Funding: Tattva Heritage Foundation,Kolkata. Digitization: eGangotri.

# ಉತ್ತರರಾಮಾಯಣದ ವಿಷಯಾನುಕ್ರಮಣಿ



— * —

## ರಾಮರಾಜ್ಯವರ್ಣನೆ.



ಉತ್ತರರಾಮಾಯಣ ವಿಷಯಾನುಕ್ರಮಣಿಕಾ ಸಮಾಪ್ತವಾದುದು.



CC-0. Bhagavad Ramanuja National Research Institute, Melukote Collection.

Fúnding: Tattva Heritage Foundation,Kolkata. Digitization: eGangotri.

ಶ್ರೀರಾಮಭಗವಾನ್ ಪ್ರಸೀದ.

ಟೀಕಾ ತಾತ್ಪರ್ಯ ಸಹಿತ.

# ಶ್ರೀಮದುತ್ತರ ರಾಮಾಯಣ ಪ್ರಾರಂಭಃ.

---

ಶ್ರೀ ಸೀತಾ ಲಕ್ಷ್ಮಣ ಭರತ ಶತ್ರುಘ್ನ ಹನುಮತ್ಸಮೇತ ಶ್ರೀ ರಾಮಚಂದ್ರ ಪರಬ್ರಹ್ಮಣೇ ನಮಃ

ಮೂ॥ ಪ್ರಾಪ್ತರಾಜ್ಯಸ್ಯರಾಮಸ್ಯರಾಕ್ಷಸಾನಾಂವಧೇಕೃತೇ। ಆಜಗ್ಮುರ್ಮುನಯಸ್ಸರ್ವೇರಾಘವಂಪ್ರತಿನಂದಿತುಮ್ ॥೧॥ *(ಕೌಶಿಕೋಥಯವಕ್ರೀತೋಗಾರ್ಗ್ಯೋಗಾಲವಏವಚ।)ಕಣ್ವೋಮೇಧಾತಿಥೇಃಪುತ್ರಃಪೂರ್ವಸ್ಯಾಂದಿಶಿಯೇಸ್ಥಿತಾಃ॥೨॥†ಸ್ವಸ್ತ್ಯಾತ್ರೇಯಶ್ಚ ಭಗವಾನ್ ನಮುಚಿಃಪ್ರಮುಚಿಸ್ತಥಾ। ಅಗಸ್ತ್ಯೋತ್ರಿಶ್ಚ ಭಗವಾಂತ್ಸುಮುಖೋವಿಮುಖಸ್ತಥಾ ॥ ಆಜಗ್ಮುಸ್ತೇಸಹಾಗಸ್ತ್ಯಾಯೇಶ್ರಿತಾದಕ್ಷಿಣಾಂದಿಶಮ್॥೩॥ + ನೃಕಂಡುಃಕವಷೋಧೌಮ್ಯಃ ಕೌಷೇಯಶ್ಚ ಮಹಾನೃಷಿಃ॥ ತೇಪ್ಯಾಜಗ್ಮುಸ್ಸಶಿಷ್ಯಾವೈಯೇಶ್ರಿತಾಃಪಶ್ಚಿಮಾಂದಿಶಂ ವಸಿಷ್ಠಃಕಶ್ಯಪೋಥಾತ್ರಿರ್ವಿಶ್ವಾಮಿತ್ರಸ್ಸಗೌತಮಃ॥೪॥ಜಮದಗ್ನಿರ್ಭರದ್ವಾಜಸ್ತೇಪಿಸಪ್ತರ್ಷಯಸ್ತಥಾ । ಉದೀಚ್ಯಾಂದಿಶಿಸಪ್ತೈತೇನಿತ್ಯಮೇವನಿವಾಸಿನಃ॥೫॥ಸಂಪ್ರಾಪ್ಯತೇಮಹಾತ್ಮಾನೋರಾಘವಸ್ಯ

---

ಟೀ॥ ರಾಕ್ಷಸಾನಾಂ-ರಾಕ್ಷಸರ, ವಧೆ-ಸಂಹಾರವು ಕೃತೇಸತಿ-ಮಾಡಲ್ಪಟ್ಟಂಥಾದ್ದಾಗುತಿರಲೀಕಾಗಿ, ಪ್ರಾಪ್ತರಾಜ್ಯಸ್ಯ-ಹೊಂದಲ್ಪಟ್ಟರಾಜ್ಯವುಳ್ಳ, ರಾಮಸ್ಯ-ಶ್ರೀರಾಮನನ್ನ ನಾದರಣೆಮಾಡಿ ( ಅಥವಾ-ಶ್ರೀರಾಮನ) ಸಮೀಪೇ-ಬಳಿಯಲ್ಲಿ ಸರ್ವೇ-ಸಮಸ್ತರಾದ ಮುನಯಃ-ಋಷಿಗಳು, ರಾಘವಂ-ರಾಮನನ್ನು, ಪ್ರತಿನಂದಿತುಂ-ಸಂತೋಷ ಗೊಳಿಸುವದಕ್ಕೋಸ್ಕರ, ಆಜಗ್ಮುಃ-ಬಂದರು ॥ ೧ ॥ಅಥ-ಬಳಿಕ,ಕೌಶಿಕಃ-ಕುಶಿಕವಂಶೋತ್ಪನ್ನನಾದವನನ್ನು, ಯವಕ್ರೀತಃ-ಯವಕ್ರೀತನೆಂಬ ಋಷಿಯುನ್ನು, ಗಾರ್ಗ್ಯಃ-ಗಾರ್ಗ್ಯಮುನಿಯುನ್ನು, ಗಾಲವಏವಚ-ಗಾಲವನೆಂಬ ಋಷಿಯುನ್ನು, ಮೇಧಾತಿಥೇಃ-ಮೇಧಾತಿಥಿಯೆಂಬ ಮುನಿಯ, ಪುತ್ರಃ-ಕುಮಾರನಾದ, ಕಣ್ವಃ-ಕಣ್ವಋಷಿಯೂಯೆಂಬ, ಯೇ-ಯಾರು, ಪೂರ್ವಸ್ಯಾಂದಿಶಿ-ಪೂರ್ವದಿಕ್ಕಿನಲ್ಲಿ, ಸ್ಥಿತಾಃ-ನೆಲಗೊಂಡಿರುವರೋ (ತೇ-ಅವರು, ಆಜಗ್ಮುಃ-ಬಂದರು) ॥೨॥ ತಥಾ-ಹಾಗೆ,ಯೇ-ಯಾರು, ದಕ್ಷಿಣಾಂದಿಶಂ-ದಕ್ಷಿಣದಿಕ್ಕಿನಲ್ಲಿ, ಸ್ಥಿತಾಃ-ಇದ್ದರೋ, ಸ್ವಸ್ತ್ಯಾತ್ರೇಯಃ-ಸ್ವಸ್ತಿ-ಕ್ಷೇಮವನ್ನುಂಟುಮಾಡುವ, ಆತ್ರೇಯಶ್ಚ-ಆತ್ರೇಯನನ್ನು, ಭಗವಾನ್-ಪೂಜ್ಯನಾದ, ನಮುಚಿಃ-ನಮುಚಿಯೆಂಬಋಷಿಯು, ಪ್ರಮುಚಿಃ-ಪ್ರಮುಚಿಯೆಂಬ ಋಷಿಯು, ಅಗಸ್ತ್ಯಃ-ಅಗಸ್ತ್ಯಋಷಿಯು, ಅತ್ರಿಶ್ಚ-ಅತ್ರಿಋಷಿಯುನ್ನು, ಭಗವಾನ್-ಪೂಜ್ಯನಾದ, ಸುಮುಖಃ-ಸುಮುಖನೆಂಬ ಋಷಿಯು, ತಥಾ-ಹಾಗೆ, ವಿಮುಖಃ-ವಿಮುಖನೆಂಬ ಋಷಿಯುಯೆಂಬ, (ತೇ-ಅವರು)ಸಹಾಗಸ್ತ್ಯಾಃ-ಅಗಸ್ತ್ಯಸಹಿತರಾಗಿ, ಆಜಗ್ಮುಃ-ಬಂದರು ॥೩॥ ಪಶ್ಚಿಮಾಂದಿಶಂ-ಪಶ್ಚಿಮದಿಕ್ಕನ್ನು, ಯೇ-ಯಾರು-ಶ್ರಿತಾಃ-ಆಶ್ರಯಿಸಿರುವರೋ, ನೃಕಂಡುಃ-ನೃಕಂಡುಮುನಿಯೆಂಬ, ಕವಷಃ-ಕವಷನೆಂಬ, ಧೌಮ್ಯಃ-ಧೌಮ್ಯಋಷಿಯೆಂಬ, ಮಹಾನ್ಋಷಿಃ-ಮಹಾಮುನಿಯಾದ, ಕೌಷೇಯಶ್ಚ-ಕೌಷೇಯನೆಂಬ, ತೇಪಿ-ಅವರುನ್ನು, ಸಶಿಷ್ಯಾವೈ-ಶಿಷ್ಯಸಹಿತರಾಗಿಯೇ, ಆಜಗ್ಮುಃ-ಬಂದರು ॥ ೪॥ ಅಥ-ಬಳಿಕ, ತಥಾ-ಹಾಗೆ. ವಸಿಷ್ಠಃ-ವಸಿಷ್ಠಋಷಿಯು, ಕಶ್ಯಪಃ-ಕಶ್ಯಪನು, ಅತ್ರಿಃ-ಅತ್ರಿಯು, ಸಗೌತಮಃ-ಗೌತಮಸಹಿತನಾದ, ವಿಶ್ವಾಮಿತ್ರಃ-ವಿಶ್ವಾಮಿತ್ರನು, ಜಮದಗ್ನಿಃ-ಜಮದಗ್ನಿಯು, ಭರದ್ವಾಜಃ-ಭರದ್ವಾಜನೆಂಬ, ತೇಸಪ್ತರ್ಷಯಶ್ಚಾಪಿ-ಆ ಸಪ್ತಋಷಿಗಳೂ ಸಹ (ಆಜಗ್ಮುಃ-ಬಂದರು) ಏತೇಸಪ್ತ-ಈ ಏಳುಮಂದಿ ಋಷಿಗಳು, ಉದೀಚ್ಯಾಂದಿಶಿ-ಉತ್ತರದಿಕ್ಕಿನಲ್ಲಿ, ನಿತ್ಯಮೇವ-ಯಾವಾಗಲು, ನಿವಾಸಿನಃ-ನೆಲಗೊಂಡಿರುವರು ॥೫॥ ಹುತಾಶನಸಮಪ್ರಭಾಃ-ಅಗ್ನಿ ಸದೃಶವಾದ ಕಾಂತಿಯುಳ್ಳ, ವೇದವೇದಾಂಗವಿದುಷಃ-ವೇದಗಳನ್ನು ಆದರ ಅಂಗಗಳನ್ನು ಸಹ ತಿಳಿದಿರುವ, ನಾನಾಶಾಸ್ತ್ರವಿಶಾರದಾಃ - ಅನೇಕಶಾಸ್ತ್ರಗಳಲ್ಲಿದಕ್ಷರಾದ, ತೇಮಹಾತ್ಮಾನಃ-ಆ ಮಹಾನುಭಾವರು, ರಾಘವಸ್ಯ-ಶ್ರೀರಾಮನ, ನಿವೇಶನಂ-ಮನೆಯ

---

ತಾ॥ ರಾಕ್ಷಸ ಸಂಹಾರವಾಗುತ್ತಿರಲೀಕಾಗಿ, ರಾಜ್ಯ ಪರಿಪಾಲನೆಯುಂಗೈಯುತ್ತಿರುವ ಶ್ರೀ ರಾಮಮೂರ್ತಿಯ ಬಳಿಲ್ಲಿ ಲಕ್ಷ್ಮಣನನ್ನು ಸಂತೋಷಗೊಳಿಸುವದಕ್ಕೋಸ್ಕರ ಋಷಿಗಳೆಲ್ಲರು ಬಂದವರಾದರು ॥೧॥ ಅವರ್ಯಾರಂದರೆ ಕೌಶಿಕ, ಯವಕ್ರೀತ, ಗಾರ್ಗ್ಯ, ಗಾಲವ, ಕಣ್ವನೇ ಮೊದಲಾದ ಪೂರ್ವ ದಿಕ್ಕಿನಲ್ಲಿರುವ ಮುನಿಗಳುನ್ನು ಮತ್ತು ಸ್ವಸ್ತ್ಯಾತ್ರೇಯ, ನಮುಚಿ, ಪ್ರಮುಚಿ, ಅಗಸ್ತ್ಯ, ಅತ್ರಿ, ಸುಮುಖ, ವಿಮುಖನೆಂಬವರೇ ಮುಂತಾದ ದಕ್ಷಿಣದಿಗ್ವಾಸಿಗಳಾದ ಋುಷಿಗಳುನ್ನು, ಮತ್ತು ನೃಕಂಡು, ಕವಷ, ಧೌಮ್ಯ, ಕೌಷೇಯನೆಂಬವರೆ ಪ್ರಮುಖರಾದ ಪಶ್ಚಿಮವಾಸಿಗಳಾದ ತಾಪಸರುನ್ನು, ಮತ್ತು ವಸಿಷ್ಠ, ಕಶ್ಯಪ, ಅತ್ರಿ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ಭರದ್ವಾಜನೇ ಮೊದಲಾದ ಉತ್ತರ ದಿಕ್ಕಿನಲ್ಲಿ ವಾಸಿಸುತಿರುವ ಸಪ್ತರ್ಷಿಗಳುನ್ನು ಸಹ ಬಂದವರಾದರು ॥೫॥ ಅಗ್ನಿ ಸದೃಶ ತೇಜಸ್ವಿಗಳಾದ ವೇದಾಂಗ ತತ್ವಜ್ಞರಾದ, ಮತ್ತು ಶಾಸ್ತ್ರ ಪಂಡಿತರಾದ, ಆ ಮಹಾತ್ಮರು ರಾಮ ನಿವೇಶನವಂ ಹೊಂದಿ,

---

ಪಾಠಾಂತರಗಳು. * ಕೌಶಿಕೋಥಯವಕ್ರೀತೋರೈಭ್ಯಶ್ಚ್ಯವನಏವಚ. † ದತ್ತಾತ್ರೇಯಶ್ಚ ಭಗವಾನ್.

+ ಪೃಷದ್ರುಃಕವಷೋಧೌಮ್ಯೋ ರಾಥೇಯಶ್ಚಮಹಾತಪಾಃ॥ ಭಾರ್ಗವೋಗಾಲವೋಗಾರ್ಗ್ಯಶ್ಶೈಬ್ಯಶ್ಚೈವಮಹಾನೃಷಿಃ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation Kolkata. Digitization: eGangotri.



ನಿವೇಶನಮ್ । ವಿಷ್ಠಿತಾಃ*(ಪ್ರತಿಹಾರಾರ್ಥಂಹುತಾಶನಸಮಪ್ರಭಾಃ)॥೬॥ ವೇದವೇದಾಂಗವಿದುಷೋನಾನಾಶಾಸ್ತ್ರ ವಿಶಾರದಾಃ ॥೭॥ ದ್ವಾಸ್ಸ್ಥಂಪ್ರೋವಾಚಧರ್ಮಾತ್ಮಾಹ್ಯಗಸ್ತ್ಯೋಮುನಿಸತ್ತಮಃ ನಿವೇದ್ಯತಾಂದಾಶರಥೇಃ† ಋಷಯೋವಯಮಾಗತಾಃ ॥೮॥ ಪ್ರತಿಹಾರಸ್ತತಸ್ತೂರ್ಣಮಗಸ್ತ್ಯವಚನಾದ್ದ್ರುತಮ್॥ ಸಮೀಪಂರಾಘವಸ್ಯಾಶುಪ್ರವಿವೇಶಮಹಾತ್ಮನಃ॥೯॥ನಯೇಂಗಿತಜ್ಞಸ್ಸದ್ವೃತ್ತೋದಕ್ಷೋಧೈರ್ಯಸಮನ್ವಿತಃ । ಸರಾಮಂದೃಶ್ಯಸಹಸಾಪೂರ್ಣಚಂದ್ರಸಮಪ್ರಭಂ॥ ಅಗಸ್ತ್ಯಂಕಥಯಾಮಾಸಸಂಪ್ರಾಪ್ತಮೃಷಿಭಿಸ್ಸಹ ॥೧೧॥ ಶ್ರುತ್ವಾಪ್ರಾಪ್ತಾನ್ಮುನೀಂಸ್ತಾಂಸ್ತು ಬಾಲಸೂರ್ಯಸಮಪ್ರಭಾನ್ । ಪ್ರತ್ಯುವಾಚತತೋದ್ವಾಸ್ಸ್ಥಂಪ್ರವೇಶಯಯಥಾಸುಖಮ್ ॥೧೨॥ ತಾಂಸ್ತ್ಸಂಪ್ರಾಪ್ತಾನ್ಮುನೀನ್ದೃಷ್ಟ್ವಾ ಪ್ರತ್ಯುತ್ಥಾಯಕೃತಾಂಜಲಿಃ । ಪಾದ್ಯಾರ್ಘ್ಯಾದಿಭಿರಾನರ್ಚ್ಯಗಾಂನಿವೇದ್ಯಚಸಾದರಮ್ ॥ ರಾಮೋಭಿವಾದ್ಯಪ್ರಯತಆಸನಾನ್ಯಾದಿದೇಶಹ। ತೇಷುಕಾಂಚನಚಿತ್ರೇಷುಮಹತ್ಸುಚವರೇಷುಚ ॥೧೩॥ ಕುಶಾಂತರ್ಧಾನದತ್ತೇಷುಮೃಗಚರ್ಮಯುತೇಷುಚ। ಯಥಾರ್ಹಮುಪವಿಷ್ಟಾಸ್ತೆ ಆಸನೇಷ್ವೃಷಿಪುಂಗವಾಃ ॥೧೪॥ ರಾಮೇಣಕುಶಲಂಪೃಷ್ಟಾಸ್ಸಶಿಷ್ಯಾಸ್ಸಪುರೋಗಮಾಃ। ಮಹ

---

ನ್ನು, ಸಂಪ್ರಾಪ್ಯ–ಹೊಂದಿ, ಪ್ರತಿಹಾರಾರ್ಥಂ–ದ್ವಾರಪಾಲಕನಿಗೋಸ್ಕರ, ವಿಷ್ಠಿತಾಃ–ನಿಂತಿದ್ದರು ॥೭॥ ಋಷಯಃ–ಮುನಿಗಳಾದ, ವಯಂ–ನಾವು, ಆಗತಾಃ–ಬಂದಿದೇವೇ, ದಾಶರಥೇಃ–ಶ್ರೀರಾಮನಿಗೆ, ನಿವೇದ್ಯತಾಂ–ತಿಳಿಸಲ್ಪಡಲಿ (ಇತಿ–ಇಂತೆಂದು) ಧರ್ಮಾತ್ಮಾ–ಧರ್ಮಬುದ್ಧಿಯುಳ್ಳ, ಮುನಿಸತ್ತಮಃ–ಋಷಿಶ್ರೇಷ್ಠನಾದ, ಅಗಸ್ತ್ಯಃ–ಅಗಸ್ತ್ಯಮುನಿಯು, ದ್ವಾಸ್ಸ್ಥಂ–ದ್ವಾರರಕ್ಷಕನನ್ನು ಕುರಿತು, ಪ್ರೋವಾಚ–ಹೇಳಿದನು ॥೮॥ ತತಃ–ಬಳಿಕೆ, ಪ್ರತಿಹಾರಃ–ದ್ವಾರಪಾಲಕನು, ತೂರ್ಣಂ–ಜಾಗ್ರತೆಯಾಗಿ (ಆಗತ್ಯ–ಬಂದು,)ದ್ರುತಂ–ತ್ವರಿತವಾಗಿಹೇಳಲ್ಪಟ್ಟ, ಅಗಸ್ತ್ಯವಚನಾತ್–ಅಗಸ್ತ್ಯನಮಾತಿನ ದೆಸೆಯಿಂದ, ಮಹಾತ್ಮನಃ–ಮಹಾನುಭಾವನಾದ, ರಾಘವಸ್ಯ–ಶ್ರೀರಾಮನ, ಸಮೀಪಂ–ಬಳಿಯನ್ನು ಕುರಿತು, ಆಶು–ಕ್ಷಿಪ್ರವಾಗಿ, ಪ್ರವಿವೇಶ–ಪ್ರವೇಶಿಸಿದನು ॥೯॥ ನಯೇಂಗಿತಜ್ಞಃ–ನೀತಿಯನ್ನು ಇತರಾಭಿಪ್ರಾಯವನ್ನೂ ಸಹ ಅರಿತಿರುವ, ಸದ್ವೃತ್ತಃ–ಒಳ್ಳೇ ನಡತೆಯುಳ್ಳ, ದಕ್ಷಃ–ಕಾರ್ಯಸಮರ್ಥನಾದ, ಧೈರ್ಯಸಮನ್ವಿತಃ–ಧೀರತೆಯಿಂದೊಡಗೂಡಿದ, ಸಃ–ಆದ್ವಾರಪಾಲಕನು, ಪೂರ್ಣಚಂದ್ರ ಸಮಪ್ರಭಂ–ಸಂಪೂರ್ಣವಾದ ಚಂದ್ರಸದೃಶಕಾಂತಿಯುಳ್ಳ, ರಾಮಂ–ಶ್ರೀರಾಮನನ್ನು, ಸಹಸಾ–ತ್ವರಿತವಾಗಿ, ದೃಶ್ಯ–ಕಂಡು, ಋಷಿಭಿಸ್ಸಹ–ಮುನಿಗಳೊಡನೆ, ಸಂಪ್ರಾಪ್ತಂ–ಬಂದಿರುವ, ಅಗಸ್ತ್ಯಂ–ಅಗಸ್ತ್ಯಋಷಿಯನ್ನು, ಕಥಯಾಮಾಸ–ಹೇಳಿದನು ॥೧೧॥ ತತಃ–ಬಳಿಕ, ಬಾಲಸೂರ್ಯಸಮಪ್ರಭಾನ್–ತತ್ಕಾಲೋದಿತ ಸೂರ್ಯಸಮಾನವಾದ ಕಾಂತಿಯುಳ್ಳ, ತಾಂಸ್ತಾನ್ಮುನೀಂಸ್ತು–ಆಯಾಋಷಿಗಳನ್ನಾದರೆ, ಪ್ರಾಪ್ತಾನ್–ಬಂದವರನ್ನಾಗಿ, ಶ್ರುತ್ವಾ–ಕೇಳಿ, ಯಥಾಸುಖಂ–ಸುಖವಾಗಿ, ಪ್ರವೇಶಯ–ಪ್ರವೇಶಮಾಡಿಸು (ಇತಿ–ಇಂತೆಂದು) ದ್ವಾಸ್ಸ್ಥಂ–ದ್ವಾರಪಾಲಕನನ್ನು ಕುರಿತು, ಪ್ರತ್ಯುವಾಚ–ಉತ್ತರಕೊಟ್ಟನು ॥೧೨॥ ರಾಮಃ–ಶ್ರೀರಾಮನು, ಸಂಪ್ರಾಪ್ತಾನ್–ಬಂದಿರುವ, ತಾನ್ಮುನೀನ್–ಆತಾಪಸರನ್ನು, ದೃಷ್ಟ್ವಾ–ಕಂಡು, ಪ್ರತ್ಯುತ್ಥಾಯ–ಮೇಲಕ್ಕೆದ್ದು, ಕೃತಾಂಜಲಿಃ–ಅಂಜಲಿಬದ್ಧನಾಗಿ, ಪಾದ್ಯಾರ್ಘ್ಯಾದಿಭಿಃ–ಪಾದ್ಯಅರ್ಘ್ಯವೇಮುಂತಾದವುಗಳಿಂದ, ಆನರ್ಚ್ಯ–ಪೂಜಿಸಿ, ಸಾದರಂ–ಆದರಣೆಯಿಂದೊಡಗೂಡಿದಂತೆ, ಗಾಂಚ–ಆಕಳನ್ನು ಸಹ, ನಿವೇದ್ಯ–ನಿವೇದಿಸಿ, ಅಭಿವಾದ್ಯ–ಎರಗಿ, ಪ್ರಯತಃ–ಸಾವಧಾನಚಿತ್ತನಾಗಿ, ಆಸನಾನಿ–ಪೀಠಗಳನ್ನು, ಆದಿದೇಶಹ–ತೋರಿಸಿದನಷ್ಟೆ ॥೧೩॥ ತೇಋಷಿಪುಂಗವಾಃ–ಆ ಮುನಿವರರು ಕಾಂಚನಚಿತ್ರೇಷು–ಸುವರ್ಣನಿರ್ಮಿತಂಗಳಾದ, ಮಹತ್ಸುಚ–ಬೃಹತ್ತುಗಳಾಗಿಯೂ ಇರುವ, ವರೇಷುಚ–ಉತ್ತಮವಾದಗಳೂ ಆದ, ಕುಶಾಂತರ್ಧಾನದತ್ತೇಷು–ದರ್ಭೆಯಹುಲ್ಲುಗಳೇ ಮಧ್ಯಭಾಗದಲ್ಲಿ ಕೊಡಲ್ಪಟ್ಟ, ಮೃಗಚರ್ಮಯುತೇಷುಚ – ಜಿಂಕೆಯಚರ್ಮದಿಂದಲೂ ಒಡಗೂಡಿರುವ, ತೇಷುಆಸನೇಷು–ಪೀಠಗಳಲ್ಲಿ, ಯಥಾರ್ಹಂ–ಯಥಾಯೋಗ್ಯವಾಗಿ, ಉಪವಿಷ್ಟಾಃ–ಕುಳಿತುಕೊಂಡರು ॥೧೪॥ ಸಶಿಷ್ಯಾಃ–ಶಿಷ್ಯಸಹಿತರಾದ, ಸಪುರೋಗಮಾಃ–ಊಳಿ

---

ಯಕನಂ ಕಂಡು ॥೭॥ ಋಷಿಗಳಾದ ನಾವೆಲ್ಲರು ಬಂದಿಧೆವೆಂದು ಶ್ರೀರಾಮನಿಗರುಹೆಂದು ತಾಪಸೋತ್ತಮನಾದ ಅಗಸ್ತ್ಯ ಮಹಾ ಮುನಿಯು ಪೇಳಲು ॥೮॥ ಬಳಿಕ ಆ ವಾಕ್ಯಮಂ ಕೇಳಿ ಪ್ರತಿಹಾರಿಯು ಜಾಗ್ರತೆಯಾಗಿ, ಮಹಾತ್ಮನಾದ ರಾಮನ ಸಮೀಪವನ್ನು ಹೊಂದಿದವನಾದನು ॥೯॥ ನಯಜ್ಞನಾಗಯು, ಇಂಗಿತಜ್ಞನಾಗಿಯು, ಸದ್ವೃತ್ತನಾಗಿಯು, ಕಾರ್ಯದಕ್ಷನಾಗಿಯು, ಧೈರ್ಯಯುಕ್ತನಾಯು ಇರುವ ಆ ದ್ವಾರ ರಕ್ಷಕನು ಪೂರ್ಣ ಚಂದ್ರ ಸದೃಶ ಪ್ರಭೆಯುಳ್ಳ ಶ್ರೀ ರಾಮನಂ ಕಂಡು, ಋಷಿಗಳಿಂದೊಡಗೂಡಿ ಸಂಪ್ರಾಪ್ತನಾದ ಅಗಸ್ತ್ಯ ಮಹಾ ಮುನಿಯಂ ಪೇಳಿದನು ॥೧೧॥ ಬಾಲ ಸೂರ್ಯ ಸಮಪ್ರಭೆಯುಳ್ಳ,ಆಯಾ ತಾಪಸರಂ ಬಂದವರನ್ನಾಗಿ ಕೇಳುತಲೆ ಜಾಗ್ರತೆಯಾಗಿ ಪ್ರವೇಶ ಮಾಡಿಸೆಂದುತ್ತರವನ್ನಿತ್ತನು ॥೧೨॥ ಸಮೀಪದಲ್ಲಿ ಬರುತಿರುವ ಆ ಋಷಿಗಳಂ ಕಂಡು, ಪ್ರತ್ಯುತ್ಥಾನಮಂಗೈದು, ಅಂಜಲಬದ್ಧನಾಗಿ ಪಾದ್ಯಾರ್ಘ್ಯಾದಿಗಳಿಂದ ಪೂಜಿಸಿ, ಗೋನಿವೇದನವಂ ಮಾಡಿ,ಅವರ ಪಾದ ಪಂಕಜಗಳಿಗೆರಗಿ, ಸಾವಧಾನ ಸ್ವಾಂತನಾಗಿ ಆಸನಗಳನ್ನು ಕೊಟ್ಟವನಾದನು ॥೧೩॥ ಕಾಂಚನ ವಿಚಿತ್ರತಗಳಾದ ಬೃಹತ್ತರವಾದ ಸರ್ವೋತ್ತಮವಾದ, ಕುಶಗಳೇ ಅಂತರ್ಧಾನವಾಗುಳ್ಳ ಮತ್ತು ಮೃಗ ಚರ್ಮಯುಕ್ತವಾದ, ಆ ಪೀಠಗಳಲ್ಲಿ ಆ ತಾಪಸೋತ್ತಮರೆಲ್ಲರು ಯಥಾ ಯೋಗ್ಯವಾಗಿ ಕುಳಿತು ಕೊಂಡರು ॥೧೪॥ ಶಿಷ್ಯಸಹಿತರಾದ ಆ ಮಹರ್ಷಿಗಳೆಲ್ಲರು ಶ್ರೀರಾಮ

---

* ಪ್ರತಿಹಾರಸ್ಥಾಹುತಾಶಸಮವಿಗ್ರಹಾಃ. † ಋಷೀನಸ್ಮಾನುಪಾಗತಾನ್.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಷಯೋವೇದವಿದೋರಾಮಂವಚನಮಬ್ರುವನ್ ॥೧೬॥ ಕುಶಲಂನೋಮಹಾಬಾಹೋಸರ್ವತ್ರರಘುನಂದನ । ತ್ವಾಂತುದಿಷ್ಟ್ಯಾಕುಶಲಿನಂಪಶ್ಯಾಮೋಹತಶಾತ್ರವಮ್ ॥೧೭॥ ದಿಷ್ಟ್ಯಾತ್ವಯಾಹತೋರಾಜನ್ರಾವಣೋಲೋಕರಾವಣಃ । ನಹಿಭಾರಸ್ಸತೇರಾಮರಾವಣಃಪುತ್ರಪೌತ್ರವಾನ್ *॥೧೮॥ಸಧನುಸ್ತ್ವಂಹಿಲೋಕಾಂಸ್ತ್ರೀನ್ ವಿಜಯೇಥಾನಸಂಶಯಃ। ದಿಷ್ಟ್ಯಾತ್ವಯಾಹತೋರಾಮ+ ರಾವಣೋರಾಕ್ಷಸೇಶ್ವರಃ ॥೧೯॥ ದಿಷ್ಟ್ಯಾವಿಜಯಿನಂತ್ವಾದ್ಯಪಶ್ಯಾಮಸ್ಸಹಸೀತಯಾ। ಲಕ್ಷ್ಮಣೇನಚಧರ್ಮಾತ್ಮನ್ ಭ್ರಾತ್ರಾತ್ವದ್ಧಿತಕಾರಿಣಾ॥+(ಮಾತೃಭಿರ್ಭ್ರಾತೃಸಹಿತಂ)ಪಶ್ಯಾಮೋದ್ಯವಯಂನೃಪ॥೨೦॥ದಿಷ್ಟ್ಯಾಪ್ರಹಸ್ತೋವಿಕಟೋವಿರೂಪಾಕ್ಷೋಮಹೋದರಃ ॥ ಅಕಂಪನಶ್ಚ ದುರ್ಧರ್ಷೋನಿಹತಾಸ್ತೇನಿಶಾಚರಾಃ ॥೨೧॥ ಯಸ್ಯಪ್ರಮಾಣಾದ್ವಿಪುಲಂಪ್ರಮಾಣಂನೇಹವಿದ್ಯತೇ ॥ ‡ ದಿಷ್ಟ್ಯಾತೇಸಮರೇರಾಮ ಕುಂಭಕರ್ಣೋನಿಪಾತಿತಃ ॥೨೨॥ತ್ರಿಶಿರಾಶ್ಚಾತಿಕಾಯಶ್ಚ ದೇವಾಂತಕನರಾಂತಕೌ ॥ದಿಷ್ಟ್ಯಾತೇನಿಹತಾರಾಮಮಹಾವೀರ್ಯಾನಿಶಾಚರಾಃ॥೨೩॥ಕುಂಭಶ್ಚೈವನಿಕುಂಭಶ್ಚ ರಾ

---

ಗದವನಿಂದೊಡಗೂಡಿದ, ವೇದವಿದಃ-ವೇದಜ್ಞರಾದ, ಮಹರ್ಷಯಃ-ಮಹಾಮುನಿಗಳು, ರಾಮೇಣ-ಶ್ರೀರಾಮನಿಂದ, ಕುಶಲಂ-ಕ್ಷೇಮವನ್ನು, ಪೃಷ್ಟಾಃ-ಕೇಳಲ್ಪಟ್ಟವರಾಗಿ, ರಾಮಂ-ಶ್ರೀರಾಮನನ್ನು ಕುರಿತು, ವಚನಂ-ಮಾತನ್ನು, ಅಬ್ರುವನ್-ನುಡಿದರು ॥೧೬॥ ಹೇರಘುನಂದನ-ಎಲೈರಘುವಂಶೋತ್ಪನ್ನನೇ! ಹೇಮಹಾಬಾಹೋ-ಎಲೈ ಮಹಾಭುಜಗಳುಳ್ಳವನೆ, ಸರ್ವತ್ರ-ಸರ್ವಪ್ರಕಾರವಾಗಿಯೂ, ನಃ-ನಮ್ಮಗಳಿಗೆ, ಕುಶಲಂ-ಕ್ಷೇಮವು, ತ್ವಾಂತು-ನಿನ್ನನ್ನಾದರೆ, ದಿಷ್ಟ್ಯಾ-ದೈವಾಧೀನದಿಂದ, ಹತಶಾತ್ರವಂ-ಸಂಹೃತರಾದ ಶತ್ರುಗಳುಳ್ಳವನನ್ನಾಗಿಯೂ,ಕುಶಲಿನಂ-ಕ್ಷೇಮವಂತನನ್ನಾಗಿಯೂ, ಪಶ್ಯಾಮಃ-ಕಂಡೆವು ॥೧೭॥ ಹೆ ರಾಜನ್-ಎಲೈರಾಜನೆ, ಲೋಕರಾವಣಃ-ಲೋಕಗಳನ್ನು ದೀನಾರಾವಮುಳ್ಳವುಗಳನ್ನಾಗಿ ಮಾಡುತಿರುವ, ರಾವಣಃ-ರಾವಣನು, ದಿಷ್ಟ್ಯಾ-ದೈವಗತಿಯಿಂದ, ತ್ವಯಾ-ನಿನ್ನಿಂದ, ಹತಃ-ಸಂಹೃತನಾದನು, ಹೆ ರಾಮ-ಎಲೈರಾಮನೆ, ಪುತ್ರಪೌತ್ರವಾನ್-ಮಕ್ಕಳು ಮಮ್ಮಕ್ಕಳುಸಹ ವುಳ್ಳ, ಸರಾವಣಃ-ಆ ರಾವಣನು, ತೆ-ನಿನಗೆ, ಭಾರಃ-ಅಶಕ್ಯನಾದವನು, ನಹಿ-ಅಲ್ಲವಷ್ಟೆ? ॥೧೮॥ ಹೆರಾಮ-ಎಲೈರಾಮನೆ! ಹಿಯಸ್ಮಾತ್-ಯಾವಕಾರಣದ ದೆಸೆಯಿಂದ, ತ್ವಂ-ನೀನು, ಸಧನುಃ-ಬಿಲ್ಲಿನಿಂದೊಡಗೂಡಿದವನಾದರೆ, ತ್ರೀನ್‌ಲೋಕಾನ್-ಮೂರುಲೋಕಗಳನ್ನು, ವಿಜಯೆಥಾಃ-ಜಯಿಸುವಿ, ನಸಂಶಯಃ-ಸಂದೇಹವಿಲ್ಲ, ಹೆ ರಾಮ-ಎಲೈ ಶ್ರೀರಾಮನೆ! ತ್ವಯಾ-ನಿನ್ನಿಂದ,ರಾಕ್ಷಸೇಶ್ವರಃ-ರಾಕ್ಷಸಾಧಿಪತಿಯಾದ, ರಾವಣಃ-ರಾವಣನು,ದಿಷ್ಟ್ಯಾ-ದೈವಾಧೀನದಿಂದ, ಹತಃ-ಸಂಹೃತನಾದನು॥೧೯॥ ಹೆ ಧರ್ಮಾತ್ಮನ್-ಎಲೈ ಧರ್ಮಿಷ್ಠನೆ! ತ್ವದ್ಧಿತಕಾರಿಣಾ-ನಿನಗೆ ಹಿತಕರನಾದ, ಭ್ರಾತ್ರಾ-ತಮ್ಮನಾದ, ಲಕ್ಷ್ಮಣೇನಚಸಹ ಲಕ್ಷ್ಮಣನೊಡನೆಯೂ, ಸೀತಯಾಸಹ-ಸೀತಾದೇವಿಯೊಡನೆಯೂಸಹ,ವಿಜಯಿನಂ-ಜಯಶಾಲಿಯಾದ, ತ್ವಾಂ-ನಿನ್ನನ್ನು, ಅದ್ಯ-ಈಗ,ದಿಷ್ಟ್ಯಾ-ದೈವಾಧೀನದಿಂದ,ಪಶ್ಯಾಮಃ-ಕಂಡೆವು॥ಹೆನೃಪ-ಎಲೈನರಪಾಲನೆ, ಮಾತೃಭಿಃ-ತಾಯಿಗಳಿಂದಲು, ಭ್ರಾತೃಸಹಿತಂ-ಭ್ರಾತೃ-ಸಹೋದರರಿಂದಲು,ಸಹಿತಂ-ಯುಕ್ತನಾದನಿನ್ನನ್ನು,ವಯಂ-ನಾವುಗಳು, ಅದ್ಯ-ಈಗ-ಪಶ್ಯಾಮಃ-ನೋಡಿದೆವು॥೨೦॥ ಪ್ರಹಸ್ತಃ-ಪ್ರಹಸ್ತನು,ವಿಕಟಃ-ವಿಕಟನು,ವಿರೂಪಾಕ್ಷಃ-ವಿರೂಪಾಕ್ಷನು ॥ ದುರ್ಧರ್ಷಃ-ತಿರಸ್ಕರಿಸಲಶಕ್ಯನಾದ, ಅಕಂಪನಶ್ಚ-ಅಕಂಪನನೂ,ತೆ-ಪ್ರಸಿದ್ಧರಾದ, ನಿಶಾಚರಾಃ-ರಾಕ್ಷಸರು, ದಿಷ್ಟ್ಯಾ-ದೈವಾಧೀನದಿಂದ, ನಿಹತಾಃ-ಸಂಹೃತರಾದರು॥೨೧॥ ಹೆರಾಮ-ಎಲೈ ರಾಮನೆ, ಇಹ-ಈಲೋಕದಲ್ಲಿ, ಯಸ್ಯ-ಯಾವ ಕುಂಭಕರ್ಣನ,ಪ್ರಮಾಣಾತ್-ದೈರ್ಘ್ಯಕ್ಕಿಂತಲು,ವಿಪುಲಂ-ಅಧಿಕವಾದ,ಪ್ರಮಾಣಂ-ಉದ್ದವು, ನವಿದ್ಯತೆ-ಇಲ್ಲವೋ, ಸಕುಂಭಕರ್ಣಃ-ಆ ಕುಂಭಕರ್ಣನು, ತೆಸಮರೆ-ನಿನ್ನ ಕಾಳಗದಲ್ಲಿ, ದಿಷ್ಟ್ಯಾ-ದೈವವಶದಿಂದ, ನಿಪಾತಿತಃ-ಬೀಳಿಸಲ್ಪಟ್ಟನು॥೨೨॥ಹೆರಾಮ-ಎಲೈರಾಮನೆ, ತ್ರಿಶಿರಾಶ್ಚ-ತ್ರಿಶಿರಸ್ಕನುನ್ನು,ಅತಿಕಾಯಶ್ಚ-ಅತಿಕಾಯನುನ್ನು, ದೇವಾಂತಕನರಾಂತಕೌ-ದೇವಾಂತಕನರಾಂತಕರೆಂಬ,ಮಹಾವೀರ್ಯಾಃ-ಅತಿ ಪರಾಕ್ರಮಿಗಳಾದ, ನಿಶಾಚರಾಃ ರಾಕ್ಷಸರು,ತೆ-ನಿನ್ನಿಂದ,ದಿಷ್ಟ್ಯಾ-ದೈವಾಧೀನದಿಂದ, ನಿಹತಾಃ-ಹೊಡೆಯಲ್ಪಟ್ಟರು.

---

ನಿಂದ ಕುಶಲವನ್ನು ಕೇಳಲ್ಪಟ್ಟವರಾಗಿ ಈ ಪರಿಯಾಗಿ ಹೇಳಲುಪಕ್ರಮಿಸಿದರು. ಎಲೈ ರಘುಕುಲ ತಿಲಕನೇ! ನಾವೆಲ್ಲರು ಕುಶಲವಂತರಾಗಿಧೇವೆ, ನಿನ್ನನ್ನು ಕ್ಷೇಮವಂತನನ್ನಾಗಿಯೂ, ನಿಶ್ಶತ್ರುವಿನನ್ನಾಗಿಯೂ, ದೈವಾಧೀನತೆಯಿಂದ ಕಂಡೆವು ॥೧೭॥ ಎಲೈ ರಾಜನೆ! ಲೋಕಕಂಟಕನಾದ ಅಂಥದಶಕಂಠನು ದೈವಗತಿಯಿಂದ ನಿನ್ನಿಂದ ಸಂಹೃತನಾದನು. ಆದರೆ ಪುತ್ರ ಪೌತ್ರ ಸಹಿತನಾದ ಆ ರಾವಣನ ಸಂಹಾರವು ನಿನಗೇನಶಕ್ಯವಾದ್ದಲ್ಲ ॥೧೮॥ ನೀನು ಕೋದಂಡಪಾಣಿಯಾದರೆ ತ್ರಿಲೋಕಗಳನ್ನು ಜಯಿಸಬಲ್ಲೆ, ಈ ವಿಷಯದಲ್ಲಿ ಸಂದೇಹವೇ ಇಲ್ಲ. ಆದರು ರಾಕ್ಷಸೇಶ್ವರನಾದ ರಾವಣನನ್ನು ದೈವವಶಾತ ಜಯಿಸಿದವನಾದೆ ॥೧೯॥ಎಲೈ ಧರ್ಮಾತ್ಮನಾದ ನರನಾಥನೆ ದೈವಾಧೀನದಿಂದ ಜಯಲಕ್ಷ್ಮೀ ಸಂಪನ್ನನಾಗಿ, ಸತಿಯಾದ ಸೀತಾದೇವಿಯಿಂದಲು, ಸದಾ ಹಿತಕರನಾದ ಲಕ್ಷ್ಮಣನಿಂದಲು, ಇತರ ಸಹೋದರರಿಂದಲು, ಜನನಿಗಳಿಂದಲು ಸಹಿತನಾಗಿರುವ, ನಿನ್ನನ್ನು ಈಗ ಕಂಡೆವಷ್ಟೆ ॥೨೦॥ ಪ್ರಹಸ್ತ, ವಿಕಟ, ವಿರೂಪಾಕ್ಷ,ಮಹೋದರ, ಅಕಂಪನನೆಂಬೀ ರಾಕ್ಷಸರು ದೈವಗತಿಯಿಂದ ನಿಹತರಾದರು॥೨೧॥ ಯಾವದೈತ್ಯನ ದೇಹ ಪ್ರಮಾಣಕ್ಕಿಂತಲು ಅತಿಶಯವಾದ ಶರೀರ ಪರಿಮಿತಿಯುಳ್ಳ ಪುರುಷನು ಈ ಲೋಕದಲ್ಲಿ ಯಾರು ಇಲ್ಲವೋ ಅಂಥಾ ಕುಂಭಕರ್ಣನು ದೈವವಶಾತ ನಿನ್ನಿಂದ ಮೃತಿಹೊಂದಿದನು ॥೨೨॥ ಎಲೈ ರಾಘವನೆ! ತ್ರಿಶಿರಸ್ಕ, ಅತಿಕಾಯ, ದೇವಾಂತಕ, ನ

---

* ರಾವಣೋರಾಕ್ಷಸೇಶ್ವರಃ. † ರಾವಣಃಪುತ್ರಪೌತ್ರವಾನ್. + ಹನೂಮತಾಚಸಹಿತಂ. ‡ ದಿಷ್ಟ್ಯಾ ಸರಾಕ್ಷಸೋರಾಮ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕ್ಷಸೌಭೀಮದರ್ಶನೌ ॥ ದಿಷ್ಟ್ಯಾತೌನಿಹತೌರಾಮಕುಂಭಕರ್ಣಸುತೌಮೃಧೇ ॥೧೪॥ ಯುದ್ಧೋನ್ಮತ್ತಶ್ಚ ಮತ್ತಶ್ಚ ಕಾಲಾಂತಕಯಮೋಪಮೌ ॥೧೫॥ ಯಜ್ಞಕೋಪಶ್ಚ ಬಲವಾನ್ ಧೂಮ್ರಾಕ್ಷೋನಾಮರಾಕ್ಷಸಃ । ಕುರ್ವಂತಃಕದನಂಘೋರಂ ಮೇತೇಶಸ್ತ್ರಾಸ್ತ್ರಪಾರಗಾಃ ॥ಅಂತಕಪ್ರತಿಮೈರ್ಬಾಣೈರ್ದಿಷ್ಟ್ಯಾವಿನಿಹತಾಸ್ತ್ವಯಾ ॥೧೬॥ ದಿಷ್ಟ್ಯಾತ್ವಂರಾಕ್ಷಸೇಂದ್ರೇಣದ್ವಂದ್ವಯುದ್ಧಮುಪಾಗತಃ ॥೧೭॥ ದೇವತಾನಾಮವಧ್ಯೇನವಿಜಯಂಪ್ರಾಪ್ತವಾನಸಿ।(*ಸಂಖ್ಯೇತಸ್ಯನಕಿಂಚಿತ್ತುರಾವಣಸ್ಯಪರಾಭವಃ) ॥೧೮॥ ದ್ವಂದ್ವಯುದ್ಧಮನುಪ್ರಾಪ್ತೋದಿಷ್ಟ್ಯಾತೇರಾವಣಿರ್ಹತಃ । ದಿಷ್ಟ್ಯಾತಸ್ಯಮಹಾಬಾಹೋಕಾಲಸ್ಯೇವಾಭಿಧಾವತಃ ॥ಮುಕ್ತಸ್ಸುರರಿಪೋರ್ವೀರಪ್ರಾಪ್ತಶ್ಚವಿಜಯಸ್ತ್ವಯಾ॥೧೯॥† ಅಭಿನಂದಾಮತೇಸರ್ವೇಸಂಶ್ರುತ್ಯೇಂದ್ರಜಿತೋವಧಮ್॥೨೦॥ಸೋಽವಧ್ಯಸ್ಸರ್ವಭೂತಾನಾಂಮಹಾಮಾಯಾಧರೋಯುಧಿ।ವಿಸ್ಮಯಸ್ತ್ವೇಷಚಾಸ್ಮಾಕಂತಚ್ಛ್ರುತ್ವೇಂದ್ರಜಿತಂಹತಮ್॥೨೧॥ಏತೇಚಾನ್ಯೇಚಬಹವೋರಾಕ್ಷಸಾಃಕಾಮರೂಪಿಣಃ । ದಿಷ್ಟ್ಯಾತ್ವಯಾಹತಾವೀರರಘೂಣಾಂ

---

ಹೇರಾಮ-ಎಲೈ ಶ್ರೀರಾಮನೆ, ಕುಂಭಶ್ಚ-ಕುಂಭನೆಂಬ, ನಿಕುಂಭಶ್ಚೈವೇತಿ-ನಿಕುಂಭನು ಎಂಬ, ಭೀಮದರ್ಶನೌ-ಕ್ರೂರನೋಟವುಳ್ಳ, ರಾಕ್ಷಸೌ-ರಾಕ್ಷಸರಾದ, ತೌಃಕುಂಭಕರ್ಣಸುತೌ-ಆ ಕುಂಭಕರ್ಣನ ಪುತ್ರರು, ಮೃಧೇ-ಯುದ್ಧದಲ್ಲಿ, ದಿಷ್ಟ್ಯಾ-ದೈವಗತಿಯಿಂದ, ನಿಹತೌ-ಕೊಲ್ಲಲ್ಪಟ್ಟರು ॥೧೪॥ ಯುದ್ಧೋನ್ಮತ್ತಶ್ಚ-ಯುದ್ಧೋನ್ಮತ್ತನು ,ಮತ್ತಶ್ಚ-ಮತ್ತನು ಎಂಬ ರಾಕ್ಷಸರಿಬ್ಬರು, ಕಾಲಾಂತಕ ಯಮೋಪಮೌ-ಕಾಲ ಪುರುಷನಿಗು ಅಂತಕನಿಗು ಯಮನಿಗು ಸಮಾನರಾದವರು, ಬಲವಾನ್-ಬಲವಂತನಾದ, ಯಜ್ಞಕೋಪಶ್ಚ-ಯಜ್ಞಕೋಪನುನ್ನು, ಧೂಮ್ರಾಕ್ಷೋನಾಮ-ಧೂಮ್ರಾಕ್ಷನೆಂದು ಪ್ರಸಿದ್ಧನಾದ, (ರಾಕ್ಷಸಃ-ಅಸುರನು ಎಂಬ, ) ಶಸ್ತ್ರಾಸ್ತ್ರಪಾರಗಾಃ - ಶಸ್ತ್ರವಿದ್ಯದಲ್ಲಿಯು ಅಸ್ತ್ರವಿದ್ಯದಯಲ್ಲಿಯು ಪಾರಂಗತರಾದ, ಏತೇ-ಈ ನಾಲ್ಕುಮಂದಿಯು, ಘೋರಂ-ಭಯಂಕರವಾದ, ಕದನಂ-ಕಾಳಗವನ್ನು ಮಾಡಿದವರಾಗಿ, ತ್ವಯಾ-ನಿನ್ನಿಂದ, ಅಂತಕಪ್ರತಿಮೈಃ-ಯಮಸದೃಶಗಳಾದ, ಬಾಣೈಃ-ಬಾಣಗಳಿಂದ, ದಿಷ್ಟ್ಯಾ-ದೈವಾಧೀನದಿಂದ, ವಿನಿಹತಾಃ-ಸಂಹೃತರಾದರು ॥೧೬॥ ತ್ವಂ-ನೀನು, ದೇವತಾನಾಂ-ದೇವತೆಗಳಿಗೆ, ಅವಧ್ಯೇನ-ವಧಾರ್ಹನಾಗದಿರುವ, ರಾಕ್ಷಸೇಂದ್ರೇಣ-ರಾಕ್ಷಸಾಧಿಪತಿಯಾದ ರಾವಣನೊಡನೆ, ದ್ವಂದ್ವಯುದ್ಧಂ-ಯುಗ್ಮಯುದ್ಧವನ್ನು, ಉಪಾಗತಃ-ಹೊಂದಿದವನಾಗಿ, ದಿಷ್ಟ್ಯಾ-ದೈವಾಧೀನದಿಂದ, ವಿಜಯಂ-ಜಯವನ್ನು, ಪ್ರಾಪ್ತವಾನ್-ಹೊಂದಿದವನು, ಅಸಿ-ಆದೇ, ಸಂಖ್ಯೇ-ಯುದ್ಧದಲ್ಲಿ, ತಸ್ಯರಾವಣಸ್ಯ-ಆ ರಾವಣನಿಗೆ, ಪರಾಭವಃ-ಪರಾಜಯವು, ಕಿಂಚಿತ್-ಸ್ವಲ್ಪವಾದರು, ನ-ಇಲ್ಲ ॥೧೮॥ ಹೇಮಹಾಬಾಹೋ-ಎಲೈ ಬಹುಭುಜಪರಾಕ್ರಮಿಯೆ, ದ್ವಂದ್ವಯುದ್ಧಂ-ದ್ವಂದ್ವಯುದ್ಧವನ್ನು, ಅನುಪ್ರಾಪ್ತಃ-ಹೊಂದಿದ, ರಾವಣಿಃ-ಇಂದ್ರಜಿತುವು, ದಿಷ್ಟ್ಯಾ-ದೈವಾಧೀನದಿಂದ, ತೇ-ನಿನ್ನಿಂದ, ಹತಃ-ಸಂಹರಿಸಲ್ಪಟ್ಟನು ॥ ಹೇವೀರ-ಎಲೈಶೂರನೆ, ಕಾಲಸ್ಯೇವ-ಯಮನೋಪಾದಿಯಲ್ಲಿ, ಅಭಿಧಾವತಃ-ಓಡಿಬರುತಿರುವ, ತಸ್ಯಸುರರಿಪೋಃ-ಆ ಇಂದ್ರಜಿತುವಿನ, ಶರಬಂಧಾತ್-ನಾಗಪಾಶದದೆಸೆಯಿಂದ, ದಿಷ್ಟ್ಯಾ-ದೈವಾಧೀನದಿಂದ, ಮುಕ್ತಃ-ಬಿಡಲ್ಪಟ್ಟೆ, ತ್ವಯಾ-ನಿನ್ನಿಂದ, ವಿಜಯಶ್ಚ-ಜಯವುನ್ನುಸಹ, ಪ್ರಾಪ್ತಃ-ಹೊಂದಲ್ಪಟ್ಟಿತು ॥ ೧೯ ॥ ಸರ್ವೇ-ನಾವೆಲ್ಲರು, ತೇ-ನಿನ್ನದೆಸೆಯಿಂದ, ಇಂದ್ರಜಿತಃ-ಇಂದ್ರಜಿತುವಿನ, ವಧಂ-ಸಂಹಾರವನ್ನು, ಸಂಶ್ರುತ್ಯ-ಕೇಳಿ, ಅಭಿನಂದಾಮ-ಸಂತೋಷಿಸುತಿಧೆವೆ ॥ ೨೦ ॥ ಯುಧಿ-ಯುದ್ಧದಲ್ಲಿ, ಮಹಾಮಾಯಾಧರಃ-ಅತಿಮಾಯಾವಿಯಾದ, ಸಃ-ಆ ಇಂದ್ರಜಿತುವು, ಸರ್ವಭೂತಾನಾಂ-ಸಮಸ್ತಭೂತಗಳಿಗು, ಅವಧ್ಯಃ-ವಧಿಸಲಸಾಧ್ಯನು, ತತ್-ಆಕಾರಣದ ದೆಸೆಯಿಂದ, ಇಂದ್ರಜಿತಂ-ಇಂದ್ರಜಿತುವಿನನ್ನು, ಹತಂ-ನಿನ್ನಿಂದ ಹೊಡಿಯಲ್ಪಟ್ಟವನನ್ನಾಗಿ, ಶ್ರುತ್ವಾ-ಕೇಳಿ, ಏಷತು-ಇದಾದರೆ, ಅಸ್ಮಾಕಂ-ನಮಗು (ಇತರೇಷಾಂಚ-ಇತರರಿಗೂಸಹ) ವಿಸ್ಮಯಃ-ಆಶ್ಚರ್ಯವು ॥ ೨೧ ॥ ಹೇರಘೂಣಾಂಕುಲವರ್ಧನ-ಎಲೈ ರಘುಕುಲಪೋಷಕನೆ, ಏತೇಚ-ಈ ಪೂರ್ವೋಕ್ತರುನ್ನು, ಅನ್ಯೇಚ-ಇತರರುನ್ನು, ಕಾಮರೂಪಿಣಃ-ಸ್ವೇಚ್ಛಾ ರೂಪಿಗಳಾದ, ವೀರಾಃ-

---

ಭೀಮದರ್ಶನವುಳ್ಳ ಕುಂಭಕರ್ಣನಕುಮಾರರಾದ ಕುಂಭ ನಿಕುಂಭರೆಂಬೀರ್ವರು ರಣರಂಗದಲ್ಲಿ ದೈವಗತಿಯಿಂದ ಹತರಾದರು॥ ಕಾಲಾಂತಕ ತುಲ್ಯರಾದ, ಶಸ್ತ್ರಾಸ್ತ್ರ ವಿದ್ಯಾ ಪಾರಂಗತರಾದ, ಯುದ್ಧೋನ್ಮತ್ತ, ಮತ್ತ ಯಜ್ಞಕೋಪ, ಧೂಮ್ರಾಕ್ಷನೆಂಬೀ ನಾಲ್ವರು ಘೋರವಾದ ಕದನವಂ ಮಾಡುತಿರುವರಾಗಿ, ನಿನ್ನ ಬಾಣಜಾಲಗಳಿಂದ ದೈವವ ಶಾನ್ನಿಹತರಾದರು ॥೧೬॥ದೇವತೆಗಳಿಗೂ ಸಹ ಅವಧ್ಯನಾದ ಎಲ್ಲಿಯಾದರು ಪರಾಜಯುವಿಲ್ಲದಿರುವ ಅಂಥ ಲೋಕ ಕಂಟಕನಾದ ದಶಕಂಠನೊಡನೆ ದ್ವಂದ್ವಯುದ್ಧವಂ ಗೈದು ದೈವಾಧೀನದಿಂದ ವಿಜಯುವನ್ನು ಹೊಂದಿದೆ ॥೧೮॥ ಎಲೈ ಭುಜಪರಾಕ್ರಮಿಯಾದವನೆ ಕಾಲಪುರುಷನಂತೆ ತರುಬಿಕೊಂಡು ಬರುತಿರುವ ಆ ಇಂದ್ರಜಿತುವಿನ ಶರ ಬಂಧಕ್ಕೆ ಶಿಲುಕಿದ ನೀನು ದೈವಾಧೀನದಿಂದ ಮುಕ್ತನಾದೆ, ಮಹಾ ಮಾಯಾವಿಯಾದ ಸರ್ವಭೂತಗಳಿಗೂ ಅವಧ್ಯನಾದ ಅಂಥ ಮೇಘನಾದನೆ ದ್ವಂದ್ವಯುದ್ಧವಂ ಗೈಯ್ಯುತ್ತಿರುವನಾಗಿ ನಿನ್ನಿಂದ ಹತನಾದನೆಂಬುದಂ ಕೇಳಿ ನಾವೆಲ್ಲರು ಪರಮಾಶ್ಚರ್ಯಭರಿತರಾದೆವು॥೨೧ ಎಲೈ ರಘುಕುಲೋದ್ಧಾರಕನಾದ ಶೂರನೇ! ಈ ಪೂರ್ವೋಕ್ತರಾದವರು ಮತ್ತು ಕಾಮರೂಪಿಗಳಾದ ಅನೇಕ ಇತರ

---

* ಸಂಖ್ಯೇನಸಹತೇಕಶ್ಚಿದ್ರಾವಣೇಸ್ತುಪರಾಕ್ರಮಂ. †ವಿಸ್ಮಯಸ್ತ್ವೇಷಚಾಸ್ಮಾಕಂಸಂಶ್ರುತ್ಯೇಂದ್ರಜಿತಂಹತಂ |ಅವಧ್ಯಂಸರ್ವಭೂತಾನಾಂ ಮಹಾಮಾಯಾಧರಂಯುಧಿ.

CC-0. Bhagavad Ramanuja National Research Institute, Melukote Collection

Funding: Tattva Heritage Foundation,Kolkata. Digitization: eGangotri.



ಕುಲವರ್ಧನ ||೩೨|| ದತ್ವಾಪುಣ್ಯಾಮಿಮಾಂವೀರಸೌಮ್ಯಾಮಭಯದಕ್ಷಿಣಾಮ್ | ದಿಷ್ಟ್ಯಾವರ್ಧಸಿಕಾಕುಸ್ಥ ಜಯೇನಾಮಿತ್ರಕರ್ಶನ ||೩೩|| ಶ್ರುತ್ವಾತುತೇಷಾಂವಚನಮೃಷೀಣಾಂಭಾವಿತಾತ್ಮನಾಮ್ | ವಿಸ್ಮಯಂಪರಮಂಗತ್ವಾರಾಮಃಪ್ರಾಂಜಲಿರಬ್ರವೀತ ||೩೪|| ಭಗವಂತಃಕುಂಭಕರ್ಣಂರಾವಣಂಚ*ನಿಶಾಚರಮ್ | ಅತಿಕ್ರಮ್ಯಮಹಾವೀರ್ಯೌಕಿಂಪ್ರಶಂಸಥರಾವಣಿಮ್ ||೩೫|| ಮಹೋದರಂಪ್ರಹಸ್ತಂಚ ವಿರೂಪಾಕ್ಷಂಚರಾಕ್ಷಸಮ್ | ಮತ್ತೋನ್ಮತ್ತೌಚದುರ್ಧರ್ಷೌದೇವಾಂತಕನರಾಂತಕೌ || ಅತಿಕ್ರಮ್ಯಮಹಾವೀರ್ಯಾನ್ ಕಿಂಪ್ರಶಂಸಥರಾವಣಿಮ್ ||೩೬|| ಅತಿಕಾಯಂತ್ರಿಶಿರಸಂಧೂಮ್ರಾಕ್ಷಂಚನಿಶಾಚರಮ್ | ಅತಿಕ್ರಮ್ಯಮಹಾವೀರ್ಯಾನ್‌ಕಿಂಪ್ರಶಂಸಥರಾವಣಿಮ್ ||೩೭|| ಕೀದೃಶೋವೈಪ್ರಭಾವೋಸ್ಯ ಕಿಂಬಲಂಕಃಪರಾಕ್ರಮಃ | ಕೇನವಾಕಾರಣೇನೈವರಾವಣಾದತಿರಿಚ್ಯತೇ ||೩೮|| ಶಕ್ಯಂಯದಿಮಯಾಶ್ರೋತುಂನಖಲ್ವಾಜ್ಞಾಪಯಾಮಿವಃ | ಯದಿಗುಹ್ಯಂನಚೇದ್ವಕ್ತುಂಶ್ರೋತುಮಿಚ್ಛಾಮಿಕಥ್ಯತಾಮ್||೪೦|| ಕಥಂಶಕ್ರೋಜಿತಸ್ತೇನಕಥಂಲಬ್ಧವರಶ್ಚ ಸಃ|ಕ

ಶೂರರಾದ, ಬಹವೋರಾಕ್ಷಸಾಃ-ಅನೇಕರಾಕ್ಷಸರು, ತ್ವಯಾ-ನಿನ್ನಿಂದ, ದಿಷ್ಟ್ಯಾ-ದೈವಾಧೀನದಿಂದ, ಹತಾಃ-ಸಂಹೃತರಾದರು|| ೩೨ || ಹೇವೀರ-ಎಲೈಶೂರನೆ! ಹೇಕಾಕುತ್ಸ್ಥ-ಎಲೈಕಕುತ್ಸ್ಥವಂಶೋತ್ಪನ್ನನೆ! ಹೆ ಅಮಿತ್ರಕರ್ಶನ!ಎಲೈ ಶತ್ರುನಾಶಕನೆ! ಸೌಮ್ಯಾಂ- ಶಾಂತಿಕರವಾದ,ಪುಣ್ಯಾಂ-ಪುಣ್ಯಕರವಾದ, ಇಮಾಂ-ಈ, ಅಭಯದಕ್ಷಿಣಾಂ-ಅಭಯಪ್ರದಾನ ರೂಪವಾದ ದಕ್ಷಿಣೆಯನ್ನು, ದತ್ವಾ-ಕೊಟ್ಟು, ದಿಷ್ಟ್ಯಾ-ದೈವಾಧೀನದಿಂದ, ಜಯೇನ-ವಿಜಯದಿಂದ, ವರ್ಧಸಿ-ವೃದ್ಧಿಹೊಂದುವಿ || ೩೩ || ರಾಮಃ-ಶ್ರೀರಾಮನು, ಭಾವಿತಾತ್ಮನಾಂ - ಧ್ಯಾನಿಸಲ್ಪಟ್ಟ ಪರಮಾತ್ಮವುಳ್ಳ, ತೇಷಾಮೃಷೀಣಾಂ- ಆ ಮುನಿಗಳ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಪರಮಂವಿಸ್ಮಯಂ-ಅತ್ಯಾಶ್ಚರ್ಯವನ್ನು, ಗತ್ವಾ-ಹೊಂದಿ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ಅಬ್ರವೀತ್- ನುಡಿದನು||೩೪||ಹೆ ಭಗವಂತಃ-ಎಲೈ ಪೂಜ್ಯರೆ, ಮಹಾವೀರ್ಯೌ-ಬಹುಪರಾಕ್ರಮಿಗಳಾದ,ರಾವಣಂ-ರಾವಣನನ್ನು, ನಿಶಾಚರಂ-ಅಸುರನಾದ,ಕುಂಭಕರ್ಣಂ-ಕುಂಭಕರ್ಣನನ್ನು,ಅತಿಕ್ರಮ್ಯ-ಬಿಟ್ಟು, ರಾವಣಿಂ-ಇಂದ್ರಜಿತುವಿನನ್ನು,ಕಿಂಪ್ರಶಂಸಥ-ಯಾಕೆಸ್ತುತಿಸುವಿರಿ||೩೫||ಮಹೋದರಂ-ಮಹೋದರನನ್ನು,ಪ್ರಹಸ್ತಂಚ-ಪ್ರಹಸ್ತನನ್ನು, ರಾಕ್ಷಸಂ-ರಾಕ್ಷಸನಾದ, ವಿರೂಪಾಕ್ಷಂ-ವಿರೂಪಾಕ್ಷನನ್ನು, ದುರ್ಧರ್ಷೌ - ವಾರಿಸಲಸಾಧ್ಯರಾದ, ಮತ್ತೋನ್ಮತ್ತೌಚ -ಮತ್ತೋನ್ಮತ್ತ ರೆಂಬವರನ್ನು, ದೇವಾಂತಕನರಾಂತಕೌ-ದೇವಾಂತಕ ನರಾಂತಕರನ್ನು,(ಎಬ)ಮಹಾವೀರ್ಯಾನ್-ಮಹಾ ಪರಾಕ್ರಮಿಗಳನ್ನು, ಅತಿಕ್ರಮ್ಯ-ಕಳದು, ರಾವಣಿಂ-ರಾವಣಪುತ್ರನನ್ನು, ಕಿಂಪ್ರಶಂಸಥ-ಯಾತಕ್ಕೆಶ್ಲಾಘಿಸುವಿರಿ ||೩೬||ಅತಿಕಾಯಂ-ಅತಿಕಾಯನನ್ನು, ತ್ರಿಶಿರಸಂ-ತ್ರಿಶಿರಸ್ಕನನ್ನು, ಧೂಮ್ರಾಕ್ಷಂನಿಶಾಚರಂಚ-ಧೂಮ್ರಾಕ್ಷನೆಂಬ ರಾಕ್ಷಸನನ್ನು, ಮಹಾವೀರ್ಯಾನ್-ಮಹಾಪರಾಕ್ರಮ ಶಾಲಿಗಳಾದ ಇವರನ್ನು, ಅತಿಕ್ರಮ್ಯ-ಒದಲಿ, ರಾವಣಿಂ-ಇಂದ್ರಜಿತುವಿನನ್ನು, ಕಿಂಪ್ರಶಂಸಥ-ಯಾತಕ್ಕೆ ಸ್ತುತಿಸುವಿರಿ || ೩೭||ಅಸ್ಯ-ಈ ಇಂದ್ರಜಿತುವಿನ, ಪ್ರಭಾವಃ-ಪ್ರಭಾವವು, ಕೀದೃಶಃ- ಎಂಥಾದ್ದು, ಬಲಂ-ದೇಹಶಕ್ತಿಯು, ಕಿಂ-ಎಂಥಾದ್ದು, ವಿಷಃ-ಈ ಇಂದ್ರರಿಪುವು, ಕೇನಕಾರಣೇನವಾ-ಯಾವ ಕಾರಣದಿಂದ, ರಾವಣಾತ್-ರಾವಣನಿಗಿಂತಲು, ಅತಿರಿಚ್ಯತೇ-ಅಧಿಕನಾಗಿಧಾನೆ, ನಖಲು-ತಮಗೆಇದರೆ, ನಾಜ್ಞಾಪಯಾಮಿ-ಆಜ್ಞಾಪಿಸಲಾರೆನು, ಮಯಾ-ನನ್ನಿಂದ, ಶ್ರೋತುಂ-ಕೇಳುವದಕ್ಕೆ, ಶಕ್ಯಂಯದಿ-ಸಾಧ್ಯನಾಗಿದ್ದರೆ, ವಕ್ತುಂ-ಹೇಳುವದಕ್ಕೆ, ಗುಹ್ಯಂ-ರಹಸ್ಯವಾದ್ದು, ನಚೇದ್ಯದಿ-ಆಗದಿದ್ದರೆ, ಶ್ರೋತುಂ - ಕೇಳುವದಕ್ಕೆ, ಇಚ್ಛಾಮಿ-ಅಪೇಕ್ಷಿಸುತ್ತೇನೆ, ಕಥ್ಯತಾಂ-ಹೇಳಲ್ಪಡಲಿ, ತೇನ-ಆ ಇಂದ್ರಜಿತುವಿನಿಂದ, ಶಕ್ರಃ-ದೇವೇಂದ್ರನು ಕಥಂಜಿತಃ-ಹ್ಯಾಗೆಜಯಿಸಲ್ಪಟ್ಟನು, ಸಚ-ಆ ಇಂದ್ರಜಿತುವ್ವನ್ನು, ಕಥಂ-ಹ್ಯಾಗೆ, ಲಬ್ಧವರಃ-ಪ್ರಾಪ್ತವರವುಳ್ಳವನು || ೪೦ || ಪುತ್ರಃ-ಮಗನು, ಕಥಂಬಲವಾನ್-ಹ್ಯಾಗೆ ಬಲಿಷ್ಠನಾದನು, ತಸ್ಯ-ಆ ಇಂದ್ರಜಿತುವಿನ, ಪಿತಾ-ತಂದೆಯಾದ, ರಾವಣಃ-ರಾವಣನು, ಕಥಂನಬಲವಾನ್-ಹ್ಯಾಗೆ ಬಲವಂತ ನಾಗಲಿಲ್ಲ || ೪೧ || ಹೇಮುನೀಂದ್ರ-ಎಲೈ ಅಗಸ್ತ್ಯಮುನಿಯೆ ! ಸರಾಕ್ಷಸಾಃ-ಅ

ರಾಕ್ಷಸರುನ್ನು ದೈವವಶಾನ್ನಿನ್ನಿಂದ ಸಂಹೃತರಾದರು||೩೨||ಎಲೈ ಶತ್ರುಶಮನ ಶೀಲನಾದ ಕಾಕುಸ್ಥನೇ! ಸೌಮ್ಯಕರವಾಗಿಯೂ,ಪುಣ್ಯಕರವಾಗಿಯೂ ಇರುವ ಈ ಅಭಯವೆಂಬ ದಕ್ಷಿಣೆಯನ್ನು ಸರ್ವಜನರಿಗೂಕೊಟ್ಟು,ವಿಜಯಾಭಿವರ್ಧಿತನಾಗಿದ್ದೀ ||೩೩|| ಶ್ರೀರಾಮ ಮೂರ್ತಿಯು ಆ ಮಹರ್ಷಿಗಳ ವಾಕ್ಯವಂ ಕೇಳಿ, ಅಂಜಲಿ ಬದ್ಧನಾಗಿ ಹೇಳಿದನು||೩೪||ಎಲೈಪೂಜ್ಯರುಗಳಿರಾ ! ಮಹಾಶೂರರಾದ ರಾವಣ ಕುಂಭಕರ್ಣರನ್ನು ಮಹಾಶಕ್ತಿಯುಕ್ತರಾದ ಮಹೋದರ,ಪ್ರಹಸ್ತ, ವಿರೂಪಾಕ್ಷ, ಮತ್ತ, ಉನ್ಮತ್ತ, ದೇವಾಂತಕ, ನರಾಂತಕನೇ ಮೊದಲಾದ ಕಡುಪರಾಕ್ರಮ ಶಾಲಿಗಳನ್ನೆಲ್ಲ ತೊರದು ಆ ಇಂದ್ರಜಿತುವಿನನ್ನೇ ಯಾಕೆ ಪ್ರಶಂಸಿಸುತಿರುವಿರಿ. ಮತ್ತೆ ಅವನ ಪ್ರಭಾವವೆಂಥಾದ್ದು? ಆತನಿಗೇನು ಬಲವು? ಅವನ ಸಾಮರ್ಥ್ಯವೆಂಥಾದ್ದು ? ಯಾವಕಾರಣದಿಂದ ಅವನು ರಾವಣನಿಗಿಂತಲು ಅಧಿಕನಾದನು ||೩೮||ಅದು ಪರಮ ರಹಸ್ಯವಾಗದಿದ್ದು ನಾನು ಕೇಳಬಹುದಾದರೆ ದಯಪಾಲಿಸಿ ಹೇಳ ಬಹುದು? ನಾನಾದರೆ ಶ್ರವಣೇಚ್ಛೆಯುಳ್ಳಿ, ಬದ್ಧೋತ್ಕಂಠನಾಗಿಧೇನೆ. ಖಂಡಿತವಾಗಿ ಹೇಳಬೇಕೆಂದು ಆಜ್ಞಾಪಿಸುವ ಶಕ್ತಿಯು ಎನಗೆ ಸಾಲದು ||೩೯|| ಎಲೈ ಮುನೀಂದ್ರನೇ! ಈ ಇಂದ್ರಜಿತುವಿನಿಂದ ದೇವೇಂದ್ರನು ಹ್ಯಾಗೆ ಜಯಿಸಲ್ಪಟ್ಟನೋ, ಹ್ಯಾಗೆ ವರಗಳು ಪ್ರಾಪ್ತವಾಯಿತೋ ಇವನು

* ಮಹಾಬಲಂ.



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಥಂಸಬಲವಾನ್ಪಿತೊ್ರನಪಿತಾತಸ್ಯರಾವಣಃ॥೪೦॥ಕಥಂಪಿತುಶ್ಚಾಪ್ಯಧಿಕೊಮಹಾಹವೆಶಕ್ರಸ್ಯಜಿತಾಹಿಕಥಂಸರಾಕ್ಷಸಃ। ವರಾಶ್ಚಲಬ್ಧಾಃಕಥಯಸ್ವಮೆದ್ಯತತ್ಪೃಚ್ಛತಶ್ಚಾಸ್ಯಮುನೀಂದ್ರಸರ್ವಂ ... ... ... ॥೪೧॥

—...ಇತಿ ಶ್ರೀಮದುತ್ತರ ರಾಮಾಯಣೆ ಪ್ರಥಮಸ್ಸರ್ಗಃ...—

ತಸ್ಯತದ್ವಚನಂಶ್ರುತ್ವಾರಾಘವಸ್ಯಮಹಾತ್ಮನಃ ।ಕುಂಭಯೊನಿರ್ಮಹಾತೆಜಾವಾಕ್ಯಮೆತದುವಾಚಹ ॥೧॥ ಶೃಣುರಾಮೆಯಥಾವೃತ್ತಂತಸ್ಯತೆಜೊಬಲಂಮಹತ । † ಜಘಾನಶತೂ್ರನ್ಯೆನಾಸೌನಚಾವಧ್ಯಸ್ಸಶತ್ರುಭಿಃ॥೨॥ತಾವತ್ತೆರಾವಣಸ್ಯೆದಂಕುಲಂಜನ್ಮಚರಾಘವ । ವರಪ್ರದಾನಂಚತಥಾತಸ್ಮೈದತ್ತಂಬ್ರವೀಮಿತೆ ॥೩॥ಪುರಾಕೃತಯುಗೆರಾಮಪ್ರಜಾಪತಿಸುತಃಪ್ರಭುಃ । ಪುಲಸ್ತ್ಯೊನಾಮಬ್ರಹ್ಮರ್ಷಿಸ್ಸಾಕ್ಷಾದಿವಪಿತಾಮಹಃ ॥ ೪ ॥ನಾನುಕೀರ್ತ್ಯಾಗುಣಾಸ್ತಸ್ಯಧರ್ಮತಶ್ಶೀಲತಸ್ತಥಾ । ಪ್ರಜಾಪತೆಃಪುತ್ರಇತಿಶಕ್ಯಂವಕ್ತುಂಹಿನಾಮತಃ ॥೫॥ ಪ್ರಜಾಪತಿಸುತತ್ವೆನದೆವಾನಾಂವಲ್ಲಭೊಹಿಸಃ । ಇ

---

ಇಂದ್ರಜಿತುವೆಂಬ ರಾಕ್ಷಸನು, ಮಹಾಹವೆ-ಮಹಾಯುದ್ಧದಲ್ಲಿ, ಪಿತುಶ್ಚಾಪಿ-ತಂದೆಗಿಂತಲು ಕೂಡ, ಕಥಮಧಿಕಃ-ಹ್ಯಾಗೆ ಅಧಿಕನಾದನು, ಶಕ್ರಸ್ಯ-ದೇವೇಂದ್ರನನ್ನು, ಕಥಂಜಿತಾ-ಹ್ಯಾಗೆಜಯಿಸಿದನು, ವರಾಶ್ಚ-ವರಗಳುನ್ನು ಸಹ, ಕಥಂಲಬ್ಧಾಃ - ಹ್ಯಾಗೆ ಹೊಂದಲ್ಪಟ್ಟವು, ತತ್-ಅದನ್ನು, ಪೃಚ್ಛತಃ-ಕೇಳುತಿರುವ, ಮೆ-ನನಗೆ, ಅಸ್ಯ-ಈ ಇಂದ್ರಜಿತುವಿನ, ಸರ್ವಂಚ-ಸಮಸ್ತವನ್ನು, ಕಥಯಸ್ವ-ಹೇಳು ... ... ... ॥ ೪೧ ॥

ಶ್ರೀಮದುತ್ತರ ರಾಮಾಯಣದಲ್ಲಿ ೧ನೇ ಸರ್ಗ ಮುಗಿದುದು.

ಮಹಾತ್ಮನಃ-ಮಹಾನುಭಾವನಾದ, ತಸ್ಯರಾಘವಸ್ಯ-ಆ ಶ್ರೀರಾಮನ, ತದ್ವಚನಂ-ಆಮಾತನ್ನು, ಶ್ರುತ್ವಾ-ಕೇಳಿ, ಮಹಾತೇಜಾಃ-ಅತಿತೇಜಸ್ವಿಯಾದ, ಕುಂಭಯೊನಿಃ-ಅಗಸ್ತ್ಯಋಷಿಯು, ರಾಮಂ-ಶ್ರೀರಾಮನನ್ನುಕುರಿತು,ಏತದ್ವಾಕ್ಯಂ-ಈ ವಕ್ಷ್ಯಮಾಣ ವಚನವನ್ನು, ಉವಾಚಹ-ಹೇಳಿದನಷ್ಟೆ॥ ಹೆರಾಮ-ಎಲೈರಾಮನೆ ! ಯೆನ-ಯಾವಕಾರಣದಿಂದ, ತೆಜೊಬಲಂ-ಅಂತಸ್ಸಾರವು ದೇಹತ್ರಾಣೆಯೂಸಹ, ಮಹತ್-ಅಧಿಕವಾಯತೋ, ಯೆನ-ಯಾವಕಾರಣದಿಂದ, ಅಸೌ-ಈ ಇಂದ್ರಜಿತುವು, ಶತ್ರೂನ್-ಹಗೆಯರನ್ನು, ಜಘಾನ-ಹೊಡೆದನೋ, ಸಚ-ಆ ಇಂದ್ರಜಿತುವುನ್ನು, ಯೆನ-ಯಾವಕಾರಣದಿಂದ, ಶತ್ರುಭಿಃ-ದ್ವೇಷಿಗಳಿಂದ, ನಾವಧ್ಯಶ್ಚ-ವಧಿಸಲಸಾಧ್ಯನೋ, ತಸ್ಯ-ಆ ಇಂದ್ರಜಿತುವಿನ, ಕಥಾವೃತ್ತಂ-ಪೂರ್ವದಲ್ಲಿನಡೆದ ಚರಿತ್ರೆಯನ್ನು, ಶೃಣು-ಕೇಳು ॥ ೨ ॥ ಹೆರಾಘವ-ಎಲೈಶ್ರೀರಾಮನೆ, ತಾವತ್-ಮೊದಲು, ತೆ-ನಿನಗೆ, ರಾವಣಸ್ಯ-ರಾವಣನ, ಇದಂಕುಲಂ-ಈ ವಂಶವನ್ನು, ಜನ್ಮಚ-ಉತ್ಪತ್ತಿಯನ್ನೂ, ತಸ್ಮೈ-ಆ ರಾವಣನಿಗೆ, ಯಥಾ-ಹ್ಯಾಗೆ-ವರಪ್ರದಾನಂ-ವರದಾನವು, ದತ್ತಂ-ಕೊಡಲ್ಪಟ್ಟಿತೋ, ತಥಾ-ಹಾಗೆ,ತೆ-ನಿನಗೆ, ಬ್ರವೀಮಿ-ಹೇಳುವೆನು ॥ ೩ ॥ ಹೆರಾಮ-ಎಲೈ ರಾಘವನೆ! ಪುರಾ-ಪೂರ್ವಕಾಲದಲ್ಲಿ, ಕೃತಯುಗೆ-ಕೃತಯುಗದಲ್ಲಿ, ಪ್ರಜಾಪತಿಸುತಃ-ಬ್ರಹ್ಮಪುತ್ರನಾದ, ಪ್ರಭುಃ - ಸಮರ್ಥನಾದ, ಪುಲಸ್ತ್ಯೊನಾಮ-ಪುಲಸ್ತ್ಯನೆಂದು ಪ್ರಸಿದ್ಧನಾದ, ಬ್ರಹ್ಮರ್ಷಿಃ-ಬ್ರಹ್ಮಋಷಿಯು, ಸಾಕ್ಷಾತ್-ಪ್ರತ್ಯಕ್ಷನಾದ, ಪಿತಾಮಹಇವ-ಬ್ರಹ್ಮನಂತೆ,ಆಸೀತ್-ಆದನು ॥ ೪ ॥ ತಸ್ಯ-ಆ ಪುಲಸ್ತ್ಯನ-ಗುಣಾಃ-ಗುಣಗಳು, ಧರ್ಮತಃ-ಧರ್ಮದದೆಶೆಯಿಂದಲು, ತಥಾ-ಹಾಗೆ, ಶೀಲತಃ-ಸ್ವಭಾವದದೆಶೆಯಿಂದಲು, ನಾನುಕೀರ್ತ್ಯಾಃ-ವರ್ಣಿಸಲಸಾಧ್ಯವಾದವು, ಪ್ರಜಾಪತೆಃ-ಬ್ರಹ್ಮನಿಗೆ, ಪುತ್ರಇತಿ-ಪುತ್ರನೆಂದು, ನಾಮತಃ-ಹೆಸರಿನಿಂದ, ವಕ್ತುಂ-ಹೇಳುವದಕ್ಕೆ, ಶಕ್ಯಂಹಿ-ಸಾಧ್ಯವಷ್ಟೆ ॥ ೫ ॥ ಪ್ರಜಾಪತಿಸುತತ್ವೆನ-ಚತುರ್ಮುಖ ಬ್ರಹನ ಪುತ್ರಭಾವದಿಂದ, ದೇವಾನಾಂ-ದೇವತೆಗಳಿಗೆ, ವಲ್ಲಭಃ-ಇಷ್ಟನಾದ, ಮಹಾವು

---

ಹ್ಯಾಗೆ ಬಲವಂತನಾದನೋ, ಇವನಿಗಿಂತಲೂ ತಂದೆಯು ಹ್ಯಾಗೆ ಬಲವಂತನಲ್ಲವೋ, ರಣರಂಗದಲ್ಲಿ ತಂದೆಗಿಂತಲೂ, ಹ್ಯಾಗೆ ಬಲಾಧಿಕನಾದನೋ, ಇವುಗಳನ್ನೆಲ್ಲ ಪೃಚ್ಛಿಸುತ್ತಿರುವ ನನಿಗೆ ವಿಸ್ತರಿಸಿ ಹೇಳು. ... ... ॥೪೧॥

ಶ್ರೀಮದುತ್ತರ ರಾಮಾಯಣದಲ್ಲಿ ೧ನೇ ಸರ್ಗ ಮುಗಿದುದು.

ಕಡು ತೇಜಸ್ವಿಯಾದ ಆ ಅಗಸ್ತ್ಯ ಮಹಾಮುನಿಯು ಮಹಾತ್ಮನಾದ ಶ್ರೀರಾಮನ ಆ ವಾಕ್ಯವನ್ನು ಕೇಳಿ ಈ ಮಾತನ್ನು ಹೇಳ ತೊಡಗಿದನು ॥೧॥ ಎಲೈಶ್ರೀರಾಮನೆ! ಈ ಇಂದ್ರಜಿತುವು ಯಾವಕಾರಣದಿಂದ ತಾನು ಅಜೇಯನಾಗಿ ಶತೃನಿಗ್ರಹವಂಗೈದನೋ ? ಅದನ್ನು ಮತ್ತು ಮಹತ್ತರವಾದ ಆತನ ತೇಜೋಬಲವನ್ನು ಸಹ ಕೇಳು ॥೨॥ ಎಲೈ ರಾಘವನೆ! ರಾವಣಾಸುರನ ವಂಶ ವಿಸ್ತಾರವು ಮತ್ತು ಆವರ ಉತ್ಪತ್ತಿಯು ವರಪ್ರಾಪ್ತಿಯು ಸಹ ಹ್ಯಾಗೆ ಉಂಟಾಯಿತೋ ಹಾಗೆಯೇ ಅವುಗಳನ್ನೆಲ್ಲ ನಿನಗೆ ವಿಸ್ತರಿಸಿ ಹೇಳುವೆನು ॥೩॥ ಎಲೈ ದಶರಥನಂದನನೆ ! ಪೂರ್ವಕಾಲದೋಳ್ ಕೃತಯುಗದಲ್ಲಿ ಚತುರ್ಮುಖಬ್ರಹ್ಮ ಪುತ್ರನಾದ ಮಹಾ ಸಮರ್ಥನಾದ ಪುಲಸ್ತ್ಯನೆಂಬ ಬ್ರಹ್ಮರ್ಷಿಯು ಸಾಕ್ಷಾತ್ಪಿತಾಮಹನಂತೆ ಹೊಳೆಯುತಿದ್ದನು ॥೪॥ ಧರ್ಮವಿಷಯದಲ್ಲಿಯಾಗಲಿ, ಸ್ವಭಾವವಿಷಯದಲ್ಲಿಯಾಗಲಿ, ಆ ಪುಲಸ್ತ್ಯನ ಗುಣಗಳು ವರ್ಣಿಸಲಸಾಧ್ಯವಾದವುಗಳು. ಆದರೆ ಬ್ರಹ್ಮಮಾನಸ ಪುತ್ರನೆಂದು ನಾಮಮಾತ್ರದಿಂದ ಹೇಳಲು ಶಕ್ಯವಾಗಿರುವದು ॥೫॥ ಚತುರ್ಮುಖಬ್ರಹ್ಮನ ಪುತ್ರತ್ವದಿಂದ ದೇವತೆಗಳಿಗೆ ಪ್ರೀತಿಪಾತ್ರನಾದ ಮಹಾ ಬುದ್ಧಿಶಾಲಿಯಾದ ಆತನು ಜನರಿಗೆಲ್ಲ

---

† ಜಘಾನ ಚರಿಪೂನ್ಯುದ್ಧೆ ನಚಾವಧ್ಯಶ್ಚ ಶತ್ರುಭಿಃ ॥೨॥ ಅಹಂತೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಷ್ಟಸ್ಸರ್ವಸ್ಯಲೋಕಸ್ಯಗುಣೈಶ್ಶುಭ್ರೈರ್ಮಹಾಮತಿಃ ॥೬॥ ಸತುಧರ್ಮಪ್ರಸಂಗೇನಮೇರೋಃಪಾರ್ಶ್ವೇಮಹಾಗಿರೇಃ ।*ತೃಣ
ಬಿಂದ್ವಾಶ್ರಮಂಗತ್ವಾನ್ಯವಸನ್ಮುನಿಪುಂಗವಃ ॥೭॥ ತಪಸ್ತೇಪೇಸಧರ್ಮಾತ್ಮಾಸ್ವಾಧ್ಯಾಯನಿಯತೇಂದ್ರಿಯಃ । † ಗತ್ವಾಶ್ರ
ಮಪದಂತಸ್ಯವಿಘ್ನಂಕುರ್ವಂತಿಕನ್ಯಕಾಃ ॥೮॥ ದೇವಪನ್ನಗಕನ್ಯಾಶ್ಚ ರಾಜರ್ಷಿತನಯಾಶ್ಚ ಯಾಃ । ಕ್ರೀಡಂತ್ಯೋಪ್ಸರಸ
ಶ್ಚೈವತಂದೇಶಮುಪಪೇದಿರೇ ॥೯॥ ಸರ್ವರ್ತೂಪಭೋಗ್ಯತ್ವಾದ್ರಮ್ಯತ್ವಾತ್ಕಾನನಸ್ಯಚ । ನಿತ್ಯಶಸ್ತಾಶ್ಚ ತಂದೇಶಂಗತ್ವಾ
ಕ್ರೀಡಂತಿಕನ್ಯಕಾಃ ॥೧೦॥ ದೇಶಸ್ಯರಮಣೀಯತ್ವಾತ್ಪುಲಸ್ತ್ಯೋಯತ್ರಸದ್ವಿಜಃ । ಗಾಯಂತ್ಯೋವಾದಯಂತ್ಯಶ್ಚ ಲಾ
ಸಯಂತ್ಯಸ್ತಥೈವಚ । ಮುನೇಸ್ತಪಸ್ವಿನಸ್ತಸ್ಯವಿಘ್ನಂಚಕ್ರುರನಿಂದಿತಾಃ ॥೧೧॥ ಅಥಕ್ರುದ್ಧೋಮಹಾತೇಜಾವ್ಯಾಜಹಾರಮ
ಹಾಮುನಿಃ । ಯಾಮೇದರ್ಶನಮಾಗಚ್ಛೇತ್ಸಾಗರ್ಭಂಧಾರಯೇದಿತಿ ॥೧೨॥ ತಾಸ್ತುಸರ್ವಾಃ + ಪ್ರತಿಶ್ರುತ್ಯತಸ್ಯವಾಕ್ಯಂಮ

---

ತಿಃ-ಬಹುಬುದ್ಧಿ ಶಾಲಿಯಾದ, ಸಃ-ಆ ಪುಲಸ್ತ್ಯನು, ಶುಭ್ರೈಃ-ನಿರ್ದೋಷಂಗಳಾದ, ಗುಣೈಃ-ಶುಭಗುಣಗಳಿಂದ, ಸರ್ವಸ್ಯಲೋಕಸ್ಯ-ಸಮಸ್ತ ಜನಕ್ಕೂ
ಇಷ್ಟಃ-ಪ್ರೀತಿಪಾತ್ರನಾದವನು ॥ ೬॥ ಮುನಿಪುಂಗವಃ-ಋಷಿಶ್ರೇಷ್ಠನಾದ, ಸತು-ಆ ಪುಲಸ್ತ್ಯನಾದರೆ, ಧರ್ಮಪ್ರಸಂಗೇನ- ಧರ್ಮ - ಧರ್ಮಸ್ವರೂಪವಾ
ದ ತಪಸ್ಸಿನಲ್ಲಿ, ಪ್ರಸಂಗೇನ-ಬಹಳ ಇಷ್ಟದಿಂದ, ಮೇರೋಃ-ಮೇರುವೆಂಬ, ಮಹಾಗಿರೇಃ-ಮಹಾಪರ್ವತದ, ಪಾರ್ಶ್ವೇ-ಪಾರ್ಶ್ವದಲ್ಲಿ, ತೃಣಬಿಂದ್ವಾಶ್ರಮಂ-ತೃ
ಣಬಿಂದುವೆಂಬ ಮುನಿಯ ಆಶ್ರಮವನ್ನು, ಗತ್ವಾ-ಹೊಂದಿ, ನ್ಯವಸತ್-ನಿಂತನು ॥ ೭ ॥ ಸ್ವಾಧ್ಯಾಯನಿಯತೇಂದ್ರಿಯಃ-ಸ್ವಾಧ್ಯಾಯ-ವೇದಪಠನದಲ್ಲಿಯೆ,
ದನಿಯತೇಂದ್ರಿಯಃ-ನಿಯಮಿಸಲ್ಪಟ್ಟ ಇಂದ್ರಿಯಗಳುಳ್ಳ, ಧರ್ಮಾತ್ಮಾ-ಧರ್ಮಿಷ್ಠನಾದ, ಸಃ-ಆ ಪುಲಸ್ತ್ಯನು, ತಪಃ-ತಪಸ್ಸನ್ನು, ತೇಪೇ-ಮಾಡಿದನು, ಕ
ನ್ಯಕಾಃ-ಕನ್ನಿಕೆಯರು, ತಸ್ಯ-ಆ ಪುಲಸ್ತ್ಯನ, ಆಶ್ರಮಪದಂ-ಆಶ್ರಮ ಪ್ರದೇಶವನ್ನು ಕುರಿತು, ಗತ್ವಾ-ಹೋಗಿ, ವಿಘ್ನಂ-ತಪೋವಿಘ್ನವನ್ನು, ಕು
ರ್ವಂತಿ-ಮಾಡುತಿದ್ದರು ॥೮॥ ದೇವಪನ್ನಗಕನ್ಯಾಶ್ಚ-ದೇವಕನ್ನಿಕೆಯರು ಪನ್ನಗಸ್ತ್ರೀಯರುನ್ನು, ರಾಜರ್ಷಿತನಯಾಶ್ಚ-ರಾಜರ್ಷಿಪುತ್ರಿಕೆಗಳು,ಯಾಃ-
ಯಾರೋ, ತಾಃ-ಆಕುವರಿಯರುನ್ನು, ಅಪ್ಸರಸಶ್ಚ-ಅಪ್ಸರ ಸ್ತ್ರೀಯ್ಯರುನ್ನು, ಕ್ರೀಡಂತ್ಯಃ-ವಿಹರಿಸುತಿರುವರಾಗಿ, ತಂದೇಶಮೇವ-ಆ ಸ್ಥಳವನ್ನೆ, ಉ
ಪಪೇದಿರೇ-ಹೊಂದಿದರು ॥ ೯ ॥ ಸರ್ವರ್ತುಷು-ಸಮಸ್ತ ಋತುಗಳಲ್ಲಿಯೂ, ಕಾನನಸ್ಯ-ವನದ, ಉಪಭೋಗ್ಯತ್ವಾತ್ - ಭೋಗಾರ್ಹತೆಯಿಂದಲು, ರಮ್ಯ
ತ್ವಾತ್-ಸೊಬಗಿನ ದೆಸೆಯಿಂದಲು, ತಾಃಕನ್ಯಕಾಃ-ಆಕುಮಾರಿಗಳು,ನಿತ್ಯಶಃ-ಯಾವಾಗಲು, ತಂದೇಶಂ-ಆ ಎಡೆವನ್ನು, ಗತ್ವಾ-ಹೊಂದಿ, ಕ್ರೀಡಂತಿ-ವಿಹ
ರಿಸುತಿರುವರು ॥ ೧೦ ॥ಯತ್ರ-ಯಾವಪ್ರದೇಶದಲ್ಲಿ, ಪುಲಸ್ತ್ಯಃ-ಪುಲಸ್ತ್ಯನೆಂಬ, ಸದ್ವಿಜಃ-ಆಬ್ರಾಹ್ಮಣನು, ಅಸ್ತಿ-ಇಧಾನೋ, ತಸ್ಯದೇಶಸ್ಯ-ಆ ಪ್ರ
ದೇಶವು, ರಮಣೀಯತ್ವಾತ್-ಮನೋಹರವಾಗಿರೋಣದರ ದೆಸೆಯಿಂದಲು, ಗಾಯಂತ್ಯಃ-ಗಾನ ಮಾಡುತಿರುವರಾಗಿ, ವಾದಯಂತ್ಯಃ-ವಾದ್ಯಗಳನ್ನು ಬಾ
ರಿಸುತಿರುವ, ತಥೈವ-ಹಾಗೆಯೆ, ಲಾಸಯಂತ್ಯಃ-ಕುಣಿದಾಡುತಿರುವ, ಅನಿಂದಿತಾಃ-ಉತ್ತಮರಾದ ಕನ್ಯೆಯರು, ತಪಸ್ವಿನಃ-ತಪಸ್ಸುಮಾಡುತಿರುವ,ತಸ್ಯ
ಮುನೇಃ-ಆ ಪುಲಸ್ತ್ಯಬ್ರಹ್ಮನಿಗೆ, ವಿಘ್ನಂ-ತಪೋವಿಘ್ನವನ್ನು, ಚಕ್ರುಃ-ಮಾಡಿದರು ॥ ೧೧॥ ಅಥ-ಬಳಿಕ, ಯಾ-ಯಾವಹೆಣ್ಣು ಹುಡಗಿಯು, ಮೇ-
ನನ್ನ, ದರ್ಶನಂ-ದೃಷ್ಟಿಯನ್ನು, ಆಗಚ್ಛೇತ್-ಹೊಂದುವಳೊ, ಸಾ-ಅವಳು, ಗರ್ಭಂ-ಗರ್ಭವನ್ನು, ಧಾರಯಿಷ್ಯತಿ-ಧರಿಸುವಳು, ಇತಿ-ಇಂತೆಂದು, ಕ್ರು
ದ್ಧಃ-ಕೋಪಿಷ್ಠನಾದ, ಮಹಾತೇಜಾಃ-ಅತಿ ತೇಜಸ್ವಿಯಾದ, ಮಹಾಮುನಿಃ-ಪುಲಸ್ತ್ಯಋಷಿಯು, ವ್ಯಾಜಹಾರ-ಹೇಳಿದನು ॥ ೧೨ ॥ ಸರ್ವಾಃ-ಸ
ಮಸ್ತರಾದ, ತಾಸ್ತು-ಆ ಕನ್ನಿಕೆಯರಾದರೆ, ಮಹಾತ್ಮನಃ-ಮಹಾನು ಭಾವನಾದ, ತಸ್ಯ-ಆ ಪುಲಸ್ತ್ಯನ, ವಾಕ್ಯಂ-ಮಾತನ್ನು, ಪ್ರತಿಶ್ರುತ್ಯ-ಕೇಳಿ,

---

ವಿಶ್ವಾಸಾಸ್ಪದವಾದವನಾದನು॥೬॥ ಮುನಿಪುಂಗವನಾದ ಧರ್ಮಾತ್ಮನಾದ ಆ ಪುಲಸ್ತ್ಯ ಬ್ರಹ್ಮನು ತಪಸ್ಸಂಪಾದನೇಚ್ಛೆ
ಯಿಂದ ಮೇರು ಪರ್ವತದ ಪಾರ್ಶ್ವದಲ್ಲಿರುವ ತೃಣಬಿಂದ್ವಾಶ್ರಮವನ್ನು ಹೊಂದಿ ಜಪದಲ್ಲಿ ನಿಯಮಿಸಲ್ಪಟ್ಟ ಇಂದ್ರಿಯಗ
ಳುಳ್ಳವನಾಗಿ ತಪಸ್ಸನ್ನು ಮಾಡುತಿದ್ದನು ॥೭॥ ಆಗಕೆಲ ಬಾಲಕಿಯರು ಆ ಆಶ್ರಮವಂ ಪೊಕ್ಕು ಆತನಿಗೆ ತಪೋವಿಘ್ನ
ವಂಗೈಯ್ಯುತ್ತಿದ್ದರು॥೮॥ಮತ್ತು ದೇವಗಂಧರ್ವ ಕನ್ಯಕೆಯರು ರಾಜರ್ಷಿ ಪುತ್ರಿಕೆಯರು ಅಪ್ಸರಸ್ತ್ರೀಯ್ಯರು ಸಹ ವಿಹರಿ
ಸುತಿರುವರಾಗಿ ಆಸ್ಥಳವನ್ನೇ ಹೊಂದಿದರು॥೯॥ಆ ವನವು ಸರ್ವ ಋುತುಗಳಲ್ಲಿಯು ಭೋಗಾರ್ಹವಾಗಿರೋಣದರಿಂದ
ಲು, ಸೊಬಗಾಗಿರೋಣದರಿಂದಲು,ಆಕನ್ಯಕಾಮಣಿಗಳು ಕೂಡ ಯಾವಾಗಲು,ಆಪ್ರದೇಶವನ್ನು ಕುರಿತು ಬಂದು ಕ್ರೀ
ಡಿಸುತಿದ್ದರು॥೧೦॥ಆ ಪುಲಸ್ತ್ಯನೆಂಬ ಬ್ರಹ್ಮರ್ಷಿಯು ಯಾವ ಎಡದಲ್ಲಿ ನೆಲಗೊಂಡಿದ್ದನೋ, ಆ ದೇಶವು ಬಹಳ ಸುಂದ
ರವಾಗಿರೋಣದರಿಂದ ಅಲ್ಲಿಗೆ ಎಡೆಬಿಡದೆ ಬರುತಿರುವ ಆ ಉತ್ತಮಾಂಗನೆಯರು ಗಾನ ಮಾಡುತಿರುವರಾಗಿಯು, ವಾ
ದ್ಯಗಳನ್ನು ಬಾರಿಸುವವರಾಗಿಯು, ಕುಣಿಯುತಿರುವವರಾಗಿಯೂ ಆಗಿ, ತಪಸ್ವಿಯಾದ ಆ ಪುಲಸ್ತ್ಯಬ್ರಹ್ಮನಿಗೆ ತಪೋ
ವಿಘ್ನವನ್ನು ಮಾಡಿದರು॥೧೧॥ ಆ ಬಳಿಕ ಮಹಾ ತೇಜಸ್ವಿಯಾದ ಆ ಮಹಾಮುನಿಯು ಕಡು ಕೋಪವುಳ್ಳವನಾಗಿ
ಯಾವ ಹೆಂಗಸು ನನ್ನ ದೃಷ್ಟಿಗೆ ಗೋಚರ ವಾಗುವಳೋ ಅಂಥ ಹೆಣ್ಣು ಮಗಳು ಗರ್ಭವನ್ನು ಧರಿಸುವಳು ಎಂದು
ಶಾಪವನ್ನಿತ್ತನು ॥೧೨॥ ಆ ಸುಂದರಿಗಳು ಆ ಮಹಾನುಭಾವನ ವಾಕ್ಯವನ್ನರಿತು, ಬ್ರಹ್ಮಶಾಪ ಭಯದಿಂದ ಅಂಜಿದ

---

* ತೃಣಾಗ್ನೇರಾಶ್ರಮಂ. † ಏವಂತಪಸ್ಯತಸ್ತಸ್ಯ. + ಪ್ರತೀಗತಾಶ್ಶೃತ್ವಾವಾಕ್ಯಂ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹಾತ್ಮನಃ । ಬ್ರಹ್ಮಶಾಪಭಯಾದ್ಭೀತಾಃತಂದೇಶಂನೋಪಚಕ್ರಮುಃ ॥೧೩॥ ತೃಣಬಿಂದೋಸ್ತುರಾಜರ್ಷೇಸ್ತನಯಾನಶೃಣೋತಿತತ್ । ಗತ್ವಾಶ್ರಮಪದಂತಸ್ಯವಿಚಚಾರಸುನಿರ್ಭಯಾ ॥ ೧೪ ॥ ನಸಾಪಶ್ಯತಿಸ್ಥಿತಾತತ್ರಕಾಂಚಿದಪ್ಯಾಗತಾಂಸಖೀಮ್ ॥೧೫॥ * ತಸ್ಮಿನ್ಕಾಲೇಮಹಾತೇಜಾಃಪ್ರಾಜಾಪತ್ಯೋಮಹಾನೃಷಿಃ। ಸ್ವಾಧ್ಯಾಯಮಕರೋತ್ತತ್ರತಪಸಾ‡ಭಾವಿತಸ್ಸ್ವಯಮ್ ॥೧೬॥ ಸಾತುವೇದಶ್ರುತಿಂಶ್ರುತ್ವಾದೃಷ್ಟ್ವಾವೈತಪಸೋನಿಧಿಮ್। ಅಭವತ್ಪಾಂಡುದೇಹಾಸಾಸುವ್ಯಂಜಿತಶರೀರಜಾ ॥೧೭॥ ಬಭೂವಚಸಮುದ್ವಿಗ್ನಾದೃಷ್ಟ್ವಾತದ್ದೋಷಮಾತ್ಮನಃ । ಇದಂಮೇಕಿಂನ್ವಿತಿಜ್ಞಾತುಂ ಪಿತುರ್ಗತ್ವಾಗ್ರತಃಸ್ಥಿತಾ ॥೧೮॥ ತಾಂತುದೃಷ್ಟ್ವಾತಥಾಭೂತಾಂತೃಣಬಿಂದುರಥಾಬ್ರವೀತ್। ಕಿಂತ್ವಮೇತತ್ತ್ವಸದೃಶಂಧಾರಯಸ್ಯಾತ್ಮನೋವಪುಃ ॥೧೯॥ ಸಾತುಕೃತ್ವಾಂಜಲಿಂದೀನಾಕನ್ಯೋವಾಚತಪೋಧನಮ್ । ನಜಾನೇಕಾರಣಂತಾತಯೇನಮೇರೂಪಮೀದೃಶಮ್ ॥೨೦॥ ಕಿಂತುಪೂರ್ವಂಗತಾಸ್ಮ್ಯೇಕಾಮಹರ್ಷೇರ್ಭಾವಿತಾತ್ಮನಃ । ಪುಲಸ್ತ್ಯಸ್ಯಾಶ್ರಮಂದಿವ್ಯಮನ್ವೇಷ್ಟುಂ ಸ್ವಸಖೀಜನಮ್ ॥೨೧॥

---

ಬ್ರಹ್ಮಶಾಪಭಯಾತ್–ಬ್ರಾಹ್ಮಣನಶಾಪ ಭೀತಿಯಿಂದ, ಭೀತಾಃ–ಅಂಜಿದವರಾಗಿ, ತಂದೇಶಂ–ಆ ಪ್ರದೇಶವನ್ನು ಕುರಿತು, ನೋಪಚಕ್ರಮುಃ–ಬರಲಿಲ್ಲ॥೧೩॥ ರಾಜರ್ಷೇಃ–ರಾಜರ್ಷಿಯಾದ, ತೃಣಬಿಂದೋಃ–ತೃಣಬಿಂದುವಿನ, ತನಯಾತು–ಮಗಳಾದರೆ, ತತ್–ಆಶಾಪ ವಚನವನ್ನು, ನಶೃಣೋತಿ–ಕೇಳಲಿಲ್ಲ ॥ ೧೪॥ ತತ್ರ–ಆ ವನದಲ್ಲಿ, ಸುನಿರ್ಭಯಾ–ಭಯರಹಿತಳಾದ, ಸಾ–ಆ ತೃಣಬಿಂದು ಪುತ್ರಿಕೆಯು, ಆಶ್ರಮಪದಂ–ಆಶ್ರಮ ಪ್ರದೇಶವನ್ನು, ಗತ್ವಾ–ಹೊಂದಿ, ವಿಚಚಾರ–ಸಂಚರಿಸಿದಳು, ತತ್ರ–ಆ ಆಶ್ರಮದಲ್ಲಿ, ಸ್ಥಿತಾ–ನಿಂತವಳಾಗಿ, ಕಾಂಚಿತ್ಸಖೀಂ–ಯಾವಸಖಿಯನ್ನಾದರು,ಆಭ್ಯಾಗತಾಂ–ಬಂದಿರುವಳನ್ನಾಗಿ,ನಾಪಶ್ಯತ್–ಕಾಣಲಿಲ್ಲ ॥ ೧೫ ॥ ತಸ್ಮಿನ್ಕಾಲೇ–ಆಸಮಯದಲ್ಲಿ, ಮಹಾತೇಜಾಃ–ಮಹಾತೇಜಸ್ವಿಯಾದ, ಪ್ರಾಜಾಪತ್ಯಃ–ಬ್ರಹ್ಮಪುತ್ರನಾದ, ಮಹಾನೃಷಿಃ–ಮಹಾಮುನಿಯಾದ ಪುಲಸ್ತ್ಯನು, ತಪಸಾ–ತಪಸ್ಸಿನಿಂದ, ಸ್ವಯಂ–ತಾನು, ಭಾವಿತಃ–ಎಚ್ಚರಗೊಂಡವನಾಗಿ, ತತ್ರ–ಆಶ್ರಮದಲ್ಲಿ,ಸ್ವಾಧ್ಯಾಯಂ– ವೇದಾಧ್ಯಯನವನ್ನು ಅಕರೋತ್–ಮಾಡಿದನು ॥ ೧೬ ॥ಸಾ–ಪ್ರಸಿದ್ಧಳಾದ, ಸಾತು–ಆ ತೃಣಬಿಂದು ಪುತ್ರಿಯಾದರೆ, ವೇದಶ್ರುತಿಂ–ವೇದಘೋಷೆಯನ್ನು, ಶ್ರುತ್ವಾ–ಕೇಳಿ, ತಪಸಃ–ಆತಪಸ್ಸಿನ, ನಿಧಿಂ–ನಿಕ್ಷೇಪನಾದ ಪುಲಸ್ತ್ಯನನ್ನು, ದೃಷ್ಟ್ವಾವೈ–ನೋಡುತಲೆ, ಸುವ್ಯಂಜಿತ ಶರೀರಜಾ–ಸ್ಪಷ್ಟಮಾಡಲ್ಪಟ್ಟ ಅಂಗಜನುಳ್ಳವಳಾಗಿ, ಪಾಂಡುದೇಹಾ–ಬಿಳುಪಾದ ಶರೀರವುಳ್ಳವಳು, ಅಭವತ್–ಆದಳು ॥ ೧೭ ॥ ಆತ್ಮನಃ–ತನಗೆ ಸಂಬಂಧಿಸಿದ, ತದ್ದೋಷಂ–ಗರ್ಭಲಕ್ಷಣರೂಪವಾದ ಆ ದೋಷವನ್ನು, ದೃಷ್ಟ್ವಾ–ಕಂಡು, ಸಮುದ್ವಿಗ್ನಾ–ಭೀತಳಾದವಳು, ಬಭೂವ–ಆದಳು, ಇದಂ–ಇದು, ಮೇ–ನನಗೆ, ಕಿನ್ನ್ವಿತಿ–ಯೇನೆಂದು, ಜ್ಞಾತುಂ–ಅರಿತುಕೊಳ್ಳುವದಕ್ಕೆ, ಗತ್ವಾ–ಪೋಗಿ, ಪಿತುಃ–ತಂದೆಯ, ಅಗ್ರತಃ–ಮುಂದೆ, ಸ್ಥಿತಾ–ನಿಂತಳು॥೧೮॥ ಅಥ–ಬಳಿಕ,ತೃಣಬಿಂದುಃ–ತೃಣಬಿಂದುವು, ತಥಾಭೂತಾಂ–ಹಾಗೆ ಗರ್ಭಿಣಿಯಾದ, ತಾಂ–ಆ ಮಗಳನ್ನು, ದೃಷ್ಟ್ವಾ–ಕಂಡು, ತ್ವಂ–ನೀನು, ಆತ್ಮನಃ–ನಿನಗೆ, ಅಸದೃಶಂ–ಅನರ್ಹವಾದ, ಏತದ್ವಪುಃ–ಈ ದೇಹವನ್ನು, ಕಿಂಧಾರಯಸಿ–ಯಾಕೆ ಧರಿಸಿರುವೀ, ಇತಿ–ಇಂತೆಂದು, ಅಬ್ರವೀತ್–ಪೇಳಿದನು॥ ೧೯॥ಸಾಕನ್ಯಾತು–ಆ ಹುಡಿಗಿಯಾದರೆ, ದೀನಾ–ದುಃಖಿತಳಾಗಿ, ಅಂಜಲಿಂಕೃತ್ವಾ–ಕೈಮೊಗಚಿಗೊಂಡು, ಹೇತಾತ–ಎಲೈಜನಕನೇ! ಮೇ–ನನಗೆ, ಯೇನ–ಯಾತರಿಂದ, ಈ ದೃಶಂರೂಪಂ–ಇಂಥರೂಪವು(ಅಸೀತ್–ಆಯಿತೋ)ತತ್ರ– ಆ ವಿಷಯದಲ್ಲಿ, ಕಾರಣಂ–ಹೇತುವಿನನ್ನು, ನಜಾನೇ–ಅರಿಯಲಾರೆನು ॥ ೨೦ ॥ ಕಿಂತು–ಮತ್ತೇನಂದರೆ, ಪೂರ್ವಂ–ಮೊದಲು, ಭಾವಿತಾತ್ಮನಃ–ಬ್ರಹ್ಮನಿಷ್ಠನಾದ, ಮಹರ್ಷೇಃ–ಮಹಾಮುನಿಯಾದ, ಪುಲಸ್ತ್ಯಸ್ಯ–ಪುಲಸ್ತ್ಯನ, ದಿವ್ಯಂ–ರಮ್ಯವಾದ, ಆಶ್ರಮಂ–ಆಶ್ರಮವನ್ನು ಕುರಿತು, ಸ್ವಸಖೀಜನಂ–ನನ್ನ ಸಖೀಜನರನ್ನು, ಅನ್ವೇಷ್ಟುಂ–ಹುಡುಕುವದಕ್ಕೋಸ್ಕರ, ಏಕಾ–ಒಬ್ಬಳೇ, ಗತಾಸ್ಮಿ–ಪೋಗಿದ್ದೆ ॥ ೨೧ ॥ ತತ್ರ–ಆ ಆಶ್ರಮದಲ್ಲಿ, ಅಹಂ–ನಾನು,

---

ವರಾಗಿ ಆ ಭಾಗದಲ್ಲಿ ಯಾರು ಬರಲಿಲ್ಲ ॥೧೩॥ ಆದರೆ ರಾಜರ್ಷಿಯಾದ ತೃಣಬಿಂದುವಿನ ಪುತ್ರಿಕೆಯು ಮಾತ್ರ ಆ ಮಾತನ್ನು ಕೇಳಿರಲಿಲ್ಲ ॥೧೪॥ ಆದ ಕಾರಣ ನಿರ್ಭಯಳಾದ ಆ ಬಾಲಿಕಾಮಣಿಯು ಆ ಪುಲಸ್ತ್ಯಾಶ್ರಮವನ್ನು ಕುರಿತು ಬಂದು ಸಂಚರಿಸುತ್ತಿದ್ದು ನಿಂತವಳಾಗಿ ಅಲ್ಲಿ ಒಬ್ಬ ಸಖಿಯನ್ನಾದರು ಬಂದವಳನ್ನಾಗಿ ಕಾಣಲಿಲ್ಲ॥೧೫॥ಆ ಸಮಯದೋಳ್ ಬಹು ತೇಜಸ್ವಿಯಾದ ಬ್ರಹ್ಮಮಾನಸ ಪುತ್ರನಾದ ಆ ಪುಲಸ್ತ್ಯ ಬ್ರಹ್ಮರ್ಷಿಯು ವೇದಾಧ್ಯಯನವಂಮಾಡುತಿರಲು॥೧೬॥ ಆ ಕನ್ಯಕೆಯು ಆ ವೇದಘೋಷೆಯನ್ನು ಕೇಳಿ ತಪೋನಿಧಿಯಾದ ಆ ಪುಲಸ್ತ್ಯನನ್ನು ಕಂಡಕೂಡ್ಲೆ ಬಿಳುಪಾದ ದೇಹವುಳ್ಳವಳಾಗಿ ಗರ್ಭಿಣಿಯಾದಳು ॥೧೭॥ ತನಗೆ ಪ್ರಾಪ್ತವಾದ ಆ ಗರ್ಭಿಣೀ ಲಕ್ಷಣವನ್ನು ಕಂಡು ಕಡುಭೀತಳಾಗಿ ಇದೇನಿರಬಹುದೆಂದು ಯೋಚಿಸುತ್ತಾ ಪೋಗಿ ತಂದೆಯ ಮುಂದೆ ನಿಂತಳು ॥೧೮॥ ಸಮನಂತರದೋಳ್ ತೃಣ ಬಿಂದುವು ಆರೀತಿಯಾಗಿರುವ ತನ್ನ ಪುತ್ರಿಕೆಯಂ ಕಂಡು, ಎಲೈ ಮಗಳೆ! ನಿನಗೆ ಅನರ್ಹವಾದ ಇಂಥ ದೇಹವನ್ನು ಯಾಕೆ ಧರಿಸಿರುವಿ ಪೇಳಮ್ಮ ಎಂದು ಕೇಳಲು ॥೧೯॥ ಆ ಕನ್ಯಕಾಮಣಿಯು ಕೈಮುಗಿದವಳಾಗಿ ಎಲೈ ತಂದೆಯೆ ! ಯಾವಕಾರಣದಿಂದ ಎನಗೀಪರಿಯಾದ ರೂಪಮುಂಟಾಯಿತೋ ನಾನು ಕಾಣೆನು॥೨೦॥ಆದರೆ ಸ್ವಲ್ಪಹೊತ್ತು ಮುಂಚೆ ನನ್ನ ಸಖೀಜನರನ್ನು ಹುಡುಕಲಿಚ್ಛೈಸಿದವಳಾಗಿ ನಾನೊಬ್ಬಳೆ ಪುಲಸ್ತ್ಯ ಋಷ್ಯಾಶ್ರಮವನ್ನು ಕುರಿತು ಪೋಗಿದ್ದೆನು ॥೨೧॥

---

*ಏತಸ್ಮಿನ್ನೇವಕಾಲೇತು. † ದ್ಯೋತಿತಪ್ರಭಃ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನೆಚೆಾಪಶ್ಯಮಹಂತತ್ರಕಾಂಚಿದಭ್ಯಾಗತಾಂಸಖೀಮ್ । ರೂಪಸ್ಯತುವಿಪರ್ಯಾಸಂದೃಷ್ಟ್ವಾತ್ರಾಸಾದಿಹಾಗತಾ॥೨೨॥ತೃಣ ಬಿಂದುಸ್ತು ರಾಜರ್ಷಿಸ್ತಪಸಾದ್ಯೋತಿತಪ್ರಭಃ । ಧ್ಯಾನಂವಿವೇಶತಚ್ಚಾಪಿ ಯಮಪಶ್ಯದೃಷಿಕರ್ಮಜಮ್॥೨೩॥ಸತುವಿಜ್ಞಾಯ ತಂಶಾಪಂಮಹರ್ಷೇರ್ಭಾವಿತಾತ್ಮನಃ।ಗೃಹೀತ್ವಾತನಯಾಂಗತ್ವಾಪುಲಸ್ತ್ಯಮಿದಮಬ್ರವೀತ್॥೨೪॥ಭಗವಂಸ್ತನಯಾಮ್ಮೆ ತ್ವಂಗುಣೈಸ್ಸ್ವೈರೇವಭೂಷಿತಾಮ್ । ಭಿಕ್ಷಾಂಪ್ರತಿಗೃಹಾಣೆಮಾಂಮಹರ್ಷೇಸ್ವಯಮುದ್ಯತಾಮ್॥೨೫॥ತಪಶ್ಚರಣಯು ಕ್ತಸ್ಯಶ್ರಾಮ್ಯಮಾಣೇಂದ್ರಿಯಸ್ಯತೆ । ಶುಶ್ರೂಷಣಪರಾನಿತ್ಯಂಭವಿಷ್ಯತಿನಸಂಶಯಃ ॥ ೨೬ ॥*ತಂಬ್ರುವಾಣಂತು ತದ್ವಾ ಕ್ಯಂರಾಜರ್ಷಿಂಧಾರ್ಮಿಕಂತದಾ । ಜಿಘೃಕ್ಷುರಬ್ರವೀತ್ಕನ್ಯಾಂಬಾಢಮಿತ್ಯೇವಸದ್ವಿಜಃ ॥ ೨೭॥ ದತ್ವಾಸತುಯಥಾನ್ಯಾ ಯ್ಯಂಸ್ವಮಾಶ್ರಮಪದಂಗತಃ । ಸಾಪಿತತ್ರಾವಸತ್ಕನ್ಯಾತೋಷಯಂತೀ ಪತಿಂಗುಣೈಃ ॥೨೮॥ ತಸ್ಯಾಸ್ತು ಶೀಲ ವೃತ್ತಾ ಭ್ಯಾಂತುತೋಷಮುನಿಪುಂಗವಃ । ಪ್ರೀತಸ್ಸತುಮಹಾತೇಜಾವಾಕ್ಯ ಮೆತದುವಾಚಹ ॥೨೯॥ ಪರಿತುಷ್ಟೋಸ್ಮಿ ಸುಶ್ರೋಣಿ

---

ಕಾಂಚಿತ್ಸಖೀಮಪಿ-ಯಾವ ಸ್ನೇಹಿತಳನ್ನೂ ಕೂಡ, ಅಭ್ಯಾಗತಾಂ-ಬಂದಿರುವಳನ್ನಾಗಿ, ನಪಶ್ಯಾಮಿ-ನೋಡಲಿಲ್ಲ, ರೂಪಸ್ಯ-ಆಕಾರದ, ವಿಪರ್ಯಾಸಂತು-ವ್ಯತ್ಯಾಸವನ್ನಾದರೆ, ದೃಷ್ಟ್ವಾ-ಕಂಡು, ತ್ರಾಸಾತ್-ಭೀತಿಯ ದೆಸೆಯಿಂದ, ಇಹ-ಇಲ್ಲಿಗೆ, ಆಗತಾ-ಬಂದನು ॥ ೨೨ ॥ ರಾಜರ್ಷಿಃ-ರಾಜರ್ಷಿಯಾದ, ತಪಸಾ-ತಪಸ್ಸಿನಿಂದ, ದ್ಯೋತಿತಪ್ರಭಃ-ಹೊಳೆಯುತಿರುವ ತೇಜಸ್ಸುಳ್ಳ, ತೃಣಬಿಂದುಸ್ತು-ತೃಣಬಿಂದುವಾದರೆ, ಧ್ಯಾನಂ-ಧ್ಯಾನವನ್ನು, ವಿವೇಶ-ಪ್ರವೇಶಿಸಿದನು, ತಚ್ಚಾಪಿ-ಆರೂಪವ್ಯತ್ಯಸ್ತವನ್ನೂ ಕೂಡ, ಋಷಿಕರ್ಮಜಂ-ಮುನಿಕೃತ್ಯದಿಂ ದುಂಟಾದ್ದನ್ನಾಗಿ, ಅಪಶ್ಯತ್-ಕಂಡನು ॥ ೨೩ ॥ ಸತು-ಆ ತೃಣಬಿಂದುವಾದರೆ, ಭಾವಿತಾತ್ಮನಃ-ಬ್ರಹ್ಮನಿಷ್ಠನಾದ, ಮಹರ್ಷೇಃ-ಪುಲಸ್ತ್ಯನ, ತಂಶಾಪಂ-ಆಶಾಪವನ್ನು, ವಿಜ್ಞಾಯ-ಅರಿತು, ತನಯಾಂತು-ಕುವರಿಯನ್ನಾದರೆ, ಗೃಹೀತ್ವಾ-ಕರೆದುಕೊಂಡು, ಗತ್ವಾ-ಬಂದು, ಪುಲಸ್ತ್ಯಂ-ಪುಲಸ್ತ್ಯನನ್ನು ಕುರಿತು, ಇದಂ-ಇದನ್ನು, ಅಬ್ರವೀತ್-ಹೇಳಿದನು ॥ ೨೪ ॥ ಹೇಭಗವನ್-ಎಲೈ ಪೂಜ್ಯನೆ ! ಹೇಮಹರ್ಷೇ-ಎಲೈ ಮಹಾಮುನಿಯೆ, ಸ್ವೈಃ-ಸ್ವಂತವಾದ, ಗುಣೈರೇವ-ಗುಣಗಳಿಂದಲೆ, ಭೂಷಿತಾಂ-ಅಲಂಕೃತಳಾದ, ಸ್ವಯಮುದ್ಯತಾಂ ತನ್ನಷ್ಟಕ್ಕೆತಾನೆ ಬಂದಿರುವ, ಮೆತನಯಾಂ-ನನ್ನ ಮಗಳಾದ, ಇಮಾಂ-ಈಕೆಯನ್ನು, ಭಿಕ್ಷಾಂ-ಭಿಕ್ಷೆಯನ್ನಾಗಿ, ಪ್ರತಿಗೃಹಾಣ-ಸ್ವೀಕರಿಸು ॥ ೨೫ ॥ ನಿತ್ಯಂ-ಯಾವಾಗಲು, ತಪಶ್ಚರಣಯುಕ್ತಸ್ಯ-ತಪಶ್ಚರ್ಯದಿಂದ ಕೂಡಿಕೊಂಡಿರುವ, ಶ್ರಾಮ್ಯಮಾಣೇಂದ್ರಿಯಸ್ಯ-ಶ್ರಮಗೊಳಿಸಲ್ಪಡುತಿರುವ ಇಂದ್ರಿಯಗಳುಳ್ಳ, ತೆ-ನಿನಗೆ, ಶುಶ್ರೂಷಣಪರಾ-ಸೇವೆಯಲ್ಲಿ ಆಸಕ್ತಳಾದವಳು, ಭವಿಷ್ಯತಿ-ಆಗುವಳು, ನಸಂಶಯಃ-ಸಂದೇಹವಿಲ್ಲ ॥೨೬ ॥ ತದಾ-ಆ ಕಾಲದಲ್ಲಿ, ದ್ವಿಜಃ-ಬ್ರಾಹ್ಮಣನಾದ, ಸಃ-ಆ ಪುಲಸ್ತ್ಯನು, ಕನ್ಯಾಂ-ಕುಮಾರಿಯನ್ನು, ಜಿಘೃಕ್ಷುಃ-ಗ್ರಹಿಸಬೇಕೆಂದಿಚ್ಛೈಸಿದವನಾಗಿ, ತದ್ವಾಕ್ಯಂತು-ಆ ಮಾತನ್ನಾದರೆ, ಬ್ರುವಾಣಂ-ಹೇಳುತಿರುವ, ಧಾರ್ಮಿಕಂ-ಧರ್ಮಿಷ್ಠನಾದ, ತಂರಾಜರ್ಷಿಂ-ಆ ರಾಜರ್ಷಿಯನ್ನು ಕುರಿತು, ಬಾಢಮಿತ್ಯೇವ-ಹಾಗೆ ಆಗಲಿಎಂದು, ಅಬ್ರವೀತ್- ಹೇಳಿದನು ॥೨೭॥ ಸತು-ಆ ತೃಣಬಿಂದುವಾದರೆ, ಯಥಾನ್ಯಾಯ್ಯಂ - ವಿಧ್ಯುಕ್ತವಾಗಿ, ದತ್ವಾ-ಕೊಟ್ಟು, ಸ್ವಂ - ಸ್ವಕೀಯ್ಯವಾದ, ಆಶ್ರಮಪದಂ-ಆಶ್ರಮಪ್ರದೇಶವನ್ನು ಕುರಿತು, 'ಗತಃ - ಪೋದನು, ಸಾಕನ್ಯಾಪಿ-ಆ ಕನ್ನಿಕೆಯೂ ಸಹ, ಪತಿಂ-ಪ್ರಿಯನನ್ನು, ಗುಣೈಃ-ದಾಕ್ಷಿಣ್ಯಾದಿಗುಣಗಳಿಂದ, ತೋಷಯಂತೀ-ಸಂತೋಷಗೊಳಿಸುತಿರುವಳಾಗಿ, ತತ್ರ-ಆಆಶ್ರಮದಲ್ಲಿ, ಅವಸತ್-ಇದ್ದಳು ॥೨೮॥ ಮುನಿಪುಂಗವಸ್ತು-ಋಷಿಶ್ರೇಷ್ಠನಾದ ಪುಲಸ್ತ್ಯನಾದರೆ, ತಸ್ಯಾಃ-ಆ ಕುವರಿಯ, ಶೀಲವೃತ್ತಾಭ್ಯಾಂ-ಸ್ವಭಾವದಿಂದಲು ಸದ್ವೃತ್ತಿಯಿಂದಲು, ತುತೋಷ-ಸಂತುಷ್ಟನಾದನು॥೨೯॥ ಮಹಾತೇಜಾಃ-ಅತಿ ತೇಜಸ್ವಿಯಾದ, ಸತು-ಆ ಪುಲಸ್ತ್ಯನಾದರೆ, ಪ್ರೀತಃ-ಹೃಷ್ಟನಾಗಿ, ಏತದ್ವಾಕ್ಯಂ-ಈ ಮಾತನ್ನು, ಉವಾಚಹ-ಹೇಳಿದನು ॥೨೯॥

---

ಅಲ್ಲಿ ಯಾವ ಸಖಿಯನ್ನಾದರೂ ಬಂದವಳನ್ನಾಗಿ ನೋಡಲಿಲ್ಲ. ಎನಗೆ ಸಂಭವಿಸಿರುವ ಈ ವೈರೂಪ್ಯವನ್ನು ಅರಿತುಕೊಳ್ಳುವದಕ್ಕಿಲ್ಲಿಗೆ ಬಂದೆನೆನ್ನಲು॥೨೨॥ತಪಸ್ಸಿನಿಂದ ಕಂಗೊಳಿಸುವ ದೇಹಕಾಂತಿಯುಳ್ಳ ಆ ರಾಜರ್ಷಿಯಾದ ತೃಣಬಿಂದುವು ಋಷಿಕರ್ಮದಿಂದುಂಟಾದ ಆ ಗರ್ಭಿಣೀ ಲಕ್ಷಣವನ್ನು ಧ್ಯಾನ ದೃಷ್ಟಿಯಿಂದ ಕಂಡು॥೨೩॥ಇದು ಮಹಾ ತಪಸ್ವಿಯಾದ ಪುಲಸ್ತ್ಯನ ಶಾಪ ರೂಪವಾದದ್ದೆಂದೆಣಿಸಿ, ತನ್ನ ಮಗಳನ್ನು ಕರೆದುಕೊಂಡು ಬಂದು ಪುಲಸ್ತ್ಯನನ್ನು ಕುರಿತು ಇಂತೆಂದನು ॥೨೪॥ ಎಲೈ ಪೂಜ್ಯನಾದ ಮಹರ್ಷಿಯೆ!ತನ್ನ ಗುಣಗಳಿಂದ ಅಲಂಕೃತಳಾದ ನನ್ನ ಮಗಳಾದ ಈ ಕನ್ಯಕೆಯನ್ನು ಭಿಕ್ಷೆಯನ್ನೋಪಾದಿಯಲ್ಲಿ ಸ್ವೀಕರಿಸು ॥೨೫॥ ಈ ಕುವರಿಯು ಸದಾ ಕಾಲದಲ್ಲಿಯು ತಪೋನಿಷ್ಠನಾಗಿರುವ ನಿನ್ನ ಸೇವಾಪರಳಾದಂಥವಳಾಗಿರುವಳು. ಈ ವಿಷಯದಲ್ಲಿ ಸಂದೇಹವಿಲ್ಲ ॥೨೬॥ ಎಂದು ನುಡಿಯಲು ಆ ಪುಲಸ್ತ್ಯಬ್ರಹ್ಮನು ಈಪರಿ ಪೇಳುತಿರುವ ಆ ರಾಜರ್ಷಿಯ ವಾಕ್ಯವಂ ಕೇಳಿ ಆ ಕನ್ಯಕಾಮಣಿಯಂ ಗ್ರಹಿಸಲಿಚ್ಛೈಸಿದವನಾದನು ॥೨೭॥ ಆ ತೃಣಬಿಂದುವು ವಿಧ್ಯುಕ್ತವಾಗಿ ಕನ್ಯಾ ದಾನವಂ ಮಾಡಿ ತನ್ನ ಆಶ್ರಮವನ್ನೈದಿದನು. ಬಳಿಕ ಆ ಬಾಲಿಕಾಮಣಿಯು ಪತಿಯನ್ನು ತನ್ನ ಸೌಶೀಲ್ಯಾದಿ ಸದ್ಗುಣಗಳಿಂ ದಾನಂದ ಗೊಳಸುತ್ತಿದ್ದಳು ॥೨೮॥ ಮಹಾತೇಜಸ್ವಿಯಾದ ಪುಲಸ್ತ್ಯನೆಂಬ ಮುನಿಪುಂಗವನು ಆ ಬಾಲೆಯ ಶೀಲ ವೃತ್ತಗಳನ್ನರಿತು ಸಂತುಷ್ಟನಾಗಿ ಈ ವಾಕ್ಯವನ್ನು ನುಡಿದನು ॥೨೯॥ ಎಲೈ ರಮಣೀಮಣಿಯೇ ! ನಿನ್ನ ಗುಣಗಳಿಂದ ಪರಿತುಷ್ಟನಾಗಿಧೇ ನಾದಕಾರಣ ನನ್ನ ಸದ್ಯ

---

* ಏವಂಬ್ರುವಾಣಂರಾಜರ್ಷಿಂಬ್ರಹ್ಮರ್ಷಿರ್ಧಾರ್ಮಿಕಸ್ತದಾ।



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗುಣಾನಾಂಸಂಪದಾಭೃಶಂ॥ತಸ್ಮಾದ್ದೆ ವಿದದಾಮ್ಯದ್ಯಪುತ್ರಮಾತ್ಮ ಸಮಂತವ । ಉಭಯೋರ್ವಂಶಕರ್ತಾರಂಪೌಲಸ್ತ್ಯ ಇತಿವಿಶೃತಂ ॥ ೩೦ ॥ ಯಸ್ಮಾತ್ತು ವಿಶೃತೇವವೇದಾಸ್ತ್ವಯೆಷೊಭ್ಯಸ್ಯತೊಮಮ । ತಸ್ಮಾತ್ಸವಿಶ್ರವಾನಾಮಭವಿಷ್ಯತಿ ನಸಂಶಯಃ ॥೩೧॥*ಏವಮುಕ್ತಾತುಸಾದೇವೀಪ್ರಹೃಷ್ಟೆನಾಂತರಾತ್ಮನಾ। ಅಚಿರೇಣೈವಕಾಲೆನಾಸೂತವಿಶ್ರವಸಂಸುತಂ ॥ ತ್ರಿಷುಲೋಕೆಷುವಿಖ್ಯಾತಂಯಶೊ ಧರ್ಮಸಮನ್ವಿತಮ್ ॥ ಶ್ರುತಿರ್ಮಾ ಸಮದರ್ಶೀಚವ್ರತಾಚಾರರತಸ್ತಥಾ ॥ ಪಿತೆವ ತಪಸಾಯುಕ್ತೊ ವಿಶ್ರವಾಹ್ಯ ಭವನ್ಮುನಿಃ ... ... ... ... ॥೩೪॥

—...ಇತಿಶ್ರೀಮದುತ್ತರ ರಾಮಾಯಣೆ ದ್ವಿತೀಯ್ಯಸ್ಸರ್ಗಃ....—

ಅಥಪುತ್ರಃಪುಲಸ್ತ್ಯಸ್ಯವಿಶ್ರವಾಮುನಿಪುಂಗವಃ । ಅಚಿರೇಣೈವಕಾಲೆನಪಿತೆವತಪಸಿಸ್ಥಿತಃ ॥೧॥ ಸತ್ಯವಾ ಶೀಲವಾ ಶಾಂತಸ್ಸ್ವಾಧ್ಯಾಯನಿರತಶ್ಯುಚಿಃ। ಸರ್ವಭೊಗೆಷ್ವಸಂಸಕ್ತೊ ನಿತ್ಯಂಧರ್ಮಪರಾಯಣಃ ॥೨॥ ಜ್ಞಾತ್ವಾ ತಸ್ಯತುತ

---

ಹೆಸುಶ್ರೋಣಿ–ಎಲ್ಯೆ ಒಳ್ಳೇ ಕಟಿಪ್ರದೇಶವುಳ್ಳವಳೆ !ಗುಣಾನಾಂ–ಸುಗುಣಗಳ, ಸಂಪದಾ–ಅತಿಶಯದಿಂದ, ಭೃಶಂ–ಅಧಿಕವಾಗಿ, ಪರಿತುಷ್ಟಃ–ಸಂತುಷ್ಟನಾದವನು, ಅಸ್ಮಿ–ಆದೆನು, ಹೆದೆವಿ–ಎಲ್ಯೆ ಪ್ರಿಯಳೆ ! ತಸ್ಮಾತ್–ಆ ಕಾರಣದ ದೆಸೆಯಿಂದ, ಉಭಯೋಃ–ಮಾತಾಪಿತೃಗಳೆಂಬೀರ್ವರ, ವಂಶಕರ್ತಾರ–ಕುಲೋದ್ಧಾರಕನಾದ, ಪೌಲಸ್ತ್ಯಇತಿ–ಪೌಲಸ್ತ್ಯನೆಂದು, ವಿಶೃತಂ–ಪ್ರಖ್ಯಾತನಾದ, ಆತ್ಮಸಮಂ–ನನ್ನ ಸಮಾನನಾದ, ಪುತ್ರಂ–ಕುಮಾರನನ್ನು, ಅದ್ಯ–ಈಗ, ದದಾಮಿ–ಕೊಡುವೆನು ॥ ೩೦ ॥ ಕಿಂತು–ಮತ್ತೇನೆಂದರೆ, ಅಭ್ಯಸ್ಯತಃ–ಅಭ್ಯಾಸ ಮಾಡುತಿರುವ, ಮಮ– ನನ್ನ ಸಂಬಂಧವಾದ, ಏಷಃ–ಈ ಗರ್ಭಧಾರಣ ಸಾಧಕವಾದ, ವೆದಃ – ವೇದಘೋಷೆಯು, ತ್ವಯಾ–ನಿನ್ನಿಂದ, ಯಸ್ಮಾತ್–ಯಾವ ಕಾರಣದ ದೆಸೆಯಿಂದ, ವಿಶೃತಃ–ಕೇಳಲ್ಪಟ್ಟಿತೊ, ತಸ್ಮಾತ್–ಆ ಕಾರಣದ ದೆಸೆಯಿಂದ, ಸಃ–ಆ ನಿನ್ನ ಪುತ್ರನಾದ ಪೌಲಸ್ತ್ಯನು, ವಿಶ್ರವಾನಾಮ–ವಿಶ್ರವಸ್ಸೆಂಬ ಹೆಸರುಳ್ಳವನು, ಭವಿಷ್ಯತಿ–ಆಗುವನು, ನಸಂಶಯಃ–ಸಂದೇಹವಿಲ್ಲ ॥೩೧॥ ಏವಂ–ಈಪರಿಯಾಗಿ, ಉಕ್ತಾ–ಹೇಳಲ್ಪಟ್ಟ, ಸಾದೇವೀ–ಆ ಪುಲಸ್ತ್ಯನ ಪತ್ನಿಯು, ಪ್ರಹೃಷ್ಟೆನ–ಸಂತೋಷ ಯುಕ್ತನಾದ, ಅಂತರಾತ್ಮನಾ–ಮನಸ್ಸಿನಿಂದ(ಯುಕ್ತಾ ಕೂಡಿದವಳಾಗಿ,)ತ್ರಿಷುಲೊಕೆಷುಚ–ಲೋಕತ್ರಯದಲ್ಲಿಯು, ವಿಖ್ಯಾತಂ–ಪ್ರಸಿದ್ಧನಾದ, ಯಶೊಧರ್ಮಸಮನ್ವಿತಂ–ಕೀರ್ತಿಯಿಂದಲು ಧರ್ಮದಿಂದಲು ಕೂಡಿಕೊಂಡಿರುವ, ವಿಶ್ರವಸಂ–ವಿಶ್ರವಸ್ಸೆಂಬ, ಸುತಂ–ಪುತ್ರನನ್ನು, ಅಚಿರೇಣಕಾಲೇನ–ಶೀಘ್ರದಲ್ಲಿಯೆ, ತ್ತಳು ॥ ೩೩ ॥ ಶೃತಿರ್ಮಾ–ವೇದಜ್ಞನಾದ, ಸಮದರ್ಶೀಚ–ಸುಖದುಃಖ ಸಮದೃಷ್ಟಿಯುಳ್ಳ, ತಥಾ–ಹಾಗೆಯೆ, ವ್ರತಾಚಾರರತಃ–ವ್ರತ–ನಿಯಮದಲ್ಲಿಯು, ಆಚಾರ–ಸತ್ಸಂಪ್ರದಾಯದಲ್ಲಿಯು, ರತಃ–ಆಸಕ್ತನಾದ, ವಿಶ್ರವಾಃ–ವಿಶ್ರವಸ್ಸೆಂಬ, ಮುನಿಶ್ಚ–ಋಷಿಯುಸಹ, ಪಿತೆವ–ತಂದೆಯಂತೆ, ತಪಸಾ–ತಪಸ್ಸಿನಿಂದ, ಯುಕ್ತಃ–ಕೂಡಿದವನು, ಅಭವತ್–ಆದನು ... ... ... ... ॥೩೪ ॥

ಶ್ರೀಮದುತ್ತರ ರಾಮಾಯಣೆ ದ್ವಿತೀಯ್ಯಸ್ಸರ್ಗಃ.

ಅಥ–ಅನಂತರದಲ್ಲಿ, ಪುಲಸ್ತ್ಯಸ್ಯ–ಪುಲಸ್ತ್ಯಬ್ರಹ್ಮನ, ಪುತ್ರಃ–ಕುಮಾರನಾದ, ಮುನಿಪುಂಗವಃ–ಋಷಿಶ್ರೇಷ್ಠನಾದ, ವಿಶ್ರವಾಃ–ವಿಶ್ರವಸ್ಸು, ಅಚಿರೇಣಕಾಲೆನೈವ–ಸ್ವಲ್ಪಕಾಲದಿಂದಲೆ, ಪಿತೆವ–ತಂದೆಯಂತೆ, ತಪಸಿ–ತಪಸ್ಸಿನಲ್ಲಿ, ಸ್ಥಿತಃ–ಇರುವವನಾದನು॥೧॥ಸತ್ಯವಾ–ಸತ್ಯವಂತನಾದ, ಶೀಲವಾ- ಸತ್ಸ್ವಭಾವವುಳ್ಳ, ಶಾಂತಃ–ಸೌಮ್ಯನಾದ, ಸ್ವಾಧ್ಯಾಯನಿರತಃ–ವೇದಾಧ್ಯಯನದಲ್ಲಿ ಆಸಕ್ತನಾದ, ಶುಚಿಃ–ಪರಿಶುದ್ಧನಾದ,ನಿತ್ಯಂ–ಯಾವಾಗಲು, ಧರ್ಮಪರಾಯಣಃ–ಸ್ವಧರ್ಮದಲ್ಲಿ ಆಸಕ್ತನಾದ ವಿಶ್ರವಸ್ಸು, ಸರ್ವಭೋಗೇಷು–ಸಮಸ್ತವಿಷಯಗಳಲ್ಲಿ,ಅಸಂಸಕ್ತಃ–ಸಂಬಂಧ ರಹಿತನಾದವನು,(ಆಸೀತ್–ಆದನು)॥೨॥ಭರ

---

ಶನಾಗಿಯು ಮಾತಾಪಿತೃ ವಂಶೋದ್ಧಾರಕನಾಗಿಯು ಪೌಲಸ್ತ್ಯನೆಂದು ಪ್ರಸಿದ್ಧನಾಗಿಯು ಇರುವ ಪುತ್ರನನ್ನು, ಈಗಲೆ ಕೊಡುವೆನು ॥೩೦॥ ಆದರೆ ಈ ನಿನ್ನ ಗರ್ಭಕ್ಕೆ ಹೇತುವಾದ ನನ್ನ ವೇದಘೋಷೆಯು ಯಾವಕಾರಣದಿಂದ ನಿನ್ನಿಂದ ವಿಶೃತವಾಯಿತೋ ಆಕಾರಣದಿಂದ ಈಪುತ್ರನು ವಿಶ್ರವಸ್ಸೆಂದು ಪ್ರಸಿದ್ಧಿಯುಳ್ಳವ ನಾಗುವನೆಂದು ಹೇಳಲು॥೩೧॥ ಆ ಕಾಂತಾರತ್ನವು ಸಂತುಷ್ಟಾಂತ ರಂಗವುಳ್ಳವಳಾಗಿ, ಲೋಕತ್ರಯದಲ್ಲಿಯು ಪ್ರಖ್ಯಾತನಾಗಿಯು, ಯಶೋಧರ್ಮಗಳಿಂದ ಯುಕ್ತನಾಗಿಯು ಇರುವ ವಿಶ್ರವಸ್ಸೆಂಬ ಪುತ್ರನನ್ನು ಕ್ಷಿಪ್ರದಲ್ಲಿ ಹೆತ್ತವಳಾದಳು ॥೩೩॥ ವೇದಜ್ಞನಾಗಿಯು ಸುಖದುಃಖಗಳಲ್ಲಿ ಸಮದೃಷ್ಟಿ ಯುಳ್ಳವನಾಗಿಯು ವ್ರತಾಚಾರ ನಿರತನಾಗಿಯು ಇರುವ ವಿಶ್ರವಸ್ಸೆಂಬ ಮುನಿಯು ತನ್ನ ತಂದೆಯಂತೆ ತಪೋವಂತ ನಾದನು. ... ... ... ... ॥೩೪॥

ಶ್ರೀಮದುತ್ತರ ರಾಮಾಯಣದೊಳ್ ೨ನೇ ಸರ್ಗವು ಮುಗಿದುದು.

ಬಳಿಕಾ ಪುಲಸ್ತ್ಯಪುತ್ರನಾದ ವಿಶ್ರವಸ್ಸೆಂಬಮುನಿಪುಂಗವನು ಶೀಘ್ರಕಾಲದಲ್ಲಿಯೆ ತಪೋನಿಷ್ಠನಾಗಿಯುಸತ್ಯವಂತನಾಗಿಯು ಶೀಲವಂತನಾಗಿಯು ಶಾಂತನಾಗಿಯು,ವೇದಾಧ್ಯಯನನಿರತನಾಗಿಯು, ಪರಿಶುದ್ಧನಾಗಿಯು, ವಿರಕ್ತನಾಗಿಯು ಸತ್ಯಧರ್ಮ ಪರಾಯಣನಾಗಿಯು ಇರುವಂಥಾವನಾಗುತಿರಲೀಕಾಗಿ॥ ಭರದ್ವಾಜನೆಂಬ ಮಹಾಮುನಿಯು ಆತನ ವೃತ್ತಾಂತ

---

* ಏವಮುಕ್ತಾತುಸಾಕನ್ಯಾಭರ್ತ್ರಾರಾಜೀವಲೋಚನಾ |

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದ್ವೃತ್ತಂಭರದ್ವಾಜೋಮಹಾಮುನಿಃ। ದದೌವಿಶ್ರವಸೇಭಾರ್ಯಾಂಸ್ವಸುತಾಂದೇವವರ್ಣಿನೀಮ್ ॥೩॥ *ಪ್ರತಿಗೃಹ್ಯತುಧರ್ಮೇಣಭರದ್ವಾಜಸುತಾಂತದಾ। ಮುದಾಪರಮಯಾಯುಕ್ತೋವಿಶ್ರವಾಮುನಿಪುಂಗವಃ॥೪॥ ಸತಸ್ಯಾಂವೀರ್ಯಸಂಪನ್ನಂಪುತ್ರಂಪರಮಧಾರ್ಮಿಕಂ। ಜನಯಾಮಾಸಧರ್ಮಾತ್ಮಾ ಸರ್ವೈರ್ಬ್ರಹ್ಮಗುಣೈರ್ಯುತಂ ॥೫॥ ತಸ್ಮಿನ್ಜಾತೇತು ಸಂಹೃಷ್ಟಃಸಬಭೂವಪಿತಾಮಹಃ । ಪ್ರಜಾನ್ವೇಷಿತಯಾಬುಧ್ಯಾಶ್ರಿಯೋಽಸ್ಯವಿಚಿಂತಯನ್ ॥ ೬ ॥ ದೃಷ್ಟ್ವಾಶ್ರೇಯಸ್ಕರೀಂವೃತ್ತಿಂಧನಾಧ್ಯಕ್ಷೋಭವಿಷ್ಯತಿ । ನಾಮಚಾಸ್ಯಾಕರೋತ್ಪ್ರೀತಸ್ಸಾರ್ಧಂದೇವರ್ಷಿಭಿಸ್ತದಾ ॥೭॥ ಯಸ್ಮಾದ್ವಿಶ್ರವಸೋಽಪತ್ಯಂಸಾದೃಶ್ಯಾದ್ವಿಶ್ರವಾಇವ । ತಸ್ಮಾದ್ವೈಶ್ರವಣೋನಾಮಭವಿಷ್ಯತ್ಯೇಷವಿಶ್ರುತಃ ॥೮॥ ಸತುವೈಶ್ರವಣಸ್ತತ್ರತಪೋವನಗತಸ್ತದಾ । ವ್ಯವರ್ಧತಮಹಾತೇಜಾಹುತಾಹುತಿರಿವಾನಲಃ ॥೯॥ ತಸ್ಯಾಶ್ರಮಪದಸ್ಥಸ್ಯಬುದ್ಧಿರ್ಜಾತಾಮಹಾತ್ಮನಃ। † ಚರಿಷ್ಯೇನಿಯತೋಧರ್ಮಂಧರ್ಮೋಹಿಪರಮಾಗತಿಃ ॥೧೦॥ ಸತುವರ್ಷಸಹಸ್ರಾಣಿ + ಸಪ್ತಸಪ್ತಮಹಾವನೇ। ಯಂತ್ರಿತೋನಿ

---

ದ್ವಾಜಃ–ಭರದ್ವಾಜನೆಂಬ, ಮಹಾಮುನಿಃ–ಮಹರ್ಷಿಯು,ತಸ್ಯ–ಆ ವಿಶ್ರವಸ್ಸಿನ, ತದ್ವೃತ್ತಂತು–ಆ ನಡತೆಯನ್ನಾದರೆ, ಜ್ಞಾತ್ವಾ–ಅರಿತು, ದೇವವರ್ಣಿನೀಂ–ದೇವತಾಸ್ತ್ರೀಸಮಾನವಾದವರ್ಣವುಳ್ಳ, ಸ್ವಸುತಾಂ–ತನ್ನ ಮಗಳನ್ನು, ವಿಶ್ರವಸಃ–ವಿಶ್ರವಸ್ಸಿಗೆ, ಭಾರ್ಯಾಂ–ಪತ್ನಿಯನ್ನಾಗಿ, ದದೌ–ಕೊಟ್ಟನು॥ತದಾ–ಆಕಾಲದಲ್ಲ, ದ್ವಿಜಶ್ರೇಷ್ಠಃ–ಬ್ರಾಹ್ಮಣೋತ್ತಮನಾದ,ವಿಶ್ರವಾಃ–ವಿಶ್ರವಸ್ಸೆಂಬ,ಸಮುನಿಪುಂಗವೋಪಿ–ಋಷಿಶ್ರೇಷ್ಠನೂಕೂಡ, ಭರದ್ವಾಜಸುತಾಂ–ಭರದ್ವಾಜನ ಪುತ್ರಿಯನ್ನು,ಲಬ್ಧ್ವಾ–ಹೊಂದಿ,ಪರಮಯಾ–ಉತ್ಕೃಷ್ಟವಾದ,ಮುದಾ–ಸಂತೋಷದಿಂದ,ಯುಕ್ತಃ–ಕೂಡಿಕೊಂಡಿರುವನು,ಅಭೂತ್–ಆದನು॥ ಧರ್ಮಾತ್ಮಾ–ಧರ್ಮಬುದ್ಧಿಯುಳ್ಳ, ಸಃ–ಪ್ರಸಿದ್ಧನಾದ,ಸಃ–ಆವಿಶ್ರವಸ್ಸು,ಸರ್ವೈಃ–ಸಮಸ್ತವಾದ, ಬ್ರಹ್ಮಗುಣೈಃ–ಬ್ರಾಹ್ಮಣಗುಣಗಳಿಂದ,ಯುತಂ–ಕೂಡಿಕೊಂಡಿರುವ,ವೀರ್ಯಸಂಪನ್ನಂ–ವೀರ್ಯಯುಕ್ತನಾದ, ಪರಮಧಾರ್ಮಿಕಂ–ಮಹಾಧರ್ಮಿಷ್ಠನಾದ, ಪುತ್ರಂ–ಕುಮಾರನನ್ನು,ಜನಯಾಮಾಸ–ಹುಟ್ಟಿಸಿದನು॥೫॥ ತಸ್ಮಿನ್–ಆ ಬಾಲಕನು, ಜಾತೇಸತಿ–ಹುಟ್ಟಿದವನಾಗುತಿರಲಿಕಾಗಿ, ಪಿತಾಮಹಃ–ಅಜ್ಜನಾದ, ಸಃ–ಆಪುಲಸ್ತ್ಯನು, ಪ್ರಜಾನ್ವೇಷಿತಯಾ – ಮಕ್ಕಳನ್ನು ನೋಡಬೇಕೆಂಬ, ಬುಧ್ಯಾ–ಬುದ್ಧಿಯಿಂದ, ಅಸ್ಯ–ಈ ವಿಶ್ರವಸ್ಸಿಗೆ, ಶ್ರಿಯಃ–ಅಭಿವೃದ್ಧಿಯನ್ನು, ವಿಚಿಂತಯನ್–ಯೋಚಿಸುತಿರುವನಾಗಿ,ಸಂಹೃಷ್ಟಃ–ಸಂತುಷ್ಟನಾದವನು, ಬಭೂವ–ಆದನು ॥೬॥ ಶ್ರೇಯಸ್ಕರೀಂ–ಅಭಿವೃದ್ಧಿಕರವಾದ, ವೃತ್ತಿಂ–ಮುಂದೆ ಆಗತಕ್ಕ ಪದವಿಯನ್ನು, ದೃಷ್ಟ್ವಾ–ಕಂಡು, ಧನಾಧ್ಯಕ್ಷಃ–ನವನಿಧಿಗಳಿಗಧಿಪತಿಯು, ಭವಿಷ್ಯತಿ–ಆಗುವನು, ಯಸ್ಮಾತ್–ಯಾವ ಕಾರಣದ ದೆಸೆಯಿಂದ, ವಿಶ್ರವಸಃ–ವಿಶ್ರವಸ್ಸಿನ, ಅಪತ್ಯಂ–ಮಗುವು, ॥೭॥ ಸಾದೃಶ್ಯಾತ್–ಹೋಲ್ಕೆಯಿಂದ, ವಿಶ್ರವಾಇವ–ವಿಶ್ರವಸ್ಸಿನಂತೆ (ವರ್ತತೇ–ಇರುವನೊ) ತಸ್ಮಾತ್–ಆ ಕಾರಣದಿಂದ, ವೈಶ್ರವಣೋನಾಮ–ವೈಶ್ರವಣನೆಂದು ಪ್ರಸಿದ್ಧನಾಗಿ, ವಿಶ್ರುತಃ–ಕೇಳಲ್ಪಟ್ಟವನು, ಭವಿಷ್ಯತಿ–ಆಗುವನು, ಇತಿ–ಇಂತೆಂದು, ಪ್ರೀತಃ–ಸಂತುಷ್ಟನಾಗಿ, ತದಾ–ಆಕಾಲದಲ್ಲಿ, ದೇವರ್ಷಿಭಿಸ್ಸಾರ್ಧಂ–ದೇವಋಷಿಗಳೊಡನೆ, ಅಸ್ಯ–ಈ ಬಾಲಕನಿಗೆ, ನಾಮ–ಹೆಸರನ್ನು, ಅಕರೋತ್–ಮಾಡಿದನು ॥೮॥ ತದಾ–ಆ ಕಾಲದಲ್ಲಿ, ತತ್ರ–ಆಶ್ರಮದಲ್ಲಿ, ತಪೋವನಗತಃ–ತಪೋನಿಮಿತ್ತವಾಗಿ ವನವನ್ನು ಹೊಂದಿದ, ಸವೈಶ್ರವಣಸ್ತು–ಆ ವೈಶ್ರವಣನಾದರೆ, ಹುತಾಹುತಿಃ– ಹೋಮಮಾಡಲ್ಪಟ್ಟ ಹವಿಸ್ಸುಳ್ಳ, ಅನಲಇವ–ಅಗ್ನಿಯಂತೆ, ಮಹಾತೇಜಾಃ–ಅತಿ ತೇಜಸ್ವಿಯಾಗಿ, ವ್ಯವರ್ಧತ–ವೃದ್ಧಿಹೊಂದಿದನು ॥ ೯ ॥ ಹಿಯಸ್ಮಾತ್–ಯಾವಕಾರಣದ ದೆಸೆಯಿಂದ, ಧರ್ಮಃ–ಧರ್ಮವು, ಪರಮಾ–ಉತ್ಕೃಷ್ಟವಾದ, ಗತಿಃ–ಪ್ರಾಪ್ಯಸ್ಥಾನವೋ, ತಸ್ಮಾತ್–ಆ ಕಾರಣದ ದೆಸೆಯಿಂದ, ಪರಮಂ–ಶ್ರೇಷ್ಠವಾದ, ಧರ್ಮಂ–ಧರ್ಮವನ್ನು, ಚರಿಷ್ಯೇ–ಆಚರಿಸುವೆನು, ಇತಿ–ಇಂತೆಂದು, ಆಶ್ರಮಪದಸ್ಥಸ್ಯ–ಆ ಪರ್ಣಶಾಲೆಯಲ್ಲಿರುವ,ಮಹಾತ್ಮನಃ–ಮಹಾನುಭಾವನಾದ,ತಸ್ಯ–ಆ ವೈಶ್ರವಣನಿಗೆ, ಬುದ್ಧಿಃ–ಜ್ಞಾನವು, ಜಾತಾ ಹುಟ್ಟಿತು ॥೧೦॥ ಸತು–ಆ ವೈಶ್ರವಣನಾದರೆ, ಮಹಾವನೇ–ಗೊಂಡಾರಣ್ಯದಲ್ಲಿ, ಸಪ್ತಸಪ್ತ–ಹದಿನಾಲ್ಕಾದ, ವರ್ಷ

---

ವನ್ನರಿತು, ದೇವತಾಸ್ತ್ರೀ ಸಮಾನ ರೂಪವುಳ್ಳ ತನ್ನ ಮಗಳನ್ನು ಆ ವಿಶ್ರವಸ್ಸಿಗೆ ಕೊಟ್ಟನು॥೩॥ ಆ ಕನ್ಯಕೆಯಂ ಕಲ್ಯಾಣ ಮಾಡಿಕೊಂಡ ವಿಶ್ರವಸ್ಸೆಂಬ ಮುನಿಪುಂಗವನು ಪ್ರಜೋತ್ಪಾದನೆಯಂ ಗೈಯ್ಯಬೇಕೆಂದಿಚ್ಛೈಸಲು, ವೀರ್ಯ ಸಂಪನ್ನನಾದ ಮತ್ತು ಮಹದಾನಂದಕರನಾದ ನಂದನನು ಜನಿಸಿದನು, ಆ ಬಾಲಕನ ಪಿತಾಮಹನಾದ ಪುಲಸ್ತ್ಯಬ್ರಹ್ಮನು, ಬ್ರಹ್ಮರ್ಷಿಗಳೊಡನೆ ಜನ್ಮಲಗ್ನವಂ ಪರ್ಯಾಲೋಚಿಸಿ ಈ ಕುವರನು ಭವಿಷ್ಯತ್ಕಾಲದಲ್ಲಿ ಧನಾಧ್ಯಕ್ಷನಾಗುವನು, ಆದರೆ ಈಗ ತಂದೆಯಾದ ವಿಶ್ರವಸ್ಸಿಗನುರೂಪನಾಗಿರುವ ಕಾರಣ ವೈಶ್ರವಣನೆಂದು ಪೆಸರಿಡಬಹುದೆಂದು ಯೋಚಿಸಿ ಆ ಕುಮಾರನಿಗೆ ನಾಮಕರಣವನ್ನು ಮಾಡಿಸಿದವನಾದನು ॥೮॥ ಆ ಸಮಯದೊಳ್ ತಪೋವನಗತನಾದ ಆ ವೈಶ್ರವಣನು ಆಹುತಿ ಹುತನಾದ ಹುತಾಶನನೋಪಾದಿಯಲ್ಲಿ ಹೊಳೆಯುತಿದ್ದನು ॥೯ ॥ ಧರ್ಮವೇ ಪರಮ ಗತಿಯಾದ ಕಾರಣ ನಾನುನ್ನು ಧರ್ಮಪ್ರಧಾನವಾದ ತಪಸ್ಸನ್ನಾಚರಿಸ ಬೇಕೆಂಬದಾಗಿ ಆ ಬಾಲಕನಿಗೆ ಬುದ್ಧಿಯುಂಟಾಗಿ ಮಹಾ ವನದಲ್ಲಿದ್ದು ಕೊಂಡು ಹದಿನಾಲ್ಕುಸಾವಿರ ವರ್ಷಗಳು ನಿಯಮಯಂತ್ರಿತನಾಗಿ ಮಹತ್ತರವಾದ ಮತ್ತೆ ಘೋರವಾದ ತಪಸ್ಸುಮಾಡುತಿದ್ದನು ॥೧೧॥ ಅದೆಂತೆನೆ,—ಜಲಾಶಿಯಾಗಿಯು, ಮಾರುತಾಹಾರನಾಗಿಯು, ನಿರಾಹಾರನಾಗಿಯು, ಒಂದೊಂದು ಸಹಸ್ರವರ್ಷಾಂತ್ಯವು ಪೂರ್ತಿಯಾಗುವವರಿವಿಗು, ಒಂದೊಂದು ವಿಧವಾದ ವಿಧಿಯನ್ನಾಚರಿಸುತ್ತಿರಲು, ಈ ರೀತಿಯಾಗಿ ಅಂಥಾ ಅ

---

* ಸೋಪಿಲಬ್ಧ್ವಾದ್ವಿಜಶ್ರೇಷ್ಠಃ. † ಚರಿಷ್ಯೇಪರಮಂಧರ್ಮಂ. + ತಪಸ್ತಪ್ತ್ವಾ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



*ನಿಯಮೆನೋಗ್ರಂಶ್ಚಕಾರಸುಮಹತ್ತಪಃ॥೧೧॥ ಪೂರ್ಣೇವರ್ಷಸಹಸ್ರಾಂತೆ ತಂತಂವಿಧಿ † ಮವರ್ತತ ।ಜಲಾಶೀಮಾರು ತಾಹಾರೊನಿರಾಹಾರಸ್ತಥೈವಚ ॥ ೧೨ ॥ ಏವಂವರ್ಷಸಹಸ್ರಾಣಿಜಗ್ಮುಸ್ತಾನ್ಯೇಕವರ್ಷವತ್॥ ೧೩॥ ಅಥಪ್ರೀತೊಮ ಹಾತೇಜಾಸ್ಸೇಂದ್ರೈಸ್ಸುರಗಣೈಸ್ಸಹ । ಗತ್ವಾತಸ್ಯಾಶ್ರಮಪದಂಬ್ರಹ್ಮೇದಂವಾಕ್ಯಮಬ್ರವೀತ್ ॥೧೪॥ ಪರಿತುಷ್ಟೋ ಸ್ಮಿತೆವತ್ಸ + ತಪಸಾತವಸುವ್ರತ।ವರಂವೃಣೀಷ್ವಭದ್ರಂತೆವರಾರ್ಹಸ್ತ್ವಂ ‡ ಹಿಮೆಮತಃ॥೧೫॥ ಅಥಾಬ್ರವೀದ್ವೈಶ್ರವ ಣಃಪಿತಾಮಹಮುಪಸ್ಥಿತಂ । ಭಗವನ್ ಲೊಕಪಾಲತ್ವಮಿಚ್ಛೆಯಂವಿತ್ತರಕ್ಷಣಂ॥೧೬॥ ಅಥಾಬ್ರವೀದ್ವೈಶ್ರವಣಂಪರಿ ತುಷ್ಟೆನಚೆತಸಾ । ಬ್ರಹ್ಮಾ ಸುರಗಣೈಸ್ಸಾರ್ಧಂಬಾಢಮಿತ್ಯೆವ ?? ಹೃಷ್ಟವತ್ ॥೧೭॥ ಅಹಂಹಿಲೊಕಪಾಲಾನಾಂಚತು ರ್ಥಂಸ್ರಷ್ಟುಮುದ್ಯತಃ । ಯಮೆಂದ್ರವರುಣಾನಾಂಚಯತ್ಪದಂತವಚೆಪ್ಸಿತಂ ॥೧೮॥ ತ್ವಂತುತದ್ಗಚ್ಛ ಧರ್ಮಜ್ಞ ಧನೆ ಶತ್ವಮವಾಪ್ನುಹಿ ।ಶಕ್ರಾಂಬುಪಯಮಾನಾಂಚಚತುರ್ಥಸ್ತ್ವಂಭವಿಷ್ಯಸಿ ॥೧೯॥ಏತಚ್ಚ ಪುಷ್ಪಕಂನಾಮ ವಿಮಾನಂ

---

ಸಹಸ್ರಾಣಿ–ಸಾವಿರ ವರ್ಷಗಳು, ನಿಯಮೇನ–ಉಪವಾಸಾದಿ ವ್ರತದಿಂದ, ಯಂತ್ರಿತಃ–ನಿಯತನಾಗಿ, ಉಗ್ರಂ–ಕ್ರೂರವಾದ, ಸುಮಹತ್–ಬಹಳವಾದ, ತಪಃ–ತಪಸ್ಸನ್ನು, ಚಕಾರ–ಮಾಡಿದನು ॥೧೧॥ ವರ್ಷಸಹಸ್ರಾಂತೆ–ಸಾವಿರವರ್ಷಗಳ ತುದಿಭಾಗವು, ಪೂರ್ಣೆಸತಿ–ಪೂರ್ತಿಯಾಗತಿರಲೀಕಾಗಿ, ಜಲಾಶೀ–ಜಲಪಾನಮಾಡುತಿರುವನಾಗಿಯು, ತಥೈವ–ಹಾಗೆಯೆ, ಮಾರುತಾಹಾರಃ–ವಾಯ್ವಾಹಾರ ವುಳ್ಳವನಾಗಿಯು, ನಿರಾಹಾರಃ–ಆಹಾರಶೂನ್ಯನಾಗಿಯು, ತಂತಂ ವಿಧಿಂ–ಆಯಾವಿಧಾನವನ್ನು, ಆವರ್ತತ–ಅನುಷ್ಠಾನಮಾಡಿದನು ॥೧೨॥ ಏವಂ–ಈ ಪ್ರಕಾರವಾಗಿ, ತಾನಿವರ್ಷಸಹಸ್ರಾಣಿ–ಆ ಸಂವತ್ಸರ ಸಹಸ್ರಗಳು, ಏಕವರ್ಷವತ್– ಒಂದು ವರ್ಷದಂತೆ ,ಜಗ್ಮುಃ–ಕಳದುಹೋದವು ॥ ೧೩ ॥ ಅಥ–ಬಳಿಕ, ಮಹಾತೆಜಾಃ–ಬಹು ತೇಜೋವಂತನಾದ, ಬ್ರಂಹಾ–ಬ್ರಹ್ಮನು, ಪ್ರೀತಃ– ಸಂತುಷ್ಟನಾಗಿ, ಸೆಂದ್ರೈಃ–ಇಂದ್ರಸಹಿತರಾದ, ಸುರಗಣೈಸ್ಸಹ–ದೇವಸಂಘಗಳೊಡಗೂಡಿ, ತಸ್ಯ–ಆ ವೈಶ್ರವಣನ, ಆಶ್ರಮಪದಂ–ಆಶ್ರಮಪ್ರದೇಶವನ್ನು ಕುರಿತು, ಗತ್ವಾ–ಪೋಗಿ, ಇದಂವಾಕ್ಯಂ–ಈ ವಚನವನ್ನು, ಅಬ್ರವೀತ್–ನುಡಿದನು ॥ ೧೪ ॥ ಹೆವತ್ಸ–ಎಲೈ ಬಾಲಕನೆ, ಹೆಸುವ್ರತ–ಎಲೈ ಒಳ್ಳೇವ್ರತ ವುಳ್ಳವನೆ, ತೆ–ನಿನ್ನ, ಅನೆನತಪಸಾ–ಈ ತಪಸ್ಸಿನಿಂದ, ಪರಿತುಷ್ಟಃ–ಸಂತುಷ್ಟನಾದವನು, ಅಸ್ಮಿ–ಆದೆನು, ತೆ–ನಿನಗೆ, ಭದ್ರಂ–ಶುಭವಾಗಲಿ, ವರಂ–ವರವನ್ನು, ವೃಣೀಷ್ವ–ಬೇಡು, ತ್ವಂ–ನೀನು ಮೆ–ನನಗೆ, ವರಾರ್ಹಃ–ವರಕ್ಕೆ ಅರ್ಹನಾಗಿ, ಮತೋಹಿ–ಸಮ್ಮತನಪ್ಪೆ ॥ ೧೫ ॥ ಅಥ–ಬಳಿಕ, ಹೆ ಭಗವನ್–ಎಲೈ ಪೂಜ್ಯನೆ, ಲೋಕಪಾಲತ್ವಂ–ದಿಕ್ಪಾಲಕತ್ವವನ್ನು, ವಿತ್ತರಕ್ಷಣಂ–ಧನರಕ್ಷಣೆಯನ್ನು, ಇಚ್ಛೆಯಂ–ಅಪೇಕ್ಷಿಸುವೆನು, (ಇತಿ–ಇಂತೆಂದು) ವೈಶ್ರವಣಃ–ಕುಬೆರನು, ಉಪಸ್ಥಿತಂ–ಸಮೀಪ ವರ್ತಿಯಾದ, ಪಿತಾಮಹಂ–ಬ್ರಹ್ಮನನ್ನು ಕುರಿತು, ಅಬ್ರವೀತ್–ಪೇಳಿದನು ॥ ೧೬ ॥ ಅಥ–ಅನಂತರದಲ್ಲಿ, ಬ್ರಹ್ಮಾ–ಬ್ರಹ್ಮನು, ಸುರಗಣೈಸ್ಸಾರ್ಧಂ–ದೇವತಾ ಸಮೂಹಗಳಿಂ ದೊಡಗೂಡಿ, ಪರಿತುಷ್ಟೆನ–ಹೃಷ್ಟವಾದ, ಚೆತಸಾ–ಮನದಿಂದ, ಬಾಢಮಿತ್ಯೆವ–ಹಾಗೆ ಆಗಲೀಯೆಂದು, ವೈಶ್ರವಣಂ–ವೈಶ್ರವಣನನ್ನು ಹರ್ಷಯನ್–ಸಂತೋಷ ಗೊಳಿಸುತಿರುವನಾಗಿ, ಅಬ್ರವೀತ್–ನುಡಿದನು ॥೧೭॥ ಅಹಂ–ನಾನು, ಲೊಕಪಾಲಾನಾಂ–ದಿಕ್ಪಾಲಕರೊಳಗೆ, ಚತುರ್ಥಂ–ನಾಲ್ಕನೇಯವನನ್ನು, ಸ್ರಷ್ಟುಂ–ಸೃಜಿಸುವದಕ್ಕೋಸ್ಕರ, ಉದ್ಯತಃ– ಉದ್ಯುಕ್ತನಾಗಿಥೆನೆ ॥ ೧೮ ॥ ಹೆಧರ್ಮಜ್ಞ–ಎಲೈ ಧರ್ಮವನ್ನರಿತವನೇ । ತವಚ–ನಿನಗೂಕೂಡ, ಯಮೆಂದ್ರವರುಣಾನಾಂಚ – ಯಮ, ಇಂದ್ರ, ವರುಣರೊಳಗೆ, ಯತ್ಪದಂ–ಯಾವಸ್ಥಾನವು, ಈಪ್ಸಿತಂ–ಇಷ್ಟವೋ, ತತ್–ಅಂಥಪದವನ್ನು, ಗಚ್ಛ–ಹೊಂದು, ಧನೇಶತ್ವಂ–ನಿಧಿಪತಿತ್ವವನ್ನು, ಅವಾಪ್ನುಹಿ–ಹೊಂದು ॥ ೧೯ ॥ ತ್ವಂ–ನೀನು, ಶಕ್ರಾಂಬುಪಯಮಾನಾಂ – ಇಂದ್ರ, ವರುಣ, ಯಮರೆಂಬ ಮುವ್ವೋರಿಗು, ಚತುರ್ಥಃ–ನಾಲ್ಕನೇಯವ ನು

---

ನೇಕವರ್ಷ ಸಹಸ್ರಗಳು ಒಂದು ಸಂವತ್ಸರದಂತೆ ಕಳದು ಹೋದವು ॥೧೩॥ ಸಮನಂತರ ಕಾಲದೋಳ್ ಮಹಾ ತೇಜಸ್ವಿಯಾದ ಚತುರ್ಮುಖಬ್ರಹ್ಮನು ಸಂತುಷ್ಟಾಂತರಂಗಮುಳ್ಳವನಾಗಿ, ಇಂದ್ರ ಸಹಿತರಾದ ದೇವತೆಗಳಿಂದೊಡಗೂಡಿ ಆ ವೈಶ್ರವಣನಾಶ್ರಮವಂಪೊಕ್ಕು ಈ ವಾಕ್ಯವಂ ಹೇಳತೊಡಗಿದನು ॥೧೪॥ ಎಲೈ ವ್ರತಶೀಲನಾದ ವತ್ಸನೆ! ನೀನು ಮಾಡುತ್ತಿರುವ ಈ ತಪಸ್ಸಿಂದ ನಾನು ಪರಿತುಷ್ಟನಾಗಿಥೇನೆ ಎಲೈ ಮತಿವಂತನೆ! ನೀನು ವರಾರ್ಹನಾದ ಕಾರಣ ಬೇಕಾದ ವರವಂಬೇಡಿಕೋ, ನಿನಗೆ ಶುಭವಾಗಲಿ ಎಂದು ಪೇಳಲು ॥೧೫॥ ಬಳಿಕಾ ವೈಶ್ರವಣನು ಎಲೈ ಪೂಜ್ಯನಾದ ಪಿತಾಮಹನೆ! ಹಾಗಾದರೆ ದ್ರವ್ಯಾಧಿಪತ್ಯವನ್ನು ಲೋಕಪಾಲಕತ್ವವನ್ನು ಸಹ ಇಚ್ಛೈಸುವೆನೆಂದು ಬ್ರಹ್ಮನಂಕುರಿತು ವರವಂನಪೇಕ್ಷಿಸಿದನು ॥೧೬॥ಅನಂತರದಲ್ಲಿ ಪಿತಾಮಹನು ಮಹದಾನಂದ ಭರಿತನಾಗಿ ಸುರಗಣಗಳೊಡನೆ ಹಾಗೆ ಆಗಬಹುದೆಂದು ಸಂಮತಿಸಿ ಸಂತುಷ್ಟವಾದ ಸ್ವಾಂತದಿಂದ ವೈಶ್ರವಣನನ್ನು ಕುರಿತಿಂತೆಂದನು ॥೧೭॥ಎಲೈ ಧರ್ಮಜ್ಞನೆ! ನಾನಾದರೆ ಲೋಕಪಾಲಕರೊಳಗೆ ನಾಲ್ಕನೇ ಯವನನ್ನು ಸೃಜಿಸಲುದ್ಯುಕ್ತನಾಗಿದ್ದೆನು. ನೀನುನ್ನು ಅದರಂತೆಯೆ ಅಪೇಕ್ಷಿಸಿದವನಾದಕಾರಣ ಯಮ, ಇಂದ್ರ, ವರುಣರೆಂಬೀ ಲೋಕಪಾಲಕರ ಸ್ಥಾನಗಳಲ್ಲಿ ಯಾವದು ನಿನಗಿಷ್ಟವಾಗಿರುವದೋ ಅದನ್ನು ಮತ್ತು ನಿಧೀಶತ್ವವನ್ನು ಸಹಹೊಂದಿ, ಈ ಲೋಕಪಾಲಕರೊಳಗೆ ನಾಲ್ಕನೇ ಯವನಾಗು, ಮತ್ತು ಸೂರ್ಯಸದೃಶ

---

* ನಿಯಮೆನೋಗ್ರಂ † ಮಕಲ್ಪಯತ್ + ಕರ್ಮಣಾನೇನ ‡ ಮಹಾಮತೆ. ?? ಹರ್ಷಯನ್.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸೂರ್ಯಸನ್ನಿಭಂ । ಪ್ರತಿಗೃಹ್ಣೀಷ್ವಯಾನಾರ್ಥಂತ್ರಿದಶೈಸ್ಸಮತಾಂವ್ರಜ ॥೧೯॥ ಸ್ವಸ್ತಿತೆಸ್ತುಗಮಿಷ್ಯಾಮಸ್ಸರ್ವ
ಏವಯಥಾಗತಂ ॥ ಕೃತಕೃತ್ಯಾವಯಂತಾತದತ್ವಾ ತವವರದ್ವಯಂ ॥ ಇತ್ಯುಕ್ತ್ವಾ ಸಗತೊಬ್ರಹ್ಮಾ ಸ್ವಸ್ಥಾನಂತ್ರಿದಶೈ
ಸ್ಸಹ ॥೨೧॥ ಗತೆಷುಬ್ರಹ್ಮಪೂರ್ವೆಷುದೆವೆಷ್ವಥನಭಸ್ಥಲಂ। ಧನೆಶಃಪಿತರಂಪ್ರಾಹಪ್ರಾಂಜಲಿಃಪ್ರಯತಾತ್ಮವಾನ್ ॥೨೨॥
ಭಗವನ್ ಲಬ್ಧವಾನಸ್ಮಿ ವರಮಿಷ್ಟಂಪಿತಾಮಹಾತ್। ನಿವಾಸಂನತುಮೆದೆವೊವಿದಧೆಸಪ್ರಜಾಪತಿಃ॥೨೩॥ ತಂಪಶ್ಯಭಗವನ್ ಕಿಂ
ಚಿನ್ನಿವಾಸಂಸಾಧುಮೆಪ್ರಭೊ । ನಚಪೀಡಾಭವೇದ್ಯತ್ರಪ್ರಾಣಿನೊಯಸ್ಯಕಸ್ಯಚಿತ ॥೨೪॥ ಏವಮುಕ್ತಸ್ತುಪುತ್ರೇಣವಿಶ್ರ
ವಾಮುನಿಪುಂಗವಃ। ವಚನಂಪ್ರಾಹಧರ್ಮಜ್ಞಶ್ರೂಯತಾಮಿತಿಸತ್ತಮ ॥೨೫॥ ದಕ್ಷಿಣಸ್ಯೊದಧೆಸ್ತೀರೆತ್ರಿಕೂಟೊನಾಮ
ಪರ್ವತಃ । ತಸ್ಯಾಗ್ರೆತುವಿಶಾಲಾಸಾಮಹೆಂದ್ರಸ್ಯಪುರೀಯಥಾ॥೨೬॥ ಲಂಕಾನಾಮಪುರೀರಮ್ಯಾನಿರ್ಮಿತಾವಿಶ್ವಕರ್ಮ
ಣಾ। ರಾಕ್ಷಸಾನಾಂನಿವಾಸಾರ್ಥಂಯಥೆಂದ್ರಸ್ಯಾಮರಾವತೀ ॥೨೭॥ ಹೆಮಪ್ರಾಕಾರಪರಿಖಾಯಂತ್ರಶಸ್ತ್ರಸಮಾವೃತಾ ।
ರಮಣೀಯಾಪುರೀಸಾಹಿರುಕ್ಮವೈಡೂರ್ಯತೊರಣಾ ॥೨೮॥ ರಾಕ್ಷಸೈಶ್ಚ ಪರಿತ್ಯಕ್ತಾ ಪುರಾವಿಷ್ಣುಭಯಾರ್ದಿತೈಃ । ಶೂ

---

ಭವಿಷ್ಯಸಿ-ಆಗುವಿ, ಸೂರ್ಯಸನ್ನಿಭಂ-ಸೂರ್ಯಸದೃಶವಾದ, ಪುಷ್ಪಕಂನಾಮ-ಪುಷ್ಪಕವೆಂದು ಪ್ರಸಿದ್ಧವಾದ, ಏತದ್ವಿಮಾನಂ-ಈ ದೇವರಥವನ್ನು, ಯಾನಾ
ರ್ಥಂ-ವಾಹನಾರ್ಥವಾಗಿ, ಪ್ರತಿಗೃಹ್ಣೀಷ್ವ-ತೆಗದುಕೊ, ತ್ರಿದಶೈಃ-ದೇವತೆಗಳೊಡನೆ, ಸಮತಾಂ-ಸಾಮ್ಯವನ್ನು, ವ್ರಜ-ಹೊಂದು, ತೇ-ನಿನಗೆ, ಸ್ವ
ಸ್ತ್ಯಸ್ತು-ಶುಭವಾಗಲಿ, ಸರ್ವಏವ-ನಾವೆಲ್ಲರು, ಯಥಾಗತಮೇವ-ಬಂದಂತೆಯೆ, ಗಮಿಷ್ಯಾಮಃ-ಹೋಗುವೆವು ॥ ೨೦ ॥ ಹೆತಾತ-ಎಲೈ ವತ್ಸನೆ! ತ
ವ-ನಿನಗೆ, ವರದ್ವಯಂ-ಎರಡುವರಗಳನ್ನು, ದತ್ವಾ-ಕೊಟ್ಟು, ವಯಂ-ನಾವು, ಕೃತಕೃತ್ಯಾಃ-ಕೃತಾರ್ಥರಾದೆವು, ಇತ್ಯುಕ್ತ್ವಾ-ಈ ಪರಿಪೇಳಿ, ಸ
ಬ್ರಹ್ಮಾ-ಆ ಬ್ರಹ್ಮನು, ತ್ರಿದಶೈಸ್ಸಹ-ದೇವತೆಗಳೊಡನೆ, ಸ್ವಸ್ಥಾನಂ-ಸತ್ಯಲೋಕವನ್ನು ಕುರಿತು, ಗತಃ-ಹೋದನು ॥ ೨೧ ॥ ಬ್ರಹ್ಮಪೂರ್ವೆಷು-ಬ
ಹ್ಮನೇ ಮೊದಲಾಗುಳ್ಳ, ದೆವೆಷು-ದೇವತೆಗಳು, ನಭಸ್ಥಲಂ-ಗಗನವನ್ನು ಕುರಿತು, ಗತೆಷುಸತ್ಸು-ಹೋದವರಾಗುತ್ತಿರಲಿಕಾಗಿ, ಅಥ-ಬಳಿಕ, ಪ್ರಯ
ತಾತ್ಮವಾನ್-ನಿಶ್ಚಂಚಲ ಚಿತ್ತನಾದ, ಧನೆಶಃ-ಕುಬೇರನು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ಪಿತರಂ-ತಂದೆಯನ್ನು ಕುರಿತು, ಪ್ರಾಹ-ಪೇಳಿದನು॥೨೨
ಹೆಭಗವನ್-ಎಲೈ ಪೂಜ್ಯನೆ! ಪಿತಾಮಹಾತ್-ಬ್ರಹ್ಮದೇವರ ದೆಸೆಯಿಂದ, ವರಂ-ವರವನ್ನು, ಲಬ್ಧವಾನ್-ಹೊಂದಿದವನು, ಅಸ್ಮಿ-ಆದೆನು, ಸಪ್ರಜಾಪತಿ
ರ್ದೆವಃ-ಆ ಬ್ರಹ್ಮದೇವನು, ಮೆ-ನನಗೆ, ನಿವಾಸಂತು-ವಾಸಸ್ಥಲವನ್ನಾದರೆ, ನವಿದಧೆ-ಮಾಡಲಿಲ್ಲ ॥ ೨೩ ॥ ಹೆಭಗವನ್-ಎಲೈ ಪೂಜ್ಯನೆ! ಹೆಪ್ರಭೊ-ಎ
ಲೋ ಸ್ವಾಮಿಯೆ! ಯತ್ರ-ಯಾವಸ್ಥಲದಲ್ಲಿ, ಯಸ್ಯಕಸ್ಯಚಿತ್ಪ್ರಾಣಿನಃ-ಯಾವಪ್ರಾಣಿಗೂ, ಪೀಡಾಚ-ಬಾಧೆಯುನ್ನು, ನಭವೆತ್-ಆಗದಿರುವದೋ,
ತಂ-ಅಂಥಪ್ರದೇಶವನ್ನು ಕಿಂ-ಯಾವದನ್ನಾದರು, ಸಾಧು-ಚನ್ನಾಗಿ, ನಿವಾಸಂ-ವಾಸಸ್ಥಲವನ್ನು, ಪಶ್ಯ-ನೋಡು॥ ೨೪ ॥ ಏವಂ-ಈ ಪರಿಯಾಗಿ, ಪುತ್ರೇ
ಣ-ಕುಮಾರನಿಂದ, ಉಕ್ತಃ-ಹೇಳಲ್ಪಟ್ಟ, ಮುನಿಪುಂಗವಃ-ಋಷಿಶ್ರೇಷ್ಠನಾದ, ಧರ್ಮಜ್ಞಃ-ಧರ್ಮಿಷ್ಠನಾದ, ವಿಶ್ರವಾಃ-ವಿಶ್ರವಸ್ಸು, ಹೆಸತ್ತಮ-ಎ
ಲೈ ಸತ್ಪುರುಷನೆ! ಶ್ರೂಯತಾಂ-ಕೇಳಲ್ಪಡಲಿ (ಇತಿ ಇಂತೆಂದು) ವಚನಂ-ಮಾತನ್ನು, ಪ್ರಾಹ-ಪೇಳಿದನು ॥ ೨೫ ॥ ದಕ್ಷಿಣಸ್ಯ-ದಕ್ಷಿಣದಿಕ್ಕಿನಲ್ಲಿರುವ, ಉ
ದಧೆಃ-ಸಮುದ್ರದ, ತೀರೆ-ದಡದಲ್ಲಿ, ತ್ರಿಕೂಟೊನಾಮ-ತ್ರಿಕೂಟವೆಂದು ಪ್ರಸಿದ್ಧವಾದ, ಪರ್ವತಃ-ಪರ್ವತವು, ಅಸ್ತಿ-ಇಹೆ, ತಸ್ಯ-ಆಪರ್ವತದ, ಅಗ್ರೆ-
ಮುಂಭಾಗದಲ್ಲಿ, ಮಹೆಂದ್ರಸ್ಯ-ದೇವೇಂದ್ರನ, ಪುರೀಯಥಾ-ಪಟ್ಟಣದಂತೆ, ವಿಶಾಲಾ-ವಿಸ್ತಾರವಾದ, ಲಂಕಾನಾಮ-ಲಂಕೆಯೆಂದು ಪ್ರಸಿದ್ಧವಾದ, ರಮ್ಯಾ-
ಸೊಬಗಾದ, ಸಾಪುರೀ-ಆ ಪಟ್ಟಣವು, ರಾಕ್ಷಸಾನಾಂ-ಅಸುರರ, ನಿವಾಸಾರ್ಥಂ-ಇರುವದಕ್ಕೋಸ್ಕರ, ಇಂದ್ರಸ್ಯ-ಇಂದ್ರನಿಗೆ, ಅಮರಾವತೀಯಥಾ-
ಅಮರಾವತೀ ಪುರಿಯೋಪಾದಿಯಲ್ಲಿ, ವಿಶ್ವಕರ್ಮಣಾ-ವಿಶ್ವಕರ್ಮ ಬ್ರಹ್ಮನಿಂದ, ನಿರ್ಮಿತಾ-ಸೃಜಿಸಲ್ಪಟ್ಟಿಧೆ ॥೨೭॥ ಹೆಮಪ್ರಾಕಾರಪರಿಖಾ-ಸುವರ್ಣಮ
ಯವಾದ ಕೋಟೆಯು ಅಗಳತೆಯುಳ್ಳಹುಳ್ಳ, ಯಂತ್ರಶಸ್ತ್ರಸಮಾವೃತಾ-ಯಂತ್ರವಿಕಾರವಾದ ಶಸ್ತ್ರಗಳಿಂದ ಸುತ್ತುವರಲ್ಪಟ್ಟ, ಸಾಪುರೀ-ಆ ಲಂಕಾ

---

ವಾದ ಕಾಮುಗಾಮಿಯಾದ ಈ ಪುಷ್ಪಕವೆಂಬ ವಿಮಾನವನ್ನು ನಿನಗೆ ವಾಹನಾರ್ಥವಾಗಿ ತೆಗದುಕೊಂಡು ದೇವತಾ
ಸಾಮ್ಯವಂ ಹೊಂದು, ನಿನಗೆ ಶುಭವಾಗಲಿ, ನಾನು ಪೋಗಿಬರುವೆನು, ಎಲೈ ವತ್ಸನೆ! ನಿನಗೀವರದ್ವಯ ಪ್ರದಾನದಿಂದ
ನಾವೆಲ್ಲರು ಕೃತಕೃತ್ಯರಾದೆವೆಂದು ಈಪರಿ ಪೇಳಿ ದೇವತೆಗಳಿಂದೊಡಗೂಡಿ ಸ್ವಸ್ಥಾನವನ್ನೈದಿದನು॥೨೧॥ ಬ್ರಹ್ಮ
ಮುಂತಾದ ದೇವತೆಗಳೆಲ್ಲರು ಗಗನ ಮಾರ್ಗದಲ್ಲಿ ಹೊರಟು ಹೋದ ಬಳಿಕ, ನಿಶ್ಚಂಚಲ ಚಿತ್ತನಾದ ಆ ವೈಶ್ರವಣನು
ಅಂಜಲಿಬದ್ಧನಾಗಿಂತೆಂದನು ॥೨೨॥ ಎಲೈ ಪೂಜ್ಯನಾದ ಜನಕನೆ! ಆ ಬ್ರಹ್ಮದೇವರು ನನಗೆ ವರವಂ ಕೊಟ್ಟು ನಿವಾಸ
ವಂ ತೋರಿಸದೆ ಹೊರಟು ಹೋದನು ॥೨೩॥ ಎಲೈ ಸ್ವಾಮಿಯೇ! ಆದಕಾರಣ ಯಾವ ಪ್ರಾಣಿಗು ಬಾಧೆ ಇಲ್ಲದಂ
ತಿರುವ ಯಾವದಾದರು ಒಂದಾನೊಂದು ಸ್ಥಳವನ್ನು ನಿರ್ದೇಶಿಸ ಬೇಕೆನ್ನಲು ॥೨೪॥ ಮುನಿಪುಂಗವನಾದ ವಿಶ್ರವಸ್ಸು ತ
ನ್ನ ಪುತ್ರನಿಂದ ಹೇಳಲ್ಪಟ್ಟ ವಾಕ್ಯವಂ ಕೇಳಿ ಎಲೈ ಮತಿವಂತನೇ! ಈ ಮುಂದೆ ಹೇಳುವ ವಚನವಂ ಕೇಳೆಂದು
ಪೇಳಿದನು ॥೨೫॥ ದಕ್ಷಿಣ ಸಮುದ್ರದ ತೀರದಲ್ಲಿ ತ್ರಿಕೂಟವೆಂಬ ಬೆಟ್ಟವಿಹೆ, ಆ ಪರ್ವತಾಗ್ರದಲ್ಲಿ ಇಂದ್ರ ಪುರಿಯಾದ
ಅಮರಾವತೀ ಪಟ್ಟಣದೋಪಾದಿಯಲ್ಲಿ ವಿಸ್ತಾರವಾದ ಲಂಕೆ ಎಂದು ಪ್ರಸಿದ್ಧಿಯಾದ ಸುಂದರವಾದ ಪುರವು ರಾಕ್ಷಸ
ರ ನಿವಾಸಕ್ಕೋಸ್ಕರವಾಗಿ ವಿಶ್ವಕರ್ಮ ನಿರ್ಮಿತವಾಗಿಧೆ ॥೨೭॥ ಮತ್ತು ಸುವರ್ಣ ನಿರ್ಮಿತವಾದ ಪ್ರಾಕಾರವುಳ್ಳ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನ್ಯ್ಯೈರಕ್ಷೋಗಣೈಸ್ಸರ್ವೈಃರಸಾತಲತಲಂಗತೈಃ ॥೧೯॥ ಶೂನ್ಯಾಸಂಪ್ರತಿಲಂಕಾಸಾಪ್ರಭುಸ್ತಸ್ಯಾನವಿದ್ಯತೇ । ಸತ್ವಂತ ತ್ರನಿವಾಸಾಯುಗಚ್ಛ ಪುತ್ರಯಥಾಸುಖಂ ॥೨೦॥ ನಿರ್ದೋಷಸ್ತತ್ರತೇವಾಸೋನಚಬಾಧಾಸ್ತಿ ಕಸ್ಯಚಿತ ॥೨೧॥ ಏತಚ್ಛ್ರುತ್ವಾ ಸಧರ್ಮಾತ್ಮಾ ಧರ್ಮಿಷ್ಠ ವಚನಂಪಿತುಃ । ನಿವಾಸಯಾಮಾಸತದಾಲಂಕಾಂಪರ್ವತಮೂರ್ಧನಿ ॥೨೨॥ ನೈರೃತಾನಾಂ ಸಹಸ್ರೈಸ್ತುಯಕ್ಷೈಃಪ್ರಮುದಿತೈಸ್ಸಹ । ಅಚಿರೇಣೈವಕಾಲೇನಸಂಪೂರ್ಣಾತಸ್ಯಶಾಸನಾತ ॥೨೩॥ ಸತುತತ್ರಾವಸತ್ಪ್ರೀತೋಧರ್ಮಾತ್ಮಾನೈರೃತರ್ಷಭಃ । ಸಮುದ್ರಪರಿಘಾಯಾಂತುಲಂಕಾಯಾಂವಿಶ್ರವಾತ್ಮಜಃ ॥೨೪॥ ಕಾಲೇಕಾಲೇತುಧರ್ಮಾತ್ಮಾ ಪುಷ್ಪಕೇಣಧನೇಶ್ವರಃ । ಅಭ್ಯಾಗಚ್ಛದ್ವಿನೀತಾತ್ಮಾ ಪಿತರಂಮಾತರಂಚಸಃ॥೨೫॥ಸದೇವಗಂಧರ್ವಗಣೈರಭಿಷ್ಟುತಸ್ತಥಾಪ್ಸರೋನೃತ್ಯವಿಭೂಷಿತಾಲಯಃ।ಗಭಸ್ತಿಭಿಸ್ಸೂರ್ಯಇವಾವಭಾಸಯನ್ಪಿತುಸ್ಸಮೀಪಂಪ್ರಯಯೌಸವಿತ್ತಪಃ ॥೨೬॥

—…ಇತಿಶ್ರೀಮದುತ್ತರರಾಮಾಯಣೆ ತೃತಿಯಸ್ಸರ್ಗಃ…—

---

ಪಟ್ಟಣವು, ರುಕ್ಮವೈಡೂರ್ಯ ತೋರಣಾಹಿ–ಭಂಗಾರಮಯವಾದ ವೈಡೂರ್ಯ ಮಣಿಗಳ ಊರು ಬಾಗಲುಳ್ಳದ್ದಪ್ಪೆ? ಪುರಾ–ಪೂರ್ವದಲ್ಲಿ, ವಿಷ್ಣುಭಯಾರ್ದಿತೈಃ–ಶ್ರೀಮಹಾವಿಷ್ಣುವಿನದೆಸೆಯಿಂದುಂಟಾದ ಭೀತಿಯಿಂದ ಬಾಧಿತರಾದ,ರಾಕ್ಷಸೈಶ್ಚ –ಅಸುರರಿಂದಲು, ಪರಿತ್ಯಕ್ತಾ–ಬಿಡಲ್ಪಟ್ಟಿತು॥೧೮॥ ರಸಾತಲ ತಲಂ–ಪಾತಾಳಪ್ರವೇಶವನ್ನು, ಗತೈಃ–ಹೊಂದಿದ, ಸರ್ವೈಃ–ಸಮಸ್ತರಾದ, ರಕ್ಷೋಗಣೈಃ–ರಾಕ್ಷಸಸಂಘಗಳಿಂದ, ಶೂನ್ಯಾ–ರಹಿತವಾದ, ಸಾಲಂಕಾ–ಆ ಲಂಕಾಪಟ್ಟಣವು, ಸಂಪ್ರತಿ–ಈಗ, ಶೂನ್ಯಾ–ಜನರಹಿತವಾಗಿದೆ, ತಸ್ಯಾಃ–ಆ ಪುರಕ್ಕೆ, ಪ್ರಭುಃ–ಒಡೆಯನು, ನವಿದ್ಯತೆ–ಇಲ್ಲ॥೧೯॥ ಹೆಪುತ್ರ–ಎಲೈಮಗನೆ! ಸತ್ವಂ–ಅನೀನು, ತತ್ರ–ಆ ಪಟ್ಟಣದಲ್ಲಿ, ನಿವಾಸಾಯ–ಇರುವದಕ್ಕೆ, ಯಥಾಸುಖಂ–ಸೌಖ್ಯವಾಗಿ, ಗಚ್ಛ–ಪೋಗು,ತೆ–ನಿನಗೆ, ತತ್ರ–ಆಪಟ್ಟಣದಲ್ಲಿ,ವಾಸಃ–ನಿವಾಸವು, ನಿರ್ದೋಷಃ–ಯುಕ್ತವು, ತತ್ರ–ಅಲ್ಲಿ, ಕಸ್ಯಚಿತ್–ಯಾರಿಗು, ಬಾಧಾ–ವ್ಯಥೆಯು, ನ–ಇಲ್ಲ ॥ ೨೧ ॥ ಧರ್ಮಾತ್ಮಾ–ಧರ್ಮಿಷ್ಟನಾದ, ಸಃ–ಆ ವೈಶ್ರವಣನು, ಪಿತುಃ–ತಂದೆಯ, ಏತದ್ಧರ್ಮಿಷ್ಠವಚನಂ–ಈ ಧರ್ಮಪ್ರಧಾನವಾದ ಮಾತನ್ನು, ಶ್ರುತ್ವಾ–ಕೇಳಿ, ತದಾ–ಆಕಾಲದಲ್ಲಿ, ಪರ್ವತಮೂರ್ಧನಿ–ಪರ್ವತಾಗ್ರದಲ್ಲಿಯ, ಲಂಕಾಂ–ಲಂಕಾಪುರದಲ್ಲಿ, ನಿವಾಸಯಾಮಾಸ–ನೆಲೆಗೊಂಡಿದ್ದನು ॥ ೨೨ ॥ಪ್ರಮುದಿತೈಃ–ಸಂತೋಷಗೊಂಡಿರುವ, ಯಕ್ಷೈಃ–ಯಕ್ಷರೊಡನೆಯು, ನೈರ್ಋತಾನಾಂ– ನೈರುತರ, ಸಹಸ್ರೈಸ್ಸಹ–ಸಾವಿರಗಳೊಡಗೂಡಿ, ತಸ್ಯ–ಆ ಕುಬೇರನ, ಶಾಸನಾತ್–ಆಜ್ಞೆಯ ದೆಸೆಯಿಂದ, ಅಚಿರೇಣಕಾಲೇನೈವ–ಶೀಘ್ರಕಾಲದಿಂದಲೆ, ಸಂಪೂರ್ಣಾ–ತುಂಬಿತ್ತು ॥ ೨೩ ॥ ಧರ್ಮಾತ್ಮಾ–ಧರ್ಮಿಷ್ಠನಾದ, ನೈರೃತರ್ಷಭಃ–ಯಕ್ಷಾಧಿಪನಾದ, ವಿಶ್ರವಾತ್ಮಜಃ–ವಿಶ್ರವಸ್ಸಿನ ಪುತ್ರನಾದ, ಸಃ–ಆ ವೈಶ್ರವಣನು, ಸಮುದ್ರಪರಿಘಾಯಾಂ–ಕಡಲೆ ಅಗಳ್ತೆಯಾಗುಳ್ಳ, ತತ್ರಲಂಕಾಯಾಂ– ಆಲಂಕಾನಗರದಲ್ಲಿ, ಪ್ರೀತಃ–ಸಂತೋಷಚಿತ್ತನಾಗಿ, ಅವಸತ್–ವಾಸಿಸಿದನು ॥ ೨೪ ॥ ಧರ್ಮಾತ್ಮಾ–ಧರ್ಮಿಷ್ಠನಾದ ಕಾರಣ, ವಿನೀತಾತ್ಮಾ – ನಮ್ರನಾದಮನವುಳ್ಳ, ಧನೇಶ್ವರಃ–ಧನಪತಿಯು, ಕಾಲೇಕಾಲೆ–ಆಯಾಕಾಲಗಳಲ್ಲಿ, ಪುಷ್ಪಕೇನ–ಪುಷ್ಪಕದಿಂದ, ಪಿತರಂ–ತಂದೆಯನ್ನು, ಮಾತರಂಚ–ತಾಯಿಯನ್ನು ಕುರಿತು, ಅಭ್ಯಾಗಚ್ಛದ್ಧಿ–ಬರುತಿದ್ದನಷ್ಟೆ ॥ ೨೫ ॥ ಸದೇವಗಂಧರ್ವಗಣೈಃ–ದೇವತೆಗಳೊಡಗೂಡಿದ ಗಂಧರ್ವರತಂಡಗಳಿಂದ, ಅಭಿಷ್ಟುತಃ–ಸ್ತುತಿಸಲ್ಪಟ್ಟ, ತಥಾ–ಹಾಗೆ, ಅಪ್ಸರೋನೃತ್ಯವಿಭೂಷಿತಾಲಯಃ– ಅಪ್ಸರಸ್ತ್ರೀಯರ ನರ್ತನದಿಂದಲಂಕೃತವಾದ ಮನೆಯುಳ್ಳ, ವಿತ್ತಪಃ–ಧನಾಧಿಪನಾದ, ಸಃ–ಆ ಕುಬೇರನು, ಗಭಸ್ತಿಭಿಃ–ಕಿರಣಗಳಿಂದ, ಸೂರ್ಯಇವ–ಸೂರ್ಯನೋಪಾದಿಯಾಗಿ, ಅವಭಾಸಯನ್–ಕಂಗೊಳಿಸುವಂತೆ ಮಾಡುತಿರುವನಾಗಿ, ಪಿತುಃ–ತಂದೆಯಾದ ವಿಶ್ರವಸ್ಸಿನ, ಸಮೀಪಂ–ಬಳಿಯನ್ನು, ಪ್ರಯಯೌ–ಹೊಂದಿದನು ॥ ೨೬ ॥ —…ಶ್ರೀಮದುತ್ತರಕಾಂಡೆ ತೃತಿಯಸ್ಸರ್ಗಃ…—

---

ದ್ದಾಗಿಯು, ಅಗಲವಾದ ಅಗಳ್ತೆಯುಳ್ಳದ್ದಾಗಿಯು, ಯಂತ್ರರೂಪಗಳಾದ ಶಸ್ತ್ರಗಳಿಂದ ಸಮಾವೃತವಾಗಿಯು, ವೈಡೂರ್ಯ ಮಣಿ ವಿಕಾರವಾದ ತೋರಣಗಳುಳ್ಳದ್ದಾಗಿಯು, ರಮಣೀಯವಾಗಿಯು ಇರುವ ಮಹಾ ಪ್ರಖ್ಯಾತವಾದ ಆ ಪುರಿಯು ವಿಷ್ಣು ಭಯ ಭೀತರಾಗಿ ರಸಾತಲ ತಲಂಗತರಾದ ರಾಕ್ಷಸರೆಲ್ಲರಿಂದಲು ಪೂರ್ವಕಾಲದಲ್ಲಿಯೇ ಪರಿತ್ಯಕ್ತವಾಗಿ, ಈಗಲು ಅನಾಯಕವಾಗಿಧೆ. ನೀನಾ ಪುರಿಯೋಳ್ ಪೋಗಿ ಸುಖವಾಗಿರಬಹುದು. ಯಾರಿಗೂ ಬಾಧಕವಾಗಿರುವದಿಲ್ಲವೆಂದು ತಂದೆಯು ನುಡಿದನು ॥೨೧॥ ಸಮನಂತರದೋಳ್ ಧರ್ಮಾತ್ಮನಾದ ಆ ಧನನಾಥನು ಧರ್ಮಿಷ್ಠವಾದ ಆ ವಿಶ್ರವಸ್ಸಿನ ವಾಕ್ಯವಂ ಕೇಳಿ ತ್ರಿಕೂಟ ಪರ್ವತದ ಶೃಂಗದಲ್ಲಿರುವ ಲಂಕಾ ಪುರಿಯಲ್ಲಿ ನೆಲಗೊಂಡಿರಲು, ಕುಬೇರ ನಾಜ್ಞಾವಶವರ್ತಿಗಳಾದ ಅನೇಕರಾದ ನೈರುತಶ್ರೇಷ್ಠರಿಂದಲು ಮತ್ತೆ ಸಂತುಷ್ಟರಾದ ಯಕ್ಷರಿಂದಲು ಸಹ ತುಂಬಿದಂಥಾದ್ದಾಯಿತು॥೨೩॥ಆಬಳಿಕ ಧರ್ಮಾತ್ಮನಾದ್ದಆ ವೈಶ್ರವಣನು ಸಮುದ್ರವೇಅಗಳ್ತೆಯಾಗುಳ್ಳ ಲಂಕಾಪುರದಲ್ಲಿ ನೈರೃತಾಧಿ ಪತಿಯಾಗಿ ಪರಮಾನಂದ ವನ್ನೈದಿದನು ॥೨೪॥ ವಿನೀತಾತ್ಮನಾದ ಆ ಧನೇಶ್ವರನು ಆಯಾ ಸಮಯಗಳಲ್ಲಿ ತಂದೆತಾಯಿಗಳನ್ನು ಕಾಣುವದಕ್ಕೋಸ್ಕರವಾಗಿ ಕಾಮ ಗಾಮಿಯಾದ ಪುಷ್ಪಕ ವಿಮಾನದಲ್ಲಿ ಕುಳಿತುಕೊಂಡು ಮಹಾ ಸಂತುಷ್ಟನಾಗಿ ಬರುತಿದ್ದನು ॥೨೫॥ ದೇವ ಗಂಧರ್ವಗಣಗಳಿಂದ ಸಂಸ್ತೂಯ ಮಾನನಾಗಿಯು, ಹಾಗೆಯೆ ಅಪ್ಸರಸ್ತ್ರೀಯರ ನರ್ತನದಿಂ ದಲಂಕೃತವಾದ ಮಂದಿರ ಮುಳ್ಳವನಾಗಿಯು ಮಹದೈಶ್ವರ್ಯ ಸಂಪನ್ನನಾಗಿಯು ಇರುವ ಆ ಕುಬೇರನು, ಕಿರಣಗಳಿಂದ ಕಂಗೊಳಿಸುತಿರುವ ದಿವಾಕರನೋ ಪಾದಿಯಾಗಿ ಪ್ರಕಾಶಿಸುವವನಾಗಿ ಪಿತೃಸಮೀಪವಂ ಕುರಿತು ಪೋಗುತಿದ್ದನು.

ಉತ್ತರಕಾಂಡದೊಳು ಮೂರನೇ ಸರ್ಗಂ ಮುಗಿದುದು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ರುತ್ವಾಗಸ್ತ್ಯೇರಿತಂವಾಕ್ಯಂರಾಮೋವಿಸ್ಮಯಮಾಗತಃ । ಪೂರ್ವಮಾಸೀತ್ತು ಲಂಕಾಯಾಂರಕ್ಷಸಾಮಿತಿಸಂಭವಃ ॥೧॥ ತತಃಶಿರಃಕಂಪಯಿತ್ವಾತ್ರೇತಾಗ್ನಿಸಮವಿಗ್ರಹಮ್। ಆಗಸ್ತ್ಯಂತಂಮುಹುರ್ದೃಷ್ಟ್ವಾ ವಿಸ್ಮಯಾನೊಭ್ಯಭಾಷತ ॥೨॥ ಭಗವನ್ ಪೂರ್ವಮಪ್ಯೇಷಾಲಂಕಾಸೀತ್ಪಿಶಿತಾಶಿನಾಮ್। ಇತೀದಂಭವತಃಶ್ರುತ್ವಾ ವಿಸ್ಮಯೋಜನಿತೋಮ್ಮಮ॥೩॥ಪುಲಸ್ತ್ಯವಂಶಾದುದ್ಭೂತಾರಾಕ್ಷಸಾಇತಿನಶ್ಶ್ರುತಮ್। ಇದಾನೀಮನ್ಯತಶ್ಚಾಪಿಸಂಭವಃಕೀರ್ತಿತಸ್ತ್ವಯಾ॥೪॥ ರಾವಣಾತ್ಕುಂಭಕರ್ಣಾಚ್ಚಪ್ರಹಸ್ತಾದ್ವಿಕಟಾದಪಿ । ರಾವಣಸ್ಯಚಪುತ್ರೇಭ್ಯಃಕಿನ್ನುತೇಬಲವತ್ತರಾಃ ॥೫॥ ಕಏಷಾಂಪೂರ್ವಕೋಬ್ರಹ್ಮನ್ ಕಿಂನಾಮಾಕಿಂತಪೋಬಲಃ । ಅಪರಾಧಂಚಕಂಪ್ರಾಪ್ಯವಿಷ್ಣುನಾದ್ರಾವಿತಾಃಪುರಾ ॥ ೬ ॥ ಏತದ್ವಿಸ್ತರತಸ್ಸರ್ವಂ ಕಥಯಸ್ವಮಮಾನಘ । ಕೌತೂಹಲಮಿದಂಮಹ್ಯಂನುದಭಾನುರ್ಯಥಾತಮಃ ॥ ೭ ॥ರಾಘವಸ್ಯತುತಚ್ಛ್ರುತ್ವಾಸಂಸ್ಕಾರಾಲಂಕೃತಂವಚಃ । ಈಷದ್ವಿಸ್ಮಯಮಾನಸ್ತಮಗಸ್ತ್ಯಃಪ್ರಾಹರಾಘವಂ ॥ ೮ ॥ ಪ್ರಜಾಪತಿಃಪುರಾಸೃಷ್ಟ್ವಾ ಅಪಃಸಲಿಲಸಂಭ

---

ಪೂರ್ವಂ-ಕುಬೇರನಿಗಿಂತಲು ಮೊದಲು, ಲಂಕಾಯಾಂತು-ಲಂಕಾಪಟ್ಟಣದಲ್ಲಾದರೆ, ರಕ್ಷಸಾಂ-ಅಸುರರ, ಸಂಭವಃ- ಉತ್ಪತ್ತಿಯು, ಆಸೀತ್-ಆಯಿತು, ಇತಿ-ಇಂತೆಂದು, ಅಗಸ್ತ್ಯೇರಿತಂ-ಅಗಸ್ತ್ಯಮುನಿಯಿಂದ ಪೇಳಲ್ಪಟ್ಟ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ರಾಮಃ-ಶ್ರೀರಾಮನು, ವಿಸಯಂ-ಆಶ್ಚರ್ಯವನ್ನು, ಆಗತಃ-ಹೊಂದಿದನು ॥ ೧॥ ತತಃ-ಬಳಿಕ, ಶಿರಃ-ತಲೆಯನ್ನು, ಕಂಪಯಿತ್ವಾ-ಚಲಿಸುವಂತೆ ಮಾಡಿ, ಮುಹುಃ-ಬಾರಿಬಾರಿಗೂ, ವಿಸ್ಮಯಮಾನಃ-ಆಶ್ಚರ್ಯಪಡುತಿರುವನಾಗಿ,ತ್ರೇತಾಗ್ನಿಸಮವಿಗ್ರಹಂ-ಅಗ್ನಿತ್ರಯ ಸದೃಶವಾದ ದೇಹವುಳ್ಳ, ತಮಗಸ್ತ್ಯಂ- ಆಗಸ್ತ್ಯನನ್ನು, ದೃಷ್ಟ್ವಾ-ಕಂಡು, ಅಭ್ಯಭಾಷತ- ಮಾತಾಡಿದನು ॥ ೨ ॥ ಹೆಭಗವನ್-ಎಲೈ ಪೂಜ್ಯನೆ! ಪೂರ್ವಮಪಿ-ಕುಬೇರರಾವಣರಿಗಿಂತಲು ಮುಂದೆ, ಏಷಾಲಂಕಾ-ಈ ಲಂಕಾಪುರಿಯು, ಪಿಶಿತಾಶಿನಾಂ-ರಾಕ್ಷಸರಿಗೆ, ಆಸೀತ್-ಆವಾಸವಾಯಿತು, ಇತಿ-ಇಂತೆಂದು, ಇದಂ-ಈ ಮಾತನ್ನು, ಭವತಃ-ನಿಮ್ಮದೆಸೆಯಿಂದ, ಶ್ರುತ್ವಾ-ಕೇಳಿ, ಮೇ-ನನಗೆ, ವಿಸ್ಮಯಃ-ಅದ್ಭುತವು, ಜನಿತಃ-ಹುಟ್ಟಿಸಲ್ಪಟ್ಟಿತು,॥ ರಾಕ್ಷಸಾಃ-ಅಸುರರು, ಪುಲಸ್ತ್ಯವಂಶಾತ್-ಪುಲಸ್ತ್ಯನಕುಲದ ದೆಸೆಯಿಂದ, ಉದ್ಭೂತಾಃಇತಿ-ಪುಟ್ಟಿದರೆಂದು, ನಃ-ನಮ್ಮಿಂದ, ಶ್ರುತಂ-ಕೇಳಲ್ಪಟ್ಟಿತ್ತು, ಇದಾನೀಂ-ಈಗ, ಅನ್ಯತಃ-ಮತ್ತೊಬ್ಬರ ದೆಸೆಯಿಂದ, ಸಂಭವಃ-ಉತ್ಪತ್ತಿಯು, ತ್ವಯಾ, ನಿನ್ನಿಂದ, ಕೀರ್ತಿತಃ-ಪೇಳಲ್ಪಟ್ಟಿತು ॥೪॥ತೇ-ಆ ರಾಕ್ಷಸರು, ರಾವಣಾತ್-ರಾವಣನಗಿಂತಲು, ಕುಂಭಕರ್ಣಾಚ್ಚ-ಕುಂಭಕರ್ಣನ ಗಿಂತಲು,ಪ್ರಹಸ್ತಾಚ್ಚ-ಪ್ರಹಸ್ತನ ಗಿಂತಲು, ವಿಕಟಾದಪಿ-ವಿಕಟನಗಿಂತಲು, ರಾವಣಸ್ಯ-ರಾವಣನ, ಪುತ್ರೇಭ್ಯಶ್ಚ-ಮಕ್ಕಳಗಿಂತಲು, ಬಲವತ್ತರಾಃಕಿಂನು-ಅತಿಬಲ ಶಾಲಿಗಳೇನು॥೫॥ಹೆಬ್ರಹ್ಮನ್-ಎಲೈ ಬ್ರಹ್ಮನೆ, ಏಷಾಂ-ಈ ರಾಕ್ಷಸರಿಗೆ, ಕಿಂತಪೋಬಲಃ-ಯೇನುತಪೋಬಲವುಳ್ಳವ, ಪೂರ್ವಕಃ-ಪೂರ್ವಿಕನು, ಕಃ-ಯಾರು, ಕಿಂನಾಮಾಚ-ಯೇನುಹೆಸರುಳ್ಳವನು, ಪುರಾ-ಪೂರ್ವದಲ್ಲಿ, ಕಮಪರಾಧಂಚ-ಯಾವ ಅಪರಾಧವನ್ನಾದರೆ, ಪ್ರಾಪ್ಯ-ಹೊಂದಿ, ವಿಷ್ಣುನಾ-ಶ್ರೀವೈಕುಂಠನಿಂದ, ದ್ರಾವಿತಾಃ-ತೆರುಬಲ್ಪಟ್ಟರು ॥ ೬ ॥ ಹೆ ಅನಘ, ಎಲೈ ನಿರ್ದೋಷಿಯೆ, ಏತತ್ಸರ್ವಂ-ಇದನ್ನೆಲ್ಲ, ವಿಸ್ತರತಃ-ವಿಸ್ತಾರದ ದೆಸೆಯಿಂದ, ಮಮ-ನನಿಗೆ, ಕಥಯಸ್ವ-ಹೇಳು, ಇದಂಕೌತೂಹಲಂ-ಈ ಕುತೂಹಲವನ್ನು, ಭಾನುಃ-ಸೂರ್ಯನು, ತಮೋಯಥಾ-ಅಂಧಕಾರವನ್ನಂತೆ, ಮಹ್ಯಂ-ನನಿಗೋಸ್ಕರ, ನುದ-ಪರಿಹರಿಸು ॥ ೭ ॥ ರಾಘವಸ್ಯ-ಶ್ರೀರಾಮನ, ಸಂಸ್ಕಾರಾಲಂಕೃತಂ-ಪದವಾಕ್ಯಾರ್ಥ ಜ್ಞಾನಜನ್ಯಸಂಸ್ಕಾರದಿಂದ, ಅಲಂಕೃತವಾದ

---

ಕುಬೇರನು ಲಂಕಾ ಪಟ್ಟಣದಲ್ಲಿ ವಾಸಿಸುವಕ್ಕಿಂತಲು ಮುಂಚಿತವಾಗಿಯೆ ಅಲ್ಲಿ ರಾಕ್ಷಸೋತ್ಪತ್ತಿಯಾಗಿತ್ತೆಂದು ಅಗಸ್ತ್ಯೇರಿತವಾದ ವಾಕ್ಯವಂ ಕೇಳಿ ಅತ್ಯಾನಂದಭರಿತನಾದ ಆಶ್ರೀ ರಾಮನು ಶಿರಃಕಂಪನೆಯಂಗೈದುತ್ರೇತಾಗ್ನಿ ಸಮವಿಗ್ರಹವುಳ್ಳ ಆ ಅಗಸ್ತ್ಯಮಹಾಮುನಿಯಂ ಬಾರಿಬಾರಿಗು ನೋಡುತ್ತಾ ಮುಗುಳ್ನಗೆಯುಳ್ಳವನಾಗಿಂತೆಂದನು॥೧॥೨॥ ಎಲೈ ಭಗವಂತನೇ ! ಪೂರ್ವಕಾಲದಲ್ಲಿ ಈ ಲಂಕಾಪುರಿಯು ರಾಕ್ಷಸರಿಗಾವಾಸವಾಗಿತ್ತೆಂದು ತಾವು ಹೇಳಿದುದಂ ಕೇಳಿ ಮಹದಾಶ್ಚರ್ಯವಂ ಪೊಂದಿದೇನೆ ॥೩॥ ಯಾಕೆಂದರೆ, ರಾಕ್ಷಸರು ಪುಲಸ್ತ್ಯ ವಂಶೋತ್ಪನ್ನರಾದವರೆಂದು ನಾವೆಲ್ಲರು ಕೇಳಿಬಲ್ಲೆವು, ಆದರೆ ಮತ್ತೊಂದು ಕುಲದಲ್ಲಿಯು ಸಹ ಜನಿಸಿದ್ದರೆಂದು ಈಗ ತಾವು ತಿಳಿಯಪಡಿಸಿದಿರಿ ॥೪॥ ಆದಕಾರಣ ಆರಾಕ್ಷಸರು, ರಾವಣ, ಕುಂಭಕರ್ಣ, ಪ್ರಹಸ್ತ, ವಿಕಟ, ವಿರೂಪಾಕ್ಷ, ಮೊದಲಾದವರಿಗಿಂತಲು, ಮತ್ತೆ, ರಾವಣ ಪುತ್ರರಾದ ಅತಿಕಾಯ, ಇಂದ್ರಜಿತುವು, ಮುಂತಾದವರಿಗಿಂತಲು ಬಲವಂತರಾದವರೆ ಏನು ॥೫॥ ಎಲೈ ಬ್ರಾಹ್ಮಣನೆ ! ಅವರೊಳಗೆ ಪೂರ್ವಿಕರಾರು ? ಅವನ ಹೆಸರೇನು ? ಆತನ ತಪೋಬಲವೆಂಥಾದ್ದು ? ಶ್ರೀಮನ್ನಾರಾಯಣಮೂರ್ತಿಯು ಪೂರ್ವಕಾಲದಲ್ಲಿ ಯಾವ ಅಪರಾಧವಂ ಕಂಡು ಅವರನ್ನೆಲ್ಲ ಆ ಪುರದ ದೆಶೆಯಿಂದ ಹೊರಡಿಸಿದನು ॥೬॥ ಎಲೈ ದೋಷರಹಿತನಾದ ಅಗಸ್ತ್ಯಮುನಿಯೇ ! ಇದನ್ನೆಲ್ಲ ವಿಸ್ತಾರವಾಗಿ ಪೇಳಿ ನನಗುಂಟಾಗಿರುವ ಕೌತೂಹಲವನ್ನು ಸೂರ್ಯನು ಅಂಧಕಾರವನ್ನು ಹ್ಯಾಗೆ ಪರಿಹರಿಸುವನೋ ಆ ಪರಿಯಾಗಿ ಹೋಗಲಾಡಿಸು॥೭॥ ಇಂತೆಂದು ಪದಪದಾರ್ಥಜ್ಞಾನ ಜನ್ಯ ಸಂಸ್ಕಾರದಿಂದ ಪರಿಷ್ಕೃತವಾದ ಶ್ರೀ ರಾಮನ ವಾಕ್ಯವಂ ಕೇಳಿ, ಕೊಂಚ ಆಶ್ಚರ್ಯಪಟ್ಟವನಾಗಿ ಅಗಸ್ತ್ಯಮಹಾಮುನಿಯು ಇಂತೆಂದನು ॥೮॥ ಪೂರ್ವಕಾಲದಲ್ಲಿ ಪ್ರಳಯೋದಕೋತ್ಪನ್ನನಾದ ಕಮಲಾಸನನು ಪ್ರಥಮ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಃ । ತಾಸಾಂಗೋಪಾಯನೇಸತ್ವಾನಸೃಜತ್ಪದ್ಮಸಂಭವಃ ॥೯॥ ತೇಸತ್ವಾಸ್ಸತ್ವಕರ್ತಾರಂವಿನೀತವದುಸ್ಥಿತಾಃ । ಕಿಂಕುರ್ಮಇತಿಭಾಷಂತಃಕ್ಷುತ್ಪಿಪಾಸಾಭಯಾರ್ದಿತಾಃ ॥೧೦॥ ಪ್ರಜಾಪತಿಸ್ತು ತಾನ್ಯಾಹಸತ್ವಾನಿಪ್ರಹಸನ್ನಿವ। ಆಭಾಷ್ಯವಾಚಾಯತ್ನೇನರಕ್ಷಧ್ವಮಿತಿಮಾನದ॥೧೧॥ ಇತ್ಯುಕ್ತಾಸ್ತೇಕ್ಷುಧಾವಿಷ್ಟಾ ಅಂಭಾಂಸ್ಯಾದಾತುಮುದ್ಯತಾಃ । ಅಂಭಾಂಸ್ಯೇತಾನಿರಕ್ಷಾಮಉಕ್ತವಂತಸ್ತಥಾಪರೇ ॥೧೨॥ ರಕ್ಷಾಮೇತಿಚತತ್ರಾನ್ಯೈರ್ಜಕ್ಷಾಮೇತಿತಥಾಪರೈಃ । ಭುಂಕ್ಷಿತಾಭುಂಕ್ಷಿತೈರುಕ್ತೇಃ ತತಸ್ತಾನಾಹಭೂತಕೃತ ॥೧೩॥ ರಕ್ಷಾಮೇತಿಚಯೈರುಕ್ತಂರಾಕ್ಷಸಾಸ್ತೇಭವಂತುವಃ। ಜಕ್ಷಾಮೇತಿಚಯೈರುಕ್ತಂತೇವೈಯಕ್ಷಾಭವಂತುವಃ ॥೧೪॥ ತತ್ರಹೇತಿಃಪ್ರಹೇತಿಶ್ಚ ಭ್ರಾತರೌರಾಕ್ಷಸರ್ಷಭೌ । ಮಧುಕೈಟಭಸಂಕಾಶೌಬಭೂವತುರರಿಂದಮೌ ॥೧೫॥ ಪ್ರಹೇತಿರ್ಧಾರ್ಮಿಕಸ್ತತ್ರತಪೋವನಮಗಾತ್ತದಾ । ಹೇತಿರ್ದಾರಕ್ರಿಯಾರ್ಥಂತುಯತ್ನಂಪರಮಥಾಕರೋತ ॥೧೬॥ ಸಕಾಲಭಗಿನೀಂಕನ್ಯಾಂಭಯಾಂನಾಮಭಯಾವಹಾಮ್ । ಉದಾವಹದಮೇಯಾತ್ಮಾ ಸ್ವಯಮೇವಮಹಾಮತಿಃ॥

---

ತದ್ವಚಃ-ಆ ಮಾತನ್ನು, ಶ್ರುತ್ವಾ-ಕೇಳಿ, ಈಷತ್-ಕೊಂಚವಾಗಿ, ವಿಸ್ಮಯಮಾನಃ-ಆಶ್ಚರ್ಯಪಡುತಿರುವ, ಅಗಸ್ತ್ಯಃ-ಅಗಸ್ತ್ಯನು, ತಂರಾಘವಂ-ಆ ಶ್ರೀರಾಮನನ್ನು ಕುರಿತು, ಪ್ರಾಹ-ಹೇಳಿದನು ॥ ೮ ॥ ಪುರಾ-ಪೂರ್ವದಲ್ಲಿ, ಸಲಿಲಸಂಭವಃ-ಜಲದಲ್ಲಿ ಹುಟ್ಟಿದ, ಪದ್ಮಸಂಭವಃ-ಪದ್ಮದಲ್ಲಿ ಹುಟ್ಟಿದ, ಪ್ರಜಾಪತಿಃ-ಬ್ರಹ್ಮನು, ಅಪಃ-ಉದಕವನ್ನು, ಸೃಷ್ಟ್ವಾ-ಸೃಜಿಸಿ, ತಾಸಾಂ-ಆಜಲಗಳಿಗೆ, ಗೋಪಾಯನೇ-ಸಂರಕ್ಷಣೆಯಲ್ಲಿ, ಸತ್ವಾನ್-ಜಂತುಗಳನ್ನು, ಅಸೃಜತ್-ಸೃಷ್ಟಿಮಾಡಿದನು ॥ ೯ ॥ ಕ್ಷುತ್ಪಿಪಾಸಾಭಯಾರ್ದಿತಾಃ-ಕ್ಷುತ್ತೃಷ್ಣೆಗಳಭಯದಿಂದ ಬಾಧಿತರಾದ, ತೇಸತ್ವಾಪಿ-ಆ ಜಂತುಗಳೂ, ಕಿಂಕುರ್ಮ-ಇತಿ-ಯೆನುಮಾಡೋಣೆಂದು, ಭಾಷಂತಃ-ಮಾತಾಡುತಿರುವರಾಗಿ, ಸತ್ವಕರ್ತಾರಂ-ಸೃಷ್ಟಿಕರ್ತನಾದ ಬ್ರಹ್ಮದೇವನನ್ನು ಕುರಿತು, ವಿನೀತವತ್-ನಮ್ರರಾಗಿ, ಉಪಸ್ಥಿತಾಃ-ಸಮೀಪದಲ್ಲಿ ನಿಂತರು ॥ ೧೦ ॥ ಹೇಮಾನದ-ಎಲೈ ಬಹುಮತಿಪ್ರದಾಯಕನೇ, ಪ್ರಜಾಪತಿಸ್ತು-ಬ್ರಹ್ಮನಾದರೆ, ಪ್ರಹಸನ್ನಿವ-ನಗುತ್ತಿರುವನಂತೆ, ವಾಚಾ-ವಾಕ್ಕಿನಿಂದ, ಯತ್ನೇನ-ಪ್ರಯತ್ನದಿಂದ, ಅಭಾಷ್ಯ-ಕರೆದು, ರಕ್ಷಧ್ವಮಿತಿ-ಸಂರಕ್ಷಣೆಮಾಡಿರೆಂದು, ತಾನಿಸತ್ವಾನಿ-ಆ ಜಂತುಗಳನ್ನು ಕುರಿತು, ಆಹ-ಹೇಳಿದನು ॥ ೧೧ ॥ ಇತಿ-ಈಪರಿಯಾಗಿ, ಉಕ್ತಾಃ-ಹೇಳಲ್ಪಟ್ಟ, ತೇ-ಆಜಂತುಗಳು, ಕ್ಷುಧಾವಿಷ್ಟಾಃ-ಹಸಿವಿನಿಂದ ನೊಂದವರಾಗಿ, ಅಂಭಾಂಸಿ-ಉದಕವನ್ನು, ಆದಾತುಂ-ಕುಡಿಯುವದಕ್ಕೆ, ಉದ್ಯತಾಃ-ಉದ್ಯುಕ್ತರಾದರೂ, ತಥಾ-ಹಾಗೆಯೆ, ಅಪರೇ-ಇನ್ನು ಕೆಲವರು, ಅಂಭಾಂಸಿ-ಉದಕಗಳನ್ನು, ರಕ್ಷಾಮೇತಿ-ರಕ್ಷಿಸುವೆವೆಂದು, ಉಕ್ತವಂತಃ-ಹೇಳಿದರು ॥೧೨॥ ತತ್ರ-ಆ ಜಂತುಗಳಲ್ಲಿ, ಅಪರೈಃ-ಕೆಲವರಿಂದ, ಜಕ್ಷಾಮೇತಿ- ಭಕ್ಷಿಸುತ್ತೇವೆಂದುನ್ನು, ಅನ್ಯೈಃ-ಮತ್ತೆ ಕೆಲಬರಿಂದ, ರಕ್ಷಾಮೇತಿ-ರಕ್ಷಿಸುತ್ತೇವೆಂದುನ್ನು, ಭುಂಕ್ಷಿತಾಭುಂಕ್ಷಿತೈಃ-ಭೋಜನೇಚ್ಛೆಯುಳ್ಳವರಿಂದಲು ಇಲ್ಲದಿರುವದರಿಂದಲೂ ಸಹ, ಉಕ್ತೇಃ-ಹೇಳಲ್ಪಟ್ಟ, ಭೂತಕೃತ್-ಬ್ರಹ್ಮನು, ವಃ-ನಿಮ್ಮೊಳಗೆ, ರಕ್ಷಾಮೇತಿ-ರಕ್ಷಿಸುತ್ತೇವೆಂದು, ಯೈಃ-ಯಾರಿಂದ, ಉಕ್ತಂ-ಹೇಳಲ್ಪಟ್ಟಿತ್ತೊ, ತೇ-ಅವರು, ರಾಕ್ಷಸಾಃ-ರಕ್ಕಸರು, ಭವಂತು-ಆಗಲಿ, ವಃ-ನಿಮ್ಮಗಳೊಳಗೆ, ಯೈಃ-ಯಾರಿಂದ, ಯಕ್ಷಾಮೇತ್ಯುಕ್ತಂ-ಭುಜಿಸುತ್ತೇವೆಂದು ಹೇಳಲ್ಪಟ್ಟಿತ್ತೊ, ತೇ-ಅವರು, ಯಕ್ಷಾಃ-ಯಕ್ಷರು, ಭವಂತು-ಆಗಲಿ ॥ ೧೩ ॥ ॥೧೪ ॥ ತತ್ರ-ಆ ರಾಕ್ಷಸಗುಂಪಿನಲ್ಲಿ, ಮಧುಕೈಟಭಸಂಕಾಶೌ-ಮಧ್ವಾಸುರನಿಗೂ ಕೈಟಭಾಸುರನಿಗೂ ಸಮಾನರಾದ, ಅರಿಂದಮೌ-ಶತ್ರುನಾಶಕರಾದ, ರಾಕ್ಷಸರ್ಷಭೌ-ರಾಕ್ಷಸೋತ್ತಮರಾದ, ಹೇತಿಃ-ಹೇತಿಯೆಂಬ, ಪ್ರಹೇತಿಶ್ಚ-ಪ್ರಹೇತಿಯುಯೆಂಬ, ಭ್ರಾತರೌ-ಅಣ್ಣತಮ್ಮಂದರು, ಬಭೂವತುಃ-ಆದರು ॥ ೧೫ ॥ ತದಾ-ಆಕಾಲದಲ್ಲಿ, ತತ್ರ-ಆ ರಾಕ್ಷಸರಲ್ಲಿ, ಧಾರ್ಮಿಕಃ-ಧರ್ಮಿಷ್ಠನಾದ ಪ್ರಹೇತಿಃ-ಪ್ರಹೇತಿಯೆಂಬವನು, ತಪೋವನಂ-ತಪೋವನವನ್ನು, ಅಗಾತ್-ಹೊಂದಿದನು, ಹೇತಿಸ್ತು-ಹೇತಿಯೆಂಬವನಾದರೆ, ಅಥ-ಬಳಿಕ, ದಾರಕ್ರಿಯಾರ್ಥಂ-ಮದುವೆಗೋಸ್ಕರ, ಪರಂಯತ್ನಂ-ಬಹುಪ್ರಯತ್ನವನ್ನು, ಅಕರೋತ್-ಮಾಡಿದನು ॥ ೧೬ ॥ ಅಮೇಯಾತ್ಮಾ-ಮಹಾಮನಸ್ವಿಯಾದ, ಮಹಾಮತಿಃ-ಮಹಾಬುದ್ಧಿಯುಳ್ಳ, ಸಃ-ಆ ಹೇತಿಯು, ಕಾಲಭಗಿನೀಂ-ಯಮನತಂಗಿಯಾದ, ಭಯಾವಹಾಂ-ಅತಿಭಯಂಕರಳಾದ, ಭಯಾನ್ನಾಮ-ಭಯಾಳೆಂಬ ಹೆಸ

---

ದಲ್ಲಿ ಉದಕ ಸೃಷ್ಟಿಯಂ ಮಾಡಿ ಅವುಗಳ ಸಂರಕ್ಷಣೆಗಾಗಿ ಕೆಲವು ಜಂತುಗಳನ್ನು ಸೃಜಿಸಿದನು ॥ ೯ ॥ ಆ ಪ್ರಾಣಿಗಳು ಕ್ಷುತ್ಪಿಪಾಸಗಳಿಂದ ಬಾಧಿತರಾಗಿ ಕೈಮುಗಿದುಕೊಂಡು ಬ್ರಹ್ಮನ ಬಳಿಗೆ ಬಂದು ನಾವೇನು ಮಾಡಬೇಕೆಂದು ಕೇಳಿದರು ॥೧೦॥ ಎಲೈ ಬಹುಮಾನ ಪ್ರದಾಯಕನಾದ ಶ್ರೀರಾಮನೇ! ಸೃಷ್ಟಿಕರ್ತನಾದ ಆ ಚತುರ್ಮುಖ ಬ್ರಹ್ಮನು ಆ ಜಂತುಗಳಂ ಕರೆದು ರಕ್ಷಿಸಿರೆಂದು ಹೇಳಿದನು॥೧೧॥ ಇಂತೆಂದು ಹೇಳಲ್ಪಟ್ಟ ಆ ಜಂತುಗಳಲ್ಲಿ ಕೆಲವು ಸತ್ವಗಳು ಪಾನಮಾಡುವೆವೆಂದುನ್ನು ಮತ್ತೆ ಕೆಲವು ಜಂತುಗಳು ಜಲರಕ್ಷಣೆಯಂ ಮಾಡುವೆವೆಂತಲು ಹೇಳಿ ಭೋಜನೇಚ್ಛೆಯುಳ್ಳವರಾಗಿಯು ಇಲ್ಲದವರಾಗಿಯು ಇರುವ ಆ ಉಭಯ ವಿಧ ಜಂತುಗಳಿಂದ ಹೇಳಲ್ಪಟ್ಟ ಆ ಪದ್ಮಸಂಭವನು ನಿಮ್ಮೊಳಗೆ ಉದಕಗಳನ್ನು ರಕ್ಷಿಸುವೆವೆಂದು ಯಾರು ಹೇಳಿದರೋ ಅವರು ರಾಕ್ಷಸರಾಗುವಿರಿ. ಮತ್ತೆ ಯಾರು ಭಕ್ಷಿಸುತ್ತೇವೆಂದು ನುಡಿದರೊ ಅವರು ಯಕ್ಷರಾಗುವಿರೆಂದು ಹೇಳಿದನು॥೧೪॥ ಈರೀತಿಯಾದ ಆ ರಾಕ್ಷಸತಂಡದಲ್ಲಿ ಉತ್ತಮರಾದ ಹೇತಿ ಪ್ರಹೇತಿಯೆಂಬಸಹೋದರರೀರ್ವರು ಮಧುಕೈಟಭರೆಂಬ ರಕ್ಕಸರಿಗೆ ಸರಿಯಾಗಿ ಶತ್ರುಸಂಹಾರಕರಾಗಿನಿಂತರು॥೧೫॥ ಆಸಮಯದೊಳ್ ಆವರೀರ್ವರಲ್ಲಿ ಧರ್ಮಿಷ್ಠನಾದ ಪ್ರಹೇತಿಯೆಂಬವನು ತಪಸ್ಸಿಗೋಸ್ಕರ ವನಪ್ರವೇಶವಂ ಮಾಡಿದನು. ಬಳಿಕಹೇತಿಯು ವಿವಾಹಾರ್ಥವಾಗಿ ಬಹು ಬಗೆಯಾಗಿ ಪ್ರಯತ್ನಮಾಡುತಾನೆ ಹುಡುಕಿದವನಾಗಿ ಯಮನ ತಂಗಿಯಾದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸೇತಸ್ಯಾಂಜನಯಾಮಾಸಹೇತೀರಾಕ್ಷಸಪುಂಗವಃ । ಪುತ್ರಂಪುತ್ರವತಾಂಶ್ರೇಷ್ಠೋ ವಿದ್ಯುತ್ಕೇಶಇತಿಶ್ರುತಂ ॥೧೮॥ ವಿದ್ಯುತ್ಕೇಶೋಹೇತಿಪುತ್ರಃಪ್ರದೀಪ್ತಾಗ್ನಿಸಮಪ್ರಭಃ । ವ್ಯವರ್ಧತಮಹಾತೇಜಾಃತೋಯಮಧ್ಯ ಇವಾಂಬುಜಂ ॥೧೯॥ ಸಯದಾಯೌವನಂಭದ್ರಮನುಪ್ರಾಪ್ತೋನಿಶಾಚರಃ । ತತೋದಾರಕ್ರಿಯಾಂತಸ್ಯಕರ್ತುಂವ್ಯವಸಿತಃಪಿತಾ ॥೨೦॥ ಸಂಧ್ಯಾಯಾಸ್ತನಯಾಂಸೋಥಸಂಧ್ಯಾತುಲ್ಯಾಂಪ್ರಭಾವತಃ । ವರಯಾಮಾಸಪುತ್ರಾರ್ಥಂಹೇತೀರಾಕ್ಷಸಪುಂಗವಃ॥೨೧॥ ಅವಶ್ಯಮೇವದಾತವ್ಯಾಪರಸ್ಮೈಸೇತಿಸಂಧ್ಯಯಾ । ಚಿಂತಯಿತ್ವಾಸುತಾದತ್ತಾವಿದ್ಯುತ್ಕೇಶಾಯರಾಘವ ॥೨೨॥ ಸಂಧ್ಯಾಯಾಸ್ತನಯಾಂಲಬ್ಧ್ವಾವಿದ್ಯುತ್ಕೇಶೋನಿಶಾಚರಃ । ರಮತೇಸ್ಮತಯಾಸಾರ್ಧಂಪೌಲೋಮ್ಯಾಮಘವಾನಿವ ॥೨೩॥ ಕೇನಚಿತ್ವಥಕಾಲೇನರಾಮಸಾಲಕಟಂಕಟಾ । ವಿದ್ಯುತ್ಕೇಶಾದ್ಗರ್ಭಮಾಪಘನರಾಜಿರಿವಾರ್ಣವಾತ ॥೨೪॥ ತತಸ್ಸಾರಾಕ್ಷಸೀಗರ್ಭಂಘನಗರ್ಭಸಮಪ್ರಭಂ । ಪ್ರಸೂತಮಂದರಂಗತ್ವಾಗಂಗಾಗರ್ಭಮಿವಾಗ್ನಿಜಮ್ ॥೨೫॥ ತಮುತ್ಸೃಜ್ಯತುಸಾಗರ್ಭಂವಿದ್ಯುತ್ಕೇಶ

ರುಳ್ಳ, ಕನ್ಯಾಂ–ಕುವರಿಯನ್ನು, ಸ್ವಯಮೇವ–ತಾನೇ, ಉದಾವಹತ್–ವಿವಾಹಮಾಡಿಕೊಂಡನು ॥೧೭॥ ಪುತ್ರವತಾಂ–ಮಕ್ಕಳೊಡೆಗರೊಳಗೆ, ಶ್ರೇಷ್ಠಃ–ಉತ್ತಮನಾದ, ಹೇತಿಃ–ಆ ಹೇತಿಯೆಂಬ, ಸರಾಕ್ಷಸಪುಂಗವಃ–ಆ ಅಸುರೋತ್ತಮನು, ವಿದ್ಯುತ್ಕೇಶಇತಿ–ವಿದ್ಯುತ್ಕೇಶನೆಂದು, ಶ್ರುತಂ–ಖ್ಯಾತನಾದ, ಪುತ್ರಂ–ಕುಮಾರನನ್ನು, ತಸ್ಯಾಂ–ಭಯಳೆಂಬ ಸತಿಯಲ್ಲಿ, ಜನಯಾಮಾಸ–ಹುಟ್ಟಿಸಿದನು ॥ ೧೮ ॥ಪ್ರದೀಪ್ತಾಗ್ನಿಸಮಪ್ರಭಃ–ಉರಿಯುತಿರುವ ಅಗ್ನಿಗೆ ಸಮಾನನಾದ ಪ್ರಭೆಯುಳ್ಳ, ಹೇತಿಪುತ್ರಃ–ಹೇತಿಯೆಂಬವನ ಮಗನಾದ, ವಿದ್ಯುತ್ಕೇಶಃ–ಆವಿದ್ಯುತ್ಕೇಶನು, ತೋಯಮಧ್ಯೇ–ನೀರಿನನಡುವೆ ಇರುವ,ಅಂಬುಜಮಿವ–ತಾವರೆಯಂತೆ, (ಪಾ–ತೋಯಮಧ್ಯಃ–ಉದಕವೇಗರ್ಭದಲ್ಲಿಉಳ್ಳ, ಅಂಬುದಇವ–ಮೇಘದಂತೆ ) ಮಹಾತೇಜಾಃ–ಅತಿತೇಜಸ್ವಿಯಾಗಿ, ವ್ಯವರ್ಧತ–ಬೆಳೆದನು॥ ಸಃ–ಆವಿದ್ಯುತ್ಕೇಶನೆಂಬ, ನಿಶಾಚರಃ–ರಾಕ್ಷಸನು, ಯದಾ–ಯಾವಾಗ, ಭದ್ರಂ–ಕಲ್ಯಾಣಕರವಾದ, ಯೌವನಂ–ಪ್ರಾಯವನ್ನು, ಅನುಪ್ರಾಪ್ತಃ–ಹೊಂದಿದನೋ, ತತಃ–ಬಳಿಕ, ಪಿತಾ–ತಂದೆಯಾದ ಹೇತಿಯು, ತಸ್ಯ–ಆವಿದ್ಯುತ್ಕೇಶನಿಗೆ, ದಾರಕ್ರಿಯಾಂ–ಮದುವೆಯನ್ನು, ಕರ್ತುಂ–ಮಾಡುವದಕ್ಕೆ, ವ್ಯವಸಿತಃ–ಉದ್ಯುಕ್ತನಾದನು ॥ ೨೦ ॥ಅಥ–ಬಳಿಕ, ರಾಕ್ಷಸಪುಂಗವಃ–ರಾಕ್ಷಸೋತ್ತಮನಾದ,ಸಹೇತಿಃ–ಆ ಹೇತಿಯೆಂಬವನು, ಪ್ರಭಾವತಃ–ಸಾಮರ್ಥ್ಯದ ದೆಸೆಯಿಂದ, ಸಂಧ್ಯಾತುಲ್ಯಾಂ–ಸಂಧ್ಯಾದೇವಿಗೆ ಸಮಾನಳಾದ, ಸಂಧ್ಯಾಯಾಃ–ಸಂಧ್ಯಾದೇವಿಯ, ತನಯಾಂ–ಮಗಳನ್ನು, ಪುತ್ರಾರ್ಥಂ–ಕುಮಾರನಿಗೋಸ್ಕರ, ವರಯಾಮಾಸ–ಅಪೇಕ್ಷಿಸಿದನು ॥ ೨೧ ॥ ಹೇರಾಘವ–ಎಲೈ ಶ್ರೀರಾಮನೆ, ಪರಸ್ಮೈ–ಶ್ರೇಷ್ಠನಾದ, ವಿದ್ಯುತ್ಕೇಶಾಯ–ವಿದ್ಯುತ್ಕೇಶನಿಗೆ, ಸಾಸುತಾ–ಆ ನನ್ನ ಮಗಳು, ಅವಶ್ಯಮೇವ–ನಿಶ್ಚಯವಾಗಿ, ದಾತವ್ಯೇತಿ–ಕೊಡತಕ್ಕವಳೆಂದು, ಚಿಂತಯಿತ್ವಾ–ಯೋಚಿಸಿ, ಸಂಧ್ಯಯಾ–ಸಂಧ್ಯಾದೇವಿಯಿಂದ, ದತ್ತಾ–ಕೊಡಲ್ಪಟ್ಟಳು ॥ ೨೨ ॥ವಿದ್ಯುತ್ಕೇಶಃ–ವಿದ್ಯುತ್ಕೇಶನೆಂಬ, ನಿಶಾಚರಃ–ರಾಕ್ಷಸನು, ಸಂಧ್ಯಾಯಾಃ–ಸಂಧ್ಯಾದೇವಿಯ, ತನಯಾಂ–ಕುವರಿಯನ್ನು, ಲಬ್ಧ್ವಾ–ಹೊಂದಿ, ತಯಾಸಾರ್ಧಂ–ಆಸಂಧ್ಯಾಪುತ್ರಿಕೆಯೊಡನೆ, ಪೌಲೋಮ್ಯಾ–ಶಚೀದೇವಿಯೊಡನೆ, ಮಘವಾನಿವ–ದೇವೇಂದ್ರನಂತೆ, ರಮತೇಸ್ಮ–ವಿಹರಿಸಿದನಪ್ಪ ॥ ೨೩ ॥ ಹೇರಾಮ–ಎಲೈ ಶ್ರೀರಾಮನೆ, ಅಥ–ಬಳಿಕ, ಕೇನಚಿತ್ಕಾಲೇನ–ಸ್ವಲ್ಪಕಾಲಜಿಂದಲೆ,ಸಾಲಕಟಂಕಟಾ–ಸಾಲಕಟಂಕಟಿಯೆಂಬ ಸಂಧ್ಯಾಮಗಳು, ವಿದ್ಯುತ್ಕೇಶಾತ್–ವಿದ್ಯುತ್ಕೇಶನಸೇರಿಯಿಂದ, ಘನರಾಜಿಃ–ಮೇಘಪಙ್ಕ್ತಿಯು, ಅರ್ಣವಾದಿವ–ಸಮುದ್ರದ ದೆಸೆಯಿಂದಲಂತೆ, ಗರ್ಭಂ–ಗರ್ಭವನ್ನು, ಆಪ–ಹೊಂದಿದಳು ॥೨೪॥ ತತಃ–ಬಳಿಕ, ಸಾರಾಕ್ಷಸೀ–ಆರಾಕ್ಷಸಸ್ತ್ರೀಯು, ಮಂದರಂ–ಮಂದರಪರ್ವತವನ್ನು, ಗತ್ವಾ–ಹೊಂದಿ, ಘನಗರ್ಭಸಮಪ್ರಭಂ–ಸಿಡಿಲಿಗೆ, ಸದೃಶವಾದ ಪ್ರಭೆಯುಳ್ಳ, ಗರ್ಭಂ–ಬಸುರನ್ನು, ಗಂಗಾ–ಗಂಗಾನದಿಯು, ಅಗ್ನಿಜಂ–ಅಗ್ನಿಯಿಂದ ಹುಟ್ಟಿದ, ಗರ್ಭಮಿವ–ಗರ್ಭವನ್ನಂತೆ, ಪ್ರಸೂತ–ಹೆತ್ತಳು॥ ೨೫॥

ಅತಿಭಯಂಕರಳಾದ ಭಯಳೆಂಬ ಕನ್ಯಕೆಯಂ ಮದುವೆ ಮಾಡಿಕೊಂಡನು॥೧೭॥ರಾಕ್ಷಸಪುಂಗವನಾದ ಹೇತೀ ಎಂಬವನು ಪುತ್ರವಂತರೊಳಗೆ ಶ್ರೇಷ್ಠನಾಗಿ ಆ ಕನ್ಯಕೆಯಲ್ಲಿ ವಿದ್ಯುತ್ಕೇಶನೆಂದು ಪ್ರಸಿದ್ಧನಾದ ಪುತ್ರನನ್ನು ಪಡೆದನು॥೧೮॥ಪ್ರಜ್ವಲಿಸುತಿರುವ ಅಗ್ನಿಯಂತೆ ಪ್ರಕಾಶಮಾನನಾದ ಆ ವಿದ್ಯುತ್ಕೇಶನು ಕಾಲಮೇಘದಂತೆ ವೃದ್ಧಿಯನ್ನು ಹೊಂದಿದನು॥ ಆವಿದ್ಯುತ್ಕೇಶನೆಂಬ ನಿಶಾಚರನು ಯಾವಾಗ ಯವ್ವನ ಪ್ರಾದುರ್ಭಾವವನ್ನು ಪಡೆದನೋ ಆ ಬಳಿಕ ಅವನತಂದೆಯು ಮದುವೆ ಮಾಡಬೇಕೆಂದು ಎತ್ನಿಸಿದನು ॥೨೦॥ ಅನಂತರವು ಆ ಹೇತಿಯು ಪ್ರಭಾವದಿಂ ಸಂಧ್ಯಾ ತುಲ್ಯಳಾದ ಸಾಲಂಕಟಂಕಟಯೆಂಬ ಸಂಧ್ಯಾದೇವಿಯ ಮಗಳನ್ನು ತನ್ನ ಪುತ್ರನಿಗೋಸ್ಕರ ವರಿಸಿದನು॥೨೧॥ಎಲೈ ರಾಘವನೆ! ಆಸಂಧ್ಯಾದೇವಿಯು ಶ್ರೇಷ್ಠನಾದ ಈ ವರನಿಗೆ ನನ್ನಪುತ್ರಿಕೆಯಂ ಕೊಡುವದುತ್ತಮವಾಗಿರುವ ದೆಂದೆಣಿಸಿ ಆ ವಿದ್ಯುತ್ಕೇಶನಿಗಾ ಕೆಯ ಮಗಳನ್ನಿತ್ತಳು ॥೨೨॥ ಆ ಬಳಿಕ ವಿದ್ಯುತ್ಕೇಶನೆಂಬ ನಿಶಾಚರನು ಆ ಸಂಧ್ಯಾಮಗಳಂ ಹೊಂದಿ ದೇವೇಂದ್ರನು ಶಚೀದೇವಿಯಿಂ ದೊಡಗೂಡಿ ಸುಖಿಸಿದಂತೆ ಸುಖಿತನಾದನು ॥ ೨೩ ॥ ಸ್ವಲ್ಪಕಾಲ ಕಳೆದ ಬಳಿಕ ಆ ಸಾಲಕಟಂಕಟಿಯು, ಮೇಘ ಮಾಲೆಯು ಮಹಾಂಬುಧಿಯ ದೆಶೆಯಿಂದ ಗರ್ಭವಂಪಡೆದಂತೆ ಆ ವಿದ್ಯುತ್ಕೇಶನ ದೆಶೆಯಿಂದ ಗರ್ಭವನ್ನು ಹೊಂದಿದಳು ॥೨೪॥ ಬಳಿಕಾ ರಾಕ್ಷಸಿಯು ಮಂದರಪರ್ವತವನ್ನು ಕುರಿತು ಹೋಗಿಅಲ್ಲಿ ಘನಗರ್ಭನಿಭವಾದ ಆ ಗರ್ಭವನ್ನು ಗಂಗಾನದಿಯು ಅಗ್ನಿಸಂಪ್ರಾಪ್ತಮಾದ ಗರ್ಭವಂನು ಹೆತ್ತಂತೆ ತಾನುನ್ನು ಹೆರದವಳಾದಳು॥೨೫॥ ಸಮನಂತರಕಾಲದೋಳ್ ಆ ಸಾಲಕಟಂಕಟಿಯು ಆ ಗರ್ಭವಂ ತೊರದು ತನ್ನ ಪತಿಯಾದ ವಿದ್ಯುತ್ಕೇಶನಿಂದೊಡಗೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರತಾರ್ಥಿನೀ । ರೇಮೇಹಿಪತ್ಯಾಸಾರ್ಧಂವೈವಿಸ್ಮೃತ್ಯಸುತ ಮಾತ್ಮಜಮ್ ॥ ೧೫ ॥ ಉತ್ಸೃಷ್ಟಸ್ತುತದಾಗರ್ಭೋಘನಗ ರ್ಭಸಮಸ್ವನಃ । ನಿಧಾಯಚಾಸ್ಯೇಸ್ವಾಂಮುಷ್ಟಿಂರುರೋದಶನಕ್ಕೈರಿವ ॥೧೬॥ ತತೋವೃಷಭಮಾಸ್ಥಾಯಪಾರ್ವತ್ಯಾ ಸಹಿತಶ್ಶಿವಃ । ವಾಯುಮಾರ್ಗೇಣಗಚ್ಛನ್ವೈಶುಶ್ರಾವರುದಿತಸ್ವನಂ॥ ೧೭॥ ಅಪಶ್ಯದುಮಯಾಸಾರ್ಧಂ ರುದಂತಂರಾಕ್ಷ ಸಾತ್ಮಜಮ್ ॥ ೧೮ ॥ ಕಾರುಣ್ಯಭಾವಾತ್ಪಾರ್ವತ್ಯಾಭವಸ್ತ್ರಿಪುರಹಾತತಃ । ತಂರಾಕ್ಷಸಾತ್ಮಜಂಚಕ್ರೇಮಾತುರೇವವಯ ಸ್ಸಮಮ್ ॥೧೯॥ ಅಮರಂಚೈವತಂಕೃತ್ವಾಮಹಾದೇವೋಕ್ಷರೋವ್ಯಯಃ। ಪುರಮಾಕಾಶಗಂಪ್ರಾದಾತ್ಪಾರ್ವತ್ಯಾಃಪ್ರಿಯ ಕಾಮ್ಯಯಾ ॥೨೦॥ ಉಮಯಾಪಿವರೋದತ್ತೋರಾಕ್ಷಸಾನಾಂನೃಪಾತ್ಮಜ । ಸದ್ಯೋಪಲಬ್ಧಿರ್ಗರ್ಭಸ್ಯಪ್ರಸೂತಿಸ್ಸದ್ಯ ಏವಚ। ಸದ್ಯಏವವಯಃಪ್ರಾಪ್ತಿರ್ಮಾತುರೇವವಯಸ್ಸಮಮ್ ॥ ೨೧ ॥ ತತಸ್ಸುಕೇಶೋವರದಾನಗರ್ವಿತಶ್ರಿಯಂಪ್ರಭೋಃ ಪ್ರಾಪ್ಯಹರಸ್ಯಪಾರ್ಶ್ವತಃ । ಚಚಾರಸರ್ವತ್ರಮಹಾನ್ಮಹಾಮತಿಃಖಗಂಪುರಂಪ್ರಾಪ್ಯಪುರಂದರೋಯಥಾ ॥೨೨॥

—...ಇತಿಶ್ರೀಮ ದುತ್ತರರಾಮಾಯಣೆ ಚತುರ್ಥಸ್ಸರ್ಗಃ...—

ಸಾ–ಆಸಾಲ ಕಟಂಕಟೆಯು, ತಂಗರ್ಭಂ–ಆ ಗರ್ಭವನ್ನು, ಸಮುತ್ಸೃಜ್ಯ–ತೊರದು, ವಿದ್ಯುತ್ಕೇಶರತಾರ್ಥಿನೀ–ವಿದ್ಯುತ್ಕೇಶನೊಡನೆ ಕ್ರೀಡಿಸಲಿಚ್ಛೆಯುಳ್ಳವ ಳಾಗಿ, ಆತ್ಮಜಂ–ತನ್ನ ಶರೀರದಿಂದ ಹುಟ್ಟಿದ, ಸುತಂ–ಮಗನನ್ನು, ವಿಸ್ಮೃತ್ಯ–ಮರತು, ಪತ್ಯಾಸಾರ್ಧಂ–ಪತಿಯೊಡನೆ, ರೇಮೇಹಿ–ವಿಹರಿಸಿದಳಷ್ಟೆ ॥೧೫॥ ತದಾ–ಆಕಾಲದಲ್ಲಿ, ಉತ್ಸೃಷ್ಟಃ–ಬಿಡಲ್ಪಟ್ಟ, ಘನಗರ್ಭಸಮಸ್ವನಃ–ಸಿಡಿಲಿಗೆಸಮವಾದ ಗರ್ಜನೆಯುಳ್ಳ, ಗರ್ಭಸ್ತು–ಶಿಶುವಾದರೆ, ಆಸ್ಯೇ– ಮುಖದಲ್ಲಿ, ಸ್ವಾಂಮುಷ್ಟಿಂ–ತನ್ನಕೈಹಿಡಿಯನ್ನು, ನಿಧಾಯ–ಇಟ್ಟುಕೊಂಡು, ಶನಕ್ಕೈರಿವ–ಮೆಲ್ಲಗೇನೆ, ರುರೋದ–ಅಳುತಿತ್ತು॥ ೧೬॥ ತತಃ–ಬಳಿಕ, ಪಾರ್ವತ್ಯಾ–ಪಾರ್ವತೀದೇವಿಯಿಂದ, ಸಹಿತಃ–ಯುಕ್ತನಾದ, ಶಿವಃ–ಶಿವನು, ವೃಷಭಂ–ಬಸವನನ್ನು, ಆಸ್ಥಾಯ–ಏರಿ, ವಾಯುಮಾರ್ಗೇಣ–ಗಗನಮಾರ್ಗದಿಂದ, ಗಚ್ಛನ್ವೈ–ಹೋಗುತಿರುವನಾಗಿಯೆ, ರುದಿತಸ್ವನಂ–ರೋದನಧ್ವನಿಯನ್ನು, ಶುಶ್ರಾವ–ಕೇಳಿದನು ॥ ೧೭ ॥ ರುದಂತಂ–ಅಳುತಿರುವ, ರಾಕ್ಷಸಾತ್ಮಜಂ–ರಾಕ್ಷಸಪುತ್ರನನ್ನು, ಉಮಯಾಸಾರ್ಧಂ–ಪಾರ್ವತಿಯಿಂದೊಡಗೂಡಿ, ಅಪಶ್ಯತ್–ಕಂಡನು ॥ ೧೮ ॥ ತತಃ–ಬಳಿಕ, ತ್ರಿಪುರಹಾ–ತ್ರಿಪುರಸಂಹಾರಕನಾದ ಶಿವಃ–ಪರಮೇಶ್ವರನು, ಪಾರ್ವತ್ಯಾಃ–ಪಾರ್ವತೀದೇವಿಯು, ಕಾರುಣ್ಯಭಾವಾತ್–ದಯಾಬುದ್ಧಿಯಿಂದ, ತಂರಾಕ್ಷಸಾತ್ಮಜಂ–ಆರಾಕ್ಷಸ ಶಿಶುವಿನನ್ನು, ಮಾತುಃ–ತಾಯಿಗೆ, ವಯಸ್ಸಮಮೇವ–ವಯಃ–ವಯಸ್ಸಿನಲ್ಲಿ, ಸಮಮೇವ–ಸಮಾನನನ್ನಾಗಿಯೆ, ಚಕ್ರೇ–ಮಾಡಿದನು॥ ೧೯ ॥ ಅಕ್ಷರಃ– ಚ್ಯುತಿಯಿಲ್ಲದಿರುವ, ಅವ್ಯಯಃ–ನಾಶರಹಿತನಾದ, ಮಹಾದೇವಃ–ಪರಮೇಶ್ವರನು, ಪಾರ್ವತ್ಯಾಃ–ಪಾರ್ವತೀದೇವಿಯ, ಪ್ರಿಯಕಾಮ್ಯಯಾ–ಇಷ್ಟವನ್ನೆರವೇರಿಸಬೇಕೆಂಬಿಚ್ಛೆಯಿಂದ, ತಂಚ–ಆರಾಕ್ಷಸ ಶಿಶುವಿನನ್ನು, ಅಮರಮೇವ–ದೇವತೆಯನ್ನೇ,ಕೃತ್ವಾ–ಮಾಡಿ, ಆಕಾಶಗಂ–ಆಕಾಶಗಾಮಿಯಾದ, ಪುರಂ–ಪಟ್ಟಣವನ್ನು,ಪ್ರಾದಾತ್–ಕೊಟ್ಟನು ॥೨೦॥ ಹೆನೃಪಾತ್ಮಜ–ಎಲೈ ರಾಜಪುತ್ರನೆ ಗರ್ಭಸ್ಯ–ಗರ್ಭದ,ಸದ್ಯೋಪಲಬ್ಧಿಃ–ತಕ್ಷಣಪ್ರಾಪ್ತಿಯುನ್ನು,ಸದ್ಯಏವ–ಆಗಲೆ–ಪ್ರಸೂತಿಃ – ಉತ್ಪತ್ತಿಯುನ್ನು, ಸದ್ಯಏವ–ತಕ್ಷಣದಲ್ಲಿಯೆ, ವಯಃಪ್ರಾಪ್ತಿಃ–ಯವ್ವನಪ್ರಾಪ್ತಿಯು, ಮಾತುಃ–ತಾಯಿಗೆ, ಸಮಮೇವ–ಸಮಾನವೇಆದ, ವಯಃ–ವಯಸ್ಸನ್ನು (ಅಸ್ತ್ವಿತಿ–ಆಗಲೆಂದು) ರಾಕ್ಷಸಾನಾಂ–ಅಸುರರಿಗೆ, ಉಮಯಾಪಿ–ಪಾರ್ವತೀದೇವಿಯಿಂದಲು, ವರಃ–ವರವು, ದತ್ತಃ–ಕೊಡಲ್ಪಟ್ಟಿತು ॥೨೧॥ ತತಃ–ಬಳಿಕ–ಪ್ರಭೋಃ–ಸ್ವಾಮಿಯಾದ, ಹರಸ್ಯ–ಶಿವನ, ಪಾರ್ಶ್ವತಃ–ಪಕ್ಷಪಾತದ ದೆಸೆಯಿಂದ,ಶ್ರಿಯಂ–ಐಶ್ವರ್ಯವನ್ನು, ಪ್ರಾಪ್ಯ–ಹೊಂದಿ, ವರದಾನಗರ್ವಿತಃ–ವರಪ್ರದಾನದಿಂದ ಕೊಬ್ಬಿದವನಾಗಿ, ಮಹಾನ್–ಮಹಾತ್ಮನಾದ, ಮಹಾಮತಿಃ–ಅತಿಬುದ್ಧಿಶಾಲಿಯಾದ, ಸುಕೇಶಃ–ಸುಕೇಶನು, ಖಗಂ–ಅಂತರಿಕ್ಷೆಗಾಮಿಯಾದ, ಪುರಂ–ಪಟ್ಟಣವನ್ನು, ಪ್ರಾಪ್ಯ–ಹೊಂದಿ, ಪುರಂದರೋಯಥಾ–ಇಂದ್ರನಂತೆ, ಸರ್ವತ್ರ–ಎಲ್ಲೆಲ್ಲಿಯು, ಚಚಾರ–ಸಂಚರಿಸಿದನು ॥ ೨೨ ॥

*ಶ್ರೀಮದುತ್ತರ ರಾಮಾಯಣೆ ಚತುರ್ಥಸ್ಸರ್ಗಃ.*

ಡಿ ಆ ಬಾಲಕನಂ ಮರತು ಕ್ರೀಡಿಸುತಿದ್ದಳು ॥೧೫॥ ಆ ಸಮಯದಲ್ಲಿ ತಾಯಿಯಿಂದ ಬಿಡಲ್ಪಟ್ಟ ಆ ಶಿಶುವು ಸಿಡಿಲಿನ ಶಬ್ದಕ್ಕೆ ಸದೃಶವಾದ ಶಬ್ದವುಳ್ಳದ್ದಾಗಿ ಕೂಗುತ್ತಾ ತನ್ನ ಬೆರಳನ್ನು ಬಾಯೊಳಗಿಟ್ಟುಕೊಂಡು ಮೆಲ್ಲ ಮೆಲ್ಲಗೆ ಅಳುತಿತ್ತು ॥೧೬॥ ಬಳಿಕ ಪರಮೇಶ್ವರನು ಪಾರ್ವತೀ ಸಮೇತನಾಗಿ ವೃಷಭವನ್ನೇರಿ ಗಗನ ಮಾರ್ಗದಲ್ಲಿ ಹೋಗುತಿರುವನಾಗಿ ಈ ಮಗುವಿನ ರೋದನಧ್ವನಿಯಂ ಕೇಳಿ ಬಾಲಕನಂ ಕಂಡನು॥೧೭-೧೮॥ ಬಳಿಕ ತ್ರಿಪುರ ಸಂಹಾರಕನಾದಪರಮೇಶ್ವರನು ಪಾರ್ವತೀದೇವಿಗಾಶಿಶುವಿನಲ್ಲಿ ಉಂಟಾಗಿರುವ ಪ್ರೀತಿಯನ್ನರಿತು ಆ ರಾಕ್ಷಸ ಪುತ್ರನನ್ನು ತಾಯಿಗೆ ಸಮಾನವಾದ ವಯಸ್ಸುಳ್ಳವನನ್ನಾಗಿಯು ಅವಧ್ಯನನ್ನಾಗಿಯು ಮಾಡಿ ಗಗನ ಗಾಮಿಯಾದ ನಗರವನ್ನೂ ಸಹ ಕೊಟ್ಟವನಾದನು ॥೨೦॥ ಎಲೈ ನರಪಾಲನೇ ! ಪಾರ್ವತಿಯೂ ಸಹ ಈ ವರ ಪ್ರದಾನವನ್ನರಿತವಳಾಗಿ ಅಸುರರಿಗೆ ತತ್ಕಾಲದಲ್ಲಿ ಗರ್ಭಪ್ರಾಪ್ತಿಯು ಆಗಲೇ ಹುಟ್ಟೋಣವು ಆಗಲೇ ಬೆಳೆಯೋಣವು ತಾಯಿಗೆ ಸಮಾನವಾದ ಯವ್ವನ ಪ್ರಾದುರ್ಭಾವವು ಉಂಟಾಗಲೆಂದು ವರವನ್ನಿತ್ತಳು॥೨೧॥ ಬಳಿಕಾ ಮತಿವಂತನಾದ ಸುಕೇಶನು ಪರಶಿವನಕೃಪಾ ಕಟಾಕ್ಷದಿಂದಪ್ರಾಪ್ತವಾದ ಮಹದೈಶ್ವರ್ಯವನ್ನು ಮತ್ತು ಅಂತರಿಕ್ಷ ಗಮನ ಶೀಲವಾದ ಪುರವನ್ನು ಸಹ ಹೊಂದಿ ವರದಾನ ಗರ್ವಿತನಾಗಿ ದೇವೇಂದ್ರನೋಪಾದಿಯಾಗಿ ಎಲ್ಲಾ ಕಡೆಯಲ್ಲಿಯು ಸಂಚರಿಸುತಿದ್ದನು ... ... ॥೨೨॥

—ಶ್ರೀಮದುತ್ತರ ರಾಮಾಯಣದೋಳ್ ೪ ನೇಸರ್ಗಂ ಮುಗಿದುದು.—

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸುಕೇಶಂರಾಕ್ಷಸಂದೃಷ್ಟ್ವಾ ವರಲಬ್ಧಂಚರಾಘವ । ಗ್ರಾಮಣೀರ್ನಾಮಗಂಧರ್ವೋವಿಶ್ವಾವಸುಸಮಪ್ರಭಃ॥೧॥ ತಸ್ಯದೇವವತೀನಾಮದ್ವಿತೀಯಾಶ್ರೀರಿವಾತ್ಮಜಾ । ಬಭೂವಲೋಕವಿಖ್ಯಾತಾ ರೂಪಯೌವ್ವನಶಾಲಿನೀ ॥೨॥ ತಾಂಸುಕೇಶಾಯಧರ್ಮೇಣದದೌರಕ್ಷಶ್ಶ್ರಿಯಂಯಥಾ ॥೩॥ ವರದಾನಕೃತೈಶ್ವರ್ಯಂಸಾತಂಪ್ರಾಪ್ಯಪತಿಂಪ್ರಿಯಂ । ಆಸೀದ್ದೇವವತೀತುಷ್ಟಾಧನಂಪ್ರಾಪ್ಯೇವನಿರ್ಧನಃ ॥೪॥ ಸತಯಾಸಹಸಂಯುಕ್ತೋರರಾಜರಜನೀಚರಃ । ಅಂಜನಾದಭಿನಿಷ್ಕ್ರಾಂತಃಕರೆಣ್ವೇವಮಹಾಗಜಃ ॥೫॥ ದೇವವತ್ಯಾಂಸುಕೇಶಸ್ತುಜನಯಾಮಾಸರಾಘವ । ತ್ರೀಂಸ್ತ್ರಿಣೇತ್ರಸಮಾನ್ಪುತ್ರಾನ್ರಾಕ್ಷಸಾನ್ರಾಕ್ಷಸಾಧಿಪಃ ॥ ಮಾಲ್ಯವಂತಂಸುಮಾಲಿಂಚಮಾಲಿಂಚಬಲಿನಾಂವರಮ್॥೬॥ತ್ರಯೋಲೋಕಾಇವಾವ್ಯಗ್ರಾಃಸ್ಥಿತಾಸ್ತ್ರಯಇವಾಗ್ನಯಃ । ತ್ರಯೋಮಂತ್ರಾಇವಾತ್ಯುಗ್ರಾಸ್ತ್ರಯೋಘೋರಾಇವಾಮಯಾಃ ॥೭॥ ತ್ರಯಸ್ಸುಕೇಶಸ್ಯಸುತಾಸ್ತ್ರೇತಾಗ್ನಿಸಮವರ್ಚಸಃ । ವಿವೃದ್ಧಿಮಗಮಂಸ್ತತ್ರೋಪೇಕ್ಷಿತಾವ್ಯಾಧಯೋಯಥಾ ॥೮॥ ವರಪ್ರಾಪ್ತಂಪಿತುಸ್ತೇತುಜ್ಞಾತ್ವೈಶ್ವ

---

ಹೆರಾಘವ-ಎಲೈ ಶ್ರೀರಾಮನೆ! ವಿಶ್ವಾವಸುಸಮಪ್ರಭಃ-ವಿಶ್ವಾವಸುಸದೃಶವಾದ ಕಾಂತಿಯುಳ್ಳ, ಗ್ರಾಮಣೀರ್ನಾಮ-ಗ್ರಾಮಣಿಯೆಂದುಪ್ರಸಿದ್ಧನಾದ, ಗಂಧರ್ವಃ-ಗಂಧರ್ವನು, (ಆಸೀತ್-ಆದನು) ತಸ್ಯ-ಆಗ್ರಾಮಣಿಗೆ, ಲೋಕವಿಖ್ಯಾತಾ-ಲೋಕದಲ್ಲಿ ಪ್ರಸಿದ್ಧಳಾದ, ರೂಪಯೌವನಶಾಲಿನೀ-ಸೌಂದರ್ಯದಿಂದಲು ಜವ್ವನದಿಂದಲು ವೊಪ್ಪುತಿರುವ, ದ್ವಿತೀಯಾ-ಯೆರಡನೇಯವಳಾದ, ಶ್ರೀರಿವಸ್ಥಿತಾ-ಲಕ್ಷ್ಮಿದೇವಿಯಂತಿರುವ, ದೇವವತೀನಾಮ-ದೇವವತಿಯೆಂದು ಪ್ರಸಿದ್ಧಳಾದ, ಆತ್ಮಜಾ-ಮಗಳು (ಬಭೂವ-ಆದಳು) ॥೨॥ ವರಲಬ್ಧಂ-ಲಬ್ಧವರನಾದ,ಸುಕೇಶಂ-ಸುಕೇಶನೆಂಬ, ರಾಕ್ಷಸಂ-ಅಸುರರನ್ನು-ದೃಷ್ಟ್ವಾ-ಕಂಡು, ಸುಕೇಶಾಯ-ಸುಕೇಶನಿಗೆ, ರಕ್ಷಶ್ಶ್ರಿಯಂಯಥಾ-ರಾಕ್ಷಸ ಲಕ್ಷ್ಮಿಯಂತಿರುವ, ತಾಂ-ಆಕನ್ಯಕೆಯನ್ನು,ಧರ್ಮೇಣ-ಯಥಾಯೋಗ್ಯವಾಗಿ, ದದೌ-ಕೊಟ್ಟನು ॥ ೨ ॥ ಸಾದೇವವತೀ-ಆ ದೇವತಿಯೆಂಬ ಕನ್ಯಕೆಯು, ವರದಾನಕೃತೈಶ್ವರ್ಯಂ-ವರಪ್ರದಾನದಿಂದ ಹೊಂದಲ್ಪಟ್ಟ ಐಶ್ವರ್ಯವುಳ್ಳ, ಪ್ರಿಯಂ-ಇಷ್ಟನಾದ, ತಂಪತಿಂ-ಆ ಗಂಡನನ್ನು, ಪ್ರಾಪ್ಯ-ಹೊಂದಿ, ನಿರ್ಧನಃ-ಬಡವನು, ಧನಂಪ್ರಾಪ್ಯೇವ-ಧನವನ್ನು ಹೊಂದಿದಂತೆ, ತುಷ್ಟಾ-ಸಂತುಷ್ಟಳಾದವಳು, ಆಸೀತ್-ಆದಳು॥೪॥ತಯಾಸಹ-ಆ ದೇವತಿಯೊಡನೆ,ಸಂಸಕ್ತಃ-ಕೂಡಿದ, ಸರಜನೀಚರಃ-ಆಸುಕೇಶನೆಂಬ ರಕ್ಕಸನು,ಅಂಜನಾತ್-ಅಂಜನ ಪರ್ವತದ ದೆಶೆಯಿಂದ, ಅಭಿನಿಷ್ಕ್ರಾಂತಃ-ಹೊರಟುಬಂದ,ಮಹಾಗಜಃ-ದೊಡ್ಡಾನೆಯು, ಕರೆಣ್ವೇವ-ಹೆಣ್ಣಾನೆಯಿಂದಲಂತೆ, ರರಾಜ-ಹೊಳೆಯುತಿದ್ದನು॥೫॥ ಹೆ ರಾಘವ-ಎಲೈ ಶ್ರೀರಾಮನೆ! ರಾಕ್ಷಸಾಧಿಪಃ-ರಾಕ್ಷಸಾಧಿ ಪತಿಯಾದ, ಸುಕೇಶಸ್ತು-ಸುಕೇಶನಾದರೆ, ದೇವವತ್ಯಾಂ-ದೇವವತಿಯಲ್ಲಿ, ತ್ರಿಣೇತ್ರಸಮಾನ್-ಈಶ್ವರತುಲ್ಯರಾದ, ರಾಕ್ಷಸಾನ್-ಅಸುರರಾದ, ಮಾಲ್ಯವಂತಂ-ಮಾಲ್ಯವಂತನೆಂಬ, ಸುಮಾಲಿಂಚ-ಸುಮಾಲಿಯೆಂಬ, ಬಲಿನಾಂ-ಬಲವಂತರೊಳಗೆ, ವರಂ-ಶ್ರೇಷ್ಟನಾದ, ಮಾಲಿಂಚ-ಮಾಲಿಯೆಂಬ, ತ್ರೀನ್ಪುತ್ರಾನ್-ಮೂರುಮಂದಿ ಮಕ್ಕಳನ್ನು, ಜನಯಾಮಾಸ-ಹುಟ್ಟಿಸಿದನು ॥ ೬ ॥ ತ್ರಯೋಲೋಕಾಇವ-ಮೂರುಲೋಕಗಳಂತೆ, ಅವ್ಯಗ್ರಾಃ-ಸಾವಧಾನ ಚಿತ್ತರಾದ, ತ್ರಯ್ಯಃಅಗ್ನಯಇವಸ್ಥಿತಾಃ-ಮೂರಗ್ನಿಗಳಂತಿರುವ, ತ್ರಯೋಮಂತ್ರಾಇವ-ಮೂರು ಮಂತ್ರಗಳಂತೆ, ಅತ್ಯುಗ್ರಾಃ-ಬಹುಕ್ರೂರರಾದ, ತ್ರಯಃ-ಮೂರಾದ, ಆಮಯಾಇವ-ರೋಗಗಳಂತೆ, ಘೋರಾಃ-ಭಯಂಕರರಾದ, ತ್ರೇತಾಗ್ನಿಸಮವರ್ಚಸಃ-ಅಗ್ನಿತ್ರಯಕ್ಕೆ ಸಮಾನವಾದ ತೇಜಸ್ಸುಳ್ಳ, ಸುಕೇಶಸ್ಯ-ಸುಕೇಶನ, ಸುತಾಃ-ಮಕ್ಕಳಾದ, ತ್ರಯಃ-ಮೂರುಮಂದಿಯು, ತತ್ರ-ಅಲ್ಲಿ, ಉಪೇಕ್ಷಿತಾಃ-ಉದಾಸೀನಮಾಡಲ್ಪಟ್ಟ, ವ್ಯಾಧಯಇವ-ರೋಗಗಳಂತೆ, ವಿವೃದ್ಧಿಂ-ವೃದ್ಧಿಯನ್ನು, ಅಗಮನ್-ಹೊಂದಿದರು ॥ ೮ ॥ ತೇತು-ಆ ಮೂವ್ವರಾದರೆ, ಪಿತುಃ-ತಂದೆಯ, ತಪೋಬಲಾತ್-ತಪಶ್ಶಕ್ತಿಯದೆಶೆಯಿಂದ, ವರಪ್ರಾಪ್ತಂ-ಈಶ್ವರ ವರಲಬ್ಧವಾದ, ಐಶ್ವರ್ಯಂ-ಸಂಪತ್ತನ್ನು, ಜ್ಞಾತ್ವಾ-ಅರಿತು, ಭ್ರಾತರಃ-ಅಣ್ಣತಮ್ಮಂದಿರು, ತಪಃ-ತಪಸ್ಸನ್ನು, ತಪ್ತುಂ-ಮಾಡುವದಕ್ಕೋಸ್ಕರ-ಕೃತನಿಶ್ಚಯಾಃ-ಬದ್ಧಸಂಕಲ್ಪರಾಗಿ, ಮೇರುಂ-ಮೇರುಪರ್ವ

---

ಎಲೈ ಶ್ರೀರಾಮನೆ! ಇಷ್ಟರಲ್ಲಿ, ವಿಶ್ವಾವಸು ಸದೃಶಮಾದ ಪ್ರಭೆಯುಳ್ಳ ಗ್ರಾಮಣಿಎಂಬ ಗಂಧರ್ವನೋರ್ವನಿರುತಿದ್ದನು. ಆತನಿಗೆ ಜಗತ್ಪ್ರಸಿದ್ಧಳಾದ ಎರಡನೇ ಲಕ್ಷ್ಮಿದೇವಿಯಂತಿರುವ ದೇವವತಿಯೆಂಬೋರ್ವ ಪುತ್ರಿಕೆಯಾದಳು, ಅವನು ಈ ಸುಕೇಶನೆಂಬ ರಾಕ್ಷಸನಂಕಂಡು ಆತನಿಗೆ ತನ್ನಕುವರಿಯಂನಿತ್ತು ವಿಧ್ಯುಕ್ತಮಾಗಿ ವಿವಾಹವಂ ಬೆಳಿಸಲು ಆ ದೇವವತಿಯು ಈಶ್ವರ ವರಪ್ರದಾನದಿಂದ ಪ್ರಾಪ್ತಮಾದ ಮಹದೈಶ್ವರ್ಯವುಳ್ಳ ಆ ಸುಕೇಶನೆಂಬ ಪತಿಯಂ ಪಡದು ಧನಹೀನನು ಧನವನ್ನು ಹೊಂದಿದಂತೆ ಸಂತೋಷಯುಕ್ತಳಾದಳು ॥೪॥ ಆವೇದ ಪತೀಸಮೇತನಾದ ಆಸುಕೇಶನೆಂಬ ನಿಶಾಚರನು, ಅಂಜನಾಚಲದ ದೆಶೆಯಿಂದ ಹೆಣ್ಣಾನೆಯಿಂದೊಡಗೂಡಿ ಹೊರಟುಬಂದ ಮಹಾಗಜದಂತೆ ಹೊಳೆಯುತಿದ್ದನು ॥೫॥ ಎಲೈರಘುಕುಲ ತಿಲಕನೆ! ರಾಕ್ಷಸಾಧಿಪತಿಯಾದಆಸುಕೇಶನು ದೇವವತೀ ದೇವಿಯಲ್ಲಿ ತ್ರಿಣೇತ್ರಸಮರಾದ, ಮಾಲ್ಯವಂತ, ಸುಮಾಲಿ, ಮಾಲಿ, ಎಂಬ ಮೂರುಮಂದಿ ಮಕ್ಕಳನ್ನು ಪಡದನು ॥೬॥ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನಿಯ್ಯ, ಎಂಬ ಅಗ್ನಿತ್ರಯದಂತೆ ಕಡು ತೇಜಸ್ವಿಗಳಾದ ಆ ಮೂರುಮಂದಿಯು ಮೂರು ಲೋಕಗಳಂತೆ ಅವ್ಯಗ್ರರಾಗಿಯು, ಮತ್ತೆ ಪ್ರಭು, ಮಂತ್ರ, ಉತ್ಸಾಹವೆಂಬ ಮೂರುಶಕ್ತಿಗಳಂತೆ ಕಡುಭಯಂಕರರಾಗಿಯು, ಇರುವವರಾಗಿ ಉಪೇಕ್ಷಿಸಲ್ಪಟ್ಟ ವಾತ,ಪಿತ್ತ, ಶ್ಲೇಷ್ಮಜನ್ಯವಾದ ಮೂರು ರೋಗಗಳಂತೆ ವೃದ್ಧಿಯನ್ನೈದಿದರು॥೮॥ ಆ ಮೂರುಮಂದಿ ಯಾದ ಅಣ್ಣತಮ್ಮಂದರು ತಂದೆಯಾದ ಸುಕೇಶನಿಗೆಪ್ರಾಪ್ತಮಾದಐಶ್ವರ್ಯವು ಈಶ್ವರ ವರಪ್ರಸಾದಲ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಯಂತಪೋಬಲಾತ್ । ತಪಸ್ತಪ್ತುಂಗತಾಮೇರುಂಭ್ರಾತರಃಕೃತನಿಶ್ಚಯಾಃ ॥೯॥ ಪ್ರಗೃಹ್ಯನಿಯಮಾನ್ಘೋರಾನ್ರಾಕ್ಷಸಾ
ರಘುಸತ್ತಮ । ವಿಚೇರುಸ್ತೇತಪೋಘೋರಂಸರ್ವಭೂತಭಯಾವಹಂ ॥೧೦॥ ಸತ್ಯಾರ್ಜವಶಮೋಪೇತೈ ಸ್ತಪೋಭಿರ್ಭುವಿದು
ಷ್ಕರೈಃ ।ಸಂತಾಪಯಂತಸ್ತ್ರೀನ್ಲೋಕಾನ್ ಸದೇವಾಸುರಮಾನುಷಾನ್ ॥೧೧॥ತತೋವಿಭುಶ್ಚತುರ್ವಕ್ತ್ರೋವಿಮಾನವರಮಾ
ಸ್ಥಿತಃ । ಸುಕೇಶಪುತ್ರಾನಾಮಂತ್ರ್ಯವರದೋಸ್ಮೀತ್ಯಭಾಷತ ॥ ೧೨ ॥ ಬ್ರಹ್ಮಾಣಂವರದಂಜ್ಞಾತ್ವಾ ಸೇಂದ್ರೈರ್ದೇವಗಣೈ
ರ್ವೃತಂ । ಊಚುಃಪ್ರಾಂಜಲಯಸ್ಸರ್ವೇವೇಪಮಾನಾಇವದ್ರುಮಾಃ ॥೧೩॥ ತಪಸಾರಾಧಿತೋದೇವಯದಿನೋದಿಶಸೇವರಮ್ ।
ಅಜೇಯಾಶ್ಶತ್ರುಹಂತಾರಃತಥೈವಚಿರಜೀವಿನಃ । ಪ್ರಭವಿಷ್ಣವೋಭವಾಮೇತಿಪರಸ್ಪರಮನುವ್ರತಾಃ ॥೧೪॥ ಏವಂಭವಿಷ್ಯ
ತೀತ್ಯುಕ್ತ್ವಾ ಸುಕೇಶತನಯಾನ್ಪ್ರಭುಃ । ಪ್ರಯಯೌಬ್ರಹ್ಮಲೋಕಾಯಬ್ರಹ್ಮಾಬ್ರಾಹ್ಮಣವತ್ಸಲಃ ॥ ೧೫ ॥ ವರಂಲ
ಬ್ಧ್ವಾತತಸ್ಸರ್ವೇರಾಮರಾತ್ರಿಂಚರಾಸ್ತದಾ।ಸುರಾಸುರಾನ್ಪ್ರಬಾಧಂತೇವರದಾನಾತ್ಸುನಿರ್ಭಯಾಃ॥೧೬॥ತೈರ್ಬಾಧ್ಯಮಾನಾ

---

ತವನ್ನು, ಗತಾಃ-ಹೊಂದಿದರು ॥ ೯ ॥ ಹೇರಘುಸತ್ತಮ-ಎಲೈ ರಘುಶ್ರೇಷ್ಠನೆ! ತೇರಾಕ್ಷಸಾಃ-ಆಮೂರುಮಂದಿ ರಾಕ್ಷಸರು, ಘೋರಾನ್-ಭಯಂಕರವಾ
ದ, ನಿಯಮಾನ್-ವ್ರತಗಳನ್ನು, ಪ್ರಗೃಹ್ಯ-ಪರಿಗ್ರಹಿಸಿ, ಸತ್ಯಾರ್ಜವಶಮೋಪೇತೈಃ-ಸತ್ಯದಿಂದಲು ಕಪಟಾಭಾವದಿಂದಲು ಇಂದ್ರಿಯನಿಗ್ರಹದಿಂದಲು .ಯು
ಕ್ತವಾದ, ಭುವಿ-ಭೂಮಿಯಲ್ಲಿ, ದುಷ್ಕರೈಃ-ಮಾಡಲಸಾಧ್ಯವಾದ, ತಪೋಭಿಃ-ತಪಸ್ಸಿಗಳಿಂದ, ಸದೇವಾಸುರಮಾನುಷಾನ್-ದೇವರಾಕ್ಷಸ ಮನುಷ್ಯರಿಂದೊ
ಡಗೂಡಿದ, ತ್ರೀನ್ಲೋಕಾನ್-ಮೂರುಲೋಕಗಳನ್ನು, ಸಂತಾಪಯಂತಃ-ಸುಡುತಿರುವರಾಗಿ, ಸರ್ವಭೂತಭಯಾವಹಂ-ಸರ್ವಜಂತುಗಳಿಗು ಭಯುವ
ನ್ನುಂಟುಮಾಡುವ, ಘೋರಂ-ಕ್ರೂರವಾದ, ತಪಃ-ತಪಸ್ಸನ್ನು, ವಿಚೇರುಃ-ಮಾಡಿದರು ॥ ೧೧ ॥ ತತಃ-ಬಳಿಕ, ವಿಭುಃ-ತತ್ವಾವಧಾರಣ ಸಮರ್ಥ
ನಾದ, ವಿಮಾನವರಂ-ಉತ್ತಮವಿಮಾನದಲ್ಲಿ, ಆಸ್ಥಿತಃ-ಕುಳಿತುಕೊಂಡಿರುವ, ಚತುರ್ವಕ್ತ್ರಃ-ಬ್ರಹ್ಮನು,ಸುಕೇಶಪುತ್ರಾನ್-ಸುಕೇಶನಮಕ್ಕಳನ್ನು, ಆಮಂ
ತ್ರ್ಯ-ಕರೆದು, ವರದಃ-ವರಪ್ರದಾತನು, ಅಸ್ಮಿ-ಆಗಿಧ್ದೆನೆ, ಇತಿ-ಇಂತೆಂದು, ಅಭಾಷತ-ನುಡಿದನು ॥ ೧೨ ॥ ಸರ್ವೆ-ಅವರೆಲ್ಲರು, ಸೇಂದ್ರೈಃ-ಇಂದ್ರಸಹಿ
ತರಾದ, ದೇವಗಣೈಃ-ದೇವತಾಸಂಘಗಳಿಂದ, ವೃತಂ-ಕೂಡಿಕೊಂಡಿರುವ, ಬ್ರಹ್ಮಾಣಂ-ಬ್ರಹ್ಮನನ್ನು, ವರದಂ-ವರಪ್ರದಾತನನ್ನಾಗಿ, ಜ್ಞಾತ್ವಾ-ಅರಿತು,
ವೇಪಮಾನಾಃ-ಚಲಿಸುತಿರುವ, ದ್ರುಮಾಇವ-ವೃಕ್ಷಗಳಂತೆ, ಪ್ರಾಂಜಲಯಃ-ಅಂಜಲಿಬದ್ಧರಾಗಿ, ಊಚುಃ-ವಿಜ್ಞಾಪಿಸಿದರು ॥ ೧೩ ॥ ಹೇದೇವ-ಎಲೈ ಸ್ವಾ
ಮಿಯೆ! ತಪಸಾ-ತಪಸ್ಸಿನಿಂದ, ಆರಾಧಿತಃ-ಪೂಜಿಸಲ್ಪಟ್ಟವನಾಗಿ, ನಃ-ನಮಗೆ, ವರಂ-ವರವನ್ನು, ದಿಶಸಯದಿ, ಕೊಡುವನಾದರೆ, (ವಯಂ-ನಾವು)
ಪ್ರಭವಿಷ್ಣವಃ-ವರ್ಧಿಷ್ಣುಗಳಾಗಿಯು, ಶತ್ರುಹಂತಾರಃ-ಶತ್ರುಸಂಹಾರಕರಾಗಿಯು, ಅಜೇಯಾಃ-ಇತರರಿಂದ ಜಯಿಸಲಸಾಧ್ಯರಾಗಿಯು, ತಥೈವ-ಹಾ
ಗೆಯೆ, ಚಿರಜೀವಿನಃ-ಬಹುಕಾಲ ಬದುಕುವವರಾಗಿಯು, ಪರಸ್ಪರಂ-ಒಬ್ಬರಿಗೊಬ್ಬರು, ಅನುವ್ರತಾಃ-ಅನುಸರಿಸಿರುವರು, ಭವಾಮೇತಿ-ಆದೇವೆಂದು (ಊ
ಚುಃ-ಪೇಳಿದರು) ॥ ೧೪ ॥ ಬ್ರಾಹ್ಮಣವತ್ಸಲಃ-ಬ್ರಾಹ್ಮಣವಿಶ್ವಾಸವುಳ್ಳ, ಪ್ರಭುಃ-ಸಮರ್ಥನಾದ, ಬ್ರಹ್ಮಾ-ಚತುರ್ಮುಖನು, ಸುಕೇಶತನಯಾನ್- ಸುಕೇಶ
ನ ಮಕ್ಕಳನ್ನು ಕುರಿತು, ಏವಂಭವಿಷ್ಯತೀತಿ-ಹೀಗೇ ಆಗುವದೆಂದು, ಉಕ್ತ್ವಾ-ಹೇಳಿ, ಬ್ರಹ್ಮಲೋಕಾಯ, ಸತ್ಯಲೋಕಕ್ಕೆ, ಪ್ರಯಯೌ-ಹೊರಟನು ॥
ಹೇರಾಮ-ಎಲೈ ಶ್ರೀರಾಮನೆ! ತತಃ-ಬಳಿಕ, ತೇಸರ್ವೇರಾತ್ರಿಂಚರಾಃ-ಆರಾಕ್ಷಸರೆಲ್ಲರು,ವರಂ-ವರವನ್ನು, ಲಬ್ಧ್ವಾ-ಹೊಂದಿ, ವರದಾನಸುನಿರ್ಭಯಾಸ್ಸಂ
ತಃ-ಬ್ರಹ್ಮದೇವನ ವರದಿಂದ ನಿರ್ಭಯರಾಗಿ, ಸುರಾಸುರಾನ್-ದೇವರಾಕ್ಷಸರನ್ನು, ಪ್ರಬಾಧಂತೇ-ಬಾಧೆಗೊಳಿಸಿದರು ॥ ೧೬ ॥ ತೈಃ-ಆ-ಮೂರ್ವರಿಂದ,ವ

---

ಬ್ಧವಾದ್ದೆಂದರಿತು ತಾವೂ ಕೂಡ ತಪಸ್ಸು ಮಾಡಬೇಕೆಂದು ದೀಕ್ಷೈಸಿದವರಾಗಿ ಮೇರು ಪರ್ವತಕ್ಕೆ ಪೋದರು ॥೯॥
ಎಲೈ ರಘುಸತ್ತಮನೆ ! ಆ ಮೂರು ಮಂದಿ ರಾಕ್ಷಸರು ಆವಾಗ ಅತಿಘೋರವಾದ ನಿಯಮಗಳನ್ನಾಚರಿಸುತಿರುವ
ರಾಗಿ, ಸರ್ವಭೂತಗಳಿಗು ಭಯಂಕರವಾದ ಮತ್ತೆ ಇತರರು ಮಾಡಲಸಾಧ್ಯವಾದ ತಪಸ್ಸುಗಳಿಂದ ದೇವ, ದಾನ
ವ, ಮನುಷ್ಯರಿಂ ದೊಡಗೂಡಿದ ಸ್ವರ್ಗ, ಮರ್ತ್ಯ,ಪಾತಾಳಗಳೆಂಬ ಮೂರು ಲೋಕಗಳನ್ನು ಸುಡುತಿರುವರಾದರು ॥
ಆ ಬಳಿಕ ಚತುರ್ಮುಖ ಬ್ರಹ್ಮನು ವಿಮಾನಾರೂಢನಾಗಿ ಬಂದು, ತಪಸ್ವಿಗಳಾದ ಆ ಮುವ್ವರನ್ನು ಕರೆದು ನಿಮ್ಮ
ಗಳಿಗೆ ವರವಂ ಕೊಡುವದಕ್ಕೋಸ್ಕರವಾಗಿ ಬಂದಿದೆನೆಂದು ಪೇಳಿದನು॥೧೨॥ ಬಳಿಕಾ ಸುಕೇಶನ ಪುತ್ರರು ಇಂದ್ರಾ
ದಿದೇವ ಬೃಂದದಿಂದೊಡಗೂಡಿದ ಆ ಬ್ರಹ್ಮನನ್ನು ವರಪ್ರದಾತನನ್ನಾಗಿ ತಿಳಿದು, ಅಂಜಲಿಬದ್ಧರಾದ ಗಿಡಗಳಂತೆ ನಡಗು
ತಿರುವರಾ ಗಿಂತೆಂದರು ॥೧೩॥ ಎಲೈ ಸ್ವಾಮಿಯೆ! ನಮ್ಮ ತಪಸ್ಸುಗಳಿಂದಾರಾಧಿತನಾದ ನೀನು ನಮ್ಮಗಳಿಗೆ ವರವಂ
ಕೊಡುವನಾದರೆ, ನಾವು ಮೂರುಮಂದಿಯು ಒಬ್ಬರಿಗೊಬ್ಬರು ಶೇರಿರುವರಾಗಿಯು, ಇತರರಿಗೆ ಜಯಿಸಲಸಾಧ್ಯರಾಗಿ
ಯು, ಶತ್ರುಸಂಹಾರಕರಾಗಿಯು, ಹಾಗೆಯೆ ಚಿರಜೀವಿಗಳಾಗಿಯು ದಿನೆದಿನೆ ವೃದ್ಧಿಯನ್ನುಹೊಂದುವವರಾಗಿಯು ಇರು
ವೆವೆಂದು ವರವನ್ನೀಯ್ಯಬೇಕೆಂದು ಬ್ರಹ್ಮನಂ ಬೇಡಿದರು ॥೧೪॥ ಬ್ರಾಹ್ಮಣ ವಾತ್ಸಲ್ಯವುಳ್ಳ, ವರಪ್ರದಾನ ಸಮರ್ಥ
ನಾದ ಆ ಚತುರ್ಮುಖ ಬ್ರಹ್ಮನು ನೀವಪೇಕ್ಷಿಸಿದಂತೆ ಆದೀತೆಂದು ಪೇಳಿ ಸತ್ಯಲೋಕವನ್ನೈದಿದನು ॥೧೫॥ ಎಲೈ
ರಾಘವನೆ! ಬಳಿಕಾ ರಾಕ್ಷಸರು ಬ್ರಹ್ಮದೇವರಿಂದ ವರವಂ ಪಡೆದು ಅದರಿಂದ ನಿರ್ಭೀಕರಾಗಿ ದೇವಾಸುರರನ್ನೆಲ್ಲ ಬಾ
ಧಿಸುತಿದ್ದರು ॥೧೬॥ ಆ ಮೂರ್ವರಿಂದ ಹೊಡೆಯಲ್ಪಡುತಿರುವ, ಋಷಿಸಂಘಗಳಿಂದಲು ಚಾರಣರ ತಂಡಗಳಿಂದಲು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ತ್ರಿದಶಾಸ್ಸರ್ಷಿಸಂಘಾಸ್ಸಚಾರಣಾಃ । ತ್ರಾತಾರಂನಾಧಿಗಚ್ಛಂತಿನಿರಯಸ್ಥಾ ಯಥಾನರಾಃ ॥೧೭॥ ಅಥತೇ ವಿಶ್ವ ಕರ್ಮಾಣಂಶಿಲ್ಪಿನಾಂವರಮವ್ಯಯಂ । ಊಚುಸ್ಸಮೇತ್ಯಸಂಹೃಷ್ಟಾ ರಾಕ್ಷಸಾರಘುಸತ್ತಮ ॥೧೮॥ ಓಜಸ್ತೇಜೋಬಲವತಾಂಮಹತಾಮಾತ್ಮ ತೇಜಸಾ । ಗೃಹಕರ್ತಾ ಭವಾನೇವದೇವಾನಾಂಹೃದಯೇಪ್ಸಿತಂ ॥೧೯॥ ಅಸ್ಮಾಕಮಪಿತಾವತ್ತ್ವಂಗೃಹಂಕುರು ಮಹಾಮತೇ। ಹಿಮವಂತಮುಪಾಶ್ರಿತ್ಯಮೇರುಂಮಂದರಮೇವವಾ ॥೨೦॥ ಮಹೇಶ್ವರಗೃಹಪ್ರಖ್ಯಂಗೃಹಂನಃಕ್ರಿಯತಾಮಿತಿ॥ ವಿಶ್ವ ಕರ್ಮಾತತಸ್ತೇಷಾಂರಾಕ್ಷಸಾನಾಂಮಹಾಭುಜಃ। ನಿವಾಸಂಕಥಯಾಮಾಸಶಕ್ರಸ್ಯೇವಾಮರಾವತೀಮ್ ॥೨೧॥ ದಕ್ಷಿಣಸ್ಯೋದಧೇಸ್ತೀರೇ ತ್ರಿಕೂಟೋನಾಮಪರ್ವತಃ । ಸುವೇಲಇತಿಚಾಪ್ಯನ್ಯೋದ್ವಿತೀಯಸ್ತತ್ರಸತ್ತಮಾಃ॥೨೨॥ ಶಿಖರೇತಸ್ಯ ಶೈಲಸ್ಯಮಧ್ಯಮೇಂಬುದಸನ್ನಿಭೇ । ಶಕುನೈರಪಿದುಷ್ಪ್ರಾಪೇಟಂಕಚ್ಛನ್ನಚತುರ್ದಿಶಿ ॥೨೩॥ ತ್ರಿಂಶದ್ಯೋಜನವಿಸ್ತೀರ್ಣಾಶತಯೋಜನಮಾಯತಾ । ಸ್ವರ್ಣಪ್ರಾಕಾರಸಂವೀತಾಹೇಮತೋರಣಸಂವೃತಾ ॥೨೪॥ ಮಯಾಲಂಕೇತಿನಗರೀಶಕ್ರಾಜ್ಞಪ್ತೇ

ಧ್ಯಮಾನಾಃ-ಹೊಡೆಯಲ್ಪಡುತಿರುವ, ಸರ್ಷಿಸಂಘಾಃ-ಋಷಿತಂಡೆಗಳಿಂ ದೊಡಗೂಡಿದ, ಸಚಾರಣಾಃ-ಚಾರಣಯುಕ್ತರಾದ, ತ್ರಿದಶಾಃ-ದೇವತೆಗಳು, ನಿರಯಸ್ಥಾಃ-ನರಕದಲ್ಲಿರುವ, ನರಾಯಥಾ-ಮನುಷ್ಯರೋಪಾದಿಯಲ್ಲಿ, ತ್ರಾತಾರಂ-ರಕ್ಷಕನನ್ನು, ನಾಧಿಗಚ್ಛಂತಿ-ಹೊಂದಲಿಲ್ಲ ॥ ೧೭ ॥ ಹೇರಘುಸತ್ತಮ-ಎಲೈ ರಘುಶ್ರೇಷ್ಠನೆ ! ಅಥ-ಬಳಿಕ, ತೇರಾಕ್ಷಸಾಃ-ಆ ರಾಕ್ಷಸರು, ಸಂಹೃಷ್ಟಾಃ-ಸಂತುಷ್ಟರಾಗಿ, ಶಿಲ್ಪಿನಾಂ-ಬಡಿಗೀಕೆಲಸದವ ರೊಳಗೆ, ವರಂ-ಶ್ರೇಷ್ಠನಾದ, ಅವ್ಯಯಂ-ನಾಶರಹಿತನಾದ, ವಿಶ್ವಕರ್ಮಾಣಂ-ವಿಶ್ವಕರ್ಮಬ್ರಹ್ಮನನ್ನು ಕುರಿತು, ಸಮೇತ್ಯ-ಬಂದು * ಹೇ ಮಹಾಮತೇ-ಎಲೈಅತಿ ತಿಳುವಳಿಕೆಯುಳ್ಳ ವಿಶ್ವಕರ್ಮನೆ, ಓಜಸ್ತೇಜೋಬಲವತಾಂ-ಇಂದ್ರಿಯಬಲವು, ಪ್ರಾಣಬಲವು ದೇಹಬಲವು ಸಹ ಉಳ್ಳ, ಆತ್ಮತೇಜಸಾ - ಸ್ವಕೀಯ್ಯ ತೇಜಸ್ಸಿನಿಂದ, ಮಹತಾಂ-ಮಹಾತ್ಮರಾದ, ದೇವಾನಾಂ-ದೇವತೆಗಳಿಗೆ, ಹೃದಯೇಪ್ಸಿತಂ-ಮನೋಭೀಷ್ಟದಂತೆ, ಭವಾನೇವ-ನೀನೆ, ಗೃಹಕರ್ತಾ-ಗೃಹನಿರ್ಮಾಣ ಕರ್ತನಾಗಿದ್ದೀ, * ತಾವತ್-ಆದರೆ, ಅಸ್ಮಾಕಮಪಿ- ನಮಿಗೂಕೂಡ, ತ್ವಂ-ನೀನು, ಗೃಹಂ-ಮನೆಯನ್ನು, ಕುರು-ಮಾಡು, ಹಿಮವಂತಂ-ಹಿಮವತ್ಪರ್ವತವನ್ನಾದರು, ಮೇರುಂ-ಮೇರುಪರ್ವತವನ್ನಾದರು, ಮಂದರಮೇವವಾ-ಮಂದರಪರ್ವತವನ್ನಾದರೂ ಸರಿಯೆ, ಉಪಾಶ್ರಿತ್ಯ-ಆಧಾರಗೊಳಿಸಿ, ಮಹೇಶ್ವರಗೃಹಪ್ರಖ್ಯಂ-ಶಿವನಮನೆಯ ಪ್ರಕಾಶವುಳ್ಳ, ಗೃಹಂ-ಮನೆಯು, ಕ್ರಿಯತಾಂ-ಮಾಡಲ್ಪಡಲಿ, ಇತಿ-ಇಂತೆಂದು, ಊಚುಃ-ಹೇಳಿದರು ॥ ೨೧ ॥ ಮಹಾಭುಜಃ-ಮಹಾಬಾಹುವಾದ, ವಿಶ್ವಕರ್ಮಾ-ವಿಶ್ವಕರ್ಮನು, ತತಃ-ಬಳಿಕ, ತೇಷಾಂರಾಕ್ಷಸಾನಾಂ-ಆ ರಾಕ್ಷಸರಿಗೂ,ಶಕ್ರಸ್ಯ-ದೇವೇಂದ್ರನಿಗೆ, ಅಮರಾವತೀಮಿವ-ಅಮರಾವತೀ ಪಟ್ಟಣವನ್ನಂತೆ, ನಿವಾಸಂ - ವಾಸಸ್ಥಾನವನ್ನು, ಕಥಯಾಮಾಸ-ಹೇಳಿದನು॥ ೨೧ ॥ ಹೇಸತ್ತಮಾಃ -ಎಲೈಸತ್ಪುರುಷರೆ, ದಕ್ಷಿಣಸ್ಯ-ದಕ್ಷಿಣದಿಕ್ಕಿನಲ್ಲಿರುವ, ಉದಧೇಃ-ಕಡಲಿನ, ತೀರೇ-ಧಡದಲ್ಲಿ,ತ್ರಿಕೂಟೋನಾಮ-ತ್ರಿಕೂಟವೆಂದುಪ್ರಸಿದ್ಧವಾದ, ಪರ್ವತಃ-ಬೆಟ್ಟವು,ಅಸ್ತಿ-ಇಧೆ*ಸುವೇಲಇತಿ-ಸುವೇಲವೆಂಬ, ದ್ವಿತೀಯ್ಯಃ-ಯರಡನೇದಾದ, ಅನ್ಯಶ್ಚ -ಮತ್ತೊಂದುಬೆಟ್ಟವನ್ನು, ಅಸ್ತಿ-ಇಧೆ, ತತ್ರ-ಅಲ್ಲಿ, ತಸ್ಯಶೈಲಸ್ಯ-ಆ ಪರ್ವತದ, ಅಂಬುದಸನ್ನಿಭೇ-ಮೇಘಸದೃಶವಾದ, ಶಕುನೈರಪಿ-ಹಕ್ಕಿಗಳಿಂದಲೂಕೂಡ, ದುಷ್ಪ್ರಾಪೇ-ಹೊಂದಲಸಾಧ್ಯವಾದ, ಟಂಕಚ್ಛನ್ನಚತುರ್ದಿಶಿ-ಉಳಿಗಳಿಂದ ವ್ಯಾಪ್ತವಾದ ನಾಲಕ್ಕುದಿಕ್ಕುಗಳುಳ್ಳ, ಮಧ್ಯಮೇ-ಮಧ್ಯವರ್ತಿಯಾದ, ಶಿಖರೇ-ಶೃಂಗದಲ್ಲಿ, ತ್ರಿಂಶದ್ಯೋಜನವಿಸ್ತೀರ್ಣಾ-ಮುವ್ವತ್ತುಗಾವುದ ವಿಸ್ತಾರವುಳ್ಳ, ಶತಯೋಜನಂ-ನೂರುಯೋಜನವು, ಆಯತಾ-ದೀರ್ಘವುಳ್ಳ, ಸ್ವರ್ಣಪ್ರಾಕಾರಸಂವೀತಾ-ಭಂಗಾರದ ಕೋಟೆಯಿಂದ ಸುತ್ತುಬಾರಲ್ಪಟ್ಟ, ಹೇಮತೋರಣಸಂವೃತಾ-ಸ್ವರ್ಣಖಚಿತವಾದ, ಊರುಬಾಗಲುಗಳುಳ್ಳ, ಲಂಕೇತಿ-ಲಂಕೆಯೆಂಬ, ನಗರೀ-ಪಟ್ಟಣವು, ಶಕ್ರಾಜ್ಞಪ್ತೇನ-ದೇವೇಂದ್ರನಿಂದಾ ಜ್ಞಾಪಿತನಾದ, ಮ

ಒಡಗೂಡಿದ ದೇವಗಣಂಗಳು ನರಕಂಗತರಾದ ನರರಂತೆ ಶರಣವಂ ಹೊಂದದಿರುವರಾಗಿದ್ದರು॥೧೭॥ ಹೇರಘುಶ್ರೇಷ್ಠನೇ !ಸಮನಂತರದೊಳ್ ಆ ರಾಕ್ಷಸರೆಲ್ಲರು ಶೇರಿ ಪರಮ ಸಂಹೃಷ್ಟರಾಗಿ ಬಡಿಗೀಕೆಲಸ ಗಾರರಲ್ಲಿ ಪ್ರಮುಖನಾದ ವಿಶ್ವಕರ್ಮನಂ ಕರೆಕಳಿಸಿ ಎಲೈ ಮಹಾಮತಿವಂತನಾದ ವಿಶ್ವಕರ್ಮನೇ! ಪ್ರಾಣಶಕ್ತಿಯು, ದೇಹಶಕ್ತಿಯು, ಮನಶ್ಶಕ್ತಿಯೂಉಳ್ಳ ಮಹಾತ್ಮರಾದ ದೇವತೆಗಳಿಗೆ ಮನೋರಮ್ಯವಾದ ಹರ್ಮ್ಯಗಳಂ ನಿರ್ಮಿಸಲು ಶಕ್ತನಾದವನು ನೀನಷ್ಟೆ? ಆದಕಾರಣ ಹಿಮವತ್ಪರ್ವತವನ್ನಾಗಲಿ ಮೇರು ಪರ್ವತವನ್ನಾಗಲಿ, ಮಂದರ ಗಿರಿಯನ್ನಾಗಲಿ ಆಧಾರವಾಗಿ ಮಾಡಿ ಮಹೇಶ್ವರನ ಮಂದಿರ ಸದೃಶವಾದ ಸುಂದರ ತರವಾದ ಆಗಾರವನ್ನಿರ್ಮಿಸಿ ಕೊಡೆಂದು ನುಡಿದರು॥೨೧॥ ಆಬಳಿಕ ಗೃಹನಿರ್ಮಾಣದಲ್ಲಿ ಮಹಾಚಮತ್ಕಾರಿಯಾದ ಆ ವಿಶ್ವಕರ್ಮನು ಆ ರಾಕ್ಷಸರಿಗೆ, ದೇವೇಂದ್ರನಿಗೆ ಅಮರಾವತಿಯಂತಿರುವ ಒಂದು ನಿವಾಸಸ್ಥಾನವಂ ಪೇಳಿದನು. ಎಲೈ ರಾಕ್ಷಸೋತ್ತಮರೆ ! ದಕ್ಷಿಣ ಸಮುದ್ರದ ಧಡದಲ್ಲಿ ತ್ರಿಕೂಟವೆಂಬ ಬೆಟ್ಟ ಉಂಟು, ಆದರ ಬಳಿಯಲ್ಲಿ ಸುವೇಲವೆಂಬ ಮತ್ತೊಂದು ಪರ್ವತವಿಧೆ. ಅದರ ಮಧ್ಯವರ್ತಿಯಾದ ಪಕ್ಷಿಗಳ ಸಂಚಾರ ವಿಲ್ಲದಿರುವ ಮತ್ತು ಟಂಕಾಯುಧಗಳಿಂದ ವ್ಯಾಪ್ತವಾದ ಚತುರ್ದಿಕ್ಕುಗಳುಳ್ಳ, ಶಿಖರದಲ್ಲಿ ಮುವ್ವತ್ತುಗಾವುದ ವಿಸ್ತಾರವು, ಮತ್ತೆ ನೂರು ಗಾವುದಗಳ ಉದ್ದವು ಉಳ್ಳ ಸುವರ್ಣ ಪ್ರಾಕಾರ ಸಂವೇಷ್ಟಿತವಾದ ಭಂಗಾರಿನ ಊರುಬಾಗಿಲುಗಳಿಂ ದೊಡಗೂಡಿದ ಲಂಕೆಯೆಂಬ ಪಟ್ಟಣವು ಇಂದ್ರಾಜ್ಞೆಗೆ ಒಳಪಟ್ಟ ನನ್ನಿಂದ ಸೃಷ್ಟಿಮಾಡಲ್ಪಟ್ಟಧೆ. ಇಂ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಿರ್ಮಿತಾ॥೧೬॥ ತಸ್ಯಾಂವಸತದುರ್ಧರ್ಷಾಃಯೂಯಂರಾಕ್ಷಸಪುಂಗವಾಃ । ಅಮರಾವತೀಂಸಮಾಸಾದ್ಯ ಸೇಂದ್ರಾ ಇ ವದಿವೌಕಸಃ ॥೧೭॥ ಲಂಕಾದುರ್ಗಂಸಮಾಸಾದ್ಯರಾಕ್ಷಸೈರ್ಬಹುಭಿರ್ವೃತಾಃ । ಭವಿಷ್ಯಥದುರಾಧರ್ಷಾಶ್ಶತ್ರೂಣಾಂ ಶತ್ರುಸೂದನಾಃ ॥೧೮॥ ವಿಶ್ವಕರ್ಮವಚಶ್ಶ್ರುತ್ವಾತತಸ್ತೇರಾಮರಾಕ್ಷಸಾಃ । ಸಹಸ್ರಾನುಚರಾಗತ್ವಾ ಲಂಕಾಂತಾ ಮಾ ವರ್ಸ ಪುರೀಮ್॥೧೯॥ ದೃಢಪ್ರಾಕಾರಪರಿಖಾಂ ಸೌವರ್ಣೈರ್ಗೃಹಶೋಭಿತಾಮ್ । ಲಂಕಾಮವಾಪ್ಯತೇಹೃಷ್ಟಾನ್ಯವಸ ರಜ ನೀಚರಾಃ ॥೨೦॥ ಏತಸ್ಮಿನ್ನೇವಕಾಲೇತು ಬಭೂವರಘುನಂದನ । ನರ್ಮದಾನಾಮಗಂಧರ್ವೀನಾನಾಧರ್ಮ ಸಮೇಧಿತಾ। ತಸ್ಯಾಃಕನ್ಯಾತ್ರಯಂಹ್ಯಾಸೀದ್ಧ್ರೀಶ್ರೀಕೀರ್ತಿಸಮದ್ಯುತಿ॥೨೧॥ ಜ್ಯೇಷ್ಠಕ್ರಮೇಣಸಾತೇಷಾಂರಾಕ್ಷಸಾನಾಮರಾಕ್ಷಸೀ। ಕ ನ್ಯಾಸ್ತಾಃಪ್ರದದೌಹೃಷ್ಟಾ ಪೂರ್ಣಚಂದ್ರನಿಭಾನನಾಃ ॥೨೨॥ ತ್ರಯಾಣಾಂರಾಕ್ಷಸೇಂದ್ರಾಣಾಂತಿಸ್ರೋಗಂಧರ್ವಕನ್ಯ ಕಾಃ । ಮಾತ್ರಾದತ್ತಾ ಮಹಾಭಾಗನಕ್ಷತ್ರೇಭಗದೈವತೇ ॥೨೩॥ ಕೃತದಾರಾಸ್ತು ತೇರಾಮ ಸುಕೇಶತನಯಾತದಾ। ಭಾರ್ಯಾ ಭಿಸ್ಸಹಚಿಕ್ರೀಡುರಪ್ಸರೋಭಿರಿವಾಮರಾಃ ॥೨೪॥ ತತ್ರಮಾಲ್ಯವತೋಭಾರ್ಯಾಸುಂದರೀನಾಮ ಸುಂದರೀ । ಸತಸ್ಯಾಂಜ

---

ಯಾ-ನಸ್ಸೀಂದ, ನಿರ್ಮಿತಾ-ನಿರ್ಮಿಸಲ್ಪಟ್ಟಿರ್ಥ * ಹೇರಾಕ್ಷಸಪುಂಗವಾಃ-ಎಲೈ ಅಸುರೋತ್ತಮರೇ,ಯೂಯಂ-ನೀವುಗಳು,ಸೇಂದ್ರಾಃ-ಇಂದ್ರನಿಂದೊಡಗೂಡಿದ, ದಿವೌಕಸಃ-ದೇವತೆಗಳು, ಅಮರಾವತೀಂ-ಅಮರಾವತೀ ಪಟ್ಟಣವನ್ನು, ಸಮಾಸಾದ್ಯೇವ-ಹೊಂದಿದಂತೆ, ತಸ್ಯಾಂ-ಆ ಪಟ್ಟಣದಲ್ಲಿ,ದುರ್ಧರ್ಷಾಃ-ಯಾರಿಂದಲು ತಿರಸ್ಕರಿಸ ಲಶಕ್ಯರಾಗಿ, ವಸತ-ನೆಲಗೊಂಡಿರಿ॥* ಹೇಶತ್ರುಸೂದನಾಃ-ಎಲೈಶತ್ರುಸಂಹಾರಕರೇ, ಲಂಕಾದುರ್ಗಂ-ಲಂಕೆಎಂಬದುರ್ಗಸ್ಥಾನವನ್ನು,ಸಮಾಸಾದ್ಯ -ಹೊಂದಿ,ಬಹುಭಿಃ-ಅನೇಕರಾದ,ರಾಕ್ಷಸೈಃ-ಅಸುರರಿಂದ,ವೃತಾಃ-ಪರಿವೃತರಾಗಿ,ಶತ್ರೂಣಾಂ-ಹಗೆಯವರಿಗೆ,ದುರಾಧರ್ಷಾಃ-ಪರಿಭವಿಸಲಸಾಧ್ಯರು, ಭವಿ ಷ್ಯಥ-ಆಗುವಿ(ಇತಿ-ಇಂತೆಂದು,ಕಥಯಾಮಾಸ-ಹೇಳಿದನು)॥ತೇರಾಕ್ಷಸಾಃ-ಆರಾಕ್ಷಸರು,ವಿಶ್ವಕರ್ಮವಚಃ-ವಿಶ್ವಕರ್ಮನ ಮಾತನ್ನು,ಶ್ರುತ್ವಾ-ಕೇಳಿ,ತತಃ-ಬಳಕ, ಸಹಸ್ರಾನುಚರಾಃ-ಅನೇಕ ಸೇವಕರುಳ್ಳವರಾಗಿ, ಗತ್ವಾ-ಬಂದು, ತಾಂಲಂಕಾಂಪುರೀಂ-ಆ ಲಂಕಾಪುರದಲ್ಲಿ, ಅವರ್ಸ-ನಿಲ್ಲಲಿಚ್ಛೈಸಿದರು॥ ರಜನೀಚರಾಃ-ಆ ರಾಕ್ಷಸರು, ದೃಢಪ್ರಾಕಾರಪರಿಖಾಂ-ಘಟ್ಟಿಯಾಗಿರುವ ಕೋಟೆಯ ಅಗಳತೆಯೂಳ್ಳ, ಹೈಮೈಃ-ಸುವರ್ಣವಿಕಾರಗಳಾದ, ಗೃಹಶತೈಃ-ಅನೇಕ ಮನೆ ಗಳಿಂದ, ವೃತಾಂ-ಪರಿವೃತವಾದ, ಲಂಕಾಂ-ಲಂಕಾಪಟ್ಟಣವನ್ನು, ಅವಾಪ್ಯ-ಹೊಂದಿ-ಹೃಷ್ಟಾಸ್ಸಂತಃ-ಸಂತೋಷಗೊಂಡವರಾಗಿ,ನ್ಯವರ್ಸ-ನಿಂತರು॥೨೦॥ ಹೆ ರಘುನಂದನ-ಎಲೈ ಶ್ರೀರಾಮನೆ! ಏತಸ್ಮಿನ್ನೇವಕಾಲೇತು-ಇಷ್ಟರಲ್ಲಿಯೆ, ನರ್ಮದಾನಾಮ-ನರ್ಮದೆಯೆಂದು ಪ್ರಸಿದ್ಧಳಾದ,ಗಂಧರ್ವೀ-ಗಂಧರ್ವಕನ್ಯಕೆಯು, ನಾನಾಧರ್ಮಸಮೇಧಿತಾ-ಅನೇಕ ಧರ್ಮಗಳಿಂದ ವೃದ್ಧಿಹೊಂದಿದವಳು, ಬಭೂವ-ಆದಳು ॥ ೨೦ ॥ ತಸ್ಯಾಃ-ಆನರ್ಮದಾದೇವಿಗೆ, ಹ್ರೀಶ್ರೀಕೀರ್ತಿಸಮದ್ಯು ತೀ-ಹ್ರೀಶ್ರೀಕೀರ್ತಿ-ಲಜ್ಜೆಗು, ಲಕ್ಷ್ಮಿಗು, ಕೀರ್ತಿಗು, ಸಮದ್ಯುತಿ-ಸಮಾನವಾದ ಕಾಂತಿಯುಳ್ಳ, ಕನ್ಯಾತ್ರಯಂ-ಮೂರುಮಂದಿ ಕನ್ನಿಕೆಯರು, ಆಸೀತ್- ಆದರು ॥ ೨೦ ॥ ಆರಾಕ್ಷಸೀ-ರಾಕ್ಷಸಜಾತಿಯ್ಯಳ್ಳವಿರುವ, ಸಾ-ಆಗಂಧರ್ವಾಂಗನೆಯು, ಹೃಷ್ಟಾ-ಸಂತೋಷಚಿತ್ತಳ್ಳಾಗಿ, ಪೂರ್ಣಚಂದ್ರನಿಭಾನ ನಾಃ-ಪೂರ್ಣಚಂದ್ರಸದೃಶ ಮುಖಗಳುಳ್ಳ, ತಿಸ್ರಃ-ಮೂರ್ವರಾದ, ಕನ್ಯಾಃ-ಅವಿವಾಹಿತರಾದ, ತಾಃಗಂಧರ್ವಕನ್ಯಾಃ-ಆಗಂಧರ್ವ ಕುವರಿಗಳನ್ನು, ರಾಕ್ಷಸೇಂದ್ರಾಣಾಂ-ಅಸುರೋತ್ತಮರಾದ, ತ್ರಯಾಣಾಂ-ಮೂರುಮಂದಿಯಾದ, ತೇಷಾಂರಾಕ್ಷಸಾನಾಂ-ಆ ರಕ್ಕಸರಿಗೆ, ಜ್ಯೇಷ್ಠಕ್ರಮೇಣ-ಜ್ಯೇಷ್ಠಾನುಪೂ ರ್ವಿಕವಾಗಿ, ದದೌ-ಕೊಟ್ಟಳು ॥ ೨೩ ॥ ಮಹಾಭಾಗಾಃ-ಪುಣ್ಯವತಿಗಳಾದ ಆ ಗಂಧರ್ವಕನ್ಯಕೆಯರು, ಭಗದೈವತೇ-ಭಗದೈವತ್ಯವಾದ, ನಕ್ಷತ್ರೇ-ಉ ತ್ತರಾ ನಕ್ಷತ್ರದಲ್ಲಿ, ಮಾತ್ರಾ-ತಾಯಿಯಿಂದ, ದತ್ತಾಃ-ಕೊಡಲ್ಪಟ್ಟರು. ಹೇರಾಮ-ಎಲೈ ಶ್ರೀರಾಮನೆ! ತದಾ-ಆ ಕಾಲದಲ್ಲಿ, ಕೃತದಾರಾಃ-ವಿವಾಹಿ ತರಾದ, ಸುಕೇಶತನಯಾಃ-ಸುಕೇಶನ ಮಕ್ಕಳು, ಅಪ್ಸರೋಭಿಃ-ಅಪ್ಸರಸ್ತ್ರೀಗಳಿಂದ, ಅಮರಾಇವ-ದೇವತೆಗಳೋಪಾದಿಯಲ್ಲಿ, ಭಾರ್ಯಾಭಿಸ್ಸಹ-ಹೆಂಡ

---

ದ್ರಸಹಿತರಾದ ದೇವತೆಗಳು ಅಮರಾವತೀ ಪಟ್ಟಣದಲ್ಲಿರುವಂತೆನೀವುಗಳು ಲಂಕಾನಗರಿಯ ದುರ್ಗವಂ ಹೊಂದಿ ಅನೇಕ ರಾಕ್ಷಸ ತಂಡಗಳಿಂ ದೊಡಗೂಡಿ ಹಗೆಯರಿಗಜೇಯರಾಗಿ ನಿವಾಸವಂ ಗೈಯ್ಯುತ್ತಿರಿ ಎಂದು ನುಡಿದನು॥೧೮॥ ಎಲೈಶ್ರೀ ರಾಮನೆ! ಬಳಿಕಾರಾಕ್ಷಸರು ಆ ವಿಶ್ವಕರ್ಮನ ವಾಕ್ಯವಂ ಕೇಳಿ ಸಾವಿರಾರು ಜನರು ಅನುಚರರಾಗುಳ್ಳವರಾಗಿ, ದೃ ಢಪ್ರಾಕಾರಪರಿವೇಷ್ಟಿತವಾಗಿಯು, ಸುವರ್ಣ ನಿರ್ಮಿತಂಗಳಾದ ನಿವೇಶನಗಳಿಂದ ಕಂಗೊಳಿಸುತ್ತಿರುವದಾಗಿಯು, ಇ ರುವ ಆ ಲಂಕೆಯಂ ಹೊಕ್ಕು ಸಂತುಷ್ಟರಾಗಿರುತಿರ್ದರು ॥೨೦॥ ಎಲೈ ರಘುನಂದನನೆ ! ಹೀಗಿರುವಲ್ಲಿ ಕಡು ಧರ್ಮವ ತಿಯಾದ ನರ್ಮದೆ ಎಂಬ ಗಂಧರ್ವಳೋರ್ವಳಾದಳು. ಆಕೆಗೆ ಹ್ರೀ, ಶ್ರೀ, ಕೀರ್ತಿಗಳಿಗೆ ಸದೃಶವಾದ ದ್ಯುತಿಯುಳ್ಳ ಕನ್ಯಾತ್ರಯುಮುತ್ಪನ್ನಮಾಯಿತು ॥೨೧॥ ರಾಕ್ಷಸಜಾತಿಯ್ಯಳಾಗಿರುವ ಆ ನರ್ಮದಾದೇವಿಯು ಪೂರ್ಣಚಂದ್ರ ಸದೃಶ ಪ್ರಭೆಯುಳ್ಳ ಮುಖಗಳುಳ್ಳ ಆ ಕನ್ಯಕೆಯರನ್ನು ಆ ಮೂರುಮಂದಿ ರಾಕ್ಷಸರಿಗೂ ಜ್ಯೇಷ್ಠಾನು ಕ್ರಮಣಿಕವಾಗಿ ಕೊಟ್ಟು ವಿವಾಹವಂ ಬೆಳಸಿದಳು ॥೨೨॥ ಎಲೈ ರಘುಕುಲತಿಲಕನೆ!ಬಳಿಕಾಸುಕೇಶನ ಕುಮಾರರಾದ, ಮಾಲಿ, ಸುಮಾ ಲಿ, ಮಾಲ್ಯವಂತರೆಂಬ ಮೂರುಮಂದಿ ರಾಕ್ಷಸರು ಭಾರ್ಯಾಸಹಿತರಾಗಿ ಅಪ್ಸರ ಸ್ತ್ರೀಯರೊಡನೆ ಸುರರು ರಮಿಸುವಂತೆ ಆ ರಮಣೀಮಣಿಗಳೊಡನೆ ಕ್ರೀಡಿಸಿದರು ॥೨೪॥ ಆ ಮೂರು ಮಂದಿಯಲ್ಲಿ ಅತಿ ಸುಂದರಿಯಾದ ಸುಂದರಿ ಯೆಂಬವಳು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನೆಯಾಮಾಸಯದಪತ್ಯಂನಿಬೋಧತತ್ ॥೩೫॥ ವಜ್ರಮುಷ್ಟಿರ್ವಿರೂಪಾಕ್ಷೋದುರ್ಮುಖಶ್ಚೈವರಾಕ್ಷಸಃ । ಸುಪ್ತಘ್ನೋ ಯಜ್ಞಕೋಪಶ್ಚ ಮತ್ತೋನ್ಮತ್ತೌತಥೈವಚ ॥೩೬॥ ಅನಲಾಚಾಭವತ್ಕನ್ಯಾಸುಂದರ್ಯಾಂರಾಮಸುಂದರೀ ॥೩೭॥ ಸುಮಾಲೇರಪಿಭಾರ್ಯಾಸೀತ್ಪೂರ್ಣಚಂದ್ರನಿಭಾನನಾ । ನಾಮ್ನಾಕೇತುಮತೀನಾಮಪ್ರಾಣೇಭ್ಯೋಪಿಗರೀಯಸೀ ॥೩೮॥ ಸುಮಾಲಿರ್ಜನೆಯಾಮಾಸಯದಪತ್ಯಂನಿಶಾಚರಃ । ಕೇತುಮತ್ಯಾಂಮಹಾಬಾಹೋತನ್ನಿಬೋಧಾನುಪೂರ್ವಶಃ ॥೩೯॥ ಪ್ರಹಸ್ತೋಕಂಪನಶ್ಚೈವವಿಕಟಃಕಾಲಕಾಮುರ್ಕಃ । ಧೂಮ್ರಾಕ್ಷಶ್ಚಾಥದಂಡಶ್ಚ ಸುಪಾರ್ಶ್ವಶ್ಚ ಮಹಾಬಲಃ ॥ ಸಂಹ್ರಾದಿಃಪ್ರಘಸಶ್ಚೈವಭಾಸಕರ್ಣಶ್ಚ ರಾಕ್ಷಸಃ ॥ ೪೦ ॥ ರಾಕಾಪುಷ್ಪೋತ್ಕಟಾಚೈವಕೈಕಸೀಚಸುವಿಸ್ಮಿತಾ । ಕುಂಭೀನಸೀಚಇತ್ಯೇತೆಸುಮಾಲೇಃಪ್ರಭವಾಃಸ್ಮೃತಾಃ॥೪೧॥ ಮಾಲೇಸ್ತುವಸುಧಾನಾಮಗಂಧರ್ವೀರೂಪಶಾಲಿನೀ । ಭಾರ್ಯಾಸೀತ್ಪದ್ಮಪತ್ರಾಕ್ಷೀಸ್ವಕ್ಷೀಯಕ್ಷೀವರೋಪಮಾ ॥೪೨॥ ಸುಮಾಲೇರನುಜಸ್ತಸ್ಯಾಂಜನೆಯಾಮಾಸಯತ್ಪ್ರಭೋ । ಅಪತ್ಯಂಕಥ್ಯಮಾನಂತನ್ಮಯಾತ್ವಂಶೃಣುರಾಘವ ॥೪೩॥ ಅನಲಶ್ಚಾನಿಲಶ್ಚೈವಹರಸ್ಸಂಪಾತಿರೇವಚ ॥ ಏತೆವಿಭೀಷಣಾಮಾತ್ಯಾಮಾಲೇಯಾಸ್ತೆನಿ

---

ತಿಗಳಿಂದೊಡಗೂಡಿ, ಚಿಕ್ರೀಡುಃ-ವಿಹರಿಸಿದರು ॥ ೩೪ ॥ ತತ್ರ-ಆಮುಪ್ಪೋರಲ್ಲಿ ಸುಂದರೀನಾಮ-ಸುಂದರಿಎಂದು ಪ್ರಸಿದ್ಧಳಾದ, ಸುಂದರೀ-ಸ್ತ್ರೀಯು, ಮಾಲ್ಯವತಃ-ಮಾಲ್ಯವಂತನ, ಭಾರ್ಯಾ-ಹೆಂಡತಿಯು, ಸಃ-ಆ ಮಾಲ್ಯವಂತನು, ತಸ್ಯಾಂ-ಆ ಸುಂದರಿಯಲ್ಲಿ, ಯದಪತ್ಯಂ-ಯಾವ ಸಂತಾನವನ್ನು, ಜನಯಾಮಾಸ-ಹುಟ್ಟಿಸಿದನೋ, ತತ್-ಅದನ್ನು, ನಿಬೋಧ-ಅರಿತುಕೋ, ಹೇರಾಮ-ಎಲೈಶ್ರೀರಾಮನೆ ! ವಜ್ರಮುಷ್ಟಿಃ-ವಜ್ರಮುಷ್ಟಿಯು, ವಿರೂಪಾಕ್ಷಃ-ವಿರೂಪಾಕ್ಷನು, ದುರ್ಮುಖಃ-ದುರ್ಮುಖನೆಂಬ, ರಾಕ್ಷಸಶ್ಚ-ರಾಕ್ಷಸನುನ್ನು, ಸುಪ್ತಘ್ನಃ-ಸುಪ್ತಘ್ನನು, ಯಜ್ಞಕೋಪಶ್ಚ-ಯಜ್ಞಕೋಪನು, ತಥೈವ-ಹಾಗೆ, ಮತ್ತೋನ್ಮತ್ತೌ-ಮತ್ತೋನ್ಮತ್ತರೆಂಬ ಈ ಏಳುಮಂದಿಯು, ಅಭವನ್-ಆದರು. ಅನಲಾ-ಅನಲೆಯೆಂಬ, ಸುಂದರೀ-ರೂಪವತಿಯಾದ, ಕನ್ಯಾ-ಕನ್ಯಕೆಯು, ಸುಂದರ್ಯಾಂ-ಸುಂದರಿಯಲ್ಲಿ,ಅಭವತ್-ಆದಳು ॥೩೭॥ ಸುಮಾಲಿನೋಪಿ-ಸುಮಾಲಿಗೂಕೂಡ, ಪೂರ್ಣಚಂದ್ರ ನಿಭಾನನಾ-ಸಂಪೂರ್ಣಚಂದ್ರಸಮಾನವಾದಮುಖವುಳ್ಳ, ಪ್ರಾಣೇಭ್ಯೋಪಿ-ಪ್ರಾಣಗಳಿಗಿಂತಲು, ಗರಿಯ್ಯಸೀ-ಶ್ರೇಷ್ಠಳಾದ,ನಾಮ್ನಾ-ಹೆಸರಿಂದ, ಕೇತುಮತೀನಾಮ-ಕೇತುಮತಿಯೆಂದು ಪ್ರಸಿದ್ಧಳಾದ, ಭಾರ್ಯಾ-ಹೆಂಡತಿಯು, ಆಸೀತ್-ಆದಳು ॥ ೩೮ ॥ ಹೆಮಹಾಬಾಹೋ-ಎಲೈ ಮಹಾಭುಜಗಳುಳ್ಳವನೇ ! ಸುಮಾಲೀ - ಸುಮಾಲಿಯೆಂಬ, ನಿಶಾಚರಃ-ರಾಕ್ಷಸನು, ಕೇತುಮತ್ಯಾಂ-ಕೇತುಮತಿಯಲ್ಲಿ, ಯದಪತ್ಯಂ-ಯಾವ ಸಂತಾನವನ್ನು , ಜನಯಾಮಾಸ-ಉತ್ಪಾದಿಸಿದನೋ, ತತ್-ಅದನ್ನು, ಅನುಪೂರ್ವಶಃ-ಕ್ರಮವಾಗಿ, ನಿಬೋಧ-ತಿಳಿದುಕೋ ॥ ೩೯ ॥ ಪ್ರಹಸ್ತಃ-ಪ್ರಹಸ್ತನು, ಅಕಂಪನಶ್ಚ-ಅಕಂಪನನುನ್ನು, ವಿಕಟಃ-ವಿಕಟನುನ್ನು, ಕಾಲಕಾಮುರ್ಕಃ-ಕಾಲಕಾಮುಕನುನ್ನು, ಧೂಮ್ರಾಕ್ಷಶ್ಚೈವ-ಧೂಮ್ರಾಕ್ಷನೆಂಬುವನುನ್ನು, ದಂಡಶ್ಚ-ದಂಡನುನ್ನು, ಮಹಾಬಲಃ-ಅತಿಬಲಶಾಲಿಯಾದ, ಸುಪಾರ್ಶ್ವಶ್ಚ-ಸುಪಾರ್ಶ್ವನುನ್ನು, ಸಂಹ್ರಾದಿಃ-ಸಂಹ್ರಾದಿಎಂಬವನುನ್ನು, ಪ್ರಘಸಶ್ಚೈವ-ಪ್ರಘಸನೆಂಬುವನುನ್ನು, ರಾಕ್ಷಸಃ-ರಾಕ್ಷಸನಾದ, ಭಾಸಕರ್ಣಃ-ಭಾಸಕರ್ಣನೂಎಂಬ ಹನ್ನೊಂದುಮಂದಿ ಗಂಡುಮಕ್ಕಳುನ್ನು, ರಾಕಾ-ರಾಕಾದೇವಿಯು, ಪುಷ್ಪೋತ್ಕಟಾ-ಪುಷ್ಪೋತ್ಕಟೆ ಎಂಬವಳುನ್ನು,ಸುವಿಸ್ಮಿತಾ-ಮಂದಸ್ಮಿತಯುಕ್ತಳಾದ,ಕೈಕಸೀಚ-ಕೈಕಸಿಯು,ಕುಂಭೀನಸೀಚ-ಕುಂಭೀನಸಿಯು, ಇತಿ-ಇಂತೆಂಬ-ಏತೆ-ಇವರುಗಳು, ಸುಮಾಲೇಃ-ಸುಮಾಲಿಗೆ,ಪ್ರಭವಾಃ-ಹುಟ್ಟಿದವರೆಂದು,ಸ್ಮೃತಾಃ-ಹೇಳಲ್ಪಡುತ್ತಾರೆ॥೪೧॥ಮಾಲೇಸ್ತು-ಮಾಲಿಯೆಂಬವನಿಗಾದರೆ,ರೂಪಶಾಲಿನೀ-ರೂಪದಿಂದ ಪಪ್ಪುತಿರುವ, ಪದ್ಮಪತ್ರಾಕ್ಷೀ-ತಾವರೆಯಸಳೆಗೆಸಮಾನವಾದ ನೇತ್ರಗಳುಳ್ಳ,ಸ್ವಕ್ಷೀ-ಸುಂದರವಾದ ಚಕ್ಷುರಾದೀಂದ್ರಿಯಗಳುಳ್ಳ, ವರೋಪಮಾ-ವರಸಿಗೆಸಮಾನಳಾದ, ಯಕ್ಷೀ-ಭೋಗವತಿಯಾದ, ವಸುಧಾನಾಮ-ವಸುಧೆಯೆಂದು ಪ್ರಸಿದ್ಧಳಾದ,ಗಂಧರ್ವೀ-ಗಂಧರ್ವಸ್ತ್ರೀಯು,ಭಾರ್ಯಾ-ಹೆಂಡತಿಯು, ಆಸೀತ -ಆದಳು॥೪೨॥ ಹೆಪ್ರಭೋ-ಎಲೈರಾಜನೆ, ಹೆರಾಘವ-ಎಲೈ ಶ್ರೀರಾಮನೆ, ಸುಮಾಲೇಃ-ಸುಮಾಲಿಗೆ, ಅನುಜಃ-ತಮ್ಮನಾದ ಮಾಲಿಯು, ತಸ್ಯಾಂ-ಆ ವಸುಧೆಯಲ್ಲಿ, ಯ

---

ಮಾಲ್ಯವಂತನ ಹೆಂಡತಿಯು, ಆ ರಾಕ್ಷಸನು ಆಕೆಯಲ್ಲಿ ಯಾವ ಮಕ್ಕಳಂ ಪಡದನೋ, ಅದನ್ನು ವಿಸ್ತರಿಸಿ ಪೇಳುವೆನು ಎಲೈ ಶ್ರೀರಾಮನೆ ! ಸಾವಧಾನಚಿತ್ತನಾಗಿ ತಿಳಿದುಕೋ, ವಜ್ರಮುಷ್ಟಿ, ವಿರೂಪಾಕ್ಷ, ದುರ್ಮುಖ, ಸುಪ್ತಘ್ನ, ಯಜ್ಞಕೋಪ, ಮತ್ತ, ಉನ್ಮತ್ತರೆಂಬ ಈ ೭ ಮಂದಿ ಗಂಡುಮಕ್ಕಳು ಮತ್ತೆ ಅನಲೆಯೆಂಬ ಹೆಣ್ಣು ಮಗಳು ಇವರುಗಳು ಮಾಲ್ಯವಂತನಮಕ್ಕಳು॥ಸಂಪೂರ್ಣಚಂದ್ರ ಸಮಾನವಾದ ಮುಖವುಳ್ಳ ಕೇತುಮತಿಯೆಂಬ ಕನ್ಯಕೆಯು ಸುಮಾಲಿಯ ಹೆಂಡತಿಯು, ಅವನು ಕೇತುಮತಿಯಿಂದ ಪಡದ ಪುತ್ರರ್ಯಾರಂದರೆ, ಪ್ರಹಸ್ತ, ಅಕಂಪನ, ವಿಕಟ, ಕಾಲಕಾರ್ಮುಕ, ಧೂಮ್ರಾಕ್ಷ, ದಂಡ, ಸುಪಾರ್ಶ್ವ, ಸಂಹ್ರಾದಿ, ಪ್ರಘಸ, ಭಾಸಕರ್ಣನೆಂಬ ಕಡು ಪರಾಕ್ರಮಿಗಳಾದ ೧೦ ಜನ ಕುಮಾರರುನ್ನು ಮತ್ತೆ ರಾಕಾ, ಪುಷ್ಪೋತ್ಕಟಾ, ಕೈಕಸೀ, ಕುಂಭೀನಸೀ ಎಂಬ ೪ ಮಂದಿ ಕುವರಿಯರುನ್ನು ಇವರುಗಳುಸುಮಾಲಿಯುಮಕ್ಕಳು॥೪೧॥ ಮಾಲಿಯ ಹೆಂಡತಿಯಾದವಸುಧಾಭಿಧಾನಳಾದಗಂಧರ್ವ ಕನ್ಯಕೆಯಾದರೆ ತಾವರೆ ಎಸಳೆಯಂತೆ ನೇತ್ರಗಳುಳ್ಳವಳಾಗಿಯು, ರೂಪವತಿಯಾಗಿಯು ಇರುತಿರ್ದಳು. ಎಲೈ ರಘುವೀರನೇ ! ಆ ಮಾಲಿಯೆಂಬ ರಾಕ್ಷಸನಿಗೆ, ಆ ವಸುಧೆಯೆಂಬ ಗಂಧರ್ವ ಸ್ತ್ರೀಯಲ್ಲಿ ಉತ್ಪನ್ನವಾದ ಸಂತಾನವು ನನ್ನಿಂದ ಪೇಳಲ್ಪಡುತ್ತದೆ. ಕೇಳು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶಾಚರಾಃ॥೪೪॥ ತತಸ್ತು ತೇರಾಕ್ಷಸಪುಂಗವಾಸ್ತ್ರಯೋನಿಶಾಚರೈಃಪುತ್ರಶತೈಶ್ಚ ಸಂವೃತಾಃ । ಸುರಾನ್ ಸಹೇಂದ್ರಾನೃಷಿನಾಗ ದಾನವಾನ್ ಬಬಾಧಿರೇತಾನ್ ಬಲವೀರ್ಯದರ್ಪಿತಾಃ॥೪೫॥ ಜಗದ್ಭ್ರಮಂತೋನಿಲವದ್ದುರಾಸದಾರಣೇಚಮೃತ್ಯು ಪ್ರತಿಮಾಸ್ಸ ಮಾಹಿತಾಃ । ವರಪ್ರದಾನಾದತಿಗರ್ವಿತಾಭೃಶಂಕ್ರತುಕ್ರಿಯಾಣಾಂಪ್ರಶಮಂಕರಾಸ್ಸದಾ ... ... ॥೪೬॥

ಇತಿಶ್ರೀಮದುತ್ತರ ರಾಮಾಯಣೆ ಪಂಚಮಸ್ಸರ್ಗಃ.

ತೈರ್ವಧ್ಯಮಾನಾದೇವಾಶ್ಚ ಋಷಯಶ್ಚ ತಪೋಧನಾಃ । ಭಯಾರ್ತಾಶ್ಶರಣಂಜಗ್ಮುಃದೇವದೇವಂಮಹೇಶ್ವರಂ ॥೧॥ ಜಗತ್ಸೃಷ್ಟ್ಯಂತಕರ್ತಾರಮಜಮವ್ಯಕ್ತರೂಪಿಣಂ । ಆಧಾರಂಸರ್ವಲೋಕಾನಾಮಾರಾಧ್ಯಂಪರಮಂಗುರುಂ ॥೨॥ ತೇಸಮೇತ್ಯತುಕಾಮಾರಿಂತ್ರಿಪುರಘ್ನಂತ್ರಿಲೋಚನಂ। ಊಚುಃಪ್ರಾಂಜಲಯೋದೇವಾಭಯಗದ್ಗದಭಾಷಿಣಃ॥೩॥ಸುಕೇಶಪುತ್ರೈಃ

---

ತ್-ಯಾವ ಸಂತಾನವನ್ನು, ಜನಯಾಮಾಸ-ಹುಟ್ಟಿಸಿದನೋ' ಮಯಾ-ನನ್ನಿಂದ, ಕಥ್ಯಮಾನಂ-ಹೇಳಲ್ಪಡುತಿರುವ, ತದಪತ್ಯಂ-ಆ ಸಂತಾನವನ್ನು ತ್ವಂ-ನೀನು, ಶೃಣು-ಕೇಳು, ಅನಿಲಶ್ಚ-ಅನಿಲನೆಂಬುವನನ್ನು, ಅನಲಶ್ಚೈವ-ಅನಲನೆಂಬವನು, ಹರಃ-ಹರನು, ಸಂಪಾತಿಃ-ಸಂಪಾತಿಯು, ಎಂಬ- ಏತೆ-ಇವರು, ಮಾಲೆಯಾಃ-ಮಾಲಿಯಮಕ್ಕಳು, ತೆನಿಶಾಚರಾಃ-ಆರಾಕ್ಷಸರು,ವಿಭೀಷಣಾಮಾತ್ಯಾಃ-ವಿಭೀಷಣನ ಮಂತ್ರಿಗಳು॥೪೪॥ತತಃ-ಬಳಿಕ- ರಾಕ್ಷಸಪುಂಗವಾಃ-ರಾಕ್ಷಸಶ್ರೇಷ್ಠರಾದ,ಬಹುವೀರ್ಯದರ್ಪಿತಾಃ-ಬಹಳ ಪರಾಕ್ರಮದಿಂದ ಗರ್ವಿಷ್ಠರಾದ, ತೆತ್ರಯಸ್ತು-ಆ ಮೂರುಮಂದಿಯಾದರೆ, ನಿಶಾಚರೈಃ-ರಾಕ್ಷಸರಿಂದಲೂ, ಪುತ್ರಶತೈಶ್ಚ-ಅನೇಕಮಕ್ಕಳಿಂದಲುನ್ನು, ಸಂವೃತಾಃ-ಯುಕ್ತರಾಗಿ, ಸಹೇಂದ್ರಾನ್-ಇಂದ್ರನಿಂದೊಡಗೂಡಿದ, ಸುರಾನ್-ದೇವತೆಗಳಂನು, ತಾನ್ ಋಷಿನಾಗದಾನವಾನ್-ಪ್ರಸಿದ್ಧರಾದ ಋಷಿಗಳನು, ಸರ್ಪಗಳನ್ನು ದಾನವರನ್ನೂ ಸಹ, ಬಬಾಧಿರೆ-ಹಿಂಸಿಸಿದರು ॥ ೪೫ ॥ ಜಗತ್-ಲೋಕಗಳಲ್ಲಿ, ಭ್ರಮಂತಃ-ಸಂಚರಿಸುತಿರುವ, ಅನಿಲವತ್-ವಾಯುವಿನಂತೆ-ದುರಾಸದಾಃ-ಹೊಂದಲಸಾಧ್ಯರಾದ, ರಣೇಚ-ಕಾಳಗದಲ್ಲಿಯು ಮೃತ್ಯುಪ್ರತಿಮಾಃ-ಯಮನಿಗೆ ಸಮಾನರಾದ ಸಮಾಹಿತಾಃ-ಒಬ್ಬರಿಗೊಬ್ಬರು ಸೇರಿರುವ, ವರಪ್ರದಾನಾತ್-ಬ್ರಹ್ಮವರದ ದೆಸೆಯಿಂದಲು, ಭೃಶಂ-ಬಹಳವಾಗಿ,ಅತಿಗರ್ವಿತಾಃ-ಬಹಳಕೊಬ್ಬಿರುವ ಮೂವರು, ಕ್ರತುಕ್ರಿಯಾಣಾಂ-ಯಜ್ಞಾದಿಕ್ರಿಯಗಳಿಗೆ, ಪ್ರಶಮಂಕರಾಃ-ಶಾಂತಿಕರರು (ಅಂದರೆ ನಾಶಕರು) ಅಭವನ್-ಆದರು॥

—...⁕ಇತಿ ಶ್ರೀಮದುತ್ತರ ರಾಮಾಯಣೆ ಪಂಚಮಸ್ಸರ್ಗಃ.⁕...—

ತೈಃ-ಆಮೂರುಮಂದಿಯಿಂದ, ವಧ್ಯಮಾನಾಃ-ಕೊಲ್ಲಲ್ಪಡುತಿರುವ, ದೇವಾಶ್ಚ-ದೇವತೆಗಳುನ್ನು, ತಪೋಧನಾಃ-ತಪಸ್ಸೇಧನವಾಗುಳ್ಳ, ಋಷಯಶ್ಚ-ಋಷಿಗಳೂಸಹ, ಭಯಾರ್ತಾಃ-ಭಯವದೆಸೆಯಿಂದ ದೀನರಾದವರಾಗಿ, ದೇವದೇವಂ-ದೇವತೆಗಳಿಗೆ ದೇವನಾದ,ಜಗತ್ಸೃಷ್ಟ್ಯಂತಕರ್ತಾರಂ-ಜಗತ್- ಲೋಕಗಳ, ಸೃಷ್ಟ್ಯಂತಕರ್ತಾರಂ-ಸೃಷ್ಟಿಸ್ಥಿತಿಲಯಗಳಿಗೆ ಕರ್ತೃಭೂತನಾದ, ಅಜಂ-ಉತ್ಪತ್ತಿರಹಿತನಾದ, ಅವ್ಯಕ್ತರೂಪಿಣಂ-ಅವ್ಯಕ್ತ ಸ್ವರೂಪಿಯಾದ, ಸರ್ವಲೋಕಾನಾಂ-ಸಮಸ್ತ ಜನರಿಗು, ಆಧಾರಂ-ಮೂಲಭೂತನಾದ, ಆರಾಧ್ಯಂ-ಪೂಜಾರ್ಹನಾದ,ಪರಮಂಗುರುಂ-ಉತ್ತಮಗುರುವಾದ, ಮಹೇಶ್ವರಂ-ಶಿವನನ್ನು, ಶರಣಂ-ರಕ್ಷಕನನ್ನಾಗಿ, ಜಗ್ಮುಃ-ಹೊಂದಿದರು ॥೨॥ ತೇದೇವಾಃ-ಆ ದೇವತೆಗಳು, ಕಾಮಾರಿಂ-ಮನ್ಮಥವಿರೋಧಿಯಾದ, ತ್ರಿಲೋಚನಂ-ಮುಕ್ಕಣ್ಣನಾದ, ತ್ರಿಪುರಾರಿಂ-ತ್ರಿಪುರಾಸುರರಿಗೆ ಶತೃವಾದ, ಸದಾಶಿವನನ್ನು,ಸಮೇತ್ಯ-ಹೊಂದಿ, ಪ್ರಾಂಜಲಿಃ-ಅಂಜಲಿಬದ್ಧರಾಗಿ, ಭಯಗದ್ಗದಭಾಷಿಣಃ-

---

ಆಕೆಯಲ್ಲಿ,ಅನಲ,ಅನಿಲ, ಹರ,ಸಂಪಾತಿ, ಎಂಬ ಈ ನಾಲ್ವರು ಮಕ್ಕಳು ಉತ್ಪನ್ನರಾದರು, ಈ ನಾಲ್ಕು ಮಂದಿಯು ವಿಭೀಷಣನಿಗೆ ಮಂತ್ರಿಗಳಾಗೀಗಲು ಇರುತ್ತಾರೆ ॥೪೪॥ ಬಳಿಕ ಈಪರಿಯಾಗಿ ಉತ್ಪನ್ನರಾದ ಅನೇಕ ಪುತ್ರರಿಂದಲು ಮತ್ತೆ ಇತರ ರಾಕ್ಷಸರಿಂದಲು ಸಹ ಪರಿವೃತರಾದ ಆಮಾಲಿಸುಮಾಲಿ ಮಾಲ್ಯವಂತರೆಂಬ ಮೂರುಮಂದಿ ರಾಕ್ಷಸೋತ್ತಮರು ಬಲದಿಂದಲು ವೀರ್ಯರಿಂದಲು ಗರ್ವಿತರಾಗಿ, ಇಂದ್ರನಿಂದೊಡಗೂಡಿದ ಅಂಥ ದೇವತೆಗಳನ್ನು ಋಷಿಗಳನ್ನು ನಾಗಗಳನ್ನು ದಾನವರನ್ನು ಸಹ ಲಕ್ಷ್ಯವಿಡದೆ ಬಾಧಿಸುತಿದ್ದರು॥ಜಂಝಾಮಾರುತದಂತೆ ಜಗತ್ತಿನಲ್ಲಿತಿರುಗುವವರಾಗಿಯು ಕಾಳಗಗಳಲ್ಲಿ ಯಮನಿಗೆ ಸಮಾನರಾಗಿಯು,ಪ್ರತಿಭಟಸ ಲಸಾಧ್ಯರಾಗಿಯು ಮತ್ತೆ ಬ್ರಹ್ಮದೇವರ ವರಪ್ರದಾನದಿಂದಲು ಬಹಳ ಕೊಬ್ಬಿದವರಾಗಿಯು ಇರುವ ಆ ಮೂರುಮಂದಿ ರಾಕ್ಷಸರು ಯಜ್ಞಾದಿ ಕರ್ಮಗಳಿಗೆ ನಾಶಕರರಾಗಿ ನಿಂತರು.

ಇಂತುಶ್ರೀಮ ದುತ್ತರ ರಾಮಾಯಣದೊಳ್ ಪಂಚಮಸರ್ಗಂ ಮುಗಿದು.

ಆ ರಕ್ಕಸರಿಂದ ಕೊಲ್ಲಲ್ಪಡುತಿರುವ ದೇವತೆಗಳು, ಋಷಿಗಳು ಸಹ ಬಹಳಭಯದಿಂ ದಂಜಿದವರಾಗಿ, ದೇವದೇವೋತ್ತಮನಾದ ಪರಮೇಶ್ವರನನ್ನು ಶರಣವಾಗಿ ಹೊಂದಿದರು ॥೧॥ ಆ ದೇವತೆಗಳೆಲ್ಲರು ಶೇರಿ ಅಂಜಲಿ ಬದ್ಧರಾಗಿಬಂದು, ಜಗತ್ತುಗಳ ಸೃಷ್ಟಿಸ್ಥಿತಿ, ಲಯಗಳಿಗೆ ಕಾರಣೀಭೂತನಾಗಿಯು, ಜನ್ಮರಹಿತನಾಗಿಯೂ, ಅವ್ಯಕ್ತ ರೂಪಿಯಾಗಿಯು, ಲೋಕಗಳಿಗೆಲ್ಲ ಆಧಾರ ಭೂತನಾಗಿಯು, ಸರ್ವರಿಗು ಪೂಜಾರ್ಹನಾಗಿಯು ಪರಮಗುರುವಾಗಿಯು, ಕಾಮಾರಿಯಾಗಿಯು, ತ್ರಿಪುರಾಸುರ ಸಂಹಾರಕನಾಗಿಯು ಇರುವ ಮುಕ್ಕಣ್ಣನನ್ನು ಹೊಂದಿ ಭಯದಿಂದ ಗದ್ಗದ ಧ್ವನಿಯುಳ್ಳ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭಗವನ್ ಪಿತಾಮಹವರೋದ್ಧತೈಃ । ಪ್ರಜಾಧ್ಯಕ್ಷಪ್ರಜಾಸ್ಸರ್ವಾ ಬಾಧ್ಯಂತೇರಿಪುಘಾತಕ ॥೪॥ ಶರಣ್ಯಾನ್ಯಶರಣ್ಯಾನಿ ಹ್ಯಾಶ್ರಮಾಣಿಕೃತಾನಿನಃ । ಸ್ವರ್ಗಾಚ್ಚ ಚ್ಯಾವಿತಶ್ಶಕ್ರಸ್ಸ್ವರ್ಗೇಕ್ರೀಡಂತಿಶಕ್ರವತ ॥ ೫॥ ಅಹಂವಿಷ್ಣುರಹಂರುದ್ರೋ ಬ್ರಹ್ಮಾಹಂದೇವರಾಡಹಂ । ಅಹಂಯಮೋಹಂವರುಣಶ್ಚಂದ್ರೋಹಂರವಿರಪ್ಯಹಂ ॥೬॥ ಇತಿಮಾಲೀಸುಮಾಲೀಚಮಾಲ್ಯವಾಂಶ್ಚೈವರಾಕ್ಷಸಾಃ।(* ಭಯಂಕರಾಮಹಾದೇವವರದಾನೇನಗರ್ವಿತಾಃ )॥ಬಾಧಂತೆಸಮರೋದ್ಧರ್ಷಾದ್ಯೇಚತೇಷಾಂಪ್ರರಸ್ಸರಾಃ ॥೭॥ ತನ್ನೋದೇವಭಯಾರ್ತಾನಾಮಭಯಂದಾತುಮರ್ಹಸಿ । ಅಶಿವಂವಪುರಾಸ್ಥಾಯಜಹಿದೈವತಕಂಟಕಾನ್ ॥ ಇತ್ಯುಕ್ತಸ್ತುಸುರೈಸ್ಸರ್ವೈಃಕಪರ್ದೀನೀಲಲೋಹಿತಃ। ಸುಕೇಶಂಪ್ರತಿಸಾಪೇಕ್ಷಃಪ್ರಾಹದೇವಗಣಾನ್ ಪ್ರಭುಃ॥೯॥ ನಾಹಂತಾನ್ನಿಹನಿಷ್ಯಾಮಿ ಅವಧ್ಯಾಮಮತೇಸುರಾಃ । ಕಿಂತುಮಂತ್ರಂಪ್ರದಾಸ್ಯಾಮಿಯೋವೈತಾನ್ ನಿಹನಿಷ್ಯತಿ ॥೧೦॥ ಏತಮೇವ

ಭಯದಿಂದ ವಿಸ್ವರವಾಗಿ ಮಾತನಾಡುವವರಾಗಿ, ಊಚುಃ-ಪೇಳಿದರು ॥ ೩ ॥ ಹೆ ಪ್ರಜಾಧ್ಯಕ್ಷ-ಎಲೈ ಪ್ರಜಾಧಿಪತಿಯೆ, ಹೆಭಗವನ್-ಎಲೈ ಷಡ್ಗುಣೈಶ್ವರ್ಯಸಂಪನ್ನನೆ, ಹೆರಿಪುಘಾತಕ- ಎಲೈ ಶತ್ರುನಾಶಕನೆ, ಸರ್ವಾಃಪ್ರಜಾಃ-ಸಮಸ್ತಪ್ರಜೆಗಳು, ಪಿತಾಮಹವರೋದ್ಧತೈಃ-ಬ್ರಹ್ಮನ ವರದಿಂದ ಕೊಬ್ಬಿದವರಾದ, ಸುಕೇಶಪುತ್ರೈಃ-ಸುಕೇಶನಮಕ್ಕಳಿಂದ, ಬಾಧ್ಯಂತೆ-ಬಾಧಿಸಲ್ಪಡುತ್ತಾರೆ ॥೪॥ ನಃ-ನಮ್ಮಿಗೆ, ಶರಣ್ಯಾನಿ-ರಕ್ಷಕವಾದ, ಆಶ್ರಮಾಣಿ-ಅಧಿಷ್ಠಾನಗಳು ಅಶರಣ್ಯಾನಿ-ದಿಕ್ಕಿಲ್ಲದವುಗಳಾಗಿ, ಕೃತಾನಿ-ಮಾಡಲ್ಪಟ್ಟವು, ಸ್ವರ್ಗಾತ್-ಸ್ವರ್ಗದದೆಸೆಯಿಂದ, ಶಕ್ರಃ-ಇಂದ್ರನು, ಚ್ಯಾವಿತಃ-ತಳ್ಳಪಡಿಮಾಡಲ್ಪಟ್ಟನು , ಸ್ವರ್ಗೆ-ಸ್ವರ್ಗದಲ್ಲಿ, ಶಕ್ರವತ್-ಇಂದ್ರನಂತೆ, ಕ್ರೀಡಂತಿ-ವಿಹರಿಸುತ್ತಾರೆ ॥ ೫ ॥ ಅಹಂ-ನಾನು, ವಿಷ್ಣುಃ-ವಿಷ್ಣುವು, ಅಹಂ-ನಾನು, ರುದ್ರಃ-ರುದ್ರನು, ಅಹಂ-ನಾನು, ಬ್ರಹ್ಮಾ-ಬ್ರಹ್ಮನು, ಅಹಂ-ನಾನು, ದೇವರಾಟ್-ದೇವರಾಜನು, ಅಹಂ-ನಾನು, ಯಮಶ್ಚ-ಯಮನು, ಅಹಂ-ನಾನು, ವರುಣಃ-ವರುಣನು,ಅಹಂ-ನಾನು,ಚಂದ್ರಶ್ಚ - ಚಂದ್ರನು, ಅಹಂ-ನಾನು, ರವಿರಪಿ-ಸೂರ್ಯನೂ,ಇತಿ-ಇಂತೆಂದು, ತೇಷಾಂ-ಆ ಅಸುರರೊಳಗೆ, ಯೆ-ಯಾರು, ಪುರಸ್ಸರಾಃ-ಮುಖಂಡರೊ, ತೆ-ಅಂಥ,ಮಾಲೀ-ಮಾಲಿಯು,ಸುಮಾಲೀಚ-ಸುಮಾಲಿಯು, ಮಾಲ್ಯವಾಂಶ್ಚೈವ-ಮಾಲ್ಯವಂತನೂಯೆಂಬ,ರಾಕ್ಷಸಾಃ-ರಾಕ್ಷಸರು,ಸಮರೋದ್ಧರ್ಷಾತ್-ಯುದ್ಧದಲ್ಲಿ ಗರ್ವದದೆಸೆಯಿಂದ, ಬಾಧಂತೆ-ಪೀಡಿಸುತ್ತಾರೆ ॥೭॥ಹೆದೇವ-ಎಲೈ ಸ್ವಾಮಿಯೆ, ತತ್-ಆಕಾರಣದ ದೆಸೆಯಿಂದ,ಭಯಾರ್ತಾನಾಂ-ಭಯಾಕ್ರಾಂತರಾದ, ನಃ-ನಮಗೆ, ಅಭಯಂ-ಅಭಯವನ್ನು, ದಾತುಂ-ಕೊಡುವದಕ್ಕೆ, ಅರ್ಹಸಿ-ಯೋಗ್ಯನಾಗಿರುತ್ತಿ, ಅಶಿವಂ-ಸೌಮ್ಯವಾಗದಿರುವ, ವಪುಃ-ಶರೀರವನ್ನು, ಆಸ್ಥಾಯ-ಹೊಂದಿ, ದೈವಕಂಟಕಾನ್-ದೇವಬಾಧಕರನ್ನು, ಜಹಿ-ನಿಗ್ರಹಿಸು ॥ ೮ ॥ ಇತಿ-ಈ ಪರಿಯಾಗಿ, ಸರ್ವೈಸ್ಸುರೈಃ-ಸಮಸ್ತ ದೇವತೆಗಳಿಂದಲು, ಉಕ್ತಃ-ಪ್ರಾರ್ಥಿಸಲ್ಪಟ್ಟ, ನೀಲಲೋಹಿತಃ-ನೀಲಲೋಹಿತನೆಂಬ, ಪ್ರಭುಃ-ಸಮರ್ಥನಾದ, ಕಪರ್ದೀ- ಪರಮೇಶ್ವರನು, ಸುಕೇಶಂಪ್ರತಿ-ಸುಕೇಶನಂಕುರಿತು, ಸಾಪೇಕ್ಷಃ-ಪಕ್ಷಪಾತವುಳ್ಳವನಾಗಿ, ದೇವಗಣಾನ್-ದೇವಸಂಘಗಳನ್ನು ಕುರಿತು, ಪ್ರಾಹ-ಹೇಳಿದನು ॥ ೯ ॥ ಹೆಸುರಾಃ-ಎಲೈ ದೇವತೆಗಳಿರಾ, ಅಹಂ-ನಾನು, ತಾನ್- ಅವರನ್ನು, ನನಿಹನಿಷ್ಯಾಮಿ-ಕೊಲ್ಲುವನಲ್ಲ, ಮಮ-ನನಗೆ, ತೆ-ಆ ರಾಕ್ಷಸರು, ಅವಧ್ಯಾಃ-ವಧಾನರ್ಹರು, ಕಿಂತು-ಮತ್ತೇನಂದರೆ, ಮಂತ್ರಂ-ಆಲೋಚನೆಯನ್ನು, ಪ್ರದಾಸ್ಯಾಮಿ-ಕೊಡುವೆನು, ಯೋವೈ-ಯಾವನಾದರೆ, ತಾನ್-ಅವರನ್ನು, ನಿಹನಿಷ್ಯತಿ-ಸಂಹರಿಸುವನೋ ॥ ೧೦ ॥ ಹೆ ಸುರರ್ಷಯಃ-ಎಲೈ ದೇವರ್ಷಿಗಳಿರಾ, ಏತಂಸಮುದ್ಯೋಗಮೇವ-ಈ ಪ್ರಯತ್ನವನ್ನೇ, ಪುರಸ್ಕೃತ್ಯ-ಮೊದಲುಮಾಡಿ, ವಿಷ್ಣುಂ-ಶ್ರೀಮಹಾವಿಷ್ಣುವಿನನ್ನು, ಶರಣಂ-ರಕ್ಷಕನನ್ನಾಗಿ, ಗಚ್ಛಧ್ವಂ-ಹೊಂದಿರಿ, ಪ್ರಭುಃ-ಸಮರ್ಥನಾದ, ಸಃ-ಆ ವಿಷ್ಣುವು, ತಾನ್-ಅವರ

ವರಾಗಿಂತೆಂದು ಬೇಡಿಕೊಂಡರು ॥೩॥ ಎಲೈ ಪ್ರಜಾಧ್ಯಕ್ಷನಾದ ಭಗವಂತನೆ! ಬ್ರಹ್ಮದೇವರ ವರದಿಂದ ಕೊಬ್ಬಿದವರಾದ ಆಸುಕೇಶನ ಕುಮಾರರು ಪ್ರಜೆಗಳನ್ನೆಲ್ಲ ಭಾಧಿಸುತಿರುವದಲ್ಲದೆ, ನಮ್ಮಗಳಿ ಗಾವಾಸಸ್ಥಾನಗಳಾದ ಆ ಶ್ರಮಗಳನ್ನೆಲ್ಲ ಹಾಳುಮಾಡಿ, ದೇವೇಂದ್ರನನ್ನು ಸ್ವರ್ಗದಿಂದತರುಬಿ ಇಂದ್ರನೋಪಾದಿಯಲ್ಲಿ ಸ್ವರ್ಗದೊಳ್ ಕ್ರೀಡಿಸುತಿಧಾರೆ ॥೫॥ ಎಲೈ ಮಹಾದೇವನೆ! ಆ ರಾಕ್ಷಸರಲ್ಲಿ ಮುಖಂಡರಾದ ಮಾಲಿ, ಸುಮಾಲಿ, ಮಾಲ್ಯವಂತನೇಮೊಂತಾದ ರಾಕ್ಷಸರು ಯುದ್ಧದಲ್ಲಿನ ಗರ್ವಾತಿಶಯದಿಂದ ನಾನೆ ರುದ್ರನು ನಾನೆ ವಿಷ್ಣುವು, ನಾನೆ ಬ್ರಹ್ಮ, ನಾನೆ ಯಮನು, ನಾನೆ ವರುಣನು, ನಾನೆ ಚಂದ್ರನು, ನಾನೆ ಸೂರ್ಯನು ಎಂದು ಕೂಗುತಿರುವರಾಗಿ ಮತ್ತೆ ಬ್ರಹ್ಮನವರ ಪ್ರದಾನದಿಂದಲು ಕಡು ಕೊಬ್ಬಿದವರಾಗಿ ಲೋಕಗಳನ್ನೆಲ್ಲ ಬಾಧಿಸುತಿಧಾರೆ ॥೭॥ ಎಲೈ ದೇವದೇವೋತ್ತಮನಾದ ಪರಮೇಶ್ವರನೆ! ಭಯಾರ್ತರಾದ ನಮಗೆ ಅಭಯವನ್ನಿಯ್ಯುವದಕ್ಕೋಸ್ಕರವಾಗಿ ಕಡುಭಯಂಕರಾ ಕಾರವಂಹೊಂದಿ ಮಹದಾರ್ಭಟವಂ ಗೈದು ಲೋಕ ಕಂಟಕರಾದ ಆ ನಿಶಾಟರ ನ್ನಟ್ಟಕುಟ್ಟಿ ದಿಕ್ ತಟಂಶೇರಿಸಿದರೆ ನಮ್ಮ ಸಂಕಟವು ನಿವೃತ್ತಿಯಾಗಿ ನಿರಾಟಂಕವಾಗಿರುವೆವೆಂದು ದೇವತೆಗಳು ಬೇಡಿದರು ॥೮॥ ಈ ಪರಿಯಾಗಿ ಅವರಿಂದ ಪ್ರಾರ್ಥಿಸಲ್ಪಟ್ಟ ಪರಮೇಶ್ವರನು ಸುಕೇಶನ ವಿಷಯವಾಗಿ ಪಕ್ಷಪಾತ ಮುಳ್ಳವನಾಗಿ ದೇವತಾಬೃಂದವಂ ಕುರಿತಿಂತೆಂದನು॥೯॥ ಎಲೈ ದೇವತೆಗಳಿರ್‍ಯಾ! ಆರಕ್ಕಸರು ನನಗೆ ಅವಧ್ಯರಾದಕಾರಣ ನಾನವರಂ ಕೊಲ್ಲುವದಿಲ್ಲ, ಯಾರು ಅವರಂ ಕೊಲ್ಲುವನೋ ಅಂಥವನಂ ಕುರಿತು ಯೋಚನೆಯಂ ಪೇಳುವೆನು ॥೧೦॥ ಎಲೈ ದೇವರ್ಷಿಗಳಿರಾ ! ಈ ಪ್ರಯತ್ನವಂ ಪ್ರಥಮತಃ ಮಾಡಿ ಶ್ರೀ ಮಹಾವಿ

* ಮಹಾದೇವವರದಾನೇನ-ಈಶ್ವರ ವರಪ್ರದಾನದಿಂದ, ಗರ್ವಿತಾಃ-ಗರ್ವಿಷ್ಠರಾದ, ಭಯಂಕರಾಃ-ಭಯವನ್ನುಂಟುಮಾಡುವ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಮುದ್ಯೋಗಂಪುರಸ್ಕೃತ್ಯಸುರರ್ಷಯಃ । ಗಚ್ಛಧ್ವಂಶರಣಂವಿಷ್ಣುಂಹನಿಷ್ಯತಿಸತಾನ್ಪ್ರಭುಃ ॥೧೧॥ ತತಸ್ತೇಜಯಶಬ್ದೇನಪ್ರತಿನಂದ್ಯಮಹೇಶ್ವರಂ । ವಿಷ್ಣೋಸ್ಸಮೀಪಮಾಜಗ್ಮುರ್ನಿಶಾಚರಭಯಾರ್ದಿತಾಃ ॥೧೨॥ ಶಂಖಚಕ್ರಧರಂದೇವಂಪೀತವಾಸಸಮಚ್ಯುತಂ । ಪ್ರಣಮ್ಯಜಗತಾಂನಾಥಂವಾಕ್ಯಮೂಚುರ್ದಿವೌಕಸಃ ॥೧೩॥ ಸುಕೇಶತನಯೈರ್ದೇವ ತ್ರಿಭಿಸ್ತ್ರೇತಾಗ್ನಿಸನ್ನಿಭೈಃ । ಆಕ್ರಮ್ಯವರದಾನೇನಸ್ಥಾನಾನ್ಯಪಹೃತಾನಿನಃ ॥೧೪॥ ಲಂಕಾನಾಮಪುರೀದುರ್ಗಾತ್ರಿಕೂಟಶಿಖರೇಸ್ಥಿತಾ । ತತ್ರಸ್ಥಿತಾಃಪ್ರಬಾಧಂತೇಸರ್ವಾನ್ನಃಕ್ಷಣದಾಚರಾಃ ॥೧೫॥ ಸತ್ವಮಸ್ಮತ್ಪ್ರಿಯಾರ್ಥಂತುಜಹಿತಾನ್ಮಧುಸೂದನ । ಶರಣಂತ್ವಾಂವಯಂಪ್ರಾಪ್ತಾಗತಿರ್ಭವಸುರೇಶ್ವರ ॥೧೬॥ ರಾಕ್ಷಸಾನ್ಸಮರೇದುಷ್ಟಾನ್ಸಾನುಬಂಧಾನ್ವರೋದ್ಧತಾನ್ । ಚಕ್ರಕೃತ್ತಾಸ್ಯಕಮಲಾನ್ನಿವೇದಯಯಮಾಯವೈ ॥೧೭॥ ಭಯೇಷ್ವಭಯದೋಸ್ಮಾಕಂನಾನ್ಯೋಸ್ತಿಭವತಾವಿನಾ । ನುದತ್ವಂನೋಭಯಂದೇವನೀಹಾರಮಿವಭಾಸ್ಕರಃ ॥೧೮॥ ಇತ್ಯೇವಂದೈವತೈರುಕ್ತೋದೇವದೇವೋಜನಾರ್ದನಃ । ಅಭಯಂಭಯದೋ

---

ನ್ನು, ಹನಿಷ್ಯತಿ–ಸಂಹರಿಸುವನು ॥ ೧೧ ॥ ತತಃ–ಬಳಿಕ, ನಿಶಾಚರಭಯಾರ್ದಿತಾಃ–ರಾಕ್ಷಸಭೀತಿಯಿಂದ ಹೆದರಿದ, ತೇ–ಆ ದೇವರ್ಷಿಗಳು, ಜಯಶಬ್ದೇನ–ಜಯಶಬ್ದೋಚ್ಚಾರಣೆಯಿಂದ, ಮಹೇಶ್ವರಂ–ಶಿವನನ್ನು, ಪ್ರತಿನಂದ್ಯ–ಸಂತೋಷಗೊಳಿಸಿ, ವಿಷ್ಣೋಃ–ಶ್ರೀ ಮಹಾವಿಷ್ಣುವಿನ, ಸಮೀಪಂ–ಬಳಿಯಂನು ಕುರಿತು, ಆಜಗ್ಮುಃ–ಬಂದರು ॥ ೧೨ ॥ ದಿವೌಕಸಃ–ದೇವತೆಗಳು, ಶಂಖಚಕ್ರಧರಂ–ಶಂಖಚಕ್ರಧಾರಿಯಾದ, ಪೀತವಾಸಸಂ– ಪೀತಾಂಬರಧಾರಿಯಾದ, ಅಚ್ಯುತಂ–ಚ್ಯುತಿರಹಿತನಾದ, ಜಗತಾಂನಾಥಂ–ಜಗತ್ಪಾಲಕನಾದ, ದೇವಂ–ವಿಷ್ಣುವಿನನ್ನು, ಪ್ರಣಮ್ಯ–ವಂದಿಸಿ, ವಾಕ್ಯಂ–ಮಾತನ್ನು, ಊಚುಃ–ಹೇಳಿದರು, ಹೇದೇವ–ಎಲೈಸ್ವಾಮಿಯೆ, ತ್ರೇತಾಗ್ನಿಸನ್ನಿಭೈಃ–ಅಗ್ನಿತ್ರಯಕ್ಕೆ ಸದೃಶರಾದ, ಸುಕೇಶತನಯೈಃ–ಸುಕೇಶನ ಪುತ್ರರಾದ, ತ್ರಿಭಿಃ–ಮೂರುಮಂದಿಂದ, ವರದಾನೇನ–ಬ್ರಹ್ಮವರಪ್ರದಾನದಿಂದ, ನಃ–ನಮ್ಮ, ಸ್ಥಾನಾನಿ–ನಿವಾಸಸ್ಥಲಗಳು, ಆಕ್ರಮ್ಯ–ಆಕ್ರಮಿಸಿ, ಅಪಹೃತಾನಿ–ಅಪಹರಿಸಲ್ಪಟ್ಟವು ॥೧೪॥ ತ್ರಿಕೂಟಶಿಖರೇ–ತ್ರಿಕೂಟಪರ್ವತದ ಶೃಂಗದಲ್ಲಿ, ಸ್ಥಿತಾ–ಇರುತಿರುವ, ಲಂಕಾನಾಮ–ಲಂಕೆಯೆಂಬ, ಪುರೀ–ಪಟ್ಟಣವು, ದುರ್ಗಾ– ಅಗಮ್ಯವಾಗಿಧೆ, ತತ್ರ–ಆ ಪುರಿಯಲ್ಲಿ, ಸ್ಥಿತಾಃ–ಇರುತಿರುವ, ಕ್ಷಣದಾಚರಾಃ–ರಾಕ್ಷಸರು, ಸರ್ವಾನ್–ಸಮಸ್ತರಾದ, ನಃ–ನಮ್ಮನ್ನು, ಪ್ರಬಾಧಂತೇ– ಬಾಧಿಸುತ್ತಾರೆ ॥ ೧೫ ॥ ಹೇ ಮಧುಸೂದನ–ಎಲೈ ಮಧುಸೂದನನೆ, ಸತ್ವಂ–ಆ ಯಾನೀನು, ಅಸ್ಮತ್ಪ್ರಿಯಾರ್ಥಂತು–ನಮ್ಮ ಇಷ್ಟಕ್ಕೋಸ್ಕರ, ತಾನ್–ಆ ರಾಕ್ಷಸರನ್ನು, ಜಹಿ–ಸಂಹರಿಸು, ಹೇಸುರೇಶ್ವರ–ಎಲೈ ಸುರನಾಥನೆ, ವಯಂ–ನಾವು, ತ್ವಾಂ–ನಿನ್ನನ್ನು, ಶರಣಂ–ರಕ್ಷಕನನ್ನಾಗಿ, ಪ್ರಾಪ್ತಾಃ–ಹೊಂದಿಧೇವೆ, ತ್ವಂ–ನೀನು, ಗತಿಃ–ಶರಣವು, ಭವ–ಆಗು ॥ ೧೬ ॥ ಭಯೇಷು–ಭಯಕಾಲಗಳಲ್ಲಿ, ಅಸ್ಮಾಕಂ–ನಮಗೆ, ಅಭಯದಃ–ಅಭಯವನ್ನೀಯುವ ನೀನು, ಸಮರೇ–ಯುದ್ಧದಲ್ಲಿ, ದುಷ್ಟಾನ್–ದುಷ್ಟರಾದ, ಸಾನುಬಂಧಾನ್–ಬಂಧುಸಹಿತರಾದ, ವರೋದ್ಧತಾನ್– ವರದಿಂದ ಗರ್ವಿತರಾದ, ರಾಕ್ಷಸಾನ್–ರಾಕ್ಷಸರನ್ನು, ಚಕ್ರಕೃತ್ತಾಸ್ಯಕಮಲಾನ್–ಚಕ್ರ–ಚಕ್ರದಿಂದ, ಕೃತ್ತ–ಕತ್ತರಿಸಲ್ಪಟ್ಟ, ಆಸ್ಯಕಮಲಾನ್–ಮುಖಕಮಲಗಳುಳ್ಳವರನ್ನಾಗಿ, ಯಮಾಯ–ಯಮನಿಗೋಸ್ಕರ, ನಿವೇದಯ–ಅಧೀನಮಾಡು ॥ ೧೭ ॥ ಹೇದೇವ–ಎಲೈ ಸ್ವಾಮಿಯೆ, ಭಯೇಷು–ಭಯಕಾಲಗಳಲ್ಲಿ, ಅಸ್ಮಾಕಂ–ನಮಗೆ–ಅಭಯದಃ–ಅಭಯದಾಯಕನು, ಭವತಾವಿನಾ–ನಿನ್ನ ವಿನಹಾ, ಅನ್ಯಃ–ಮತ್ತೊಬ್ಬನು, ನಾಸ್ತಿ – ಇಲ್ಲ, ತ್ವಂ–ನೀನು, ನಃ–ನಮ್ಮ, ಭಯಂ–ಭೀತಿಯನ್ನು, ಭಾಸ್ಕರಃ–ಸೂರ್ಯನು, ನೀಹಾರಮಿವ–ಮಂಜಿನಂತೆ, ನುದ–ಪರಿಹರಿಸು ॥ ೧೮ ॥ ಇತ್ಯೇವಂ–ಈ ಪರಿಯಾಗಿ, ದೈವತೈಃ–ದೇವತೆಗಳಿಂದ, ಉಕ್ತಃ–ಹೇಳಲ್ಪಟ್ಟ, ಅರೀಣಾಂ–ಶತ್ರುಗಳಿಗೆ, ಭಯದಃ–ಭೀತಿದಾಯಕನಾದ, ದೇವದೇವಃ–ದೇವತೆಗಳಿಗೆಲ್ಲ ದೇವನಾದ, ಜನಾರ್ದನಃ–ವಿಷ್ಣುವು, ಅಭಯಂ–ಅಭಯವನ್ನು, ದತ್ವಾ–ಕೊಟ್ಟು, ದೇವಾನ್–ದೇವತೆಗ

---

ಷ್ಣುವಿನನ್ನು ಶರಣವಾಗಿ ಹೊಂದಿರಿ ಆತನಾರಾಕ್ಷಸರಂ ಸಂಹರಿಸುವನು ॥೧೧॥ ಈ ಪರಿಯಾಗಿ ಪರಮೇಶ್ವರನಿಂದ ಹೇಳಲ್ಪಟ್ಟ ಆ ಸುರರ್ಷಿಗಳು ಜಯಘೋಷಯಿಂದ ಸದಾಶಿವನಂ ಸಂತೋಷಗೊಳಿಸಿ ವಿಷ್ಣುವಿನ ಬಳಿಗೆ ಬಂದರು ॥೧೨॥ ಆ ದೇವತೆಗಳೆಲ್ಲರು, ಶಂಖಚಕ್ರಗದಾಧಾರಿಯಾಗಿಯು, ಪೀತಾಂಬರಧಾರಿಯಾಗಿಯು, ಶಾಶ್ವತನಾಗಿಯು, ಜಗತ್ಪರಿಪಾಲಕನಾಗಿಯು ಇರುವ ಶ್ರೀ ಮಹಾವಿಷ್ಣುವಿನನ್ನು ಕುರಿತು ಕೈಮುಗಿದವರಾಗಿಂತೆಂದರಿಕೆ ಮಾಡಿಕೊಂಡರು ॥೧೩॥ ಎಲೈ ಸ್ವಾಮಿಯೆ ! ಬ್ರಹ್ಮದೇವರವರ ಪ್ರಸಾದದಿಂದ ಕಡು ಕೊಬ್ಬಿದವರಾದ ಆ ಸುಕೇಶನ ಕುಮಾರರು ತ್ರಿಕೂಟಪರ್ವತದ ಶಿಖರಸ್ಥಮಾದ ಲಂಕಾನಾಮಕವಾದಪುರದಲ್ಲಿ ನೆಲಗೊಂಡಿರುವರಾಗಿ, ನಮ್ಮ ನಮ್ಮ ಸ್ಥಾನಗಳನ್ನೆಲ್ಲ ಅಪಹರಿಸುತ್ತಾ ಬಹು ಬಾಧೆಯನ್ನಿಡುತಿರುವರು, ಎಲೈ ಮಧುಸೂದನನೆ ! ನಮ್ಮಗಳ ಪ್ರೀತಿಗೋಸ್ಕರವಾಗಿ ಅವರಂ ನಿಗ್ರಹಿಸು, ನೀನೇಗತಿಯೆಂದು ನಿನ್ನನ್ನೆ ಶರಣವಾಗಿ ಹೊಂದಿಧೇವೆ ನಿನ್ನಂತೊರದು ನಮ್ಮಿಗ್ಯಾರು ಶರಣರಿಲ್ಲ, ಆದಕಾರಣ ವರೋದ್ಧತರಾದ ಮತ್ತೆ ಬಂಧು ಸಹಿತರಾದ ಆ ದುಷ್ಟ ರಕ್ಕಸರಂ ಚಕ್ರದಿಂದ ಕತ್ತರಿಸಿ ಯಮಗಧೀನರನ್ನಾಗಿ ಮಾಡು, ಎಲೈ ಚತುರ್ಭುಜನೆ ! ಭಯಕಾಲಗಳಲ್ಲಿ ಅಭಯಪ್ರದಾಯಕನಾದ ನೀನು,ಸೂರ್ಯನು ಮಂಜನನ್ನು ಭಂಜಿಸುವಂತೆ ನಮ್ಮಂಜಿಕೆಯನ್ನು ಭಂಜಿಸು ॥೧೮॥ ಈ ಪರಿಯಾಗಿ ಪೇಳಲ್ಪಟ್ಟ ರಿಪುಭಯಂಕರನಾದ ನಾರಾಯಣನು ದೇವತೆಗಳಿಗಭಯವನ್ನಿತ್ತು ಇಂತೆಂದನು ॥೧೯॥ ಈ ಶಾನವರ ಗರ್ವಿತನಾದ ಆ ಸುಕೇಶನೆಂಬ ರಕ್ಕಸನನ್ನು ಮತ್ತೆ ಅವನ ಮಕ್ಕಳನ್ನು ಅಪರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರೀಣಾಂದತ್ವಾದೇವಾನುವಾಚಹ ॥೧೯॥ ಸುಕೇಶಂರಾಕ್ಷಸಂಜಾನೇಈಶಾನವರದರ್ಪಿತಂ । ತಂಚಾಸ್ಯತನಯಾನ್ಜಾನೇಯೇ ಷಾಂಜ್ಯೇಷ್ಠಸ್ಸಮಾಲ್ಯವಾನ್ ॥೨೦॥ ತಾನಹಂಸಮತಿಕ್ರಾಂತಮರ್ಯಾದಾನ್ರಾಕ್ಷಸಾಧಮಾನ್ । ನಿಹನಿಷ್ಯಾಮಿಸಂಕ್ರುದ್ಧಸ್ಸುರಾಭವತವಿಜ್ವರಾಃ ॥೨೧॥ ಇತ್ಯುಕ್ತಾಸ್ತೆಸುರಾಸ್ಸರ್ವೆವಿಷ್ಣುನಾಪ್ರಭವಿಷ್ಣುನಾ । ಯಥಾವಾಸಂಯಯುರ್ಹೃಷ್ಟಾಃಪ್ರಶಂಸಂತೋಜನಾರ್ದನಮ್ ॥೨೨॥ ವಿಬುಧಾನಾಂಸಮುದ್ಯೋಗಂಮಾಲ್ಯವಾನ್ಸನಿಶಾಚರಃ । ಶ್ರುತ್ವಾತೌಭ್ರಾತರೌವೀರಾವಿದಂವಚನಮಬ್ರವೀತ್ ॥೨೩॥ ಅಮರಾಋಷಯಶ್ಚೈವಸಂಗಮ್ಯಕಿಲಶಂಕರಂ । ಅಸ್ಮದ್ವಧಂಪರೀಪ್ಸಂತಇದಂವಚನಮಬ್ರುವನ್ ॥೨೪॥ ಸುಕೇಶತನಯಾದೇವವರದಾನಬಲೋದ್ಧತಾಃ । ಬಾಧಂತೆಸ್ಮಾನ್ಸಮುದ್ರಪ್ತಾ ಘೋರರೂಪಾಃಪದೇಪದೇ ॥೨೫॥ ರಾಕ್ಷಸೈರಭಿಭೂತಾಸ್ತುನಶಕ್ತಾಸ್ಮಃಪ್ರಜಾಪತೇ । ಸ್ವೇಷುಸದ್ಮಸುಸಂಸ್ಥಾತುಂಭಯಾತ್ತೆಷಾಂದುರಾತ್ಮನಾಮ್ ॥೨೬॥ ತದಸ್ಮಾಕಂಹಿತಾರ್ಥಾಯಜಹಿತಾಂಶ್ಚತ್ರಿಲೋಚನ । ರಾಕ್ಷಸಾನ್ಹುಂಕೃತೆನೈವದಹಪ್ರದಹತಾಂವರ ॥೨೭॥ ಇತ್ಯೇವಂತ್ರಿದಶೈರುಕ್ತಂನಿಶಮ್ಯಾಂಧಕಸೂದನಃ । ಶಿರಃಕರಂಚಧುನ್ವಾನಃಇದಂವಚನಮಬ್ರವೀತ್ ॥೨೮॥ ಅವಧ್ಯಾ ಮ

---

ಳನ್ನು ಕುರಿತು, ಉವಾಚಹ-ಹೇಳಿದನು ॥ ೧೯ ॥ ಹೆಸುರಾಃ-ಎಲೈ ದೇವತೆಗಳಿರಾ, ಈಶಾನವರದರ್ಪಿತಂ-ಈಶ್ವರನ ವರದಿಂದ ಕೊಬ್ಬಿರುವ, ಸುಕೇಶಂ-ಸುಕೇಶನೆಂಬ, ತಂರಾಕ್ಷಸಂ-ಆ ಅಸುರನನ್ನು, ಜಾನೆ- ಅರಿತಿದ್ದೇನೆ, ಅಸ್ಯ-ಈ ಸುಕೇಶನ, ತನಯಾಂಶ್ಚ - ಆ ಮಕ್ಕಳನ್ನೂ ಸಹ, ಜಾನೆ-ತಿಳಿದಿದ್ದೇನೆ, ಯೆಷಾಂ-ಯಾರೊಳಗೆ, ಸಃಮಾಲ್ಯವಾನ್-ಆ ಮಾಲ್ಯವಂತನು, ಜ್ಯೇಷ್ಠಃ - ಹಿರಿಯವನೋ ॥ ೨೦ ॥ ಸಂಕ್ರುದ್ಧಃ-ಕೋಪಿಷ್ಠನಾದ, ಅಹಂ - ನಾನು, ಸಮತಿಕ್ರಾಂತಮರ್ಯಾದಾನ್-ಮರ್ಯಾದೋಲ್ಲಂಘನೆ ಮಾಡಿರುವ, ತಾನ್‌ರಾಕ್ಷಸಾಧಮಾನ್-ಆ ನೀಚ ರಕ್ಕಸರನ್ನು, ನಿಹನಿಷ್ಯಾಮಿ-ಸಂಹರಿಸುವೆನು, ವಿಜ್ವರಾಃ-ಸಂತಾಪರಹಿತರು, ಭವತ-ಆಗುವಿರಿ ॥ ೨೧ ॥ ಇತಿ-ಈ ಪರಿಯಾಗಿ, ಪ್ರಭವಿಷ್ಣುನಾ-ವರ್ಧಿಷ್ಣುವಾದ, ವಿಷ್ಣುನಾ-ವಿಷ್ಣುವಿನಿಂದ, ಉಕ್ತಾಃ-ಹೇಳಲ್ಪಟ್ಟ, ಸರ್ವೆ-ಸಮಸ್ತರಾದ, ತೆಸುರಾಃ-ಆ ದೇವತೆಗಳು, ಹೃಷ್ಟಾಃ-ಸಂತೋಷಯುಕ್ತರಾಗಿ, ಜನಾರ್ದನಂ-ವಿಷ್ಣುವಿನನ್ನು, ಪ್ರಶಂಸಂತಃ-ಶ್ಲಾಘಿಸುತಿರುವರಾಗಿ, ಯಥಾವಾಸಂ-ಸ್ವಸ್ಥಾನವನ್ನನುಸರಿಸಿ, ಯಯುಃ-ಹೊರಟುಹೋದರು ॥ ೨೨ ॥ ವಿಬುಧಾನಾಂ-ದೇವತೆಗಳ, ಸಮುದ್ಯೋಗಂ-ಪ್ರಯತ್ನವನ್ನು, ಶ್ರುತ್ವಾ-ಕೇಳಿ, ಮಾಲ್ಯವಾನ್- ಮಾಲ್ಯವಂತನೆಂಬ, ನಿಶಾಚರಸ್ತು- ರಾಕ್ಷಸನಾದರೆ, ವೀರೌ-ಶೂರರಾದ, ತೌಭ್ರಾತರೌ-ಆ ತಮ್ಮಂದಿರನ್ನು ಕುರಿತು, ಇದಂವಚನಂ-ಈ ಮುಂದೆ ಹೇಳತಕ್ಕಮಾತನ್ನು, ಅಬ್ರವೀತ್-ನುಡಿದನು ॥೨೩॥ ಅಮರಾಃ-ದೇವತೆಗಳುನ್ನು, ಋಷಯಶ್ಚೈವ-ಮುನಿಗಳೂ ಸಹ, ಅಸ್ಮದ್ವಧಂ-ನಮ್ಮ ಸಂಹಾರವನ್ನು, ಪರೀಪ್ಸಂತಃ-ಮಾಡಲಿಚ್ಛೆಯುಳ್ಳವರಾಗಿ, ಶಂಕರಂ-ಪರಮೇಶ್ವರನನ್ನು, ಸಂಗಮ್ಯ-ಹೊಂದಿ, ಇದಂವಚನಂ-ಈ ಮಾತನ್ನು, ಅಬ್ರುವನ್-ನುಡಿದರು, ಹೆದೇವ-ಎಲೈ ಸ್ವಾಮಿಯೆ ! ಸಮುದ್ರಪ್ತಾಃ-ಅತಿ ಗರ್ವಿತರಾದ, ಘೋರರೂಪಾಃ-ಭಯಂಕರರೂಪಿಗಳಾದ ವರದಾನಬಲೋದ್ಧತಾಃ-ಬ್ರಹ್ಮವರಪ್ರದಾನದ ಬಲದಿಂದ ಧೂರ್ತರಾದ, ಸುಕೇಶತನಯಾಃ-ಸುಕೇಶನಮಕ್ಕಳು, ಪದೆಪದೆ-ಕ್ಷಣಕ್ಷಣದಲ್ಲಿಯು, ಅಸ್ಮಾನ್-ನಮ್ಮನ್ನು-ಬಾಧಂತೆ-ಪೀಡಿಸುತ್ತಾರೆ ॥೨೫॥ ಹೆ ಪ್ರಜಾಪತೆ-ಎಲೈ ಪ್ರಜಾನಾಥನೆ,ರಾಕ್ಷಸೈಃ-ರಾಕ್ಷಸರಿಂದ, ಅಭಿಭೂತಾಃ-ತಿರಸ್ಕರಿಸಲ್ಪಟ್ಟವರು ಸ್ಮಃ-ಆಗಿದ್ದೇವೆ, ತೆಷಾಂದುರಾತ್ಮನಾಂ-ಆದುಷ್ಟರ, ಭಯಾತ್-ಭೀತಿಯದೆಸೆಯಿಂದ, ಸ್ವೇಷುಸದ್ಮಸು-ಸ್ವಂತಮನೆಗಳಲ್ಲಿ, ಸಂಸ್ಥಾತುಂ-ನೆಲೆಗೊಂಡಿರುವದಕ್ಕೆ, ನಶಕ್ತಾಸ್ಸ್ಮಃ-ಸಮರ್ಥರಾಗದಿದ್ದೇವೆ ॥೨೬॥ ಹೆ ತ್ರಿಲೋಚನ-ಎಲೈ ಮುಕ್ಕಣ್ಣನೆ, ಪ್ರದಹತಾಂವರ-ಎಲೈ ದಹಿಸುವವರೊಳಗೆ ಉತ್ತಮನಾದವನೆ, ತತ್-ಆಕಾರಣದ ದೆಸೆಯಿಂದ, ಅಸ್ಮಾಕಂ-ನಮಗೆ, ಹಿತಾರ್ಥಾಯ-ಹಿತರೂಪ ಪ್ರಯೋಜನಕ್ಕೋಸ್ಕರ, ತಾನ್‌ರಾಕ್ಷಸಾನ್-ಆ ರಾಕ್ಷಸರನ್ನು,ಜಹಿ-ನಿಗ್ರಹಿಸು, ಹುಂಕೃತೆನೈವ-ಹುಂಕಾರದಿಂದಲೆ, ದಹಚ-ದಹಿಸು ॥೨೭॥ ಇತ್ಯೇವಂ-ಈ ಪ್ರಕಾರ, ತ್ರಿದಶೈಃ-ದೇವತೆಗಳಿಂದ, ಉಕ್ತಂ-ಹೇಳಲ್ಪಟ್ಟ ಮಾತನ್ನು, ನಿಶಮ್ಯ-ಕೇಳಿ,

---

ಲ್ಲಿಜ್ಯೇಷ್ಠನಾದ ಮಾಲ್ಯವಂತನನ್ನು ಸಹ ಬಲ್ಲೆನು ॥೨೦॥ ಎಲೈ ದೇವತೆಗಳಿರಾ! ನಾನು ಕಡುಕೋಪವುಳ್ಳವನಾಗಿ, ಮಿತಿ ಮೀರಿದ ಆ ನೀಚ ರಕ್ಕಸರನ್ನು ನಾನುಕೊಲ್ಲುವೆನು ನೀವಂಜಬ್ಯಾಡಿರೆಂದು ॥೨೧॥ ತತ್ಕಾಲೋಚಿತವಾಗಿನಾರಾಯಣನಿಂದ ನುಡಿಯಲ್ಪಟ್ಟ ಆ ದೇವತೆಗಳು ಸಂತುಷ್ಟರಾಗಿಂತೆಂದು ಸ್ತುತಿಸಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟು ಹೋದರು ॥ ಇತ್ತಲಾ ಮಾಲ್ಯವಂತನು ದೇವತೆಗಳ ಪ್ರಯತ್ನವನ್ನರಿತವನಾಗಿ ತಮ್ಮಂದಿರಂ ಕುರಿತಿಂತೆಂದನು ॥೨೩॥ ಎಲೈ ತಮ್ಮಂದಿರಿರ್ರ್ಯಾ ! ದೇವ, ಋಷಿಗಳು ನಮ್ಮನ್ನು ಕೊಲ್ಲಿಸಲಿಚ್ಛೆಯುಳ್ಳವರಾಗಿ ಮುಕ್ಕಣ್ಣನಂ ಕುರಿತಿಂತೆಂದರಂತೆ, ಎಲೈ ದೇವದೇವೋತ್ತಮನೆ! ಬ್ರಹ್ಮ ವರಪ್ರದಾನದಿಂದೌದ್ಧತ್ಯವಂ ಹೊಂದಿದ ಬಹಳ ಧೂರ್ತರಾದ, ಸುಕೇಶನ ಮಕ್ಕಳು ಪದೆ ಪದೆ ನಮ್ಮಗಳನ್ನು ತೊಂದರೆ ಪಡಿಸುತಿಧಾರೆ ॥೨೫॥ ಸಕಲ ಪ್ರಜೆಗಳಿಗೂ ಅಧಿಪತಿಯಾದ ಎಲೈ ಸ್ವಾಮಿಯೆ ! ಅವರಿಂದ ಪರಾಜಿತರಾದ ನಾವುಗಳು ಅವರ ಭೀತಿಯಿಂದ ನಮ್ಮ ನಮ್ಮ ಮನೆಗಳಲ್ಲಿರಲು, ಅಸಮರ್ಥರಾಗಿಧ್ದೇವೆ ॥೨೬॥ ಹಗೆಯರ ಸುಡುವವರೊಳಗುತ್ತಮನಾದ ಮುಕ್ಕಣ್ಣನೆ, ಆದಕಾರಣ ನಮ್ಮ ಹಿತಕ್ಕೋಸ್ಕರವಾಗಿ ಆ ರಕ್ಕಸರನ್ನು ಹುಂಕಾರ ಮಾತ್ರದಿಂ ಧಿಕ್ಕರಿಸಿ ಸುಟ್ಟುಬಿಡು ॥೨೭॥ ಇಂತೆಂದು ಆ ದೇವತೆಗಳಿಂದ ಪ್ರಾರ್ಥಿತನಾದ ಪರಮೇಶ್ವರನು, ಶಿರಃಕಂಪನೆಯಂಮಾಡಿ ಈ ಮಾತನ್ನು ನುಡಿದನು ॥೨೮॥ ಎಲೈ ದೇವತೆಗಳಿರ್ರ್ಯಾ! ಆ ಸುಕೇಶನ ಮಕ್ಕಳನಗೆ ಕಾಳಗದಲ್ಲಿ ವಧಿಸಲ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮತೆದೇವಾಸ್ಸುಕೇಶತನಯಾರಣೆ । ಮಂತ್ರಂತುವಃಪ್ರದಾಸ್ಯಾಮಿಯೋವೈತಾನ್ನಿಹನಿಷ್ಯತಿ॥೨೯॥ಯಸ್ತುಚಕ್ರಗದಾಪಾಣಿಃ ಪೀತವಾಸಾಜನಾರ್ದನಃ।ಹರಿರ್ನಾರಾಯಣಶ್ರೀಮಾನ್ ಶರಣಂತಂಪ್ರಪದ್ಯಥ॥೩೦॥ಹರಾದವಾಪ್ಯತೇಮಂತ್ರಂಕಾಮಾರಿಮ ಭಿವಾದ್ಯಚ । ನಾರಾಯಣಾಲಯಂಪ್ರಾಪ್ಯತಸ್ಮೈಸರ್ವಂನ್ಯವೇದಯನ್ ॥೩೧॥ತತೋನಾರಾಯಣೇನೋಕ್ತಾಃದೇವಾಇಂದ್ರ ಪುರೋಗಮಾಃ । ಸುರಾರೀನ್ತಾನ್ಹನಿಷ್ಯಾಮಿಸುರಾಭವತವಿಜ್ವರಾಃ ॥೩೨॥ ದೇವಾನಾಂಭಯಭೀತಾನಾಂಹರಿಣಾರಾ ಕ್ಷಸರ್ಷಭೌ । ಪ್ರತಿಜ್ಞಾತೋವಧೊಸ್ಮಾಕಂಚಿಂತ್ಯತಾಂಯದಿಹಕ್ಷಮಮ್ ॥೩೩॥ ಹಿರಣ್ಯಕಶಿಪೋರ್ಹಂತಾಸರ್ವೇಷಾಂಚ ಸುರದ್ವಿಷಾಮ್ ।ದುಃಖಂನಾರಾಯಣಂಜೇತುಂಯೋನೋಹಂತುಮಭೀಪ್ಸತಿ ॥೩೪॥ ತತಸ್ಸುಮಾಲೀಮಾಲೀಚ ಶೃತ್ವಾವಮಾ ಲ್ಯವತೋವಚಃ । ಊಚತುರ್ಭ್ರಾತರಂಜ್ಯೇಷ್ಠಂಅಶ್ವಿನಾವಿವವಾಸವಂ ॥೩೫॥ ಅಧೀತಂದತ್ತವಿಷ್ಟಂಚಾಪ್ಯೈಶ್ವರ್ಯಂಪರಿ

---

ಅಂಧಕಸೂದನಃ-ಈಶ್ವರನು, ಶಿರಃ-ಶಿರಸ್ಸನ್ನು,ಕರಂಚ-ಹಸ್ತವನ್ನು ಸಹ, ಧುನ್ವಾನಃ-ಚಲಿಸುತಿರುವನಾಗಿ, ಇದುಂವಚನು-ಈಮಾತನ್ನು,ಅಬ್ರವೀತ್-ನುಡಿದನು॥೨೮॥ಹೆದೇವಾಃ-ಎಲೈ ದೇವತೆಗಳಿರಾ, ರಣೆ-ಕಾಳಗದಲ್ಲಿ,ತೇಸುಕೇಶತನಯಾಃ-ಆ ಸುಕೇಶನ ಮಕ್ಕಳು, ಮಮ-ನನಗೆ, ಅವಧ್ಯಾಃ-ವಧಾರ್ಹರಲ್ಲ, ವಃ-ನಿಮಗೆ,ಮಂತ್ರಂತು-ಉಪಾಯವನ್ನಾದರೆ ಪ್ರದಾಸ್ಯಾಮಿ-ಹೇಳುತ್ತೇ,ಯಃ-ಯಾವನು, ತಾನ್-ಆ ರಾಕ್ಷಸರನ್ನು, ನಿಹನಿಷ್ಯತಿ-ಕೊಲ್ಲುವನೋ॥೨೯॥ ಚಕ್ರಗದಾಪಾಣಿಃ-ಚಕ್ರಗದೆಗಳೇ ಹಸ್ತಗಳಲ್ಲಿ ಯುಳ್ಳ, ಪೀತವಾಸಾಃ-ಪೀತಾಂಬರನಾದ,ಜನಾರ್ದನಃ-ದುಷ್ಟಜನಶಿಕ್ಷಕನಾದ, ನಾರಾಯಣಃ-ಪ್ರಳಯೋ ದಕವೇಆಶ್ರಯವಾಗುಳ್ಳ, ಶ್ರೀಮಾನ್-ಸಂಪದ್ಯುಕ್ತನಾದ, ಹರಿಃ-ವಿಷ್ಣುವು, ಯಃ-ಯಾರೋ,ತಂ-ಆತನನ್ನು, ಶರಣಂ-ರಕ್ಷಕನನ್ನಾಗಿ,ಪ್ರಪದ್ಯಥ ಹೊಂದಿರಿ ॥೩೦॥ ತೇ-ಆ ದೇವತೆಗಳು, ಹರಾತ್-ಪರಮೇಶ್ವರನ ದೆಶೆಯಿಂದ, ಮಂತ್ರಂ-ಉಪಾಯವನ್ನು ಅವಾಪ್ಯ-ಹೊಂದಿ, ಕಾಮಾರಿಂ-ಶಿವನನ್ನು, ಅಭಿವಾದ್ಯಚ-ನಮಸ್ಕಾರವನ್ನು ಮಾಡಿ, ನಾರಾಯಣಾಲಯಂ-ವೈಕುಂಠವನ್ನು, ಪ್ರಾಪ್ಯ-ಹೊಂದಿ, ತಸ್ಮೈ-ಆ ವಿಷ್ಣುವಿಗೆ, ಸರ್ವಂ-ಸಮಸ್ತವನ್ನು, ನ್ಯವೇದಯನ್-ಅರುಹಿದರು ॥೩೧॥ ತತಃ-ಬಳಿಕ, ಹೆಸುರಾಃ-ಎಲೈದೇವತೆಗಳಿರಾ, ತಾನ್ಸುರಾರೀನ್-ಆ ರಾಕ್ಷಸರನ್ನು,ಹನಿಷ್ಯಾಮಿ-ಸಂಹರಿಸುವೆನು,ವಿಜ್ವರಾಃ-ತಾಪರಹಿತರು, ಭವತ-ಆಗಿರಿ, ಇತಿ-ಇಂತೆಂದು, ಇಂದ್ರಪುರೋಗಮಾಃ-ಇಂದ್ರನೇ ಮೊದಲಾಗುಳ್ಳ, ದೇವಾಃ-ದೇವತೆಗಳು, ನಾರಾಯಣೇನ- ವಿಷ್ಣುವಿನಿಂದ, ಉಕ್ತಾಃ-ಹೇಳಲ್ಪಟ್ಟರು ॥೩೨॥ ಹೆ ರಾಕ್ಷಸರ್ಷಭೌ-ಎಲೈ ರಾಕ್ಷಸೋತ್ತಮರೆ, ಭಯಭೀತಾನಾಂ – ಭಯಭೀತರಾದ, ದೇವಾನಾಂ- ದೇವತೆಗಳ ಮುಂದೆ, ಹರಿಣಾ-ವಿಷ್ಣುವಿನಿಂದ, ಅಸ್ಮಾಕಂ-ನಮ್ಮ, ವಧಃ-ಸಂಹಾರವು, ಪ್ರತಿಜ್ಞಾತಃ-ಪ್ರತಿಜ್ಞೆ ಮಾಡಲ್ಪಟ್ಟಿತು, ಇಹ-ಈಗ, ಯತ್-ಯಾವದು, ಕ್ಷಮಂ-ಯುಕ್ತವೋ, ತತ್-ಅದು, ಚಿಂತ್ಯತಾಂ-ಯೋಚಿಸಲ್ಪಡಲಿ ॥೩೩॥ ಹಿರಣ್ಯಕಶಿಪೋಃ-ಹಿರಣ್ಯಕಶಿಪಿಗು, ಸರ್ವೇಷಾಂ-ಸಮಸ್ತರಾದ, ಸುರದ್ವಿಷಾಂಚ-ರಕ್ಕಸರಿಗೂ ಕೂಡ, ಹಂತಾ-ಸಂಹಾರಕನಾದ, ಯಃ-ಯಾವವಿಷ್ಣುವು-ನಃ-ನಮ್ಮನ್ನು, ಹಂತುಂ-ಕೊಲ್ಲುವದಕ್ಕೆ,ಅಭೀಪ್ಸತಿ-ಇಚ್ಛೈಸುವನೋ, ತಂ ನಾರಾಯಣಂ, ಅಥ ವಿಷ್ಣುವಿನನ್ನು, ಜೇತುಂ-ಜಯಿಸುವದು, ದುಃಖಂ-ಕಷ್ಟವು.॥೩೪॥ ತತಃ-ಬಳಿಕ, ಸುಮಾಲೀ-ಸುಮಾಲಿಯು, ಮಾಲೀಚ – ಮಾಲಿಯೂ ಸಹ, ಮಾಲ್ಯವತಃ-ಮಾಲ್ಯವಂತನ, ವಚಃ-ಮಾತನ್ನು, ಶೃತ್ವಾ-ಕೇಳಿ,ಅಶ್ವಿನೌ-ಅಶ್ವಿನೀದೇವತೆಗಳು, ವಾಸವಮಿವ-ಇಂದ್ರನನ್ನಂತೆ, ಜ್ಯೇಷ್ಠಂ ಭ್ರಾತರಂ-ಹಿರೀ ಅಣ್ಣನನ್ನು ಕುರಿತು, ಊಚತುಃ-ಪೇಳಿದರು ॥೩೫॥ ಸ್ವಧೀತಂ-ಚನ್ನಾಗಧ್ಯಯನ ಮಾಡಲ್ಪಟ್ಟಿತು, ದತ್ತಂ-ಕೊಡಲ್ಪಟ್ಟಿತು, ಇಷ್ಟಂ

---

ನರ್ಹರು ಆದರೆ ಅವರನ್ನು ಯಾರು ಕೊಲ್ಲುವನೋ ಅಂಥವನನ್ನು ಪೇಳ್ವೆನು ಕೇಳಿರೀ ಯಾರಂದರೆ ಶಂಖಚಕ್ರಗದಾಪಾಣಿಯಾದ ಮತ್ತು ಪೀತಾಂಬರಧಾರಿಯಾದ ಶ್ರೀಮನ್ನಾರಾಯಣನುಅವರನ್ನು ನಿಗ್ರಹಿಸುವನು,ಆದಕಾರಣ ಆತನನ್ನೇ ನೀವು ಶರಣವಾಗಿ ಹೊಂದಿರೆಂದು ನುಡಿದನು॥೩೦॥ಈ ಪರಿಯಾಗಿ ಹರನಿಂದ ಪೇಳಲ್ಪಟ್ಟ ಸುರರು ನಾರಾಯಣ ಮಂದಿರವಾದ ವೈಕುಂಠವನ್ನು ಹೊಂದಿ ಇದನ್ನೆಲ್ಲ ಗೋವಿಂದನಿಗೆ ಬಿನ್ನವಿಸಲು ಬಳಿಕಾ ನಾರಾಯಣನು ಸುರಾರಿಗಳಾದ ನಮ್ಮಗಳನ್ನೆಲ್ಲ ನಿಗ್ರಹಿಸುವೆನೆಂದು ಶಪಥಮಾಡಿ · ಭಯಭೀತರಾದ ಆ ಇಂದ್ರಾದಿ ದೇವತೆಗಳಿಗೆ ಹೆದರಬ್ಯಾಡಿರೆಂದು ಭಯವನ್ನಿತ್ತಿರುವನಂತೆ ॥೩೩॥ ಎಲೈ ರಾಕ್ಷಸೋತ್ತಮರಾದ ಎನ್ನನುಜರಾದ ಸುಮಾಲಿ ಮಾಲಿಗಳಿರ್ಯಾ, ಆ ವೈಕುಂಠನಾದರೆ, ಕಡು ಪರಾಕ್ರಮಿಯಾದ ಹಿರಣ್ಯಕಶಪುನನ್ನು ಮತ್ತೆ ದೇವ ಕಂಟಕರಾದ ಇತರರಕ್ಕಸರನ್ನು ಸಹ ಕೊಂದವನು, ಅಂಥವನನ್ನು ಜಯಿಸಲು ಬಲು ಕಷ್ಟಮಾಗಿರುವದು, ಆದಕಾರಣ ಈ ವಿಷಯದಲ್ಲಿ ಯಾವದು ನಮಗೆ ಯುಕ್ತವಾಗಿರುವದೋ ಅದಂ ಯೋಚಿಸಿ ಪೇಳಿರೆಂದು ಮಾಲ್ಯವಂತನು ನುಡಿದನು ॥೩೪॥ ಆ ಬಳಿಕ ಮಾಲಿ ಸುಮಾಲಿಗಳೀರ್ವರು ಅಣ್ಣನಾದ ಮಾಲ್ಯವಂತನ ವಾಕ್ಯವಂ ಕೇಳಿ ಅಶ್ವಿನೀದೇವತೆಗಳು ಇಂದ್ರನಂ ಕುರಿತು ಪೇಳುವೋಪಾದಿಯಾಗಿ ಅಗ್ರಜನಂ ಕುರಿತಿಂತೆಂದರು ॥೩೫॥ ಎಲೈ ಅಗ್ರಜನೆ ನಮ್ಮಗಳಿಂದ ಚನ್ನಾಗಧ್ಯಯನ ಮಾಡಲ್ಪಟ್ಟಿತು. ಅನೇಕವಾದ ದಾನಗಳು ಕೊಡಲ್ಪಟ್ಟವು. ಮಹದೈಶ್ವರ್ಯವು ಹೊಂದಲ್ಪಟ್ಟಿತು. ನಿರಾಮಯಮಾದ ಆಯುಸ್ಸು ಪಡೆಯಲ್ಪಟ್ಟಿಥೆ. ಸ್ವಧರ್ಮವು ಸನ್ಮಾರ್ಗದಲ್ಲಿ ಸ್ಥಾಪಿಸಲ್ಪಟ್ಟಿತು. ಮತ್ತೆ ಶಸ್ತ್ರಗಳೆಂಬ ತೆರೆಗಳುಳ್ಳ ದೇವತೆಗಳೆಂಬ ಸಮುದ್ರವಂ ಹೊಕ್ಕು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪಾಲಿತಂ। ಆಯುರ್ನಿರಾಮಯಂಪ್ರಾಪ್ತಂಸುಧರ್ಮಃಸ್ಥಾಪಿತಃಪಥಿ ॥೩೬॥ ದೇವಸಾಗರಮಕ್ಷೋಭ್ಯಂಶಸ್ತ್ರೋರ್ಮಿಂ ಪ್ರವಿಗಾಹ್ಯಚ । ಜಿತಾದೇವಾರಣೇನಿತ್ಯಂನನೋಮೃತ್ಯುಕೃತಂಭಯಂ ॥೩೭॥ ನಾರಾಯಣಶ್ಚ ರುದ್ರಶ್ಚ ಶಕ್ರಶ್ಚಾಪಿ ಯಮಸ್ತಥಾ । ಅಸ್ಮಾಕಂಪ್ರಮುಖೇಸ್ಥಾತುಂಸರ್ವಏವಹಿಬಿಭ್ಯತಿ ॥೩೮॥ ವಿಷ್ಣೋರ್ದ್ವೇಷಸ್ಯನಾಸ್ತ್ಯೇವಕಾರಣಂರಾಕ್ಷಸೇಶ್ವರ। ದೇವಾನಾಮೇವದೋಷೇಣವಿಷ್ಣೋಃಪ್ರಜ್ವಲಿತಂಮನಃ ॥೩೯॥ ತಸ್ಮಾದದ್ಯಸಮುದ್ಯುಕ್ತಾಸ್ಸರ್ವೇ ಸೈನ್ಯಸಮಾವೃತಾಃ । ದೇವಾನೇವಜಿಘಾಂಸಾಮೋಯೇಭ್ಯೋದೋಷಸ್ಸಮುತ್ಥಿತಃ ॥೪೦॥ ಇತಿಮಾಲೀಸುಮಾಲೀಚಮಾಲ್ಯವಾನಗ್ರಜಃಪ್ರಭುಃ। ಉದ್ಯೋಗಂಘೋಷಯಿತ್ವಾತುರಾಕ್ಷಸಾಸ್ಸರ್ವಏವತೇ । ಯುದ್ಧಾಯನಿರ್ಯಯುಃಕ್ರುದ್ಧಾ ಜಂಭವೃತ್ರಬಲಾಇವ॥೪೧॥ ಸ್ಯಂದನೈರ್ವಾರಣೇಂದ್ರೈಶ್ಚ ಹಯೈಶ್ಚ ಗಿರಿಸಂನಿಭೈಃ । ಖರೈರ್ಗೋಭಿರಥೋಷ್ಟ್ರೈಶ್ಚ ಶಿಂಶುಮಾರೈರ್ಭುಜಂಗಮೈಃ ॥೪೨॥ ಮಕರೈಃಕಚ್ಛಪೈರ್ಮೀನೈರ್ವಿಹಂಗೈರ್ಗರುಡೋಪಮೈಃ । ಸಿಂಹೈರ್ವ್ಯಾಘ್ರೈರ್ವರಾಹೈಶ್ಚ ಸೃಮರೈಶ್ಚ ಮರೈರಪಿ ॥೪೩॥ ತ್ಯಕ್ತ್ವಾ

---

ಚ-ಯಾಗವು ಮಾಡಲ್ಪಟ್ಟಿತು, ಐಶ್ವರ್ಯಂಚ-ಪ್ರಭುತ್ವವನ್ನು, ಪರಿಪಾಲಿತಂ-ರಕ್ಷಿಸಲ್ಪಟ್ಟಿತು, ನಿರಾಮಯಂ-ರೋಗರಹಿತವಾಗಿ, ಆಯುಃ-ಆಯುಸ್ಸು, ಪ್ರಾಪ್ತಂ-ಹೊಂದಲ್ಪಟ್ಟಿತು, ಸುಧರ್ಮಃ-ಒಳ್ಳೇಧರ್ಮವು, ಪಥಿ-ಸನ್ಮಾರ್ಗದಲ್ಲಿ, ಸ್ಥಾಪಿತಃ-ಪ್ರತಿಷ್ಠೆ ಮಾಡಲ್ಪಟ್ಟಿತು, ॥೩೬॥ ಅಕ್ಷೋಭ್ಯಂ-ಕ್ಷೋಭಿಸಲಸಾಧ್ಯವಾದ, ಶಸ್ತ್ರೋರ್ಮಿಂ-ಶಸ್ತ್ರಗಳೆಂಬ ತೆರೆಗಳುಳ್ಳ, ದೇವಸಾಗರಂ-ದೇವತೆಗಳೆಂಬ ಸಮುದ್ರವನ್ನು, ಪ್ರವಿಗಾಹ್ಯ-ಕೊಕ್ಕು, ದೇವಾಃ-ದೇವತೆಗಳು, ರಣೇ-ಕಾಳಗದಲ್ಲಿ, ನಿತ್ಯಂ-ಯಾವಾಗಲು, ಜಿತಾಃ- ಜಯಿಸಲ್ಪಟ್ಟರು, ಮತ್ಯುಕೃತಂ-ಮೃತ್ಯುವಿನಿಂದ ಮಾಡಲ್ಪಟ್ಟ, ಭಯಂ-ಭೀತಿಯು, ನಃ-ನಮ್ಮಗೆ, ನ-ಇಲ್ಲ. ॥೩೭॥ ನಾರಾಯಣಶ್ಚ-ವಿಷ್ಣುವೂ, ರುದ್ರಶ್ಚ- ರುದ್ರನೂ, ಶಕ್ರಶ್ಚ-ಇಂದ್ರನೂ, ತಥಾ-ಹಾಗೆ, ಯಮಶ್ಚ-ಯಮನೂ, ಸರ್ವೆ-ಎಲ್ಲರು, ಅಸ್ಮಾಕಂ-ನಮ್ಮ, ಪ್ರಮುಖೇ-ಮುಂದೆ, ಸ್ಥಾತುಂ-ನಿಲ್ಲುವದಕ್ಕೆ, ಬಿಭ್ಯತ್ಯೇವಹಿ-ಹೆದರುತ್ತಾರಷ್ಟೆ ॥ ೩೮ ॥ ಹೇರಾಕ್ಷಸೇಶ್ವರ-ಎಲೈ ರಾಕ್ಷಸನಾಥನೆ! ವಿಷ್ಣೋಃ-ವಿಷ್ಣುವಿಗೆ, ದ್ವೇಷಸ್ಯ-ವಿರೋಧಕ್ಕೆ, ಕಾರಣಂ-ಹೇತುವು, ನಾಸ್ತ್ಯೇವ-ಇಲ್ಲವೇಯಿಲ್ಲ, ದೇವಾನಾಂ-ದೇವತೆಗಳ, ದೋಷೇಣೈವ-ದೋಷದಿಂದಲೆ, ವಿಷ್ಣೋಃ-ವಿಷ್ಣುವಿನ, ಮನಃ-ಮನಸ್ಸು, ಪ್ರಜ್ವಲಿತಂ-ಉರಿಸಲ್ಪಟ್ಟಿತು, ತಸ್ಮಾತ್-ಆ ಕಾರಣದ ದೆಸೆಯಿಂದ, ಅದ್ಯ-ಈಗ, ಸಮುದ್ಯುಕ್ತಾಃ-ಯತ್ನಿಸಿದವರಾಗಿ, ಸರ್ವೆ-ಎಲ್ಲರು, ಸೈನ್ಯಸಮಾವೃತಾಃ-ಸೇನೆಯೊಂದೊಡಗೂಡಿದವರಾಗಿ, ಯೇಭ್ಯಃ-ಯಾವ ದೇವತೆಗಳ ದೆಸೆಯಿಂದ, ದೋಷಃಉತ್ಥಿತಃ-ದೋಷವು ಹುಟ್ಟಿತೋ, ತಾನ್‌ದೇವಾನೇವ-ಆ ದೇವತೆಗಳನ್ನೆ, ಜಿಘಾಂಸಾಮಃ-ಹೊಡಿಯೋಣ, ಇತಿ-ಇಂತೆಂದು, ಮಾಲೀ-ಮಾಲಿಯು, ಸುಮಾಲೀಚ-ಸುಮಾಲಿಯು, ಅಗ್ರಜಃ-ಜ್ಯೇಷ್ಠನಾದ, ಪ್ರಭುಃ-ಒಡೆಯನಾದ, ಮಾಲ್ಯವಾನ್-ಮಾಲ್ಯವಂತನುಕೂಡೆ,ಉದ್ಯೋಗಂ-ಪ್ರಯತ್ನವನ್ನು,ಘೋಷಯಿತ್ವಾ-ಡಂಗೂರಹೊಡೆಸಿ, ಕ್ರುದ್ಧಾಃ-ಕುಪಿತರಾದ, ಜಂಭವೃತ್ರಬಲಾಯಥಾ-ಜಂಭವೃತ್ರಬಲಾಸುರರಂತೆ, ಸರ್ವೆ-ಸಮಸ್ತರಾದ,ತೇರಾಕ್ಷಸಾಃ-ಆರಕ್ಕಸರು,ಯುದ್ಧಾಯ-ಕಾಳಗಕ್ಕೋಸ್ಕರ, ನಿರ್ಯಯುಃ-ಹೊರಟರು ॥ ೪೧ ॥ ಬಲಗರ್ವಿತಾಃ-ಬಲದಿಂದ ಕೊಬ್ಬಿದವರಾದ ದೈವತಶತ್ರವಃ-ದೇವವಿರೋಧಿಗಳಾದ, ಸರ್ವರಾಕ್ಷಸಾಃ-ಅಸುರರೆಲ್ಲರು, ಸ್ಯಂದನೈಃ-ರಥಗಳಿಂದಲು, ಗಿರಿಸನ್ನಿಭೈಃ-ಪರ್ವತ ಸದೃಶವಾದ, ವಾರಣೇಂದ್ರೈಶ್ಚ-ಆನೆಗಳಿಂದಲು, ಹಯೈಶ್ಚೈವ-ಕುದುರೆಗಳಿಂದಲು, ಖರೈಃ-ಕತ್ತೆಗಳಿಂದಲು, ಗೋಭಿಃ-ವೃಷಭಗಳಿಂದಲು, ಉಷ್ಟ್ರೈಶ್ಚ-ಒಂಟೆಗಳಿಂದಲು, ಶಿಂಶುಮಾರೈಶ್ಚ-ನೆಗಳುಗಳಿಂದಲು, ಭುಜಂಗಮೈಃ-ಹಾವುಗಳಿಂದಲು, ಮಕರೈಃ-ಜೋರಮೀನುಗಳಿಂದಲು, ಕಚ್ಛಪೈಃ-ಆಮೆಗಳಿಂದಲು, ಗರುಡೋಪಮೈಃ-ಗರುಡನಿಗೆ ಸಮಾನವಾದ, ವಿಹಂಗಮೈಃ-ಹಕ್ಕಿಗಳಿಂದಲೂ, * ಸಿಂಹೈಃ-ಸಿಂಹಗಳಿಂದಲು, ವ್ಯಾಘ್ರೈಃ-ಹುಲಿಗಳಿಂದಲು, ವರಾಹೈಶ್ಚ-ಹಂದಿಗಳಿಂದಲು, ಸೃಮರೈಃ-ಕಾಡು ಗೋವುಗಳಿಂದಲು, ಚಮರೈಃ-ಚಮರೀಮೃಗಗಳಿಂದಲು, (ಉಪಲಕ್ಷಿತಾಃ-ಕೂಡಿದವರಾಗಿ) ಲಂಕಾಂ-ಲಂಕಾಪಟ್ಟಣವನ್ನು, ತ್ಯಕ್ತ್ವಾ-ಬಿಟ್ಟು, ಯೋದ್ಧುಂ-ಯುದ್ಧಮಾಡುವದಕ್ಕೋಸ್ಕರ-ದೇವ

---

ಕಾಳಗದೊಳ್ ದೇವತೆಗಳೆಲ್ಲರು ಜಯಿಸಲ್ಪಟ್ಟಧಾರೆ. ಆದಕಾರಣ ನಮಗೆ ಮೃತ್ಯುಭೀತಿ ಯೆಂಬುವದೇ ಇಲ್ಲ ॥೩೭॥ ಮತ್ತೆ ನಾರಾಯಣ, ರುದ್ರ, ಇಂದ್ರ, ಯಮ, ಇವರೆಲ್ಲರು ಗುಂಪು ಶೇರಿ ನಮ್ಮಮುಂದೆ ನಿಲ್ಲಲು ಹೆದರುತ್ತಾರೆ ॥೩೮॥ ಎಲೈ ರಾಕ್ಷಸರಾಜನೆ! ನಾರಾಯಣನಿಗು ನಮಗು ದ್ವೇಷಕ್ಕೆ ಕಾರಣವೇ ಇಲ್ಲ, ಆದರೆ ಈ ದುಷ್ಟರಾದ ದೇವತೆಗಳ ದೋಷದಿಂದ ವಿಷ್ಣುವಿನ ಮನವು ಪ್ರಜ್ವಲಿಸಲ್ಪಟ್ಟು ದ್ವೇಷವುಂಟಾಯಿತು ॥೩೯॥ ಆದಕಾರಣ ಈಗ ನಾವೆಲ್ಲರು ಸನ್ನದ್ಧರಾಗಿ ಸೈನ್ಯಗಳಿಂದೊಡಗೂಡಿ ಈ ದ್ವೇಷಕ್ಕೆ ಹೇತು ಭೂತರಾದ ಆ ದೇವತೆಗಳನ್ನೆ ಕೊಲ್ಲೋಣೆಂದು ಮಾಲಿ, ಸುಮಾಲಿ, ಮಾಲ್ಯವಂತರೆಂಬೀ ಮೂವರೂ ಯೋಚಿಸಿಕೊಂಡು ಈ ಉದ್ಯೋಗವಂ ಘೋಷಿಸಿ ಕಡು ಕುಪಿತರಾಗಿ ಜಂಭವೃತ್ರ ಬಲನಾಮಕರಾದ ಮಹಾ ಸುರರಂತೆ ನಿರ್ಭೀಕರಾಗಿ ಕಾಳಗಕ್ಕೋಶರವಾಗಿ ಹೊರಡಲುದ್ಯುಕ್ತರಾದರು ॥೪೧॥ ಆ ಬಳಿಕ ದೇವವೈರಿಗಳಾದ ಆರಕ್ಕಸರೆಲ್ಲರು ಬಲಗರ್ವಿತರಾಗಿ ಲಂಕಾಪುರಿಯಂ ತೊರದು, ರಥಗಳಿಂದಲು, ಗಜಶ್ರೇಷ್ಠಗಳಿಂದಲು, ಕುದುರೆಗಳಿಂದಲು, ಕತ್ತೆಗಳಿಂದಲು, ಯತ್ತುಗಳಿಂದಲು, ಒಂಟೆಗಳಿಂದಲು, ಮತ್ತು ಶಿಂಶುಮಾರ, ಸರ್ಪ, ಮಕರ, ಕೂರ್ಮ, ಮೀನ, ಪಕ್ಷಿ, ಸಿಂಹ, ವ್ಯಾಘ್ರ, ವರಾಹ, ಸೃಮರ, ಚಮರಗಳೆಂಬ ವಾಹನಗಳಿಂದಲು, ಒಡಗೂಡಿ ಕಾಳಗಕ್ಕೋಸ್ಕರ ದೇವಲೋಕಕ್ಕೆ ಪ್ರಯಾಣಸಿದರೂ ॥೪೪॥ ಆ ಬಳಿಕ ಲಂಕಾಭಿಮಾನಿ ದೇವತೆಗಳು ಈ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲಂಕಾಂತತಸ್ಸರ್ವೇರಾಕ್ಷಸಾಬಲಗರ್ವಿತಾಃ । ಪ್ರಯಾತಾದೇವಲೋಕಾಯಯೊದ್ಧುಂದೈವತಶತ್ರವಃ ॥೪೪॥ ಲಂಕಾವಿಪರ್ಯ ಯಂದೃಷ್ಟ್ವಾ ಯಾನಿಲಂಕಾಲಯಾನ್ಯಥ।ರಕ್ಷಸಾಮೇವಮಾರ್ಗೇಣದೈವತಾನ್ಯಪಚಕ್ರಮುಃ॥೪೫॥ ಭೂತಾನಿಭಯದರ್ಶೀನಿ ವಿಷಮಸ್ಥಾನಿಸರ್ವಶಃ । ಭೌಮಾಸ್ತಥಾಂತರಿಕ್ಷಾಶ್ಚ ಕಾಲಾಜ್ಞಪ್ತಾ ಭಯಾವಹಾಃ। ಉತ್ಪಾತಾರಾಕ್ಷಸೇಂದ್ರಾಣಾಮಭಾ ವಾಯೋತ್ಥಿತಾಭೃಶಂ ॥೪೬॥ ಅಸ್ಥೀನಿಮೇಘಾವವೃಷುರುಷ್ಣಂಶೋಣಿತಮೇವಚ । ವೇಲಾಂಸಮುದ್ರೋಪ್ಯುತ್ಕ್ರಾಂತಶ್ಚಲಂತೆ ಚಾಚಲೋತ್ತಮಾಃ ॥೪೭॥ ಅಟ್ಟಹಾಸಂವಿಮುಂಚಂತೋಘನನಾದಸಮಸ್ವನಾಃ । ಭೂತಾಃಪರಿಪತಂತಿಸ್ಮನೃತ್ಯಮಾನಾ ಸ್ಸಹಸ್ರಶಃ ॥೪೮॥ ಗೃಧ್ರಚಕ್ರಂಮಹಚ್ಚಾಪಿಜ್ವಲನೋದ್ಗಾರಿಭಿರ್ಮುಖೈಃ । ರಾಕ್ಷಸಾನಾಮುಪರಿಖೇಭ್ರಮತೇಕಾಲಚಕ್ರ ವತ್ ॥೪೯॥ ಕಪೋತಾರಕ್ತಪಾದಾಶ್ಚಶಾರಿಕಾವಿದ್ರುತಾಯಯುಃ। ಕಾಕಾವಾಶ್ಯಂತಿತತ್ರೈವಬಿಡಾಲಾವೈದ್ವಿಜಾದಯಃ॥ಉ ತ್ಪಾತಾಂಸ್ತಾನನಾದೃತ್ಯರಾಕ್ಷಸಾಬಲಗರ್ವಿತಾಃ।ಯಾಂತ್ಯೇವನನಿವರ್ತಂತೇಮೃತ್ಯುಪಾಶಾವಪಾಶಿತಾಃ ॥೫೧॥ ಮಾಲ್ಯವಾಂ ಶ್ಚ ಸುಮಾಲೀಚಮಾಲೀಚರಜನೀಚರಾಃ । ಆಸನ್ಪುರಸ್ಸರಾಸ್ತೇಷಾಂಜ್ವಲಿತಾಇವಪಾವಕಾಃ ॥೫೨॥ ಮಾಲ್ಯವಂತಂತು

---

ಲೋಕಾಯ-ಸ್ವರ್ಗಲೋಕಕ್ಕೆ, ಪ್ರಯಾತಾಃ-ಹೊರಟರು ॥ ೪೪ ॥ ಅಥ-ಬಳಿಕ, ಯಾನಿದೈವತಾನಿ-ಯಾವ ದೇವತೆಗಳು, ಲಂಕಾಲಯಾನಿ-ಲಂಕಾಪುರಿಯೆ ಆವಾಸವಾಗುಳ್ಳವುಗಳೋ, ತಾನಿ-ಆ ದೇವತೆಗಳು, ಲಂಕಾವಿಪರ್ಯಯಂ-ಲಂಕಾನಾಶವನ್ನು, ದೃಷ್ಟ್ವಾ-ಕಂಡು, ರಕ್ಷಸಾಂ-ರಕ್ಕಸರ, ಮಾರ್ಗೇಣೈವ-ಮಾ ರ್ಗದಿಂದಲೇ, ಅಪಚಕ್ರಮುಃ-ಹೊರಟುಹೋದವು. ಭಯದರ್ಶೀನಿ-ಭೀತಿಯನ್ನು ತೋರಿಸತಕ್ಕ, ಭೂತಾನಿ-ಭೂತಗಳು, ಸರ್ವಶಃ-ಸರ್ವಪ್ರಕಾರದಲ್ಲಿ ಯು, ವಿಷಮಸ್ಥಾನಿ-ವಕ್ರಗಳಾದವು ॥೪೫॥ ಭೌಮಾಶ್ಚ-ಪೃಥ್ವೀಸಂಬಂಧಗಳಾದ, ಅಂತರಿಕ್ಷಾಶ್ಚ-ಗಗನಸಂಬಂಧಿಗಳೂಆದ, ಭಯಾವಹಾಃ-ಭಯಂಕರವಾ ದ, ಉತ್ಪಾತಾಃ-ಉತ್ಪಾತಗಳು, ಕಾಲಾಜ್ಞಪ್ತಾಃ-ಕಾಲಪುರುಷನಿಂದ ಆಜ್ಞಾಪಿಸಲ್ಪಟ್ಟವುಗಳಾಗಿ, ರಾಕ್ಷಸೇಂದ್ರಾಣಾಂ-ರಾಕ್ಷಸಶ್ರೇಷ್ಠರ, ಅಭಾವಾಯ- ನಾಶಕ್ಕೋಸ್ಕರ, ಭೃಶಂ-ಬಹಳವಾಗಿ, ಉತ್ಥಿತಾಃ-ಹುಟ್ಟಿದವು ॥೪೬॥ ಮೇಘಾಃ-ಮೇಘಗಳು, ಅಸ್ಥೀನಿ-ಎಲುವುಗಳನ್ನು ಉಷ್ಣಂ-ಬಿಸಿಯಾದ, ಶೋ ಣಿತಮೇವಚ-ರಕ್ತವನ್ನೂ ಸಹ, ವವೃಷುಃ-ಸುರಿಸಿದವು, ಸಮುದ್ರೋಪಿ-ಕಡಲೂಕೂಡ, ವೇಲಾಂ-ಮೇರೆಯನ್ನು, ಉತ್ಕ್ರಾಂತಃ-ಮೀರಿತು, ಅಚ ಲೋತ್ತಮಾಃ-ಪರ್ವತಶ್ರೇಷ್ಠಗಳು, ಚಲಂತೆ-ಚಲಿಸುತಿದ್ದವು. ॥೪೭॥ ಅಟ್ಟಹಾಸಂ-ಸಿಂಹನಾದವನ್ನು, ವಿಮುಂಚಂತಃ-ಬಿಡುತಿರುವ, ಘನನಾದ ಸಮ ಸ್ವನಾಃ-ಮೇಘಗರ್ಜನೆಗೆ ಸಮಾನವಾದ ಧ್ವನಿಯುಳ್ಳ, ಸಹಸ್ರಶಃ-ಅನೇಕವಾದ, ಭೂತಾಃ-ಭೂತಗಳು, ನೃತ್ಯಮಾನಾಃ-ಕುಣಿದಾಡು ತಿರುವಗಳಾಗಿ, ಪ ರಿಪತಂತಿಸ್ಮ-ಬೀಳುತಿದ್ದವಷ್ಟೆ ॥೪೮॥ ಜ್ವಲನೋದ್ಗಾರಿಭಿಃ-ಅಗ್ನಿಯನ್ನು ವಮನ ಗೊಳ್ಳುತಿರುವ, ಮುಖೈಃ-ಮುಖಗಳಿಂದ, ಉಪಲಕ್ಷಿತಂ-ಕೂಡಿಕೊಂಡಿ ರುವ) ಮಹತ್-ಮಹತ್ತರವಾದ, ಗೃಧ್ರಚಕ್ರಂ-ಹದ್ದುಗಳ ತಂಡವು, ಕಾಲಚಕ್ರವತ್-ಕಾಲಚಕ್ರದಂತೆ, ರಾಕ್ಷಸಾನಾಂ-ಅಸುರರ, ಉಪರಿ – ಮೇಲ್ಭಾಗದ ಲ್ಲಿ, ಖೇ-ಅಂತರಿಕ್ಷದಲ್ಲಿ, ಭ್ರಮತೆ-ತಿರುಗುತಿತ್ತು ॥೪೯॥ ರಕ್ತಪಾದಾಃ-ಕೆಂಗಾಲುಗಳುಳ್ಳ, ಕಪೋತಾಃ-ಪಾರಿವಾಣದ ಹಕ್ಕಿಗಳು, ಶಾರಿಕಾವಿದ್ರುತಾಃ-ಗೊ ರವಂಕೆಗಳಿಂದ ಹೆದರಿಸಲ್ಪಟ್ಟವುಗಳಾಗಿ, ಯಯುಃ-ಓಡಿಹೋದವು, ಕಾಕಾಃ-ಕಾಗೆಗಳು, ಬಿಡಾಲಾಃ-ಬೆಕ್ಕುಗಳು, ದ್ವಿಜಾದಯಃ-ಹಕ್ಕಿ ಮುಂತಾದವುಗಳು, ತತ್ರೈವ-ಅಲ್ಲಿಯೇ, ವಾಶ್ಯಂತಿ-ಕೂಗುತಿದ್ದವು, ತಾನ್ಉತ್ಪಾತಾನ್-ಆ ದುಶ್ಶಕುನಗಳನ್ನು, ಅನಾದೃತ್ಯ-ಲಕ್ಷ್ಯವಿಡದೆ,ಬಲಗರ್ವಿತಾಃ-ಬಲದಿಂದ ಅಹಂಕಾ ರವುಳ್ಳ, ಮೃತ್ಯುಪಾಶಾವಪಾಶಿತಾಃ-ಕಾಲಪಾಶಬದ್ಧರಾದ, ರಾಕ್ಷಸಾಃ-ರಕ್ಕಸರು,ಯಾಂತ್ಯೇವ-ಹೊರಟಲೇ ಹೊರಟರು, ನನಿವರ್ತಂತೆ-ಹಿಂದಿರಗಲಿಲ್ಲ. ॥೫೧॥ ನಿಶಾಚರಾಃ-ರಾಕ್ಷಸರಾದ, ಮಾಲ್ಯವಾನ್-ಮಾಲ್ಯವಂತನು, ಸುಮಾಲೀಚ-ಸುಮಾಲಿಯು, ಮಾಲೀಚೇತಿತ್ರಯಃ-ಮಾಲೀಯೆಂಬಮುವ್ವೇರು,ಜ್ವಲಿತಾಃ- ಪ್ರಜ್ವಲಿಸುತ್ತಿರುವ, ಪಾವಕಾಇವ-ಅಗ್ನಿಗಳಂತೆ, ತೇಷಾಂ-ಅಸುರರಿಗೆ, ಪುರಸ್ಸರಾಃ-ಮುಂದೆ ಹೋಗತಕ್ಕವರು, ಆಸನ್-ಆದರು ॥೫೨॥ ಸರ್ವೆ-ಸಮಸ್ತರಾ

---

ವಿಪರೀತವಂ ಕಂಡು ರಾಕ್ಷಸರ ಮಾರ್ಗದಿಂದಲೇ ಹೊರಟು ಹೋದವು. ಭೂತಗಳೆಲ್ಲ ವಕ್ರಗಳಾಗಿ ಕಡುಭಯವಂ ತೋರಿಸುವಗಳಾದವು ॥೪೫॥ ಭೂಸಂಬಂಧಿಗಳಾದ ಮತ್ತೆ ಅಂತ ರಿಕ್ಷೋತ್ಪನ್ನಗಳಾದ ಉತ್ಪಾತಗಳು ಕಾಲಪುರುಷ ನಾಜ್ಞಾಧಾರಿಗಳಾಗಿ ರಾಕ್ಷಸ ವಿನಾಶಕ್ಕೋಸ್ಕರ ಬಹಳವಾಗಿ ಕಾಣುತ್ತಿದ್ದವು ॥೪೬॥ ಅದೆಂತೆಂದರೆ, ಮೇಘಗಳು ಎಲು ವುಗಳನ್ನು ಮತ್ತೆ ಬಿಸಿಯಾದ ರಕ್ತವನ್ನೂ ವರ್ಷಿಸಿದವು, ಸಮುದ್ರವು ಮೇರೆ ಮೀರಿತು, ಮಹಾಚಲಗಳೆಲ್ಲ ಚಲಿಸಿದ ವು, ಅನೇಕ ಪಿಶಾಚಗಳು ಮೇಘಗರ್ಜನೆಯಂತೆ ಗರ್ಜನೆಯುಳ್ಳವುಗಳಾಗಿ ಸಿಂಹನಾದವಂಗೈದು, ನರ್ತನೆಯಂಮಾಡು ತ್ತಾ ನೆಲದಲ್ಲಿ ಬಿದ್ದವು. ಮತ್ತೆ ಹದ್ದುಗಳ ತಂಡಗಳು ಕೂಡ ಬೆಂಕೀ ಕಿಡಿಗಳಂ ಕಕ್ಕುತ್ತಾ ಆಗ ಕಾಲ ಚಕ, ದಂತೆ ರಾಕ್ಷಸರ ಮೇಲೆ ಬಿದ್ದವು ॥ ಮತ್ತು ಕೆಂಗಾಲುಗಳುಳ್ಳ ಪಾರಿವಾಣದ ಹಕ್ಕಿಗಳು ಗೊರವಂಕೆಗಳಿಗೆ ಹೆದರಿ ಓಡಿ ಹೋದವು. ಅಲ್ಲಿಯೆ ಕಾಗೆಗಳು ಬೆಕ್ಕುಗಳು ಮತ್ತು ಪಕ್ಷಿಗಳು ಸಹ ಕೂಗುತಿದ್ದವು॥೫೦॥ ಇಂಥ ಉತ್ಪಾತಗಳಂ ಕಂಡ ರು ಲಕ್ಷ್ಯವಿಡದೆ, ಕಾಲಪಾಶ ಬದ್ಧರಾದ ಆ ರಕ್ಕಸರು ಹಿಂದಿರಗದೆ ಕಾಳಗಕ್ಕೆ ಹೊರಟಲೇ ಹೊರಟರು॥೫೧॥ ಮಾ ಲೀ, ಸುಮಾಲೀ, ಮಾಲ್ಯವಂತ ರೆಂಬೀ ರಾಕ್ಷಸರು ಬೆಂಕೆಯಂತೆ ಕಂಗೊಳಿಸುತಿರುವರಾಗಿ ಆ ರಕ್ಕಸರ ಮುಂದೆ ಹೊ ರಟರು. ॥೫೨॥ ದೇವತೆಗಳು ಬ್ರಹ್ಮನನ್ನಾಶ್ರಯಿಸುವಂತೆ ಆ ನಿಶಾಚರರೆಲ್ಲರು ಮಾಲ್ಯವತ್ಪರ್ವತದೋಪಾದಿ ಯಾಗಿರುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೆಸರ್ವೆಮಾಲ್ಯವಂತಮಿವಾಚಲಮ್ । ನಿಶಾಚರಾಆಶ್ರಯಂತೆಧಾತಾರಮಿವದೇವತಾಃ ॥೫೩॥ ತದ್ಬಲಂರಾಕ್ಷಸೇಂದ್ರಾಣಾಂಮಹಾಭ್ರಘನನಾದಿತಂ । ಜಯೇಪ್ಸಯಾದೇವಲೋಕಂಯಯೌಮಾಲಿವಶೇಸ್ಥಿತಮ್ ॥೫೪॥ ರಾಕ್ಷಸಾನಾಂಸಮುದ್ಯೋಗಂತಂತುನಾರಾಯಣಃಪ್ರಭುಃ । ದೇವದೂತಾದುಪಶ್ರುತ್ಯದಧ್ರೇಯುದ್ಧೆತತೋಮನಃ ॥೫೫॥ ಆಬಧ್ಯಶರಸಂಪೂರ್ಣೆಇಷುಧೀವಿಮಲೆತತಃ । ಆಸಾದ್ಯಕವಚಂದಿವ್ಯಂಸಹಸ್ರಾರ್ಕಸಮದ್ಯುತಿ ॥ ಶಂಖಚಕ್ರಗದಾಶಾರ್ಙ್ಗಖಡ್ಗಾಖ್ಯಪ್ರವರಾಯುಧರ್ಾ । ಸುಪರ್ಣಂಗಿರಿಸಂಕಾಶಂವೈನತೆಯಮಥಾಸ್ಥಿತಃ । ರಾಕ್ಷಸಾನಾಮಭಾವಾಯಯಯೌತೂರ್ಣತರಂಹರಿಃ ॥೫೬॥ ಸುಪರ್ಣಪೃಷ್ಠೆಸಬಭೌಶ್ಯಾಮಃಪೀತಾಂಬರೋಹರಿಃ । ಕಾಂಚನಸ್ಯಗಿರೇಃಶೃಂಗೆಸತಟಿತ್ತೋಯದೋಯಥಾ ॥೫೭॥ ಸಸಿದ್ಧದೇವರ್ಷಿಮಹೋರಗೈಶ್ಚಗಂಧರ್ವಯಕ್ಷೈರುಪಗೀಯಮಾನಃ । ಸಮಾಸಸಾದಾಮರಶತ್ರುಸೈನ್ಯಂಚಕ್ರಾಸಿಸೀರಪ್ರವರಾಸ್ತ್ರಧಾರೀ ॥ ಸುಪರ್ಣಪಕ್ಷಾನಿಲನುನ್ನಪಕ್ಷಂಭ್ರಮತ್ಪತಾಕಂಪ್ರವಿಕೀರ್ಣಶಸ್ತ್ರಂ । ಚಚಾಲತದ್ರಾಕ್ಷಸರಾಜಸೈನ್ಯಂಚಲೋಪಲೊ

---

ದ, ತೆನಿಶಾಚರಾಃ–ಆ ರಾಕ್ಷಸರು, ದೇವತಾಃ–ದೇವತೆಗಳು, ಧಾತಾರಮಿವ–ಬ್ರಹ್ಮನನ್ನಂತೆ, ಮಾಲ್ಯವಂತಂ–ಮಾಲ್ಯವಂತವೆಂಬ, ಅಚಲಮಿವಸ್ಥಿತಂ–ಬೆಟ್ಟದಂತಿರುವ, ಮಾಲ್ಯವಂತಂ–ಮಾಲ್ಯವಂತನನ್ನು, ಆಶ್ರಯಂತೆ–ಅವಲಂಬಿಸಿದರು. ॥ ೫೩ ॥ ಮಹಾಭ್ರಘನನಾದಿತಂ–ದೊಡ್ಡ ಮೇಘಗಳ ಗಂಭೀರವಾದ ಧ್ವನಿಯಂತೆ ಧ್ವನಿಯುಳ್ಳ, ರಾಕ್ಷಸೇಂದ್ರಾಣಾಂ–ರಾಕ್ಷಸ ಶ್ರೇಷ್ಠರ, ತದ್ಬಲಂ–ಆ ಸೈನ್ಯವು, ಮಾಲಿವಶೇ–ಮಾಲಿಯ ಸ್ವಾಧೀನದಲ್ಲಿ, ಸ್ಥಿತಂ–ಇರುವಂಥಾದ್ದಾಗಿ, ಜಯೇಪ್ಸಯಾ – ಜಯೇಚ್ಛೆಯಿಂದ, ದೇವಲೋಕಂ–ಸ್ವರ್ಗವನ್ನು ಕುರಿತು, ಯಯೌ–ಹೊರಟಿತು.ರಾಕ್ಷಸಾನಾಂ–ಅಸುರರ, ತಂ ಸಮುದ್ಯೋಗಂ–ಆ ಪ್ರಯತ್ನವನ್ನು, ದೇವದೂತಾತ್–ದೇವತೆಗಳ ದೂತನವೆಸೆಯಿಂದ, ಉಪಶ್ರುತ್ಯ–ಕೇಳಿ, ಪ್ರಭುಃ–ಜಗತ್ಪ್ರಭುವಾದ,ನಾರಾಯಣಃ–ವಿಷ್ಣುವು, ತತಃ–ಬಳಿಕ, ಯುದ್ಧೆ–ಕಾಳಗದಲ್ಲಿ, ಮನಃ–ಮನಸ್ಸನ್ನು (ದಧ್ರೇ–ಧರಿಸಿದನು ॥ ೫೫॥ ತತಃ–ಬಳಿಕ, ಹರಿಃ–ವಿಷ್ಣುವು, ಶರಸಂಪೂರ್ಣೆ– ಬಾಣಗಳಿಂದ ತುಂಬಿರುವ, ವಿಮಲೆ–ನಿರ್ಮಲವಾದ, ಇಷುಧೀ–ಸರಳು ಬತ್ತಳಿಕೆಗಳನ್ನು, ಸಹಸ್ರಾರ್ಕಸಮದ್ಯುತಿ–ಸಹಸ್ರಸೂರ್ಯ ಸಮಾನ ಕಾಂತಿಯುಳ್ಳ, ದಿವ್ಯಂಕವಚಂ–ಉತ್ತಮವಾದ ಕವಚವನ್ನು ಸಹ, ಆ ಬಧ್ಯ–ಕಟ್ಟಿಕೊಂಡು, ಶಂಖಚಕ್ರ ಗದಾಶಾರ್ಙ್ಗಖಡ್ಗಾಖ್ಯಪ್ರವರಾಯುಧರ್ಾ–ಶಂಖ, ಚಕ್ರ, ಗದೆ, ಧನುಸ್ಸು, ಖಡ್ಗಗಳೆಂಬ ಹೆಸರುಗಳುಳ್ಳ ಉತ್ತಮಾಯುಧಗಳನ್ನು, ಆಸಾದ್ಯ–ಹೊಂದಿ, ಗಿರಿಸಂಕಾಶಂ–ಪರ್ವತೋಪಮನಾದ, ಸುಪರ್ಣಂ– ಒಳ್ಳೆಗರಿಗಳುಳ್ಳ, ವೈನತೇಯಂ–ಗರುಡನನ್ನು, ಆಸ್ಥಿತಃ–ಏರಿದವನಾಗಿ, ಅಥ–ಬಳಿಕ, ರಾಕ್ಷಸಾನಾಂ–ಅಸುರರ, ಅಭಾವಾಯ–ನಾಶಕ್ಕೋಸ್ಕರ, ತೂರ್ಣತರಂ–ಅತಿಶೀಘ್ರವಾಗಿ, ಯಯೌ–ಹೊರಟನು ॥೫೬॥ಶ್ಯಾಮಃ–ಕಪ್ಪಾಗಿರುವ, ಪೀತಾಂಬರಃ–ಪೀತಾಂಬರಧಾರಿಯಾದ, ಸಹರಿಃ–ಆ ಶ್ರೀಮಹಾವಿಷ್ಣುವು,ಸುಪರ್ಣಪೃಷ್ಠೆ–ಗರುಡನ ಬೆನ್ನಿನಲ್ಲಿ, ಕಾಂಚನಸ್ಯಗಿರೇಃ–ಬಂಗಾರ ಪರ್ವತದ, ಶೃಂಗೆ–ಶಿಖರದಲ್ಲಿ, ಸತಟಿತ್–ಮಿಂಚಿನಿಂದೊಡಗೂಡಿದ,ತೋಯದೊಯಥಾ–ಮೇಘದಂತೆ, ಬಭೌ–ಹೊಳೆಯುತಿದ್ದನು॥೫೭॥ಸಿದ್ಧದೇವರ್ಷಿಮಹೋರಗೈಶ್ಚ –ಸಿದ್ಧರಿಂದಲು, ದೇವತೆಗಳಿಂದಲು, ಋಷಿಗಳಿಂದಲು, ಸರ್ಪಗಳಿಂದಲು,ಗಂಧರ್ವಯಕ್ಷೈಃ–ಗಂಧರ್ವರಿಂದಲು, ಯಕ್ಷರಿಂದಲು, ಉಪಗೀಯಮಾನಃ–ಶ್ಲಾಘಿಸಲ್ಪಟ್ಟ, ಸಃ–ಆ ಶ್ರೀಮಹಾವಿಷ್ಣುವು, ಚಕ್ರಾಸಿಸೀರಪ್ರವರಾಸ್ತ್ರಧಾರೀ–ಚಕ್ರವನ್ನು ಖಡ್ಗವನ್ನು ಉತ್ತಮವಾದ ಹಲವನ್ನು ಅಸ್ತ್ರಗಳನ್ನು ಧರಿಸಿದವನಾಗಿ, ಅಮರಶತ್ರುಸೈನ್ಯಂ–ರಾಕ್ಷಸಸೈನ್ಯವನ್ನು, ಸಮಾಸಸಾದ–ಹೊಂದಿದನು. ॥೫೮॥ ಸುಪರ್ಣಪಕ್ಷಾನಿಲನುನ್ನಪಕ್ಷಂ–ಗರುಡನ ಪಕ್ಷವಾತದಿಂದ ಕ್ಷೋಭಿತವಾದ ಬಲವುಳ್ಳ, ಭ್ರಮತ್ಪತಾಕಂ–ತಿರುಗುತಿರುವ ಧ್ವಜಗಳುಳ್ಳ, ಪ್ರವಿಕೀರ್ಣಶಸ್ತ್ರಂ– ಎರಚಲ್ಪಟ್ಟ ಶಸ್ತ್ರಗಳುಳ್ಳ, ತದ್ರಾಕ್ಷಸರಾಜಸೈನ್ಯಂ–ಆ ರಾಕ್ಷಸಾಧಿಪತಿಯ ಸೈನ್ಯವು, ಚಲೋಪಲಃ–ಕದಲಾಡುತಿರುವ ಕಲ್ಲುಗಳುಳ್ಳ, ನೀಲಃ–ಕಪ್ಪಾದ, ಅಚಲೇಂದ್ರಃಇವ–ಮಹಾ ಪರ್ವತದಂತೆ, ಚಚಾಲ–ಚಲಿಸಿತು. ॥೫೯॥ ತತಃ–ಬಳಿಕ, ತೆನಿಶಾಚರಾಃ–ಆರಾಕ್ಷಸರು, ತಂಮಾಧವಂ–ಆ ಶ್ರೀ ಮಹಾ ವಿಷ್ಣುವಿನ

---

ಆ ಮಾಲ್ಯವಂತನನ್ನು ಆ ಶ್ರಯಿಸುತಿದ್ದರು. ॥೫೩॥ಮೇಘಗರ್ಜನೆಯಂತೆ ಗಂಭೀರವಾದ ಕೋಲಾಹಲಧ್ವನಿಯುಳ್ಳ ಮಾಲಿ ಯಧೀನವಾದ ಆ ರಾಕ್ಷಸಸೈನ್ಯವು ಜಯೇಚ್ಛೆಯಿಂದ ದೇವಲೋಕಕ್ಕೆ ಹೊರಟಿತು ॥೫೪॥ ಆಬಳಿಕ ಜಗತ್ಪ್ರಭುವಾದ ಶ್ರೀಮನ್ನಾರಾಯಣ ಮೂರ್ತಿಯು ಆ ರಾಕ್ಷಸರ ಪ್ರಯತ್ನವನ್ನು ದೇವದೂತನಮುಖವಾಗಿ ಕೇಳಿ ಕದನದೊಳ್ ಮನವನ್ನಿಟ್ಟನು. ॥೫೫॥ ಬಳಿಕ ಶ್ರೀಮಹಾವಿಷ್ಣುವು ಸಹಸ್ರ ಸೂರ್ಯಗಳಂತೆ ಕಂಗೊಳಿಸುತಿರುವ ಕವಚವಂ ತೊಟ್ಟುಕೊಂಡವನಾಗಿ, ಬಾಣಗಳಿಂ ಸಂಪೂರ್ಣವಾಗಿರ್ಪ ಸರಳು ಬತ್ತಳಿಕೆಗಳನ್ನು ಮತ್ತೆ ಶಂಖ,ಚಕ್ರ,ಗದಾ, ಶಾರ್ಙ್ಗ ಖಡ್ಗಗಳೆಂಬುತ್ತಮಾಯುಧಗಳಂ ತರಿಸಿ ದವನಾಗಿ ಸಮಿಾಚೀನವಾದ ಗರಿಗಳುಳ್ಳ ಗರುಡನನ್ನೇರಿ ರಾಕ್ಷಸನಾಶಕ್ಕೋಸ್ಕರ ಅತಿತ್ವರಿತವಾಗಿ ತೆರಳಿದನು॥೫೬॥ಆ ಗರುಡನ ಪೃಷ್ಠ ಭಾಗಗತನಾದ ಆ ಪೀತಾಂಬರಧಾರಿಯು ಮೇರುಪರ್ವತದ ಶೃಂಗದಲ್ಲಿರುವ ಮಿಂಚಿನಿಂದೊಡಗೂಡಿದ ಮೇಘದಂತೆ ಹೊಳೆಯುತಿರ್ದನು ॥೫೭॥ ಈ ಪರಿಯಾಗಿ ದಿವ್ಯಾಸ್ತ್ರಗಳಂ ಧರಿಸಿದ ಶ್ರೀ ವೈಕುಂಠನು, ದೇವತೆಗಳಿಂದಲು, ಸಿದ್ಧರಿಂದಲು, ಸರ್ಪಗಳಿಂದಲು, ಗಂಧರ್ವರಿಂದಲು, ಯಕ್ಷರಿಂದಲು, ಸಹ ಸ್ತುತಿಸಲ್ಪಡುತಿರುವನಾಗಿ ಆ ಅಸುರ ಸೈನ್ಯವಂ ಹೊಂದಿದನು॥೫೮॥ಗರುಡನ ಪಕ್ಷಮಾರುತದಿಂದ ಕ್ಷೋಭಿತವಾದ ಬಲವುಳ್ಳ, ಮತ್ತೆ ಗರ್‍ರನೆ ತಿರುಗುತಿರುವ ಟೆಕ್ಕೆಗಳುಳ್ಳ, ಸಿಡಿದ ಶಸ್ತ್ರಗಳುಳ್ಳ ಆ ರಾಕ್ಷಸರಾಜ ಸೈನ್ಯವು, ಕದಲಾಡುತಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನೀಲಇವಾಚಲೇಂದ್ರಃ ॥೬೦॥ ತತಸ್ತು ತೇಶೋಣಿತಮಾಂಸರೂಷಿತೈರ್ಯುಗಾಂತ ವೈಶ್ವಾನರತುಲ್ಯವಿಗ್ರಹೈಃ। ನಿಶಾಚರಾಸ್ತಂ ಪರಿವಾರ್ಯಮಾಧವಂವರಾಯುಧೈರ್ನಿರ್ಬಿಭಿದುಸ್ಸಹಸ್ರಶಃ ॥೬೧॥ *ಇತಿಶ್ರೀಮದುತ್ತರ ರಾಮಾಯಣೆ ಷಷ್ಠಸ್ಸರ್ಗಃ.*

ನಾರಾಯಣಗಿರಿಂತೇತುಗರ್ಜಂತೋರಾಕ್ಷಸಾಂಬುದಾಃ । ಅವರ್ಷನ್ನಿಷುವರ್ಷೇಣವರ್ಷೇಣಾದ್ರಿಮಿವಾಂಬುದಾಃ ॥೧॥ ಶ್ಯಾಮಾವದಾತಸ್ತೈರ್ವಿಷ್ಣುರ್ನೀಲೈರ್ನಕ್ತಂಚರೋತ್ತಮೈಃ। ವೃತೋಂಜನಗಿರೀವಾಸೀದ್ವರ್ಷಮಾಣೈಃಪಯೋಧರೈಃ॥ ಶಲಭಾಇವಕೇದಾರಂಮಶಕಾಇವಪಾವಕಂ। ಯಥಾಮೃತಘಟಂದಂಶಾಮಕರಾಇವಚಾರ್ಣವಂ ॥೨॥ ತಥಾರಕ್ಷೋಧನುರ್ಮುಕ್ತಾ ವಜ್ರಾನಿಲಮನೋಜವಾಃ । ಹರಿಂವಿಶಂತಿಸ್ಮ ಶರಾಲೋಕಾಇವವಿಪರ್ಯಯೆ ॥೪॥ ಸ್ಯಂದನೈಸ್ಸ್ಯಂದನಗತಾಃಗಜೈಶ್ಚ ಗಜಪೃಷ್ಠಗಾಃ । ಅಶ್ವಾರೋಹಾಸ್ತಥಾಶ್ವೈಶ್ಚ ಪಾದಾತಾಸ್ತ್ವಂಬರೇಚರಾಃ॥೫॥ರಾಕ್ಷಸೇಂದ್ರಾ ಗಿರಿನಿಭಾಶರಶಕ್ತ್ಯೃಷ್ಟಿ

---

ನ್ನು, ಪರಿವಾರ್ಯ–ಸುತ್ತುಬಾರುಕೊಂಡು, ಶೋಣಿತಮಾಂಸರೂಷಿತೈಃ–ರಕ್ತದಿಂದಲು ಮಾಂಸದಿಂದಲು ವ್ಯಾಪ್ತವಾದ, ಯುಗಾಂತವೈಶ್ವಾನರತುಲ್ಯವಿಗ್ರಹೈಃ–ಪ್ರಳಯಾಗ್ನಿಗೆ ಸಮಾನವಾದ ಆಕಾರವುಳ್ಳ, ವರಾಯುಧೈಃ–ಉತ್ತಮಾಯುಧಗಳಿಂದ, ಸಹಸ್ರಶಃ–ಅನೇಕವಾಗಿ, ನಿರ್ಬಿಭಿದುಃ–ಹೊಡದರು॥೬೧॥

ಇತಿ ಶ್ರೀಮದುತ್ತರರಾಮಾಯಣೆ ಷಷ್ಠಸ್ಸರ್ಗಃ.

ಗರ್ಜಂತಃ–ಗರ್ಜಿಸುತಿರುವ, ತೇರಾಕ್ಷಸಾಂಬುದಾಃ–ಆರಾಕ್ಷಸರೆಂಬ ಮೇಘಗಳು, ನಾರಾಯಣಗಿರಿಂ–ನಾರಾಯಣನೆಂಬ ಬೆಟ್ಟವನ್ನು, ಇಷು ವರ್ಷೇಣ–ಬಾಣವರ್ಷದಿಂದ, ವರ್ಷೇಣ–ವರ್ಷದಿಂದ, ಅದ್ರಿಂ–ಬೆಟ್ಟವನ್ನು, ಅಂಬುದಾಇವ–ಮೇಘಗಳಂತೆ, ಅವರ್ಷನ್–ಸುರಿಸಿದರು॥೧॥ ಶ್ಯಾಮಾವದಾತಃ–ಶ್ಯಾಮಲವಾಗಿಯು, ನಿರ್ಮಲವಾಗಿಯು ಇರುವವಿಷ್ಣುಃ–ವಿಷ್ಣುವು, ನೀಲೈಃ–ಕಪ್ಪಾಗಿರುವ–ತೈರ್ನಕ್ತಂಚರೋತ್ತಮೈಃ–ಆ ರಾಕ್ಷಸಶ್ರೇಷ್ಠರಿಂದ,ವರ್ಷಮಾಣೈಃ–ವರ್ಷಿಸುತಿರುವ, ಪಯೋಧರೈಃ–ಮೇಘಗಳಿಂದ, ವೃತಃ–ಸುತ್ತು ಬಾರಲ್ಪಟ್ಟ, ಅಂಜನಗಿರಿರಿವ–ಅಂಜನಪರ್ವತದಂತೆ,ಆಸೀತ್–ಆದನು॥೨॥ಶಲಭಾಃ–ಪತಂಗದಹುಳುಗಳು, ಕೇದಾರಮಿವ–ಗದ್ದೆಯನ್ನಂತೆಯು,ಪಾವಕಂ–ಅಗ್ನಿಯನ್ನು,ಮಶಕಾಇವ–ನೊಣಗಳಂತೆಯು, ಮಕರಾಃ–ಚೋರಮೀನುಗಳು,ಅರ್ಣವಮಿವ–ಸಮುದ್ರವನ್ನಂತೆಯು, ದಂಶಾಃ–ಕಾಡುನೊಣಗಳು, ಅಮೃತಘಟಂ–ಮಧ್ಯದಭಾಂಡವನ್ನು,ಯಥಾ–ಹ್ಯಾಗೆ, ಹೊಕ್ಕುತವೋ*ತಥಾ–ಹಾಗೆ,ರಕ್ಷೋಧನುರ್ಮುಕ್ತಾಃ–ರಕ್ಕಸರ ಬಿಲ್ಲುಗಳದೆಸೆಯಿಂದ ಬಿಡಲ್ಪಟ್ಟ,ವಜ್ರಾನಿಲಮನೋಜವಾಃ–ವಜ್ರ–ವಜ್ರಸಾರವಾದ,ಅನಿಲಮನೋಜವಾಃ–ವಾಯು ಮನಸ್ಸುಗಳ ವೇಗದಂತೆವೇಗವುಳ್ಳ,ಶರಾಃ–ಬಾಣಗಳು,ವಿಪರ್ಯಯೆ–ಪ್ರಳಯಕಾಲದಲ್ಲಿ, ಲೋಕಾಇವ–ಜನರಂತೆ, ಹರಿಂ–ಶ್ರೀಮಹಾವಿಷ್ಣುವಿನನ್ನು,ವಿಶಂತಿಸ್ಮ–ಹೊಂದಿದವಷ್ಟೆ॥ ಸ್ಯಂದನಗತಾಃ–ರಥಗತರಾದವರು, ಸ್ಯಂದನೈಃ–ತೇರುಗಳಿಂದಲು, ಗಜಪೃಷ್ಠಗಾಃ–ಆನೆಗಳನ್ನೇರಿದವರು,ಗಜೈಶ್ಚ–ಆನೆಗಳಿಂದಲು, ಅಶ್ವಾರೋಹಾಃ– ಸವಾರರು,ಅಶ್ವೈಶ್ಚ–ಕುದುರೆಗಳಿಂದಲು, ಅಂಬರೆ–ಗಗನದಲ್ಲಿ, ಚರಾಃ–ತಿರುಗುತಿರುವ,ಪಾದಾತಾಶ್ಚ–ಕಾಲಾಳುಗಳೊಡದ, ಗಿರಿಸಂನಿಭಾಃ–ಪರ್ವತಸದೃಶರಾದ,ರಾಕ್ಷಸೇಂದ್ರಾಃ–ಅಸುರಾಧಿಪತಿಗಳು, ಶರಶಕ್ತ್ಯೃಷ್ಟಿತೋಮರೈಃ –ಬಾಣಗಳಿಂದಲು, ಶಕ್ತ್ಯಾಯುಧಗಳಿಂದಲು,ದಂಡೆಗಳಿಂದಲು,ತೋಮರಾಯುಧಗಳಿಂದಲೂ

---

ರುವ ಕಲ್ಲುಗಳುಳ್ಳ ಕಪ್ಪಾಗಿ ಕಾಣುವ ದೊಡ್ಡ ಬೆಟ್ಟದಂತೆ ಚಲನವಾಯಿತು ॥೬೦॥ ಬಳಿಕಾ ರಾಕ್ಷಸೋತ್ತಮರಾದರೆ ಶ್ರೀಮನ್ನಾರಾಯಣನಂ ಸುತ್ತುಬಾರಿಕೊಂಡು ರಕ್ತಮಾಂಸಗಳಿಂದ ವ್ಯಾಪ್ತಂಗಳಾದ, ಮತ್ತೆ ಪ್ರಳಯಾಗ್ನಿಯಂತೆ ಕಡುಭಯಂಕರವಾದ ಆಯುಧ ಶ್ರೇಷ್ಠಗಳಿಂದ ಅನೇಕ ವಿಧವಾಗಿ ಹೊಡೆದವರಾದರು. ॥೬೧॥

—•••*ಇಂತು ಶ್ರೀಮದುತ್ತರ ರಾಮಾಯಣದೊಳ್ ೬ ನೇ ಸರ್ಗಂ ಮುಗಿದುದು.*•••—

ಘನಗರ್ಜನೆಯಂ ಗೈಯುತಿರುವ ಆ ರಾಕ್ಷಸರೆಂಬ ಮೇಘಗಳು ನಾರಾಯಣನೆಂಬ ಬೆಟ್ಟದಲ್ಲಿ ಬಾಣವರ್ಷವೆಂಬ ವರ್ಷದಿಂದ ಕಾಲಮೇಘಗಳು ಮಹಾ ಪರ್ವತದಲ್ಲಿ ಮಳೆಯನ್ನು ಸುರಿಯುವಂತೆ ಸುರಿಸುತಿದ್ದರು ॥ಆಗ ನಿರ್ಮಲಮೂರ್ತಿಯಾದಶ್ರೀಮನ್ಮಹಾವಿಷ್ಣುವು ಕಪ್ಪಾಗಿರುವ ಆರಕ್ಕಸರಿಂದೊಡಗೂಡಿದವನಾಗಿ ಮೇಘಸಹಿತವಾದ ಅಂಜನ ಪರ್ವತದಂತೆ ಹೊಳೆಯುತ್ತಿದ್ದನು ॥೨॥ಆ ಕಾಲದೊಳ್ ಕದನವಂಗೈಯ್ಯುತಿರುವ ಆರಕ್ಕಸರಿಂದ ಶೆಳೆಯಲ್ಪಡುತಿರುವಬಿಲ್ಲುಗಳದೆಸೆಯಿಂದ ಬಿಡಲ್ಪಟ್ಟ ಆ ಬಾಣಗಳು ಪತಂಗದ ಹುಳುಗಳುಪಾದಿಗಳಂ ಹೊಂದುವೊಪಾದಿಯಾಗಿಯು, ನೊಣಗಳು ಅಗ್ನಿಯೊಳ್ ಬೀಳುವಂತೆಯು, ಮದ್ಯದ ಭಾಂಡದಲ್ಲಿ ಕಾಡು ನೊಣಗಳು ಮುಚ್ಚುವಂತೆಯು, ಚೋರ ಮೀನುಗಳು ಮಹಾಕಡಲಿನೊಳ್ ಹ್ಯಾಗೆ ಪ್ರವೇಶಿಸುವವೋ ಮತ್ತು ಮಹಾ ಪ್ರಳಯಕಾಲದಲ್ಲಿ ಪ್ರಜೆಗಳೆಲ್ಲರು ಶ್ರೀಮಹಾವಿಷ್ಣುವಿನನ್ನು ಹ್ಯಾಗೆ ಹೊಂದುವರೋ ಹಾಗೆಯೆ ಶ್ರೀ ಹರಿಯಂ ಹೊಕ್ಕು ತಿದ್ದವು ॥೪॥ ತದನಂತರದಲ್ಲಿ, ತೇರುಗಳನ್ನೇರಿದವರು ತೇರುಗಳಿಂದಲು, ಗಜಗತರಾದವರು ಗಜಗಳಿಂದಲು, ಕುದುರೆ ಸವಾರರು ಕುದುರೆಗಳಿಂದಲೂ, ಬರುತಿರುವಗಿರಿಸದೃಶರಾದ ಆ ರಾಕ್ಷಸಶ್ರೇಷ್ಠರೆಲ್ಲರು ಶ್ರೀಹರಿಯನ್ನು ಸುತ್ತುಬಾರಿಕೊಂಡು ಶಕ್ತ್ಯಾಯುಧದಿಂದಲೂ,ದೊಣ್ಣೆಗಳಿಂದಲು, ತೋಮರಾಯುಧಗಳಿಂದಲೂ ಸಹ ಹೊಡೆಯುತಿರುವರಾಗಿ ಪ್ರಾಣಾಯಾಮಗಳು ಬ್ರಾಂಹಣನನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೋಮರೈಃ । ನಿರುಚ್ಛ್ವಾಸಂಹರಿಂಚಕ್ರುಃಪ್ರಾಣಾಯಾಮಇವದ್ವಿಜಂ ॥೬॥ ನಿಶಾಚರೈಸ್ತಾಡ್ಯಮಾನೋಮೀನೈರಿವಮ
ಹೋದಧಿಃ । ಶಾರ್ಜಮಾಯಮ್ಯದುರ್ಧರ್ಷೋರಾಕ್ಷಸೇಭ್ಯೋಸೃಜಚ್ಛರಾನ್ ॥೭॥ ಶರೈಃಪೂರ್ಣಾಯತೋತ್ಸೃಷ್ಟೈರ್ವಜ್ರ
ಕಲ್ಪೈರ್ಮನೋಜವೈಃ । ಚಿಚ್ಛೇದತಿಲಶೋವಿಷ್ಣುಃಶತಶೋಥಸಹಸ್ರಶಃ ॥೮॥ ವಿದ್ರಾವ್ಯಶರವರ್ಷೇಣಮೇಘಂವಾಯುರಿವೋ
ತ್ಥಿತಮ್। ಪಾಂಚಜನ್ಯಂಮಹಾಶಂಖಂಪ್ರದಧ್ಮೌಪುರುಷೋತ್ತಮಃ ॥೯॥ ಸೋಂಬುಜೋಹರಿಣಾಧ್ಮಾತ ಸ್ಸರ್ವಪ್ರಾಣೇನ
ಶಂಖರಾಟ್ । ರರಾಸಭೀಮನಿರ್ಹ್ರಾದಃತ್ರೈಲೋಕ್ಯಂವ್ಯಥಯನ್ನಿವ ॥ ೧೦ ॥ ಶಂಖರಾಜರವಸ್ಸೋಥತ್ರಾಸಯಾಮಾಸ ರಾ
ಕ್ಷಸಾನ್। ಮೃಗರಾಜಇವಾರಣ್ಯೇಸಮದಾನಿವಕುಂಜರಾನ್ ॥೧೧॥ ನಶೇಕುರಶ್ವಾಸ್ಸಂಸ್ಥಾತುಂವಿಮದಾಃಕುಂಜರಾಭವನ್।
ಸ್ಯಂದನೇಭ್ಯಃಚ್ಯುತಾವೀರಾಶ್ಶಂಖರಾವಿತದುರ್ಬಲಾಃ ॥೧೨॥ ಶಾರ್ಜಚಾಪವಿನಿರ್ಮುಕ್ತಾವಜ್ರತುಲ್ಯಾನನಾಶ್ಶರಾಃ। ವಿ
ದಾರ್ಯತಾನಿರಕ್ಷಾಂಸಿಸುಪುಂಖಾವಿವಿಶುಃಕ್ಷಿತಿಮ್ ॥೧೩॥ ಭಿದ್ಯಮಾನಾಶ್ಶರೈಸ್ಸಂಖ್ಯೇನಾರಾಯಣಧನುಶ್ಚ್ಯುತೈಃ।ನಿಪೇತೂ

---

ಸಹ, ಹರಿಂ–ವಿಷ್ಣುವಿನನ್ನು, ಪ್ರಾಣಾಯಾಮಃ– ಪ್ರಾಣಾಯಾಮವು, ದ್ವಿಜಮಿವ–ಬ್ರಾಹ್ಮಣನನ್ನೋಪಾದಿಯಲ್ಲಿ, ನಿರುಚ್ಛ್ವಾಸಂ–ಉಸುರುಬಿಡುವದ ಕ್ಕೆ ಅವಕಾಶವಿಲ್ಲದವನನ್ನಾಗಿ,ಚಕ್ರುಃ–ಮಾಡಿದರು॥೬॥ಮೀನೈಃ–ಮೀನುಗಳಿಂದ,ಮಹೋದಧಿರಿವ–ಕಡಲಿನಂತೆ,ನಿಶಾಚರೈಃ–ರಾಕ್ಷಸರಿಂದ, ತಾಡ್ಯಮಾನಃ– ಹೊಡೆಯಲ್ಪಡುತಿರುವ, ದುರ್ಧರ್ಷಃ–ತಿರಸ್ಕರಿಸಲಸಾಧ್ಯನಾದ ಶ್ರೀಮಹಾವಿಷ್ಣುವು,ಶಾರ್ಜಂ– ಶಾರ್ಜವೆಂಬ ಧನುಸ್ಸನ್ನು,ಆಯಮ್ಯ–ಸೆಳೆದು ಬಿಗಿಸಿ,ರಾಕ್ಷ ಸೇಭ್ಯಃ–ಅಸುರರಿಗೋಸ್ಕರ, ಶರಾನ್–ಬಾಣಗಳನ್ನು, ಅಸೃಜತ್–ಬಿಟ್ಟನು॥೭॥ಅಥ–ಬಳಿಕ, ವಿಷ್ಣುಃ–ಶ್ರೀಮಹಾವಿಷ್ಣುವು, ಪೂರ್ಣಾಯತೋತ್ಸೃಷ್ಟೈಃ– ಬಹಳನಾಗಿ ಸೆಳೆಯಲ್ಪಟ್ಟು ಬಿಡಲ್ಪಟ್ಟ, ವಜ್ರಕಲ್ಪೈಃ–ವಜ್ರಾಯುಧಕ್ಕೆ ಸಮಾನವಾದ,ಮನೋಜವೈಃ–ಮನೋವೇಗವುಳ್ಳ,ಶರೈಃ–ಬಾಣಗಳಿಂದ,ತಿಲಶಃ– ಎಳ್ಳಿನಂತೆ ಲೇಶವಾಗಿಯು, ಶತಶಃ–ನೂರಾರುಬಗೆಯಾಗಿಯು, ಸಹಸ್ರಶಃ–ಅನೇಕವಿಧವಾಗಿಯು,ಚಿಚ್ಛೇದ–ಕತ್ತರಿಸಿದನು.॥೮॥ಪುರುಷೋತ್ತಮಃ–ನಾರಾಯಣ ಮೂರ್ತಿಯು,ಶರವರ್ಷೇಣ–ಬಾಣವರ್ಷದಿಂದ,ವಾಯುಃ–ಗಾಳಿಯು,ಉತ್ಥಿತಂ–ಹುಟ್ಟಿದ,ಮೇಘಮಿವ–ಮೇಘವನ್ನಂತೆ,ವಿದ್ರಾವ್ಯ–ತರುಬಿ,ಪಾಂಚಜನ್ಯಂ– ಪಾಂಚಜನ್ಯವೆಂಬ, ಮಹಾಶಂಖಂ–ದೊಡ್ಡ ಶಂಖವನ್ನು, ಪ್ರದಧ್ಮೌ–ಪೂರಿಸಿದನು॥೯॥ ಹರಿಣಾ–ವಿಷ್ಣುವಿನಿಂದ, ಸರ್ವಪ್ರಾಣೇನ–ಸರ್ವಶಕ್ತಿಯಿಂದ,ಧ್ಮಾತಃ– ಪೂರಿಸಲ್ಪಟ್ಟ, ಅಂಬುಜಃ–ನೀರಿನಲ್ಲಿ ಹುಟ್ಟಿದ, ಶಂಖರಾಟ್–ಶಂಖಶ್ರೇಷ್ಠವು,ಭೀಮನಿರ್ಹ್ರಾದಃ–ಭಯಂಕರಧ್ವನಿಯುಳ್ಳದ್ದಾಗಿ,ತ್ರೈಲೋಕ್ಯಂ–ಲೋಕತ್ರಯ ವನ್ನು, ವ್ಯಥಯನ್ನಿವ–ಕ್ಷೋಭಗೊಳಿಸುವಂತೆ, ರರಾಸ–ಕೂಗಿತು ॥೧೦॥ ಅಥ–ಬಳಿಕ, ಸಶಂಖರಾಜರವಃ–ಆ ಉತ್ತಮವಾದ ಶಂಖಧ್ವನಿಯು, ಮೃಗರಾ ಜಃ–ಸಿಂಹವು–ಅರಣ್ಯೇ–ಕಾಡಿನಲ್ಲಿ, ಸಮದಾನ್–ಮದಯುಕ್ತವಾದ, ಕುಂಜರಾನಿವ–ಆನೆಗಳನ್ನೋಪಾದಿಯಲ್ಲಿ, ರಾಕ್ಷಸಾನ್–ರಕ್ಕಸರನ್ನು, ತ್ರಾಸಯಾಮಾ ಸ–ಹೆದರಿಸಿತು. ॥೧೧॥ ಶಂಖರಾವಿತದುರ್ಬಲಾಃ–ಶಂಖಧ್ವನಿಯಿಂದ ಬಲಹೀನವಾದ, ಅಶ್ವಾಃ–ಕುದುರೆಗಳು, ಸಂಸ್ಥಾತುಂ–ನಿಲ್ಲುವದಕ್ಕೆ, ನಶೇಕುಃ–ಸಮ ರ್ಥಗಳಾಗಲಿಲ್ಲ, ಕುಂಜರಾಃ–ಆನೆಗಳು, ವಿಮದಾಃ–ಮದಹೀನಗಳು, ಭವನ್–ಆದವು, ವೀರಾಃ–ಶೂರರು, ಸ್ಯಂದನೇಭ್ಯಃ–ರಥಗಳ ದೆಸೆಯಿಂದ, ಚ್ಯುತಾಃ– ಉರುಳಿಕೊಂಡರು ॥ ೧೨ ॥ ಶಾರ್ಜಚಾಪ ವಿನಿರ್ಮುಕ್ತಾಃ– ಶಾರ್ಜವೆಂಬ ಧನುಸ್ಸಿನಿಂದ ಬಿಡಲ್ಪಟ್ಟ, ವಜ್ರತುಲ್ಯಾನನಾಃ – ವಜ್ರಾಯುಧಕ್ಕೆ ಸಮಾ ನವಾದ ಮುಖಗಳುಳ್ಳ, ಸುಪುಂಖಾಃ–ಒಳ್ಳೇ ಕೊಂಕಿಗಳುಳ್ಳ, ಶರಾಃ–ಬಾಣಗಳು,ತಾನಿರಕ್ಷಾಂಸಿ – ಆ ರಕ್ಕಸರನ್ನು, ವಿದಾರ್ಯ–ಸೀಳಿ, ಕ್ಷಿತಿಂ–ನೆಲವ ನ್ನು, ವಿವಿಶುಃ–ಹೊಕ್ಕಿದವು ॥೧೩ ॥ ಸಂಖ್ಯೇ–ಯುದ್ಧದಲ್ಲಿ, ನಾರಾಯಣ ಧನುಶ್ಚ್ಯುತೈಃ– ಶ್ರೀಮಹಾವಿಷ್ಣುವಿನ ಬಿಲ್ಲಿನ ದೆಸೆಯಿಂದಬೀಳುತಿರುವ,ಶರೈಃ–

---

ನಿರುಚ್ಛ್ವಾಸನನ್ನಾಗಿ ಮಾಡುವಂತೆ ಶ್ರೀಮನ್ನಾರಾಯಣ ಮೂರ್ತಿಯನ್ನು ಉಸುರು ಬಿಡಲವಕಾಶ ವಿಲ್ಲದವನನ್ನಾಗಿ ಮಾಡಿದರು ॥೬॥ ಆ ರಕ್ಕಸರಿಂದ ಎಡಬಿಡದೆ ಪರಿಪರಿಯಾಗಿ ಹೊಡೆಯಲ್ಪಡುತ್ತಿರುವ ಆ ಪುಂಡರೀಕಾಕ್ಷನು, ಮೀನು ಗಳಿಂದ ತಾಡ್ಯಮಾನವಾದ ಮಹೋದಧಿಯಂತೆ ದುರ್ಧರ್ಷನಾಗಿ ಶಾರ್ಜವೆಂಬ ಕೋದಂಡವಂ ಸ್ಪರ್ಶಿಸಿ ಆ ಅಸುರರಿ ಗೆ ಸರಳುಗಳನ್ನೆಸೆಯುತ್ತಿರುವನಾಗಿ ಮನೋವೇಗಮುಳ್ಳ ಮತ್ತು ವಜ್ರಾಯುಧ ಸಮಾನವಾಗಿ ಹದವುಳ್ಳ ಪೂರಾ ಸೆಳೆಯಲ್ಪಟ್ಟು ಬಿಡಲ್ಪಡುತಿರುವ ಆ ಬಾಣಗಳಿಂದ ತಿಲಾಂಶವಾಗಿಯು ನೂರಾರು ತುಂಡುಗಳಾಗಿಯು ಸಾವಿರಾರು ಭಾ ಗಗಳಾಗಿಯು ಛಿಂದಿ ಛಿಂದಿ ಯಾಗುವಂತೆ ಛೇದಿಸಿದನು ॥೮॥ ವಾಯುವು ಮೇಘವಂ ಓಡಿಸಿದಂತೆ ಆ ಪುರುಷೋತ್ತ ಮನು ಬಾಣವರ್ಷದಿಂದಾ ರಾಕ್ಷಸರಂ ತರುಬಿ ಪಾಂಚಜನ್ಯವೆಂಬ ಮಹಾಶಂಖವಂ ಪೂರಿಸಿದನು ॥೯॥ ಬಳಿಕ ನಾರಾ ಯಣನಿಂದ ಪೂರಿತವಾದ ಆ ಶಂಖಶ್ರೇಷ್ಠವು ಕಡುಭಯಂಕರವಾದ ಧ್ವನಿಯುಳ್ಳದ್ದಾಗಿ ಲೋಕತ್ರಯವನ್ನು ವ್ಯಥೆ ಗೊಳಿಸುವಂತೆ ಶಬ್ದಾಯಮಾನ ವಾಯಿತು ॥೧೦॥ ದೊಡ್ಡ ಕಾಡಿನಲ್ಲಿರುವ ಮದವೇರಿದ ಕಾಡಾನೆಗಳನ್ನು ಕಂಡು ಸಿಂಹ ದೋಪಾದಿಯಲ್ಲಿ ಆ ಶಂಖಘೋಷೆಯು ಮಹದಾಡಂಬರವಂ ಮಾಡುತಿರುವ ಆ ರಕ್ಕಸರನ್ನೆಲ್ಲ ಗಡಗಡನೆ ನಡುಗಿಸಿತು॥ ಈ ಪರಿಯಾದ ಪಾಂಚಜನ್ಯದ ಘೋಷೆಯಂ ಕೇಳಿ ಕುದುರೆಗಳೆದುರಾಗಿ, ನಿಲ್ಲದೇಹೋದವು, ದ್ವಿರದಗಳು ವಿಮದಗ ಳಾದವು. ವೀರರಾದ ರಥಿಕರು ಬಲಹೀನರಾಗಿ, ತೇರುಗಳಿಂದ ಕೆಳಗುರುಳಿದರು ॥೧೨॥ ಮತ್ತು ಶಾರ್ಜದಿಂದ ಬಿಡಲ್ಪ ಟ್ಟ ವಜ್ರಾಯುಧದೋಪಾದಿಯಾಗಿ ಬಹಳ ಹದವುಳ್ಳ ಬಾಣಗಳು ಆ ರಕ್ಕಸರನ್ನೆಲ್ಲ ಖಂಡಿಸಿ ನೆಲದಮೇಲೆ ಬೀಳುತಿದ್ದ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಾಕ್ಷಸಾಭೂಮೌಶೈಲಾವಜ್ರಹತಾಇವ ॥೧೪॥ ರಾಕ್ಷಸಾಸ್ತೇವ್ರಣೈರ್ಗಾತ್ರೈರಕ್ತಧಾರಾಮಸುಸ್ರುವುಃ । ತೇವಿಷ್ಣುಶರಸಂಕೃತ್ತಾಸ್ಸ್ವರ್ಣಧಾತುಮಿವಾಚಲಾಃ ॥೧೫॥ ಶಂಖರಾಜರವಶ್ಚಾಪಿಶಾರ್ಙ್ಗಚಾಪರವಸ್ತಥಾ । ರಾಕ್ಷಸಾನಾಂರವಾಂಶ್ಚಾಪಿಗ್ರಸತೇವೈಷ್ಣವೋರವಃ ॥೧೬॥ ತೇಷಾಂಶಿರೋಧರಾನ್ ಸೂತಾನ್ ಶರಧ್ವಜಧನೂಂಷಿಚ । ರಥಾನ್ ಪತಾಕಾಂಸ್ತೂಣೀರಾಂಶ್ಚಿಚ್ಛೇದಸಹರಿಶ್ಶರೈಃ ॥ ೧೭ ॥ ಸೂರ್ಯಾದಿವಕರಾಘೋರಾಊರ್ಮಯಸ್ಸಾಗರಾದಿವ । ಪರ್ವತಾದಿವನಾಗೇಂದ್ರಾಧಾರೌಘಾಇವಚಾಂಬುದಾತ್ ॥೧೮॥ ತಥಾಶಾರ್ಙ್ಗವಿನಿರ್ಮುಕ್ತಾಶ್ಶರಾನಾರಾಯಣೇರಿತಾಃ । ನಿರ್ಧಾವಂತಿತದಾತೂರ್ಣಂಶತಶೋಥಸಹಸ್ರಶಃ ॥೧೯॥ ಶರಭೇಣಯಥಾಸಿಂಹಾಸ್ಸಿಂಹೇನದ್ವಿರದಾಯಥಾ । ದ್ವಿರದೇನಯಥಾವ್ಯಾಘ್ರಾವ್ಯಾಘ್ರೇಣದ್ವೀಪಿನೋಯಥಾ ॥೨೦॥ ದ್ವೀಪಿನಾಚಯಥಾಶ್ವಾನಶ್ಶುನಾಮಾರ್ಜಾರಕಾಯಥಾ । ಮಾರ್ಜಾರೇಣಯಥಾಸರ್ಪಾಸ್ಸರ್ಪೇಣಚಯಥಾಖವಃ ॥೨೧॥

---

ಬಾಣಗಳಿಂದ, ಭಿದ್ಯಮಾನಾಃ–ಭೇದಿಸಲ್ಪಡುತಿರುವ, ರಾಕ್ಷಸಾಃ–ರಕ್ಕಸರು, ವಜ್ರಹತಾಃ–ವಜ್ರಾಯುಧದಿಂದ ಹೊಡೆಯಲ್ಪಟ್ಟ, ಶೈಲಾಇವ–ಬೆಟ್ಟಗಳಂತೆ, ಭೂಮೌ–ನೆಲದಲ್ಲಿ, ನಿಪೇತುಃ–ಬಿದ್ದವ್ರು ॥೧೪॥ ವಿಷ್ಣುಶರಸಂಕೃತ್ತಾಃ–ವಿಷ್ಣುವಿನಬಾಣಗಳಿಂದಕತ್ತರಿಸಲ್ಪಟ್ಟ, ತೇರಾಕ್ಷಸಾಃ–ಆ ರಕ್ಕಸರು, ಸವ್ರಣೈಃ–ಘಾಯಗಳಿಂದೊಡಗೂಡಿದ, ಗಾತ್ರೈಃ–ಶರೀರಗಳಿಂದ, ರಕ್ತಧಾರಾಂ–ರಕುತದ ಧಾರೆಯನ್ನು, ಅಚಲಾಃ–ಬೆಟ್ಟಗಳು, ಸ್ವರ್ಣಧಾತುಮಿವ–ಭಂಗಾರದ ಗೇಖಿಗಳನ್ನಂತೆ, ಅಸುಸ್ರುವುಃ–ಸುರಿಸಿದರು ॥೧೫॥ ಶಂಖರಾಜರವಶ್ಚಾಪಿ–ಶ್ರೇಷ್ಠವಾದ ಶಂಖದ ಧ್ವನಿಯುನ್ನು, ತಥಾ–ಹಾಗೆಯೆ, ಶಾರ್ಙ್ಗಚಾಪರವಃ–ಶಾರ್ಙ್ಗವೆಂಬ ಬಿಲ್ಲನಧ್ವನಿಯೆಂಬ, ವೈಷ್ಣವಃ–ವಿಷ್ಣುಸಂಬಂಧವಾದ, ರವಃ–ಧ್ವನಿಯು, ರಾಕ್ಷಸಾನಾಂ–ಅಸುರರ, ರವಾಂಶ್ಚಾಪಿ–ಘೋಷೆಗಳನ್ನೂಕೂಡ, ಗ್ರಸತೇ–ನುಂಗುತಿತ್ತು ॥ ೧೬ ॥ ಸಹರಿಃ–ಆ ಶ್ರೀಮನ್ನಾರಾಯಣಮೂರ್ತಿಯು, ಶರೈಃ–ಬಾಣಗಳಿಂದ, ತೇಷಾಂ–ಆ ರಕ್ಕಸರ, ಶಿರೋಧರಾನ್–ಕಂಠಗಳನ್ನು, ಸೂತಾನ್–ಸಾರಥಿಗಳನ್ನು, ಶರಧ್ವಜಧನೂಂಷಿಚ–ಬಾಣಗಳನ್ನು ಧ್ವಜಗಳನ್ನು ಧನುಸ್ಸುಗಳನ್ನು, ರಥಾನ್–ತೇರುಗಳನ್ನು, ಪತಾಕಾಃ–ಚಿಕ್ಕನಿಶಾನಿಗಳನ್ನೂ, ತೂಣೀರಾನ್–ಸರಳು ಬತ್ತಿಕೆಗಳನ್ನು, ಚಿಚ್ಛೇದ–ಕತ್ತರಿಸಿದನು ॥ ೧೭ ॥ ಸೂರ್ಯಾತ್–ಸೂರ್ಯನ ದೆಸೆಯಿಂದ, ಕರಾಇವ–ಕಿರಣಗಳೋಪಾದಿಯಾಗಿಯು, ಸಾಗರಾತ್–ಕಡಲಿನ ದೆಸೆಯಿಂದ, ಊರ್ಮಯಇವ–ತೆರೆಗಳಂತೆಯು, ಪರ್ವತಾತ್–ಬೆಟ್ಟದ ದೆಸೆಯಿಂದ,ನಾಗೇಂದ್ರಾಇವ–ಸರ್ಪಶ್ರೇಷ್ಠಗಳಂತೆಯು, ಅಂಬುದಾತ್–ಮೇಘದ ದೆಸೆಯಿಂದ, ಧಾರೌಘಾಇವ–ಉದಕಧಾರಗಳಂತೆಯು,ಅಥ–ಬಳಿಕ,ತಥಾ–ಹಾಗೆ, ನಾರಾಯಣೇರಿತಾಃ–ವಿಷ್ಣುಪ್ರೇರಿತಗಳಾದ,ಶಾರ್ಙ್ಗವಿನಿರ್ಮುಕ್ತಾಃ–ಶಾರ್ಙ್ಗವೆಂಬ ಧನುಸ್ಸಿನಿಂದ ಬಿಟಲ್ಪಟ್ಟ,ಶರಾಃ–ಬಾಣಗಳು, ತದಾ–ಆಕಾಲದಲ್ಲಿ,ಶತಶಃ–ನೂರುಬಗೆಯಾಗಿಯು, ಸಹಸ್ರಶಃ–ಸಾವಿರಾರುವಿಧವಾಗಿಯು, ತೂರ್ಣಂ–ಜಾಗ್ರತೆಯಾಗಿ, ನಿರ್ಧಾವಂತಿ–ಹೊರಟುಬಂದವ್ರು॥ಶರಭೇಣ–ಶರಭದಿಂದ, ಸಿಂಹಾಃ–ಸಿಂಹಗಳು,ದ್ರಾವಿತಾಃ–ತರುಬಿಸಲ್ಪಟ್ಟವಾಗಿ, ಯಥಾದ್ರವಂತಿ–ಹ್ಯಾಗೆ ಓಡಿಹೋಗುತ್ತವ್ರೋ, ಸಿಂಹೇನ–ಸಿಂಹದಿಂದ, ದ್ವಿರದಾಃ–ಆನೆಗಳು, ಯಥಾ–ಹ್ಯಾಗೋ,ದ್ವಿರದೇನ–ಆನೆಯಿಂದ,ವ್ಯಾಘ್ರಾಃ–ಹುಲಿಗಳು, ಯಥಾ–ಹ್ಯಾಗೋ, ವ್ಯಾಘ್ರೇಣ–ದೊಡ್ಡ ಹುಲಿಯಿಂದ, ದ್ವೀಪಿನೋಯಥಾ–ಚಿಕ್ಕ ಹುಲಿಗಳು ಹ್ಯಾಗೋ, ದ್ವೀಪಿನಾ–ಚಿಕ್ಕ ಹುಲಿಯಿಂದ, ಶ್ವಾನೋಯಥಾ–ನಾಯಿಗಳು ಹ್ಯಾಗೋ,ಶುನಾ–ನಾಯಿಯಿಂದ, ಮಾರ್ಜಾರಕಾಯಥಾ–ಬೆಕ್ಕುಗಳು ಹ್ಯಾಗೋ, ಮಾರ್ಜಾರೇಣ–ಬೆಕ್ಕಿನಿಂದ, ಸರ್ಪಾಯಥಾ–ಹಾವುಗಳು, ಹ್ಯಾಗೋ, ಸರ್ಪೇಣ–ಸರ್ಪದಿಂದ, ಆಖವಃ–ಇಲಿಗಳು, ಯಥಾ–ಹ್ಯಾಗೋ, ತಥಾ–ಹಾಗೆ, ಯುದ್ಧೇ–ಯುದ್ಧದಲ್ಲಿ,ತೇರಾಕ್ಷಸಾಃ–ಆರಾಕ್ಷಸರು,ಪ್ರಭವಿಷ್ಣುನಾ–ಇನ್ನು ವೃದ್ಧಿಹೊಂದುತಿರುವ,ವಿಷ್ಣುನಾ–ವಿಷ್ಣುವಿನಿಂದ,ದ್ರಾವಿತಾಃ–ಓಡಿಸಲ್ಪಟ್ಟವರಾಗಿ,ದ್ರವಂತಿ–ಓಡಿಹೋದರು,ಅನ್ಯೇಚ– ಕೆಲವರು–ಮಹೀತಲೇ–ನೆಲದಲ್ಲಿ,

---

ವು ॥೧೩॥ ವಜ್ರಾಯುಧದಿಂದ ಹೊಡೆಯಲ್ಪಟ್ಟ ಬೆಟ್ಟಗಳು ಭೂಮಿಯಲ್ಲಿ ಬೀಳುವಂತೆ-ಶ್ರೀಮನ್ನಾರಾಯಣನ ಬಿಲ್ಲಿನಿಂದ ಬಿಡಲ್ಪಟ್ಟ ಬಾಣಗಳಿಂದ ಭೇದಿಸಲ್ಪಡುತಿರುವರಾಗಿ, ಆ ರಾಕ್ಷಸರೆಲ್ಲರು ನೆಲದಲ್ಲಿಬಿದ್ದು ಹೋದರು ॥೧೪॥ ಈ ಪರಿಯಾಗಿ ಹರಿಯ ಶರಗಳಿಂದ ಕತ್ತರಿಸಲ್ಪಡುತಿರುವ ರಕ್ಕಸರು, ಗಾಯಗಳಿಂದೊಡಗೂಡಿದ ಅಂಗಗಳಿಂದ ರಕುತವಂ ಸುರಿಸುತಿರುವರಾಗಿ, ಸ್ವರ್ಣಧಾತುಗಳಂ ಸ್ರವಿಸುತಿರುವ ಪರ್ವತಗಳಂತೆ ಹೊಳೆಯುತಿದ್ದರು ॥೧೫॥ ಶಂಖೋತ್ತಮದ ಧ್ವನಿಯು, ಶಾರ್ಙ್ಗಶಬ್ದವು, ಮತ್ತೆ ವೈಕುಂಠನಘೋಷೆಯು ಸಹ ಆ ರಕ್ಕಸರ ಶಬ್ದವನ್ನು ನುಂಗುತಿದ್ದವು ॥೧೬॥ ಬಳಿಕಾ ಹೃಷೀಕೇಶನು, ಆ ರಕ್ಕಸರ ಶಿರಗಳನ್ನು, ಸಾರಥಿಗಳನ್ನು ಸರಳುಗಳನ್ನು ಧ್ವಜಗಳನ್ನು, ಧನುಸ್ಸುಗಳನ್ನು, ತೇರುಗಳನ್ನು, ನಿಶಾನಿಗಳನ್ನು, ಸರಳು ಬತ್ತಳಿಕೆಗಳನ್ನು ಇವುಗಳನ್ನೆಲ್ಲ ಕತ್ತರಿಸಿದನು ॥೧೭॥ ಸೂರ್ಯನ ದೆಶೆಯಿಂದ ಕಿರಣಗಳು ಹ್ಯಾಗೆಬರುವವೋ, ಕಡಲಿನಿಂದ ತೆರೆಗಳುಹ್ಯಾಗೆ ಬರುತಿರುವವೋ, ಗಿರಿಗಳ ಜರತೆಗಳಿಂದ ಸರ್ಪಶ್ರೇಷ್ಠಗಳು ಹ್ಯಾಗೆ ನುಗ್ಗಿಬರುವವೋ, ಮತ್ತೆ ಮೇಘಗಳಿಂ ಉದಕಧಾರೆಗಳು ಹ್ಯಾಗೆಬೀಳುವವೋ, ಹಾಗೆಯೆ, ಶಾರ್ಙ್ಗವೆಂಬ ಬಿಲ್ಲಿನಿಂದ ಬಿಡಲ್ಪಟ್ಟ ನಾರಾಯಣ ಪ್ರೇರಿತಗಳಾದ ಅನೇಕ ನಾರಾಚಗಳು ಕಡುಜಾಗ್ರತೆಯಾಗಿ ನುಗ್ಗಿಬರುತಿದ್ದವು ॥೧೯॥ ಶರಭಮೃಗದಿಂದ ಸಿಂಹಗಳುಹ್ಯಾಗೆಯೊ, ಸಿಂಹದಿಂದ ಆನೆಗಳು ಹ್ಯಾಗೆಯೋ, ಆನೆಯಿಂದಹುಲಿಗಳು ಹ್ಯಾಗೆಯೋ, ದೊಡ್ಡಹುಲಿಯಿಂದ ಚಿರತೆಗಳು ಹ್ಯಾಗೋ ಚಿರತೆಯಿಂದ ಶುನಕಗಳು ಹ್ಯಾಗೋ ನಾಯಿಯಿಂದ ಬೆಕ್ಕುಗಳು ಹ್ಯಾಗೊ ಬೆಕ್ಕಿನಿಂದ ಹಾವುಗಳು ಹ್ಯಾಗೊ ಹಾವಿನಿಂದ ಇಲಿಗಳು ಹ್ಯಾಗೊ ಹಾಗೆಯೇ ವರ್ಧಿಷ್ಣುವಾದ ಶ್ರೀಮಹಾವಿಷ್ಣುವಿನಿಂದ ತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಥಾತೇರಾಕ್ಷಸಾಯುದ್ಧೆ ವಿಷ್ಣುನಾಪ್ರಭವಿಷ್ಣುನಾ । ದ್ರವಂತಿದ್ರಾವಿತಾಶ್ಚಾನ್ಯೇ ಶಾಯಿತಾಶ್ಚ ಮಹೀತಲೆ ॥೨೧॥ ರಾಕ್ಷಸಾನಾಂಸಹಸ್ರಾಣಿನಿಹತ್ಯಮಧುಸೂದನಃ । ವಾರಿಜಂನಾದಯಾಮಾಸತೋಯದಂಸುರರಾಡಿವ ॥೨೨॥ ನಾರಾಯಣ ಶರತ್ರಸ್ತಂಶಂಖನಾದಸುವಿಹ್ವಲಂ। ಯಯೌಲಂಕಾಮಭಿಮುಖಂಪ್ರಭಗ್ನಂರಾಕ್ಷಸಂಬಲಂ ॥೨೩॥ ಪ್ರಭಗ್ನೆರಾಕ್ಷಸಬಲೆನಾರಾಯಣಶರಾಹತೆ । ಸುಮಾಲೀಶರವರ್ಷೇಣನಿವವಾರರಣೆಹರಿಂ ॥೨೪॥ ಸತುತಂಛಾದಯಾಮಾಸ ನೀಹಾರಇವಭಾಸ್ಕರಂ। ರಾಕ್ಷಸಾಃಸತ್ವ ಸಂಪನ್ನಾಃಪುನರ್ಧೈರ್ಯಂಸಮಾದಧುಃ ॥ ೨೫॥ ಅಥಸೋಭ್ಯಪತದ್ರೋಷಾದ್ರಾಕ್ಷಸೋಬಲದರ್ಪಿತಃ।ಮಹಾನಾದಂಪ್ರಕುರ್ವಾಣೋರಾಕ್ಷಸಾರ್ನ್ ಜೀವಯನ್ನಿವ ॥ ೨೬ ॥ ಉತ್ಕ್ಷಿಪ್ಯಹೇಮಾಭರಣಂಕರಂಕರಮಿವದ್ವಿಪಃ । ರರಾಸರಾಕ್ಷಸೋಹರ್ಷಾತ್ಸತಟಿತ್ತೋಯದೋಯಥಾ ॥೨೭॥ ಸುಮಾಲೇರ್ನದತಸ್ತಸ್ಯ ಶಿರೋಜ್ವಲಿತಕುಂಡಲಮ್॥ಚಿಚ್ಛೇದಯಂತುರಶ್ಚಾಶ್ಚ ಭ್ರಾಂತಾಸ್ತಸ್ಯತುರಕ್ಷಸಃ ॥೨೮॥ ತೈರಶ್ವೈರ್ಭ್ರಾಮ್ಯತೆಭ್ರಾಂತೈಸ್ಸುಮಾಲೀರಾಕ್ಷಸೇಶ್ವರಃ । ಇಂದ್ರಿಯಾ

---

ಶಾಯಿತಾಃ-ಮಲಗಿಸಲ್ಪಟ್ಟರು ॥೨೧॥ಮಧುಸೂದನಃ-ಶ್ರೀಮಹಾವಿಷ್ಣುವು, ರಾಕ್ಷಸಾನಾಂ-ಅಸುರರ,ಸಹಸ್ರಾಣಿ-ಸಹಸ್ರಗಳನ್ನು,ನಿಹತ್ಯ-ಕೊಂದು,ಸುರರಾಟ್-ಇಂದ್ರನು, ತೋಯದಮಿವ-ಮೇಘಗಳನ್ನೋಪಾದಿಯಲ್ಲಿ, ವಾರಿಜಂ-ಶಂಖವನ್ನು, ನಾದಯಾಮಾಸ-ಧ್ವನಿಸಿದನು ॥೨೨॥ ನಾರಾಯಣಶರತ್ರಸ್ತಂ-ವಿಷ್ಣುವಿನಬಾಣಗಳಿಂದ ಹೆದರಿದ, ಶಂಖನಾದಸುವಿಹ್ವಲಂ-ಶಂಖಧ್ವನಿಯಿಂದ ವ್ಯಾಕುಲವಾದ, ರಾಕ್ಷಸಂ-ರಕ್ಷಸ್ಸಂಬಂಧವಾದ, ಬಲಂ-ಸೇನೆಯು,ಪ್ರಭಗ್ನಂ-ಹತವಾದದ್ದಾಗಿ, ಲಂಕಾಂ-ಲಂಕಾಪಟ್ಟಣಕ್ಕೆ, ಅಭಿಮುಖಂ-ಎದುರಾಗಿ, ಯಯೌ-ಹೊರಟು ಹೋಯಿತು ॥ ೨೩॥ರಣೆ-ಕಾಳಗದಲ್ಲಿ, ನಾರಾಯಣಶರಾಹತೆ-ಶ್ರೀ ಮಹಾವಿಷ್ಣುವಿನ ಬಾಣಗಳಿಂದ ಹೊಡಿಯಲ್ಪಟ್ಟ, ರಾಕ್ಷಸಬಲೆ-ರಾಕ್ಷಸರ ಸೈನ್ಯವು, ಪ್ರಭಗ್ನೆಸತಿ-ಸೋತು ಹೋದಂಥಾದ್ದಾಗುತಿರಲೀಕಾಗಿ, ಸುಮಾಲೀ-ಸುಮಾಲಿಯು, ಶರವರ್ಷೇಣ-ಬಾಣವರ್ಷದಿಂದ, ಹರಿಂ-ವಿಷ್ಣುವಿನನ್ನು, ನಿವವಾರ-ತಡೆದನು ॥ ೨೪॥ಸತು-ಆ ಸುಮಾಲಿಯಾದರೆ, ತಂ-ಆ ನಾರಾಯಣನನ್ನು, ನೀಹಾರಃ-ಮಂಜು, ಭಾಸ್ಕರಮಿವ-ಸೂರ್ಯನಂತೆ, ಛಾದಯಾಮಾಸ-ತುಂಬಿಸಿದನು, ಸತ್ವಸಂಪನ್ನಾಃ- ಧೈರ್ಯಶಾಲಿಗಳಾದ, ರಾಕ್ಷಸಾಃ-ಅಸುರರು, ಪುನಃ-ಮತ್ತು,ಧೈರ್ಯಂ-ಧೀರತೆಯನು, ಸಮಾದಧುಃ-ಹೊಂದಿದರು ॥೨೫ ॥ಅಥ-ಬಳಕ, ಬಲದರ್ಪಿತಃ-ಸಾಮರ್ಥ್ಯದಿಂದ ಕೊಬ್ಬಿದವನಾದ, ಸರಾಕ್ಷಸೋಪಿ-ಆ ಸುಮಾಲಿಯೂ ಕೂಡ, ಮಹಾನಾದಂ-ಮಹತ್ತರವಾದ ಧ್ವನಿಯನ್ನು, ಪ್ರಕುರ್ವಾಣಃ-ಮಾಡುತಿರುವನಾಗಿ, ರಾಕ್ಷಸಾರ್ನ್-ರಕ್ಕಸರನ್ನು, ಜೀವಯನ್ನಿವ-ಬದುಕಿಸುವವನಂತೆ, ರೋಷಾತ್-ಕೋಪದ ದೆಸೆಯಿಂದ, ಅಭ್ಯಪತತ್-ಇಳಿಬಿದ್ದನು ॥೨೬ ॥ ರಾಕ್ಷಸಃ-ಸುಮಾಲಿಯು, ಹೇಮಾಭರಣಂ-ಚಿನ್ನದ ಒಡಿವೆಗಳುಳ್ಳ, ಕರಂ-ಹಸ್ತವನ್ನು, (ಹೇಮಾಭರಣಂ-ಭಂಗಾರದ ಕಟ್ಟುಗಳುಳ್ಳ) ಕರಂ-ಸೊಂಡಿಲವನ್ನು, ದ್ವಿಪಇವ-ಆನೆಯಂತೆ, ಉತ್ಕ್ಷಿಪ್ಯ-ಮೇಲಕೆತ್ತಿ, ಸತಟಿತ್ತೋಯದೋಯಥಾ-ಮಿಂಚುಗಳಿಂದೊಡಗೂಡಿದ ಮೇಘದಂತೆ, ಹರ್ಷಾತ್-ಸಂತೋಷದಿಂದ, ರರಾಸ-ಕೂಗಿದನು॥೨೭ ॥ನರ್ದತಃ-ಕುಣಿದಾಡುತಿರುವ, ತಸ್ಯಸುಮಾಲೇಃ-ಆ ಸುಮಾಲಿಯ, ಯಂತುಃ-ಸಾರಥಿಯ, ಜ್ವಲಿತಕುಂಡಲಂ-ಹೊಳೆಯುತಿರುವ ಕುಂಡಲಗಳುಳ್ಳ, ಶಿರಃ-ಶಿರಸ್ಸನ್ನು,ಚಿಚ್ಛೇದ-ಕತ್ತರಿಸಿದನು, ಕಿಂತು-ಮತ್ತೇನಂದರೆ, ತಸ್ಯರಕ್ಷಸಃ-ಆ ಸುಮಾಲಿಯು, ಅಶ್ವಾಶ್ಚ-ಕುದುರೆಗಳುನ್ನು, ಭ್ರಾಂತಾಃ-ಸ್ವೇಚ್ಛೆಯಾಗಿ ತಿರುಗುತಿದ್ದವು ॥ ೨೮ ॥ ಧೃತಿಹೀನಃ-ಹೇಡಿಯಾದ, ನರಃ-ಮನುಷ್ಯನು, ಭ್ರಾಂತೈಃ-ಚಂಚಲವಾದ, ಇಂದ್ರಿಯಾಶ್ವೈಃ-ಇಂದ್ರಿಯಗಳೆಂಬ ಕುದುರೆಗಳಿಂದ, ಯಥಾ-ಹ್ಯಾಗೆ, ಭ್ರಾಮ್ಯತೆ-ತಿರುಗಿಸಲ್ಪಡುವನೋ, ತಥಾ-ಹಾಗೆ, ಭ್ರಾಂತೈಃ-ಸ್ವೇಚ್ಛೆಯಾಗಿ ಹೋಗುತಿರುವ, ತೈರಶ್ವೈಃ-ಆಕುದುರೆಗಳಿಂದ, ರಾಕ್ಷಸೆ

---

ರುಬಲ್ಪಟ್ಟ ಆ ರಕ್ಕಸರಲ್ಲಿ ಕೆಲವರು ಓಡಿ ಹೋಗುತಿದ್ದರು. ಮತ್ತೆ ಕೆಲವರು ನೆಲದಲ್ಲಿ ಮಲಗಿದರು. ॥೨೧॥ ಈಪರಿಯಾಗಿ ಶ್ರೀಹರಿಯು ಆ ರಾಕ್ಷಸರನ್ನೆಲ್ಲ ಕೊಂದು, ದೇವೇಂದ್ರನು ಮೇಘಗರ್ಜನೆಯಂ ಗೈಸಿದಂತೆ ಶಂಖವಂಧ್ವನಿಸಿದನು ॥೨೨॥ ಬಳಿಕಾರಾಕ್ಷಸ ಸೈನ್ಯವು ಆ ಪುಂಡರೀಕಾಕ್ಷನ ಶರ ತಂಡಗಳಿಂ ಒಡದು ಹೋದ ಎದೆಗುಂಡಿಗೆ ಯುಳ್ಳದ್ದಾಗಿ ಹಿಂದಿರಿಗಿ ಲಂಕೆಗೆದುರಾಗಿ ಓಡಿ ಹೋಯಿತು ॥ ೨೩ ॥ ಈ ಪರಿಯಾಗಿ ಆ ರಾಕ್ಷಸಬಲ ವೆಲ್ಲ ನಿರ್ಬಲವಾಗಿ ನಾರಾಯಣನಿಂದ ಪರಾಜಿತ ಮಾದದ್ದಾಗುತಿರಲೀಕಾಗಿ, ಸುಮಾಲಿಯು ಬಾಣವರ್ಷದಿಂದ ಹರಿಯಂನಿವಾರಿಸಿ ನೀಹಾರವು ಭಾಸ್ಕರನನು ಆಚ್ಛಾದಿಸುವಂತೆ ಸರಳುಗಳಿಂದಾಚ್ಛಾದಿಸಿದನು. ಆ ಬಳಿಕ ಕೆಲ ರಕ್ಕಸರು ಮಾಲಿಯಹಿಂಬಲದಿಂದ ಧೈರ್ಯವಂ ಹೊಂದಿ ಕಾಳಗಕ್ಕೆ ನುಗ್ಗಿ ಬಂದರು॥೨೫॥ ಬಲಗರ್ವಿತನಾದ ಆ ಸುಮಾಲಿಯು ಕೂಡಾ ಕಡು ಕೋಪದಿಂದ ಕೋಲಾಹಲಧ್ವನಿಯಂ ಗೈಯ್ಯುತ್ತಿರುವನಾಗಿ ರಕ್ಕಸರನ್ನೆಲ್ಲ ಬದುಕಿಸುವವನಂತೆ ಕದನಕ್ಕೆದುರಾಗಿ ಬಂದನು॥೨೬॥ ಆನೆಯು ಚಿನ್ನದ ಕಟ್ಟುಗಳುಳ್ಳ ಸೊಂಡಿಲವನ್ನು ಮೇಲೆಕ್ಕೆ ಎತ್ತುವಂತೆಆಸುಮಾಲಿಯುಸುವರ್ಣ ವಿಕಾರವಾವ ಒಡವೆಗಳುಳ್ಳ ಹಸ್ತವನ್ನು ಮೇಲಕ್ಕೆ ಎತ್ತಿಕೊಂಡವನಾಗಿ ಮಿಂಚುಗಳಿಂದೊಡಗೂಡಿದ ಮೇಘದಂತೆ ಮಹಾಸಂತೋಷದಿಂದಗರ್ಜಿಸಿದನು॥೨೭॥ ಬಳಿಕಾಪುಂಡರೀಕಾಕ್ಷನು ಕಾಳಗದಲ್ಲಿ ಕುಣಿದಾಡುತ್ತಿರುವ ಆ ಸುಮಾಲಿಯಸಾರಥಿಯ ಶಿರವಂ ಕತ್ತರಿಸಿದನು. ಆಗ ಆ ರಕ್ಕಸನ ಕುದುರೆಗಳು ಮನಸ್ಸು ಬಂದಂತೆ ಓಡಿಹೋಗುತಿದ್ದವು॥೨೮॥ ಬುದ್ಧಿ ಹೀನನಾದ ಮನುಷ್ಯನು ಚಂಚಲಂಗಳಾದ ಇಂದ್ರಿಯಗಳೆಂಬ ತುರಗಗಳಿಂದ ಹ್ಯಾಗೆ ಭ್ರಾಂತನಾಗುವನೊ ಹಾಗೆಯೆ ಆ ಸುಮಾಲಿಯು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ವೈಸ್ತಥಾಭ್ರಾಂತೈರ್ಧೃತಿಹೀನೊಯಥಾನರಃ ॥೨೦॥ ಹೃತೆಸುಮಾಲೆರಶ್ವೈಶ್ಚ ರಥೆವಿಷ್ಣುರಥಂಪ್ರತಿ। ಮಾಲೀಚಾಭ್ಯದ್ರವದ್ಯುದ್ಧೆ ಪ್ರಗೃಹ್ಯಸಶರಂಧನುಃ ॥೨೧॥ ಮಾಲೆರ್ಧನುಃಚ್ಯುತಾಬಾಣಾಃಕಾರ್ತಸ್ವರವಿಭೂಷಿತಾಃ। ವಿವಿಶುರ್ಹರಿಮಾಸಾದ್ಯಕ್ರೌಂಚಂಪತ್ರರಥಾಇವ ॥೨೨॥ ಅರ್ದ್ಯಮಾನಶ್ಶರೈಸ್ಸೊಥಮಾಲಿಮುಕ್ತೈಸ್ಸಹಸ್ರಶಃ। ಚುಕ್ಷುಭೆನರಣೆವಿಷ್ಣುರ್ಜಿತೆಂದ್ರಿಯಇವಾಧಿಭಿಃ ॥೨೩॥ ಅಥಮೌರ್ವೀಸ್ವನಂಕೃತ್ವಾಭಗವಾನ್ ಭೂತಭಾವನಃ। ಮಾಲಿಸಂಪ್ರತಿಬಾಣೌಘಾನ್ ಸಸರ್ಜಾರಿನಿಷೂದನಃ ॥೨೪॥ ತೆಮಾಲಿದೆಹಮಾಸಾದ್ಯವಜ್ರವಿದ್ಯುತ್ಪ್ರಭಾಶ್ಶರಾಃ। ಪಿಬಂತಿರುಧಿರಂತೆತುದೆವಾಇವ ಪುರಾಮೃತಂ ॥೨೫॥ ಮಾಲಿನಂವಿಮುಖಂಕೃತ್ವಾಕ್ಷುರಾಗ್ರೇಣಹರಿರ್ಬಲಾತ್। ರಥಂಚಸಧ್ವಜಂಚಾಪಂವಾಜಿನಶ್ಚ ನ್ಯಪಾತಯತ ॥೨೬॥ ವಿರಥಸ್ತುಗದಾಂಗೃಹ್ಯಮಾಲೀನಕ್ತಂಚರೊತ್ತಮಃ। ಆಪುಪ್ಲುವೆಗದಾಪಾಣಿರ್ಗಿರ್ಯಗ್ರಾದಿವಕೇಸರೀ ॥೨೭॥

---

॥ ೨೦ ॥ಯುದ್ಧೆ–ಯುದ್ಧದಲ್ಲಿ, ಸುಮಾಲೆಃ–ಸುಮಾಲಿಯ, ರಥೆಶ್ವರಃ–ರಕ್ಕಸರೊಡೆಯನಾದ, ಸುಮಾಲೀ–ಸುಮಾಲಿಯು, ಭ್ರಾಮ್ಯತೆ–ತಿರುಗಿಸಲ್ಪಟ್ಟನು ॥ ೨೦ ॥ಯುದ್ಧೆ–ಯುದ್ಧದಲ್ಲಿ, ಸುಮಾಲೆಃ–ಸುಮಾಲಿಯ, ರಥೆಚ–ತೇರುನ್ನು, ಅಶ್ವೈಃ–ಕುದುರೆಗಳಿಂದ, ಹೃತೆಸತಿ–ಅಪಹರಿಸಲ್ಪಟ್ಟಂಥಾದ್ದಾಗುತಿರಲೀಕಾಗಿ, ಮಾಲೀಚ–ಮಾಲಿಯು ಕೂಡೆ,ಸಶರಂ–ಬಾಣಗಳೊಡಗೂಡಿದ, ಧನುಃ–ಧನುಸ್ಸನ್ನು, ಪ್ರಗೃಹ್ಯ–ತೆಗದುಕೊಂಡು, ವಿಷ್ಣುರಥಂಪ್ರತಿ–ಶ್ರೀ ಮಹಾವಿಷ್ಣುವಿನ ರಥವಂ ಕುರಿತು, ಅಭ್ಯದ್ರವತ್–ಓಡಿಬಂದನು ॥ ಕಾರ್ತಸ್ವರ ವಿಭೂಷಿತಾಃ–ಸುವರ್ಣಾಲಂಕೃತಮಾದ, ಮಾಲೆಃ–ಮಾಲಿಯ, ಧನುಶ್ಚ್ಯುತಾಃ–ಧನುಸ್ಸಿನಿಂದ ಬಿಡಲ್ಪಟ್ಟ, ಬಾಣಾಃ–ಬಾಣಗಳು, ಹರಿಂ–ಶ್ರೀ ಮಹಾವಿಷ್ಣುವಿನನ್ನು, ಆಸಾದ್ಯ–ಹೊಂದಿ, ಕ್ರೌಂಚಂ–ಕ್ರೌಂಚಪರ್ವತವನ್ನು, ಪತ್ರರಥಾಇವ–ಪಕ್ಷಿಗಳಂತೆ, ವಿವಿಶುಃ–ಹೊಕ್ಕಿದವು ॥೨೨॥ ಅಥ–ಬಳಿಕ, ರಣೆ–ಯುದ್ಧದಲ್ಲಿ, ಸವಿಷ್ಣುಃ–ಆ ವೈಕುಂಠನು, ಮಾಲಿಮುಕ್ತೈಃ–ಮಾಲಿಯಿಂದ ಬಿಡಲ್ಪಟ್ಟ, ಸಹಸ್ರಶಃ–ಅನೇಕವಾದ, ಶರೈಃ–ಬಾಣಗಳಿಂದ, ಅರ್ದ್ಯಮಾನಃ–ಹೆದರಿಸಲ್ಪಡುತಿರುವನಾಗಿ, ಜಿತೆಂದ್ರಿಯಃ–ಇಂದ್ರಿಯ ನಿಗ್ರಹಮಾಡಿದವನು, ಆಧಿಭಿರಿವ–ರೋಗಗಳಿಂದಲಂತೆ,ನಚುಕ್ಷುಭೆ–ಕ್ಷೋಭೆಪಡಲಿಲ್ಲ॥ ೨೩॥ ಅರಿನಿಷೂದನಃ–ಶತ್ರುನಾಶಕನಾದ, ಭೂತಭಾವನಃ–ಪ್ರಾಣಿಗಳಿಂದ ಭಾವಿಸಲ್ಪಡುತಿರುವ, ಭಗವಾನ್–ಭಗವಂತನು, ಅಥ–ಬಳಿಕ, ಮೌರ್ವೀಸ್ವನಂ–ಹೆದೆಯ ಧ್ವನಿಯನ್ನು, ಕೃತ್ವಾ – ಮಾಡಿ, ಮಾಲಿನಂಪ್ರತಿ–ಮಾಲಿಯಂ ಕುರಿತು, ಬಾಣೌಘಾನ್–ಬಾಣತಂಡೆಗಳನ್ನು,ಸಸರ್ಜ–ಬಿಡುತಿದ್ದನು॥ ೨೪ ॥ವಜ್ರವಿದ್ಯುತ್ಪ್ರಭಾಃ–ವಜ್ರಾಯುಧಕ್ಕೂ ಮಿಂಚುಗಳಿಗು ಸಮಾನವಾದ ಪ್ರಭೆಯುಳ್ಳ, ತೆ–ಪ್ರಸಿದ್ಧಗಳಾದ, ತೇತುಶರಾಃ–ಆ ಬಾಣಗಳಾದರೆ,ಮಾಲಿದೆಹಂ–ಮಾಲಿಯ ಶರೀರವನ್ನು, ಆಸಾದ್ಯ–ಹೊಂದಿ, ದೇವಾಃ–ದೇವತೆಗಳು, ಅಮೃತಮಿವ–ಅಮೃತವನ್ನಂತೆ, ರುಧಿರಂ–ರಕ್ತವನ್ನು, ಪಿಬಂತಿ–ಪಾನಮಾಡುತಿದ್ದವು ॥ ೨೫ ॥ ಹರಿಃ–ಶ್ರೀಮಹಾವಿಷ್ಣುವು, ಬಲಾತ್–ಬಲಾತ್ಕಾರದ ದೆಶೆಯಿಂದ, ಕ್ಷುರಾಗ್ರೇಣ–ಕತ್ತಿಯ ಕೊನೆಯಿಂದ, ಮಾಲಿನಂ–ಮಾಲಿಯನ್ನು, ವಿಮುಖಂಕೃತ್ವಾ, ಪರಾಙ್ಮುಖನನ್ನಾಗಿ ಮಾಡಿ, ಸಧ್ವಜಂ–ಧ್ವಜದಿಂದೊಡಗೂಡಿದ, ರಥಂಚ–ರಥವನ್ನೂ, ಚಾಪಂ–ಬಿಲ್ಲಿನನ್ನು, ವಾಜಿನಶ್ಚ –ಕುದುರೆಗಳನ್ನೂ ಸಹ–ನ್ಯಪಾತಯತ್–ಕೆಡಹಿದನು. ॥೨೬॥ ವಿರಥಃ–ರಥಹೀನನಾದಕಾರಣ, ಮಾಲೀ–ಮಾಲಿಯೆಂಬ, ನಕ್ತಂಚರೋತ್ತಮಃ–ರಾಕ್ಷಸಶ್ರೇಷ್ಠನು, ಗದಾಂ–ಗದೆಯನ್ನು, ಗೃಹ್ಯ–ಗ್ರಹಿಸಿ, ಗದಾಪಾಣಿಃ–ಗದಾಯುಧವೆ ಪಾಣಿಯಲ್ಲಿ ಉಳ್ಳವನಾಗಿ, ಗಿರ್ಯಗ್ರಾತ್–ಪರ್ವತದ ಶಿಖರದದೆಸೆಯಿಂದ, ಕೆಸರೀವ–ಸಿಹ್ಮದಂತೆ, ಆಪುಪ್ಲುವೆ–ಹಾರಿಬಂದನು. ॥೨೭॥ ಸಃ–ಆ ಮಾಲಿಯು, ತಯಾ–ಆ ಗದಾಯುಧದಿಂದ, ಗರುಡೆಶಾನಂ–ಗರುಡನನ್ನು, ಯಮಃ–ಯಮನು, ಈಶಾನಮಿವ, ಈಶ್ವರನಂತೆಯೂ, ಇಂದ್ರಃ–ಇಂದ್ರನು, ವಜ್ರೇಣ–ವಜ್ರಾಯುಧದಿಂದ, ಅಚಲಂಯಥಾ–ಪರ್ವತವನ್ನಂತೆಯು, ಲಲಾಟದೆಶೆ–ಲಲಾಟಪ್ರದೇಶದಲ್ಲಿ,ನ್ಯಹನತ್

---

ಸ್ವೇಚ್ಛೆಯಾಗಿ ಹೋಗುತಿರುವ ಆ ತುರಂಗಗಳಿಂದ ಭ್ರಾಂತನಾದನು॥೨೦॥ಕದನದಲ್ಲಿ ಆ ಸುಮಾಲಿಯರಥವು ಆ ಕುದುರೆಗಳಿಂದಲೆ ಅಪಹರಿಸಲ್ಪಟ್ಟದ್ದಾಗುತಿರಲೀಕಾಗಿ ಮಾಲಿಯೂಕೂಡ ಜಾಗ್ರತೆಯಾಗಿ ವಿಷ್ಣುರಥವಂ ಕುರಿತು ಓಡಿಬಂದನು ॥೨೧॥ ಆ ಮಾಲಿಯಿಂದ ಬಿಡಲ್ಪಟ್ಟ ಭಂಗಾರದಿಂದಲಂಕೃತಮಾದ ಬಾಣಗಳು ಶ್ರೀಹರಿಯಂ ಹೊಂದಿ ಕ್ರೌಂಚ ಪರ್ವತವನ್ನು ಪಕ್ಷಿಗಳು ಪ್ರವೇಶಿಸುವಂತೆ ಹೊಕ್ಕುತಿದ್ದವು॥೨೨॥ ಆ ಬಳಿಕ ಮಾಲಿಯಿಂದ ಎಸೆಯಲ್ಪಡುತಿರುವ ಸರಳುಗಳಿಂದ ಹೆದರಿಸಲ್ಪಡುತಿರುವ ಆ ಸರಸಿಜಾಕ್ಷನು ಜಿತೇಂದ್ರಿಯನಾದವನು ಹ್ಯಾಗೆ ರೋಗಬಾಧೆ ಇಲ್ಲದವನಾಗಿರುವನೊ ಹಾಗೆಯೇ ಅಬಾಧಿತನಾಗಿದ್ದನು ॥೨೩॥ ಸಮನಂತರಕಾಲದಲ್ಲಿ ಸಮಸ್ತ ಭೂತಗಳಿಂದಲೂ ಭಾವಿಸಲ್ಪಡುತಿರುವ ಶತ್ರುಸಂಹಾರಕನಾದ ಭಗವಂತನು ಧನುಷ್ಟಂಕಾರವಂ ಗೈದು ಮಾಲಿಯಂ ಕುರಿತು ಬಾಣ ತಂಡಗಳನ್ನು ಸುರಿಸುತಿದ್ದನು॥ ವಜ್ರಾಯುಧಕ್ಕೂ ಮತ್ತು ಸಿಡಿಲಿಗು ಸಮಾನವಾಗಿರುವ ಆ ಬಾಣಗಳು ಮಾಲಿಯನ್ನು ಹೊಂದಿ ದೇವತೆಗಳು ಅಮೃತಪಾನಮಾಡುವಂತೆ ರಕ್ತವಂ ಹೀರುತಿದ್ದವು॥೨೫॥ಬಳಿಕಾಶ್ರೀಮಹಾವಿಷ್ಣುವು ಬಲಾತ್ಕರಿಸಿ ಕ್ಷುರಾಗ್ರದಿಂದ ಮಾಲಿಯಂ ವಿಮುಖನನ್ನಾಗಿ ಮಾಡಿ, ಧ್ವಜಯುಕ್ತಮಾದ ರಥವನ್ನು ಬಿಲ್ಲನ್ನು ಮತ್ತು ಕುದುರೆಗಳನ್ನುಸಹ ಕೆಡಹಿದವನಾದನು॥ ಆ ಬಳಿಕ ರಥಹೀನನಾದ ಆ ಮಾಲಿಯೆಂಬ ರಾಕ್ಷಸೋತ್ತಮನು ಗದಾಪಾಣಿಯಾಗಿ ಗಿರಿಶೃಂಗದಿಂದ ಹಾರಿ ಬರುತಿರುವ ಸಿಂಹದೋಪಾದಿಯಾಗಿ ಹಾರಿಬಂದನು॥೨೭॥ ಯಮನು ಈಶಾನನನ್ನು ಹೊಡದಂತೆಯೂ, ಮತ್ತೆ ವಜ್ರಾಯುಧದಿಂದ ಬೆಟ್ಟವಂಖಂಡಿಸಿದಂತೆಯು, ಆ ಮಾಲಿಯು ಆ ಗದಾಯುಧದಿಂದ ಗರುಡನಂನುಹೊಡದನು॥೨೮॥ ಆ ಗದಾಯುಧದಿಂದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸತಯಾಗರುಡೇಶಾನಮಾಶಾನಮಿವಚಾಂತಕಃ । ಲಲಾಟದೇಶೇನ್ಯಹನದ್ವಜ್ರೇಣೇಂದ್ರೋಯಥಾಚಲಮ್ ॥೩೮॥ ಗದಯಾಭಿಹತಸ್ತೇನಮಾಲಿನಾಗರುಡೋಭೃಶಂ । ರಣಾತ್ಪರಾಙ್ಮುಖಂದೇವಂಕೃತವಾನ್ವೇದನಾತುರಃ ॥೩೯॥ ಪರಾಙ್ಮುಖೇಕೃತೇದೇವೇಮಾಲಿನಾಗರುಡೇನವೈ । ಉದತಿಷ್ಠನ್ಮಹಾನ್ನಾದೋರಕ್ಷಸಾಮಭಿಗರ್ಜತಾಂ ॥೪೦॥ ರಕ್ಷಸಾಂನರ್ದತಾಂನಾದಂಶ್ರುತ್ವಾಹರಿಹಯಾನುಜಃ । ಪರಾಙ್ಮುಖೋಪ್ಯುತ್ಸಸರ್ಜಮಾಲೇಶ್ಚಕ್ರಂಜಿಘಾಂಸಯಾ ॥೪೧॥ ತತ್ಸೂರ್ಯಮಂಡಲಾಭಾಸಂಸ್ವಭಾಸಾಭಾಸಯನ್ನಭಃ । ಕಾಲಚಕ್ರನಿಭಂಚಕ್ರಂಮಾಲೇಶ್ಶೀರ್ಷಂನ್ಯಪಾತಯತ್ ॥೪೨॥ ತಚ್ಛಿರೋರಾಕ್ಷಸೇಂದ್ರಸ್ಯಚಕ್ರೋತ್ಕೃತ್ತಂವಿಭೀಷಣಮ್ । ಪಪಾತರುಧಿರೋದ್ಗಾರಿಪುರಾರಾಹುಶಿರೋಯಥಾ ॥೪೩॥ ತತಸ್ಸುರೈಸ್ಸುಸಂಹೃಷ್ಟೈಸ್ಸರ್ವಪ್ರಾಣಸಮೀರಿತಃ । ಸಿಂಹನಾದರವೋಮುಕ್ತಸ್ಸಾಧುದೇವೇತಿವಾದಿಭಿಃ ॥೪೪॥ ಮಾಲಿನಂನಿಹತಂದೃಷ್ಟ್ವಾಸುಮಾಲೀಮಾಲ್ಯವಾನಪಿ । ಸಬಲೌಶೋಕಸಂತಪ್ತೌಲಂಕಾಂಪ್ರತಿಸಮಾಯತುಃ ॥೪೫॥ ಗರುಡಸ್ತುಸಮಾಶ್ವಸ್ತಸ್ಸನ್ನಿವೃತ್ಯಯಥಾಪುರಾ । ರಾಕ್ಷಸಾನ್

---

ತ್-ಹೊಡೆದನು. ॥೩೮॥ ತೇನಮಾಲಿನಾ-ಆ ಮಾಲಿಯಿಂದ, ಗದಯಾ-ಗದಾಯುಧದಿಂದ, ಭೃಶಂ-ಬಹಳವಾಗಿ, ಅಭಿಹತಃ-ಹೊಡೆಯಲ್ಪಟ್ಟ, ಗರುಡಃ-ಗರುಡನು, ವೇದನಾತುರಃ-ದುಃಖಪೀಡಿತನಾಗಿ, ದೇವಂ-ಶ್ರೀ ಮಹಾವಿಷ್ಣುವಿನನ್ನು, ರಣಾತ್-ಯುದ್ಧದದೆಶೆಯಿಂದ, ಪರಾಙ್ಮುಖಂ-ವಿಮುಖನನ್ನಾಗಿ, ಕೃತವಾನ್-ಮಾಡಿದನು. ॥೩೯॥ ದೇವೇ-ಶ್ರೀಮನ್ನಾರಾಯಣಮೂರ್ತಿಯು, ಮಾಲಿನಾ-ಮಾಲಿಯಿಂದ, ಗರುಡೇನವೈ-ಗರುಡನಿಂದಲೆ, ಪರಾಙ್ಮುಖೇ ಕೃತೇಸತಿ-ವಿಮುಖನಾಗಿ ಮಾಡಲ್ಪಟ್ಟವನಾಗುತಿರಲೀಕಾಗಿ, ಅಭಿಗರ್ಜತಾಂ-ಸಿಹ್ಮನಾದ ಮಾಡುತಿರುವ, ರಕ್ಷಸಾಂ-ಅಸುರರ, ಮಹಾನ್-ಮಹತ್ತರವಾದ, ನಾದಃ-ಶಬ್ದವು, ಉದತಿಷ್ಠತ್-ಎದ್ದಿತು. ॥೪೦॥ ನರ್ದತಾಂ-ಕುಣಿದಾಡುತಿರುವ ರಕ್ಷಸಾಂ-ರಕ್ಕಸರ, ನಾದಂ-ಧ್ವನಿಯನ್ನು, ಶ್ರುತ್ವಾ-ಕೇಳಿ, ಹರಿಹಯಾನುಜಃ-ಶ್ರೀಮಹಾವಿಷ್ಣುವು, ಪರಾಙ್ಮುಖೋಪಿ-ವಿಮುಖನಾದರು, ಮಾಲೇಃ-ಮಾಲಿಯ, ಜಿಘಾಂಸಯಾ-ಕೊಲ್ಲಲಿಚ್ಛೆಯಿಂದ, ಚಕ್ರಂ-ಸುದರ್ಶನವೆಂಬ ಚಕ್ರವನ್ನು, ಉತ್ಸಸರ್ಜ-ಬಿಟ್ಟನು. ॥ ೪೧॥ ಸೂರ್ಯಮಂಡಲಾಭಾಸಂ-ಸೂರ್ಯಮಂಡಲದ ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ, ಕಾಲಚಕ್ರನಿಭಂ- ಕಾಲಚಕ್ರೋಪಮೆಯುಳ್ಳ, ತಚ್ಚಕ್ರಂ-ಆ ಚಕ್ರಾಯುಧವು, ಸ್ವಭಾಸಾ-ತನ್ನ ಕಾಂತಿಯಿಂದ, ನಭಃ-ಅಂತರಿಕ್ಷವನ್ನು, ಆಭಾಸಯತ್- ಹೊಳೆಯುವಂತೆ ಮಾಡುತಿರುವದಾಗಿ, ಮಾಲೇಃ-ಮಾಲಿಯ, ಶೀರ್ಷಂ-ಶಿರವನ್ನು, ನ್ಯಪಾತಯತ್-ಕೆಡಹಿತು ॥ ೪೨ ॥ ಚಕ್ರೋತ್ಕೃತ್ತಂ-ಚಕ್ರದಿಂದ ಕತ್ತರಿಸಲ್ಪಟ್ಟ, ವಿಭೀಷಣಂ-ಮಹಾ ಭಯಂಕರವಾದ, ರಾಕ್ಷಸೇಂದ್ರಸ್ಯ-ಮಾಲಿಯ, ತಚ್ಛಿರಃ-ಆ ಶಿರಸ್ಸು, ರುಧಿರೋದ್ಗಾರಿ-ರಕ್ತಸ್ರಾವ ಮುಳ್ಳದ್ದಾಗಿ, ಪುರಾ-ಪೂರ್ವಕಾಲದಲ್ಲಿ, ರಾಹುಶಿರೋಯಥಾ-ರಾಹುವಿನ ಶಿರದಂತೆ, ಪಪಾತ-ಬಿದ್ದು ಹೋಯಿತು ॥ ೪೩ ॥ ತತಃ-ಬಳಿಕ, ಹೇದೇವ-ಎಲೈ ಸ್ವಾಮಿಯೆ ! ಸಾಧ್ವಿತಿ-ಬಹಳ ಒಳ್ಳೇದಾಯಿತೆಂದು, ವಾದಿಭಿಃ-ಪೇಳುತಿರುವ, ಸುಸಂಹೃಷ್ಟೈಃ-ಅತಿ ಸಂತುಷ್ಟರಾದ, ಸುರೈಃ-ದೇವತೆಗಳಿಂದ, ಸರ್ವಪ್ರಾಣಸಮೀರಿತಃ-ಸರ್ವ ಶಕ್ತಿಯಿಂದಲು ಪೂರಿತವಾದ, ಸಿಹ್ಮನಾದರವಃ-ಅಟ್ಟಹಾಸಧ್ವನಿಯು, ಮುಕ್ತಃ-ಬಿಡಲ್ಪಟ್ಟಿತು ॥ ೪೪ ॥ ಸುಮಾಲೀ-ಸುಮಾಲಿಯು, ಮಾಲ್ಯವಾನಪಿ-ಮಾಲ್ಯವಂತನು ಕೂಡ, ಸಬಲೌ-ಬಲಸಹಿತರಾದರು, ನಿಹತಂ-ಕೊಲ್ಲಲ್ಪಟ್ಟ, ಮಾಲಿನಂ-ಮಾಲಿಯನ್ನು, ದೃಷ್ಟ್ವಾ-ಕಂಡು, ಶೋಕಸಂತಪ್ತೌ-ದುಃಖಾಕ್ರಾಂತರಾಗಿ, ಲಂಕಾಂಪ್ರತಿ-ಲಂಕಾ ಪಟ್ಟಣವಂ ಕುರಿತು, ಸಮಾಯತುಃ-ಹೊರಟು ಹೋದರು ॥ ೪೫ ॥ ಸಮಾಶ್ವಸ್ತಃ-ಸ್ವಸ್ಥಚಿತ್ತನಾದ, ಗರುಡಸ್ತು-ಗರುಡನಾದರೆ, ಸನ್ನಿವೃತ್ಯ-ಹಿಂತಿರಿಗಿ, ಕೋಪಿತಃ-ಕೋಪಿಷ್ಠನಾಗಿ, ಯಥಾಪುರಾ-ಪೂರ್ವದಂತೆಯೆ, ಪಕ್ಷವಾತೇನ-ಪಕ್ಷಮಾರುತದಿಂದ, ರಾಕ್ಷಸಾನ್- ಅಸುರರನ್ನು, ದ್ರಾವಯಾ

---

ಬಹಳವಾಗಿ ತಾಡಿತನಾದ ಆ ಗರುಡನು ದುಃಖಪೀಡಿತನಾಗಿ ದೇವದೇವೋತ್ತಮನಾದ ನಾರಾಯಣನನ್ನು ಯುದ್ಧಪರಾಙ್ಮುಖನನ್ನಾಗಿ ಮಾಡಿದನು ॥೩೯॥ ಗರುಡನಿಂದಲೆ ಭಗವಂತನು ವಿಮುಖನಾಗಿ ಮಾಡಲ್ಪಟ್ಟವನಾಗುತಿರಲೀಕಾಗಿ ಘನಗರ್ಜನೆಯಂ ಗೈಯುತ್ತಿರುವ ಆ ರಕ್ಕಸರ ಸಿಹ್ಮನಾದವು ಉತ್ಪನ್ನ ಮಾಯಿತು ॥೪೦॥ ಕದನದಲ್ಲಿ ಕುಣಿದಾಡುತ್ತಿರುವ ಆ ರಕ್ಕಸರ ನಿರ್ಘೋಷವಂ ಕೇಳಿ ಶ್ರೀಹರಿಯು ಪರಾಙ್ಮುಖನಾದವನಾದರು ಆ ಮಾಲಿಯಂ ಕೊಲ್ಲಬೇಕೆಂ ದಿಚ್ಛೈಸಿ ಚಕ್ರವಂ ಬಿಟ್ಟನು ॥೪೧॥ ಕಾಲ ಚಕ್ರ ಸದೃಶವಾದ ಸೂರ್ಯ ಮಂಡಲದಂತೆ ಕಡು ಕಾಂತಿ ತಂಡಗಳುಳ್ಳ ಆ ವಿಷ್ಣು ಚಕ್ರವು ಆಕಾಶವಂ ಕಂಗೊಳಿಸುವಂತೆ ಮಾಡುತಿರುವದಾಗಿ ಆ ಮಾಲಿಯ ಕಂಠವಂ ಕತ್ತರಿಸಿ ಕೆಡವಿತು ॥೪೨॥ ಆ ಚಕ್ರದಿಂದ ಖಂಡಿಸಲ್ಪಟ್ಟ ಬಹು ಭಯಂಕರವಾದ ಆ ಮಾಲಿಯ ಮಂಡೆಯು ರಕುತವಂ ಕಕ್ಕುತ್ತಿರುವದಾಗಿ ಪೂರ್ವದಲ್ಲಿ ರಾಹುವಿನ ಶಿರವು ಧರಾತಲದಲ್ಲಿ ಹ್ಯಾಗುರುಳಿತೋ ಹಾಗೆಯೆ ಭೂಮಿಯಲ್ಲಿ ಬಿದ್ದು ಹೋಯಿತು ॥೪೩॥ ಆ ಬಳಿಕ ಬಹಳ ಸಂತುಷ್ಟರಾಗಿ ಒಳ್ಳೇದಾಯಿತೆಂದು ಪೇಳುತಿರುವ ದೇವತೆಗಳಿಂದ ಸರ್ವ ಸಾಮರ್ಥ್ಯದಿಂದಲು ಸಮೀರತವಾದ ಸಿಂಹನಾದವು ಮಾಡಲ್ಪಟ್ಟಿತು ॥೪೪॥ ಸುಮಾಲಿ, ಮಾಲ್ಯವಂತರೆಂಬೀರ್ವರು ಬಲ ಸಮೇತರಾದರು. ರಣರಂಗದಲ್ಲಿ ಹರಿಯಿಂದ ಮರಣವಂ ಹೊಂದಿದ ಆ ಮಾಲಿಯಂ ಕಂಡು ಶೋಕವುಳ್ಳವರಾಗಿ ಲಂಕಾ ಪುರಿಯನ್ನೈದಿದರು ॥೪೫॥ ಸಮನಂತರ ಕಾಲದೊಳ್ ಸಮಾಧಾನ ಚಿತ್ತನಾದ ಆ ಸುಪರ್ಣನು ಪೂರ್ವದಂತೆ ಹಿಂತಿರುಗಿ ಬಹು ರೋಷವುಳ್ಳವನಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದ್ರಾನಯಾಮಾಸಪಕ್ಷವಾತೇನಕೋಪಿತಃ ॥೪೬॥ ನಾರಾಯಣೋಪೀಷುವರಾಶನೀಭಿರ್ವಿದಾರಯಾಮಾಸಧನುಃಪ್ರಮುಕ್ತೈಃ । ನಕ್ತಂಚರಾನ್ಮುಕ್ತವಿಧೂತಕೇಶಾನ್ಯಥಾಶನೀಭಿಸ್ಸತಟಿನ್ಮಹಾಭ್ರಃ ॥೪೭॥ ಛಿನ್ನಾತಪತ್ರಂಪತಮಾನಶಸ್ತ್ರಂಶರೈರಪಧ್ವಸ್ತವಿನೀತವೇಷಂ । ವಿನಿಸ್ಸೃತಾಂತ್ರಂಭಯಲೋಲನೇತ್ರಂಬಲಂತದುನ್ಮತ್ತನಿಭಂಬಭೂವ ॥೪೮॥ ಸಿಂಹಾರ್ದಿತಾನಾಮಿವಕುಂಜರಾಣಾಂನಿಶಾಚರಾಣಾಂಸಹಕುಂಜರಾಣಾಮ್ । ರವಾಶ್ಚವೇಗಾಶ್ಚಸಮಂಬಭೂವುಃಪುರಾಣಸಿಂಹೇನವಿಮರ್ದಿತಾನಾಮ್ ॥೪೯॥ ಸಂಛಾದ್ಯಮಾನಾಹರಿಬಾಣಜಾಲೈಸ್ಸ್ವಬಾಣಜಾಲಾನಿಸಮುತ್ಸೃಜಂತಃ। ಧಾವಂತಿನಕ್ತಂಚರಕಾಲಮೇಘಾಃವಾಯುಪ್ರಣುನ್ನಾಇವಕಾಲಮೇಘಾಃ ॥೫೦॥ ಶರಪ್ರಹಾರೈರ್ವಿನಿಕೃತ್ತಗಾತ್ರಾಶ್ಚಕ್ರಪ್ರಹಾರೈರ್ವಿನಿಕೃತ್ತಶೀರ್ಷಾಃ । ಸಂಚೂರ್ಣಿತಾಂಗಾಶ್ಚಗದಾಪ್ರಹಾರೈರಸಿಪ್ರಹಾರೈರ್ಬಹುಧಾವಿಭಕ್ತಾಃ ॥೫೧॥ ಪತಂತಿಶೈಲಾಇವವಜ್ರಭಿನ್ನಾಃವಾಯುಪ್ರಭಗ್ನಾಇವವೃಕ್ಷಷಂಡಾಃ । ಸಂಛಿನ್ನಗಾತ್ರಾಯುಧಿರಾಕ್ಷಸೇಂದ್ರಾಃನಿರಂತರಂದೇವಗಣೈಶ್ಚದೃಷ್ಟಾಃ॥

---

ಮಾಸ-ಓಡಿಸಿದನು ॥ ೪೬ ॥ ನಾರಾಯಣೋಪಿ-ಶ್ರೀ ಮಹಾ ವಿಷ್ಣುವ್ರನ್ನು, ಧನುಃಪ್ರಮುಕ್ತೈಃ-ಧನುಸ್ಸಿನಿಂದ ಬಿಡಲ್ಪಟ್ಟ, ಇಷುವರಾಶನೀಭಿಃ-ಬಾಣಗಳೆಂಬ ಶಿಡಿಲುಗಳಿಂದ, ನಕ್ತಂಚರಾನ್-ರಾಕ್ಷಸರನ್ನು, ಮುಕ್ತವಿಧೂತಕೇಶಾನ್-ಬಿಡಲ್ಪಟ್ಟು ಕೊಡಹಲ್ಪಟ್ಟ ಕೂದುಲುಗಳುಳ್ಳವರನ್ನಾಗಿ, ಸತಟಿತ್-ಮಿಂಚುಗಳಿಂದೊಡಗೂಡಿದ, ಮಹಾಭ್ರಃ-ಮಹಾ ಮೇಘವು, ಅಶನೀಭಿರ್ಯಥಾ-ಶಿಡಿಲುಗಳಿಂದಲಂತೆ, ವಿದಾರಯಾಮಾಸ-ಸೀಳಿದನು ॥ ೪೭ ॥ ಛಿನ್ನಾತಪತ್ರಂ-ಛಿನ್ನ ಕತ್ತರಿಸಲ್ಪಟ್ಟ, ಆತಪತ್ರಂ-ಛತ್ರಗಳಗಳುಳ್ಳ, ಪತಮಾನಶಸ್ತ್ರಂ-ಬೀಳುತಿರುವ ಆಯುಧಗಳುಳ್ಳ, ಶರೈಃ-ಬಾಣಗಳಿಂದ, ಅಪಧ್ವಸ್ತವಿನೀತವೇಷಂ-ಹೋಗಲಾಡಿಸಲ್ಪಟ್ಟ ಸೌಮ್ಯವೇಷವುಳ್ಳ, ವಿನಿಸ್ಸೃತಾಂತ್ರಂ-ಈಚೇ ಬರುತಿರುವ ಕರುಗಳುಳುಳ್ಳ, ಭಯಲೋಲನೇತ್ರಂ-ಭೀತಿಯಿಂದ ಚಂಚಲವಾದ ಕಣ್ಣುಗಳುಳ್ಳ, ತದ್ಬಲಂ-ಆ ಸೈನ್ಯವು, ಉನ್ಮತ್ತನಿಭಂ-ಉನ್ಮಾದಾವಸ್ಥೆಯುಳ್ಳವನಾದವನಿಗೆ ಸದೃಶವಾದದ್ದು, ಬಭೂವ-ಆಯಿತು ॥ ೪೮ ॥ ಸಿಂಹಾರ್ದಿತಾನಾಂ-ಸಿಂಹದಿಂದ ಹೆದರಿಸಲ್ಪಟ್ಟ, ಕುಂಜರಾಣಾಮಿವ-ಆನೆಗಳೋಪಾದಿಯಲ್ಲಿ, ಪುರಾಣಸಿಂಹೇನ-ನರಸಿಂಹನಿಂದ, ವಿಮರ್ದಿತಾನಾಂ-ಹೊಡೆಯಲ್ಪಟ್ಟ, ಸಹಕುಂಜರಾಣಾಂ-ಆನೆಗಳಿಂದೊಡಗೂಡಿದ, ನಿಶಾಚರಾಣಾಂ-ರಾಕ್ಷಸರ,ರವಾಃ-ಶಬ್ದಗಳು, ವೇಗಾಶ್ಚ-ವೇಗಗಳುನ್ನು, ಸಮಂ-ಏಕಕಾಲದಲ್ಲಿ, ಬಭೂವುಃ-ಆದವು ॥ ೪೯ ॥ ಹರಿಬಾಣಜಾಲೈಃ-ಶ್ರೀ ಮಹಾ ವಿಷ್ಣುವಿನ ಬಾಣಸಮೂಹಗಳಿಂದ, ಸಂಛಾದ್ಯಮಾನಾಃ-ಹೊದಿಸಲ್ಪಟ್ಟ, ನಕ್ತಂಚರ ಕಾಲಮೇಘಾಃ-ರಾಕ್ಷಸರೆಂಬ ನೀಲಮೇಘಗಳು, ಸ್ವಬಾಣಜಾಲಾನಿ-ತಮ್ಮ ಬಾಣತಂಡಗಳನ್ನು, ಸಮುತ್ಸೃಜಂತಃ-ಬಿಡುತಿರುವರಾಗಿ, ವಾಯುಪ್ರಣುನ್ನಾಃ-ಗಾಳಿಯಿಂದ ಪ್ರೇರಿತಗಳಾದ, ಕಾಲಮೇಘಾಇವ-ವರ್ಷಾಕಾಲದ ಮೇಘಗಳಂತೆ, ಧಾವಂತಿ-ಓಡಿಹೋದವು ॥ ೫೦ ॥ ಶರಪ್ರಹಾರೈಃ-ಬಾಣಗಳ ಹೊಡತೆಗಳಿಂದ, ವಿನಿಕೃತ್ತಗಾತ್ರಾಃ-ಕತ್ತರಿಸಲ್ಪಟ್ಟ ಶರೀರವುಳ್ಳ, ಚಕ್ರಪ್ರಹಾರೈಃ-ಸುದರ್ಶನದ ಏಟುಗಳಿಂದ, ವಿನಿಕೃತ್ತಶೀರ್ಷಾಃ-ಕತ್ತರಿಸಲ್ಪಟ್ಟ ಶಿರಸ್ಸುಗಳುಳ್ಳ, ಗದಾಪ್ರಹಾರೈರಪಿ-ಗದಾಯುಧದ ಹೊಡಿಯೋಣದರಿಂದಲು, ಸಂಚೂರ್ಣಿತಾಂಗಾಃ-ಪುಡಿಮಾಡಲ್ಪಟ್ಟ ಅವಯವಗಳುಳ್ಳ, ಅಸಿಪ್ರಹಾರೈಃ-ಖಡ್ಗಪ್ರಹಾರಗಳಿಂದ, ಬಹುಧಾ-ಅನೇಕಬಗೆಯಾಗಿ, ವಿಭಕ್ತಾಃ-ತುಂಡುಗಳಾಗಿ ಮಾಡಲ್ಪಟ್ಟ, ಯುಧಿ-ಯುದ್ಧದಲ್ಲಿ, ಸಂಛಿನ್ನಗಾತ್ರಾಃ-ಸೀಳಲ್ಪಟ್ಟ ಶರೀರಗಳುಳ್ಳ, ರಾಕ್ಷಸೇಂದ್ರಾಃ-ರಾಕ್ಷಸಶ್ರೇಷ್ಠರು, ವಜ್ರಭಿನ್ನಾಃ-ವಜ್ರಾಯುಧದಿಂದ ಹೊಡೆಯಲ್ಪಟ್ಟ, ಶೈಲಾಇವ-ಬೆಟ್ಟಗಳಂತೆಯು, ವಾಯುಪ್ರಭಗ್ನಾಃ-ಗಾಳಿಯಿಂದ ಮುರಿಯಲ್ಪಟ್ಟ ವೃಕ್ಷಷಂಡಾಇವ-ಗಿಡಗಳ ತಂಡಗಳಂತೆ, ನಿರಂತರಂ-ಸಾಂದ್ರವಾಗಿ, ದೇವಗಣೈಶ್ಚ-ದೇವತಾಳಿಗಳಿಂದ, ದೃಷ್ಟಾಸ್ಸಂತಃ-ನೋಡಲ್ಪಟವ

---

ಗಿ ತನ್ನ ರೆಕ್ಕೆಗಳಿಂದಾ ರಕ್ಕಸರನ್ನೆಲ್ಲ ತರುಬುತ್ತಿದ್ದನು ॥೪೬॥ ಮಿಂಚುಗಳಿಂದೊಡಗೂಡಿದ ಮಹಾ ಮೇಘಗಳು ಶಿಡಿಲುಗಳಿಂದ ಹೊಡೆಯುವಂತೆ ತನ್ನ ಬಾಹು ದಂಡಗಳಿಂದ ಪಿಡಿದಿರುವ ಕೋದಂಡದಿಂದ ಬಿಡಲ್ಪಡುತಿರುವ ಮತ್ತು ಕಡು ಚಂಡವಾದ ಶಿಡಿಲುಗಳ ಹೊಡತೆಯಂತೆ ಹೊಡತೆಯುಳ್ಳ ಬಾಣ ತಂಡಗಳಿಂದ, ತುಂಡು ತುಂಡುಗಳಾಗುವಂತೆ ಕಂಡುಕಂಡು ಖಂಡಿಸುತ್ತಾ ರಣರಂಗದಲ್ಲಿ ಗರುಡನನ್ನೇರಿ ಬರುತಿರುವ ಆ ಪುಂಡರೀಕಾಕ್ಷನು, ಆ ಸುಕೇಶ ಪುತ್ರರಂ ಕೂಡಿ ಬಂದಿರುವ ರಕ್ಕಸರನ್ನೆಲ್ಲ ಕೆದರಿದ ಕೇಶಗಳುಳ್ಳವರಾಗಿ ಹೊಡದು ಕೆಡಹಿದನು. ॥೪೭॥ ಕತ್ತರಿಸಲ್ಪಟ್ಟ ತೊಡೆಗಳುಳ್ಳದ್ದಾಗಿಯು, ಅವಿಚ್ಛಿನ್ನವಾಗಿ ಬೀಳುತಿರುವ ಶಸ್ತ್ರಗಳುಳ್ಳದ್ದಾಗಿಯು, ಕಡು ಕ್ರೂರವಾದ ಆಕಾರವುಳ್ಳದ್ದಾಗಿಯು, ಹೊಟ್ಟೆಯಿಂದ ಈಚೆಗೆ ಹೊರಟು ಬರುತಿರುವ ಕರುಳುಗಳುಳ್ಳದ್ದಾಗಿಯು, ಭೀತಿಯಿಂದ ಚಂಚಲವಾದ ನೇತ್ರಗಳುಳ್ಳದ್ದಾಗಿಯೂ ಇರುವ ಆ ಅಸುರರ ಸೇನೆಯು ಹುಚ್ಚು ಹಿಡಿದಂತಿತ್ತು. ॥೪೮॥ ಸಿಂಹಗಳಿಂದ ಹೆದರಿಸಲ್ಪಟ್ಟ ಆನೆಗಳಂತೆ, ಪುರಾಣ ಪುರುಷೋತ್ತಮನಿಂದ ಮರ್ದಿತವಾದ ಆನೆಗಳಿಂದ ಆ ರಕ್ಕಸರ ಕೂಗುಗಳು ವೇಗಗಳು ಸಹ ಏಕಕಾಲದಲ್ಲಿ ಆದವು. (ಅಂದರೆ ಕೂಗುತ್ತಾ ಓಡಿ ಹೋದರು.) ॥೪೯॥ ಬಿರುಘಾಳಿಯಿಂದ ಕೊಚ್ಚಿ ಕೊಂಡು ಹೋಗಲ್ಪಡುತಲಿರುವ ಮಹಾ ಮೇಘಗಳೋಪಾದಿಯಲ್ಲಿ, ಆ ರಾಕ್ಷಸರೆಂಬ ದೊಡ್ಡ ಮೇಘಗಳು ಶ್ರೀ ಮಹಾವಿಷ್ಣುವಿನ ಬಾಣ ಜಾಲಗಳಿಂದಾಚ್ಛಾದಿತವಾಗಿಯು, ತಮ್ಮ ಬಾಣಗಣಗಳನ್ನು ಬಿಡುತಿರುವವುಗಳಾಗಿಯು. ಓಡಿ ಹೋದವು ॥ ಶರಪ್ರಹಾರಗಳಿಂದ ನಿಕೃತ್ತವಾದ ಗಾತ್ರಗಳುಳ್ಳವರಾಗಿಯು, ಚಕ್ರಾಯುಧದಿಂದ ಛೇದಿತವಾದ ಶಿರಸ್ಸುಗಳುಳ್ಳವರಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚಕ್ರಕೃತ್ತಾಸ್ಯಕಮಲಾಗದಾಸಂಚೂರ್ಣಿತೋರಸಃ । ಲಾಂಗಲಗ್ಲಪಿತಗ್ರೀವಾಮುಸಲೈರ್ಭಿನ್ನಮಸ್ತಕಾಃ ॥೫೩॥ ಕೇಚಿಚ್ಛಿನ್ನಾಸಿನಾಭಿನ್ನಾಸ್ತಥಾನ್ಯೇಶರಪೀಡಿತಾಃ । ನಿಪೇತುರಂಬರಾತ್ತೂರ್ಣಂರಾಕ್ಷಸಾಸ್ಸಾಗರಾಂಭಸಿ ॥೫೪॥ ತದಾಂಬರಂ ವಿಗಳಿತಹಾರಕುಂಡಲೈರ್ನಿಶಾಚರೈರ್ನೀಲವಲಾಹಕೋಪಮೈಃ ॥ ನಿಪಾತ್ಯಮಾನೈರ್ದದೃಶೇನಿರಂತರಂ ನಿಪಾತ್ಯಮಾನೈರಿವ ನೀಲಪರ್ವತೈಃ ॥೫೫॥

—…ಇತಿ ಶ್ರೀಮದುತ್ತರಕಾಂಡೇ—ಸಪ್ತಮಸ್ಸರ್ಗಃ.…—

ಹನ್ಯಮಾನಬಲೇತಸ್ಮಿನ್ ಪದ್ಮನಾಭೇನಪೃಷ್ಠತಃ । ಮಾಲ್ಯವಾನ್ ಸನ್ನಿವೃತ್ತೋಥವೇಲಾತಿಗಇವಾರ್ಣವಃ ॥೧॥ ಸಂರಕ್ತನಯನಃಕೋಪಾಚ್ಚಲನ್ಮೌಳಿರ್ನಿಶಾಚರಃ । ಪದ್ಮನಾಭಮಿದಂಪ್ರಾಹವಚನಂಪುರುಷೋತ್ತಮಮ್ ॥೨॥ ನಾರಾಯಣನಜಾನೀಷೇಕ್ಷತ್ರಧರ್ಮಂಸನಾತನಂ । ಅಯುದ್ಧಮನಸೋಭಗ್ನಾನಸ್ಮಾನ್ ಹಂಸಿಯಥೇತರಃ॥೩॥ ಪರಾಙ್ಮುಖವಧಂಪಾ

---

ರಾಗಿ, ಪತಂತಿ–ಬಿದ್ದುಹೋದರು ॥೫೨॥ ಚಕ್ರಕೃತ್ತಾಸ್ಯಕಮಲಾಃ–ಚಕ್ರದಿಂದ ಕತ್ತರಿಸಲ್ಪಟ್ಟ ಮುಖಕಮಲಗಳುಳ್ಳ, ಗದಾಸಂಚೂರ್ಣಿತೋರಸಃ–ಗದಾಯುಧದಿಂದ ಚೂರ್ಣ ಮಾಡಲ್ಪಟ್ಟ ಎದೆಗಳುಳ್ಳ, ಲಾಂಗಲಗ್ಲಪಿತಗ್ರೀವಾಃ–ನೇಗಲಿಂದ ಭಗ್ನವಾದ ಕೊರಳುಳ್ಳ, ಮುಸಲೈಃ–ಮುಸಲಾಯುಧಗಳಿಂದ, ಭಿನ್ನಮಸ್ತಕಾಃ–ಭೇದಿಸಲ್ಪಟ್ಟ ಶಿರಸ್ಸುಗಳುಳ್ಳವರು(ಆಗಿ–ಆದರು)ಕೇಚಿತ್‌ರಾಕ್ಷಸಾಃ–ಕೆಲವರಾಕ್ಷಸರು, ಅಸಿನೈವ–ಖಡ್ಗದಿಂದಲೇ, ಛಿನ್ನಾಃ–ಕತ್ತರಿಸಲ್ಪಟ್ಟವರಾಗಿಯು, ತಥಾ–ಹಾಗೆಯೆ, ಅನ್ಯೇ–ಮತ್ತುಕೆಲವರು, ಶರಪೀಡಿತಾಃ–ಬಾಣಗಳಿಂದ ಬಾಧಿಸಲ್ಪಟ್ಟವರಾಗಿಯು ಆಗಿ, ಅಂಬರಾತ್–ಅಂತರಿಕ್ಷದ ದೇಶದಿಂದ, ಸಾಗರಾಂಭಸಿ–ಸಮುದ್ರೋದಕದಲ್ಲಿ, ತೂರ್ಣಂ–ಜಾಗ್ರತೆಯಾಗಿ, ನಿಪೇತುಃ–ಬಿದ್ದರು ॥೫೪॥ ತದಾ–ಆಕಾಲದಲ್ಲಿ, ಅಂಬರಂ–ಅಂತರಿಕ್ಷವು, ವಿಗಳಿತಹಾರಕುಂಡಲೈಃ–ಕೆಳಗೆ ಬೀಳುತಿರುವ ಹಾರಗಳುನ್ನು ಹತ್ತು ಕಡಕುಗಳುಮ್ನು ಉಳ್ಳ, ನಿಪಾತ್ಯಮಾನೈಃ–ಬೀಳಸಲ್ಪಡುತಿರುವ, ನೀಲವಲಾಹಕೋಪಮೈಃ–ಕಪ್ಪಾದ ಮೇಘಗಳಿಗೆ ಸಮಾನರಾದ, ನಿಶಾಚರೈಃ–ರಾಕ್ಷಸರಿಂದ, ನಿಪಾತ್ಯಮಾನೈಃ–ಕೆಳಗೆ ಬೀಳಸಲ್ಪಟ್ಟ,ನೀಲಪರ್ವತೈರಿವ–ಕಾಡಿಗೆ ಬೆಟ್ಟಗಳಿಂದಲಂತೆ, ನಿರಂತರಂ–ಸಾಂದ್ರವಾಗಿ, ದದೃಶೇ–ಕಾಣಲ್ಪಟ್ಟಿತು ॥೫೫॥ ಶ್ರೀಮದುತ್ತರ ರಾಮಾಯಣೆ ಸಪ್ತಮಸ್ಸರ್ಗಃ ಸಮಾಪ್ತಃ.

ಅಥ–ಬಳಿಕ, ತಸ್ಮಿನ್‌ಬಲೇ–ಆ ಸೈನ್ಯವು, ಪದ್ಮನಾಭೇನ–ಶ್ರೀ ವಿಷ್ಣುವಿನಿಂದ,ಹನ್ಯಮಾನೇಸತಿ–ಹೊಡೆಯಲ್ಪಟ್ಟಂಥಾದ್ದಾಗುತಿರಲೀಕಾಗಿ, ಮಾಲ್ಯವಾನ್–ಮಾಲ್ಯವಂತನು, ಪೃಷ್ಠತಃ–ಹಿಂದಗಡೆ, ವೇಲಾತಿಗಃ–ಮಿತಿಮೀರಿದ, ಅರ್ಣವಇವ–ಸಮುದ್ರದಂತೆ,ಸನ್ನಿವೃತ್ತಃ–ಹಿಂತಿರಿಗಿದನು॥ಕೋಪಾತ್–ಕ್ರೋಧದದೆಸೆಯಿಂದ, ಸಂರಕ್ತನಯನಃ–ಕೆಂಗಾದ–ಕಣ್ಣುಗಳುಳ್ಳ,ಚಲನ್ಮೌಳಿಃ–ಚಲಿಸುತಿರುವ–ಶಿರಸ್ಸುಳ್ಳ,ನಿಶಾಚರಃ–ರಾಕ್ಷಸನು,ಪುರುಷೋತ್ತಮಂ–ಪುರುಷಶ್ರೇಷ್ಠನಾದ,ಪದ್ಮನಾಭಂ–ಪದ್ಮನಾಭನನ್ನು ಕುರಿತು,ಇದಂವಚನಂ–ಈ ಮಾತನ್ನು,ಪ್ರಾಹ–ಪೇಳಿದನು॥೨॥ಹೇನಾರಾಯಣ–ಎಲೈವಿಷ್ಣುವೆ!ತ್ವಂ–ನೀನು, ಅಯುದ್ಧಮನಸಃ–ಯುದ್ಧದಲ್ಲಿ ಮನವಿಲ್ಲದಿರುವ, ಭಗ್ನಾನ್–ಯುದ್ಧದಲ್ಲಿ ಸೋತುಹೋದ,ಅಸ್ಮಾನ್–ನಮ್ಮನ್ನು, ಇತರೋಯಥಾ–ಪಾಮರನಂತೆ,'ಹಂಸಿ–ಹೊಡಿಯುತ್ತೀಯಿ, ತ್ವಂ–ನೀನು,ಸನಾತನಂ–ಅನಾದಿಸಿದ್ಧನಾದ,ಕ್ಷತ್ರಧರ್ಮಂ–ಕ್ಷತ್ರಿಯಧರ್ಮವನ್ನು,ನಜಾನೀಷೇ–ಅರಿಯದೇಹೋದೆ॥ಅಸುರೇತರಃ–ರಾಕ್ಷಸೇತರನಾದ,ಯಃ–ಯಾರು, ಪರಾಙ್ಮುಖವಧಂ–ಹಿಂತಿರಿಗಿದವನ ಸಂಹಾರರೂಪವಾದ,ಪಾಪಂ–ಪಾತಕವನ್ನು, ಕರೋತಿ–ಮಾಡುವನೋ, ಸಹಂತಾ–ಆ ಸಂಹಾರಕರ್ತನು, ಹತಃ–ಸತ್ತವನಾಗಿ, ಪುಣ್ಯಕರ್ಮಣಾಂ–ಪುಣ್ಯವಂತರ, ಸ್ವರ್ಗಂ–ಸ್ವರ್ಗವನ್ನು, ನಲಭತೇ–ಹೊಂದುವದಿಲ್ಲ ॥೪॥ ಅಥವಾ–ಹಾಗಲ್ಲದಿದ್ದರೆ, ಹೇಶಂಖಚಕ್ರಗದಾಧರ–

---

ಗಿಯು, ಗದಾಯುಧ ಪ್ರಹಾರದಿಂದ ಸಂಚೂರ್ಣಿತಮಾದ ಅಂಗಳುಳ್ಳವರಾಗಿಯು, ಶಸ್ತ್ರಗಳ ದೆಬ್ಬೆಗಳಿಂದ ಬಹು ಬಗೆಯಾಗಿ ಖಂಡಿಸಲ್ಪಟ್ಟವರಾಗಿಯು, ಇರುವ ಆ ರಾಕ್ಷಸ ಶ್ರೇಷ್ಠರು, ವಜ್ರಾಯುಧ ಪ್ರಹಾರಗಳಿಂದ ಶೀಳಿ ಹೋದ ಬೆಟ್ಟಗಳಂತೆಯು, ಬಿರುಘಾಳಿಯಿಂದ ಮುರಿಯಲ್ಪಟ್ಟ ವೃಕ್ಷಗಳಂತೆಯು, ಬೀಳುತಿರುವರಾಗಿ ದೇವತೆಗಳಿಂದ ನೋಡಲ್ಪಟ್ಟರು ॥೫೨॥ ಆ ರಾಕ್ಷಸರು ಚಕ್ರದಿಂದ ಕತ್ತರಿಸಲ್ಪಟ್ಟ ಮುಖಗಳುಳ್ಳವರಾಗಿಯು, ಗದಾ ಯುಧದಿಂದ ಚೂರ್ಣಮಾಡಲ್ಪಟ್ಟ ವಕ್ಷಸ್ಥಲಗಳುಳ್ಳವರಾಗಿಯು, ನೇಗಲಿನಿಂದ ಕಂದಿದ ಕಂಠಗಳುಳ್ಳವರಾಗಿಯು, ಮನಿಕೆಗಳಿಂದ ಹೊಡೆಯಲ್ಪಟ್ಟ ಮಂಡೆಗಳುಳ್ಳವರಾಗಿಯು, ಇರುವರಾದರು ॥೫೩॥ ಕೆಲ ರಾಕ್ಷಸರು ಕತ್ತಿಗಳಿಂದ ಕತ್ತರಿಸಲ್ಪಟ್ಟರು, ಮತ್ತೆ ಕೆಲಬರು ಬಾಣಗಳಿಂದ ಬಾಧಿತರಾಗಿ ಅಂತರಿಕ್ಷದಿಂದ ಸಮುದ್ರದಲ್ಲಿ ಬಿದ್ದು ಹೋದರು ॥೫೪॥ ಆ ಸಮಯದಲ್ಲಿ ಬಿಚ್ಚಿಹೋದ ಹಾರಗಳೂ, ಹತ್ತು ಕಡುಕುಗಳೂಉಳ್ಳ ಕಾಲ ಮೇಘಗಳಂತೆ ಕಪ್ಪಾಗಿರುವ ಆ ರಕ್ಕಸರು ಕಪ್ಪಾದಬೆಟ್ಟಗಳಂತೆ ಬಿದ್ದು ಹೋದರು. ॥೫೫॥

—…ಉತ್ತರಕಾಂಡದೋಳ್ ಸಪ್ತಮಸರ್ಗಂ ಮುಗಿದುದು.…—

ಈಪರಿಯಾಗಿ ಪದ್ಮನಾಭನಿಂದ, ಆ ಸೈನ್ಯವು ನಿಹತಮಾದದ್ದಾಗುತಿರಲೀಕಾಗಿ, ಮಾಲ್ಯವಂತನೆಂಬ ರಕ್ಕಸನು ಮಿತಿಮೀರಿದ ಕಡಲಿನಂತೆ ಹಿಂದಿರಿಗಿದವನಾಗಿ ಕೋಪದಿಂ ಕೆಂಗಣ್ಣುಗಳುಳ್ಳವನಾಗಿ ತಲೆದೂಗಿ ಶ್ರೀಮನ್ನಾರಾಯಣನಂ ಕುರಿತು ಇಂತೆಂದನು. ॥೨॥ ಎಲೈ ನಾರಾಯಣನೇ ನೀನು ಕ್ಷತ್ರಧರ್ಮವನ್ನರಿಯೆ, ಯಾಕಂದರೆ, ಯುದ್ಧದಲ್ಲಿ ಓಡಿಹೋಗುತಿರುವ ನಮ್ಮಗಳನ್ನು ಪಾಮರ ನರನಂತೆ ಹಿಂಸಿಸುತಿರುವಿ ॥೩॥ ರಾಕ್ಷಸನಲ್ಲದಿರುವ ಯಾವಾತನು ಪರಾಙ್ಮುಖ ವಧೆಯೆಂಬ ಪಾಪವಂ ಮಾಡುವನೋ ಅಂಥವನು ಮೃತನಾದವನಾಗಿ ಸ್ವರ್ಗವಂ ಹೊಂದುವದಿಲ್ಲವೆಂಬುದು ನಿನಗೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ಸುರೈರ್ಬ್ರಹ್ಮಾ ಚಿಂತಯತ್ಪದ್ಮ ಸಂಭವಃ। ದೇವೀಂಸರಸ್ವತೀಂದೇವಃಪದ್ಮಾಕ್ಷೀಂಪದ್ಮ ಮಾಲಿನೀಮ್ ॥೩೮॥ತ್ರೈಲೋಕ್ಯೇಸ ರ್ವಭೂತಾನಾಂಜಿಹ್ವಾಬುದ್ಧಿರ್ಧೃತಿಃಸ್ಮೃತಿಃ । ಚಿಂತಿತಾಚೋಪತಸ್ಥೇಸಾಪಾರ್ಶ್ವಂದೇವೀಸರಸ್ವತೀ॥೩೯॥ಪ್ರಾಂಜಲಿಶ್ಶಾ ಸ್ತ್ವಪಾರ್ಶ್ವಸ್ಥಾವಾಕ್ಯಂಪ್ರಾಹಸರಸ್ವತೀ । ಇಯಮಸ್ಮ್ಯಾಗತಾದೇವಕಿಂಕಾರ್ಯಂಕರವಾಣ್ಯಹಂ ॥೪೦॥ ಪ್ರಜಾಪತಿಸ್ತು ತಾಂಪ್ರಾಪ್ತಾಂವಾಕ್ಯಂಪ್ರಾಹಸರಸ್ವತೀಂ । ವಾಣಿತ್ವಂರಾಕ್ಷಸೇಂದ್ರಸ್ಯಭವವಾಗ್ದೇವತೇಪ್ಸಿತಾ॥೪೧॥ ತಥೇತ್ಯುಕ್ತ್ವಾಪ್ರವಿ ಷ್ಟಾಸಾಪ್ರಜಾಪತಿರಥಾಬ್ರವೀತ್ । ಕುಂಭಕರ್ಣಮಹಾಬಾಹೋವರಂವರಯಯೋಮತಃ॥೪೨॥ಕುಂಭಕರ್ಣಸ್ತುತದ್ವಾ ಕ್ಯಂಶ್ರುತ್ವಾವಚನಮಬ್ರವೀತ್ । ಸ್ವಪ್ತುಂವರ್ಷಾಣ್ಯನೇಕಾನಿದೇವದೇವಮಮೇಪ್ಸಿತಂ ॥೪೩॥ ಏವಮಸ್ತ್ವಿತಿತಂಪ್ರಾಹದೇ ವಾಹೃಷ್ಟಾದಿವೌಕಸಃ । ದೇವೀಸರಸ್ವತೀಚೈವರಾಕ್ಷಸಂಸಾಜಹೌಪುನಃ ॥೪೪॥ ಬ್ರಹ್ಮಣಾಸಹದೇವೇಷುಗತೇಷ್ವಥನಭ ಸ್ಸ್ಥಲಂ । ವಿಮುಕ್ತೋಸೌಸರಸ್ವತ್ಯಾಸ್ವಾಂಸಂಜ್ಞಾಮಗಮತ್ತತಃ॥೪೫॥ ಕುಂಭಕರ್ಣಸ್ತುದುಷ್ಟಾತ್ಮಾಚಿಂತಯಾಮಾ

---

ಪದ್ಮೋದ್ಭವನಾದ, ಬ್ರಹ್ಮಾದೇವಃ–ಬ್ರಹ್ಮದೇವನು, ಪದ್ಮಾಕ್ಷೀಂ–ಕಮಲಾಕ್ಷಿಯಾದ, ಪದ್ಮಮಾಲಿನೀಂ–ಕಮಲಗಳೇ ಮಾಲಿಕೆಯಾಗುಳ್ಳ, ಸರಸ್ವತೀಂದೇವೀಂ–ಸರಸ್ವತೀ ದೇವಿಯನ್ನು, ಅಚಿಂತಯತ್ ಧ್ಯಾನಿಸಿದನು. ॥೩೮॥ ತ್ರೈಲೋಕ್ಯೇ–ಲೋಕತ್ರಯದಲ್ಲಿ, ಸರ್ವಭೂತಾನಾಂ–ಸಮಸ್ತ ಭೂತಗಳಿಗೂ, ಜಿಹ್ವಾ–ರಸನೇಂದ್ರಿಯ ರೂಪವಾಗಿ, ಬುದ್ಧಿಃ–ಬುದ್ಧಿಸ್ವರೂಪವಾಗಿಯು,ಧೃತಿಃ–ಧೈರ್ಯಸ್ವರೂಪವಾಗಿಯು,ಸ್ಮೃತಿಃ–ಸ್ಮರಣೆಯರೂಪವಾಗಿಯು ಇರುವಳು,ಯಾ–ಯಾವಾತಕೆಯೋ, ಸಾ–ಸರಸ್ವತೀದೇವೀಚ–ಆ ಸರಸ್ವತೀ ದೇವಿಯೂ, ಚಿಂತಿತಾ–ಸ್ಮರಿಸಲ್ಪಟ್ಟವಳಾಗಿ, ಪಾರ್ಶ್ವಂ–ಪಕ್ಕದಲ್ಲಿ, ಉಪತಸ್ಥೇ–ನಿಂತಳು, ॥೩೯॥ಅಸ್ಯ–ಈ ಬ್ರಹ್ಮನ, ಪಾರ್ಶ್ವಸ್ಥಾ–ಪಕ್ಕದಲ್ಲಿರುವ, ಸರಸ್ವತೀ–ಸರಸ್ವತೀದೇವಿಯು, ಪ್ರಾಂಜಲಿಃ–ಅಂಜಲಿಬದ್ಧಳಾಗಿ, ಹೇದೇವ–ಎಲೈ ಸ್ವಾಮಿಯೆ! ಇಯಂ–ಈ ನಾನು, ಆಗತಾಸ್ಮಿ–ಬಂದಿಥೇನೆ, ಅಹಂ–ನಾನು, ಕಿಂಕಾರ್ಯಂ–ಯಾವಕಾರ್ಯವನ್ನು, ಕರವಾಣಿ–ಮಾಡಲಿ, ಇತಿ–ಇಂತೆಂದು, ವಾಕ್ಯಂ–ಮಾತನ್ನು,ಪ್ರಾಹ–ಹೇಳಿದಳು ॥೪೦॥ಪ್ರಜಾಪತಿಸ್ತು–ಬ್ರಹ್ಮನಾದರೆ, ಪ್ರಾಪ್ತಾಂ–ಬಂದಿರುವ, ತಾಂಸರಸ್ವತೀಂ–ಆ ಸರಸ್ವತೀದೇವಿಯನ್ನು ಕುರಿತು, ವಾಕ್ಯಂ–ಮಾತನ್ನು, ಪ್ರಾಹ–ನುಡಿದನು, ಹೇವಾಣಿ–ಎಲೈ ಸರಸ್ವತಿಯೆ, ತ್ವಂ–ನೀನು, ರಾಕ್ಷಸೇಂದ್ರಸ್ಯ–ರಾಕ್ಷಸಶ್ರೇಷ್ಠನಾದ ಕುಂಭಕರ್ಣನ, ವಾಗ್ದೇವತಾ–ವಾಗಭಿಮಾನಿದೇವತೆಯಾಗಿ, ಈಪ್ಸಿತಾ–ಪ್ರಿಯಳು, ಭವ–ಆಗು ॥೪೧॥ ತಥೇತಿ–ಹಾಗೇಆಗಲಿಎಂದು, ಉಕ್ತ್ವಾ–ಹೇಳಿ, ಸಾಸರಸ್ವತೀ–ಆಸರಸ್ವತಿಯು, ಪ್ರವಿಷ್ಟಾ–ಪ್ರವೇಸಿಸಿದಳು. ಅಥ–ಬಳಿಕ, ಪ್ರಜಾಪತಿಃ–ಬ್ರಹ್ಮನು, ಹೇಕುಂಭಕರ್ಣ–ಎಲೈ ಕುಂಭಕರ್ಣನೆ, ಹೇಮಹಾಬಾಹೋ–ಎಲೈ ಮಹಾ ಭುಜಶಾಲಿಯೆ, ಯಃ–ಯಾವವರವು, ಮತಃ–ಇಷ್ಟವೋ, ತಂವರಂ–ಆ ವರವನ್ನು, ವರಯ–ಬೇಡಿಕೋ, ಇತಿ–ಇಂತೆಂದು, ಅಬ್ರವೀತ್–ನುಡಿದನು ॥ ೪೨ ॥ ಕುಂಭಕರ್ಣಸ್ತು–ಕುಂಭಕರ್ಣನಾದರೆ, ತದ್ವಾಕ್ಯಂ–ಆ ಮಾತನ್ನು, ಶ್ರುತ್ವಾ–ಕೇಳಿ, ಹೇದೇವದೇವ–ಎಲೈ ದೇವದೇವೋತ್ತಮನೆ, ಅನೇಕಾನಿವರ್ಷಾಣಿ–ಅನೇಕ ಸಂವತ್ಸರಗಳು, ಸ್ವಪ್ತುಂ–ನಿದ್ದೆಮಾಡುವದಕ್ಕೋಸ್ಕರ, ಮಮ–ನನಗೆ, ಈಪ್ಸಿತಮಿತಿ–ಇಷ್ಟವೆಂದು, ವಚನಂ–ಮಾತನ್ನು, ಅಬ್ರವೀತ್–ನುಡಿದನು ॥ ೪೩ ॥ ದೇವಃ–ಬ್ರಹ್ಮದೇವನು, ಏವಮಸ್ತ್ವಿತಿ–ಹಾಗೆ ಆಗಲಿಂದು, ತಂ–ಆ ಕುಂಭಕರ್ಣನನ್ನು ಕುರಿತು, ಪ್ರಾಹ–ಹೇಳಿದನು, ದಿವೌಕಸಃ–ದೇವತೆಗಳು, ಹೃಷ್ಟಾಃ–ಸಂತುಷ್ಟರಾದರು, ಸಾಸರಸ್ವತೀದೇವೀಚ–ಆ ಸರಸ್ವತೀದೇವಿಯು ಸಹ, ರಾಕ್ಷಸಂ–ಕುಂಭಕರ್ಣನನ್ನು ಪುನಃ–ಮತ್ತು, ಜಹೌ–ಬಿಟ್ಟಳು ॥ ೪೪ ॥ ಅಥ–ಅನಂತರದಲ್ಲಿ, ದೇವೇಷು–ದೇವತೆಗಳು, ಬ್ರಹ್ಮಣಾಸಹ–ಬ್ರಹ್ಮದೇವನೊಡನೆ, ನಭಸ್ಥಲಂ–ಅಂತರಿಕ್ಷಮಾರ್ಗದಲ್ಲಿ, ಗತೇಷುಸತ್ಸು–ಹೋದವರಾಗುತ್ತಿರಲಾಗಿ, ತತಃ–ಬಳಿಕ, ಸರಸ್ವತ್ಯಾ–ಸರಸ್ವತೀದೇವಿಯಿಂದ, ವಿಮುಕ್ತಃ–ಬಿಡಲ್ಪಟ್ಟ, ಅಸೌ–ಈ ಕುಂಭಕರ್ಣನು, ಸ್ವಾಂಸಂಜ್ಞಾಂ–ತನ್ನ ಪ್ರಜ್ಞೆಯನ್ನು ಅಗಮತ್–ಹೊಂದಿದನು ॥ ೪೫ ॥

---

ಆ ಚತುರ್ಮುಖಬ್ರಹ್ಮನು, ಕಮಲಾಕ್ಷಿಯಾದ ಮತ್ತು ಕಮಲಗಳೇ ಮಾಲಿಕೆಯಾಗಿವುಳ್ಳ, ಸರಸ್ವತೀದೇವಿಯನ್ನು ಸ್ಮರಿಸಿದನು ॥೩೮॥ ಲೋಕತ್ರಯದಲ್ಲಿರುವ ಸಮಸ್ತ ಭೂತಗಳಿಗು, ರಸನೇಂದ್ರಿಯರೂಪವಾಗಿಯು, ಬುದ್ಧಿಸ್ವರೂಪವಾಗಿಯು, ಧೈರ್ಯಸ್ವರೂಪವಾಗಿಯು, ಸ್ಮರಣರೂಪವಾಗಿಯು, ಇರುವ ಆ ಸರಸ್ವತೀದೇವಿಯು ಬ್ರಹ್ಮದೇವರಿಂದ ಸ್ಮರಿಸಲ್ಪಟ್ಟವಳಾಗಿ ಪಾರ್ಶ್ವದಲ್ಲಿ ಬಂದು ನಿಂತು ಅಂಜಲಿಬದ್ಧಳಾಗಿಂತೆಂದು ನುಡಿದಳು ಎಲೈ ಸ್ವಾಮಿಯೆ, ಇಗೋ ನಾನು ಬಂದಿಥೇನೆ, ಯೇನುಮಾಡಲಿ ಎನ್ನಲು, ॥೪೦॥ ಆಗ ಬ್ರಹ್ಮನು ಸಮೀಪವರ್ತಿಯಾಗಿರುವ ಸರಸ್ವತೀದೇವಿಯಂ ಕುರಿತು ಎಲೈ ವಾಣಿಯೆ! ನೀನು ರಾಕ್ಷಸೋತ್ತಮನಾದ ಕುಂಭಕರ್ಣನ ವಾಕ್ಸ್ಥಾನದಲ್ಲಿದ್ದುಕೊಂಡು ಇಷ್ಟಾರ್ಥವನ್ನಪೇಕ್ಷಿಸು ಎಂದು ನುಡಿದನು ॥೪೧॥ ಈಪರಿಯಾಗಿ ಬ್ರಹ್ಮನಿಂದಾಜ್ಞಪ್ತಳಾದ ಆ ಸರಸ್ವತೀದೇವಿಯು ಕುಂಭಕರ್ಣನ ವಾಗಿಂದ್ರಿಯವಂ ಹೊಕ್ಕಿದಳು, ಆ ಬಳಿಕ ಬ್ರಹ್ಮನು ಅವನಬಳಿಗೆ ಬಂದು, ಎಲೈ ಕುಂಭರ್ಣನೆ ನಿನಗೆ ಇಷ್ಟವಾದ ವರವಂ ಬೇಡಿಕೊ ಎಂದು ಪೇಳಲು, ಆ ಕುಂಭಕರ್ಣನು ಈ ವಾಕ್ಯವಂಕೇಳಿ ಎಲೈ ದೇವದೇವೋತ್ತಮನೆ! ಅನೇಕವರ್ಷಗಳು ಸುಖವಾಗಿ ನಿದ್ರಿಸಬೇಕೆಂದಿಚ್ಛೈಸುವೆನೆಂದು ವರವನ್ನಪೇಕ್ಷಿಸಿದನು ॥೪೩॥ ಆಗ ಚತುರ್ಮುಖಬ್ರಹ್ಮನು, ಹಾಗೆ ಆಗುವದೆಂದು ಹೇಳಲು, ದೇವತೆಗಳೆಲ್ಲರು ಸಂತೋಷಭರಿತರಾದರು, ಆಸರಸ್ವತೀದೇವಿಯು ಸಹ ರಾಕ್ಷಸನಂ ತೊರದು ಪುನಹಾ ಬಂದವಳಾದಳು ॥೪೪॥ ಬ್ರಹ್ಮನಿಂದೊಡಗೂಡಿ ಬಂದಿದ್ದ ದೇವತೆಗಳೆಲ್ಲರು ಗಗನಮಾರ್ಗ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸದುಃಖಿತಃ । ಕೀದೃಶಂಕಿನ್ನ್ವಿದಂವಾಕ್ಯಂಮಮಾದ್ಯವದನಾಚ್ಯುತಮ್ ॥೪೬॥ ಅಹಂವ್ಯಾಮೋಹಿತೋಮನ್ಯೇದೇವೈರಿಹ ಸಮಾಹಿತೈಃ ॥ ೪೭ ॥ ಏವಂಲಬ್ಧವರಾಸ್ಸರ್ವೇಭ್ರಾತರೋದೀಪ್ತತೇಜಸಃ । ಶ್ಲೇಷ್ಮಾತಕವನಂಗತ್ವಾತತ್ರತೇನ್ಯವಸನ್ಸು ಖಮ್ ॥೪೮॥

—…*ಇತಿ ಶ್ರೀಮದುತ್ತರರಾಮಾಯಣೆ ದಶಮಸ್ಸರ್ಗಃ.*…—

ಸುಮಾಲೀವರಲಬ್ಧಾಂಸ್ತುಜ್ಞಾತ್ವಾಚೈತಾನ್ನಿಶಾಚರಾನ್ । ಉದತಿಷ್ಠದ್ಭಯಂತ್ಯಕ್ತ್ವಾಸಾನುಗಸ್ಸರಸಾತಲಾತ್ ॥೧॥ ಮಾರೀಚಶ್ಚಪ್ರಹಸ್ತಶ್ಚವಿರೂಪಾಕ್ಷೋಮಹೋದರಃ । ಉದತಿಷ್ಠನ್ಸುಸಂರಬ್ಧಾಸ್ಸಚಿವಾಸ್ತಸ್ಯರಕ್ಷಸಃ ॥೨॥ ಸುಮಾಲೀ ಚೈವತೈಸ್ಸರ್ವೈರ್ವೃತೋರಾಕ್ಷಸಪುಂಗವೈಃ । ಅಭಿಗಮ್ಯದಶಗ್ರೀವಂಪರಿಷ್ವಜ್ಯೇದಮಬ್ರವೀತ್ ॥೩॥ ದಿಷ್ಟ್ಯಾತೇವತ್ಸಸಂ ಪ್ರಾಪ್ತಶ್ಚಿಂತಿತೋಯಂಮನೋರಥಃ । ಯಸ್ತ್ವಂತ್ರಿಭುವನಶ್ರೇಷ್ಠಾಲ್ಲಬ್ಧವಾನ್ವರಮೀದೃಶಮ್ ॥೪॥ ಯತ್ಕೃತೇಚವಯಂ ಲಂಕಾಂತ್ಯಕ್ತ್ವಾಯಾತಾರಸಾತಲಮ್ । ತದ್ಗತಂನೋಮಹಾಬಾಹೋಮಹದ್ವಿಷ್ಣುಕೃತಂಭಯಮ್ ॥೫॥ ಅಸಕೃತ್ತೇನ

---

ದುಷ್ಟಾತ್ಮಾ-ದುರ್ಬುದ್ಧಿಯುಳ್ಳ, ಕುಂಭಕರ್ಣಸ್ತು-ಕುಂಭಕರ್ಣನಾದರೆ, ದುಃಖಿತಃ-ದುಃಖಿತನಾಗಿ, ಅದ್ಯ-ಈಗ, ಕೀದೃಶಂ-ಯಂಥಾದ್ದಾದ, ಇದಂಕಿನ್ನುವಾಕ್ಯಂ-ಈ ಯಾವಮಾತು,-ಮಮ-ನನ್ನ, ವದನಾತ್-ಬಾಯಿಯಿಂದ, ಚ್ಯುತಂ-ಹೊರಟಿತು, ಅಹಂ-ನಾನು, ಇಹ-ಇಲ್ಲಿ, ಸಮಾಹಿತೈಃ-ಗುಂಪುಸೇರಿದ, ದೇವೈಃ-ದೇವತೆಗಳಿಂದ, ವ್ಯಾಮೋಹಿತಃ-ಮೋಹಿಸಲ್ಪಟ್ಟನು, ಇತಿ-ಇಂತೆಂದು, ಮನ್ಯೇ-ಊಹಿಸುತ್ತೇನೆ, ಇತಿ-ಇಂತೆಂದು, ಚಿಂತಯಾಮಾಸ-ಯೋಚಿಸಿದನು ॥ ೪೭ ॥ ಏವಂ-ಈ ಪರಿಯಾಗಿ, ಲಬ್ಧವರಾಃ-ಹೊಂದಲ್ಪಟ್ಟ ವರವುಳ್ಳಕಾರಣ, ದೀಪ್ತತೇಜಸಃ-ಹೊಳಯುತಿರುವ ತೇಜಸ್ಸುಳ್ಳ, ತೇಸರ್ವೇಭ್ರಾತರಃ-ಆ ಮೂರುಮಂದಿ ಅಣ್ಣ ತಮ್ಮಂದಿರು, ಶ್ಲೇಷ್ಮಾತಕವನಂ-ಚಳ್ಳೇಗಿಡಗಳುಳ್ಳ ತಂದೆಯ ವನವನ್ನು, ಗತ್ವಾ-ಹೊಂದಿ, ತತ್ರ-ಆವನದಲ್ಲಿ, ಸುಖಂ-ಸುಖವಾಗಿ, ನ್ಯವಸನ್-ಇರುತಿದ್ದರು. ॥ ೪೮ ॥ —…*ಇತಿ ಶ್ರೀಮದುತ್ತರ ರಾಮಾಯಣೆ ದಶಮಸ್ಸರ್ಗಃ.*…—

ಸಸುಮಾಲೀ-ಆ ಸುಮಾಲಿಯು, ಏತಾನ್ನಿಶಾಚರಾನ್‌ತು-ಈ ರಾವಣಾದಿಗಳನ್ನಾದರೆ, ವರಲಬ್ಧಾನ್-ಲಬ್ಧವರವುಳ್ಳವರನ್ನಾಗಿ, ಜ್ಞಾತ್ವಾ-ಅರಿತು, ಭಯಂ-ಭೀತಿಯನ್ನು, ತ್ಯಕ್ತ್ವಾ-ಪದಲಿ, ಸಾನುಗಃ-ಸೇವಕರಿಂ ದೊಡಗೂಡಿದವನಾಗಿ, ರಸಾತಲಾತ್-ಪಾತಾಳದ ದೆಸೆಯಿಂದ, ಉದತಿಷ್ಠತ್-ಮೇಲಕ್ಕೆದ್ದನು ॥೧॥ ತಸ್ಯರಕ್ಷಸಃ-ಆ ಸುಮಾಲಿಗೆ, ಸಚಿವಾಃ-ಮಂತ್ರಿಗಳಾದ, ಮಾರೀಚಶ್ಚ-ಮಾರೀಚನನ್ನು, ಪ್ರಹಸ್ತಶ್ಚ-ಪ್ರಹಸ್ತನನ್ನು, ವಿರೂಪಾಕ್ಷಃ-ವಿರೂಪಾಕ್ಷನನ್ನು, ಮಹೋದರಃ-ಮಹೋದರನು ಕೂಡ, ಸುಸಂರಬ್ಧಾಃ-ಕೋಪಿಷ್ಠರಾಗಿ, ಉದತಿಷ್ಠನ್-ಮೇಲಕ್ಕೆದ್ದರು॥೨॥ಸುಮಾಲೀಚ-ಸುಮಾಲಿಯೂಸಹ, ಸರ್ವೈಃ-ಸಮಸ್ತರಾದ, ರಾಕ್ಷಸಪುಂಗವೈಃ-ರಾಕ್ಷಸಶ್ರೇಷ್ಠರಾದ, ತೈಃ-ಆಪ್ರಹಸ್ತಾದಿಗಳಿಂದ,ವೃತಃ-ಕೂಡಿದವನಾಗಿ, ದಶಗ್ರೀವಂ-ರಾವಣನನ್ನು ಕುರಿತು,ಅಭಿಗಮ್ಯ-ಬಂದು, ಪರಿಷ್ವಜ್ಯ-ಅಪ್ಪಿಕೊಂಡು,ಇದಂವಚನಂ-ಈ ಮಾತನ್ನು, ಅಬ್ರವೀತ್-ನುಡಿದನು॥೩॥ ಹೇವತ್ಸ-ಎಲೈ ಬಾಲಕನೆ,ಚಿಂತಿತಃ-ಯೋಚಿಸಲ್ಪಟ್ಟ,ಅಯಂಮನೋರಥಃ-ಈ ಇಷ್ಟಾರ್ಥವು, ತೇ-ನಿನಗೆ, ದಿಷ್ಟ್ಯಾ-ದೈವಾಧೀನದಿಂದ,ಸಂಪ್ರಾಪ್ತಃ-ಲಭಿಸಿತು, ಯಸ್ತ್ವಂ-ಯಾವ ನೀನು, ತ್ರಿಭುವನಶ್ರೇಷ್ಠಾತ್-ಮೂರುಲೋಕಗಳಲ್ಲಿಯು ಉತ್ತಮನಾದ ಬ್ರಹ್ಮದೇವನ ದೆಸೆಯಿಂದ,ಈದೃಶಂ-ಇಂಥ,ವರಂ-ವರವನ್ನು,ಲಬ್ಧವಾನ್-ಹೊಂದಿದೋ॥ ಹೇಮಹಾಬಾಹೋ-ಎಲೈ ಮಹಾ ಭುಜಗಳುಳ್ಳವನೆ, ವಯಂ-ನಾವು,ಯತ್ಕೃತೇ-ಯಾವವಿಷ್ಣುವಿನನಿಮಿತ್ತವಾಗಿ,ಲಂಕಾಂ-ಲಂಕಾಪಟ್ಟಣವನ್ನು,ತ್ಯಕ್ತ್ವಾ-ಬಿಟ್ಟು,ರಸಾತಲಂ-ಪಾತಾಳವನ್ನು ಕುರಿತು, ಯಾತಾಃ-ಹೋದೆವೋ, ತತ್-ಅಂಥ, ಮಹತ್-ಮಹತ್ತರವಾದ, ವಿಷ್ಣುಕೃತಂ-ವಿಷ್ಣುವಿನಿಂದ ಮಾಡಲ್ಪಟ್ಟ, ಭಯಂ-ಭೀತಿಯು, ನಃ-ನಮಗೆ, ಗತಂ-ಹೋಯಿತು॥೫॥ಯಸ್ಮಾತ್-ಯಾವಕಾರಣದ ದೆಸೆಯಿಂದ, ಅಸಕೃತ್-ಬಾರಿಬಾರಿಗು, ತೇನ-ಆ ವಿಷ್ಣುವಿನಿಂ

---

ದಲ್ಲಿ ಹೋದಬಳಿಕ, ಆ ಕುಂಭಕರ್ಣನು ಸರಸ್ವತೀದೇವಿಯಿಂದ ವಿಮುಕ್ತನಾಗಿ ಅನಂತರ ತನ್ನ ಪ್ರಜ್ಞೆಯನ್ನು ಹೊಂದಿದನು॥೪೫॥ ದುರ್ಬುದ್ಧಿಯುಳ್ಳ ಆ ಕುಂಭಕರ್ಣನು ಕಡುದುಃಖವುಳ್ಳವನಾಗಿ, ಅಕಟ ಯಂಥಾದ್ದಾದ ಈಮಾತು ನನ್ನ ಬಾಯಿಂದ ಹೊರಡಿತೆಂದು ಪರಿಪರಿಯಾಗಿ ಚಿಂತಿಸಿದನು ॥೪೬॥ ಆಹಾ ಈಗ ಗೊತ್ತಾಯಿತು ಇಲ್ಲಿಗೆ ಬಂದಿದ್ದ ದೇವತೆಗಳಿಂದ ನಾನು ಮೋಹಿಸಲ್ಪಟ್ಟೆನೆಂದು ನಿಶ್ಚೈಸಿಕೆ ಉಂಡನು॥೪೭॥ಈಪರಿಯಾಗಿ ಪಡದ ವರಗಳುಳ್ಳ ಆ ಮೂರುಮಂದಿ ಅಣ್ಣ ತಮ್ಮಂದಿರು ಕಡುತೇಜಸ್ವಿಗಳಾಗಿ, ಚಳ್ಳೇ ಮರಗಳಿಂದ ತುಂಬಿರುವ ತಂದೆಯ ಆಶ್ರಮವನ್ನೈದಿಅಲ್ಲಿಸುಖವಾಗಿದ್ದರು॥೪೮॥ —…ಶ್ರೀಮದುತ್ತರರಾಮಾಯಣದೋಳ್ ದಶಮಸ್ಸರ್ಗಂ ಮುಗಿದುದು…—

ಈ ರಾವಣಾದಿಗಳು ವರವಂ ಪಡದರೆಂದು ಸುಮಾಲಿಯುಕೇಳಿದವನಾಗಿ ಭಯವಂತೊರದು ಸಪರಿವಾರವಾಗಿ ಪಾತಾಳಲೋಕದ ದೆಶೆಯಿಂದ ಮೇಲಕ್ಕೆದ್ದವನಾದನು ॥೧॥ ಆಸುಮಾಲಿಯ ಮಂತ್ರಿಗಳಾದ, ಮಾರೀಚ, ಪ್ರಹಸ್ತ, ವಿರೂಪಾಕ್ಷ ಮಹೋದರರೆಂಬೀ ನಾಲ್ಕುಮಂದಿಯು ಕೂಡ ಕಡು ಕೋಪಿಷ್ಠರಾಗಿ ಬಂದವರಾದರು ॥೨॥ ಆ ರಾಕ್ಷಸೋತ್ತಮರಿಂದ ಪರಿವೃತನಾದ ಸುಮಾಲಿಯು ರಾವಣಾಸುರನ ಬಳಿಗೆ ಬಂದವನಾಗಿ ಆಲಿಂಗನಂಗೈದಿಂತೆಂದನು ॥೩॥ ಎಲೈ ಬಾಲಕನೇ! ಯಾವನೀನು ಲೋಕತ್ರಯದಲ್ಲಿಯು ಉತ್ತಮನಾದ ಸಾಕ್ಷಾದ್ಬ್ರಹ್ಮದೇವರಿಂದ ಇಂಥ ವರವಂಪಡೆದೆಯೊ ಆದಕಾರಣ ಪೂರ್ವದಲ್ಲಿ ಯೋಚಿಸಿದ ಈ ಮನೋರಥವು ದೈವಾಧೀನದಿಂದ ಇಂದಿಗೆ ಸಫಲವಾಯಿತು ॥೪॥ ಎಲೈ ಮ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭಗ್ನಾಹಿಪರಿತ್ಯಜ್ಯಸ್ವಮಾಲಯಮ್ । ವಿದ್ರುತಾಸ್ಸಹಿತಾಸ್ಸರ್ವೆ ಪ್ರವಿಷ್ಟಾಸ್ಮ್ರಸಾತಲಮ್ ॥೬॥ ಅಸ್ಮದೀಯಾಚಲಂಕೆಯಂನಗರೀರಾಕ್ಷಸೊಷಿತಾ । ನಿವೆಶಿತಾತವಭ್ರಾತ್ರಾಧನಾಧ್ಯಕ್ಷೇಣಧೀಮತಾ ॥೭॥ ಯದಿನಾಮಾತ್ರಶಕ್ಯಂಸ್ಯಾತ್ಸಾಮ್ನಾದಾನೆನವಾನಘ । ತರಸಾವಾಮಹಾಬಾಹೊಪ್ರತ್ಯಾನೆತುಂಕೃತಂಭವೆತ ॥೮॥ ತ್ವಂತುಲಂಕೆಶ್ವರಸ್ತಾತಭವಿಷ್ಯಸಿನಸಂಶಯಃ । ಸರ್ವೆಷಾಂನಃಪ್ರಭುಶ್ಚೈವನಿತ್ಯಮೆವಮಹಾಬಲ ॥೯॥ ತ್ವಯಾರಾಕ್ಷಸವಂಶೊಯಂನಿಮಗ್ನಸ್ತುಸಮುದ್ಧೃತಃ। ರಾಕ್ಷಸಾನಾಮಯಂವತ್ಸತ್ವಯಿವಂಶಃಪ್ರತಿಷ್ಠಿತಃ । ತ್ವಂನಾಥಸ್ತ್ವಂಪ್ರಭುಸ್ಸ್ವಾಮಿತ್ವಮಸ್ಮಾಕಂಪರಾಗತಿಃ ॥೧೦॥ ಅಥಾಬ್ರವೀದ್ದಶಗ್ರೀವೊಮಾತಾಮಹಮುಪಸ್ಥಿತಮ್ । ವಿತ್ತೆಶೊಗುರುರಸ್ಮಾಕಂನಾರ್ಹಸ್ತ್ವಂವಕ್ತುಮೀದೃಶಮ್ ॥೧೧॥ ಸುಮಾಲೀರಾಕ್ಷಸೆಂದ್ರೇಣಪ್ರತ್ಯಾಖ್ಯಾತೊಬಲೀಯಸಾ । ಕಿಂಚಿನ್ನಾಹತತೊರಕ್ಷೊಜ್ಞಾತ್ವಾತಸ್ಯಮನೊಗತಮ್ ॥೧೨॥

---

ದ, ಭಗ್ನಾಃ-ಪರಾಜಿತರಾದೆವೋ, ತೆನ-ಆ ಕಾರಣದಿಂದ, ಸ್ವಮಾಲಯಂ-ಸ್ವಕೀಯಮಾದ ಮನೆಯನ್ನು, ಪರಿತ್ಯಜ್ಯ-ತೊರದು, ವಿದ್ರುತಾಃ-ಓಡಿಹೋದ, ಸರ್ವೆ-ನಾವೆಲ್ಲರು, ಸಹಿತಾಃ-ಗುಂಪುಸೇರಿ, ರಸಾತಲಂ-ಪಾತಾಳವನ್ನು, ಪ್ರವಿಷ್ಟಾಸ್ಸ್ಮ-ಹೊಕ್ಕಿದೆವಷ್ಟೆ ॥೬॥ ರಾಕ್ಷಸೊಷಿತಾ-ರಕ್ಕಸರಿಂದ ವಾಸಿಸಲ್ಪಟ್ಟ ಕಾರಣ, ಅಸ್ಮದೀಯಾ-ನಮ್ಮದಾದ, ಇಯಂಲಂಕಾನಗರೀಚ-ಈ ಲಂಕಾಪಟ್ಟಣವೂ ಕೂಡ, ತವಭ್ರಾತ್ರಾ-ನಿನ್ನಣ್ಣನಾದ, ಧೀಮತಾ-ಬುದ್ಧಿಮಂತನಾದ, ಧನಾಧ್ಯಕ್ಷೇಣ-ಕುಬೇರನಿಂದ, ನಿವೆಶಿತಾ-ಇಡಲ್ಪಟ್ಟಿಥೆ ॥೭॥ ಹೆ ಅನಘ-ಎಲೈ ನಿರ್ದೋಷಿಯೆ, ಹೆ ಮಹಾಬಾಹೊ-ಎಲೈ ಮಹಾ ಭುಜಪರಾಕ್ರಮಿಯೆ, ಅತ್ರ-ಈ ವಿಷಯದಲ್ಲಿ, ಸಾಮ್ನಾ-ಸಾಮೋಪಾಯದಿಂದಲಾಗಲಿ, ದಾನೆನ-ದಾನದಿಂದಲಾಗಲಿ, ತರಸಾವಾ-ಬಲಾತ್ಕಾರದಿಂದಲಾಗಲಿ, ಪ್ರತ್ಯಾನೆತುಂ-ತಿರಿಗಿಸಿಕೊಂಬುವದಕ್ಕೆ, ಯದಿನಾಮಶಕ್ಯಂಸ್ಯಾತ್-ಸಾಧ್ಯವಾದದ್ದಾದರೆ, (ನಃಕಾರ್ಯಂ-ನಮ್ಮ ಕೆಲಸವು) ಕೃತಂ-ಮಾಡಲ್ಪಟ್ಟದ್ದಾಗಿ, (ಭವೆತ್-ಆಗುವದು) ॥೮॥ ಹೆ ಮಹಾಬಲ-ಎಲೈ ಬಹುಬಲಾಢ್ಯನೆ, ಹೆತಾತ-ಎಲೋಅಪ್ಪ-ತ್ವಂತು-ನೀನಾದರೆ, ಲಂಕೆಶ್ವರಃ-ಲಂಕಾಧಿಪತಿಯೂ, ಸರ್ವೆಷಾಂ-ಸಮಸ್ತರಾದ, ನಃ-ನಮ್ಮಗೆ, ಪ್ರಭುಶ್ಚೈವ-ಸ್ವಾಮಿಯುಕೂಡೆ, ನಿತ್ಯಮೆವ-ಯಾವಾಗಲು, ಭವಿಷ್ಯಸಿ-ಆಗುವಿ, ನಸಂಶಯಃ-ಸಂದೇಹವಿಲ್ಲ ॥೯॥ ಹೆವತ್ಸ-ಎಲೈ ಬಾಲಕನೆ, ನಿಮಗ್ನಃ-ಮುಳಗಿಹೋದ, ಅಯಂರಾಕ್ಷಸವಂಶಃ-ಈ ರಾಕ್ಷಸಕುಲವು, ತ್ವಯಾ-ನಿನ್ನಿಂದ, ಸಮುದ್ಧೃತಃ-ಉದ್ಧರಿಸಲ್ಪಟ್ಟಿತು, ತ್ವಯಿ-ನಿನ್ನಲ್ಲಿ, ರಾಕ್ಷಸಾನಾಂ-ಅಸುರರ, ಅಯಂವಂಶಃ-ಈ ವಂಶವು, ಪ್ರತಿಷ್ಠಿತಃ - ಸ್ಥಾಪಿಸಲ್ಪಟ್ಟಿತು ಅಸ್ಮಾಕಂ-ನಮಗೆ, ತ್ವಂ-ನೀನು, ಪ್ರಭುಃ-ಪ್ರಭುವು, ಸ್ವಾಮೀ-ಧಣಿಯು, ತ್ವಂ-ನೀನು, ಪರಾ-ಶ್ರೇಷ್ಠವಾದ, ಗತಿಃ-ಗಮ್ಯಸ್ಥಾನವು. ॥೧೦॥ ಅಥ-ಬಳಿಕ, ದಶಗ್ರೀವಃ - ದಶಕಂಠನು, ಉಪಸ್ಥಿತಂ-ಸಮೀಪದಲ್ಲಿರುವ, ಮಾತಾಮಹಂ - ತಾಯಿಯ ತಂದೆಯನ್ನು ಕುರಿತು, ವಿತ್ತೆಶಃ-ಕುಬೇರನು, ಅಸ್ಮಾಕಂ-ನನಗೆ, ಗುರುಃ-ಗುರುವು, ತ್ವಂ-ನೀನು, ಈದೃಶಂ-ಇಂಥಮಾತನ್ನು, ವಕ್ತುಂ-ಹೇಳುವದಕ್ಕೆ, ನಾರ್ಹಃ-ಯೋಗ್ಯನಲ್ಲ, ಇತಿ-ಇಂತೆಂದು, ಅಬ್ರವೀತ್-ನುಡಿದನು ॥೧೧॥ ರಕ್ಷಃ-ರಾಕ್ಷಸನಾದ, ಸುಮಾಲೀ-ಸುಮಾಲಿಯು, ಬಲೀಯಸಾ-ಬಲಿಷ್ಠನಾದ, ರಾಕ್ಷಸೇಂದ್ರೇಣ-ರಾವಣನಿಂದ, ಪ್ರತ್ಯಾಖ್ಯಾತಃ-ನಿರಾಕರಿಸಲ್ಪಟ್ಟವನಾಗಿ, ತತಃ-ಬಳಿಕ, ತಸ್ಯ-ಆ ರಾವಣನ, ಮನೊಗತಂ-ಮನೋಭಿಪ್ರಾಯವನ್ನು, ಜ್ಞಾತ್ವಾ-ಅರಿತು, ಕಿಂಚಿತ್-ಸ್ವಲ್ಪವಾದರೂ, ನಾಹ-ಹೇಳಲಿಲ್ಲ ॥೧೨॥ ಅಥ-ಬಳಿಕ, ಕೇನಚಿತ್ಕಾಲೆನ-ಸ್ವಲ್ಪಕಾಲದಲ್ಲಿ, ತತ್ರ-ಆ ಆಶ್ರಮದಲ್ಲಿ, ವಸಂತಂ-ಇರುತಿರುವ, ತಥಾ-ಹಾಗೆ, ವಾಕ್ಯಂ-ವಚನವನ್ನು, ಉಕ್ತವಂತಂ-ನುಡಿದ, ದಶಗ್ರೀವಂ-ದಶಕಂಠಗಳು

---

ಹಾ ಭುಜಪರಾಕ್ರಮವುಳ್ಳವನೆ, ಯಾವ ವಿಷ್ಣುವಿನ ಭೀತಿಯಿಂದ ಲಂಕಾಪುರಿಯಂ ತೊರದು ರಸಾತಲ ಪ್ರವಿಷ್ಟರಾಗಿದ್ದೆವೋ ಅಂಥ ನಮ್ಮ ಭಯವಿಂದಿಗೆ ತೊಲಗಿಹೋಯಿತು ॥೫॥ ಅದೇನಂಥ ಭಯ ವನ್ನುವಿಯೋ ಕೇಳು, ನಾವೆಲ್ಲರು ಬಾರಿಬಾರಿಗೂ ವಿಷ್ಣುವಿನೊಡನೆ ಸಂಗರವಂಗೈದು ಭಗ್ನರಾಗಿ ನಮ್ಮ ನಮ್ಮ ಮನೆಗಳಂಬಿಟ್ಟು ಓಡಿ ಹೋದವರಾಗಿ ನಾಗಲೋಕವಂ ಹೊಕ್ಕಿದೆವು ರಾಕ್ಷಸರಿಗಾವಾಸ ಭೂತಮಾದ ಈ ಲಂಕಾನಗರವುಸಹ ನಮ್ಮದಾಗಿಯೇ ಇತ್ತು, ಈಗಲಾದರೆ ನಿನ್ನಗ್ರಜನಾದ ಕುಬೆರನು ಅದನ್ನಾಕ್ರಮಿಸಿಕೊಂಡಿರುತ್ತಾನೆ ॥೭॥ ಎಲೈ ಭುಜ ಪರಾಕ್ರಮಿಯೇ ! ಸಾಮೋಪಾಯದಿಂದಲಾಗಲಿ ಅಥವಾ ದಾನೋಪಾಯದಿಂದಲಾಗಲಿ ಅಥವಾ ದಂಡೋಪಾಯದಿಂದಲಾಗಲಿ ಆ ಲಂಕಾಪುರವನ್ನು ಹಿಂತಿರುಗಿಸುವದಕ್ಕೆ ಸಾಧ್ಯವಾದರೆ ಆಗನಮ್ಮ ಕೆಲಸವು ಕೃತಮಾದೀತು ॥೮॥ ಬಹುಬಲಶಾಲಿಯಾದ ಎಲೈವತ್ಸನೆ! ಸದಾಕಾಲದಲ್ಲಿಯು ನಮಗೆ ನೀನು ಪ್ರಭುವಾದವನಾಗಿ ಈ ಲಂಕಾಪುರಿಗೆ ಒಡೆಯನಾಗುವಿ ಈ ವಿಷಯದಲ್ಲಿ ಸಂಶಯವಿಲ್ಲ ॥೯॥ ಎಲೈ ಬಾಲಕನೆ! ಮುಳುಗಿ ಹೋಗುತಿದ್ದ ಈ ರಾಕ್ಷಸವಂಶವನ್ನೇ ನೀನು ಉದ್ಧಾರಮಾಡಿದೆ ಈ ರಕ್ಕಸಕುಲಕ್ಕೆಲ್ಲ, ನೀನೇ ನಾಥನು, ನೀನೇವೇ ಪ್ರಭುವು, ನೀನೇ ಸ್ವಾಮಿ, ನೀನೇ ಗತಿಯೆಂದು ನಿನ್ನನ್ನೆ ನಂಬಿರುತ್ತೇವೆ ಆದಕಾರಣ ಈ ನಮ್ಮ ಸಂರಕ್ಷಣೆಯ ಭಾರವು ಹ್ಯಾಗಾದರು ನಿನ್ನನ್ನೇ ಹೊಂದಿರುವದೆಂದು ಸುಮಾಲಿಯು ನುಡಿದನು ॥೧೦॥ ಆ ಬಳಿಕ ರಾವಣಾಸುರನು ಈ ವಚನವಂ ಕೇಳಿ ಎಲೈ ಮಾತಾಮಹನೆ ನೀನು ಈಪರಿಯಾಗಿ ಹೇಳಲು ಯುಕ್ತವಲ್ಲ, ಆ ಕುಬೇರನು ನಿನಗೆಗುರುವಾಗಬೇಕೆನ್ನಲು, ಇವನ ಮನೋನಿಶ್ಚಯವನ್ನರಿತು ತೂಷ್ಣೀಂಭೂತನಾದ ಆ ಸುಮಾಲಿಯು ಕಂಗೆಟ್ಟ ಮುಖಮುಳ್ಳವನಾಗಿ ಹೊರಟು ಹೋದನು ॥೧೨॥ ಸ್ವಲ್ಪಕಾಲವಾದ ಬಳಿಕ ಪ್ರಹಸ್ತನೆಂಬ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕೇನಚಿತ್ತ್ವಥಕಾಲೇನವಸಂತಂತತ್ರರಾವಣಮ್ । ಉಕ್ತವಂತಂತಥಾವಾಕ್ಯಂದಶಗ್ರೀವಂನಿಶಾಚರಃ । ಪ್ರಹಸ್ತಃಪ್ರಶ್ರಿತಂ ವಾಕ್ಯಮಿದಮಾಹಸಕಾರಣಮ್ ॥೧೩॥ ದಶಗ್ರೀವಮಹಾಬಾಹೋನಾರ್ಹಸ್ತ್ವಂವಕ್ತುಮೀದೃಶಮ್ । ಸೌಭ್ರಾತ್ರಂನಾಸ್ತಿಶೂರಾಣಾಂಶೃಣುಚೇದಂವಚೋಮಮ ॥೧೪॥ ಅದಿತಿಶ್ಚದಿತಿಶ್ಚೈವಭಗಿನ್ಯೌಸಹಿತೇಕಿಲ । ಭಾರ್ಯೇಪರಮರೂಪಿಣ್ಯೌಕಶ್ಯಪಸ್ಯಪ್ರಜಾಪತೇಃ ॥೧೫॥ ಅದಿತಿರ್ಜನಯಾಮಾಸದೇವಾಂಸ್ತ್ರಿಭುವನೇಶ್ವರಾನ್ । ದಿತಿಸ್ತ್ವಜನಯದ್ದೈತ್ಯಾನ್ಕಶ್ಯಪಸ್ಯಾತ್ಮಸಂಭವಾನ್ ॥೧೬॥ ದೈತ್ಯಾನಾಂಕಿಲಧರ್ಮಜ್ಞಪುರೇಯಂಸವನಾರ್ಣವಾ । ಸಪರ್ವತಾಮಹೀವೀರತೇಭವನ್ಪ್ರಭವಿಷ್ಣವಃ ॥೧೭॥ ದೈತ್ಯಾನ್ಹತ್ವಾತುಸಮರೇವಿಷ್ಣುನಾಪ್ರಭವಿಷ್ಣುನಾ । ದೇವಾನಾಂವಶಮಾನೀತಂತ್ರೈಲೋಕ್ಯಮಿದಮವ್ಯಯಮ್ ॥೧೮॥ ನೈತದೇಕೋಭವಾನೇವಕರಿಷ್ಯತಿವಿಪರ್ಯಯಮ್ । ಸುರೈರಾಚರಿತೋಮಾರ್ಗಸ್ತತ್ಕುರುಷ್ವವಚೋಮಮ ॥ ಏವಮುಕ್ತೋದಶಗ್ರೀವಃಪ್ರಹಸ್ತೇನಸಕಾರಣಮ್ । ಚಿಂತಯಿತ್ವಾಮುಹೂರ್ತಂವೈಬಾಢಮಿತ್ಯೇವಚಾಬ್ರವೀತ್ ॥೨೦॥ ಸತುತೇನೈವಹರ್ಷೇಣತಸ್ಮಿನ್ನಹನಿವೀರ್ಯವಾನ್ । ವನಂಗತೋದಶಗ್ರೀವಸ್ಸಹತೈಃಕ್ಷಣದಾಚರೈಃ ॥೨೧॥ ತ್ರಿಕೂಟಸ್ಥಸ್ಸ

---

ಶ್ರೀ, ರಾವಣಂ-ರಾವಣನನ್ನು ಕುರಿತು, ನಿಶಾಚರಃ-ರಾಕ್ಷಸನಾದ, ಪ್ರಹಸ್ತಃ-ಪ್ರಹಸ್ತನು, ಪ್ರಶ್ರಿತಂ-ವಿನಯದಿಂದೊಡಗೂಡಿದಂತೆ, ಸಕಾರಣಂ-ಹೇತುಗರ್ಭಿತವಾದ, ಇದಂವಾಕ್ಯಂ-ಈ ಮಾತನ್ನು, ಆಹ-ನುಡಿದನು ॥೧೩॥ ಹೇದಶಗ್ರೀವ-ಎಲೈ ಹತ್ತುಕಂಠಗಳುಳ್ಳವನೆ, ಹೇ ಮಹಾಬಾಹೋ! ಎಲೈ ಮಹಾಭುಜಪರಾಕ್ರಮ ಶಾಲಿಯೆ, ತ್ವಂ-ನೀನು, ಈದೃಶಂ-ಇಂಥಾಮಾತನ್ನು, ವಕ್ತುಂ-ಹೇಳುವದಕ್ಕೆ, ನಾರ್ಹಸಿ-ಯೋಗ್ಯನಾಗಬೇಡ, ಶೂರಾಣಾಂ-ಶೂರರಿಗೆ, ಸೌಭ್ರಾತ್ರಂ-ಭ್ರಾತೃಭಾವವು, ನಾಸ್ತಿ-ಇಲ್ಲ, ಇದಂ-ಈ, ಮಮವಚಶ್ಚ-ನನ್ನ ಮಾತನ್ನು ಕೂಡ, ಶೃಣು-ಕೇಳು ॥೧೪॥ ಕಶ್ಯಪಸ್ಯಪ್ರಜಾಪತೇಃ-ಕಶ್ಯಪಬ್ರಹ್ಮನಿಗೆ, ಭಾರ್ಯೆ-ಪತ್ನಿಗಳಾದ, ಪರಮರೂಪಿಣ್ಯೌ-ಕಡುಸೌಂದರ್ಯವತಿಗಳಾದ, ಅದಿತಿಶ್ಚ-ಅದಿತಿಯು, ದಿತಿಶ್ಚೈವ-ದಿತಿಯುಎಂಬ,ಭಗಿನ್ಯೌ-ಅಕ್ಕತಂಗಿಯರು, ಸಹಿತೇಕಿಲ-ಅನ್ಯೋನ್ಯವಾಗಿದ್ದರಷ್ಟೆ ॥೧೫॥ ಅದಿತಿಃ-ಅದಿತಿಯು, ತ್ರಿಭುವನೇಶ್ವರಾನ್-ತ್ರಿಲೋಕಾಧಿಪತಿಗಳಾದ, ದೇವಾನ್-ದೇವತೆಗಳನ್ನು, ಜನಯಾಮಾಸ-ಹೆತ್ತಳು, ದಿತಿಸ್ತು-ದಿತಿಯಾದರೆ, ಕಶ್ಯಪಸ್ಯ-ಕಶ್ಯಪನಿಗೆ, ಆತ್ಮಸಂಭವಾನ್-ಕುಮಾರರಾದ, ದೈತ್ಯಾನ್-ರಾಕ್ಷಸರನ್ನು, ಅಜನಯತ್-ಹೆತ್ತಳು ॥೧೬॥ ಹೇ ಧರ್ಮಜ್ಞ-ಎಲೈ ಧರ್ಮಿಷ್ಠನೆ, ಪುರಾ-ಪೂರ್ವದಲ್ಲಿ, ಸವನಾರ್ಣವಾ-ವನಗಳಿಂದಲು ಸಮುದ್ರದಿಂದಲು ಒಡಗೂಡಿದ, ಸಪರ್ವತಾ-ಬೆಟ್ಟಗಳಿಂದ ಯುಕ್ತವಾದ, ಇಯಂಮಹೀ-ಈ ಭೂಮಿಯು,ದೈತ್ಯಾನಾಂಕಿಲ-ರಾಕ್ಷಸರದಷ್ಟೆ,ಹೇವೀರ-ಎಲೈ ಕಡುಶೂರನೆ,ತೇ-ಆರಾಕ್ಷಸರು,ಪ್ರಭವಿಷ್ಣವಃ-ಒಡೆಯರು, ಅಭವನ್-ಆದರು ॥ಕಿಂತು-ಮತ್ತೇನೆಂದರೆ,ದೈತ್ಯಾನ್-ರಾಕ್ಷಸರನ್ನು,ಸಮರೇ-ಕಾಳಗದಲ್ಲಿಹತ್ವಾ-ಹೊಡೆದು,ಪ್ರಭವಿಷ್ಣುನಾ-ವೃದ್ಧಿ ಹೊಂದುತಿರುವ, ವಿಷ್ಣುನಾ-ವಿಷ್ಣುವಿನಿಂದ, ಇದಂತ್ರೈಲೋಕ್ಯಂ-ಈ ಲೋಕತ್ರಯವು,ಅವ್ಯಯಂಯಥಾತಥಾ-ಚ್ಯುತಿಯಿಲ್ಲದರೀತಿಗೆ, ದೇವಾನಾಂ-ದೇವತೆಗಳ,ವಶಂ-ಅಧೀನತೆಯನ್ನು, ಆನೀತಂ-ಹೊಂದಿಸಲ್ಪಟ್ಟಿತು॥ ೧೮ ॥ಭವಾನ್‌ಏಕಏವ-ನೀನೊಬ್ಬನೆ, ಏತದ್ವಿಪರ್ಯಯಂ-ಈ ವ್ಯತ್ಯಾಸವನ್ನು,ನಕರಿಷ್ಯತಿ- ಮಾಡುವನಲ್ಲ, ಮಾರ್ಗಃ-ದಾರಿಯು, ಸುರೈಃ-ದೇವತೆಗಳಿಂದ, ಆಚರಿತಃ-ಅನುಷ್ಠಾನ ಮಾಡಲ್ಪಟ್ಟಿಥೆ, ತತ್-ಆ ಕಾರಣದ ದೆಸೆಯಿಂದ, ಮಮವಚಃ-ನನ್ನ ಮಾತನ್ನು, ಕುರುಷ್ವ-ಮಾಡು ॥ ೧೯ ॥ ಏವಂ-ಈಪ್ರಕಾರವಾಗಿ, ಪ್ರಹಸ್ತೇನ-ಪ್ರಹಸ್ತನಿಂದ, ಸಕಾರಣಂ-ಹೇತುವಾದ ಯುಕ್ತವಾಗಿ, ಉಕ್ತಃ-ಹೇಳಲ್ಪಟ್ಟ, ದಶಗ್ರೀವಃ-ರಾವಣನು, ಮುಹೂರ್ತಂ-ಸ್ವಲ್ಪಹೊತ್ತು, ಚಿಂತಯಿತ್ವಾ-ಆಲೋಚಿಸಿ, ಬಾಢಮಿತ್ಯೇವ-ಹಾಗೇಸರಿಯೆಂದು, ಅಬ್ರವೀತ್-ನುಡಿದನು ॥ ೨೦ ॥ ತಸ್ಮಿನ್ನಹನಿ-ಆ ದಿನದಲ್ಲಿ, ತೇನೈವಹರ್ಷೇಣ-ಅದೇ ಸಂತೋಷದಿಂದಲೇ (ಯುಕ್ತಃ-ಕೂಡಿಕೊಂಡಿರುವ) ವೀರ್ಯವಾನ್-ಪರಾಕ್ರಮಿಯಾದ, ಸದಶಗ್ರೀವಸ್ತು - ಆ

---

ರಾಕ್ಷಸನು, ತಂದೆಯ ಆಶ್ರಮದಲ್ಲಿರುವ ಮತ್ತು ಮಾತಾಮಹನ ಕೂಡ ಅಂಥ ಮಾತುಗಳನ್ನಾಡಿದ ಆ ರಾವಣನಂ ಕಂಡು ವಿನಯಪೂರ್ವಕವಾಗಿಯು, ಹೇತುವಾದದಿಂದ ಯುಕ್ತವಾಗಿಯು ಇರುವ ಈ ವಾಕ್ಯವನ್ನು ಹೇಳಲು, ಪಕ್ರಮಿಸಿದನು ॥೧೩॥ ಎಲೈ ಮಹಾ ಭುಜಪರಾಕ್ರಮಿಯಾದ ದಶಕಂಠನೆ! ನೀನು ಹೀಗೆ ಪೇಳಬಹುದೇ ಶೂರರಾದವರಿಗೆ ಸೌಭ್ರಾತೃತ್ವವೆಂಬದೇ ಇಲ್ಲವಲ್ಲ, ನನ್ನ ಈ ಮಾತನ್ನಾಲಿಸು ॥೧೪॥ ಕಶ್ಯಪ ಬ್ರಹ್ಮನ ಹೆಂಡತಿಗಳಾದ ಕಡು ರೂಪವತಿಗಳಾದ, ದಿತಿ, ಅದಿತಿ, ಎಂಬ ಭಗಿನಿಗಳೀರ್ವರು ಅನ್ಯೋನ್ಯವಾಗಿದ್ದರಷ್ಟೆ? ಆ ಅದಿತಿಯಲ್ಲಿ ಲೋಕತ್ರಯಾಧಿಪತಿಗಳಾದ ದೇವತೆಗಳು ಉತ್ಪನ್ನರಾದರು. ದಿತಿಯಲ್ಲಿ ರಾಕ್ಷಸರು ಜನಿಸಿದರು॥೧೬॥ ಎಲೈ ಧರ್ಮಜ್ಞನೇ! ವನಗಳಿಂದಲು ಸಮುದ್ರಗಳಿಂದಲು, ಪರ್ವತಗಳಿಂದಲು ಯುಕ್ತವಾದ ಈ ಮಹೀಮಂಡಲಕ್ಕೆಲ್ಲ ರಕ್ಕಸರೆ ಪ್ರಭುಗಳಾಗಿದ್ದರು. ॥೧೭॥ ಹೀಗಿರುವಲ್ಲಿ, ವರ್ಧಿಷ್ಣುವಾದ ವಿಷ್ಣುವು ರಾಕ್ಷಸರಂ ಹೊಡೆದು ಈ ತ್ರೈಲೋಕ್ಯವನ್ನು ನಿಷ್ಕಂಟಕವಾಗಿ ದೇವತೆಗಳಿಗೆ ಸ್ವಾಧೀನವಾಗಿ ಮಾಡಿಸಿದನು ॥೧೮॥ ಆದ ಪ್ರಯುಕ್ತ ನೀನೊರ್ವನೆ ಈ ವಿಪರೀತವಂ ಮಾಡುವದಿಲ್ಲ, ಈ ದಾರಿಯು ದೇವತೆಗಳ ನಿಮಗೆ ತೋರಿಸಿರುವರು, ನನ್ನ ಮಾತನ್ನ ಲಾಲಿಸು॥೧೯॥ ಎಂದು ಕಾರಣಗಳಿಂ ದೊಡಗೂಡಿದಪ್ರಹಸ್ತನ ವಾಕ್ಯವಂ ಕೇಳಿ ದಶಕಂಠನು ಸ್ವಲ್ಪಕಾಲವು ಯೋಚನೆಯಂ ಗೈದು ಇದೇ ಸರಿಎಂದು ಒಪ್ಪಿಕೊಂಡವನಾಗಿ, ಅದೇ ಸಂತೋಷದಿಂದಲೆ ೬ ರಕ್ಕಸರಿಂ ದೊಡಗೂಡಿ ಆದಿನವೆಲ್ಲ ವನದಲ್ಲಿದ್ದನು ॥೨೧॥ ಆ ಸಮಯದಲ್ಲಿ ರಾವಣನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತುತದಾದಶಗ್ರೀವೋನಿಶಾಚರಃ । ಪ್ರೇಷಯಾಮಾಸದೌತ್ಯೇನಪ್ರಹಸ್ತಂವಾಕ್ಯಕೋವಿದಮ್ ॥೧೦॥ ಪ್ರಹಸ್ತಶೀಘ್ರಂಗತ್ವಾ ತ್ವಂಬ್ರೂಹಿನೈರೃತಪುಂಗವಮ್ । ವಚನಾನ್ಮಮವಿತ್ತೇಶಂಸಾಮಪೂರ್ವಮಿದಂವಚಃ ॥೧೩॥ ಇಯಂಲಂಕಾಪುರೀಪೂರ್ವಂರಾಕ್ಷಸಾನಾಂಮಹಾತ್ಮನಾಮ್ । ತ್ವಯಾನಿವೇಶಿತಾಸೌಮ್ಯನೈತದ್ಯುಕ್ತಂತವಾನಘ ॥೧೪॥ ತದ್ಭವಾನ್ಯದಿನಾಮ್ಯೇತಾಂದದ್ಯಾದತುಲವಿಕ್ರಮ । ಕೃತಾಭವೇನ್ಮಮಪ್ರೀತಿರ್ಧರ್ಮಶ್ಚೈವಾನುಪಾಲಿತಃ ॥೧೫॥ ಸತುಗತ್ವಾಪುರೀಂಲಂಕಾಂ ಪ್ರಹಸ್ತಃಧನದಂತದಾ । ಅಬ್ರವೀತ್ಪರಮೋದಾರಂವಿತ್ತಪಾಲಮಿದಂವಚಃ ॥೧೬॥ ಪ್ರೇಷಿತೋಹಂತವಭ್ರಾತ್ರಾದಶಗ್ರೀವೇಣಸುವ್ರತ । ತ್ವತ್ಸಮೀಪಂಮಹಾಬಾಹೋದೌತ್ಯೇನಧನದೇಶ್ವರ ॥೧೭॥ ತಚ್ಛ್ರೂಯತಾಂಮಹಾಪ್ರಾಜ್ಞಸರ್ವಶಾಸ್ತ್ರವಿಶಾರದ । ವಚನಂಮಮವಿತ್ತೇಶಯದ್ಬ್ರವೀತಿದಶಾನನಃ ॥೧೮॥ ಇಯಂರಮ್ಯಾಪುರೀಲಂಕಾಸುಮಾಲಿಪ್ರಮುಖೈಃಕಿಲ।ಭುಕ್ತಾಪೂರ್ವಾವಿಶಾಲಾಕ್ಷರಾಕ್ಷಸೈರ್ಭೀಮವಿಕ್ರಮೈಃ ॥೧೯॥ ತೇನವಿಜ್ಞಾಪ್ಯತೇಚೇದಂಸಾಂಪ್ರತಂವಿಶ್ರವಸ್ಸುತ । ತದೇಷಾದೀ

---

ರಾವಣನಾದರೆ, ತೈಕ್ಷ್ಣಜಾಚರೈಸ್ಸಹ-ಆ ರಾಕ್ಷಸರೊಡನೆ, ವನಂ-ಶ್ಲೇಷ್ಮಾತಕವನವನ್ನು, ಗತಃ-ಹೊಂದಿದನು ॥೧೧॥ ತದಾ-ಆ ಕಾಲದಲ್ಲಿ,ನಿಶಾಚರಃ-ರಾಕ್ಷಸನಾದ, ಸದಶಗ್ರೀವಸ್ತು-ಆ ರಾವಣಾಸುರನಾದರೆ, ತ್ರಿಕೂಟಸ್ಥಃ-ತ್ರಿಕೂಟ ಪರ್ವತದಲ್ಲಿ ವಾಸಸ್ಥನಾಗಿ, ದೌತ್ಯೇನ-ದೂತಭಾವದಿಂದ, ವಾಕ್ಯಕೋವಿದಂ-ಮಾತುಗಳಲ್ಲಿ ಬುದ್ಧಿವಂತನಾದ, ಪ್ರಹಸ್ತಂ-ಪ್ರಹಸ್ತನನ್ನು, ಪ್ರೇಷಯಾಮಾಸ-ಕಳುಹಿಸಿದನು ॥ ೧೦ ॥ ಹೇಪ್ರಹಸ್ತ-ಎಲೈ ಪ್ರಹಸ್ತನೆ ! ತ್ವಂ-ನೀನು, ಶೀಘ್ರಂ-ಜಾಗ್ರತೆಯಾಗಿ, ಗತ್ವಾ-ಹೋಗಿ, ನೈರುತಪುಂಗವಂ-ನೈರ್ಋತಶ್ರೇಷ್ಠನಾದ, ವಿತ್ತೇಶಂ-ಕುಬೇರನನ್ನು ಕುರಿತು, ಮಮವಚನಾತ್-ನನ್ನ ಮಾತಿನ ದೆಸೆಯಿಂದ, ಸಾಮ ಪೂರ್ವಂ-ಸಂಧಿಪೂರ್ವಕವಾಗಿ, ಇದಂವಚಃ-ಈ ಮಾತನ್ನು, ಬ್ರೂಹಿ-ಹೇಳು ॥ ೧೩ ॥ ಇಯಂಲಂಕಾಪುರೀ-ಈ ಲಂಕಾಪಟ್ಟಣವು, ಪೂರ್ವಂ-ಮೊದಲು, ಮಹಾತ್ಮನಾಂ-ಮಹಾನುಭಾವರಾದ,ರಾಕ್ಷಸಾನಾಂ-ರಾಕ್ಷಸರದು, ಹೆ ಅನಘ-ಎಲೈ ನಿರ್ದುಷ್ಟನೆ ! ಹೆಸೌಮ್ಯ-ಎಲೈ ಕೋಪರಹಿತನೆ ! ತ್ವಯಾ-ನಿನ್ನಿಂದ, ನಿವೇಶಿತಾ-ಪ್ರವೇಶಿಸಲ್ಪಟ್ಟಿತು, ಏತತ್-ಇದು, ತವ-ನಿನಗೆ, ನಯುಕ್ತಂ-ಯುಕ್ತವಲ್ಲ ॥ ೧೪ ॥ ಹೆ ಅತುಲವಿಕ್ರಮ-ಎಲೈ ಅಸದೃಶವಾದ ಪರಾಕ್ರಮವುಳ್ಳವನೆ, ತತ್-ಆ ಕಾರಣದ ದೆಸೆಯಿಂದ, ಭವಾನ್-ನೀನು, ಏತಾಂನಾಮ-ಈ ಲಂಕಾಪಟ್ಟಣವನ್ನಾದರೆ, ದದ್ಯಾದ್ಯದಿ-ಕೊಟ್ಟವನಾದರೆ, ಮಮ-ನನಗೆ, ಪ್ರೀತಿಃ-ವಿಶ್ವಾಸವು, ಕೃತಾ-ಮಾಡಲ್ಪಟ್ಟಂಥಾದ್ದು, ಧರ್ಮಶ್ಚೈವ-ಧರ್ಮವೂಕೂಡ, ಅನುಪಾಲಿತಃ-ಸಂರಕ್ಷಿತವಾದ್ದು, ಭವೇತ್-ಆದೀತು ॥ ೧೫ ॥ ತದಾ-ಆ ಕಾಲದಲ್ಲಿ, ಸಪ್ರಹಸ್ತಸ್ತು-ಆ ಪ್ರಹಸ್ತನಾದರೆ, ಲಂಕಾಂಪುರೀಂ-ಲಂಕಾಪಟ್ಟಣವನ್ನು ಕುರಿತು, ಗತ್ವಾ-ಹೋಗಿ,ಪರಮೋದಾರಂ-ಮಹಾದಾತನಾದ, ವಿತ್ತಪಾಲಂ-ಧನಪಾಲಕನಾದ,ಧನದಂ-ಕುಬೇರನನ್ನು ಕುರಿತು, ಇದಂವಚಃ-ಈ ಮಾತನ್ನು, ಅಬ್ರವೀತ್-ನುಡಿದನು ॥ ೧೬ ॥ ಹೆಸುವ್ರತ-ಎಲೈ ಮಹಾನಿಯಮವುಳ್ಳವನೆ ! ಹೆಮಹಾಬಾಹೋ-ಎಲೈಮಹಾಭುಜಗಳುಳ್ಳವನೆ, ಹೇಧನದೇಶ್ವರ-ಎಲೈ ಕುಬೇರನೆ,ತವಭ್ರಾತ್ರಾ-ನಿನ್ನ ತಮ್ಮನಾದ, ದಶಗ್ರೀವೇಣ-ರಾವಣಾಸುರನಿಂದ, ತ್ವತ್ಸಮೀಪಂ-ನಿನ್ನ ಸಮೀಪವನ್ನು ಕುರಿತು ಅಹಂ-ನಾನು, ದೌತ್ಯೇನ-ದೂತಕರ್ಮದಿಂದ, ಪ್ರೇಷಿತಃ-ಕಳುಹಿಸಲ್ಪಟ್ಟೆನು॥೧೭॥ಹೆಮಹಾಪ್ರಾಜ್ಞ-ಎಲೈ ಮಹಾ ತಿಳುವಳಿಕೆಯುಳ್ಳವನೆ, ಹೆಸರ್ವಶಾಸ್ತ್ರವಿಶಾರದ-ಎಲೈ ಶಾಸ್ತ್ರಪಂಡಿತನೆ, ಹೇ ವಿತ್ತೇಶ-ಎಲೈ ಧನಾಧ್ಯಕ್ಷನೆ, ದಶಾನನಃ-ರಾವಣಾಸುರನು, ಯದ್ಬ್ರವೀತಿ-ಏನು ಹೇಳಿದ್ದಾನೋ,ಮಮ-ನನ್ನ,ತದ್ವಚನಂ-ಆ ಮಾತು,ಶ್ರೂಯತಾಂ-ಕೇಳಲ್ಪಡಲಿ ॥೧೮॥ಹೇವಿಶಾಲಾಕ್ಷ-ಎಲೈ ವಿಸ್ತಾರವಾದ ನೇತ್ರಗಳುಳ್ಳವನೆ, ರಮ್ಯಾ-ಮನೋಹರವಾದ, ಇಯಂ ಲಂಕಾಪುರೀ-ಈ ಲಂಕಾಪಟ್ಟಣವು, ಸುಮಾಲಿಪ್ರಮುಖೈಃ-ಸುಮಾಲಿಯೆ ಮೊದಲಾದ, ಭೀಮವಿಕ್ರಮೈಃ-ಭಯಂಕರವಾದಪರಾಕ್ರಮವುಳ್ಳ,ರಾಕ್ಷಸೈಃ-ರಾಕ್ಷಸರಿಂದ, ಭುಕ್ತಪೂರ್ವಾಕಿಲ-ಪೂರ್ವದಲ್ಲಿಅನುಭವಿಸಲ್ಪಟ್ಟದ್ದಷ್ಟೆ॥ ಹೇ ವಿಶ್ರವಸ್ಸುತ-ಎಲೈವಿಶ್ರವಸ್ಸಿನ ಕುಮಾರನೆ, ತೇನ-ಆ ರಾವಣನಿಂದ, ಸಾಂಪ್ರತಂ-ಯುಕ್ತವಾದ ಇದಂ-ಈಮಾತು,

---

ತ್ರಿಕೂಟ ಪರ್ವತದಲ್ಲಿದ್ದವನಾಗಿ, ದೂತ ಮುಖವಾಗಿ ಹೇಳಿಕಳುಹಿಸ ಬೇಕೆಂದಿಚ್ಛೈಸಿಪ್ರಹಸ್ತನಂ ಕುರಿತಿಂತೆಂದನು॥ ಎಲೈ ಪ್ರಹಸ್ತನೇ ! ನೀನು ನನ್ನಾಜ್ಞೆಯಿಂದ ಕ್ಷಿಪ್ರವಾಗಿಪೋಗಿ, ವಿನಯ ಪೂರ್ವಕಮಾಗಿ ಯಕ್ಷೇಶ್ವರನಿಗೆ ಈ ಮಾತನ್ನು ಪೇಳು, ಎಲೈ ಪೂಜ್ಯನಾದ ಧನೇಶನೆ! ಮಹಾತ್ಮರಾದ ರಾಕ್ಷಸರಿಗಾವಾಸ ಭೂತಮಾದ ಈಲಂಕಾಪುರಿಯನ್ನು ನೀನಾಕ್ರಮಿಸಿ ಕೊಂಡಿದ್ದೀ, ಇದು ನಿನಗೆ ನ್ಯಾಯಮಲ್ಲ, ಆದಕಾರಣ ಇದನ್ನುನನಗೆ ಕೊಟ್ಟವನಾದರೆ, ನನಗು ಸಹ ವಿಶ್ವಾಸ ಪಾತ್ರನಾಗುವದಲ್ಲದೆ ಧರ್ಮವು ಸಹ ಪರಿಪಾಲಿಸಿದಂತೆ ಆಗುವದು ಎಂದು ನುಡಿಯಲು॥೧೫॥ಆ ಪ್ರಹಸ್ತನು ಅತಿ ತ್ವರಿತಮಾಗಿ ಲಂಕಾಪುರಿಗೆ ಪೋಗಿ ಪರಮೋದಾರಿಯ ಧದನೇಶ್ವರನಂ ಕಂಡು ಈ ವಾಕ್ಯವನ್ನು ಹೇಳಿದನು ॥ಎಲೈ ವ್ರತನಿಷ್ಠಾಪರನಾದ ಧನನಾಥನೆ! ನಿನ್ನನುಜನಾದ ದಶಕಂಠನು ನನ್ನಂ ನಿನ್ನ ಬಳಿಗೆ ಕಳುಹಿಸಿಕೊಟ್ಟಿದ್ದಾನೆ, ನೀನಾದರೆ ಮಹಾಪ್ರಾಜ್ಞನಾದವನು, ಸಕಲ ಶಾಸ್ತ್ರಗಳನ್ನರಿತವನು, ಧನಾಧ್ಯಕ್ಷನಾದವನು, ಇಂಥ ನೀನು ಆ ನಮ್ಮ ಒಡೆಯನಾದ ರಾವಣಾಸುರನ ವಚನವನ್ನು ಸಾವಧಾನಚಿತ್ತನಾಗಿ ಕೇಳು, ಎಲೈ ವಿಸ್ತರವಾದ ಕಣ್ಣುಗಳುಳ್ಳವನೇ!ಪುರಾತನ ಕಾಲದಲ್ಲಿ ಈ ಮನೋಹಾರಿಯಾದ ಲಂಕಾಪುರಿಯು, ನನ್ನ ಪಿತಾಮಹನಾದ ಸುಮಾಲಿಯೇ ಮೊದಲಾದ ಕಡು ಪರಾಕ್ರಮಿಗಳಾದ ರಕ್ಕಸರ ವಶಮಾಗಿತ್ತು॥ ವಿಶ್ರವಸ್ಸಿನ ಕುಮಾರನಾದ ಎಲೈ! ಕುಬೇರನೆ! ಆದಕಾರಣ ವಿನಯವಾಗಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯತಾಂತಾತಯಾಚತಸ್ತಸ್ಯಸಾಮತಃ ॥೨೦॥ ಪ್ರಹಸ್ತಾದಭಿಸಂಶ್ರುತ್ಯದೇವೋವೈಶ್ರವಣೋವಚಃ। ಪ್ರತ್ಯುವಾಚಪ್ರಹಸ್ತಂ ತಂವಾಕ್ಯಂವಾಕ್ಯವಿಶಾರದಃ ॥೨೧॥ ದತ್ತಾಮಮೇಯಂಲಂಕಾತಾಪಿತ್ರಾಶೂನ್ಯಾನಿಶಾಚರೈಃ। ನಿವೇಶಿತಾಚಮೇಯಕ್ಷೈರ್ದಾನಮಾನಾದಿಸದ್ಗುಣೈಃ ॥೨೨॥ ಬ್ರೂಹಿಗಚ್ಛದಶಗ್ರೀವಂಪುರೀರಾಜ್ಯಂಚಯನ್ಮಮ। ಅವಾಪ್ಯೈತನ್ಮಹಾಬಾಹೋಭುಙ್ಕ್ಷ್ವತದ್ಧತಕಂಟಕಮ್। ಅವಿಭಕ್ತಂಮಯಾಸಾರ್ಧಂರಾಜ್ಯಂಯಚ್ಚಾಪಿಮೇವಸು ॥೨೩॥ ಏವಮುಕ್ತ್ವಾಧನಾಧ್ಯಕ್ಷೋಜಗಾಮಪಿತುರಂತಿಕಮ್। ಅಭಿವಾದ್ಯಗುರುಂಪ್ರಾಹರಾವಣಸ್ಯಯದೀಪ್ಸಿತಮ್ ॥೨೪॥ ಏಷತಾತದಶಗ್ರೀವೋ ದೂತಂಪ್ರೇಷಿತವಾನ್ಮಮ। ದೀಯತಾಂನಗರೀಲಂಕಾಪೂರ್ವಂರಕ್ಷೋಗಣೋಷಿತಾ ॥೨೫॥ ಮಯಾತ್ರಯದನುಷ್ಠೇಯಂತನ್ಮಮಾಚಕ್ಷ್ವಸುವ್ರತ ॥೨೬॥ ಬ್ರಹ್ಮರ್ಷಿಸ್ತ್ವೇವಮುಕ್ತೋಸೌವಿಶ್ರವಾಮುನಿಪುಂಗವಃ। ಉವಾಚಧನದಂವಾಕ್ಯಂಶೃಣುಪುತ್ರವಚೋಮಮ ॥೨೭॥ ದಶಗ್ರೀವೋಮಹಾಬಾಹುರುಕ್ತವಾನ್ಮಮಸನ್ನಿಧೌ। ಮಯಾನಿರ್ಭರ್ತ್ಸಿತಶ್ಚಾಸೀದ್ಬಹುಧೋಕ್ತಸ್ಸ

---

ವಿಜ್ಞಾಪ್ಯತೇ-ಅರಿಕೆ ಮಾಡಲ್ಪಡುತ್ತದೆ. ಹೇತಾತ-ಎಲೈ ತಂದೆಯೆ, ತತ್-ಆಕಾರಣದ ದೆಸೆಯಿಂದ, ಏಷಾ-ಈ ಲಂಕಾಪಟ್ಟಣವು, ಯಾಚತಃ-ಬೇಡುತಿರುವ, ತಸ್ಯ-ಆ ರಾವಣನಿಗೆ, ಸಾಮತಃ-ಸಂಧಿಯ ದೆಸೆಯಿಂದ, ದೀಯತಾಂ-ಕೊಡಲ್ಪಡಲಿ॥೨೦॥ವಾಕ್ಯವಿಶಾರದಃ-ಮಾತುಗಾರಿಕೆಯಲ್ಲಿ ಪಂಡಿತನಾದ,ವೈಶ್ರವಣೋದೇವಃ-ಕುಬೇರನು, ಪ್ರಹಸ್ತಾತ್-ಪ್ರಹಸ್ತನ ದೆಸೆಯಿಂದ, ವಚಃ-ಮಾತನ್ನು, ಅಭಿಸಂಶ್ರುತ್ಯ-ಕೇಳಿ, ತಂಪ್ರಹಸ್ತಂ-ಆ ಪ್ರಹಸ್ತನನ್ನು ಕುರಿತು, ವಾಕ್ಯಂ-ವಚನವನ್ನು, ಪ್ರತ್ಯುವಾಚ-ಪ್ರತ್ಯುತ್ತರ ಹೇಳಿದನು ॥೨೧॥ ನಿಶಾಚರೈಃ-ರಾಕ್ಷಸರಿಂದ, ಶೂನ್ಯಾ-ಬರಿದಾದ, ಇಯಂಲಂಕಾ-ಈ ಲಂಕಾಪಟ್ಟಣವು, ಪಿತ್ರಾ-ತಂದೆಯಾದ ವಿಶ್ರವಸ್ಸಿನಿಂದ, ಮಮ-ನನಗೆ, ದತ್ತಾ-ಕೊಡಲ್ಪಟ್ಟಿತ್ತು, ಮೇ-ನನ್ನ, ದಾನಮಾನಾದಿಸದ್ಗುಣೈಃ-ದಾನ-ದ್ರವ್ಯದಾನವು,ಮಾನ-ಬಹುಮತಿಯೇ, ಆದಿ-ಮೊದಲಾಗುಳ್ಳ, ಸದ್ಗುಣೈಃ-ಒಳ್ಳೇಗುಣಗಳುಳ್ಳ, ಯಕ್ಷೈಃ-ಯಕ್ಷರಿಂದಲು, ನಿವೇಶಿತಾಚ-ವಾಸಮಾಡಲ್ಪಟ್ಟಿದೆ॥ ೨೨॥ಹೇ ಮಹಾಬಾಹೋ-ಎಲೈ ಮಹಾ ಭುಜಗಳುಳ್ಳವನೆ, ಯದ್ಯಸ್ಮಾತ್-ಯಾವ ಕಾರಣದ ದೆಸೆಯಿಂದ, ಮಮ-ನನ್ನ ಸಂಬಂಧವಾದ, ಪುರೀ-ಪಟ್ಟಣವು, ರಾಜ್ಯಂಚ-ರಾಜ್ಯವು, ವಸ್ವಪಿ-ದ್ರವ್ಯವು ಕೂಡ, ಯತ್-ಯಾವದೋ, ತತ್-ಅದು, ಅವಿಭಕ್ತಂ-ವಿಭಾಗಿಸಲ್ಪಡಲಿಲ್ಲ, ತತ್-ಆ ಕಾರಣದದೆಸೆಯಿಂದ, ಏತದ್ರಾಜ್ಯಂ ಈ ರಾಜ್ಯವನ್ನು, ಮಯಾಸಾರ್ಧಂ - ನನ್ನೊಡನೆ, ಅವಾಪ್ಯ-ಹೊಂದಿ, ಹತಕಂಟಕಂ - ನಿಷ್ಕಂಟಕವಾಗಿ, ಭುಂಕ್ಷ್ವ-ಅನುಭವಿಸು, ಇತಿ-ಇಂತೆಂದು, ದಶಗ್ರೀವಂ-ರಾವಣನನ್ನು ಕುರಿತು, ಬ್ರೂಹಿ-ಹೇಳು, ಗಚ್ಛ-ಹೋಗು ॥ ೨೩ ॥ ಏವಂ-ಈಪ್ರಕಾರವಾಗಿ, ಉಕ್ತ್ವಾ-ಹೇಳಿ, ಧನಾಧ್ಯಕ್ಷಃ-ಕುಬೇರನು, ಪಿತುಃ-ತಂದೆಯಾದ ವಿಶ್ರವಸ್ಸಿನ, ಅಂತಿಕಂ-ಸಮೀಪವನ್ನು ಕುರಿತು, ಜಗಾಮ-ಹೊರಟು ಹೋದನು, ಗುರುಂ-ತಂದೆಯನ್ನು ಕುರಿತು, ಅಭಿವಾದ್ಯ-ಮಣಿಸಿ, ರಾವಣಸ್ಯ-ರಾವಣನಿಗೆ, ಯತ್-ಯಾವದು, ಈಪ್ಸಿತಂ-ಇಷ್ಟವೋ, ತತ್-ಅದನ್ನು, ಪ್ರಾಹ-ಹೇಳಿದನು ॥ ೨೪ ॥ ಹೇತಾತ-ಎಲೈ ತಂದೆಯೆ, ಏಷದಶಗ್ರೀವಃ-ಈ ದಶಕಂಠನು, ಪೂರ್ವಂ-ಮೊದಲು, ರಕ್ಷೋಗಣೋಷಿತಾ-ರಾಕ್ಷಸಸಮೂಹದಿಂದ ವಾಸಿಸಲ್ಪಟ್ಟ, ಲಂಕಾನಗರೀ-ಲಂಕಾಪಟ್ಟಣವು, ದೀಯತಾಂ-ಕೊಡಲ್ಪಡಲೆಂದು, ದೂತಂ-ದೂತನನ್ನು, ಮಮ-ನನಗೆ, ಪ್ರೇಷಿತವಾನ್-ಕಳುಹಿಸಿಕೊಟ್ಟಿದ್ದಾನೆ ॥ ೨೫ ॥ ಹೇಸುವ್ರತ-ಎಲೈ ನಿಯಮನಿಷ್ಠಾಪರನೆ, ಅತ್ರ-ಈ ಅರ್ಥದಲ್ಲಿ, ಮಯಾ-ನನ್ನಿಂದ, ಯತ್-ಯಾವದು, ಅನುಷ್ಠೇಯಂ-ಮಾಡಲ್ಪಡ ತಕ್ಕದ್ದೋ, ತತ್-ಅದನ್ನು, ಮಮ-ನನಗೆ, ಆಚಕ್ಷ್ವ-ಹೇಳು॥ ೨೬ ॥ಏವಂ-ಇಂತೆಂದು, ಉಕ್ತಃ-ಹೇಳಲ್ಪಟ್ಟ, ಬ್ರಹ್ಮರ್ಷಿಃ-ಬ್ರಹ್ಮರ್ಷಿಯಾದ, ಮುನಿಪುಂಗವಃ-ಮನನಶೀಲವುಳ್ಳವರಲ್ಲಿ ಶ್ರೇಷ್ಠನಾದ, ಅಸೌವಿಶ್ರವಾಃ-ಈ ವಿಶ್ರವಸ್ಸು, ಧನದಂಪ್ರತಿ-ಕುಬೇರನನ್ನು ಕುರಿತು, ವಾಕ್ಯಂ-ಮಾತನ್ನು, ಉವಾಚ-ಹೇಳಿದನು, ಹೇಪುತ್ರ-ಎಲೈ ಮಗನೆ ! ಮಮವಚಃ-ನನ್ನ ಮಾತನ್ನು, ಶೃಣು-ಕೇಳು ॥ ೨೭ ॥ ಮಹಾಬಾಹುಃ-ಮಹಾಪರಾಕ್ರಮ ಶಾಲಿಯಾದ, ದಶಗ್ರೀವಃ-ರಾವಣನು, ಮಮ-ನನ್ನ, ಸನ್ನಿಧೌ-

---

ಕೇಳಿಕೊಳ್ಳುತಿರುವ ನಿನ್ನಸುಜನಾದ ಎನ್ನಭಾಗಕ್ಕೆ ಈ ಪಟ್ಟಣವಂ ಬಿಟ್ಟುಕೊಡೆಂದು ಬೇಡಿಕೊಳ್ಳುತ್ತಾನೆ॥೨೦॥ಎಂದು ಪ್ರಹಸ್ತನಮುಖದಿಂ ದೀವಾಕ್ಯವಂಕೇಳಿ, ವಚನಜ್ಞನಾದ ಆ ಕುಬೇರನು ಪ್ರಹಸ್ತನಂ ಕುರಿತಿಂತೆಂದು ನುಡಿದನು॥ ರಕ್ಕಸರಿಂದ ಶೂನ್ಯವಾದ ಈ ಲಂಕಾಪುರಿಯಾದರೆ ಪೂರ್ವದಲ್ಲಿನಮ್ಮ ತಂದೆಯಿಂದ ಕೊಡಲ್ಪಟ್ಟಿತು, ಆದ ಪ್ರಯುಕ್ತ ನಮ್ಮಿಬ್ಬರಿಗು ಶೇರತಕ್ಕದ್ದಾಗಿದ್ದಾಗಿಯೆ ಇರುವದು. ಈ ಪಟ್ಟಣವು, ರಾಜ್ಯವು, ಮತ್ತು ದ್ರವ್ಯವು ಸಹ ನಿನಿಗು ನನಿಗು ಅವಿಭಕ್ತ ವಾಗಿರುವದು, ಆದಕಾರಣ ನನ್ನೊಡನೆ ನೀನು ನಿಷ್ಕಂಟಕವಾಗಿ ಅನುಭವಿಸ ಬಹುದೆಂದು ರಾವಣನಿಗೆ ಹೇಳುಪೋಗೆಂದುದೂತನಂಕಳುಹಿಸಿ ॥ಆ ಬಳಿಕ ತಂದೆಯಬಳಿಗೆ ಪೋಗಿ ವಂದಿಸಿ ರಾವಣಾಸುರನ ಮನೋಗತವನ್ನು ಹೇಳಲುಪಕ್ರಮಿಸಿದನು॥೨೪॥ಎಲೈ ತಂದೆಯೆ! ಈ ರಾವಣಾಸುರನು ಪೂರ್ವದಲ್ಲಿ ರಾಕ್ಷಸರಿಗಾವಾಸ ಭೂತವಾದ ಈ ಲಂಕಾ ಪಟ್ಟಣವನ್ನು ಎನಗೆ ಬಿಟ್ಟು ಬಿಡೆಂದು ನನ್ನಬಳಿಗೆ ದೂತನಮುಖವಾಗಿ ಹೇಳಿ ಕಳುಹಿಸಿದ್ದನು, ಈ ವಿಷಯದಲ್ಲಿ ನಾನೇನು ಮಾಡಲಿ ಅಪ್ಪಣೇ ಕೊಡಿಸಬೇಕೆಂನಲು॥೨೬॥ ಮುನಿಪುಂಗವನಾದ ಆ ವಿಶ್ರವಸ್ಸು ಇಂತೆಂದನು, ಎಲೈ ಪುತ್ರನೆ! ಮಹಾ ಪರಾಕ್ರಮ ವುಳ್ಳ ದಶಕಂಠನು ನನ್ನ ಸಂಗಡಲು ಪ್ರಸ್ತಾಪ ಮಾಡಿದನು, ಆಗ ನಾನು ಹೆದರಿಸಿ ಬಹಳವಿಧವಾಗಿ ಯೆಷ್ಟು ಹೇಳಿದರು ಸಮಾಧಾನ ನಾಗದೇ ಇದ್ದ ಕಾರಣ ಕೋಪದಿಂದ ಯಲ್ಲಿಯಾದರು ಹಾಳಾಗಿ ಹೋಗೆಂದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದುರ್ಮತಿಃ । ಸಕ್ರೋಧೇನಮಯಾಚೋಕ್ತೋ ಧ್ವಂಸಸ್ವೇತಿಪುನಃಪುನಃ ॥೩೮॥ ಶ್ರೇಯೋಯುಕ್ತಂಚಧರ್ಮ್ಯಂಚಶೃಣು ಚೈವವಚೋಮಮ ॥೩೯॥ ವರಪ್ರದಾನಸಂಮೂಢೋಮಾನ್ಯಾಮಾನ್ಯಾನ್ಸದುರ್ಮತಿಃ । ನವೇತ್ತಿಮಮಶಾಪಾಚ್ಚ ಪ್ರಕೃತಿಂದಾರುಣಾಂಗತಃ॥೪೦॥ ತಸ್ಮಾದ್ಗಚ್ಛ ಮಹಾಬಾಹೋಕೈಲಾಸಂಧರಣೀಧರಂ। ನಿವೇಶಯನಿವಾಸಾರ್ಥಂತ್ಯಜಲಂಕಾಂ ಸಹಾನುಗಃ ॥೪೧॥ ತತ್ರಮಂದಾಕಿನೀರಮ್ಯಾನದೀನಾಂಪ್ರವರಾನದೀ। ಕಾಂಚನೈಸ್ಸೂರ್ಯಸಂಕಾಶೈಃಪಂಕಜೈಸ್ಸಂವೃತೋದಕಾ ॥೪೨॥ ಕುಮುದೈರುತ್ಪಲೈಶ್ಚೈವಅನ್ಯೈಶ್ಚೈವಸುಗಂಧಿಭಿಃ ॥೪೩॥ ತತ್ರದೇವಾಸ್ಸಗಂಧರ್ವಾಸ್ಸಾಪ್ಸರೋರಗಕಿನ್ನರಾಃ। ವಿಹಾರಶೀಲಾಸ್ಸತತಂರಮಂತೆಸಲಿಲಂಶ್ರಿತಾಃ ॥೪೪॥ ನಹಿಕ್ಷಮಂತ್ವಯಾತೇನವೈರಂಧನದರಕ್ಷಸಾ। ಜಾನೀಷೆಹಿಯಥಾತೇನಲಬ್ಧಃಪರಮಕೋವರಃ ॥೪೫॥ ಏವಮುಕ್ತೋಗೃಹೀತ್ವಾತುತದ್ವಚಃಪಿತೃಗೌರವಾತ್। ಸದಾರಪೌರಸ್ಸಾಮಾತ್ಯಸ್ಸವಾಹನಧನೋಗತಃ ॥೪೬॥ ಶೂನ್ಯಾಸಾನಗರೀಲಂಕಾತ್ರಿಂಶದ್ಯೋಜನಮಾಯತಾ। ಕ್ಷಿಪ್ರಮೆವಾಭವದ್ರಾಮನಿರ್ಜನಾ

---

ಸಮೀಪದಲ್ಲಿ, ಉಕ್ತವಾನ್–ಹೇಳಿದನು, ದುರ್ಮತಿಃ–ದುರ್ಬುದ್ಧಿಯುಳ್ಳ, ಸಃ–ಆ ರಾವಣನು, ಮಯಾ–ನನ್ನಿಂದ, ನಿರ್ಭರ್ತ್ಸಿತಶ್ಚ–ಗರ್ಜಿಸಲ್ಪಟ್ಟವನು, ಬಹುಧಾ–ಬಗೆಬಗೆಯಾಗಿ, ಉಕ್ತಃ–ಹೇಳಲ್ಪಟ್ಟವನು, ಆಸೀತ್–ಆದನು, ಸಕ್ರೋಧೇನ–ಕೋಪದಿಂದೊಡಗೂಡಿದ, ಮಯಾ–ನನ್ನಿಂದ, ಧ್ವಂಸಸ್ವ–ನಾಶವಾಗು, ಇತಿ–ಇಂತೆಂದು, ಪುನಃಪುನಃ–ಬಾರಿಬಾರಿಗು, ಉಕ್ತಃ–ಹೇಳಲ್ಪಟ್ಟನು ॥ ೩೮ ॥ ಧರ್ಮ್ಯಂ–ಧರ್ಮಪ್ರಧಾನವಾದ, ಶ್ರೇಯೋಯುಕ್ತಂ–ಶ್ರೇಯಸ್ಕರವಾದ, ಮಮವಚಶ್ಚ–ನನ್ನ ಮಾತನ್ನು ಕೂಡ, ಶೃಣು–ಕೇಳು॥ ೩೯ ॥ವರಪ್ರದಾನಸಂಮೂಢಃ–ಬ್ರಹ್ಮವರಪ್ರದಾನದಿಂದ ಮೋಹಿತನಾದ,ದುರ್ಮತಿಃ–ದುರ್ಬುದ್ಧಿಯುಳ್ಳ, ಸಃ–ಆ ರಾವಣನು, ಮಮ–ನನ್ನ,ಶಾಪಾಚ್ಚ–ಶಾಪದ ದೆಸೆಯಿಂದಲು, ದಾರುಣಾಂ–ಕ್ರೂರವಾದ, ಪ್ರಕೃತಿಂ–ಸ್ವಭಾವವನ್ನು, ಗತಃ–ಹೊಂದಿದವನಾಗಿ, ಮಾನ್ಯಾಮಾನ್ಯಾನ್–ಪೂಜ್ಯಾ ಪೂಜ್ಯರನ್ನು, ನವೇತ್ತಿ–ತಿಳಿಯಲಾರನು, ತಸ್ಮಾತ್–ಆ ಕಾರಣದ ದೆಸೆಯಿಂದ–ಹೇಮಹಾಬಾಹೋ–ಎಲೈ ಮಹಾಭುಜಗಳುಳ್ಳವನೆ, ಕೈಲಾಸಂ–ಕೈಲಾಸವೆಂಬ, ಧರಣೀಧರಂ–ಪರ್ವತವನ್ನು ಕುರಿತು, ಗಚ್ಛ–ಹೋಗು,ನಿವಾಸಾರ್ಥಂ–ವಾಸಕ್ಕೋಸ್ಕರ, ನಿವೇಶಯ–ಪ್ರವೇಶಿಸು, ಸಹಾನುಗಃ–ಅನುಚರರಿಂ ದೊಡಗೂಡಿದವನಾಗಿ, ಲಂಕಾಂ–ಲಂಕಾಪಟ್ಟಣವನ್ನು, ತ್ಯಜ–ಬಿಟ್ಟುಬಿಡು ॥ ೪೧ ॥ ತತ್ರ–ಆ ಸ್ಥಳದಲ್ಲಿ, ಕಾಂಚನೈಃ–ಬಂಗಾರ ವಿಕಾರವಾದ, ಸೂರ್ಯಸಂಕಾಶೈಃ–ಸೂರ್ಯ ಸದೃಶಂಗಳಾದ, ಪಂಕಜೈಃ–ಕಮಲಗಳಿಂದಲು, ಕುಮುದೈಃ–ಬಿಳೀನೈದಿಲೆಗಳಿಂದಲು, ಉತ್ಪಲೈಶ್ಚೈವ–ಸಾಧಾರಣವಾದ ನೈದಿಲೆಗಳಿಂದಲು, ಸುಗಂಧಿಭಿಃ–ಸುವಾಸನೆಯುಳ್ಳ, ಅನ್ಯೈಶ್ಚೈವ–ಇತರ ಹುಷ್ಪಗಳಿಂದಲು, ಸಂವೃತೋದಕಾ – ಯುಕ್ತವಾದ ಉದಕವುಳ್ಳ, ನದೀನಾಂ–ನದಿಗಳೊಳಗೆ, ಪ್ರವರಾ–ಶ್ರೇಷ್ಠವಾದ, ಮಂದಾಕಿನೀ–ಮಂದಾಕಿನಿಯೆಂಬ, ರಮ್ಯಾ–ಸೊಗಸಾದ, ನದೀ–ನದಿಯು (ಅಸ್ತಿ–ಯಿದೆ) ॥ ೪೩ ॥ ತತ್ರ–ಆ ಕೈಲಾಸದಲ್ಲಿ, ಸಗಂಧರ್ವಾಃ–ಗಂಧರ್ವರಿಂ ದೊಡಗೂಡಿದ, ಸಾಪ್ಸರೋರಗಕಿನ್ನರಾಃ–ಅಪ್ಸರಸ್ತ್ರೀಗಳಿಂದಲು ನಾಗಪುರುಷರಿಂದಲು, ಕಿನ್ನರರಿಂದಲು ಯುಕ್ತರಾದ, ದೇವಾಃ–ದೇವತೆಗಳು, ಸತತಂ–ನಿರಂತರದಲ್ಲಿಯು, ಸಲಿಲಂ–ಮಂದಾಕಿನೀ ಜಲವನ್ನು, ಶ್ರಿತಾಃ–ಆಶ್ರಯಿಸಿದವರಾಗಿ, ವಿಹಾರಶೀಲಾಃ–ಜಲಕ್ರೀಡೆಗಳಲ್ಲಿ ಮನೋವೃತ್ತಿ ಯುಳ್ಳವರಾಗಿ, ರಮಂತೆ–ವಿಹರಿಸುತ್ತಿಧಾರೆ॥೪೪ ॥ ಹೇಧನದ–ಎಲೈ ಕುಬೇರನೆ, ತೇನರಕ್ಷಸಾ–ಆ ರಾವಣನೊಡನೆ, ವೈರಂ–ಶತ್ರುತ್ವವು, ತ್ವಯಾ–ನಿನ್ನಿಂದ, ನಕ್ಷಮಂಹಿ–ಯುಕ್ತವಲ್ಲವಷ್ಟೆ, ತೇನ–ಆ ರಾವಣನಿಂದ, ಪರಮಕಃ–ಉತ್ಕೃಷ್ಟವಾದ,ವರಃ–ವರವು, ಯಥಾ–ಯಾವಪ್ರಕಾರ, ಲಬ್ಧಃ–ಹೊಂದಲ್ಪಟ್ಟಿತೊ, ತಥಾ–ಹಾಗೆ, ಜಾನೀಷೆಹಿ–ತಿಳಿದಿರುವಿಯಷ್ಟೆ॥೪೫॥ ಏವಂ–ಈ ಪರಿಯಾಗಿ, ಉಕ್ತಃ–ಹೇಳಲ್ಪಟ್ಟ ಕುಬೇರನು, ತದ್ವಚಃ–ಆ ಮಾತನ್ನು, ಪಿತೃಗೌರವಾತ್–ತಂದೆಯೆಂಬ ಗುರುತ್ವದಿಂದ, ಗೃಹೀತ್ವಾ–ಗ್ರಹಿಸಿ, ಸದಾರಪೌರಃ–ಪತ್ನಿಯಿಂದಲು ಪ್ರಜೆಗಳಿಂದಲು ಒಡಗೂಡಿದವನಾಗಿಯು, ಸಾಮಾತ್ಯಃ–ಮಂತ್ರಿಗಳಿಂದ ಯುಕ್ತನಾಗಿಯು–ಸವಾಹನಧನಃ–ವಾಹನಗಳಿಂದಲು ದ್ರವ್ಯದಿಂದಲು ಸಹಿತನಾಗಿಯು,

---

ಹೇಳಿ ಸುಮ್ಮನಾದೆನು, ಅವನು ಮಹಾದುಷ್ಟನು, ಆದಕಾರಣನೀನಾದರೂಶ್ರೇಯಸ್ಕರ ವಾಗಿಯು ಧರ್ಮಪ್ರಧಾನವಾಗಿಯು ಇರುವ ನನ್ನಮಾತನ್ನು ಕೇಳು ॥೩೯॥ಆ ದುರ್ಬುದ್ಧಿಯುಳ್ಳ ರಾವಣನು ಬ್ರಹ್ಮದೇವರ ವರಪ್ರದಾನದಿಂದ ಕಡುಮತ್ತನಾಗಿಯು, ಮತ್ತು ನನ್ನ ಶಾಪದಿಂದ ದಾರುಣವಾದ ಬುದ್ಧಿಯನ್ನೈದಿದವನಾಗಿಯು ಇರುವನಾಗಿ, ಇವರುಪೂಜ್ಯರು ಇವರಪೂಜ್ಯರು ಎಂಬದನ್ನೆ ತಿಳಿಯದೆ ಜ್ಞಾನಶೂನ್ಯನಾಗಿ ಇಧಾನೆ॥೪೦॥ಎಲೈ ಮಹಾಬಾಹುಗಳುಳ್ಳವನೆ!ಆದ ಕಾರಣ ನೀನು ಆ ಲಂಕಾಪುರಿಯಂ ತೊರದು ನಿನ್ನ ಜನರೊಡನೆ ಕೈಲಾಸ ಪರ್ವತಕ್ಕೆ ಪೋಗಿ ನೆಲಗೊಂಡಿರೂ॥೪೧॥ ಅಲ್ಲಿ ಸೂರ್ಯ ಸದೃಶಂಗಳಾದ ಮತ್ತು ಕಾಂಚನ ವಿಕಾರಂಗಳಾದ ಕಮಲಗಳಿಂದಲು, ಮತ್ತು ಬಿಳೀ ನೈದಿಲೆಗಳಿಂದಲು, ಇನ್ನು ಪರಿಮಳ ಯುಕ್ತವಾದ ಇತರ ಪುಷ್ಪಗಳಿಂದಲೂ, ವ್ಯಾಪ್ತವಾದ ಉದಕವುಳ್ಳ ಮಂದಾಕಿನಿಯೆಂದು ಪ್ರಸಿದ್ಧವಾದ ಮನೋಹಾರಿಯಾದ ನದಿಯು ಪ್ರವಹಿಸುತಿದೆ॥೪೩॥ ಅಲ್ಲಿ ದೇವತೆಗಳು ಗಂಧರ್ವರು, ಅಪ್ಸರಸ್ತ್ರೀಯರು, ಕಿನ್ನರರು ಸಹ ಕ್ರೀಡಿಸ ಲಿಚ್ಛೆಯುಳ್ಳವರಾಗಿ ಸದಾಕಾಲದಲ್ಲಿಯು ಆ ಉದಕವನ್ನು ಆಶ್ರಯಿಸಿ ರಮಿಸುತಿಧಾರೆ ॥೪೪॥ ಎಲೈ ಕುಬೇರನೆ ! ಆರಾವಣನಿಗೆ ಲಬ್ಧವಾದ ಸರ್ವೋತ್ತಮವಾದ ವರವನ್ನು ನೀನೆ ತಿಳಿದಿರುವಿಯಷ್ಟೆ ? ಆದ ಕಾರಣ ಅಂಥ ದುಷ್ಟನಾದ ರಾಕ್ಷಸನೊಡನೆ ವೈರವು ನಿನಗೆ ತಕ್ಕದ್ದಲ್ಲ ಎಂದು ತಂದೆಯಿಂದ ಹೇಳಲ್ಪಟ್ಟವನಾಗಿ ಆ ಕುಬೇರನು ಪಿತೃ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚಾಥನಿರ್ಭಯಾ॥೪೭॥ಪ್ರಹಸ್ತಸ್ತುದಶಗ್ರೀವಂಗತ್ವಾಸರ್ವಂನ್ಯವೇದಯತ । ಪ್ರವಿಶ್ಯತಾಂಸಹಾಸ್ಮಾಭಿಃಸ್ವಧರ್ಮಂತತ್ರ ಪಾಲಯ ॥೪೮॥ ಏವಮುಕ್ತಃಪ್ರಹಸ್ತೇನರಾವಣೋರಾಕ್ಷಸಸ್ತದಾ। ಪ್ರಹೃಷ್ಟಾತ್ಮಾದಶಗ್ರೀವಸ್ಸಹಾಮಾತ್ಯಸ್ಸಹಾನುಗಃ॥ ವಿವೇಶನಗರೀಂಲಂಕಾಂಸಭ್ರಾತೃಬಲವಾಹನಃ । ಧನದೇನಪರಿತ್ಯಕ್ತಾಂಸುವಿಭಕ್ತಮಹಾಪಥಾಮ್ । ವರದೃಪ್ತಸ್ಸದೇವಾರಿಸ್ಸ್ವರ್ಗಂದೇವಾಧಿಪೋಯಥಾ ॥೫೦॥ ಸಚಾಭಿಷಿಕ್ತಃಕ್ಷಣದಾಚರೈಸ್ತದಾನಿವೇಶಯಾಮಾಸಪುರೀಂದಶಾನನಃ । ನಿಕಾಮಪೂರ್ಣಾಚಬಭೂವಸಾಪುರೀನಿಶಾಚರೈರ್ನೀಲವಲಾಹಕೋಪಮೈಃ ॥೫೧॥ ಧನೇಶ್ವರಸ್ತ್ವಥಪಿತೃವಾಕ್ಯಗೌರವಾತ್ನ್ಯವೇಶಯಚ್ಛಶಿವಿಮಲೇಗಿರೌಪುರೀಂ।ಸ್ವಲಂಕೃತೈರ್ಭವನವರೈರ್ವಿಭೂಷಿತಾಂಪುರಂದರಃಪುರಮಮರಾವತೀಂಯಥಾ॥೫೨॥

—...ಇತಿಶ್ರೀಮದುತ್ತರ ರಾಮಾಯಣೆ ಏಕಾದಶಸ್ಸರ್ಗಃ....—

ರಾಕ್ಷಸೇಂದ್ರೋಭಿಷಿಕ್ತಸ್ತುಭ್ರಾತೃಭ್ಯಾಂಸಹಿತಸ್ತದಾ।ತತಃಪ್ರದಾನಂರಾಕ್ಷಸ್ಯಾಭಿಗಿನ್ಯಾಸ್ಸಮಚಿಂತಯತ॥ಸ್ವಸಾರಂ

ಗತಃ–ಹೊರಟು ಹೋದನು ॥ ಹೇರಾಮ–ಎಲೈಶ್ರೀ ರಾಮನೆ,ತ್ರಿಂಶದ್ಯೋಜನಂ–ಮುವ್ವತ್ತು ಗಾವುದವು, ಆಯತಾ–ವಿಸ್ತಾರವಾದ,ಸಾಲಂಕಾನಗರೀ ಅಲಂಕಾ ಪಟ್ಟಣವು, ಕ್ಷಿಪ್ರಮೇವ–ಜಾಗ್ರತೆಯಾಗಿ, ನಿರ್ಜನಾ–ಜನರಹಿತವಾದ ಕಾರಣ, ನಿರ್ಭಯಾ–ಭಯರಹಿತವಾದದ್ದಾಗಿ, ಅಥ–ಬಳಿಕ, ಶೂನ್ಯಾ–ಬರಿದಾದದ್ದು, ಅಭವತ್–ಆಯಿತು ॥ ೪೭ ॥ ಪ್ರಹಸ್ತಸ್ತು–ಪ್ರಹಸ್ತನಾದರೆ, ದಶಗ್ರೀವಂ–ದಶಕಂಠನನ್ನು ಕುರಿತು, ಗತ್ವಾ–ಹೋಗಿ, ತಾಂ–ಆ ಲಂಕಾಪಟ್ಟಣವನ್ನು, ಆಸ್ಮಾಭಿಸ್ಸಹ–ನಮ್ಮೊಡನೆ–ಪ್ರವಿಶ್ಯ–ಪ್ರವೇಶಿಸಿ–ತತ್ರ–ಆ ಲಂಕಾಪಟ್ಟಣದಲ್ಲಿ,ಸ್ವಧರ್ಮಂ–ನಿನ್ನ ಧರ್ಮವನ್ನು, ಪಾಲಯ–ರಕ್ಷಿಸು, ಇತಿ–ಇಂತೆಂದು,ಸರ್ವಂ–ಸಮಸ್ತವನ್ನು, ನ್ಯವೇದಯತ್–ಅರುಹಿದನು ॥ ತದಾ–ಆಕಾಲದಲ್ಲಿ, ಪ್ರಹಸ್ತೇನ–ಪ್ರಹಸ್ತನಿಂದ, ಏವಮುಕ್ತಃ–ಈ ಪರಿಯಾಗಿ ಹೇಳಲ್ಪಟ್ಟ ರಾಕ್ಷಸಃ–ಅಸುರನಾದ, ದಶಗ್ರೀವಃ–ಹತ್ತು ಕಂಠಗಳುಳ್ಳ, ದೇವಾರಿಃ–ದೇವಶತ್ರುವಾದ, ವರದೃಪ್ತಃ–ವರದಿಂದ ಗರ್ವಿತನಾದ, ಸರಾವಣಃ–ಆ ರಾವಣನು, ಪ್ರಹೃಷ್ಟಾತ್ಮಾ–ಸಂತುಷ್ಟವಾದಮನಸ್ಸುಳ್ಳವನಾಗಿಯು,ಸಹಾಮಾತ್ಯಃ–ಮಂತ್ರಿಗಳಿಂ ದೊಡಗೂಡಿದವನಾಗಿಯು,ಸಹಾನುಗಃ–ಪರಿವಾರದಿಂದೊಡಗೂಡಿದವನಾಗಿಯು,ಸಭ್ರಾತೃಬಲವಾಹನಃ–ಭ್ರಾತೃಗಳಿಂದಲು, ಸೈನ್ಯಗಳಿಂದಲು, ವಾಹನಗಳಿಂದಲು, ಯುಕ್ತನಾಗಿ, ಧನದೇನ–ಕುಬೇರನಿಂದ, ಪರಿತ್ಯಕ್ತಾಂ–ಬಿಡಲ್ಪಟ್ಟ, ಸುವಿಭಕ್ತ ಮಹಾಪಥಾಂ–ಚನ್ನಾಗಿವಿಭಾಗಿಸಲ್ಪಟ್ಟ ದೊಡ್ಡರಸ್ತೆಗಳುಳ್ಳ, ಲಂಕಾಂನಗರೀಂ–ಲಂಕಾಪಟ್ಟಣವನ್ನು, ಸ್ವರ್ಗಂ–ಸ್ವರ್ಗವನ್ನು, ದೇವಾಧಿಪೋಯಥಾ–ದೇವೇಂದ್ರನಂತೆ–ವಿವೇಶ–ಪ್ರವೇಶಿಸಿದನು, ತದಾ–ಆಕಾಲದಲ್ಲಿ, ಕ್ಷಣದಾಚರೈಃ – ರಾಕ್ಷಸರಿಂದ, ಅಭಿಷಿಕ್ತಃ–ಪಟ್ಟಾಭಿಷಿಕ್ತನಾದ, ಸದಶಾನನಃ–ಆ ರಾವಣನುಕೂಡ, ಪುರೀಂ–ಲಂಕಾಪಟ್ಟಣವನು,ನಿವೇಶಯಾಮಾಸ–ನೆಲಗೊಂಡಿದ್ದನು ,ಸಾಪುರೀಚ–ಆ ಪಟ್ಟಣವು ಕೂಡ,ನೀಲವಲಾಹಕೋಪಮೈಃ–ಕಾಲ ಮೇಘಗಳಿಗೆಸಮಾನರಾದ, ನಿಶಾಚರೈಃ–ರಕ್ಕಸರಿಂದ, ನಿಕಾಮಪೂರ್ಣಾ–ಅತಿ ಭರಿತ ವಾದದ್ದು,ಬಭೂವ–ಆಯಿತು ॥೫೧॥ ಅಥ–ಬಳಿಕ, ಧನೇಶ್ವರಸ್ತು–ಕುಬೇರನಾದರೆ,ಪಿತೃವಾಕ್ಯ ಗೌರವಾತ್–ತಂದೆಯ ವಾಕ್ಯದಲ್ಲಿ ಗುರುತ್ವದಿಡಕೆಯಿಂದ, ಶಶಿ ವಿಮಲೇ–ಚಂದ್ರನಂತೆ ನಿರ್ಮಲವಾದ, ಗಿರೌ–ಕೈಲಾಸಪರ್ವತದಲ್ಲಿ, ಸ್ವಲಂಕೃತೈಃ–ಚನ್ನಾಗಿ ಅಲಂ ಕರಿಸಲ್ಪಟ್ಟ, ಭವನವರೈಃ–ಗೃಹಶ್ರೇಷ್ಠಗಳಿಂದ, ವಿಭೂಷಿತಾಂ–ಅಲಂಕೃತವಾದ, ಪುರೀಂ–ಅಲಕಾ ಪಟ್ಟಣವನ್ನು, ಪುರಂದರಃ–ಇಂದ್ರನು, ಅಮರಾವತೀಂ ಪುರಂಯಥಾ–ಅಮರಾವತೀ ಪಟ್ಟಣವನ್ನಂತೆ, ನ್ಯವೇಶಯತ್–ಪ್ರವೇಶ ಮಾಡಿದನು. ॥ ೫೨ ॥

—...✻ಇತಿ ಶ್ರೀಮದುತ್ತರರಾಮಾಯಣೆ ಏಕಾದಶಸ್ಸರ್ಗಃ.✻...—

ಟೀ॥ ತದಾ–ಆಕಾಲದಲ್ಲಿ, ಅಭಿಷಿಕ್ತಃ–ಪಟ್ಟಾಭಿಷಿಕ್ತನಾದ, ರಾಕ್ಷಸೇಂದ್ರಸ್ತು ರಾವಣನಾದರೆ, ಭ್ರಾತೃಭ್ಯಾಂ–ಅನುಜರಾದ ಕುಂಭಕರ್ಣವಿಭೀಷ

ವಾಕ್ಯಗೌರವದಿಂದ ಲಂಕಾಪುರವಂ ತೊರದು ದಾರ, ಪುತ್ರ, ಪೌರ, ಮಂತ್ರಿ, ವಾಹನ ಧನ ಸಹಿತನಾಗಿ ಹೊರಟು ಹೋದನು ॥೪೬॥ ಎಲೈರಘುಕುಲ ತಿಲಕನೆ! ಆಕಾಲದಲ್ಲಿ ಅತಿತ್ವರಿತವಾಗಿ ನಿರ್ಜನ ವಾದ ತ್ರಿಂಶದ್ಯೋಜನ ದೈರ್ಘ್ಯವುಳ್ಳ ಆ ಲಂಕಾನಗರಿಯು ಶೂನ್ಯವಾಗಿಯು ಕಡುಭಯಂಕರ ವಾಗಿಯು ಇರುವಂಥಾದ್ದಾಯಿತು ॥೪೭॥ಇತ್ತಲಾಪ್ರಹಸ್ತನು ದಶಗ್ರೀವನ ಬಳಿಗೆ ಪೋಗಿ ಇಂತೆಂದರುಹಿದನು. ಆ ಕುಬೇರನು ಲಂಕಾಪುರಿಯಂ ತೊರದು ಹೊರಟುಹೋದನು ॥ ಆದಕಾರಣ ನೀನು ನಮ್ಮಗಳಿಂ ದೊಡಗೂಡಿ ಆ ಲಂಕಾನಗರಿಯಂ ಹೊಕ್ಕು ಅಲ್ಲಿ ಸ್ವಧರ್ಮವನ್ನು ಪರಿಪಾಲಿಸುಎಂನಲು ॥೪೮॥ ಆಕಾಲದಲ್ಲಿ, ದಶಕಂಠನು ಕಡು ಸಂತೋಷಗೊಂಡವನಾಗಿ, ಮಂತ್ರಿಗಳಿಂದಲು, ಸೇವಕರಿಂದಲು ಶ್ರೇಷ್ಠ ಸಹೋದರರಿಂದಲೂ ಸೇನೆಗಳಿಂದಲೂ ವಾಹನಗಳಿಂದಲೂ ಒಡಗೂಡಿ ಇಂದ್ರನು ಸ್ವರ್ಗವಂ ಪ್ರವೇಶಿಸುವಂತೆ ಆ ಲಂಕಾಪುರವನ್ನು ಹೊಕ್ಕು ಆ ಸಮಯದೊಳ್ ಸಂತುಷ್ಟರಾದ ರಕ್ಕಸರಿಂದ ಪಟ್ಟವಂ ಕಟ್ಟಲ್ಪಟ್ಟವನಾಗಿ ಕಡು ಸಂತೋಷದೊಡನೆ ಆ ಪಟ್ಟಣದಲ್ಲಿ ನೆಲಗೊಂಡಿರಲು, ಆ ಪುರಿಯು ಸಹ ಮೇಘಸದೃಶರಾದ ನಿಶಾಚರರಿಂದ ಬಲುತುಂಬಿ ದಂಥಾದ್ದಾಯಿತು॥೫೧॥ ಬಳಿಕ ಆಧನೇಶ್ವರನಾದರೆ ಪಿತಾಜ್ಞೆಯ ಗೌರವದಿಂದ ಕೈಲಾಸಗಿರಿಯಲ್ಲಿ ಸುಂದರವಾದ ಮಂದಿರಗಳುಳ್ಳವರ ನಗರಿಯನ್ನು ನಿರ್ಮಿಸಿದವನಾಗಿ, ಅಮರಾವತೀ ಪುರದಲ್ಲಿ ಇಂದ್ರನೋಪಾದಿಯಲ್ಲಿ ಆ ಪುರದೊಳ್ ವಾಸಿಸುತಿದ್ದನು॥೫೨॥—...✻ಶ್ರೀಮದುತ್ತರ ರಾಮಾಯಣದೊಳ್ ಏಕಾದಶ ಸರ್ಗಂ ಮುಗಿದುದು.✻...—

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಾಲಕೇಯಾಯ ದಾನವೇಂದ್ರಾಯ ರಾಕ್ಷಸೀಮ್ । ದದೌ ಶೂರ್ಪಣಖಾಂ ನಾಮ ವಿದ್ಯುಜ್ಜಿಹ್ವಾಯ ನಾಮತಃ ॥೧॥ ಅಥ ದತ್ವಾ ಸ್ವಸಾರಂ ಸ ಮೃಗಯಾಂ ಪರ್ಯಟನ್ನೃಪ । ತತ್ರಾಪಶ್ಯತ್ತತೋ ರಾಮ ಮಯಂ ನಾಮ ದಿತೇಸ್ಸುತಮ್ ॥೨॥ ಕನ್ಯಾಸಹಾಯಂ ತಂ ದೃಷ್ಟ್ವಾ ದಶಗ್ರೀವೋ ನಿಶಾಚರಃ । ಅಪೃಚ್ಛತ್ಕೋ ಭವಾನೇಕೋ ನಿರ್ಮನುಷ್ಯಮೃಗೇ ವನೇ । ಅನಯಾ ಮೃಗಶಾಬಾಕ್ಷ್ಯಾ ಕಿಮರ್ಥಂ ಸಹ ತಿಷ್ಠಸಿ ॥೪॥ ಮಯಸ್ತ್ವಥಾಬ್ರವೀದ್ರಾಮ ಪೃಚ್ಛಂತಂ ತಂ ನಿಶಾಚರಮ್ । ಶ್ರೂಯತಾಂ ಸರ್ವಮಾಖ್ಯಾಸ್ಯೇ ಯಥಾವೃತ್ತಮಿದಂ ಮಮ ॥೫॥ ಹೇಮಾ ನಾಮಾಪ್ಸರಾಸ್ತಾತ ಶ್ರುತಪೂರ್ವಾ ಯದಿ ತ್ವಯಾ । ದೈವತೈರ್ಮಮ ಸಾ ದತ್ತಾ ಪೌಲೋಮೀವ ಶತಕ್ರತೋಃ ॥೬॥ ತಸ್ಯಾಂ ಸಕ್ತಮನಾಸ್ತಾತ ಪಂಚವರ್ಷಶತಾನ್ಯಹಮ್ । ಸಾ ಚ ದೈವತಕಾರ್ಯೇಣ ಗತಾ ವರ್ಷಾಣಿ ಚತುರ್ದಶ ॥೭॥ ತಸ್ಯಾಃ ಕೃತೇ ಚ ಹೇಮಾಯಾಸ್ಸರ್ವಂ ಹೇಮಮಯಂ ಪುರಮ್ । ವಜ್ರವೈಡೂರ್ಯಚಿತ್ರಂ ತತ್ ಮಾಯಯಾ ನಿರ್ಮಿತಂ ಮಯಾ ॥೮॥ ತತ್ರಾಹಮರತಿಂ ವಿಂದಂ ತಯಾ ಹೀನಸ್ಸುದುಃಖಿತಃ । ತಸ್ಮಾತ್ಪುರಾದ್ದುಹಿತರಂ ಗೃಹೀ

---

ಣರಿಂದ ಸಹಿತಃ-ಕೂಡಿದವನಾಗಿ, ತತಃ-ಬಳಿಕ, ರಾಕ್ಷಸ್ಯಾಃ-ರಕ್ಕಸಿಯಾದ, ಭಗಿನ್ಯಾಃ-ತಂಗಿಯ, ಪ್ರದಾನಂಪ್ರತಿ-ದಾನವಂ ಕುರಿತು, ಸಮಚಿಂತಯತ್-ಯೋಚಿಸಿದನು ॥೧॥ ಶೂರ್ಪಣಖಾಂನಾಮ-ಶೂರ್ಪಣಖಿಯೆಂದು ಪ್ರಸಿದ್ಧಳಾದ, ರಾಕ್ಷಸೀಂ-ರಾಕ್ಷಸಿಯಾದ, ಸ್ವಸಾರಂ-ತಂಗಿಯನ್ನು, ಕಾಲಕೇಯಾಯ-ಕಾಲಕಪುತ್ರನಾದ, ನಾಮತಃ-ಹೆಸರಿಸಿಂದ, ವಿದ್ಯುಜ್ಜಿಹ್ವಾಯ-ವಿದ್ಯುಜ್ಜಿಹ್ವನೆಂದು ಪ್ರಸಿದ್ಧನಾದ,ದಾನವೇಂದ್ರಾಯ-ರಾಕ್ಷಸೋತ್ತಮನಿಗೆ ದದೌ-ಕೊಟ್ಟನು ॥೨॥ ಹೆನೃಪ-ಎಲೈ ನರಪತಿಯೆ,ಹೆ ರಾಮ-ಎಲೈಶ್ರೀರಾಮನೆ,ಅಥ-ಬಳಿಕ, ತತ್ರ-ಆಲಂಕಾಪಟ್ಟಣದಲ್ಲಿ,ಸಃ-ಆರಾವಣನು,ಸ್ವಸಾರಂ-ತಂಗಿಯನ್ನು, ದತ್ವಾ-ಕೊಟ್ಟು, ತತಃ-ಬಳಿಕ, ಮೃಗಯಾಂ-ಬೇಟೆಯನ್ನು ಕುರಿತು, ಪರ್ಯಟನ್-ತಿರುಗುತಿರುವವನಾಗಿ, ಮಯಂನಾಮ-ಮಯನೆಂದು ಪ್ರಸಿದ್ಧನಾದ, ದಿತೇಃ- ದಿತಿಯ, ಸುತಂ-ಕುಮಾರನನ್ನು, ಅಪಶ್ಯತ್-ಕಂಡನು ॥೩॥ ದಶಗ್ರೀವಃ-ದಶಗ್ರೀವನೆಂಬ, ನಿಶಾಚರಃ-ರಾಕ್ಷಸನು, ನಿರ್ಮನುಷ್ಯಮೃಗೇ- ಮನುಷ್ಯರು ಮೃಗಗಳು ಸಹ ಇಲ್ಲದಿರುವ, ವನೇ-ಕಾಡಿನಲ್ಲಿ, ಕನ್ಯಾಸಹಾಯಂ-ಕನ್ಯೆಯೇಸಹಾಯವಾಗುಳ್ಳ, ತಂ-ಅವನನ್ನು, ದೃಷ್ಟ್ವಾ-ಕಂಡು, ಭವಾನೇಕಃ-ನೀನೊಬ್ಬನೆ, ಮೃಗಶಾಬಾಕ್ಷ್ಯಾ-ಜಿಂಕೆಮರಿಯ ನೇತ್ರಗಳಂತೆ ನೇತ್ರಗಳುಳ್ಳ, ಅನಯಾಸಹ-ಈ ಕುವರಿಯೊಡನೆ, ಕಿಮರ್ಥಂ-ಯಾಕೆ, ತಿಷ್ಠಸಿ-ನಿಂತಿದ್ದೀ, ಇತಿ-ಇಂತೆಂದು, ಅಪೃಚ್ಛತ್-ಕೇಳಿದನು ॥೪॥ ಹೆ ರಾಮ-ಎಲೈ ಶ್ರೀರಾಮನೆ, ಅಥ-ಬಳಿಕ, ಮಯಸ್ತು-ಮಯಾಸುರನಾದರೆ,ಪೃಚ್ಛಂತಂ- ಕೇಳುತಿರುವ, ತಂನಿಶಾಚರಂ-ಆ ರಾಕ್ಷಸನನ್ನು ಕುರಿತು, ಅಬ್ರವೀತ್-ನುಡಿದನು, ಮಮ-ನನ್ನ, ಇದಂ-ಈ,ಸರ್ವಂಯಥಾವೃತ್ತಂ-ವೃತ್ತಾಂತವೆಲ್ಲ,ಶ್ರೂಯತಾಂ-ಕೇಳಲ್ಪಡಲಿ,ಆಖ್ಯಾಸ್ಯೇ-ಹೇಳುತ್ತೇನೆ॥ಹೆ ತಾತ-ಎಲೋ ಅಪ್ಪ,ಹೇಮಾನಾಮ-ಹೇಮೆಯೆಂದು ಪ್ರಸಿದ್ಧಳಾದ, ಅಪ್ಸರಾಃ-ಅಪ್ಸರಸ್ತ್ರೀಯು,ತ್ವಯಾ-ನಿನ್ನಿಂದ, ಶ್ರುತಪೂರ್ವಾಯದಿ-ಕೇಳಲ್ಪಟ್ಟಿದ್ದಳೇ ಯೇನು, ಸಾ-ಆಕನ್ಯೆಯು, ಮಮ-ನನಗೆ, ಶತಕ್ರತೋಃ-ಇಂದ್ರನಿಗೆ,ಪೌಲೋಮೀವ-ಶಚೀದೇವಿಯಂತೆ,ದೈವತೈಃ-ದೇವತೆಗಳಿಂದ, ದತ್ತಾ-ಕೊಡಲ್ಪಟ್ಟಳು ॥೬॥ ಹೆ ತಾತ-ಎಲೊ ರಾವಣನೆ, ಅಹಂ-ನಾನು, ಪಂಚವರ್ಷಶತಾನಿ-ಐನೂರು ಸಂವತ್ಸರಗಳು, ತಸ್ಯಾಂ-ಆ ಹೇಮೆಯಲ್ಲಿ ಸಕ್ತಮನಾಃ-ಆಸಕ್ತವಾದ ಮನಸ್ಸುಳ್ಳವನಾದೆನು, ಸಾಚ-ಆಕೆಯು ಕೂಡ, ದೈವತಕಾರ್ಯೇಣ-ದೇವಕಾರ್ಯದಿಂದ, ಚತುರ್ದಶವರ್ಷಾಣ-ಹದಿನಾಲ್ಕು ವರ್ಷಗಳಲ್ಲಿ, ಗತಾ-ಹೋದಳು ॥೭॥ ತಸ್ಯಾಃ ಹೆ ಮಾಯಾಃಕೃತೇ-ಆ ಸ್ತ್ರೀನಿಮಿತ್ತವಾಗಿ, ತತ್ಸರ್ವಂಪುರಂ-ಆ ಸಮಸ್ತವಾದ ಪಟ್ಟಣವು, ಹೇಮಮಯಂ ಭಂಗಾರವಿಕಾರಮಾಗಿಯು, ವಜ್ರವೈಡೂರ್ಯಚಿತ್ರಂ-ವಜ್ರಗಳಿಂದಲು ವೈಡೂರ್ಯ ಮಣಿಗಳಿಂದಲು, ಚಿತ್ರಬಣ್ಣವುಳ್ಳದ್ದಾಗಿಯು, ಮಯಾ-ನನ್ನಿಂದ, ಮಾಯಯಾ-ಮಾಯೆಯಿಂದ, ನಿರ್ಮಿತಂ-ಸೃಜಿಸಲ್ಪಟ್ಟಿತು ॥೮॥ ತತ್ರ-ಆ ಹೇಮಪುರದಲ್ಲಿ, ತಯಾ-ಆಕೆಯಿಂದ, ಹೀನಃ-ರಹಿತನಾದ, ಅಹಂ-ನಾನು, ಅರತಿಂ-

---

ಆ ಸಮಯದಲ್ಲಿ ರಾಕ್ಷಸೇಂದ್ರನಾದ ರಾವಣನು ಪಟ್ಟಾಭಿಷಿಕ್ತನಾದ ಬಳಿಕ ತನ್ನ ತಂಗಿಯಾದ ಶೂರ್ಪಣಖಿಯ ವಿವಾಹವಂ ಗೈಯಲು, ತಮ್ಮಂದಿರೊಡನೆ ಯೋಚಿಸಿ ಕಾಲಕಪುತ್ರನಾದ ವಿದ್ಯುಜ್ಜಿಹ್ವನೆಂಬಾತನಿಗೆ ಕೊಟ್ಟು ವಿವಾಹವಂ ಬೆಳಿಸಿದನು॥೧॥ ಆಬಳಿಕ ಒಂದಾನೊಂದು ಕಾಲದಲ್ಲಿ ಬ್ಯಾಟೆಗೆ ಪೋದವನಾಗಿ, ಕನ್ನಿಕಾಸಹಿತನಾದ ದೈತ್ಯೋತ್ತಮನಾದ ಮಯನೆಂಬವನನ್ನು ಕಂಡು ಇಂತೆಂದನು, ಎಲೈ ದೈತ್ಯನೆ! ನಿರ್ಜನವಾದ ಈ ವನದಲ್ಲಿ ಈ ಬಾಲಿಕಾ ಮಣಿಯೊಡನೆ ಯಾಕೆ ನಿಂತಿದ್ದೀ, ನೀನ್ಯಾರು? ಎಂದು ಕೇಳಲು, ಆ ಮಯಾಸುರ ನಿಂತೆಂದು ಹೇಳಲುಪಕ್ರಮಿಸಿದನು॥೫॥ ಕೆಳೈಯ್ಯಾ ನನ್ನ ವೃತ್ತಾಂತವನ್ನರುಪುವೆನು, ಹೇಮಾ ಎಂಬ ಅಪ್ಸರಸ್ತ್ರೀಯನ್ನು ನೀನು ಕೇಳಿದ್ದೀಯಾ? ಶಚೀದೇವಿಯು ಇಂದ್ರನಿಗೆ ಕೊಡಲ್ಪಟ್ಟಂತೆ ಆಕೆಯು ದೇವತೆಗಳಿಂದ ನನಗೆ ಕೊಡಲ್ಪಟ್ಟಳು, ನಾನೂ ಸಹ ಆ ಅಪ್ಸರ ಸ್ತ್ರೀಯಲ್ಲಿಯೇ ಅನುರಾಗ ವುಳ್ಳವನಾಗಿ ಅಯಿನೂರು ವರುಷಗಳು ಕಡು ಸಂತುಷ್ಟನಾಗಿದ್ದೆನು ॥೭॥ ಆ ಹೇಮೆಯು ದೇವ ಕಾರ್ಯಕ್ಕೋಸ್ಕರ ಹೊರಟುಹೋಗಿ ಇಂದಿಗೆ ಹದಿನಾಲ್ಕು ವರುಷಗಳಾದವು, ಆ ರಮಣೀಮಣಿಯಾದ ಹೇಮೆಯ ಪ್ರೀತ್ಯರ್ಥವಾಗಿ, ಹೈಮ ವಿಕಾರವಾಗಿಯು, ವಜ್ರವೈಡೂರ್ಯಾದಿ ಮಣಿರಮಣೀಯ್ಯವಾಗಿಯು ಇರುವ ಪಟ್ಟಣವಂ ನಿರ್ಮಿಶಿಕೊಂಡು ಅದರೊಳ್ ನೆಲಗೊಂಡಿದ್ದೆನು, ಆಕೆಯ ವಿರಹ ವೇದನೆಯಿಂದ ಕಡುದುಃಖಿತನಾಗಿ ಅಂಥಾಪುರವನ್ನೂ ಸಹ ತೊರದು ಈ ಕುವರಿಯನ್ನು ಕರೆದುಕೊಂಡು ಕಡು ಭಯಂಕರವಾದ ಈಕಾಡಿಗೆ ಬಂದೆನು, ಎಲೈ ರಾಜ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ವಾವನಮಾಗತಃ ॥೯॥ ಇಯಂಮಮಾತ್ಮಜಾರಾಜನ್ ತಸ್ಯಾಃಕುಕ್ಷೌವಿವರ್ಧಿತಾ । ಭರ್ತಾರಮನಯಾಸಾರ್ಧಮಸ್ಯಾಃ ಪ್ರಾಪ್ತೋಸ್ಮಿಮಾರ್ಗಿತುಮ್ ॥೧೦॥ ಕನ್ಯಾಪಿತೃತ್ವಂದುಃಖಂಹಿಸರ್ವೇಷಾಂಮಾನಕಾಂಕ್ಷಿಣಾಮ್ । ಕನ್ಯಾಹಿದ್ವೇಕುಲೇನಿತ್ಯಂ ಸಂಶಯೇಸ್ಥಾಪ್ಯತಿಷ್ಠತಿ ॥೧೧॥ ದ್ವೌಸುತೌತುಮಮತ್ವಸ್ಯಾಂಭಾರ್ಯಾಯಾಂಸಂಬಭೂವತುಃ। ಮಾಯಾವೀಪ್ರಥಮಸ್ತತ್ರದುಂದುಭಿಸ್ತದನಂತರಃ ॥೧೨॥ ಏವಂತೇಸರ್ವಮಾಖ್ಯಾತಂಯಥಾತತ್ವೇನಪೃಚ್ಛತಃ । ತ್ವಾಮಿದಾನೀಂಕಥಂತಾತಜಾನೀಯಾಂಕೋಭವಾನಿತಿ ॥೧೩॥ ಏವಮುಕ್ತಸ್ತುತದ್ರಕ್ಷೋವಿನೀತಮಿದಮಬ್ರವೀತ್। ಅಹಂಪೌಲಸ್ತ್ಯತನಯೋದಶಗ್ರೀವಶ್ಚನಾಮತಃ । ವಿಶ್ರವಾವೈಮುನಿರ್ಯಸ್ತುತೃತೀಯೋಬ್ರಹ್ಮಣೋಭವತ್ ॥೧೪॥ ಏವಮುಕ್ತಸ್ತದಾರಾಮರಾಕ್ಷಸೇಂದ್ರೇಣದಾನವಃ । ಬ್ರಹ್ಮರ್ಷೇಸ್ತಂಸುತಂಜ್ಞಾತ್ವಾಮಯೋಹರ್ಷಮುಪಾಗತಃ ॥೧೫॥ ದಾತುಂದುಹಿತರಂತಸ್ಯರೋಚಯಾಮಾಸತತ್ರವೈ । ಪ್ರಹಸನ್ಪ್ರಾಹದೈತ್ಯೇಂದ್ರೋರಾಕ್ಷಸೇಂದ್ರಮಿದಂವಚಃ ॥೧೬॥ ಇಯಂಮಮಾತ್ಮಜಾರಾಜನ್ಹೇಮಯಾಪ್ಸ

---

ಆ ಸಂತೋಷವನ್ನು, ಪ್ರಾಪ್ತಂ-ಹೊಂದಿದೆನು, ಸುದುಃಖಿತಃ-ವ್ಯಸನ ವುಳ್ಳವನಾಗಿ, ತಸ್ಮಾತ್ಪುರಾತ್-ಆ ನಗರದ ದೆಸೆಯಿಂದ, ದುಹಿತರಂ-ಮಗಳನ್ನು, ಗೃಹೀತ್ವಾ-ಕರದುಕೊಂಡು, ವನಂ-ಕಾಡನ್ನು ಕುರಿತು, ಆಗತಃ-ಬಂದೆನು ॥೯॥ ಹೇರಾಜನ್-ಎಲೈ ಅರಸೆ, ಇಯಂ-ಈ ಕನ್ಯಕೆಯು, ತಸ್ಯಾಃ- ಆಹೇಮೆಯ, ಕುಕ್ಷೌ-ಹೊಟ್ಟೆಯಲ್ಲಿ, ವಿವರ್ಧಿತಾ-ವೃದ್ಧಿ ಹೊಂದಿದವಳು, ಮಮ-ನನಗೆ, ಆತ್ಮಜಾ-ಮಗಳು, ಅನಯಾಸಾರ್ಧಂ-ಇವಳೊಡಗೂಡಿ ಅಸ್ಯಾಃ-ಈ ಕೆಗೆ, ಭರ್ತಾರಂ-ಗಂಡನನ್ನು, ಮಾರ್ಗಿತುಂ-ಹುಡುಕುವದಕ್ಕೋಸ್ಕರ, ಪ್ರಾಪ್ತೋಸ್ಮಿ-ಬಂದವನಾದೆ ॥೧೦॥. ಕನ್ಯಾಪಿತೃತ್ವಂ-ಕನ್ಯಾಜನಕತ್ವವು, ಸರ್ವೇಷಾಂ-ಸಮಸ್ತರಾದ, ಮಾನಕಾಂಕ್ಷಿಣಾಂ-ಮಾನೇಚ್ಛೆಯುಳ್ಳವರಿಗೆ, ದುಃಖಂಹಿ-ದುಃಖಕರವಾದ್ದಷ್ಟೆ, ಹಿಯಸ್ಮಾತ್-ಯಾವಕಾರಣದ ದೆಸೆಯಿಂದ, ಕನ್ಯಾ-ಕನ್ಯಕೆಯು, ನಿತ್ಯಂ- ಯಾವಾಗಲು, ದ್ವೇಕುಲೇ-ಮಾತಾಪಿತೃ ವಂಶಗಳನ್ನು, ಸಂಶಯೇ-ಸಂದೇಹದಲ್ಲಿ, ಸ್ಥಾಪ್ಯ-ನಿಲ್ಲಿಸಿ, ತಿಷ್ಠತಿ-ನಿಂತಿರುವಳು ॥೧೧॥ ಕಿಂತು-ಮತ್ತೇನಂದರೆ, ಮಮತು-ನನಗಾದರೆ, ಅಸ್ಯಾಂಭಾರ್ಯಾಯಾಂ-ಈ ಹೆಂಡತಿಯಲ್ಲಿ, ದ್ವೌಸುತೌ-ಯರಡುಮಕ್ಕಳು, ಸಂಬಭೂವತುಃ-ಹುಟ್ಟಿದರು,ತತ್ರ-ಆ ಈರ್ವರಲ್ಲಿ, ಮಾಯಾವೀ-ಮಾಯಾವಿಯು, ಪ್ರಥಮಃ-ಜ್ಯೇಷ್ಠನು, ದುಂದುಭಿಃ-ದುಂದುಭಿಯು, ತದನಂತರಃ-ಆವನಿಗೆ ಕಿರೀಯವನು ॥೧೨॥ ಪೃಚ್ಛತಃ-ಕೇಳುತಿರುವ, ತೇ-ನಿನಗೆ, ಯಥಾತತ್ವೇನ-ಯಥಾರ್ಥವಾಗಿ, ಏವಂ-ಈಪರಿಯಾಗಿ, ಸರ್ವಂ-ಸಮಸ್ತವು, ಆಖ್ಯಾತಂ-ಹೇಳಲ್ಪಟ್ಟಿತು, ಹೇತಾತ-ಎಲೋ ತಂದೆಯೆ, ಭವಾನ್-ನೀನು, ಕಃಇತಿ-ಯಾರೆಂದು, ತ್ವಾಂ-ನಿನ್ನನ್ನು, ಇದಾನೀಂ-ಈಗ, ಕಥಂಜಾನೀಯಾಂ-ಹ್ಯಾಗೆ ತಿಳಿಯಲೀ ॥೧೩॥ ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ತದ್ರಕ್ಷಸ್ತು-ಆ ರಾವಣನಾದರೆ, ವಿನೀತಂ-ವಿನಯವಾಗಿ, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು, ಅಹಂ-ನಾನು, ಪೌಲಸ್ತ್ಯತನಯಃ-ಪೌಲಸ್ತ್ಯನಮಗನು, ನಾಮತಃ-ಹೆಸರಿನಿಂದ, ದಶಗ್ರೀವಶ್ಚ-ದಶಕಂಠನೆಂಬವನು, ಮುನಿಃ-ಋಷಿಯಾದ, ಯಃ-ವಿಶ್ರವಾವೈ-ಯಾವ ನಮ್ಮ ತಂದೆಯಾದ ವಿಶ್ರವಸ್ಸಾದರೆ, ಬ್ರಹ್ಮಣಃ-ಬ್ರಹ್ಮನಿಗೆ, ತೃತೀಯಃ-ಮೂರನೆಯವನು, ಅಭವತ್-ಆದನು ॥೧೪॥ ಕಿಂತು – ಮತ್ತೇನಂದರೆ,—ಹೇರಾಮ-ಎಲೈರಾಮನೆ, ತದಾ-ಆ ಕಾಲದಲ್ಲಿ, ಏವಂ-ಈ ಪರಿಯಾಗಿ, ರಾಕ್ಷಸೇಂದ್ರೇಣ-ರಾವಣನಿಂದ, ಉಕ್ತಃ-ಹೇಳಲ್ಪಟ್ಟ, ದಾನವಃ-ರಾಕ್ಷಸನಾದ, ಮಯಃ-ಮಯನು,(ತಂ-ಅವನನ್ನು,) ಬ್ರಹ್ಮರ್ಷೇಃ-ಬ್ರಹ್ಮರ್ಷಿಯ,ಸುತಂ-ಕುಮಾರನನ್ನಾಗಿ,ಜ್ಞಾತ್ವಾ-ಅರಿತು, ಹರ್ಷಂ-ಸಂತೋಷವನ್ನು, ಉಪಾಗತಃ-ಹೊಂದಿದನು ॥೧೫॥ ತತ್ರವೈ-ಅದೇಸ್ಥಳದಲ್ಲಿಯೆ, ದುಹಿತರಂ-ಮಗಳನ್ನು, ತಸ್ಯ-ಆರಾವಣನಿಗೆ, ದಾತುಂ-ಕೊಡುವದಕ್ಕೆ, ರೋಚಯಾಮಾಸ-ಇಚ್ಛೈಸಿದನು, ದೈತ್ಯೇಂದ್ರಃ-ದೈತ್ಯಶ್ರೇಷ್ಠನಾದ ಮಯನು, ಪ್ರಹಸನ್-ನಗುತಿರುವನಾಗಿ, ರಾಕ್ಷಸೇಂದ್ರಂ-ರಾಕ್ಷಸನಾಥನಾದ ರಾವಣನನ್ನು ಕುರಿತು, ಇದಂವಚಃ-ಈ ಮಾತನ್ನು, ಪ್ರಾಹ-ಹೇಳಿದನು ॥೧೬॥ ಹೆ ರಾಜನ್-ಎಲೈ ಅರಸೆ, ಹೇಮಯಾ-ಹೇಮೆಯೆಂಬ, ಅಪ್ಸರಸಾ-ಅಪ್ಸರಸ್ತ್ರೀಯಿಂದ, ಧೃತಾ-ಧರಿ

---

ನೆ! ಈ ಹುಡುಗಿಯು ನನ್ನ ಮಗಳು ಆ ಹೇಮೆಯ ಗರ್ಭದಲ್ಲಿ ಹುಟ್ಟಿದವಳು, ಈ ಕುಮಾರಿಗೆ ವರಾನ್ವೇಷಣೆಯಂ ಗೈಯುತ್ತಾ ಯಿಲ್ಲಿಗೆ ಬಂದೆನು ॥೧೦॥ ಅಕಟ ಏನು ಹೇಳಲಿ, ಕೇಳೈಯಾ ಮಾನವಂತ ರಾದವರಿಗೆ ಕನ್ಯಾ ಜನಕತ್ವ ವೆಂಬುವದು ಕಡುಕಷ್ಟವು, ಯಾಕಂದರೆ ಕನ್ಯಕೆಯ ಚಾರಿತ್ರ್ಯ ವಿಷಯದಲ್ಲಿ ಹ್ಯಾಗಾಗುವದೋ ಯೆಂದು, ಮಾತಾ ಪಿತೃ ಕುಲಸ್ಥರು ಸದಾ ಕಾಲದಲ್ಲಿಯು ಸಂಶಯದಲ್ಲಿಯೇ ಮುಳುಗು ತಿರುವರು ॥ ೧೧ ॥ ಈ ಹೆಂಣು ಮಗಳಲ್ಲದೆ ಇನ್ನು ಇಬ್ಬರು ಗಂಡು ಮಕ್ಕಳಿಧಾರೆ, ಅವರೀರ್ವರಲ್ಲಿ ಮಾಯಾವಿಯು ಹಿರೀಮಗನು, ದುಂದುಭಿ ಯೆಂಬವನು ಕಿರಿಯವನು ॥೧೨॥ ನನ್ನ ವಿಷಯವನ್ನೆಲ್ಲ ಶೃತಪಡಸಿದ್ದೇನೆ, ನೀಸ್ಯಾರೋ ಪೇಳಬೇಕೆಂ ದಿಚ್ಛೈಸುತ್ತೇನೆಂದು ಪೃಚ್ಛಿಸಲು ॥೧೩॥ ಆ ರಾವಣನು ವಿನಯವಾಗಿಂತೆಂದು ನುಡಿದನು ಯಾವ ವಿಶ್ರವಸ್ಸೆಂಬ ಮುನಿಯು ಬ್ರಹ್ಮನಿಗೆ ಮೂರನೇವನಾಗಿರುವನೋ, ಅಂಥ ಪೌಲಸ್ತ್ಯನಮಗನು ನನ್ನನ್ನು ದಶಕಂಠನೆಂದು ಕರೆಯುವರು ॥೧೪॥ ಈ ಪರಿಯಾಗಿ ಪೇಳುತಿರುವ ಆ ರಾಕ್ಷಸೇಂದ್ರನಾದ ರಾವಣನ ವಾಕ್ಯವಂ ಕೇಳಿ, ಬ್ರಹ್ಮರ್ಷಿಯ ಪುತ್ರನೆಂದು ತಿಳಿದು ಆ ಮಯನು ಮಹಾ ಹರ್ಷವನ್ನೈದಿ ತನ್ನ ಮಗಳನ್ನಿವನಿಗೆ ಕೊಡಬೇಕೆಂದಿಚ್ಛೈಸಿ ನಸುನಗೆಯುಳ್ಳವನಾಗಿ ರಾವಣನಂ ಕುರಿತಿಂತೆಂದನು ॥೧೬॥ ಎಲೈ ರಾಜನೆ! ಆ ಹೇಮೆಯ ಹೊಟ್ಟೆಯಲ್ಲಿ ಹುಟ್ಟಿದ ನನ್ನ ಮಗಳಾದ ಮಂಡೋದರಿಯೆಂಬ ಈ ಕನ್ಯಕೆಯನ್ನು ಪತ್ನ್ಯರ್ಥವಾಗಿ ಪರಿಗ್ರಹಿಸು॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಸಾಧೃತಾ । ಕನ್ಯಾಮಂಡೋದರೀನಾಮಪತ್ನ್ಯರ್ಥಂಪ್ರತಿಗೃಹ್ಯತಾಮ್ ॥೧೭॥ ಬಾಢಮಿತ್ಯೇವತಂರಾಮದಶಗ್ರೀವೋಭ್ಯ
ಭಾಷತ । ಪ್ರಜ್ವಾಲ್ಯತತ್ರಚೈವಾಗ್ನಿಮಕರೋತ್ಪಾಣಿಸಂಗ್ರಹಮ್ ॥೧೮॥ ನಹಿತಸ್ಯಮಯೋರಾಮಶಾಪಾಭಿಜ್ಞಸ್ತಪೋ
ಧನಾತ್ ।ವಿದಿತ್ವಾತೇನಸಾದತ್ತಾತಸ್ಯಪೈತಾಮಹಂಕುಲಮ್॥೧೯॥ಅಮೋಘಾಂತಸ್ಯಶಕ್ತಿಂಚಪ್ರದದೌಪರಮಾದ್ಭುತಾಮ್।
ಪರೇಣತಪಸಾಲಬ್ಧಾಂಜಘ್ನಿವಾ೯ಲಕ್ಷ್ಮಣಂಯಯಾ॥೨೦॥ ಏವಂಸ್ವೀಕೃತದಾರೋವೈಲಂಕಾಯಾಈಶ್ವರಃಪ್ರಭುಃ । ಗ
ತ್ವಾತುನಗರೀಂಲಂಕಾಂಭ್ರಾತೃಭ್ಯಾಂಸಹಿತೋವಸತ್ ॥೨೧॥ ವೈರೋಚನಸ್ಯದೌಹಿತ್ರೀಂವಜ್ರಜ್ವಾಲಾಂತುನಾಮತಃ।
ತಾಂಭಾರ್ಯಾಂಕುಂಭಕರ್ಣಸ್ಯರಾವಣಸ್ಸಮುದಾವಹತ್ ॥೨೨॥ ಗಂಧರ್ವರಾಜಸ್ಯಸುತಾಂಶೈಲೂಷಸ್ಯಮಹಾತ್ಮನಃ। ಸರ
ಮಾಂನಾಮಧರ್ಮಜ್ಞಾಂಲೇಭೇಭಾರ್ಯಾಂವಿಭೀಷಣಃ ॥೨೩॥ ತೀರೇತುಸರಸಸ್ಸಾತುಸಂಜಜ್ಞೇಮಾನಸಸ್ಯವೈ ।ಮಾನಸಂಚ
ಸರಸ್ತಾತವವೃಧೇಜಲದಾಗಮೇ ॥೨೪। ಮಾತ್ರಾತುತಸ್ಯಾಃಕನ್ಯಾಯಾಃಸ್ನೇಹೇನಾಕ್ರಂದಿತಂವಚಃ ॥ ಸರೋಮಾವರ್ಧಯ

---

ಸಲ್ಪಟ್ಟ, ಮಮಾತ್ಮಜಾ–ನನ್ನ ಮಗಳಾದ, ಮಂಡೋದರೀನಾಮ–ಮಂಡೋದರಿಯೆಂದು ಪ್ರಸಿದ್ಧಳಾದ, ಇಯಂಕನ್ಯಾ–ಈ ಕನ್ಯೆಕೆಯು, ಪತ್ನ್ಯರ್ಥಂ–ಹೆಂಡತಿಗೋಸ್ಕರ, ಪ್ರತಿಗೃಹ್ಯತಾಂ–ಸ್ವೀಕರಿಸಲ್ಪಡಲಿ ॥೧೭॥ ಹೇರಾಮ– ಎಲೈ ಶ್ರೀರಾಮನೆ, ದಶಗ್ರೀವಃ–ರಾವಣನು, ಬಾಢಮಿತ್ಯೇವ, ಹಾಗೆ ಆಗಬಹುದೆಂದು, ತಂ–ಆಮಯನನ್ನು ಕುರಿತು, ಅಭ್ಯಭಾಷತ–ಹೇಳಿದನು, ತತ್ರೈವ–ಅದೇ ಎಡದಲ್ಲಿಯೆ, ಅಗ್ನಿಂಚ–ಅಗ್ನಿಯನ್ನು ಕೂಡ, ಪ್ರಜ್ವಾಲ್ಯ–ಉರಿಸಿ, ಪಾಣಿಸಂಗ್ರಹಂ–ಪಾಣಿಗ್ರಹಣವನ್ನು, ಅಕರೋತ್–ಮಾಡಿದನು ॥೧೮॥ಹೇರಾಮ–ಎಲೈ ಶ್ರೀರಾಮನೆ, ಮಯಃ–ಮಯನು, ತಪೋಧನಾತ್–ವಿಶ್ರವಸ್ಸಿನ ದೆಶೆಯಿಂದ, ತಸ್ಯ–ಆ ರಾವಣನಿಗೆ ಬಂದಿರುವ, ಶಾಪಾಭಿಜ್ಞಃ–ಶಾಪವನ್ನರಿತವನು, ನಹಿ–ಅಲ್ಲ, ತಸ್ಯ–ಆ ರಾವಣನ, ಪೈತಾಮಹಂ–ಪಿತಾಮಹ ಸಂಬಂಧಿಯಾದ, ಕುಲಂ–ವಂಶವನ್ನು, ವಿದಿತ್ವಾ–ಅರಿತು, ತೇನ–ಆ ಮಯನಿಂದ, ಸಾ–ಆ ಕನ್ಯಕೆಯು, ದತ್ತಾ–ಕೊಡಲ್ಪಟ್ಟಳು ॥೧೯॥ ಯಯಾ–ಯಾವಶಕ್ತಿಯಿಂದ, ಲಕ್ಷ್ಮಣಂ–ಲಕ್ಷ್ಮಣನನ್ನು, ಜಘ್ನಿವಾ೯–ಹೊಡೆದನೋ, ಪರೇಣ–ಶ್ರೇಷ್ಠವಾದ, ತಪಸಾ–ತಪಸ್ಸಿನಿಂದ, ಲಬ್ಧಾಂ–ಪಡೆದ, ಪರಮಾದ್ಭುತಾಂ– ಮಹದಾಶ್ಚರ್ಯಕರವಾದ, ಅಮೋಘಾಂ–ವ್ಯರ್ಥವಾಗದಿರುವ, ಶಕ್ತಿಂಚ–ಶಕ್ತಿಯನ್ನೂ ಸಹ, ತಸ್ಯ–ಆರಾವಣನಿಗೆ,ಪ್ರದದೌ–ಕೊಟ್ಟನು॥ಏವಂ–ಈಪ್ರಕಾರವಾಗಿ, ಸ್ವೀಕೃತದಾರಃ–ಪರಿಗ್ರಹಿಸಲ್ಪಟ್ಟ ಹೆಂಡತಿಯುಳ್ಳ,ಲಂಕಾಯಾಃ–ಲಂಕಾಪಟ್ಟಣದ,ಈಶ್ವರಃ–ಒಡೆಯನಾದ,ಪ್ರಭುರ್ವೈ–ಸಮರ್ಥನಾದರಾವಣನಾದರೆ,ಲಂಕಾನಗರೀಂತು–ಲಂಕಾಪಟ್ಟಣವನ್ನು ಕುರಿತು, ಗತ್ವಾ–ಹೋಗಿ, ಭ್ರಾತೃಭ್ಯಾಂ–ತಮ್ಮಂದಿರಿಂದ, ಸಹಿತಃ–ಯುಕ್ತನಾಗಿ, ಅವಸತ್–ಇದ್ದನು ॥೨೧॥ ಕಿಂತು–ಮತ್ತೇನೆಂದರೆ, ರಾವಣಃ–ರಾವಣನು, ವೈರೋಚನಸ್ಯ–ವೈರೋಚನನ, ದೌಹಿತ್ರೀಂ–ಮೊಮ್ಮಗಳಾದ, ನಾಮತಃ–ಹೆಸರಿನಿಂದ, ವಜ್ರಜ್ವಾಲಾಂ– ವಜ್ರಜ್ವಾಲೆಯೆಂಬ, ತಾಂ–ಆ ಕನ್ಯಕೆಯನ್ನು, ಕುಂಭಕರ್ಣಸ್ಯ–ಕುಂಭಕರ್ಣನ, ಭಾರ್ಯಾಂ–ಹೆಂಡತಿಯನ್ನಾಗಿ, ಸಮುದಾವಹತ್–ವಹಿಸಿದನು ॥೨೨॥ ಗಂಧರ್ವರಾಜಸ್ಯ–ಗಂಧರ್ವರಾಜನಾದ, ಮಹಾತ್ಮನಃ–ಮಹಾನುಭಾವನಾದ, ಶೈಲೂಷಸ್ಯ–ಶೈಲೂಷನೆಂಬವನ, ಸುತಾಂ–ಮಗಳಾದ, ಧರ್ಮಜ್ಞಾಂ–ಧರ್ಮವನ್ನರಿತಿರುವ, ಸರಮಾಂನಾಮ–ಸರಮೆ ಯೆಂದು ಪ್ರಖ್ಯಾತಳಾದ,ಭಾರ್ಯಾಂ–ಹೆಂಡತಿಯನ್ನು, ವಿಭೀಷಣಃ–ವಿಭೀಷಣನು,ಲೇಭೇ–ಹೊಂದಿದನು॥೨೩॥ಹೇತಾತ–ಎಲೈ ಶ್ರೀರಾಮನೆ, ಸಾತು–ಆ ಸರಮೆಯಾದರೆ, ಮಾನಸಸ್ಯ–ಮಾನಸವೆಂಬ, ಸರಸಃ–ಸರೋವರದ, ತೀರೇತು–ದಡದಲ್ಲಿ ಆದರೆ,ಜಜ್ಞೇ–ಹುಟ್ಟಿದಳು, ಮಾನಸಂಸರಶ್ಚ–ಮಾನಸಸರೋವರವನ್ನು, ಜಲದಾಗಮೇ–ವರ್ಷಾಕಾಲದಲ್ಲಿ, ವವೃಧೇ–ವೃದ್ಧಿಹೊಂದಿತು ॥೨೪॥ ತಸ್ಯಾಃ ಕನ್ಯಾಯಾಃ–ಆ ಹೆಣ್ಣುಮಗಳ, ಮಾತ್ರಾತು–ತಾಯಿಂದಲಾದರೆ, ಹೇಸರಃ–ಎಲೈ ಸರಸ್ಸೆ, ಮಾವರ್ಧಯಸ್ವೇತಿ–ವೃದ್ಧಿಹೊಂದಬ್ಯಾಡೆಂದು, ಸ್ನೇಹೇನ–ವಿಶ್ವಾಸದಿಂದ,ವಚಃ–ಮಾತು, ಆಕ್ರಂದಿತಂ–ಕೂಗೆಲ್ಪ

---

ಎಂದು ನುಡಿಯಲ್ಪಟ್ಟ ಆ ರಾವಣನು ಹಾಗೆ ಆಗಬಹುದೆಂದು ಸಮ್ಮತಿಸಿದವನಾಗಿ, ಅಲ್ಲಿಯೆ ಅಗ್ನಿಯನ್ನು ಪ್ರಜ್ವಲಿಸಿ ಪಾಣಿಗ್ರಹಣವಂ ಗೈದನು ॥೧೮॥ ಎಲೈ ರಘುವೀರನೆ!ಆ ಮಯನು, ತಂದೆಯಿಂದ ಪ್ರಾಪ್ತವಾದ ಆ ರಾವಣನ ಶಾಪವನ್ನರಿಯದೆ, ಆತನ ಪಿತಾಮಹನ ಕುಲವಂ ತಿಳಿದವನಾಗಿ ಆಸುಂದರಿಯಾದಮಂಡೋದರಿಯನ್ನು ಕೊಟ್ಟನು॥೧೯॥ಮತ್ತು ಯಾವ ಶಕ್ತ್ಯಾಯುಧದಿಂದ ರಾವಣನು ಲಕ್ಷ್ಮಣನನ್ನು ಹೊಡದನೋ,ಮಹಾ ತಪಸ್ಸಿನಿಂದ ಪ್ರಾಪ್ತವಾದ ಅಮೋಘವಾದ ಮತ್ತು ಮಹದಾಶ್ಚರ್ಯ ಕರವಾದ ಆ ಶಕ್ತಿಯನ್ನು ಸಹ ಕೊಟ್ಟವನಾದನು॥೨೦॥ಈ ಪರಿಯಾಗಿ ಪರಿಗ್ರಹಿಸಲ್ಪಟ್ಟ ಭಾರ್ಯೆಯುಳ್ಳ ಲಂಕೇಶ್ವರನಾದ ರಾವಣನು ಲಂಕಾಪುರಿಗೆ ಪೋಗಿ ತಮ್ಮಂದಿರೊಡನೆ ಸುಖವಾಗಿದ್ದನು।೨೧॥ ಬಳಿಕಾ ರಾವಣನಾದರೆ ವೈರೋಚನನ ಮೊಮ್ಮಗಳಾದ ವಜ್ರಜ್ವಾಲೆಯೆಂಬ ಕನ್ಯಕೆಯನ್ನು ಕುಂಭಕರ್ಣನಿಗೆವಿವಾಹವಂಗೈದನು ॥೨೨॥ ಸಮನಂತರ ಕಾಲದೋಳ್ ಆ ವಿಭೀಷಣನು ಮಹಾತ್ಮನಾದ ಶೈಲೂಷನೆಂಬ ಗಂಧರ್ವ ರಾಜನ ಪುತ್ರಿಯಾದ ಸರಮಾ ಯೆಂದು ಪ್ರಸಿದ್ಧಳಾದ ಕಡು ಧರ್ಮವತಿಯಾದ ಹೆಂಡತಿಯನ್ನು ಪಡದನು॥೨೩॥ ಎಲೈ ಶ್ರೀರಾಮನೇ ಕೇಳು! ಆ ಬಾಲೆಯು ಮಾನಸ ಸರೋವರದ ದಡದಲ್ಲಿಯೇ ಹುಟ್ಟಿದಳು,ಆ ವರ್ಷಾಕಾಲದಲ್ಲಿ ಆ ಮಾನಸ ಸರೋವರವೂ ಕೂಡ ಉಕ್ಕಿ ಬರುತಿತ್ತು, ಆ ಸಮಯದಲ್ಲಿ ಆ ಕನ್ಯಕೆಯ ತಾಯಿಯು ಪುತ್ರಿಕಾಸ್ನೇಹದಿಂದ (ಸರೋಮಾವರ್ಧಯಸ್ವೇತಿ ) ಎಲೈ ಸರಸ್ಸೆ! ವೃದ್ಧಿ ಹೊಂದಬ್ಯಾಡೆಂದು ಕೂಗಿದಳಾದ್ದ ಕಾರಣ ಸರಮೆಯೆಂಬ ಪೆಸರಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ವೈತಿತತಸ್ಸಾಸರಮಾಭವತ ॥೧೫॥ ಏವಂತೇಕೃತದಾರಾವೈರಮಿರೆತತ್ರರಾಕ್ಷಸಾಃ । ಸ್ವಾಂಸ್ವಾಂಭಾರ್ಯಾಮುಪಾಗಮ್ಯ ಗಂಧರ್ವಾಇವನಂದನೆ ॥೧೬॥ ತತೋಮಂಡೋದರೀಪುತ್ರಂಮೇಘನಾದಮಸೂಯತ । ಸಏಷಇಂದ್ರಜಿನ್ನಾಮಯುಷ್ಮಾಭಿರಭಿಧೀಯತೇ ॥೧೭॥ ಜಾತಮಾತ್ರೇಣಹಿಪುರಾತೇನರಾಕ್ಷಸಸೂನುನಾ । ರುದತಾಸುಮಹಾರ್ನಮುಕ್ತೋನಾದೋಜಲಧರೋಪಮಃ ॥೧೮॥ ಜಡೀಕೃತಾಚಲಂಕೆಯಂತೇನನಾದೇನತಸ್ಯವೈ । ಪಿತಾತಸ್ಯಾಕರೋನ್ನಾಮಮೇಘನಾದಇತಿಸ್ವಯಮ್॥ ಸೋವರ್ಧತತದಾರಾಮರಾವಣಾಂತಃಪುರೇಶುಭೆ । ರಕ್ಷ್ಯಮಾಣೋವರಸ್ತ್ರೀಭಿಃಛನ್ನಃಕಾಷ್ಠೈರಿವಾನಲಃ ॥೨೦॥

—…*ಶ್ರೀಮದುತ್ತರರಾಮಾಯಣೇ ದ್ವಾದಶಸ್ಸರ್ಗಃ.*…—

ಅಥಲೋಕೇಶ್ವರೋತ್ಸೃಷ್ಟಾತತ್ರಕಾಲೇನಕೇನಚಿತ।ನಿದ್ರಾಸಮಭವತ್ತೂರ್ಣಂಕುಂಭಕರ್ಣಸ್ಯರೂಪಿಣೀ॥೧॥ ತತೋಭ್ರಾತರಮಾಸೀನಂಕುಂಭಕರ್ಣೋಬ್ರವೀದ್ವಚಃ । ನಿದ್ರಾಮಾಂಬಾಧತೇರಾಜನ್ ಕಾರಯಸ್ವಮಮಾಲಯಮ್॥೨॥ ವಿನಿ

---

ಟ್ಟಿತು, ತತಃ–ಆ ಕಾರಣದ ದೆಸೆಯಿಂದ, ಸಾ–ಆ ಕನ್ಯಕೆಯು, ಸರಮಾ–ಸರಮೆಯೆಂಬವಳು, ಅಭವತ್–ಆದಳು ॥ ೧೫ ॥ ಏವಂ–ಈ ಪರಿಯಾಗಿ, ಕೃತದಾರಾಃ–ಮಾಡಿಕೊಳ್ಳಲ್ಪಟ್ಟ ಹೆಂಡತಿಗಳುಳ್ಳ, ತೇರಾಕ್ಷಸಾಃ–ಆ ರಾಕ್ಷಸರು, ತತ್ರ–ಆ ಲಂಕಾಪುರದಲ್ಲಿ, ಸ್ವಾಂಸ್ವಾಂಭಾರ್ಯಾಂ–ತಮ್ಮತಮ್ಮ ಹೆಂಡತಿಯನ್ನು, ಉಪಾಗಮ್ಯ–ಹೊಂದಿ, ನಂದನೆ–ನಂದನವನದಲ್ಲಿ, ಗಂಧರ್ವಾಇವ–ಗಂಧರ್ವರಂತೆ, ರೆಮಿರೆ–ವಿಹರಿಸುತ್ತಿದ್ದರು॥೧೬॥ತತಃ–ಬಳಿಕ–ಮಂಡೋದರೀ–ಮಂಡೋದರಿಯು, ಮೇಘನಾದಂ–ಮೇಘನಾದನೆಂಬ, ಪುತ್ರಂ–ಮಗನನ್ನು, ಅಸೂಯತ–ಹೆತ್ತಳು, ಸಏಷಃ–ಆ ಕುಮಾರನು, ಇಂದ್ರಜಿನ್ನಾಮ–ಇಂದ್ರಜಿತುವೆಂದು ಪ್ರಸಿದ್ಧನಾಗಿ, ಯುಷ್ಮಾಭಿಃ–ನಿಮ್ಮಿಂದ, ಅಭಿಧೀಯತೇ–ತಿಳಿಯಲ್ಪಟ್ಟನು ॥ ೧೭॥ಪುರಾ–ಪೂರ್ವದಲ್ಲಿ, ಜಾತಮಾತ್ರೇಣ–ಹುಟ್ಟೋಣ ಮಟ್ಟಿಗೆಯುಳ್ಳ, ರಾಕ್ಷಸಸೂನುನಾ–ರಾಕ್ಷಸಪುತ್ರನಾದ, ರುದತಾ–ಅಳುತಿರುವ, ತೇನ–ಆ ಶಿಶುವಿನಿಂದ, ಜಲಧರೋಪಮಃ–ಮೇಘಸದೃಶವಾದ, ಸುಮಹಾನ್–ಮಹತ್ತರವಾದ, ನಾದಃ–ಧ್ವನಿಯು, ಮುಕ್ತಃ–ಬಿಡಲ್ಪಟ್ಟಿತು ॥ ೧೮ ॥ ಇಯಂಲಂಕಾಚ–ಈ ಲಂಕಾಪಟ್ಟಣವೂ ಸಹ, ತಸ್ಯ–ಆಕೂಸಿನ, ತೇನನಾದೇನವೈ–ಆ ಧ್ವನಿಯಿಂದಲೆ, ಜಡೀಕೃತಾ–ಸ್ತಬ್ಧವಾಗಿ ಮಾಡಲ್ಪಟ್ಟಿತು, ತಸ್ಯಪಿತಾ–ಆ ಬಾಲಕನ ತಂದೆಯೂಕೂಡ, ಸ್ವಯಂ–ತಾನು, ಮೇಘನಾದಇತಿ–ಮೇಘನಾದನೆಂದು, ನಾಮ–ಹೆಸರನ್ನು, ಅಕರೋತ್–ಮಾಡಿದನು ॥ ೧೯ ॥ ಹೇರಾಮ–ಎಲೈ ಶ್ರೀರಾಮನೆ, ತದಾ–ಆಕಾಲದಲ್ಲಿ, ಸಃ–ಆಮೇಘನಾದನು, ಶುಭೆ–ಶುಭಕರವಾದ, ರಾವಣಾಂತಃಪುರೆ–ರಾವಣನರಾಣಿ ವಾಸಸ್ಥಳದಲ್ಲಿ, ವರಸ್ತ್ರೀಭಿಃ–ಉತ್ತಮರಾದ ಸ್ತ್ರೀಯರಿಂದ, ರಕ್ಷ್ಯಮಾಣಃ–ರಕ್ಷಿಸಲ್ಪಟ್ಟವನಾಗಿ, ಕಾಷ್ಠೈಃ–ಕಟ್ಟಿಗೆಗಳಿಂದ, ಛನ್ನಃ–ಮುಚ್ಚಾಡಿಸಲ್ಪಟ್ಟ, ಅನಲಇವ–ಅಗ್ನಿಯಂತೆ–ಅವರ್ಧತ–ಬೆಳೆದನು ॥ ೨೦ ॥

—…ಇತಿ ಶ್ರೀಮದುತ್ತರ ರಾಮಾಯಣೇ ದ್ವಾದಶಸ್ಸರ್ಗಃ.…—

ಟೀ॥ ಅಥ–ಬಳಿಕ–ತತ್ರ–ಆಲಂಕಾಪಟ್ಟಣದಲ್ಲಿ, ಕೇನಚಿತ್ಕಾಲೇನ–ಒಂದಾನೊಂದು ಕಾಲದಲ್ಲಿ, ಲೋಕೇಶ್ವರೋತ್ಸೃಷ್ಟಾ–ಬ್ರಹ್ಮನಿಂದ ಬಿಡಲ್ಪಟ್ಟ, ರೂಪಿಣೀ–ರೂಪವುಳ್ಳ, ನಿದ್ರಾ–ನಿದ್ರೆಯು, ತೂರ್ಣಂ–ಜಾಗ್ರತೆಯಾಗಿ, ಕುಂಭಕರ್ಣಸ್ಯ–ಕುಂಭಕರ್ಣನಿಗೆ, ಅಭವತ್–ಆಯಿತು ॥೧॥ ತತಃ–ಬಳಿಕ, ಕುಂಭಕರ್ಣಃ–ಕುಂಭಕರ್ಣನು, ಆಸೀನಂ–ಕುಳಿತುಕೊಂಡಿರುವ, ಭ್ರಾತರಂ–ಅಣ್ಣನನ್ನು ಕುರಿತು, ಹೇರಾಜನ್–ಎಲೈ ಪ್ರಭುವೆ, ನಿದ್ರಾ–ನಿದ್ದೆಯು, ಮಾಂ–ನನ್ನನ್ನು, ಬಾಧತೆ–ಪೀಡಿಸುತ್ತಿದೆ, ಮಮ–ನನಗೆ, ಆಲಯಂ–ಮನೆಯನ್ನು, ಕಾರಯಸ್ವೇತಿ–ಮಾಡಿಸೆಂದು, ವಚಃ–ಮಾತನ್ನು, ಅಬ್ರವೀತ್–ನುಡಿದನು॥೨॥ತತಃ–

---

ಟಾಯಿತು ॥೧೫॥ ಈಪರಿಯಾಗಿ ವಿವಾಹಿತರಾದ ಆ ರಾವಣ ಕುಂಭಕರ್ಣ ವಿಭೀಷಣರೆಂಬ ಮೂರು ಮಂದಿ ರಾಕ್ಷಸರು ತಮ್ಮತಮ್ಮ ಹೆಂಡತಿಯಂ ಪಡದು ಗಂಧರ್ವರು ನಂದನವನದಲ್ಲಿ ರಮಿಸುವ ತೆರದಿ ಆ ಪುರಿಯೊಳ್ ರಮಿಸುತ್ತಿರ್ದರು ॥೧೬॥ ಆಬಳಿಕ ಮಂಡೋದರಿಯು ಮೇಘ ನಾದನೆಂಬ ಪುತ್ರನನ್ನು ಹೆತ್ತಳು ಅವನು ಇಂದ್ರಜಿತುವೆಂದುನಿಮ್ಮಿಂದ ತಿಳಿಯಲ್ಪಟ್ಟಿರುವನಷ್ಟೆ ॥೧೭॥ಪೂರ್ವದಲ್ಲಿ ಹುಟ್ಟೋಣ ಮಾತ್ರವಾದ ಆ ರಾಕ್ಷಸ ಪುತ್ರನು ಅಳುತಿರುವನಾಗಿ ಮೇಘಕ್ಕೆ ಸಮಾನವಾದ ನಾದವನ್ನು ಮಾಡಿದನು॥೧೮॥ ಆ ಶಿಶುವಿನ ನಾದ ದಿಂದಲೆ ಲಂಕಾಪುರವೆಲ್ಲ ಜಡೀಕೃತವಾಯಿತು ಆದಕಾರಣ ಆತನ ತಂದೆಯು ಮೇಘ ನಾದನೆಂಬ ಪೆಸರಿಟ್ಟನು ॥೧೯॥ಆ ಕಾಲದಲ್ಲಿ ಆ ಕುಮಾರನು ರಾವಣನರಾಣಿವಾಸಸ್ಥಳದಲ್ಲಿ ರಾಕ್ಷಸ ಸ್ತ್ರೀಯರಿಂದ ರಕ್ಷಿಸಲ್ಪಡುತಿರುವನಾಗಿ, ಅಗ್ನಿಯು ಕಾಷ್ಠಗಳಿಂದ ವೃದ್ಧಿಹೊಂದುವ ತೆರದಿ ಅಭಿವರ್ಧಿತನಾದನು ॥೨೦॥

—…*ದ್ವಾದಶಸರ್ಗಂ ಮುಗಿದುದು.*…—

ಆ ಬಳಿಕ ಒಂದಾನೊಂದು ಸಮಯದಲ್ಲಿ, ಜಗತ್ಸೃಷ್ಟಿ ಕರ್ತನಾದ ಸಾಕ್ಷಾತ್ ಬ್ರಹ್ಮನಿಂದ ಉತ್ಸೃಷ್ಟವಾದ ನಿದ್ರಾವಿಕಾರವಾದ ಶಕ್ತಿಯು, ಕಡುಜಾಗ್ರತೆಯಾಗಿ ಕುಂಭಕರ್ಣನಿ ಗಾವರಿಸಿತು ॥೧॥ ಬಳಿಕಾ ಕುಂಭಕರ್ಣನು ತನ್ನ ಬಳಿಯಲ್ಲಿ ಕುಳಿತಿರುವ ಭ್ರಾತನಾದ ರಾವಣನಂ ಕುರಿತಿಂತೆಂದನು, ಎಲೈರಾಕ್ಷಸರಾಜನೆ!ನಿದ್ದೆಯು ನನ್ನಂಬಾಧಿಸುತಿದೆ ಆದಕಾರಣ ನನಗೆ ಮನೆಯನ್ನು ಮಾಡಿಸಿಕೊಡೆನಲು ॥೨॥ಬಳಿಕ ರಾವಣನು ಬಡಿಗೆಕೆಲಸಗಾರರಂ ಕರೆಕಳುಹಿಸಿಆಜ್ಞಾಪಿಸಲುಅವರುಕೈಲಾಸದಂತಿರುವ ಮನೆಯನ್ನು ವಿಶ್ವಕರ್ಮನು ನಿರ್ಮಿಸುವಂತೆ ಕುಂಭಕರ್ಣನಿಗಾಗಿ ನಿರ್ಮಿಸಿದರು ॥ಆಮಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯುಕ್ತಾಸ್ತತೋರಾಜ್ಞಾ ಶಿಲ್ಪಿನೋವಿಶ್ವಕರ್ಮವತ್ । ಅಕುರ್ವನ್ ಕುಂಭಕರ್ಣಸ್ಯ ಕೈಲಾಸಸಮಮಾಲಯಮ್ ॥೩॥ ವಿಸ್ತೀರ್ಣಂಯೋಜನಂಶುಭ್ರಂತತೋದ್ವಿಗುಣಮಾಯತಮ್ । ದರ್ಶನೀಯಂನಿರಾಬಾಧಂಕುಂಭಕರ್ಣಸ್ಯ ಚಕ್ರಿರೆ ॥೪॥ ಕಾಂಚನೈಸ್ಸ್ಫಾಟಿಕೈಶ್ಚಿತ್ರೈಃಸ್ತಂಭೈಸ್ಸರ್ವತ್ರಭೂಷಿತಮ್ । ವೈಡೂರ್ಯಕೃತಶೋಭಂಚಕಿಂಕಿಣೀಜಾಲಕಂತಥಾ ॥೫॥ ದಾಂತತೋರಣವಿನ್ಯಸ್ತಂವಜ್ರಸ್ಫಟಿಕವೇದಿಕಂ । ಮನೋಹರಂಸರ್ವಸುಖಂಕಾರಯಾಮಾಸರಾವಣಃ ॥ ೬ ॥ ಸರ್ವರ್ತುಸುಖದಂನಿತ್ಯಂಮೇರೋಃಪುಣ್ಯಾಂಗುಹಾಮಿವ ॥ ೭ ॥ ತತ್ರನಿದ್ರಾಸಮಾವಿಷ್ಟಃಕುಂಭಕರ್ಣೋನಿಶಾಚರಃ । ಬಹೂನ್ಯಬ್ದಸಹಸ್ರಾಣಿಶಯಾನೋನಪ್ರಬುಧ್ಯತೆ ॥೮॥ ನಿದ್ರಾಭಿಭೂತೇತುತದಾಕುಂಭಕರ್ಣೆದಶಾನನಃ। ದೇವರ್ಷಿಯಕ್ಷಗಂಧರ್ವಾನ್ ಹ ಬಾಧತೆಸ್ಮ ಸನಿತ್ಯಶಃ ॥೯॥ ಉದ್ಯಾನಾನಿವಿಚಿತ್ರಾಣಿನಂದನಾದೀನಿಯಾನಿವೈ । ತಾನಿಗತ್ವಾಸುಸಂಕ್ರುದ್ಧೋಹಿನಸ್ತಿಸ್ಮದಶಾನನಃ ॥೧೦॥ ನದೀರ್ಗಜಇವಕ್ರೀಡನ್ ವೃಕ್ಷಾನ್ ವಾಯುರಿವಕ್ಷಿಪನ್ । ನಗಾನ್ ವಜ್ರಇವೋತ್ಸೃಷ್ಟೋ ವಿಧ್ವಂಸಯತಿನಿತ್ಯಶಃ ॥೧೧॥ ತಥಾವೃತ್ತಂತುವಿಜ್ಞಾಯದಶಗ್ರೀವಂಧನೇಶ್ವರಃ । ಕುಲಾನುರೂಪಂಧರ್ಮಜ್ಞೋವೃತ್ತಂಸಂಸ್ಮೃತ್ಯಚಾತ್ಮ

ಬಳಿಕ, ರಾಜ್ಞಾ–ಅರಸಿಂದ, ವಿನಿಯುಕ್ತಾಃ–ಆಜ್ಞಾಪಿಸಲ್ಪಟ್ಟ, ಶಿಲ್ಪಿನಃ–ಬಡಿಗೀ ಕೆಲಸಗಾರರು,ವಿಶ್ವಕರ್ಮವತ್– ವಿಶ್ವಕರ್ಮನಂತೆ,ಕುಂಭಕರ್ಣಸ್ಯ–ಕುಂಭಕರ್ಣನಿಗೆ, ಕೈಲಾಸಸಮಂ–ಕೈಲಾಸಪರ್ವತಕ್ಕೆ ಸಮಾನವಾದ, ಆಲಯಂ–ಮನೆಯನ್ನು, ಅಕುರ್ವನ್– ಮಾಡಿದರು॥೩॥ಯೋಜನಂ–ಗಾವುದಪರಿಮಿತವಾದ, ವಿಸ್ತೀರ್ಣಂ–ಅಗಲವುಳ್ಳ, ತತಃ–ಅದಕ್ಕಿಂತಲು, ದ್ವಿಗುಣಂ–ಯರಡೆರಷ್ಟು, ಆಯತಂ–ದೀರ್ಘವಾದ, ಶುಭ್ರಂ–ಬೆಳ್ಳಗಿರುವ, ದರ್ಶನೀಯಂ– ನೋಡತಕ್ಕ, ನಿರಾಬಾಧಂ–ಬಾಧೆಗಳಲ್ಲದಿರುವ ಮನೆಯನ್ನು, ಕುಂಭಕರ್ಣಸ್ಯ–ಕುಂಭಕರ್ಣನಿಗೆ, ಚಕ್ರಿರೆ–ಮಾಡಿದರು ॥೪॥ ಕಾಂಚನೈಃ–ಭಂಗಾರವಿಕಾರವಾದ, ಸ್ಫಾಟಿಕೈಃ–ಸ್ಫಟಿಕಮಣಿಮಯವಾದ, ಚಿತ್ರೈಃ–ನಾನಾಬಣ್ಣಗಳುಳ್ಳ, ಸ್ತಂಭೈಃ–ಕಂಭಗಳಿಂದ, ಸರ್ವತ್ರ–ಸರ್ವಪ್ರದೇಶಗಳಲ್ಲಿ, ಭೂಷಿತಂ–ಅಲಂಕೃತವಾದ, ವೈಡೂರ್ಯಕೃತಶೋಭಂ–ವೈಡೂರ್ಯಮಣಿಗಳಿಂದ ಮಾಡಲ್ಪಟ್ಟ ಪ್ರಕಾಶೆಯುಳ್ಳ, ತಥಾ–ಹಾಗೆ, ಕಿಂಕಿಣೀಜಾಲಕಂ–ಕಿರುಗೆಜ್ಜೆಗಳ ತಂಡೆಗಳುಳ್ಳ, ದಾಂತತೋರಣವಿನ್ಯಸ್ತಂ–ದಂತವಿಕಾರವಾದ ತೋರಣಗಳ ವಿನ್ಯಾಸವುಳ್ಳ,ವಜ್ರಸ್ಫಟಿಕವೇದಿಕಂ–ವಜ್ರ–ವಜ್ರಗಳ, ಸ್ಫಟಿಕ–ಸ್ಫಟಿಕಗಳ,ವೇದಿಕಂ– ಜಗಲಿಗಳುಳ್ಳ,ಮನೋಹರಂ ಮನೋಹಾರಿಯಾದ, ಸರ್ವಸುಖಂ–ಅತಿಸೌಖ್ಯದಾಯಕವಾದ, ನಿತ್ಯಂ–ಸದಾಕಾಲದಲ್ಲಿಯು,ಸರ್ವರ್ತುಸುಖದಂ–ಸರ್ವರುತುಗಳಸುಖವಂಕೊಡುತಿರುವ,ಮೇರೋಃ–ಮೇರುಪರ್ವತದ, ಪುಣ್ಯಾಂ–ಪುಣ್ಯಕರವಾದ, ಗುಹಾಮಿವ–ಗುಹೆಯಂತಿರುವ ಮನೆಯನ್ನು, ರಾವಣಃ–ರಾವಣನು, ಕಾರಯಾಮಾಸ– ಮಾಡಿಸಿದನು ॥೭॥ ತತ್ರ–ಆ ಮನೆಯಲ್ಲಿ, ನಿದ್ರಾಸಮಾವಿಷ್ಟಃ–ನಿದ್ದೆಯಂಗೈಯ್ಯುತಿರುವ, ನಿಶಾಚರಃ–ರಾಕ್ಷಸನಾದ, ಕುಂಭಕರ್ಣಃ–ಕುಂಭಕರ್ಣನು, ಬಹೂನಿ–ಅನೇಕವಾದ, ಅಬ್ದಸಹಸ್ರಾಣಿ–ಸಹಸ್ರವರ್ಷಗಳು, ಶಯಾನಃ–ಮಲಗಿದವನಾಗಿ, ನಪ್ರಬುಧ್ಯತೆ–ಎಚ್ಚರಗೊಳಲಿಲ್ಲ ॥೮॥ ತದಾ–ಆ ಕಾಲದಲ್ಲಿ, ಕುಂಭಕರ್ಣೆತು–ಕುಂಭಕರ್ಣನಾದರೆ, ನಿದ್ರಾಭಿಭೂತೆಸತಿ–ನಿದ್ರೆಯಿಂದ ತಿರಸ್ಕರಿಸಲ್ಪಟ್ಟವನಾಗುತಿರಲೀಕಾಗಿ, ಸದಶಾನನಃ–ಆ ರಾವಣನು,ದೇವರ್ಷಿಯಕ್ಷಗಂಧರ್ವಾನ್–ದೇವತೆಗಳನ್ನು, ಋಷಿಗಳನ್ನು, ಯಕ್ಷರನ್ನು, ಗಂಧರ್ವರನ್ನೂ, ನಿತ್ಯಶಃ–ನಿರಂತರವು, ಬಾಧತೆಸ್ಮ–ಪೀಡಿಸಿದನು ॥೯॥ ವಿಚಿತ್ರಾಣಿ–ಆಶ್ಚರ್ಯಕರಂಗಳಾದ, ನಂದನಾದೀನಿ–ನಂದನವನವೇ ಮೊದಲಾಗುಳ್ಳ, ಉದ್ಯಾನಾನಿ–ಕ್ರೀಡಾವನಗಳು, ಯಾನಿ–ಯಾವವ್ವೋ, ತಾನಿ–ಅವ್ವಗಳನ್ನು ಕುರಿತು,ದಶಾನನಃ–ರಾವಣನು ಗತ್ವಾ–ಹೋಗಿ, ಸುಸಂಕ್ರುದ್ಧಃ–ಬಹಳ ಕೋಪಿಷ್ಠನಾಗಿ, ಹಿನಸ್ತಿಸ್ಮ–ಕತ್ತರಿಸಿದನಷ್ಟೆ॥ನದೀಃ–ನದಿಗಳನ್ನು,ಗಜಇವ–ಆನೆಯಂತೆ,ಕ್ರೀಡನ್–ವಿಹರಿಸು

ದಿರವು ಹಿಂದುಯೋಜನ ವಿಸ್ತಾರವುಳ್ಳದ್ದಾಗಿಯು,ಅದರ ದ್ವಿಗುಣವಾದದೈರ್ಘ್ಯವುಳ್ಳದ್ದಾಗಿಯು.ಶುಭ್ರವಾಗಿಯು, ನೇತ್ರಾನಂದ ಕರವಾಗಿಯು, ಬಾಧಾರಹಿತವಾಗಿಯು, ಮತ್ತು, ಸುವರ್ಣ ವಿಕಾರವಾಗಿಯು ಸ್ಫಟಿಕಮಣಿಮಯವ್ವಾಗಿಯು ಇರುವಕಾರಣ ಅತಿಚಿತ್ರವಾದ ಸ್ತಂಭಗಳಿಂದ ಸರ್ವಪ್ರದೇಶಗಳಲ್ಲಿಯು ಅಲಂಕರಿಸಲ್ಪಟ್ಟದ್ದಾಗಿಯು, ಹಾಗೆಯೆ ವೈಡೂರ್ಯಂಗಳಿಂದ ಮಾಡಲ್ಪಟ್ಟ ಪ್ರಕಾಶಯುಳ್ಳದ್ದಾಗಿಯು, ಕಿರುಘಂಟೆಗಳ ಗೊಂಚಲುಗಳುಳ್ಳದ್ದಾಗಿಯು, ದಂತ ವಿಕಾರಂಗಳಾದ ತೋರಣಗಳುಳ್ಳದ್ದಾಗಿಯು, ವಜ್ರಗಳಿಂದಲು ಸ್ಫಟಿಕಗಳಿಂದಲು ಮಾಡಲ್ಪಟ್ಟ ವೇದಿಕೆಗಳುಳ್ಳದ್ದಾಗಿಯು, ಮನೋಹಾರಿಯಾಗಿಯು, ಮೇರುಪರ್ವತದ ಗುಹೆಯೋಪಾದಿಯಲ್ಲಿ ಸರ್ವ ಸುಖಗಳುಳ್ಳದ್ದಾಗಿಯು,ರಾವಣಾಸುರನಿಂದ ಮಾಡಲ್ಪಟ್ಟಿತು ॥೭॥ ಆ ಸದನದಲ್ಲಿ ಮಲಗಿಕೊಂಡು ಸುಖನಿದ್ದೆಯಂ ಗೈಯ್ಯುತಿರುವ ಕುಂಭಕರ್ಣನು ಅನೇಕವರ್ಷ ಸಹಸ್ರಗಳಾದರು ಎಚ್ಚರ ಗೊಳ್ಳಲಿಲ್ಲ ॥೮॥ ಆ ಸಮಯದಲ್ಲಿ ದಶಕಂಠನು, ದೇವತೆಗಳನ್ನು, ಯಕ್ಷರನ್ನು, ಋಷಿಗಳನ್ನು, ಗಂಧರ್ವರನ್ನು ಸಹ ನಿರಂತರವು ಬಾಧಿಸುತ್ತಾ ಕಡುಕೋಪವುಳ್ಳವನಾಗಿ ನಂದನವನವೇ ಮುಂತಾದ ಉದ್ಯಾನವನಗಳಂ ಪೊಕ್ಕು ಭಂಜಿಸಲು, ಆನೆಯಂತೆ ನದಿಗಳಲ್ಲಿ ನುಗ್ಗುತ್ತಲು ವಾಯುವಿನತೆರದಿ ವೃಕ್ಷಂಗಳಂ ಕೀಳುತಲು, ವಜ್ರಾಯುಧದೋಪಾದಿಯಲ್ಲಿ ಬೆಟ್ಟಗಳನ್ನು ಭಂಜಿಸುತಲು, ನಿರಂತರವು ತಿರುಗುತಿದ್ದನು॥೧೧॥ಇಂಥಾ ದುರ್ವ್ಯಾಪಾರಿಯಾದ ಆ ರಾವಣನನ್ನು ಧರ್ಮಿಷ್ಠನಾದ ಆ ಧನೇಶ್ವರನು ಕೇಳಿದವನಾಗಿ, ಕುಲಕ್ಕೆ ಅನುರೂಪ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಃ ॥೧೨॥ ಸೌಭ್ರಾತ್ರದರ್ಶನಾರ್ಥಂತುದೂತಂವೈಶ್ರವಣಸ್ತದಾ । ಲಂಕಾಯಾಂಪ್ರೇಷಯಾಮಾಸದಶಗ್ರೀವಸ್ಯವೈಹಿತಮ್ ॥೧೩॥ ಸಗತ್ವಾನಗರೀಂಲಂಕಾಮಾಸಸಾದವಿಭೀಷಣಮ್ । ಮಾನಿತಸ್ತೇನಧರ್ಮೇಣಪೃಷ್ಟಶ್ಚಾಗಮನಂಪ್ರತಿ ॥೧೪॥ ಪೃಷ್ಟ್ವಾಚಕುಶಲಂರಾಜ್ಞೋಜ್ಞಾತೀನಪಿಚಬಾಂಧವಾನ್ । ಸಭಾಯಾಂದರ್ಶಯಾಮಾಸಸಮಾಸೀನಂದಶಾನನಮ್ ॥೧೫॥ ಸದೃಷ್ಟ್ವಾತತ್ರರಾಜಾನಂದೀಪ್ಯಮಾನಂಸ್ವತೇಜಸಾ । ಜಯೇನಚಾಭಿಸಂಪೂಜ್ಯತೂಷ್ಣೀಮಾಸೀನ್ಮುಹೂರ್ತಕಮ್ ॥೧೬॥ ಸತತ್ರೋತ್ತಮಪರ್ಯಂಕೇವರಾಸ್ತರಣಾವೃತೇ । ಉಪವಿಷ್ಟಂದಶಗ್ರೀವಂದೂತೋವಾಕ್ಯಮಥಾಬ್ರವೀತ್ ॥೧೭॥ ರಾಜನ್ ವದಾಮಿತೇಸರ್ವಂಭ್ರಾತಾತವಯದಬ್ರವೀತ್ । ಉಭಯೋಸ್ಸದೃಶಂಸೌಮ್ಯವೃತ್ತಸ್ಯಚಕುಲಸ್ಯಚ ॥೧೮॥ ಸಾಧುಪರ್ಯಾಪ್ತಮೇತಾವತ್ಕೃತಶ್ಚಾರಿತ್ರಸಂಗ್ರಹಃ । ಸಾಧುಧರ್ಮೇವ್ಯವಸ್ಥಾನಂ ಕ್ರಿಯತಾಂಯದಿಶಕ್ಯತೇ ॥೧೯॥ ದೃಷ್ಟಂಮೇನಂದನಂಭಗ್ನಮೃಷಯೋಮೇಹತಾಃಶ್ರುತಾಃ । ದೇವಾನಾಂತುಸಮುದ್ವೇಗಸ್ತ್ವನ್ನಿಮಿತ್ತಶ್ಶ್ರುತಶ್ಚಮೇ ॥೨೦॥ ನಿರಾಕೃತಶ್ಚಬ

---

ತಿರುವನಾಗಿ, ವೃಕ್ಷಾನ್-ಗಿಡಗಳನ್ನು, ವಾಯುರಿವ-ಘಾಳಿಯಂತೆ, ಕ್ಷಿಪನ್-ಎಸಯುತಿರುವನಾಗಿ,ನಗಾನ್-ಬೆಟ್ಟಗಳನ್ನು, ಉತ್ಸೃಷ್ಟಃ-ಬಿಡಲ್ಪಟ್ಟ,ವಜ್ರಇವ-ವಜ್ರಾಯುಧದಂತೆ, ನಿತ್ಯಶಃ-ಯಾವಾಗಲು, ವಿಧ್ವಂಸಯತಿ-ನಾಶಮಾಡುತಿದ್ದನು ॥೧೧॥ ತಥಾವೃತ್ತಂ-ಅಂಥ ಕೆಟ್ಟ ನಡತೆಯುಳ್ಳ, ದಶಗ್ರೀವಂ-ರಾವಣನನ್ನು, ವಿಜ್ಞಾಯ-ಅರಿತು, ಧನೇಶ್ವರಃ-ಕುಬೇರನು, ಧರ್ಮಜ್ಞಃ-ಧರ್ಮಿಷ್ಠನಾದ ಕಾರಣ, ಆತ್ಮನಃ-ತನ್ನ, ಕುಲಾನುರೂಪಂ- ಕುಲೋಚಿತವಾದ, ವೃತ್ತಂಚ-ನಡತೆಯನ್ನೂ ಕೂಡ, ಸಂಸ್ಮೃತ್ಯ-ಜ್ಞಾಪಿಸಿಕೊಂಡು ॥೧೨॥ತದಾ-ಆಕಾಲದಲ್ಲಿ,ವೈಶ್ರವಣಃ-ಕುಬೇರನು,ಸೌಭ್ರಾತ್ರದರ್ಶನಾರ್ಥಂ-ಒಳ್ಳೇ ಅಣ್ಣತಮ್ಮಂದಿರ ಸ್ವಭಾವವನ್ನು, ತೋರಿಸುವದಕ್ಕೋಸ್ಕರ, ಲಂಕಾಯಾಂ-ಲಂಕಾಪಟ್ಟಣದಲ್ಲಿ, ದಶಗ್ರೀವಸ್ಯ-ರಾವಣನಿಗೆ, ಹಿತಂ- ಹಿತಕರನಾದ, ದೂತಂ-ಭೃತ್ಯನನ್ನು, ಪ್ರೇಷಯಾಮಾಸ-ಕಳುಹಿಸಿದನು ॥೧೩॥ ಸಃ-ಆದೂತನು, ಲಂಕಾಂನಗರೀಂ-ಲಂಕಾಪಟ್ಟಣವನ್ನು ಕುರಿತು, ಗತ್ವಾ-ಹೋಗಿ, ವಿಭೀಷಣಂ-ವಿಭೀಷಣನನ್ನು, ಆಸಸಾದ-ಹೊಂದಿದನು ತೇನ- ಆ ವಿಭೀಷಣನಿಂದ, ಮಾನಿತಃ-ಬಹುಮಾನಿಸಲ್ಪಟ್ಟವನಾಗಿ, ಧರ್ಮೇಣ-ಧರ್ಮದಿಂದ, ಆಗಮನಂ ಪ್ರತಿ-ಬರುವಿಕೆಯನ್ನು ಕುರಿತು, ಪೃಷ್ಟಶ್ಚ - ಕೇಳಲ್ಪಟ್ಟನು॥೧೪॥ ರಾಜ್ಞಃ-ಅರಸಿನ, ಜ್ಞಾತೀನಪಿ-ಜ್ಞಾತಿಗಳನ್ನು, ಬಾಂಧವಾಂಶ್ಚ -ಬಂಧುಗಳನ್ನೂ ಸಹ ಕುರಿತು, ಕುಶಲಂ-ಕ್ಷೇಮವನ್ನು, ಪೃಷ್ಟ್ವಾಚ-ಕೇಳಿಯೂಕೂಡ, ಸಭಾಯಾಂ-ಸಭೆಯಲ್ಲಿ, ಸಮಾಸೀನಂ-ಕುಳಿತಿರುವ, ದಶಾನನಂ-ರಾವಣನನ್ನು, ದರ್ಶಯಾಮಾಸ-ತೋರಿಸಿದನು॥೧೫॥ ಸಃ-ಆ ದೂತನು,ತತ್ರ-ಆ ಸಭೆಯಲ್ಲಿ, ಸ್ವತೇಜಸಾ-ತನ್ನ ತೇಜಸ್ಸಿನಿಂದ,ದೀಪ್ಯಮಾನಂ-ಹೊಳೆಯುತಿರುವ, ರಾಜಾನಂ-ಅರಸನ್ನು, ದೃಷ್ಟ್ವಾ-ಕಂಡು,ಜಯೇನಚ-ಜಯಶಬ್ದದಿಂದಲು,ಅಭಿಸಂಪೂಜ್ಯ-ಪೂಜಿಸಿ,ಮುಹೂರ್ತಕಂ-ಸ್ವಲ್ಪ ಹೊತ್ತು,ತೂಷ್ಣೀಮಾಸೀತ್-ಸುಮ್ಮನಿದ್ದನು ॥೧೬॥ ಅಥ-ಬಳಿಕ, ಸದೂತಃ-ಆ ದೂತನು, ತತ್ರ-ಆ ಸಭೆಯಲ್ಲಿ, ವರಾಸ್ತರಣಾವೃತೇ-ಉತ್ತಮವಾದಹಾಸಿಗೆಗಳಿಂದ ವ್ಯಾಪ್ತವಾದ, ಉತ್ತಮಪರ್ಯಂಕೇ-ಶ್ರೇಷ್ಠವಾದ ಮಂಚದಲ್ಲಿ, ಉಪವಿಷ್ಟಂ-ಕುಳಿತುಕೊಂಡಿರುವ, ದಶಗ್ರೀವಂ-ರಾವಣನನ್ನು ಕುರಿತು-ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧೭॥ ಹೇರಾಜನ್-ಎಲೈ ಅರಸೆ, ತವಭ್ರಾತಾ-ನಿಮ್ಮಣ್ಣನು, ವೃತ್ತಸ್ಯಚ-ನಡತೆಗು, ಕುಲಸ್ಯಚ-ಕುಲಕ್ಕೂ ಕೂಡ, ಉಭಯೋಃ-ಎರಡಕ್ಕೂ, ಸದೃಶಂ-ಸಮಾನವಾದ, ಯತ್-ಯಾವ ಮಾತನ್ನು, ಅಬ್ರವೀತ್-ನುಡಿದನೋ, ಹೇ ಸೌಮ್ಯ-ಎಲೈ ಸೌಮ್ಯನೆ, ತೇ-ನಿನಗೆ, ತತ್ಸರ್ವಂ-ಅದನ್ನೆಲ್ಲ, ವದಾಮಿ-ಹೇಳುವೆನು ॥೧೮॥ ಏತಾವತ್-ಇಷ್ಟರವರಿಗೂ, ಚಾರಿತ್ರಸಂಗ್ರಹಃ-ನಡತೆಯಸಂಗ್ರಹವು,ಸಾಧು-ಚನ್ನಾಗಿ-ಕೃತಃ- ಮಾಡಲ್ಪಟ್ಟಿತು, ಪರ್ಯಾಪ್ತಂ-ಸಾಕು, ಶಕ್ಯತೇಯದಿ-ಸಾಧ್ಯವಾದರೆ, ಧರ್ಮೇ-ಧರ್ಮದಲ್ಲಿ, ಸಾಧು-ಚನ್ನಾಗಿ, ವ್ಯವಸ್ಥಾನಂ-ಇರುವಿಕೆಯು, ಕ್ರಿಯತಾಂ-ಮಾಡಲ್ಪಡಲಿ ॥೧೯॥ ಕಿಂತು-ಮತ್ತೇನೆಂದರೆ, ಭಗ್ನಂ-ಮುರಿಯಲ್ಪಟ್ಟ,ನಂದನಂ-ನಂದನವನವು, ಮೇ-ನನ್ನಿಂದ, ದೃಷ್ಟಂ-ನೋಡಲ್ಪಟ್ಟಿತು, ಹತಾಃ-ಸಂಹೃತರಾದ, ಋಷಯಃ-ಮುನಿಗಳು, ಮೇ-ನನ್ನಿಂದ, ಶ್ರುತಾಃ-ಕೇಳಲ್ಪಟ್ಟರು, ತ್ವನ್ನಿಮಿತ್ತಃ-ನಿನ್ನಿಂದುಂಟಾದ, ದೇವಾನಾಂ-ದೇವತೆಗಳ, ಸಮುದ್ವೇಗಃ -ಭೀತಿಯು ಕೂಡ ಮೇ-ನನ್ನಿಂದ, ಶ್ರುತಃ-ಕೇಳಲ್ಪಟ್ಟಿತು ॥೨೦॥ ಹೇರಾಕ್ಷಸಾಧಿಪ - ಎಲೈ ರಾಕ್ಷಸನಾಥನೆ, ಅಹಂ-ನಾನು, ಬಹುಶಃ-ಬಹುಬಗೆಯಾಗಿ, ತ್ವಯಾ-ನಿನ್ನಿಂದ,

---

ಮಾದ ತನ್ನ ಗುಣಗಳನ್ನು ಸಹ ಸ್ಮರಿಶಿಕೊಂಡವನಾಗಿ, ಆಕಾಲದೋಳ್ ಭ್ರಾತೃಸೌಹಾರ್ದನವನ್ನು ತೋರಿಸುವದಕ್ಕೋಸ್ಕರ ದೂತನನ್ನು ಲಂಕಾಧಿಪತಿಯಾದ ರಾವಣನ ಸಮೀಪಕ್ಕೆ ಕಳುಹಿಸಿದನು ॥೧೩॥ ಆ ದೂತನು ಲಂಕಾಪುರಿಗೆ ಬಂದವನಾಗಿ ಪ್ರಥಮತಃ ವಿಭೀಷಣನಂಕಂಡು ಆಗಮನ ಕಾರಣವನ್ನು ಸಹ ಕೇಳಲ್ಪಟ್ಟವನಾದನು ॥೧೪॥ ಬಳಿಕಾ ವಿಭೀಷಣನು ಒಡೆಯನಾದ ಕುಬೇರನನ್ನು ಜ್ಞಾತಿಗಳನ್ನು ಮತ್ತು ಬಂಧುಗಳನ್ನು ಸಹ ಕೇಳಿದವನಾಗಿ ಸಭೆಯಲ್ಲಿ ಕುಳಿತುಕೊಂಡಿರುವ ದಶಕಂಠನನ್ನು ತೋರಿಶಿದನು ॥೧೫॥ ಆ ಬಳಿಕ ದೂತನು ಆ ಸಭೆಯಲ್ಲಿ ಉತ್ತಮವಾದ ರತ್ನಕಂಬಳಿ ಯಿಂದೊಡಗೂಡಿದ ಮಂಚದಮೇಲೆ ಸುಖವಾಗಿ ಕುಳಿತುಕೊಂಡಿರುವ ಆ ದಶಗ್ರೀವನಂಕಂಡು ವಂದನೆಯುಂಗೈದು ಸ್ವಲ್ಪ ಕಾಲವು ತೂಷ್ಣೀಂಭೂತನಾಗಿದ್ದು ಅನಂತರದಲ್ಲಿಂತೆಂದನು॥೧೬॥ ಎಲೈ ಸೌಮ್ಯನಾದ ರಾಜನೆ! ತಂದೆತಾಯಿಗಳಿಗೂ ಕುಲಕ್ಕೂ ಸಹ ಸಮಾನವಾಗಿರುವ ಯಾವ ಕಾರ್ಯವನ್ನು ನಿಮ್ಮಣ್ಣನಾದ ಕುಬೇರನು ಹೇಳಿರುವನೋ ಅದನ್ನೆಲ್ಲ ಬಿನ್ನವಿಸುವೆನು ಕೇಳು ॥೧೮॥ ಎಲೈ ರಾವಣನೆ, ಒಳ್ಳೇನಡತೆಯನ್ನು ಸಂಪಾದಿಸಿದೆ, ಇದಿಷ್ಟೆಸಾಕು, ನಿನಗಸಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹುಶಸ್ತ್ವಯಾಹಂರಾಕ್ಷಸಾಧಿಪ । ಅಪರಾದ್ಧಾಹಿಬಾಲ್ಯಾಚ್ಚ ರಕ್ಷಣೀಯಾಃಸ್ವಬಾಂಧವಾಃ ॥೧೧॥ ಅಹಂತುಹಿಮವತ್ಪೃ ಷ್ಠಂಗತೋಧರ್ಮಮುಪಾಸಿತುಮ್ । ರೌದ್ರಂವ್ರತಂಸಮಾಸ್ಥಾಯನಿಯತೋನಿಯತೇಂದ್ರಿಯಃ ॥೧೨॥ ತತ್ರದೇವೋಮ ಯಾದೃಷ್ಟಸ್ಸಹದೇವ್ಯೋಮಯಾಪ್ರಭುಃ । ಸವ್ಯಂಚಕ್ಷುರ್ಮಯಾಚೈವತತ್ರದೇವ್ಯಾಂನಿಪಾತಿತಮ್ । ಕಾನ್ವಿಯಂಸ್ಯಾದಿ ತಿಶುಭಾನಖಲ್ವನ್ಯೇನಹೇತುನಾ । ರೂಪಂಹ್ಯನುಪಮಂಕೃತ್ವಾರುದ್ರಾಣೀತತ್ರಕ್ರೀಡತಿ ॥೧೪॥ ದೇವ್ಯಾದಿವ್ಯಪ್ರಭಾವೇನದ ಗ್ಧಂಸವ್ಯಂಮಮೇಕ್ಷಣಂ । ರೇಣುಧ್ವಸ್ತಮಿವಜ್ಯೋತಿಃಪಿಂಗಳತ್ವಮುಪಾಗಮತ ॥೧೫॥ ತತೋಹಮನ್ಯದ್ವಿಸ್ತೀರ್ಣಂಗ ತ್ವಾತಸ್ಯಗಿರೇಸ್ತಟಮ್ । ಪೂರ್ಣಂವರ್ಷಶತಾನ್ಯಷ್ಟೌಸಮವಾಪಂಮಹಾವ್ರತಮ್ ॥೧೬॥ ಸಮಾಪ್ತೇನಿಯಮೇತಸ್ಮಿನ್ ತತ್ರ ದೇವೋಮಹೇಶ್ವರಃ । ಪ್ರೀತಃಪ್ರೀತೇನಮನಸಾಪ್ರಾಹವಾಕ್ಯಮಿದಂಪ್ರಭುಃ ॥೧೭॥ ಪ್ರೀತೋಸ್ಮಿತವಧರ್ಮಜ್ಞ ತಪಸಾನೇ ನಸುವ್ರತ । ಮಯಾಚೈತದ್ವ್ರತಂಚೀರ್ಣಂತ್ವಯಾಚೈವಧನಾಧಿಪ ॥೧೮॥ ತೃತೀಯಃಪುರುಷೋನಾಸ್ತಿಯಶ್ಚರೇದ್ವ್ರತ

---

ನಿರಾಕೃತಶ್ಚ-ತಿರಸ್ಕರಿಸಲೂ ಪಟ್ಟೆನು ಕಿಂಚ-ಇಷ್ಟುಮಾತ್ರವಲ್ಲ, ರಕ್ಷಣೀಯಾಃ-ಸಂರಕ್ಷಿಸತಕ್ಕ, ಸ್ವಬಾಂಧವಾಃ-ತನ್ನ ಬಂಧುಗಳು, ಬಾಲ್ಯಾತ್-ಅ ಜ್ಞಾನದ ದೆಸೆಯಿಂದ, ಅಪರಾದ್ಧಾಹಿ-ನಿನ್ನಿಂದ ಅಪರಾಧ ಮಾಡಲ್ಪಟ್ಟವರಾಗಿದ್ದಾರಷ್ಟೆ॥೧೧॥ಅಹಂತು-ನಾನಾದರೆ, ಧರ್ಮಂ-ಧರ್ಮವನ್ನು, ಉಪಾಸಿ ತುಂ-ಆಚರಿಸುವದಕ್ಕೋಸ್ಕರ, ರೌದ್ರಂ-ರುದ್ರಸಂಬಂಧವಾದ, ವ್ರತಂ-ವ್ರತವನ್ನು, ಅಂದರೆ ಕೇದಾರವ್ರತವನ್ನು, ಸಮಾಸ್ಥಾಯ-ಹೊಂದಿ, ನಿಯತಃ- ನಿಯಮನಿಷ್ಠನಾಗಿ, ನಿಯತೇಂದ್ರಿಯಃ-ನಿಯಮಿಸಲ್ಪಟ್ಟ ಇಂದ್ರಿಯಗಳುಳ್ಳವನಾಗಿ, ಹಿಮವತ್ಪೃಷ್ಠಂ-ಹಿಮವತ್ಪರ್ವತದ ಪೃಷ್ಠಭಾಗವನ್ನು, ಗತಃ- ಹೊಂದಿದೆನು ॥೧೨॥ ತತ್ರ-ಅಲ್ಲಿ, ಪ್ರಮಯಾದೇವ್ಯಾಸಹ-ಪಾರ್ವತೀದೇವಿಯೊಡನೆ ಗೂಡಿದ, ಪ್ರಭುಃ-ಸಮರ್ಥನಾದ, ದೇವಃ-ಶಿವನು, ಮಯಾ-ನನ್ನಿಂ ದ, ದೃಷ್ಟಃ-ನೋಡಲ್ಪಟ್ಟನು, ತತ್ರ-ಆ ಸ್ಥಳದಲ್ಲಿ, ರುದ್ರಾಣೀ-ಪಾರ್ವತೀದೇವಿಯು, ಅನುಪಮಂ-ಸರ್ವೋತ್ತಮವಾದ, ರೂಪಂ-ಆ ಕಾರವನ್ನು,ಕೃ ತ್ವಾ-ಮಾಡಿಕೊಂಡು, ಕ್ರೀಡತಿ-ಆಡುತಿದ್ದಳು, ಶುಭಾ-ಶುಭಕರಳಾದ,ಇಯಂ-ಈಕೆಯು,ಕಾ-ಯಾರು,ಸ್ಯಾತ್-ಆದಾಳು,ಇತಿ-ಇಂತೆಂದು,ತತ್ರದೇವ್ಯಾಂ-ಆ ದೇವಿಯಲ್ಲಿ,ಸವ್ಯಂಚಕ್ಷುಃ-ಎಡಗಣ್ಣು, ಮಯಾ-ನನ್ನಿಂದ, ನಿಪಾತಿತಂ-ಬೀಳಿಸಲ್ಪಟ್ಟಿತು, ಅನ್ಯೇನಹೇತುನಾ-ಇತರ ಕಾರಣದಿಂದ,ನಖಲು-ನೋಡಲೇ ಇಲ್ಲ ॥೧೪॥ದೇವ್ಯಾಃ-ಪಾರ್ವತೀದೇವಿಯ, ದಿವ್ಯಪ್ರಭಾವೇನ-ಉತ್ತಮವಾದ ಮಹಿಮೆಯಿಂದ, ಮೇ-ನನ್ನ ಸವ್ಯಮೀಕ್ಷಣಂ-ವಾಮಭಾಗದ ಕಣ್ಣು,ದಗ್ಧಂ-ಸುಡಲ್ಪ ಟ್ಟದ್ದಾಗಿ, ರೇಣುಧ್ವಸ್ತಂ-ಧೂಳುಮುಚ್ಚಿದ, ಜ್ಯೋತಿರಿವ-ತೇಜಸ್ಸಿನಂತೆ, ಪಿಂಗಳತ್ವಂ-ಪಿಂಗಳಬಣ್ಣವನ್ನು, ಉಪಾಗಮತ್-ಹೊಂದಿತು ॥೧೫॥ ತತಃ- ಬಳಿಕ, ಅಹಂ-ನಾನು, ತಸ್ಯಗಿರೇಃ-ಆ ಪರ್ವತದ, ವಿಸ್ತೀರ್ಣಂ-ವಿಸ್ತಾರವಾದ, ಅನ್ಯತ್ತಟಂ-ಮತ್ತೊಂದು ಜರತೆಯನ್ನು ಕುರಿತು, ಗತ್ವಾ-ಹೋಗಿ, ಪೂರ್ಣಂ-ಸಂಪೂರ್ಣವಾದ, ಅಷ್ಟಾವರ್ಷಶತಾನಿ-ಎಂಟುನೂರು ವರ್ಷಗಳು, ಮಹಾವ್ರತಂ-ಮಹಾ ನಿಯಮವನ್ನು, ಸಮವಾಪಂ-ಹೊಂದಿದೆನು ॥೧೬ ತತ್ರ-ಆ ಸ್ಥಳದಲ್ಲಿ, ತಸ್ಮಿನ್ನಿಯಮೇ-ಆ ವ್ರತವು, ಸಮಾಪ್ತೇಸತಿ- ಪರಿಪೂರ್ತಿಯಾದಂಥಾದ್ದಾಗುತಿರಲೀಕಾಗಿ, ಪ್ರಭುಃ-ಸಮಸ್ತ ಲೋಕಗಳಿಗೂ ಪ್ರಭು ವಾದ, ಮಹೇಶ್ವರೋದೇವಃ-ಪರಮೇಶ್ವರ ದೇವನು, ಪ್ರೀತಃ-ಸಂತುಷ್ಟನಾಗಿ, ಪ್ರೀತೇನ-ವಿಶ್ವಾಸವುಳ್ಳ, ಮನಸಾ-ಮನಸ್ಸಿನಿಂದ, ಇದಂವಾಕ್ಯಂ-ಈ ಮಾತ ನ್ನು, ಪ್ರಾಹ-ಹೇಳಿದನು ॥೧೭॥ ಹೆ ಧರ್ಮಜ್ಞ-ಎಲೈಧರ್ಮವನ್ನರಿತವನೆ, ಹೆಸುವ್ರತ-ಎಲೈ ಒಳ್ಳೇನಿಯಮವುಳ್ಳವನೆ, ಅನೇನತಪಸಾ-ಈ ತಪಸ್ಸಿನಿಂದ ತವ-ನಿನಗೆ, ಪ್ರೀತೋಸ್ಮಿ-ಸಂತುಷ್ಟನಾಗಿದ್ದೇನೆ, ಹೆ ಧನಾಧಿಪ-ಎಲೈ ಧನಪಾಲಕನೆ, ಏತದ್ವ್ರತಂ-ಈ ವ್ರತವು, ಮಯಾಚ-ನನ್ನಿಂದಲು, ತ್ವಯಾಚೈವ- ನಿನ್ನಿಂದಲು ಕೂಡ, ಚೀರ್ಣಂ-ಮಾಡಲ್ಪಟ್ಟಿತು ॥೧೮॥ ಈದೃಶಂವ್ರತಂ-ಇಂಥಾ ವ್ರತವನ್ನು, ಯಃಚರೇತ್-ಯಾರು ಮಾಡುವನೋ, (ಸಃ-ಅಥ)ತೃ

---

ಧ್ಯವಾದ ಮಟ್ಟಿಗೆ ಧರ್ಮದಲ್ಲಿ ಬುದ್ಧಿಯುನ್ನಿಡು, ದುಷ್ಟನಾದ ನಿನ್ನಿಂದ ಭಗ್ನವಾದ ನಂದನವನವು ಎನ್ನಿಂದ ದೃಷ್ಟವಾ ಯಿತು, ಋಷಿಗಳೆಲ್ಲರು ಹತರಾದರೆಂದು ಕೇಳಿದೆ, ನಿನಗೋಸ್ಕರ ದೇವತೆಗಳೆಲ್ಲರು ಹೆದರುತ್ತಿಧಾರೆ, ನಾನುಕೂಡ ಅ ನೇಕಸಲ ನಿನ್ನಿಂದ ನಿರಾಕರಿಸಲ್ಪಟ್ಟವ ನಾಗಿಯೆ ಇಧೇನೆ, ಇದಲ್ಲದೆ ರಕ್ಷಣೀಯರಾದ ನೆಂಟರೆಲ್ಲರಿಗೂ ನೀನು ಅಜ್ಞಾ ನದಿಂದ ಪರಾಧವೆಸಗೈದೆ ॥೧೧॥ ನಾನಾದರೇನೋ, ಧರ್ಮಾ ಚರಣೆಗೋಸ್ಕರ ಹಿಮವತ್ಪರ್ವತಕ್ಕೆ ಹೋಗಿ ನಿಯತೇಂ ದ್ರಿಯನಾಗಿ, ರುದ್ರಸಂಬಂಧವಾದ ವ್ರತವನ್ನಾಚರಿಸುತ್ತಿದ್ದೆನು (ಅಂದರೆಕೇದಾರೇಶ್ವರ ವ್ರತನಿಷ್ಠನಾಗಿದ್ದೆನು॥೧೨॥ ಅ ಲ್ಲಿ ಪಾರ್ವತೀಸಹಿತನಾದ ಪರಮೇಶ್ವರನಂ ಕಂಡೆನು ಈಕೆ ಯಾರಿರುವಳೆಂದು ಆ ಪಾರ್ವತೀದೇವಿ ಯಲ್ಲಿ ಎಡಗಣ್ಣಿನ ದೃಷ್ಟಿಯು ಪ್ರಸರಿಸಿತು, ಮತ್ಯಾವ ಹೇತುವಿನ ದೆಸೆಯಿಂದ ನಾನು ನೋಡಲಿಲ್ಲ, ಅಸದೃಶವಾದ ರೂಪವಂತಾಳಿ ರುದ್ರಾ ಣಿಯು ಆ ಪರ್ವತದಲ್ಲಿ ವಿಹರಿಸುತಿದ್ದಳು ॥೧೪॥ ಆ ದೇವಿಯ ದಿವ್ಯಪ್ರಭಾವದಿಂದ ನನ್ನೆಡಗಣ್ಣು ಧೂಳೀಧೂಸರವಾ ದ ತೇಜಸ್ಸಿನಂತೆ ಪಿಂಗಳಬಣ್ಣವುಳ್ಳದ್ದಾಯಿತು ॥೧೫॥ ಆ ಬಳಿಕ ನಾನು ಆ ಎಡವಂಬಿಟ್ಟು ಆ ಬೆಟ್ಟದ ಮತ್ತೊಂದು ಜರತೆಯಂಹೊಂದಿ ತಪಸ್ಸುಮಾಡುತ್ತಾ ಯೆಂಟುನೂರು ವರುಷಗಳು ಮಹಾವ್ರತವನ್ನಾಚರಿಸಿದೆನು ॥೧೬॥ ಆನಿಯ ಮ ಪರಿಪೂರ್ತಿಯಾದ ಬಳಿಕ ಸಾಕ್ಷಾನ್ಮಹೇಶ್ವರನು ಕಡುಸಂತುಷ್ಟನಾಗಿ ಅಲ್ಲಿಗೆ ಬಂದಿಂತೆಂದನು ॥೧೭॥ ಎಲೈ ಧರ್ಮ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮೀದೃಶಂ । ವ್ರತಂಸುದುಶ್ಚರಂಹ್ಯೇತನ್ಮಯೈವೋತ್ಪಾದಿತಂಪುರಾ ॥೧೯॥ ತತ್ಸಖಿತ್ವಂಮಯಾಸೌಮ್ಯರೋಚಯಸ್ವಧ ನೇಶ್ವರ । ತಪಸಾನಿರ್ಜಿತಶ್ಚೈವಸಖಾಭವಮಮಾನಘ ॥೨೦॥ ದೇವ್ಯಾದಗ್ಧಂಪ್ರಭಾವೇನಯಚ್ಚಸವ್ಯಂತವೇಕ್ಷಣಂ । ಏಕಾ ಕ್ಷಿಪಿಂಗಳೇತ್ಯೇವಂನಾಮಸ್ಥಾಸ್ಯತಿಶಾಶ್ವತಮ್ ॥೨೧॥ ಏವಂತೇನಸಖಿತ್ವಂಚಪ್ರಾಪ್ಯಸುಜ್ಞಾಂಚಶಂಕರಾತ್ । ಆಗತ್ಯಚಶ್ರು ತೋಯಂಮೇತವಪಾಪವಿನಿಶ್ಚಯಃ ॥೨೨॥ ತದಧರ್ಮಿಷ್ಠಸಂಯೋಗಾದ್ವಿನಿವರ್ತಸ್ವಕಿಲ್ಬಿಷಾತ್ । ಚಿಂತ್ಯತೇಹಿವಧೋ ಪಾಯಸ್ಸರ್ಷಿಸಂಘೈಸ್ಸುರೈಸ್ತವ ॥೨೩॥ ಏವಮುಕ್ತೋದಶಗ್ರೀವಃಕ್ರುದ್ಧಸ್ಸಂರಕ್ತಲೋಚನಃ । ಹಸ್ತೌದಂತಾಂಶ್ಚಸಂಪೀ ಡ್ಯವಾಕ್ಯಮೇತದುವಾಚಹ ॥೨೪॥ ವಿಜ್ಞಾತಂತೇಮಯಾದೂತವಾಕ್ಯಂಯಸ್ಯಪ್ರಭಾಷಸೇ । ನೈವತ್ವಮಸಿನೈವಾಸೌಭ್ರಾ ತ್ರಾಯೇನಾಸಿಚೋದಿತಃ ॥೨೫॥ ಹಿತಂನೈವಮಮೈತದ್ಧಿಬ್ರವೀತಿಧನರಕ್ಷಕಃ । ಮಹೇಶ್ವರಸಖಿತ್ವಂತುಮೂಢಃಶ್ರಾವಯ ತೇಕಿಲ ॥೨೬॥ ನೇದಂಕ್ಷಮಣೀಯಂಮೇಯದೇತದ್ಭಾಷಿತಂತ್ವಯಾ । ನಹಂತವ್ಯೋಗುರುಃಜ್ಯೇಷ್ಠೋಮಮಾಯಮಿತಿಮಾನಿ

---

ತ್ರಿಯ್ಯಃಪುರುಷಃ-ನಾನುನೀನುವಿನಹ ಮೂರನೇಯವನು, ನಾಸ್ತಿ-ಯಿಲ್ಲ, ಸುದುಶ್ಚರಂ-ಮಾಡಲಸಾಧ್ಯವಾದ, ಏತದ್ವ್ರತಂ-ಈ ವ್ರತವು, ಮಯೈವ ನ ನ್ನಿಂದಲೆ, ಪುರಾ-ಪೂರ್ವಕಾಲವಲ್ಲಿ, ಉತ್ಪಾದಿತಂ-ಹುಟ್ಟಿಸಲ್ಪಟ್ಟಿತಷ್ಟೆ ||೧೯|| ಹೆ ಸೌಮ್ಯ-ಎಲೈ ಸೌಮ್ಯನೆ, ಹೆ ಧನೇಶ್ವರ-ಎಲೈ ಧನಾಧ್ಯಕ್ಷನೆ, ತ ತ್-ಆ ಕಾರಣದ ದೆಸೆಯಿಂದ, ಮಯಾಸಹ-ನನ್ನೊಡನೆ, ಸಖಿತ್ವಂ-ಸ್ನೇಹಭಾವವನ್ನು, ರೋಚಯಸ್ವ-ಇಚ್ಛೆಸು, ತಪಸಾಚೈವ-ತಪಸ್ಸಿನಿಂದಲು, ನಿರ್ಜಿ ತಃ-ಜಯಿಸಲಟ್ಟಿನು, ಹೆಅನಘ-ಎಲೈ ಪಾಪರಹಿತನೆ, ಮಮ-ನನಗೆ, ಸಖಾ-ಸ್ನೇಹಿತನು, ಭವ-ಆಗು ||೨೦|| ಯತ್-ಯಾವಕಾರಣದ ದೆಸೆಯಿಂದ, ತವ-ನಿನ್ನ, ಸವ್ಯಮೀಕ್ಷಣಂ-ಎಡಗಣ್ಣು, ದೇವ್ಯಾಃ-ಪಾರ್ವತೀದೇವಿಯ, ಪ್ರಭಾವೇನ-ಮಾಹಾತ್ಮ್ಯದಿಂದ, ದಗ್ಧಂ-ಸುಡಲ್ಪಟ್ಟಿತೋ,ತತ್-ಆಕಾರಣದದೆಸೆ ಯಿಂದ, ಏಕಾಕ್ಷಿಪಿಂಗಳ ಇತ್ಯೇವಂ-ಏಕಾಕ್ಷಿಪಿಂಗಳನೆಂದು, ನಾಮ-ಹೆಸರು, ಶಾಶ್ವತಂ-ಸ್ಥಿರವಾಗಿ, ಸ್ಥಾಸ್ಯತಿ-ನಿಲ್ಲುತ್ತದೆ ||೨೧|| ಏವಂ-ಈ ಪರಿಯಾಗಿ, ತೇನ-ಆ ಪರಮೇಶ್ವರನೊಡನೆ, ಸಖಿತ್ವಂ-ಸ್ನೇಹವನ್ನೂ ಶಂಕರಾತ್-ಈಶ್ವರನ ದೆಸೆಯಿಂದ ಅನುಜ್ಞಾಂಚ-ಅಪ್ಪಣೆಯನ್ನು ಸಹ,ಪ್ರಾಪ್ಯ-ಹೊಂದಿಆಗಮ್ಯ ಚ-ಬರಲೂಬಂದು, ತವ-ನಿನ್ನ,ಅಯಂಪಾಪವಿನಿಶ್ಚಯಃ-ಈ ಪಾಪಮುಷ್ಕರವು, ಮೇ-ನನ್ನಿಂದ, ಶ್ರುತಃ-ಕೇಳಲ್ಪಟ್ಟಿತು||೨೨||ತತ್-ಆಕಾರಣದದೆಸೆಯಿಂ ದ ಅಧರ್ಮಿಷ್ಠಸಂಯೋಗಾತ್-ಕೆಟ್ಟಜನರ ಸಹವಾಸದ ದೆಸೆಯಿಂದುಂಟಾದ, ಕಿಲ್ಬಿಷಾತ್-ಪಾಪದದೆಸೆಯಿಂದ, ವಿನಿವರ್ತಸ್ವ-ಹಿಂತಿರುಗು, ಹಿಯಸ್ಮಾತ್- ಯಾವಕಾರಣದ ದೆಸೆಯಿಂದ, ತವ-ನಿನ್ನ-ವಧೋಪಾಯಃ-ಸಂಹಾರಸಾಧನವು, ಸರ್ಷಿಸಂಘೈಃ-ಋಷಿಸಂಘಗಳಿಂದೊಡಗೂಡಿದ, ಸುರೈಃ-ದೇವತೆಗಳಿಂದ, ಚಿಂತ್ಯತೆ-ಆಲೋಚಿಸಲ್ಪಡುತ್ತೆ || ೨೩ || ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟವನಾದ ಕಾರಣ, ಕ್ರುದ್ಧಃ-ಕುಪಿತನಾದ, ದಶಗ್ರೀವಃ-ದಶಕಂಠನು ಸಂರಕ್ತಲೋಚನಃ-ಕೆಂಗಣ್ಣುಗಳುಳ್ಳವನಾಗಿ, ಹಸ್ತೌ-ಕೈಗಳನ್ನು, ದಂತಾಂಶ್ಚ-ಹಲ್ಲುಗಳನ್ನು, ಸಂಪೀಡ್ಯ-ಕಚ್ಚಿಕೊಂಡು, ಏತದ್ವಾಕ್ಯಂ-ಇಮಾತ ನ್ನು, ಉವಾಚಹ-ಹೇಳಿದನು ||೨೪|| ಹೆ ದೂತ-ಎಲೈ ದೂತನೆ,ಯಸ್ಯ-ಯಾವನ, ವಾಕ್ಯಂ-ಮಾತನ್ನು, ಪ್ರಭಾಷಸೇ-ಹೇಳುತ್ತಿದ್ದೀಯೋ, ತೇ-ನಿನ್ನ, ತ ತ್-ಆ ಮಾತು, ಮಯಾ-ನನ್ನಿಂದ, ವಿಜ್ಞಾತಂ ತಿಳಿಯಲ್ಪಟ್ಟಿತು, ತ್ವಂ-ನೀನು, ನಾಸಿ-ಯಿರುವದಿಲ್ಲ, ಭ್ರಾತ್ರಾ-ಅಣ್ಣನಾದ, ಯೇನ-ಯಾವನಿಂದ,ಚೋ ದಿತಃ-ಕಳುಹಿಸಲ್ಪಟ್ಟವನು, ಅಸಿ-ಆದೀ, ಅಸೌ-ಈ ಅಣ್ಣನೂಕೂಡ, ನೈವಾಸ್ತಿ-ಇರುವದಿಲ್ಲ ||೨೫||ಧನರಕ್ಷಕಃ-ಧನಪತಿಯು, ಹಿತಮಿತಿ-ಇಷ್ಟ ವೆಂದು, ಯದ್ಬ್ರವೀತಿ-ಯಾವದನ್ನು ಹೇಳಿದನೋ, ಏತತ್-ಇದು, ಮಮ-ನನಗೆ, ಹಿತಂ-ಇಷ್ಟವಾದದ್ದು, ನೈವ-ಅಲ್ಲವೇ ಅಲ್ಲ, ಮೂಢಃ-ಮೂರ್ಖ ನು, ಮಹೇಶ್ವರಸಖಿತ್ವಂತು-ಈಶ್ವರನ ಸ್ನೇಹವನ್ನಾದರೆ, ಶ್ರಾವಯತೆಕಿಲ-ಕೇಳಿಸುತ್ತಾನಷ್ಟೆ, ||೨೬|| ಇದಂ-ಇದನ್ನು , ಯತ್-ಯಾವ ಮಾತು, ತ್ವ

---

ಜ್ಞನಾದ ಧನಾಧ್ಯಕ್ಷನೆ! ಈ ವ್ರತದಿಂದ ನಾನು ಪ್ರಸನ್ನನಾಗಿದ್ದೇನೆ, ಎನ್ನಿಂದಲು ಈ ವ್ರತವು ಆಚರಿಸಲ್ಪಟ್ಟಿತು, ಈವ್ರ ತವಂಗೈದ ಮತ್ತೊರ್ವನಿಲ್ಲವೇಯಿಲ್ಲ, ಇದು ನನ್ನಿಂದಲೇ ನಿರ್ಮಿಸಲ್ಪಟ್ಟಿತು, ಈಗ ನೀನು ಮಾಡಿದವನಾದೆ, ಆದಕಾ ರಣ ನೀನು ನನ್ನೊಡನೆ ಸಖಿತ್ವವಂ ವಹಿಸು, ನಿನ್ನ ತಪಸ್ಸಿನಿಂದ ನಾನು ಸ್ವಾಧೀನನಾದೆ ನನಗೆನೀನು ಸಖನಾಗು||೨೦|| ಪಾರ್ವತೀದೇವಿಯ ಪ್ರಭಾವದಿಂದ ಯಾವಕಾರಣದ ದೆಸೆಯಿಂದ ನಿನ್ನ ಎಡಗಣ್ಣು ದಗ್ಧವಾಯಿತೋ, ಆ ಹೇತುವಿನಿಂ ದ ಏಕಾಕ್ಷಿ ಪಿಂಗಳನೆಂದು ಶಾಶ್ವತವಾಗಿ ನಿನ್ನ ಹೆಸರು ನಿಲ್ಲುವದುಯೆಂದು ಪರಮೇಶ್ವರನಿಂದಾಜ್ಞಾಪಿತನಾಗಿ, ಆದೆ ವದೇವೋತ್ತಮನೊಡನೆ ಸಖಿತ್ವವಂಗೈದು ಬಂದಬಳಿಕ ನಿನ್ನ ಕೆಟ್ಟಕಾರ್ಯಂಗಳಂ ಕೇಳಿದೆ||೨೨||ಎಲೈ ದಶಕಂಠನೆ; ಆದ ಕಾರಣ ನೀನು ಇತಃಪರವಾದರು ಅಧರ್ಮಿಷ್ಠರ ಸಹವಾಸವಂ ತೊರೆದು ಈ ಕೆಟ್ಟ ಕಾರ್ಯಗಳಂಗೈಯ್ಯದಿರು, ಯಾಕೆಂ ದರೆ, ದೇವತೆಗಳೆಲ್ಲರು ನಿನ್ನ ವಧೋಪಾಯವಂ ಗೈಯ್ಯುತಿಧಾರೆ ||೨೩|| ಎಂದು ಕರ್ಣಕಠೋರವಾದ ವಾಕ್ಯವಂಕೇಳಿ. ಕಡುಕೋಪಿಯಾದ ಆ ದಶಕಂಠನು ಕೆಂಗಣ್ಣುಗಳುಳ್ಳವನಾಗಿ, ಹಲ್ಲುಗಳಂ ಕಚ್ಚಿಕೊಳ್ಳುತ್ತಲು, ಕೈಯ್ಯಗಳನ್ನು ಹಿಸು ಕಿಕೊಳ್ಳುತಲು, ಈ ವಾಕ್ಯವಂ ನುಡಿದನು||೨೪|| ಎಲೈ ದೂತನೆ! ಯಾವಕುಬೇರನ ವಾಕ್ಯವನ್ನು ಕೇಳಿಸುತಿದ್ದೀಯೋ. ಅದೆಲ್ಲ ತಿಳಿಯಲಾಯಿತು, ನಿನ್ನಿಲ್ಲಿಯೇ ಕೊಲ್ಲುವೆನು, ನಿನ್ನಂ ಕಳುಹಿಸಿದ ಆ ಕುಬೇರನು ಕೂಡ ಇರುವದಿಲ್ಲ ||೨೫|| ಆ ಧನಪತಿಯು ಮತಿಗೆಟ್ಟವನಾಗಿ, ಯಾವದು ಹಿತವಾಗಿರುವದೆಂದು ತಿಳಿದು ಯನಗೆ ಹೇಳಿಕಳುಹಿಸಿರುವನೋ ಅದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೇ ॥೩೭॥ ತಸ್ಯತ್ವಿದಾನೀಂಶ್ರುತ್ವಾವಮಾಕ್ಯಮೆಷಾಕೃತಾಮತಿಃ। ತ್ರೀನ್ಲೊಕಾನಪಿಜೆಷ್ಯಾಮಿಬಾಹುವೀರ್ಯಮುಪಾಶ್ರಿತಃ ॥೩೮॥ ಎತನ್ಮುಹೂರ್ತಮೆಷೊಹಂತಸ್ಯೈಕಸ್ಯಕೃತೆಚವೈ । ಚತುರೊಲೊಕಪಾಲಾಂಶ್ಚ ನಯಿಷ್ಯಾಮಿಯಮಕ್ಷಯಮ್ ॥೩೯॥ ಏವಮುಕ್ತ್ವಾತುಲಂಕೆಶೊದೂತಂಖಡ್ಗೆನಜಘ್ನಿವಾನ್ । ದದೌಭಕ್ಷಯಿತುಂಹ್ಯೆನಂರಾಕ್ಷಸಾನಾಂದುರಾತ್ಮನಾಮ್ ॥೪೦॥ ತತಃಕೃತಸ್ವಸ್ತ್ಯಯನೊರಥಮಾರುಹ್ಯರಾವಣಃ । ತ್ರೈಲೊಕ್ಯವಿಜಯಾಕಾಂಕ್ಷೀಯಯೌಯತ್ರಧನೆಶ್ವರಃ॥೪೧॥

—…ಇತಿ ಶ್ರೀಮದುತ್ತರ ರಾಮಾಯಣೆ ತ್ರಯೊದಶಸ್ಸರ್ಗಃ.…—

ತತಸ್ತು ಸಚಿವೈಸ್ಸಾರ್ಧಂಷಡ್ಭಿರ್ನಿತ್ಯಂಬಲೊತ್ಕಟೈಃ । ಮಹೊದರಪ್ರಹಸ್ತಾಭ್ಯಾಂಮಾರೀಚಶುಕಸಾರಣೈಃ ॥೧॥ ಧೂಮ್ರಾಕ್ಷೇಣಚವೀರೇಣನಿತ್ಯಂಸಮರಗೃಧ್ನುನಾ । ಸಂವೃತಃಪ್ರಯಯೌಶ್ರೀಮಾನ್ಕ್ರೊಧಾಲ್ಲೊಕಾನ್ದಹನ್ನಿವ ॥೨॥ ಪುರಾಣಿಸನದೀಶ್ಶೈಲಾನ್ವನಾನ್ಯುಪವನಾನಿಚ । ಅತಿಕ್ರಮ್ಯಮುಹೂರ್ತೆನಕೈಲಾಸಂಗಿರಿಮಾವಿಶತ ॥೩॥ ತಂನಿವಿಷ್ಟಂ

---

ಯಾ-ನಿನ್ನಿಂದ, ಭಾಷಿತಂ-ಹೇಳಲ್ಪಟ್ಟಿತ್ತೋ, ಏತಚ್ಚ-ಇದುನ್ನೂ ಕೂಡ, ನೈವಮರ್ಷಣೀಯ್ಯಂ-ಸಹಿಸತಕ್ಕದ್ದೇಅಲ್ಲ, ಅಯಂ-ಇವನು, ಮಮ-ನನಿಗೆ, ಜ್ಯೇಷ್ಠಃ-ಅಣ್ಣ, ಗುರುಃ-ಪೂಜಾರ್ಹನಾದಕಾರಣ, ನಹಂತವ್ಯಇತಿ-ಹೊಡೆಯತಕ್ಕವನಲ್ಲ ಎಂದು, ಮಾನಿತಃ-ಬಹುಮಾನಿಸಲ್ಪಟ್ಟನು ॥೩೭॥ಇದಾನೀಂ-ಈಗ, ತಸ್ಯ-ಅವನ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ಮೆ-ನನ್ನಿಂದ,ಏಷಾಮತಿಃ-ಈ ಬುದ್ಧಿಯು, ಕೃತಾ-ಮಾಡಲ್ಪಟ್ಟಿತು, ಬಾಹುವೀರ್ಯಂ- ಭುಜಬಲವನ್ನು,ಉಪಾಶ್ರಿತಃ-ಹೊಂದಿದವನಾಗಿ, ತ್ರೀನ್ಲೋಕಾನಪಿ-ಮೂರು ಲೋಕಗಳನ್ನು ಕೂಡ, ಜೆಷ್ಯಾಮಿ-ಜಯಿಸುವೆನು॥೩೮॥ ಏತನ್ಮುಹೂರ್ತಂ-ಈಕ್ಷಣದಲ್ಲಿ,ಏಷೊಹಂ-ಈ ನಾನು, ತಸ್ಯಏಕಸ್ಯಕೃತೆಚವೈ-ಅವನ ಒಬ್ಬನ ನಿಮಿತ್ತವಾಗಿಯೆ, ಚತುರಃ-ನಾಲ್ಕು ಮಂದಿ ಯಾದ,ಲೊಕಪಾಲಾಂಶ್ಚ-ದಿಕ್ಪಾಲಕರನ್ನು ಕೂಡ, ಯಮಕ್ಷಯಂ-ಯಮನ ಮನೆಯನ್ನು, ನಯಿಷ್ಯಾಮಿ-ಹೊಂದಿಸುವೆನು ॥೩೯॥ ಲಂಕೆಶಃ-ಲಂಕಾಧಿಪತಿಯಾದ ರಾವಣನು, ಏವಂ - ಈ ಪರಿಯಾಗಿ,ಉಕ್ತ್ವಾ-ಹೇಳಿ, ದೂತಂ-ದೂತನನ್ನು,ಖಡ್ಗೆನ-ಖಡ್ಗದಿಂದ, ಜಘ್ನಿವಾನ್-ಹೊಡೆದವನಾಗಿ, ಏನಂ-ಇವನ್ನು, ಭಕ್ಷಯಿತುಂ-ತಿನ್ನುವದಕ್ಕೋಸ್ಕರ, ದುರಾತ್ಮನಾಂ-ದುಷ್ಟರಾದ, ರಾಕ್ಷಸಾನಾಂ-ರಾಕ್ಷಸರಿಗೆ, ದದೌ- ಕೊಟ್ಟನು ॥೪೦॥ ತತಃ-ಬಳಿಕ, ಕೃತಸ್ವಸ್ತ್ಯಯನಃ-ಮಾಡಲ್ಪಟ್ಟ ಆಶೀರ್ವಾದವುಳ್ಳ,ರಾವಣಃ-ರಾವಣನು, ರಥಂ-ರಥವನ್ನು, ಆರುಹ್ಯ-ಏರಿ, ಯತ್ರ-ಯಾವಸ್ಥಳದಲ್ಲಿ, ಧನೆಶ್ವರಃ-ಕುಬೇರನು, (ಇದ್ದನೊ,) ತತ್ರ-ಆಸ್ಥಳದಲ್ಲಿ, ತ್ರೈಲೋಕ್ಯವಿಜಯಾಕಾಂಕ್ಷೀ-ಲೊಕತ್ರಯವನ್ನು ಜಯಿಸಲಿಚ್ಛೆಯುಳ್ಳವನಾಗಿ, ಯಯೌ-ತೆರಳಿದನು ॥೪೧॥

—…*ಇತಿ ಶ್ರೀಮದುತ್ತರರಾಮಾಯಣೆ ತ್ರಯೋದಶ ಸ್ಸರ್ಗಃ.*…—

ಟೀ॥ ತತಃ-ಬಳಿಕ, ನಿತ್ಯಂ-ನಿರಂತರವು, ಬಲೋತ್ಕಟೈಃ-ಬಲೋದ್ಧತರಾದ, ಷಡ್ಭಿಃ-ಆರುಮಂದಿಯಾದ, ಸಚಿವೈಃ-ಮಂತ್ರಿಗಳಾದ, ಮಹೊದರ, ಪ್ರಹಸ್ತಾಭ್ಯಾಂ-ಮಹೋದರಪ್ರಹಸ್ತರಿಂದಲು, ಮಾರೀಚಶುಕಸಾರಣೈಃ-ಮಾರೀಚ,ಶುಕ, ಸಾರಣರಿಂದಲು, ನಿತ್ಯಂ-ಯಾವಾಗಲು, ಸಮರಗೃಧ್ನುನಾ-ಯುದ್ಧೇಚ್ಛೆಯುಳ್ಳ, ವೀರೇಣ-ಶೂರನಾದ, ಧೂಮ್ರಾಕ್ಷೇಣಾಪಿ-ಧೂಮ್ರಾಕ್ಷನಿಂದಲೂಕೂಡ, ಸಂವೃತಃ-ಕೂಡಿಕೊಂಡವನಾಗಿ, ಕ್ರೋಧಾತ್-ಕೋಪದದೆಸೆಯಿಂದ, ಲೋಕಾನ್-ಲೋಕಗಳನ್ನು, ದಹನ್ನಿವ-ಸುಡುವವನಂತೆ, ಶ್ರೀಮಾನ್-ಸಂಪದ್ಯುಕ್ತನಾದ ರಾವಣನು,ಪ್ರಯಯೌ-ಹೊರಟನು ॥೨॥ ಸಃ-ಆ ರಾವಣನು, ಪುರಾಣಿ-ಪಟ್ಟಣಗಳನ್ನು, ನದೀಃ-ನದಿಗಳನ್ನು, ಶೈಲಾನ್-ಬೆಟ್ಟಗಳನ್ನು, ವನಾನಿ-ವನಗಳನ್ನು, ಉಪವನಾನಿಚ-ಉದ್ಯಾನವನಗಳನ್ನೂ

---

ನನಗೆ ಅಹಿತವಾಗಿಯೇ ತೋರುವದು, ಆದರೆ ಆಪೂರ್ಥನು ಮಹೇಶ್ವರ ಸಖಿತ್ವವನ್ನೆ ಅತಿಶಯವಾಗಿ ಕೇಳಿಸಿದನಷ್ಟೆ ॥೩೬। ಅದೂನು ಮತ್ತು ನಿನ್ನಮಾತೂ ಸಹ ಕ್ಷಮಿಸತಕ್ಕದ್ದಲ್ಲ, ಯನಗೆ ಅಗ್ರಜನಾದ ಕಾರಣ ಗುರುವೆಂದು ಭಾವಿಸಿ ಬಹುಮಾನದೊಡನೆ ಇದುವರಿಗು ಹೊಡೆಯದಿದ್ದೆನು ॥೩೭॥ ಈಗ ಆತನ ಬಾಯಿಯಿಂದ ಇಂಥಾ ಕೆಟ್ಟಮಾತುಗಳಂ ಕೇಳಿದೆ ನಾದಕಾರಣ, ಭುಜವೀರ್ಯವ ನ್ನಾಶ್ರಯಿಸಿ ಲೋಕವನ್ನೆಲ್ಲ ಜಯಿಸಬೇಕೆಂದು ನಿಶ್ಚೈಸಿಧೇನೆ ॥೩೮॥ ಇಗೋ ಈಗಲೇ ಎದ್ದು, ಅವನೊಬ್ಬನ ನಿಮಿತ್ತವಾಗಿ ನಾಲ್ಕುಮಂದಿಯಾದ ಲೋಕಪಾಲಕರನ್ನು ಯಮಧರ್ಮರಾಯನ ಮನೆಯಂ ಹೊಕ್ಕುವಂತೆ ಮಾಡುವೆನು ॥೩೯॥ ಎಂದು ಲಂಕೇಶ್ವರನಾದ ದಶಕಂಠನು ಪೇಳಿದವನಾಗಿ ಖಡ್ಗದಿಂದಾ ದೂತನಂ ಖಂಡಿಸಿ, ದುರಾತ್ಮರಾದ ರಕ್ಷಸರಿಗೆ ಭಕ್ಷಣಾರ್ಥವಾಗಿ ಕೊಟ್ಟವನಾದನು॥೪೦॥ ಆ ಬಳಿಕ ದಶಮುಖನು ತ್ರಿಲೋಕಗಳನ್ನು ಜಯಿಸ ಲಿಚ್ಛೈಸಿದವನಾಗಿ, ಕಾಮಗಾಮಿಯಾದ ರಥವನ್ನೇರಿ ಕ್ಷಿಪ್ರವಾಗಿ ಕುಬೇರನಿರುವ ಪ್ರದೇಶವನ್ನು ಕುರಿತು ತೆರಳಿದನು…— ಇತಿ ಶ್ರೀಮದುತ್ತರ ರಾಮಾಯಣದೋಳ್ ಹದಿಮೂರನೇ ಸರ್ಗಂ ಮುಗಿದುದು…—

ಸಮನಂತರ ಕಾಲದೋಳ್ ಆ ದಶಕಂಠನು, ಕಡುಬಲ ಶಾಲಿಗಳಾದ ಮಹೋದರ, ಪ್ರಸಸ್ತ, ಮಾರೀಚ, ಶುಕ, ಸಾರಣ, ಧೂಮ್ರಾಕ್ಷರೆಂಬ ಈ ಆರುಮಂದಿ ಮಂತ್ರಿಗಳಿಂ ದೊಡಗೂಡಿ, ತ್ರಿಲೋಕಂಗಳಂ ದಹಿಸುವವನಂತೆ ಕಡು ಕೋಪ ಮುಳ್ಳವನಾಗಿ ಹೊರಟು ಅನೇಕವಾದ ನಗರಿಗಳನ್ನು, ನದಿಗಳನ್ನು, ವನಗಳನ್ನು, ಗಿರಿಗಳನ್ನು, ಉಪವನ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯುದ್ಧೇತ್ಯರ್ಥಕೃತೋತ್ಸಾಹಂದುರಾತ್ಮಾನಂಸಮಂತ್ರಿಣಮ್ ॥೪॥ ಯಕ್ಷಾನಶೆ ಗಿರೌತಸ್ಮಿನ್ರಾಕ್ಷಸೇಂದ್ರಂನಿಶಮ್ಯತು । ಯುದ್ಧೇತ್ಯರ್ಥಕೃತೋತ್ಸಾಹಂದುರಾತ್ಮಾನಂಸಮಂತ್ರಿಣಮ್ ॥೪॥ ಯಕ್ಷಾನಶೆ

ಕುಸ್ಸಂಸ್ಥಾತುಂ ಪ್ರಮುಖೇತಸ್ಯರಕ್ಷಸಃ । ರಾಜ್ಞೋಭ್ರಾತಾಯಮಿತ್ಯುಕ್ತ್ವಾಗತಾಯತ್ರಧನೇಶ್ವರಃ ॥೫॥ ಗತ್ವಾತುಸರ್ವ ಮಾಚಖ್ಯುಃಭ್ರಾತುಸ್ತಸ್ಯವಿನಿಶ್ಚಯಂ । ಅನುಜ್ಞಾತಾಯಯುಶ್ಶೈವಯುದ್ಧಾಯಧನದೇನತೇ ॥೬॥ ತತೋಬಲಸ್ಯಸಂಕ್ಷೋ ಭಃಸಾಗರಸ್ಯೇವವರ್ಧತಃ । ಅಭೂನ್ನೈರುತರಾಜಸ್ಯಗಿರಿಂಸಂಚಾಲಯನ್ನಿವ ॥೭॥ ತತೋಯುದ್ಧಂಸಮಭವದ್ಯಕ್ಷರಾ ಕ್ಷಸಸಂಕುಲಮ್ । ವ್ಯಥಿತಾಶ್ಚಾಭವಂಸ್ತತ್ರಸಚಿವಾ ಸ್ತಸ್ಯರಕ್ಷಸಃ ॥೮॥ ತದ್ದೃಷ್ಟ್ವಾತಾದೃಶಂಸೈನ್ಯಂದಶಗ್ರೀವೋ ನಿ ಶಾಚರಃ । ಹರ್ಷಾನ್ನಾದಂತತಃಕೃತ್ವಾರೋಷಾತ್ಸಮಭಿವರ್ತತ ॥೯॥ ಯೇತುತೇರಾಕ್ಷಸೇಂದ್ರಸ್ಯಸಚಿವಾಘೋರವಿಕ್ರಮಾಃ। ತೇಸಹಸ್ರಂಸಹಸ್ರಾಣಾಮೇಕೈಕಂಸಮಯೋಧಯನ್ ॥ ೧೦ ॥ ತತೋಗದಾಭಿಃಪರಿಘೈರಸಿಭಿಶ್ಶಕ್ತಿತೋಮರೈಃ । ವಧ್ಯ ಮಾನೋದಶಗ್ರೀವಸ್ತತ್ಸೈನ್ಯಂಸಮಗಾಹತ ॥೧೧॥ ತೈರ್ನಿರುಚ್ಛ್ವಾಸವತ್ತತ್ರವಧ್ಯಮಾನೋದಶಾನನಃ । ವರ್ಷಮಾ

---

ಹ, ಮುಹೂರ್ತೇನ-ಸ್ವಲ್ಪಕಾಲದಲ್ಲಿ, ಅತಿಕ್ರಮ್ಯ-ಅತಿಕ್ರಮಿಸಿ, ಕೈಲಾಸಂಗಿರಿಂ-ಕೈಲಾಸಪರ್ವತವನ್ನು, ಆವಿಶತ್-ಪ್ರವೇಶಿಸಿದನು॥ಯುದ್ಧೇ-ಕಾಳಗದಲ್ಲಿ,ಅ ತ್ಯರ್ಥಕೃತೋತ್ಸಾಹಂ-ಬಹಳವಾಗಿ ಉತ್ಸಾಹವುಳ್ಳ, ದುರಾತ್ಮಾನಂ-ದುರ್ಬುದ್ಧಿಯುಳ್ಳ, ಸಮಂತ್ರಿಣಂ-ಮಂತ್ರಿಗಳಿಂದೊಡಗೂಡಿದ, ತಂರಾಕ್ಷಸೇಂದ್ರಂ-ಆ ರಾವಣನನ್ನು, ತಸ್ಮಿನ್ಗಿರೌ-ಆ ಬೆಟ್ಟದಲ್ಲಿ, ಪ್ರವಿಷ್ಟಂ-ಪ್ರವೇಶಿಸಿದವನನ್ನಾಗಿ, ನಿಶಮ್ಯ-ಕೇಳಿ, ಯಕ್ಷಾಃ-ಯಕ್ಷರು, ತಸ್ಯರಕ್ಷಸಃ-ಆರಾವಣನ, ಪ್ರಮು ಖೇ-ಮುಂದುಗಡೆ, ಸಂಸ್ಥಾತುಂ-ನಿಲ್ಲುವದಕ್ಕೆ, ನಶೇಕುಃ-ಸಮರ್ಥರಾಗದೇ ಹೋದರು, ಅಯಂ-ಈ ರಾವಣನು, ರಾಜ್ಞಃ-ನಮ್ಮೊಡೆಯನಾದ ಕುಬೇರ ನಿಗೆ, ಭ್ರಾತಾ-ತಮ್ಮನು, ಇತ್ಯುಕ್ತ್ವಾ-ಇಂತೆಂದುಹೇಳಿ, ಯತ್ರ-ಯಾವಸ್ಥಳದಲ್ಲಿ, ಧನೇಶ್ವರಃ-ಕುಬೇರನು (ವರ್ತತೇ-ಇರುವನೋ) ತತ್ರ-ಅಲ್ಲಿ, ಗತಾಃ- ಹೊರಟುಹೋದರು ॥೫॥ ಗತ್ವಾತು-ಹೋಗಲೂಹೋಗಿ, ಸರ್ವಂ-ಸಮಸ್ತವಾದ,ತಸ್ಯಭ್ರಾತುಃ-ಆ ಕುಬೇರನ ತಂಮನ,ನಿಶ್ಚಯಂ-ನಿಶ್ಚಯವನ್ನು,ಆಚ ಖ್ಯುಃ-ಹೇಳಿದರು, ತೇಚ-ಅವರುನ್ನು, ಧನದೇನ-ಕುಬೇರನಿಂದ, ಅನುಜ್ಞಾತಾಃ-ಆಜ್ಞಾಪಿತರಾಗಿ,ಯುದ್ಧಾಯೈವ-ಕಾಳಗಕ್ಕೋಸ್ಕರವೆ, ಯಯುಃ-ಹೊ ರಟರು ॥೬॥ ತತಃ-ಬಳಿಕ, ಸಾಗರಸ್ಯೇವ-ಕಡಲಿನಂತೆಯೆ, ವರ್ಧತಃ-ವೃದ್ಧಿಹೊಂದುತಿರುವ, ನೈರುತರಾಜಸ್ಯ-ಕುಬೇರನ,ಬಲಸ್ಯ-ಸೈನ್ಯದ,ಸಂಕ್ಷೋಭಃ- ಘೋಷೆಯು, ಗಿರಿಂ-ಬೆಟ್ಟವನ್ನು, ಸಂಚಾಲಯನ್ನಿವ-ಕದುಲುಸುತ್ತದೋ ಯಂಬಂತೆ, ಅಭೂತ್-ಆಯಿತು ॥೭॥ ತತಃ-ಬಳಿಕ, ಯಕ್ಷರಾಕ್ಷಸಸಂಕು ಲಂ-ಯಕ್ಷರಿಂದಲು ರಾಕ್ಷಸರಿಂದಲು, ವ್ಯಾಪ್ತಮಾದ, ಯುದ್ಧಂ-ಕಾಳಗವು, ಸಮಭವತ್-ಆಯಿತು, ತತ್ರ-ಆ ಯುದ್ಧರಂಗದಲ್ಲಿ, ತಸ್ಯರಕ್ಷಸಃ-ಆ ರಾವ ಣನ, ಸಚಿವಾಃ-ಮಂತ್ರಿಗಳು ಸಹ, ವ್ಯಥಿತಾಃ-ದುಃಖಿತರು, ಅಭವನ್-ಆದರು ॥೮॥ ನಿಶಾಚರಃ-ರಾಕ್ಷಸನಾದ,ದಶಗ್ರೀವಃ-ದಶಕಂಠನು, ತಾದೃಶಂ-ಅಂ ಥಾ ಅವಸ್ಥೆಯುಳ್ಳ, ಸೈನ್ಯಂ-ಸೇನೆಯನ್ನು, ದೃಷ್ಟ್ವಾ-ಕಂಡು, ಹರ್ಷಾತ್-ಸಂತೋಷದಿಂದ, ನಾದಂ-ಅಟ್ಟಹಾಸವನ್ನು, ಕೃತ್ವಾ-ಮಾಡಿ, ತತಃ-ಬ ಳಿಕ, ರೋಷಾತ್-ಕೋಪದದೆಶೆಯಿಂದ, ಸಮಭಿವರ್ತತ-ಅಭಿಮುಖವಾಗಿ ನಿಂತನು ॥೯॥ ರಾಕ್ಷಸೇಂದ್ರಸ್ಯ-ರಾವಣನಿಗೆ, ಸಚಿವಾಃ-ಮಂತ್ರಿಗಳಾದ, ಘೋ ರವಿಕ್ರಮಾಃ-ಭಯಂಕರಮಾದ ಪರಾಕ್ರಮವುಳ್ಳ, ತೇ-ಪ್ರಸಿದ್ಧರಾದವರು, ಯೇ-ಯಾರೋ, ತೇತು-ಆ ಮಂತ್ರಿಗಳೆಲ್ಲರು, ಸಹಸ್ರಾಣಾಂಸಹಸ್ರಂ- ಸಹಸ್ರಗಳ ಸಾವಿರಗಳನ್ನು ( ಅಂದರೆ ಹತ್ತುಲಕ್ಷಗಳನ್ನು, ಕುರಿತು)ಏಕೈಕಂ-ಒಬ್ಬನೊಬ್ಬನೆ,ಸಮಯೋಧಯನ್-ಯುದ್ಧಮಾಡಿದರು॥ತತಃ-ಬಳಿಕ, ಗದಾಭಿಃ-ಗದಾ ಯುಧಗಳಿಂದಲು, ಪರಿಘೈಃ-ಕಬ್ಬಿಣದ ಕಟ್ಟುಗಳುಳ್ಳ ದೊಣ್ಣೆಗಳಿಂದಲು, ಅಸಿಭಿಃ-ಕತ್ತಿಗಳಿಂದಲು, ಶಕ್ತಿತೋಮರೈಃ-ಶಕ್ತ್ಯಾಯುಧಗಳಿಂದಲು ಮರ ದಿಂದಮಾಡಿದಆಯುಧಗಳಿಂದಲು,ವಧ್ಯಮಾನಃ-ಹೊಡೆಯಲ್ಪಡುತಿರುವ, ದಶಗ್ರೀವಃ-ರಾವಣನು, ತತ್ಸೈನ್ಯಂ-ಆಸೇನೆಯನ್ನು,ಸಮವಗಾಹತ-ಹೊಕ್ಕನು॥ ತೈಃ-ಆ ಯಕ್ಷರಿಂದ, ನಿರುಚ್ಛ್ವಾಸವತ್-ಉಸುರುಬಿಡಲವಕಾಶವಿಲ್ಲದಂತೆ, ತತ್ರ-ಆ ಕಾಳಗದಲ್ಲಿ, ವಧ್ಯಮಾನಃ-ಹೊಡೆಯಲ್ಪಡುತಿರುವ, ದಶಾನನಃ- ರಾ

---

ಗಳನ್ನು ಸಹ ಅತಿಕ್ರಮಿಸಿದವನಾಗಿ, ಸ್ವಲ್ಪ ಕಾಲದಿಂದಲೆ ಕೈಲಾಸ ಪರ್ವತವಂ ಹೊಕ್ಕನು ॥೩॥ ಸಂಗರವಂ ಗೈಯ್ಯ ಲು ಇಚ್ಛೆಯುಳ್ಳವನಾಗಿ ಆ ಗಿರಿಯಲ್ಲಿ ನುಗ್ಗಿ ಬರುತಿರುವ ಆ ದಶಗ್ರೀವನಂ ಕಂಡು ಯಕ್ಷರೆಲ್ಲರು ಆ ರಕ್ಕಸನಿಗೆ ಎದು ರಾಗಿ ನಿಲ್ಲಲಶಕ್ತರಾಗಿ, ಈತನು ನಮ್ಮೊಡೆಯನಾದ ಕುಬೇರನಿಗೆ ಭ್ರಾತನೆಂದು ಕೂಗುತ್ತಾ ಓಡಿಹೋಗಿ ಇವನ ಮ ನೋಗತವನ್ನು ಅಗ್ರಜನಿಗರುಹಿ ಆತನಿಂದಾಜ್ಞಾಪಿತರಾಗಿ ಪುನಹಾ ಆಹವಕ್ಕಾಗಿಯೆ ಹಿಂತಿರಿಗಿ ಬಂದರು॥೬॥ ಆ ಬಳಿ ಕ ಸಮುದ್ರದಂತೆ ವೃದ್ಧಿ ಹೊಂದುತಿರುವ ಆ ಸೈನ್ಯದ ಘೋಷೆಯು ಪರ್ವತವನ್ನು ಕಂಪಾಯಮಾನ ಮಾಡುವಂತೆ ಉತ್ಪನ್ನವಾಯಿತು ॥೭॥ ಅನಂತರವು, ಯಕ್ಷರಾಕ್ಷಸರಿಗೆ ಕಡುಭಯಂಕರವಾದ ಕಾಳಗವು ಸಂಭವಿಸಿತು, ಆ ರಣರಂ ಗದಲ್ಲಿ ಆ ರಾವಣ ಮಂತ್ರಿಗಳು ಸಹ ದುಃಖಿತರಾದರು ॥೭॥ ಬಳಿಕ ರಾವಣಾಸುರನು, ಅಂಥಾ ಸೈನ್ಯವಂಕಂಡು ಹರ್ಷಾ ಟ್ಟಹಾಸವಂಗೈದು ರೋಷದಿಂದ ನುಗ್ಗಿಬಂದನು॥೯॥ ಆಗ ಆ ರಾವಣನ ಮಂತ್ರಿಗಳಾದ ಕಡುಪರಾಕ್ರಮಿಗಳಾದ ಆರು ಮಂದಿ ರಾಕ್ಷಸರು ಒಬ್ಬೊಬ್ಬನು ಹತ್ತುಹತ್ತು ಲಕ್ಷ ಯಕ್ಷರೊಡನೆಯುದ್ಧಂ ಗೈಯುತಿದ್ದರು ॥ ೧೦ ॥ ಆ ಬಳಿಕ ದಶಗ್ರೀ ವನು ಗದಾ, ಪರಿಘ, ಶಕ್ತಿ, ತೋಮರ, ಖಡ್ಗಾದ್ಯಾಯುಧಗಳಿಂದ ಹೊಡೆಯಲ್ಪಡುತಿರುವನಾಗಿ ಆಸೈನ್ಯವಂ ಹೊಕ್ಕ ನು ॥೧೧॥ ತತ್ಕಾಲದಲ್ಲಿ ದಶಕಂಠನನ್ನು ಉಸುರು ಬಿಡಲವಕಾಶವಿಲ್ಲದಂತೆ ಹೊಡೆಯಲ್ಪಡುತಿರುವನಾಗಿ, ಮಳೆಯಂ ಸು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣ್ಯೈರಿವಘನೈರ್ಯಕ್ಷೇಂದ್ರೈಸ್ಸನ್ನ್ಯರುಧ್ಯತ ||೧೨|| ವ್ಯಥಾಂನಚಕುರುತೇವೀರೋಯಕ್ಷೈಶ್ಶಸ್ತ್ರೈಸ್ಸಮಾಹತಃ। ಮಹೀಧರಇವಾಂಭೋದೈರ್ಧಾರಾಶತಸಮುಕ್ಷಿತಃ || ೧೩ || ಸದುರಾತ್ಮಾ ಸಮುದ್ಯಮ್ಯಕಾಲದಂಡೋಪಮಾಂಗದಾಮ್ । ಪ್ರವಿವೇಶ ತತಸ್ಸೈನ್ಯಂನಯನ್ಯಕ್ಷಾನ್ಯಮಕ್ಷಯಮ್ ||೧೪|| ಸಕಕ್ಷಮಿವವಿಸ್ತೀರ್ಣಂಶುಷ್ಕೇಂಧನಸಮಾವೃತಮ್ । ವಾತೇನಾಗ್ನಿರಿವಾಯತ್ತೋ ದಹತ್ಸೈನ್ಯಂಸುದಾರುಣಮ್ ||೧೫|| ತೈಸ್ತು ತಸ್ಯಮೃಥೇಮಾತ್ಯೈರ್ಮಹೋದರಶುಕಾದಿಭಿಃ । ಅಲ್ಪಾವಶಿಷ್ಟಾಸ್ತೇಯಕ್ಷಾಃಕೃತಾವಾತೈರಿವಾಂಬುದಾಃ ||೧೬|| ಕೇಚಿತ್ತ್ವಾಯುಧಭಗ್ನಾಂಗಾಃಪತಿತಾಸ್ಸಮರಕ್ಷಿತೌ । ಓಷ್ಠಾಂಸ್ಸ್ವದಶನೈಸ್ತೀಕ್ಷ್ಣೈರ್ದಂಶಂತೋಭುವಿಪಾತಿತಾಃ||೧೭|| ಭಯಾದನ್ಯೋನ್ಯಮಾಲಿಂಗ್ಯಭ್ರಷ್ಟಶಸ್ತ್ರಾರಣಾಜಿರೇ। ನಿಷೇತುಸ್ತೇತದಾಯಕ್ಷಾಃಕೂಲಾಜಲಹತಾಇವ ||೧೮|| ಹತಾನಾಂಸ್ವರ್ಗಸಂಸ್ಥಾನಾಂಯುಧ್ಯತಾಂಪೃಥಿವೀತಲೇ । ಪ್ರೇಕ್ಷತಾಮೃಷಿಸಂಘಾನಾಂನಬಭೂವಾಂತರಂದಿವಿ ||೧೯|| ಏತಸ್ಮಿನ್ನಂತರೇರಾಮವಿಸ್ತೀರ್ಣಬಲವಾನಹಃ । ಆಗಮತ್ಸುಮಹಾನ್ಯಕ್ಷೋ

---

ವಣನು, ವರ್ಷಮಾಣೈಃ-ಮಳೆಯಂಸುರಿಯುತಿರುವ, ಘನೈರಿವ-ಮೇಘಗಳೋಪಾದಿಯಾಗಿ, ಯಕ್ಷೇಂದ್ರೈಃ-ಯಕ್ಷಶ್ರೇಷ್ಠರಿಂದ, ಸನ್ನ್ಯರುಧ್ಯತ- ತಡೆಯಲ್ಪಟ್ಟನು ||೧೨|| ವೀರಃ-ಶೂರನಾದ ರಾವಣನು, ಯಕ್ಷೈಃ-ಯಕ್ಷರಿಂದ, ಶಸ್ತ್ರೈಃ-ಶಸ್ತ್ರಗಳಿಂದ, ಸಮಾಹತಃ-ಹೊಡೆಯಲ್ಪಟ್ಟವನಾದರು, ಅಂಭೋದೈಃ-ಮೇಘಗಳಿಂದ, ಧಾರಾಶತಸಮುಕ್ಷಿತಃ-ಅನೇಕಧಾರೆಗಳಿಂದ ನೆನೆಯಲ್ಪಟ್ಟ, ಮಹೀಧರಇವ-ಪರ್ವತದಂತೆ, ವ್ಯಥಾಂ-ವ್ಯಸನವನ್ನು, ನಚಕುರುತೇ-ಮಾಡಲಿಲ್ಲ ||೧೩|| ದುರಾತ್ಮಾ-ದುರ್ಬುದ್ಧಿಯುಳ್ಳ, ಸಃ-ಆ ರಾವಣನು, ತತಃ-ಬಳಿಕ, ಕಾಲದಂಡೋಪಮಾಂ-ಯಮದಂಡಕ್ಕೆ ಸಮಾನವಾದ, ಗದಾಂ-ಗದಾಯುಧವನ್ನು, ಸಮುದ್ಯಮ್ಯ-ಯೆತ್ತಿಕೊಂಡು, ಯಕ್ಷಾನ್-ಯಕ್ಷರನ್ನು, ಯಮಕ್ಷಯಂ-ಯಮಾಲಯವನ್ನು, ನಯನ್-ಹೊಂದಿಸುತಿರುವನಾಗಿ ಸೈನ್ಯಂ-ಸೇನೆಯನ್ನು, ಪ್ರವಿವೇಶ-ಹೊಕ್ಕನು ||೧೪|| ಸಃ-ಅವನು, ವಿಸ್ತೀರ್ಣಂ-ವಿಸ್ತಾರವಾದ, ಶುಷ್ಕೇಂಧನ ಸಮಾವೃತಂ-ಒಣಗಿದ ಕಟ್ಟಿಗೆಗಳಿಂದ ವ್ಯಾಪ್ತವಾದ, ಕಕ್ಷಮಿವ-ಪೊದೆಯನ್ನಂತೆ, ಸುದಾರುಣಂ-ಭಯಂಕರವಾದ, ಸೈನ್ಯಂ-ಸೇನೆಯನ್ನು, ವಾತೇನ-ಘಾಳಿಯಿಂದ, ಆಯತ್ತಃ-ಯುಕ್ತವಾದ, ಅಗ್ನಿರಿವ-ಅಗ್ನಿಯಂತೆ, ಅದಹತ್-ದಹಿಸಿದನು ||೧೫|| ಮೃಥೇ-ಕಾಳಗದಲ್ಲಿ, ತಸ್ಯ-ಆ ರಾವಣನ, ಅಮಾತ್ಯೈಃ-ಮಂತ್ರಿಗಳಾದ, ಮಹೋದರಶುಕಾದಿಭಿಃ-ಮಹೋದರ, ಶುಕನೇ ಮೊದದಲಾಗುಳ್ಳ, ತೈಸ್ತು-ಆ ರಾಕ್ಷಸರಿಂದಲಾದರೆ, ತೇಯಕ್ಷಾಃ-ಆ ಯಕ್ಷರು, ವಾತೈಃ-ವಾಯುಗಳಿಂದ, ಅಂಬುದಾಇವ-ಮೇಘಗಳಂತೆ, ಅಲ್ಪಾವಶಿಷ್ಟಾಃ-ಸ್ವಲ್ಪ ಉಳಿದಿರುವರಾಗಿ, ಕೃತಾಃ-ಮಾಡಲ್ಪಟ್ಟರು ||೧೬||ಕೇಚಿತ್-ಕೆಲವರು, ಆಯುಧಭಗ್ನಾಂಗಾಃ-ಆಯುಧಗಳಿಂದ ಮುರುದುಹೋದ ಅವಯವಗಳುಳ್ಳವರಾಗಿ, ಸಮರಕ್ಷಿತೌ - ಯುದ್ಧಭೂಮಿಯಲ್ಲಿ, ಪತಿತಾಃ-ಬಿದ್ದುಹೊದರು,(ಕೇಚಿತ್-ಇನ್ನು ಕೆಲವರು)ತೀಕ್ಷ್ಣೈಃ-ಹರಿವಾದ, ಸ್ವದಶನೈಃ-ತಮ್ಮ ಹಲ್ಲುಗಳಿಂದ, ಓಷ್ಠಾನ್-ತುಟಿಗಳನ್ನು, ದಂಶಂತಃ-ಕಚ್ಚಿಕೊಂಡವರಾಗಿ, ಭುವಿ-ನೆಲದಲ್ಲಿ, ಪಾತಿತಾಃ-ಬೀಳಿಸಲ್ಪಟ್ಟರು|| ತದಾ-ಆ ಕಾಲದಲ್ಲಿ, ತೇಯಕ್ಷಾಃ-ಆಯಕ್ಷರು, ರಣಾಜಿರೇ-ಯುದ್ಧರಂಗದಲ್ಲಿ, ಭ್ರಷ್ಟಶಸ್ತ್ರಾಃ-ಜಾರಿಹೋದ ಶಸ್ತ್ರಗಳುಳ್ಳವರಾಗಿ, ಭಯಾತ್- ಭೀತಿಯುಡೆಯಿಂದ, ಅನ್ಯೋನ್ಯಂ-ಒಬ್ಬರಿಗೊಬ್ಬರು, ಆಲಿಂಗ್ಯ-ಅಪ್ಪಿಕೊಂಡು, ಜಲಹತಾಃ-ನೀರಿಂದ ಹೊಡೆಯಲ್ಪಟ್ಟ, ಕೂಲಾಇವ-ಧಡೆಗಳೋಪಾದಿಯಲ್ಲಿ, ನಿಪೇತುಃ-ಬಿದ್ದುಹೋದರು||೧೮||ಹತಾನಾಂ-ಸತ್ತವರಿಗು,ಸ್ವರ್ಗಸಂಸ್ಥಾನಾಂ-ಸ್ವರ್ಗದಲ್ಲಿರುವವರಿಗು,ಪೃಥಿವೀತಲೇ-ಭೂಮಿಯಲ್ಲಿ,ಯುಧ್ಯತಾಂ-ಯುದ್ಧಮಾಡುತಿರುವವರಿಗು, ಪ್ರೇಕ್ಷತಾಂ-ನೋಡುತಿರುವ, ಋಷಿಸಂಘಾನಾಂ-ಋಷಿಗಳ ತಂಡೆಗಳಿಗು, ದಿವಿ-ಅಂತರಿಕ್ಷದಲ್ಲಿ, ಅಂತರಂ-ಅವಕಾಶವು, ( ಅಥವಾ ಭೇದವು) ನಬಭೂವ-ಆಗಲಿಲ್ಲ (ತೋರಲಿಲ್ಲ) ||೧೯|| ಹೆ ರಾಮ ಎಲೈ ಶ್ರೀರಾಮನೆ,ಏತಸ್ಮಿನ್ನಂತರೇ-ಇಷ್ಟರಲ್ಲಿ, ವಿಸ್ತೀರ್ಣಬಲವಾಹನಃ-ಅತಿಶಯವಾದ ಬಲವು ವಾಹನವೂವುಳ್ಳ, ನಾಮ್ನಾ ಹೆಸರಿನಿಂದ, ಸಂಯೋಧಕಂಟಕಃ-ಸಂಯೊಧ ಕಂಟಕನೆಂಬ, ಸುಮಹಾನ್-ದೊಡ್ಡವನಾದ,ಯಕ್ಷಃ-ಯಕ್ಷನು, ಆಗಮತ್-

---

ರಿಯುತಿರುವ ಮೇಘಗಳಿಂದ ಬೆಟ್ಟದೋಪಾದಿಯಾಗಿ ಆ ಯಕ್ಷರಿಂದ ಮುಚ್ಚಲ್ಪಟ್ಟನು ||೧೨||ಆ ಸಮಯದಲ್ಲಿ ಕಡುಶೂರನಾದ ಆ ರಾವಣನು ಯಕ್ಷರಿಂದಬಲು ಶಸ್ತ್ರಗಳಿಂದ ಹೊಡೆಯಲ್ಪಟ್ಟವನಾಗಿ,ಮಳೆಯಿಂದನೆನೆಯುತಿರುವ ಮಹಾಬೆಟ್ಟದಂತೆ ಅಬಾಧಿತನಾಗಿದ್ದನು ||೧೩||ಆಗ ಆದುರಾತ್ಮನಾದ ದಶಗ್ರೀವನು ಯಮದಂಡ ಸದೃಶವಾದ ಗದಾಯುಧವಂ ಗ್ರಹಿಸಿ, ಯಕ್ಷರನ್ನೆಲ್ಲ ಯಮಮಂದಿರವಂ ಹೊಂದಿಸುತಿರುವನಾಗಿ, ಆಸೈನ್ಯವಂ ಹೊಕ್ಕು, ಅಗ್ನಿಯು ಒಣಗಿದ ಕಾಷ್ಠಗಳುಳ್ಳ ವಿಸ್ತಾರವಾದ ಕಾಡನ್ನು ದಹಿಸುವತೆರದಿ ಕಡುಭಯಂಕರವಾಗಿ ಆ ಮಹಾ ಸೈನ್ಯವನ್ನು ಸುಡುತಿದ್ದನು ||೧೫||ಆ ರಣರಂಗದಲ್ಲಿ ಮಹೋದರನೇ ಮೊದಲಾದ ಮಂತ್ರಿಗಳಿಂದ ಆ ಯಕ್ಷರು ಜಂಝಾಮಾರುತದಿಂದ ಮೇಘಗಳು ಸ್ವಲ್ಪ ಉಳಿಯುವಂತೆ ಅಲ್ಪವಾಗಿ ಮಾಡಲ್ಪಟ್ಟರು ||೧೬|| ಆ ರಣರಂಗದಲ್ಲಿ ಕೆಲಯಕ್ಷರು ಆಯುಧಗಳಿಂದ ಭಗ್ನವಾದ ಅಂಗಗಳುಳ್ಳವರಾಗಿಯು ಮತ್ತೆ ಕೆಲಬರು ತೀಕ್ಷ್ಣವಾದ ದಂತಗಳಿಂದ ತುಟಿಗಳಂ ಕಚ್ಚಿಕೊಂಡವರಾಗಿಯುಭೂಮಿಯಲ್ಲಿ ಬೀಳುತಿದ್ದರು||೧೭|| ಆ ಸಮಯದಲ್ಲಿ ಭ್ರಷ್ಟವಾದ ಶಸ್ತ್ರಗಳುಳ್ಳ ಆಯಕ್ಷರೆಲ್ಲರು ಭಯದಿಂದ ಒಬ್ಬರಿಗೊಬ್ಬರು ಅಪ್ಪಿಕೊಂಡವರಾಗಿ, ನೀರಿನಿಂದ ಕಿತ್ತುಹೋದ ತೀರದತೆರದಿ ಬಿದ್ದು ಹೋದರು ||೧೮||ಆಸಂಗರದಲ್ಲಿ ಮರಣವನ್ನೈದಿ ಸ್ವರ್ಗಸ್ಥರಾದ ಕಾರಣ ಅಂಬರದಲ್ಲಿರು ತಿರುವರಾಗಿ ವೀಕ್ಷಿಸುತಿರುವ ಯಕ್ಷರಿಗು ಮತ್ತು ಋಷಿಸಂಘಗಳಿಗು ಸಹ. ಅಂತರಿಕ್ಷದಲ್ಲಿ ಯಡವಿಲ್ಲದೇ ಹೋಯಿತು ||೧೯|| ಎಲೈ ಶ್ರೀರಾಮನೆ! ಇಂಥಾ ಸಮಯದಲ್ಲಿ ಕಡು ಪರಾಕ್ರಮಿಯಾದ ಸಂಯೊಧ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಾಮ್ನಾ ಸಂಯೋಧಕಂಟಕಃ ॥೨೦॥ ತೇನಯಕ್ಷೇಣಮಾರೀಚೋವಿಷ್ಣುನೇವಸಮಾಹತಃ । ಪಾತಿತಃಪೃಥಿವೀಂಭೇಜೇಕ್ಷೀಣ ಪುಣ್ಯಇವಾಂಬರಾತ ॥೨೧॥ ಪ್ರಾಪ್ತ ಸಂಜ್ಞೋ ಮುಹೂರ್ತೇನವಿಶ್ರಮ್ಯಚನಿಶಾಚರಃ । ತಂಯಕ್ಷಂಯೋಧಯಾಮಾಸಸ ಚಭಗ್ನಃಪ್ರದುದ್ರುವೆ ॥೨೨॥ ತತಃಕಾಂಚನಚಿತ್ರಾಂಗಃವೈಡೂರ್ಯರಜತೋಕ್ಷಿತವ್ । ಮರ್ಯಾದಾಂದ್ವಾರಪಾಲಾನಾಂ ತೋರಣಂತತ್ಸಮಾವಿಶತ ॥ ೨೩ ॥ ತತೋರಾಮದಶಗ್ರೀವಂಪ್ರವಿಶಂತಂದಶಾನನವ್ । ಸೂರ್ಯಭಾನುರಿತಿಖ್ಯಾತೋದ್ವಾ ರಪಾಲೋನ್ಯರೋಧಯುತ ॥೨೪ ॥ ಸತೇನವಾರಿತೋರಾರ್ಜ ನಸ್ಥಾತಿಷ್ಟ ಚ್ಚ ರಾಕ್ಷಸಃ । ತತಸ್ತೋರಣಮುತ್ಪಾಟ್ಯ ತೇನಯಕ್ಷೇ ಣತಾಡಿತಃ ॥೨೫॥ ರಾಕ್ಷಸೋಯಕ್ಷವರ್ಯೇಣತೋರಣೇನಸಮಾಹತಃ। ನಮೃತಿಂಪ್ರಯಯೌರಾಮವರದಾನಾತ್ಸ್ವಯಂಭು ವಃ ॥೨೬॥ ಸತುತೇನೈವತಂಯಕ್ಷಂತೋರಣೇನಸಮಾಹನತ ।ನಾದೃಶ್ಯತತದಾಯಕ್ಷೋಭಸ್ಮ ತೇನಕೃತಸ್ತುಸಃ॥೨೭॥ ತತಃ ಪ್ರದುದ್ರುವುಸ್ಸರ್ವೆಯಕ್ಷಾದೃಷ್ಟ್ವಾಪರಾಕ್ರಮವ್। ತತೋನದೀರ್ಗುಹಾಶ್ಚೈವವಿವಿಶುರ್ಭಯಪೀಡಿತಾಃ ॥೨೮॥

—…*ಇತಿ ಶ್ರೀಮದುತ್ತರ ರಾಮಾಯಣೆ ಚತುರ್ದಶ ಸ್ಸರ್ಗಃ.*…—

ಬಂದನು ॥೨೦॥ ತೇನಯಕ್ಷೇಣ–ಆ ಯಕ್ಷನಿಂದ, ಮಾರೀಚಃ–ಮಾರೀಚನು, ವಿಷ್ಣುನಾ–ವಿಷ್ಣುವಿನಿಂದ, ಸಮಾಹತಃಇವ–ಹೊಡೆಯಲ್ಪಟ್ಟವನಂತೆ, ಪಾತಿತಃ–ಬೀಳಿಸಲ್ಪಟ್ಟವನಾಗಿ, ಕ್ಷೀಣಪುಣ್ಯಃಇವ–ನಶಿಸಿದಪುಣ್ಯವುಳ್ಳವನಂತೆ, ಅಂಬರಾದಿವ–ಅಂತರಿಕ್ಷದ ದೆಸೆಯಿಂದ,ಪೃಥಿವೀಂ–ಭೂಮಿಯನ್ನು, ಭೇಜೆ–ಹೊಂದಿದನು॥ ನಿಶಾಚರಃ–ರಾಕ್ಷಸನಾದ ಮಾರೀಚನು, ಮುಹೂರ್ತೇನ–ಮೂಹೂರ್ತಮಾತ್ರದಿಂದ, ಪ್ರಾಪ್ತಸಂಜ್ಞಃ–ಹೊಂದಲ್ಪಟ್ಟ ಪ್ರಜ್ಞೆಯುಳ್ಳವನಾಗಿ, ವಿಶ್ರಮ್ಯ–ಸಮಾಧಾನಗೊಂಡು, ತಂಯಕ್ಷಂ–ಆ ಯಕ್ಷನನ್ನು ಕುರಿತು, ಯೊಧಯಾಮಾಸ–ಯುದ್ಧಮಾಡಿದನು, ಸಚ–ಯೋಧಕಂಟಕನೊಡನೆ, ಭಗ್ನಃ–ಸೋತು ಹೋದವನಾಗಿ, ಪ್ರದುದ್ರುವೆ–ಓಡಿಯೋದನು ॥ತತಃ–ಬಳಿಕ, ಕಾಂಚನಚಿತ್ರಾಂಗಃ–ಭಂಗಾರದ ರೇಖೆಗಳಿಂದ ವಿಚಿತ್ರವಾದ ಅವಯವಗಳುಳ್ಳ ರಾವಣನು, ವೈಡೂರ್ಯರಜತೋಕ್ಷಿತಂ–ವೈಡೂರ್ಯಗಳಿಂದಲು ಬೆಳ್ಳಿಯಿಂದಲು ಕೆತ್ತಲ್ಪಟ್ಟ,ದ್ವಾರಪಾಲಾನಾಂ–ದ್ವಾರರಕ್ಷಕರಿಗೆ,ಮರ್ಯಾದಾಂ–ಅವಧಿಸ್ಥಾನವಾದ,ತತ್ತೋರಣಂ–ಆಊರು ಬಾಗಿಲನ್ನು, ಸಮಾವಿಶತ್–ಹೊಕ್ಕನು ॥೨೩॥ ಹೇರಾಮ–ಎಲೈ ಶ್ರೀರಾಮನೆ, ತತಃ–ಬಳಿಕ, ಪ್ರವಿಶಂತಂ–ಹೊಕ್ಕುತಿರುವ, ದಶಗ್ರೀವಂ–ಹತ್ತುಕಂಠಗಳುಳ್ಳ, ದಶಾನನಂ–ರಾವಣನನ್ನು, ಸೂರ್ಯಭಾನುರಿತಿ, ಸೂರ್ಯಭಾನುನೆಂದು, ಖ್ಯಾತಃ–ಪ್ರಖ್ಯಾತನಾದ, ದ್ವಾರಪಾಲಃ–ದ್ವಾರಪಾಲಕನು, ನ್ಯರೋಧಯುತ್–ತಡೆಪಡಿಸಿದನು ॥೨೪॥ ಹೇರಾರ್ಜ–ಎಲೈ ಶ್ರೀರಾಮನೆ, ತೇನ–ಆ ದ್ವಾರಪಾಲಕನಿಂದ, ವಾರಿತಃ–ತಡೆಯಲ್ಪಟ್ಟ, ಸರಾಕ್ಷಸಃ–ಆ ರಾವಣನು ನಾತಿಷ್ಠತ್–ನಿಲ್ಲಲಿಲ್ಲವಪ್ಪೆ ತತಃ–ಬಳಿಕ, ತೇನಯಕ್ಷೇಣ–ಆ ಯಕ್ಷನಿಂದ, ತೊರಣಂ–ತೋರಣದಂಡವನ್ನು, ಉತ್ಪಾಟ್ಯ–ಕಿತ್ತುಕೊಂಡು, ತಾಡಿತಃ–ಹೊಡೆಯಲ್ಪಟ್ಟನು ॥೨೫॥ ಹೇರಾಮ–ಎಲೈ ಶ್ರೀರಾಮನೆ, ರಾಕ್ಷಸಃ–ಅಸುರನಾದ ರಾವಣನು, ಯಕ್ಷವರ್ಯೇಣ–ಯಕ್ಷಶ್ರೇಷ್ಠನಿಂದ, ತೋರಣೇನ–ತೋರಣದಂಡದಿಂದ, ಸಮಾಹತಃ–ಹೊಡೆಯಲ್ಪಟ್ಟವನಾಗಿ, ಸ್ವಯಂಭುವಃ–ಬ್ರಹ್ಮನ, ವರದಾನಾತ್–ವರಪ್ರದಾನದಿಂದ, ಮೃತಿಂ–ಮರಣವನ್ನು ನಪ್ರಯಯೌ–ಹೊಂದಲಿಲ್ಲ ॥೨೬॥ ಸತು–ಆ ರಾವಣನಾದರೆ, ತೇನತೋರಣೇನೈವ–ಅದೇ ತೋರಣದಿಂದಲೆ, ತಂಯಕ್ಷಂ–ಆ ದ್ವಾರಪಾಲಕನನ್ನು ಸಮಾಹನತ್–ಹೊಡದನು. ತದಾ–ಆ ಕಾಲದಲ್ಲಿ, ಸಯಕ್ಷಃ–ಆ ಯಕ್ಷನು, ತೇನ–ಆ ತೋರಣದ ದಂಡದಿಂದ, ಭಸ್ಮಕೃತಃ–ಭಸ್ಮೀಕೃತನಾಗಿ, ನಾದೃಶ್ಯತ–ಕಾಣದೇಹೋದನು ॥೨೭॥ ತತಃ–ಬಳಿಕ, ಸರ್ವೆಯಕ್ಷಾಃ–ಯಕ್ಷರೆಲ್ಲರು, ಪರಾಕ್ರಮಂ–ಸಾಮರ್ಥ್ಯವನ್ನು, ದೃಷ್ಟ್ವಾ–ಕಂಡು, ಪ್ರದುದ್ರುವುಃ–ಓಡಿಹೋದರು, ತತಃ–ಆರಾವಣನ ದೆಸೆಯಿಂದ ಭಯಪೀಡಿತಾಃ–ಭೀತಿಗೊಂಡವರಾಗಿ, ನದೀಃ–ನದಿಗಳನ್ನು, ಗುಹಾಶ್ಚಾಪಿ–ಗುಹೆಗಳನ್ನೂ ಕೂಡ, ವಿವಿಶುಃ–ಹೊಕ್ಕರು ॥೨೮॥

—…*ಶ್ರೀಮದುತ್ತರರಾಮಾಯಣೆ ಚತುರ್ದಶಸ್ಸರ್ಗಃ.*…—

ಕಂಟಕನೆಂಬ ಮಹಾ ಯಕ್ಷನು ಉತ್ತಮ ವಾಹನಾ ರೂಢನಾಗಿ ಆ ಹವಕೆಬಂದನು॥೨೦॥ ಆ ಯಕ್ಷನಿಂದ ಮಾರೀಚನು ವಿಷ್ಣುವಿನಿಂದ ಹೊಡೆಯಲ್ಪಟ್ಟವನಂತೆ ಹೊಡೆಯಲ್ಪಟ್ಟವನಾಗಿ ಪುಣ್ಯಹೀನನಾದವನು ಗಗನಮಾರ್ಗದಿಂದ ಭೂಮಿಯಲ್ಲಿ ಬಿದ್ದು ಹೋಗುವಂತೆ ಬಿದ್ದುಹೋದನು ॥೨೧॥ ಆ ಬಳಿಕ ಸ್ವಲ್ಪಕಾಲವು ಮೂರ್ಛಾಕ್ರಾಂತನಾಗಿದ್ದು, ಪುನಹಾ ಪ್ರಜ್ಞೆಯನ್ನೈದಿ ವಿಶ್ರಮಿಸಿಕೊಂಡು ಆ ಯಕ್ಷರೊಡನೆ ಕಾಳಗವಂಗೈದು ಅವನನ್ನೋಡಿಸಿದನು॥೨೨॥ ತದನಂತರ ಕಾಲದಲ್ಲಿ, ಸುವರ್ಣಮಯವಾಗಿಯು, ವೈಡೂರ್ಯಮಣಿಗಳಿಂದಲು ಕೆತ್ತಲ್ಪಟ್ಟದ್ದಾಗಿಯು, ಮತ್ತು, ದ್ವಾರಪಾಲಕ ರೆಲ್ಲರಿಗು ಆ ವಾಸಸ್ಥಾನವಾಗಿಯು ಇರುವ ತೋರಣವ ಹೊಕ್ಕನು ॥೨೩॥ ಎಲೈ ರಘುಕುಲತಿಲಕನೆ!ಕೇಳು, ಆಬಳಿಕ ಕಂಡು ತೆಜಸ್ವಿಯಾದ ಸೂರ್ಯಭಾನುವೆಂಬ ದ್ವಾರಪಾಲಕನು, ಈ ಪರಿಯಾಗಿ ಹೊಕ್ಕುತ್ತಿರುವ ಆ ರಾವಣನಂ ಕಂಡು ತಡೆಪಡಿಸಿದರೂ, ನಿಲ್ಲದೆ ನುಗ್ಗಿ ಬರುತಿದ್ದನು, ಆಗ ಆಯಕ್ಷನು ತೋರಣ ದಂಡೋತ್ಪಾಟನೆಯಂ ಗೈದು ಅದರಿಂದ ದಶಕಂಠನಂ ಹೊಡದನು ॥೨೫॥ ಎಲೈ ರಘುನಾಯಕನೇ!ಆ ಯಕ್ಷನಿಂ ದೀಪರಿಯಾಗಿ ಹೊಡೆಯಲ್ಪಟ್ಟವನಾದರು, ರಾವಣನು ಬ್ರಹ್ಮನ ವರದಿಂದ ಮೃತನಾಗಲಿಲ್ಲ ॥೨೬॥ ಬಳಿಕಾ ರಾವಣನು ಅದೇತೋರಣ ದಂಡದಿಂದಲೇ ಆಯಕ್ಷನಂ ತಾಡಿಸಲು ಆ ಯಕ್ಷನು ಭಸ್ಮೀಭೂತನಾಗಿ ಕಣ್ಣಿಗೆ ಕಾಣದಂತೆ ಆದನು ॥೨೭॥ ಆ ಬಳಿಕ ಯಕ್ಷರೆಲ್ಲರು ರಾವಣನ ಪರಾಕ್ರಮವಂಕಂಡು ಹೆದರಿದವರಾಗಿ ಭೀತಿಯಿಂದ ನದಿಗಳಲ್ಲಿಯು ಗುಹೆಗಳಲ್ಲಿಯು ಹೊಕ್ಕೊಂಡರು ॥೨೮॥

—…ಶ್ರೀಮದುತ್ತರ ರಾಮಾಯಣದೊಳ್ ಹದಿನಾಲ್ಕನೇ ಸರ್ಗಂ ಮುಗಿದುದು.…—

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತತಸ್ತೇ ವಿದ್ರುತಾಃ ದೃಷ್ಟ್ವಾ ಯಕ್ಷಾಃ ಶತಸಹಸ್ರಶಃ । ಸ್ವಯಮೇವ ಧನಾಧ್ಯಕ್ಷೋ ನಿರ್ಜಗಾಮ ರಣಂ ಪ್ರತಿ ॥೧॥ ತತ್ರ ಮಾಣಿಚರೋ ನಾಮ ಯಕ್ಷಃ ಪರಮದುರ್ಜಯಃ । ವೃತೋ ಯಕ್ಷಸಹಸ್ರೈಸ್ಸ ಚತುರ್ಭಿಸ್ಸಮಯೋಧಯತ ॥೨॥ ತೇ ಗದಾಮುಸಲಪ್ರಾಸಶಕ್ತಿತೋಮರಮುದ್ಗರೈಃ । ಅಭಿಘ್ನಂತೋ ರಣೇ ಯಕ್ಷಾ ರಾಕ್ಷಸಾಂಶ್ಚ ಸಹಸ್ರಶಃ ॥ ೩ ॥ ತತಃ ಪ್ರಹಸ್ತೇನ ತದಾ ಸಹಸ್ರಂ ನಿಹತಂ ರಣೇ । ಮಹೋದರೇಣ ಗದಯಾ ಸಹಸ್ರಮಪರಂ ಹತಂ ॥೪॥ ಕ್ರುದ್ಧೇನ ಚ ತದಾ ರಾಮ ಮಾರೀಚೇನ ದುರಾತ್ಮನಾ । ನಿಮೇಷಾಂತರಮಾತ್ರೇಣ ದ್ವೇ ಸಹಸ್ರೇ ನಿಪಾತಿತೇ ॥ ೫ ॥ ಧೂಮ್ರಾಕ್ಷೇಣ ಸಮಾಗಮ್ಯ ಮಾಣಿಭದ್ರೋ ಮಹಾರಣೇ । ಮುಸಲೇನೋರಸಿ ಕ್ರೋಧಾತ್ತಾಡಿತೋ ನ ಚ ಕಂಪಿತಃ ॥೬॥ ತತೋ ಗದಾಂ ಸಮಾವಿಧ್ಯ ಮಾಣಿಭದ್ರೇಣ ರಾಕ್ಷಸಃ । ಧೂಮ್ರಾಕ್ಷಸ್ತಾಡಿತೋ ಮೂರ್ಧ್ನಿ ವಿಹ್ವಲೋ ನಿಪಪಾತ ಹ ॥೭॥ ಧೂಮ್ರಾಕ್ಷಂ ತಾಡಿತಂ ದೃಷ್ಟ್ವಾ ಪತಿತಂ ಶೋಣಿತೋಕ್ಷಿತಮ್ । ಅಭ್ಯಧಾವತ್ಸ ಸಂಕ್ರುದ್ಧೋ ಮಾಣಿಭದ್ರಂ ದಶಾನನಃ ॥೮॥ ತಂ ಕ್ರುದ್ಧಮಭಿಧಾವಂತಂ ಯುಗಾಂತಾಗ್ನಿಮಿವೋತ್ಥಿತಮ್ । ಶಕ್ತಿಭಿಸ್ತಾ

---

ಟೀ ॥ ತತಃ-ಬಳಿಕ, ವಿದ್ರುತಾಃ-ಓಡಿಹೋದ, ಶತಸಹಸ್ರಶಃ-ಅನೇಕರಾದ, ತಾನ್ ಯಕ್ಷಾನ್-ಆ ಯಕ್ಷರನ್ನು, ದೃಷ್ಟ್ವಾ-ಕಂಡು, ಧನಾಧ್ಯಕ್ಷಃ-ಕುಬೇರನು, ಸ್ವಯಮೇವ-ತಾನೇ, ರಣಂಪ್ರತಿ-ಯುದ್ಧವಂ ಕುರಿತು, ನಿರ್ಜಗಾಮ-ಹೊರಟನು ॥ ೧ ॥ ತತ್ರ-ಆ ಕಾಳಗದಲ್ಲಿ, ಮಾಣಿಚರೋನಾಮ-ಮಾಣಿಭದ್ರನೆಂಬ, ಪರಮದುರ್ಜಯಃ-ಜಯಿಸಲಸಾಧ್ಯನಾದ, ಸಯಕ್ಷಃ-ಆ ಯಕ್ಷನು, ಚತುರ್ಭಿಃ-ಯಕ್ಷಸಹಸ್ರೈಃ-ನಾಲ್ಕು ಸಾವಿರ ಯಕ್ಷರಿಂದ, ವೃತಃ-ಪರಿವೃತನಾಗಿ, ಸಮಯೋಧಯತ್-ಕಾಳಗವಂಗೈದನು ॥ತೇಯಕ್ಷಾಃ-ಆ ಯಕ್ಷರು, ರಣೇಯುದ್ಧದಲ್ಲಿ, ಗದಾಮುಸಲಪ್ರಾಸಶಕ್ತಿತೋಮರಮುದ್ಗರೈಃ-ಗದಾಯುಧಗಳಿಂದಲು, ಒನಿಕೆಗಳಿಂದಲು ಕತ್ತಿಗಳಿಂದಲು, ಶಕ್ತ್ಯಾಯುಧಗಳಿಂದಲು, ಮರದಿಂದ ಮಾಡಿದ ಆಯುಧಗಳಿಂದಲು, ಕಬ್ಬಿಣದ ಹಾರೆಗಳಿಂದಲು, ಸಹಸ್ರಶಃ-ಅನೇಕರಾದ, ರಾಕ್ಷಸಾನ್-ಅಸುರರನ್ನು, ಅಭಿಘ್ನಂತಃ-ಹೊಡೆಯುತ್ತಿದ್ದರು ॥ತತಃ-ಬಳಿಕ, ತದಾ-ಆ ಕಾಲದಲ್ಲಿ, ರಣೇ-ಕಾಳಗದಲ್ಲಿ, ಪ್ರಹಸ್ತೇನ-ಪ್ರಹಸ್ತನಿಂದ, ಸಹಸ್ರಂ-ಸಾವಿರಮಂದಿಯು, ನಿಹತಂ-ಕೊಲ್ಲಲ್ಪಟ್ಟಿತು, ಮಹೋದರೇಣ-ಮಹೋದರನಿಂದ, ಗದಯಾ-ಗದೆಯೆಂಬಾಯುಧದಿಂದ, ಅಪರಂಸಹಸ್ರಂ-ಇನ್ನೊಂದು ಸಹಸ್ರವು, ಹತಂ-ಸಂಹರಿಸಲ್ಪಟ್ಟಿತು ॥ ೪ ॥ ಹೇರಾಮ-ಎಲೈ ಶ್ರೀರಾಮನೆ ! ತದಾ-ಆ ಕಾಲದಲ್ಲಿ, ಕ್ರುದ್ಧೇನ-ಕುಪಿತನಾದ, ದುರಾತ್ಮನಾ-ದುರ್ಬುದ್ಧಿಯುಳ್ಳ, ಮಾರೀಚೇನಚ-ಮಾರೀಚನಿಂದಲು, ದ್ವೇಸಹಸ್ರೇ-ಯರಡುಸಹಸ್ರಗಳು, ನಿಮೇಷಾಂತರಮಾತ್ರೇಣ-ರೆಪ್ಪೆಹಾಕುವಷ್ಟು ಪರಿಮಿತವಾದ ಕಾಲವಿಶೇಷದಿಂದ, ನಿಪಾತಿತೇ-ಬೀಳಿಸಲ್ಪಟ್ಟವು ॥ ೫ ॥ ಮಹಾರಣೇ-ಯುದ್ಧದಲ್ಲಿ, ಮಾಣಿಭದ್ರಃ-ಮಾಣಿಭದ್ರನೆಂಬವನು, ಧೂಮ್ರಾಕ್ಷೇಣ-ಧೂಮ್ರಾಕ್ಷನೊಡನೆ, ಸಮಾಗಮ್ಯ-ಕೂಡಿ, ಮುಸಲೇನ-ಮುಸಲಾಯುಧದಿಂದ, ಉರಸಿ-ವಕ್ಷಸ್ಥಳದಲ್ಲಿ, ಕ್ರೋಧಾತ್-ಕೋಪದ ದೆಸೆಯಿಂದ, ತಾಡಿತಶ್ಚ-ಹೊಡೆಯಲ್ಪಟ್ಟವನಾದರು, ನಕಂಪಿತಃ-ಚಲಿಸಲಿಲ್ಲ ॥೬॥ ತತಃ-ಬಳಿಕ, ಗದಾಂ ಗದೆಯನ್ನು, ಸಮಾವಿಧ್ಯ-ತಿರುವಿ, ಮಾಣಿಭದ್ರೇಣ-ಮಾಣಿಭದ್ರನಿಂದ, ಮೂರ್ಧ್ನಿ-ಶಿರಸ್ಸಿನಲ್ಲಿ, ತಾಡಿತಃ-ಹೊಡೆಯಲ್ಪಟ್ಟ, ಧೂಮ್ರಾಕ್ಷಃ-ಧೂಮ್ರಾಕ್ಷನೆಂಬ, ರಾಕ್ಷಸಃ-ಅಸುರನು, ವಿಹ್ವಲಸ್ಸನ್-ಸಂಕಟಪಟ್ಟವನಾಗಿ, ನಿಪಪಾತಹ-ಬಿದ್ದನಷ್ಟೆ ॥೭ ॥ ತಾಡಿತಂ-ಹೊಡೆಯಲ್ಪಟ್ಟವನಾಗಿ, ಶೋಣಿತೋಕ್ಷಿತಂ-ರಕುತದಿಂದ ನೆನೆಯಲ್ಪಟ್ಟ, ಪತಿತಂ-ನೆಲಕ್ಕೆ ಬಿದ್ದಿರುವ, ಧೂಮ್ರಾಕ್ಷಂ-ಧೂಮ್ರಾಕ್ಷನನ್ನು, ದೃಷ್ಟ್ವಾ-ಕಂಡು, ಸುಸಂಕ್ರುದ್ಧಃ-ಕಡು ಕೋಪವುಳ್ಳ, ದಶಾನನಃ-ರಾವಣನು, ಮಾಣಿಭದ್ರಂ-ಮಾಣಿಭದ್ರನೆಂಬ ಯಕ್ಷನನ್ನು ಕುರಿತು, ಅಭ್ಯಧಾವತ್-ಓಡಿಬಂದನು ॥ಕ್ರುದ್ಧಂ-ಕೋಪಿಷ್ಠನಾಗಿ, ಅಭಿಧಾವಂತಂ-ಓಡಿಬರುತಿರುವ, ಉತ್ಥಿತಂ-ಮೇಲಕ್ಕೆದ್ದ, ಯುಗಾಂತಾಗ್ನಿಮಿವ-ಪ್ರಳಯಾಗ್ನಿಯಂತಿರುವ, ತಂ-ಆರಾವಣನನ್ನು, ಯಕ್ಷಪುಂಗವಃ-ಯಕ್ಷಶ್ರೇ

---

ಈ ಪರಿಯಾಗಿ ಆ ಯಕ್ಷರೆಲ್ಲರು ಓಡಿ ಹೋದಬಳಿಕ ಕುಬೇರನು ಸ್ವಯಮೇವ ಕಾಳಗವಂ ಕುರಿತುತೆರಳಿದನು॥೧॥ ಆ ರಣರಂಗದಲ್ಲಿ ಕಡು ಪರಾಕ್ರಮಿಯಾದ ಮಾಣಿಭದ್ರನೆಂಬ ಯಕ್ಷ ಶ್ರೇಷ್ಠನು ನಾಲ್ಕು ಸಾವಿರ ಯಕ್ಷರಿಂದೊಡಗೂಡಿ ಕಾಳಗಿಶಿದನು ॥೨॥ ಆ ಯಕ್ಷರು ಗದಾ, ಮುಸಲ, ಪ್ರಾಸ, ಶಕ್ತಿ ತೋಮರಗಳೆಂಬಾಯುಧಗಳಿಂದ ರಣದಲ್ಲಿ ರಾಕ್ಷಸರಂ ಹೊಡದರು ॥೩॥ ಬಳಿಕಾ ಸಮಯದಲ್ಲಿ ಪ್ರಹಸ್ತನು ಒಂದು ಸಹಸ್ರ ಯಕ್ಷರನ್ನು ಮಹೋದರನು ಗದಾ ಪಾಣಿಯಾಗಿ ಮತ್ತೊಂದು ಸಹಸ್ರವನ್ನು ಹೊಡದರು. ಇಷ್ಟರಲ್ಲಿ ದುಷ್ಟನಾದ ಮಾರೀಚನು ಚಂಡಕೋಪಮುಳ್ಳವನಾಗಿ ನಿಮಿಷ ಮಾತ್ರದಲ್ಲಿ ಎರಡು ಸಹಸ್ರ ಸಂಖ್ಯಾಕರಾದ ಯಕ್ಷರನ್ನು ಕುಟ್ಟಿ ಕೆಡಹಿದನು ॥೫॥ ಹೀಗಿರುವಲ್ಲಿ ಆ ಮಾಣಿಭದ್ರನೆಂಬ ಯಕ್ಷನು ಧೂಮ್ರಾಕ್ಷನಿಂದ ವಕ್ಷಸ್ಥಲದಲ್ಲಿ ಮುಸಲಾಯುಧದಿಂದ ಹೊಡೆಯಲ್ಪಟ್ಟವನಾದರು ಚಲಿಸದೇ ಧೈರ್ಯವಾಗಿ ನಿಂತು ಕೊಂಡು ಗದಾಯುಧವಂ ತಿರುವಿ ಧೂಮ್ರಾಕ್ಷನಂ ಹೊಡೆಯಲು ಅವನು ಕಡು ಮೂರ್ಛಿತನಾಗಿ ರಕುತವಂ ಕಕ್ಕುತ್ತ ನೆಲಕ್ಕೆ ಬಿದ್ದು ಹೋದನು ॥೭॥ ಈ ಪರಿಯಾಗಿ ತಾಡಿತನಾದ ಆ ಧೂಮ್ರಾಕ್ಷನಂ ಕಂಡು ಚಂಡಕೋಪಮುಳ್ಳವನಾಗಿ ದಶಕಂಠನು ಆ ಮಾಣಿಭದ್ರನಂ ಕುರಿತು ಓಡಿ ಬಂದನು ॥೮॥ ಆ ಯಕ್ಷ ಮುಖ್ಯನಾದರೆ, ಕಾಲಾಗ್ನಿಯೋಪಾದಿಯಲ್ಲಿ ಕಡು ಕೋಪಿಯಾಗಿ ತನ್ನ ಬಳಿಗೆ ಓಡಿ ಬರುತಿರುವ ಆ ರಾಕ್ಷಸನಾಥನನ್ನು ಮೂರು ಶಕ್ತ್ಯಾಯುಧಗಳಿಂದ ಹೊಡದನು ॥೯॥ ಬಳಿಕಾ ದಶಕಂಠನಾದರೆ, ಶಕ್ತ್ಯಾಯುಧ ಪ್ರಹಾರಂಗಳಂ ಸೈರಿಸಿ ಕೊಂಡು



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಡಯಾಮಾಸ ತಿಸೃಭಿರ್ಯಕ್ಷಪುಂಗವಃ ||೯|| ತತೋವೈರಾಕ್ಷಸೇಂದ್ರಸ್ತು ತಾಡಿತೋಗದಯಾತದಾ | ಮುಕುಟೇಚಾಹನತ್ಕ್ರುದ್ಧಃ ಮುಕುಟಂಪಾರ್ಶ್ವಮಾಗಮತ್ ||೧೦|| ತತಸ್ಸಯುಧ್ಯಮಾನೇನವಿಷ್ಟಬ್ಧೋನವ್ಯಕಂಪತ | ತದಾಪ್ರಭೃತಿರಕ್ಷೋಸೌಪಾರ್ಶ್ವಮೌಳಿರಿತಿಸ್ಮೃತಃ ||೧೧|| ತಸ್ಮಿಂಸ್ತು ವಿಮುಖೇಯಕ್ಷೇಮಾಣಿಭದ್ರೇಮಹಾತ್ಮನಿ | ಸನ್ನಾದಸ್ಸುಮಹಾನ್ರಾಮತಸ್ಮಿನ್ ಶೈಲೇವ್ಯವರ್ಧತ ||೧೨|| ತತೋದೂರಾತ್ಪ್ರದದೃಶೇಧನಾಧ್ಯಕ್ಷೋಗದಾಧರಃ | ಶುಕ್ರಪ್ರೋಷ್ಠಪದಾಭ್ಯಾಂಚಶಂಖಪದ್ಮಸಮಾವೃತಃ ||೧೩|| ಸದೃಷ್ಟ್ವಾಭ್ರಾತರಂಸಂಖ್ಯೇಶಾಪಾದ್ವಿಭ್ರಷ್ಟಗೌರವಂ | ಉವಾಚವಚನಂಧೀಮಾನ್ಯುಕ್ತಂಪೈತಾಮಹೇಕುಲೇ ||೧೪|| ಮಯಾತ್ವಂವಾರ್ಯಮಾಣೋಪಿನಾವಗಚ್ಛಸಿದುರ್ಮತೇ | ಪಶ್ಚಾದಸ್ಯಫಲಂಪ್ರಾಪ್ಯಜ್ಞಾಸ್ಯಸೇನಿರಯಂಗತಃ ||೧೫|| ಯೋಹಿಮೋಹಾದ್ವಿಷಂಪೀತ್ವಾನಾವಗಚ್ಛತಿಮಾನವಃ | ಪರಿಣಾಮೇಸವೈಮೂಢೋಜಾನೀತೇಕರ್ಮಣಃಫಲಂ|| ದೇವತಾನಾಭಿನಂದಂತಿಧರ್ಮಯುಕ್ತೇನಕೇನಚಿತ | ಯೇನತ್ವಮೀದೃಶಂಭಾವಂನೀತಸ್ತನ್ನಾವಬುಧ್ಯಸೇ||೧೬|| ಯೋಹಿಮಾ

---

ಷ್ಠನಾದ ಮಾಣಿಭದ್ರನು, ತ್ರಿಸೃಭಿಃ-ಮೂರಾದ, ಶಕ್ತಿಭಿಃ-ಶಕ್ತಿಗಳಿಂದ, ತಾಡಯಾಮಾಸ-ಹೊಡೆದನು||೯|| ತತಃ-ಬಳಿಕ, ತಾಡಿತಃ-ಶಕ್ತ್ಯಾಯುಧಗಳಿಂದ ಹೊಡೆಯಲ್ಪಟ್ಟ, ರಾಕ್ಷಸೇಂದ್ರಸ್ತು-ರಾವಣನಾದರೆ, ತದಾ-ಆ ಕಾಲದಲ್ಲಿ, ಕ್ರುದ್ಧಃ-ಕೋಪಿಷ್ಠನಾಗಿ,ಗದಯಾ-ಗದಾಯುಧದಿಂದ, ಮುಕುಟೇಚ-ಕಿರೀಟದಲ್ಲಿ,ಅಹನತ್-ಹೊಡೆದನು, ಮುಕುಟಂಚ-ಕಿರೀಟವೂ ಕೂಡ,ಪಾರ್ಶ್ವಂ-ಪಾರ್ಶ್ವಭಾಗವನ್ನು, ಅಗಮತ್-ಹೊಂದಿತು || ೧೦ ||ತತಃ-ಅನಂತರ, ಸಃಯಕ್ಷಃ-ಆಮಾಣಿಭದ್ರನು, ಯುಧ್ಯಮಾನೇನ-ಯುದ್ಧಮಾಡುವ ರಾವಣನಿಂದ,ವಿಷ್ಟಬ್ಧಃ-ಅಡ್ಡಗಿಸಲ್ಪಟ್ಟವನಾದರು,ನವ್ಯಕಂಪತ-ಚಲಿಸಲಿಲ್ಲ, ತದಾಪ್ರಭೃತಿ-ಅದುಮೊದಲು,ಪಾರ್ಶ್ವಮೌಳಿರಿತಿ-ಪಾರ್ಶ್ವಮೌಳಿಯೆಂದು,ಸ್ಮೃತಃ-ಹೇಳಲ್ಪಡುತ್ತಾನೆ ||೧೧||ಯಕ್ಷೇ-ಯಕ್ಷನಾದ,ಮಹಾತ್ಮನಿ-ಮಹಾನುಭಾವನಾದ, ತಸ್ಮಿನ್ಮಾಣಿಭದ್ರೇ-ಆ ಮಾಣಿಭದ್ರನು, ವಿಮುಖೇಸತಿ-ಪರಾಙ್ಮುಖನಾಗುತಿರಲೀಕಾಗಿ, ಹೇರಾಮ-ಎಲೈ ಶ್ರೀರಾಮನೆ, ತಸ್ಮಿನ್ಶೈಲೇ-ಆ ಕೈಲಾಸಪರ್ವತದಲ್ಲಿ, ಸುಮಹಾನ್ಸನ್ನಾದಃ-ಮಹಾನಿರ್ಘೋಷವೆಯು, ವ್ಯವರ್ಧತ-ವೃದ್ಧಿಹೊಂದಿತು|| ೧೨ || ತತಃ-ಬಳಿಕ,ಧನಾಧ್ಯಕ್ಷಃ-ಧನಪತಿಯಾದ ಕುಬೇರನು,ಶುಕ್ರಪ್ರೋಷ್ಠಪದಾಭ್ಯಾಂಚ-ಶುಕ್ರಪ್ರೋಷ್ಠಪದರೆಂಬ ಮಂತ್ರಿಗಳಿಂದಲು, ಶಂಖಪದ್ಮಸಮಾವೃತಃ-ಶಂಖಪದ್ಮರೆಂಬ ನಿಧ್ಯಭಿಮಾನಿದೇವತೆಗಳಿಂದಲು ಕೂಡಿದವನಾಗಿ, ದೂರಾತ್-ದೂರದಲ್ಲಿ, ಪ್ರದದೃಶೇ-ಕಾಣಲ್ಪಟ್ಟನು || ೧೩ || ಧೀಮಾನ್-ಬುದ್ಧಿಶಾಲಿಯಾದ, ಸಃ-ಆ ಕುಬೇರನು, ಶಾಪಾತ್-ಪಿತೃಶಾಪದ ದೆಸೆಯಿಂದ, ವಿಭ್ರಷ್ಟಗೌರವಂ-ಗತವಾದ ಗುರುತ್ವವುಳ್ಳ, ಭ್ರಾತರಂ-ತಮ್ಮನಾದ ರಾವಣನನ್ನು, ಸಂಖ್ಯೇ-ಯುದ್ಧದಲ್ಲಿ, ದೃಷ್ಟ್ವಾ-ಕಂಡು, ಪೈತಾಮಹೇ-ಬ್ರಹ್ಮಸಂಬಂಧವಾದ, ಕುಲೇ-ವಂಶದಲ್ಲಿ, ಯುಕ್ತಂ-ಉತ್ಪತ್ತಿಗೆ ಯೋಗ್ಯವಾದ, ವಚನಂ-ಮಾತನ್ನು, ಉವಾಚ-ಪೇಳಿದನು|| ೧೪ ||ಹೇದುರ್ಮತೇ-ಎಲೈ ಕೆಟ್ಟಬುದ್ಧಿಯುಳ್ಳವನೇ!ಮಯಾ-ನನ್ನಿಂದ, ತ್ವಂ-ನೀನು, ವಾರ್ಯಮಾಣೋಪಿ-ಅಧರ್ಮ ಮಾಡಬೇಡೆಂದು ನಿವಾರಿಸಲ್ಪಟ್ಟವನಾದರು, ನಾವಗಚ್ಛಸಿ-ಅರಿತುಕೊಳ್ಳಲಿಲ್ಲ, ಅಸ್ಯ-ಈ ಪಾಪಕೃತ್ಯಕ್ಕೆ, ಫಲಂ-ಫಲವನ್ನು, ಪ್ರಾಪ್ಯ-ಹೊಂದಿ, ನಿರಯಂ-ನರಕವನ್ನು, ಗತಃ-ಹೊಂದಿದವನಾಗಿ, ಪಶ್ಚಾತ್-ಅನಂತರದಲ್ಲಿ, ಜ್ಞಾಸ್ಯಸೇ-ತಿಳಿದು ಕೊಳ್ಳುವಿ || ೧೫ || ಯೋಮಾನವಃ-ಯಾವ ಮನುಷ್ಯನು, ಮೋಹಾತ್-ಅಜ್ಞಾನದಿಂದ, ವಿಷಂ-ವಿಷವನ್ನು, ಪೀತ್ವಾ-ಪಾನಮಾಡಿ, ನಾವಗಚ್ಛತಿ-ತಿಳಿದುಕೊಳ್ಳುವದಿಲ್ಲವೊ, ಸಮೂಢೋವೈ-ಅದೇಮೂಢನೆ, ಕರ್ಮಣಃ-ಕಾರ್ಯದ, ಪರಿಣಾಮೇ-ಪರಿಪಾಕಕಾಲದಲ್ಲಿ, ಫಲಂ-ಫಲವನ್ನು, ಜಾನೀತೇ-ತಿಳಿದುಕೊಳ್ಳುವನಷ್ಟೆ || ೧೬ || ದೇವತಾಃ-ದೇವತೆಗಳು, ಧರ್ಮಯುಕ್ತೇನ-ಧರ್ಮದಿಂದೊಡಗೂಡಿದ, (ತವ-ನಿನ್ನ) ಕೇನಚಿತ್-ಯಾವದೋ ಒಂದು ಕಾರ್ಯದಿಂದ, ನಾಭಿನಂದಂತಿ-ಸಂತೋಷಿಸುವದಿಲ್ಲ, ಯೇನ-ಯಾವ ದೇವತಾ ವೈಮುಖ್ಯದಿಂದ, ತ್ವಂ-ನೀನು ಈದೃಶಂಭಾವಂ-ಇಂಥಾ ಕ್ರೂರಸ್ವಭಾವವನ್ನು, ನೀತಃ-ಹೊಂದಿಸಲ್ಪಟ್ಟವನಾಗಿ, ನಾವಬುಧ್ಯಸೇ-ತಿಳಿಯದೇ ಇದ್ದೀಯೋ || ೧೭ || ಯೋಹಿ-ಯಾವ ಪುರುಷನಾದರೆ, ಮಾತಾಪಿತರೌ-ತಾಯಿತಂದೆಗಳನ್ನು, ಭ್ರಾತೄನ್-ಅಣ್ಣಂದರನ್ನು, ಆಚಾರ್ಯಾಂಶ್ಚ-ಕುಲಗುರುಗಳನ್ನು, ಅವಮನ್ಯತೆ-ಅವಮಾನಮಾಡುವನೊ, ಸಃ-ಆ ಪುರುಷನು,ಪ್ರೇತರಾಜ ವಶಂಗತಃ-ಯ

---

ಗದಾಯುಧದಿಂದ ಮಾಣಿಭದ್ರನ ಕಿರೀಟದ ಮೇಲೆ ಹೊಡೆಯಲು, ಆಗ ಆ ಮುಕುಟವು ಪಾರ್ಶ್ವವಂ ಹೊಂದಿತು||೧೦|| ಆ ಸಮಯದಲ್ಲಿ ಆ ಯಕ್ಷನು ಸ್ತಂಭೀಭೂತನಾಗಿ ಮಾಡಲ್ಪಟ್ಟವನಾದರು ಚಲಿಸಲೇ ಇಲ್ಲ. ಅದುಮೊದಲುಗೊಂಡು ಆತನಿಗೆ ಪಾರ್ಶ್ವಮೌಳಿಯೆಂಬದಾಗಿ ಪೆಸರುಂಟಾಯಿತು ||೧೧|| ಎಲೈ ರಘುಕುಲನಂದನನೇ!ಮಹಾತ್ಮನಾದ ಆ ಯಕ್ಷಶ್ರೇಷ್ಠನು ವಿಮುಖನಾಗುತಿರಲೀಕಾಗಿ ಆ ಕೈಲಾಸಗಿರಿಯಲ್ಲಿ ಮಹತ್ತರವಾದ ಘೋಷೆಯುಂಟಾಯಿತು ||೧೨|| ಆ ಬಳಿಕ ಗದಾಧಾರಿಯಾದ ಧನಾಧ್ಯಕ್ಷನು,ಶುಕ್ರ,ಪ್ರೋಷ್ಠಪರೆಂಬ ಮಂತ್ರಿಗಳಿಂದಲು,ಶಂಖ ಪದ್ಮವೇ ಮುಂತಾದ ನಿಧ್ಯಧಿದೇವತೆಗಳಿಂದಲು ಪರಿವೃತನಾಗಿ ಸಮೀಪದಲ್ಲಿ ಕಾಣಿಸಿದನು ||೧೩|| ಯುದ್ಧದಲ್ಲಿ ಧೈರ್ಯಶಾಲಿಯಾದ ಆ ಧನಾಧಿಪತಿಯು ಗತವಾದ ಗುರುಭಾವವುಳ್ಳ ಭ್ರಾತನಾದ ದಶಕಂಠನಂ ಕಂಡು ಬ್ರಹ್ಮಕುಲೋತ್ಪತ್ತಿಗೆ ಯುಕ್ತವಾದ ಈ ವಾಕ್ಯವಂ ಹೇಳಿದನು ||೧೪|| ಎಲೈ ದುರ್ಬುದ್ಧಿಯುಳ್ಳ ರಾವಣನೇ!ಇಂಥ ಕೆಟ್ಟ ಕಾರ್ಯಗಳಂಗೈಯಬೇಡೆಂದು ಪರಿಪರಿ ಪೇಳಿದರೂ ತಿಳಿದುಕೊಳ್ಳಲಿಲ್ಲ. ಈ ಪಾಪದ ಫಲವನ್ನನುಭವಿಸಿ ನಾರಕಂಗತನಾದ ಬಳಿಕಾ ತಿಳಿದುಕೊಳ್ಳುವಿ||೧೫|| ಮೂಢನಾದ ಯಾವ ನರನು ವಿಷಪಾನವಂಗೈದರೆ ಮರಣವಂ ಹೊಂದುವೆನೆಂದು ತಿಳಿಯದೆ ಅಜ್ಞಾನದಿಂದ ವಿಷಪಾನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಾಪಿತರೌ ಭ್ರಾತೄನ್ ಆಚಾರ್ಯಾಂಶ್ಚಾವಮನ್ಯತೇ । ಸಪಶ್ಯತಿಫಲಂತಸ್ಯಪ್ರೇತರಾಜವಶಂಗತಃ ॥೧೮॥ ಅಧ್ರುವೇಹಿಶರೀರೇ ಯೋನಕರೋತಿತಪೋರ್ಜನಂ । ಸಪಶ್ಚಾತ್ತಪ್ಯತೇಮೂಢೋಮೃತೋದೃಷ್ಟ್ವಾತ್ಮನೋಗತಿಂ ॥ ೧೯ ॥ ಧರ್ಮಾದ್ರಾಜ್ಯಂಧನಂಸೌಖ್ಯಂಅಧರ್ಮಾದ್ದುಃಖಮೇವಚ । ತಸ್ಮಾದ್ಧರ್ಮಂಸುಖಾರ್ಥಾಯಕುರ್ಯಾತ್ಪಾಪಂವಿಸರ್ಜಯೇತ್ ॥೨೦॥ ಪಾಪಸ್ಯಹಿ ಫಲಂದುಃಖಂತದ್ಭೋಕ್ತವ್ಯಮಿಹಾತ್ಮನಾ । ತಸ್ಮಾದಾತ್ಮೋಪಘಾತಾರ್ಥಂಮೂಢಃಪಾಪಂಕರಿಷ್ಯತಿ ॥೨೧॥ ಕಸ್ಯಚಿನ್ನಹಿದುರ್ಬುದ್ಧೇಛಂದತೋಜಾಯತೇಮತಿಃ । ಯಾದೃಶಂಕುರುತೇಕರ್ಮತಾದೃಶಂಫಲಮಶ್ನುತೇ॥೨೨॥ ಬುದ್ಧಿಂರೂಪಂಬಲಂ ವಿತ್ತಂಪುತ್ರಾನ್ಮಾಹಾತ್ಮ್ಯಮೇವಚ। ಪ್ರಾಪ್ನುವಂತಿನರಾಸ್ಸ್ವರ್ಗಂಸ್ವಕೃತ್ಯೈಃಪೂರ್ವಕರ್ಮಭಿಃ॥೨೩॥ ಏವಂನಿರಯಗಾಮಿತ್ವಂಯಸ್ಯತೇಮತಿರೀದೃಶೀ । ನತ್ವಾಂಸಮಭಿಭಾಷಿಷ್ಯೇದುರ್ವೃತ್ತಸ್ಯೈಷನಿರ್ಣಯಃ ॥೨೪॥ ಏವಮುಕ್ತಾಸ್ತತಸ್ತೇನತಸ್ಯಾಮಾತ್ಯಾಸ್ಸಮಾಹಿತಾಃ । ಸಂಕ್ರುದ್ಧಾ ರಾಕ್ಷಸಾಃ ಕ್ರೂರಾ ನಿಜಘ್ನುಸ್ಸಂಯುಗೇತದಾ । ಮಾರೀಚಪ್ರಮುಖಾಸ್ಸ

---

ಮನಅಧೀನನಾಗಿ, ತಸ್ಯ–ಆಪಾಪಕ್ಕೆ, ಫಲಂ–ಫಲವನ್ನು, ಪಶ್ಯತಿಹಿ–ನೋಡುವನಷ್ಟೆ ॥೧೮॥ ಯಃ–ಯಾವನು, ಅಧ್ರುವೇ–ಅಶಾಶ್ವತವಾದ, ಶರೀರೇ–ದೇಹದಲ್ಲಿ, ತಪೋರ್ಜನಂ– ತಪಸ್ಸಂಪಾದನೆಯನ್ನು, ನಕರೋತಿ–ಮಾಡುವದಿಲ್ಲವೋ, ಸಮೂಢಃ– ಆ ಅಜ್ಞಾನಿಯು, ಮೃತಃ – ಸತ್ತವನಾಗಿ, ಆತ್ಮನಃ–ತನ್ನ, ಗತಿಂ–ಪ್ರಾಪ್ಯಸ್ಥಾನವನ್ನು, ದೃಷ್ಟ್ವಾ–ಕಂಡು, ಪಶ್ಚಾತ್–ಬಳಿಕ, ತಪ್ಯತೇ–ತಪಿಸುತ್ತಾನೆ ॥೧೯॥ ಧರ್ಮಾತ್–ಧರ್ಮದ ದೆಸೆಯಿಂದ, ರಾಜ್ಯಂ–ರಾಜ್ಯವು, ಧನಂ–ಧನವು, ಸೌಖ್ಯಂಚ–ಸುಖವು, ಭವತಿ–ಆಗುವದು, ಅಧರ್ಮಾತ್–ಅಧರ್ಮದ ದೆಸೆಯಿಂದ, ದುಃಖಮೇವ–ವ್ಯಸನವೆ, (ಭವತಿ–ಆಗುತದೆ) ತಸ್ಮಾತ್–ಆ ಕಾರಣದ ದೆಸೆಯಿಂದ, ಸುಖಾರ್ಥಾಯ–ಸುಖರೂಪ ಪ್ರಯೋಜನಕ್ಕೋಸ್ಕರ, ಧರ್ಮಂ–ಧರ್ಮವನ್ನೆ, ಕುರ್ಯಾತ್–ಮಾಡಬೇಕು, ಪಾಪಂ–ಪಾಪವನ್ನು, ವಿಸರ್ಜಯೇತ್–ಬಿಡಬೇಕು ॥೨೦॥ ಹಿಯಸ್ಮಾತ್–ಯಾವಕಾರಣದ ದೆಸೆಯಿಂದ, ದುಃಖಂ–ದುಃಖವು, ಪಾಪಸ್ಯ–ಪಾಪಕ್ಕೆ, ಫಲಂ–ಫಲವೋ ತತ್–ಆ ಫಲವು, ಇಹ–ಈ ಲೋಕದಲ್ಲಿ, ಆತ್ಮನಾ–ತನ್ನಿಂದ, ಭೋಕ್ತವ್ಯಂ–ಅನುಭವಿಸತಕ್ಕದ್ದು, ತಸ್ಮಾತ್–ಆ ಕಾರಣದ ದೆಸೆಯಿಂದ, ಮೂಢಃ–ಅಜ್ಞಾನಿಯು, ಆತ್ಮೋಪಘಾತಾರ್ಥಂ–ತಾನು ಕೆಡುವದಕ್ಕೋಸ್ಕರ, ಪಾಪಂ–ಪಾಪವನ್ನು, ಕರಿಷ್ಯತಿ–ಮಾಡುವನು ॥೨೧॥ ಹೆ ದುರ್ಬುದ್ಧೇ–ಎಲೈ ಕೆಟ್ಟಬುದ್ಧಿಯುಳ್ಳವನೆ, ಕಸ್ಯಚಿತ್–ಯಾವನಿಗಾದರೂ, ಛಂದತಃ–ಸ್ವೇಚ್ಛಾಮಾತ್ರದಿಂದ, ಮತಿಃ–ವಳ್ಳೇಬುದ್ಧಿಯು, ನಜಾಯತೇಹಿ–ಹುಟ್ಟುವದಿಲ್ಲವಷ್ಟೆ, ಯಾದೃಶಂ–ಯಂಥ, ಕರ್ಮ–ಕೆಲಸವನ್ನು, ಕುರುತೇ–ಮಾಡುವನೊ, ತಾದೃಶಂ–ಅಂಥ, ಫಲಂ–ಫಲವನ್ನು, ಅಶ್ನುತೇ–ಅನುಭವಿಸುತ್ತಾನೆ ॥೨೨॥ ನರಾಃ–ಮನುಷ್ಯರು, ಬುದ್ಧಿಂ–ಬುದ್ಧಿಯನ್ನು, ರೂಪಂ–ಸೌಂದರ್ಯವನ್ನು, ಬಲಂ–ದೇಹಶಕ್ತಿಯನ್ನು, ವಿತ್ತಂ–ದ್ರವ್ಯವನ್ನು, ಪುತ್ರಾನ್–ಮಕ್ಕಳನ್ನು, ಮಾಹಾತ್ಮ್ಯಮೇವಚ–ಮಾಹಾತ್ಮ್ಯವನ್ನು, ಸ್ವರ್ಗಂ–ಸ್ವರ್ಗವನ್ನು ಕೂಡೆ, ಸ್ವಕೃತ್ಯೈಃ–ತಮ್ಮಿಂದ ಮಾಡಲ್ಪಟ್ಟ, ಪೂರ್ವಕರ್ಮಭಿಃ–ಪ್ರಾಚೀನಕರ್ಮಗಳಿಂದ, ಪ್ರಾಪ್ನುವಂತಿ–ಹೊಂದುತ್ತಾರೆ ॥೨೩॥ ಏವಂ–ಈಪ್ರಕಾರವಾಗಿರಲೀಕಾಗಿ, ಯಸ್ಯತೇ–ಯಾವ ನಿನಗೆ, ಮತಿಃ–ಬುದ್ಧಿಯು, ಈದೃಶೀ–ಇಂಥಾದ್ದೊ, ತ್ವಂ–ನೀನು, ನಿರಯಗಾಮೀ–ನರಕವಂ ಹೊಂದುವನೆ, ತ್ವಾಂ–ನಿನ್ನನ್ನು, ನಸಮಭಿಭಾಷಿಷ್ಯೇ–ಮಾತಾಡಿಸಲಾರೆ, ದುರ್ವೃತ್ತಸ್ಯ–ದುರ್ವ್ಯಾಪಾ

---

ವಂ ಮಾಡುವನೋ ಅಂಥವನು ಪರಿಣಾಮ ಕಾಲದಲ್ಲಿ ಆ ಕರ್ಮದ ಫಲವನ್ನನುಭವಿಸುವನಷ್ಟೆ ॥೧೬॥ ಯಾವದಾದರು ಒಂದಾನೊಂದು ಧರ್ಮಕಾರ್ಯದಿಂದ ದೇವತೆಗಳು ಸಂತುಷ್ಟರಾಗಲಾರರೆಂಬದನ್ನು ನೀನು ತಿಳಿಯದೆ ದೇವದೇವತಾವೈಮುಖ್ಯದಿಂದ ಇಂಥಾ ಕ್ರೂರ ಸ್ವಭಾವವಂ ಹೊಂದಿದವನಾಗಿದ್ದೀಯಲ್ಲ ॥೧೭॥ ಯಾವ ಪುರುಷನು ಮಾತಾ, ಪಿತೃ ಭ್ರಾತೃ, ಆಚಾರ್ಯರೇ ಮುಂತಾದ ಗುರುಗಳನ್ನು ಅವಮಾನಿಸುವನೊ ಅವನು ಯಮನ ಬಂಧದಲ್ಲಿ ಶಿಲುಕಿ ಆ ಪಾಪಫಲವನ್ನು ಕಾಣುವನು ॥೧೮॥ ಅಶಾಶ್ವತವಾದ ಈ ಶರೀರ ವಿರುವಾಗಲೇ ಯಾವನು ತಪಸ್ಸಂಪಾದನೆಯಂ ಗೈಯುವದಿಲ್ಲವೊ, ಅವನು ಮೃತನಾದವನಾಗಿ ತನ್ನ ಗತಿಯನ್ನು ನೋಡಿ ಆಗ ಸಂತಪಿಸುವನು॥೧೯॥ ಧರ್ಮದಿಂದಲೆ ರಾಜ್ಯವು,ಧನವು, ಸೌಖ್ಯವು ಇವುಗಳೆಲ್ಲ ಉಂಟಾಗುವವು॥ಅಧರ್ಮದ ದೆಸೆಯಿಂದ ದುಃಖವೆ ಲಭಿಸುವದು,ಆದಕಾರಣ ಸುಖಕ್ಕೋಸ್ಕರ ಪಾಪವಂ ತೊರೆದು ಧರ್ಮವನ್ನಾಚರಿಸ ಬೇಕು ॥೨೦॥ ಪಾಪಫಲ ರೂಪವಾದ ದುಃಖವನ್ನೇ ಅನುಭವಿಸ ಬೇಕೆಂದು ಮೂಢನಾದವನು (ವಿನಾಶಕಾಲೆ ವಿಪರೀತಬುದ್ಧಿಃ) ಎಂಬಂತೆ ತನ್ನ ನಾಶಕ್ಕೋಸ್ಕರ ಪಾಪಗಳನ್ನೆ ಮಾಡುತಿರುವನು॥೨೧॥ ಪ್ರಪಂಚದಲ್ಲಿ ಯಾರಿಗಾದರೂ ಶೀಘ್ರ ಇಲ್ಲದೆ ವಳ್ಳೇ ಬುದ್ಧಿ ಯುಂಟಾಗಲಾರದು. ಎಲೈದುರ್ಬುದ್ಧಿ ಯುಳ್ಳವನೇಕೇಳು, ಪ್ರಾಣಿಯು ಎಂಥಾ ಕಾರ್ಯಗಳಂ ಮಾಡುವನೊ ಅಂಥಾ ಫಲವನ್ನೇ ಅನುಭವಿಸುವನು॥೨೨॥ ಆದಕಾರಣ ಪುರಾತನ ಸುಕೃತ ಕರ್ಮಗಳಿಂದ ಬುದ್ಧಿಯನ್ನು ರೂಪವನ್ನು ಬಲವನ್ನೂ,ಮಕ್ಕಳನ್ನೂ, ಮಾಹಾತ್ಮ್ಯವನ್ನು, ಪರಲೋಕವನ್ನು ಸಹ ಹೊಂದುತ್ತಾರೆ, ನೀನಾದರೆ ಪಾಪಕರ್ಮಗಳಂಗೈದು ನರಕವಂ ಹೊಂದುವಿ ಯಾದಕಾರಣ ನಿನಗಿಂಥಾ ದುರ್ಬುದ್ಧಿಯು ಹುಟ್ಟಿಥೆ, ಆದಕಾರಣ ನಾನಿನ್ನನ್ನು ಮಾತಾಡಿಸಲಾರೆ (ದುಷ್ಟಂದೂರತಸ್ತ್ಯಜೇತ್ )ಎಂಬಂತೆ ದುಷ್ಟನಾದ ನಿನ್ನನ್ನು ದೂರದಲ್ಲಿಡುವದೆ ಉತ್ತಮವು ಎಂದು ನಿಶ್ಚೈಸಿರುತ್ತೇನೆಂದು ಧನಪತಿಯು ಕಾಳಗದಲ್ಲಿ ದಶ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಸೇವಿಮುಖಾವಿಪ್ರದುದ್ರುವುಃ ॥೨೫॥ ತತಸ್ತೇನದಶಗ್ರೀವೋಯಕ್ಷೇಂದ್ರೇಣಮಹಾತ್ಮನಾ। ಗದಯಾಭಿಹತೋಮೂರ್ಧ್ನಿನಚ ಸ್ಥಾನಾತ್ಪ್ರಕಂಪತೇ ॥೨೬॥ ತತಸ್ತಾವಭಿನಿಘ್ನಂತಾವನ್ಯೋನ್ಯಂಪರಮಾಹವೇ । ನವಿಹ್ವಲೌನಚಶ್ರಾಂತೌಬಭೂವತುರ ಮರ್ಷಣೌ ॥೨೭॥ ಆಗ್ನೇಯಮಸ್ತ್ರಂಸತತೋಮುಮೋಚಧನದೋರಣೇ । ವಾರುಣೇನದಶಗ್ರೀವಸ್ತದಸ್ತ್ರಂಪ್ರತ್ಯವಾರ ಯತ್ ॥ ೨೮ ॥ ತತೋಮಾಯಾಂಪ್ರವಿಷ್ಟಸ್ಸರಾಕ್ಷಸೀಂರಾಕ್ಷಸೇಶ್ವರಃ । ವವರ್ಷಚಾಸ್ತ್ರಶಸ್ತ್ರಾಣಿಬಹುರೂಪೋಬಭೂ ವಹ ॥೨೯॥ ವ್ಯಾಘ್ರೋವರಾಹೋಜೀಮೂತಸ್ಸಾರಂಗಃಪರ್ವತೋಹ್ರದಃ । ಯಕ್ಷರಾಟ್ತಾದೃಶಂರಾಮನಾಲುಲೋಕ ದಶಾನನಮ್ ॥೩೦॥ಏವಂಮಾಯಾಂಪ್ರಕುರ್ವಾಣೋಬಹುಮಾಯಸ್ಸರಾವಣಃ । ಜಘಾನಮೂರ್ಧ್ನಿಧನದಂವ್ಯಾವಿಧ್ಯ ಮಹತೀಂಗದಾಮ್ ॥೩೧॥ ಏವಂಸತೇನಾಭಿಹತೋವಿಹ್ವಲಶ್ಶೋಣಿತೋಕ್ಷಿತಃ । ಕೃತ್ತಮೂಲಇವಾಶೋಕೋ ನಿಪಪಾತ

---

ರಿಸಿ, ಏಷಃ-ಇದು, ನಿರ್ಣಯಃ-ನಿಶ್ಚಯವು ॥೨೪॥ ಏವಂ-ಇಂತೆಂದು, ತೇನ-ಆ ಕುಬೇರನಿಂದ, ಉಕ್ತೇಸತಿ-ಹೇಳಲ್ಪಡುತಿರಲಾಗಿ, ತತಃ-ಬಳಿಕ, ತಸ್ಯ-ಆ ಕುಬೇರನ, ಅಮಾತ್ಯಾಃ-ಮಂತ್ರಿಗಳು, ಸಮಾಹಿತಾಃ-ಗುಂಪುಸೇರಿ, ಸಂಕ್ರುದ್ಧಾಃ-ಕೋಪಿಷ್ಠರಾಗಿ, ಸಂಯುಗೇ-ಯುದ್ಧದಲ್ಲಿ, ಕ್ರೂರಾನ್-ಭಯಂಕರರಾದ, ರಾಕ್ಷಸಾನ್-ರಾಕ್ಷಸರನ್ನು, ನಿಜಘ್ನುಃ-ಹೊಡೆದರು, ತದಾ-ಆ ಕಾಲದಲ್ಲಿ, ಮಾರೀಚಪ್ರಮುಖಾಃ-ಮಾರೀಚನೇಮೊದಲಾಗುಳ್ಳ, ಸರ್ವೇ-ಸಮಸ್ತ ರಾಕ್ಷಸರು, ವಿಮುಖಾಃ-ಪರಾಙ್ಮುಖರಾಗಿ, ವಿಪ್ರದುದ್ರುವುಃ-ಓಡಿಹೋದರು ॥೨೫॥ ತತಃ-ಬಳಿಕ, ದಶಗ್ರೀವಃ-ರಾವಣನು, ಮಹಾತ್ಮನಾ-ಮಹಾಮನಸ್ವಿಯಾದ, ತೇನಯಕ್ಷೇಂದ್ರೇಣ-ಆ ಯಕ್ಷರಾಜನಾದ ಕುಬೇರನಿಂದ, ಮೂರ್ಧ್ನಿ-ಮಂಡೆಯಲ್ಲಿ, ಗದಯಾ-ಗದಾಯುಧದಿಂದ, ಅಭಿಹತಃ-ಹೊಡೆಯಲ್ಪಟ್ಟವನಾಗಿ, ಸ್ಥಾನಾಚ್ಚ-ಸ್ವಸ್ಥಾನದ ದೆಶೆಯಿಂದಲೂ ಕೂಡ, ನಪ್ರಕಂಪತೇ-ಚಲಿಸಲಿಲ್ಲ ॥೨೬॥ ತತಃ-ಬಳಿಕ, ಪರಮಾಹವೇ-ಮಹಾಯುದ್ಧದಲ್ಲಿ, ಅನ್ಯೋನ್ಯಂ-ಒಬ್ಬರಿಗೊಬ್ಬರು, ಅಭಿನಿಘ್ನಂತೌ-ಹೊಡೆಯುತಿರುವ-ತೌ-ಆ ಕುಬೇರರಾವಣರು, ನವಿಹ್ವಲೌ-ಸಂಕಟಪಡಲಿಲ್ಲ, ಶ್ರಾಂತೌ-ಬಳಲಿದವರೂ, ನಬಭೂವತುಃ-ಆಗಲಿಲ್ಲ, ಕಿಂತು-ಮತ್ತೇನೆಂದರೆ, ಅಮರ್ಷಣೌ-ಕೋಪಿಷ್ಠರು, ಬಭೂವತುಃ-ಆದರು ॥೨೭॥ ತತಃ-ಬಳಿಕ, ಸಧನದಃ-ಆ ಕುಬೇರನು, ರಣೇ-ಯುದ್ಧದಲ್ಲಿ, ಆಗ್ನೇಯಂ-ಅಗ್ನಿದೇವತಾಕವಾದ, ಅಸ್ತ್ರಂ-ಅಸ್ತ್ರವನ್ನು, ಮುಮೋಚ-ಬಿಟ್ಟನು, ದಶಗ್ರೀವಃ-ರಾವಣನು, ತದಸ್ತ್ರಂ-ಆ ಅಸ್ತ್ರವನ್ನು, ವಾರುಣೇನ-ವಾರುಣಾಸ್ತ್ರದಿಂದ, ಪ್ರತ್ಯವಾರಯತ್-ನಿವಾರಿಸಿದನು ॥೨೮॥ ತತಃ-ಬಳಿಕ, ರಾಕ್ಷಸೀಂ-ರಕ್ಷಸ್ಸಂಬಂಧವಾದ, ಮಾಯಾಂ-ಅದೃಶ್ಯತ್ವವನ್ನು, ಪ್ರವಿಷ್ಟಃ-ಹೊಂದಿದ ಸರಾಕ್ಷಸೇಶ್ವರಃ-ಆ ರಾವಣನು, ಬಹುರೂಪಃ-ಬಹುಬಗೆಯಾದ ರೂಪಗಳುಳ್ಳವನು, ಬಭೂವಹ-ಆದನು, ಅಸ್ತ್ರಶಸ್ತ್ರಾಣಿಚ-ಅಸ್ತ್ರಗಳನ್ನೂ ಶಸ್ತ್ರಗಳನ್ನು ಸಹ, ವವರ್ಷ-ಸುರಿಸಿದನು ॥೨೯॥ ಹೇರಾಮ-ಎಲೈ ಶ್ರೀ ರಾಮನೆ, (ರಾವಣಃ-ರಾವಣನು) ವ್ಯಾಘ್ರಃ-ಹುಲಿಯಾಗಿಯು, ವರಾಹಃ-ಹಂದಿಯಾಗಿಯು, ಜೀಮೂತಃ-ಮೇಘವಾಗಿಯು, ಸಾರಂಗಃ-ಚಿಗರಿಯಾಗಿಯು, ಪರ್ವತಃ-ಬೆಟ್ಟವಾಗಿಯು, ಹ್ರದಃ-ಮಳುವಾಗಿಯು, ಬಭೂವ-ಆದನು, ಯಕ್ಷರಾಟ್-ಕುಬೇರನು, ತಾದೃಶಂ-ಅಂಥ ರೂಪವಂತನಾದ, ದಶಾನನಂ-ರಾವಣನನ್ನು, ನಾಲುಲೋಕ-ನೋಡಲಿಲ್ಲ ॥೩೦॥ ಏವಂ-ಈಪರಿಯಾಗಿ, ಮಾಯಾಂ-ಮಾಯೆಯನ್ನು, ಪ್ರಕುರ್ವಾಣಃ-ಮಾಡುತಿರುವ, ಬಹುಮಾಯಃ-ಅನೇಕ ಮಾಯಾಶಕ್ತಿಗಳುಳ್ಳ, ಸರಾವಣಃ-ಆರಾವಣನು, ಮಹತೀಂ-ದೊಡ್ಡದಾದ, ಗದಾಂ-ಗದಾಯುಧವನ್ನು, ವ್ಯಾವಿಧ್ಯ-ತಿರುಗಿಸಿ, ಧನದಂ-ಕುಬೇರನನ್ನು, ಮೂರ್ಧ್ನಿ-ಶಿರಸ್ಸಿನಲ್ಲಿ ಜಘಾನ-ಹೊಡೆದನು ॥೩೧॥ ಏವಂ-ಈ ರೀತಿಯಾಗಿ, ತೇನ-ಆ ರಾವಣನಿಂದ, ಅಭಿಹತಃ-ಹೊಡೆಯಲ್ಪಟ್ಟ, ಸಧನಾಧಿಪಃ-ಆ ಕುಬೇರನು, ವಿಹ್ವಲಃ-ಗಾಬರಿಬಿದ್ದವನಾಗಿ, ಶೋಣಿತೋಕ್ಷಿತಃ-ರಕುತದಿಂದ ತೋಯಿಸಲ್ಪಟ್ಟವನಾಗಿ, ಕೃತ್ತಮೂಲಃ-ಕತ್ತರಿಸಲ್ಪಟ್ಟಬುಡವುಳ್ಳ, ಅಶೋಕಇವ-ಅಶೋಕವೃಕ್ಷದಂತೆ, ನಿಪಪಾ

---

ಕಂಠನಂ ಕುರಿತು ಹೇಳುತಿರುವ ಕಾಲದಲ್ಲಿ ಆ ಕುಬೇರನ ಮಂತ್ರಿಗಳು ಕಡುಕೋಪಿಷ್ಠರಾಗಿ, ಕ್ರೂರರಾದ ಆ ರಕ್ಷಸರನ್ನು ತಾಡಿಸಲು ಆಗ ಮಾರೀಚನೇ ಮೊದಲಾದ ರಾವಣ ಮಂತ್ರಿಗಳೆಲ್ಲರು ಆ ಹೊಡೆತೆಗಳನ್ನು ತಾಳದೆ ಓಡಿಹೋದರು॥೨೫॥ ಆಬಳಿಕ ದಶಕಂಠನು ಮಹಾತ್ಮನಾದ ಯಕ್ಷೇಂದ್ರನಿಂದ ಶಿರಸ್ಸಿನಲ್ಲಿ, ಗದಾಯುಧದಿಂದ ಹೊಡೆಯಲ್ಪಟ್ಟವನಾದರು ಆಸ್ಥಳದಿಂದ ಈಚೆಗೆ ಕದಲಲೇಯಿಲ್ಲ ॥೨೬॥ ಅನಂತರವು ಆ ರಣರಂಗದಲ್ಲಿ ಒಬ್ಬರನ್ನೊಬ್ಬರು ಹೊಡೆಯುತಿರುವ ಅವರೀರ್ವರು, ವಿಹ್ವಲ ಚಿತ್ತರಾಗಿಯು, ಬಳಲಿಕೆ ಯುಳ್ಳವರಾಗಿಯು ಆಗದೇ ಕಡು ಕುಪಿತರಾದರು ॥೨೭॥ ಆ ಸಮಯದಲ್ಲಿ ಧನನಾಥನು ಆಗ್ನೇಯಾಸ್ತ್ರ ಪ್ರಯೋಗಿಸಲು ಅದನ್ನು ವಾರುಣಾಸ್ತ್ರದಿಂದ ರಾವಣನು ನಿವಾರಿಸಿದನು ॥೨೮॥ ಆಬಳಿಕ ದಶಕಂಠನು ಅದೃಶ್ಯನಾಗಿ ಅನೇಕವಾದ ಅಸ್ತ್ರಶಸ್ತ್ರಗಳಂ ಸುರಿಸುತ್ತಾ, ಬಹುರೂಪಗಳಂ ತಾಳಿದನು, ಅದೆಂತೆನೆ? ವ್ಯಾಘ್ರರೂಪವಾಗಿಯು, ವರಾಹ ರೂಪವಾಗಿಯು, ಮೇಘಾಕಾರ ವಾಗಿಯು, ಚಿಗರಿಯಾಗಿಯು, ಬೆಟ್ಟವಾಗಿಯು, ಮಳೆವಾಗಿಯು, ಆಗಪರಿಪರಿಯಾಗಿ, ಕಾಣಿಸುತಿದ್ದನು ಆ ಕುಬೇರನಾದರೆ ಋಜುಮಾರ್ಗ ವರ್ತಿಯಾದಕಾರಣ ಆ ಕಾಲದಲ್ಲಿ ಅಂಥ ಮಾಯಾರೂಪನಾದ ರಾವಣನನ್ನು ನೋಡಲೆಯಿಲ್ಲ ॥೩೦॥ ಈ ಪರಿಯಾಗಿ ಮಾಯಗಳಂ ಮಾಡುತಿರುವ ಕಡು ಮಾಯಾವಿಯಾದ ಆ ದಶಗ್ರೀವನು ಗದಾಯುಧವಂ ತಿರಿವಿ ಕುಬೇರನಮಂಡೆಯೊಳು ಹೊಡದನು॥೩೧॥ ಈ ರೀತಿಯಾಗಿ ಆ ರಾವಣನಿಂದ ತಾಡಿತನಾದ ಧನಾಧ್ಯಕ್ಷನು, ರಕುತವಂ ಕಕ್ಕುತ್ತ ಕತ್ತರಿಸಲ್ಪಟ್ಟ ಬುಡೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಧನಾಧಿಪಃ ॥೨೦॥ತತಃಪದ್ಮಾದಿಭಿಸ್ತತ್ರನಿಧಿಭಿಸ್ಸಧನಾಧಿಪಃ। ಆಶ್ವಾಸಿತಸ್ತದಾರಾಮವನಮಾನೀಯನಂದನಮ್ ॥೨೨॥ ಏವಂನಿರ್ಜಿತ್ಯತಂರಾಮಧನದಂರಾಕ್ಷಸಾಧಿಪಃ। ಪುಷ್ಪಕಂತಸ್ಯಜಗ್ರಾಹವಿಮಾನಂಜಯಲಕ್ಷಣಮ್ ॥೨೪॥ ಮುಕ್ತಾಜಾಲಪ್ರತಿಚ್ಛನ್ನಂಸರ್ವಕಾಲಫಲದ್ರುಮಮ್ । ಕಾಂಚನಸ್ತಂಭಸಂವೀತಂವೈಡೂರ್ಯಮಯತೋರಣಮ್॥೨೫॥ ಮನೋಜವಂಕಾಮಗಮಂಕಾಮರೂಪಂವಿಯದ್ಗಮಮ್ । ಮಣಿಕಾಂಚನಸೋಪಾನಂತಪ್ತಹಾಟಕವೇದಿಕಮ್ ॥೨೬॥ ದೇವೋಪವಾಹ್ಯಮಕ್ಷಯ್ಯಂಶ್ರೀಮದ್ದೃಷ್ಟಿಮನಸ್ಸುಖಂ। ಬದ್ಧಾಶ್ಚರ್ಯಂಭಕ್ತಿಚಿತ್ರಂಬ್ರಹ್ಮಣಾಪರಿನಿರ್ಮಿತಮ್ ॥೨೭॥ ತತ್ತು ರಾಜ್ಯಸಮಾರೂಢಃಕಾಮಗಃವೀರ್ಯನಿರ್ಜಿತಮ್ । ಜಿತಂತ್ರಿಭುವನಂಮೇನೇದರ್ಪೋತ್ಸೇಕಾತ್ಸದುರ್ಮತಿಃ ॥ ಜಿತ್ವಾವೈಶ್ರವಣಂದೇವಂಕೈಲಾಸಾದವರೋಹತ ... ... ... ॥೨೮॥

—…ಇತಿಶ್ರೀಮದುತ್ತರ ರಾಮಾಯಣೇ ಪಂಚದಶಸ್ಸರ್ಗಃ…—

ತ-ಬಿದ್ದನು ॥ ೨೦ ॥ ಹೇರಾಮ-ಎಲೈ ಶ್ರೀ ರಾಮನೆ ! ತತಃ-ಬಳಿಕ, ತತ್ರ-ಆ ಯುದ್ಧ ರಂಗದಲ್ಲಿ, ಪದ್ಮಾದಿಭಿಃ-ಪದ್ಮನೇ ಮೊದಲಾಗುಳ್ಳ, ನಿಧಿಭಿಃ-ನಿಧಿ ಅಭಿಮಾನ ದೇವತೆಗಳಿಂದ, ಸಧನಾಧಿಪಃ-ಆ ಕುಬೇರನು, ನಂದನಂವನಂ-ನಂದನವನವನ್ನು, ಆನೀಯ-ತರಿಸಿ, ತದಾ-ಆಗ, ಆಶ್ವಾಸಿತಃ-ಸಮಾಧಾನಗೊಳಿಸಲ್ಪಟ್ಟನು ॥ ೨೨ ॥ ಹೇರಾಮ-ಎಲೈ ಶ್ರೀರಾಮನೆ, ರಾಕ್ಷಸಾಧಿಪಃ-ರಾವಣನು, ತಂಧನದಂ-ಆ ಕುಬೇರನನ್ನು, ಏವಂ-ಈ ಪರಿಯಾಗಿ, ನಿರ್ಜಿತ್ಯ-ಜಯಿಸಿ, ತಸ್ಯ-ಆ ಕುಬೇರನ, ಜಯಲಕ್ಷಣಂ-ಜಯಕ್ಕೆ ಗುರ್ತಾದ, ಪುಷ್ಪಕಂ-ಪುಷ್ಪಕವೆಂಬ, ವಿಮಾನಂ-ವಿಮಾನವನ್ನು, ಜಗ್ರಾಹ-ಅಪಹರಿಸಿದನು ॥೨೪॥ ಹೇರಾಜನ್-ಎಲೈ ಶ್ರೀರಾಮನೆ, ಮುಕ್ತಾಜಾಲ ಪ್ರತಿಚ್ಛನ್ನಂ-ಮುತ್ತಿನಗೊಂಚಲುಗಳಿಂದ ವ್ಯಾಪ್ತವಾದ,ಸರ್ವಕಾಲಫಲದ್ರುಮಂ-ಸರ್ವಕಾಲದಲ್ಲಿಯೂ, ಫಲಯುಕ್ತವಾದ ವೃಕ್ಷಗಳುಳ್ಳ, ಕಾಂಚನಸ್ತಂಭಸಂವೀತಂ-ಭಂಗಾರದ ಕಂಭಗಳಿಂದ ಯುಕ್ತವಾದ, ವೈಡೂರ್ಯಮಯತೋರಣಂ- ವೈಡೂರ್ಯಮಣಿಮಯವಾದ ಮೇಲ್ಕಟ್ಟುಗಳುಳ್ಳ, ಮನೋಜವಂ-ಮನಸ್ಸಿನವೇಗದಂತೆ ವೇಗವುಳ್ಳ, ಕಾಮಗಂ-ಸ್ವೇಚ್ಛೆಯಾಗಿ ಪೋಗುತಿರುವ, ಕಾಮರೂಪಂ-ಕಾಮರೂಪವಾದ ವಿಯದ್ಗಮಂ-ಗಗನಮಾರ್ಗದಲ್ಲಿ ಹೋಗುತಿರುವ, ಮಣಿಕಾಂಚನ ಸೋಪಾನಂ-ರತ್ನಗಳಿಂದಲು ಭಂಗಾರದಿಂದಲು ಯುಕ್ತವಾದ ಪಾವಟಿಗೆಗಳುಳ್ಳ, ತಪ್ತಹಾಟಕವೇದಿಕಂ-ಅಪರಂಜಿಯ ಜಗಲಿಗಳುಳ್ಳ, ದೇವೋಪವಾಹ್ಯಂ-ದೇವತೆಗಳಿಗೆ ವಾಹನವಾಗುವದಕ್ಕೆ ಯೋಗ್ಯವಾದ, ಅಕ್ಷಯ್ಯಂ-ನಾಶರಹಿತವಾದ, ಶ್ರೀಮತ್-ಕಾಂತಿಯುಕ್ತವಾದ, ದೃಷ್ಟಿಮನಸ್ಸುಖಂ-ಕಣ್ಣುಗಳಿಗು ಮನಸ್ಸಿಗು ಸಹ ಇಂಪಾಗಿರುವ, ಬದ್ಧಾಶ್ಚರ್ಯಂ-ಕಟ್ಟಲ್ಪಟ್ಟ ಅದ್ಭುತನಿರ್ಮಾಣವುಳ್ಳ, ಭಕ್ತಿಚಿತ್ರಂ-ಅಂತಸ್ತುಗಳಿಂದ ವಿಚಿತ್ರವಾದ,ಬ್ರಹ್ಮಣಾ-ಬ್ರಹ್ಮನಿಂದ, ಪರಿನಿರ್ಮಿತಂ-ಸೃಜಿಸಲ್ಪಟ್ಟ, ವೀರ್ಯನಿರ್ಜಿತಂ-ತನ್ನ ಪರಾಕ್ರಮದಿಂದ ಜಯಿಸಲ್ಪಟ್ಟ, ತತ್-ಆ ವಿಮಾನವನ್ನು, ಸಮಾರೂಢಃ-ಏರಿದವನಾಗಿ, ಕಾಮಗಃ-ಸ್ವೇಚ್ಛೆಯಾಗಿ ಹೋಗುತಿರುವ, ದುರ್ಮತಿಃ-ದುರ್ಬುದ್ಧಿಯುಳ್ಳ, ಸಃ-ರಾವಣನು, ದರ್ಪೋತ್ಸೇಕಾತ್-ಗರ್ವೋದ್ರೇಕದಿಂದ,ತ್ರಿಭುವನಂ-ಲೋಕತ್ರಯವನ್ನು, ಜಿತಂ-ಜಯಿಸಲ್ಪಟ್ಟದ್ದಾಗಿ, ಮೇನೇ-ತಿಳಿದುಕೊಂಡನು, ವೈಶ್ರವಣಂದೇವಂ-ಕುಬೇರನನ್ನು, ಜಿತ್ವಾ-ಜಯಿಸಿ, ಕೈಲಾಸಾತ್-ಕೈಲಾಸದ ದೆಸೆಯಿಂದ, ಅವರೋಹತ-ಇಳಿದನು ॥ ೨೮॥

—…ಇತಿ ಶ್ರೀಮದುತ್ತರ ರಾಮಾಯಣೇ ಪಂಚ ದಶಸ್ಸರ್ಗಃ.…—

ವುಳ್ಳ ಅಶೋಕ ವೃಕ್ಷದೋಪಾದಿಯಾಗಿ ಕೆಳಕ್ಕೆ ಬಿದ್ದುಹೋದನು ॥೨೦॥ ಎಲೈ ರಘುವೀರನೆ! ಅನಂತರವು, ಶಂಖ ಪದ್ಮ ಮುಂತಾದ ನಿಧ್ಯಧಿ ದೇವತೆಗಳು ಆ ಸಮಯದಲ್ಲಿ ನಂದನವನವಂ ತರಿಸಿ ಆ ಧನಾಧ್ಯಕ್ಷನಿಗುಪಚರಿಸಿ ಸಮಾಧಾನಗೊಳಿಸಿದರು ॥೨೨॥ ಎಲೈ ಶ್ರೀರಾಮನೆ ಆ ರಾಕ್ಷಸಾಧಿಪತಿಯಾದ ರಾವಣನು ಈ ರೀತಿಯಾಗಿ ಆ ಕುಬೇರನಂ ಜಯಿಸಿ, ಆತನಜಯಕ್ಕೆ ಗುರ್ತಾಗಿರುವಂತೆ ಪುಷ್ಪವೆಂಬ ಆತನ ವಿಮಾನವಂ ಗ್ರಹಿಸಿಕೊಂಡನು ॥೨೪॥ ಆ ದುರಾತ್ಮನಾದ ರಾವಣನು, ಮುತ್ತುಗಳ ಗೊಂಚಲುಗಳಿಂದ ವ್ಯಾಪ್ತವಾಗಿಯು, ಸದಾಕಾಲದಲ್ಲಿಯು ಫಲಭರಿತವಾದ ವೃಕ್ಷಗಳುಳ್ಳದ್ದಾಗಿಯು ಭಂಗಾರದ ಕಂಭಗಳಿಂದ ಕೂಡಿದ್ದಾಗಿಯು, ವೈಡೂರ್ಯ ಮಣಿಮಯವಾದ ತೋರಣಗಳುಳ್ಳದ್ದಾಗಿಯು, ಮನೋವೇಗವುಳ್ಳದ್ದಾಗಿಯು, ಸ್ವೇಚ್ಛೆಯಾಗಿ ಹೋಗುವದಾಗಿಯು, ಕಾಮರೂಪವಾಗಿಯು, ಗಗನಗಾಮಿಯಾಗಿಯು, ರತ್ನಗಳಿಂದ ಕೆತ್ತಲ್ಪಟ್ಟಪಾವಟಿಕೆಗಳುಳ್ಳದ್ದಾಗಿಯು, ಅಪರಂಜೀವಿಕಾರವಾದ ವೇದಿಕೆಗಳುಳ್ಳದ್ದಾಗಿಯು ನಾಶರಹಿತವಾಗಿಯು, ಕಾಂತಿಯುಕ್ತವಾಗಿಯು, ನೇತ್ರಾನಂದಕರವಾಗಿಯು ಮನಸ್ಸಂತೋಷ ಜನಕವಾಗಿಯು, ಮಹದಾಶ್ಚರ್ಯಕರವಾಗಿಯು, ಭೂಮಿಕೆಗಳಿಂದ ಅದ್ಭುತಕರವಾಗಿಯು, ಸಾಕ್ಷಾಚ್ಚತುರ್ಮುಖಬ್ರಹ್ಮ ನಿರ್ಮಿತವಾಗಿಯು, ಇರುವ, ಆ ಪುಷ್ಪಕವೆಂಬ ಅಂಥಾ ವಿಮಾನವನ್ನೇರಿ ಕಡು ಸಂತುಷ್ಟನಾಗಿ ಇಂದಿಗೆ ಲೋಕತ್ರಯವು ಜಯಿಸಲ್ಪಟ್ಟಿತೆಂದು ತಿಳಿದವನಾಗಿ ಆ ಕೈಲಾಸಬೆಟ್ಟದ ದೆಶೆಯಿಂದ ಕೆಳಗಿಳಿದನು- ॥೨೮॥

—…*ಶ್ರೀಮದುತ್ತರ ರಾಮಾಯಣದೊಳ್ ೧೫ ನೇ ಸರ್ಗಂ ಮುಗಿದುದು.*…—



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಜಿತ್ವಾಭ್ರಾತರಂರಾಮಧನದಂರಾಕ್ಷಸಾಧಿಪಃ । ಮಹಾಸೇನಪ್ರಸೂತಿಂತುಯಯೌಶರವಣಂತತಃ ॥೧॥ ಅಥಾಪಶ್ಯ ದ್ದಶಗ್ರೀವೋರೌದ್ರಂಶರವಣಂತದಾ । ಗಭಸ್ತಿಜಾಲಸಂವೀತಂದ್ವಿತೀಯಮಿವಭಾಸ್ಕರಮ್ ॥೨॥ ಪರ್ವತಂಸಸಮಾಸಾದ್ಯ ಕಿಂಚಿದ್ರಮ್ಯವನಾಂತರಮ್ । ಅಪಶ್ಯತ್ಪುಷ್ಪಕಂತತ್ರರಾಮವಿಷ್ಟಂಭಿತಂದಿವಿ ॥ ೩ ॥ ವಿಷ್ಟಬ್ಧಂಪುಷ್ಪಕಂದೃಷ್ಟ್ವಾಹ್ಯಗ ಮಂಕಾಮಗಂಕೃತಮ್ । ರಾಕ್ಷಸಶ್ಚಿಂತಯಾಮಾಸಸಚಿವೈಸ್ತೈಸ್ಸಮಾವೃತಃ॥೪॥ ಕಿಮಿದಂಯನ್ನಿಮಿತ್ತಂಮೇನಚಗಚ್ಛತಿ ಪುಷ್ಪಕಮ್ । ಪರ್ವತಸ್ಯೋಪರಿಸ್ಥಸ್ಯಕಸ್ಯಕರ್ಮತ್ವಿದಂಭವೇತ್ ॥೫॥ ತತೋಬ್ರವೀದ್ದಶಗ್ರೀವಂಮಾರೀಚೋಬುದ್ಧಿಕೋ ವಿದಃ । ನೈತನ್ನಿಷ್ಕಾರಣಂರಾಜನ್ಯನ್ನಗಚ್ಛತಿಪುಷ್ಪಕಮ್ ॥೬॥ ಅಥವಾಪುಷ್ಪಕಮಿದಂಧನದಾನ್ನಾನ್ಯವಾಹನಮ್।ಅ ತೋನಿಷ್ಪಂದಮಭವದ್ಧನಾಧ್ಯಕ್ಷವಿನಾಕೃತಮ್ ॥೭॥ ತತಃಪಾರ್ಶ್ವಮುಪಾಗಮ್ಯಭವಸ್ಯಾನುಚರೋಬಲೀ । ನಂದೀಶ್ವರ ಉವಾಚೇದಂರಾಕ್ಷಸೇಂದ್ರಮಶಂಕಿತಃ॥ ೮॥ ನಿವರ್ತಸ್ವ ದಶಗ್ರೀವಶೈಲೇಕ್ರೀಡತಿಶಂಕರಃ। ಸುಪರ್ಣನಾಗಯಕ್ಷಾಣಾಂ ದೇವಗಂಧರ್ವರಕ್ಷಸಾಂ...

---

ತತಃ-ಬಳಿಕ, ರಾಮ-ಎಲೈ ಶ್ರೀರಾಮನೆ, ಸರಾಕ್ಷಸಾಧಿಪಃ-ಆ ರಾಕ್ಷಸೇಶ್ವರನು, ಭ್ರಾತರಂ-ಅಣ್ಣನಾದ, ಧನದಂ-ಕುಬೇರನನ್ನು, ಜಿತ್ವಾ-ಜಯಿಸಿ, ಮಹಾಸೇನಪ್ರಸೂತಿಂ-ಕುಮಾರಸ್ವಾಮಿಗೆ ಉತ್ಪತ್ತಿಸ್ಥಲ ರೂಪವಾದ,ಶರವಣಂ-ಶರವಣವೆಂಬ ಪ್ರದೇಶವಂಕುರಿತು,ಯಯೌ-ತೆರಳಿದನು॥೧॥ಅಥ-ಬಳಿಕ, ದಶಗ್ರೀವಃ-ದಶಕಂಠನು, ರೌದ್ರಂ-ರುದ್ರಸಂಬಂಧವಾದ, ಗಭಸ್ತಿಜಾಲಸಂವೀತಂ-ಕಿರಣಗಳ ಸಮೂಹದಿಂದ ಸುತ್ತುಕೊಳ್ಳಲ್ಪಟ್ಟ, ದ್ವಿತೀಯ್ಯಂ-ಯರಡನೇ ಯವನಾದ,ಭಾಸ್ಕರಮಿವಸ್ಥಿತಂ-ಸೂರ್ಯನಂತಿರುವ,ಶರವಣಂ-ಶರವಣವೆಂಬ ವನವನ್ನು,ಅಪಶ್ಯತ್-ಕಂಡನು॥೨॥ಹೇರಾಮ-ಎಲೈ ಶ್ರೀರಾಮನೆ,ಸಃ-ಆ ದಶಕಂಠನು, ರಮ್ಯವನಾಂತರಂ-ರಮ್ಯ-ಮನೋಹರವಾದ,ವನಾಂತರಂ-ವನಮಧ್ಯವುಳ್ಳ, ಪರ್ವತಂ-ಪರ್ವತವನ್ನು,ಕಿಂಚಿತ್-ಕೊಂಚವಾಗಿ, ಸಮಾಸಾದ್ಯ-ಹೊಂದಿ, ತತ್ರ-ಆ ಬೆಟ್ಟದಲ್ಲಿ, ದಿವಿ- ಅಂತರಿಕ್ಷಮಾರ್ಗದಲ್ಲಿ, ವಿಷ್ಟಂಭಿತಂ-ನಿಂತುಹೋದ, ಪುಷ್ಪಕಂ-ಪುಷ್ಪಕವನ್ನು, ಅಪಶ್ಯತ್-ಕಂಡನು ॥ ೩॥ ಕಾಮಗಂ-ಸ್ವೇಚ್ಛೆಯಾಗಿ ಪೋಗುತಿರುವದಾದರೂ ವಿಷ್ಟಬ್ಧಂ-ಸ್ತಂಭೀಭೂತವಾದ ಕಾರಣ, ಅಗಮಂ-ಗಮನಶೀಲವಾಗದಿರುವದನ್ನಾಗಿ, ಕೃತಂ-ಮಾಡಲ್ಪಟ್ಟ, ಪುಷ್ಪಕಂ-ಪುಷ್ಪಕವನ್ನು, ದೃಷ್ಟ್ವಾ-ಕಂಡು, ರಾಕ್ಷಸಃ-ದಶಕಂಠನು, ತೈಃ-ಆ ಪ್ರಸಿದ್ಧರಾದ, ಸಚಿವೈಃ-ಮಂತ್ರಿಗಳಿಂದ, ಸಮಾವೃತಃ-ಸುತ್ತುಕೊಳ್ಳಲ್ಪಟ್ಟವನಾಗಿ, ಚಿಂತಯಾಮಾಸ -ಯೋಚಿಸಿದನು॥೪॥ಇದಂ-ಇದು, ಕಿಂ-ಯೇನು, ಮೇ-ನನ್ನ, ಪುಷ್ಪಕಂ-ಪುಷ್ಪಕವು,ಯನ್ನಿಮಿತ್ತಂ-ಯಾವ ನಿಮಿತ್ತವಾಗಿ, ನಗಚ್ಛತಿ-ಹೋಗುವದಿಲ್ಲ, ಪರ್ವತಸ್ಯ-ಬೆಟ್ಟದ, ಉಪರಿಸ್ಥಸ್ಯ-ಶಿಖರದಲ್ಲಿರುವ, ಕಸ್ಯ-ಯಾವನ, ಕರ್ಮ-ಕೃತ್ಯವು, ಭವೇತ್-ಆದೀತು, ತತಃ-ಬಳಿಕ, ಬುದ್ಧಿಕೋವಿದಃ-ಬುದ್ಧಿಮಂತನಾದ, ಮಾರೀಚಃ-ಮಾರೀಚನು, ದಶಗ್ರೀವಂ-ದಶಕಂಠನನ್ನು ಕುರಿತು,ಅಬ್ರವೀತ್-ನುಡಿದನು, ಹೆ ರಾಜನ್-ಎಲೈ ಅರಸೆ, ಯತ್-ಯಾವಕಾರಣದ ದೆಸೆಯಿಂದ, ಪುಷ್ಪಕಂ-ಪುಷ್ಪವಿಮಾನವು, ನಗಚ್ಛತಿ-ಹೋಗುವದಿಲ್ಲವೋ, ಏತತ್-ಇದು, ನಿಷ್ಕಾರಣಂ-ನಿರ್ಹೆತುಕವಾದದ್ದು, ನ-ಅಲ್ಲ ॥ ೬ ॥ ಅಥವಾ-ಹಾಗಲ್ಲದಿದ್ದರೆ, ಇದಂಪುಷ್ಪಕಂ-ಈ ಪುಷ್ಪಕವು, ಧನದಾತ್-ಕುಬೇರನಿಗಿಂತಲು, ಅನ್ಯವಾಹನಂ-ಮತ್ತೊಬ್ಬನಿಗೆ ವಾಹನವಾದದ್ದು, ನ-ಅಲ್ಲ, ಅತಃ-ಈ ಹೇತುವಿನಿಂದ,ಧನಾಧ್ಯಕ್ಷವಿನಾಕೃತಂ-ಕುಬೇರನನ್ನಗಲಿ,ನಿಷ್ಪಂದಂ-ಚಲನರಹಿತವಾದದ್ದು, ಅಭೂತ್-ಆಯಿತು ॥ ೭ ॥ ತತಃ-ಬಳಿಕ, ಭವಸ್ಯ-ಶಿವನ, ಅನುಚರಃ-ಸೇವಕನಾದ, ಬಲೀ-ಬಲವಂತನಾದ, ನಂದೀಶ್ವರಃ-ನಂದೀಶ್ವರನು,ಪಾರ್ಶ್ವಂ-ರಾವಣನ ಪಾರ್ಶ್ವವನ್ನು ಕುರಿತು, ಉಪಾಗಮ್ಯ-ಬಂದು, ಅಶಂಕಿತಃ-ನಿರ್ಭೀತನಾಗಿ, ರಾಕ್ಷಸೇಂದ್ರಂ-ರಾಕ್ಷಸನಾಥನನ್ನು ಕುರಿತು, ಇದಂವಚನಂ-ಈ ಮಾತನ್ನು, ಉವಾಚ-ಪೇಳಿದನು॥೮॥ಹೆ ದಶಗ್ರೀವ-ಎಲೈ ದಶಕಂಠನೆ, ನಿವರ್ತಸ್ವ-ಹಿಂತಿರುಗು,ಶಂಕರಃ-ಈಶ್ವರನು, ಶೈಲೆ-ಈಕೈಲಾಸಪರ್ವತದಲ್ಲಿ, ಕ್ರೀಡತಿ-ವಿಹರಿಸುತ್ತಾ

---

ಟೀ॥ ಎಲೈ ಶ್ರೀರಾಮನೆ ! ಆ ರಾಕ್ಷಸಾಧಿಪತಿಯು ಅಣ್ಣನಾದ ಕುಬೇರನಂ ಜಯಿಸಿದ ಬಳಿಕ ಕುಮಾರಸ್ವಾಮಿಗೆ ಉತ್ಪತ್ತಿಸ್ಥಾನವಾದ ಶರವಣವೆಂಬ ಮಹಾಸ್ಥಳವಂ ಕುರಿತು ತೆರಳಿದನು ॥೧॥ ಬಳಿಕ ಕಿರಣಗಳ ತಂಡದಿಂದೊಡಗೂಡಿದಸೂರ್ಯನೋಪಾದಿಯಲ್ಲಿ ಕಂಗೊಳಿಸುತಿರುವ ರುದ್ರಸಂಬಂಧವಾದ ಆ ಶರವಣನ್ನು ಕಂಡನು॥೨॥ಎಲೈ ರಘುನಾಥನೆ ! ಆ ರಾವಣನು ಸೊಬಗಾದ ವನ ಮಧ್ಯಪ್ರದೇಶವುಳ್ಳ ಆ ಪರ್ವತವನ್ನು ಸ್ವಲ್ಪಹೊಕ್ಕು ಅಲ್ಲಿ ಗಗನಮಾರ್ಗದಲ್ಲಿಯೇ ನಿರುದ್ಧವಾದ ಪುಷ್ಪಕ ವಿಮಾನವಂ ಕಂಡು, ಕಾಮಗಾಮಿನಿಯಾದ ಈ ವಿಮಾನವು ಮುಂದೆ ಗಮಿಸದೆ ಯಾಕೆ ನಿಂತುಹೋಯಿತು ಈ ಪರ್ವತದಮೇಲಿರುವ ಯಾರು ಹೀಗೆ ಮಾಡಿರಬಹುದೆಂದು ಮಂತ್ರಿಗಳಿಂದೊಡಗೂಡಿ ಯೋಚಿಸಲು ॥೫॥ ಮತಿಮಂತರೊಳಗೆ ಉತ್ತಮನಾದ ಮಾರೀಚನೆಂಬ ಮಂತ್ರಿ ಇಂತೆಂದನು, ಎಲೈ ಒಡೆಯನಾದ ದಶಕಂಠನೆ! ಈ ಪುಷ್ಪಕವಿಮಾನವು ನಿಂತಿದ್ದು ಏನೋಒಂದು ಹೇತುವಿಗಾಗಿರಬಹುದೇ ಹೊರ್ತು ನಿಷ್ಕಾರಣ ವಾಗಿರಲಾರದು, ಅಥವಾ ಇದು ಆ ಕುಬೇರನ ವಿನಹಾ ಮತ್ತೊರ್ವನಿಗೆ ಎಂದಿಗೂ ವಾಹನವಾದ್ದಲ್ಲ, ಈವಾಗ ಅಂಥಾ ಧನಾಧ್ಯಕ್ಷ ರಹಿತವಾಗಿ ಬಂದಿರೋಣದರಿಂದ ನಿಂತಿರಬಹುದೆಂದು ನನಗೆ ತೋರುತ್ತದೆ ಎಂದು ನುಡಿದನು ॥೭॥ ಆ ಬಳಿಕ ಶಂಕರಕಿಂಕರನಾದ ಕಡು ಬಲಿಷ್ಠನಾದ ನಂದಿಕೇಶ್ವರನು ದಶಕಂಠನ ಬಳಿಗೆ ಬಂದು ನಿರ್ಭೀತನಾಗಿ ಈ ವಾಕ್ಯವಂ ಪೇಳಿದನು ॥೮॥ ಎಲೈ ದಶಕಂಠನೆ!ಶಂಕರನು ಈ ಶೈಲದಲ್ಲಿ ಕ್ರೀಡಿಸುತಿಧಾನೆ, ಆದಕಾರಣ, ಗರುಡ, ನಾಗ, ಯಕ್ಷ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ಯೋಃಪರ್ವತಃಕೃತಃ ॥೯॥ ಸುಪರ್ಣನಾಗಯಕ್ಷಾಣಾಂದೈತ್ಯದಾನವರಕ್ಷಸಾಮ್ । ತನ್ನಿವರ್ತಸ್ವದುರ್ಬುದ್ಧೇ ಮಾವಿನಾಶಮವಾಪ್ಸ್ಯಸಿ॥೧೦॥ ಸರೋಷತಾಮ್ರನಯನಃಪುಷ್ಪಕಾದವರುಹ್ಯಚ। ಕೋಯಂಶಂಕರಇತ್ಯುಕ್ತ್ವಾ ಶೈಲಮೂಲಮುಪಾಗಮತ್॥೧೧॥ ನಂದೀಶ್ವರಮಥಾಪಶ್ಯದವಿದೂರಸ್ಥಿತಂಪ್ರಭುಮ್ । ದೀಪ್ತಂಶೂಲಮವಷ್ಟಭ್ಯದ್ವಿತೀಯಮಿವಶಂಕರಮ್॥ ಸವಾನರಮುಖಂದೃಷ್ಟ್ವಾತಮವಜ್ಞಾಯರಾಕ್ಷಸಃ। ಪ್ರಹಾಸಂಮುಮುಚೇಮೌರ್ಖ್ಯಾತ್ಸತೋಯಇವತೋಯದಃ ॥೧೩॥ ಸಕ್ರುದ್ಧೋ ಭಗವಾನ್ನಂದೀಶಂಕರಸ್ಯಾಪರಾತನುಃ। ಅಬ್ರವೀದ್ರಾಕ್ಷಸಂತತ್ರದಶಗ್ರೀವಮುಪಸ್ಥಿತಮ್ ॥೧೪॥ ಯಸ್ಮಾದ್ವಾನರಮೂರ್ತಿಂಮಾಂದೃಷ್ಟ್ವಾರಾಕ್ಷಸದುರ್ಮತೇ । ಮೌರ್ಖ್ಯಾತ್ತ್ವಮವಜಾನೀಷೇಪರಿಹಾಸಂವಿಮುಂಚಸೀ ॥೧೫॥ ತಸ್ಮಾನ್ಮದ್ರೂಪಸಂಯುಕ್ತಾಮದ್ರೂಪಸಮತೇಜಸಃ । ಉತ್ಪತ್ಸ್ಯಂತಿವಧಾರ್ಥಂಹಿಕುಲಸ್ಯತವವಾನರಾಃ॥೧೬॥ ನಖದಂಷ್ಟ್ರಾಯುಧಾಶ್ಶೂರಾಃಮನಃಪವನರಂಹಸಃ । ಯುದ್ಧೋನ್ಮತ್ತಾಬಲೋದಗ್ರಾಶ್ಶೈಲಾಇವವಿಸರ್ಪಿಣಃ॥೧೭॥ ತೇತವಾಸ್ತ್ರ

ನೆ, ಏಷಪರ್ವತಃ-ಈ ಪರ್ವತವು,ಸುಪರ್ಣನಾಗಯಕ್ಷಾಣಾಂ-ಗರುಡಸರ್ಪಯಕ್ಷರಿಗೂ,ದೈತ್ಯದಾನವರಕ್ಷಸಾಂ-ದೈತ್ಯರಿಗೂ,ದಾನವರಿಗೂ,ರಾಕ್ಷಸರಿಗು, ಸರ್ವೆಷಾಂ-ಸಮಸ್ತರಾದ, ಪ್ರಾಣಿನಾಂ-ಜೀವರಾಶಿಗಳಿಗೆ, ಅಗಮ್ಯಃಕೃತಃ-ಪ್ರವೇಶಿಸಲ ನರ್ಹವಾಗಿ ಮಾಡಲ್ಪಟ್ಟಿತು॥ ಹೇದುರ್ಬುದ್ಧೇ-ಎಲೈ ದುಷ್ಟಬುದ್ಧಿಯುಳ್ಳವನೆ, ತತ್-ಆಕಾರಣದ ದೆಸೆಯಿಂದ, ನಿವರ್ತಸ್ವ-ಹಿಂತಿರುಗು, ವಿನಾಶಂ-ನಾಶವನ್ನು, ಮಾವಾಪ್ಸ್ಯಸಿ-ಹೊಂದಬ್ಯಾಡ ॥ ಸಃ-ಆ ದಶಕಂಠನು, ರೋಷತಾಮ್ರನಯನಃ-ಕೋಪದಿಂದ ಕೆಂಗಣ್ಣುಗಳುಳ್ಳವನಾಗಿ,ಪುಷ್ಪಕಾತ್-ಪುಷ್ಪಕದ ದೆಸೆಯಿಂದ, ಅವರುಹ್ಯ-ಇಳಿದು, ಅಯಂಶಂಕರಃ-ಈ ಶಂಕರನು, ಕಃ-ಯಾರು-ಇತ್ಯುಕ್ತ್ವಾ-ಇಂತೆಂದುಪೇಳಿ,ಶೈಲಮೂಲಂಚ-ಪರ್ವತಬುಡೆವನ್ನು ಸಹಾಕುರಿತು,ಉಪಾಗಮತ್-ಹೊಂದಿನು॥ಅಥ-ಬಳಿಕ,ಅವಿದೂರಸ್ಥಿತಂ-ಸಮಿಪದಲ್ಲಿರುವ,ಪ್ರಭುಂ-ಸಮರ್ಥನಾದ, ದೀಪ್ತಂ-ಹೊಳೆಯುತಿರುವ, ಶೂಲಂ-ಶೂಲಾಯುಧವನ್ನು, ಅವಷ್ಟಭ್ಯ-ಹಿಡಿದು, ದ್ವಿತೀಯಂ-ಯರಡನೆಯವನಾದ, ಶಂಕರಮಿವಸ್ಥಿತಂ-ಈಶ್ವರನಂತಿರುವ, ನಂದೀಶ್ವರಂ-ನಂದೀಶ್ವರನನ್ನು, ಅಪಶ್ಯತ್-ಕಂಡನು॥ ೧೨॥ಸರಾಕ್ಷಸಃ-ಆ ದಶಕಂಠನು,ವಾನರಮುಖಂ-ಕಪಿಯಮುಖದಂತೆ ಮುಖವುಳ್ಳ,ತಂ-ಆ ನಂದೀಕೇಶ್ವರನನ್ನು, ದೃಷ್ಟ್ವಾ-ಕಂಡು, ಅವಜ್ಞಾಯ-ಅವಮಾನಮಾಡಿ, ಮೌರ್ಖ್ಯಾತ್-ಮೂಢತ್ವದಿಂದ, ಸತೋಯಃ-ಉದಕದಿಂದೊಡಗೂಡಿದ, ತೋಯದಃಇವ-ಮೇಘದಂತೆ, ಪ್ರಹಾಸಂ-ಹಾಸ್ಯವಚನವನ್ನು, ಮುಮುಚೇ-ಬಿಟ್ಟನು ॥ ೧೩ ॥ ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ, ಶಂಕರಸ್ಯ-ಪರಮೇಶ್ವರನ, ಅಪರಾತನುಃ-ಮತ್ತೊಂದು ಶರೀರರೂಪನಾದ,ಸನಂದೀ-ಆ ನಂದೀಶ್ವರನು,ಕ್ರುದ್ಧಃ-ಕುಪಿತನಾಗಿ, ತತ್ರ-ಆ ಪರ್ವತಾಗ್ರದಲ್ಲಿ, ಉಪಸ್ಥಿತಂ-ಸಮೀಪವರ್ತಿಯಾದ, ರಾಕ್ಷಸಂ-ರಾಕ್ಷಸನಾದ, ದಶಗ್ರೀವಂ-ದಶಕಂಠನನ್ನು ಕುರಿತು, ಅಬ್ರವೀತ್-ನುಡಿದನು ॥ ೧೪ ॥ ಹೇದುರ್ಮತೇ-ದುರ್ಬುದ್ಧಿಯುಳ್ಳ ಹೇ ರಾಕ್ಷಸ-ಎಲೈ ರಾಕ್ಷಸನೆ, ಯಸ್ಮಾತ್-ಯಾವಕಾರಣದ ದೆಸೆಯಿಂದ, ವಾನರಮೂರ್ತಿಂ-ವಾನರಾಕಾರವುಳ್ಳ, ಮಾಂ-ನನ್ನನ್ನು, ದೃಷ್ಟ್ವಾ-ಕಂಡು, ಮೌರ್ಖ್ಯಾತ್-ಮೌಢ್ಯದಿಂದ,ತ್ವಂ-ನೀನು, ಅವಜಾನೀಷೇ-ತಿಳಿಯದವನಾದೆಯೋ, ಪರಿಹಾಸಂಚ-ಹಾಸ್ಯವಚನವನ್ನೂ ಕೂಡ, ಮುಂಚಸಿ-ಬಿಟ್ಟಿದ್ದೀಯೋ,ತಸ್ಮಾತ್-ಆಕಾರಣದ ದೆಸೆಯಿಂದ, ಮದ್ರೂಪಸಂಯುಕ್ತಾಃ-ನನ್ನ ರೂಪದಂತಿರುವ ರೂಪದಿಂದ ಯುಕ್ತರಾದ, ಮದ್ರೂಪಸಮತೇಜಸಃ-ನನ್ನ ಸ್ವಭಾವಕ್ಕೆ ಸಮಾನವಾದ ತೇಜಸ್ಸುಳ್ಳ,ವಾನರಾಃ-ಕಪಿಗಳು, ತವ-ನಿನ್ನ, ಕುಲಸ್ಯ-ವಂಶದ, ವಧಾರ್ಥಂ-ಸಂಹಾರಾರ್ಥವಾಗಿ, ಉತ್ಪತ್ಸ್ಯಂತಿ-ಹುಟ್ಟಹೋಗುವರು ॥ ೧೬ ॥ ನಖದಂಷ್ಟ್ರಾಯುಧಾಃ-ಉಗುರುಗಳು ಕೋರೆಹಲ್ಲುಗಳು ಇವುಗಳೇ ಆಯುಧಗಳಾಗುಳ್ಳ, ಶೂರಾಃ-ವೀರರಾದ, ಮನಃಪವನರಂಹಸಃ-ಮನೋವಾಯುಗಳ ವೇಗದಂತೆ ವೇಗವುಳ್ಳ, ಯುದ್ಧೋನ್ಮತ್ತಾಃ-ಯುದ್ಧದಲ್ಲಿಕೊಬ್ಬಿದವರಾದ, ಬಲೋದಗ್ರಾಃ-ಶಕ್ತಿಯಲ್ಲಿ ಅಧಿಕರಾದ, ವಿಸರ್ಪಿಣಃ-ಸಂಚಾರಮಾಡುತಿರುವ, ಶೈಲಾಇವ-ಬೆಟ್ಟಗಳಂತಿರುವ, ತೇ-ಆ ಕಪಿಗಳು, ಸಂಭೂಯ-ಗುಂಪುಸೇರಿ, ಸಹಾಮಾತ್ಯಸುತ

ದೈತ್ಯ, ದಾನವ, ರಾಕ್ಷಸರೇ ಮುಂತಾದ ಸರ್ವಪ್ರಾಣಿಗಳಿಗು ಈ ಪರ್ವತವು ಈಗ ಅಗಮ್ಯವಾಗಿ ಮಾಡಲ್ಪಟ್ಟಿದೆ, ಎಲೈ ದುರ್ಬುದ್ಧಿಯುಳ್ಳವನೆ! ಬೇಗ ಹಿಂತಿರುಗು. ವಿನಾಶವಂ ಹೊಂದಬೇಡೆಂನಲು ॥೧೦॥ ಆ ದಶಕಂಠನು ಕಡುಕೋಪದಿಂದ ಕೆಂಗಣ್ಣುಗಳುಳ್ಳವನಾಗಿ ಪುಷ್ಪಕದಿಂದ ಕೆಳಗಿಳಿದು ಶಂಕರನ್ಯಾರೆಂದು ಕೇಳಿ, ಕೈಲಾಸಬೆಟ್ಟದ ತಳಕ್ಕೆ ಬಂದನು ॥೧೧॥ ಆ ಬಳಿಕ ದಶಕಂಠನು ಶೂಲಾಯುಧವಂಪಿಡಿದು ಸಾಕ್ಷಾಚ್ಛಂಕರನಂತೆ ಕಂಗೊಳಿಸುತಿರುವ ಕಡು ಪರಾಕ್ರಮಿಯಾದ ಮತ್ತು ಸಮೀಪದಲ್ಲಿ ನಿಂತಿರುವ ಆ ನಂದಿಕೇಶ್ವರನಂ ಕಂಡು ಕಪಿಮುಖವುಳ್ಳವನಾಗಿರುವನೆಂದು ಅಪಹಾಸ್ಯಮಾಡುತಾ ಅವಮಾನವಂಗೈಯ್ಯಲು, ಆ ನಂದಿಕೇಶ್ವರನು ಕಡುಕುಪಿತನಾಗಿ ದಶಕಂಠನಂ ಕುರಿತಿಂತೆಂದನು॥ ಎಲೈ ದುರ್ಬುದ್ಧಿಯುಳ್ಳ ದೈತ್ಯನೇ ! ವಾನರಮೂರ್ತಿಯಾದ ನನ್ನನ್ನು ಕಂಡು ಮೂರ್ಖತೆ ಯಿಂದ ಯಾವಕಾರಣದದೆಶೆಯಿಂದ ಅವಮಾನವಂಗೈದು ಪರಿಹಾಸವನ್ನು ಮಾಡಿದೋ, ಆ ಹೇತುವಿನಿಂದ ನನ್ನ ರೂಪದಂತೆ ರೂಪವುಳ್ಳವರಾಗಿಯು, ನನ್ನಂತೆಯೇ ಪರಾಕ್ರಮಿಗಳಾಗಿಯು, ನಖದಂಷ್ಟ್ರಗಳೇ ಆಯುಧಗಳಾಗಿ ಉಳ್ಳವರಾಗಿಯು, ಮನೋವಾಯುಗಳ ವೇಗದಂತೆ ವೇಗವುಳ್ಳವರಾಗಿಯು, ಕಾಳಗದಲ್ಲಿ ಕಡು ಕೊಬ್ಬಿದವರಾಗಿಯು, ಬಲಾಧಿಕರಾಗಿಯು, ಸಂಚಾರಶೀಲವಾದ ಪರ್ವತಗಳಂತಿರುವರಾಗಿಯು,ಇರುವ ವಾನರರು ನಿನ್ನವಧಾರ್ಥವಾಗಿ ಹುಟ್ಟಿ, ಎಲ್ಲರು ಸಂಘಭೂತರಾಗಿ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬಲಂದರ್ಪಮುತ್ಸೇಕಂಚಪೃಥಗ್ವಿಧಂ। ವ್ಯಪನೇಷ್ಯಂತಿಸಂಭೂಯಸಹಾಮಾತ್ಯಸುತಸ್ಯಹಿ॥೧೮॥ಕಿಂತ್ವಿದಾನೀಂಮಯಾಶಕ್ಯಂಹನ್ತುಂಯತ್ತ್ವಾಂನಿಶಾಚರ।ನಹಂತವ್ಯೋಹತಸ್ತ್ವಂಹಿಪೂರ್ವಮೇವಸ್ವಕರ್ಮಭಿಃ॥೧೯॥ ಇತ್ಯುದೀರಿತವಾಕ್ಯೇತುದೇವೇ ತಸ್ಮಿನ್ಮಹಾತ್ಮನಿ। ದೇವದುಂದುಭಯೋನೇದುಃಪುಷ್ಪವೃಷ್ಟಿಶ್ಚಖಾಚ್ಚ್ಯುತಾ ॥೨೦॥ ಅಚಿಂತಯಿತ್ವಾಸತದಾನಂದಿವಾಕ್ಯಂ ನಿಶಾಚರಃ । ಪರ್ವತಂತಂಸಮಾಸಾದ್ಯವಾಕ್ಯಮೇತದುವಾಚಹ॥೨೧॥ ಪುಷ್ಪಕಸ್ಯಗತಿಶ್ಛಿನ್ನಾಯತ್ಕೃತೇಮಮಗಚ್ಛತಃ। ತದೇತಂಶೈಲಮುನ್ಮೂಲಂಕರೋಮಿತವಗೋಪತೇ ॥೨೨॥ ಕೇನಪ್ರಭಾವೇನಭವಸ್ತ್ವತ್ರಕ್ರೀಡತಿರಾಜವತ್ । ವಿಜ್ಞಾತವ್ಯಂ ನಜಾನೀತೇಭಯಸ್ಥಾನಮುಪಸ್ಥಿತಮ್॥೨೩॥ ಏವಮುಕ್ತ್ವಾತತೋರಾಮಭುಜಾನ್ಪ್ರಕ್ಷಿಪ್ಯಪರ್ವತೇ । ತೋಲಯಾಮಾಸ ತಂಶೈಲಂಸಮೃಗವ್ಯಾಳಪಾದಪಮ್॥೨೪॥ * ಚಲನಾತ್ಪರ್ವತೇಂದ್ರಸ್ಯಗಣಾದೇವಸ್ಯಕಂಪಿತಾಃ।ಚಚಾಲಪಾರ್ವತೀಚಾಪಿತದಾಶ್ಲಿಷ್ಟಾಮಹೇಶ್ವರಂ॥೨೫॥ ತತೋರಾಮಮಹಾದೇವಃಪ್ರಹರ್ಷವೀಕ್ಷ್ಯತತ್ಕೃತಂ।ಪಾದಾಂಗುಷ್ಠೇನತಂಶೈಲಂಪೀಡಯಾ

---

ಸ್ಯಹಿ-ಮಂತ್ರಿಗಳಿಂದಲು ಮಕ್ಕಳಿಂದಲು ಒಡಗೂಡಿದ, ತವ-ನಿನ್ನ, ಅಸ್ತ್ರಬಲಂ-ಅಸ್ತ್ರಶಕ್ತಿಯನ್ನು, ದರ್ಪಂ-ಗರ್ವವನ್ನು, ಪೃಥಗ್ವಿಧಂ-ನಾನಾಬಗೆಯಾಗಿರುವ, ಉತ್ಸೇಕಂಚ-ಮದೋದ್ರೇಕವನ್ನು ಸಹಾ, ವ್ಯಪನೇಷ್ಯಂತಿ-ಹೋಗಲಾಡಿಸುತ್ತಾರೆ ॥ ೧೮॥ ಕಿಂತು-ಮತ್ತೇನಂದರೆ, ಹೇನಿಶಾಚರ-ಎಲೈ ರಾಕ್ಷಸನೆ, ತ್ವಾಂ-ನಿನ್ನನ್ನು, ಇದಾನೀಂ-ಈಗಲೆ,ಹಂತುಂ-ಹೊಡೆಯುವದಕ್ಕೋಸ್ಕರ,ಮಯಾ-ನನ್ನಿಂದ,ಶಕ್ಯಂ-ಸಾಧ್ಯವಾಗುವದು, ಯದ್ಯಸ್ಮಾತ್ಕಾರಣಾತ್-ಯಾವಕಾರಣದ ದೆಸೆಯಿಂದ, ತ್ವಂ-ನೀನು, ಪೂರ್ವಮೇವ-ಮೊದಲೆ, ಸ್ವಕರ್ಮಭಿಃ-ನಿನ್ನಕರ್ಮಗಳಿಂದಲೆ, ಹತಃ-ಹತನಾಗಿದ್ದೀಯೋ, ತತ್-ಆಕಾರಣದವೆಸೆಯಿಂದ, ನಹಂತವ್ಯೋಹಿ-ಹೊಡೆಯತಕ್ಕವನಲ್ಲವಷ್ಟೆ ॥ ೧೯॥ ಮಹಾತ್ಮನಿ-ಮಹಾನು ಭಾವನಾದ,ತಸ್ಮಿನ್ದೇವೆ-ಆ ನಂದೀಶ್ವರನು, ಇತಿ-ಈ ಪರಿಯಾಗಿ, ಉದೀರಿತವಾಕ್ಯೆಸತಿ-ಹೇಳಲ್ಪಟ್ಟ ವಾಕ್ಯವುಳ್ಳವನಾಗು ತಿರಲೀಕಾಗಿ, ದೇವದುಂದುಭಯಃ-ದೇವತಾಭೇರಿಗಳು, ನೇದುಃ-ಧ್ವನಿಸಿದವು, ಪುಷ್ಪವೃಷ್ಟಿಶ್ಚ-ಪುಷ್ಪಗಳ ವರ್ಷವೂಕೂಡ, ಖಾತ್-ಅಂತರೀಕ್ಷದ ದೆಸೆಯಿಂದ, ಚ್ಯುತಾ-ಬಿದ್ದಿತು ॥ ೨೦ ॥ ತದಾ-ಆಕಾಲದಲ್ಲಿ, ಸನಿಶಾಚರಃ-ಆ ದಶಕಂಠನು, ನಂದಿವಾಕ್ಯಂ-ನಂದಿಕೇಶ್ವನ ವಚನವನ್ನು, ಅಚಿಂತಯಿತ್ವಾ-ಯೋಚಿಸದೆ, ತಂಪರ್ವತಂ-ಆ ಬೆಟ್ಟವನ್ನು, ಸಮಾಸಾದ್ಯ-ಹೊಂದಿ, ಏತದ್ವಾಕ್ಯಂ-ಈ ವಚನವನ್ನು, ಉವಾಚಹ-ಹೇಳಿದನು ॥ ೨೧ ॥ ಹೆ ಗೋಪತೆ-ಎಲೈ ವೃಷಭೇಶ್ವರನೆ, ಗಚ್ಛತಃ-ಪ್ರಯಾಣಹೋಗುತಿರುವ, ಮಮ-ನನ್ನ, ಪುಷ್ಪಕಸ್ಯ-ಪುಷ್ಪಕದ, ಗತಿಃ-ಗಮನವು, ಯತ್ಕೃತೆ-ಯಾವಬೆಟ್ಟದ ನಿಮಿತ್ತವಾಗಿ, ಛಿನ್ನಾ-ಅಂತರಾಯ ಮಾಡಲ್ಪಟ್ಟಿತೋ, ತದೇತಂ-ಆ ಈ-ನಿನ್ನ, ಶೈಲಂ-ಪರ್ವತವನ್ನು, ಉನ್ಮೂಲಂಕರೋಮಿ-ಮೂಲೋತ್ಪಾಟನೆಯಂ ಗೈಯ್ಯುವೆನು ॥ ೨೨ ॥ ಅತ್ರ- ಈ ಪರ್ವತದಲ್ಲಿ, ಭವಸ್ತು-ಈಶ್ವರನಾದರೆ, ಕೇನಪ್ರಭಾವೇನ-ಯಾವುಪ್ರಭಾವದಿಂದ, ರಾಜವತ್-ರಾಜನಂತೆ, ಕ್ರೀಡತಿ-ವಿಹರಿಸುತ್ತಾನೊ, ವಿಜ್ಞಾತವ್ಯಂ-ತಿಳಿಯತಕ್ಕ, ಉಪಸ್ಥಿತಂ-ಸಮೀಪವರ್ತಿಯಾದ, ಭಯಸ್ಥಾನಂ-ಭಯಾಸ್ಪದವನ್ನು, ನಜಾನೀತೆ-ತಿಳಿಯದೆಹೋದನು ॥ ೨೩ ॥ ಹೆರಾಮ ಎಲೈ ಶ್ರೀರಾಮನೆ, ಏವಮುಕ್ತ್ವಾ-ಈ ಪರಿಯಾಗಿ ಹೇಳಿ, ಭುಜಾನ್-ಬಾಹುಗಳನ್ನು, ಪರ್ವತೆ-ಬೆಟ್ಟದಲ್ಲಿ, ಪ್ರಕ್ಷಿಪ್ಯ-ಇಟ್ಟು, ಸಮೃಗವ್ಯಾಳಪಾದಪಂ-ಮೃಗಗಳಿಂದಲು ಸರ್ಪಗಳಿಂದಲು ಗಿಡಗಳಿಂದಲು ಒಡಗೂಡಿದ, ತಂಶೈಲಂ-ಆ ಪರ್ವತವನ್ನು, ತೋಲಯಾಮಾಸ-ತೂಗಿಸಿದನು ॥ ೨೪ ॥ ಪರ್ವತಸ್ಯ-ಬೆಟ್ಟದ, ಚಲನಾತ್-ಕಂಪನದ ದೆಸೆಯಿಂದ, ದೇವಸ್ಯ-ಪರಮೇಶ್ವರನ, ಗಣಾಃ-ಪ್ರಮಥಗಣಗಳು, ಕಂಪಿತಾಃ-ಚಲಿಸಲ್ಪಟ್ಟವು, ಪಾರ್ವತೀಚಾಪಿ-ಪಾರ್ವತಿ ದೇವಿಯುಕೂಡ,ಚಚಾಲ-ನಡುಗಿದಳು, ತದಾ-ಆ ಕಾಲದಲ್ಲಿ, ಮಹೇಶ್ವರಂ-ಈಶ್ವರನನ್ನು, ಆಶ್ಲಿಷ್ಟಾ-ಅಪ್ಪಿಕೊಂಡಳು ॥ ೨೫ ॥ ಹೆ ರಾಮ-ಎಲೈ ಶ್ರೀರಾಮನೆ, ತತಃ-ಬಳಿಕ-ಮಹಾದೇವಃ-ಈಶ್ವರನು, ತತ್ಕೃತಂ-ಆ ರಾ

---

ಮಂತ್ರಿ, ಭ್ರಾತೃ, ಸುತ, ಬಂಧುಸಹಿತನಾದ ನಿನ್ನ, ಆಸ್ತ್ರಶಸ್ತ್ರಗಳ ಶಕ್ತಿಯನ್ನು, ಗರ್ವವನ್ನು, ಕೊಬ್ಬನ್ನು ಇವುಗಳನ್ನೆಲ್ಲ ಬಗೆಬಗೆಯಾಗಿ ಹೋಗಲಾಡಿಸುವರು ॥೧೮॥ ಎಲೈ ರಾಕ್ಷಸನೆ!ನಿನ್ನನ್ನು ಕೊಲ್ಲತಕ್ಕ ಶಕ್ತಿಯು ಎನಗಿದ್ದರೂ ಈಗ ಕೊಲ್ಲುವದಿಲ್ಲ. ಯಾಕಂದರೆ,—ನಿನ್ನ ಕರ್ಮಗಳಿಂದಲೇ ನೀನು ಸತ್ತು ಇರುವಿ ॥೧೯॥ ಇಂತೆಂದು ಮಹಾತ್ಮನಾದ ನಂದೀಶ್ವರನು ಹೇಳುತ್ತಿರುವನಾಗುತ್ತಿರಲಿಕಾಗೀ ದೇವದುಂದುಭಿಗಳು ಧ್ವನಿಸಿದವು. ಮತ್ತು ಪುಷ್ಪ ವೃಷ್ಟಿಯೂಕೂಡ ಸುರಿಯಿತು ॥೨೦॥ ಆ ಕಾಲದಲ್ಲಿ ಆ ನಿಶಾಚರನಾದ ರಾವಣನು ನಂದಿಕೇಶ್ವರನ ವಾಕ್ಯವನ್ನೆಣಿಸದೆ ಆ ಕೈಲಾಸಪರ್ವತವನ್ನ ಹೊಂದಿ ಇಂತೆಂದನು ॥೨೧॥ ಎಲೈ ವೃಷಭಪತಿಯೆ! ಯಾವಕಾರಣದಿಂದ ನಿಂನ ಬೆಟ್ಟವು ಮಾರ್ಗದಲ್ಲಿ ಪೋಗುತ್ತಿರುವ ನಂನ ಪುಷ್ಪಕವಿಮಾನದ ಗತಿಯಂ ತಡೆಪಡಿಸಿತೋ ಆದಕಾರಣದಿಂದ ಈ ಪರ್ವತವನ್ನು ಮೂಲೋತ್ಪಾಟನಂ ಗೈಯ್ಯುವೆನು ॥೨೨॥ ಯಾವಪ್ರಭಾವದಿಂದ ಶಂಕರನು ರಾಜನಂತೆ ಈ ಪರ್ವತದಲ್ಲಿ ಕ್ರೀಡಿಸುತ್ತಿರುವನಾಗಿಉಪಸ್ಥಿತವಾದಭಯವನ್ನು ತಿಳಿಯದೇ ಇರುತ್ತಾನೆ ॥೨೩॥ಎಂದುಪೇಳಿ ಆಬಳಿಕ ಆ ಕೈಲಾಸ ಪರ್ವತದ ಬುಡಕ್ಕೆಕೈಗಳನ್ನು ಹಾಕಿ ಮೃಗಗಳಿಂದಲೂ ಸರ್ಪಗಳಿಂದಲೂ, ವ್ಯಾಪ್ತವಾದ, ಆ ಪರ್ವತವನ್ನು ಅಳ್ಳಾಡಿಸಿದನು ॥೨೪॥ ಆ ಪರ್ವತದ ಚಲನಮಾತ್ರದಿಂದಲೇ-ಶಿವನ ಪ್ರಮಥಗಣಂಗಳು ಕಂಪಿಸಿದವು ಪಾರ್ವತಿಯೂ ಕೂಡ ಚಲಿಸಿದವಳಾಗಿ ಆ ಸಮಯದಲ್ಲಿ ಪರಮೇಶ್ವರನನ್ನ ಅಪ್ಪಿಕೊಂಡಳು ॥೨೫॥ ಎಲೈ ರಘುಕುಲತಿಲಕನೆ ಆಬಳಿಕ ಶಂಕರನು ದಶಕಂಠನ ಕೃತ್ಯವಾದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಾಸಲೀಲಯಾ ॥೨೬॥ ತತಸ್ತೇ ಪೀಡಿತಾಸ್ತಸ್ಯಶೈಲಸ್ಯಾಧೋಗತಾಃಭುಜಾಃ ।ವಿಸ್ಮಿತಾಶ್ಚಾಭವಂಸ್ತತ್ರಸಚಿವಾಸ್ತಸ್ಯರಕ್ಷಸಃ ॥೨೭॥ ತೇನರಕ್ಷೋಧಿಪೇನಾತ್ರವೇದನಾರ್ತಭುಜೇನಚ। ಮುಕ್ತೋವಿರಾವಸ್ಸುಮಹಾನ್ತ್ರೈಲೋಕ್ಯಂಯೇನಪೂರಿತಮ್ ॥ ಮಾನುಷಾಶಬ್ದವಿತ್ರಸ್ತಾಮೇನಿರೇಲೋಕಸಂಕ್ಷಯಂ । ದೇವತಾಶ್ಚಾಪಿಸಂಕ್ಷುಬ್ಧಾಶ್ಚಲಿತಾಸ್ಸ್ವೇಷುವರ್ತ್ಮಸು ॥೨೯॥ ಸಮುದ್ರಾಶ್ಚಾಪಿಸಂಕ್ಷುಬ್ಧಾಶ್ಚಲಿತಾಶ್ಚಾಪಿಪರ್ವತಾಃ। ಯಕ್ಷಾವಿದ್ಯಾಧರಾಸಿದ್ಧಾಃಕಿಮೇತದಿತಿಚಾಬ್ರುವನ್ ॥೩೦॥ ಅಥತೇಮಂತ್ರಿಣಸ್ತಸ್ಯವಿಕ್ರೋಶಂತಮಥಾಬ್ರುವನ್ । ತೋಷಯಸ್ವಮಹಾದೇವಂನೀಲಗ್ರೀವಮುಮಾಪತಿಮ್ ॥೩೧॥ ತಮೃತೇಶರಣಂನಾನ್ಯಂಪಶ್ಯಾಮೋತ್ರದಶಾನನ । ಸ್ತುತಿಭಿಃಪ್ರಣತೋಭೂತ್ವಾತಮೇನಂಶರಣಂವ್ರಜ । ಕೃಪಾಳುಶ್ಶಂಕರಸ್ತುಷ್ಟಃಪ್ರಸಾದಂತೇವಿಧಾಸ್ಯತಿ ॥೩೨॥ ಏವಮುಕ್ತಸ್ತದಾಮಾತ್ಯೈಸ್ತುಷ್ಟಾವವೃಷಭಧ್ವಜಮ್ । ಸಾಮಭಿರ್ವಿವಿಧೈಃ ಸ್ತೋತ್ರೈಃಪ್ರಣಮ್ಯ

---

ವಣನುಮಾಡಿದ ಕಾರ್ಯವನ್ನು, ವೀಕ್ಷ್ಯ-ಕಂಡು, ಪ್ರಹಸ್ಯ-ನಕ್ಕು, ತಂಶೈಲಂ-ಆ ಪರ್ವತವನ್ನು, ಲೀಲಯಾ-ವಿಲಾಸದಿಂದ, ಪಾದಾಂಗುಷ್ಠೇನ-ಪಾದದ ಹೆಬ್ಬೆಟ್ಟಿನಿಂದ, ಪೀಡಯಾಮಾಸ-ಅಣಗಿಸಿದನು ॥ ೨೬ ॥ ತಸ್ಯಶೈಲಸ್ಯ-ಆ ಪರ್ವತದ, ಅಧೋಗತಾಃ-ಕೆಳಗೆಸಿಕ್ಕಿರುವ, ತೇಭುಜಾಃ-ಆ ಭುಜಗಳು, ತತಃ-ಅಷ್ಟುಮಾತ್ರದಿಂದಲೆ, ಪೀಡಿತಾಃ-ಬಾಧಿಸಲ್ಪಟ್ಟವು, ತಸ್ಯರಕ್ಷಸಃ-ಆ ರಾಕ್ಷಸನ, ಸಚಿವಾಃ-ಮಂತ್ರಿಗಳು, ತತ್ರ-ಆ ಬೆಟ್ಟದಲ್ಲಿ, ವಿಸ್ಮಿತಾಃ-ಆಶ್ಚರ್ಯಯುಕ್ತರಾದವರು, ಅಭವನ್-ಆದರು ॥ ೨೭ ॥ ವೇದನಾರ್ತಭುಜೇನ-ಬಾಧೆಯಿಂದ ಒಳಲಿದಭುಜಗಳುಳ್ಳ, ತೇನರಕ್ಷೋಧಿಪೇನ-ಆ ರಾಕ್ಷಸಾಧಿಪತಿಯಿಂದ, ಅತ್ರ-ಈ ಪರ್ವತದ ಕೆಳಗಡೆ, ಸುಮಹಾನ್-ಮಹತ್ತರವಾದ, ವಿರಾವಃ-ದೀನಧ್ವನಿಯು, ಮುಕ್ತಃ-ಬಿಡಲ್ಪಟ್ಟಿತು, ಯೇನ-ಯಾವಶಬ್ದದಿಂದ, ತ್ರೈಲೋಕ್ಯಂ-ಲೋಕತ್ರಯವು, ಪೂರಿತಂ-ತುಂಬಲ್ಪಟ್ಟಿತೋ ॥ ೨೮ ॥ ಶಬ್ದವಿತ್ರಸ್ತಾಃ-ಶಬ್ದದಿಂದ ಹೆದರಿದ, ಮಾನುಷಾಃ-ಮನುಷ್ಯರು, ಲೋಕಸಂಕ್ಷಯಂ-ಲೋಕನಾಶನಕಾಲವನ್ನಾಗಿ, ಮೇನಿರೇ-ಎಣಿಸಿದರು, ದೇವತಾಶ್ಚಾಪಿ-ದೇವತೆಗಳೂ ಕೂಡ, ಸಂಕ್ಷುಬ್ಧಾಃ-ಕ್ಷೋಭಿಸಲ್ಪಟ್ಟವರಾಗಿ, ಸ್ವೇಷುವರ್ತ್ಮಸು-ತಮ್ಮ ತಮ್ಮ ಮಾರ್ಗಗಳಲ್ಲಿ, ಚಲಿತಾಃ-ಚಲಿಸಿದರು, ಸಮುದ್ರಾಶ್ಚಾಪಿ-ಸಮುದ್ರಗಳೂ ಕೂಡ, ಸಂಕ್ಷುಬ್ಧಾಃ-ಕ್ಷೋಭಗೊಂಡವು, ಪರ್ವತಾಶ್ಚಾಪಿ-ಪರ್ವತಗಳು ಸಹ, ಚಲಿತಾಃ-ಕಂಪಾಯಮಾನ ವಾದವು. ಯಕ್ಷಾಃ-ಯಕ್ಷರು, ವಿದ್ಯಾಧರಾಃ-ವಿದ್ಯಾಧರರು,ಸಿದ್ಧಾಃ-ಸಿದ್ಧರು, ಏತತ್-ಇದು, ಕಿಮಿತಿ-ಯೇನು ಯೆಂದು, ಅಬ್ರುವನ್-ನುಡಿದರು ॥ ೩೦ ॥ ಅಥ-ಬಳಿಕ, ತಸ್ಯ-ಆರಾವಣನ, ಮಂತ್ರಿಣಃ-ಮಂತ್ರಿಗಳು, ಅಥ-ಅನಂತರದಲ್ಲಿ, ವಿಕ್ರೋಶಂತಂ-ಅಳುತಿರುವ ರಾವಣನನ್ನು ಕುರಿತು, ಹೆದಶಾನನ-ಎಲೈ ದಶಮುಖನೆ, ನೀಲಗ್ರೀವಂ-ನೀಲಕಂಠನಾದ, ಉಮಾಪತಿಂ-ಪಾರ್ವತೀಪತಿಯಾದ, ಮಹಾದೇವಂ-ಪರಮೇಶ್ವರನನ್ನು, ತೋಷಯಸ್ವ-ಸಂತೋಷ ಗೊಳಿಸು, ಅತ್ರ-ಈ ವಿಷಯದಲ್ಲಿ, ತಮೃತೆ-ಆ ಪರಮೇಶ್ವರನ ವಿನಹಾ, ಅನ್ಯಂ-ಮತ್ತೊಬ್ಬನನ್ನು, ಶರಣಂ-ರಕ್ಷಕನನ್ನಾಗಿ, ನಪಶ್ಯಾಮಃ-ಕಾಣೆವು, ಸ್ತುತಿಭಿಃ-ಸ್ತೋತ್ರಗಳಿಂದ, ಪ್ರಣತಃ-ವಿನಯವುಳ್ಳವನು, ಭೂತ್ವಾ-ಆಗಿ, ತಮೇನಂ-ಆ ಈಪರಮೇಶ್ವರನನ್ನು, ಶರಣಂ-ರಕ್ಷಕನನ್ನಾಗಿ, ವ್ರಜ-ಹೊಂದು, ತುಷ್ಟಃ-ಸಂತುಷ್ಟನಾದ, ಕೃಪಾಳುಃ-ದಯಾಶಾಲಿಯಾದ, ಶಂಕರಃ-ಶಿವನು, ತೇ-ನಿನಗೆ, ಪ್ರಸಾದಂ-ಅನುಗ್ರಹವನ್ನು, ವಿಧಾಸ್ಯತಿ-ಮಾಡುವ, ಇತಿ-ಇಂತೆಂದು, ಅಥ-ಬಳಿಕ, ಅಬ್ರುವನ್-ನುಡಿದಿರು ॥ ೩೨ ॥ ಅಮಾತ್ಯೈಃ-ಮಂತ್ರಿಗಳಿಂದ, ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಸದಶಾನನಃ-ಆ ದಶಕಂಠನು, ವೃಷಭಧ್ವಜಂ-ಪರಮೇಶ್ವರನನ್ನು, ಪ್ರಣಮ್ಯ-ನಮಸ್ಕರಿಸಿ, ವಿವಿಧೈಃ-ನಾನಾಬಗೆಗಳಾದ, ಸಾಮಭಿಃ-ಸಾಮವೇದಗಳಿಂದಲು, ಸ್ತೋತ್ರೈಃ-ಸ್ತುತಿಗಳಿಂದಲು, ತುಷ್ಟಾವ-ಸ್ತುತಿಸಿದನು ॥ ೩೩ ॥ ಹೇರಾಜನ್-ಎಲೈ ರಾಜನೆ, ರವತಃ-

---

ಕಾರ್ಯವುಂಕಂಡು ಮುಗುಳುನಗೆಯುಳ್ಳವನಾಗಿ ಪಾದಾಂಗುಷ್ಠದಿಂದ ಬೆಟ್ಟವನ್ನು ವಿಲಾಸಮಾತ್ರದಿಂದ ಪೀಡಿಸಿದನು॥ ಆ ಬಳಿಕ ಆ ಬೆಟ್ಟದಕೆಳಗೆ ಶಿಕ್ಕಿದ ದಶಗ್ರೀವನ ಭುಜಗಳು ಪೀಡಿಸಲ್ಪಟ್ಟವು ಆಗ ಆ ರಾವಣನ ಮಂತ್ರಿಗಳೆಲ್ಲರೂವಿಸ್ಮಿತರಾದರು ಬಾಧೆಯನ್ನು ಹೊಂದಿದ ಭುಜಗಳುಳ್ಳ ಆ ರಾವಣನಿಂದ ಮಾಡಲ್ಪಟ್ಟ ಮಹತ್ತರವಾದ ಧ್ವನಿಯು ತ್ರೈಲೋಕ್ಯದಲ್ಲಿಯೂ, ತುಂಬಿದಂಥಾದ್ದಾಯಿತು ॥೨೮॥ ಆಸಮಯದಲ್ಲಿ ಮನುಷ್ಯರೆಲ್ಲರು ಹೆದರಿದವರಾಗಿ ಲೋಕಕ್ಷಯವು ಪ್ರಾಪ್ತವಾಯಿತೆಂದೆಣಿಸಿರದು. ದೇವತೆಗಳೆಲ್ಲರು ಕ್ಷೋಭಿಸಲ್ಪಟ್ಟವರಾಗಿ ತಮ್ಮತಮ್ಮ ಮಾರ್ಗಗಳಲ್ಲಿ ಹೊರಟು ಹೋದರು, ಸಮುದ್ರಗಳೆಲ್ಲಾ ಕ್ಷೋಭಿಸಲ್ಪಟ್ಟವು, ಪರ್ವತಗಳೆಲ್ಲಾ ಚಲಿಸಿದವು. ಯಕ್ಷರು, ವಿದ್ಯಾಧರರು, ಸಿದ್ಧರು, ಇವರೆಲ್ಲರು ಇದೇನಿರಬಹುದೆಂದು ಪೇಳಿದರು॥೩೦॥ ಆಬಳಿಕ ಆ ರಾವಣ ಮಂತ್ರಿಗಳು ಅಳುತ್ತಿರುವ ಆ ದಶಕಂಠನಂಕುರಿತಿಂತೆಂದರು, ಎಲೈ ರಾವಣನೇ ! ನೀಲಕಂಠವುಳ್ಳವನಾಗಿಯೂ ಉಮಾಪತಿಯಾಗಿಯೂ ಇರುವ ಮಹಾದೇವನನ್ನು ಸಂತೋಷಗೊಳಿಸು ॥೩೧॥ ಈಕಾಲದಲ್ಲಿ ಆ ಶಂಕರನ ವಿನಹಾ ಮತ್ತಾರೂ ರಕ್ಷಕರಿಲ್ಲಾ ಆದಕಾರಣ ಆ ಪರಮೇಶ್ವರನನ್ನೇ ಸ್ತೋತ್ರವಂ ಮಾಡುತಿರುವನಾಗಿ ಶರಣವಾಗಿ ಹೊಂದು, ಕರುಣಾಶಾಲಿಯಾದ ಆ ಶಂಕರನು ಸಂತುಷ್ಟನಾದವನಾಗಿ ನಿನಗೆ ಅನುಗ್ರಹವಂ ಮಾಡುವನು ॥೩೨॥ ಈಪರಿಯಾಗಿ ಮಂತ್ರಿಗಳಿಂದ ಪೇಳಲ್ಪಟ್ಟವನಾಗಿ, ವೃಷಭಧ್ವಜನಂ ಕುರಿತು ಕೈಮುಗಿದವನಾಗಿ, ಅನೇಕ ಸಾಮಗಳಿಂದಲು ಸ್ತೋತ್ರಗಳಿಂದಲು ಸ್ತುತಿಶಿದವನಾದನು॥೩೩॥ ಈರೀತಿಯಾಗಿ ಹೇಳುತಿರುವ ಆ ರಾವಣನನಿಗೆ ಸಂವತ್ಸರ ಸಹಸ್ರಗಳು ಕಳೆದುಹೋದವು॥೩೪॥ ಎಲೈರಘುಕುಲತಿಲಕನೆ! ಆ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸವಶಾನನಃ ॥ ಸಂವತ್ಸರಸಹಸ್ರಂತುರವತೊರಕ್ಷಸೊಗತಮ್ ॥೩೪॥ ತತಃಪ್ರೀತೊಮಹಾದೇವಶ್ಶೈಲಾಗ್ರೇವಿಷ್ಠಿತಸ್ತದಾ।
ಮುಕ್ತ್ವಾತಸ್ಯಭುಜಾರ್ನ್ರಾಜನ್ಪ್ರಾಹವಾಕ್ಯಂದಶಾನನಮ್॥೩೫॥ಪ್ರೀತೊಸ್ಮಿತವವೀರ್ಯಾಚ್ಛಶೌಂಡಿರ್ಯಾಚ್ಚದಶಾನನ।
ರವತೊವದನಾನ್ಮುಕ್ತಃಸ್ವರಃಪರಮದಾರುಣಃ ॥೩೬॥ ಯಸ್ಮಾಲ್ಲೋಕತ್ರಯಂತ್ವೇತದ್ರಾವಿತಂಭಯಮಾಗತಮ್ । ತ
ಸ್ಮಾತ್ತ್ವಂರಾವಣೊನಾಮನಾಮ್ನಾವೀರಭವಿಷ್ಯಸಿ ॥೩೭॥ ದೇವದಾನವಯಕ್ಷಾಶ್ಚಯೇಚಾನ್ಯೇಜಗತೀತಲೇ । ಏವಂತ್ವಾ
ಮಭಿಧಾಸ್ಯಂತಿರಾವಣಂಲೊಕರಾವಣಮ್ ॥೩೮॥ ಗಚ್ಛಗಚ್ಛಸುವಿಸ್ರಬ್ಧಃಪಥಾಯೆನತ್ವಮಿಚ್ಛಸಿ । ಮಯಾತ್ವಮಭ್ಯ
ನುಜ್ಞಾತೊರಾಕ್ಷಸಾಧಿಪಗಮ್ಯತಾಮ್ ॥೩೯॥ಏವಮುಕ್ತಸ್ಸಲಂಕೆಶಶ್ಶಂಭುನಾಸ್ವಯಮಬ್ರವೀತ್। ಪ್ರೀತೊಯದಿಮಹಾ
ದೇವವರಂಮೆದೆಹಿಯಾಚತಃ ॥೪೦॥ ಅವಧ್ಯತಾಮಯಾಪ್ರಾಪ್ತಾದೇವಗಂಧರ್ವದಾನವೈಃ । ರಾಕ್ಷಸೈರ್ಗುಹ್ಯಕೈರ್ನಾಗೈ
ರ್ಯೇಚಾನ್ಯೆಬಲವತ್ತರಾಃ ॥೪೧॥ ತಿರ್ಯಞ್ಚರಾನ್ನಗಣಯೆದುರ್ಬಲಾಇತಿಚಿಂತಯನ್ । ದೀರ್ಘಮಾಯುಶ್ಚಸಂಪ್ರಾಪ್ತಂ
ಬ್ರಹ್ಮಣಸ್ತ್ರಿಪುರಾಂತಕ ॥೪೨॥ ವಾಂಛಿತಸ್ಯಾಯುಷಶ್ಶಿಷ್ಟಂಶಸ್ತ್ರಂಚತ್ವಂಪ್ರಯಚ್ಛಮೆ । ಏವಮುಕ್ತಸ್ತದಾತೆನರಾವ

---

ಕೂಗುತಿರುವ, ರಾಕ್ಷಸಃ-ರಾಕ್ಷಸನಿಗೆ, ಸಂವತ್ಸರಸಹಸ್ರಂ-ಸಾವಿರವರ್ಷಗಳು, ಗತಂ-ಕಳೆದು ಹೋದವು॥೩೪॥ತತಃ-ಆಸ್ತೋತ್ರದಿಂದ,ಪ್ರೀತಃ-ಸಂತುಷ್ಟ
ನಾದ, ಮಹಾದೇವಃ-ಪರಮೇಶ್ವರನು, ಶೈಲಾಗ್ರೇ-ಪರ್ವತಾಗ್ರದಲ್ಲಿ, ಏಷ್ಠಿತಃ-ಕುಳಿತವನಾಗಿ, ತದಾ-ಆ ಕಾಲದಲ್ಲಿ,ತಸ್ಯ-ಆ ರಾಕ್ಷಸನ, ಭುಜಾನ್-ತೋಳುಗ
ಳನ್ನು, ಮುಕ್ತ್ವಾ-ಬಿಡಿಸಿ, ದಶಾನನಂ-ದಶಕಂಠನನ್ನು ಕುರಿತು, ವಾಕ್ಯಂ-ವಚನವನ್ನು, ಪ್ರಾಹ-ಹೇಳಿದನು ॥ ೩೫ ॥ ಹೆದಶಾನನ-ಎಲೈ ದಶಮುಖನೇ
ತವ-ನಿನ್ನ, ವೀರ್ಯಾಚ್ಚ-ಪರಾಕ್ರಮದ ದೆಸೆಯಿಂದಲು, ಶೌರ್ಯಾಚ-ಶೂರತ್ವದಿಂದಲು, ಪ್ರೀತಃ-ಸಂತುಷ್ಟನಾದವನು, ಅಸ್ಮಿ-ಆದೆನು, ರವತಃ-ಕೂ
ಗುತ್ತಿರುವನಿನ್ನ, ವದನಾತ್-ಮುಖದ ದೆಸೆಯಿಂದ, ಪರಮದಾರುಣಃ-ಬಹಳ ಕ್ರೂರವಾದ, ಸ್ವರಃ-ಶಬ್ದವು, ಮುಕ್ತಃ-ಬಿಡಲ್ಪಟ್ಟಿತು ॥೩೬ ॥ ಯಸ್ಮಾ
ತ್-ಯಾವ ಧ್ವನಿಯಿಂದ, ಏತಲ್ಲೋಕತ್ರಯಂ-ಈ ಮೂರುಲೋಕಗಳು, ರಾವಿತಂ-ಶಬ್ದಾಯಮಾನವಾಗಿ ಮಾಡಲ್ಪಟ್ಟಿತೋ, ಭಯಂ-ಭೀತಿಯು, ಆಗ
ತಂ-ಪ್ರಾಪ್ತಮಾಯಿತೋ, ಹೆವೀರ-ಎಲೈ ಶೂರನೆ, ತ್ವಂ-ನೀನು, ತಸ್ಮಾತ್ ಆಕಾರಣದ ದೆಸೆಯಿಂದ, ನಾಮ್ನಾ-ಹೆಸರಿನಿಂದ, ರಾವಣೋನಾಮ-ರಾವಣ
ನೆಂದು ಪ್ರಸಿದ್ಧನಾದವನು, ಭವಿಷ್ಯಸಿ-ಆಗುವಿ ॥ ೩೭ ॥ ಜಗತೀತಲೆ-ಭೂಪ್ರದೇಶದಲ್ಲಿ, ದೆವದಾನವಯಕ್ಷಾಶ್ಚ-ದೇವದಾನವ,ಯಕ್ಷರು, ಅನ್ಯೇಚ-ಮತ್ತು
ಕೆಲವರೆಂಬವರು, ಯೆ-ಯಾರೊ, ತೆ-ಅವರು, ತ್ವಾಂ-ನಿನ್ನನ್ನು, ಏವಂ-ಈಪರಿಯಾಗಿ, ಲೋಕರಾವಣಂ-ಲೋಕಗಳನ್ನೆಲ್ಲ ದೀನಧ್ವನಿಯುಳ್ಳವುಗಳನ್ನಾ
ಗಿ ಮಾಡುವ, ರಾವಣಂ-ರಾವಣನನ್ನಾಗಿ, ಅಭಿಧಾಸ್ಯಂತಿ-ಹೇಳುವರು ॥ ೩೮ ॥ ಹೆರಾಕ್ಷಸಾಧಿಪ-ಎಲೈ ರಾಕ್ಷಸಾಧಿಪತಿಯೆ, ಸುವಿಸ್ರಬ್ಧಃ-ವಿಶ್ವಾಸಿಸ
ಲ್ಪಟ್ಟವನಾಗಿ, ತ್ವಂ-ನೀನು, ಗಚ್ಛಗಚ್ಛ-ಹೋಗು ಹೋಗು, ತ್ವಂ-ನೀನು, ಮಯಾ-ನನ್ನಿಂದ, ಅಭ್ಯನುಜ್ಞಾತಃ-ಅಪ್ಪಣೆ ಕೊಡಲ್ಪಟ್ಟವನಾಗಿ, ಯೆನ
ಪಥಾ-ಯಾವಮಾರ್ಗದಿಂದ, ಗಂತುಂ-ಹೋಗುವದಕ್ಕೆ, ಇಚ್ಛಸಿ-ಅಪೇಕ್ಷಿಸುತ್ತೀಯೋ, ತೆನಪಥಾ-ಆ ಮಾರ್ಗದಿಂದ, ಗಮ್ಯತಾಂ-ಹೋಗಲ್ಪಡಲಿ ॥ ೩೯ ॥
ಏವಂ-ಈ ಪರಿಯಾಗಿ, ಶಂಭುನಾ-ಪರಮೇಶ್ವರನಿಂದ, ಉಕ್ತಃ-ಹೇಳಲ್ಪಟ್ಟ, ಸಲಂಕೆಶಃ-ಆ ಲಂಕಾಧಿಪತಿಯಾದ ರಾವಣನು, ಸ್ವಯಂ-ತಾನು, ಅಬ್ರವೀ
ತ್-ನುಡಿದನು, ಹೆ ಮಹಾದೇವ-ಎಲೈ ಪರಮೇಶ್ವರನೆ ತ್ವಂ-ನೀನು, ಪ್ರೀತೊಯದಿ-ಸಂತುಷ್ಟನಾದವನಾದರೆ, ಯಾಚತಃ - ಬೇಡುತ್ತಿರುವ, ಮೇ-ಯ
ನಗೆ,ವರಂ-ವರವನ್ನು, ದೇಹಿ-ಕೊಡು, ದೆವ ಗಂಧರ್ವದಾನವೈಃ - ದೇವತೆಗಳಿಂದಲು ಗಂಧರ್ವರಿಂದಲು ದಾನವರಿಂದಲು, ರಾಕ್ಷಸೈಃ - ರಾಕ್ಷಸರಿಂ
ದಲು, ಗುಹ್ಯಕೈಃ-ಪಿಶಾಚಗಳಿಂದಲು, ನಾಗೈಃ-ಸರ್ಪಗಳಿಂದಲು, ಅನ್ಯೆ-ಇತರರಾದ, ಯೆಚ-ಯಾರು, ಬಲವತ್ತರಾಃ-ಅತಿಬಲವಂತರೋ, ತೈಃ-ಅವ

---

ಬಳಿಕಮಹಾದೇವನು ಸಂತುಷ್ಟನಾದವನಾಗಿ, ಆಗ ಆದಶಗ್ರೀವನಭುಜಗಳನ್ನು ಬಿಡಗಡೆಮಾಡಿಂತೆಂದನು ॥೩೪॥ ಎಲೈ
ದಶಕಂಠನೆ,ನಿನ್ನ ವೀರ್ಯದಿಂದಲು ಧೈರ್ಯದಿಂದಲು ಮೆಚ್ಚಿರುವೆನು,ಕೂಗುತಿರುವ ನಿನ್ನಿಂದ ಕಡು ಭಯಂಕರವಾದ ಘೋ
ಷೆಯು ಮಾಡಲ್ಪಟ್ಟು, ಯಾವ ಕಾರಣದಿಂದ ಈ ಲೋಕತ್ರಯವು ಭಯವಂ ಹೊಂದಿ ಓಡಿಹೋಯಿತೊ, ಆದಕಾರ
ಣದಿಂದ ರಾವಣನೆಂದು ಹೆಸರುಳ್ಳವನಾಗುವಿ ॥೩೬॥ ದೇವ, ದಾನವ ಯಕ್ಷರೆ ಮುಂತಾದ ಪ್ರಾಣಿಗಳೆಲ್ಲ, ಈ ಲೋಕ
ದಲ್ಲಿ ಲೋಕಗಳನ್ನೆಲ್ಲ ರಾವಿಸುತಿರುವ ರಾವಣನೆಂದು ಕರೆಯುವರು ॥೩೮॥ಎಲೈ ರಾಕ್ಷಸಾಧಿಪತಿಯೆ, ನೀನು ನನ್ನಿಂದ
ಅಪ್ಪಣೆಯಂತೆಗದುಕೊಂಡು ಹೋಗಬೇಕಾದ ಸ್ಥಳಕ್ಕೆ ನಿಶ್ಚಿಂತೆಯಾಗಿ ಹೋಗಬಹುದು॥೩೯॥ಇಂತೆಂದು ನುಡಿಯಲ್ಪ
ಟ್ಟ ಆ ಲಂಕೇಶನು ಶಿವನಂ ಕುರಿತಿಂತೆಂದನು, ಎಲೈ ಮಹಾದೇವನೆ, ನೀನು ಪ್ರೀತನಾಗಿದ್ದಲ್ಲಿ, ವರವಂಕೊಡು॥ಎಲೈ ತ್ರಿ
ಪುರಾಂತಕನೆ, ದೇವತೆಗಳಿಂದಲು, ಗಂದರ್ವರಿಂದಲು, ದಾನವರಿಂದಲು, ರಾಕ್ಷಸರಿಂದಲು,ಗುಹ್ಯಕರಿಂದಲು ನಾಗದೇವತೆ
ಗಳಿಂದಲು, ಮತ್ತು ಇತರರಾದ ಕಡುಪರಾಕ್ರಮಿಗಳಿಂದಲು ಅವಧ್ಯತೆಯುಂ ಸಾಧಾರಣ ಮನುಷ್ಯರು ದುರ್ಬಲರಾದ
ಕಾರಣ ನನಗೆ ಲಕ್ಷ್ಯವೇಯಿಲ್ಲ,ಎಲೈ ಮಹಾದೇವನೆ ಬ್ರಹ್ಮದೇವನ ದೆಶೆಯಿಂದ ದೀರ್ಘಾಯುಸ್ಸನ್ನೂ ಕೂಡ ಹೊಂದಿ
ಧೇನೆ ॥೪೨॥ ಆದರೆ ನನ್ನ ದುಷ್ಕಾರ್ಯಗಳಿಂದ ಆಯುಸ್ಸು ಕ್ಷೀಣವಾಗುವದಾದಕಾರಣ, ಬ್ರಹ್ಮದೇವರಿಂದ ಪಡದಿರು
ವ ಆಯುಸ್ಸಿನಲ್ಲಿ ಅವಶಿಷ್ಟವಾದ ಆಯುಸ್ಸು ನಿರ್ಬಾಧಕವಾಗಿರುವಂತೆ ಕೊಡುವದಲ್ಲದೆ ಶಸ್ತ್ರವನ್ನು ಸಹ ಕೊಡಬೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣೇನಸಶಂಕರಃ ॥೪೩॥ ದದೌಖಡ್ಗಂಮಹಾದೀಪ್ತಂಚಂದ್ರಹಾಸಮಿತಿಶ್ರುತಮ್। ಆಯುಷಶ್ಚಾವಶೇಷಂಚಸ್ಮೃತ್ವಾ ಭೂತಪತಿಸ್ತದಾ ॥೪೪॥ ದತ್ತ್ವೋವಾಚತದಾಶಂಭುನಾವಜ್ಞೇಯಮಿದಂತ್ವಯಾ । ಅವಜ್ಞಾತಂಹಿ ಯದಿತೇ ಮಾಮೇವೈಷ್ಯತ್ಯಸಂಶಯಃ ॥೪೫॥ ಸಾಕ್ಷಾನ್ಮಹೇಶ್ವರೇಣೈವಂಕೃತನಾಮಾಸರಾವಣಃ। ನಮಸ್ಕೃತ್ಯಮಹಾದೇವಂವಿಮಾನಂತತ್ಸಮಾರುಹತ್॥ ತತೋಮಹೀತಲೇರಾಮಪರಿಚಕ್ರಾಮರಾವಣಃ। ಕ್ಷತ್ರಿಯಾನ್ಸಮಹಾವೀರ್ಯಾನ್‌ಬಾಧಮಾನಇತಸ್ತತಃ ... ॥೪೭॥

—•••✳ಇತಿ ಶ್ರೀಮದುತ್ತರ ರಾಮಾಯಣೆ ಷೊಡಶಸ್ಸರ್ಗಃ.✳•••—

ಅಥರಾಜನ್‌ಮಹಾಬಾಹುರ್ವಿಚರನ್‌ಸಮಹೀತಲೆ । ಹಿಮವದ್ವನಮಾಸಾದ್ಯಪರಿಚಕ್ರಾಮರಾವಣಃ ॥೧॥ ತತ್ರಾಪಶ್ಯತ್ಸವೈಕನ್ಯಾಂಕೃಷ್ಣಾಜಿನಜಟಾಧರಾಮ್। ಆರ್ಷೇಣವಿಧಿನಾಯುಕ್ತಾಂತಪಂತೀಂದೇವತಾಮಿವ ॥೨॥ ಸದೃಷ್ಟ್ವಾರೂಪ

---

ರಿಂದಲು, ಅವಧ್ಯತಾ-ಅವಧ್ಯತ್ವವು, ಮಯಾ-ನನ್ನಿಂದ, ಪ್ರಾಪ್ತಾ-ಹೊಂದಲ್ಪಟ್ಟಿತು, ಹೆ ತ್ರಿಪುರಾಂತಕ-ಎಲೈ ಶಿವನೆ, ತಿರ್ಯಙ್ನರಾನ್-ತಿರ್ಯಕ್-ತಿರ್ಯಗ್ಜಂತುಗಳನ್ನು, ನರಾನ್- ಮನುಷ್ಯರನ್ನು, ದುರ್ಬಲಾಇತಿ-ಬಲಹೀನರೆಂದು, ಚಿಂತಯನ್-ಯೋಚಿಸಿದವನಾಗಿ, ನಗಣಯೆ-ಎಣಿಸುವದಿಲ್ಲ,ಬ್ರಹ್ಮಣಃ-ಬ್ರಹ್ಮದೇವನವರಿಯಿಂದ, ದೀರ್ಘಮಾಯುಶ್ಚ-ದೀರ್ಘಾಯುಸ್ಸನ್ನು,ಸಂಪ್ರಾಪ್ತಂ-ಹೊಂದಲ್ಪಟ್ಟಿತು,ವಾಂಛಿತಸ್ಯ-ಅಪೇಕ್ಷಿಸಲ್ಪಟ್ಟ, ಆಯುಷಃಶಿಷ್ಟಂ-ದುಷ್ಕರಗಳಿಂದ ನಷ್ಟವಾಗದಂತೆ ಆಯುಶ್ಶೇಷವನ್ನು,ಶಸ್ತ್ರಂಚ-ಶಸ್ತ್ರವನ್ನು ನತ್ವಂ-ನನಗೆನೀನು, ಪ್ರಯಚ್ಛ-ಕೊಡು, ಏವಂ-ಈಪರಿಯಾಗಿ, ತೇನರಾವಣೇನ-ಆರಾವಣನಿಂದ, ಉಕ್ತಃ-ಹೇಳಲ್ಪಟ್ಟ,ಭೂತಪತಿಃ-ಪ್ರಮಥಗಣಾಧಿಪತಿಯಾದ, ಶಂಕರಃ-ಪರಮೇಶ್ವರನು, ಸ್ಮೃತ್ವಾ-ನಕ್ಕು, ಮಹಾದೀಪ್ತಂ-ಮಹಾ ಪ್ರಕಾಶಯುಳ್ಳ, ಚಂದ್ರಹಾಸಮಿತಿ ಶ್ರುತಂ-ಚಂದ್ರಹಾಸವೆಂದು ಪ್ರಸಿದ್ಧವಾದ, ಖಡ್ಗಂ-ಖಡ್ಗವನ್ನು, ತಥಾ-ಹಾಗೆಯೆ, ಆಯುಷಃ-ಆಯುಸ್ಸಿನ, ಅವಶೇಷಂಚ-ಉಳಿದಭಾಗವನ್ನು, ದದೌ-ಕೊಟ್ಟನು ॥೪೪॥ ತದಾ-ಆ ಕಾಲದಲ್ಲಿ, ಶಂಭುಃ-ಪರಮೇಶ್ವರನು, ದತ್ತ್ವಾ-ಕೊಟ್ಟು, ಇದಂ-ಈ ಶಸ್ತ್ರವು, ತ್ವಯಾ-ನಿನ್ನಿಂದ, ನಾವಜ್ಞೇಯಂ-ಅವಮಾನ ಮಾಡತಕ್ಕದ್ದಲ್ಲ ಅವಜ್ಞಾತಂಯದಿ-ತಿರಸ್ಕರಿಸಲ್ಪಟ್ಟದ್ದಾದರೆ, ಮಾಮೇವ-ನನ್ನನ್ನೆ, ಏಷ್ಯತಿ-ಹೊಂದುವದಷ್ಟೆ, ಅಸಂಶಯಃ-ಸಂದೇಹವಿಲ್ಲ, ಇತಿ-ಇಂತೆಂದು, ಉವಾಚ-ಹೇಳಿದನು ॥೪೫॥ ಏವಂ-ಈಪರಿಯಾಗಿ, ಮಹೇಶ್ವರೇಣ-ಈಶ್ವರನಿಂದ, ಸಾಕ್ಷಾತ್-ಪ್ರತ್ಯಕ್ಷವಾಗಿ, ಕೃತನಾಮಾ-ಮಾಡಲ್ಪಟ್ಟ ನಾಮಧೇಯವುಳ್ಳ, ಸರಾವಣಃ-ಆ ರಾವಣನು, ಮಹಾದೇವಂ-ಪರಮೇಶ್ವರನನ್ನು, ನಮಸ್ಕೃತ್ಯ-ವಂದಿಸಿ,ತದ್ವಿಮಾನಂ-ಆ ವಿಮಾನವನ್ನು, ಸಮಾರೊಹತ್-ಏರಿದನು ॥೪೬॥ ಹೆರಾಮ-ಎಲೈ ಶ್ರೀರಾಮನೆ, ತತಃ-ಬಳಿಕ, ಸರಾವಣಃ-ಆ ರಾವಣನು, ಮಹಾವೀರ್ಯಾನ್-ಮಹಾ ಪರಾಕ್ರಮಿಗಳಾದ, ಕ್ಷತ್ರಿಯಾನ್-ರಾಜರನ್ನು,ಇತಸ್ತತಃ-ಇತ್ತತ್ತಲು, ಬಾಧಮಾನಃ-ಬಾಧೆಗೊಳಿಸುತ್ತಿರುವನಾಗಿ,ಮಹೀತಲೆ-ಭೂಮಿಯಲ್ಲಿ, ಪರಿಚಕ್ರಾಮ-ಸಂಚರಿಸಿದನು. ॥೪೭॥ —•••✳ಶ್ರೀಮ ದುತ್ತರರಾಮಾಯಣೆ ಷೋಡಶಸ್ಸರ್ಗಃ.✳•••—

ಟೀ॥ ಹೆರಾಜನ್-ಎಲೈ ಮಹಾರಾಜನೆ, ಅಥ-ಬಳಿಕ, ಮಹಾಬಾಹುಃ-ಮಹಾಭುಜಪರಾಕ್ರಮವುಳ್ಳ, ಸರಾವಣಃ-ಆ ರಾವಣನು, ಮಹೀತಲೆ- ಭೂಮಂಡಲದಲ್ಲಿ, ವಿಚರನ್-ಸಂಚರಿಸುತಿರುವನಾಗಿ, ಹಿಮವದ್ವನಂ-ಹಿಮವತ್ಪರ್ವತದ ವನವನ್ನು, ಆಸಾದ್ಯ-ಹೊಂದಿ, ಪರಿಚಕ್ರಾಮ-ತಿರಗಿದನು ॥ ೧ ॥ ಸವೈ-ಆ ರಾವಣನಾದರೆ, ತತ್ರ-ಆಹಿಮವದ್ವನದಲ್ಲಿ, ತಪಂತೀಂ-ತಪಸ್ಸು ಮಾಡುತಿರುವ, ದೇವತಾಮಿವಸ್ಥಿತಾಂ-ದೇವತೆಯಂತಿರುವ, ಆರ್ಷೇಣ-ಋಷಿಸಂಬಂಧವಾದ, ವಿಧಿನಾ-ಅನುಷ್ಠಾನದಿಂದ, ಯುಕ್ತಾಂ-ಕೂಡಿಕೊಂಡಿರುವ, ಕೃಷ್ಣಾಜಿನಜಟಾಧರಾಂ-ಕೃಷ್ಣಾಜಿನವನ್ನು ಜಡೆಗಳನ್ನು ಸಹ ಧರಿಸಿರುವ, ಕನ್ಯಾಂ-ಕನ್ಯಕೆಯನ್ನು, ಅಪಶ್ಯತ್-ಕಂಡನು ॥೨॥ ಸಃ-ಆ ರಾವಣನು, ರೂಪಸಂಪನ್ನಾಂ-ಸೌಂದರ್ಯದಿಂದ ಕೂಡಿಕೊಂಡಿರುವ, ಸುಮಹಾವ್ರತಾಂ-ಮಹಾ ನಿಯಮಪರಳಾದ, ತಾಂಕನ್ಯಾಂ-ಆ ಕನ್ಯಕೆಯನ್ನು, ದೃಷ್ಟ್ವಾ-ಕಂಡು, ಕಾಮಮೋಹಪರೀತಾತ್ಮಾ-ಕಾಮದಿಂದುಂಟಾದ ಅಜ್ಞಾನದಿಂದ ವ್ಯಾಪ್ತ

---

ಕೆಂದಿಚ್ಛೈಸುವೆನೆಂದು ರಾವಣಾಸುರನಿಂದ ಬೇಡಲ್ಪಟ್ಟ ಆ ಶಂಕರನು ಆ ಸಮಯದಲ್ಲಿ ಚಂದ್ರಹಾಸವೆಂದು ಪ್ರಸಿದ್ಧವಾದ ಕಡುಕಾಂತಿಯುಳ್ಳ ಖಡ್ಗವನ್ನು, ಆಯುಶ್ಶೇಷವನ್ನು ಕೂಡ ಕೊಟ್ಟವನಾಗಿ, ಮುಗುಳುನಗೆ ಯುಳ್ಳವನಾಗಿಂತೆಂದನು ॥೪೪॥ ಎಲೈ ದಶಕಂಠನೆ, ಈ ಖಡ್ಗವನ್ನು ನೀನವಮಾನ ಪಡಿಸಕೂಡದು, ಒಂದುವ್ಯಾಳೆ ಹಾಗೆ ಮಾಡಿದರೆ ಇದು ನನ್ನ ಬಳಿಗೆ ಬಂದು ಬಿಡುವದು ಈ ವಿಷಯದಲ್ಲಿ ಸಂದೇಹವಿಲ್ಲ ॥೪೫॥ ಈಪರಿಯಾಗಿ ಸಾಕ್ಷಾಚ್ಛಂಕರನಿಂದಲೆ ರಾವಣನೆಂದು ಪೆಸರಿಟ್ಟ ಆ ದಶಕಂಠನು ಮಹಾದೇವನ ಪಾದಪಂಕಜಗಳಿಗೆರಗಿ ಆ ಪುಷ್ಪಕವಿಮಾನವನ್ನೇರಿದನು॥ ಎಲೈ ರಾಘವನೆ, ಬಳಿಕಾ ರಾವಣನು ಭೂಮಂಡಲ ವಾಸಿಗಳಾದ ಕಡು ಪರಾಕ್ರಮಿಗಳಾದ ಕ್ಷತ್ರಿಯರನ್ನು ಬಾಧಿಸುತ್ತಾ ಅಲ್ಲಲ್ಲಿ ಸಂಚರಿಸುತಿದ್ದನು ... ... ... ॥೪೭॥

—•••ಶ್ರೀಮದುತ್ತರ ರಾಮಾಯಣದೊಳ್ ಹದಿನಾರನೇ ಸರ್ಗಂ ಮುಗಿದುದು•••—

ಎಲೈ ರಘುನಾಯಕನೆ, ಮಹಾ ಭುಜಪರಾಕ್ರಮಿಯಾದ ಆ ರಾವಣನು ಭೂಮಂಡಲದಲ್ಲಿ ಸಂಚರಿಸುತಿರುವನಾಗಿ ಹಿಮವತ್ಪರ್ವತವನ್ನೈದಿದನು ॥೧॥ ಅಲ್ಲಿ ಸಾಕ್ಷಾದ್ದೇವತೆಯೋ ಪಾದಿಯಾಗಿ ಕಂಗೊಳಿಸುತಿರುವಳಾಗಿಯು, ವ್ರತಾನುಷ್ಠಾನ ತತ್ಪರಳಾಗಿಯು, ಕೃಷ್ಣಾಜಿನವನ್ನು ಜಡೆಗಳನ್ನು ಧರಿಸಿರುವಳಾಗಿಯು ಕಡು ರೂಪವತಿಯಾಗಿಯು ಇರುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಂಪನ್ನಾಂಕನ್ಯಾಂತಾಂಸುಮಹಾವ್ರತಾಮ್। ಕಾಮಮೋಹಪರೀತಾತ್ಮಾ ಪಪ್ರಚ್ಛ ಪ್ರಹಸನ್ನಿವ॥೩॥ ಕಿಮಿದಂವರ್ತಸೇಭದ್ರೆ ವಿರುದ್ಧಂಯೌವನಸ್ಯತೇ । ನಹಿಯುಕ್ತಾತವೈತಸ್ಯರೂಪಸ್ಯತಪಸಃಕ್ರಿಯಾ ॥೪॥ ರೂಪಂತೇನುಪಮಂಭೀರುಕಾಮೋನ್ಮಾದಕರಂನೃಣಾಮ್ । ನಯುಕ್ತಂತಪಸಿಸ್ಥಾತುಂಅಫಲೋಹ್ಯೇಷನಿರ್ಣಯಃ ॥೫॥ ಕಸ್ಯಾಸಿದುಹಿತಾಭದ್ರೆಕೋವಾಭರ್ತಾತವಾನಘೇ । ಯೇನಸಂಭುಜ್ಯಸೇಭೀರುಸನರಃಪುಣ್ಯಭಾಗ್ಭುವಿ ॥೬॥ ಪೃಚ್ಛತಶ್ಶಂಸಮೇಸರ್ವಂಕಸ್ಯಹೇತೋಶ್ಶ್ರಮಸ್ತವ ॥೭॥ ಏವಮುಕ್ತಾತುಸಾಕನ್ಯಾರಾವಣೇನಯಶಸ್ವಿನೀ । ಅಬ್ರವೀದ್ವಿಧಿವತ್ಕೃತ್ವಾತಸ್ಯಾತಿಥ್ಯಂತಪೋಧನಾ ॥೮॥ ಕುಶಧ್ವಜೋಮಮಪಿತಾಬ್ರಹ್ಮರ್ಷಿರತುಲಪ್ರಭಃ ॥ ಬೃಹಸ್ಪತಿಸುತಶ್ಶ್ರೀಮಾನ್ಬುದ್ಧ್ಯಾತುಲ್ಯೋಬೃಹಸ್ಪತೇಃ ॥೯॥ ತಸ್ಯಾಹಂಕುರ್ವತೋನಿತ್ಯಂವೇದಾಭ್ಯಾಸಂಮಹಾತ್ಮನಃ । ಸಂಭೂತಾವಾಙ್ಮಯೀಕನ್ಯಾನಾಮ್ನಾವೇದವತೀಸ್ಮೃತಾ ॥೧೦॥ ತತೋದೇವಾಸ್ಸಗಂಧರ್ವಾ ಯಕ್ಷರಾಕ್ಷಸಪನ್ನಗಾಃ । ತೇಚಾಪಿಗತ್ವಾಪಿತರಂವರಣಂರೋಚಯಂತಿಮೇ॥೧೧॥ ನಚಮಾಂಸಪಿತಾ

---

ಮಾದ ಮನವುಳ್ಳವನಾಗಿ, ಪ್ರಹಸನ್ನಿವ–ನಗುತಿರುವನಂತೆ, ಪಪ್ರಚ್ಛ–ಕೇಳಿದನು ॥೩॥ ಹೆ ಭದ್ರೇ–ಎಲೈ ಶುಭಕರಳೆ, ತೇ–ನಿನ್ನ, ಯವ್ವನಸ್ಯ–ಜವ್ವನಕ್ಕೆ, ವಿರುದ್ಧಂ–ವೈರವಾದ, ಇದಂ–ಈ ವ್ರತವನ್ನು, ಕಿಂವರ್ತಸೆ ಯಾಕೆ ಅನುಷ್ಠಾನಮಾಡುತ್ತಿ, ತವ–ನಿನ್ನ, ಏತಸ್ಯರೂಪಸ್ಯ–ಈ ಸೌಂದರ್ಯಕ್ಕೆ, ತಪಸಃಕ್ರಿಯಾ–ತಪೋನುಷ್ಠಾನವು, ನಯುಕ್ತಾಹಿ–ಯುಕ್ತವಲ್ಲದ್ದಪ್ಪೆ ॥೪॥ ಹೆಭೀರು–ಎಲೈ ಭಯಶೀಲಳೆ, ನೃಣಾಂ–ಮನುಷ್ಯರಿಗೆ,ಕಾಮೋನ್ಮಾದಕರಂ–ಮನ್ಮಥೋದ್ರೇಕಕರವಾದ, ತೇ–ನಿನ್ನ, ರೂಪಂ–ರೂಪವು, ಅನುಪಮಂ–ಅಸದೃಶವಾದದ್ದು, ತಪಸಿ–ತಪಸ್ಸಿನಲ್ಲಿ, ಸ್ಥಾತುಂ–ಇರುವದಕ್ಕೆ, ನಯುಕ್ತಂ–ತಕ್ಕದ್ದಲ್ಲ, ಏಷಃನಿರ್ಣಯಃ–ಈ ನಿಶ್ಚಯವು, ಅಫಲೋಹಿ–ವ್ಯರ್ಥವಪ್ಪೆ ॥೫॥ ಹೆ ಭದ್ರೇ–ಎಲೈ ಶುಭಕರಳೆ, ಕಸ್ಯದುಹಿತಾಸಿ–ಯಾರಮಗಳಾಗಿದ್ದಿ, ಹೆ ಅನಘೇ–ಎಲೈ ದೋಷರಹಿತಳೆ, ತವ–ನಿನಗೆ, ಭರ್ತಾವಾ–ಗಂಡನಾದನು, ಕಃ–ಯಾರು, ಹೆ ಭೀರು–ಎಲೈ ಭಯಶೀಲಳೆ,ಯೇನ–ಯಾವ ಪುರುಷನಿಂದ, ಸಂಭುಜ್ಯಸೇ–ಅನುಭವಿಸಲ್ಪಡುತ್ತಿಯೋ, ಸನರಃ–ಆ ಮನುಷ್ಯನು,ಪುಣ್ಯಭಾಕ್–ಪುಣ್ಯವಂತನು, ಭವೇತ್–ಆಗುವನು॥ಪೃಚ್ಛತಃ–ಕೇಳುತಿರುವ, ಮೇ–ನನಗೆ–ಸರ್ವಂ–ಸಮಸ್ತವನ್ನು, ಶಂಸ–ಪೇಳು, ತವ–ನಿನಗೆ, ಕಸ್ಯಹೇತೋಃ–ಯಾವಕಾರಣದ ದೆಶೆಯಿಂದ,ತವ–ನಿನಗೆ,ಶ್ರಮಃ–ಆಯಾಸವು॥೭॥ ಏವಂ–ಈಪರಿಯಾಗಿ,ರಾವಣೇನ–ರಾವಣನಿಂದ,ಉಕ್ತಾ–ಹೇಳಲ್ಪಟ್ಟ,ಯಶಸ್ವಿನೀ–ಕೀರ್ತಿವಂತಳಾದ,ತಪೋಧನಾ–ತಪಸ್ಸೇಧನವಾಗುಳ್ಳ,ಸಾಕನ್ಯಾ–ಆ ಕನ್ಯಕೆಯು,ವಿಧಿವತ್–ಯಥಾಶಾಸ್ತ್ರವಾಗಿ, ಆತಿಥ್ಯಂ–ಅತಿಥಿಸತ್ಕಾರವನ್ನು, ಕೃತ್ವಾ–ಮಾಡಿ, ಅಬ್ರವೀತ್–ನುಡಿದಳು॥೮॥ ಅತುಲಪ್ರಭಃ–ಸಮಾನವಿಲ್ಲದಿರುವ ಕಾಂತಿಯುಳ್ಳ,ಬೃಹಸ್ಪತಿಸುತಃ–ಬೃಹಸ್ಪತಿಯಮಗನಾದ,ಶ್ರೀಮಾನ್–ಸಂಪದ್ಯುಕ್ತನಾದ, ಬುದ್ಧ್ಯಾ–ಬುದ್ಧಿಯಿಂದ,ಬೃಹಸ್ಪತೇಃ–ಬೃಹಸ್ಪತಿಗೆ,ತುಲ್ಯಃ–ಸಮಾನನಾದ, ಕುಶಧ್ವಜಃ–ಕುಶಧ್ವಜನೆಂಬ, ಬ್ರಹ್ಮರ್ಷಿಃ–ಬ್ರಹ್ಮರ್ಷಿಯು,ಮಮ–ನನಗೆ, ಪಿತಾ–ತಂದೆಯು॥ನಿತ್ಯಂ–ನಿರಂತರವು,ವೇದಾಭ್ಯಾಸಂ–ವೇದಾಧ್ಯಯನವನ್ನು,ಕುರ್ವತಃ–ಮಾಡುತಿರುವ, ಮಹಾತ್ಮನಃ–ಮಹಾನುಭಾವನಾದ, ತಸ್ಯ–ಆ ಕುಶಧ್ವಜನಿಗೆ, ವಾಙ್ಮಯೀ–ವಾಗ್ರೂಪವಾದ, ನಾಮ್ನಾ–ಹೆಸರಿಂದ, ವೇದವತೀ–ವೇದವತಿಯೆಂದು, ಸ್ಮೃತಾ–ಸ್ಮರಣವಿಷಯಳಾದ, ಕನ್ಯಾ–ಅವಿವಾಹಿತಳಾದ, ಅಹಂ–ನಾನು, ಸಂಭೂತಾ–ಉತ್ಪನ್ನಳಾದವಳು ॥೧೦॥ ತತಃ–ಬಳಿಕ, ಸಗಂಧರ್ವಾಃ–ಗಂಧರ್ವರಿಂದೊಡಗೂಡಿದ, ದೇವಾಃ–ದೇವತೆಗಳು, ಯಕ್ಷರಾಕ್ಷಸಪನ್ನಗಾಶ್ಚ–ಯಕ್ಷರು, ರಾಕ್ಷಸರು, ನಾಗದೇವತೆಗಳು ಯೆಂಬ, ತೇಚಾಪಿ–ಅವರು ಮತ್ತು ಕೆಲವರು ಕೂಡೆ, ಪಿತರಂ–ತಂದೆಯನ್ನು ಕುರಿತು, ಗತ್ವಾ–ಪೋಗಿ,ಮೇ–ನನ್ನ, ವರಣಂ–ಸ್ವಯಂವರವನ್ನು, ರೋಚಯಂತಿ–ಪ್ರಾರ್ಥಿಸಿದರು ॥ ೧೧ ॥ ಹೆ ರಾಕ್ಷಸೇಶ್ವರ–ಎಲೊ ರಾಕ್ಷಸಾಧಿಪತಿಯೆ, ಸಪಿತಾ–ಆ ತಂದೆಯು, ತೇಭ್ಯಃ–ಅವರಿಗೆ, ಮಾಂ–ನನ್ನನ್ನು, ನದತ್ತವಾನ್–ಕೊಡದೇ ಹೋದನು, ಹೆ ಮಹಾಭುಜ–

---

ಓಂದಾನೊಂದು ಕನ್ಯಕೆಯಂ ಕಂಡು ಕಾಮಮೋಹಿತನಾಗಿ ಮುಗುಳುನಗೆಯುಳ್ಳವನಾಗಿಂತೆಂದನು ॥೩॥ ಎಲೈ ಶುಭಕರಳೆ, ನಿನ್ನ ಯುವ್ವನಕ್ಕೆ ವಿರುದ್ಧವಾಗಿ ಯಾಕೆ ಹೀಗಿರುವಿ, ನಿನ್ನ ಈ ಸೌಂದರ್ಯಕ್ಕೆ ತಪಸ್ಸು ಮಾಡೋಣವು ಯುಕ್ತವಾದದ್ದಲ್ಲ ॥೪॥ ಎಲೈ ಭಯಶೀಳಲೆ, ನಿನ್ನ ರೂಪವು ಅಸದೃಶವಾಗಿಯು ಮನುಷ್ಯರಿಗೆ ಕಾಮೋದ್ರೇಕವನ್ನುಂಟುಮಾಡುವದಾಗಿಯು ಇರುವದು, ಇಂಥಾದ್ದರಲ್ಲಿ ಹೀಗೆ ತಪಸ್ಸಿನಲ್ಲಿ ನಿಲ್ಲಲು ಅರ್ಹವಾದ್ದಲ್ಲವೇಅಲ್ಲ, ಆದಕಾರಣ ಈ ತಪೋನಿಶ್ಚಯವು ವ್ಯರ್ಥವಾದದ್ದು ॥೫॥ ಎಲೈ ಶುಭಕರಳೆ, ನೀನ್ಯಾರಮಗಳು, ಎಲೈ ಪೂಜ್ಯಳೆ ! ನಿನ್ನ ಪತಿಯಾರು, ಯಾವ ಪುರುಷನು ನಿನ್ನನ್ನನುಭವಿಸುವನೋ ಅವನೇ ಪುಣ್ಯವಂತನೆಂದೆಣಿಸುತ್ತೇನೆ, ನಿನಗೆ ಯಾಕೆ ಇಷ್ಟು ಶ್ರಮ ಪ್ರಾಪ್ತವಾಗಿದೆ, ಇದನ್ನೆಲ್ಲ ಕೇಳುತಿರುವ ನನಗೆ ವಿಸ್ತರಿಸಿ ಪೇಳು ॥೭॥ ಎಂದು ರಾವಣನಿಂದ ಪೃಚ್ಛಿಸಲ್ಪಟ್ಟ, ಕೀರ್ತಿವಂತಳಾದ ಆಕನ್ಯಕೆಯು ವಿಧ್ಯುಕ್ತವಾಗಿ ಆತನಿಗಾತಿಥ್ಯವಂಗೈದು ಇಂತೆಂದು ॥೮॥ ಬುದ್ಧಿಯಲ್ಲಿಸಾಕ್ಷಾದ್ಬೃಹಸ್ಪತಿಗೆ ನೇಸಮಾನನಾಗಿಯು ಬೃಹಸ್ಪತಿ ಪುತ್ರನಾಗಿಯು, ಕಡು ತೇಜಸ್ವಿಯಾಗಿಯು, ಬ್ರಹ್ಮರ್ಷಿಯಾಗಿಯು ಇರುವ ಕುಶಧ್ವಜನೆಂಬವನು ನಮ್ಮ ತಂದೆಯು ॥೯॥ ನಿರಂತರವು ವೇದಾಧ್ಯಯನವಂ ಗೈಯ್ಯುತಿರುವ ಮಹಾತ್ಮನಾದ ಆತನ ವಾಗ್ರೂಪವಾಗಿ ಜನಿಸಿದವಳು ನನ್ನನ್ನು ವೇದವತಿಯೆಂದು ಕರೆಯುವರು ॥ ೧೦ ॥ ದೇವ, ಗಂಧರ್ವ, ಯಕ್ಷ, ರಾಕ್ಷಸ, ಪನ್ನಗರೇ ಮುಂತಾದವರೆಲ್ಲರು ತತ್ಕಾಲದಲ್ಲಿ ನನ್ನ ಜನಕನ ಬಳಿಗೆ ಬಂದು ನನ್ನ ವರಣವನ್ನಪೇಕ್ಷಿಸಿದರು ॥೧೧॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೇಭ್ಯೋದತ್ತಾ ವರ್ಗ ರಾಕ್ಷಸೇಶ್ವರ । ಕಾರಣಂತದ್ವದಿಷ್ಯಾಮಿನಿಶಾಮಯಮಹಾಭುಜ ॥ ೧೦ ॥ ಪಿತುಸ್ತು ಮಮಜಾಮಾತಾವಿಷ್ಣುಃಕಿಲಸುರೋತ್ತಮಃ । ಅಭಿಪ್ರೇತಸ್ತ್ರಿಲೋಕೇಶಸ್ತಸ್ಮಾನ್ನಾನ್ಯಸ್ಯಮೇಪಿತಾ । ದಾತುಮಿಚ್ಛತಿಧರ್ಮಾತ್ಮಾ ತಚ್ಛ್ರುತ್ವಾಬಲದರ್ಪಿತಃ ॥ ೧೩ ॥ ದಂಭುರ್ನಾಮತತೋರಾಜಾದೈತ್ಯಾನಾಂಕುಪಿತೋಭವತ । ತೇನರಾತ್ರೌಶಯಾನೋಮೇ ಪಿತಾಪಾಪೇನಹಿಂಸಿತಃ ॥ ( * ಶಂಭುರ್ನಾಮೇತಿ ಗ್ರಂಥಾಂತರೆ. ) ॥೧೪॥ ತತೋಮೇ ಜನನೀದೀನಾತಚ್ಛರೀರಂ ಪಿತುರ್ಮಮ । ಪರಿಷ್ವಜ್ಯಮಹಾಭಾಗಾಪ್ರವಿಷ್ಟಾಹವ್ಯವಾಹನಮ್ ॥೧೫॥ ತತೋಮನೋರಥಂ ಸತ್ಯಂ ಪಿತುರ್ನಾರಾಯಣಂಪ್ರತಿ । ಕರೋಮೀತಿಮಮೇಚ್ಛಾ ಚಹೃದಯೇಸಾಧುವಿಷ್ಠಿತಾ ॥೧೬॥ ಅಹಂಪ್ರೇತಗತಸ್ಯಾಪಿಕುರ್ವಂತೀಕಾಂಕ್ಷಿತಂಪಿತುಃ । ಇತಿಪ್ರತಿಜ್ಞಾಮಾರುಹ್ಯಚರಾಮಿವಿಪುಲಂತಪಃ ॥೧೭॥ ಏತತ್ತೇ ಸರ್ವಮಾಖ್ಯಾತಂಮಯಾರಾಕ್ಷಸಪುಂಗವ । ಆಶ್ರಿತಾಂವಿದ್ಧಿಮಾಂಧರ್ಮಂನಾರಾಯಣಪತೀಚ್ಛಯಾ॥೧೮॥ವಿಜ್ಞಾತಸ್ತ್ವಂಹಿಮೇರಾಜನ್ಗಚ್ಛ ಪೌಲಸ್ತ್ಯನಂದನ । ಜಾನಾಮಿತಪಸಾಸರ್ವಂತ್ರೈಲೋಕ್ಯೇಯದ್ಧಿ ವರ್ತತೆ ॥೧೯॥ಸೋಬ್ರವೀದ್ರಾವಣೋಭೂಯಸ್ತಾಂಕನ್ಯಾಂಸುಮಹಾವ್ರತಾಮ್।ಅವರುಹ್ಯ

---

ಎಲೈ ಮಹಾಭುಜ ಪರಾಕ್ರಮಿಯೆ, ತತ್ಕಾರಣಂ–ಆ ಕಾರಣವನ್ನು, ವದಿಷ್ಯಾಮಿ–ಹೇಳುವೆನು, ನಿಶಾಮಯ–ಕೇಳು ॥ ೧೦ ॥ ತ್ರಿಲೋಕೇಶಃ– ಲೋಕತ್ರಯಾಧಿಪತಿಯಾದ, ಸುರೋತ್ತಮಃ–ದೇವತೋತ್ತಮನಾದ, ವಿಷ್ಣುಃ–ವಿಷ್ಣುವು, ಮಮಪಿತುಸ್ತು–ನನ್ನ ತಂದೆಗಾದರೆ, ಜಾಮಾತಾ–ಅಳಿಯನಾಗಿ, ಅಭಿಪ್ರೇತಃಕಿಲ–ಇಷ್ಟನಷ್ಟೆ, ತಸ್ಮಾತ್–ಆ ಕಾರಣದ ದೆಸೆಯಿಂದ, ಧರ್ಮಾತ್ಮಾ–ಧರ್ಮಿಷ್ಟನಾದ, ಮೇಪಿತಾ–ನನ್ನ ತಂದೆಯು, ಅನ್ಯಸ್ಯ–ಮತ್ತೊಬ್ಬನಿಗೆ, ದಾತುಂ–ಕೊಡುವದಕ್ಕೆ,ನೇಚ್ಛತಿ–ಇಚ್ಛೆಸಲಿಲ್ಲ,ತತಃ–ಬಳಿಕ, ತತ್–ಆವೃತ್ತಾಂತವನ್ನು,ಶ್ರುತ್ವಾ–ಕೇಳಿ,ಬಲದರ್ಪಿತಃ–ಬಲದಿಂದ ಗರ್ವಿತನಾದ, ದಂಭುರ್ನಾಮ ದಂಭುವೆಂಬ (ಪ–ಶಂಭುರ್ನಾಮ–ಶಂಭುವೆಂಬ) ದೈತ್ಯಾನಾಂ–ದೈತ್ಯರ,ರಾಜಾ–ಅರಸು, ಕುಪಿತಃ–ಕೋಪಿಷ್ಟನು, ಅಭವತ್–ಆದನು, ಪಾಪೇನ–ಪಾಪಿಷ್ಠನಾದ, ತೇನ–ದೈತ್ಯನಿಂದ, ರಾತ್ರೌ–ರಾತ್ರಿಕಾಲದಲ್ಲಿ, ಶಯಾನಃ–ಮಲಗಿರುವ, ಮೇಪಿತಾ, ನನ್ನ ತಂದೆಯು, ಹಿಂಸಿತಃ–ಕೊಲೆಯಲ್ಪಟ್ಟನು ॥ ೧೪ ॥ ತತಃ–ಬಳಿಕ, ಮಹಾಭಾಗಾ–ಪುಣ್ಯವತಿಯಾದ, ಮೇಜನನೀ–ನಮ್ಮತಾಯಿಯು, ದೀನಾ–ದುಃಖಿತಳಾಗಿ, ಮಮಪಿತುಃ–ನಮ್ಮ ತಂದೆಯ, ತಚ್ಛರೀರಂ–ಆ ದೇಹವನ್ನು, ಪರಿಷ್ವಜ್ಯ–ಅಪ್ಪಿಕೊಂಡು, ಹವ್ಯವಾಹನಂ–ಅಗ್ನಿಯನ್ನು, ಪ್ರವಿಷ್ಟಾ–ಹೊಕ್ಕಳು ॥ ೧೫॥ ತತಃ–ಬಳಿಕ, ನಾರಾಯಣಂಪ್ರತಿ–ನಾರಾಯಣನನ್ನು ಕುರಿತು, ಮಮಪಿತುಃ–ನನ್ನ ತಂದೆಯ, ಮನೋರಥಂ–ಇಷ್ಟಾರ್ಥವನ್ನು, ಸತ್ಯಂ–ಯಥಾರ್ಥವನ್ನಾಗಿ, ಕರೋಮೀತಿ–ಮಾಡುತ್ತೇನೆಂದು, ಮಮಚ –ನನಗೂಕೂಡ, ಇಚ್ಛಾ –ಅಭಿಲಾಷೆಯು, ಹೃದಯೇ–ಮನಸ್ಸಿನಲ್ಲಿ, ಸಾಧು–ಚನ್ನಾಗಿ, ವಿಷ್ಠಿತಾ–ನಿಂತಿತು ॥ ೧೬ ॥ ಅಹಂ–ನಾನು, ಪ್ರೇತಗತಸ್ಯಾಪಿ–ಮೃತಿಹೊಂದಿದವನಾದರು ಪಿತುಃ–ತಂದೆಯ, ಕಾಂಕ್ಷಿತಂ–ಇಷ್ಟವನ್ನು, ಕುರ್ವಂತೀ–ಮಾಡುತಿರುವಳಾಗಿ, ಇತಿ–ಹೀಗೆಂದು, ಪ್ರತಿಜ್ಞಾಂ–ಪ್ರತಿಜ್ಞೆಯನ್ನು, ಆರುಹ್ಯ–ಮಾಡಿ, ವಿಪುಲಂ–ವಿಸ್ತಾರವಾದ, ತಪಃ–ತಪಸ್ಸನ್ನು, ಚರಾಮಿ–ಆಚರಿಸುತ್ತೇನೆ॥೧೭॥ ಹೇರಾಕ್ಷಸಪುಂಗವ–ಎಲೈರಾಕ್ಷಸ ಶ್ರೇಷ್ಠನೆ, ತೇ–ನಿನಗೆ ಏತತ್ಸರ್ವಂ–ಇದೆಲ್ಲ,ಮಯಾ–ನನ್ನಿಂದ,ಆಖ್ಯಾತಂ–ಹೇಳಲ್ಪಟ್ಟಿತು,ನಾರಾಯಣ ಪತೀಚ್ಛಯಾ–ನಾರಾಯಣನೇ ಪತಿಯೆಂದಿಚ್ಛೆಸೋಣದರಿಂದ,ಮಾಂ–ನನ್ನನ್ನು, ಧರ್ಮಂ–ನಿಯಮವನ್ನು, ಆಶ್ರಿತಾಂ–ಆ ಶ್ರಿಸುತಿರುವಳನ್ನಾಗಿ,ವಿದ್ಧಿ–ಅರಿತುಕೋ॥೧೮॥ಹೇರಾಜನ್–ಎಲೈ ಅರಸೆ ಪೌಲಸ್ತ್ಯನಂದನ–ಪುಲಸ್ತ್ಯನ ಮಗನೆ, ಮೇ–ನಿನ್ನಿಂದ,ತ್ವಂಹಿ–ನೀನಾದರೆ.ವಿಜ್ಞಾತಃ–ತಿಳಿಯಲ್ಪಟ್ಟದ್ದೀ,ಎಲೈ ವಿಶ್ರವಸ್ಸಿನ ಪುತ್ರನೆ,ಗಚ್ಛ–ಹೋಗು,ಯದ್ಧೀ–ಯಾವದಾದರೆ,ತ್ರೈಲೋಕ್ಯೇ–ಲೋಕತ್ರಯದಲ್ಲಿ,ವರ್ತತೆ–ಯಿರುವದೋ, ತತ್ಸರ್ವಂ–ಅದನ್ನೆಲ್ಲ, ತಪಸಾ–ತಪಸ್ಸಿನಿಂದ, ಜಾನಾಮಿ, ತಿಳಿಯುತ್ತೇನೆ॥೧೯॥ ಸರಾವಣಃ–ಆರಾವಣನು, ಕಂದರ್ಪಶರಪೀಡಿತಃ–ಮನ್ಮಥಬಾಣದಿಂದ ನೊಂದವನಾಗಿ, ವಿಮಾನಾಗ್ರಾತ್–ವಿಮಾನದಮೇಲ್ಭಾಗದ ದೆಸೆಯಿಂದ, ಅವರುಹ್ಯ–ಇಳಿದು, ಸುಮಹಾವ್ರತಾಂ–ಮಹಾನಿಯ

---

ಎಲೈ ರಾಕ್ಷಸೇಶರ್ನನೆ ! ಆ ನಮ್ಮತಂದೆಯು ನನ್ನನ್ನು ಅವರಿಗೆ ಕೊಡಲಿಲ್ಲ, ಎಲೈ ಬಹುಭುಜ ಬಲಶಾಲಿಯಾದ ದಶಕಂಠನೆಕೇಳು. ಆಕಾರಣವನ್ನು ಹೇಳುವೆನು, ನಮ್ಮತಂದೆಯಾದರೆ ದೇವದೇವೋತ್ತಮನಾದ ಲೋಕತ್ರಯಾಧಿಪತಿಯಾದ, ಸಾಕ್ಷಾದ್ವಿಷ್ಣುವೆ ನನ್ನ ಅಳಿಯನೆಂದು ಭಾವಿಸಿ ಮತ್ತೋರ್ವರಿಗೆ ನನ್ನನ್ನು ಕೊಡಲಿಲ್ಲ. ಇದನ್ನು ಕೇಳಿ ಬಲದಿಂದ ಗರ್ವಿತನಾದ ದಂಭುವೆಂಬ ದೈತ್ಯೇಂದ್ರನು ಕಡುಕೋಪಿಷ್ಠನಾಗಿ, ರಾತ್ರಿಯಲ್ಲಿ ನಿದ್ರೆಹೋಗುತ್ತಲಿರುವ ನಂನತಂದೆಯುನ್ನು ಕೊಂದವನಾದನು ॥೧೪॥ ಆ ಬಳಿಕ ಮಹಾಪುಣ್ಯವತಿಯಾದ ನಮ್ಮತಾಯಿಯು ದುಃಖಿತಳಾದವಳಾಗಿ ಪತಿಯದೇಹವನ್ನಪ್ಪಿಕೊಂಡು ಅಗ್ನಿಪ್ರವೇಶವಂಗೈದವಳಾದಳು ॥ ೧೫ ॥ ನಾರಾಯಣನನ್ನು ಕುರಿತು ನಮ್ಮ ತಂದೆಯು ಮಾಡಿದ ಪ್ರತಿಜ್ಞೆಯಂ ನೆರವೇರಿಸ ಬೇಕೆಂದು ಎನಗೆ ಇಚ್ಛೆಯುಂಟಾಯಿತು ॥೧೬॥ ಪ್ರೇತರಾಜ ವಶಂಗತನಾದರು ಆ ಜನಕನ ಕಾಂಕ್ಷಿತವನ್ನು ಕಾಪಾಡುವೆನೆಂದು ಪ್ರತಿಜ್ಞೆಯಂ ಗೈದು ಈ ತಪಸ್ಸನ್ನು ಮಾಡುತಿಧೆನೆ ॥೧೭॥ ಎಲೈರಾಕ್ಷಸೋತ್ತಮನೆ ! ಇದೆಲ್ಲ ನಿನಗೆ ಹೇಳಿರುವೆನು, ಶ್ರೀಮನ್ನಾರಾಯಣನೆ ಪತಿಯಾಗಬೇಕೆಂದು ಧರ್ಮಾಚರಣಶೀಲ ಮುಳ್ಳವಳನ್ನಾಗಿ ನನ್ನನ್ನರಿತುಕೊ॥೧೮॥ ಎಲೈ ಪೌಲಸ್ತ್ಯಪುತ್ರನಾದ ದಶಕಂಠನೆ ! ನನ್ನ ತಪಃ ಪ್ರಭಾವದಿಂದ ತ್ರೈಲೋಕ್ಯದಲ್ಲಿರುವದನ್ನೆಲ್ಲಾ ತಿಳಿದಿದ್ದೇ. ಆದಕಾರಣ ನಿನ್ನನ್ನುಕೂಡಾ ಅರಿತಿರುವೆನು ॥೧೯॥ ಆ ರಾವಣ ನಾದರೆ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಿಮಾನಾಗ್ರಾತ್ತ್ಕಂದರ್ಪಶರಪೀಡಿತಃ ॥೨೦॥ ಅವಲಿಪ್ತಾಸಿಸುಶ್ರೋಣಿಯಸ್ಯಾಸ್ತೇಮತಿರೀದೃಶೀ । ವೃದ್ಧಾನಾಂಮೃಗಶಾಬಾಕ್ಷಿಭ್ರಾಜತೇಧರ್ಮಸಂಚಯಃ ॥೨೧॥ ತ್ವಂಸರ್ವಗುಣಸಂಪನ್ನಾನಾರ್ಹಸೇವಕ್ತುಮೀದೃಶಮ್ । ತ್ರೈಲೋಕ್ಯಸುಂದರಂಭೀರುಯೌವನಂತೇತಿವರ್ತತೇ ॥೨೨॥ ಅಹಂಲಂಕಾಪತಿರ್ಭದ್ರೇದಶಗ್ರೀವಇತಿಶ್ರುತಃ । ತಸ್ಯಮೇಭವಭಾರ್ಯಾತ್ವಂಭುಂಕ್ಷ್ವಭೋಗಾನ್ಯಥೇಪ್ಸಿತಾನ್ ॥೨೩॥ ಕಶ್ಚತಾವದಸೌಯಂತ್ವಂವಿಷ್ಣುರಿತ್ಯಭಿಭಾಷಸೇ । ವೀರ್ಯೇಣತಪಸಾಚೈವಭೋಗೇನಚಬಲೇನಚ ॥ ನಮಯಾಸಸಮೋಭದ್ರೇಯಂತ್ವಂಕಾಮಯಸೇಂಗನೇ॥೨೪॥ಇತ್ಯುಕ್ತವತಿತಸ್ಮಿಂಸ್ತುವೇದವತ್ಯತಿಧರ್ಮಧೀಃ। ಮಾಮೈವಮಿತಿಸಾಕನ್ಯಾತಮುವಾಚನಿಶಾಚರಮ್ ॥೨೫॥ ತ್ರೈಲೋಕ್ಯಾಧಿಪತಿಂವಿಷ್ಣುಂಸರ್ವಲೋಕನಮಸ್ಕೃತಮ್।ತ್ವದೃತೇರಾಕ್ಷಸೇಂದ್ರಾನ್ಯಃಕೋವಮನ್ಯೇತಬುದ್ಧಿಮಾನ್ ॥೨೬॥ ಏವಮುಕ್ತಸ್ತಯಾತತ್ರವೇದವತ್ಯಾನಿಶಾಚರಃ। ಮೂರ್ಧಜೇಷುತದಾಕನ್ಯಾಂಕರಾಗ್ರೇಣಪರಾಮೃಶತ ॥೨೭॥ ತತೋವೇದವತೀಕ್ರುದ್ಧಾಕೇಶಾನ್ಹಸ್ತೇನಸಾಚ್ಛಿನತ । ಅಸಿರ್ಭೂತ್ವಾಕರ

---

ಮವತಿಯಾದ, ತಾಂಕನ್ಯಾಂ-ಆ ಕನ್ಯಕೆಯಾದ ವೇದವತಿಯನ್ನು ಕುರಿತು ಭೂಯಃ-ಮತ್ತು, ಅಬ್ರವೀತ್-ನುಡಿದನು ॥ ೨೦ ॥ ಹೇಸುಶ್ರೋಣಿ ಎಲೈವಳ್ಳೆಕಟಿಪ್ರದೇಶವುಳ್ಳವಳೆ, ಯಸ್ಯಾಸ್ತೇ-ಯಾವನಿನ್ನ, ಮತಿಃ-ಬುದ್ಧಿಯು, ಈದೃಶೀ-ಇಥಾದ್ದೋ (ಸಾತ್ವಂ-ಅಂಥಾನೀನು) ಅವಲಿಪ್ತಾ-ಗರ್ವಿತಳು, ಅಸಿ-ಆಗಿದ್ದೀ, ಹೇಮೃಗಶಾಬಾಕ್ಷಿ-ಎಲೈಚಿಗರಿಯ ನೇತ್ರಗಳಂತೆ ನೇತ್ರಗಳುಳ್ಳವಳೆ,ಧರ್ಮಸಂಚಯಃ-ಧರ್ಮಸಂಗ್ರಹವು, ವೃದ್ಧಾನಾಂ-ಮುದುಕರಿಗೆ, ಭ್ರಾಜತೇ-ಹೊಳೆಯುತ್ತಿಧೆ ॥ ೨೧ ॥ ಸರ್ವಗುಣಸಂಪನ್ನಾ-ಸಮಸ್ತಗುಣಗಳಿಂದ ಯುಕ್ತಳಾದ, ತ್ವಂ-ನೀನು, ಈದೃಶಂ-ಇಥಾಮಾತನ್ನು, ವಕ್ತುಂ-ಹೇಳುವದಕ್ಕೆ, ನಾರ್ಹಸೇ-ಯೋಗ್ಯಳಲ್ಲ, ಹೇಭೀರು-ಎಲೈ ಭಯಶೀಲಳೆ, ತ್ರೈಲೋಕ್ಯಸುಂದರಂ-ಲೋಕತ್ರಯದಲ್ಲಿಯು ಸುಂದರವಾದ, ತೇ-ನಿನ್ನ, ಯೌವನಂ-ಜವ್ವನವು, ಅತಿವರ್ತತೇ-ಕಳದು ಹೋಗುವದು ॥ ೨೨ ॥ಹೇಭದ್ರೇ-ಎಲೈ ಶುಭಕರಳೆ, ದಶಗ್ರೀವಇತಿ-ದಶಕಂಠನೆಂದು,ಶ್ರುತಃ-ಕೇಳಲ್ಪಟ್ಟ, ಅಹಂ-ನಾನು, ಲಂಕಾಪತಿಃ-ಲಂಕಾಧಿಪತಿಯು, ತಸ್ಯಮೇ-ಅಂಥಾನನಗೆ, ತ್ವಂ-ನೀನು, ಭಾರ್ಯಾ-ಹೆಂಡತಿಯು, ಭವ-ಆಗು,ಭೋಗಾನ್-ವಿಲಾಸಗಳನ್ನು, ಯಥೇಪ್ಸಿತಾನ್-ಇಷ್ಟವಿದ್ದಂತೆ, ಭುಂಕ್ಷ್ವ-ಅನುಭವಿಸು ॥ ೨೩ ॥ ಹೇ ಅಂಗನೇ-ಎಲೈ ಸ್ತ್ರೀಯೆ, ಯಂ-ಯಾವನನ್ನು, ತ್ವಂ-ನೀನು, ವಿಷ್ಣುರಿತಿ-ವಿಷ್ಣುವೆಂದು, ಅಭಿಭಾಷಸೇ-ಹೇಳುತಿದ್ದೀಯೋ, ಅಸೌತಾವತ್-ಇವನಾದರೆ, ಕಃ-ಯಾರು, ಕಿಂಚ-ಇಷ್ಟುಮಾತ್ರವಲ್ಲ, ಹೇಭದ್ರೇ-ಎಲೈ ಶುಭಕರಳೆ, ತ್ವಂ-ನೀನು, ಯಂ-ಯಾವನನ್ನು ಕಾಮಯಸೇ-ಅಪೇಕ್ಷಿಸುತಿರುವಿಯೋ, ಸಃ-ಅವನು, ವೀರ್ಯೇಣ-ಪರಾಕ್ರಮದಿಂದಲು, ತಪಸಾಚೈವ-ತಪಸ್ಸಿನಿಂದಲು, ಭೋಗೇನಚ-ಸೌಖ್ಯದಿಂದಲು, ಬಲೇನಚ-ಬಲದಿಂದಲು, ಮಯಾ-ನನ್ನೊಡನೆ, ನಸಮಃ-ಸರಿಯಾದವನಲ್ಲ ॥ ೨೪ ॥ ತಸ್ಮಿಂಸ್ತು-ಆ ರಾವಣನಾದರೆ, ಇತಿ-ಇಂತೆಂದು, ಉಕ್ತವತಿಸತಿ-ಹೇಳಿದವನಾಗು ತಿರಲಿಕ್ಕಾಗಿ, ಅತಿ-ಧರ್ಮಧೀಃ-ಬಹಳ-ಧರ್ಮಬುದ್ಧಿಯುಳ್ಳ, ವೇದವತೀ-ವೇದವತಿಯೆಂಬ-ಸಾಕನ್ಯಾ-ಆ ಕನ್ಯಕೆಯು, ಮಾಮೈವಮಿತಿ-ಹೀಗಾಗಕೂಡದೆಂದು, ತಂನಿಶಾಚರಂ-ಆ ರಾಕ್ಷಸನಾದ ರಾವಣನನ್ನು ಕುರಿತು, ಉವಾಚ-ಹೇಳಿದಳು ॥ ೨೫ ॥ ಹೇ ರಾಕ್ಷಸೇಂದ್ರ-ಎಲೈ ರಾಕ್ಷಸಪತಿಯೆ,ತ್ರೈಲೋಕ್ಯಾಧಿಪತಿಂ-ಲೋಕತ್ರಯಕ್ಕೆ ಅಧಿಪತಿಯಾದ, ಸರ್ವಲೋಕನಮಸ್ಕೃತಂ-ಸಮಸ್ತ ಜನಗಳಿಂದಲು ವಂದಿಸಲ್ಪಡುತಿರುವ, ವಿಷ್ಣುಂ- ವಿಷ್ಣುವಿನನ್ನು, ತ್ವದೃತೇ-ನಿನ್ನ ವಿನಹಾ, ಬುದ್ಧಿಮಾನ್-ಮತಿವಂತನಾದ, ಅನ್ಯಃ-ಮತ್ತೊರ್ವನು, ಕಃ-ಯಾವನುತಾನೆ, ಅವಮನ್ಯೇತ-ಅವಮಾನಮಾಡುವನು,ತತ್ರ-ಆ ಹಿಮವತ್ಪರ್ವತದಲ್ಲಿ, ಏವಂ-ಈ ಪರಿಯಾಗಿ, ತಯಾವೇದವತ್ಯಾ-ಆ ವೇದವತಿಯಿಂದ, ಉಕ್ತಃ-ಹೇಳಲ್ಪಟ್ಟ,ನಿಶಾಚರಃ-ರಾಕ್ಷಸನಾದ ರಾವಣನು, ತದಾ-ಆಸಮಯದಲ್ಲಿ, ಮೂರ್ಧಜೇಷು-ಕೇಶಗಳಲ್ಲಿ, ಕನ್ಯಾಂ-ಕನ್ಯಕೆಯನ್ನು, ಕರಾಗ್ರೇಣ-ಹಸ್ತಾಗ್ರದಿಂದ, ಪರಾಮೃಶತ್-ಸ್ಪರ್ಶಿಸಿದನು ॥ ೨೭ ॥ ತತಃ-ಬಳಿಕ

---

ಕಾಮಬಾಣಗಳಿಂದ ನೊಂದವನಾಗಿ ಆ ಪುಷ್ಪಕ ವಿಮಾನದ ದೆಸೆಯಿಂದ ಭೂಮಿಗಿಳಿದು ಮಹಾ ನಿಯಮ ಪರಳಾದ ಆ ಕನ್ಯಕೆಯುಂ ಕುರಿತಿಂತೆಂದನು॥೨೦॥ ಹೇಸುಶ್ರೋಣಿ ! ನೀನು ಕಡುಕೊಬ್ಬಿದವಳಾಗಿರುವಿ, ಹಾಗಿಲ್ಲದಿದ್ದರೆ ನಿಂನ ಬುದ್ಧಿಯು ಹೀಗಿರುವದೇ, ಎಲೈಚಿಗರಿಯ ನೇತ್ರಗಳಂತೆ ನೇತ್ರಗಳುಳ್ಳವಳೇ ಕೇಳು. ಧರ್ಮಸಂಗ್ರಹ ವೆಂಬದು ವೃದ್ಧರಿಗೇ ಹೊರ್ತು ಬಾಲರಿಗಾಗಲಿ ಯುವ್ವನವಂತರಿಗಾಗಲಿ ಹುಟ್ಟದ್ದಲ್ಲ ॥೨೧॥ ಸರ್ವಗುಣಗಳಿಂದಲು ಶೋಭಿಸುತಿರುವ ನೀನು ಈಪರಿಯಾಗಿ ಹೇಳಬಾರದು, ಎಲೈ ಅಂಗನಾಮಣಿಯೆ ! ತ್ರೈಲೋಕ್ಯ ಸುಂದರವಾಗಿರುವ ಈ ನಿನ್ನ ಯುವ್ವನವು ವ್ಯರ್ಥವಾಗಿ ಕಳದುಹೋಗುವದಲ್ಲ ॥೨೨॥ ಎಲೈ ಶುಭಕರಳೆ ಕೇಳು ! ನಾನು ಲಂಕಾಧಿಪತಿಯಾದ ದಶಕಂಠನೆಂದು ಪ್ರಸಿದ್ಧನಾದವನು ಅಂಥಾ ನನಗೆ ಭಾರ್ಯೆಯಾಗಿ ನಿನಗಿಷ್ಟವಿದ್ದಂತೆ ಭೋಗಗಳನ್ನನುಭವಿಸು ॥೨೩॥ ಎಲೈ ಅಂಗನಾಮಣಿಯೇ ! ನೀನು ಹೇಳುತಿರುವ ಆ ವಿಷ್ಣುವೆಂಬವನ್ಯಾವನು, ವೀರ್ಯದಿಂದಲಾಗಲಿ ತಪಸ್ಸಿನಿಂದಲಾಗಲಿ, ಭೋಗದಿಂದಲಾಗಲಿ, ಬಲದಿಂದಲಾಗಲಿ ಅವನು ನನಗೆ ಸಮಾನನಾದವನಲ್ಲ ಎಂದು ರಾವಣನು ಹೇಳಲು, ಕಡು ಧರ್ಮವತಿಯಾದ ಆ ವೇದವತಿಯು ಹಾಗೆ ಹೇಳಕೂಡದೆಂದು ಹೇಳಿ ರಾವಣನಂ ಕುರಿತು ಮತ್ತಿಂತೆಂದಳು, ಎಲೈ ರಾಕ್ಷಸೇಂದ್ರನೆ ! ಲೋಕತ್ರಯಾಧಿಪತಿಯಾಗಿಯೂ ದೇವದೇವೋತ್ತಮನಾಗಿಯೂ ಇರುವ ಆ ಶ್ರೀಮಹಾ ವಿಷ್ಣುವಿನನ್ನು ನಿನ್ನಂ ತೊರದು ಮತ್ಯಾರು ನಿಂದಿಸಲಾರರು ॥೨೬॥ ಈಪರಿಯಾಗಿ ಆ ವೇದವತಿಯಿಂದ ಹೇಳಲ್ಪಟ್ಟ ಆ ರಾವಣನು, ಆ ಸಹ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ತಸ್ಯಾಃಕೇಶಾನ್ಸ್ಫೀತಾನ್ದ್ವಿಧಾಕರೋತ॥ಸಾಜ್ವಲಂತೀವರೋಷೇಣದಹಂತೀವನಿಶಾಚರಮ್।ಉವಾಚಾಗ್ನಿಂಸಮಾಧಾಯ ಮರಣಾಯಕೃತತ್ವರಾ॥೧೯॥ ಧರ್ಷಿತಾಯಾಸ್ತ್ವಯಾನಾರ್ಯ ನಮೇಜೀವಿತಮಿಷ್ಯತೇ । ರಕ್ಷೋಧಮಪ್ರವೇಕ್ಷ್ಯಾಮಿಪಶ್ಯತಸ್ತೇ ಹುತಾಶನಮ್ ॥೨೦॥ ಯಸ್ಮಾತ್ತುಧರ್ಷಿತಾಚಾಹಮಪಾಪಾಚಾಪ್ಯನಾಥವತ । ತಸ್ಮಾತ್ತವವಧಾರ್ಥಂವೈಸಮುತ್ಪತ್ಸ್ಯೇ ಹ್ಯಹಂಪುನಃ ॥ ೨೧ ॥ ನಹಿಶಕ್ಯಂಸ್ತ್ರಿಯಾಹಂತುಂಪುರುಷಃಪಾಪನಿಶ್ಚಯಃ। ಶಾಪೇತ್ವಯಿಮಯೋತ್ಸೃಷ್ಟೇತಪಸಶ್ಚ ವ್ಯಯೋಭವೇತ ॥೨೨॥ ಯದಿತ್ವಸ್ತಿಮಯಾಕಿಂಚಿತ್ಕೃತಂದತ್ತಂಹುತಂಪುರಾ।ತೇನತ್ವಯೋನಿಜಾಭೂತ್ವಾ ಭವೇಯಂಧರಣೀ ಸುತಾ ॥ ೨೩ ॥ ಏವಮುಕ್ತ್ವಾಪ್ರವಿಷ್ಟಾಸಾಜ್ವಲಂತಂವೈಹುತಾಶನಮ್ । ಪಪಾತಚದಿವೋದಿವ್ಯಾಪುಷ್ಪವೃಷ್ಟಿಸ್ಸಮಂ ತತಃ॥ ೨೪ ॥ ಸೈಷಾಜನಕರಾಜಸ್ಯಪ್ರಸೂತಾತನಯಾಪ್ರಭೋ । ತವಭಾರ್ಯಾಮಹಾಬಾಹೋವಿಷ್ಣುಸ್ತ್ವಂಹಿಸನಾತ ನಃ ॥೨೫॥ ಪೂರ್ವಂಕ್ರೋಧಾದ್ಧತಶ್ಶತ್ರುರ್ಯಯಾಸೌವಿಹತಸ್ತ್ವಯಾ । ಉಪಾಶ್ರಯಿತ್ವಾಶೈಲಾಭಂತವವೀರ್ಯಮಮಾನು

---

ಸಾವೇದವತೀ–ಆ ವೇದವತೀದೇವಿಯು, ಕ್ರುದ್ಧಾ, ಕುಪಿತಳಾಗಿ, ಹಸ್ತೇನ–ಕೈಯ್ಯಿಂದ, ಕೇಶಾನ್–ಕೂದುಲುಗಳನ್ನು, ಅಚಿ ನತ್–ಕತ್ತರಿಸಿದಳು, ತಸ್ಯಾಃ–ಆಕೆಯ, ಕರಃ–ಹಸ್ತವು, ಅಸಿರ್ಭೂತ್ವಾ–ಖಡ್ಗವಾಗಿ, ಸ್ಫೀತಾನ್–ತುಂಬಿರುವ, ಕೇಶಾನ್–ಕೂದಲುಗಳನ್ನು, ದ್ವಿಧಾ–ಎರಡುಭಾಗವಾಗಿ, ಅಕರೋತ್–ಮಾಡಿತು ॥ ೧೮ ॥ ಮರಣಾಯ–ಸಾಯುವದಕ್ಕೋಸ್ಕರ, ಕೃತತ್ವರಾ–ತ್ವರೆಯುಳ್ಳವಳಾಗಿ, ಸಾ–ಆ ವೇದವತಿಯು, ರೋಷೇಣ–ಕೋಪದಿಂದ, ಜ್ವಲಂತೀವ–ಪ್ರಜ್ವಲಿಸುತ್ತಿರುವಳೋಯೆಂಬ ಹಾಗಿಯು, ನಿಶಾಚರಂ–ರಾಕ್ಷಸನನ್ನು, ದಹಂತೀವ–ಸುಡುವಳೋ ಯೆಂಬಂತೆಯು, ಅಗ್ನಿಂ–ಅಗ್ನಿಯನ್ನು, ಸಮಾಧಾಯ–ಸಿದ್ಧಗೊಳಿಸಿ, ಉವಾಚ–ಹೇಳಿದಳು ॥ ೧೯ ॥ ಹೆ ಅನಾರ್ಯ–ಎಲೈ ನೀಚನೆ, ತ್ವಯಾ–ನಿನ್ನಿಂದ, ಧರ್ಷಿತಾಯಾಃ–ಹೆದರಿಸಲ್ಪಟ್ಟ, ಮೇ–ನನಗೆ, ಜೀವಿತಂ–ಬದುಕೋಣವು, ನೆಷ್ಯತೆ–ಇಚ್ಛೆಯಿಲ್ಲ, ಹೆರಕ್ಷೋಧಮ–ಎಲೈ ರಾಕ್ಷಸನೀಚನೆ, ಪಶ್ಯತಃ–ನೋಡುತಿರುವ, ತೆ–ನಿನ್ನನ್ನನಾದರಿಸಿ, ಹುತಾಶನಂ–ಅಗ್ನಿಯನ್ನು, ಪ್ರವೇಕ್ಷ್ಯಾಮಿ–ಪ್ರವೇಶಿಸುವೆನು ॥ ೨೦ ॥ ಕಿಂತು–ಮತ್ತೇನಂದರೆ, ಅಪಾಪಾಚಾಪಿ–ಪಾಪರಹಿತಳಾದರೂ, ಅಹಂ–ನಾನು, ಅನಾಥವತ್–ನಾಥನಿಲ್ಲದವಳಂತೆ, ಯಸ್ಮಾಚ್ಚ ಯಾವಕಾರಣದ ದೆಸೆಯಿಂದಲೆ, ಧರ್ಷಿತಾ–ಹೆದರಿಸಲ್ಪಟ್ಟೆನೋ, ತಸ್ಮಾತ್–ಆ ಹೇತುವಿನಿಂದ, ತವ–ನಿನ್ನ, ವಧಾರ್ಥಂವೈ–ಸಹಾರಕ್ಕೋಸ್ಕರವಾಗಿಯೆ, ಅಹಂ–ನಾನು, ಪುನಃ–ಮತ್ತು, ಸಮುತ್ಪತ್ಸ್ಯೇಹಿ–ಹುಟ್ಟುವೆನಷ್ಟೆ ॥೨೧ ॥ ಪಾಪನಿಶ್ಚಯಃ–ಪಾಪವನ್ನೇ ಮಾಡುತಿರುವ, ಪುರುಷಃ–ಗಂಡಸು, ಸ್ತ್ರಿಯಾ–ಹೆಂಗಸಿನಿಂದ, ಹಂತುಂ–ಕೊಲ್ಲುವದಕ್ಕೆ, ನಶಕ್ಯೋಹಿ–ಅಶಕ್ಯವಷ್ಟೆ, ತ್ವಯಿ–ನಿನ್ನಲ್ಲಿ, ಶಾಪೆ–ಶಾಪವು, ಮಯಾ–ನನ್ನಿಂದ, ಉತ್ಸೃಷ್ಟೆಸತಿ–ಬಿಡಲ್ಪಟ್ಟದ್ದಾದರೆ, ತಪಸಃ–ತಪಸ್ಸಿನ, ವ್ಯಯಶ್ಚ–ನಾಶವೂಕೂಡ, ಭವೇತ್–ಆಗುವದು॥ ಕಿಂತು– ಮತ್ತೇನಂದರೆ,ಮಯಾ–ನನ್ನಿಂದ, ಪುರಾ–ಪೂರ್ವದಲ್ಲಿ, ಕೃತಂ–ಮಾಡಲ್ಪಟ್ಟಂಥಾದ್ದು, ದತ್ತಂ–ಕೊಡಲ್ಪಟ್ಟಂಥಾದ್ದು, ಹುತಂ–ಹೋಮಮಾಡಲ್ಪಟ್ಟಂಥಾದ್ದು,ಕಿಂಚಿತ್–ಸ್ವಲ್ಪಪುಣ್ಯಅಸ್ತಿಯದಿ–ಇದ್ದದ್ದಾದರೆ, ತೆನಹಿ–ಅದರಿಂದಲೆ, ಅಯೋನಿಜಾ–ಯೋನಿಯಲ್ಲಿ ಹುಟ್ಟದೇಯಿರುವಳು, ಭೂತ್ವಾ–ಆಗಿ, ಧರಣೀಸುತಾ–ಭೂಪುತ್ರಿಯು, ಭವೇಯಂ–ಆಗುವೆನು ॥ ೨೩॥ ಏವಂ–ಈ ಪರಿಯಾಗಿ, ಉಕ್ತ್ವಾ–ಹೇಳಿ, ಸಾ–ಆ ವೇದವತೀದೇವಿಯು,ಜ್ವಲಂತಂ–ಉರಿಯುತಿರುವ,ಹುತಾಶನಂವೈ–ಅಗ್ನಿಯನ್ನೇ, ಪ್ರವಿಷ್ಟಾ–ಹೊಕ್ಕಳು, ದಿವ್ಯಾ–ದೇವತಾಸಂಬಂಧವಾದ, ಪುಷ್ಪವೃಷ್ಟಿಶ್ಚ–ಪುಷ್ಪವೃಷ್ಟಿಯೂಕೂಡ, ಸಮಂತತಃ–ಯಲ್ಲಾ ಕಡೆಯಲ್ಲಿಯು, ದಿವಃ–ಸ್ವರ್ಗದ ದೆಸೆಯಿಂದ, ಪಪಾತ–ಬಿದ್ದಿತು ॥ ೨೪ ॥ ಹೆಮಹಾಬಾಹೊ–ಎಲೈ ಮಹಾಭುಜಗಳುಳ್ಳವನೆ, ಹೆಪ್ರಭೊ–ಎಲೈ ಸ್ವಾಮಿಯೇ–ಸೈಷಾ–ಆ ವೇದವತೀದೇವಿಯು, ತವಭಾರ್ಯಾ–ನಿನ್ನ ಪತಿಯಾದ, ಜನಕರಾಜಸ್ಯ–ಜನಕರಾಯನ, ತನಯಾ–ಪುತ್ರಿಕೆಯಾಗಿ, ಪ್ರಸೂತಾ–ಹುಟ್ಟಿದಳು, ತ್ವಂ–ನೀನು, ಸನಾ

---

ಯದಲ್ಲಿ ಆಕೆಯ ಕೇಶಗಳನ್ನು ಕೈಯಿಂದ ಹಿಡಿದವನಾದನು ॥೧೭॥ ಆ ಬಳಿಕ ವೇದವತಿಯು ಕಡು ಕುಪಿತಳಾಗಿ ಆ ಕೂದಲುಗಳನ್ನು ಕರದಿಂದ ಕತ್ತರಿಸಿದಳು ಆಗ ಆಕೆಯ ಹಸ್ತವು ಖಡ್ಗವಾಗಿ ಆ ಕೇಶಗಳನ್ನು ಎರಡುಬಾಗಗಳಾಗಿ ಮಾಡಿತು ॥೧೮॥ ರೋಷದಿಂದ ಪ್ರಜ್ವಲಿಸುವಳಂತೆಯೂ, ಆ ರಾವಣನನ್ನು ಸುಡುವವಳಂತೆಯೂಮರಣಾರ್ಥವಾಗಿತ್ವರೆ ಬೀಳುವವಳಾಗಿಯೂ, ಇರುವಳಾಗಿ ಅಗ್ನಿಯಂಸಿದ್ಧಗೊಳಿಸಿಗೊಂಡಿಂತೆಂದಳು ॥೧೯॥ ಎಲೋ ನೀಚನೆ ! ನಿನ್ನಿಂದ ಹೆದರಿಸಲ್ಪಟ್ಟ ನನಗೆ ಜೀವಿತದಲ್ಲಿ ಆಶೆಯಿಲ್ಲ ಆದಕಾರಣ, ಹೆರಾಕ್ಷಸಾಧಮ! ನೀನು ನೋಡುತಿರುವಾಗಲೇ ಅಗ್ನಿಪ್ರವೇಶವಂಗೈಯ್ಯುವೆನು ॥೨೦॥ ಆದರೆ ಪಾಪರಹಿತಳಾದ ನಾನು ಅನಾಥಳಂತೆ, ಯಾವ ಹೇತುವಿನಿಂದ ನಿನ್ನಿಂದ ಹೆದರಿಸಲ್ಪಟ್ಟೆನೋ, ಆ ಕಾರಣದ ದೆಶೆಯಿಂದ ನಿನ್ನ ವಿನಾಶಕ್ಕೋಸ್ಕರವೆ ಪುನಹಾ ಹುಟ್ಟುವೆನು॥ ೨೧॥ ದುಷ್ಟನಾದಪುರುಷನನ್ನು ಶಿಕ್ಷಿಸಲು ಹೆಂಗಸಿಗೆ ಸಾಧ್ಯವಲ್ಲ, ಮತ್ತು ನಿನಗೆ ಶಾಪವನ್ನಿತ್ತರೆ ತಪೋಭಂಗವೂ ಆಗುವದಲ್ಲ ॥೨೨॥ನಾನು ಪೂರ್ವದಲ್ಲಿ ಸುಕೃತಮಾಡಿದ್ದರೂ ಅಥವಾ ಯಾವವಿಧವಾದ ದಾನವಂ ಗೈದಿದ್ದರೂ ಹಾಗಲ್ಲದಿದ್ದರೆಹವನಾದಿಗಳನ್ನು ಮಾಡಿದ್ದರೂ ಸರಿಯೇ, ಯಾವವಿಧವಾದ ಫಲವೇನಾದರು ಎನಗಿದ್ದಲ್ಲಿ,ಯೋನಿಯಲ್ಲಿಹುಟ್ಟದವಳಾಗದಭೂಪುತ್ರಿಕೆಯಾಗಿಯೆ ಹುಟ್ಟುವೆನೆಂದು ಪೇಳುತ್ತಾ, ಪ್ರಜ್ವಲಿಸುತಿರುವ ಅಗ್ನಿಯಲ್ಲಿಯೇ ಬಿದ್ದುಹೋದಳು, ಅ ಸಮಯದಲ್ಲಿ ಯಲ್ಲಾ ಕಡೆಯಲ್ಲಿಯು ಪುಷ್ಪವೃಷ್ಟಿಯು ಸುರಿಯಿತು ॥೨೪॥ ಎಲೈ ಸ್ವಾಮಿಯೆ ! ಆಕೆಯೇ ನಿನ್ನ ಪತ್ನಿಯಾದ ಜನಕರಾಯನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಷು ॥ ೩೬ ॥ ಏವಮೇಷಾಮಹಾಭಾಗಾಮರ್ತ್ಯೇಷೂತ್ಪದ್ಯತೇಪುನಃ । ಕ್ಷೇತ್ರೇಹಲಮುಖೋತ್ಕೃಷ್ಟೇವೇದ್ಯಾಮಗ್ನಿಶಿಖೋಪಮಾ ॥೩೭॥ ಏಷಾವೇದವತೀನಾಮಪೂರ್ವಮಸ್ಮಿಕೃತೇಯುಗೇ । ತ್ರೇತಾಯುಗಮನುಪ್ರಾಪ್ಯವಧಾರ್ಥಂತಸ್ಯರಕ್ಷಸಃ॥ ಉತ್ಪನ್ನಾಮೈಥಿಲಕುಲೇಜನಕಸ್ಯಮಹಾತ್ಮನಃ। ಸೀತೋತ್ಪನ್ನಾತುಸೀತೇತಿಮಾನುಷೈಃಪುನರುಚ್ಯತೇ ॥೩೮॥

ಇತಿ ಶ್ರೀಮದುತ್ತರ ರಾಮಾಯಣೇ ಸಪ್ತದಶಸ್ಸರ್ಗಃ.

ಪ್ರವಿಷ್ಟಾಯಾಂಹುತಾಶಂತುವೇದವತ್ಯಾಂಸರಾವಣಃ । ಪುಷ್ಪಕಂತತ್ಸಮಾರುಹ್ಯಪರಿಚಕ್ರಾಮಮೇದಿನೀಮ್ ॥೧॥ ತತೋಮರುತ್ತಂನೃಪತಿಂಯಜಂತಂಸಹದೈವತೈಃ । ಉಶೀರಬೀಜಮಾಸಾದ್ಯದದರ್ಶಸತುರಾಕ್ಷಸಃ ॥೨॥ ಸಂವರ್ತೋನಾಮಬ್ರಹ್ಮರ್ಷಿಭ್ರಾತಾಸಾಕ್ಷಾದ್ಬೃಹಸ್ಪತೇಃ।ಯಾಜಯಾಮಾಸಧರ್ಮಜ್ಞಸ್ಸರ್ವೈರ್ದೇವಗಣೈರ್ವೃತಃ ॥೩॥ ದೃ

ತನಃ-ಪುರಾಣನಾದ, ವಿಷ್ಣುರ್ಹಿ-ವಿಷ್ಣುವಸ್ಟ ॥ ೩೫॥ ಶೈಲಾಭಂ-ಪರ್ವತಸದೃಶನಾದ, ಅಮಾನುಷಂ-ಮನುಷ್ಯ ಸಂಬಂಧವಾಗದಿರುವ, ತವವೀರ್ಯಂ-ನಿನ್ನಪರಾಕ್ರಮವನ್ನು, ಉಪಾಶ್ರಯಿತ್ವಾ-ಆಶ್ರಯಿಸಿ, ತಯಾ-ಆ ವೇದವತಿಯಿಂದ, ಶತ್ರುಃ-ಶತ್ರುವಾದ, ಅಸೌ-ಈ ರಾವಣನು, ಪೂರ್ವಂ-ಮೊದಲೇನೆ ಕ್ರೋಧಾತ್-ಕೋಪಪಡದೇಯಿಂದ, ಹತಃ-ಸತ್ತವನಾಗಿ, ತ್ವಂಯಾ-ನಿನ್ನಿಂದ, ವಿಹಿತಃ-ಮಾಡಲ್ಪಟ್ಟನು ॥ ೩೬ ॥ ಮಹಾಭಾಗಾ- ಕಡುಪುಣ್ಯವತಿಯಾದ, ಏಷಾ-ಈ ಅಗ್ನಿಶಿಖೋಪಮಾ-ಅಗ್ನಿಜ್ವಾಲೆಗೆ ಸಮಾನಳಾಗಿ, ಹಲಮುಖೋತ್ಕೃಷ್ಟೇ- ನೇಗಲಿನಕೊನೆಯಿಂದ ಸೆಳೆಗಿಸಲ್ಪಟ್ಟ,ಕ್ಷೇತ್ರೇ-ಕ್ಷೇತ್ರದಲ್ಲಿ, ಮರ್ತ್ಯೇಷು-ಮನುಷ್ಯರಲ್ಲಿ, ಪುನಃ-ಮತ್ತು, ಏವಂ-ಈ ಪರಿಯಾಗಿ, ಉತ್ಪದ್ಯತೇ-ಹುಟ್ಟಿದಳು ॥ ೩೭ ॥ ಈಕೆಯು, ವೇದವತಿನಾಮ-ವೇದವತಿಎಂದು ಪ್ರಸಿದ್ಧಳಾಗಿ, ಪೂರ್ವಂ-ಮೊದಲು, ಕೃತೆಯುಗೇ-ಕೃತಯುಗದಲ್ಲಿ, ಆಸೀತ್-ಆದಳು, ತಸ್ಯರಕ್ಷಸಃ-ಆರಾವಣನ, ವಧಾರ್ಥಂ-ಸಂಹಾರಕ್ಕೋಸ್ಕರವಾಗಿ, ತ್ರೇತಾಯುಗಂ-ತ್ರೇತಾಯುಗವನ್ನು, ಅನುಪ್ರಾಪ್ಯ-ಹೊಂದಿ, ಮಹಾತ್ಮನಃ-ಮಹಾನುಭಾವನಾದ. ಜನಕಸ್ಯ-ಜನಕಮಹಾರಾಯನ, ಮೈಥಿಲಕುಲೇ-ಮೈಥಿಲಕುಲದಲ್ಲಿ, ಪುನಃ-ಮತ್ತು, ಉತ್ಪನ್ನಾ-ಹುಟ್ಟಿದಳು, ಕಿಂತು-ಮತ್ತೇನಂದರೆ, ಸೀತೋತ್ಪನ್ನಾ-ನೇಗಲಿನರೆಂಟೆಯಿಂದ ಹುಟ್ಟಿದವಳಾದ ಕಾರಣ,ಸೀತೇತಿ-ಸೀತಾದೇವಿಯೆಂದು, ಮಾನುಷೈಃ-ಮನುಷ್ಯರಿಂದ, ಉಚ್ಯತೇ-ಹೇಳಲ್ಪಡುತ್ತಾಳೆ ॥ ೩೮ ॥

—•••ಇತಿ ಶ್ರೀಮದುತ್ತರ ರಾಮಾಯಣೆ ೧೭ ನೇ ಸರ್ಗಂ ಮುಗಿದುದು.•••—

ವೇದವತ್ಯಾಂತು-ವೇದವತೀದೇವಿಯಾದರೆ, ಹುತಾಶಂ-ಅಗ್ನಿಯನ್ನು, ಪ್ರವಿಷ್ಟಾಯಾಂಸತ್ಯಾಂ-ಪ್ರವೇಶಿಸಿದವಳ ಗುತಿರಲೀಕಾಗಿ, ಆ ರಾವಣಃ-ಆರಾವಣನು, ತತ್ಪುಷ್ಪಕಂ-ಆ ಪುಷ್ಪಕವಿಮಾನವನ್ನು, ಸಮಾರುಹ್ಯ-ಏರಿ, ಮೇದಿನೀಂ-ಭೂಮಿಯಲ್ಲಿ, ಪರಿಚಕ್ರಾಮ-ತಿರಿಗಿದನು ॥೧ ॥ ತತಃ-ಬಳಿಕ, ಸರಾಕ್ಷಸಸ್ತು-ಆ ರಾವಣನಾದರೆ, ಉಶೀರಬೀಜಂ-ಉಶೀರಬೀಜವೆಂಬ ದೇಶವನ್ನು, ಆಸಾದ್ಯ-ಹೊಂದಿ-ದೈವತೈಸ್ಸಹ-ದೇವತೆಗಳೊಡನೆ, ಯಜಂತಂ- ಯಜ್ಞಮಾಡುತಿರುವ, ಮರುತ್ತಂ-ಮರುತ್ತನೆಂಬ, ನೃಪತಿಂ-ರಾಜನನ್ನು, ದದರ್ಶ-ಕಂಡನು ॥ ೨॥ ಬೃಹಸ್ಪತೇಃ-ಬೃಹಸ್ಪತಿಗೆ, ಭ್ರಾತಾ-ತಮ್ಮನಾದ, ಧರ್ಮಜ್ಞಃ-ಧರ್ಮವನ್ನರಿತಿರುವ, ಸಂವರ್ತೋನಾಮ-ಸಂವರ್ತನೆಂದು ಪ್ರಸಿದ್ಧನಾದ, ಬ್ರಹ್ಮರ್ಷಿಃ-ಬ್ರಹ್ಮರ್ಷಿಯು, ಸರ್ವೈಃ-ಸಮಸ್ತನಾದ, ದೇವಗಣೈಃ-ದೇವತೆಗಳ ಸಮೂಹಗಳಿಂದ, ವೃತಃ-ಸುತ್ತುಬಾರಲ್ಪಟ್ಟವನಾಗಿ, ಯಾಜಯಾಮಾಸ-ಯಜ್ಞಮಾಡಿಸುತಿರ್ದನು॥ ೩॥ ದೇವಾಸ್ತು-ದೇವತೆಗಳಾದರೆ, ವರದಾನೆ

ಪುತ್ರಿಯಾಗಿ ಹುಟ್ಟಿದವಳಾದಳು, ನೀನೇ ಸಾಕ್ಷಾದ್ವಿಷ್ಣುಸ್ವರೂಪನಾದವನು ॥೩೫॥ ಈಪರಿಯಾದ ಕಡುಕೋಪದಿಂದ ಆ ವೇದವತಿಯು, ಪರ್ವತ ಸದೃಶವಾದ ಮತ್ತು ಅಮಾನುಷವಾದ ನಿನ್ನ ಪೌರುಷವನ್ನಾಶ್ರಯಿಸಿ, ನಿನ್ನಿಂದಲೇ ಆ ರಾವಣನನ್ನು ಕೊಲ್ಲಿಸಿದಳು ॥೩೬॥ ಈ ಮಹಾಪುಣ್ಯವತಿಯು, ವೇದಿಕೆಯಲ್ಲಿ ಕಂಗೊಳಿಸುತಿರುವ ಅಗ್ನಿಯ ತೆರದಿ, ನೇಗಲಿನಿಂದ ಉಳಲ್ಪಡುತಿರುವ ಕ್ಷೇತ್ರದಲ್ಲಿ ಈಪರಿಯಾಗಿ ಪುನಹಾ ಜನಿಸಿದವಳಾಗಿ ಮನುಷ್ಯರಲ್ಲಿ ಹುಟ್ಟಿದಳು ॥೩೭॥ ಈಕೆಯೇ ವೇದವತೀಯೆಂಬ ಹೆಸರುಳ್ಳವಳಾಗಿ ಪೂರ್ವ ಕೃತಯುಗದಲ್ಲಿ ಹುಟ್ಟಿದ್ದು, ಆ ರಾಕ್ಷಸನ ಸಂಹಾರಕ್ಕೋಸ್ಕರ ಪುನಹಾ ಈ ತ್ರೇತಾಯುಗದಲ್ಲಿ, ಜನಕಮಹಾರಾಯನ ಕುಲದಲ್ಲಿ ಜನಿಸಿದಳು, ಆದರೆ ಈಕೆಯು ನೇಗಲಿನಸಾಲಿನಿಂದ ಹುಟ್ಟಿದಳಾದ ಕಾರಣ ಸೀತಾಎಂದು ಜನರೆಲ್ಲರು ಕರೆಯುವರು ॥೩೮॥

—•••*ಶ್ರೀಮದುತ್ತರ ರಾಮಾಯಣದೋಳ್ ೧೭ ನೇ ಸರ್ಗಂ ಮುಗಿದುದು.*•••—

ಆ ವೇದವತೀದೇವಿಯಾದರೆ ಅಗ್ನಿಪ್ರವೇಶಮಂಗೈಯ್ಯಲು, ಆ ದಶಕಂಠನು ಪುನಹಾ ಆ ಪುಷ್ಪಕವಿಮಾನವನ್ನೇರಿ ಭೂಮಿಯಲ್ಲಿ ತಿರುಗುತ್ತಿದ್ದನು ॥೧॥ ಆಬಳಿಕಾದರೆ,ಆರಾವಣನು, ಉಶೀರಬೀಜವೆಂಬ ಕ್ಷೇತ್ರದಲ್ಲಿ ದೇವತೆಗಳಿಂದೊಡಗೂಡಿ ಯಜ್ಞವಂ ಗೈಯ್ಯುತಿರುವ ಮರುತ್ತನೆಂಬ ರಾಜನನ್ನು ಕಂಡನು ॥೨॥ ಅಲ್ಲಿ, ಸಾಕ್ಷಾದ್ಬೃಹಸ್ಪತಿಗೆ ತಮ್ಮನಾಗಿಯೂ, ಆ ಬೃಹಸ್ಪತಿಗೆ ಸಮಾನನಾಗಿಯೂ, ಧರ್ಮಜ್ಞನಾಗಿಯೂ, ಇರುವ ಸಂವರ್ತಕನೆಂಬ ಬ್ರಹ್ಮರ್ಷಿಯು, ದೇವತಂಡಗಳಿಂದ ಸುತ್ತುಲ್ಪಟ್ಟವನಾಗಿ, ಯಜ್ಞವಂ ಗೈಸುತ್ತಿದ್ದನು ॥೩॥ ವಿರಿಂಚಿ ವರ ಪ್ರದಾನದಿಂದ ದುರ್ಜೇಯನಾದ ಆರಾವಣನನ್ನು ಕಾಣುತಲೇ, ದೇವತೆಗಳೆಲ್ಲರು ಹೆದರಿದವರಾಗಿ, ಆಯಾ ಯೋನಿಗಳಂತಾಳಿದರು. ಅದೆಂತೆನೆ, ಇಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.





ಷ್ಟ್ವಾ ದೇವಾಸ್ತು ತದ್ರಕ್ಷೋ ವರದಾನೇನ ದುರ್ಜಯಮ್। ತಾಂತಾಂಯೋನಿಂ ಸಮಾಪನ್ನಾಸ್ತಸ್ಯ ಧರ್ಷಣಭೀರವಃ ॥ ಇಂದ್ರೋ ಮಯೂರಸ್ತಂ ದೃಷ್ಟ್ವಾ ಧರ್ಮರಾಜಸ್ತು ವಾಯಸಃ। ಕೃಕಲಾಸೋ ಧನಾಧ್ಯಕ್ಷೋ ಹಂಸೋವೈ ವರುಣೋಭವತ್ ॥೫॥ ಅನ್ಯೇಷ್ವಪಿಗತೇಷ್ವೇವಂ ಸುರೇಷು ಸುರಸೂದನಃ। ರಾವಣಃ ಪ್ರವಿಶದ್ಯಜ್ಞಂ ಸಾರಮೇಯ ಇವಾಶುಚಿಃ ॥೬॥ ತಂ ಚ ರಾಜಾನಮಾಸಾದ್ಯ ರಾವಣೋ ರಾಕ್ಷಸಾಧಿಪಃ । ಪ್ರಾಹ ಯುದ್ಧಂ ಪ್ರಯಚ್ಛೇತಿ ನಿರ್ಜಿತೋಸ್ಮೀತಿ ವಾ ವದ ॥ ೭ ॥ ತತೋ ಮರುತ್ತೋ ನೃಪತಿಃ ಕೋಭವಾನಿತ್ಯುವಾಚ ತಮ್ । ಅಪಹಾಸಂ ತತೋ ಮುಕ್ತ್ವಾ ರಾವಣೋ ವಾಕ್ಯಮಬ್ರವೀತ್ ॥೮॥ ಅಕೌತೂಹಲಭಾವೇನ ಪ್ರೀತೋಸ್ಮಿ ತವ ಪಾರ್ಥಿವ । ಧನದಸ್ಯಾನುಜಂ ಯೋ ಮಾಂ ನಾವಗಚ್ಛಸಿ ರಾವಣಮ್ ॥೯॥ ತ್ರಿಷು ಲೋಕೇಷು ಕಸ್ಸೋಸ್ತಿ ಯೋ ನ ಜಾನಾತಿ ಮೇ ಬಲಮ್ । ಭ್ರಾತರಂ ಯೇನ ನಿರ್ಜಿತ್ಯ ವಿಮಾನಮಿದಮಾಹೃತಮ್ ॥೧೦॥ ತತೋ ಮರುತ್ತೋ ನೃಪತಿಸ್ತಂ ರಾಕ್ಷಸಮಥಾಬ್ರವೀತ್। ಧನ್ಯಃ ಖಲು ಭವಾನ್ಯೇನ ಜ್ಯೇಷ್ಠೋ ಭ್ರಾತಾ ರಣೇ ಜಿತಃ ॥೧೧॥ ನಾಧರ್ಮಸಹಿತಂ ಕರ್ಮ ಲೋಕೋ

---

ನ-ವರಪ್ರದಾನದಿಂದ, ದುರ್ಜಯಂ-ಜಯಿಸಲಸಾಧ್ಯನಾದ, ತದ್ರಕ್ಷಃ-ಆ ರಾಕ್ಷಸನನ್ನು, ದೃಷ್ಟ್ವಾ-ಕಂಡು, ತಸ್ಯ-ಆ ರಾವಣನ, ಧರ್ಷಣಭೀರವಃ-ತಿರಸ್ಕಾರದವೇಳೆಯಿಂದ ಅಂಜಿದವರಾಗಿ, ತಾಂತಾಂಯೋನಿಂ-ಆಯಾ ಆಕಾರಗಳನ್ನು, ಸಮಾಪನ್ನಾಃ-ಹೊಂದಿದವರಾದರು ॥ ೪ ॥ ತಂ-ಆ ರಾವಣನನ್ನು, ದೃಷ್ಟ್ವಾ-ಕಂಡು, ಇಂದ್ರಃ-ಇಂದ್ರನು, ಮಯೂರಃ-ನವಿಲಾಗಿಯು, ಧರ್ಮರಾಜಸ್ತು-ಯಮಧರ್ಮರಾಜನಾದರೆ, ವಾಯಸಃ-ಕಾಗೆಯಾಗಿಯು, ಧನಾಧ್ಯಕ್ಷಃ-ಕುಬೇರನು, ಕೃಕಲಾಸಃ-ತೊಂಡೇಕೇತೆಯಾಗಿಯು, ವರುಣಃ-ವರುಣನು, ಹಂಸಃ-ಹಂಸಪಕ್ಷಿಯಾಗಿಯು, ಅಭವತ್-ಆದರು ॥ ೫ ॥ ಅನ್ಯೇಷು-ಇತರರಾದ, ದೇವೇಷ್ವಪಿ-ದೇವತೆಗಳೂಕೂಡ, ಏವಂ-ಈ ಪರಿಯಾಗಿ, ಗತೇಷುಸತ್ಸು-ಹೋದವರಾಗುತಿರಲಿಕಾಗಿ, ಸುರಸೂದನಃ-ದೇವಧ್ವಂಸಕನಾದ, ರಾವಣಃ-ರಾವಣನು, ಅಶುಚಿಃ-ಅಪರಿಶುದ್ಧವಾದ, ಸಾರಮೇಯಇವ-ನಾಯಿಯಂತೆ, ಯಜ್ಞಂ-ಯಜ್ಞವನ್ನು, ಪ್ರಾವಿಶತ್-ಹೊಕ್ಕನು ॥೬॥ ರಾಕ್ಷಸಾಧಿಪಃ-ರಾಕ್ಷಸರಿಗೆಲ್ಲ ಒಡೆಯನಾದ, ರಾವಣಃ-ರಾವಣನು, ತಂರಾಜಾನಂಚ-ಆಮರುತ್ತನೆಂಬ ಅರಸನ್ನೂ ಕೂಡ, ಆಸಾದ್ಯ-ಹೊಂದಿ, ಯುದ್ಧಂ-ಕಾಳಗವನ್ನು ಪ್ರಯಚ್ಛ-ಕೊಡು, ಅಥವಾ-ಹಾಗಲ್ಲದಿದ್ದರೆ, ನಿರ್ಜಿತಃ-ಜಯಿಸಲ್ಪಟ್ಟವನು, ಅಸ್ಮಿ ಇತಿ-ಆದನೆಂದು, ವದ-ಹೇಳು (ಇತಿ-ಇಂತೆಂದು, ಅಬ್ರವೀತ್- ನುಡಿದನು) ॥೭॥ ತತಃ-ಬಳಿಕ, ಮರುತ್ತಃ-ಮರುತ್ತನೆಂಬ, ನೃಪತಿಃ-ರಾಜನು, ಭವಾನ್-ನೀನು, ಕಃ-ಯಾರು, ಇತಿ-ಇಂತೆಂದು, ತಂ-ಆ ರಾವಣನನ್ನು ಕುರಿತು, ಉವಾಚ -ಹೇಳಿದನು, ತತಃ-ಬಳಿಕ, ರಾವಣಃ-ರಾವಣನು, ಅಪಹಾಸಂ-ಹಾಸ್ಯವನ್ನು, ಮುಕ್ತ್ವಾ-ಮಾಡಿ, ವಾಕ್ಯಂ-ವಚನವನ್ನು, ಅಬ್ರವೀತ್-ನುಡಿದನು ॥ ೮ ॥ ಹೇಪಾರ್ಥಿವ ಎಲೈ ಅರಸೆ! ಯಃ-ಯಾವನೀನು, ಅಕೌತೂಹಲಭಾವೇನ-ಕೌತೂಹಲವಿಲ್ಲದ ಭಾವದಿಂದ, ಮಾಂ-ನನ್ನನ್ನು (ದೃಷ್ಟ್ವಾಪಿ-ನೋಡಿದರೂಕೂಡಾ) ಧನದಸ್ಯಾನುಜಂ-ಕುಬೇರನತಮ್ಮನಾದ, ರಾವಣಂ-ರಾವಣನ್ನಾಗಿ, ನಾವಗಚ್ಛಸಿ-ತಿಳಿಯದಿದ್ದೀಯೋ, ತಸ್ಯತವ-ಅಂಥಾನಿನಗೆ, ಪ್ರೀತಃ-ಸಂತುಷ್ಟನಾದವನು, ಅಸ್ಮಿ-ಆಗಿದ್ದೇನೆ ॥೯॥ ಯಃ-ಯಾವಪುರುಷನು, ಮೇ-ನನ್ನ, ಬಲಂ-ಶಕ್ತಿಯನ್ನು, ನಜಾನಾತಿ-ತಿಳಿಯದೇಇಪ್ಪಾನೊ, ಸಃ-ಅಂಥಾ ಪುರುಷನು, ತ್ರಿಷುಲೋಕೇಷು-ಲೋಕತ್ರಯದಲ್ಲಿಯೂ, ಕಃ-ಯಾವನು, ಅಸ್ತಿ-ಯಿದ್ದಾನೆ, ಮೇ-ನನ್ನ, ಭ್ರಾತರಂ ಅಣ್ಣನಾದ ಕುಬೇರನನ್ನು, ನಿರ್ಜಿತ್ಯ-ಜೈಸಿ, ಇದಂವಿಮಾನಂ-ಈ ವಿಮಾನವು, ಆಹೃತಂ-ತರಲ್ಪಟ್ಟಿತು ॥ ೧೦ ॥ ತತಃ-ಬಳಿಕ, ಮರುತ್ತಃ-ಮರುತ್ತನೆಂಬ, ನೃಪತಿಃ-ಅರಸು, ತಂರಾಕ್ಷಸಂ-ಆರಾಕ್ಷಸನನ್ನು ಕುರಿತು, ಅಥ-ಅನಂತರವು, ಅಬ್ರವೀತ್-ನುಡಿದನು, ಜ್ಯೇಷ್ಠಃ-ದೊಡ್ಡವನಾದ, ಭ್ರಾತಾ-ಅಣ್ಣನು, ರಣೇ-ಯುದ್ಧದಲ್ಲಿ, ಯೇನ-ಯಾವಕಾರಣದಿಂದ, ಜಿತಃ-ಜಯಿಸಲ್ಪಟ್ಟನೊ, (ತೇನ-ಆ ಕಾರಣದಿಂದ,) ಭವಾನ್-ನೀನು, ಧನ್ಯಃಖಲು-ಧನ್ಯನಷ್ಟೆ, ಅಧರ್ಮಸಹಿತಂ-ಧರ್ಮವಿರುದ್ಧನಾದ, ಕರ್ಮ-ಈ ವಾಕ್ಯವನ್ನು ಕುರಿತು, ಅಯಂಲೋಕಃ-ಈಜನವು, ನಪ್ರತಿನಂದತಿ-ಸಂತೋಷಿಸುವದಿಲ್ಲಾ-ದೌರಾತ್ಮ್ಯಕಂ-ದುಷ್ಟ

---

ದ್ರನು ನವಿಲಾಗಿಯೂ, ಧರ್ಮರಾಜನು ಕಾಗೆಯ ರೂಪವಾಗಿಯೂ, ಕುಬೇರನು ತೊಂಡೇಕ್ಯಾತೆಯ ಆಕಾರವಾಗಿಯು, ವರುಣನು ಹಂಸಪಕ್ಷಿಯ ರೂಪವಾಗಿಯೂ, ಮತ್ತು ಇತರ ದೇವತೆಗಳೂ ಸಹ ಈತೆರದಿ ಆಯಾ ನಾನಾರೂಪಗಳಂತಾಳಿ, ಓಡಿ ಹೋಗಲು ರಾಕ್ಷಸಾಧಿಪತಿಯಾದ ಮತ್ತು ದುರ್ಜಯನಾದ ರಾವಣನು ಅಪರಿಶುದ್ಧ ಜೀವವಾದ ನಾಯಿಯಂತೆ ಆ ಯಜ್ಞಸ್ಥಾನವಂಹೊಕ್ಕು ಆ ಮರುತ್ತನೆಂಬ ರಾಜನಂಕಂಡು, ಯನಗೆ ಯುದ್ಧಾತಿಥ್ಯವನ್ನು ಕೊಡು. ಅಥವಾ ಜಯಿಸಲ್ಪಟ್ಟೆನೆಂದಾದರೂ ಪೇಳೆಂದು ನುಡಿದನು ॥೭॥ ಆಬಳಕ ಮರುತ್ತನೆಂಬ ಆ ನರನಾಥನು, ನೀ ನ್ಯಾರೆಂದು ಕೇಳಲೂ ರಾವಣನು ಅಪಹಾಸ್ಯವಂಗೈದು ಈ ವಾಕ್ಯವನ್ನು ನುಡಿದನು ॥೮॥ ಎಲೈ ಪಾರ್ಥಿವನೇ ! ಧನದನಿಗೆ ಅನುಜನಾದ ರಾವಣನೆಂದು ಕಡು ಪ್ರಸಿದ್ಧನಾದ ನನನ್ನು ನೀನು ಕಂಡರೂ ಕೂಡ ಆಶ್ಚರ್ಯಪಡದೆ ನಿರ್ಭಯನಾಗಿ ಅನಾದರಣೆ ಮಾಗಿರೋಣದರಿಂದ ನಾನೂ ಸಂತುಷ್ಟನಾಗಿಧೇನೆ॥೯॥ ಈ ಲೋಕತ್ರಯದಲ್ಲಿ ನನ್ನ ಭುಜಬಲವನ್ನು ಕಾಣದೆ ಇರುವನ್ಯಾರು ? ನಮ್ಮಣ್ಣನಾದ ಕುಬೆರನನ್ನು ಜಯಿಸಿ ಈ ವಿಮಾನವಂ ತಂದಿಧೆ ನೆನಲು ॥೧೦॥ ಆ ಬಳಿಕಮರುತ್ತನು ರಾವಣನನ್ನು ಕುರಿತಿಂತೆಂದನು , ಎಲೈದಶಕಂಠನೆ ! ಅಣ್ಣನಾದವನನ್ನು ಸಂಗರದಲ್ಲಿ ಜಯಿಸಿದವನಾದ ಕಾರಣ ನೀನೇಧನ್ಯನು, ಅಧರ್ಮಯುಕ್ತವಾದ ಈ ಕೃತ್ಯವನ್ನು ಯಾರೂ ಸಂತೋಷಿಸಲಾರರು॥ಕೆಟ್ಟಕೆಲಸವಂ ಗೈದು.



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಂಪ್ರತಿನಂದತಿ। ಕಥಂದೌರಾತ್ಮ್ಯಕಂಕೃತ್ವಾಶ್ಲಾಘಸೇಭ್ರಾತೃನಿರ್ಜಯಾತ್ ॥೧೦॥ ಕಿಂತ್ವಂಪ್ರಾಕ್ಕೇವಲಂಧರ್ಮಂಚ
ರಿತ್ವಾಲಬ್ಧವಾನ್ವರಮ್ । ಶ್ರುತಪೂರ್ವಂಹಿನಮಯಾಯಾದೃಶಂಭಾಷತೇಸ್ವಯಂ ॥೧೧॥ ತಿಷ್ಠೇದಾನೀಂನಮೇಜೀವನ್ಪ್ರ
ತಿಯಾಸ್ಯಸಿದುರ್ಮತೇ । ಅದ್ಯತ್ವಾಂನಿಶಿತೈರ್ಬಾಣೈಃಪ್ರೇಷಯಾಮಿ ಯಮಕ್ಷಯಮ್ ॥ ೧೨ ॥ ತತಶ್ಶರಾಸನಂ ಗೃಹ್ಯ
ಸಾಯಕಾಂಶ್ಚ ಸಪಾರ್ಥಿವಃ । ರಣಾಯನಿರ್ಯಯೌಕ್ರುದ್ಧಸ್ಸಂವರ್ತೋಮಾರ್ಗಮಾವೃಣೋತ್ ॥೧೩॥ ಸೋಬ್ರವೀತ್ಸ್ನೇಹಸಂ
ಯುಕ್ತಂಮರುತ್ತಂತಂಮಹಾನೃಷಿಃ । ಶ್ರೋತವ್ಯಂಯದಿಮದ್ವಾಕ್ಯಂಸಂಪ್ರಹಾರೋನತೇಕ್ಷಮಃ ॥೧೪॥ ಮಾಹೇಶ್ವರಮಿ
ದಂಸತ್ರಮಸಮಾಪ್ತಂಕುಲಂದಹೇತ್ । ದೀಕ್ಷಿತಸ್ಯಕುತೋಯುದ್ಧಂಕ್ರೂರತ್ವಂದೀಕ್ಷಿತೇಕುತಃ ॥೧೫॥ ಸಂಶಯಶ್ಚ ಜಯೇ
ನಿತ್ಯಂರಾಕ್ಷಸಶ್ಚ ಸುದುರ್ಜಯಃ ॥೧೬॥ ಸನಿವೃತ್ತೋಗುರೋರ್ವಾಕ್ಯಾನ್ಮರುತ್ತಃಪೃಥಿವೀಪತಿಃ। ವಿಸೃಜ್ಯಸಶರಂಚಾಪಂ
ಸ್ವಸ್ಥೋಮಖಮುಖೋಭವತ್ ॥೧೭॥ ತತಸ್ತಂನಿರ್ಜಿತಂಮತ್ವಾಘೋಷಯಾಮಾಸವೈಶುಕಃ । ರಾವಣೋಜಿತವಾಂಶ್ಚೇತಿ

---

ವಾದ ಕೆಲಸವನ್ನು, ಕೃತ್ವಾ-ಮಾಡಿ, ಭ್ರಾತೃನಿರ್ಜಯಾತ್-ಅಣ್ಣನ ಜಯದದೆಸೆಯಿಂದಾ, ಕಥಂಶ್ಲಾಘಸೇ- ಹ್ಯಾಗೆ ಸ್ತುತಿಸಿಕೊಳ್ಳುತ್ತೀ ॥೧೦॥ ಪ್ರಾಕ್-ಮೊದಲು, ಕೇವಲಂ-ಅತಿಶಯವಾದ, ಧರ್ಮಂ-ಪುಣ್ಯವನ್ನು, ಚರಿತ್ವಾ-ಮಾಡಿ, ತ್ವಂ-ನೀನು, ವರಂ-ವರವನ್ನು, ಲಬ್ಧವಾನ್ಕಿಂ-ಹೊಂದಿದ್ದೆಯೇನು, ಯಾದೃಶಂ-ಹ್ಯಾಗೆ, ಸ್ವಯಂ-ನೀನು, ಭಾಷಸೇ-ಮಾತಾಡುತ್ತಿದ್ದೀಯೊ, (ತಾದೃಶಂ-ಅಂಥಾಮಾತು,) ಮಯಾ-ಎನ್ನಿಂದಾ, ನಶ್ರುತಪೂರ್ವಂಹಿ-ಪೂರ್ವ ದಲ್ಲಿ ಕೇಳಿರಲಿಲ್ಲಾ ॥೧೧॥ ಹೆದುರ್ಮತೆ-ಎಲೈ ದುರ್ಬುದ್ಧಿಉಳ್ಳವನೆ! ತಿಷ್ಠ-ನಿಲ್ಲು, ಇದಾನೀಂ-ಈಗ, ಮೇ-ನನ್ನಮುಂದೆ, ಜೀವನ್-ಬದುಕಿದವನಾಗಿ, ನ ಪ್ರತಿಯಾಸ್ಯಸಿ-ಹೋಗಲಾರೆ, ಅದ್ಯ-ಈಗ, ತ್ವಾಂ-ನಿನ್ನನ್ನು, ನಿಶಿತೈಃ-ತೀಕ್ಷ್ಣಗಳಾದ, ಬಾಣೈಃ-ಶರಗಳಿಂದಾ, ಯಮಕ್ಷಯಂ-ಯಮನಮನೆಯನ್ನು ಕುರಿತು, ಪ್ರೇಷಯಾಮಿ-ಕಳುಹುವೆನು, ॥ ೨೧ ॥ ತತಃ-ಬಳಿಕ, ಪಾರ್ಥಿವಃ-ಅರಸಾದ,ಸಃ-ಆ ಮರುತ್ತನು, ಶರಾಸನಂ-ಬಿಲ್ಲನ್ನು, ಸಾಯಕಾಂಶ್ಚ-ಬಾಣಗಳನ್ನೂ ಸಹಾ-ಗೃಹ್ಯ- ತೆಗದುಕೊಂಡು, ರಣಾಯ-ಕಾಳಗಕ್ಕೋಸ್ಕರ, ಕ್ರುದ್ಧಃ-ಕುಪಿತನಾಗಿ, ನಿರ್ಯಯೌ-ಹೊರಟನು, ಸಂವರ್ತಃ-ಸಂವರ್ತಕನೆಂಬ ಯಾಜಕನು, ಮಾರ್ಗಂ-ದಾರಿಯನ್ನೂ, ಆ ವೃಣೋತ್-ತಡೆಮಾಡಿದನು ॥ ೧೩ ॥ಮಹಾನೃಷಿಃ-ಮಹಾಮುನಿಯಾದ, ಸಃ-ಆಸಂವರ್ತಕನು, ತಂ ಮ್ಮರುತ್ತಂ-ಆ ಮರುತ್ತನನ್ನು ಕುರಿತು, ಸ್ನೇಹಸಂಯುಕ್ತಂ-ಸ್ನೇಹದಿಂದೊಡಗೂಡಿದ ಮಾತನ್ನು, ಅಬ್ರವೀತ್-ನುಡಿದನು, ಮದ್ವಾಕ್ಯಂ-ನನ್ನ ಮಾತು, ಶ್ರೋತವ್ಯಂಯದಿ-ಕೇಳತಕ್ಕದ್ದಾದರೆ, ಸಂಪ್ರಹಾರಃ-ಯುದ್ಧವು, ತೇ-ನಿನಗೆ, ನಕ್ಷಮಃ-ಯೋಗ್ಯವಲ್ಲಾ ॥೧೪॥ ಮಾಹೇಶ್ವರಂ-ಮಹೇಶ್ವರ ಸಂಬಂಧವಾದ, ಇದಂಸತ್ರಂ-ಈ ಯಜ್ಞವು, ಅಸಮಾಪ್ತಂ-ಪರಿಪೂರ್ತಿಯಾಗದಿದ್ದರೆ, ಕುಲಂ-ವಂಶವನ್ನು, ದಹೇತ್-ಸುಟ್ಟುಬಿಡುವದು, ದೀಕ್ಷಿತಸ್ಯ-ದೀಕ್ಷಿತನಾದವನಿಗೆ, ಯುದ್ಧಂ-ಯುದ್ಧವು, ಕುತಃ-ಎಲ್ಲೀದು, ಕ್ರೂರತ್ವಂ-ಕ್ರೂರಭಾವವು, ದೀಕ್ಷಿತೆ-ದೀಕ್ಷಾಬದ್ಧನಾದವನಲ್ಲಿ, ಕುತಃ-ಎಲ್ಲಿ ॥ ೧೫ ॥ ಜಯೆ-ಗೆಲ್ಲುವಿಕೆಯಲ್ಲಿ, ನಿತ್ಯಂ-ನಿರಂತರವೂ, ಸಂಶಯಃ- ಸಂದೇಹವು, ಕಿಂಚ-ಇಷ್ಟುಮಾತ್ರವಲ್ಲಾ, ರಾಕ್ಷಸಶ್ಚ-ಈ ರಾಕ್ಷಸನೂಕೂಡಾ, ಸುದುರ್ಜಯಃ-ಜಯಿಸಲ ಸಾಧ್ಯನಾದವನು ॥ ೧೬ ॥ ಪೃಥಿವೀಪತಿಃ-ಅರಸನಾದ, ಸಮರುತ್ತಃ-ಆಮರುತ್ತನು, ಗುರೋಃ-ಪುರೋಹಿತನ, ವಾಕ್ಯಾತ್-ಮಾತಿನದೆಸೆಯಿಂದ, ನಿವೃತ್ತಃ-ಹಿಂದಿರುಗಿದವನಾಗಿ, ಸಶರಂ-ಬಾಣಗಳಿಂದೊಡಗೂಡಿದ, ಚಾಪಂ-ಧನುಸ್ಸನ್ನು, ವಿಸೃಜ್ಯ-ತೊರದು, ಸ್ವಸ್ಥಃ-ಸ್ವಸ್ಥಚಿತ್ತನಾಗಿ, ಮಖಮುಖಃ-ಯಜ್ಞಾಭಿಮುಖನಾದವನು, ಅಭವತ್-ಆದನು ॥೧೭॥ ತತಃ-ಆ ಬಳಿಕ, ನಿರ್ಜಿತಂ-ಜಯಿಸಲ್ಪಟ್ಟನೆಂದು, ತಂ-ಆ ಮರುತ್ತನನ್ನು, ಮತ್ವಾ-ಅರಿತುಕೊಂಡು-ಸಶುಕಃ-ಆ ಶುಕನು, ರಾವಣಃ-ರಾವಣನು, ಜಿತವಾನ್-ಜಯಿಸಿದವನು, ಇತಿ-ಇಂತೆಂದು, ಘೋಷಯಾಮಾಸ, ಕೂಗಿದನು,ಹರ್ಷಾತ್-ಸಂತೊ

---

ಅಣ್ಣನಾದವನ ಜಯದದೆಶೆಯಿಂದ ಹ್ಯಾಗೆ ಶ್ಲಾಘಿಸಿಕೊಳ್ಳುತ್ತಿ, ನಿನಗೆ ನಾಚಿಕೆಯಿಲ್ಲವೆ ಏನು ॥೧೦॥ ನೀನು ಮೊದಲು ಕಡು ಧರ್ಮವನ್ನಾಶ್ರಯಿಸಿ ವರವಂಪಡದಿರುವಿಯೋ ಏನು? ಈಗ ನೀಪೇಳಿದಂಥ ಮಾತನ್ನು ನಾನೆಲ್ಲಿಯೂ ಕೇಳಿರಲಿಲ್ಲ. ಎಲೈದುರ್ಬುದ್ಧಿ ಯುಳ್ಳವನೇ ನಿಲ್ಲುನಿಲ್ಲು, ನನ್ನಮುಂದೆ ಬದುಕಿದವನಾಗಿ ನೀನೆಲ್ಲಿಯೂ ಹೋಗಲಾರೆ ಈ ಕ್ಷಣದಲ್ಲಿಯೇ ತೀಕ್ಷ್ಣವಾದ ಬಾಣತಂಡಗಳಿಂದ ಯಮಮಂದಿರವಂ ತೋರಿಸುವೆನೆಂದು ಪೇಳಿ ॥೧೨॥ ಆ ಬಳಿಕ ಕೋದಂಡವಂನು ಸರಳುಗಳನ್ನು ತೆಗದುಕೊಂಡು, ಕಡುಕೋಪವುಳ್ಳವನಾಗಿ ಕಾಳಗಕ್ಕೋಸ್ಕರ ಆ ರಾಜನು ಹೊರಡಲೂ, ಯಾಜಕನಾದ ಮತ್ತುಗುರುವಾದ ಸಂವರ್ತಕ ನೆಂಬ ಮಹಾ ಮುನಿಯು ಇದಂ ಕಂಡು ಥಕ್ಕನೆ ನುಗ್ಗಿ ಬಂದು ಆ ರಾಜನಂ ತಡೆ ಮಾಡಿ, ಸ್ನೇಹದಿಂದ ಇಂತೆಂದು ನುಡಿದನು, ನನ್ನ ಮಾತು ಕೇಳುವವನಾದರೆದರೆ ನಿನಗೆ ರಣವು ಯುಕ್ತವಾದದ್ದಲ್ಲ ॥೧೪॥ ಮಹೇಶ್ವರ ಸಂಬಂಧವಾದ ಈ ಯಜ್ಞವು ಪರಿಪೂರ್ತಿಯಾಗ ದಿರ್ದೊಡೆ ಕುಲವನ್ನೇ ಸುಟ್ಟುಬಿಟ್ಟೀತು ದೀಕ್ಷಿತನಾದವನಿಗೆ ಯುದ್ಧವೇಕೆ? ದೀಕ್ಷಾ ಬದ್ಧನಾದವನಲ್ಲಿ ಕೋಪ ವೆತ್ತಣದು ॥೧೫॥ ಕಾಳಗದಲ್ಲಿ ಜಯವೆಂಬದು ಸಂದೇಹವಾಗಿರುವದು, ಮತ್ತು ಈ ರಾಕ್ಷಸನಾದರೆ ಪರಮ ದುರ್ಜಯನಾದವನು॥ ಆ.ಆದಕಾರಣ ನೀನು ಯುದ್ಧಕ್ಕೆ ಹೋಗಬೇಡ ಹಿಂ ತಿರುಗು ಎಂದುಗುರುವಾಕ್ಯದಿಂದ ನಿವಾರಿಸಲ್ಪಟ್ಟವನಾಗಿ ಆಗ ಬಾಣ ಸಹಿತವಾದ ಕೋದಂಡ ತೊರದು ಸ್ವಸ್ಥಚಿತ್ತನಾಗಿ ಯಜ್ಞಾಭಿಮುಖನಾದವನಾದನು ॥೧೭॥ ಅನಂತರವು, ಶುಕನಾದರೆ, ಆ ಅರಸನನ್ನು ಜ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹರ್ಷಾನ್ನಾದಂಚಮುಕ್ತ್ವಾನ್ ॥೨೦॥ ತಾನ್ ಭಕ್ಷಯಿತ್ವಾತತ್ರಸ್ಥಾನ್ ಮಹರ್ಷೀನ್ ಯಜ್ಞಮಾಗತಾನ್ । ಸತೃಪ್ತೋ ರುಧಿರೈಸ್ತೇಷಾಂಪುನಸ್ಸಂಪ್ರಯಯೌಮಹೀಮ್ ॥೨೧॥ ರಾವಣೇತುಗತೇದೇವಾಸ್ಸೇಂದ್ರಾಶ್ಚೈವದಿವೌಕಸಃ । ತತಸ್ಸ್ವಾಂಯೋನಿಮಾಸಾದ್ಯತಾನಿಸತ್ವಾನ್ಯಥಾಬ್ರುವನ್ ॥೨೨॥ ಹರ್ಷಾತ್ತದಾಬ್ರವೀದಿಂದ್ರೋಮಯೂರಂನೀಲಬರ್ಹಿಣಮ್ । ಪ್ರೀತೋಸ್ಮಿತವಧರ್ಮಜ್ಞ ಉಪಕಾರಾದ್ವಿಹಂಗಮ ॥೨೩॥ ಮಮನೇತ್ರಸಹಸ್ರಂಯತ್ತತ್ತೇಬರ್ಹೇಭವಿಷ್ಯತಿ । ವರ್ಷಮಾಣೇಮಯಿಮುದಂಪ್ರಾಪ್ಸ್ಯಸಿಪ್ರೀತಿಲಕ್ಷಣಾಮ್ ॥೨೪॥ ಏವಮಿಂದ್ರೋವರಂಪ್ರಾದಾನ್ಮಯೂರಸ್ಯಸುರೇಶ್ವರಃ ॥೨೫॥ ನೀಲಾಃಕಿಲಪುರಾಬರ್ಹಾಮಯೂರಾಣಾಂನರಾಧಿಪ । ಸುರಾಧಿಪಾದ್ವರಂಪ್ರಾಪ್ಯಗತಾಸ್ಸರ್ವೇವಿಚಿತ್ರತಾಮ್ ॥೨೬॥ ಧರ್ಮರಾಜೋಬ್ರವೀತ್ತತ್ರಪ್ರಾಗ್ವಂಶೇವಾಯಸಂಸ್ಥಿತಂ । ಪಕ್ಷಿಂಸ್ತವಾಸ್ಮಿಸುಪ್ರೀತಃಪ್ರೀತಸ್ಯವಚನಂಶೃಣು ॥೨೭॥ ಯಥಾನ್ಯೈರ್ವಿವಿಧೈರ್ರೋಗೈಃಪೀಡ್ಯಂತೇಪ್ರಾಣಿನೋಮಯಾ । ತೇನತೇಪ್ರಭವಿಷ್ಯಂತಿಮಯಿಪ್ರೀತೇನಸಂಶಯಃ ॥೨೮॥ ಮೃತ್ಯುತಸ್ತೇಭಯಂನಾಸ್ತಿ

ಪದ ದಶೀಘಂ..., ನಾದಂಚ-ಶಬ್ದವನ್ನೂ ಕೂಡ, ಮುಕ್ತ್ವಾನ್-ಬಿಟ್ಟನು, ಸಃ-ಆ ರಾವಣನು, ಯಜ್ಞಂ-ಯಜ್ಞವನ್ನು ಕುರಿತು, ಆಗತಾನ್-ಬಂದಿರುವ, ತತ್ರಸ್ಥಾನ್-ಅಲ್ಲಿರುವ,ತಾನ್ಮಹರ್ಷೀನ್-ಆ ಮಹಾಋಷಿಗಳನ್ನು, ಭಕ್ಷಯಿತ್ವಾ-ತಿಂದು, ತೇಷಾಂ-ಅವರಗಳ, ರುಧಿರೈಃ-ರಕ್ತಗಳಿಂದ, ತೃಪ್ತಃ-ಸಂತುಷ್ಟನಾಗಿ, ಪುನಃ-ಮತ್ತು, ಮಹೀಂ-ಭೂಮಿಯಲ್ಲಿ, ಸಂಪ್ರಯಯೌ-ತೆರಳಿದನು ॥ ೨೧ ॥ ತತಃ-ಆ ಬಳಿಕ, ರಾವಣೇತು-ರಾವಣನಾದರೆ, ಗತೇಸತಿ-ಹೋದವನಾಗತಿರಲಾಗಿ, ದಿವೌಕಸಃ-ಸ್ವರ್ಗವೆಸ್ಥಾನವಾಗುಳ್ಳ, ಸೇಂದ್ರಾಃ-ಇಂದ್ರಸಹಿತರಾದ, ದೇವಾಶ್ಚೈವ-ದೇವತೆಗಳೂಕೂಡಾ, ಸ್ವಾಂಯೋನಿಂ-ಸ್ವಕೀಯ್ಯ ಪಕೃತಿಗಳನ್ನು, ಆಸಾದ್ಯ-ಹೊಂದಿ, ತಾನಿಸತ್ವಾನಿ-ಆಜಂತುಗಳನ್ನು ಕುರಿತು, ಅಥ-ಬಳಿಕ, ಅಬ್ರುವನ್-ನುಡಿದರು ॥ ೨೨ ॥ ತದಾ-ಆಸಮಯದಲ್ಲಿ, ಇಂದ್ರಃ-ಇಂದ್ರನು, ನೀಲಬರ್ಹಿಣಂ-ಕಪ್ಪಾದ ಬಾಲವುಳ್ಳ, ಮಯೂರಂ-ಮಯೂರವನ್ನ ಕುರಿತು, ಹರ್ಷಾತ್-ಸಂತೋಷದ ದೆಸೆಯಿಂದ, ಅಬ್ರವೀತ್-ನುಡಿದನು, ಹೆಧರ್ಮಜ್ಞ-ಎಲೈ ಧರ್ಮವನ್ನರಿತವನೆ, ಹೆವಿಹಂಗಮ-ಎಲೈ ಪಕ್ಷಿಯೆ, ತವ-ನಿನ್ನ, ಉಪಕಾರಾತ್-ಉಪಕಾರದ ದೆಸೆಯಿಂದಾ-ಪ್ರೀತೋಸ್ಮಿ-ಸಂತುಷ್ಟನಾಗಿಥೆನೆ ॥ ೨೩ ॥ ಮಮ-ನನ್ನ, ನೇತ್ರಸಹಸ್ರಂ-ಕಣ್ಣುಗಳ ಸಹಸ್ರವು, ಯತ್-ಯಾವದೊ, ತತ್-ಅದು, ತೇ-ನಿನ್ನ, ಬರ್ಹೆ-ಪುಚ್ಛದಲ್ಲಿ, ಭವಿಷ್ಯತಿ-ಆಗುವದು, ಮಯಿ-ನಾನು, ವರ್ಷಮಾಣೆಸತಿ-ವರ್ಷಿಸುವವನಾಗತಿರಲಾಗಿ, ಪ್ರೀತಿಲಕ್ಷಣಂ-ವಿಶ್ವಾಸಚಿಹ್ನಿತವಾದ, ಮುದಂ-ಸಂತೋಷವನ್ನು, ಪ್ರಾಪ್ಸ್ಯಸಿ-ಹೊಂದುವಿ ॥ ೨೪ ॥ ಸುರೇಶ್ವರಃ-ದೇವತಾಧಿಪತಿಯಾದ, ಇಂದ್ರಃ-ಇಂದ್ರನು, ಏವಂ-ಈ ಪರಿಯಾಗಿ, ಮಯೂರಸ್ಯ-ನವಿಲಿಗೆ, ವರಂ-ವರವನ್ನು, ಪ್ರಾದಾತ್-ಕೊಟ್ಟನು ॥೨೫ ॥ ಹೆನರಾಧಿಪ-ಎಲೈ ಶ್ರೀರಾಮನೆ, ಪುರಾ-ಪೂರ್ವಕಾಲದಲ್ಲಿ, ಮಯೂರಾಣಾಂ-ನವಿಲುಗಳಿಗೆ, ಬರ್ಹಾಃ-ಬಾಲಗಳು, ನೀಲಾಃಕಿಲ-ಕಪ್ಪಾಗಿದ್ದವಷ್ಟೆ,ಸುರಾಧಿಪಾತ್-ದೇವೇಂದ್ರನ ದೆಸೆಯಿಂದಾ, ವರಂ-ವರವನ್ನು, ಪ್ರಾಪ್ಯ-ಹೊಂದಿ, ಸರ್ವೇ-ಎಲ್ಲವೂ, ವಿಚಿತ್ರತಾಂ-ವಿಚಿತ್ರತ್ವವನ್ನು, ಗತಾಃ-ಹೊಂದಿದವು ॥ ೨೬ ॥ ತತ್ರ-ಆ ಯಜ್ಞದಲ್ಲಿ, ಪ್ರಾಗ್ವಂಶೇ-ಯಜ್ಞಶಾಲೆಯ ಮೇಲ್ಭಾಗದಲ್ಲಿಹಾಕಿ, ಇರುವಮರದಲ್ಲಿ, ಸ್ಥಿತಂ-ಇರುವ, ವಾಯಸಂ-ಕಾಗೆಯನ್ನುಕುರಿತು, ಧರ್ಮರಾಜಃ-ಧರ್ಮರಾಜನು, ಅಬ್ರವೀತ್-ನುಡಿದನು, ಹೆಪಕ್ಷಿನ್-ಎಲೈ ಪಕ್ಷಿಯೆ, ತವ-ನಿನಗೆ, ಸುಪ್ರೀತಃ-ಸಂತುಷ್ಟನಾದವನು, ಅಸ್ಮಿ-ಆದೆನು, ಪ್ರೀತಸ್ಯ-ಸಂತುಷ್ಟನಾದನನ್ನ, ವಚನಂ-ಮಾತನ್ನು, ಶೃಣು-ಕೇಳು, ॥ ೨೭॥ ಮಯಾ-ನನಿಂದಾ, ಪ್ರಾಣಿನಃಜೀವರಾಶಿಗಳು, ಅನ್ಯೈಃ-ಇತರವಾದ, ವಿವಿಧೈಃ-ಅನೇಕವಾದ, ರೋಗೈಃ-ರೋಗಗಳಿಂದ, ಯಥಾ-ಹ್ಯಾಗೆ, ಪೀಡ್ಯಂತೇ-ಬಾಧಿಸಲ್ಪಡುತಿರುವರೊ, ತಥಾ-ಹಾಗೆ, ಮಯಿ-ನಾನು, ಪ್ರೀತೆಸತಿ-ಸಂತುಷ್ಟನಾಗತಿರಲಾಗಿ, ತೇ-ಆ ರೋಗಗಳು, ತೇ-ನಿನಗೆ, ನಪ್ರಭವಿಷ್ಯಂತಿ-ಮಾಡಲಾರವು, ನಸಂಶಯಃ-ಸಂದೇಹವಿಲ್ಲಾ ॥ ೨೮ ॥ ಹೆವಿಹಂಗಮ-ಎಲೈ ಪಕ್ಷಿಯೆ ! ಮಮ-ನನ್ನ, ವರಾತ್-ವರದ ದೆಸೆಯಿಂದ, ತೇ-ನಿನಗೆ, ಮೃತ್ಯುತಃ-ಮೃತ್ಯುವಿನ ದೆಸೆಯಿಂದ, ಭಯಂ-

ಯಿಸಲ್ಪಟ್ಟವನಾದನೆಂದು ತಿಳಿದು ಘೋಷಿಸಿ, ರಾವಣನು ಜಯಿಸಿದನೆಂದು ಕಡು ಸಂತೋಷದಿಂ ಅಟ್ಟಹಾಸವಂ ಗೈದನು ॥೨೦॥ ಆ ರಾವಣನಾದರೆ ಯಜ್ಞಾರ್ಥವಾಗಿ ಬಂದಿದ್ದ ಮಹರ್ಷಿಗಳನ್ನೆಲ್ಲಾ ಮೆದ್ದು, ಅವರ ಮಾಂಸಗಳಿಂದ ತೃಪ್ತನಾಗಿ ಪುನಹಾ ಭೂಮಂಡಲದಲ್ಲಿ ತೆರಳಿದನು ॥೨೧॥ ರಾವಣಾಸುರನು ಹೊರಟು ಹೋಗಲೂ, ದೇವತೆಗಳೆಲ್ಲರು ತಮ್ಮತಮ್ಮ ಪ್ರಕೃತಿಗಳಂ ತಾಳಿ ಅನಂತರವು ಆ ಸತ್ವಗಳಂ ಕುರಿತು ಇಂತೆಂದರು ॥೨೨॥ ಆ ಸಮಯದಲ್ಲಿ ಇಂದ್ರನು ಕಡು ಹರ್ಷದಿಂದ ಆ ನವುಲಂ ಕುರಿತಿಂತೆಂದನು, ಎಲೈಧರ್ಮಜ್ಞನಾದ ಪಕ್ಷಿಯೇ ನಿನ್ನ ಉಪಕಾರದ ದಶೆಯಿಂದ ನಾನು ಸುಪ್ರೀತನಾಗಿಥೇನೆ ॥೨೩॥ ಆದಕಾರಣ ಎನ್ನ ಸಹಸ್ರನೇತ್ರಗಳ್ಯಾವವೊ, ಅವುಗಳು ನಿನ್ನಪಿಂಛ್ಛದಲ್ಲಿರುವವು, ಮತ್ತು ನಾನು ವರ್ಷಿಸುವಾಗ ಪ್ರೀತಿಚಿನ್ಹಿತಮಾದ ಮುದವನ್ನು ಹೊಂದುವೀ ಅಂದರೆ ವರ್ಷಾಕಾಲದಲ್ಲಿ ಕುಣಿಯುವಿ ॥೨೪॥ ದೇವೇಂದ್ರನು ಈ ಪರಿಯಾಗಿ ಆ ಮಯೂರಕ್ಕೆ ವರವಂ ಕೊಟ್ಟನು ॥೨೫॥ ಎಲೈ ನರನಾಥನೆ ! ತತ್ಪೂರ್ವದಲ್ಲಿ ನವುಲುಗಳಿಗೆ ಬಾಲಗಳು ಕಪ್ಪಾಗಿಯೇ ಇತ್ತು, ಸುರನಾಥನಿಂದ ಈ ಪರಿವರವಂ ಪಡದ ತರುವಾಯ ವಿಚಿತ್ರವಂನು ಹೊಂದಿದವು ॥೨೬॥ ಆ ಸಮಯದೋಳ್ ಧರ್ಮರಾಜನು ಕೂಡ ಆ ಯಜ್ಞಶಾಲೆಯ ದಾರುವಿನಲ್ಲಿ ಕುಳಿತಿರುವ ಕಾಗೆಯನ್ನು ಕುರಿತು ಇಂತೆಂದನು, ಎಲೋವಾಯಸವೆ! ನಿನಗೆ ಸುಪ್ರೀತನಾಗಿಥೇನೆ, ಅಂಥಾ ನನ್ನ ವಚನವಂಕೇಳು, ನಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವರಾನ್ಮಮವಿಹಂಗಮ । ಯಾವತ್ತ್ವಾಂನವಧಿಷ್ಯಂತಿನರಾಸ್ತಾವದ್ಭವಿಷ್ಯಸಿ॥೧೯॥ ಯೇಚಮದ್ವಿಷಯಸ್ಥಾಸ್ತುಮಾನವಾಃ ಕ್ಷುಧಯಾರ್ದಿತಾಃ। ತ್ವಯಿತೃಪ್ತೇತುತೇತೃಪ್ತಾಭವಿಷ್ಯಂತಿಸಬಾಂಧವಾಃ ॥೨೦॥ವರುಣಸ್ತ್ವಬ್ರವೀದ್ಧಂಸಂ ಗಂಗಾತೋಯವಿಹಾರಿಣಮ್। ಶ್ರೂಯತಾಂಪ್ರೀತಿಸಂಯುಕ್ತಂವಚಃಪತ್ರರಥೇಶ್ವರ ॥೨೧॥ ವರ್ಣೋಮನೋಹರಸ್ಸೌಮ್ಯ ಚಂದ್ರಮಂಡಲಸನ್ನಿಭಃ । ಭವಿಷ್ಯತಿತವೋದಗ್ರಃಶುಕ್ಲಫೇನಸಮಪ್ರಭಃ ॥೨೨॥ ಮಚ್ಛರೀರಂಸಮಾಸಾದ್ಯಕಾಂತೋನಿತ್ಯಂಭವಿಷ್ಯಸಿ । ಪ್ರಾಪ್ಸ್ಯಸೇಚಾತುಲಾಂಪ್ರೀತಿಮೇತನ್ಮೇಪ್ರೀತಿಲಕ್ಷಣಮ್ ॥೨೩॥ ಹಂಸಾನಾಂಹಿಪುರಾರಾಮನವರ್ಣಸ್ಸರ್ವಪಾಂಡುರಃ । ಪಕ್ಷಾನೀಲಾಗ್ರಸಂವೀತಾಃಕ್ರೋಡಾಶ್ಶಷ್ಪಾಗ್ರನಿರ್ಮಲಾಃ ॥೨೪॥ ಅಥಾಬ್ರವೀದ್ವೈಶ್ರವಣಃಕೃಕಲಾಸಂಗಿರೌಸ್ಥಿತಂ । ಹೈರಣ್ಯಂಸಂಪ್ರಯಚ್ಛಾಮಿವರ್ಣಂಪ್ರೀತಸ್ತವಾಹಮ್॥೨೫॥ಸದ್ರವ್ಯಂಚಶಿರೋನಿತ್ಯಂಭವಿಷ್ಯತಿತವಾಕ್ಷಯಮ್।

---

ಧೀಃಯು, ನಾಸ್ತಿ–ಇಲ್ಲಾ, ನರಾಃ–ಮನುಷ್ಯರು, ತ್ವಾಂ–ನಿನನ್ನು, ಯಾವತ್–ಯದುವರಿವಿಗೂ, ನವಧಿಷ್ಯಂತಿ–ಕೊಲ್ಲುವದಿಲ್ಲವೋ, ತಾವತ್–ಅದುವರಿವಿಗೂ, ಭವಿಷ್ಯಸಿ–ಇರುವಿ, ॥ ೧೯ ॥ ಕಿಂತು–ಮತ್ತೇನಂದರೆ, ಕ್ಷುಧಯಾ–ಹಸಿವಿನಿಂದಾ, ಅರ್ದಿತಾಃ–ನೊಂದವರಾದ,ಯೇಮಾನವಾಶ್ಚ–ಯಾವಮನುಷ್ಯರು, ಮದ್ವಿಷಯಸ್ಥಾಃ–ನನನ ಲೋಕದಲ್ಲಿರುವರೋ, ತ್ವಯಿ, ನಿನಾದರೆ, ತೃಪ್ತೇಸತಿ– ಸಂತುಷ್ಟವಾದಂಥಾವನಾಗುತಿರಲಾಗಿ, ಸಬಾಂಧವಾಃ–ಬಂಧುಗಳಿಂದೊಡಗೂಡಿದ, ತೇಚ–ಅವರನ್ನೂ ಕೂಡ, ತೃಪ್ತಾಃ–ಸಂತುಷ್ಟರಾದವರೂ, ಭವಿಷ್ಯಂತಿ–ಆಗುವರು ॥ ೨೦ ॥ ವರುಣಸ್ತು– ವರುಣನಾದರೆ, ಗಂಗಾತೋಯವಿಹಾರಿಣಂ–ಗಂಗೋದಕದಲ್ಲಿ ಕ್ರೀಡಿಸುತ್ತಿರುವ, ಹಂಸಂ–ಹಂಸಪಕ್ಷಿಯನ್ನು ಕುರಿತು, ಅಬ್ರವೀತ್–ನುಡಿದನು, ಹೇಪತ್ರರಥೇಶ್ವರ–ಎಲೈ ರಾಜಹಂಸನೆ, ಪ್ರೀತಿಸಂಯುಕ್ತಂ–ವಿಶ್ವಾಸದಿಂದೊಡಗೂಡಿದ, ವಚಃ–ಮಾತು, ಶ್ರೂಯತಾಂ–ಕೇಳಲ್ಪಡಲಿ ॥ ೨೧ ॥ ಹೇಸೌಮ್ಯ–ಎಲೈ ಸೌಮ್ಯನೆ, ತವ–ನಿನಗೆ, ಚಂದ್ರಮಂಡಲಸನ್ನಿಭಃ–ಚಂದ್ರಮಂಡಲಕ್ಕೆ ಸಮಾನವಾದ, ಮನೋಹರಃ–ಇಂಪಾದ, ಶುಕ್ಲಫೇನಸಮಪ್ರಭಃ–ಬಿಳುಪಾದ ನೊರೆಗೆಸಮಾನವಾದ ಪ್ರಭೆಯುಳ್ಳ, ಉದಗ್ರಃ–ಉತ್ಕೃಷ್ಟವಾದ, ವರ್ಣಃ–ಬಣ್ಣವೂ, ಭವಿಷ್ಯತಿ–ಆಗುವದು ॥ ೨೨ ॥ ಮಚ್ಛರೀರಂ–ನನ್ನ ಶರೀರವಾದ ಜಲಮೂರ್ತಿತ್ವವನ್ನೂ, ಸಮಾಸಾದ್ಯ–ಹೊಂದಿ, ನಿತ್ಯಂ–ಸದಾಕಾಲದಲ್ಲಿಯು, ಕಾಂತಃ–ಮನೋಹರವಾದದ್ದು, ಭವಿಷ್ಯಸಿ–ಆಗುವಿ, ಅತುಲಾಂ–ಅಸದೃಶವಾದ, ಪ್ರೀತಿಂಚ– ಸಂತೋಷವನ್ನೂ ಕೂಡಾ, ಪ್ರಾಪ್ಸ್ಯಸೇ–ಹೊಂದುವಿ–ಏತತ್–ಇದು, ಮೇ–ನನ್ನ, ಪ್ರೀತಿಲಕ್ಷಣಂ–ವಿಶ್ವಾಸಕ್ಕೆ–ಗುರ್ತಾದಂಥಾದ್ದು॥೨೩॥ಹೇರಾಮ–ಎಲೈ ಶ್ರೀರಾಮನೆ, ಪುರಾ–ಪೂರ್ವಕಾಲದಲ್ಲಿ, ಸರ್ವಪಾಂಡುರಃ–ಸಮಸ್ತವೂ, ಬಿಳುಪಾಗಿರುವ ವರ್ಣಃ–ಬಣ್ಣವೂ, ನಹಿ–ಇರಲಿಲ್ಲಾ, ಪಕ್ಷಾಃ–ರೆಕ್ಕೆಗಳು, ನೀಲಾಗ್ರಸಂವೀತಾಃ–ಕಪ್ಪಾಗಿರುವ ಕೊನೆಗಳಿಂದ ಕೂಡಿದಂಥಾದ್ದು, ಕ್ರೋಡಾಃ–ಭುಜಗಳ ಮಧ್ಯಪ್ರದೇಶಗಳು, ಶಷ್ಪಾಗ್ರನಿರ್ಮಲಾಃ–ಕೂದಲುಗಳಕೊನೆಗಳಲ್ಲಿ ನಿರ್ಮಲವಾದವುಗಳು ಅಂದರೆ ಕೋಮಲ–ಶ್ಯಾಮಲ ವರ್ಣವಾದಂಥಾದ್ದು, ನಹಿ–ಆಗಿರಲಿಲ್ಲ ॥ ೨೪ ॥ ಅಥ–ಬಳಿಕ,ವೈಶ್ರವಣಃ–ಕುಬೇರನು, ಗಿರೌ–ಬೆಟ್ಟದಲ್ಲಿಸ್ಥಿತಂ–ಇರುತಿರುವ, ಕೃಕಲಾಸಂ–ತೊಣಚೆಕ್ಯಾತನನ್ನು, ಕುರಿತು ಅಬ್ರವೀತ್–ನುಡಿದನು, ಅಹಂ–ನಾನು, ಪ್ರೀತಃ–ಸಂತುಷ್ಟನಾಗಿ ತವ–ನಿನಗೆ, ಹೈರಣ್ಯಂ–ಸುವರ್ಣಸಂಬಂಧವಾದ, ವರ್ಣಂ–ಬಣ್ಣವನ್ನು, ಸಂಪ್ರಯಚ್ಛಾಮಿ–ಕೊಡುತ್ತೇನೆ ॥ ೨೫ ॥ ತವ–ನಿನ್ನ, ಶಿರಃ–ತಲೆಯು, ನಿತ್ಯಂ–ನಿರಂತರವು, ಸದ್ರವ್ಯಂ–ಚಂಚಲವಾಗಿರುವಂಥಾದ್ದಾಗಿಯೂ, ಅಕ್ಷಯಂ–ನಾಶರಹಿತ ವಾದಂಥಾದ್ದು, ಭವಿಷ್ಯತಿ–ಆಗುವದು, ಮತ್ಪ್ರೀತ್ಯಾ–ನಂನವಿಶ್ವಾಸದಿಂದ, ಏಷಃ–ಈ ಕಾಂಚನಕಃ–ಸುವರ್ಣ–ವಿಕಾರವಾದ, ವರ್ಣಃ–ಬಣ್ಣವು, ತೇ–ನಿನಗೆ, ಭವಿಷ್ಯತಿ–ಆಗುವದು ॥೨೬॥ ಸುರಾಃ–ದೇವತೆಗಳು, ತೇಸ್ಮಿನ್ಯಜ್ಞೋತ್ಸವೇ–ಆ ಯ

---

ನು ಅನೇಕ ರೋಗಗಳಿಂದ ಪ್ರಾಣಿಗಳನ್ನೆಲ್ಲ ಪರಿಪರಿಯಾಗಿ ಪೀಡಿಸುತ್ತೇನೆ ನಿನಗೀಗ ನಾನು ಸಂತುಷ್ಟನಾದ ಕಾರಣ ಆ ರೋಗಗಳು ನಿನ್ನನ್ನು ಬಾಧಿಸುವದಿಲ್ಲ. ॥೧೮॥ ಎಲೈ ಕಾಗೆಯೆ ! ನನ್ನ ವರದಿಂದ ನಿನಗೆ ಮೃತ್ಯುಭಯ ವೆಂಬದು ಬೇಡ, ಆದ ಕಾರಣ ಮನುಷ್ಯರು ನಿಂನ್ನನು ಯದು ವರಿವಿಗೂ ಕೊಲ್ಲುವದಿಲ್ಲವೊ ಅದು ವರಿವಿಗೂ ಸ್ಥಿರವಾಗಿರು, ನೀನು ತೃಪ್ತನಾದರೆ ನನ್ನ ಲೋಕದಲ್ಲಿ ಶಿಲುಕಿ ಬಹಳವಾಗಿ ಹಸ್ತು ಇರುವ ಮಾನವ ರೆಲ್ಲರುಬಂಧು ಸಹಿತರಾಗಿ ತೃಪ್ತಿಯನ್ನೈದಿದವರಾಗುವರು ಎಂದು ಕಾಗೆಗೆ ಯಮನುವರವಂ ಕೊಟ್ಟನು ॥ ವರುಣನಾದರೆ ಗಂಗಾನದಿಯನೀರಿನಲ್ಲಿ ವಿಹರಿಸುತಿರುವ ಆ ಹಂಸಪಕ್ಷಿಯಂ ಕುರಿತಿಂತೆಂದನು, ಎಲೈಪಕ್ಷಿ ರಾಜನೆ ! ವಿಶ್ವಾಸ ಪೂರ್ವಕವಾದ ಈನನ್ನ ವಚನವಂ ಕೇಳು॥೨೧॥ ಎಲೊಸೌಮ್ಯವಾದ ಹಂಸಪಕ್ಷಿಯೆ ! ಚಂದ್ರಮಂಡಲ ಸದೃಶವಾಗಿಯೂ ಬೆಳ್ಳಗಿರುವ ನೊರೆಗೆ ಸಮಾನವಾದ ಕಾಂತಿಯುಳ್ಳದ್ದಾಗಿಯೂ, ಬಹಳ ಮನೋಹರ ವಾಗಿಯೂ ಇರುವ ವರ್ಣವು ನಿನಗುಂಟಾಗುವದಲ್ಲದೆ ನಿರಂತರವು ಜಲರೂಪವಾದ ನನ್ನ ಶರೀರವನ್ನಾಶ್ರಯಿಸಿಕಡು ಸಂತೋಷವಂಹೊಂದು,ಇದೇನಿನ್ನ ವಿಶ್ವಾಸಕ್ಕೆ ಗುರ್ತೆಂದು ಹಂಸಪಕ್ಷಿಗೆ ವರುಣನು ವರವಂ ಕೊಟ್ಟನು ॥೨೩॥ಎಲೈ ರಘುಕುಲ ತಿಲಕನೇ ಕೇಳು, ಹಂಸಪಕ್ಷಿಗಳಿಗೆ ಪಾಂಡುವರ್ಣವೂ, ಕಪ್ಪಾಗಿರುವ ಕೊನೆಗಳುಳ್ಳ ಗರಿಗಳೂ, ಮತ್ತೂ ಕೋಮಲವಾಗಿರುವ ಭುಜಮಧ್ಯಪ್ರದೇಶವು ಇವುಗಳೆಲ್ಲ ಇದಕ್ಕೆ ಮುಂಚಿತವಾಗಿ ಇರಲಿಲ್ಲ ॥೨೪॥ ಆ ಬಳಿಕ ಕುಬೇರನಾದರೆಆ ಬೆಟ್ಟದಲ್ಲಿರುವ ತೊಂಡೆಕೇತೆಯನ್ನು ಕುರಿತಿಂತೆಂದನು ನಾನು ಕಡುಸಂತುಷ್ಟನಾಗಿ ಬಂಗಾರಿನ ಬಣ್ಣವನ್ನು, ಕೊಡುವೆನು ॥೨೫॥ ನಿನ್ನವುಂಡೆಯು ದ್ರವ ಸಹಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಏಷಕಾಂಚನಕೋವರ್ಣೋಮತ್ಪ್ರೀತ್ಯಾತೇಭವಿಷ್ಯತಿ ॥೨೬॥ ಏವಂದತ್ವಾವರಾಂಸ್ತೇಭ್ಯಸ್ತಸ್ಮಿನ್ ಯಜ್ಞೋತ್ಸವೇಸುರಾಃ। ನಿವೃತ್ತಾಸ್ಸಹರಾಜ್ಞಾವೈಪುನಃಸ್ವಭವನಂಗತಾಃ ... ... ... ॥೨೭॥

—…ಇತಿ ಶ್ರೀಮದುತ್ತರ ರಾಮಾಯಣೇ ಅಷ್ಟಾದಶಸ್ಸರ್ಗಃ…—

ಅಥಜಿತ್ವಾಮರುತ್ತಂಸಪ್ರಯಯೌರಾಕ್ಷಸಾಧಿಪಃ । ನಗರಾಣಿನರೇಂದ್ರಾಣಾಂಯುದ್ಧಕಾಂಕ್ಷೀದಶಾನನಃ ॥೧॥ ಸಮಾಸಾದ್ಯತುರಾಜೇಂದ್ರಾನ್ ಮಹೇಂದ್ರವರುಣೋಪಮಾನ್ । ಅಬ್ರವೀದ್ರಾಕ್ಷಸೇಂದ್ರಸ್ತುಯುದ್ಧಂಮೇದೀಯತಾಮಿತಿ ॥೨॥ ನಿರ್ಜಿತಾಸ್ಸ್ಮೇತಿವಾಬ್ರೂತಏಷಮೇಕಿಲನಿಶ್ಚಯಃ । ಅನ್ಯಥಾಕುರ್ವತಾಮೇವಮೋಕ್ಷೋವೋನೋಪಪದ್ಯತೇ ॥೩॥ ತತಸ್ತು ಬಹವಃಪ್ರಾಜ್ಞಾಃಪಾರ್ಥಿವಾಧರ್ಮನಿಶ್ಚಯಾಃ । ಮಂತ್ರಯಿತ್ವಾತದಾನ್ಯೋನ್ಯಂಯುದ್ಧೇಸಂತೋಪ್ಯಭೀರವಃ । ನಿರ್ಜಿತಾಸ್ಸ್ಮೇತ್ಯಭಾಷಂತಜ್ಞಾತ್ವಾವರಬಲಂರಿಪೋಃ ॥೪॥ ದುಷ್ಯಂತಸ್ಸುರಥೋಗಾಧಿರ್ಗಯೋರಾಜಾಪುರೂರವಾಃ । ಏತೇಸರ್ವೇಬ್ರುವಂಸ್ತಾತ ನಿರ್ಜಿತಾಸ್ಸ್ಮೇತಿಪಾರ್ಥಿವಾಃ ॥೫॥ ಅಥಾಯೋಧ್ಯಾಂಸಮಾಸಾದ್ಯರಾವಣೋರಾಕ್ಷಸಾಧಿಪಃ । ಸುಗು

---

ಜ್ಞೋತ್ಸವದಲ್ಲಿ, ಏವಂ–ಈ ಪರಿಯಾಗಿ, ತೇಭ್ಯಃ–ಆ ಜಂತುಗಳಿಗೆ, ವರಾನ್–ವರಗಳನ್ನು, ದತ್ವಾ–ಕೊಟ್ಟು, ರಾಜ್ಞಾಸಹ–ಆ ಮರುತ್ತನ ವಡನೆ, ನಿವೃತ್ತಾಃ–ಹಿಂತಿರುಗಿದವರಾಗಿ, ಪುನಃ–ಮತ್ತು, ಸ್ವಭವನಂ–ತಮ್ಮ ತಮ್ಮ ಮನೆಗಳನ್ನು ಕುರಿತು, ಗತಾಃ–ಹೋದರು. ॥೨೭॥

—…ಇತಿಶ್ರೀಮದುತ್ತರ ರಾಮಾಯಣೇ ಅಷ್ಟಾದಶಸ್ಸರ್ಗಃ…—

ಟೀ॥ ರಾಕ್ಷಸಾಧಿಪಃ–ರಾಕ್ಷಸಪ್ರಭುವಾದ, ಸದಶಾನನಃ–ಆ ರಾವಣನು, ಮರುತ್ತಂ–ಮರುತ್ತನನ್ನು, ಜಿತ್ವಾ–ಜಯಿಸಿ, ಅಥ–ಬಳಿಕ, ಯುದ್ಧಕಾಂಕ್ಷೀ–ಯುದ್ಧೇಚ್ಛೆಯುಳ್ಳವನಾಗಿ, ನರೇಂದ್ರಾಣಾಂ–ರಾಜರ, ನಗರಾಣಿ–ಪಟ್ಟಣಗಳನ್ನು ಕುರಿತು–ಪ್ರಯಯೌ–ತೆರಳಿದನು ॥೧॥ ಕಿಂತು–ಮತ್ತೇನೆಂದರೆ, ರಾಕ್ಷಸೇಂದ್ರಸ್ತು–ರಾವಣನಾದರೆ, ಮಹೇಂದ್ರವರುಣೋಪಮಾನ್–ಇಂದ್ರವರುಣರಿಗೆ ಸಮಾನರಾದ, ರಾಜೇಂದ್ರಾನ್–ಅರಸುಗಳನ್ನು, ಸಮಾಸಾದ್ಯ–ಹೊಂದಿ, ಯುದ್ಧಂ–ಯುದ್ಧವನ್ನು, ಮೇ–ನನಗೆ, ದೀಯತಾಂ–ಕೊಡಲ್ಪಡಲಿ, ಇತಿ–ಇಂತೆಂದು, ಅಬ್ರವೀತ್–ನುಡಿದನು ॥೨॥ ಅಥವಾ–ಹಾಗಲ್ಲದಿದ್ದರೆ, ನಿರ್ಜಿತಾಸ್ಮ–ಜಯಿಸಲ್ಪಟ್ಟವರಾದೆವು, ಇತಿ–ಹೀಗಾದರು, ಬ್ರೂತ–ಹೇಳಿರಿ, ಏಷಃ–ಇದು, ಮೇ–ನನ್ನ, ನಿಶ್ಚಯಃಕಿಲ–ನಿಶ್ಚಯವಷ್ಟೆ, ಅನ್ಯಥಾ–ಮತ್ತೊಂದು ಬಗೆಯಾಗಿ, ಕುರ್ವತಾಂ–ಮಾಡುತ್ತಿರುವ, ವಃ–ನಿಮಗೆ, ಮೋಕ್ಷಏವ–ಬಿಡುಗಡೆಯೇ, ನೋಪಪದ್ಯತೇ–ಆಗುವದಿಲ್ಲ ॥೩॥ ತತಸ್ತು–ಬಳಿಕಾದರೆ, ಪ್ರಾಜ್ಞಾಃ–ತಿಳಿವಳಿದ, ಧರ್ಮನಿಶ್ಚಯಾಃ–ಧರ್ಮದಲ್ಲಿ ನಿಶ್ಚಯಬುದ್ಧಿವುಳ್ಳ, ಬಹವಃ–ಅನೇಕರಾದ, ಪಾರ್ಥಿವಾಃ–ಅರಸುಗಳು, ಯುದ್ಧೇ–ಕಾಳಗದಲ್ಲಿ, ಅಭೀರವಃ–ಭಯಪಡದೆ ಇರುವ, ಸಂತೋಪಿ–ಸತ್ಪುರುಷರಾದರು, ತದಾ–ಆ ಸಮಯದಲ್ಲಿ, ಅನ್ಯೋನ್ಯಂ–ಒಬ್ಬರಿಗೊಬ್ಬರು, ಮಂತ್ರಯಿತ್ವಾ–ಯೋಚಿಸಿಕೊಂಡು, ರಿಪೋಃ–ಶತೃವಿನ, ವರಬಲಂ–ಬ್ರಹ್ಮವರದಿಂದುಂಟಾದ ಬಲವನ್ನು, ಜ್ಞಾತ್ವಾ–ಅರಿತುಕೊಂಡು, ನಿರ್ಜಿತಾಸ್ಮ–ಜಯಿಸಲ್ಪಟ್ಟೆವು, ಇತಿ–ಹೀಗೆಂದು, ಅಭಾಷಂತ–ಹೇಳಿದರು ॥೪॥ ಹೇ ತಾತ–ಎಲೋ ತಂದೆಯೆ, ದುಷ್ಯಂತಃ–ದುಷ್ಯಂತನು, ಸುರಥಃ–ಸುರಥನು, ಗಾಧಿಃ–ಗಾಧಿಯು, ಗಯಃ–ಗಯನೆಂಬ, ರಾಜಾ–ಅರಸು, ಪುರೂರವಾಃ–ಪುರೂರವಸ್ಸೆಂಬ, ಪಾರ್ಥಿವಾಃ–ಅರಸುಗಳಾದ, ಏತೇಸರ್ವೇ–ಇವರೆಲ್ಲರು, ನಿರ್ಜಿತಾಸ್ಮ–ನಿರ್ಜಿತರಾದೆವು, ಇತಿ–ಹೀಗೆಂದು, ಅಬ್ರುವನ್–ನುಡಿದರು ॥೫॥ ಅಥ–ಬಳಿಕ, ರಾಕ್ಷಸಾಧಿಪಃ–ರಾಕ್ಷಸಾಧಿಪತಿಯಾದ, ರಾವಣಃ–ರಾವಣನು; ಶಕ್ರೇಣ–ಇಂದ್ರನಿಂದ, ಅಮರಾವತೀಮಿವ–ಅಮರಾವತೀಪಟ್ಟಣದೋಪಾದಿಯಲ್ಲಿ, ಅನರಣ್ಯೇನ–ಅನರಣ್ಯನಿಂದ, ಸುಗುಪ್ತಾಂ–ಪೋಷಿಸಲ್ಪಟ್ಟ, ಅಯೋಧ್ಯಾಂ–ಅಯೋಧ್ಯಾಪಟ್ಟಣವನ್ನು, ಸಮಾಸಾದ್ಯ–ಹೊಂದಿ,

---

ತವಾಗಿಯು ಅಕ್ಷಯವಾಗಿಯೂ ಇರುವದು ಈ ಬಂಗಾರಿನ ಬಣ್ಣವೂ ಕೂಡಾ ನನ್ನ ವಿಶ್ವಾಸದಿಂದುಂಟಾಗುವದು॥ ಯಜ್ಞೋತ್ಸವದಲ್ಲಿ ಸುರರೆಲ್ಲರು ಈ ಪರಿಯಾಗಿ ಅವುಗಳಿಗೆ ವರವಂಕೊಟ್ಟು ಸುಖಿತರಾಗಿ, ಆ ಮರುತ್ತನೆಂಬ ರಾಜನೊಡನೆ ತಮ್ಮ ತಮ್ಮ ಸ್ಥಾನಗಳಂ ಕುರಿತು ತೆರಳಿದರು ॥೨೭॥

—…ಇತಿ ಶ್ರೀಮದುತ್ತರ ರಾಮಾಯಣೇ ೧೮ ನೇ ಸರ್ಗಂ ಮುಗಿದುದು…—

ಆ ಮರುತ್ತನನ್ನು ಜಯಿಸಿ ಅನಂತರವು ನರೇಂದ್ರರ ನಗರಿಗಳನ್ನೂ ಕುರಿತು ತೆರಳಿದನು ॥೧॥ ಆ ರಾವಣನಾದರೆ ಇಂದ್ರ ವರುಣರಿಗೆ ಸಮಾನರಾದ ನರನಾಥರಂ ಕಂಡು ನನಗೆ ಯುದ್ಧವನ್ನು ಕೊಡಿ, ಇಲ್ಲದಿದ್ದರೆ ಜಯಿಸಲ್ಪಟ್ಟೆವೆಂದು ಹೇಳಿ, ಹಾಗಲ್ಲದಿದ್ದರೆ ನಿಮಗೆ ಬಿಡುಗಡೆ ಯಾಗುವದಿಲ್ಲ ಎಂನಲೂ ॥೩॥ ಎಲೊ ಶ್ರೀ ರಾಮನೆ ! ಮಹಾಪ್ರಾಜ್ಞರಾಗಿಯೂ, ಧರ್ಮದಲ್ಲಿಯೇ ಬುದ್ಧಿಯುಳ್ಳವರಾಗಿಯೂ ಕಾಳಗದಲ್ಲಿ ಹೆದರದಿರುವ ಸತ್ಪುರುಷರಾಗಿಯೂ ಇರುವ ದುಷ್ಯಂತನು, ಸುರಥನು, ಗಾಧಿಯು, ಗಯನು, ಪುರೂರವಸ್ಸು, ಇವರೇ ಮೊದಲಾದ ರಾಜರೆಲ್ಲರು, ಆ ಸಮಯದಲ್ಲಿ ಒಬ್ಬರಿಗೊಬ್ಬರು ಕೂಡಿ ಯೋಚನೆಯಂ ಗೈದು, ಆ ರಕ್ಕಸನ ಬಲವನ್ನರಿತು ಜಯಿಸಲ್ಪಟ್ಟೆವೆಂದು ಹೇಳಿದರು ॥೫॥ ಆ ಬಳಿಕ ರಾಕ್ಷಸಾಧಿಪತಿಯಾದ ರಾವಣನು. ಇಂದ್ರನಿಂದ ಪರಿಪಾಲಿತವಾದ ಅಮರಾವತೀ ಪಟ್ಟಣದ ತೆರದಿ ರಕ್ಷಿತವಾದ ಅಯೋ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ತಾಮನರಣ್ಯೇನಶಕ್ರೇಣೇವಾಮರಾವತೀಮ್ ॥೬॥ ಸಪ್ರಾಹರಾಜಾನಮಾಸಾದ್ಯಯುದ್ಧಂದೇಹೀತಿರಾವಣಃ । ನಿರ್ಜಿತೋಸ್ಮೀ ತಿವಾಬ್ರೂಹಿತ್ವಮೇವಂಮಮಶಾಸನಮ್ ॥೭॥ ಅಯೋಧ್ಯಾಧಿಪತಿಸ್ತಸ್ಯಶ್ರುತ್ವಾಪಾಪಾತ್ಮನೋವಚಃ । ಅನರಣ್ಯಸ್ತುಸಂ ಕ್ರುದ್ಧೋರಾಕ್ಷಸೇಂದ್ರಮಥಾಬ್ರವೀತ್ ॥೮॥ ದೀಯತೇದ್ವಂದ್ವಯುದ್ಧಂತೇ ರಾಕ್ಷಸಾಧಿಪತೇಮಯಾ। ಸಂತಿಷ್ಠ ಕ್ಷಿಪ್ರಮಾಯು ತ್ತೋಭವಚೈವಂಭವಾಮ್ಯಹಮ್ ॥೯॥ ಅಥಪೂರ್ವಂಶ್ರುತಾರ್ಥೇನಸಜ್ಜಿತಂಸುಮಹದ್ಧಿಯತ್। ನಿಶ್ಚಕ್ರಾಮನರೇಂದ್ರಸ್ಯಬಲಂ ರಕ್ಷೋವಧೋದ್ಯತಮ್॥೧೦॥ ನಾಗಾನಾಂಬಹುಸಾಹಸ್ರಂವಾಜಿನಾಂನಿಯುತಂತಥಾ । ಮಹೀಂಸಂಛಾದ್ಯನಿಷ್ಕ್ರಾಂತಂಸ ಪದಾತಿರಥಂಕ್ಷಣಾತ್ ॥೧೧॥ ತತಃಪ್ರವೃತ್ತಂಸುಮಹದ್ಯುದ್ಧಂಯುದ್ಧವಿಶಾರದ। ಅನರಣ್ಯಸ್ಯನೃಪತೇಃರಾಕ್ಷಸೇಂದ್ರಸ್ಯಚಾ ದ್ಭುತಮ್ ॥೧೨॥ ತದ್ರಾವಣಬಲಂಪ್ರಾಪ್ಯಬಲಂತಸ್ಯಮಹೀಪತೇಃ । ಯುಧ್ವಾಚಸುಚಿರಂಕಾಲಂ ಕೃತ್ವಾವಿಕ್ರಮಮು ತ್ತಮಮ್ ॥೧೩॥ ಸಮಾಸಾದ್ಯರಣೋತ್ಸಾಹಂಶಿಕ್ಷಾಬಲಸಮನ್ವಿತಮ್ । ಪ್ರಜ್ವಲತ್ತನ್ನರಶ್ರೇಷ್ಠಕ್ಷಿಪ್ರಮೇವಾವಶೇಷಿತಮ್॥

---

ರಾಜಾನಂ-ರಾಜನನ್ನು ಆಸಾದ್ಯ - ಹೊಂದಿ, ಮೇ-ನನಗೆ, ಯುದ್ಧಂ-ಯುದ್ಧವನ್ನು, ದೇಹಿ-ಕೊಡು, ಅಥವಾ-ಹಾಗಲ್ಲದಿದ್ದರೆ, ನಿರ್ಜಿತಃ-ಜಯಿಸಲ್ಪಟ್ಟ ವನು,ಅಸ್ಮೀತಿ-ಆದನೆಂದು, ತ್ವಂ-ನೀನು, ಬ್ರೂಹಿ-ಹೇಳು. ಏವಂ-ಈ ಪ್ರಕಾರವಾಗಿ, ಮಮಶಾಸನಂ-ನನ್ನ ಆಜ್ಞೆ-ಇತಿ-ಇಂತೆಂದು, ರಾವಣಃ-ರಾವಣನು ಪ್ರಾಹ-ನುಡಿದನು॥೭ ॥ ಅಯೋಧ್ಯಾಧಿಪತಿಃ-ಅಯೋಧ್ಯಾಪಟ್ಟಣಕ್ಕೆ ಒಡೆಯನಾದ, ಅನರಣ್ಯಃ-ಅನರಣ್ಯನು, ತಸ್ಯ-ಆ ರಾವಣನ, ಅವ ಲಿಪ್ತಂ-ಅವಮಾ ನ ರೂಪವಾದ, ವಚಃ-ಮಾತನ್ನು ಕೂಡೆ, ಶ್ರುತ್ವಾ-ಕೇಳಿ, ಸುಸಂಕ್ರುದ್ಧಃ-ಬಹಳ ಕೋಪವುಳ್ಳವನಾಗಿ,ರಾಕ್ಷಸೇಂದ್ರಂ-ರಾವಣನನ್ನು ಕುರಿತು, ಅಬ್ರವೀ ತ್-ನುಡಿದನು ॥೮॥ಹೇರಾಕ್ಷಸಾಧಿಪತೇ-ಎಲೈ ರಾಕ್ಷಸನಾಥನೆ, ತೇ-ನಿನಗೆ, ಮಯಾ-ನನ್ನಿಂದ, ದ್ವಂದ್ವಯುದ್ಧಂ-ಭುಜಯುದ್ಧವು-ದೀಯತೇ-ಕೊಡಲ್ಪಡು ತ್ತೆ,ಸಂತಿಷ್ಠ-ನಿಲ್ಲು,ಕ್ಷಿಪ್ರಂ-ಜಾಗ್ರತೆಯಾಗಿ,ಆಯತ್ತಃ-ಉದ್ಯುಕ್ತನಾದವನು, ಭವ-ಆಗು, ಏವಂ ಅಹಂ-ಭವಾಮಿ-ಹೀಗೆಯೆ,ನಾನು-ಸನ್ನದ್ಧನಾಗಿಧನೆ॥ಪೂ ರ್ವಂ-ರಾವಣಾಗಮನಕ್ಕಿಂತಲುಮುಂಚಿತವಾಗಿಯೆ,ಶ್ರುತಾರ್ಥೇನ-ಕೇಳಿದವೃತ್ತಾಂತದಿಂದ, ಸಜ್ಜಿತಂ-ಸನ್ನದ್ಧಮಾಡಲ್ಪಟ್ಟ, ರಕ್ಷೋವಧೋದ್ಯತಂ-ರಾಕ್ಷಸ ಸಂ ಹಾರದಲ್ಲಿ ಉದ್ಯುಕ್ತಮಾದ, ಸುಮಹತ್-ಮಹತ್ತರವಾದ, ನರೇಂದ್ರಸ್ಯ-ಅನರಣ್ಯನ, ಬಲಂ-ಬಲವು, ಯತ್'ಯಾವದೊ, ತತ್-ಆ ಬಲವೊ, ಅಥ-ಆಬಳಿ ಕ, ನಿಶ್ಚಕ್ರಾಮ-ತೆರಳಿತು ॥ ೧೦ ॥ ನಾಗಾನಾಂ-ಆನೆಗಳ, ಬಹುಸಾಹಸ್ರಂ, ಅನೇಕ ಸಾಹಸ್ರಗಳು, ವಾಜಿನಾಂ-ಕುದುರೆಗಳ, ನಿಯುತಂ-ಲಕ್ಷವೂ, ಸ ಪದಾತಿರಥಂ-ಕಾಲುಬಲದಿಂದಲೂ ರಥಗಳಿಂದಲೂ ಒಡಗೂಡಿದ್ದಾಗಿ, ಕ್ಷಣಾತ್-ಕ್ಷಣಮಾತ್ರದಿಂದಲೆವೆ, ಮಹೀಂ-ಭೂಮಿಯನ್ನು ಸಂಛಾದ್ಯ-ಮುಚ್ಚಿ ಕೊಂಡು, ನಿಷ್ಕ್ರಾಂತಂ-ಹೊರಟುಬಂತು ॥೧೧ ॥ ಹೇಯುದ್ಧವಿಶಾರದ, ಎಲೈ ಯುದ್ಧದಲ್ಲಿ ಪಂಡಿತನೆ, ನೃಪತೇಃ-ಅರಸನಾದ, ಅನರಣ್ಯಸ್ಯ - ಅನರ ಣ್ಯನಿಗೂ, ರಾಕ್ಷಸೇಂದ್ರಸ್ಯಚ, ರಾವಣನಿಗೂ ಕೂಡಾ, ಅದ್ಭುತಂ-ಆಶ್ಚರ್ಯಕರವಾದ, ಸುಮಹತ್-ಮಹತ್ತರವಾದ, ಯುದ್ಧಂ-ಕಾಳಗವೂ, ಪ್ರ ವೃತ್ತಂ-ಹುಟ್ಟಿತು ॥ ೧೨ ॥ ಹೇನರಶ್ರೇಷ್ಠ-ಎಲೈ ಪುರುಷೋತ್ತಮನೆ, ತತಃ-ಬಳಿಕ, ತಸ್ಯಮಹೀಪತೇಃ-ಆ ರಾಜನ, ತತ್-ಪ್ರಸಿದ್ಧವಾದ, ತದ್ಬ ಲಂ-ಆ ಸೈನ್ಯವೂ, ರಾವಣಬಲಂ-ರಾವಣನ ಬಲವನ್ನು, ಪ್ರಾಪ್ಯ, ಹೊಂದಿ, ಸುಚಿರಂಕಾಲಂ-ಬಹಳಹೊತ್ತು, ಯುಧ್ವಾ-ಯುದ್ಧಮಾಡಿ, ಉತ್ತಮಂ- ಶ್ರೇಷ್ಠವಾದ, ವಿಕ್ರಮಂ-ಪರಾಕ್ರಮವನ್ನು, ಕೃತ್ವಾ-ಮಾಡಿ, ಶಿಕ್ಷಾಬಲಸಮನ್ವಿತಂ-ಶಿಕ್ಷೆಯಿಂದಲೂ ಬಲದಿಂದಲೂ ಕೂಡಿರುವ, ರಣೋತ್ಸಾಹಂ- ಯು ದ್ಧಸಂತೋಷವನ್ನು, ಸಮಾಸಾದ್ಯ-ಹೊಂದಿಪ್ರಜ್ವಲತ್-ಉರಿಯುತಿರುವಂಥಾದ್ದಾಗಿ,ಕ್ಷಿಪ್ರಮೇವ-ಜಾಗ್ರತೆಯಾಗಿಯೆ,ಅವಶೇಷಿತಂ-ಕೊಂಚವಾಗಿಉಳಿಸಲ್ಪ

---

ಧ್ಯಾ ಪಟ್ಟಣವಂ ಹೊಕ್ಕು, ರಾಜನಂ ಕಂಡು ನನಗೆ ಯುದ್ಧವಂ ಕೊಡು ಅಥವಾ ಜಯಿಸಲ್ಪಟ್ಟೆನೆಂದು ಪೇಳು, ಹೀ ಗೆನನ್ನಾಜ್ಞೆಯು, ಎಂದು ರಾವಣನು ನುಡಿಯಲು ॥೭॥ ಅಯೋಧ್ಯಾ ನಗರಿಗಧಿಪತಿಯಾದ ಅನರಣ್ಯನು, ಅವಮಾನ ಕರವಾದ ಆರಾವಣನ ವಾಕ್ಯವಂ ಕೇಳಿ ಕಡು ಕೋಪವುಳ್ಳವನಾಗಿ ಇಂತೆಂದನು ॥೮॥ ಎಲೈ ರಾಕ್ಷಸಾಧಿಪನೆ! ನಿ ಲ್ಲು ನಿಲ್ಲು ಇಗೋ ದ್ವಂದ್ವಯುದ್ಧವು ಕೊಡಲ್ಪಡುತ್ತೆ, ನೀನು ಸನ್ನದ್ಧನಾಗು, ನಾನು ಹೀಗೆಯೇ ಬರುವೆನು ॥೯॥ ಆ ಬಳಿಕ ರಾವಣಾಸುರನ ವೃತ್ತಾಂತದಿಂದ ಸನ್ನದ್ಧವಾದಕಾರಣ ಆ ರಾಕ್ಷಸಸಂಹಾರೋದ್ಯುಕ್ತವಾದ ಅನರ ಣ್ಯನ ಮಹತ್ತರವಾದ ಬಲವು ತೆರಳಿತು ॥೧೦॥ ಅದೆಂತೆನೆ, ಅನೇಕವಾದ ಆನೆಗಳ ಸಹಸ್ರಗಳೂ, ಮತ್ತು ಲಕ್ಷ ಕು ದುರೆಗಳೂ ಸಹಾ ಕಾಲು ಬಲದಿಂದಲೂ ರಥಗಳಿಂದಲೂ ಒಡ ಗೂಡಿದವುಗಳಾಗಿ ಕ್ಷಣಮಾತ್ರದಲ್ಲಿ ಭೂಮಿಯನ್ನಾ ಚ್ಛಾದಿಸಿ ಕೊಂಡು ಹೊರಟಿತು ॥೧೧॥ ಎಲೈ ಯುದ್ಧ ವಿಶಾರದರನೆ ! ಆ ಬಳಿಕ ಆ ಅನರಣ್ಯನೆಂಬ ರಾಜನಿಗೂ ಮತ್ತು ರಾವಣನಿಗೂ ಸಹ ಮಹದಾಶ್ಚರ್ಯ ಕರವಾದ ಸಂಗರವು ಪ್ರವರ್ತಿಸಿತು ॥೧೨॥ ಆ ಅನರಣ್ಯನ ಸೇನೆಯು ರಾವಣನಬ ಲವನ್ನು ಹೊಂದಿ ಬಹುಕಾಲ ಯುದ್ಧವನ್ನೂ ಮಾಡಿ, ಶಿಕ್ಷಾಬಲದಿಂದ ಯುಕ್ತವಾದ ಮಹಾರಣೋತ್ಸಾಹವಂ ಗೈದು ಜಾಗ್ರತೆಯಾಗಿ ಸ್ವಲ್ಪ ಉಳಿದ್ದಾಯಿತು ॥೧೪॥ ಆ ರಣರಂಗದಲ್ಲಿ ಪತಂಗದ ಹುಳುಗಳು ಅಗ್ನಿಯಲ್ಲಿ ಬೀಳುವಂತೆ ಆ ಬಲವು ಕ್ಷಿಪ್ರದಲ್ಲಿ ಗುಂಪು ಗುಂಪಾಗಿ ಬಿದ್ದುಹೋಯಿತು, ಮತ್ತು ಅಗ್ನಿಯಲ್ಲಿ ಹೋಮ ಮಾಡಲ್ಪಟ್ಟ ಹವ್ಯದಂತೆ ನಾಶ ವಾಯಿತು ॥೧೫॥ ಆ ನರನಾಥನಾದರೆ ಮಹಾ ಸಮುದ್ರವನ್ನು ಪ್ರವೇಶಿಸುವ ನದಿಗಳ ಶತದೊಪಾದಿಯಾಗಿ ನಶಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರಾವಿಶತ್ಸಂಕುಲಂತತ್ರಶಲಭಾಇವಪಾವಕಮ್ । ನಶ್ಯತಿಸ್ಮ ಬಲಂತತ್ರಹವ್ಯಂಹುತಮಿವಾನಲೇ॥೧೫॥ ಸೋಪಶ್ಯತ್ತನ್ನರೇಂದ್ರಸ್ತು ನಶ್ಯಮಾನಂಮಹಾಬಲಮ್। ಮಹಾರ್ಣವಂಸಮಾಸಾದ್ಯ ಆಪಗಾನಾಂಶತಂಯಥಾ॥೧೬॥ ತತಶ್ಶಕ್ರಧನುಃಪ್ರಖ್ಯಂ ಧನುರ್ವಿಷ್ಫಾರಯನ್ ಸ್ವಯಮ್ । ಆಸಸಾದನರೇಂದ್ರಸ್ತಂರಾವಣಂಕ್ರೋಧಮೂರ್ಛಿತಃ॥೧೭॥ ತತೋಬಾಣಶತಾನ್ಯಷ್ಟೌ ಪಾತಯಾಮಾಸಮೂರ್ಧನಿ । ತಸ್ಯರಾಕ್ಷಸರಾಜಸ್ಯ ಇಕ್ಷ್ವಾಕುಕುಲನಂದನಃ॥೧೮॥ ತಸ್ಯ ಬಾಣಾಃಪತಂತಸ್ತೇ ಚಕ್ರುರ್ನ ಕ್ಷತಿಂಕ್ವಚಿತ್ । ವಾರಿಧಾರಾಇವಾಭ್ರೇಭ್ಯಃಪತಂತ್ಯೋನಗಮೂರ್ಧನಿ॥೧೯॥ತತೋರಾಕ್ಷಸರಾಜೇನಕ್ರುದ್ಧೇನನೃಪತಿಸ್ತದಾ। ತಲೇನಾಭಿಹತೋಮೂರ್ಧ್ನಿಸ್ವರಥಾನ್ನಿಪಪಾತಹ ॥೨೦॥ ಸರಾಜಾಪತಿತೋಭೂಮೌ ವಿಹ್ವಲಾಂಗಃಪ್ರವೇಪಿತಃ । ವಜ್ರದಗ್ಧಇವಾರಣ್ಯೇಸಾಲೋನಿಪತಿತೋಮಹಾನ್ ॥೨೧॥ ತಂಪ್ರಹಸ್ಯಾಬ್ರವೀದ್ರಕ್ಷಇಕ್ಷ್ವಾಕುಂಪೃಥಿವೀಪತಿಮ್।ಕಿಮಿದಾನೀಂ ತ್ವಯಾಪ್ರಾಪ್ತಂಫಲಂಮಾಂಪ್ರತಿಯುಧ್ಯತಾ ॥೨೨॥ ತ್ರೈಲೋಕ್ಯೇನಾಸ್ತಿಯೋದ್ವಂದ್ವಂಮಮದದ್ಯಾನ್ನರಾಧಿಪ । ಶಂಕೇ

---

ಟ್ಟಿತು ॥೧೪॥ ತತ್ರ–ಆ ಯುದ್ಧರಂಗದಲ್ಲಿ, ಶಲಭಾಃ–ಪತಂಗದ ಹುಳುಗಳು, ಪಾವಕಮಿವ – ಅಗ್ನಿಯನ್ನಂತೆ, ಸಂಕುಲಂ – ಸಮೂಹನಾಶನವನ್ನು ಪ್ರಾವಿಶತ್–ಹೊಂದಿತು, ತತ್ರ–ಆ ಸಮಯದಲ್ಲಿ, ಅನಲೇ–ಅಗ್ನಿಯಲ್ಲಿ, ಹುತಂ–ಹೋಮಮಾಡಲ್ಪಟ್ಟ, ಹವ್ಯಮಿವ, ಹೋಮದ್ರವ್ಯದಂತೆ,ಬಲಂ–ಸೈನ್ಯವು,ನಶ್ಯತಿಸ್ಮ–ನಾಶವಾಯಿತಪ್ಪ ॥೧೫॥ ಸನರೇಂದ್ರಸ್ತು–ಆ ಅನರಣ್ಯನಾದರೆ, ನಶ್ಯಮಾನಂ–ನಶಿಸಿ ಹೋಗುತ್ತಿರುವ,ತನ್ಮಹಾಬಲಂ–ಆ ಮಹಾ ಸೈನ್ಯವನ್ನು, ಮಹಾರ್ಣವಂ–ಸಮುದ್ರವನ್ನು, ಸಮಾಸಾದ್ಯ–ಹೊಂದಿ, ಆಪಗಾನಾಂ–ನದಿಗಳ, ಶತಂಯಥಾ–ನೂರಿನಂತೆ, ಅಪಶ್ಯತ್–ಕಂಡನು ॥೧೬॥ತತಃ–ಆ ಬಳಿಕ, ನರೇಂದ್ರಃ–ಅರಸು, ಕ್ರೋಧಮೂರ್ಛಿತಃ–ಕೋಪದಿಂದ ಮೂರ್ಛಿತನಾಗಿ,ಶಕ್ರಧನುಃಪ್ರಖ್ಯಂ – ಇಂದ್ರನ ಬಿಲ್ಲಿಗೆ ಸಮಾನವಾದ,ಧನುಃ–ಬಿಲ್ಲನ್ನು,ಸ್ವಯಂ–ತಾನು, ವಿಷ್ಫಾರಯನ್–ಟಂಕಾರ ಮಾಡುತ್ತಿರುವನಾಗಿ, ತಂರಾವಣಂ–ಆ ರಾವಣನನ್ನು, ಆಸಸಾದ ಹೊಂದಿದನು॥ ತತಃ–ಬಳಿಕ,ಇಕ್ಷ್ವಾಕು ಕುಲನಂದನಃ–ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಅನರಣ್ಯನು, ತಸ್ಯರಾಕ್ಷಸರಾಜಸ್ಯ–ಆ ರಾಕ್ಷಸಾಧಿಪತಿಯ, ಮೂರ್ಧನಿ–ಮಂಡೆಯಲ್ಲಿ, ಅಷ್ಟೌಬಾಣಶತಾನಿ – ಯಂಟನೂರುಬಾಣಗಳನ್ನು, ಪಾತಯಾಮಾಸ – ಬೀಳಿಸಿದನು ॥ ೧೮ ॥ ಪತಂತಃ–ಬೀಳುತ್ತಿರುವ, ತಸ್ಯ–ಆ ಅನರಣ್ಯನ, ತೇಬಾಣಾಃ–ಆಬಾಣಗಳು, ಅಭ್ರೇಭ್ಯಃ–ಮೇಘಗಳ ದೆಸೆಯಿಂದ, ನಗಮೂರ್ಧನಿ–ಬೆಟ್ಟದ ಶಿಖರದಲ್ಲಿ, ಪತಂತ್ಯಃ–ಬೀಳುತ್ತಿರುವ, ವಾರಿಧಾರಾಇವ – ಉದಕಧಾರೆಗಳಂತೆ ಕ್ವಚಿತ್–ಯಲ್ಲಾದರೂ, ಕ್ಷತಿಂ–ಘಾಯವನ್ನು, ನಚಕ್ರುಃ–ಮಾಡಲಿಲ್ಲಾ ॥ ೧೯ ॥ ತತಃ–ಆ ಬಳಿಕ–ನೃಪತಿಃ–ಆ ಅನರಣ್ಯನು, ಕ್ರುದ್ಧೇನ – ಕುಪಿತನಾದ, ರಾಕ್ಷಸರಾಜೇನ – ರಾಕ್ಷಸಾಧಿಪತಿಯಿಂದ, ತಲೇನ–ಹಸ್ತ ಪ್ರದೇಶದಿಂದ, ಮೂರ್ಧ್ನಿ–ಶಿರಸ್ಸಿನಲ್ಲಿ, ಅಭಿಹತಃ – ಹೊಡಿಯಲ್ಪಟ್ಟವನಾಗಿ, ತದಾ–ಆ ಕಾಲದಲ್ಲಿ, ಸ್ವರಥಾತ್–ತನ್ನ ರಥದ ದೆಸೆಯಿಂದ, ನಿಪಪಾತ–ಬಿದ್ದು ಹೋದವನಾದನು॥ಸರಾಜಾ ಆ ಅನರಣ್ಯನು, ವಿಹ್ವಲಾಂಗಃ–ಕುಂದಿದ ದೇಹವುಳ್ಳವನಾದ ಕಾರಣ, ಪ್ರವೇಪಿತಃ–ಕಂಪಿಸುತ್ತಿರುವನಾಗಿ, ಅರಣ್ಯೇ–ಅರಣ್ಯದಲ್ಲಿ, ವಜ್ರದಗ್ಧಃ–ಸಿಡಿಲಿನಿಂದ ಸುಡಲ್ಪಟ್ಟ, ನಿಪತಿತಃ–ಬಿದ್ದು ಹೋದ, ಮಹಾನ್– ಮಹತ್ತರವಾದ, ಸಾಲಇವ–ಸಾಲವೃಕ್ಷದಂತೆ, ಭೂಮೌ–ನೆಲದಲ್ಲಿ, ಪತಿತಃ–ಬಿದ್ದು ಹೋದನು ॥೨೧॥ ರಕ್ಷಃ–ರಾಕ್ಷಸನಾದ ರಾವಣನು,ಪ್ರಹಸ್ಯ–ನಕ್ಕು,ತಂಇಕ್ಷ್ವಾಕುಂಪೃಥಿವೀಪತಿಂ–ಆ ಇಕ್ಷ್ವಾಕುರಾಜನಾದ ಅನರಣ್ಯನನ್ನು ಕುರಿತು ಅಬ್ರವೀತ್–ನುಡಿದನು,ಮಾಂ–ನನ್ನನ್ನು ಕುರಿತು,ಪ್ರತಿಯುಧ್ಯತಾ–ಯುದ್ಧ ಮಾಡುತ್ತಿರುವ, ತ್ವಯಾ–ನಿನ್ನಿಂದ, ಇದಾನೀಂ–ಈಗ ಕಿಂಫಲಂಪ್ರಾಪ್ತಂ–ಏನುಫಲವು ಹೊಂದಲ್ಪಟ್ಟಿತು ॥೨೨॥ ಹೇನರಾಧಿಪ–ಎಲೈ ಅರಸ! ಮಮ–ನನಗೆ, ಯಃ–ಯಾವ ಪುರುಷನು, ದ್ವಂದ್ವಂ–ದ್ವಂದ್ವಯುದ್ಧವನ್ನು, ದದ್ಯಾತ್–ಕೊಡುವನೋ, (ಸಃ–ಅವನು) ತ್ರೈಲೋಕ್ಯೇ–ಲೋಕತ್ರಯದಲ್ಲಿಯೂ, ನಾಸ್ತಿ–ಇಲ್ಲಾ, ಭೋಗೇಷು–ಸ್ತ್ರೀಸುಖದಲ್ಲಿ, ಪ್ರಸಕ್ತಃ–ಸಿಲುಕಿದವನಾಗಿ, ಮಮ–ನನ್ನ, ಬಲಂ–ಶಕ್ತಿಯನ್ನು, ನಶೃಣೋಷಿ–ಕೇಳಲಿಲ್ಲ, ಇತಿ–ಹೀಗೆಂದು–ಶಂಕೇ–ಊಹಿಸು

---

ಹೋಗುತಿರುವ ತನ್ನ ಬಲವಂ ಕಂಡನು ॥೧೬॥ ಬಳಿಕಾ ಅನರಣ್ಯನು ಕಡುಕೋಪ ಮುಳ್ಳವನಾಗಿ, ಇಂದ್ರನ ಧನುಸ್ಸಿಗೆ ಸಮಾನವಾದ ಬಿಲ್ಲನ್ನು ಟಂಕಾರ ಮಾಡುತ್ತಾ ತಾನೇ ರಾವಣನನ್ನು ಕುರಿತು ಬಂದು, ಯೆಂಟು ನೂರು ಬಾಣಗಳನ್ನು ಆ ರಾವಣನ ಮಂಡೆಯಲ್ಲಿ ಹೊಡದನು॥೧೮॥ ಬೀಳುತಿರುವ ಆ ರಾಜನ ಬಾಣಗಳು, ಬೆಟ್ಟದ ಶಿಖರದಲ್ಲಿ ಬೀಳುತಿರುವ ಉದಕಧಾರೆಗಳಂತೆ ಯೇನೇನು ವ್ಯಥೆಯನ್ನುಂಟು ಮಾಡಲಿಲ್ಲ ॥೧೯॥ ಆ ಬಳಿಕ ಕಡುಕೋಪಮುಳ್ಳ ರಾಕ್ಷಸರಾಜನು ಆ ನರಪತಿಯನ್ನು ಅಂಗೈಯಿ ಇಂದ ಮಂಡೆಯಲ್ಲಿ ಹೊಡೆಯಲು, ಅವನು ಭೂಮಿಯಲ್ಲಿ ಬಿದ್ದು ಹೋದನು ॥೨೦॥ ಕಾಡಿನಲ್ಲಿ ಶಿಡಿಲಿನಿಂದ ಹೊಡಿಯಲ್ಪಟ್ಟ ಮಹಾಸಾಲವೃಕ್ಷದಂತೆ, ಆ ಅನರಣ್ಯನುಭೂಮಿಯಲ್ಲಿ ಬಿದ್ದು ಹೋದನು ॥೨೧॥ ಈ ಪರಿಯಾಗಿ, ನೆಲದಲ್ಲಿ ಬಿದ್ದು ಹೋದ ಆ ನರನಾಥನಂ ಕಂಡು, ರಾವಣನು ನಕ್ಕು ಇಂತೆಂದನು, ಎಲೈ ಅರಸೆ ! ನನ್ನನ್ನು ಕುರಿತು ಯುದ್ಧಮಾಡುತ್ತಿರುವ ನಿನ್ನಿಂದ, ಈಗ ಏನುಫಲವು ಅನುಭವಿಸಲ್ಪಟ್ಟಿತು. ಎಲೋರಾಜನೆ!ಯಾವನು ನನಗೆ ದ್ವಂದ್ವಯುದ್ಧವನನ್ನೀಯುವನೊ ಅಂಥಾವನು ಲೋಕ ತ್ರಯದಲ್ಲಿಯು ಇಲ್ಲ. ನೀನಾದರೆ ಸ್ತ್ರೀಸುಖಲೋಲನಾಗಿ ನನ್ನ ಬಲವನ್ನು ಕೇಳಿರಲಿಲ್ಲವೆಂದುವೂಹಿಸುತ್ತೇನೆ॥ ಈಪ್ರಕಾರ ಹೇಳುತ್ತಿರುವ ಆರಾವಣನಮುಂದೆ ಅನರಣ್ಯನು ಕ್ಷೀಣ ಜೀವಿತನಾಗಿ ಇಂತೆಂದನು ಈಗನಾನೇನು ಮಾಡಲಿ?ಕಾಲವಾದರ ಹೀಗೆಪ್ರಾಪ್ತ ಮಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರಸಕ್ತೋ ಭೋಗೇಷುನಶ್ರುಣೋಷಿಬಲಂಮಮ ॥೧೩॥ ತಸ್ಯೈವಂಬ್ರುವತೋರಾಜಾಮಂದಾಸುರ್ವಾಕ್ಯಮಬ್ರವೀತ್ । ಕಿಂಶ
ಕ್ಯಮಿಹಕರ್ತುಂವೈಕಾಲೋಹಿದುರತಿಕ್ರಮಃ ।೧೪॥ ನಹ್ಯಹಂನಿಹತೋರಕ್ಷಃತ್ವಯಾಚಾತ್ಮಪ್ರಶಂಸಿನಾ । ಕಾಲೇನೈವವಿ
ಪನ್ನೋಸ್ಮಿಹೇತುಭೂತಸ್ತುಮೇಭವಾನ್ ॥೧೫॥ ಕಿನ್ತ್ವಿದಾನೀಂಮಯಾಶಕ್ಯಂಕರ್ತುಂಪ್ರಾಣಪರಿಕ್ಷಯೇ। ನಹ್ಯಹಂವಿಮು
ಖೋರಕ್ಷೋಯುಧ್ಯಮಾನಸ್ತ್ವಯಾಜಿತಃ ॥೧೬॥ ಇಕ್ಷ್ವಾಕುಪರಿಭಾವಿತ್ವಾದ್ವಚೋವಕ್ಷ್ಯಾಮಿರಾಕ್ಷಸ ॥೧೭॥ ಯದಿ
ದತ್ತಂಯದಿಹುತಂಯದಿಮೇಸುಕೃತಂತಪಃ । ಯದಿಗುಪ್ತಾಃಪ್ರಜಾಸ್ಸಮ್ಯಕ್ತದಾಸತ್ಯಂವಚೋಸ್ತುಮೇ ॥೧೮॥ ಉತ್ಪತ್ಸ್ಯ
ತೇಕುಲೇಹ್ಯಸ್ಮಿನ್ ಇಕ್ಷ್ವಾಕೂಣಾಂಮಹಾತ್ಮನಾಮ್ । ರಾಮೋದಾಶರಥಿರ್ನಾಮಯಸ್ತೇಪ್ರಾಣಾನ್ಹರಿಷ್ಯತಿ ॥೧೯॥ ತತೋ
ಜಲಧರೋದಗ್ರಸ್ತಾಡಿತೋದೇವದುಂದುಭಿಃ। ತಸ್ಮಿನ್ನುದಾಹೃತೇಶಾಪೇಪುಷ್ಪವೃಷ್ಟಿಶ್ಚಖಾಚ್ಚ್ಯುತಾ ॥೨೦॥ ತತಸ್ಸರಾಜಾರಾ
ಜೇಂದ್ರಗತಃಸ್ಥಾನಂತ್ರಿವಿಷ್ಟಪಮ್ । ಸ್ವರ್ಗತೇಚನೃಪೇತಸ್ಮಿನ್ ರಾಕ್ಷಸಸ್ಸನ್ಯವರ್ತತ ... ... ॥೨೧॥

—…*ಇತಿಶ್ರೀಮದುತ್ತರ ರಾಮಾಯಣೆ ಏಕೋನ ವಿಂಶಸ್ಸರ್ಗಃ.*…—

---

ತ್ರನೆ ॥೧೩॥ ಏವಂ—ಈ ಪ್ರಕಾರವಾಗಿ—ಬ್ರುವತಃ—ಹೇಳುತ್ತಿರುವ, ತಸ್ಯ—ಆ ರಾವಣನ ಮುಂದೆ, ರಾಜಾ—ಅನರಣ್ಯನು, ಮಂದಾಸುಃ—ಕ್ಷೀಣವಾದ, ಪ್ರಾಣಗ
ಳುಳ್ಳವನಾಗಿ, ವಾಕ್ಯಂ—ಮಾತನ್ನು, ಅಬ್ರವೀತ್—ನುಡಿದನು, ಇಹ—ಈ ಸಮಯದಲ್ಲಿ, ಕಿಂಕರ್ತುಂವೈ—ಏನು ಮಾಡುವದಕ್ಕೆ ತಾನೆ, ಶಕ್ಯಂ—ಆಗುವದು, ಕಾಲಃ—
ಕಾಲವು, ದುರತಿಕ್ರಮೋಹಿ—ಮೀರಲಸಾಧ್ಯವಷ್ಟೆ ॥೧೪॥ ಹೇರಕ್ಷಃ—ಎಲೈ ರಾಕ್ಷಸನೆ ! ಆತ್ಮ ಪ್ರಶಂಸಿನಾ—ತನ್ನನ್ನು ಶ್ಲಾಘಿಸಿಕೊಳ್ಳುತ್ತಲಿರುವ, ತ್ವಯಾಚ—
ನಿನ್ನಿಂದಲೂ, ಅಹಂ—ನಾನು, ನನಿಹತೋಹಿ—ಹೊಡೆಯಲ್ಪಡಲಿಲ್ಲವಷ್ಟೆ, ಕಾಲೇನೈವ—ಕಾಲದಿಂದಲೆ, ವಿಪನ್ನಃ—ಆಪತ್ತನ್ನು ಹೊಂದಿದವನು, ಅಸ್ಮಿ—ಆದೆನು, ಭ
ವಾನ್ತು—ನೀನಾದರೆ, ಮಮ—ನನಗೆ, ಹೇತುಭೂತಃ—ಕಾರಣ ಭೂತನಾದವನು, ॥೧೫॥ ಪ್ರಾಣಪರಿಕ್ಷಯೇಸತಿ—ಪ್ರಾಣನಾಶ ವಾಗುತ್ತಿರಲಿಕಾಗಿ, ಇದಾ
ನೀಂ—ಈಗ— ಮಯಾ—ಎನ್ನಿಂದ, ಕರ್ತುಂ—ಮಾಡುವದಕ್ಕೆ, ಕಿನ್ನುಶಕ್ಯಂ—ಯಾವದುತಾನೆಶಕ್ಯವು, ಹೇರಕ್ಷಃ—ಎಲೈ ರಾಕ್ಷಸನೆ, ಅಹಂ—ನಾನು, ನವಿಮು
ಖಃ—ಓಡಿಹೋಗಲಿಲ್ಲ ಯುಧ್ಯಮಾನಃ—ಯುದ್ಧ ಮಾಡುತ್ತಿರುವನಾಗಿ, ತ್ವಯಾ—ನಿನ್ನಿಂದ, ಜಿತಃ—ಜಯಿಸಲ್ಪಟ್ಟೆನು ॥೧೬॥ ಹೇ ರಾಕ್ಷಸ—ಎಲೈ ರಾಕ್ಷಸನೆ,
ಇಕ್ಷ್ವಾಕುಪರಿಭಾವಿತ್ವಾತ್—ಇಕ್ಷ್ವಾಕುವಂಶದ ತಿರಸ್ಕಾರದದೆಸೆಯಿಂದ, ವಚಃ—ವಾಕ್ಯವನ್ನು, ವಕ್ಷ್ಯಾಮಿ—ಹೇಳುವೆನು ॥೧೭॥ ಮೇ—ನನ್ನಿಂದ, ದತ್ತಂಯದಿ—
ಕೊಡಲ್ಪಟ್ಟಿದ್ದರೆ, ಹುತಂಯದಿ—ಹೋಮಮಾಡಲ್ಪಟ್ಟಿದ್ದರೆ, ಸುಕೃತಂಯದಿ—ಪುಣ್ಯವಿದ್ದರೆ, ತಪೋಯದಿ—ತಪಸ್ಸಿದ್ದರೆ, ಪ್ರಜಾಃ—ಪ್ರಜೆಗಳು, ಸಮ್ಯಕ್—ಚೆ
ನ್ನಾಗಿ, ಗುಪ್ತಾಯದಿ—ರಕ್ಷಿಸಲ್ಪಟ್ಟಿದ್ದರೆ, ತದಾ—ಆಗ, ಮೇ—ನನ್ನ, ವಚಃ—ಮಾತು, ಸತ್ಯಮಸ್ತು—ಯಥಾರ್ಥವಾಗಲಿ ॥೧೮॥ ಯಃ—ಯಾವಪುರು
ಷನು, ತೇ—ನಿನ್ನ, ಪ್ರಾಣಾನ್—ಪ್ರಾಣಗಳನ್ನು, ಹರಿಷ್ಯತಿ—ಅಪಹರಿಸುವನೋ, ಸಃ—ಅಂಥಾ, ದಾಶರಥಿಃ—ದಶರಥಪುತ್ರನಾದ, ರಾಮಃ—ಶ್ರೀರಾಮನು,
ಮಹಾತ್ಮನಾಂ—ಮಹಾತ್ಮರಾದ, ಇಕ್ಷ್ವಾಕೂಣಾಂ—ಇಕ್ಷ್ವಾಕುಮಹಾರಾಜರ, ಅಸ್ಮಿನ್ಕುಲೇಹಿ—ಇದೇ ವಂಶದಲ್ಲಿಯೆ, ಉತ್ಪತ್ಸ್ಯತಿ—ಉಟ್ಟುತ್ತಾನೆ ॥೧೯॥
ತತಃ—ಬಳಿಕ, ತಸ್ಮಿನ್ಶಾಪೇ—ಆ ಶಾಪವು, ಉದಾಹೃತೇಸತಿ—ಹೇಳಲ್ಪಟ್ಟದ್ದಾಗುತ್ತಿರಲಿಕ್ಕಾಗಿ, ಜಲಧರೋದಗ್ರಃ—ಮೇಘಕ್ಕಿಂತಲೂ ಅಧಿಕವಾದ, ದೇವದುಂದು
ಭಿಃ—ದೇವಭೇರಿಯು, ತಾಡಿತಃ—ಹೊಡೆಯಲ್ಪಟ್ಟಿತು, ಪುಷ್ಪವೃಷ್ಟಿಶ್ಚ—ಪುಷ್ಪವರುಷವೂ ಕೂಡಾ, ಖಾತ್—ಅಂತರಿಕ್ಷದ ದೆಸೆಯಿಂದ, ಚ್ಯುತಾ—ಸುರಿಯಿ
ತು ॥೨೦॥ ಹೇ ರಾಜೇಂದ್ರ—ಎಲೈ ರಾಜಶ್ರೇಷ್ಠನೆ, ತತಃ—ಅನಂತರದಲ್ಲಿ, ಸರಾಜಾ—ಆ ಅನರಣ್ಯನು, ತ್ರಿವಿಷ್ಟಪಂಸ್ಥಾನಂ—ಸ್ವರ್ಗಸ್ಥಾನವನ್ನು, ಗತಃ—ಹೊಂ
ದಿದನು, ತಸ್ಮಿನ್ನೃಪೇ—ಆ ಅರಸು, ಸ್ವರ್ಗತೇಸತಿ—ಸ್ವರ್ಗವನ್ನು ಹೊಂದಿದವನಾಗುತ್ತಿರಲಿಕ್ಕಾಗಿ, ರಾಕ್ಷಸಶ್ಚ—ರಾವಣನೂ ಕೂಡಾ, ಸನ್ನ್ಯವರ್ತತ—ಹಿಂದಿರುಗಿದನು ॥

—…*ಇತಿ ಶ್ರೀಮದುತ್ತರ ರಾಮಾಯಣೆ ಏಕೋನವಿಂಶ ಸ್ಸರ್ಗಃ.*…—

---

ಯಿತಲ್ಲ ॥೧೪॥ ಎಲೊ ರಾಜನೆ, ಆತ್ಮಶ್ಲಾಘನೆಯಂ ಗೈಯ್ಯುತ್ತಿರುವನಿನ್ನಿಂದ ನಾನೇನು ಜಯಿಸಲ್ಪಡಲಿಲ್ಲ. ಆದರೆ ಕಾಲ
ಪರಿಪಾಕದಿಂದಲೇ ಆಪದವನ್ನು ಹೊಂದಿದೆ, ನೀನು ಇದಕ್ಕೆ ಕಾರಣಭೂತನಾದೆ ॥೧೫॥ ಪ್ರಾಣಗಳು ಕಂಠಗತವಾದ
ಕಾಲದಲ್ಲಿ ನಾನೇನು ಮಾಡುವದಕ್ಕೆ ಶಕ್ಯನು॥ ಎಲೈರಾಕ್ಷಸನೇ ! ನಾನೇನು ಯುದ್ಧದಲ್ಲಿ ವಿಮುಖನಾಗಲಿಲ್ಲ, ಯುದ್ಧ
ಮಾಡುತಿರುವನಾಗಿ ನಿನ್ನಿಂದ ಜಯಿಸಲ್ಪಟ್ಟೆನು ॥೧೬॥ ಎಲೋರಾಕ್ಷಸನೆ! ಇಕ್ಷ್ವಾಕುವಂಶದ ತಿರಸ್ಕಾರದದೆಶೆಯಿಂದ ಈ
ಮಾತನ್ನು ಹೇಳುವೆನು ॥೧೭॥ ನಾನು ಏನಾದರೂ ದಾನಗಳನ್ನು ಮಾಡಿದ್ದರೂ ಸರಿಯೆ ಅಥವಾ ಹೋಮ ಮಾಡಿದ್ದ
ರೂ ಏನಾದರೂ ಪುಣ್ಯವು ಮಾಡಿದ್ದರೂ ತಪಶ್ಚರಣೆಯಂ ಗೈದಿದ್ದರೂ ಸರಿಯೆ ನಿರಂತರವು ಚನ್ನಾಗಿ ಪ್ರಜಾ ಪಾಲನೆ
ಯಂ ಗೈದಿದ್ದರೂ ಸರಿಯೆ ಈ ನನ್ನ ಮಾತು ಸುಳ್ಳಾಗಬೇಡ (ಅದೇನೆಂದರೆ) ಎಲೋರಕ್ಕಸನೆ! ಯಾವ ಪುರುಷನು ನಿನ್ನ ಪ್ರಾ
ಣಗಳನ್ನಪಹರಿಸುವನೋ ಅಂಥಾ ದಶರಥನಂದನನಾದ ಶ್ರೀರಾಮನೆಂಬುವನು ಮಹಾತ್ಮರಾದ ಇಕ್ಷ್ವಾಕುರಾಜರ ಕು
ಲದಲ್ಲಿಯೇ ಹುಟ್ಟುವನು ಎಂದು ಕಡುಭಯಂಕರವಾದ ಶಾಪವನ್ನಿಡಲು, ॥೧೯॥ ದೇವ ದುಂದುಭಿಗಳು ಧ್ವನಿಸಿದವು,
ಪುಷ್ಪವೃಷ್ಟಿ ಅಂತರಿಕ್ಷದಿಂದ ಸುರಿಯಿತು ॥೨೦॥ ಎಲೈರಾಜೇಂದ್ರನಾದ ಶ್ರೀರಾಮನೆ ಈ ಪರಿಯಾಗಿ ಅನರಣ್ಯನೆಂಬರಾ
ಜನು ಮರಣವನ್ನೈದಿ ಸುರಲೋಕಮಂ ಕುರಿತು ತೆರಳಲೂ ಆ ರಾಕ್ಷಸಾಧಿಪತಿಯಾದ ರಾವಣನು ಹಿಂತಿರುಗಿದನು॥

ಇತಿಶ್ರೀಮದುತ್ತರ ಕಾಂಡದೊಳ್ ಹತ್ತೊಂಭತ್ತನೆ ಸರ್ಗಂ ಮುಗಿದುದು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತತೋವಿತ್ರಾಸಯನ್ಮರ್ತ್ಯಾನ್ಪೃಥಿವ್ಯಾಂರಾಕ್ಷಸಾಧಿಪಃ । ಆಸಸಾದವನೇತಸ್ಮಿನ್ನಾರದಂಮುನಿಸತ್ತಮಂ ॥೧॥ ತಸ್ಯಾಭಿವಾದನಂಕೃತ್ವಾದಶಗ್ರೀವೋನಿಶಾಚರಃ । ಅಬ್ರವೀತ್ಕುಶಲಂಪೃಷ್ಟ್ವಾಹೇತುಮಾಗಮನಸ್ಯವೈ॥೨॥ ನಾರದಸ್ತು ವಚಶ್ರುತ್ವಾಬ್ರಹ್ಮರ್ಷಿರಮಿತಪ್ರಭಃ । ಅಬ್ರವೀನ್ಮೇಘಪೃಷ್ಠಸ್ಥೋರಾವಣಂಪುಷ್ಪಕೇಸ್ಥಿತಮ್ ॥೩॥ ರಾಕ್ಷಸಾಧಿಪತೇಸೌಮ್ಯತಿಷ್ಠ ವಿಶ್ರವಸಸ್ಸುತ । ಪ್ರೀತೋಸ್ಮ್ಯಭಿಜನೋಪೇತವಿಕ್ರಮೈರೂರ್ಜಿತೈಸ್ತವ॥೪॥ವಿಷ್ಣುನಾದೈತ್ಯಘಾತೈಶ್ಚ ತಾರ್ಕ್ಷ್ಯೇಣೋರಗಧರ್ಷಣೈಃ।ತ್ವಯಾಸಮರಮರ್ದೈಶ್ಚ ಭೃಶಂಹಿಪರಿತೋಷಿತಃ॥೫॥ಕಿಂಚಿದ್ವಕ್ಷ್ಯಾಮಿತಾವತ್ತೇ ಶ್ರೋತವ್ಯಂಶ್ರೋಷ್ಯಸೇಯದಿ । ಶ್ರುತ್ವಾಚಾನಂತರಂಕಾರ್ಯಂತ್ವಯಾರಾಕ್ಷಸಸತ್ತಮ॥೬॥ ತನ್ಮೇನಿಗದಿತಸ್ತಾತ ಸಮಾಧಿಂಶ್ರವಣೇಕುರು ॥೭॥ ಕಿಮಯಂವಧ್ಯತೇಲೋಕಸ್ತ್ವಯಾವಧ್ಯೇನದೈವತೈಃ । ಹತಏವಸ್ವಯಂಲೋಕೋಯದಾಮೃತ್ಯುವಶಂಗತಃ॥೮॥ ದೇವದಾನವಯಕ್ಷಾಣಾಂದೈತ್ಯಗಂಧರ್ವರಕ್ಷಸಾಮ್ । ಅವಧ್ಯೇನತ್ವಯಾಲೋಕಃಕ್ಲೇಷ್ಟುಂಯುಕ್ತೋನಮಾನುಷಃ ॥೯॥ನಿತ್ಯಂಶ್ರೇಯಸಿಸಂಮೂ

---

ಟೀ॥ ತತಃ-ಬಳಿಕ, ರಾಕ್ಷಸಾಧಿಪಃ-ರಾಕ್ಷಸರಾಜನಾದ ರಾವಣನು, ಪೃಥಿವ್ಯಾಂ-ಭೂಮಿಯಲ್ಲಿ, ಮರ್ತ್ಯಾನ್-ಮನುಷ್ಯರನ್ನು, ವಿತ್ರಾಸಯನ್-ಹೆದರಿಸುತಿರುವನಾಗಿ, ತಸ್ಮಿನ್ವನೇ-ಆವನದಲ್ಲಿ, ಮುನಿಸತ್ತಮಂ-ಋಷಿಶ್ರೇಷ್ಠನಾದ, ನಾರದಂ-ನಾರದನನ್ನು, ಆಸಸಾದ-ಹೊಂದಿದನು ॥೧॥ ನಿಶಾಚರಃ-ರಾಕ್ಷಸನಾದ, ದಶಗ್ರೀವಃ-ದಶಕಂಠನು, ತಸ್ಯ-ಆ ನಾರದಮುನಿಗೆ, ಅಭಿವಾದನಂ-ವಂದನವನ್ನು, ಕೃತ್ವಾ-ಮಾಡಿ, ಕುಶಲಂ-ಕುಶಲವನ್ನು, ಪೃಷ್ಟಃ-ಕೇಳಲ್ಪಟ್ಟವನಾಗಿ, ಆಗಮನಸ್ಯ-ಬರುವದಕ್ಕೆ, ಹೇತುಂವೈ-ಕಾರಣವನ್ನೂ, ಅಬ್ರವೀತ್-ನುಡಿದನು ॥ ೨ ॥ ಅಮಿತಪ್ರಭಃ-ಕಡುಕಾಂತಿಯುಳ್ಳ, ಬ್ರಹ್ಮರ್ಷಿಃ-ಬ್ರಹ್ಮಋಷಿಯಾದ, ನಾರದಸ್ತು-ನಾರದಮುನಿಯಾದರೆ, ವಚಃ-ಮಾತನ್ನು, ಶ್ರುತ್ವಾ-ಕೇಳಿ,ಮೇಘಪೃಷ್ಠಸ್ಥಃ-ಮೇಘಪೃಷ್ಠದಲ್ಲಿರುವನಾಗಿ, ಪುಷ್ಪಕೇ-ಪುಷ್ಪಕದಲ್ಲಿ, ಸ್ಥಿತಂ-ಇರುವ, ರಾವಣಂ-ರಾವಣನನ್ನು ಕುರಿತು, ಅಬ್ರವೀತ್-ನುಡಿದನು॥ ೩॥ಹೇರಾಕ್ಷಸಾಧಿಪತೇ-ಎಲೈರಾಕ್ಷಸನಾಥನೆ, ಹೇಸೌಮ್ಯ-ಎಲೈ ಸೌಮ್ಯನೆ, ಹೆವಿಶ್ರವಸಸ್ಸುತ-ಎಲೈವಿಶ್ರವಸ್ಸಿನಪುತ್ರನೆ, ಹೆ ಅಭಿಜನೋಪೇತ-ಎಲೈ ಕೀರ್ತಿವಂತನೆ,(ಅಥವಾ-ಕುಲಕ್ಕೆತಕ್ಕವನಾದವನೆ) ಊರ್ಜಿತೈಃ-ಉತ್ಸಾಹಯುಕ್ತವಾದ, ತವ-ನಿನ್ನ, ವಿಕ್ರಮೈಃ-ಪರಾಕ್ರಮಗಳಿಂದ, ಪ್ರೀತಃ-ಸಂತುಷ್ಟನಾದವನು, ಅಸ್ಮಿ-ಆದೆನು॥೪॥ವಿಷ್ಣುನಾ-ವಿಷ್ಣುವಿನಿಂದ, ದೈತ್ಯಘಾತೈಶ್ಚ-ರಾಕ್ಷಸ ಸಂಹಾರಗಳಿಂದಲು, ತಾರ್ಕ್ಷ್ಯೇಣ-ಗರುಡನಿಂದ, ಉರಗಧರ್ಷಣೈಃ-ಸರ್ಪಗಳ ಹೆದರಿಸೋಣದಿಂದಲೂ, ತ್ವಯಾ-ನಿನ್ನಿಂದ, ಸಮರಮರ್ದೈಶ್ಚ-ಯುದ್ಧದಲ್ಲಿ, ಕೊಲ್ಲಲ್ಪಡುವದರಿಂದಲೂ, ಭೃಶಂ-ಬಹಳವಾಗಿ, ಪರಿತೋಷಿತೋಹಿ-ಸಂತೋಷಿಸಲ್ಪಟ್ಟದ್ದೇನಷ್ಟೆ ॥೫॥ ಹೇರಾಕ್ಷಸೋತ್ತಮ-ಎಲೈ ರಾಕ್ಷಸಶ್ರೇಷ್ಠನೆ, ಶ್ರೋತವ್ಯಂ-ಕೇಳತಕ್ಕದ್ದನ್ನು, ಶ್ರೋಷ್ಯಸೇಯದಿ-ಕೇಳದರೆ,ಕಿಂಚಿತ್ತಾವತ್-ಸ್ವಲ್ಪವಾಗಿಯೆ, ತೇ-ನಿನಗೆ,ವಕ್ಷ್ಯಾಮಿ-ಹೇಳುವೆನು,ಶ್ರುತ್ವಾ-ಕೇಳಿಅನಂತರಂ-ಆಮೇಲೆ-ತ್ವಯಾಚ-ನಿನ್ನಿಂದಲೂ, ಕಾರ್ಯಂ-ಮಾಡತಕ್ಕದ್ದು॥೬॥ಹೆತಾತ-ಎಲೈ ತಂದೆಯೆ, ನಿಗದಿತಃ-ಹೇಳುತ್ತಿರುವ, ಮೇ-ನನ್ನ,ತತ್-ಆ ಮಾತನ್ನು, ಶ್ರವಣೆ-ಕೇಳುವದರಲ್ಲಿ, ಸಮಾಧಿಂ-ಏಕಾಗ್ರ ಚಿತ್ತವನ್ನು, ಕುರು-ಮಾಡು ॥೭॥ ದೈವತೈಃ-ದೇವತೆಗಳಿಂದ, ಅವಧ್ಯೇನ-ವಧಾರ್ಹನಾಗದಿರುವ, ತ್ವಯಾ-ನಿನ್ನಿಂದ, ಅಯಂಲೋಕಃ-ಈ ಮನುಷ್ಯನ ಲೋಕವು, ಕಿಂವಧ್ಯತೆ-ಯಾಕೆಕೊಲ್ಲಲ್ಪಡುತ್ತ, ಲೋಕಃ-ಲೋಕವು, ಯದಾ-ಯಾವಾಗ, ಮೃತ್ಯು ವಶಂಗತಃ-ಮೃತ್ಯುವಿನಸ್ವಾಧೀನವಂ ಹೊಂದುವದೊ, ತದಾ-ಆಗ, ಸ್ವಯಮೇವ-ತನ್ನಷ್ಟಕ್ಕೆತಾನೆ, ಹತಃ-ಸತ್ತಿರುವದು ॥೮॥ ದೇವದಾನವಯಕ್ಷಾಣಾಂ-ದೇವತೆಗಳಗೂ, ದಾನವರಿಗೂ, ಯಕ್ಷರಿಗೂ, ದೈತ್ಯಗಂಧರ್ವ ರಕ್ಷಸಾಂ-ದೈತ್ಯರಿಗೂ, ಗಂಧರ್ವರಿಗೂ,ರಾಕ್ಷಸರಿಗೂಕೂಡಾ, ಅವಧ್ಯೇನ-ವಧಾರ್ಹನಾಗದಿರುವ, ತ್ವಯಾ-ನಿನ್ನಿಂದ-ಮಾನುಷಃ-ಮನುಷ್ಯಸಂಬಂಧವಾದ,ಲೋಕಃ-ಲೋಕವು, ಕ್ಲೇಷ್ಟುಂ-ಕ್ಲೇಶಪಡಿಸುವದಕ್ಕೆ, ನಯುಕ್ತಃ-ತಕ್ಕನಾದ್ದಲ್ಲ ॥೯॥ ನಿತ್ಯಂ-ಸದಾಕಾಲದಲ್ಲಿಯೂ, ಶ್ರೇಯಸಿ-ಅಭಿವೃದ್ಧಿ ವಿಷಯದಲ್ಲಿ, ಸಂಮೂಢಂ-ಮೂಢವಾದ, ಮಹದ್ಭಿಃ-ಅನೇಕವಾದ, ವ್ಯಸನೈಃ-ದುಃಖಗ

---

ಆ ಬಳಿಕ ರಾಕ್ಷಸಾಧಿಪತಿಯಾದ ರಾವಣನು, ಧರಾತಲದಲ್ಲಿರುವ ನರರನ್ನೆಲ್ಲಾ ಹೆದರಿಸುತ್ತಾ ಅರಣ್ಯದಲ್ಲಿ ನಾರದ ಮಹಾ ಮುನಿಯಂ ಕಂಡು ಅವರ ಪಾದಗಳಿಗೆರಗಿ ಕುಶಲವಂ ಕೇಳಲ್ಪಟ್ಟವನಾಗಿ,ಆಗಮನ ಕಾರಣವಂ ಪೇಳಿದನು॥೨ ಕಡುಕಾಂತಿಯುಳ್ಳ ಬ್ರಹ್ಮರ್ಷಿಯಾದ ಆ ನಾರದ ಮುನಿಯಾದರೆ, ಮೇಘಗಳ ಪೃಷ್ಠ ಭಾಗದಲ್ಲಿ ನಿಂತವನಾಗಿ ಆ ಮಾತನ್ನು ಕೇಳಿ ಪುಷ್ಪಕದಲ್ಲಿ ಕುಳಿತಿರುವ ಆ ದಶಕಂಠನಂ ಕುರಿತಿಂತೆಂದನು॥೩॥ವಿಶ್ರವಸ್ಸಿನ ಪುತ್ರನಾಗಿಯೂ ಸೌಮ್ಯನಾಗಿಯೂ ಇರುವ ಎಲೈದಶಕಂಠನೆ!ಊರ್ಜಿತವಾದ ನಿಂನ ವಿಕ್ರಮದಿಂದ ಸಂತುಷ್ಟನಾಗಿಧೇನೆ ॥೪॥ ವಿಷ್ಣುವು ದೈತ್ಯರನ್ನು ಹೊಡೆಯುವಂತೆಯೂ,ಗರುಡನುಸರ್ಪಗಳನ್ನು ಹೆದರಿಸುವಂತೆಯೂ ನೀನುಸಂಗರದಲ್ಲಿಹೆದರಿಸೋಣದರಂ ಕಂಡು ಕಡು ಪರಿತೋಷಿತನಾಗಿಧೇನೆ ॥೫॥ ಎಲೈರಾಕ್ಷಸೋತ್ತಮನೆ! ನೀನು ಕೇಳುವನಾದರೆ ನಾನೂ ಸ್ವಲ್ಪ ಪೇಳುವೆನು, ಅದುಕೇಳಿದಬಳಿಕ ನೀನು ಮಾಡಬೆಕು, ಏನನ್ನುವಿಯೋ?ಸಾವಧಾನ ಚಿತ್ತನಾಗಿ ಕೇಳು ॥೭॥ ದೇವತೆಗಳಿಗೂ ಕೂಡಾ ಅವಧ್ಯನಾದ ನೀನು ಈ ನರಲೋಕವನ್ನು ಯಾಕೆ ಕೊಲ್ಲುವಿ, ಇದಾದರೇ ಮೃತ್ಯುವಿನ ವಶದಲ್ಲಿ ಶಿಲುಕಿರೋಣದರಿಂದ ಸ್ವತಸಿದ್ಧವಾಗಿಯೆ ಸತ್ತಿರುವದು ॥೮॥ ದೇವ, ದಾನವ, ಯಕ್ಷ, ದೈತ್ಯ, ಗಂಧರ್ವ, ರಾಕ್ಷಸರಿಗೂ, ಸಹ ವಧಿಸಲಶ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಥಂಮಹದ್ಭಿರ್ವ್ಯಸನೈರ್ವೃತಮ್ । ಹನ್ಯಾತ್ಕಸ್ತ್ವಾದೃಶೋಲೋಕಂಜರಾವ್ಯಾಧಿವಶಂಗತಮ್ ॥೧೦॥ ತೈಸ್ತೈರನಿಷ್ಟೋಪಗ ಮೈರಜಸ್ರಂಯಸ್ತುತಪ್ಯತೆ । ಕೋಬುಧ್ವಾಮತಿಮಾನಸ್ಮಿನ್ ಯುದ್ಧೇಷುಪ್ರಣಯೀಭವೇತ್ ॥೧೧॥ ಕ್ಷೀಯಮಾಣಂಸದೈವೈ ನಂಕ್ಷುತ್ಪಿಪಾಸಾಜರಾದಿಭಿಃ । ವಿಷಾದಶೋಕಸಂಮೂಢಂಲೋಕಂತ್ವಂಕ್ಷಪಯಸ್ವಮಾ ॥೧೨॥ ಪಶ್ಯತಾವನ್ಮಹಾಬಾಹೋ ರಾಕ್ಷಸೇಶ್ವರಮಾನುಷಂ । ಲೋಕಮೇನಂವಿಚಿತ್ರಾರ್ಥಂಯಸ್ಯನಜ್ಞಾಯತೆಗತಿಃ ॥೧೩॥ ಕ್ವಚಿದ್ವಾದಿತ್ರನಿರ್ವೃತ್ತಾಸ್ಸೇವ್ಯಂ ತೆಮುದಿತೈರ್ಜನೈಃ । ರುಚ್ಯಂತೆಚಾಪರೈರಾರ್ತೈರ್ಧಾರಾಶ್ರುನಯನಾನನೈಃ ॥ ೧೪ ॥ ಮಾತಾಪಿತೃ ಸುತಸ್ನೇಹೈಃಭಾರ್ಯಾ ಬಂಧುಮನೋರಥೈಃ । ಮೋಹೇನಾಯಂಜನೋಗ್ರಸ್ತಃಕ್ಲೇಶಂಸ್ವಂನಾವಬುಧ್ಯತೆ ॥೧೫॥ ಅಲಮೇತತ್ಪರಿಕ್ಲಿಶ್ಯಲೋಭಮೋ ಹನಿರಾಕೃತಮ್ । ಜಿತಮೇವತ್ವಯಾಸೌಮ್ಯಮರ್ತ್ಯಲೋಕೋನಸಂಶಯಃ॥೧೬॥ ಏವಮುಕ್ತಸ್ತುಲಂಕೇಶೋದೀಪ್ಯಮಾನಇ

---

ಳಿಂದ, ವೃತಂ-ಸುತ್ತಿಕೊಳ್ಳಲ್ಪಟ್ಟ, ಜರಾವ್ಯಾಧಿವಶಂಗತಂ-ವಾರ್ಧಿಕ್ಯಕ್ಕೂ, ರೋಗಗಳಿಗೂ, ಸ್ವಾಧೀನವಾದ, ಲೋಕಂ-ಭೂಲೋಕವನ್ನು, ತ್ವಾದೃಶಃ- ನಿನ್ನಂಥಾ, ಕಃ-ಯಾವನು, ಹನ್ಯಾತ್-ಹೊಡೆಯುವನು ॥೧೦॥ ಅಸ್ಮಿನ್-ಈ ಲೋಕದಲ್ಲಿ, ತೈಸ್ತೈರನಿಷ್ಟೋಪಗಮೈಃ-ಆಯಾ ಅನಿಷ್ಟಗಳು ಸಂಭವಿಸೋ ಣದರಿಂದ, ಯಸ್ತು-ಯಾವ ಪುರುಷನಾದರೂ, ಅಜಸ್ರಂ-ನಿರಂತರವೂ, ತಪ್ಯತೆ-ತಪಿಸಲ್ಪಡುತ್ತಾನೆ, (ಏತತ್-ಇದನ್ನು, ) ಬುಧ್ವಾ-ತಿಳದು, ಮತಿ ಮಾನ್-ಬುದ್ಧಿಮಂತನಾದವನು, ಕಃ-ಯಾರುತಾನೆ, ಯುದ್ಧೇಷು-ಯುದ್ಧಗಳಲ್ಲಿ,ಪ್ರಣಯೀಭವೇತ್-ವಿಶ್ವಾಸಮಾಡುವನು ॥೧೧॥ಸದೈವ-ನಿರಂತರವೂ, ಕ್ಷು ತ್ಪಿಪಾಸಾಜರಾದಿಭಿಃ-ಹಸಿವಿನಿಂದಲೂ, ಬಾಯಾರಿಕೆಯಿಂದಲೂ-ಮುದಿತನವೆ ಮೊದಲಾದವುಗಳಿಂದ, ಕ್ಷೀಯ್ಯಮಾಣಂ-ಕ್ಷೀಣವಾಗುತ್ತಿರುವ, ವಿಷಾದಶೋಕ ಸಂಮೂಢಂ-ಅಂತಸ್ತಾಪದಿಂದಲೂ, ದುಃಖದಿಂದಲೂ-ತಿಳಿಯದೆ ಇರುವ, ಏನಂಲೋಕಂ-ಈ ಭೂಲೋಕವನ್ನು, ತ್ವಂ-ನೀನು, ಮಾಕ್ಷಪಯಸ್ವ-ನಾಶಗೊ ಳಿಸಬ್ಯಾಡ ॥೧೨॥ ಹೆ ಮಹಾಬಾಹೊ-ಎಲೈ ಭುಜಪರಾಕ್ರಮವುಳ್ಳವನೆ, ಹೆ ರಾಕ್ಷಸೇಶ್ವರ-ಎಲೈ ರಾಕ್ಷಸಾಧಿಪತಿಯೆ, ಯಸ್ಯ-ಯಾವಜನಕ್ಕೆ, ಗತಿಃ-ಗಮ ಸ್ಥಾನವೂ, ನಜ್ಞಾಯತೆ-ತಿಳಿಯುವದಿಲ್ಲವೊ, ತದೇನಂ-ಅಂಥಾ, ಮಾನುಷಂ-ಮನುಷ್ಯಸಂಬಂಧವಾದ, ಲೋಕಂ-ಲೋಕವನ್ನು, ವಿಚಿತ್ರಾರ್ಥಂತಾ ವತ್-ಆಶ್ಚರ್ಯಕ್ಕೊಸ್ಕರವೆ, ಪಶ್ಯ-ನೋಡು ॥ ೧೩॥ ಕ್ವಚಿತ್-ಕೆಲಬರು, ವಾದಿತ್ರನಿರ್ವೃತ್ತಾಃ-ವಾದಿತ್ರ-ನಾಲ್ಕು ಬಗೆಯಾದ ವಾದ್ಯದಿಂದ ಸುಖಿತರಾಗಿ, ಮುದಿತೈಃ-ಸಂತೋಷಗೊಂಡ, ಜನೈಃ-ಜನರಿಂದ, ಸೇವ್ಯಂತೆ-ಸೇವಿಸಲ್ಪಡುತ್ತಾರೆ, ಆರ್ತೈಃ-ದುಃಖಿತರಾದಕಾರಣ, ಧಾರಾಶ್ರುನಯನಾನನೈಃ- ಧಾರೆ ಯಾಗಿಬರುತ್ತಿರುವ ಕಂಬನಿಗಳುಳ್ಳನೇತ್ರಗಳೂ, ಮುಖಗಳೂಉಳ್ಳ ಅಪರೈಃ -ಮತ್ತುಕೆಲವರಿಂದಲೂನು, ಉಚ್ಯತೆ-ಹೇಳಿ ಕೊಳ್ಳಲ್ಪಡುತ್ತಾರೆ ॥೧೪॥ ಯಃ-ಯಾವಜನವೂ, ಸ್ವಂ-ತನ್ನನ್ನು, ಸ್ವಕೀಯ್ಯವಾದ-ಕ್ಲೇಶಂ-ದುಃಖವನ್ನು ನಾವಬುಧ್ಯತೆ-ತಿಳಿಯುವದಿಲ್ಲವೊ, ಸೋಯಂಜನಃ-ಅಂಥಾ ಈ ಜ ನವೂ-ಮೋಹೇನ-ಅಜ್ಞಾನದಿಂದ, ಮಾತಾಪಿತೃಸುತಸ್ನೇಹೈಃ-ಮಾತಾಪಿತೃಸುತರೆಂಬ ಸ್ನೇಹಗಳಿಂದ, ಭಾರ್ಯಾ-ಬಂಧುಮನೋರಥೈಃ, ಭಾರ್ಯಾ ಬಂಧುಗಳಇ ಷ್ಟಗಳಿಂದಲೂ,ಗ್ರಸ್ತಃ-ವ್ಯಾಪ್ತಮಾಗಿಧಾನೆ॥೧೫॥ಪರಿಕ್ಲಿಶ್ಯ-ಕ್ಲೇಶಗೊಂಡು,ಎತತ್-ಈ ಜಗತ್ತು, ಲೋಭಮೋಹನಿರಾಕೃತಂ-ಲೋಭದಿಂದಲೂ ಮೋಹದಿಂ ದಲೂ ನಿರಾಕರಿಸಲ್ಪಟ್ಟಿಧೆ,ಅಲಂ-ಸಾಕು, ಹೆ ಸೌಮ್ಯ-ಯಲೊ ಸೌಮ್ಯನೆ, ಮರ್ತ್ಯಲೋಕಃ-ಮನುಷ್ಯಲೋಕವೂ, ತ್ವಯಾ-ನಿನ್ನಿಂದ, ಜಿತಃ- ಜಯಿಸಲ್ಪಟ್ಟಿಧೆ, ನಸಂಶಯಃ-ಸಂದೇಹವಿಲ್ಲ ॥೧೬॥ ತತ್ರ-ಆಸ್ಥಳದಲ್ಲಿ, ಏವಂ-ಈ ಪರಿಯಾಗಿ, ಲಂಕೇಶಃ-ರಾವಣನು, ಉಕ್ತಃ-ಹೇಳಲ್ಪಟ್ಟವನಾಗಿ ಓ

---

ಕ್ಯನಾದ ನಿನ್ನಿಂದ ಈ ಮನುಷ್ಯಲೋಕವು ಕ್ಲೇಶಿಸಲ್ಪಡುವದು ಯುಕ್ತವಲ್ಲ, ಯಾಕಂದರೆ,— ಇದು ಶ್ರೇಯೋ ವಿ ಷಯದಲ್ಲಿ ತಿಳುವಳಿಕೆ ಇಲ್ಲದಿರುವದು, ಕಡುದುಃಖಗಳಿಂದ ಸುತ್ತು ಬಾರಲ್ಪಟ್ಟದ್ದು, ಮುದಿತನಕ್ಕೂ ರೋಗ ಗಳಿಗೂ ಕೂಡ ಅಧೀನವಾಗಿರುವದು, ಇಂಥಾದ್ದನ್ನು ನಿಂನಂಥಾಶೂರನು ಕೊಲ್ಲ ಬಹುದೆ? ॥೧೦॥ ಮತ್ತು ಆಯಾ ಅನಿಷ್ಟಗಳು ಸಂಭವಿಸೋಣದರಿಂದ ನಿರಂತರವೂ ಪರಿತಪಿಸುತಲೇಯಿಧೆ, ಹೀಗಿರುವಲ್ಲಿ ಬುದ್ಧಿಮಂತನಾದವಸ್ಯಾರು ತಾನೆ ಈಲೋ ಕದಲ್ಲಿ ಯುದ್ಧವಂ ಗೈಯುವನು ॥೧೧॥ಹಶಿವು, ಬಾಯಾರಿಕೆ, ಮುದಿತನವೇ ಮುಂತಾದವುಗಳಿಂದ ಸದಾಕಾಲದಲ್ಲಿಯೂ ಕ್ಷೀಣವಾಗುತಿರುವದಾಗಿಯೂ ವಿದಾಹದಿಂದಲೂ ಶೋಕದಿಂದಲೂ ಜ್ಞಾನವಿಲ್ಲದ್ದಾಗಿಯೂ,ಇರುವ ಈ ಭೂಮಂಡಲ ವನ್ನು, ನಾಶಗೊಳಿಸಬ್ಯಾಡ ॥೧೨॥ಎಲೈ ಮಹಾ ಭುಜಪರಾಕ್ರಮವುಳ್ಳ ರಾಕ್ಷಸನಾಥನೇ! ಯಾವದಕ್ಕೆ ಗತಿಯೇಇ ಲ್ಲವೋ, ಅಂಥಾ ಈ ಮನುಷ್ಯ ಲೋಕವನ್ನು ವಿಚಿತ್ರಾರ್ಥವಾಗಿನೋಡು॥೧೩॥ಕೆಲಬರು ನರ್ತನದಲ್ಲಿ ಪ್ರೀತಿಯುಳ್ಳ ದವರಾಗಿ ಸಂತುಷ್ಟರಾದ ಜನಗಳಿಂದ ಕೂಡಿಧಾರೇ ಮತ್ತು ಕೆಲಬರು,ಧಾರೆಗಳಾಗಿ ಬರುತಿವ ಕಂಬನಿಗಳಿಂದ ವ್ಯಾಪ್ತಮಾ ಮುಖ ಗಳುಳ್ಳ ವರಾಗಿದುಃಖಿತರಾದವರಿಂದ ಬೇಡಲ್ಪಡುತ್ತಾರೆ ಇನ್ನು ಕೆಲವರು ಮಾತಾಪಿತೃ ಸ್ನೇಹದಿಂದಲೂ,ಭಾರ್ಯಾ ಬಂಧು ಜನಗಳ ಮನೋರಥದಿಂದಲೂ, ತನ್ನ ದುಃಖವನ್ನರಿಯದೆ,ಅಜ್ಞಾನಮೋಹಿತರಾಗಿ ಶ್ರಮೆ ಗೊಳ್ಳುತ್ತಿಧಾರೆ ಇ ದಿಲ್ಲಿಗೆಸಾಕು, ಬಹಳವಾಗಿ ಕೇಳಿದರಿಂದಪ್ರಯೋಜನವೇನು?ಈ ಜಗತ್ತೆ ಮೋಹನದಲ್ಲಿ ಶಿಲುಕಿಇಧೆ,ಎಲೈ ಸೌಮ್ಯನಾ ದವನೇ! ಈ ಮರ್ತ್ಯ ಲೊಕವು ನಿನ್ನಿಂದ ಜಯಿಸಲ್ಪಟ್ಟೇ ಇಧೇ, ಈ ವಿಷಯದಲ್ಲಿ ಸಂದೇಹವಿಲ್ಲ ॥೧೬॥ ಈ ಪರಿಯಾ ಗಿ ನಾರದ ಋಷಿಯಿಂದ ಹೇಳಲ್ಪಟ್ಟ ಆ ರಾವಣನು, ತನ್ನ ತೇಜಸ್ಸಿನಿಂದ ಕಂಗೊಳಿಸುತಿರುವನಂತೆ, ನಕ್ಕು, ನಮ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವರ್ಚಸಾ । ಅಬ್ರವೀನ್ನಾರದಂತತ್ರ ಸಂಪ್ರಹಸ್ಯಾಭಿವಾದ್ಯ ಚ ॥೧೭॥ ಮಹರ್ಷೇದೇವಗಂಧರ್ವ ವಿಹಾರಸಮರಪ್ರಿಯ । ಅಹಂ ಖಲೂದ್ಯತೋಗಂತುಂವಿಜಯಾರ್ಥಂರಸಾತಲಂ ॥೧೮॥ ತತೋಲೋಕತ್ರಯಂಜಿತ್ವಾಸ್ಥಾಪ್ಯನಾಗಾನ್ ಸುರಾನ್ ವಶೇ । ಸಮುದ್ರಮಮೃತಾರ್ಥಂವೈಮಥಿಷ್ಯಾಮಿರಸಾಲಯಂ ॥೧೯॥ ಅಥಾಬ್ರವೀದ್ದಶಗ್ರೀವಂನಾರದೋಭಗವಾನೃಷಿಃ । ಕ್ವಖಲ್ವಿದಾನೀಂಮಾರ್ಗೇಣತ್ವಯಾನೇನಹಿಗಮ್ಯತೇ॥೨೦॥ ಅಯಂಖಲುಸುದುರ್ಗಮ್ಯಃಪ್ರೇತರಾಜಪುರಂಪ್ರತಿ । ಮಾರ್ಗೋಗಚ್ಛತಿ ದುರ್ಧರ್ಷೋಯಮಸ್ಯಾಮಿತ್ರಕರ್ಶನ॥೨೧॥ ಸತುಶಾರದಮೇಘಾಭಂಮುಕ್ತ್ವಾಹಾಸಂದಶಾನನಃ। ಉವಾಚಕೃತಮಿತ್ಯೇವ ವಚನಂಚೇದಮಬ್ರವೀತ್ ॥೨೨॥ ಯಸ್ಮಾತ್ತ್ವಂಮಾನುಷಂಲೋಕಮೇತಂಪ್ರತಿಕೃಪಾಯಸೇ। ತಸ್ಮಾದೇಷೋಹ್ಯಹಂಬ್ರಹ್ಮನ್ ವೈವಸ್ವತವಧೋದ್ಯತಃ ॥ ಗಚ್ಛಾಮಿದಕ್ಷಿಣಾಮಾಶಾಂಯತ್ರಸೂರ್ಯಾತ್ಮಜೋನೃಪಃ॥೨೩॥ ಮಯಾಹಿಭಗವನ್ ಕ್ರೋಧಾತ್ ಪ್ರತಿಜ್ಞಾತಂರಣಾರ್ಥಿನಾ । ಅಪಜೇಷ್ಯಾಮಿಚತುರೋಲೋಕಪಾಲಾನಿತಿಪ್ರಭೋ ॥೨೪॥ ತದೇಷಃಪ್ರಸ್ಥಿತೋಹಂವೈವೈವಸ್ವ

---

ಚಸಾ–ತೇಜಸ್ಸಿನಿಂದಾ, ಜ್ವಲ್ಯಮಾನಇವ–ಹೊಳೆಯುತ್ತಿರುವನಂತೆ, ಸಂಪ್ರಹಸ್ಯ–ನಕ್ಕು, ಅಭಿವಾದ್ಯಚ–ನಮಸ್ಕಾರವನ್ನೂಗೈದು, ನಾರದಂ–ನಾರದರನ್ನು ಕುರಿತು, ಅಬ್ರವೀತ್–ಪೇಳದನು, ॥೧೭॥ ಹೆಮಹರ್ಷೇ–ಎಲೈ ಮಹಾಮುನಿಯೆ, ದೇವಗಂಧರ್ವ ವಿಹಾರಸಮರಪ್ರಿಯ–ದೇವತೆಗಳಿಗೂ, ಗಂಧರ್ವರಿಗೂ ನಡೆಯುತ್ತಿರುವ ವಿಹಾರಾರ್ಥವಾದ ಯುದ್ಧದಲ್ಲಿಇಷ್ಟಉಳ್ಳವನೆ, ಅಹಂಖಲು–ನಾನಾದರೆ, ರಸಾತಲಂ–ಪಾತಾಳವನ್ನು, ವಿಜಯಾರ್ಥಂ–ಜಯಿಸುವದಕ್ಕೋಸ್ಕರ,ಗಂತುಂ–ಪೋಗುವದಕ್ಕೆ, ಉದ್ಯುಕ್ತಃ–ಸನ್ನದ್ಧನಾಗಿಧ್ದೆನೆ, ॥೧೮॥ಲೋಕತ್ರಯಂ–ಮೂರು,ಲೋಕಗಳನ್ನು, ಜಿತ್ವಾ–ಜಯಿಸಿ, ನಾಗಾನ್–ಸರ್ಪದೇವತೆಗಳನ್ನು, ಸುರಾನ್–ದೇವತೆಗಳನ್ನು,ವಶೇ–ಅಧೀನದಲ್ಲಿ,ಸ್ಥಾಪ್ಯ–ಇಟ್ಟು,ತತಃ–ಬಳಿಕ,ರಸಾಲಯಂ–ಅಮೃತರಸಗಳಿಗೆ ಮನೆಯಾದ, ಸಮುದ್ರಂವೈ–ಕಡಲನ್ನು–ಅಮೃತಾರ್ಥಂ–ಅಮೃತಕ್ಕಾಗಿ, ಮಥಿಷ್ಯಾಮಿ–ಕಡೆಯುವೆನು ॥೧೯॥ ಅಥ–ಬಳಿಕ, ಭಗವಾನ್–ಪೂಜ್ಯನಾದ, ನಾರದಃ–ನಾರದರೆಂಬ, ಋಷಿಃ–ಮುನಿಯು, ಇದಾನೀಂ–ಈಗ, ಅನೇನಮಾರ್ಗೇಣಹಿ–ಈ ಮಾರ್ಗದಿಂದಲೆ, ಕ್ವಖಲು–ಯಲ್ಲಾದರೆ, ತ್ವಯಾ–ಪಾತಾಳಕ್ಕೆಹೋಗಬೇಕೆಂಬ ನಿನ್ನಿಂದಾ, ಗಮ್ಯತೇ–ಹೋಗಲ್ಪಡುತ್ತೆಹೆ ಅಮಿತ್ರಕರ್ಶನ–ಎಲೈ ಶತೃನಾಶಕನೆ, ಸುದುರ್ಗಮ್ಯಃ–ಸುಖವಾಗಿ ಗಮಿಸುವದಕ್ಕೆ ಅಸಾಧ್ಯವಾದ, ದುರ್ಧರ್ಷಃ–ತಿರಸ್ಕರಿಸುವದಕ್ಕೆ ಅಸಾಧ್ಯವಾದ, ಅಯಂಮಾರ್ಗಃಖಲು–ಇದೆ ದಾರಿಯೆ, ಯಮಸ್ಯ–ಯಮಸಂಬಂಧವಾದ, ಪ್ರೇತರಾಜಪುರಂಪ್ರತಿ– ಪ್ರೇತರಾಜ ಪಟ್ಟಣವನ್ನು ಕುರಿತು, ಗಚ್ಛತಿ–ಪೋಗುತ್ತದೆ॥ಏವಂ–ಹೀಗೆಂದು, ದಶಗ್ರೀವಂ–ರಾವಣನನ್ನು ಕುರಿತು, ಅಬ್ರವೀತ್ ನುಡಿದನು॥೨೧॥ಸದಶಾನನಃ–ಆದಶಮುಖನು, ಶಾರದಮೇಘಾಭಂ–ಶರತ್ಕಾಲ ಸಮ್ಮಂಧವಾದ ಮೇಘದ ಕಾಂತಿಯೊಪಾದಿಯಲ್ಲಿ ಕಾಂತಿಯುಳ್ಳ, ಹಾಸಂ–ಮುಗುಳುನಗೆಯನ್ನು, ಮುಕ್ತ್ವಾ–ಬಿಟ್ಟು, ಕೃತಮಿತ್ಯೇವ–ಮಾಡಲ್ಪಟ್ಟಿತೆಂದೆ, ಉವಾಚ–ಪೇಳದನು ಇದಂ ವಚನಂಚ–ಈ ವಾಕ್ಯನ್ನೂ ಕೂಡ, ಅಬ್ರವೀತ್–ನುಡಿದನು, ॥೨೨॥ಯಸ್ಮಾತ್–ಯಾವಕಾರಣದ ದೆಶೆಯಿಂದ, ತ್ವಂ–ನೀನು,ಮಾನುಷಂ–ಮನುಷ್ಯ ಸಂಬಂಧವಾದ,ಎತಂಲೋಕಂಪ್ರತಿ–ಈ ಲೋಕವನ್ನು ಕುರಿತು, ಕೃಪಾಯಸೇ–ದಯಉಳ್ಳವನಾಗಿದ್ದೀಯೊ, ತಸ್ಮಾತ್–ಆಕಾರಣ ದ್ದೆಶೆಯಿಂದ, ಹೆಬ್ರಹ್ಮನ್–ಎಲೈ ಬ್ರಾಹ್ಮಣನೆ, ಏಷೋಹ್ಯಹಂ–ಈ ನಾನು, ವೈವಸ್ವತವಧೋದ್ಯತಃ–ಯಮನಸಂಹಾರದಲ್ಲುದ್ಯುಕ್ತನಾಗಿ, ಯತ್ರ–ಯಲ್ಲಿ, ಸೂರ್ಯಾತ್ಮಜಃ–ಸೂರ್ಯಪುತ್ರನಾದ, ನೃಪಃ–ರಾಜನು(ಆಸ್ತೆ–ಇರುವನೊ)ತಾಂದಕ್ಷಿಣಾಮಾಶಾಂ, ಆದಕ್ಷಿಣದಿಕ್ಕಂನು ಕುರಿತು, ಗಚ್ಛಾಮಿಹಿ–ಹೋಗುತ್ತೆನಷ್ಟೆ ॥ಹೆ ಭಗವನ್–ಎಲೈಪೂಜ್ಯನೆ, ಹೆಪ್ರಭೋ–ಎಲೊಸ್ವಾಮಿಯೆ,ರಣಾರ್ಥಿನಾ–ಯುದ್ಧೇಚ್ಛೆಯುಳ್ಳ, ಮಯಾ–ನನ್ನಿಂದಾ,ಕ್ರೋಧಾತ್–ಕೋಪದದೆಶೆಯಿಂದ,ಚತುರಃ–ನಾಲ್ಕು ಮಂದಿಯಾದ,ಲೋಕಪಾಲಾನ್–ಲೋಕಪಾಲಕರನ್ನು, ಅಪಜೇಷ್ಯಾಮೀತಿ–ಜಯಿಸುವನೆಂದು,ಹಿಯಸ್ಮಾತ್–ಯಾವ ಕಾರಣದ ದೆಶಿಇಂದ,ಪ್ರತಿಜ್ಞಾತಂ–ಪ್ರತಿಜ್ಞೆ ಮಾಡಲಟ್ಟಿತೊ,ತತ್–ಆಕಾರಣದ ದೆಶೆಯಿಂದ,ಏಷೋಹಂ–ಈನಾನು,ವೈವಸ್ವತಪುರಂಪ್ರತಿ–ಯಮಪಟ್ಟಣವನ್ನು

---

ನ್ನಾರವನ್ನೂ ಸಹಾ ಗೈದು ಇಂತೆಂದನು, ॥೧೭॥ ದೇವ ದಾನವ ಗಂಧರ್ವರಿಗೆ ಸಂಭವಿಸುತ್ತಿರುವ ವಿಹಾರವಾದ ಸಮರದಲ್ಲಿ ಪರಮ ಪ್ರೀತಿಯುಳ್ಳ ನಾರದಮುನಿಯೆ, ರಸಾತಲವಂ ಜಯಿಸುವದಕ್ಕೋಸ್ಕರವಾಗಿ ಪೋಗಲೂ ಉದ್ಯುಕ್ತನಾಗಿ ಧೇನೆ ॥೧೮॥ ನಾಗಗಳನ್ನು, ಮತ್ತು ದೇವತೆಗಳನ್ನೂ ಸಹ ಜಯಿಸಿ ನನ್ನ ವಶದಲ್ಲಿಟ್ಟುಕೊಂಡು, ಆಬಳಿಕ ಅಮೃತಾರ್ಥ ಕಡಲನ್ನು ಕಡೆಯುವೆನೆನ್ನಲೂ, ಪೂಜ್ಯನಾದ ನಾರದ ಮುನಿಯು ರಾವಣನಂ ಕುರಿತಿಂತೆಂದನು, ಎಲೈ ದಶಗ್ರೀವನೆ! ಪಾತಾಳದ ದಾರಿಯು ಬಿಟ್ಟು ಹಾಗಾದರೆ ಈಗ ನೀನು ಈ ಮಾರ್ಗದಲ್ಲಿ ಯೆಲ್ಲಿಗೆ ಹೋಗುವಿ, ಈ ದಾರಿಯಾದರೇನೋ, ಸುಲಭವಾಗಿ ಹೊಗೇಲೂ ಶಕ್ಯವಾದ್ದಲ್ಲ, ಇದು ಪ್ರೇತರಾಜನಾದ ಯಮ ಪುರಕ್ಕೆ ಹೋಗುವದು ಎಂದು ಪೇಳಲೂ, ಆ ದಶಾನನನು ಹಾಗಾದರೆ ಸರಿ ನನ್ನ ಕೆಲಸವು ಈ ಡೇರಿತೆಂದು ಪೇಳಿದ್ದಲ್ಲದೇ ಈ ವಾಕ್ಯವನ್ನೂ ಸಹ ನುಡಿದನು ॥೨೦॥ಎಲೈಬ್ರಹ್ಮನಿಷ್ಠಾ ಪರನಾದ ನಾರದಮುನಿಯೇ, ಯಾವ ಹೇತುವಿನಿಂದನೀನು ಈಮನುಷ್ಯಲೋಕವಂ ಕುರಿತು ಕೃಪಾಭರಿತನಾಗಿದ್ದೀಯೊ, ಆದಕಾರಣ ಈಗಲೇ ಈಲೋಕವಂ ತೊರದು ಯಮಧರ್ಮರಾಜನ ವಧೋದ್ಯುಕ್ತನಾಗಿ ಅವನಿರುವ ದಕ್ಷಿಣದಿಕ್ಕಿಗೆ ಹೋಗುವೆನು॥೨೩॥ ಎಲೈ ಸ್ವಾಮಿಯೆ! ನಾನು ಪೂರ್ವ ಕಾಲದಲ್ಲಿ, ಯುದ್ಧದಲ್ಲಿ ಬದೊತ್ಕಂಠನಾಗಿ, ನಾಲ್ಕು ಮಂದಿಯಾದ ಲೋಕ ಪಾಲಕರನ್ನು ಜಯಿಸುವೆನೆಂದು ಪ್ರತಿಜ್ಞೆಯಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜಯಿಷ್ಯಾಮಿಮೃತ್ಯುನಾ ॥೧೫॥ ಏವಮುಕ್ತ್ವಾ ದಶಗ್ರೀವೋಮುನಿಂತೆ ತಪುರಂಪ್ರತಿ ॥ ಪ್ರಾಣಿಸಂಕ್ಲೇಶಕರ್ತಾರಂಯೋಜಯಿಷ್ಯಾಮಿಮೃತ್ಯುನಾ ॥೧೫॥ ಏವಮುಕ್ತ್ವಾ ದಶಗ್ರೀವೋಮುನಿಂತೆ ಮಭಿವಾದ್ಯಚ । ಪ್ರಯಯೌದಕ್ಷಿಣಾಮಾಶಾಂಪ್ರಹೃಷ್ಟಸ್ಸಚಿವೈಸ್ಸಹ ॥೧೬॥ ನಾರದಸ್ತುಮಹಾತೇಜಾಮುಹೂರ್ತಂ ಧ್ಯಾನಮಾಸ್ಥಿತಃ । ಚಿಂತಯಾಮಾಸವಿಪ್ರೇಂದ್ರೋವಿಧೂಮಇವಪಾವಕಃ ॥೧೭॥ ಯೇನಲೋಕಾಸ್ತ್ರಯಸ್ಸೇಂದ್ರಾಃಕ್ಲಿಶ್ಯಂತೆ ಸಚರಾಚರಾಃ।ಕ್ಷೀಣೇಚಾಯುಷಿಧರ್ಮೇಚಸಕಾಲೋಹಿಂಸ್ಯತೆಕಥಮ್॥೧೮॥ಯಶ್ಚದತ್ತೇಕೃತೆಸಾಕ್ಷೀದ್ವಿತೀಯಇವಪಾವ ಕಃ । ಲಬ್ಧಸಂಜ್ಞಾವಿಚೇಷ್ಟಂತೆಯಸ್ಮಾಲ್ಲೋಕಾಮಹಾತ್ಮನಃ ॥೧೯॥ ಯಸ್ಯನಿತ್ಯಂತ್ರಯೋಲೋಕಾವಿದ್ರವಂತಿಭಯಾರ್ದಿ ತಾಃ । ತಂಕಥಂರಾಕ್ಷಸೇಂದ್ರೋಸೌಸ್ವಯಮೇವಾಭಿಗಚ್ಛತಿ ॥೨೦॥ಯೋವಿಧಾತಾಚಧಾತಾಚಸುಕೃತೇದುಷ್ಕೃತೇತಥಾ ।ತ್ರೈ ಲೋಕ್ಯಂವಿಜಿತಂಯೇನತಂಕಥನ್ನುವಿಜೇಷ್ಯತಿ ॥೨೧॥ಅಯಂತುಕಿಂನುಕೃತ್ವೈವಂವಿಧಾನಂಸಂವಿಧಾಸ್ಯತಿ ॥ ಕೌತೂಹಲ

---

ಮೃತ್ಯುನಾ–ಮೃತ್ಯುವಿ ದುಖವನ್ನುಂಟುಮಾಡುತ್ತಿರುವ ಯಮನನ್ನು. ಮೃತ್ಯುನಾ–ಮೃತ್ಯುವಿ ಕುರಿತು,ಪ್ರಸ್ಥಿತಃ–ಹೊರಟುವನಾಗಿ,ಪ್ರಾಣಿಸಂಕ್ಲೇಶಕರ್ತಾರಂ–ಜೀವರಾಶಿಗಳಿಗೆ ದುಖವನ್ನುಂಟುಮಾಡುತ್ತಿರುವ ಯಮನನ್ನು. ಮೃತ್ಯುನಾ–ಮೃತ್ಯುವಿ ನೊಂದಿಗೆ, ಯೋಜಇಷ್ಯಾಮಿ–ಸೇರಿಸುವೆನು ॥೧೫॥ ಏವಂ–ಈ ಪರಿಯಾಗಿ, ದಶಗ್ರೀವಃ–ರಾವಣನು, ಉಕ್ತ್ವಾ–ಹೇಳಿ, ತಂಮುನಿಂ–ಆನಾರದಮುನಿಯನ್ನು ಕುರಿತು, ಅಭಿವಾದ್ಯಚ–ನಮಸ್ಕಾರವನ್ನು ಮಾಡಿ, ದಕ್ಷಿಣಾಮಾಶಾಂ–ದಕ್ಷಿಣದಿಕ್ಕನ್ನು ಕುರಿತು, ಪ್ರಹೃಷ್ಟಃ–ಸಂತುಷ್ಟರಾದ, ಸಚಿವೈಸ್ಸಹ–ಮಂತ್ರಿಗ ಳೊಡನೆ, ಪ್ರಯಯೌ–ಹೊರಟನು ॥೧೬॥ವಿಪ್ರೇಂದ್ರಃ–ಬ್ರಾಹ್ಮಣೋತ್ತಮನಾದ, ಮಹಾತೇಜಾಃ–ಕಡುತೇಜಸ್ವಿಯಾದ, ನಾರದಸ್ತು–ನಾರದಮುನಿಯಾದರೆ, ಮುಹೂರ್ತಂ–ಮುಹೂರ್ತಕಾಲವು, ಧ್ಯಾನಂ–ಧ್ಯಾನವನ್ನು, ಆಸ್ಥಿತಃ–ಹೊಂದಿದವನಾಗಿ, ವಿಧೂಮಃ–ಹೊಗೆಯಿಲ್ಲದಿರುವ, ಪಾವಕಇವ–ಅಗ್ನಿಯಂತೆ– ಚಿಂತಯಾಮಾಸ–ಯೋಚಿಸಿದನು ॥೧೭॥ ಆಯುಷಿ–ಆಯುಸ್ಸು, ಕ್ಷೀಣೇಸತಿ–ಕಳೆದದ್ದಾಗ ತೀರಲಿಕಾಗಿ, ಧರ್ಮೇಚ–ಧರ್ಮವೂಕೂಡಾ–ಕ್ಷೀಣೇಸತಿ– ನಶಿಸಿಹೋದು ದಾದ್ದಾಗತೀರಲಾಗಿ, ಯೇನ–ಯಾವಯಮನಿಂದ, ಸಚರಾಚರಾಃ– ಜಂಗಮಾ ಜಂಗಮ ರೂಪವಾದ, ಸೇಂದ್ರಾಃ–ಇಂದ್ರಸಹಿತವಾದ, ತ್ರಯೋಲೋಕಾಃ–ಮೂ ರುಲೋಕಗಳು, ಕ್ಲಿಶ್ಯಂತೆ–ಕ್ಲೇಶಿಸಲ್ಪಡುತ್ತವೋ, ಸಕಾಲಃ–ಆ ಯಮನು, ಕಥಂಹಿಂಸ್ಯತೆ–ಹ್ಯಾಗೆ ಹಿಂಸಿಸಲ್ಪಡುವನೂ ॥ ೧೮॥ ಕಿಂಚ–ಇಷ್ಟುಮಾತ್ರವೆ ಅ ಲ್ಲದತ್ತೇ ಕೊಡಲ್ಪಟ್ಟದ್ದರಲ್ಲಿಯೂ, ಕೃತೆ–ಮಾಡಲ್ಪಟ್ಟದ್ದರಲ್ಲಿಯೂ, ಯಃ–ಯಾವಯಮನು, ದ್ವಿತೀಯಃ–ಎರಡನೆ ಯವನಾದ, ಪಾವಕಇವ–ಅಗ್ನಿಯಂ ತೆ, ಸಾಕ್ಷೀ–ಸಾಕ್ಷಿಯಾಗುವನೋ, ಮಹಾತ್ಮನಃ–ಮಹಾನುಭಾವನಾದ ಯಮನ, ಯಸ್ಮಾತ್–ಯಾವ ವಿಶ್ವಾಸದಿಂದ, ಲೋಕಾಃ–ಜನರು, ಲಬ್ಧಸಂಜ್ಞಾಃ– ಹೊಂದಲ್ಪಟ್ಟ ಸಂಜ್ಞೆಯುಳ್ಳವರಾಗಿ, ವಿಚೇಷ್ಟಂತೆ–ಕದಲಾಡುತ್ತಾರೊ, ಯಸ್ಯ–ಯಾವಯಮನ, ಭಯಾರ್ದಿತಾಃ–ಭಯದಿಂದ ಪೀಡಿಸಲ್ಪಟ್ಟ, ತ್ರಯೋ ಲೋಕಾಃ–ಮೂರುಲೋಕಗಳು, ನಿತ್ಯಂ–ಯಾವಾಗಲೂ, ವಿದ್ರವಂತಿಹಿ–ಓಡಿಹೋಗುತ್ತವೋ, ತಂ–ಅಂಥಾಯಮನನ್ನು, ಅಸೌರಾಕ್ಷಸೇಂದ್ರಃ–ಈರಾ ಕ್ಷಸಾಧಿಪತಿಯು, ಸ್ವಯಮೇವ–ತಾನೆ, ಕಥಂ–ಹ್ಯಾಗೆ–ಅಭಿಗಚ್ಛತಿ–ಯದಿರಿಗೊಳ್ಳುತ್ತಾನೆ ॥ ೨೦ ॥ ಯಃ–ಯಾವನು, ಸುಕೃತೆ–ಪುಣ್ಯವಿಷಯವಾಗಿ ವಿಧಾತಾ–ವಿಶೇಷವಾಗಿ ಕರ್ತನಾದವನೊ, ತಥಾ–ಹಾಗೆ, ದುಷ್ಕೃತೆ–ಪಾಪದಲ್ಲಿ, ಧಾತಾಚ–ಕರ್ತನಾದವನೊ, ತ್ರೈಲೋಕ್ಯಂ–ಲೋಕತ್ರಯವು, ಯೇನ– ಯಾವಯಮನಿಂದ, ವಿಜಿತಂ–ಜಯಿಸಲ್ಪಟ್ಟದ್ದಾಗಿಯೊ, ತಂ–ಅಂಥಾಯಮನನ್ನು, ಕಥಂನು–ಹ್ಯಾಗೆತಾನೆ, ವಿಜೇಷ್ಯತಿ–ಜಯಿಸುವನು ॥ ೨೧ ॥ ಅಯಂ ತು–ಇವನಾದರೆ, ಕಿಂನುವಿಧಾನಂಕೃತ್ವಾ–ಯೆನು ಸಾಧನವನ್ನು ಸಂಪಾದಿಸಿ, (ಕಾಲಜಯಂ ಯಮನಜಯವನ್ನು) ಸಂವಿಧಾಸ್ಯತಿ–ಮಾಡುವನು (ಇತ್ಯೇವಂ–

---

ಗೈದಿರ್ಧೇನೆ, ಆದ ಪ್ರಯುಕ್ತ ನಾನು ಹೀಗೆಯೇ ಹೊರಟು ಪ್ರಾಣಗಳಿಗೆ ಕ್ಲೇಶವನ್ನುಂಟುಮಾಡುತ್ತಿರುವ,ಆಯಮನ ಪುರವಂ ಕುರಿತು ತೆರಳಿ ಅವನನ್ನು ಮೃತ್ಯುವಿನೊಂದಿಗೆ ಶೇರಿಸುವೆನೆಂದು, ದಶಗ್ರೀವನು ನಾರದ ಮುನಿಗೆ ಪೇಳಿ, ಕ ಡುಸಂತುಷ್ಟನಾಗಿ ಮಂತ್ರಿಗಳಿಂದೊಡಗೂಡಿ, ದಕ್ಷಿಣದಿಕ್ಕಿನಲಿ ಹೊರಟು ಹೋಗಲೂ, ಹೊಗೆ ಇಲ್ಲದಿರುವ ಅಗ್ನಿ ಯಂತೆ ಕಂಗೊಳಿಸುತಿರುವ ಆ ನಾರದಋಷಿಯು ಸ್ವಲ್ಪ ಹೊತ್ತು ಧ್ಯಾನನಿಷ್ಠನಾಗಿ, ಈಪರಿಯಾಗಿ ಯೋಚಿಸಿದನು, ಅದೆಂತೆಂದರೆ; ॥೧೭॥ ಆಯುಸ್ಸಾದರೂ, ಅಥವಾ ಧರ್ಮವಾದರೂ ಯಾವದಾದರೂ ಕ್ಷೀಣವಾದರೆ ಯಾವ ಯಮ ನು ಚರಾಚರಾತ್ಮಕವಾದ ಮತ್ತೂ ಇಂದ್ರಸಹಿತವಾದ ಲೋಕಗಳನ್ನೆಲ್ಲಾ ಕ್ಲೇಶ ಪಡಿಸುವನೊ, ಅಂಥಾವನು ತಾ ನು ಹ್ಯಾಗೆ ಹಿಂಸಿಸಲ್ಪಡುವನು ॥೧೮॥ ದಾನಮಾಡುವಾಗಲೂ, ತಪಸ್ಸು ಮಾಡುವಾಗಲೂ, ಸಾಕ್ಷಾದಗ್ನಿಯಂತೇ ಯಾವನು ಸಾಕ್ಷಿಯಾಗಿರುವನೋ, ಮತ್ತು ಯಾವ ಮಹಾತ್ಮನದಯೆಯಿಂದ,ಜನರೆಲ್ಲರು ಲಬ್ಧ ಸಂಜ್ಞರಾಗಿರುವರೋ, ಯಾವ ಯಮನ ಭಯದಿಂದಾ, ಲೋಕತ್ರಯವೂ ಕೂಡಾ, ಗಡಗಡನೇ ನಡುಗುತ ವೋಡಿಹೋಗುವದೋ, ಅಂಥಾ ಯಮನನ್ನು ಕುರಿತು, ಯಿ ರಾಕ್ಷಸೇಂದ್ರನಾದ ರಾವಣನು, ಸ್ವಯಮೇವಪೋಗಿ ಹ್ಯಾಗೆಹಿಂಸಿಸುವನು, ॥೨೦॥ ಯಾವ ಯಮನು ಪುಣ್ಯಾಪಾಪಗಳ ವಿಷಯದಲ್ಲಿ, ವಿಶೇಷಕರ್ತನಾಗಿಯೂ, ಸಾಧಾರಣಕರ್ತನಾಗಿಯೂ, ಯಿರುವನೋ, ಮ ತ್ತು, ಯಾಲೋಕತ್ರಯವನ್ನು, ಯಾವನು ಜಯಿಸಿಯಿರುವನೋ, ಅಂಥಾ ಯಮನನ್ನು, ಇವನು ಹ್ಯಾಗೆಜಯಿಸುವ ನು ॥೨೧॥ ಈ ರಾವಣನಾದರೆ ಏನಾದರೂ ಒಂದಾನೊಂದುಪಾಯವಂ ಗೈದು ಯಮನನ್ನು ಜಯಿಸುವನು ಆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಮಾವಿಷ್ಟಃಯಾಸ್ಯಾಮಿಯಮಸಾದನಮ್ ‖ವಿಮರ್ದಂದ್ರಷ್ಟುಮನಯೋಃಯಮರಾವಣಯೋಸ್ಸ್ವಯಮ್ ‖೩೦‖

—···✻ಇತಿ ಶ್ರೀಮದುತ್ತರ ರಾಮಾಯಣೇ ವಿಂಶಸ್ಸರ್ಗಃ.✻···—

ಏವಂಸಂಚಿಂತ್ಯವಿಪ್ರೇಂದ್ರೋಜಗಾಮಲಘುವಿಕ್ರಮಃ । ಆಖ್ಯಾತುಂತದ್ಯಥಾವೃತ್ತಂಯಮಸ್ಯಸದನಂಪ್ರತಿ ‖೧‖ ಅಪಶ್ಯತ್ತಂಯಮಂತತ್ರದೇವಮಗ್ನಿಪುರಸ್ಕೃತಮ್ । ವಿಧಾನಮುಪತಿಷ್ಠಂತಂಪ್ರಾಣಿನೋಯಸ್ಯಯಾದೃಶಂ ‖೨‖ ಸತಂದೃಷ್ಟ್ವಾಯಮಃಪ್ರಾಪ್ತಂದೇವರ್ಷಿಂನಾರದಂತದಾ । ಅಬ್ರವೀತ್ಸುಖಮಾಸೀನಂಅರ್ಘ್ಯಮಾವೇದ್ಯಧರ್ಮತಃ ‖೩‖ ಕಚ್ಚಿತ್ಕ್ಷೇಮಂನುದೇವರ್ಷೇಕಚ್ಚಿದ್ಧರ್ಮೋನನಶ್ಯತಿ । ಕಿಮಾಗಮನಕೃತ್ಯಂತೇದೇವಗಂಧರ್ವಸೇವಿತ ‖೪‖ ಅಥಾಬ್ರವೀದ್ಧರ್ಮರಾಜಂನಾರದೋಭಗವಾನೃಷಿಃ । ಶ್ರೂಯತಾಮಭಿಧಾಸ್ಯಾಮಿವಿಧಾನಂಚವಿಧೀಯತಾಂ ‖೫‖ ಏಷನಾಮ್ನಾದಶಗ್ರೀವಃಪಿತೃರಾಜನಿಶಾಚರಃ । ಉಪಯಾತಿವಶಂನೇತುಂವಿಕ್ರಮೈಸ್ತ್ವಾಂಸುದುರ್ಜಯಮ್ ‖ ೬ ‖ ಏತೇನಕಾರಣೇನಾಹಂತ್ವರಿತೋ

---

ಹೀಗೆಂದು) ಕೌತೂಹಲಸಮಾವಿಷ್ಟಃ-ಕುತೂಹಲದಿಂದೊಡಗೂಡಿದವನಾಗಿ, ಅನಯೋರ್ಯಮರಾವಣಯೋಃ-ಈ ಯಮರಾವಣರ, ವಿಮರ್ದಂ-ಕಾಳಗವನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಸ್ವಯಂ-ನಾನು, ಯಮಸಾದನಂ-ಯಮನಮನೆಯನ್ನು ಕುರಿತು, ಯಾಸ್ಯಾಮಿ-ಹೋಗುವೆನು ‖ ೩೦ ‖

—···ಇತಿಶ್ರೀಮದುತ್ತರ ರಾಮಾಯಣೇ ವಿಂಶಸ್ಸರ್ಗಃ···—

ಟೀ ‖ ಲಘುವಿಕ್ರಮಃ-ಶೀಘ್ರಗಮನವುಳ್ಳ, ವಿಪ್ರೇಂದ್ರಃ-ಬ್ರಾಹ್ಮಣೋತ್ತಮನಾದ ನಾರದಮುನಿಯು, ಏವಂಸಂಚಿಂತ್ಯ-ಈಪರಿ ಯೋಚಿಸಿ, ತದ್ಯಥಾವೃತ್ತಂ-ಆ ವೃತ್ತಾಂತವನ್ನೆಲ್ಲ, ಆಖ್ಯಾತುಂ-ಹೇಳುವದಕ್ಕೋಸ್ಕರ, ಯಮಸ್ಯ-ಯಮನ, ಸದನಂಪ್ರತಿ-ಮನೆಯನ್ನು ಕುರಿತು, ಜಗಾಮ-ತೆರಳಿದನು ‖ ೧ ‖ ತತ್ರ-ಆಯ ಮನಮನೆಯಲ್ಲಿ, ಸಃ-ಆ ನಾರದನು, ಯಸ್ಯಪ್ರಾಣಿನಃ-ಯಾವ ಪ್ರಾಣಿಗೆ, ಯಾದೃಶಂವಿಧಾನಂ-ನಿಗ್ರಹಾನುಗ್ರಹರೂಪವಾದ ಯಾವ ಕಾರ್ಯವೋ, (ತತ್-ಅಂಥಾ ಕೃತ್ಯವನ್ನು ಮಾಡುತ್ತಾ) ಉಪತಿಷ್ಠಂತಂ-ಸಮೀಪದಲ್ಲಿ ಕುಳಿತಿರುವ, ಅಗ್ನಿಪುರಸ್ಕೃತಂ-ಅಗ್ನಿಯೇ ಸಾಕ್ಷಿಭೂತವಾಗಿ ಇಟ್ಟುಕೊಂಡಿರುವ, ಯಮಂದೇವಂ-ಯಮದೇವನನ್ನು, ಅಪಶ್ಯತ್-ನೋಡಿದನು ‖ ೨ ‖ ಸಃಯಮಃ-ಆ ಯಮನು, ಪ್ರಾಪ್ತಂ-ಬಂದಿರುವ, ದೇವರ್ಷಿಂ-ದೇವರ್ಷಿಯಾದ, ಸುಖಮಾಸೀನಂ-ಸುಖವಾಗಿ ಕುಳಿತುಕೊಂಡಿರುವ, ತಂನಾರದಂ-ಆ ನಾರದನನ್ನು, ದೃಷ್ಟ್ವಾ-ಕಂಡು, ತದಾ-ಆ ಕಾಲದಲ್ಲಿ, ಅರ್ಘ್ಯಂ-ಅರ್ಘ್ಯವನ್ನು, ಧರ್ಮತಃ-ವಿಧ್ಯುಕ್ತವಾಗಿ, ಆವೇದ್ಯ-ನಿವೇದಿಸಿ, ಅಬ್ರವೀತ್-ಹೇಳಿದನು ‖ ೩ ‖ಹೆ ದೇವರ್ಷೇ-ಎಲೈ ದೇವಋಷಿಯೆ, ಕಚ್ಚಿತ್ ಕ್ಷೇಮಂ-ಕುಶಲವೆ ಏನು, ಧರ್ಮಃ-ಧರ್ಮವು, ನನಶ್ಯತಿಕಚ್ಚಿತ್-ನಾಶವಾಗದಿರುವದೆ ಯೇನು, ಹೆದೇವ ಗಂಧರ್ವಸೇವಿತ-ಎಲೈ ದೇವತೆಗಳಿಂದಲೂ ಗಂಧರ್ವರಿಂದಲೂ ಸೇವಿಸಲ್ಪಡುತಿರುವನೆ, ತೇ-ನಿನ್ನ, ಆಗಮನಕೃತ್ಯಂ-ಬಂದಕಾರ್ಯವು, ಕಿಂವಾ-ಯೆನೋ‖ ೪ ‖ಭಗವಾನ್-ಪೂಜ್ಯನಾದ, ನಾರದಃಋಷಿಃ-ನಾರದಋಷಿಯು, ಅಥ-ಬಳಿಕ, ಶ್ರೂಯತಾಂ-ಕೇಳಲ್ಪಡಲಿ, ಅಭಿಧಾಸ್ಯಾಮಿ-ಹೇಳುವೆನು, ವಿಧಾನಂಚ-ನಾನು ಹೇಳುವದಕ್ಕೆ ಪ್ರತಿಕ್ರಿಯೆಯೂ ಕೂಡಾ, ವಿಧೀಯತಾಂ-ಮಾಡಲ್ಪಡಲಿ, ಇತಿ-ಇಂತೆಂದು, ಧರ್ಮರಾಜಂ-ಯಮನನ್ನು ಕುರಿತು, ಅಬ್ರವೀತ್-ನುಡಿದನು ‖ ೫ ‖ ಹೆಪಿತೃರಾಜ-ಎಲೈ ಪಿತೃಪತಿಯೆ, ನಾಮ್ನಾ-ಹೆಸರಿನಿಂದಾ, ದಶಗ್ರೀವಃ-ದಶಗ್ರೀವನೆಂಬ, ಏಷನಿಶಾಚರಃ-ಈಗ ನಾನು ಕಂಡುಬಂದ ರಾಕ್ಷಸನು, ಸುದುರ್ಜಯಂ-ಜಯಿಸುವದಕ್ಕೆ ಅಶಕ್ಯನಾದ, ತ್ವಾಂ-ನಿನ್ನನ್ನು, ವಿಕ್ರಮೈಃ-ಪರಾಕ್ರಮಗಳಿಂದಾ, ವಶಂ-ಸ್ವಾಧೀನವನ್ನು, ನೇತುಂ-ಹೊಂದಿಸುವದಕ್ಕೋಸ್ಕರ, ಉಪಯಾತಿ-ಬರುವನು ‖ ೬ ‖ ಹೆಪ್ರಭೋ-ಯಲೈ ಪ್ರಭುವೆ, ಏತೇನಕಾರಣೇನ-ಈ ಕಾರಣದಿಂದ, ಅಹಂ-ನಾನು, ತ್ವರಿತಃ-ವೇಗಗಮನ ವುಳ್ಳವನಾಗಿ, ಆಗತಃ-ಬಂದವನು, ಅಸ್ಮಿ-ಆದೆನು, ದಂಡಪ್ರ

---

ದಕಾರಣ ಆ ರಾವಣಯಮರ ರಣವನ್ನೋಡುವದಕ್ಕೋಸ್ಕರ ಯನಗೆ ಬಹಳ ಕುತೂಹಲ ವಿರೋಣದರಿಂದ ಆ ಯಮನಮಂದಿರವಂ ಕುರಿತು ಜಾಗ್ರತೆಯಾಗಿ ಪೋಗುವೆನು ‖ ···ಉತ್ತರರಾಮಾಯಣದಲ್ಲಿ ೨೦ ನೇಸರ್ಗಂಮುಗಿದುದು···

ಶೀಘ್ರಗಾಮಿಯಾದ ಆ ಬ್ರಾಹ್ಮಣೋತ್ತಮನು ಈಪರಿಯಾಗಿ ಯೋಚಿಸಿ, ಆ ವೃತ್ತಾಂತವನ್ನರುಹುವದಕ್ಕೆ ಯಮನ ಮನೆಯಂ ಕುರಿತು ತೆರಳಿದನು ‖೧‖ ಆಲೋಕದೋಳ್ ಅಗ್ನಿ ಸಾಕ್ಷಿಕವಾಗಿ ಪ್ರಾಣಿಗಳ ಪುಣ್ಯ ಪಾಪ ವಿಚಾರಣೆಯಂಗೈಯ್ಯುತ್ತಿರುವ ಆ ಯಮನನ್ನು ಕಂಡನು. ‖೨‖ ಆ ಸಮಯದಲ್ಲಿ ಸಂಪ್ರಾಪ್ತನಾದ ನಾರದ ಮುನಿಯಂ ಕಂಡು, ವಿಧ್ಯುಕ್ತವಾಗಿ ಅರ್ಘ್ಯ ಪಾದ್ಯಾದಿಗಳನ್ನಿತ್ತು ಸುಖವಾಗಿ ಕುಳ್ಳಿರಿಸಿ ಕೊಂಡು ಇಂತೆಂದು ಕೇಳಿದನು ‖೩‖ ಎಲೈ ದೇವರ್ಷಿಯೇ! ಕುಶಲವೇ ಏನು ? ಧರ್ಮವು ನಾಶವಾಗದಿರುವದೇ, ದೇವತೆಗಳಿಂದಲೂ ಗಂಧರ್ವರಿಂದಲೂ ಸೇವಿಸಲ್ಪಡುತಿರುವನೇ ! ತಮ್ಮಾಗಮನ ಕಾರ್ಯವೇನಿರುವದು ? ಎಂದು ಯಮನು ಕೇಳಲು, ಆ ಮಹಾತ್ಮನಾದ ನಾರದ ಮುನಿಯು ಧರ್ಮ ನಿಯಾಮಕನಂ ಕುರಿತಿಂತೆಂದನು. ಎಲೈ ಯಮನೇ ಕೇಳು ! ಆ ವಿಧಾನವನ್ನೆಲ್ಲಾ ತಿಳಿಯ ಪಡಿಸುವೆನು. ಆನಂತರ್ಯ ಕಾರ್ಯವಂಗೈಯ್ಯು. ಏನಂದರೆ, ಎಲೈ ಪಿತೃರಾಜನೇ ! ದಶಕಂಠನೆಂಬವನು ಜಯಿಸಲಸಾಧ್ಯನಾದ ನಿನ್ನನ್ನು ತನ್ನ ಪರಾಕ್ರಮದಿಂದ ನಿನ್ನಂ ಸ್ವಾಧೀನಗೊಳಿಸಿಕೊಳ್ಳುವದಕ್ಕೋಸ್ಕರ ಈಗಲೇ ಬರುವನು. ಈ ಕಾರ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ಮಾತ್ಪ್ರಾಗತಃಪ್ರಭೋ । ದಂಡಪ್ರಹರಣಸ್ಯಾದ್ಯತವಕಿಂನುಕರಿಷ್ಯತಿ ॥೭॥ ಏತಸ್ಮಿನ್ನಂತರೇದೂರಾ ದಂಶುಮಂತಮಿವೋದಿತಮ್ । ದದರ್ಶದಿವ್ಯಮಾಯಾಂತಂವಿಮಾನಂತಸ್ಯರಕ್ಷಸಃ ॥೮॥ ತಂದೇಶಂಪ್ರಭಯಾತಸ್ಯಪುಷ್ಪಕಸ್ಯಮಹಾಬಲಃ। ಕೃತ್ವಾವಿತಿಮಿರಂಸರ್ವಂಸಮೀಪಂಸಮ್ಯವರ್ತತ ॥೯॥ ಸೋಪಶ್ಯತ್ಸುಮಹಾಬಾಹುರ್ದಶಗ್ರೀವಸ್ತತಸ್ತತಃ। ಪ್ರಾಣಿನಃಸುಕೃತಂಕರ್ಮಭುಂಜಾನಾಂಶ್ಚೈವದುಷ್ಕೃತಂ ॥೧೦॥ ಯಮಸ್ಯಪುರುಷೈರೌದ್ರೈರ್ಘೋರರೂಪೈರ್ಭಯಾನಕೈಃ । ದದರ್ಶವಧ್ಯಮಾನಾಂಶ್ಚ ಕ್ಲಿಶ್ಯಮಾನಾಂಶ್ಚ ದೇಹಿನಃ॥೧೧॥ ಕ್ರೋಶತಶ್ಚ ಮಹಾನಾದಂತೀವ್ರನಿಷ್ಟನತತ್ಪರಾನ್। ಕ್ರಿಮಿಭಿರ್ಭಕ್ಷ್ಯಮಾಣಾಂಶ್ಚ ಸಾರಮೇಯೈಶ್ಚ ದೇಹಿನಃ ॥೧೨॥ ಶ್ರೋತ್ರತ್ರಾಸಕರೀರ್ವಾಚೋವದತಶ್ಚ ಭಯಾವಹಾಃ। ತಾರ್ಯಮಾಣಾನ್ವೈತರಣೀಂಬಹುಶಶ್ಶೋಣಿತೋದಕಾಮ್ ॥೧೩॥ ವಾಲುಕಾಯಾಂಚತಪ್ತಾಯಾಂತಪ್ಯಮಾನಾನ್ಮುಹುರ್ಮುಹುಃ । ಅಸಿಪತ್ರವನೇಚೈವಭಿದ್ಯಮಾನಾನನೇಕಶಃ ॥೧೪॥ ರೌರವೇಕ್ಷಾರನದ್ಯಾಂಚಕ್ಷುರಧಾರೆತಥೈವಚ । ಪಾನೀಯಂಯಾಚಮಾನಾಂಶ್ಚ ತೃಷಿತಾನ್

---

ಹರಣಸ್ಯ-ದಂಡವೆ ಆಯುಧವಾಗಿ ಉಳ್ಳ, ತವ-ನಿನಗೆ, ಅದ್ಯ-ಈಗ, ಕಿಂನುಕರಿಷ್ಯತಿ-ಯೆನುಮಾಡುವನೊ॥೭॥ಎತಸ್ಮಿನ್ನಂತರೆ-ಇಷ್ಟರವಳಗಾಗಿ, ಆಯಾಂತಂ-ಬರುತ್ತಿರುವ, ಉದಿತಂ-ಪುಟ್ಟಿದ, ಅಂಶುಮಂತಮಿವಸ್ಥಿತಂ-ಸೂರ್ಯನಂತಿರುವ, ದಿವ್ಯಂ-ದೇವತಾಸಂಮಂಧವಾದ, ತಸ್ಯರಕ್ಷಸಃ-ಆ ರಾಕ್ಷಸನ, ವಿಮಾನಂ-ವಿಮಾನವನ್ನು, ದೂರಾತ್-ದೂರದಿಂದ, ದದರ್ಶ-ನೋಡಿದನು॥೮॥ಮಹಾಬಲಃ-ಮಹಾ ಬಲಿಷ್ಠನಾದ ರಾವಣನು, ತಸ್ಯಪುಷ್ಪಕಸ್ಯ-ಆ ಪುಷ್ಪಕದ, ಪ್ರಭಯಾ-ಕಾಂತಿಯಿಂದ,ಸರ್ವಂ-ಸಮಸ್ತವಾದ, ತಂದೇಶಂ-ಆ ದೇಶವನ್ನು,ವಿತಿಮಿರಂ-ಬೆಳಕಾಗಿ, ಕೃತ್ವಾ-ಮಾಡಿ, ಸಮೀಪಂ-ಸಮೀಪದಲ್ಲಿ, ಸಮವರ್ತತ-ಬಂದನು ॥೯॥ ಸುಮಹಾಬಾಹುಃ-ಮಹಾ ಭುಜಗಳುಳ್ಳ, ಸದಶಗ್ರೀವಃ-ಆ ದಶಗ್ರೀವನು, ತತಸ್ತತಃ-ಅಲ್ಲಲ್ಲಿ, ಸುಕೃತಂ-ಪುಣ್ಯವನ್ನು, ದುಷ್ಕೃತಂಚ-ಪಾಪವನ್ನು ಕೂಡೆ, ಭುಂಜಾನಾನ್-ಅನುಭವಿಸುತ್ತಿರುವ, ಪ್ರಾಣಿನಃ-ಜಂತುಗಳನ್ನು, ಅಪಶ್ಯತ್-ಕಂಡನು ॥೧೦॥ ರೌದ್ರೈಃ-ಕ್ರೂರರಾದ, ಘೋರರೂಪೈಃ-ಭಯಂಕರವಾದ ರೂಪವುಳ್ಳವರಾದ ಕಾರಣ, ಭಯಾನಕೈಃ-ಭಯಂಕರರಾದ, ಯಮಸ್ಯಪುರುಷೈಃ-ಯಮದೂತರಿಂದ, ಕ್ಲಿಶ್ಯಮಾನಾನ್-ಕ್ಲೇಶಪಡುತ್ತಿರುವ, ವಧ್ಯಮಾನಾನ್-ಕೊಲ್ಲಲ್ಪಡುತ್ತಿರುವ, ದೇಹಿನಶ್ಚ-ದೇಹಿಗಳನ್ನು, ಮಹಾನಾದಂ-ದೊಡ್ಡಧ್ವನಿಯುಳ್ಳಂತೆ, ಕ್ರೋಶತಶ್ಚ-ಅಳುತ್ತಿರುವವರಂನು, ತೀವ್ರನಿಷ್ಟನತತ್ಪರಾನ್-ಕ್ರೂರಶಬ್ದದಲ್ಲಿ ಆಸಕ್ತರಾದವರನ್ನು, ಕ್ರಿಮಿಭಿಃ-ಹುಳುಗಳಿಂದಲೂ, ದಾರುಣೈಃ-ಕ್ರೂರವಾದ, ಸಾರಮೇಯೈಶ್ಚ - ನಾಯಿಗಳಿಂದಲೂನು, ಭಕ್ಷ್ಯಮಾಣಾಂಶ್ಚ -ಭಕ್ಷಿಸಲ್ಪಡುತ್ತಿರುವವರನ್ನು, ದದರ್ಶ-ಕಂಡನು ॥೧೨॥ ಭಯಾವಹಾಃ-ಭಯಂಕರವಾಗಿರುವಕಾರಣ, ಶ್ರೋತ್ರತ್ರಾಸಕರೀಃ-ಕಿವಿಗಳಿಗೆ ಭಯವನ್ನುಂಟುಮಾಡುತ್ತಿರುವ, ವಾಚಃ-ವಾಕ್ಯಗಳನ್ನು, ವದತಶ್ಚ - ಹೇಳುತ್ತಿರುವದನ್ನು, ಬಹುಶಃ-ಬಹುಕರವಾಗಿ, ಶೋಣಿತೋದಕಾಂ-ರಕ್ತವೇ ಉದಕವಾಗುಳ್ಳ, ವೈತರಣೀಂ-ವೈತರಣೀನದಿಯನ್ನು, ತಾರ್ಯಮಾಣಾನ್- ದಾಂಟುತ್ತಿರುವವರನ್ನು ॥೧೩॥ ತಪ್ತಾಯಾಂ-ಬೆಂದಿರುವ, ವಾಲುಕಾಯಾಂ- ಮೊರಳನಲ್ಲಿ,ಮುಹುರ್ಮುಹುಃ - ಬಾರಿಬಾರಿಗೂ, ತಪ್ಯಮಾನಾನ್-ತಪಿಸಲ್ಪಡುತ್ತಿರುವವರನ್ನು, ಅಸಿಪತ್ರವನೇಚ-ಅಸಿಪತ್ರವೆಂಬ ವನದಲ್ಲಿಯೂ ಕೂಡೆ, ಅನೇಕಶಃ -ಬಹಳವಾಗಿ, ಭಿದ್ಯಮಾನಾನ್ - ಭೇದಿಸಲ್ಪಡುತ್ತಿರುವವರನ್ನು ॥ ೧೪ ॥ ರೌರವೇ-ರವರವವೆಂಬ ನರಕದಲ್ಲಿಯು, ಕ್ಷಾರನದ್ಯಾಂಚ-ಉಪ್ಪಿನನದಿಯಲ್ಲಿಯು, ತಥೈವ-ಹಾಗೆಯೆ, ಕ್ಷುರಧಾರೇ-ಕ್ಷುರದ ಹದದಂತೆ ಹರದವಾಗಿರುವ ನರಕಭೇದದಲ್ಲಿಯೂ, ತೃಷಿತಾನ್-ಬಾಯಾರಿಕೆ ಯುಳ್ಳವರಾದಕಾರಣ, ಪಾನೀಯ್ಯಂ- ಉದುಕವನ್ನು, ಯಾಚಮಾನಾಂಶ್ಚ - ಬೇಡುತ್ತಿರುವವರನ್ನು, ಕ್ಷುಧಿತಾನಪಿ-ಹಸು ಇರುವವರನ್ನು ॥೧೫॥ ಕ

---

ಣದಿಂದ ನಾನಿಲ್ಲಿಗೆ ಬಂದೆನು. ದಂಡಪಾಣಿಯಾದ ನಿನ್ನನ್ನೇನು ಮಾವನೋ ಎಂದು ಪೇಳುತಿದ್ದನು. ॥೭॥ ಇಷ್ಟರಲ್ಲಿ ಆಗ ತಾನೇ ಹುಟ್ಟಿದ ಸೂರ್ಯನಂತೆ ದೂರದಲ್ಲಿ ಬರುತಿರುವ ಆ ರಾಕ್ಷಸ ವಿಮಾನವಂ ಕಂಡನು ॥೮॥ ಮಹಾ ಭುಜ ಬಲವುಳ್ಳ, ಆ ರಾವಣನು ಗಾಢಾಂಧಕಾರವಾಗಿರ್ಪ ಆ ಪ್ರದೇಶವನ್ನೆಲ್ಲಾ ಆ ಪುಷ್ಪಕ ವಿಮಾನದ ಪ್ರಭೆಯಿಂದ ಬೆಳಕುಳ್ಳದ್ದನ್ನಾಗಿ ಮಾಡಿ ಕೊಂಡು ಸಮೀಪಕ್ಕೆ ಬಂದನು ॥೯॥ ಆ ದಶಗ್ರೀವನಾದರೆ, ಪಾಪ ಪುಣ್ಯಗಳ ಫಲಗಳನ್ನನುಭವಿಸುವ ಪ್ರಾಣಿಗಳನ್ನು ಅಲ್ಲಲ್ಲಿ ನೋಡುತಿದ್ದನು ॥೧೦॥ ಘೋರಾಕಾರಗಳುಳ್ಳ ಮತ್ತು ಭಯಂಕರರಾದ ಯಮ ಕಿಂಕರರಿಂದ ಪರಿಪರಿಯಾಗಿ ಹೊಡೆಯಲ್ಪಡುತಿರುವರಾದಕಾರಣ ಬಹಳ ಬಳಲಿದವರಾದ ದೇಹಿಗಳನ್ನೂ ಮತ್ತೂ ಹುಳುಗಳಿಂದಲೂ ದಾರುಣವಾದ ನಾಯಿಗಳಿಂದಲೂ ಕಚ್ಚಲ್ಪಟ್ಟು ಕ್ರೂರವಾದ ಘೋಷೆಯಂಗೈಯ್ಯುತಿರುವರಾಗಿ, ಘಟ್ಟಿಯಾಗಿ ಅಳುತಿರುವ ಮತ್ತು ಕೆಲವರನ್ನು, ರಕ್ತವೇ ಉದಕವಾಗುಳ್ಳ ವೈತರಣೀ ಎಂಬ ನದಿಯನ್ನು ತರಿಸುತ್ತಾ, ಕರ್ಣ ಕಠೋರಂಗಳಾದ ವಾಕ್ಯಂಗಳನ್ನು ನುಡಿಯುತ್ತಿರುವ, ಇನ್ನೂ ಕೆಲವರನ್ನೂ ॥೧೩॥ ಕಾಯಿಸಲ್ಪಟ್ಟ ಮರಗಳಲ್ಲಿ ಬಾರಿಬಾರಿಗೂ ತಪಿಸಲ್ಪಡುತ್ತಿರುವರನ್ನು, ಮತ್ತೂ ಅಸಿಪತ್ರವನವೆಂಬ ನರಕದಲ್ಲಿ ತುಂಡು ತುಂಡುಗಳಾಗುವಂತೆ ಕತ್ತರಿಸಲ್ಪಡುತ್ತಿರುವರನ್ನೂ ॥೧೪॥ ರೌರವವೆಂಬ ನರಕದಲ್ಲಿಯೂ, ಮತ್ತೂ ಕ್ಷಾರನದಿಯಲ್ಲಿಯೂ ಕ್ಷುರಧಾರವೆಂಬ ನರಕ ಭೇದದಲ್ಲಿಯೂ ಕೂಡಾ ಬಾಯಾರಿಕೆಯುಳ್ಳವರಾಗಿಯೂ, ಕ್ಷುಧಾತುರರಾಗಿಯೂ ಇರುವರಾಗಿ ನೀರನ್ನು ಬೇಡುತ್ತಿರುವವರನ್ನು ॥೧೫॥ ಮತ್ತು ಹೆಣಗಳಂತಿರುವರನ್ನು ಕೃಶರಾಗಿರುವಂಥಾವರನ್ನು ದೀನರಾದವರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕ್ಷುಧಿತಾನಪಿ ||೧೫||ಶವಭೂತಾನ್ ಕೃಶಾನ್ ದೀನಾನ್ ವಿವರ್ಣಾನ್ ಮುಕ್ತಮೂರ್ಧಜಾನ್ । ಮಲಪಂಕಧರಾನ್ ಶ್ರಾಂತಾನ್ ನಗ್ನಾಂಶ್ಚ ಪರಿಧಾವತಃ। ದದರ್ಶರಾವಣೋಮರ್ತ್ಯಾನ್ ಶತಶೋಥಸಹಸ್ರಶಃ ||೧೬||ಕಾಂಶ್ಚಿದ್ವಿಮಾನಮುಖ್ಯೇಷುಗೀತವಾದಿತ್ರನಿಸ್ವನೈಃ । ಪ್ರಮೋದಮಾನಾನದ್ರಾಕ್ಷೀದ್ರಾವಣಸ್ಸುಕೃತೈಸ್ಸ್ವಕೈಃ ||೧೭|| ಗೋರಸಂಗೋಪ್ರದಾತಾರೋಭೋಜನಂಚಾನ್ನದಾಯಿನಃ। ಗೃಹಾಂಶ್ಚ ಗೃಹದಾತಾರೋಶ್ನುವತೇತತ್ರತತ್ರಹ ||೧೮|| ಸುವರ್ಣಮಣಿಮುಕ್ತಾನಾಂಪ್ರದಾತೄಂಶ್ಚಾಪ್ಯಲಂಕೃತಾನ್। ಧಾರ್ಮಿಕಾನಾಪರಾಂಸ್ತತ್ರದೀಪ್ಯಮಾನಾನ್ ಸ್ವತೇಜಸಾ || ದದರ್ಶಸಮಹಾಬಾಹೂರಾವಣೋರಾಕ್ಷಸಾಧಿಪಃ||ತತಸ್ತಾನ್ ವಧ್ಯಮಾನಾಂಸ್ತು ಕರ್ಮಭಿರ್ದುಷ್ಕೃತೈಸ್ಸ್ವಕೈಃ। ರಾವಣೋಮೋಚಯಾಮಾಸವಿಕ್ರಮೇಣಬಲಾದ್ಬಲೀ ||೨೧||ಪ್ರಾಣಿನೋಮೋಚಿತಾಸ್ತೇನದಶಗ್ರೀವೇಣರಕ್ಷಸಾ । ಸುಖಮಾಪುರ್ಮುಹೂರ್ತಂತೇಹ್ಯತರ್ಕಿತಮಚಿಂತಿತಮ್||೨೨|| ಪ್ರೇತೇಷುಮುಚ್ಯಮಾನೇಷುರಾಕ್ಷಸೇನಬಲೀಯಸಾ । ಪ್ರೇತಗೋಪಾಸ್ಸುಸಂಕ್ರುದ್ಧಾ ರಾಕ್ಷಸೇಂದ್ರಮಭಿದ್ರವನ್||

---

ಶವಭೂತಾನ್– ಹೆಣಗಳಂತಿರುವವರನ್ನು, ಕೃಶಾನ್–ನೊಂದುಕೊಂಡು ಹೋಗಿ ಇರುವವರನ್ನು, ದೀನಾನ್ – ದೈನ್ಯವುಳ್ಳವರನ್ನು, ವಿವರ್ಣಾನ್– ಕಳೆ ಕುಂದಿದವರನ್ನು,ಮುಕ್ತಮೂರ್ಧಜಾನ್–ಬಿಡಲ್ಪಟ್ಟ ಕೇಶಗಳುಳ್ಳವರನ್ನು, ಮಲಪಂಕಧರಾನ್–ಮಲವೆಂಬ ಕೆಸರನ್ನು ಧರಿಸಿದವರನ್ನು, ಶ್ರಾಂತಾನ್ – ಬಳಲಿದವರುನ್ನು, ನಗ್ನಾನ್–ಬಟ್ಟೆ ಇಲ್ಲದವರನ್ನು, ಪರಿಧಾವತಶ್ಚ –ಓಡಿ ಹೋಗುತ್ತಿರುವವರುನ್ನು, ಶತಶಃ–ನೂರಾದ, ಅಥ–ಬಳಿಕ, ಸಹಸ್ರಶಃ–ಅನೇಕರಾದ, ಮರ್ತ್ಯಾನ್–ಮನುಷ್ಯರನ್ನು, ರಾವಣಃ–ರಾವಣನು, ದದರ್ಶ–ಕಂಡನು || ೧೬ || ಸ್ವಕೈಃ–ತಾವು ಮಾಡಿದ, ಸುಕೃತೈಃ–ಪುಣ್ಯಗಳಿಂದ, ವಿಮಾನಮುಖ್ಯೇಷು–ಮುಖ್ಯವಾದ ವಿಮಾನಗಳಲ್ಲಿ, ಗೀತವಾದಿತ್ರನಿಸ್ವನೈಃ–ಗಾನವಾದಿತ್ರಗಳ ಧ್ವನಿಗಳಿಂದಾ, ಪ್ರಮೋದಮಾನಾನ್–ಸಂತೋಷಿಸುತ್ತಿರುವ, ಕಾಂಶ್ಚಿತ್–ಕೆಲವರನ್ನು, ರಾವಣಃ–ರಾವಣನು, ಅದ್ರಾಕ್ಷೀತ್–ಕಂಡನು || ೧೭ || ಗೋಪ್ರದಾತಾರಃ–ಗೋದಾನ ಮಾಡಿದವರು, ಗೋರಸಂ–ಹಸುವಿನ ಮಜ್ಜಿಗೆಯನ್ನು, ಅನ್ನದಾಯಿನಃ–ಅನ್ನದಾತೃಗಳು, ಭೋಜನಂ–ಭೋಜನವನ್ನು, ಗೃಹದಾತಾರಃ–ಮನೆಗಳನ್ನಿತ್ತವರು, ಗೃಹಾಂಶ್ಚ –ಮನೆಗಳನ್ನು, ತತ್ರತತ್ರ–ಅಲ್ಲಲ್ಲೇ, ಅಶ್ನುವತೇ–ಅನುಭವಿಸುತ್ತಿದ್ದರು || ೧೮||ಅಲಂಕೃತಾನ್–ಅಲಂಕರಿಸಲ್ಪಟ್ಟ, ಸುವರ್ಣಮಣಿಮುಕ್ತಾನಾಂ–ಚಿನ್ನ, ರತ್ನ, ಮುತ್ತುಗಳಿಗೆ, ಪ್ರದಾತಾಂಶ್ಚಾಪಿ–ದಾತರಾದವರನ್ನು, ಅಪರಾಸ್ವತೇಜಸಾ–ತಮ್ಮ ತೇಜಸ್ಸಿನಿಂದಾ, ದೀಪ್ಯಮಾನಾನ್–ಹೊಳೆಯುತ್ತಲಿರುವ, ಅಪರಾನ್–ಇತರರಾದ, ಧಾರ್ಮಿಕಾಂಶ್ಚಾಪಿ–ಧರ್ಮಿಷ್ಠರನ್ನು, ಮಹಾಬಾಹುಃ–ಮಹಾ ಭುಜಪರಾಕ್ರಮಉಳ್ಳ, ರಾಕ್ಷಸಾಧಿಪಃ–ರಾಕ್ಷಸರಿಗೆ ಅರಸಾದ, ರಾವಣಃ–ರಾವಣನು, ದದರ್ಶ–ಕಂಡನು || ೨೦ || ಬಲೀ–ಬಲವಂತನಾದ, ರಾವಣಃ–ರಾವಣನು, ತತಃ–ಬಳಿಕ, ಸ್ವಕೈಃ–ಸ್ವಂತವಾದ, ದುಷ್ಕೃತೈಃ ಕರ್ಮಭಿಃ–ಪಾಪಕೃತ್ಯಗಳಿಂದ, ವಧ್ಯಮಾನಾನ್–ಹೊಡೆಯಲ್ಪಡುತ್ತಲಿರುವವರನ್ನು, ಬಲಾತ್–ಬಲಾತ್ಕಾರದಿಂದ, ವಿಕ್ರಮೇಣ–ಪರಾಕ್ರಮದಿಂದ, ಮೋಚಯಾಮಾಸ–ಬಿಡಿಸಿದನು || ೨೧ || ತೇಪ್ರಾಣಿನಃ–ಆ ಪ್ರಾಣಿಗಳು, ರಕ್ಷಸಾ–ರಾಕ್ಷಸರನಾದ, ತೇನದಶಗ್ರೀವೇಣ–ಆ ದಶಕಂಠನಿಂದ, ಮೋಚಿತಾಃ–ಬಿಡಿಸಲ್ಪಟ್ಟವರಾಗಿ, ಅತರ್ಕಿತಂ–ಊಹಿಸದಿರುವ, ಅಚಿಂತಿತಂ–ಯೋಚಿಸದಿರುವ, ಸುಖಂ–ಸುಖವನ್ನು, ಮುಹೂರ್ತಂ–ಸ್ವಲ್ಪಹೊತ್ತು, ಆಪುಃ–ಹೊಂದಿದರು ||೨೨|| ಪ್ರೇತೇಷು–ಪ್ರೇತಗಳು, ಬಲೀಯಸಾ–ಬಲಿಷ್ಠನಾದ, ರಾಕ್ಷಸೇನ–ರಾವಣನಿಂದ, ಮುಚ್ಯಮಾನೇಷುಸತ್ಸು–ಬಿಡಿಸಲ್ಪಟ್ಟವರಾಗುತಿರಲಾಗಿ, ಪ್ರೇತಗೋಪಾಃ–ಪ್ರೇತಪಾಲಕರು, ಸುಸಂಕ್ರುದ್ಧಾಃ–ಕಡು ಕೋಪಿಷ್ಠರಾಗಿ, ರಾಕ್ಷಸೇಂದ್ರಂ–ರಾಕ್ಷಸಾಧಿಪತಿಯನ್ನು ಕುರಿತು, ಅಭಿದ್ರವನ್–ಓಡಿ ಬಂದರು ||೨೩|| ತತಃ–ಬಳಿಕ, ಪರಿ

---

ನ್ನು ವರ್ಣಹೀನರಾದವರನ್ನು ಬಿಚ್ಚಿ ಹೋದ ಕೂದಲುಳ್ಳವರನ್ನು || ಮಲ ವಿಕಾರವಾದ, ಕೊಳೆಯಂ ಧರಿಸಿದವರನ್ನು, ಮತ್ತು ಬಳಲಿದವರನ್ನು ಬಟ್ಟೆಯಿಲ್ಲದೆ ದಿಗಂಬರರಾಗಿರುವರನ್ನು ಇತ್ತತ್ತಲೂ ಹುಡುಕುತ್ತಿರುವರಾಗಿಯೂ ಇರುವ ಅನೇಕರಾದ ಜೀವರಾಶಿಗಳನ್ನು ನೋಡಿದನು ||೧೬|| ಆ ರಾವಣನು ಪೂರ್ವ ಪುಣ್ಯ ಸುಕೃತಗಳಿಂದ ಗೀತವಾದಿತ್ರಧ್ವನಿಗಳಿಂದೊಡಗೂಡಿ, ಉತ್ತಮ ವಿಮಾನಗಳಲ್ಲಿ ಕುಳಿತು ಕೊಂಡು ಕಡು ಸಂತೋಷಿಗಳಾಗಿರುವ ಕೆಲಬರನ್ನು ||೧೭|| ಗೋದಾನ ಮಾಡಿದವರು ಗೋರಸ ಪಾನವಂಗೈಯ್ಯುತ್ತಿದ್ದರು. ಅನ್ನದಾತೃಗಳು ಸುಖವಾಗಿಭೋಜನಂಗೈಯ್ಯುತ್ತಿದ್ದರು. ಇನ್ನು ಕೆಲವರಾದ ಗೃಹದಾನ ಮಾಡಿದವರು, ಗೃಹಗಳನ್ನು ಹೊಂದಿದವರಾಗಿದ್ದರು ||ಇಹಲೋಕದಲ್ಲಿ ಚಿನ್ನ, ರತ್ನ, ಮುತ್ತು ಮೊದಲಾದವುಗಳನ್ನಿತ್ತು, ಆ ಲೋಕದೊಳ್ ಅತಿಯಾಗಲಂಕೃತರಾಗಿರುವವರನ್ನು, ಮತ್ತುತಮ್ಮ ತಮ್ಮ ತೇಜಸ್ಸಿನಿಂದ ಕಂಗೊಳಿಸುತಿರುವ ಇತರ ಧಾರ್ಮಿಕರನ್ನು ಸಹಾ ಬಹು ಭುಜಬಲವುಳ್ಳ ಆ ರಾಕ್ಷಸಾಧಿಪನಾದ ರಾವಣನು ಅಲ್ಲಿ ಅಲ್ಲಿ ನೋಡಿ ದವನಾದನು || ೨೦ || ಸಮನಂತರ ಕಾಲನಲ್ಲಿ ಆ ಬಲವಂತನಾದ ರಾವಣನು ತಾವು ಪೂರ್ವ ಜನ್ಮದೊಳ್ ಮಾಡಿದ ಪಾಪ ದುಷ್ಕರ್ಮಗಳಿಂದ ವಧಿಸಲ್ಪಡುತಿರುವ ಆ ಪಾಪಿಗಳನ್ನಾದರೆ, ತನ್ನ ಬಾಹು ಬಲದಿಂದ ಬಲಾತ್ಕರಿಸಿ ಬಿಡಿಸಿದವನಾದನು ||೨೧|| ಆ ರಾವಣನಿಂದ ವಿಮೋಚಿತರಾದ ಆ ಪ್ರಾಣಿಗಳೆಲ್ಲ ಊಹಿಸದೇಲೂ ಯೋಚಿಸದೇಲೂ ಇರುವ ಸುಖವನ್ನು ಸ್ವಲ್ಪ ಹೊತ್ತು ಹೊಂದಿದವರಾದರು ||೨೨|| ಬಲವಂತನಾದ ಆ ರಾವಣನಿಂದ ಪ್ರೇತರು ಬಿಡಿಸಲ್ಪಟ್ಟವರಾಗಲೂ, ಆ ಪ್ರೇತ ಪಾಲಕರು ಕಡು ಕುಪಿತರಾಗಿ, ರಾಕ್ಷಸೇಂದ್ರನಂ ಕುರಿತು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತತೋ ಹಲಹಲಾಶಬ್ದಸ್ಸರ್ವದಿಗ್ಭ್ಯಸ್ಸಮುತ್ಥಿತಃ। ಧರ್ಮರಾಜಸ್ಯ ಯೋಧಾನಾಂ ಶೂರಾಣಾಂ ಪರಿಧಾವತಾಮ್॥ ತೇ ಪ್ರಾಸೈಃ ಪರಿಘೈಶ್ಶೂಲೈಃ ಮುದ್ಗರೈಶ್ಶಕ್ತಿತೋಮರೈಃ। ಪುಷ್ಪಕಂ ಸಮವರ್ಷಂತ ಶೂರಾಶ್ಶತಸಹಸ್ರಶಃ॥೧೫॥ ಅಸಂಖ್ಯೇಯಂ ಯಮಸ್ಯಾಸೀತ್ತತ್ರ ಸೈನ್ಯಂ ಮಹಾತ್ಮನಃ। ಶೂರಾಣಾಮುಗ್ರವೀರ್ಯಾಣಾಂ ಸಮರೇಷ್ವನಿವರ್ತಿನಾಮ್ ॥೧೬॥ ತತೋ ವೃಕ್ಷಾಂಶ್ಚ ಶೈಲಾಂಶ್ಚ ಪ್ರಾಸಾದೀನಾಂ ಶತಾನಿ ಚ । ಪುಷ್ಪಕಂ ಸಮವರ್ಷಂತ ಯಮದೂತಾ ಭಯಾನಕಾಃ ॥೧೭॥ ಸಮಂತಾದ್ವಿದ್ರುತಂ ತೈಸ್ತು ಪುಷ್ಪಕಂ ಯಾನಮಾಬಭೌ ।ಯಥಾ ಸ್ವರ್ಣಮಯಂ ಶೃಂಗಂ ಸಮಂತಾದ್ವಿದ್ರುತಂ ಘನೈಃ ॥೧೮॥ ತಸ್ಯಾಸನಾನಿ ಪ್ರಾಸಾದಾನ್ ವೇದಿಕಾಸ್ತೋರಣಾನಿ ಚ । ಪುಷ್ಪಕಸ್ಯ ಬಭಂಜುಸ್ತೇ ಶೀಘ್ರಂ ಮಧುಕರಾ ಇವ ॥೧೯॥ ದೇವತಾಸ್ಥಾನಭೂತಂ ತದ್ವಿಮಾನಂ ಪುಷ್ಪಕಂ ಮೃಧೇ । ಭಜ್ಯಮಾನಂ ತಥೈವಾಸೀದಕ್ಷಯ್ಯಂ ಬ್ರಹ್ಮತೇಜಸಾ ॥೨೦॥ ತತಸ್ತೇ ರಾವಣಾಮಾತ್ಯಾ ಯಥಾಕಾಮಂ ಯಥಾಬಲಮ್ । ಅಯುಧ್ಯಂತ ಮಹಾವೀರಾಸ್ಸ ಚ ರಾಜಾ ದಶಾನನಃ ॥೨೧॥ ತೇ ತು ಶೋಣಿತದಿಗ್ಧಾಂಗಾಸ್ಸರ್ವ

ಧಾವತಾಂ–ಓಡ್ಯಾಡುತ್ತಿರುವ, ಶೂರಾಣಾಂ–ವೀರರಾದ, ಧರ್ಮರಾಜಸ್ಯ–ಯಮನ, ಯೋಧಾನಾಂ–ಭಟರ, ಹಲಹಲಾಶಬ್ದಃ–ಹಲಹಲವೆಂಬ ಧ್ವನಿಯು, ಸರ್ವದಿಗ್ಭ್ಯಃ–ಸಮಸ್ತ ದಿಕ್ಕುಗಳಲ್ಲಿಯು, ಸಮುತ್ಥಿತಃ–ಹುಟ್ಟಿತು ॥೧೪॥ ಶತಸಹಸ್ರಶಃ–ಅನೇಕರಾದ, ತೇಶೂರಾಃ–ಆ ಶೂರರು, ಪ್ರಾಸೈಃ–ಪ್ರಾಸವೆಂಬಾಯುಧಂಗಳಿಂದಲೂ, ಪರಿಘೈಃ–ಪರಿಘಾಯುಧಂಗಳಿಂದಲೂ, ಶೂಲೈಃ–ಶೂಲಾಯುಧಂಗಳಿಂದಲೂ,ಮುದ್ಗರೈಃ–ಮುದ್ಗರಾಯುಧಗಳಿಂದಲೂ, ಶಕ್ತಿತೋಮರೈಃ–ಶಕ್ತ್ಯಾಯುಧಂಗಳಿಂದಲೂ, ತೋಮರಾಯುಧಂಗಳಿಂದಲೂ ಸಹಾ, ಪುಷ್ಪಕಂ–ಪುಷ್ಪಕ ವಿಮಾನದಲ್ಲಿ, ಸಮವರ್ಷಂತ–ಸುರಿಸಿದರು ॥೧೫॥ ತತ್ರ–ಆ ಯಮಲೋಕದಲ್ಲಿ, ಮಹಾತ್ಮನಾಂ–ಮಹಾನುಭಾವನಾದ, ಯಮಸ್ಯ–ಯಮನ ಸಂಬಂಧವಾದ, ಉಗ್ರವೀರ್ಯಾಣಾಂ–ಕಡುಪರಾಕ್ರಮವುಳ್ಳ, ಸಮರೇಷು–ಯುದ್ಧಗಳಲ್ಲಿ, ಅನಿವರ್ತಿನಾಂ–ಹಿಂದಿರುಗದಿರುವ, ಶೂರಾಣಾಂ–ವೀರರ, ಸೈನ್ಯಂ–ಬಲವು,ಅಸಂಖ್ಯೇಯಂ–ಅಪರಿಮಿತವಾದದ್ದು, ಆಸೀತ್–ಆಯಿತು॥೧೬॥ ಭಯಾನಕಾಃ–ಭಯಂಕರರಾದ, ಯಮದೂತಾಃ–ಯಮಕಿಂಕರರು, ತತಃ–ಬಳಿಕ, ವೃಕ್ಷಾಂಶ್ಚ–ಗಿಡಗಳನ್ನು, ಶೈಲಾಂಶ್ಚ–ಬೆಟ್ಟಗಳನ್ನು, ಪ್ರಾಸಾದೀನಾಂ–ಪ್ರಾಸಾದವೇ ಮೊದಲಾಗಿಉಳ್ಳ, ಶತಾನಿಚ–ನೂರಾರುಗಳನ್ನು, ಪುಷ್ಪಕಂ–ಪುಷ್ಪಕವಿಮಾನದಲ್ಲಿ,ಸಮವರ್ಷಂತ–ಸುರಿಸಿದರು ॥೧೭॥ ಸಮಂತಾತ್–ಯಲ್ಲಾ ಕಡೆಯಲ್ಲಿಯೂ, ವಿದ್ರುತಂ–ಪೋಡುತ್ತಿರುವ, ಪುಷ್ಪಕಂಯಾನಂತು–ಪುಷ್ಪಕವಿಮಾನವಾದರೆ, ತೈಃ–ಆ ರಾಕ್ಷಸರಿಂದಾ, ಸಮಂತಾತ್–ಎಲ್ಲಾ ಕಡೆಯಲ್ಲಿಯೂ, ವಿದ್ರುತಂ–ವೋಡುತ್ತಿರುವ, ಸ್ವರ್ಣಮಯಂ–ಸ್ವರ್ಣವಿಕಾರಮಾದ, ಶೃಂಗಂ–ಕೊಂಬು, ಘನೈಃ–ಮೇಘಗಳಿಂದ, ಯಥಾ–ಹ್ಯಾಗೋ, ತಥಾ–ಹಾಗೆ, ಆಬಭೌ–ಹೊಳೆಯುತ್ತಿತ್ತು ॥೧೮॥ ತೇ–ಆ ಯಮದೂತರು, ತಸ್ಯಪುಷ್ಪಕಸ್ಯ–ಆ ಪುಷ್ಪಕದ, ಆಸನಾನಿ–ಪೀಠಗಳನ್ನು–ಪ್ರಾಸಾದಾನ್–ಅರಸನು ಕೂಡುವ ಸ್ಥಳಗಳನ್ನು, ವೇದಿಕಾಃ–ಜಗಲಿಗಳನ್ನು, ತೋರಣಾನಿಚ– ತೋರಣಗಳನ್ನೂ ಕೂಡೆ, ಶೀಘ್ರಂ–ಜಾಗ್ರತೆಯಾಗಿ, ಮಧುಕರಾಇವ–ದುಂಬಿಗಳಂತೆ, ಬಭಂಜುಃ–ಮುರಿದರು ॥ ೧೯ ॥ ದೇವತಾಸ್ಥಾನಭೂತಂ–ದೇವತೆಗಳಿಗೆ ಸ್ಥಾನಭೂತಮಾದ, ಪುಷ್ಪಕಂ–ಪುಷ್ಪಕಮೆಂಬ, ತದ್ವಿಮಾನಂ–ಆ ವಿಮಾನವು, ಮೃಧೇ–ಯುದ್ಧದಲ್ಲಿ, ಯಥಾಭಜ್ಯಮಾನಂ–ಹ್ಯಾಗೆ ಮುರಿದುಹೋಯಿತೋ, ತಥೈವ–ಹಾಗೆಯೆ, ಬ್ರಹ್ಮತೇಜಸಾ–ಬ್ರಹ್ಮನ ತೇಜಸ್ಸಿನಿಂದಾ, ಅಕ್ಷಯಂ–ನಾಶರಹಿತವಾದಂಥಾದ್ದು, ಆಸೀತ್–ಆಯಿತು ॥ ೨೦ ॥ ತತಃ–ಬಳಿಕ, ಮಹಾವೀರಾಃ–ಮಹಾ ಶೂರರಾದ, ತೇರಾವಣಾಮಾತ್ಯಾಃ–ಆ ರಾವಣ ಮಂತ್ರಿಗಳು, ರಾಜಾ–ಒಡೆಯನಾದ ಸದಶಾನನಶ್ಚ–ಆ ರಾವಣನೂ ಕೂಡೆ, ಯಥಾಕಾಮಂ–ಇಷ್ಟವಿದ್ದಂತೆಯೂ, ಯಥಾ ಬಲಂ, ಬಲವಿದ್ದಂತೆಯೂ, ಅಯುಧ್ಯಂತ–ಯುದ್ಧವಂ ಮಾಡಿದರು ॥ ೨೧ ॥ ರಾಕ್ಷಸೇಂದ್ರಸ್ಯ–ರಾವಣನು, ಅಮಾತ್ಯಾಸ್ತು–ಆ ಮಂತ್ರಿಗಳಾದರೆ, ಸರ್ವಶಸ್ತ್ರಸಮಾಹತಾಃ–ಸ

ಓಡಿ ಬಂದರು. ॥೧೩॥ ಆ ಬಳಿಕ ಓಡಿ ಬರುತಿರುವ ಕಡು ಶೂರರಾದ ಆ ಯಮ ಕಿಂಕರರ ಕೋಲಾಹಲ ಧ್ವನಿಯು ಸಮಸ್ತ ದಿಕ್ಕುಗಳಿಂದಲೂ ಹುಟ್ಟಿದನು ॥೧೪॥ ಅನೇಕರಾದ ಆ ಯಮ ಭಟರು ಪ್ರಾಸ ಪರಿಘ ಮುದ್ಗರಶಕ್ತಿ ತೋಮರಾದ್ಯಾಯುಧಗಳಿಂದಲೂ, ಆ ಪುಷ್ಪಕದಲ್ಲಿ ಸುರಿಸಿದರು ॥ ೧೫ ॥ ಕಾಳಗದಲ್ಲಿ ಹಿಂದಿರುಗದಿರುವ ಮತ್ತು ಭಯಂಕರ ವೀರ್ಯವುಳ್ಳ ಆ ರಕ್ಕಸರ ಮುಂದೆ ಮಹಾತ್ಮನಾದ ಆ ಯಮನ ಸೈನ್ಯವು ತತ್ಕಾಲದೊಳ್ ಅಪರಿಮಿತವಾಗಿ ನಿಂತಿತು. ॥೧೬॥ ಆ ಬಳಿಕ ಮಹಾ ಭಯಂಕರರಾದ ಆ ಯಮ ಕಿಂಕರರು ವೃಕ್ಷಗಳನ್ನೂ, ಬೆಟ್ಟಗಳನ್ನೂ ಅನೇಕವಾದ ಆಯುಧಗಳನ್ನೂ ಆ ವಿಮಾನದಲ್ಲಿ ವರ್ಷಿಸಿದರು. ॥೧೭॥ ಎಲ್ಲಾ ಕಡೆಯಲ್ಲಿ ಓಡುತ್ತಿರುವ ಆ ಪುಷ್ಪಕ ವಿಮಾನವು, ಮೇಘಗಳಿಂದ ವ್ಯಾಪ್ತವಾದ ಸ್ವರ್ಣ ವಿಕಾರಮಾದ ಶೃಂಗದಂತೆ,ಆ ಯಮದೂತರಿಂದ ಕಂಗೊಳಿಸುತಿತ್ತು ॥೧೮॥ ಆ ಶೂರರು ಪುಷ್ಪಕ ವಿಮಾನದ ಪ್ರಾಸಾದಗಳನ್ನೂ, ವೇದಿಕೆಗಳನ್ನೂ ತೋರಣಗಳನ್ನೂ ದುಂಬಿಗಳಂತೆ ತ್ವರಿತವಾಗಿ ಮುರಿದು ಹಾಕಿದರು. ॥೧೯॥ ಆ ಕಾಳಗದಲ್ಲಿ ದೇವತಾಸ್ಥಾನ ಭೂತಮಾದ ಆ ಪುಷ್ಪಕ ವಿಮಾನವು ಹ್ಯಾಗೆ ಶೀಘ್ರವಾಗಿ ಮುರಿಯಲ್ಪಟ್ಟಿತೋ, ಹಾಗೆಯೇ ಬ್ರಹ್ಮ ತೇಜಸ್ಸಿನಿಂದ ಅಕ್ಷಯ್ಯವಾಗುತಿತ್ತು. ॥೨೦॥ ಅನಂತರವು ಕಡು ಪರಾಕ್ರಮಿಗಳಾದ ಆ ರಾವಣನ ಮಂತ್ರಿಗಳೂ ಮತ್ತೂ ರಾವಣನು ಸಹಾ ಅವರವರ ಶಕ್ತಿದ್ದಂತೆಯು ಇಷ್ಟವಿದ್ದಂತೆಯು ಯುದ್ಧವಂ ಗೈಯ್ಯುತ್ತಿದ್ದರು॥೨೧॥ಆ ದಶಕಂಠನ ಮಂತ್ರಿಗಳಾದ ಪ್ರಹಸ್ತಾದಿಗಳು ಅಸ್ತ್ರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶಸ್ತ್ರೈಸ್ಸಮಾಹತಾಃ। ಅಮಾತ್ಯಾ ರಾಕ್ಷಸೇಂದ್ರಸ್ಯ ಚಕ್ರುರಾಯೋಧನಂ ಮಹತ್ ॥೨೦॥ ಅನ್ಯೋನ್ಯಂ ಚ ಮಹಾಭಾಗ ಜಘ್ನುಃ ಪ್ರಹರಣೈರ್ಯುಧಿ । ಯಮಸ್ಯ ಚ ಮಹತ್ಸೈನ್ಯಂ ರಾವಣಸ್ಯ ಚ ಮಂತ್ರಿಣಃ ॥೨೧॥ ಅಮಾತ್ಯಾಂಸ್ತಾಂಸ್ತು ಸಂತ್ಯಜ್ಯ ರಾಕ್ಷಸಸ್ಯ ಮಹೌಜಸಃ । ತಮೇವ ತೇಭ್ಯಧಾವಂತ ಶೂಲವರ್ಷೈರ್ದಶಾನನಮ್ ॥೨೪॥ ತತಶ್ಶೋಣಿತದಗ್ಧಾಂಗಃ ಪ್ರಹಾರೈರ್ಜರ್ಝರೀಕೃತಃ । ವಿಮಾನೇ ರಾಕ್ಷಸಶ್ರೇಷ್ಠಃ ಫುಲ್ಲಾಶೋಕ ಇವಾಬಭೌ ॥೨೫॥ ಸ ಶೂಲಾಸಿಗದಾಪ್ರಾಸಾನ್ ಶಕ್ತಿತೋಮರಸಾಯಕಾನ್ । ಮುಸಲಾನಿ ಶಿಲಾವೃಕ್ಷಾನ್ ಮುಮೋಚಾಸ್ತ್ರಬಲಾದ್ಬಲೀ ॥೨೬॥ ತರೂಣಾಂ ಚ ಶಿಲಾನಾಂ ಚ ಶಸ್ತ್ರಾಣಾಂ ಚೈವ ದಾರುಣಮ್ । ಯಮಸೈನ್ಯೇಷು ತದ್ವರ್ಷಂ ಪಪಾತಾತಿಭಯಂಕರಂ ॥೨೭॥ ತಾಂಸ್ತು ಸರ್ವಾನ್ ಸಮಾಕ್ಷಿಪ್ಯ ದತಸ್ತ್ರಮಪಹತ್ಯ ಚ । ಜಘ್ನುಸ್ತೇ ರಾಕ್ಷಸಂ ಘೋರಮೇಕಂ ಶತಸಹಸ್ರಶಃ ॥೨೮॥ ಪರಿವಾರ್ಯ ಚ ತಂ ಸರ್ವೇ ಶೈಲಂ ಮೇಘೋತ್ಕರಾ ಇವ । ಭಿಂಡಿಪಾಲೈಶ್ಚ ಶೂಲೈಶ್ಚ ನಿರುಚ್ಛ್ವಾಸಮಕಾರಯನ್ ॥೨೯॥ ವಿಮುಕ್ತಕವಚಃ ಕೃದ್ಧಃ ಮತ್ತಶ್ಶೋಣಿತವಿಸ್ರವೈಃ । ಸಪ್ರಪ್ಪ

---

ಮತ್ತ ಶಸ್ತ್ರಗಳಿಂದಲೂ ಹೊಡೆಯಲ್ಪಟ್ಟವರಾದಕಾರಣ, ಶೋಣಿತಸಿಗ್ಧಾಂಗಾಃ-ರಕ್ತದಿಂದ ತೊಯಿಸಲ್ಪಟ್ಟ ಅಂಗಗಳುಳ್ಳವರಾಗಿ, ಮಹತ್-ಮಹತ್ತರವಾದ, ಆಯೋಧನಂ-ಯುದ್ಧವನ್ನು, ಚಕ್ರುಃ-ಮಾಡಿದರೂ ॥ ೨೦ ॥ ಹೇಮಹಾಭಾಗ-ಎಲೈ ಪೂಜ್ಯನಾದ ರಾಮನೆ ! ಯಮಸ್ಯ-ಯಮನ, ಮಹತ್-ಮಹತ್ತರವಾದ, ಸೈನ್ಯಂಚ-ಸೈನ್ಯವು, ರಾವಣಸ್ಯ-ರಾವಣನ, ಮಂತ್ರಿಣಶ್ಚ-ಮಂತ್ರಿಗಳೂ ಕೂಡಾ, ಯುಧಿ-ಕಾಳಗದಲ್ಲಿ, ಅನ್ಯೋನ್ಯಂ-ಪರಸ್ಪರರನ್ನೊಬ್ಬರು, ಪ್ರಹರಣೈಶ್ಚ-ಆಯುಧಗಳಿಂದಲೂ, ಜಘ್ನುಃ-ಹೊಡೆದರು, ॥೨೧॥ ರಾಕ್ಷಸಸ್ಯ-ರಾವಣನ, ಅಮಾತ್ಯಾನ್-ಮಂತ್ರಿಗಳಾದ, ತಾಂಸ್ತು-ಆ ಪ್ರಹಸ್ತಾದಿಗಳನ್ನಾದರೆ, ಸಂತ್ಯಜ್ಯ-ತೊರೆದು, ಶೂಲವರ್ಷೈಸ್ಸಹಾ- ಶೂಲಾಯುಧವರ್ಷದಿಂದಾಯುಕ್ತರಾಗಿ, ತಂದಶಾನನಮೇವ- ಆದಶಮುಖನನ್ನೆ ಕುರಿತು,ಮಹೌಜಸಃ-ತೇಜಸ್ವಿಗಳಾದ, ತೇ-ಆ ಯಮದೂತರು, ಅಭ್ಯಧಾವಂತ-ಓಡಿಬಂದರು ॥ ೨೪ ॥ತತಃ-ಬಳಿಕ, ಪ್ರಹಾರೈಃ-ಪೆಟ್ಟುಗಳಿಂದ,ಶೋಣಿತ ದಿಗ್ಧಾಂಗಃ-ರಕ್ತದಿಂದಾ ನೆನೆಸಲ್ಪಟ್ಟ ಅಂಗವುಳ್ಳ, ರಾಕ್ಷಸಶ್ರೇಷ್ಠಃ-ರಾಕ್ಷಸಾಧಿಪತಿಯಾದ ರಾವಣನು, ವಿಮಾನೇ-ವಿಮಾನದಲ್ಲಿ, ಜರ್ಝರೀಕೃತಃ- ಕಂಪಾಯಮಾನನಾಗಿ ಪುಲ್ಲಾಶೋಕ ಇವ-ವಿಕಸಿತವಾದ ಅಶೋಕವೃಕ್ಷದಂತೆ, ಆಬಭೌ-ಪ್ರಕಾಶಿಸಿದನು॥೨೫॥ಬಲೀ-ಬಲವಂತನಾದ,ಸಃ-ಆ ರಾವಣನು, ಶೂಲಾಸಿಗದಾಪ್ರಾಸಾನ್-ಶೂಲಕತ್ತಿ ಗದಾಯುಧಗಳನ್ನು, ಶಕ್ತಿತೋಮರಸಾಯಕಾನ್-ಶಕ್ತಿ ತೋಮರ ಬಾಣಗಳನ್ನು, ಮುಸಲಾನಿ-ಮುಸಲಾಯುಧಗಳನ್ನು, ಶಿಲಾವೃಕ್ಷಾನ್-ಕಲ್ಲುಗಳನ್ನು, ವೃಕ್ಷಗಳನ್ನು, ಅಸ್ತ್ರಬಲಾತ್-ಅಸ್ತ್ರಬಲದಿಂದ, ಮುಮೋಚ-ಬಿಟ್ಟನು ॥೨೬॥ ದಾರುಣಂ-ಭಯವಾದ, ತರೂಣಾಂಚ -ವೃಕ್ಷವರ್ಷವನ್ನೂ, ಶಿಲಾನಾಂಚ-ಶಿಲವರ್ಷವನ್ನೂ, ಶಸ್ತ್ರಾಣಾಂಚ-ಶಸ್ತ್ರವರ್ಷವನ್ನು, ಯತ್-ಯಾವದೊ, ತದ್ವರ್ಷಂ-ಆ ವರ್ಷವೂ, ಯಮಸೈನ್ಯೇಷು-ಯಮಧರ್ಮರಾಜನ ಸೈನ್ಯಗಳಲ್ಲಿ, ಅತಿಭಯಂಕರಂ-ಅತ್ಯಂತ ಭಯಂಕರವಾದಂಥಾದ್ದಾಗಿ, ಪಪಾತ-ಬಿದ್ದಿತು॥ ೨೭ ॥ ತೇ-ಆ ಯಮದೂತರು,ಸರ್ವಾನ್- ಸಮಸ್ತವಾದ, ತಾನ್ತು-ಆ ಅಸ್ತ್ರಗಳನ್ನಾದರೆ, ಸಮಾಕ್ಷಿಪ್ಯ-ಹಾರಿಹಿಡಿದು, ತದಸ್ತ್ರಂ-ಆ ಅಸ್ತ್ರವನ್ನು, ಅಪಹತ್ಯಚ-ಮುರದುನೂ ಹಾಕಿ, ಶತಸಹಸ್ರಶಃ-ಅನೇಕವಾಗಿ, ರಾಕ್ಷಸಮೇಕಂ-ಆ ಪಬ್ಬ ರಾವಣನ್ನೆ, ಘೋರಂ-ಭಯಂಕರವಾಗಿ, ಜಘ್ನುಃ-ಹೊಡೆದರು ॥೨೮॥ ಸರ್ವೇ-ಯಲ್ಲರು, ಶೈಲಂ-ಬೆಟ್ಟವನ್ನು, ಉತ್ಕರಾಃ-ಅಧಿಕವಾದ, ಮೇಘಾ ಇವ-ಮೇಘಗಳಂತೆ, ತಂ-ಆ ರಾವಣನನ್ನು, ಪರಿವಾರ್ಯ-ಸುತ್ತಿಕೊಂಡು, ಭಿಂಡಿವಾಲೈಶ್ಚ -ಭಿಂಡಿವಾಲಗಳಿಂದಲೂ, ಶೂಲೈಶ್ಚ -ಶೂಲಾಯುಧಗಳಿಂದಲೂ, ನಿರುಚ್ಛ್ವಾಸಂ-ಉಸುರುಬಿಡಲವಕಾಶವಿಲ್ಲದವನನ್ನಾಗಿ, ಅಕಾರಯನ್-ಮಾಡಿದರು ॥೨೯॥ ವಿಮುಕ್ತಕವಚಃ-ಬಿಡಲ್ಪಟ್ಟ ಕವಚವುಳ್ಳ, ಸಃ-ಆ ರಾವಣನು, ಶೋಣಿತವಿಸ್ರವೈಃ-ರಕ್ತ ಸುರಿಯೋಣದರಿಂದ, ಮತ್ತಃ-ಮದವೇರಿದವನಾದ ಕಾರಣ, ಕ್ರುದ್ಧಃ- ಕೋ

---

ಗಳಿಂದ ಪ್ರಹರಿತರಾದಕಾರಣ ರಕ್ತದಿಂದ ತೊಯಿಸಲ್ಪಟ್ಟ ಅವಯವಗಳುಳ್ಳವರಾಗಿ, ಮಹತ್ತರವಾದ ಯುದ್ಧವಂಗೈಯ್ಯುತ್ತಿದ್ದರು ॥೨೦॥ ಎಲೈ ಪೂಜ್ಯನಾದ ರಾಮನೇ? ಆ ಯಮ ದೂತರು ರಾವಣ ಮಂತ್ರಿಗಳೂ ಸಹ ಆ ರಣರಂಗದಲ್ಲಿ ಅನೇಕ ವಿಧವಾದ ಆಯುಧಗಳಿಂದ ಪರಸ್ಪರವಾಗಿ ಹೊಡೆದರು ॥೨೧॥ ಕಡು ತೇಜಸ್ವಿಗಳಾದ ಆ ಯಮದೂತರು ರಾವಣನ ಮಂತ್ರಿಗಳಾದ ಪ್ರಹಸ್ತಾದಿಗಳಂ ತೊರೆದು ರಾವಣನ ಮೇಲೆ ಶೂಲಗಳಂ ವರ್ಷಿಸುತ್ತಾ ಓಡಿ ಬಂದರು॥ ಆ ಬಳಿಕ ರಕ್ತದಿಂದ ತೊಯಿಸಲ್ಪಟ್ಟ ಅಂಗಗಳುಳ್ಳ ಆರಾಕ್ಷಸನಾಥನು ಆವಿಮಾನದಲ್ಲಿ ಕಂಪಾಯಮಾನನಾಗಿ, ವಿಕಸಿತವಾದ ಅಶೋಕವೃಕ್ಷದೋಪಾದಿಯಾಗಿ ಹೊಳೆಯುತಿದ್ದನು, ॥೨೫॥ ಆ ಬಲವಂತನಾದ ರಾವಣನು, ಅಸ್ತ್ರ ಬಲದ ದೆಸೆಯಿಂದ ಶೂಲ, ಗದಾ, ಪ್ರಾಸ, ಶಕ್ತಿ,ತೋಮರ, ಬಾಣ, ಮುಸಲಗಳೆಂಬ ಆಯುಧಗಳನ್ನು ಮತ್ತು ಪಾಷಾಣಗಳನ್ನು ವೃಕ್ಷಗಳನ್ನೂ ಸಹಾ ಬಿಡುತಿದ್ದನು ॥೨೬॥ ಕಡು ಭಯಂಕರವಾದ ಆ ವೃಕ್ಷಗಳ ವರ್ಷವೂ, ಶಿಲಾ ವರ್ಷವೂ,ಶಸ್ತ್ರವರ್ಷವೂ ಸಹ, ಆ ಯಮ ಸೈನ್ಯದಲ್ಲಿ ಮಹಾ ಭಯಂಕರವಾಗಿ ಬೀಳುತಿತ್ತು॥೨೭॥ ಆ ಯಮದೂತರಾದರೆ ಅವುಗಳನ್ನೆಲ್ಲ ಹಾರಿ ಹಿಡಿದು ಆ ಅಸ್ತ್ರವನ್ನು ಮುರುದುಹಾಕಿ, ಕಡು ಭಯಂಕರನಾದ ಆ ರಾವಣನನ್ನು ಬಗೆ ಬಗೆಯಾಗಿ ಹೊಡದರು ॥೨೮॥ ಆ ದೂತರು ಪರ್ವತವನ್ನು ಮೇಘಗಳು ಸುತ್ತು ಬಾರುವಂತೆ ಆ ರಾವಣನನ್ನು ಸುತ್ತು ಬಾರಿಕೊಂಡು, ಭಿಂಡಿವಾಲ, ಶೂಲವೇಮೊದಲಾದ ಆಯುಧಗಳಿಂದ ನಿರುಚ್ಛ್ವಾಸವಾಗಿ ಮಾಡಿದರು ॥೨೯॥ ಕತ್ತರಿಸಲ್ಪಟ್ಟ ಕ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯನಿವೇದ್ಯತಾಮ್ ॥೪೮॥ ರಾವಣಂಚಾಬ್ರವೀನ್ಮಂತ್ರೀ ಪ್ರಹಸೋನಾಮವಾರುಣಃ। ಗತಃಖಲುಮಹಾತೇಜಾಬ್ರಹ್ಮಲೋಕಂಜಲೇಶ್ವರಃ । ಗಾಂಧರ್ವಂವರುಣಶ್ಶ್ರೋತುಂಯಂತ್ವಮಾಹ್ವಯಸೇಯುಧಿ॥೪೯॥ ತತ್ಕಿಂತವವೃಥಾವೀರಪರಿಶ್ರಾಮ್ಯಗತೇನೃಪೇ। ಯೇತುಸನ್ನಿಹಿತಾವೀರಾಃಕುಮಾರಾಸ್ತೇಪರಾಜಿತಾಃ ॥೫೦॥ ರಾಕ್ಷಸೇಂದ್ರಸ್ತು ತಚ್ಛ್ರುತ್ವಾ ನಾಮವಿಶ್ರಾವ್ಯಚಾತ್ಮನಃ । ಹರ್ಷಾನ್ನಾದಂವಿಮುಂಚನ್ವೈನಿಷ್ಕ್ರಾಮದ್ವರುಣಾಲಯಾತ್ ॥೫೧॥ ಆಗತಸ್ತುಪಥಾಯೇನತೇನೈವವಿನಿವರ್ತ್ಯಸಃ। ಲಂಕಾಮಭಿಮುಖೋರಕ್ಷೋನಭಸ್ಥಲಗತೋಯಯೌ ॥೫೨॥ —...ಇತ್ಯುತ್ತರ ರಾಮಾಯಣೇ ತ್ರಯೋವಿಂಶ ಸ್ಸರ್ಗಃ ...—

ಹರ್ಷಾನ್ನಾದಾಂಸ್ತು ವಿಸೃಜನ್ನಿಷ್ಕ್ರಾಂತೋವರುಣಾಲಯಾತ್। ಮಹೋದರೇಣಸಂಯುಕ್ತೋ ಹರ್ಷಗದ್ಗದಭಾಷಿಣಾ॥ ದ್ವಿತೀಯ್ಯಂಜಿತವಾನ್ಲೋಕಂರಾವಣೋರಾಕ್ಷಸಾಧಿಪಃ । ತತೋಶ್ಮನಗರಂಭೂಯೋವಿಚೇರುರ್ಯುದ್ಧಲಾಲಸಾಃ ॥೨॥ ತ

---

ರಿತು, ವರುಣಾಯ-ವರುಣನಿಗೆ, ನಿವೇದ್ಯತಾಂ-ತಿಳಿಸಲ್ಪಡಲಿ, ಇತಿ-ಇಂತೆಂದು, ಅಬ್ರವೀತ್-ನುಡಿದನು ॥ ೪೮ ॥ ವಾರುಣಃ-ವರುಣಸಂಬಂಧಿಯಾದ, ಪ್ರಹಸೋನಾಮ-ಪ್ರಹಸನೆಂದು ಪ್ರಸಿದ್ಧನಾದ, ಮಂತ್ರೀಚ-ಮಂತ್ರಿಯೂಕೂಡ,ರಾವಣಂ-ರಾವಣನನ್ನು ಕುರಿತು, ಅಬ್ರವೀತ್-ನುಡಿದನು, ಯುಧಿ-ಯುದ್ಧದಲ್ಲಿ, ತ್ವಂ-ನೀನು, ಯಂ-ಯಾವನನ್ನು, ಆಹ್ವಯಸೇ-ಕರೆಯುತ್ತೀಯೋ, ಸಃ-ಅಂಥಾ, ಮಹಾತೇಜಾಃ-ಮಹಾತೇಜಸ್ವಿಯಾದ, ಜಲೇಶ್ವರಃ-ಜಲಾಧಿಪತಿಯಾದ, ವರುಣಃ-ವರುಣನು, ಗಾಂಧರ್ವಂ-ಭರತಶಾಸ್ತ್ರವನ್ನು, ಶ್ರೋತುಂ-ಕೇಳುವದಕ್ಕೋಸ್ಕರ,ಬ್ರಹ್ಮಲೋಕಂ-ಸತ್ಯಲೋಕವಂಕುರಿತು, ಗತಃಖಲು, ಹೋಗಿಧ್ದಾನಷ್ಟೆ ॥೪೯॥ ಹೇವೀರ-ಎಲೈ ಶೂರನೆ, ತವ-ನಿನಗೆ, ತತ್-ಆ ಕಾರಣದ ದೆಸೆಯಿಂದ, ನೃಪೆ-ರಾಜನು, ಗತೇಸತಿ- ಹೊರಟುಹೋದವನಾಗುತಿರಲಾಗಿ, ಪರಿಶ್ರಾಮ್ಯ-ಶ್ರಮೆಬಿದ್ದು, ವೃಥಾ-ವ್ಯರ್ಥವು, ಕಿಂತು-ಮತ್ತೇನೆಂದರೆ, ವೀರಾಃ-ವೀರರಾದ, ಯೇಕುಮಾರಾಃ-ಯಾವಕುವರರು, ಸನ್ನಿಹಿತಾಃ-ಸಮೀಪದಲ್ಲಿದ್ದರೋ, ತೇ-ಅವರು, ಪರಾಜಿತಾಃ-ಸೋಲಿಸಲ್ಪಟ್ಟರು ॥ ೫೦ ॥ ರಾಕ್ಷಸೇಂದ್ರಸ್ತು-ರಾವಣನಾದರೆ, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಆತ್ಮನಃ-ತನ್ನ, ನಾಮಚ-ಹೆಸರನ್ನೂ ಕೂಡ, ವಿಶ್ರಾವ್ಯ-ಘೋಷಿಸಿ-ಹರ್ಷಾತ್-ಸಂತೋಷದ ದೆಸೆಯಿಂದ, ನಾದಂ-ಶಬ್ದವನ್ನು, ವಿಮುಂಚನ್ವೈ-ಬಿಡುತಿರುವನಾಗಿಯೆ, ವರುಣಾಲಯಾತ್-ವರುಣನಮನೆಯದೆಸೆಯಿಂದ, ನಿಷ್ಕ್ರಾಮತ್-ಹೊರಟುಹೋದನು ॥೫೧॥ ರಕ್ಷಃ-ರಾಕ್ಷಸನಾದ, ಸಃ-ಆ ರಾವಣನು, ಯೇನಪಥಾತು-ಯಾವ ಮಾರ್ಗದಿಂದಲಾದರೆ, ಆಗತಃ-ಬಂದನೋ, ತೇನೈವ-ಅದೇಮಾರ್ಗದಿಂದಲೆ,ವಿನಿವೃತ್ಯ-ಹಿಂದಿರುಗಿ, ಲಂಕಾಂ-ಲಂಕಾಪಟ್ಟಣವನ್ನು ಕುರಿತು, ಅಭಿಮುಖಃ-ಎದುರಾಗಿ ಬರುತಿರುವನಾಗಿ, ನಭಸ್ಥಲಗತಃ-ಅಂತರಿಕ್ಷಮಾರ್ಗವನ್ನ ಹೊಂದಿದವನಾಗಿ, ಯಯೌ-ಹೋದನು॥

ಇತಿ ಶ್ರೀಮದುತ್ತರ ರಾಮಾಯಣೇ ತ್ರಯೋವಿಂಶ ಸ್ಸರ್ಗಃ...

ಹರ್ಷಗದ್ಗದಭಾಷಿಣಾ-ಹರ್ಷ-ಸಂತೋಷದಿಂದ, ಗದ್ಗದ-ವಿಸ್ವರವಾಗಿ, ಭಾಷಿಣಾ-ಮಾತನಾಡುತ್ತಿರುವ, ಮಹೋದರೇಣಾ-ಮಹೋದರನೊಡನೆ, ಸಂಯುಕ್ತಃ-ಕೂಡಿಕೊಂಡಿರುವ ರಾವಣನು, ಹರ್ಷಾತ್-ಸಂತೋಷದಿಂದ, ನಾದಾನ್-ಕೋಲಾಹಲಧ್ವನಿಗಳನ್ನು, ವಿಸೃಜನ್-ಬಿಡುತ್ತಿರುವನಾಗಿ, ವರುಣಾಲಯಾತ್-ವರುಣನಮನೆಯಿಂದ, ನಿಷ್ಕ್ರಾಂತಃ-ಹೊರಟು ಬಂದನು ॥ ೧ ॥ ರಾಕ್ಷಸಾಧಿಪಃ-ರಾಕ್ಷಸಾಧಿಪನಾದ, ರಾವಣಃ-ರಾವಣನು, ದ್ವಿತೀಯ್ಯಂ-ಎರಡನೆಯದಾದ, ಲೋಕಂ-ಲೋಕವನ್ನು, ಜಿತವಾನ್-ಜಯಿಸಿದನು, ತತಃ-ಬಳಿಕ, ಯುದ್ಧಲಾಲಸಾಃ-ಯುದ್ಧದಲ್ಲಾಸಕ್ತರಾದ ರಾಕ್ಷಸರು, ಅಶ್ಮನಗರಂ-ಅಶ್ಮನಗರವನ್ನು ಕುರಿತು, ಭೂಯಃ-ಮತ್ತು, ವಿಚೇರುಃ-ಹೊರಟರು ॥ ೨ ॥ ತತ್ರ-ಆ ಪಟ್ಟಣದಲ್ಲಿ, ದಶಗ್ರೀವಃ-ರಾವಣನು, ಪರಮಭಾಸ್ವ

---

ಆ ವರುಣ ಪುತ್ರರನ್ನು ಅವರ ಭೃತ್ಯರು ತೆಗೆದುಕೊಂಡು ಪೋಗಿ ಮಂದಿರಂಗಳಂ ಸೇರಿಸಿದರು ॥೪೭॥ ಆ ಸಮಯದಲ್ಲಿ ರಾವಣನು ಆ ಭೃತ್ಯರಂ ಕುರಿತು ಇಂತೆಂದನು, ಎಲೈ ಭೃತ್ಯರೆ! ನೀವು ಜಾಗ್ರತೆಯಾಗಿ ಪೋಗಿ ವರುಣನಿಗೆ ಈ ವರ್ತಮಾನವಂ ತಿಳಿಸಿರೆಂದು ಪೇಳಲೂ, ಆಗ ವರುಣ ಮಂತ್ರಿಯಾದ ಪ್ರಹಸನೆಂಬವನು ಇಂತೆಂದು ಉತ್ತರವಂ ಕೊಟ್ಟನು, ಎಲೈ ರಾವಣನೆ! ಯಾವ ವರುಣನನ್ನು ನೀನು ಕಾಳಗಕ್ಕೆ ಕರೆಯುವಿಯೋ, ಅಂಥಾ ಜಲಾಧಿಪತಿಯು, ಗಾನವಂ ಕೇಳುವದಕ್ಕೋಸ್ಕರ ಬ್ರಹ್ಮಲೋಕಕ್ಕೆ ಪೋಗಿರುವನು ಆದಕಾರಣ ನೀನು ಬಹಳವಾಗಿ ಶ್ರಮಿಸಿದರೂ,ಪ್ರಯೋಜನವಿಲ್ಲ, ಸಮೀಪವರ್ತಿಗಳಾಗಿದ್ದ ಕುಮಾರರೆಲ್ಲರು ನಿನ್ನಿಂದ ಪರಾಜಿತರಾಗಿರುವರು, ಎಂದು ನುಡಿಯಲೂ, ರಾಕ್ಷಸೇಂದ್ರನಾದ ರಾವಣನದಂಕೇಳಿ, ಹರ್ಷಾಟ್ಟಹಾಸವಂಗೈದು ತನ್ನ ನಾಮಧೇಯವಂ ಘೋಷಿಸಿ, ವರುಣನ ಮಂದಿರದ ದೆಸೆಯಿಂದ ಬಂದ ಮಾರ್ಗದಿಂದಲೇ ಹಿಂತಿರಿಗಿ ಲಂಕಾಭಿಮುಖನಾಗಿ ಗಗನಮಾರ್ಗದಲ್ಲಿ ಹೊರಟನು ॥೫೨॥

—...*ಇತಿ ಶ್ರೀಮದುತ್ತ ರಾಮಾಯಣದೊಳ್ ೨೩ನೇ ಸರ್ಗಂ ಮುಗಿದುದು.*...—

ಸಮನಂತರ ಕಾಲದಲ್ಲಿ ಹರುಷದಿಂದ ಗದ್ಗದ ಧ್ವನಿಯುಳ್ಳಂತೆ ಮಾತಾಡುತಿರುವ ಮಹೋದರನಿಂದ ಯುಕ್ತನಾದ ಮತ್ತು ದಶಗ್ರೀವಗಳುಳ್ಳ ಮತ್ತು ಕಡು ಪರಾಕ್ರಮಿಯಾದ ಆ ರಾಕ್ಷಸಾಧಿಪತಿಯಾದ ರಾವಣನು ಎರಡನೇ ಲೋಕವಂ ಜಯಿಸಿ, ಹರ್ಷಾಟ್ಟಹಾಸವಂಗೈಯ್ಯುತ್ತಾ ವರುಣನ ಮನೆಯಂ ತೊರದು ಹಿಂದಕ್ಕೆ ಹೊರಟು ಯುದ್ಧೇಚ್ಛೆಯುಳ್ಳವರಾಗಿ ಪುನಹಾ ಅಶ್ಮನಗರವಂ ಹೊಕ್ಕು ತಿರುಗುತಿದ್ದರು ॥೨॥ ಆ ಪುರದಲ್ಲಿ ಕಡುಕಾಂತಿಯುಳ್ಳದ್ದಾಗಿಯೂ, ವೈ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ರಾಪಶ್ಯದ್ದಶಗ್ರೀವೋಗೃಹಂಪರಮಭಾಸ್ವರಮ್। ವೈಡೂರ್ಯತೋರಣಾಕೀರ್ಣಂಮುಕ್ತಾಜಾಲವಿಭೂಷಿತಮ್ ॥೩॥ ಸುವ ರ್ಣಸ್ತಂಭಗಹನಂವೇದಿಕಾಭಿರಲಂಕೃತಮ್ । ವಜ್ರಸ್ಫಟಿಕಸೋಪಾನಂಕಿಂಕಿಣೀಜಾಲಸಂವೃತಮ್ ॥೪॥ ಬಹ್ವಾಸನಯು ತಂರಮ್ಯಂಮಹೇಂದ್ರಸದನೋಪಮಮ್ । ತಂತುದೃಷ್ಟ್ವಾಗೃಹವರಂದಶಗ್ರೀವಃಪ್ರತಾಪವಾನ್ ॥೫॥ ಕಸ್ಯೇದಂಭವನಂ ಸೌಮ್ಯಂಮೇರುಕಂದರಸಂನಿಭಮ್ । ಗಚ್ಛಪ್ರಹಸ್ತಶೀಘ್ರಂತ್ವಂಜಾನೀಷ್ವಭವನೋತ್ತಮಮ್ ॥೬॥ ಏವಮುಕ್ತಃಪ್ರಹ ಸ್ತಸ್ತುಪ್ರವಿವೇಶಗೃಹೋತ್ತಮಮ್ । ಶೂನ್ಯಂಪ್ರೇಕ್ಷ್ಯಚತದ್ದ್ವಾರಂಪುನಃಕಕ್ಷ್ಯಾಂತರಂಯಯೌ ॥ ೭ ॥ ಸಪ್ತಕಕ್ಷ್ಯಾಂ ತರಂಗತ್ವಾತತೋಜ್ವಾಲಾಮಪಶ್ಯತ । ತತೋದೃಷ್ಟಃಪುಮಾಂಸ್ತತ್ರದೃಷ್ಟ್ವಾಹಾಸಂಮುಮೋಚಸಃ ॥೮॥ ಶ್ರುತ್ವಾಸತಂ ಮಹಾಹಾಸಮೂರ್ಧ್ವರೋಮಾಭವತ್ತದಾ ॥೯॥ ಜ್ವಾಲಾಮಧ್ಯಸ್ಥಿತಸ್ತತ್ರಹೇಮಮಾಲೀವ್ಯದೃಶ್ಯತ । ಆದಿತ್ಯಇವದು ಷ್ಪ್ರೇಕ್ಷ್ಯಸ್ಸಾಕ್ಷಾದಿವಯಮಃಪ್ರಭುಃ ॥೧೦॥ ತತೋದೃಷ್ಟ್ವಾತುವೃತ್ತಾಂತಂತ್ವರಮಾಣೋವಿನಿರ್ಗತಃ। ವಿನಿರ್ಗಮ್ಯಾಬ್ರ

---

ರಂ-ಪರಮ ಅಧಿಕವಾಗಿ, ಭಾಸ್ವರಂ-ಹೊಳೆಯುತ್ತಿರುವ, ವೈಡೂರ್ಯತೋರಣಾಕೀರ್ಣಂ-ವೈಡೂರ್ಯಮಣಿವಿಕಾರವಾದ ಬಹಿರ್ದ್ವಾರಗಳಿಂದ ವ್ಯಾಪ್ತವಾದ, ಮುಕ್ತಾಜಾಲವಿಭೂಷಿತಂ-ಮುತ್ತಿನ ವಿಕಾರಂಗಳಾದ ಗವಾಕ್ಷಿಗಳಿಂದಲಂಕೃತವಾದ, ಸುವರ್ಣಸ್ತಂಭಗಹನಂ-ಬಂಗಾರವಿಕಾರವಾದ ಸ್ತಂಭಗಳಿಂದ ಪ್ರವೇಶಿಸ ಲಸಾಧ್ಯವಾದ, ವೇದಿಕಾಭಿಃ-ಜಗಲಿಗಳಿಂದ, ಅಲಂಕೃತಂ-ಅಲಂಕರಿಸಲ್ಪಟ್ಟ, ವಜ್ರಸ್ಫಟಿಕಸೋಪಾನಂ-ವಜ್ರ-ವಜ್ರಗಳ, ಸ್ಫಟಿಕ-ಸ್ಫಟಿಕಗಳ, ಸೋಪಾನಂ-ಪಾವಟಿಕೆಗಳುಳ್ಳ, ಕಿಂಕಿಣೀಜಾಲಸಂವೃತಂ-ಕಿಂಕಿಣೀ-ಕಿರುಗೆಜ್ಜೆಗಳ, ಜಾಲ-ಸಮೂಹದಿಂದ, ಸಂವೃತಂ-ಸುತ್ತಲ್ಪಟ್ಟ, ಬಹ್ವಾಸನಯುತಂ-ಬಹು-ಬಹಳವಾದ, ಆಸನ-ಪೀಠಗಳಿಂದ, ಯುತಂ-ಕೂಡಿಕೊಂಡಿರುವ, ರಮ್ಯಂ-ಇಂಪಾಗಿರುವ, ಮಹೇಂದ್ರಸದನೋಪಮಂ - ದೇವೇಂದ್ರನಮನೆಗೆ ಸಮಾನವಾದ, ಗೃಹಂ-ಗೃಹವನ್ನು, ಅಪಶ್ಯತ್-ನೋಡಿದನು ॥ ೪ ೫ ॥ ತಂ-ಗೃಹವರಂ-ಆ ದೊಡ್ಡ ಮನೆಯನ್ನು, ದೃಷ್ಟ್ವಾ-ಕಂಡು, ಪ್ರತಾಪವಾನ್-ಪರಾಕ್ರಮಶಾಲಿಯಾದ, ದಶಗ್ರೀವಃ-ದಶಕಂಠನು, ಮೇರುಕಂದರಸಂನಿಭಂ-ಮೇರುಪರ್ವತದ ಗುಹೆಗೆಸಮಾನವಾದ, ಸೌಮ್ಯಂ-ಮನೋಹರವಾದ, ಇದಂ-ಭವನಂ-ಈ ಮನೆಯು, ಕಸ್ಯ-ಯಾರದು, ಹೇಪ್ರಹಸ್ತ-ಓ ಪ್ರಹಸ್ತನೇ, ತ್ವಂ-ನೀನು, ಶೀಘ್ರಂ-ಜಾಗ್ರತೆಯಾಗಿ, ಗಚ್ಛ-ಹೋಗು, ಭವನೋತ್ತಮಂ ಜಾನೀಷ್ವ- ಮನೆಯನ್ನು ತಿಳಿದುಕೋ ॥ ೬ ॥ ಏವಂ-ಈ ಪರಿಯಾಗಿ, ಉಕ್ತಃ-ಹೇಳಲಲ್ಪಟ್ಟ, ಪ್ರಹಸ್ತಸ್ತು-ಪ್ರಹಸ್ತನಾದರೆ, ಗೃಹೋತ್ತಮಂ-ಉತ್ತಮವಾದ ಮನೆಯನ್ನು, ಪ್ರವಿವೇಶ-ಹೊಕ್ಕನು, ಶೂನ್ಯಂ-ನಿರ್ಜನವಾದ, ತದ್ದ್ವಾರಂ-ಆ ಮನೆಯಬಾಗಲನ್ನು, ಪ್ರೇಕ್ಷ್ಯ-ಕಂಡು, ಪುನಃ-ಮತ್ತು, ಕಕ್ಷ್ಯಾಂತರಂ- ಮತ್ತೊಂದು ತೊಟ್ಟಿಯನ್ನು ಕುರಿತು, ಯಯೌ-ತೆರಳಿದನು ॥ ೭ ॥ ಸಪ್ತಕಕ್ಷ್ಯಾಂತರಂ-ಸಪ್ತ-ಏಳನೇದಾದ, ಕಕ್ಷ್ಯಾಂ-ತೊಟ್ಟಿಮನೆಯ, ಅಂತರಂ-ಮಧ್ಯವನ್ನು, ಗತ್ವಾ-ಹೊಂದಿ, ತತಃ-ಬಳಿಕ, ಜ್ವಾಲಾಂ-ಉರಿಯನ್ನು-ಅಪಶ್ಯತ-ಕಂಡನು, ತತಃ-ಬಳಿಕ ತತ್ರ-ಆ ಜ್ವಾಲೆಯಲ್ಲಿ, ಪುಮಾನ್-ಪುರುಷನು, ದೃಷ್ಟಃ-ಕಾಣಲ್ಪಟ್ಟನು, ಸಃ-ಆ ಪುರುಷನು, ದೃಷ್ಟ್ವಾ-ಈ ಪ್ರಹಸ್ತನ್ನ ಕಂಡು, ಹಾಸಂ-ಅಟ್ಟಹಾಸಧ್ವನಿಯನ್ನು, ಮುಮೋಚ-ಬಿಟ್ಟನು ॥೮॥ ಸಃ-ಆ ಪ್ರಹಸ್ತನು, ತಂ-ಮಹಾಹಾಸಂ-ಆ ದೊಡ್ಡ ಪರಿಹಾಸ ಧ್ವನಿಯನ್ನು, ಶ್ರುತ್ವಾ-ಕೇಳಿ, ಊರ್ಧ್ವರೋಮಾ-ಊರ್ಧ್ವಾಕಾರ ರೋಮಗಳುಳ್ಳವನು, ಅಭವತ್-ಆದನು, ॥೯॥ ತತ್ರ-ಆ ಮನೆಯಲ್ಲಿ, ಜ್ವಾಲಮಧ್ಯಸ್ಥಿತಃ-ಜ್ವಾಲೆಗಳ ಮಧ್ಯಭಾಗದಲ್ಲಿರುವ, ಹೇಮಮಾಲೀ-ಸುವರ್ಣ ಮಾಲಿಕೆಗಳಿಂದ ಯುಕ್ತನಾದಪುರುಷನು, ಆದಿತ್ಯಇವ-ಸೂರ್ಯನಂತೆ, ದುಷ್ಪ್ರೇಕ್ಷ್ಯಃ-ನೋಡಲಸಾಧ್ಯನಾದವನಾಗಿ, ಸಾಕ್ಷಾತ್-ಪ್ರತ್ಯಕ್ಷವಾದ, ಪ್ರಭುಃ-ಸಮರ್ಥನಾದ, ಯಮಃ-ಯಮಧರ್ಮರಾಯನಂತೆ, ವ್ಯದೃಶ್ಯತ-ಕಾಣಲ್ಪಟ್ಟನು ॥೧೦॥ ತತಃ-ಬಳಿಕ, ವೃತ್ತಾಂತಂ-ನಡವಳಿಕೆಯನ್ನು, ದೃಷ್ಟ್ವಾ-ಕಂಡು, ತ್ವರಮಾಣಃ-ಜಾ

---

ಡೂರ್ಯ ಮಣಿ ವಿಕಾರಂಗಳಾದ ತೋರಣಂಗಳುಳ್ಳದ್ದಾಗಿಯೂ, ಮುತ್ತುಗಳಿಂದ ವ್ಯಾಪ್ತವಾದ ಗವಾಕ್ಷಿಗಳುಳ್ಳದ್ದಾಗಿಯೂ, ಸುವರ್ಣಸ್ತಂಭಗಳಿಂದ ದುರವಗಾಹವಾಗಿಯೂ, ವೇದಿಕೆಗಳಿಂದ ಅಲಂಕೃತವಾಗಿಯೂ, ವಜ್ರಗಳಿಂದಲೂ, ಸ್ಫಟಿಕದಿಂದಲೂ, ಕಟ್ಟಲ್ಪಟ್ಟ ಪಾವಟಿಗೆಗಳುಳ್ಳದ್ದಾಗಿಯೂ, ಕಿರುಗೆಜ್ಜೆಗಳ ತಂಡಗಳಿಂದ ಸುತ್ತುವರಲ್ಪಟ್ಟದ್ದಾಗಿಯೂ, ಬಹಳವಿಧವಾದ ಆಸನಗಳಿಂದ ಯುಕ್ತವಾದದ್ದಾಗಿಯೂ, ಮಹೇಂದ್ರನ ಮಂದಿರದಂತೆ ಮನೋಹರವಾಗಿರುವ ಒಂದಾನೊಂದು ಮನೆಯಂ ಕಂಡು, ಮೇರುಮಂದರ ಸದೃಶವಾದ ಈ ಮಂದಿರವು ಯಾರದಿರಬಹುದೆಂದು ಯೋಚಿಸಿ, ಪ್ರಹಸ್ತನಂ ಕುರಿತಿಂತೆಂದನು. ಎಲೈ ಪ್ರಹಸ್ತನೆ! ಇದು ಯಾರದು ಜಾಗ್ರತೆಯಾಗಿ ಅರಿತುಕೊಂಡು ತಿಳಿಸೆಂದು ನುಡಿಯಲೂ, ಆ ಪ್ರಹಸ್ತನು ಅತಿ ತ್ವರಿತವಾಗಿ ಪೋಗಿ ಆ ಗೃಹೋತ್ತಮವಂ ಹೊಕ್ಕು, ಜನರಹಿತವಾದ ಆ ತೊಟ್ಟಿಯಂ ಕಂಡು, ಮತ್ತೊಂದು ತೊಟ್ಟಿಯಂ ಪ್ರವೇಶಿಸಿದನು ॥೭॥ ಈಪರಿಯಾಗಿ ಆರುತೊಟ್ಟಿಗಳನ್ನತಿಕ್ರಮಿಸಿ ಏಳನೇ ತೊಟ್ಟಿಯ ಮಧ್ಯಪ್ರದೇಶವಂ ಹೊಕ್ಕಲೂ, ಮಹತ್ತರವಾದ ಜ್ವಾಲೆಯಂಕಂಡನು. ಆ ಬಳಿಕ ಅಲ್ಲಿ ಒಬ್ಬಾನೊಬ್ಬ ಪುರುಷನಂ ನೋಡಿ, ಅಟ್ಟಹಾಸವಂ ಗೈಯ್ಯಲೂ, ಆ ಪುರುಷನು ಅದಂ ಕೇಳಿ ಆ ಕಾಲದಲ್ಲಿ ಊರ್ಧ್ವಾಕಾರವಾದ ಕೇಶಗಳುಳ್ಳವನಾದನು ॥೯॥ ಆ ತೊಟ್ಟಿಯಲ್ಲಿ ಜ್ವಾಲೆಗಳ ಮಧ್ಯೆ ನಿಂತಿರುವ ಸುವರ್ಣಮಾಲಿಕೆಗಳುಳ್ಳ ಆ ಪುರುಷನು, ಸೂರ್ಯನತೆರದಿ ನೋಡಲಸಾಧ್ಯನಾಗಿಯೂ, ಸಾಕ್ಷಾದ್ಯಮನಂತೆ ಸಮರ್ಥನಾಗಿಯೂ, ಕಾಣಿಸಿದನು ॥೧೦॥ ಆ ಬಳಿಕ ನಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವೀತ್ಸರ್ವಂರಾವಣಾಯನಿಶಾಚರಃ ॥೧೧॥ ಅಜಗಾಮದಶಗ್ರೀವಃಪುಷ್ಪಕಾದವತೀರ್ಯಸಃ ॥ ಪ್ರವೇಷ್ಟುಕಾಮೋವೇಶ್ಮಾನಃ ಭಿನ್ನಾಂಜನಚಯೋಪಮಃ ॥೧೨॥ ಬದ್ಧಮೌಳಿರ್ವಪುಷ್ಮಾಂಶ್ಚ ಪುರುಷಶ್ಚಾಗ್ರತಸ್ಸ್ಥಿತಃ॥ ದ್ವಾರಮಾವೃತ್ಯಸಹಸಾಜ್ವಾಲಾಜಿಹ್ವೋಭಯಾನಕಃ ॥೧೩॥ ರಕ್ತಾಕ್ಷಃಶ್ವೇತವದನೋಬಿಂಬೋಷ್ಠಶ್ಚೋರ್ಧ್ವರೋಮವಾನ್ । ಮಹಾಭೀಷಣನಾಸಶ್ಚ ಕಂಬುಗ್ರೀವೋಮಹಾಹನುಃ ॥೧೪॥ ಗೂಢಶ್ಮಶ್ರುರ್ನಿಗೂಢಾಸ್ಥಿರ್ದಂಷ್ಟ್ರಾಭೋರೋಮಹರ್ಷಣಃ ॥೧೫॥ ಏತಾದೃಶಂ ವೈಪುರುಷಂದದರ್ಶಸತುರಾವಣಃ । ಗೃಹೀತ್ವಾಲೋಹಮುಸಲಂದ್ವಾರಂವಿಷ್ಟಭ್ಯಸುಸ್ಥಿತಮ್ ॥೧೬॥ ಅಥಸಂದರ್ಶನಾತ್ತಸ್ಯಊರ್ಧ್ವರೋಮಾವ್ಯಜಾಯತ। ಅಸ್ಪಂದತಾಸ್ಯಹೃದಯಂವೇಪಥುಶ್ಚಾಪ್ಯಜಾಯತ ॥೧೭॥ ನಿಮಿತ್ತಾನ್ಯಮನೋಜ್ಞಾನಿದೃಷ್ಟ್ವಾರಾಮವ್ಯಚಿಂತಯತ್ । ಅಥಚಿಂತಯತಸ್ತಸ್ಯಸಏಷಪುರುಷೋಬ್ರವೀತ್ ॥ ೧೮ ॥ ಕಿಂನುಚಿಂತಯಸೇರಕ್ಷೋ

ಗ್ರತೆ ಬೀಳುತಿರುವನಾಗಿ, ವಿನಿರ್ಗತಃ–ಹೊರಟುಬಂದ, ನಿಶಾಚರಃ–ರಾಕ್ಷಸನಾದ ಪ್ರಹಸ್ತನು, ವಿನಿರ್ಗಮ್ಯ–ಹೊರಟುಬಂದು, ರಾವಣಾಯ – ರಾವಣನಿಗೋಸ್ಕರ, ಸರ್ವಂ–ಸಮಸ್ತವನ್ನು, ಅಬ್ರವೀತ್–ಹೇಳಿದನು ॥ ೧೧ ॥ ಅಥ–ಬಳಿಕ, ಭಿನ್ನಾಂಜನಚಯೋಪಮಃ–ಭಿನ್ನಾ–ಭೇದಿಸಲ್ಪಟ್ಟ, ಅಂಜನ–ಕಾಡಿಗೆಯ, ಚಯ–ರಾಶಿಗೆ, ಉಪಮಃ–ಸಮಾನನಾದ, ಸದಶಗ್ರೀವಃ–ಆ ರಾವಣನು, ಪುಷ್ಪಕಾತ್–ಪುಷ್ಪಕವಿಮಾನದ ದೆಸೆಯಿಂದ, ಅವತೀರ್ಯ–ಇಳಿದು, ವೇಶ್ಮ–ಮನೆಯನ್ನು, ಪ್ರವೇಷ್ಟುಕಾಮಸ್ಸನ್–ಹೊಕ್ಕ ಬೇಕೆಂಬ ಇಚ್ಛೆಯುಳ್ಳವನಾಗಿ, ಆ ಜಗಾಮ–ಬಂದನು ॥ ೧೨ ॥ ಬದ್ಧಮೌಳಿಃ–ಕಿರೀಟವುಳ್ಳ, ವಪುಷ್ಮಾನ್– ದೇಹಧಾರಿಯಾದ, ಜ್ವಾಲಾಜಿಹ್ವಃ–ಉರಿಯುತಿರುವ ನಾಲಿಗೆಯುಳ್ಳ, ಭಯಾನಕಃ–ಭಯಂಕರನಾದ,ರಕ್ತಾಕ್ಷಃ–ಕೆಂಗಣ್ಣುಗಳುಳ್ಳ, ಶ್ವೇತವದನಃ–ಬಿಳೇಮುಖವುಳ್ಳ, ಬಿಂಬೋಷ್ಠಃ–ತೊಂಡೇಹಣ್ಣಿಗೆಸಮಾನವಾದ ತುಟಿಗಳುಳ್ಳ, ಊರ್ಧ್ವರೋಮವಾನ್–ಊರ್ಧ್ವಾಕಾರ ರೋಮಗಳುಳ್ಳ, ಮಹಾಭೀಷಣನಾಸಶ್ಚ –ಮಹಾ ದೊಡ್ಡದಾಗಿರುವ, ಭೀಷಣ–ಭಯಂಕರವಾದ, ನಾಸಶ್ಚ –ಮೂಗುಳ್ಳ, ಕಂಬುಗ್ರೀವಃ–ಶಂಖದೋಪಾದಿಯಲ್ಲಿರುವ ಕಂಠವುಳ್ಳ, ಮಹಾಹನುಃ–ದೊಡ್ಡದಾದ ಕೆನ್ನೆಗಳುಳ್ಳ, ಗೂಢಶ್ಮಶ್ರುಃ–ಗಲ್ಲುಮೀಸೆಗಳುಳ್ಳ,ನಿಗೂಢಾಸ್ಥಿಃ–ಗೋಪ್ಯವಾದ ಯಲುಬುಗಳುಳ್ಳ, ದಂಷ್ಟ್ರಾಭಃ–ಕೋರೆಹಲ್ಲುಗಳಿಂದ ಪ್ರಕಾಶಮಾನನಾಗಿರುವ, ರೋಮಹರ್ಷಣಃ–ರೋಮಾಂಚವನ್ನು ಉಂಟು ಮಾಡುತಿರುವ, ಪುರುಷಶ್ಚ–ಪುರುಷನು, ಸಹಸಾ–ಶೀಘ್ರವಾಗಿ,ದ್ವಾರಂ–ಬಾಗಲನ್ನು, ಆವೃತ್ಯ–ತಡೆಮಾಡಿ, ಅಗ್ರತಃ ಮುಂದುಗಡೆ, ಸ್ಥಿತಃ–ನಿಂತನು ॥ ೧೩ ॥ ೧೪ ॥ ೧೫ ॥ ಸರಾವಣಸ್ತು–ಆ ರಾವಣನಾದರೆ, ಲೋಹಮುಸಲಂ–ಲೋಹವಿಕಾರವಾದ ಒನಿಕೆಯಂಬ ಆಯುಧವನ್ನು, ಗೃಹೀತ್ವಾ–ಹಿಡಿದು, ದ್ವಾರಂ–ಬಾಗಲನ್ನು, ವಿಷ್ಟಭ್ಯ–ತಡೆಮಾಡಿ, ಸುಸ್ಥಿತಂ–ನಿಂತಿರುವ, ಏತಾದೃಶಂ–ಇಂಥಾವನಾದ, ಪುರುಷಂ ವೈ–ಪುರುಷನನ್ನಾದರೆ, ದದರ್ಶ–ಕಂಡನು॥೧೬॥ಅಥ–ಬಳಿಕ, ತಸ್ಯ–ಆ ಪುರುಷನ, ಸಂದರ್ಶನಾತ್–ನೋಡುವಿಕೆಯ ದೆಸೆಯಿಂದ, ಊರ್ಧ್ವರೋಮಾ– ರೋಮಾಂಚಿತವುಳ್ಳವನು, ವ್ಯಜಾಯತ–ಆದನು, ಅಸ್ಯ–ಈ ರಾವಣನ,ಹೃದಯಂ–ಗುಂಡಿಗೆ,ಅಸ್ಪಂದತ,ಅದಿರಿತು,ವೇಪಥುಶ್ಚಾಪಿ–ದೇಹಕಂಪವೂಕೂಡ, ಅಜಾಯತ–ಹುಟ್ಟಿತು, ಹೆ ರಾಮ–ಓ ಶ್ರೀರಾಮನೆ, ಅಮನೋಜ್ಞಾನಿ–ಮನಸ್ಸಿಗೆ ಒಪ್ಪದಿರುವ, ನಿಮಿತ್ತಾನಿ–ಶಕುನಗಳನ್ನು, ದೃಷ್ಟ್ವಾ–ಕಂಡು,ವ್ಯಚಿಂತಯತ್–ಆಲೋಚಿಸಿದನು, ಅಥ–ಬಳಿಕ, ಚಿಂತಯತಃ–ಯೋಚಿಸುತಿರುವ, ತಸ್ಯ–ಆ ರಾವಣನನ್ನು ನಾದರಣೆ ಮಾಡಿ,ಸಏಷಪುರುಷಃ–ಆ ಈ ಪುರುಷನು, ಅಬ್ರವೀತ್–ನುಡಿದನು ॥ ೧೭ ॥ ೧೮ ॥ ಹೇರಕ್ಷಃ–ಯಲೋರಾಕ್ಷಸನೆ, ಕಿಂನುಚಿಂತಯಸೇ–ಯಾವದನ್ನು ಕುರಿತು ಆಲೋಚಿಸುತ್ತಿ, ವಿಸ್ರಬ್ಧಂ– ಇಷ್ಟವನ್ನು

ಶಾಚರನಾದ ಆ ಪ್ರಹಸ್ತನಾದರೆ, ಕಡು ಭಯಂಕರನಾದ ಆ ಪುರುಷನಂ ಕಾಣುತಲೇ, ತ್ವರೆಯುಳ್ಳವನಾಗಿ, ರಾವಣನಿಗೆ ಈ ವೃತ್ತಾಂತವನ್ನರುಹುವದಕ್ಕೋಸ್ಕರ ಹಿಂದಕ್ಕೆ ಬಂದವನಾಗಿ ಅದನ್ನೆಲ್ಲಾ ತಿಳಿಶಿದನು॥೧೧॥ ಮಿಶ್ರಮಾದ ಕಾಡಿಗೆಯ ತಂಡಕ್ಕೆ ಸಮಾನವಾದ ದೇಹಕಾಂತಿಯುಳ್ಳ ಆ ದಶಕಂಠನು ಆ ಬಳಿಕ ಪುಷ್ಪಕ ವಿಮಾನದಿಂದ ಕೆಳಗಿಳಿದು ಆಮನೆಯಂ ಹೊಕ್ಕ ಬೇಕೆಂದು ಬರಲೂ, ಕಟ್ಟಲ್ಪಟ್ಟ ಕೇಶಗಳುಳ್ಳವನಾಗಿಯೂ, ದೊಡ್ಡದಾದ ದೇಹವುಳ್ಳವನಾಗಿಯೂ, ಜ್ವಾಲಾ ವಿಕಾರವಾದ ನಾಲಿಗೆ ಯುಳ್ಳವನಾಗಿಯೂ ಮಹಾ ಭಯಂಕರನಾಗಿಯೂ, ಕೆಂಪಾದ ಕಣ್ಣುಗಳುಳ್ಳ ವನಾಗಿಯೂ, ಬಿಳುಪಾದ ಮುಖವುಳ್ಳವನಾಗಿಯೂ, ಬಿಂಬ ಫಲದಂತೆ ಓಷ್ಠಗಳುಳ್ಳವನಾಗಿಯೂ, ಊರ್ಧ್ವಾಕಾರವಾದ ರೋಮಗಳುಳ್ಳವನಾಗಿಯೂ, ಕಡುಭಯಂಕರವಾದ ಮೂಗುಳ್ಳವನಾಗಿಯೂ, ಶಂಖದೋಪಾದಿಯಾಗಿರುವ ಕಂಠವುಳ್ಳವನಾಗಿಯೂ, ಮಹತ್ತರವಾದ ಕೆನ್ನೆಗಳುಳ್ಳವನಾಗಿಯೂ, ಸ್ಪಷ್ಟವಾಗಿ ಕಾಣದಿರುವ ಶ್ಮಶ್ರುಗಳುಳ್ಳವನಾಗಿಯೂ, ಚನ್ನಾಗಿ ಬಲಿತಿರುವನಾಗಿಯೂ,ಕೋರೆ ಹಲ್ಲುಗಳಿಂದ ಪ್ರಕಾಶಮಾನನಾಗಿಯೂ ರೋಮಾಂಚವುಳ್ಳವನಾಗಿಯೂ ಆಗಿರುವ ಆ ಪುರುಷನು ದ್ವಾರದಲ್ಲಿ ಅಡ್ಡವಾಗಿ ಬಂದು ಮುಂದೆ ನಿಂತವನಾದನು ॥೧೫॥ ಆಬಳಿಕ ರಾವಣನಾದರೆ, ಲೋಹವಿಕಾರವಾದ ಮುಸಲಾಯುಧವಂ ಪಿಡಿದು ದ್ವಾರದಲ್ಲಿ ನಿಂತಿರುವ ಇಂಥಾ ಪುರುಷನಂ ಕಂಡನು ॥೧೬॥ ಎಲೈ ನರಶ್ರೇಷ್ಠನೆ! ಆ ಪುರುಷನ ದರ್ಶನಮಾತ್ರ, ದಿಂದಲೇ, ಈ ರಾವಣನ ಎದೆ ಗುಂಡಿಗೆ ಹೊಡದು ಹೋಗಿ ಕೇಶಗಳೆಲ್ಲ ಊರ್ಧ್ವಾಕಾರವಾದವು, ಮತ್ತೂ ಕಂಪಾಯಮಾನ ಸಹಾ ಹುಟ್ಟಿದಂಥಾದ್ದಾಯಿತು, ಅಂಥಾದು ಶ್ಯಕುನಂಗಳನ್ನು ಕಂಡು ಆ ದಶಗ್ರೀವನು ಯೋಚಿಸುತಿರಲೂ ಆ ಪುರುಷನೇ ಇಂತೆಂದು ಹೇಳಿದನು ॥೧೮॥ ಎಲೈ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ವಂಬ್ರೂಹಿಮಾಚಿರಮ್। ಯುದ್ಧಾತಿಥ್ಯಮಹಂವೀರಕರಿಷ್ಯೇರಜನೀಚರ ॥ ೧೯ ॥ ಏವಮುಕ್ತ್ವಾಸತದ್ರಕ್ಷಃಪ್ರಸ ನ್ನಂ ಬ್ರೂಹಿಮಾಚಿರಮ್। ಯುದ್ಧಾತಿಥ್ಯಮಹಂವೀರಕರಿಷ್ಯೇರಜನೀಚರ ॥ ೧೯ ॥ ಏವಮುಕ್ತ್ವಾಸತದ್ರಕ್ಷಃಪ್ರಸ

ಯೋತ್ಸ್ಯಸೇಬಲಿನಾಸಾರ್ಧಂಮಯಾವಾತದ್ವಿಧೀಯತಾಮ್॥೨೦॥ರಾವಣೋಸಿಚಕಿಂಭೂಯಊ ರ್ಧ್ವರೋಮಾಕಥಂಹ್ಯಸಿ ॥೨೧॥ ಅಥಧೈರ್ಯಂಸಮಾಲಂಬ್ಯರಾವಣೋವಾಕ್ಯಮಬ್ರವೀತ್ । ಗೃಹೇತ್ರತಿಷ್ಠತೇಕೋವಾ ತಂಬ್ರೂಹಿಮದತಾಂವರ ॥೨೨॥ ತೇನೈವಸಾರ್ಧಂಯೋತ್ಸ್ಯಾಮಿಯಥಾವಾಮನ್ಯತೇಭವಾನ್ ॥೨೩॥ ಸಪುನಃಪ್ರಾಹ ದಾನವೇಂದ್ರೋತ್ರತಿಷ್ಠತಿ । ಏಷವೈಪರಮೋದಾರಶ್ಶೂರಸ್ಸತ್ಯಪರಾಕ್ರಮಃ ॥೨೪॥ ವೀರೋಬಹುಗುಣೋಪೇತಃಪಾಶಹಸ್ತ ಇವಾಂತಕಃ। ಕಾಲಾರ್ಕಇವತೇಜಸ್ವೀಸಮರೇಷ್ವನಿವರ್ತಕಃ ॥ ೨೫॥ ಅಮರ್ಷೀದುರ್ಜಯೋಧೀರೋಬಲಿರ್ಗುಣಸಾಗ

ಬ್ರೂಹಿ–ಹೇಳು,ಮಾಚಿರಂ–ತಡಮಾಡಬೇಡ, ಹೇವೀರ–ಎಲೈಶೂರನೆ, ಹೇರಜನೀಚರ–ಎಲೋರಾಕ್ಷಸನೆ, ಯುದ್ಧಾತಿಥ್ಯಂ– ಯುದ್ಧವೆಂಬ ಅತಿಥಿಸತ್ಕಾ ರವನ್ನು, ಅಹಂ–ನಾನು, ಕರಿಷ್ಯೇ–ಮಾಡುವೆನು ॥ ೧೯ ॥ ತದ್ರಕ್ಷಃ–ಆ ರಾಕ್ಷಸನಾದ ರಾವಣನನ್ನು ಕುರಿತು, ಏವಂ–ಈ ಪರಿಯಾಗಿ, ಉಕ್ತ್ವಾ– ಹೇಳಿ, ಸಃ–ಆ ದ್ವಾರಪಾಲಕನು, ಬಲಿನಾಸಾರ್ಧಂ–ಬಲಿಚಕ್ರವರ್ತಿಯೊಡನೆ, ಯೋತ್ಸ್ಯಸೇ–ಯುದ್ಧಮಾಡುವಿಯೊ, ಮಯಾವಾ–ನನ್ನೊಡನೆಯಾದರು, ಯೋತ್ಸ್ಯ ಸೇ–ಯುದ್ಧಮಾಡುವಿಯೊ, ತತ್–ಆ ಯುದ್ಧವು, ವಿಧೀಯತಾಂ–ಮಾಡಲ್ಪಡಲಿ, ರಾವಣಃ–ಲೋಕಗಳನ್ನೆಲ್ಲಾ ಜೀನಧ್ವನಿಯುಳ್ಳದ್ದನ್ನಾಗಿ ಮಾಡುವನು, ಅಸಿ– ಆಗಿ ದ್ದೀ, ಇತಿ–ಹೀಗೆಂದು, ಪುನಃ–ಮತ್ತು, ಕಿಂ–ಯಾತಕ್ಕೋಸ್ಕರ, ಕಥಂ–ಹ್ಯಾಗೆ, ಊರ್ಧ್ವರೋಮಾಸಿ–ಊರ್ಧ್ವರೋಮಾ–ನಿಗಿರಿದ ರೋಮಗಳುಳ್ಳವನು, ಅಸಿ– ಆಗಿ ದ್ದೀ, ಇತಿ–ಹೀಗೆಂದು, ಪುನಃ–ಮತ್ತು–ವಚನಂ–ಮಾತನ್ನು, ಅಬ್ರವೀತ್–ನುಡಿದನು ॥ ೨೦ ॥ ೨೧ ॥ ಅಥ–ಬಳಿಕ, ರಾವಣಃ–ರಾವಣನು, ಧೈರ್ಯಂ– ಧೀರತ್ವವನ್ನು, ಸಮಾಲಂಬ್ಯ–ಆ ಶ್ರಯಿಸಿ, ಹೇವದತಾಂವರ–ಮಾತನಾಡುವವರಲ್ಲಿ ಶ್ರೇಷ್ಠನೆ, ಅತ್ರಗೃಹೇ–ಈ ಮನೆಯಲ್ಲಿ, ಕೋವಾ–ಯಾವನುತಾ ನೆ, ತಿಷ್ಠತೇ–ಇರುವನೆ, ತಂ–ಅತನನ್ನು, ಬ್ರೂಹಿ–ಹೇಳು, ಭವಾನ್–ನೀನು, ಯಥಾ–ಹ್ಯಾಗೆ, ಮನ್ಯತೇವಾ–ತಿಳಕೊಂಡಿದ್ದೀಯೊ, ತೇನೈವಸಾರ್ಧಂ–ಅವನಸಂ ಗಡಲೆ, ಯೋತ್ಸ್ಯಾಮಿ–ಯುದ್ಧಮಾಡುವೆನು, ಇತಿ–ಹೀಗೆಂತೆಂದು, ವಾಕ್ಯಂ–ವಚನವನ್ನು, ಅಬ್ರವೀತ್–ನುಡಿದನು ॥ ೨೨ ॥ ೨೩ ॥ ಸಃ–ಆ ದ್ವಾರ ಪಾಲಕ ಪುರುಷನು, ಏನಂ–ಈ ರಾವಣನನ್ನು ಕುರಿತು, ಅತ್ರ–ಈ ಮನೆಯಲ್ಲಿ, ದಾನವೇಂದ್ರಃ–ರಾಕ್ಷಸಶ್ರೇಷ್ಠನಾದ ಬಲಿಚಕ್ರವರ್ತಿಯು, ತಿಷ್ಠತಿ– ಇರು ನೆ, ಏಷವೈ–ಈ ಬಲಿಚಕ್ರವರ್ತಿಆದರೆ, ಪರಮೋದಾರಃ–ಪರಮದಾತನಾದಂಥಾವನು, ಶೂರಃ–ಶೂರನು, ಸತ್ಯಪರಾಕ್ರಮಃ–ಸತ್ಯದಿಂದ ಶತೃಗಳನ್ನುಕೊ ಲ್ಲುವನು, ವೀರಃ–ಶೂರನು, ಬಹುಗುಣೋಪೇತಃ–ಬಹಳವಾದ ಗುಣಗಳಿಂದಕೂಡಿದವನು, ಪಾಶಹಸ್ತಃ–ಪಾಶವೆ ಹಸ್ತದಲ್ಲಿಯುಳ್ಳ, ಅಂತಕಇವಸ್ಥಿತಃ–ಯಮನಂ ತಿರುವನು, ಕಾಲಾರ್ಕಇವ–ಪ್ರಳಯಕಾಲಸೂರ್ಯನಂತೆ, ತೇಜಸ್ವೀ–ತೇಜೋವಂತನು,ಸಮರೇಷು–ಕಾಳಗಗಳಲ್ಲಿ, ಅನಿವರ್ತಕಃ–ಹಿಂತಿರಿಗಿಬರದೆಇರುವನು,ಅ ಮರ್ಷೀ–ಕೋಪಿಷ್ಠನು, ದುರ್ಜಯಃ–ಜಯಿಸಲಸಾಧ್ಯನು, ಧೀರಃ–ಧೈರ್ಯವಂತನು, ಗುಣಸಾಗರಃ–ಸದ್ಗುಣಗಳಲ್ಲಿ ಸಮುದ್ರದಂತಿರುವನು, ಸಂವಿಭಾಗೀ–ದ್ರ ವ್ಯತ್ಯಾಗ ವಿಷಯದಲ್ಲಿ, ಪ್ರಿಯಂವದಃ–ಇಷ್ಟಾನುಸಾರ ಮಾತಾಡುವನು, ಸದಾ–ನಿರಂತರದಲ್ಲಿಯು, ಗುರುವಿಪ್ರಪ್ರಿಯಃ–ಗುರುಗಳಿಗೂ ಬ್ರಾಹ್ಮರಿಗೂಪ್ರೀ ತಿಪಾತ್ರನು, (ಅಥವಾ–ಗುರುಗಳನ್ನು ಬ್ರಾಹ್ಮರನ್ನು ಇಷ್ಟವಾಗಿ ಉಳ್ಳವನು) ಕಾಲಕಾಂಕ್ಷೀ–ಕಾಲನಿರೀಕ್ಷಣೆ ಮಾಡತಕ್ಕವನು, ಮಹಾಸತ್ವಃ–ಮಹಾ ಬಲಿಷ್ಠನು, ಸತ್ಯವಾಕ್–ಯಥಾರ್ಥವಾದ ವಾಕ್ಯವುಳ್ಳವನು, ಸೌಮ್ಯದರ್ಶನಃ–ಸೊಗಸಾದ ದೃಷ್ಟಿಗಳುಳ್ಳವನು, ವೀರಃ–ಶೂರನಾದವನು, ಸರ್ವಗುಣೋ ಪೇತಃ–ಸಮಸ್ತಗುಣಗಳಿಂದ ಕೂಡಿಕೊಂಡಿರುವನು, ದಕ್ಷಃ–ಸಮರ್ಥನಾದವನು, ಸ್ವಾಧ್ಯಾಯತತ್ಪರಃ– ವೇದಾಧ್ಯಯನದಲ್ಲಿ ಆಸಕ್ತನು, ಏಷಬಲಿಃ– ಈ ಬಲಿಚಕ್ರವರ್ತಿಯು,ದೈವೈಶ್ಚ –ದೇವತೆಗಳೊಡನೆ, ಗರ್ಜತಿ–ಗರ್ಜನೆಮಾಡುತ್ತಾನೆ,ಭೂತಸಂಘೈಶ್ಚ –ಪಿಶಾಚಾದಿಗಣಗಳೊಡನೆ, ವಾತಿ–ತಿರುಗುತ್ತಾನೆ, ಪನ್ನಗೈಶ್ಚ –ಸರ್ಪಗಳೊಡನೆ, ಜ್ವಲತೇ–ಉರಿಯುತ್ತಾನೆ, ತಥಾ–ಹಾಗೆಯೆ, ಮಹರ್ಷಿಭಿಃ – ಮಹರ್ಷಿಗಳೊಡನೆ, ತಪತೇ–ತಪಸ್ಸುಮಾಡುತ್ತಾನೆ, ಯಃ–ಯಾ ವಾತನು, ಭಯಂ–ಭಯವೆಂಬ ಪದಾರ್ಥವನ್ನು, ನಾಭಿಜಾನಾತಿ–ಅರಿಯದವನೊ, ತೇನ–ಅಂಥಾ ಬಲಿ ಚಕ್ರವರ್ತಿಯೊಡನೆ, ಯೊದ್ಧುಂ – ಯುದ್ಧಮಾ ಡುವದಕ್ಕೋಸ್ಕರ–ಕಿಮಿಚ್ಛಸಿ–ಯಾಕೆ ಅಪೇಕ್ಷಿಸುವಿ ॥ ೨೪ ॥ ೨೫ ॥ ೨೬ ॥ ೨೭ ॥ ೨೮ ॥ ಹೇರಾಕ್ಷಸೇಶ್ವರ–ಎಲೈ ರಾಕ್ಷಸಶ್ರೇಷ್ಠನಾದ ರಾವಣನೆ, ತೇ–ನಿನ

ರಾಕ್ಷಸನೆ ! ಯಾಕೆ ಯೋಚಿಸುವಿ, ಧೈರ್ಯವಾಗಿ ಹೇಳು, ಎಲೈ ವೀರನೆ ! ನಾನು ತ್ವರಿತವಾಗಿ ಯುದ್ಧಾತಿಥ್ಯ ವನ್ನೀ ಯ್ಯುವೆನೆಂದು ಹೇಳಿ ಪುನಹಾ ಇಂತೆಂದನು, ನೀನು ಬಲಿಚಕ್ರವರ್ತಿ ಯೊಡನೆ ಯುದ್ಧವಂಗೈಯ್ಯುವಿಯೋ, ಅಥವಾ ನನ್ನೊಡನೆ ಕಾಳಗಿಸುವಿಯೋ, ನೀನು ತ್ರೈಲೋಕ್ಯವನ್ನು ದೀನಾ ರಾವಮುಳ್ಳದ್ದನಾಗಿ ಮಾಡತಕ್ಕ ಶಕ್ತಿಯುಳ್ಳ ರಾವಣನಾದರೂ ಯಾಕೆ ಹೀಗೆ ಹೆದರುವಿ, ಎಂದು ಆ ಪುರುಷನು ನುಡಿಯಲು, ಆ ಬಳಿಕ ರಾವಣನು ಧೈರ್ಯವಂ ತಾಳಿ ಈ ಮಾತನ್ನು ಹೇಳಿದನು, ಎಲೈ ವಾಚಾಳಕನೆ ! ಈ ಮಂದಿರದೋಳ್ ವಾಸಿಸುವನ್ಯಾರು ? ದಯ ಪಾಲಿಸಿ ನೀ ನು ಹೇಳಿದರೇ, ಆತ ನೊಡನೆ ಸಂಗರವಂ ಗೈಯ್ಯಲು ಅಪೇಕ್ಷಿಸುವೆನೆಂದು ಹೇಳಲು ॥೨೩॥ ಆ ಪುರುಷನು ಪುನಹಾ ಇಂತೆಂದನು, ಇಲ್ಲಿ ನೆಲಗೊಂಡಿರುವ ದಾನವೇಂದ್ರನಾದರೆ, ಮಹಾ ಉದಾರನಾಗಿಯೂ, ಶೂರನಾಗಿಯೂ ಸತ್ಯ ಪ ರಾಕ್ರಮಿಯಾಗಿಯೂಪಾಶಹಸ್ತನಾದ ಯಮನ ತೆರದಿ ಕಡುವೀರನಾಗಿಯೂ, ಬಹು ಗುಣಗಳಿಂದೊಡಗೂಡಿದವನಾಗಿ ಯ್ಯೂ, ಸೂರ್ಯನಂತೆ ಮಹಾ ತೇಜಸ್ವಿಯಾಗಿಯ್ಯೂ, ಕಾಳಗದಲ್ಲಿ ಹಿಂಜರಗದೇ ಯಿರುವನಾಗಿಯ್ಯೂ, ಕಡುಕೋಪ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲೇಃ। ಪ್ರಿಯಂವದಸ್ಸಂವಿಭಾಗೀಗುರುವಿಪ್ರಪ್ರಿಯಸ್ಸದಾ ॥೧೬॥ ಕಾಲಕಾಂಕ್ಷೀಮಹಾಸತ್ವಸ್ಸತ್ಯವಾಕ್ಸೌಮ್ಯದರ್ಶನಃ। ವೀರಸ್ಸರ್ವಗುಣೋಪೇತಃದಕ್ಷಸ್ಸ್ವಾಧ್ಯಾಯತತ್ಪರಃ । ಏಷಗರ್ಜತಿವಾತ್ಯೈಷಜ್ವಲತೇತಪತೇತಥಾ ॥೧೭॥ ದೇವೈಶ್ಚ ಭೂತಸಂಘೈಶ್ಚ ಪನ್ನಗೈಶ್ಚ ಮಹರ್ಷಿಭಿಃ। ಭಯಂಯೋಸಾಭಿಜಾನಾತಿತೇನಕಿಂಯೋದ್ಧುಮಿಚ್ಛಸಿ॥೧೮॥ ಬಲಿನಾಯದಿತೇಯುದ್ಧಂರೋಚತೇರಾಕ್ಷಸೇಶ್ವರ। ಪ್ರವಿಶತ್ವಂಮಹಾಸತ್ವಸಂಗ್ರಾಮಂಕುರುಮಾಚಿರಮ್ ॥೧೯॥ ಏವಮುಕ್ತೋ ದಶಗ್ರೀವಃಪ್ರವಿವೇಶಯತೋಬಲಿಃ ॥೨೦॥ ಸವಿಲೋಕ್ಯಾಥಲಂಕೇಶಮಟ್ಟಹಾಸಂಜಹಾಸಚ। ಆದಿತ್ಯಇವದುಷ್ಪ್ರೇಕ್ಷ್ಯಃಸ್ಥಿತೋದಾನವಸತ್ತಮಃ ॥೨೧॥ ತಸ್ಯಸಂದರ್ಶನಾದೇವಬಲಿರ್ವೈವಿಶ್ವರೂಪವಾನ್ । ತತೋಗೃಹೀತ್ವಾತದ್ರಕ್ಷಉತ್ಸಂಗೇಸ್ಥಾಪ್ಯಚಾಬ್ರವೀತ್॥೨೨॥ ದಶಗ್ರೀವಮಹಾಬಾಹೋಕಂತೇಕಾಮಂಕರೋಮ್ಯಹಮ್। ಕಿಮಾಗಮನಕೃತ್ಯಂತೇಬ್ರೂಹಿತ್ವಂರಾಕ್ಷಸೇಶ್ವರ ॥೨೩॥ ಏವಮುಕ್ತಸ್ತು ಬಲಿನಾರಾವಣೋವಾಕ್ಯಮಬ್ರವೀತ್॥೨೪॥ ಶ್ರುತಂಮಯಾಮಹಾಭಾಗಬದ್ಧಸ್ತ್ವಂವಿಷ್ಣುನಾಪುರಾ। ಸೋಹಂಮೋಚಯಿತುಂ

ಗೆ, ಬಲಿನಾ-ಬಲಿಚಕ್ರವರ್ತಿಯೊಡನೆ, ಯುದ್ಧಂ-ಕಾಳಗವು, ರೋಚತೇಯದಿ- ರುಚಿಸುವದಾದರೆ, ಹೇಮಹಾಸತ್ವ-ಎಲೋಮಹಾಬಲಿಷ್ಠನೆ, ತ್ವಂ - ನೀನು, ಪ್ರವಿಶ-ಮನೆಯಲ್ಲಿಹೊಕ್ಕು, ಸಂಗ್ರಾಮಂ-ಯುದ್ಧವನ್ನು, ಕುರು-ಮಾಡು, ಮಾಚಿರಂ-ತಾವಕಾಶ ಮಾಡಬೇಡ ॥ ೧೯ ॥ ಏವಂ-ಈ ಪರಿಯಾಗಿ, ಉಕ್ತಃ-ನುಡಿಯಲ್ಪಟ್ಟ, ದಶಗ್ರೀವಃ-ರಾವಣನು, ಯತಃ-ಯಾವಸ್ಥಳದಲ್ಲಿ, ಬಲಿಃ-ಬಲಿಚಕ್ರವರ್ತಿಯು, ಅಸ್ತಿ-ಇರ್ಧಾನೋ, ತತ್ರ-ಅಲ್ಲಿ,ಪ್ರವಿವೇಶ-ಪ್ರವೇಶಿಸಿದನು ॥೨೦॥ ಅಥ-ಬಳಿಕ, ಆದಿತ್ಯಇವ-ಸೂರ್ಯನಂತೆ, ದುಷ್ಪ್ರೇಕ್ಷ್ಯಃ-ನೋಡಲಸಾಧ್ಯನಾಗಿ,ಸ್ಥಿತಃ-ಕೂತುಕೊಂಡಿರುವ, ದಾನವಸತ್ತಮಃ-ರಾಕ್ಷಸಶ್ರೇಷ್ಠನಾದ, ಸಃ-ಆ ಬಲಿಯು, ಲಂಕೇಶಂ-ಲಂಕಾಧಿಪತಿಯಾದ ರಾವಣನನ್ನು, ವಿಲೋಕ್ಯ-ಕಂಡು, ಅಟ್ಟಹಾಸಂ-ಅಟ್ಟಹಾಸಧ್ವನಿಯನ್ನಾಗಿ,ಜಹಾಸಚ-ನಕ್ಕನು ॥ ೨೧ ॥ ತಸ್ಯ-ಆ ರಾವಣನ, ಸಂದರ್ಶನಾದೇವ-ನೋಡೋಣದರ ದೆಶೆಯಿಂದಲೆ, ವಿಶ್ವರೂಪವಾನ್-ಪ್ರಪಂಚರೂಪಾದಿಯಲ್ಲಿ ವಿಸ್ತಾರವಾಗಿರೂಪವುಳ್ಳ, ಬಲಿಃ-ಬಲಿಚಕ್ರವರ್ತಿಯು, ತತಃ-ಬಳಿಕ, ತದ್ರಕ್ಷಃ-ಆರಾವಣನನ್ನು, ಗೃಹೀತ್ವಾ-ಹಿಡಿದುಕೊಂಡು, ಉತ್ಸಂಗೇ-ತೊಡೆಮ್ಯಾಲೆ, ಸ್ಥಾಪ್ಯ-ಕೂಡಿಸಿಕೊಂಡು, ಅಬ್ರವೀಚ್ಚ - ಮಾತನ್ನಾಡಿದನು ॥ ೨೨ ॥ ಹೇ ದಶಗ್ರೀವ-ಎಲೈ ದಶಕಂಠನೆ, ಹೇಮಹಾಬಾಹೋ-ಎಲೊ ಮಹಾಭುಜಗಳುಳ್ಳವನೆ, ತೇ-ನಿನಗೆ, ಕಂಕಾಮಂ-ಯೇನುಇಷ್ಟಾರ್ಥವನ್ನು, ಅಹಂ-ನಾನು, ಕರೋಮಿ-ಮಾಡಲೀ, ಹೇ ರಾಕ್ಷಸೇಶ್ವರ-ಎಲೋರಾಕ್ಷಸಶ್ರೇಷ್ಠನೆ, ತೇ-ನಿನಗೆ, ಆಗಮನಕೃತ್ಯಂ-ಬಂದದ್ದಕ್ಕೆ ಪ್ರಯೋಜನವು, ಕಿಂ-ಯೇನು, ತ್ವಂ-ನೀನು-ಬ್ರೂಹಿ-ಹೇಳು ॥ ೨೩ ॥ ಬಲಿನಾ-ಬಲಿಚಕ್ರವರ್ತಿಯಿಂದ, ಏವಂ-ಈ ಪರಿಯಾಗಿ, ಉಕ್ತಃ-ನುಡಿಯಲ್ಪಟ್ಟ, ರಾವಣಃ-ರಾವಣನು, ಹೇ ಮಹಾಭಾಗ-ಎಲೈ ಪುಣ್ಯಶಾಲಿಯೆ, ತ್ವಂ-ನೀನು, ಪುರಾ-ಪೂರ್ವದಲ್ಲಿ, ವಿಷ್ಣುನಾ-ವಿಷ್ಣುವಿನಿಂದ, ಬದ್ಧಃ-ಹಿಂಗಟ್ಟು ಮುಂಗಟ್ಟು ಕಟ್ಟಲ್ಪಟ್ಟಿದ್ದೆ, ಇತಿ-ಈ ಪರಿಯಾಗಿ, ಮಯಾ-ನನ್ನಿಂದಾ-ಶ್ರುತಂ-ಕೇಳಲ್ಪಟ್ಟಿತು,ಸೋಹಂ-ಆ ಈ ನಾನು, ಬಂಧನಾತ್-ಬಂಧನದ ದೆಶೆಯಿಂದ, ಮೋಚಯಿತುಂ-ಬಿಡುಗಡೆ ಮಾಡುವದಕ್ಕೋಸ್ಕರ, ಶಕ್ತಃ-ಸಮರ್ಥನಾಗಿಧ್ದೆನೆ, ಅತ್ರ-ಈ ಅರ್ಥದಲ್ಲಿ, ಸಂಶಯೋನ- ಸಂಶಯವಿಲ್ಲವೆಂದು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥ ೨೪ ॥ ೨೫ ॥ ಏವಂ-ಈ ಪರಿಯಾಗಿ, ಉಕ್ತೆಸತಿ-ಹೇಳಲ್ಪಟ್ಟದ್ದಾಗ ತಿರಲೀಕಾಗಿ, ತತಃ - ಬಳಿಕ,

ಮುಳ್ಳವನಾಗಿಯೂ, ದುರ್ಜೇಯನಾಗಿಯೂ, ಧೀರನಾಗಿಯೂ, ಗುಣಗಳಿಗೆ ಸಮುದ್ರನೆಂತಿರುವನಾಗಿಯೂ, ಪ್ರಿಯವಾದನುಡಿಗಳಂ ಪೇಳುತಿರುವನಾಗಿಯೂ, ದೇವಬ್ರಾಹ್ಮಣರ ಪೂಜೆಯಲ್ಲಿ ಆ ಸಕ್ತಿಯುಳ್ಳವನಾಗಿಯೂ, ಕಾಲವನ್ನಪೇಕ್ಷಿಸುತಿರುವನಾಗಿಯೂ, ಮಹಾ ದೇಹಶಕ್ತಿಯುಳ್ಳವನಾಗಿಯೂ, ಸತ್ಯವಚನವುಳ್ಳವನಾಗಿಯೂ, ಸೌಮ್ಯವಾದ ದರ್ಶನವುಳ್ಳವನಾಗಿಯೂ, ಸರ್ವಗುಣಗಳಿಂದೊಡಗೂಡಿದವನಾಗಿಯೂ, ಸರ್ವಕಾರ್ಯ ಧುರಂಧರನಾಗಿಯೂ, ವೇದಜಪದಲ್ಲಿ ಆಸಕ್ತಿಯುಳ್ಳವನಾಗಿಯೂ, ಆಗಿರುವ ಈ ಬಲಿಚಕ್ರವರ್ತಿಯು, ದೇವತೆಗಳೊಡನೆ ಗರ್ಜಿಸುವನು, ಭೂತತಂಡಗಳೊಡನೆ ತಿರುಗುವನು, ಹಾವುಗಳೊಡನೆ ಪ್ರಜ್ವಲಿಸುವನು, ಋಷಿಗಳೊಡನೆ ತಪಿಸುವನು, ಮತ್ತು ದೇವತೆಗಳಿಂದಲೂ, ಭೂತತಂಡಗಳಿಂದಲೂ, ನಾಗಗಳಿಂದಲೂ, ಮಹರ್ಷಿಗಳಿಂದಲೂ ಕೂಡ ಭಯವೆಂಬದನ್ನು ಕಾಣದಿರುವ ಅಂಥಾ ಬಲಿಚಕ್ರವರ್ತಿ ಯೊಡನೆ ಸಂಗರವಂಗೈಯ್ಯಲೂ ಯಾಕೆ ಇಚ್ಛಿಸುವಿ ಎಲೈ ಬಹುಬಲಶಾಲಿಯಾದ ರಾಕ್ಷಸೇಶ್ವರನೆ! ಹಾಗೆ ಯುದ್ಧವಂ ಮಾಡಬೇಕೆಂಬ ಕುತೂಹಲವಿದ್ದರೆ, ಒಳಕ್ಕೆ ಹೊಕ್ಕು, ಕ್ಷಿಪ್ರವಾಗಿ ಕಾಳಗವಂಗೈಯ್ಯು ಎನ್ನಲೂ ರಾವಣನು ಬಲಿಚಕ್ರವರ್ತಿಯ ಬಳಿಗೆ ಬಂದನು ॥೨೦॥ ಅನಂತರದಲ್ಲಿ, ಆ ದಾನವೋತ್ತಮನಾದ ಬಲಿಚಕ್ರವರ್ತಿಯು, ಲಂಕೇಶ್ವರನಾದ ದಶಕಂಠನಂ ಕುರಿತು ಅಟ್ಟಹಾಸವಂಗೈದು ಸೂರ್ಯನ ತೆರದಿ ನೋಡಲಸಾಧ್ಯನಾಗಿ ನಿಂತನು ॥೨೧॥ ಆ ರಾವಣನ ಸಂದರ್ಶನ ಮಾತ್ರದಿಂದಲೆ ಬಲಿಯು ವಿಶ್ವರೂಪವುಳ್ಳವನಾಗಿ, ಆ ರಾಕ್ಷಸನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು, ಬಳಿಕಿಂತೆಂದನು ॥೨೨॥ ಮಹಾ ಭುಜ ಪರಾಕ್ರಮವುಳ್ಳ ದಶಕಂಠನೆಂಬ ರಾಕ್ಷಸೇಶ್ವರನೇ! ಬಂದಕಾರ್ಯವೇನಿರುವದು ನಾನೇನು ಮಾಡಿ ಕೊಡ ಬೇಕು ಪೇಳೆಂದು ನುಡಿಯಲೂ ರಾವಣ ನಿಂತೆಂದನು ॥೨೪॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶಕ್ತೋ ಬಂಧನಾನ್ಮಾತ್ರಸಂಶಯಃ ॥೩೫॥ ಏವಮುಕ್ತೆ ತತೋಹಾಸಂಬಲಿಃಕೃತ್ವೇದಮಬ್ರವೀತ್ । ಶ್ರೂಯತಾಮಭಿಧಾಸ್ಯಾಮಿ ಯತ್ತ್ವಂವದಸಿರಾವಣ ॥೩೬॥ ಯಏಷಪುರುಷಶ್ಶ್ಯಾಮೋದ್ವಾರಿತಿಷ್ಠತಿನಿತ್ಯಶಃ । ಏತೇನದಾನವೇಂದ್ರಾಶ್ಚ ತಥಾನ್ಯೇಬಲದರ್ಪಿತಾಃ । ವಶಂನೀತಾಬಲವತಾಪೂರ್ವೆಪೂರ್ವತರಾಶ್ಚಯೇ ॥೩೭॥ ಬದ್ಧಶ್ಚಾಹಮನೇನೈವಕೃತಾಂತೋದುರತಿಕ್ರಮಃ । ಕಏನಂಪುರುಷಂಲೋಕೇವಂಚಯಿಷ್ಯತಿರಾವಣ । ಸರ್ವಭೂತಾಪಹರ್ತಾಚಯಏಷದ್ವಾರತಿಷ್ಠತಿ । ಕರ್ತಾಕಾರಯಿತಾಚೈವಧಾತಾಚ ಭುವನೇಶ್ವರಃ ॥೩೯। ನತ್ವಂವೇದನಚಾಹಂವೈಭೂತಭವ್ಯಭವತ್ಪ್ರಭುಮ್ । ಕಲಿಶ್ಚೈವಹಿಕಾಲಶ್ಚ ಸರ್ವಭೂತಾಪಹಾರಕಃ ॥ ಲೋಕತ್ರಯಸ್ಯಸರ್ವಸ್ಯಕರ್ತಾಭರ್ತಾತಥೈವಚ । ಸಂಹರತ್ಯೇಷಭೂತಾನಿಸ್ಥಾವರಾಣಿಚರಾಣಿಚ ॥೪೧॥ ಪುನಶ್ಚಸೃಜತೇಸರ್ವಮನಾದ್ಯಂತೋಮಹೇಶ್ವರಃ । ಕರಣಂಕಾರಣಂಕರ್ತಾಸೋಯಂಪುರುಷಸತ್ತಮಃ ॥ ೪೨ ॥ ಇಷ್ಟಂಚೈವಹಿದ

---

ಬಲಿಃ–ಬಲಿಚಕ್ರವರ್ತಿಯು, ಹಾಸಂ–ಮುಗುಳುನಗೆಯನ್ನು, ಕೃತ್ವಾ–ಮಾಡಿ, ಇದಂ–ಈ ಮಾತನ್ನು, ಅಬ್ರವೀತ್–ಹೇಳಿದನು, ಹೇರಾವಣ–ಎಲೈ ರಾವಣನೆ, ತ್ವಂ–ನೀನು, ಯದ್ವದಸಿ–ಯಾವಮಾತನ್ನು ಹೇಳಿದೆಯೊ, ತತ್–ಅದನ್ನ ಕುರಿತು, ಅಭಿಧಾಸ್ಯಾಮಿ–ಹೇಳುವೆನು, ಶ್ರೂಯತಾಂ–ಕೇಳಲ್ಪಡಲಿ ॥ ಬಲವತಾ–ಬಲಿಷ್ಠನಾದ, ಎತೇನ–ಈ ಪುರುಷನಿಂದ, ಪೂರ್ವೆ–ಪ್ರಾಚೀನರು, ಪೂರ್ವತರಾಶ್ಚ–ಮತ್ತೂ ಪೂರ್ವೀಕರಾದವರು, ಯೇ–ಯಾರುಂಟೊ, ತೇದಾನವೇಂದ್ರಾಃ–ಆರಾಕ್ಷಸ ಶ್ರೇಷ್ಠರೆಲ್ಲರು, ತಥಾ–ಹಾಗೆಯೇ–ಬಲದರ್ಪಿತಾಃ–ತ್ರಾಣದಿಂದ ಕೊಬ್ಬಿದ, ಅನ್ಯೇಮತ್ತು–ಕೆಲಬರೂಕೂಡ, ವಶಂ–ಸ್ವಾಧೀನವನ್ನು, ನೀತಾಃ–ಹೊಂದಿಸಲ್ಪಟ್ಟರು ॥ ೩೭ ॥ ಹೇರಾವಣ–ಯಲೊರಾವಣನೆ, ಅಹಂಚ–ನಾನೂಕೂಡ, ಅನೇನೈವ–ಈತನಿಂದಲೆ, ಬದ್ಧಃ – ಬಂಧಿಸಲ್ಪಟ್ಟೆನು, ಯಃ–ಯಾವಪುರುಷನು, ದ್ವಾರಿ–ಬಾಗಲಲ್ಲಿ, –ತಿಷ್ಠತಿ–ಇಧಾನೊ, ಎಷಃ–ಈ ಪುರುಷನು, ದುರತಿಕ್ರಮಃ–ಅತಿಕ್ರಮಿಸ ಲಸಾಧ್ಯನಾದ, ಕೃತಾಂತಃ–ಯಮನು, ಸರ್ವಭೂತಾ ಪಹರ್ತಾಚ–ಸರ್ವಭೂತಗಳನ್ನೂ ಕೂಡ ಉಪಸಂಹಾರ ಮಾಡತಕ್ಕವನು, ಲೋಕೇ–ಲೋಕದಲ್ಲಿ, ಏನಂ–ಪುರುಷಂ–ಯೀ ಪುರುಷನನ್ನು, ಕಃ–ಯಾರುತಾನೆ, ವಂಚಯಿಷ್ಯತಿ–ಮೋಸಮಾಡಿ ಗೆಲ್ಲುವನು ॥ ೩೮ ॥ ಎಷಃ–ಈಪುರುಷನು, ಕರ್ತಾ–ಲೋಕಕರ್ತನಾದವನು, ಕಾರಯಿತಾಚೈವ–ಕಾರ್‍ಯಗಳನ್ನು ಪ್ರೇರಣೆಮಾಡಿಮಾಡಿಸುವನು, ಧಾತಾಚ–ಸೃಷ್ಟಿಕರ್ತನು, ಭುವನೇಶ್ವರಃ–ಲೋಕಗಳಿಗೆ ನಿಯಾಮಕನು, ಭೂತಭವ್ಯಭವತ್ಪ್ರಭುಂ–ಹುಟ್ಟಿದ್ದಕ್ಕೂ, ಮುಂದೆಹುಟ್ಟತಕ್ಕದ್ದಕ್ಕೂ, ಹುಟ್ಟುತಾ ಇರತಕ್ಕದ್ದಕ್ಕೂ ಕೂಡಾ, ಪ್ರಭುಂ–ಸ್ವಾಮಿಯಾದ ಈ ಪುರುಷನನ್ನು, ತ್ವಂ–ನೀನು, ನವೇದ– ತಿಳಿದವನಲ್ಲಾ, ಅಹಂಚ–ನಾನೂಕೂಡಾ, ನವೇದ–ತಿಳಿದವನಲ್ಲಾ ಎಷಃ–ಈ ಪುರುಷನು, ಕಲಿಃ–ಕಲಿಸ್ವರೂಪನು, (ಅಂದರೆ–ಕಲಹಸ್ವರೂಪನು) ಸರ್ವಭೂತಾಪಹಾರಕಃ– ಸರ್ವಭೂತಗಳನ್ನು ಅಪಹರಿಸುತಿರುವ, ಕಾಲಶ್ಚ–ಕಾಲಸ್ವರೂಪನು ॥ ೩೯॥೪೦ ॥ ಸರ್ವಸ್ಯ–ಸಮಸ್ತವಾದ, ಲೋಕತ್ರಯಸ್ಯ–ಮೂರುಲೋಕಕ್ಕೂ ಕೂಡೆ, ಕರ್ತಾ–ಕರ್ತನಾದ, ತಥೈವ–ಹಾಗೆ, ಭರ್ತಾ–ಭರಣಶೀಲನಾದ, ಎಷಃ–ಈ ಪುರುಷನು, ಸ್ಥಾವರಾಣಿ, ಬೆಟ್ಟಗಳುಮುಂತಾದ ಸ್ಥಾವರಗಳನ್ನು, ಚರಾಣಿಚ–ಜಂಗಮಾತ್ಮಕವಾದ, ಭೂತಾನಿ–ಪ್ರಾಣಿಗಳನ್ನು, ಸಂಹರತಿ–ಸಂಹರಿಸುತ್ತಾನೆ ॥೪೧॥ ಅನಾದ್ಯಂತಃ–ಆದ್ಯಂತಗಳಿಲ್ಲದೆಇರುವ, ಮಹೇಶ್ವರಃ–ದೊಡ್ಡದೇವರಾದ, ಸೋಯಂ–ಅಂಥಾಈಪುರುಷಸತ್ತಮಃ–ಪುರುಷಶ್ರೇಷ್ಠನು, ಸರ್ವಂ–ಸಮಸ್ತವನ್ನು, ಪುನಶ್ಚಸೃಜತೇ–ತಿರಿಗಿ ಸೃಷ್ಟಿಮಾಡುವನು, ಕರಣಂ–ಸಾಧಕಸ್ವರೂಪನುಇವನೆ, ಕಾರಣಂ–ಕಾರಣ ಹೇತುವಾದ:ಥಾವನು ಇವನೆ, ಕರ್ತಾ–ಜಗತ್ಕರ್ತೃತ್ವ ಮುಳ್ಳವನೂಇವನೆ, ॥ ೪೨ ॥ ಹೇ–ನಿಶಾಚರ, ಎಲೈ ರಾಕ್ಷಸನೆ,

---

ಎಲೈ ಮಹಾ ಭಾಗ್ಯಸಂಪನ್ನನೆ ! ಪೂರ್ವದಲ್ಲಿ ವಿಷ್ಣುವಿನಿಂದ ನೀನು ಬದ್ಧನಾದೆಂದು ನನ್ನಿಂದ ಕೇಳಲ್ಪಟ್ಟಿಥೆ, ನಾನು ಆ ಬಂಧನ ಪರಿಹಾರವಂಗೈಯ್ಯಲೂ, ಶಕ್ತನಾಗಿಥೇನೆಂದು, ರಾವಣನಿಂದ ಹೇಳಲ್ಪಟ್ಟವನಾಗಿ, ಬಲಿಯು ಹಾಸ್ಯವಂಗೈದು ಬಳಿಕಿಂತೆಂದನು. ಎಲೈ ರಾವಣನೆ! ನೀನು ಹೇಳಿದ ವಿಷಯುವಂ ಕುರಿತು ಹೇಳುವೆನು ಕೇಳು ॥೩೬॥ ಸ್ವಲ್ಪ ಕಪ್ಪಾಗಿರುವ ಯಾವ ಈ ಪುರುಷನು ನಿರಂತರವೂ ದ್ವಾರದಲ್ಲಿರುವನೋ ಬಲವಂತನಾದ ಇವನಿಂದಲೆ ಪೂರ್ವೀಕರು ಅವರಿಗಿಂತಲೂ, ಪೂರ್ವದಲ್ಲಿದ್ದವರಾದ ದಾನವೇಂದ್ರರೂ ಬಲಗರ್ವಿತರಾದ ಇತರರೂ ಸಹಾ ಕೊಲ್ಲಲ್ಪಟ್ಟರು ॥೩೭॥ ಎಲೈ ರಾವಣನೆ! ಈತನಿಂದಲೇ ನಾನೂ ಕೂಡಾ ಬದ್ಧನಾದೆನು ಯಾವ ಪುರುಷನುದ್ವಾರದಲ್ಲಿರುವನೋ ಇವನು ಅತಿಕ್ರಮಿಸಲಸಾಧ್ಯನಾದ ಸಾಕ್ಷಾದ್ಯಮನು ಸರ್ವಭೂತಗಳನ್ನು ಉಪಸಂಹಾರ ಮಾಡತಕ್ಕ ಶಕ್ತಿಯುಳ್ಳವನು ಜಗತ್ಕರ್ತನಾದವನು ಕಾರ್‍ಯಗಳಂ ಮಾಡಬೇಕೆಂದು ಪ್ರೇರಣೆಯುಂಗೈದು ಮಾಡಿಸುವವನು ಲೋಕಕ್ಕೆಲ್ಲ ಈಶ್ವರನಾದವನು ಇಂಥಾ ಈ ಪುರುಷನನ್ನು ಲೋಕದಲ್ಲಿ ಯಾರು ವಂಚಿಸುವರು ॥೩೯॥ ಭೂತಭವಿಷ್ಯದ್ವರ್ತಮಾನ ಕಾಲೀನವಾದ ಸಮಸ್ತಕ್ಕೂ ಸ್ವಾಮಿಯಾದ ಈ ಪುರುಷನನ್ನು ನೀನರಿತವನಲ್ಲ ಎನಗೂಕೂಡ ಚನ್ನಾಗಿ ತಿಳಿಯದು. ಇವನಾದರೆ, ಕಲಹಸ್ವರೂಪನಾಗಿಯೂ ಮತ್ತು ಸಮಸ್ತ ಭೂತಗಳನ್ನು ಅಪಹರಿಸುತಿರುವ ಕಾಲಸ್ವರೂಪನಾಗಿಯೂ, ಸರ್ವ ಲೋಕಗಳಿಗೂ ಸೃಷ್ಟಿಕರ್ತನಾಗಿಯೂ, ಭರಣಶೀಲನಾಗಿಯೂ ಇರುವನಾಗಿ, ಹಾಗೆಯೆ ಚರಾಚರಾತ್ಮಕವಾದ ಸರ್ವ ಭೂತಗಳನ್ನು ಸಂಹರಿಸುವನು ॥೪೧॥ ತಾನು ಆದ್ಯಂತರಹಿತನಾಗಿದ್ದು ಪುನಹಾ ಈ ಸಮಸ್ತವನ್ನು ಸೃಜಿಸುತಿರುವನಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ತಂಚಹುತಂಚೈವನಿಶಾಚರ । ಸರ್ವಮೇವಹಿಲೋಕೇಶೋಧಾತಾಗೋಪ್ತಾನಸಂಶಯಃ ॥ ೪೩ ॥ ನೈವಂವಿಧಂಮಹದ್ಭೂತಂ ವಿದ್ಯತೇಭುವನತ್ರಯೇ ॥೪೪॥ ಅಹಂಚತ್ವಂಚಲಂಕೇಶಯೇಚಾನ್ಯೇಪೂರ್ವವತ್ತರಾಃ । ನೇತಾತೇಷಾಂಮಹಾತ್ಮಾಹಿಪಶೂನಾಂರಶನಾಯಥಾ ॥೪೫॥ ವೃತ್ರೋದನುಶ್ಶುಕಶ್ಶಂಭುರ್ನಿಶುಂಭಶ್ಶುಂಭಏವಚ । ಕಾಲನೇಮಿಶ್ಚ ಪ್ರಹ್ಲಾದಸ್ತಥಾವೈರೋಚನೋ ಬಲಿಃ ॥೪೬॥ ಕಾಲಕೇಯಸ್ತಾರಕಾಖ್ಯೋಮುಚುಕುಂದೋವಿವರ್ಧನಃ ।ಹಿರಣ್ಯಾಕ್ಷೋಮಧುಶ್ಚೈವಕೈಟಭೋಧೂಮಶಂಬರೌ ॥೪೭॥ಏತೇತಪಂತಿದ್ಯೋತಂತೇವಾಂತಿಕರ್ಷಂತಿಚೈವಹಿ ।ಸರ್ವೈಸ್ತ್ರಿದಶರಾಜ್ಯಾನಿಕಾಂಕ್ಷಿತಾನಿಮಹಾತ್ಮಭಿಃ॥೪೮॥ ಯುದ್ಧೇಸುದಾರುಣಾಸ್ಸರ್ವೇ ನಿರ್ಜಿತಾಶ್ಚ ಸಹಸ್ರಶಃ। ಪ್ರಮತ್ತಾಭೋಗರಕ್ತಾಶ್ಚ ಬಾಲಾರ್ಕಸಮತೇಜಸಃ । ತೇಹಿಸರ್ವೇಕ್ಷಯಂನೀತಾಬಲಿನಾಕಾಮರೂಪಿಣಾ ॥೪೯॥ ಸಮರೇಯೇಹಿದುರ್ಧರ್ಷಾನೃಪಾಸ್ತೇಚಪರಾಜಿತಾಃ।ತೇನನೀತಾಃಕ್ಷಯಂಸರ್ವೆ

---

ಇಷ್ಟಂಚೈವ-ಯಾಗಾದಿ ಕರ್ಮಗಳನ್ನು, ದತ್ತಂ-ದಾನರೂಪಕರ್ಮವನ್ನು, ಹುತಂಚೈವ-ಹೋಮರೂಪಕರ್ಮವನ್ನು, ಸರ್ವಮೇವ- ಸಮಸ್ತಕರ್ಮಗಳನ್ನು, ಧಾತಾ-ಧರಿಸುವಂಥಾ, ಲೋಕೇಶಃ-ಲೋಕೇಶ್ವರನು, ಗೋಪ್ತಾ-ಸಂರಕ್ಷಣಕರ್ತನು, ನಸಂಶಯಃ-ಈ ಅರ್ಥದಲ್ಲಿ ಸಂಶಯವಿಲ್ಲಾ ॥೪೩॥ ಏವಂವಿಧಂ-ಇಂಥಾವಿಧವಾದ, ಮಹದ್ಭೂತಂ-ದೊಡ್ಡ ಭೂತಸ್ವರೂಪನಾದ ಪುರುಷನು, ಭುವನತ್ರಯೇ-ಲೋಕತ್ರಯದಲ್ಲಿ, ನವಿದ್ಯತೇಹಿ-ಇಲ್ಲವಷ್ಟೇ ॥೪೪॥ ಹೇ ಲಂಕೇಶ-ಯಲೈ ಲಂಕಾಧಿಪತಿಯೆ, ಅಹಂಚ-ನಾನುನ್ನು, ತ್ವಂಚ-ನೀನೂಕೂಡ, ಅನ್ಯೇ-ಇತರರಾದ, ಪೂರ್ವವತ್ತರಾಃ-ಬಹಳ ಪ್ರಾಚೀನರು, ಯೇಚ-ಯಾರುಂಟೋ, ತೇಷಾಂ-ಅವರಿಗೆ, ಏಷಮಹಾತ್ಮಾ-ಈ ಮಹಾಪುರುಷನು, ರಶನಯಾ-ಹಗ್ಗದಿಂದ, ಪಶುಂಯಥಾ-ಪಶುವಿನಂತೆ, ನೇತಾ-ನಿಯಾಮಕನು ॥೪೫॥ ವೃತ್ರಃ-ವೃತ್ರಾಸುರನೂ, ದನುಃ - ದನುಯೆಂಬ ರಾಕ್ಷಸನೂ, ಶುಕಃ - ಶುಕನೂ, ಶುಂಭಃ-ಶುಂಭನು, ನಿಶುಂಭಃ-ನಿಶುಂಭನು, ಕಾಲನೇಮಿಶ್ಚ - ಕಾಲನೇಮಿಯು, ಪ್ರಹ್ಲಾದಃ-ಪ್ರಹ್ಲಾದನು, ವೈರೋಚನಃ-ವಿರೋಚನಪುತ್ರನಾದ, ಬಲಿಃ-ಬಲಿಯುನ್ನು, ಕಾಲಕೇಯಃ-ಕಾಲಕೇಯನು, ತಾರಕಾಖ್ಯಃ-ತಾರಕನೂಯೆಂಬವನು, ಮುಚುಕುಂದಃ - ಮುಚುಕುಂದನು, ವಿವರ್ಧನಃ - ವಿವರ್ಧನನು, ಹಿರಣ್ಯಾಕ್ಷಃ - ಹಿರಣ್ಯಾಕ್ಷನುನ್ನೂ, ಮಧ್ವಾಸುರಃ-ಮಧೂಯೆಂಬ ರಾಕ್ಷಸನೂ, ಕೈಟಭಃ - ಕೈಟಭಾಸುರನು, ಧೂಮಶಂಬರೌ - ಧೂಮನೆಂಬವ, ಶಂಬರನು, ಏತೇ - ಈ ಜನರು, ತಪಂತಿ - ತಪಸ್ಸುಮಾಡುತಿಧಾರೆ, ದ್ಯೋತಂತೇ- ಹೊಳೆಯುತಿಧಾರೆ, ವಾಂತಿ-ತಿರುಗುತಿಧಾರೆ, ಕರ್ಷಂತಿ- ಆಕರ್ಷಣೆಮಾಡುತ್ತಾರೆ, ಸರ್ವೈಃ-ಸಮಸ್ತರಾದ, ಮಹಾತ್ಮಭಿಃ-ಮಹಾತ್ಮರಿಂದ, ತ್ರಿದಶರಾಜ್ಯಾನಿ, ತ್ರಿದಶ-ದೇವತೆಗಳ, ರಾಜ್ಯಾನಿ-ರಾಷ್ಟ್ರಗಳು, ಕಾಂಕ್ಷಿತಾನಿ-ಅಪೇಕ್ಷಿಸಲ್ಪಟ್ಟವು ॥೪೬ ॥೪೭ ॥ ೪೮ ॥ ಯುದ್ಧೇ-ಯುದ್ಧದಲ್ಲಿ, ಸುದಾರುಣಾಃ-ಅತಿ ಕ್ರೂರರಾದ, ಪ್ರಮತ್ತಾಃ-ಕೊಬ್ಬಿರುವ, ಭೋಗರಕ್ತಾಶ್ಚ -ವಿಷಯಭೋಗಗಳಲ್ಲಿ ಆಸಕ್ತರಾದ, ಬಾಲಾರ್ಕಸಮತೇಜಸಃ-ಬಾಲಸೂರ್ಯನಿಗೆ ಸಮಾನವಾದ ಪ್ರಕಾಶವುಳ್ಳ, ಸಹಸ್ರಶಃ-ಸಾವಿರಾರುಸಂಖ್ಯೆಯುಳ್ಳ, ಸರ್ವೇ-ಸಮಸ್ತರುನ್ನು, ಕಾಮರೂಪಿಣಾ-ಕಾಮರೂಪಿಯಾದ, ಬಲಿನಾ-ಬಲಿಷ್ಠನಾದ ಈ ಪುರುಷನಿಂದ, ನಿರ್ಜಿತಾಃ-ಜಯಿಸಲ್ಪಟ್ಟವರಾಗಿ, ತೇಸರ್ವೇ-ಅವರೆಲ್ಲರು, ಕ್ಷಯಂಚ-ನಾಶವನ್ನೂ ಕೂಡ, ನೀತಾಃ-ಹೊಂದಿಸಲ್ಪಟ್ಟರು ॥ ಸಮರೇ, ಯುದ್ಧದಲ್ಲಿ, ಯೇ-ಯಾರು, ದುರ್ಧರ್ಷಾಃ-ತಿರಸ್ಕರಿಸಲಸಾಧ್ಯರೊ, ತೇನೃಪಾಶ್ಚ-ಆ ಅರಸರೂಕೂಡ, ಪರಾಜಿತಾಃ-ಜಯಿಸಲ್ಪಟ್ಟವರಾಗಿ, ಕೃತಾಂತಬಲಚೋದಿತಾಃ-ಕೃತಾಂತ, ಯಮನ,ಬಲಚೋದಿತಾಃ-ಬಲದಿಂದ ಪ್ರೇರಿತರಾಗಿ, ಸರ್ವೇ-ಸಮಸ್ತರು, ತೇನ-ಆ ಪುರುಷನಿಂದ, ಕ್ಷಯಂನೀತಾಃ-ನಾಶವ

---

ಯೂ, ಮಹೇಶ್ವರನಾಗಿಯೂ, ಸಾಧಕಸ್ವರೂಪನಾಗಿಯೂ, ಕಾರಣ ಹೇತುವಾದವನಾಗಿಯೂ, ಜಗತ್ಕರ್ತೃತ್ವವುಳ್ಳವನಾಗಿಯೂ ಆಗಿರುವ ಆ ಪುರುಷೋತ್ತಮನು ಇವನು ॥೪೩॥ ಎಲೈ ನಿಶಾಚರನೆ! ಯಜ್ಞಾದಿ ಕರ್ಮಗಳನ್ನೂ, ದಾನರೂಪವಾದ ಕೃತ್ಯಗಳನ್ನೂ, ಹೋಮಕಾರ್ಯವನ್ನೂ ಇವುಗಳನ್ನೆಲ್ಲಾ ಧರಿಸುವ ಲೋಕೇಶ್ವರನಾದ ರಕ್ಷಕನು ಈತನೇ ಸರಿ, ಇಂಥಾ ಭೂತವು ಈ ಜಗತ್ತಿನಲ್ಲಿ ಮತ್ಯಾವದೂ ಇಲ್ಲ, ಈ ವಿಷಯದಲ್ಲಿ ಸಂಶಯವಿಲ್ಲ ॥೪೪॥ ಎಲೈ ಲಂಕೇಶನೆ! ನಾನು ನೀನು ಮತ್ತು ಇತರರಾದ ಪೂರ್ವಿಕರ್ಯಾರೋ ? ಅವರಿಗೂನಮಗೂ ಕೂಡ ಈ ಮಹಾತ್ಮನು ನಿಯಾಮಕನಾಗಿ, ಹಗ್ಗದಿಂದ ಪಶುವಿನನ್ನು ಸ್ವಾಧೀನಗೊಳಿಸಿಕೊಳ್ಳುವಂತೆ ನಮ್ಮನ್ನೆಲ್ಲ ವಶದಲ್ಲಿಟ್ಟುಕೊಂಡಿರುವನು ॥೪೫॥ ಮತ್ತು, ವೃತ್ರ, ದನು, ಶುಕ, ಶಂಭು, ನಿಶುಂಭ, ಶುಂಭ, ಕಾಲನೇಮಿ, ಪ್ರಹ್ಲಾದ, ಬಲಿ, ಕಾಲಕೇಯ, ತಾರಕ, ಮುಚುಕುಂದ, ವಿವರ್ಧನ, ಹಿರಣ್ಯಾಕ್ಷ , ಮಧ್ವಾಸುರ, ಕೈಟಭ, ಧೂಮ, ಶಂಬರೆಂಬಮಹಾತ್ಮರಾದ ಇವರೆಲ್ಲರು, ತಪಸ್ಸುಮಾಡುತಲು, ಹೊಳೆಯುತ್ತಲೂ, ತಿರುಗುತಲೂ,ಶೆಳೆಯುತಲೂ, ದೇವತೆಗಳರಾಷ್ಟ್ರಗಳನ್ನ ಪ್ರಕಾರಿಸಬೇಕೆಂ ದಿಚ್ಛೈಸುತಿದ್ದರು॥೪೮॥ ಬಾಲಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವರಾಗಿಯೂ, ಭೋಗೇಚ್ಛೆಯುಳ್ಳವರಾಗಿಯೂ, ಕಡುಕೊಬ್ಬಿದವರಾಗಿಯೂ, ಕಾಳಗದಲ್ಲಿ ಮಹಾಭಯಂಕರರಾಗಿಯೂ,ಇರುವಅನೇಕರಾದ ಅವರೆಲ್ಲರು ಬಹಳ ಭುಜಪರಾಕ್ರಮವುಳ್ಳ ಕಾಮರೂಪಿಯಾದ ಈತನಿಂದಲೆ ಜಯಿಸಲ್ಪಟ್ಟವರಾಗಿ ನಾಶವನ್ನೈದಿದರು ॥೪೯॥ ಮತ್ತು ಯುದ್ಧದಲ್ಲಿ ತಿರಸ್ಕರಿಸಲಸಾಧ್ಯರಾದ ನರಪತಿಗಳ್ಯಾರೋ, ಅವರೂ ಕೂಡಾ ಯಮನಬಲದಿಂದ ಪ್ರೇರಿತರಾಗಿ,



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕೃತಾಂತಬಲಚೋದಿತಾಃ ॥೫೦॥ ಇಂದ್ರಾಣಾಂಚಸಹಸ್ರಾಣಿಸುರಾಣಾಮಯುತಾನಿಚ। ಋಷೀಣಾಂಸಪ್ತಸಂಖ್ಯಾನಾಂ ಶತಶೋಥಸಹಸ್ರಶಃ । ವಶಂನೀತಾನಿಸರ್ವಾಣಿಯಏಷದ್ವಾರಿತಿಷ್ಠತಿ॥೫೧॥ತಸ್ಯತದ್ವಚನಂಶ್ರುತ್ವಾರಾವಣೋವಾಕ್ಯಮಬ್ರವೀತ್ । ಮಯಾಪ್ರೇತೇಶ್ವರೋದೃಷ್ಟಃಕೃತಾಂತಸ್ಸಹಮೃತ್ಯುನಾ ॥೫೨॥ ಪಾಶಹಸ್ತೋಮಹಾಜ್ವಾಲೋಹ್ಯೂರ್ಧ್ವರೋಮಾಭಯಾನಕಃ । ವಿದ್ಯುಜ್ಜಿಹ್ವಶ್ಚ ದಂಷ್ಟ್ರಾಲಸ್ಸರ್ಪವೃಶ್ಚಿಕರೋಮವಾನ್ । ರಕ್ತಾಕ್ಷೋಭೀಮವೇಗಶ್ಚ ಸರ್ವಭೂತಭಯಂಕರಃ । ಆದಿತ್ಯಇವದುಷ್ಪ್ರೇಕ್ಷ್ಯಸ್ಸಮರೇಷ್ವನಿವರ್ತಕಃ ॥ ಪಾಪಾನಾಂಶಮಿತಾಚೈವಸಮಯಾಯುಧಿನಿರ್ಜಿತಃ। ನಚಮೇತತ್ರಭೀಃಕಾಚಿದ್ವ್ಯಥಾವಾದಾನವೇಶ್ವರ ॥೫೫॥ ಏತಂತುನಾಭಿಜಾನಾಮಿತದ್ಭವಾನ್ವಕ್ತುಮರ್ಹತಿ।ರಾವಣಸ್ಯವಚಶ್ಶ್ರುತ್ವಾಬಲಿರ್ವೈರೋಚನೋಬ್ರವೀತ್ ॥೫೬॥ ಏಷತ್ರೈಲೋಕ್ಯಧಾತಾಚಹರಿರ್ನಾರಾಯಣಃಪ್ರಭುಃ । ಅನಂತಃಕಪಿಲೋ

---

ನ್ನು ಹೊಂದಿಸಲ್ಪಟ್ಟರು ॥ ೫೦ ॥ ಇಂದ್ರಾಣಾಂ-ದೇವೇಂದ್ರಗಳ, ಸಹಸ್ರಾಣಿ- ಸಹಸ್ರಾರುಗಳು, ಸುರಾಣಾಂ-ದೇವತೆಗಳ, ಅಯುತಾನಿಚ- ಹತ್ತು ಸಾವಿರಗಳು, 'ಸಪ್ತಸಂಖ್ಯಾನಾಂ-ಯೇಳುಸಂಖ್ಯೆಯುಳ್ಳ, ಋಷೀಣಾಂ-ರುಷಿಗಳ, ಶತಶೋಥಸಹಸ್ರಶಃ-ಶತಶಃ-ನೂರಾರುಗಳು, ಸಹಸ್ರಶಃ-ಸಹಸ್ರಾರಗಳು, ಸರ್ವಾಣಿ-ಸಮಸ್ತ ಭೂತಗಳು, ಯಏಷಃ-ಯಾವ ಈ ಪುರುಷನು, ದ್ವಾರಿ-ನಮ್ಮ ಬಾಗಲಲ್ಲಿ,ತಿಷ್ಠತಿ-ಇರುತ್ತಾನೊ,ತೇನ-ಅವನಿಂದ,ವಶಂನೀತಾನಿ-ಸ್ವಾಧೀನವನ್ನು ಹೊಂದಿಸಲ್ಪಟ್ಟವು ॥೫೧॥ ತಸ್ಯ-ಆ ಬಲಿಚಕ್ರವರ್ತಿಯ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ರಾವಣಃ-ರಾವಣಾಸುರನು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು, ಮಯಾ-ನನ್ನಿಂದ, ಪ್ರೇತೇಶ್ವರಃ-ಪ್ರೇತಗಳಿಗೆಲ್ಲಾ ಅಧಿಪತಿಯಾದ, ಪಾಶಹಸ್ತಃ-ಪಾಶವೆಹಸ್ತದಲ್ಲಿವುಳ್ಳ, ಮಹಾಜ್ವಾಲಃ-ಮಹಾಉರಿವುಳ್ಳ, ಊರ್ಧ್ವರೋಮಾ-ಊರ್ಧ್ವಕೇಶಗಳುಳ್ಳ,ಭಯಾನಕಃ-ಭಯಂಕರನಾದ,ವಿದ್ಯುಜ್ಜಿಹ್ವಃ-ಮಿಂಚಿನಂತೆ ನಾಲಿಗೆವುಳ್ಳ,ದಂಷ್ಟ್ರಾಲಃ-ಕೋರೆಹಲ್ಲುಗಳುಳ್ಳ, ಸರ್ಪವೃಶ್ಚಿಕರೋಮವಾನ್-ಸರ್ಪಗಳು ವೃಶ್ಚಿಕಗಳೇ ರೋಮವಾಗಿವುಳ್ಳ, (ಯದ್ವಾಸರ್ಪ-ಸರ್ಪಗಳಂತೆಯು, ವೃಶ್ಚಿಕ- ಚೇಳುಗಳಂತೆಯು, ರೋಮವಾನ್-ರೋಮಗಳುಳ್ಳ,)ರಕ್ತಾಕ್ಷಃ-ಕೆಂಗಂಣುಗಳುಳ್ಳ, ಭೀಮವೇಗಶ್ಚ-ಭಯಂಕರವಾದ ವೇಗವುಳ್ಳ, ಸರ್ವಭೂತಭಯಂಕರಃ- ಸರ್ವಭೂತಗಳಿಗೂ ಭಯಂಕರನಾದ, ಆದಿತ್ಯಇವ-ಸೂರ್ಯನಂತೆ, ದುಷ್ಪ್ರೇಕ್ಷ್ಯಃ-ನೋಡಲಶಕ್ಯನಾದ, ಸಮರೇಷು-ಕಾಳಗಗಳಲ್ಲಿ, ಅನಿವರ್ತಕಃ-ಹಿಂತಿರಗದಿರುವ, ಪಾಪಾನಾಂ-ಪಾಪಗಳಿಗೆ, ಶಮಿತಾ-ಶಾಂತಿಕರ್ತನಾದ, ಸಃ-ಕೃತಾಂತಃ-ಆಯಮನು, ಮೃತ್ಯುನಾಸಹ-ಮೃತ್ಯುವಿನಿಂದೊಡಗೂಡಿ,ದೃಷ್ಟಃ-ಕಾಣಲ್ಪಟ್ಟನು, ಮಯಾ-ನನ್ನಿಂದ, ಯುಧಿ-ಯುದ್ಧದಲ್ಲಿ, ನಿರ್ಜಿತಃ-ಜಯಿಸಲ್ಪಟ್ಟನು, ಹೇ ದಾನವೇಶ್ವರ-ಯಲೈದಾನವಾಧಿಪತಿಯಾದ ಬಲಿಯೆ, ತತ್ರ- ಆಯಮಲೋಕದಲ್ಲಿಯೂಕೂಡ, ಮೇ-ನನಗೆ, ಭೀಃ-ಭಯವು, ನ-ಇಲ್ಲ, ಕಾಚಿತ್-ಯಾವದಾದರುವಂದು, ವ್ಯಥಾ-ವ್ಯಸನವು, ನ-ಇಲ್ಲ॥೫೨॥೫೩॥೫೪॥೫೫॥ಏತಂತು-ಈ ಪುರುಷನನ್ನಾದರೆ,ನಾಭಿಜಾನಾಮಿ-ಅರಿಯೆನು,ತತ್-ಆಕಾರಣದಪೆಶೆಯಿಂದ,ಭವಾನ್-ನೀನು,ವಕ್ತುಂ-ಹೇಳುವದಕ್ಕೋಸ್ಕರ,ಅರ್ಹತಿ-ಅರ್ಹನಾಗಿದ್ದೀಯೆ, ರಾವಣಸ್ಯ-ರಾವಣನ, ವಚಃ-ವಾಕ್ಯನ್ನು, ಶ್ರುತ್ವಾ-ಕೇಳಿ, ವೈರೋಚನಃ-ವಿರೋಚನಪುತ್ರನಾದ, ಬಲಿಃ-ಬಲಿಚಕ್ರವರ್ತಿಯು, ಅಬ್ರವೀತ್-ನುಡಿದನು ॥ ಏಷಃ-ಈ ಪುರುಷನು, ತ್ರೈಲೋಕ್ಯಧಾತಾ-ಲೋಕತ್ರಯವನ್ನು ಧರಿಸಿಯಿರುವ ನಾರಾಯಣಃ-ಪ್ರಳಯೋದಕವೆ ಆಶ್ರಯವಾಗಿಉಳ್ಳ, ಪ್ರಭುಃ-ಜಗತ್ಸ್ವಾಮಿಯಾದ, ಅನಂತಃ-ನಾಶರಹಿತನಾದ, ಕಪಿಲಃ-ಕಪಿಲಸ್ವರೂಪನಾದ, ವಿಷ್ಣುಃ-ವಿಷ್ಣುಸ್ವರೂಪನಾದ, ಹರಿಃ-ಸರ್ವಪಾಪಪರಿಹಾರಕನಾದ, ನಾರಸಿಹ್ಮಃ-ನರಸಿಹ್ಮನು, ಮಹಾದ್ಯುತಿಃ-ಮಹಾಪ್ರಕಾಶವುಳ್ಳನನು, ಋತಧಾಮಾ-ಸತ್ಯಭೂತವಾದ ತೇಜಸ್ಸುಳ್ಳವನು, ಸುಧಾಮಾಚ-ಸೌಮ್ಯವಾದಕಾಂತಿಯುಳ್ಳವ

---

ಆ ಪುರುಷನಿಂದಲೇ ಕ್ಷೀಣರಾದರು॥೫೦॥ಈ ದ್ವಾರದಲ್ಲಿರುವನ್ಯಾರೋ, ಈತನೆ ಅನೇಕಸಹಸ್ರಸಂಖ್ಯಾಕರಾದ ಇಂದ್ರರನ್ನೂ, ದೇವತೆಗಳನ್ನೂ, ಮತ್ತು ಸಪ್ತರ್ಷಿಗಳ ಸಂಖ್ಯೆಯುಳ್ಳ ಅನೇಕರನ್ನೂಸಹಾ ಸ್ವಾಧೀನಗೊಳಿಸಿ ಗೊಂಡಿರುವನೆಂದು ಬಲಿಯು ಹೇಳಲು॥೫೧॥ ರಾವಣನು ಅದಂ ಕೇಳಿ ಇಂತೆಂದನು, ಎಲೈ ದಾನವೇಂದ್ರನೇ! ಮೃತ್ಯುಸಹಿತನಾಗಿಯೂ, ಪಾಶಹಸ್ತನಾಗಿಯೂ, ಮಹತ್ತರವಾದ ಜ್ವಾಲೆಗಳುಳ್ಳವನಾಗಿಯೂ, ಊರ್ಧ್ವಾಕಾರವಾದ ರೋಮಗಳುಳ್ಳವನಾಗಿಯೂ, ಕಡುಭಯಂಕರನಾಗಿಯೂ, ಮಿಂಚುಗಳಂತೆ ಹೊಳೆಯುತ್ತಿರುವ ನಾಲಿಗೆಯುಳ್ಳವನಾಗಿಯೂ, ಕೋರೆಹಲ್ಲುಗಳುಳ್ಳವನಾಗಿಯೂ, ಹಾವುಗಳಂತೆಯೂ ಚೇಳುಗಳಂತೆಯೂ ಇರುವ ಕೂದಲುಗಳುಳ್ಳವನಾಗಿಯೂ, ಕೆಂಪಾದ ಕಣ್ಣುಗಳುಳ್ಳವನಾಗಿಯೂ, ಭಯಂಕರವಾದ ವೇಗಮುಳ್ಳವನಾಗಿಯೂ, ಸರ್ವಭೂತಗಳಿಗೂ ಮಹಾಭೀತಿಯನ್ನುಂಟು ಮಾಡುತಿರುವನಾಗಿಯೂ, ಸೂರ್ಯನತೆರದಿ ನೋಡಲಸಾಧ್ಯನಾಗಿಯೂ, ಕಾಳಗಗಳಲ್ಲಿ ಹಿಂತಿರಗದೇ ಇರುವನಾಗಿಯೂ ಪಾಪಧ್ವಂಸಕನಾಗಿಯೂ, ಇರುವ ಅಂಥಾ ಯಮಧರ್ಮರಾಜನು ಯುದ್ಧರಂಗದಲ್ಲಿ ನನ್ನಿಂದ ಜಯಿಸಲ್ಪಟ್ಟನು ಆದಕಾರಣ ಆ ಯಮಲೋಕದಲ್ಲಿಯೂಕೂಡಾ ನನಗೆ ಭಯವಾಗಲೀ ವ್ಯಥೆಯಾಗಲೀ ಯಾವದೊಂದುಯಿಲ್ಲ ಎಲೈ ದಾನವೇಶ್ವರನೆ! ಈ ಪುರುಷನನ್ನಾದರೆ ನಾನು ಕಾಣೆನು, ಆದಕಾರಣ ನೀನು ಹೇಳಬೇಕೆಂಬದಾಗಿ ಕಾಂಕ್ಷಿಸುತ್ತೇನೆಂದು ರಾವಣನು ನುಡಿಯಲು, ವಿರೋಚನಪುತ್ರನಾದ ಬಲಿಚಕ್ರವರ್ತಿಯು ಇಂತೆಂದನು॥೫೬ ॥ಎಲೈರಾವಣನೆ! ಈ ಪುರುಷನು ಲೋಕತ್ರಯವನ್ನು ಧರಿಸುತಿರುವನಾಗಿಯು ಸರ್ವಪಾಪಪರಿ ಹಾರವಂಗೈಯ್ಯು ತಿರುವನಾಗಿಯು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಿಷ್ಣುರ್ನಾರಸಿಂಹೋಮಹಾದ್ಯುತಿಃ ॥ ಋತಧಾಮಾಸುಧಾಮಾಚಪಾಶಹಸ್ತೋ ಭಯಾನಕಃ । ದ್ವಾದಶಾದಿತ್ಯಸದೃಶಃ ಪುರಾಣಪುರುಷೋತ್ತಮಃ ॥೫೮॥ನೀಲಜೀಮೂತಸಂಕಾಶಸ್ಸುರನಾಥಸ್ಸುರೋತ್ತಮಃ। ಜ್ವಾಲಾಮಾಲೀಮಹಾನಾದೋ ಗೀತಸಕ್ತಜನಪ್ರಿಯಃ ॥೫೯॥ಏಷಧಾರಯತೆಲೋಕಾನ್ಏಷವೈಸೃಜತೆಪ್ರಭುಃ। ಏಷಸಂಹರತೆಚೈವಕಾಲೋಭೂತ್ವಾಮಹಾಬಲಃ ॥೬೦॥ ಏಷಯಜ್ವಾಚಯಜ್ಞಶ್ಚಚಕ್ರಾಯುಧಧರೋಹರಿಃ । ಸರ್ವದೇವಮಯಶ್ಚೈವಸರ್ವಭೂತಮಯಸ್ತಥಾ। ಸರ್ವಲೋಕಮಯಶ್ಚೈವಸರ್ವಜ್ಞಾನಮಯಸ್ತಥಾ। ಸರ್ವರೂಪೀಮಹಾರೂಪೀಬಲದೇವೋಮಹಾಭುಜಃ॥೬೧॥ವೀರಹಾವೀರಚಕ್ಷುಷ್ಮಾನ್ತ್ರೈಲೋಕ್ಯಗುರುರವ್ಯಯಃ। ಏವಂಮುನಿಗಣಾಸ್ಸರ್ವೆ ಕಥಯಂತೀಹಮೋಕ್ಷಿಣಃ॥೬೨॥ಯಏನಂ

---

ನು, ಪಾಶಹಸ್ತಃ-ಪಾಶವೇ ಹಸ್ತದಲ್ಲಿ ಉಳ್ಳವನು, ಭಯಾನಕಃ-ಶತೃಗಳಿಗೆ ಭಯಂಕರನಾಗಿರುವನು, ದ್ವಾದಶಾದಿತ್ಯಸದೃಶಃ-ದ್ವಾದಶಾದಿತ್ಯ-ಹನ್ನೆರಡುಸೂರ್ಯರಿಗೆ, ಸದೃಶಃ-ಸಮಾನನಾದವನು, ಪುರಾಣಪುರುಷೋತ್ತಮಃ-ಪುರಾಣಪುರುಷ-ಪೂರ್ವಪುರುಷರೊಳಗೆ, ಉತ್ತಮಃ-ಉತ್ತಮನು, (ಯದ್ವಾ- ಪುರಾಣ-ಅನಾದಿಸಿದ್ಧವಾದ, ಪುರುಷೋತ್ತಮಃ-ಪುರುಷಶ್ರೇಷ್ಠನಾದವನು ॥೫೭॥೫೮॥ ನೀಲಜೀಮೂತಸಂಕಾಶಃ-ನೀಲಮೇಘಕ್ಕೆ-ಸಮಾನನಾದವನು, ಸುರನಾಥಃ-ದೇವತೆಗಳಿಗೆ ಒಡೆಯನು, ಸುರೋತ್ತಮಃ-ದೇವತೆಗಳೊಳಗೆ ಶ್ರೇಷ್ಠನು, ಜ್ವಾಲಾಮಾಲೀ-ಜ್ವಾಲಾರೂಪವಾಗಿರುವಮಾಲಿಕೆಯುಳ್ಳವನು, ಮಹಾನಾದಃ-ಗಂಭೀರಧ್ವನಿಯುಳ್ಳವನು,ಗೀತಸಕ್ತಜನಪ್ರಿಯಃ-ಗೀತ-ತನ್ನ ಕೀರ್ತನೆಯಲ್ಲಿ, ಸಕ್ತ-ಆಸಕ್ತರಾದ,ಜನ-ಜನರಲ್ಲಿ, ಪ್ರಿಯಃ-ಇಷ್ಟತೆಯುಳ್ಳವನು॥೫೯॥ ಏಷಃ-ಈ ಪುರುಷನು, ಲೋಕಾನ್-ಲೋಕಗಳನ್ನು, ಧಾರಯತೆ-ಧರಿಸಿಧ್ದಾನೆ, ಏಷಪ್ರಭುಃ-ಈಸ್ವಾಮಿಯೆ, ಸೃಜತೆ-ಸೃಷ್ಟಿಮಾಡುತ್ತಾನೆ, ಏಷಃ-ಈ ಪುರುಷನು, ಮಹಾಬಲಃ-ಮಹಾಬಲ ವುಳ್ಳ,ಕಾಲೋಭೂತ್ವಾ-ಕಾಲಪುರುಷನಾಗಿ ಸಂಹರತೆ-ಸಂಹಾರವು ಮಾಡುತ್ತಾನೆ, ಏಷಃ-ಈತನುಯಜ್ವಾಚ-ಯಜಮಾನ ಸ್ವರೂಪನು, ಯಜ್ಞಶ್ಚ-ಯಜ್ಞ ಸ್ವರೂಪನು, ಚಕ್ರಾಯುಧಧರಃ-ಸುದರ್ಶನವನ್ನು ಧರಿಸಿಯಿರುವನು, ಹರಿಃ-ಪಾಪ ಪರಿಹಾರಕನು, ಸರ್ವದೇವಮಯಶ್ಚೈವ-ಸರ್ವದೇವತಾಸ್ವರೂಪನಾಗಿಧ್ದಾನೆ, ತಥಾ-ಹಾಗೆ, ಸರ್ವಭೂತಮಯಃ-ಸಮಸ್ತಭೂತಸ್ವರೂಪನು॥೬೦॥ ॥೬೧॥ ಸರ್ವಲೋಕಮಯಶ್ಚೈವ-ಸರ್ವಲೋಕಾತ್ಮಕ ನಾಗಿದಂಥಾವನು ತಥಾ-ಹಾಗೆ, ಸರ್ವಜ್ಞಾನಮಯಃ-ಸರ್ವಚೈತನ್ಯಸ್ವರೂಪನಾದವನು, ಸರ್ವರೂಪಿ-ಸಮಸ್ತರೂಪಗಳುಳ್ಳವನು, ಮಹಾರೂಪಿ- ದೊಡ್ಡ ಆಕಾರ ವುಳ್ಳವನು,ಬಲದೇವಃ-ಬಲರೂಪವಾದ ದೇವತೆಗಳುಳ್ಳವನು,(ಯದ್ವಾ-ಬಲಆತ್ಮಶಕ್ತಿಯಿಂದಾದೇವಃವಿಹರಿಸುವನು,)ಮಹಾಭುಜಃ-ಮಹಾಭುಜಪರಾಕ್ರಮಿಯಾದವನು ॥೬೦॥ ವೀರಹಾ-ಶೂರರನ್ನು ಸಂಹರಿಸುವನು, ವೀರಚಕ್ಷುಷ್ಮಾನ್-ವೀರ-ಶೂರರಲ್ಲಿ ಚಕ್ಷುಷ್ಮಾನ್-ದೃಷ್ಟಿವುಳ್ಳವನು, ತ್ರೈಲೋಕ್ಯಗುರುಃ-ಲೋಕತ್ರಯಕ್ಕೂ ಉಪದೇಶಕರ್ತನು, ಅವ್ಯಯಃ-ನಾಶರಹಿತನು,ಏವಂ-ಈ ಪರಿಯಾಗಿ ಮೋಕ್ಷಿಣಃ-ಜೀವನ್ಮುಕ್ತರಾದ, ಸರ್ವೆ-ಸಮಸ್ತರಾದ, ಮುನಿಗಣಾಃ-ಋಷಿಗಳ ಸಮೂಹಗಳು, ಇಹ-ಈ ಲೋಕದಲ್ಲಿ, ಕಥಯಂತಿ-ಹೇಳುತ್ತಾರೆ ॥೬೨॥ ಯಃ-ಯಾವಪುರುಷನು, ಏನಂ-ಪುರುಷಂ-ಈ ಮಹಾಪುರುಷನನ್ನು, ವೆತ್ತಿ-ತಿಳದುಕೊಳುತ್ತಾನೊ, ಸಃ-ಅವನು, ಪಾಪೈಃ-ಪಾಪಗಳಿಂದ, ಪ್ರಮುಚ್ಯತೆ-ಬಿಡಲ್ಪಡುತ್ತಾನೆ, ಸ್ತುತ್ವಾ-

---

ಪ್ರಳಯೋದಕವೇ ಆಶ್ರಯವಾಗುಳ್ಳವನಾಗಿಯೂ ಲೋಕಸ್ವಾಮಿಯಾದವನಾಗಿಯೂ, ನಾಶರಹಿತವಾದವನಾಗಿಯೂ, ಕಪಿಲಸ್ವರೂಪನಾಗಿಯೂ, ಪ್ರಪಂಚವನ್ನೆಲ್ಲಾ ವ್ಯಾಪಿಸಿಕೊಂಡಿರುವನಾಗಿಯೂ, ನರಸಿಂಹಾಕಾರವಂ ಗೈದವನಾಗಿಯೂ, ಕಡುಕಾಂತಿಯುಳ್ಳವನಾಗಿಯೂ, ಸತ್ಯಭೂತವಾದ ತೇಜಸ್ಸುಳ್ಳವನಾಗಿಯೂ, ಸೌಮ್ಯವಾದಕಾಂತಿಯುಳ್ಳವನಾಗಿಯೂ, ಪಾಶಾಯುಧವಂ ಪಿಡಿದಿರುವನಾಗಿಯೂ, ಶತೃಭಯಂಕರನಾಗಿಯೂ, ದ್ವಾದಶವಿಧವಾದ ಸೂರ್ಯರಂತೆ ಕಂಗೊಳಿಸುತಿರುವ ದೇಹಕಾಂತಿಯುಳ್ಳವನಾಗಿಯೂ, ಅನಾದಿಸಿದ್ಧನಾದ ಪುರುಷಶ್ರೇಷ್ಠನೆಂದು ಪ್ರಸಿದ್ಧಿಯಂಗೈದವನಾಗಿಯೂ, ವರ್ಷಾಕಾಲದ ಮೇಘಕ್ಕೆ ಸಮಾನವಾದ ಕಾಂತಿಯುಳ್ಳವನಾಗಿಯೂ, ದೇವತೆಗಳಿಗೆಲ್ಲ ಸ್ವಾಮಿಯಾದವನಾಗಿಯೂ, ದೇವೋತ್ತಮನಾಗಿಯೂ, ಜ್ವಾಲಾರೂಪವಾದ ಮಾಲಿಕೆಗಳುಳ್ಳವನಾಗಿಯೂ,ಗಂಭೀರವಾದ ಧ್ವನಿಯುಳ್ಳವನಾಗಿಯೂ, ತನ್ನ ಕೀರ್ತನೆಯಲ್ಲಿ ಆಸಕ್ತರಾದ ಜನರಲ್ಲಿ ವಿಶ್ವಾಸವುಳ್ಳವನಾಗಿಯೂ ಆಗಿರುವ ಸಾಕ್ಷಾದ್ವಿಷ್ಣುವು॥೫೯॥ ಈತನೆ ಲೋಕಗಳಂ ಧರಿಸುವನು, ಇವನೇ ಸೃಜಿಸುವನು, ಕಾಲಪುರುಷನಾಗಿ ಈತನೆ ಸರ್ವವನ್ನು ಸಂಹರಿಸುವನು ॥ ಮತ್ತೂ ಯಜ್ಞ ಮಾಡುವನಾಗಿಯೂ, ಯಜ್ಞರೂಪಿಯಾಗಿಯೂ, ಚಕ್ರಾಯುಧ ಧಾರಿಯಾಗಿಯೂ, ಸರ್ವ ದೇವತಾಸ್ವರೂಪನಾಗಿಯೂ, ಸಮಸ್ತಭೂತಮಯನಾಗಿಯೂ, ಸರ್ವಲೋಕಾತ್ಮಕನಾಗಿಯೂ, ಸರ್ವಚೈತನ್ಯಸ್ವರೂಪಿಯಾಗಿಯೂ, ಸಮಸ್ತರೂಪಗಳುಳ್ಳವನಾಗಿಯೂ, ದೊಡ್ಡದಾದ ಆಕಾರವುಳ್ಳವನಾಗಿಯೂ, ಬಲರೂಪವಾದ ದೇವತೆಗಳುಳ್ಳವನಾಗಿಯೂ, ಮಹಾಭುಜಪರಾಕ್ರಮವುಳ್ಳವನಾಗಿಯೂ, ವೀರರನ್ನು ಸಂಹರಿಸುತಿರುವನಾಗಿಯೂ, ಶೂರರಲ್ಲಿಯೇ ದೃಷ್ಟಿಯುಳ್ಳವನಾಗಿಯೂ, ಲೋಕತ್ರಯಕ್ಕೂ ಗುರುವಾಗಿರುವನಾಗಿಯೂ, ನಾಶರಹಿತನಾಗಿಯೂ ಆಗಿರುವಹರಿ ಎಂದು ಬ್ರಹ್ಮಾಂಡದಲ್ಲಿರುವ ಮುನಿತಂಡಗಳೆಲ್ಲವು ಈತನನ್ನು ಹೇಳುವರು ॥೬೨॥ ಯಾವನು ಈ ಪುರುಷನನ್ನು ತಿಳಿಯುತ್ತಾನೋ, ಅವನೆ ಸಮಸ್ತಪಾಪಿಗಳಿಂದಲೂ ವಿಮುಕ್ತನಾಗುವನು ಈತನನ್ನು ಕುರಿತು ಸ್ತುತಿಶಿದರೂ ಅಥವಾ ಸ್ಮರಿಸಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪುರುಷಂವೆತ್ತಿ ಸತುಪಾಪೈಃಪ್ರಮುಚ್ಯತೆ। ಸ್ತುತ್ವಾಸ್ಮೃತ್ವಾತಥೈವೆಷ್ಟ್ವಾ ಸರ್ವಮಸ್ಮಾದವಾಪ್ಯತೆ ॥೬೪ ॥ ಎತಚ್ಛ್ರುತ್ವಾತುವಚನಂರಾವಣೊನಿರ್ಯಯೌತದಾ। ನಚತಂಪುರುಹಂತತ್ರದದರ್ಶರಜನೀಚರಃ॥ ೬೫ ॥ ಹರ್ಷಾನ್ನಾದಂವಿಮುಂಚನ್ವೈನಿಷ್ಕ್ರಾಮದ್ವರುಣಾಲಯಾತ । ಯೆನೈವಸಂಪ್ರವಿಷ್ಟಸ್ಸಪಥಾತೆನೈವನಿರ್ಗತಃ ... ... ॥೬೬॥

—...ಅಥಾಧಿಕ ಪಾಠ ಶ್ಲೋಕಾಃ...—

ಅಥಸಂಚಿಂತ್ಯಪೌಲಸ್ತ್ಯಸ್ಸೂರ್ಯಲೊಕಂಜಗಾಮಹ । ಮೆರುಶೃಂಗೆವರೆರಮ್ಯೆ ಉಷಿತ್ವಾತತ್ರಶರ್ವರೀಂ ॥೬೭॥ ಪುಷ್ಪಕಂತತ್ಸಮಾರುಹ್ಯರವೆಸ್ತುರಗಸನ್ನಿಭಂ।ಮನೊವಾತಗತಿಂದಿವ್ಯಂವಿಹಾರಿವಿಯತಿಸ್ಥಿತಮ್ ॥೬೮॥ತತ್ರಾಪಶ್ಯದ್ರವಿಂದೆವಂಸರ್ವತೆಜೊಮಯಂಶುಭಮ್।ವರಕಾಂಚನಕೆಯೂರರಂರಕ್ತಾಂಬರವಿಭೂಷಿತಮ್॥೬೯॥ಕುಂಡಲಾಭ್ಯಾಂಶುಭಾಭ್ಯಾಂತುಭ್ರಾಜನ್ಮುಖವಿಕಾಸಿತಮ್।ಕೆಯೂರನಿಷ್ಕಾಭರಣಂರಕ್ತಮಾಲಾವಲಂಬಿನಮ್॥೭೦॥ ರಕ್ತಕಾಂಚನದಿಗ್ಧಾಂಗಂಸಹಸ್ರಕಿ

---

ಸ್ತೋತ್ರವನ್ನೂ ಮಾಡಿ, ತಥೈವ-ಹಾಗೆಯೆ, ಸ್ಮೃತ್ವಾ-ಸ್ಮರಣೆಮಾಡಿ, ಇಷ್ಟ್ವಾ-ಪೂಜೆಮಾಡಿ, ಅಸ್ಮಾತ್-ಈ ಪುರುಷನಿಂದ, ಸರ್ವಂ-ಸಮಸ್ತವು, ಅವಾಪ್ಯತೆ-ಹೊಂದಲ್ಪಡುತ್ತೆ ॥೬೪॥ ಎತದ್ವಚನಂ-ಈ ಮಾತನ್ನು, ಶ್ರುತ್ವಾ-ಕೇಳಿ, ರಾವಣಃ-ರಾವಣನು, ನಿರ್ಯಯೌ-ಹೊರಟನು, ರಜನೀಚರಃ-ರಾವಣನು, ತದಾ-ಆ ಕಾಲದಲ್ಲಿ, ತಂ-ಪುರುಷಂ-ಆ ಪುರುಷನನ್ನು, ತತ್ರ-ಆ ಬಾಗಿಲಲ್ಲಿ, ನದದರ್ಶ-ನೋಡಲಿಲ್ಲ ॥೬೫॥ ಹರ್ಷಾತ್-ಸಂತೋಷದವೆಶೆಯಿಂದ, ನಾದಂ-ಅಟ್ಟಹಾಸಧ್ವನಿಯನ್ನು, ವಿಮುಂಚನ್-ಬಿಡುತ್ತಾ, ವರುಣಾಲಯಾತ್-ವರುಣನಮನೆಯದೆಶೆಯಿಂದ,ನಿಷ್ಕ್ರಾಮತ್-ಹೊರಟುಬಂದನು, ಸಃ-ಆ ರಾವಣನು, ಯೆನೈವ-ಯಾವಮಾರ್ಗದಿಂದ, ಸಂಪ್ರವಿಷ್ಟಃ-ಪ್ರವೇಶಮಾಡಿದನೋ ತೆನೈವಪಥಾ-ಅದೇಮಾರ್ಗದಿಂದಲೆ, ನಿರ್ಗತಃ-ಹೊರಟುಬಂದನು ॥೬೬॥

ಅಥಾಧಿಕಪಾಠಃ.

ಅಥ-ಬಳಿಕ, ಪೌಲಸ್ತ್ಯಃ-ಪುಲಸ್ತ್ಯಬ್ರಹ್ಮಮಮ್ಮಗನಾದ ರಾವಣನು,ಸಂಚಿಂತ್ಯ-ಆಲೊಚಿಸಿ,ಸೂರ್ಯಲೋಕಂ-ಸೂರ್ಯಲೋಕವನ್ನು ಕುರಿತು,ಜಗಾಮಹ, ಹೊರಟನು, ವರೆ-ಶ್ರೆಷ್ಠವಾದ, ರಮ್ಯೆ-ಇಂಪಾಗಿರುವ, ಮೆರುಶೃಂಗೆ,ಮೆರುಪರ್ವತದಶಿಖರದಲ್ಲಿ,ತತ್ರ-ಅಲ್ಲಿಯೆ,ಶರ್ವರೀಂ-ರಾತ್ರಿಯಲ್ಲಿ, ಉಷಿತ್ವಾ-ಇದ್ದು, ರವೆಃ-ಸೂರ್ಯನ, ತುರಗಸನ್ನಿಭಂ-ಅಶ್ವಕ್ಕೆ ಸಮಾನವಾದ, ಮನೊವಾತಗತಿಂ-ಮನೋವಾಯುಗಳ ಗಮನದಂತೆ ಗಮನವುಳ್ಳ, ದಿವ್ಯಂ-ದೇವತಾಸಂಬಂಧವಾದ, ವಿಯತಿ-ಅಂತರಿಕ್ಷದಲ್ಲಿ, ಸ್ಥಿತಂ-ನಿಂತಿರುವ, ವಿಹಾರಿ, ವಿಹರಣಶೀಲವಾದ-ತತ್ಪುಷ್ಪಕಂ-ಆ ವಿಮಾನವನ್ನು,ಸಮಾರುಹ್ಯ-ಹತ್ತಿ, ತತ್ರ-ಆ ಅಂತರಿಕ್ಷದಲ್ಲಿ, ರಾಕ್ಷಸಾಧಿಪಃ-ರಾಕ್ಷಸಾಧಿಪತಿಯಾದ, ರಾವಣಃ-ರಾವಣನು, ಸರ್ವತೆಜೊಮಯಂ-ಸರ್ವತೇಜಸ್ವರೂಪನಾದ, ಶುಭಂ-ಶುಭಕರನಾದ, ವರಕಾಂಚನಕೆಯೂರಂ-ವರಶ್ರೆಷ್ಠವಾದ, ಕಾಂಚನಕೇಯೂರಂ-ಭಂಗಾರದ ಭುಜಕೀರ್ತಿಗಳುಳ್ಳ, ರಕ್ತಾಂಬರವಿಭೂಷಿತಂ-ರಕ್ತವಸ್ತ್ರಗಳಿಂದ ಅಲಂಕೃತಮಾದ, ಶುಭಾಭ್ಯಾಂ-ಶುಭಕರವಾದ, ಕುಂಡಲಾಭ್ಯಾಂ-ಕರ್ಣಾಭರಣಗಳಿಂದ, ಭ್ರಾಜನ್ಮುಖವಿಕಾಸಿತಂ-ಭ್ರಾಜತ್-ಪ್ರಕಾಶರೂಪವಾದ, ಮುಖ- ಮುಖ

---

ದರೂ ಯಾಗಮಾಡಿದರೂ ಸಮಸ್ತ ಇಷ್ಟಾರ್ಥವನ್ನು ಹೊಂದುವನು,ಎಂದು ಬಲಿಚಕ್ರವರ್ತಿಯು ಹೇಳಲು, ರಾವಣನು ಅದಂಕೇಳಿ, ಆಗಹೊರಟು, ಆ ದ್ವಾರದಲ್ಲಿ ಆ ಪುರುಷನನ್ನು ಕಾಣಲಿಲ್ಲ ॥೬೫॥ ಆ ರಾವಣನು, ಯಾವ ಮಾರ್ಗದಿಂದ ಪ್ರವೇಶಿಸಿದವನೋ, ಅದೇಮಾರ್ಗದಿಂದಲೇ,ವರುಣನ ಲೋಕದ ದೆಶೆಯಿಂದ, ಅಟ್ಟಹಾಸವಂಗೈಯುತ್ತಾ ಈಚೆಗೆ ಹೊರಟು ಬಂದವನಾದನು ಅನಂತರದಲ್ಲಿಪುಲಸ್ತ್ಯ ಕುಮಾರನಾದ ರಾವಣನು, ಯೋಚಿಸಿದವನಾಗಿ, ಸೂರ್ಯಲೊಕಮಂ ಕುರಿತು ಹೊರಟು, ಆ ದಾರಿಯಲ್ಲಿರುವರಂಮ್ಯವಾದ ಮೇರು ಪರ್ವತದ ಶಿಖರದಲ್ಲಿ ಆ ರಾತ್ರಿ ಮಲಗಿದ್ದು, ಆ ಬಳಿಕ ಸೂರ್ಯಾಶ್ವಕ್ಕೆ ಸಮಾನವಾಗಿಯೂ ಮನಸ್ಸಿಗೂ, ವಾಯುವಿಗೂ ಸದೃಶವಾದವೇಗವುಳ್ಳದ್ದಾಗಿಯೂ, ವಿಹರಣಶೀಲವಾಗಿಯೂ, ಅಂತರಿಕ್ಷಮಾರ್ಗದಲ್ಲಿ ನಿಂತಿರುವದಾಗಿರುವ, ಆ ಪುಷ್ಪಕವನ್ನೇರಿ, ಸರ್ವತೇಜಃಪುಂಜನಾಗಿಯೂ, ಅಪರಂಜೀವಿಕಾರವಾದ, ವರಕೇಯೂರಗಳುಳ್ಳವನಾಗಿಯೂ, ಕೆಂಪಾಗಿರುವ ವಸ್ತ್ರಗಳನ್ನು, ಭೂಷಣಗಳನ್ನೂ ಧರಿಸಿದವನಾಗಿಯೂ ಶುಭಕರಂಗಳಾದ ಕುಂಡಲಂಗಳಿಂದಹೊಳೆಯುತ್ತಿರುವ ಮುಖವಿಕಾಸವುಳ್ಳವನಾಗಿಯೂ ಬಾಹುಚೆಗೆ ಳಂತಿರುವ ಬಂದಿಗಳೇ ಆಭರಣವಾಗಿ ಉಳ್ಳವನಾಗಿಯೂ ತೆಂಪಾಗಿರುವ ಹೂವ್ವಿನಮಾಲಿಕೆಗಳುಳ್ಳವನಾಗಿಯೂ ಚಂದನಗಂಧದಿಂದ ಹಚ್ಚಲ್ಪಟ್ಟ ಅಂಗಗಳುಳ್ಳವನಾಗಿಯೂ, ಸಹಸ್ರ ಕಿರಣಗಳಿಂದ ಕಂಗೊಳಿಸುತಿರುವನಾಗಿಯೂ, ಆದಿದೇವನಾಗಿಯೂ ,ಅದಿತಿಯ ಪುತ್ರನಾಗಿಯೂಸಮರ್ಥನಾಗಿಯೂ, ಸಪ್ತಾಶ್ವವೇವಾಹನವಾಗುಳ್ಳವನಾಗಿಯೂ, ಆದಿಮಧ್ಯಾಂತ ರಹಿತನಾಗಿಯೂ, ಲೋಕಸಾಕ್ಷಿಯಾಗಿಯೂ, ಇರುವ ಸೂರ್ಯನಂ ಕಂಡು, ರವಿಕಿರಣಗಳಿಂದ ಹೆದರಿದ ಪ್ರಹಸ್ತನಂ ಕುರಿತಿಂತೆಂದನು ॥ ಎಲೈ ಪ್ರಹಸ್ತನೆ ! ನನ್ನಾಜ್ಞೆಯಿಂದ ಸೂರ್ಯನಸಮೀಪಕ್ಕೆ ಹೋಗಿ, ರಾಕ್ಷಸರಾಜನಾದ ರಾವಣನು ಯುದ್ಧಾರ್ಥವಾಗಿಬಂದಿಹನು, ಆತನಿಗೆ ಯುದ್ಧವಂನೀಡು, ಅಥವಾ ಜಯಿಸಲ್ಪಟ್ಟೆನೆಂದಾದರೂ ಹೇಳು, ಎಂದು ನುಡಿಯಲೂ, ಪ್ರಹಸ್ತನದಂ ಕೇಳಿ ಸೂರ್ಯನ ಸನ್ನಿಧಾನಕ್ಕೆ ಹೊರಟುಹೋಗಿ ಪಿಂಗಳ, ದಂಡರೆಂಬ ದ್ವಾರಪಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಣೋಜ್ವಲಮ್ । ತಮಾದಿದೇವಮಾದಿತ್ಯಂವಿಭುಂಸಪ್ತಾಶ್ವ ವಾಹನಮ್॥೨೧॥ಅನಾದ್ಯಂತಮಮಧ್ಯಂತಂಲೋಕಸಾಕ್ಷಿಣಮೀಶ್ವರಮ್ ॥೨೧½॥ ತಂದೃಷ್ಟ್ವಾ ಪ್ರವರಂದೇವಂರಾವಣೋರಾಕ್ಷಸಾಧಿಪಃ । ಸಪ್ರಹಸ್ತಮುವಾಚಾಥರವಿತೇಜೋ ಬಲಾರ್ದಿತಮ್। ಗಚ್ಛಾಮಾತ್ಯವದಹ್ಯೇನಂಸಂದೇಶಾನ್ಮಮಶಾಸನಮ್ ॥ಮಾರ್ತಾಂಡಂಭಾಸ್ಕರಂಶ್ರೇಷ್ಠಂತತ್ವತೋ ಬ್ರೂಹಿಮಾಚಿರಮ್ ॥೨೩½ ಯುದ್ಧಾರ್ಥೀರಾವಣಃಪ್ರಾಪ್ತೋಯುದ್ಧಂತಸ್ಯಪ್ರದೀಯತಾಮ್ ॥೨೪॥ನಿರ್ಜಿತೋಸ್ಮೀತಿವಾಬ್ರೂಹಿಪಕ್ಷಮೇಕತರಂಕುರು ।ತಸ್ಯತದ್ವಚನಾದ್ರಕ್ಷಸ್ಸೂರ್ಯಸ್ಯಾಂತಿಕಮಾಗಮತ್ ॥೨೫॥ ಪಿಂಗಳಂದಂಡಿನಂಚೈವಸೋಪಶ್ಯದ್ದ್ವಾರಪಾಲಕೌ । ಆಭ್ಯಾಮಾಖ್ಯಾಯತತ್ಸರ್ವಂರಾವಣಸ್ಯವಿನಿಶ್ಚಯಮ್ ॥೨೬॥ ತೂಷ್ಣೀಮಾಸ್ತೇಪ್ರಹಸ್ತಸ್ಸಸೂರ್ಯತೇಜಃಪ್ರತಾಪಿತಃ । ದಂಡೀಗತ್ವಾರವೇಃಪಾರ್ಶ್ವಂಪ್ರಣಮ್ಯಾಖ್ಯಾತವಾನ್ವಿಭುಮ್॥೨೭॥ ಶ್ರುತ್ವಾ ತುಸೂರ್ಯಸ್ತದ್ವೃತ್ತಂದಂಡಿನೋರಾವಣಸ್ಯಹ ।ಉವಾಚವಚನಂಶ್ರೀಮಾನ್ಬುದ್ಧಿಪೂರ್ವಂದಿವಾಕರಃ॥೨೮॥ಗಚ್ಛದಂಡಿನ್ಜಯಸ್ವೈನಂನಿರ್ಜಿತೋಸ್ಮೀತಿವಾವದ । ಕುರುಯತ್ತೇಕಾಂಕ್ಷಿತಂತನ್ನಾಹಂಕಾಲಕ್ಷಿಪಾಂಸಹೇ ॥೨೯॥ ಸಗತ್ವಾವಚನಾತ್ತಸ್ಯರಾಕ್ಷಸಾಯಮಹಾತ್ಮನಃ। ಕ

---

ಇಂದ, ವಿಕಾಸಿತಂ-ಹೊಳೆಯುತಿರುವ, ಕೇಯೂರನಿಷ್ಕಾಭರಣಂ-ಕೇಯೂರ-ಅಂಗದಗಳಿಂತಿರುವ,ನಿಷ್ಕ-ಬಂದಿಗಳೆ,ಆಭರಣಂ-ಭೂಷಣಗಳಾಗಿ ಉಳ್ಳ,ರಕ್ತಮಾಲಾವಲಂಬಿನಂ-ಕೆಂಪಾದ ಪುಷ್ಪಮಾಲಿಕೆಗಳನ್ನು ಧರಿಸಿಯಿರುವ, ರಕ್ತಚಂದನದಿಗ್ಧಾಂಗಂ-ರಕ್ತಚಂದನ-ಕೆಂಪುಗಂಧದಿಂದ, ದಿಗ್ಧ-ಲೇಪನೆ ಮಾಡಲ್ಪಟ್ಟ ಅಂಗಂ-ಅವಯಗಳುಳ್ಳ, ಸಹಸ್ರಕಿರಣೋಜ್ವಲಂ-ಸಹಸ್ರಕಿರಣಗಳಿಂದ, ಪ್ರಕಾಶಮಾನನಾಗಿರುವ, ಸಪ್ತಾಶ್ವವಾಹನಂ, ಸಪ್ತ-ಸಪ್ತವೆಂಬ ಹೆಸರುಳ್ಳ,ಅಶ್ವವೇ ವಾಹನವಾಗಿವುಳ್ಳ (ಯದ್ವಾ-ಸಪ್ತಾಶ್ವ-ಏಳುಅಶ್ವಗಳೆ, ವಾಹನಗಳಾಗಿವುಳ್ಳ,)ಆದಿದೇವಂ-ಮೊದಲನೆ ದೇವರಾದ,ಅನಾದ್ಯಂತಂ-ಉತ್ಪತ್ತಿಲಯಗಳಿಲ್ಲದಿರುವ, ಅಮಧ್ಯಂ-ಮಧ್ಯವಿಲ್ಲದಿರುವ,ಲೋಕಸಾಕ್ಷಿಣಂ-ಲೋಕಗಳಿಗೆಸಾಕ್ಷಿಭೂತನಾದ, ಈಶ್ವರಂ-ಸ್ವಾಮಿಯಾದ,ಆದಿತ್ಯಂ-ಅದಿತಿಸಂಭೂತನಾದ, ರವಿಂ-ದೇವಂ, ಸೂರ್ಯದೇವರನ್ನು,ಅಪಶ್ಯತ್-ಕಂಡನು ॥೨೧½॥ರಾಕ್ಷಸಾಧಿಪಃ-ರಾಕ್ಷಸರಾಜನಾದ,ಸರಾವಣಃ-ಆ ರಾವಣನು, ಪ್ರವರಂ-ಶ್ರೇಷ್ಠನಾದ, ತಂದೇವಂ-ಆಸೂರ್ಯದೇವರನ್ನು,ದೃಷ್ಟ್ವಾ-ಕಂಡು,ಅಥ-ಬಳಿಕ,ರವಿತೇಜೋಬಲಾರ್ದಿತಂ-ರವಿ-ಸೂರ್ಯನ,ತೇಜೋಬಲ-ತೇಜಶ್ಶಕ್ತಿಯಿಂದ,ಅರ್ದಿತಂ-ಬಾಧಿತನಾದ, ಪ್ರಹಸ್ತಂ-ಪ್ರಹಸ್ತನನ್ನು ಕುರಿತು, ಉವಾಚ-ಹೇಳಿದನು,ಹೆ ಅಮಾತ್ಯ-ಎಲೈ ಮಂತ್ರಿಯೆ,ಮಮ-ನನ್ನ,ಸಂದೇಶಾತ್-ಆಜ್ಞಾವಚನದಿಂದ,ಗಚ್ಛ-ಹೋಗು, ಶ್ರೇಷ್ಠಂ-ಶ್ರೇಷ್ಠನಾದ, ಭಾಸ್ಕರಂ-ಪ್ರಕಾಶಕರನಾದ, ಏನಂಮಾರ್ತಾಂಡಂ-ಈ ಸೂರ್ಯನನ್ನು ಕುರಿತು, ಶಾಸನಂ-ಆಜ್ಞಾವಚನವನ್ನು, ವದ-ಹೇಳು, ತತ್ವತಃ-ಯಥಾರ್ಥವಾಗಿ, ಬ್ರೂಹಿ-ಹೇಳು, ಮಾಚಿರಂ-ಸಾವಕಾಶಮಾಡಬೇಡ ॥೨೩॥ ರಾವಣಃ-ರಾವಣನು, ಯುದ್ಧಾರ್ಥೀ- ಕಾಳಗವಂಮಾಡಬೇಕೆಂಬ ಕೋರಿಕೆಯುಳ್ಳವನಾಗಿ, ಪ್ರಾಪ್ತಃ-ಬಂದಿದ್ದಾನೆ, ತಸ್ಯ-ಆ ರಾವಣನಿಗೆ, ಯುದ್ಧಂ-ಕಾಳಗವು, ಪ್ರದೀಯತಾಂ-ಕೊಡಲ್ಪಡಲಿ ॥೨೪॥ ನಿರ್ಜಿತಃ-ಜಯಿಸಲ್ಪಟ್ಟವನು, ಅಸ್ಮೀತಿವಾ-ಆದೆನೆಂಬಾದರೂ, ಬ್ರೂಹಿ-ಹೇಳು,ಏಕತರಂ-ಯರಡರಲ್ಲಿ ಒಂದಾದ,ಪಕ್ಷಂ-ಪಕ್ಷವನ್ನು, ಕುರು-ಮಾಡು, ತಸ್ಯ-ಆ ರಾವಣನ, ತದ್ವಚನಾತ್-ಆ ಮಾತಿನದೆಸೆಯಿಂದ, ರಕ್ಷಃ-ರಾಕ್ಷಸನಾದ ಪ್ರಹಸ್ತನು, ಸೂರ್ಯಸ್ಯ-ಸೂರ್ಯನ, ಅಂತಿಕಂ-ಸಮೀಪವಂಕುರಿತು, ಅಗಮತ್-ಐದನು ॥೨೫॥ ಸಃ-ಆ ಪ್ರಹಸ್ತನು,ಪಿಂಗಳಂ-ಪಿಂಗಳನೆಂಬ, ದಂಡಿನಂ-ದಂಡಿಯೆಂಬ, ದ್ವಾರಪಾಲಕೌ-ದ್ವಾರಪಾಲಕರಿಬ್ಬರನ್ನು, ಅಪಶ್ಯತ್-ಕಂಡನು,ಆಭ್ಯಾಂ-ಈ ಇಬ್ಬರು ದ್ವಾರಪಾಲಕರಿಗೋಸ್ಕರ, ಸರ್ವಂ-ಸಮಸ್ತವಾದ, ರಾವಣಸ್ಯ-ರಾವಣನ, ತದ್ವಿನಿಶ್ಚಯಂ-ಆ ನಿಶ್ಚಯವನ್ನು,ಆಖ್ಯಾಯ-ಹೇಳಿ, ಸೂರ್ಯತೇಜಃಪ್ರತಾಪಿತಃ-ಸೂರ್ಯನ ತೇಜಸ್ಸಿನಿಂದಾ-ತಪಿಸಲ್ಪಟ್ಟವನಾಗಿ, ತೂಷ್ಣೀಮಾಸ್ತೇ-ಸುಮ್ಮನೇ ಆದನು ॥೨೬॥ದಂಡೀ-ದಂಡಿಯೆಂಬ ದ್ವಾರಪಾಲಕನು, ರವೇಃ-ಸೂರ್ಯನ, ಪಾರ್ಶ್ವಂ-ಸಮೀಪವನ್ನು ಕುರಿತು, ಗತ್ವಾ-ಹೋಗಿ, ವಿಭುಂ-ಪ್ರಭುವಾದ ಸೂರ್ಯನನ್ನು ಕುರಿತು, ಪ್ರಣಮ್ಯ-ನಮಸ್ಕರಿಸಿ, ಆಖ್ಯಾತವಾನ್-ಹೇಳಿದನು ॥೨೭॥ ಶ್ರೀಮಾನ್-ಸಂಪದ್ಯುಕ್ತನಾದ, ದಿವಾಕರಃ-ದಿನಕರನಾದ, ಸೂರ್ಯಃ-ಸೂರ್ಯನು, ದಂಡಿನಃ-ದಂಡಿಯೆಂಬ ದ್ವಾರಪಾಲಕನ ದೆಸೆಯಿಂದ, ರಾವಣಸ್ಯ-ರಾವಣನ, ತದ್ವೃತ್ತಂ-ಆ ವೃತ್ತಾಂತವನ್ನು, ಶ್ರುತ್ವಾ-ಕೇಳಿ, ಬುದ್ಧಿಪೂರ್ವಂ-ಮನಃಪೂರ್ವಕವಾಗಿ, ವಚನಂ-ಮಾತನ್ನು, ಉವಾಚ-ಹೇಳಿದನು ॥೨೮॥ಹೆ ದಂಡಿನ್-ಎಲೈ ದಂಡಿಯೆ! ಗಚ್ಛ-ಹೋಗು, ಏನಂ-ಈ ರಾವಣನನ್ನು,ಜಯಸ್ವ-ಜಯಿಸು,ನಿರ್ಜಿತೋಸ್ಮೀತಿವಾ-ಪರಾಜಿತನಾದೆನೆಂತಲಾದರೂ, ವದ-ಹೇಳು, ತೇ-ನಿನಗೆ, ಯತ್-ಯಾವದು, ಕಾಂಕ್ಷಿತಂ-ಇಷ್ಟವಾದದ್ದೊ, ತತ್-ಆ ಇಷ್ಟವನ್ನು, ಕುರು-ಮಾಡು, ಅಹಂ-ನಾನು, ಕಾಲಕ್ಷಿಪಾಂ-ಕಾಲವಿಳಂಬವನ್ನು, ನಸಹೇ-ಸಹಿಸಲಾರೆನು॥೨೯॥ಸಃ-ಆ ದಂಡಿಯು, ಮಹಾತ್ಮನಃ-ಮಹಾತ್ಮನಾದ, ತಸ್ಯ-ಆ ಸೂರ್ಯದೇವರ, ವಚನಾತ್-ಮಾತಿನದೆಸೆಯಿಂದ, ಗತ್ವಾ-ಹೋಗಿ, ಯಥಾ-ಹ್ಯಾಗೆ, ವಚನಂ-ಮಾತು, ಸೂರ್ಯೋಕ್ತಂ-ಸೂರ್ಯನಿಂದ ನುಡಿಯಲ್ಪಟ್ಟಿತೊ, ತತ್ಸರ್ವಂ-ಆವೃತ್ತಾಂತವೆಲ್ಲವನ್ನು,ರಾಕ್ಷಸಾಯ-ರಾವಣನಿಗೆ,

---

ಲಕರಂಕಂಡು, ರಾವಣನ ನಿಶ್ಚಯವಂಸೂಚಿಸಿ, ಸೂರ್ಯತೇಜಸ್ಸಿನಿಂದ ಸುಡಲ್ಪಟ್ಟವನಾಗಿ,ತೂಷ್ಣೀಂಭೂತನಾದನು,ದಂಡೀಯೆಂಬದ್ವಾರರಕ್ಷಕನು,ಸೂರ್ಯನ ಸಮೀಪಕ್ಕೆಹೋಗಿ,ನಮಸ್ಕಾರವಂಗೈದು ತಿಳಿಸಿದವನಾದನು॥ಮಹಾತೇಜಸ್ವಿಯಾದಸೂರ್ಯನಾದರೆ,ದಂಡಿಯವಾಕ್ಯವಂ ಕೇಳಿ,ಹಾಹಾ ರಾವಣನು ಹೀಗೆ ಹೇಳಿಕಳುಹಿಸಿರುವನೆ,ಎಲೈದಂಡಿಯೆ,ನೀನೆ ಜಾಗ್ರತೆಯಾಗಿಹೋಗಿ ಅವನಂಜಯಿಸು ಅಥವಾ ಜಯಿಸಲ್ಪಟ್ಟೆನೆಂದಾದರೂ ಹೇಳು, ಹ್ಯಾಗಾದರೂ ನಿನಗಿಷ್ಟವಿದ್ದಂತೆ ನಡಿಸು,ನಾನು ಎನ್ನ ಕೆಲಸವಂ ತೊರದು ಕಾಲಕ್ಷೇಪವನ್ನು ಸಹಿಸಲಾರೆಂದು ಆ ಸೂರ್ಯನು ಬುದ್ಧಿಪೂರ್ವವಾಗಿಯೆನು



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಥಯಾಮಾಸತತ್ಸರ್ವಂಸೂರ್ಯೋಕ್ತಂವಚನಂಯಥಾ॥೮೦॥ ಸಶ್ರುತ್ವಾವಚನಂತಸ್ಯದಂಡಿನೋವ್ಯಮಹಾತ್ಮನಃ । ಘೋಷ ಯಿತ್ವಾಜಗಾಮಾಥವಿಜಯಂರಾಕ್ಷಸೇಶ್ವರಃ ॥೮೧॥ ಅಥಸಂಚಿಂತ್ಯಪೌಲಸ್ತ್ಯಸ್ಸೋಮಲೋಕಂಜಗಾಮಹ। ಮೇರುಶೃಂಗೇ ವರೇರಮ್ಯೇರಜನೀಮುಷ್ಯವೀರ್ಯವಾನ್॥೮೨॥ ತದಾಕಶ್ಚಿದ್ರಥಾರೂಢೋದಿವ್ಯಸ್ರಗನುಲೇಪನಃ । ಅಪ್ಸರೋಗಣಮುಖ್ಯೇನ ಸೇವ್ಯಮಾನಸ್ತುಗಚ್ಛತಿ । ರತಿಶ್ರಾಂತೋಪ್ಸರೋಂಗೇಷುಚುಂಬಿತಸ್ಸವಿಬುಧ್ಯತೇ॥೮೩॥ ರಾವಣಸ್ತ್ವಥತಂದೃಷ್ಟ್ವಾಕೌ ತೂಹಲಸಮನ್ವಿತಃ ॥ ಅಥಾಪಶ್ಯದೃಷಿಂತತ್ರಪರ್ವತಂಮುನಿಸತ್ತಮಮ್ । ದಶಗ್ರೀವೋಮಹಾತ್ಮಾನಂದೃಷ್ಟ್ವಾ ಚೇದಮು ವಾಚಹ ॥೮೪॥ ಸ್ವಾಗತಂತವದೇವರ್ಷೇದಿಷ್ಟ್ಯಾಚೈವಾಗತೋಹ್ಯಸಿ । ಕೋಯಂಸ್ಯಂದನಮಾರೂಢೋಹ್ಯಪ್ಸರೋಗಣಸೇ ವಿತಃ॥೮೫॥ನಿರ್ಲಜ್ಜ ಇವಸಂಯಾತಿಭಯಸ್ಥಾನಂನವಿಂದತಿ। ರಾವಣೇನೈವಮುಕ್ತಸ್ತುಪರ್ವತೋವಾಕ್ಯಮಬ್ರವೀತ್॥೮೬॥ ಏಷಗಚ್ಛ ಶೃಣುವತ್ಸಯಥಾತತ್ವಂವಕ್ಷ್ಯೇತವಮಹಾಮತೇ । ಏತೇನನಿರ್ಜಿತಾಲೋಕಾಃಬ್ರಹ್ಮಾಚೈವಾಭಿತೋಷಿತಃ॥೮೭॥

---

ಕಥಯಾಮಾಸ–ಹೇಳಿದನು ॥೮೦॥ ಸರಾಕ್ಷಸೇಶ್ವರಃ–ಆ ರಾವಣನು, ಮಹಾತ್ಮನಃ–ಮಹಾಮನಸ್ವಿಯಾದ, ತಸ್ಯದಂಡಿನಃ–ಆ ದಂಡಿಯೆಂಬ ದ್ವಾರಪಾಲಕನ, ವಚನಂ–ಮಾತನ್ನು, ಶ್ರುತ್ವಾ–ಕೇಳಿ, ವಿಜಯಂ–ಜಯವನ್ನು, ಘೋಷಯಿತ್ವಾ–ಪ್ರಸಿದ್ಧಿಪಡಿಸಿ, ಅಥ–ಬಳಿಕ, ಜಗಾಮ–ಹೊರಟನು ॥೮೧॥ ಅಥ–ಬಳಿಕ, ವೀರ್ಯವಾನ್–ಪರಾಕ್ರಮಶಾಲಿಯಾದ, ಪೌಲಸ್ತ್ಯಃ–ರಾವಣನು, ರಜನೀಂ–ರಾತ್ರಿಯಲ್ಲಿ, ವರೇ–ಶ್ರೇಷ್ಠವಾದ, ರಮ್ಯೇ–ಇಂಪಾದ, ಮೇರುಶೃಂಗೇ– ಮೇರು ಪರ್ವತದ ಶಿಖರದಲ್ಲಿ, ಉಷ್ಯ–ಇದ್ದು, ಸಂಚಿಂತ್ಯ–ಆಲೋಚಿಸಿ, ಸೋಮಲೋಕಂ–ಚಂದ್ರಲೋಕವನ್ನು ಕುರಿತು, ಜಗಾಮಹ–ಹೊರಟನು ॥೮೨॥ ತದಾ–ಆಕಾಲದಲ್ಲಿ, ದಿವ್ಯಸ್ರಗನುಲೇಪನಃ–ದಿವ್ಯದೇವತಾಸಂಬಂಧವಾದ, ಸ್ರಗನುಲೇಪನಃ – ಪುಷ್ಪಮಾಲಿಕೆಗಳನ್ನು ಗಂಧವನ್ನು ಉಳ್ಳ, ರಥಾರೂಢಃ– ರಥವನ್ನು ಏರಿದ, ಕಶ್ಚಿತ್–ಒಬ್ಬಾನೊಬ್ಬ ಪುರುಷನು, ಅಪ್ಸರೋಗಣಮುಖ್ಯೇನ–ಶ್ರೇಷ್ಠರಾದ ಅಪ್ಸರಸ್ತ್ರೀಯರುಗಳ ಗಣದಿಂದ ಸೇವ್ಯಮಾನಃ–ಸೇವಿಸಲ್ಪಟ್ಟವನಾಗಿ, ಗಚ್ಛತಿ–ಹೋಗುತ್ತಿದ್ದಾನೆ ॥೮೩॥ಅಪ್ಸರೋಂಗೇಷು–ಅಪ್ಸರಃ–ಅಪ್ಸರಸ್ತ್ರೀಯರ, ಅಂಗೇಷು–ಶರೀರಗಳಲ್ಲಿ, ರತಿಶ್ರಾಂತಃ–ರತಿ–ಕ್ರೀಡೆಯಿಂದ, ಶ್ರಾಂತಃ–ಬಳಲಿದವನಾಗಿ, ಚುಂಬಿತಸ್ಸ–ಮುದ್ದಾಡಲ್ಪಟ್ಟವನಾಗಿ, ವಿಬುಧ್ಯತೇ–ಎಚ್ಚರಿಕೆಯನ್ನು ಹೊಂದುತ್ತಾನೆ, ಅಥ–ಬಳಿಕ, ರಾವಣಃ–ರಾವಣನು, ತಂ–ಅಂಥಾ ಪುರುಷನನ್ನು, ದೃಷ್ಟ್ವಾ–ಕಂಡು, ಕೌತೂಹಲಸಮನ್ವಿತಃ–ಕೌತೂಹಲ–ಉತ್ಕಂಠೆ ಇಂದ, ಸಮನ್ವಿತಃ–ಕೂಡಿದವನಾದನು ॥೮೪॥ ಅಥ–ಬಳಿಕ, ದಶಗ್ರೀವಃ–ರಾವಣನು, ತತ್ರ–ಆ ಅಂತರಿಕ್ಷಮಾರ್ಗದಲ್ಲಿ, ಮಹಾತ್ಮಾನಂ–ಮಹಾಪ್ರಭಾವವಂತನಾದ, ಮುನಿಸತ್ತಮಂ–ಋಷಿಶ್ರೇಷ್ಠನಾದ, ಪರ್ವತಮೃಷಿಂ–ಪರ್ವತನೆಂಬ ರುಷಿಯನ್ನು, ಅಪಶ್ಯತ್–ಕಂಡನು, ದೃಷ್ಟ್ವಾಚ–ನೋಡಿಕೊಡೆ, ಇದಂ–ಈ ವಕ್ಷ್ಯಮಾಣ ವಚನವನ್ನು, ಉವಾಚಹ–ಹೇಳಿದನು ॥೮೫॥ ಹೇ ದೇವರ್ಷೇ–ಎಲೊ ದೇವತಾಶ್ರೇಷ್ಠನಾದ ಋಷಿಯೆ, ತವ–ನಿನಗೆ, ಸ್ವಾಗತಂ–ಸುಖಾಗಮನವೆ, ದಿಷ್ಟ್ಯಾಚೈವ–ದೈವಾಧೀನದಿಂದಲೇ, ಆಗತಃ–ಬಂದವನು, ಅಸಿ–ಆಗಿದ್ದೀಯಷ್ಟೆ, ಸ್ಯಂದನಂ–ರಥವನ್ನು,ಆರೂಢಃ–ಹತ್ತಿರುವ, ಅಪ್ಸರೋಗಣಸೇವಿತಃ–ಅಪ್ಸರಸ್ತ್ರೀಗುಂಪಿನಿಂದಸೇವಿಸಲ್ಪಟ್ಟ, ಅಯಂ–ಇವನು, ಕಃ–ಯಾರು, ನಿರ್ಲಜ್ಜಇವ–ನಾಚಿಕೆಯಿಲ್ಲದವನಂತೆ, ಸಂಯಾತಿ–ಬರುತಿದ್ದಾನೆ, ಭಯಸ್ಥಾನಂ–ಭಯಕಾರಣವನ್ನು, ನವಿಂದತಿ–ಅರಿಯನು॥ ರಾವಣೇನ–ರಾವಣನಿಂದ, ಏವಂ–ಈಪರಿಯಾಗಿ,ಉಕ್ತಃ–ಹೇಳಲ್ಪಟ್ಟ, ಪರ್ವತಸ್ತು–ಪರ್ವತಋಷಿಯಾದರೆ, ವಾಕ್ಯಂ–ವಚನವನ್ನು, ಅಬ್ರವೀತ್– ನುಡಿದನು ॥೮೬॥ ಹೇವತ್ಸ–ಯಲೊ ಹುಡುಗನೆ, ಹೆ ಮಹಾಮತೆ, ಯಲೈ ಬುದ್ಧಿಶಾಲಿಯೆ, ಯಥಾತತ್ವಂ–ಯಥಾರ್ಥವಾಗಿ,ತವ–ನಿನಗೆ,ವಕ್ಷ್ಯೇ–ಹೇಳುತ್ತೇನೆ, ಶೃ

---

ಡಿಯಲು, ಆದಂಡಿಯು ಆ ಮಹಾತ್ಮನ ವಾಕ್ಯದಿಂದ ಹೊರಟುಬಂದು ಅದನ್ನೆಲ್ಲ ರಾಕ್ಷಸನಾದ ರಾವಣನಿಗರುಹಿದನು॥ ಆಬಳಿಕ ರಾಕ್ಷಸೇಶ್ವನಾದ ರಾವಣನಾದರೆ, ದಂಡಿಯಮಾತಂಕೇಳಿ ಜಯಘೋಷೆಯಂಗೈದು ಹೊರಟು ಹೋದವನಾದನು ॥೮೧॥ ಸಮನಂತರ ಕಾಲದಲ್ಲಿ ಆ ದಶಕಂಠನು ಚಂದ್ರಲೋಕವಂಕುರಿತು ತೆರಳಬೇಕೆಂದು ಸ್ವಾಂತದಲ್ಲಿ ಚಿಂತಿಸಿ, ಮೇರುಪರ್ವತದ ಶೃಂಗದಲ್ಲಿ ಆ ರಾತ್ರಿಯಂ ಕಳದು ಮುಂದೆ ಹೊರಟನು॥೮೨॥ಆ ಸಮಯದಲ್ಲಿ ಒಬ್ಬಾನೊಬ್ಬ ಪುರುಷನಾದರೆ, ದಿವ್ಯವಾದ ಪುಷ್ಪಮಾಲಿಕೆಗಳು ಸುಗಂಧವೂ ವುಳ್ಳವನಾಗಿಯೂ ಉತ್ತಮವಾದ ವಿಮಾನವನ್ನೇರಿ ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತಿರುವನಾಗಿಯೂ, ರತಿ ಶ್ರಾಂತನಾಗಿದ್ದವನಾಗಿಯೂ, ಅಪ್ಸರಾಂಗನೆಯರಿಂದ ಚುಂಬಿಸಲ್ಪಟ್ಟವನಾದಕಾರಣ ಎಚ್ಚರಗೊಳ್ಳುತಿರುವನಾಗಿಯೂ ಇರುವನಾಗಿ, ಹೊಗುತಿದ್ದನು ॥೮೩॥ ಆ ಬಳಿಕ ರಾವಣನಾದರೆ ಆ ಪುರುಷನಂ ಕಂಡು ಕೌತೂಹಲ ಯುಕ್ತನಾಗಿ, ಅಲ್ಲಿರುತಿರುವ ಮಹಾತ್ಮನಾದ ಪರ್ವತನೆಂಬ ಮುನಿಪುಂಗವನಂ ಕುರಿತಿಂತೆಂದನು ॥೮೪॥ ಎಲೈದೇವರ್ಷಿಯೆ! ಸುಖಾಗಮನವೇ? ದೈವಾಧೀನದಿಂದ ತಮ್ಮನ್ನು ಕಂಡೆನು, ಅಪ್ಸರಸ್ತ್ರೀ ತಂಡಗಳಿಂದೊಡಗೂಡಿ ಭಯಸ್ಥಾನವನ್ನರಿಯದೆ ವಿಮಾನದಲ್ಲಿ ಕುಳಿತು ಕೊಂಡು, ನಾಚಿಕೆಯಿಲ್ಲದೇ ಹೋಗುತಿರುವ ಈ ಪುರುಷನ್ಯಾರು, ಎಂದು ರಾವಣನುಡಿಯಲೂ, ಆಮುನಿಯು ಇಂತೆಂದನು ॥೮೬॥ ಎಲೈ ಬಹುತಿಳುವಳಿಕೆಯುಳ್ಳಬಾಲನೆ, ಕೇಳು, ಆ ತತ್ವವನ್ನೆಲ್ಲಾ ಹೇಳುವೆನು, ಈತನಿಂದ ಸರ್ವಲೋಕಗಳು ಜಯಿಸಲ್ಪಟ್ಟವು, ಬ್ರಹ್ಮನೂ ಸಹಾ ಸಂತೋಷಮುಳ್ಳವನಾಗಿ ಮಾಡಲ್ಪಟ್ಟಿದ್ದಾನೆ ॥೮೭॥ ನೀನು ಪರಾಕ್ರಮದಿಂದ ಲೋಕಗಳಂ ಜಯಿಸಿದಂತೆ ಈ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಿಮೋಕ್ಷಾಯಸಸುಖಂಸ್ಥಾನಮುತ್ತಮಮ್ ॥ ತಪಸಾನಿರ್ಜಿತಾಲೋಕಾಃವಿಕ್ರಮೇಣಯಥಾತ್ವಯಾ ॥೪೮॥ ಪ್ರಯಾತಿಪುಣ್ಯವಾನ್ ವತ್ಸಸೋಮಂಪೀತ್ವಾನಸಂಶಯಃ । ತ್ವಂಚರಾಕ್ಷಸಶಾರ್ದೂಲಶೂರಸ್ಸತ್ಯವ್ರತಸ್ತಥಾ ॥೪೯॥ ನೇದೃಶೇಷುಚ ಕ್ರುಧ್ಯಂತಿಬಲಿನೋಬ್ರಹ್ಮಚಾರಿಷು । ಅಥಾಪಶ್ಯದ್ರಥಚರಂಮಹಾಕಾಯಂಮಹೌಜಸಮ್ ॥೫೦॥ ಜಾಜ್ವಲ್ಯಮಾನಂವಪುಷಾ ಗೀತವಾದಿತ್ರಸಂಕುಲಮ್ । ಕ್ವೈಷಗಚ್ಛತಿದೇವರ್ಷೇಶೋಭಮಾನೋ ಮಹಾದ್ಯುತಿಃ । ಕಿನ್ನರೈಶ್ಚ ಪ್ರಗಾಯದ್ಭಿರ್ನೃತ್ಯದ್ಭಿಶ್ಚ ಮನೋಹರಮ್ । ಶ್ರುತ್ವಾ ಚೈನಮುವಾಚಾಥಪರ್ವತೋಮುನಿಸತ್ತಮಃ ॥ ೫೨ ॥ ಏಷಶೂರೋ ರಣೇಯೋದ್ಧಾ ಸಂಗ್ರಾಮೇಷ್ವನಿವರ್ತಕಃ । ಯುಧ್ಯಮಾನಸ್ತಥೈವೈಷಪ್ರಹಾರೈರ್ಜರ್ಝರೀಕೃತಃ ॥೫೩॥ ಕೃತೀಶೂರೋರಣೇಜೇತಾಸ್ವಾಮ್ಯರ್ಥೇತ್ಯಕ್ತಜೀವಿತಃ । ಸಂಗ್ರಾಮೇನಿಹತೋವೀರಾನ್ ಹತ್ವಾ ಚಸಬಲಾನ್ ಬಹೂನ್ ॥೫೪॥ ಇಂದ್ರಸ್ಯಾತಿಥಿರೇವೈಷಹ್ಯಥವಾಯತ್ರ ಚೇಚ್ಛತಿ । ನೃತ್ತಗೀತವಿಲಾಸೈಸ್ತು ಸೇವ್ಯತೇನರಸತ್ತಮಃ ॥ ೫೫ ॥ ಪಪ್ರಚ್ಛ ರಾವಣೋಭೂಯಃಕೋಯಂಯಾತ್ಯರ್ಕಸನ್ನಿ

---

ಣು–ಕೇಳು, ಏತೇನ–ಈ ಪುರುಷನಿಂದ, ಲೋಕಾಃ–ಲೋಕಗಳು, ನಿರ್ಜಿತಾಃ–ಜಯಿಸಲ್ಪಟ್ಟಿವು–ಬ್ರಹ್ಮಾಚೈವ–ಚತುರ್ಮುಖಬ್ರಹ್ಮನೂ ಕೂಡ, ಅಭಿತೋಷಿತಃ–ಆನಂದಿಸಲ್ಪಟ್ಟನು ॥೪೮॥ ಏಷಃ–ಈ ಪುರುಷನು, ಸಸುಖಂ–ಸುಖದಿಂದೊಡಗೂಡಿದ್ದ, ಉತ್ತಮಂಸ್ಥಾನಂ–ಸರ್ವೋತ್ತಮಸ್ಥಾನವಾದ ವೈಕುಂಠವನ್ನು ಕುರಿತು, ಮೋಕ್ಷಾಯ–ಮುಕ್ತಿಗೋಸ್ಕರ, ಗಚ್ಛತಿ–ಹೋಗುತ್ತಾನೆ, ಅನೇನ–ಈ ಪುರುಷನಿಂದ, ಲೋಕಾಃ–ಲೋಕಗಳು, ವಿಕ್ರಮೇಣ, ಪರಾಕ್ರಮದಿಂದ– ತ್ವಯಾ ಯಥಾ–ನಿನ್ನಿಂದಲಂತೆ, ತಪಸಾ–ತಪಸ್ಸಿನಿಂದ, ನಿರ್ಜಿತಾಃ–ಜಯಿಸಲ್ಪಟ್ಟವು ॥೪೯॥ ಹೇವತ್ಸ–ಎಲೋ ಬಾಲಕನೆ, ಪುಣ್ಯವಾನ್– ಪುಣ್ಯವಂತನಾದ ಈ ಪುರುಷನು, ಸೋಮಂ–ಚಂದ್ರನನ್ನು, ಪೀತ್ವಾ–ಪಾನಮಾಡಿ, (ಯಜ್ವಾ–ಸೋಮಪಾನವನ್ನು ಮಾಡಿ,) ಪ್ರಯಾತಿ–ಹೋಗುತಿಧಾನೆ, ಸಂಶಯಃ–ಸಂಶಯವು, ನ–ಇಲ್ಲ, ಹೇರಾಕ್ಷಸಶಾರ್ದೂಲ–ಎಲೈ ರಾಕ್ಷಸಶ್ರೇಷ್ಠನೆ, ತ್ವಂಚ–ನೀನೂಕೂಡ, ಶೂರಃ–ಶೂರನಾದವನು, ತಥಾ–ಹಾಗೆಯೆ, ಸತ್ಯವ್ರತಶ್ಚ– ಸತ್ಯವಾದ ನಿಯಮವುಳ್ಳವನು, ಬಲಿನಃ–ಬಲವಂತರು, ಈದೃಶೇಷು–ಇಂಥಾವರಾದ, ಬ್ರಹ್ಮಚಾರಿಷು–ಬ್ರಹ್ಮಜ್ಞಾನಿಗಳಲ್ಲಿ, ನಕ್ರುಧ್ಯಂತಿಚ – ಕ್ರೋಧವನ್ನು ಮಾಡಲಾರರು ॥೫೦॥ ಅಥ–ಬಳಿಕ–ರಥಚರಂ–ರಥದಿಂದ ಸಂಚಾರಮಾಡುತಿರುವ, ಮಹಾಕಾಯಂ–ದೊಡ್ಡ ಶರೀರವುಳ್ಳ, ಮಹೌಜಸಂ–ಮಹತ್ತರವಾದ ಅಂತಸ್ಸಾರವುಳ್ಳ, ವಪುಷಾ–ಶರೀರದಿಂದ, ಜಾಜ್ವಲ್ಯಮಾನಂ–ಪ್ರಜ್ವಲಿಸುತಿರುವ, ಗೀತವಾದಿತ್ರಸಂಕುಲಂ–ಗಾನದಿಂದಲೂ ವಾದ್ಯದಿಂದಲೂ ವ್ಯಾಪ್ತಮಾದ ಪುರುಷನನ್ನು, ಅಪಶ್ಯತ್–ಕಂಡನು ॥೫೧॥ ಹೇದೇವರ್ಷೇ–ಎಲೈ ದೇವಋಷಿಯೆ, ಶೋಭಮಾನಃ–ಹೊಳೆಯುತಿರುವ, ಮಹಾದ್ಯುತಿಃ–ಮಹಾಪ್ರಕಾಶವಂತನಾದ, ಏಷಃ–ಈ ಪುರುಷನು, ಪ್ರಗಾಯದ್ಭಿಃ–ಗಾನಮಾಡುತಿರುವ, ಕಿಂನರೈಶ್ಚ –ಕಿನ್ನರರಿಂದಲುನ್ನು, ನೃತ್ಯದ್ಭಿಶ್ಚ –ನರ್ತನಮಾಡುತಿರುವರಿಂದಲುನ್ನು, ಮನೋಹರಂಯಥಾಭವತಿತಥಾ–ರಮ್ಯವಾಗಿರುವಂತೆ, ಕ್ವಗಚ್ಛತಿ–ಎಲ್ಲಿಹೋಗುತ್ತಾನೆ ॥೫೨॥ ಅಥ–ಬಳಿಕ, ಮುನಿಸತ್ತಮಃ–ಋಷಿಶ್ರೇಷ್ಠನಾದ, ಪರ್ವತಃ–ಪರ್ವತಋಷಿಯು, ಶ್ರುತ್ವಾ–ಈ ರಾವಣನ ಮಾತನ್ನು ಕೇಳಿ, ಏನಂ–ಈ ರಾವಣನನ್ನು ಕುರಿತು, ಉವಾಚ–ಹೇಳಿದನು ॥೫೩॥ ಏಷಃ–ಇವನು, ಶೂರಃ–ಶೂರನು, ರಣೇ–ಕಾಳಗದಲ್ಲಿ, ಯೋದ್ಧಾ–ಬಹಳಯುದ್ಧ ಮಾಡುವನು, ಸಂಗ್ರಾಮೇಷು–ಯುದ್ಧಗಳಲ್ಲಿ, ಅನಿವರ್ತಕಃ–ಹಿಂತಿರಗದೇಇರುವನು, ತಥೈವ–ಹಾಗೆಯೆ, ಏಷಃ–ಈತನು, ಯುಧ್ಯಮಾನಃ–ಯುದ್ಧಮಾಡುತಿರುವನಾಗಿ, ಪ್ರಹಾರೈಃ–ಹೊಡೆತಗಳಿಂದ, ಜರ್ಝರೀಕೃತಃ–ಶಿಥಿಲವಾದ ಶರೀರವುಳ್ಳವನು ॥೫೪॥ ಕೃತೀ–ಕುಶಲನು, ರಣೇ–ಯುದ್ಧದಲ್ಲಿ, ಶೂರಃ–ಶೂರನು, ಜೇತಾ–ಜಯಸಾಮರ್ಥ್ಯವುಳ್ಳವನು, ಸ್ವಾಮ್ಯರ್ಥೇ–ತನ್ನ ಧಣೀ ನಿಮಿತ್ತವಾಗಿ ತ್ಯಕ್ತಜೀವಿತಃ–ಬಿಡಲ್ಪಟ್ಟ ಪ್ರಾಣಗಳುಳ್ಳವನು, ಸಂಗ್ರಾಮೇ–ಯುದ್ಧದಲ್ಲಿ, ಸಬಲಾನ್–ಸೈನ್ಯಸಮೇತರಾದ, ಬಹೂನ್ವೀರಾನ್ಚ–ಬಹುಮಂದಿ ಶೂರರನ್ನೂಕೂಡ, ಹತ್ವಾ–ಹೊಡೆದು, ನಿಹತಃ–ಮೃತನಾದನು ॥೫೫॥ ಏಷಃ–ಇವನು, ಇಂದ್ರಸ್ಯ–ಇಂದ್ರನಿಗೆ–ಅತಿಥಿರೇವ–ಅಭ್ಯಾಗತನಾಗಿಯೆ, ನೃತ್ತಗೀತವಿಲಾಸೈ

---

ತನು ತಪಸ್ಸಿನಿಂದ ಲೋಕಗಳೆಲ್ಲಾ ಜಯಿಸಿ ಸುಖಸ್ಥಾನಮಾದ ಮೋಕ್ಷವಂಕುರಿತು ತೆರಳುತಿರುವನು ॥೪೮॥ ಎಲೈವತ್ಸನೆ! ಪುಣ್ಯವಂತನಾದ ಇವನು ಸೋಮಪಾನವಂಗೈದು ಹ್ಯಾಗೆ ಪುಣ್ಯಲೋಕವಂ ಹೊಕ್ಕುವನೋ ಹಾಗೆಯೆ ಸತ್ಯಸಂಕಲ್ಪನಾಗಿಯೂ ಶೂರನಾಗಿಯೂ ಇರುವ ನೀನೂಕೂಡಾ ಮೋಕ್ಷವಂಹೊಂದುವೀ, ಮತ್ತೂ ಬಲವಂತರಾದವರು ಇಂಥಾ ಬ್ರಹ್ಮಚಾರಿಗಳಲ್ಲಿ ಕೋಪವಮಾಡಬಾರದೆಂದು ಪರ್ವತನೆಂಬ ಮುನಿಯುಹೇಳುತಿರಲೂ, ಆ ಬಳಿಕ ದಶಕಂಠನು ಆಕಾರದಿಂದ ಹೊಳೆಯುತ್ತಿರುವದಾಗಿಯೂ, ಗೀತವಾದಿತ್ರಧ್ವನಿಯುಳ್ಳದ್ದಾಗಿಯೂ, ಮಹಾತೇಜಸ್ಸುಳ್ಳದ್ದಾಗಿಯೂ ಇರುವ ಮತ್ತೊಂದು ರಥವಂಕಂಡು, ಎಲೈ ದೇವರ್ಷಿಯೆ, ಕಡುಕಾಂತಿಯುಳ್ಳವನಾಗಿ ಕಿನ್ನರರಿಂದಲೂ, ನರ್ತನಂಗೈಯ್ಯುತಿರುವ ಅಪ್ಸರಸ್ತ್ರೀಯರಿಂದಲೂ ಒಡಗೂಡಿ ಸೊಗಸಾಗಿ ಹೋಗುತಿರುವ ಈ ಪುರುಷನ್ಯಾರೆಂದು ಪುನಹಾ ನುಡಿಯಲೂ ಆ ದೇವರ್ಷಿಯು ಇಂತೆಂದನು ॥೫೨॥ ಈತನಾದರೆ ಕಾಳಗದಲ್ಲಿ ಹಿಂಜರಿಯದೆ ಯುದ್ಧಮಾಡುತಿರುವನು, ಸಂಗರವಂಗೈಯ್ಯುತಿರುವನಾಗಿ ಪ್ರಹಾರಗಳಿಂದ ಜರ್ಝರೀಕೃತಮಾದ ದೇಹಮುಳ್ಳವನು, ಪುಣ್ಯವಂತನು, ಶೂರನು, ಯುದ್ಧದಲ್ಲಿ ಗೆಲ್ಲುವ ಸ್ವಭಾವಮುಳ್ಳವನು ತನ್ನ ಸ್ವಾಮಿಗೋಸ್ಕರ ಬಿಡಲ್ಪಟ್ಟ ಪ್ರಾಣಗಳುಳ್ಳವನು, ಯುದ್ಧದಲ್ಲಿ ಹೊಡೆಯುತಿರುವ ವೀರರನ್ನು ಬಲಸಹಿತವಾಗಿ ಕೊಂದು ಇಂದ್ರನಿಗೆ ಅತಿಥಿಯಾದವನಾಗಿಯೂ ಅಥವಾ ಇಚ್ಛೈಸುವಸ್ಥಳಗಳ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭಃ । ರಾವಣಸ್ಸ್ವವಚಶ್ಶ್ರುತ್ವಾಪರ್ವತೋವಾಕ್ಯಮಬ್ರವೀತ ॥೯೬॥ ಯಏಷದೃಶ್ಯತೇರಾಜನ್ವಿಮಾನೇಸರ್ವಕಾಂಚನೇ। ಅಪ್ಸರೋಗಣಸಂಯುಕ್ತೇಪೂರ್ಣೇಂದುಸದೃಶಾನನಃ ॥ ೯೭ ॥ ಸುವರ್ಣದೋಮಹಾರಾಜವಿಚಿತ್ರಾಭರಣಾಂಬರಃ । ಏಷಗಚ್ಛತಿಶೀಘ್ರೇಣ ಯಾನೇನಸುಮಹಾದ್ಯುತಿಃ ॥ ಪರ್ವತಸ್ಯವಚಶ್ಶ್ರುತ್ವಾರಾವಣೋವಾಕ್ಯಮಬ್ರವೀತ । ಯಏತೇಯಾಂತಿರಾಜಾನೋಬ್ರೂಹಿತಾನೃಷಿಸತ್ತಮ॥ಕೋತ್ರಮೇಯಾಚತೋದದ್ಯಾದ್ಯುದ್ಧಾತಿಥ್ಯಂಮಹಾದ್ಯುತಿಃ।ಕ್ಷಿಪ್ರಮಾಖ್ಯಾಹಿಧರ್ಮಜ್ಞಪಿತಾಮೇತ್ವಂಹಿಪರ್ವತ ॥೧೦೦॥ ಏವಮುಕ್ತಃಪ್ರತ್ಯುವಾಚರಾವಣಂಪರ್ವತಸ್ತದಾ ॥ ಸ್ವರ್ಗಾರ್ಥಿನೋಮಹಾರಾಜನೈತೇಯುದ್ಧಾರ್ಥಿನೋನೃಪಾಃ ॥೧೦೧॥ವಕ್ಷ್ಯಾಮಿಚಮಹಾರಾಜ ವಿಚಿತ್ರಾಭರಣಾಂಬರಃ । ಯಸ್ತುರಾಜಾಮಹಾತೇಜಾಸ್ಸಪ್ತದ್ವೀಪೇಶ್ವರೋಮಹಾನ್ ॥೧೦೨॥ ಮಾಂಧಾತೇತ್ಯಭಿವಿಖ್ಯಾತಸ್ಸತೇಯುದ್ಧಂಪ್ರದಾಸ್ಯತಿ । ಪರ್ವತಸ್ಯವಚಶ್ಶ್ರುತ್ವಾರಾವಣೋವಾಕ್ಯಮಬ್ರವೀತ ॥೧೦೩॥ ಕುತ್ರಾಸೌವರ್ತತೇರಾಜಾತಂಮಮಾಚಕ್ಷ್ವತತ್ತ್ವತಃ। ಅಹಂಯಾಸ್ಯಾಮಿತತ್ರಾದ್ಯ

---

ನರಸತ್ತಮಃ-ನರಶ್ರೇಷ್ಠನಾದ ಇವರು (ಅಥವಾ-ಹಾಗಲ್ಲದಿದ್ದರೆ, ನರಸತ್ತಮಃ-ನರಶ್ರೇಷ್ಠನಾದ ಇವರು) ನೃತ್ತ-ನರ್ತನಗಾನಗಳಿಂದ ಹುಟ್ಟಿದ ಸಂತೋಷಗಳಿಂದ, ಸೇವ್ಯತೇ-ಸೇವಿಸಲ್ಪಡುತ್ತಾನೆ, (ಅಥವಾ-ಹಾಗಲ್ಲದಿದ್ದರೆ, ನರಸತ್ತಮಃ-ನರಶ್ರೇಷ್ಠನಾದ ಇವರು ನೃತ್ತ-ನರ್ತನಗಾನಗಳಿಂದ ಹುಟ್ಟಿದ ಸಂತೋಷಗಳಿಂದ, ಸೇವ್ಯತೇ-ಸೇವಿಸಲ್ಪಡುತ್ತಾನೆ, ಭೂಯಃ-ಪುನಃ-ಯತ್ರ-ಯಾವಸ್ಥಳದಲ್ಲಿ, ಇಚ್ಛತಿ-ಇಚ್ಛಯಿಸುತ್ತಾನೊ, ತತ್ರ-ಆ ಸ್ಥಳದಲ್ಲಿ, ಗಚ್ಛತಿ-ಹೋಗುತ್ತಾನೆ ॥೯೫॥ ರಾವಣಃ-ರಾವಣನು, ಭೂಯಃ-ಪುನಃ-ಯತ್ರ-ಯಾವಸ್ಥಳದಲ್ಲಿ, ಇಚ್ಛತಿ-ಇಚ್ಛಯಿಸುತ್ತಾನೊ, ತತ್ರ-ಆ ಸ್ಥಳದಲ್ಲಿ, ಗಚ್ಛತಿ-ಹೋಗುತ್ತಾನೆ, ಇತಿ ಇತೆಂದು, ಪಪ್ರಚ್ಛ-ಕೇಳಿದನು, ತಿರಗಿ-ಅರ್ಕಸನ್ನಿಭಃ-ಸೂರ್ಯನಿಗೆ ಸಮಾನನಾದ, ಅಯಂ-ಈ ಪುರುಷನು, ಕಃ-ಯಾರು, ಕ್ವಯಾತಿ-ಯಲ್ಲಿಹೋಗುತ್ತಾನೆ, ಇತಿ ಇತೆಂದು, ಪಪ್ರಚ್ಛ-ಕೇಳಿದನು, ರಾವಣಸ್ಯ-ರಾವಣನ, ವಚಃ-ವಾಕ್ಯವನ್ನು, ಶ್ರುತ್ವಾ-ಕೇಳಿ, ಪರ್ವತಃ-ಪರ್ವತರುಷಿಯು, ವಾಕ್ಯಂ-ವಚನವನ್ನು, ಅಬ್ರವೀತ್-ನುಡಿದನು ॥೯೬॥ ಹೆ ರಾಜನ್-ಯಲೈ ಅರಸೆ, ಪೂರ್ಣೇಂದುಸದೃಶಾನನಃ-ಪೂರ್ಣಚಂದ್ರನಿಗೆ ಸಮಾನವಾದ ಮುಖವುಳ್ಳ, ಯಃಏಷಃ-ಯಾವ ಈ ಪುರುಷನು, ಅಪ್ಸರೋಗಣಸಂಯುಕ್ತೇ- ಅಪ್ಸರಸ್ತ್ರೀಗುಂಪಿನಿಂದ ಕೂಡಿಕೊಂಡಿರುವ, ಸರ್ವಕಾಂಚನೇ- ಸರ್ವಾವಯವಗಳಲ್ಲಿಯೂ ಬಂಗಾರಮಯವಾದ, ವಿಮಾನೇ-ವಿಮಾನದಲ್ಲಿ, ದೃಶ್ಯತೇ-ಕಾಣಲ್ಪಡುತ್ತಾನೊ ॥ ೯೮ ॥ ಹೆಮಹಾರಾಜ-ಎಲೊಮಹಾರಾಜನೆ, ಸುಮಹಾದ್ಯುತಿಃ-ಮಹಾಪ್ರಕಾಶವುಳ್ಳ, ವಿಚಿತ್ರಾಭರಣಾಂಬರಃ-ವಿಚಿತ್ರ-ಆಶ್ಚರ್ಯಕರವಾದ, ಆಭರಣ-ಭೂಷಣಗಳು, ಅಂಬರ-ವಸ್ತ್ರಗಳುಉಳ್ಳ, ಏಷಃ-ಈ ಪುರುಷನು, ಸುವರ್ಣದಃ-ಹಿರಣ್ಯದಾನಮಾಡಿದವನು, ಶೀಘ್ರೇಣ-ವೇಗದಿಂದ ಹೋಗುತಿರುವ, ಯಾನೇನ-ವಿಮಾನದಿಂದ, ಗಚ್ಛತಿ-ಹೋಗುತಾನೆ ॥ ೯೯ ॥ ರಾವಣಃ-ರಾವಣನು,ಪರ್ವತಸ್ಯ- ಪರ್ವತರುಷಿಯ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು, ಹೆ ಋಷಿಸತ್ತಮ-ಎಲೈ ಋಷಿಶ್ರೇಷ್ಠನೆ ! ಯಏತೇರಾಜಾನಃ-ಯಾವ ಈ ಅರಸರು, ಯಾಂತಿ-ಹೋಗುತ್ತಾರೋ, ತಾನ್ಬ್ರೂಹಿ-ಅವರನ್ನ ಹೇಳು, ಅತ್ರ-ಇವರಲ್ಲಿ, ಯಾಚತಃ-ಬೇಡುತಿರುವ, ಮೇ-ಯನಗೆ, ಮಹಾದ್ಯುತಿಃ-ಮಹಾ ಪ್ರತಾಪಶಾಲಿಯಾದ, ಕಃ-ಯಾವನು, ಯುದ್ಧಾತಿಥ್ಯಂ-ಕಾಳಗವೆಂಬ ಅತಿಥಿಸತ್ಕಾರವನ್ನು, ದದ್ಯಾತ್-ಕೊಟ್ಟಾನೋ ॥೧೦೦॥ ಹೆ ಧರ್ಮಜ್ಞ-ಎಲೈ ಧರ್ಮಿಷ್ಠನೆ! ಹೇ ಪರ್ವತ-ಎಲೈ ಪರ್ವತರುಷಿಯೆ, ತ್ವಂ-ನೀನು, ಮೇ-ನನಗೆ, ಪಿತಾ-ತಂದೆಯಾಗಿದ್ದಿ-ಕ್ಷಿಪ್ರಂ-ಜಾಗ್ರತೆಯಾಗಿ, ಆಖ್ಯಾಹಿ-ಹೇಳು॥೧೦೧॥ ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಪರ್ವತಃ-ಪರ್ವತರುಷಿ, ತದಾ-ಆ ಕಾಲದಲ್ಲಿ, ರಾವಣಂ-ರಾವಣನನ್ನು ಕುರಿತು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ಹೆ ಮಹಾರಾಜ-ಎಲೈ ಮಹಾರಾಜನೆ, ಏತೇನೃಪಾಃ-ಈ ಅರಸರು, ಸ್ವರ್ಗಾರ್ಥಿನಃ-ಸ್ವರ್ಗವನ್ನು ಅಪೇಕ್ಷಿಸಿ ಇರುವರು. ಯುದ್ಧಾರ್ಥಿನಃ-ಯುದ್ಧವನ್ನು ಬೇಡುವರು, ನ-ಅಲ್ಲಾ ॥೧೦೨॥ ಹೆ ಮಹಾರಾಜ-ಎಲೈ ಮಹಾರಾಜನೆ, ವಕ್ಷ್ಯಾಮಿ-ಹೇಳುತ್ತೇನೆ, ಮಹಾತೇಜಾಃ-ಮಹಾತೇಜಸ್ವಿಯಾದ, ವಿಚಿತ್ರಾಭರಣಾಂಬರಃ-ವಿಚಿತ್ರ-ನಾನಾಬಣ್ಣಗಳಾದ, ಆಭರಣಾಂಬರಃ- ತೊಡವುಗಳನ್ನು ವಸ್ತ್ರಗಳನ್ನು ಉಳ್ಳ, ಸಪ್ತದ್ವೀಪೇಶ್ವರಃ-ಸಪ್ತದ್ವೀಪ- ಸಪ್ತದ್ವೀಪಗಳನ್ನು ಈಶ್ವರಃ-ಅಧಿಪತಿಯಾದ ಮಹಾನ್-ಮಹಾತ್ಮನಾದ, ಯಃ-ರಾಜಾ-ಯಾವ ಅರಸು, ಮಾಂಧಾತೇತಿ-ಮಾಂಧಾತನೆಂದು ವಿಖ್ಯಾತಃ-ಪ್ರ

---

ಗೆಲ್ಲ ಹೋಗುತಿರುವನಾಗಿಯೂ ಆಗಿ, ನೃತ್ತ, ಗೀತಾದಿಗಳಿಂದ, ನಿರಂತರವೂ ಸಂತೋಷಿಸುತಿರುವನೆಂದು ಪರ್ವತನುಹೇಳಲು ಪುನಹಾ ರಾವಣನು ಸೂರ್ಯಸದೃಶನಾಗಿ ಇಲ್ಲಿ ಹೋಗುತಿರುವ ನ್ಯಾರೆಂದು ಕೇಳಲೂ ಆ ಋಷಿಯುಮತ್ತಿಂತೆಂದನು ॥೯೬॥ ಎಲೈರಾಜನೆ! ಬಂಗಾರವಿಕಾರವಾದ ಮತ್ತೂ ಅಪ್ಸರಸ್ತ್ರೀಯುಕ್ತವಾದ ವಿಮಾನದಲ್ಲಿ ಕುಳಿತುಕೊಂಡು ಯಾವನು ಹೋಗುತ್ತಿರುವನೊ? ಆತನು ಸುವರ್ಣದಾತನಾದ ರಾಜನು, ಈತನು ಕಡುಕಾಂತಿಯುಳ್ಳವನಾಗಿ ಕಾಣುತ್ತಾ ಜಾಗ್ರತೆಯಾಗಿ ಹೋಗುತ್ತಾನೆ ಎಂದು ಪರ್ವತನೆಂಬ ಮುನಿಯು ನುಡಿಯಲು ರಾವಣನಿಂತೆಂದನು ॥೯೮॥ ಎಲೈ ಧರ್ಮಜ್ಞನಾದ ಋಷಿಶ್ರೇಷ್ಠನೆ ! ಯುದ್ಧಾತಿಥ್ಯವಂ ಪ್ರಾರ್ಥಿಸುತ್ತಿರುವ ನನಗೆ, ಇಲ್ಲಿ ಹೋಗುತಿರುವ ರಾಜರೊಳಗೆ ಯಾರು ಯುದ್ಧಾತಿಥ್ಯವನ್ನಿಯ್ಯುವರೋ, ನನಗೆ ಜಾಗ್ರತೆಯಾಗಿಪೇಳು, ಎಲೈ ಪರ್ವತನೆ! ನೀನೇತಂದೆಯೆಂದು ನಂಬಿದೇನೆಂದು ರಾವಣನು ನುಡಿಯಲೂ ಆ ಋಷಿಯು ಇಂತೆಂದನು, ಎಲೈ ಮಹಾರಾಜನೆ! ಈ ರಾಜರೆಲ್ಲರು ಸ್ವರ್ಗವನ್ನಪೇಕ್ಷಿಸದವರಾಗಿ ಹೋಗುತಿರುವರೇಹೊರ್ತುಯುದ್ಧಾರ್ಥ ಬಂದವರಲ್ಲ, ಆದರೂ ಹೇಳುವೆನು ಕೇಳು, ವಿಚಿತ್ರವಾದ ವಡವೆಗಳೂ ವಸ್ತ್ರಗಳೂಉಳ್ಳ, ಸಪ್ತ ದ್ವೀಪಗಳಿಗಧಿಪತಿಯಾದ ಮಾಂಧಾತನೆಂದು ಪ್ರಸಿದ್ಧನಾದ ರಾಜನಿರುವನು ಆತನು, ನಿನಗೆ ಯುದ್ಧವನ್ನಿಯ್ಯುವನೆಂದು ಹೇಳಲೂ ರಾವಣನಿಂತೆಂದನು, ॥೧೦೩॥ ಆ ನರಶ್ರೇಷ್ಠನಾದ ಮಾಂಧಾತನೆಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯತ್ರಾಸೌನರಪುಂಗವಃ॥೧೦೪॥ರಾವಣಸ್ಯವಚಶ್ಶ್ರುತ್ವಾಮುನಿರ್ವಚನಮಬ್ರವೀತ್ । ಯುವನಾಶ್ವಸುತೋಹ್ಯೇಷಮಾಂ ಧಾತಾರಾಜಸತ್ತಮಃ ॥ ಸಪ್ತದ್ವೀಪಾನ್ಸಮುದ್ರಾಂತಾನ್ಜಿತ್ವಾದ್ಯಸ್ವರ್ಗಮೆಷ್ಯತಿ ॥೧೦೬॥ಅಥಾಪಶ್ಯನ್ಮಹಾಬಾಹು ರ್ವಿರಿಂಚಿಬಲದರ್ಪಿತಃ । ಅಯೊಧ್ಯಾಧಿಪತಿಂವೀರಂಮಾಂಧಾತಾರಂನೃಪೋತ್ತಮಮ್ । ಸಪ್ತದ್ವೀಪಾಧಿಪಂಯಾಂತಂಸ್ಯಂ ದನೇನವಿರಾಜತಾ ॥ಕಾಂಚನೇನವಿಚಿತ್ರೇಣಮಹೋದಾರೇಣಭಾಸ್ವತಾ । ಜಾಜ್ವಲ್ಯಮಾನಂರೂಪೇಣದಿವ್ಯಸ್ರಗನುಲೇಪನಮ್॥ ತಮುವಾಚದಶಗ್ರೀವೋಯುದ್ಧಂಮೇದೀಯತಾಮಿತಿ । ಏವಮುಕ್ತೋದಶಗ್ರೀವಂ ಪ್ರಹಸ್ಯೇದಮುವಾಚಹ । ಯದಿತೇಜೀವಿ ತಂನೇಷ್ಟಂತತೋಯುಧ್ಯಸ್ವಮಾಮಿತಿ॥೧೧೦॥ಮಾಂಧಾತುರ್ವಚನಂಶ್ರುತ್ವಾರಾವಣೋವಾಕ್ಯಮಬ್ರವೀತ್ ॥೧೧೧॥ ವರುಣ ಸ್ಯಕುಬೇರಸ್ಯಯಮಸ್ಯಾಪಿನವಿವ್ಯಥೇ। ಕಿಮರೇಮಾನುಷಾತ್ತ್ವತ್ತೋರಾವಣೋಭಯಮಾವಿಶೇತ್॥ಏವಮುಕ್ತ್ವಾದಶಗ್ರೀವಃ ಕ್ರೋಧಾತ್ತಂಪ್ರದಹನ್ನಿವ ।ಆಜ್ಞಾಪಯಾಮಾಸತದಾರಾಕ್ಷಸಾನ್ಯುದ್ಧದುರ್ಮದಾನ್ ॥೧೧೩॥ಅಥಕ್ರುದ್ಧಾಸ್ತುಸಚಿವಾಃ

---

ಸಿದ್ಧನಾಗಿಧಾನೊ, ಸಃ-ಆ ಮಾಂಧಾತ ಚಕ್ರವರ್ತಿಯು, ತೆ-ನಿನಗೆ, ಯುದ್ಧಂ-ಕಾಳಗವನ್ನು ಪ್ರದಾಸ್ಯತಿ-ಕೊಡುತ್ತಾನೆ, ॥೧೦೩॥ ಪರ್ವತಸ್ಯ-ಪರ್ವ ತನ, ವಚಃ-ವಚನವನ್ನು, ಶ್ರುತ್ವಾ-ಕೇಳಿ, ರಾವಣಃ-ರಾವಣನು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧೦೪॥ ಅಸೌರಾಜಾ-ಈ ಅರಸು, ಕುತ್ರವರ್ತತೆ-ಯಲ್ಲಿಧಾನೆ, ತಂ-ಆತನನ್ನು, ಮಮ-ಯನಗೆ, ತತ್ವತಃ-ಯಥಾರ್ಥವಾಗಿ, ಆಚಕ್ಷ್ವ-ಹೇಳು, ಅಸೌನರಪುಂಗವಃ-ಈ ಅರಸು, ಯತ್ರ- ಯಲ್ಲಿಧಾನೊ, ತತ್ರ-ಅಲ್ಲಿ, ಅದ್ಯ-ಈಗ, ಅಹಂ-ನಾನು, ಯಾಸ್ಯಾಮಿ-ಹೊಗುತ್ತೆನೆ॥೧೦೫॥ ರಾವಣಸ್ಯ-ರಾವಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಏಷಃಮಾಂಧಾತಾ-ಈ ಮಾಂಧಾತನೆಂಬ, ರಾಜಸತ್ತಮಃ-ರಾಜಶ್ರೇಷ್ಠನು, ಯುವನಾಶ್ವಸುತಃ-ಯುವನಾಶ್ವನಿಗೆ ಕೊಮಾರನು, ಸಮುದ್ರಾಂತಾನ್-ಸ ಮುದ್ರವೆಅಂತವಾಗಿವುಳ್ಳ ಸಪ್ತದ್ವೀಪಾನ್ - ಸಪ್ತದ್ವೀಪಗಳನ್ನು ಜಿತ್ವಾ - ಜಯಿಸಿ, ಅದ್ಯ-ಈಗ, ಸ್ವರ್ಗಂ - ಸ್ವರ್ಗವನ್ನು ಕುರಿತು, ಏಷ್ಯತಿ- ಹೋಗುವವನು, ಇತಿ-ಹೀಗೆಂತೆಂದು, ಮುನಿಃ-ಪರ್ವತನು, ವಚನಂ - ಮಾತನ್ನು, ಅಬ್ರವೀತ್-ನುಡಿದನು ॥ ೧೦೬ ॥ ಅಥ-ಬಳಿಕ, ಮಹಾಬಾಹುಃ- ಭುಜಪರಾಕ್ರಮಶಾಲಿಯಾದ, ದಶಗ್ರೀವಃ-ರಾವಣನು, ವಿರಿಂಚಿವರದರ್ಪಿತಃ-ವಿರಿಂಚಿ - ಬ್ರಹ್ಮದೇವರ, ವರ-ವರದಿಂದ, ದರ್ಪಿತಃ - ಕೊಬ್ಬಿದವನಾಗಿ, ಅಯೊಧ್ಯಾಧಿಪತಿಂ - ಅಯೊಧ್ಯಾಪಟ್ಟಣಕ್ಕೆ ಧೊರೆಯಾದ, ವೀರಂ - ಶೂರನಾದ, ಸಪ್ತದ್ವೀಪಾಧಿಪಂ - ಸಪ್ತದ್ವೀಪಗಳಿಗೂ ಅಧಿಪತಿಯಾದ, ವಿರಾಜ ತಾ-ಹೊಳೆಯುತ್ತಿರುವ, ಸ್ಯಂದನೇನ-ರಥದಿಂದ, ಯಾಂತಂ-ಹೊಗುತಿರುವ, ವಿಚಿತ್ರೇಣ - ಆಶ್ಚರ್ಯಕರವಾದ, ಕಾಂಚನೇನ, ಭಂಗಾರುವಿಕಾರವಾದ ಆ ಭರಣಗಳಿಂದ, ಭಾಸ್ವತಾ-ಪ್ರಕಾಶಮಾನವಾದ, ಮಹೋದಾರೇಣ, ಅತ್ಯಂತ ಶ್ರೇಷ್ಠವಾದ, ರೂಪೇಣ-ಆ ಕಾರದಿಂದ, ಜಾಜ್ವಲ್ಯಮಾನಂ - ಹೊಳೆಯುತಿರುವ, ದಿವ್ಯಸ್ರಗನು ಲೇಪನಂ-ದಿವ್ಯ-ದೇವತಾಸಮ್ಮಂಧಿಗಳಾದ, ಸ್ರಗನುಲೇಪನ-ಗಂಧಪುಷ್ಪಗಳುಳ್ಳ, ಮಾಂಧಾತಾರಂ-ಮಾಂಧಾತನೆಂಬ, ನೃಪೋತ್ತಮಂ-ರಾಜಶ್ರೇ ಷ್ಠನನ್ನು, ಅಪಶ್ಯತ್-ಕಂಡನು,ಮೇ-ನನಿಗೆ, ಯುದ್ಧಂ-ಯುದ್ಧವು, ದೀಯತಾಂ-ಕೊಡಲ್ಪಡಲೀ, ಇತಿ-ಇಂತೆಂದು, ತಂ-ಆಮಾಂಧಾತನನ್ನು ಕುರಿತು, ಉ ವಾಚ-ಹೇಳಿದನು ॥ ಏವಂ-ಈ ಪ್ರಕಾರವಾಗಿ, ಉಕ್ತಃ-ಹೇಳಲ್ಪಟ್ಟ, ಮಾಂಧಾತನು, ಪ್ರಹಸ್ಯ-ನಕ್ಕು, ತೇ-ನಿನಗೆ, ಜೀವಿತಂ-ಪ್ರಾಣವು, ಇಷ್ಟಂ-ನಯುಡಿ, ಇಷ್ಟವಲ್ಲದಿದ್ದರೆ, ತತಃ-ಬಳಿಕ, ಮಾಂ-ನನ್ನನ್ನು ಕುರಿತು, ಯುಧ್ಯಸ್ವ-ಯುದ್ಧಮಾಡು, ಇತಿ-ಇಂತೆಂದು, ಇದಂ-ಈ ಮಾತನ್ನು, ದಶಗ್ರೀವಂ-ರಾವಣನ ನು ಕುರಿತು, ಉವಾಚಹ-ಹೇಳಿದನಪ್ಪೆ ॥ ೧೧೦॥ ಮಾಂಧಾತುಃ-ಚಕ್ರವರ್ತಿಯಾದ ಮಾಂಧಾತುವಿನ, ವಚನಂ- ಮಾತನ್ನು, ಶ್ರುತ್ವಾ-ಕೇಳಿ, ರಾವಣಃ- ರಾವಣನು, ವಾಕ್ಯಂ-ವಾಕ್ಯವನ್ನು,ಅಬ್ರವೀತ್-ನುಡಿದನು॥೧೧೧॥ಅರೆ-ಯಲೊನೀಚನೆ,ವರುಣಸ್ಯ-ವರುಣನಿಗೂ, ಕುಬೇರಸ್ಯ-ಕುಬೇರನಿಗೂ, ಯಮ ಸ್ಯಾಪಿ, ಯಮನಿಗೂ, ರಾವಣಃ-ರಾವಣನು,ನವಿವ್ಯಥೆ-ಭಯದಿಂದವ್ಯಸನಬೀಳಲಿಲ್ಲಾ,ಮಾನುಷಾತ್-ಮನುಷ್ಯನಾದ,ತ್ವತ್ತಃ-ನಿನ್ನ ದೆಸೆಯಿಂದ,ಭಯಂ-ಭ ಯವನ್ನು,ಆ ವಿಶೇತ್ಕಿಂ- ಹೊಂದುವನೆಯೆನು ॥೧೧೨॥ ಏವಂ-ಈ ಪರಿಯಾಗಿ, ಉಕ್ತ್ವಾ-ಹೇಳಿ, ದಶಗ್ರೀವಃ-ರಾವಣನು, ಕ್ರೋಧಾತ್-ಕೋಪದ್ದೆಸೆಯಿಂ

---

ಬರಾಜನು ಎಲ್ಲಿರುವನೋ ನನಗೆ ತಿಳಿಯದಲ್ಲ, ದಯಪಾಲಿಸಿ ಹೇಳಿದರೆ ನಾನಲ್ಲಿ ಹೋಗುವೆನೆಂದು ರಾವಣನು ನುಡಿ ಯಲೂ, ಆ ಮುನಿಯು ಈ ವಚನವಂ ಹೇಳತೊಡಗಿದನು, ಈ ಮಾಂಧಾತನೆಂಬ ರಾಜಶ್ರೇಷ್ಠನು ಯುವನಾಶ್ವನ ಮ ಗನು, ಸಮುದ್ರವೇ ತುದಿಯಾಗುಳ್ಳ ಸಪ್ತದ್ವೀಪಗಳನ್ನು ಜಯಿಸಿ ಈಗ ಸ್ವರ್ಗವಂ ಕುರಿತುಬರುವನು ॥೧೦೬॥ ಆಬ ಳಿಕ ರಾವಣನು ಬ್ರಹ್ಮವರದಿಂದ ಕಡುಕೊಬ್ಬಿದವನಾಗಿ, ಅಯೋಧ್ಯಾಪುರಿ ಗಧಿಪತಿಯಾದವನಾಗಿಯೂ, ಶೂರನಾಗಿ ಯೂ, ಸುವರ್ಣವಿಕಾರವಾದ ಮತ್ತೂ ಆಶ್ಚರ್ಯ ಕರವಾದ ಕಂಗೊಳಿಸುತಿರುವ ರಥದಿಂದ ಹೋಗುತಿರುವನಾಗಿ ಯೂ, ರೂಪದಿಂದ ಹೊಳೆಯುತಿರುವನಾಗಿಯೂ, ದಿವ್ಯವಾದ ಪುಷ್ಪಮಾಲಿಕೆಗಳೊ ಗಂಧವೂಸಹಾ ವುಳ್ಳವನಾಗಿಯೂ ಇರುವ ಆ ಮಾಂಧಾತನೆಂಬ ನರರಾಜೋತ್ತಮನಂ ಕಂಡು, ಎನಗೆಯುದ್ಧಾತಿಥ್ಯವನ್ನಿಡೆಂದು ನುಡಿಯಲೂ, ನಿನಗೆಪ್ರಾ ಣಗಳಮೇಲೆ ಇಷ್ಟವಿಲ್ಲದಿದ್ದರೆ, ನನ್ನೊಡನೆ ಯುದ್ಧಮಾಡು, ಎಂಬದಾಗಿ ಮಾಂಧಾತನಿಂದ ಹೇಳಲ್ಪಟ್ಟವನಾಗಿ ರಾವ ಣನು ಈ ಮಾತನ್ನು ನುಡಿದನು॥ಎಲೋ ನೀಚನೆ ! ವರುಣನಿಗೂ ಕುಬೇರನಿಗೂ ಎಮನಿಗೂಕೂಡ ಹೆದರದಿರುವ ರಾ ವಣನು ನಿನಗಂಜುವನೇ, ಎಂದುಹೇಳಿ ಆಕಾಲದಲ್ಲಿ ದಶಕಂಠನು ಕಡುಕೋಪದಿಂದ ಮಾಂಧಾತನಂ ಸುಡುವನಂತೆ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಾವಣಸ್ಯದುರಾತ್ಮನಃ ।ವವರ್ಷುಶ್ಶರವರ್ಷಾಣಿಶೂರಾಯುದ್ಧವಿಶಾರದಾಃ ॥೧೧೪॥ ಅಥರಾಜ್ಞಾಬಲವತಾಕಂಕಪತ್ರೈರಜಿಂಹಗೈಃ। ಇಷುಭಿಸ್ತಾಡಿತಾಸ್ಸರ್ವೇಪ್ರಹಸ್ತಶುಕಸಾರಣಾಃ।ಮಹೋದರವಿರೂಪಾಕ್ಷಮಾರೀಚಾಕಂಪನಾದಯಃ ॥೧೧೫ ಅಥಪ್ರಹಸ್ತೋನೃಪತಿಂಶರವರ್ಷೈರವಾಕಿರತ॥೧೧೬॥ ಅಪ್ರಾಪ್ತಾನೇವತಾನ್ಸರ್ವಾನ್ಪ್ರಚಿಚ್ಛೇದನೃಪೋತ್ತಮಃ।ಭುಸುಂಡೀಭಿಶ್ಚಭಲ್ಲೈಶ್ಚಭಿಂಡಿವಾಲೈಶ್ಚತೋಮರೈಃ ॥ನರರಾಜೇನದಹ್ಯಂತೇಶಲಭಾಇವತೇಗ್ನಿನಾ॥೧೧೮॥ ಪುನರ್ನೃಪವರಃಕ್ರುದ್ಧಃ ಪಂಚಭಿಃಪ್ರಬಿಭೇದತಮ್ ।ತೋಮರೈಸ್ಸಮಹಾಘೋರೈಃಪುರಾಕ್ರೌಂಚಮಿವಾಗ್ನಿಜಃ ॥೧೧೯॥ತತೋಮುಹುರ್ಭ್ರಾಮಯಿತ್ವಾಮುದ್ಗರಂವಜ್ರಸನ್ನಿಭಮ್ ।ಮುಮೋಚಸೋತಿವೇಗೇನರಾಕ್ಷಸಸ್ಯರಥಂಪ್ರತಿ॥ ೧೨೦ ॥ ಸಪಪಾತಮಹಾವೇಗೋಮುದ್ಗರೋವಜ್ರಸನ್ನಿಭಃ ॥ ಘೂರ್ಣಿತೋರಾವಣಸ್ತೇನಪತಿತಶ್ಶಕ್ರಕೇತುವತ ॥೧೨೧ ತದಾಸನ್ನೃಪತಿಃಪ್ರೀತಃಹರ್ಷೋದ್ಭೂತ

ದ, ತಂ-ಆ ಮಾಂಧಾತನನ್ನು, ಪ್ರದಹನ್ನಿವ, ಸುಡುವನಂತಿರುವನಾಗಿ, ತದಾ-ಆ ಕಾಲದಲ್ಲಿ, ಯುದ್ಧದುರ್ಮದಾಃ-ಯುದ್ಧ-ಕಾಳಗದಲ್ಲಿ,ದುರ್ಮದಾಃ-ಗರ್ವಿತರಾದ,ರಾಕ್ಷಸಾನ್-ರಕ್ಕಸರನ್ನು,ಆಜ್ಞಾಪಯಾಮಾಸ-ಆ ಜ್ಞಾಪಿಸಿದನು॥೧೧೩॥ ಅಥ-ಬಳಿಕ, ಕ್ರುದ್ಧಾಃ-ಕೋಪಿಷ್ಠರಾದ, ಶೂರಾಃ-ಶೂರರಾದ,ಯುದ್ಧವಿಶಾರದಾಃ-ಯುದ್ಧದಲ್ಲಿ ಸಮರ್ಥರಾದ, ದುರಾತ್ಮನಃ-ದುಷ್ಟನಾದ, ರಾವಣಸ್ಯ-ರಾವಣನ, ಸಚಿವಾಃ-ಮಂತ್ರಿಗಳು, ಶರವರ್ಷಾಣಿ-ಬಾಣವರ್ಷಗಳನ್ನು, ವವರ್ಷುಃ-ಸುರಿಸಿದರು॥೧೧೪॥ಅಥ-ಬಳಿಕ, ಬಲವತಾ-ಬಲವಂತನಾದ, ರಾಜ್ಞಾ-ಅರಸನಿಂದ,ಮಹೋದರವಿರೂಪಾಕ್ಷಮಾರೀಚಾಕಂಪನಾದಯಃ-ಮಹೋದರ-ಮಹೋದರನು, ವಿರೂಪಾಕ್ಷ-ವಿರೂಪಾಕ್ಷನು, ಮಾರೀಚ-ಮಾರೀಚನು, ಅಕಂಪನ-ಅಕಂಪನು ಇವರುಗಳೆವೆ, ಆದಯಃ-ಮೊದಲಾಗಿವುಳ್ಳ, ಪ್ರಹಸ್ತಶುಕಸಾರಣಾಃ-ಪ್ರಹಸ್ತ ಶುಕಸಾರಣರೆಂಬ, ಸರ್ವೇ-ಸಮಸ್ತರು, ಕಂಕಪತ್ರೈಃ-ಹದ್ದುಗಳ ರಕ್ಕೆಗಳುಳ್ಳ, ಅಜಿಹ್ಮಗೈಃ-ನೆಟ್ಟಗೆ ಬರುತಿರುವ,ಇಷುಭಿಃ-ಬಾಣಗಳಿಂದ, ತಾಡಿತಾಃ-ಹೊಡೆಯಲ್ಪಟ್ಟರು ॥೧೧೫॥ ಅಥ-ಬಳಿಕ, ಪ್ರಹಸ್ತಃ-ಪ್ರಹಸ್ತನು, ನೃಪತಿಂ-ರಾಜನನ್ನು, ಶರವರ್ಷೈಃ-ಬಾಣವರ್ಷಗಳಿಂದ, ಅವಾಕಿರತ್-ಸುರಿಸಿದನು ॥೧೧೬॥ ನೃಪೋತ್ತಮಃ-ರಾಜಶ್ರೇಷ್ಠನು, ಸರ್ವಾನ್-ಸಮಸ್ತವಾದ, ತಾನ್-ಆ ಬಾಣಗಳನ್ನು, ಅಪ್ರಾಪ್ತಾನೇವ - ಬಾರದೆಯಿರುವಗಳನ್ನಾಗಿ, ಭುಸಂಡೀಭಿಃ-ಧಪ್ಪದಾಗಿರುವ ಕಬ್ಬಿಣದ ಕೊಡತಿಗಳಿಂದಲೂ, ಭಲ್ಲೈಶ್ಚ-ಭಲ್ಲಾಯುಧಗಳಿಂದಲೂ, ಭಿಂಡಿವಾಲೈಶ್ಚ-ದೊಣ್ಣೆಗಳಿಂದಲೂ, ತೋಮರೈಶ್ಚ-ತೋಮರಗಳೇಬಾಯುಧವಿಶೇಷ ಗಳಿಂದಲೂ, ಪ್ರಚಿಚ್ಛೇದ-ಕತ್ತರಿಸಿದನು, ನರರಾಜೇನ-ಮಾಂಧಾತಚಕ್ರವರ್ತಿಯಿಂದ, ತೇ-ಆರಾಕ್ಷಸರು, ಅಗ್ನಿನಾ-ಬೆಂಕಿಯಿಂದ, ಶಲಭಾಇವ, ಪತಂಗಹುಳುಗಳಂತೆ, ದಹ್ಯಂತೆ-ದಹಿಸಲ್ಪಟ್ಟರು॥೧೧೮॥ ಸನೃಪವರಃ-ಆ ಮಾಂಧಾತುವು, ಪುನಃ-ಮತ್ತು, ಕ್ರುದ್ಧಃ-ಕುಪಿತನಾಗಿ; ಪಂಚಭಿಃ-ಐದಾದ, ಮಹಾಘೋರೈಃ-ಮಹಾಭಯಂಕರಗಳಾದ,ತೋಮರೈಃ-ತೋಮರಾಯುಧಗಳಿಂದ, ತಂ-ಆ ರಾವಣನನ್ನು, ಪುರಾ-ಪೂರ್ವದಲ್ಲಿ, ಕ್ರೌಂಚಂ-ಕ್ರೌಂಚಪರ್ವತವನ್ನು, ಅಗ್ನಿಜಇವ, ಕುಮಾರಸ್ವಾಮಿಯಂತೆ, ಪ್ರಬಿಭೇದ-ಭೇದಿಸಿದನು॥ತತಃ-ಬಳಿಕ,ಸಃ-ಆಮಾಂಧಾತನು,ವಜ್ರಸನ್ನಿಭಂ-ವಜ್ರಾಯುಧಕ್ಕೆ ಸಮಾನವಾದ,ಮುದ್ಗರಂ-ಮುದ್ಗರಾಯುಧವನ್ನು,ಮುಹುಃ-ಬಾರಿಬಾರಿಗು,ಭ್ರಾಮಯಿತ್ವಾ-ತಿರುಗಿ,ಅತಿವೇಗೇನ-ಬಹಳಜಾಗ್ರತೆಯಿಂದ, ರಾಕ್ಷಸಸ್ಯ-ರಾವಣನ, ರಥಂಪ್ರತಿ-ರಥವನ್ನು ಕುರಿತು, ಮುಮೋಚ-ಬಿಟ್ಟನು ॥೧೨೦ ॥ ವಜ್ರಸನ್ನಿಭಃ-ವಜ್ರಾಯುಧ ಸದೃಶವಾದ, ಸಮುದ್ಗರಃ-ಆ ಮುದ್ಗರವು, ಮಹಾವೇಗಃ-ಅತಿವೇಗವುಳ್ಳದ್ದಾಗಿ, ಪಪಾತ-ಬಿದ್ದಿತು, ತೇನ-ಆ ಮುದ್ಗರಾಯುಧದಿಂದ, ರಾವಣಃ-ರಾವಣಾಸುರನು, ಘೂರ್ಣಿತಃ-ತಿರಿಗಿಸಲ್ಪಟ್ಟವನಾಗಿ, ಶಕ್ರಕೇತುವತ್-ಇಂದ್ರನಧ್ವಜದಂತೆ, ಪತಿತಃ-ಬಿದ್ದುಹೋದನು ॥೧೨೧॥ ತದಾ-ಆ ಸಮಯದಲ್ಲಿ, ಸನೃಪತಿಃ-ಆ ಮಾಂಧಾತುವು, ಪ್ರೀತಃ-ಸಂತುಷ್ಟನಾದ ಕಾರಣ, ಸಕಲೇಂದುಕರೈಃ- ಸಕಲ-ಸಮಸ್ತವಾದ, ಇಂದುಕರೈಃ-ಚಂದ್ರಕಿರಣಗಳಿಂದ, ಸ್ಪೃಷ್ಟಂ-ಸ್ಪರ್ಶಿಸಲ್ಪಟ್ಟ, ಲವಣಾಂ

ಯುದ್ಧದುರ್ಮದರಾದ ತನ್ನಮಂತ್ರಿಗಳಿಗಾಜ್ಞಾಪಿಸಿದನು॥೧೧೩॥ಆಬಳಿಕ ದುರಾತ್ಮನಾದರಾವಣನ ಮಂತ್ರಿಗಳಾದ ಮತ್ತೂ ಯುದ್ಧದಕ್ಷರಾದ ಆ ಪ್ರಹಸ್ತಾದಿಗಳಾದರೆ, ಬಾಣವರ್ಷಗಳಂ ಸುರಿಸುತಿದ್ದರು॥೧೧೪॥ ಅನಂತರವು, ಪ್ರಹಸ್ತ, ಶುಕ, ಸಾರಣ, ಮಹೋದರ, ವಿರೂಪಾಕ್ಷ, ಮಾರೀಚ, ಅಕಂಪನನೆಂಬವರೇ ಮುಂತಾದವರೆಲ್ಲರು, ಬಲವಂತನಾದ ಆ ಮಾಂಧಾತನಿಂದ ಹೊಡೆಯಲ್ಪಟ್ಟರು ॥೧೧೫॥ ಆಬಳಿಕ ಪ್ರಹಸ್ತನು ಬಾಣ ತಂಡಗಳನ್ನೆ ಸೆಯಲೂ, ಆ ನೃಪೋತ್ತಮನು ಆ ಬಾಣಗಳನ್ನೆಲ್ಲಾ ಅಪ್ರಾಪ್ತಗಳನ್ನಾಗಿಯೆ ಭುಸುಂಡಿಗಳೆಂಬ ಆ ಯುಧಗಳಿಂದ ಕತ್ತರಿಸಿದನು, ನರನಾಥನಿಂದ ಆ ಬಾಣಜಾಲಗಳು, ಅಗ್ನಿಯಿಂದ ಪತಂಗದ ಹುಳುಗಳು ಸುಡುಲ್ಪಡುವ ತೆರದಿ ಸುಡಲ್ಪಡುತಿದ್ದವು॥೧೧೮॥ಆ ಮಾಂಧಾತನು ಮತ್ತೂ ಕೋಪಿಷ್ಠನಾಗಿ ಮಹಾಭಯಂಕರವಾದ ಐದು ತೋಮರಾಯುಧಗಳಿಂದ, ಪೂರ್ವದಲ್ಲಿ ಕುಮಾರಸ್ವಾಮಿಯು ಶಕ್ತ್ಯಾಯುಧದಿಂದ ಕ್ರೌಂಚಪರ್ವತವಂ ಭೇದಿಸಿದ ತೆರದಿ ಆ ಪ್ರಹಸ್ತನಂ ಭೇದಿಶಿದವನಾದನು॥೧೧೯॥ಸಮನಂತರಕಾಲದಲ್ಲಿ ಆ ಮಾಂಧಾತನು, ವಜ್ರಶದೃಸಮಾದ ಮುದ್ಗರಾಯುಧವನ್ನು ಗರ್ರನೆ ತಿರಗಿಶಿ ರಾವಣರಥವಂಕುರಿತು ತ್ವರಿತವಾಗಿಬಿಡಲೂ, ಆ ಆಯುಧವು ಅತಿವೇಗವಾಗಿಬಂದು ರಾವಣನಮೇಲೆಥಟ್ಟನೆಬೀಳಲೂ, ಆಗರಾವಣನು ಇಂದ್ರನ ಧ್ವಜದತೆರದಿತಿರುಗುತಿರುವನಾಗಿ ಬಿದ್ದುಹೋದನು ॥೧೨೧॥ ಆ ಸಮಯದಲ್ಲಿ ಆ ಮಾಂಧಾತನು ಕಡುಸಂತುಷ್ಟನಾದಕಾರಣ ಹರುಷದಿಂದ ಉಕ್ಕಿಬರುತಿರುವ ಬಲವುಳ್ಳವನಾಗಿ,ಲವಣಸಮುದ್ರೋದಕವು ಪೂರ್ಣಿಮಾ ಚಂದ್ರಕಿ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬಲೋಬಭೌ ॥ ಸಕಲೇಂದುಕರೈಃಸ್ಪೃಷ್ಟಂಯಥಾಂಬುಲವಣಾಂಭಸಃ॥೧೦॥ತತೋರಕ್ಷೋಬಲಂಸರ್ವಂಹಾಹಾಭೂತ ಮಚೇತನಮ್ ॥ ಪರಿವಾರ್ಯಾಥತಂತಸ್ಥೌ ರಾಕ್ಷಸೇಂದ್ರಂಸಮಂತತಃ ॥೧೧॥ತತಶ್ಚಿರಾತ್ಸಮಾಶ್ವಸ್ತೋ ರಾವಣೋಲೋಕರಾವಣಃ ॥ ಮಾಂಧಾತುಃಪೀಡಯಾಮಾಸದೇಹಂಲಂಕೇಶ್ವರೋಭೃಶಮ್॥೧೨॥ರಥಂಚಾಶ್ವಯುಜಂಕ್ಷಿಪ್ರಂಬಭಂಜಚಮಹಾಬಲಃ।ವಿರಥಸ್ಸರಥಂಪ್ರಾಪ್ಯಶಕ್ತಿಂಘಂಟಾಟ್ಟಹಾಸಿನೀಮ್।ಮಾಂಧಾತಾವಿಪ್ರಚಿಕ್ಷೇಪತಾಂಬಲಾದ್ರಾವಣಂಪ್ರತಿ ॥೧೩॥ ಮರೀಚಿಮಿವಚಾರ್ಕಸ್ಯಚಿತ್ರಭಾನೋಶ್ಶಿಖಾಮಿವ ॥ ದೀಪ್ಯಂತೀಂರುಚಿರಾಭಾಸಾಂ ಮಾಂಧಾತೃಕರನಿಸ್ಸೃತಾಮ್ ॥ ತಾಮಾಪತಂತೀಂಶೂಲೇನಪೌಲಸ್ತ್ಯೋರಜನೀಚರಃ। ದದಾಹಶಕ್ತಿಂಲಂಕೇಶಃಪತಂಗಮಿವಪಾವಕಃ ॥೧೪॥ ಯಮದತ್ತಂತುನಾರಾಚಂವಿಕೃಷ್ಯಥದಶಾನನಃ ॥ ಪಾತಯಾಮಾಸವೇಗೇನಸತೇನಾಭಿಹತೋಭೃಶಮ್ ॥೧೫॥ ಮೂರ್ಛಿತಂನೃಪತಿಂದೃಷ್ಟ್ವಾಪ್ರಹೃಷ್ಟಾಸ್ತೇನಿಶಾಚರಾಃ।ಚುಕ್ರುಶುಸ್ಸಿಂಹನಾದಾಂಶ್ಚ ಕ್ಷ್ವೇಳಂತಶ್ಚ ನಿಶಾಚರಾಃ ॥೧೬॥ ಲಬ್ಧಸಂಜ್ಞೋ

---

ಭಸಃ-ಲವಣಸಮುದ್ರದ, ಅಂಬು-ಉದಕವು, ಯಥಾ-ಹ್ಯಾಗೊ, ತಥಾ-ಹಾಗೆ, ಹರ್ಷೋದ್ಭೂತಬಲಃ-ಸಂತೋಷದಿಂದಹುಟ್ಟಿದ ಬಲವುಳ್ಳವನಾಗಿ,ಬಭೌ-ಹೊಳೆಯುತಿದ್ದನು ॥೧೦॥ ಅಥ-ಅನಂತರದಲ್ಲಿ, ತತಃ-ಆ ಮುದ್ಗರಾಯುಧ ಪ್ರಹಾರದಿಂದ, ಅಚೇತನಂ-ಪ್ರಜ್ಞೆಯಿಲ್ಲದೆಬಿದ್ದಿರುವ, ತಂರಾಕ್ಷಸೇಂದ್ರಂ-ಆ ರಾಕ್ಷಸೇಂದ್ರನನ್ನು, ಸಮಂತತಃ-ಯಲ್ಲಾ ಕಡೆಯಲ್ಲಿಯೂ,ಸರ್ವಂ-ಸಮಸ್ತವಾದ,ರಕ್ಷೋಬಲಂ-ರಾಕ್ಷಸಸೈನ್ಯವು,ಹಾಹಾಭೂತಂ-ಹಾಹಾಯೆಂದುಕೂಗುತ್ತಾ, ಪರಿವಾರ್ಯ-ಸುತ್ತಿಕೊಂಡು ತಸ್ಥೌ-ನಿಂತಿತು ॥೧೧॥ತತಃ-ಬಳಿಕ, ಲೋಕರಾವಣಃ-ಲೋಕಗಳನ್ನೆಲ್ಲಾ,ದೀನಧ್ವನಿಯುಳ್ಳದ್ದನ್ನಾಗಿ ಮಾಡುತಿರುವ,ಲಂಕೇಶ್ವರಃ-ಲಂಕಾಧಿಪತಿಯಾದ, ರಾವಣಃ-ರಾವಣನು, ಚಿರಾತ್-ಬಹುಕಾಲದಲ್ಲಿ, ಸಮಾಶ್ವಸ್ತಃ-ಸಮಾಧಾನಗೊಳಿಸಲ್ಪಟ್ಟವನಾಗಿ, ಮಾಂಧಾತುಃ-ಮಾಂಧಾತುವಿನ, ದೇಹಂ-ಶರೀರವನ್ನು, ಭೃಶಂ-ಬಹಳವಾಗಿ, ಪೀಡಯಾಮಾಸ-ಬಾಧಿಸಿದನು ॥೧೨॥ ಕಿಂಚ-ಇಷ್ಟೇಅಲ್ಲಾ, ಮಹಾಬಲಃ-ಮಹಾಬಲವಂತನಾದ ರಾವಣನು, ಅಶ್ವಯುಜಂ-ಕುದುರೆಗಳಿಂದೊಡಗೂಡಿದ, ರಥಂಚ-ರಥವನ್ನೂ ಕೂಡ, ಕ್ಷಿಪ್ರಂ-ಜಾಗ್ರತೆಯಾಗಿ,ಬಭಂಜ-ಮುರಿದನು,ವಿರಥಃ-ರಥಹೀನನಾದ, ಸಮಾಂಧಾತಾ-ಆ ಮಾಂಧಾತನು, ರಥಂ-ರಥವನ್ನು,ಪ್ರಾಪ್ಯ-ಹೊಂದಿ,ಘಂಟಾಟ್ಟಹಾಸಿನೀಂ-ಘಂಟೆಗಳಿಂದ ಅಟ್ಟಹಾಸವಂಗೈಯುತಿರುವ, ಶಕ್ತಿಂ-ಶಕ್ತ್ಯಾಯುಧವನ್ನು, ಪ್ರಾಪ್ಯ-ಹೊಂದಿ, ತಾಂ-ಆಶಕ್ತ್ಯಾಯುಧವನ್ನು,ರಾವಣಂಪ್ರತಿ-ರಾವಣಾಸುರನನ್ನು ಕುರಿತು,ಬಲಾತ್-ಬಲಾತ್ಕಾರದಿಂದ, ವಿಪ್ರಚಿಕ್ಷೇಪ-ಯಸೆದನು ॥೧೩॥ರಜನೀಚರಃ-ರಾಕ್ಷಸನಾದ, ಪೌಲಸ್ತ್ಯಃ-ಪುಲಸ್ತ್ಯಪುತ್ರನಾದ, ಲಂಕೇಶಃ-ರಾವಣನು, ಅರ್ಕಸ್ಯ- ಸೂರ್ಯನ, ಮರೀಚಿಮಿವ-ಕಾಂತಿಯಂತೆಯು, ಚಿತ್ರಭಾನೋಃ-ಅಗ್ನಿಯ, ಶಿಖಾಮಿವ, ಜ್ವಾಲೆಯಂತೆಯೂ,ದೀಪ್ಯಂತೀಂ-ಪ್ರಕಾಶಿಸುತಿರುವ,ರುಚಿರಾಭಾಸಾಂ-ಮನೋಹರವಾದ ಕಾಂತಿಯುಳ್ಳ, ಮಾಂಧಾತೃಕರನಿಸ್ಸೃತಾಂ-ಮಾಂಧಾತನ ಹಸ್ತದಿಂದ ಹೊರಡಿತಾದಕಾರಣ, ಆಪತಂತೀಂ-ಬರುತಿರುವ, ತಾಂಶಕ್ತಿಂಚ-ಆ ಶಕ್ತಿಯನ್ನೂ ಕೂಡ, ಪತಂಗಂ-ಪತಂಗದಹುಳವನ್ನು,ಪಾವಕಇವ-ಅಗ್ನಿಯಂತೆ, ಶೂಲೇನ-ಶೂಲಾಯುಧದಿಂದ, ದದಾಹ-ಸುಟ್ಟನು॥ ೧೪॥ ಅಥ-ಅನಂತರದಲ್ಲಿ, ದಶಾನನಃ-ರಾವಣನು, ಯಮದತ್ತಂ-ಯಮನಿಂದ ಕೊಡಲ್ಪಟ್ಟ, ನಾರಾಚಂತು, ನಿಡಿಗೋಲಂನಾದರೆ, ವಿಕೃಷ್ಯ-ಸೆಳದು, ವೇಗೇನ-ವೇಗದಿಂದ, ಪಾತಯಾಮಾಸ-ಕೆಡಹಿದನು, ಸಃ-ಆ ಮಾಂಧಾತನು,ತೇನ, ಆಬಾಣದಿಂದ,ಭೃಶಂ-ಬಹಳವಾಗಿ,ಅಭಿಹತಃ-ಹೊಡೆಯಲ್ಪಟ್ಟನು॥೧೫॥ನಿಶಾಚರಾಃ-ರಾತ್ರಿಸಂಚಾರಶೀಲರಾದ, ತೇನಿಶಾಚರಾಃ-ಆ ರಾಕ್ಷಸರು, ಮೂರ್ಛಿತಂ-ಪ್ರಜ್ಞೆತಪ್ಪಿದ, ನೃಪತಿಂ-ರಾಜನನ್ನು, ದೃಷ್ಟ್ವಾ-ಕಂಡು, ಪ್ರಹೃಷ್ಟಾಃ-ಸಂತೋಷಚಿತ್ತರಾಗಿ, ಸಿಂಹನಾದಾಂಶ್ಚ -ಸಿಂಹನಾದಗಳನ್ನು, ಚುಕ್ರುಶುಃ-ಕೂಗಿದರು, ಕ್ಷ್ವೇಳಂತಶ್ಚ -ಘಟ್ಟಿಯಾಗಿ ನಗುತ್ತಲೂಯಿದ್ದರು.॥೧೬॥ಚಂದ್ರಾರ್ಕಸದೃಶ

---

ರಣಗಳ ಸಂಪರ್ಕದಿಂದ ಉಕ್ಕಿಬರುವಂತೆ, ಹೊಳೆಯುತಿರ್ದನು॥೧೦॥ಆ ಬಳಿಕ ರಾಕ್ಷಸಬಲವೆಲ್ಲ ಹಾಹಾಎಂದುಕೂಗುತ್ತಾ, ಚೈತನ್ಯವಿಲ್ಲದೆ ಬಿದ್ದಿರುವ ರಾಕ್ಷಸೇಂದ್ರನಾದ ರಾವಣನ ಸುತ್ತುಮುತ್ತಲೂ ಸುತ್ತು ಬಾರಿಕೊಂಡುನಿಂತಿತು॥ ಲೋಕಗಳನ್ನೆಲ್ಲಾ ದೀನ ಧ್ವನಿಯುಳ್ಳವುಗಳನ್ನಾಗಿ ಮಾಡುತ್ತಿರುವ ಮಹಾ ಬಲವಂತನಾದ ಮತ್ತೂ ಲಂಕೇಶ್ವರನಾದ ಆ ರಾವಣನು, ಬಹುಕಾಲವು ಸಮಾಧಾನಗೊಳಿಸಲ್ಪಟ್ಟವನಾದ ಬಳಿಕ ಮಾಂಧಾತನದೇಹವನ್ನು ಬಹಳವಾಗಿ ಬಾಧಿಸಿದ್ದಲ್ಲದೆ, ಅಶ್ವ ಸಹಿತವಾದರಥವನ್ನು ಕ್ಷಿಪ್ರದಲ್ಲಿ ಮುರುದುಹಾಕಲು, ವಿರಥನಾದ ಆರಾಜನು ರಥವಂ ಹೊಂದಿ, ಘಂಟೆಗಳಿಂದ ಅಟ್ಟಹಾಸವಂಗೈಯ್ಯುತಿರುವ ಶಕ್ತ್ಯಾಯುಧವಂಹೊಂದಿ, ಬಲಾತ್ಕಾರದಿಂದರಾವಣನಂಕುರಿತು ಎಸೆದನು ॥ಆಪುಲಸ್ತ್ಯಪುತ್ರನಾದ ರಾವಣನು,ಸೂರ್ಯಕಿರಣದಂತೆಯೂ ಅಗ್ನಿಯ ಜ್ವಾಲೆಯಂತೆಯೂ ಹೊಳೆಯುತಿರುವದಾದಕಾರಣ ಸೊಬಗಾದ ಕಾಂತಿಯುಳ್ಳ, ಮಾಂಧಾತನ ಹಸ್ತದಿಂದ ಬಿಡಲ್ಪಟ್ಟುಬರುತಿರುವ ಆ ಶಕ್ತಿಯನ್ನು, ಶೂಲಾಯುಧದಿಂದ ಪತಂಗದ ಹುಳವನ್ನು ಅಗ್ನಿಯುಸುಡುವಂತೆ ಸುಟ್ಟು ಆ ಬಳಿಕ ರಾವಣನು,ಯಮಲಬ್ಧವಾದನಿಡಿಗೋಲನ್ನು ಶೆಳದುವೇಗದಿಂದಬಿಡಲೂ, ಆ ರಾಜನು ಅದರಿಂದಹೊಡೆಯಲ್ಪಟ್ಟವನಾಗಿ ಮೂರ್ಛಿತನಾದನು॥೧೫॥ಪ್ರಜ್ಞೆತಪ್ಪಿ ಬಿದ್ದಿರುವ ಆ ನರಪತಿಯಂ ಕಂಡು, ಆ ರಾವಣಮಂತ್ರಿಗಳಾದ ಪ್ರಹಸ್ತಾದಿಗಳೆಲ್ಲರು ಕಡುಸಂತುಷ್ಟರಾಗಿ, ಸಿಂಹನಾದಗಳಂಗೈಯ್ಯುತಿರುವರಾದರು ॥೧೬॥ ಅಯೋಧ್ಯಾಧಿಪತಿಯಾದ ಆ ಮಾಂಧಾತನಾದರೆ,ಸ್ವಲ್ಪಕಾಲವಾದ ಬಳಿಕ ಪ್ರಜ್ಞೆಬಂದವನಾಗಿ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮುಹೂರ್ತೇನಸ್ಯಯೊಧ್ಯಾಧಿಪತಿಸ್ತದಾ ।ತಂದೃಷ್ಟ್ವಾಶತ್ರುಭಿಶ್ಶತ್ರುಂಪೂಜ್ಯಮಾನಂಮುದಾನ್ವಿತೈಃ ॥ ಜಾತಕೋಪೋದು ರಾಧರ್ಷಶ್ಚಂದ್ರಾರ್ಕಸದೃಶದ್ಯುತಿಃ । ಮಹತಾಶರವರ್ಷೇಣಪೀಡಯನ್ರಾಕ್ಷಸಂಬಲಮ್ ॥೧೩೧॥ ಚಾಪಸ್ಯಚನಿನಾದೇನತಸ್ಯಬಾಣರವೇಣಚ ॥ ಸಂಚಚಾಲತತಸ್ಸೈನ್ಯಂಉದ್ಧೂತಇವಸಾಗರಃ ॥೧೩೨॥ ತದ್ಯುದ್ಧಮಭವದ್ಘೋರಂನರರಾಕ್ಷಸಸಂಕುಲಮ್ ॥೧೩೩॥ ಕ್ರುಧಾವಿಷ್ಟೌಮಹಾತ್ಮಾನೌನರರಾಕ್ಷಸಸತ್ತಮೌ॥ ಕಾರ್ಮುಕಾಸಿಧರೌವೀರೌಶರಾಸನಗತೌತಥಾ ।ಮಾಂಧಾತಾರಾವಣಂಚೈವರಾಕ್ಷಸಶ್ಚೈವತಂನೃಪಮ್। ಕ್ರೋಧೇನಮಹತಾವಿಷ್ಟೌಶರವರ್ಷಂವವರ್ಷತುಃ । ತೌಪರಸ್ಪರಸಂಕ್ಷೋಭಾತ್ಪ್ರಹಾರೈರ್ಜರ್ಝರೀಕೃತೌ ॥೧೩೪॥ರಾವಣೋರೌದ್ರಮಸ್ತ್ರಂತುಪ್ರಾಯುಙ್ಕ್ತಸಮಹಾಬಲಃ ।ಆಗ್ನೇಯೇನಸಮಾಂಧಾತಾತದಸ್ತ್ರಂಪ್ರತ್ಯವಾರಯತ ॥೧೩೫॥ ಗಾಂಧರ್ವೇಣದಶಗ್ರೀವೋವಾರುಣೇನಸರಾಜರಾಟ್ ॥೧೩೬॥ ಗೃಹೀತ್ವಾಸತುಬ್ರಹ್ಮಾಸ್ತ್ರಂಸರ್ವಭೂತಭಯಾವಹಮ್॥ತೋಲಯಾಮಾಸಮಾಂಧಾತಾದಿವ್ಯಂಪಾಶುಪತಂಮಹತ್॥೧೩೭

---

ಅಯೋಧ್ಯಾಧಿಪತಿಃ-ಅಯೋಧ್ಯಾಪಟ್ಟಣಕ್ಕೆ ಅಧಿಪತಿಯಾದ ಮಾಂಧಾತನು,ಮುಹೂರ್ತೇನಹಿ-ಸ್ವಲ್ಪಕಾಲದಲ್ಲಿಯೆ,ಲಬ್ಧಸಂಜ್ಞಃ-ಹೊಂದಲ್ಪಟ್ಟ ಪ್ರಜ್ಞೆಯುಳ್ಳವನಾಗಿ, ತದಾ-ಆ ಕಾಲದಲ್ಲಿ, ಮುದಾನ್ವಿತೈಃ-ಸಂತೋಷದಿಂದ ಕೂಡಿದವರಾದ, ಶತ್ರುಭಿಃ-ಶತ್ರುಗಳಿಂದ,ಪೂಜ್ಯಮಾನಂ-ಪೂಜಿಸಲ್ಪಡುತಿರುವ,ತಂ-ಶತ್ರುಂ-ಆ ಶತ್ರುವಾದ ರಾವಣನನ್ನು, ದೃಷ್ಟ್ವಾ-ಕಂಡು, ಜಾತಕೋಪಃ-ಜಾತ-ಹುಟ್ಟಿದ, ಕೋಪಃ-ಕೋಪವುಳ್ಳವನಾದ ಕಾರಣ, ದುರಾಧರ್ಷಃ-ತಿರಸ್ಕರಿಸಲಸಾಧ್ಯನಾಗಿ, ಚಂದ್ರಾರ್ಕಸದೃಶದ್ಯುತಿಃ-ಚಂದ್ರಸೂರ್ಯರಿಗೆ ಸಮಾನವಾದಕಾಂತಿಯುಳ್ಳ, ಮಹತಾ-ಮಹತ್ತರವಾದ, ಶರವರ್ಷೇಣ-ಬಾಣವರ್ಷದಿಂದ, ರಾಕ್ಷಸಂ-ಅಸುರಸಂಬಂಧವಾದ, ಬಲಂ-ಸೇನೆಯನ್ನು,ಪೀಡಯನ್-ಪೀಡಿಸುತ್ತಿರುವನು(ಅಭವತ್-ಆದನು)॥೧೩೧॥ತತಃ-ಬಳಿಕ,ತಸ್ಯ-ಆ ಮಾಂಧಾತನ,ಚಾಪಸ್ಯನಿನಾದೇನ, ಧನುಸ್ಸಿನ ಧ್ವನಿಯಿಂದಲೂ,ಬಾಣರವೇಣಚ-ಬಾಣಶಬ್ದದಿಂದಲೂ, ಸೈನ್ಯಂ-ಆ ರಾಕ್ಷಸಸೈನ್ಯವು,ಉದ್ಧೂತಃ-ಕೊಡಹಲ್ಪಟ್ಟ, ಸಾಗರಇವ-ಸಮುದ್ರದಂತೆ, ಸಂಚಚಾಲ, ಕದಲಿತು॥ನರರಾಕ್ಷಸಸಂಕುಲಂ-ನರರಾಕ್ಷಸರಿಂದ ವ್ಯಾಪ್ತವಾದ, ತದ್ಯುದ್ಧಂ-ಆ ಯುದ್ಧವು, ಘೋರಂ-ಭಯಂಕರವಾಗಿ, ಅಭವತ್-ಆಯಿತು॥ ಕ್ರುಧಾವಿಷ್ಟೌ-ಕ್ರೋಧಾವೇಶವುಳ್ಳ,ಮಹಾತ್ಮಾನೌ-ಮಹಾಮನಸ್ವಿಗಳಾದ, ನರರಾಕ್ಷಸಸತ್ತಮೌ-ನರರಾಕ್ಷಸಶ್ರೇಷ್ಠರಾದ,ಕಾರ್ಮುಕಾಸಿಧರೌ-ಧನುಸ್ಸುಗಳನ್ನು ಖಡ್ಗಗಳನ್ನು ಧರಿಸಿರುವ, ವೀರೌ-ಶೂರರಾದ,ಶರಾಸನಗತೌ-ಧನುಸ್ಸುಗಳನ್ನು ಹೊಂದಿರುವ,ತಥಾ-ಹಾಗೆ, ಮಹತಾ-ಮಹತ್ತರವಾದ,ಕ್ರೋಧೇನ-ಕೋಪದಿಂದ, ಆವಿಷ್ಟೌ-ಆವೇಶವುಳ್ಳ,ತೌ-ಅವರೀರ್ವರು, ಪರಸ್ಪರಸಂಕ್ಷೋಭಾತ್-ಅನ್ಯೋನ್ಯವಾಗಿ ಕ್ಷೋಭಗೊಳಿಸೋಣದರಿಂದಲೂ, ಪ್ರಹಾರೈಃ-ಹೊಡಿಯೋಣದರಿಂದಲೂ,ಜರ್ಝರೀಕೃತೌ-ಶಿಥಿಲ ಮಾಡಲ್ಪಟ್ಟವರಾಗಿ, ಮಾಂಧಾತಾ-ಮಾಂಧಾತನು, ರಾವಣಂಚ-ರಾವಣನನ್ನು, ರಾಕ್ಷಸಶ್ಚ-ರಾವಣನು, ತಂನೃಪಂಚೈವ-ಆ ಮಾಂಧಾತನನ್ನು ಕುರಿತು, ಶರವರ್ಷಂ-ಬಾಣವರ್ಷಗಳನ್ನು, ವವರ್ಷತುಃ-ಸುರಿಸಿದರು ॥೧೩೪॥ ಮಹಾಬಲಃ-ಬಲವಂತನಾದ, ಸರಾವಣಸ್ತು-ರಾವಣನಾದರೆ, ರೌದ್ರಂ-ರುದ್ರ ಸಂಬಂಧವಾದ, ಅಸ್ತ್ರಂ-ಅಸ್ತ್ರವನ್ನು, ಪ್ರಾಯುಙ್ಕ್ತ-ಪ್ರಯೋಗಿಸಿದನು, ಸಮಾಂಧಾತಾ-ಆ ಮಾಂಧಾತನು, ತದಸ್ತ್ರಂ-ಆ ಅಸ್ತ್ರವನ್ನು, ಆಗ್ನೇಯೇನ-ಆಗ್ನೇಯಾಸ್ತ್ರದಿಂದ, ಪ್ರತ್ಯವಾರಯತ್-ತಡೆಮಾಡಿದನು, ॥೧೩೫॥ ದಶಗ್ರೀವಃ-ರಾವಣನು, ಗಾಂಧರ್ವೇಣ-ಗಾಂಧರ್ವಾಸ್ತ್ರದಿಂದಲೂ, ಸರಾಜರಾಟ್-ಆ ಚಕ್ರವರ್ತಿಯಾದ ಮಾಂಧಾತನು, ವಾರುಣೇನ-ವರುಣಾಸ್ತ್ರದಿಂದ ಪ್ರತ್ಯವಾರಯತ್-ತಡೆಮಾಡಿದನು ॥ ೧೩೬ ॥ ಸತು-ಆ ರಾವಣನಾದರೆ, ಸರ್ವಭೂತ ಭಯಾವಹಂ-ಸರ್ವಭೂತ-ಸಮಸ್ತಭೂತಗಳಿಗೂ ಭಯಾವಹಂ-ಭಯಂಕರವಾದ, ಬ್ರಹ್ಮಾಸ್ತ್ರಂ-ಬ್ರಹ್ಮಾಸ್ತ್ರವನ್ನು, ಗೃಹೀತ್ವಾ-ತೆಗದು ಕೊಂಡು, ತೋಲಯಾಮಾಸ-ಪ್ರಯೋಗಮಾಡಿದನು, ಮಾಂಧಾತಾಚ-ಮಾಂಧಾತ ಚಕ್ರವರ್ತಿಯು, ತ್ರೈಲೋಕ್ಯಭಯವರ್ಧನಂ-ಲೋಕತ್ರಯಕ್ಕೂ ಕೂಡೆ ಭಯಂಕರವಾದ ಘೋರರೂಪಂ-ಉಗ್ರಾಕಾರವುಳ್ಳ,ದಿವ್ಯಂ-ದೇವತಾಸಂಬಂಧವಾದ, ಮಹತ್-

---

ಸಂತೋಷಯುಕ್ತರಾದ ಶತ್ರುಗಳಿಂದ ಪೂಜಿಸಲ್ಪಡುತಿರುವ ಆ ಶತ್ರುವಂ ಕಂಡು, ಜಾತಕೋಪಮುಳ್ಳವನಾದಕಾರಣ ತಿರಸ್ಕರಿಸಲ ಸಾಧ್ಯನಾಗಿಯೂ, ಚಂದ್ರ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳವನಾಗಿಯೂ ಆಗಿ, ಮಹತ್ತರವಾದ ಶರವರ್ಷದಿಂದ ರಾಕ್ಷಸ ಬಲವನ್ನೆಲ್ಲಾ ಪೀಡಿಸುತಿರುವನಾಗಿರಲೂ, ಆ ಸೈನ್ಯವೆಲ್ಲಾ ಧನುಷ್ಟಂಕಾರದಿಂದಲೂ ಬಾಣಶಬ್ದದಿಂದಲೂ, ಕೊಡಹಲ್ಪಟ್ಟ ಸಮುದ್ರದಂತೆ ಚಲಿಸಿತು, ನರ ರಾಕ್ಷಸ ಸಂಕುಲವಾದ ಆ ರಣವು ಅತಿಘೋರವಾಗಿ ನಡೆಯುತಿತ್ತು॥ಕೋಪೋದ್ರೇಕವುಳ್ಳವರಾಗಿಯೂ,ನರರಾಕ್ಷಸಶ್ರೇಷ್ಠರಾಗಿಯೂ,ಮಹಾತ್ಮರಾಗಿಯೂ,ಶೂರರಾಗಿಯೂ ಕೋದಂಡಗಳನ್ನೂ ಖಡ್ಗಗಳನ್ನೂ ಸಹಾ ಪಿಡಿದಿರುವರಾಗಿಯೂ, ಇರುವ ಆ ಮಾಂಧಾತರಾವಣರೀರ್ವರು, ಒಬ್ಬರನ್ನೊಬ್ಬರು ಹೊಡಿಯೋಣದರಿಂದ ಪುಡಿ ಪುಡಿಯಾದ ದೇಹಗಳುಳ್ಳವರಾಗಿ, ಪರಸ್ಪರವಾಗಿ ಬಾಣವರ್ಷಗಳಂ ಸುರಿಸುತಿರ್ದರು ॥೧೩೪॥ಹೀಗಿರುವಲ್ಲಿ ಮಹಾಬಲವಂತನಾದ ದಶಕಂಠನು ಪಾಶುಪತಾಸ್ತ್ರವಂ ಪ್ರಯೋಗಿಸಲೂ, ಆಮಾಂಧಾತ ಚಕ್ರವರ್ತಿಯು ಆಗ್ನೇಯಾಸ್ತ್ರದಿಂದ ಆ ಅಸ್ತ್ರವಂ ನಿವಾರಿಸಿದನು॥೧೩೫॥ ಆ ಬಳಿಕ ರಾವಣನು ಗಾಂಧರ್ವಾಸ್ತ್ರದಿಂದ ಅದಂನಿವಾರಿಸಲೂ, ಮಾಂಧಾತನು ಆ ಗಾಂಧರ್ವಾಸ್ತ್ರವಂ ವಾರುಣಾಸ್ತ್ರದಿಂ ವಾರಿಸಲೂ ರಾವಣನು ಸರ್ವಲೋಕಭಯಂಕರವಾಗಿರುವ ಬ್ರಹ್ಮಾಸ್ತ್ರವನ್ನೂ, ಮಾಂಧಾತ ಚಕ್ರವರ್ತಿಯು ಲೋಕತ್ರಯಕ್ಕೂ ಕೂಡಾ ಭಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತದಸ್ತ್ರಂಘೋರರೂಪಂತುತ್ರೈಲೋಕ್ಯಭಯವರ್ಧನವ್ ॥ ದೃಷ್ಟ್ವಾತ್ರಸ್ತಾನಿಭೂತಾನಿಸ್ಥಾವರಾಣಿಚರಾಣಿಚ॥ ವರದಾನಾತ್ತುರುದ್ರಸ್ಯತಪಸಾಧಿಗತಂಮಹತ್ ॥ ತತಃಪ್ರಕಂಪಿತಂಸರ್ವಂತ್ರೈಲೋಕ್ಯಂಸಚರಾಚರವ್ । ದೇವಾಃಪ್ರಕಂಪಿತಾಸ್ಸರ್ವೇಲಯಂನಾಗಾಶ್ಚ ಮೇನಿರೇ । ಅಥತೌಮುನಿಶಾರ್ದೂಲೌಧ್ಯಾನಯೋಗಾದಪಶ್ಯತಾವ್ ॥ ಪುಲಸ್ತ್ಯೋಗಾಲವಶ್ಚೈವ ವಾರಯಾಮಾಸತುರ್ನೃಪವ್ ॥೧೪೨॥ ಉಪಲಬ್ಧೈಶ್ಚ ವಿವಿಧೈರ್ವಾಕ್ಯೈರಾಕ್ಷಸಸತ್ತಮವ್ ॥ ತೌತುಕೃತ್ವಾಪರಾಂ ಪ್ರೀತಿಂನರರಾಕ್ಷಸಯೋಸ್ತದಾ ॥೧೪೩॥ ಸಂಪ್ರಸ್ಥಿತೌತುಸಂಹೃಷ್ಟೌಪಥಾಯೇನೈವಚಾಗತೌ॥*ಗತಾಭ್ಯಾಮಥವಿಪ್ರಾಭ್ಯಾಂ ರಾವಣೋರಾಕ್ಷಸಾಧಿಪಃ॥೧೧೪॥ ದಶಯೋಜನಸಾಹಸ್ರಂಪ್ರಥಮಂಸಮರುತ್ಪಥವ್ । ಅತ್ಯಕ್ರಾಮನ್ಮಹಾತೇಜಾಃಪುಷ್ಪಕೇನಮಹಾಬಲಃ॥೧೪೫॥ ಯತ್ರತಿಷ್ಠಂತಿಸಂನ್ಯಸ್ತಾಹಂಸಾಸ್ಸರ್ವಗುಣಾನ್ವಿತಾಃ। ಅತಊರ್ಧ್ವಂದ್ವಿತೀಯಂತುಗತ್ವಾಚೈಷಮರುತ್ಪಥವ್॥೧೪೬॥ ದಶಯೋಜನಸಾಹಸ್ರಂತದ್ಧಿವೈಪರಿಗಣ್ಯತೇ ।ತತ್ರಮೇಘಾಸ್ಸ್ಥಿತಾಸ್ಸರ್ವೇತ್ರಿವಿಧಾನಿತ್ಯಸಂಶ್ರಿ

---

ದೊಡ್ಡದಾದ, ಪಾಶುಪತಂ – ಪಶುಪತಿಸಂಬಂಧವಾದ, ತದಸ್ತ್ರಂ–ಆ ಪಾಶುಪತಾಸ್ತ್ರವನ್ನು, ತೊಲಯಾಮಾಸ– ಬಿಟ್ಟನು ॥೧೩೯॥ ರುದ್ರಸ್ಯ–ಪರಮೇಶ್ವರನ, ವರದಾನಾತ್–ವರದಾನದ ದೆಸೆಯಿಂದಲೂ,ತಪಸಾತು–ತಪಸ್ಸಿನಿಂದಲೂನೂ, ಅಧಿಗತಂ–ಹೊಂದಲ್ಪಟ್ಟ, ಮಹತ್ – ದೊಡ್ಡದಾದ, ಪಾಶುಪತಾಸ್ತ್ರವನ್ನು,ದೃಷ್ಟ್ವಾ–ಕಂಡು, ಸ್ಥಾವರಾಣಿ –ಸ್ಥಿರಗಳಾದ, ಚರಾಣಿ – ಜಂಗಮಗಳಾದ, ಭೂತಾನಿ–ಭೂತಗಳು, ತ್ರಸ್ತಾನಿ–ಭಯಬಿದ್ದವು ॥೧೪೦॥ ತತಃ–ಆ ಪಾಶು ಪತಾಸ್ತ್ರದಿಂದ, ಸಚರಾಚರಂ–ಚರಾಚರಾತ್ಮಕವಾದ, ಸರ್ವಂ–ಸಮಸ್ತವಾದ, ತ್ರೈಲೋಕ್ಯಂ–ಲೋಕತ್ರಯವು, ಪ್ರಕಂಪಿತಂ–ಕಂಪಿಸಲ್ಪಟ್ಟಿತು, ಸರ್ವೆದೇವಾಃ–ಸಮಸ್ತ ದೇವತೆಗಳು, ಪ್ರಕಂಪಿತಾಃ–ಕಂಪಿಸಲ್ಪಟ್ಟರು, ನಾಗಾಶ್ಚ–ಸರ್ಪಗಳೂನು, ಲಯಂ–ನಾಶವನ್ನು, ಮೇನಿರೇ–ಎಣಿಸಿದವು ॥ ಅಥ–ಬಳಿಕ, ಪುಲಸ್ತ್ಯಃ–ಪುಲಸ್ತ್ಯಬ್ರಹ್ಮನೂ, ಗಾಲವಶ್ಚೈವ–ಗಾಲವನೂಯೆಂಬ, ಉಭೌ – ಇಬ್ಬರಾದ, ಮುನಿಶಾರ್ದೂಲೌ–ಋಷಿಶ್ರೇಷ್ಠರು,ಧ್ಯಾನಯೋಗಾತ್–ಧ್ಯಾನಯೋಗದ ದೆಸೆಯಿಂದ, ತೌ–ಆ ಮಾಂಧಾತರಾವಣ ರಿಬ್ಬರುನ್ನು, ಅಪಶ್ಯತಾಂ–ಕಂಡರು, ನೃಪಂ–ಮಾಂಧಾತನನ್ನು, ವಾರಯಾಮಾಸತುಃ–ತಡೆದರು ॥೧೪೨॥ ತೌ–ಆ ಋಷಿಗಳು, ಉಪಲಬ್ಧೈಃ–ಬುದ್ಧಿಗೋಚರವಾದ, ವಿವಿಧೈಃ–ನಾನಾವಿಧಂಗಳಾದ, ವಾಕ್ಯೈಃ–ವಾಕ್ಯಗಳಿಂದ, ರಾಕ್ಷಸಸತ್ತಮಂ–ರಾವಣಾಸುರನನ್ನು, ವಾರಯಾಮಾಸತುಃ–ತಡೆಮಾಡಿದರು, ತದಾ–ಆ ಕಾಲದಲ್ಲಿ, ತೌತು–ಆ ಋಷಿಗಳಾದರೆ, ನರರಾಕ್ಷಸಯೋಃ–ಮಾಂಧಾತೃರಾವಣರಿಗೆ, ಪರಾಂ–ಅಧಿಕವಾದ, ಪ್ರೀತಿಂ–ವಿಶ್ವಾಸವನ್ನು, ಕೃತ್ವಾ–ಮಾಡಿ, ಸಂಹೃಷ್ಟಾ–ಹರ್ಷಯುಕ್ತರಾಗಿ, ಯೇನಪಥಾ–ಯಾವಮಾರ್ಗದಿಂದ, ಆಗತೌ–ಬಂದರೊ, ತೇನೈವ–ಅದೇ ಮಾರ್ಗದಿಂದಲೆ, ಸಂಪ್ರಸ್ಥಿತೌ–ಹೊರಟು ಹೋದರು ॥ ೧೪೩॥ ಅಥ–ಬಳಿಕ, ಗತಾಭ್ಯಾಂ ಪ್ರಯಾಣಮಾಡಿದ, ವಿಪ್ರಾಭ್ಯಾಂ–ಬ್ರಾಹ್ಮಣರೊಡನೆ, ಮಹಾಬಲಃ–ಮಹಾ ಬಲಿಷ್ಠನಾದ, ಮಹಾತೇಜಾಃ–ಮಹಾಪರಾಕ್ರಮಿಯಾದ, ರಾಕ್ಷಸಾಧಿಪಃ–ರಕ್ಕಸರಿಗೆಲ್ಲಾ ಅಧಿಪತಿಯಾದ, ಸರಾವಣಃ–ಆ ರಾವಣನು, ದಶಯೋಜನಸಾಹಸ್ರಂ–ಹತ್ತುಸಹಸ್ರ ಯೋಜನಗಳುಳ್ಳ, ಪ್ರಥಮಂ–ಪ್ರಥಮಖಂಡವಾದ, ಮರುತ್ಪಥಂ– ವಾಯುಮಾರ್ಗವನ್ನು, ಪುಷ್ಪಕೇನ–ಪುಷ್ಪಕ ವಿಮಾನದಿಂದ, ಅತ್ಯಕ್ರಾಮತ್–ಅತಿಕ್ರಮಿಸಿದನು ॥ ೧೪೪ ॥ ಯತ್ರ–ಯಾವ ಸ್ಥಳದಲ್ಲಿ, ಸರ್ವಗುಣಾನ್ವಿತಾಃ– ಸಮಸ್ತಗುಣಗಳಿಂದ ಕೂಡಿಕೊಂಡಿರುವ, ಸಂನ್ಯಸ್ತಾಃ–ಸನ್ಯಾಸವನ್ನು ವಹಿಸಿರುವ, ಹಂಸಾಃ–ಪರಮಹಂಸರು, ತಿಷ್ಠಂತಿ–ಇರುತ್ತಾರೋ–ಏಷಃ–ಈ ರಾವಣನು, ಅತಃ–ಈ ಪರಮ ಹಂಸರಿರುವ ಸ್ಥಳಕ್ಕಿಂತಲು, ಊರ್ಧ್ವಂ–ಮ್ಯಾಲಿರುವ, ದ್ವಿತೀಯ್ಯಂ–ಎರಡನೆ ಖಂಡವಾದ, ಮರುತ್ಪಥಂ–ವಾಯುಮಾರ್ಗವನ್ನು, ಗತ್ವಾ–ಹೊಂದಿ, ಅತ್ಯಕ್ರಾಮತ್–ಅತಿಕ್ರಮಿಸಿದನು ॥ ೧೪೬ ॥ ತತ್–ಆ ಸ್ಥಳವು, ದಶಯೋಜನಸಾಹಸ್ರಂ–ಹತ್ತುಸಾವಿರ ಗಾವುದವೆಂದು, ಪರಿಗಣ್ಯತೇಹಿ–ಗಣನೆಮಾಡಲ್ಪಡುತ್ತೆ ॥೧೪೫॥ತತ್ರ–ಆ ಸ್ಥಳದಲ್ಲಿ, ಸರ್ವೆ–ಸಮಸ್ತವಾದ,ಮೇಘಾಃ–ಮೇಘಗಳು, ತ್ರಿವಿಧಾಃ–ಮೂರು ಬಗೆ ಉಳ್ಳವುಗಳಾಗಿ, ನಿತ್ಯಸಂಶ್ರಿತಾಃ, ನಿತ್ಯ–ನಿರಂತರವನ್ನು, ಸಂಶ್ರಿತಾಃ–ಆಶ್ರಯಿಸಿ ಕೊಂಡವುಗಳಾಗಿ, ಸ್ಥಿತಾಃ–ಇರುತ್ತವೆ ॥೧೪೭॥ ಆಗ್ನೇಯಾಃ–ಆಗ್ನೇಯಗಳೆಂತಲೂ, ಪಕ್ಷಜಾಃ–ಪಕ್ಷಜಗಳೆಂತಲೂ, ಬ್ರಾಹ್ಮಾಃ–ಬ್ರಾಹ್ಮಗಳೆಂತಲೂ, ತ್ರಿವಿಧಾಇತಿ–ಮೂರು ಬಗೆಗಳುಳ್ಳವಗಳೆಂದು, ಸಂಸ್ಕೃತಾಃ–ಹೇಳಲ್ಪಡುತವೆ, ಅಥ–ಬಳಿಕ

---

ವನ್ನುಂಟುಮಾಡುತಿರುವ ಘೋರಾಕಾರವುಳ್ಳ ಪಾಶುಪತಾಸ್ತ್ರವನ್ನೂ, ತೆಗದುಕೊಂಡು ರಣಶೂರರಾದ ಆ ರಾವಣ ಮಾಂಧಾತರೆಂಬೀರ್ವರು ಕೂಗುತಿರುವದಂ ಕಂಡು ಸಮಸ್ತಭೂತಗಳೂ, ಮತ್ತೂ ಚರಾ ಚರಾತ್ಮಕವಾದ ಪ್ರಪಂಚವೆಲ್ಲ, ಹೆದರಿತು, ಲೋಕತ್ರಯವೆಲ್ಲ ಚಲಿಸಿತು, ದೇವತೆಗಳೆಲ್ಲರು ಕಂಪಿಸಿದರು, ನಾಗದೇವತೆಗಳೆಲ್ಲ ಲಯವಂ ಹೊಂದಿದವು ॥೧೪೧॥ ಬಳಿಕ ಪುಲಸ್ತ್ಯ ಗಾಲವರೆಂಬೀ ಮಹಾ ಮುನಿಗಳೀರ್ವರು, ಧ್ಯಾನ ಯೋಗದಿಂದ,ಆಯುದ್ಧವಂ ಕಂಡು ಮಾಂಧಾತ ಚಕ್ರವರ್ತಿಯನ್ನು ತಡೆಮಾಡಿದರು ॥೧೪೨॥ ಅನೇಕವಾದ ಒಳ್ಳೇ ಮಾತುಗಳಿಂದ ಮಾಂಧಾತ ರಾವಣರನ್ನು ಸಂತೋಷಗೊಳಿಸಿ, ಆ ಋಷಿಗಳು ಬಂದ ದಾರಿಯಲ್ಲಿಯೇ ಹೊರಟು ಹೊಗಲೂ, ರಾಕ್ಷಸಾಧಿಪತಿಯಾದ ರಾವಣನು, ಹತ್ತುಸಾವಿರ ಸಂಖ್ಯಾಕವಾದ ಯೋಜನಗಳುಳ್ಳ ಮೊದಲನೆದಾದ ವಾಯು ಮಾರ್ಗವನ್ನು ಪುಷ್ಪಕ ವಿಮಾನದಿಂದಲೆ ಅತಿ ಕ್ರಮಿಸಿದವನಾದನು॥೧೪೫॥ಸರ್ವಗುಣಾನ್ವಿತರಾದಪರ ಮಹಂಸ ಸನ್ಯಾಸಿಗಳುಯಾವಸ್ಥಳದಲ್ಲಿರುತ್ತಾರೋ ಅದಕ್ಕಿಂತಲೂ,ಮೇಲೆಯಿರುವ ಎರಡನೆಯದಾದ ವಾಯು ಮಾರ್ಗವನ್ನತಿಕ್ರಮಿಸಿದವ ನಾದನು ॥ ೧೪೬॥ ಆ ಪ್ರತಿದೇಶ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಾಃ॥ಆಗ್ನೆಯಾಃಪಕ್ಷಜಾಃಬ್ರಾಹ್ಮಾತ್ರಿವಿಧಾಇತಿಸಂಸ್ಕೃತಾಃ। ಅಥಗತ್ವಾತೃತೀಯಂತುವಾಯೋಃಪಂಥಾನಮುತ್ತಮಮ್।
ನಿತ್ಯಂಯತ್ರಸ್ಥಿತಾಸ್ಸಿದ್ಧಾಶ್ಚಾರಣಾಶ್ಚ ಮನಸ್ವಿನಃ। ದಶೈವತುಸಹಸ್ರಾಣಿಯೋಜನಾನಾಂತಥೈವಚ॥ಚತುರ್ಥಂವಾಯುಮಾ
ರ್ಗಂತುಗತವಾನ್ರಾವಣಸ್ತಥಾ । ವಸಂತಿಯತ್ರನಿತ್ಯಂವೈಭೂತಾಶ್ಚ ಸವಿನಾಯಕಾಃ ॥ ಅಥಗತ್ವಾತುವೈಶೀಘ್ರಂಪಂ
ಚಮಂವಾಯುಗೋಚರಮ್ । ದಶೈವತುಸಹಸ್ರಾಣಿಯೋಜನಾನಾಂತಥೈವಚ ॥ ಗಂಗಾಯತ್ರಸರಿಚ್ಛ್ರೇಷ್ಠಾ ನಾಗಾಶ್ಚ ಕು
ಮುದಾದಯಃ। ಕುಂಜರಾಯತ್ರತಿಷ್ಠಂತಿಯೇಚಮುಂಚಂತಿಶೀಕರಾನ್॥ ಗಂಗಾತೋಯೇಷುತಿಷ್ಠಂತೋಪುಣ್ಯಂಕುರ್ವಂತಿ
ಸರ್ವತಃ । ತತಃಕರಿಕರಾದ್ಭ್ರಷ್ಟಂವಾಯುನಾಲೋಲಿತಂಭೃಶಮ್ ॥ ಜಲಂಕುಂಜೇಷುಪತಿತಂಹಿಮಂಭವತಿರಾಘವ ॥೧೫೧॥
ತತೋಜಗಾಮಷಷ್ಠಂಸವಾಯುಮಾರ್ಗಂಮಹಾದ್ಯುತೇ । ಯೋಜನಾನಾಂಸಹಸ್ರಾಣಿತಥೈವತುಸರಾಕ್ಷಸಃ । ಯತ್ರಾಸ್ತೆ

---

ಯತ್ರ-ಯಾವಸ್ಥಳದಲ್ಲಿ, ಮನಸ್ವಿನಃ-ಪಳ್ಳೆ ಮನಸ್ಸುಳ್ಳ, ಚಾರಣಾಶ್ಚ-ಚಾರಣರುನ್ನು, ಸಿದ್ಧಾಃ-ಸಿದ್ಧರುನ್ನು, ನಿತ್ಯಂ-ನಿರಂತರವು, ಸ್ಥಿತಾಃ-ಇರುತ್ತಾರೋ, ತೃತೀಯ್ಯಂ-ಮೂರನೆಖಂಡ ರೂಪವಾದ, ಉತ್ತಮಂ-ಉತ್ತಮವಾದ, ವಾಯೋಃಪಂಥಾನಂ-ವಾಯುಮಾರ್ಗವನ್ನು, ಗತ್ವಾ-ಹೊಂದಿ, ಅತ್ಯಕ್ರಾಮತ್-ಅತಿಕ್ರಮಿಸಿದನು ॥೧೪೩॥ ತಥೈವ-ಹಾಗೇನೆ, ದಶ-ಹತ್ತಾದ, ಯೋಜನಾನಾಂ-ಗಾವುದಗಳ, ಸಹಸ್ರಾಣಿ-ಸಹಸ್ರ ಯೋಜನಗಳು, ಗತ್ವಾ-ಹೋಗಿ, ತಥಾ-ಹಾಗೆ, ರಾವಣಃ-ರಾವಣನು, ಚತುರ್ಥಂ-ನಾಲ್ಕನೆಖಂಡವಾದ, ವಾಯುಮಾರ್ಗಂ-ವಾಯುಮಾರ್ಗವನ್ನು, ಗತವಾನ್-ಹೊಂದಿದನು ॥೧೪೪॥ ಯತ್ರ-ಯಾವಸ್ಥಳದಲ್ಲಿ, ಸವಿನಾಯಕಾಃ-ವಿಘ್ನಕರ್ತರೊಡನೆ ಕೂಡಿದ, ಭೂತಾಶ್ಚ-ಭೂತಗಳು, ನಿತ್ಯಂ-ನಿರಂತರವು, ವಸಂತಿ-ಇರುತ್ತವೊ, ಅಥ-ಬಳಿಕ, ತಥೈವ-ಹಾಗೆನೆ, ಯೋಜನಾನಾಂ-ಗಾವುದಗಳ, ದಶಸಹಸ್ರಾಣ್ಯೈವ, ಹತ್ತು ಸಹಸ್ರಗಳನ್ನೆ, ಗತ್ವಾ-ಹೊಗಿ, ವಾಯುಗೋಚರಂ-ವಾಯುವಿಗೆ ವಿಷಯವಾದ, ಪಂಚಮಂ-ಐದನೇ ಖಂಡವನ್ನು, ಗತವಾನ್-ಹೊಂದಿದನು ॥೧೪೫॥ ಯತ್ರ-ಯಾವಸ್ಥಳದಲ್ಲಿ, ಸರಿಚ್ಛ್ರೇಷ್ಠಾ-ನದೀಶ್ರೇಷ್ಠವಾದ, ಗಂಗಾ-ಗಂಗಾನದಿಯು, ನಾಗಾಶ್ಚ-ಆನೆಗಳು,ಕುಮುದಾದಯಃ-ಕುಮುದವೆಂಬ ದಿಗ್ಗಜವೆಮೊದಲಾಗುಳ್ಳ,ಯೇ-ಯಾವ,ಕುಂಜರಾಶ್ಚ-ದಿಗ್ಗಜಗಳೊಸಹಾ, ತಿಷ್ಠಂತಿ-ಇರುತವೊ, ಶೀಕರಾನ್-ಹನಿಗಳನ್ನು, ಮುಚಂತಿ-ಬಿಡುತವೊ ॥೧೫೦॥ ಹೆ ರಾಘವ-ಎಲೈ ಶ್ರೀರಾಮನೆ, ಗಂಗಾತೋಯೇಷು-ಗಂಗೋದಕಗಳಲ್ಲಿ, ತಿಷ್ಠಂತಃ-ಇರುತಿರುವಗಳಾಗಿ, ಸರ್ವತಃ-ಸರ್ವ ಪ್ರದೇಶಗಳಲ್ಲಿಯೂ, ಪುಣ್ಯಂ-ಪುಣ್ಯವನ್ನು, ಕುರ್ವಂತಿ-ಮಾಡುತವೊ, ತತಃ-ಬಳಿಕ, ಕರಿಕರಾತ್-ಕರಿ-ಆನೆಗಳ, ಕರಾತ್-ಸೊಂಡಿಲದಿಂದ, ಭ್ರಷ್ಟಂ-ಸ್ರವಿಸುತಿರುವ, ವಾಯುನಾ-ಘಾಳಿಯಿಂದ, ಭೃಶಂ-ಅತ್ಯಂತವಾಗಿ, ಲೋಳಿತಂ-ಚಲಿಸಲ್ಪಟ್ಟ, ಕುಂಜೇಷು-ಪೊದೆಗಳಲ್ಲಿ, ಪತಿತಂ-ಬೀಳುತಿರುವ, ಜಲಂ-ಉದಕವು, ಹಿಮಂ-ಮಂಜುರೂಪವಾದ್ದು, ಭವತಿ-ಆಗುತದೊ ॥೧೫೧ ॥ ಹೆ ಮಹಾದ್ಯುತೆ-ಎಲೈ ಮಹಾ ತೇಜಸ್ವಿಯಾದ ಶ್ರೀರಾಮನೆ, ತತಃ-ಬಳಿಕ, ಸಃ-ಪ್ರಸಿದ್ಧನಾದ, ಸರಾಕ್ಷಸಃ-ಆ ರಾವಣನು, ಗರುಡಃ-ಗರುಡನು, ಜ್ಞಾತಿಬಾಂಧವಸತ್ಕೃತಃ-ಪುತ್ರರು ಬಂಧುಗಳು ಜ್ಞಾತಿಗಳು ಇವರಿಂದ ಪೂಜಿತ ನಾದಂಥಾವನಾಗಿ, ಯತ್ರ-ಯಾವಸ್ಥಳದಲ್ಲಿ, ನಿತ್ಯಂ-ನಿರಂತರದಲ್ಲಿಯೂ, ಆಸ್ತೆ - ಇರುತ್ತಾನೊ, ಷಷ್ಠಂ-ಆರನೆ ಖಂಡವಾದ, ವಾಯುಮಾರ್ಗಂ-ವಾಯು ಮಾರ್ಗದಲ್ಲಿ, ,ತಥೈವ-ಹಾಗೆಯೆನೆ ಹತ್ತುಸಂಖ್ಯೆಗಳುಳ್ಳ, ಯೋಜನಾನಾಂ-ಗಾವುದಗಳ, ಸಹಸ್ರಾಣಿ-ಸಹಸ್ರಗಳನ್ನು, ಜಗಾಮ-ಹೊರಟನು ॥೧೫೦೨॥ ತಥಾ-ಹಾಗೆಯೆನೆ, ಉಪರಿ-ಮೇಲ್ಭಾಗದಲ್ಲಿ, ಋಷಯಃ-ಋಷಿಗಳು, ಯತ್ರ-ಯಾವಸ್ಥಳದಲ್ಲಿ, ಸ್ಥಿತಾಃ-ಇರುತಾರೊ, ಸಪ್ತಮಂ-ಏಳನೆ ಖಂಡವಾದ, ವಾಯುಮಾರ್ಗಂ - ವಾಯುಮಾರ್ಗದಲ್ಲಿ, ತಥೈವ - ಹಾಗೆಯೆ ದಶಸಂ

---

ವೂ ಕೂಡಾ ಹತ್ತು ಸಾವಿರಗಾವುದ ಪರಿಮಿತವಾಗಿರುವದು,ಅಲ್ಲಿ ಮೇಘಗಳೆಲ್ಲಾ ಆಗ್ನೆಯ್ಯ,ಪಕ್ಷಜ,ಬ್ರಾಹ್ಮಗಳೆಂಬದಾಗಿ ಮೂರುವಿಧವಾಗಿರುವವು॥೧೪೩॥ಅದನ್ನೂ ಅತಿಕ್ರಮಿಶಿದಶಸಹಸ್ರಪರಿಮಿತವಾಗಿಯೂ ಸಿದ್ಧಚಾರಣರಿಗೆ ಆಶ್ರಯವಾಗಿಯೂ ಇರುವ ಮೂರನೆಯದಾದ ವಾಯುಮಾರ್ಗವನ್ನು ಹೊಂದಿದನು॥ ೧೪೪॥ಯಾವ ಎಡದಲ್ಲಿ ಮಹಾ ಮನಸ್ವಿಗಳಾದ ಸಿದ್ಧಚಾರಣ ರಿರುವರೋ,ಅಂಥಾ ಮೂರನೇ ವಾಯುಮಾರ್ಗವನ್ನತಿಕ್ರಮಿಸಿ, ಆ ಬಳಿಕ ವಿನಾಯಕನಿಂದೊಡಗೂಡಿದ ಭೂತಗಳೆಲ್ಲವೂ ಎಲ್ಲಿರುವವೋ, ಅಂಥಾ ದಶಸಹಸ್ರಯೋಜನ ಪರಿಮಿತವಾದ ನಾಲ್ಕನೇ ವಾಯುಮಾರ್ಗವಂ ಹೊಂದಿ, ಅದನ್ನೂ ಕೂಡಾ ಅತಿಕ್ರಮಿಸಿ, ಐದನೇ ವಾಯುಮಾರ್ಗವಂ ಹೊಕ್ಕನು, ಅಲ್ಲಿ ನದೀಶ್ರೇಷ್ಠವಾದ ಗಂಗಾನದಿ ಪ್ರವಹಿಸುತಿರುವದು ಮತ್ತೂ ಕುಮುದವೇ ಮುಂತಾದ ಆನೆಗಳು ಗಂಗೋದಕಪಾನವಂ ಗೈದು ತುಂತುರಿಗಳನ್ನು ಬಿಡುತಾ ನಿಂತಿರುವವು. ಮತ್ತೂ ಗಂಗೋದಕ ತೀರದ ಸರ್ವ ಪ್ರದೇಶಗಳಲ್ಲಿ ನಿಂತಿರುವರೆಲ್ಲರೂ ಪುಣ್ಯವಂ ಮಾಡುತಿದ್ದರು, ಎಲೈ ರಘುಕುಲತಿಲಕನೇ ! ಅಲ್ಲಿ ಆನೇ ಸೊಂಡಿಲದಿಂದ ಜಾರಿ ಬರುತಿರುವ ಮತ್ತೂ ಗಾಳಿಯಿಂದ ಚಂಚಲವಾಗಿ ಲತಾ ಮಂದಿರಗಳಲ್ಲಿ ಬೀಳುತಿರುವ ಜಲವು ಮಂಜು ರೂಪವಾದಂಥಾದ್ದಾಗುತದೆ ॥೧೫೧॥ ಎಲೈ ಮಹಾ ತೇಜ್ವಸಿಯಾದ ಶ್ರೀರಾಮನೇ! ಬಳಿಕ ಆ ರಾವಣನು ಅದೇಪ್ರಕಾರವಾಗಿಯೇ ಹತ್ತುಸಾವಿರ ಯೋಜನಗಳು ವಿಸ್ತಾರವುಳ್ಳದ್ದಾಗಿಯೂ ಜ್ಞಾತಿ ಬಾಂಧವ ಸಹಿತನಾದ ಗರುಡನಿಗಾವಾಸ ಭೂತವಾಗಿಯೂ ಇರುವ ಆರನೇ ವಾಯು ಮಾರ್ಗವಂ ಹೊಂದಿ ಅದನ್ನತಿಕ್ರಮಿಸಿ, ಹಾಗೆಯೇ ಅದರ ಮೇಲ್ಭಾಗದಲ್ಲಿ ದಶ ಸಹಸ್ರ ಯೋಜನ ಪರಿಮಿತಿಯುಳ್ಳ ಏಳ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗರುಡೋನಿತ್ಯಂಜ್ಞಾತಿಬಾಂಧವೆಸತ್ಕೃತಃ ।ತಥೈವತುಸಹಸ್ರಾಣಿಯೋಜನಾನಾಂತಥೋಪರಿ । ಸಪ್ತಮಂವಾಯುಮಾರ್ಗಂತುಯತ್ರವೈಖುಷಯಃಸ್ಥಿತಾಃ॥೧೫೩॥ ಅತಊರ್ಧ್ವಂಸಗತ್ವಾಥಸಹಸ್ರಾಣಿದಶೈವತು। ಅಷ್ಟಮಂವಾಯುಮಾರ್ಗಂತುಯತ್ರಗಂಗಾಪ್ರತಿಷ್ಠಿತಾ ।ಆಕಾಶಗಂಗಾವಿಖ್ಯಾತಾಹ್ಯಾದಿತ್ಯಪಥಮಾಸ್ಥಿತಾ ॥ ವಾಯುನಾಧಾರ್ಯಮಾಣಾಸಾಮಹಾವೇಗಾಮಹಾಸ್ವನಾ॥ಅಶೀತಿಸ್ತುಸಹಸ್ರಾಣಿಯೋಜನಾನಾಂತಥೋಪರಿ ॥ ಚಂದ್ರಮಾಸ್ತಿಷ್ಠತೇಯತ್ರಗ್ರಹನಕ್ಷತ್ರಸಂಯುತಃ ॥ ಶತಂಶತಸಹಸ್ರಾಣಿರಶ್ಮಯಶ್ಚಂದ್ರಮಂಡಲಾತ್॥ ಪ್ರಕಾಶಯಂತಿಲೋಕಾಂಸ್ತುಸರ್ವಸತ್ವಸುಖಾವಹಾಃ ॥೧೫೭॥ತತೋದೃಷ್ಟ್ವಾದಶಗ್ರೀವಂಚಂದ್ರಮಾನಿರ್ದಹನ್ನಿವ॥ಸತುಶೀತಾಗ್ನಿನಾಶೀಘ್ರಂಪ್ರಾಪತದ್ರಾವಣಂತದಾ ॥೧೫೮॥ ನಾಸಹಂಸ್ತಸ್ಯಸಚಿವಾಃಶೀತಾಗ್ನಿಂಭಯಪೀಡಿತಾಃ॥ ರಾವಣಂಜಯಶಬ್ದೇನಪ್ರಹಸ್ತೋವಾಕ್ಯಮಬ್ರವೀತ್। ರಾಜನ್ ಶೀತೇನಬಾಧ್ಯಾಮೋನಿವರ್ತಾಮಇತೋವಯಮ್॥ಚಂದ್ರರಶ್ಮಿಪ್ರತಾಪೇನರಕ್ಷಸಾಂಭಯಮಾವಿಶತ । ಸ್ವಭಾಸಾಹ್ಯೇಷರಾಜೇಂದ್ರಶೀತಾಂಶುರ್ದಹ

ಷ್ಯೋಯುಳ್ಳ, ಯೋಜನಾನಾಂ-ಯೊಜನಗಳ, ಸಹಸ್ರಾಣಿ- ಸಹಸ್ರಗಳನ್ನು, ಜಗಾಮ-ಹೊರಟನು ॥ ೧೫೩೪ ॥ ಅಥ-ಬಳಿಕ, ಅತಃ-ಇದಕ್ಕಿಂತಲೂ, ಊರ್ಧ್ವಂ - ಮೇಲ್‌ಭಾಗದಲ್ಲಿ, ಯತ್ರ-ಯಾವಸ್ಥಳದಲ್ಲಿ, ಆಕಾಶಗಂಗೆತಿ-ಮಂದಾಕಿನೀಯೆಂದು, ವಿಖ್ಯಾತಾ - ತಥಾವಿಧಪ್ರಸಿದ್ಧವಾದ, ಆದಿತ್ಯಪಥಂ-ಸೂರ್ಯಮಾರ್ಗವನ್ನು, ಆಸ್ಥಿತಾ-ಹೊಂದಿರುವ, ವಾಯುನಾ-ವಾಯುವಿನಿಂದ, ಧಾರ್ಯಮಾಣಾ-ಧರಿಸಲ್ಪಟ್ಟ, ಮಹಾವೇಗಾ-ಬಲುವೇಗವುಳ್ಳ, ಮಹಾಸ್ವನಾ-ಬಹಳಧ್ವನಿಯುಳ್ಳ, ಸಾಗಂಗಾ-ಆ ಗಂಗಾನದಿಯು, ಯತ್ರ-ಯಲ್ಲಿ, ಪ್ರತಿಷ್ಠಿತಾ-ಇರುತದೊ, ತತ್ರ-ಆಸ್ಥಳದಲ್ಲಿ, ಸಃ-ಆರಾವಣನು, ದಶೈವಸಹಸ್ರಾಣಿ-ಹತ್ತುಸಾವಿರ ಗಾವುದಗಳನ್ನು, ಗತ್ವಾ-ಹೋಗಿ, ಅಷ್ಟಮಂ-ಯಂಟನೆ ಭಾಗವಾದ, ವಾಯುಮಾರ್ಗಂ-ವಾಯುಮಾರ್ಗವನ್ನು ಕುರಿತು, ಜಗಾಮ-ಹೊರಟನು ॥೧೫೬೫೦॥ತಥಾ-ಹಾಗೆಯೇ, ಉಪರಿ-ಮೇಲ್ ಭಾಗದಲ್ಲಿ, ಯತ್ರ-ಯಾವಸ್ಥಳದಲ್ಲಿ, ಚಂದ್ರಮಾಃ-ಚಂದ್ರನು,ಗ್ರಹ ನಕ್ಷತ್ರಸಂಯುತಸ್ಸನ್-ಗ್ರಹಗಳಿಂದಲೂ ನಕ್ಷತ್ರಗಳಿಂದಲೂನೂ ಕೂಡಿಕೊಂಡಿರುವನಾಗಿ,ತಿಷ್ಠತೆ - ಇರುತ್ತಾನೊ, ಶತಂ-ನೂರಾರಾದ, ಶತಸಹಸ್ರಾಣಿ-ಲಕ್ಷಸಂಖ್ಯೆಯುಳ್ಳ, ರಶ್ಮಯಃ-ಕಿರಣಗಳು, ಚಂದ್ರಮಂಡಲಾತ್-ಚಂದ್ರಮಂಡಲದೆಸೆಯಿಂದ, ಸರ್ವಸತ್ವಸುಖಾವಹಾಃ-ಸರ್ವ-ಸಮಸ್ತಗಳಾದ, ಸತ್ವ-ಜಂತುಗಳಿಗೆ,ಸುಖಾವಹಾಃ-ಸುಖವನ್ನು ಮಾಡುತಿರುವಗಳಾಗಿ, ಲೊಕಾಂಸ್ತು-ಲೋಕಗಳನ್ನಾದರೆ, ಪ್ರಕಾಶಯಂತಿ-ಪ್ರಕಾಶಮಾಡುತ್ತವೋ, ತತ್ರ-ಆಪ್ರದೇಶದಲ್ಲಿ, ಯೊಜನಾನಾಂ-ಯೋಜನಗಳ, ಅಶೀತಿಸ್ತುಸಹಸ್ರಾಣಿ-ಯಂಭತ್ತು ಸಾವಿರಗಳನ್ನು, ಜಗಾಮ-ಹೊಂದಿದನು ॥೧೫೭೫೦॥ ತತಃ-ಬಳಿಕ, ಚಂದ್ರಮಾಃ-ಚಂದ್ರನು, ದಶಗ್ರೀವಂ-ರಾವಣನನ್ನು, ದೃಷ್ಟ್ವಾ-ಕಂಡು, ಸತು-ಆ ಚಂದ್ರನಾದರೆ, ಶೀತಾಗ್ನಿನಾ-ತಣ್ಣಗಿರುವ ಅಗ್ನಿಯಿಂದ,ತದಾ-ಆ ಕಾಲದಲ್ಲಿ, ರಾವಣಂ-ರಾವಣನನ್ನು ಕುರಿತು, ಶೀಘ್ರಂ-ಜಾಗ್ರತೆಯಾಗಿ, ಪ್ರಾಪತತ್-ಬಂದನು ॥೧೫೮॥ ತಸ್ಯ-ಆರಾವಣನ, ಸಚಿವಾಃ-ಮಂತ್ರಿಗಳು, ಭಯಪೀಡಿತಾಃ-ಭಯ- ಭಯದಿಂದ, ಪೀಡಿತಾಃ-ಬಾಧಿತರಾಗಿ, ಶೀತಾಗ್ನಿಂ-ಶೀತ-ಥಣ್ಣಗಿರುವ, ಅಗ್ನಿಂ-ಅಗ್ನಿಯನ್ನು, ನಾಸಹನ್-ಸಹಿಸದೇ ಹೋದರು ॥೧೫೯॥ ಪ್ರಹಸ್ತಃ-ಪ್ರಹಸ್ತನು, ರಾವಣಂ-ರಾವಣನನ್ನು ಕುರಿತು, ಜಯಶಬ್ದೇನ-ಜಯಜಯಯೆಂಬುವ ಶಬ್ದದಿಂದ, ವಾಕ್ಯಂ-ವಚನವನ್ನು, ಅಬ್ರವೀತ್-ನುಡಿದನು, ಹೆ ರಾಜನ್-ಎಲೈ ರಾಜನೆ, ಶೀತೇನ - ಶೀತಾಗ್ನಿಯಿಂದ, ವಯಂ-ನಾವುಗಳು, ಬಾಧ್ಯಾಮಃ-ಬಾಧಿಸಲ್ಪತ್ತೇವೇ ॥ ಇತಃ-ಇಲ್ಲಿಂದ, ನಿವರ್ತಾಮಃ-ಹಿಂದಕ್ಕೆತಿರುಗೋಣ, ಚಂದ್ರರಶ್ಮಿಪ್ರತಾಪೇನ-ಚಂದ್ರ-ಚಂದ್ರನ, ರಶ್ಮಿ-ಕಿರಣಗಳ,ಪ್ರತಾಪೇನ-ಉರಿಯಿಂದ, ರಕ್ಷಸಾಂ-ರಾಕ್ಷಸರಿಗೆ, ಭಯಂ-ಭಯವು, ಆವಿಶತ್-ಬಂತು॥ಹೆರಾಜೇಂದ್ರ-ಯಲೈ ರಾವಣನೆ, ಏಷಶೀತಾಂಶುಃ- ಈ ಚಂದ್ರನು ಸ್ವಭಾಸಾ-ತನ್ನ ಕಾಂತಿಯಿಂದ, ದಹನಾತ್ಮಕೋಹಿ-ಅಗ್ನಿಸ್ವರೂಪನಾಗಿಧಾನಸ್ಟೈ ॥

ನೇ ವಾಯುಮಾರ್ಗವಂ ಹೊಂದಿದನು. ಅಲ್ಲಿ ಮಹಾ ಖುಷಿಗಳಿದ್ದರು॥ ೧೫೩½ ॥ಅದಕ್ಕಿಂತಲೂ ಮೇಲೆ ಹತ್ತು ಸಾವಿರ ಯೋಜನಗಳು ಹೋಗಿ,ಗಂಗಾ ನದಿಯು ಪ್ರತಿಷ್ಠಿತಮಾಗಿರುವ ಎಂಟನೇ ವಾಯುಮಾರ್ಗವಂ ಹೊಂದಿದನು. ಆಕಾಶ ಗಂಗೆಯು ವಾಯುವಿದಿಂದ ಧರಿಸಲ್ಪಟ್ಟದ್ದಾಗಿಯೂ, ಅತಿ ವೇಗವುಳ್ಳದ್ದಾಗಿಯೂ,ಮಹಾಘೋಷೆಯುಳ್ಳದ್ದಾಗಿಯೂ, ಇರುವದಾಗಿ ಆದಿತ್ಯ ಪಥವನ್ನಾಶ್ರಯಿಸಿತ್ತು. ಇಂಥಾಪ್ರದೇಶಗಳನ್ನೆಲ್ಲನೋಡುತ್ತಮುಂದಕ್ಕೆ ಹೊರಡಲು ಹಾಗೆಯೇ ಆದರ ಮೇಲ್ಭಾಗದಲ್ಲಿ ಯಾವ ಸ್ಥಳದಲ್ಲಿ ಚಂದ್ರನು ಗ್ರಹಗಳಿಂದಲೂ, ನಕ್ಷತ್ರಗಳಿಂದಲೂ ಒಡಗೂಡಿದವನಾಗಿರುವನೊ, ಮತ್ತೂ ನೂರು ಲಕ್ಷ ಕಿರಣಗಳು,ಯಾವಚಂದ್ರಮಂಡಲದಿಂದ ಹೊರಟು ಸರ್ವಲೋಕಕ್ಕೂ ಸುಖವನ್ನುಉಂಟುಮಾಡುತ್ತಾ ಕಂಗೊಳಿಸುತಿರುವವೋ, ಎಂಭತ್ತುಸಾವಿರ ಯೋಜನಗಳುಳ್ಳ ಅಂಥಾಪ್ರದೇಶವನ್ನುಹೊಂದಿದನು ॥೧೫೭½॥ಆ ಬಳಿಕ ಚಂದ್ರನಾದರೆ ರಾವಣನಂ ಕಂಡು ಮಂಜಿನ ರೂಪವಾಗಿರುವ ಅಗ್ನಿಯಿಂದ ಸುಡುತ್ತಿರುವನಂತೆ ಆ ಸಮಯದಲ್ಲಿ ಜಾಗ್ರತೆಯಾಗಿ ಬಂದನು ॥೧೫೮½॥ ಆ ಕಾಲದಲ್ಲಿ ರಾವಣ ಮಂತ್ರಿಗಳಾದರೆ, ಆ ಥಂಡಿಯಾಗಿರುವ ಅಗ್ನಿಯನ್ನುಸಹಿಸಲಾರದೆ ಭಯ ಪೀಡಿತರಾಗಲು, ಪ್ರಹಸ್ತನು ರಾವಣನಂ ಕುರಿತು ಜಯಜಯ ಎಂಬ ಶಬ್ದದೊಡನೆ ಈಮಾತು ನುಡಿದನು. ಎಲೈ ರಾಜೇಂದ್ರನೇ!ಈ ಮಂಜಿನಿಂದ ಬಹಳವಾಗಿ ಬಾಧಿಸಲ್ಪಡುತ್ತೇವೆ, ಆದಕಾರಣ ಹಿಂತಿರುಗೋಣ, ಚಂದ್ರಕಿರಣ ತಾಪದಿಂದ ರಾಕ್ಷಸರಾದ ನಮಗೆಲ್ಲ ಬಹು ಭಯವುಂಟಾಗಿದೆ, ಎಲೈ ಒಡೆಯನೇ!

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಾತ್ಮಕಃ ॥ ಏತಚ್ಛ್ರುತ್ವಾಪ್ರಹಸ್ತಸ್ಯ ರಾವಣಃಕ್ರೋಧಮೂರ್ಛಿತಃ । ವಿಷ್ಫಾರ್ಯಧನುರುದ್ಯಮ್ಯ ನಾರಾಚೈಸ್ತಮಪೀಡಯತ್ ॥೧೬೧॥ ಅಥಬ್ರಹ್ಮಾ ಸಮಾಗಮ್ಯಚಂದ್ರಲೋಕಂತ್ವರಾನ್ವಿತಃ । ದಶಗ್ರೀವಮಹಾಬಾಹೋಸಾಕ್ಷಾದ್ವಿಶ್ರವಸಸ್ಸುತ ॥ ಗಚ್ಛ ಶೀಘ್ರಮಿತಸ್ಸೌಮ್ಯಮಾಚಂದ್ರಂಪೀಡಯಾಶುಗೈಃ ॥೧೬೨॥ ಲೋಕಸ್ಯಹಿತಕಾಮೋಯಂದ್ವಿಜರಾಜೋಮಹಾದ್ಯುತಿಃ ॥೧೬೪॥ ಮಂತ್ರಂಚತೆಪ್ರದಾಸ್ಯಾಮಿಪ್ರಾಣಾತ್ಯಯಭಯೆಭಯಮ್ । ಯಸ್ತ್ವಿದಂಸಂಸ್ಮರೆನ್ಮಂತ್ರಂನಸಮೃತ್ಯುಮವಾಪ್ನುಯಾತ್ । ಏವಮುಕ್ತೋದಶಗ್ರೀವಃಪ್ರಾಂಜಲಿರ್ವಾಕ್ಯಮಬ್ರವೀತ್ । ಯದಿತುಷ್ಟೋಸಿಮೆದೇವಅನುಗ್ರಾಹ್ಯೋಯದಿಹ್ಯಹಮ್ । ಯದಿಮಂತ್ರಶ್ಚ ರೋದೆಯೋದೀಯತಾಂಮಮಧಾರ್ಮಿಕ। ಯಂಜಪ್ತ್ವಾಹಂಮಹಾಭಾಗಸರ್ವದೇವೇಷುನಿರ್ಭಯಃ॥ಅಮರೇಷುಚಸರ್ವೇಷುದಾನವೇಷುಪತತ್ರಿಷು।ತ್ವತ್ಪ್ರಸಾದಾತ್ತುದೇವೇಶನಭಯಂವಿದ್ಯತೆಮಮ ॥ಏವಮುಕ್ತೋ

---

ಪ್ರಹಸ್ತಸ್ಯ-ಪ್ರಹಸ್ತನ, ಎತತ್-ಈ ವಚನವನ್ನು, ಶೃತ್ವಾ-ಕೇಳಿ, ರಾವಣಃ-ರಾವಣನು, ಕ್ರೋಧಮೂರ್ಛಿತಃ-ಕ್ರೋಧದಿಂದ ವ್ಯಾಪ್ತನಾಗಿ, ಧನುಃ-ಧನುಸ್ಸನ್ನು, ಉದ್ಯಮ್ಯ-ಯತ್ತಿಕೊಂಡು, ವಿಷ್ಫಾರ್ಯ-ಟಂಕಾರಮಾಡಿ, ನಾರಾಚೈಃ-ಬಾಣಗಳಿಂದ, ತಂ-ಆ ಚಂದ್ರನನ್ನು ಅಪೀಡಯತ್- ಬಾಧೆಗೊಳಿಸಿದನು ॥ ೧೬೦ ॥ ಅಥ-ಬಳಿಕ, ಬ್ರಹ್ಮಾ-ಚತುರ್ಮುಖ ಬ್ರಹ್ಮನು, ತ್ವರಾನ್ವಿತಃ-ವೇಗದಿಂದ ಕೂಡಿಕೊಂಡಿರುವನಾಗಿ, ಚಂದ್ರಲೋಕಂ- ಚಂದ್ರಲೋಕವನ್ನು ಕುರಿತು, ಸಮಾಗಮ್ಯ-ಬಂದು, ಹೆ ಮಹಾಬಾಹೋ-ಎಲೈ ಭುಜಪರಾಕ್ರಮ ಶಾಲಿಯೆ, ಹೆ ದಶಗ್ರೀವ-ಎಲೈ ದಶಕಂಠನೆ, ಹೆಸಾಕ್ಷಾದ್ವಿಶ್ರವಸಸ್ಸುತ-ಎಲೈ ವಿಶ್ರವಸ್ಸನ ಕುಮಾರನೆ, ಹೆ ಸೌಮ್ಯ, ಎಲೈ ಪ್ರಸನ್ನನೆ, ಚಂದ್ರಂ-ಚಂದ್ರನನ್ನು, ಆಶುಗೈಃ-ಬಾಣಗಳಿಂದ, ಮಾಪೀಡಯ – ಬಾಧಿಸಬ್ಯಾಡ, ಇತಃ-ಇಲ್ಲಿಂದ, ಶೀಘ್ರಂ-ಜಾಗ್ರತೆಯಾಗಿ, ಗಚ್ಛ-ಹೋಗು ॥ ೧೬೩ ॥ ಮಹಾದ್ಯುತಿಃ-ಮಹಾಪ್ರಕಾಶ ವಂತನಾದ, ಅಯಂದ್ವಿಜರಾಜಃ-ಈ ಚಂದ್ರನು, ಲೋಕಸ್ಯ-ಲೋಕಕ್ಕೆ, ಹಿತಕಾಮಃ-ಇಷ್ಟವನ್ನು ಕೋರುವನು ॥೧೬೪॥ ಪ್ರಾಣಾತ್ಯಯಭಯೆ-ಪ್ರಾಣ-ಪ್ರಾಣಗಳಿಗೆ,ಅತ್ಯಯ-ನಾಶದದೆಸೆಯಿಂದ, ಭಯೆ-ಭಯಕಾಲದಲ್ಲಿ, ಅಭಯಂ-ಭಯಪರಿಹಾರಕವಾದ, ಮಂತ್ರಂಚ-ಮಂತ್ರವನ್ನೂಕೂಡ, ತೆ-ನಿನಗೆ, ಪ್ರದಾಸ್ಯಾಮಿ-ಉಪದೇಶ ಮಾಡುವೆನು ಯಸ್ತು-ಯಾವ ಪುರುಷನಾದರೆ, ಇದಂ-ಮಂತ್ರಂ-ಈ ಮಂತ್ರವನ್ನು, ಸಂಸ್ಮರೆತ್-ಪುನಶ್ಚರ‍್ಯ ಮಾಡುವನೊ, ಸಃ-ಆ ಪುರುಷನು, ಮೃತ್ಯುಂ-ಮರಣವನ್ನು, ನಾವಾಪ್ನುಯಾತ್-ಹೊಂದಲಾರನು ॥೧೬೫ ॥ ಎವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ದಶಗ್ರೀವಃ-ರಾವಣನು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ವಾಕ್ಯಂ-ವಚನವನ್ನು, ಅಬ್ರವೀತ್-ನುಡಿದನು, ಹೆದೇವ-ಎಲೈ ಸ್ವಾಮಿಯೆ, ಮೆ-ನನಿಗೆ, ತುಷ್ಟೋಸಿಯದಿ, ಸಂತುಷ್ಟ ನಾದವನಾದರೆ, ಅಹಂ-ನಾನು, ಅನುಗ್ರಾಹ್ಯೋಯದಿ-ಅನುಗ್ರಹಿಸ ತಕ್ಕವನಾದರೆ, ಹೆ ಧಾರ್ಮಿಕ-ಎಲೈ ಧರ್ಮಿಷ್ಠನೆ, ಹೆಮಹಾಭಾಗ-ಎಲೈ ಪುಣ್ಯವಂತನೆ, ಅಹಂ-ನಾನು, ಯಂ-ಯಾವಮಂತ್ರವನ್ನು, ಜಪ್ತ್ವಾ-ಜಪಮಾಡಿ, ಸರ್ವದೇವೇಷು-ಸಮಸ್ತದೇವತಾ ಯೋನಿಗಳಲ್ಲಿ, ನಿರ್ಭಯಃ-ಭಯರಹಿತನು, ಭವೆಯಂ-ಆಗುವೆನೋ, ಸಃ-ಮಂತ್ರಶ್ಚರಃ-ಆಮಂತ್ರ ಶ್ರೇಷ್ಠವು, ಮಮ-ನನಿಗೆ, ದೆಯೋಯದಿ-ಕೊಡತಕ್ಕದ್ದಾದರೆ, ದೀಯ್ಯತಾಂ-ಕೊಡಲ್ಪಡಲಿ ॥ ೧೬೭ ॥ಹೆ ದೇವೇಶ-ಎಲೈ ದೇವತೆಗಳಿಗೆಲ್ಲಾ ಅಧಿಪತಿಯೆ, ತ್ವತ್ಪ್ರಸಾದಾತ್-ನಿನ್ನ ಅನುಗ್ರಹದ ದೆಸೆಯಿಂದ, ಮಮ-ನನಿಗೆ, ಸರ್ವೇಷು-ಸಮಸ್ತರಾದ, ಅಮರೇಷು-ದೇವತೆಗಳಲ್ಲಿ, ದಾನವೇಷು-ರಾಕ್ಷಸರಲ್ಲಿ, ಪತತ್ರಿಷುಚ-ಪಕ್ಷಿಗಳಲ್ಲಿಯೂಕೂಡಾ,ಭಯಂ-ಭಯವು, ನ-ಇಲ್ಲಾ ॥೧೬೮ ॥ ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಬ್ರ

---

ಈ ಚಂದ್ರನು ತನ್ನ ಕಾಂತಿಯಿಂದ ಅಗ್ನಿ ಸ್ವರೂಪವಾಗಿಧಾನಪ್ಪೆ ? ಎಂಬದಾಗಿ ನುಡಿಯುತ್ತಿರುವ ಪ್ರಹಸ್ತನ ಮಾತಂ ಕೇಳಿ ರಾವಣನು ಕೋಪೋದ್ರೇಕಮುಳ್ಳವನಾಗಿ, ಕೋದಂಡವಂ ತೆಗದು ಕೊಂಡು ಟಂಕಾರವಂಗೈದು ನಿಡಿಗೋಲುಗಳಿಂದ ಆ ಚಂದ್ರನಂ ಪೀಡಿಸಿದನು. ॥೧೬೧॥ ಆ ಸಮಯದಲ್ಲಿ ಸಾಕ್ಷಾತ ಚತುರ್ಮುಖ ಬ್ರಹ್ಮನು ಬಹು ತ್ವರೆಯುಳ್ಳವನಾಗಿ ಚಂದ್ರ ಲೋಕವಂ ಕುರಿತು ಬಂದು ಇಂತೆಂದನು. ಮಹಾ ಪರಾಕ್ರಮ ಶಾಲಿಯಾದ ದಶಕಂಠಗಳುಳ್ಳ ಮತ್ತೂ ವಿಶ್ರವಸ್ಸಿನ ಕುಮಾರನಾದ ಎಲೈ ರಾವಣನೇ! ಜಾಗ್ರತೆಯಾಗಿ ಮುಂದಕ್ಕೆ ತೆರಳು. ಸರಳುಗಳಿಂದ ಈ ಚಂದಿರನನ್ನು ಪೀಡಿಸಬ್ಯಾಡ. ॥೧೬೨॥ ಕಡು ಕಾಂತಿಯುಳ್ಳ ಈ ಚಂದ್ರನು ಲೋಕಹಿತಕರನಾಗಿರುವನು, ಆದರೆ ನಿನಿಗೊಂದು ಮಂತ್ರವನ್ನುಪದೇಶಿಸುವೆನು ಕೇಳು. ಪ್ರಾಣ ಭೀತಿಯುಂಟಾದ ಕಾಲದಲ್ಲಿ ಯಾವ ಪುರುಷನೀ ಮಂತ್ರವಂ ಸ್ಮರಿಸುವನೋ, ಅವನು ಮೃತ್ಯುವಿನನ್ನು ಹೊಂದುವದಿಲ್ಲ ಎಂಬದಾಗಿ ಬ್ರಹ್ಮನಿಂದ ನುಡಿಯಲ್ಪಟ್ಟ ಆ ದಶಕಂಠನು ಅಂಜಲಿಬದ್ಧನಾಗಿಂತೆಂದನು. ಎಲೈ ಸ್ವಾಮಿಯೇ! ನನ್ನ ವಿಷಯದಲ್ಲಿ ನೀನು ಸಂತುಷ್ಟನಾದವನಾದರೂ ಸರಿಯೇ, ಅಥವಾ ನಾನು ಅನುಗ್ರಹಿಸುವದಕ್ಕೆ ಅರ್ಹನಾದವನಾದರೂ ಸರಿಯೇ, ಹಾಗಲ್ಲದಿದ್ದರೆ ಈ ಮಂತ್ರೋತ್ತಮವು ನನಿಗೆ ಕೊಡತಕ್ಕದ್ದಾಗಿದ್ದರೂ ಸರಿಯೇ, ಹ್ಯಾಗಾದರೂ ನನಿಗೆ ಆ ಮಂತ್ರೋಪದೇಶವಂ ಗೈಯ್ಯು, ಎಲೈ ಧರ್ಮಿಷ್ಠನೇ! ಯಾವ ಮಂತ್ರವಂ ಜಪಿಸಿದರೆ ದೇವ, ದಾನವ, ಯಕ್ಷ, ಪಕ್ಷಿಗಳಲ್ಲಿಯೂ ಕೂಡಾ ಎನಗೆ ಭಯವಿಲ್ಲದಿರುವದೋ, ಎಲೈ ದೇವೋತ್ತಮನೇ! ಅಂಥಾ ಮಂತ್ರವನ್ನು ನಿನ್ನನುಗ್ರಹದಿಂದ ಪಡದು ನಿರ್ಭೀತನಾಗಿರುವೆನೆಂದು ರಾವಣನು ಬ್ರಹ್ಮನಂಕುರಿತು ಬೇಡಲೂ, ಚತುರಾನನನೀವಚನವಂ ನುಡಿದನು, ಎಲೈರಾಕ್ಷಸೋತ್ತಮನೆ ! ಪ್ರಾಣನಾಶಕಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದಶಗ್ರೀವಂಬ್ರಹ್ಮಾವಚನಮಬ್ರವೀತ್ । ಪ್ರಾಣಾತ್ಯಯೇತುವೈದದ್ಮಿ ನನಿತ್ಯಂರಾಕ್ಷಸಾಧಿಪ ॥೧೧೯॥ ಅಕ್ಷಸೂತ್ರಂಗೃಹೀತ್ವಾತುಜಪೇನ್ಮಂತ್ರಮಿದಂಶುಭಮ್ । ಅಜಪ್ತ್ವಾರಾಕ್ಷಸಶ್ರೇಷ್ಠ ನತೇಸಿದ್ಧಿರ್ಭವಿಷ್ಯತಿ ॥ ೧೨೦ ॥ ಶೃಣುಮಂತ್ರಂಪ್ರವಕ್ಷ್ಯಾಮಿಶುದ್ಧಂರಾಕ್ಷಸಪುಂಗವ । ಮಂತ್ರಸ್ಯಕೀರ್ತನಾದೇವಪ್ರಾಪ್ಸ್ಯಸೇಸಮರೇಜಯಮ್ ॥೧೨೧॥ ನಮಸ್ತೇದೇವದೇವೇಶಸುರಾಸುರನಮಸ್ಕೃತ । ಭೂತಭವ್ಯಮಹಾದೇವಹರಪಿಂಗಳಲೋಚನ ॥ ಬಾಲಸ್ತ್ವಂವೃದ್ಧರೂಪೀಚವೈಯಾಘ್ರವಸನಚ್ಛದಃ । ಆರುಣೇಯೋಸಿದೇವತ್ವಂತ್ರೈಲೋಕ್ಯಪ್ರಭುರೀಶ್ವರಃ । ೧೨೩ ॥ ಹರೋಹರಿತನೇಮಿಸ್ತ್ವಂಯುಗಾಂತದಹನೋನಲಃ । ಗಣೇಶೋಲೋಕಶಂಭುಶ್ಚ ಲೋಕಪಾಲೋಮಹಾಭುಜಃ ॥ ೧೨೪ ॥ ಮಹಾದೇವೋಮಹಾಶೂಲೀಮಹಾದಂಷ್ಟ್ರೋಮಹಾಭುಜಃ । ಕಾಲಶ್ಚ ಕಾಲರೂಪೀಚನೀಲಗ್ರೀವೋಮಹೋದರಃ ॥೧೨೫॥ ವೇದಾಂತಗೋವೇದಮಯಃಪಶೂನಾಂಪತಿರವ್ಯಯಃ ।

---

ಹ್ಮಾ–ಚತುರ್ಮುಖ ಬ್ರಹ್ಮನು, ದಶಗ್ರೀವಂ–ರಾವಣನನ್ನು ಕುರಿತು, ವಚನಂ–ವಾಕ್ಯವನ್ನು, ಅಬ್ರವೀತ್–ನುಡಿದನು, ಹೆ ರಾಕ್ಷಸಾಧಿಪ–ಎಲೈ ರಾಕ್ಷಸಾಧಿಪತಿಯೆ, ಪ್ರಾಣಾತ್ಯಯೆ, ಪ್ರಾಣನಾಶಕಾಲದಲ್ಲಿ, ದದ್ಮಿ–ಕೊಡುತ್ತೇನೆ, ನಿತ್ಯಂ–ನಿರಂತರವೂ, ನದದ್ಮಿ–ಕೊಡೊಡಿಲ್ಲಾ ॥೧೧೯॥ ಹೆ ರಾಕ್ಷಸಶ್ರೇಷ್ಠ–ಎಲೈ ರಾಕ್ಷಸಶ್ರೇಷ್ಠನೆ, ಅಕ್ಷಸೂತ್ರಂ–ಅಕ್ಷಮಾಲಿಕೆಯನ್ನು, ಗೃಹೀತ್ವಾತು–ಕೈಯಲ್ಲಿಧರಿಸಿ, ಶುಭಂ–ಶುಭಕರವಾದ, ಇದಂಮಂತ್ರಂ–ಈಮಂತ್ರವನ್ನು, ಜಪೇತ್–ಜಪಿಸತಕ್ಕದ್ದು, ಅಜಪ್ತ್ವಾ–ಜಪಮಾಡದೆ,ತೆ–ನಿನಗೆ, ಸಿದ್ಧಿಃ–ಮಂತ್ರಸಾಫಲ್ಯವು, ನಭವಿಷ್ಯತಿ–ಆಗಲಾರದು ॥೧೨೦॥ ಹೆ ರಾಕ್ಷಸಪುಂಗವ–ಎಲೈ ರಾಕ್ಷಸಶ್ರೇಷ್ಠನೆ, ಶುದ್ಧಂ–ಶುದ್ಧಿಕರವಾದ, ಮಂತ್ರಂ–ಮಂತ್ರವನ್ನು, ಪ್ರವಕ್ಷ್ಯಾಮಿ–ಹೇಳುತ್ತೇನೆ, ಶೃಣು–ಕೇಳು, ಮಂತ್ರಸ್ಯ–ಮಂತ್ರದ, ಕೀರ್ತನಾದೇವ–ಪಠನಮಾತ್ರದಿಂದಲೆ, ಸಮರೆ–ಯುದ್ಧದಲ್ಲಿ, ಜಯಂ–ಜಯವನ್ನು, ಪ್ರಾಪ್ಸ್ಯಸೆ–ಹೊಂದುವಿ ॥೧೨೧॥ ಹೇದೇವದೇವೇಶ–ಎಲೈದೇವತಾಶ್ರೇಷ್ಠನೆ, ಹೆ ಸುರಾಸುರ ನಮಸ್ಕೃತ–ಎಲೈದೇವರಾಕ್ಷಸರಿಂದ ನಮಸ್ಕರಿಸಲ್ಪಟ್ಟವನೆ, ತೆ–ನಿನಗೆ, ನಮಃ–ನಮಸ್ಕಾರವು, ಹೆಭೂತಭವ್ಯ–ಎಲೈ ಭೂತಗಳಿಗೆಲ್ಲಾ ಕ್ಷೇಮಂಕರನೆ, ಹೆಮಹಾದೇವ–ಎಲೈಮಹಾದೇವನೆ, ಹೆಹರ–ಎಲೈಹರನೆ, ಹೆ ಪಿಂಗಳಲೋಚನ–ಕಪಿಲವರ್ಣವಾದನೇತ್ರವುಳ್ಳವನೆ,ತ್ವಂ–ನೀನು,ಬಾಲಃ–ಬಾಲನು,ವೃದ್ಧರೂಪೀಚ–ವೃದ್ಧಸ್ವರೂಪನು,ವೈಯಾಘ್ರವಸನಚ್ಛದಃ, ವ್ಯಾಘ್ರಚರ್ಮವೆ ವಸ್ತ್ರವಾಗಿ ಉಳ್ಳವನು,ಹೆದೇವ–ಎಲೈದೇವನೆ, ತ್ವಂ–ನೀನು, ಆರುಣೇಯಃ–ಅರುಣ ಮಂತ್ರಗಳಿಂದ ಪ್ರತಿಪಾದ್ಯಮಾನನು, ಅಸಿ–ಆಗಿದ್ದೀಯಿ, ತ್ರೈಲೋಕ್ಯಪ್ರಭುಃ–ಲೋಕತ್ರಯಕ್ಕೂ ಸ್ವಾಮಿಯಾದ, ಈಶ್ವರಃ–ನಿಯಾಮಕನು ॥೧೨೨ ॥೧೨೩॥ ಹರಃ–ಸರ್ವಪಾಪಹರನು,ಹರಿತನೇಮಿಃ–ಹರಿತ–ಹಸುರುಬಣ್ಣವುಳ್ಳ, ನೇಮಿಃ–ಡಮರುಗವುಳ್ಳವನು, ತ್ವಂ–ನೀನು,ಯುಗಾಂತದಹನಃ–ಪ್ರಳಯಾಗ್ನಿ ಸ್ವರೂಪನು,ಅನಲಃ–ಅಗ್ನಿಯು,ಗಣೇಶಃ–ಗಣಾಧಿಪತಿಯು, ಲೋಕಶಂಭುಃ–ಲೋಕಕ್ಕೆ ಕ್ಷೇಮಂಕರನು, ಲೋಕಪಾಲಃ–ಲೋಕಪಾಲಕನು, ಮಹಾಭುಜಃ–ಮಹಾಭುಜಗಳುಳ್ಳವನು ॥ ಮಹಾದೇವಃ–ದೇವತೆಗಳೊಳಗೆ ಶ್ರೇಷ್ಠನಾದವನು, ಮಹಾಶೂಲೀ–ದೊಡ್ಡ ಶೂಲಾಯುಧವುಳ್ಳವನು, ಮಹಾದಂಷ್ಟ್ರಃ–ದೊಡ್ಡ ಕೋರೆಹಲ್ಲುಗಳುಳ್ಳವನು, ಮಹಾಭುಜಃ–ದೀರ್ಘಬಾಹುಗಳುಳ್ಳವನು, ಕಾಲಶ್ಚ–ಮಹಾ ಕಾಲಸ್ವರೂಪನು, ಕಾಲರೂಪೀಚ–ಖಂಡಕಾಲಸ್ವರೂಪನು, ನೀಲಗ್ರೀವಃ–ನೀಲಕಂಠನು, ಮಹೋದರಃ–ಬ್ರಹ್ಮಾಂಡೋದರವುಳ್ಳವನು ॥೧೨೫॥ ವೇದಾಂತಃ–ವೇದಾಂತಗಳಿಂದ ಪ್ರತಿಪಾದ್ಯನು, ವೇದಮಯಃ–ಚತುರ್ವೇದಸ್ವರೂಪನು, ಪಶೂನಾಂಪತಿಃ–ದ್ವಿ

---

ಲವಲ್ಲಿ ಜಪಿಸತಕ್ಕದ್ದಾಗಿಯೇಹೊರ್ತು ನಿರಂತರವು ಜಪ ಮಾಡತಕ್ಕದ್ದಾಗಿ ಕೊಡುವದಿಲ್ಲ ॥೧೧೯॥ ಎಲೈ ರಾಕ್ಷಸೋತ್ತಮನೆ ! ರುದ್ರಾಕ್ಷ ಮಾಲಿಕೆಯಂಧರಿಸಿ ಶುಭಕರವಾದ ಈಮಂತ್ರವಂಜಪಿಸತಕ್ಕದ್ದು,ಜಪವಂಗೈಯ್ಯದಿದ್ದರೆ ನಿನಿಗೆ ಸಿದ್ಧಿಯುಂಟಾಗುವದಿಲ್ಲ ॥೧೨೦॥ ಎಲೈ ರಾಕ್ಷಸಶ್ರೇಷ್ಠನೆ ! ಶುದ್ಧವಾದಮಂತ್ರವಂಪೇಳುವೆನು ಕೇಳು, ಆಮಂತ್ರ ಸ್ಮರಣಮಾತ್ರದಿಂದಲೇ ಕಾಳಗದಲ್ಲಿ ಜಯವಂಹೊಂದುವಿ ॥೧೨೧॥ ಅದೆಂತೆನೆ, ದೇವದೇವೋತ್ತಮನಾಗಿಯೂ, ದೇವರಾಕ್ಷಸರಿಂದ ನಮಸ್ಕರಿಸಲ್ಪಟ್ಟವನಾಗಿಯೂ, ಭೂತಗಳಿಗೆಲ್ಲ ಕ್ಷೇಮವನ್ನುಂಟುಮಾಡುತ್ತಿರುವನಾಗಿಯೂ, ಲಯಕರ್ತನಾಗಿಯೂ, ಪಿಂಗಳಬಣ್ಣವಾದ ನೇತ್ರವುಳ್ಳವನಾಗಿಯೂ ಇರುವ ಎಲೈಮಹಾದೇವನೆ ! ನೀನು ಬಾಲನಾಗಿಯೂ ವೃದ್ಧನಾಗಿಯೂ ಹುಲಿಯಚರ್ಮವಂ ಧರಿಸಿದವನಾಗಿಯೂ, ಅರುಣಮಂತ್ರಗಳಿಂದ ಪ್ರತಿಪಾದ್ಯಮಾನನಾಗಿಯೂ ಲೋಕತ್ರಯಕ್ಕೂ ಕೂಡಾ ಸ್ವಾಮಿಯಾಗಿರುವನಾಗಿಯೂ, ನಿಯಾಮಕನಾಗಿಯೂ ಇರುವನಾಗಿದ್ದೀ ॥೧೨೨॥೧೨೩॥ ಮತ್ತು ನೀನು ಸ್ವಭಕ್ತಜನ ಸರ್ವಪಾಪ ಪರಿಹಾರಕನಾಗಿಯೂ, ಹಸುರುಬಣ್ಣವುಳ್ಳ ಡಮರುಗವುಳ್ಳವನಾಗಿಯೂ, ಪ್ರಳಯಾಗ್ನಿಸ್ವರೂಪನಾಗಿಯೂ, ಅಗ್ನಿಯಾಗಿಯೂ, ಗಣಪತಿಯಾಗಿಯೂ, ಲೋಕಕ್ಷೇಮಂಕರನಾಗಿಯೂ ॥೧೨೪॥ ದೇವತೆಗಳಲ್ಲಿ ಉತ್ತಮನಾದ ದೇವನಾಗಿಯೂ, ದೊಡ್ಡದಾದ ಶೂಲಾಯುಧವಂ ಪಿಡಿದಿರುವನಾಗಿಯೂ, ಮಹಾ ಕೋರೆಹಲ್ಲುಗಳುಳ್ಳವನಾಗಿಯೂ, ದೀರ್ಘವಾದ ಭುಜಗಳುಳ್ಳವನಾಗಿಯೂ, ಮಹಾಕಾಲಸ್ವರೂಪನಾಗಿಯೂ, ಖಂಡ ಕಾಲಸ್ವರೂಪನಾಗಿಯೂ, ನೀಲವಾದ ಕಂಠಮುಳ್ಳವನಾಗಿಯೂ, ಬ್ರಹ್ಮಾಂಡೋದರಮುಳ್ಳವನಾಗಿಯೂ ॥೧೨೫॥ ಉಪನಿಷತ್ಪ್ರತಿಪಾದ್ಯನಾಗಿಯೂ,ಋುಗ್ಯಜುಸ್ಸಾಮಾಥರ್ವಣಗಳೆಂಬ ಚತುರ್ವೇದಸ್ವರೂಪನಾಗಿಯೂ,ದ್ವಿಪಾತ್ಪಶುಗಳೊ ಚ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶೂಲಭೃಚ್ಛೂಲಕೇತುಶ್ಚ ನೇತಾಗೋಪ್ತಾ ಹರಿಶ್ಶಿವಃ॥೧೭೬॥ ಜಟೀಮುಂಡೀಶಿಖಂಡೀಚಲಗುಡೀಚಮಹಾಯಶಾಃ। ಭೂತೇಶ್ವರೋಗಣಾಧ್ಯಕ್ಷಸ್ಸರ್ವಾತ್ಮಾ ಸ್ಸರ್ವಭಾವನಃ ॥೧೭೭॥ ಸರ್ವದಸ್ಸರ್ವಹಾರೀಚಸ್ರಷ್ಟಾಚಗುರುರವ್ಯಯಃ । ಕಮಂಡಲುಧರೋದೇವಃಪಿನಾಕೀಧೂರ್ಜಟಸ್ತಥಾ ॥೧೭೮॥ ಮಾನನೀಯೋರ್ಹಣೀಯಶ್ಚ ಓಂಕಾರಸ್ಸಾಮವೇದಗಃ । ಮೃತ್ಯುಶ್ಚ ಮೃತ್ಯುದೂತಶ್ಚ ಪಾರಿಯಾತ್ರಶ್ಚ ಸುವ್ರತಃ॥೧೭೯॥ ಬ್ರಹ್ಮಚಾರೀಗೃಹೀಯೋಗೀವೀಣಾಪಣವತೂಣವಾನ್। ಅಮರೋದರ್ಶನೀಯಶ್ಚ ಬಾಲಸೂರ್ಯನಿಭಸ್ತಥಾ ॥೧೮೦॥ ಶ್ಮಶಾನಚಾರೀಭಗವಾನುಮಾಪತಿರರಿಂದಮಃ। ಭಗನೇತ್ರಪ್ರಹರ್ತಾಚಪೂಷದಂತನಿ

---

ಪಾತ್ಪಶುಗಳಿಗೂ ಚತುಷ್ಪಾತ್ಪಶುಗಳಿಗೂ ಸಹಾ ಅಧಿಪತಿಯಾದವನು,ಅವ್ಯಯಃ–ನಾಶರಹಿತನು,ಶೂಲಭೃತ್–ಶೂಲಧಾರಿ ಯಾದವನು, ಶೂಲಕೇತುಶ್ಚ–ಶೂಲ ಧ್ವಜವಾಗಿ ಉಳ್ಳವನು, ನೇತಾ–ಜಗತ್ತಿಗೆಲ್ಲಾ ನಾಯಕನು, ಗೋಪ್ತಾ–ಸಂರಕ್ಷಣಕರ್ತನು, ಹರಿಃ–ಸಕಲ ಪಾಪವನು ಹೋಗಲಾಡಿಸುವ ಹರಿಸ್ವರೂಪವನು, ಶಿವಃ–ಶುಭಕರನು ॥೧೭೬॥ ಜಟೀ–ಜಟಾಧಾರಿಯು, ಮುಂಡೀ–ಕೇಶವಿಲ್ಲದ ಶಿರಸುಳ್ಳವನು, ಶಿಖಂಡೀಚ–ಜಟಾಧಾರಿಯಾದವನು, ಲಗುಡೀಚ–ದೊಣ್ಣೆಯೆ ಆಯುಧವಾಗಿ ಉಳ್ಳವನು, ಮಹಾಯಶಾಃ–ಮಹಾ ಕೀರ್ತಿವಂತನು, ಭೂತೇಶ್ವರಃ–ಭೂತಗಳಿಗೆಲ್ಲಾ ನಿಯಾಮಕನು, ಗಣಾಧ್ಯಕ್ಷಃ– ಪ್ರಥಮಗಣಗಳಿಗೆ ಅಧ್ಯಕ್ಷನು, ಸರ್ವಾತ್ಮಾ–ಸರ್ವರಿಗೂ ಚೈತನ್ಯಸ್ವರೂಪನು, ಸರ್ವಭಾವನಃ–ಸರ್ವಸಾಕ್ಷಿ ಯಾದವನು ॥೧೭೭॥ ಸರ್ವದಃ–ಸಮಸ್ತವನ್ನು ಕೊಡುವ, ಸರ್ವಹಾರೀಚ–ಸಮಸ್ತವನ್ನೂ ಪ್ರಳಯಕಾಲದಲ್ಲಿ ಹರಿಸುವ, ಸ್ರಷ್ಟಾಚ–ಸೃಷ್ಟಿಕರ್ತನು, ಅವ್ಯಯಃ–ನಾಶರಹಿತನಾದ, ಗುರುಃ– ಅಜ್ಞಾನಾಂಧಕಾರವನ್ನು ಹೋಗಲಾಡಿಸುವವನು, ಅವ್ಯಯಃ–ನಾಶರಹಿತನು, ಕಮಂಡಲುಧರಃ–ಉದಕಪಾತ್ರೆಯನ್ನು ಧರಿಸಿರುವನು, ದೇವಃ–ದೇವತಾಸ್ವರೂಪನು, ಪಿನಾಕೀ–ಪಿನಾಕವೆಂಬ ಧನುರ್ಧಾರಿಯಾದವನು, ತಥಾ–ಹಾಗೆ, ಧೂರ್ಜಟಿಃ–ಸಮಸ್ತಭಾರವನ್ನು ವಹಿಸಿದನು, ಮಾನನೀಯಃ–ಬಹುಮಾನ ಮಾಡಿಸತಕ್ಕವನು, ಅರ್ಹಣೀಯಶ್ಚ–ಪೂಜಿಸತಕ್ಕವನು, ಓಂಕಾರಃ–ಓಂಕಾರ ಸ್ವರೂಪನು, ಸಾಮವೇದಗಃ–ಸಾಮ ವೇದದಲ್ಲಿ ಪ್ರೇಮವುಳ್ಳವನು, ಮೃತ್ಯುಶ್ಚ–ಪಾಪಿಷ್ಠರಿಗೆ ಯಮಸ್ವರೂಪನು, ಮೃತ್ಯುದೂತಶ್ಚ–ಯಮನೆ ದೂತನಾಗಿ ವುಳ್ಳವನು, ಪಾರಿಯಾತ್ರಃ–ಸರ್ವತ್ರ ಗಮನ ವುಳ್ಳವನು, ಸುವ್ರತಃ–ನಿಯಮವುಳ್ಳವನು,॥ ಬ್ರಹ್ಮಚಾರೀ–ಬ್ರಹ್ಮಜ್ಞಾನವುಳ್ಳವನು, (ಅಥವಾ–ಅನಾದಿ ಬ್ರಹ್ಮಚಾರಿಸ್ವರೂಪನು,) (ಗೃಹೀ–ಗೃಹಸ್ಥನಾದಂಥಾವನು,)ಬ್ರಹ್ಮಾಂಡವೆಂಬ ಗೃಹದಲ್ಲಿ ವಾಸಮಾಡತಕ್ಕ ಚೈತನ್ಯ ಸ್ವರೂಪನು, ಯೋಗೀ–ಜ್ಞಾನ ಯೋಗವುಳ್ಳವನು, ವೀಣಾಪಣವ ತೂಣವಾನ್–ವೀಣಾ–ವೀಣೆಯು, ಪಣವ–ಮದ್ದಳೆಯು ತೂಣವಾನ್–ಬಾಣಗಳಬತ್ತಳಿಕೆಗಳುನ್ನೂ ಉಳ್ಳವನು, ಅಮರಃ–ಮರಣ ಧರ್ಮ ರಹಿತನು, ದರ್ಶನೀಯಶ್ಚ–ವೇದಾಂತಗಳಿಂದದ್ರಷ್ಟವ್ಯ ಪದಾರ್ಥ ಸ್ವರೂಪನು, ತಥಾ–ಹಾಗೆ, ಬಾಲಸೂರ್ಯನಿಭಃ–ಬಾಲಸೂರ್ಯನಿಗೆ ಸಮಾನನಾದವನು॥೧೮೦॥ಶ್ಮಶಾನಚಾರೀ–ಪ್ರಳಯಾಗ್ನಿಯಿಂದ ಜಗತ್ತೆಲ್ಲ ದಗ್ಧನಾಗುತ್ತಿರಲಿಕ್ಕಾಗಿ ಜಗದ್ರೂಪವಾದ ಶ್ಮಶಾನದಲ್ಲಿ ಸಂಚಾರ ಮಾಡುತಿರುವನು, ಭಗವಾನ್–ಷಡ್ಗುಣೈಶ್ವರ್ಯ ಸಂಪನ್ನನು, ಉಮಾಪತಿಃ–ಪಾರ್ವತೀಪತಿಯು, ಅರಿಂದಮಃ–ಶತೃಸಂಹಾರಕನು, ಭಗನೇತ್ರಪ್ರಹರ್ತಾಚ–ಭಗನೆಂಬ ಸೂರ್ಯನ ನೇತ್ರಗಳನ್ನು ಅಪಹರಿಸಿದವನು, ಪೂಷದಂತ ನಿಪಾತನಃ–ಪೂಷಾಯೆಂಬ ಸೂರ್ಯನ

---

ತುಷ್ಪಾತ್ಪಶುಗಳೂ ಎಂಬ ಎರಡುವಿಧವಾದ ಪಶುಪ್ರಾಣಿಗಳಿಗೆ ಅಧಿಪತಿಯಾಗಿಯೂ, ನಾಶರಹಿತನಾಗಿಯೂ, ಶೂಲಾಯುಧ ಧಾರಿಯಾಗಿಯೂ, ಶೂಲವೇ ಧ್ವಜವಾಗುಳ್ಳವನಾಗಿಯೂ, ಜಗನ್ನಾಯಕನಾಗಿಯೂ, ಸಂರಕ್ಷಣ ಕರ್ತನಾಗಿಯೂ, ಸಕಲಪಾಪ ಪರಿಹಾರಕನಾದ ಹರಿಸ್ವರೂಪನಾಗಿಯೂ, ಶುಭಕರನಾಗಿಯೂ ॥೧೭೬॥ ಜಟಾಧಾರಿಯಾಗಿಯೂ, ಕೇಶಗಳಿಲ್ಲದ ಶಿರಸ್ಸುಳ್ಳವನಾಗಿಯೂ, ಜಟಾರೂಪವಾದ ಕೇಶಗಳುಳ್ಳವನಾಗಿಯೂ, ದೊಣ್ಣೆಯೇ ಆಯುಧವಾಗುಳ್ಳವನಾಗಿಯೂ, ಮಹಾಕೀರ್ತಿವಂತನಾಗಿಯೂ, ಭೂತಗಳಿಗೆಲ್ಲ ಅಧಿಪತಿಯಾದವನಾಗಿಯೂ, ಪ್ರಮಥಗಣಗಳಿಗಧ್ಯಕ್ಷನಾಗಿಯೂ, ಸರ್ವಚೈತನ್ಯಸ್ವರೂಪನಾಗಿಯೂ, ಸರ್ವಸಾಕ್ಷಿಯಾದವನಾಗಿಯೂ, ॥೧೭೭ ॥ ಸಮಸ್ತವನ್ನು ಕೊಡುತಿರುವನಾಗಿಯೂ, ಸರ್ವವನ್ನು ಪ್ರಳಯಕಾಲದಲ್ಲಿ ಹರಿಸುವವನಾಗಿಯೂ, ಬ್ರಹ್ಮಮುಖವಾಗಿ ಪ್ರಪಂಚವನ್ನೆಲ್ಲಾ ಸೃಜಿಸುತಿರುವನಾಗಿಯೂ, ಅಜ್ಞಾನಾಂಧಕಾರನಿವೃತ್ತಿ ಕರನಾಗಿಯೂ, ನಾಶರಹಿತನಾಗಿಯೂ, ಕಮಂಡಲು ಧಾರಿಯಾಗಿಯೂ, ದೇವತಾಸ್ವರೂಪನಾಗಿಯೂ, ಪಿನಾಕವೆಂಬ ಧನುಸ್ಸನ್ನು ಪಿಡಿದಿರುವನಾಗಿಯೂ, ಸಮಸ್ತಭಾರವನ್ನು ವಹಿಸುವ ಮಂಡೆಯುಳ್ಳವನಾಗಿಯೂ ॥೧೭೮॥ ಮಾನಿಸುವದಕ್ಕೆ ಅರ್ಹನಾಗಿಯೂ, ಪೂಜಿಸತಕ್ಕವನಾಗಿಯೂ, ಓಂಕಾರಸ್ವರೂಪನಾಗಿಯೂ, ಸಾಮಗಾನದಲ್ಲಿ ಪ್ರೀತಿಯುಳ್ಳವನಾಗಿಯೂ, ಪಾಪಿಗಳಿಗೆ ಯಮರೂಪಮಾಗಿರುವನಾಗಿಯೂ, ಮೃತ್ಯುವೇ ದೂತನಾಗುಳ್ಳವನಾಗಿಯೂ, ಸರ್ವಪ್ರದೇಶಗಳಲ್ಲಿಯೂ ಗಮನಮುಳ್ಳವನಾಗಿಯೂ, ಮಹಾನಿಯಮಮುಳ್ಳವನಾಗಿಯೂ ॥೧೭೯॥ ಅನಾದಿಬ್ರಹ್ಮಚಾರಿಯಾಗಿಯೂ, ಬ್ರಹ್ಮಾಂಡವೆಂಬ ಗೃಹದಲ್ಲಿ ವಾಸಿಸುವ ಚೈತನ್ಯಸ್ವರೂಪನಾಗಿಯೂ, ಜ್ಞಾನಯೋಗಮುಳ್ಳವನಾಗಿಯೂ,ವೀಣೆಯುಮದ್ದಳೆಯು, ಸರಳುಬತ್ತಳಿಕೆಗಳೂಸಹಾವುಳ್ಳವನಾಗಿಯೂ, ಮರಣಧರ್ಮರಹಿತನಾಗಿಯೂ, ವೇದಾಂತೈಕವೇದ್ಯನಾಗಿಯೂ,ಬಾಲಸೂರ್ಯನಿಗೆ ಸಮಾನವಾದ ದೇಹಕಾಂತಿಯುಳ್ಳವನಾಗಿಯೂ ॥೧೮೦॥ ಪ್ರಳಯಾಗ್ನಿದಗ್ಧವಾದ ಜಗದ್ರೂಪಶ್ಮಶಾನದಲ್ಲಿಸಂಚರಿಸುತಿರುವನಾಗಿಯೂ, ಷ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪಾತನಃ ॥೧೮೦॥ ಜ್ವರಹರ್ತಾ ಪಾಶಹಸ್ತಃ ಪ್ರಳಯಃ ಕಾಲ ಏವ ಚ । ಉಲ್ಕಾಮುಖೋಗ್ನಿಕೇತುಶ್ಚ ಮುನಿರ್ದೀಪ್ತೋ ವಿಶಾಂಪತಿಃ ॥೧೮೧॥ ಉನ್ಮಾದಮೋಹನಕರಸ್ಸಮರ್ಥಸ್ತ್ರಿದಶೋತ್ತಮಃ । ವಾಮನೋ ವಾಮದೇವಶ್ಚ ಪ್ರಾಗ್ದಕ್ಷಿಣ್ಯಶ್ಚ ನಾಮತಃ ॥ ಭಿಕ್ಷುಶ್ಚ ಭಿಕ್ಷುರೂಪೀ ಚ ತ್ರಿಜಟೀ ಜಟಿಲಸ್ಸ್ವಯಂ । ಚಕ್ರಹಸ್ತಃ ಪ್ರತಿಷ್ಟಂಭೀ ಚಮೂನಾಂ ಸ್ತಂಭನಸ್ತಥಾ ॥೧೮೨॥ ಋತುರೃತುಕರಃ ಕಾಲೋ ಮಧುರ್ಮಧುರಲೋಚನಃ ॥ ವಾನಸ್ಪತ್ಯಶ್ಶ್ರೀಕರಶ್ಚ ನಿತ್ಯಮಾಶ್ರಿತಪೂಜಿತಃ ॥೧೮೩॥ ಜಗದ್ಧಾತಾ ಚ ಕರ್ತಾ ಚ ಪುರುಷಶ್ಶಾಶ್ವತೋಽಜಃ । ಧರ್ಮಾಧ್ಯಕ್ಷೋ ವಿರೂಪಾಕ್ಷಸ್ತ್ರಿವರ್ತ್ಮಾ ಭೂತಭಾವನಃ ॥೧೮೪॥ ತ್ರಿಣೇ

---

ದಂತಗಳನ್ನು ಹೋಗಲಾಡಿಸಿದವನು, ॥೧೮೦॥ ಜ್ವರಹರ್ತಾ-ಜ್ವರರೋಗವನ್ನು ಹರಿಸುವವನು ಪಾಶಹಸ್ತಃ-ಕಾಲಪಾಶಹಸ್ತದಲ್ಲಿ ಉಳ್ಳವನು, ಪ್ರಳಯಃ ಕಾಲ ಏವಚ-ಪ್ರಳಯಕಾಲ ಸ್ವರೂಪನು,ಉಲ್ಕಾಮುಖಃ-ಕೊಳ್ಳಿಗೆ ಸಮಾನವಾದ ಫಾಲನೇತ್ರವೇ ಮುಖದಲ್ಲಿ ಉಳ್ಳವನು, ಅಗ್ನಿಕೇತುಶ್ಚ-ಅಗ್ನಿಯೇ ಧ್ವಜವಾಗಿ ಉಳ್ಳವನು, ಮುನಿಃ-ಮನನ ಶೀಲನು,ದೀಪ್ತಃ-ಸ್ವಯಂಪ್ರಕಾಶನು,ವಿಶಾಂಪತಿಃ-ಪ್ರಜಗಳಿಗೆಲ್ಲಾ ಅಧಿಪತಿಯಾದವನು ॥೧೮೧॥ ಉನ್ಮಾದಮೋಹನಕರಃ-ಮದೋದ್ರೇಕದಿಂದ ಮೋಹವನ್ನುಂಟುಮಾಡುವನು,ಸಮರ್ಥಃ-ಸರ್ವವಿಷಯದಲ್ಲಿ ಸಾಮರ್ಥ್ಯವುಳ್ಳವನು, ತ್ರಿದಶೋತ್ತಮಃ-ದೇವತಾಶ್ರೇಷ್ಠನು, ವಾಮನಃ-ಸುಂದರನಾದಂಥಾವನು, ವಾಮದೇವಶ್ಚ-ಯಲ್ಲಾ ಕಾಲಗಳಲ್ಲಿ ವಾಮಪಾರ್ಶ್ವವರ್ತಿಗಳಾದ ದೇವತೆಗಳುಳ್ಳವನು, ನಾಮತಃ-ಹೆಸರಿನಿಂದ, ಪ್ರಾಕ್ ದಕ್ಷಿಣ್ಯಃ-ಪ್ರಾಙ್ಮುಖನು, ದಕ್ಷಿಣಮುಖನೂ ಎಂಬ ಹೆಸರುಳ್ಳವನು॥೧೮೨॥ ಭಿಕ್ಷುಶ್ಚ-ಕಪಾಲಭಿಕ್ಷೆಮಾಡಿದವನು, ಭಿಕ್ಷುರೂಪೀಚ-ಸನ್ಯಾಸಸ್ವರೂಪನಾದವನು, ತ್ರಿಜಟೀ-ಮೂರು ಜಡೆಯುಳ್ಳವನು, ಜಟಿಲಃ-ಜಟಾಜೂಟವುಳ್ಳವನು, ಸ್ವಯಂ-ತಾನೆ, ಚಕ್ರಹಸ್ತಃ-ಚಕ್ರವೇ ಹಸ್ತದಲ್ಲಿ ವುಳ್ಳವನು,( ಯದ್ವಾ ಚಕ್ರಹಸ್ತಃ-ವಿಷ್ಣುಸ್ವರೂಪನು, ಪ್ರತಿಷ್ಟಂಭೀಚ-ಸ್ತಂಭನಾಖ್ಯವ್ಯಾಪಾರ ಮಾಡುವನು, ಚಮೂನಾಂ-ಸೇನೆಗಳಿಗೆ, ಸ್ತಂಭನಃ-ಸ್ತಂಭನಾಖ್ಯಚೇಷ್ಟೆಯನ್ನುಂಟುಮಾಡುವನು, ತಥಾ-ಹಾಗೆ, ಋತುಃ-ಷಡೃತುಸ್ವರೂಪನು, ಋತುಕರಃ-ಷಡೃತು ಧರ್ಮಗಳನ್ನ ದಿಸತಕ್ಕವನು,ಕಾಲೋಮಧುಃ-ವಸಂತಕಾಲ ಸ್ವರೂಪನು, ಮಧುರಲೋಚನಃ-ಜಗತ್ತಿಗೆಲ್ಲಾ ತಾಪಶಾಂತಿಕರವಾದ ನೇತ್ರಗಳುಳ್ಳವನು, ವಾನಸ್ಪತ್ಯಃ-ಸುಖಕರರಿಗೆಲ್ಲ ಅಧಿಪತಿಯಾದವನು, ಶ್ರೀಕರಃ-ಸಂಪತ್ತನ್ನುಂಟುಮಾಡುವನು, ನಿತ್ಯಂ-ನಿರಂತರವು, ಆಶ್ರಿತಪೂಜಿತಃ – ಆಶ್ರಿತರಿಂದ ಪೂಜಿಸಲ್ಪಟ್ಟವನು, ॥ ೧೮೩ ॥ ಜಗದ್ಧಾತಾ-ಜಗತ್ತನ್ನು ಧರಿಸಿರುವನು, ಕರ್ತಾಚ-ಜಗತ್ಕರ್ತನಾದವನು, ಪುರುಷಃ-ಶರೀರದಲ್ಲಿ ಅಂತರ್ಯಾಮಿರೂಪನು, ಶಾಶ್ವತಃ-ನಿತ್ಯವಾಗಿರವನು, ಅಜಃ – ಉತ್ಪತ್ತಿರಹಿತನು, ಧರ್ಮಾಧ್ಯಕ್ಷಃ-ಸಕಲ ಧರ್ಮಗನನ್ನೂ ನೋಡುತಿರುವನು,( ಅಂದರೆ ಸಾಕ್ಷಿಚೈತನ್ಯಸ್ವರೂಪನು, )ವಿರೂಪಾಕ್ಷಃ-ವಿಷಮಗಳಾದ ನೇತ್ರಗಳುಳ್ಳವನು,ತ್ರಿವರ್ತ್ಮಾ-ಭೂತಭವಿಷ್ಯದ್ವರ್ತಮಾನ ಕಾಲಗಳೆಂಬ ಮಾರ್ಗಗಳನ್ನು ತೋರಿಸಿದವನು॥(ಯದ್ವಾ-ತ್ರಿವರ್ತ್ಮಾ-ತ್ರಿ-ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಂಗಳಲ್ಲಿರುವರಿಗೆ ವರ್ತ್ಮಾ-ಸನ್ಮಾರ್ಗಸ್ವರೂಪನು) ಭೂತಭಾವನಃ-ಭೂತಗಳನ್ನೆಲ್ಲಾ ನೋಡುತಿರುವನು ॥೧೮೪॥ ತ್ರಿಣೇತ್ರಃ-ಮೂರುನೇತ್ರಗಳು

---

ಡ್ಗುಣೈಶ್ವರ್ಯಸಂಪನ್ನನಾಗಿಯೂ, ಪಾರ್ವತೀಪತಿಯಾಗಿಯೂ, ಶತ್ರುಶಮನ ಶೀಲನಾಗಿಯೂ, ಭಗನೆಂಬಸೂರ್ಯನ ನೇತ್ರಗಳನ್ನೂ ಪೂಷನೆಂಬ ಸೂರ್ಯನ ದಂತಗಳನ್ನೂ ಸಹಾ ಭಂಜಿಸಿದವನಾಗಿಯೂ ॥೧೮೦॥ ಜ್ವರಾದಿ ರೋಗಪರಿಹಾರಕನಾಗಿಯೂ, ಕಾಲಪಾಶವೇ ಹಸ್ತದಲ್ಲಿ ಉಳ್ಳವನಾಗಿಯೂ, ಪ್ರಳಯಕಾಲಸ್ವರೂಪನಾಗಿಯೂ, ಕೊಳ್ಳಿಗೆ ಸಮಾನವಾದ ಫಾಲನೇತ್ರವೇ ಮುಖದಲ್ಲುಳ್ಳವನಾಗಿಯೂ, ಅಗ್ನಿಯೇ ಧ್ವಜವಾಗುಳ್ಳವನಾಗಿಯೂ, ಮನನಶೀಲನಾಗಿಯೂ, ಸ್ವಯಂ ಪ್ರಕಾಶನಾಗಿಯೂ, ಪ್ರಜಗಳಿಗೆಲ್ಲ ಅಧಿಪತಿಯಾದವನಾಗಿಯೂ ॥೧೮೧॥ ಮದೋದ್ರೇಕದಿಂದ ಮೋಹನವನ್ನುಂಟುಮಾಡುತಿರುವನಾಗಿಯೂ, ಸರ್ವವಿಷಯಗಳಲ್ಲಿ ಶಕ್ತಿಯುಳ್ಳವನಾಗಿಯೂ, ದೇವೋತ್ತಮನಾಗಿಯೂ, ಸುಂದರನಾದವನಾಗಿಯೂ, ಸದಾಕಾಲದಲ್ಲೂ ವಾಮಪಾರ್ಶ್ವವರ್ತಿಗಳಾದ ದೇವತೆಗಳುಳ್ಳವನಾಗಿಯೂ, ಪೂರ್ವಮುಖನು ದಕ್ಷಿಣಮುಖನುಎಂಬ ಹೆಸರುಳ್ಳವನಾಗಿಯೂ ॥೧೮೨॥ ಕಪಾಲ ಭಿಕ್ಷೆಯಂಗೈದವನಾಗಿಯೂ, ಸನ್ಯಾಸಿಯ ರೂಪವಂತಾಳಿದವನಾಗಿಯೂ, ಮೂರು ಜಡೆಗಳುಳ್ಳವನಾಗಿಯೂ, ಜಟಾಜೂಟ ಧಾರಿಯಾಗಿಯೂ, ಚಕ್ರಹಸ್ತನಾದ ವಿಷ್ಣುಸ್ವರೂಪವಾಗಿರುವನಾಗಿಯೂ, ಸ್ತಂಭನಾಖ್ಯ ವ್ಯಾಪಾರಮುಳ್ಳವನಾಗಿಯೂ, ಸೇನೆಗಳನ್ನು ಸ್ತಂಭೀಭೂತವಾಗಿ ಮಾಡುತಿರುವನಾಗಿಯೂ ॥೧೮೩॥ ಷಟ್ ಋತುಸ್ವರೂಪನಾಗಿಯೂ, ವಸಂತಾದಿ ಋತುಗಳನ್ನುಂಟುಮಾಡುತಿರುವನಾಗಿಯೂ, ವಸಂತಕಾಲಸ್ವರೂಪನಾಗಿಯೂ, ಜಗತ್ತಿಗೆಲ್ಲ ತಾಪಶಾಂತಿಕರವಾದ ನೇತ್ರಗಳುಳ್ಳವನಾಗಿಯೂ, ಸುಖಕರರಿಗೆಲ್ಲಾ ಅಧಿಪತಿಯಾದವನಾಗಿಯೂ, ಐಶ್ವರ್ಯವಂ ವೃದ್ಧಿಗೊಳಿಸುತಿರುವನಾಗಿಯೂ, ಸದಾಕಾಲದಲ್ಲಿಯೂ ಆಶ್ರಿತ ಜನರಿಂದ ಪೂಜಿಸಲ್ಪಟ್ಟವನಾಗಿಯೂ ॥೧೮೪॥ ಜಗತ್ತುಗಳನ್ನು ಧರಿಸಿರುವನಾಗಿಯೂ, ಜಗತ್ಕರ್ತನಾಗಿಯೂ, ದೇಹದಲ್ಲಿ ಅಂತರ್ಯಾಮಿ ರೂಪನಾಗಿಯೂ, ನಿತ್ಯನಾಗಿಯೂ, ಉತ್ಪತ್ತಿ ರಹಿತನಾಗಿಯೂ, ಸಾಕ್ಷಿ ಚೈತನ್ಯರೂಪನಾಗಿರುವನಾಗಿಯೂ, ವಿಷಮನೇತ್ರಗಳುಳ್ಳವನಾಗಿಯೂ, ಭೂತ ಭವಿಷ್ಯ ದ್ವರ್ತಮಾನಕಾಲಗಳೆಂಬ ಮೂರು ಮಾರ್ಗಗಳನ್ನು ತೋರಿಸುವವನಾಗಿಯೂ॥೧೮೫॥ಮೂರು ನೇತ್ರಗಳುಳ್ಳವನಾಗಿಯೂ, ಅನೇಕ ನೇತ್ರಗಳುಳ್ಳವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೋ,ಬಹುನೇತ್ರಶ್ಚ ಸೂರ್ಯಾಯುತಸಮಪ್ರಭಃ। ದೇವದೇವೋಧಿದೇವಶ್ಚ ಚಂದ್ರಾಂಕಿತಜಟಸ್ತಥಾ ॥೧೮೭॥ ನರ್ತಕೋಲಾಸಕಶ್ಚೈವಪೂರ್ಣೇಂದುಸದೃಶಾನನಃ। ಸುಬ್ರಹ್ಮಣ್ಯಶ್ಶರಣ್ಯಶ್ಚ ಸರ್ವದೇವಮಯಸ್ತಥಾ ॥೧೮೮॥ ಸರ್ವಭೂತನಿವಾಸಶ್ಚ ಸರ್ವಬಂಧವಿಮೋಚಕಃ ।ಮೋಹನೋವಂಚಕಶ್ಚೈವಸರ್ಪಧಾರೀವರೋತ್ತಮಃ ॥೧೮೯॥ ಪುಷ್ಪದಂತೋವಿಭಾಗಶ್ಚ ಮುಖ್ಯಸ್ಸರ್ವಹರಸ್ತಥಾ ।ಹರಿಶ್ಮಶ್ರುಃಧರಾಧಾರೀಭೀಮೋಭೀಮಪರಾಕ್ರಮಃ॥೧೯೦॥ ಭಕ್ತಾಭೀಷ್ಟಪ್ರದಸ್ಸ್ಥಾಣುಃಪರಮಾತ್ಮಾಸನಾತನಃ । ಮಯಾಪ್ರೋಕ್ತಮಿದಂಪುಣ್ಯಂನಾಮಾಷ್ಟಶತಮುತ್ತಮಂ॥೧೯೧॥ ಜಪ್ಯಮೇತದ್ದಶಗ್ರೀವಕುರ್ಯಾಚ್ಛತ್ರುವಿನಾಶನಮ್ । ದತ್ವಾತುರಾವಣಸ್ಯೇದಂವರಂಸಕಮಲೋದ್ಭವಃ॥ ಪುನರೇವಜಗಾಮಾಶುಬ್ರಹ್ಮಲೋಕಂಸನಾತನಮ್॥೧೯೨॥ ರಾವಣೋಪಿವರಂಲಬ್ಧ್ವಾಪುನರೇವಾಗಮತ್ತದಾ। ನಿವರ್ತಮಾನಸ್ಸಂಹೃಷ್ಟೋರಾವಣಸ್ಸದುರಾತ್ಮವಾನ್ ॥

ಅಧಿಕಪಾಠಸ್ಸಮಾಪ್ತಃ.

---

ಕ್ಷವನು, ಬಹುನೇತ್ರಶ್ಚ-ಸಹಸ್ರಾರು ನೇತ್ರಗಳುಳ್ಳವನು, ಸೂರ್ಯಾಯುತಸಮಪ್ರಭಃ-ಹತ್ತುಸಾವಿರಸೂರ್ಯರಿಗೆ ಸಮಾನಕಾಂತಿಯುಳ್ಳವನು, ದೇವದೇವಃ-ದೇವತೆಗಳೊಡನೆ ಲೀಲೆಯಂಮಾಡುತ್ತಿರುವನು, ಅಧಿದೇವಃ-ಅಧಿದೇವತಾ ಸ್ವರೂಪನು, ತಥಾ-ಹಾಗೆಯೆ, ಚಂದ್ರಾಂಕಿತಜಟಃ – ಚಂದ್ರನಿಂದ ಅಲಂಕರಿಸಲ್ಪಟ್ಟ, ಜಟಃ-ಜಡೆಗಳುಳ್ಳವನು ॥ ೧೮೭ ॥ ನರ್ತಕಃ-ನರ್ತನೆಮಾಡುವನು, ಲಾಸಕಃ-ಲಾಸ್ಯವನ್ನು ಮಾಡುವನು, ಪೂರ್ಣೇಂದುಸದೃಶಾನನಃ-ಪೂರ್ಣಚಂದ್ರನಿಗೆ ಸಮಾನವಾದ ಮುಖವುಳ್ಳವನು, ಸುಬ್ರಹ್ಮಣ್ಯಃ-ಸದ್ಬ್ರಾಹ್ಮಣರಲ್ಲಿ ಪ್ರೇಮವುಳ್ಳವನು, ಶರಣ್ಯಶ್ಚ – ಸರ್ವಲೋಕ ರಕ್ಷಕನಾದವನು, ತಥಾ-ಹಾಗೆ, ಸರ್ವದೇವಮಯಃ-ಸರ್ವದೇವಾತ್ಮಕನಾದಂಥಾವನು ॥ ೧೮೮ ॥ ಸರ್ವಭೂತನಿವಾಸಶ್ಚ – ಸರ್ವಭೂತಗಳಿಗೂ ಆಶ್ರಯಭೂತನು, ಸರ್ವಬಂಧವಿಮೋಚಕಃ-ಸರ್ವಬಂಧಗಳನ್ನು ಬಿಡಿಸುವನು, ಮೋಹನಃ-ಜಗನ್ಮೋಹಕನು, ವಂಚಕಶ್ಚೈವ – ಜಗದ್ವಂಚಕ ನಾದಂಥಾವನು, ಸರ್ಪಧಾರೀ – ಸರ್ಪಭೂಷಣನು, ವರೋತ್ತಮಃ-ಉತ್ತಮೋತ್ತಮನು ॥೧೮೯ ॥ ಪುಷ್ಪದಂತಃ-ಪುಷ್ಪಗಳೋಪಾದಿಯಲ್ಲಿ ದಂತಗಳುಳ್ಳವನು, ವಿಭಾಗಶ್ಚ-ಸ್ಥಾವರ ಜಂಗಮಗಳನ್ನ ವಿಭಾಗಮಾಡಿದವನು, ಮುಖ್ಯಃ-ಶ್ರೇಷ್ಠನಾದವನು, ಸರ್ವಹರಃ-ಸಮಸ್ತಜನಗಳನ್ನು ಅಪಹರಿಸತಕ್ಕವನು,ತಥಾ-ಹಾಗೆಯೆ, ಹರಿಶ್ಮಶ್ರುಃ-ಹಸರುಬಣ್ಣ ಮುಳ್ಳ ಮುಖಕೂದಲುಳ್ಳವನು, ಧರಾಧಾರೀ-ಬೆಟ್ಟಗಳೇ ಆಧಾರವಾಗುಳ್ಳವನು,ಭೀಮಃ-ಶತೃಗಳಿಗೆಲ್ಲಾ ಭಯಂಕರನು, ಭೀಮಪರಾಕ್ರಮಃ-ಭಯಂಕರವಾದಪ್ರತಾಪವುಳ್ಳವನು, ಭಕ್ತಾಭೀಷ್ಟಪ್ರದಃ-ಭಕ್ತರಿಗೆ ಇಷ್ಟಾರ್ಥವನ್ನು ಕೊಡತಕ್ಕವನು, ಸ್ಥಾಣುಃ-ಚಪಲಚಿತ್ತ ವಿಲ್ಲದಿರುವನು, ಪರಮಾತ್ಮಾ– ಪರಮಾತ್ಮಸ್ವರೂಪನು, ಸನಾತನಃ-ಅನಾದಿಸಿದ್ಧನಾದವನು, ॥೧೯೦॥ ಹೇ ದಶಗ್ರೀವ-ಎಲೈ ದಶಕಂಠನೆ, ಮಯಾ-ನನ್ನಿಂದ, ಪ್ರೋಕ್ತಂ-ಹೇಳಲ್ಪಟ್ಟ, ಉತ್ತಮಂ-ಉತ್ತಮವಾದ, ಪುಣ್ಯಂ-ಪುಣ್ಯಕರವಾದ, ಇದಂನಾಮಾಷ್ಟಶತಂ-ಈ ಅಷ್ಟೋತ್ತರ ಶತನಾಮಾವಳಿಯು, ಶತೃವಿನಾಶನಂ-ಶತೃನಾಶಕರವಾದಂಥಾದ್ದು ಏತತ್-ಇದರನ್ನ, ಜಪ್ಯಂಕುರ್ಯಾತ್-ಜಪವಮಾಡತಕ್ಕದ್ದು ॥೧೯೧॥ ಸಕಮಲೋದ್ಭವಃ-ಆ ಚತುರ್ಮುಖ ಬ್ರಹ್ಮನು, ರಾವಣಸ್ಯ-ರಾವಣನಿಗೆ, ಇದಂವರಂ-ಈ ವರವನ್ನು, ದತ್ವಾತು-ಕೊಟ್ಟು-ಸನಾತನಂ-ಅನಾದಿಯಾಗಿರುವ, ಬ್ರಹ್ಮಲೋಕಂ-ಬ್ರಹ್ಮಲೋಕವನ್ನು ಕುರಿತು, ಪುನಃ- ಮತ್ತು, ಆಶು-ಜಾಗ್ರತೆಯಾಗಿ, ಜಗಾಮೈವ-ಹೊರಟುಹೋದನು ॥೧೯೨॥ ತದಾ-ಆ ಕಾಲದಲ್ಲಿ, ರಾವಣೋಪಿ-ರಾವಣನೂನು, ವರಂ-ಇಷ್ಟಾರ್ಥವನ್ನು, ಲಬ್ಧ್ವಾ-ಹೊಂದಿ,

---

ನಾಗಿಯೂ, ಹತ್ತು ಸಾವಿರಸೂರ್ಯರಿಗೆ ಸಮಾನವಾದ ಕಾಂತಿಯುಳ್ಳವನಾಗಿಯೂ, ದೇವತೆಗಳೊಡನೆ ಕ್ರೀಡಿಸುತಿರುವನಾಗಿಯೂ, ಅಧಿ ದೇವತಾಸ್ವರೂಪನಾಗಿಯೂ, ಚಂದ್ರನಿಂದ ಲಂಕೃತವಾದ ಜಡೆಗಳುಳ್ಳವನಾಗಿಯೂ, ॥೧೮೭॥ ನರ್ತನವಂಗೈಯ್ಯುತಿರುವನಾಗಿಯೂ, ನಾಟ್ಯವನ್ನಾಡಿಸುವವನಾಗಿಯೂ, ಪೂರ್ಣಮಾಚಂದ್ರನಿಗೆ ಸದೃಶವಾದಮುಖವುಳ್ಳವನಾಗಿಯೂ, ಸದ್ಬ್ರಾಹ್ಮರಲ್ಲಿ ಪ್ರೇಮವುಳ್ಳವನಾಗಿಯೂ, ಸರ್ವಲೋಕರಕ್ಷಕನಾಗಿಯೂ, ಹಾಗೆಯೆ ಸರ್ವದೇವತಾಸ್ವರೂಪನಾದವನಾಗಿಯೂ ॥೧೮೮॥ ಸರ್ವಭೂತಗಳಿಗೂ ಆಶ್ರಯಭೂತನಾಗಿರುವನಾಗಿಯೂ, ಸರ್ವ ಬಂಧಗಳಿಂದಲೂ ಬಿಡಿಸತಕ್ಕವನಾಗಿಯೂ, ಜಗನ್ಮೋಹಕನಾಗಿಯೂ, ಜಗದ್ವಂಚಕನಾಗಿಯೂ, ನಾಗಭೂಷಣನಾಗಿಯೂ ಉತ್ತಮೋತ್ತಮನಾಗಿಯೂ ॥೧೮೯॥ ಪುಷ್ಪಗಳೋಪಾದಿಯಲ್ಲಿರುವ ದಂತಗಳುಳ್ಳವನಾಗಿಯೂ, ಸ್ಥಾವರ ಜಂಗಮಗಳನ್ನು ವಿಭಾಗಮಾಡಿದವನಾಗಿಯೂ ಶ್ರೇಷ್ಠನಾಗಿಯೂ, ಸಮಸ್ತಜಗತ್ತನ್ನ ಪಹರಿಸತಕ್ಕವನಾಗಿಯೂ, ಹಸುರುಬಣ್ಣವುಳ್ಳ ಕೂದಲುಗಳುಳ್ಳವನಾಗಿಯೂಬೆಟ್ಟಗಳೆ ಆಧಾರವಾಗಿವುಳ್ಳವನಾಗಿಯೂ,ಶತೃಗಳಿಗೆಭಯವನ್ನುಂಟುಮಾಡುವ ಮತ್ತು, ಭಯಂಕರವಾದ ಪರಾಕ್ರಮಉಳ್ಳವ ತನ್ನ ಭಕ್ತರಿಗೆ ಇಷ್ಟಾರ್ಥವನ್ನು ಕೊಡುವನಾಗಿಯೂ, ಚಪಲಚಿತ್ತವಿಲ್ಲದಿರುವನಾಗಿಯೂ, ಪರಮಾತ್ಮಸ್ವರೂಪನಾದವನಾಗಿಯೂ, ಅನಾದಿ ಸಿದ್ಧನಾಗಿಯೂ ಇರುವ ॥೧೯೦॥ ಎಲೈ ರಾವಣನೆ!ನನ್ನಿಂದ ಹೇಳಲ್ಪಟ್ಟ ಉತ್ತಮವಾದ, ಮತ್ತು ಪುಣ್ಯಕರವಾದ, ಈ ಅಷ್ಟೋತ್ತರ ಶತ ನಾಮಗಳು, ಜಪವಂಗೈದರೆ ಶತೃನಾಶನವಾಗುವದೆಂದು ಆಬ್ರಹ್ಮನು ರಾವಣನಿಗುಪದೇಶವಂಗೈದು ಅನಾದಿಯಾಗಿರುವ ಬ್ರಹ್ಮಲೋಕವನ್ನು ಕುರಿತು ಜಾಗ್ರತೆಯಾಗಿ ಹೊರಟು ಹೋದನು ॥೧೯೨॥ ಆ ಕಾಲದಲ್ಲಿ ರಾವಣನೂ ಕೂಡ ವರರೂಪವಾದ, ಇಷ್ಟಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜಹ್ರೇ ಪಥಿ ನರೇಂದ್ರರ್ಷಿದೇವಗಂಧರ್ವಕನ್ಯಕಾಃ ॥೧೯೪॥ ದರ್ಶನೀಯಾಂ ಹಿ ತದ್ರಕ್ಷಃ ಕನ್ಯಾಂ ಸ್ತ್ರೀಂ ವಾನುಪಶ್ಯತಿ । ಹತ್ವಾ ಬಂಧುಜನಂ ತಸ್ಯಾ ವಿಮಾನೇ ತಾಂ ನ್ಯವೇಶಯತ್ ॥೧೯೫॥ ತತ್ರ ಪನ್ನಗಯಕ್ಷಾಣಾಂ ಮಾನುಷಾಣಾಂ ಚ ರಕ್ಷಸಾಮ್ । ದೈತ್ಯಾನಾಂ ದಾನವಾನಾಂ ಚ ಕನ್ಯಾ ಜಗ್ರಾಹ ರಾವಣಃ ॥೧೯೬॥ ತಾಭಿಸ್ಸರ್ವಾನವದ್ಯಾಭಿರ್ನದೀಭಿರಿವ ಸಾಗರಃ । ಆಪೂರ್ಣ ವಿಮಾನಂ ತದ್ಭಯಶೋಕಾಶಿವಾಶ್ರುಭಿಃ ॥೧೯೭॥ ನಾಗಗಂಧರ್ವಕನ್ಯಾಶ್ಚ ರಾಜರ್ಷಿತನಯಾಸ್ತಥಾ । ದೈತ್ಯದಾನವಕನ್ಯಾಶ್ಚ ವಿಮಾನೇ ಶತಶೋರುದನ್ ॥೧೯೮॥ ದೀರ್ಘಕೇಶ್ಯಸ್ಸುಚಾರ್ವಂಗ್ಯಃ ಪೂರ್ಣಚಂದ್ರನಿಭಾನನಾಃ । ಶೋಕಾಯತ್ತಾಸ್ತರುಣ್ಯಶ್ಚ ಸಮಸ್ತಾ ನನನಮ್ರಕಾಃ ॥೧೯೯॥ ತುಲ್ಯಮಗ್ನ್ಯರ್ಚಿಷಾಂ ತತ್ರ ಶೋಕಾಗ್ನಿಭಯಸಂಭವಮ್ । ಪ್ರವೇಪಮಾನಾ ದುಃಖಾರ್ತಾ ಮುಮುಚುರ್ಬಾಷ್ಪಜಂ ಜಲಮ್ ॥೨೦೦॥ ತಾಸಾಂ ನಿಶ್ವಾಸಮಾನಾನಾಂ ನಿಶ್ವಾಸೈಸ್ಸಂಪ್ರದೀಪಿತಮ್ । ಅಗ್ನಿಹೋ

---

ಪುನರೇವ-ಮತ್ತೊಮ್ಮೆ, ಆಗಮತ್-ಹೊರಟು ಬಂದನು ॥೧೯೩॥ ಪಥಿ-ಮಾರ್ಗದಲ್ಲಿ, ನಿವರ್ತಮಾನಃ-ಹಿಂತಿರುಗಿ ಬರುತ್ತಿರುವ, ದುರಾತ್ಮವಾನ್- ದುಷ್ಟಬುದ್ಧಿಯುಳ್ಳ, ಸರಾವಣಃ-ಆ ರಾವಣನು, ನರೇಂದ್ರರ್ಷಿದೇವಗಂಧರ್ವಕನ್ಯಕಾಃ-ರಾಜ, ಋಷಿ, ದೇವ ಗಂಧರ್ವರ, ಕನ್ಯಕೆಯರನ್ನು, ಸಂಹೃಷ್ಟಃ-ಸಂತೋಷಚಿತ್ತನಾಗಿ, ಜಹ್ರೇ-ಅಪಹರಿಸಿದನು ॥೧೯೪॥ ತದ್ರಕ್ಷಃ-ಆ ರಾವಣನು, ದರ್ಶನೀಯಾಂ-ನೋಡತಕ್ಕವಳಾದ, (ಅಂದರೆ ಕಣ್ಣಿಗಿಂಪಾದ) ಕನ್ಯಾಂ-ಅವಿವಾಹಿತ ಸ್ತ್ರೀಯನ್ನಾದರೂ ಸರಿಯೆ, ಸ್ತ್ರೀಂವಾ-ವಿವಾಹಿತಳಾದ ಹೆಂಗಸನ್ನಾದರೂ, ಅನುಪಶ್ಯತಿ-ನೋಡಿದರೆ, ತಸ್ಯಾಃ-ಅವಳ, ಬಂಧುಜನಂ-ಸ್ವಜನವನ್ನು, ಹತ್ವಾ-ಕೊಂದು, ತಾಂ-ಆ ಕನ್ಯಕೆಯನ್ನು, ವಿಮಾನೇ-ವಿಮಾನದಲ್ಲಿ, ನ್ಯವೇಶಯತ್-ಕೂಡಿಸಿ ಕರೆದುಕೊಂಡು ಬಂದನು ॥೧೯೫॥ ತತ್ರ-ಆ ಅಂತರಿಕ್ಷ ಮಾರ್ಗದಲ್ಲಿ, ರಾವಣಃ-ರಾವಣನು, ಪನ್ನಗಯಕ್ಷಾಣಾಂ- ಪನ್ನಗ-ಸರ್ಪಗಳ, ಯಕ್ಷಾಣಾಂ-ಯಕ್ಷರ, ಮಾನುಷಾಣಾಂಚ-ಮನುಷ್ಯರ, ರಕ್ಷಸಾಂ-ರಾಕ್ಷಸರ, ದೈತ್ಯಾನಾಂ-ರಾಕ್ಷಸಜಾತೀಯರ, ದಾನವಾನಾಂ-ದಾನವರೆಂಬ ರಾಕ್ಷಸರ, ಕನ್ಯಾಃ-ಕನ್ಯಕೆಯರನ್ನು, ಜಗ್ರಾಹ-ಗ್ರಹಿಸಿದನು ॥೧೯೬॥ ಭಯಶೋಕಾಶಿವಾಶ್ರುಭಿಃ-ಭಯ-ಭಯದಿಂದಲೂ, ಶೋಕ-ಶೋಕದಿಂದಲೂನೂ, ಅಶಿವ- ಅಮಂಗಳಕರವಾದ, ಅಶ್ರುಭಿಃ - ಕಣ್ಣೀರುಳ್ಳ, ಸರ್ವಾನವದ್ಯಾಭಿಃ- ಸರ್ವ-ಸರ್ವಾವಯವಗಳಲ್ಲಿಯೂ, ಅನವದ್ಯಾಭಿಃ- ದೋಷರಹಿತರಾದ, ತಾಭಿಃ-ಆ ಹೆಂಗಸರಿಂದ, ನದೀಭಿಃ-ನದಿಗಳಿಂದ, ಸಾಗರಇವ-ಸಮುದ್ರದಂತೆ, ತದ್ವಿಮಾನಂ- ಆವಿಮಾನವು, ಆ ಪೂರ್ಣ - ತುಂಬಲ್ಪಟ್ಟಿತು ॥ ೧೯೭ ॥ ನಾಗ ಗಂಧರ್ವ ಕನ್ಯಾಶ್ಚ - ನಾಗ -ಸರ್ಪಗಳ,ಗಂಧರ್ವ-ಗಂಧರ್ವರನ್ನೂ, ಕನ್ಯಾಶ್ಚ -ಕನ್ಯಕೆಯರೂ, ತಥಾ-ಹಾಗೆ, ರಾಜರ್ಷಿತನಯಾಃ- ರಾಜರ್ಷಿಗಳ ಹೆಣ್ಣುಗಳು, ದೈತ್ಯದಾನವಕನ್ಯಾಶ್ಚ - ದೈತ್ಯ-ದೈತ್ಯರ, ದಾನವ - ದಾನವರ, ಕನ್ಯಾಶ್ಚ -ಕನ್ಯಕೆಯರು, ಶತಶಃ-ನೂರಾರುಜನರು, ವಿಮಾನೇ-ವಿಮಾನದಲ್ಲಿ, ಅರುದನ್ - ಘಟ್ಟಿಯಾಗಿ ಅಳುತ್ತಿದ್ದರು ॥ ೧೯೮ ॥ ದೀರ್ಘಕೇಶ್ಯಃ - ದೀರ್ಘವಾದ ಕೂದಲುಗಳುಳ್ಳ, ಸುಚಾರ್ವಂಗ್ಯಃ - ಸುಚಾರು-ರಮ್ಯವಾದ, ಅಂಗ್ಯಃ-ಶರೀರಗಳುಳ್ಳ, ಪೂರ್ಣಚಂದ್ರನಿಭಾನನಾಃ-ಪೂರ್ಣಚಂದ್ರನಿಗೆ ಸಮಾನ ವಾದ ಮುಖಗಳುಳ್ಳ, ಶೋಕಾಯತ್ತಾಃ- ವ್ಯಸನಗೊಂಡಿರುವ, ಸಮಸ್ತಾಃ-ಸಮಸ್ತರಾದ, ತರುಣ್ಯಶ್ಚ -ಯುವ್ವನಸ್ತ್ರೀರುಗಳೂನು, ಆನನ ನಮ್ರಕಾಃ - ಬೊಗ್ಗಿರುವ ಮುಖಗಳುಳ್ಳವರಾಗಿ, ಪ್ರವೇಪಮಾನಾಃ- ನಡುಗುತಿರುವರಾಗಿ, ದುಃಖಾರ್ತಾಃ-ದುಃಖದಿಂದ ದೀನರಾದಕಾರಣ, ಅಗ್ನ್ಯರ್ಚಿಷಾಂ-ಅಗ್ನಿಜ್ವಾಲೆಗಳಿಗೆ, ತುಲ್ಯಂ-ಸಮಾನವಾದ, ಶೋಕಾಗ್ನಿ ಭಯಸಂಭವಂ - ಶೋಕಾಗ್ನಿ- ಶೋಕವೆಂಬ ಅಗ್ನಿಯಿಂದಲೂ, ಭಯ-ಭಯದಿಂದಲೂ, ಸಂಭವಂ-ಹುಟ್ಟಿರುವ, ಬಾಷ್ಪಜಂ-ಕಣ್ಣೀರಿಂದಹುಟ್ಟಿದ, ಜಲಂ-ಜಲವನ್ನು, ತತ್ರ-ಆ ವಿಮಾನದಲ್ಲಿ,ಮುಮುಚುಃ-

---

ರ್ಘವನ್ನು ಹೊಂದಿ, ತಿರಗಿ ಹೊರಟಂಥಾವನಾದನು॥ ೧೯೩ ॥ ಮಾರ್ಗದಲ್ಲಿ ಹಿಂತಿರಗಿ ಬರುತಿರುವ ಕೆಟ್ಟ ಬುದ್ಧಿಯುಳ್ಳ ಆ ರಾವಣನು, ರಾಜ ಋುಷಿದೇವ ಗಂಧರ್ವರ ಮೊದಲಾದವರಕನ್ನೆಯರನ್ನು, ಸಂತೋಷಚಿತ್ತನಾಗಿ ಅಪಹಿಸಿದನು ॥೧೯೪॥ ಆ ರಾವಣನು, ನೋಡುವದಕ್ಕೆ ಮನೋಹರಳಾದ, ವಿವಾಹಿತಳಾದಕನ್ನೆಯನ್ನಾಗಲಿ,ಅವಿವಾಹಿತ ಕನ್ಯಕೆಯನ್ನಾಗಲಿ ನೋಡಿದರೇ, ಅವರಬಂಧುಜನಗಳಂ ಕೊಂದು ಆ ಕನ್ನೆಯರನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡುಕರೆದುಕೊಂಡು ಬಂದನು ॥೧೯೫॥ ಮತ್ತು ಅಂತರಿಕ್ಷಮಾರ್ಗದಲ್ಲಿ ರಾವಣನುಸರ್ಪಗಳು,ಯಕ್ಷರು, ಮನುಷ್ಯರು, ದಾನವರೆಂಬ ರಾಕ್ಷಸರ ಕನ್ಯಕೆಯರೆಲ್ಲರನ್ನು, ಹಿಡಿದುಕೊಂಡನು ॥೧೯೬॥ ಭಯದಿಂದಲೂ,ಅಳುವದರಿಂದಲೂ, ಉಂಟಾಗಿರುವಅಮಂಗಳಕರವಾದ ಕಣ್ಣೀರಿನಿಂದವ್ಯಾಪ್ತರಾದ,ಸರ್ವಾವಯವಗಳಲ್ಲಿಯೂ ದೋಷರಹಿತರಾದ,ಆ ಹೆಂಗಸರಿಂದ, ನದಿಗಳಿಂದ ಸಮುದ್ರದಂತೇ ಆ ವಿಮಾನವು ತುಂಬಲ್ಪಟ್ಟಿತು॥೧೯೭॥ ನಾಗ ಗಂಧರ್ವ ಕನ್ಯಕೆಯರು, ರಾಜರ್ಷಿಪುತ್ರಿಕೆಗಳು, ದೈತ್ಯದಾನವರ ಕುವರಿಗಳೂ ಎಂಬ ಅನೇಕರಾದ ಹುಡಿಗಿಯರು ಅಪುಷ್ಪಕವಿಮಾನದಲ್ಲಿ ಅಳುತಿದ್ದರು॥೧೯೮॥ ಅದೆಂತೆನೆ,—ದೀರ್ಘವಾದ ಕೇಶಗಳುಳ್ಳವರಾಗಿಯೂ, ಸೊಗಸಾದ ಅವಯವಗಳುಳ್ಳವರಾಗಿಯೂ, ಪೂರ್ಣಿಮಾಚಂದ್ರನಿಗೆ ಸಮಾನವಾದ ಮುಖಗಳುಳ್ಳವರಾಗಿಯೂ, ಶೋಕಾಕ್ರಾಂತರಾಗಿರುವರಾಗಿಯೂ, ಜವ್ವನವುಳ್ಳವರಾಗಿಯೂ, ತಲೆ ಬೊಗ್ಗಿಸಿಕೊಂಡಿರುವರಾಗಿಯೂ, ದುಃಖಾಕ್ರಾಂತರಾದಕಾರಣ ಅಗ್ನಿ ಜ್ವಾಲೆಗಳಿಗೆ ಸಮಾನವಾದ ಮತ್ತು ಶೋಕಾಗ್ನಿಯಿಂದ ಹುಟ್ಟಿದ ಕಂಬನಿಗಳಂ ಸುರಿಸುತ್ತಿರುವರಾಗಿಯೂ ಇರುವನಿಟ್ಟುಸುರುಗಳಂ ಬಿಡುತಿರುವ ಆ ಉತ್ತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ರಮಿವಾಭಾತಿಸನ್ನಿರುದ್ಧಂಹಿಪುಷ್ಪಕಮ್॥೨೦೧॥ಕಾಚಿದತ್ರಭಯತ್ರಸ್ತಾ ಕಿನ್ನುಮಾಂಭಕ್ಷಯಿಷ್ಯತಿ । ಕಾಚಿದ್ದಧ್ಯೌಸು ದುಃಖಾರ್ತಾಹನ್ಯಾದಪಿಹಿಮಾಮಯಂ ॥೨೦೨॥ ಸ್ಮೃತ್ವಾಮಾತೃಪಿತೃಭ್ರಾತೄನ್ಪುತ್ರಾನ್ವೈಶ್ವಶುರಾನಪಿ । ದುಃಖ ಶೋಕಸಮಾವಿಷ್ಟಾವಿಲೇಪುಸ್ಸಹಿತಾಃಸ್ತ್ರಿಯಃ॥ಕಥಂನುಖಲುಮೆಪುತ್ರಃಕರಿಷ್ಯತಿಮಯಾವಿನಾ । ಕಥಂಮಾತಾಕಥಂಭ್ರಾತಾನಿಮಗ್ನಾಶ್ಶೋಕಸಾಗರೆ॥೨೦೪॥ಹಾಕಥಂನುಕರಿಷ್ಯಾಮಿಭರ್ತಾರಂದೈವತಂವಿನಾ । ಮೃತ್ಯೋಪ್ರಸೀದಯಾಚೆತ್ವಾಂ ನಯಮಾಂಯಮಸಾದನಮ್ ॥೨೦೫॥ ಕಿನ್ನುಮೆದುಷ್ಕೃತಂಕರ್ಮಕೃತಂದೇಹಾಂತರೆಪುರಾ । ಯತೋಽಸ್ಮಿ ಧರ್ಷಿತಾನೆನ ಪತಿತಾಶೋಕಸಾಗರೆ॥೨೦೬॥ ನಖಲ್ವಿದಾನೀಂಪಶ್ಯಾಮಿದುಃಖಸ್ಯಾಂತಮಹಾತ್ಮನಃ । ಅಹೋಧಿಗಸ್ತು ಜನ್ಮೆದಂನಿಸ್ಸಾರಂಬುದು ದೋಪಮಮ್ ॥೨೦೭॥ಅಹೋಧಿಙ್ಮಾನುಷೆಲೋಕೆನಾಸ್ತಿಧರ್ಮಪರೋಜನಃ। ಅಹೋಧಿಗಸ್ತುಲೋಕಾನಾಂಯೊ

---

ಬಿಟ್ಟರು ॥ ೧೯೯ ॥ ೨೦೦ ॥ ನಿಶ್ವಾಸಮಾನಾನಾಂ – ನಿಟ್ಟುಸುರುಬಿಡುತಿರುವ, ತಾಸಾಂ–ಆ ಹೆಂಗಸರ, ನಿಶ್ವಾಸೈಃ– ನಿಟ್ಟುಸುರುಗಳಿಂದ, ಸಂಪ್ರಪೀಡಿತಂ–ಬಾಧೆಗೊಳಸಲ್ಪಟ್ಟ, ಪುಷ್ಪಕಂ–ಪುಷ್ಪಕವು, ಸನ್ನಿರುದ್ಧಂ–ತಡೆಮಾಡಲ್ಪಟ್ಟ, ಅಗ್ನಿಹೊತ್ರಮಿವ – ಅಗ್ನಿಯಂತೆ, ಆಭಾತಿಃ– ಹೊಳೆಯುತ್ತಿತ್ತಪ್ಪೇ ॥೨೦೧॥ ಅತ್ರ–ಈ ಹೆಣುಮಕ್ಕಳಲ್ಲಿ, ಕಾಚಿತ್– ಒಬ್ಬಾನೊಬ್ಬಳು, ಮಾಂ–ನನ್ನನ್ನು, ಭಕ್ಷಯಿಷ್ಯತಿ ಕಿನ್ನು–ತಿನ್ನುತಾನೆ, ಇತಿ–ಇಂತೆಂದು, ಭಯತ್ರಸ್ತಾ–ಭಯದಿಂದ ಹೆದರಿದಳು, ಕಾಚಿತ್–ಮತ್ತೊಬ್ಬಸ್ತ್ರೀಯು, ಅಯಂ–ಈ ರಾವಣನು,ಮಾಂ–ನನ್ನನ್ನು, ಹನ್ಯಾದಪಿ–ಕೊಲ್ಲುವನೆಂದು, ಸುದುಃಖಾರ್ತಾ–ಬಲುದುಃಖದಿಂದ ದೀನಳಾಗಿ, ದಧ್ಯೌ–ಧ್ಯಾನಿಸಿದಳು॥೨೦೨॥ಸಹಿತಾಃ– ಶೇರಿರುವ, ಸ್ತ್ರಿಯಃ–ಹೆಂಣುಗಳು, ಮಾತೃಪಿತೃಭ್ರಾತೄನ್ – ತಾಯಿತಂದೆ ಅಂಣತಮ್ಮಂದರಗಳನ್ನು, ಪುತ್ರಾನ್– ಮಕ್ಕಳನ್ನು, ಶ್ವಶುರಾನಪಿ –ಮಾವಂದರನ್ನು, ಸ್ಮೃತ್ವಾ–ನೆನಸಿಕೊಂಡು, ದುಃಖಶೋಕ ಸಮಾವಿಷ್ಟಾಃ–ಬಹಳ ಶೋಕದಿಂದ ವ್ಯಾಪ್ತರಾಗಿ, ವಿಲೇಪುಃ–ವಿಲಾಪ ಮಾಡಿದರು. ॥ ೨೦೩ ॥ ಮೆಪುತ್ರಃ– ನನ್ನಮಗನು,ಮಯಾವಿನಾ–ನನ್ನಬಿಟ್ಟು, ಕಥಂನ್ನುಕರಿಷ್ಯತಿಖಲು –ಯೇನುತಾನೆಮಾಡುವನು, ಮಾತಾ–ತಾಯಿ,ಕಥಂ–ಹ್ಯಾಗೆ ಇಥಾಳೊ,ಭ್ರಾತಾ–ಅಂಣನು, ಕಥಂ–ಹ್ಯಾಗೆ ಇಥಾನೊ, ಇತಿ–ಹೀಗೆಂದು, ಶೋಕಸಾಗರೆ–ಶೋಕಸಮುದ್ರದಲ್ಲಿ, ನಿಮಗ್ನಾಃ–ಮುಳುಗಿದರು, ॥೨೦೪॥ ಹಾ–ಕಷ್ಟವು, ದೈವತಂ–ದೆವತಾಸ್ವರೂಪನಾದ, ಭರ್ತಾರಂವಿನಾ–ಗಂಡನಂತೊರದು, ಕಥಂನು ಕರಿಷ್ಯಾಮಿ–ಯೇನು ಮಾಡುವೆನು, ಹೆಮೃತ್ಯೋ–ಎಲೈ ಯಮಸ್ವರೂಪನಾದ ಮೃತ್ಯುವೆ, ಪ್ರಸೀದ– ಪ್ರಸನ್ನನಾಗು, ತ್ವಾಂ–ನಿನ್ನನ್ನು,ಯಾಚೆ–ಬೇಡುತ್ತೇನೆ, ಮಾಂ–ನನ್ನನ್ನು ಯಮಸಾದನಂ–ಯಮನ ಮನೆಯನ್ನು, ನಯ–ಹೊಂದಿಸು॥೨೦೫॥ಮೆ–ನನ್ನ, ಪುರಾ–ಪೂರ್ವದಲ್ಲಿ ದೇಹಾಂತರೆ –ಜನ್ಮಾಂತರದಲ್ಲಿ, ಕಿಂನು ದುಷ್ಕೃತಂ ಕರ್ಮ–ಯೇನು ದುಷ್ಕರ್ಮವು ಕೃತಂ–ಮಾಡಲ್ಪಟ್ಟಿತೋ, ಯತಃ–ಯಾವಕರ್ಮದ ದೆಸೆಯಿಂದ, ಅನೆನ–ಈ ರಾವಣನಿಂದ, ಧರ್ಷಿತಾ–ತಿರಸ್ಕೃತಳಾಗಿ, ಶೋಕಸಾಗರೆ–ದುಃಖಸಮುದ್ರದಲ್ಲಿ, ಪತಿತಾಸ್ಮಿ–ಬಿದ್ದು ಹೋದೆನು ॥೨೦೬॥ ಇದಾನೀಂಖಲು – ಈಗಲಾದರೆ, ಇಹ–ಈ ಜನ್ಮದಲ್ಲಿ, ಆತ್ಮನಃ–ನನಿಗೆ, ದುಃಖಸ್ಯ – ದುಃಖದ, ಅಂತಂ–ಪಾರವನ್ನು, ನಪಶ್ಯಾಮಿ–ನೋಡಲಾರೆನು, ಅಹೋ–ಆಶ್ಚರ್ಯವು, ಇದಂಜನ್ಮ–ಈ ಮನುಷ್ಯಸ್ತ್ರೀಜನ್ಮವು, ಬುದ್ಬುದೋಪಮಂ–ಬುದ್ಬುದ–ನೀರುಮೇಲಣಗುಳ್ಳೆಗೆ–ಉಪಮಂ–ಸಮಾನವಾದಂತೆ, ನಿಸ್ಸಾರಂ–ಸಾರ ರಹಿತವಾದ್ದು, ಧಿಗಸ್ತು–ಬಿಡು, ॥ ೨೦೭ ॥ ಮಾನುಷೆಲೋಕೆ–ಮನುಷ್ಯ ಲೋಕದಲ್ಲಿ, ಧರ್ಮಪರಃ–ಧರ್ಮದಲ್ಲಿ ಆಸಕ್ತಿಯುಳ್ಳ, ಜನಃ–ಜನವು, ನಾಸ್ತಿ–ಇಲ್ಲ, ಧಿಕ್ ನಿಂದಿಸು, ಅಹೊ–ಕಷ್ಟವು, ನಃ–ನಮಗೆ, ಲೊಕಾನಾಂ–ಜನರೊಳಗಾಗಿ, ಯೊಬಂಧುಃ–ಯಾವಬಂಧುವು, ನದೃಶ್ಯತೆ– ಕಾಣಲ್ಪಡುವದಿಲ್ಲ, ಅಹೊ–ಆಶ್ಚರವು, ಧಿಗಸ್ತು–ನಿಂದಿಸಿಬಿಡು, ॥ ೨೦೮ ॥ ಯತ್–ಯಾವಕಾರಣದ ದೆಸೆಯಿಂದ, ದುರ್ಬಲಾಃ–ಬಲಹೀನರಾದ, ಮೆ–ನನ್ನ, ಬಾಂಧವಾಃ–ಬಂಧುಜನರು, ಬ

---

ಮಾಂಗನೆಯರ ನಿಶ್ವಾಸಗಳಿಂದ ಪೀಡಿಸಲ್ಪಟ್ಟ ಆ ಪುಷ್ಪಕವಿಮಾನವು, ಸನ್ನಿರುದ್ಧವಾದ ಅಗ್ನಿಹೋತ್ರದಂತೆ ಕಂಗೊಳಿಸುತಿತ್ತು ॥೨೦೧॥ ಒಬ್ಬಾಳೊಬ್ಬಳು ನನ್ನನ್ನುಭಕ್ಷಿಸುವನೇನೋ ಎಂದು ಹೆದರಿದವಳಾದಳು, ಮತ್ತೊರ್ವಳು ಕಡುದುಃಖಿತಳಾಗಿ ಈ ದಶಕಂಠನು ಹೊಡೆಯುವನೆಂದು ಯೋಚಿಸಿದಳು॥೨೦೨॥ಏಕತ್ರಶೇರಿರುವ ಆ ಸ್ತ್ರೀಯರು, ತಾಯಿ, ತಂದೇ, ಅಣ್ಣತಮ್ಮಂದರು ಮಕ್ಕಳು, ಅತ್ತೆಮಾವಂದರು ಮುಂತಾದ ನೆಂಟರಂ ಸ್ಮರಿಸಿ ಕೊಂಡು ಕಡುದುಃಖಮುಳ್ಳವರಾಗಿ ಅಳುತಿದ್ದರು ॥೨೦೩॥ಎನ್ನಮಗನು ನನ್ನನ್ನಗಲಿ ಏನುಮಾಡುತಿರುವನೋ,ನಮ್ಮ ತಾಯಿಯು ಹ್ಯಾಗಿರುವಳೋ, ನಮ್ಮಣ್ಣ ಯಾವರೀತಿಯಲ್ಲಿದಾನೋ ಎಂದು ಪರಿತಪಿಸುತ್ತಾ ಆ ಸ್ತ್ರಿಯ್ಯರೆಲ್ಲರು ಶೋಕಸಮುದ್ರದಲ್ಲಿ ಮುಳುಗಿದ್ದರು ॥೨೦೪॥ ಅಯ್ಯೋ ದೇವರಂತಿದ್ದ ಅಂಥಾ ಪತಿಯನ್ನಗಲಿ ನಾನೇನುಮಾಡಲಿ, ಎಲೈಮೃತ್ಯುವೇ, ನೀನಾದರೂ ಪ್ರಸನ್ನನಾಗು, ಎನ್ನನ್ನು ಯಮಮಂದಿರವಂ ಹೊಂದಿಸೆಂದು ನಿನ್ನನ್ನೇ ಬೇಡುವೆನು ॥೨೦೫॥ ಪೂರ್ವಜನ್ಮದಲ್ಲಿ ನಾನೆಂಥಾ ಪಾತಕವಂಗೈದಿದ್ದೆನೋ ಯೇನೋ, ಯಾಕಂದರೆ, ಈ ರಕ್ಕಸನಿಂದ ತಿರಸ್ಕರಿಸಲ್ಪಟ್ಟವಳಾಗಿ ದುಃಖವೆಂಬ ಸಮುದ್ರದಲ್ಲಿ ಮುಳುಗದೇನೆ ॥೨೦೬॥ ಈಗ ನನಿಗೆ ಸಂಭವಿಸಿರುವ ದುಃಖಕ್ಕೆ ಮಿತಿಯೇಯಿಲ್ಲವಲ್ಲ,ಅಯ್ಯಯ್ಯೋ ಬಲುಕಷ್ಟವು, ನೀರಿನಬುಡ್ಡೆಗಳಂತೆ ಅಸಾರವಾದ ಈ ಜನ್ಮವು ವ್ಯರ್ಥವು॥೨೦೭॥ಹಾಹಾ ಈ ಮನುಷ್ಯಲೋಕದಲ್ಲಿಧರ್ಮಪರರಾದ ಜನರ್ಯಾರೂ ಇಲ್ಲವಲ್ಲ, ಛೀ ಛೀ ಈ ಲೋಕವ್ಯಾತಕ್ಕೆ, ಬಲವಂತನಾದ ಯಾವ ಒಂದು ಕಾಣಲಿಲ್ಲವಲ್ಲ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನೋಬಂಧುರ್ನದೃಶ್ಯತೇ||೧೦೮|| ಯದ್ದುರ್ಬಲಾಬಲವತಾ ಬಾಂಧವಾರಾವಣೇನಮೇ । ಉದಿತೇನೈವಸೂರ್ಯೇಣತಾರಕಾಇವನಾಶಿತಾಃ ||೧೦೯|| ಅಹೋಸುಬಲವದ್ರಕ್ಷೋವಧೋಪಾಯೇನರಜ್ಯತೇ । ಅಹೋದುರ್ವೃತ್ತಮಾತ್ಮಾನಂ ಸ್ವಯಮೇವನಬುಧ್ಯತೇ||ಸರ್ವಥಾಸದೃಶಸ್ತಾವದ್ವಿಕ್ರಮೋಸ್ಯದುರಾತ್ಮನಃ । ಇದಂತ್ವಸದೃಶಂಕರ್ಮಪರದಾರಾಭಿಮರ್ಶನಮ್ ||೧೧೧|| ಯಸ್ಮಾದೇಷಪರೇಷಾಂತು ಸ್ತ್ರೀಷುರಜ್ಯತಿದುರ್ಮತಿಃ । ತಸ್ಮಾತ್ತುಸ್ತ್ರೀಕೃತೇನೈವ ವಧಂಪ್ರಾಪ್ಸ್ಯತಿರಾವಣಃ || ಶಪ್ತಃಸ್ತ್ರೀಭಿಸ್ಸತುತದಾಹತತೇಜಾಸ್ಸುನಿಷ್ಪ್ರಭಃ । ಪತಿವ್ರತಾಭಿಸ್ಸಾಧ್ವೀಭಿಸ್ಥಿತಾಭಿಸ್ಸಾಧುವರ್ತ್ಮಸು || ೧೧೩|| ತಾಸ್ವೇವಂವಿಲಪಂತೀಷುರಾವಣೋರಾಕ್ಷಸಾಧಿಪಃ । ಪ್ರವಿವೇಶಪುರೀಂಲಂಕಾಂ ಪೂಜ್ಯಮಾನೋನಿಶಾಚರೈಃ ||೧೧೪|| ತತೋರಾಕ್ಷಸರಾಜಸ್ಯಸ್ವಸಾಪರಮದುಃಖಿತಾ । ಪಾದಯೋಃಪತಿತಾತಸ್ಯವಕ್ತುಮೇವೋಪಚಕ್ರಮೇ ||೧೧೫|| ತತಸ್ಸ್ವಸಾರಮುತ್ಥಾಪ್ಯರಾವಣಃಪರಿಸಾಂತ್ವಯನ್ । ಅಬ್ರವೀತ್ಕಿಮಿದಂಭದ್ರೇವಕ್ತುಮರ್ಹಸಿಮೇದ್ರುತಮ್ ||೧೧೬|| ಸಾಬಾಷ್ಪಪರಿಪೂರ್ಣಾ

---

ಲವತಾ–ಬಲಿಷ್ಠನಾದ, ರಾವಣೇನ–ರಾವಣನಿಂದ, ಉದಿತೇನೈವ–ಆಗತಾನೆ ಹುಟ್ಟಿದ, ಸೂರ್ಯೇಣ–ಸೂರ್ಯನಿಂದ, ತಾರಕಾಇವ – ನಕ್ಷತ್ರಗಳಂತೆ,ನಾಶಿತಾಃ–ನಾಶಗೊಳಿಸಲ್ಪಟ್ಟರು:|| ೧೦೯ || ಅಹೋ–ಆಶ್ಚರ್ಯವು, ಸುಬಲವತ್–ಬಹು ಬಲವಂತನಾದ, ರಕ್ಷಃ–ರಾವಣನು, ವಧೋಪಾಯೇನ–ಮರಣಸಾಧನದಿಂದ, ರಜ್ಯತೇ–ಅನುರಕ್ತನಾಗಿಧಾನೆ, ಅಹೋ–ಕಷ್ಟವು, ದುರ್ವೃತ್ತಂ–ದುರ್ವ್ಯಾಪಾರಿಯಾದ, ಆತ್ಮಾನಂ–ತನ್ನನ್ನು, ಸ್ವಯಮೇವ–ತಾನೆ, ನಬುಧ್ಯತೇ–ತಿಳಿಯಲಾರನು||೧೧೦|| ಸರ್ವಥಾ–ಸರ್ವಪ್ರಕಾರದಲ್ಲಿಯೂ ಅಸ್ಯದುರಾತ್ಮನಃ–ಈ ದುರಾತ್ಮನಾದ ರಾವಣನ,ವಿಕ್ರಮಸ್ತಾವತ್–ಪರಾಕ್ರಮವಾದರೆ, ಅಸದೃಶಃ–ಸಮಾನವಿಲ್ಲದ್ದು, ಇದಂ–ಈ ಪರದಾರಾಭಿಮರ್ಶನಂ–ಪರಸ್ತ್ರೀಗಮನರೂಪವಾದ,ಕರ್ಮತು–ಕರ್ಮವಾದರೆ, ಅಸದೃಶಂ–ಅಯೋಗ್ಯವಾದದ್ದು ||೧೧೧|| ಯಸ್ಮಾತ್–ಯಾವಕಾರಣದವಶೆಯಿಂದ, ದುರ್ಮತಿಃ–ದುರ್ಬುದ್ಧಿಯುಳ್ಳ, ಏಷರಾವಣಸ್ತು–ಈ ರಾವಣನಾದರೆ,ಪರೇಷಾಂಸ್ತ್ರೀಷು–ಪರರ ಸ್ತ್ರೀಯರಲ್ಲಿ ರಜ್ಯತಿ–ಅನುರಕ್ತನಾಗುತ್ತಾನೊ, ತಸ್ಮಾತ್– ಆಕಾರಣದ ದೆಶೆಯಿಂದಲಾದರೆ, ಸ್ತ್ರೀಕೃತೇನೈವ–ಸ್ತ್ರೀ ನಿಮಿತ್ತದಿಂದಲೆ,ವಧಂ–ಮರಣವನ್ನು,ಪ್ರಾಪ್ಸ್ಯತಿ–ಹೊಂದುವನು ||೧೧೨|| ಇತಿ–ಇಂತೆಂದು, ಸಾಧುವರ್ತ್ಮಸು–ಸನ್ಮಾರ್ಗಗಳಲ್ಲಿ, ಸ್ಥಿತಾಭಿಃ–ಇರುತಿರುವ, ಪತಿವ್ರತಾಭಿಃ–ಪತಿಯಲ್ಲಿ ನಿಯತರಾದ, ಸಾಧ್ವೀಭಿಃ–ಸ್ತ್ರೀಭಿಃ–ಪತಿವ್ರತಾ ಸ್ತ್ರೀಯರುಗಳಿಂದ, ಶಪ್ತಃ–ಶಪಿಸಲ್ಪಟ್ಟ,ಸತು–ಆ ರಾವಣನಾದರೆ, ತದಾ–ಆ ಕಾಲದಲ್ಲಿ, ಹತತೇಜಾಃ– ಹೊಡೆಯಲ್ಪಟ್ಟ ತೇಜಸ್ಸುಳ್ಳವನಾಗಿ, ಸುನಿಷ್ಪ್ರಭಃ–ನಿಸ್ತೇಜಸ್ಕನಾದವನು (ಆಸೀತ್–ಆದನು) ||೧೧೩|| ತಾಸು–ಆ ಸ್ತ್ರೀರು, ಏವಂ–ಈಪರಿಯಾಗಿ, ವಿಲಪಂತೀಷುಸತೀಷು– ವಿಲಾಪಮಾಡುತಿರಲೀಕಾಗಿ, ರಾಕ್ಷಸಾಧಿಪಃ–ರಾಕ್ಷಸಾಧಿಪತಿಯಾದ, ರಾವಣಃ–ರಾವಣನು,ನಿಶಾಚರೈಃ–ರಕ್ಕಸರಿಂದ, ಪೂಜ್ಯಮಾನಃ–ಪೂಜಿಸಲ್ಪಟ್ಟವನಾಗಿ, ಲಂಕಾಪುರೀಂ–ಲಂಕಾಪಟ್ಟಣವನ್ನು, ಪ್ರವಿವೇಶ–ಹೊಕ್ಕನು ||೧೧೪|| ತತಃ–ಬಳಿಕ, ರಾಕ್ಷಸರಾಜಸ್ಯ–ರಾವಣನ, ಸ್ವಸಾ–ತಂಗಿಯಾದ ಶೂರ್ಪನಖೆಯು, ಪರಮದುಃಖಿತಾ–ಬಹಳ ದುಃಖಿತಳಾಗಿ, ತಸ್ಯ–ಆ ರಾವಣನ,ಪಾದಯೋಃ–ಕಾಲುಗಳಲ್ಲಿ, ಪತಿತಾ–ಬೀಳುತಿರುವಳಾಗಿ, ವಕ್ತುಮೇವ–ಮಾತನಾಡುವದಕ್ಕೋಸ್ಕರ, ಉಪಚಕ್ರಮೇ–ಆರಂಭಿಸಿದಳು ||೧೧೫|| ತತಃ–ಬಳಿಕ, ರಾವಣಃ–ರಾವಣನು, ಸ್ವಸಾರಂ–ತಂಗಿಯನ್ನು, ಉತ್ಥಾಪ್ಯ–ಎಬ್ಬಿಸಿ, ಪರಿಸಾಂತ್ವಯನ್–ಸಮಾಧಾನಗೊಳಿಸುವನಾಗಿ, ಹೆ ಭದ್ರೇ–ಎಲೆ ಶುಭಕರಳೆ, ಮೇ–ನನಿಗೆ, ದ್ರುತಂ–ಶೀಘ್ರವಾಗಿ; ಕಿಂವಕ್ತುಂ–ಯೇನು ಹೇಳುವದಕ್ಕೋಸ್ಕರ, ಅರ್ಹಸಿ–ಅರ್ಹಳಾಗಿದ್ದಿ, ಇತಿ–ಇತೆಂದು, ಅಬ್ರವೀತ್–ನುಡಿದನು ||೧೧೬|| ಸಾರಕ್ಷಸೀ–ಆಶೂರ್ಪಣಖೆಯು,ಬಾಷ್ಪಪರಿರುದ್ಧಾಕ್ಷೀ–ಕಣ್ಣೀರಿಂದ ತಡೆಮಾಡಲ್ಪಟ್ಟ ನೇತ್ರಗಳುಳ್ಳ

---

ಯಾಕಂದರೆ, ದುರ್ಬಲರಾದ ಎನ್ನ ಬಂಧುಗಳೆಲ್ಲರು ಬಲವಂತನಾದ ಈ ದಶಕಂಠನಿಂದ, ಆಗ ತಾನೇ ಹುಟ್ಟಿದ ಸೂರ್ಯನಿಂ
ದ ನಕ್ಷತ್ರಗಳು ನಾಶವಾದಂತೆ ನಷ್ಟವಾದರಲ್ಲಾ ||೧೦೯|| ಹಾ ಹಾ!!!ಈ ರಾವಣನು ಎಷ್ಟುಬಲಮುಳ್ಳವನು,ವಧೋ
ಪಾಯದಿಂದಲೇ ಅನುರಕ್ತನಾಗಿಧಾನಲ್ಲ, ನಾನೇನು ಮಾಡಲಿ, ಇವನಿಗೆ ಹೇಳತಕ್ಕವರೇ ಇಲ್ಲ, ಎನಗೆ ಬಲುಕಷ್ಟವು,
ಈ ರಾಕ್ಷಸನು ತಾನುಮಾಡುವ ಕೆಟ್ಟ ಕೆಲಸಗಳಂತಿಳಿಯತಕ್ಕವನಲ್ಲ, ಈದುರಾತ್ಮನ ಪರಾಕ್ರಮವಾದರೇನೋ,ಸರ್ವ
ಪ್ರಕಾರದಲ್ಲಿಯೂ ಅಸದೃಶವಾಗಿರುವದಲ್ಲಾ, ಇವನು ಮಾಡುತಿರುವ ಪರಸ್ತ್ರೀಗಮನಾದಿರೂಪವಾದ ಈದುಷ್ಕಾರ್ಯ
ವಾದರೆಬಹಳ ನಿಂದಿತವಾಗಿರುವದಲ್ಲಾ ||೧೧೧|| ಆದರೆ ಈ ದುರ್ಬುದ್ಧಿಯುಳ್ಳ ರಾವಣನು ಯಾವಕಾರಣದಿಂದ ಪರಸ
ತಿಗಳಲ್ಲಿಯೇ ಆಸಕ್ತನಾಗಿರುವನೋ,ಆಕಾರಣದಿಂದ ಸ್ತ್ರೀನಿಮಿತ್ತವಾಗಿಯೇ ಇವನು ಸಾಯುವನೆಂದು ಸನ್ಮಾರ್ಗವರ್ತಿ
ಗಳಾದ ಆ ಪತಿವ್ರತಾ ಶಿರೋಮಣಿಗಳಿಂದ ಶಪಿಸಲ್ಪಟ್ಟ ಆ ರಾವಣನು, ಹೊಡೆಯಲ್ಪಟ್ಟ ತೇಜಸ್ಸುಳ್ಳವನಾದ ಕಾರಣಕ
ಳೆಕುಂದಿದವನಾದನು||೧೧೩|| ಆ ಉತ್ತಮಾಂಗನೆಯು ರೀಪರಿಯಾಗಿ ಪರಿತಪಿಸುತಿರುವಾಗಲೇ, ರಾಕ್ಷಸಾಧಿಪತಿಯಾದ
ರಾವಣನಾದರೆ, ನಿಶಾಚರರಿಂದ ಪೂಜಿಸಲ್ಪಡುತಿರುವನಾಗಿ, ಸುಂದರವಾಗಿರುವ ಲಂಕಾ ಪುರಿಯನ್ನು ಪ್ರವೇಶಿಸಿದನು
ಆಬಳಿಕ ರಾವಣನ ತಂಗಿಯಾದ ಶೂರ್ಪನಖೆಯು ಪರಮ ದುಃಖಿತಳಾಗಿ ಆ ರಾವಣನ ಪಾದದಮೇಲೆ ಬಿದ್ದು ಈ ರೀಪರಿ
ಯಾಗಿ ಹೇಳಲುಪಕ್ರಮಿಸಲೂ ಆರಾವಣನು ತಂಗಿಯನ್ನು ಮೇಲಕ್ಕೆಬ್ಬಿಸಿ ಸಮಾಧಾನಗೊಳಿಸುತಿರುವನಾ ಗಿಂತೆಂದ
ನು, ಏಲೈತಂಗಿಯೆ ! ಇದೇನು, ಯಾಕೆ ಹೀಗೆ ಅಳುವಿ, ಕ್ಷಿಪ್ರವಾಗಿ ತಿಳಿಸೆಂದು ನುಡಿದವನಾಗಲೂ ||೧೧೬|| ಆ ಶೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕ್ಷೀರಾಕ್ಷಸೀವಾಕ್ಯಮಬ್ರವೀತ್ । ಹತಾಸ್ಮಿ ವಿಧವಾರಾಜನ್ ತ್ವಯಾಬಲವತಾಕೃತಾ ॥೧೭॥ ಏತೇವೀರಾಸ್ತ್ವಯಾರಾಜನ್ ದೈತ್ಯಾವಿನಿಹತಾರಣೇ । ಕಾಲಕೇಯಾಇತಿಖ್ಯಾತಾಃಮಹಾಬಲಪರಾಕ್ರಮಾಃ ॥೧೮॥ ತತ್ರಮೇನಿಹತೋಭರ್ತಾಗರೀಯಾನ್ ಜೀವಿತಾದಪಿ । ಸತ್ವಯಾದಯಿತೋವೀರಭ್ರಾತ್ರಾಶತ್ರುಸಮೇನವೈ ॥ ನಿಹತೋಯುಧಿಕೋಪೇನಮಾಂವಿಸ್ಮೃತ್ಯಯವೀಯಸೀಮ್ ॥೧೯॥ ಯಾತ್ವಯಾನಿಹತಾರಾಜನ್ ಸ್ವಯಮೇವಹಬಂಧುನಾ । ದುಃಖಂವೈಧವ್ಯಶಬ್ದಂಚದತ್ತಂ ಭೋಕ್ಷ್ಯಾಮ್ಯಹಂತ್ವಯಾ ॥೨೦॥ ನನುನಾಮಹತೋರಕ್ಷೋಜಾಮಾತಾಸಮರೇತ್ವಯಾ । ತಂನಿಹತ್ಯಮಹಾರಾಜಸ್ವಯಮೇವನಲಜ್ಜಸೇ ॥೨೧॥ ಏವಮುಕ್ತಸ್ತಯಾರಕ್ಷೋ ಭಗಿನ್ಯಾಕ್ರೋಶಮಾನಯಾ । ಅಬ್ರವೀತ್ಸಾಂತ್ವಯಿತ್ವಾತಾಂ ಸಾಮಪೂರ್ವಮಿದಂವಚಃ ॥೨೨॥ ಅಲಂವತ್ಸೇವಿಷಾದೇನನಭೇತವ್ಯಂಚಸರ್ವಶಃ । ಮಾನದಾನವಿಶೇಷೈಸ್ತ್ವಾಂತೋಷಯಿಷ್ಯಾಮಿನಿತ್ಯಶಃ ॥೨೩॥ ಯುದ್ಧೇಪ್ರಮತ್ತೋವ್ಯಾಕ್ಷಿಪ್ತೋ ಜಯಕಾಂಕ್ಷೀಕ್ಷಿಪನ್ ಶರಾನ್ । ನಾವಗಚ್ಛಾಮಿಯುದ್ಧೇಷುಸ್ವಾನ್ ಪರಾನ್ ವಾಪ್ಯಹಂಶುಭೇ ॥೨೪॥ ಜಾಮಾತರಂನಜಾನಾಮಿಪ್ರಹರನ್ ಯುದ್ಧದುರ್ಮದಃ । ಅತೋ

ವಳಾಗಿ, ಹೆ ರಾಜನ್–ಯಲೊ ಅರಸೇ, ಬಲವತಾ–ಬಲವಂತನಾದ, ತ್ವಯಾ–ನಿನ್ನಿಂದ, ಅಹಂ–ನಾನು, ವಿಧವಾಕೃತಾ–ಗಂಡಹೀನಳಾಗಿ ಮಾಡಲ್ಪಟ್ಟೆನು, ಹತಾಸ್ಮಿ–ಕೆಟ್ಟುಹೋದೆನು ॥೧೭॥ ಹೆರಾಜನ್–ಯಲೊ ರಾಜನೆ, ತ್ವಯಾ–ನಿನ್ನಿಂದ, ಕಾಲಕೇಯಾಃಇತಿ–ಕಾಲಕೇಯರೆಂದು, ಖ್ಯಾತಾಃ–ಪ್ರಖ್ಯಾತರಾದ ಮಹಾಬಲಪರಾಕ್ರಮಾಃ–ಬಹಳವಾದ ದೇಹಶಕ್ತಿಯೂ, ಪರಾಕ್ರಮವೂ ಉಳ್ಳ, ವೀರಾಃ–ಶೂರರಾದ, ಏತೇದೈತ್ಯಾಃ – ಈ ರಾಕ್ಷಸರು, ರಣೇ – ಕಾಳಗದಲ್ಲಿ, ವಿನಿಹತಾಃ–ಹೊಡೆಯಲ್ಪಟ್ಟರು ॥೧೮॥ ತತ್ರ–ಆ ಗುಂಪಿನಲ್ಲಿ, ಮೇ–ನನಗೆ, ಜೀವಿತಾದಪಿ–ಪ್ರಾಣಕ್ಕಿಂತಲೂ, ಗರೀಯಾನ್–ಹೆಚ್ಚಾದ, ಭರ್ತಾ–ಭರಣಶೀಲನಾದ, ದಯಿತಃ–ಪ್ರೀತಿಪಾತ್ರನಾದ ನನ್ನ ಗಂಡನು, ನಿಹತಃ–ಹೊಡೆಯಲ್ಪಟ್ಟನು ॥ ಹೆವೀರ–ಎಲೈ ಶೂರನೆ, ಶತ್ರುಸಮೇನ–ಶತ್ರುಸಮನಾದ,ಭ್ರಾತ್ರಾ–ಅಣ್ಣನಾದ, ತ್ವಯಾ– ನಿನ್ನಿಂದ, ಯವೀಯಸೀಂ–ತಂಗಿಯಾದ, ಮಾಂ – ನನ್ನನ್ನು, ವಿಸ್ಮೃತ್ಯ–ಮರತುಹೋಗಿ, ಯುಧಿ – ಯುದ್ಧದಲ್ಲಿ, ಕೋಪೇನ–ಕೋಪದಿಂದ, ಸದಯಿತಃ–ಆ ನನಗಂಡನು, ನಿಹತಃ–ಹೊಡೆಯಲ್ಪಟ್ಟನು ॥ ೧೯ ॥ ಹೆರಾಜನ್ –ಯಲೈ ಅರಸ, ಸ್ವಯಮೇವ–ತಾನಷ್ಟಕ್ಕೆತಾನೆ, ಬಂಧುನಾ–ಬಂಧುವಾದ, ತ್ವಯಾ – ನಿನ್ನಿಂದ, ಯಾ–ಯಾವನಾನು, ನಿಹತಾ–ಹೊಡೆಯಲ್ಪಟ್ಟೆನೊ, ಸಾ– ಅಹಂ– ಅಂಥಾ–ನಾನು, ತ್ವಯಾ–ನಿನ್ನಿಂದ, ದತ್ತಂ–ಕೊಡಲ್ಪಟ್ಟ, ವೈಧವ್ಯಶಬ್ದಂ–ವೈಧವ್ಯಶಬ್ದದಿಂದ ಪ್ರಾಪ್ತಮಾದ, ದುಃಖಂ–ದುಃಖವನ್ನು, ಭೋಕ್ಷ್ಯಾಮಿ– ಅನುಭವಿಸುತ್ತೇನೆ ॥೨೦॥ ಹೆರಕ್ಷಃ–ಎಲೊರಾಕ್ಷಸನೆ, ತ್ವಯಾ–ನಿನ್ನಿಂದ, ಸಮರೇ–ಕಾಳಗದಲ್ಲಿ, ಜಾಮಾತಾ–ಅಳಿಯನೂಕೂಡ, ಹತೋನಾಮನನು–ಹೊಡೆಯಲ್ಪಟ್ಟನಷ್ಟೆ, ಹೆಮಹಾರಾಜ–ಎಲೊ ಮಹಾರಾಜನೆ, ತಂ–ಅಂಥಾ ಅಳಿಯನನ್ನು, ಸ್ವಯಮೇವ–ನೀನೆ, ನಿಹತ್ಯ–ಹೊಡೆದು, ನಲಜ್ಜಸೇ–ನಾಚಿಕೆಇಲ್ಲದವನಾಗಿದ್ದೀ ॥೨೧॥ ಕ್ರೋಶಮಾನಯಾ–ಆ ಕ್ರೋಶಬೀಳುತಿರುವ, ತಯಾಭಗಿನ್ಯಾ–ಆ ತಂಗಿಯಿಂದ, ಏವಂ–ಈ ಪರಿ, ಉಕ್ತಃ–ಹೇಳಲ್ಪಟ್ಟ, ರಕ್ಷಃ–ರಾವಣನು, ತಾಂ–ಆ ಶೂರ್ಪಣಖಿಯನ್ನು, ಸಾಂತ್ವಯಿತ್ವಾ–ಸಮಾಧಾನ ಗೊಳಿಸಿ, ಸಾಮಪೂರ್ವಂ–ಸಮಾಧಾನಪೂರ್ವಕವಾಗಿ, ಇದಂವಚಃ–ಈ ಮಾತನ್ನು ಅಬ್ರವೀತ್–ನುಡಿದನು ॥೨೨॥ ಹೆವತ್ಸೇ–ಎಲೆಮಗಳೆ, ವಿಷಾದೇನ–ವ್ಯಸನದಿಂದ, ಅಲಂ–ಸಾಕು, ಸರ್ವಶಃ–ಸರ್ವಪ್ರಕಾರವಾಗಿಯೂ, ನಭೇತವ್ಯಂ–ಭಯಬೀಳತಕ್ಕದ್ದಲ್ಲಾ, ಮಾನದಾನವಿಶೇಷೈಃ–ಮರ್ಯಾದೆ ಯಿಂದಲೂ, ವಿಶೇಷವಾಗಿ ದ್ರವ್ಯದಾನಗಳಿಂದಲುನ್ನೂ, ನಿತ್ಯಶಃ–ನಿರಂತರವು, ತ್ವಾಂ–ನಿನ್ನನ್ನು, ತೋಷಯಿಷ್ಯಾಮಿ–ಸಂತೋಷಬೀಳಿಸುತ್ತೇನೆ ॥೨೩॥ ಹೆಶುಭೇ–ಎಲೆಶುಭಳೆ, ಯುದ್ಧೇ–ಕಾಳಗದಲ್ಲಿ, ಪ್ರಮತ್ತಃ–ಮತ್ತನಾದ, ವ್ಯಾಕ್ಷಿಪ್ತಃ–ವಿಶೇಷವಾಗಿ ಹೆದರಿಸಲ್ಪಟ್ಟ, ಅಹಂ–ನಾನು, ಜಯಕಾಂಕ್ಷೀ–ಜಯವನ್ನು ಪೇಕ್ಷಿಸುತಿದ್ದವನಾದ ಕಾರಣ, ಶರಾನ್–ಬಾಣಗಳನ್ನು, ಕ್ಷಿಪನ್–ಎಸೆಯುತಿರುವನಾಗಿ,

ರ್ಪನಖಿಯೆಂಬ ರಾಕ್ಷಸಿಯು ಕಂಬನಿಗಳಿಂದ ತಡೆಮಾಡಲ್ಪಟ್ಟನೇತ್ರಗಳುಳ್ಳವಳಾಗಿ, ರಾವಣನಂ ಕುರಿತಿಂತೆಂದಳು, ಎಲೈರಾಜನೆ !ಬಲವಂತನಾದ ನಿನ್ನಿಂದ ವಿಧವೆಯಾಗಿ ಮಾಡಲ್ಪಟ್ಟವಳಾಗಿನಾನುಕೆಟ್ಟುಹೊದೆನು॥೧೭॥ಎಲೈ ರಾಕ್ಷಸನಾಥನೆ! ಕಾಲಕೇಯರೆಂದುಪ್ರಸಿದ್ಧರಾದ ಮತ್ತು ಮಹಾಪರಾಕ್ರಮವಂತರಾದ ಈರಾಕ್ಷಸರುಸಂಗರದಲ್ಲಿನಿನ್ನಿಂದ ಹೊಡೆಯಲ್ಪಟ್ಟವರಾದರು ॥೧೮॥ ಎಲೈ ಶೂರನೆ ! ಶತ್ರು ಸದೃಶನಾದ ನಿನ್ನಿಂದ ಎನ್ನಪ್ರಾಣಗಳಿಗಿಂತಲೂ ಅತಿಶಯನಾದ ಮತ್ತು ಪ್ರೀತಿಪಾತ್ರನಾದಪತಿಯು ಯುದ್ಧದಲ್ಲಿ ಕೋಪೋದ್ರೇಕದಿಂದ ನಿಹತನಾದವನು॥೧೯॥ ಎಲೈ ರಾಜನೆ ! ಯಾವ ನಾನು ಬಂಧುವಾದ ನಿನ್ನಿಂದಲೇ ಹತಳಾಗಿನಿನ್ನಿಂದ ಕೊಡಲ್ಪಟ್ಟ ದುಃಖವನ್ನೂ ವೈಧವ್ಯ ಸಬ್ದವನ್ನೂ ಸಹ ಸ್ವಯಮೇವ ಅನುಭವಿಸುವೆನು ॥೨೦॥ ಎಲೈ ಮಹಾರಾಜನೆ ! ಸಂಗರದಲ್ಲಿ ನಿನ್ನಿಂದಲೇ ಅಳಿಯನಾದವನು ಹತನಾದನಷ್ಟೆ? ಅಂಥಾವನಂ ಕೊಂದು ನಿನಿಗೆ ನಾಚಿಕೆಯಾಗವದಿಲ್ಲವೇ, ಎಂದು ಪರಿಪರಿಯಾಗಿ ಸಂತಪಿಸುತ್ತಾ ಅಳುತಿರುವಆತಂಗಿಯಾದ ಶೂರ್ಪನಖಿಯಿಂದ ಹೇಳಲ್ಪಟ್ಟವನಾಗಿ, ಆರಾವಣನು ಸಮಾಧಾನಗೊಳಿಸುತ್ತಾ ವಿನಯುಮಾಗಿ ಈ ವಚನವಂ ಹೇಳತೊಡಗಿದನು ॥೨೨॥ ಎಲೈ ಬಾಲೆಯೆ ! ಸಂಕಟಪಡಬೇಡ, ಸರ್ವ ಪ್ರಕಾರದಲ್ಲಿಯೂ ಹೊಡೆಯು ತಕ್ಕದ್ದಲ್ಲ, ಆದರೂ ನೀನು ಹೆದರಬೇಡ, ನಾನು ನಿರಂತರವು ದಾನ ಮಾನಾದಿಗಳಿಂದ ಸಂತೋಷಗೊಳಿಸುತಿರುವೆನು ॥೨೩॥ ಸಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸೌನಿಹತಸ್ಸಂಖ್ಯೇಮಯಾಭರ್ತಾತವಸ್ವಸಃ ॥೨೫॥ ಅಸ್ಮಿನ್ಕಾಲೇತುಯತ್ಪ್ರಾಪ್ತಂ ತತ್ಕರಿಷ್ಯಾಮಿತೇಹಿತಮ್ ಭ್ರಾತುರ್ಐಶ್ವರ್ಯಸಂಸ್ಥಸ್ಯಖರಸ್ಯಭವಪಾರ್ಶ್ವತಃ ॥೨೬॥ ಚತುರ್ದಶಾನಾಂಭ್ರಾತಾತೇಸಹಸ್ರಾಣಾಂಭವಿಷ್ಯತಿ । ಪ್ರಭುಃಪ್ರದಾನೇಯಾನೇಚರಾಕ್ಷಸಾನಾಂಮಹೌಜಸಾಮ್॥೨೭॥ ಶೀಘ್ರಂಗಚ್ಛತ್ವಯಂಶೂರೋದಂಡಕಾನ್ಪರಿರಕ್ಷಿತುಂ। ದೂಷಣೋಸ್ಯಬಲಾಧ್ಯಕ್ಷೋಭವಿಷ್ಯತಿಮಹಾಬಲಃ ॥೨೮॥ ಸಹಿಶಪ್ತೋವನೋದ್ದೇಶಃಕ್ರುದ್ಧೇನೋಶನಸಾಪುರಾ। ರಾಕ್ಷಸಾನಾಮಯಂವಾಸೋಭವಿಷ್ಯತಿನಸಂಶಯಃ ॥೨೯॥ ತತ್ರಮಾತೃಷ್ವಸುಃಪುತ್ರೋ ಭ್ರಾತಾತವಖರಃಪ್ರಭುಃ । ಭವಿಷ್ಯತಿಸದಾಕುರ್ವನ್ಯದ್ವಕ್ಷ್ಯಸಿವಚಸ್ತ್ವಯಮ್ ॥೩೦॥ಏವಮುಕ್ತ್ವಾದಶಗ್ರೀವಃಸೈನ್ಯಂತಸ್ಯಾದಿದೇಶಹ । ಚತುರ್ದಶಸಹಸ್ರಾಣಿ ರಕ್ಷಸಾಂಕಾಮರೂಪಿಣಾಮ್ ॥೩೧॥ ಸತೈಸ್ಸರ್ವೈಃಪರಿವೃತೋರಾಕ್ಷಸೈರ್ಘೋರದರ್ಶನೈಃ । ಖರಸ್ಸಂ

---

ಯುದ್ಧೇಷು-ಯುದ್ಧರಂಗಗಳಲ್ಲಿ, ಸ್ವಾನ್-ಸ್ವಕೀಯ್ಯರನ್ನು, ಪರಾನ್ಯಾನಪಿ-ಪರಕೀಯ್ಯರನ್ನೇ ಆಗಲಿ, ನಾವಗಚ್ಛಾಮಿ-ತಿಳಿಯಲಾರೆನು ॥೨೪॥ ಹೇಸ್ವಸಃ-ಎಲೈ ತಂಗಿಯೆ, ಯುದ್ಧದುರ್ಮದಃ-ಯುದ್ಧ-ಯುದ್ಧದಲ್ಲಿ, ದುರ್ಮದಃ-ಮದವೇರಿದ,ಪ್ರಹರ್ನ್- ಹೊಡೆಯುತಿರುವನಾನು, ಜಾಮಾತರಂ-ಅಳಿಯನನ್ನು, ನಜಾನಾಮಿ-ಕಾಣೆನು, ಅತಃ-ಈ ಕಾರಣದ ದೆಸೆಯಿಂದ,ತವ-ನಿನ್ನ, ಅಸೌಭರ್ತಾ-ಈ ಗಂಡನು, ಸಂಖ್ಯೇ-ಯುದ್ಧದಲ್ಲಿ, ಮಯಾ-ನನ್ನಿಂದ, ನಿಹತಃ-ಹೊಡೆಯಲ್ಪಟ್ಟನು॥೨೫॥ ಅಸ್ಮಿನ್ಕಾಲೇತು-ಈ ಕಾಲದಲ್ಯಾದರೆ, ಯತ್-ಪ್ರಾಪ್ತಂ-ಯಾವದುಪಸ್ಥಿತವಾಗಿಧಿಯೊ, ತತ್-ಆಹಿತವನ್ನು, ಕರಿಷ್ಯಾಮಿ-ಮಾಡುವೆನು, ಐಶ್ವರ್ಯಸಂಸ್ಥಸ್ಯ - ಐಶ್ವರ್ಯ ಸಂಪಂನನಾದ, ಭ್ರಾತುಃ-ಅಂಣನಾದ, ಖರಸ್ಯ-ಖರನ, ಪಾರ್ಶ್ವತಃ - ಪಾರ್ಶ್ವದಲ್ಲಿ, ಭವ-ಇರು, ತೇಭ್ರಾತಾ-ನಿಮ್ಮಣ್ಣನಾದ ಖರನು, ಮಹೌಜಸಾಂ-ಮಹಾಪರಾಕ್ರಮ ಶಾಲಿಗಳಾದ, ಚತುರ್ದಶಾನಾಂಸಹಸ್ರಾಣಾಂ- ಹದಿನಾಲ್ಕು ಸಾವಿರ ಸಂಖ್ಯೆಯುಳ್ಳ, ರಾಕ್ಷಸಾನಾಂ-ರಾಕ್ಷಸರಿಗೆ, ಯಾನೇ-ಪ್ರಯಾಣದಲ್ಲಿಯೂ, ಪ್ರದಾನೇ-ಸಂಬಳ ಕೊಡೋದರಲ್ಲಿಯೂ, ಪ್ರಭುಃ ಧಣಿಯಾದವನು, ಭವಿಷ್ಯತಿ-ಆಗುವನು ॥ ಶೂರಃ-ಶೂರನಾದ, ಅಯಂ-ಈ ಖರಾಸುರನು, ದಂಡಕಾನ್-ದಂಡಕ ಪ್ರದೇಶಗಳನ್ನು, ಪರಿರಕ್ಷಿತುಂ-ಪರಿಪಾಲನೆ ಮಾಡುವದಕ್ಕೋಸ್ಕರ,ಶೀಘ್ರಂ-ಜಾಗ್ರತೆಯಾಗಿ, ಗಚ್ಛತು-ಹೊಗಲಿ, ಮಹಾಬಲಃ-ಮಹಾಬಲಿಷ್ಠನಾದ, ದೂಷಣಃ-ದೂಷಣನು, ಅಸ್ಯ-ಈ ಖರನಿಗೆ, ಬಲಾಧ್ಯಕ್ಷಃ-ಸೈನ್ಯಾಧಿಪತಿಯು, ಭವಿಷ್ಯತಿ-ಆಗುವನು ॥೨೮॥ ಪುರಾ-ಪೂರ್ವದಲ್ಲಿ, ಕ್ರುದ್ಧೇನ-ಕೋಪಿಷ್ಠನಾದ,ಉಶನಸಾ- ಶುಕ್ರಾಚಾರ್ಯನಿಂದ, ಸೋಯಂವನೋದ್ದೇಶಃ-ಈ ದಂಡಕಾರಣ್ಯಪ್ರದೇಶವು, ರಾಕ್ಷಸಾನಾಂ-ರಾಕ್ಷಸರಗಳಿಗೆ, ವಾಸಃ-ಆಶ್ರಯವು, ಭವಿಷ್ಯತಿ-ಆಗುವದು, ನಸಂಶಯಃ-ಸಂಶಯವಿಲ್ಲಾ, ಇತಿ-ಇಂತೆಂದು, ಶಪ್ತಃ-ಶಪಿಸಲ್ಪಟ್ಟಿದೆ ॥೨೯॥ ತತ್ರ-ಆ ಅರಣ್ಯದಲ್ಲಿ, ತವ-ನಿನಿಗೆ, ಮಾತೃಷ್ವಸುಃ-ಚಿಕ್ಕಂಮನಿಗೆ, ಪುತ್ರಃ-ಪುತ್ರನಾದ, ತವ-ನಿನಿಗೆ, ಭ್ರಾತಾ-ಅಂಣನಾದ, ಖರಃ-ಖರನು, ಪ್ರಭುಃ-ಧೊರೆಯು ಆಗಿಧಾನೆ, ತ್ವಂ-ನೀನು, ಯತ್-ವಕ್ಷ್ಯಸಿ-ಯಾವಮಾತನ್ನು ಹೇಳುವಿಯೊ, ತದ್ವಚಃ-ಆ ಮಾತನ್ನು, ಪ್ರಭುಃ-ಸಮರ್ಥನಾದ ಖರನು, ಸದಾ-ಸರ್ವಕಾಲದಲ್ಲಿಯೂ, ಕುರ್ವನ್-ಮಾಡುತಿರುವನು, ಭವಿಷ್ಯತಿ-ಆಗುವನು ॥ ೩೦ ॥ ಏವಂ-ಈ ಪರಿಯಾಗಿ, ಉಕ್ತ್ವಾ-ಹೇಳಿ ದಶಗ್ರೀವಃ-ರಾವಣನು, ತಸ್ಯ-ಆ ಖರಾಸುರನಿಗೆ, ಕಾಮರೂಪಿಣಾಂ-ಕಾಮ ರೂಪಿಗಳಾದ, ರಕ್ಷಸಾಂ-ರಾಕ್ಷಸರ, ಚತುರ್ದಶಸಹಸ್ರಾಣಿ- ಹದಿನಾಲ್ಕು ಸಾವಿರದ, ಸೈನ್ಯಂ-ದಂಡನ್ನು, ಆದಿದೇಶಹ-ಆಜ್ಞಾಪಿಸಿದನು ॥೩೧॥ ಸಖರಃ-ಆ ಖರಾಸುರನು, ಘೋರ ದರ್ಶನೈಃ-ಭಯಂಕರವಾದ ದೃಷ್ಟಿಯುಳ್ಳ, ಸರ್ವೈಃ-ಸವಸ್ತರಾದ, ತೈಃರಾಕ್ಷಸೈಃ-ಆ ರಾಕ್ಷಸರಿಂದ, ಪರಿವೃತಃ-ಸುತ್ತುಕೊಳ್ಳಲ್ಪಟ್ಟವನಾಗಿ, ಅಕುತೋಭಯಃ-ಯಾತೆರ ದೆಸೆಯಿಂದಲೂ ಭಯವಿಲ್ಲದ

---

ಗರದಲ್ಲಿ ಮಹಾಮದವೇರಿ ಹೆದರಿಸಲ್ಪಟ್ಟನಾನು, ಜಯೇಚ್ಛೆಯುಳ್ಳವನಾಗಿ ಬಾಣಗಳನ್ನೆಸೆಯುತ್ತಾ ತಿರುಗುತಿರುವ ಕಾಲದಲ್ಲಿ ಸ್ವಕೀಯರನ್ನು ಪರರನ್ನು ಸಹಾ ತಿಳಿಯದಿದ್ದೆನ್ನ,ಎಲೈ ತಂಗಿಯೇ!ಯುದ್ಧದುರ್ಮದನಾಗಿ ಹೊಡೆಯುತ್ತಾ ಅಳಿಯನನ್ನು ಕಾಣೆನು, ಈ ಕಾರಣದಿಂದ ನಿನ್ನಪತಿಯಾದ ವಿದ್ಯುಜ್ಜಿಹ್ವನನ್ನು ಕಾಳಗದಲ್ಲಿ ಕೊಂದೆನು ॥೨೫॥ ಎಲೈ ಮಗಳೇ! ಈ ಕಾಲದಲ್ಲಿ ಹ್ಯಾಗೆ ಮಾಡಿದರೆ ನಿನಿಗೆ ಹಿತವಾಗಿರುವದೋ ಹಾಗೆ ಮಾಡುವೆನು ಕೇಳು( ಅದೇನಂದರೆ.) ಮಹದೈಶ್ವರ್ಯ ಸಂಪನ್ನನಾದ ಖರನೆಂಬ ನಿಮ್ಮಣ್ಣನ ಸಮೀಪದಲ್ಲಿರು ಆತನು ಮಹಾತೇಜಸ್ವಿಗಳಾದಹದಿನಾಲ್ಕು ಸಾವಿರ ರಾಕ್ಷಸರಿಗೆ ಸಂಬಳ ಕೊಡುವದರಲ್ಲಿಯೂ ಪ್ರಯಾಣಮಾಡಿಸುವದರಲ್ಲಿಯೂ ಕೂಡಾ ಧಣಿಯಾಗಿರುವಂತೆ ಸ್ವಾತಂತ್ರ್ಯವಂಕೊಡುವೆನು ॥೨೭॥(ಆದಪ್ರಯುಕ್ತ) ಶೂರನಾದ ಖರನು ದಂಡಕಾವನವಂ ಕುರಿತು ಕ್ಷಿಪ್ರವಾಗಿ ತೆರಳಲಿ, ಮಹಾಬಲಿಷ್ಠನಾದ ದೂಷಣನೂ ಕೂಡಾ, ಈ ತನಿಗೆ ಸೇನಾಧಿಪತಿಯಾಗಿರುವನು ॥೨೮॥ ಪೂರ್ವಕಾಲದಲ್ಲಿ ಕಡುಕುಪಿತನಾದ ಶುಕ್ರಾಚಾರ್ಯರಿಂದ ಈ ದಂಡಕಾರಣ್ಯವು ರಾಕ್ಷಸರಿಗಾವಾಸವಾಗಲೆಂದು ಶಪಿಸಿರುವನು, ಈ ವಿಷಯದಲ್ಲಿ ಸಂಶಯವಿಲ್ಲ; ನಿಮ್ಮ ಚಿಕ್ಕಮ್ಮನಿಗೆ ಮಗನಾದ ಖರನೆಂಬ ಅಣ್ಣನು, ಅಲ್ಲಿ ಪ್ರಭುವಾಗಿರುವನಾಗಿ, ನೀನು ಹೇಳುವಂತೆ ಕೇಳಿಕೊಂಡಿರುವನು ॥೩೦॥ ಎಂಬದಾಗಿ ರಾವಣನು ನುಡಿದು, ಆ ಖರನಿಗೆ ಕಾಮರೂಪಿಗಳಾದ ಹದಿನಾಲ್ಕುಸಾವಿರ ರಾಕ್ಷಸ ಸೈನ್ಯವಂಕೊಟ್ಟವನಾಗಲೂ, ಆ ಖರಾಸುರನು ಸೇನೆಯಿಂದೊಡಗೂಡಿ ಮಹಾಭಯಂಕರವಾದ ಗೊಂಡಾರಣ್ಯ ವಾಗಿರ್ಪ ಆ ದಂಡಕಾವನವೆಂಬ ದೊಡ್ಡಕಾಡನ್ನುಶೇರಿ, ಅಲ್ಲಿ ನಿಷ್ಕಂಟಕವಾದ ಪ್ರಭುತ್ವವಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರಯಯೌಶೀಘ್ರಂದಂಡಕಾನಕುತೋಭಯಃ ||೨೩-೪|| ಸತತ್ರಕಾರಯಾಮಾಸರಾಜ್ಯಂನಿಹತಕಂಟಕಮ್ | ಸಾಚಶೂ ರ್ಪಣಖಾಪ್ರೀತಾನ್ಯವಸದ್ದಂಡಕಾವನೆ ||೨೩೪|| —…*ಇತಿ ಶ್ರೀಮದುತ್ತರಕಾಂಡೆ ಚತುರ್ವಿಂಶಸ್ಸರ್ಗಃ.*…—

ಸತುದತ್ವಾದಶಗ್ರೀವೋವನಂಘೋರಂಖರಸ್ಯತತ | ಭಗಿನೀಂಚಸಮಾಶ್ವಾಸ್ಯಹೃಷ್ಟಸ್ಸ್ವಸ್ಥತರೋಭವತ್ ||೧|| ತತೋನಿಕುಂಭಿಲಾಂನಾಮಲಂಕಾಯಾಃಕಾನನಂಮಹತ್ | ಮಹಾತ್ಮಾ ರಾಕ್ಷಸೇಂದ್ರಸ್ತತ್ಪ್ರವಿವೇಶಸಹಾನುಗಃ ||೨|| ತತ್ರ ಯೂಪಶತಾಕೀರ್ಣಂಸೌಮ್ಯಂಚೈತ್ಯೋಪಶೋಭಿತಮ್ | ದದರ್ಶಾಧಿಷ್ಠಿತಂಯಜ್ಞಂಸಂಪ್ರದೀಪ್ತಮಿವಶ್ರಿಯಾ ||೩|| ತತಃ ಕೃಷ್ಣಾಜಿನಧರಂಕಮಂಡಲುಕುಶೋಜ್ವಲಂ | ದದರ್ಶಸ್ವಸುತಂತತ್ರಮೇಘನಾದಮರಿಂದಮಮ್ ||೪|| ರಕ್ಷಃಪತಿಸ್ಸಮಾ ಸಾದ್ಯಸಮಾಶ್ಲಿಷ್ಯಚಬಾಹುಭಿಃ | ಅಬ್ರವೀತ್ಕಿಮಿದಂವತ್ಸವರ್ತತೆತದ್ಬ್ರವೀಹಿಮೆ ||೫|| ಉಶನಾಸ್ತ್ವಬ್ರವೀತ್ತತ್ರಗುರು ರ್ಯಜ್ಞಸಮೃದ್ಧಯೆ | ರಾವಣಂರಾಕ್ಷಸಶ್ರೇಷ್ಠಂದ್ವಿಜಶ್ರೇಷ್ಠೋಮಹಾತಪಾಃ ||೬|| ಅಹಮಾಖ್ಯಾಮಿತೇರಾಜನ್ ಶ್ರೂಯ

ವನಾಗಿ, ದಂಡಕಾನ್–ದಂಡಕಾರಣ್ಯ ಪ್ರದೇಶಗಳನ್ನು ಕುರಿತು, ಶೀಘ್ರಂ–ಜಾಗ್ರತೆಯಾಗಿ, ಸಂಪ್ರಯಯೌ–ಹೊರಟನು ||೨೩-೪||ಸಃ–ಆ ಖರನು, ತತ್ರ–ಆ ದಂಡಕಾರಣ್ಯದಲ್ಲಿ, ನಿಹತಕಂಟಕಂಯಥಾಭವತಿತಥಾ–ನಿಷ್ಕಂಟಕವಾದಂತೆ, ರಾಜ್ಯಂ–ರಾಜ್ಯವನ್ನು, ಕಾರಯಾಮಾಸ–ಮಾಡಿಸಿದನು, ಸಾಚಶೂರ್ಪ ನಖಾ–ಆಶೂರ್ಪ ನಖಿಯುಂನು, ಪ್ರೀತಾ–ಸಂತುಷ್ಟಳಾಗಿ, ದಂಡಕಾವನೆ, ದಂಡಕಾರಣ್ಯದಲ್ಲಿ, ನ್ಯವಸತ್–ಇರುತಿದ್ದಳು ||೨೩೪||

ಸಃದಶಗ್ರೀವಸ್ತು–ಆ ರಾವಣನಾದರೆ, ಖರಸ್ಯ–ಖರನಿಗೆ,ಘೋರಂ–ಭಯಂಕರಮಾದ,ತದ್ವನಂ–ಆ ದಂಡಕಾರಣ್ಯವನ್ನು,ದತ್ವಾ–ಕೊಟ್ಟು,ಭಗಿನೀಂಚ–ತಂಗಿಯನ್ನು, ಸಮಾಶ್ವಾಸ್ಯ–ಸಮಾಧಾನ ಗೊಳಿಸಿ, ಹೃಷ್ಟಃ–ಸಂತೋಷ ಯುಕ್ತನಾಗಿ,ಸ್ವಸ್ಥತರಃ–ಅತ್ಯಂತಸ್ವಸ್ಥ ಚಿತ್ತನು–ಅಭವತ್–ಆದನು||೧||ತತಃ–ಬಳಿಕ, ಮಹಾತ್ಮಾ–ಮಹಾತ್ಮನಾದ, ರಾಕ್ಷಸೇಂದ್ರಃ–ರಾವಣನು, ಸಹಾನುಗಃ–ಅನುಚರರಿಂದೊಡಗೂಡಿದವನಾಗಿ, ನಿಕುಂಭಿಳಾಂನಾಮ– ನಿಕುಂಭಿಲಾನಾಮಕವಾದ, ಲಂಕಾಯಾಃ–ಲಂಕಾಪಟ್ಟಣ ಸಂಬಂಧವಾದ, ಮಹತ್–ದೊಡ್ಡದಾದ, ತತ್ಕಾನನಂ–ಆವನವನ್ನು, ಪ್ರವಿವೇಶ–ಹೊಕ್ಕನು ||೨|| ತತ್ರ–ಆ ನಿಕುಂಭಿಳಾಕ್ಷೇತ್ರದಲ್ಲಿ, ಯೂಪಶತಾಕೀರ್ಣಂ– ಯೂಪಸ್ತಂಭಗಳ, ಶತ–ನೂರರಿಂದ, ಆಕೀರ್ಣಂ–ವ್ಯಾಪ್ತಮಾದ,ಸೌಮ್ಯಂ–ಮನೋಹರಮಾದ, ಚೈತ್ಯೋಪಶೋಭಿತಂ–ಚೈತ್ಯ–ಅಗ್ನ್ಯಾಯತನಗಳಿಂದ, ಉಪಶೋಭಿತಂ–ಪ್ರಕಾಶಿಸುತಿರುವ, ಶ್ರಿಯಾ–ಕಾಂತಿಯಿಂದ, (ಯಜ್ಞಸಂಭಾರಸಂಪತ್ತಿನಿಂದ) ಸಂಪ್ರದೀಪ್ತಮಿವ, ಪ್ರಜ್ವಲಿಸುತ್ತಿರುವಂತಿರುವ, ಅಧಿಷ್ಠಿತಂ–ಅಧಿಷ್ಠಾನ ಮಾಡಲ್ಪಡುತಿರುವ, ಯಜ್ಞಂ–ಯಜ್ಞವನ್ನು, ದದರ್ಶ–ಕಂಡನು ||೩|| ತತ್ರ–ಯಜ್ಞದಲ್ಲಿ, ತತಃ–ಬಳಿಕ, ಕೃಷ್ಣಾಜಿನಧರಂ–ಏಣೀಚರ್ಮವನ್ನು ಧರಿಸುತಿರುವ, ಕಮಂಡಲ ಕುಶೋಜ್ವಲಂ–ಉದಕ ಪಾತ್ರೆಗಳಿಂದಲೂನು ದರ್ಭೆಗಳಿಂದಲೂನು ಪ್ರಕಾಶಮಾನನಾದ, ಅರಿಂದಮಂ–ಶತ್ರುಸಂಹಾರಕನಾದ, ಮೇಘನಾದಂ–ಮೇಘನಾದನೆಂಬ, ಸ್ವಸುತಂ–ತನ್ನ ಮಗನನ್ನು, ದದರ್ಶ–ಕಂಡನು ||೪|| ರಕ್ಷಃಪತಿಃ–ರಾಕ್ಷಸಾಧಿಪತಿಯಾದ ರಾವಣನು, ಸಮಾಸಾದ್ಯ–ಬಂದು, ಬಾಹುಭಿಃ–ಭುಜಗಳಿಂದ, ಸಮಾಶ್ಲಿಷ್ಯಚ–ಆಲಿಂಗನವನ್ನು ಮಾಡಿ, ಹೇವತ್ಸ–ಎಲೈ ಹುಡುಗನೆ, ಇದಂಕಿಂ–ಇದುವಿನು,ವರ್ತತೆ–ನಡಿಯುತ್ತದೆ,ತತ್–ಅದರನ್ನು,ಮೆ–ಎನಗೆ,ಬ್ರವೀಹಿ–ಹೇಳು,ಇತಿ–ಈ ಪರಿಯಾಗಿ, ಅಬ್ರವೀತ್–ನುಡಿದನು||೫|| ತತ್ರ–ಆ ಯಜ್ಞಶಾಲೆಯಲ್ಲಿ, ಮಹಾತಪಾಃ–ಮಹಾತಪಸ್ವಿಯಾದ, ದ್ವಿಜಶ್ರೇಷ್ಠಃ–ಬ್ರಾಹ್ಮಣಶ್ರೇಷ್ಠನಾದ, ಯಜ್ಞಸಮೃದ್ಧಯೆ–ಯಜ್ಞಾಭಿ ವೃದ್ಧಿಗೊಸ್ಕರ, ಗುರುಃ–ಉಪದೇಶಕರ್ತನಾದ, ಉಶನಾಸ್ತು–ಶುಕ್ರಾಚಾರ್ಯನಾದರೆ, ರಾಕ್ಷಸಶ್ರೇಷ್ಠಃ–ರಾಕ್ಷಸೊತ್ತಮನಾದ,ರಾವಣಂ–ರಾವಣನನ್ನು ಕುರಿತು, ಅಬ್ರವೀತ್–ನುಡಿದನು ||೬|| ಹೇರಾಜನ್–ಎಲೈ ರಾವಣನೆ, ಅಹಂ–ನಾನು, ತೆ–ನಿನಗೆ, ಆಖ್ಯಾಮಿ–ಹೇಳುತ್ತೇನೆ, ಸರ್ವಮೇವಚ–ಸಮಸ್ತವೂಕೂಡೆ, ಶ್ರೂಯತಾಂ–ಕೇ

ಗೈಯ್ಯುತ್ತಿರಲೂ, ಆ ಶೂರ್ಪನಖಿಯು ಕಡು ಸಂತುಷ್ಟಳಾಗಿ ಆ ದಂಡಕಾರಣ್ಯದಲ್ಲಿದ್ದವಳಾದಳು ||೨೩೪||

—*ಉತ್ತರರಾಮಾಯಣದೊಳ್ ೨೪ನೇಸರ್ಗಂ ಮುಗಿದುದು*—

ಆ ರಾವಣನಾದರೆ ಭಯಂಕರಮಾದ ಆ ದಂಡಕಾಣ್ಯವನ್ನು ಖರನಿಗೆಕೊಟ್ಟು ತಂಗಿಯನ್ನು ಸಮಾಧಾನಗೊಳಿಸಿ ಸಂತೋಷಯುಕ್ತನಾಗಿ, ಸ್ವಸ್ಥವಾಗಿದ್ದನು ||೧|| ಅನಂತರದಲ್ಲಿ ಮಹಾತ್ಮನಾದ ರಾವಣನು ಅನುಚರರಿಂದೊಡಗೂಡಿದವನಾಗಿ ನಿಕುಂಭಿಳಾ ಯಂಬಹೆಸರುಳ್ಳ ಲಂಕಾಪಟ್ಟಣ ಸಂಬಂಧವಾದ ಮಹತ್ತರವಾದ ವನವನ್ನು ಪ್ರವೇಸಿಶಿದನು ||೨|| ಆ ನಿಕುಂಭಿಲಾವನದಲ್ಲಿ ನೂರಾರು ಯೂಪಗಳಿಂದ ಕೂಡಿಕೊಂಡಿರುವದಾಗಿಯೂ ಸೌಮ್ಯವಾಗಿಯೂ, ಅಗ್ನ್ಯಾಯತನಗಳಿಂದ ಕಂಗೊಳಿಸುತ್ತಿರುವದಾಗಿಯೂ, ಕಾಂತಿಯಿಂದ ಪ್ರಕಾಸಿಸುತ್ತಿರುವ, ಯಜ್ಞವಂಕಂಡವನಾದನು ||೩|| ಸಮನಂತರಕಾಲದಲ್ಲಿ ಆ ರಾವಣನು ಕೃಷ್ಣಾಜಿನವಂ ಧರಿಸಿದವನಾಗಿಯೂ ಕಮಂಡಲವೆಂಬ ಜಲಪೂರ್ಣವಾದ ಪಾತ್ರೆಯಿಂದಲೂ ಕುಶೆಗಳಿಂದಲೂ ಕಂಗೊಳಿಸುತ್ತಿರುವನಾಗಿಯೂ ಯಿರುವ ಮೇಘನಾದನೆಂಬ ತನ್ನ ಕುವರನಂಕಂಡು ಅವನಂ ಹೊಂದಿ ಕಡುಸಂತುಷ್ಟನಾಗಿ ಬಾಹುಗಳಿಂದಪ್ಪಿಕೊಂಡು, ಎಲೈ ಬಾಲಕನೆ! ಯಾಕೆ ಹೀಗಿರುವಿ, ಎನಗೆ ಪೇಳೆಂದುಕೇಳಲೂ ||೫|| ಆ ಯಜ್ಞಶಾಲೆಯಲ್ಲಿ ಮಹಾತಪಿಸ್ವಿಯಾಗಿಯೂ ಬ್ರಾಹ್ಮಣೋತ್ತಮನಾಗಿಯೂ ಗುರುವಾಗಿಯೂ ಯಿರುವ ಶುಕ್ರಾಚಾರ್ಯನು ಯಜ್ಞಾಭಿವೃದ್ಧಿಗೊಸ್ಕರ ರಾವಣನಂ ಕುರಿತಿಂತೆಂದನು ||೬|| ಎಲೈ ವಡೆಯನೆ! ನಿನಗೆನಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಾಂಸರ್ವ ಮೇವಚ । ಯಜ್ಞಾಸ್ತೇ ಸಪ್ತ ಪುತ್ರೇಣಪ್ರಾಪ್ತಾಸ್ಸುಬಹುವಿಸ್ತರಾಃ ॥೭॥ ಅಗ್ನಿಷ್ಟೋಮೋಶ್ವಮೇಧಶ್ಚ ಯಜ್ಞೋ ಬಹುಸುವರ್ಣಕಃ । ರಾಜಸೂಯಸ್ತಥಾಯಜ್ಞೋ ಗೋಮೇಧೋವೈಷ್ಣವಸ್ತಥಾ ॥೮॥ ಮಾಹೇಶ್ವರೇಪ್ರವೃತ್ತೇತುಯಜ್ಞೇ ಪುಂಭಿಸ್ಸುದುರ್ಲಭೇ । ವರಾಂಸ್ತೇ ಲಬ್ಧವಾನ್ ಪುತ್ರಸ್ಸಾಕ್ಷಾತ್ಪಶುಪತೇರಿಹ ॥೯॥ ಕಾಮಗಂಸ್ಯಂದನಂದಿವ್ಯಮಂತರೀಕ್ಷಚರಂಧ್ರುವಮ್ । ಮಾಯಾಂಚತಾಮಸೀಂನಾಮಯಯಾಸಂಪದ್ಯತೇತಮಃ ॥೧೦॥ ಏತಯಾಕಿಲಸಂಗ್ರಾಮೇಮಾಯಯಾ ರಾಕ್ಷಸೇಶ್ವರ । ಪ್ರಯುಧ್ಯತೋಗತಿಶ್ಶಕ್ಯಾನವಿಜ್ಞಾತುಂಸುರಾಸುರೈಃ ॥೧೧॥ ಅಕ್ಷಯಾವಿಷುಧೀಬಾಣೈಶ್ಚಾಪಂಚಾಪಿಸುದುರ್ಜಯಂ । ಅಸ್ತ್ರಂಚಬಲವತ್ಸೌಮ್ಯಶತ್ರುವಿಧ್ವಂಸನಂರಣೇ ॥೧೨॥ ಏತಾನ್ ಸರ್ವಾನ್ ವರಾನ್ ಲಬ್ಧ್ವಾ ಪುತ್ರಸ್ತೇವದಶಾನನ । ಅದ್ಯಯಜ್ಞಸಮಾಪ್ತೌತುತ್ವಾಂಪ್ರತೀಕ್ಷ್ಯ ಸ್ಥಿತೋಹ್ಯಯಂ ॥೧೩॥ ತತೋಬ್ರವೀದ್ದಶಗ್ರೀವೋನಶೋಭನಮಿದಂಕೃತಮ್ । ಪೂಜಿತಾಶ್ಶತ್ರವೋಯಸ್ಮಾದ್ದ್ರವ್ಯೈರಿಂದ್ರಪುರೋಗಮಾಃ ॥೧೪॥ ಏಹೀದಾನೀಂಕೃತಂವಿದ್ಧಿ ಕರ್ತುಮನ್ಯನ್ನಶಕ್ಯತೇ । ಆಗ

ಛಪ್ಪಡಲಿ, ತೇ–ನಿನ್ನ, ಪುತ್ರೇಣ–ಮಗನಿಂದ, ಸುಬಹುವಿಸ್ತಾರಾಃ–ಬಹಳವಿಸ್ತಾರಗಳಾದ, ಅಗ್ನಿಷ್ಟೋಮಃ–ಅಗ್ನಿಷ್ಟೋಮವೂ, ಅಶ್ವಮೇಧಃ–ಅಶ್ವಮೇಧವೂ ಬಹುಸುವರ್ಣಕಃ–ಅನೇಕದ್ರವ್ಯಸಾಧ್ಯವಾದ, ರಾಜಸೂಯಃ–ರಾಜಸೂಯವೆಂಬ, ಯಜ್ಞಃ–ಯಜ್ಞವೂ, ತಥಾ–ಹಾಗೆಯೆ, ಗೋಮೇಧಃ–ಗೋಮೇಧವೆಂಬ, ಯಜ್ಞಃ–ಯಜ್ಞವು, ತಥಾ–ಹಾಗೆಯೆ, ವೈಷ್ಣವಃ–ವಿಷ್ಣುದೇವತಾಕವಾದ, ಯಜ್ಞವೆಂಬ, ಸಪ್ತ–ಏಳಾದ, ಯಜ್ಞಾಃ–ಕ್ರತುಗಳು, ಪ್ರಾಪ್ತಾಃ–ಸಂಕಲ್ಪಮಾಡಲ್ಪಟ್ಟವು ॥೮॥ ಮಾಹೇಶ್ವರೇ–ಮಹೇಶ್ವರ ದೇವತಾಕವಾದ, ಪುಂಭಿಃ–ಪುರುಷರಿಂದ, ಸುದುರ್ಲಭೇ–ಹೊಂದಲಸಾಧ್ಯವಾದ, ಯಜ್ಞೇ–ಯಜ್ಞವು, ಪ್ರವೃತ್ತೇತು, ಪ್ರತ್ಯಕ್ಷವಾದ, ಪಶುಪತೇಃ–ಪಶುಪತಿಯಾದ ಪರಮೇಶ್ವರನ ದೆಸೆಯಿಂದ, ವರಾನ್–ವರಗಳನ್ನು, ಲಬ್ಧವಾನ್–ಪಡೆದನು ॥೯॥ ದಿವ್ಯಂ–ದೇವತಾಸಂಬಂಧವಾದ, ಅಂತರಿಕ್ಷಚರಂ–ಗಗನಮಾರ್ಗದಲ್ಲಿ ಸಂಚರಿಸುತ್ತಿರುವ, ಧ್ರುವಂ–ಶಾಶ್ವತವಾದ, ಕಾಮಗಂ–ಕಾಮಯಾನವಾದ, ಸ್ಯಂದನಂ–ರಥವನ್ನು, ಯಯಾ–ಯಾವಮಾಯೆಯಿಂದ, ತಮಃ–ಕತ್ತಲು, ಸಂಪದ್ಯತೇ–ಹುಟ್ಟುತ್ತದೊ, ತಾಂ–ಅಂಥಾ, ತಾಮಸೀಂನಾಮ, ತಾಮಸೀಎಂಬ ಮಾಯಾಂಚ–ಮಾಯೆಯನ್ನೂ ಕೂಡ, ಲಬ್ಧವಾನ್–ಹೊಂದಿದನು ॥೧೦॥ ಹೆ ರಾಕ್ಷಸೇಶ್ವರ–ಎಲೈರಾಕ್ಷಸಾಧಿಪತಿಯೆ, ಸಂಗ್ರಾಮ–ಕಾಳಗದಲ್ಲಿ, ಏತಯಾ–ಮಾಯಯಾಕಿಲ–ಈ ಮಾಯೆಯಿಂದಲಾದರೆ, ಪ್ರಯುಧ್ಯತಃ–ಯುದ್ಧಮಾಡುತಿರುವ ಪುರುಷನ, ಗತಿಃ–ಗಮನವು, ಸುರಾಸುರೈಃ–ದೇವರಾಕ್ಷಸರಿಂದ, ವಿಜ್ಞಾತುಂ–ತಿಳಿಯುವದಕ್ಕೋಸ್ಕರ, ನಶಕ್ಯಾ–ಸಾಧ್ಯವಲ್ಲಾ ॥೧೧॥ ಬಾಣೈಃ–ಬಾಣಗಳಿಂದ, ಅಂತಕೌ–ನಾಶರಹಿತಂಗಳಾದ, ಇಷುಧೀ – ಬತ್ತಳಿಕೆಗಳನ್ನು–ಸುದುರ್ಜಯಂ–ಜಯಿಸಲಸಾಧ್ಯವಾದ, ಚಾಪಂಚ–ಧನುಸಿನನ್ನು, ಹೆಸೌಮ್ಯ–ಎಲೈಸೌಮ್ಯನೆ, ರಣೆ–ಯುದ್ಧರಂಗದಲ್ಲಿ, ಶತ್ರುವಿಧ್ವಂಸನಂ–ಶತ್ರುನಾಶಕರವಾದ, ಬಲವತ್–ಬಲಿಷ್ಠವಾದ, ಅಸ್ತ್ರಂಚ–ಪಾಶುಪತಾಸ್ತ್ರವನ್ನು ॥೧೨॥ ಹೆ ದಶಾನನ–ಎಲೈ ದಶಕಂಠನೆ, ತವ–ನಿನ್ನ, ಅಯಂಪುತ್ರಃ–ಈ ಮಗನು, ಸರ್ವಾನ್–ಸಮಸ್ತಂಗಳಾದ, ಏತಾನ್ವರಾನ್–ಈ ವರಗಳನ್ನು, ಲಬ್ಧ್ವಾ–ಹೊಂದಿ, ಅದ್ಯ–ಈಗ, ಯಜ್ಞಸಮಾಪ್ತೌತು–ಯಜ್ಞಪೂರ್ತಿಯ ವಿಷಯದಲ್ಲಾದರೆ, ತ್ವಾಂ–ನಿನ್ನನ್ನು, ಪ್ರತೀಕ್ಷ್ಯ–ನಿರೀಕ್ಷಿಸಿಕೊಂಡು, ಸ್ಥಿತಃ–ಇರುತ್ತಾನಪ್ಪೆ ॥೧೩॥ ತತಃ–ಬಳಿಕ, ದಶಗ್ರೀವಃ–ರಾವಣನು, ಅಬ್ರವೀತ್–ನುಡಿದನು, ಯಸ್ಮಾತ್–ಯಾವಕಾರ್ಯದದೆಸೆಯಿಂದ, ಇಂದ್ರಪುರೋಗಮಾಃ–ದೇವೇಂದ್ರನೇ ಮೊದಲಾಗಿ ವುಳ್ಳ, ಶತ್ರವಃ–ಶತ್ರುಗಳಾದ ದೇವತೆಗಳು, ದ್ರವ್ಯೈಃ–ದ್ರವ್ಯಗಳಿಂದ, ಪೂಜಿತಾಃ–ಪೂಜಿಸಲ್ಪಟ್ಟರೋ, ಕೃತಂ–ಮಾಡಲ್ಪಟ್ಟ, ಇದಂ–ಈ ಕಾರ್ಯವು, ನಶೋಭನಂ–ಒಳ್ಳೇದಲ್ಲಾ ॥೧೪॥ ಏಹಿ–ಬಾ, ಇದಾನೀಂ–ಈಗ, ಕೃತಂ–ಮಾಡಲ್ಪಟ್ಟ, ಕಾರ್ಯವು, ಕೃತಂ–ಸಾಕು, ವಿದ್ಧಿ–ತಿಳಿ, ಅನ್ಯತ್–ಮತ್ತೊಂದು ಯಜ್ಞವು, ಕರ್ತುಂ–ಮಾಡಲಿಕ್ಕೋಸ್ಕರ, ನಶಕ್ಯ

ನು ಪೇಳುವೆನು ಕೇಳು ನಿನ್ನ ಪುತ್ರನಾದ ಈ ಮೇಘನಾದನು ಬಹಳ ಅತಿಶಯವಾದ ಏಳು ಯಜ್ಞಗಳಂಗೈದಿರುವನು, ಅದೆಂತೆನೆ, ಅಗ್ನಿಷ್ಟೋಮ ಅಶ್ವಮೇಧ, ಅನೇಕ ದ್ರವ್ಯಸಾಧಕವಾದರಾಜಸೂಯವು, ಗೋಮೇಧವು, ವೈಷ್ಣವು, ಇವುಗಳಂಗೈದು ಪುರುಷರಿಗೆಲ್ಲಾ ದುರ್ಲಭವಾದ ಮಾಹೇಶ್ವರ ಯಜ್ಞವಂ ಮಾಡುತ್ತಿರಲು, ನಿನ್ನ ಪುತ್ರನು, ಸಾಕ್ಷಾತ್ಪರಮೇಶ್ವರನಿಂದ ಅನೇಕ ವರಗಳಂ ಪಡೆದಿರುವನು ॥೯॥ ಅದೆಂತೆನೆ,—ಅಂತರಿಕ್ಷಗಾಮಿನಿಯಾದ ಮತ್ತು ಶಾಶ್ವತವಾದ ಅಪೇಕ್ಷಿಸಿದಂತೆ ಗಮನಶೀಲವಾದ ವಿಮಾನವನ್ನು ಮತ್ತು ತಾಮಸವೆಂಬ ಮಾಯೆಯನ್ನೂ ಕೂಡ ಹೊಂದಿರುವನು ॥ ಎಲೈ ರಾಕ್ಷಸೇಶ್ವರನೆ! ಈ ಮಾಯೆಯಿಂದ ಸಂಗ್ರಾಮಗಳಲ್ಲಿ ಯುದ್ಧಮಾಡುತಿರುವನ ಗತಿಯಂ ಹುಡುಕುವದಕ್ಕೆ ದೇವರಾಕ್ಷಸರಿಂದಲೂ ಆಗಲಾರದು ॥೧೧॥ ಮತ್ತು ಅಕ್ಷಯವಾದ ಸರಳು ಬತ್ತಳಿಕೆಗಳನ್ನು ಬಾಣಗಳನ್ನು ದುರ್ಲಭವಾದ ಧನುಸ್ಸನ್ನು, ರಣರಂಗದಲ್ಲಿ ಶತ್ರುಗಳಂ ಧ್ವಂಸಿಸುತ್ತಿರುವ ಮಹಾಬಲಿಷ್ಠವಾದ ಅಸ್ತ್ರವನ್ನು ಇವುಗಳನ್ನೆಲ್ಲಾ, ನಿನ್ನ ಪುತ್ರನಾದ ಮೇಘನಾದನು ಪಡದು ಯಜ್ಞ ಪರಿಪೂರ್ತಿಯಂಗೈದು ನಿನ್ನ ಸಂದರ್ಶನಾರ್ಥವಾಗಿ ಕಾದುಕೊಂಡಿರುವನೆಂದು ನುಡಿಯಲೂ ॥೧೩॥ ಅನಂತರದಲ್ಲಿ ರಾವಣನಿಂತೆಂದನು—ಎಲೈಗುರುವೆ ! ಶತ್ರುಗಳಾದ ಇಂದ್ರಾದಿ ದೇವತೆಗಳೆಲ್ಲರೂ ದ್ರವ್ಯಾದಿಗಳಿಂದ ಯಾವಕಾರಣದಿಂದ ಪೂಜಿಸಲ್ಪಟ್ಟರೋ ಆದಕಾರಣ ನೀನು ಮಾಡಿದ ಈ ಯಜ್ಞವು ಅನರ್ಥಕವಾದ್ದಾಯಿತು, ಎಲೈ ಮಗನೆ ಇಲ್ಲಿಬಾ, ಇನ್ನಾದರೂ ತಿಳಿದುಕೋ ಮತ್ತೊಂದು ಯಾಗವುಮಾಡಲಾರದು, ಎಲೈ ಸೌಮ್ಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚ್ಛ ಸೌಮ್ಯಗಚ್ಛಾಮಃಸ್ವಮೇವಭವನಂಪ್ರತಿ ॥೧೫॥ ತತೋಗತ್ವಾ ದಶಗ್ರೀವಸ್ಸಪುತ್ರಸ್ಸವಿಭೀಷಣಃ । ಸ್ತ್ರಿಯೋಽವತಾರ ಯಾಮಾಸಸರ್ವಾಸ್ತಾ ಬಾಷ್ಪವಿಕ್ಲಬಾಃ ॥೧೬॥ ಲಕ್ಷಣ್ಯೋಯಾರತ್ನಭೂತಾಃದೇವದಾನವರಕ್ಷಸಾಂ । ನಾನಾಭೂಷ ಣಸಂಪನ್ನಾಜ್ವಲಂತ್ಯಸ್ಸ್ವೇನತೇಜಸಾ ॥೧೭॥ ವಿಭೀಷಣಸ್ತುತಾನಾರೀರ್ದೃಷ್ಟ್ವಾಶೋಕಸಮಾಕುಲಾಃ । ತಸ್ಯತಾಂಚ ಮತಿಂಜ್ಞಾತ್ವಾಧರ್ಮಾತ್ಮಾವಾಕ್ಯಮಬ್ರವೀತ್ ॥೧೮॥ ಈದೃಶೈಸ್ತ್ವಂಸಮಾಚಾರೈರ್ಯಶೋರ್ಥಕುಲನಾಶನೈಃ। ಧರ್ಷ ಣಂಪ್ರಾಣಿನಾಂದತ್ವಾಸ್ವಮತೇನವಿಚೇಷ್ಟಸೇ ॥೧೯॥ ಪತೀನ್ಸ್ವೇಷಾಂಧರ್ಷಯಿತ್ವೈತಾಸ್ತ್ವಯಾನೀತಾವರಾಂಗನಾಃ ।ತ್ವಾಮತಿ ಕ್ರಮ್ಯಮಧುನಾರಾಜನ್ಕುಂಭೀನಸೀಹೃತಾ ॥೨೦॥ ರಾವಣಸ್ತ್ವಬ್ರವೀದ್ವಾಕ್ಯಂನಾವಗಚ್ಛಾಮಿಕಿನ್ನ್ವಿದಂ ।ಕೋಽಯಂ ಯಸ್ತ್ವಯಾಖ್ಯಾತೋಮಧುರಿತ್ಯೇವನಾಮತಃ ॥೨೧॥ವಿಭೀಷಣಸ್ತುಸಂಕ್ರುದ್ಧಃಭ್ರಾತರಂವಾಕ್ಯಮಬ್ರವೀತ್ । ಶ್ರೂ ಯತಾಮಸ್ಯಪಾಪಸ್ಯಕರ್ಮಣಃಫಲಮಾಗತಂ॥೨೨॥ ಮಾತಾಮಹಸ್ಯಯೋಽಸ್ಮಾಕಂಜ್ಯೇಷ್ಠೋಭ್ರಾತಾಸುಮಾಲಿನಃ। ಮಾ

---

ತೇ-ಯೋಗ್ಯವಲ್ಲ,ಹೆಸೌಮ್ಯ-ಎಲೈ ಸೌಮ್ಯನೆ, ಆಗಚ್ಛ-ಬಾ, ಸ್ವಂ-ಸ್ವಕೀಯ್ಯವಾದ, ಭವನಮೇವಪ್ರತಿ-ಮನೆಯನ್ನೇ ಕುರಿತು, ಗಚ್ಛಾಮಃ-ಹೋ ಗುವಣ ॥೧೫॥ ತತಃ-ಬಳಿಕ, ದಶಗ್ರೀವಃ-ರಾವಣನು, ಸಪುತ್ರಃ-ಮಗನಿಂದ ಕೂಡಿದವನಾಗಿ, ಸವಿಭೀಷಣಃ-ವಿಭೀಷಣನಿಂ ದೊಡಗೂಡಿದವನಾಗಿ, ಗ ತ್ವಾ-ಬಂದು, ಬಾಷ್ಪವಿಕ್ಲಬಾಃ, ಬಾಷ್ಪ-ಕಣ್ಣೀರುಗಳಿಂದ, ವಿಕ್ಲಬಾಃ-ವಿಹ್ವಲಚಿತ್ತರಾದ, ಸರ್ವಾಃ-ಸಮಸ್ತರಾದ, ತಾಸ್ಸ್ತ್ರಿಯಃ-ಆ ಹೆಂಗಸರನ್ನು ಅವತಾರಯಾಮಾಸ-ಪುಷ್ಪಕದದೆಸೆಯಿಂದಿಳಿಸಿದನು,ನಾನಾಭೂಷಣಸಂಪನ್ನಾಃ-ನಾನಾಭೂಷಣ ಅನೇಕವಿಧವಾದ ಅಲಂಕಾರಗಳಿಂದ, ಸಂಪನ್ನಾಃ-ಕೂಡಿ ಕ್ಕೊಂಡಿರುವ, ಲಕ್ಷಣ್ಯಾಃ-ಸಲ್ಲಕ್ಷಣಯುಕ್ತರಾದ, ರತ್ನಭೂತಾಃ-ರತ್ನಪ್ರಾಯರಾದ, ಸ್ವೇನ-ಸ್ವಕೀಯ್ಯವಾದ, ತೇಜಸಾ-ತೇಜಸ್ಸಿನಿಂದ, ಜ್ವಲಂತ್ಯಃ- ಹೊಳೆಯುತ್ತಿರುವ, ಯಾಃ-ಯಾವಸ್ತ್ರೀಯರು, ದೇವದಾನವರಕ್ಷಸಾಂ-ದೇವ, ದೇವತೆಗಳದಾನವ-ದಾನವರೆಂಬ ರಾಕ್ಷಸಜಾತೀಯ್ಯರ,ರಕ್ಷಸಾಂ-ರಾಕ್ಷಸ ರ, ಸಮ್ಮಂಧಿಗಳಾದವರೋ ॥೧೭॥ ವಿಭೀಷಣಸ್ತು-ವಿಭೀಷಣನಾದರೆ, ಶೋಕಸಮಾಕುಲಾಃ-ಶೋಕ-ದುಃಖದಿಂದ, ಸಮಾಕುಲಾಃ-ವ್ಯಾಕುಲಚಿತ್ತರಾ ದ, ತಾನಾರೀಃ-ಆ ಹೆಂಣುಮಕ್ಕಳನ್ನು, ದೃಷ್ಟ್ವಾ-ಕಂಡು, ಧರ್ಮಾತ್ಮಾ-ಧರ್ಮಬುದ್ಧಿಯುಳ್ಳವ ನಾದಕಾರಣ, ತಸ್ಯ-ಆ ರಾವಣನ, ತಾಂ-ಮತಿಂಚ, ಆ ಬುದ್ಧಿಯನ್ನು, ಜ್ಞಾತ್ವಾ-ತಿಳಿದು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧೮ ॥ ಯಶೋರ್ಥಕುಲನಾಶನೈಃ-ಕೀರ್ತಿಯನ್ನು, ಅರ್ಥವನ್ನು, ಕುಲವನ್ನು, ನಾಶನಮಾಡುತ್ತಿರುವ, ಈದೃಶೈಃ-ಇಂಥಾವುಗಳಾದ, ಸಮಾಚಾರೈಃ-ವ್ಯಾಪಾರಗಳಿಂದ, ತ್ವಂ-ನೀನು, ಪ್ರಾಣಿನಾಂ-ಪ್ರಾಣಿಗಳಿಗೆ, ಧರ್ಷ ಣಂ-ಹಿಂಸೆಯನ್ನು, ದತ್ವಾ-ಕೊಟ್ಟು, ಸ್ವಮತೇನ-ಸ್ವಬುದ್ಧಿಯಿಂದಲೆ, ವಿಚೇಷ್ಟಸೇ-ನಡಿಯುತಿದ್ದೀ ॥೧೯॥ ಪತೀನ್-ಇವರ ಗಂಡಂದಿರನ್ನು, ಧರ್ಷಯಿ ತ್ವಾ- ತಿರಸ್ಕರಿಸಿ, ತ್ವಯಾ-ನಿನ್ನಿಂದ,ಏತಾಃ-ವರಾಂಗನಾಃ-ಈ ಶ್ರೇಷ್ಠರಾದ ಹೆಂಗಸರು, ನೀತಾಃ-ತರಲ್ಪಟ್ಟರು, ಹೇರಾಜನ್-ಎಲೈ ಅರಸೆ, ತ್ವಾ-ನಿ ನ್ನನ್ನು, ಅತಿಕ್ರಮ್ಯ-ಉಲ್ಲಂಘಿಸಿ, ಮಧುನಾ-ಮಧ್ವಾಸುರನಿಂದ, ಕುಂಭೀನಸಿ-ಕುಂಭೀನಸಿಎಂಬ ರಾಕ್ಷಸಸ್ತ್ರೀಯೂ, ಹೃತಾ-ಅಪಹರಿಸಲ್ಪಟ್ಟಳು ॥ ರಾವಣಸ್ತು-ರಾವಣನಾದರೆ, ಇದುಕಿನ್ನು, ಇದುಯೆನು, ನಾವಗಚ್ಛಾಮಿ-ನಾನುಕಾಣೆನು, ತ್ವಯಾ-ನಿನ್ನಿಂದ, ಖ್ಯಾತಃ-ಹೇಳಲ್ಪಟ್ಟ, ನಾಮತಃ-ಹೆಸ ರಿನಿಂದ, ಮಧುರಿತ್ಯೇವ-ಮಧುವೆಂಬ, ಯಃ-ಯಾವರಾಕ್ಷಸನುಂಟೊ, ಅಯಂ-ಇವನು, ಕೋಽಯಂ-ಯಾವ್ವನೊ, ಇತಿ-ಇಂತೆಂದು, ಅಬ್ರವೀತ್-ನುಡಿದ ನು ॥೨೧॥ ವಿಭೀಷಣಸ್ತು-ವಿಭೀಷಣನಾದರೆ, ಸಂಕ್ರುದ್ಧಃ-ಕೋಪಿಷ್ಠನಾಗಿ, ಭ್ರಾತರಂ-ಅಣ್ಣನನ್ನು ಕುರಿತು, ವಾಕ್ಯಂ-ವಚನವನ್ನು, ಅಬ್ರವೀತ್- ನುಡಿದನು, ಶ್ರೂಯತಾಂ-ಕೇಳಲ್ಪಡಲಿ, ಅಸ್ಯಪಾಪಸ್ಯ-ಈ ಪಾಪರೂಪವಾದ, ಕರ್ಮಣಃ-ಪರಸ್ತ್ರೀಗಮನ ರೂಪಕೃತ್ಯಕ್ಕೆ, ಫಲಂ-ಫಲವು, ಆಗತಂ-ಪ್ರಾ ಪ್ತವಾಯಿತು ॥೨೨॥ ಅಸ್ಮಾಕಂ-ನಮಗೆ, ಮಾತಾಮಹಸ್ಯ-ಮಾತಾಮಹನಾದ, ಸುಮಾಲಿನಃ-ಸುಮಾಲಿಗೆ, ಜ್ಯೇಷ್ಠೋಭ್ರಾತಾ-ದೊಡ್ಡಣ್ಣನಾದ, ನ್ಯ

---

ನೆ! ನಮ್ಮ ಮನೆಯಂ ಕುರಿತು ತೆರುಳೋಣೆಂದು ಮಗನಂ ಕುರಿತು ಹೇಳಿದನು॥೧೫॥ ಅನಂತರದಲ್ಲಿ ದಶಕಂಠನು ಪುತ್ರ ಸಹಿತನಾಗಿಯೂ ವಿಭೀಷಣಯುಕ್ತನಾಗಿಯೂ ಆಗಿ, ತಾನು ಅಪಹರಿಸಿಕೊಂಡು ಬಂದ ಮತ್ತು, ಬಹಳವಾಗಿ ಅಳು ತ್ತಿರುವರಾಗಿಯೂ, ಸಲ್ಲಕ್ಷಣಯುಕ್ತರಾಗಿಯೂ ರತ್ನಗಳಂತೆ ಕಂಗೊಳಿಸುತ್ತಿರುವರಾಗಿಯೂ ನಾನಾ ಭೂಷಣಗಳಿಂದ ಅಲಂಕರಿಸಲ್ಪಟ್ಟವರಾಗಿಯೂ ಸ್ವಕೀಯ್ಯತೇಜಸ್ಸಿನಿಂದಾ ಹೊಳೆಯುತ್ತಿರುವರಾಗಿಯೂ, ಆಗಿರುವ, ದೇವದಾನವ ರಾಕ್ಷಸಾಂಗನೆಯರನ್ನು ಆ ಪುಷ್ಪಕ ವಿಮಾನದಿಂದಿಳಿಸಿದನು ॥೧೭॥ ಆ ಕಾಲದಲ್ಲಿ ಧರ್ಮಾತ್ಮನಾದ ವಿಭೀಷಣನಾದರೆ ಶೋಕಾಕ್ರಾಂತರಾದ ಆ ನಾರಿಯರಂ ಕಂಡು ರಾವಣನ ಆ ದುರ್ಬುದ್ಧಿಯನ್ನರಿತು ಇಂತೆಂದನು॥೧೮॥ ಯಶಸ್ಸನ್ನು, ಅ ರ್ಥವನ್ನು, ಕುಲವನ್ನು, ನಾಶಮಾಡುತ್ತಿರುವ ಇಂಥಾ ದುಷ್ಕಾರ್ಯಗಳಿಂದ, ಪ್ರಾಣಿಗಳಂ ತಿರಸ್ಕರಿಸಿ, ನಿನ್ನ ಬುದ್ಧಿ ಬಂ ದಂತೆಯೇ ತಿರುಗುತ್ತೀಯಲ್ಲಾ ॥೧೯॥ ಎಲೈ ರಾಕ್ಷಸರಾಜನೆ ! ಈ ಅಂಗನೆಯರ ಪತಿಗಳಂ ಹೆದಿರಿಸಿ ಈ ಶ್ರೇಷ್ಠರಾದ ಹೆಂಗಸರು ನಿನ್ನಿಂದ ಹ್ಯಾಗೆ ತರಲ್ಪಟ್ಟರೊ, ಹಾಗೆ ನಿನ್ನನ್ನತಿಕ್ರಮಿಸಿ ಮಧುವೆಂಬ ದಾನವನು ಕುಂಭೀನಸಿಯನ್ನು ಅಪಹರಿಸಿಕೊಂಡು ಹೋಗಿರುವನೆಂದು ವಿಭೀಷಣನು ನುಡಿಯಲು, ರಾವಣನಿಂತೆಂದನು, ಎಲೈವಿಭೀಷಣನೆ, ನಿನ್ನಿಂದ ಹೇಳಲ್ಪಟ್ಟ ಮಧುವೆಂಬವನ್ಯಾರು? ಅವನೇನುಗೈದಿರುವನು, ಇದನ್ನು ನಾನು ಕಾಣೆನೆಂದು ರಾವಣನು ಹೇಳಿದನು॥೨೧

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲ್ಯವಾನಿತಿವಿಖ್ಯಾತೋವೃದ್ಧಃಪ್ರಾಜ್ಞೋನಿಶಾಚರಃ ॥೨೩॥ ಜನನ್ಯಾಭಗಿನೀಜ್ಯೇಷ್ಠಾ ನಾಮ್ನಾಪುಷ್ಪೋತ್ಕಟಾಸ್ಮೃತಾ ॥ ಪಿತಾಜ್ಯೇಷ್ಠೋ ಜನನ್ಯಾಶ್ಚ ಹ್ಯಸ್ಮಾಕಂತ್ವಾರ್ಯಕೋಭವತ । ತಸ್ಯಕುಂಭೀನಸೀನಾಮದುಹಿತುರ್ದುಹಿತಾಭವತ ॥೨೪॥ ಮಾತೃಷ್ವಸುರಥೋಸ್ಮಾಕಂಸಾಕನ್ಯಾಚಾನಲೋದ್ಭವಾ । ಭವತ್ಯಸ್ಮಾಕಮೇಷಾಹಿಭ್ರಾತೄಣಾಂಧರ್ಮತಸ್ಸ್ವಸಾ॥೨೫॥ ಸಾಹೃತಾಮಧುನಾರಾಜನ್ರಾಕ್ಷಸೇನಬಲೀಯಸಾ । ಯಜ್ಞಪ್ರವೃತ್ತೆಪುತ್ರೇತೇಮಯಿಚಾಂತರ್ಜಲೋಷಿತೇ। ಕುಂಭಕರ್ಣೆ ಮಹಾರಾಜನಿದ್ರಾಮನುಭವತ್ಯತ॥ ೨೬॥ ನಿಹತ್ಯರಾಕ್ಷಸಶ್ರೇಷ್ಠಾನಮಾತ್ಯಾನಿಹಸಂಮತಾನ್ । ಧರ್ಷಯಿತ್ವಾಹೃತಾರಾಜನ್ಗುಪ್ತಾಪ್ಯಂತಃಪುರೇತವ ॥೨೭॥ ಶ್ರುತ್ವಾಚೈತನ್ಮಯಾಸರ್ವಂಕ್ಷಾಂತಮೇವಹತೋನಸಃ। ಯಸ್ಮಾದವಶ್ಯಂದಾತವ್ಯಾಕನ್ಯಾಭರ್ತ್ರೇಹಿದಾತೃಭಿಃ ॥೨೮॥ ತದೇತತ್ಕರ್ಮಣೋಹ್ಯಸ್ಯಫಲಂಪಾಪಸ್ಯದುರ್ಮತೇ । ಅಸ್ಮಿನ್ನೇವಾಭಿಸಂಪ್ರಾಪ್ತಂಲೋ

ದ್ಧಃ–ವೃದ್ಧನಾದ, ಪ್ರಾಜ್ಞಃ–ಪಂಡಿತನಾದ, ಯಃನಿಶಾಚರಃ – ಯಾವರಾಕ್ಷಸನು, ಮಾಲ್ಯವಾನಿತಿ – ಮಾಲ್ಯವಂತನೆಂದು, ವಿಖ್ಯಾತಃ–ಪ್ರಸಿದ್ಧನಾದವನೋ॥೨೩॥ಅಸ್ಮಾಕಂ–ನಮಿಗೆ, ಜನನ್ಯಾಃ–ತಾಯಿಯಾದ ಕೈಕಸಿಗೆ, ಜ್ಯೇಷ್ಠಾಭಗಿನೀ–ಅಕ್ಕನಾದ, ನಾಮ್ನಾ – ಹೆಸರಿನಿಂದ, ಪುಷ್ಪೋತ್ಕಟಾ – ಪುಷ್ಪೋತ್ಕಟೆಯೆಂಬವಳಾಗಿ, ಸ್ಮೃತಾ – ಹೇಳಲ್ಪಡುತಿದ್ಧಾಳೆ, ಜನನ್ಯಾಃ – ತಾಯಿಯಾದ ಕೈಕಸಿಗೆ, ಜ್ಯೇಷ್ಠಃಪಿತಾ – ದೊಡ್ಡ ತಂದೆಯಾದ ಮಾಲ್ಯವಂತನು, ಅಸ್ಮಾಕಂತು – ನಮಿಗಾದರೆ, ಆರ್ಯಕಃ – ಮಾತಾಮಹನು, ಅಭವತ್–ಆದನು ॥ ೨೪ ॥ ತಸ್ಯ–ಆ ಮಾಲ್ಯವಂತನಿಗೆ, ಕುಂಭೀನಸೀನಾಮ–ಕುಂಭೀನಸಿಯೆಂಬವಳು,ದುಹಿತುರ್ದುಹಿತಾ – ಮಗಳಮಗಳಾದವಳು, ಅಭವತ್–ಆದಳು ॥ ಅಥೋ–ಬಳಿಕ,ಅಸ್ಮಾಕಂ–ನಮಿಗೆ, ಮಾತೃಷ್ವಸುಃ – ಚಿಕ್ಕಮ್ಮನಾದ, ಅನಲೋದ್ಭವಾ– ಅನಲಾದೇವಿಯಲ್ಲಿ ಜನಿಸಿದ,ಸೈಷಾ – ಆಈ, ಕನ್ಯಾಚ – ಕುಂಭೀನಸೀ ಎಂಬ ಕನ್ಯಕೆಯು, ಭ್ರಾತೄಣಾಂ– ಅಣ್ಣ ತಮ್ಮಂದರಾದ ಅಸ್ಮಾಕಂ–ನಮ್ಮಗಳಿಗೆ, ಧರ್ಮತಃ–ಧರ್ಮದ ದೆಶೆಯಿಂದ, ಸ್ವಸಾ–ತಂಗಿಯು, ಭವತಿಹಿ–ಆಗಿಧ್ಧಾಳಷ್ಟೆ ॥೨೫॥ ಹೆ ರಾಜನ್–ಎಲೈ ರಾಜನೆ, ತೆಪುತ್ರೇ–ನಿನ್ನ ಮಗನಾದ ಮೇಘನಾದನು, ಯಜ್ಞಪ್ರವೃತ್ತೇಸತಿ, ಯಜ್ಞದಲ್ಲಿ ಪ್ರವರ್ತಿಸಿದಂಥಾವನಾಗಲೀಕಾಗಿ, ಮಯಿಚ–ನಾನಾದರೆ, ಅಂತರ್ಜಲೋಷಿತೆಸತಿ–ಉದಕಮಧ್ಯದಲ್ಲಿರಲೀಕಾಗಿ, ಹೆ ಮಹಾರಾಜ–ಎಲೈ ಮಹಾರಾಜನೆ, ಕುಂಭಕರ್ಣೆಉತ– ಕುಂಬಕರ್ಣನೂಕೂಡೆ, ನಿದ್ರಾಂ – ನಿದ್ರೆಯನ್ನು, ಅನುಭವತಿಸತಿ – ಅನುಭವಿಸುತಿರುವನಾಗುತಿರಲೀಕಾಗಿ, ಹೆರಾಜನ್ – ಎಲೈ ಅರಸೆ, ಬಲೀಯಸಾ – ಬಲಿಷ್ಠನಾದ, ಮಧುನಾ – ಮಧ್ವಾಸುರನಿಂದ, ತವ–ನಿನ್ನ, ಅಂತಃಪುರೆ–ಅಂತಃಪುರದಲ್ಲಿ, ಗುಪ್ತಾ – ಸಂರಕ್ಷಣೆಮಾಡಲ್ಪಟ್ಟ, ಸಾಕನ್ಯಾ–ಆ ಕುಂಭೀನಸಿಯೆಂಬ ಆ ಹುಡುಗಿಯು, ಇಹ – ಇಲ್ಲಿ, ಸಮ್ಮತಾನ್–ನಮಿಗಿಷ್ಟರಾದ, ರಾಕ್ಷಸಶ್ರೇಷ್ಠಾನ್–ರಕ್ಕಸರಲ್ಲಿ ಮುಖ್ಯರಾದ, ಅಮಾತ್ಯಾನ್–ಮಂತ್ರಿಗಳನ್ನು,ನಿಹತ್ಯ–ಹೊಡೆದು, ಧರ್ಷಯಿತ್ವಾ–ತಿರಸ್ಕಾರಮಾಡಿ, ಹೃತಾ–ಅಪಹರಿಸಲ್ಪಟ್ಟಳು॥೨೬॥೨೭॥೨೮॥ಏತತ್ಸರ್ವಂ–ಈ ಸಮಸ್ತ ವೃತ್ತಾಂತವನ್ನು,ಶ್ರುತ್ವಾ–ಕೇಳಿ,ಮಯಾ–ನನ್ನಿಂದ,ಕ್ಷಾಂತಮೇವ–ಕ್ಷಮಿಸಲ್ಪಟ್ಟಿತು, ಸಃ–ಆ ಮಧ್ವಾಸುರನು, ಮಯಾ–ನನ್ನಿಂದ,ನಹತಃ–ಹೊಡೆಯಲ್ಪಡಲಿಲ್ಲಾ, ಯಸ್ಮಾತ್–ಯಾವಕಾರಣದದೆಶೆಯಿಂದ, ದಾತೃಭಿಃ–ಕನ್ಯಾದಾತೃಗಳಿಂದ, ಕನ್ಯಾ–ಅವಿವಾಹಿತಳಾದ ಹೆಣುಮಳನು, ಭರ್ತ್ರೇ–ಗಂಡನಿಗೋಸ್ಕರ,ಅವಶ್ಯಂ–ನಿಶ್ಚಯವಾಗಿ, ದಾತವ್ಯಾಹಿ–ಕೊಡತಕ್ಕವಳಷ್ಟೆ॥೨೯॥ಹೆದುರ್ಮತೆ–ಎಲೈ ದುಷ್ಟಬುದ್ಧಿಯುಳ್ಳವನೆ, ಅಸ್ಯಪಾಪಸ್ಯ–ಈ ಪಾಪರೂಪವಾದ, ಕರ್ಮಣಃ–ವ್ಯಾಪಾರಕ್ಕೆ, ತದೇತತ್–ಆಈ,ಫಲಂ– ಫಲವು, ಅಸ್ಮಿನ್ನೇವಲೋಕೆ–ಈ ಲೋಕದಲ್ಲಿಯೆ, ಅಭಿಸಂಪ್ರಾಪ್ತಂ–ಪ್ರಾಪ್ತವಾಯಿತು,ತೆ–ನಿನಗೆ, ವಿಹಿತಂ–ತಿಳದದ್ದು, ಅಸ್ತು–ಆಗಲಿ ॥೩೦॥ ತತಃ–ಬಳಿಕ, ದಶಗ್ರೀವಃ–ದಶಕಂಠನು, ಕೃ

ಆ ಬಳಿಕ ವಿಭೀಷಣನಾದರೆ ಮಹಾ ಕೋಪವುಳ್ಳವನಾಗಿ, ಅಣ್ಣನಂಕುರಿತಿಂತೆಂದನು,ಎಲೈಅಣ್ಣನೇ!ನೀನು ಮಾಡಿರುವ ಈ ಪಾಪಕೃತ್ಯಕ್ಕೆ,ಫಲರೂಪವಾಗಿ ಬಂದಿರುವ ಈವಾರ್ತೆಯಂಕೇಳು॥೨೨॥ನಮಗೆಮಾತಾಮಹನಾದ ಸುಮಾಲಿಗೆ, ಜ್ಯೇಷ್ಠ ಭ್ರಾತನಾದ ಮಾಲ್ಯವಂತನೆಂದು ಮಹಾಖ್ಯಾತನಾದ, ಮಹಾಪ್ರಾಜ್ಞನಿರುವನಷ್ಟೆ॥೨೩॥ ಆತನ ಮಗಳಾದ, ಮತ್ತು, ನಮ್ಮ ತಾಯಿಗೆ ಜ್ಯೇಷ್ಠ ಭಗಿನಿಯಾದವಳು ಪುಷ್ಪೋತ್ಕಟೆಯೆಂದು ಕರೆಯಲ್ಪಡುವಳು ॥೨೪॥ ನಮ್ಮ ತಾಯಿಗೆ ದೊಡ್ಡ ತಂದೆಯಾದ ಆ ಮಾಲ್ಯವಂತನು ನಮಗಾದರೆ, ಮಾತಾಮಹನಾದನು. ಆತನಿಗೆ ಈ ಕುಂಭೀನಸೀ ಎಂಬ ಕನ್ಯೆಕೆಯು ಮಮ್ಮಗಳಾಗಬೇಕು. ಅದು ಹ್ಯಾಗಂದರೆ, ನಮ್ಮ ತಾಯಿಯ ಜ್ಯೇಷ್ಠ ಭಗಿನಿಯಾದ ಅನಲೆಯೆಂಬವಳ ಮಗಳಾದ ಆ ಕುಂಭೀನಸಿಯು ನಮಗೆ ತಂಗಿಯಾದವಳಷ್ಟೆ॥೨೫॥ ಎಲೈ ರಾಜನಾದ ರಾವಣನೆ, ನಿನ್ನಮಗನಾದ ಮೇಘನಾದನು ಯಜ್ಞವಂಗೈಯ್ಯುತ್ತಿರಲೂ, ನಾನಾದರೆ ಉದಕಮಧ್ಯದಲ್ಲಿರುವನಾಗಲೂ, ಕುಂಭಕರ್ಣನೂ ಕೂಡ,ಮಹಾ ನಿದ್ರಾಪರವಶನಾಗಿರಲೂ, ಬಲವಂತನಾದ ಮಧುವೆಂಬದೈತ್ಯನು, ಈ ಲಂಕಾಪುರದಲ್ಲಿದ್ದ ರಾಕ್ಷಸ ಶ್ರೇಷ್ಠರನ್ನೂ ಮತ್ತೂ ಮಂತ್ರಿಗಳನ್ನೂ ಸಹಾ ಹೆದರಿಸಿ, ಅಂತಃಪುರದಲ್ಲಿದ್ದ ನಿನ್ನತಂಗಿಯಾದ ಕುಂಭೀನಸಿಯನ್ನಪಹರಿಸಿಕೊಂಡು ಹೋದನು. ಇದೆಲ್ಲಾ ಕೇಳಿಯೂಕೂಡಾ ನಾನು ಸೈರಿಸಿಕೊಂಡು ಅವನಂ ಕೊಲ್ಲಲಿಲ್ಲಾ, ಯಾಕೆಂದರೆ,—ಕನ್ಯಕೆಯು ವಿವಾಹವಿಲ್ಲದ ಯಾವನಿಗಾದರೂ ಒಬ್ಬಾನೊಬ್ಬ ಪುರುಷರಿಗೆ ಕೊಡತಕ್ಕವಳಷ್ಟೆ? ಎಲೈ ದುರ್ಬುದ್ಧಿಯುಳ್ಳವನೆ! ನೀನು ಮಾಡುತಿರುವ ಈ ಪಾಪಕೃತ್ಯಕ್ಕೆ, ಈ ಲೋಕದಲ್ಲಿಯೇ ಇಂಥಾ ಫಲವುಂಟಾಯಿತು, ಈಗಲಾದರೂ ನೀನು ತಿಳಿದುಕೋ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕೆವಿದಿತಮಸ್ತುತೆ ॥ ೨೦ ॥ ತತೋಬ್ರವೀದ್ದಶಗ್ರೀವಃಕ್ರುದ್ಧಸ್ಸಂರಕ್ತಲೋಚನಃ । ಕಲ್ಪ್ಯತಾಂಮೆರಥಶ್ಶೀಘ್ರಂಶೂರಾಸ್ಸಜ್ಜೀಭವಂತ್ವಿಹ ॥೨೧॥ ಭ್ರಾತಾಮೆಕುಂಭಕರ್ಣಶ್ಚ ಯೆಚಮುಖ್ಯಾನಿಶಾಚರಾಃ । ವಾಹನಾನ್ಯಧಿರೋಹಂತು ನಾನಾಪ್ರಹರಣಾಯುಧಾಃ ॥೨೨॥ ಅದ್ಯತಂಸಮರೆಹತ್ವಾಮಧುಂರಾವಣನಿರ್ಭಯಮ್ । ಇಂದ್ರಲೋಕಂಗಮಿಷ್ಯಾಮಿಯುದ್ಧಕಾಂಕ್ಷೀಸುಹೃದ್ವೃತಃ ॥೨೩॥ ತತೋವಿಜಿತ್ಯತ್ರಿದಿವಂವಶೆಸ್ಥಾಪ್ಯಪುರಂದರಮ್ । ನಿವೃತ್ತೋವಿಹರಿಷ್ಯಾಮಿತ್ರೈಲೋಕ್ಯೈಶ್ವರ್ಯಶೋಭಿತಃ ॥೨೪॥ ಅಕ್ಷೌಹಿಣೀಸಹಸ್ರಾಣಿಚತ್ವಾರ್ಯುಗ್ರಾಣಿರಕ್ಷಸಾಮ್ । ನಾನಾಪ್ರಹರಣಾನ್ಯಾಶುನಿರ್ಯಯುರ್ಯುದ್ಧಕಾಂಕ್ಷಿಣಾಮ್ ॥೨೫॥ ಇಂದ್ರಜಿತ್ತ್ವಗ್ರತಸ್ಸೈನ್ಯಂಸೈನಿಕಾನ್ಪರಿಗೃಹ್ಯಚ । ರಾವಣೋಮಧ್ಯತಃಶೂರಃಕುಂಭಕರ್ಣಶ್ಚಪೃಷ್ಠತಃ ॥೨೬॥ ವಿಭೀಷಣಸ್ತುಧರ್ಮಾತ್ಮಾ ಲಂಕಾಯಾಂಧರ್ಮಮಾಚರತ್ ॥೨೭॥ ತೇತುಸರ್ವೆಮಹಾಭಾಗಾಯಯುರ್ಮಧುಪುರಂಪ್ರತಿ ॥೨೮॥ರಥೈರ್ನಾಗೈಃಖರೈರುಷ್ಟ್ರೈಃಹಯೈರ್ದೀಪ್ತೈರ್ಮಹೋರಗೈಃ । ರಾಕ್ಷಸಾಃಪ್ರಯಯುಸ್ಸರ್ವೆಕೃತ್ವಾ

---

ಕ್ರುದ್ಧಃ-ಕೋಪಿಷ್ಠನಾಗಿ, ಸಂರಕ್ತಲೋಚನಃ-ಕೆಂಗಣ್ಣುಗಳುಳ್ಳವನಾಗಿ, ಅಬ್ರವೀತ್-ನುಡಿದನು, ಇಹ-ಈಗಲೆ, ಶೀಘ್ರಂ-ಜಾಗ್ರತೆಯಾಗಿ, ಮೆ-ನನ್ನ, ಸಂಬಂಧವಾದ, ರಥಃ-ರಥವು, ಕಲ್ಪ್ಯತಾಂ-ಕಟ್ಟಲ್ಪಡಲಿ, ಶೂರಾಃ-ಶೂರರು, ಸಜ್ಜೀಭವಂತು-ಯುದ್ಧಸನ್ನದ್ಧರಾಗಲಿ ॥೨೧॥ಮೆ-ನನ್ನ, ಭ್ರಾತಾ-ತಮ್ಮನಾದ, ಕುಂಭಕರ್ಣಶ್ಚ-ಕುಂಭಕರ್ಣನೂನು, ಯೆಚನಿಶಾಚರಾಃ-ಯಾವ ರಾಕ್ಷಸರೂಕೂಡೆ, ಮುಖ್ಯಾಃ-ಮುಖಂಡರೊ, ತೆ-ಅವರೆಲ್ಲರು, ನಾನಾ ಪ್ರಹರಣಾಯುಧಾಃ-ಅನೇಕಬಗೆಯಾಗಿರುವ ಶಸ್ತ್ರಗಳೂ, ಆಯುಧಗಳೂ ಉಳ್ಳವರಾಗಿ, ವಾಹನಾನಿ-ವಾಹನಗಳನ್ನು, ಆರೋಹಂತು, ಏರಲಿ ॥೨೨॥ ಅದ್ಯ-ಈಗ, ರಾವಣನಿರ್ಭಯಂ-ರಾವಣನ ದೆಸೆಯಿಂದ ಭಯವಿಲ್ಲದವನಾದ, ತಂ-ಮಧುಂ-ಆ ಮಧ್ವಾಸುರನನ್ನು, ಸಮರೆ-ಕಾಳಗದಲ್ಲಿ, ಹತ್ವಾ-ಕೊಂದು, ಯುದ್ಧಕಾಂಕ್ಷೀ-ಯುದ್ಧೇಚ್ಛೆಯುಳ್ಳವನಾಗಿ, ಸುಹೃದ್ವೃತಃ-ಸ್ನೇಹಿತರಿಂದೊಡಗೂಡಿದವನಾಗಿ, ಇಂದ್ರಲೋಕಂ-ಸ್ವರ್ಗಲೋಕವನ್ನು ಕುರಿತು, ಗಮಿಷ್ಯಾಮಿ-ಹೋಗುವೆನು ॥೨೩॥ ತತಃ-ಬಳಿಕ, ತ್ರಿದಿವಂ-ಸ್ವರ್ಗಲೋಕವನ್ನು ವಿಜಿತ್ಯ - ಜಯಿಸಿ, ಪುರಂದರಂ-ದೇವೇಂದ್ರನನ್ನು, ವಶೆಸ್ಥಾಪ್ಯ - ಸ್ವಾಧೀನದಲ್ಲಿಟ್ಟುಕೊಂಡು, ತ್ರೈಲೋಕ್ಯೈಶ್ವರ್ಯಶೋಭಿತಃ-ಲೋಕತ್ರಯ ಪ್ರಭುತ್ವದಿಂದ ಹೊಳೆಯುತಿರುವನಾಗಿ, ನಿವೃತ್ತಃ-ಹಿಂತಿರಿಗಿಬಂದವನಾಗಿ, ವಿಹರಿಷ್ಯಾಮಿ-ವಿಹರಿಸುವೆನು ॥ಯುದ್ಧಕಾಂಕ್ಷಿಣಾಂ-ಯುದ್ಧಾಪೇಕ್ಷೆಯುಳ್ಳ, ರಕ್ಷಸಾಂ-ರಾಕ್ಷಸರ, ಉಗ್ರಾಣಿ-ಭಯಂಕರವಾದ, ನಾನಾಪ್ರಹರಣಾನಿ-ನಾನಾ- ಬಹುಬಗೆಯಾದ, ಪ್ರಹರಣಾನಿ-ಆಯುಧಂಗಳುಳ್ಳ, ಚತ್ವಾರಿ-ನಾಲ್ಕಾದ, ಅಕ್ಷೌಹಿಣೀಸಹಸ್ರಾಣಿ-ಅಕ್ಷೌಹಿಣಿಸಹಸ್ರಗಳು, ಆಶು- ಜಾಗ್ರತೆಯಾಗಿ, ನಿರ್ಯಯುಃ-ಹೊರಟವು॥ಇಂದ್ರಜಿತ್ತು-ಇಂದ್ರಜಿತುವಾದರೆ, ಸೈನ್ಯಂ-ದಂಡಿನನ್ನು, ಸೈನಿಕಾಂಶ್ಚ-ಸೇನೆಯಲ್ಲಿರುವಜನರನ್ನು, ಪರಿಗೃಹ್ಯ-ತೆಗದುಕೊಂಡು, ಅಗ್ರತಃ-ಮುಂದೆ, ಅಗಮತ್-ಹೊದನು, ರಾವಣಃ-ರಾವಣನು, ಮಧ್ಯತಃ-ಮಧ್ಯಭಾಗದಲ್ಲಿಯೂ, ಕುಂಭಕರ್ಣಶ್ಚ-ಕುಂಭಕರ್ಣನೂನು, ಪೃಷ್ಠತಃ-ಹಿಂದುಗಡೆ, ಅಗಮತ್-ಹೊರಟನು॥ ಧರ್ಮಾತ್ಮಾ-ಧರ್ಮಿಷ್ಠನಾದ, ವಿಭೀಷಣಸ್ತು-ವಿಭೀಷಣನಾದರೆ, ಲಂಕಾಯಾಂ-ಲಂಕಾಪಟ್ಟಣದಲ್ಲಿ, ಧರ್ಮಂ-ಧರ್ಮವನ್ನು-ಅಚರತ್-ನಡಿಸುತಿರುವನಾಗಿದ್ದನು, ಸರ್ವೆ-ಸಮಸ್ತರಾದ, ಮಹಾಭಾಗಾಃ-ಪುಣ್ಯವಂತರಾದ, ತೆತು-ಆ ರಾವಣಾದಿಗಳಾದರೆ, ಮಧುಪುರಂಪ್ರತಿ-ಮಧ್ವಾಸುರನ ಪಟ್ಟಣವನ್ನು ಕುರಿತು, ಯಯುಃ-ತೆರಳಿದರು ॥೨೭॥ ಸರ್ವೆ-ಸಮಸ್ತರಾದ, ರಾಕ್ಷಸಾಃ-ರಾಕ್ಷಸರು, ರಥೈಃ-ರಥಗಳಿಂದಲೂ, ನಾಗೈಃ-ಆನೆಗಳಿಂದಲೂ, ಖರೈಃ-ಕತ್ತೆಗಳಿಂದಲೂ, ಉಷ್ಟ್ರೈಃ-ವಂಟೆಗಳಿಂದಲೂ, ಹಯೈಃ-ಕುದುರೆಗಳಿಂದಲೂ, ದೀಪ್ತೈಃ-ಹೊಳೆಯುತಿರುವ, ಮಹೋರಗೈಃ-ದೊಡ್ಡಸರ್ಪಗಳಿಂದಲೂ, ಆಕಾಶಂ-ಅಂತರಿಕ್ಷಮಾರ್ಗವನ್ನು, ನಿರಂತರಂ-ಅವಕಾಶವಿಲ್ಲದ್ದಂನಾಗಿ ಕೃತ್ವಾ-ಮಾಡಿ, ಪ್ರಯಯುಃ-ತೆರಳಿದರು, ॥೨೮॥ ತತ್ರ-ಆ ಸಮಯದಲ್ಲಿ, ಸುರೈಸ್ಸಹ-ದೇವತೆಗಳೊಡನೆ,

---

ಎಂದು ವಿಭೀಷಣನು ನುಡಿಯಲು ॥೨೦॥ ಆ ರಾವಣನು ಕುಪಿತನಾದಕಾರಣ ಕೆಂಗಣ್ಣುಗಳುಳ್ಳವನಾಗಿ, ಎನ್ನ ರಥವಂ ಜಾಗ್ರತೆಯಾಗಿ ಸಿದ್ಧಗೊಳಿಸಿರಿ, ಶೂರರೆಲ್ಲರೂ ಸನ್ನದ್ಧರಾಗಲಿ, ನನ್ನ ತಮ್ಮನಾದ ಕುಂಭಕರ್ಣನೇ ಮುಂತಾದ ರಾಕ್ಷಸೋತ್ತಮರೆಲ್ಲರು, ನಾನಾವಿಧಾಯುಧಗಳಂ ಧರಿಸಿ, ವಾಹನಗಳಲ್ಲಿ ಕುಳಿತುಕೊಂಡುಹೊರಡಲೀ, ರಾವಣನಿಗೆ ಹೆದರದೇ ಇರುವ ಆ ಮಧ್ವಾಸುರನನ್ನ ಈಗಲೇಸಂಹರಿಸಿ, ಸಖರಿಂದೊಡಗೂಡಿ ಯುದ್ಧೇಚ್ಛೆಯುಳ್ಳವನಾಗಿ, ಇಂದ್ರಲೋಕವಂ ಕುರಿತು ತೆರಳಿ, ದೇವೇಂದ್ರನಂ ಜಯಿಸಿದಬಳಿಕ, ಸ್ವರ್ಗವಂ ಸ್ವಾಧೀನಮಾಡಿಕೊಂಡು, ತ್ರೈಲೋಕ್ಯೈಶ್ವರ್ಯದಿಂದ ಕಂಗೊಳಿಸುತಿರುವನಾಗಿ, ಹಿಂತಿರಿಗಿ ಬಂದು ಸುಖಮಾಗಿರುವೆನೆಂದು ರಾವಣನು ನುಡಿಯಲು ॥೨೪॥ನಾಲ್ಕುಸಾವಿರ ಅಕ್ಷೌಹಿಣೀ ಸಂಖ್ಯೆಯುಳ್ಳ ರಾಕ್ಷಸರ ಸೈನ್ಯಗಳು ಅನೇಕಾಯುಧಗಳಂ ತೆಗದುಕೊಂಡು ಹೊರಟರು॥೨೫॥ ಸೇನೆಗಳಂ ತೆಗದುಕೊಂಡು ಇಂದ್ರಜಿತುವು ಮುಂದುಗಡೇಯೂ, ರಾವಣನು ಮಧ್ಯಭಾಗದಲ್ಲಿಯೂ, ಕುಂಭಕರ್ಣನುಹಿಂಭಾಗದಲ್ಲಿಯೂ ಇರುತಿರುವರಾಗಿಹೊರಟರು ॥೨೬॥ಧರ್ಮಾತ್ಮನಾದ ವಿಭೀಷಣನಾದರೆ ಲಂಕಾಪಟ್ಟಣದಲ್ಲಿಯೇಧರ್ಮಗಳನ್ನಾಚರಿಸುತ್ತಾ ಇದ್ದನು ॥೨೭॥ ಮಹಾತ್ಮರಾದ ಆ ರಾಕ್ಷಸರಾದರೆ ರಥಗಳಿಂದಲೂ, ಆನೆಗಳಿಂದಲೂ, ಹಾಸರಕತ್ತೆಗಳಿಂದಲೂ, ವಂಟೆಗಳಿಂದಲೂ, ಕುದುರೆಗಳಿಂದಲೂ, ಮಹಾ ಸರ್ಪಗಳಿಂದಲೂ, ಒಡಗೂಡಿದವರಾಗಿ, ಆಕಾಶ ಮಾರ್ಗದಲ್ಲಿ ಗುಂಪು ಗುಂಪುಗಳಾಗಿ ಹೊರಟರು ॥೨೮॥ ದೇವತೆಗಳೊಡನೆ ನಿರಂತರವೂ ವೈರವಂಗೈಯ್ಯುತ್ತಲಿರುವ ಆನೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಾಶಂನಿರಂತರಮ್॥೩೯॥ ದೈತ್ಯಾಶ್ಚ ಶತಶಸ್ತತ್ರಕೃತವೈರಾಸ್ಸುರೈಸ್ಸಹ।ರಾವಣಂಪ್ರೇಕ್ಷ್ಯಗಚ್ಛಂತಮನ್ವಗಚ್ಛಂಸ್ತು ಪೃಷ್ಠತಃ ॥೪೦॥ಸತುಗತ್ವಾಮಧುಪುರಂಪ್ರವಿಶ್ಯಚದಶಾನನಃ । ನದದರ್ಶಮಧುಂತತ್ರಭಗಿನೀಂತತ್ರದೃಷ್ಟವಾನ್ ॥೪೧॥ ಸಾಚತದಾಪ್ರಾಂಜಲಿರ್ಭೂತ್ವಾಶಿರಸಾಪಾದಯೋರ್ಗತಾ। ತಸ್ಯರಾಕ್ಷಸರಾಜಸ್ಯತ್ರಸ್ತಾಕುಂಭೀನಸೀಸ್ವಸಾ ॥೪೨॥ ತಾಂಸಮುತ್ಥಾಪಯಾಮಾಸನಭೇತ್ತವ್ಯಮಿತಿಬ್ರುವನ್ ।ರಾವಣೋರಾಕ್ಷಸಶ್ರೇಷ್ಠಃಕಿಂಚಾಪಿಕರವಾಣಿತೇ॥೪೩॥ ಸಾಬ್ರವೀದ್ಯದಿಮೇರಾಜನ್ ಪ್ರಸನ್ನಸ್ತ್ವಂಮಹಾಬಲ । ಭರ್ತಾರಂಮೇಮಧುಂವಾದ್ಯಹಂತುಮರ್ಹಸಿಮಾನದ ॥೪೪॥ ನಹೀದೃಶಂಭಯಂಕಿಂಚಿತ್ಕುಲಸ್ತ್ರೀಣಾಮಿಹೋಚ್ಯತೇ ।ಭಯಾನಾಮಪಿಸರ್ವೇಷಾಂವೈಧವ್ಯಂವ್ಯಸನಂಮಹತ್ ॥೪೫॥ ಸತ್ಯವಾಗ್ಭವರಾಜೇಂದ್ರಮಾಮವೇಕ್ಷಸ್ವಯಾಚತೀಮ್ । ತ್ವಯಾಹ್ಯುಕ್ತಂಮಹಾಬಾಹೋನಭೇತ್ತವ್ಯಮಿತಿಸ್ವಯಮ್ ॥೪೬॥ರಾವಣಸ್ತ್ವಬ್ರವೀದ್ಧೃಷ್ಟಃಸ್ವಸಾರಂತತ್ರಸಂಸ್ಥಿತಾಮ್ । ಕ್ವಚಾಸೌತವಭರ್ತಾವೈಮಮಶೀಘ್ರಂನಿವೇದ್ಯತಾಮ್॥೪೭॥ ಸಹತೇನಗಮಿಷ್ಯಾಮಿಸು

---

ಕೃತವೈರಾಃ–ಕೃತ– ಮಾಡಲ್ಪಟ್ಟ, ವೈರಾಃ–ದ್ವೇಷಗಳುಳ್ಳ, ಶತಶಃ–ಅನೇಕರಾದ, ದೈತ್ಯಾಶ್ಚ–ರಕ್ಕಸರೂನು, ಗಚ್ಛಂತಂ–ತೆರಳುತಿರುವ, ರಾವಣಂ–ರಾವಣನನ್ನು, ಪ್ರೇಕ್ಷ್ಯ–ಕಂಡು, ಪೃಷ್ಠತಃ–ಹಿಂದುಗಡೆ, ಅನ್ವಗಚ್ಛನ್–ಹೊರಟರು ॥೪೦॥ಸದಶಾನನಸ್ತು–ಆ ರಾವಣಾಸುರನಾದರೆ, ಗತ್ವಾ–ಹೊರಟು, ಮಧುಪುರಂಚ–ಮಧ್ವಾಸುರ ಪಟ್ಟಣವನ್ನೂ, ಪ್ರವಿಶ್ಯ–ಹೊಕ್ಕು, ತತ್ರ–ಆ ಪಟ್ಟಣದಲ್ಲಿ, ಮಧುಂ–ಮಧ್ವಾಸುರನನ್ನು, ನದದರ್ಶ–ಕಾಣದೇಹೋದನು, ತತ್ರ–ಅಲ್ಲಿ, ಭಗಿನೀಂ–ತಂಗಿಯಾದ ಕುಂಭೀನಸಿಯನ್ನು, ದೃಷ್ಟವಾನ್–ಕಂಡನು ॥೪೧॥ ತದಾ–ಆ ಕಾಲದಲ್ಲಿ, ಸ್ವಸಾ–ತಂಗಿಯಾದ, ಸಾ–ಆ ಕುಂಭೀನಸಿಯು, ತ್ರಸ್ತಾ–ಭಯಗೊಂಡವಳಾಗಿ, ಪ್ರಾಂಜಲಿಃ–ಅಂಜಲಿಬದ್ಧಳು,ಭೂತ್ವಾ–ಆಗಿ, ತಸ್ಯರಾಕ್ಷಸರಾಜಸ್ಯ–ಆ ರಾವಣನ, ಪಾದಯೋಃ – ಪಾದಗಳಲ್ಲಿ, ಗತಾ–ಬಿದ್ದಳು ॥೪೨॥ ರಾಕ್ಷಸಶ್ರೇಷ್ಠಃ–ರಾಕ್ಷಸಾಧಿಪತಿಯಾದ, ರಾವಣಃ–ರಾವಣನು, ತೇ–ನಿನಗೆ, ಕಿಂಕರವಾಣಿ–ಯೆನುಮಾಡಲಿ, ನಭೇತ್ತವ್ಯಂ–ಭಯಬೀಳತಕ್ಕದ್ದಲ್ಲಾ, ಇತಿಚ–ಇತ್ತೆಂದುಕೂಡ, ಬ್ರುವನ್–ಹೇಳುತಿರುವನಾಗಿ, ತಾಂ–ಆಕುಂಭೀನಸೀಯನ್ನು, ಸಮುತ್ಥಾಪಯಾಮಾಸ – ಎಬ್ಬಿಸಿದನು ॥೪೩॥ ಹೇರಾಜನ್–ಯಲೈ ಮಹಾರಾಜನೆ, ಹೇಮಹಾಬಲ–ಎಲೈ ಮಹಾಪರಾಕ್ರಮವಂತನೆ, ಮೇ–ನನಗೆ, ತ್ವಂ–ನೀನು,ಪ್ರಸನ್ನೋಯದಿ–ಪ್ರಸನ್ನನಾಗಿದ್ದರೆ, ಹೆ ಮಾನದ, ಎಲೈ ಬಹುಮಾನವನ್ನು ಕೊಡುವನೆ, ಮೇ–ನನ್ನ, ಭರ್ತಾರಂ–ಗಂಡನಾದ,ಮಧುಂ–ಮಧ್ವಾಸುರನನ್ನು, ಅದ್ಯ–ಈಗ, ಹಂತುಂ–ಸಂಹರಿಸುವದಕ್ಕೋಸ್ಕರ, ನಾರ್ಹಸಿ–ಅರ್ಹನಾಗಬ್ಯಾಡ ॥೪೪॥ ಹಿಯಸ್ಮಾತ್ಕಾರಣಾತ್, ಯಾವಕಾರಣದ ದೆಸೆಯಿಂದ, ಕುಲಸ್ತ್ರೀಣಾಂ–ಪತಿವ್ರತಾಸ್ತ್ರೀಯರುಗಳಿಗೆ, ಇಹ–ಈ ಲೋಕದಲ್ಲಿ, ಈದೃಶಂ–ಈ ಪರಿಯಾದ, ಭಯಂ–ಭಯವು, ಕಿಂಚಿತ್–ಯಾವದೂನು, ನೋಚ್ಯತೇ–ಹೇಳಲ್ಪಡುವದಿಲ್ಲಾ, ಸರ್ವೇಷಾಂ–ಸಮಸ್ತಗಳಾದ, ಭಯಾನಾಮಪಿ–ಭೀತಿಗಳೊಳಗಾಗಿ, ವೈಧವ್ಯಂ–ವೈಧವ್ಯರೂಪವಾದ, ವ್ಯಸನಂ–ವ್ಯಸನವು, ಮಹತ್–ದೊಡ್ಡಭಯವು ॥೪೫॥ ಹೇರಾಜೇಂದ್ರ–ಎಲೈ ರಾಜಶ್ರೇಷ್ಠನೆ, ಹೆ ಮಹಾಬಾಹೋ–ಮಹಾ ಭುಜಪರಾಕ್ರಮಶಾಲಿಯೆ, ತ್ವಯಾ–ನಿನ್ನಿಂದ, ಸ್ವಯಂ–ತನ್ನಷ್ಟಕ್ಕೆತಾನೆ, ನಭೇತ್ತವ್ಯಮಿತಿ–ಭಯ ಬೀಳತಕ್ಕದಲ್ಲವೆಂದು, ಉಕ್ತಂಹಿ–ಹೇಳಲ್ಪಟ್ಟತಷ್ಟೆ,ಯಾಚತೀಂ–ಬೇಡುತಿರುವ,ಮಾಂ–ನನ್ನನ್ನು, ಅವೇಕ್ಷಸ್ವ–ನೋಡು, ಸತ್ಯವಾಕ್–ಸತ್ಯವಾಕ್ಕುಳ್ಳವನು, ಭವ–ಆಗು ॥ ೪೬॥ ರಾವಣಸ್ತು–ರಾವಣನಾದರೆ, ಹೃಷ್ಟಃ–ಸಂತುಷ್ಟನಾಗಿ, ತತ್ರ–ಅಲ್ಲಿ,ಸಂಸ್ಥಿತಾಂ–ಇರುತಿರುವ, ಸ್ವಸಾರಂ–ತಂಗಿಯನ್ನು ಕುರಿತು, ಅಬ್ರವೀತ್–ನುಡಿದನು, ತವ–ನಿನ್ನ, ಅಸಾಭರ್ತಾ – ಗಂಡನಾದಯಿವನು, ಕ್ವಚ–ಯಲ್ಲಿ, ಮಮ–ಯನಗೆ, ಶೀಘ್ರಂ–ಜಾಗ್ರತೆಯಾಗಿ, ನಿವೇದ್ಯತಾಂ–ತಿಳಿಸಲ್ಪಡಲಿ; ತವ–ನಿನ್ನ, ಕಾರುಣ್ಯಸೌಹಾರ್ದಾತ್–ಕಾರುಣ್ಯ–ದೈನ್ಯದಿಂದಹುಟ್ಟಿದ, ಸೌಹಾರ್ದಾತ್ – ವಿಶ್ವಾಸದದೆಸೆಯಿಂದ, ಮಧೋಃ – ಮಧ್ವಾಸುರನ, ವಧಾತ್–ಸಂಹಾರದ ದೆಸೆಯಿಂದ, ನಿವೃತ್ತಃ–ಹಿಂತಿರಿಗಿದವನು, ಅಸ್ಮಿ–ಆದೆನು,ತೇನಸಹ–ಆಮಧ್ವಾಸುರನೊಡಗೂಡಿ, ಸುರಲೋಕಜಯಾಯಹಿ, ಸುರಲೋಕ–ಇಂದ್ರಲೋಕದ, ಜಯಾಯಹಿ–ಜಯಕ್ಕೋಸ್ಕರವೇ, ಗಮಿಷ್ಯಾಮಿ–ಹೋಗುವೆನು ॥೪೭ ॥ ೪೮॥ ಇತ್ಯುಕ್ತಾ–ಈಪರಿ ಹೇಳಲ್ಪಟ್ಟ, ಸಾರಾ

---

ಕರಾದ ಆ ದೈತ್ಯರೆಲ್ಲರೂ ಮುಂದುಗಡೆ ಹೋಗುವ ಆ ರಾವಣನಂ ಕಂಡು ಬೆನ್ನಟ್ಟಿ ಬರುತಿದ್ದರು ॥೪೦॥ ಆ ಸಮಯದಲ್ಲಿ ರಾವಣನಾದರೆ ಮಧ್ವಾಸುರನ ಪಟ್ಟಣವಂ ಹೊಕ್ಕು, ಅಲ್ಲಿ ಆ ಮಧ್ವಾಸುರನಂ ಕಾಣದೇ ತನ್ನ ತಂಗಿಯನ್ನು ಮಾತ್ರ ಕಂಡವನಾದನು ॥ ೪೧ ॥ ಆ ಸಮಯದಲ್ಲಿ ಆ ಕುಂಭೀನಸಿಯೆಂಬ ಆತನ ತಂಗಿಯು ಬಹಳ ಭೀತಿಗೊಂಡವಳಾಗಿ ಆ ರಾಕ್ಷಸರಾಜರಾದ ರಾವಣನ ಪಾದಗಳಮೇಲೆ ಬಿದ್ದು ಅಂಜಲಿ ಬದ್ಧಳಾಗಿ ಹೊರಳಾಡುತ್ತಿರಲೂ,ಆರಾವಣನು, ಆ ಕುಂಭೀನಸಿಯನ್ನೆಬ್ಬಿಸಿ, ಎಲೈ ತಂಗಿಯೇ! ಭಯಬೀಳಬೇಡಾ, ಈಗ ನಾನೇನುಮಾಡಲೀ ಎಂಬವಾಗಿ ನಡಿಯಲೂ ಆ ಕುಂಭೀನಸಿಯು ಇಂತೆಂದಳು,ಎಲೈ ಕಡುಪರಾಕ್ರಮಿಯಾದ ರಾಕ್ಷಸನಾಥನೇ!ನೀನು ಪ್ರಸನ್ನನಾಗಿ ಎನ್ನಪತಿಯಾದ ಮಧುವಿನನ್ನು ಕೊಲ್ಲಬೇಡ॥೪೪॥ಎಲೈ ಮಾನವನ್ನೀಯುವವನೇ! ತನ್ನವಂಶದಲ್ಲಿ ವ್ಯಭಿಚಾರಾದಿ ದೋಷವಿಲ್ಲದಂತೆಕಾಪಾಡಿಕೊಂಡಿರುವ ಸ್ತ್ರೀಯರಿಗೆ, ಸರ್ವಭೀತಿಗಳಿಗಿಂತಲೂ ವೈಧವ್ಯವೆಂಬದೇ ಅತಿಶಯವಾದ ದುಃಖವೇ ಹೊರ್ತು ಇಂಥಾ ಭೀತಿಯು ಬೇರೊಂದಿಲ್ಲವಲ್ಲ॥೪೫॥ ಎಲೈ ರಾಜೋತ್ತಮನೇ! ನನ್ನಂನೋಡಿ ಸತ್ಯ ಪ್ರತಿಜ್ಞೆಯುಳ್ಳವನಾಗು, ಎಲೈ ಮಹಾಭುಜಗಳುಳ್ಳವನೇ! ಹೆದರಬೇಡೆಂದು ನೀನೇ ಹೇಳಿರುವಿಯಷ್ಟೆ ? ಎಂಬದಾಗಿ ತಂಗಿಯಾದ ಕುಂಭೀನಸಿಯುನುಡಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಲೋಕಜಯಾಯಹಿ । ತವಕಾರುಣ್ಯಸೌಹಾರ್ದಾನ್ನಿವೃತ್ತೋಸ್ಮಿ ಮಧೋರ್ವಧಾತ್ । ಇತ್ಯುಕ್ತ್ವಾ ಸಾಪ್ರಸುಪ್ತಂತಂ ರಾಕ್ಷಸೀಸ್ವಪತಿಂತದಾ॥೪೯॥ ಏಷಪ್ರಾಪ್ತೋ ದಶಗ್ರೀವಃಮಮ ಸಮುತ್ಥಾಪ್ಯನಿಶಾಚರಮ್ । ಅಬ್ರವೀತ್ಸಂಪ್ರಹೃಷ್ಟೈವ ಭ್ರಾತಾನಿಶಾಚರಃ । ಸುರಲೋಕಜಯಾಕಾಂಕ್ಷೀಸಾಹಾಯ್ಯೇತ್ವಾಂವೃಣೋತಿಚ॥೫೦॥ ತದಸ್ಯತ್ವಂಸಹಾಯಾರ್ಥಂಸಬಂಧುರ್ಗಚ್ಛ ರಾಕ್ಷಸ । ಸ್ನಿಗ್ಧಸ್ಯಭಜಮಾನಸ್ಯಯುಕ್ತಮರ್ಥಾಯಕಲ್ಪಿತುಂ॥೫೧॥ ತಸ್ಯತದ್ವಚನಂಶ್ರುತ್ವಾ ತಥೇತ್ಯಾಹಮಧುರ್ವಚಃ।ದದರ್ಶರಾಕ್ಷಸಶ್ರೇಷ್ಠಂಯಥಾನ್ಯಾಯಮುಪೇತ್ಯಸಃ॥ಪೂಜಯಾಮಾಸಧರ್ಮೇಣರಾವಣಂರಾಕ್ಷಸಾಧಿಪಮ್॥೫೨॥ ಪ್ರಾಪ್ತಪೂಜೋದಶಗ್ರೀವೋಮಧುವೇಶ್ಮನಿವೀರ್ಯವಾನ್ । ಅಸ್ತಂಪ್ರಾಪ್ತೇದಿನಕರೇನಿವಾಸಂಸಮರೋಚಯತ್ । ತತ್ರಚೈಕಾಂನಿಶಾಮುಷ್ಯಗಮನಾಯೋಪಚಕ್ರಮೆ ॥೫೩॥ ತತಃಕೈಲಾಸಮಾಸಾದ್ಯಶೈಲಂವೈಶ್ರವಣಾಲಯಂ।ರಾಕ್ಷಸೇಂದ್ರೋಮಹೇಂದ್ರಾಭಸ್ಸೇನಾಮುಪನಿವೇಶಯತ್

…ಇತಿ ಶ್ರೀಮದುತ್ತರ ರಾಮಾಯಣೆ ಪಂಚವಿಂಶ ಸ್ಸರ್ಗಃ…

---

ಕ್ಷಸೀ-ಆ ಕುಂಭೀನಸಿಯು, ಸಂಪ್ರಹೃಷ್ಟೈವ- ಸಂತೋಷಯುಕ್ತಳಾಗಿಯೆ, ತದಾ - ಆಕಾಲದಲ್ಲು, ಪ್ರಸುಪ್ತಂ - ನಿದ್ದೆ ಹೋಗುತಿರುವ, ಸ್ವಪತಿಂ-ತನ್ನ ಗಂಡನಾದ, ತಂನಿಶಾಚರಂ-ಆ ಮಧ್ವಾಸುರನನ್ನು, ಸಮುತ್ಥಾಪ್ಯ-ಯಬ್ಬಿಸಿ, ಅಬ್ರವೀತ್-ನುಡಿದಳು ॥೪೯॥ ಮಮ-ನನಿಗೆ, ಭ್ರಾತಾ-ಅಣ್ಣನಾದ, ದಶಗ್ರೀವಃ-ರಾವಣನೆಂಬ, ಏಷನಿಶಾಚರಃ-ಈ ರಾಕ್ಷಸನು, ಸುರಲೋಕಜಯಾಕಾಂಕ್ಷೀ-ಸುರಲೋಕ-ಇಂದ್ರಲೋಕದ,ಜಯಾಕಾಂಕ್ಷೀ-ಜಯವನ್ನು ಕೋರುತಿರುವನಾಗಿ, ಪ್ರಾಪ್ತಃ-ಬಂದಿಧಾನೆ, ತ್ವಾಂ-ನಿನ್ನನ್ನು, ಸಾಹಾಯ್ಯೇ-ಸಹಾಯ ಕರ್ಮದಲ್ಲಿ,ವೃಣೋತಿಚ-ವರಿಸುತ್ತಾನೆ॥೫೦॥ತತ್-ಆ ಕಾರಣದ ದೆಸೆಇಂದ, ಹೆರಾಕ್ಷಸ-ಎಲೈ ರಾಕ್ಷಸನೆ, ಅಸ್ಯ-ಈ ರಾವಣನಿಗೆ, ಸಹಾಯಾರ್ಥಂ-ಸಹಾಯಕ್ಕೋಸ್ಕರ, ತ್ವಂ-ನೀನು,ಸಬಂಧುಃ-ಬಂಧುಗಳಿಂದೊಡಗೂಡಿದವನಾಗಿ, ಗಚ್ಛ-ಹೋಗು, ಭಜಮಾನಸ್ಯ-ಬಂದಂಥಾ, ಸ್ನಿಗ್ಧಸ್ಯ-ಹಿತನ, ಅರ್ಥಾಯ-ಪ್ರಯೋಜನ ಕ್ಕೋಸ್ಕರ, ಕಲ್ಪಿತುಂ-ಸಹಾಯಕಲ್ಪನವೂ, ಯುಕ್ತಂ-ಯುಕ್ತವು ॥೫೧॥ ತಸ್ಯಾಃ-ಆ ಕುಂಭೀನಸಿಯ, ತದ್ವಚನಂ-ಆ ವಚನವನ್ನು, ಶ್ರುತ್ವಾ-ಕೇಳಿ, ಮಧುಃ-ಮಧ್ವಾಸುರನು, ತಥೇತಿ-ಹಾಗೆಸರಿಎಂದು, ವಚಃ-ಮಾತನ್ನು, ಆಹ-ಹೇಳಿದನು, ಸಃ-ಆ ಮಧ್ವಾಸುರನು, ಉಪೇತ್ಯ-ಬಂದು, ರಾಕ್ಷಸಶ್ರೇಷ್ಠಃ-ರಾಕ್ಷಸಶ್ರೇಷ್ಠನಾದ, ರಾಕ್ಷಸಾಧಿಪತಿಂ-ರಾಕ್ಷಸಾಧಿಪತಿಯಾದ, ರಾವಣಂ-ರಾವಣನನ್ನು, ಯಥಾನ್ಯಾಯಂ-ಯಥಾ ಶಾಸ್ತ್ರೋಕ್ತವಾಗಿ, ದದರ್ಶ-ಕಂಡನು, ಧರ್ಮೇಣ-ಸ್ವಧರ್ಮದಿಂದ, ಪೂಜಯಾಮಾಸಚ-ಮರ್ಯಾದೆಯನ್ನೂ ಮಾಡಿದನು ॥೫೨॥ ಪ್ರಾಪ್ತಪೂಜಃ-ಪ್ರಾಪ್ತ-ಹೊಂದಲ್ಪಟ್ಟ, ಪೂಜಾ - ಮರ್ಯಾದೆಯುಳ್ಳ, ವೀರ್ಯವಾನ್-ಪರಾಕ್ರಮ ಶಾಲಿಯಾದ, ದಶಗ್ರೀವಃ-ದಶಕಂಠನು, ದಿನಕರೆ-ಸೂರ್ಯನು, ಅಸ್ತಂ-ಅಸ್ತಮಾನವನ್ನು, ಪ್ರಾಪ್ತೆಸತಿ-ಹೊಂದುತಿರುವ ಸಾಗತಿರಲೀಕಾಗಿ, ಮಧುವೇಶ್ಮನಿ-ಮಧ್ವಾಸುರನ ಮನೆಯಲ್ಲಿ, ನಿವಾಸಂ-ವಾಸವನ್ನು, ಸಮರೋಚಯತ್-ಸಮ್ಮತಿಸಿದನು ॥೫೩॥ ತತ್ರ-ಆ ಮನೆಯಲ್ಲಿ, ಏಕಾಂ-ಒಂದಾದ, ನಿಶಾಂ-ರಾತ್ರಿಯನ್ನು,ಉಷ್ಯ-ಕಳದು, ಗಮನಾಯ-ಪ್ರಯಾಣಕ್ಕೋಸ್ಕರ, ಉಪಚಕ್ರಮೆ-ಆರಂಭಿಸಿದನು, ತತಃ-ಬಳಿಕ, ಮಹೇಂದ್ರಾಭಃ-ಇಂದ್ರನಂತೆ ಹೊಳೆಯುತಿರುವ, ರಾಕ್ಷಸೇಂದ್ರಃ- ರಾಕ್ಷಸಶ್ರೇಷ್ಠನಾದ ರಾವಣನು, ವೈಶ್ರವಣಾಲಯಂ-ಕುಬೇರನಿಗೆ ಆಲಯವಾದ, ಕೈಲಾಸಂಶೈಲಂ-ಕೈಲಾಸ ಪರ್ವತವನ್ನು, ಆಸಾದ್ಯ-ಹೊಂದಿ, ಸೇನಾಂ-ಸೇನೆಯನ್ನು, ಉಪನಿವೇಶಯತ್-ಇಳಿಸಿದನು ॥೫೪॥

—…ಇತಿ ಶ್ರೀಮದುತ್ತರ ರಾಮಾಯಣೆ ಪಂಚವಿಂಶ ಸ್ಸರ್ಗಃ…—

---

ಯಲೂ, ರಾವಣನು ಕಡುಸಂತುಷ್ಟನಾಗಿ ಆ ಮಧುವಿನ ಮನೆಯಲ್ಲಿರುವ ತಂಗಿಯಂ ಕುರಿತಿಂತೆಂದನು, ನಿನ್ನಗಂಡ ನೆಲ್ಲಿರುವನು, ತ್ವರಿತಮಾಗಿ ತಿಳಿಸು, ನಿನ್ನಲ್ಲಿನ ವಿಶ್ವಾಸದಿಂದ ಈಗ ಮಧ್ವಾಸುರನ ಸಂಹಾರವಂ ಮನ್ನಿಸಿಧೇನೆ, ನಿನ್ನ ಪತಿಯಂಕರೆದುಕೊಂಡುಬಾ, ದೇವಲೋಕಜಯಾರ್ಥವಾಗಿ ಹೋಗಿಬರುವೆನೆಂದುಪೇಳಲೂ, ಆಗ ಕುಂಭೀನಸಿಯು ಸಂತುಷ್ಟಳಾಗಿ, ನಿದ್ರಿಸುತಿರುವ ಆ ಮಧುವಿನನ್ನೆಬ್ಬಿಸಿಂತೆಂದಳು, ಎಲೈಪ್ರಾಣಕಾಂತನೇ ! ನಮ್ಮಣ್ಣನಾದ ರಾವಣಾಸುರನು ಸುರಲೋಕವಂ ಜೆಯಿಸಲಿಚ್ಛೆಯುಳ್ಳವನಾಗಿ, ಸಹಾಯಾರ್ಥವಾಗಿ ನಿನ್ನನ್ನಪೇಕ್ಷಿಸುತಿಧಾನೇ, ಸ್ನೇಹ ಭಾವದಿಂದ ಪ್ರಾಪ್ತನಾದ ಆತನಿಗೆ ಸಹಾಯವಂಗೈಯ್ಯುವದು ಯುಕ್ತವಷ್ಟೆ, ಜಾಗ್ರತೆಯಾಗಿ ನಿನ್ನ ಬಂಧುಗಳಿಂದೊಡಗೂಡಿ, ತೆರಳೆಂದು ಕುಂಭೀನಸಿಯು ನುಡಿಯಲೂ ॥೫೧॥ ಹಾಗೆ ಆಗಬಹುದೆಂದು ಮಧ್ವಾಸುರನು ನುಡಿದವನಾಗಿ, ವಿನಯಪೂರ್ವಕವಾಗಿಬಂದು ಆ ರಾಕ್ಷಸಾಧಿಪತಿಯಾದ ರಾವಣನಂ ಕಂಡು, ಯಥಾ ಯೋಗ್ಯವಾಗಿ ಪೂಜೆಸಿದವನಾದನು ॥೫೨॥ ಆಮಧು ಮಂದಿರದಲ್ಲಿ ಪರಿಪರಿಯಾಗಿ ಬಹುಮಾನಿಸಲ್ಪಟ್ಟ ರಾವಣನಾದರೆ, ಸೂರ್ಯನು ಅಸ್ತಮಯ ಪರ್ವತವಂಪೊಕ್ಕಲೂ, ಆ ಒಂದುರಾತ್ರಿಯು ಅಲ್ಲಿಯೇ ಇದ್ದವನಾಗಿ, ಮುಂದಕ್ಕೆ ತೆರಳಿ ಆಬಳಿಕ,ಕೈಲಾಸ ಪರ್ವತವಂ ಹೊಂದಿ ಅಲ್ಲಿ ಸೇನೆಯನ್ನಿಳ್ಸಿಸಿಕೊಂಡು ನಿಂತವನಾದನು ॥೫೪॥

—…ಉತ್ತರ ರಾಮಾಯಣದಲ್ಲಿ ೨೫ನೇ ಸರ್ಗಂ ಮುಗಿದುದು…—

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸತುತತ್ರದಶಗ್ರೀವಸ್ಸೈನ್ಯೇನಸಹವೀರ್ಯವಾನ್ । ಅಸ್ತಂಪ್ರಾಪ್ತೇದಿನಕರೇನಿವಾಸಂಸಮರೋಚತ॥೧॥ಉದಿತೇವಿಮಲೇಚಂದ್ರೇತುಂಗಪರ್ವತವರ್ಚಸಿ । ಪ್ರಸುಪ್ತಂಸುಮಹತ್ಸೈನ್ಯಂನಾನಾಪ್ರಹರಣಾಯುಧಮ್॥೨॥ ರಾವಣಸ್ತುಮಹಾವೀರ್ಯೋನಿಷಣ್ಣಶ್ಶೈಲಮೂರ್ಧನಿ । ಸದದರ್ಶಬಹೂನ್ಭಾಗಾನ್ ಚಂದ್ರಪಾದೋಪಶೋಭಿತಾನ್ ॥೩॥ ಕರ್ಣಿಕಾರವನೈರ್ದಿವ್ಯೈಃಕದಂಬಗಹನೈಸ್ತಥಾ । ಪದ್ಮಿನೀಭಿಶ್ಚಫುಲ್ಲಾಭಿರ್ಮಂದಾಕಿನ್ಯಾಜಲೈರಪಿ ॥೪॥ ಚಂಪಕಾಶೋಕಪುನ್ನಾಗಮಂದಾರತರುಭಿಸ್ತಥಾ । ಚೂತಪಾಟಲಲೋಧ್ರೈಶ್ಚಪ್ರಿಯಂಗ್ವರ್ಜುನಕೇತಕೈಃ ॥೫॥ ಆರಗ್ವಧತಮಾಲೈಶ್ಚಪ್ರಿಯಾಳುವಕುಳೈರಪಿ। ಏತೈರನ್ಯೈಶ್ಚತರುಭಿರುದ್ಭಾಸಿತವನಾಂತರೇ ॥೬॥ ಕಿನ್ನರಾಮದನೇನಾರ್ತಾರಕ್ತಾಮಧುರಕಂಠಿನಃ । ಸಮಂಸಂಪ್ರಜಗುರ್ಗೇಯಂಮನಸ್ತುಷ್ಟಿವಿವರ್ಧನಮ್ ॥೭॥ ವಿದ್ಯಾಧರಾಮದಕ್ಷೀಬಾಮದರಕ್ತಾಂತಲೋಚನಾಃ । ಯೋಷಿದ್ಭಿಸ್ಸಹಸಂಕ್ರಾಂತಾಶ್ಚಿಕ್ರೀಡುರ್ಜಹೃಷುಶ್ಚಹ॥೮॥ ಘಂಟಾನಾಮಿವಸನ್ನಾದಃಶುಶ್ರುವೇಮಧುರಸ್ವನಃ । ಅಪ್ಸರೋಗಣಸಂಘಾನಾಂ

---

ವೀರ್ಯವಾನ್-ಪರಾಕ್ರಮಶಾಲಿಯಾದ, ಸಃದಶಗ್ರೀವಸ್ತು-ಆ ದಶಕಂಠನಾದರೆ, ದಿನಕರೇ-ಸೂರ್ಯನು, ಅಸ್ತಂ-ಅಸ್ತಮಯುವನ್ನು, ಪ್ರಾಪ್ತೇಸತಿ-ಹೊಂದಿದವನಾಗುತಿರಲೀಕಾಗಿ, ತತ್ರ-ಆ ಕೈಲಾಸಪರ್ವತದಲ್ಲಿ, ನಿವಾಸಂ-ವಾಸವನ್ನು,ಸಮರೋಚತ-ಸಮ್ಮತಿಸಿದನು॥೧॥ವಿಮಲೇ-ನಿರ್ಮಲವಾದ, ಚಂದ್ರೇ-ಚಂದ್ರನು, ತುಂಗಪರ್ವತವರ್ಚಸಿ-ತುಂಗ-ಅತ್ಯುನ್ನತವಾದ, ಪರ್ವತ-ಕೈಲಾಸಬೆಟ್ಟದ,ವರ್ಚಸಿ-ಪ್ರಕಾಶಮುಳ್ಳವನಾಗಿ, ಉದಿತೇಸತಿ-ಹುಟ್ಟುತಿರಲೀಕಾಗಿ, ನಾನಾಪ್ರಹರಣಾಯುಧಂ-ನಾನಾ-ಅನೇಕ ಬಗೆಗಳಾದ, ಪ್ರಹರಣಾಯುಧಂ-ಅಸ್ತ್ರಶಸ್ತ್ರಗಳುಳ್ಳ, ಸುಮಹತ್-ದೊಡ್ಡದಾದ, ಸೈನ್ಯಂ-ಸೈನ್ಯವು, ಪ್ರಸುಪ್ತಂ-ನಿದ್ರೆ ಹೋಯಿತು॥೨॥ ಮಹಾವೀರ್ಯಃ-ಮಹಾ ವೀರ್ಯವಂತನಾದ,ಸರಾವಣಸ್ತು-ಆ ರಾವಣನಾದರೆ, ಶೈಲಮೂರ್ಧನಿ-ಬೆಟ್ಟದ ಶಿಖರಭಾಗದಲ್ಲಿ,ನಿಷಣ್ಣಃ-ಕುಳಿತುಕೊಂಡಿರುವನಾಗಿ, ಚಂದ್ರಪಾದೋಪಶೋಭಿತಾನ್-ಚಂದ್ರಕಿರಣಗಳಿಂದ ಹೊಳೆಯುತಿರುವ, ಬಹೂನ್-ಅನೇಕಗಳಾದ, ಭಾಗಾನ್-ಪ್ರದೇಶಗಳನ್ನು, ದದರ್ಶ-ಕಂಡೆನು ॥೩॥ ದಿವ್ಯೈಃ-ಮನೋಹರಂಗಳಾದ, ಕರ್ಣಿಕಾರವನೈಃ-ಬೆಟ್ಟದಾವರೆ-ಗಿಡಗಳ ವನಗಳಿಂದಲೂ, ತಥಾ-ಹಾಗೆಯೆ, ಕದಂಬಗಹನೈಃ-ಕಡಲುಮರಗಳ ವನಗಳಿಂದಲೂ, ಫುಲ್ಲಾಭಿಃ-ಅರಳಿರುವ, ಪದ್ಮಿನೀಭಿಃ-ಕಮಲಬಳ್ಳಿಗಳಿಂದಲೂ, ಮಂದಾಕಿನ್ಯಾಃ-ದೇವಗಂಗೆಯ, ಜಲೈರಪಿ-ನೀರುಗಳಿಂದಲೂ॥ ತಥಾ-ಹಾಗೆಯೆ, ಚಂಪಕ-ಸಂಪಿಗೇ ಗಿಡಗಳಿಂದಲೂ, ಅಶೋಕ-ಅಶೋಕ ವೃಕ್ಷಗಳಿಂದಲೂ, ಪುನ್ನಾಗ-ಸುರಹೊನ್ನೆ ಗಿಡಗಳಿಂದಲೂ, ಮಂದಾರತರುಭಿಃ-ಮಲ್ಲಿಗೆ ಗಿಡಗಳಿಂದಲೂ, ಚೂತಪಾಟಲಲೋಧ್ರೈಶ್ಚ-ಚೂತ-ಮಾವಿನಗಿಡಗಳಿಂದಲೂ,ಪಾಟಲ-ಪಾದ್ರೀ ಗಿಡಗಳಿಂದಲೂ, ಲೋಧ್ರೈಶ್ಚ-ಲೋಧ್ರಗಿಡಗಳಿಂದಲೂ, ಪ್ರಿಯಂಗ್ವರ್ಜುನಕೇತಕೈಃ-ಪ್ರಿಯಂಗು-ಪ್ರೇಂಕಣದಗಿಡಗಳಿಂದಲೂ, ಅರ್ಜುನ-ಕೊರಮತ್ತೀಗಿಡಗಳಿಂದಲೂ, ಕೇತಕೈಃ-ಕೇದಿಗೇ ಗಿಡಗಳಿಂದಲೂ, ಆರಗ್ವಧತಮಾಲೈಶ್ಚ-ಆರಗ್ವಧ-ಅರೇಗಿಡಗಳಿಂದಲೂ, (ಕಕ್ಕೆ ಗಿಡವೆಂತಲೂ ಅನ್ನುವರು) (ಅಚಲಮರವೆಂದು ವಾದಿಕೆಯುಂಟು) ತಮಾಲೈಶ್ಚ- ಕಸ್ತೂರಿ ಹೊಂಗೇಗಿಡಗಳಿಂದಲೂ, ಪ್ರಿಯಾಳು-ಪ್ರಿಯಾಳುವೃಕ್ಷಗಳಿಂದಲೂ, ವಕುಳೈರಪಿ-ಹವಳದ ಗಿಡಗಳಿಂದಲೂ, ಏತೈಸ್ತರುಭಿಃ - ಈ ವೃಕ್ಷಗಳಿಂದಲೂ, ಅನ್ಯೈಶ್ಚ-ಮತ್ತು ಇತರ ಗಿಡಗಳಿಂದಲೂ, ಉದ್ಭಾಸಿತವನಾಂತರೇ-ಉದ್ಭಾಸಿತ-ಪ್ರಕಾಶಿಸಲ್ಪಟ್ಟ, ವನಾಂತರೇ-ವನಮಧ್ಯದಲ್ಲಿ॥೫॥ಮಧುರಕಂಠಿನಃ- ಮಧುರಸ್ವರಯುಕ್ತವಾದ ಕಂಠಗಳುಳ್ಳ, ರಕ್ತಾಃ-ರಾಗಯುಕ್ತರಾದ, ಕಿನ್ನರಾಃ-ಕಿನ್ನರರು, ಮದನೇನ-ಮನ್ಮಥನಿಂದ, ಆರ್ತಾಃ-ಬಾಧಿತರಾಗಿ, ಮನಸ್ತುಷ್ಟಿವಿವರ್ಧನಂ-ಮನಸ್ಸಂತೋಷವನ್ನು ವೃದ್ಧಿಗೊಳಿಸುತಿರುವ, ಸಮಂ-ಸಮತಾಳಯುಕ್ತವಾದ, ಗೇಯಂ-ಗಾನವನ್ನು, ಸಂಪ್ರಜಗುಃ-ಚೆನ್ನಾಗಿ ಹಾಡಿದರು ॥೭॥ ಮಧುಕ್ಷೀಬಾಃ-ಮದ್ಯಪಾನದಿಂದ ಮತ್ತರಾದ, ಮದರಕ್ತಾಂತಲೋಚನಃ - ಮದ-ಹುಮ್ಮಸ್ಸಿನಿಂದ, ರಕ್ತಾಂತ - ಕೆಂಪಾದ ಕೊನೆಗಳುಳ್ಳ ಲೋಚನಾಃ-ನೇತ್ರಗಳುಳ್ಳ, ವಿದ್ಯಾಧರಾಃ-ವಿದ್ಯಾಧರರು, ಯೋಷಿದ್ಭಿಸ್ಸಹ-ಸ್ತ್ರೀರುಗಳೊಡನೆ, ಸಂಕ್ರಾಂತಾಃ-ಕೂಡಿಕೊಂಡವರಾಗಿ, ಚಿಕ್ರೀಡುಃ-ಕ್ರೀ

---

ಆ ಕೈಲಾಸಗಿರಿಯಲ್ಲಿ ಸೇನಾಪರಿವೃತನಾಗಿರ್ಪ ಆ ರಾವಣನಾದರೆ ಸೂರ್ಯಾಸ್ತಮಾನವಾಗಲೂ ಅಲ್ಲಿಯೇ ಇದ್ದವನಾದನು, ಪೂರ್ಣಿಮಾಕಾಲದಲ್ಲಿ ಕಡುತೇಜಸ್ವಿಯಾಗಿರುವ ಚಂದ್ರನು ಉದಯಿಸಲೂ, ಬಗೆಬಗೆಯಾದ ಆ ಯುಧಗಳುಳ್ಳ ಆ ರಾಕ್ಷಸರಸೈನ್ಯವೆಲ್ಲಾ ನಿದ್ದೆಯಂಗೈಯ್ಯುತಿತ್ತು ॥೨॥ ಪರ್ವತ ಶಿಖರದಲ್ಲಿರುತಿರುವ ಮಹಾ ಪರಾಕ್ರಮಿಯಾದ ರಾವಣನಾದರೆ ಚಂದ್ರ ಕಿರಣಗಳಿಂದ ಕಂಗೊಳಿಸುತಿರುವ ಅನೇಕಭಾಗಗಳಂ ವೀಕ್ಷಿಸುತಿದ್ದನು ಅದೆಂತೆನೆ,— ಕದಂಬ ವೃಕ್ಷಗಳಿಂವ್ಯಾಪ್ತ ಮಾಗಿರ್ಪದೇವ ಸಂಬಂಧವಾದ ಕರ್ಣಿಕಾರವನಗಳಿಂದಲೂ, ವಿಕಸಿತವಾದ ಪದ್ಮಗಳುಳ್ಳ ತಾವರೇ ಬಳ್ಳಿಗಳಿಂದಲೂ, ದೇವಗಂಗೋದಕದಿಂದಲೂ, ಚಂಪಕ, ಅಶೋಕ, ಪುನ್ನಾಗ, ಮಂದಾರ, ಚೂತ, ಪಾಟಲ, ಲೋಧ್ರ, ಪ್ರಿಯಂಗು, ಅರ್ಜುನ, ಕೇತಕ, ಆರಗ್ವಧ, ತಮಾಲ, ಪ್ರಿಯಾಳು, ವಕುಳವೇ ಮೊದಲಾದ ವೃಕ್ಷಗಳಿಂದಲೂ, ಮತ್ತೂ ಇತರ ವೃಕ್ಷಗಳಿಂದಲೂ ಕಂಗೊಳಿಸಲ್ಪಡುತಿರುವವನ ಮಧ್ಯ ಪ್ರದೇಶಗಳಲ್ಲಿ, ಸೊಗಸಾದ ಕಂಠಸ್ವರಗಳುಳ್ಳ ಮತ್ತೂ ಮದನತಾಪಮುಳ್ಳ ಕಿನ್ನರರು, ಮನಸ್ಸಂತೋಷಂಗೈಯ್ಯುವಂತೆ ತಾಳ ಲಯ ಸಮವಾಗಿಗಾನವಾಡುತಿದ್ದರು ॥೭॥ ಮತ್ತೂ ಮದ್ಯಪಾನದಿಂದ ಮತ್ತರಾದ ವಿದ್ಯಾಧರರು ಕೆಂಪಾದ ನೇತ್ರಾಂತಗಳುಳ್ಳವರಾಗಿ ಸ್ತ್ರೀಯರಿಂದೊಡಗೂಡಿ ಸಂತೋಷವಾಗಿ ಕ್ರೀಡಿಸುತಿದ್ದರು ॥೮॥ ಆ ಕುಬೇರನ ಮಂದಿರದಲ್ಲಾದರೆ, ಗಾನವಂಗೈಯ್ಯು



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗಾಯತಾಂಧನದಾಲಯೇ ॥೯॥ ಪುಷ್ಪವರ್ಷಾಣಿಮುಂಚಂತೋನಗಾಃಪವನತಾಡಿತಾಃ । ಶೈಲಂತಂವಾಸಯಂತೀವ ಮಧುಮಾಧವಗಂಧಿನಃ ॥೧೦॥ ಮಧುಪುಷ್ಪರಜಃಪೃಕ್ತಂಗಂಧಮಾದಾಯಪುಷ್ಕಲಮ್। ಪ್ರವವೌವರ್ಧಯನ್ ಕಾಮಂರಾವಣಸ್ಯಸುಖಾನಿಲಃ ॥೧೧॥ ಗೇಯಾತ್ಪುಷ್ಪಸಮೃದ್ಧ್ಯಾಚಶೈತ್ಯಾದ್ವಾಯೋರ್ಗುಣಾದಪಿ । ಪ್ರವೃತ್ತಾಯಾಂರಜನ್ಯಾಂಚ ಚಂದ್ರಸ್ಯೋದಯನೇನಚ ॥೧೨॥ ರಾವಣಸ್ಸಮಹಾವೀರ್ಯಃಕಾಮಬಾಣವಶಂಗತಃ । ವಿನಿಶ್ವಸ್ಯವಿನಿಶ್ವಸ್ಯಶಶಿನಂಸಮವೈಕ್ಷತ ॥೧೩॥ ಏತಸ್ಮಿನ್ನಂತರೇತತ್ರದಿವ್ಯಾಭರಣಭೂಷಿತಾ । ಸರ್ವಾಪ್ಸರೋವರಾರಂಭಾಪೂರ್ಣಚಂದ್ರನಿಭಾನನಾ॥೧೪॥ದಿ

---

ಡಿಸುತ್ತಿದ್ದರು, ಜಹೃಷುಶ್ಚ ಹ–ಸಂತೋಷವನ್ನೂ ಹೊಂದಿದರು ॥೮॥ ಘಂಟಾನಾಂ–ಘಂಟೆಗಳ, ಸನ್ನಾದಃಇವ–ಧ್ವನಿಯಂತೆ, ಧನದಾಲಯೇ–ಕುಬೇರನ ಮನೆಯಲ್ಲಿ, ಗಾಯತಾಂ–ಗಾನಮಾಡುತಿರುವ, ಅಪ್ಸರೋಗಣಸಂಘಾನಾಂ–ಅಪ್ಸರ–ಅಪ್ಸರ ಸ್ತ್ರೀಯರುಗಳ, ಗಣಸಂಘಾನಾಂ–ಗುಂಪುಗುಂಪುಗಳ, ಮಧುರಸ್ವನಃ–ಮಧುರವಾದ ಗಾನಧ್ವನಿಯು, ಶುಶ್ರುವೇ–ಕೇಳಲ್ಪಟ್ಟಿತು ॥೯॥ ಪವನತಾಡಿತಾಃ–ಪವನ–ಘಾಳಿಇಂದ, ತಾಡಿತಾಃ–ಹೊಡೆಯಲ್ಪಟ್ಟ, ಮಧುಮಾಧವಗಂಧಿನಃ–ಮಧು–ಚೈತ್ರಮಾಸದ, ಮಾಧವ–ವೈಶಾಖಮಾಸದ, ಗಂಧಿನಃ–ವಾಸನೆಗಳುಳ್ಳ, ಪುಷ್ಪವರ್ಷಾಣಿ–ಪುಷ್ಪವೃಷ್ಟಿಗಳನ್ನು, ಮುಚಂತಃ–ಸುರಿಯುತಿರುವ, ನಗಾಃ–ಗಿಡಗಳು, ತಂಶೈಲಂ–ಆ ಪರ್ವತವನ್ನು, ವಾಸಯಂತೀವ–ವಾಸನೆಗೊಳಿಸುತ್ತವೊ ಯಂಬಹಾಗಿತ್ತು ॥೧೦॥ ಮಧುಪುಷ್ಪರಜಃಪೃಕ್ತಂ–ಮಧುಪುಷ್ಪರಜಃ–ಮಕರಂದರಸಗಳಿಂದಲೂ ಪುಷ್ಪಧೂಳಿಗಳಿಂದಲೂ ಪೃಕ್ತಂ–ವ್ಯಾಪ್ತಮಾದ, ಗಂಧಂ–ಪರಿಮಳವನ್ನು, ಆದಾಯ–ತೆಗದುಕೊಂಡು, ಸುಖಾನಿಲಃ–ಸುಖಕರವಾದ ಮಂದಮಾರುತವು, ರಾವಣಸ್ಯ–ರಾವಣನಿಗೆ, ಕಾಮಂ–ಕಾಮವನ್ನು, ವರ್ಧಯನ್–ವೃದ್ಧಿಗೊಳಿಸುವದಾಗಿ, ಪ್ರವವೌ–ಬೀಸಿತು ॥೧೧॥ ಗೇಯಾತ್–ಗಾನದದೆಸೆಯಿಂದಲೂ, ಪುಷ್ಪಸಮೃದ್ಧ್ಯಾಚ–ಹುವ್ವುಗಳ ಬಾಹುಳ್ಯದಿಂದಲೂ, ವಾಯೋಃ–ವಾಯುವಿನ, ಶೈತ್ಯಾತ್–ಶೀತವಾದ, ಗುಣಾದಪಿ–ಗುಣದದೆಸೆಯಿಂದಲೂ, ಚಂದ್ರಸ್ಯ–ಚಂದ್ರನ, ಉದಯನೇನಚ–ಉದಯದಿಂದಲೂ, ರಜನ್ಯಾಂ–ರಾತ್ರಿಯು, ಪ್ರವೃತ್ತಾಯಾಂ ಸತ್ಯಾಂ– ಪ್ರವರ್ತಿಸಿದಂಥಾದ್ದಾಗತಿರಲಿಕಾಗಿ, ಮಹಾವೀರ್ಯಃ–ಮಹಾಪರಾಕ್ರಮಶಾಲಿಯಾದ, ಸರಾವಣಃ–ಆ ರಾವಣನು, ಕಾಮಬಾಣವಶಂಗತಃ – ಕಾಮ–ಮನ್ಮಥನ, ಬಾಣ–ಬಾಣದಿಂದ,ವಶಂಗತಃ–ಸ್ವಾಧೀನನಾಗಿ, ವಿನಿಶ್ವಸ್ಯ–ವಿನಿಶ್ವಸ್ಯ–ಬಾರಿಬಾರಿಗೂ ನಿಟ್ಟುಸುರು ಬಿಡುತ್ತಾ, ಶಶಿನಂ–ಚಂದ್ರನನ್ನು, ಸಮವೈಕ್ಷತ– ನೋಡಿದನು ॥೧೩॥ ಏತಸ್ಮಿನ್ನಂತರೇ–ಈ ಮಧ್ಯಕಾಲದಲ್ಲಿ, ತತ್ರ–ಆ ಕೈಲಾಸ ಪರ್ವತದಲ್ಲಿ, ದಿವ್ಯಾಭರಣಭೂಷಿತಾ–ದಿವ್ಯ–ಪ್ರಕಾಶಿಸುತಿರುವ, ಆಭರಣ–ಒಡವೆಗಳಿಂದ, ಭೂಷಿತಾ–ಅಲಂಕೃತಳಾದ, ಪೂರ್ಣಚಂದ್ರನಿಭಾನನಾ–ಪೂರ್ಣಚಂದ್ರನಿಭ–ಹುಣ್ಣುಮೆಚಂದ್ರನಿಗೆ ಸಮಾನವಾದ, ಆನನಾ–ಮುಖವುಳ್ಳ, ಮಂದಾರಕೃತಮೂರ್ಧಜಾ–ಮಂದಾರ ಪುಷ್ಪಗಳಿಂದ ಅಲಂಕೃತವಾದ ಕೇಶಗಳುಳ್ಳ, ರತೋತ್ಸವಕೃತಾರಂಭಾ–ವಿಹಾರೋತ್ಸವದಲ್ಲಿ ಮಾಡಲ್ಪಟ್ಟ ಪ್ರಯತ್ನವುಳ್ಳ, ದಿವ್ಯಪುಷ್ಪವಿಭೂಷಿತಾ–ದೇವತಾ ಸಮ್ಮಂಧವಾದ, ಪುಷ್ಪಗಳಿಂದ ಭೂಷಿತಳಾದ, ಚಕ್ಷುರ್ಮನೋಹರಂ–ಚಕ್ಷುಃ–ನೇತ್ರಗಳಿಗೆ, ಮನೋಹರಂ–ಇಂಪಾಗಿರುವ, ಮೇಖಲಾದಾಮಭೂಷಿತಂ–ಮೇಖಲಾದಾಮ–ಒಡ್ಯಾಣವೆಂಬ ವಡವೆಯಿಂದ, ಭೂಷಿತಂ–ಅಲಂಕೃತಮಾದ, ರತಿಪ್ರಾಭೃತಂ–ರತಿ–ಪತಿವಿಹಾರಕ್ಕೆ, ಪ್ರಾಭೃತಂ–ಉತ್ಪಾದಕಮಾದ, ಉತ್ತಮಂ–ಉತ್ತಮವಾದ, ಪೀನಂ–ಬಲತಿರುವ, ಜಘನಂ – ಕಟಿಪ್ರದೇಶವನ್ನು, ಸಮುದ್ವಹಂತೀ–ವಹಿಸುತ್ತಿರುವ, ಸರ್ವಾಪ್ಸರೋವರಾ – ಸರ್ವಾಪ್ಸರ ಸ್ತ್ರೀಯರೊಳಗೆ, ಶ್ರೇಷ್ಠಳಾದ, ರಂಭಾ – ರಂಭಾಯೆಂಬ ಅಪ್ಸರಸ್ತ್ರೀಯು, ಷಡೃತುಕುಸುಮೋತ್ತಮೈಃ – ಷಡೃತು– ಷಡೃತುಗಳ, ಕುಸುಮೋತ್ತಮೈಃ– ಉತ್ತಮವಾದ ಕುಸುಮಗಳಿಂದ, ರಮ್ಯೈಃ– ಮನೋಹರಂಗಳಾದ, ಕೃತೈಃ–ಮಾಡಲ್ಪಟ್ಟ, ವಿಶೇಷಕೈಃ–ಅಲಂಕಾರಗಳಿಂದ, ಹ್ರೀಕಾಂತಿದ್ಯುತಿಮತಿಶ್ರಿಯಾಂ –ಹ್ರೀ – ಲಜ್ಜಾಭಿಮಾನ ದೇವತೆಯೂ, ಕಾಂತಿ – ಕಾಂತಿಲಕ್ಷ್ಮಿಯೂ,ದ್ಯುತಿ–ಪ್ರಕಾಶಲಕ್ಷ್ಮಿಯೂ, ಮತಿ–

---

ರುವ ಅಪ್ಸರಸ್ತ್ರೀಯರ ಗುಂಪುಗಳ ಇಂಪಾದ ಗಾನವು, ಘಂಟಾಧ್ವನಿಯಂತೆ ಕೇಳಿಸುತಿತ್ತು ॥೯॥ ಸದಾ ಕಾಲದಲ್ಲಿಯೂ ಚೈತ್ರ ವೈಶಾಖ ಮಾಸಗಳಲ್ಲಿನ ಪುಷ್ಪ ಗಂಧಉಳ್ಳದ್ದಾಗಿಯೂ, ಬಿರುಘಾಳಿಯು ಬೀಸೋಣದರಿಂದ ಉದರಿದ ಪೂಗಳುಳ್ಳದ್ದಾಗಿಯೂ ಇರುವ ವೃಕ್ಷಗಳು ಆ ಕೈಲಾಸಪರ್ವತವಂ ವಾಸನೆ ಕಟ್ಟುವಂತಿತ್ತು ॥೧೦॥ ಮತ್ತೂ ಮಂದಮಾರುತವು ಮಕರಂದ ರಸದಿಂದಲೂ ಪೂಧೂಳಿಯಿಂದಲೂ ವ್ಯಾಪ್ತಮಾಗಿರ್ಪ ಸುಗಂಧವಂ ತೆಗದುಕೊಂಡು, ಆ ದಶಕಂಠನಿಗೆ ಕಾಮವಂ ವೃದ್ಧಿಗೊಳಿಸುತಿರುವದಾಗಿ ಬೀಸುತಿತ್ತು ॥೧೧॥ ಇದಲ್ಲದೆ ರಾತ್ರಿಕಾಲವು ಪ್ರಾಪ್ತಮಾಗಲೂ, ಗಾನದಿಂದಲೂ, ಪುಷ್ಪಾತಿಶಯದಿಂದಲೂ, ಶೈತ್ಯದಿಂದಲೂ,ಮಂದಮಾರುತದಿಂದಲೂ, ಚಂದ್ರೋದಯದಿಂದಲೂ ಸಹಾ ಆ ರಾವಣನು ಕಡು ಪರಾಕ್ರಮಿಯಾದರೂ ಮನ್ಮಥಬಾಣಗಳಿಗೆ ಶಿಲುಕಿದವನಾಗಿ, ಆ ಬಾಧೆಯಂ ಸೈರಿಸಲಾರದೇ, ಭಾರಿಭಾರಿಗೂ ನಿಟ್ಟುಸುರುಗಳಂ ಬಿಡುತ್ತಾ ಚಂದಿರನನ್ನು ನೋಡುತಿದ್ದನು ॥೧೩॥ ಇಷ್ಟರಲ್ಲಿ ಸರ್ವಾಭರಣ ಭೂಷಿತಳಾಗಿಯೂ, ಪೂರ್ಣಮಾಚಂದ್ರನ ತೆರದಿ।ಕಂಗೊಳಿಸುತಿರುವ ಮುಖಮುಳ್ಳವಳಾಗಿಯೂ, ಅಪ್ಸರಾಂಗನೆಯರಲ್ಲಿ ಉತ್ತಮಳಾಗಿಯೂ, ದಿವ್ಯವಾದ ಗಂಧವಂ ಹಚ್ಚಿಕೊಂಡಿರುವಳಾಗಿಯೂ, ಮಂದಾರಪುಷ್ಪಗಳಂ ಮುಡು ಕೊಂಡಿರುವಳಾಗಿಯೂ, ವಿಹಾರೋತ್ಸವದಲ್ಲಿ ಯತ್ನಿಸುತಿರುವಳಾಗಿಯೂ, ದಿವ್ಯಪುಷ್ಪಗಳಿಂದ ಲಂಕೃತಳಾಗಿಯೂ,ನೇತ್ರಗಳಿಗಿಂಪಾಗಿರುವಸುತ್ತೂ ಬಲಿತಿರುವ, ಒಢ್ಯಾಣ್ಣವೆಂಬ ಒಡಿವೇಯಿಂದಲಂಕೃತವಾದ, ವಿಹಾರಕ್ಕೆ ಉತ್ಪಾದಕವಾದ ಮತ್ತೂ ಉತ್ತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವ್ಯಚಂದನಲಿಪ್ತಾಂಗೀಮಂದಾರಕೃತಮೂರ್ಧಜಾ । ರತೋತ್ಸವಕೃತಾರಂಭಾದಿವ್ಯಪುಷ್ಪವಿಭೂಷಿತಾ ||೧೫|| ಚಕ್ಷುರ್ಮ ನೋಹರಂಪೀನಂಮೇಖಲಾದಾಮಭೂಷಿತಮ್ । ಸಮುದ್ವಹಂತೀಜಘನಂರತಿಪ್ರಾಭೃತಮುತ್ತಮಮ್ ||೧೬|| ಕೃತೈರ್ವಿ ಶೇಷಕೈರಾರ್ದ್ರೈಃಷಡರ್ತುಕುಸುಮೋತ್ತಮೈಃ। ಬಭಾವನ್ಯತಮೇವಹ್ರೀಕಾಂತಿದ್ಯುತಿಮತಿಶ್ರಿಯಾಮ್ ||೧೭||ನೀಲಂಸತೋ ಯಂಮೇಘಾಭಂವಸ್ತ್ರಂಸಮವಕುಂಠಿತಾ। ಯಸ್ಯಾವಕ್ತ್ರಂಶಶಿನಿಭಂಭ್ರುವೌಚಾಪನಿಭೆಶುಭೆ |||೧೮|| ಊರೂಕರಿಕರಾಕಾ ರಾಕರೌಪಲ್ಲವಕೋಮಲೌ। ಸೈನ್ಯಮಧ್ಯೇನಗಚ್ಛಂತೀರಾವಣೇನೋಪಲಕ್ಷಿತಾ ||೧೯|| ತಾಂಸಮುತ್ಥಾಯಗಚ್ಛಂತೀಂಕಾ ಮಬಾಣಬಲಾರ್ದಿತಃ । ಕರೇಗೃಹೀತ್ವಾಲಜ್ಜಂತೀಂಸ್ಮಯಮಾನೋಭ್ಯಭಾಷತ||೨೦|| ಕ್ವಗಚ್ಛಸಿವರಾರೋಹೇಕಾಂಸಿದ್ಧಿಂ ಭಜಸೇಸ್ವಯಮ್ । ಕಸ್ಯಾಭ್ಯುದಯಕಾಲೋಯಂಕಸ್ತ್ವಾಂಸಮುಪಭೋಕ್ಷ್ಯತೆ ||೨೧|| ತವಾನನರಸಸ್ಯಾದ್ಯಪದ್ಮೋ ತ್ಪಲಸುಗಂಧಿನಃ । ಸುಧಾಮೃತರಸಸ್ಯೇಹಕೋದ್ಯತೃಪ್ತಿಂಗಮಿಷ್ಯತಿ ||೨೨|| ಕಇದಂಪೂರ್ಣಚಂದ್ರಾಭಂನಿರವದ್ಯೋತ್ಪಲೆ ಕ್ಷಣಮ್। ಮುಖಾಮೃತಂಪಾಸ್ಯತಿತೇಹ್ಯಮೃತಂದೇವರಾಡಿವ||೨೩|| ಸ್ವರ್ಣಕುಂಭನಿಭೌಪೀನೌಶುಭೌಭೀರುನಿರಂತರೌ।

---

ಬುದ್ಧಿಯೂ, ಶ್ರಿಯಾಂ-ಲಕ್ಷ್ಮೀದೇವಿಯೂಎಂಬ ಇವರೊಳಗೆ, ಅನ್ಯತಮೇವ-ಯಾರೋ ಒಬ್ಬಳಂತೆ, ಬಭೌ-ಹೊಳೆಯುತ್ತಿದ್ದಳು ||೧೪||೧೫||೧೬||೧೭|| ನೀಲಂ-ಕಪ್ಪಾಗಿ ಇರುವ, ಸತೋಯಮೇಘಾಭಂ-ಉದಕದಿಂದೊಡಗೂಡಿದ ಮೇಘದ ಕಾಂತಿಯಂತೆ ಕಾಂತಿಯುಳ್ಳ, ವಸ್ತ್ರಂ- ಸೀರೆಯನ್ನು, ಸಮವ ಕುಂಠಿತಾ-ಉಟ್ಟಿರುವಳಾಗಿ, ಬಭೌ-ಪ್ರಕಾಶಿಸಿದಳು, ಯಸ್ಯಾಃ-ಯಾವ ರಂಭೆಯ, ವಕ್ತ್ರಂ-ಮುಖವು, ಶಶಿನಿಭಂ-ಚಂದ್ರನಿಗೆ ಸಮಾನವಾದ್ದೋ, ಶುಭೇ-ಶು ಭಕರಗಳಾದ, ಭ್ರುವೌ-ಕಣ್ಣುಬ್ಬುಗಳು, ಚಾಪನಿಭೆ-ಮನ್ಮಥನ ಧನಸ್ಸಿಗೆ ಸಮಾನವಾಗಿರುವವೋ||೧೮|| ಊರೂ-ತೊಡೆಗಳು, ಕರಿಕರಾಕಾರೌ-ಕರಿ- ಆನೆ ಯ-ಕರ-ಸೊಂಡಿಲಮೋಪಾದಿಯಲ್ಲಿ, ಆಕಾರೌ-ಆಕಾರವುಳ್ಳವುಗಳೊ,ಕರೌ-ಹಸ್ತಗಳು, ಪಲ್ಲವಕೋಮಲೌ-ಪಲ್ಲವ-ಚಿಗುರುಗಳಂತೆ,ಕೋಮಲೌ-ಮೃದು ವಾಗಿರುವವೊ-ಸಾ-ಆ ರಂಭೆಯು, ಸೈನ್ಯಮಧ್ಯೇನ-ಸೈನ್ಯ-ಸೇನೆಯ, ಮಧ್ಯೇನ-ಮಧ್ಯಮಾರ್ಗದಿಂದ,ಗಚ್ಛಂತೀ-ಹೋಗುತಿರುವಳಾಗಿ, ರಾವಣೇನ-ರಾವಣನಿಂ ದ, ಉಪಲಕ್ಷಿತಾ-ನೋಡಲ್ಪಟ್ಟಳು ||೧೯|| ಗಚ್ಛಂತೀಂ-ಹೋಗುತಿರುವ, ಲಜ್ಜಂತೀಂ-ನಾಚಿಕೆಗೊಂಡಿರುವ, ತಾಂ-ಆ ರಂಭೆಯನ್ನು, ಸಮುತ್ಥಾಯ-ಎ ದ್ದು, ಕರೇ-ಹಸ್ತದಲ್ಲಿ, ಗೃಹೀತ್ವಾ-ಹಿಡುಕೊಂಡು, ಕಾಮಬಾಣಬಲಾರ್ದಿತಃ-ಕಾಮ-ಮನ್ಮಥನ, ಬಾಣ-ಬಾಣದ, ಬಲ-ಸಾಮರ್ಥ್ಯದಿಂದ, ಅರ್ದಿತಃ-ಬಾಧಿ ತನಾಗಿ, ಸ್ಮಯಮಾನಃ-ನಗುತಿರುವನಾಗಿ, ಅಭ್ಯಭಾಷತ-ನುಡಿದನು ||೨೦|| ಹೇವರಾರೋಹೆ-ಯಲೈಶ್ರೇಷ್ಠಳೆ, ಕ್ವಗಚ್ಛಸಿ-ಯಲ್ಲಿಗೆ ಹೋಗುತ್ತಿ, ಕಾಂಸಿ ದ್ಧಿಂ-ಯಾವ ಭೋಗಸಿದ್ಧಿಯನ್ನು, ಸ್ವಯಂ-ನೀನು, ಭಜಸೆ-ಹೊಂದುತ್ತಿ, ಅಯಂ-ಇದು, ಕಸ್ಯ-ಯಾವನಿಗೆ, ಅಭ್ಯುದಯಕಾಲಃ- ಅಭ್ಯುದಯಕಾಲ ವೊ, ಕಃ-ಯಾವನು, ತ್ವಾಂ-ನಿನ್ನನ್ನು, ಸಮುಪಭೋಕ್ಷ್ಯತೆ-ಉಪಭೋಗ ಮಾಡುವನು ||೨೧|| ಅದ್ಯ-ಈಗ, ಪದ್ಮೋತ್ಪಲಸುಗಂಧಿನಃ-ಪದ್ಮ-ಕಮ ಲದಂತೆ, ಉತ್ಪಲ-ನೈದಲೆ ಹುವ್ವಿನಂತೆ, ಸುಗಂಧಿನಃ-ಸುಗಂಧವುಳ್ಳ, ತವ-ನಿನ್ನ, ಆನನರಸಸ್ಯ-ಆನನ-ಮುಖದ, ರಸಸ್ಯ- ರಸವನ್ನೂ ಅನಾದರಣೆ ಮಾಡಿ, ಸುಧಾಮೃತರಸಸ್ಯ-ಸುಧಾ-ಅಮೃತಕ್ಕಿಂತಲು, ಅಮೃತರಸಸ್ಯ-ಅಮೃತರಸದಿಂದ, ಇಹ-ಈ ಲೋಕದಲ್ಲಿ, ಕಃ-ಯಾವ ಪುರುಷನು,ಅದ್ಯ-ಈಗ, ತೃ ಪ್ತಿಂ-ತೃಪ್ತಿಯನ್ನು, ಗಮಿಷ್ಯತಿ-ಹೊಂದುವನು ||೨೨|| ಕಃ-ಯಾವ ಪುರುಷನು, ಪೂರ್ಣಚಂದ್ರಾಭಂ-ಹುಣ್ಣಿಮೆ ಚಂದ್ರನಂತೆ ಹೊಳೆಯುತಿರುವ, ನಿರ ವದ್ಯೋತ್ಪಲೆಕ್ಷಣಂ-ನಿರ್ದೋಷಗಳಾದ ನೈದಿಲೆ ಹುವ್ವುಗಳಂತಿರುವ ಕಣ್ಣುಗಳುಳ್ಳ, ತೆ-ನಿನ್ನ, ಇದಂ-ಈಮುಖಾಮೃತಂ-ಮುಖರಸವೆಂಬ ಅಮೃತವನ್ನು, ದೇವರಾಟ್-ದೇವೇಂದ್ರನು, ಅಮೃತಮಿವ, ಅಮೃತವನ್ನಂತೆ,ಪಾಸ್ಯತಿ-ಪಾನಮಾಡುವನು||೨೩||ಹೆ ಭೀರು,ಎಲೈ ಭಯಶೀಲಳೆ,ಸ್ವರ್ಣಕುಂಭನಿಭೌ-ಸುವರ್ಣ

---

ವು ಮಾದ ಕಟಿಪ್ರದೇಶವಂ ವಹಿಸುತಿರುವಳಾಗಿಯೂ, ಆಗಿರುವ ರಂಭೆಯೆಂಬಪ್ಸರಸ್ತ್ರೀಯು ಬಂದವಳಾದಳು ||೧೬|| ಮನೋಹರವಾದ ಷಡೃತುಗಳಲ್ಲಿ ಹುಟ್ಟಿದ ಪುಷ್ಪಗಳಿಂದ ಮಾಡಲ್ಪಟ್ಟ ಅಲಂಕಾರಗಳಿಂದ, ಲಜ್ಜಾಭಿಮಾನಿದೇವತೆಯೂ ಲಕ್ಷ್ಮಿಯೂ, ಕಾಂತಿಯೂ, ಬುದ್ಧಿಯೂ, ಸಮೃದ್ಧಿಯೂ ಎಂಬವರುಗಳಲ್ಲಿ ಯಾರೋ ಒಬ್ಬಳಂತೆ ಹೊಳೆಯುತಿದ್ದಳು|| ಯಾವ ರಂಭೆಯಮುಖವು ಚಂದಿರನಂತೆಯೂ, ಶುಭಕರವಾದ ಕಣ್ಣುಹುಬ್ಬುಗಳು ಧನುಸ್ಸುಗಳಹಾಗೆಯೂ, ತೊಡೆಗ ಳು ಆನೇಸೊಂಡಿಲಗಳೋಪಾದಿಯಲ್ಲಿರುವವೋ,ಮತ್ತು ಹಸ್ತಗಳು ಚಿಗುರುಗಳ ತೆರದಂತಿರುವವೋ, ಕಾಲಮೇಘದಂತೆ ನೀಲವಾಗಿರುವ ವಸ್ತ್ರವನ್ನುಟ್ಟಿರುವ ಆ ರಂಭೆಯು ಸೈನ್ಯಮಧ್ಯದಲ್ಲಿ ಹೋಗುತಿರುವಳಾಗಿ ರಾವಣನಿಂದ ಕಾಣಲ್ಪಟ್ಟ ಳು ||೧೯|| ಆ ಸಮಯದಲ್ಲಿ ರಾವಣನು, ಮನ್ಮಥಬಾಣದಿಂದ ಬಹಳವಾಗಿ ನೊಂದವನಾಗಿ ಸೈನ್ಯದ ನಡುವೇ ಹೊಗು ತಿರುವ ಆ ರಂಭೆಯಂ ಕಂಡು, ಮೇಲಕ್ಕೆ ಎದ್ದು, ನಾಚಿಕೆ ಬೀಳುತಿರುವ ಆಕೆಯಂ ಹಸ್ತದಿಂದ ಪರಿಗ್ರಹಿಸಿ ಮುಗುಳ್ ನಗೆಯುಳ್ಳವನಾಗಿಂತೆಂದನು ||೨೦|| ಎಲೈ ಉತ್ತಮಾಂಗನೆಯೇ ! ಎಲ್ಲಿ ಹೋಗುತಿರುವಿ,ನೀನು ಯಾವಭೋಗಸಿದ್ಧಿಯಂ ಹೊಂದುವಿ, ಯಾವಪುರುಷನಿಗೆ ಉಭ್ಯುದಯಕಾಲವಿದು, ನಿನ್ನನ್ನು ಯಾವನು ಉಪಭೋಗಿಸುವನು ಈ ಲೋಕದಲ್ಲಿ ಕಮಲಗಳಂತೆಯೂ ನೈದಿಲೆಯಂತೆಯೂ ಸುವಾಸನೆಯುಳ್ಳ ನಿನ್ನಮುಖದರಸವನ್ನನಾದರಿಸಿ ಈ ಕಾಲದಲ್ಲಿ ಯಾವಪು ರುಷನು ಅಮೃತರಸದಿಂದ ತೃಪ್ತನಾಗುವನು ||೨೨|| ಸಂಪೂರ್ಣಚಂದ್ರನ ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಸ್ಯೋರಸ್ಥಳಸಂಸ್ಪರ್ಶಂದಾಸ್ಯತಸ್ತೆ ಕುಚಾವಿಮೌ ॥೧೪॥ ಸುವರ್ಣಚಕ್ರಪ್ರತಿಮಂಸ್ವರ್ಣದಾಮಚಿತಂಪೃಥು। ಅಧ್ಯಾರೋಕ್ಷ್ಯತಿಕಸ್ತೆದ್ಯಸ್ವರ್ಗಂಜಘನರೂಪಿಣಮ್ ॥೧೫॥ ಮದ್ವಿಶಿಷ್ಟಃಪುಮಾನ್ಕೋದ್ಯ ಶಕ್ರೋವಿಷ್ಣುರಥಾಶ್ವಿನೌ। ಮಾಮತೀತ್ಯಹಿಯಸ್ಯತ್ವಂಯಾಸಿಭೀರುನಶೋಭನಮ್ ॥೧೬॥ ವಿಶ್ರಮಸ್ವ ಪೃಥುಶ್ರೋಣಿಶಿಲಾತಲಮಿದಂಶುಭಮ್ । ತ್ರೈಲೋಕ್ಯೇಯಃಪ್ರಭುಶ್ಚೈವತುಲ್ಯೋಮಮನವಿದ್ಯತೆ ॥೧೭॥ ತದೇಷಪ್ರಾಂಜಲಿಃಪ್ರಹ್ವೋಯಾಚತೇತ್ವಾಂದಶಾನನಃ । ಯಃಪ್ರಭುಶ್ಚವಿಭೋಕ್ತಾಚತ್ರೈಲೋಕ್ಯಸ್ಯಭಜಸ್ವಮಾಮ್॥೧೮॥ ಏವಮುಕ್ತಾಬ್ರವೀದ್ರಂಭಾವೇಪಮಾನಾಕೃತಾಂಜಲಿಃ । ಪ್ರಸೀದನಾರ್ಹಸೆವಕ್ತುಮೀದೃಶಂತ್ವಂಹಿಮೆಗುರುಃ ॥೧೯॥ ಅನ್ಯೇಭ್ಯೋಪಿತ್ವಯಾರಕ್ಷ್ಯಾಪ್ರಾಪ್ನುಯಾಂಧರ್ಷಣಂಯದಿ । ಧರ್ಮತಶ್ಚಸ್ನುಷಾತೆಹಂತತ್ವಮೆತದ್ಬ್ರವೀಮಿತೆ ॥೨೦॥ ಅಥಾಬ್ರವೀದ್ದಶಗ್ರೀವಶ್ಚರಣಾಧೋಮುಖೀಂಸ್ಥಿತಾಮ್ । ರೋಮಹರ್ಷ

---

ಕಲಶಗಳಿಗೆ ಸಮಾನಗಳಾದ, ಪೀನೌ-ಬಲಿತಿರುವ, ಶುಭೌ-ಶುಭಕರಗಳಾದ, ನಿರಂತರೌ-ಪರಸ್ಪರ ಸಂಮರ್ದಗಳಾದ, ತೆ-ನಿನ್ನ, ಇಮೌ-ಕುಚೌ-ಈ ಕಾಣಿಸುತ್ತಿರುವ ಕುಚಗಳು, ಕಸ್ಯ-ಯಾವಪುರುಷನಿಗೆ, ಉರಸ್ಥಳ ಸಂಸ್ಪರ್ಶಂ-ವಕ್ಷಸ್ಥಳ ಸಂಗಮವನ್ನು, ದಾಸ್ಯತಃ-ಕೊಡಿಸುತವೆ, ॥೧೪॥ ಸುವರ್ಣಚಕ್ರಪ್ರತಿಮಂ-ಸುವರ್ಣ-ಭಂಗಾರ ವಿಕಾರಮಾದ, ಚಕ್ರ-ಚಕ್ರಕ್ಕೆ, ಪ್ರತಿಮಂ-ಸಮಾನಮಾದ, ಸ್ವರ್ಣದಾಮಚಿತಂ-ಸ್ವರ್ಣದಾಮ-ಕಾಂತಿಭೂಷಣದಿಂದ, ಚಿತಂ-ವ್ಯಾಪ್ತಮಾದ, ಪೃಥು-ವಿಸ್ತಾರಮಾದ, ತೆ-ನಿನ್ನ, ಜಘನರೂಪಿಣಂ-ಜಘನ-ಕಟಿಪ್ರರೋಭಾಗದ, ರೂಪಿಣಂ-ಸ್ವರೂಪಮುಳ್ಳ,ಸ್ವರ್ಗಂ-ಸ್ವರ್ಗವನ್ನು, ಕಃ-ಯಾರು, ಅದ್ಯ-ಈಗ, ಅಧ್ಯಾರೋಕ್ಷ್ಯತಿ-ಆರೋಹಣೆಮಾಡುವನು ॥೧೫॥ ಹೆಭೀರು-ಯಲೈ ಭಯಶೀಲಳೆ, ಅದ್ಯ-ಈಗ, ಮದ್ವಿಶಿಷ್ಟಃ-ನನಗಿಂತಲೂ ಹೆಚ್ಚಾದ, ಪುಮಾನ್-ಪುರುಷನು, ಕಃ-ಯಾರು, ಶಕ್ರಃ-ದೇವೇಂದ್ರನೆ, (ಅಥವಾ-ವಿಷ್ಣುಃ-ವಿಷ್ಣುವೆ, ಅಶ್ವಿನೌ-ಅಶ್ವಿನೀ ದೇವತೆಗಳೇ,ಯಸ್ಮಾತ್ಕಾರಣಾತ್-ಯಾವಕಾರಣದವೆಸೆಯಿಂದ, ಮಾಂ-ನನ್ನನ್ನು, ಅತೀತ್ಯ-ಉಲ್ಲಂಘಿಸಿ, ಯಸ್ಯ-ಯಾವನನಿಮಿತ್ತವಾಗಿ, ತ್ವಂ-ನೀನು, ಯಾಸಿ – ಹೋಗುತ್ತೀಯೋ,ತತ್-ಅದು, ನಶೋಭನಂ-ವಳ್ಳೇದಲ್ಲಾ ॥೧೬॥ ಹೆ ಪೃಥುಶ್ರೋಣಿ-ಬೃಹತ್ತಾದ ಶ್ರೋಣೀಪ್ರದೇಶವುಳ್ಳವಳೆ,ಶುಭಂ-ಶುಭಕರಮಾದ, ಇದಂಶಿಲಾತಲಂ-ಈ ಪಾಷಾಣಪ್ರದೇಶದಲ್ಲಿ, ವಿಶ್ರಮಸ್ವ-ವಿಶ್ರಮಿಸು, ತ್ರೈಲೋಕ್ಯೇ-ಲೋಕತ್ರಯದಲ್ಲಿ,ಯಃ-ಯಾವನಾನು,ಪ್ರಭುಶ್ಚೈವ-ಸ್ವಾಮಿಯಾಗಿ ಧಣಿಯೊ, ತಸ್ಯ-ಮಮ-ಅಂಥಾ ನನಿಗೆ, ತುಲ್ಯಃ-ಸಮಾನನು, ನವಿದ್ಯತೆ-ಇಲ್ಲಾ ॥೧೭॥ ತತ್-ಆದಕಾರಣದವೆಸೆಯಿಂದ,ಏಷದಶಾನನಃ-ಈ ರಾವಣನು,ಪ್ರಾಂಜಲಿಃ-ಕೈಮುಗಿದವನಾಗಿ, ಪ್ರಹ್ವಃ-ನಮ್ರನಾಗಿ, ತ್ವಾಂ-ನಿನ್ನನ್ನು, ಯಾಚತೆ-ಬೇಡುತ್ತಾನೆ, ಯಃ-ಯಾವ ರಾವಣನು, ತ್ರೈಲೋಕ್ಯಸ್ಯ- ಲೋಕತ್ರಯಕ್ಕೂ ಕೂಡ, ಪ್ರಭುಶ್ಚ-ಸ್ವಾಮಿಯಾದವನೊ, ಭೋಕ್ತಾಪಿಚ-ಉಪಭೋಗಕರ್ತನಾದವನೊ, ತಂ-ಅಂಥಾ, ಮಾಂ-ನನ್ನನ್ನು, ಭಜಸ್ವ-ಹೊಂದು ॥೧೮॥ ಏವಂ-ಈ ಪ್ರಕಾರವಾಗಿ, ಉಕ್ತಾ-ಹೇಳಲ್ಪಟ್ಟ, ರಂಭಾ-ರಂಭೆಯು, ವೇಪಮಾನಾ-ಕಂಪಿಸುವಳಾಗಿ, ಕೃತಾಂಜಲಿಃ-ಕೈಮುಗಿದವಳಾಗಿ, ಅಬ್ರವೀತ್-ನುಡಿದಳು, ಪ್ರಸೀದ-ಪ್ರಸನ್ನನಾಗು, ಈದೃಶಂ-ಇಂಥಾ ಮಾತನ್ನು,ವಕ್ತುಂ-ಹೇಳುವದಕ್ಕೆ, ತ್ವಂ-ನೀನು, ನಾರ್ಹಸೆ-ಅರ್ಹನಲ್ಲಾ, ಹಿ-ಯಾವಕಾರಣದವೆಸೆಯಿಂದ, ತ್ವಂ-ನೀನು, ಮೆ-ನನಗೆ, ಗುರುಃ-ಗುರುವಾಗಿದ್ದೀ, ತ್ವಯಾ-ನಿನ್ನಿಂದ, ಅನ್ಯೇಭ್ಯಃ-ಇತರಪುರುಷರವೆಸೆಯಿಂದ, ರಕ್ಷ್ಯಾ-ಸಂರಕ್ಷಿಸುವದಕ್ಕೆ ಅರ್ಹಳಾದ ನಾನು, ಧರ್ಷಣಂ-ತಿರಸ್ಕಾರವನ್ನು, ಪ್ರಾಪ್ನುಯಾಂಯದಿ-ಹೊಂದುವಳೆ ಆದರೆ, ಕಿಮುವಕ್ತವ್ಯಂ-ಏನು ಹೇಳ ತಕ್ಕದ್ದು, ಧರ್ಮತಃ-ಧರ್ಮದಿಂದ, ತೆ-ನಿನಗೆ, ಸ್ನುಷಾ-ಸೊಸೆಯು, ತೆ-ನಿನಗೆ, ತತ್ವಂ-ಯಥಾರ್ಥವಾದ, ಏತತ್-ಈ ಮಾತನ್ನು, ಬ್ರವೀಮಿ-ಹೇಳುತ್ತೇನೆ ॥೧೯॥೨೦॥ ಅಥ-ಬಳಿಕ, ದಶ

---

ಮತ್ತೂ ನಿರ್ದುಷ್ಟಮಾದ ನೈದಿಲೆಗಳ ತೆರದಿ ಕಂಗೊಳಿಸುತಿರುವ ನೇತ್ರಗಳುಳ್ಳ, ನಿನ್ನ ಈ ಮುಖಾಮೃತವಂ, ಇಂದು ಅಮೃತಪಾನವಂ ಗೈದಂತೆ ಯಾವ ಪುರುಷನು ಪಾನವಂಗೈಯ್ಯುವನೋ ॥ ಎಲೈ ಕಾಮಿನಿಯೇ ! ನಿರಂತರಮಾಗಿರುವದಾಗಿಯೂ, ಶುಭಕರವಾಗಿಯೂ ಸ್ವರ್ಣಕುಂಭಗಳಂತೆಕಂಗೊಳಿಸುವದಾಗಿಯೂ, ಇರುವ ಈ ನಿನ್ನ ಕುಚಗಳು ಯಾವ ಪುರುಷನ ವಕ್ಷಸ್ಥಳಕ್ಕೆ ಸ್ಪರ್ಶವನ್ನೀಯ್ಯುವವೋ ॥೧೪॥ ಸುವರ್ಣನಿರ್ಮಿತಮಾದ ಚಕ್ರಕ್ಕೆ ಸಮಾನಮಾಗಿರ್ಪ ಮತ್ತೂ ಭಂಗಾರದ ಕಾಂತಿಯಿಂದ ವ್ಯಾಪ್ತಮಾದ, ನಿನ್ನ ಜಘನರೂಪಮಾದ ವಿಸ್ತಾರಮಾಗಿರುವ ಸ್ವರ್ಗವನ್ನೀಗ ಯಾವ ಪುರುಷನೇರುವನೋ ॥೧೫॥ ಎಲೆ ಭಯಶೀಲಳೇ ! ನನ್ನನ್ನತಿಕ್ರಮಿಸಿ ನೀನು ಯಾವಪುರುಷನ ಬಳಿಗೆ ಹೋಗುವಿ, ನನಗಿಂತಲೂ ಅಧಿಕನಾದ ಪುರುಷನ್ಯಾರು? ಇಂದ್ರನೋ, ವಿಷ್ಣುವೋ, ಅಶ್ವಿನೀ ದೇವತೆಗಳೋ ಯಾರಿರುವರು, ಹೀಗೆ ಹೋಗುವದು ನಿನಿಗೆ ಒಳ್ಳೇದಲ್ಲಾ ॥೧೬॥ ಎಲೈ ಸುಶ್ರೋಣಿಯೇ! ಶುಭಕರಮಾಗಿರ್ಪ ಈ ಶಿಲಾತಲದಲ್ಲಿ ಕುಳಿತುಕೋ, ಲೋಕತ್ರಯಕ್ಕೆಲ್ಲಾ ಧಣಿಯಾಗಿರುವ ನನಿಗೆ ಸರಿಯಾದವನ್ಯಾರೂ ಇಲ್ಲಾ ॥೧೭॥ ಈ ಮೂಜಗತ್ತುಗಳಿಗೂ ಸ್ವಾಮಿಯಾಗಿಯೂ, ಉಪಭೋಗಕರ್ತನಾಗಿಯೂ ರಾವಣನೆಂಬದಾಗಿ ಪ್ರಖ್ಯಾತನಾಗಿಯೂ ಇರುವ ಈ ನಾನು, ಕೈಗಳು ಕಟ್ಟಿಕೊಂಡು ವಿಧೇಯನಾಗಿ ನಿನ್ನನ್ನು ಬೇಡುತ್ತೇನೆ, ನನ್ನಂಹೊಂದು ಎಂಬದಾಗಿ, ರಾವಣನಿಂದನುಡಿಯಲ್ಪಟ್ಟ ಮಾತಂಕೇಳಿ, ಆ ರಂಭೆಯು ಗಡಗಡತೆ ನಡುಗುತಿರುವಳಾಗಿ ಕೈಮುಗಿದು ಎಲೈ ರಾವಣನೆ ! ನೀನನಗೆಗುರುವಾದಕಾರಣ ಈ ಪರಿಯಾಗಿ ನುಡಿಯದೆ ಪ್ರಸನ್ನಚಿತ್ತನಾಗು, ಮತ್ತ್ಯಾರಾದರೂ ಎನಗೆ ತೊಂದರೆಯಂ ಪಡಿಸಿದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮೇನೇಪ್ರಾಪ್ತಃಸ್ಪೃಷ್ಟಮಾತ್ರೇಣತಾಂತದಾ॥೨೧॥ ಸುತಸ್ಯಯದಿಮೇಭಾರ್ಯಾತತಸ್ತ್ವಂಮೇಸ್ನುಷಾಭವೇಃ। ಬಾಢಮಿತ್ಯೇವ ಸಾರಂಭಾಪ್ರಾಹರಾವಣಮುತ್ತರಮ್ ॥೨೦॥ ಧರ್ಮತಸ್ತೇಸುತಸ್ಯಾಹಂಭಾರ್ಯಾರಾಕ್ಷಸಪುಂಗವ ॥೨೨॥ ಪುತ್ರಃಪ್ರಿಯತ ರಃಪ್ರಾಣೈರ್ಭ್ರಾತುರ್ವೈಶ್ರವಣಸ್ಯತೇ। ಖ್ಯಾತೋಯಸ್ತ್ರಿಷುಲೋಕೇಷುನಲಕೂಬರಇತ್ಯಸೌ ॥೨೪॥ ಧರ್ಮತೋಯೋ ಭವೇದ್ವಿಪ್ರಃಕ್ಷತ್ರಿಯೋವೀರ್ಯತೋಭವೇತ್। ಕ್ರೋಧಾದ್ಯಸ್ತುಭವೇದಗ್ನಿಃಕ್ಷಾಂತ್ಯಾಚವಸುಧಾಸಮಃ ॥೨೫॥ ತಸ್ಯಾಸ್ಮಿ ಕೃತಸಂಕೇತಾಲೋಕಪಾಲಸುತಸ್ಯವೈ। ತಮುದ್ದಿಶ್ಯಚಮೇಸರ್ವಂವಿಭೂಷಣಮಿದಂಕೃತಮ್ ॥೨೬॥ ಯಥಾತಸ್ಯಹಿನಾ ನ್ಯಸ್ಯಭಾವೋಮೇಪ್ರತಿತಿಷ್ಠತಿ। ತೇನಸತ್ಯೇನಮಾಂರಾಜನ್ಮೋಕ್ತುಮರ್ಹಸ್ಯರಿಂದಮ॥೨೭॥ ಸಹಿತಿಷ್ಠತಿಧರ್ಮಾತ್ಮಾಸಾಂ ಪ್ರತಂಮತ್ಸಮುತ್ಸುಕಃ। ತನ್ನವಿಘ್ನಂಸುತಸ್ಯೇಹಕರ್ತುಮರ್ಹಸಿಮುಂಚಮಾಂ ॥೨೮॥ ಸದ್ಭಿರಾಚರಿತಂಮಾರ್ಗಂಗಚ್ಛ

ಗ್ರೀವಃ-ರಾವಣನು, ಸ್ಪೃಷ್ಟಮಾತ್ರೇಣ-ಸ್ಪರ್ಶಮಾತ್ರದಿಂದಲೆ, ರೋಮಹರ್ಷಂ-ರೋಮಾಂಚವನ್ನು, ಅನುಪ್ರಾಪ್ತಃ-ಹೊಂದಿದವನಾಗಿ, ತದಾ-ಆ ಕಾಲದ ಲ್ಲಿ, ಚರಣಾಧೋಮುಖೀಂ-ಚರಣ-ಚರಣಗಳಲ್ಲಿ, ಅಧೋಮುಖೀಂ-ಕೆಳನೋಟವುಳ್ಳವಳಾಗಿ, ಸ್ಥಿತಾಂ-ನಿಂತಿರುವ, ತಾಂ-ಆ ರಂಭೆಯನ್ನು ಕುರಿತು, ಅಬ್ರ ವಿತ್-ನುಡಿದನು॥೧೯॥ಮೇ-ನನ್ನ, ಸುತಸ್ಯ-ಕುಮಾರನಿಗೆ, ಭಾರ್ಯಾಯದಿ, ಹೆಂಡತಿ ಆದರೆ, ತತಃ-ಬಳಿಕ, ತ್ವಂ-ನೀನು, ಮೇ-ಯನಗೆ, ಸ್ನುಷಾ- ಸೊ ಸೆಯೆ, ಭವೇಃ-ಆಗುವಿ,ಸಾರಂಭಾ- ಆ ರಂಭೆಯು, ರಾವಣಂ-ರಾವಣನನ್ನು ಕುರಿತು, ಬಾಢಮಿತ್ಯೇವ-ಅಂಗೀಕಾರವೆಂದು(ಅಂದರೆ ಹೌದೆಂದು)ಉತ್ತರಂ- ಪ್ರತ್ಯುತ್ತರವನ್ನು, ಪ್ರಾಹ-ನುಡಿದಳು॥೨೦॥ಹೇರಾಕ್ಷಸಪುಂಗವ-ಯಲೊ ರಾಕ್ಷಸಶ್ರೇಷ್ಠನೆ,ಧರ್ಮತಃ-ಧರ್ಮವಿಷಯದಲ್ಲಿ,ತೇಸುತಸ್ಯ-ನಿಂನ್ನ ಮಗನಿಗೇ,ಅಹಂ ನಾನು, ಭಾರ್ಯಾ-ಹೆಂಡತಿಯಾಗಿಧ್ದನೆ ॥೨೨॥ ತೇಭ್ರಾತುಃ-ನಿನ್ನ-ಅಂಣನಾದ, ವೈಶ್ರವಣಸ್ಯ-ಕುಬೇರನಿಗೆ, ಪ್ರಾಣೈಃ-ಪ್ರಾಣಗಳೊಡನೆ, ಪ್ರಿಯತರಃ-ಅತ್ಯಂ ತಇಷ್ಟನಾದ, ಪುತ್ರಃ-ಮಗನು, ತ್ರಿಷುಲೋಕೇಷು-ಮೂರು ಲೋಕಗಳಲ್ಲಿ, ನಳಕೂಬರಇತಿ-ನಳಕೂಬರನೆಂದು, ಯಃ-ಯಾವ ಪುರುಷನು, ಖ್ಯಾತಃ-ಪ್ರ ಸಿದ್ಧನಾಗಿಧಾನೊ, ಯೋಸೌ - ಯಾವ ಈ ನಳಕೂಬರನಾದರೆ, ಧರ್ಮತಃ-ಧರ್ಮಗಳಲ್ಲಿ, ವಿಪ್ರಃ-ಬ್ರಾಹ್ಮಣನು, ಭವೇತ್-ಆಗುವನೊ, ವೀರ್ಯತಃ-ಪ ರಾಕ್ರಮದಲ್ಲಿ, ಕ್ಷತ್ರಿಯಃ-ಭವೇತ್-ಕ್ಷತ್ರಿಯನೇ ಆಗುವನೊ, ಯಸ್ತು-ಯಾವ ನಳಕೂಬರನಾದರೆ, ಕ್ರೋಧಾತ್-ಕೋಪದ ದೆಶೆಯಿಂದ, ಅಗ್ನಿಃ-ಅಗ್ನಿ ಯೆ, ಭವೇತ್-ಆಗುವನೋ, ಕ್ಷಾಂತ್ಯಾಚ-ಕ್ಷಮೆಯಿಂದಾದರೆ, ವಸುಧಾಸಮಃ-ಭೂಮಿಗೆ ಸಮಾನನೊ॥೨೫॥ ಲೋಕಪಾಲಸುತಸ್ಯ-ಲೋಕಪಾಲ-ಕುಬೇರ ನ, ಸುತಸ್ಯ-ಕುಮಾರನಾದ, ತಸ್ಯ-ಆನಳಕೂಬರನಿಗೆ ಕೃತಸಂಕೇತಾ-ಮಾಡಲ್ಪಟ್ಟ, ಸಂಕೇತಾ-ರತಿಪ್ರತಿಜ್ಞೆಯುಳ್ಳವಳು, ಅಸ್ಮಿವೈ-ಆಗಿಧೇನಷ್ಟೆ, ತಮುದ್ದಿ ಶ್ಯ-ಆತನನ್ನು, ಉದ್ದೇಶಿಸಿ, ಮೇ-ನನ್ನ, ಸರ್ವಂ-ಸಮಸ್ತವಾದ, ವಿಭೂಷಣಂ-ಒಡಿವೆ, ಅಲಂಕೃತಂ-ಅಲಂಕರಿಸಲ್ಪಟ್ಟಿಧೆ ॥೨೬॥ ಹೆ ರಾಜನ್- ಎಲೈ ಅರಸೆ, ಹೆ ಅರಿಂದಮ-ಎಲೈ ಶತೃಸಂಹಾರಕನೆ, ತಸ್ಯ-ಆ ನಳಕೂಬರನ, ಭಾವಃ-ಅಭಿಪ್ರಾಯವು, (ಮಯಿ-ನನ್ನಲ್ಲಿ) ಯಥಾ-ಹ್ಯಾಗೆ, ಪ್ರತಿತಿಷ್ಠತಿ-ಇ ಧೆಯೋ, ಅನ್ಯಸ್ಯ-ಮತ್ತೊಬ್ಬನಿಗೆ, ತಥಾ-ಹಾಗೆ, ನ-ಇಲ್ಲಾ, ಮೇ-ನನ್ನ, ಭಾವಃ-ಮನೋವೃತ್ತಿಯು, (ತಸ್ಮಿನ್-ಆನಳಕೂಬರನಲ್ಲಿ) ಪ್ರತಿತಿಷ್ಠತಿ- ಸ್ಥಿರವಾಗಿಧೆ, ತೇನಸತ್ಯೇನ-ಆ ಸತ್ಯವಚನದಿಂದ, ಮಾಂ-ನನ್ನನ್ನು, ಮೋಕ್ತುಂ-ಬಿಡುವದಕ್ಕೋಸ್ಕರ,ಅರ್ಹಸಿ-ಅರ್ಹನಾಗು॥೨೭॥ ಹೀಯಸ್ಮಾತ್- ಯಾವ ಕಾರಣದ ದೆಶೆಯಿಂದ, ಧರ್ಮಾತ್ಮಾ-ಧರ್ಮಿಷ್ಠನಾದ, ಸಃ-ಆ ನಳಕೂಬರನು, ಸಾಂಪ್ರತಂ-ಈಗ, ಮತ್ಸಮುತ್ಸುಕಃ-ನನ್ನಲ್ಲಿ ಆಸಕ್ತನಾಗಿಧಾನೆಯೋ,ತತ್- ಆ ಕಾರಣದ ದೆಶೆಯಿಂದ, ಸುತಸ್ಯ-ಕೊಮಾರನಿಗೆ, ವಿಘ್ನಂ-ವಿಘ್ನವನ್ನು, ಕರ್ತುಂ-ಮಾಡಲಿಕ್ಕೆ, ಇಹ-ಈಗ, ನಾರ್ಹಸಿ-ಯೋಗ್ಯನಾಗಬೇಡಾ, ಮಾಂ- ಎನ್ನನ್ನು ಮುಂಚ-ಬಿಡು ॥೨೮॥ ಹೇ ರಾಕ್ಷಸಪುಂಗವ-ಎಲೈ ರಾಕ್ಷಸಶ್ರೇಷ್ಠನೆ, ಸದ್ಭಿಃ-ಸತ್ಪುರುಷರಿಂದ, ಆಚರಿತಂ-ಅನುಷ್ಠಿತವಾದ, ಮಾರ್ಗಂ-ಪದ್ಧ

ರೆ, ನಿನ್ನಿಂದ ರಕ್ಷಿಸಲ್ಪಡಲರ್ಹಳಾಗಿಧೇನೆ,ಹ್ಯಾಗೆಂದರೆ, ಧರ್ಮವಾಗಿ ನಾನು ನಿನಿಗೆ ಸೊಶೆಯಾಗಬೇಕು, ಈ ಯಥಾ ರ್ಥವಾದ ಮಾತನ್ನು ಹೇಳಿಧೇನೆ ಎಂಬದಾಗಿ ನುಡಿದು,ಅಧೋಮುಖಿಯಾಗಿ ನಿಂತಿರುವಳ ರಂಭೆಯು ಸ್ಪರ್ಶನಮಾತ್ರದಿಂದ ಲೇ,ರಾವಣನು ರೋಮಾಂಚಿತನಾಗಿ ಆ ಸಮಯದಲ್ಲಿ ಮತ್ತಿಂತೆಂದನು॥೨೧॥ಎಲೈ ರಂಭೆಯೇ! ನೀನೆನ್ನ ಸುತನಿಗೆ ಭಾರ್ಯೆ ಯಾದರೇ ಆಗ ನೀನೆನಗೆ ಸೊಶೆಯಾಗಿರುವಿ,ಎಂಬದಾಗಿ ರಾವಣನು ನುಡಿಯಲೂ, ಆ ರಂಭೆಯು ರಾವಣನಂ ಕುರಿತಿಂ ತೆಂದು ಉತ್ತರವಂಕೊಟ್ಟಳು, ಎಲೈ ರಾಕ್ಷಸೊತ್ತಮನೆ! ಹಾಗೇ ಸರಿ ನಾನು ನಿನ್ನಮಗನಿಗೆ ಹೆಂಡತಿಯಾದವಳೇ ಹೌ ದು, ಹ್ಯಾಗಂದರೆ, ನಿಮ್ಮಂಣ್ಣನಾದ ಕುಬೇರನಿಗೆ ಪ್ರಾಣಗಳಿಗಿಂತಲೂ ಪ್ರೀತಿ ಪಾತ್ರಪುತ್ರನಾದ।ಮತ್ತೂ ನಲಕೂಬರನೆಂ ದು ಲೋಕತ್ರಯದಲ್ಲಿಯೂ ಪ್ರಖ್ಯಾತನಾದವನಿರುವನಷ್ಟೆ॥೨೪॥ ಯಾವ ಆತನು ಧರ್ಮದಿಂದ ಬ್ರಾಹ್ಮಣನಾಗಿರುವ ನೋ, ವೀರ್ಯದಿಂದ ಕ್ಷತ್ರಿಯನಂತಿರುವನೋ,ಕ್ರೋಧದಿಂದ ಸಾಕ್ಷಾದಗ್ನಿಯಾಗಿರುವನೋ, ಸೈರಣೆಯಿಂದ ಭೂಸ ಮಾನನಾಗಿರುವನೋ, ಲೋಕಪಾಲ ಪುತ್ರನಾದ ಅಂಥಾ ನಲಕೂಬರನಿಗೆ, ಗೂಢಪತ್ನಿಯಾಗಿಧೇನೆ, ಆತನನ್ನುದ್ದೇಶಿ ಸಿ ಈ ಅಲಂಕಾರವಂ ಮಾಡಿಕೊಂಡಿಧೇನೆ, ಮತ್ತೂ ಆತನಭಿಪ್ರಾಯವು ನನ್ನಲ್ಲಿ ಹ್ಯಾಗಿರುವದೋ, ಹಾಗೆಯೇ ನನಿ ಗೂ ಕೂಡಾ ಆತನಲ್ಲಿಯೇ ನಿಂತಿರುವದು, ಎಲೈ ಶತೃನಾಶಕನೆ! ಹೀಗೆ ಶಪಥ ಪಿರೋಣದರಿಂದ ನನ್ನನ್ನಗಲು ॥೨೭॥ ಧರ್ಮಿಷ್ಠನಾದ ನಳಕೂಬರನಾದರೆ, ಈಗ ನನ್ನಲ್ಲಾಶೆಯುಳ್ಳವನಾಗಿರುವನು,ಆದ ಕಾರಣ ನಿನ್ನ ಮಗನ ಸಂತೋ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಾಕ್ಷಸಪುಂಗವ । ಮಾನನೀಯೋಮಯಾಹಿತ್ವಂಲಾಲನೀಯಾತಥಾಸ್ಮಿ ತೇ॥೩೯॥ ಏವಮುಕ್ತೋ ದಶಗ್ರೀವಃಪ್ರತ್ಯುವಾಚ ವಿನೀತವತ್। ಸ್ನುಷಾಸ್ಮಿ ಯದವೋಚಸ್ತ್ವಮೇಕಪತ್ನೀಷ್ವಯಂಕ್ರಮಃ॥೪೦॥ದೇವಲೋಕಸ್ಥಿತಿರಿಯಂಸುರಾಣಾಂಶಾಶ್ವತೀ ಸ್ಥಿತಾ । ಪತಿರಪ್ಸರಸಾಂನಾಸ್ತಿನಚೈಕಸ್ಯಪರಿಗ್ರಹಃ ॥೪೧॥ ಏವಮುಕ್ತ್ವಾ ಸತಾಂರಕ್ಷೋನಿವೇಶ್ಯಚಶಿಲಾತಲೆ । ಕಾಮಮೋಹಾಭಿಸಂರಬ್ಧೋ ಮೈಥುನಾಯೋಪಚಕ್ರಮೆ ॥೪೨॥ ಸಾವಿಮುಕ್ತಾ ತತೋರಂಭಾಭ್ರಷ್ಟಮಾಲ್ಯವಿಭೂಷಣಾ। ಗಜೇಂದ್ರಲೀಲಾಮಥಿತಾನದೀವಾಕುಲತಾಂಗತಾ ॥೪೩॥ ಲುಲಿತಾಲಕಕೇಶಾಂತಾಕರವೇಪಿತಪಲ್ಲವಾ । ಪವನೇನಾವಧೂತೇವಲತಾ ಕುಸುಮಶಾಲಿನೀ ॥ ೪೪ ॥ ಸಾವೇಪಮಾನಾಲಜ್ಜಂತೀಭೀತಾಕರಕೃತಾಂಜಲಿಃ । ನಲಕೂಬರಮಾಸಾದ್ಯ ಪಾದಯೋಃ ನಿಪಪಾತಹ ॥೪೫॥ ತದವಸ್ಥಾಂತುತಾಂದೃಷ್ಟ್ವಾಮಹಾತ್ಮಾ ನಲಕೂಬರಃ। ಅಬ್ರವೀತ್ಕಿಮಿದಂಭದ್ರೇಪಾದಯೋಃಪತಿತಾ

---

ತಿಯಂ ಕುರಿತು, ಗಚ್ಛ-ಹೋಗು, ತ್ವಂ-ನೀನು, ಮಯಾ-ಎನ್ನಿಂದಾ, ಮಾನನೀಯೋಹಿ-ಬಹುಮಾನಿಸ ತಕ್ಕವನಷ್ಟೆ, ತಥಾ-ಹಾಗೆಯೆ, ತೇ-ನಿನಿಗೆ, ಅಹಂ-ನಾನು, ಲಾಲನೀಯಾ-ಲಾಲನೆ ಮಾಡತಕ್ಕವಳು, ಅಸ್ಮಿ-ಆಗಿದ್ದೇನೆ ॥೩೯॥ ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ದಶಗ್ರೀವಃ- ದಶಕಂಠನು, ವಿನೀತವತ್-ನಮ್ರನಾದವನಂತೆ, ಉವಾಚ-ಹೇಳಿದನು, ಸ್ನುಷಾಸ್ಮೀತಿ-ಸ್ನುಷಾ-ಸೊಸೆಯು, ಅಸ್ಮೀತಿ-ಆಗಿದ್ದೇನೆಂದು, ಯತ್-ಯಾವ ಮಾತನ್ನು, ತ್ವಂ-ನೀನು, ಅವೋಚಃ-ಹೇಳಿದೆಯೋ, ಅಯಂ-ಈ, ಕ್ರಮಃ-ಪೂರ್ವಾಚಾರವು, ಏಕಪತ್ನೀಷು-ಪತಿವ್ರತಾ ಸ್ತ್ರೀರುಗಳಲ್ಲಿ(ಅಸ್ತಿ-ಇಧೆ,)॥೪೦॥ ಸುರಾಣಾಂ-ದೇವತೆಗಳಿಗೆ, ಇಯಂದೇವಲೋಕಸ್ಥಿತಿಃ-ಈ ದೇವಲೋಕನಿವಾಸವು, ಶಾಶ್ವತೀ-ಸ್ಥಿರವಾಗಿ, ಸ್ಥಿತಾ-ಇಧೆ, ಅಪ್ಸರಸ್ತ್ರೀರುಗಳಿಗೆ, ಪತಿಃ-ವಿವಾಹಮಾಡಿಕೊಂಡ ಗಂಡನು, ನಾಸ್ತಿ-ಇಲ್ಲಾ, ಏಕಸ್ಯ-ಒಬ್ಬನಿಗೆ, ಪರಿಗ್ರಹಶ್ಚ-ಹೆಂಡತಿಯೂಕೂಡ, ನ-ಅಲ್ಲಾ ॥೪೧॥ ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ರಕ್ಷಃ-ರಾಕ್ಷಸನಾದ, ಸಃ-ಆ ರಾವಣನು, ತಾಂ-ಆ ರಂಭೆಯನ್ನು, ಶಿಲಾತಲೆ-ಪಾಷಾಣಪ್ರದೇಶದಲ್ಲಿ, ನಿವೇಶ್ಯಚ-ಮಲಗಿಸಿಕೊಂಡು, ಕಾಮಮೋಹಾಭಿ ಸಂರಬ್ಧಃ-ಕಾಮ-ಮನ್ಮಥನಿಂದ ಹುಟ್ಟಿದ, ಮೋಹ-ಮೋಹದಿಂದ, ಅಭಿಸಂರಬ್ಧಃ-ತ್ವರೆಯುಳ್ಳವನಾಗಿ, ಮೈಥುನಾಯ- ವಿಹಾರಕ್ಕೋಸ್ಕರ, ಉಪಚಕ್ರಮೆ-ಆರಂಭಿಸಿದನು ॥೪೨॥ತತಃ-ಬಳಿಕ, ಸಾರಂಭಾ-ಆ ರಂಭೆಯು, ವಿಮುಕ್ತಾ-ಬಿಡಲ್ಪಟ್ಟವಳಾಗಿ, ಭ್ರಷ್ಟಮಾಲ್ಯವಿಭೂಷಣಾ-ಭ್ರಷ್ಟ-ಬಾಡಿದ ಮಾಲ್ಯ-ಪುಷ್ಪಮಾಲಿಕೆಗಳುನ್ನು,ವಿಭೂಷಣಾ-ವಡಿವೆಗಳೂ ಉಳ್ಳವಳಾಗಿ, ಗಜೇಂದ್ರಲೀಲಾಮಥಿತಾ-ಗಜೇಂದ್ರ-ಗಜಶ್ರೇಷ್ಠದ,ಲೀಲಾ-ಕ್ರೀಡೆಯಿಂದ,ಮಥಿತಾ,ಮಥನಮಾಡಲ್ಪಟ್ಟ , ನದೀವ, ನದಿಯಂತೆ,ಆಕುಲಿತಾಂ-ಕಲುಷೀಭಾವವನ್ನು,ಗತಾ-ಹೊಂದಿದವಳಾಗಿ॥೪೩॥ಲುಲಿತಾಲಕಕೇಶಾಂತಾ-ಲುಳಿತ-ವ್ಯತ್ಯಸ್ತಮಾಡಲ್ಪಟ್ಟ, ಅಲಕಕೇಶ-ಮುಂದಲೆಯ ಕೂದಲುಗಳ,ಅಂತಾ-ಅಗ್ರ ಭಾಗಗಳುಳ್ಳವಳಾಗಿ, ಕರವೇಪಿತಪಲ್ಲವಾ-ಕರ-ಹಸ್ತದಿಂದ, ವೇಪಿತ, ಬಾಧಿಸಲ್ಪಟ್ಟ, ಪಲ್ಲವಾ-ಚಿಗುರುಗಳುಳ್ಳ, ಕುಸುಮಶಾಲಿನೀ-ಪುಷ್ಪಗಳಿಂದೊಪ್ಪುತ್ತಿರುವ, ಪವನೇನ-ಘಾಳಿಯಿಂದ, ಅವಧೂತಾ-ಕೊಡೆಹಲ್ಪಟ್ಟ, ಲತೇವ, ಬಳ್ಳಿಯಂತೆ,ಬಭೂವ-ಆದಳು ॥೪೪॥ ವೇಪಮಾನಾ-ನಡುಗುತ್ತಿರುವ, ಭೀತಾ-ಭಯಗೊಂಡವಳಾದ, ಲಜ್ಜಂತೀ-ನಾಚಿಕೊಂಡಿರುವ, ಸಾ-ಆ ರಂಭೆಯು, ಕರಕೃತಾಂಜಲಿಃ-ಕೈಮುಗಿದವಳಾಗಿ, ನಲಕೂಬರಂ-ನಲಕೂಬರನನ್ನು, ಆಸಾದ್ಯ-ಹೊಂದಿ, ಪಾದಯೋಃ-ಕಾಲುಗಳಲ್ಲಿ, ನಿಪಪಾತಹ-ಬಿದ್ದಳಷ್ಟೆ ॥೪೫॥ ಮಹಾತ್ಮಾ-ಮಹಾ ಮನಸ್ವಿಯಾದ, ನಲಕೂಬರಃ-ನಲಕೂಬರನು, ತದವಸ್ಥಾಂ-ಅಂಥಾ ಅವಸ್ಥೆಯುಳ್ಳ, ತಾಂತು-ಆ ರಂಭೆಯನ್ನಾದರೆ, ದೃಷ್ಟ್ವಾ-ಕಂಡು, ಹೆ ಭದ್ರೇ-ಎಲೈ ಶುಭಕರಳೆ, ಮೇ-ನನ್ನ, ಪಾದಯೋಃ-ಕಾಲುಗಳಲ್ಲಿ, ಪತಿತಾ-ಬಿದ್ದವಳು, ಅಸಿ-ಆಗಿದ್ಧೆ,ಇದಂ-ಇದು,ಕಿಮಿತಿ-ಏನೆಂತೆಂದು,ಅಬ್ರವೀತ್-ನುಡಿದ

---

ಷಕ್ಕೆ ತಡೆ ಮಾಡದೆ ನನ್ನನ್ನು ನೀನು ಜಾಗ್ರತೆಯಾಗಿ ಬಿಟ್ಟುಬಿಡು ॥ ೩೯ ॥ ಎಲೈ ರಾಕ್ಷಸಶ್ರೇಷ್ಠನೆ ! ಸತ್ಪುರುಷರಿಂದಾಚರಿಸಲ್ಪಡುತಿರುವ ಮಾರ್ಗದಲ್ಲಿ ಹೋಗು, ನೀನೆನಗೆ ಹ್ಯಾಗೆ ಮಾನನೀಯನೋ ಹಾಗೆ ನಾನೂಕೂಡಾ ನಿನಗೆಲಾಲಿಸ ಲರ್ಹಳಾಗಿಧೆನೆ, ಎಂಬದಾಗಿ ಆ ರಂಭೆಯಿಂದ ಹೇಳಲ್ಪಟ್ಟವನಾಗಿ ದಶಕಂಠನು ದುರ್ಮಾರ್ಗತನದಿಂದ ಇಂತೆಂದು ಉತ್ತರವಂ ಕೊಟ್ಟನು, ಎಲೈರಂಭೆಯೇ! ನೀನು ಹೇಳಿದ ಈ ಕ್ರಮವು ವಿವಾಹಿತರಾದ ಪತ್ನಿಗಳ ವಿಷಯವೇಹೊರ್ತು ಬೇರೊಂದು ವಿಧವಲ್ಲ ॥೪೦॥ ಈ ದೇವಲೋಕಸ್ಥಿತಿಯು ಶಾಶ್ವತವಾಗಿರುವದೇನಂದರೆ,—ಅಪ್ಸರಸ್ತ್ರೀಯರಿಗೆ ಮದುವೆ ಎಂಬದಾಗಲೀ ಪತಿಯೆಂಬದಾಗಲೀ ಯಾವದೊಂದೂ ಗೊತ್ತಿನವಲ್ಲ. ಎಂದು ನುಡಿದು ಆ ದಶಕಂಠನು ಆಕೆಯಂ ಶಿಲಾತಲದ ಮೇಲೆ ಶೆಳದುಕೊಂಡು ಕ್ರೀಡಿಸಲುದ್ಯುಕ್ತನಾಗುತ್ತಿರಲು, ॥೪೨॥ ಆ ಬಳಿಕ ರಂಭೆಯು, ಶಿಥಿಲವಾದ ಪುಷ್ಪಗಳೂ ವಡಿವೆಗಳೂ ಉಳ್ಳಂಥವಳಾಗಿ, ಗಜಶ್ರೇಷ್ಠದಿಂದ ನುಗ್ಗಲ್ಪಟ್ಟ ನದಿಯಂತೆ ವ್ಯಾಕುಲಳಾಗಿ ಮಾಡಲ್ಪಟ್ಟವಳಾದಕಾರಣ ಕೆದರಿದ ಮುಂಗೂದಲುಗಳು ಕೇಶಾಂತಗಳೂ ಉಳ್ಳವಳಾಗಿಯೂ ಇರುವ ಕಾರಣಬಿರುಘಾಳಿಯಿಂದ ತೊಡಗಲ್ಪಟ್ಟ ಪುಷ್ಪಿನಿಯಲತೆಯಂತೆ ಬತ್ತಿ ಹೋದವಳಾಗಿ ಬಿಡಲ್ಪಟ್ಟವಳಾದಳು ॥೪೪॥ ಬಹಳವಾಗಿಸಂತಪಿಸುತಿರುವಆರಂಭೆಯು ಬಲು ನಾಚಿಕೆ ಯುಳ್ಳವಳಾಗಿ ಆ ನಳಕೂಬರನಂ ಹೊಂದಿ, ಕೈಮುಗಿದು ಆತನ ಪಾದದ ಮೇಲೆ ಬಿದ್ದವಳಾದಳು ॥೪೫॥ ಧರ್ಮಾತ್ಮನಾದ ಆ ನಳಕೂಬರನಾದರೆ ಆ ದುರವಸ್ಥೆಯಂ ಕಂಡು ಎಲೈ ಶುಭಕರಳೇ, ಯಾಕೆನ್ನ ಪಾದಗಳಲ್ಲಿ ಬಿದ್ದಿರುವೆಂದು ಕೇಳಲು, ॥೪೬॥ ಆ ರಂಭೆ ಯಾದರೆ ನಿಟ್ಟುಸುರಂ ಬಿಡುತಲೂ ಗಡಗಡನೆ ನಡುಗುತಲೂ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಿಮೆ॥೪೬॥ ಸಾತುನಿಶ್ವಸಮಾನಾಥವೇಪಮಾನಾಕೃತಾಂಜಲಿಃ। ತಸ್ಮೈಸರ್ವಂಯಥಾತತ್ತ್ವಮಾಖ್ಯಾತುಮುಪಚಕ್ರಮೆ॥ ಏಷದೇವದಶಗ್ರೀವಃಪ್ರಾಪ್ತೋಗಂತುಂತ್ರಿವಿಷ್ಟಪಮ್। ತೇನಸೈನ್ಯಸಹಾಯೇನನಿಶೇಯಂಪರಿಣಾಮಿತಾ॥೪೭॥ ಆಯಾಂತೀತೇನ ದೃಷ್ಟಾಸ್ಮಿತ್ವತ್ಸಕಾಶಮರಿಂದಮ। ಗೃಹೀತ್ವಾತೇನಪೃಷ್ಟಾಸ್ಮಿಕಸ್ಯತ್ವಮಿತಿರಕ್ಷಸಾ ॥೪೮॥ ಮಯಾಸರ್ವಂಹಿತತ್ಸತ್ಯಂ ತದ್ಧಿತಸ್ಮೈನಿವೇದಿತಮ್। ಕಾಮಮೋಹಾಭಿಭೂತಾತ್ಮಾ ನಾಶ್ರೌಷೀತ್ತದ್ವಚೋಮಮ ॥೪೯॥ ಯಾಚ್ಯಮಾನೋಮಯಾ ದೇವಸ್ನುಷಾತೇಹಮಿತಿಪ್ರಭೋ। ತತ್ಸರ್ವಂಪೃಷ್ಠತಃಕೃತ್ವಾ ಬಲಾತ್ತೇನಾಸ್ಮಿ ಧರ್ಷಿತಾ ॥೫೦॥ ಏವಂತ್ವಮಪರಾಧಂಮೇಕ್ಷಂ ತುಮರ್ಹಸಿಮಾನದ। ನಹಿತುಲ್ಯಬಲಂಸೌಮ್ಯಸ್ತ್ರಿಯಶ್ಚಪುರುಷಸ್ಯಚ ॥೫೧॥ ಏವಂಶ್ರುತ್ವಾ ತುಸಂಕ್ರುದ್ಧಸ್ತದಾವೈಶ್ರವಣಾತ್ಮಜಃ। ಧರ್ಷಣಾಂತಾಂಪರಾಂಶ್ರುತ್ವಾಧ್ಯಾನಂಸಂಪ್ರವಿವೇಶಹ ॥೫೨॥ತಸ್ಯತತ್ಕರ್ಮವಿಜ್ಞಾಯತದಾವೈಶ್ರವಣಾತ್ಮಜಃ। ಮುಹೂರ್ತಾದ್ರೋಷತಾಮ್ರಾಕ್ಷಃತೋಯಂಜಗ್ರಾಹಪಾಣಿನಾ ॥ ೫೩ ॥ ಗೃಹೀತ್ವಾಸಲಿಲಂದಿವ್ಯಮುಪಸ್ಪೃಶ್ಯ

ನು, ॥೪೬॥ ಅಥ–ಆ ಬಳಿಕ–ನಿಶ್ವಸಮಾನಾ–ನಿಟ್ಟುಸುರು ಬಿಡುತ್ತಿರುವ, ಸಾತು–ಆ ರಂಭೆಯಾದರೆ,ವೇಪಮಾನಾ–ನಡುಗುತಿರುವಳಾಗಿ, ಕೃತಾಂಜಲಿಃ–ಅಂ ಜಲಿಬದ್ಧಳಾಗಿ, ತಸ್ಮೈ–ಆನಳಕೂಬರನಿಗೆ, ಸರ್ವಂ–ಸಮಸ್ತವನ್ನು, ಯಥಾತತ್ವಂ–ನಡೆದಂತೆ, ಆಖ್ಯಾತುಂ–ಹೇಳುವದಕ್ಕೋಸ್ಕರ, ಉಪಚಕ್ರಮೆ– ಆ ರಂಭಿಸಿದಳು ॥೪೭॥ ಹೆದೇವ, ಎಲೈ ಸ್ವಾಮಿಯೇ, ಏಷದಶಗ್ರೀವಃ–ಈ ದಶಕಂಠನು, ತ್ರಿವಿಷ್ಟಪಂ–ಸ್ವರ್ಗವನ್ನು ಕುರಿತು, ಗಂತುಂ–ಹೋಗುವದಕ್ಕೋ ಸ್ಕರ, ಪ್ರಾಪ್ತಃ–ಬಂದನು, ಸೈನ್ಯಸಹಾಯೇನ–ಸೈನ್ಯ–ಸೇನಾಜನವೇ, ಸಹಾಯೇನ–ಸಹಾಯವಾಗಿ ಉಳ್ಳ, ತೇನ–ಆ ರಾವಣನಿಂದ, ಇಯಂನಿಶಾ–ಈ ರಾತ್ರಿ ಯು, ಪರಿಣಾಮಿತಾ–ಕಳೆಯಲ್ಪಟ್ಟಿತು ॥೪೮॥ ಹೆ ಅರಿಂದಮ–ಎಲೈ ಶತ್ರುಸಂಹಾರಕನೆ, ತ್ವತ್ಸಕಾಶಂ–ನಿನ್ನ ಸಮೀಪವನ್ನು ಕುರಿತು, ಆಯಾಂತೀ–ಬ ರುತ್ತಿರುವ ನಾನು, ತೇನ–ಅವನಿಂದ, ದೃಷ್ಟಾಸ್ಮಿ–ನೋಡಲ್ಪಟ್ಟೆನು, ತೇನರಕ್ಷಸಾ–ಆ ರಾವಣನಿಂದ, ಗೃಹೀತ್ವಾ–ಕೈಹಿಡಿದುಕೊಂಡು, ತ್ವಂ–ನೀನು, ಕ ಸ್ಯ–ಯಾರ ಹೆಂಡತಿಎಂದು, ಪೃಷ್ಟಾ–ಕೇಳಲ್ಪಟ್ಟವಳು, ಅಸ್ಮಿ–ಆದೆನು ॥೪೯॥ ಮಯಾ–ಎನ್ನಿಂದ, ಸರ್ವಂ–ಸಮಸ್ತವಾದ, ಯತ್ಸತ್ಯಂ–ಯಾವದು ನಿಜ ವೋ–ತತ್–ಅದು, ತಸ್ಮೈ–ಆ ರಾವಣನಿಗೋಸ್ಕರ, ನಿವೇದಿತಂಹಿ–ತಿಳಿಸಲ್ಪಟ್ಟಿತಷ್ಟೆ, ಕಾಮಮೋಹಾಭಿಭೂತಾತ್ಮಾ–ಕಾಮ–ಮನ್ಮಥನಿಂದ ಹುಟ್ಟಿದ,ಮೊ ಹ–ಮನೋವಿಕಾರದಿಂದ, ಅಭಿಭೂತ–ತಿರಸ್ಕೃತವಾದ, ಆತ್ಮಾ– ಮನಸ್ಸುಳ್ಳ ಆ ರಾವಣನು, ಮಮ–ನನ್ನ, ತದ್ವಚಃ–ಆ ಮಾತನ್ನು, ನಾಶ್ರೌಷೀ ತ್–ಕೇಳದೇ ಹೋದನು ॥೫೦॥ ಹೆ ಪ್ರಭೊ–ಎಲೈ ಸ್ವಾಮಿಯೆ, ತೇ–ನಿನಗೆ, ಅಹಂ–ನಾನು, ಸ್ನುಷೇತಿ–ಸೊಸೆ ಯೆಂಬದಾಗಿ, ಮಯಾ, ಎನ್ನಿಂದಾ–ಯಾಚ ಮಾನಃ–ಬೇಡಿಕೊಳ್ಳಲ್ಪಟ್ಟವ ನಾದರೂ, ಹೆದೇವ–ಎಲೈ ಸ್ವಾಮಿಯೆ, ತತ್ಸರ್ವಂ–ಅದನ್ನೆಲ್ಲಾ, ಪೃಷ್ಠತಃಕೃತ್ವಾ–ತಿರಸ್ಕರಿಸಿ, ಬಲಾತ್–ಸಾಮರ್ಥ್ಯದ ದೆಸೆ ಯಿಂದ, ತೇನ– ಆ ರಾವಣನಿಂದಾ, ಧರ್ಷಿತಾ–ಅನುಭವಿಸಲ್ಪಟ್ಟವಳು, ಅಸ್ಮಿ–ಆದೆನು ॥೫೧॥ ಹೆ ಮಾನದ, ಎಲೈ ಬಹುಮಾನ ಪ್ರದಾಯಕನೆ ! ತ್ವಂ– ನೀ ನು, ಮೇ–ನನ್ನ, ಏವಂಅಪರಾಧಂ–ಈಪರಿಯಾಗಿರುವ ಅಪರಾಧವನ್ನು, ಕ್ಷಂತುಂ–ಕ್ಷಮಿಸುವದಕ್ಕೋಸ್ಕರ, ಅರ್ಹಸಿ–ಯೋಗ್ಯನಾಗು, ಹೆ ಸೌಮ್ಯ– ಎಲೈ ಸೌಮ್ಯನೆ, ಸ್ತ್ರಿಯಶ್ಚ–ಹೆಂಗಸಿಗೂ, ಪುರುಷಸ್ಯಚ, ಪುರುಷನಿಗೂ, ಬಲಂ–ಬಲವು, ತುಲ್ಯಂ–ಸಮಾನವಾದ್ದು, ನಹಿ–ಅಲ್ಲವಷ್ಟೆ ॥೫೨॥ ಏವಂ– ಈಪರಿಯಾಗಿ, ಶ್ರುತ್ವಾ–ಕೇಳಿ, ಸಂಕ್ರುದ್ಧಃ–ಕೋಪಿಷ್ಠನಾದ, ವೈಶ್ರವಣಾತ್ಮಜಃ–ಕುಬೇರ ಪುತ್ರನಾದ ನಲಕೂಬರನು, ತದಾ–ಆ ಕಾಲದಲ್ಲಿ, ಪರಾಂ– ಬಹ ಳವಾದ, ತಾಂಧರ್ಷಣಾಂ–ಆ ತಿರಸ್ಕಾರವನ್ನು, ಶ್ರುತ್ವಾ–ಕೇಳಿ, ಧ್ಯಾನಂ–ಧ್ಯಾನವನ್ನು, ಸಂಪ್ರವಿವೇಶಹ–ಮಾಡಿದನು,॥೫೩॥ ತದಾ ಆಕಾಲದಲ್ಲಿ, ವೈಶ್ರವ ಣಾತ್ಮಜಃ–ಕುಬೇರನಮಗನಾದ ನಳಕೂಬರನು, ತಸ್ಯ–ಆರಾವಣನ, ತತ್ಕರ್ಮ–ಆ ಕೆಲಸವನ್ನು, ವಿಜ್ಞಾಯ–ತಿಳದು, ಮುಹೂರ್ತಾತ್–ಸ್ವಲ್ಪಕಾಲದಲ್ಲಿ ರೋಷತಾಮ್ರಾಕ್ಷಃ–ರೋಷದಿಂದ ಕೆಂಗಣ್ಣುಗಳುಳ್ಳವನಾಗಿ, ಪಾಣಿನಾ–ಹಸ್ತದಿಂದ, ತೋಯಂ–ಉದಕವನ್ನು, ಜಗ್ರಾಹ–ಗ್ರಹಿಸಿದನು ॥ ೫೪ ॥ ತದಾ–ಆ

ಅಂಜಲಿ ಬದ್ಧಳಾಗಿ ಆ ನಳಕೂಬರನಿಗೆ ಆಗ ಆ ರಾವಣನ ದುರ್ನಡತೆ ಎಲ್ಲವಂ ಹೇಳಲುಪಕ್ರಮಿಸಿದಳು ॥೪೭॥ ಎಲೈ ಸ್ವಾಮಿಯೆ ! ಈ ದಶಗ್ರೀವನು, ಸ್ವರ್ಗವಂ ಕುರಿತು ಹೋಗುವದಕ್ಕೋಸ್ಕರ ಇಲ್ಲಿ ಬಂದಿಹನು, ಸೈನ್ಯ ಸಮೇತನಾದ ಆ ರಾವಣನಿಂದ ಅಸಂತೋಷವಾಗಿಲ್ಲಿಗೆ ಹೊಂದಿಸಲ್ಪಟ್ಟೆನು॥೪೮॥ ಎಲೈ ಶತ್ರುನಾಶಕನೆ ! ನಿನ್ನ ಸಮೀಪವಂಕುರಿತು ಬರು ತಿರುವಳಾಗಿ ಆ ದುಷ್ಟನಿಂದ ಕಾಣಲ್ಪಟ್ಟೆನು, ನೀನ್ಯಾರೆಂದು ಹಿಡದುಕೊಂಡು ಸ್ಪರ್ಶಿಸಲೂಪಟ್ಟೆನು ॥ಆಸಮಯ ದಲ್ಲಿ ಎಲ್ಲಾ ಸಂಗತಿಗಳನ್ನೂ ಅವನಿಗೆ ತಿಳಿಸಿದರೂ ಕೂಡಾ ಕಾಮಮೋಹಿತನಾಗೆನ್ನ ಮಾತಂ ಕೇಳಲಿಲ್ಲ॥ಎಲೈ ಸ್ವಾ ಮಿಯೆ ನಿನಗೆ ಸೊಸೆಯಾಗಬೇಕು. ಎನ್ನಂ ಬಾಧಿಸ ಬೇಡೆಂದು ಎಷ್ಟು ಬೇಡಿದರೂ ಅದಂ ಕೇಳದೇ ಬಲಾತ್ಕಾರದಿಂದ ತಿರಸ್ಕರಿಸಲ್ಪಟ್ಟೆನು, ಎಲೈ ಮಾನ ಪ್ರದಾತನೆ ! ಈ ಪರಿಯಾಗಿ ಸಂಭವಿಸಿರುವ ಎನ್ನ ಅಪರಾಧವಂ ಕ್ಷಮಿಸು. ಎಲೈ ಸೌಮ್ಯನೆ ಪುರುಷನಿಗೆ ಸರಿಯಾದ ಬಲವು ಸ್ತ್ರೀಯರಿಗಿಲ್ಲವಷ್ಟೆ ? ಎಂಬದಾಗಿ ರಂಭೆಯು ನುಡಿಯಲು ಆಮಾತಂಕೇಳಿ, ಕಡು ಕುಪಿತನಾದ ಆ ಕುಬೇರ ಕುವರನು, ಅದು ಸತ್ಯವೋ ಅಥವಾ ಅಸತ್ಯವೋ ಕಂಡು ಹಿಡಿಯ ಬೇಕೆಂದು ಧ್ಯಾನ ನಿಷ್ಠನಾಗಿ ಆ ರಾವಣನ ಅಧರ್ಮವಂ ಕಂಡು ಕೆಂಗಣ್ಣುಗಳುಳ್ಳವನಾಗಿ ಕೈಯ್ಯಲ್ಲುದಕವಂ ಗ್ರಹಿಸಿ ಯಥಾವಿಧಿಯಾ ಗಿ ಆಚಮನಂ ಗೈದು ಆ ರಾಕ್ಷಸೇಂದ್ರನಾದ ದಶಕಂಠನಿಗೆ ಕಡು ಘೋರವಾದ ಶಾಪವಂ ಕೊಟ್ಟನು, ಎಲೈ ಶುಭಕರಳೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಥಾವಿಧಿ । ಉತ್ಸಸರ್ಜತದಾಶಾಪಂರಾಕ್ಷಸೇಂದ್ರಾಯದಾರುಣಮ್ ॥೫೫॥ ಅಕಾಮಾತೇನಯಸ್ಮಾತ್ತ್ವಂಬಲಾದ್ಭದ್ರೇಪ್ರಧರ್ಷಿತಾ । ತಸ್ಮಾತ್ಸಯುವತೀಮನ್ಯಾಂನಕಾಮಾಮುಪಯಾಸ್ಯತಿ ॥೫೬॥ ಯದಾತ್ವಕಾಮಾಂಕಾಮಾರ್ತೋಧರ್ಷಯಿಷ್ಯತಿಯೋಷಿತಮ್ । ಮೂರ್ಧಾಸಹಸ್ರಧಾತಸ್ಯಶಕಲೀಭವಿತಾತದಾ ॥೫೭॥ ತಸ್ಮಿನ್ನುದಾಹೃತೇಶಾಪೇಜಲೇಚಾಗ್ನಿಸಮಪ್ರಭೇ । ದೇವದುಂದುಭಯೋನೆದುಃಪುಷ್ಪವೃಷ್ಟಿಶ್ಚಖಾಚ್ಚ್ಯುತಾ ॥೫೮॥ ಪ್ರಜಾಪತಿಮುಖಾಶ್ಚಾಪಿಸರ್ವೇದೇವಾಃಪ್ರಹರ್ಷಿತಾಃ । ಜ್ಞಾತ್ವಾಲೋಕಗತಿಂಸರ್ವಾಂತಸ್ಯಮೃತ್ಯುಂಚರಕ್ಷಸಃ ॥೫೯॥ ಶ್ರುತ್ವಾಸತುದಶಗ್ರೀವಸ್ತಂಶಾಪಂರೋಮಹರ್ಷಣಮ್ । ನಾರೀಷುಮೈಥುನಂಭಾವಂನಾಕಾಮಾಸ್ವಭ್ಯರೋಚಯತ್ ॥೬೦॥ ಸ್ತ್ರಿಯಶ್ಚತೇನನಿರ್ಣೀತಾಃಪ್ರೀತಿಮಾಪುಃಪತಿವ್ರತಾಃ । ನಲಕೂಬರನಿರ್ಮುಕ್ತಂಶಾಪಂಶ್ರುತ್ವಾಮನಃಪ್ರಿಯಮ್ ॥೬೧॥ …ಇತಿಶ್ರೀಮದುತ್ತರ ರಾಮಾಯಣೆ ಷಡ್ವಿಂಶಸ್ಸರ್ಗಃ…

ಕೈಲಾಸಂಲಂಘಯಿತ್ವಾಥದಶಗ್ರೀವಸ್ಸರಾಕ್ಷಸಃ । ಆಸಸಾದಮಹಾತೇಜಾಇಂದ್ರಲೋಕಂನಿಶಾಚರಃ ॥೧॥ ತಸ್ಯರಾಕ್ಷ

---

ಕಾಲದಲ್ಲಿ, ದಿವ್ಯಂ-ಮನೋಹರವಾದ, ಸಲಿಲಂ-ಉದಕವನ್ನು, ಗೃಹೀತ್ವಾ-ತೆಗದುಕೊಂಡು, ಯಥಾವಿಧಿ-ಯಥಾಶಾಸ್ತ್ರವಾಗಿ, ಉಪಸ್ಪೃಶ್ಯ-ಆಚಮನ ಮಾಡಿ, ರಾಕ್ಷಸೇಂದ್ರಾಯ-ರಾವಣಾಸುರನಿಗೆ, ದಾರುಣಂ-ಕ್ರೂರವಾದ, ಶಾಪಂ-ಶಾಪವನ್ನು, ಉತ್ಸಸರ್ಜ-ಬಿಟ್ಟನು, ॥ ೫೫ ॥ ಹೇಭದ್ರೇ-ಎಲೇ ಶುಭಕರಳೆ, ಯಸ್ಮಾತ್-ಯಾವಕಾರಣದ ದೆಸೆಯಿಂದ, ಅಕಾಮಾ-ಕಾಮಿಸದಿರುವ, ತ್ವಂ-ನೀನು, ತೇನ-ಆ ರಾವಣನಿಂದ, ಬಲಾತ್-ಬಲಾತ್ಕಾರದಿಂದ, ಪ್ರಧರ್ಷಿತಾ-ಭೋಗಿಸಲ್ಪಟ್ಟೆಯೊ, ತಸ್ಮಾತ್-ಆ ಕಾರಣದ ದೆಸೆಯಿಂದ, ಸಃ-ಆ ರಾವಣನು, ಅಕಾಮಾಂ-ಕಾಮಿಸದಿರುವ, ಅನ್ಯಾಂ-ಯುವತೀಂ-ಮತ್ತೊಬ್ಬ ಯೌವನ ಸ್ತ್ರೀಯನ್ನು, ನೋಪಯಾಸ್ಯತಿ-ಹೊಂದಲಾರನು ॥ ೫೬ ॥ ಯದಾತು-ಯಾವಕಾಲದಲ್ಲಾದರೆ, ಕಾಮಾರ್ತಃ-ಕಾಮ ಮೋಹಿತನಾಗಿ, ಅಕಾಮಾಂ-ಕಾಮರಹಿತಳಾದ, ಯೋಷಿತಂ-ಹೆಂಗಸನ್ನು, ಧರ್ಷಯಿಷ್ಯತಿ-ಬಲಾತ್ಕಾರಮಾಡಿ ಅನುಭವಿಸುತ್ತಾನೆಯೊ, ತದಾ-ಆ ಕಾಲದಲ್ಲಿ, ತಸ್ಯ-ಆ ರಾವಣನ, ಮೂರ್ಧಾ-ತಲೆಯು, ಸಹಸ್ರಧಾ-ಸಹಸ್ರ ಭಾಗಗಳಾಗಿ, ಶಕಲೀಭವಿತಾ-ಛಿದ್ರಗಳಾಗುವದು ॥೫೭॥ ತಸ್ಮಿನ್ಶಾಪೇ-ಆ ಶಾಪವಚನವು, ಉದಾಹೃತೇಸತಿ-ಹೇಳಲ್ಪಟ್ಟದ್ದಾಗುತ್ತಿರಲಿಕ್ಕಾಗಿ, ಜಲೇಚ-ಉದಕವೂ ಕೂಡೆ, ಅಗ್ನಿಸಮಪ್ರಭೇಸತಿ-ಅಗ್ನಿಗೆ ಸಮಾನವಾದ ಜ್ವಾಲೆಯುಳ್ಳದ್ದಾಗುತ್ತಿರಲಿಕ್ಕಾಗಿ ದೇವದುಂದುಭಯಃ-ದೇವತೆಗಳ ಭೇರಿಗಳು, ನೆದುಃ-ಧ್ವನಿಗೊಳಿಸಿದವು, ಪುಷ್ಪವೃಷ್ಟಿಶ್ಚ-ಪುಷ್ಪವೃಷ್ಟಿಯೂ ಕೂಡೆ, ಖಾತ್-ಅಂತರಿಕ್ಷದ ದೆಸೆಯಿಂದ, ಚ್ಯುತಾ-ಜಾರಿತು, ॥ ೫೮ ॥ ತಸ್ಯರಕ್ಷಸಃ-ಆ ರಾವಣನಿಗೆ, ಮೃತ್ಯುಂಚ-ಮರಣ ಸಂಪಾದಕವಾದ, ಸರ್ವಾಂ-ಸಮಸ್ತವಾದ, ಲೋಕಗತಿಂ-ಲೋಕದುರ್ದಶೆಯನ್ನು, ಜ್ಞಾತ್ವಾ-ತಿಳಿದು, ಪ್ರಜಾಪತಿಮುಖಾಃ-ಬ್ರಹ್ಮನೆ ಮೊದಲಾಗಿಉಳ್ಳ, ಸರ್ವೇದೇವಾಶ್ಚಾಪಿ-ಸಮಸ್ತದೇವತೆಗಳೂ ಕೂಡಾ-ಪ್ರಹರ್ಷಿತಾಃ-ಸಂತೋಷಿಸಿದರು ॥೫೯॥ ದಶಗ್ರೀವಸ್ತು-ರಾವಣನಾದರೆ, ರೋಮಹರ್ಷಣಂ-ರೋಮಾಂಚವನ್ನುಂಟುಮಾಡುವ, ತಂಶಾಪಂ-ಆಶಾಪ ವಚನವನ್ನು, ಶ್ರುತ್ವಾ-ಕೇಳಿ, ಅಕಾಮಾಸು-ಕಾಮಿಸದಿರುವ, ನಾರೀಷು-ಸ್ತ್ರೀರುಗಳಲ್ಲಿ, ಮೈಥುನಂಭಾವಂ-ಮಿಥುನೀಭಾವವನ್ನು, ನಾಭ್ಯರೋಚಯತ್-ಕೋರದೇಹೋದನು ॥ ೬೦ ॥ ತೇನ-ಆ ರಾವಣನಿಂದ, ನಿರ್ಣೀತಾಃ-ತರಲ್ಪಟ್ಟ, ಪತಿವ್ರತಾಃ-ಪತಿವ್ರತೆಗಳಾದ, ಸ್ತ್ರಿಯಶ್ಚ-ಹೆಂಗಸರುನ್ನು, ನಳಕೂಬರನಿರ್ಮುಕ್ತಂ- ನಳಕೂಬರನಿಂದ ಬಿಡಲ್ಪಟ್ಟ, ಮನಃಪ್ರಿಯಂ-ಮನಸ್ಸಿಗೆ ಇಂಪಾಗಿರುವ, ಶಾಪಂ-ಶಾಪವನ್ನು, ಶ್ರುತ್ವಾ-ಕೇಳಿ, ಪ್ರೀತಿಂ-ಸಂತೋಷವನ್ನು, ಆಪುಃ-ಹೊಂದಿದರು ॥೬೧॥

ಇತಿ ಶ್ರೀಮದುತ್ತರ ರಾಮಾಯಣೆ ಷಡ್ವಿಂಶ ಸ್ಸರ್ಗಃ.

ಟೀ ॥ ಅಥ-ಬಳಿಕ, ಮಹಾತೇಜಾಃ-ಮಹಾಪರಾಕ್ರಮ ಶಾಲಿಯಾದ, ನಿಶಾಚರಃ-ರಾಕ್ಷಸನಾದ, ದಶಗ್ರೀವಃ-ರಾವಣನು, ಸರಾಕ್ಷಸಃ- ರಾಕ್ಷಸರಿಂದೊಡಗೂಡಿದವನಾಗಿ, ಕೈಲಾಸಂ-ಕೈಲಾಸ ಪರ್ವತವನ್ನು, ಲಂಘಯಿತ್ವಾ-ದಾಂಟಿ, ಇಂದ್ರಲೋಕಂ-ದೇವಲೋಕವನ್ನು, ಆಸಸಾದ-ಹೊಂದಿದನು ॥

---

ಅವನಲ್ಲಿಚ್ಛೆಯಿಲ್ಲದಿರುವ ನೀನು ಯಾವಕಾರಣದಿಂದ ಬಲಾತ್ಕಾರವಾಗಿ ಹೆದರಿಸಲ್ಪಟ್ಟೆಯೊ, ಆ ಕಾರಣದಿಂದೀ ರಾವಣನು ಇತಃಪರವು ಕಾಮುಕಳಲ್ಲದಿರುವ ಮತ್ಯಾವ ವನಿತೆಯನ್ನಾಗಲೀ ಹೊಂದಕೂಡದು, ಕಾಮಾರ್ತನಾಗಿ ಯಾವಾಗ ಸ್ತ್ರೀಯನ್ನು ಭೋಗಿಸುವನೊ, ಆಗ ಇವನ ಮಂಡೆಯು ಸಾವಿರ ತುಂಡುಗಳಾಗಲೆಂದು ಶಾಪನನ್ನಿಡಲೂ, ದೇವ ದುಂದುಭಿಗಳು ಶಬ್ದಾಯಮಾನವಾದವು, ಅಂತರಿಕ್ಷದ ದೆಶೆಯಿಂದ ಪುಷ್ಪವರ್ಷವು ಸುರಿಯಿತು. ಈ ಲೋಕ ಗತಿಯನ್ನು ಮತ್ತು ಆ ರಾವಣ ಮೃತ್ಯುವನ್ನೂ ಸಹಾ ತಿಳಿದು ಬ್ರಂಹನೇ ಮುಂತಾದ ದೇವತೆಗಳೆಲ್ಲರೂ ಬಹು ಸಂತೋಷಿಸಿದರು ॥೫೯॥ ಆ ರಾವಣನಾದರೆ, ಕಡು ಘೋರವಾದ ಆ ಶಾಪವಂ ಕೇಳಿ, ತನ್ನಂ ಕಾಮಿಸದಿರುವ ಅಂಗನೆಯರಲ್ಲಿ ಅಭಿರುಚಿಯಂತೊರದನು ॥೬೦॥ ಆ ರಾವಣನಿಂದಪಹೃತರಾದ ಪತಿವ್ರತಾ ಸ್ತ್ರೀಯರಾದರೇ, ನಲಕೂಬರನಿಂದಿಡಲ್ಪಟ್ಟ ಶಾಪವಂ ಕೇಳಿ ಬಹು ಸಂತೋಷವನ್ನೈದಿದರು ॥೬೧॥ ಇತಿ ಶ್ರೀಮದುತ್ತರರಾಮಾಯಣದೊಳ್ ೨೬ನೇ ಸರ್ಗಂ ಮುಗಿದುದು.

ಮಹಾ ತೇಜಸ್ವಿಯಾದ ಆ ದಶಕಂಠನಾದರೆ ಕೈಲಾಸಪರ್ವತವಂದಾಂಟಿ ಆ ಬಳಿಕ ಇಂದ್ರಲೋಕವಂ ಹೊಂದಿದನು ಆ ರಾವಣನು ಸುತ್ತ ಮುತ್ತಲೂ ಬರುತಿರುವ ಆ ಸೈನ್ಯದ ಕೋಲಾಹಲ ಧ್ವನಿಯು, ಮಥಿಸಲ್ಪಡುತಿರುವ ಸಮುದ್ರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸರಾಜಸ್ಯಸಮಂತಾದುಪಯಾಸ್ಯತಃ। ದೇವಲೋಕಂಯಯೌಶಬ್ದೋಮಥ್ಯಮಾನಾರ್ಣವೋಪಮಃ॥೧॥ ಶ್ರುತ್ವಾಸರಾವಣಂ ಪ್ರಾಪ್ತಮಿಂದ್ರಸ್ಸಂಚಲಿತಾಸನಃ । ಅಬ್ರವೀತ್ತತ್ರತಾನ್ದೇವಾನ್ಸರ್ವಾನೇವಸಮಾಗತಾನ್॥೩॥ ಆದಿತ್ಯಾನ್ಸವಸೂನ್‌ರುದ್ರಾನ್ವಿಶ್ವಾನ್ಸಾಧ್ಯಾನ್ಮರುದ್ಗಣಾನ್। ಸಜ್ಜೀಭವತಯುದ್ಧಾರ್ಥಂರಾವಣಸ್ಯದುರಾತ್ಮನಃ ॥೪॥ ಏವಮುಕ್ತಾಸ್ತುಶಕ್ರೇಣದೇವಾಶ್ಶಕ್ರಸಮಾಯುಧಿ । ಸನ್ನಹ್ಯಂತಮಹಾಸತ್ವಾಯುದ್ಧಶ್ರದ್ಧಾಸಮನ್ವಿತಾಃ ॥೫॥ ಸತುದೀನಃಪರಿತ್ರಸ್ತೋಮಹೇಂದ್ರೋರಾವಣಂಪ್ರತಿ । ವಿಷ್ಣೋಸ್ಸಮೀಪಮಾಗಮ್ಯವಾಕ್ಯಮೇತದುವಾಚಹ ॥೬॥ ವಿಷ್ಣೋಕಥಂಕರಿಷ್ಯಾಮಿಮಹಾವೀರ್ಯಪರಾಕ್ರಮಃ । ಅಸೌಹಿಬಲವಾನ್ರಕ್ಷೋಯುದ್ಧಾರ್ಥಮಭಿವರ್ತತೇ ॥ ೭ ॥ ವರಪ್ರದಾನಾದ್ಬಲವಾನ್ನಖಲ್ವನ್ಯೇನಹೇತುನಾ । ತಚ್ಚಸತ್ಯಂಹಿಕರ್ತವ್ಯಂವಾಕ್ಯಂದೇವಪ್ರಜಾಪತೇಃ ॥೮॥ ತತ್ಪುರಾನಮುಚಿರ್ವೃತ್ರೋಬಲಿರ್ನರಕಶಂಬರೌ। ತ್ವದ್ಬಲಂಸಮವಷ್ಟಭ್ಯಯಥಾದಗ್ಧಾಸ್ತಥಾಕುರು ॥೯॥ ನಹ್ಯನ್ಯೋದೇವದೇವಾನಾಮಾಪತ್ಸುಸುಮಹಾಬಲ। ಗತಿಃಪರಾಯ

ರಾಕ್ಷಸರಾಜಸ್ಯ – ರಾವಣಾಸುರನ, ಸಮಂತಾತ್–ಸುತ್ತುಮುತ್ತಲು, ಉಪಯಾಸ್ಯತಃ–ಬರುತಿರುವ, ತಸ್ಯ–ಆ ಸೈನ್ಯದ, ಶಬ್ದಃ–ಕೋಲಾಹಲಧ್ವನಿಯು, ಮಥ್ಯಮಾನಾರ್ಣವೋಪಮಃ–ಮಥ್ಯಮಾನ–ಮಥಿಸಲ್ಪಡುತಿರುವ, ಅರ್ಣವ–ಕಡಲಿಗೆ, ಉಪಮಃ–ಸಮಾನವಾದದ್ದಾಗಿ, ದೇವಲೋಕಂ–ಸ್ವರ್ಗಲೋಕವನ್ನು, ಯಯೌ – ಹೊಂದಿತು ॥ ೧ ॥ ಪ್ರಾಪ್ತಂ–ಬಂದಿರುವ, ರಾವಣಂ–ರಾವಣನನ್ನು, ಶ್ರುತ್ವಾ–ಕೇಳಿ, ಸಃಇಂದ್ರಃ–ಆ ದೇವೇಂದ್ರನು, ಸಂಚಲಿತಾಸನಃ–ಸಿಂಹಾಸನದಿಂದ ಕದಲಿದವನಾಗಿ, ತತ್ರ–ಆ ಕಾಲದಲ್ಲಿ, ಸಮಾಗತಾನ್ – ಬಂದಂಥಾ, ಆದಿತ್ಯಾನ್–ದ್ವಾದಶಾದಿತ್ಯರನ್ನು, ಸವಸೂನ್–ಅಷ್ಟವಸುಗಳಿಂ ದೊಡಗೂಡಿದ, ರುದ್ರಾನ್ – ಏಕಾದಶ ರುದ್ರರನ್ನು, ವಿಶ್ವಾನ್ – ವಿಶ್ವೇದೇವತೆಗಳನ್ನು, ಸಾಧ್ಯಾನ್ – ಸಾಧ್ಯರನ್ನು, ಮರುದ್ಗಣಾನ್ – ಸಪ್ತಮರುತ್ತುಗಳನ್ನು, ಸರ್ವಾನ್–ಸಮಸ್ತರಾದ, ತಾನ್ದೇವಾನ್–ಆ ದೇವತೆಗಳನ್ನು ಕುರಿತು, ದುರಾತ್ಮನಃ –ದುಷ್ಟನಾದ, ರಾವಣಸ್ಯ – ರಾವಣನ,ಯುದ್ಧಾರ್ಥಂ–ಯುದ್ಧಕ್ಕೋಸ್ಕರ, ಸಜ್ಜೀಭವತೇತಿ – ಸನ್ನದ್ಧ ರಾಗಿರೀ ಯೆಂದು, ಅಬ್ರವೀತ್ – ನುಡಿದನು ॥ ೩ ॥ ೪॥ ಶಕ್ರೇಣ– ದೇವೇಂದ್ರನಿಂದ, ಏವಮುಕ್ತಾಃ–ಈ ಪರಿಯಾಗಿ ಹೇಳಲ್ಪಟ್ಟ, ಯುಧಿ–ಕಾಳಗದಲ್ಲಿ, ಶಕ್ರಸಮಾಃ–ಇಂದ್ರನಿಗೆ ಸಮಾನರಾದ, ಮಹಾಸತ್ವಾಃ–ಮಹಾಬಲಿಷ್ಠರಾದ, ದೇವಾಃ–ದೇವತೆಗಳು, ಯುದ್ಧಶ್ರದ್ಧಾಸಮನ್ವಿತಾಃ–ಕಾಳಗದಲ್ಲಿ. ಅದರಣೆಯಿಂ ದೊಡಗೂಡಿದವರಾಗಿ, ಸನ್ನಹ್ಯಂತೆ–ಸನ್ನದ್ಧರಾದರು ॥ ೫ ॥ ರಾವಣಂಪ್ರತಿ – ರಾವಣನನ್ನು ಕುರಿತು, ಪರಿತ್ರಸ್ತಃ–ದಿಗಿಲು ಬೀಳುತ್ತಿರುವ,ಸಮಹೇಂದ್ರಃ–ಆದೇವೇಂದ್ರನು,ದೀನಃ–ದೈನ್ಯವುಳ್ಳವನಾಗಿ, ವಿಷ್ಣೋಃ–ಶ್ರೀಮಹಾವಿಷ್ಣುವಿನ, ಸಮೀಪಂ–ಸಮೀಪವನ್ನು ಕುರಿತು, ಆಗಮ್ಯ–ಬಂದು,ಏತದ್ವಾಕ್ಯಂ–ಈ ವಕ್ಷ್ಯಮಾಣ ವಚನವನ್ನು, ಉವಾಚಹ–ಹೇಳಿದನಷ್ಟೆ॥೬ ॥ ಹೇವಿಷ್ಣೋ–ಎಲೈ ನಾರಾಯಣನೆ, ಮಹಾವೀರ್ಯ ಪರಾಕ್ರಮಃ–ಮಹಾವೀರ್ಯ–ಬಹಳ ಸಾಮರ್ಥ್ಯವೂ, ಪರಾಕ್ರಮಃ–ಪರಾಕ್ರಮವೂ ಉಳ್ಳ, ಬಲವಾನ್–ದೇಹಸಾಮರ್ಥ್ಯವುಳ್ಳ, ರಕ್ಷಃ–ರಾಕ್ಷಸನಾದ, ಅಸೌ–ಈ ರಾವಣನು, ಯುದ್ಧಾರ್ಥಂ–ಯುದ್ಧಾರ್ಥವಾಗಿ, ಅಭಿವರ್ತತೆ – ಬಂದುನಿಂತಿಧಾನೆ, ಕಥಂ–ಕರಿಷ್ಯಾಮಿ – ಹ್ಯಾಗೆ ಮಾಡಲಿ ॥೭॥ ಹೆದೇವ–ಎಲೈ ಸ್ವಾಮಿಯೆ, ಸಃ–ಆರಾವಣನು, ವರಪ್ರದಾನಾತ್–ಬ್ರಹ್ಮವರಪ್ರಭಾವದದೆಸೆಯಿಂದ, ಬಲವಾನ್ – ಬಲವಂತನು,ಅನ್ಯೇನಹೇತುನಾ–ಮತ್ತೊಂದು ಕಾರಣದಿಂದ, ನಖಲು–ಅಲ್ಲವಷ್ಟೆ, ಪ್ರಜಾಪತೇಃ–ಬ್ರಂಹನ, ತದ್ವಾಕ್ಯಂ–ಆಮಾತು, ಸತ್ಯಂಕರ್ತವ್ಯಂಹಿ–ಯಥಾರ್ಥವಾಗಿ ಮಾಡತಕ್ಕದ್ದಷ್ಟೇ ॥೮॥ ತತ್–ಆ ಕಾರಣದ ದೆಸೆಯಿಂದ, ತ್ವದ್ಬಲಂ–ನಿನ್ನ ಬಲವನ್ನು, ಸಮವಷ್ಟಭ್ಯ–ಆಶ್ರಯಿಸಿ,ಯಥಾ–ಹ್ಯಾಗೆ, ಪುರಾ–ಪೂರ್ವದಲ್ಲಿ, ನಮುಚಿಃ–ನಮುಚೀಎಂಬವನು, ವೃತ್ರಃ–ವೃತ್ರಾಸುರನು, ಬಲಿಃ–ಬಲಿಚಕ್ರವರ್ತಿಯು,ನರಕಶಂಬರೌ–ನರಕಾಸುರನು, ಶಂಬರಾಸುರನು, ದಗ್ಧಾಃ–ದಗ್ಧರಾದರೋ, ತಥಾ–ಹಾಗೆಯೆ, ಕುರು–ಮಾಡು ॥೯॥ಹೆದೇವ–ಎಲೈ ಸ್ವಾಮಿಯೆ,ಹೆಸುಮಹಾಬಲ–ಎಲೈ ಮಹಾಬಲಶಾಲಿಯೆ, ಹೆಪುರುಷೋತ್ತಮ–ಎಲೈ ಪುರುಷಶ್ರೇಷ್ಠನೇ,ದೆ

ದ ಘೋಷೆಯಂತೆ ಸ್ವರ್ಗಲೋಕವಂ ಹೊಂದಿತು ॥೧॥ ಸಮಾಗತನಾದ ರಾವಣನಂ ಕೇಳಿ ದೇವೇಂದ್ರನು ಸಿಂಹಾಸನದಿಂದ ಚಲಿಸಿದವನಾಗಿ, ಆ ಸಮಯದಲ್ಲಿದ್ದ ಅಷ್ಟವಸುಗಳಿಂ ದೊಡಗೂಡಿದ ದ್ವಾದಶಾದಿತ್ಯರನ್ನೂ, ಏಕಾದಶ ರುದ್ರರನ್ನೂ ತ್ರಯೋದಶ ವಿಶ್ವೇದೇವತೆಗಳನ್ನೂ ಸಾಧ್ಯರನ್ನೂ ಸಪ್ತ ಮರುತ್ತುಗಳನ್ನು ಇವರೆಲ್ಲರಂ ಕುರಿತಿಂತೆಂದನು. ಆ ದುರಾತ್ಮನಾದ ರಾವಣಾಸುರನ ಸಂಗಡಾ ಯುದ್ಧಾರ್ಥವಾಗಿ ನೀವೆಲ್ಲರೂ ಸನ್ನದ್ಧರಾಗಿರಿ, ಎಂಬದಾಗಿ ದೇವೇಂದ್ರನಿಂದಾಜ್ಞಾಪಿತರಾದ ಮತ್ತು ಮಹಾಬಲಿಷ್ಠರಾದ ಆ ದೇವತೆಗಳೆಲ್ಲರೂ ಯುದ್ಧಕಾಂಕ್ಷಿಗಳಾಗಿ ಸನ್ನದ್ಧರಾದರು॥೫॥ ಆ ಮಹೇಂದ್ರನಾದರೆ, ಹೆದರಿದವನಾದಕಾರಣ ದೈನ್ಯವುಳ್ಳವನಾಗಿ ಶ್ರೀಮಹಾವಿಷ್ಣುವಿನ ಸಾಮೀಪ್ಯವನ್ನೈದಿ ರಾವಣನ ವಿಷಯವಾಗಿ ಇಂತೆಂದನು॥೬॥ ಎಲೈ ಶ್ರೀಮಹಾ ವಿಷ್ಣುವೇ! ಈಗನಾನೇನು ಗೈಯಲೀ, ಮಹಾ ಪರಾಕ್ರಮಿಯಾದ ರಾವಣನಾದರೆ ಈಗ ಯುದ್ಧಾರ್ಥವಾಗಿ ಬಂದಿಹನು, ಎಲೈಭಗವಂತನೇ! ಇವನು ಬ್ರಹ್ಮವರಪ್ರದಾನದಿಂದ ಬಲವಂತನೇ ಹೊರ್ತು ಮತ್ತಾರಿಂದಲೂ ಅಲ್ಲಾ, ಆ ಚತುರ್ಮುಖಬ್ರಹ್ಮನ ವಚನವಂ ಸತ್ಯವಾಗಿಮಾಡತಕ್ಕದ್ದಷ್ಟೆ ॥೮॥ ಈ ದುಷ್ಟನಿಗಿಂತಲೂ ಪೂರ್ವಿಕರಾದನಮುಚಿ, ವೃತ್ರ, ಬಲಿ, ನರಕ,ಶಂಬರರೇ ಮುಂತಾದ ರಾಕ್ಷಸರೆಲ್ಲರು ನಿನ್ನ ಬಲವನ್ನಾಶ್ರಯಿಸಿ ಹ್ಯಾಗೆ ದಗ್ಧರಾದರೋ ಹಾಗೆ ದಹಿಸು॥೯॥ಎಲೈ ಮಹಾಬಲವಂತನಾದ ದೇವನೇ, ದೇವತೆಗಳಿಗೆ ಆಪತ್ಕಾಲಸಂಭ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣಾಂನಾಸ್ತಿತ್ವಾಮೃತೆಪುರುಷೋತ್ತಮ॥೧೦॥ ತ್ವಂಹಿನಾರಾಯಣಶ್ಶ್ರೀಮಾನ್ಪದ್ಮನಾಭಸ್ಸನಾತನಃ । ತ್ವಯೆಯಾಹಂಸ್ಥಾಪಿತಶ್ಚೈವದೆವರಾಜ್ಯೆಸನಾತನೆ ॥೧೧॥ ತದಾಖ್ಯಾಹಿಯಥಾತತ್ವಂದೆವದೆವಮಮಸ್ವಯಮ್ । ಅಪಿಶಕ್ರಸಹಾಯಸ್ತ್ವಂಯುಧ್ಯಸೆಸಂಯುಗೆರಿಪುಮ್॥ ಅಥವಾಚಕ್ರಮಾದಾಯಸ್ವಯಂಯುಧ್ಯಸಿಸಂಯುಗೆ ॥೧೨॥ ಎವಮುಕ್ತಸ್ಸಶಕ್ರೇಣದೆವೊನಾರಾಯಣಃಪ್ರಭುಃ । ಅಬ್ರವೀನ್ನಪರಿತ್ರಾಸಃಕಾರ್ಯಸ್ತೆಶ್ರೂಯತಾಂಚಮೆ ॥೧೩॥ ನತಾವದೆಷದುರ್ವೃತ್ತಶ್ಶಕ್ಯೊದೆವತದಾನವೈಃ । ಹಂತುಂಯುದ್ಧೆಸಮಾಸಾದ್ಯವರದಾನೆನದುರ್ಜಯಃ ॥೧೪॥ ಸರ್ವಥಾತುಮಹತ್ಕರ್ಮಕರಿಷ್ಯತಿಬಲೊತ್ಕಟಃ । ರಕ್ಷಃಪುತ್ರಸಹಾಯೊಸೌದೃಷ್ಟಮೆತನ್ನಸಂಶಯಃ ॥೧೫॥ ಬ್ರವೀಷಿಯತ್ತುಮಾಂಶಕ್ರಸಂಯುಗೆಯೊತ್ಸ್ಯಸೀತಿವೈ । ನೈವಾಹಂಪ್ರತಿಯೊತ್ಸ್ಯಾಮಿರಾವಣಂರಾಕ್ಷಸಾಧಿಪಮ್ ॥೧೬॥ ಅನಿಹತ್ಯರಿಪುಂವಿಷ್ಣುರ್ನಹಿಪ್ರತಿನಿವರ್ತತೆ।

---

ವಾ ಸ್ಥಿ ಂ-ದೇವತೆಗಳಿಗೆ, ಆಪತ್ಸು-ಆಪತ್ಕಾಲಗಳಲ್ಲಿ, ತ್ವಾಮೃತೆ-ನಿನ್ನ ಹೊರ್ತಾಗಿ, ಅನ್ಯಃ-ಮತ್ತೊಬ್ಬನು,ಪರಾಯಣಂ-ಮುಖ್ಯಾಶ್ರಯವಾದ, ಗತಿಃ-ಶರಣವು, ನಾಸ್ತಿಹಿ-ಇಲ್ಲವಷ್ಟೆ ॥೧೦॥ ತ್ವಂಹಿ-ನೀನಾದರೆ, ಶ್ರೀಮಾನ್-ಸಂಪದ್ಯುಕ್ತನಾದ, ನಾರಾಯಣಃ-ಪ್ರಳಯೋದಕವೇ ಆಧಾರವಾಗಿ ಉಳ್ಳವನು, ಪದ್ಮನಾಭಃ-ಚತುರ್ಮುಖ ಬ್ರಹ್ಮನಿಗೂ ಕೂಡಾ, ಜನಕವಾದ ಕಮಲವೇ ನಾಭಿಯಾಗಿ ಉಳ್ಳವನು, ಸನಾತನಃ-ಅನಾದಿಸಿದ್ಧನು, ತ್ವಯಾ-ನಿನ್ನಿಂದ, ಅಹಂ-ನಾನು, ಸನಾತನೆ-ಬಹುಕಾಲದಿಂದ,ದೆವರಾಜ್ಯೆ-ದೇವರಾಜ್ಯದಲ್ಲಿ,ಸ್ಥಾಪಿತಶ್ಚ-ಸ್ಥಾಪಿಸಲ್ಪಟ್ಟನು ॥೧೧॥ತತ್-ಆ ಕಾರಣದ ದೆಸೆಯಿಂದ,ದೇವದೇವ-ಎಲೈ ದೇವತೆಗಳಿಗೆಲ್ಲಾ ಸ್ವಾಮಿಯೆ, ಮಮ-ನನಗೆ, ಸ್ವಯಂ-ನೀನು, ಯಥಾತತ್ವಂ – ಯಥಾಪ್ರಕಾರವಾಗಿ, ಆಖ್ಯಾಹಿ-ಹೇಳು, ತ್ವಂ-ನೀನು, ಸಂಯುಗೆ, ಯುದ್ಧದಲ್ಲಿ, ಶಕ್ರಸಹಾಯಃ-ದೇವೇಂದ್ರನಿಗೆ ಸಹಾಯಭೂತನಾಗಿ, ರಿಪುಂ-ಶತ್ರುವಿನನ್ನು, ಯುಧ್ಯಸೇಪಿ-ಯುದ್ಧ ಮಾಡುತ್ತೀಯ್ಯಾ ಏನು ॥೧೨॥ ಅಥವಾ-ಹಾಗಲ್ಲದೆಹೋದರೆ, ಚಕ್ರಂ-ಚಕ್ರವನ್ನು, ಸ್ವಯಂ-ತಾನೆ, ಆದಾಯ-ತೆಗದುಕೊಂಡು, ಸಂಯುಗೆ-ಕಾಳಗದಲ್ಲಿ, ಯುಧ್ಯಸಿ-ಯುದ್ಧ ಮಾಡುತೀಯ್ಯಾ, ಶಕ್ರೇಣ-ದೇವೇಂದ್ರನಿಂದ, ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಪ್ರಭುಃ – ಸ್ವಾಮಿಯಾದ, ನಾರಾಯಣೋದೇವಃ-ಶ್ರೀಮಹಾವಿಷ್ಣುವು, ಅಬ್ರವೀತ್-ನುಡಿದನು ॥೧೩॥ ತೆ-ನಿನಗೆ, ಪರಿತ್ರಾಸಃ-ಭಯವು, ನಕಾರ್ಯಃ-ಮಾಡತಕ್ಕದ್ದಲ್ಲಾ, ಮೆ-ನನ್ನ, ವಚಃ-ವಾಕ್ಯ, ಶ್ರೂಯತಾಂ-ಕೇಳಲ್ಪಡಲಿ, ದುರ್ವೃತ್ತಃ-ದುಷ್ಟನಾದ, ಏಷಃ-ಈ ರಾವಣನು, ವರದಾನೇನ-ಬ್ರಹ್ಮವರ ಪ್ರದಾನದಿಂದ, ದುರ್ಜಯಃ-ಜಯಿಸ ಲಸಾಧ್ಯನು,ದೇವತದಾನವೈಃ- ದೇವತೆಗಳಿಂದಲೂ ರಾಕ್ಷಸರಿಂದಲೂ, ಯುದ್ಧೆ-ಕಾಳಗದಲ್ಲಿ, ಸಮಾಸಾದ್ಯ-ಬಂದು, ಹಂತುಂ-ಹೊಡಿಯುವದ ಕ್ಕೋಸ್ಕರ,ಶಕ್ಯಸ್ತಾವತ್-ಸಾಧ್ಯನಾದರೆ, ನ-ಅಲ್ಲ॥೧೪॥ ಬಲೊತ್ಕಟಃ-ಬಲೋದ್ಧತನಾದ, ಅಸಾರಕ್ಷಃ-ಈ ರಾವಣನು, ಸರ್ವಥಾ-ಸರ್ವಪ್ರಕಾರದಲ್ಲಿ, ಪುತ್ರಸಹಾಯಃ-ಪುತ್ರನೇ ಸಹಾಯವಾಗಿರುವನಾಗಿ, ಮಹತ್ಕರ್ಮ-ಮಹತ್ಕಾರ್ಯವನ್ನು, ಕರಿಷ್ಯತಿ-ಮಾಡುವನು, ಏತತ್-ಇದು, ದೃಷ್ಟಂ-ಕಾಣಲ್ಪಟ್ಟಿಥೆ, ಸಂಶಯಃ-ಸಂಶಯವು, ನ-ಇಲ್ಲಾ ॥೧೫॥ ಹೇಶಕ್ರ-ಎಲೈ ದೇವೇಂದ್ರನೆ, ಸಂಯುಗೆ-ಯುದ್ಧದಲ್ಲಿ, ಯೊತ್ಸ್ಯಸೀತಿವೈ-ಯುದ್ಧ ಮಾಡುತಿಯ್ಯಾಯೆಂದು, ಮಾಂ-ನನ್ನನ್ನು ಕುರಿತು, ಯತ್-ಯಾವಮಾತನ್ನು, ಬ್ರವೀಷಿ-ಹೇಳಿದೆಯೋ,ಅಹಂ-ನಾನು, ರಾಕ್ಷಸಾಧಿಪಂ-ರಾಕ್ಷಸಾಧಿ ಪತಿಯಾದ, ರಾವಣಂಪ್ರತಿ-ರಾವಣನನ್ನು ಕುರಿತು, ನೈವಯೊತ್ಸ್ಯಾಮಿ -ಯುದ್ಧ ಮಾಡುವದೇ ಇಲ್ಲ ॥೧೬॥ ಹಿ-ಯಾವಕಾರಣದ ದೆಸೆಯಿಂದ, ವಿಷ್ಣುಃ-ವಿಷ್ಣುವು, ರಿಪುಂ-ಶತ್ರುವನ್ನು, ಅನಿಹತ್ಯ-ಹೊಡಿಯದೇ, ನಪ್ರತಿ ನಿವರ್ತತೆ-ಹಿಂತಿರುಗುವನಲ್ಲನೋ, ಅದ್ಯ-ಈಗ, ರಾಕ್ಷಸೆ-ರಾಕ್ಷಸನಲ್ಲಿ, ವರಂ-ಬ್ರಹ್ಮವರವನ್ನು,ಆಸಾದ್ಯ-ಹೊಂದಿ, ಏಷಕಾಮಃ-ಈ ಕೋರಿಕೆಯು, ದುರ್ಲಭಃ-ದು

---

ವಿಸಿದರೇ ನಿನ್ನ ವಿನಹಾ ಮತ್ತ್ಯಾರೂ ರಕ್ಷಕ ನಿಲ್ಲಾ ॥೧೦॥ನೀನಾದರೇನೋ ಸಂಪದ್ಯುಕ್ತನಾಗಿಯೂ, ಪ್ರಳಯೋದಕವೇ ಆಧಾರವಾಗುಳ್ಳವನಾಗಿಯೂ, ಪದ್ಮವೇ ನಾಭಿಯಾಗುಳ್ಳವನಾಗಿಯೂ ಇರುವ ಅನಾದಿಸಿದ್ಧಪುರುಷನು, ನಿನ್ನಿಂದಲೇ ನಾನು ಬಹುಕಾಲದಿಂದ ಪ್ರಾಪ್ತವಾದದೇವರಾಜ್ಯದಲ್ಲಿ ಸ್ಥಾಪಿಸಲ್ಪಟ್ಟಧೇನೇ ಅಂಥ ನೀನು ಇಂದ್ರನಿಗೆ ಸಹಾಯ ಭೂತನಾಗಿ ಕಾಳಗದಲ್ಲಿ ಯುದ್ಧವಂ ಗೈಯ್ಯುವಿಯೋ ಅಥವಾ ಚಕ್ರವಂ ತೆಗದುಕೊಂಡು ನೀನೇ ಯುದ್ಧವಂ ಗೈಯ್ಯುವಿಯೋ, ಎಲೈ ದೇವದೇವೋತ್ತಮನೆ ! ಎನಗೆ ತತ್ವಂಪೇಳು॥೧೨॥ಈ ಪರಿಯಾಗಿ ದೇವೇಂದ್ರನಿಂದ ಕೇಳಲ್ಪಟ್ಟ ಲೋಕ ಪ್ರಭುವಾದ ಶ್ರೀಮನ್ನಾರಾಯಣ ಮೂರ್ತಿಯು, ನಿನಿಗೆ ಭಯಬೇಡ, ಈ ನನ್ನಮಾತನ್ನೂ ಸಹಾ ಕೇಳು ॥೧೩॥ಈ ದುರ್ವೃತ್ತನಾದ ರಾವಣನು ಬ್ರಹ್ಮವರಪ್ರದಾನದಿಂದ ದುರ್ಜೇಯನಾದ ಕಾರಣ ಕಾಳಗದಲ್ಲಿ ಬಂದು ದೇವರಾಕ್ಷಸರಿಂದ ಹೊಡೆಯಲಾಗದು ॥ಆ ಬಲಾಧಿಕನಾದ ದಶಕಂಠನು ಪುತ್ರನೇ ಸಹಾ ಯವಾಗುಳ್ಳವನಾಗಿ ಸರ್ವಪ್ರಕಾರ ವಾಗಿಯೂ ಮಹತ್ತರವಾದ ಕಾರ್ಯವಂಗೈಯ್ಯುವನು ಇದು ನೋಡಲ್ಪಟ್ಟೀಇಧೇ,ಈ ವಿಷಯದಲ್ಲಿ ಸಂಶಯವಿಲ್ಲ ॥೧೫॥ ಎಲೈ ದೇವೇಂದ್ರನೇ ! ನೀನು ರಾವಣನಂ ಕುರಿತು ಯುದ್ಧವಂ ಗೈಯ್ಯಬೇಕೆಂದು ನುಡಿದಿದ್ದು ಸರಿಯಷ್ಟೆ, ಆರಾಕ್ಷಸಾಧಿಪತಿಯಾದ ರಾವಣನಂ ಕುರಿತು ಈಗ ಕಾಳಗಿಸುವನಲ್ಲ. ಯಾಕಂದರೆ,—ಶ್ರೀ ಮಹಾವಿಷ್ಣುವು ಶತ್ರುವಿನಂ ಸಂಹರಿಸದೆ ಹಿಂತಿರುಗುವನಲ್ಲ. ಆ ರಾವಣನಾದರೆ. ವರವಂ ಪಡಿದಿರೋಣದರಿಂದ ದುರ್ಲಭನಾಗಿಹನು, ಎಲೈ ಇಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದುರ್ಲಭಶ್ಶ್ರೀಪಕಾಪೊದ್ಯವರಮಾಸಾದ್ಯರಾಕ್ಷಸೆ ॥೧೭॥ ಪ್ರತಿಜಾನಾಮಿದೇವೇಂದ್ರತ್ವತ್ಸಮಕ್ಷಂಶತಕ್ರತೊ। ರಾಕ್ಷಸಸ್ಯಾಹಮೇವಾಸ್ಯಭವಿತಾಮೃತ್ಯುಕಾರಣಮ್ ॥೧೮॥ ಅಹಮೇವವಧಿಷ್ಯಾಮಿರಾವಣಂಸಸುತಂಯುಧಿ । ದೇವತಾಸ್ತೋಷಯಿಷ್ಯಾಮಿಜ್ಞಾತ್ವಾ ಕಾಲಮುಪಸ್ಥಿತಮ್ ॥೧೯॥ ಏತತ್ತೇ ಕಥಿತಂತತ್ವಂದೇವರಾಜಶಚೀಪತೇ। ಯುಧ್ಯಸ್ವವಿಗತತ್ರಾಸಸ್ಸುರೈಸ್ಸಹ ಮಹಾತ್ಮಭಿಃ ॥೨೦॥ ಏತಸ್ಮಿನ್ನಂತರೆನಾದಃಶ್ರೂಯತೆರಜನೀಕ್ಷಯೆ। ತಸ್ಯರಾಕ್ಷಸಸೈನ್ಯಸ್ಯಪ್ರಮತ್ತಸ್ಯಸಮಂತತಃ॥೨೧॥ ತೆಪ್ರವೃದ್ಧಾ ಮಹಾವೀರ್ಯಾ ಅನ್ಯೋನ್ಯಮಭಿವೀಕ್ಷ್ಯಚ । ಸಂಗ್ರಾಮಮೇವಾಭಿಮುಖಾಸ್ತ್ವಭ್ಯಧಾವಂತಹೃಷ್ಟವತ್॥೨೨॥ ತತಸ್ತ್ರಿದಶಸೈನ್ಯಾನಾಂಸಂಕ್ಷೋಭಸ್ಸಮಜಾಯತ। ತದಕ್ಷಯಂಮಹಾಸೈನ್ಯಂದೃಷ್ಟ್ವಾಪರಮದುರ್ಜಯಮ್॥೨೩॥ ಅಥ ಯುದ್ಧಂಸಮಭವದ್ದೇವರಾಕ್ಷಸಯೋಸ್ತದಾ । ಘೋರಂತುಮುಲನಿರ್ಹ್ರಾದಂನಾನಾಪ್ರಹರಣಾಯುಧಮ್॥೨೪॥ ಏತಸ್ಮಿನ್ನಂತರೆಶೂರಾರಾಕ್ಷಸಾಘೋರದರ್ಶನಾಃ । ಯುದ್ಧಾರ್ಥಮಭ್ಯಧಾವಂತಸಚಿವಾರಾವಣಾಜ್ಞಯಾ ॥೨೫॥ ಮಾರೀಚಶ್ಚ

---

ಲರ್ಭವಾಗಿಧೆ ॥೧೭॥ಹೆದೇವೇಂದ್ರ-ಎಲೈ ದೇವೇಂದ್ರನೆ, ಹೆ ಶತಕ್ರತೊ-ಎಲೋಶತಮಖನೆ,ತ್ವತ್ಸಮಕ್ಷಂ-ನಿನಿಗೆ ಯದುರಾಗಿ, ಪ್ರತಿ ಜಾನಾಮಿ-ಪ್ರತಿಜ್ಞೆಮಾಡುತ್ತೇನೆ, ಅಸ್ಯರಾಕ್ಷಸಸ್ಯ-ಈ ರಾವಣನಿಗೆ, ಅಹಮೇವ-ನಾನೇ,ಮೃತ್ಯುಕಾರಣಂ-ಮರಣಕ್ಕೆ ಹೇತುವು, ಭವಿತಾ-ಆಗಿಧೇನೆ, ಅಹಂ-ನಾನು, ಯುಧಿ-ಯುದ್ಧರಂಗದಲ್ಲಿ, ಸಸುತಂ-ಮಕ್ಕಳಿಂ ದೊಡಗೂಡಿದ, ಏನಂರಾವಣಂ-ಈ ರಾವಣನನ್ನು, ವಧಿಷ್ಯಾಮಿ-ಸಂಹಾರ ಮಾಡುವೆನು, ಕಾಲಂ-ಕಾಲವನ್ನು, ಉಪಸ್ಥಿತಂ-ಪ್ರಾಪ್ತವಾದ್ದಂನಾಗಿ, ಜ್ಞಾತ್ವಾ-ತಿಳದು, ದೇವತಾಃ-ದೇವತೆಗಳನ್ನು, ತೋಷಯಿಷ್ಯಾಮಿ-ಸಂತೋಷಗೊಳಿಸುವೆನು॥ ೧೮॥ ೧೯॥ ಹೆ ದೇವರಾಜ-ಎಲೈ ದೇವೇಂದ್ರನೆ, ಹೆಶಚೀಪತೆ-ಎಲೈ ಶಚೀಪತಿಯೆ, ತೆ-ನಿನಗೆ,ಏತತ್ತತ್ವಂ-ಈ ರಹಸ್ಯವು,ಕಥಿತಂ-ಹೇಳಲ್ಪಟ್ಟಿತು,ವಿಗತತ್ರಾಸಃ-ಹೋದಂಥಾ ಭಯವುಳ್ಳವನಾಗಿ, ಮಹಾತ್ಮಭಿಃ-ಮಹಾಧೈರ್ಯಶಾಲಿಗಳಾದಂಥಾ, ಸುರೈಸ್ಸಹ-ದೇವತೆಗಳಿಂದೊಡಗೂಡಿ, ಯುಧ್ಯಸ್ವ- ಯುದ್ಧಮಾಡು ॥ ಏತಸ್ಮಿನ್ನಂತರೆ- ಈ ಮಧ್ಯಕಾಲದಲ್ಲಿ, ರಜನೀಕ್ಷಯೆ-ಬೆಳಿಗ್ಗೆ, ಪ್ರಮತ್ತಸ್ಯ-ಯುದ್ಧಗರ್ವದಿಂದ ಮದವೇರಿದ, ತಸ್ಯರಾಕ್ಷಸಸೈನ್ಯಸ್ಯ- ಆರಾವಣಾಸುರನ ರಾಕ್ಷಸಸೈನ್ಯದ,ನಾದಃ-ಕೋಲಾಹಲ ಧ್ವನಿಯು, ಸಮಂತತಃ-ಎಲ್ಲಾ ಕಡೆಯಲ್ಲಿ, ಶ್ರೂಯತೆ-ಕೇಳಲ್ಪಟ್ಟಿತು ॥೨೧॥ ಮಹಾವೀರ್ಯಾಃ-ಮಹಾಪರಾಕ್ರಮ ಶಾಲಿಗಳಾದ, ಪ್ರವೃದ್ಧಾಃ-ವೃದ್ಧರಾದ, ತೆ-ಆದೇವ ರಾಕ್ಷಸರು, ಅನ್ಯೋನ್ಯಂ-ಪರಸ್ಪರವಾಗಿ,ಅಭಿವೀಕ್ಷ್ಯಚ-ಕಂಡುನ್ನೂ,ಸಂಗ್ರಾಮಮೇವ-ಯುದ್ಧವನ್ನೇ ಕುರಿತು,ಅಭಿಮುಖಾಃ-ಯದುರಿಗೆ ಬಂದಂಥಾವರಾಗಿ, ಹೃಷ್ಟವತ್-ಸಂತೋಷಯುಕ್ತರಾದಂತೆ, ಅಭ್ಯಧಾವಂತ-ಓಡಿ ಬಂದರು ॥೨೨॥ ತತಃ-ಬಳಿಕ, ಅಕ್ಷಯಂ-ನಾಶರಹಿತವಾದ, ಪರಮದುರ್ಜಯಂ-ಬಹಳ ಜಯಿಸಲಸಾಧ್ಯವಾದ, ತನ್ಮಹಾಸೈನ್ಯಂ-ಆದೊಡ್ಡ ಸೈನ್ಯವನ್ನು, ದೃಷ್ಟ್ವಾ-ಕಂಡು, ತ್ರಿದಶಸೈನ್ಯಾನಾಂ-ತ್ರಿದಶ-ದೇವತೆಗಳ, ಸೈನ್ಯಾನಾಂ-ಸೈನ್ಯಗಳಿಗೆ, ಸಂಕ್ಷೋಭಃ-ಸಂಕಟವು, ಸಮಜಾಯತ-ಹುಟ್ಟಿತು ॥೨೩॥ಅಥ-ಬಳಿಕ,ದೇವರಾಕ್ಷಸಯೋಃ-ದೇವತೆಗಳಗೂ, ರಾಕ್ಷಸರಿಗೂಕೂಡಾ,ತುಮುಲನಿರ್ಹ್ರಾದಂ-ತುಮುಲ ಸಂಕುಲವಾದ,ನಿರ್ಹ್ರಾದಂ-ಕೋಲಾಹಲ ಧ್ವನಿಗಳುಳ್ಳ, ನಾನಾಪ್ರಹರಣಾಯುಧಂ-ನಾನಾ ಅನೇಕಬಗೆಗಳಾದ, ಪ್ರಹರಣಾಯುಧಂ-ಅಸ್ತ್ರಗಳೂ ಶಸ್ತ್ರಗಳೂ ಉಳ್ಳ, ಘೋರಂ-ಭಯಂಕರವಾದ. ಯುದ್ಧಂ-ಯುದ್ಧವು, ತದಾ-ಆ ಕಾಲದಲ್ಲಿ, ಅಭವತ್-ಆಯಿತು॥೨೪॥ಏತಸ್ಮಿನ್ನಂತರೆ ಇಷ್ಟರವಳಗಾಗಿ,ಶೂರಾಃ-ಶೂರರಾದ, ರಾಕ್ಷಸಾಃ-ರಕ್ಕಸರಾದ, ಘೋರದರ್ಶನಾಃ-ಭಯಂಕರವಾದ ನೋಡುವಿಕೆಯುಳ್ಳ, ಸಚಿವಾಃ-ರಾವಣನ ಮಂತ್ರಿಗಳು, ರಾವಣಾಜ್ಞಯಾ-ರಾವಣಾಸುರನಾಜ್ಞೆಯಿಂದ,ಯುದ್ಧಾರ್ಥಂ-ಯುದ್ಧಾರ್ಥವಾಗಿ, ಅಭ್ಯವರ್ತಂತ- ಅಭಿಮುಖವಾಗಿ ಬಂದು ನಿಂತರು ॥೨೫॥ ಮಾರೀಚಶ್ಚ-ಮಾರೀಚನನ್ನು, ಪ್ರಹಸ್ತಶ್ಚ-ಪ್ರಹಸ್ತನನ್ನು, ಮಹಾಪಾರ್ಶ್ವಮಹೋದರೌ-ಮಹಾರ್ಶ್ವನು, ಮಹೋದ

---

ದ್ರನೆ! ನಿನ್ನ ಸಮಕ್ಷಮದಲ್ಲಿಯೇ ಪ್ರತಿಜ್ಞೆಯಂಗೈಯ್ಯುವೆನು ಕೇಳು, ಆ ದಶಗ್ರೀವನಿಗೆ ನಾನೇಮೃತ್ಯುವೆಂದು ತಿಳಿದುಕೋ, ಅದಕ್ಕೆ ಅನುಕೂಲವಾದ ಸಮಯ ಪದಗಲೂ ಸಂಗ್ರಾಮದಲ್ಲಿ ಪುತ್ರ ಸಹಿತನಾದ ಆರಾವಣನಂ ಸಹ್ಮರಿಸಿ ದೇವತೆಗಳಿಗೆಲ್ಲಾ ಸಂತೋಷವನ್ನುಂಟು ಮಾಡುವೆನು ॥೧೯॥ ಕೇಳೈ ಎಲೈ ಶಚೀಪತಿಯಾದ ಇಂದ್ರನೇ, ಈ ತತ್ವವಂ ನಿನಿಗೆಪೇಳಿಧೇನೆ, ಆದಕಾರಣ ನೀನಂಜದೇ ಮಹಾತ್ಮರಾದ ದೇವತೆಗಳಿಂದೊಡಗೂಡಿ ಯುದ್ಧಮಾಡೆಂದು ಶ್ರೀಮನ್ನಾರಾಯಣಮೂರ್ತಿಯು ನುಡಿಯುತ್ತಿದ್ದನು॥೨೦॥ ಈ ಮಧ್ಯಕಾಲದಲ್ಲಿ, ರಾತ್ರಿಕಳದು,ಸೂರ್ಯೋದಯವಾಗಲೂ, ಯುದ್ಧಗರ್ವದಿಂದ ಮದವೇರಿದ ಆ ರಾವಣಾಸುರನಸೈನ್ಯದ ಕೋಲಾಹಲಧ್ವನಿಯು, ಎಲ್ಲಾ ಕಡೆಯಲ್ಲಿಯೂಕೇಳಲ್ಪಟ್ಟಿತು ॥೨೧॥ ಮಹಾಪರಾಕ್ರಮಶಾಲಿಗಳಾದ ಆ ದೇವರಾಕ್ಷಸರಾದರೆ, ಒಬ್ಬರನ್ನೊಬ್ಬರು ನೋಡಿ ಯುದ್ಧಾರ್ಥವಾಗಿಯೇ ಓಡಿಬಂದವರಾದರು ॥೨೨॥ ಅಕ್ಷಯವಾಗಿಯೂ, ಮಹಾ ದುರ್ಜಯ ವಾಗಿಯೂ, ಇರುವ ಆ ಮಹಾಸೈನ್ಯಗಳಂ ಕಂಡಬಳಿಕ ದೇವಸೈನ್ಯಗಳಿಗೆ ಮಹಾಭೀತಿ ಯುಂಟಾದಂಥಾದ್ದಾಯಿತು ॥೨೩॥ ಆ ಬಳಿಕ ದೇವರಾಕ್ಷಸರಿಗೆ, ಆ ಸಮಯದಲ್ಲಿ, ಕಡುಭಯಂಕರವಾಗಿರುವ ರಣಸಂಕುಲವಾದ ಯುದ್ಧವು ಪ್ರಾಪ್ತವಾಯಿತು ॥೨೪॥ ಹೀಗಿರುವಲ್ಲಿ, ಮಾರೀಚ, ಪ್ರಹಸ್ತ, ಮಹಾಪಾರ್ಶ್ವ, ಮಹೋದರ, ಅಕಂಪನ, ಕುಂಭ, ನಿಕುಂಭ, ಶುಕ, ಸಾರಣ, ಸಂಹ್ರಾದಿ, ಅಗ್ನಿಕೇತು, ಧೂಮಕೇತು, ಮಹಾದಂಷ್ಟ್ರ, ಮಹಾಮುಖ,ಜಂಬುಮಾಲೀ, ಮಹಾಮಾಲೀ, ವಿರೂಪಾಕ್ಷ, ಸುಪ್ತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅಕಂಪನೋನಿಕುಂಭಶ್ಚ ಶುಕಸ್ಸಾರಣಏವಚ ॥೨೬॥ ಸಂಹ್ರಾದೀಧೂಮಕೇತು ಶ್ಚ ಮಹಾದಂಷ್ಟ್ರೋಮಹಾಮುಖಃ। ಜಂಬುಮಾಲೀಮಹಾಮಾಲೀವಿರೂಪಾಕ್ಷಶ್ಚ ರಾಕ್ಷಸಃ॥೨೭॥ ಸುಪ್ತಘ್ನೋಯಜ್ಞಕೋ ಪಶ್ಚ ದುರ್ಮುಖೋದೂಷಣಃಖರಃ। ತ್ರಿಶಿರಾಃಕರವೀರಾಕ್ಷಸ್ಸೂರ್ಯಶತ್ರುಶ್ಚ ರಾಕ್ಷಸಃ॥೨೮॥ಏತೈಸ್ಸರ್ವೈರ್ಮಹಾವೀರ್ಯೈ ರ್ವೃತೋರಾಕ್ಷಸಪುಂಗವಃ । ರಾವಣಸ್ಯಾರ್ಯಕಶ್ಶ್ರೀಮಾನ್ ಸುಮಾಲೀಪ್ರವಿವೇಶಹ ॥೨೯॥ ಸಹಿದೇವಗಣಾನ್ ಸರ್ವಾನ್ ನಾನಾಪ್ರಹರಣೈಶ್ಶಿತೈಃ। ವಿಧ್ವಂಸಯತಿಸಂಕ್ರುದ್ಧಸ್ಸಹತೈಃಕ್ಷಣದಾಚರೈಃ ॥೩೦॥ಸುಮಾಲೀಭಯಸಂತ್ರಸ್ತಾಸ್ಸುರಾಸ್ತೇ ಸರ್ವತೋದಿಶಃ । ಪ್ರದುದ್ರುವುರ್ವಧ್ಯಮಾನಾಃಸಿಂಹತ್ರಸ್ತಾಮೃಗಾಯಥಾ ।೩೧॥ ಏತಸ್ಮಿನ್ನಂತರೇಶೂರೋವಸೂನಾಮಷ್ಟಮೋವಸುಃ । ಸಾವಿತ್ರಇತಿವಿಖ್ಯಾತಃಪ್ರವಿವೇಶಮಹಾರಣಮ್ ॥೩೨॥ಸೈನ್ಯೈಃಪರಿವೃತೋಹೃಷ್ಟೋನಾನಾಪ್ರಹರಣೋದ್ಯತೈಃ । ತ್ರಾಸಯನ್ ಶತ್ರುಸೈನ್ಯಾನಿಸಿಂಹಃಕ್ಷುದ್ರಮೃಗಾನಿವ ॥೩೩॥ಅಥಾಪರೌಮಹಾವೀರ್ಯೌತ್ವಷ್ಟಾಪೂಷಾಚದಂಶಿತೌ। ಸಹಸಾಸಹಸೈನ್ಯೇನಪ್ರವಿಷ್ಟಾತದ್ರಣಾಜಿರಮ್ ॥೩೪॥ ತತೋಯುದ್ಧಂಸಮಭವತ್ಸುರಾಣಾಂರಾಕ್ಷಸೈಸ್ಸಹ । ಕ್ರುದ್ಧಾನಾಂ

---

ರನೆಂಬ ರಿಬ್ಬರೂನು, ಅಕಂಪನಃ-ಅಕಂಪನು, ನಿಕುಂಭಶ್ಚ-ನಿಕುಂಭನುನ್ನು, ಶುಕಃ-ಶುಕನುನ್ನು, ಸಾರಣ ಏವಚ-ಸಾರಣನುನ್ನು॥೨೬॥ಸಂಹ್ರಾದೀ-ಸಂಹ್ರಾದಿಯೆಂಬವನು, ಧೂಮಕೇತುಶ್ಚ-ಧೂಮಕೇತುವೂನು, ಮಹಾದಂಷ್ಟ್ರಃ-ಮಹಾದಂಷ್ಟ್ರನು,ಮಹಾಮುಖಃ-ಮಹಾಮುಖನು, ಜಂಬುಮಾಲೀ-ಜಂಬುಮಾಲಿಯು, ಮಹಾಮಾಲೀ-ಮಹಾಮಾಲಿಯು, ವಿರೂಪಾಕ್ಷಃ-ವಿರೂಪಾಕ್ಷನೆಂಬ, ರಾಕ್ಷಸಶ್ಚ-ರಾಕ್ಷಸನೂ ನು॥೨೭॥ ಸುಪ್ತಘ್ನಃ- ಸುಪ್ತಘ್ನನೂನು, ಯಜ್ಞಕೋಪಶ್ಚ-ಯಜ್ಞಕೋಪನೂನು, ದುರ್ಮುಖಃ-ದುರ್ಮುಖನುನ್ನು,ದೂಷಣಶ್ಚ-ದೂಷಣನುನ್ನು,ಖರಃ-ಖರನೂನು, ತ್ರಿಶಿರಃ-ತ್ರಿಶಿರಸ್ಸನು, ಕರವೀರಾಕ್ಷಃ-ಕರವೀರಾಕ್ಷನು, ರಾಕ್ಷಸಃ-ರಾಕ್ಷಸನಾದ, ಸೂರ್ಯಶತ್ರುಶ್ಚ ತ್ರಿ-ಸೂರ್ಯಶತ್ರುನೂಯೆಂಬ॥೨೮॥ಮಹಾವೀರ್ಯೈಃ-ಮಹಾಪರಾಕ್ರಮಶಾಲಿಗಳಾದ, ಸರ್ವೈಃ-ಸಮಸ್ತರಾದ, ಏತೈಃ-ಈ ರಾಕ್ಷಸರಿಂದ, ವೃತಃ-ಸುತ್ತುಕೊಳ್ಳಲ್ಪಟ್ಟ-ರಾಕ್ಷಸಪುಂಗವಃ-ರಾಕ್ಷಸಶ್ರೇಷ್ಠನಾದ, ರಾವಣಸ್ಯ- ರಾವಣಾಸುರನಿಗೆ, ಆರ್ಯಕಃ-ಮಾತಾಮಹನಾದ, ಶ್ರೀಮಾನ್-ಕಾಂತಿಯುಳ್ಳ, ಸುಮಾಲೀ-ಸುಮಾಲಿಯು, ಪ್ರವಿವೇಶಹ-ಯುದ್ಧರಂಗವಂನು ಕುರಿತು ಪ್ರವೇಶ ಮಾಡಿದನು ॥೨೯॥ ಸಃ-ಆ ಸುಮಾಲಿಯು,ಸಂಕ್ರುದ್ಧಃ-ಕೋಪಿಷ್ಠನಾಗಿ,ತೈಃಕ್ಷಣದಾಚರೈಸ್ಸಹ-ಆ ಮಾರೀಚಾದಿ ರಾಕ್ಷಸರಿಂದೊಡಗೂಡಿ, ಶಿತೈಃ-ಹದವುಳ್ಳ, ನಾನಾಪ್ರಹರಣೈಃ ಅನೇಕಬಗೆಗಳಾದ ಅಸ್ತ್ರಶಸ್ತ್ರಗಳಿಂದ, ಸರ್ವಾನ್ದೇವಗಣಾನ್-ಆ ದೇವತೆಗಳ ತಂಡಗಳನ್ನು, ವಿಧ್ವಂಸಯತಿ-ಧ್ವಂಸಮಾಡುತ್ತಾ ಬಂದನು॥೩೦॥ ಸುಮಾಲಿಭಯಸಂತ್ರಸ್ತಾಃ-ಸುಮಾಲಿ-ಸುಮಾಲಿಯ ದೆಸೆಯಿಂದ ಹುಟ್ಟಿದ, ಭಯ-ಭಯದಿಂದ, ಸಂತ್ರಸ್ತಾಃ-ಭಯಕೊಂಡಿರುವ, ತೇಸುರಾಃ-ಆ ದೇವತೆಗಳು, ವಧ್ಯಮಾನಾಃ-ಹೊಡೆಯಲ್ಪಟ್ಟವರಾಗಿ, ಸಿಂಹತ್ರಸ್ತಾಃ-ಸಿಂಹದದೆಸೆಯಿಂದ ಹೆದರಿಕೊಂಡಿರುವ, ಮೃಗಾಯಥಾ-ಮೃಗಗಳಂತೆ, ಸರ್ವತೋದಿಶಃ- ಸರ್ವದಿಕ್ಕುಗಳಲ್ಲಿಯು, ಪ್ರದುದ್ರುವುಃ-ಓಡಿಹೋದರು॥೩೧॥ಏತಸ್ಮಿನ್ನಂತರೇ-ಇಷ್ಟರವಳಗಾಗಿ, ಶೂರಃ-ಶೂರನಾದ, ಸಾವಿತ್ರಇತಿ-ಸಾವಿತ್ರನೆಂದು, ವಿಖ್ಯಾತಃ- ಪ್ರಸಿದ್ಧನಾದ, ವಸೂನಾಂ-ಅಷ್ಟವಸುಗಳಲ್ಲಿ, ಅಷ್ಟಮಃ-ಎಂಟನೇಯವನಾದ, ವಸುಃ-ವಸುವು, ಮಹಾರಣಂ-ಮಹಾಕಾಳಗವನ್ನು ಕುರಿತು, ನಾನಾಪ್ರಹರಣೋದ್ಯತೈಃ-ನಾನಾಯುಧಗಳಿಂದ ಸನ್ನದ್ಧರಾದ, ಸೈನ್ಯೈಃ-ಸೈನ್ಯಗಳಿಂದ,ಪರಿವೃತಃ-ಸುತ್ತಿಕೊಳಲ್ಪಟ್ಟವನಾಗಿ;ಹೃಷ್ಟಃ-ಯುದ್ಧಸಂತೋಷದಿಂದಯುಕ್ತನಾಗಿ, ಸಿಂಹಃ-ಸಿಂಹವು, ಕ್ಷುದ್ರಮೃಗಾನಿವ-ಸ್ವಲ್ಪವಾದ ಮೃಗಗಳನ್ನಂತೆ, ಶತ್ರುಸೈನ್ಯಾನಿ-ಶತ್ರುಗಳ ಸೈನ್ಯಗಳನ್ನು,ತ್ರಾಸಯನ್-ಭಯಪಡಿಸುತಿರುವನಾಗಿ, ಪ್ರವಿವೇಶ-ಹೊಕ್ಕನು ॥೩೩॥ ಅಥ-ಬಳಿಕ, ಮಹಾವೀರ್ಯೌ-ಮಹಾಪರಾಕ್ರಮವಂತರಾದ, ತ್ವಷ್ಟಾ-ತ್ವಷ್ಟನೆಂಬವನು, ಪೂಷಾಚ-ಪೂಷನೂ ಎಂಬ ಅಪರೌ-ಇಬ್ಬರಾದಿತ್ಯರು, ದಂಶಿತೌ-ಕವಚಗಳುಳ್ಳವರಾಗಿ, ಸಹಸಾ-ಜಾಗ್ರತೆಯಾಗಿ, ಸೈನ್ಯೇನಸಹ-ಸೈನ್ಯದಿಂದೊಡನೆ, ತದ್ರಣಾಜಿರಂ-ಆ ಯುದ್ಧರಂಗವನ್ನು ಕುರಿತು, ಪ್ರವಿಷ್ಟಾ-ಹೊಕ್ಕರು ॥೩೪॥ ತತಃ-ಬಳಿಕ, ಕ್ರುದ್ಧಾನಾಂ-ಕೋಪಗೊಂಡ, ಕೀರ್ತಿಂ-ಯಶಸ್ಸನ್ನು, ರಕ್ಷತಾಂ-ಸಂರಕ್ಷಣೆಮಾಡುತಿರುವ ಪಸಮರೇಷು-ಕಾಳಗಗಳಲ್ಲಿ, ಅನಿವರ್ತಿನಾಂ-ಹಿಂತಿರಗದಿರುವ, ಸುರಾಣಾಂ-ದೇವತೆಗಳಿಗೆ, ರಾಕ್ಷಸೈಸ್ಸಹ-ರಾಕ್ಷಸರೊಡನೆ, ಯುದ್ಧಂ - ಕಾಳಗವು, ಸಮಭ

---

ಘ್ನ, ಯಜ್ಞಕೋಪ, ದುರ್ಮುಖ, ದೂಷಣ, ಖರ,ತ್ರಿಶಿರಸ, ಕರವೀರಾಕ್ಷ, ಸೂರ್ಯಶತ್ರುವೇಮುಂತಾದ ರಾಕ್ಷಸರೆಲ್ಲ ರುಳಿಜ್ಞಾಪಿಸಲ್ಪಟ್ಟವರಾಗಿ, ಯುದ್ಧಾರ್ಥವಾಗಿ ಬಂದವರಾಗಲು, ರಾವಣಾಸುರನಿಗೆ ಮಾತಾಮಹನಾದ ಸುಮಾಲಿಯೆಂಬ ರಾಕ್ಷಸೋತ್ತಮನು, ಕಡುಕಾಂತಿಯುಳ್ಳವನಾಗಿ ಈ ರಾಕ್ಷಸರಿಂದೊಡಗೂಡಿ ಪ್ರವೇಶಿಸಿದವನಾದನು ॥೨೯॥ ಆ ಸುಮಾಲಿಯಾದರೆ, ಕಡುಕೋಪಮುಳ್ಳವನಾಗಿ ರಾಕ್ಷಸರಿಂದೊಡಗೂಡಿ ದೇವಗಣಂಗಳನ್ನೆಲ್ಲಾ, ಬಗೆಬಗೆಯಾದ ಆ ಯುಧಗಳಿಂದ, ಹೊಡೆಯುತಿರಲೂ, ಆತನಭಯದಿಂದ ಹೆದರಿದವರಾಗಿ, ದೇವತೆಗಳೆಲ್ಲರು, ಸಿಂಹಗಳಿಂದ ವಧಿಸಲ್ಪಡುತಿರುವ ಮೃಗಗಳಂತೆ ಓಡಿ ಹೊದರು॥೩೧॥ ಇಷ್ಟರೊಳಗಾಗಿ, ಅಷ್ಟವಸುಗಳಲ್ಲಿ ಎಂಟನೆಯವನಾದ ಸಾವಿತ್ರನೆಂದು ಪ್ರಖ್ಯಾತನಾದ ಮಹಾಶೂರನು, ಕಡುಸಂಹೃಷ್ಟನಾಗಿ ತನ್ನ ಸೈನ್ಯಗಳಿಂದೊಡಗೂಡಿ, ಶತ್ರು ಸೈನ್ಯಗಳನ್ನೆಲ್ಲಾ, ಸಿಂಹವು, ಕ್ಷುದ್ರಮೃಗಗಳನ್ನು, ತರುಬುವಂತೆ ತರುಬುತಿರುವನಾಗಿ, ಆ ರಣರಂಗದಲ್ಲಿ ನುಗ್ಗಿಬರಲೂ ತ್ವಷ್ಟಾ,ಪೂಷಾ, ಎಂಬರೀರ್ವರು ಕವಚಗಳಂತೊಟ್ಟುಕೊಂಡು ಸೈನ್ಯಸಮೇತರಾಗಿ ಆ ರಣರಂಗವಂ ಹೊಕ್ಕರು ॥೩೪॥ ಕಾಳಗದಲ್ಲಿ ಹಿಂಜರಗದೆ ಕೀ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಕ್ಷತಾಂಕೀರ್ತಿಂಸಮರೇಷ್ವನಿವರ್ತಿನಾಂ ॥೩೫॥ ತತಸ್ತೇರಾಕ್ಷಸಾಶ್ಶೂರಾದೇವಾಂಸ್ತಾನ್ಸಮರೇಸ್ಥಿತಾನ್ । ನಾನಾಪ್ರಹರಣೈರ್ಘೋರೈಃಜಘ್ನುಶ್ಶತಸಹಸ್ರಶಃ ॥೩೬॥ ಸುರಾಸ್ತುರಾಕ್ಷಸಾನ್ಘೋರಾನ್ಮಹಾವೀರ್ಯಾನ್ಸ್ವತೇಜಸಾ। ಸಮರೇವಿವಿಧೈರಸ್ತ್ರೈರನಯನ್ಯಮಸಾದನಮ್ ॥೩೭॥ ಏತಸ್ಮಿನ್ನಂತರೇಶೂರಸ್ಸುಮಾಲೀನಾಮರಾಕ್ಷಸಃ । ನಾನಾಪ್ರಹರಣೈಃ ಕ್ರುದ್ಧೋರಣಮೇವಾಭ್ಯವರ್ತತ ॥೩೮॥ ದೇವಾನಾಂತದ್ಬಲಂಸರ್ವಂನಾನಾಪ್ರಹರಣೈಶ್ಶಿತೈಃ । ವಿಧ್ವಂಸಯತಿಸಂಕ್ರುದ್ಧೋ ವಾಯುರ್ಜಲಧರಾನಿವ ॥೩೯॥ ತೇಮಹಾಬಾಣವರ್ಷೈಶ್ಚ ಶೂಲೈಃಪ್ರಾಸೈಶ್ಚ ದಾರುಣೈಃ । ಪೀಡ್ಯಮಾನಾಸ್ಸುರಾಸ್ಸರ್ವೇನಶ್ಯತಿಷ್ಠನ್ಸಮಾಹಿತಾಃ ॥೪೦॥ ತತೋವಿದ್ರಾವ್ಯಮಾಣೇಷುತ್ರಿದಶೇಷುಸುಮಾಲಿನಾ । ವಸೂನಾಮಷ್ಟಮೋದೇವಃಸಾವಿತ್ರೋವ್ಯವತಿಷ್ಠತ ॥೪೧॥ ಸಂವೃತಸ್ಸ್ವೈರನೀಕೈಸ್ತುಪ್ರಹರಂತಂನಿಶಾಚರಮ್ । ವಿಕ್ರಮೇಣಮಹಾತೇಜಾವಾರಯಾಮಾಸ ಸಂಯುಗೇ ॥೪೨॥ ಸುರರಾಕ್ಷಸಯೋರಾಸೀದ್ಯುದ್ಧಂಲೋಕಸುದಾರುಣಮ್। ಸುಮಾಲಿನೋವಸೋಶ್ಚೈವಸಮರೇಷ್ವನಿವರ್ತಿ

---

ವತ್-ಆಯಿತು ॥೩೫॥ ತತಃ-ಬಳಿಕ, ಶೂರಾಃ-ಶೂರರಾದ, ತೇರಾಕ್ಷಸಾಃ-ಆ ರಕ್ಕಸರು, ಸಮರೇ-ಕಾಳಗದಲ್ಲಿ, ಸ್ಥಿತಾನ್-ನಿಂತಿರುವ, ತಾನ್‌ದೇವಾನ್-ಆ ದೇವತೆಗಳನ್ನು, ಘೋರೈಃ-ಭಯಂಕರಗಳಾದ, ನಾನಾಪ್ರಹರಣೈಃ-ನಾನಾವಿಧಾಯುಧಗಳಿಂದ,ಶತಸಹಸ್ರಶಃ-ನೂರುಬಗೆಯಾಗಿಯೂ, ಸಹಸ್ರಾರುಬಗೆಯಾಗಿಯೂ, ಜಘ್ನುಃ-ಹೊಡೆದರು ॥೩೬॥ ಸುರಾಸ್ತು-ದೇವತೆಗಳಾದರೆ, ಸ್ವತೇಜಸಾ-ತಮ್ಮ ಪರಾಕ್ರಮದಿಂದ, ಸಮರೇ-ಯುದ್ಧದಲ್ಲಿ, ಮಹಾವೀರ್ಯಾನ್-ಬಲವಂತರಾದ, ಘೋರಾನ್-ಭಯಂಕರರಾದ, ರಾಕ್ಷಸಾನ್-ರಾಕ್ಷಸರನ್ನು, ವಿವಿಧೈಃ-ನಾನಾವಿಧಂಗಳಾದ, ಅಸ್ತ್ರೈಃ-ಅಸ್ತ್ರಗಳಿಂದ, ಯಮಸಾದನಂ-ಯಮನ ಪಟ್ಟಣವನ್ನು, ಅನಯನ್ - ಹೊಂದಿಸಿದರು ॥ ೩೭ ॥ ಎತಸ್ಮಿನ್ನಂತರೇ - ಇಷ್ಟರ ವಳಗಾಗಿ, ಶೂರಃ-ಶೂರನಾದ, ಸುಮಾಲೀನಾಮ - ಸುಮಾಲಿಯೆಂದು ಪ್ರಸಿದ್ಧನಾದ, ರಾಕ್ಷಸಃ-ರಾಕ್ಷಸನು, ಕ್ರುದ್ಧಃ - ಕೋಪಯುಳ್ಳವನಾಗಿ, ನಾನಾಪ್ರಹರಣೈಃ - ನಾನಾವಿಧಾಯುಧಗಳಿಂದೊಡಗೂಡಿ, ರಣಮೇವ - ಕಾಳಗವನ್ನು ಕುರಿತು, ಅಭ್ಯವರ್ತತ - ಎದುರಾಗಿ ಬಂದು ನಿಂತನು ॥ ೩೮ ॥ ದೇವಾನಾಂ - ದೇವತೆಗಳ, ಸರ್ವಂ-ಸಮಸ್ತವಾದ, ತದ್ಬಲಂ-ಆ ಸೈನ್ಯವನ್ನು, ಶಿತೈಃ - ಹದವುಳ್ಳ, ನಾನಾಪ್ರಹರಣೈಃ - ನಾನಾಯುಧಗಳಿಂದೊಡಗೂಡಿ, ಸಂಕ್ರುದ್ಧಃ - ಕೋಪಿಷ್ಠನಾಗಿ, ವಾಯುಃ-ಘಾಳಿಯು, ಜಲಧರಾನಿವ - ಮೇಘಗಳನ್ನಂತೆ, ವಿಧ್ವಂಸಯತಿ - ನಾಶಗೊಳಿಸಿದನು ॥ ೩೯ ॥ ಸರ್ವೇ-ಸಮಸ್ತರಾದ, ತೇಸುರಾಃ-ಆ ದೇವತೆಗಳು, ಮಹಾಬಾಣವರ್ಷೈಶ್ಚ-ಮಹತ್-ದೊಡ್ಡದಾದ, ಬಾಣವರ್ಷೈಶ್ಚ - ಬಾಣಗಳ ಸುರಿಯೋಣದರಿಂದಲೂ, ಶೂಲೈಶ್ಚ - ತ್ರಿಶೂಲಗಳಿಂದಲೂ, ದಾರುಣೈಃ- ಭಯಂಕರಗಳಾದ, ಪ್ರಾಸೈಶ್ಚ-ಖಡ್ಗಗಳಿಂದಲೂ, ಪೀಡ್ಯಮಾನಾಃ-ಬಾಧಿಸಲ್ಪಟ್ಟವರಾಗಿ, ಸಮಾಹಿತಾಃ-ಸಮಾಧಾನಚಿತ್ತರಾಗಿ,ನಶ್ಯತಿಷ್ಠನ್-ನಿಲ್ಲಲಿಲ್ಲಾ ॥೪೦॥ ತತಃ-ಬಳಿಕ, ತ್ರಿದಶೇಷು-ದೇವತೆಗಳು, ಸುಮಾಲಿನಾ - ಸುಮಾಲಿಯಿಂದ, ವಿದ್ರಾವ್ಯಮಾಣೇಷುಸತ್ಸು- ಓಡಿಸಲ್ಪಟ್ಟವರಾಗುತಿರಲೀಕಾಗಿ, ವಸೂನಾಂ- ಅಷ್ಟವಸುಗಳಲ್ಲಿ, ಅಷ್ಟಮಃ-ಎಂಟನೇಯವನಾದ, ಸಾವಿತ್ರೋದೇವಃ-ಸಾವಿತ್ರನೆಂಬ ಆದಿತ್ಯನು, ವ್ಯತಿಷ್ಠತ, ನಿಂತನು ॥೪೧॥ ಮಹಾತೇಜಾಃ-ಮಹಾ ಪರಾಕ್ರಮಿಯಾದ ಸಾವಿತ್ರನು, ಸ್ವೈಃ-ಸ್ವಕೀಯ್ಯಗಳಾದ, ಅನೀಕೈಸ್ತು-ಸೈನ್ಯಗಳಿಂದಲಾದರೆ, ಸಂವೃತಃ-ಪರಿವೃತನಾಗಿ, ಪ್ರಹರಂತಂ-ಹೊಡೆಯುತ್ತಿರುವ, ತಂನಿಶಾಚರಂ-ಆ ರಾಕ್ಷಸನನ್ನು, ಸಂಯುಗೇ, ಕಾಳಗದಲ್ಲಿ, ವಿಕ್ರಮೇಣ-ಪರಾಕ್ರಮದಿಂದ, ವಾರಯಾಮಾಸ-ಅಡ್ಡಹಾಕಿದನು ॥೪೨॥ ಸಮರೇಷು-ಯುದ್ಧಗಳಲ್ಲಿ, ಅನಿವರ್ತಿನೋಃ-ಹಿಂತಿರಗದಿರುವ, ಸುಮಾಲಿನಃ-ಸುಮಾಲಿಯೆಂಬ, ವಸೋಶ್ಚೈವ-ವಸೂಯೆಂಬ, ಸುರರಾಕ್ಷಸಯೋಃ-ದೇವ ರಾಕ್ಷಸರಿಬ್ಬರಿಗೂ, ಲೋಕಸುದಾರುಣಂ-ಭಯಂಕರವಾದ, ಯುದ್ಧಂ-ಕಾಳಗವು, ಆಸೀತ್-ಆಯಿತು, ॥೪೩॥ ತತಃ-ಬಳಿಕ, ತಸ್ಯ-ಆ ಸುಮಾಲಿಯ, ಮಹಾನ್-ದೊಡ್ಡದಾ

---

ರ್ತಿಯನ್ನು ಕಾಪಾಡಕೊಳ್ಳುತಿರುವ, ಮಹಾಕೋಪಿಷ್ಠರಾದ, ಆ ದೇವತೆಗಳಿಗೆ ರಾಕ್ಷಸರೊಡನೆ ಮಹತ್ತರವಾದ ಯುದ್ಧವು ಪ್ರಾಪ್ತವಾಗಲೂ, ಶೂರರಾದ ಆ ರಾಕ್ಷಸರು, ಸಂಗ್ರಾಮದಲ್ಲಿರ್ಪ ಅನೇಕ ದೇವತೆಗಳನ್ನು,ಭಯಂಕರವಾದ ಆಯುಧಗಳಿಂದ, ಹೊಡೆದರೂ ॥೩೬॥ ಆ ದೇವತೆಗಳಾದರೇನೊ, ಮಹಾಪರಾಕ್ರಮವಂತರಾದ, ಮತ್ತೂ, ಭಯಂಕರರಾದ ರಾಕ್ಷಸರನ್ನು ತಮ್ಮ ಶಕ್ತಿಯಿಂದ,ಆ ಸಂಗರದಲ್ಲಿ,ವಿಧವಿಧವಾದಅಸ್ತ್ರಗಳಿಂದ ಯಮಮಂದಿರವಂಹೊಂದಿಸಿದರು॥ಹೀಗಿರುವಲ್ಲಿ, ಶೂರನಾದ ಸುಮಾಲಿಎಂಬ ರಾಕ್ಷಸನು, ಕಡುಕುಪಿತನಾಗಿ, ಆ ರಣವನ್ನೈದಿ, ಅನೇಕ ಆಯುಧಗಳಿಂದ, ಆ ದೇವತಾಬಲವನ್ನೆಲ್ಲಾ, ವಾಯುವು ಮೇಘಗಳಂ ಧ್ವಂಸಿಸುವಂತೆ ಧ್ವಂಸಿಸುತಿದ್ದನು॥೩೯॥ಮಹಾಭಯಂಕರವಾಗಿರುವ ಬಾಣ ವರ್ಷಗಳಿಂದಲೂ,ಶೂಲಾಯುಧಗಳಿಂದಲೂ,ಪ್ರಾಸಾಯುಧಗಳಿಂದಲೂ ಕೂಡ,ಬಾಧಿಸಲ್ಪಡುತಿರುವ ಆ ಸುರರೆಲ್ಲರುನಿಲ್ಲದೆ ಓಡಿಹೋಗುತಿದ್ದರು॥೪೦॥ಆ ಬಳಿಕ, ಸುಮಾಲಿಯಿಂದ, ದೇವತೆಗಳೆಲ್ಲರು, ಓಡಿಸಲ್ಪಡುತಿದ್ದರೂ, ಆ ಸಾವಿತ್ರನೆಂಬ ಎಂಟನೆವಸುವು, ನಿಂತವನಾಗಿ, ತನ್ನ ಸೈನ್ಯಗಳಿಂದೊಡಗೂಡಿ ಹೊಡೆಯುತಿರುವ ಆ ಸುಮಾಲಿಯನ್ನು, ತನ್ನ ವಿಕ್ರಮದಿಂದ ಅಡ್ಡಹಾಕಿಕೊಂಡನು ॥೪೨॥ ಯುದ್ಧಗಳಲ್ಲಿ ಹಿಂಜರಗದಿರುವ, ಆ ಸುಮಾಲಿಗೂ, ಸಾವಿತ್ರನೆಂಬ ವಸುವಿಗೂ ಕೂಡ, ಲೋಕಭಯಂಕರವಾದ ಮಹಾಯುದ್ಧವು, ಸಂಭವಿಶಿತು ॥೪೩॥ ಅನಂತರದಲ್ಲಿ ಸರ್ಪಗಳಿಂದೊಡಗೂಡಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನೋಃ ॥೪೩॥ ತತಸ್ತಸ್ಯಮಹಾಬಾಣೈರ್ವಸುನಾಸುಮಹಾತ್ಮನಾ । ಮಹಾರ್ಣಸಪನ್ನಗರಥಃಕ್ಷಣೇನವಿನಿಪಾತಿತಃ ॥೪೪॥ ಹತ್ವಾತುಸಂಯುಗೇತಸ್ಯರಥಂಬಾಣಶತೈಶ್ಶಿತೈಃ । ಗದಾಂತಸ್ಯವಧಾರ್ಥಾಯವಸುರ್ಜಗ್ರಾಹಪಾಣಿನಾ ॥೪೫॥ ತಾಂಪ್ರದೀಪ್ತಾಂಪ್ರಗೃಹ್ಯಾಶುಕಾಲದಂಡನಿಭಾಂಶುಭಾಮ್ । ತಸ್ಯಮೂರ್ಧನಿಸಾವಿತ್ರಸ್ಸುಮಾಲೇರ್ವ್ಯನಿಪಾತಯತ್॥೪೬॥ ತಸ್ಯಮೂರ್ಧನಿಸೋಲ್ಕಾಭಾಪತಂತೀಚಗದಾಬಭೌ । ಸಹಸ್ರಾಕ್ಷಸಮುತ್ಸೃಷ್ಟಾಗಿರಾವಿವಮಹಾಶನಿಃ ॥೪೭॥ ತಸ್ಯನೈವಾಸ್ಥಿಕಾಯೋವಾನಮಾಂಸಂದೃಶ್ಯತೇತದಾ। ಗದಯಾಭಸ್ಮಸಾದ್ಭೂತೋರಣೇತಸ್ಮಿನ್ನಿಶಾಚರಃ । ನಿಪಪಾತತತೋಭೂಮೌಮಹಾತರುರಿವಾಶನೇಃ ॥೪೮॥ ತಂದೃಷ್ಟ್ವಾನಿಹತಂಸಂಖ್ಯೇರಾಕ್ಷಸಾಸ್ತೇಸಮಂತತಃ । ದುದ್ರುವುಸ್ಸಹಿತಾಸ್ಸರ್ವೇ ಕ್ರೋಶಮಾನಾಮಹಾಸ್ವನಮ್ ॥೪೯॥ —... ಇತ್ಯುತ್ತರ ರಾಮಾಯಣೆ ಸಪ್ತವಿಂಶ ಸ್ಸರ್ಗಃ...—

ಸುಮಾಲಿನಂಹತಂದೃಷ್ಟ್ವಾವಸುನಾಭಸ್ಮಸಾತ್ಕೃತಮ್ । ವಿದ್ರುತಂಚಸ್ವಕಂಸೈನ್ಯಂಲಕ್ಷಯಿತ್ವಾಶರಾರ್ದಿತಮ್॥೧॥ ತತಸ್ಸಬಲವಾನ್ಕ್ರುದ್ಧೋರಾವಣಸ್ಯಸುತೋಯುಧಿ। ನಿವರ್ತ್ಯರಾಕ್ಷಸಾನ್ಸರ್ವಾನ್ಮೇಘನಾದೋವ್ಯತಿಷ್ಠತ॥೨॥ಸರಥೇನಾ

---

ದ, ಸಪನ್ನಗರಥಃ–ಸಪನ್ನಗ–ಸರ್ಪಗಳಿಂ ದೊಡಗೂಡಿದ, ರಥಃ–ರಥವು, ಸುಮಹಾತ್ಮನಾ–ಮಹಾಧೈರ್ಯಶಾಲಿಯಾದ ವಸುವಿನಿಂದ, ಮಹಾಬಾಣೈಃ–ದೊಡ್ಡಬಾಣಗಳಿಂದ, ಕ್ಷಣೇನ–ಕ್ಷಣಕಾಲದಲ್ಲಿ, ವಿನಿಪಾತಿತಃ–ಬೀಳಿಸಲ್ಪಟ್ಟಿತು ॥ ೪೪ ॥ ವಸುಃ–ಸಾವಿತ್ರನೆಂಬ ವಸುವು, ತಸ್ಯ–ಆ ಸುಮಾಲಿಯ, ರಥಂ–ರಥವನ್ನು, ಶಿತೈಃ–ಹದವುಳ್ಳ, ಬಾಣಶತೈಃ–ಅನೇಕ ಬಾಣಗಳಿಂದ, ಸಂಯುಗೇ–ಕಾಳಗದಲ್ಲಿ, ಹತ್ವಾ–ಕೊಂದು, ತಸ್ಯ–ಆಸುಮಾಲಿಯ, ವಧಾರ್ಥಾಯ–ವಧರೂಪ ಪ್ರಯೋಜನಕ್ಕೋಸ್ಕರ, ಪಾಣಿನಾ–ಹಸ್ತದಿಂದ, ಗದಾಂ–ಗದಾಯುಧವನ್ನು, ಜಗ್ರಾಹ–ತೆಗದುಕೊಂಡನು॥೪೫॥ ಸಾವಿತ್ರಃ–ಸಾವಿತ್ರನೆಂಬ ವಸುವು, ಕಾಲದಂಡನಿಭಾಂ–ಯಮನದಂಡಕ್ಕೆ ಸಮಾನವಾದ,ಶುಭಾಂ–ಶುಭಕರವಾದ,ಪ್ರದೀಪ್ತಾಂ–ಹೊಳೆಯುತ್ತಿರುವ,ತಾಂ–ಆ ಗದೆಯನ್ನು,ತಸ್ಯಸುಮಾಲಿನಃ–ಆಸುಮಾಲಿಯ, ಮೂರ್ಧನಿ–ಶಿರಸ್ಸಿನಲ್ಲಿ, ವ್ಯಪಾತಯತ್–ಬೀಳಿಸಿದನು, ॥೪೬॥ ತಸ್ಯ–ಆ ಸುಮಾಲಿಯ, ಮೂರ್ಧನಿ–ಶಿರಸ್ಸಿನಲ್ಲಿ, ಪತಂತೀ–ಬೀಳುತಿರುವ, ಉಲ್ಕಾಭಾ–ಕೊಳ್ಳಿಯಂತೆ ಹೊಳೆಯುತ್ತಿರುವ,ಸಾಗದಾ–ಆ ಗದಾಯುಧವು, ಗಿರೌ–ಬೆಟ್ಟದಲ್ಲಿ, ಸಹಸ್ರಾಕ್ಷಸಮುತ್ಸೃಷ್ಟಾ– ಸಹಸ್ರಾಕ್ಷ–ದೇವೇಂದ್ರನಿಂದ, ಸಮುತ್ಸೃಷ್ಟಾ–ಬಿಡಲ್ಪಟ್ಟ, ಮಹಾಶನಿರಿವ–ದೊಡ್ಡ ಸಿಡಲಿನೋಪಾದಿಯಲ್ಲಿ, ಬಭೌ–ಹೊಳೆಯುತಿತ್ತು ॥೪೭॥ ತದಾ–ಆ ಕಾಲದಲ್ಲಿ, ತಸ್ಯ–ಆ ಸುಮಾಲಿಯ, ಅಸ್ಥಿ–ಯಲುವು, ಕಾಯೋವಾ–ಶರೀರವೇ ಆಗಲಿ, ನೈವ–ಇರಲೇಇಲ್ಲಾ, ಮಾಂಸಂ–ಮಾಂಸವು, ನದೃಶ್ಯತೇ–ಕಾಣಬರಲಿಲ್ಲಾ, ನಿಶಾಚರಃ–ಆಸುಮಾಲಿಯು, ತಸ್ಮಿನ್ರಣೇ– ಆಕಾಳಗದಲ್ಲಿ, ಗದಯಾ–ಗದಾಯುಧದಿಂದ, ಭಸ್ಮಸಾದ್ಭೂತಃ–ಭಸ್ಮೀಭೂತನಾಗಿ, ತತಃ–ಬಳಿಕ, ಅಶನೇಃ–ಸಿಡಲಿನ ದೆಸೆಯಿಂದ,ಮಹಾತರುರಿವ–ದೊಡ್ಡ ಗಿಡದಂತೆ, ಭೂಮೌ–ನೆಲದಲ್ಲಿ, ನಿಪಪಾತ–ಬಿದ್ದನು॥೪೮॥ಸಂಖ್ಯೇ–ಯುದ್ಧದಲ್ಲಿ,ನಿಹತಂ–ಬೀಳಲ್ಪಟ್ಟ, ತಂ–ಆ ಸುಮಾಲಿಯನ್ನು, ದೃಷ್ಟ್ವಾ–ಕಂಡು, ಸರ್ವೇ– ಸಮಸ್ತರಾದ, ತೇರಾಕ್ಷಸಾಃ–ಆ ರಾಕ್ಷಸರು, ಸಮಂತತಃ–ಎಲ್ಲಾ ಕಡೆಯಲ್ಲಿ, ಸಹಿತಾಃ–ಗುಂಪುಸೇರಿದವರಾಗಿ, ಮಹಾಸ್ವನಂ–ಮಹಾಶಬ್ದವುಳ್ಳದ್ದಂತೆ, ಕ್ರೋಶಮಾನಾಃ–ಕೋಪಿಸುತಿರುವರಾಗಿ, ದುದ್ರುವುಃ–ಓಡಿ ಹೋದರು . . . ॥೪೯॥

ಇತಿ ಶ್ರೀಮದುತ್ತರ ರಾಮಾಯಣೆ ಸಪ್ತವಿಂಶ ಸ್ಸರ್ಗಃ.

ತತಃ–ಬಳಿಕ, ಬಲವಾನ್–ಬಲಿಷ್ಟನಾದ, ರಾವಣಸ್ಯ–ರಾವಣಾಸುರನ, ಸುತಃ–ಕುವರನಾದ, ಸಃಮೇಘನಾದಃ–ಆ ಮೇಘನಾದನು, ಸರ್ವಾನ್ ರಾಕ್ಷಸಾನ್–ಸಮಸ್ತ ರಕ್ಕಸರನ್ನು, ನಿವರ್ತ್ಯ–ಹಿಂದಕ್ಕೆ ತಿರುಗಿಸಿ, ವಸುನಾ–ವಸುವಿನಿಂದ, ಭಸ್ಮಸಾತ್ಕೃತಂ–ಭಸ್ಮವಾಗಿ ಮಾಡಲ್ಪಟ್ಟ, ಹತಂ–ಮೃತನಾದ, ಸುಮಾಲಿನಂ–ಸುಮಾಲಿ ಯಂಬವನನ್ನು, ದೃಷ್ಟ್ವಾ–ಕಂಡು, ವಿದ್ರುತಂ–ಓಡಿಹೋಗುತಿರುವ, ಶರಾರ್ದಿತಂ–ಬಾಣಗಳಿಂದ ಪೀಡಿಸಲ್ಪಟ್ಟ, ಸ್ವಕಂ– ಸ್ವಕೀಯಮಾದ, ಸೈನ್ಯಂಚ–ದಂಡಿನನ್ನು, ಲಕ್ಷಯಿತ್ವಾ–ಕಂಡು, ಯುಧಿ–ಯುದ್ಧದಲ್ಲಿ, ಕೃದ್ಧಃ–ಕೋಪಿಷ್ಟನಾಗಿ, ವ್ಯತಿಷ್ಠತ–ನಿಂತನು ॥೧॥೨॥ ಮಹಾರಥಃ–ಮ

---

ಆ ಸುಮಾಲಿಯ ರಥವು, ಸಾವಿತ್ರನಿಂದ ಭಂಜಿತವಾಗಿ ಕ್ಷಣಮಾತ್ರದಲ್ಲಿಯೇ ಬಿದ್ದು ಹೋಗಲೂ, ಅವನ ಸಂಹಾರಾರ್ಥವಾಗಿ ಕಾಲದಂಡಸದೃಶವಾದ, ಶುಭಕರವಾದಗದಾಯುಧವಂ ತೆಗದುಕೊಂಡು, ಆ ಸುಮಾಲಿಯ ಮಂಡೆಯಲ್ಲಿ ಹೊಡೆಯಲೂ, ಕೊಳ್ಳಿಯಂತೆ ಬೀಳುತಿರುವ, ಆ ಗದಾಯುಧವು, ಪರ್ವತದಲ್ಲಿ, ಇಂದ್ರನಿಂದ ಬಿಡಲ್ಪಟ್ಟ ವಜ್ರಾಯುಧದಂತೆ ಹೊಳೆಯುತಿತ್ತು ॥೪೭॥ ರಣರಂಗದಲ್ಲಿ ಆ ಸುಮಾಲಿಯ ಶರೀರವಾಗಲೀ, ಮಾಂಸವಾಗಲೀ, ಯಾವದೊಂದೂ ಕಾಣದೆ, ಗದಾಯುಧದಿಂದ ಭಸ್ಮೀಭೂತನಾಗಿ, ಸಿಡಿಲಿನಿಂದ ಹೊಡೆಯಲ್ಪಟ್ಟ ಗಿಡದಂತೆ ಸುಟ್ಟು ಬಿದ್ದುಹೋದನು॥೪೮॥ ಕಾಳಗದಲ್ಲಿ ಬಿದ್ದುಹೊದ ಆ ಸುಮಾಲಿಯಂ ಕಂಡು, ರಾಕ್ಷಸರೆಲ್ಲರು, ಘಟ್ಟಿಯಾಗಿ ಕೂಗುತಿರುವರಾಗಿ, ಎಲ್ಲಾ ಕಡೆಯಲ್ಲಿಯೂ ಗುಂಪು ಗುಂಪುಗಳಾಗಿ ಓಡಿ ಬಂದರು॥—...*ಉತ್ತರ ರಾಮಾಯಣದಲ್ಲಿ ೨೭ನೇ ಸರ್ಗಂಮುಗಿದುದು*...—

ಸುಮನಂತರಕಾಲದಲ್ಲಿ ಮಹಾಬಲಿಷ್ಟನಾದ ಆ ರಾವಣಾಸುರನಪುತ್ರನಾದ ಮೇಘನಾದನೆಂಬವನು,ರಾಕ್ಷಸರನ್ನೆಲ್ಲಾ ಹಿಂದಕ್ಕೆತಿರಿಗಿಸಿಕೊಂಡು ಸಂಗರದಲ್ಲಿ ಬಂದು ವಸುವಿನಿಂದ ಭಸ್ಮವಾಗಿ ಮಾಡಲ್ಪಟ್ಟ ಆ ಸುಮಾಲಿಯಂಕಂಡು, ಕಡುಕುಪಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗ್ನಿವರ್ಣನಕಾಮಗೆನಮಹಾರಥಃ । ಅಭಿದುದ್ರಾವತಾಂಸೇನಾಂವನಾನ್ಯಗ್ನಿರಿವಜ್ವಲರ್ ॥೩॥ ತತಃಪ್ರವಿಶತಸ್ತಸ್ಯವಿವಿಧಾಯುಧಧಾರಿಣಃ । ವಿದುದ್ರುವುರ್ದಿಶಸ್ಸರ್ವೇದೇವಾಸ್ತಸ್ಯಚದರ್ಶನಾತ್॥೪॥ನತತ್ರಾವಸ್ಥಿತಃಕಶ್ಚಿದ್ರಣೇತಸ್ಯಯುಯುತ್ಸತಃ। ಸರ್ವಾನಾಯುಧವಿಧ್ವಸ್ತಾರ್ನ್ದೃಷ್ಟ್ವಾಶಕ್ರೋಭ್ಯಭಾಷತ ॥೫॥ ನಭೇತ್ತವ್ಯಂನಗಂತವ್ಯಂನಿವರ್ತಧ್ವಂರಣಂಪ್ರತಿ । ಏಷ ಗಚ್ಛತಿಮೇಪುತ್ರಃಯುದ್ಧಾರ್ಥಮಪರಾಜಿತಃ ॥೬॥ ತತಃಶಕ್ರಸುತೋದೇವೋಜಯಂತಇತಿವಿಶ್ರುತಃ । ರಥೇನಾದ್ಭುತವರ್ಣೇನಸಂಗ್ರಾಮಂಸ್ಯಭ್ಯವರ್ತತ॥೭॥ ತತಸ್ತೇತ್ರಿದಶಾಸ್ಸರ್ವೇ ಪರಿವಾರ್ಯಶಚೀಸುತಮ್ । ರಾವಣಸ್ಯಸುತಂಯುದ್ಧೇ ಸಮಾಸಾದ್ಯವ್ಯವಸ್ಥಿತಾಃ ॥೮॥ ತೇಷಾಂಯುದ್ಧಂಮಹದಭೂತ್ಸದೃಶಂದೇವರಕ್ಷಸಾಮ್ । ಕೃತೇಮಹೇಂದ್ರಪುತ್ರಸ್ಯರಾಕ್ಷಸೇಂದ್ರಸುತಸ್ಯಚ॥೯॥ ತತೋಮಾತಲಿಪುತ್ರೇತುಗೋಮುಖೇರಾಕ್ಷಸಾತ್ಮಜಃ । ಸಾರಥೌಪಾತಯಾಮಾಸಶರಾರ್ನ್ಕಾಂಚನಭೂಷಣಾರ್ನ್॥ ಶಚೀಸುತಸ್ತ್ವಪಿತಥಾಜಯಂತಸ್ತಸ್ಯಸಾರಥಿಮ್ । ತಂಚೈವರಾವಣಿಂಕೃದ್ಧಃಪ್ರತ್ಯವಿಧ್ಯದ್ರಣಾಜಿರೆ॥೧೧॥ ತತಃಕೃದ್ಧೋ

---

ಹಾ ರಥೀಕನಾದ, ಸಃ-ಆ ಮೇಘನಾದನು, ಕಾಮಗೇನ, ಕಾಮಗಾಮಿಯಾದ, ಅಗ್ನಿವರ್ಣೇನ-ಅಗ್ನಿಯೋಪಾದಿಯಲ್ಲಿ ಬಣ್ಣವುಳ್ಳ, ರಥೇನ-ರಥದಿಂದ, ತಾಂ ಸೇನಾಂ-ಆ ದೇವಸೈನ್ಯವನ್ನು ಕುರಿತು, ವನಾನಿ-ವನಗಳನ್ನು, ಅಗ್ನಿರಿವ-ಅಗ್ನಿಯಂತೆ, ಜ್ವಲರ್-ಪ್ರಜ್ವಲಿಸುತಿರುವನಾಗಿ, ಅಭಿದುದ್ರಾವ- ಓಡಿಬಂದನು ॥೩॥ತತಃ-ಬಳಿಕ-ಪ್ರವಿಶತಃ-ಹೊಕ್ಕುತ್ತಿರುವ, ವಿವಿಧಾಯುಧಧಾರಿಣಃ-ನಾನಾಬಗೆಯಾದ ಆಯುಧಗಳನ್ನು ಧರಿಸಿರುವ, ತಸ್ಯ-ಆ ಪ್ರಸಿದ್ಧನಾದ, ತಸ್ಯ-ಆ ಮೇಘನಾದನ, ದರ್ಶನಾಚ್ಚ-ನೋಡುವಿಕೆಯಿಂದಲೆ, ಸರ್ವೆದೇವಾಃ-ಸಮಸ್ತ ದೇವತೆಗಳು, ದಿಶಃ-ದಿಕ್ಕುಗಳನ್ನು ಕುರಿತು, ದುದ್ರುವುಃ-ಓಡಿಹೊಂದರು ॥೪॥ರಣೆ-ಯುದ್ಧದಲ್ಲಿ,ಯುಯುತ್ಸತಃ-ಕಾಳಗಮಾಡಲಿಚ್ಛೈಸಿದ, ತಸ್ಯ-ಆ ಮೇಘನಾದನಿ ಗೆದುರಾಗಿ,ತತ್ರ-ಆ ರಣರಂಗದಲ್ಲಿ, ಕಶ್ಚಿತ್-ಒಬ್ಬಾನೊಬ್ಬನೂನು, ನಾವಸ್ಥಿತಃ-ನಿಲ್ಲಲಿಲ್ಲಾ, ಆಯುಧವಿಧ್ವಸ್ತಾರ್ನ್-ನಾಶಗೊಳಿಸಲ್ಪಟ್ಟ ಆಯುಧಗಳುಳ್ಳ, ಸರ್ವಾರ್ನ್-ಸಮಸ್ತದೇವತೆಗಳನ್ನು, ದೃಷ್ಟ್ವಾ-ಕಂಡು॥ ರಣಂಪ್ರತಿ-ಯುದ್ಧವನ್ನು ಕುರಿತು, ನಿವರ್ತಧ್ವಂ-ಹಿಂತಿರಗಿ ಬಂನಿರಿ, ನಭೇತ್ತವ್ಯಂ-ಭಯಬೀಳತಕ್ಕದಲ್ಲಾ, ನಗಂತವ್ಯಂ-ಓಡಿಹೋಗತಕ್ಕದಲ್ಲಾ, ಅಪರಾಜಿತಃ-ಪರಾಜಿತನಾಗದಿರುವ, ಮೇ-ನನ್ನ, ಏಷಪುತ್ರಃ-ಈ ಮಗನು,ಯುದ್ಧಾರ್ಥಂ-ಕಾಳಗ ನಿಮಿತ್ಯವಾಗಿ,ಗಚ್ಛತಿ-ಹೊಗುತ್ತಾನೆ,ಇತಿ-ಇಂತೆಂದು,ಶಕ್ರಃ-ದೇವೇಂದ್ರನು, ಅಭ್ಯಭಾಷತ-ಹೇಳಿದನು॥೬॥ ತತಃ-ಬಳಿಕ, ಜಯಂತಇತಿ-ಜಯಂತನೂಯಂದು, ವಿಶ್ರುತಃ-ಪ್ರಸಿದ್ಧನಾದ, ದೇವಃ-ದೇವತನಾದ, ಶಕ್ರಸುತಃ-ದೇವೇಂದ್ರಪುತ್ರನು, ಅದ್ಭುತವರ್ಣೇನ-ಅದ್ಭುತ-ಆಶ್ಚರ್ಯಕರಮಾದ, ವರ್ಣೇನ-ಬಣ್ಣವುಳ್ಳ, ರಥೇನ-ರಥದಿಂದ, ಸಂಗ್ರಾಮಂ-ಕಾಳಗವನ್ನು ಕುರಿತು, ಅಭ್ಯವರ್ತತಃ-ಅಭಿಮುಖವಾಗಿ ನಿಂತನಪ್ಟೆ ॥೭॥ ತತಃ-ಬಳಿಕ, ಸರ್ವೆ-ಸಮಸ್ತರಾದ, ತೇತ್ರಿದಶಾಃ-ಆ ದೇವತೆಗಳು, ಶಚೀಸುತಂ-ಶಚೀಮಗನಾದ ಜಯಂತನನ್ನು, ಪರಿವಾರ್ಯ-ಸುತ್ತಿಕೊಂಡು, ಯುದ್ಧೇ-ಕಾಳಗದಲ್ಲಿ, ರಾವಣಸ್ಯ-ರಾವಣಾಸುರನ, ಸುತಂ-ಕೊಮಾರನಾದ ಮೇಘನಾದನನ್ನು, ಸಮಾಸಾದ್ಯ-ಹೊಂದಿ, ವ್ಯವಸ್ಥಿತಾಃ-ನಿಂತರು ॥೮॥ ತೇಷಾಂದೇವರಕ್ಷಸಾಂ-ಆ ದೇವರಾಕ್ಷಸ ರಿಬ್ಬರಿಗೂ, ಮಹೇಂದ್ರಪುತ್ರಸ್ಯ-ಇಂದ್ರಪುತ್ರನಾದ ಜಯಂತನ, ಕೃತೇ-ನಿಮಿತ್ತವಾಗಿಯೂ, ರಾಕ್ಷಸೇಂದ್ರಸುತಸ್ಯಚ-ರಾವಣನ ಪುತ್ರನಾದ ಮೇಘನಾದನ ನಿಮಿತ್ತವಾಗಿಯೂ, ಸದೃಶಂ-ಸಮಾನವಾದ, ಮಹದ್ಯುದ್ಧಂ-ಮಹಾ ಕಾಳಗವು, ಅಭೂತ್-ಆಯಿತು ॥ ೯ ॥ ತತಃ-ಬಳಿಕ, ರಾಕ್ಷಸಾತ್ಮಜಃ-ಮೇಘನಾದನು, ಮಾತಲಿಪುತ್ರೇ-ಮಾತಲಿಗೆ ಕುಮಾರನಾದ, ಸಾರಥೌ-ಸಾರಥಿಯಾದ, ಗೋಮುಖೇ-ಗೋಮುಖನಲ್ಲಿ, ಕಾಂಚನಭೂಷಣಾರ್ನ್-ಬಂಗಾರದ ರೇಖೆಗಳುಳ್ಳ, ಶರಾರ್ನ್-ಬಾಣಗಳನ್ನು, ಪಾತಯಾಮಾಸ-ಬೀಳಿಸಿದನು ॥೧೦॥ ತಥಾ-ಹಾಗೆಯೆ, ಶಚೀಸುತಃ-ಶಚೀಪುತ್ರನಾದ, ಜಯಂತಸ್ತು-ಜಯಂತನಾದರೆ, ತಸ್ಯ-ಆ ಮೇಘನಾದನ, ಸಾರಥಿಂ - ಸಾರಥಿಯನ್ನು, ರಣಾಜಿರೆ-ಯುದ್ಧರಂಗದಲ್ಲಿ, ತಂರಾವಣಿಂಚಾಪಿ-ಆ ರಾವಣ ಪುತ್ರನನ್ನೂ ಕೂಡೆ, ಕೃದ್ಧಃ-ಕೋಪಿಷ್ಠನಾಗಿ, ಪ್ರತ್ಯವಿಧ್ಯತ್- ಹೊಡೆದನು ॥೧೧॥ ತ

---

ತನಾಗಿ ಅಗ್ನಿ ಸದೃಶವಾದ ಮತ್ತು ಕಾಮಗವಾದ ಮಹಾರಥವನ್ನೇರಿ, ಆ ದೇವಸೈನ್ಯ ತಂಡಗಳನ್ನೂ ಪ್ರಜ್ವಲಿಸುತಿರುವ ಅಗ್ನಿಯು ದೊಡ್ಡ ಕಾಡುಗಳಂ ಸುಡುವಂತೆ ಸುಡುತಿರುವನಾಗಿ ಓಡಿಬಂದನೂ॥೩॥ಆ ಬಳಿಕ ವಿವಿಧಾಯುಧಗಳಂ ಧರಿಸಿಕೊಂಡು ಸೇನೆಯಲ್ಲಿ ನುಗ್ಗಿಬರುತಿರುವ ಆ ಮೇಘನಾದನ ದರ್ಶನ ಮಾತ್ರದಿಂದಲೇ ದೇವತೆಗಳೆಲ್ಲರು ದಿಕ್ಕು ದಿಕ್ಕುಗಳಲ್ಲಿ ಓಡಿಹೋದರು॥೪॥ಆ ರಣರಂಗದಲ್ಲಿ ಯುದ್ಧಮಾಡಬೇಕೆಂದಿಚ್ಛೈಸುತಿರುವ ಆ ಮೇಘನಾದನ ಮುಂದೆ ಒಬ್ಬನೂ ನಿಲ್ಲದೇಹೋಗಲೂ ದೇವೇಂದ್ರನಿಂತೆಂದನು ॥೫॥ಎಲೈ ದೇವತೆಗಳಿರ್ರಾ ! ಹೆದರಬ್ಯಾಡಿರಿ, ಓಡಿಹೋಗುವದು ಯುಕ್ತಮಲ್ಲಾ, ಕಾಳಗವಂ ಕುರಿತು ಹಿಂತಿರಿಗಿಬನ್ನಿರಿ, ಎಂದೆಂದಿಗೂ ಪರಾಜಿತನಾಗದಿರುವ ಎನ್ನಮಗನಾದ ಜಯಂತನು ಸಂಗರಕ್ಕೋಸ್ಕರ ಇದಿಗೋ ಬರುವನು, ಎಂಬದಾದಿ ನುಡಿಯುತಿದ್ದನು ॥೬॥ ಆ ಬಳಿಕ, ಜಯಂತನೆಂದು ಪ್ರಸಿದ್ಧನಾದ, ಇಂದ್ರ ಕುಮಾರನು, ಆಶ್ಚರ್ಯಕರವಾದ ವರ್ಣವುಳ್ಳ ರಥದಿಂದ, ಸಂಗ್ರಾಮದಲ್ಲಿಳಿದನು ॥೭॥ ಅನಂತರದಲ್ಲಿ ದೇವತೆಗಳೆಲ್ಲರೂ, ಆ ಶಚೀಪುತ್ರನಾದ ಜಯಂತನಂ ಸುತ್ತುಬಾರಿಕೊಂಡು, ರಾವಣನ ಸುತನಾದ ಮೇಘನಾದನಂ ಕುರಿತು, ಸಂಗರದಲ್ಲಿ, ನಿಂತವರಾದರೂ॥೮॥ ಆ ಸಮಯದಲ್ಲಿ, ದೇವರಾಕ್ಷಸರಿಗೆ, ಜಯಂತ ಮೇಘನಾದರಿಗೋಸ್ಕರ, ಮಹಾಕದನವು ಸಂಭವಿಸಿತು ॥ಆ ಬಳಿಕ, ಮೇಘನಾದನು, ಜಯಂತನಸಾರಥಿಯಾದ ಮಾತಲಿ ಕುಮಾರನಲ್ಲಿ, ಸುವರ್ಣಾಲಂಕೃತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಹಾತೇಜಾರಕ್ಷೋವಿಸ್ಫಾರಿತೇಕ್ಷಣಃ । ರಾವಣಿಃಶಕ್ರಪುತ್ರಂತಂಶರವರ್ಷೈರವಾಕಿರತ್ ॥೧೦॥ ತತಃಪ್ರಗೃಹ್ಯ ಶಸ್ತ್ರಾಣಿ ಸಾರವಂತಿಮಹಾಂತಿಚ । ಸುರಸೈನ್ಯೇಷುಸಂಕ್ರುದ್ಧಃಪಾತಯಾಮಾಸರಾವಣಿಃ ॥೧೧॥ ಶತಘ್ನೀಸ್ತೋಮರಾನ್ಪ್ರಾಸಾನ್ ಗದಾಃಖಡ್ಗಾನ್ಪರಶ್ವಧಾನ್ । ಮುಸಲಾನ್ಯದ್ರಿಶೃಂಗಾಣಿಪಾತಯಾಮಾಸರಾವಣಿಃ ॥೧೨॥ ತತಃಪ್ರವ್ಯಥಿತಾದೇವಾಸ್ಸಂಜಜ್ಞೇಚತಮೋಮಹತ್ । ತಸ್ಯರಾವಣಪುತ್ರಸ್ಯತಥಾಶತ್ರೂನಭಿಘ್ನತಃ ॥೧೩॥ ತತಸ್ತದ್ದೈವತಬಲಂಸಮಂತಾತ್ಸಶಚೀಸುತಮ್ । ಬಹುಪ್ರಕಾರಮಸ್ವಸ್ಥಂತತ್ರತತ್ರಸ್ಮಧಾವತಿ ॥೧೪॥ ನಾಭ್ಯಜಾನಂಸ್ತತೋನ್ಯೋನ್ಯಂಶತ್ರವೋದೈವತಾನಿಚ । ತತ್ರತತ್ರವಿಪರ್ಯಸ್ತಂಯತ್ರಸೈನ್ಯಂಪ್ರಧಾವತಿ ॥೧೫॥ ಏತಸ್ಮಿನ್ನಂತರೇಶೂರಃಪುಲೋಮಾನಾಮವೀರ್ಯವಾನ್ । ದೈತೆಯಸ್ತೇನಸಂಗೃಹ್ಯಶಚೀಪುತ್ರೋಪವಾಹಿತಃ ॥೧೬॥ ಗೃಹೀತ್ವಾತಂತುನಪ್ತಾರಂಪ್ರವಿಷ್ಟಸ್ಸಮಹೋದಧಿಮ್ । ಆರ್ಯೋಮಾತಾಮಹಸ್ತಸ್ಯಪೌಲೋಮೀಯೇನಸಾಶಚೀ ॥೧೭॥ ಪ್ರಣಾಶಂಪ್ರೇಕ್ಷ್ಯಚಸುರಾಜಯಂತಸ್ಯಾತಿದಾರುಣಮ್ । ವ್ಯಥಿ

---

ತತಃ-ಬಳಿಕ, ಕೃದ್ಧಃ-ಕೋಪಿಷ್ಠನಾದ, ಮಹಾತೇಜಾಃ-ಕಡುತೇಜೋವಂತನಾದ, ರಕ್ಷಃ-ರಾಕ್ಷಸನಾದ, ರಾವಣಿಃ-ರಾವಣಪುತ್ರನಾದ ಮೇಘನಾದನು, ವಿಸ್ಫಾರಿತೇಕ್ಷಣಃ-ತೆರೆಗಿಸಲ್ಪಟ್ಟನೇತ್ರಗಳುಳ್ಳವನಾಗಿ, ತಂಶಕ್ರಪುತ್ರಂ-ಆ ದೇವೇಂದ್ರಪುತ್ರನಾದ ಜಯಂತನನ್ನು, ಶರವರ್ಷೈಃ-ಬಾಣವರ್ಷಗಳಿಂದ, ಅವಾಕಿರತ್-ಸುರಿಸಿದನು ॥೧೦॥ ತತಃ-ಬಳಿಕ, ರಾವಣಿಃ-ಮೇಘನಾದನು, ಸಂಕ್ರುದ್ಧಃ-ಕೋಪಿಷ್ಠನಾಗಿ, ಸಾರವಂತಿ-ಸಾರವತ್ತಗಳಾದ, ಮಹಾಂತಿ-ದೊಡ್ಡವುಗಳಾದ, ಶಸ್ತ್ರಾಣಿ-ಅಸ್ತ್ರಗಳನ್ನು, ಪ್ರಗೃಹ್ಯ-ತೆಗದುಕೊಂಡು, ಸುರಸೈನ್ಯೇಷು-ದೇವತೆಗಳ ಸೇನೆಗಳಲ್ಲಿ, ಪಾತಯಾಮಾಸ-ಕೆಡಹಿಸಿದನು ॥೧೧॥ ರಾವಣಿಃ-ಮೇಘನಾದನು, ಶತಘ್ನೀಃ-ಪಿರಂಗಿಗಳನ್ನು, ತೋಮರಾನ್-ಕಬ್ಬಿಣದ ಕಟ್ಟುಹಾಕಿದ ದೊಣ್ಣೆಗಳನ್ನು, ಪ್ರಾಸಾನ್- ಈಟೀ ಕೋಲುಗಳನ್ನು, ಗದಾಃ-ಗದಾಯುಧಗಳನ್ನು, ಖಡ್ಗಾನ್-ಕತ್ತಿಗಳನ್ನು, ಪರಶ್ವಧಾನ್-ಕೊಡ್ಲಿಗಳನ್ನು, ಮುಸಲಾನಿ-ಒನಕೆಗಳನ್ನು, ಅದ್ರಿಶೃಂಗಾಣಿ-ಬೆಟ್ಟದ ಶೃಂಗಗಳನ್ನು, ಪಾತಯಾಮಾಸ-ಬೀಳಿಸಿದನು ॥೧೨॥ ತತಃ-ಆ ಬಳಿಕ, ರಾವಣಪುತ್ರಸ್ಯ-ರಾವಣಾಸುರನ ಪುತ್ರನಾದ, ತಸ್ಯ-ಆ ಮೇಘನಾದನು, ತಥಾ-ಹಾಗೆಯೆ, ಶತ್ರೂನ್-ಶತ್ರುಗಳನ್ನ, ಅಭಿಘ್ನತಸ್ಸತಃ-ಹೊಡೆಯುತಿರುವ ನಾಗುತಿರಲೀಕಾಗಿ, ದೇವಾಃ-ದೇವತೆಗಳು, ಪ್ರವ್ಯಥಿತಾಃ-ಬಹಳವಾಗಿ ವ್ಯಥೆಪಟ್ಟರು, ಮಹತ್-ಬಹಳವಾದ, ತಮಃ-ಅಂಧಕಾರವು, ಸಂಜಜ್ಞೇ-ಮುಚ್ಚಿಕೊಂಡಂಥಾದ್ದಾಯಿತು ॥೧೩॥ ತತಃ-ಬಳಿಕ, ಸಶಚೀಸುತಂ-ಆ ಜಯಂತನಿಂದೊಡಗೂಡಿದ, ತದ್ದೈವತಬಲಂ-ಆ ದೇವತಾ ಸೈನ್ಯವು, ಬಹುಪ್ರಕಾರಂ-ಬಹು ಬಗೆಯಾಗಿ, ಅಸ್ವಸ್ಥಂ-ಸ್ವಸ್ಥಚಿತ್ತವಿಲ್ಲದಾಗಿ, ತತ್ರ-ಆ ಯಾ ಪ್ರದೇಶಗಳಲ್ಲಿ, ಸಮಂತಾತ್-ಯಲ್ಲಾ ಕಡೆಯಲ್ಲಿ, ಧಾವತಿಸ್ಮ-ಓಡಿ ಹೋಯಿತಪ್ಪೆ ॥೧೪॥ ತತಃ-ಬಳಿಕ, ಶತ್ರವಃ-ಶತ್ರುಗಳು, ದೈವತಾನಿಚ-ದೇವತೆಗಳೂಕೂಡ, ಅನ್ಯೋನ್ಯಂ-ಒಬ್ಬರಿಗೊಬ್ಬರನ್ನು, ನಾಭ್ಯಜಾನನ್-ತಿಳಿಯದೆ ಹೋದರು, ಯತಃ-ಯತ್ತಕಡೆ, ಸೈನ್ಯಂ-ಸೈನ್ಯವು, ಪ್ರಧಾವತಿ-ಓಡಿಹೋಗುತದೊ, ತತ್ರ-ಅಲ್ಲೆಲ್ಲಿ, ವಿಪರ್ಯಸ್ತಂ-ವ್ಯತ್ಯಾಸವನ್ನು ಹೊಂದಿತು ॥೧೫॥ ಏತಸ್ಮಿನಂತರೇ-ಇಷ್ಟರವಳಗಾಗಿ, ಶೂರಃ-ಶೂರನಾದ, ವೀರ್ಯವಾನ್-ಪರಾಕ್ರಮಶಾಲಿಯಾದ, ಪುಲೋಮಾನಾಮ-ಪುಲೋಮನೆಂದು ಪ್ರಸಿದ್ಧನಾದ, ದೈತೇಯಃ-ರಾಕ್ಷಸನು, ಅಸ್ತಿ-ಇಧಾನೆ, ತೇನ-ಅವನಿಂದ, ಶಚೀಪುತ್ರಃ-ಜಯಂತನು, ಸಂಗೃಹ್ಯ-ಯುದ್ಧಮಾಡಿ, ಅಪವಾಹಿತಃ-ಕರದುಕೊಂಡು ಹೋಗಲ್ಪಟ್ಟನು ॥೧೬॥ ತಸ್ಯ-ಆ ಜಯಂತನಿಗೆ, ಆರ್ಯಃ-ಪೂಜ್ಯನಾದ, ಮಾತಾಮಹಃ-ತಾಯಿಗೆ ತಂದೆಯಾದ, ಸಃ-ಆ ಪುಲೋಮನು, ನಪ್ತಾರಂ-ಮಗಳ ಮಗನಾದ, ತಂತು-ಆ ಜಯಂತನನ್ನಾದರೆ, ಗೃಹೀತ್ವಾ-ಕರದುಕೊಂಡು, ಮಹೋದಧಿಂ-ಕಡಲಿನನ್ನು, ಪ್ರವಿಷ್ಟಃ-ಹೊಕ್ಕನು ॥೧೭॥ ಸಾ-ಆ ಪ್ರಸಿದ್ಧಳಾದ, ಶಚೀ-ಶಚೀದೇವಿಯು, ಯೇನ-ಯಾವ ಪುಲೋಮನಿಂದ, ಪೌಲೋಮೀ-ಪೌಲೋಮಿಯಂದು ಹೇಳಲ್ಪಟ್ಟು ಇಧಾಳೊ, ಸುರಾಃ-ದೇವತೆಗಳು, ಜಯಂತಸ್ಯ-ಜಯಂತನಿಗೆ, ಅತಿದಾರುಣಂ-ಅತಿಕ್ರೂರವಾದ, ಪ್ರಣಾಶಂ-ಆ ದರ್ಶ

---

ವಾದ ಸರಳುಗಳಂ ಕೆಡಹಲೂ, ಆ ಶಚೀಸುತನು, ಕಡುಕೋಪವುಳ್ಳವನಾಗಿ, ರಾವಣನಸುತನಂ ಹೊಡದು ಅವನ ಸಾರಥಿಯನ್ನೂ ಕೂಡ ಹೊಡದವನಾದನೂ ॥೧೧॥ ಸಮನಂತರಕಾಲದೊಳು, ಕಡು ತೇಜಸ್ವಿಯಾದ, ಆ ರಾವಣಿಯು, ಕುಪಿತನಾದ ಕಾರಣ ಕೆಂಗಣ್ಣುಗಳುಳ್ಳವನಾಗಿ, ಇಂದ್ರಪುತ್ರನಂ ಕುರಿತು ಬಾಣ ವರ್ಷಗಳಂ ಸುರಿಸುತ್ತಾ, ಮಹಾಸ್ತ್ರಗಳಂ ಗ್ರಹಿಸಿ, ಸುರ ಸೈನ್ಯಗಳಲ್ಲಿ, ಶತಘ್ನೀ, ತೋಮರ, ಪ್ರಾಸ, ಗದ, ಖಡ್ಗ, ಪರಶ್ವಧ, ಮುಸಲಗಳೇಮುಂತಾದ ಆಯುಧಗಳಂ ಕೆಡಹುತ್ತಿರಲೂ, ಆ ದೇವತೆಗಳೆಲ್ಲಾ, ದೈನ್ಯವುಳ್ಳವರಾಗಿ, ಆಪರಿಯಾಗಿ ಶತ್ರುಗಳಂ ಹೊಡೆಯುತಿರುವ ರಾವಣಪುತ್ರನಾದ ಮೇಘನಾದನ ಮುಂದೆ ನಿಲ್ಲಲಾರದೆ ಮಹಾ ಮೋಹವಂ ನೈದಿದರು॥೧೩॥ ಆ ಬಳಿಕ, ಜಯಂತನಿಂದೊಡಗೂಡಿದ ಆ ದೈವತಾಬಲವೆಲ್ಲಾ, ಬಗೆಬಗೆಯಾಗಿ ಸ್ವಸ್ಥ ಚಿತ್ತವಾಗಿ ನಿಲ್ಲದೇ ಅಲ್ಲಲ್ಲಿ ಓಡಿ ಹೋಗುತಿತ್ತು ॥೧೪॥ ಆ ಸಮಯದಲ್ಲಿ, ದೇವರಾಕ್ಷಸರು ಒಬ್ಬರನ್ನೊಬ್ಬರು ತಿಳಿಯದೇ, ಎತ್ತೆತ್ತ ಓಡಿ ಹೋಗುತಿದ್ದರೊ, ಅಲ್ಲಲ್ಲಿಯೆ, ನಾಶವಾಗುತಿದ್ದರು, ಇಷ್ಟರಲ್ಲಿ ಮಹಾಪರಾಕ್ರಮಿಯಾದ ಮತ್ತೂ ಶಚೀದೇವಿಗೆ ತಂದೆಯಾದ ಪುಲೋಮನೆಂಬ ರಾಕ್ಷಸನು ನುಗ್ಗಿಬಂದವನಾಗಿ, ತನ್ನ ಮೊಮ್ಮಗನಾದ ಆ ಜಯಂತನಂ ಕರದುಕೊಂಡು, ಯಾರಿಗೂ ತಿಳಿಯದೇ ಸಮುದ್ರವಂ ಹೊ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಾಶ್ಚಾಪ್ಯಹೃಷ್ಟಾಶ್ಚ ಸಮಂತಾದ್ವಿಪ್ರದುದ್ರುವುಃ ॥೧೦॥ ರಾವಣಿಸ್ತ್ವಥಸಂಹೃಷ್ಟೋ ಬಲೈಃಪರಿವೃತಸ್ಸ್ವಕೈಃ। ಅಭ್ಯಧಾವತದೇವಾಂಸ್ತಾನ್ಮುಮೋಚಚಮಹಾಸ್ವನಮ್॥೧೧॥ ದೃಷ್ಟ್ವಾಪ್ರಕಾಶಂಪುತ್ರಸ್ಯರಾವಣೇಶ್ಚಾಪಿವಿಕ್ರಮಮ್ । ಮಾತಲಿಂಪ್ರಾಹದೇವೇಂದ್ರೋರಥಸ್ಸಮುಪನೀಯತಾಮ್॥೧೨॥ ಸತುದಿವ್ಯೋಮಹಾಭೀಮಸ್ಸದ್ಯಏವಮಹಾರಥಃ। ಉಪಸ್ಥಿತೋಮಾತಲಿನಾವಾಹ್ಯಮಾನೋಮನೋಜವಃ ॥೧೩॥ ತತೋಮೇಘಾರಥೇತಸ್ಮಿನ್ತಟಿತ್ವಂತೋಮಹಾಸ್ವನಾಃ । ಅಗ್ರತೋವಾಯುಚಪಲಾಗಚ್ಛಂತೋವ್ಯನದಂಸ್ತದಾ ॥೧೪॥ ನಾನಾವಾದ್ಯಾನ್ಯವಾದ್ಯಂತಸ್ತುತಯಶ್ಚ ಸಮಾಹಿತಾಃ । ನನೃತುಶ್ಚಾಪ್ಸರಸ್ಸಂಘಾಃಪ್ರಯಾತೇವಾಸವೇರಣಮ್ ॥೧೫॥ ರುದ್ರೈರ್ವಸುಭಿರಾದಿತ್ಯೈಸ್ಸಾಧ್ಯೈಶ್ಚ ಸಮರುದ್ಗಣೈಃ। ವೃತೋನಾನಾಪ್ರಹರಣೈರ್ನಿರ್ಯಯೌತ್ರಿದಶಾಧಿಪಃ ।೧೬॥ ನಿರ್ಗಚ್ಛತಸ್ತು ಶಕ್ರಸ್ಯಪರುಷಂಪವನೋವವೌ। ಭಾಸ್ಕರೋನಿಷ್ಪ್ರಭಶ್ಚಾಸೀನ್ಮಹೋ

---

ನವನ್ನು, ಉಪೇಕ್ಷ್ಯ–ಕಂಡು, ವ್ಯಥಿತಾಶ್ಚ–ಭರ್ವ–ವ್ಯಥೆ ಬೀಳೋಂಥಾವರಾದರು, ಅಹೃಷ್ಟಾಶ್ಚ–ಸಂತೋಷವಿಲ್ಲದವರಾಗಿ,ಸಮಂತಾತ್–ಎಲ್ಲಾ ಕಡೆಯಲ್ಲಿ, ವಿಪ್ರದುದ್ರುವುಃ–ಓಡಿಹೋದರು ॥೧೦॥ ಅಥ–ಬಳಿಕ, ಸಂಹೃಷ್ಟಃ–ಸಂತೋಷಗೊಂಡ, ರಾವಣಿಃ–ರಾವಣ ಪುತ್ರನಾದ ಮೇಘನಾದನು, ಸ್ವಕೈಃ–ಸ್ವಕೀಯ್ಯಕಗಳಾದ, ಬಲೈಃ–ಸೈನ್ಯಗಳಿಂದ, ಪರಿವೃತಃ–ಸುತ್ತಿಕೊಳ್ಳಲ್ಪಟ್ಟವನಾಗಿ, ತಾನ್‌ದೇವಾನ್–ಆ ದೇವತೆಗಳನ್ನು ಕುರಿತು, ಅಭ್ಯಧಾವತ–ಅನುಸರಿಸಿ ಓಡಿದನು, ಮಹಾಸ್ವನಂ–ಕೋಲಾಹಲ ಧ್ವನಿಯನ್ನು, ಮುಮೋಚಚ–ಮಾಡಲೂ ಮಾಡಿದನು ॥೧೧॥ ದೇವೇಂದ್ರಃ–ದೇವೇಂದ್ರನು, ಪುತ್ರಸ್ಯ–ಮಗನಾದ ಜಯಂತನ, ಅಪ್ರಕಾಶಂ–ಅದೃಶ್ಯವನ್ನು, ದೃಷ್ಟ್ವಾ–ಕಂಡು, ರಾವಣೇಃ–ಮೇಘನಾದನ, ವಿಕ್ರಮಂಚಾಪಿ–ಪರಾಕ್ರಮವನ್ನೂ ಕೂಡ, ದೃಷ್ಟ್ವಾ–ಕಂಡು, ರಥಃ–ರಥವು, ಸಮುಪನೀಯತಾಂ–ತರಲ್ಪಡಲೀಯಂದು, ಮಾತಲಿಂ–ಮಾತಲಿ ಎಂಬ ಸಾರಥಿಯನ್ನು ಕುರಿತು, ಪ್ರಾಹ–ಹೇಳಿದನು ॥೧೨॥ ಸದ್ಯಏವ–ಆಗಲೇ, ದಿವ್ಯಃ–ದೇವತಾಸಂಬಂಧವಾದ, ಮಹಾಭೀಮಃ–ಮಹಾ ಭಯಂಕರವಾದ, ಸಮಹಾರಥಃ–ಆ ರಥವು, ಮಾತಲಿನಾ–ಮಾತಲಿಇಂದ, ವಾಹ್ಯಮಾನಃ–ಕಟ್ಟಲ್ಪಟ್ಟಂಥಾದ್ದಾಗಿ, ಮನೋಜವಃ–ಮನೋವೇಗ ಉಳ್ಳದ್ದಾಗಿ, ಉಪಸ್ಥಿತಃ–ಸಮೀಪವರ್ತಿ ಆಯಿತು ॥೧೩॥ ತತಃ–ಬಳಿಕ, ತಸ್ಮಿನ್‌ರಥೇ–ಆ ರಥದಲ್ಲಿ, ತಟಿತ್ವಂತಃ–ಮಿಂಚುಗಳುಳ್ಳ, ಮಹಾಸ್ವನಃ–ಮಹಾಘರ್ಜನೆಯುಳ್ಳ, ಮೇಘಾಃ–ಮೇಘಗಳು, ತದಾ–ಆ ಕಾಲದಲ್ಲಿ, ಅಗ್ರತಃ–ಮುಂದುಗಡೆ, ವಾಯುಚಪಲಾಃ–ವಾಯು–ಘಾಳಿಯಿಂದ, ಚಪಲಾಃ–ಚಂಚಲಗಳಾಗಿ, ಗಚ್ಛಂತಃ–ಹೋಗುತ್ತಿರುವವುಗಳಾಗಿ, ವ್ಯನದನ್–ಧ್ವನಿಗೊಂಡವು॥೧೪॥ ವಾಸವೇ–ದೇವೇಂದ್ರನು, ರಣಂ–ಯುದ್ಧವನ್ನು ಕುರಿತು, ಪ್ರಯತೇಸತಿ–ಪ್ರಯಾಣವನ್ನು ಮಾಡಿದಂಥವನಾಗುತ್ತಿರಲೀಕಾಗಿ, ನಾನಾವಾದ್ಯಾನಿ–ನಾನಾ ಬಗೆಯಾದ ವಾದ್ಯಗಳು, ಅವಾದ್ಯಂತ–ಹೊಡೆಯಲ್ಪಟ್ಟವು, ಸ್ತುತಯಶ್ಚ–ಸ್ತೋತ್ರಗಳೂಕೂಡ, ಸಮಾಹಿತಾಃ–ಮಾಡಲ್ಪಟ್ಟವು, ಅಪ್ಸರಸಂಘಾಃ–ಅಪ್ಸರಸ್ತ್ರೀರುಗಳ ಗುಂಪುಗಳು, ನನೃತುಶ್ಚ–ನರ್ತನವನ್ನೂ ಮಾಡಿದವು ॥೧೫॥ ರುದ್ರೈಃ–ಏಕಾದಶ ರುದ್ರರಿಂದಲೂ, ವಸುಭಿಃ–ಅಷ್ಟವಸುಗಳಿಂದಲೂ, ಆದಿತ್ಯೈಃ–ದ್ವಾದಶಾದಿತ್ಯರಿಂದಲೂ, ಸಮರುದ್ಗಣೈಃ–ಸಪ್ತ ಮರುತ್ತುಗಳಿಂದೊಡಗೂಡಿದ, ಸಾಧ್ಯೈಶ್ಚ–ಸಾಧ್ಯರಿಂದಲೂ, ವೃತಃ–ಸುತ್ತಿಕೊಳ್ಳಲ್ಪಟ್ಟ, ತ್ರಿದಶಾಧಿಪಃ–ದೇವೇಂದ್ರನು, ನಾನಾಪ್ರಹರಣೈಃ–ನಾನಾಬಗೆಯಾದ ಆಯುಧಗಳಿಂದ, ಉಪಲಕ್ಷಿತಃ–ಕೂಡಿದವನಾಗಿ, ನಿರ್ಯಯೌ–ಹೊರಟನು ॥೧೬॥ ನಿರ್ಗಚ್ಛತಃ–ಹೊರಟಿರುವ, ಶಕ್ರಸ್ಯತು–ದೇವೇಂದ್ರನಿಗಾದರೆ, ಪವನಃ–ಘಾಳಿಯು, ಪರುಷಂಯಥಾಭವತೀತಥಾ–ಪ್ರತಿಕೂಲವಾಗೋದುಷ್ಯಾಗೊ ಹಾಗೆ,ವವೌ–ಬೀಸಿತು, ಭಾಸ್ಕರಶ್ಚ–ಸೂರ್ಯನೂಕೂಡ, ನಿಷ್ಪ್ರಭಃ–ಕಾಂತಿ ರಹಿತನು, ಆಸೀತ್–ಆದನು, ಮಹೋಲ್ಕಾಶ್ಚ–ದೊಡ್ಡ ಕೊಳ್ಳಿಗಳು, ಪ್ರಪೇತೇ–

---

ಕ್ಕನು ॥೧೯॥ ಆ ಸಮಯದಲ್ಲಿ ಸುರರೆಲ್ಲರು, ಅತಿದಾರುಣವಾದ, ಆ ಜಯಂತನಅದರ್ಶನವಂ ಕಂಡು, ದುಃಖಿತರಾಗಿ ಎಲ್ಲಾ ಕಡೆಯಲ್ಲಿಯೂ ಓಡಿಹೋದರು ॥೨೦॥ ಅನಂತರದಲ್ಲಿ ಮೇಘನಾದನಾದರೆ ಸಂತುಷ್ಟಾಂತರಂಗವುಳ್ಳವನಾಗಿ, ತನ್ನ ಸೈನ್ಯಗಳಿಂದೊಡಗೂಡಿ ಆ ದೇವತಂಡಗಳಂ ತರುಬುಕೊಂಡು ಬಂದು ಮಹಾ ಘೋಷೆಯಂಗೆಯ್ಯುತಿದ್ದನು ॥ ಆ ವೇಳೆಯಲ್ಲಿ ದೇವೇಂದ್ರನು ತನ್ನ ಕುವರನಾದ ಜಯಂತನ ಆದರ್ಶನವನ್ನೂ ಮತ್ತೂ ರಾವಣ ಪುತ್ರನ ಪರಾಕ್ರಮವನ್ನು ಸಹಾ ಕಂಡವನಾಗಿ, ತನ್ನ ಸಾರಥಿಯಾದ ಮಾತಲಿಯಂ ಕುರಿತಿಂತೆಂದನು. ಎಲೈ ಸಾರಥಿಯೇ! ನನ್ನ ರಥವನ್ನೀಗ ರಾವಣಪುತ್ರನಿರುವ ಎಡಕ್ಕೆ ತ್ವರಿತವಾಗಿ ತರುಬು ಎಂಬದಾಗಿ ನುಡಿಯಲೂ, ಆ ಮಾತಲಿಯು ಒಡೆಯನಾಜ್ಞೆಯಿಂದ ಶೀಘ್ರವಾಗಿ ತರುಬುಕೊಂಡು ಬರುತಿರಲು, ಆ ಸಮಯದಲ್ಲಿ ಮಿಂಚುಗಳಿಂದೊಡಗೂಡಿ ಮಹಾ ಘೋಷೆಯಂಗೆಯ್ಯುತಿರುವವಹಾ ಮೇಘಗಳು ಆ ಇಂದ್ರರಥದ ಮುಂದುಗಡೆ ಹೋಗುತಿರುವವುಗಳಾಗಿ ಗರ್ಜಿಸುತಿದ್ದವು. ದೇವತೆಗಳಂ ಬಗೆ ಬಗೆಯಾದ ವಾದ್ಯಗಳಂ ಬಾರಿಸುತಿದ್ದರು. ಮತ್ತು ಕೆಲವರು ಸ್ತೋತ್ರಗಳಂಗೈಯ್ಯುತಿದ್ದರು, ಅಪ್ಸರಾಂಗನೆಯರು ನರ್ತಿಸುತಿದ್ದರು ಇದಲ್ಲದೆ, ಏಕಾದಶ ರುದ್ರರೂ, ಅಷ್ಟವಸುಗಳೂ, ದ್ವಾದಶಾದಿತ್ಯರೂ, ಸಿದ್ಧರೂ, ಸಾಧ್ಯರೂ ಎಂಬ ದೇವಗಣಗಳಿಂದ ಪರಿವೃತನಾಗಿ ಇಂದ್ರನು ರಣರಂಗಕೋಸ್ಕರ ಬರುತ್ತಿರಲೂ, ಆತನಿಗೆ ದುಃಶಕುನಂಗಳು ಸೂಚಕವಾದವು ॥ ೧೬॥ಅದೆಂತೆನೆ,—ಮಹಾದಾರುಣವಾಗಿ ವಾಯುವು ಬೀಸುತಿತ್ತು, ಸೂರ್ಯನು ಕಳೆಗುಂದಿದವನಾದನು, ಮಹದಾಕಾರವಾದ ಕೊಳ್ಳಿಗಳು ಕೆಳಕ್ಕೆ ಬೀಳುತಿದ್ದವು ॥೧೭॥ ಹೀಗಿರುವಲ್ಲಿ, ಮಹಾಪರಾಕ್ರಮಿಯಾದ ದಶಕಂಠನು, ಮಹದಾಕಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲ್ಲಾಕ್ಷ್ಯ ಪ್ರಪೇದಿರೆ॥೧೭॥ ಏತಸ್ಮಿನ್ನಂತರೇವೀರೋದಶಗ್ರೀವಃಪ್ರತಾಪವಾನ್। ಆರುರೋಹರಥಂದಿವ್ಯಂನಿರ್ಮಿತಂವಿಶ್ವಕರ್ಮಣಾ ॥೧೮॥ ಪನ್ನಗೈಸ್ಸುಮಹಾಭೋಗೈರ್ವಿಷ್ಠಿತಂರೋಮಹರ್ಷಣಮ್। ಯೇಷಾಂನಿಶ್ವಾಸವಾತೇನಪ್ರದೀಪ್ತಮಿವಸಂಯುಗಮ್॥೧೯॥ ದೈತ್ಯೈರ್ನಿಶಾಚರೈಶ್ಶೂರೈರ್ರಥಸ್ಸಪರಿವಾರಿತಃ। ಸಮರಾಭಿಮುಖೋದಿವ್ಯೋಮಹೇಂದ್ರಂತ್ವಭ್ಯವರ್ತತ॥೨೦॥ ಪುತ್ರಂಸ್ವಂವಾರಯಿತ್ವಾಜೌಸ್ವಯಮೇವವ್ಯವಸ್ಥಿತಃ। ಸೋಪಿಯುದ್ಧಾದ್ವಿನಿಷ್ಕ್ರಮ್ಯರಾವಣಿಸ್ಸಮುಪಾವಿಶತ್॥೨೧॥ ತತೋಯುದ್ಧಂಪ್ರವೃತ್ತಂತತ್ಸುರಾಣಾಂರಾಕ್ಷಸೈಸ್ಸಹ। ಶಸ್ತ್ರಾಭಿವರ್ಷಣಂಘೋರಂಮೇಘಾನಾಮಿವಸಂಯುಗೇ॥೨೨॥ ಕುಂಭಕರ್ಣಸ್ತುದುಷ್ಟಾತ್ಮಾನಾನಾಪ್ರಹರಣೋದ್ಯತಃ। ನಾಜ್ಞಾಯತತದಾಯುದ್ಧೇಸಹಕೇನಾಪ್ಯಯುಧ್ಯತ॥೨೩॥ ದಂತೈರ್ಭುಜಾಭ್ಯಾಂಪದ್ಭ್ಯಾಂಚಶಕ್ತಿತೋಮರಸಾಯಕೈಃ। ಏನಕೇನೈವಸಂರುದ್ಧಸ್ತಾಡಯಾಮಾಸವೈಸುರಾನ್॥೨೪॥ತತೋರುದ್ರೈರ್ಮಹಾಭಾಗೈಸ್ಸಹಾದಿತ್ಯೈರ್ನಿಶಾಚರಃ।ಪ್ರಾಯುಧ್ಯತೈಶ್ಚಸಂಗ್ರಾಮೇಕೃತಶ್ಶಸ್ತ್ರೈರ್ನಿರಂತರಮ್॥೨೫॥ಬಭೌ

ಬೀಳುತಿದ್ದವು ॥೧೭॥ ಏತಸ್ಮಿನ್ನಂತರೇ-ಇಷ್ಟರವಳಗೆ, ವೀರಃ-ಶೂರನಾದ, ಪ್ರತಾಪವಾನ್-ಪರಾಕ್ರಮವಂತನಾದ, ದಶಗ್ರೀವಃ- ರಾವಣನು, ವಿಶ್ವಕರ್ಮಣಾ-ವಿಶ್ವಕರ್ಮನಿಂದ, ನಿರ್ಮಿತಂ-ನಿರ್ಮಿಸಲ್ಪಟ್ಟ, ದಿವ್ಯಂ-ದೇವತಾಸಂಬಂಧವಾದ ॥೧೮॥ ಯೇಷಾಂ-ಯಾವ ಸರ್ಪಗಳ, ನಿಶ್ವಾಸವಾತೇನ-ನಿಟ್ಟುಸುರಿನ ಸೋಂಕಿ ನಿಂದ, ಸಂಯುಗಂ-ಯುದ್ಧರಂಗವು, ಪ್ರದೀಪ್ತಮಿವಸ್ಥಿತಂ-ಹೊಳೆಯುತಿರುವಂತೆ ಆಯಿತೋ, ತೈಃ-ಅಂಥಾ, ಸುಮಹಾಭೋಗೈಃ- ಮಹಾಶರೀರಗಳುಳ್ಳ, ಪನ್ನಗೈಃ-ಸರ್ಪಗಳಿಂದ, ವಿಷ್ಠಿತಂ-ಅಧಿಷ್ಟಿತವಾದ, ರೋಮಹರ್ಷಣಂ-ರೋಮಾಂಚವನ್ನು ಮಾಡುತಿರುವ, ರಥಂ-ರಥವನ್ನು, ಆರುರೋಹ-ಹತ್ತಿದನು ॥೧೯॥ ಶೂರೈಃ-ಶೂರರಾದ, ದೈತ್ಯೈಃ-ದಿತಿಗೆ ಮಕ್ಕಳಾದ, ನಿಶಾಚರೈಃ-ರಾಕ್ಷಸರಿಂದ, ಪರಿವಾರಿತಃ-ಸುತ್ತಿಕೊಳ್ಳಲ್ಪಟ್ಟ, ದಿವ್ಯಃ- ದೇವತಾಸಮ್ಬಂಧವಾದ, ಸರಥಃ-ಆ ರಥವು, ಸಮರಾಭಿಮುಖಃ-ಕಾಳಗಕ್ಕೆ ಅಭಿಮುಖವಾಗಿ, ಮಹೇಂದ್ರಂತು-ಮಹೇಂದ್ರನನ್ನು ಕುರಿತಾದರೆ, ಅಭ್ಯವರ್ತತ, ಅಭಿಮುಖವಾಗಿ ಬಂದು ನಿಂತಿತು ॥೨೦॥ ಆಜೌ-ಯುದ್ಧದಲ್ಲಿ, ಸ್ವಂ-ಸ್ವಕೀಯ್ಯವಾದ, ಪುತ್ರಂ-ಮಗನನ್ನು, ವಾರಯಿತ್ವಾ-ತಡೆಮಾಡಿ, ಸ್ವಯಮೇವ-ತಾನೆ, ವ್ಯವಸ್ಥಿತಃ-ನಿಂತನು, ಸೋಪಿರಾವಣಿಃ-ಆ ಮೇಘನಾದನು, ಯುದ್ಧಾತ್-ಕಾಳಗದ ದೆಸೆಯಿಂದ, ವಿನಿಷ್ಕ್ರಮ್ಯ-ಈಚೆಗೆ ಹೊರಟು ಬಂದು ಸಮುಪಾವಿಶತ್-ಕೂತುಕೊಂಡನು ॥೨೧॥ ತತಃ-ಬಳಿಕ, ಸುರಾಣಾಂ-ದೇವತೆಗಳಿಗೆ, ರಾಕ್ಷಸೈಸ್ಸಹ-ರಾಕ್ಷಸರೊಡನೆ, ಶಸ್ತ್ರಾಭಿವರ್ಷಣಂ-ಶಸ್ತ್ರಗಳನ್ನು ಸುರಿಸುತಿರುವ, ಸಂಯುಗೇ-ಯುದ್ಧದಲ್ಲಿ, ಮೇಘಾನಾಮಿವ-ಮೇಘಗಳಂತೆ, ಘೋರಂ-ಭಯಂಕರವಾದ, ತತ್ಯುದ್ಧಂ-ಆ ಕಾಳಗವು, ಪ್ರವೃತ್ತಂ-ಆರಂಭವಾಯಿತು ॥೨೨॥ ದುಷ್ಟಾತ್ಮಾ-ದುರಾತ್ಮನಾದ,ನಾನಾಪ್ರಹರಣೋದ್ಯತಃ-ನಾನಾ ಬಗೆಯಾದ ಆಯುಧಗಳಿಂದ ಯುದ್ಧೋದ್ಯುಕ್ತನಾದ, ಕುಂಭಕರ್ಣಸ್ತು-ಕುಂಭಕರ್ಣನಾದರೆ, ತದಾ-ಆ ಕಾಲದಲ್ಲಿ, ಯುದ್ಧೇ-ಕಾಳಗದಲ್ಲಿ, ಕೇನಾಪಿ-ಯಾರೊಬ್ಬನಿಂದಲೂ ಕೂಡ, ನಾಜ್ಞಾಯ- ಕರೆಯಲ್ಪಡಲಿಲ್ಲಾ ನಾಯುಧ್ಯತ-ಯುದ್ಧವೂ ಮಾಡಲ್ಪಡಲಿಲ್ಲಾ ॥ ೨೩ ॥ ಸಂರುದ್ಧಃ-ಕೋಪಿಷ್ಠನಾದ ಕುಂಭಕರ್ಣನು, ದಂತೈಃ-ದಂತಗಳಿಂದಲೂ, ಭುಜಾಭ್ಯಾಂ-ಭುಜಗಳಿಂದಲೂ, ಪದ್ಭ್ಯಾಂಚ-ಪಾದಗಳಿಂದಲೂಕೂಡ, ಶಕ್ತಿತೋಮರಸಾಯಕೈಃ-ಶಕ್ತಿ-ಶಕ್ತ್ಯಾಯುಧಗಳಿಂದಲೂ, ತೋಮರ - ಕಬ್ಬಿಣದ ದೊಣ್ಣೆಗಳಿಂದಲೂ, ಸಾಯಕೈಃ-ಬಾಣಗಳಿಂದಲೂ, ಯೇನಕೇನೈವ-ಯಾವದೊಂದು ಪದಾರ್ಥದಿಂದಲಾದರೂ ಸರಿಯೆ, ಸುರಾನ್-ದೇವತೆಗಳನ್ನು, ತಾಡಯಾಮಾಸವೈ-ಹೊಡೆಯುವಂಥಾವನಾದನು ॥೨೪॥ ತತಃ-ಬಳಿಕ, ರುದ್ರೈಃ-ಏಕಾದಶ ರುದ್ರರಿಂದಲೂ, ಮಹಾಭಾಗೈಃ-ಪುಣ್ಯವಂತರಾದ, ಆದಿತ್ಯೈಸ್ಸಹ- ದ್ವಾದಶಾದಿತ್ಯರಿಂದಲೂ, ನಿಶಾಚರಃ-ರಾಕ್ಷಸನಾದ ಕುಂಭಕರ್ಣನು, ಸಂಗ್ರಾಮೇ-ಕಾಳಗದಲ್ಲಿ, ಪ್ರಾಯುಧ್ಯ-ಯುದ್ಧಮಾಡಿ, ತೈಶ್ಚ-ಆ ದೇವತೆಗಳಿಂದಲೂ, ಶಸ್ತ್ರೈಃ-ಶಸ್ತ್ರಗಳಿಂದ, ನಿರಂತರಂ-ನಿರವಕಾಶವಾದಂತೆ, ಕೃತಃ-ಮಾಡಲ್ಪಟ್ಟನು ॥೨೫॥ಶಸ್ತ್ರಾಚಿತತನುಃ-ಶಸ್ತ್ರಗಳಿಂದ ತುಂಬಿಸಲ್ಪಟ್ಟ ಶರೀರವುಳ್ಳ, ಕುಂಭಕರ್ಣಃ-ಕುಂಭಕರ್ಣನು, ಅಸೃಕ್-ರಕುತವನ್ನು, ಕ್ಷರನ್ - ಸುರಿಯುತಿರುವನಾಗಿ, ವಿದ್ಯುತ್ಸ್ತನಿತನಿರ್ಘೋಷಃ - ಮಿಂಚುಗಳಿಂದಲೂ ಘ

ರಗಳುಳ್ಳ ಮತ್ತೂ ಉಶ್ವಾಸಮಾತ್ರದಿಂದಲೇ ಸಂಗರವನ್ನೆಲ್ಲಾ ಉರಿಯುವಂತೆ ಮಾಡುತಿರುವ ಸರ್ಪಶ್ರೇಷ್ಠಗಳಿಂದ ಯುಕ್ತವಾಗಿರ್ಪ ಕಡು ಭಯಂಕರವಾಗಿರುವ, ಮತ್ತೂ ವಿಶ್ವಕರ್ಮ ನಿರ್ಮಿತವಾದ ದಿವ್ಯ ರಥವನ್ನೇರಿ, ಶೂರರಾದ ನಿಶಾಚರರಿಂದ ಪರಿವೃತನಾಗಿ, ಇಂದ್ರನಂ ಕುರಿತು ಸಂಗರಾಭಿಮುಖನಾಗಿ ತೆರಳಿ, ರಣಕರ್ಮದಿಂದ ತನ್ನ ಪುತ್ರನಂ ನಿವಾರಿಸಿ, ಸ್ವಯಮೇವ ನಿಂತವನಾಗಲೂ, ಆ ಮೇಘನಾದನು ಯುದ್ಧದಿಂದ ಹಿಂತಿರಿಗಿ ಸುಮ್ಮನೆ ನಿಂತವನಾದನು॥೨೧॥ ಅನಂತರದಲ್ಲಿ ಮೇಘಗಳು ವರ್ಷವಂ ಸುರಿಸುವ ತೆರದಿ ರಣರಂಗದಲ್ಲಿ ಶಸ್ತ್ರಾಸ್ತ್ರ ವರ್ಷಗಳಂ ಸುರಿಸುತಿರುವ ದೇವತೆಗಳಿಗೆ ರಾಕ್ಷಸರೊಡನೆ ಮಹಾ ಯುದ್ಧವು ಸಂಭವಿಸಿತು ॥೨೨॥ ದುರ್ಬುದ್ಧಿಯುಳ್ಳ ಕುಂಭಕರ್ಣನು, ಬಗೆಬಗೆಯಾದ ಆಯುಧಗಳಂ ಪಿಡಿದು ಕೊಂಡು ಬಂದಿದ್ದರೂ, ಆ ಯುದ್ಧರಂಗದಲ್ಲಿ ಅವನನ್ನಾರ್ಯರೂ ಕರೆಯಲೂ ಇಲ್ಲಾ. ಮತ್ತೂ, ಯಾವನೊಡನೆಯೂ ಸಂಗರವಂಗೈಯ್ಯಲೂ ಇಲ್ಲಾ. ಹೀಗಿದ್ದರೂ ಆ ದುಷ್ಟನು ಬಲು ಕೋಪಮುಳ್ಳವನಾಗಿ, ದೇವತೆಗಳನ್ನೇ ದಂತಗಳಿಂದ ಕಚ್ಚುತ್ತಲೂ, ಭುಜಗಳಿಂದಪ್ಪಳಿಸುತ್ತಲೂ, ಕಾಲ್ಗಳಿಂದ ವೊದೆಯುತ್ತಲೂ, ಶಕ್ತಿ, ತೋಮರ, ಬಾಣಗಳೇ ಮುಂತಾದ ಕೈಯ್ಯಿಗೆ ಶಿಕ್ಕಿದ ಆಯುಧಗಳಿಂದ ಹೊಡೆಯುತ್ತಾ, ರುದ್ರರೊಡನೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶಸ್ತ್ರಾಂಚಿತತನುಃಕುಂಭಕರ್ಣಃಕ್ಷರನ್ಸೃಕ್ । ವಿದ್ಯುತ್ಸ್ತನಿತನಿರ್ಘೋಷೋಧಾರಾವಾನಿವತೋಯದಃ॥೩೬॥ತತಸ್ತ ದ್ರಾಕ್ಷಸಂಸೈನ್ಯಂತ್ರಿದಶೈಸ್ಸಮರುದ್ಗಣೈಃ । ರಣೇವಿದ್ರಾವಿತಂಸೈನ್ಯಂನಾನಾಪ್ರಹರಣೈಶ್ಶಿತೈಃ ॥೩೭॥ ಕೇಚಿದ್ವಿನಿಹತಾಶ್ಶ ಸ್ತ್ರೈಃನಿವೇಷ್ಟಂತೇಸ್ಮಮಹೀತಲೇ । ವಾಹನೇಷ್ವವಸಕ್ತಾಶ್ಚಸ್ಥಿತಾವಿವಾಪರೇರಣೇ ॥೩೮॥ ರಥಾನ್ನಾಗಾನ್ಖರಾನುಷ್ಟ್ರಾನ್ಪ ನ್ನಗಾಂಸ್ತುರಗಾನ್ರಣೇ। ಶಿಂಶುಮಾರಾನ್ವರಾಹಾಂಶ್ಚಪಿಶಾಚವದನಾಂಸ್ತಥಾ ॥೩೯॥ ತಾನ್ಸಮಾಲಿಂಗ್ಯಬಾಹುಭ್ಯಾಂ ವಿ ಷ್ಟಬ್ಧಾಃಕೇಚಿದುಚ್ಛ್ರಿತಾಃ । ದೇವೈಸ್ತುಶಸ್ತ್ರಸಂವಿದ್ಧಾಮಮ್ರಿರೇಚನಿಶಾಚರಾಃ ॥೪೦॥ಚಿತ್ರಕರ್ಮವಬಭಾತಿಸತೇಷಾಂರಣ ಸಂಪ್ಲವಃ । ನಿಹತಾನಾಂಪ್ರಮತ್ತಾನಾಂರಾಕ್ಷಸಾನಾಂಮಹೀತಲೇ ॥೪೧॥ಶೋಣಿತೋದಕನಿಷ್ಯಂದಾಕಂಕಗೃಧ್ರಸಮಾಕು ಲಾ। ಪ್ರವೃತ್ತಾಸಂಯುಗಮುಖೇಶಸ್ತ್ರಗ್ರಾಹವತೀನದೀ॥೪೨॥ ಏತಸ್ಮಿನ್ನಂತರೇಕ್ರುದ್ಧೋದಶಗ್ರೀವಃಪ್ರತಾಪವಾನ್। ನಿರೀ

ಕ್ಷನೇ ಇಂದಲೂಕೂಡಾ ಕಬ್ಬಾಯವಾದ, ಧಾರಾವಾನ್–ಉದಕ ಧಾರೆಯನ್ನು ಬಿಡುತಿರುವ, ತೋಯದಃಇವ–ಮೇಘದಂತೆ, ಬಭೌ–ಹೊಳೆಯುತಿದ್ದ ನು ||=೬|| ತತಃ–ಬಳಿಕ, ಸರ್ವಂ–ಸಮಸ್ತವಾದ, ತದ್ರಾಕ್ಷಸಂಸೈನ್ಯಂ–ಆ ರಾಕ್ಷಸಸಂಬಂಧವಾದ ಸೈನ್ಯವು, ಸಮರುದ್ಗಣೈಃ–ಸಪ್ತಮರುತುಗಳಿಂದೊ ಡಗೂಡಿದ, ತ್ರಿದಶೈಃ–ದೇವತೆಗಳಿಂದ, ರಣೇ–ಯುದ್ಧದಲ್ಲಿ, ಶಿತೈಃ–ತೀಕ್ಷ್ಣಂಗಳಾದ, ನಾನಾಪ್ರಹರಣೈಃ– ನಾನಾ ಆಯುಧಗಳಿಂದಲೂ, ವಿದ್ರಾವಿತಂ–ಓಡಿ ಸಲ್ಪಟ್ಟಿತು ||೩೭|| ಕೇಚಿತ್–ಕೆಲಬರು, ಶಸ್ತ್ರೈಃ–ಶಸ್ತ್ರಗಳಿಂದ, ವಿನಿಹತಾಃ–ಹೊಡೆಯಲ್ಪಟ್ಟವರಾಗಿ, ಮಹೀತಲೇ–ನೆಲದಲ್ಲಿ, ನಿವೇಷ್ಟಂತೇಸ್ಮ–ಹೊರ ಳಾಡುತಿದ್ದರು, ಅಪರೇ–ಮತ್ತು ಕೆಲಬರು, ವಾಹನೇಷ್ವೇವ–ವಾಹನಗಳಲ್ಲಿಯೆ, ಅವಸಕ್ತಾಃ–ಅಪ್ಪಿಕೊಂಡೇಘಾವರಾಗಿ, ಸ್ಥಿತಾಃ–ನಿಂತರು ||೩೮|| ಕೇಚಿತ್–ಕೆಲಬರು, ಬಾಹುಭ್ಯಾಂ–ಭುಜಗಳಿಂದ, ರಥಾನ್–ರಥಗಳನ್ನು, ನಾಗಾನ್–ಆನೆಗಳನ್ನು, ಖರಾನ್–ಕತ್ತೆಗಳನ್ನು, ಉಷ್ಟ್ರಾನ್–ಒಂಟೆಗಳನ್ನು, ಪನ್ನಗಾನ್–ಸರ್ಪಗಳನ್ನು, ತುರಗಾನ್–ಕುದುರೆಗಳನ್ನು, ಶಿಂಶುಮಾರಾನ್–ನೆಗಳುಗಳನ್ನು, ವರಾಹಾಂಶ್ಚ–ಹಂದಿಗಳನ್ನು, ತಥಾ–ಹಾಗೆಯೆ, ತಾನ್–ಪ್ರ ಸಿದ್ಧಂಗಳಾದ, ಪಿಶಾಚವದನಾನ್–ಪಿಶಾಚಮುಖದಂತೆ ಮುಖವುಳ್ಳ ವಾಹನಗಳನ್ನು, ಸಮಾಲಿಂಗ್ಯ–ಅಪ್ಪಿಕೊಂಡು, ವಿಷ್ಟಬ್ಧಾಃ–ಸ್ತಂಭೀ ಭೂತರಾಗಿ ಉಚ್ಛ್ರಿತಾಃ–ಮೇಲಕ್ಕೆ ಎದ್ದವರಾಗಿ, ನಿಶಾಚರಾಃ–ರಾಕ್ಷಸರು, ದೇವೈಸ್ತು–ದೇವತೆಗಳಿಂದಾದರೆ, ಶಸ್ತ್ರಸಂವಿದ್ಧಾಃ–ಶಸ್ತ್ರಗಳಿಂದ ತಿವಿಯಲ್ಪಟ್ಟ ವರಾಗಿ, ಮಮ್ರಿರೇ–ಮೃತರಾದರು ||೩೯ || ೪೦ || ನಿಹತಾನಾಂ– ಹೊಡೆಯಲ್ಪಟ್ಟ, ಪ್ರಮತ್ತಾನಾಂ–ಮದವೇರಿದ, ತೇಷಾಂರಾಕ್ಷಸಾನಾಂ – ಆ ರಾಕ್ಷ ಸರ, ಸಃರಣಸಂಪ್ಲವಃ– ಆ ಯುದ್ಧರಂಗವು, ಮಹೀತಲೇ –ನೆಲದಲ್ಲಿ, ಚಿತ್ರಕರ್ಮೇವ–ಚಿತ್ರವ್ಯಾಪಾರ ಉಳ್ಳದಂತೆ, ಆಭಾತಿ– ಹೊಳೆಯುತಿತ್ತು ||೪೧|| ಶೋಣಿತೋದಕನಿಷ್ಯಂದಾ–ಶೋಣಿತ–ರಕ್ತವೇ, ಉದಕ–ನೀರಿನ, ನಿಷ್ಯಂದಾ– ಸ್ರವಣವುಳ್ಳ, ಕಂಕಗೃಧ್ರಸಮಾಕುಲಾ – ರಣಹದ್ದುಗಳು ಹದ್ದುಗಳಿಂದ ವ್ಯಾಪ್ತವಾದ, ಶಸ್ತ್ರಗ್ರಾಹವತೀ–ಶಸ್ತ್ರ– ಶಸ್ತ್ರಗಳೆಂಬ, ಗ್ರಾಹವತೀ–ನೆಗಳುಗಳುಳ್ಳ, ನದೀ–ನದಿಯು, ಸಂಯುಗಮುಖೇ–ಕಾಳಗ ಮುಖದಲ್ಲಿ, ಪ್ರವೃ ತ್ತಾ–ಪ್ರವಹಿಸಿತೋ ||೪೨|| ಏತಸ್ಮಿನ್ನಂತರೇ–ಈ ಮಧ್ಯಕಾಲದಲ್ಲಿ, ಪ್ರತಾಪವಾನ್– ಪರಾಕ್ರಮ ಶಾಲಿಯಾದ, ಸದಶಗ್ರೀವಸ್ತು–ಆ ರಾವಣನಾದರೆ ದೈವ ತೈಃ – ದೇವತೆಗಳಿಂದ, ವಿಪಾತಿತಂ – ಬೀಳಿಸಲ್ಪಟ್ಟ, ಕೃತ್ಸ್ನಂ– ಸಮಸ್ತವಾದ, ತದ್ಬಲಂ – ಆ ಸೈನ್ಯವನ್ನು, ನಿರೀಕ್ಷ್ಯ– ಕಂಡು, ಕ್ರುದ್ಧಸ್ಸನ್– ಕೋಪಿಷ್ಟನಾಗಿ, ಪ್ರವೃದ್ಧಂ – ವೃದ್ಧಿಗೊಂಡ, ಸೈನ್ಯಸಾಗರಂ – ಸೈನ್ಯವೆಂಬ ಸಮುದ್ರವನ್ನು, ಆಶು – ಜಾಗ್ರತೆಯಾಗಿ, ಪ್ರತಿವಿಗಾಹ್ಯ–ಹೊಕ್ಕು,

ಯೂ ಆದಿತ್ಯರೊಡನೆಯೂ ಯುದ್ಧವಂಗೈದು ಅವರಿಂದಲೂ ಪ್ರಯೋಗಿಸಲ್ಪಟ್ಟ ಶಸ್ತ್ರಾಸ್ತ್ರಗಳಿಂದ ಸಾಂದ್ರವಾ ದ ದೇಹವುಳ್ಳವನಾಗಿ ರಕುತವಂ ಸುರಿಸುತ್ತಾ, ಮಿಂಚುಗಳಿಂದಲೂ ಗುಡುಗುಗಳಿಂದಲೂ ಒಡಗೂಡಿದ ಮಳೆಯಂ ಸು ರಿಯುತ್ತಿರುವ ಮೇಘದಂತೆ ಹೊಳೆಯುತಿದ್ದನು ||೩೬|| ಅನಂತರದಲ್ಲಿ ಆ ರಣರಂಗದಲ್ಲಿ ರಾಕ್ಷಸಸೈನ್ಯವೆಲ್ಲಾ, ಸಪ್ತ ಮರುತ್ತುಗಳಿಂದೊಡಗೂಡಿದ ದೇವತೆಗಳಿಂದ ತೀಕ್ಷ್ಣವಾದ ಆಯುಧ ಜಾಲಗಳಿಂದ ಹೊಡೆಯಲ್ಪಟ್ಟು ಓಡಿ ಹೋಗು ತಿತ್ತು ||೩೭|| ಕೆಲ ರಾಕ್ಷಸರು ಶಸ್ತ್ರಗಳಿಂದ ನಿಹತರಾದರು. ಮತ್ತೆ ಕೆಲಬರು ಆ ಬಾಧೆಯಂ ಸಹಿಸಲಾರದೇ ಭೂಮಿ ಯಲ್ಲಿ ಬಿದ್ದು ಹೊರಳಾಡುತಿದ್ದರು. ಇನ್ನು ಕೆಲವರು ವಾಹನಗಳಲ್ಲಿ ತಗಲಿಕೊಂಡಿದ್ದರು, ಮತ್ತೂ ಕೆಲವರು ಕಾ ಳಗದಲ್ಲಿ ನೈಮರತವರಾಗಿ ನಿಂತಿದ್ದರು. ಇನ್ನು ಕೆಲವರು, ರಥಗಳನ್ನೂ, ಆನೆಗಳನ್ನೂ, ಕತ್ತೆಗಳನ್ನೂ, ಒಂಟೆಗಳ ನ್ನೂ, ಸರ್ಪಗಳನ್ನೂ, ಕುದುರೆಗಳನ್ನೂ, ನೆಗಳುಗಳನ್ನೂ, ಹಂದಿಗಳನ್ನೂ, ಪಿಶಾಚ ಮುಖದಂತೆ ಮುಖಗಳುಳ್ಳ ವಾ ಹನಗಳನ್ನೂ, ಇವುಗಳನ್ನೆಲ್ಲಾ ಬಾಹುಗಳಿಂದ ಅಪ್ಪಿಕೊಂಡು ಸ್ತಂಭೀ ಭೂತರಾಗಿ ಬಿದ್ದಿದ್ದರು. ಇನ್ನು ಕೆಲಬರಾದ ರಾಕ್ಷಸರು ಮೇಲಕ್ಕೆದ್ದವರಾಗಿ ಪುನಹಾ ದೇವತೆಗಳಿಂದ ಹೊಡೆಯಲ್ಪಟ್ಟು ಮೃತರಾದರು. ಈಪರಿಯಾಗಿ ಮದವೇರಿ ಹೊಡೆಯಲ್ಪಟ್ಟ ಆ ರಾಕ್ಷಸರ ರಣವು ಭೂಮಿಯಲ್ಲಿ ಬರೆಯಲ್ಪಟ್ಟ ಚಿತ್ರದಂತೆ ಹೊಳೆಯುತಿತ್ತು ||೪೧|| ಆ ಸಮರದಲ್ಲಿ ರಕುತವೆಂಬ ಉದಕದಿಂದ ಪ್ರವಹಿಸುತ್ತಿರುವ,ಮತ್ತೂ ರಣಹದ್ದುಗಳೆಂಬ ಹದ್ದುಗಳಿಂದ ವ್ಯಾಪ್ತವಾದ ಶಸ್ತ್ರಗಳೆಂಬ ನೆ ಗಳುಗಳುಳ್ಳ ಮಹಾ ನದಿಯು ಪ್ರವಹಿಸುತ್ತಿತ್ತು ||೪೨|| ಹೀಗಿರುವ ಸಮಯದಲ್ಲಿ ಮಹಾ ಪರಾಕ್ರಮಿಯಾದ ಆ ದಶ ಗ್ರೀವನು, ದೇವತೆಗಳಿಂದ ನಿಪಾತಿತವಾದ ತನ್ನ ಸೈನ್ಯಗಳಂ ಕಂಡು ಕಡು ಕೋಪವುಳ್ಳವನಾಗಿ, ಸಮುದ್ರದೋಪಾ

CC-0. Bhagavad Ramanuja National Research Institute, Melukote Collection

Funding: Tattva Heritage Foundation,Kolkata. Digitization: eGangotri.



ಷ್ಯೇತದ್ಬಲಂಕೃತ್ಸ್ನಂದೈವತ್ಯೆರ್ವಿನಿಪಾತಿತಮ್॥೪೩॥ ಸತುಪ್ರತಿವಿಗಾಹ್ಯಾಶುಪ್ರವೃದ್ಧಂಸೈನ್ಯಸಾಗರಮ್ । ತ್ರಿದಶಾನ್ಸ ಮರೇನಿಘ್ನನ್ ಶಕ್ರಮೇವಾಭ್ಯವರ್ತತ ॥೪೪॥ ತತಶ್ಶಕ್ರೋಮಹಚ್ಚಾಪಂವಿಸ್ಫಾರ್ಯಸುಮಹಾಸ್ವನಮ್ । ಯಸ್ಯವಿಸ್ಫಾರಘೋಷೇಣಸ್ವನಂತಿಸ್ಮದಿಶೋದಶ ॥೪೫॥ ತದ್ವಿಕೃಷ್ಯಮಹಚ್ಚಾಪಮಿಂದ್ರೋರಾವಣಮೂರ್ಧನಿ।ನಿಪಾತಯಾಮಾಸಶರಾನ್ ಪಾವಕಾದಿತ್ಯವರ್ಚಸಃ ॥೪೬॥ ತಥೈವಚಮಹಾಬಾಹುರ್ದಶಗ್ರೀವೋವ್ಯವಸ್ಥಿತಃ। ಶಕ್ರಂಕಾರ್ಮುಕವಿಭ್ರಷ್ಟೈಃಶರವರ್ಷೈ ರವಾಕಿರತ್॥೪೭॥ ಪ್ರಯುಧ್ಯತೋರಥತಯೋರ್ಬಾಣವರ್ಷೈಸ್ಸಮಂತತಃ । ನಾಜ್ಞಾಯತತದಾಕಿಂಚಿತ್ಸರ್ವಂಹಿತಮಸಾವೃತಮ್ ॥೪೮॥

...ಇತಿಶ್ರೀಮದುತ್ತರ ರಾಮಾಯಣೆ ಅಷ್ಟಾವಿಂಶಸ್ಸರ್ಗಃ...

ತತಸ್ತಮಸಿಸಂಜಾತೇರಾಕ್ಷಸಾಸ್ತ್ರಿದಶಾಅಪಿ । ಅಯುಧ್ಯಂತಬಲೋನ್ಮತ್ತಾಸ್ಸೂದಯಂತಃಪರಸ್ಪರಮ್ ॥೧॥ ತತಸ್ತುದೇವಸೈನ್ಯೇನರಾಕ್ಷಸಾನಾಂಮಹದ್ಬಲಮ್। ದಶಾಂಶಸ್ಥಾಪಿತಂಯುದ್ಧೇಶೇಷಂನೀತಂಯಮಕ್ಷಯಮ್॥೨॥ತಸ್ಮಿಂಸ್ತುತಮಸಾಯು

---

ಸಮರೇ-ಕಾಳಗದಲ್ಲಿ, ತ್ರಿದಶಾನ್-ದೇವತೆಗಳನ್ನು, ನಿಘ್ನನ್-ಹೊಡೆಯುತಿರುವನಾಗಿ, ಶಕ್ರಮೇವ-ಇಂದ್ರನನ್ನೇ ಕುರಿತು, ಅಭ್ಯವರ್ತತ-ಯದುರಿಗೆ ನಿಂತು ಕ್ಕೊಂಡನು ॥೪೪॥ ತತಃ-ಬಳಿಕ, ಯಸ್ಯ ಯಾವ ಧನುಸ್ಸಿನ, ವಿಸ್ಫಾರಘೋಷೇಣ-ಟಂಕಾರದಿಂದ ಹುಟ್ಟಿದ ಧ್ವನಿಯದೆಸೆಯಿಂದ, ದಶ-ಹತ್ತಾದ, ದಿಶಃ-ದಿಕ್ಕುಗಳು, ಸ್ವನಂತಿಸ್ಮ-ಶಬ್ದಗೊಂಡವೋ, ತತ್-ಅಂಥಾ ಮಹಾಸ್ವನಂ-ಮಹಾ ಧ್ವನಿವುಳ್ಳ, ಮಹತ್-ದೊಡ್ಡದಾದ, ಚಾಪಂ-ಕೋದಂಡವನ್ನು, ವಿಸ್ಫಾರ್ಯ-ಟಂಕಾರಮಾಡಿ, ಇಂದ್ರಃ-ಇಂದ್ರನು, ಮಹತ್-ದೊಡ್ಡದಾದ, ಚಾಪಂ-ಧನುಸ್ಸನನ್ನು, ವಿಕೃಷ್ಯ-ಸೆಳದು, ಪಾವಕಾದಿತ್ಯವರ್ಚಸಃ-ಪಾವಕ-ಅಗ್ನಿಯು, ಆದಿತ್ಯ-ಸೂರ್ಯನ, ವರ್ಚಸಃ-ಪ್ರಕಾಶದಂತೆ ಪ್ರಕಾಶವುಳ್ಳ, ಶರಾನ್-ಬಾಣಗಳನ್ನು, ರಾವಣಮೂರ್ಧನಿ-ರಾವಣ-ರಾವಣನ, ಮೂರ್ಧನಿ-ಮಂಡೆಯಲ್ಲಿ, ನಿಪಾತಯಾಮಾಸ-ಬೀಳಿಸಿದನು ॥೪೬॥ ಮಹಾಬಾಹುಃ-ಮಹಾ ಭುಜಗಳುಳ್ಳ, ದಶಗ್ರೀವಃ-ರಾವಣನು, ತಥೈವ-ಹಾಗೇನೆ, ವ್ಯವಸ್ಥಿತಃ-ನಿಂತವನಾಗಿ, ಕಾರ್ಮುಕವಿಭ್ರಷ್ಟೈಃ-ಧನುಸ್ಸಿನ ದೆಸೆಯಿಂದ ಬಿಡಲ್ಪಟ್ಟ, ಶರವರ್ಷೈಃ-ಬಾಣವರ್ಷಗಳಿಂದ, ಶಕ್ರಂ-ದೇವೇಂದ್ರನನು,ಅವಾಕಿರತ್-ಸುರಿಸಿದನು॥೪೭॥ ಅಥ-ಬಳಿಕ, ಸಮಂತತಃ-ಯಲ್ಲಾ ಕಡೆಯಲ್ಲಿ, ಬಾಣವರ್ಷೈಃ-ಬಾಣವರ್ಷಗಳಿಂದ, ತಯೋಃ-ಆ ಇಂದ್ರ ರಾವಣರಿಬ್ಬರು, ಪ್ರಯುಧ್ಯತೋಸ್ಸತೋಃ-ಯುದ್ಧಮಾಡುತಿರುವರಾಗಿರಲೀಕಾಗಿ, ತದಾ-ಆ ಕಾಲದಲ್ಲಿ, ಕಿಂಚಿತ್-ಯಾವದಾದರು, ನಾಜ್ಞಾಯತ-ತಿಳಿಯಲ್ಪಡಲಿಲ್ಲಾ, ಸರ್ವಂ-ಸಮಸ್ತವು, ತಮಸಾ-ಕತ್ತಲಿನಿಂದ, ಆವೃತಂ-ಮುಚ್ಚಿಕೊಳಲ್ಪಟ್ಟಿತ್ತಷ್ಟೆ ॥ ॥೪೮॥

—...*ಇತ್ಯುತ್ತರ ರಾಮಾಯಣೆ ಅಷ್ಟಾವಿಂಶಸ್ಸರ್ಗಃ.*...—

ತತಃ-ಬಳಿಕ, ತಮಸಿ-ಕತ್ತಲು, ಸಂಜಾತೇಸತಿ-ಆಗತಿರಲೀಕಾಗಿ, ಬಲೋನ್ಮತ್ತಾಃ-ದೇಹತ್ರಾಣೆಯಿಂದ ಮದವೇರಿದ, ರಾಕ್ಷಸಾಃ-ರಕ್ಕಸರು,ತ್ರಿದಶಾಃ-ದೇವತೆಗಳೂ ಕೂಡಾ, ಪರಸ್ಪರಂ-ಒಬ್ಬರಿಗೊಬ್ಬರು, ಸೂದಯಂತಃ-ತಿವಿಯುತಿರುವರಾಗಿ, ಅಯುಧ್ಯಂತ-ಯುದ್ಧಮಾಡಿದರು ॥೧॥ ತತಸ್ತು-ಬಳಿಕಾದರೆ, ದೇವಸೈನ್ಯೇನ-ದೇವತೆಗಳ ಸೇನೆಯಿಂದ, ರಾಕ್ಷಸಾನಾಂ-ರಕ್ಕಸರ, ಮಹತ್-ದೊಡ್ಡದಾದ,ಬಲಂ-ಸೈನ್ಯವು, ದಶಾಂಶಸ್ಥಾಪಿತಂ-ದಶಾಂಶಹತ್ತರಲ್ಲಿ ಒಂದುಅಂಶವು, ಸ್ಥಾಪಿತಂ-ಇಡಲ್ಪಟ್ಟಿತು, ಶೇಷಂ-ನಿಂತ ಸೈನ್ಯವು, ಯುದ್ಧೇ-ಕಾಳಗದಲ್ಲಿ, ಯಮಕ್ಷಯಂ-ಯಮನಮನೆಯನ್ನು, ನೀತಂ-ಹೊಂದಿಸಲ್ಪಟ್ಟಿತು ॥೨॥ ತಸ್ಮಿನ್ಯುದ್ಧೇ-ಆ ಯುದ್ಧದಲ್ಲಿ, ಪರಸ್ಪರಂ-ಒಬ್ಬರಿಗೊಬ್ಬರು, ಯುಧ್ಯಮಾನಾಃ-ಯುದ್ಧ ಮಾಡುತ್ತಿರುವ, ಸರ್ವೇ-ಸಮಸ್ತರಾದ, ತೇ-ದೇವರಾ

---

ದಿಯಾಗಿ ಅಪಾರವಾಗಿರ್ಪ ದೇವ ಸೇನೆಯಂ ಹೊಕ್ಕು ಅವರಂ ಹೊಡೆಯುತ್ತಾ ಇಂದ್ರನನ್ನೇ ಕುರಿತೆದುರಾಗಿ ಬರುತಿದ್ದನು ॥೪೪॥ ಆ ಬಳಿಕ ದೇವೇಂದ್ರನುಯಾವ ಧನುಸ್ಸಿನ ಟೇಂಕಾರದ ದೆಸೆಯಿಂದ ಹತ್ತಾದ ದಿಕ್ಕುಗಳೂ ಶಬ್ದಗೊಂಡವೋ ಅಂಥಾ ಮಹಾ ಧ್ವನಿವುಳ್ಳ ದೊಡ್ಡದಾದ ಕೋದಂಡವನ್ನು ಟೇಂಕಾರ ಮಾಡಿ, ದೇವೇಂದ್ರನು ಅಗ್ನಿಗೂ, ಸೂರ್ಯನಿಗೂ ಸಮಾನವಾದ ಕಾಂತಿಯಂತೆ ಕಾಂತಿಯುಳ್ಳ ಬಾಣಗಳನ್ನು ರಾವಣಾಸುರನ ಸಿರಸ್ಸಿನಲ್ಲಿ ಬೀಳಿಸಿದನು॥೪೬॥ ಹಾಗೆಯೇ ನಿಂತಿರುವ ಮಹಾ ಪರಾಕ್ರಮ ಶಾಲಿಯಾದ ರಾವಣಾಸುರನಾದರೆ, ಕೋದಂಡದಿಂದ ಬಿಡಲ್ಪಡುತ್ತಿರುವ ಬಾಣ ತಂಡಗಳಿಂದ, ಆ ದೇವೇಂದ್ರನನ್ನು ಹೊಡೆಯುತಿದ್ದನು ॥೪೭॥ ಆ ಪರಿಯಾಗಿ ಯುದ್ಧವಂಗೈಯ್ಯುತಿರುವ, ಆ ದೇವೇಂದ್ರ, ರಾವಣರೀರ್ವ್ವರ ಬಾಣ ವರುಷಗಳಿಂದ, ಎಲ್ಲಾ ಕಡೆಯಲ್ಲಿಯೂ, ಗಾಡಾಂಧಕಾರವು ಮುಚ್ಚಿಕೊಂಡು ಏನೂ ಕಾಣಿಸದೆ ಇತ್ತು. ॥೪೮॥

—...*ಉತ್ತರ ರಾಮಾಯಣದಲ್ಲಿ ೨೮ನೇ ಸರ್ಗಂ ಮುಗಿದುದು*...—

ಗಾಡಾಂಧಕಾರವು ಪ್ರಾಪ್ತವಾಗಲೂ ದೇವರಾಕ್ಷಸರೀರ್ವ್ವರೂ ಪರಸ್ಪರವಾಗಿ ಹೋಡಿಯುತ್ತಿರುವರಾಗಿ, ಯುದ್ಧವಂಗೈಯ್ಯುತಿದ್ದರು ॥೧॥ ಸಮನಂತರ ಕಾಲದಲ್ಲಿ ಆ ದೇವ ಸೈನ್ಯದಿಂದ, ರಾಕ್ಷಸರ ಬಲವೆಲ್ಲಾ, ಹತ್ತರಲ್ಲಿ ಒಂದುಪಾಲು ನಿಲ್ಲಿಸಲ್ಪಟ್ಟು ಮಿಕ್ಕ ಸೈನ್ಯವೆಲ್ಲಾ ನಾಶಿಸಲ್ಪಟ್ಟಿತು ॥೨॥ ಆ ರಣರಂಗದಲ್ಲಿ ಆದರೆ ದೇವ ರಾಕ್ಷಸರೆಲ್ಲರು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗ್ಧೆ ಸರ್ವೆತೆದೆವರಾಕ್ಷಸಾಃ। ಅನ್ಯೋನ್ಯಂನಾಭ್ಯಜಾನಂತಯುಧ್ಯಮಾನಾಃಪರಸ್ಪರಂ ॥೩॥ ಇಂದ್ರಶ್ಚ ರಾವಣಶ್ಚೈವ ರಾವಣಿಶ್ಚ ಮಹಾಬಲಃ । ತಸ್ಮಿಂಸ್ತಮೋಜಾಲವೃತೆಮೋಹಮೀಯುರ್ನತೆತ್ರಯಃ ॥೪॥ ಸತುದೃಷ್ಟ್ವಾ ಬಲಂಸರ್ವಂನಿಹತಂರಾವಣೋರಣೆ। ಕ್ರೋಧಮಭ್ಯಾಗಮತ್ತೀವ್ರಂಮಹಾನಾದಂಚಮುಕ್ತವಾನ್ ॥೫॥ ಕ್ರೋಧಾತ್ಸೂತಂಸುದುರ್ಧರ್ಷಂಸ್ಯಂದನಸ್ಥಮುವಾಚಹ । ಪರಸೈನ್ಯಸ್ಯಮಧ್ಯೇನಯಾವದಂತಂನಯಸ್ವಮಾಮ್॥೬॥ ಅದ್ಯೈತಾಂಸ್ತ್ರಿದಶಾನ್ ಸರ್ವಾನ್ ವಿಕ್ರಮೈಸ್ಸಮರೆಸ್ವಯಮ್।ನಾನಾಶಸ್ತ್ರೈರ್ಮಹಾಘೋರೈರ್ನಾಶಯಾಮಿನಭಸ್ಥಲಾತ ॥೭॥ ಅಹಮಿಂದ್ರಂವಧಿಷ್ಯಾಮಿಧನದಂವರುಣಂಯಮಮ್।ತ್ರಿದಶಾನ್ ವಿನಿಹತ್ವಾಚಸ್ವಯಂಸ್ಥಾಸ್ಯಾಮ್ಯಥೋಪರಿ ॥೮॥ ವಿಷಾದೋನಚಕರ್ತವ್ಯಶ್ಶೀಘ್ರಂವಾಹಯಮೆರಥಮ್। ತ್ರಿಃಖಲುತ್ವಾಂಬ್ರವೀಮ್ಯದ್ಯಯಾವದಂತಂನಯಸ್ವಮಾಮ್ ॥೯॥ ಅಯಂಸನಂದನೋದ್ದೆಶೋಯತ್ರವರ್ತಾಮಹೆವಯಮ್ । ನಯಮಾಮದ್ಯತತ್ರತ್ವಮುದಯೊಯತ್ರಪರ್ವತಃ ॥೧೦॥ ತಸ್ಯತದ್ವಚನಂಶ್ರುತ್ವಾತುರಗಾನ್ ಸಮನೋಜವಾನ್ । ಆದಿದೆಶಾಥಶತ್ರೂಣಾಂಮಧ್ಯೇನೈವಚಸಾರಥಿಃ ।೧೧॥ ತಸ್ಯತಂನಿಶ್ಚಯಂಜ್ಞಾತ್ವಾಶಕ್ರೋದೇವೇಶ್ವರಸ್ತದಾ।ರಥ

---

ಕ್ಷಸಾಃ-ಆ ದೇವತೆಗಳೂ ರಾಕ್ಷಸರೂಸಹಾ, ತಮಸಾ-ಕತ್ತಲಿನಿಂದ, ಅನ್ಯೋನ್ಯಂ- ಒಬ್ಬರನ್ನೊಬ್ಬರು, ನಾಭ್ಯಜಾನಂತ-ಅರಿಯದೇ ಹೋದರು॥೩॥ ಇಂದ್ರಶ್ಚ-ಇಂದ್ರನುನ್ನು, ರಾವಣಶ್ಚೈವ-ರಾವಣನುನ್ನು, ಮಹಾಬಲಃ-ಮಹಾ ಬಲಶಾಲಿಯಾದ, ರಾವಣಿಶ್ಚ-ಮೇಘನಾದನೂಯೆಂಬ, ತ್ರಯಃ-ಅವರು ಮುವ್ವರು, ತಮೋಜಾಲವೃತೆ-ತಮಃ-ಕತ್ತಲುಗಳ, ಜಾಲ-ತಂಡೆಗಳಿಂದ,ವೃತೆ-ವ್ಯಾಪ್ತಮಾದ, ತಸ್ಮಿನ್-ಆ ಯುದ್ಧದಲ್ಲಿ, ಮೋಹಂ-ಪ್ರಮಾದವನ್ನು, ನೆಯುಃ- ಹೊಂದದೇ ಹೋದರು ॥೪॥ ಸಃರಾವಣಸ್ತು-ಆ ರಾವಣನಾದರೆ, ಸರ್ವಂ-ಸಮಸ್ತವಾದ, ಬಲಂ-ಸೈನ್ಯವನ್ನು, ರಣೆ - ಕಾಳಗದಲ್ಲಿ, ನಿಹತಂ-ಹೊಡೆಯಲ್ಪಟ್ಟದ್ದಂನಾಗಿ, ದೃಷ್ಟ್ವಾ- ಕಂಡು, ತೀವ್ರಂ-ತೀಕ್ಷ್ಣಮಾದ, ಕ್ರೋಧಂ-ಕೋಪವನ್ನು, ಅಭ್ಯಾಗಮತ್ - ಹೊಂದಿದನುಮಹಾನಾದಂಚ-ದೊಡ್ಡ ಕೋಲಾಹಲ ಧ್ವನಿಯನ್ನು ಕೂಡ, ಮುಕ್ತವಾನ್-ಬಿಟ್ಟನು ॥೫॥ ಕ್ರೋಧಾತ್-ಕ್ರೋಧದ ದೆಸೆಯಿಂದ, ಸ್ಯಂದನಸ್ಥಂ-ರಥದಲ್ಲಿ ಕುಳಿತು ಕೊಂಡಿರುವ, ಸುದುರ್ಧರ್ಷಂ-ತಿರಸ್ಕರಿಸಲಸಾಧ್ಯನಾದ,ಸೂತಂ-ಸಾರಥಿಯನ್ನು ಕುರಿತು, ಮಾಂ-ನನ್ನನ್ನು, ಪರಸೈನ್ಯಸ್ಯ-ಶತ್ರುಸೈನ್ಯದ, ಯಾವದಂತಂ-ಕೊನೆವರಿಗೂ, ಮಧ್ಯೇನ-ಮಧ್ಯಮಾರ್ಗದಿಂದ, ನಯಸ್ವೇತಿ-ಹೊಂದಿಸೂಯೆಂದು, ಉವಾಚಹ-ಹೇಳಿದನಷ್ಟೆ ॥೬॥ ಅದ್ಯ-ಈಗ, ಏತಾನ್-ಈ ಎದುರಾಗಿರುವ, ಸರ್ವಾನ್-ಸಮಸ್ತರಾದ, ತ್ರಿದಶಾನ್-ದೇವತೆಗಳನ್ನು, ಸಮರೆ-ಕಾಳಗದಲ್ಲಿ, ಮಹಾಘೋರೈಃ-ಮಹಾ ಭಯಂಕರಗಳಾದ, ನಾನಾಶಸ್ತ್ರೈಃ-ನಾನಾ ಬಗೆಗಳಾದ ಶಸ್ತ್ರಗಳಿಂದ, ನಭಸ್ತಲಾತ್- ಅಂತರಿಕ್ಷಪ್ರದೇಶದ ದೆಸೆಯಿಂದ, ನಾಶಯಾಮಿ-ನಾಶಮಾಡುವೆನು ॥೭॥ ಅಹಂ-ನಾನು, ತ್ರಿದಶಾನ್-ದೇವತೆಗಳನ್ನು, ಹತ್ವಾಚ-ಕೊಂದೂಕೂಡ, ಇಂದ್ರಂ-ಇಂದ್ರನನ್ನು, ಧನದಂ-ಕುಬೇರನನ್ನು, ಯಮಂ-ಯಮನನ್ನು, ವರುಣಂ-ವರುಣನನ್ನು, ವಧಿಷ್ಯಾಮಿ-ಕೊಲ್ಲುವೆನು, ಅಥ-ಬಳಿಕ, ಸ್ವಯಮೇವ-ನಾನೆ, ಉಪರಿ-ಮ್ಯಾಲೆ ಇರುವ ಸ್ವರ್ಗಲೋಕದಲ್ಲಿ, ಸ್ಥಾಸ್ಯಾಮಿ-ಇರುತ್ತೇನೆ ॥೮॥ ವಿಷಾದಶ್ಚ-ವ್ಯಸನವೂನು, ನಕರ್ತವ್ಯಃ-ಮಾಡತಕ್ಕದ್ದಲ್ಲಾ, ಮೆ-ನನ್ನ, ರಥಂ-ರಥವನ್ನು, ಶೀಘ್ರಂ-ಜಾಗ್ರತೆಯಾಗಿ, ವಾಹಯ-ನಡಿಸು, ಮಾಂ-ನನ್ನನ್ನು, ಯಾವದಂತಂ-ಕೊನೆಮುಟ್ಟೋವರಿಗೂ, ನಯಸ್ವ-ಕರದುಕೊಂಡು ಹೋಗು, ತ್ವಾಂಖಲು-ನಿನ್ನನ್ನು, ಕುರಿತು, ತ್ರಿಃ-ಮೂರುಪ್ರಕಾರವಾಗಿ, ಅದ್ಯ-ಈಗ, ಬ್ರವೀಮಿ-ಹೇಳುತ್ತೇನೆ ॥೯॥ ಅಯಂ-ಇದು, ಸಃನಂದನೋದ್ದೇಶಃ-ಆ ನಂದನವನ ಇರತಕ್ಕ ಪ್ರದೇಶವು, ಯತ್ರ-ಯಾವಸ್ಥಳದಲ್ಲಿ, ವಯಂ-ನಾವುಗಳು, ವರ್ತಾಮಹೆ-ಇರುತ್ತೇವೊ, ಯತ್ರ-ಯಾವಸ್ಥಳದಲ್ಲಿಉದಯಃಪರ್ವತಃ-ಉದಯಪರ್ವತ ವಿಧಿಯೊ, ತತ್ರ-ಆ ಸ್ಥಳದಲ್ಲಿ, ಅದ್ಯ-ಈಗ, ಮಾಂ-ನನ್ನನ್ನು,ನಯ ಹೊಂದಿಸು ॥ ೧೦ ॥ ಸಸಾರಥಿಃ-ಆ ಸಾರಥಿಯು, ತಸ್ಯ-ಆ ರಾವಣನ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ,"ಅಥ-ಬಳಿಕ, ಮನೋಜವಾನ್-ಮನೊವೇಗದಂತೆವೇಗವುಳ್ಳ, ತುರಗಾನ್-ಕುದುರೆಗಳನ್ನು, ಶತ್ರೂಣಾಂ-ಶತ್ರುಗಳ, ಮಧ್ಯೇನೈವಚ-ಮಧ್ಯ ಮಾರ್ಗದಿಂದಲೆ,ಆದಿದೆಶ-ಆಜ್ಞಾಪಿಸಿದನು ॥೧೧ ॥ ತ

---

ಅನ್ಯೋನ್ಯವಾಗಿ, ಯುದ್ಧವಂಗೈಯ್ಯುತ್ತಿರುವರಾಗಿ, ಗಾಢಾಂಧಕಾರದಿಂದ ಒಬ್ಬರನ್ನೊಬ್ಬರು ತಿಳಿಯದೇ ಇರುವರಾದರೂ, ಕಡು ಪರಾಕ್ರಮಿಗಳಾದ, ಇಂದ್ರ, ರಾವಣ, ಮೇಘನಾದರೆಂಬೀ ಮೂರ್ವರು ಮಾತ್ರ ಮೋಹವನ್ನೈದಲಿಲ್ಲಾ ॥೪॥ ಆ ರಾವಣನಾದರೆ ನಿಹತವಾಗಿರುವ ತನ್ನ ಬಲವಂ ಕಂಡು ಬಲು ಕೋಪವುಳ್ಳವನಾಗಿ ಅಟ್ಟಹಾಸವಂಗೈದು, ಸಾರಥಿಯಂ ಕುರಿತಿಂತೆಂದನು. ಎಲೈ ಸಾರಥಿಯೇ ! ಶತ್ರು ಸೇನೆಯ ಮಧ್ಯದಿಂದ ಕೊನೆಯವರಿವಿಗೂ ನನ್ನನು ಹೊಂದಿಸು, ನಾನು ಈ ಸಂಗರದಲ್ಲಿ ಸ್ವವೀರ್ಯಪರಾಕ್ರಮದಿಂದ, ಆ ದೇವತೆಗಳನ್ನೆಲ್ಲಾ ಘೋರವಾದ ಶಸ್ತ್ರಗಳಿಂದ ವಿನಾಶಿಸುವೆನು॥೭॥ ಇದಲ್ಲದೆ ಇಂದ್ರನನ್ನೂ ವರುಣನನ್ನೂ ಯಮನನ್ನೂ ಸಹಾ ಕೊಂದು, ದೇವತೆಗಳನ್ನೆಲ್ಲಾ ಹೊಡದು ಆ ಬಳಿಕ ಸ್ವರ್ಗದಲ್ಲಿ ನಿಲ್ಲುವೆನು. ಇದು ದುಃಖಿಸುವದಕ್ಕೆ ಸಮಯವಲ್ಲಾ ಮೂರು ಮಾತಿಗೂ ಹೇಳುತ್ತೇನೆ ಕೇಳು,—ನಾನು ದೇವ ಸೇನೆಯ ತುದಿಭಾಗವಂ ಶೇರುವ ವರಿವಿಗೂ ಜಾಗ್ರತೆಯಾಗಿ ರಥವಂನಡೆಯಿಸು॥೯॥ ಈಗ ನಾವು ನಂದನ ವನದ ಸಮೀಪದಲ್ಲಿಧೇವೆ, ಇಲ್ಲಿಂದ ತ್ವರಿತವಾಗಿ ಉದಯ ಪರ್ವತದ ಸಮೀಪವಂ ಹೊಂದಿಸೆಂದು ರಾವಣನು ನುಡಿದ ಬಳಿಕ, ಆ ಸಾರಥಿಯು ಮನೋ ವೇಗವುಳ್ಳ ಆ ಕುದುರೆಗಳಂ ತ್ವರಿತವಾಗಿ ಶತ್ರುಗಳ ಮಧ್ಯ ಮಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ಥಸ್ಸಮರಸ್ಥಾಂಸ್ತಾಂದೇವಾನ್ವಾಕ್ಯಮಥಾಬ್ರವೀತ್॥೧೨॥ ಸುರಾಃಶೃಣುತಮದ್ವಾಕ್ಯಂಯತ್ತಾವನ್ಮಮರೋಚತೇ । ಜೀವನ್ನೇವದಶಗ್ರೀವಸ್ಸಾಧುರಕ್ಷೋನಿಗೃಹ್ಯತಾಮ್ ॥೧೩॥ ಏಷಹ್ಯತಿಬಲಸ್ಸೈನ್ಯೇರಥೇನಪವನೌಜಸಾ । ಆಗಚ್ಛತಿಪ್ರವೃದ್ಧೋರ್ಮಿಸ್ಸಮುದ್ರಇವಪರ್ವಣಿ॥೧೪॥ನಹ್ಯೇಷಹಂತುಂಶಕ್ಯೋದ್ಯವರದಾನಾತ್ಸುನಿರ್ಭಯಃ । ತಂಗೃಹೀಷ್ಯಾಮಿವೈ ರಕ್ಷೋ ಯತ್ತಾಭವತಸಂಯುಗೇ ।೧೫॥ ಯಥಾಬಲಿಂನಿಗೃಹ್ಯೈತತ್ತ್ರೈಲೋಕ್ಯಂಭುಜ್ಯತೇಮಯಾ । ಏವಮೇತಸ್ಯಪಾಪಸ್ಯನಿಗ್ರಹೋಮಮರೋಚತೇ॥೧೬॥ ತತೋನ್ಯಂದೇಶಮಾಸಾದ್ಯಶಕ್ರಸ್ಸಂತ್ಯಜ್ಯರಾವಣಮ್ । ಅಯುಧ್ಯತಮಹಾತೇಜಾರಾಕ್ಷಸಾನ್ನಾಶಯನ್ಮೃಧೇ ।೧೭॥ ಉತ್ತರೇಣದಶಗ್ರೀವಃಪ್ರವಿವೇಶಾನಿವರ್ತಿತಃ । ದಕ್ಷಿಣೇನೈವಪಾರ್ಶ್ವೇನಪ್ರವಿವೇಶಶತಕ್ರತುಃ ॥೧೮॥ತತಸ್ಸಯೋಜನಶತಂಪ್ರವಿಷ್ಟೋರಾಕ್ಷಸಾಧಿಪಃ । ದೇವಾನಾಂಚಬಲಂಕೃತ್ಸ್ನಂಶರವರ್ಷೈರವಾಕಿರತ್ ॥೧೯॥ ತತಶ್ಶಕ್ರೋ

ಸ್ಯ-ಆ ರಾವಣನ, ತಂನಿಶ್ಚಯಂ-ಆ ನಿಶ್ಚಯದನ್ನು, ಜ್ಞಾತ್ವಾ- ತಿಳಿದು, ತದಾ-ಆ ಕಾಲದಲ್ಲಿ, ರಥಸ್ಥಃ-ರಥಾರೂಢನಾದ, ದೇವೇಶ್ವರಃ-ದೇವತೆಗಳಿಗೆ ಅಧಿಪತಿಯಾದ, ಶಕ್ರಃ-ದೇವೇಂದ್ರನು, ಸಮರಸ್ಥಾನ್-ಯುದ್ಧರಂಗದಲ್ಲಿರುವ, ತಾನ್‌ದೇವಾನ್-ಆ ದೇವತೆಗಳನ್ನು ಕುರಿತು, ವಾಕ್ಯಂ-ಮಾತನ್ನು, ಅಥ-ಬಳಿಕ, ಅಬ್ರವೀತ್-ನುಡಿದನು॥ ೧೨॥ಹೇಸುರಾಃ-ಎಲೈದೇವತೆಗಳಿರ್ರಾ, ಮಮ-ಯೆನಗೆ, ಯತ್ತಾವತ್-ಯಾವದಾದರೆ, ರೋಚತೇ-ತೋರುವದೋ, ತತ್-ಆ, ಮದ್ವಾಕ್ಯಂ-ನನ್ನ ಮಾತನ್ನು,ಶೃಣುತ-ಕೇಳಿರಿ, ದಶಗ್ರೀವಃ-ರಕ್ಷಃ-ರಾವಣಾಸುರನೆಂಬ ರಾಕ್ಷಸನು, ಜೀವನ್ನೇವ-ಬದುಕಿ ಇರುವನಾಗಿಯೆ ಸಾಧು-ಚನ್ನಾಗಿ, ನಿಗೃಹ್ಯತಾಂ-ಹಿಡಿದುಕೊಳ್ಳಲ್ಪಡಲಿ ॥೧೩॥ ಅತಿಬಲಃ-ಬಲು ಬಲಿಷ್ಠನಾದ, ಏಷಃ-ಈ ರಾವಣನು, ಪವನೌಜಸಾ- ವಾಯುವಿನಂತೆ ವೇಗವುಳ್ಳ, ರಥೇನ-ರಥದಿಂದ, ಸೈನ್ಯೇ-ದಂಡಿನಲ್ಲಿ, ಪ್ರವೃದ್ಧೋರ್ಮಿಃ-ಪ್ರವೃದ್ಧ-ವೃದ್ಧಿಗೊಂಡ, ಊರ್ಮಿಃ-ತೆರಂಗಗಳುಳ್ಳ, ಪರ್ವಣಿ-ಪೂರ್ಣಮಾಸ್ಯಯಲ್ಲಿ, ಸಮುದ್ರಇವ-ಕಡಲಿನಂತೆ, ಆಗಚ್ಛತಿ - ಬರುತ್ತಾನೆ ॥ ೧೪ ॥ ಏಷಃ-ಈ ರಾವಣನು, ವರದಾನಾತ್ - ಬ್ರಹ್ಮ ವರದಿಂದ, ಸುನಿರ್ಭಯಃ-ಭಯವಿಲ್ಲದವನಾದ ಕಾರಣ, ಅದ್ಯ-ಈಗ, ಹಂತುಂ-ಹೊಡೆಯುವದಕ್ಕೆ, ನಶಕ್ಯೋಹಿ-ಸಾಧ್ಯನಾದವನಲ್ಲವಷ್ಟೆ, ರಕ್ಷಃ-ರಾಕ್ಷಸನಾದ, ತಂವೈ - ಆ ರಾವಣನನ್ನಾದರೋ, ಗೃಹೀಷ್ಯಾಮಿ-ಹಿಡುಕೊಳ್ಳುವೆನು, ಸಂಯುಗೇ-ಕಾಳಗದಲ್ಲಿ, ಯತ್ತಾಃ-ಜಾಗರೂಕರು, ಭವತ- ಆಗಿರಿ ॥೧೫ ॥ ಯಥಾ-ಹ್ಯಾಗೆ, ಬಲಿಂ-ಬಲಿಚಕ್ರವರ್ತಿಯನ್ನು, ನಿಗೃಹ್ಯ-ನಿಗ್ರಹಿಸಿ, ಏತತ್ತ್ರೈಲೋಕ್ಯಂ-ಈಲೋಕತ್ರಯವು, ಮಯಾ-ನನ್ನಿಂದ, ಭುಜ್ಯತೇ-ಅನುಭವಿಸಲ್ಪಟ್ಟಿತೋ, ಏವಂ-ಹಾಗೇನೆ, ಏತಸ್ಯ-ಈ, ಪಾಪಸ್ಯ-ಪಾಪಿಷ್ಠನಾದ ರಾವಣನ, ನಿಗ್ರಹಃ-ನಿಗ್ರಹವು, ಮಮ-ಯನಗೆ, ರೋಚತೇ-ತೋರುತ್ತದೆ॥ ೧೬ ॥ ತತಃ-ಬಳಿಕ, ಮಹಾತೇಜಾಃ-ಮಹಾಪರಾಕ್ರಮಿಯಾದ, ಶಕ್ರಃ-ದೇವೇಂದ್ರನು, ಅನ್ಯಂದೇಶಂ-ಮತ್ತೊಂದು ಪ್ರದೇಶವನ್ನು, ಆಸಾದ್ಯ-ಹೊಂದಿ, ರಾವಣಂ-ರಾವಣಾಸುರನನ್ನು, ಸಂತ್ಯಜ್ಯ-ಬಿಟ್ಟು, ರಾಕ್ಷಸಾನ್-ರಾಕ್ಷಸರನ್ನು, ಮೃಧೇ-ಕಾಳಗದಲ್ಲಿ, ನಾಶಯನ್-ನಾಶಗೊಳಿಸುತಿರುವನಾಗಿ, ಅಯುಧ್ಯತ-ಯುದ್ಧಮಾಡಿದನು ॥೧೭॥ ದಶಗ್ರೀವಃ-ರಾವಣನು, ಅನಿವರ್ತಿತಃ-ತಡೆಮಾಡಲ್ಪಡದಿರುವನಾಗಿ, ಉತ್ತರೇಣ-ಉತ್ತರ ಮಾರ್ಗದಿಂದ, ಪ್ರವಿವೇಶ-ಹೊಕ್ಕನು, ಶತಕ್ರತುಃ- ದೇವೇಂದ್ರನಾದರೆ, ದಕ್ಷಿಣೇನಪಾರ್ಶ್ವೇನೈವ - ದಕ್ಷಿಣ ಮಾರ್ಗದಿಂದಲೆ, ಪ್ರವಿವೇಶ - ಹೊಕ್ಕನು ॥ ೧೮ ॥ ತತಃ-ಬಳಿಕ, ಸರಾಕ್ಷಸಾಧಿಪಃ-ಆ ರಾವಣನು, ಯೋಜನಶತಂ-ನೂರುಗಾವುದವನ್ನು, ಪ್ರವಿಷ್ಟಃ-ಹೊಕ್ಕಿದವನಾಗಿ, ಕೃತ್ಸ್ನಂ-ಸಮಸ್ತವಾದ, ದೇವಾನಾಂ-ದೇವತೆಗಳ, ಬಲಂಚ- ಸೈನ್ಯವನ್ನು, ಶರವರ್ಷೈಃ-ಬಾಣವರ್ಷಗಳಿಂದ, ಅವಾಕಿರತ್-ಸುರಿಸಿದನು ॥ ೧೯ ॥ ತತಃ-ಬಳಿಕ, ಶಕ್ರಃ-ದೇವೇಂದ್ರನು, ಸ್ವಕಂಬಲಂ-ಸ್ವಕೀಯ್ಯವಾದ ಸೈ

ರ್ಗದಿಂದಲೇ ತರುಬುಕೊಂಡು ಹೋಗುತಿದ್ದನು ॥೧೧॥ ಆ ಸಮಯದೋಳ್ ರಥಗತನಾದ ದೇವೇಂದ್ರನು ರಾವಣನ ಮನೋಗತವಂ ತಿಳಿದವನಾದ ಬಳಿಕ ರಣ ಗತರಾದ ದೇವತೆಗಳಂ ಕುರಿತಿಂತೆಂದನು ॥೧೨॥ ಎಲೈ ದೇವತ್ತೆಗಳಿರ್ರಾ ಎನಗಿಷ್ಟವಾಗಿರುವ ಈ ಮಾತಂ ಕೇಳಿರಿ, ಈ ದುಷ್ಟನಾದ ರಾವಣನು ಬದುಕಿರುವ ಹಾಗೆಯೇ ಹಿಡಿದುಕೊಂಬೋಣ ಬಲು ಬಲವುಳ್ಳ ಇವನು ವಾಯುವೇಗವುಳ್ಳ ರಥದಿಂದ ಸೈನ್ಯದಲ್ಲಿ, ಪರ್ವಕಾಲಗಳಲ್ಲಿ ವೃದ್ಧಿ ಹೊಂದುತ್ತಿರುವ ಸಮುದ್ರನ ತೆರದಿ ನುಗ್ಗಿ ಬರುತ್ತಿರುವನು ॥೧೪॥ ಬ್ರಹ್ಮವರ ಪ್ರದಾನದಿಂದ ನಿರ್ಭಯನಾಗಿರುವ ಇವನನ್ನೀಗ ಕೊಲ್ಲಲಸಾಧ್ಯವು, ಆದಕಾರಣ ನೀವೆಲ್ಲರು ರಣದಲ್ಲಿ ಜಾಗರೂಕರಾಗಿರಿ, ನಾನಾದರೆ ಇವನನ್ನೂ ಹಿಡಿದು ಕೊಳ್ಳುವೆನು ॥೧೫॥ ಮತ್ತೂ ಬಲಿಚಕ್ರವರ್ತಿಯಂ ನಿಗ್ರಹಿಸಿ ಹ್ಯಾಗೆ ಈ ತ್ರೈಲೋಕ್ಯವನ್ನನುಭವಿಸುತ್ತಿಹೇನೆಯೋ, ಹಾಗೆಯೇ ಪಾಪಿಯಾದ ಈ ದುಷ್ಟನನ್ನೂ ಕೂಡಾ ನಿಗ್ರಹಿಸಲಿಚ್ಛಿಸುವೆನೆಂದು ಇಂದ್ರನು ದೇವತೆಗಳಂ ಕುರಿತು ನುಡಿದು ॥೧೬॥ ಅನಂತರದಲ್ಲಿ ಮಹಾ ತೇಜಸ್ವಿಯಾದ ಇಂದ್ರನು, ರಾವಣನಂತೊರೆದು ಮತ್ತೊಂದು ಪ್ರದೇಶವಂ ಹೊಂದಿ ಅಲ್ಲಿ ಮಹತ್ತರವಾದ ಯುದ್ಧಮಂಗೈಯ್ಯುತ್ತಿದ್ದನು ॥೧೭॥ ಅದೆಂತೆನೆ,—ಉತ್ತರ ಮಾರ್ಗದಿಂದ ದಶಗ್ರೀವನು ಹಿಂದಕ್ಕೆ ತಿರುಗದೇ ಇರುವನಾಗಿ ಹೊರಟನು. ಆ ಇಂದ್ರನಾದರೆ ದಕ್ಷಿಣಪಾರ್ಶ್ವದಲ್ಲಿ ಹೊಕ್ಕನು ॥೧೮॥ ಸಮನಂತರಕಾಲದೊಳ್ ಆ ದಶಕಂಠನು, ನೂರು ಗಾವುದ ದೂರವು ಪ್ರವೇಸಿಸಿದವನಾಗಿ, ದೇವತೆಗಳ ಬಲದಲ್ಲಿ ಬಾಣ ವರುಷಗಳಂ ಸುರಿಸುತ್ತಿದ್ದನು ॥೧೯॥ ಅನಂತರದಲ್ಲಿ ದೇವೇಂದ್ರನು ತನ್ನ ಬಲದಲ್ಲಿ ಪ್ರವೆಸಿಸುತ್ತಿರುವ ಆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಿರೀಕ್ಷ್ಯಾಥಪ್ರವಿಷ್ಟಂತಂಬಲಂಸ್ವಕಂ। ನ್ಯವರ್ತಯದಸಂಭ್ರಾಂತಸ್ಸಮಾವೃತ್ಯದಶಾನನಮ್॥೨೦॥ಏತಸ್ಮಿನ್ನಂತರೇನಾದೋಮುಕ್ತೋದಾನವರಾಕ್ಷಸೈಃ। ಹಾಹತಾಸ್ಮೇತಿತಂದೃಷ್ಟ್ವಾಗ್ರಸ್ತಂಶಕ್ರೇಣರಾವಣಮ್॥೨೧॥ ತತೋರಥಂ ಸಮಾರುಹ್ಯರಾವಣಿಃಕ್ರೋಧಮೂರ್ಛಿತಃ। ತತ್ಸೈನ್ಯಮಭಿಸಂಕ್ರುದ್ಧಃಪ್ರವಿವೇಶಸುದಾರುಣಮ್॥೨೨॥ಸತಾಂಪ್ರವಿಶ್ಯಮಾಯಾಂತುದತ್ತಾಂಗೋಪತಿನಾಪುರಾ। ಅದೃಶ್ಯಸ್ಸರ್ವಭೂತಾನಾಂತತ್ಸೈನ್ಯಂಸಮವಾಕಿರತ್॥೨೩॥ತತಸ್ಸದೇವಾನ್ಸಂತ್ಯಜ್ಯಶಕ್ರಮೇವಾಭ್ಯಯಾದ್ದ್ರುತಮ್। ಮಹೇಂದ್ರಶ್ಚಮಹಾತೇಜಾನದದರ್ಶಸುತಂರಿಪೋಃ॥೨೪॥ ಸಮಾತಲಿಂಹಯಾಂಶ್ಚೈವ ತಾಡಯಿತ್ವಾಶರೋತ್ತಮೈಃ। ಮಹೇಂದ್ರಂಬಾಣವರ್ಷೇಣಶೀಘ್ರಹಸ್ತೋವ್ಯವಾಕಿರತ್॥೨೫॥ ತತಶ್ಶಕ್ರೋರಥಂತ್ಯಕ್ತ್ವಾವಿಸೃಜ್ಯಚಸಮಾತಲಿಮ್। ಐರಾವತಂಸಮಾರುಹ್ಯಮೃಗಯಾಮಾಸರಾವಣಿಮ್॥೨೬॥ಸತುಮಾಯಾಬಲಾದ್ರಕ್ಷಸ್ಸಂಗ್ರಾಮೇನಾಭ್ಯದೃಶ್ಯತ। ಕಿರಮಾಣಶ್ಶರೌಘೇಣಮಹೇಂದ್ರಮಮಿತೌಜಸಮ್॥೨೭॥ ಸತಂಯದಾಪರಿಶ್ರಾಂತಮಿಂದ್ರಂಮೇನೇಸರಾವ

---

ನ್ಯವನ್ನು, ಪ್ರವಿಷ್ಟಂ-ಹೊಕ್ಕಿ ಇರುವ, ತಂ-ದಶಾನನಂ-ಆ ರಾವಣನನ್ನು, ನಿರೀಕ್ಷ್ಯ-ಕಂಡು, ಸಮಾವೃತ್ಯ- ಸುತ್ತುಮುತ್ತಲು ಆವರಿಸಿಕೊಂಡು, ಅಥ-ಬಳಿಕ, ಅಸಂಭ್ರಾಂತಃ-ಜಾಗರೂಕನಾಗಿ, ನಿವರ್ತಯತ್-ಹಿಂತಿರಗಿಸಿದನು ॥ ೨೦ ॥ ಏತಸ್ಮಿನ್ನಂತರೇ-ಇಷ್ಟರವಳಗೆ, ಶಕ್ರೇಣ-ದೇವೇಂದ್ರನಿಂದ ಗ್ರಸ್ತಂ-ಹಿಡಿದುಕೊಳ್ಳಲ್ಪಟ್ಟ, ತಂರಾವಣಂ-ಆ ರಾವಣಾಸುರನನ್ನು, ದೃಷ್ಟ್ವಾ-ಕಂಡು, ಹಾ-ಆಶ್ಚರ್ಯವು, ಹತಾಸ್ಮ-ಕೆಡಿಸಲ್ಪಟ್ಟೆವು,(ಇತಿ-ಇಂತೆಂದು,) ದಾನವರಾಕ್ಷಸೈಃ-ದಾನವರಿಂದಲೂ ರಾಕ್ಷಸ ಜಾತೀಯ್ಯರಿಂದಲೂ, ನಾದಃ-ಶಬ್ದವು, ಮುಕ್ತಃ- ಬಿಡಲ್ಪಟ್ಟಿತು ॥೨೧॥ ತತಃ- ಬಳಿಕ, ರಾವಣಿಃ-ರಾವಣಾಸುರನ ಪುತ್ರನಾದ ಮೇಘನಾದನು, ಕ್ರೋಧಮೂರ್ಛಿತಃ-ಕ್ರೋಧಾವಿಷ್ಟನಾಗಿ,ರಥಂ-ತೇರನ್ನು, ಸಮಾರುಹ್ಯ-ಹತ್ತಿ,ಸುದಾರುಣಂ-ಭಯಂಕರವಾದ, ತತ್ಸೈನ್ಯಂ-ಆ ದೇವತಾಸೈನ್ಯವನ್ನು ಕುರಿತು, ಅಭಿಸಂಕ್ರುದ್ಧಃ-ಅಭಿಮುಖವಾಗಿ ಕೋಪಿಷ್ಠನಾಗಿ, ಪ್ರವಿವೇಶ-ಪ್ರವೇಶಿಸಿದನು ॥೨೨॥ ಸಃ-ಆ ಮೇಘನಾದನು, ಪುರಾ-ಪೂರ್ವದಲ್ಲಿ, ಗೋಪತಿನಾ-ಈಶ್ವರನಿಂದ, ದತ್ತಾಂ-ಕೊಡಲ್ಪಟ್ಟ, ತಾಂ-ಆ,ಮಾಯಾಂ-ಮಾಯೆಯನ್ನು, ಪ್ರವಿಶ್ಯ-ಪ್ರವೇಶಿಸಿ-ಸರ್ವಭೂತಾನಾಂ-ಸಮಸ್ತ ಭೂತಗಳಿಗೂ, ಅದೃಶ್ಯಃ-ಕಾಣಲ್ಪಡದಿರುವನಾಗಿ, ತತ್ಸೈನ್ಯಂ-ಆ ಸೈನ್ಯವನ್ನು, ಸಮವಾಕಿರತ್-ಬಾಣವೃಷ್ಟಿಯನ್ನು ಸುರಿಸಿದನು ॥೨೩॥ ತತಃ-ಬಳಿಕ, ಸಃ-ಆ ಮೇಘನಾದನು, ದೇವಾನ್-ದೇವತೆಗಳನ್ನು, ಸಂತ್ಯಜ್ಯ-ಬಿಟ್ಟು, ಶಕ್ರಮೇವ-ದೇವೇಂದ್ರನನ್ನೇ ಕುರಿತು, ದ್ರುತಂ-ಶೀಘ್ರವಾಗಿ, ಅಭ್ಯಯಾತ್-ಅಭಿಮುಖವಾಗಿ ಬಂದನು. ಮಹಾತೇಜಾಃ-ಮಹಾ ತೇಜೋವಂತನಾದ, ಮಹೇಂದ್ರಶ್ಚ-ದೇವೇಂದ್ರನೂ ಕೂಡ, ರಿಪೋಃ-ಶತ್ರುವಾದ ರಾವಣನ, ಸುತಂ-ಕುವರನಾದ ಮೇಘನಾದನನ್ನು, ನದದರ್ಶ-ಕಾಣದೇ ಹೋದನು ॥೨೪॥ ಶೀಘ್ರಹಸ್ತಃ-ವೇಗದಿಂದ ಕೂಡಿದ ಹಸ್ತವುಳ್ಳ, ಸಃ-ಆ ಮೇಘನಾದನು, ಮಾತಲಿಂ-ದೇವೇಂದ್ರ ಸಾರಥಿಯನ್ನು, ಹಯಾಂಶ್ಚೈವ-ಕುದುರೆಗಳನ್ನೂ ಕೂಡಾ, ಶರೋತ್ತಮೈಃ - ಶ್ರೇಷ್ಠವಾದ ಬಾಣಗಳಿಂದ, ತಾಡಯಿತ್ವಾ-ಹೊಡೆದು, ಮಹೇಂದ್ರಂ-ದೇವೇಂದ್ರನನ್ನು, ಬಾಣವರ್ಷೇಣ-ಬಾಣಗಳ ವೃಷ್ಟಿಯಿಂದ, ಅವಾಕಿರತ್-ಸುರಿಸಿದನು ॥೨೫॥ ತತಃ-ಬಳಿಕ, ಸಶಕ್ರಃ-ಆದೇವೇಂದ್ರನು, ರಥಂ-ತೇರನ್ನು, ತ್ಯಕ್ತ್ವಾ-ಬಿಟ್ಟು, ಮಾತಲಿಂಚ-ಮಾತಲಿಯನ್ನು, ವಿಸೃಜ್ಯ-ಬಿಟ್ಟು,ಐರಾವತಂ-ಐರಾವತವೆಂಬ ಪಟ್ಟದಾನೆಯನ್ನು, ಸಮಾರುಹ್ಯ-ಏರಿ, ರಾವಣಿಂ-ಮೇಘನಾದನನ್ನು, ಮೃಗಯಾಮಾಸ-ಹುಡುಕಿದನು॥೨೬॥ರಕ್ಷಃ-ರಾಕ್ಷಸನಾದ, ಸತು-ಆ ಮೇಘನಾದ ನಾದರೆ,ಶರೌಘೇಣ-ಬಾಣವೃಷ್ಟಿಯಿಂದ, ಅಮಿತೌಜಸಂ-ಅಪಾರ ತೇಜಸ್ವಿಯಾದ, ಮಹೇಂದ್ರಂ-ದೇವೇಂದ್ರನನ್ನು, ಕಿರಮಾಣಃ-ಸುರಿಸುತಿರುವನಾಗಿ, ಸಂಗ್ರಾಮೇ-ಯುದ್ಧರಂಗದಲ್ಲಿ, ಮಾಯಾಬಲಾತ್-ಮಾಯಾಸಾಮರ್ಥ್ಯದಿಂದ, ನಾಭ್ಯದೃಶ್ಯತ-ಕಾಣಲ್ಪಡದೆ ಹೋದನು ॥೨೭॥ ಸಃ-ಪ್ರಸಿದ್ಧನಾದ, ಸಃ-ಆ ರಾವಣಿಃ-ಮೇಘನಾದನು, ಯದಾ-ಯಾವಕಾಲದಲ್ಲಿ, ತಂಇಂದ್ರಂ-ಆ ದೇವೇಂದ್ರನನ್ನು, ಪರಿಶ್ರಾಂತಂ-ಬಳಲಿದವನನ್ನಾಗಿ, ಮೇನೇ-ತಿಳಿದನೋ, ತದಾ-ಆ ಕಾಲದಲ್ಲಿ, ಏನಂ-ಈ ಇಂದ್ರನನ್ನು, ಮಾಯಯಾ-ಮಾಯಾಶಕ್ತಿಯಿಂದ, ಬಧ್ವಾ-ಹಿಂಗಟ್ಟು ಮುಂಗಟ್ಟು ಕಟ್ಟಿ,ಸ್ವಸೈನ್ಯಂ-ತನ್ನ ಆ ಸೈನ್ಯವನ್ನು ಕು

---

ರಾವಣನಂ ಕಂಡು ಗಾಬರಿ ಬೀಳದೆ ಹಿಂದಿರಿಗಿದವನಾಗಿ, ರಾವಣನನ್ನು ಹಿಂದಕ್ಕೆ ತಿರಿಗಿಸಿದನು ॥೨೦॥ ಇಷ್ಟರೊಳಗೆ ಇಂದ್ರನಿಂದ ಹಿಡಿಯಲ್ಪಟ್ಟ ರಾವಣನಂ ಕಂಡು ರಾಕ್ಷಸರೆಲ್ಲರೂ ಹಾಹಾ ಹತರಾದೆವೂ ಹತರಾದೆವೂ ! ಎಂದು ಘಟ್ಟಿಯಾಗಿ ಕೂಗಿಕ್ಕೊಂಡರು ॥೨೧॥ ಅದಂ ಕೇಳಿ ಮೇಘನಾದನು ಕಡು ಕೋಪವುಳ್ಳವನಾಗಿ ರಥವನ್ನೇರಿ ಮಹಾ ದಾರುಣವಾದ ಆ ದೇವ ಸೈನ್ಯಮಂ ಹೊಕ್ಕು ಈಶ್ವರ ವರಪ್ರಸಾದದಿಂದ ಪ್ರಾಪ್ತವಾದ ಮಾಯೆಯನ್ನಾಶ್ರಯಿಸಿ ಸರ್ವ ಭೂತಗಳಿಗೂ ಅದೃಶ್ಯನಾಗಿ, ಬಾಣ ವರುಷಗಳಂ ಸುರಿಸಿ ದೇವತೆಗಳನ್ನೆಲ್ಲಾ ತೊರೆದು ದೇವೇಂದ್ರನಂ ಕುರಿತು ತ್ವರಿತವಾಗಿ ಓಡಿಬಂದನು ಆ ದೇವೇಂದ್ರನಾದರೆ ಶತ್ರುವಾದ ರಾವಣ ಪುತ್ರನನ್ನು ಮಾತ್ರ ಕಾಣಲಿಲ್ಲಾ ॥೨೪॥ ಕ್ಷಿಪ್ರ ಹಸ್ತನಾದ ಆ ಮೇಘನಾದನಾದರೆ ಇಂದ್ರ ಸಾರಥಿಯಾದ ಮಾತಲಿಯನ್ನು ಕುದುರೆಗಳನ್ನೂ ಸಹಾ ಬಾಣಗಳಿಂದ ಹೊಡೆದು ಇಂದ್ರನನ್ನು ಬಾಣವರುಷಗಳಿಂದ ವರುಷಿಸಿದನು ॥೨೫॥ ಅನಂತರದೋಳ್ ದೇವೇಂದ್ರನು ರಥವನ್ನೂ, ಮಾತಲಿಯನ್ನೂ ಕೂಡಾ ಬಿಟ್ಟವನಾಗಿ ಐರಾವತವನ್ನೇರಿ ಮೇಘನಾದನನ್ನು ಹುಡಿಕಿದನು॥೨೬॥ ರಾಕ್ಷಸನಾದ ಆ ಮೇಘನಾದನಾದರೆ ಅಪಾರ ತೇಜಸ್ವಿಯಾದ ಆ ಇಂದ್ರನಂ ಕುರಿತು ಬಾಣ ವೃಷ್ಟಿಯಿಂದ ವರುಷಿಸು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣೇಃ। ತದೇನಂಮಾಯಯಾಬಧ್ವಾ ಸ್ವಸೈನ್ಯಮಭಿತೋನಯತ॥೨೮॥ ತಂದೃಷ್ಟ್ವಾಥಬಲಾತ್ತಸ್ಮಿನ್ಮಾಯಯಾಪಹೃತಂರಣೇ। ಮಹೇಂದ್ರಮಮರಾಸ್ಸರ್ವೇಕಿನ್ನ್ವೇತದಿತಿಚುಕ್ರುಶುಃ॥೨೯॥ ದೃಶ್ಯತೇನಪಿವಿದ್ಯಾವಾನ್ಮಾಯಯಾಯೇನನೀಯತೇ॥೩೦॥ ಏತಸ್ಮಿನ್ನಂತರೇಚಾಪಿಸರ್ವೇಸುರಗಣಾಸ್ತದಾ। ಅಭ್ಯದ್ರವನ್ಸುಸಂಕ್ರುದ್ಧಾ ರಾವಣಂಶಸ್ತ್ರವೃಷ್ಟಿಭಿಃ ॥೩೧॥ ರಾವಣಸ್ತು ಸಮಾಸಾದ್ಯವಸ್ವಾದಿತ್ಯಮರುದ್ಗಣಾನ್ । ನಶಶಾಕರಣೇಸ್ಥಾತುಂನಯೋದ್ಧುಂಶಸ್ತ್ರಪೀಡಿತಃ ॥೩೨॥ ತಂತುದೃಷ್ಟ್ವಾಪರಿಶ್ರಾಂತಂಪ್ರಹಾರೈರ್ಜರ್ಝರೀಕೃತಮ್ । ರಾವಣಿಃಪಿತರಂಯುದ್ಧೇದರ್ಶನಸ್ಥೋಬ್ರವೀದಿದಮ್ ॥೩೩॥ ಆಗಚ್ಛ ತಾತಗಚ್ಛಾವೋನಿವೃತ್ತಂರಣಕರ್ಮತತ । ಜಿತಸ್ತೇವಿದಿತಃಶತ್ರುಸ್ಸ್ವಸ್ಥೋಭವಗತಜ್ವರಃ ॥೩೪॥ ಅಯಂಹಿಸುರಸೈನ್ಯಸ್ಯತ್ರೈಲೋಕ್ಯಸ್ಯಚಯಃಪ್ರಭುಃ । ಸಗೃಹೀತೋಮಯಾಶಕ್ರೋಭಗ್ನಮಾನಾಸ್ಸುರಾಕೃತಾಃ ॥೩೫॥ ಯಥೇಷ್ಟಂಭುಂಕ್ಷ್ವತ್ರೈಲೋಕ್ಯಂನಿಗೃಹ್ಯರಿಪುಮೋಜಸಾ । ವೃಥಾತೇಕಿಂಶ್ರಮಂಕೃತ್ವಾಯುದ್ಧಂಹಿತವನಿಷ್ಫಲಂ ॥೩೬ (ತತಸ್ತದ್ದೈವತಗಣಾಃನಿವೃತ್ತಾ

---

ರಿತು, ಅಭಿತಃ-ಎದುರಾಗಿ, ಅನಯತ್-ತೆಗೆದುಕೊಂಡು ನಡೆದನು॥೨೮॥ ಅಥ-ಬಳಿಕ, ಸರ್ವೇ-ಸಮಸ್ತರಾದ, ಅಮರಾಃ-ದೇವತೆಗಳು, ತಸ್ಮಿಂನ್ರಣೇ-ಆ ಯುದ್ಧರಂಗದಲ್ಲಿ, ಬಲಾತ್-ಬಲಾತ್ಕಾರದಿಂದ, ಮಾಯಯಾ-ಮಾಯಾಶಕ್ತಿಯಿಂದ, ಅಪಹೃತಂ-ಅಪಹರಿಸಲ್ಪಟ್ಟ, ಮಹೇಂದ್ರಂ-ದೇವೇಂದ್ರನನ್ನು, ದೃಷ್ಟ್ವಾ-ಕಂಡು-ನದೃಶ್ಯತೇಹಿ-ಕಾಣಲ್ಪಡುವದಿಲ್ಲವಷ್ಟೆ, ವಿದ್ಯಾವಾನಪಿ-ರಾಕ್ಷಸಮಾಯೆಯನ್ನು ಹೊಡಿಯತಕ್ಕ ವಿದ್ಯಾವಂತನಾದರು, ಯೇನ-ಯಾವ ಮೇಘನಾದನಿಂದ, ಮಾಯಯಾ-ಮಾಯಾಶಕ್ತಿಯಿಂದ, ನೀಯ್ಯತೇ-ತೆಗೆದುಕೊಂಡು ಹೋಗಲ್ಪಡುತ್ತಾನೊ, ಏತತ್-ಇದು, ಕಿನ್ನು-ಏನು, ಇತಿ-ಇಂತೆಂದು, ಚುಕ್ರುಶುಃ-ಕೂಗಿದರು॥೩೦॥ಏತಸ್ಮಿನ್ನಂತರೇ-ಈ ಮಧ್ಯಕಾಲದಲ್ಲಿ, ಸರ್ವೇ-ಸಮಸ್ತರಾದ, ಸುರಗಣಾಶ್ಚಾಪಿ-ದೇವತೆಗಳ ಗುಂಪೂಕೂಡ, ತದಾ-ಆ ಕಾಲದಲ್ಲಿ, ಸುಸಂಕ್ರುದ್ಧಾಃ-ಬಹಳ ಕೋಪಿಷ್ಠರಾಗಿ, ರಾವಣಂ-ರಾವಣಾಸುರನನ್ನು, ಶಸ್ತ್ರವೃಷ್ಟಿಭಿಃ-ಶಸ್ತ್ರ-ಶಸ್ತ್ರಗಳ, ವೃಷ್ಟಿಭಿಃ-ವರ್ಷಗಳಿಂದ, ಅಭ್ಯದ್ರವನ್-ಹೆದರಿಸಿದರು ॥೩೧॥ ರಾವಣಸ್ತು-ರಾವಣಾಸುರನಾದರೆ, ಶಸ್ತ್ರಪೀಡಿತಃ-ಶಸ್ತ್ರಗಳಿಂದ ಬಾಧಿತನಾಗಿ, ವಸ್ವಾದಿತ್ಯಮರುದ್ಗಣಾನ್-ವಸು-ಅಷ್ಟವಸುಗಳ, ಆದಿತ್ಯ-ದ್ವಾದಶಾದಿತ್ಯರ, ಮರುತ್-ಸಪ್ತ ಮರುತ್ತುಗಳ, ಗಣಾನ್-ಗುಂಪುಗಳನ್ನು, ಸಮಾಸಾದ್ಯ-ಹೊಂದಿ, ರಣೇ-ಯುದ್ಧದಲ್ಲಿ, ಸ್ಥಾತುಂ-ನಿಲ್ಲುವದಕ್ಕೋಸ್ಕರ, ನಶಶಾಕ-ಸಮರ್ಥನಾಗದೆ ಹೋದ, ಯೋದ್ಧುಂಚ-ಯುದ್ಧಮಾಡುವದಕ್ಕೂ ಕೂಡ, ನಶಶಾಕ-ಸಮರ್ಥನಾಗಲಿಲ್ಲಾ॥೩೨॥ ಯುದ್ಧೇ-ಕಾಳಗದಲ್ಲಿ, ಪರಿಶ್ರಾಂತಂ-ಬಡಲಿದ, ಪ್ರಹಾರೈಃ-ಹೊಡೆತಗಳಿಂದ, ಝರ್ಝರೀಕೃತಂ-ಶಿಥಿಲವಾಗಿ ಮಾಡಲ್ಪಟ್ಟ, ತಂ-ಪಿತರಂತು-ಆ ತಂದೆಯನ್ನಾದರೆ, ದೃಷ್ಟ್ವಾ-ಕಂಡು, ರಾವಣಿಃ-ಮೇಘನಾದನು, ದರ್ಶನಸ್ಥಃ-ದೃಷ್ಟಿ ವಿಷಯನಾಗಿ, ಇದಂ-ಈ ವಕ್ಷ್ಯಮಾಣವಚನವನ್ನು,ಅಬ್ರವೀತ್-ನುಡಿದನು॥೩೩॥ ಹೆ ತಾತ-ಎಲೈ ತಂದೆಯೆ, ತದ್ರಣಕರ್ಮ-ಆ ಯುದ್ಧವ್ಯಾಪಾರವು, ನಿವೃತ್ತಂ-ಪೂರ್ತಿಯಾಯಿತು, ಆಗಚ್ಛ-ಬಾ,ಗಚ್ಛಾವಃ-ಹೋಗೋಣ, ತೇಶತ್ರುಃ-ನಿನಗೆ ವೈರಿಯಾದ ದೇವೇಂದ್ರನು, ಜಿತಃ-ಜಯಿಸಲ್ಪಟ್ಟವನಾಗಿ, ವಿಧಿತಃ-ತಿಳಿಯಲ್ಪಟ್ಟನು, ವಿಗತಜ್ವರಃ-ಹೋದಂಥಾ ವ್ಯಥೆಯುಳ್ಳವನಾಗಿ, ಸ್ವಸ್ಥೋಭವ-ಸ್ವಸ್ಥಚಿತ್ತನಾಗು ॥೩೪॥ ಯಃ-ಯಾವ ದೇವೇಂದ್ರನು, ಸುರಸೈನ್ಯಸ್ಯ-ದೇವತೆಗಳ ಸೈನ್ಯಕ್ಕು, ತ್ರೈಲೋಕ್ಯಸ್ಯಚ-ಲೋಕತ್ರಯಕ್ಕೂ ಕೂಡ, ಪ್ರಭುಃ-ಸ್ವಾಮಿಯು, ಸೋಯಂಶಕ್ರಃ-ಆ ಈ ದೇವೇಂದ್ರನು, ಮಯಾ-ನನ್ನಿಂದ, ಗೃಹೀತಃ-ಹಿಡಿಕೊಳ್ಳಲ್ಪಟ್ಟನು, ಸುರಾಃ-ದೇವತೆಗಳು, ಭಗ್ನಮಾನಾಃ-ಮುರಿಯಲ್ಪಟ್ಟ ಗರ್ವವುಳ್ಳವರಾಗಿ, ಕೃತಾಃ-ಮಾಡಲ್ಪಟ್ಟರು ॥೩೫॥ ರಿಪುಂ-ಶತೃವಾದ ದೇವೇಂದ್ರನನ್ನು, ಓಜಸಾ-ಪರಾಕ್ರಮದಿಂದ, ನಿಗೃಹ್ಯ-ನಿಗ್ರಹಿಸಿ, ತ್ರೈಲೋಕ್ಯಂ-ಲೋಕತ್ರಯವನ್ನು, ಯಥೇಷ್ಟಂ-ಇಷ್ಟಾನುಸಾರವಾಗಿ, ಭುಂಕ್ಷ್ವ-ಅನುಭವಿಸು, ತೇ-ನಿನಗೆ, ವೃಥಾಶ್ರಮಂ-ವ್ಯರ್ಥವಾಗಿ ದೇಹಾಯಾಸವನ್ನು, ಕೃತ್ವಾ-ಮಾಡಿ, ಕಿಂ-ಏನುಪ್ರಯೋಜನವು, ತವ-ನಿನ್ನ, ಯುದ್ಧಂ-ಯುದ್ಧವು, ನಿಷ್ಫಲಂಹಿ-ನಿಷ್ಪ್ರಯೋಜನವಷ್ಟೆ ॥ ೩೬ ॥ ತತಃ-

---

ತಿದ್ದ ಆತನಂ ಬಳಲಿದವನೆನ್ನಾಗಿ ತಿಳಿದು ಮಾಯೆಯಿಂದ ಕಟ್ಟಿ ತನ್ನ ಸೈನ್ಯವಂ ಹೊಂದಿಸಿದನು ॥೨೮॥ ಅನಂತರದಲ್ಲಿ ದೇವತೆಗಳೆಲ್ಲರೂ ಬಲಾತ್ಕರಿಸಿ ಮಾಯೆಯಿಂದ ಅಪಹರಿಸಲ್ಪಟ್ಟ ಆ ಇಂದ್ರನಂ ಕಂಡು ಹಾಹಾ ನಮ್ಮೊಡೆಯಾಸಾದ ಇಂದ್ರನು ರಾಕ್ಷಸ ಮಾಯೆಗಳನ್ನರಿತವನಾದರೂ, ಮಾಯಾವಿಯಾದ ಮೇಘನಾದನಿಂದ ಅಪಹರಿಸಲ್ಪಟ್ಟು ಎಲ್ಲಿಹೋದನೋ ಇದೇನಿರಬಹುದೆಂದು ಕೂಗುತ್ತಾಯಿದ್ದರು ॥೩೦॥ ಇಷ್ಟರಲ್ಲಿ ದೇವಗಣಂಗಳೆಲ್ಲ ಕಡು ಕೋಪಮುಳ್ಳದ್ದಾಗಿ ರಾವಣನಂ ಕುರಿತು ಶಸ್ತ್ರವರ್ಷಗಳಂ ಸುರಿಸುತ್ತಾ ಓಡಿ ಬರಲು, ಆ ರಾವಣನು ಅಷ್ಟವಸುಗಳಿಂದಲೂ, ದ್ವಾದಶಾದಿತ್ಯರಿಂದಲೂ, ದೇವತಾ ಗಣಗಳಿಂದಲೂ, ಸಹಾ ಶಸ್ತ್ರಗಳಿಂದಾ ಪೀಡಿತನಾಗಿ ಯುದ್ಧದಲ್ಲಿ ನಿಲ್ಲುವದಕ್ಕೂ ಮತ್ತೂ, ಯುದ್ಧ ಮಾಡುವದಕ್ಕೂ ಕೂಡ ಸಮರ್ಥನಾಗದೇ ಹೋದನು ॥೩೨॥ ಆ ಸಮಯದಲ್ಲಿ ದೃಷ್ಟಿಗೋಚರನಾದ ಇಂದ್ರಜಿತುವು, ಸಂಗರದಲ್ಲಿ ಮತ್ತು ಪ್ರಹಾರಗಳಿಂದ ಬಳಲಿರುವ ದೇಹವುಳ್ಳ, ತಂದೆಯಾದ ರಾವಣನಂ ಕಂಡು, ಈವಕ್ಷ್ಯಮಾಣಪ್ರಕಾರವಾಗಿ ವಚನವಂ ಹೇಳ ತೊಡಗಿದನು ॥೩೩॥ ಎಲೈ ತಂದೆಯೇ, ಯುದ್ಧಕರ್ಮವಂ ಸಾಲಿಸು, ನಿನ್ನ ಶತೃವಾದ ದೇವೇಂದ್ರನು ಜಯಿಸಲ್ಪಟ್ಟನಾದ ಕಾರಣ, ಸ್ವಸ್ಥವಾಗಿರು. ಬಾರೈ ಪೋಗೋಣ. ಈ ದೇವ ಸೈನ್ಯಗಳಿಗೆ ಪ್ರಭುವಾಗಿರುವ ಶಕ್ರನು, ನನ್ನಿಂದ ಹಿಡಿಯಲ್ಪಟ್ಟನು, ದೇವತೆಗಳೆಲ್ಲರು ಅಳುತಲಿಧಾರೇ ಪೋ ನಿನ್ನ ಶತೃವಾದ, ಇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಣಕರ್ಮಣಃ) ।ಇತಿ ಪಾಠಾಂತರ* ಸದೈವತಬಲಾತ್ತಸ್ಮಾನ್ನಿವೃತ್ತೋರಣಕರ್ಮಣಃ । ತಚ್ಛ್ರುತ್ವಾರಾವಣೋವಾಕ್ಯಂ ಸ್ವಸ್ಥಚೇತಾಬಭೂವಹ ॥೩೭॥ ಅಥರಣವಿಗತಜ್ವರಃಪ್ರಭುರ್ವಿಜಯಮವಾಪ್ಯನಿಶಾಚರೇಶ್ವರಃ । ನಗರಮಭಿಗತೋ ಜಗಾಮಹೃಷ್ಟಃಸ್ವ ಸುತಮವಾಪ್ಯಚವಾಕ್ಯಮಬ್ರವೀತ ॥೩೮॥ ಸುತಬಲಸದೃಶೈಃಪರಾಕ್ರಮೈಸ್ತ್ವಮಮಕುಲಮಾನವಿವರ್ಧನಂಕೃತಮ್ । ಯದಯಮತುಲಬಲಸ್ತ್ವಯಾದ್ಯವೈತ್ರಿದಶಪತಿಸ್ತ್ರಿದಶಾಶ್ಚನಿರ್ಜಿತಾಃ ॥೩೯॥ ತ್ವರಿತಮುಪನಯಸ್ವವಾಸವಂನಗರಮಿತೋವ್ರಜಸೈನ್ಯಸಂವೃತಃ । ಅಹಮಪಿತವಗಚ್ಛತೋದ್ರುತಂಸಹಸಚಿವೈರನುಯಾಮಿಪೃಷ್ಠತಃ ॥೪೦॥ ಅಥಸಬಲವೃತಸ್ಸವಾಹನಸ್ತ್ರಿದಶಪತಿಂಪರಿಗೃಹ್ಯರಾವಣಿಃ। ಸ್ವಭವನಮುಪಗಮ್ಯರಾಕ್ಷಸೋಮುದಿತಮನಾವಿಸಸರ್ಜರಾಕ್ಷಸಾನ್ ॥೪೧॥ —…ಇತಿ ಶ್ರೀಮದುತ್ತರ ರಾಮಾಯಣೆ ಏಕೋನ ತ್ರಿಂಶಸ್ಸರ್ಗಃ…—

---

ಬಳಿಕ, ದೈವತಗಣಾಃ–ದೇವತಾಸಮೂಹಗಳು, ರಣಕರ್ಮಣಃ–ಯುದ್ಧವ್ಯಾಪಾರದ ದೆಸೆಯಿಂದ, ನಿವೃತ್ತಾಃ–ಹಿಂತಿರಿಗಿಹೋದರು, ತದ್ವಾಕ್ಯಂ–ಆ ಇಂದ್ರಜಿತ್ತಿನ ವಾಕ್ಯವನ್ನು, ಶ್ರುತ್ವಾ–ಕೇಳಿ, ರಾವಣಃ–ರಾವಣನು, ಸ್ವಸ್ಥಚೇತಾಃ–ಸ್ವಸ್ಥಚಿತ್ತನು, ಬಭೂವಹ–ಆದನಷ್ಟೆ॥೩೭॥ಅಥ–ಬಳಿಕ, ಪ್ರಭುಃ–ಸಮರ್ಥನಾದ, ನಿಶಾಚರೇಶ್ವರಃ–ರಾಕ್ಷಸಾಧಿಪತಿಯಾದ ರಾವಣನು, ರಣವಿಗತಜ್ವರಃ–ರಣ–ಯುದ್ಧವಿಷಯವಾಗಿ, ವಿಗತಜ್ವರಃ–ಹೋಗಲಾಡಿಸಲ್ಪಟ್ಟಸಂತಾಪವುಳ್ಳವನಾಗಿ, ವಿಜಯಂ–ವಿಜಯವನ್ನು, ಅವಾಪ್ಯ–ಹೊಂದಿ, ನಗರಂ–ಲಂಕಾಪಟ್ಟಣವನ್ನು ಕುರಿತು, ಅಭಿಗತಃ–ಯದುರಾಗಿ ಹೊರಟವನಾಗಿ, ಜಗಾಮ–ತೆರಳಿದನು . ಸ್ವಸುತಂ–ಸ್ವ–ತನ್ನ, ಸುತಂ–ಕುಮಾರನಾದ ಇಂದ್ರಜಿತುವಿನನ್ನು, ಅವಾಪ್ಯ–ಹೊಂದಿ, ಹೃಷ್ಟಃ–ಸಂತೋಷಗೊಂಡವನಾಗಿ, ವಾಕ್ಯಂ–ವಾಕ್ಯವನ್ನು, ಅಬ್ರವೀಚ್ಚ – ನುಡಿದನು ॥ ೩೮ ॥ ಯತ್–ಯಾವ ಕಾರಣದ ದೆಸೆಯಿಂದ, ತ್ವಯಾವೈ – ನಿನ್ನಿಂದಾದರೆ, ಅದ್ಯ – ಈಗ, ಅತುಲಬಲಃ–ಅತುಲ–ಸಮಾನವಿಲ್ಲದಿರುವ, ಬಲಃ–ಬಲವುಳ್ಳ, ಅಯಂ–ಈ, ತ್ರಿದಶಪತಿಃ–ದೇವತಾಧಿಪತಿಯಾದ ದೇವೇಂದ್ರನು, ತ್ರಿದಶಾಶ್ಚ –ದೇವತೆಗಳೂ ಕೂಡಾ, ನಿರ್ಜಿತಾಃ–ಜಯಿಸಲ್ಪಟ್ಟರೊ, ಹೇಸುತ–ಎಲೈ ಪುತ್ರನೆ, ತತ್–ಆಕಾರಣದ ದೆಸೆಯಿಂದ, ತೇ–ನಿನ್ನ, ಬಲಸದೃಶೈಃ–ಬಲ–ದೇಹತ್ರಾಣಕೆ, ಸದೃಶೈಃ– ಸಮಾನಂಗಳಾದ, ಪರಾಕ್ರಮೈಃ–ಪರಾಕ್ರಮಗಳಿಂದ, ಮಮ–ನನ್ನ, ಕುಲಮಾನ ವಿವರ್ಧನಂ–ಕುಲ–ವಂಶಕ್ಕೆ, ಮಾನ–ಬಹುಮಾನದ, ವಿವರ್ಧನಂ–ಅಭಿವೃದ್ಧಿಯು, ಕೃತಂ–ಮಾಡಲ್ಪಟ್ಟಿತು ॥೩೯॥ ತ್ವರಿತಂ–ಜಾಗ್ರತೆಯಾಗಿ, ಸೈನ್ಯಸಂವೃತಃ–ಸೈನ್ಯ–ಸೇನೆಯಿಂದ, ಸಂವೃತಃ–ಸುತ್ತುಕೊಳ್ಳಲ್ಪಟ್ಟವನಾಗಿ, ವಾಸವಂ–ದೇವೇಂದ್ರನನ್ನು, ನಗರಂ–ಲಂಕಾ ಪಟ್ಟಣವನ್ನು, ಉಪನಯಸ್ವ–ಹೊಂದಿಸು, ಇತಃ–ಈ ರಣರಂಗದ ದೆಸೆಯಿಂದ, ವ್ರಜ–ಹೊರಡು, ಅಹಮಪಿ–ನಾನೂನು, ಗಚ್ಛತಃ–ಹೋಗುತಿರುವ, ತವ–ನಿನ್ನ, ಪೃಷ್ಠತಃ–ಹಿಂದುಗಡೆಲೆ, ಸಚಿವೈಸ್ಸಹ–ಮಂತ್ರಿಗಳೊಡಗೂಡಿ, ದ್ರುತಂ–ಜಾಗ್ರತೆಯಾಗಿ, ಅನುಯಾಮಿ–ಅನುಸರಿಸಿ ಬರುತ್ತೇನೆ ॥೪೦॥ ಅಥ–ಬಳಿಕ, ಬಲವೃತಃ–ಸೈನ್ಯ ಸಮೇತನಾದ, ಸವಾಹನಃ–ವಾಹನಗಳಿಂದ ಯುಕ್ತನಾದ, ರಾಕ್ಷಸಃ– ರಾಕ್ಷಸನಾದ, ರಾವಣಿಃ–ರಾವಣ ಕುಮಾರನಾದ, ಸಃ–ಆ ಇಂದ್ರಜಿತ್ತು, ತ್ರಿದಶಪತಿಂ–ದೇವೇಂದ್ರನನ್ನು, ಪರಿಗೃಹ್ಯ– ತೆಗದುಕೊಂಡು, ಮುದಿತಮನಾಃ–ಮುದಿತ–ಸಂತೋಷಗೊಂಡ, ಮನಾಃ–ಮನಸ್ಸುಳ್ಳವನಾಗಿ, ಸ್ವಭವನಂ–ತನ್ನ ಮನೆಯನ್ನು, ಉಪಗಮ್ಯ–ಹೊಂದಿ, ರಾಕ್ಷಸಾನ್–ರಕ್ಕಸರನ್ನು, ವಿಸಸರ್ಜ–ಮನಿಗೆ ಕಳುಹಿಸಿದನು ॥ ೪೧ ॥

ಶ್ರೀಮದುತ್ತರ ರಾಮಾಯಣದೋಳ್ ೨೯ನೇಗರ್ಸಂಮುಗಿದುದು.

---

ವನಂ ಪರಿಗ್ರಹಿಸಿ ಲೋಕತ್ರಯವನ್ನು ಅನುಭವಿಸು, ನಾಥನು ಸ್ವಾಧೀನನಾದ ಕಾರಣ ಯಿನ್ನು ಯುದ್ಧಮಾಡಿಶ್ರಮೇ ಪಟ್ಟರೂ ವ್ಯರ್ಥವು ಎಂಬದಾಗಿ ಇಂದ್ರಜಿತನು ನುಡಿಯಲೂ, ಆ ಮಾತಂ ಕೇಳಿ, ದೇವತೆಗಳೆಲ್ಲರೂ ಓಡಿಹೊದರೂ, ದಶಕಂಠನು, ದೇವಸೈನ್ಯಗಳ ದೆಶೆಯಿಂದ, ಯುದ್ಧಭೂಮಿಯಿಂದ ಹಿಂತಿರಗಿ ಸ್ವಸ್ಥಚಿತ್ತನಾದನೂ, ॥೩೭॥ ತದನಂತರಕಾಲದಲ್ಲಿ, ರಾಕ್ಷಸೇಶ್ವರನಾದ ಆ ಮಹಾ ಸಮರ್ಥನಾದ ಆ ರಾವಣನು ಜಯವಂ ಹೊಂದಿ, ವಿಗತವಾದ ಸಂತಾಪವುಳ್ಳವನಾಗಿ, ತನ್ನ ನಗರವಾದ ಲಂಕಾಪುರಿಗೆ ಅಭಿಮುಖನಾಗಿ ಹೊರಟು, ಮಹಾ ಸಂತೋಷವುಳ್ಳವನಾಗಿ, ತನ್ನ ಕುಮಾರನಾದ ಮೇಘನಾದನಂ ಕುರಿತಿಂತೆಂದನು,—ಎಲೈ ಸುತನೇ, ಅಸದೃಶವಾದ ಪರಾಕ್ರಮವುಳ್ಳ, ಈ ದೇವರಾಜನೂ, ಮತ್ತೂ ದೇವತೆಗಳೂ ಸಹಾ, ಯಾವ ಕಾರಣದ ದೆಶೆಯಿಂದ ನಿನ್ನಿಂದ ಪರಾಜಿತರಾದರೊ ಆ ಕಾರಣದ ದೆಶೆಯಿಂದ, ನಿನ್ನ ಶಕ್ತಿಗೆ ಅನುರೂಪವಾದ, ಪರಾಕ್ರಮಗಳಿಂದ ನನ್ನ ಕುಲಕ್ಕೆ ಬಹು ಮಾನಸಂಪಾದಿಸಲ್ಪಟ್ಟಿತು ॥೩೯॥ ಈ ಇಂದ್ರನಂ ತೆಗದುಕೊಂಡು ಸೈನ್ಯ ಪರಿವೃತನಾಗಿ ಇಲ್ಲಿಂದ ಲಂಕಾಪುರಿಯಂ ಕುರಿತು ಮುಂದೆ ತೆರಳೂ, ನಾನೂ ಕೂಡಾ, ಮಂತ್ರಿ ಪರಿವೃತನಾಗಿ, ಹಿಂದಗಡೆ ಅನುಸರಿಸಿ ಬರುವೆನೆಂದು ತಂದೆ ನುಡಿಯಲೂ, ಆ ಮೇಘನಾದನು, ಸೈನ್ಯಗಳಿಂದೊಡಗೂಡಿ, ಇಂದ್ರನಂ ತೆಗದುಕೊಂಡು ತನ್ನ ಮಂದಿರವಂ ಹೊಕ್ಕು. ಕಡು ಸಂತುಷ್ಟನಾಗಿ, ರಾಕ್ಷಸರನ್ನೆಲ್ಲಾ ಕಳುಹಿಸಿ ಕೊಟ್ಟನು. ॥೪೧॥

—…ಉತ್ತರರಾಮಾಯಣದಲ್ಲಿನ ೨೯ನೇ ಸರ್ಗಂ ಮುಗಿದುದು…—



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜಿತೆಮಹೆಂದ್ರೆತಿಬಲೆರಾವಣಸ್ಯಸುತನವ್ಯೆ । ಪ್ರಜಾಪತಿಂಗತಾಸ್ಸರ್ವೆಸುರಾಃಪರಮದುಃಖಿತಾಃ॥೧॥ ಪ್ರಜಾಪತೆಮ ಹೆಂದ್ರೊಯಂಗೃಹೀತೊಭಗವದ್ವರಾತ। ರಾಕ್ಷಸೆಂದ್ರಂತ್ರಿಲೊಕೆಶಅವಧ್ಯಂಕೃತವಾನಸಿ ॥೨॥ ಮಹೆಶ್ವರೆಣೆಂದ್ರಜಿತೊ ಮಾಯಾದತ್ತಾಮಹಾತ್ಮನಾ । ಕಿಂಕರಿಷ್ಯತಿದೆವೆಂದ್ರಃತಂಮಾಯಾಬಲವತ್ತರಮ್ ॥೩॥ ಸುರಾವಾದೆವಸರ್ವೆಶನಜಯಂತಿ ಭವದ್ವರಾತ । ತತಸ್ತ್ವಮವದೆವೆಂದ್ರಂಮೊಚಯಸ್ವಪ್ರಜಾಪತೆ ॥೪॥ ಅದ್ಯಪ್ರಭೃತಿಲಂಕೆಶಸ್ಸುವಿಕ್ರಮಬಲೊದಿತಃ। ತಸ್ಮಾನ್ಮೊಚಯದೆವೆಂದ್ರಂಭಕ್ತಂತವಜಗತ್ಪತೆ॥೫॥ ಎವಮುಕ್ತಸ್ಸುರೈರ್ಬ್ರಹ್ಮಾ ಗತ್ವಾಲಂಕಾಂನರೆಶ್ವರ ।ತಂರಾವಣಂ ಸಮಾಸಾದ್ಯಪುತ್ರಭ್ರಾತೃಭಿರಾವೃತಮ್ । ಅಬ್ರವೀದ್ಗಗನೆತಿಷ್ಠನ್ಸಾಂತ್ವಪೂರ್ವಂಪ್ರಜಾಪತಿಃ ॥೬॥ ವತ್ಸರಾವಣತು ಷ್ಟೊಸ್ಮಿತವಪುತ್ರಸ್ಯಸಂಯುಗೆ । ಅಹೊಸ್ಯವಿಕ್ರಮೌದಾರ್ಯಂತವತುಲ್ಯೊಧಿಕೊಪಿವಾ॥೭॥ಜಿತಂಹಿಭವತಾಸರ್ವಂತ್ರೈ

---

ಅತಿಬಲೆ-ಅತ್ಯಂತ ಬಲಶಾಲಿಯಾದ, ಮಹೆಂದ್ರೆ-ದೇವೇಂದ್ರನು, ರಾವಣಸ್ಯ-ರಾವಣಾಸುರನ, ಸುತೆನವ್ಯೆ-ಕೊಮಾರನಿಂದಲಾದರೆ, ಜಿತೆಸತಿ-ಜಯಿಸಲ್ಪಟ್ಟವನಾಗುತಿರಲೀಕಾಗಿ, ಸರ್ವೆ-ಸಮಸ್ತರಾದ, ಸುರಾಃ-ದೇವತೆಗಳು, ಪರಮದುಃಖಿತಾಃ-ಅತ್ಯಂತದುಃಖಿತರಾಗಿ, ಪ್ರಜಾಪತಿಂ-ಬ್ರಹ್ಮನನ್ನು ಕುರಿತು, ಗತಾಃ-ತೆರಳಿದರು ॥೧॥ ಹೆ ಪ್ರಜಾಪತೆ-ಎಲೈ ಬ್ರಹ್ಮನೆ, ಹೆ ತ್ರಿಲೊಕೆಶ-ಎಲೈ ಮೂರುಲೋಕಗಳಿಗೆ ಅಧಿಪತಿಯೆ, ಅಯಂಮಹೆಂದ್ರಃ-ಈ ದೇವೇಂದ್ರನು, ಭಗವದ್ವರಾತ್-ಭಗವತ್-ಪೂಜ್ಯನಾದ ನಿನ್ನ, ವರಾತ್-ವರದ ದೆಸೆಯಿಂದ,ಗೃಹೀತಃ-ಗ್ರಹಿಸಲ್ಪಟ್ಟನು, ರಾಕ್ಷಸೆಂದ್ರಂ – ರಾಕ್ಷಸಾಧಿಪತಿಯಾದ ರಾವಣನನ್ನು, ಅವಧ್ಯಂ-ವಧಿಸಲಸಾಧ್ಯನನ್ನಾಗಿ, ಕೃತವಾನಸಿ-ಮಾಡಿದೆ ॥೨॥ ಮಹಾತ್ಮನಾ-ಮಹಾಮನಸ್ವಿಯಾದ, ಮಹೆಶ್ವರೆಣ – ಈಶ್ವರನಿಂದ, ಇಂದ್ರಜಿತಃ-ಇಂದ್ರಜಿತುವಿಗೆ, ಮಾಯಾ-ಮಾಯಾಶಕ್ತಿಯು, ದತ್ತಾ-ಕೊಡಲ್ಪಟ್ಟಿತು, ದೆವೆಂದ್ರಃ-ದೇವೇಂದ್ರನು,ಮಾಯಾಬಲವತ್ತರಂ-ಮಾಯಾ-ಮಾಯಾಶಕ್ತಿಯಿಂದ,ಬಲವತ್ತರಂ-ಅತಿ ಬಲಾಢ್ಯನಾದ, ತಂ-ಆ ಮೇಘನಾದನನ್ನು, ಕಿಂಕರಿಷ್ಯತಿ-ಯೇನುಮಾಡುವನು ॥೩॥ ಹೆದೆವ-ಎಲೈ ದೇವನೆ, ಹೆಸರ್ವೆಶ-ಎಲೈ ಸರ್ವೇಶ್ವರನೆ, ಸುರಾವಾ- ದೇವತೆಗಳಾದರೂ, ಭವದ್ವರಾತ್-ನಿನ್ನ ವರದ ದೆಸೆಯಿಂದ, ನಜಯಂತಿ-ಜಯಿಸದೆ ಹೊದರು, ತತಃ-ಆ ಕಾರಣದ ದೆಸೆಯಿಂದ, ಹೆ ಪ್ರಜಾಪತೆ-ಓ ಬ್ರಹ್ಮನೆ, ತ್ವಮೇವ-ನೀನೆ, ದೆವೆಂದ್ರಂ-ದೇವೇಂದ್ರನನ್ನು, ಮೊಚಯಸ್ವ-ಬಿಡಿಸು ॥೪॥ ಹೆಜಗತ್ಪತೆ-ಎಲೈ ಲೋಕಕ್ಕೆ ಸ್ವಾಮಿಯೆ, ಅದ್ಯಪ್ರಭೃತಿ-ಇದು ಮೊದಲುಕೊಂಡು, ಲಂಕೆಶಃ-ರಾವಣನು, ಸುವಿಕ್ರಮಬಲೊದಿತಃ-ಸುವಿಕ್ರಮ, ಬಹಳವಾದ ಪರಾಕ್ರಮದಿಂದ, ಬಲೊದಿತಃ-ಬಲವನ್ನು ಪಡೆದಿರುತ್ತಾನೆ, ತಸ್ಮಾತ್-ಆಕಾರಣದದೆಸೆಯಿಂದ, ತವ-ನಿನ್ನ, ಭಕ್ತಂ-ಭಕ್ತನಾದ, ದೆವೆಂದ್ರಂ-ದೇವೇಂದ್ರನನ್ನು, ಮೊಚಯ-ಬಿಡಿಸು ॥೫॥ ಹೆ ನರೆಶ್ವರ-ನರಾಧಿಪತಿಯಾದ ಶ್ರೀರಾಮನೆ, ಏವಂ-ಈ ಪರಿಯಾಗಿ, ಸುರೈಃ-ದೇವತೆಗಳಿಂದ, ಉಕ್ತಃ-ಹೇಳಲ್ಪಟ್ಟ, ಪ್ರಜಾಪತಿಃ-ಸೃಷ್ಟಿಕರ್ತನಾದ, ಬ್ರಹ್ಮಾ-ಚತುರ್ಮುಖನು, ಲಂಕಾಂ-ಲಂಕಾಪಟ್ಟಣವನ್ನು ಕುರಿತು, ಗತ್ವಾ-ತೆರಳಿ, ಪುತ್ರಭ್ರಾತೃಭಿಃ-ಕುಮಾರರಿಂದಲೂ ಅಣ್ಣತಮ್ಮಂದಿರಿಂದಲೂ, ಆವೃತಂ-ಸುತ್ತಿಕೊಳ್ಳಲ್ಪಟ್ಟ, ತಂರಾವಣಂ-ಆ ರಾವಣನನ್ನು, ಸಮಾಸಾದ್ಯ-ಹೊಂದಿ, ಗಗನೆ-ಅಂತರಿಕ್ಷದಲ್ಲಿ, ತಿಷ್ಠನ್ – ಇರುತಿರುವನಾಗಿ, ಸಾಂತ್ವಪೂರ್ವಂ-ಸಾಮೋಪಾಯ ಪೂರ್ವಕವಾಗಿ, ಅಬ್ರವೀತ್-ನುಡಿದನು ॥೬॥ ಹೆವತ್ಸ-ಎಲೈ ಹುಡುಗನೆ, ಹೆ ರಾವಣ-ಎಲೈ ರಾವಣನೆ, ತವ-ನಿನ್ನ, ಪುತ್ರಸ್ಯ-ಮಗನ, ಸಂಯುಗೆ-ಕಾಳಗದಲ್ಲಿ, ತುಷ್ಟೊಸ್ಮಿ-ಸಂತುಷ್ಟನಾದೆನು, ಅಸ್ಯ-ಈ ಮೇಘನಾದನ, ವಿಕ್ರಮೌದಾರ್ಯಂ – ವಿಕ್ರಮ ಪರಾಕ್ರಮದ, ಔದಾರ್ಯಂ-ಅತಿಶಯವು, ಅಹೊ-ಆಶ್ಚರ್ಯವು, ತವ-ನಿನಗೆ, ತುಲ್ಯಃ-ಸಮಾನನೇನೊ, ಅಧಿಕೊಪಿವಾ-ಹೆಚ್ಚಾದವನೇನೊ ॥೭॥ಭವತಾ-ನಿನ್ನಿಂದ, ಸ್ವೆನತೆಜಸಾ-ಸ್ವಕೀಯ್ಯವಾದ ಪರಾಕ್ರಮದಿಂದ, ಸರ್ವಂ-ಸಮಸ್ತವಾದ, ತ್ರೈಲೊಕ್ಯಂ-ಲೋಕತ್ರಯವು, ಜಿತಂಹಿ-ಜಯಿಸಲ್ಪಟ್ಟತಷ್ಟೆ, ಸಸುತೆನ-ಕೊ

---

ರಾವಣಪುತ್ರನಾದ ಮೇಘನಾದನಿಂದ, ಮಹೇಂದ್ರನು ಹಿಡಿಯಲ್ಪಡಲೂ, ದೇವತೆಗಳೆಲ್ಲರೂ, ಪರಮ ದುಃಖಿಗಳವರಾಗಿ, ಬ್ರಹ್ಮನ ಸಮೀಪವಂ ಹೊಂದಿಂತೆಂದರೂ. ॥೧॥ ಎಲೈ ಲೋಕತ್ರಯಾಧಿಪತಿಯಾದ ಬ್ರಹ್ಮನೇ, ಆ ರಾಕ್ಷಸನಂ ಅವಧ್ಯನಾಗಿ ಮಾಡಿದ್ದೀಯಲ್ಲಾ, ನಿನ್ನವರ ಬಲದಿಂದ ಈಗ ಮಹೇಂದ್ರನನ್ನೂ ಹಿಡಿದುಕೊಂಡು ಹೋದನು ॥ ಆ ಇಂದ್ರಜಿತುವುಗಾದರೆ, ಮಹೇಶ್ವರನಿಂದ ಮಹಾ ಮಾಯಾಶಕ್ತಿಯೂ ಕೊಡಲ್ಪಟ್ಟತಲ್ಲಾ, ನಮ್ಮೊಡೆಯನಾದ ದೇವೇಂದ್ರನು ಮಹಾ ಮಾಯಾವಿಯಾದ ಅವನಂ ಏನು ಮಾಡ್ಯಾನು, ಎಲೈ ಸರ್ವೇಶನೇ! ನಿನ್ನ ವರ ಪ್ರಭಾವದಿಂದ ದೇವತೆಗಳಾದ ನಾವೆಲ್ಲರೂ ಜೈಸದೆ ಹೋದೆವು. ಎಲೈ ಬ್ರಹ್ಮನೇ! ನೀನೇ ಆ ಇಂದ್ರಜಿತುವಿನಿಂದ ಬಿಡಿಸು, ಎಲೈ ಜಗತ್ಪತಿಯೆ, ಇದು ಮೊದಲ್ಗೊಂಡು, ಲಂಕೇಶನಾದ ರಾವಣನು, ಮಹಾ ಬಲಶಾಲಿಯಾಗಿರುತ್ತಾನೆ. ಆ ಕಾರಣದಿಂದ, ನಿನ್ನ ಭಕ್ತನಾದ ಇಂದ್ರನಂ ಜಾಗ್ರತೆಯಾಗಿ ಬಿಡಿಸು. ॥೫॥ ಎಲೈ ನರನಾಥನೇ! ಎಂಬದಾಗಿ ದೇವತೆಗಳಿಂದ ಪ್ರಾರ್ಥಿತನಾದ ಬ್ರಹ್ಮನು ಲಂಕಾಪುರಿಯಂ ಹೊಕ್ಕು ಪುತ್ರ ಭ್ರಾತೃಗಳಿಂದ ಪರಿವೃತನಾದ ಆ ರಾವಣನಂ ಹೊಂದಿ ಗಗನದಲ್ಲಿಯೇ ನಿಂತವನಾಗಿ, ಒಳ್ಳೆ ಮಾತಿನಿಂದಲೇ ಇಂತೆಂದು ಹೇಳಿದನು ॥೬॥ ಎಲೈ ಹುಡುಗನಾದ ರಾವಣನೇ ! ನಿನ್ನಪುತ್ರನಿಗೆ ಯುದ್ಧದಲ್ಲಿ ನಾನು ಮೆಚ್ಚಿಯಿದ್ದೇನೆ, ಈತನ ಪರಾಕ್ರಮವು, ಔದಾರ್ಯವೂ, ಕೂಡ, ಬಹಳಾಶ್ಚರ್ಯಕರವಾಗಿರುವದು, ನಿನಗೆ ಸಮಾನನೆನೊ ಹೆಚ್ಚಿದವನೇನೋ ಏನೋ ॥೭॥ಈ ಲೋಕತ್ರಯವೆಲ್ಲಾ ಪುತ್ರಸಹಿತನಾದ ನಿನ್ನಿಂದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲೋಕ್ಯಂಸ್ತ್ವೆ ನತೇಜಸಾ । ಕೃತಾಪ್ರತಿಜ್ಞಾ ಸಫಲಾಪ್ರೀತೋಸ್ಮಿ ಸಸುತೇನವೈ ॥೮॥ ಅಯಂಚಪುತ್ರೋತಿಬಲಸ್ತವರಾವಣರಾವಣಿಃ। ಇಂದ್ರಜಿತೇತಿವಿಖ್ಯಾತೋಜಗತ್ಯೇಷಭವಿಷ್ಯತಿ ॥೯॥ ಬಲವಾನ್ ಶತ್ರುನಿರ್ಜೇತಾಭವಿಷ್ಯತ್ಯೇಷರಾಕ್ಷಸಃ। ಯಮಾಶ್ರಿತ್ಯತ್ವಯಾರಾಜನ್ ಸ್ಥಾಪಿತಾಸ್ತ್ರಿದಶಾವಶೇ ॥೧೦॥ ತನ್ಮುಚ್ಯತಾಂಮಹಾಬಾಹೋಮಹೇಂದ್ರಃಪಾಕಶಾಸನಃ । ಕಿಂಚಾಸ್ಯಮೋಕ್ಷಣಾರ್ಥಾಯಪ್ರಯಚ್ಛಂತುದಿವೌಕಸಃ ॥೧೧॥ ಅಥಾಬ್ರವೀನ್ಮಹಾತೇಜಾಇಂದ್ರಜಿತ್ಸಮಿತಿಂಜಯಃ॥ ಅಮರತ್ವಮಹಂದೇವವೃಣೋಮ್ಯಸ್ಯವಿಮೋಕ್ಷಣೇ ॥೧೨॥ ಅಬ್ರವೀತ್ತುತದಾದೇವೋರಾವಣಿಂನಳಿನೋದ್ಭವಃ। ನಾಸ್ತಿ ಸರ್ವಾಮರತ್ವಂಹಿಸರ್ವೇಷಾಂಪ್ರಾಣಿನಾಮಿಹ ॥೧೩॥ ಚತುಷ್ಪದಾಂಖೇಚರಾಣಾಮನ್ಯೇಷಾಂಚಮಹೌಜಸಾಮ್ । ವೃಕ್ಷಗುಲ್ಮಕ್ಷುಪಲತಾತೃಣೋಪಲಮಹೀಭೃತಾಮ್ ॥೧೪॥ ಸರ್ವೇಪಿಜಂತವೋನ್ಯೋನ್ಯಂಭೇತವ್ಯಸತಿಬಿಭ್ಯತಿ । ಅತೋತ್ರಲೋಕೇಸರ್ವೇಷಾಂಸರ್ವಸ್ಮಾಚ್ಚಭವೇದ್ಭಯಮ್ ॥ ೧೫ ॥ ಪಕ್ಷಿಣೋಥಚತುಷ್ಪಾದೋಯದ್ವಾನ್ಯೇಸ್ಯುರ್ಮಹೌಜಸಃ । ಅಪಿವೃಕ್ಷಸ್ಯಶುಷ್ಕಸ್ಯಪರ್ಣಾ

---

ಮಾರನಿಂದೊಡಗೂಡಿದ, ಭವತಾ-ನಿನ್ನಿಂದ, ಕೃತಾ-ಮಾಡಲ್ಪಟ್ಟ, ಪ್ರತಿಜ್ಞಾ-ಶಪಥವು, ಸಫಲಾ-ಇಂದಿಗೆ ಪ್ರಯೋಜನವಾಯಿತು, ಪ್ರೀತಃ- ಸಂತುಷ್ಟನು, ಅಸ್ಮಿ-ಆದೆನು ॥೮॥ ಹೆ ರಾವಣ-ಎಲೈ ರಾವಣನೆ, ಅತಿಬಲಃ-ಬಲುಪರಾಕ್ರಮಿ ಯಾದ,ತವಪುತ್ರಃ-ನಿನ್ನ ಪುತ್ರನಾದ, ಅಯಂರಾವಣಿಃ - ಈ ಮೇಘನಾದನು, ಜಗತಿ-ಲೋಕದಲ್ಲಿ, ಇಂದ್ರಜಿತೇತಿ-ಇಂದ್ರನನ್ನು ಜಯಿಸಿದವನೆಂದು, ವಿಖ್ಯಾತಃ-ಪ್ರಖ್ಯಾತನು, ಭವಿಷ್ಯತಿ-ಆಗುವನು॥೯॥ ಹೆ ರಾಜನ್-ಎಲೈ ಅರಸೆ, ಯಂ-ಯಾವನಿನ್ನ ಮಗನನ್ನು, ಆಶ್ರಿತ್ಯ-ಆಶ್ರಯಿಸಿ, ತ್ವಯಾ-ನಿನ್ನಿಂದ, ತ್ರಿದಶಾಃ-ದೇವತೆಗಳು, ವಶೇ-ಸ್ವಾಧೀನದಲ್ಲಿ, ಸ್ಥಾಪಿತಾಃ-ಇಡಲ್ಪಟ್ಟರೊ, ಏಷರಾಕ್ಷಸಃ-ಈ ರಾಕ್ಷಸನು, ಬಲವಾನ್-ಬಲವಂತನಾಗಿ, ಶತ್ರುನಿರ್ಜೇತಾ-ಶತ್ರುಗಳ ಜಯಶೀಲನು, ಭವಿಷ್ಯತಿ-ಆಗುವನು ॥೧೦॥ ತತ್-ಆಕಾರಣದ ದೆಸೆಯಿಂದ, ಹೆಮಹಾಬಾಹೋ-ಓ ಮಹಾಭುಜ ಪರಾಕ್ರಮಿಯೆ, ಪಾಕಶಾಸನಃ-ಪಾಕಾರಿಯಾದ, ಮಹೇಂದ್ರಃ- ದೇವೇಂದ್ರನು, ಮುಚ್ಯತಾಂ-ಬಿಡಲ್ಪಡಲಿ, ಅಸ್ಯ-ಈ ದೇವೇಂದ್ರನ, ಮೋಕ್ಷಣಾರ್ಥಾಯ-ಬಿಡುವಿಕೆಯೆಂಬ ಪ್ರಯೋಜನಕ್ಕೋಸ್ಕರ, ದಿವೌಕಸಃ-ದೇವತೆಗಳು, ಕಿಂವಾ-ಏನಾದರೂ, ಪ್ರಯಚ್ಛಂತು-ಕೊಡಲಿ॥೧೧॥ ಅಥ-ಬಳಿಕ, ಮಹಾತೇಜಾಃ-ಮಹಾಪರಾಕ್ರಮಿಯಾದ, ಸಮಿತಿಂಜಯಃ-ಯುದ್ಧದಲ್ಲಿ ಜಯಿಸುವ, ಇಂದ್ರಜಿತ್-ಇಂದ್ರಜಿತ್ತು, ಹೆದೇವ-ಎಲೈ ಸ್ವಾಮಿಯೆ, ಅಸ್ಯ-ಈ ದೇವೇಂದ್ರನ, ವಿಮೋಕ್ಷಣೆ-ಬಿಡುಗಡೆ ವಿಷಯದಲ್ಲಿ, ಅಹಂ-ನಾನು, ಅಮರತ್ವಂ-ಮರಣವಿಲ್ಲದಭಾವವನ್ನು, ವೃಣೋಮಿ-ಬೇಡುತ್ತೇನೆ, ಇತಿ-ಇಂತೆಂದು, ಅಬ್ರವೀತ್-ನುಡಿದನು॥೧೨॥ ತದಾ-ಆ ಕಾಲದಲ್ಲಿ, ನಳಿನೋದ್ಭವಃ-ಕಮಲಾಸನನಾದ, ದೇವಃ-ಬ್ರಹ್ಮದೇವರು, ರಾವಣಿಂ-ರಾವಣಪುತ್ರನಾದ ಇಂದ್ರಜಿತ್ತನ್ನು ಕುರಿತು, ಅಬ್ರವೀತ್-ನುಡಿದನು, ಇಹ-ಈ ಮಧ್ಯಮ ಲೋಕದಲ್ಲಿ, ಸರ್ವೆಷಾಂ-ಸಮಸ್ತರಾದ, ಪ್ರಾಣಿನಾಂ-ಪ್ರಾಣಧಾರಿಗಳಿಗೆ, ಸರ್ವಾಮರತ್ವಂ-ಸರ್ವ-ಸಮಸ್ತನಿಮಿತ್ತದಿಂದಲೂ, ಅಮರತ್ವಂ-ಮರಣರಾಹಿತ್ಯವು; (ಅಥವಾ- ಸರ್ವಾಮರತ್ವಂ-ಸರ್ವಕಾಲದಲ್ಲಿಯೂ ಮರಣರಾಹಿತ್ಯವು) ನಾಸ್ತಿಹಿ-ಇಲ್ಲವಷ್ಟೆ॥೧೩॥ ಚತುಷ್ಪದಾಂ-ಚತುಷ್ಪಾತ್ಪಶುಗಳಿಗೆ, ಖೇಚರಾಣಾಂ-ಪಕ್ಷಿವಿಶೇಷಗಳಿಗೂ, ಅನ್ಯೇಷಾಂ-ಇತರಗಳಾದ, ಮಹೌಜಸಾಂ-ಮಹಾತೇಜಸ್ವಿಗಳಾದವರಿಗೂ, ವೃಕ್ಷಗುಲ್ಮಕ್ಷುಪಲತಾತೃಣೋಪಲಮಹೀಭೃತಾಂ-ವೃಕ್ಷ-ಗಿಡಗಳಿಗೂ, ಗುಲ್ಮ-ಪೊದೆಗಳಿಗೂ, ಕ್ಷುಪ-ಚಿಕ್ಕದಾಗಿರುವ ಕೊಂಬೆಗಳಿಗೂ, ಲತಾ-ಬಳ್ಳಿಗಳಿಗೂ, ತೃಣ-ಹುಲ್ಲುಗಳಿಗೂ, ಉಪಲ-ಕಲ್ಲುಗಳಿಗೂ, ಮಹೀಭೃತಾಂ-ಬೆಟ್ಟಗಳಿಗೂ, ಸರ್ವಾಮರತ್ವಂ-ಸರ್ವಕಾಲದಲ್ಲಿ ಮರಣರಾಹಿತ್ಯವು, ನಾಸ್ತಿಹಿ-ಇಲ್ಲವಷ್ಟೆ ॥೧೪॥ ಸರ್ವೇಪಿಜಂತವಃ-ಸಮಸ್ತ ಜಂತುಗಳು, ಅನ್ಯೋನ್ಯಂ - ಒಬ್ಬರಿಗೊಬ್ಬರು, ಭೇತವ್ಯಸತಿ-ಭಯಪಡಲತಕ್ಕದ್ದಾಗತಿರಲಿಕಾಗಿ, ಬಿಭ್ಯತಿ-ಭಯಬೀಳುತ್ತೇವೆ, ಅತಃ-ಈಕಾರಣದ್ದೆಸೆಯಿಂದ, ಅತ್ರಲೋಕೇ-ಈ ಲೋಕದಲ್ಲಿ, ಸರ್ವೇಷಾಂ-ಸಮಸ್ತ ಪ್ರಾಣಿಗಳಿಗೂ, ಸರ್ವಸ್ಮಾಚ್ಚ -ಸಮಸ್ತಪ್ರಾಣಿಗಳ ದೆಸೆಯಿಂದಲೂ, ಭಯಂ-ಭಯವು, ಭವೇತ್-ಆಗುವದು ॥೧೫ ॥ ಪಕ್ಷಿಣಃ-ಪಕ್ಷಿಗಳೂ

---

ಜಯಿಸಲ್ಪಟ್ಟಿತು, ಆದಕಾರಣ ನಿನ್ನ ಪ್ರತಿಜ್ಞೆಯು ಸಫಲವಾಯಿತು, ನಾನು ಬಹಳ ಸಂತೋಷ ಚಿತ್ತನಾದೆನು ॥೮॥ ಎಲೈ ರಾವಣನೇ, ನಿನ್ನ ಕುವರನಾದ ಈ ಮೇಘನಾದನು ಮಹಾ ಪರಾಕ್ರಮಿಯು, ಲೋಕದಲ್ಲೆಲ್ಲಾ ಇಂದ್ರಜಿತುವೆಂದು ಪ್ರಖ್ಯಾತನಾಗಿರುವನು, ॥೯॥ ಯಾವ ಪುತ್ರನನ್ನಾಶ್ರಯಿಸಿ ನಿನ್ನಿಂದಾಲೋಕತ್ರಯವೆಲ್ಲಾ ಸ್ವಾಧೀನಗೊಳಿಸಲ್ಪಟ್ಟಿತೊ, ಅಂಥಾ ಬಲವಂತನಾದ ಈ ರಾಕ್ಷಸನು ಶತ್ರುಗಳಂ ಜೈಸತಕ್ಕವನಾಗುವನು ॥೧೦॥ ಎಲೈ ಮಹಾ ಭುಜಪರಾಕ್ರಮಿಯೇ, ಪಾಕಾರಿಯಾದ, ಈ ಮಹೇಂದ್ರನು, ನಿನ್ನಿಂದ ಬಿಡಸಲ್ಪಟ್ಟವನಾಗಲೀ ಈತನನ್ನು ಬಿಡುವದಕ್ಕೋಸ್ಕರ ದೇವತೆಗಳು ನಿನಗೇನು ಕೊಡಬೇಕು ಎಂಬದಾಗಿ ಬ್ರಹ್ಮನು ನುಡಿಯಲೂ, ಮಹಾ ತೇಜಸ್ವಿಯಾದ ಇಂದ್ರಜಿತುವಿಂತೆಂದನು, ಎಲೈ ದೇವೋತ್ತಮನೇ, ನನಿಗೆ ಅಮರತ್ವವಂ ಕೊಟ್ಟರೆ ನಾನು ಈತನಂ ಬಿಡುವೆನೆಂಬದಾಗಿ ನುಡಿದವನಾದನು ॥೧೨॥ ಆ ಸಮಯದಲ್ಲಿ ಸಾಕ್ಷಾಚ್ಚತುರ್ಮುಖ ಬ್ರಹ್ಮನು, ಎಲೈ ವತ್ಸನೇ! ಈ ಲೋಕದಲ್ಲಿ ಸರ್ವಪ್ರಾಣಗಳಿಗೂ, ಸರ್ವ ಕಾಲದಲ್ಲಿಯೂ ಮರಣ ರಾಹಿತ್ಯವಿಲ್ಲವಷ್ಟೇ ॥೧೩॥ ಅದು ಹ್ಯಾಗಂದರೇ ಈ ಲೋಕದಲ್ಲಿ, ಚತುಷ್ಪಾತ್ಪಶುಗಳೂ, ಗಗನ ಚಾರಿಗಳೂ, ಮಹಾ ತೇಜಸ್ವಿಗಳಾದ ಮತ್ತು ಕೆಲಬರೂ ವೃಕ್ಷ, ಗುಲ್ಮ, ಕ್ಷುಪ, ಲತ, ತೃಣ, ಪಾಷಾಣ, ಗಿರಿಗಳೇ ಮುಂತಾದ ಸರ್ವಜಂತುಗಳೂ ಒಬ್ಬರಿಗೊಬ್ಬರು ಹೆದರುತ್ತಾರೆ, ಸರ್ವರಿಗೂ ಸಮಸ್ತಪದಾರ್ಥಗ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ಯಪತನಾದ್ಭಯಮ್ ॥೧೬॥ ಮರಣಾಂತಾನಿಸರ್ವಾಣಿಚರಾಣಿಸ್ಥಾವರಾಣಿ ॥೧೭॥ ಅಥಾಬ್ರವೀತ್ಸತತ್ರಸ್ಥಮಿಂದ್ರಜಿತ್ಪದ್ಮಸಂಭವಮ್ । ಶ್ರೂಯತಾಂವಾಭವೇತ್ಸಿದ್ಧಿಶ್ಶಕ್ರಸ್ಯತುವಿಮೋಕ್ಷಣೇ ॥೧೮॥ ಮಮೇಷ್ಟಂನಿತ್ಯಶೋದೇವಹವ್ಯೈಸ್ಸಂಪೂಜ್ಯಪಾವಕಮ್ । ಸಂಗ್ರಾಮಮಭಿತರ್ತುಂವೈಶತ್ರುನಿರ್ಜಯಕಾಂಕ್ಷಿಣಃ ॥೧೯॥ ಅಶ್ವಯುಕ್ತೋಮಮರಥಃಸಮುತ್ತಿಷ್ಠೇದ್ವಿಭಾವಸೋಃ । ತತಸ್ಥಸ್ಯಾಮರತಾಚಸ್ಯಾದೇಷಮೇನಿಶ್ಚಯೋವರಃ॥೨೦॥ ತಸ್ಮಿಂಶ್ಚೇದಸಮಾಪ್ತೇತುಜಪಹೋಮೇವಿಭಾವಸೌ। ಯುಧ್ಯೇಯಂದೇವಸಂಗ್ರಾಮೇತದಾಮೇಸ್ಯಾದ್ವಿನಾಶನಮ್ ॥೨೧॥ ಸರ್ವೋಹಿತಪಸಾಚೈವವೃಣೋತ್ಯಮರತಾಂಜನಃ।ವಿಕ್ರಮೇಣಮಯಾತ್ವೇತದಮರತ್ವಂಪ್ರವರ್ತಿತಮ್॥೨೨॥ ಏವಮಸ್ತ್ವಿತಿತಂಚಾಹವಾಕ್ಯಂದೇವಃಪಿತಾಮಹಃ । ಮುಕ್ತಶ್ಚೇಂದ್ರಜಿತಾಶಕ್ರೋಗತಾಶ್ಚತ್ರಿದಿವಂಸುರಾಃ ॥೨೩॥ ಏತಸ್ಮಿನ್ನಂತರೇಶಕ್ರೋದೀನೋಭ್ರಷ್ಟಾಂಬರದ್ಯುತಿಃ ।ರಾಮಚಿಂತಾಪರೀತಾ

---

ಳು,ಅಥ-ಬಳಿಕ, ಚತುಷ್ಪಾದಃ-ಚತುಷ್ಪಾತ್ಪಶುಗಳೂನು, ( ಯದ್ವಾ-ಹಾಗಲ್ಲದೆ ಹೋದರೆ, ಮಹೌಜಸಃ-ಮಹಾತೇಜಸ್ವಿಗಳಾದ, ಅನ್ಯೇ- ಇತರಜಾತಿಗಳು, ಸ್ಯುಃ-ಆಗುವವು, ವೃಕ್ಷಸ್ಯ-ಗಿಡದ ಸಮ್ಮಂಧಿಯಾದ, ಶುಷ್ಕಸ್ಯ-ಒಣಗಿರುವ, ಪರ್ಣಸ್ಯ-ಎಲೆಯ, ಪತನಾದಪಿ – ಬೀಳುವಿಕೆಯಿಂದಲೂಕೂಡ, ಭಯಂ-ಭಯವನ್ನು, ಪ್ರಾಪ್ನುವಂತಿ-ಹೊಂದುತವೆ ॥೧೬॥ ಸರ್ವಾಣಿ-ಸಮಸ್ತವಾದ, ಚರಾಣಿ-ಜಂಗಮಗಳೂನು, ಸ್ಥಾವರಾಣಿ-ಸ್ಥಿರಗಳೂನು, ಮರಣಾಂತಾನಿ-ಮರಣವೆ ಕೊನೆಯಾಗಿಉಳ್ಳದುಸ್ಟೆ॥೧೭॥ ಅಥ-ಬಳಿಕ,ಸಃಇಂದ್ರಜಿತ್-ಆ ಇಂದ್ರಜಿತ್ತುವು,ತತ್ರಸ್ಥಂ-ಅಲ್ಲಿರುವ,ಪದ್ಮಸಂಭವಂ-ಚತುರ್ಮುಖ ಬ್ರಹ್ಮನನ್ನು ಕುರಿತು, ಅಬ್ರವೀತ್-ನುಡಿದನು,ಶಕ್ರಸ್ಯ-ದೇವೇಂದ್ರನ,ವಿಮೋಕ್ಷಣೇತು-ಬಿಡಗಡೆವಿಷಯದಲ್ಲಾದರೆ, ಸಿದ್ಧಿಃ-ನನ್ನ ಕಾರ್ಯಸಿದ್ಧಿಯು,ಭವೇತ್-ಆಗಲಿ,ಶ್ರೂಯತಾಂ-ಕೇಳಲ್ಪಡಲಿ॥೧೮॥ ಹೇದೇವ-ಎಲೈ ಸ್ವಾಮಿಯೆ,ನಿತ್ಯಶಃ-ನಿರಂತರದಲ್ಲಿಯು,ಪಾವಕಂ-ಯಜ್ಞೇಶ್ವರನನ್ನು,ಹವ್ಯೈಃ-ಹವಿರ್ಭಾಗಗಳಿಂದ,ಸಂಪೂಜ್ಯ-ಪೂಜೆಮಾಡಿ, ಸಂಗ್ರಾಮಂ-ಕಾಳಗವನ್ನು, ಅಭಿತರ್ತುಂವೈ-ಗೆಲ್ಲುವದಕ್ಕೋಸ್ಕರವಾದರೆ, ಶತ್ರುನಿರ್ಜಯಕಾಂಕ್ಷಿಣಃ-ಶತ್ರುಗಳಜಯವನ್ನು ಅಪೇಕ್ಷಿಸುತಿರುವ, ಮಮ-ನನಗೆ, ಇಷ್ಟಂ-ಇಷ್ಟವು ॥೧೯॥ ಮಮ-ನನಗೆ, ಅಶ್ವಯುಕ್ತಃ-ಕುದುರೆಗಳಿಂದೊಡಗೂಡಿದ, ರಥಃ-ರಥವು, ವಿಭಾವಸೋಃ-ಅಗ್ನಿದೇಶೆಯಿಂದ, ಸಮುತ್ತಿಷ್ಠೇತ್-ಮ್ಯಾಲಕ್ಕೆ ಯೇಳಲಿ, ತತ್ರಸ್ಥಸ್ಯ-ಆರಥದಲ್ಲಿ ಇರುವ, ಮೇ-ನನಗೆ, ಅಮರತಾಚ- ಮರಣರಾಹಿತ್ಯವು, ಸ್ಯಾತ್-ಆಗಲಿ, ಏಷಃ-ವರಃ- ಈ ವರವು, ನಿಶ್ಚಯಃ-ನಿಶ್ಚಯವು ॥೨೦॥ ತಸ್ಮಿನ್-ವಿಭಾವಸೌ-ಆ ಯಜ್ಞೇಶ್ವರನಲ್ಲಿ, ಜಪ್ಯೇ-ಜಪವಾಗಲಿ, ಹೋಮೇ-ಹೋಮವಾಗಲಿ, ಅಸಮಾಪ್ತೇತು-ಸಮಾಪ್ತಿಯಾಗದೆ ಇರಲಿಕಾಗಿ, ಯುಧ್ಯೇಯಂಚೇತ್-ಯುದ್ಧಮಾಡಿದವನಾದರೆ,ತದಾ-ಆಕಾಲದಲ್ಲಿ, ದೇವ-ಸ್ವಾಮಿಯೆ,ಸಂಗ್ರಾಮೇ-ಕಾಳಗದಲ್ಲಿ, ಮೇ-ನನಗೆ,ವಿನಾಶನಂ-ಸಂಹಾರವು, ಸ್ಯಾತ್-ಆಗಲಿ॥ ಹಿಯಸ್ಮಾತ್ಕಾರಣಾತ್-ಯಾವಕಾರಣದ್ದೆಶೆಯಿಂದ,ಸರ್ವೋಜನಃ-ಸಮಸ್ತಜನವು,ತಪಸಾಚೈವ-ತಪಸ್ಸಿನಿಂದಲೆ,ಅಮರತಾಂ- ಮರಣರಾಹಿತ್ಯವನ್ನು, ವೃಣೋತಿ-ವರಿಸುತ್ತದೆ, ಮಯಾತು-ನನ್ನಿಂದಲಾದರೆ,ಏತತ್-ಈ- ಅಮರತ್ವಂ-ಮರಣರಾಹಿತ್ಯವು, ವಿಕ್ರಮೇಣ-ಪರಾಕ್ರಮದಿಂದ, ಪ್ರವರ್ತಿತಂ-ಪ್ರವರ್ತಿಸಲ್ಪಟ್ಟಿತು ॥೨೨॥ ಪಿತಾಮಹೋದೇವಃ-ಬ್ರಹ್ಮದೇವರು, ತಂಚ-ಆ ಇಂದ್ರಜಿತ್ತಿನನ್ನು ಕುರಿತು, ಏವಮಸ್ತ್ವಿತಿ-ಹಾಗೆ ಆಗಲೆಂದು, ವಾಕ್ಯಂ-ಮಾತನ್ನು,ಆಹ-ನುಡಿದನು, ಇಂದ್ರಜಿತಾ-ಇಂದ್ರಜಿತ್ತಿನಿಂದ, ಶಕ್ರಶ್ಚ-ದೇವೇಂದ್ರನೂಕೂಡ, ಮುಕ್ತಃ-ಬಿಡಲ್ಪಟ್ಟನು, ಸುರಾಶ್ಚ-ದೇವತೆಗಳೂಕೂಡ, ತ್ರಿದಿವಂ-ಸ್ವರ್ಗಲೋಕವನ್ನು ಕುರಿತು, ಗತಾಃ-ಹೊರಟುಹೋದರು ॥೨೩॥ ಹೇರಾಮ-ಎಲೈ ಶ್ರೀರಾಮನೆ, ಏತಸ್ಮಿನ್ನಂತರೇ-ಈ ಮಧ್ಯದಲ್ಲಿ, ದೀನಃ-ದೀನನಾದ, ಭ್ರಷ್ಟಾಂಬರದ್ಯುತಿಃ-ಭ್ರಷ್ಟ-ಜಾರಿಹೋದ,ಅಂಬರ-ವಸ್ತ್ರದ, ದ್ಯುತಿಃ-ಕಾಂತಿಯುಳ್ಳ, ಶಕ್ರಃ-ದೇವೇಂದ್ರನು, ಚಿಂತಾಪರೀತಾತ್ಮಾ-ಚಿಂತ-ಚಿಂತೆಯಿಂದ, ಪರೀತಾತ್ಮಾ-ಕಳವಳವಾದ ಮನಸ್ಸುಳ್ಳವನಾಗಿ, ಧ್ಯಾನತತ್ಪರತಾಂ-ಧ್ಯಾನಾಸಕ್ತಿಯನ್ನು,ಗತಃ-

---

ಳಿಂದಲೂ ಭಯವೇ ಯಿರುವದೂ ಅದು ಹ್ಯಾಗೆಂದರೆ—ಪಶು, ಪಕ್ಷಿ, ಮೃಗಾದಿಗಳಾದ ಜೀವರಾಶಿಗಳಿಗೆ ಮರಣಭಯವು ಮತ್ತು, ಸ್ಥಾವರಗಳಾದ, ವೃಕ್ಷಪರ್ಣಗಳಿಗೆ ಪತನ ಭಯವು ಇರುವಂತೇ ನೇಮಿಸಲ್ಪಟ್ಟಿರುವದು ಎಂಬದಾಗಿಬ್ರಹ್ಮನು ನುಡಿಯಲೂ ॥೧೭॥ ಇಂದ್ರಜಿತುವಿಂತೆಂದನು. ಎಲೈ ಭಗವಂತನೇ ! ಈ ಇಂದ್ರನ ಬಿಡಗಡೇ ವಿಷಯದಲ್ಲಿ, ನನ್ನ ಕಾರ್ಯಸಿದ್ಧಿಯು, ಹೀಗೇ, ಇರಬೇಕೆಂಬದಾಗಿ ಅಪೇಕ್ಷಿಸುತ್ತೇನೆ ಕೇಳು,ಅದೇನೆಂದರೆ.—ಎಲೈ ದೇವನೇ, ಶತ್ರುಗಳಂ ಜಯಿಸಬೇಕೆಂದಿಚ್ಛೈಸಿದವನಾಗಿ ಯುದ್ಧಾರ್ಥವಾಗಿ ಹೋಗುವದಕ್ಕೋಸ್ಕರ, ಹವಿರ್ಭಾಗಗಳಿಂದ ಅಗ್ನಿಯಂ ಪೂಜಿಸಿದರೆ ಅಶ್ವಯುಕ್ತವಾದ ರಥವು ಆ ಅಗ್ನಿಯಿಂದ ಮೇಲಕ್ಕೆಎದ್ದು ಬರಬೇಕು, ಅದರನ್ನೇರಿ ನಾನು ಯುದ್ಧವಂಗೈಯುತಿದ್ದರೆ, ಯನಗೆ ಅಮರತ್ವವುಂಟಾಗಬೇಕು. ಯಾವ ಕಾಲದಲ್ಲಿ ಆ ಹೋಮವನ್ನಾದರೆ ಸಮಾಪ್ತಿ ಮಾಡದೆ, ಯುದ್ಧವಂ ಕುರಿತು ತೆರಳುವೆನೋ, ಆಗ ಯನಗೆ ಮೃತ್ಯು ಉಂಟಾಗಲೀ ಸರ್ವಜನರೂ, ತಪಸ್ಸಿನಿಂದಲೇ ಅಮರತ್ವವಂ ಹೊಂದುವರು, ನಾನಾದರೇನೊ, ಯನ್ನ ಪರಾಕ್ರಮದಿಂದ ಮರಣರಾಹಿತ್ಯವಂ ಹೊಂದುವೆನು, ಎಂಬದಾಗಿ ಇಂದ್ರಜಿತುವು ಬೇಡಲೂ, ಪಿತಾಮಹನು ಹಾಗೇ ಆಗಲೆಂದು ವರವಂಕೊಟ್ಟು, ದೇವೇಂದ್ರನಂ ಬಿಡಿಸಲೂ. ಆಗ ದೇವತೆಗಳೆಲ್ಲರೂ ಸ್ವರ್ಗವಂ ಕುರಿತು ತೆರಳಿದರು ॥೨೩॥ ಎಲೈ ಶ್ರೀರಾಮನೇ ! ಇಷ್ಟರಲ್ಲಿ ದೇವೇಂದ್ರನು ದೀನನಾಗಿಯೂ ಕಳೆಗುಂದಿದ ವಸ್ತ್ರಕಾಂತಿಯುಳ್ಳವನಾಗಿಯೂ, ಚಿಂತೆಯಿಂದ ವ್ಯಾಪ್ತವಾದ ಮನುಸ್ಸುಳ್ಳವನಾಗಿಯೂ ಇರುವನಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ಮಾ ಧ್ಯಾನತತ್ಪರತಾಂಗತಃ॥೨೪॥ ತಂತುದೃಷ್ಟ್ವಾ ತಥಾಭೂತಂಪ್ರಾಹದೇವಃಪ್ರಜಾಪತಿಃ। ಶತಕ್ರತೋಕಿಮುಪುರಾ ಕರಿ ಷಿಸ್ಮ ಸುದುಷ್ಕೃತಮ್ ॥೨೫॥ ಅಮರೇಂದ್ರಮಯಾಬಹ ವ್ಯಃಪ್ರಜಾಸ್ಸೃಷ್ಟಾಪುರಾಪ್ರಭೋ । ಏಕವರ್ಣಾಸ್ಸಮಾಭಾಷಾ ಏಕರೂಪಾಶ್ಚ ಸರ್ವಶಃ ॥೨೬॥ ತಾಸಾಂನಾಸ್ತಿ ವಿಶೇಷೋಹಿದರ್ಶನೇಲಕ್ಷಣೇಪಿವಾ॥೨೭॥ ತತೋಹಮೇಕಾಗ್ರಮನಾಸ್ತಾಃಪ್ರ ಜಾಃಪರ್ಯಚಿಂತಯಮ್। ಸೋಹಂತೇಷಾಂವಿಶೇಷಾರ್ಥಂಸ್ತ್ರಿಯಮೇಕಾಂವಿನಿರ್ಮಮೇ ॥೨೮॥ ಯದ್ಯತ್ಪ್ರಜಾನಾಂಪ್ರತ್ಯಂಗಂ ವಿಶಿಷ್ಟಂತತ್ತದುದ್ಧೃತಮ್। ತತೋಮಯಾರೂಪಗುಣೈರಹಲ್ಯಾಸ್ತ್ರೀವಿನಿರ್ಮಿತಾ ॥೨೯॥ ಹಲಂನಾಮೇಹವೈರೂಪ್ಯಂಹಲ್ಯಂ ತತ್ಪ್ರಭವಂಭವೇತ್ ! ಯಸ್ಯಾನವಿದ್ಯತೇಹಲ್ಯಂತತೋಹಲ್ಯೇತಿವಿಶ್ರುತಾ । ಅಹಲ್ಯೇತಿಮಯಾಶಕ್ರತಸ್ಯಾನಾಮಪ್ರವರ್ತಿತಮ್। ನಿರ್ಮಿತಾಯಾಂಚದೇವೇಂದ್ರತಸ್ಯಾಂನಾರ್ಯಾಂಸುರರ್ಷಭ । ಭವಿಷ್ಯತೀತಿಕಸ್ಯೈಷಾಮಮಚಿಂತಾತತೋಭವತ್ ॥೩೧॥

ಹೊಂದಿದನು॥ ತಥಾಭೂತಂ–ಅಂಥಾಧ್ಯಾನಮಾಡುತಿರುವ, ತಂತು–ಆ ದೇವೇಂದ್ರನನ್ನಾದರೆ,ಪ್ರಜಾಪತಿರ್ದೇವಃ–ಬ್ರಹ್ಮದೇವನು,ದೃಷ್ಟ್ವಾ–ಕಂಡು,ಪ್ರಾಹ– ಹೇಳಿದನು,ಹೆಶತಕ್ರತೋ–ಎಲೈದೇವೇಂದ್ರನೆ,ಪುರಾ–ಪೂರ್ವದಲ್ಲಿ, ಸುದುಷ್ಕೃತಂ–ದೊಡ್ಡ ಪಾಪಕಾರ್ಯವನ್ನು,ಕಿಮುಕರಿಷ್ಯಸ್ಮ–ಯಾತಕ್ಕೆಮಾಡಿದ್ದೀಯಪ್ಪೆ॥ ಹೆಅಮರೇಂದ್ರ–ಎಲೈ ದೇವೇಂದ್ರನೆ, ಹೆಪ್ರಭೋ–ಎಲೈಸ್ವಾಮಿಯೆ,ಮಯಾ–ನನ್ನಿಂದ, ಪುರಾ–ಪೂರ್ವದಲ್ಲಿ, ಏಕವರ್ಣಾಃ–ಒಂದೇಬಣ್ಣವುಳ್ಳ,ಸಮಾಭಾಷಾಃ– ಸಮಾನ ಭಾಷಣೆಯುಳ್ಳಂಥಾ ಸರ್ವಶಃ– ಸರ್ವಾಂಶೆಗಳಲ್ಲಿಯೂ, ಏಕರೂಪಾಃ – ಏಕಾಕಾರವುಳ್ಳ, ಬಹ್ವ್ಯಃ – ಅನೇಕರಾದ, ಪ್ರಜಾಃ – ಪ್ರಜೆಗಳು, ಸೃ ಷ್ಟಾಃ–ಸೃಷ್ಟಿಮಾಡಲ್ಪಟ್ಟರು ॥೨೬॥ ತಾಸಾಂ–ಆ ಪ್ರಜೆಗಳಿಗೆ, ದರ್ಶನೆ–ನೋಡುವಿಕೆಯಲ್ಲಿಯೂ, ಲಕ್ಷಣೇಪಿವಾ–ಲಕ್ಷಣದಲ್ಯಾದರೂ ಸರಿಯೆ, ವಿಶೇಷಃ– ವಿಶೇಷವು, ನಾಸ್ತಿಃ–ಇಲ್ಲವಷ್ಟೆ ॥೨೭॥ ತತಃ–ಅನಂತರದಲ್ಲಿ, ಅಹಂ–ನಾನು, ಏಕಾಗ್ರಮನಾಃ–ಏಕಾಗ್ರಚಿತ್ತನಾಗಿ, ತಾಃಪ್ರಜಾಃ–ಆಪ್ರಜೆಗಳನ್ನು ಕು ರಿತು, ಪರ್ಯಚಿಂತಯಂ–ಆಲೋಚನೆ ಮಾಡಿದೆನು, ಸೋಹಂ–ಆ ಈ ನಾನು,ತೇಷಾಂ–ಆ ಪ್ರಜೆಗಳಿಗೆ, ವಿಶೇಷಾರ್ಥಂ–ವೈಲಕ್ಷಣ್ಯನಿಮಿತ್ತವಾಗಿ, ಏಕಾಂಸ್ತ್ರಿ ಯಂ–ಒಬ್ಬ ಸ್ತ್ರೀಯನ್ನು, ವಿನಿರ್ಮಮೆ–ಸೃಷ್ಟಿಮಾಡಿದೆನು ॥೨೮॥ ಪ್ರಜಾನಾಂ–ಪ್ರಜೆಗಳ,ಪ್ರತ್ಯಂಗಂ–ಪ್ರತ್ಯವಯವಗಳಲ್ಲಿ,ಯದ್ಯತ್–ಯಾವ ಯಾವದು ವಿಶಿಷ್ಟಂ–ವಿಶೇಷವಾಗಿ ಲಕ್ಷಣಯುಕ್ತವಾದ್ದೋ, ತತ್ತತ್–ಆಯಾಯ ಅವಯವು, ಉದ್ಧೃತಂ–ತೆಗಿಯಲ್ಪಟ್ಟಂಥಾದ್ದಾಯಿತು, ತತಃ–ಆದರಿಂದ, ಮ ಯಾ–ನನ್ನಿಂದ, ರೂಪಗುಣೈಃ–ರೂಪ–ಸೌಂದರ್ಯದಿಂದಲೂ, ಗುಣೈಃ–ಸುಶೀಲ್ಯಾದಿ ಲಕ್ಷಣಗಳಿಂದಲೂ, ಅಹಲ್ಯಾ–ಅಹಲ್ಯಾ ನಾಮಕಳಾದ, ಸ್ತ್ರೀ–ಹೆಂ ಗಸು, ವಿನಿರ್ಮಿತಾ–ಸೃಷ್ಟಿಮಾಡಲ್ಪಟ್ಟಳು ॥೨೯॥ಇಹ–ಈ ಲೋಕದಲ್ಲಿ, ಹಲಂನಾಮ–ಹಲವೆಂದರೆ, ವೈರೂಪ್ಯಂ–ವಿಕಾರ ರೂಪವು, ತತ್ಪ್ರಭವಂ–ಆವೈರೂ ಪ್ಯದಿಂದ ಹುಟ್ಟಿದ ದೋಷಕ್ಕೆ, ಹಲ್ಯಂ–ಹಲ್ಯವೆಂಬ ಹೆಸರುಳ್ಳದ್ದು, ಭವೇತ್–ಆದೀತು, ಹಲ್ಯಂ–ವೈರೂಪ್ಯ ಜನ್ಯದೋಷವು, ಯಸ್ಯಾಃ–ಯಾವ ಹೆಂಗಸಿಗೆ,ನ ವಿದ್ಯತೆ–ಇರುವದಿಲ್ಲವೋ, ತತಃ–ಆಕಾರಣದ ದೆಸೆಯಿಂದ, ಅಹಲ್ಯೆತಿ–ಅಹಲ್ಯೆಯೆಂದು, ವಿಶ್ರುತಾ–ಪ್ರಸಿದ್ಧಳಾದಳು ॥೩೦॥ ಹೆಶಕ್ರ–ಎಲೈ ದೇವೇಂದ್ರನೆ,ಮ ಯಾ–ನನ್ನಿಂದ, ತಸ್ಯಾಃ–ಆ ಹೆಂಗಸಿಗೆ, ಅಹಲ್ಯೆತಿನಾಮ–ಅಹಲ್ಯಾಯೆಂದು ಹೆಸರು, ನಿರ್ಮಿತಂ–ಮಾಡಲ್ಪಟ್ಟಿತು, ಹೆ ದೇವೇಂದ್ರ–ಎಲೈ ದೇವೇಂದ್ರನೆ, ಹೆಸು ರರ್ಷಭ–ಎಲೈದೇವತಾ ಶ್ರೇಷ್ಠನೆ, ತಸ್ಯಾಂ–ನಾರ್ಯಾಂಚ–ಆ ಹೆಂಗಸೂನು, ನಿರ್ಮಿತಾಯಾಂಸತ್ಯಾಂ– ಸೃಷ್ಟಿಮಾಡಲ್ಪಟ್ಟವಳಾಗುತಿರಲಿಕಾಗಿ, ಮಮ–ಯ ನಗೆ, ತತಃ–ಬಳಿಕ, ಏಷಾ–ಈ ಹೆಂಗಸು, ಕಸ್ಯ–ಯಾವಪುರುಷನಿಗೆ, ಭವಿಷ್ಯತೀತಿ–ಆಗುವಳೆಂದು, ಚಿಂತಾ–ಆ ಆಲೋಚನೆಯು,ಅಭವತ್–ಆಯಿತು॥೩೧॥ ಹೆಶಕ್ರ–ಎಲೈ ದೇವೇಂದ್ರನೆ, ಹೆ ಪುರಂದರ–ಎಲೈ ಪುರಂದರನೆ, ಹೆಪ್ರಭೋ–ಎಲೈ ಸಮರ್ಥನೆ, ತದಾ–ಆ ಕಾಲದಲ್ಲಿ, ತ್ವಂತು–ನೀನಾದರೆ, ನಾರೀಂ–ಆ ಹೆಂ ಗಸನ್ನು, ಏಷಾ–ಇವಳು, ಮಮ–ನನಗೆ, ಪತ್ನೀತಿ–ಹೆಂಡತಿಯೆಂದು, ಸ್ಥಾನಾಧಿಕತಯಾ–ಪದವಿಯಿಂದ ಹೆಚ್ಚಾದವನಾದ ಭಾವದಿಂದ, ತದಾ–ಆ ಕಾಲ

ಧ್ಯಾನಿಸುತ್ತಾ ನಿಂತನು ॥೨೪॥ ಆ ಪರಿಯಾಗಿ ಚಿಂತಿಸುತಿರುವ ಇಂದ್ರನಂ ಕಂಡು ಸಾಕ್ಷಾಚ್ಚತುರ್ಮುಖನಿಂತೆಂದನು,— ಎಲೈ ಇಂದ್ರನೆ ! ನೀನು ಪೂರ್ವಕಾಲದಲ್ಲಿ ಇಂಥಾಮಹಾಪಾತಕವನ್ನಾಕೆಗೈದೆ, ಅದೇನೆಂದರೆ ಕೇಳು— ॥೨೫॥ಎಲೈ ಸುರೇಂದ್ರನೇ ! ಪೂರ್ವಕಾಲದಲ್ಲಿ ಏಕವಿಧವಾದ ವರ್ಣವುಳ್ಳವರಾಗಿಯೂ, ಏಕರೀತಿಯಾಗಿ ಸಂಭಾಷಿಸುತಿರುವರಾಗಿ ಯೂ, ಸರ್ವಾಂಶೆಗಳಲ್ಲಿಯೂ ಏಕಾಕಾರಮುಳ್ಳವರಾಗಿಯೂ ಇರುವಪ್ರಜೆಗಳನ್ನು ಸೃಜಿಸಿದೇನೆ, ಅವರನೋಟದ ಲ್ಲಿಯೂ ಲಕ್ಷಣಗಳಲ್ಲಿಯೂ ಸಹಾ ಏನೂ ವಿಶೇಷವಿಲ್ಲಆದಕಾರಣದಿಂದ ನಾನು ಏಕಾಗ್ರಚಿತ್ತನಾಗಿ ಅವರೆಲ್ಲರಂ ಕಂಡು ಯೋಚಿಸಿದವನಾಗಿ, ಅವರೆಲ್ಲರಿಗೂ ಅತಿಶಯಮಾಗಿರುವ ಲೋಕೋತ್ತರ ಸೌಂದರ್ಯಮುಳ್ಳ ಒಬ್ಬ ಸ್ತ್ರೀಯನ್ನು ನಿರ್ಮಿ ಸಿದೆನು ॥೨೮॥ ಅದೆಂತೆನೇ,—ಪ್ರಜೆಗಳ ಅಂಗಾಂಗಗಳಲ್ಲಿ ಯಾವ ಯಾವದು ಉತ್ಕೃಷ್ಟವೋ ಅದನ್ನೆಲ್ಲಾ ತೆಗದು ಕೊಂಡು, ಆ ರೂಪಗುಣಗಳಿಂದ ಅಹಲ್ಯೆಯೆಂಬ ಒಬ್ಬಾಳೊಬ್ಬಸ್ತ್ರೀ ನಿರ್ಮಾಣವಂಗೈದೆನು॥೨೯॥ಹಲವೆಂದರೆ ವೈರೂ ಪ್ಯದಿಂದುಂಟಾದ ದೋಷಕ್ಕೆ ಹಲ್ಯವೆಂದು ಹೆಸರು. ಆ ಉತ್ತಮಾಂಗನೆಗಾದರೆ ಅಂಥಾ ದೋಷವಿಲ್ಲವಾದಕಾರಣಅಹ ಲ್ಯೆ ಯೆಂದು ಈ ಲೋಕದಲ್ಲೆಲ್ಲಾ ಪ್ರಸಿದ್ಧಿಯಾಗಿರುವಂತೆ ನಾಮ ಧೇಯಮುಂಟಾಯಿತು. ॥೩೦॥ ಎಲೈ ಸುರನಾಥನೇ! ಲೋಕೋತ್ತರ ಸೌಂದರ್ಯವತಿಯಾದ ಆ ಬಾಲಿಕಾಮಣಿಯು ನಿರ್ಮಿಸಲ್ಪಡಲೂ, ಈಕೆಗೆ ಸದೃಶನಾದ ವರ ನ್ಯಾರಿ ರುವನೆಂದು ನನಗೆ ಚಿಂತೆಯುಂಟಾಯಿತು. ಎಲೈ ಸಮರ್ಥನಾದ ಇಂದ್ರನೇ! ಆಗ ನೀನಾದರೆ ಮಹತ್ಪದವಿಯಲ್ಲಿದ್ದ ಕಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ಥಾನಾಧಿಕತಯಾಪತ್ನೀಮಮೈಷೇತಿಪುರಂದರ॥೨೦॥ಸಾಮಯಾ ತ್ವಂತುಶಕ್ರತವಾನಾರೀಂಜಾನೀಷೇಮನಸಾಪ್ರಭೋ । ನ್ಯಸ್ತಾಬಹೂನಿವರ್ಷಾಣಿತೇನನಿರ್ಯಾತಿತಾಶುಭಾ॥೨೨॥ ತತಸ್ತಸ್ಯಪರಿಜ್ಞಾ ನ್ಯಾಸಭೂತಾತುಗೌತಮಸ್ಯಮಹಾತ್ಮನಃ । ಜ್ಞಾತ್ವಾತಪಸಸಿದ್ಧಿಂಚಪತ್ನ್ಯರ್ಥಂಸ್ಪರ್ಶಿತಾತದಾ ॥೨೪॥ ಸತಯಾಸಹಧರ್ಮಾ ಯಮಯಾಸ್ಥೈರ್ಯಂಮಹಾಮುನೇಃ । ಜ್ಞಾತ್ವಾತಪಸಸಿದ್ಧಿಂಚಪತ್ನ್ಯರ್ಥಂಸ್ಪರ್ಶಿತಾತದಾ ॥೨೪॥ ಸತಯಾಸಹಧರ್ಮಾ ತ್ಮಾರಮತೇಸ್ಮಮಹಾಮುನಿಃ । ಆಸನ್ನಿರಾಶಾದೇವಾಸ್ತುಗೌತಮೇದತ್ತಯಾತಯಾ ॥೨೫॥ ತ್ವಂಕ್ರುದ್ಧಸ್ತ್ವಿಹಕಾಮಾತ್ಮಾ ಗತ್ವಾತಸ್ಯಾಶ್ರಮಂಮುನೇಃ । ದೃಷ್ಟವಾಂಶ್ಚತದಾತಾಂಸ್ತ್ರೀಂದೀಪ್ತಾಮಗ್ನಿಶಿಖಾಮಿವ ॥೨೬॥ ಸಾತ್ವಯಾಧರ್ಷಿತಾಶಕ್ರ ಕಾಮಾರ್ತೇನಸಮನ್ಯುನಾ । ದೃಷ್ಟಸ್ತ್ವಂಚತದಾತೇನಹ್ಯಾಶ್ರಮೇಪರಮರ್ಷಿಣಾ ॥೨೭॥ ತತಃಕ್ರುದ್ಧೇನತೇನಾಸಿಶಪ್ತಃಪರ ಮತೇಜಸಾ । ಗತೋಸಿಯೇನದೇವೇಂದ್ರದಶಾಭಾಗವಿಪರ್ಯಯಮ್ ॥೨೮॥ ಯಸ್ಮಾನ್ಮೇಧರ್ಷಿತಾಪತ್ನೀತ್ವಯಾವಾಸವನಿರ್ಭ ಯಮ್। ತಸ್ಮಾತ್ತ್ವಂಸಮರೇರಾಜಞ್ಶತ್ರುಹಸ್ತಂಗಮಿಷ್ಯಸಿ॥೨೯॥ಅಯಂತುಭಾವೋದುರ್ಬುದ್ಧೇಯಸ್ತ್ವಯೇಹಪ್ರವರ್ತಿತಃ।

---

ದಲ್ಲಿ, ಮನಸಾ-ಮನಸ್ಸಿನಿಂದ, ಜಾನೀಷೇ-ತಿಳಕೊಂಡೆ ॥೨೦॥ ಸಾ-ಆ ಹೆಂಗಸು, ಮಹಾತ್ಮನಃ-ಮಹಾ ತಪಸ್ವಿಯಾದ, ಗೌತಮಸ್ಯ-ಗೌತಮ ಋಷಿಗೆ, ನ್ಯಾಸಭೂತಾ-ಉದ್ದೇಶಮಾಡಲ್ಪಟ್ಟವಳಾಗಿ, ಬಹೂನಿವರ್ಷಾಣಿ-ಅನೇಕ ಸಂವತ್ಸರಗಳು, ನ್ಯಸ್ತಾ-ಅವನಲ್ಲಿ ಇಡಲ್ಪಟ್ಟಳು, ತೇನ-ಆ ಗೌತಮನಿಂ ದ, ಶುಭಾ-ಶುಭಕರಳಾದ ಆ ಹೆಂಗಸು, ನಿರ್ಯಾತಿತಾ-ಪುನಶ್ಚ ನನಿಗೇನೆಕೊಡಲ್ಪಟ್ಟಳು ॥೨೨॥ ತತಃ-ಬಳಿಕ, ಮಹಾಮುನೇಃ-ಮಹಾ ಮುನಿಯಾದ, ತಸ್ಯ-ಆ ಗೌತಮನ, ಸ್ಥೈರ್ಯಂ-ಸ್ಥಿರಚಿತ್ತತೆಯನ್ನು, ಪರಿಜ್ಞಾಯ-ತಿಳದು, ತಪಸಿ-ತಪಸ್ಸಿನಲ್ಲಿ, ಸಿದ್ಧಿಂಚ-ಫಲನಿಶ್ಚಯವನ್ನು, ಜ್ಞಾತ್ವಾ-ತಿಳದು,ಮ ಯಾ-ನನ್ನಿಂದ, ಪತ್ನ್ಯರ್ಥಂ-ಹೆಂಡತಿನಿಮಿತ್ತವಾಗಿ, ತದಾ-ತಕ್ಷಣದಲ್ಲಿ, ಸ್ಪರ್ಶಿತಾ-ದಾನಮಾಡಲ್ಪಟ್ಟಳು ॥ ೨೪ ॥ ಸಮಹಾಮುನಿಃ-ಆ ಮಹಾಋ ಷಿಯಾದ ಗೌತಮನು, ಧರ್ಮಾತ್ಮಾ-ಧರ್ಮದಲ್ಲಿ ದೃಷ್ಟಿಯುಳ್ಳವನಾಗಿ, ತಯಾಸಹ-ಆ ಅಹಲ್ಯಾದೇವಿಯೊಡನೆ, ರಮತೇಸ್ಮ-ವಿಹರಿಸಿದನಷ್ಟೆ, ದೇವಾಸ್ತು- ದೇವತೆಗಳಾದರೆ, ಗೌತಮೇ-ಗೌತಮ ಋಷಿಯಲ್ಲಿ, ದತ್ತಯಾ-ಕೊಡಲ್ಪಟ್ಟ, ತಯಾ-ಆ ಅಹಲ್ಯಾದೇವಿಯಿಂದ, ನಿರಾಶಾಃ-ಆಶಾರಹಿತರು, ಆಸನ್-ಆದ ರು ॥೨೫॥ ತ್ವಂತು-ನೀನಾದರೆ, ಕ್ರುದ್ಧಃ-ಕೋಪಿಷ್ಠನಾಗಿ, ಕಾಮಾತ್ಮಾ-ಕಾಮಾಸಕ್ತ ಚಿತ್ತನಾಗಿ, ತಸ್ಯಮುನೇಃ-ಆ ಗೌತಮ ಋಷಿಯ, ಆಶ್ರಮಂ- ಆಶ್ರಮವನ್ನು ಕುರಿತು, ಗತ್ವಾ-ಹೋಗಿ, ತದಾ-ಆ ಕಾಲದಲ್ಲಿ, ಇಹ-ಈ ಗೌತಮಾಶ್ರಮದಲ್ಲಿ, ಅಗ್ನಿಶಿಖಾಮಿವ, ಯಜ್ಞೇಶ್ವರನಜ್ವಾಲೆಯಕೊನೆಯಂ ತೆ, ದೀಪ್ತಾಂ-ಹೊಳೆಯುತಿರುವ, ತಾಂಸ್ತ್ರಿಯಂ-ಆ ಸ್ತ್ರೀಯನ್ನು, ದೃಷ್ಟವಾನ್-ನೋಡಿದೆ॥೨೬ ॥ಹೇಶಕ್ರ-ಎಲೈದೇವೇಂದ್ರನೇ,ಕಾಮಾರ್ತೇನ-ಕಾಮಾ ಸಕ್ತನಾದ, ಸಮನ್ಯುನಾ-ಕೋಪದಿಂ ದೊಡಗೂಡಿದ್ದ, ತ್ವಯಾ-ನಿನ್ನಿಂದ, ಸಾ-ಆ ಅಹಲ್ಯಾದೇವಿಯು, ಧರ್ಷಿತಾ-ತಿರಸ್ಕೃತಳಾದಳು, ತದಾ-ಆ ಕಾಲ ದಲ್ಲಿ, ತ್ವಂಚ-ನೀನೂಕೂಡ, ಆಶ್ರಮೇ-ಆಶ್ರಮದಲ್ಲಿ, ಪರಮರ್ಷಿಣಾ-ಋಷಿಶ್ರೇಷ್ಠನಾದ, ತೇನ-ಆ ಗೌತಮನಿಂದ, ದೃಷ್ಟಃ-ಕಾಣಲ್ಪಟ್ಟೆ॥೨೭॥ತತಃ- ಬಳಿಕ, ಕ್ರುದ್ಧೇನ-ಕೋಪಿಷ್ಠನಾದ, ಪರಮತೇಜಸಾ-ಉತ್ಕೃಷ್ಟವರ್ಚಸ್ವಿಯಾದ, ತೇನ-ಆ ಗೌತಮನಿಂದ, ಶಪ್ತಃ-ಶಪಿಸಲ್ಪಟ್ಟವನು,ಅಸಿ-ಆದೇ, ದೇವೇಂ ದ್ರ-ಎಲೈ ದೇವೇಂದ್ರನೇ, ಯೇನ-ಯಾವಕಾರಣದವೆಶೆಯಿಂದ, ದಶಾಭಾಗ ವಿಪರ್ಯಯಂ-ಅವಸ್ಥಾ ವ್ಯತ್ಯಾಸವನ್ನು ಹೊಂದಿದವನು, ಅಸಿ - ಆದೇ ॥೨೮॥ ಹೇವಾಸವ-ಎಲೈ ದೇವೇಂದ್ರನೇ,ಯಸ್ಮಾತ್-ಯಾವಕಾರಣದವೆಶೆಯಿಂದ, ಮೇಪತ್ನೀ - ನನ್ನ ಹೆಂಡತಿಯು,ತ್ವಯಾ-ನಿನ್ನಿಂದ, ನಿರ್ಭಯಂ- ಭಯವಿಲ್ಲದು. ತೆ,ಧರ್ಷಿತಾ-ತಿರಸ್ಕೃತಳಾದಳೋ, ಹೇರಾಜನ್ - ಎಲೈ ತ್ರಿವಿಷ್ಟಪಾಧಿಪತಿಯೆ, ತಸ್ಮಾತ್-ಆ ಕಾರಣದ ವೆಶೆಯಿಂದ, ತ್ವಂ-ನೀನು, ಸಮರೇ - ಕಾಳಗ ದಲ್ಲಿ, ಶತ್ರುಹಸ್ತಂ - ಶತ್ರುವಿನ ಕೈಯನ್ನು, ಗಮಿಷ್ಯಸಿ-ಹೊಂದುವೀ ॥೨೯॥ ಹೇದುರ್ಬುದ್ಧೇ - ಎಲೈ ದುರ್ಬುದ್ಧಿಯುಳ್ಳವನೇ, ಯಃ-ಯಾವ ಭಾವವು,

---

ರಣ, ಆ ಸುಂದರಿಯು ನಿನಿಗೆ ಸರಿಯಾಗುವಳೆಂದು ಭಾವಿಸಿಕೊಂಡಿದ್ದೆ ॥೨೦॥ ಆ ಉತ್ತಮಾಂಗನೆಯೂ ಮಹಾತ್ಮ ನಾದ ಗೌತಮ ಮುನಿಗೆ ಕೊಡಲ್ಪಡತಕ್ಕವಳೆಂದುದ್ದೇಶಿಸಲ್ಪಟ್ಟು ಅನೇಕವರ್ಷಗಳು ಆತನ ಬಳಿಯಲ್ಲಿಯೇ ಇ ನ್ನಿಂದಬಿಡಲ್ಪಟ್ಟದ್ದವಳಾಗಿ, ಪುನಹಾ ಆತನಿಂದ ಎನಗೊಪ್ಪಿಸಲ್ಪಟ್ಟಳು ॥೨೨॥ ಅನಂತರದಲ್ಲಿ ನಾನು ಆ ಮಹಾತ್ಮನ ಮನಸ್ಸ್ಥೈರ್ಯವನ್ನೂ, ತಪಸ್ಸಿದ್ಧಿಯನ್ನೂ ಸಹಾ ಅರಿತು, ಅತನಿಗೇನೆ ಪತ್ನ್ಯರ್ಥಮಾಗಿಕೊಟ್ಟವನಾದೆನು॥೨೪॥ಆಬಾ ಲಿಕಾಮಣಿಯು ಈ ಪರಿಯಾಗಿ ಗೌತಮಮುನಿಗೆ ಕೊಡಲ್ಪಡಲು, ಆ ಅಹಲ್ಯೆಯಿಂ ದೊಡಗೂಡಿ ಆತನು ವಿಹರಿಸುತಿ ದ್ದನು, ಆಗ ದೇವತೆಗಳೆಲ್ಲರು ಆಶಾರಹಿತರಾದರು, ॥೨೫॥ ಎಲೈ ಸುರೇಂದ್ರನೇ! ಆ ಸಮಯದಲ್ಲಿ ಕುಪಿತನಾದ ನೀನಾ ದರೆ ಕಾಮಾತುರನಾಗಿ, ಆ ಮುನಿಯ ಆಶ್ರಮವಂಹೊಕ್ಕು ಅಗ್ನಿಜ್ವಾಲೆಯಂತೆ ಕಂಗೊಳಿಸುತಿರುವ ಆ ಸುಂದರಿಯ ಕಂಡು, ಕಾಮ ಬಾಣಪೀಡಿತನಾಗಿ, ಆಕೆಯಂ ತಿರಸ್ಕರಿಸಲೂ, ಮಹಾತ್ಮನಾದ ಗೌತಮಮುನಿಯು, ನಿನ್ನಂ ಕಂಡು ಕಡುಕೋಪವುಳ್ಳವನಾಗಿ ಇಂತೆಂದು ನಿನಿಗೆ ಶಾಪವನ್ನಿತ್ತನು, ಎಲೈ ಇಂದ್ರನೇ! ನೀನು ಸಾತ್ವಿಕಾವಸ್ಥಾ ವಿಪರ್ಯಾಸ ವಂಹೊಂದಿ, ಯಾವ ಕಾರಣದಿಂದ ಎನ್ನ ಪತ್ನಿಯಾದ ಅಹಲ್ಯೆಯನ್ನು ತಿರಸ್ಕರಿಸಿದವನಾದೆಯೋ ಆಕಾರಣದಿಂದ, ಶ ತ್ರು ಹಸ್ತಗತನಾಗುವಿ, ಎಲೈ ದುರ್ಬುದ್ಧಿಯುಳ್ಳವನೇ, (ರಾಜ್ಞಿಧರ್ಮಿಣಿಧರ್ಮಿಷ್ಠಾಃ ಪಾಪೇಪಾಪರತಾಸ್ಸದಾ । ರಾಜಾ ನಮನುವರ್ತಂತೆ ಯಥಾರಾಜಾ ತಥಾಪ್ರಜಾಃ) ಎಂಬಂತೆ ಲೋಕತ್ರಯಾಧಿಪತಿಯಾದ ನೀನು ಇಂಥಾ ದುರ್ನಡತೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಾನುಷೇಷ್ವಪಿಸರ್ವೇಷುಭವಿಷ್ಯತಿನಸಂಶಯಃ ॥೪೦॥ ತತ್ರಾಧರ್ಮಸ್ಸುಬಲವಾನ್ ಸಮುತ್ಥಾಸ್ಯತಿಯೋಮಹಾನ್ । ತತ್ರಾರ್ಧಂತಸ್ಯಯಃಕರ್ತಾತ್ವಯ್ಯರ್ಧಂನಿಪತಿಷ್ಯತಿ॥೪೧॥ ನಚತೇಸ್ಥಾವರಂಸ್ಥಾನಂಭವಿಷ್ಯತಿಪುರಂದರ। ಏತೇನಾಧರ್ಮಯೋಗೇನಯುಸ್ತ್ವಯೇಹಪ್ರವರ್ತಿತಃ । ಯಶ್ಚ ಯಶ್ಚ ಸುರೇಂದ್ರಸ್ಸ್ಯಾದಧ್ರುವಸ್ಸಭವಿಷ್ಯತಿ ॥೪೨॥ ಏಷಶಾಪೋಮಯಾಮುಕ್ತ ಇತ್ಯಸೌತ್ವಾಂತದಾಬ್ರವೀತ್ । ತಾಂತುಭಾರ್ಯಾಂವಿನಿರ್ಭರ್ತ್ಸ್ಯಸೋಬ್ರವೀತ್ಸುಮಹಾತಪಾಃ ॥೪೩॥ ದುರ್ವಿನೀತೇವಿಧ್ವಂಸಮಮಾಶ್ರಮಸಮೀಪತಃ।ರೂಪಯೌವನಸಂಪನ್ನಾ ಯಸ್ಮಾತ್ತ್ವಮನವಸ್ಥಿತಾ ॥೪೪॥ ತಸ್ಮಾದ್ರೂಪವತೀಲೋಕೇನತ್ವಮೇಕಾಭವಿಷ್ಯಸಿ । ರೂಪಂಚತತ್ಪ್ರಜಾಸ್ಸರ್ವಾಗಮಿಷ್ಯಂತಿಸುದುರ್ಲಭಮ್ । ಯತ್ತದೇವಂಸಮಾಶ್ರಿತ್ಯವಿಭ್ರಮೋಯಮುಪಸ್ಥಿತಃ ॥೪೫॥ ಸಾತಂಪ್ರಸಾದಯಾಮಾಸಮಹರ್ಷಿಂಗೌತಮಂತದಾ । ಅಜ್ಞಾನಾದ್ಧರ್ಷಿತಾಸಾಥತ್ವದ್ರೂಪೇನಬಿಡೌಜ

ತ್ವಯಾ–ನಿನ್ನಿಂದ, ಇಹ–ಈಗ, ಪ್ರವರ್ತಿತಃ–ಮಾಡಲ್ಪಟ್ಟಿತೋ, ಅಯಂಭಾವಸ್ತು–ಈ ವ್ಯಭಿಚಾರ ಭಾವವಾದರೋ,ಸರ್ವೇಷು–ಸಮಸ್ತರಾದ, ಮಾನುಷೇಷ್ವಪಿ–ಮನುಷ್ಯರಲ್ಲಿಯೂಸಹ , ಭವಿಷ್ಯತಿ–ಉಂಟಾಗುವದು, ನಸಂಶಯಃ–ಸಂಶಯವಿಲ್ಲಾ ॥೪೦॥ತತ್ರ–ಜಾರಭಾವದಲ್ಲಿ, ಸುಬಲವಾನ್– ಮಹಾಬಲಿಷ್ಠವಾದ, ಮಹಾನ್–ದೊಡ್ಡದಾದ, ಯಃ–ಅಧರ್ಮಃ–ಯಾವ ಅಧರ್ಮವು, ಸಮುತ್ಥಾಸ್ಯತಿ–ಹುಟ್ಟುತದೋ,ತಸ್ಯ–ಆ ಅಧರ್ಮಕ್ಕೋ,ಯಃ–ಯಾವ ಮನುಷ್ಯನು, ಕರ್ತಾ–ಕರ್ತನೊ, ತತ್ರ–ಆ ಅಧರ್ಮದಲ್ಲಿ, ಅರ್ಧಂ–ಅರ್ಧಭಾಗವು, ತಸ್ಯ–ಮಾಡಿದವನಿಗೆ, ಅರ್ಧಂ–ಅವಶಿಷ್ಟಾರ್ಧವು, ತ್ವಯಿ–ನಿನ್ನಲ್ಲಿ, ನಿಪತಿಷ್ಯತಿ–ಬೀಳುವದು ॥೪೧॥ ಹೆ ಪುರುಂದರ–ಎಲೈ ದೇವೇಂದ್ರನೆ, ತೇ–ನಿನಗೇ, ಸ್ಥಾನಂ–ಸ್ವರ್ಗಸ್ಥಾನವು, ಸ್ಥಾವರಂ–ಸ್ಥಿರವಾಗಿ,ನಭವಿಷ್ಯತಿ–ಇರಲಾರದು, ಏತೇನ–ಈ, ಅಧರ್ಮಯೋಗೇನ–ಪಾಪಸಂಬಂಧದಿಂದ, ಇಹ–ಈಗ, ತ್ವಯಾ–ನಿನ್ನಿಂದ, ಯಃ–ಯಾವ ಭಾವವು, ಪ್ರವರ್ತಿತಃ–ಪ್ರವರ್ತಿಸಲ್ಪಟ್ಟಿತೋ,ಏತೇನ–ಈ ಅಧರ್ಮದಿಂದ, ಯಶ್ಚಯಶ್ಚ–ಯಾವನ್ಯಾವನು, ಸುರೇಂದ್ರಃ–ದೇವೇಂದ್ರನು, ಸ್ಯಾತ್–ಆಗುವನೋ, ಸಃ–ಆವನವನು,ಅಧ್ರುವಃ–ಅಶಾಶ್ವತನು, ಭವಿಷ್ಯತಿ–ಆಗುವನು ॥೪೨॥ಏಷಶಾಪಃ–ಈ ಶಾಪವು, ಮಯಾ–ನನ್ನಿಂದ, ಮುಕ್ತಃಇತಿ–ಬಿಡಲ್ಪಟ್ಟಿತೆಂದು, ಸೋಸೌ–ಆಈ ಮಹಾತಪಾಃ–ಮಹಾತಪಸ್ವಿಯಾದ ಗೌತಮನು, ತ್ವಾಂ–ನಿನ್ನನ್ನು ಉದ್ದೇಸಿಶಿ, ತದಾ–ಆಕಾಲದಲ್ಲಿ, ಅಬ್ರವೀತ್–ನುಡಿದನು, ತಾಂಭಾರ್ಯಾಂತು–ಆ ಹೆಂಡತಿಯನ್ನಾದರೆ, ವಿನಿರ್ಭರ್ತ್ಸ್ಯ–ಬೆದರಿಸಿ, ಹೆದುರ್ವಿನೀತೆ–ಎಲೈ ದುಷ್ಟಳೆ, ಮಮ–ನನ್ನ, ಆಶ್ರಮಸಮೀಪತಃ–ಆಶ್ರಮ ಸಮೀಪದಲ್ಲಿ, ಯಸ್ಮಾತ್–ಯಾವಕಾರಣದದೆಸೆಯಿಂದ, ತ್ವಂ–ನೀನು ರೂಪಯವ್ವನಸಂಪನ್ನಾ–ರೂಪದಿಂದಲೂ ಯವ್ವನದಿಂದಲೂ ಕೂಡಿದವಳಾಗಿ, ಅನವಸ್ಥಿತಾ–ದುರವಸ್ಥೆಯನ್ನು ಹೊಂದಿದ್ದೀಯೋ, ತಸ್ಮಾತ್– ಆಕಾರಣದದೆಸೆಯಿಂದ, ವಿನಿಧ್ವಂಸ–ಆ ದರ್ಶನವನ್ನು ಹೊಂದು ॥೪೪॥ ತ್ವಂ–ನೀನು, ಲೋಕೇ–ಲೋಕದಲ್ಲಿ, ಏಕಾ–ಒಬ್ಬಳೆ, ರೂಪವತೀ–ರೂಪವತಿಯಳು, ನಭವಿಷ್ಯಸಿ–ಆಗುವದಿಲ್ಲಾ, ತತ್–ಆಕಾರಣದ್ದೆಸೆಯಿಂದ, ಸರ್ವಾಃಪ್ರಜಾಶ್ಚ–ಸಮಸ್ತ ಪ್ರಜೆಗಳೂನೂಕೂಡ, ಸುದುರ್ಲಭಂ–ಹೊಂದಲಶಕ್ಯವಾದ, ರೂಪಂ–ರೂಪವನ್ನು, ಗಮಿಷ್ಯಂತಿ–ಹೊಂದುವರು, ಯತ್–ಯಾವಕಾರಣದದೆಸೆಯಿಂದ, ತವ–ನಿನಗೆ, ಇದಂ–ಈ ರೂಪವನ್ನು, ಸಮಾಶ್ರಿತ್ಯ–ಆಶ್ರಯಿಸಿ, ಅಯಂವಿಭ್ರಮಃ–ಈ ವಿಲಾಸವು, ಉಪಸ್ಥಿತಃ–ಪ್ರಾಪ್ತವಾಯಿತೋ॥೪೫॥ ತದಾ–ಆ ಕಾಲದಲ್ಲಿ, ಸಾ–ಆ ಅಹಲ್ಯಾದೇವಿಯು, ಮಹರ್ಷಿಂ– ಋಷಿಶ್ರೇಷ್ಠನಾದ, ತಂಗೌತಮಂ–ಆ ಗೌತಮನನ್ನು ಕುರಿತು, ಹೆನಾಥ–ಎಲೈ ಗಂಡನೆ, ತ್ವದ್ರೂಪೇಣ–ನಿನ್ನ ರೂಪದಂತಿರುವ ರೂಪವುಳ್ಳ,ಬಿಡೌಜಸಾ–ದೇವೇಂದ್ರನಿಂದ, ಅಜ್ಞಾನಾತ್–ತಿಳುವಳಿಕೆಇಲ್ಲದ ದೆಸೆಯಿಂದ, ಧರ್ಷಿತಾ–ತಿರಸ್ಕೃತಳಾದೆನು, ಹೆವಿಪ್ರರ್ಷೆ–ಎಲೈ ಬ್ರಹ್ಮರುಷಿಯೇ, ಕಾಮಕಾರಾತ್–ಬುದ್ಧಿಪೂರ್ವ

ಯಂ ಗೈದವನಾದಕಾರಣ, ಈ ಭಾವವು ನಿನ್ನ ಧೀನರಾದ ಜನರಲ್ಲಿಯೂ ಕೂಡಾ ಉಂಟಾಗುವದು. ಈ ವಿಷಯದಲ್ಲಿ ಸಂದೇಹವಿಲ್ಲ ॥೪೦॥ ಇದಲ್ಲದೆ (ರಾಜಾ ರಾಷ್ಟ್ರಕೃತಂ ಪಾಪಂ) ಎಂಬಂತೆ ನಿನ್ನ ಕೈಕೆಳಗಣ ಜನರು ಮಾಡುವ ಜಾರತ್ವದಿಂ ದುಂಟಾಗುವ ಪಾಪದಲ್ಲಿ ಅಡ್ಡಪಾಲು ಆ ಪಾಪಿಗೂ ಅರ್ಧ ಭಾಗವು ನಿನಿಗೂ ಕೂಡಾ ಬರುವಂಥಾದ್ದಾಗುವದು ॥೪೧॥ ಎಲೈ ದೇವೇಂದ್ರನೇ ! ನೀನೀಗ ಇಂಥಾ ಅಧರ್ಮವಂಗೈದೆ ಯಾದಕಾರಣ ನಿನ್ನ ಪದವಿಯುಸ್ಥಿರ ಮಾಗಿರಲಾರದು. ಮತ್ತೂ ಯಾವನ್ಯಾವನು ಇಂದ್ರನಾಗಿರುವನೊ ಅವನವನು ಈ ಅಧರ್ಮದಿಂದ ಶಾಶ್ವತಮಾಗಿರಲಾರನು ॥೪೨॥ಎಲೈ ಇಂದ್ರನೇ! ನಿನಗೀಪರಿಯಾಗಿ ಶಾಪವಂ ಕೊಟ್ಟಿಧೇನೆಂದು, ಮಹಾ ತಪಸ್ವಿಯಾದ ಆ ಗೌತಮ ಮುನಿಯು ನುಡಿದು, ಪತ್ನಿಯನ್ನು ಹೆದರಿಸಿಂತೆಂದನು ॥೪೩॥ ಎಲೈ ದುಷ್ಟಳೇ !ರೂಪ ಯುವ್ವನಗಳಿಂ ದೊಡಗೂಡಿರುವ ನೀನು ಯಾವಕಾರಣದಿಂದ ಇಂಥಾ ದುರವಸ್ಥೆಯಂ ಪಡದೆಯೋ, ಮತ್ತು ಯಾವರೂಪವನ್ನಾಶ್ರಯಿಸಿ ಈ ವಿಲಾಸಮುಂಟಾಯಿತೋ, ಆದಕಾರಣ ನನ್ನಾಶ್ರಮ ಸಮೀಪದಲ್ಲಿ:ಅದರ್ಶನವಂ ಹೊಂದು,ಲೋಕದಲ್ಲಿ ರೂಪವತಿಯಾದವಳು ನೀನೊಬ್ಬಳೇ ಅಲ್ಲ. ಸರ್ವ ಪ್ರಜೆಗಳು ದುರ್ಲಭಮಾದ ರೂಪಮುಳ್ಳವರಾಗಿಧಾರೆ, ಎಂಬದಾಗಿ ನುಡಿಯಲೂ ಆ ಸಮಯದಲ್ಲಿ ಅಹಲ್ಯೆಯು ಗೌತಮಮುನಿಯಂ ಕುರಿತಿಂತೆಂದಳು, ಎಲೈ ನಾಥನಾದಬ್ರಹ್ಮರ್ಷಿಯೆ! ಆ ದೇವೇಂದ್ರನು ನಿನ್ನ ರೂಪವಂತಾಳಿ ಬಂದಿದ್ದ ನಾದಕಾರಣ, ಅಜ್ಞಾನದಿಂದ ಈ ಪರಿಯಾಗಿ ಮಾಡಲ್ಪಟ್ಟನೇ ಹೊರ್ತು ಬುದ್ಧಿಪೂರ್ವಕಮಾಗಿ ಈ ಕಾರ್ಯವಂ ಗೈದವಳಲ್ಲಾ. ಆದ ಕಾರಣ ತಾನು ಅನುಗ್ರಹಿಸಬೇಕೆಂಬದಾಗಿ ಬೇಡಿದವಳಾದಳು ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಾ । ನಕಾಮಕಾರಾದ್ವಿಪ್ರರ್ಷೇಪ್ರಸಾದಂಕರ್ತುಮರ್ಹಸಿ॥೪೬॥ಅಹಲ್ಯಯಾತ್ವೇವಮುಕ್ತಃಪ್ರತ್ಯುವಾಚಸಗೌತಮಃ । ಉತ್ಪತ್ಸ್ಯತೇಮಹಾತೇಜಾಇಕ್ಷ್ವಾಕೂಣಾಂಮಹಾರಥಃ ॥೪೭॥ ರಾಮೋನಾಮಶ್ರುತೋಲೋಕೇವನಂಚಾಪ್ಯುಪಯಾಸ್ಯತಿ। ಬ್ರಾಹ್ಮಣಾರ್ಥೇಮಹಾಬಾಹುರ್ವಿಷ್ಣುರ್ಮಾನುಷವಿಗ್ರಹಃ॥೪೮॥ ತಂದ್ರಕ್ಷ್ಯಸಿಯದಾಭದ್ರೇತದಾಪೂತಾಭವಿಷ್ಯಸಿ॥೪೯॥ ಸಹಿಪಾವಯಿತುಂಶಕ್ತಸ್ತ್ವಯಾಯದ್ದುಷ್ಕೃತಂಕೃತಮ್ । ತಸ್ಯಾತಿಥ್ಯಂಚಕೃತ್ವಾವೈಮತ್ಸಮೀಪಂಗಮಿಷ್ಯಸಿ॥೫೦॥ವಸ್ತ್ಸ್ಯಸಿತ್ವಂಮಯಾಸಾರ್ಧಂತದಾಹಿವರವರ್ಣಿನಿ । ಏವಮುಕ್ತ್ವಾಮುನಿಶ್ರೇಷ್ಠಃಆಜಗಾಮಸ್ವಮಾಶ್ರಮಮ್ ॥೫೧॥ ತಪಶ್ಚಕಾರಸುಮಹತ್ಸಾಪತ್ನೀಬ್ರಹ್ಮವಾದಿನಃ । ಶಿಲಾರೂಪಮನುಪ್ರಾಪ್ಯತ್ವತ್ಸಂಗಕೃತಕಿಲ್ಬಿಷಾ ॥೫೨॥ ತದಾಪ್ರಭೃತಿಭೂಯಿಷ್ಠಂಪ್ರಜಾರೂಪಸಮನ್ವಿತಾಃ । ಶಾಪೋತ್ಸರ್ಗಾದ್ಧಿತಸ್ಯೇದಂಮುನೇಸ್ಸರ್ವಮುಪಾಗತಮ್॥೫೩॥ತತ್ಸ್ಮರತ್ವಂಮಹಾಬಾಹೋದುಷ್ಕೃತಂಯತ್ತ್ವಯಾಕೃತಂ । ಯೇನತ್ವಂಗ್ರಹಣಂಶತ್ರೋರ್ಗತೋನಾನ್ಯೇನಹೇತುನಾ॥೫೪॥ಶೀಘ್ರಂಯಃ

ಯೋಗ್ಯನಾಗಿದ್ಧಕ ದೆಶೆಯಿಂದ, ನಧರ್ಷಿತಾ-ತಿರಸ್ಕೃತಳಾಗಲಿಲ್ಲಾ, ಪ್ರಸಾದಂ-ಅನುಗ್ರಹವನ್ನು, ಕರ್ತುಂ-ಮಾಡುವದಕ್ಕೋಸ್ಕರ, ಅರ್ಹಸಿ – ಯೋಗ್ಯನಾಗಿದ್ಧಿ–ಕ ದೆಶೆಯಿಂದ, ನಧರ್ಷಿತಾ-ತಿರಸ್ಕೃತಳಾಗಲಿಲ್ಲಾ, ಪ್ರಸಾದಂ-ಅನುಗ್ರಹವನ್ನು, ಕರ್ತುಂ-ಮಾಡುವದಕ್ಕೋಸ್ಕರ, ಅರ್ಹಸಿ – ಯೋಗ್ಯನಾಗಿದ್ಧೀ, ಇತಿ-ಇಂತೆಂದು, ಪ್ರಸಾದಯಾಮಾಸ-ಸಮ್ಮತಿಯಂ ಗೊಳಿಸಿದಳು ॥೪೬॥ ಅಹಲ್ಯಯಾ-ಅಹಲ್ಯಾ ದೇವಿಯಿಂದ, ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಸಗೌತಮಃ-ಆ ಗೌತಮಋಷಿಯು, ಪ್ರತ್ಯುವಾಚ-ಪ್ರತ್ಯುತ್ತರ ಕೊಟ್ಟನು, ಇಕ್ಷ್ವಾಕೂಣಾಂ-ಇಕ್ಷ್ವಾಕುರಾಯನ ವಂಶಸ್ಥರೊಳಗೆ, ಮಹಾತೇಜಾಃ-ಮಹಾತೇಜೋವಂತನಾದ, ಮಹಾರಥಃ-ಮಹಾರಥಿಕನಾದ, ರಾಮೋನಾಮ-ಶ್ರೀರಾಮನೆಂದು ಪ್ರಸಿದ್ಧನಾದ ಅರಸು-ಲೋಕೆ-ಲೋಕದಲ್ಲಿ, ಶ್ರುತಃ-ಪ್ರಖ್ಯಾತನಾಗಿ, ಉತ್ಪತ್ಸ್ಯತೆ-ಹುಟ್ಟುವನು ॥೪೭॥ ಮಹಾಬಾಹುಃ-ಮಹಾಭುಜ ಪರಾಕ್ರಮಶಾಲಿಯಾದ, ವಿಷ್ಣುಃ-ವಿಷ್ಣುವು, ಮಾನುಷವಿಗ್ರಹ-ಮನುಷ್ಯನ ಶರೀರವುಳ್ಳವನಾಗಿ, ಬ್ರಾಹ್ಮಣಃ-ಬ್ರಾಹ್ಮಣನಾದ ವಿಶ್ವಾಮಿತ್ರಋಷಿಯ, ಅರ್ಥೇ-ನಿಮಿತ್ತವಾಗಿ, ವನಂಚ-ವನವನ್ನು ಕುರಿತೂ, ಉಪಯಾಸ್ಯತಿ-ಬರುತ್ತಾನೆ ॥೪೮॥ ಹೆಭದ್ರೇ-ಎಲೆಶುಭಕರಳೆ, ತಂ-ಆ ಶ್ರೀರಾಮನನ್ನು, ಯದಾ-ಯಾವ ಕಾಲದಲ್ಲಿ, ದ್ರಕ್ಷ್ಯಸಿ – ನೋಡುವಿಯೋ, ತದಾ-ಆ ಕ್ಷಣದಲ್ಲಿ, ಪೂತಾ-ಪರಿಶುದ್ಧಳು, ಭವಿಷ್ಯಸಿ-ಆಗುವಿ ॥೪೯॥ ತ್ವಯಾ-ನಿನ್ನಿಂದ, ಯತ್-ಯಾವ, ದುಷ್ಕೃತಂ-ಪಾಪವು, ಕೃತಂ-ಮಾಡಲ್ಪಟ್ಟಿತ್ತೋ, ತತ್-ಆ ಪಾಪವನ್ನು, ಪಾವಯಿತುಂ-ಶುದ್ಧಿಮಾಡುವ ದಕ್ಕೋಸ್ಕರ, ಸಃ-ಆ ಶ್ರೀರಾಮನು, ಶಕ್ತಃ-ಸಮರ್ಥನಪ್ಪ, ತಸ್ಯ-ಆ ಶ್ರೀರಾಮನಿಗೆ, ಆತಿಥ್ಯಂಚ-ಅತಿಥಿ ಸತ್ಕಾರವನ್ನು, ಕೃತ್ವಾ-ಮಾಡಿ, ಮತ್ಸಮೀಪಂವೈ-ನನ್ನ ಸಮೀಪವನ್ನಾದರೇ, ಗಮಿಷ್ಯಸಿ-ಹೊಂದುವಿ ॥೫೦॥ ಹೆವರವರ್ಣಿನಿ-ಎಲೈ ಉತ್ತಮ ಸ್ತ್ರೀಯೇ, ತ್ವಂ-ನೀನು, ತದಾ-ಆ ಕಾಲದಲ್ಲಿ, ಮಯಾಸಾರ್ಧಂ-ನನ್ನಿಂದೊಡಗೂಡಿ,ವತ್ಸ್ಯಸಿ-ಇರುವಿಯಿ, ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಮುನಿಶ್ರೇಷ್ಠಃ-ಗೌತಮಋಷಿಯು, ಸ್ವಂ-ಸ್ವಕೀಯ್ಯವಾದ, ಆಶ್ರಮಂ-ಆಶ್ರಮವನ್ನು ಕುರಿತು, ಆಜಗಾಮ-ಬಂದನು ॥೫೧॥ ಬ್ರಹ್ಮವಾದಿನಃ-ಗೌತಮ ಋಷಿಯು, ಪತ್ನೀ-ಧರ್ಮಪತ್ನಿಯಾದ, ಸಾ-ಆ ಅಹಲ್ಯಾದೇವಿಯು, ತ್ವತ್ಸಂಗಕೃತಕಿಲ್ಬಿಷಾ-ತ್ವತ್ಸಂಗ-ನಿನ್ನ ದೇಹಸಂಗದಿಂದ ಕೃತ-ಮಾಡಲ್ಪಟ್ಟ, ಕಿಲ್ಬಿಷಾ-ಪಾಪ ಉಳ್ಳವಳಾಗಿ, ಶಿಲಾರೂಪಂ-ಪಾಷಾಣ ಭಾವವನ್ನು, ಅನುಪ್ರಾಪ್ಯ-ಹೊಂದಿ, ಸುಮಹತ್-ಬಹಳವಾದ, ತಪಃ-ತಪಸ್ಸನ್ನು, ಚಕಾರ-ಮಾಡಿದಳು ॥೫೨॥ ತದಾಪ್ರಭೃತಿ-ಆಕಾಲ ಮೊದಲು, ಪ್ರಜಾಃ-ಪ್ರಜೆಗಳು, ಭೂಯಿಷ್ಠಂ-ಬಹಳವಾಗಿ, ರೂಪಸಮನ್ವಿತಾಃ-ಸೌಂದರ್ಯದಿಂದ ಯುಕ್ತರಾಗಿಧಾರೆ, ತಸ್ಯಮುನೇಃ-ಆಗೌತಮ ಋಷಿಯ, ಶಾಪೋತ್ಸರ್ಗಾತ್-ಶಾಪ-ಶಾಪವಚನದ,ಉತ್ಸರ್ಗಾತ್- ಬಿಡುವಿಕೆ ದೆಶೆಯಿಂದ ಇದಂ-ಸರ್ವಂ-ಈ ಸಮಸ್ತವು, ಉಪಾಗತಂ-ಪ್ರಾಪ್ತವಾಯಿತು ॥೫೩॥ಹೇಮಹಾಬಾಹೋ-ಎಲೈ ಮಹಾಭುಜಗಳುಳ್ಳವನೆ, ತ್ವಯಾ-ನಿನ್ನಿಂದ,ಯತ್-ದುಷ್ಕೃತಂ-ಯಾವ ಪಾಪ ಕೃತ್ಯವು, ಕೃತಂ-ಮಾಡಲ್ಪಟ್ಟಿತ್ತೋ, ಯೆನ-ಯಾವ ಪಾಪದಿಂದ, ತ್ವಂ-ನೀನು, ಶತ್ರೋಃ-ಶತೃವಿನ ದೆಶೆಯಿಂದ,ಗ್ರಹಣಂ-ಹಿಡಿಯುವಿಕೆಯನ್ನು, ಗತಃ-ಹೊಂದಿದೋ, ತತ್ ಅಪಾಪವನ್ನು, ತ್ವಂ-ನೀನು,ಸ್ಮರ-ಸ್ಮರಿಸಿಕೊ, ಅನ್ಯೇನಹೇತುನಾ-ಮತ್ತು ಬೇರೆ ಕಾರಣದಿಂದ, ನ-ಇಲ್ಲ॥೫೪॥

ಅಹಲ್ಯಾದೇವಿಯಿಂದ ಈ ಪರಿಯಾಗಿ ಪ್ರಾರ್ಥಿಸಲ್ಪಟ್ಟ ಆ ಗೌತಮಮುನಿಯು, ಇಂತೆಂದುತ್ತರವಂ ಕೊಟ್ಟನು. ಎಲೈ ಪ್ರಿಯಳೇ! ಸಾಕ್ಷಾಚ್ಛ್ರೀಮಹಾವಿಷ್ಣುವು ಮಾನುಷದೇಹಧಾರಿಯಾಗಿ ಇಕ್ಷ್ವಾಕುವಂಶದಲ್ಲಿ ಹುಟ್ಟಿ, ಶ್ರೀರಾಮನೆಂದು ಪ್ರಖ್ಯಾತನಾಗುವನು, ಆತನು ವಿಶ್ವಾಮಿತ್ರಮುನಿಯ ಯಾಗಸಂರಕ್ಷಣೆ ಗೋಸ್ಕರ ವನವಂಕುರಿತು ಬರುವನು, ಆತನ ಸಂದರುಶನವಾದರೆನೀನು ಪರಿಶುದ್ಧಳಾಗುವಿ ॥೪೯॥ ನೀನು ಗೈದಿರುವ ಈ ದುಷ್ಕೃತ್ಯವಂ ಹೋಗಲಾಡಿಸುವದಕ್ಕೆ ಆತನಹೊರ್ತುಮತ್ಯಾರು ಸಮರ್ಥರಲ್ಲ ಎಲೈ ಉತ್ತಮಾಂಗನೆಯೇ ! ಆ ಮಹಾ ಪುರುಷನಿಗೆ ಆತಿಥ್ಯವನ್ನಿತ್ತು ಎನ್ನ ಸಮೀಪವಂಪೊಂದಿ, ಆಗ ನನ್ನೊಡನೆ ತಪಶ್ಚರಣೆಯಂ ಗೈಯ್ಯುತಿರುವಳಾಗುವಿ, ಎಂಬದಾಗಿ ಸತಿಗೆಪೇಳಿ ತನ್ನಾಶ್ರಮಕ್ಕೆ ಹೊರಟುಪೋಗಿ ಮಹಾ ತಪವಂಗೈಯ್ಯುತಿದ್ದನು. ಆ ತನಪತ್ನಿಯಾದ ಅಹಲ್ಯೆಯಾದರೆ,ನಿನ್ನ ಸಂಪರ್ಕದಿಂದ ಪ್ರಾಪ್ತವಾದ ಪಾಪವುಳ್ಳವಳಾಗಿ ತಕ್ಷಣದಲ್ಲಿಯೇ ಶಿಲಾ ರೂಪವಂ ತಾಳಿದವಳಾದಳು॥೫೨॥ಅದು ಮೊದಲ್ಗೊಂಡು ಪ್ರಜೆಗಳೆಲ್ಲರು ಕಡುರೂಪವಂತರಾಗಿಧಾರೇ. ಆ ಮಹಾತ್ಮನ ಶಾಪದಿಂದ ಈ ಪರಿಯಾಗಿ ಸಂಭವಿಸಿತು॥೫೩॥ ಎಲೈ ಮಹಾಭುಜಗಳುಳ್ಳವನೇ! ಯಾವದುಷ್ಕರ್ಮದಿಂದ ಶತೃವಿನಕೈಗೆ ಶಿಲುಕಿದೆಯೋ, ಅಂಥಾ ನಿನ್ನ ಪಾಪವಂ ನ್ನೀಗ ತಿಳಿದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ವಯಜ್ಞಂತ್ವಂವೈಷ್ಣವಂಸುಸಮಾಹಿತಃ । ಪಾವಿತಸ್ತೇನಯಜ್ಞೇನಯಾಸ್ಯಸಿತ್ರಿದಿವಂತತಃ ॥೫೫॥ಪುತ್ರಶ್ಚ ತವದೇವೇಂದ್ರನ ವಿನಷ್ಟೋಮಹಾರಣೇ । ನೀತಸ್ಸನ್ನಿಹಿತಶ್ಚೈವಆರ್ಯಕೇಣಮಹೋದಧೌ ॥೫೬॥ ಏತಚ್ಛ್ರುತ್ವಾಮಹೇಂದ್ರಸ್ತುಯಜ್ಞಮಿಷ್ಟ್ವಾತುವೈಷ್ಣವಂ ।ಪುನಸ್ತ್ರಿದಿವಮಾಕ್ರಾಮದನ್ವಶಾತ್ಸರ್ವದೇವತಾಃ॥೫೭॥ಏತದಿಂದ್ರಜಿತೋರಾಮಬಲಂಯತ್ಕೀರ್ತಿತಂ ಮಯಾ।ನಿರ್ಜಿತಸ್ತೇನದೇವೇಂದ್ರಃಪ್ರಾಣಿನೋನ್ಯೇತುಕಿಂಪುನಃ ॥೫೮॥ಆಶ್ಚರ್ಯಮಿತಿತದ್ರಾಮೋಲಕ್ಷ್ಮಣಶ್ಚಾಬ್ರವೀತ್ತದಾ। ಅಗಸ್ತ್ಯಸ್ಯವಚಶ್ಶ್ರುತ್ವಾವಾನರಾರಾಕ್ಷಸಾಸ್ತಥಾ॥೫೯॥ವಿಭೀಷಣಸ್ತುರಾಮಸ್ಯಪಾರ್ಶ್ವಸ್ಥೋವಾಕ್ಯಮಬ್ರವೀತ್।ಆಶ್ಚರ್ಯಂಸ್ಮಾರಿತೋಸ್ಮ್ಯದ್ಯಯತ್ತದ್ವೃತ್ತಂಪುರಾತನಂ ॥೬೦॥ ಅಗಸ್ತ್ಯಮಬ್ರವೀದ್ರಾಮಃದೃಷ್ಟಮೇತಚ್ಛ್ರುತಂಚಮೇ॥೬೧॥

—...ಇತಿ ಶ್ರೀಮದುತ್ತರ ರಾಮಾಯಣೆ ತ್ರಿಂಶಸ್ಸರ್ಗಃ...—

ತ್ವಂ-ನೀನು, ಸುಸಮಾಹಿತಃ-ಏಕಾಗ್ರಚಿತ್ತನಾಗಿ, ಶೀಘ್ರಂ-ಜಾಗ್ರತೆಯಾಗಿ, ವೈಷ್ಣವಂ-ವಿಷ್ಣು ದೇವತಾಕವಾದ, ಯಜ್ಞಂ-ಯಜ್ಞವನ್ನು, ಯಜಸ್ವ-ಮಾಡು, ತೇನಯಜ್ಞೇನ-ಆ ಯಜ್ಞದಿಂದ, ಪಾವಿತಃ-ಪವಿತ್ರನಾಗಿ, ತತಃ-ಬಳಿಕ, ತ್ರಿದಿವಂ-ಸ್ವರ್ಗವನ್ನು, ಯಾಸ್ಯಸಿ-ಹೊಂದುವಿ॥೫೫॥ ಹೇದೇವೇಂದ್ರ-ಎಲೈ ದೇವೇಂದ್ರನೆ, ತವ-ನಿನ್ನ, ಪುತ್ರಶ್ಚ-ಮಗನೂನು, ಮಹಾರಣೇ-ದೊಡ್ಡ ಕಾಳಗದಲ್ಲಿ, ನವಿನಷ್ಟಃ-ನಷ್ಟನಾಗಲಿಲ್ಲಾ, ಆರ್ಯಕೇಣ-ಮಾತಾಮಹನಾದ ಪುಲೋಮನೊಡನೆ, ಸನ್ನಿಹಿತಶ್ಚೈವ-ಕೂಡಿದವನಾಗಿ, ಮಹೋದಧೌ-ಕಡಲಿನಲ್ಲಿ, ನೀತಃ-ಕರದುಕೊಂಡು ಹೋಗಲ್ಪಟ್ಟನು ॥೫೬॥ ಏತತ್-ಈ ಬ್ರಹ್ಮ ವಚನವನ್ನು, ಶ್ರುತ್ವಾ-ಕೇಳಿ, ಮಹೇಂದ್ರಸ್ತು-ದೇವೇಂದ್ರನಾದರೆ,ವೈಷ್ಣವಂ-ವಿಷ್ಣು ದೇವತಾಕವಾದ, ಯಜ್ಞಂ-ಯಜ್ಞವನ್ನು, ಇಷ್ಟ್ವಾ-ಮಾಡಿ, ಪುನಃ-ಮತ್ತು, ತ್ರಿದಿವಂತು-ಸ್ವರ್ಗವನ್ನಾದರೆ, ಆಕ್ರಾಮತ್-ಹೊಂದಿದನು, ಸರ್ವದೇವತಾಃ-ಸಮಸ್ತ ದೇವತೆಗಳನ್ನು, ಅನ್ವಶಾತ್-ಪಾಲಿಸಿದನು॥ ೫೭॥ ಹೇರಾಮ-ಎಲೈ ಶ್ರೀರಾಮನೆ, ಇಂದ್ರಜಿತಃ-ಇಂದ್ರಜಿತುವಿನ,ಬಲಂ-ಬಲವು, ಯತ್-ಯಾವದೂ, ಏತತ್-ಇದು, ಮಯಾ-ನನ್ನಿಂದ,ಕೀರ್ತಿತಂ-ಹೇಳಲ್ಪಟ್ಟಿತು, ತೇನ-ಆ ಇಂದ್ರಜಿತ್ತಿನಿಂದ, ದೇವೇಂದ್ರಃ-ದೇವೇಂದ್ರನೂಕೂಡಾ, ನಿರ್ಜಿತಃ-ಜಯಿಸಲ್ಪಟ್ಟನು, ಅನ್ಯೇಪ್ರಾಣಿನಸ್ತು-ಇತರ ಪ್ರಾಣಿಗಳಾದರೆ, ಪುನಃಕಿಂ-ಮತ್ತೇನು ಹೇಳತಕ್ಕದ್ದು ॥೫೮॥ ತದಾ-ಆ ಕಾಲದಲ್ಲಿ, ರಾಮಃ-ಶ್ರೀರಾಮನು, ಲಕ್ಷ್ಮಣಶ್ಚ-ಲಕ್ಷ್ಮಣಸ್ವಾಮಿಯೂನು, ಅಗಸ್ತ್ಯಸ್ಯ-ಅಗಸ್ತ್ಯಋಷಿಯ, ವಚಃ-ವಾಕ್ಯವನ್ನು, ಶ್ರುತ್ವಾ-ಕೇಳಿ, ತತ್-ಆಮಾತು, ಆಶ್ಚರ್ಯಮಿತಿ-ಆಶ್ಚರ್ಯಕರವೆಂದು, ಅಬ್ರವೀತ್-ನುಡಿದನು, ವಾನರಾಃ- ಕಪಿಗಳುನ್ನು, ರಾಕ್ಷಸಾಃ-ರಾಕ್ಷಸರೂನು, ತಥಾ-ಹಾಗೆಯೆ, ಅಬ್ರುವನ್-ನುಡಿದರು ॥೫೯॥ ರಾಮಸ್ಯ-ಶ್ರೀರಾಮನ, ಪಾರ್ಶ್ವಸ್ಥಃ-ಪಾರ್ಶ್ವಭಾಗದಲ್ಲಿರುವ, ವಿಭೀಷಣಸ್ತು-ವಿಭೀಷಣನಾದರೆ, ಪುರಾತನಂ-ಬಹುಕಾಲದಲ್ಲಿ ನಡೆದಿರುವ, ವೃತ್ತಂ-ಚರಿತ್ರೆಯು, ಯತ್-ಯಾವದೊ, ಆಶ್ಚರ್ಯಂ-ಆಶ್ಚರ್ಯಕರವಾದ, ತತ್-ಆ ವೃತ್ತಾಂತವನ್ನು, ಅದ್ಯ-ಈಗ, ಸ್ಮಾರಿತಃ-ಜ್ಞಾಪಕ ಕೊಡಿಸಲ್ಪಟ್ಟವನು, ಅಸ್ಮಿ-ಆದೆನು, ಇತಿ-ಇಂತೆಂದು, ವಾಕ್ಯಂ-ವಚನವನ್ನು, ಅಬ್ರವೀತ್-ನುಡಿದನು ॥೬೦॥ ರಾಮಃ-ಶ್ರೀರಾಮನು, ಮೇ-ನನ್ನಿಂದ, ಏತತ್-ಇದು, ದೃಷ್ಟಂ-ಕಾಣಲ್ಪಟ್ಟಿತು, ಮೇ-ನನಗೆ, ಶ್ರುತಂಚೇತಿ-ಕೇಳಲ್ಪಟ್ಟಿತೂಯೆಂದೂ, ಅಗಸ್ತ್ಯಂ-ಅಗಸ್ತ್ಯಮಹಾಮುನಿಯನ್ನು ಕುರಿತು, ಅಬ್ರವೀತ್-ನುಡಿದನು ॥ ೬೧ ॥

ಇತಿ ಶ್ರೀಮದುತ್ತರ ರಾಮಾಯಣೆ ತ್ರಿಂಶಸ್ಸರ್ಗಃ.

ಕೋ, ಇದಲ್ಲದೇ ಮತ್ಯಾವಕಾರಣದಿಂದಲೂ ನಿನಿಗಿಂತಾ ಅವಸ್ಥೆಯು ಪ್ರಾಪ್ತಮಾಗಲಿಲ್ಲ ॥೫೪॥ ಆದಕಾರಣ ನೀನು ಈ ಪಾತಕ ಪರಿಹಾರಾರ್ಥವಾಗಿ ವಿಷ್ಣುದೇವತಾಕವಾದ ಯಜ್ಞಮಂ ಗೈದು, ಪರಿಶುದ್ಧನಾದ ಬಳಿಕ ಸ್ವರ್ಗವಂ ಹೊಂದುವಿ ॥೫೫॥ ಎಲೈ ದೇವೇಂದ್ರನೇ! ಆ ಮಹಾಕದನದಲ್ಲಿ ನಿನ್ನಕುವರನು ನಷ್ಟನಾಗಲಿಲ್ಲ (ಅದು ಹ್ಯಾಗಂದರೆ)ನಿನ್ನ ಮಾವನಾದ ಪುಲೋಮನು ಆ ಜಯಂತನಂ ಕರದು ಕೊಂಡು ಕಡಲಿನಲ್ಲಿ ನುಗ್ಗಿ ಹೊರಟು ಹೋದನು, ಎಂಬದಾಗಿ ಬ್ರಹ್ಮನು ನುಡಿದ ಮಾತಂ ಕೇಳಿ ಇಂದ್ರನು ವೈಷ್ಣವ ಯಾಗವಂ ಗೈದು, ಪುನಹಾ ಸ್ವರ್ಗವಂ ಹೊಂದಿ, ದೇವತೆಗಳನ್ನೆಲ್ಲಾ ಪರಿಪಾಲಿಸುತಿದ್ದನು ॥೫೭॥ಎಲೈ ರಘುಕುಲತಿಲಕನೇ! ಆ ಇಂದ್ರಜಿತುವಿನಿಂದ ಸಾಕ್ಷಾದ್ದೇವೇಂದ್ರನೂ ಕೂಡಾ ಜಯಿಸಲ್ಪಟ್ಟದ್ದನು. ಹೀಗಿರುವಲ್ಲಿ ಇತರ ಪ್ರಾಣಿಗಳ ಗತಿಯು ಏನು ಹೇಳತಕ್ಕದ್ದು, ಇವನ ಬಲವೀಪರಿಯಾಗಿ ಹದೆಂಬದಾಗಿ ಅಗಸ್ತ್ಯ ಮಹಾಮುನಿಯು ನುಡಿಯಲೂ, ಆದಂ ಕೇಳಿ, ರಾಮ ಲಕ್ಷ್ಮಣರು, ಸುಗ್ರೀವಾದಿ ವಾನರರು, ವಿಭೀಷಣನೇ ಮುಂತಾದ ರಾಕ್ಷಸರು, ಇವರೆಲ್ಲರು ಪರಮಾನಂದ ಭರಿತರಾದರು ॥೫೯॥ ಆ ಸಮಯದಲ್ಲಿ ರಾಮ ಪಾರ್ಶ್ವವರ್ತಿಯಾದ ವಿಭೀಷಣನಾದರೆ, ಪುರಾತನವಾದ ಮತ್ತೂ ಮಹದಾಶ್ಚರ್ಯಕರವಾಗಿರ್ಪ ಈ ವೃತ್ತಾಂತವನ್ನೀಗ ಜ್ಞಾಪಿಸಲ್ಪಟ್ಟೆನೆಂದು ನುಡಿದವನಾಗಲೂ, ಶ್ರೀರಾಮಚಂದ್ರನು, ತಮ್ಮದೆಶೆಯಿಂದ ಕೇಳಿದವನಾಗಿ, ಚನ್ನಾಗಿ ಅರಿತು ಕೊಂಡನನಾದೆನೆಂದು ಅಗಸ್ತ್ಯ ಮಹಾಮುನಿಯಂ ಕುರಿತು ಪೇಳಿದವನಾದನು. ॥೬೧॥

—...ಃ.*ಉತ್ತರಕಾಂಡದಲ್ಲಿನ ೩೦ನೇಸರ್ಗಂ ಮುಗಿದುದು*.ಃ...—



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತತೋರಾಮೋಮಹಾತೇಜಾವಿಸ್ಮಯಾತ್ಪುನರೇವಹಿ । ಉವಾಚಪ್ರಯತೋವಾಕ್ಯಮಗಸ್ತ್ಯಮೃಷಿಸತ್ತಮಮ್ ॥೧॥ ಭಗವರ್ನ್ರಾಕ್ಷಸಃಕ್ರೂರೋಯದಾಪ್ರಭೃತಿಮೇದಿನೀಮ್ । ಪರ್ಯಟತ್ಕಿಂತದಾಲೋಕೇಮಾನ್ಯಾನಾಸರ್ನ್ದ್ವಿಜೋತ್ತಮ ॥೨॥ ರಾಜಾವಾರಾಜಪುತ್ರೋವಾಕಿಂತದಾನಾತ್ರಕಶ್ಚನ । ಯತೋನಧರ್ಷಣಂಪ್ರಾಪ್ತೋ ರಾವಣೋರಾಕ್ಷಸೇಶ್ವರಃ॥೩॥ ಉತಾಹೋಹೀನವೀರ್ಯಾಸ್ತೇಬಭೂವುಃಪೃಥಿವೀಕ್ಷಿತಃ । ಬಹಿಷ್ಕೃತಾವರಾಸ್ತ್ರೈಶ್ಚ ಬಹವೋನಿರ್ಜಿತಾನೃಪಾಃ ॥೪॥ ರಾಘವಸ್ಯವಚಃಶ್ರುತ್ವಾಹ್ಯಗಸ್ತ್ಯೋಭಗವಾನೃಷಿಃ। ಉವಾಚರಾಮಂಪ್ರಹಸರ್ನ್ಪಿತಾಮಹಇವೇಶ್ವರಮ್॥೫॥ ಸವಿವಂಬಾಧಮಾನಸ್ತು ಪಾರ್ಥಿವಾರ್ನ್ಪಾರ್ಥಿವರ್ಷಭ। ಚಚಾರರಾವಣೋರಾಮಪೃಥಿವೀಂಪೃಥಿವೀಪತೇ ॥೬॥ ತತೋಮಾಹಿಷ್ಮತೀಂನಾಮಪುರೀಂಸ್ವರ್ಗಪುರೀಪ್ರಭಾಮ್ । ಸಂಪ್ರಾಪ್ತೋಯತ್ರಸಾನ್ನಿಧ್ಯಂಪರಮಂವಸುರೇತಸಃ ॥೭॥ ತುಲ್ಯ ಆಸೀನ್ನೃಪಸ್ತತ್ರಪ್ರತಾಪಾದ್ವಸುರೇತಸಃ। ಅರ್ಜುನೋನಾಮಯಸ್ಯಾಗ್ನಿಶ್ಶರಕುಂಡೇಶಯಸ್ಸದಾ॥೮॥ ಯಮೇವದಿವಸಂಸೋಥಹಹಯಾಧಿಪತಿರ್ಬಲೀ।

ತತಃ–ಅನಂತರದಲ್ಲಿ, ಮಹಾತೇಜಾಃ–ಮಹಾ ಪರಾಕ್ರಮಶಾಲಿಯಾದ, ರಾಮಃ–ಶ್ರೀ ರಾಮನು, ವಿಸ್ಮಯಾತ್–ಆಶ್ಚರ‍್ಯದದೆಸೆಯಿಂದ, ಪ್ರಯತಃ–ಏಕಾಗ್ರಚಿತ್ತನಾಗಿ, ಋಷಿಸತ್ತಮಂ–ಋಷಿಶ್ರೇಷ್ಠನಾದ, ಅಗಸ್ತ್ಯಂ–ಅಗಸ್ತ್ಯಋಷಿಯನ್ನು ಕುರಿತು, ವಾಕ್ಯಂ–ಮಾತನ್ನು, ಪುನರೇವ – ಮತ್ತೂ, ಉವಾಚಹ–ಪೇಳಿದನಷ್ಟೆ॥೧॥ಹೇಭಗವರ್ನ್–ಎಲೈಪೂಜ್ಯರಾದ ಅಗಸ್ತ್ಯರೆ, ಕ್ರೂರಃ–ಕ್ರೂರನಾದ,ರಾಕ್ಷಸಃ–ರಾವಣನು,ಯದಾಪ್ರಭೃತಿ–ಯಾವಕಾಲ ಮೊದಲು, ಮೇದಿನೀಂ–ಭೂಮಿಯಲ್ಲಿ, ಪರ್ಯಟತ್–ಸಂಚರಿಸಿದನೊ, ತದಾ–ಆ ಕಾಲದಲ್ಲಿ, ಹೇದ್ವಿಜೋತ್ತಮ–ಎಲೈ ಬ್ರಾಹ್ಮಣಶ್ರೇಷ್ಠನೆ, ಮಾನ್ಯಾಃ–ಪೂಜ್ಯರು, ಲೋಕೇ–ಲೋಕದಲ್ಲಿ, ನಾಸರ್ನ್–ಇರಲಿಲ್ಲವೇನೊ ॥೨॥ ಯತಃ–ಯಾವಕಾರಣದದೆಸೆಯಿಂದ, ರಾಕ್ಷಸೇಶ್ವರಃ – ರಾಕ್ಷಸಾಧಿಪತಿಯಾದ, ರಾವಣಃ–ರಾವಣನು, ಧರ್ಷಣಂ–ತಿರಸ್ಕಾರವನ್ನು, ಸಂಪ್ರಾಪ್ತಃ–ಹೊಂದಲಿಲ್ಲವೊ, ತದಾ–ಆ ಕಾಲದಲ್ಲಿ, ರಾಜಾವಾ–ಅರಸೇ ಆಗಲೀ, ರಾಜಪುತ್ರೋವಾ–ರಾಜಪುತ್ರನೇ ಆಗಲೀ, ಕಶ್ಚನ–ಒಬ್ಬನೂಕೂಡ, ಅತ್ರ–ಈ ಲೋಕದಲ್ಲಿ, ನಕಿಂ–ಇಲ್ಲವೋಯೇನು॥೩॥ ಉತ–ಹಾಗಲ್ಲದೇ ಹೋದರೆ, ತೇಪೃಥಿವೀಕ್ಷಿತಃ–ಆ ಆರಸರು, ಹೀನವೀರ್ಯಾಃ–ಹೀನ– ಕಮ್ಮಿಯಾದ, ವೀರ್ಯಾಃ–ಶಕ್ತಿಯುಳ್ಳವರು, ಬಭೂವುಃ–ಆದರು,ಬಹವಃ–ಅನೇಕರಾದ, ನೃಪಾಃ–ಅರಸರು, ವರಾಸ್ತ್ರೈಃ–ವರ–ಶ್ರೇಷ್ಠಂಗಳಾದ, ಅಸ್ತ್ರೈಃ–ಅಸ್ತ್ರಂಗಳಿಂದ, ಬಹಿಷ್ಕೃತಾಃ–ತಿರಸ್ಕೃತರಾಗಿ, ನಿರ್ಜಿತಾಃ–ಜಯಿಸಲ್ಪಟ್ಟರು ॥೪॥ ರಾಘವಸ್ಯ–ಶ್ರೀರಾಮನ, ವಚಃ–ಮಾತನ್ನು, ಶ್ರುತ್ವಾ–ಕೇಳಿ, ಭಗವಾರ್ನ್–ಪೂಜ್ಯನಾದ, ಅಗಸ್ತ್ಯಃ–ಅಗಸ್ತ್ಯನೆಂಬ, ಋಷಿಃ–ಋಷಿಯು, ಪ್ರಹಸರ್ನ್–ನಗುತಿರುವನಾಗಿ, ಪಿತಾಮಹಃ–ಬ್ರಹ್ಮನು, ಈಶ್ವರಮಿವ–ಈಶ್ವರನನ್ನಂತೆ, ರಾಮಂ–ಶ್ರೀರಾಮನನ್ನು ಕುರಿತು, ಉವಾಚ–ಪೇಳಿದನು॥೫॥ ಹೇಪಾರ್ಥಿವರ್ಷಭ–ಎಲೈ ರಾಜಶ್ರೇಷ್ಠನೆ,ಹೇ ಪೃಥ್ವೀಪತೇ–ಪೃಥ್ವೀಪತಿಯಾದ, ಹೇರಾಮ–ಎಲೈ ಶ್ರೀರಾಮನೆ, ಏವಂ–ಈ ಪರಿಯಾಗಿ, ಪಾರ್ಥಿವಾರ್ನ್–ಅರಸರನ್ನು, ಬಾಧಮಾನಃ–ವೇಧೆಗೊಳಿಸುತಿರುವ, ರಾವಣಸ್ತು–ರಾವಣನಾದರೆ, ಪೃಥಿವೀಂ–ಭೂಮಿಯಲ್ಲಿ, ಚಚಾರ–ಸಂಚರಿಸಿದನು ॥೬॥ ತತಃ–ಬಳಕ, ಯತ್ರ–ಯಾವ ಪಟ್ಟಣದಲ್ಲಿ, ವಸುರೇತಸಃ–ಅಗ್ನಿಯ, ಪರಮಂ– ಶ್ರೇಷ್ಠವಾದ, ಸಾನ್ನಿಧ್ಯಂ–ಸಾಮೀಪ್ಯವೊ, ಸ್ವರ್ಗಪುರೀಪ್ರಭಾಂ–ಅಮರಾವತೀ ಪಟ್ಟಣದಂತೆ ಹೊಳೆಯುತಿರುವ, ಮಾಹಿಷ್ಮತೀಂನಾಮ,ಮಾಹಿಷ್ಮತಿಯೆಂದು ಪ್ರಸಿದ್ಧವಾದ, ತಾಂಪುರೀಂ–ಆ ಪಟ್ಟಣವನ್ನು, ಸಂಪ್ರಾಪ್ತಃ–ಹೊಂದಿದನು॥೭॥ತತ್ರ–ಆ ಪಟ್ಟಣದಲ್ಲಿ, ವಸುರೇತಸಃ–ಅಗ್ನಿಯ, ಪ್ರತಾಪಾತ್–ಪರಾಕ್ರಮದದೆಸೆಯಿಂದ, ತುಲ್ಯಃ–ಸಮಾನನಾದ, ಅರ್ಜುನೋನಾಮ–ಅರ್ಜುನನೆಂಬ, ನೃಪಃ–ರಾಯನು, ಆಸೀತ್–ಆದನು, ಅಗ್ನಿಃ–ಅಗ್ನಿಯು, ಸದಾ–ಸರ್ವಕಾಲವು, ಯಸ್ಯ–ಯಾವಕಾರ್ತವೀರ್ಯಾರ್ಜುನನ, ಶರಕುಂಡೇಶಯಃ–ಶರ–ಬಾಣಗಳ ಹಾಸಿಗೆಯಂತಿರುವ, ಕುಂಡೇಶಯಃ–ಅಗ್ನಿಕುಂಡದಲ್ಲಿರುವನೊ ॥೮॥ ಅಥ–ಬ

ಸವುನಂತರಕಾಲದೋಳ್ ಮಹಾ ಪರಾಕ್ರಮಶಾಲಿಯಾದ ಶ್ರೀರಾಮನು ಆಶ್ಚರ‍್ಯದದೆಶೆಯಿಂದ ಏಕಾಗ್ರಚಿತ್ತನಾಗಿ ಋಷಿಶ್ರೇಷ್ಠನಾದ ಅಗಸ್ತ್ಯಮುನಿಯಂ ಕುರಿತು ಮತ್ತೊಂದು ಮಾತನ್ನೂ ಪೇಳಿದವನಾದನು ॥೧॥ ಪೂಜ್ಯನಾದ ಎಲೈ ಅಗಸ್ತ್ಯಮಹಾಮುನಿಯೇ ! ಕ್ರೂರನಾದ ಆ ರಾವಣನೂ ಯಾವಕಾಲವು ಮೊದಲ್ಗೊಂಡು ಭೂಮಿಯಲ್ಲಿ ಸಂಚರಿಸಿದನೋ ಆ ಕಾಲದೋಳ್ ಲೋಕದಲ್ಲಿ ರಾಜನಾಗಲೀ ರಾಜ ಪುತ್ರನಾಗಲೀ ಯಾರಾದರು ಪೂಜ್ಯರಾದವರು ಇರಲಿಲ್ಲವೋ ಏನೋ ಯಾಕಂದರೆ, ರಾಕ್ಷಸೇಶ್ವರನಾದ ರಾವಣನು ಆ ಕಾಲದಲ್ಲಿ ತಿರಸ್ಕರಿಸಲ್ಪಡಲಿಲ್ಲವಲ್ಲ ॥೩॥ಹಾಗಲ್ಲದಿದ್ದರೆ ಆನೇಕರಾದ ಆ ರಾಜರೆಲ್ಲರು ತಮ್ಮ ಸ್ಥಳಗಳಿಂದ ಬಹಿಷ್ಕೃತರಾಗಿ ಯಾವ ಕಾರಣದಿಂದ ಜಯಿಸಲ್ಪಟ್ಟರೋ ಆ ಕಾರಣದಿಂದ ಅವರೆಲ್ಲರು ಕೊರೆತೆಯಾದ ಪರಾಕ್ರಮವುಳ್ಳವರಾಗಿರ ಬಹುದೆಂದು ಶ್ರೀರಾಮನು ನುಡಿಯಲು, ಅದಂ ಕೇಳಿ ಅಗಸ್ತ್ಯಮಹಾಮುನಿಯು ಮುಗುಳು ನಗೆಯುಳ್ಳವನಾಗಿ,ಬ್ರಹ್ಮನು ಈಶ್ವರನಂ ಕುರಿತು ನುಡಿಯುವತೆರದಿ ಶ್ರೀ ರಾಮಚಂದ್ರನಂ ಕುರಿತಿಂತೆಂದನು ॥೫॥ ಎಲೈ ರಾಜೋತ್ತಮನೇ! ಈ ಪರಿಯಾಗಿ ರಾವಣನು ನರನಾಥರಂ ಬಾಧಿಸುತಿರುವನಾಗಿ ಭೂಮಂಡಲದಲ್ಲಿ ಸಂಚರಿಸುತ್ತಾ ಯಾವ ಪುರದಲ್ಲಿ ಅಗ್ನಿಯು ನಿರಂತರವು ಸುತ್ತು ಬಾರಿಕೊಂಡಿರುವನೊ ಅಂಥಾ ಸ್ವರ್ಗದೋಪಾದಿಯಲ್ಲಿ ಕಂಗೊಳಿಸುತಿರುವ ಮಾಹಿಷ್ಮತೀ ಪಟ್ಟಣವಂ ಹೊಕ್ಕನು ॥೭॥ ಯಾವ ರಾಜನ ಸರಳುಗಳಿಂದ ಮಾಡಲ್ಪಟ್ಟ ಅಗ್ನಿ ಕುಂಡದಲ್ಲಿ ಅಗ್ನಿಯು ನಿರಂತರವು ವಾಸವಂ ಗೈಯ್ಯುತಿದ್ದನೋ, ಅಂಥಾ ಮಹಾ ಪ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅರ್ಜುನೋನರ್ಮದಾಂರಂತುಂಗತಸ್ತ್ರೀಭಿಸ್ಸಹೇಶ್ವರಃ॥೯॥ರಾವಣೋರಾಕ್ಷಸೇಂದ್ರಸ್ತುತಸ್ಮಿನ್ನೇವಪ್ರಾಪ್ಯದಿನೇಪುರೀಮ್ । ನಾ ಪಶ್ಯದ್ಧೈಹಯೇಶಂತುತಸ್ಯಾಮಾತ್ಯಾನಪೃಚ್ಛತ ॥೧೦॥ ಕ್ವಾರ್ಜುನೋವೋನೃಪಸ್ಸೋದ್ಯ ಶೀಘ್ರಮಾಖ್ಯಾತುಮರ್ಹಥ । ರಾವಣೋಹಮನುಪ್ರಾಪ್ತಃಯುದ್ಧೇಪ್ಸುರ್ನೃವರೇಣಹ ॥ ಮಮಾಗಮನಮವ್ಯಗ್ರೈರ್ಯುಷ್ಮಾಭಿಸ್ಸನ್ನಿವೇದ್ಯತಾಂ ॥೧೧॥ ಇತ್ಯೇವಂರಾವಣೇನೋಕ್ತಾಸ್ತೇಮಾತ್ಯಾಸ್ಸುವಿಪಶ್ಚಿತಃ।ಬ್ರುವತೇರಾಕ್ಷಸಪತಿಮಸಾನ್ನಿಧ್ಯಂಮಹೀಪತೇಃ ॥೧೨॥ ಶ್ರುತ್ವಾವಿಶ್ರವಸಃಪುತ್ರಃಪೌರೇಭ್ಯೋಹ್ಯರ್ಜುನಂಗತಮ್ । ಉಪಸೃತ್ಯಗತೋವಿಂಧ್ಯಂಹಿಮವತ್ಸನ್ನಿಭಂಗಿರಿಂ ॥೧೩॥ ಸತಮಭ್ರಮಿವಾವಿಷ್ಟಮುದ್ಭ್ರಾಂತಮಿವಮೇದಿನೀಮ್। ಅಪಶ್ಯದ್ರಾವಣೋವಿಂಧ್ಯಮಾಲಿಖಂತಮಿವಾಂಬರಮ್ ॥೧೪॥ ಸಹಸ್ರಶಿಖರೋಪೇತಂ ಸಿಂಹಾಧ್ಯುಷಿತಕಂದರಮ್ । ಪ್ರಪಾತಪತಿತೈಶ್ಶೀತೈಸ್ಸಾಟ್ಟಹಾಸಮಿವಾಂಬುಭಿಃ ॥೧೫॥ ದೇವದಾನವಗಂಧರ್ವೈಸ್ಸಾಪ್ಸ

---

ಳಕ, ಈಶ್ವರಃ– ಸಮರ್ಥನಾದ, ಹೈಹಯಾಧಿಪತಿಃ–ಹೈಹಯ–ಹೈಹಯ ದೇಶಗಳಿಗೆ, ಅಧಿಪತಿಃ–ಧೊರೆಯಾದ, ಬಲೀ–ಬಲವಂತನಾದ,ಸಃಅರ್ಜುನಃ–ಆ ಕಾರ್ತವೀರ್ಯಾರ್ಜುನನು, ಯಮೇವದಿವಸಂ–ಯಾವ ದಿವಸದಲ್ಲಿ, ನರ್ಮದಾಂ–ನರ್ಮದಾಸರಸ್ಸಿನಲ್ಲಿ, ರಂತುಂ– ಜಲಕ್ರೀಡೆಗಳಾಡುವದಕ್ಕೋಸ್ಕರ,ಸ್ತ್ರೀಭಿಸ್ಸಹ–ಹೆಂಗಸರಿಂದೊಡಗೂಡಿ, ಗತಃ–ಹೊದನೊ ॥೯॥ ರಾಕ್ಷಸೇಂದ್ರಃ–ರಾಕ್ಷಸಾಧಿಪತಿಯಾದ, ರಾವಣಸ್ತು–ರಾವಣನಾದರೆ, ತಸ್ಮಿನ್ನೇವದಿನೇ–ಅದೇ ದಿನದಲ್ಲಿ, ಪುರೀಂ–ಮಾಹಿಷ್ಮತೀ ಪಟ್ಟಣವನ್ನು, ಪ್ರಾಪ್ಯ–ಹೊಂದಿ, ಹೈಹಯೇಶಂತು–ಹೈಹಯ ದೇಶಾಧಿಪತಿಯಾದ ಕಾರ್ತವೀರ್ಯಾರ್ಜುನನನ್ನು, ನಾಪಶ್ಯತ್–ಕಾಣಲಿಲ್ಲಾ, ತಸ್ಯ–ಆ ಅರ್ಜುನನ, ಅಮಾತ್ಯಾಂಸ್ತು – ಮಂತ್ರಿಗಳನ್ನಾದರೆ, ಅಪೃಚ್ಛತ್–ಕೇಳಿದನು ॥ ೧೦ ॥ ವಃ–ನಿಮ್ಮ, ನೃಪಃ–ಅರಸಾದ, ಸಃಅರ್ಜುನಃ–ಆ ಕಾರ್ತವೀರ್ಯಾರ್ಜುನನು, ಕ್ವ–ಯಲ್ಲಿ, ಅದ್ಯ–ಈಗಲೆ, ಶೀಘ್ರಂ–ಚಾಗ್ರತೆಯಾಗಿ, ಆಖ್ಯಾತುಂ–ಹೇಳುವದಕ್ಕೋಸ್ಕರ, ಅರ್ಹಥ–ಯೋಗ್ಯರಾಗಿರಿ, ರಾವಣಃ–ರಾವಣನಾಮಕನಾದ, ಅಹಂ–ನಾನು, ನೃವರೇಣ–ಕಾರ್ತವೀರ್ಯಾರ್ಜುನನೊಡನೆ, ಯುದ್ಧೇಪ್ಸುಃ– ಯುದ್ಧ ಮಾಡೆ ಲಿಚ್ಛೆಯುಳ್ಳವನಾಗಿ, ಅನುಪ್ರಾಪ್ತಃ– ಬಂದಿಧ್ಧೇನೆ, ಅವ್ಯಗ್ರೈಃ–ಜಾಗರೂಕರಾದ, ಯುಷ್ಮಾಭಿಃ–ನಿಮ್ಮಿಂದ, ಮಮ–ನನ್ನ, ಆಗಮನಂ–ಬಂದಕಾರ್ಯವು, ಸನ್ನಿವೇದ್ಯತಾಂ–ತಿಳಿಸಲ್ಪಡಲೀ, ಇತ್ಯೇವಂ–ಈ ಪರಿಯಾಗಿ, ರಾವಣೇನ–ರಾವಣನಿಂದ, ಉಕ್ತಾಃ–ಹೇಳಲ್ಪಟ್ಟ, ಸುವಿಪಶ್ಚಿತಃ–ತಿಳುವಳಿಕೆಯುಳ್ಳ, ತೇಮಾತ್ಯಾಃ–ಆ ಮಂತ್ರಿಗಳು, ರಾಕ್ಷಸಪತಿಂ–ರಾವಣನನ್ನು ಕುರಿತು, ಮಹೀಪತೇಃ–ಅರ್ಜುನನ, ಅಸಾನ್ನಿಧ್ಯಂ– ಸಮೀಪದಲ್ಲಿ ಇಲ್ಲದ ಭಾವವನ್ನು, ಬ್ರುವತೇ–ಹೇಳಿದರು ॥ ವಿಶ್ರವಸಃ– ವಿಶ್ರವಸ್ಸಿನ, ಪುತ್ರಃ–ಪುತ್ರನಾದ ರಾವಣನು, ಅರ್ಜುನಂ–ಅರ್ಜುನನನ್ನು, ಗತಂ–ಹೊರಟು ಹೋದಂಥಾವನನ್ನಾಗಿ, ಪೌರೇಭ್ಯಃ– ಪಟ್ಟಣಸ್ಥರದೆಸೆಯಿಂದ, ಶ್ರುತ್ವಾ–ಕೇಳಿ, ಉಪಸೃತ್ಯ–ಹೊರಟು ಬಂದು, ಹಿಮವತ್ಸನ್ನಿಭಂ–ಹಿಮವತ್–ಹಿಮವತ್ಪರ್ವತಕ್ಕೆ, ಸನ್ನಿಭಂ – ಸಮಾನವಾದ, ವಿಂಧ್ಯಂಗಿರಿಂ–ವಿಂಧ್ಯಪರ್ವತವನ್ನು ಕುರಿತು, ಗತಃ–ಹೋದನು ॥೧೩॥ ಸರಾವಣಃ–ಆ ರಾವಣನು, ಮೇದಿನೀಂ–ಭೂಮಿಯಲ್ಲಿ, ಆವಿಷ್ಟಂ–ಪ್ರವೇಶಿಸಿದ, ಅಭ್ರಮಿವ–ಮೇಘದಂತೆ–ಉದ್ಭ್ರಾಂತಮಿವಸ್ಥಿತಂ–ಉರ್ರಾಡುತಿರುವಂತಿರುವ, ಅಂಬರಂ–ಅಂತರಿಕ್ಷವನ್ನು, ಆಲಿಖಂತಮಿವ–ಬರೆಯುತ್ತದಂತಿರುವ, ತಂವಿಂಧ್ಯಂ–ಆ ವಿಂಧ್ಯಪರ್ವತವನ್ನು, ಅಪಶ್ಯತ್–ಕಂಡನು ॥೧೪॥ ಸಹಸ್ರಶಿಖರೋಪೇತಂ–ಸಹಸ್ರ–ಸಹಸ್ರಸಂಖ್ಯೆಯುಳ್ಳ, ಶಿಖರ–ಶೃಂಗಗಳಿಂದ,ಉಪೇತಂ–ಕೂಡಿರುವ, ಸಿಂಹಾಧ್ಯುಷಿತಕಂದರಂ–ಸಿಂಹ– ಸಿಂಹಗಳಿಂದ, ಅಧ್ಯುಷಿತ–ಅಧಿಷ್ಠಾನಮಾಡಲ್ಪಟ್ಟ, ಕಂದರಂ–ಗುಹೆಗಳುಳ್ಳ, ಪ್ರಪಾತಪತಿತೈಃ–ಪ್ರಪಾತ–ಜರಿಗಳಲ್ಲಿ, ಪತಿ

---

ರಾಕ್ರಮಿಯಾದ ಮತ್ತೂ ಪ್ರತಾಪದಿಂದ ಸಾಕ್ಷಾದಗ್ನಿಗೆ ಸದೃಶನಾದ ಕಾರ್ತವೀರ್ಯಾರ್ಜುನನೆಂಬ ರಾಜನು ಆ ನಗರಿಯಲ್ಲಿ ವಾಸಿಸುತಿದ್ದನು ॥೮॥ ಹೇಹಯ ದೇಶಾದಿಪತಿಯಾದ ಮಹಾ ಸಮರ್ಥನಾಗಿರ್ಪ ಆ ನರನಾಥನು, ಸ್ತ್ರೀಯರಿಂದೊಡಗೂಡಿ ಜಲಕ್ರೀಡೆ ಯಾಡುವದಕ್ಕೋಸ್ಕರ ಯಾವ ದಿವಸದಲ್ಲಿ ಆನರ್ಮದಾನದಿಗೆ ಪೋಗಿದ್ದನೋ ಅದೇ ದಿವಸದಲ್ಲಿಯೆ ರಾಕ್ಷಸಶ್ರೇಷ್ಠನಾದ ದಶಕಂಠನು ಯುದ್ಧಾರ್ಥಿಯಾಗಿ ಆ ಮಾಹಿಷ್ಮತೀಪುರಿಯಂ ಹೊಕ್ಕು ಅಲ್ಲಿ ತತ್ಕಾಲದಲ್ಲಿ ಆ ಅರ್ಜುನನನ್ನು ಕಾಣದೇ ಆತನ ಮಂತ್ರಿಗಳಂ ಕೇಳಿದವನಾದನು॥೧೦॥ ಅದೆಂತೆನೆ,—ಎಲೈ ಮಂತ್ರಿಶ್ರೇಷ್ಠರೇ! ನಿಮ್ಮೊಡೆಯನಾದ ಅರ್ಜುನರಾಜನೆಲ್ಲಿಹನು ತ್ವರಿತವಾಗಿ ಹೋಗಿ ಇಂತೆಂದು ತಿಳಿಸಿರಿ, ಆತನೊಡನೆ ಸಂಗರವಂಗೈಯಲೂ ಇಚ್ಛಿಸುವ ರಾವಣನೆಂಬ ನಾನು ಬಂದಿಹನು. ನನ್ನ ಆಗಮನವನ್ನರಿತು ಕ್ಷಿಪ್ರಮಾಗಿ ಬಿನ್ನವಿಸಿರೆಂದು ರಾವಣನು ನುಡಿಯಲೂ, ಮಹಾ ತಿಳುವಳಿಕೆಯುಳ್ಳ ಆ ಮಂತ್ರಿಗಳು ರಾವಣನಂ ಕುರಿತಿಂತೆಂದರು,ಎಲೈ ರಾವಣನೇ! ನಮ್ಮೊಡೆಯನು ನಗರದಲ್ಲಿಲ್ಲಾ ಜಲಕ್ರೀಡೆಗೋಸ್ಕರ ನರ್ಮದಾನದಿಗೆ ಹೋಗಿರುವನೆಂಬದಾಗಿ ನುಡಿಯಲೂ, ಆ ರಾವಣನದಂ ಕೇಳಿ ಹಿಂತಿರಿಗಿ, ಹಿಮವತ್ಪರ್ವತದಂತೆರದಿ ಮಹಾ ದೊಡ್ಡದಾಗಿರುವ ವಿಂಧ್ಯಪರ್ವತವಂ ಕುರಿತು ತೆರಳಿ, ಸಹಸ್ರ ಶಿಖರಗಳುಳ್ಳದ್ದಾಗಿಯೂ, ಸಿಹ್ಮಗಳಿಂದ ಅಧಿಷ್ಠಿತವಾದ ಗುಹೆಗಳುಳ್ಳದ್ದಾಗಿಯೂ, ಜರತೆಗಳಲ್ಲಿ ಬೀಳುತಿರ್ಪ ಶುಭ್ರವಾದ ಉದಕಗಳಿಂದ ಅಟ್ಟಹಾಸವಂಗೈಯ್ಯುತಿರುವದೋ ಎಂಬಂತಿರುವದಾಗಿಯೂ, ಸ್ತ್ರೀಯರಿಂ ದೊಡಗೂಡಿರ್ಪ, ದೇವ, ದಾನವ, ಗಂಧರ್ವ, ನಾಗ, ಕಿನ್ನರರೇ ಮುಂತಾದವರೆಲ್ಲರಿಂದಲೂ ಯುಕ್ತವಾಗಿರುವದಾಗಿಯೂ, ಸ್ವರ್ಗತುಲ್ಯವಾಗಿಯೂ ಅತ್ಯೌನ್ನತ್ಯವುಳ್ಳದ್ದಾಗಿಯೂ, ಸ್ರವಿಸುತಿರುವ ನದಿಗಳೆಂಬ ಫೇಣಗಳಿಂದಲೂ ಚಂಚಲವಾದ ನಾಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರೋರಗಕಿನ್ನರೈಃ । ಸಹಸ್ತ್ರೀಭಿಃಕ್ರೀಡಮಾನೈಃಸ್ವರ್ಗಭೂತಂಮಹೋಚ್ಛ್ರಯಮ್॥೧೬॥ನದೀಭಿಸ್ಸ್ಯಂದಮಾನಾಭಿಃಸ್ಫಾಟಿಕಪ್ರತಿಮಂಜಲಮ್। ಫಣಾಭಿಶ್ಚಲಜಿಹ್ವಾಭಿರ್ಲಿಹಂತಮಿವವಿಷ್ಠಿತಮ್ ॥೧೭॥ ಉತ್ಕ್ರಾಮಂತಂದರೀಮಂತಂಹಿಮವತ್ಸಂನ್ನಿಭಂಗಿರಿಮ್ । ಪಶ್ಯಮಾನಸ್ತತೋವಿಂಧ್ಯಂರಾವಣೋನರ್ಮದಾಂಯಯೌ॥೧೮॥ ಚಲೋತ್ಪಲಯುತಾಂಪುಣ್ಯಾಂಪಶ್ಚಿಮೋದಧಿಗಾಮಿನೀಮ್ । ಮಹಿಷೈಶ್ಚಮರೈಸ್ಸಿಂಹೈಶ್ಶಾರ್ದೂಲರ್ಕ್ಷಗಜೋತ್ತಮೈಃ। ಉಷ್ಣಾಭಿತಪ್ತೈಸ್ತೃಷಿತೈಃಸ್ಸಂಕ್ಷೋಭಿತಜಲಾಶಯಾಮ್ ॥೨೦॥ ಚಕ್ರವಾಕೈಶ್ಚ ಕಾರಂಡೈಸ್ಸಹಂಸಜಲಕುಕ್ಕುಟೈಃ ॥ ಸಾರಸೈಶ್ಚ ಸದಾಮತ್ತೈಃಕೂಜದ್ಭಿಸ್ಸರ್ವತೋವೃತಾಮ್ ॥೨೧॥ ಫುಲ್ಲದ್ರುಮಕೃತೋತ್ತಂಸಾಂಚಕ್ರವಾಕಯುಗಸ್ತನೀಮ್ । ವಿಸ್ತೀರ್ಣಪುಳಿನಶ್ರೋಣೀಂಹಂಸಾವಳಿಸುಮೇಖಲಾಮ್ ॥೨೨॥ಪುಷ್ಪರೇಣ್ವನುರಕ್ತಾಂಗೀಂಜ್ವಲಫೇನಾಮಲಾಂಶುಕಾಮ್। ಜಲಾವಗಾಹಸಂಸ್ಪರ್ಶಾಂನೀಲೋ

---

ತ್ಪೈಃ–ಬೀಳುತಿರುವ, ಶ್ವೇತೈಃ–ಬೆಳ್ಳಗಿರುವ, ಅಂಬುಭಿಃ–ಉದಕಗಳಿಂದ, ಸಾಟ್ಟಹಾಸಮಿವಸ್ಥಿತಂ–ಕೋಲಾಹಲಧ್ವನಿಯಂ ಮಾಡುತ್ತದೆಂಬಂತಿರುವ, ಸಾಪ್ಸರೋರಗಕಿನ್ನರೈಃ–ಅಪ್ಸರಸ್ತ್ರೀಗಳಿಂದಲೂ,ಸರ್ಪಗಳಿಂದಲೂ, ಕಿನ್ನರರಿಂದಲೂ ಒಡಗೂಡಿದ,ಸ್ತ್ರೀಭಿಸ್ಸಹ–ಹೆಂಗಸರೊಡನೆ, ಕ್ರೀಡಮಾನೈಃ–ವಿಹರಿಸುತಿರುವ, ದೇವದಾನವಗಂಧರ್ವೈಃ–ದೇವತೆಗಳಿಂದಲೂ, ರಾಕ್ಷಸರಿಂದಲೂ, ಗಂಧರ್ವರಿಂದಲೂ,ಸ್ವರ್ಗಭೂತಂ–ಸ್ವರ್ಗಪ್ರಾಯವಾಗಿರುವ,ಮಹೋಚ್ಛ್ರಯಂ–ಬಹಳ ಉದ್ದವಾಗಿರುವ, ಸ್ಯಂದಮಾನಾಭಿಃ–ಜಾರುತಿರುವ, ನದೀಭಿಃ–ನದಿಗಳಿಂದ, ಸ್ಫಾಟಿಕಪ್ರತಿಮಂ– ಸ್ಫಾಟಿಕ–ಸ್ಫಟಿಕಮಣಿಗಳಿಗೆ, ಪ್ರತಿಮಂ–ಸಮಾನವಾದ, ಜಲಂ–ಉದಕವನ್ನು, ಫಣಾಭಿಃ–ಹೆಡೆಗಳಿಂದಲೂ, ಚಲಜಿಹ್ವಾಭಿಃ–ಚಲ ಕದಲುತಿರುವ,ಜಿಹ್ವಾಭಿಃ–ನಾಲಿಗೆಗಳಿಂದಲೂ, ಲಿಹಂತಮಿವ–ನೆಕ್ಕುವಂತೆ, ವಿಷ್ಠಿತಂ–ಇರುತಿರುವ, (ಅನಂತಮಿವವಿಷ್ಠಿತಮಿತಿ–ಪಾಠದಲ್ಲಾದರೆ, ಜಿಹ್ವಾಭಿಃ–ನಾಲಿಗೆಗಳಿಂದ, ಉಪಲಕ್ಷಿತಂ–ಕೂಡಿಕೊಂಡಿರುವ, ಅನಂತಮಿವ–ಆದಿಶೇಷನಂತೆ, ವಿಷ್ಠಿತಂ–ಇರುತಿರುವ) ಉತ್ಕ್ರಾಮಂತಂ–ಊರ್ಧ್ವಪ್ರದೇಶವನ್ನಾಕ್ರಮಿಸುತಿರುವ, ದರೀಮಂತಂ–ಗುಹೆಗಳುಳ್ಳ, ಹಿಮವತ್ಸನ್ನಿಭಂ–ಹಿಮವತ್ಪರ್ವತಕ್ಕೆ ಸಮಾನವಾದ, ವಿಂಧ್ಯಂ–ಗಿರಿಂ–ವಿಂಧ್ಯವೆಂಬ ಪರ್ವತವನ್ನು, ಪಶ್ಯಮಾನಃ–ನೋಡುತಿರುವನಾಗಿ, ರಾವಣಃ–ರಾವಣನು,ತತಃ–ಆ ವಿಂಧ್ಯಪರ್ವತದ ದೆಸೆಯಿಂದ, ನರ್ಮದಾಂ–ನರ್ಮದೆಯನ್ನು ಕುರಿತು, ಯಯೌ–ತೆರಳಿದನು ॥೧೮॥ ಚಲೋತ್ಪಲಯುತಾಂ–ಚಲ–ಕದಲುತಿರುವ, ಉತ್ಪಲ–ನೈದಿಲೆಪುಷ್ಪಗಳಿಂದ, ಯುತಾಂ–ಕೂಡಿಕೊಂಡಿರುವ, ಪುಣ್ಯಾಂ–ಪುಣ್ಯಕರವಾದ, ಪಶ್ಚಿಮೋದಧಿಗಾಮಿನೀಂ–ಪಶ್ಚಿಮೋದಧಿ–ಪಶ್ಚಿಮಸಮುದ್ರವನ್ನು ಕುರಿತು, ಗಾಮಿನೀಂ–ಪ್ರವಹಿಸುತಿರುವ, ಉಷ್ಣಾಭಿತಪ್ತೈಃ–ಉಷ್ಣ–ಬಿಸಿಲಿನಿಂದ, ಅಭಿತಪ್ತೈಃ–ತಪಿಸಲ್ಪಟ್ಟ, ತೃಷಿತೈಃ–ನೀರಡಿಕೆಯುಳ್ಳ, ಮಹಿಷೈಃ–ಕೋಣಗಳಿಂದಲೂ, ಚಮರೈಃ–ಚಮರೀಮೃಗಗಳಿಂದಲೂ, ಸಿಂಹೈಃ–ಸಿಂಹಗಳಿಂದಲೂ, ಶಾರ್ದೂಲರ್ಕ್ಷಗಜೋತ್ತಮೈಃ–ಶಾರ್ದೂಲ–ದೊಡ್ಡಹುಲಿಗಳಿಂದಲೂ, ಋಕ್ಷ–ಕರಡಿಗಳಿಂದಲೂ, ಗಜೋತ್ತಮೈಃ–ಕಾಡಾನೆಗಳಿಂದಲೂ, ಸಂಕ್ಷೋಭಿತಜಲಾಶಯಾಂ–ಸಂಕ್ಷೋಭಿತ–ಕೆಸರಾಗಿ ಮಾಡಲ್ಪಟ್ಟ, ಜಲಾಶಯಾಂ–ಮಡುವೆಗಳುಳ್ಳ, ಚಕ್ರವಾಕೈಶ್ಚ–ಚಕ್ರವಾಕ ಪಕ್ಷಿಗಳಿಂದಲೂ, ಕಾರಂಡೈಶ್ಚ–ಪಕ್ಷಿವಿಶೇಷಂಗಳಿಂದಲೂ, ಸಹಂಸಜಲಕುಕ್ಕುಟೈಃ–ಸಹಂಸ–ಹಂಸಗಳಿಂದೊಡಗೂಡಿದ, ಜಲಕುಕ್ಕುಟೈಃ–ನೀರುಕೋಳಿಗಳಿಂದಲೂ, ಸದಾ–ನಿರಂತರದಲ್ಲಿಯು, ಮತ್ತೈಃ–ಮದವೇರಿದ, ಕೂಜದ್ಭಿಃ–ಧ್ವನಿಗೊಳಿಸುತಿರುವ, ಸಾರಸೈಶ್ಚ–ಸಾರಸಪಕ್ಷಿಗಳಿಂದಲೂ, ಸರ್ವದಾ–ಸರ್ವಪ್ರದೇಶಗಳಲ್ಲಿ, ವೃತಾಂ–ಸುತ್ತಲ್ಪಟ್ಟ,ಫುಲ್ಲದ್ರುಮಕೃತೋತ್ತಂಸಾಂ–ಫುಲ್ಲ–ಅರಳಿದ, ದ್ರುಮ–ಗಿಡಗಳಿಂದ, ಕೃತ–ಮಾಡಲ್ಪಟ್ಟ, ಉತ್ತಂಸಾಂ–ಶಿರೋಭೂಷಣಗಳುಳ್ಳ, (ಯದ್ವಾ) ಅರಳಿದ ಗಿಡಗಳೆಂಬ ಶಿರೋಭೂಷಣವಾಗಿ ಉಳ್ಳ, ಚಕ್ರವಾಕಯುಗಸ್ತನೀಂ–ಚಕ್ರವಾಕ–ಚಕ್ರವಾಕ ಪಕ್ಷಿಗಳ, ಯುಗ–ಯುಗ್ಮವೇ, ಸ್ತನೀಂ–ಸ್ತನಗಳಾಗಿ ಯುಳ್ಳ, ವಿಸ್ತೀರ್ಣಪುಳಿನಶ್ರೋಣೀಂ–ವಿಸ್ತೀರ್ಣ–ವಿಸ್ತಾರವಾದ, ಪುಳಿನ–ಮರಳುದಿಬ್ಬೆಗಳೆಂಬ, ಶ್ರೋಣೀಂ–ಶ್ರೋಣೀಪ್ರದೇಶಗಳಾಗಿಉಳ್ಳ, ಹಂಸಾವಳಿಸುಮೇಖಲಾಂ–ಹಂಸಾವಳಿ–ಹಂಸಪಙ್ತಿಗಳೆಂಬ, ಸುಮೇಖಲಾಂ–ಒಡ್ಯಾಣ್ಯವಾಗಿ ಉಳ್ಳ, ಪುಷ್ಪರೇ

---

ಗೆಗಳಿಂದಲೂ ಯುಕ್ತವಾಗಿರ್ಪ ಅನಂತನೆಂಬ ಸರ್ಪರಾಜನ ತೆರದಿ, ಸ್ಫಟಿಕದಂತೆ ಶುಭ್ರವಾಗಿರುವ ಉದಕವನ್ನು ನೆಕ್ಕುವಂ ತಿರುವದಾಗಿಯೂ, ಗಗನ ಮಾರ್ಗವನ್ನಾಕ್ರಮಿಸಿ ಕೊಂಡಿರುವದಾಗಿಯೂ, ಗುಹೆಗಳುಳ್ಳದ್ದಾಗಿಯೂ, ಹಿಮವತ್ಪರ್ವತಕ್ಕೆ ಸಮಾನವಾಗಿರುವದಾಗಿಯೂ, ಇರುವ ಆ ವಿಂಧ್ಯಪರ್ವತವಂ ನೋಡುತ್ತಾ, ನರ್ಮದಾ ನದಿಯಂ ಹೊಂದಿದನು ॥೧೮॥ ರಾಕ್ಷಸಶ್ರೇಷ್ಠನಾದ ಆ ರಾವಣನಾದರೇ, ಚಲಿಸುತಿರುವ ಕಮಲಗಳುಳ್ಳದ್ದಾಗಿಯೂ, ಪುಣ್ಯಕರವಾಗಿಯೂ, ಪಶ್ಚಿಮ ಸಮುದ್ರವಂ ಹೊಕ್ಕುತಿರುವದಾಗಿಯೂ, ಬಿಸಲಿನಿಂದ ಬಳಲಿದವುಗಳಾಗಿ, ಪಾನೇಚ್ಛೆಯುಳ್ಳ ಮಹಿಷ, ಚಮರ, ಸಿಂಹ, ಶಾರ್ದೂಲ, ಕರಡೀ, ಗಜಗಳೇ ಮುಂತಾದವುಗಳಿಂದ, ಒಂಡಾಗಿ ಮಾಡಲ್ಪಟ್ಟ ಜಲವುಳ್ಳದ್ದಾಗಿಯೂ, ಸುತ್ತುಮುತ್ತಲೂ ಕೂಗುತಿರುವ, ಚಕ್ರವಾಕ, ಕಾರಂಡ, ಹಂಸ, ಜಲ ಕುಕ್ಕುಟ, ಸಾರಸ, ಮುಂತಾದ ಪಕ್ಷಿಗಳಿಂದ ವ್ಯಾಪ್ತವಾದ್ದಾಗಿಯೂ ॥೨೧॥ ವಿಕಸಿತವಾದ ವೃಕ್ಷಗಳೆಂಬ ಶಿರೋಭೂಷಣವಾಗುಳ್ಳದ್ದಾಗಿಯೂ, ಚಕ್ರವಾಕಯುಗ್ಮವೆಂಬ ಸ್ತನಗಳುಳ್ಳದ್ದಾಗಿಯೂ, ವಿಸ್ತಾರವಾದ ಮರಳೆಂಬ ಕಟಿಪ್ರದೇಶವುಳ್ಳದ್ದಾಗಿಯೂ, ಹಂಸ ಪಙ್ಕ್ತಿಗಳೆಂಬ ಒಡ್ಯಾಣ್ಯವುಳ್ಳದ್ದಾಗಿಯೂ, ಪೂಧೂಳಿಗಳಿಂದ, ಕೆಂಪಾದ ಶರೀರವುಳ್ಳದ್ದಾಗಿಯೂ, ಹೊಳೆಯುತಿತುವ ನೊರೆಗಳೆಂಬ ದುಕೂಲವುಳ್ಳದ್ದಾಗಿಯೂ, ಉದಕಪ್ರವೇಶವೆಂಬ ಸ್ಪರ್ಶವುಳ್ಳದ್ದಾಗಿಯೂ, ಕನ್ನೈದಿಲೆಗ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ಪಲಶುಭೇಕ್ಷಣಾಮ್ ॥೨೩॥ ಪುಷ್ಪಕಾದವರುಹ್ಯಾಶುನರ್ಮದಾಂಸರಿತಾಂವರಾಮ್ । ಇಷ್ಟಾಮಿವವರಾಂನಾರೀಮವಗಾಢೋದಶಾನನಃ ॥೨೪॥ ಸತಸ್ಯಾಃಪುಳಿನೇರಮ್ಯೇನಾನಾಕುಸುಮಶೋಭಿತೇ । ಸುಖೋಪವಿಷ್ಟಸ್ಸಚಿವೈಸ್ಸಾರ್ಧಂರಾಕ್ಷಸಪುಂಗವಃ ॥೨೫॥ ಪ್ರಖ್ಯಾಯನರ್ಮದಾಂಸೋಥಗಂಗೇಯಮಿತಿರಾವಣಃ। ನರ್ಮದಾದರ್ಶಜಂಹರ್ಷಮಾಪ್ತವಾ೯ರಾಕ್ಷಸಾಧಿಪಃ ॥೨೬॥ ತತಸ್ಸಲೀಲಂಪ್ರಹಸ೯ರಾವಣೋರಾಕ್ಷಸೇಶ್ವರಃ। ಉವಾಚಸಚಿವಾಂಸ್ತತ್ರಮಾರೀಚಶುಕಸಾರಣಾ೯ ॥೨೭ ಏಷರಶ್ಮಿಸಹಸ್ರೇಣಜಗತ್ಕೃತ್ವೇವಕಾಂಚನಮ್ । ತೀಕ್ಷ್ಣತಪಕರಸ್ಸೂರ್ಯೋನಭಸೋಮಧ್ಯಮಾಗತಃ । ಮಾಮಾಸೀನಂ ವಿದಿತ್ವೇಹಚಂದ್ರಾಯತಇವಾಂಶುಮಾ೯ ॥೨೮॥ ನರ್ಮದಾಜಲಶೀತಶ್ಚ ಸುಗಂಧಿಃಶ್ರಮನಾಶನಃ । ಮದ್ಭಯಾದನಿಲೋಪ್ಯತ್ರವಾತ್ಯೇಷಸುಸಮಾಹಿತಃ ॥೨೯॥ ಇಯಂಚಾಪಿಸರಿಚ್ಛ್ರೇಷ್ಠಾ ನರ್ಮದಾನರ್ಮವರ್ಧಿನೀ। ಲೀನಮೀನವಿಹಂಗೋರ್ಮಿಸ್ಸ

ಷ್ಪಾನುರಕ್ತಾಂಗೀಂ-ಪುಷ್ಪರೇಣು-ಹುವ್ವುಗಳ ಪರಾಗಗಳಿಂದ, ಅನುರಕ್ತಾಂಗೀಂ-ಅನುರಕ್ತ-ಕೆಂಪಾಗಿರುವ, ಅಂಗೀಂ-ಶರೀರವುಳ್ಳ, ಜ್ವಲತ್ಫೇನಾಮಲಾಂಶುಕಾಂ-ಜ್ವಲಾತ್-ಹೊಳೆಯುತಿರುವ, ಫೇನ-ನೊರೆಗಳೆಂಬ, ಅಮಲಾಂಶುಕಾಂ-ಬಿಳೀವಸ್ತ್ರವುಳ್ಳ, ಜಲಾವಗಾಹಸಂಸ್ಪರ್ಶಾಂ-ಜಲ-ನೀರಿನಲ್ಲಿ, ಅವಗಾಹ-ಪ್ರವೇಶವೇ, ಸಂಸ್ಪರ್ಶಾಂ-ಸ್ಪರ್ಶವುಳ್ಳ, (ಯದ್ವಾ-ಜಲಾವಗಾಹ-ನೀರಿನಲ್ಲಿ ಸ್ನಾನ ಮಾಡತಕ್ಕವರ, ಸಂಸ್ಪರ್ಶಾಂ-ಸ್ಪರ್ಶವೆಂಬಸ್ಪರ್ಶವುಳ್ಳ) ನೀಲೋತ್ಪಲಶುಭೇಕ್ಷಣಾಂ-ನೀಲೋತ್ಪಲ-ಕಪ್ಪನೈದಿಲೆ ಹುವ್ವುಗಳೆಂಬ, ಶುಭೇಕ್ಷಣಾಂ-ಶುಭಕರವಾದ ನೇತ್ರಂಗಳುಳ್ಳ, ವರಾಂ-ಶ್ರೇಷ್ಠವಾದ, ಇಷ್ಟಾಂ-ಇಷ್ಟಳಾದ, ನಾರೀಮಿವ ಸ್ಥಿತಾಂ-ಹೆಂಗಸಂತಿರುವ, ಸರಿತಾಂ-ನದಿಗಳೊಳಗೆ, ವರಾಂ-ಶ್ರೇಷ್ಠಳಾದ, ನರ್ಮದಾಂ-ನರ್ಮದಾನದಿಯನ್ನು ಕುರಿತು, ದಶಾನನಃ-ರಾವಣನು, ಪುಷ್ಪಕಾತ್-ಪುಷ್ಪಕದದೆಸೆಯಿಂದ, ಆಶು-ಜಾಗ್ರತೆಯಾಗಿ, ಅವರುಹ್ಯ-ಇಳಿದು, ಅವಗಾಢಃ-ಪ್ರವೇಶಿಸಿದನು ॥ ೨೪ ॥ ನಾನಾಕುಸುಮ ಶೋಭಿತೇ-ನಾನಾ-ಅನೇಕ ಬಗೆಗಳಾದ, ಕುಸುಮೈ-ಹುವ್ವುಗಳಿಂದ, ಶೋಭಿತೇ-ಹೊಳೆಯುತಿರುವ, ರಮ್ಯೇ-ಇಂಪಾಗಿರುವ, ತಸ್ಯಾಃ- ಆ ನರ್ಮದಾನದಿಯ, ಪುಳಿನೇ-ಮರಳು ದಿಬ್ಬದಲ್ಲಿ, ಸಃರಾಕ್ಷಸಪುಂಗವಃ-ರಾಕ್ಷಸಶ್ರೇಷ್ಠನಾದ ಆ ರಾವಣನು, ಸಚಿವೈಸ್ಸಾರ್ಧಂ- ಮಂತ್ರಿಗಳಿಂದೊಡಗೂಡಿ, ಸುಖೋಪವಿಷ್ಟಃ-ಸುಖವಾಗಿ ಕುಳಿತುಕೊಂಡನು ॥೨೫॥ಅಥ-ಬಳಿಕ, ರಾಕ್ಷಸಾಧಿಪಃ-ರಾಕ್ಷಸಾಧಿಪತಿಯಾದ,ಸರಾವಣಃ-ಆ ರಾವಣನು, ಇಯಂ-ಇದು, ಗಂಗೇತಿ-ಗಂಗಾನದಿಯೆಂದು,ನರ್ಮದಾಂ-ನರ್ಮದಾನದಿಯನ್ನು, ಪ್ರಖ್ಯಾಯ-ಹೊಗಳಿ, ನರ್ಮದಾದರ್ಶಜಂ-ನರ್ಮದಾನದಿಯ ದರ್ಶನದಿಂದಹುಟ್ಟಿದ,ಹರ್ಷಂ-ಸಂತೋಷವನ್ನು,ಆಪ್ತವಾ೯-ಹೊಂದಿದನು ॥ತತಃ-ಬಳಿಕ, ರಾಕ್ಷಸೇಶ್ವರಃ-ರಾಕ್ಷಸಾಧಿಪತಿಯಾದ, ರಾವಣಃ-ರಾವಣನು, ತತ್ರ-ಆ ನರ್ಮದಾತೀರದಲ್ಲಿ,ಸಲೀಲಂ-ವಿಲಾಸದಿಂದೊಡಗೂಡಿದಂತೆ, ಪ್ರಹಸ೯-ನಗುತಿರುವನಾಗಿ,ಮಾರೀಚಶುಕಸಾರಣಾ೯-ಮಾರೀಚ-ಮಾರೀಚನು,ಶುಕ-ಶುಕನು,ಸಾರಣಾ೯-ಸಾರಣನು ಎಂಬ, ಸಚಿವಾ೯-ಮಂತ್ರಿಗಳನ್ನು ಕುರಿತು, ಉವಾಚ-ಹೇಳಿದನು ॥೨೭॥ ತೀಕ್ಷ್ಣತಪಕರಃ-ತೀಕ್ಷ್ಣ-ಚುರುಕಾಗಿರುವ, ಆತಪ-ಬಿಸುಲನ್ನು, ಕರಃ-ಮಾಡುತಿರುವ, ಏಷಸೂರ್ಯಃ-ಈ ಸೂರ್ಯನು, ಜಗತ್-ಲೋಕವನ್ನು, ರಶ್ಮಿಸಹಸ್ರೇಣ-ಕಿರಣಗಳ ಸಹಸ್ರದಿಂದ, ಕಾಂಚನಮಿವ-ಭಂಗಾರ ಬಣ್ಣದಂತೆ, ಕೃತ್ವಾ-ಮಾಡಿ, ನಭಸಃ-ಅಂತರಿಕ್ಷದ, ಮಧ್ಯಂ- ಮಧ್ಯವನ್ನು, ಆಗತಃ-ಹೊಂದಿದವನಾಗಿ, ಇಹ-ಇಲ್ಲಿ, ಆಸೀನಂ-ಕುಳಿತುಕೊಂಡಿರುವ, ಮಾಂ-ನನ್ನನ್ನು, ವಿದಿತ್ವಾ-ತಿಳಿದು, ಅಂಶುಮಾ೯- ಸೂರ್ಯನಾದರು, ಚಂದ್ರಾಯತಇವ- ಚಂದ್ರನಂತೆ ಆಚರಿಸುತಿದ್ದಾನೆ ॥೨೮॥ ಅತ್ರ-ಇಲ್ಲಿ, ನರ್ಮದಾ ಜಲ ಶೀತಲಃ-ನರ್ಮದೋದಕದಿಂದ ತಂಡಿಯಾಗಿರುವ, ಸುಗಂಧಿಃ-ವಾಸನೆಯುಳ್ಳ, ಶ್ರಮನಾಶನಃ-ಶ್ರಮವನ್ನು ಪರಿಹರಿಸುತಿರುವ, ಏಷಃ-ಈ, ಅನಿಲೋಪಿ-ವಾಯುಕೂಡ, ಮದ್ಭಯಾತ್- ನನ್ನ ಭೀತಿಯದೆಸೆಯಿಂದ, ಸುಸಮಾಹಿತಃ-ಹೆಚ್ಚರಿಕೆಯುಳ್ಳವನಾಗಿ, ವಾತಿ-ಬೀಸುತ್ತಾನೆ ॥ ೨೯॥ ಸರಿಚ್ಛ್ರೇಷ್ಠಾ-ನದೀಶ್ರೇಷ್ಠಳಾದ, ನರ್ಮವರ್ಧಿನಿ-ಸುಖವನ್ನು ವೃದ್ಧಿಗೊಳಿಸುತಿರುವ, ಇಯಂನರ್ಮದಾಚ-ಈ ನರ್ಮದಾನದಿಯು, ಲೀನಮೀನವಿಹಂಗೋರ್ಮಿಃ-ಲೀನ-ಸೇರಿಕೊಂಡಿರುವ, ಮೀನ-ಮತ್ಸ್ಯಗಳನ್ನು, ವಿಹಂಗ-ಹಕ್ಕಿಗಳನ್ನು,

ಳೆಂಬ ಶುಭಕರವಾದ ನೇತ್ರಗಳುಳ್ಳದ್ದಾಗಿಯೂ, ಆಗಿರುವ, ಪ್ರೀತಿಪಾತ್ರಳಾದ ಉತ್ತಮಾಂಗನೆಯಂತಿರುವ, ಆ ನರ್ಮದಾನದಿಯಂ ಕಂಡು, ಪುಷ್ಪಕವಿಮಾನದಿಂದಿಳಿದು, ಸೊಗಸಾಗಿರುವ, ಮತ್ತು ಪುಷ್ಪಗಳಿಂದ ಕಂಗೊಳಿಸುತಿರುವ, ಆ ನದಿಯ ಮರಳಿನಲ್ಲಿ, ಮಂತ್ರಿಗಳಿಂದೊಡಗೂಡಿ ಸುಖವಾಗಿ ಕುಳಿತು ಕೊಂಡವನಾದನು ॥೨೫॥ ಸಮನಂತರಕಾಲದಲ್ಲಿ ಆ ದಶಕಂಠನು, ಆ ನರ್ಮದಾನದಿಯ ಸಂದರ್ಶನದಿಂದುಂಟಾದ ಹರ್ಷವಂ ಹೊಂದಿ, ಇದು ಸಾಕ್ಷಾದ್ಗಂಗಾನದಿಯಂತೇ ಹೊಳೆಯುತಿರುವದೆಂದು ಹೊಗಳುತ್ತಾ, ವಿಲಾಸದಿಂ ದೊಡಗೂಡಿದವನಂತೇ ನಗುತಿರುವನಾಗಿ, ಮಂತ್ರಿಗಳಾದ ಮಾರೀಚ ಶುಕ ಸಾರಣರನ್ನು ಕುರಿತಿಂತೆಂದನು॥೨೭॥ಎಲೈ ಮಂತ್ರಿಗಳಿರಾ, ಬಹಳ ಬಿಸಲನ್ನುಂಟುಮಾಡುತಿರುವ, ಮತ್ತು, ಸಹಸ್ರಕಿರಣಗಳುಳ್ಳ, ಈ ಸೂರ್ಯನು, ಇಲ್ಲಿಗೆ ಬಂದವನನ್ನಾಗಿ ನನ್ನನ್ನು ತಿಳಿದು ಜಗತ್ತನ್ನೆಲ್ಲಾ, ಕಾಂಚನವಿಕಾರಮುಳ್ಳದ್ದನ್ನಾಗಿ ಮಾಡಿ, ಅಂತರಿಕ್ಷ ಮಧ್ಯಂಗತನಾಗಿ, ಚಂದ್ರನಂತೆ, ಆಹ್ಲಾದಕರವಾದ ಕಿರಣಗಳುಳ್ಳವನಾಗಿಹಾನೆ, ॥೨೮॥ ಇದಲ್ಲದೇ, ಯನ್ನಭಯದಿಂದ, ವಾಯುವೂ ಕೂಡಾ,ನರ್ಮದಾ ಜಲದಿಂದ ತಣ್ಣಗಿರುವನಾಗಿಯೂ, ಸುವಾಸನೆಯುಳ್ಳವನಾಗಿಯೂ, ಆಯಾಸಪರಿಹಾರವಂ ಗೈಯುತಿರುವನಾಗಿಯೂ, ಇರುವನಾಗಿ ಮೆಲ್ಲ ಮೆಲ್ಲನೆ ಬೀಸ,ತಿರುವನೂ ॥೨೯॥ ನರ್ಮವರ್ಧಿನಿಯಾದ ಈ ನರ್ಮದಾನದಿಯೂ ಕೂಡ, ಸೇರಿಕೊಂಡಿರುವ, ಹಕ್ಕಿಗಳೂ, ತೆರೆಗಳೂ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭಯೆವಾಂಗನಾಸ್ಥಿತಾ ॥ ೨೦ ॥ ತದ್ಭವಂತಃಕ್ಷತಾಶ್ಶಸ್ತ್ರೈರ್ನೃಪೈರಿಂದ್ರಸಮೈರ್ಯುಧಿ । ಚಂದನಸ್ಯರಸೇನೇವರುಧಿರೇಣಸಮುಕ್ಷಿತಾಃ ॥೨೧॥ ತೇಯೂಯಮವಗಾಹಧ್ವಂನರ್ಮದಾಂಶರ್ಮದಾಂನೃಣಾಮ್ । ಮಹಾಪದ್ಮಮುಖಾಮತ್ತಾ ಗಂಗಾಮಿವಮಹಾಗಜಾಃ॥೨೨॥ ಅಸ್ಯಾಂಸ್ನಾತ್ವಾಮಹಾನದ್ಯಾಂಪಾಪ್ಮಾನಂವಿಪ್ರಮೋಕ್ಷ್ಯಥ ॥೨೩॥ ಅಸಾವಪ್ಯತ್ರ ಪುಳಿನೆ ಶರದಿಂದುಸಮಪ್ರಭೆ । ಪುಷ್ಪೋಪಹಾರಂಶನಕೈಃಕರಿಷ್ಯಾಮಿಹ್ಯುಮಾಪತೇಃ ॥೨೪॥ ರಾವಣೇನೈವಮುಕ್ತಾಸ್ತು ಪ್ರಹಸ್ತಶುಕಸಾರಣಾಃ । ಸಮಹೋದರಧೂಮ್ರಾಕ್ಷಾಃನರ್ಮದಾಮವಗಾಹಿರೆ॥೨೫॥ ರಾಕ್ಷಸೇಂದ್ರಗಜೈಸ್ತೈಸ್ತು ಕ್ಷೋಭಿತಾಸಾಮಹಾನದೀ । ವಾಮನಾಂಜನಪದ್ಮಾದ್ಯೈರ್ಜಾಹ್ನವೀವಮಹಾಗಜೈಃ ॥೨೬॥ ತತಸ್ತೇರಾಕ್ಷಸಾಸ್ಸ್ನಾತ್ವಾ ನರ್ಮದಾಯಾವರಾಂಭಸಿ।ಉತ್ತೀರ್ಯಪುಷ್ಪಾಣ್ಯಾಜಹ್ರುರ್ಬಲ್ಯರ್ಥಂರಾವಣಸ್ಯತು॥೨೭॥ನರ್ಮದಾಪುಳಿನೇರಮ್ಯೇಶುಭ್ರಾಭ್ರಸದೃಶಪ್ರಭೆ ।ರಾಕ್ಷಸೇಂದ್ರೈರ್ಮುಹೂರ್ತೇನಕೃತಃಪುಷ್ಪಮಯೋಗಿರಿಃ ॥೨೮॥ ಪುಷ್ಪೇಷೂಪಹೃತೇಷ್ವಾಶುರಾವಣೋರಾಕ್ಷಸೇಶ್ವರಃ।

---

ಊರ್ಮಿಃ-ತರಂಗಗಳುಳ್ಳದ್ದಾಗಿ, ಸಭಯಾ-ಭಯದಿಂದೊಡಗೂಡಿದ,ಅಂಗನೇವ-ಸ್ತ್ರೀಯಂತೆ, ಸ್ಥಿತಾ-ಇರುತ್ತದೆ॥೨೦॥ತತ್-ಆ ಕಾರಣದ ದೆಸೆಯಿಂದ,ಯುಧಿ-ಕಾಳಗದಲ್ಲಿ, ಇಂದ್ರಸಮೈಃ-ಇಂದ್ರನಿಗೆ ಸಮಾನರಾದ, ನೃಪೈಃ-ಅರಸುಗಳಿಂದ, ಶಸ್ತ್ರೈಃ-ಆಯುಧಗಳಿಂದ, ಭವಂತಃ-ನೀವು,ಕ್ಷತಾಃ-ಹೊಡೆಯಲ್ಪಟ್ಟವರಾಗಿ, ಚಂದನಸ್ಯ-ಶ್ರೀಗಂಧದ,ರಸೇನೇವ-ರಸದಿಂದಂತಲೆ, ರುಧಿರೇಣ-ರಕ್ತದಿಂದ,ಸಮುಕ್ಷಿತಾಃ-ನೆನೆಯಲ್ಪಟ್ಟವರಾಗಿದ್ದೀರಿ॥೨೧॥ತೇ-ಅಂಥಾ-ಯೂಯಂ-ನೀವು, ನೃಣಾಂ-ಮನುಷ್ಯರಿಗೆ, ಶರ್ಮದಾಂ-ಸುಖವನ್ನು ಕೊಡುತಿರುವ, ನರ್ಮದಾಂ-ನರ್ಮದಾನದಿಯನ್ನು, ಮಹಾಪದ್ಮಮುಖಾಃ- ಮಹಾಪದ್ಮ-ಪುಂಡರೀಕವೆಂಬ ದಿಗ್ಗಜವೆ,ಮುಖಾಃ-ಮೊದಲಾಗಿಉಳ್ಳ,ಮತ್ತಾಃ-ಮದಿಸಿರುವ,ಮಹಾಗಜಾಃ-ದಿಗ್ಗಜಗಳು,ಗಂಗಾಮಿವ-ಗಂಗಾನದಿಯನ್ನಂತೆ,ಅವಗಾಹಧ್ವಂ-ಪ್ರವೇಶಿಸಿರಿ॥೨೨॥ಅಸ್ಯಾಂ-ಮಹಾನದ್ಯಾಂ-ಈ ಮಹಾನರ್ಮದಾ ನದಿಯಲ್ಲಿ, ಸ್ನಾತ್ವಾ-ಸ್ನಾನಮಾಡಿ, ಪಾಪ್ಮಾನಂ-ಪಾಪವನ್ನು, ವಿಪ್ರಮೋಕ್ಷ್ಯಥ-ಬಿಟ್ಟುಬಿಡಿರಿ ॥೨೩॥ ಅಹಮಪಿ-ನಾನೂಕೂಡ, ಅತ್ರ-ಈ ನದಿಯಲ್ಲಿ, ಶರದಿಂದುಸಮಪ್ರಭೆ-ಶರತ್ಕಾಲೀನ ಚಂದ್ರನಿಗೆ ಸಮಾನವಾದಕಾಂತಿಯುಳ್ಳ, ಪುಳಿನೆ-ಮರಳುದಿಬ್ಬಿನಲ್ಲಿ,ಉಮಾಪತೇಃ-ಪಾರ್ವತೀಪತಿಯಾದ ಪರಮೇಶ್ವರನಿಗೆ, ಶನಕೈಃ-ಮೆಲ್ಲಗೆ, ಪುಷ್ಪೋಪಹಾರಂ-ಪುಷ್ಪಗಳೆಂಬ ಕಾಣಿಕೆಯನ್ನು, ಕರಿಷ್ಯಾಮಿಹಿ-ಮಾಡುವೆನಷ್ಟೆ॥೨೪॥ರಾವಣೇನ-ರಾವಣನಿಂದ, ಏವಂ-ಈ ಪರಿಯಾಗಿ, ಉಕ್ತಾಃ-ಹೇಳಲ್ಪಟ್ಟ,ಸಮಹೋದರಧೂಮ್ರಾಕ್ಷಾಃ-ಮಹೋದರನಿಂದಲೂ ಧೂಮ್ರಾಕ್ಷನಿಂದಲೂಕೂಡಿದ,ಪ್ರಹಸ್ತಶುಕಸಾರಣಾಃ-ಪ್ರಹಸ್ತನೂ, ಶುಕನೂ, ಸಾರಣನೂ ಎಂಬವರು, ನರ್ಮದಾಂ-ನರ್ಮದಾನದಿಯನ್ನು,ಅವಗಾಹಿರೆ-ಹೊಕ್ಕರು॥ತೈಃ-ಅಂಥಾ, ರಾಕ್ಷಸೇಂದ್ರಗಜೈಃ-ರಾಕ್ಷಸೇಂದ್ರ-ರಾಕ್ಷಸಶ್ರೇಷ್ಠರೆಂಬ, ಗಜೈಃ-ಗಜಗಳಿಂದ, ಕ್ಷೋಭಿತಾ- ಕಲುಷವಾಗಿ ಮಾಡಲ್ಪಟ್ಟ, ಸಾಮಹಾನದೀತು-ಆ ನರ್ಮದೆಯೆಂಬ ದೊಡ್ಡನದಿಯಾದರೆ, ವಾಮನಾಂಜನಪದ್ಮಾದ್ಯೈಃ-ವಾಮನ-ವಾಮನವೆಂಬ ಗಜವು, ಅಂಜನ-ಅಂಜನವೆಂಬ ಗಜವು, ಪದ್ಮ-ಪದ್ಮವೆಂಬ ಗಜವು, ಆದ್ಯೈಃ-ಮೊದಲಾಗಿಉಳ್ಳ, ಮಹಾಗಜೈಃ-ಮಹಾಗಜಗಳಿಂದ, ಜಾಹ್ನವೀವ-ಗಂಗಾನದಿಯಂತೆ, ಭಾತಿ-ಹೊಳೆಯುತಿತ್ತು ॥೨೬॥ ತತಃ-ಬಳಿಕ, ತೇರಾಕ್ಷಸಾಃ-ಆ ರಾಕ್ಷಸರು, ನರ್ಮದಾಯಾಃ-ನರ್ಮದಾನದಿಯ, ವರಾಂಭಸಿ-ಶ್ರೇಷ್ಠವಾದ ಉದಕದಲ್ಲಿ, ಸ್ನಾತ್ವಾ-ಸ್ನಾನಮಾಡಿ, ಉತ್ತೀರ್ಯ- ಮ್ಯಾಲಕ್ಕೆಬಂದು, ರಾವಣಸ್ಯ-ರಾವಣನಿಗೆ, ಬಲ್ಯರ್ಥಂತು-ಶಿವಪೂಜೆಗೋಸ್ಕರವಾಗಿ, ಪುಷ್ಪಾಣಿ -ಹುವ್ವುಗಳನ್ನು, ಆಜಹ್ರುಃ-ತೆಗದುಕೊಂಡು ಬಂದರು॥೨೭॥ ರಾಕ್ಷಸೇಂದ್ರೈಃ-ರಾಕ್ಷಸಶ್ರೇಷ್ಠರಾದ ಮಾರೀಚಾದಿಗಳಿಂದ, ಶುಭ್ರಾಭ್ರಸದೃಶಪ್ರಭೆ-ಶುಭ್ರ-ಬೆಳ್ಳಗಿರುವ, ಅಭ್ರ-ಮೇಘಕ್ಕೆ, ಸದೃಶ-ಸಮಾನವಾದ, ಪ್ರಭೆ-ಕಾಂತಿಯುಳ್ಳ, ರಮ್ಯೇ-ಇಂಪಾಗಿರುವ, ನರ್ಮದಾಪುಳಿನೆ-ನರ್ಮದಾ-ನರ್ಮದಾನದಿಯ, ಪುಳಿನೆ-ಮರಳುದಿಬ್ಬಿನಲ್ಲಿ, ಮುಹೂರ್ತೇನ-ಸ್ವಲ್ಪಕಾಲದಿಂದ, ಪುಷ್ಪಮಯಃ-ಪುಷ್ಪವಿಕಾರವಾದ, ಗಿರಿಃ-ಬೆಟ್ಟವು, ಕೃತಃ-ಮಾಡಲ್ಪಟ್ಟಿತು ॥೨೮॥ ಪುಷ್ಪೇಷು-ಹುವ್ವುಗಳು, ಉಪಹೃತೇಷುಸತ್ಸು, ತೆಗದುಕೊಳ್ಳಲ್ಪಟ್ಟವುಗ

---

ಉಳ್ಳದ್ದಾಗಿ, ಭೀತಳಾದ ಅಂಗನೆಯಂತೆ ನಿಂತಿರುವಳಲ್ಲ. ನೀವೆಲ್ಲರೂ ಕದನಗಳಲ್ಲಿ ಇಂದ್ರಸದೃಶರಾದ ನರೇಂದ್ರರಿಂದ ಶಸ್ತ್ರಗಳಿಂದ ಹೊಡೆಯಲ್ಪಟ್ಟವರಾಗಿ ಚಂದನ ರಸದಂತೆ ಸೋರುತ್ತಿರುವ ರಕುತದಿಂದ, ತೋಯಿಸಲ್ಪಟ್ಟ ಅಂಗಗಳುಳ್ಳವರಾಗಿದ್ದೀರಾದಕಾರಣ, ಮನುಷ್ಯರಿಗೆ ಶರ್ಮದಾಯಕವಾದ ಈ ನರ್ಮದಾನದಿಯಲ್ಲಿ, ಮದಿಸಿರುವ ಮಹಾ ಪದ್ಮವೇ ಮೊಂತಾದ ದಿಗ್ಗಜಗಳಂತೆ ಪ್ರವೇಸಿಸಿರಿ, ಈ ಮಹಾನದಿ ಯಲ್ಲಿ ಸ್ನಾನವಂಗೈದು ನಮ್ಮಂಗಳ ಪಾಪಂಗಳಂ ಹೋಗಲಾಡಿಸಿಕೊಳ್ಳೋಣ॥ಈ ನದಿಯಲ್ಲಿ ಶರತ್ಕಾಲೀನ ಚಂದ್ರ ಸದೃಶವಾದ ಪ್ರಭೆಯುಳ್ಳ,ಈಮರಳಿನಲ್ಲಿ, ನಾನುಕೂಡ,ಪಾರ್ವತೀ ಪತಿಯಾದ ಪರಮೇಶ್ವರನಂ ಪುಷ್ಪಗಳಿಂದ ಪೂಜಿಸುವೆನು, ಎಂಬದಾಗಿ, ರಾವಣನಿಂದಾಜ್ಞಾಪಿತರಾದ,ಪ್ರಹಸ್ತ, ಶುಕ, ಸಾರಣ, ಮಹೋದರ, ಧೂಮ್ರಾಕ್ಷರೆಂಬ ಇವರೆಲ್ಲರು, ಆ ನರ್ಮದಾನದಿಯಂ ಹೊಕ್ಕರು ॥೨೫॥ ಆ ರಾಕ್ಷಸೇಂದ್ರರೆಂಬ ಮಹಾ ಗಜಗಳಿಂದ ಕ್ಷೋಭಿತವಾದ, ಆ ನರ್ಮದಾನದಿಯಾದರೆ ವಾಮನ, ಅಂಜನ, ಮಹಾ ಪದ್ಮವೇ ಮೊಂತಾದ, ದಿಗ್ಗಜಗಳಿಂದ ಒಂಡಾಗಿ ಮಾಡಲ್ಪಟ್ಟ ಗಂಗಾನದಿಯಂತೆ ಹೊಳೆಯುತಿತ್ತು ॥೨೬॥ ಸಮನಂತರಕಾಲದಲ್ಲಿ ಆರಾಕ್ಷಸರೆಲ್ಲರು, ನರ್ಮದೋದಕದಲ್ಲಿ, ಸ್ನಾನವಂಗೈದು,ರಾವಣನ ಶಿವ ಪೂಜೆಗೋಸ್ಕರ, ಪುಷ್ಪಗಳಂ ತಂದು ಕೊಟ್ಟರು॥ ಶುಭ್ರವಾದ ಮೇಘಗಳಿಗೆ ಸದೃಶವಾದ ಕಾಂತಿಯುಳ್ಳ, ಆ ನರ್ಮದಾನದಿಯ ಮರಳಿನಲ್ಲಿ, ಆ ರಾಕ್ಷಸೇಂದ್ರರಿಂದ ತರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅವತೀರ್ಣೋನದೀಂಸ್ನಾತುಂಗಂಗಾಮಿವಮಹಾಗಜಃ ॥೩೯॥ ತತ್ರಸ್ನಾತ್ವಾಚವಿಧಿವಜ್ಜಪ್ತ್ವಾಜಪ್ಯ ಮನುತ್ತಮಮ್॥ ನರ್ಮದಾಸಲಿಲಾತ್ತಸ್ಮಾದುತ್ತತಾರಸರಾವಣಃ॥೪೦॥ ತತಃಕ್ಲಿನ್ನಾಂಬರಂತ್ಯಕ್ತ್ವಾಶುಕ್ಲವಸ್ತ್ರಸಮಾವೃತಮ್। ರಾವಣಂ ಪ್ರಾಂಜಲಿಂಯಾಂತಮನ್ವಯುಸ್ಸರ್ವರಾಕ್ಷಸಾಃ ॥೪೧॥ ತತ್ಕರ್ಮವಶಮಾಪನ್ನಾಮೂರ್ತಿಮಂತಇವಾಚಲಾಃ । ಗಾಯಂ ತೋಮಧುರಂತತ್ರನೃತ್ಯಂತಶ್ಚ ಮಹಾಬಲಾಃ॥೪೨॥ ಲಿಂಗಂತ್ವಪೂಜಯದ್ರಕ್ಷೋರಾವಣೋಲೋಕರಾವಣಃ । ಜಪ್ಯೋಪಹಾ ರೈಸ್ಸತತಂಗಂಧಪುಷ್ಪೈಶ್ಚನಿತ್ಯಶಃ ॥೪೩॥ ಬಲಿಧೂಪಪ್ರದಾನೈಶ್ಚ ರಾವಣೋಲಿಂಗಮರ್ಚಯನ್ । ಸವಾದಿತ್ರನಿನಾದೈಶ್ಚ ಶರ್ವಮಾರಾಧಯತ್ಪ್ರಭುಂ॥೪೪॥ ಘೃತಕ್ಷೀರಾಭಿಷೇಕೈಶ್ಚ ದಧ್ನಾಚಾಪ್ಯುದಕೇನಚ । ಪಟ್ಟೈಃಕೌಶೇಯಸಂಮಿಶ್ರೈರ್ನಾಮಾ ಷ್ಟಶತಸಂಸ್ತವೈಃ ॥೪೫॥ ಆರಾಧ್ಯಭಕ್ತ್ಯಾತಲ್ಲಿಂಗಂನಾನಾರತ್ನವಿಭೂಷಿತಮ್ । ಅರ್ಚಯಿತ್ವಾತುತಂದೇವಂಯದಾಚರ ತಿರಾವಣಃ ॥ ತತ್ಸರ್ವಂಸಿಧ್ಯತೇತಸ್ಯವಿಧಿನಾರ್ಚಯತೋಹರಮ್ ॥೪೬॥ ಅಥಾವಜ್ಞಾಂಕರೋತ್ಯೇವರಾವಣೋದುರ್ಮತಿರ್ಯ

---

ಳಾಗುತ್ತಿರಲೀಕಾಗಿ, ರಾಕ್ಷಸೇಶ್ವರಃ-ರಾಕ್ಷಸಾಧಿ ಪತಿಯಾದ, ರಾವಣಃ-ರಾವಣನು, ಅಪಿ-ಜಾಗ್ರತೆಯಾಗಿ, ಸ್ನಾತುಂ- ಸ್ನಾನಮಾಡುವದಕ್ಕೋಸ್ಕರ, ಮಹಾಗಜಃ-ದೊಡ್ಡಾನೆಯು, ಗಂಗಾಮಿವ-ಗಂಗಾನದಿಯನ್ನಂತೆ, ನದೀಂ-ನರ್ಮದಾನದಿಯನ್ನು ಕುರಿತು, ಅವತೀರ್ಣಃ-ಇಳಿದನು ॥೩೯॥ ಸರಾವಣಃ- ಆ ರಾವಣನು, ತತ್ರ-ಆ ಹೊಳೆಯಲ್ಲಿ, ವಿಧಿವತ್-ಯಥಾಶಾಸ್ತ್ರವಾಗಿ, ಸ್ನಾತ್ವಾ-ಸ್ನಾನಮಾಡಿ, ಅನುತ್ತಮಂ-ಸರ್ವೋತ್ತಮವಾದ,ಜಪ್ಯಂ-ಮಂತ್ರವ ನ್ನು, ಜಪ್ತ್ವಾ-ಜಪಿಸಿ, ತಸ್ಮಾತ್-ಆ, ನರ್ಮದಾಸಲಿಲಾತ್-ಹೊಳೇನೀರಿನಿಂದ, ಉತ್ತತಾರ-ಮ್ಯಾಲಕ್ಕೆ ಹೊರಟುಬಂದನು ॥೪೦॥ ತತಃ-ಸ್ನಾನಾನಂತರ ದಲ್ಲಿ, ಕ್ಲಿನ್ನಾಂಬರಂ-ಆರ್ದ್ರವಸ್ತ್ರವನ್ನು, ತ್ಯಕ್ತ್ವಾ-ಬಿಟ್ಟು, ಶುಕ್ಲವಸ್ತ್ರಸಮಾವೃತಂ-ಬಿಳೀವಸ್ತ್ರವನ್ನುಟ್ಟಿರುವ, ಪ್ರಾಂಜಲಿಂ-ಅಂಜಲಿಬದ್ಧನಾ ಗಿ, ಯಾಂತಂ-ಹೋಗುತ್ತಿರುವ, ರಾವಣಂ-ರಾವಣನನ್ನು, ಸರ್ವರಾಕ್ಷಸಾಃ-ರಾಕ್ಷಸರೆಲ್ಲರು, ಅನ್ವಯುಃ-ಅನುಸರಿಸಿ ನಡೆದರು ॥೪೧॥ ತತ್ಕರ್ಮವಶಮಾಪ ನ್ನಾಃ-ತತ್-ಆ ರಾವಣನ, ಕರ್ಮ-ಕರ್ಮಕ್ಕೆ, ವಶಂ-ಸ್ವಾಧೀನವನ್ನು, ಆಪನ್ನಾಃ-ಹೊಂದಿರುವ, ಮೂರ್ತಿಮಂತಃ-ದೇಹಧಾರಿಗಳಾದ, ಅಚಲಾಇವ-ಬೆ ಟ್ಟಗಳಂತೆ, ಮಹಾಬಲಾಃ-ಮಹಾಬಲಿಷ್ಠರಾದ ರಾಕ್ಷಸರು, ತತ್ರ-ಆ ನರ್ಮದಾನದಿಯ ದಡದಲ್ಲಿ, ಮಧುರಂ-ಇಂಪಾಗಿ,ಗಾಯಂತಃ-ಗಾನವನ್ನು ಮಾಡು ತ್ತಿದ್ದರು, ನೃತ್ಯಂತಶ್ಚ-ನರ್ತನವನ್ನೂ ಮಾಡಿದರು ॥೪೨॥ ರಕ್ಷಃ-ರಾಕ್ಷಸನಾದ, ಲೋಕರಾವಣಃ-ಲೋಕವನ್ನೆಲ್ಲಾ ಅಳಿಸುತ್ತಿರುವ, ರಾವಣಃ-ರಾವ ಣನು, ಸತತಂ-ಅವಿಚ್ಛಿನ್ನವಾಗಿ, ನಿತ್ಯಶಃ-ನಿರಂತರಮಾಡಿದ ಹಾಗೆಯೆ, ಗಂಧಪುಷ್ಪೈಶ್ಚ-ಗಂಧಗಳಿಂದಲೂ, ಪುಷ್ಪಗಳಿಂದಲೂನು, ಜಪ್ಯೋಪಹಾರೈಃ- ಮಂತ್ರಪುಷ್ಪಾರ್ಘ್ಯಗಳೆಂಬ ಕಾಣಿಕೆಗಳಿಂದಲೂ, ಲಿಂಗಂತು-ಶಿವಲಿಙ್ಗವನ್ನಾದರೆ, ಅಪೂಜಯತ್-ಪೂಜಿಸಿದನು ॥೪೩॥ ಸರಾವಣಃ-ಆ ರಾವಣನು, ಲಿ ಙ್ಗಂ- ಶಿವಲಿಙ್ಗವನ್ನು, ಬಲಿಧೂಪಪ್ರದಾನೈಶ್ಚ -ಬಲಿ-ಬಲಿಯಿಂದಲೂ, ಧೂಪ-ಧೂಪದ, ಪ್ರದಾನೈಶ್ಚ-ಕೊಡೋಣದರಿಂದಲೂನು, ಅರ್ಚಯನ್- ಪೂಜೆಯಂಮಾಡಿದವನಾಗಿ, ಪ್ರಭುಂ-ಸರ್ವಸ್ವಾಮಿಯಾದ, ಶರ್ವಂ-ಶಿವನನ್ನು, ವಾದಿತ್ರನಿನಾದೈಶ್ಚ-ವಾದಿತ್ರ-ವಾದ್ಯವಿಶೇಷಗಳ, ನಿನಾದೈಶ್ಚ-ಧ್ವನಿಗಳಿಂ ದಲೂನು, ಆರಾಧಯತ್-ಆರಾಧನೆ ಮಾಡಿದನು ॥೪೪॥ ಘೃತಕ್ಷೀರಾಭಿಷೇಕೈಶ್ಚ-ಆಜ್ಯಕ್ಷೀರಾಭಿಷೇಕ ಗಳಿಂದಲೂ, ದಧ್ನಾಚ-ಮಸರಿನಿಂದಲೂ, ಉ ದಕೇನಚ-ಉದಕದಿಂದಲೂ, ಕೌಶೇಯಸಂಮಿಶ್ರೈಃ-ಕೌಶೇಯ-ಕೆಂಪುಪಟ್ಟೆನಿಂದ, ಸಂಮಿಶ್ರೈಃ-ಕೂಡಿಕೊಂಡಿರುವ, ಪಟ್ಟೈಃ-ವಸ್ತ್ರಗಳಿಂದಲೂ, ನಾಮಾ ಷ್ಟಶತಸಂಸ್ತವೈಃ-ಅಷ್ಟೋತ್ತರ ಶತನಾಮಗಳಿಂದ, ರಾವಣಃ-ರಾವಣನು, ನಾನಾರತ್ನವಿಭೂಷಿತಂ-ನಾನಾಬಗೆಗಳಾದ ರತ್ನಗಳಿಂದ ಅಲಂಕೃತವಾದ, ತಲ್ಲಿಙ್ಗಂ-ಆ ಲಿಙ್ಗರೂಪನಾದ, ತಂದೇವಂ-ಆ ಪರಮೇಶ್ವರನನ್ನು, ಭಕ್ತ್ಯಾ-ಭಕ್ತಿಯಿಂದ, ಆರಾಧ್ಯ-ಆರಾಧನೆಮಾಡಿ, ಅರ್ಚಯಿತ್ವಾ-ಪೂಜಿಸಿ, ಯತ್- ಯಾವ ಕರ್ಮವನ್ನು, ಆಚರತಿ-ನಡಿಸುತ್ತಾನೊ, ಹರಂ-ಪರಮೇಶ್ವರನನ್ನು, ವಿಧಿನಾ-ವಿಧಿಯಿಂದ, ಅರ್ಚಯತಃ-ಪೂಜೆಮಾಡುತ್ತಿರುವ, ತಸ್ಯ-ಆ ರಾ ವಣನಿಗೆ, ತತ್ಸರ್ವಂ-ಆಶಿವಾರ್ಚನ ರೂಪವಾದ ಕರ್ಮಸಮಸ್ತವು, ಸಿಧ್ಯತೆ-ಸಫಲ ವಾಗುತದೆ ॥೪೬॥ ಅಥ-ಬಳಿಕ, ದುರ್ಮತಿಃ - ದುರ್ಬುದ್ಧಿಯುಳ್ಳ, ರಾವ

---

ಲ್ಪಟ್ಟ, ಪುಷ್ಪಗಳು ಪರ್ವತೋಪಮವಾಗಿ,ರಾಶಿ ಮಾಡಲ್ಪಟ್ಟವು॥೩೮॥ಪುಷ್ಪಗಳು ಸಿದ್ಧವಾಗಲೂ,ರಾಕ್ಷಸೇಶ್ವರನಾದ ರಾವಣನು, ಮಹಾಗಜವು ಗಂಗೋದಕದಲ್ಲಿ ನುಗ್ಗುವಂತೇ, ಸ್ನಾನ ಮಾಡುವದಕೋಸ್ಕರ ನರ್ಮದಾನದಿಯಲ್ಲಿಳಿದು, ವಿ ಧಿವತ್ತಾಗಿ ಮಜ್ಜನವಂ ಗೈದು, ಉತ್ತಮವಾದ ಮಂತ್ರಗಳಂ ಜಪಿಸಿ,ಆ ಉದಕದಿಂದ ಮ್ಯಾಲಕ್ಕೆ ಬಂದ ಬಳಿಕ,ಆ ಆರ್ದ್ರ ವಸ್ತ್ರವಂ ತೊರೆದು, ಶುಭ್ರವಾದ ಧೌತ್ರಗಳನ್ನುಟ್ಟು, ಅಂಜಲಿ ಬದ್ಧನಾಗಿ ಹೋಗುತಿರುವನಾಗಲೂ ಆತನನ್ನನುಸರಿಸಿ ಬರುತಿರುವ ಪರ್ವತೋಪಮವಾದ ದೇಹವುಳ್ಳ ರಾಕ್ಷಸರೆಲ್ಲರು, ಆ ಒಡೆಯನ ಕರ್ಮಗಳಿಗಧೀನರಾಗಿ, ಮನೋಹರ ವಾಗಿ ಗಾನಮಾಡುತಲೂ, ನರ್ತನವಂ ಗೈಯುತಲೂ ಇದ್ದರು, ॥೪೨॥ ಲೋಕ ಕಂಟಕನಾದ ಆ ದಶಕಂಠನಾದರೇ, ಅವಿಚ್ಛಿನ್ನವಾಗಿ, ಪ್ರತಿನಿತ್ಯವೂ ಮಾಡಿದಂತೆ, ಗಂಧ ಪುಷ್ಪಾದಿಗಳಿಂದಲೂ, ಬಲಿ ಧೂಪಪ್ರದಾನವೇಮುಂತಾದವುಗಳಿಂ ದಲೂ, ವಾದ್ಯವಿಶೇಷಗಳ ಶಬ್ದಗಳಿಂದಲೂ, ಪ್ರಭುವಾದ ಶಿವಲಿಂಗ ಪೂಜೆಯಂ ಗೈದು, ಘೃತ, ಕ್ಷೀರ, ದಧಿ, ಉದಕಗ ಳಿಂದಭಿಷೇಕಗಳಂ ಗೈದು, ಪಟ್ಟೆ ವಸ್ತ್ರಗಳನ್ನಿಟ್ಟು, ಅಷ್ಟೋತ್ತರ ಶತನಾಮಗಳಿಂದ ಪೂಜೆಯಂಗೈದು, ನಾನಾ ರತ್ನವಿ ಭೂಷಿತವಾದ ಆ ಶಿವಲಿಂಗವಂ, ಭಕ್ತಿಯಿಂದ ಆರಾಧಿಸಿ ಯಾವ ಯಾವ ಕರ್ಮಗಳಂ ನಡಿಸುವನೊ, ಅದೆಲ್ಲಾ ಆ ರಾವಣ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದಾ । ಋುಷಿಭಿರ್ದೈವತೈಶ್ಚಾಪಿಮೃತ್ಯುಸ್ಸಂಚಿಂತ್ಯತೇತದಾ ॥೪೭॥ ಸತುಮತ್ತೋನಜಾನೀತೇವಿಧಿಹೀನಂಶಿವಾರ್ಚನಮ್। ಯತ್ರಯತ್ರಸಯಾತಿಸ್ಮ ರಾವಣೋರಾಕ್ಷಸಾಧಿಪಃ । ಜಾಂಬೂನದಮಯಂಲಿಂಗಂತತ್ರತತ್ರಸ್ಮನೀಯತೇ॥೪೮॥ ವಾಲುಕಾವೇದಿಮಧ್ಯೇತುತಲ್ಲಿಂಗಂಸ್ಥಾಪ್ಯರಾವಣಃ । ಅರ್ಚಯಾಮಾಸಗಂಧೈಶ್ಚ ಪುಷ್ಪೈಶ್ಚಾಮೃತಗಂಧಿಭಿಃ ॥೫೦॥ ತತಸ್ಸತಾಮಾರ್ತಿಹರಂಹರಂಶಿವಂವರಪ್ರದಂಚಂದ್ರಮರೀಚಿಭೂಷಣಮ್ । ಸಮರ್ಚಯಿತ್ವಾಸನಿಶಾಚರೋಜಗೌಪ್ರಸಾರ್ಯಹಸ್ತಾನ್ಪ್ರಣನರ್ತಚಾಯತಾನ್ ॥೫೧॥

—…ಇತಿಶ್ರೀಮದುತ್ತರ ರಾಮಾಯಣೇ ಏಕತ್ರಿಂಶಸ್ಸರ್ಗಃ…—

ನರ್ಮದಾಪುಳಿನೇಯತ್ರರಾಕ್ಷಸೇಂದ್ರಸ್ಸರಾವಣಃ । ಪುಷ್ಪೋಪಹಾರಂಕುರುತೇತಸ್ಮಾದ್ದೇಶಾದದೂರತಃ ॥೧॥ ಅರ್ಜುನೋಜಯತಾಂಶ್ರೇಷ್ಠೋ ಮಾಹಿಷ್ಮತ್ಯಾಃಪತಿಃಪ್ರಭುಃ । ಕ್ರೀಡತೇಸಹನಾರೀಭಿರ್ನಮದಾತೀರಮಾಶ್ರಿತಃ ॥೨॥ ತಾಸಾಂ

---

ಣಃ-ರಾವಣನು, ಯದಾ-ಯಾವಕಾಲದಲ್ಲಿ, ಅವಜ್ಞಾಂ-ಶಿವನತಿರಸ್ಕಾರವನ್ನು, ಕರೋತಿ-ಮಾಡುತ್ತಾನೊ, ತದೈವ-ಆ ಕಾಲದಲ್ಲಿಯೆ, ಮೃತ್ಯುಃ-ಮರಣವೊಂದು, ಋುಷಿಭಿಃ-ಋುಷಿಗಳಿಂದಲೂ, ದೈವತೈಶ್ಚಾಪಿ-ದೇವತೆಗಳಿಂದಲೂನು, ಸಚಿಂತ್ಯತೆ-ಆಲೋಚಿಸಲ್ಪಡುತ್ತೆ ॥೪೭॥ ಮತ್ತಃ-ಶರೀರವನ್ನು ಮರತಿರುವ, ರಾಕ್ಷಸಾಧಿಪಃ-ರಾಕ್ಷಸಾಧಿಪತಿಯಾದ, ಸರಾವಣಸ್ತು-ಆ ರಾವಣನಾದರೆ, ವಿಧಿಹೀನಂ-ವಿಧಿಯಿಂದ ರಹಿತವಾದ, ಶಿವಾರ್ಚನಂ-ಶಿವಾರ್ಚನೆಯನ್ನು, ನಜಾನೀತೆ-ಅರಿಯನು, ಸಃ-ಆ ರಾವಣನು, ಯತ್ರಯತ್ರ-ಯಲ್ಲೆಲ್ಲಿ, ಯಾತಿಸ್ಮ-ಹೋಗುತ್ತಾನೋ, ತತ್ರತತ್ರ-ಅಲ್ಲಿಅಲ್ಲಿ, ಜಾಂಬೂನದಮಯಂ-ಭಂಗಾರು ವಿಕಾರವಾದ, ಲಿಂಗಂ-ಲಿಂಙ್ಗವು, ನೀಯ್ಯತೆಸ್ಮ-ತೆಗದುಕೊಂಡು ಹೋಗಲ್ಪಡುವ ದಾಗುತ್ತದಷ್ಟೆ ॥೪೮॥ ರಾವಣಸ್ತು-ರಾವಣನಾದರೆ, ತಲ್ಲಿಙ್ಗಂ-ಆ ಲಿಂಗವನ್ನು, ವಾಲುಕಾವೇದಿಮಧ್ಯೆತು-ವಾಲುಕಾ-ಮರಳಿನ, ವೇದಿ-ಜಗಲಿಯ-ಮಧ್ಯೆತು-ಮಧ್ಯಭಾಗದಲ್ಲಿ, ಸ್ಥಾಪ್ಯ-ಇರಿಸಿ,ಅಮೃತಗಂಧಿಭಿಃ-ಅಮೃತದಂತೆ ಸುವಾಸನೆಯುಳ್ಳ, ಗಂಧೈಶ್ಚ - ಗಂಧಗಳಿಂದಲೂನು, ಪುಷ್ಪೈಶ್ಚ - ಪುಷ್ಪಗಳಿಂದಲೂನು, ಅರ್ಚಯಾಮಾಸ-ಪೂಜೆಮಾಡಿದನು॥ ತತಃ-ಬಳಿಕ, ಸನಿಶಾಚರಃ- ಆ ರಾವಣಾಸುರನು, ಸತಾಂ-ಸತ್ಪುರುಷರ-ಆರ್ತಿಹರಂ-ವ್ಯಸನವನ್ನು ಹೋಗಲಾಡಿಸುತಿರುವ, ವರಪ್ರದಂ-ವರಪ್ರದಾತೃವಾದ, ಚಂದ್ರಮರೀಚಿಭೂಷಣಂ-ಚಂದ್ರಚೂಡನಾದ, ಹರಂ-ಸರ್ವಪಾಪ ಪರಿಹಾರಕನಾದ, ಶಿವಂ-ಕ್ಷೇಮಂಕರನಾದ ಪರಮೇಶ್ವರನನ್ನು, ಸಮರ್ಚಯಿತ್ವಾ-ಚನ್ನಾಗಿ ಪೂಜೆಮಾಡಿ, ಆಯತಾನ್-ದೀರ್ಘಂಗಳಾದ, ಹಸ್ತಾನ್-ಹಸ್ತಗಳನ್ನು, ಪ್ರಸಾರ್ಯ-ಚಾಚಿ, ಜಗೌ-ಗಾನಮಾಡಿದನು, ಪ್ರಣನರ್ತಚ-ನೃತ್ಯವನ್ನೂ ಮಾಡಿದನು ॥೫೧॥

ಇತಿ ಶ್ರೀಮದುತ್ತರ ರಾಮಾಯಣೇ ಏಕ ತ್ರಿಂಶ ಸ್ಸರ್ಗಃ.

ರಾಕ್ಷಸೆಂದ್ರಃ-ರಾಕ್ಷಸ ಶ್ರೇಷ್ಠನಾದ, ಸರಾವಣಃ-ಆ ರಾವಣನು, ನರ್ಮದಾಪುಳಿನೆ-ನರ್ಮದಾ-ನರ್ಮದಾನದಿಯ, ಪುಳಿನೆ- ಮರಳುದಿನ್ನೆಯಲ್ಲಿ, ಯತ್ರ-ಯಾವ ಪ್ರದೇಶದಲ್ಲಿ, ಪುಷ್ಪೋಪಹಾರಂ-ಶಿವಪೂಜೆಯನ್ನು, ಕುರುತೆ-ಮಾಡುತ್ತಾನೊ, ತಸ್ಮಾದ್ದೇಶಾತ್-ಆ ಪ್ರದೇಶಕ್ಕಿಂತಲೂ, ಅದೂರತಃ-ಸಮೀಪದಲ್ಲಿ ॥೧॥ ಜಯತಾಂ-ಪರಾಕ್ರಮಶಾಲಿಗಳೊಳಗೆ, ಶ್ರೇಷ್ಠಃ-ಶ್ರೇಷ್ಠನಾದ, ಮಾಹಿಷ್ಮತ್ಯಾಃ-ಮಾಹಿಷ್ಮತೀ ಪಟ್ಟಣಕ್ಕೆ, ಪತಿಃ-ಸ್ವಾಮಿಯಾದ, ಪ್ರಭುಃ-ಸಮರ್ಥನಾದ, ಅರ್ಜುನಃ-ಕಾರ್ತವೀರ್ಯಾರ್ಜುನನು, ತತ್ರ-ಅದೆ ಪ್ರದೇಶದಲ್ಲಿ, ನರ್ಮದಾತೀರಂ-ನರ್ಮದಾನದಿಯ ಧಡವನ್ನು, ಆಶ್ರಯತಃ-ಹೊಂದಿದಂಥಾವನಾಗಿ, ನಾರೀಭಿಸ್ಸಹ-ಸ್ತ್ರೀಯರಿಂದೊಡಗೂಡಿ, ಕ್ರೀಡತೆಸ್ಮ-ವಿಹರಿಸಿದನು ॥೨॥ ತತಃ-ಅನಂತರದಲ್ಲಿ, ಅರ್ಜುನಃ- ಕಾರ್ತವೀರ್ಯಾರ್ಜುನನೆಂಬ, ಸರಾಜಾ-ಆ ಅರಸು, ತಾಸಾಂ-ಆ ಸ್ತ್ರೀಗಳ, ಮಧ್ಯಗತಃ-ಮಧ್ಯವರ್ತಿಯಾಗಿ, ಕರೇಣೂನಾಂ-ಹೆಣ್ಣು ಆನೆಗಳ, ಸಹಸ್ರಸ್ಯ-ಸಾವಿರದ, ಮಧ್ಯಸ್ಥಃ-ಮಧ್ಯದಲ್ಲಿರುವ

---

ನಿಗೆ ಸಿದ್ಧಿಯಾಗುವದು. ದುರ್ಬುದ್ಧಿಯುಳ್ಳ ಆ ರಾವಣನಾದರೇ, ಯಾವ ಕಾಲದಲ್ಲಿ, ಶಿವನತಿರಸ್ಕಾರವಂಗೈಯುವನೊ, ಆಗ, ಅವನಿಗೆ, ಮೃತ್ಯುಉಂಟಾಗುವದೆಂದು, ಋುಷಿಗಳಿಂದಲೂ, ದೇವತೆಗಳಿಂದಲೂ, ನಿಶ್ಚಯಿಸಲ್ಪಟ್ಟಿಧೇ. ಮೈಮರತಿರುವ ಆ ರಾವಣನಾದರೇ,ವಿಧಿಹೀನವಾದ ಶಿವಾರ್ಚನೆಯನ್ನರಿಯಲಾರನು॥೪೮॥ಇದಲ್ಲದೇ, ರಾಕ್ಷಸಾಧಿಪತಿಯಾದಆ ರಾವಣನು, ಎಲ್ಲೆಲ್ಲಿಹೋದರೂ,ಸುವರ್ಣಮಯವಾದ, ಆ ದಿವ್ಯ ಲಿಂಗವನ್ನು, ತೆಗದುಕೊಂಡು ಹೋಗುತಿರುವನಾದ ಕಾರಣ ಆತನು ನರ್ಮದಾಸೈಕತ ಮಧ್ಯದಲ್ಲಿಯೇ ಆ ಲಿಂಗವಂ ಸ್ಥಾಪಿಸಿ, ಗಂಧಪುಷ್ಪಾದಿಗಳಿಂ ದರ್ಚಿಸಿದನು ॥೫೦॥ ಸಮನಂತರಕಾಲದಲ್ಲಿ ಆ ರಾವಣನು, ಸತ್ಪುರುಷರ ಬಾಧೆಯನ್ನು ಹರಿಸುತಿರುವನಾಗಿಯೂ, ಸರ್ವ ಪಾಪ ಪರಿಹಾರಕನಾಗಿಯೂ, ಶುಭಕರನಾಗಿಯೂ, ವರದಾನ ಸಮರ್ಥನಾಗಿಯೂ, ಅರ್ಧೇಂದು ಶೇಖರನಾಗಿಯೂ ಇರುವ ಆ ಪರಮೇಶ್ವರನಂ ಚನ್ನಾಗಿ ಪೂಜಿಸಿ, ದೀರ್ಘವಾಗಿ ಭುಜಗಳಿಂ ಚಾಚಿಗಾನವಂ ಗೈಯ್ಯುತ್ತಾ ನರ್ತಿಸಿದವನಾದನು ॥೫೧॥

—…*ಉತ್ತರಕಾಂಡದಲ್ಲಿನ ೩೧ನೇಸರ್ಗಂ ಮುಗಿದುದು*…—

ರಾಕ್ಷಸೇಂದ್ರನಾದ ರಾವಣನು ನರ್ಮದಾ ಸೈಕತದಲ್ಲಿ ಎತ್ತಗಡೆ ಪುಷ್ಪಾದಿಗಳಿಂದ ಶಿವ ಪೂಜೆಯಂ ಗೈದನೋ, ಆ ಎಡದ ಸಮೀಪದಲ್ಲಿ ಜಯಶಾಲಿಗಳೊಳಗೆ ಉತ್ತಮನಾಗಿಯೂ, ಮಾಹಿಷ್ಮತೀ ಪುರಿಗಧಿಪತಿಯಾಗಿಯೂ,ಸಮರ್ಥನಾಗಿಯೂ ಇರುವ ಆ ಅರ್ಜುನನು, ಆ ನದಿಯ ಉದಕದಲ್ಲಿ ಸ್ತ್ರೀಯರೊಡನೆ ಕ್ರೀಡಿಸುತಿದ್ದನು॥೨॥ಆ ಅಂಗನೆಯರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಧ್ಯೇಗತೋ ನರಾಜೋ ರರಾಜ ಸ ತತೋರ್ಜುನಃ । ಕರೇಣೂನಾಂ ಸಹಸ್ರಸ್ಯ ಮಧ್ಯಸ್ಥ ಇವ ಕುಂಜರಃ ॥೩॥ ಜಿಜ್ಞಾಸುಸ್ಸ ತು ಬಾಹೂನಾಂ ಸಹಸ್ರಸ್ಯೋತ್ತಮಂ ಬಲಮ್ । ರುರೋಧ ನರ್ಮದಾವೇಗಂ ಬಾಹುಭಿರ್ಬಹುಭಿಃ ಪ್ರಭುಃ ॥೪॥ ಕಾರ್ತವೀರ್ಯಭುಜಾಸೇತುಂ ತಜ್ಜಲಂ ಪ್ರಾಪ್ಯ ನಿರ್ಮಲಮ್ । ಕೂಲೋಪಘಾತಂ ಕುರ್ವಾಣಂ ಪ್ರತಿಸ್ರೋತಃ ಪ್ರಧಾವತಿ ॥೫॥ ಸಮೀನನಕ್ರಮಕರಸ್ಸಪುಷ್ಪಕುಶಸಂಸ್ತರಃ । ಸ ನರ್ಮದಾಂಭಸೋ ವೇಗಃ ಪ್ರಾವೃಟ್ಕಾಲ ಇವಾಬಭೌ ॥೬॥ ಸ ವೇಗಃ ಕಾರ್ತವೀರ್ಯೇಣ ಸಂಪ್ರೇಷಿತ ಇವಾಂಭಸಃ । ಪುಷ್ಪೋಪಹಾರಂ ತತ್ಸರ್ವಂ ರಾವಣಸ್ಯ ಜಹಾರ ಹ ॥೭॥ ರಾವಣೋರ್ಧಸಮಾಪ್ತಂ ತಮುತ್ಸೃಜ್ಯ ನಿಯಮಂ ತದಾ । ನರ್ಮದಾಂ ಪಶ್ಯತೇ ಕಾಂತಾಂ ಪ್ರತಿಕೂಲಾಂ ಪ್ರಿಯಾಮಿವ ॥೮॥ ಪಶ್ಚಿಮೇನ ಸ ತಂ ದೃಷ್ಟ್ವಾ ಸಾಗರೋದ್ಗಾರಸನ್ನಿಭಮ್ । ವರ್ಧಂತಮಂಭಸೋ ವೇಗಂ ಪೂರ್ವಾಮಾಶಾಂ ಸ್ಮ ಪಶ್ಯತಿ ॥೯॥ ತತ್ರಾನುದ್ಭ್ರಾಂತಶಕುನಾಂ ಸ್ವಾಭಾವ್ಯೇ ಪರಮೇ ಸ್ಥಿತಾಮ್ । ನಿರ್ವಿಕಾರಾಂಗನಾಭಾಸಾಮಪಶ್ಯದ್ರಾವಣೋ ನದೀಮ್ ॥೧೦॥ ಸವ್ಯೇತರಕರಾಂಗುಳ್ಯಾ ಸಶಬ್ದಂ ಚ ದಶಾನನ

---

ಕುಂಜರ ಇವ– ಪುರುಷಗನಂತೆ, ರರಾಜ–ಹೊಳೆಯುತ್ತಿದ್ದನು ॥ ೩ ॥ ಪ್ರಭುಃ–ಸಮರ್ಥನಾದ, ಸತು–ಆ ಕಾರ್ತವೀರ್ಯಾರ್ಜುನನಾದರೆ, ಸಹಸ್ರಸ್ಯ–ಸಹಸ್ರ ಸಂಖ್ಯಾಕವಾದ, ಬಾಹೂನಾಂ–ಭುಜಗಳ, ಉತ್ತಮಂ–ಉತ್ಕೃಷ್ಟವಾದ, ಬಲಂ–ಬಲವನ್ನು, ಜಿಜ್ಞಾಸುಃ–ತಿಳಕೊಳ್ಳಲಿಚ್ಛಿಸಿದವನಾಗಿ, ಬಹುಭಿಃ–ಬಹಳವಾದ, ಬಾಹುಭಿಃ–ಭುಜಗಳಿಂದ, ನರ್ಮದಾವೇಗಂ–ನರ್ಮದಾ–ನರ್ಮದಾನದಿಯ, ವೇಗಂ–ಶೀಘ್ರಗಮನವನ್ನು, ರುರೋಧ–ತಡೆದಿಡಿದನು ॥ ೪ ॥ ನಿರ್ಮಲಂ–ಸ್ವಚ್ಛವಾದ, ತಜ್ಜಲಂ–ಆನರ್ಮದೋದಕವು, ಕಾರ್ತವೀರ್ಯಭುಜಾಸೇತುಂ, ಕಾರ್ತವೀರ್ಯ–ಕಾರ್ತವೀರ್ಯಾರ್ಜುನನ, ಭುಜಾ–ಭುಜಗಳೆಂಬ, ಸೇತುಂ–ಸೇತುವನ್ನು, ಪ್ರಾಪ್ಯ–ಹೊಂದಿ, ಕೂಲೋಪಘಾತಂ–ಕೂಲ–ದಡಕ್ಕೆ, ಉಪಘಾತಂ–ಉಪಹತಿಯನ್ನು, ಕುರ್ವಾಣಂಸತ್– ಮಾಡುತಿರುವದಾಗಿ, ಪ್ರತಿಸ್ರೋತಃ–ಪ್ರವಾಹಕ್ಕೆ ಎದುರಾಗಿ, ಪ್ರಧಾವತಿ–ಪ್ರವಹಿಸಿತು ॥೫॥ ಸಮೀನನಕ್ರಮಕರಃ– ಸಮೀನ–ಮತ್ಸ್ಯಗಳಿಂದಲೂ, ನಕ್ರ–ನೆಗಳುಗಳಿಂದಲೂ,ಮಕರಃ–ಮಿ ತಿಂಗಿಲಗಳಿಂದಲೂ ಕೂಡಿಕೊಂಡಿರುವ, ಸಪುಷ್ಪಕುಶಸಂಸ್ತರಃ–ಪುಷ್ಪಗಳಿಂದಲೂ, ಕುಶಾಸ್ತರಣಗಳಿಂದಲೂ ಕೂಡಿಕೊಂಡಿರುವ, ನರ್ಮದಾಂಭಸಃ–ನರ್ಮದೋದಕದ, ಸಃವೇಗಃ–ಆ ವೇಗವು, ಪ್ರಾವೃಟ್ಕಾಲ ಇವ, ವರ್ಷಾಕಾಲದಂತೆ, ಆಬಭೌ–ಹೊಳೆಯುತಿತ್ತು ॥೬॥ ಅಂಭಸಃ–ಉದಕದ, ಸವೇಗಃ–ಆ ವೇಗವು, ಕಾರ್ತವೀರ್ಯೇಣ–ಕಾರ್ತವೀರ್ಯಾರ್ಜುನನಿಂದ, ಸುಪ್ರೇಷಿತಇವ, ಕಳುಹಿಸಲ್ಪಟ್ಟಿತೋ ಯೆಂಬಂತೆ, ರಾವಣಸ್ಯ–ರಾವಣಾಸುರನ,ತತ್ಸರ್ವಂ–ಆ ಸಮಸ್ತವಾದ, ಪುಷ್ಪೋಪಹಾರಂ–ಪುಷ್ಪಗಳ ಪೂಜೆಯನ್ನು, ಜಹಾರಹ–ಅಪಹರಿಸಿತು,(ಕೊಚ್ಚಿಕೊಂಡು ಹೋಯಿತೆಂಬ ತಾತ್ಪರ್ಯವು) ॥೭॥ ತದಾ–ಆ ಕಾಲದಲ್ಲಿ, ರಾವಣಃ–ರಾವಣನು, ಅರ್ಧಸಮಾಪ್ತಂ–ಅರ್ಧವಾಗಿ ಮಾಡಲ್ಪಟ್ಟ, ತಂನಿಯಮಂ–ಆ ನಿಯಮವನ್ನು, ಉತ್ಸೃಜ್ಯ–ಬಿಟ್ಟು, ನರ್ಮದಾಂ–ನರ್ಮದಾನದಿಯನ್ನು,ಪ್ರಿಯಾಂ–ಇಷ್ಟಳಾದ, ಪ್ರತಿಕೂಲಾಂ–ಎದುರುಬೀಳುತಿರುವ, ಕಾಂತಾಮಿವ–ಹೆಂಡತಿಯನ್ನೋ ಎಂಬಾದಿಯಲ್ಲಿ, ಪಶ್ಯತೆ–ನೋಡಿದನಷ್ಟೆ॥೮॥ಸಃ–ಆ ರಾವಣನು, ಸಾಗರೋದ್ಗಾರಸನ್ನಿಭಂ–ಸಮುದ್ರದವೇಗಕ್ಕೆ ಸಮಾನವಾದ, ವರ್ಧಂತಂ–ವೃದ್ಧಿಗೊಳುತಿರುವ, ತಂ–ಅಂಭಸೋವೇಗಂ–ಆ ಉದಕದವೇಗವನ್ನು, ಪಶ್ಚಿಮೇನ–ಪಶ್ಚಿಮಭಾಗದಲ್ಲಿಯೂ, ದೃಷ್ಟ್ವಾ–ಕಂಡು, ಪೂರ್ವಾಮಾಶಾಂ–ಪೂರ್ವದಿಕ್ಕನ್ನು, ಪಶ್ಯತಿಸ್ಮ–ನೋಡಿದನಷ್ಟೆ ॥೯॥ ತತ್ರ–ಆ ಘಡದಲ್ಲಿ, ಅನುದ್ಭ್ರಾಂತಶಕುನಾಂ–ಗಾಬರಿಬೀಳದಿರುವ ಪಕ್ಷಿಗಳುಳ್ಳ, ಪರಮೇ–ಉತ್ಕೃಷ್ಟವಾದ, ಸ್ವಾಭಾವ್ಯೇ–ಸ್ವಾಭಾವ ಅವಸ್ಥೆಯಲ್ಲಿ, ಸ್ಥಿತಾಂ–ಇರುತಿರುವ, ನಿರ್ವಿಕಾರಾಂಗನಾಭಾಸಾಂ–ನಿರ್ವಿಕಾರ–ವಿಕಾರರಹಿತಳಾದ, ಅಂಗನಾಭಾಸಾಂ – ಅಂಗನೆಯಂತೆ ಹೊಳೆಯುತಿರುವ, ನದೀಂ – ನರ್ಮದೆಯನ್ನು, ರಾವಣಃ–ರಾವಣನು, ಅಪಶ್ಯತ್–ಕಂಡನು ॥ ೧೦ ॥ ದಶಾನನಃ – ಆ ರಾವಣನು, ಸಶಬ್ದಂ – ವೇಗದಿಂದ ಕೂಡಿಕೊಂಡಿರುವ, ವೇಗಪ್ರಭವಂ – ವೇಗೋತ್ಪತ್ತಿಸ್ಥಳವನ್ನು

---

ಮಧ್ಯಗತನಾದ ಕಾರ್ತವೀರ್ಯಾರ್ಜುನನೆಂಬ ರಾಜನು, ಹೆಣ್ಣಾನೆಗಳ ಮಧ್ಯದಲ್ಲಿ ನಿಂತಿರುವ ಗಂಡಾನೆಯ ತೆರದಿ ಹೊಳೆಯುತಿದ್ದನು ॥೩॥ ಕಡು ಸಮರ್ಥನಾದ ಆ ನರನಾಥನು ತನ್ನ ಸಹಸ್ರ ಭುಜಗಳ ಉತ್ತಮವಾದ ಬಲವಂ ನಿರೀಕ್ಷಿಸಲಪೇಕ್ಷಿಸಿದವನಾಗಿ, ಆ ನರ್ಮದಾನದಿಯ ವೇಗವಂ ಬಾಹುಗಳಿಂದಡ್ಡಗಿಸಲು, ಆ ನರ್ಮದೋದಕವಾದರೆ ಕಾರ್ತವೀರ್ಯಾರ್ಜುನನ ಭುಜಗಳೆಂಬ ಸೇತುವಿನಂ ಹೊಂದಿ, ಇತ್ತತ್ತಲಿರುವ ದಡಗಳಿಗೆ ಉಪಹತಿಯನ್ನುಂಟುಮಾಡುತಿರುವದಾಗಿ ಪ್ರವಾಹಕ್ಕೆದುರಾಗಿ ಓಡಿ ಹೋಗುತಿತ್ತು ॥೫॥ ಆ ಸಮಯದಲ್ಲಿ ನರ್ಮದಾನದಿಯ ವೇಗವು, ಮೀನುಗಳಿಂದಲೂ ನೆಗಳುಗಳಿಂದಲೂ ಒಡಗೂಡಿದ್ದಾಗಿಯೂ, ಪುಷ್ಪಗಳಿಂದಲೂ, ಕುಶಾಸ್ತರಣಗಳಿಂದಲೂ ಕೂಡಿಕೊಂಡಿರುವದಾಗಿಯೂ ಇರುವದಾಗಿ, ವರ್ಷಾಕಾಲದಂತೆ ಹೊಳೆಯುತಿತ್ತು ॥ ೬ ॥ ಆ ಉದಕ ವೇಗವು ಕಾರ್ತವೀರ್ಯಾರ್ಜುನನಿಂದಪ್ರೇರಿಸಲ್ಪಟ್ಟಂತೆ ಮಿತಿಮೀರಿ ಬಂದಂಥಾದ್ದಾಗಿ, ರಾಕ್ಷಸಾಧಿಪತಿಯಾದ ರಾವಣನು ಗೈಯುತಿರುವ ಆ ಪುಷ್ಪ ಪೂಜೆಯನ್ನಪಹರಿಸಿತು ॥೭॥ ಆ ಸಮಯದಲ್ಲಿ ರಾವಣನಾದರೆ ಅರ್ಧ ಪಾಲು ಸಮಾಪ್ತವಾಗಿರುವ ಆ ನಿಯಮವಂ ತೊರೆದು, ರಮ್ಯವಾಗಿರುವ ಆ ನರ್ಮದಾನದಿಯನ್ನು ಪ್ರತಿಕೂಲಳಾದ ಪ್ರೀಯಳನ್ನು ನೋಡುವ ತೆರದಿ ಕ್ರೂರದೃಷ್ಟಿಯಿಂದ ನೋಡಿದವನಾಗಿ, ಪಶ್ಚಿಮದಿಕ್ಕಿನಲ್ಲಿ ವೃದ್ಧಿಹೊಂದಿದ ಸಮುದ್ರವೇಗದಂತೆ ಬಲು ವೇಗವಾಗಿ ಬರುತಿರುವ ಆ ನದಿಯ ವೇಗವಂ ಕಂಡು, ಪೂರ್ವದಿಕ್ಕನ್ನು ವೀಕ್ಷಿಸಿದನು. ಅತ್ತ ಕಡೆಯಾದರೇನೋ ಗಾಬರಿಬೀಳದಿರುವ ಹಕ್ಕಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಃ । ವೇಗಪ್ರಭವಮನ್ವಿಷ್ಟಂಸೋದಿಶಚ್ಛುಕಸಾರಣೌ ॥೧೧॥ ವ್ಯೋಮಾಂತರಚರೌವೀರೌಪ್ರಸ್ಥಿತೌಪಶ್ಚಿಮಾಮ್ಮುಖೌ। ಅರ್ಧಯೋಜನಮಾತ್ರಂತುಗತ್ವಾತೌತುನಿಶಾಚರೌ ॥೧೨॥ ಪಶ್ಯೇತಾಂಪುರುಷಂತೋಯೇಕ್ರೀಡಂತಂಸಹಯೋಷಿತಮ್।ಬೃಹತ್ಸಾಲಪ್ರತೀಕಾಶಂತೋಯವ್ಯಾಕುಲಮೂರ್ಧಜಮ್॥೧೩॥ಮದರಕ್ತಾಂತನಯನಂಮದನಾಕಾರವರ್ಚಸಮ್। ನದೀಂ ಕರಸಹಸ್ರೇಣರುಂಧಂತಮಿವಭಾಸ್ಕರಮ್ ॥೧೪॥ ಗಿರಿಂಪಾದಸಹಸ್ರೇಣರುಂಧಂತಮಿವಮೇದಿನೀಮ್॥೧೫॥ ಬಾಲಾನಾಂವರನಾರೀಣಾಂಸಹಸ್ರೇಣಾಭಿಸಂವೃತಮ್ । ಸಮುದಾನಾಂಕರೇಣೂನಾಂಸಹಸ್ರೇಣೇವಕುಂಜರಮ್ ॥೧೬॥ ತಮದ್ಭುತತಮಂದೃಷ್ಟ್ವಾರಾಕ್ಷಸೌಶುಕಸಾರಣೌ। ಸನ್ನಿವೃತ್ತಾವುಪಾಗಮ್ಯರಾವಣಂತಮಥೋಚತುಃ॥೧೭॥ಬೃಹತ್ಸಾಲಪ್ರತೀಕಾಶಃಕೋಪ್ಯಸೌರಾಕ್ಷಸೇಶ್ವರ । ನರ್ಮದಾಂಶೈಲವದ್ರುದ್ಧ್ವಾಕ್ರೀಡಾಪಯತಿಯೋಷಿತಃ॥೧೮॥ ತೇನಬಾಹುಸಹಸ್ರೇಣಸನ್ನಿರುದ್ಧಜ

---

ಅನ್ವಿಷ್ಟಂ-ಹುಡುಕುವದಕ್ಕೋಸ್ಕರ, ಸವ್ಯೇತರಕರಾಂಗುಳ್ಯಾ – ಸವ್ಯೇತರ-ದಕ್ಷಿಣವಾದ, ಕರ – ಬಲಗೈಸಂಬಂಧವಾದ, ಅಂಗುಳ್ಯಾ – ಬೆರಳಿನಿಂದ ಶುಕಸಾರಣೌ-ಶುಕಸಾರಣರೆಂಬ ಮಂತ್ರಿಗಳನ್ನು ಕುರಿತು, ಆದಿಶತ್- ಆಜ್ಞಾಪಿಸಿದನು ॥೧೧॥ ವ್ಯೋಮಾಂತರಚರೌ-ವ್ಯೋಮ -ಅಂತರಿಕ್ಷಮಾರ್ಗದ, ಅಂತರಚರೌ-ಮಧ್ಯದಲ್ಲಿಸಂಚಾರಿಗಳಾದ, ವೀರೌ-ಶೂರರಾದ, ತೌನಿಶಾಚರೌತು-ಆ ರಾಕ್ಷಸರಿಬ್ಬರು, ಪಶ್ಚಿಮಾಮ್ಮುಖೌ-ಪಶ್ಚಿಮಾಭಿಮುಖರಾಗಿ, ಅರ್ಧಯೋಜನಮಾತ್ರಂತು-ಯರಡು ಹರದಾರಿ ನೆಲಹರಿಯಂತವ್ರು, ಪ್ರಸ್ಥಿತೌ-ಪ್ರಯಾಣಮಾಡಿದವರಾಗಿ, ಗತ್ವಾ-ಹೋಗಿ, ॥ ೧೨ ॥ ತೋಯೇ-ನೀರಿನಲ್ಲಿ, ಕ್ರೀಡಂತಂ-ವಿಹರಿಸುತಿರುವ, ಸಹಯೋಷಿತಂ- ಸ್ತ್ರೀಯರುಗಳಿಂದೊಡಗೂಡಿದ, ಬೃಹತ್ಸಾಲಪ್ರತೀಕಾಶಂ-ಬೃಹತ್-ದೊಡ್ಡದಾದ, ಸಾಲಪ್ರತೀಕಾಶಂ-ಸಾಲವೃಕ್ಷಕ್ಕೆ ಸಮಾನನಾದ, ತೋಯವ್ಯಾಕುಲಮೂರ್ಧಜಂ- ತೋಯ-ನೀರಿನಿಂದ, ವ್ಯಾಕುಲ-ಬಿಚ್ಚಿಹೋದ, ಮೂರ್ಧಜಂ-ಕೂದಲುಗಳುಳ್ಳ, ಮದರಕ್ತಾಂತನಯನಂ-ಮದ-ಮತ್ತತೆಯಿಂದ, ರಕ್ತಾಂತನಯನಂ- ಕೆಂಗಣ್ಣುಗಳುಳ್ಳ, ಮದನಾಕಾರವರ್ಚಸಂ-ಮನ್ಮಥಾಕಾರದೋಪಾದಿಯಲ್ಲಿ ತೇಜಸ್ವಿಯಾದ, ನದೀಂ-ನರ್ಮದಾನದಿಯನ್ನು, ಕರಸಹಸ್ರೇಣ-ಸಾವಿರ ಭುಜಗಳಿಂದ, ರುಂಧಂತಂ-ತಡೆಮಾಡುತಿರುವ, ಭಾಸ್ಕರಮಿವಸ್ಥಿತಂ-ಸೂರ್ಯನಂತಿರುವ, ಪುರುಷಂ-ಪುರುಷನನ್ನು, ಪಶ್ಯೇತಾಂ-ಕಂಡರು ॥ ೧೪ ॥ ಪಾದಸಹಸ್ರೇಣ- ಪಾದ-ಪ್ರತ್ಯಂತಪರ್ವತಗಳ, ಸಹಸ್ರೇಣ-ಸಾವಿರದಿಂದ, ಮೇದಿನೀಂ-ನೆಲವನ್ನು, ರುಂಧಂತಂ-ತಡೆಮಾಡುತಿರುವ, ಗಿರಿಮಿವಸ್ಥಿತಂ-ಬೆಟ್ಟದೋಪಾದಿಯಲ್ಲಿರುವ, ಬಾಲಾನಾಂ-ಯವ್ವನಮಧ್ಯಸ್ಥರಾದ, ವರನಾರೀಣಾಂ-ಶ್ರೇಷ್ಠರಾದಹೆಂಗಸರ, ಸಹಸ್ರೇಣ-ಸಾವಿರದಿಂದ, ಅಭಿಸಂವೃತಂ-ಕೂಡಿಕೊಂಡಿರುವನಾದ ಕಾರಣ, ಸಮುದಾನಾಂ-ಮದೋದಕದಿಂದೊಡಗೂಡಿದ, ಕರೇಣೂನಾಂ-ಹೆಣ್ಣು ಆನೆಗಳ, ಸಹಸ್ರೇಣ-ಸಹಸ್ರದಿಂದ, ಅಭಿಸಂವೃತಂ-ಕೂಡಿಕೊಂಡಿರುವ, ಕುಂಜರಮಿವಸ್ಥಿತಂ-ಆನೆಯಂತಿರುವ, ಅದ್ಭುತತಮಂ-ಆಶ್ಚರ್ಯಕರವಾದ, ತಂ-ಆ ಪುರುಷನನ್ನು, ದೃಷ್ಟ್ವಾ-ಕಂಡು, ಶುಕಸಾರಣೌ-ಶುಕಸಾರಣರೆಂಬ, ರಾಕ್ಷಸೌ-ರಾಕ್ಷಸರಿಬ್ಬರು, ಸನ್ನಿವೃತ್ತೌ-ಹಿಂತಿರಿಗಿದವರಾಗಿ, ಉಪಾಗಮ್ಯ ಬಂದು-ಅಥ-ಬಳಿಕ, ತಂ-ರಾವಣಂ-ಆ ರಾವಣನನ್ನು ಕುರಿತು, ಊಚತುಃ-ಪೇಳಿದರು॥೧೭॥ಹೇರಾಕ್ಷಸೇಶ್ವರ-ಎಲೈರಾಕ್ಷಸೇಶ್ವರನೇ,ಬೃಹತ್ಸಾಲಪ್ರತೀಕಾಶಃ, ಬೃಹತ್-ದೊಡ್ಡದಾದ, ಸಾಲ- ಸಾಲವೃಕ್ಷಕ್ಕೆ, ಪ್ರತೀಕಾಶಃ-ಸಮಾನನಾದ,ಕೋಪಿ-ಯಾವನೊಬ್ಬನಾದ, ಅಸೌಪುರುಷಃ-ಈ ಪುರುಷನು, ನರ್ಮದಾಂ-ನರ್ಮದೆಯನ್ನು, ಶೈಲವತ್-ಬೆಟ್ಟದಂತೆ, ರುದ್ಧ್ವಾ-ಅಡ್ಡಗಿಸಿ, ಯೋಷಿತಃ-ಸ್ತ್ರೀಯರುಗಳನ್ನು, ಕ್ರೀಡಾಪಯತಿ-ವಿಹಾರಮಾಡಿಸುತ್ತಾನೆ॥೧೮॥ ತೇನ-ಆ ಪುರುಷನಿಂದ, ಬಾಹುಸಹಸ್ರೇಣ-ಭುಜಸಹಸ್ರದಿಂದ, ಸನ್ನಿರುದ್ಧಜಲಾ-ಸನ್ನಿರುದ್ಧ-ತಡೆಮಾಡಲ್ಪಟ್ಟ, ಜಲಾ-ಉದಕವುಳ್ಳ, ನದೀ-ಹೊಳೆಯು, ಸಾ

---

ಗಳುಳ್ಳದ್ದಾಗಿಯೂ, ಸ್ವಭಾವಸಿದ್ಧವಾದ ಸ್ಥಿತಿಯುಳ್ಳಿರುವದಾಗಿಯೂ ವಿಕಾರವಿಲ್ಲದಿರುವ ಅಂಗನೆಯಂತೆಕಂಗೊಳಿಸುತಿರುವದಾಗಿಯೂ ಆಗಿರುವ ಆ ನದಿಯಂ ಕಂಡು ಶಬ್ದದಿಂದೊಡಗೂಡಿ ವೇಗವು ಹುಟ್ಟಿರುವ ಎಡವಂ ಹುಡುಕುವದಕ್ಕೋಸ್ಕರ, ಬಲಗೈ ಬೆರಳಿನಿಂದ ತೋರಿಸಿ ಶುಕಸಾರಣರಿಗಾಜ್ಞಾಪಿಸಿದನು ॥೧೧॥ ಆ ನಿಶಾಚರರೀರ್ವರು ಪಶ್ಚಿಮದಿಕ್ಕಿಗಭಿಮುಖವಾಗಿ ತೆರಳಿ ಗಗನಗಾಮಿಗಳಾಗಿ ಎರಡು ಹರದಾರಿಗಳು ಹೋಗಿ ಅಲ್ಲಿ ಸ್ತ್ರೀಯರಿಂದೊಡಗೂಡಿ ಜಲಕ್ರೀಡೆಗಳನ್ನಾಡುತಿರುವನಾಗಿಯೂ, ನೀರಿನಿಂದ ಚೆದರಿದ ಕೇಶಗಳುಳ್ಳವನಾಗಿಯೂ ಸಾಲವೃಕ್ಷದ ತೆರದಿ ಮಹದೌನ್ನತ್ಯಮುಳ್ಳವನಾಗಿಯೂ, ಮತ್ತತೆಯಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿಯೂ, ಮನ್ಮಥನ ಆಕಾರದಂತೆ ಕಂಗೊಳಿಸುತಿರುವ ತೇಜಸ್ಸುಳ್ಳವನಾಗಿಯೂ, ಸಾವಿರಭುಜಗಳಿಂದಲು ನದಿಯಂತಡೆಪಡಿಸಿ ಸೂರ್ಯನಂತೆ ಹೊಳೆಯುತ್ತಿರುವನಾಗಿಯೂ, ಪ್ರತ್ಯಂತ ಪರ್ವತಗಳ ಸಹಸ್ರದಿಂದ ಭೂಮಿಯನ್ನಾವರಿಸಿಕೊಂಡಿರುವ ಗಿರಿಯಂತೆ ನಿಂತಿರುವನಾಗಿರುವನಾಗಿಯೂ, ಮದವೇರಿದ ಹೆಣ್ಣಾನೆಗಳ ನಡುವೆ ನಿಂತಿರುವ ಮದಗಜದಂತೆ ಅನೇಕಸ್ತ್ರೀಯರ ತಂಡಗಳಿಂ ದೊಡಗೂಡಿರುವನಾಗಿರುವ ಮಹದಾಶ್ಚರ್ಯಕರನಾಗಿರ್ಪ ಕಾರ್ತವೀರ್ಯಾರ್ಜುನನಂ ಕಂಡು, ಶುಕಸಾರಣರಿರ್ವರು ಹಿಂತಿರಿಗಿ ರಾವಣನ ಬಳಿಗೆ ಬಂದು ಬಳಿಕಿಂತೆಂದು ಬಿನ್ನವಿಸಿದರು ॥೧೭॥ ಎಲೈ ರಾಕ್ಷಸನಾಥನೇ! ಸಾಲವೃಕ್ಷದಂತೆ ಮಹದೌನ್ನತ್ಯಮಾಗಿರುವ ಒಬ್ಬಾನೊಬ್ಬ ಪುರುಷನು ಮಹಾ ಗಿರಿಯಂತೆ ಈ ನದಿಯಂ ತಡದು, ಸ್ತ್ರೀಯರಂ ವಿಹಾರಮಾಡಿಸುತಿರುವನು ॥೧೮॥ ಈ ನರ್ಮದಾನದಿಯಾದರೆ, ಆತನ ಸಹಸ್ರಭುಜಗಳಿಂದ ತಡೆಪಡಿಸಲ್ಪಟ್ಟ ಜಲವುಳ್ಳದ್ದಾಗಿ, ಉಕ್ಕಿ ಬ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲಾನದೀ । ಸಾಗರೋದ್ಗಾರಸಂಕಾಶಾನುದ್ಗಾರಾನ್ ಸೃಜತೇಮುಹುಃ ॥೧೯॥ ಇತಿಸಂಭಾಷಮಾಣೌತೌ ನಿಶಮ್ಯಶುಕಸಾರಣೌ। ರಾವಣೋರ್ಜುನಇತ್ಯುಕ್ತ್ವಾವ್ಯುತ್ತಸ್ಥೌಯುದ್ಧಲಾಲಸಃ ॥೨೦॥ ಅರ್ಜುನಾಭಿಮುಖೇತಸ್ಮಿನ್ ಪ್ರಸ್ಥಿತೇರಾಕ್ಷಸೇಶ್ವರೇ । ಚಂಡಃಪ್ರವಾತಿಪವನಃಸನಾದಸ್ಸರಜಾಸ್ತದಾ॥ ಸಕೃದೇವಕೃತೋರಾವಃಸಂವರ್ತಕ್ಷುಭಿತೈರ್ಘನೈಃ॥೨೧॥ ಮಹೋದರಮಹಾಪಾರ್ಶ್ವಧೂಮ್ರಾಕ್ಷಶುಕಸಾರಣೈಃ। ಸಂವೃತೋರಾಕ್ಷಸೇಂದ್ರಸ್ತುತತ್ರಾಗಾದ್ಯತ್ರಸೋರ್ಜುನಃ॥೨೨॥ ಅದೀರ್ಘೇಣೈವಕಾಲೇನಸತತೋರಾಕ್ಷಸೋಬಲೀ । ತಂನರ್ಮದಾಹ್ರದಂಭೀಮಮಾಜಗಾಮಾಂಜನಪ್ರಭಃ ॥೨೩॥ ತತ್ರಸ್ತ್ರೀಭಿಃಪರಿವೃತಂವಾಶಿತಾಭಿರಿವದ್ವಿಪಮ್।ನರೇಂದ್ರಂಪಶ್ಯತೇರಾಜಾರಾಕ್ಷಸಾನಾಂತದಾರ್ಜುನಮ್॥೨೪॥ಸರೋಷಾದ್ರಕ್ತನಯನೋರಾಕ್ಷಸೇಂದ್ರೋಬಲೋದ್ಧತಃ। ಇತ್ಯೇವಮರ್ಜುನಾಮಾತ್ಯಾನಾಹಗಂಭೀರಯಾಗಿರಾ ॥೨೫॥ ಅಮಾತ್ಯಾಃಕ್ಷಿಪ್ರಮಾ

---

ಗರೋದ್ಗಾರಸಂಕಾಶಾನ್–ಸಾಗರ-ಸಮುದ್ರದ, ಉದ್ಗಾರ–ಉಕ್ಕಿಬರುವಿಕೆಗಳಿಗೆ, ಸಂಕಾಶಾನ್–ಸಮಾನಂಗಳಾದ, ಉದ್ಗಾರಾನ್–ತರಂಗಗಳನ್ನು, ಮುಹುಃ–ಬಾರಿಬಾರಿಗೂ, ಸೃಜತೇ–ಹುಟ್ಟಿಸುತ್ತದೆ ॥೧೯॥ ಇತಿ–ಈಪರಿಯಾಗಿ, ಸಂಭಾಷಮಾಣೌ–ಮಾತನಾಡುತಿರುವ,ತೌಶುಕಸಾರಣೌ–ಆ ಶುಕಸಾರಣರನ್ನು, ನಿಶಮ್ಯ– ಕಂಡು, ಅರ್ಜುನಇತಿ–ಅರ್ಜುನನೆಂದು, ಉಕ್ತ್ವಾ–ಪೇಳಿ, ರಾವಣಃ–ರಾವಣನು, ಯುದ್ಧಲಾಲಸಃ–ಕಾಳಗದಲ್ಲಿ ಆಸಕ್ತನಾಗಿ, ಉತ್ತಸ್ಥೌ–ಮ್ಯಾಲಕ್ಕೆ ಯದ್ದನಷ್ಟೆ ॥೨೦॥ ತಸ್ಮಿನ್ರಾಕ್ಷಸೇಶ್ವರೇ–ಆ ರಾವಣನು, ಅರ್ಜುನಾಭಿಮುಖೇ–ಅರ್ಜುನನಿಗೆ ಅಭಿಮುಖನಾದವನಾಗಿ,ಪ್ರಸ್ಥಿತೇಸತಿ–ಹೊರಟವನಾಗಿರಲೀಕಾಗಿ, ತದಾ–ಆಕಾಲದಲ್ಲಿ, ಚಂಡಃ–ಕ್ರೂರವಾದ, ಸರಜಾಃ–ಧೂಳಿಗಳಿಂದೊಡಗೂಡಿದ,ಸನಾದಃ–ಶಬ್ದಸಹಿತವಾದ, ಪವನಃ–ಚಂಡಮಾರುತವು, ಪ್ರವಾತಿ–ಬೀಸಿತು ॥೨೧॥ ಸಂವರ್ತಕ್ಷುಭಿತೈಃ–ಸಂವರ್ತ–ಪ್ರಳಯಕಾಲದಲ್ಲಿ, ಕ್ಷುಭಿತೈಃ–ಕ್ಷೋಭಿಸಲ್ಪಟ್ಟ–ಘನೈಃ–ಮೇಘಗಳಿಂದ, ರಾವಃ–ಧ್ವನಿಯು, ಸಕೃದೇವ–ವಂದೇಆವರ್ತಿ, ಕೃತಃ –ಮಾಡಲ್ಪಟ್ಟಿತು, ॥೨೧॥ ಯತ್ರ–ಯಾವಪ್ರದೇಶದಲ್ಲಿ, ಸೋರ್ಜುನಃ–ಆ ಕಾರ್ತವೀರ್ಯನು, ಆಸ್ತೇ–ಯಿದ್ದಾನೋ, ತತ್ರ–ಆಸ್ಥಳದಲ್ಲಿ, ರಾಕ್ಷಸೇಂದ್ರಸ್ತು–ರಾಕ್ಷಸಶ್ರೇಷ್ಟನಾದ ರಾವಣನಾದರೆ, ಮಹೋದರಮಹಾಪಾರ್ಶ್ವಧೂಮ್ರಾಕ್ಷಶುಕಸಾರಣೈಃ–ಮಹೋದರ–ಮಹೋದರನು, ಮಹಾಪಾರ್ಶ್ವನು, ಧೂಮ್ರಾಕ್ಷನೂ, ಶುಕನೂ, ಸಾರಣನೆಂಬರಾಕ್ಷಸರಿಂದ, ಸಂವೃತಃ–ಕೂಡಿಕೊಂಡವನಾಗಿ, ಅಗಾತ್–ಬಂದನು॥೨೨॥ ತತಃ–ಬಳಿಕ,ಅಂಜನಪ್ರಭಃ–ಅಂಜನ–ಕಾಡಿಗೆ ಬೆಟ್ಟಕ್ಕೆಸಮಾನನಾದ, ಪ್ರಭಃ–ಕಾಂತಿಯಂತೆ ಕಾಂತಿಯುಳ್ಳ, ಬಲೀ–ಬಲಿಷ್ಠನಾದ, ಸರಾಕ್ಷಸಃ–ಆ ರಾವಣನು,ಅದೀರ್ಘೇಣ–ಶೀಘ್ರವಾದ–ಕಾಲೇನೈವ, ಕಾಲದಿಂದಲೆ, ಭೀಮಂ–ಭಯಂಕರವಾದ, ತಂ–ಆ, ನರ್ಮದಾಹ್ರದಂ–ನರ್ಮದಾನದಿಯ ಮಡುವಿನನ್ನು ಕುರಿತು, ಆಜಗಾಮ–ಬಂದನು ॥೨೩॥ ತತಃ–ಬಳಿಕ, ರಾಕ್ಷಸಾನಾಂ–ರಾಕ್ಷಸರಿಗೆ, ರಾಜಾ–ದೊರೆಯಾದ ರಾವಣನು, ವಾಶಿತಾಭಿಃ–ಹೆಣ್ಣಾನೆಗಳಿಂದ, ಪರಿವೃತಂ–ಕೂಡಿಕೊಂಡಿರುವ, ದ್ವಿಪಮಿವ–ಆನೆಯಂತೆ, ಸ್ತ್ರೀಭಿಃ–ಸ್ತ್ರೀಯರುಗಳಿಂದ, ಪರಿವೃತಂ–ಸುತ್ತಿಕೊಳ್ಳಲ್ಪಟ್ಟ, ಅರ್ಜುನಂ–ಅರ್ಜುನನೆಂಬ, ನರೇಂದ್ರಂ–ರಾಜನನ್ನು, ತದಾ–ಆಕಾಲದಲ್ಲಿ, ಪಶ್ಯತೇ–ನೋಡಿದನು ॥೨೪॥ ರೋಷಾತ್–ರೋಷದ ದೆಸೆಯಿಂದ, ರಕ್ತನಯನಃ–ಕೆಂಗಣ್ಣುಗಳುಳ್ಳ, ಸರಾಕ್ಷಸೇಂದ್ರಃ–ಆ ರಾವಣನು, ಬಲೋದ್ಧತಃ–ದೇಹತ್ರಾಣದಿಂದ ಗರ್ವಿತನಾಗಿ, ಅರ್ಜುನಾಮಾತ್ಯಾನ್–ಕಾರ್ತವೀರ್ಯಾರ್ಜುನಮಂತ್ರಿಗಳನ್ನು ಕುರಿತು, ಗಂಭೀರಯಾಗಿರಾ–ಗಂಭೀರಯಾ – ಭಾವಗರ್ಭಿತವಾದ, ಗಿರಾ–ಮಾತಿನಿಂದ, ಇತ್ಯೇವಂ–ಈ ವಕ್ಷ್ಯಮಾಣ ಪ್ರಕಾರವಾಗಿ, ಆಹ–ಪೇಳಿದನು॥ ೨೫॥ ಹೇಅಮಾತ್ಯಾಃ–ಎಲೈ ಮಂತ್ರಿಗಳಿರಾ, ನಾಮ್ನಾ–ಹೆಸರಿನಿಂದ, ರಾವಣೋನಾಮ–ರಾವಣನೆಂದು ಪ್ರಸಿದ್ಧನಾದ ರಾವಣನು, ಯುದ್ಧಾರ್ಥೀ–ಯುದ್ಧಾಕಾಂಕ್ಷೆಯಾಗಿ, ಸಮನುಪ್ರಾಪ್ತ ಇತಿ– ಬಂದು ಇದ್ದಾನೆಂ

---

ಉತಿರುವ ಸಮುದ್ರದ ತೆರೆಗಳಂತೆ ಕಡುಭಯಂಕರವಾದ ತರಂಗಗಳನ್ನು ಬಾರಿಬಾರಿಗೂ ಹುಟ್ಟಿಸುತಿದೆಂಬದಾಗಿ ನುಡಿಯುತಿರುವ ಆ ಶುಕಸಾರಣರಂ ಕಂಡು, ರಾವಣನು ಕಾರ್ತವೀರ್ಯಾರ್ಜುನನೆಂದು ಪೇಳಿ,ಯುದ್ಧೇಚ್ಛೆಯುಳ್ಳವನಾಗಿ ಮೇಲಕ್ಕೆದ್ದು, ಆತನಿಗಭಿಮುಖವಾಗಿ ಹೊರಡಲೂ,ಆ ಸಮಯದಲ್ಲಿ ಚಂಡಮಾರುತವು ಕಡುದಾರುಣವಾಗಿ ಶಬ್ದಗಳಗೈಯುತ್ತಾ, ಗಸ್ರನೆ ಧೂಳಿಗಳನ್ನುಪ್ಪಳಿಸುತ್ತಾ ಭರ್ರನೆ ಬೀಸಿತು, ಇದಲ್ಲದೆ ಪ್ರಳಯಕಾಲದಲ್ಲಿ ಮಹಾ ಕ್ಷೋಭೆಯನ್ನುಂಟುಮಾಡುತಿರುವ ಕಾಲಮೇಘಗಳು ಏಕಕಾಲದಲ್ಲಿಯೇ ಗರ್ಜಿಸಿದವು॥೨೧॥ಕಾಡಿಗೆಯಂತೆ ಕಪ್ಪಾಗಿರುವ ದೇಹಕಾಂತಿಯುಳ್ಳ ರಾಕ್ಷಸೇಂದ್ರನಾದ ಆ ದಶಮುಖನಾದರೆ, ಇಂಥಾ ಮಹದುತ್ಪಾತಂಗಳಂ ಕಂಡರೂ ಹೆದರದೇ, ಮಹೋದರ, ಮಹಾಪಾರ್ಶ್ವ, ಧೂಮ್ರಾಕ್ಷ, ಶುಕ, ಸಾರಣರಿಂದೊಡಗೂಡಿ, ಆ ಅರ್ಜುನನಿರುವ ಎಡವಂ ಕುರಿತು ತೆರಳಿ, ಬಹುಭಯಂಕರವಾಗಿರ್ಪ ಆ ನರ್ಮದಾನದಿಯ ಮಳುವಿನಂ ಕಂಡು, ಹೆಣ್ಣಾನೆಗಳಿಂದ ಪರಿವೃತವಾದ ಮಂತ್ತೇಭದಂತೆ, ಸ್ತ್ರೀಯರಿಂದ ಸುತ್ತು ಬಾರಲ್ಪಟ್ಟು ಜಲಕ್ರೀಡೆಯನ್ನಾಡುತಿರುವ ಕಾರ್ತವೀರ್ಯಾರ್ಜುನನೆಂಬ ಆ ನರೇಂದ್ರನಂ ಕಂಡು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ, ಆ ರಾಜನ ಮಂತ್ರಿಗಳಂ ಕುರಿತು ಗಂಭೀರವಾಗಿಂತೆಂದನು ॥೨೫॥ ಎಲೈ ಮಂತ್ರಿಗಳಿರ್ರಾ! ಯುದ್ಧಾರ್ಥಿಯಾಗಿ ರಾವಣನೆಂಬಾತನು ಬಂದಿಹನೆಂದು ನಿಮ್ಮೊಡೆಯನಾದ ಹೆಹಯಾಧಿಪತಿಗೆ ತಿಳಿಯಪಡಿಸಿರೆಂದು ನುಡಿಯಲೂ, ಆ ನರನಾಥನ ಮಂತ್ರಿಗಳು ಆ ಮಾತಂಕೇಳಿ, ಆಯುಧಪಾಣಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಖ್ಯಾತಹೈಹಯಸ್ಯನೃಪಸ್ಯವೈ । ಯುದ್ಧಾರ್ಥೀಸಮನುಪ್ರಾಪ್ತೋ ರಾವಣೋನಾಮನಾಮತಃ ॥೧೬॥ ರಾವಣಸ್ಯವಚಶ್ಶ್ರು
ತ್ವಾ ಮಂತ್ರಿಣೋಥಾರ್ಜುನಸ್ಯವೈ । ಉತ್ತಸ್ಥುಸ್ಸಾಯುಧಾಸ್ತಂಚರಾವಣಂವಾಕ್ಯಮಬ್ರುವನ್ ॥೧೭॥ ಯುದ್ಧಕಾಲಃಕ್ವ
ವಿಜ್ಞಾತಸ್ಸಾಧುವಾಸಾಧುರಾವಣ । ಯಸ್ತ್ವಂಕ್ಷೀಬಂಸ್ತ್ರೀವೃತಂಚೈವಯೋದ್ಧುಮುತ್ಸಹಸೇನೃಪಂ ॥೧೮॥ ಸ್ತ್ರೀಸಮಕ್ಷಂಕ
ಥಂಕೋಪಿಯೋದ್ಧುಮುತ್ಸಹಸೇರ್ಜುನಮ್ । ವಾಶಿತಾಮಧ್ಯಗಂಮತ್ತಂಶಾರ್ದೂಲಮಿವಕುಂಜರಂ ॥೧೯॥ ಕ್ಷಮಸ್ವಾದ್ಯ
ದಶಗ್ರೀವಉಷ್ಯತಾಂಶರ್ವರೀತ್ವಯಾ । ಯುದ್ಧಶ್ರದ್ಧಾತುಯದ್ಯಸ್ತಿ ಶ್ವಸ್ತ್ವಂತಾತಸಮರಂಕುರು । ಯುದ್ಧಶ್ರದ್ಧಾಂವಿನೇತಾತೇಸ
ರಕ್ಷಸ್ಸಮರೇರ್ಜುನಃ ॥೨೦॥ ಯದಿವಾಪಿತ್ವರಾತುಭ್ಯಂ* (ಯದಿತೇಸ್ತಿಮತಿರ್ಯೋದ್ಧುಂ) ಪಾ. ಯುದ್ಧತೃಷ್ಣಾಸಮಾವೃ
ತಾ । ನಿಹತ್ಯಾಸ್ಮಾಂಸ್ತತೋಯುದ್ಧಮರ್ಜುನೇನೋಪಯಾಸ್ಯಸಿ ॥೨೧॥ ತತಸ್ತೇರಾವಣಾಮಾತ್ಯೈರಮಾತ್ಯಾಃಪಾರ್ಥಿವಸ್ಯ
ತು । ಸೂದಿತಾಶ್ಚಾಪಿತೇಯುದ್ಧೇ ಭಕ್ಷಿತಾಶ್ಚ ಬುಭುಕ್ಷಿತೈಃ ॥೨೨॥ ತತೋಹಲಹಲಾಶಬ್ದೋ ನರ್ಮದಾತೀರಆಬಭೌ । ಅರ್ಜು

---

ದ, ಹೈಹಯಸ್ಯ-ಹೈಹಯವಂಶಾಧೀಶ್ವರನಾದ, ನೃಪಸ್ಯವೈ-ನಿಮ್ಮ ಅರಸಿಗಾದರೆ, ಕ್ಷಿಪ್ರಂ-ಜಾಗ್ರತೆಯಾಗಿ, ಆಖ್ಯಾತ-ಹೇಳಿರಿ ॥ ೧೬ ॥ ರಾವಣಸ್ಯ-ರಾವಣ
ನ, ವಚಃ-ವಾಕ್ಯವನ್ನು, ಶ್ರುತ್ವಾ-ಕೇಳಿ, ಅಥ-ಬಳಿಕ, ಅರ್ಜುನಸ್ಯ-ಕಾರ್ತವೀರ್ಯನ, ಮಂತ್ರಿಣೋವೈ-ಮಂತ್ರಿಗಳಾದರೆ, ಸಾಯುಧಾಸ್ಸಂತಃ-ಆಯುಧ
ಗಳೊಡನೆಕೂಡಿ, ಉತ್ತಸ್ಥುಃ-ಮ್ಯಾಲಕ್ಕೆ ಯೆದ್ದರು, ತಂರಾವಣಂ-ಆರಾವಣನನ್ನು ಕುರಿತು, ವಾಕ್ಯಂಚ-ವಚನವನ್ನು, ಕೂಡ-ಅಬ್ರುವನ್-ನುಡಿದ
ರು ॥೧೭॥ ಹೇರಾವಣ-ಎಲೈರಾವಣನೆ, ತ್ವಯಾ-ನಿನ್ನಿಂದ, ಯುದ್ಧಕಾಲಃ-ಯುದ್ಧಕಾಲವು, ಸಾಧುವಾಅಸಾಧುರ್ವಾ-ಒಳ್ಳೇದು ಅಲ್ಲದ್ದೆಂದು, ಅವಿ
ಜ್ಞಾತೋಹಿ-ತಿಳಿಯಲ್ಪಡಲಿಲ್ಲವಷ್ಟೆ, ಯಃತ್ವಂ-ಯಾವನೀನು, ಕ್ಷೀಬಂ-ಮತ್ತನಾದವನನ್ನು, (ಅಥವಾ-ಕ್ಲೀಬಂ-ನಪುಂಸಕನನ್ನು,) ಸ್ತ್ರೀವೃತಂ
ಚೈವ-ಹೆಂಗಸರಿಂದೊಡಗೂಡಿದವನನ್ನು ಕುರಿತು, ಯೋದ್ಧುಂ-ಕಾಳಗಮಾಡುವದಕ್ಕೋಸ್ಕರ, ಉತ್ಸಹಸೇ-ಉದ್ಯುಕ್ತನಾಗುವನೋ ॥೧೮॥ ಸ್ತ್ರೀಸಮ
ಕ್ಷಂ-ಹೆಂಗಸರ ಯೆದುರಾಗಿ, ಅರ್ಜುನಂಚಾಪಿ-ಅರ್ಜುನನನ್ನೂ ಕುರಿತು, ವಾಶಿತಾಮಧ್ಯಗಂ-ಹೆಣ್ಣಾನೆಗಳಮಧ್ಯದಲ್ಲಿರುವ, ಮತ್ತಂ-ಮದವೇರಿದ, ಕುಂ
ಜರಂ-ಆನೆಯನ್ನು, ಶಾರ್ದೂಲಇವ-ವ್ಯಾಘ್ರದಂತೆ, ಕಥಂ-ಹ್ಯಾಗೆ ತಾನೆ, ಯೋದ್ಧುಂ-ಕಾಳಗ ಮಾಡುವದಕ್ಕೋಸ್ಕರ, ಉತ್ಸಹಸೇ- ಉದ್ಯುಕ್ತನಾಗಿ
ದ್ದೀ ॥೧೯॥ ಹೇದಶಗ್ರೀವ-ಎಲೈದಶಕಂಠನೆ, ಅದ್ಯ-ಈಗ, ಕ್ಷಮಸ್ವ-ಕ್ಷಮಿಸು, ಶರ್ವರೀ-ಈರಾತ್ರಿಯು, ತ್ವಯಾ-ನಿನ್ನಿಂದ, ಉಷ್ಯತಾಂ-ವಾಸಮಾ
ಡಲ್ಪಡಲೀ, ಹೇತಾತ-ಎಲೈತಂದೆಯೆ, ಯುದ್ಧಶ್ರದ್ಧಾತು-ಯುದ್ಧದಲ್ಲಿ ವಿಶ್ವಾಸವಾದರೆ, ಅಸ್ತಿಯದಿ-ಇದ್ದದ್ದಾದರೆ, ಶ್ವಃ-ನಾಳೆ, ಸಮರಂ-ಕಾಳಗವನ್ನು,
ಕುರು-ಮಾಡುವಿ, ಹೇರಕ್ಷಃ-ಎಲೈರಾಕ್ಷಸನೆ, ತೇ-ನಿನಗೆ, ಸಮರೇ-ಕಾಳಗದಲ್ಲಿ, ಸೋರ್ಜುನಃ-ಆ ಕಾರ್ತವೀರ್ಯನು, ಯುದ್ಧಶ್ರದ್ಧಾಂ-ಕಾಳಗದಲ್ಲಿ ವಿಶ್ವಾಸ
ವನ್ನು, ವಿನೇತಾ-ಹೋಗಲಾಡಿಸುವನು ॥೨೦॥ ತೇ ನಿನಗೆ, ಯೋದ್ಧುಂ-ಯುದ್ಧಮಾಡುವದಕ್ಕೆ, ಯುದ್ಧತೃಷ್ಣಾಸಮಾವೃತಾ-ಯುದ್ಧಾಭಿಲಾಷೆಯಿಂ ಕೂ
ಡಿಕೊಂಡಿರುವ, ಮತಿಃ-ಬುದ್ಧಿಯು, ಅಸ್ತಿಯದಿ-ಯಿದ್ದದ್ದೇ ಆದರೆ, ಅಸ್ಮಾನ್-ನಮ್ಮನ್ನು, ನಿಹತ್ಯ-ಕೊಂದು, ತತಃ-ಬಳಿಕ, ಅರ್ಜುನೇನ- ಕಾರ್ತವೀ
ರ್ಯನೊಡನೆ, ಯುದ್ಧಂ-ಕಾಳಗವನ್ನು, ಉಪಯಾಸ್ಯಸಿ-ಹೊಂದುವಿ, ॥೨೧॥ ತತಃ-ಬಳಿಕ, ಪಾರ್ಥಿವಸ್ಯ-ಕಾರ್ತವೀರ್ಯನ, ತೇಅಮಾತ್ಯಾಸ್ತು-ಆ ಮಂ
ತ್ರಿಗಳಾದರೆ-ಬುಭುಕ್ಷಿತೈಃ-ಭೋಜನೇಚ್ಛೆಯುಳ್ಳ, ರಾವಣಾಮಾತ್ಯೈಃ-ರಾವಣಾಸುರನ ಮಂತ್ರಿಗಳಿಂದ, ಯುದ್ಧೇ - ಕಾಳಗದಲ್ಲಿ. ಸೂದಿತಾಶ್ಚ -ಸಂಹರಿಸ
ಲ್ಪಟ್ಟರು, ತೇಪಿ-ಆ ಮಂತ್ರಿಗಳೂ, ಭಕ್ಷಿತಾಶ್ಚ-ಭಕ್ಷಣೆಯನ್ನೂ ಮಾಡಲ್ಪಟ್ಟರು ॥೨೨॥ ತತಃ-ಬಳಿಕ, ನರ್ಮದಾತೀರೆ - ನರ್ಮದಾನದಿಯದಡದಲ್ಲಿ, ಅರ್ಜು
ನಸ್ಯ ಕಾರ್ತವೀರ್ಯನ, ಅನುಯಾತ್ರಣಾಂ-ಸೇವಕರಿಗೂ, ರಾವಣಸ್ಯ-ರಾವಣನ, ಮಂತ್ರಿಣಾಂಚ-ಮಂತ್ರಿಗಳಿಗೂನೂ, ಹಲಹಲಾಶಬ್ದಃ- ಕೋಲಾಹಲ

---

ಗಳಾಗಿ ನಿಂತುಕೊಂಡು ರಾವಣನಂ ಕುರಿತು ಈ ವಾಕ್ಯವಂ ಹೇಳತೊಡಗಿದರು ॥ ೧೭ ॥ ಎಲೈ ರಾವಣನೇ! ಷಂ
ಡನನ್ನಾಗಲೀ ಸ್ತ್ರೀಯರಿಂದ ಸುತ್ತು ಬಾರಲ್ಪಟ್ಟವನನ್ನಾಗಲೀ ಯುದ್ಧ ಮಾಡುವದಕ್ಕೋಸ್ಕರ ಯಾವ ನೀನು ಕರೆ
ಯುವಂಥಾವನಾಗುತ್ತಿಯೋ, ಅಂಥಾ ನಿನಿಗೆ ಸಂಗರವಂ ಗೈಯ್ಯುವದಕ್ಕೆ ಸಮಯಾಸಮಯಗಳು ತಿಳಿಯುವದಿಲ್ಲ
ವಲ್ಲಾ, ಹೆಣ್ಣಾನೆಗಳ ನಡುವೆ ಇರುವ ಮದ ಗಜವಂ ಕುರಿತು ಹುಲಿಯು ಬರುವ ತೆರದಿ ನೀನು, ಸ್ತ್ರೀ ಸಮಕ್ಷಮ
ದಲ್ಲಿ ಆ ಅರ್ಜುನನಂ ಕುರಿತು ಯುದ್ಧವಂ ಗೈಯ್ಯಲು, ಹ್ಯಾಗೆ ಸಮರ್ಥನಾಗುವಿ ॥೧೯॥ ಎಲೈ ದಶಕಂಠನೇ ! ನಿನಿ
ಗೆ ಯುದ್ಧವಂಗೈಯಲೂ ಇಷ್ಟವಿದ್ದರೇ ಈ ಸಮಯದಲ್ಲಿ ಕ್ಷಮಿಸಿ ಈ ರಾತ್ರಿಯು ಇಲ್ಲಿಯೇ ಇದ್ದು ನಾಳೆ ಸಂಗರವಂ
ಗೈಯುವಿ, ಅಯ್ಯಾ ರಕ್ಕಸನೇ! ನಮ್ಮೊಡೆಯನಾದ ಅರ್ಜುನನು ಕದನದೊಳ್ ನಿನಿಗುಂಟಾಗಿರುವ ವಿಶ್ವಾಸವನ್ನು
ತೊಲಗಿಸುವನು, ನಿನಿಗೀಗಲೇ ಯುದ್ಧವಂ ಗೈಯಬೇಕೆಂಬ ಕುತೂಹಲ ವಿದ್ದರೆ, ನಮ್ಮೆಲ್ಲರಂ ಸಂಹರಿಸಿ ಬಳಿಕ ಅ
ರ್ಜುನನೊಡನೆ ಕಾಳಗಿಸಲೂ ಹೋಗುವಿ ಎಂಬಪಾಗಿ ನುಡಿಯಲೂ, ಜಯಿಸಲಿಚ್ಛೆಯುಳ್ಳ ಆ ರಾವಣಾ ಮಾತ್ಯರಿಂ
ದ, ಆ ನರನಾಥನ ಮಂತ್ರಿಗಳೆಲ್ಲರು ಸಂಗರದಲ್ಲಿ ಕೊಲ್ಲಲ್ಪಟ್ಟವರಾಗಿಭಕ್ಷಿಸಲ್ಪಟ್ಟರು ॥೨೨॥ಆ ಬಳಿಕ ಕಾರ್ತವೀರ್ಯಾ
ರ್ಜುನನ ಹಿಂಬಲವಾಗಿ ಬಂದವರ ಅಟ್ಟಹಾಸವು ರಾವಣ ಮಂತ್ರಿಗಳಾದ ಪ್ರಹಸ್ತಾದಿಗಳ ಕೋಲಾಹಲ ಧ್ವನಿಯು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಿಶಮ್ಯಾನುಯಾತ್ರ್ಯಾಣಾಂರಾವಣಸ್ಯಚಮಂತ್ರಿಣಾಮ್ ॥೩೩॥ ಇಷುಭಿಸ್ತೋಮರೈಶ್ಶೂಲೈಸ್ತ್ರಿಶೂಲೈರ್ವಜ್ರಸನ್ನಿಭೈಃ । ಸ ರಾವಣಾನರ್ದಯಂತಸ್ಸಮಂತಾತ್ಸಮಭಿದ್ರುತಾಃ ॥೩೪॥ ಹೇಹಯಾಧಿಪಯೋಧಾನಾಂವೇಗಆಸೀತ್ಸುದಾರುಣಃ। ಸನಕ್ರಮೀನಮಕರಸಮುದ್ರಸ್ಯೇವನಿಸ್ವನಃ ॥೩೫॥ ರಾವಣಸ್ಯತುತೇಮಾತ್ಯಾಃಪ್ರಹಸ್ತಶುಕಸಾರಣಾಃ। ಕಾರ್ತವೀರ್ಯಬಲಂಕ್ರುದ್ಧಾಃ ವ್ಯದಹನ್ನಗ್ನಿತೇಜಸಃ ॥೩೬॥ ಅರ್ಜುನಾಯತುತತ್ಕರ್ಮರಾವಣಸ್ಯಸಮಂತ್ರಿಣಃ । ಕ್ರೀಡಮಾನಾಯಕಥಿತಂಪುರುಷೈರ್ದ್ವಾರರಕ್ಷಿಭಿಃ ॥೩೭॥ ತೇಷಾಂತುವಚನಂಶ್ರುತ್ವಾಜಲಕ್ರೀಡಾವಸಕ್ತಧೀಃ । ಉಕ್ತ್ವಾನಭೇತವ್ಯಮಿತಿಸ್ತ್ರೀಜನಂಸತತೋರ್ಜುನಃ। ಉತ್ತತಾರಜಲಾತ್ತಸ್ಮಾದ್ಗಂಗಾತೋಯಾದಿವಾಂಜನಃ ॥೩೮॥ ಕ್ರೋಧರೂಷಿತನೇತ್ರಸ್ತುಸತತೋರ್ಜುನಪಾವಕಃ। ಪ್ರಜಜ್ವಾಲಮಹಾಘೋರೋಯುಗಾಂತಇವಪಾವಕಃ ॥೩೯॥ ಸತೂರ್ಣತರಮಾದಾಯವರಹೇಮಾಂಗದೋ

---

ಧ್ವನಿಯು, ಆಬಭೌ-ಆಯಿತು ॥೩೩॥ ಇಷುಭಿಃ-ಬಾಣಗಳಿಂದಲೂ, ತೋಮರೈರಪಿ-ಕಬ್ಬಿಣದದೊಣ್ಣೆಗಳಿಂದಲೂ,ಶೂಲೈಃ- ಭಲ್ಲಾಯುಧಗಳಿಂದಲೂ, ವಜ್ರಸನ್ನಿಭೈಃ-ವಜ್ರಾಯುಧಕ್ಕೆ ಸಮಾನಂಗಳಾದ, ತ್ರಿಶೂಲೈಃ-ತ್ರಿಶೂಲಗಳಿಂದಲೂ, ಸರಾವಣಾಃ-ರಾವಣನಿಂದೊಡಗೂಡಿದ ಆಮಂತ್ರಿಗಳನ್ನು, ಅರ್ದಯಂತಃ-ಹೊಡಿಯುತ್ತಿರುವರಾಗಿ, ಸಮಂತಾತ್-ಎಲ್ಲಾಕಡೆಯಲ್ಲಿಯೂ, ಸಮಭಿದ್ರುತಾಃ-ಸುತ್ತಿಕೊಂಡರು ॥೩೪॥ ಹೇಹಯಾಧಿಪಯೋಧಾನಾಂ-ಕಾರ್ತವೀರ್ಯಾರ್ಜುನನ ಭಟರು, ವೇಗಃ-ವೇಗವು, ಸನಕ್ರಮೀನಮಕರ ಸಮುದ್ರಸ್ಯ-ಸನಕ್ರಮೀನಮಕರ – ಮೊಸಳೆಗಳಿಂದಲೂ, ಮತ್ಸ್ಯಗಳಿಂದಲೂ, ಮೀಡಿಗಳಿಂದ ಲೊಡಗೂಡಿದ, ಸಮುದ್ರಸ್ಯ-ಕಡಲಿನ, ನಿಸ್ವನಇವ-ಘೋಷದಂತೆ, ಸುದಾರುಣಃ-ಭಯಂಕರ ಮಾದದ್ದು, ಆಸೀತ್-ಆಯಿತು ॥೩೫॥ ರಾವಣಸ್ಯ-ರಾವಣನ, ಅಮತ್ಯಾಃ-ಮಂತ್ರಿಗಳಾದ, ಕ್ರುದ್ಧಾಃ ಕೋಪಿಷ್ಠರಾದ, ಅಗ್ನಿತೇಜಸಃ-ಬೆಂಕಿಯಂತೆ ಉರಿಯುತ್ತಲಿರುವ, ತೇ-ಆ, ಪ್ರಹಸ್ತಶುಕಸಾರಣಾಃ-ಪ್ರಹಸ್ತನೂ, ಶುಕನೂ, ಸಾರಣನೆಂಬವನು, ಕಾರ್ತವೀರ್ಯಬಲಂ-ಕಾರ್ತವೀರ್ಯ-ಕಾರ್ತವೀರ್ಯನ, ಬಲಂ ಸೈನ್ಯವನ್ನು, ವ್ಯದಹನ್- ದಹಿಸಿದರು, ॥೩೬॥ ಸಮಂತ್ರಿಣಃ-ಮಂತ್ರಿಗಳಿಂದೊಡಗೂಡಿದ ರಾವಣಸ್ಯ-ರಾವಣನ, ತತ್ಕರ್ಮ-ಆ ಯುದ್ಧ ವ್ಯಾಪಾರವು, ಕ್ರೀಡಮಾನಾಯ-ಜಲಕ್ರೀಡೆಯಂ ಗೈಯುತ್ತಿರುವ, ಅರ್ಜುನಾಯತು-ಕಾರ್ತವೀರ್ಯಾರ್ಜುನನಿಗಾದರೆ, ದ್ವಾರರಕ್ಷಿಭಿಃ-ದ್ವಾರಪಾಲಕರಾದ, ಪುರುಷೈಃ-ರಾಜ ಪುರುಷರಿಂದ, ಕಥಿತಂ-ಹೇಳಲ್ಪಟ್ಟಿತು ॥೩೭॥. ತೇಷಾಂ-ಆ ದ್ವಾರಪಾಲಕರ, ವಚನಂತು-ಮಾತನ್ನಾದರೆ, ಶ್ರುತ್ವಾ-ಕೇಳಿ, ಜಲ ಕ್ರೀಡಾವಸಕ್ತಧೀಃ-ಜಲಕ್ರೀಡೆಯಲ್ಲಿಸಮ್ಮಿಳಿಸಿದ ಬುದ್ಧಿಯುಳ್ಳ, ಸೋರ್ಜುನಃ-ಆ ಕಾರ್ತವೀರ್ಯನು, ತತಃ-ಬಳಿಕ, ನಭೇತವ್ಯಮಿತಿ-ಭಯಪಡತಕ್ಕದ್ದಲ್ಲವೆಂದು, ಸ್ತ್ರೀಜನಂ-ಹೆಂಗಸರನ್ನುಕುರಿತು,ಉಕ್ತ್ವಾ-ಹೇಳಿ, ತಸ್ಮಾಜ್ಜಲಾತ್-ಆ ನರ್ಮದೋದಕದ ದೆಸೆಯಿಂದ-ಗಂಗಾತೋಯಾತ್-ಗಂಗೋದಕದದೆಸೆಯಿಂದ, ಅಂಜನಇವ- ಅಂಜನವೆಂಬದಿಗ್ಗಜದಂತೆ, ಉತ್ತತಾರ-ಮೇಲಕ್ಕೆಯದ್ದನು, ॥೩೮॥ ತತಃ-ಬಳಿಕ, ಕ್ರೋಧರೂಷಿತನೇತ್ರಃ-ಕ್ರೋಧದಿಂದದೀಪ್ತವಾದ ನೇತ್ರಗಳುಳ್ಳ,ಸೋರ್ಜುನಪಾವಕಃ-ಆ ಕಾರ್ತವೀರ್ಯನೆಂಬಾಗ್ನಿಯು, ಮಹಾಘೋರಃ- ಮಹಾಭಯಂಕರನಾಗಿ,ಯುಗಾಂತೇ-ಪ್ರಳಯಕಾಲದಲ್ಲಿ, ಪಾವಕಇವ- ಅಗ್ನಿಯಂತೆ, ಪ್ರಜಜ್ವಾಲ-ಉರಿಯುತಲಿದ್ದನು, ॥೩೯॥ ವರಹೇಮಾಂಗದಃ-ವರ-ಶ್ರೇಷ್ಠಂಗಳಾದ, ಹೇಮಾಂಗದಃ-ಭಂಗಾರದಬಾಹುಪುಜಿಗೆಗಳುಳ್ಳ, ಸಃ-ಆ ಕಾರ್ತವೀರ್ಯನು, ತೂರ್ಣತರಂ-ಬಹಳಜಾಗ್ರತೆಯಾಗಿ, ಗದಾಂ-ಗದಾಯುಧವನ್ನು, ಆದಾಯ-ತೆಗದುಕೊಂಡು, ಓಷಾಕರಃ-ಸೂರ್ಯನು, ತಮಃಸೀವ-ಕತ್ತಲುಗಳನ್ನಂತೆ, ರ

---

ಸಹಾ ಆ ನರ್ಮದಾನದಿಯ ತೀರದಲ್ಲಿ ಹೊಳೆಯುತಿತ್ತು ॥೩೩॥ ಹೇಹಯದೇಶಾಧಿಪತಿಯಾದ ಆ ರಾಜನ ಸೈನ್ಯಜನಗಳು ವಜ್ರಾಯುಧದಂತೆ ಬಹಳ ಹದವಾಗಿರುವ ಶೂಲಾಯುಧಗಳಿಂದಲೂ, ತ್ರಿಶೂಲಗಳಿಂದಲೂ, ಬಾಣಗಳಿಂದಲೂ ತೋಮರಾಯುಧಗಳಿಂದಲೂ, ಸಹಾ, ರಾವಣಸಹಿತರಾದ ಆ ರಾಕ್ಷಸರನ್ನೆಲ್ಲ ಪರಿಪರಿಯಾಗಿ ಹೊಡೆಯುತ್ತ ಎಲ್ಲ ಕಡೆಯಲ್ಲಿಯೂ ಸುತ್ತುಬಾರಿಕೊಂಡು ಅತಿವೇಗವಂಗೈದವರಾಗಲು, ಅದು ನೆಗಳುಗಳಿಂದಲು ಮೀನುಗಳಿಂದಲು ಮಕರಗಳಿಂದಲೂ ಒಡಗೂಡಿದ ಸಮುದ್ರದ ಶಬ್ದದಂತೆ ಅತಿದಾರುಣವಾಗಿತ್ತು ॥೩೫॥ ಅಗ್ನಿಯಂತೆ ಮಹಾ ತೇಜಸ್ವಿಗಳಾಗಿರ್ಪ ಆ ರಾವಣಮಂತ್ರಿಗಳಾದ ಪ್ರಹಸ್ತಾದಿಗಳಾದರೆ ಕಡುಕುಪಿತರಾಗಿ ಆ ಕಾರ್ತ ವೀರ್ಯಾರ್ಜುನನಬಲವನ್ನೆಲ್ಲಾ ಸುಟ್ಟು ಬೂದೀ ಮಾಡಿದರು ॥೩೬॥ ಆ ನರಪತಿಯ ದ್ವಾರಪಾಲಕರು ಮಂತ್ರಿಸಮೇತನಾದರಾವಣನು ಗೈದಿರುವ ಆ ವೃತ್ತಾಂತವನ್ನೆಲ್ಲಾ ಜಲಕ್ರೀಡೆಗಳನ್ನಾಡುತಿರುವ ತಮ್ಮೊಡೆಯನಿಗೆ ಬಿನ್ನವಿಸಿದವರಾಗಲೂ, ಆ ಕಾರ್ತವೀರ್ಯಾರ್ಜುನನು ಜಲವಿಹಾರದಲ್ಲಿ ಆ ಸಕ್ತವಾದಮನವುಳ್ಳವನಾದರೂ, ಆ ಕಾವಲುಗಾರರ ಮಾತಂ ಕೇಳಿ, ಹೆದರಬ್ಯಾಡಿರೆಂದು ಆ ಅಂಗನಾಮಣಿಗಳಿಗೆ ಹೇಳಿ, ಗಂಗೋದಕದಿಂದ ಅಂಜನವೆಂಬ ದಿಗ್ಗಜವು ಮದವೇರಿ ಹೊರಗೆ ಬರುವತೆರದಿ ಕಡು ಕುಪಿತನಾಗಿ ಆ ನರ್ಮದಾನದಿಯ ಜಲದಿಂದ ಹೊರಗೆಬಂದವನಾದನು ॥೩೮॥ ಆ ಸಮಯದಲ್ಲಿ ಕೋಪದಿಂದ ಕೆಂಪೇರಿದ ನೇತ್ರಗಳುಳ್ಳ ಆ ಅರ್ಜುನನೆಂಬ ಅಗ್ನಿಯಾದರೆ, ಕಡುಭಯಂಕರವಾಗಿರುವ ಪ್ರಳಯಾಗ್ನಿಯಂತೆ ಉರಿಯುತಲಿತ್ತು ॥೩೯॥ ಉತ್ತಮವಾದ ಬಾಹುಪುಜಿಗೆಗಳನ್ನಿಟ್ಟುಕೊಂಡಿರುವ ಆ ಕಾರ್ತವೀರ್ಯಾರ್ಜುನನೆಂಬ ರಾಜನು ಶೀಘ್ರವಾಗಿ ಗದಾಯುಧ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗದಾಮ್ । ಅಭಿದ್ರವತಿ ರಕ್ಷಾಂಸಿ ತಮಾಂಸೀವ ದಿವಾಕರಃ ॥೪೦॥ ಬಾಹುವಿಕ್ಷೇಪಕರಣಾಂ ಸಮುದ್ಯಮ್ಯ ಮಹಾಗದಾಮ್ । ಗಾರುಡಂ ರೂಪಮಾಸ್ಥಾಯ ಉಪಪಾತೇವ ಸೋಽರ್ಜುನಃ ॥೪೧॥ ತಸ್ಯ ಮಾರ್ಗಂ ಸಮಾವೃತ್ಯ ವಿಂಧ್ಯೋಽರ್ಕಸ್ಯೇವ ಪರ್ವತಃ । ಸ್ಥಿತೋ ಮೇರುರಿವಾಕಂಪ್ಯಃ ಪ್ರಹಸ್ತೋ ಮುಸಲಾಯುಧಃ ॥೪೨॥ ತತೋಽಸ್ಯ ಮುಸಲಂ ಘೋರಂ ಲೋಹಬದ್ಧಂ ಮಹೋದ್ಧತಃ । ಪ್ರಹಸ್ತಃ ಪ್ರೇಷಯನ್ ಕ್ರುದ್ಧೋ ರರಾಸ ಚ ಯಥಾಂಬುದಃ ॥೪೩॥ ತಸ್ಯಾಗ್ರೇ ಮುಸಲಸ್ಯಾಗ್ನಿರಶೋಕಾಪೀಡಸನ್ನಿಭಃ । ಪ್ರಹಸ್ತಕರಮುಕ್ತಸ್ಯ ಬಭೂವ ಪ್ರಹಸನ್ನಿವ ॥೪೪॥ ಆಧಾವಮಾನಂ ಮುಸಲಂ ಕಾರ್ತವೀರ್ಯಸ್ತದಾರ್ಜುನಃ । ನಿಪುಣಂ ವಂಚಯಾಮಾಸ ಗದಯಾ ಗಜವಿಕ್ರಮಃ ॥೪೫॥ ತತಸ್ತಮಭಿದುದ್ರಾವ ಪ್ರಹಸ್ತಂ ಹೈಹಯಾಧಿಪಃ । ಭ್ರಾಮಯಾನೋ ಗದಾಂ ಗುರ್ವೀಂ ಪಂಚಬಾಹುಶತೋದ್ಯತಾಮ್ ॥೪೬॥ ತೇನಾಹತೋಽತಿವೇಗೇನ ಪ್ರಹಸ್ತೋ ಗದಯಾ ತದಾ । ನಿಪಪಾತ ಮಹಾಶೈಲೋ ವಜ್ರಿವಜ್ರಹತೋ ಯಥಾ ॥೪೭॥ ಪ್ರಹಸ್ತಂ ಪತಿತಂ ದೃಷ್ಟ್ವಾ ಮಾರೀಚಶುಕಸಾರಣಾಃ । ಸಮಹೋದರಧೂಮ್ರಾಕ್ಷಾ ಅಪ

---

ಕ್ಷಾಂಸಿ-ರಾಕ್ಷಸರನ್ನು ಕುರಿತು, ಅಭಿದ್ರವತಿ-ಓಡಿಬಂದನು ॥ ೪೦॥ ಸೋರ್ಜುನಃ-ಆ ಕಾರ್ತವೀರ್ಯಾರ್ಜುನನು, ಬಾಹುವಿಕ್ಷೇಪಕರಣಾಂ-ಬಾಹು-ಭುಜಗಳಿಂದ, ವಿಕ್ಷೇಪಕರಣಾಂ-ತಿರಿಗಿಸುವಿಕೆಗುಳ್ಳ, ಮಹಾಗದಾಂ-ದೊಡ್ಡ ಗದಾಯುಧವನ್ನು, ಸಮುದ್ಯಮ್ಯ-ಎತ್ತಿಕೊಂಡು, ಗಾರುಡಂ-ಗರುಡಸಂಬಂಧವಾದ, ರೂಪಂ-ಆ ಕಾರವನ್ನು, ಆಸ್ಥಾಯಿವ-ಮಾಡಿದೋಯುಂಬಂತೆ, ಉಪಪಾತ-ಬಂದನು ॥ ೪೧॥ ತಸ್ಯ-ಆ ಕಾರ್ತವೀರ್ಯನ, ಮಾರ್ಗಂ-ಮಾರ್ಗವನ್ನು, ಅರ್ಕಸ್ಯ-ಸೂರ್ಯನಿಗೆ, ವಿಂಧ್ಯಃ-ಪರ್ವತಃಇವ-ವಿಂಧ್ಯಪರ್ವತದಂತೆ, ಸಮಾವೃತ್ಯ-ತಡೆಮಾಡಿ, ಮೇರುರಿವ-ಮೇರುಪರ್ವತದೋಪಾದಿಯಲ್ಲಿ, ಅಕಂಪ್ಯಃ-ಚಲಿಸಲಸಾಧ್ಯನಾದ, ಮುಸಲಾಯುಧಃ-ಒನಕೆಯೇ ಆಯುಧವಾಗುಳ್ಳ, ಪ್ರಹಸ್ತಃ-ಪ್ರಹಸ್ತನು, ಸ್ಥಿತಃ-ನಿಂತನು ॥ ೪೨ ॥ ತತಃ-ಅನಂತರದಲ್ಲಿ, ಮಹೋದ್ಧತಃ-ಮಹಾಘೋರನಾದ, ಪ್ರಹಸ್ತಃಕಿಲ-ಪ್ರಹಸ್ತನಾದರೆ; ಲೋಹಬದ್ಧಂ-ಲೋಹದಕಟ್ಟುಗಳಿಂದಕಟ್ಟಲ್ಪಟ್ಟ, ಘೋರಂ-ಭಯಂಕರವಾದ, ಮುಸಲಂ-ಮುಸಲಾಯುಧವನ್ನು, ಅಸ್ಯ-ಈ ಕಾರ್ತವೀರ್ಯನಿಗೆ, ಪ್ರೇಷಯನ್-ಎಸೆದವನಾಗಿ, ಕ್ರುದ್ಧಃ-ಕೋಪಿಷ್ಠನಾಗಿ, ಅಂಬುದೋಯಥಾ-ಮೇಘದಂತೆ ರರಾಸಚ-ಕೂಗಲೂಕೂಗಿದನು ॥೪೩ ॥ ಪ್ರಹಸ್ತಕರಮುಕ್ತಸ್ಯ-ಪ್ರಹಸ್ತ-ಪ್ರಹಸ್ತನ, ಕರ-ಹಸ್ತದಿಂದ, ಮುಕ್ತಸ್ಯ-ಬಿಡಲ್ಪಟ್ಟ, ಮುಸಲಸ್ಯ-ಮುಸಲಾಯುಧದ, ಅಗ್ನಿಃ-ಅಗ್ನಿಯು, ತಸ್ಯ-ಆ ಕಾರ್ತವೀರ್ಯಾರ್ಜುನನ, ಅಗ್ರೇ-ಮುಂದುಗಡೆ, ಅಶೋಕಾಪೀಡಸನ್ನಿಭಃ-ಅಶೋಕ-ಅಶೋಕಪುಷ್ಪಗಳಿಂದ ಮಾಡಲ್ಪಟ್ಟ, ಆಪೀಡಸನ್ನಿಭಃ-ಭೂಷಣಕ್ಕೆಸಮಾನವಾದ್ದು, ಬಭೂವ-ಆಯಿತು, ತದಾ-ಆ ಕಾಲದಲ್ಲಿ, ಪ್ರಹಸನ್ನಿವಸ್ಥಿತಃ – ನಗುವನಂತಿರುವ, ಕಾರ್ತವೀರ್ಯಃಅರ್ಜುನಃ-ಕಾರ್ತವೀರ್ಯಾರ್ಜುನನು, ಗಜವಿಕ್ರಮಃ-ಆನೆಯಂತೆ ನಡೆಯುತ್ತಿರುವನಾಗಿ, ಆಧಾವಮಾನಂ-ಬರುತ್ತಿರುವ, ಮುಸಲಂ – ಮುಸಲಾಯುಧವನ್ನು, ನಿಪುಣಂ-ಚಮತ್ಕಾರವಾಗಿ, ಗದಯಾ-ಗದಾಯುಧದಿಂದ, ವಂಚಯಾಮಾಸ-ತಪ್ಪಿಸಿಕೊಂಡನು ॥೪೫॥ ತತಃ-ಬಳಿಕ, ಹೈಹಯಾಧಿಪಃ – ಕಾರ್ತವೀರ್ಯನು, ಪಂಚಬಾಹುಶತೋದ್ಯತಾಂ – ಐನೂರುಭುಜಗಳಿಂದ ಎತ್ತಲ್ಪಟ್ಟ, ಗುರ್ವೀಂ-ದೊಡ್ಡದಾದ, ಗದಾಂ-ಗದಾಯುಧವನ್ನು, ಭ್ರಾಮಯಾನಃ- ತಿರುಗುಸುತ್ತಿರುವನಾಗಿ, ತಂಪ್ರಹಸ್ತಂ-ಆ ಪ್ರಹಸ್ತನನ್ನು ಕುರಿತು, ಅಭಿದುದ್ರಾವ-ಓಡಿಬಂದನು ॥ ೪೬ ॥ ತದಾ-ಆ ಕಾಲದಲ್ಲಿ, ತೇನ-ಆ ಅರ್ಜುನನಿಂದ, ಗದಯಾ-ಗದಾಯುಧದಿಂದ, ಅತಿವೇಗೇನ-ಅತಿಜಾಗ್ರತೆಯಾಗಿ, ಆಹತಃ-ಹೊಡೆಯಲ್ಪಟ್ಟ, ಪ್ರಹಸ್ತಃ-ಪ್ರಹಸ್ತನು, ವಜ್ರಿವಜ್ರಹತಃ-ದೇವೇಂದ್ರನ ವಜ್ರಾಯುಧದಿಂದ ಹೊಡೆಯಲ್ಪಟ್ಟ, ಮಹಾಶೈಲೋಯಥಾ-ದೊಡ್ಡ ಬೆಟ್ಟದಂತೆ, ನಿಪಪಾತ-ನೆಲಕ್ಕೆ ಬಿದ್ದನು ॥ ೪೭ ॥ ಪತಿತಂ-ಕೆಳಕ್ಕೆ ಬಿದ್ದ, ಪ್ರಹಸ್ತಂ – ಪ್ರಹಸ್ತನನ್ನು, ದೃಷ್ಟ್ವಾ – ಕಂಡು, ಮಾರೀಚಶುಕಸಾರಣಾಃ – ಮಾರೀಚನು, ಶುಕನು,ಸಾರಣನು, ಈ ಮೂರ್ವರೂ, ಸ

---

ವಂ ತೆಗೆದುಕೊಂಡು ಬಾಹುಗಳಿಂದ ಗರ್ರನೆ ತಿರಿಗಿಸುತ್ತ ಮೇಲಕ್ಕೆತ್ತಿ ಕೊಂಡು ಗರುಡನಂತೆ ಅತಿವೇಗವಾಗಿ ಬರುತಿರುವನಾಗಿಯೂ, ಮತ್ತೂ ಸೂರ್ಯನು ಕತ್ತಲನ್ನು ಹೋಗಲಾಡಿಸುವ ತೆರದಿ ಆ ರಾಕ್ಷಸರನ್ನೆಲ್ಲಾ ಧ್ವಂಸಿಸುತಿರುವನಾಗಿಯೂ ಇರುವನಾಗಿ ಶೀಘ್ರವಾಗಿ ಬರುತಿರುವನಾಗಲೂ, ಕಂಪಿಸಲಸಾಧ್ಯನಾದ ಪ್ರಹಸ್ತನೆಂಬ ರಾವಣನ ಮಂತ್ರಿಯು ಮುಸಲಾಯುಧಧಾರಿಯಾಗಿ, ವಿಂಧ್ಯಗಿರಿಯು ಸೂರ್ಯ ಮಾರ್ಗವಂ ತಡೆ ಮಾಡಿದ ತೆರದಿ, ಆ ಅರ್ಜುನನ ದಾರಿಗಡ್ಡವಾಗಿನಿಂತವನಾದನು ॥೪೨॥ ಅನಂತರದಲ್ಲಿ ಬಲುಕೊಬ್ಬಿದವನಾದ ಆ ಪ್ರಹಸ್ತನಾದರೆ, ಕಡು ಕೋಪವುಳ್ಳವನಾಗಿ ಕಬ್ಬಿಣದ ಕಟ್ಟುಗಳು ಹಾಕಲ್ಪಟ್ಟ ಅತಿಘೋರವಾದ ಆ ಮುಸಲಾಯುಧವಂ ಅರ್ಜುನರಾಜನಿಗೆ ಎಸೆದವನಾಗಿ ಮೇಘದಂತೆ ಘರ್ಜಿಸಿದವನಾದನು ॥೪೩॥ ಆ ಸಮಯದಲ್ಲಿ ಪ್ರಹಸ್ತನ ಹಸ್ತದಿಂದ ಬಿಡಲ್ಪಟ್ಟ ಆ ಮುಸಲಾಯುಧದ ಅಗ್ನಿಯು, ಆ ಕಾರ್ತವೀರ್ಯಾರ್ಜುನನ ಮುಂದುಗಡೆ, ಅಶೋಕಪುಷ್ಪಗಳಿಂದ ಮಾಡಲ್ಪಟ್ಟ ಶಿರೋಭೂಷಣದಂತೆ ಹೊಳೆಯುತಿರಲೂ, ಕಡು ಪರಾಕ್ರಮಿಯಾದ ಆ ನರನಾಥನು ನಸುನಗೆಯುಳ್ಳವನಾಗಿಯೂ, ಆನೆಯಂತೆಮಂದಗಾಮಿಯಾಗಿಯೂ ಇರುವನಾಗಿ, ನಿಪುಣತೆಯಾಗಿ ಗದಾಯುಧದಿಂದ ಆ ಮುಸಲಾಯುಧದ ಹೊಡತೆಯಂ ತಪ್ಪಿಸಿಕೊಂಡು, ಐನೂರು ಬಾಹುಗಳಿಂದ ಮಹತ್ತರವಾದ ಆ ಗದಾಯುಧವಂ ತಿರಿವಿ ಪ್ರಹಸ್ತನನ್ನಟ್ಟಿ ಕುಟ್ಟಲೂ, ಆ ರಾಕ್ಷಸನು ಇಂದ್ರನ ವಜ್ರಾಯುಧದಿಂದ ಹೊಡೆಯಲ್ಪಟ್ಟ ಬೆಟ್ಟದಂತೆ ಬಿದ್ದು ಹೋದನು ॥೪೭॥ ಕೆಳಗುರುಳಿಕೊಂಡ ಆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ಸೃಪ್ತಾ ರಣಾಜಿರಾತ್ ॥೪೮॥ ಅಪಕ್ರಾಂತೇಷ್ವಮಾತ್ಯೇಷು ಪ್ರಹಸ್ತೇ ಚ ನಿಪಾತಿತೇ । ರಾವಣೋಽಭ್ಯದ್ರವತ್ತೂರ್ಣಮರ್ಜುನಂ ನೃಪಸತ್ತಮಮ್ ॥೪೯॥ ಸಹಸ್ರಬಾಹೋಸ್ತದ್ಯುದ್ಧಂ ವಿಂಶದ್ಬಾಹೋಶ್ಚ ದಾರುಣಮ್ । ನೃಪರಾಕ್ಷಸಯೋಸ್ತತ್ರ ಆರಬ್ಧಂ ರೋಮಹರ್ಷಣಮ್ ॥೫೦॥ ಸಾಗರಾವಿವ ಸಂಕ್ಷುಬ್ಧೌ ಚಲನ್ಮೂಲಾವಿವಾಚಲೌ । ತೇಜೋವಂತಾವಿವಾದಿತ್ಯೌ ಪ್ರದಹಂತಾವಿವಾನಲೌ ॥೫೧॥ ಬಲೋದ್ಧತೌ ಯಥಾ ನಾಗೌ ವಾಶಿತಾರ್ಥೇ ಯಥಾ ವೃಷೌ । ಮೇಘಾವಿವ ವಿನಿರ್ದಂತೌ ಸಿಂಹಾವಿವ ಬಲೋತ್ಕಟೌ ॥ ರುದ್ರಕಾಲಾವಿವ ಕ್ರುದ್ಧೌ ತೌ ತದಾರ್ಜುನರಾಕ್ಷಸೌ । ಪರಸ್ಪರಂ ಗದಾಭ್ಯಾಂ ತೌ ತಾಡಯಾಮಾಸತುರ್ಭೃಶಮ್ ॥೫೨॥ ವಜ್ರಪ್ರಹಾರಾನಚಲಾ ಯಥಾ ಘೋರಾನ್ ವಿಷೇಹಿರೇ । ಗದಾಪ್ರಹಾರಾಂಸ್ತೌ ತತ್ರ ಸೇಹಾತೇ ನರರಾಕ್ಷಸೌ ॥೫೩॥ ಯಥಾಶನಿರವೇಭ್ಯಸ್ತು ಜಾಯತೇಽಥ ಪ್ರತಿಶ್ರುತಿಃ । ತಥಾ ತಾಭ್ಯಾಂ ಗದಾಪಾತೈರ್ದಿಶಸ್ಸರ್ವಾಃ ಪ್ರತಿಶ್ರುತಾಃ ॥೫೪॥ ಅರ್ಜುನಸ್ಯ ಗದಾ ಸಾ ತು

---

ಮಹೋದರಧೂಮ್ರಾಕ್ಷಾಃ – ಮಹೋದರ ಧೂಮ್ರಾಕ್ಷರಿಂ ದೊಡಗೂಡಿದವರಾಗಿ, ರಣಾಜಿರಾತ್ – ಯುದ್ಧರಂಗದ ದೆಸೆಯಿಂದ, ಅಪಸೃಪ್ತಾಃ– ಓಡಿಹೋದರು ॥ ೪೮ ॥ ಅಮಾತ್ಯೇಷು–ಮಂತ್ರಿಗಳು, ಅಪಕ್ರಾಂತೇಷು ಸತ್ಸು – ಓಡಿಹೋದವರಾಗುತ್ತಿರಲೀಕಾಗಿ, ಪ್ರಹಸ್ತೇ ಚ– ಪ್ರಹಸ್ತನೂ ಕೂಡ, ನಿಪಾತಿತೇ ಸತಿ – ಕೆಳಗೆ ಬೀಳಿಸಲ್ಪಟ್ಟವನಾಗುತ್ತಿರಲೀಕಾಗೀ, ರಾವಣಃ–ರಾವಣನು, ನೃಪಸತ್ತಮಂ – ರಾಜಶ್ರೇಷ್ಠನಾದ, ಅರ್ಜುನಂ–ಕಾರ್ತವೀರ್ಯನಂ ಕುರಿತು, ತೂರ್ಣಂ–ಜಾಗ್ರತೆಯಾಗಿ, ಅಭ್ಯದ್ರವತ್–ಓಡಿ ಬಂದನು ॥ ೪೯ ॥ ಸಹಸ್ರಬಾಹೋಃ–ಸಹಸ್ರಭುಜಗಳುಳ್ಳ, ವಿಂಶದ್ಬಾಹೋಶ್ಚ –ಇಪ್ಪತ್ತು ಭುಜಗಳುಳ್ಳ, ನೃಪರಾಕ್ಷಸಯೋಃ – ಕಾರ್ತವೀರ್ಯ ರಾವಣಾಸುರರಿಬ್ಬರಿಗೂ, ತತ್ರ–ಆ ಯುದ್ಧರಂಗದಲ್ಲಿ, ದಾರುಣಂ – ಭಯಂಕರವಾದ, ರೋಮಹರ್ಷಣಂ ರೋಮಾಂಚವನ್ನುಂಟು ಮಾಡುತ್ತಿರುವ, ತದ್ಯುದ್ಧಂ–ಆ ಯುದ್ಧವು, ಆರಬ್ಧಂ–ಆರಂಭಿಸಲ್ಪಟ್ಟಿತು ॥ ೫೦ ॥ ಸಾಗರಾವಿವ–ಸಮುದ್ರಗಳಂತೆ, ಸಂಕ್ಷುಬ್ಧೌ–ಕ್ಷೋಭೆಬೀಳುತ್ತಿರುವರಾಗಿಯೂ, ಅಚಲಾವಿವ–ಬೆಟ್ಟಗಳಂತೆ, ಚಲನ್ಮೂಲೌ–ಕದಲುತ್ತಿರುವ ಪರಸ್ಪರಮರ್ಮಗಳುಳ್ಳವರಾಗಿ ಆದಿತ್ಯಾವಿವ–ಸೂರ್ಯರಂತೆ, ತೇಜೋವಂತೌ–ಪ್ರಕಾಶಮುಳ್ಳವರಾಗಿಯೂ, ಅನಲಾವಿವ–ಅಗ್ನಿಗಳಂತೆ, ಪ್ರದಹಂತೌ–ಸುಡುತ್ತಿರುವರಾಗಿಯೂ, ವಾಶಿತಾರ್ಥೇ–ಹೆಣ್ಣಾನೆಯ ನಿಮಿತ್ತವಾಗಿ, ನಾಗೌ ಯಥಾ–ಪ್ರರುಷಗಜಗಳಂತೆ, ಬಲೋದ್ಧತೌ–ಬಲದಿಂದ ಹೊಡೆಯಲ್ಪಟ್ಟ, ವೃಷೌ ಯಥಾ–ವೃಷಭಗಳಂತೆಯೂ, ಮೇಘಾವಿವ–ಮೇಘಗಳಂತೆಯೂ, ವಿನರ್ದಂತೌ–ಕೂಗುತ್ತಿರುವರಾಗಿಯೂ, ಸಿಂಹಾವಿವ–ಸಿಂಹಗಳಂತೆ, ಬಲೋತ್ಕಟೌ– ಬಲೋದ್ಧತರಾಗಿಯೂ, ರುದ್ರಕಾಲಾವಿವ–ರುದ್ರಯಮರಂತೆ, ಕ್ರುದ್ಧೌ–ಕೋಪಿಷ್ಠರಾಗಿರುವ, ತೌ–ಅಪ್ರಸಿದ್ಧರಾದ, ಅರ್ಜುನರಾಕ್ಷಸೌ – ಆ ಕಾರ್ತವೀರ್ಯರಾವಣರಿಬ್ಬರೂ, ತದಾ–ಆ ಕಾಲದಲ್ಲಿ, ಪರಸ್ಪರಂ–ಒಬ್ಬರಿಗೊಬ್ಬರು, ಭೃಶಂ–ಬಹಳವಾಗಿ, ತಾಡಯಾಮಾಸತುಃ–ಹೊಡೆದಾಡಿದರು ॥೫೨॥ ಯಥಾ–ಹ್ಯಾಗೆ, ಅಚಲಾಃ–ಬೆಟ್ಟಗಳು, ಘೋರಾನ್–ಕಠೋರಗಳಾದ, ವಜ್ರಪ್ರಹಾರಾನ್–ವಜ್ರಾಯುಧದಿಂದ ಹೊಡೆತಗಳನ್ನು, ವಿಷೇಹಿರೇ–ಸಹಿಸಿದವೋ, ತಥಾ– ಹಾಗೆಯೇ ತೌ ನರರಾಕ್ಷಸೌ–ಆ ಕಾರ್ತವೀರ್ಯ ರಾವಣರು, ತತ್ರ–ಆ ರಣರಂಗದಲ್ಲಿ,ಗದಾಪ್ರಹಾರಾನ್–ಗದಾಯುಧಗಳಿಂದ ಹೊಡೆತಗಳನ್ನು, ಸೇಹಾತೇ–ಸಹಿಸಿದರು॥ ಯಥಾ–ಹ್ಯಾಗೆ, ಅಶನಿರವೇಭ್ಯಸ್ತು–ಸಿಡಿಲುಗಳ, ರವೇಭ್ಯಸ್ತು–ಧ್ವನಿಗಳ ದೆಸೆಯಿಂದಾದರೆ, ಪ್ರತಿಶ್ರುತಿಃ–ಪ್ರತಿಧ್ವನಿಯು, ಜಾಯತೇ–ಹುಟ್ಟುತ್ತದೋ, ತಥಾ–ಹಾಗೆಯೇ, ತಾಭ್ಯಾಂ–ಆ ಇಬ್ಬರಿಂದ, ಗದಾಪಾತೈಃ–ಗದಾಪ್ರಹಾರಗಳಿಂದ, ಸರ್ವಾದಿಶಃ–ಸಮಸ್ತದಿಕ್ಕುಗಳೂ ಕೂಡಾ, ಪ್ರತಿಶ್ರುತಾಃ– ಪ್ರತಿಧ್ವನಿಗೊಳಿಸಿದವು ॥೫೪॥ ಅರ್ಜುನಸ್ಯ–ಕಾರ್ತವೀರ್ಯಾರ್ಜುನನ, ಸಾ ಗದಾ–ಆ ಗದಾಯುಧವು, ಮಹೋರಸಿ–ರಾವಣನ, ದೊಡ್ಡ ವಕ್ಷಸ್ಥಳದಲ್ಲಿ, ಪಾತ್ಯಮಾನಾ–

---

ಪ್ರಹಸ್ತನಂ ಕಂಡು ಮಾರೀಚ, ಶುಕ, ಸಾರಣರು, ಮಹೋದರ, ಧೂಮ್ರಾಕ್ಷ ಸಹಿತರಾಗಿ, ಆ ರಣರಂಗದಿಂದ ಓಡಿ ಹೋದರು ॥೪೮॥ ಪ್ರಹಸ್ತನು ಬಿದ್ದವನಾಗುತಿರಲೀಕಾಗಿ ಇತರಮಂತ್ರಿಗಳು ಓಡಿ ಹೋಗಲೂ, ದಶಕಂಠನು ರಾಜೋತ್ತಮನಾದ ಆ ಕಾರ್ತವೀರ್ಯಾರ್ಜುನನೆಂಬ ರಾಜನಂ ಕುರಿತು ತ್ವರಿತವಾಗಿ ಬಂದನು ॥೪೯॥ ಸಹಸ್ರ ಬಾಹುಗಳುಳ್ಳ ಆ ರಾಜನಿಗೂ ಇಪ್ಪತ್ತು ಭುಜಗಳುಳ್ಳ ಆ ದಶಕಂಠನಿಗೂ ಸಹಾ, ಆ ನರ್ಮದಾತೀರದಲ್ಲಿ ಅತಿದಾರುಣವಾದ ಮತ್ತೂ ರೋಮಾಂಚವನ್ನುಂಟುಮಾಡುತ್ತಿರುವ ಕಾಳಗವು ಪ್ರಾರಂಭವಾಯಿತು ॥೫೦॥ ಆ ಸಮಯದಲ್ಲಿ ರುದ್ರ ಕಾಲರಂತೆ ಕಡುಕೋಪಮುಳ್ಳವರಾದ ಆ ಅರ್ಜುನರಾವಣರೆಂಬೀರ್ವರು, ಸಮುದ್ರದಂತೆ ಬಹುಕ್ಷೋಭೆಪಡುತಿರುವರಾಗಿಯೂ, ಕದಲಿಸಲ್ಪಟ್ಟ ಮೂಲಪ್ರದೇಶಗಳುಳ್ಳ ಪರ್ವತಗಳಂತೆ ಚಂಚಲವಾಗಿ ಮಾಡಲ್ಪಟ್ಟ ಮರ್ಮಸ್ಥಾನಗಳುಳ್ಳವರಾಗಿಯೂ, ಸೂರ್ಯರಂತೆ ತೇಜಸ್ಸುಳ್ಳವರಾಗಿಯೂ, ಅಗ್ನಿಯೋಪಾದಿಯಲ್ಲಿ ಸುಡುತಿರುವರಾಗಿಯೂ, ಹೆಣ್ಣಾನೆಯ ನಿಮಿತ್ತವಾಗಿ ಹೊಡೆದಾಡುತಿರುವ ಆನೆಗಳಂತೆ ಬಹುಬಲವಂತರಾಗಿಯೂ, ಮೇಘಗಳಂತೆ ಘರ್ಜಿಸುತಿರುವರಾಗಿಯೂ, ಸಿಂಹಗಳತೆರದಿ ಬಲಾಧಿಕರಾಗಿಯೂ ಇರುವರಾಗಿ ಒಬ್ಬರನ್ನೊಬ್ಬರು ಗದಾಯುಧಗಳಿಂದ ಹೊಡೆಯುತಿದ್ದರು ॥೫೨॥ ಗಿರಿಗಳು ಘೋರವಾದ ವಜ್ರಾಯುಧದ ಹೊಡೆತಗಳನ್ನು ಸಹಿಸಿಕೊಂಡಂತೆ ಅರ್ಜುನರಾವಣರೆಂಬೀರ್ವರು ಆ ನರ್ಮದಾನದಿಯ ತೀರದಲ್ಲಿ ಗದಾ ಪ್ರಹಾರಗಳನ್ನು ಸೈರಿಸಿಕೊಳ್ಳುತಿದ್ದರು ॥೫೩॥ ಮತ್ತೂ ಸಿಡಿಲಿನ ಶಬ್ದದಿಂದ ಪ್ರತಿಧ್ವನಿಯು ಹುಟ್ಟುವಂತೆ, ಅವರೀರ್ವರ ಗದಾಯುಧಗಳ ಹೊಡೆತಗಳಿಂದ ದಿಕ್ಕುದಿಕ್ಕುಗಳಲ್ಲಿಯೂ ಪ್ರತಿಧ್ವನಿಯುಂಟಾ

CC-0. Bhagavad Ramanuja National Research Institute, Melukote Collection.

Funding: Taṭtva Heritage Foundation,Kolkata. Digitization: eGangotri.



ಪಾತ್ಯಮಾನಾಮಹೋರಸಿ । ಕಾಂಚನಾಭಂನಭಶ್ಚಕ್ರೇವಿದ್ಯುತ್ಸೌದಾಮಿನೀಯಥಾ॥೫೬॥ ತಥೈವರಾವಣೇನಾಜೌಪಾತ್ಯಮಾನಾಮುಹುರ್ಮುಹುಃ । ಅರ್ಜುನೋರಸಿನಿರ್ಭಾತಿಗದೋಲ್ಕೇವಮಹಾಗಿರೌ ॥೫೭॥ ನಾರ್ಜುನಃಖೇದಮಾಪ್ನೋತಿನರಾಕ್ಷಸಗಣೇಶ್ವರಃ। ಸಮಮಾಸೀತ್ತಯೋರ್ಯುದ್ಧಂಯಥಾಪೂರ್ವಂಬಲೀಂದ್ರಯೋಃ ॥೫೮॥ಶೃಂಗೈರ್ಮಹರ್ಷಭೌಯದ್ವದ್ದಂತಾಗ್ರೈರಿವಕುಂಜರೌ। ಪರಸ್ಪರಂಜಘ್ನತುಸ್ತೌ ನರರಾಕ್ಷಸಸತ್ತಮೌ ॥೫೯॥ ತತೋಽರ್ಜುನೇನಕ್ರುದ್ಧೇನ ಸರ್ವಪ್ರಾಣೇನ ಸಾಗದಾ। ಸ್ತನಯೋರಂತರೇಮುಕ್ತಾ ರಾವಣಸ್ಯಮಹಾಹವೇ ॥೬೦॥ ವರದಾನಕೃತತ್ರಾಣೇಸಾಗದಾರಾವಣೋರಸಿ । ದುರ್ಬಲೇನಯಥಾಸೇನಾದ್ವಿಧಾಭೂತಾಪತತ್ಕ್ಷಿತೌ ॥೬೧॥ ಸತ್ವರ್ಜುನಪ್ರಯುಕ್ತೇನಗದಾಪಾತೇನರಾವಣಃ । ಅಪಸರ್ಪದ್ಧನುರ್ಮಾತ್ರಂನಿಷಸಾದಚನಿಸ್ಸ್ವನನ್ ॥೬೨॥ ಸವಿಹ್ವಲಂತದಾಲಕ್ಷ್ಯ ದಶಗ್ರೀವಂತತೋಽರ್ಜುನಃ। ಸಹಸಾಪ್ರತಿಜಗ್ರಾಹ ಗ

---

ಬೀಳಿಸಲ್ಪಡುತ್ತಿರುವದಾಗಿ, ವಿದ್ಯುತ್-ಚಿಕ್ಕಮಿಂಚುಗಳಿಂದ ಕೂಡಿರುವ, ಸೌದಾಮಿನೀಯಥಾ-ದೊಡ್ಡ ಮಿಂಚಿನಂತೆ, ನಭಃ-ಅಂತರಿಕ್ಷವನ್ನು, ಕಾಂಚನಾಭಂ-ಭಂಗಾರದ, ಕಾಂತಿಯುಳ್ಳದ್ದನ್ನಾಗಿ, ಚಕ್ರೇ-ಮಾಡಿತು ॥೫೬॥ ತಥೈವ-ಹಾಗೆಯೆ, ರಾವಣೇನ-ರಾವಣನಿಂದ, ಆಜೌ-ಯುದ್ಧರಂಗದಲ್ಲಿ, ಮುಹುರ್ಮುಹುಃ-ಬಾರಿಬಾರಿಗೂ, ಅರ್ಜುನೋರಸಿ-ಕಾರ್ತವೀರ್ಯಾರ್ಜುನನ ಎದೆಯಲ್ಲಿ, ಪಾತ್ಯಮಾನಾ-ಬೀಳಿಸಲ್ಪಡುತ್ತ ಲಿರುವ,ಗದಾ-ಗದಾಯುಧವು, ಮಹಾಗಿರೌ-ದೊಡ್ಡ ಬೆಟ್ಟದಲ್ಲಿ, ಉಲ್ಕೇವ- ಕೊಳ್ಳಿಯಂತೆ, ನಿರ್ಭಾತಿ-ಹೊಳೆಯುತ್ತಿತ್ತು ॥ ೫೭॥ ಅರ್ಜುನಃ-ಕಾರ್ತವೀರ್ಯನು, ಖೇದಂ - ಶ್ರಮೆಯನ್ನು, ನಾಪ್ನೋತಿ-ಹೊಂದಲಿಲ್ಲಾ, ರಾಕ್ಷಸ ಗಣೇಶ್ವರಃ-ರಾಕ್ಷಸಾಧಿಪತಿಯಾದ ರಾವಣನು, ಖೇದಂ-ಶ್ರಮೆಯನ್ನು, ನಾಪ್ನೋತಿ-ಹೊಂದಲಿಲ್ಲಾ, ತಯೋಃ-ಅವರಿಬ್ಬರಿಗೂ, ಪೂರ್ವಂ-ಪೂರ್ವದಲ್ಲಿ, ಬಲೀಂದ್ರಯೋರ್ಯಥಾ-ಬಲಿಚಕ್ರವರ್ತಿ ದೇವೇಂದ್ರರುಗಳಂತೆ, ಯುದ್ಧಂ-ಕಾಳಗವು, ಸಮಂ-ಸಮವಾದದ್ದು, ಆಸೀತ್-ಆಯಿತು ॥ ೫೮॥ ಮಹರ್ಷಭೌ-ದೊಡ್ಡ ವೃಷಭಗಳು, ಶೃಂಗೈಃ-ಕೊಂಬುಗಳಿಂದ, ಯದ್ವತ್-ಹ್ಯಾಗೋ, ದಂತಾಗ್ರೈಃ-ದಂತೆಗಳಿಂದ, ಕುಂಜರಾವಿವ-ಆನೆಗಳಂತೆಯೂ, ತೌನರರಾಕ್ಷಸೋತ್ತಮೌ-ಆಕಾರ್ತವೀರ್ಯ ರಾವಣರಿಬ್ಬರು, ಪರಸ್ಪರಂ-ಒಬ್ಬರಿಗೊಬ್ಬರು, ಜಘ್ನತುಃ- ಹೊಡೆದಾಡಿದರು ॥ ೫೯॥ ತತಃ-ಬಳಿಕ, ಮಹಾಹವೇ-ದೊಡ್ಡ ಯುದ್ಧದಲ್ಲಿ, ಕ್ರುದ್ಧೇನ-ಕೋಪಿಷ್ಠನಾದ, ಅರ್ಜುನೇನ-ಕಾರ್ತವೀರ್ಯಾರ್ಜುನನಿಂದ, ಸರ್ವಪ್ರಾಣೇನ-ಸರ್ವಸಾಮರ್ಥ್ಯದಿಂದಲೂ, ಸಾಗದಾ-ಆ ಗದಾಯುಧವು, ರಾವಣಸ್ಯ-ರಾವಣನ, ಸ್ತನಯೋರಂತರೇ-ವಕ್ಷಸ್ಥಳದಲ್ಲಿ, ಮುಕ್ತಾ-ಬಿಡಲ್ಪಟ್ಟಿತು॥೬೦॥ ವರದಾನಕೃತತ್ರಾಣೇ-ವರದಾನ-ಬ್ರಹ್ಮವರಪ್ರದಾನದಿಂದ, ಕೃತ-ಮಾಡಲ್ಪಟ್ಟ,ತ್ರಾಣೇ-ಸಂರಕ್ಷಣೆಯುಳ್ಳ, ರಾವಣೋರಸಿ-ರಾವಣನಎದೆಯಲ್ಲಿ, ಸಾಗದಾ -ಆ ಗದೆಯು, ದುರ್ಬಲಾ-ಬಲಹೀನವಾದ, ಸೇನಾಯಥಾ-ಸೈನ್ಯದಂತೆ, ದ್ವಿಧಾಭೂತಾ-ಎರಡುಬಗೆಯಾಗಿ, ಕ್ಷಿತೌ-ನೆಲದಲ್ಲಿ, ಅಪತತ್-ಬಿದ್ದು ಹೋಯಿತು॥ ಸಃರಾವಣಸ್ತು-ಆ ರಾವಣನಾದರೆ, ಅರ್ಜುನಪ್ರಯುಕ್ತೇನ-ಅರ್ಜುನ-ಕಾರ್ತವೀರ್ಯನಿಂದ, ಪ್ರಯುಕ್ತೇನ-ಪ್ರಯೋಗಿಸಲ್ಪಟ್ಟ, ಗದಾಪಾತೇನ- ಗದಾಪ್ರಹಾರದಿಂದ, ಧನುರ್ಮಾತ್ರಂ-ಒಂದು ಬಾರುಪ್ರಮಾಣ, ಅಪಸರ್ಪತ್-ಹಿಂದಕ್ಕೆಹೋದನು, ನಿಸ್ಸ್ವನನ್-ಧ್ವನಿಮಾಡುತಿರುವನಾಗಿ, ನಿಷಸಾದಚ- ಕುಳಿತುಕೊಂಡನು ॥೬೨॥ ತದಾ-ಆ ಕಾಲದಲ್ಲಿ, ತತಃ-ಅಗದಾಯುಧಪ್ರಹಾರದ ದೆಸೆಯಿಂದ,ವಿಹ್ವಲಂ-ಪೀಡಿತನಾದ, ದಶಗ್ರೀವಂ-ರಾವಣನನ್ನು, ಸೋಽರ್ಜುನಃ-ಆ ಕಾರ್ತವೀರ್ಯನು, ಲಕ್ಷ್ಯ-ಕಂಡು, ಸಹಸಾ-ಜಾಗ್ರತೆಯಾಗಿ, ಗರುತ್ಮಾನ್-ಗರುಡನು, ಪನ್ನಗಮಿವ, ಸರ್ಪವನ್ನಂತೆ, ಪ್ರತಿಜಗ್ರಾಹ-ಹಿಡಿದುಕೊಂ

---

ದನು ॥೫೫॥ ಆ ಸಮಯದಲ್ಲಿ ಕಾರ್ತವೀರ್ಯಾರ್ಜುನನಗದೆಯಾದರೆ, ಆ ದಶಕಂಠನ ಎದೆಯಲ್ಲಿ ಬೀಳಿಸಲ್ಪಟ್ಟದ್ದಾಗಿ, ಮಿಂಚಿನತೆರದಿ ಹೊಳೆಯುತ್ತಾ ಗಗನವನ್ನು ಭಂಗಾರದ ಬಣ್ಣಮುಳ್ಳದ್ದನ್ನಾಗಿ ಮಾಡಿದಂಥಾ ದ್ದಾಯಿತು,ಹಾಗೆಯೇ ಆ ನರನಾಥನ ವಕ್ಷಸ್ಥಲದಲ್ಲಿ ಬಾರಿಬಾರಿಗೂ ಬೀಳಿಸಲ್ಪಡುತಿರುವ ಆ ರಾವಣನ ಗದಾಯುಧವು ಮಹಾಗಿರಿಯಲ್ಲಿ ಬೀಳುತಿರುವ ಕೊಳ್ಳಿಯಂತೆ ಹೊಳೆಯುತಿತ್ತು ॥೫೭॥ ಪೂರ್ವಕಾಲದಲ್ಲಿ ಬಲಿ ಚಕ್ರವರ್ತಿಯು ಇಂದ್ರನೂ ಸಹಾ ಖೇದವಂ ಹೊಂದದೇ ಯುದ್ಧವಂಗೈದಂತೆ, ಆ ಅರ್ಜುನ ರಾವಣರೀರ್ವರು ಸಮವಾಗಿ ಕಾಳಗಿಸುತ್ತಾ ಖೇದವಂ ಹೊಂದದಿದ್ದರು ॥ ೫೮ ॥ ದೊಡ್ಡಗೂಳಿಗಳು ಕೊಂಬುಗಳಿಂ ಒಂದೊನ್ನೊಂದು ಹಾಯುವಂತೆಯು, ಆನೆಗಳು ದಂತಗಳಿಂದ ಹೊಡದಾಡುವಂತೆಯೂ, ಆ ನರರಾಕ್ಷಸರೀರ್ವರು ಪರಸ್ಪರವಾಗಿ ಗಧಾಯುಧಗಳಿಂದ ಹೊಡೆಯುತಿದ್ದರು ॥೫೯॥ ಸಮನಂತರಕಾಲದೋಳ್ ಆ ರಣರಂಗದಲ್ಲಿ ಕಡುಕೋಪಿಯಾದ ಕಾರ್ತ ವೀರ್ಯಾರ್ಜುನನಿಂದ ಸರ್ವ ಶಕ್ತಿಯಿಂದಲೂ,ಆ ಗದಾಯುಧವು ರಾವಣಾಸುರನ ಸ್ತನಮಧ್ಯಪ್ರದೇಶದಲ್ಲಿ ಹೊಡೆಯಲ್ಪಟ್ಟು,ದುರ್ಬಲವಾದ ಸೇನೆಯು ಭೂಮಿಯಲ್ಲಿ ಕತ್ತರಿಸಿ ಬೀಳುವಂತೆ ಬ್ರಹ್ಮವರದಿಂದ ಕೃತವಾದ ತ್ರಾಣೆಯುಳ್ಳ ದಶಕಂಠನ ಎದೆಯಲ್ಲಿಯೇ ಎರಡುತುಂಡುಗಳಾಗಿ ಬಿದ್ದುಹೋಯಿತು ॥೬೧॥ ಆ ರಾವಣನಾದರೇನೋ ಕಾರ್ತವೀರ್ಯಾರ್ಜುನನಿಂದ ಪ್ರೇರಿತವಾದ ಗದಾಪ್ರಹಾರದಿಂದ ಒಂದು ಬಾರು ಹಿಂಜರಗಿ ವಿಕಾರಧ್ವನಿಯಂಗೈಯುತ್ತಾ ಕುಳಿದನು ॥೬೨॥ ಆ ಸಮಯದಲ್ಲಿ ಬಹು ಬಲವಂತನಾದ ಕಾರ್ತವೀರ್ಯನು ರಾವಣನನ್ನು ಗದಾ ಪ್ರಹಾರದಿಂದ ಬಾಧಿತನಾದ ವನನ್ನಾಗಿ ಕಂಡು, ಗರುಡನು ಮಹಾಸರ್ಪವಂಹಿಡಿದು ಕೊಳ್ಳುವಂತೆ ಆವನನ್ನು ತ್ವರಿತವಾಗಿ ಹಿಡಿದುಕೊಂಡು, ಶ್ರೀಮನ್ನಾರಾಯಣಮೂರ್ತಿಯು ಬಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರುತ್ಮಾನಿವಪನ್ನಗಮ್ ॥೬೩॥ ಸತಂಬಾಹುಸಹಸ್ರೇಣಬಲಾದ್ಗೃಹ್ಯದಶಾನನಮ್ । ಬಬಂಧಬಲವಾನ್ರಾಜಾಬಲಿಂ ನಾರಾಯಣೋಯಥಾ॥೬೪॥ ಬಧ್ಯಮಾನೇದಶಗ್ರೀವೇಸಿದ್ಧಚಾರಣದೇವತಾಃ । ಸಾಧುಸಾಧ್ವಿತಿಭಾಷಂತಃಪ್ರಕಿರನ್ಕುಸುಮಾನಿವೈ।ಮೂರ್ಧ್ನಿರಾಜಾಧಿರಾಜಸ್ಯ ಕಾರ್ತವೀರ್ಯಸ್ಯರಾಘವ ॥೬೫॥ವ್ಯಾಘ್ರೋಮೃಗಮಿವಾದಾಯಮೃಗರಾಡಿವದಂತಿನಮ್ ॥ ನನಾದಹೈಹಯೋರಾಜಾಹರ್ಷಾದಂಬುದವನ್ಮುಹುಃ ॥೬೬॥ಪ್ರಹಸ್ತಸ್ತು ಸಮಾಶ್ವಸ್ತೋ ದೃಷ್ಟ್ವಾ ಬದ್ಧಂದಶಾನನಮ್ । ಸಹಿತೈರಾಕ್ಷಸೈಃಕ್ರುದ್ಧಃಅಭಿದುದ್ರಾವಪಾರ್ಥಿವಮ್॥೬೭॥ ನಕ್ತಂಚರಾಣಾಂವೇಗಸ್ತುತೇಷಾಮಾಪತತಾಂಬಭೌ। ಉದ್ಧೂತಆತಪಾಪಾಯೇಸಮುದ್ರಾಣಾಮಿವಾದ್ಭುತಮ್॥೬೮॥ ಮುಂಚಮುಂಚೇತಿಭಾಷಂತಸ್ತಿಷ್ಠ ತಿಷ್ಠೇತಿಚಾಸಕೃತ್॥ ಮುಸಲಾನಿಸಶೂಲಾನಿಉತ್ಸಸರ್ಜುಸ್ತದಾರ್ಜುನೇ ॥೬೯॥ ಅಪ್ರಾಪ್ತಾನ್ಯೇವತಾನ್ಯಾಶುಅಸಂಭ್ರಾಂತಸ್ತತೋಽರ್ಜುನಃ। ಆಯುಧಾನ್ಯಮರಾರೀಣಾಂಜಗ್ರಾಹಾರಿನಿಷೂದನಃ॥೭೦॥ ತತಸ್ತೈರೇವರಕ್ಷಾಂಸಿದುರ್ಧರ್ಷೈಃಪ್ರವರಾಯುಧೈಃ । ಭಿತ್ತ್ವಾವಿದ್ರಾವಯಾಮಾಸವಾಯುರಂಬುಧರಾನಿವ॥೭೧॥ ರಾಕ್ಷಸಾಂಸ್ತ್ರಾಸಯಿತ್ವಾ ತುಕಾರ್ತವೀರ್ಯಾರ್ಜುನಸ್ತದಾ।ರಾವಣಂಗೃಹ್ಯನಗರಂ

---

ಡನು ॥ ೬೩ ॥ ಬಲವಾನ್-ಬಲಿಷ್ಠನಾದ, ಸರಾಜಾ-ಆ ಕಾರ್ತವೀರ್ಯನು, ಬಾಹುಸಹಸ್ರೇಣ-ಸಾವಿರಭುಜಗಳಿಂದ, ಬಲಾತ್-ಬಲಾತ್ಕರಿಸಿ,ತಂದಶಾನನಂ-ಆ ರಾವಣನನ್ನು, ನಾರಾಯಣಃ-ಶ್ರೀಮಹಾವಿಷ್ಣುವು, ಬಲಿಂಯಥಾ-ಬಲಿಚಕ್ರವರ್ತಿಯನ್ನಂತೆ, ಬಬಂಧ-ಕಟ್ಟಿದನು ॥೬೪॥ ದಶಗ್ರೀವೇ – ರಾವಣನು, ಬಧ್ಯಮಾನೇಸತಿ-ಕಟ್ಟಲ್ಪಡುತ್ತಿರುವನಾಗ ತಿರಲೀಕಾಗಿ, ಸಿದ್ಧಚಾರಣದೇವತಾಃ-ಸಿದ್ಧರೂ, ಚಾರಣರೂ, ದೇವತೆಗಳೂ, ಸಾಧುಸಾಧ್ವಿತಿ- ವಳ್ಳೇದು ಒಳ್ಳೇದೂಯೆಂದು, ಭಾಷಂತಃ-ಮಾತನಾಡುತಿರುವರಾಗಿ, ಕುಸುಮಾನಿವೈ-ಪುಷ್ಪಗಳನ್ನಾದರೆ, ಹೆ ರಾಘವ-ಎಲೈ ಶ್ರೀರಾಮನೆ, ರಾಜಾಧಿರಾಜಸ್ಯ-ರಾಜಾಧಿರಾಜನಾದ, ಕಾರ್ತವೀರ್ಯಸ್ಯ-ಕಾರ್ತವೀರ್ಯಾರ್ಜುನನ, ಮೂರ್ಧ್ನಿ-ಮಂಡೆಮ್ಯಾಲೆ, ಪ್ರಕಿರನ್- ಸುರಿಸಿದರು ॥ ೬೫ ॥ ವ್ಯಾಘ್ರಃ-ಹುಲಿಯು, ಮೃಗಮಿವ-ಚಿಗರಿಯನ್ನಂತೆ, ಮೃಗರಾಟ್-ಸಿಂಹವು,ದಂತಿನಮಿವ-ಆನೆಯನ್ನಂತೆ-ಆದಾಯ-ಹಿಡುಕೊಂಡು, ಹೈಹಯೋರಾಜಾ-ಹೇಹಯದೇಶಾಧೀಶ್ವರನಾದ ಕಾರ್ತವೀರ್ಯನು, ಹರ್ಷಾತ್-ಸಂತೋಷಪಡದೆಶಯಿಂದ, ಮುಹುಃ-ಬಾರಿಬಾರಿಗೂ, ಅಂಬುದವತ್-ಮೇಘದಂತೆ, ನನಾದ-ಘರ್ಜಿಸಿದನು॥ ಸಮಾಶ್ವಸ್ತಃ-ಸಮಾಧಾನ ಗೊಳಿಸಲ್ಪಟ್ಟ, ಪ್ರಹಸ್ತಸ್ತು – ಪ್ರಹಸ್ತನಾದರೆ, ದಶಾನನಂ-ರಾವಣನನ್ನು.ಬದ್ಧಂ-ಬದ್ಧನನ್ನಾಗಿ, ದೃಷ್ಟ್ವಾ-ಕಂಡು, ಕ್ರುದ್ಧಃ-ಕೋಪಿಷ್ಠನಾಗಿ, ತೈರಾಕ್ಷಸೈಸ್ಸಹ-ಆ ರಾಕ್ಷಸರಿಂ ದೊಡಗೂಡಿ, ಪಾರ್ಥಿವಂ-ಕಾರ್ತವೀರ್ಯನನ್ನು ಕುರಿತು, ಅಭಿದುದ್ರಾವ-ಓಡಿ ಬಂದನು॥೬೭॥ ಆಪತತಾಂ-ಬರುತಿರುವ, ತೇಷಾಂ-ನಕ್ತಂಚರಾಣಾಂ-ಆ ರಾಕ್ಷಸರ, ವೇಗಸ್ತು-ವೇಗವಾದರೆ, ಆತಪಾಪಾಯೇ-ಬಿಸಲು ಕಾಲ ಹೋಗುತಿರಲೀಕಾಗಿ, ಉದ್ಧೂತಃ-ಹುಟ್ಟಿದ,ಸಮುದ್ರಾಣಾಂ-ಸಮುದ್ರಗಳ, ವೇಗಇವ-ವೇಗದಂತೆ, ಅದ್ಭುತಂ-ಆಶ್ಚರ್ಯಕರವಾಗಿ, ಬಭೌ-ಹೊಳೆಯುತಿತ್ತು ॥ ೬೮ ॥ಮುಂಚಮುಂಚೇತಿ-ಬಿಡು ಬಿಡೂ ಎಂದು ತಿಷ್ಠತಿಷ್ಠೇತಿಚ-ನಿಲ್ಲು ನಿಲ್ಲೂ ಎಂದು, ಅಸಕೃತ್-ಬಾರಿಬಾರಿಗೂ, ಭಾಷಂತಃ-ಹೇಳುತ್ತಿರುವರಾಗಿ, ಸಶೂಲಾನಿ-ಶೂಲಾಯುಧಗಳಿಂ ದೊಡಗೂಡಿದ, ಮುಸಲಾನಿ-ವನಿಕೆಗಳನ್ನು, ಅರ್ಜುನೇ-ಕಾರ್ತವೀರ್ಯನಲ್ಲಿ, ತದಾ-ಆ ಕಾಲದಲ್ಲಿ, ಉತ್ಸಸರ್ಜುಃ-ಬಿಟ್ಟರು, ॥ ೬೯ ॥ ತತಃ-ಬಳಿಕ, ಅಸಂಭ್ರಾಂತಃ-ತ್ವರೆ ಬೀಳದಿರುವನಾಗಿ, ಅರ್ಜುನಃ-ಅರ್ಜುನನು, ಅರಿನಿಷೂದನಃ-ಶತೃಗಳನ್ನೆಲ್ಲಾ ಸಂಹಾರ ಮಾಡುತ್ತಿರುವನಾಗಿ, ಅಪ್ರಾಪ್ತಾನ್ಯೇವ-ಮ್ಯಾಲೆ ಬೀಳದೆ ಇರುವ, ಅಮರಾರೀಣಾಂ-ರಾಕ್ಷಸರ, ತಾನ್ಯಾಯುಧಾನಿ-ಆ ಆಯುಧಗಳನ್ನು, ಆಶು-ಜಾಗ್ರತೆಯಾಗಿ, ಜಗ್ರಾಹ – ಹಿಡಿಕೊಂಡನು ॥ ೭೦ ॥ ತತಃ-ಬಳಿಕ, ದುರ್ಧರ್ಷೈಃ-ಧರಿಸಲಸಾಧ್ಯಂಗಳಾದ, ತೈಃಪ್ರವರಾಯುಧೈಃ-ಆದೆ ದೊಡ್ಡಾಯುಧಗಳಿಂದ, ರಕ್ಷಾಂಸಿ-ರಾಕ್ಷಸರನ್ನು, ವಾಯುಃ-ಘಾಳಿಯು, ಅಂಬುಧರಾನಿವ-ಮೇಘಗಳನ್ನಂತೆ-ಭಿತ್ವಾ-ಛೇದಿಸಿ, ವಿದ್ರಾವಯಾಮಾಸ-ಓಡಿಸಿದನು ॥೭೧॥ ತದಾ-ಆ ಕಾಲದಲ್ಲಿ, ಕಾರ್ತವೀ

---

ಚಕ್ರವರ್ತಿಯಂ ಬಂಧಿಸಿದತೆರದಿ, ಸಾವಿರಭುಜಗಳಿಂದಲೂ ಘಟ್ಟಿಯಾಗಿ ಹಿಡಿದುಕೊಂಡು ಹಿಂಗಟ್ಟು ಮುಂಗಟ್ಟು ಕಟ್ಟಿದವನಾದನು ॥೬೪॥ ಎಲೈ ರಘುಕುಲತಿಲಕನೇ ! ಆ ರಾವಣನು ಬಧ್ಯಮಾನನಾಗುತಿರಲೀಕಾಗಿ, ಸಿದ್ಧ ಚಾರಣರೇ ಮುಂತಾದ ದೇವತೆಗಳೆಲ್ಲರು, ಬಲುಚಂದವಾಯಿತೆಂದು ನುಡಿಯುತ್ತಾ, ರಾಜಾಧಿರಾಜನಾದ ಆ ಕಾರ್ತವೀರ್ಯಾರ್ಜುನನಮಂಡೆಯಲ್ಲಿ ಪುಷ್ಪವರ್ಷಂಗಳಂ ಸುರಿಸುತ್ತಲಿದ್ದರು ॥೬೫॥ ಹುಲಿಯು ಹುಲ್ಲೆಯನ್ನು ಕಚ್ಚಿಕೊಂಡು ಹೋಗುವಂತೆಯೂ, ಸಿಂಹವು ಆನೆಯಂ ಹಿಡಿಯುವಂತೆಯೂ, ಆ ಹೇಹಯರಾಜನು ರಾವಣನಂ ಹಿಡಿದುಕೊಂಡು, ಮಹಾಮೇಘವು ಗರ್ಜಿಸುವಂತೆ ಹರ್ಷಾಟ್ಟಹಾಸವಂಗೈದನು ॥೬೬॥ ಆ ಸಮಯದಲ್ಲಿ ಪ್ರಹಸ್ತನಾದರೆ ಸ್ವಲ್ಪ ಸುದಾರಿಸಿಕೊಂಡು, ಬದ್ಧನಾಗಿರುವ ರಾವಣನಂ ಕಂಡು ಕಡು ಕುಪಿತನಾಗಿ ಆ ರಾಕ್ಷಸರಿಂದೊಡಗೂಡಿ, ಅರ್ಜುನರಾಜನಂ ಕುರಿತು ಓಡಿಬಂದನು ॥೬೭॥ ಓಡೋಡಿ ಬರುತಿರುವ ಆ ರಾಕ್ಷಸರ ವೇಗವಾದರೆ, ವರ್ಷಾಕಾಲದಲ್ಲಿ ಸಮುದ್ರೋದ್ರೇಕ ವೇಗದಂತೆ ಅತ್ಯಾಶ್ಚರ್ಯಕರವಾಗಿತ್ತು ॥೬೮॥ ಆ ಸಮಯದಲ್ಲಿ ಬಿಡು ಬಿಡೆಂದು ಕೂಗುತಲೂ, ಬಾರಿಬಾರಿಗೂ ನಿಲ್ಲುನಿಲ್ಲೆಂದು ಅರುಚುತ್ತಲೂ, ಮುಸಲಾಯುಧಗಳನ್ನೂ ಶೂಲಾಯುಧಗಳನ್ನೂ ಸಹಾ ಆ ರಾಜನಲ್ಲಿ ಸುರಿಸುತ್ತಾ ಬರುತ್ತಿರಲೂ, ಶತೃನಾಶಕನಾದ ಆ ನರನಾಥನು ಸಂಭ್ರಾಂತನಾಗದೆ, ಆ ಸುರಾರಿಗಳ ಆ ಯುಧಗಳಂ ಕಿತ್ತುಕೊಂಡು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರವಿವೇಶಸುಹೃದ್ವೃತಃ ॥೨೦॥ ಸಕೀರ್ಯಮಾಣಃಕುಸುಮಾಕ್ಷತೈರ್ದ್ವಿಜೈರ್ನಿಜೈಸ್ಸ್ವಪೌರೈಃಪುರುಹೂತಸನ್ನಿಭಃ। ತ
ತ್ರೋರ್ಜುನಸ್ಸಂಪ್ರವಿವೇಶತಾಂಪುರೀಂಬಲಿಂನಿಗೃಹ್ಯೇವಸಹಸ್ರಲೋಚನಃ ... ... ॥೨೩॥

—...ಇತಿಶ್ರೀಮದುತ್ತರರಾಮಾಯಣೆ ದ್ವಾತ್ರಿಂಶಸ್ಸರ್ಗಃ...—

ರಾವಣಗ್ರಹಣಂತತ್ತು ವಾಯುಗ್ರಹಣಸನ್ನಿಭಮ್ । ಋಷಿಃಪುಲಸ್ತ್ಯಶುಶ್ರಾವಕಥಿತಂದಿವಿದೈವತೈಃ ॥೧॥ ತತಃಪುತ್ರ
ಸುತಸ್ನೇಹಾತ್ಕಂಪ್ಯಮಾನೋಮಹಾಧೃತಿಃ । ಮಾಹಿಷ್ಮತೀಪತಿಂದ್ರಷ್ಟುಮಾಜಗಾಮಮಹಾನೃಷಿಃ ॥೨॥ ಸವಾಯುಮಾ
ರ್ಗಮಾಸ್ಥಾಯವಾಯುತುಲ್ಯಗತಿರ್ದ್ವಿಜಃ। ಪುರೀಂಮಾಹಿಷ್ಮತೀಂಪ್ರಾಪ್ತೋ ಮನಸ್ಸಂಪಾತವಿಕ್ರಮಃ॥೩॥ಸೋಮರಾವತಿ
ಸಂಕಾಶಾಂಹೃಷ್ಟಪುಷ್ಟಜನಾವೃತಾಮ್ । ಪ್ರವಿವೇಶಪುರೀಂಬ್ರಹ್ಮಾ ಇಂದ್ರಸ್ಯೇವಾಮರಾವತೀಮ್॥೪॥ಪಾದಚಾರಮಿವಾದಿ

---

ರ್ಯಾರ್ಜುನಃ-ಕಾರ್ತವೀರ್ಯಾರ್ಜುನನು, ರಾಕ್ಷಸರ್ಷ-ರಕ್ಕಸರನ್ನು, ತ್ರಾಸಯಿತ್ವಾ-ಹೆದರಿಸಿ, ರಾವಣಂ-ರಾವಣನನ್ನು, ಗೃಹ್ಯ-ಹಿಡಿದುಕೊಂಡು, ಸುಹೃ
ದ್ವೃತಃ-ಸ್ನೇಹಿತರಿಂದೊಡಗೂಡಿದವನಾಗಿ, ನಗರಂ-ಪಟ್ಟಣವನ್ನು, ಪ್ರವಿವೇಶ-ಹೊಕ್ಕಲುದ್ಯುಕ್ತನಾದನು ॥ ೨೦ ॥ ಪುರುಹೂತ ಸನ್ನಿಭಃ – ಪುರು
ಹೂತ-ದೇವೇಂದ್ರನಿಗೆ, ಸನ್ನಿಭಃ-ಸಮಾನನಾದ, ಅರ್ಜುನಃ-ಕಾರ್ತವೀರ್ಯನು, ನಿಜೈಃ-ಸ್ವಕೀಯರಾದ, ಸ್ವಪೌರೈಃ-ತನ್ನ ಪಟ್ಟಣಸ್ಥರಾದ, ದ್ವಿಜೈಃ-
ಬ್ರಾಹ್ಮಣರಿಂದ, ಕುಸುಮಾಕ್ಷತೈಃ-ಪುಷ್ಪಾಕ್ಷತೆಗಳಿಂದ ಕೀರ್ಯಮಾಣಃ-ಎರಚಲ್ಪಟ್ಟವನಾಗಿ, ಬಲಿಂ-ಬಲಿಚಕ್ರವರ್ತಿಯನ್ನು, ನಿಗೃಹ್ಯ-ನಿಗ್ರಹಿಸಿ, ಸಹಸ್ರ
ಲೋಚನಇವ-ದೇವೇಂದ್ರನಂತೆ, ತತಃ-ಬಳಿಕ, ತಾಂಪುರೀಂ-ಆ ಪಟ್ಟಣವನ್ನು, ಸಂಪ್ರವಿವೇಶ-ಹೊಕ್ಕನು ॥ ೨೩ ॥

—...ಇತಿಶ್ರೀಮದುತ್ತರ ರಾಮಾಯಣೆ ದ್ವಾತ್ರಿಂಶಸ್ಸರ್ಗಃ...—

---

ಪುಲಸ್ತ್ಯಃ-ಋಷಿಃ-ಪುಲಸ್ತ್ಯನೆಂಬ ಋಷಿಯು, ದಿವಿ-ಸ್ವರ್ಗಲೋಕದಲ್ಲಿ, ದೈವತೈಃ-ದೇವತೆಗಳಿಂದ, ಕಥಿತಂ-ಹೇಳಲ್ಪಟ್ಟ, ವಾಯುಗ್ರಹಣ ಸನ್ನಿ
ಭಂ-ವಾಯುವನ್ನು ಹಿಡಿದು ಕೊಳ್ಳುವದಕ್ಕೆ ಸಮಾನವಾದ, ತತ್-ರಾವಣಗ್ರಹಣಂತು-ಆ ರಾವಣನ ಬಂಧನವನ್ನು, ಶುಶ್ರಾವ-ಕೇಳಿದನು॥೧॥ತತಃ-ಬ
ಳಿಕ,ಪುತ್ರಸುತಸ್ನೇಹಾತ್-ಪೌತ್ರನೆಂಬ ಸ್ನೇಹದ ದೆಸೆಯಿಂದ, ಕಂಪ್ಯಮಾನಃ-ದಯೆಯುಳ್ಳವನಾಗಿ, ಮಹಾಧೃತಿಃ-ಮಹಾಧೈರ್ಯಶಾಲಿಯಾದ, ಮಹಾನ್-ದೊ
ಡ್ಡವನಾದ, ಋಷಿಃ-ಪುಲಸ್ತ್ಯರುಷಿಯು,ಮಾಹಿಷ್ಮತೀಪತಿಂ-ಕಾರ್ತವೀರ್ಯಾರ್ಜುನನನ್ನು, ದ್ರಷ್ಟುಂ-ನೋಡುವದಕೋಸ್ಕರ, ಆಜಗಾಮ-ಬಂದನು ॥೨॥
ವಾಯುತುಲ್ಯಗತಿಃ-ವಾಯುವೇಗಕ್ಕೆಸಮಾನವೇಗವುಳ್ಳ, ಸದ್ವಿಜಃ-ಆ ಪುಲಸ್ತ್ಯಬ್ರಹ್ಮನು, ವಾಯುಮಾರ್ಗಂ-ವಾಯುಮಾರ್ಗದಲ್ಲಿ, ಆಸ್ಥಾಯ-ಹೊರಟು,
ಮನಸ್ಸಂಪಾತವಿಕ್ರಮಃ-ಮನೋವೇಗದಂತೆ ವೇಗ ಉಳ್ಳವನಾಗಿ, ಮಾಹಿಷ್ಮತೀಂಪುರೀಂ-ಮಾಹಿಷ್ಮತೀ ಪಟ್ಟಣವನ್ನು ಕುರಿತು, ಪ್ರಾಪ್ತಃ-ಬಂದನು ॥೩॥
ಸಬ್ರಹ್ಮಾ-ಆ ಪುಲಸ್ತ್ಯನು, ಅಮರಾವತಿ ಸಂಕಾಶಾಂ-ಅಮರಾವತೀಪಟ್ಟಣಕ್ಕೆ ಸಮಾನವಾದ, ಹೃಷ್ಟಪುಷ್ಟಜನಾವೃತಾಂ-ಹೃಷ್ಟ-ಸಂತೋಷಗೊಡು
ಪುಷ್ಟ-ಪೋಷಿತರಾದ, ಜನ-ಜನರಿಂದ, ಆವೃತಾಂ-ಸುತ್ತಿಕೊಳ್ಳಲ್ಪಟ್ಟದ್ದಾಗ್ಗಿರಿಂಪಲೇವೆ, ಇಂದ್ರಸ್ಯ-ದೇವೇಂದ್ರನ, ಅಮರಾವತೀಮಿವ-ಅಮರಾವತೀ
ಯಂತಿರುವ, ಪುರೀಂ-ಪಟ್ಟಣವನ್ನು, ಪ್ರವಿವೇಶ-ಹೊಕ್ಕನು ॥ ೪ ॥ ಪಾದಚಾರಂ-ಪಾದಚಾರಿಯಾದ, ಆದಿತ್ಯಮಿವ-ಸೂರ್ಯನಂತೆ-ನಿಷ್ಪ್ರತಂತಂ – ಬರುತಿ

---

ಅವುಗಳಿಂದಲೇ ಆ ರಕ್ಕಸರಂ ಹೊಡದು, ಜಂಝಾಮಾರುತನು ಮೇಘಂಗಳನ್ನೋಡಿಸುವತೆರದಿ ಅವರೆಲ್ಲರಂ ತರುಬಿ
ರಾವಣನಂ ತೆಗದುಕೊಂಡು, ಸ್ನೇಹಿತರಿಂದೊಡಗೂಡಿ, ನಗರವಂ ಹೊಕ್ಕಲುದ್ಯುಕ್ತನಾದನು ॥೨೦॥ ಇಂದ್ರಸದೃಶ
ನಾದ ಆ ಕಾರ್ತವೀರ್ಯಾರ್ಜುನನು ತನ್ನ ಪುರವಾಸಿಗಳಾದವರಿಂದಲೂ ಬ್ರಾಹ್ಮಣರಿಂದಲೂ, ಸಹಾ ಎರಚಲ್ಪಟ್ಟಪು
ಷ್ಪಾಕ್ಷತೆಗಳುಳ್ಳವನಾಗಿ, ಬಲಿ ಚಕ್ರವರ್ತಿಯಂ ನಿಗ್ರಹಿಸಿ ಇಂದ್ರನು ಅಮರಾವತೀ ಪುರಿಯಂ ಪ್ರವೇಶಿಸುವಂತೆ ಆ
ರಾವಣನಂ ನಿಗ್ರಹಿಸಿ, ತನ್ನ ರಾಜಧಾನಿಯಾದ ಮಾಹಿಷ್ಮತೀ ಪುರವಂ ಪ್ರವೇಶಿಸಿದವನಾದನು ॥೨೩॥

—...*ಉತ್ತರಕಾಂಡದಲ್ಲಿನ ೩೨ನೇ ಸರ್ಗಂ ಮುಗಿದುದು*...—

ಸಮನಂತರಕಾಲದೊಳ್ ಮಹಾ ಧೈರ್ಯಶಾಲಿಯಾದ ಮತ್ತೂ ಮನೋವೇಗದಂತೆ ಬಲುವೇಗವುಳ್ಳ ಪುಲಸ್ತ್ಯ
ನೆಂಬ ಮಹಾಮುನಿಯು ವಾಯುವಿನ ಗ್ರಹಣದಂತೆ ಬಲು ಅಸಾಧ್ಯವಾದ ರಾವಣನ ಬಂಧನವನ್ನು, ಸ್ವರ್ಗಲೋಕದ
ಲ್ಲಿ ದೇವತೆಗಳ ಮುಖದಿಂದ ಕೇಳಿ, ದಯೆಯುಳ್ಳವನಾಗಿ, ಮಾಹಿಷ್ಮತೀ ಪುರಿಗಧಿಪತಿಯಾದ ಕಾರ್ತವೀರ್ಯಾರ್ಜುನನಂ
ಕಾಣುವದಕ್ಕೋಸ್ಕರ, ವಾಯುವಿನಂತೆ ಬಲುವೇಗಮುಳ್ಳವನಾಗಿ, ಗಗನಮಾರ್ಗವನ್ನೈದಿ ಆ ರಾಜನ ನಗರವಂ ಹೊಂ
ದಿ, ಅಮರಾವತೀ ಪುರಿಗೆ ಸಮಾನವಾಗಿಯೂ, ಸಂತುಷ್ಟರಾಗಿಯೂ ಪುಷ್ಟರಾಗಿಯೂ ಇರುವ ಜನಗಳಿಂದ ತುಂಬಿರು
ವದಾಗಿಯೂ ದೇವೇಂದ್ರನ ಸಂಬಂಧವಾದ ಅಮರಾವತೀಪುರಿಯಂತೆ ಇರುವದಾಗಿಯೂ ಆಗಿರುವ ಆ ಕಾರ್ತವೀರ್ಯಾ
ರ್ಜುನನ ರಾಜಧಾನಿಯನ್ನು, ಆ ಬ್ರಹ್ಮನು ಪ್ರವೇಶಿಸಿದವನಾದನು ॥೪॥ ಅನಂತರದಲ್ಲಿ ಅರಮನೆಯ ದ್ವಾರಪಾಲಕ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ಯಂನಿಷ್ಪತಂತಂಮಹಾಮುನಿಮ್ । ತತಸ್ತಂಪ್ರತ್ಯಭಿಜ್ಞಾಯದ್ವಾಸ್ಸ್ಥಾ ರಾಜ್ಞೇನ್ಯವೇದಯನ್ ॥೫॥ ಪುಲಸ್ತ್ಯ ಇಹಸಂಪ್ರಾಪ್ತಃ ಇತಿಶ್ರುತ್ವಾತುಹೈಹಯಃ। ಶಿರಸ್ಯಂಜಲಿಮಾಧಾಯಪ್ರತ್ಯಗಚ್ಛದ್ದ್ವಿಜೋತ್ತಮಮ್॥೬॥ ಪುರೋಹಿತೋಸ್ಯಗೃಹ್ಯಾರ್ಘ್ಯಂ ಮಧುಪರ್ಕಂತಥೈವಚ। ಪುರಸ್ತಾತ್ಪ್ರಯಯೌರಾಜ್ಞಃ ಇಂದ್ರಸ್ಯೇವಬೃಹಸ್ಪತಿಃ ॥೭॥ ತತಸ್ತಮೃಷಿಮಾಯಾಂತಮುದ್ಯಂತಮಿವಭಾಸ್ಕರಮ್। ಅರ್ಜುನೋದೃಶ್ಯಸಂಪ್ರಾಪ್ತಂವವಂದೇಂದ್ರಇವೇಶ್ವರಮ್॥ ಸತಸ್ಯಮಧುಪರ್ಕಂಚಪಾದ್ಯಮರ್ಘ್ಯಂಚದಾಪಯನ್ । ಪುಲಸ್ತ್ಯಮಾಹರಾಜೇಂದ್ರೋಹರ್ಷಗದ್ಗದಯಾಗಿರಾ ॥೯॥ ಅದ್ಯೈಯಮಮರಾವತ್ಯಾತುಲ್ಯಾಮಾಹಿಷ್ಮತೀಕೃತಾ। ಅದ್ಯಾಹಂತುದ್ವಿಜೇಂದ್ರಂತ್ವಾಂಯಸ್ಮಾತ್ಪಶ್ಯಾಮಿದುರ್ದಶಮ್ ॥೧೦॥ ಅದ್ಯಮೇಕುಶಲಂದೇವಅದ್ಯಮೇಕುಲಮುದ್ಧೃತಮ್ । ಅದ್ಯಮೇಸಫಲಂಜನ್ಮ ಅದ್ಯಮೇಸಫಲಂತಪಃ । ಯತ್ತೇದೇವಗಣೈರ್ವಂದ್ಯೌವಂದೇಹಂಚರಣಾವಿಮೌ ॥೧೧॥

ರುವ, ಮಹಾಮುನಿಂ–ಮಹರ್ಷಿಯಾದ, ತಂ–ಆ ಪುಲಸ್ತ್ಯಬ್ರಹ್ಮನನ್ನು, ಪ್ರತ್ಯಭಿಜ್ಞಾಯ–ತಿಳಿದುಕೊಂಡು, ತತಃ–ಬಳಿಕ, ದ್ವಾಸ್ಸ್ಥಾಃ–ದ್ವಾರಪಾಲಕರು, ರಾಜ್ಞೇ–ಅರಸಿಗೆ, ನ್ಯವೇದಯನ್–ತಿಳಿಸಿದರು ॥ ೫ ॥ ಪುಲಸ್ತ್ಯಃ–ಪುಲಸ್ತ್ಯಬ್ರಹ್ಮನು, ಇಹ–ಇಲ್ಲಿಗೆ, ಸಂಪ್ರಾಪ್ತಃ ಇತಿ–ಬಂದಿಹಾನೆಂದು, ಶ್ರುತ್ವಾತು–ಕೇಳಿಯಾದರೆ, ಹೈಹಯಃ–ಹೇಹಯ ದೇಶಾಧೀಶ್ವರನಾದ ಕಾರ್ತವೀರ್ಯನು, ಶಿರಸಿ–ಶಿರಸ್ಸಿನಲ್ಲಿ,ಅಂಜಲಿಂ–ಅಂಜಲಿಯನ್ನು,ಆಧಾಯ– ಇರಿಸಿಕೊಂಡು, ದ್ವಿಜೋತ್ತಮಂ–ಬ್ರಾಹ್ಮಣೋತ್ತಮನಾದ, ಪುಲಸ್ತ್ಯಬ್ರಹ್ಮನನ್ನು ಕುರಿತು, ಆಗಚ್ಛತ್–ಎದುರಾಗಿ ಬಂದನು ॥ ೬ ॥ ಅಸ್ಯ–ಈ ರಾಜನ, ಪುರೋಹಿತಃ–ಪುರೋಹಿತನು, ಅರ್ಘ್ಯಂ–ಅರ್ಘ್ಯಪಾತ್ರೆಯನ್ನು, ತಥೈವ–ಹಾಗೆಯೆ, ಮಧುಪರ್ಕಂಚ–ಮಧುಪರ್ಕವನ್ನು, ಗೃಹ್ಯ–ತೆಗದುಕ್ಕೊಂಡು, ಇಂದ್ರಸ್ಯ–ಇಂದ್ರನ, ಪುರಸ್ತಾತ್–ಮುಂದುಗಡೆ, ಬೃಹಸ್ಪತಿರಿವ–ಬೃಹಸ್ಪತಿಯಂತೆ, ರಾಜ್ಞಃ–ಕಾರ್ತವೀರ್ಯನ, ಪುರಸ್ತಾತ್–ಮುಂದುಗಡೆ, ಪ್ರಯಯೌ – ಹೊರಟು ಬಂದನು ॥ ೭ ॥ ತತಃ–ಅನಂತರದಲ್ಲಿ, ಉದ್ಯಂತಂ–ಉದಯಿಸಿರುವ, ಭಾಸ್ಕರಮಿವ–ಸೂರ್ಯನಂತೆ– ಆಯಾಂತಂ–ಬರುತಿರುವ, ತಮೃಷಿಂ–ಆ ಪುಲಸ್ತ್ಯಬ್ರಹ್ಮನನ್ನು, ಅರ್ಜುನಃ–ಕಾರ್ತವೀರ್ಯನು, ಇಂದ್ರಃ–ದೇವೇಂದ್ರನು, ಸಂಪ್ರಾಪ್ತಂ–ಬಂದಂಥ, ಈಶ್ವರಮಿವ–ಈಶ್ವರನನ್ನೋಪಾದಿಯಲ್ಲಿ, ದೃಷ್ಟ್ವಾ–ಕಂಡು, ವವಂದೇ–ವಂದಿಸಿದನು ॥ ೮ ॥ ಸಃರಾಜೇಂದ್ರಃ–ಆ ರಾಜಶ್ರೇಷ್ಠನು, ತಸ್ಯ–ಆ ಪುಲಸ್ತ್ಯನಿಗೆ, ಮಧುಪರ್ಕಂ–ಮಧುಪರ್ಕವನ್ನು, ಪಾದ್ಯಂ–ಪಾದ್ಯವನ್ನು, ಅರ್ಘ್ಯಂಚ–ಅರ್ಘ್ಯವನ್ನು ಕೂಡಾ, ದಾಪಯನ್–ಕೊಡಿಸಿದಂಥವನಾಗಿ, ಹರ್ಷಗದ್ಗದಯಾ–ಹರ್ಷ–ಸಂತೋಷೋದ್ರೇಕದಿಂದ, ಗದ್ಗದಯಾ–ನಿಸ್ವರಮಾದ, ಗಿರಾ–ಮಾತಿನಿಂದ, ಪುಲಸ್ತ್ಯಂ–ಪುಲಸ್ತ್ಯಬ್ರಹ್ಮನನ್ನು ಕುರಿತು, ಆಹ–ಹೇಳಿದನು ॥ ೯ ॥ ಅದ್ಯ–ಈಗ, ಇಯಂ ಮಾಹಿಷ್ಮತೀ–ಈ ಮಾಹಿಷ್ಮತೀ ಪಟ್ಟಣವು, ಅಮರಾವತ್ಯಾ– ಅಮರಾವತೀ ಯೊಡನೆ, ತುಲ್ಯಾ – ಸಮಾನವಾಗಿ, ಕೃತಾ–ಮಾಡಲ್ಪಟ್ಟಿತು, ಯಸ್ಮಾತ್–ಯಾವ ಕಾರಣದ ದೆಸೆಯಿಂದ, ಅಹಂ–ನಾನು, ದ್ವಿಜೇಂದ್ರಂ–ಬ್ರಾಹ್ಮಣಶ್ರೇಷ್ಠನಾದ, ದುರ್ದಶಂ–ದರ್ಶನ ಮಾಡುವದಕ್ಕೆ ದುರ್ಲಭನಾದ ತ್ವಾಂ–ನಿನ್ನನ್ನು, ಪಶ್ಯಾಮಿ–ನೋಡುವೆನೊ ॥ ೧೦ ॥ ಯತ್ – ಯಾವಕಾರಣದ ದೆಸೆಯಿಂದ, ದೇವಗಣೈಃ–ದೇವತಾತಂಡಗಳಿಂದ, ವಂದ್ಯೌ–ನಮಸ್ಕರಣೀಯಗಳಾದ, ತೇ – ನಿನ್ನ, ಇಮೌ–ಚರಣೌ–ಈ ಪಾದಗಳನ್ನು, ಅಹಂ – ನಾನು, ವಂದೇ–ನಮಸ್ಕಾರ ಮಾಡುವೆನೊ, ತತ್–ಆ ಕಾರಣದ ದೆಸೆಯಿಂದ, ಹೇದೇವ – ಎಲೋಸ್ವಾಮಿಯೆ, ಅದ್ಯ–ಈಗ, ಮೇ–ನನಗೆ, ಕುಶಲಂ–ಕ್ಷೇಮವು, ಅದ್ಯ–ಈಗ, ಮೇ–ನನ್ನ, ಕುಲಂ–ಕುಲವು, ಉದ್ಧೃತಂ–ಉದ್ಧಾರವನ್ನು ಹೊಂದಿತು, ಅದ್ಯ–ಈಗ, ಮೇ–ನನ್ನ–ಜನ್ಮ–ಉತ್ಪತ್ತಿಯು, ಸಫಲಂ–ಸಫಲವಾಯಿತು, ಅದ್ಯ–ಈಗ, ಮೇ–ನನ್ನ, ತಪಃ–ತಪಸ್ಸು, ಸಫಲಂ–ಸಫಲವಾಯಿತು ॥ ೧೧ ॥ ಹೆಬ್ರಂ

ಉ, ಪಾದಚಾರಿಯಾಗಿ ಸೂರ್ಯನಂತೆ ಬರುತಿರುವ ಆ ಪುಲಸ್ತ್ಯನೆಂಬ ಮಹಾಮುನಿಯಂ ಕಂಡು ರಾಜನಿಗರುಹಿದರು ॥ ಆ ಹೇಹಯ ದೇಶಾಧಿಪತಿಯು ಪುಲಸ್ತ್ಯಮಹಾಮುನಿಯು ಬಂದಿರುವನೆಂದು ಕೇಳಿ, ಮಂಡೆಯಲ್ಲಿ ಕೈಗಳಂ ಮೊಗಚಿಟ್ಟುಕೊಂಡು ಆ ಬ್ರಾಹ್ಮಣೋತ್ತಮನಿಗೆದುರಾಗಿ ಬರಲುದ್ಯುಕ್ತನಾಗಲೂ ಇಂದ್ರನ ಮುಂದುಗಡೆ ಬೃಹಸ್ಪತಿಯು ತೆರಳುವ ತೆರದಿ, ಆ ರಾಜನ ಪುರೋಹಿತನು ಅರ್ಘ್ಯವನ್ನೂ ಮಧುಪರ್ಕವನ್ನೂ ಸಹಾ ತೆಗದುಕೊಂಡು ಪುರೋಭಾಗದಲ್ಲಿ ಹೊರಟನು ॥೭॥ ಅನಂತರದಲ್ಲಿ ಉದಯಿಸಿರುವ ಸೂರ್ಯನಂತೆ ಬರುತಿರುವ ಆ ಮಹರ್ಷಿಯಂ ಕಂಡು ಕಾರ್ತವೀರ್ಯನು, ದೇವೇಂದ್ರನು ಸಂಪ್ರಾಪ್ತನಾದ ಈಶ್ವರನಂ ಕುರಿತು ವಂದಿಸುವಂತೆ ವಂದಿಸಿ,ಮಧುಪರ್ಕ ಅರ್ಘ್ಯ, ಪಾದ್ಯಾದಿಗಳನ್ನು ಕೊಡಿಸಿದವನಾಗಿ, ಹರ್ಷದಿಂದ ಗದ್ಗದಧ್ವನಿಯುಳ್ಳವನಾಗಿಂತೆಂದನು ॥೯॥ ಎಲೈ ಪೂಜ್ಯನೇ! ಬ್ರಾಹ್ಮಣೋತ್ತಮನಾದ ಮತ್ತು ದರ್ಶನವಂಗೈಯ್ಯಲೂ ದುರ್ಲಭನಾದ ನಿನ್ನ ದರ್ಶನದಿಂದ ಈಗ ಈಮಾಹಿಷ್ಮತೀಪುರಿಯು ಅಮರಾವತೀ ನಗರಿಗೆ ಸಮಾನವಾದಂಥಾದ್ದಾಯಿತು ॥೧೦॥ಎಲೈ ಭಗವಂತನೇ ! ದೇವಗಣಗಳಿಂದ ವಂದಿಸಲರ್ಹವಾದ ಈ ತಮ್ಮ ಚರಣಸರೋಜಗಳಂ ಕುರಿತು ನಾನು ವಂದನವಂ ಗೈದವನಾದೆ ನಾದಕಾರಣ, ಈಗ ಎನ್ನ ಕುಲ ಮುದ್ಧಾರವಾಗಿ ಎನಗೆ ಕ್ಷೇಮವುಂಟಾಯಿತು, ಇಂದಿಗೆನ್ನ ಜನ್ಮ ಸಾಫಲ್ಯವಾಯಿತು, ನಾನು ಗೈದಿರುವ ತಪವಿಂದಿಗೆ ಈಡೇರಿತು, ಎಲೈ ಬ್ರಾಹ್ಮಣೋತ್ತಮನೆ ! ಇದು ಎನ್ನ ರಾಜ್ಯವು, ಇವರು ನನ್ನ ಮಕ್ಕಳು, ಇಲ್ಲಿರುವರು ನನ್ನ ಸ್ತ್ರೀಯರು, ನಾವೇನು ಗೈಯಬೇಕೋ, ಆಜ್ಞಾಪಿಸಿದರೇ ಸಿದ್ಧವಾಗಿಧೇವೆಂದು, ಕಾರ್ತವೀರ್ಯಾರ್ಜುನನು ನುಡಿಯಲೂ,ಆ ಸಮಯದಲ್ಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಇದಂರಾಜ್ಯಮಿಮೇಪುತ್ರಾ ಇಮೇದಾರಾಇಮೇವಯಮ್ । ಬ್ರಹ್ಮನ್ ಕಿಂಕುರ್ಮಕಿಂಕಾರ್ಯಂಆಜ್ಞಾಪಯತುನೋಭವಾನ್॥
ತಂಧರ್ಮೇಗ್ನಿಷುಭೃತ್ಯೇಷುಶಿವಂಪೃಷ್ಟ್ವಾಚಪಾರ್ಥಿವಮ್। ಪುಲಸ್ತ್ಯಸ್ತ್ವಾಹರಾಜಾನಂಹೇಹಯಾನಾಂತದಾರ್ಜುನಮ್॥
ರಾಜೇಂದ್ರಾಮಲಪದ್ಮಾಕ್ಷಪೂರ್ಣಚಂದ್ರನಿಭಾನನ। ಅತುಲಂತೇಬಲಂಯೇನದಶಗ್ರೀವಸ್ತ್ವಯಾಜಿತಃ ॥೧೪॥ ಭಯಾದ್ಯ
ಸ್ಯಾವತಿಷ್ಠೇತಾಂನಿಷ್ಪಂದೌಸಾಗರಾನಿಲೌ। ಸೋಯಮದ್ಯತ್ವಯಾಬದ್ಧಃಪೌತ್ರೋಮೇತೀವದುರ್ಜಯಃ ॥೧೫॥ ತತ್ಪುತ್ರ
ಕಯಶಃಪ್ರಾಪ್ತಂನಾಮವಿಶ್ರಾವಿತಂತ್ವಯಾ। ಮದ್ವಾಕ್ಯಾದ್ಯಾಚ್ಯಮಾನೋದ್ಯಮುಂಚವತ್ಸದಶಾನನಮ್।೧೬॥ ಪುಲಸ್ತ್ಯಾ
ಜ್ಞಾಂಸಸಂಗೃಹ್ಯ ಕಿಂಚಿನ್ನಾವೋಚದರ್ಜುನಃ। ಮುಮೋಚಪಾರ್ಥಿವೇಂದ್ರೋಸೌರಾಕ್ಷಸೇಂದ್ರಂಪ್ರಹೃಷ್ಟವತ್॥೧೭॥ ಸತಂ
ವಿಮುಚ್ಯತ್ರಿದಶಾರಿಮರ್ಜುನಃಸಂಪೂಜ್ಯದಿವ್ಯಾಭರಣಸ್ರಗಂಬರೈಃ । ಅಹಿಂಸಕಂಸಖ್ಯಮುಪೇತ್ಯಸಾಗ್ನಿಕಂ ಪ್ರಣಮ್ಯ

---

ರ್ಷೇ-ಎಲೈಬ್ರಹ್ಮನೆ, ಇದಂ-ಇದು, ರಾಜ್ಯಂ-ರಾಜ್ಯವು, ಇಮೇ-ಇವರು, ಪುತ್ರಾಃ-ಮಕ್ಕಳು, ಇಮೇ-ಇವರು, ದಾರಾಃ-ಹೆಂಡತಿಯರು, ಇಮೇ- ಈ, ವ
ಯಂ-ನಾವು, ಕಿಂಕುರ್ಮ-ಏನು ಮಾಡುವೆವು, ಕಾರ್ಯಂ-ಕಾರ್ಯವು, ಕಿಂ-ಏನು, ನಃ-ನಮಗೆ, ಭವಾನ್-ನೀನು, ಆಜ್ಞಾಪಯತು, ಆಜ್ಞಾಪಿಸು॥ ೧೦ ॥
ತದಾ-ಆ ಕಾಲದಲ್ಲಿ, ಪುಲಸ್ತ್ಯಸ್ತು, ಪುಲಸ್ತ್ಯನಾದರೆ, ಪಾರ್ಥಿವಂ-ಪೃಥ್ವೀಪತಿಯಾದ, ತಂ-ರಾಜಾನಂ-ಆ ಕಾರ್ತವೀರ್ಯನನ್ನು ಕುರಿತು, ಧರ್ಮೇ-ಧರ್ಮದ
ಲ್ಲಿಯೂ, ಅಗ್ನಿಷು-ಅಗ್ನಿಗಳಲ್ಲಿಯೂ, ಭೃತ್ಯೇಷು-ಭೃತ್ಯರಲ್ಲಿಯೂ, ಶಿವಂ-ಕ್ಷೇಮವನ್ನು, ಪೃಷ್ಟ್ವಾಚ-ಕೇಳಿ, ಹೇಹಯಾನಾಂ-ಹೇಹಯದೇಶಗಳಿಗೆ, ರಾಜಾ
ನಂ-ಅರಸಾದ, ಅರ್ಜುನಂ-ಅರ್ಜುನನನ್ನು ಕುರಿತು, ಆಹ-ಹೇಳಿದನು ॥೧೩॥ ಹೇರಾಜೇಂದ್ರ - ಎಲೈ ರಾಜಶ್ರೇಷ್ಠನೆ, ಹೆ ಅಮಲಪದ್ಮಾಕ್ಷ-ಎಲೈನಿರ್ಮಲ
ವಾದ ಪದ್ಮಗಳೋಪಾದಿಯಲ್ಲಿ ಇರುವ ನೇತ್ರಗಳುಳ್ಳವನೆ, ಹೆ ಪೂರ್ಣಚಂದ್ರನಿಭಾನನ-ಎಲೈ ಪೂರ್ಣಚಂದ್ರನಿಗೆ ಸಮಾನವಾದಮುಖ ಉಳ್ಳವನೆ, ಯೇನ
ತ್ವಯಾ-ಯಾವ ನಿನ್ನಿಂದ, ದಶಗ್ರೀವಃ-ರಾವಣನು, ಜಿತಃ-ಜಯಿಸಲ್ಪಟ್ಟನೋ, ತಸ್ಯತೇ-ಅಂಥಾ ನಿನ್ನ ಬಲಂ-ಬಲವು, ಅತುಲಂ - ಸಮಾನವಿಲ್ಲದ್ದು॥
ಯಸ್ಯ-ಯಾವರಾವಣನ, ಭಯಾತ್-ಭಯದದೆಸೆಯಿಂದ, ಸಾಗರಾನಿಲೌ-ಸಮುದ್ರವಾಯುವುಗಳು, ನಿಷ್ಪಂದೌ-ಚಲನವಿಲ್ಲದವರಾಗಿ, ಅವತಿಷ್ಠೇತಾಂ-ಇ
ರುವರೋ, ಮೇ-ನನ್ನ, ಪೌತ್ರಃ-ಮೊಮ್ಮಗನಾದ, ಅತೀವ-ಬಹಳವಾಗಿ, ದುರ್ಜಯಃ-ಜಯಿಸ ಲಸಾಧ್ಯನಾದ, ಸೋಯಂ-ಆ ಈರಾವಣನು, ಅದ್ಯ-ಈ
ಗ, ತ್ವಯಾ-ನಿನ್ನಿಂದ, ಬದ್ಧಃ-ಕಟ್ಟಲ್ಪಟ್ಟನು ॥ ೧೫ ॥ ತತ್-ಆ ಕಾರಣದ ದೆಸೆಯಿಂದ, ಹೆ ಪುತ್ರಕ-ಎಲೈ ಮಗನೆ, ತ್ವಯಾ-ನಿನ್ನಿಂದ, ಯಶಃ-ಕೀ
ರ್ತಿಯು, ಪ್ರಾಪ್ತಂ-ಹೊಂದಲ್ಪಟ್ಟಿತು. (ಯದ್ವಾ- ತ್ವಯಾ- ನಿನ್ನಿಂದ, ಪುತ್ರಕಯಶಃ-ಪುತ್ರಕನಾದ ರಾವಣನ ಯಶಸ್ಸು, ತ್ವಯಾ - ನಿನ್ನಿಂದ,
ಪ್ರಾಪ್ತಂ-ಹೊಂದಲ್ಪಟ್ಟಿತು ) ನಾಮ - ರಾವಣಜಿತುವೆಂಬ ಹೆಸರು, ವಿಶ್ರಾವಿತಂ - ಪ್ರಖ್ಯಾತಿ ಮಾಡಲ್ಪಟ್ಟಿತು, ಅದ್ಯ-ಈಗ, ಹೆವತ್ಸ - ಎಲೈ
ಮಗನೆ, ಮದ್ವಾಕ್ಯಾತ್-ನನ್ನ ವಾಕ್ಯದದೆಸೆಯಿಂದ, ಯಾಚ್ಯಮಾನಃ-ಪ್ರಾರ್ಥಿಸಲ್ಪಟ್ಟವನಾಗಿ, ದಶಾನನಂ-ರಾವಣನನ್ನು, ಮುಂಚ-ಬಿಟ್ಟುಬಿಡು॥೧೬॥
ಸಃ-ಅರ್ಜುನಃ-ಆ ಕಾರ್ತವೀರ್ಯಾರ್ಜುನನೆಂಬ, ಪಾರ್ಥಿವೇಂದ್ರಃ-ರಾಜಶ್ರೇಷ್ಠನು, ಪುಲಸ್ತ್ಯಾಜ್ಞಾಂ-ಪುಲಸ್ತ್ಯಬ್ರಹ್ಮನ ಮಾತನ್ನು, ಸಂಗೃಹ್ಯ-ತೆಗದು
ಕೊಂಡು, ಕಿಂಚಿತ್-ಸ್ವಲ್ಪವಾದರೂ, ನಾವೋಚತ್-ಮಾತಾಡಲಿಲ್ಲ, ರಾಕ್ಷಸೇಂದ್ರಂ-ರಾವಣನನ್ನು, ಪ್ರಹೃಷ್ಟವತ್-ಸಂತೋಷಯುಕ್ತನಾಗಿ, ಮು
ಮೋಚ-ಬಿಟ್ಟನು, ॥೧೭॥ ಸೋರ್ಜುನಃ-ಆ ಅರ್ಜುನನು, ತಂತ್ರಿದಶಾರಿಂ-ಆರಾಕ್ಷಸನಾದ ರಾವಣನನ್ನು, ವಿಮುಚ್ಯ-ಬಂಧಗಳಿಂದಬಿಡಿಸಿ, ಅಹಿಂಸ
ಕಂ-ಹಿಂಸಾದಿ ಧರ್ಮರಹಿತನಾದ, ಬ್ರಹ್ಮಸುತಂ-ಬ್ರಹ್ಮಪುತ್ರನಾದ, ತಂ-ಆ ಪುಲಸ್ತ್ಯಬ್ರಹ್ಮನನ್ನು, ಪ್ರಣಮ್ಯ-ನಮಸ್ಕರಿಸಿ, ದಿವ್ಯಾಭರಣಸ್ರಗಂಬರೈಃ-
ದಿವ್ಯ-ಮನೋಹರಂಗಳಾದ, ಆಭರಣ-ಒಡಿವೆಗಳಿಂದಲೂ, ಸ್ರಕ್-ಪುಷ್ಪಹಾರಗಳಿಂದಲೂ, ಅಂಬರೈಃ-ವಸ್ತ್ರಗಳಿಂದಲೂ, ಸಂಪೂಜ್ಯ-ಪೂಜೆಮಾಡಿ, ಸಾ
ಗ್ನಿಕಂ-ಅಗ್ನಿಸಾಕ್ಷಿಕವಾಗಿ, ಸಖ್ಯಂ-ಸ್ನೇಹವನ್ನು, ಉಪೇತ್ಯ-ಹೊಂದಿದು, ಗೃಹಂ-ಮನೆಯನ್ನು ಕುರಿತು, ಯಯೌ-ತೆರಳಿದನು, (ಯದ್ವಾ-ಸೋರ್ಜು

---

ಪುಲಸ್ತ್ಯಮಹಾಮುನಿಯು, ಹೇಹಯ ದೇಶಾಧಿಪತಿಯಾದ ಆ ರಾಜನನ್ನು, ಧರ್ಮವಿಷಯವಾಗಿಯೂ ಅಗ್ನಿಹೋತ್ರ
ವಿಷಯದಲ್ಲಿಯೂ, ಭೃತ್ಯರ ವಿಷಯದಲ್ಲಿಯೂ, ಕುಶಲಪ್ರಶ್ನೆಯಂಗೈದು ಮತ್ತಿಂತೆಂದನು, ತಾವರೇ ಎಸಳಿಗಳಂತೆ ವಿ
ಸ್ತಾರವಾದ ನೇತ್ರಗಳುಳ್ಳವನಾಗಿಯೂ, ಪೂರ್ಣ ಚಂದ್ರನಿಗೆ ಸಮಾನವಾದ ಮುಖವುಳ್ಳವನಾಗಿಯೂ ಇರುವ ಎಲೈ
ರಾಜೇಂದ್ರನೇ! ನಿನ್ನ ಬಲವು ಅಸದೃಶ ವಾದದ್ದು ಯಾಕೆಂದರೆ, ಯಾವ ರಾವಣನ ಭೀತಿಯಿಂದ, ಸಮುದ್ರವು ಜಂ
ಝಾಮಾರುತವು ಸಹಾ ಚಲಿಸದೇ ಇರವುಗಳಾಗಿರುವವೋ, ಅಂಥಾ ದುರ್ಜೇಯನಾದ ಮತ್ತು ನನ್ನ ಮೊಮ್ಮಗನಾದ
ದಶಕಂಠನೀಗ ನಿನ್ನಿಂದ ಜಯಿಸಲ್ಪಟ್ಟನಲ್ಲಾ, ಎಲೈ ಬಾಲಕನೇ ! ನಿನಿಗೆ ಮಹಾ ಖ್ಯಾತಿಯುಂಟಾಗಿ, ನಿನ್ನ ನಾಮಧೇ
ಯವು ಎಲ್ಲೆಲ್ಲಿಯು ಪ್ರಸಿದ್ಧಿಯಾಗಿರುವದು, ಎಲೈ ವತ್ಸನೇ ! ನಿನ್ನನ್ನು ಯಾಚಿಸುತಿರುವ ನನ್ನಮಾತಿನಿಂದ ಆ ದಶಕಂ
ಠನಂ ಬಿಟ್ಟುಬಿಡೆಂದು ನುಡಿಯಲೂ, ಆತನಾಜ್ಞೆಯಂ ಗ್ರಹಿಸಿ ಪ್ರತ್ಯುತ್ತರವಂ ಕೊಡದೆ, ಆ ರಾಜೇಂದ್ರನಾದ ಕಾ
ರ್ತ ವೀರ್ಯಾರ್ಜುನನು ಸಂತೋಷವಾಗಿ, ಆ ರಾಕ್ಷಸೇಂದ್ರನನ್ನು ಬಿಟ್ಟುಕೊಟ್ಟನು ॥೧೭॥ ಆ ರಾಜನು ಸುರಾರಿ
ಯಾದ ರಾವಣನಂ ಬಂಧನದಿಂದ ಬಿಡಿಸಿ, ದಿವ್ಯವಾದ ಆಭರಣ ವಸ್ತ್ರಾದಿಗಳನ್ನು ಬಹುಮತಿಯಾಗಿ ಕೊಟ್ಟು, ಹಿಂಸೆ
ಯಿಲ್ಲದಂತೆ ಅಗ್ನಿ ಸಾಕ್ಷಿಕವಾಗಿ ಸಖ್ಯವಂಗೈದು ಬ್ರಹ್ಮಪುತ್ರನಾದ ಆ ವಿಶ್ರವಸ್ಸಿನಪಾದಗಳಿಗೆರಗಿ, ತನ್ನ ಮಂದಿರವಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೆಂಬ್ರಹ್ಮಸುತಂಗೃಹಂಯಯೌ ॥೧೮॥ ಪುಲಸ್ತ್ಯೇನಾಭಿಸಂಗಮ್ಯರಾಕ್ಷಸೇಂದ್ರಃಪ್ರತಾಪವಾನ್ । ಪರಿಷ್ವಂಗಕೃತಾತಿಥ್ಯೋಲಜ್ಜಮಾನೋವಿಸರ್ಜಿತಃ ॥೧೯॥ ಪಿತಾಮಹಸುತಶ್ಚಾಪಿಪುಲಸ್ತ್ಯೋಮುನಿಪುಂಗವಃ । ಮೋಚಯಿತ್ವಾ ದಶಗ್ರೀವಂಬ್ರಹ್ಮಲೋಕಂಜಗಾಮಸಃ ॥೨೦॥ ಏವಂಸರಾವಣಃಪ್ರಾಪ್ತಃಕಾರ್ತವೀರ್ಯಾತ್ಪ್ರಧರ್ಷಣಮ್।ಪುಲಸ್ತ್ಯವಚನಾಚ್ಚಾಪಿಪುನರ್ಮೋಕ್ಷಮವಾಪ್ತವಾನ್ ॥೨೧॥ ಏವಂಬಲಿಭ್ಯೋಬಲಿನಃಸಂತಿರಾಘವನಂದನ ॥ ನಾವಜ್ಞಾ ಪರತಃಕಾರ್ಯಾ ಯಃಇಚ್ಛೇಚ್ಛ್ರೇಯಆತ್ಮನಃ ॥೨೨॥ ತತಸ್ಸರಾಜಾಪಿಶಿತಾಶನಾನಾಂಸಹಸ್ರಬಾಹೋರುಪಲಭ್ಯಮೈತ್ರೀಂ।ಪುನರ್ನರಾಣಾಂಕದನಂಚಕಾರಚಚಾರಸರ್ವಾಂಪೃಥಿವೀಂಚದರ್ಪಾತ್॥ —…ಇತಿಶ್ರೀಮದುತ್ತರ ರಾಮಾಯಣೆ ತ್ರಯಸ್ತ್ರಿಂಶಸ್ಸರ್ಗಃ…—

ಅರ್ಜುನೇನವಿಮುಕ್ತಸ್ತು ರಾವಣೋರಾಕ್ಷಸಾಧಿಪಃ । ಚಚಾರಪೃಥಿವೀಂಸರ್ವಾಮನಿರ್ವಿಣ್ಣಸ್ತದಾಕೃತಃ ॥೧॥ ರಾಕ್ಷ

---

ನಃ-ಆ ಅರ್ಜುನನು, ತಂಪ್ರಿದಶಾರಿಂ-ಆ ರಾವಣನನ್ನು, ವಿಮುಚ್ಯ-ಬಿಡಿಸಿ, ದಿವ್ಯಾಭರಣಸ್ರಗಂಬರೈಃ-ದಿವ್ಯವಾದ ಆಭರಣಗಳಿಂದಲೂ ಪುಷ್ಪಗಳಿಂದಲೂ, ಸಹಾ ಸಂಪೂಜ್ಯ-ಪೂಜಿಸಿ, ಅಹಿಂಸಕಂ-ಹಿಂಸಾರಹಿತವಾಗಿರುವಂತೆ, ಅಗ್ನಿಸಾಕ್ಷಿಕಂ-ಅಗ್ನಿಸಾಕ್ಷಿಕವಾಗಿ, ಸಖ್ಯಂ-ಸಖ್ಯವನ್ನು, ಉಪೇತ್ಯ-ಹೊಂದಿ,ತಂಬ್ರಹ್ಮಸುತಂ-ಆ ಬ್ರಹ್ಮಪುತ್ರನಂಕುರಿತು, ಪ್ರಣಮ್ಯ ನಮಸ್ಕರಿಸಿ, ಗೃಹಂ-ಮನೆಯಂಕುರಿತು, ಯಯೌ-ಹೊರಟನು ॥೧೮॥ ಪ್ರತಾಪವಾನ್-ಪರಾಕ್ರಮಿಯಾದ, ರಾಕ್ಷಸೇಂದ್ರಃ-ರಾವಣನು, ಅಭಿಗಮ್ಯ-ಬಂದು-ಪುಲಸ್ತ್ಯೇನ-ಪುಲಸ್ತ್ಯಮುನಿಯಿಂದ ಪರಿಷ್ವಂಗಕೃತಾತಿಥ್ಯಃ-ಆಲಿಂಗನದಿಂದ ಮಾಡಲ್ಪಟ್ಟ ಆತಿಥ್ಯಮುಳ್ಳವನಾದಕಾರಣ,ಲಜ್ಜಮಾನಃ-ನಾಚಿಕೆಗೊಂಡಂಥಾವನಾಗಿ, ವಿಸರ್ಜಿತಃ-ಬಿಡಲ್ಪಟ್ಟನು॥೧೯॥ ಪಿತಾಮಹಸುತಃ-ಬ್ರಹ್ಮ ಕುಮಾರನಾದ, ಮುನಿಪುಂಗವಃ- ಋಷಿಶ್ರೇಷ್ಠನಾದ, ಸಪುಲಸ್ತ್ಯೋಪಿ-ಆ ಪುಲಸ್ತ್ಯ ಬ್ರಹ್ಮನೂನು, ದಶಗ್ರೀವಂ-ದಶಕಂಠನನ್ನು,ಮೋಚಯಿತ್ವಾ-ಬಿಡಿಸಿ,ಬ್ರಹ್ಮಲೋಕಂ-ಬ್ರಹ್ಮಲೋಕವನ್ನು ಕುರಿತು, ಜಗಾಮ-ತೆರಳಿದನು ॥೨೦॥ಏವಂ-ಈ ಪರಿಯಾಗಿ, ಸರಾವಣಃ-ಆ ರಾವಣನು, ಕಾರ್ತವೀರ್ಯಾತ್-ಕಾರ್ತವೀರ್ಯನ ದೆಸೆಯಿಂದ, ಪ್ರಧರ್ಷಣಂ-ತಿರಸ್ಕಾರವನ್ನು, ಪ್ರಾಪ್ತಃ-ಹೊಂದಿದವನಾಗಿ, ಪುಲಸ್ತ್ಯವಚನಾಚ್ಚಾಪಿ-ಪುಲಸ್ತ್ಯನ ಮಾತಿನದೆಸೆಯಿಂದ, ಪುನಃ-ಮತ್ತು, ಮೋಕ್ಷಂ- ವಿಮೋಚನವನ್ನು, ಅವಾಪ್ತವಾನ್-ಹೊಂದಿದವನಾದನು ॥ ೨೧॥ ಹೇ ರಘುನಂದನ-ಎಲೈ ರಘುನಂದನನೆ, ಏವಂ-ಈ ಪರಿಯಾಗಿ, ಬಲಿಭ್ಯಃ-ಬಲಿಷ್ಠರಿಗಿಂತಲೂ, ಬಲಿನಃ-ಬಲವಂತರು, ಸಂತಿ-ಇರುತ್ತಾರೇ, ಯಃ-ಯಾವನು, ಆತ್ಮನಃ-ತನಗೆ, ಶ್ರೇಯಃ-ಶ್ರೇಯಸ್ಸನ್ನು,ಇಚ್ಛೇತ್-ಇಚ್ಛಿಸುವನೋ,ತೇನ-ಆಪುರುಷನಿಂದ,ಪರತಃ-ಪರರಿಗೇ, ಅವಜ್ಞಾ-ಅವಮಾನವು, ನಕಾರ್ಯಾ-ಮಾಡತಕ್ಕದ್ದಲ್ಲಾ ॥ ೨೨ ॥ ತತಃ-ಬಳಿಕ, ಪಿಶಿತಾಶನಾನಾಂ-ರಾಕ್ಷಸರಿಗೆ, ರಾಜಾ-ಅರಸಾದ,ಸಃ-ಆ ರಾವಣನು, ಸಹಸ್ರಬಾಹೋಃ-ಸಹಸ್ರಭುಜಗಳುಳ್ಳ ಕಾರ್ತವೀರ್ಯನ, ಮೈತ್ರೀಂ-ಸ್ನೇಹವನ್ನು, ಉಪಲಭ್ಯ-ಹೊಂದಿ, ದರ್ಪಾತ್-ಗರ್ವದ ದೆಸೆಯಿಂದ, ಪುನಃ-ಮತ್ತು, ನರಾಣಾಂ-ಮನುಷ್ಯರೊಳಗೆ, ಕದನಂ-ಕಲಹವನ್ನು, ಚಕಾರ-ಮಾಡಿದನು, ಸರ್ವಾಂ-ಸಮಸ್ತವಾದ, ಪೃಥಿವೀಂಚ- ಭೂಮಿಯಲ್ಲಿ, ಚಚಾರ-ಸಂಚರಿಸಿದನು. ॥ ೨೩ ॥

—…ಇತಿ ಶ್ರೀಮದುತ್ತರ ರಾಮಾಯಣೆ ತ್ರಯಸ್ತ್ರಿಂಶಸ್ಸರ್ಗಃ…—

ಅರ್ಜುನೇನ-ಕಾರ್ತವೀರ್ಯಾರ್ಜುನನಿಂದ, ವಿಮುಕ್ತಃ-ಬಿಡಲ್ಪಟ್ಟ, ರಾಕ್ಷಸಾಧಿಪಃ-ರಾಕ್ಷಸಾಧಿಪತಿಯಾದ, ರಾವಣಸ್ತು-ರಾವಣನಾದರೆ, ತದಾ-ಆ ಕಾಲದಲ್ಲಿ, ಅನಿರ್ವಿಣ್ಣಃ-ಪಶ್ಚಾತ್ತಾಪದಿಂ ಹೀನನಾಗಿ, ಕೃತಃ-ಮಾಡಲ್ಪಟ್ಟವನಾಗಿ, ಸರ್ವಾಂಪೃಥಿವೀಂ-ಸಮಸ್ತ ಭೂಮಂಡಲವಂಕುರಿತು, ಚಚಾರ-ಸಂಚರಿಸಿದನು ॥ ೧॥ ಸರಾವಣಃ-ಆ ರಾವಣನು, ರಾಕ್ಷಸಂವಾ-ರಾಕ್ಷಸನನ್ನೇ ಆಗಲೀ, ಮನುಷ್ಯಂವಾ-ಮನುಷ್ಯನನ್ನೇ ಆಗಲೀ, ಯಂ-ಯಾವ ಪುರುಷನನ್ನು, ಬಲಾಧಿಕಂ-ಬಲದಿಂದ ಅಧಿಕನನ್ನಾಗಿ, ಶೃಣುತೇ- ಕೇಳುವನೋ, ತಂ-ಆ ಬಲಾಧಿಕನಾದಪುರುಷನನ್ನು, ಆಸಾದ್ಯ-ಹೊಂದಿ, ಯುದ್ಧಾಯ-

---

ಕುರಿತು ತೆರಳಿದನು ॥೧೮॥ ಮಹಾ ಪರಾಕ್ರಮಶಾಲಿಯಾದ ಆದಶಕಂಠನಾದರೆ, ಪುಲಸ್ತ್ಯನಿಂದೊಡಗೂಡಿ ಆಲಿಂಗನವೆಂಬ ಆತಿಥ್ಯವು ಮಾಡಲ್ಪಟ್ಟವನಾಗಿ, ಲಜ್ಜಿಸುತ್ತಾ ಬಿಡಲ್ಪಟ್ಟನು ॥೧೯॥ ಆ ಬ್ರಹ್ಮಪುತ್ರನಾದಪುಲಸ್ತ್ಯಬ್ರಹ್ಮನಾದರೆ, ಆರಾವಣನಂಬಿಡಿಸಿ ಬ್ರಹ್ಮಲೋಕಕ್ಕೆ ತೆರಳಿದವನಾದನು ॥೨೦॥ಎಲೈರಾಘವನೆ! ಈಪರಿಯಾಗಿ ರಾವಣನು,ಕಾರ್ತವೀರ್ಯಾರ್ಜುನನಿಂದ ತಿರಸ್ಕಾರವಂ ಹೊಂದಿ, ಪುಲಸ್ತ್ಯಮುನಿಯ ವಚನದಿಂದ ಬಿಡಿಸಲ್ಪಟ್ಟವನಾದನು ॥೨೧॥ ಎಲೈರಘುಕುಲನಂದನನೇ, ಶ್ರೇಯಸ್ಕಾಮಿಯಾದವನು ಇತರರಿಗೆ ತಿರಸ್ಕಾರವಂ ಗೈಯ್ಯಬಾರದು, ಯಾಕಂದರೆ ಹೀಗೆಯೇ ಬಲವಂತರಿಗಿಂತಲೂ ಇನ್ನೂ ಬಲಿಷ್ಠರಿರುವರು ॥೨೨॥ ರಾಕ್ಷಸನಾಥನಾದ ಆ ರಾವಣನಾದರೆ, ಸಹಸ್ರ ಬಾಹುಗಳುಳ್ಳ ಆ ಕಾರ್ತವೀರ್ಯಾರ್ಜುನನೊಡನೆ ಸಖ್ಯವಂಗೈದಬಳಿಕ, ಭೂಮಂಡಲದಲ್ಲಿ ಸಂಚರಿಸುತಿರುವನಾಗಿ, ಪುನಹಾ ನರರ ಕದನವಂ ಗೈದನು ॥೨೩॥ —…*ಉತ್ತರರಾಮಾಯಣದಲ್ಲಿನ ೩೩ ನೇಸರ್ಗಂ ಮುಗಿದುದು.*…—

ಆ ರಾಕ್ಷಸಾಧಿಪತಿಯಾದ ರಾವಣನಾದರೆ, ಕಾರ್ತವೀರ್ಯಾರ್ಜುನನಿಂದ ವಿಮುಕ್ತನಾಗಿ ನಿರ್ವಿಣ್ಣನಾಗದೆ ಭೂಮಿಯಲ್ಲಿಸಂಚರಿಸುತ್ತಾ, ರಾಕ್ಷಸನಾಗಲೀ ಮನುಷ್ಯನಾಗಲೀ ಯಾವನಾದರೂ ಬಲಾಧಿಕನಾಗಿರುವನೆಂದು ಕೇಳಿದರೇ ಅವನ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಂವಾಮನುಷ್ಯಂವಾಶ್ರೃಣುತೆಯಂಬಲಾಧಿಕಮ್ । ರಾವಣಸ್ತಂಸಮಾಸಾದ್ಯಯುದ್ಧಾಯಾಹ್ವಯತೀತಿಸಃ ॥೧॥ ತತಃಕ ದಾಚಿತ್ಕಿಷ್ಕಿಂಧಾಂನಗರೀಂವಾಲಿಪಾಲಿತಾಮ್ । ಗತ್ವಾಹ್ವಯತಿಯುದ್ಧಾಯವಾಲಿನಂಹೆಮಮಾಲಿನ್ ॥೩॥ ತತಸ್ತಂವಾಲಿ ನೊಮಾತ್ಯಸ್ತಾರಸ್ತಾರಾಪಿತಾಪ್ರಭುಃ ॥ ಉವಾಚರಾವಣಂವಾಕ್ಯಂಯುದ್ಧಪ್ರೇಪ್ಸುಮುಪಾಗತಮ್ ॥೪॥ ರಾಕ್ಷಸೆಂದ್ರ ಗತೊವಾಲೀಯಸ್ತ್ವತ್ತಃಪ್ರಬಲೊಭವೆತ್ । ನಾನ್ಯಃಪ್ರಮುಖತಸ್ಥಾತುಂತವಶಕ್ತಃಪ್ಲವಂಗಮಃ । ಖಿುತೆವಾನರಶಾ ದೂರ್ಲಾದ್ವಾಲಿನೊಹೆಮಮಾಲಿನಃ ॥೫॥ ಚತುರ್ಭ್ಯೊಪಿಸಮುದ್ರೆಭ್ಯಃಸಂಧ್ಯಾಮನ್ವಾಸ್ಯರಾವಣ । ಇಮಂಮು ಹೂರ್ತಮಾಯಾತಿವಾಲೀತಿಷ್ಠಮುಹೂರ್ತಕಮ್ ॥೬॥ ಏತಾನಸ್ಥಿಚಯಾನ್ಪಶ್ಯಯಏತೆಶಂಖಪಾಂಡುರಾಃ । ಯುದ್ಧಾರ್ಥಿ ನಾಮಿಮೆರಾಜನ್ವಾನರಾಧಿಪತೆಜಸಾ ॥೭॥ ಯದ್ವಾಮೃತರಸಃಪೀತಸ್ತ್ವಯಾರಾವಣರಾಕ್ಷಸ । ತಥಾವಾಲಿನಮಾ ಸಾದ್ಯದುರ್ಲಭಂತವಜೀವಿತಮ್ ॥೮॥ ಪಶ್ಯೆದಾನೀಂಜಗಚ್ಚಿತ್ರಮಿಮಂವಿಶ್ರವಸಸ್ಸುತ । ಇಮಂಮುಹೂರ್ತಂತಿಷ್ಠಸ್ವದು

---

ಕಾಳಗಕ್ಕೋಸುಗ, ಆಹ್ವಯತಿ–ಕರೆಯುತಿದ್ದನು ॥ ೧ ॥ ತತಃ–ಬಳಿಕ, ಕದಾಚಿತ್–ಒಂದಾನೊಂದು ಕಾಲದಲ್ಲಿ, ವಾಲಿಪಾಲಿತಾಂ–ವಾಲಿಯಿಂದ ಪರಿಪಾ ಲಿತವಾದ, ಕಿಷ್ಕಿಂಧಾಂ–ಕಿಷ್ಕಿಂಧವೆಂಬ, ನಗರೀಂ–ಪಟ್ಟಣವಂ ಕುರಿತು, ಗತ್ವಾ–ಹೋಗಿ, ಹೆಮಮಾಲಿನಂ–ಚಿನ್ನದಮಾಲಿಕೆಯುಳ್ಳ, ವಾಲಿನಂ–ವಾ ಲಿಯನ್ನು, ಯುದ್ಧಾಯ–ಯುದ್ಧಕ್ಕೋಸುಗ, ಆಹ್ವಯತಿ–ಕರೆದನು ॥ ೩ ॥ ತತಃ–ಬಳಿಕ, ಪ್ರಭುಃ–ಸಮರ್ಥನಾದ, ತಾರಾಪಿತಾ – ತಾರಾ ತಾರಾದೇವಿಗೆ ತಂದೆಯಾದ, ವಾಲಿನಃ – ವಾಲಿಗೆ, ಅಮಾತ್ಯಃ–ಮಂತ್ರಿಯಾದ, ತಾರಃ–ತಾರನೂಎಂಬ ವಾನರನು, ಯುದ್ಧಪ್ರೇಪ್ಸುಂ–ಯುದ್ಧೇಚ್ಛೆಯುಳ್ಳವನಾಗಿ, ಉ ಪಾಗತಂ–ಬಂದಿರುವ, ತಂರಾವಣಂ–ಆ ರಾವಣನಂ ಕುರಿತು, ವಾಕ್ಯಂ–ಮಾತನ್ನು, ಉವಾಚ–ಹೇಳಿದನು ॥ ೪ ॥ ಹೇರಾಕ್ಷಸೇಂದ್ರ –ಎಲೈ ರಾಕ್ಷಸಾಧಿಪತಿ ಯೇ, ಯಃ–ಯಾವ ವಾಲಿಯು, ತ್ವತ್ತಃ–ನಿನಗಿಂತಲೂ, ಪ್ರಬಲಃ–ಪ್ರಬಲನು, ಭವೇತ್–ಆಗುವನೋ, ಸಃವಾಲೀ–ಅಂಥಾವಾಲಿಯು, ಗತಃ– ಹೊರ ಟು ಹೋಗಿಧಾನೆ, ವಾನರಶಾರ್ದೂಲಾತ್–ವಾನರಶ್ರೇಷ್ಠನಾದ, ಹೇಮಮಾಲಿನಃ–ಹೇಮಮಾಲಿಯಾದ, ವಾಲಿನಃಋತೆ–ವಾಲಿಯನ್ನು ಬಿಟ್ಟು, ಅ ನ್ಯಃಪ್ಲವಂಗಮಃ–ಮತ್ತೊಬ್ಬನಾದ ವಾನರನು, ತವ–ನಿನ್ನ, ಪ್ರಮುಖತಃ–ಯದುರಾಗಿ, ಸ್ಥಾತುಂ–ನಿಲ್ಲುವದಕ್ಕೋಸುಗ, ಶಕ್ತಃ–ಸಮರ್ಥನು, ನ–ಇ ಲ್ಲ ॥೫॥ ಹೇರಾವಣ–ಎಲೈ ರಾವಣನೇ, ಚತುರ್ಭ್ಯಃ–ನಾಲ್ಕಾದ, ಸಮುದ್ರೇಭ್ಯಃ–ಸಮುದ್ರಗಳದೆಸೆಯಿಂದಲೂ, ಸಂಧ್ಯಾಂ–ಸಂಧ್ಯೆಯನ್ನು, ಅನ್ವಾಸ್ಯ– ಉಪಾಸನೆಮಾಡಿ, ವಾಲೀ–ವಾಲಿಯು, ಇಮಂಮುಹೂರ್ತಂ–ಈ ಮುಹೂರ್ತ ಪರಿಮಿತಕಾಲದಲ್ಲಿ, ಆಯಾತಿ–ಬರುತ್ತಾನೆ, ಮುಹೂರ್ತಕಂ–ಮುಹೂ ರ್ತಮಾತ್ರವು, ತಿಷ್ಠ–ಇರು ॥೬ ॥ ಹೇರಾಜನ್–ಎಲೈ ಅರಸೆ, ವಾನರಾಧಿಪತೇಜಸಾ–ವಾನರಾಧಿಪತಿಯಾದ ವಾಲಿಯ ಪರಾಕ್ರಮದಿಂದ, ಯುದ್ಧಾರ್ಥಿ ನಾಂ–ಯುದ್ಧವನ್ನು ಅಪೇಕ್ಷಿಸುತಿರುವ, ಶಂಖಪಾಂಡುರಾಃ–ಶಂಖಗಳಂತೆ ಬೆಳ್ಳಗಿರುವ, ಏತೇ–ಈ ಪರಿದೃಶ್ಯಮಾನಗಳಾದ, ಯೇಅಸ್ಥಿಸಂಚಯಾಃ–ಯಾವ ಯಲುವುಗಳ ರಾಶಿಗಳುಂಟೋ, ತೇ–ಅವುಗಳು, ಇಮೇ–ಇವು, ಏತಾನ್–ಈ ಯದುರಾಗಿರುವ, ಅಸ್ಥಿಚಯಾನ್–ಅಸ್ಥಿಗಳಸಮೂಹಗಳನ್ನು, ಪಶ್ಯ–ನೋ ಡು ॥೭॥ ಹೇ ರಾಕ್ಷಸ–ರಾಕ್ಷಸನಾದ, ಹೆ ರಾವಣ–ಎಲೈ ರಾವಣನೇ, (ಯದ್ವಾ–ಹಾಗಲ್ಲದೇ ಹೋದರೇ,)ತ್ವಯಾ–ನಿನ್ನಿಂದ, ಅಮೃತರಸಃ–ಅಮೃತ ರ ಸವು, ಪೀತಃ–ಪಾನಮಾಡಲ್ಪಟ್ಟತೇ, ತಥಾಪಿ–ಹಾಗಾದರುನ್ನು, ವಾಲಿನಂ–ವಾಲಿಯನ್ನು, ಆಸಾದ್ಯ–ಹೊಂದಿ, ತವ–ನಿನ್ನ, ಜೀವಿತಂ–ಬದುಕೋಣವು ದುರ್ಲಭಂ–ದುರ್ಲಭವು ॥೮॥ ಹೇ ವಿಶ್ರವಸ್ಸುತ–ವಿಶ್ರವಸ್ಸಿನ ಕುಮಾರನೆ, ಇಹ–ಇಲ್ಲಿ, ಇಮಂಮುಹೂರ್ತಂ–ಈ ಎರಡುಘಳಿಗೆ, ತಿಷ್ಠಸ್ವ–ಇರು, ತೇ–ನಿ ನಗೆ, ಜೀವಿತಂ–ಬದುಕೋಣವು, ದುರ್ಲಭಂ–ಅಸಾಧ್ಯವು, ಭವಿಷ್ಯತಿ–ಆಗುವದು, ಇದಾನೀಂ–ಈಗ, ಜಗಚ್ಚಿತ್ರಂ–ಜಗತ್ತಿಗೆಆಶ್ಚರ್ಯವು, ಪಶ್ಯ–ನೋ

---

ಸಮಾಪಕ್ಕೆ ಹೋಗಿ ಯುದ್ಧಾರ್ಥವಾಗಿ ಕರೆಯುತಿದ್ದನು ॥೧॥ ಆ ಬಳಿಕ ಒಂದಾನೊಂದು ಕಾಲದಲ್ಲಿ ವಾಲಿ ಪಾಲಿತ ವಾದ ಕಿಷ್ಕಿಂಧಾ ನಗರಿಯಂ ಹೊಕ್ಕು ಸ್ವರ್ಣವಿಕಾರವಾದ ಮಾಲಿಕೆಗಳುಳ್ಳ ವಾಲಿಯನ್ನು ಕಾಳಗಕ್ಕೆ ಕರೆದವನಾಗ ಲೂ, ಆವಾಲಿಯ ಮಂತ್ರಿಯಾದ ತಾರನು ತಾರಾದೇವಿಯ ತಂದೆಯಾದ ಸುಷೇಣನು, ಯುವರಾಜನಾದ ಸುಗ್ರೀವನೂ ಸಹಾ ಯುದ್ಧೇಚ್ಛೆಯುಳ್ಳವನಾಗಿಬಂದಿರ್ಪ ಆರಾವಣನಂ ಕುರಿತಿಂತೆಂದರು ॥೪॥ ಎಲೈ ರಾಕ್ಷಸೇಂದ್ರನೇ ! ಯಾವ ವಾ ಲಿಯು ನಿನಗಿಂತಲೂ ಪ್ರಬಲನಾಗಿರುವನೋ ಅಂಥಾ ವಾಲಿಯು ಹೊರಟು ಹೋಗಿಧಾನೆ, ಸ್ವರ್ಣವಿಕಾರವಾದ ಮಾ ಲಿಕೆಯುಳ್ಳ ಆತನ ವಿನಹಾ ನಿನ್ನೆದುರಾಗಿ ಯಾವ ವಾನರನೂ ನಿಲ್ಲಲಾರನು ॥೫॥ ಎಲೈ ರಾವಣನೆ! ಚತುಸ್ಸಮುದ್ರಗಳ ಲ್ಲಿಯೂ ಸಂಧ್ಯೋಪಾಸನೆಯಂಗೈದು ಇದೇ ಮುಹೂರ್ತದಲ್ಲಿ ಬರುವನು, ಸ್ವಲ್ಪಹೊತ್ತು ನಿಲ್ಲು ॥೬॥ ಎಲೈರಾಕ್ಷಸ ನಾಥನೆ !ಶಂಖದಂತೆ ಬಿಳುಪಾಗಿರುವ ಈ ಎಲುವುಗಳ ಗುಡ್ಡೆಗಳಂನೋಡು, ಇವುಗಳು ಯುದ್ಧಾರ್ಥಿಗಳಾಗಿ ಬಂದ ಅರಸರ ಸಂಬಧವಾದುದ್ದು, ವಾನರಾಧಿಪತಿಯಾದ ವಾಲಿಯ ಸಾಮರ್ಥ್ಯದಿಂದ ಹೀಗೆಮಾಡಲ್ಪಟ್ಟಿಧೆ ॥೭॥ ಎಲೈ ದಶ ಕಂಠನೇ! ನೀನು ಅಮೃತ ಪಾನವಂ ಗೈದಿದ್ದವನಾದರೂ, ಆ ವಾಲಿಯಂಹೊಂದಿ ಜೀವಿಸುವದು ದುರ್ಲಭವು ॥೮॥ ಎ ಲೈ ವಿಶ್ರವಸ್ಸಿನಪುತ್ರನೇ ಜಗತ್ತಿಗೆಲ್ಲಾ ಆಶ್ಚರ್ಯ ಕರವಾಗಿರುವ ಇದಂ ನೋಡುತ್ತಾ ಸ್ವಲ್ಪಹೊತ್ತುನಿಲ್ಲು, ನೀನು ಬ ದುಕುವದೇ ಕಷ್ಟವಾಗುವದು ॥೯॥ ಅಥವಾ ನೀನು ಸಾಯಬೇಕೆಂದು ತ್ವರೆಯುಳ್ಳವನಾಗಿದ್ದರೆ ದಕ್ಷಿಣ ಸಮುದ್ರಕ್ಕೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಲಭಂತೇಭವಿಷ್ಯತಿ॥೯॥ ಅಥವಾತ್ವರಸೇಮರ್ತುಂಗಚ್ಛ ದಕ್ಷಿಣಸಾಗರಮ್। ವಾಲಿನಂದ್ರಕ್ಷ್ಯಸೇತತ್ರ ಭೂಮಿಸ್ಥಮಿವಭಾಸ್ಕರಮ್॥೧೦॥ ಸತುತಾರಂವಿನಿರ್ಭರ್ತ್ಸ್ಯರಾವಣೋರಾಕ್ಷಸೇಶ್ವರಃ। ಪುಷ್ಪಕಂತತ್ಸಮಾರುಹ್ಯ ಪ್ರಯಯಾದಕ್ಷಿಣಾರ್ಣವಮ್॥ ತತ್ರಹೇಮಗಿರಿಪ್ರಖ್ಯಂತರುಣಾರ್ಕನಿಭಾನನಮ್। ರಾವಣೋವಾಲಿನಂದೃಷ್ಟ್ವಾಸಂಧ್ಯೋಪಾಸನತತ್ಪರಮ್ ॥೧೨॥ ಪುಷ್ಪಕಾದವರುಹ್ಯಾಥರಾವಣೋಂಜನಸಂನಿಭಃ। ಗೃಹೀತುಂವಾಲಿನಂತೂರ್ಣಂನಿಶ್ಶಬ್ದಪದಮಾದ್ರವತ್ ॥೧೩॥ ಯದೃಚ್ಛಯೋನ್ಮೀಲಯತಾವಾಲಿನಾಪಿಸರಾವಣಃ। ಪಾಪಾಭಿಪ್ರಾಯವಾನ್ದೃಷ್ಟಸ್ಸಚಕಾರನಸಂಭ್ರಮಮ್॥೧೪॥ ಶಶಮಾಲಕ್ಷ್ಯಸಿಂಹೋವಾಪನ್ನಗಂಗರುಡೋಯಥಾ। ನಾಚಿಂತಯತ್ತದಾವಾಲೀರಾವಣಂಪಾಪನಿಶ್ಚಯಮ್ ॥೧೫॥ ಜಿಘೃಕ್ಷಮಾಣಮದ್ಯೈನಂರಾವಣಂಪಾಪನಿಶ್ಚಯಮ್। ಕಕ್ಷಾವಲಂಬಿನಂಕೃತ್ವಾಗಮಿಷ್ಯೇತ್ರೀನ್ಮಹಾರ್ಣವಾನ್॥೧೬॥ ದ್ರಕ್ಷ್ಯಂತಿಮಮಕಕ್ಷಸ್ಥಂಸ್ರಂಸದೂರುಕರಾಂಬರಮ್। ಲಂಬಮಾನಂದಶಗ್ರೀವಂಗರುಡಸ್ಯೇವಪನ್ನಗಮ್॥೧೭॥ ಇತ್ಯೇವಂಮತಿಮಾಸ್ಥಾಯವಾ

ಡು ॥೯॥ ಅಥವಾ-ಹಾಗಲ್ಲದೇ ಹೋದರೇ, ಮರ್ತುಂ-ಮರಣವನ್ನು ಹೊಂದುವದಕ್ಕೋಸುಗ, ತ್ವರೇಸೇ-ತ್ವರೆಮಾಡುತ್ತೀಯೆಯ್ಯಾ, ದಕ್ಷಿಣಸಾಗರಂ-ದಕ್ಷಿಣಸಮುದ್ರವಂ ಕುರಿತು, ಗಚ್ಛ-ಹೋಗು-ತತ್ರ-ಆ ದಕ್ಷಿಣಸಮುದ್ರತೀರದಲ್ಲಿ, ಭೂಮಿಸ್ಥಂ-ನೆಲದಲ್ಲಿರುವ, ಭಾಸ್ಕರಮಿವ, ಸೂರ್ಯನಂತಿರುವ, ವಾಲಿನಂ-ವಾಲಿಯನ್ನು, ದ್ರಕ್ಷ್ಯಸೇ-ನೋಡುವಿ ॥೧೦॥ ರಾಕ್ಷಸೇಶ್ವರಃ-ರಾಕ್ಷಸಾಧಿಪತಿಯಾದ, ಸರಾವಣಸ್ತು-ಆ ರಾವಣನಾದರೆ, ತಾರಂ-ತಾರನನ್ನು, ವಿನಿರ್ಭರ್ತ್ಸ್ಯ-ಘರ್ಜಿಸಿ-ತತ್ಪುಷ್ಪಕಂ-ಆವಿಮಾನವನ್ನು, ಸಮಾರುಹ್ಯ-ಹತ್ತಿ, ದಕ್ಷಿಣಾರ್ಣವಂ-ದಕ್ಷಿಣಕಡಲಿನಂ ಕುರಿತು, ಪ್ರಯಯೌ-ತೆರಳಿದನು ॥೧೧॥ ತತ್ರ-ಆ ದಕ್ಷಿಣಕಡಲಿನಲ್ಲಿ, ರಾವಣಃ-ರಾವಣನು, ಹೇಮಗಿರಿಪ್ರಖ್ಯಂ-ಮೇರುಪರ್ವತದ ಕಾಂತಿಯಂತೆ ಕಾಂತಿಯುಳ್ಳ, ತರುಣಾರ್ಕನಿಭಾನನಂ- ಬಾಲಸೂರ್ಯನಂತೆ ಸಮಾನವಾದ ಮುಖವುಳ್ಳ, ಸಂಧ್ಯೋಪಾಸನತತ್ಪರಂ-ಸಂಧ್ಯಾವಂದನಗಳಲ್ಲಿ ಆಸಕ್ತನಾದ, ವಾಲಿನಂ-ವಾಲಿಯನ್ನು, ದೃಷ್ಟ್ವಾ-ಕಂಡು ॥ ಅಥ-ಬಳಿಕ, ಅಂಜನಸನ್ನಿಭಃ-ಕಾಡಿಗೆಗೆಸಮಾನನಾದ, ರಾವಣಃ-ರಾವಣನು, ಪುಷ್ಪಕಾತ್-ಪುಷ್ಪಕದ ದೆಸೆಯಿಂದ, ಅವರುಹ್ಯ-ಇಳಿದು, ಅಥ-ಬಳಿಕ, ತೂರ್ಣಂ-ಜಾಗ್ರತೆಯಾಗಿ, ವಾಲಿನಂ-ವಾಲಿಯನ್ನು, ಗೃಹೀತುಂ-ಹಿಡಿದುಕೊಳ್ಳುವದಕ್ಕೋಸುಗ, ನಿಶ್ಶಬ್ದಪದಂ-ಸಪ್ಪಳ್ಳಿಲ್ಲದಪಾದ ವಿನ್ಯಾಸಮುಳ್ಳಂತೇ, ಅದ್ರವತ್-ಓಡಿಬಂದನು ॥ ೧೩ ॥ ಯದೃಚ್ಛಯಾ-ಸ್ವೇಚ್ಛೆಯಿಂದ, ಉನ್ಮೀಲಯತಾ-ಕಣ್ಣುತೆರೆದ,ವಾಲಿನಾಪಿ-ವಾಲಿಯಿಂದಲೂ,ಪಾಪಾಭಿಪ್ರಾಯವಾನ್-ಪಾಪಕಾರ್ಯದಲ್ಲಿ ತಾತ್ಪರ್ಯಮುಳ್ಳ, ಸರಾವಣಃ-ಆ ರಾವಣನು, ದೃಷ್ಟಃ-ನೋಡಲ್ಪಟ್ಟನು, ಸಃ-ಆವಾಲಿಯು, ಸಂಭ್ರಮಂ-ತ್ವರೆಯನ್ನು, ನಚಕಾರ-ಮಾಡಲಿಲ್ಲಾ ॥೧೪॥ ಶಶಂ-ಮೊಲವನ್ನು, ಆಲಕ್ಷ್ಯ-ಕಂಡು, ಸಿಂಹೋವಾ-ಸಿಂಹದಂತೆ, ಪನ್ನಗಂ-ಸರ್ಪವನ್ನು, ಗರುಡೋಯಥಾ - ಗರುಡನಂತೆ, ತದಾ-ಆ ಕಾಲದಲ್ಲಿ, ವಾಲೀ-ವಾಲಿಯು, ಪಾಪನಿಶ್ಚಯಂ-ಪಾಪಬುದ್ಧಿಯುಳ್ಳ, ರಾವಣಂ-ರಾವಣನನ್ನು, ನಾಚಿಂತಯತ್-ಆಲೋಚನೆಗೆ ತರಲಿಲ್ಲಾ॥ ೧೫॥ ಜಿಘೃಕ್ಷಮಾಣಂ-ಗ್ರಹಿಸಲಿಚ್ಛೆಸುತಿರುವ, ಪಾಪನಿಶ್ಚಯಂ-ಪಾಪಬುದ್ಧಿಯುಳ್ಳ, ಏನಂರಾವಣಂ-ಈ ರಾವಣನನ್ನು, ಅದ್ಯ-ಈಗಲೇ, ಕಕ್ಷಾವಲಂಬಿನಂ-ಕಂಕಳಲ್ಲಿ ಜೋಲಾಡುತ್ತಿರುವನನ್ನಾಗಿ, ಕೃತ್ವಾ-ಮಾಡಿ, ತ್ರೀನ್ - ಮೂರಾದ, ಅರ್ಣವಾನ್-ಕಡಲುಗಳಂಕುರಿತು, ಗಮಿಷ್ಯೇ-ಹೋರಡುವೆನು. ॥೧೬॥ ಮಮ-ನನ್ನ, ಕಕ್ಷಸ್ಥಂ-ಕಂಕಳಲ್ಲಿರುವ, ಸ್ರಂಸದೂರುಕರಾಂಬರಂ- ಜೋಲಾಡುತಿರುವ ತೊಡೆಗಳೂ ಕೈಗಳೂ ವಸ್ತ್ರವೂಉಳ್ಳ, ಗರುಡಸ್ಯ-ಗರುಡನ,ಕಕ್ಷಸ್ಥಂ-ಕಂಕಳಲ್ಲರುವ, ಪನ್ನಗಮಿವ-ಸರ್ಪದಂತೆ, ಲಂಬಮಾನಂ-ನ್ಯಾತಾಡುತಿರುವ, ದಶಗ್ರೀವಂ-ರಾವಣನನ್ನು, ಜನಾಃ-ಜನರು, ದ್ರಕ್ಷ್ಯಂತಿ- ನೋಡುತ್ತಾರೆ, ॥೧೭॥ಇತ್ಯೇವಂ-ಈ ಪರಿಯಾಗಿ, ಮತಿಂ-ಬುದ್ಧಿಯನ್ನು, ಆಸ್ಥಾಯ-ನಿಲ್ಲಿಸಿ, ವಾಲೀ-ವಾಲಿಯು, ಮೌನಂ-ಮೌನವನ್ನು, ಉಪಾಸ್ಥಿತಃ-ಹೊಂದಿದವನಾಗಿ,ನೈಗಮಾನ್-ವೇದ ಸಂಬಂಧಿಗಳಾದ, ಮಂತ್ರಾನ್-ಮಂತ್ರಗಳನ್ನು, ಜಪನ್-ಜಪಿಸುತಿರುವನಾಗಿ, ಪರ್ವತರಾಡಿವ, ಹಿಮವತ್ಪರ್ವತದಂ

ಗಮಿಸು. ಅಲ್ಲಿ ಭೂಮಿಯಲ್ಲಿಳಿದಿರುವ ಸೂರ್ಯನಂತಿರ್ಪವಾಲಿಯಂ ಕಾಣುವಿ ಎಂಬದಾಗಿ ನುಡಿಯಲೂ ರಾಕ್ಷಸೇಶ್ವರನಾದ ಆ ರಾವಣನು ತಾರನಂಗರ್ಜಿಸಿ ಪುಷ್ಪಕವನ್ನೇರಿ ದಕ್ಷಿಣಸಮುದ್ರವಂ ಕುರಿತು ತೆರಳಿದನು॥೧೧॥ ಆಸಮುದ್ರದಲ್ಲಿ ರಾವಣನು ಮೇರುವಿಗೆ ಸಮಾನನಾಗಿರುವನಾಗಿಯೂ, ಮಧ್ಯಾಹ್ನ ಸೂರ್ಯನಿಗೆ ಸದೃಶಮಾದ ಮುಖಮುಳ್ಳವನಾಗಿಯೂ, ಸಂಧ್ಯೋಪಾಸನೆಯಲ್ಲಿಯೇ ಸಿಲುಕಿದ ಮನವುಳ್ಳವನಾಗಿಯೂ ಆಗಿರುವ ಆ ವಾಲಿಯಂಕಂಡು ಪುಷ್ಪಕವಿಮಾನದಿಂದಿಳಿದು, ಆತನಂ ಹಿಡಿದುಕೊಳ್ಳುವದಕ್ಕೋಸ್ಕರ ನಿಶ್ಶಬ್ದಮಾಗಿ ಓಡಿಬಂದವನಾದನು- ॥೧೩॥ಸ್ವೇಚ್ಛೆಯಾಗಿತತ ನೋಡುತಿರುವ ಆ ವಾಲಿಯು ಸಿಂಹವು ಮೊಲೆಯಂನು ನೋಡಿದಂತೆಯೂ ಗರುಡನು ಸರ್ಪವಂ ಕಂಡಂತೆಯೂ ಪಾಪಿಯಾದ ಆ ರಾವಣನಂ ಕಂಡರೂ ಏನೂತ್ವರೆ ಪಡದೇಲೂ ಯೋಚಿಸದೇಲೂ ಇದ್ದವನಾಗಿ ನನ್ನನ್ನು ಗ್ರಹಿಸಲಿಚ್ಛೆಯುಳ್ಳ ಇವನಂ ಕಂಕಳಲ್ಲಿಟ್ಟುಕೊಂಡು ಪೂರ್ವಪಶ್ಚಿಮೋತ್ತರ ಸಮುದ್ರಗಳಿಗೆ ಗಮಿಸುವೆನು. ನನ್ನ ಕಂಕಳಲ್ಲಿರುವಮತ್ತು ಜಾರುತ್ತಿರುವ ಊರುಗಳು ಕರಗಳೂ ವಸ್ತ್ರವು ಉಳ್ಳ ಈರಾವಣನನ್ನು ಗರುಡನ ತೊಡೆಪುಟದಲ್ಲಿ ನೇತಾಡುತಿರುವ ಸರ್ಪವನ್ನಂತೆ ಎಲ್ಲರು ನೋಡುವರು, ಎಂಬದಾಗಿ ತಿಳಿದುಕೊಂಡು ಆ ವಾಲಿಯು ಮೌನವಾಗಿ ಮಂತ್ರಜಪವಂ ಗೈಯ್ಯುತ್ತಾ ದೊಡ್ಡ ಬೆಟ್ಟದಂತೆ ಚಲಿಸದೇ ನಿಂತಿದ್ದನು ॥೧೮॥ಒಬ್ಬರನ್ನೊಬ್ಬರು ಹಿಡಿದುಕೊಳ್ಳಬೇಕೆಂದಿಚ್ಛಿಸುತ್ತಿರುವ ಮತ್ತು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲೀಮೌನಮುಪಾಶ್ರಿತಃ। ಜಪನ್ವೈ ನೈಗಮಾನ್ಮಂತ್ರಾನ್ ತಸ್ಥೌ ಪರ್ವತರಾಡಿವ ॥೧೮॥ ತಾವನ್ಯೋನ್ಯಂಜಿಘೃಕ್ಷಂತೌ ಹರಿರಾಕ್ಷಸಪಾರ್ಥಿವೌ। ಪ್ರಯತ್ನವಂತೌ ತತ್ಕರ್ಮತ್ವೀಹತುರ್ಬಲದರ್ಪಿತೌ ॥೧೯॥ ಹಸ್ತಗ್ರಾಹಂತುತಂಮತ್ವಾ ಪಾದಶಬ್ದೇನರಾವಣಮ್ । ಪರಾಙ್ಮುಖೋಪಿಜಗ್ರಾಹವಾಲೀಸರ್ಪಮಿವಾಂಡಜಃ॥೨೦॥ 'ಗೃಹೀತುಕಾಮಂತಂಗೃಹ್ಯರಕ್ಷಸಾಮೀಶ್ವರಂಹರಿಃ । ಖಮುತ್ಪಪಾತವೇಗೇನಕೃತ್ವಾಕಕ್ಷಾವಲಂಬಿನಮ್ ॥೨೧॥ಸತಂಪೀಡಯಮಾನಸ್ತು ವಿತುದಂತಂನಖೈರ್ಮುಹುಃ। ಜಹಾರರಾವಣಂವಾಲೀಪವನಸ್ತೋಯದಂಯಥಾ ॥ ೨೨॥ ಅಥತೇರಾವಣಾಮಾತ್ಯಾಃಹ್ರಿಯಮಾಣಂದಶಾನನಮ್। ಮುಮೋಕ್ಷಯಿಷವೋಘೋರಾರವಮಾಣಾಹ್ಯಭಿದ್ರವನ್ ॥೨೩॥ ಅನ್ವೀಯಮಾನಸ್ತೈರ್ವಾಲೀಭ್ರಾಜತೇಂಬರಮಧ್ಯಗಃ। ಅನ್ವೀಯಮಾನೋಮೇಘೌಘೈಃಅಂಬರಸ್ಥ ಇವಾಂಶುಮಾನ್ ॥೨೪॥ ತೇಶಕ್ನುವಂತಸ್ತಂಪ್ರಾಪ್ತುಂವಾಲಿನಂರಾಕ್ಷಸೋತ್ತಮಾಃ । ತಸ್ಯಬಾಹೂರುವೇಗೇನಪರಿಭ್ರಾಂತಾಪತಂತಿಚ ॥೨೫॥ ವಾಲಿಮಾರ್ಗಾದಪಾಕ್ರಾಮನ್ ಪರ್ವತೇಂದ್ರಾಹಿಗಚ್ಛತಃ । ಕಿಂಪುನಃ

---

ತ್ರ, ತಸ್ಥೌ-ನಿಂತನು ॥ ೧೮ ॥ ಹರಿರಾಕ್ಷಸಪಾರ್ಥಿವೌ-ವಾನರರಾಕ್ಷಸರಾಜರಾದ, ತೌ-ಆ ವಾಲಿ ದಶಗ್ರೀವರಿಬ್ಬರು, ಅನ್ಯೋನ್ಯಂ - ಪರಸ್ಪರವಾಗಿ, ಜಿಘೃಕ್ಷಂತೌ-ಗ್ರಹಿಸಲಿಚ್ಛೆಯುಳ್ಳವರಾಗಿ, ಬಲದರ್ಪಿತೌ-ಬಲದಿಂದ ಗರ್ವಿತರಾಗಿ, ಯತ್ನವಂತೌ-ಪ್ರಯತ್ನಮುಳ್ಳವರಾಗಿ, ತತ್ಕರ್ಮ-ಅಗ್ರಹಣರೂಪಕವಾದ ಕರ್ಮವನ್ನು, ಈಹತುಃ ಇಚ್ಛಿಸಿದರು ॥ ೧೯ ॥ ವಾಲೀ-ವಾಲಿಯು, ಪಾದಶಬ್ದೇನ-ಪಾದಶಬ್ದದಿಂದ, ತಂರಾವಣಂ-ಆ ರಾವಣನನ್ನು, ಹಸ್ತಗ್ರಾಹಂ-ಕೈಗಳಿಂದ ಹಿಡುಕೊಂಬುವವನನ್ನಾಗಿ, ಮತ್ವಾ-ತಿಳಿದು, ಪರಾಙ್ಮುಖೋಪಿ-ಪರಾಙ್ಮುಖನಾದಾಗ್ಯೂ, ಸರ್ಪಂ-ಸರ್ಪವನ್ನು, ಅಂಡಜಃವ- ಗರುಡನಂತೆತಂ-ಆ ರಾವಣನನ್ನು, ಜಗ್ರಾಹ-ಹಿಡುಕೊಂಡನು ॥೨೦॥ ಹರಿಃ-ವಾನರನಾದ ವಾಲಿಯು, ಗೃಹೀತುಕಾಮಂ - ಗ್ರಹಿಸುವದಕ್ಕೆ ಇಚ್ಛೆಯುಳ್ಳ, ಈಶ್ವರಂ-ರಾಕ್ಷಸಾಧಿಪತಿಯಾದ, ತಂ-ಆ ರಾವಣನನ್ನು, ಗೃಹ್ಯ-ಹಿಡಿದುಕೊಂಡು, ವೇಗೇನ-ವೇಗದಿಂದ, ಕಕ್ಷಾವಲಂಬಿನಂ-ಕಂಕಳಲ್ಲಿಜೋಲಾಡುತಿರುವನನ್ನಾಗಿ, ಕೃತ್ವಾ-ಮಾಡಿ, ಖಂ-ಅಂತರಿಕ್ಷವಂ ಕುರಿತು, ಉತ್ಪಪಾತ-ಹಾರಿದನು ॥೨೧॥ ಸವಾಲೀ-ಆ ವಾಲಿಯು, ನಖೈಃ-ಉಗುರುಗಳಿಂದ, ಮುಹುಃ-ಬಾರಿಬಾರಿಗೂ, ವಿತುದಂತಂ-ಕಚ್ಚುತಿರುವ, ತಂರಾವಣಂ-ಆ ರಾವಣನನ್ನು, ಪವನಃ-ವಾಯುವು, ತೋಯದಂಯಥಾ-ಮೇಘವನ್ನಂತೇ, ಪೀಡಯಮಾನಸ್ತು-ಬಾಧೆಗೊಳಿಸುವಂಥಾವನಾಗಿ, 'ಜಹಾರ-ಅಪಹರಿಸಿದನು ॥ ೨೨ ॥ ಅಥ-ಬಳಿಕ, ಘೋರಾಃ-ಭಯಂಕರರಾದ, ರಾವಣಾಮಾತ್ಯಾಃ-ರಾವಣನಿಗೆಮಂತ್ರಿಗಳಾದ, ತೇ-ಆ ಮಾರೀಚಾದಿಗಳು, 'ಹ್ರಿಯಮಾಣಂ-ಸೆಗದುಕೊಂಡು ಹೋಗಲ್ಪಟ್ಟ, ದಶಾನನಂ-ರಾವಣನನ್ನು, ಮುಮೋಕ್ಷಯಿಷವಃ - ಬಿಡಿಸಲಿಚ್ಛೆಯುಳ್ಳವರಾಗಿ, ಘೋರಂ-ಭಯಂಕರವಾಗಿ, ರವಮಾಣಾಃ-ಕೂಗುತಿರುವರಾಗಿ, ಅಭಿದ್ರವನ್ಹಿ- ಓಡಿಬಂದರಷ್ಟೆ ॥೨೩॥ ತೈಃ-ಆ ಮಾರೀಚಾದಿಗಳಿಂದ, ಅನ್ವೀಯಮಾನಃ-ಅನುಸರಿಸಲ್ಪಟ್ಟ, ವಾಲೀ-ವಾಲಿಯು, ಅಂಬರಮಧ್ಯಗಃ- ಅಂತರಿಕ್ಷಮಧ್ಯದಲ್ಲಿ ಹೋಗುತಿರುವನಾಗಿ, ಮೇಘೌಘೈಃ-ಮೇಘಗಳ ತಂಡೆಗಳಿಂದ, ಅನ್ವೀಯಮಾನಃ-ಅನುಸರಿಸಲ್ಪಟ್ಟ, ಅಂಬರಸ್ಥಃ-ಅಂತರಿಕ್ಷ ಮಧ್ಯವರ್ತಿಯಾದ, ಅಂಶುಮಾನಿವ - ಸೂರ್ಯನಂತೆ, ಭ್ರಾಜತೇ-ಹೊಳೆಯುತಿದ್ದನು ॥ ೨೪ ॥ ತೇರಾಕ್ಷಸೋತ್ತಮಾಃ-ಆ ರಾಕ್ಷಸಶ್ರೇಷ್ಠನಾದ ರಾವಣಮಂತ್ರಿಗಳು, ತಸ್ಯ-ಆ ವಾಲಿಯ, ಬಾಹೂರುವೇಗೇನ-ಭುಜ ತೊಡೆಗಳ ವೇಗದಿಂದ, ಪರಿಭ್ರಾಂತಾಃ-ತಿರುಗುತಿರುವರಾಗಿ, ತಂವಾಲಿನಂ-ಆ ವಾಲಿಯನ್ನು, ಪ್ರಾಪ್ತುಂ- ಹೊಂದುವದಕ್ಕೋಸ್ಕರ, ಅಶಕ್ನುವಂತಃ - ಅಸಮರ್ಥರಾಗಿ, ಪತಂತಿಚ-ಕೆಳಕ್ಕೆ ಬಿದ್ದರು ॥೨೫॥ ಯೆಯಾವಕಾರಣದ ದೆಸೆಯಿಂದ, ಗಚ್ಛತಃ-ಹೋಗುತಿರುವ, ವಾಲಿಮಾರ್ಗಾತ್-ವಾಲಿಮಾರ್ಗದ ದೆಸೆಯಿಂದ, ಪರ್ವತೇಂದ್ರಾಃ-ಶ್ರೇಷ್ಠ ಬೆಟ್ಟಗಳೊಕೂಡ, ಅಪಾಕ್ರಾಮನ್-ಹಿಂದಕ್ಕೆ ಬಿದ್ದವು, ಜೀವಿತೇಪ್ಸವಃ-ಬದುಕಬೇಕೆಂಬ ಯಿಚ್ಛೆ

---

ಬಲಗರ್ವಿತರಾದ ಆ ವಾಲಿ ರಾವಣರೀರ್ವರು ಯತ್ನಿಸುತ್ತಿರುವರಾಗಿ ಆಕಾರ್ಯಕ್ಕೆ ತಕ್ಕ ಉಪಾಯವಂ ಹುಡುಕಿದರು॥ ಹಸ್ತಗಳಿಂದ ಗ್ರಹಿಸಲಿಚ್ಛೆಯುಳ್ಳ ಆರಾವಣನನ್ನು ಪಾದಶಬ್ದದಿಂದ ತಿಳಿದುಕೊಂಡವನಾಗಿ ಆ ವಾಲಿಯು ಪರಾಙ್ಮುಖನಾದರೂ, ತನ್ನನ್ನು ಗ್ರಹಿಸಲಪೇಕ್ಷೆಯುಳ್ಳ ಆ ರಾಕ್ಷಸನನ್ನು ಗರುಡನು ಸರ್ಪವಂ ಹಿಡಿದುಕೊಳ್ಳುವಂತೆ ಕಂಕಳೆಲ್ಲಿಯೇ ನೇತಾಡುತಿರುವಂತೆಶಿಕ್ಕಿಸಿಕೊಂಡು, ಕಡು ವೇಗದಿಂದ ಗಗನ ಮಾರ್ಗದಲ್ಲಿ ತೆರಳಿದನು॥೨೧॥ಬಾರಿಬಾರಿಗೂ ಉಗುರುಗಳಿಂದ ಜಿಗುಟುತ್ತಿರುವ ಆ ರಾವಣನನ್ನು, ಮಹಾಪರಾಕ್ರಮಿಯಾದ ವಾಲಿಯೂ, ಬಿರುಘಾಳಿಯು ಮೇಘಗಳಂ ಪೀಡಿಸುವಂತೆ ಪೀಡಿಸುತ್ತಿರುವನಾಗಿ ಅಪಹರಿಸಿಕೊಂಡು ಪೋದನು ॥೨೨॥ ಅನಂತರದಲ್ಲಿ ಕಡುಭಯಂಕರರಾದ ಆ ರಾವಣಮಂತ್ರಿಗಳು, ಹಿಡಿದುಕೊಂಡು ಹೋಗಲ್ಪಡುತ್ತಿರುವ ಆತನಂ ಬಿಡಿಸಲಿಚ್ಛೆಯುಳ್ಳವರಾಗಿ ಘಟ್ಟಿಯಾಗಿ ಕೂಗುತ್ತಾ ಓಡಿಬಂದರು ॥೨೩॥ ಆರಾಕ್ಷಸರಿಂದ ಅನುಸರಿಸಲ್ಪಟ್ಟು ಗಗನಮಾರ್ಗಲ್ಲಿ ಪೋಗುತಿರುವ ಆ ವಾಲಿಯು ಮೇಘತಂಡಗಳಿಂದೊಡಗೂಡಿ ಬರುತಿರುವ ಸೂರ್ಯನಂತೆ ಹೊಳೆಯುತಿದ್ದನು॥೨೪॥ಆರಾಕ್ಷಸೋತ್ತಮರೆಲ್ಲರು ವಾಲಿಯ ಊರುವೇಗದಿಂದಲೂ ಭುಜವೇಗದಿಂದಲೂ ಪರಿಭ್ರಾಂತರಾಗಿಯೂ ಆತನನ್ನು ಹೊಂದಲಶಕ್ತರಾಗಿಯೂ ಇರುವರಾಗಿ ಕೆಳಗೆ ಬಿದ್ದುಹೋದರು॥೨೫॥ ತ್ವರಿತವಾಗಿ ಹೋಗುತ್ತಿರುವ ಯಾವ ವಾಲಿಯ ಮಾರ್ಗದದೆಶೆಯಿಂದ ದೊಡ್ಡ ದೊ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜೀವಿತಪ್ರೇಪ್ಸುರ್ಬಿಭ್ರದ್ವೈಮಾಂಸಶೋಣಿತಂ ॥೨೬॥ ಅಪಕ್ಷಿಗಣಸಂಪಾತಾರ್ವಾನರೇಂದ್ರೋಮಹಾಜವಃ । ಕ್ರಮಶ ಸ್ಸಾಗರಾನ್ಸರ್ವಾನ್ಸಂಧ್ಯಾಕಾಲೇಸಮಾಯಯೌ ॥೨೭॥ ಸಂಭಾವ್ಯಮಾನೋಭೂತೈಸ್ತು ಖೇಚರೈಃಖೇಚರೋಹರಿಃ । ಪ ಶ್ಚಿಮಂಸಾಗರಂವಾಲೀಆಜಗಾಮಸರಾವಣಃ ॥೨೮॥ ತತ್ರಸಂಧ್ಯಾಮುಪಾಸಿತ್ವಾಸ್ನಾತ್ವಾಜಪ್ತ್ವಾಚವಾನರಃ । ಉತ್ತ ರಂಸಾಗರಂಪ್ರಾಯಾದ್ವಹಮಾನೋದಶಾನನಮ್ ॥೨೯॥ ಬಹುಯೋಜನಸಾಹಸ್ರಂತದಧ್ವಾನಂಮಹಾಹರಿಃ । ವಾಯುವ ಚ್ಚಮನೋವಚ್ಚ ಜಗಾಮಸಹಶತ್ರುಣಾ ॥೩೦॥ ಉತ್ತರೇಸಾಗರೇಸಂಧ್ಯಾಮುಪಾಸಿತ್ವಾ ದಶಾನನಮ್ । ವಹಮಾನೋಗಮದ್ವಾ ಲೀಪೂರ್ವಮಂಬುನಿಧಿಂಪರಮ್ ॥೩೧॥ ತತ್ರಾಪಿಸಂಧ್ಯಾಮನ್ವಾಸ್ಯವಾಸವಿಸ್ಸಹರೀಶ್ವರಃ । ಕಿಷ್ಕಿಂಧಾಭಿಮುಖೋಗೃಹ್ಯ ರಾವಣಂಪುನರಾಗಮತ್ ॥೩೨॥ ಚತುರ್ಷ್ವಪಿಸಮುದ್ರೇಷುಸಂಧ್ಯಾಮನ್ವಾಸ್ಯವಾನರಃ । ರಾವಣೋದ್ವಹನಶ್ರಾಂತಃಕಿ ಷ್ಕಿಂಧೋಪವನೇಪತತ್ ॥೩೩॥ ರಾವಣಂತುಮುಮೋಚಾಥಸ್ವಕಕ್ಷಾತ್ಕಪಿಸತ್ತಮಃ । ಕುತಸ್ತ್ವಮಿತಿಹೋವಾಚಪ್ರಹ

ಯುಳ್ಳ, ಮಾಂಸಶೋಣಿತಂ-ಮಾಂಸರಕುತವನ್ನು, ಬಿಭ್ರದ್ವೈ-ಧರಿಸುತಿರುವ ಪುರುಷನು, ಕಿಂಪ್ರನಃ-ಏನು ಪೇಳತಕ್ಕದ್ದು ॥೨೬॥ ಮಹಾಜವಃ- ಮ ಹಾವೇಗವಂತನಾದ, ವಾನರೇಂದ್ರಃ-ವಾಲಿಯು, ಅಪಕ್ಷಿಗಣಸಂಪಾತಾನ್-ಪಕ್ಷಿಗಣಸಂಚಾರರಹಿತಂಗಳಾದ, ಸರ್ವಾನ್-ಸಮಸ್ತವಾದ, ಸಾಗರಾನ್-ಕಡಲುಗಳ ನ್ನು ಕುರಿತು, ಕ್ರಮಶಃ-ಕ್ರಮವಾಗಿ, ಸಂಧ್ಯಾಕಾಲೇ-ಸಂಧ್ಯಾಕಾಲದಲ್ಲಿ, ಸಮಾಯಯೌ-ಬಂದನು ॥೨೭॥ ಖೇಚರಃ-ಅಂತರಿಕ್ಷಮಾರ್ಗ ಸಂಚಾರಿಯಾದ ಹರಿಃ-ವಾನರನಾದ, ವಾಲೀ-ವಾಲಿಯು, ಸರಾವಣಃ-ರಾವಣನಿಂದೊಡಗೂಡಿದವನಾಗಿ, ಖೇಚರೈಃ-ಅಂತರಿಕ್ಷಸಂಚಾರಿಗಳಾದ, ಭೂತೈಃ-ಪಕ್ಷ್ಯಾದಿ ಭೂತ ಗಳಿಂದ, ಸಂಭಾವ್ಯಮಾನಃ-ಬಹುಮಾನಿಸಲ್ಪಟ್ಟವನಾಗಿ, ಪಶ್ಚಿಮಂಸಾಗರಂ-ಪಶ್ಚಿಮ ಸಮುದ್ರವಂ ಕುರಿತು, ಆಜಗಾಮ-ಬಂದನು ॥೨೮॥ ತತ್ರ-ಆ ಪ ಶ್ಚಿಮ ಸಮುದ್ರದಲ್ಲಿ, ವಾನರಃ-ವಾನರನು, ದಶಾನನಂ-ರಾವಣಾಸುರನನ್ನು, ವಹಮಾನಃ-ಹೊತ್ತಿದವನಾಗಿ, ಸ್ನಾತ್ವಾ-ಸ್ನಾನಮಾಡಿ, ಸಂಧ್ಯಾಂ-ಸಂ ಧ್ಯಾವಂದನೆಯನ್ನು, ಉಪಾಸಿತ್ವಾ-ಉಪಾಸನಮಾಡಿ, ಜಪ್ತ್ವಾಚ-ಜಪವನ್ನೂ ಮಾಡಿ, ಉತ್ತರಂ-ಉತ್ತರದಿಕ್ಕಿನಲ್ಲಿರುವ, ಸಾಗರಂ-ಕಡಲಿನಂ ಕುರಿತು, ಪ್ರಾಯಾತ್-ಹೊರಟನು ॥೨೯॥ ಮಹಾಹರಿಃ-ಬಲಮುಳ್ಳ ವಾಲಿಯು, ಬಹುಯೋಜನಸಾಹಸ್ರಂ-ಅನೇಕಸಹಸ್ರಯೋಜನಗಳುಳ್ಳ, ತದಧ್ವಾನಂ-ಆಮಾರ್ಗ ದಲ್ಲಿ, ಶತ್ರುಣಾಸಹ-ಶತ್ರುವಾದರಾವಣನೊಡನೆ, ವಾಯುವಚ್ಚ-ವಾಯುವಿನಂತೆಯೂ-ಮನೋಚ್ಚ -ಮನಸ್ಸಿನಂತೆಯೂ, ಜಗಾಮ-ತೆರಳಿದನು ॥೩೦॥ ವಾಲೀ-ವಾ ಲಿಯು, ಉತ್ತರೇಸಾಗರೇ-ಉತ್ತರಸಮುದ್ರದಲ್ಲಿ, ಸಂಧ್ಯಾಂ-ಸಂಧ್ಯೆಯನ್ನು, ಉಪಾಸಿತ್ವಾ-ಉಪಾಸನಮಾಡಿ, ದಶಾನನಂ-ರಾವಣನನ್ನು, ವಹಮಾನಃ- ಹೊತ್ತುಕೊಂಡವನಾಗಿ, ಪೂರ್ವಂ-ಪೂರ್ವದಿಕ್ಕಿನಲ್ಲಿರುವ, ಪರಂ-ಶ್ರೇಷ್ಠವಾದ, ಅಂಬುನಿಧಿಂ-ಕಡಲಿನಂಕುರಿತು, ಜಗಾಮ-ತೆರಳಿದನು ॥೩೧॥ ವಾಸವಿಃ- ಇಂದ್ರಪುತ್ರನಾದ, ಸಹರೀಶ್ವರಃ-ವಾನರಾಧಿಪತಿಯಾದ ವಾಲಿಯು, ತತ್ರಾಪಿ-ಆಪೂರ್ವ ಸಮುದ್ರದಲ್ಲಿಯೂ, ಸಂಧ್ಯಾಂ- ಸಂಧ್ಯಾವಂದನೆಯನ್ನು, ಅನ್ವಾ ಸ್ಯ-ಉಪಾಸನೆ ಮಾಡಿ, ರಾವಣಂ-ರಾವಣನನ್ನು, ಗೃಹ್ಯ-ಹಿಡಿದುಕೊಂಡು, ಪುನಃ-ಮತ್ತು, ಕಿಷ್ಕಿಂಧಾಭಿಮುಖಃ-ಕಿಷ್ಕಿಂಧಾಪಟ್ಟಣಕ್ಕೆ-ಅಭಿಮುಖನಾ ಗಿ-ಆಗಮತ್-ಬಂದನು ॥೩೨॥ ಚತುರ್ಷ್ವಪಿ-ನಾಲ್ಕಾದ, ಸಮುದ್ರೇಷು-ಸಮುದ್ರಗಳಲ್ಲಿ, ಸಂಧ್ಯಾಂ-ಸಂಧ್ಯೆಯನ್ನು, ಅನ್ವಾಸ್ಯ-ಉಪಾಸನಮಾಡಿ, ವಾನ ರಃ-ವಾಲಿಯು, ರಾವಣೋದ್ವಹನಶ್ರಾಂತಃ-ರಾವಣಾಸುರನ.ಹೊರುವಿಕೆಯಿಂದಬಳಲಿದವನಾಗಿ, ಕಿಷ್ಕಿಂಧೋಪವನೇ, ಕಿಷ್ಕಿಂಧಾ ಪಟ್ಟಣದ ಉದ್ಯಾನವ ನದಲ್ಲಿ, ಅಪತತ್-ಬಿದ್ದನು ॥೩೩॥ ಅಥ-ಬಳಿಕ, ಕಪಿಸತ್ತಮಃ-ವಾನರಶ್ರೇಷ್ಠನಾದ ವಾಲಿಯು, ಸ್ವಕಕ್ಷಾತ್-ತನ್ನ ಕಂಕಳದೆಶೆಯಿಂದ, ರಾವಣಂತು, ರಾವಣನನ್ನಾದರೋ, ಮುಮೋಚ-ಬಿಟ್ಟನು, ಹರಿಃ-ವಾಲಿಯು, ರಾವಣಂ - ರಾವಣನಂ ಕುರಿತು, ಪ್ರಹಸನ್-ನಗುತಿರುವನಾಗಿ, ತ್ವಂ-ನೀನು, ಕು

ಡ್ಡಬೆಟ್ಟಗಳೂ ಸಹಾ ಹಿಂದಕ್ಕೆತಿರಿಗಿದವೋ, ಅಂಥಾ ವಾಲಿಯನ್ನುಬಿಟ್ಟ ಹೋಗುವದಕ್ಕೆ, ಬದುಕಲಿಚ್ಛೆಯುಳ್ಳ ಮತ್ತು ಮಾಂಸರಕುತಗಳಂ ಧರಿಸಿರುವ ಯಾವಪುರುಷನು ತಾನೇ ಸಮರ್ಥನಾಗುವನು ॥೨೬॥ ಕಡುವೇಗವಂತನಾದ ಆ ವಾನರೇಂದ್ರನು ಪಕ್ಷಿಗಳ ಸಂಚಾರವೂ ಸಹಾ ಇಲ್ಲದಿರುವ ಎಲ್ಲಾ ಸಮುದ್ರಗಳಂ ಕುರಿತು ಸಂಧ್ಯಾಕಾಲದಲ್ಲಿ ಕ್ರಮ ವಾಗಿಬಂದನು ॥೨೭॥ (ಅದಂತೆನೆ) ಗಗನ ಗಾಮಿಯಾದ ವಾಲಿಯಾದರೆ, ಗಗನಚಾರಿಗಳಾದ ಭೂತಳಿಂದ ಶ್ಲಾಘಿಸ ಲ್ಪಡುತಿರುವನಾಗಿಯೂ, ರಾವಣಸಹಿತನಾಗಿಯೂ ಇರುವನಾಗಿ ಪಶ್ಚಿಮೋದಧಿಯಂ ಹೊಂದಿ, ಅಲ್ಲಿ ಸ್ನಾನವಂಮಾಡಿ ಸಂಧ್ಯಾದೇವಿಯನ್ನುಪಾಸಿಸಿ, ಜಪವಂಗೈದು, ರಾವಣನಂ ಹೊತ್ತುಕೊಂಡು ಉತ್ತರಸಮುದ್ರವಂ ಕುರಿತು ತೆರಳಿ ದನು ॥೨೮॥ ಮಹಾವಾನರನಾದ ಆವಾಲಿಯು ಶತ್ರುಸಹಿತನಾಗಿಯೇ ಅನೇಕ ಸಹಸ್ರಯೋಜನ ದೂರವುಳ್ಳ ಆ ದಾರಿಯುಲ್ಲಿ ವಾಯುವಿನಂತೆಯು ಮನದಂತೆಯೂ ಬಹುವೇಗವಾಗಿ ಹೊರಟುಹೋಗಿ ಉತ್ತರಸಮುದ್ರವಂಹೊಂದಿ, ಅಲ್ಲಿ ಸಾಯುಂಸಂಧ್ಯೆಯುಂಗೈದು, ರಾವಣಾಸುರನಂ ವಹಿಸುತ್ತಲೆ ಪೂರ್ವ ಸಮುದ್ರಕ್ಕೆ ಹೋಗಿ ಅಲ್ಲಿ ಸಾಯುಂತನಕೃ ತ್ಯವಂಗೈದು, ದಶಕಂಠನಂ ತೆಗದುಕೊಂಡು ಪುನಹಾ ಕಿಷ್ಕಿಂಧಾ ಪುರಿಗಭಿಮುಖವಾಗಿ ಬಂದವನಾದನು ॥೩೦॥ ಆ ವಾಲಿಯಾದರೆ ಈ ಪರಿಯಾಗಿ ಚತುಸ್ಸಮುದ್ರಗಳಲ್ಲಿಯೂ ಸಂಧ್ಯಾನುಷ್ಠಾನವಂಗೈದು, ರಾವಣನ ಹೊರೆಯಿಂ ದ ಬಳಲಿದವನಾಗಿ, ಕಿಷ್ಕಿಂಧಾಪುರಿಯ ಸಮೀಪದಲ್ಲಿರ್ಪ ಉದ್ಯಾನವನದಲ್ಲಿ ಧುಮಿಕಿದವನಾಗಿ, ತನ್ನ ಕಂಕಳಿಂದ ರಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ತ ರಾವಣಂಹರಿಃ ॥೩೪॥ ವಿಸ್ಮಯಂತುಮಹದ್ಗತ್ವಾ ಶ್ರಮಲೋಲನಿರೀಕ್ಷಣಃ । ರಾಕ್ಷಸೇಶೋಹರೀಶಂತಮಿದಂವಚನಮಬ್ರವೀತ್ ॥೩೫॥ ವಾನರೇಂದ್ರಮಹೇಂದ್ರಾಭರಾಕ್ಷಸೇಂದ್ರೋಸ್ಮಿ ರಾವಣಃ । ಯುದ್ಧೇಪ್ಸುರಿಹಸಂಪ್ರಾಪ್ತಸ್ಸಚಾದ್ಯಾಸಾದಿತಸ್ತ್ವಯಾ ॥೩೬॥ ಅಹೋಬಲಮಹೋವೀರ್ಯಮಹೋಗಂಭೀರತಾಚತೇ। ಯೇನಾಹಂಪಶುವದ್ಗೃಹ್ಯಭ್ರಾಮಿತಶ್ಚತುರೋರ್ಣವಾನ್ ॥೩೭॥ ಏವಮಶ್ರಾಂತವದ್ವೀರಶೀಘ್ರಮೇವಮಹಾರ್ಣವಾನ್ । ಮಾಂಚೈವೋದ್ವಹಮಾನಸ್ತು ಕೋನ್ಯೋವೀರಃ ಕ್ರಮಿಷ್ಯತಿ ॥೩೮॥ ತ್ರಯಾಣಾಮಪಿಭೂತಾನಾಂಶಕ್ತಿರೇಷಾಪ್ಲವಂಗಮ । ಮನೋನಿಲಸುಪರ್ಣಾನಾಂತವವಾನಾತ್ರಸಂಶಯಃ ॥೩೯॥ ಸೋಹಂದೃಷ್ಟಬಲಸ್ತುಭ್ಯಮಿಚ್ಛಾಮಿಹರಿಪುಂಗವ। ತ್ವಯಾಸಹಚಿರಂಸಖ್ಯಂಸುಸ್ನಿಗ್ಧಂಪಾವಕಾಗ್ರತಃ॥
* ದಾರಾಃಪುತ್ರಾಃಪುರಂರಾಷ್ಟ್ರಂಭೋಗಾಚ್ಛಾದನಭೋಜನಮ್। ಸರ್ವಮೇವಾವಿಭಕ್ತಂನೌಭವಿಷ್ಯತಿನಸಂಶಯಃ ॥೪೧॥

---

ತತಃ-ಯಲ್ಲಿಂದಬಂದೆಂದು, ಉವಾಚಹ-ಕೇಳಿದನಷ್ಟೇ ॥೩೪॥ ರಾಕ್ಷಸೇಶಃ-ರಾಕ್ಷಸಾಧಿಪತಿಯಾದ ರಾವಣನು, ಮಹತ್-ಅಧಿಕವಾದ, ವಿಸ್ಮಯಂ-ಆಶ್ಚರ್ಯವನ್ನು, ಗತ್ವಾ-ಹೊಂದಿ, ಶ್ರಮಲೋಲನಿರೀಕ್ಷಣಃ-ಬಳಲಿಕೆಯಿಂದಚಂಚಲವಾದನೇತ್ರಗಳುಳ್ಳವನಾಗಿ, ತಂಹರೀಶಂ-ಆ ವಾಲಿಯಂ ಕುರಿತು, ಇದಂವಚನಂ-ಈ ವಕ್ಷ್ಯಮಾಣ ವಚನವನ್ನು, ಅಬ್ರವೀತ್-ನುಡಿದನು ॥೩೫॥ ಹೇವಾನರೇಂದ್ರ-ಎಲೈ ವಾನರಾಧಿಪತಿಯೇ, ಹೇಮಹೇಂದ್ರಾಭ - ಎಲೈಇಂದ್ರನಿಗೆಸಮಾನನೇ, ರಾಕ್ಷಸೇಂದ್ರಃ- ರಾಕ್ಷಸಾಧಿಪತಿಯಾದ, ರಾವಣಃ-ರಾವಣನು, ಅಸ್ಮಿ-ಆಗಿಧ್ದೇನೇ, ತ್ವಯಾ-ನಿನ್ನೊಡನೆ, ಯುದ್ಧೇಪ್ಸುಃ- ಯುದ್ಧಮಾಡಬೇಕೆಂಬ ಇಚ್ಛೆಯುಳ್ಳವನಾಗಿ, ಇಹ-ಇಲ್ಲಿ, ಸಂಪ್ರಾಪ್ತಃ-ಬಂದೆನು, ಸಚ-ಅದೂನು, ಅದ್ಯ-ಈಗ, ಆಸಾದಿತಃ-ಹೊಂದಲ್ಪಟ್ಟೆನು, ಯೇನ-ಯಾವನಿನ್ನಿಂದ, ಅಹಂ-ನಾನು, ಪಶುವತ್-ಕುರಿಯಂತೆ, ಗೃಹ್ಯ-ಹಿಡಿದುಕೊಂಡು, ಚತುರಃ-ನಾಲ್ಕಾದ, ಅರ್ಣವಾನ್ - ಸಮುದ್ರಗಳಂ ಕುರಿತು, ಭ್ರಾಮಿತಃ-ತಿರಗಿಸಲ್ಪಟ್ಟನೋ, ತಸ್ಯತೇ-ಅಂಥಾನಿನ್ನ, ಬಲಂ-ಬಲವು, ಅಹೋ-ಆಶ್ಚರ್ಯವು, ವೀರ್ಯಂ - ಪರಾಕ್ರಮವು, ಅಹೋ-ಆಶ್ಚರ್ಯತರವು, ಗಂಭೀರತಾಚ-ಘನತೆಯೂಕೂಡಾ, ಅಹೋ-ಆಶ್ಚರ್ಯವು ॥ ೩೭ ॥ ಹೇವೀರ-ಎಲೈ ಪರಾಕ್ರಮಶಾಲಿಯೇ, ಏವಂ-ಈ ಪರಿಯಾಗಿ, ಮಾಂಚೈವ-ಎನ್ನನ್ನೂಕೂಡಾ, ಉದ್ವಹಮಾನಸ್ತು - ಹೊತ್ತುಕ್ಕೊಂಡವನಾಗಿ, ಅನ್ಯೋವೀರಃ - ಮತ್ತೊಬ್ಬಶೂರನು, ಶೀಘ್ರಮೇವ - ಜಾಗ್ರತೆಯಾಗಿ, ಅಶ್ರಾಂತವತ್-ಶ್ರಮವಿಲ್ಲದವನಂತೆ, ಮಹಾರ್ಣವಾನ್ -ಮಹಾಸಮುದ್ರಗಳಂ ಕುರಿತು, ಕಃ-ಯಾರುತಾನೆ, ಕ್ರಮಿಷ್ಯತಿ-ತಿರುಗುವನು ॥೩೮॥ ಹೇ ಪ್ಲವಂಗಮ-ಎಲೈವಾನರನೇ! ತವ-ನಿನಗೆ, ಯಾಶಕ್ತಿಃ- ಯಾವ ಸಾಮರ್ಥ್ಯವೋ, ಏಷಾಶಕ್ತಿಃ-ಈ ಸಾಮರ್ಥ್ಯವು, ತ್ರಯಾಣಾಂ-ಮೂರಾದ, ಮನೋನಿಲ ಸುಪರ್ಣಾನಾಂ- ಮನವೂ-ವಾಯುವು, ಗರುಡನು ಎಂಬ, ಭೂತಾನಾನಪಿ, ಭೂತಗಳಿಗೂ ಕೂಡಾ, ಅಸ್ತಿ-ಇರುಹುದು. ನಾಸ್ತಿವಾ-ಇಲ್ಲವೊ ಏನೋ?ಅತ್ರ-ಈ ಅರ್ಥದಲ್ಲಿ, ಸಂಶಯಃ-ಸಂಶಯವು, ನ-ಇಲ್ಲಾ ॥೩೯॥ ಹೇಹರಿಪ್ಲವಂಗವ-ಎಲೈವಾನರ ಶ್ರೇಷ್ಠನೆ,ಸೋಹಂ- ಆ ಈನಾನು,ತುಭ್ಯಂ-ನಿನಿಗೋಸ್ಕರ, ದೃಷ್ಟಬಲಃ-ಕಾಣಲ್ಪಟ್ಟ ಬಲವುಳ್ಳವನಾದೆನು, ತ್ವಯಾಸಹ-ನಿನ್ನೊಡನೆ, ಚಿರಂ-ಬಹುಕಾಲವು, ಸುಸ್ನಿಗ್ಧಂ - ಸ್ನೇಹಿತನಂತೆ, ಪಾವಕಾಗ್ರತಃ-ಅಗ್ನಿಯ ಮುಂದೆ, ಸಖ್ಯಂ-ಸ್ನೇಹವನ್ನು, ಇಚ್ಛಾಮಿ-ಕೋರುತ್ತೇನೆ ॥೪॥ ದಾರಾಃ-ಹೆಂಡರು, ಪುತ್ರಾಃ-ಮಕ್ಕಳು, ಪುರಂ-ಪ್ರಧಾನನಗರವು, ರಾಷ್ಟ್ರಂ-ರಾಜ್ಯವು,ಭೋಗಾಚ್ಛಾದನ ಭೋಜನಂ-ಭೋಗ-ವಿಷಯಭೋಗಂಗಳು, ಆಚ್ಛಾದನ-ವಸ್ತ್ರಗಳು,ಭೋಜನಂ-ಆಹಾರವು,ಸರ್ವಮೇವ-ಸಮಸ್ತವೂಕೂಡಾ,ನೌ-ನಮ್ಮಿಬ್ಬರಿಗೂ, ಅವಿಭಕ್ತಂ-ಅಭಿನ್ನವಾದ್ದು, ಭವಿಷ್ಯತಿ-ಆಗುವದು, ಸಂಶಯಃ-ಸಂಶಯವು, ನ-ಇಲ್ಲಾ ॥೪೧॥ ತತಃ-ಬಳಿಕ,ಹರಿರಾಕ್ಷಸೌ-ವಾಲಿ ರಾವಣರೆಂಬ, ತಾವುಭೌ-ಅವರಿಬ್ಬರು, ಅಗ್ನಿಂ-ಅಗ್ನಿಯನ್ನು, ಪ್ರಜ್ವಾಲಯಿತ್ವಾ-ಉರಿಸಿ, ಪರಸ್ಪರಂ- ಒಬ್ಬರಿಗೊಬ್ಬರು, ಪರಿಷ್ವಜ್ಯ - ಅಪ್ಪಿ

---

ವಣನೆಂಬಿಟ್ಟು, ನಸುನಗೆಯುಳ್ಳವನಾಗಿ ನೀನೆಲ್ಲಿಂದಬಂದೆಂದು ರಾವಣನಂಕುರಿತು ನುಡಿದವನಾದನು ॥ ೩೪ ॥ ರಾಕ್ಷಸೇಂದ್ರನಾದ ಆ ರಾವಣನಾದರೆ, ಬಳಲಿಕೆಯಿಂದ ಚಂಚಲವಾದ ನೇತ್ರಗಳುಳ್ಳವನಾಗಿ, ಮಹದಾಶ್ಚರ್ಯವಂ ಹೊಂದಿ, ಆ ವಾನರೇಂದ್ರನಂ ಕುರಿತಿಂತೆಂದನು ॥೩೫॥ ದೇವೇಂದ್ರನಿಗೆ ಸದೃಶನಾದ ಎಲೈ ವಾನರೇಂದ್ರನೇ! ನಾನು ರಾಕ್ಷಸೇಂದ್ರನಾದ ರಾವಣನು, ಯುದ್ಧವಂ ಗೈಯ್ಯಲಿಚ್ಛೆಯುಳ್ಳವನಾಗಿಲ್ಲಿಗೆ ಬಂದೆನು, ಅಂಥಾ ನಾನೂ ಕೂಡಾ ನಿನ್ನಿಂದ ಹಿಡಿದುಕೊಳ್ಳಲ್ಪಟ್ಟೆನಲ್ಲಾ ॥೩೬॥ ಯಾವನಿನ್ನಿಂದ ಪಶುವಿನಂತೆ ಹಿಡಿದುಕೊಳ್ಳಲ್ಪಟ್ಟು ಚತುಸ್ಸಮುದ್ರಗಳನ್ನೂ ಸುತ್ತಿಸಲ್ಪಟ್ಟೆನೋ, ಅಂಥಾ ನಿನ್ನ ಬಲವು, ವೀರ್ಯವು, ಗಾಂಭೀರ್ಯವು ಅತ್ಯಾಶ್ಚರ್ಯಕರವಾಗಿರುವವು ॥೩೭॥ ಎಲೈ ಶೂರನೇ! ನಿನ್ನವಿನಹಾ ನನನ್ನುವಹಿಸಿಗೊಂಡು ಶ್ರಮೆಯಿಲ್ಲದೆ ಇಷ್ಟು ತ್ವರಿತವಾಗಿ ಚತುಸ್ಸಮುದ್ರಗಳನ್ನು ಈ ರೀತಿಯಾಗಿ ತಿರುಗುವ ಶೂರನ್ಯಾರು ॥೩೮॥ ಎಲೈ ಪ್ಲವಂಗಮನೇ! ನಿನಿಗುಂಟಾಗಿರುವ ಶಕ್ತಿಯು, ಮನವು, ವಾಯುವು, ಗರುಡನು, ಎಂಬ ಈ ಮೂರು ಭೂತಗಳಿಗಾದರೂ ಉಂಟಾಗಿರುವದೋ ಇಲ್ಲವೋ ಏನೋ ಈ ವಿಷಯದಲ್ಲಿ ಸಂಶಯವಿಲ್ಲಾ ॥೩೯॥ ಎಲೈ ಹರಿಶ್ರೇಷ್ಠನೇ! ನಿನ್ನ ಬಲವನ್ನರಿತಿರುವನಾನು, ಅಗ್ನಿಸಾಕ್ಷಿಕವಾಗಿ ನಿನ್ನೊಡನೆ ಸ್ನೇಹಿತನಂತೆ ಸಂಖ್ಯವಂಗೈದು ಬಹುಕಾಲ ವಿರಬೇಕೆಂದುಚ್ಛೆಸುತ್ತೇನೇ ॥ ೪೦ ॥ ಹೀಗೆ ನಡೆದರೆ, ನಮ್ಮಿರ್ವರಿಗೂ ದಾರ, ಪುತ್ರ, ಪುರ, ರಾಷ್ಟ್ರ, ಭೋಗ, ವಸ್ತ್ರ, ಭೋಜನಾದಿಗಳೆಲ್ಲಾ ಅವಿಭಕ್ತವಾಗಿಯೇ ಇರುವದು, ಈ ವಿಷ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತತಃಪ್ರಜ್ವಲಯಿತ್ವಾಗ್ನಿಂತಾವುಭೌಹರಿರಾಕ್ಷಸೌ । ಭ್ರಾತೃತ್ವಮುಪಸಂಪನ್ನೌಪರಿಷ್ವಜ್ಯಪರಸ್ಪರಮ್॥೪೨॥ ಅನ್ಯೋನ್ಯಂಲಂಬಿತಕರೌತತಸ್ತೌಹರಿರಾಕ್ಷಸೌ । ಕಿಷ್ಕಿಂಧಾಂತೌವಿವಿಶತುಸ್ಸಿಂಹೌಗಿರಿಗುಹಾಮಿವ ॥೪೩॥ ಸತತ್ರಮಾಸಮುಷಿತಸ್ಸುಗ್ರೀವಇವರಾವಣಃ । ಅಮಾತ್ಯೈರಾಗತೈರ್ನೀತಸ್ತ್ರೈಲೋಕ್ಯೋತ್ಸಾದನಾರ್ಥಿಭಿಃ ॥೪೪॥ ಏವಮೇತತ್ಪುರಾವೃತ್ತಂ ವಾಲಿನಾರಾವಣಃಪ್ರಭೋ।ಧರ್ಷಿತಶ್ಚ ಕೃತಶ್ಚಾಪಿಭ್ರಾತಾಪಾವಕಸನ್ನಿಧೌ ॥೪೫॥ ಬಲಮಪ್ರತಿಮಂರಾಮವಾಲಿನೋಭವದುತ್ತಮಂ॥ ಸೋಪಿತ್ವಯಾವಿನಿರ್ದಗ್ಧಶ್ಶಲಭೋವಹ್ನಿನಾಯಥಾ ... ... ॥೪೬॥

—...ಇತಿಶ್ರೀಮದುತ್ತರರಾಮಾಯಣೇ ಚತುಸ್ತ್ರಿಂಶಸ್ಸರ್ಗಃ...—

ಕೇನಚಿತ್ತ್ವಥಕಾಲೇನರಾವಣಃಪ್ರಯಯೌಗೃಹಾತ್। ಪಶ್ಚಿಮಾರ್ಣವಮಾಗಚ್ಛತ್ಸಚಿವೈಸ್ಸಹರಾಕ್ಷಸೈಃ ॥೧॥ ದ್ವೀಪಸ್ಥೋದದೃಶೇತೇನಪುರುಷಃಪಾವಕಃಪ್ರಭಃ । ಮಹಾಜಾಂಬೂನದಪ್ರಖ್ಯಃಏಕಏವವ್ಯವಸ್ಥಿತಃ ॥೨॥ ಯಥಾದೃಶ್ಯೇತಭಯದೋಯುಗಾಂತಾನಲಉತ್ಥಿತಃ । ದೇವಾನಾಮಿವದೇವೇಶಃಗ್ರಹಾಣಾಮಿವಭಾಸ್ಕರಃ। ಮೃಗಾಣಾಂತುಯಥಾಸಿಂಹೋಹಸ್ತಿ

---

ಕೊಂಡು, ಭ್ರಾತೃತ್ವಂ- ಭ್ರಾತೃಭಾವವನ್ನು, ಉಪಸಂಪನ್ನೌ-ಐದಿದರು ॥೪೨॥ ತತಃ-ಅನಂತರದಲ್ಲಿ, ಅನ್ಯೋನ್ಯಂ-ಪರಸ್ಪರವಾಗಿ, ಲಂಬಿತಕರೌ-ಲಂಬಿತ-ಗ್ರಹಿಸಲ್ಪಟ್ಟ, ಕರೌ-ಹಸ್ತಗಳುಳ್ಳ, ತೌಹರಿರಾಕ್ಷಸೌ-ಆ ವಾಲಿ ರಾವಣರಿಬ್ಬರುನ್ನು, ತೌ ಪ್ರಸಿದ್ಧವಾದ, ಸಿಂಹೌ- ಸಿಂಹಗಳು, ಗಿರಿಗುಹಾಮಿವ- ಬೆಟ್ಟದಗುಹೆಯನ್ನಂತೆ, ಕಿಷ್ಕಿಂಧಾಂ-ಕಿಷ್ಕಿಂಧಾಪಟ್ಟಣವನ್ನು, ವಿವಿಶತುಃ-ಹೊಕ್ಕರು ॥೪೩॥ ತತ್ರ-ಆಕಿಷ್ಕಿಂಧಾಪಟ್ಟಣದಲ್ಲಿ, ಸರಾವಣಃ-ಆ ರಾವಣನು, ಸುಗ್ರೀವಇವ, ಸುಗ್ರೀವನಂತೆ, ಮಾಸಂ-ತಿಂಗಳುಕಾಲವು, ಉಷಿತಃ- ಇದ್ದವನಾಗಿ, ತ್ರೈಲೋಕ್ಯೋತ್ಸಾದ ನಾರ್ಥಿಭಿಃ- ತ್ರೈಲೋಕ್ಯ-ಲೋಕತ್ರಯದ, ಉತ್ಸಾದನ-ಉತ್ಸಾಟಣವನ್ನು, ಅರ್ಥಿಭಿಃ -ಕೋರುತ್ತಿರುವ, ಆಗತೈಃ-ಬಂದ, ಅಮಾತ್ಯೈಃ-ಮಂತ್ರಿಗಳಿಂದ, ನೀತಃ-ಕರದುಕೊಂಡು ಹೋಗಲ್ಪಟ್ಟನು ॥೪೪॥ ಹೇಪ್ರಭೋ-ಎಲೈ ಶ್ರೀರಾಮನೆ! ಏವಂ-ಈ ಪರಿಯಾಗಿ, ರಾವಣಃ-ರಾವಣನು, ವಾಲಿನಾ - ವಾಲಿಯಿಂದ, ಧರ್ಷಿತಶ್ಚ -ತಿರಸ್ಕೃತನು ಆದನು, ಪಾವಕಸನ್ನಿಧೌ-ಅಗ್ನಿಸಾನ್ನಿಧ್ಯದಲ್ಲಿ, ಭ್ರಾತಾ-ತಮ್ಮನಾಗಿ, ಕೃತಶ್ಚಾಪಿ, ಮಾಡಲೂಮಾಡಲ್ಪಟ್ಟನು ॥೪೫॥ ಹೇರಾಮ-ಎಲೈ ಶ್ರೀರಾಮನೆ, ವಾಲಿನಃ-ವಾಲಿಯ, ಬಲಂ-ಸಾಮರ್ಥ್ಯವು, ಅಪ್ರತಿಮಂ-ಸಮಾನವಿಲ್ಲದಂತೆ, ಉತ್ತಮಂ-ಉತ್ಕೃಷ್ಟವಾದ್ದು, ಅಭವತ್-ಆಯಿತು, ಸೋಪಿ-ಅಂಥಾ ವಾಲಿಯೂನೂ, ತ್ವಯಾ-ನಿನ್ನಿಂದಾ-ವಹ್ನಿನಾ, ಅಗ್ನಿಯಿಂದಾ, ಶಲಭೋಯಥಾ -ಪತಂಗಹುಳದಂತೆ, ವಿನಿರ್ದಗ್ಧಃ-ಸುಡಲ್ಪಟ್ಟನು. ॥ ೪೬ ॥ —...*ಇತಿ ಶ್ರೀಮದುತ್ತರ ರಾಮಾಯಣೇ ಚತುಸ್ತ್ರಿಂಶಸ್ಸರ್ಗಃ.*...—

ಅಥ-ಬಳಿಕ, ಕೇನಚಿತ್ಕಾಲೇನ- ಒಂದಾನೊಂದು ಕಾಲದಲ್ಲಿ, ರಾವಣಃ-ರಾವಣನು, ಗೃಹಾತ್-ಮನೆಯಿಂದ, ಪ್ರಯಯೌ-ಹೊರಟನು, ಪಶ್ಚಿಮಾರ್ಣವಂ-ಪಶ್ಚಿಮಸಮುದ್ರವಂ ಕುರಿತು, ಸಚಿವೈಃ-ಮಂತ್ರಿಗಳಾದ, ರಾಕ್ಷಸೈಸ್ಸಹ-ರಾಕ್ಷಸರಿಂದೊಡಗೂಡಿ, ಆಗಚ್ಛತ್-ಬಂದನು ॥೧॥ತೇನ-ಆರಾವಣನಿಂದ, ದ್ವೀಪಸ್ಥಃ-ದ್ವೀಪಾಂತರದಲ್ಲಿರುವ,ಪುರುಷಃ-ಪುರುಷನು,ದದೃಶೇ-ಕಾಣಲ್ಪಟ್ಟನು,ಪಾವಕಪ್ರಭಃ-ಅಗ್ನಿಯಕಾಂತಿಯಂತೆಕಾಂತಿಯುಳ್ಳ, ಮಹಾಜಾಂಬೂನದಪ್ರಖ್ಯಃ-ಭಂಗಾರದಕಾಂತಿಯುಳ್ಳಪುರುಷನು,ಏಕಏವ-ಒಬ್ಬನೆ,ವ್ಯವಸ್ಥಿತಃ-ಇರುತಿದ್ದನು, ಯಥಾ-ಹ್ಯಾಗೆ, ಉತ್ಥಿತಃ-ಹುಟ್ಟಿದ, ಯುಗಾಂತಾನಲಃ-ಪ್ರಳಯಾಗ್ನಿಯು, ದೃಶ್ಯೇತ-ಕಾಣಲ್ಪಡುವದೊ, ತಥಾ-ಹಾಗೆಯೆ,"ದೇವಾನಾಂ-ದೇವತೆಗಳೊಳಗೆ, ದೇವೇಶಇವ-ದೇವೇಂದ್ರನಂತೆ, ಗ್ರಹಾಣಾಂ-ಗ್ರಹಗಳೊಳಗೆ, ಭಾಸ್ಕರಇವ-ಭಾಸ್ಕರನಂತೆಯು॥೩॥ ಮೃಗಾಣಾಂ-ಮೃಗಗಳೊಳಗೆ, ಸಿಂಹೋಯಥಾ-ಸಿಂಹದಂತೆ, ಹಸ್ತಿಷು-ಆನೆಗಳಲ್ಲಿ, ಐರಾವತೋಯಥಾ - ಐ

---

ಯದಲ್ಲಿ ಸಂಶಯವಿಲ್ಲಾ ಎಂಬದಾಗಿ ರಾವಣನು ನುಡಿದ ಬಳಿಕ, ಆ ಹರಿರಾಕ್ಷಸೇಂದ್ರರೀರ್ವರು ಪರಸ್ಪರವಾಗಿ ಅಗ್ನಿಯ ಸಮಕ್ಷಮದಲ್ಲಿ ಭ್ರಾತೃತ್ವವಂ ಹೊಂದಿಆಲಿಂಗನವಂಗೈದು ಒಬ್ಬನಕೈಯನ್ನು ಮತ್ತೊಬ್ಬನು ಪಿಡಿದು ಕೊಂಡು ಸಿಂಹಗಳು ಪರ್ವತಗುಹೆಯಂ ಪೊಕ್ಕುವಂತೆ ಕಿಷ್ಕಿಂಧಾಪುರಿಯಂ ಪೊಕ್ಕರು ॥೪೩॥ ಆ ಕಿಷ್ಕಿಂಧಾಪಟ್ಟಣದಲ್ಲಿ, ರಾವಣನು ಸುಗ್ರೀವನಂತೆ ಒಂದು ಮಾಸವು ನೆಲಗೊಂಡಿರಲೂ, ಲೋಕಗಳನ್ನು ಉನ್ಮೂಲನೆಯಂಗೈಯಲಿಚ್ಛಿಸುವ ಮಂತ್ರಿಗಳು ಬಂದು ಆ ರಾವಣನಂ ಕರದುಕೊಂಡು ಹೋದರು॥೪೪॥ಎಲೈ ರಾಮನೇ! ಈ ಪ್ರಕಾರವಾಗಿ ರಾವಣನು ವಾಲಿಯಿಂದ ಜಯಿಸಲ್ಪಟ್ಟು ಅಗ್ನಿ ಸಾನ್ನಿಧ್ಯದಲ್ಲಿ ತಮ್ಮನಂತೆ ವಿಶ್ವಾಸವುಳ್ಳವನಾಗಿ ಮಾಡಲ್ಪಟ್ಟನು ॥೪೫॥ಎಲೈ ರಾಘವನೇ! ಆ ವಾಲಿಗೆ ಸರ್ವೋತ್ತಮವಾದ ಬಲಮುಂಟಾಗಿತ್ತು. ಆತನೂ ಕೂಡಾ ಪತಂಗದ ಹುಳು ಅಗ್ನಿಯಿಂದ ಸುಡಲ್ಪಡುವಂತೆ ನಿನ್ನಿಂದ ದಗ್ಧನಾದನು॥೪೬॥ —*ಉತ್ತರರಾಮಾಯಣದಲ್ಲಿನ ೩೪ ನೇ ಸರ್ಗಂ ಮುಗಿದುದು.*—

ಸ್ವಲ್ಪ ಕಾಲವಾದಬಳಿಕ ರಾವಣನು ತನ್ನ ಮನೆಯಿಂದ ಹೊರಟು ಮಂತ್ರಿಗಳಾದ ಪ್ರಹಸ್ತಾದಿ ರಾಕ್ಷಸರಿಂದೊಡಗೂಡಿ ಪಶ್ಚಿಮ ಸಮುದ್ರಕ್ಕೆಪೋಗಿ ಅಲ್ಲಿರುವ ದ್ವೀಪಾಂತರದಲ್ಲಿ ಅಗ್ನಿಗೆ ಸಮಾನವಾದ ಪ್ರಭೆಯುಳ್ಳವನಾಗಿಯೂ,ಭಂಗಾರದ ಕಾಂತಿಯಂತೆ ಕಾಂತಿಯುಳ್ಳವನಾಗಿಯೂ,ಪ್ರಳಯಾಗ್ನಿಯಂತೆ ಮಹಾ ಭಯಂಕರನಾಗಿಯೂ, ದೇವತೆಗಳೊಳಗೆ ಇಂದ್ರನಂತೆಯೂ, ನವಗ್ರಹಗಳೊಳಗೆ ಸೂರ್ಯನಂತೆಯೂ, ಮೃಗಗಳಲ್ಲಿ ಸಿಂಹದಂತೆಯೂ, ಗಜಗ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಷ್ವೈರಾವತೊಯಥಾ॥೩॥ ಪರ್ವತಾನಾಂಯಥಾಮೇರುಃಪಾರಿಜಾತಶ್ಚ ಶಾಖಿನಾಂ । ತಥಾತಂಪುರುಷಂದೃಷ್ಟ್ವಾ ಕುಂಡ ಮಧ್ಯೇನಲಂಯಥಾ । ಗರ್ಜಂತಂವಿವಿಧೈರ್ನಾದೈರ್ಲಂಬಹಸ್ತಂಭಯಾನಕಮ್ । ದಂಷ್ಟ್ರಾಲಂವಿಕಟಂಚೈವದಶಗ್ರೀವಂಮ ಹೌಜಸಮ್। ಮಂಡೂಕಕುಕ್ಷಿಂಪಿಂಗಾಕ್ಷಂಕೈಲಾಸಶಿಖರೋಪಮಮ್ ॥ ಪದ್ಮಪಾದತಲಂಭೀಮಂರಕ್ತಾಂಬುಜನಿಭಾನ ನಮ್॥ಮಹಾಕಾಯಂಮಹಾನಾದಂಮನೋನಿಲಸಮಂಜವೆ । ಭೀಮಮಾಬದ್ಧತೂಣೀರಂಸಂಘಟ್ಟಾಬದ್ಧಚಾಮರಮ್॥ ಜ್ವಾಲಾಮಾಲಾಪರಿಕ್ಷಿಪ್ತಂಕಿಂಕಿಣೀಕೃತನಿಸ್ವನಮ್ ॥ ಮಾಲಯಾಸ್ವರ್ಣಪದ್ಮಾನಾಂವಕ್ಷೋದೇಶಾವಲಂಬಯಾ॥ಋ ಗ್ವೇದಮಿವಶೋಭಂತಂಪದ್ಮಮಾಲಾವಿಭೂಷಿತಮ್ ॥೯॥ ಸೋಂಜನಾಚಲಸಂಕಾಶಃಕಾಂಚನಾಚಲಸನ್ನಿಭಮ್ । ಅಬ್ರವೀ ತ್ತಂದಶಗ್ರೀವೋಯುದ್ಧಂಮೇದೀಯತಾಮಿತಿ॥೧೦॥ ಜಗರ್ಜಚೋಚ್ಚೈರ್ಬಲವಾನ್ಸಹಾಮಾತ್ಯೋದಶಾನನಃ । ಧೃತ್ವಾ

---

ರಾವತದಂತೆ, ಪರ್ವತಾನಾಂ– ಬೆಟ್ಟಗಳೊಳಗೆ,ಮೇರುರ್ಯಥಾ–ಮೇರುವಿನಂತೆ, ಶಾಖಿನಾಂ–ಗಿಡಗಳೊಳಗೆ, ಪಾರಿಜಾತಶ್ಚ ಯಥಾ–ಪಾರಿಜಾತದಂತೆ, ದೃಷ್ಟಃ– ಕಾಣಲ್ಪಟ್ಟನು॥೪॥ತಥಾ–ಹಾಗೆಯೆ, ಕುಂಡಮಧ್ಯೇ–ಅಗ್ನಿಕುಂಡದ ಮಧ್ಯದಲ್ಲಿ, ಅನಲಃಯಥಾ– ಅಗ್ನಿಯಂತೆಯೂ, ವಿವಿಧೈಃ– ನಾನಾವಿಧಂಗಳಾದ, ನಾದೈಃ–ಧ್ವನಿಗಳಿಂದ, ಗರ್ಜಂತಂ–ಗರ್ಜಿಸುತಿರುವ–ಲಂಬಹಸ್ತಂ–ಲಂಬಾಯಮಾನ ಹಸ್ತಗಳುಳ್ಳ, ಭಯಾನಕಂ– ಭಯಂಕರನಾದ॥೫॥ ದಂಷ್ಟ್ರಾಲಂ–ಕೋರೆಹಲ್ಲುಗಳುಳ್ಳ, ವಿಕಟಂಚೈವ – ವಿಸ್ತಾರಾಕೃತಿಯುಳ್ಳ, ಕಂಬುಗ್ರೀವಂ–ಶಂಖದಂತೆ ಕಂಠವುಳ್ಳ, ಮಹೌಜಸಂ–ಮಹಾತೇಜಸ್ವಿಯಾದ, ಮಂಡೂಕಕುಕ್ಷಿಂ– ಮಂಡೂಕದಂತೆ ಕುಕ್ಷಿಯುಳ್ಳ, ಪಿಂಗಾಕ್ಷಂ–ಹಸುರುಬಣ್ಣವಾದನೇತ್ರವುಳ್ಳ, ಕೈಲಾಸ ಶಿಖರೋಪಮಂ–ಕೈಲಾಸಪರ್ವತದ ಶಿಖರಕ್ಕೆ ಸಮಾನನಾದ ॥೬॥ ಪದ್ಮಪಾದತಲಂ–ಕಮಲಗಳಂತಿರುವ ಅಂಗಾಲುಗಳುಳ್ಳ, ಭೀಮಂ–ಭಯಂಕರನಾದ, ರಕ್ತಾಂಬುಜನಿಭಾನನಂ – ಕೆಂಪುಕಮಲಕ್ಕೆ ಸಮಾನವಾದ ಮುಖವುಳ್ಳ, ಮಹಾಕಾಯಂ–ಮಹಾಶರೀರವುಳ್ಳ, ಮಹಾನಾದಂ–ಮಹಾಧ್ವನಿಗೊಂಡೆ, ಜವೆ–ವೇಗದಲ್ಲಿ,ಮನೋನಿಲಸಮಂ–ಮನಸ್ಸಿಗೂ ವಾಯುವಿಗೂ ಸಮಾನನಾದ ॥೭॥ಭೀಮಂ–ಭಯಂಕರನಾದ, ಆಬದ್ಧತೂಣೀರಂ–ಆಬದ್ಧ–ಕಟ್ಟಲ್ಪಟ್ಟ,ತೂಣೀರಂ–ಬತ್ತಳಿಕೆಗಳುಳ್ಳ, ಸಂಘಟ್ಟಾಬದ್ಧಚಾಮರಂ–ಸಮೀಪದಲ್ಲಿ ಕಟ್ಟಲ್ಪಟ್ಟಚಾಮರಗಳುಳ್ಳ, ಜ್ವಾಲಾಮಾಲಾಪರಿಕ್ಷಿಪ್ತಂ–ಜ್ವಾಲಾಮಾಲಾ–ಜ್ವಾಲೆಪಙ್ತಿಗಳಿಂದ, ಪರಿಕ್ಷಿಪ್ತಂ–ವ್ಯಾಪ್ತನಾದ, ಕಿಂಕಿಣೀಕೃತನಿಸ್ವನಂ– ಗೆಜ್ಜೆಗಳಿಂದಮಾಡಲ್ಪಟ್ಟಧ್ವನಿಯುಳ್ಳ॥೮॥ವಕ್ಷೋದೇಶಾವಲಂಬಯಾ–ವಕ್ಷಸ್ಥಳದಲ್ಲಿ ಜೋಲಾಡುತಿರುವ, ಸ್ವರ್ಣಪದ್ಮಾನಾಂ–ಸುವರ್ಣಕಮಲಗಳ, ಮಾಲಯಾ–ಮಾಲೆಯಿಂದ, ಉಪಲಕ್ಷಿತಂ– ಕೂಡಿಕೊಂಡಿರುವ, ರುಗ್ವೇದಮಿವಶೋಭಂತಂ–ರುಗ್ವೇದ ಪುರುಷನಂತೆ ಹೊಳೆಯುತಿರುವ,ಪದ್ಮಮಾಲಾವಿಭೂಷಿತಂ–ಕಮಲಗಳಮಾಲಿಕೆಗಳಿಂದ ವಿಭೂಷಿತನಾದ ॥೯॥ ಕಾಂಚನಾಚಲಸನ್ನಿಭಂ–ಭಂಗಾರುಬೆಟ್ಟಕ್ಕೆ ಸಮಾನನಾದ, ತಂ–ಆ ಪುರುಷನನ್ನು ಕುರಿತು,ಅಂಜನಾಚಲಸಂಕಾಶಃ–ಕಾಡಿಗೆಬೆಟ್ಟಕ್ಕೆ ಸಮಾನನಾದ, ಸಃದಶಗ್ರೀವಃ–ಆ ರಾವಣನು, ಮೇ–ನಿನಗೆ, ಯುದ್ಧಂ–ಯುದ್ಧವು, ದೀಯ್ಯತಾಂ– ಕೊಡಲ್ಪಡಲಿ, ಇತಿ– ಇಂತೆಂದು, ಅಬ್ರವೀತ್–ನುಡಿದನು ॥೧೦॥ ಬಲವಾನ್–ಬಲಿಷ್ಠನಾದ, ರಾಕ್ಷಸಪತಿಃ–ರಾಕ್ಷಸಾಧಿಪತಿಯಾದ, ಸದಶಾನನಃ–ಆ ರಾವಣನು, ಶೂಲಶಕ್ತ್ಯೃಷ್ಟಿಪಟ್ಟಸಾನ್–ಶೂಲಗಳನ್ನು, ಶಕ್ತ್ಯಾಯುಧಗಳನ್ನು, ದೊಣ್ಣೆಗಳನ್ನು, ಕತ್ತಿಗಳನ್ನು, ಧೃತ್ವಾ–ಧರಿಸಿ, ಉಚ್ಚೈಃ–ಘಟ್ಟಿಯಾಗಿ, ಜಗರ್ಜಚ–ಗರ್ಜಿ

---

ಳೊಳಗೆ ಐರಾವತದಂತೆಯೂ, ಪರ್ವತಗಳೊಳಗೆ ಮೇರುಪರ್ವತದಂತೆಯೂ, ವೃಕ್ಷಗಳೊಳಗೆ ಪಾರಿಜಾತ ವೃಕ್ಷದಂತೆಯೂ,ಮತ್ತು ಅಗ್ನಿಕುಂಡದಲ್ಲಿರುತಿರುವ ಅಗ್ನಿಯಂತೆ ಕಂಗೊಳಿಸುತಿರುವನಾಗಿಯೂ,ವಿಧವಿಧವಾಗಿಗರ್ಜಿಸುತಿರುವನಾಗಿಯೂ, ಜೋಲಾಡುತಿರುವ ಹಸ್ತಗಳಿಂದ ಬಹಳ ಭಯಂಕರವಾಗಿರುವನಾಗಿಯೂ, ಕೋರೆ ಹಲ್ಲುಗಳುಳ್ಳವನಾಗಿಯೂ, ವಿಸ್ತಾರವಾದ ಆಕಾರವುಳ್ಳವನಾಗಿಯೂ, ಶಂಖದೋಪಾದಿಯಲ್ಲಿರುವ ಕುತ್ತಿಗೆಯುಳ್ಳವನಾಗಿಯೂ, ಮಹಾ ತೇಜಸ್ಸುಳ್ಳವನಾಗಿಯೂ, ಮಂಡೂಕದಂತೆ ಕುಕ್ಷಿಯುಳ್ಳವನಾಗಿಯೂ, ಹಸರುಬಣ್ಣವಾದ ನೇತ್ರಗಳುಳ್ಳವನಾಗಿಯೂ, ಕೈಲಾಸ ಶಿಖರದಂತೆ ಅತ್ಯಂನತ ವಾಗಿರುವನಾಗಿಯೂ, ಪದ್ಮಗಳಂತಿರುವ ಅಂಗಾಲುಗಳುಳ್ಳವನಾಗಿಯೂ, ಮಹಾ ಭಯಂಕರನಾಗಿಯೂ, ಕೆಂದಾವರೆಗೆ ಸಮಾನವಾದ ಮುಖವುಳ್ಳವನಾಗಿಯೂ, ಮಹತ್ತರವಾದ ಶರೀರವುಳ್ಳವನಾಗಿಯೂ, ಮಹಾಧ್ವನಿ ಯುಳ್ಳವನಾಗಿಯೂ, ವೇಗದಲ್ಲಿ ಮನೋವಾಯುವುಗಳಿಗೆ ಸಮಾನವಾದಗತಿಯುಳ್ಳವನಾಗಿಯೂ, ಮಹಾಭಯಂಕರ ನಾಗಿಯೂ, ಸನ್ನದ್ಧವಾದ ಸರಳಬತ್ತಳಿಕೆ ಗಳುಳ್ಳವನಾಗಿಯೂ, ಸಮೀಪದಲ್ಲಿ ಕಟ್ಟಲ್ಪಟ್ಟ ಚಾಮರಗಳುಳ್ಳವನಾಗಿಯೂ, ಜ್ವಾಲೆಗಳ ಪಂತಿಗಳಿಂದ ವ್ಯಾಪ್ತವಾಗಿರುವನಾಗಿಯೂ, ಕಿರುಗೆಜ್ಜೆಗಳಿಂದುಂಟಾದ ಧ್ವನಿಯುಳ್ಳವನಾಗಿಯೂ, ವಕ್ಷಸ್ಥಳದಲ್ಲಿ ಜೋಲಾಡುತಿರುವ ಸ್ವರ್ಣಮಯವಾಗಿರ್ಪಕಮಲಮಾಲಿಕೆ ಯುಳ್ಳವನಾಗಿಯೂ, ರುಗ್ವೇದದಂತೆ ಹೊಳೆಯುತ್ತಿರುವನಾಗಿಯೂ, ಕಮಲಮಾಲಿಕೆಯಿಂದ ಅಲಂಕರಿಸಲ್ಪಟ್ಟವನಾಗಿಯೂ ಇರುತಿರುವ ಒಬ್ಬಾನೊಬ್ಬಮಹಾಪುರುಷನಂ ಕಂಡನು॥೯॥ ಕಾಡಿಗೆ ಬೆಟ್ಟದಂತಿರುವ ಆ ದಶಕಂಠನು,ಮಂತ್ರಿಸಹಿತನಾಗಿ ಶೂಲ, ಶಕ್ತಿ, ಯಷ್ಟಿ, ಕತ್ತಿ ಮುಂತಾದ ಆ ಯುಧಗಳಂ ಧರಿಸಿಕೊಂಡು, ಯನಗೆ ಯುದ್ಧವಂ ನೀಡೆಂದು ಆ ಮಹಾಪುರುಷನಂಕೇಳಿ ಘಟ್ಟಿಯಾಗಿ ಘರ್ಜಿಸಿದವನಾಗಲು, ಆ ಮಹಾ ಪುರುಷನು ವ್ಯಾಘ್ರದಿಂದ ಸಿಹ್ಮವು ಹೆದರದೇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ ರಾಕ್ಷಸಪತಿಶ್ಶೂಲಶಕ್ತ್ಯೃಷ್ಟಿಪಟ್ಟಸೈಃ ॥೧೧॥ ಸದ್ವೀಪಿನಾ ಸಿಂಹ ಇವ ಶಲಭೇನೇವ ಕುಂಜರಃ॥ ಸುಮೇರುರಿವ ಛಾಗೇನ ನದೀವೇಗೈರಿವಾರ್ಣವಃ । ಅಕಂಪ್ಯಮಾನಃ ಪುರುಷೋ ರಾವಣಂ ವಾಕ್ಯಮಬ್ರವೀತ್ ॥೧೨॥ ಯುದ್ಧಶ್ರದ್ಧಾಂ ಹಿ ತೇ ರಕ್ಷೋ ನಾಶಯಿಷ್ಯಾಮಿ ದುರ್ಮತೇ । ರಾವಣಸ್ಯ ಚ ಯೋ ವೇಗಸ್ಸರ್ವಲೋಕಭಯಾವಹಃ । ತಥಾ ವೇಗಸಹಸ್ರಾಣಿ ಸಂಶ್ರಿತಾನಿ ತಮೇವ ಹಿ॥ ಅಭವತ್ತಸ್ಯ ಸಾ ದೃಷ್ಟಿರ್ಗ್ರಹಮಾಲೇವ ಚಾದ್ಭುತಾ । ದಂತಾನಾಂ ದಶತಶ್ಶಬ್ದೋ ಯಂತ್ರಸ್ಯೇವಾತಿಭೀಕರಃ । ಧರ್ಮಸ್ತಸ್ಯ ತಪಶ್ಚೈವ ಜಗತಸ್ಸಿದ್ಧಿಹೇತುಕೇ ॥ ಊರೂ ಸಂಶ್ರಿತ್ಯ ತಸ್ಥಾತೇ ಮನ್ಮಥಶ್ಶಿಶ್ನಮಾಸ್ಥಿತಃ। ವಿಶ್ವೇದೇವಾಃ ಕಟೀಭಾಗೇ ಮರುತೋ ಯಸ್ಯ ಶೀರ್ಷಗಾಃ । ಮಧ್ಯೇಷ್ಟಾವಸವಸ್ತಸ್ಯ ಸಮುದ್ರಾಃ ಕುಕ್ಷಿಸಂಸ್ಥಿತಾಃ। ಪಾರ್ಶ್ವಸ್ಥಾಶ್ಚ ದಿಶಸ್ಸರ್ವಾಃ ಸರ್ವಸಂಧಿಷು ಮಾರುತಾಃ । ಪಿತರಶ್ಚಾಶ್ರಿತಾಃ ಪೃಷ್ಠಂ ಹೃದಯಂ ಚ ಪಿತಾಮಹಃ ॥೧೮॥ ಗೋದಾನಾನಿ ಪವಿತ್ರಾಣಿ ಭೂಮಿದಾನಾನಿ ಯಾನಿ ಚ। ಸುವರ್ಣಸ್ಯ ಚ ದಾನಾನಿ ಶಶ್ವಲ್ಲೋಮಾಶ್ರಿತಾನಿ ವೈ ॥೧೯॥ ಹಿಮವಾನ್ ಹೇಮಕೂಟಶ್ಚ ಮಂದರೋ ಮೇರುರೇವ ಚ । ನರಂತು

---

ಸಲೂ, ಗರ್ಜಿಸಿದನು ॥೧೧॥ ಸಃಪುರುಷಃ – ಆ ಮಹಾಪುರುಷನು, ದ್ವೀಪಿನಾ-ವ್ಯಾಘ್ರದಿಂದ, ಸಿಂಹ ಇವ-ಸಿಂಹದಂತೆ, ಶಲಭೇನ-ಪತಂಗಹುಳದಿಂದ, ಕುಂಜರ ಇವ-ಆನೆಯಂತೆ, ಛಾಗೇನ-ಮೇಕೆಯಿಂದ, ಸುಮೇರುರಿವ-ಮೇರುವಿನಂತೆ, ನದೀವೇಗೈಃ-ನದೀವೇಗಗಳಿಂದ, ಅರ್ಣವ ಇವ-ಕಡಲಿನಂತೆ, ಅಕಂಪ್ಯಮಾನಃ- ಚಲಿಸಲ್ಪಡದಿರುವನಾಗಿ, ರಾವಣಂ-ರಾವಣನನ್ನು ಕುರಿತು, ವಾಕ್ಯಂ-ವಾಕ್ಯವನ್ನು, ಅಬ್ರವೀತ್-ನುಡಿದನು ॥೧೨॥ ಹೇದುರ್ಮತೇ-ಎಲೈ ಬುದ್ಧಿಯಿಲ್ಲದವನೆ, ಹೇರಕ್ಷಃ- ಎಲೈರಾಕ್ಷಸನೆ, ತೇ-ನಿನಗೆ, ಯುದ್ಧಶ್ರದ್ಧಾಂ- ಯುದ್ಧದಲ್ಲಿ ವಿಶ್ವಾಸವನ್ನು, ನಾಶಯಿಷ್ಯಾಮಿ-ನಾಶಗೊಳಿಸುತ್ತೇನೆ ॥೧೩॥ ರಾವಣಸ್ಯ-ರಾವಣನ, ಸರ್ವಲೋಕಭಯಾವಹಃ-ಸರ್ವಲೋಕಗಳಿಗೂ ಭಯಂಕರವಾದ, ಯೋವೇಗಶ್ಚ -ಯಾವ ವೇಗವುಂಟೋ (ಉಂಟೊ) ತಥಾವೇಗಸಹಸ್ರಾಣಿ-ಅಂಥಾ ವೇಗ ಸಹಸ್ರಗಳು, ತಂ-ಆ ಮಹಾಪುರುಷನನ್ನು, ಸಂಶ್ರಿತಾನ್ಯೇವಹಿ-ಆಶ್ರಯಿಸಿ ಕೊಂಡಿರುವವಷ್ಟೆ॥ ೧೪ ॥ ತಸ್ಯ-ಆ ಪುರುಷನ, ಸಾದೃಷ್ಟಿಃ-ಆ ನೇತ್ರನೋಟವು, ಗ್ರಹಮಾಲೇವ-ಗ್ರಹಗಳ ಪಙ್ಕ್ತಿಯಂತೆ, ಅದ್ಭುತಾಚ-ಆಶ್ಚರ್ಯಕರವೂನು, ದಶತಃ-ಹಲ್ಲುಕಡಿಯುತಿರುವವನ, ದಂತಾನಾಂ-ದಂತಗಳ, ಶಬ್ದಶ್ಚ-ಶಬ್ದವೂನು, ಯಂತ್ರಸ್ಯೇವ-ಗಾಣದಂತೆ, ಅತಿಭೀಕರಃ-ಅತಿಭಯಂಕರವಾದ್ದು, ಅಭವತ್-ಆಯಿತು ॥೧೫॥ ತಸ್ಯ- ಆ ಮಹಾಪುರುಷನ, ಧರ್ಮಶ್ಚ-ಧರ್ಮವೂನೂ, ತಪಶ್ಚೈವ-ತಪಸ್ಸೂನು, ಜಗತಃ-ಜಗತ್ತಿಗೆ, ಸಿದ್ಧಿಹೇತುಕೇ-ಸಿದ್ಧಿಕರಗಳಾದಂಥಾವುಗಳಾಗಿ, ಊರೂ-ತೊಡೆಗಳನ್ನು, ಆಶ್ರಿತ್ಯ-ಆಶ್ರಯಿಸಿ, ತಸ್ಥಾತೇ-ನಿಂತವು, ಮನ್ಮಥಃ-ಮನ್ಮಥನು, ಶಿಶ್ನಂ-ಪ್ರಜಾಪತಿ ಸ್ಥಾನವನ್ನು, ಆಶ್ರಿತಃ-ಆಶ್ರಯಿಸಿರ್ಧಾನೆ ॥೧೬॥ ವಿಶ್ವೇದೇವಾಃ-ವಿಶ್ವೇದೇವತೆಗಳುನ್ನು, ಕಟೀಭಾಗೇ-ಕಟಿಪ್ರದೇಶದಲ್ಲಿಯು, ಮರುತಃ-ಸಪ್ತಮರುತ್ತುಗಳು, ಯಸ್ಯ-ಯಾವ ಪುರುಷನ, ಶೀರ್ಷಗಾಃ – ಶಿರಸ್ಸನನ್ನಾಶ್ರಯಿಸಿರ್ಧಾರೋ, ಮಧ್ಯೇ-ಮಧ್ಯಭಾಗದಲ್ಲಿ, ಅಷ್ಟೌವಸವಃ-ಅಷ್ಟವಸುವುಗಳೂನು, ಸಮುದ್ರಾಃ-ಚತುಸ್ಸಮುದ್ರಗಳೂ, ತಸ್ಯ-ಆ ಪುರುಷನ, ಕುಕ್ಷಿಸಂಸ್ಥಿತಾಃ-ಉದರವನ್ನಾಶ್ರಯಿಸಿಕೊಂಡವೆ ॥೧೭॥ ಸರ್ವಾಃ-ಸಮಸ್ತಗಳಾದ, ದಿಶಃ-ದಿಕ್ಕುಗಳು, ಪಾರ್ಶ್ವಸ್ಥಾಃ-ಪಾರ್ಶ್ವಭಾಗಗಳಲ್ಲಿರುತ್ತವೆ, ಸರ್ವಸಂಧಿಷು-ಸರ್ವಸಂಧಿಸ್ಥಾನಗಳಲ್ಲಿ, ಮಾರುತಾಃ-ವಾಯುಗಳು, ಪಿತರಶ್ಚ -ಪಿತೃದೇವತೆಗಳೂನು, ಪೃಷ್ಠಂ-ಪೃಷ್ಠವನ್ನು, ಆಶ್ರಿತಾಃ-ಆಶ್ರಯಿಸಿರ್ಧಾರೆ, ಪಿತಾಮಹಃ-ಬ್ರಹ್ಮನು, ಹೃದಯಂಚ-ಮನವನ್ನು, ಆಶ್ರಿತಃ-ಆಶ್ರಯಿಸಿರ್ಧಾನೆ ॥೧೮॥ ಪವಿತ್ರಾಣಿ-ಪವಿತ್ರಕರಗಳಾದ, ಗೋದಾನಾನಿ – ಗೋದಾನಗಳು, ಭೂದಾನಾನಿಚ-ಭೂಮಿದಾನಗಳೂನು, ಸುವರ್ಣಸ್ಯಚ-ಹಿರಣ್ಯದ, ದಾನಾನಿ-ದಾನಗಳೂನು, ಯಾನಿ-ಯಾವವ್ರೋ, ತಾನಿ-ಅವುಗಳು, ಶಶ್ವತ್ – ಬಾರಿಬಾರಿಗೂ, ಲೋಮಾಶ್ರಿತಾನಿ-ರೋಮಗಳನ್ನಾಶ್ರಯಿಸಿದ್ದವು ॥೧೯॥ ಹಿಮವಾನ್-ಹಿಮವತ್ಪರ್ವತವು, ಹೇಮಕೂಟಶ್ಚ -ಹೇಮಕೂಟಪರ್ವತವು, ಮಂದ

---

ಸಿಂಹವು ವ್ಯಾಘ್ರದಿಂದ ಇರುವಂತೆಯೂ ಶಲಭದಿಂದ ಆನೆಯಂತೆಯೂ, ಮೇಕೆಯಿಂದ ಮೇರು ಪರ್ವತದಂತೆಯೂ, ನದೀವೇಗಗಳಿಂದ ಸಮುದ್ರದಂತೆಯೂ, ಕಂಪಿಸಲ್ಪಡದೇ ಇರುವನಾಗಿ, ಆರಾವಣನಂ ಕುರಿತಿಂತೆಂದನು॥೧೨॥ ಎಲೈ ದುರ್ಬುದ್ಧಿಯುಳ್ಳ ರಾಕ್ಷಸನೆ! ನಿನಗೆ ಯುದ್ಧ ಶ್ರದ್ಧೆಯಂ ನೀಗುವೆನೂ ಎಂಬದಾಗಿ ನುಡಿಯಲೂರಾವಣಾಸುರನಿಗೆ ಸರ್ವಲೋಕ ಭಯಂಕರವಾದ ಯಾವ ವೇಗ ಉಂಟಾಯಿತೋ ಅಂಥಾ ವೇಗ ಸಹಸ್ರಗಳು ಆ ಮಹಾಪುರುಷನನ್ನಾ ಪರಿಸಿದವು ॥೧೪॥ ಅದೆಂತೆನೆ ಆತನದೃಷ್ಟಿಯು, ಗ್ರಹಗಳಪಙ್ಕ್ತಿಯಂತೆ ಮಹ ದಾಶ್ಚರ್ಯಕರವಾಗಿತ್ತು. ಹಲ್ಲು ಕಡಿಯುತಿರುವ ಆ ಮಹಾ ಪುರುಷನ ದಂತಗಳ ಶಬ್ದವೂ ಗಾಣದಧ್ವನಿಯಂತೆ ಮಹಾ ಭಯಂಕರವಾಗಿತ್ತು ॥೧೫॥ ಧರ್ಮ ತಪಸ್ಸುಗಳೆಂಬೆರಡು ಜಗತ್ತಿಗೆ ಸಿದ್ಧಿಕರಂಗಳಾದಂಥಾವುಗಳಾಗಿ ಆತನ ತೊಡೆಗಳನ್ನಾಶ್ರಯಿಸಿ ನಿಂತವು,ಮನ್ಮಥನು ಶಿಶ್ನವನ್ನಾಶ್ರಯಿಸಿದನು,ವಿಶ್ವೇದೇವತೆಗಳು ಕಟಿಪ್ರದೇಶವನ್ನು, ಸಪ್ತಮರುತ್ತುಗಳು ಶಿರಸ್ಸನ್ನು, ಮಧ್ಯಭಾಗದಲ್ಲಿ ಅಷ್ಟವಸುಗಳು, ಸಮುದ್ರಗಳು ಕುಕ್ಷಿಯಲ್ಲಿಯೂ, ಪಾರ್ಶ್ವಗಳಲ್ಲಿ ದಿಕ್ಕುದಿಕ್ಕುಗಳೂ, ಸಂಧಿಸ್ಥಾನಗಳಲ್ಲಿ ಗಾಳಿಗಳೂ, ಪೃಷ್ಠಪ್ರದೇಶದಲ್ಲಿ ಪಿತೃದೇವತೆಗಳು ಹೃದಯದಲ್ಲಿ ಬ್ರಹ್ಮದೇವನು, ಆಶ್ರಯಿಸಿಕೊಂಡು ನಿಂತವು ॥೧೮॥ ಪವಿತ್ರಗಳಾದ ಗೋದಾನ ಭೂದಾನ ಸುವರ್ಣದಾನವೇ ಮುಂತಾದ ದಾನಗಳು ಆತನ ರೋಮಗಳನ್ನಾಶ್ರಯಿಸಿದ್ದವು ॥೧೯॥ ಹಿಮವತ್ಪರ್ವತವು ಮಂದರ ಪರ್ವತವು ಮೇರುಪರ್ವತವು.ಹೇಮ ಕೂಟವು, ತ್ರಿಕೂಟವೇ ಮುಂತಾದಬೆಟ್ಟಗಳೆಲ್ಲ, ಆ ಪುರುಷನನ್ನಾಶ್ರಯಿಸಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಂಸಮಾಶ್ರಿತ್ಯಸ್ಯಸ್ಥಿಭೂತಾವ್ಯವಸ್ಥಿತಾಃ ॥೨೦॥ ಮಹೀವಕ್ಷೋಽಭವತ್ತಸ್ಯ ಶರೀರೇದ್ಯೌರವಸ್ಥಿತಾ॥ ಉಭೇಸಂಧ್ಯೇ ಕಾಯಸಂಧೌ ಜಲವಾಹಾಶ್ಚ ಮೇಹನೇ ॥೨೧॥ ಬಾಹೂಧಾತಾವಿಧಾತಾಚಭಗಃಪೂಷಾ ಉಭೌ ಕರೌ। ಐರಾವತೋವಿಶಾಲಾಕ್ಷಶ್ಶೇಷೋ ವಾಸುಕಿರೇವಚ ॥೨೨॥ ಕಂಬಳಾಶ್ವತರೌನಾಗೌ ಕರ್ಕೋಟಕಧನಂಜಯೌ। ಸಚಘೋರವಿಷೋನಾಗಸ್ತಕ್ಷಕಶ್ಚೋಪತಕ್ಷಕಃ। ಕರಜಾನಾಶ್ರಿತಾಸ್ತಸ್ಯ ವಿಷವೀರ್ಯಂ ಮುಮುಕ್ಷವಃ। ಅಗ್ನಿರಾಸ್ಯಮಭೂತ್ತಸ್ಯ ಸ್ಕಂಧೌ ರುದ್ರೈರಧಿಷ್ಠಿತೌ ॥೨೩॥ ದಂತಾನ್ಮಾಸಾದಂಷ್ಟ್ರಯೋಶ್ಚ ಉಭಯೋಋತವಸ್ಥಿತಾಃ। ನಾಸಾಕುಹೂರಮಾವಾಸ್ಯಾ ತಚ್ಛಿದ್ರೇಷುಚ ವಾಯವಃ ॥೨೪॥ ಗ್ರೀವಾತಸ್ಯಾಭವದ್ದೇವೀ ವಾಣೀಚಾಪಿ ಸರಸ್ವತೀ । ನಾಸತ್ಯೌ ಶ್ರವಣೇ ಚೋಭೌ ನೇತ್ರೇಚ ಶಶಿಭಾಸ್ಕರೌ ॥೨೫॥ ವೇದಾಂಗಾನಿಚಯಜ್ಞಾಶ್ಚ ನಾನಾರೂಪಾಣಿ ಯಾನಿಚ । ಸುವೃತ್ತಾನಿಚವಾಕ್ಯಾನಿ ತೇಜಸ್ಸಿದ್ಧಿಸ್ತಪಾಂಸಿಚ ॥೨೬॥ ಏತಾನಿನರರೂ

---

ರಃ-ಮಂದರಪರ್ವತವು, ಮೇರುರೇವಚ-ಮೇರುಪರ್ವತವೂನು, ತಂಸಮಾಶ್ರಿತ್ಯ-ಆ ಪುರುಷನನ್ನಾದರೆ, ಸಮಾಶ್ರಿತ್ಯ-ಆಶ್ರಯಿಸಿ, ಅಸ್ಥಿಭೂತಾಃ-ಎಲುಬುಗಳಾಗಿ, ವ್ಯವಸ್ಥಿತಾಃ-ನಿಂತಿವೆ ॥೨೦॥ ಮಹೀ-ಭೂಮಿಯು, ತಸ್ಯ-ಆ ಪುರುಷನಿಗೆ, ವಕ್ಷಃ-ವಕ್ಷಸ್ಥಲವು, ಅಭವತ್-ಆಯಿತು, ದ್ಯೌಃ-ಅಂತರಿಕ್ಷವು, ಶರೀರೇ-ಶರೀರದಲ್ಲಿ, ಅವಸ್ಥಿತಾ-ಕಾಣುತಿತ್ತು, ಉಭೇಸಂಧ್ಯೇ- ಪ್ರಾತಸ್ಸಾಯಂಸಂಧ್ಯೆಗಳು, ಕಾಯಸಂಧೌ-ಶರೀರಸಂಧಿಯಲ್ಲಿದ್ದವು, ಜಲವಾಹಾಃ-ಮೇಘಗಳೂ, ಮೇಹನೇ-ಶಿಶ್ನದಲ್ಲಿ ॥೨೧॥ ಧಾತಾ-ಬ್ರಹ್ಮನು, ವಿಧಾತಾಚ-ಉಪಬ್ರಹ್ಮನು, ಬಾಹೂ-ಬಾಹುಗಳು, ಭಗಃ-ಸೂರ್ಯನು, ಪೂಷಾಚ-ಪೂಷನೆಂಬ, ಉಭೌ-ಇಬ್ಬರು, ಕರೌ-ಹಸ್ತಗಳಾಗಿಧಾರೆ, ಐರಾವತಃ-ಐರಾವತನೆಂಬ ಸರ್ಪವು, ವಿಶಾಲಾಕ್ಷಃ-ವಿಶಾಲಾಕ್ಷನೆಂಬ ಸರ್ಪವು, ಶೇಷಃ-ಆದಿಶೇಷನು, ವಾಸುಕಿರೇವಚ-ವಾಸುಕಿಯೂನೂ, ಕಂಬಳಾಶ್ವತರೌ, ಕಂಬಳನು ಅಶ್ವತರನೂ ಎಂಬ, ನಾಗೌ – ಸರ್ಪಗಳೆರಡೂನು, ಕರ್ಕೋಟಕಧನಂಜಯೌ- ಕರ್ಕೋಟಕಧನಂಜಯರೆಂಬ ಸರ್ಪಗಳೂ, ಘೋರವಿಷಃ-ಭಯಂಕರವಾದ ವಿಷವುಳ್ಳ, ನಾಗಶ್ಚ –ನಾಗನೂನು, ತಕ್ಷಕಶ್ಚ – ತಕ್ಷಕನೂನು, ಸಃ-ಪ್ರಸಿದ್ಧನಾದ, ಉಪತಕ್ಷಕಶ್ಚ-ಉಪತಕ್ಷಕನೂನು, ವಿಷವೀರ್ಯಂ-ವಿಷ-ವಿಷದ, ವೀರ್ಯಂ-ಸಾಮರ್ಥ್ಯವನ್ನು, ಮುಮುಕ್ಷವಃ-ಬಿಡಲಿಚ್ಛೆಯುಳ್ಳವರಾಗಿ, ತಸ್ಯ-ಆ ಮಹಾಪುರುಷನ, ಕರಜಾನ್-ಉಗರುಗಳನ್ನು, ಆಶ್ರಿತಾಃ-ಆಶ್ರಯಿಸಿದ್ದವು, ಅಗ್ನಿಃ-ಅಗ್ನಿಯು, ತಸ್ಯ-ಆ ಮಹಾಪುರುಷನಿಗೆ, ಆಸ್ಯಂ-ಮುಖವು, ಅಭವತ್-ಆಯಿತು, ಸ್ಕಂಧೌ-ಭುಜ ಶಿರಸ್ಸುಗಳು, ರುದ್ರೈಃ – ಏಕಾದಶ ರುದ್ರರಿಂದ, ಅಧಿಷ್ಠಿತೌ – ಆಶ್ರಯಿಸಲ್ಪಟ್ಟವು ॥ ೨೩ ॥ ಮಾಸಾಃ-ಮಾಸಗಳು, ದಂತಾನ್-ದಂತಗಳನ್ನು, ಶ್ರಿತಾಃ- ಆಶ್ರಯಿಸಿಕೊಂಡಿವೆ, ಋತವಃ- ಋತುಗಳು, ಉಭಯೋರ್ದಂಷ್ಟ್ರಯೋಃ-ಎರಡು ಕೋರೆ ಹಲ್ಲುಗಳಲ್ಲಿ, ಸ್ಥಿತಾಃ-ನಿಂತಿವೆ, ಅಮಾವಾಸ್ಯಾ - ಅಮಾವಾಸ್ಯಾಭಿಮಾನ ದೇವತೆಯು, ಕುಹೂಃ-ಕುಹುವೆಂಬ ದೇವತೆಯು, ನಾಸಾ-ಮೂಗಾಗಿಯಿದೆ, ತಚ್ಛಿದ್ರೇಷು-ಆ ನಾಸಾರಂಧ್ರಗಳಲ್ಲಿ, ವಾಯವಶ್ಚ –ವಾಯುವುಗಳೂನು, ಸಂತಿ-ಇರುತವೆ ॥೨೪॥ ವಾಣೀ-ವಾಕ್ಸ್ವರೂಪವಾದ, ಸರಸ್ವತೀದೇವೀಚ-ಸರಸ್ವತೀ ದೇವಿಯೂನು, ತಸ್ಯ-ಆ ಮಹಾಪುರುಷನಿಗೆ,ಗ್ರೀವಾ-ಕಂಠವು, ಅಭವತ್-ಆಯಿತು, ನಾಸತ್ಯೌ-ಅಶ್ವಿನೀದೇವತೆಗಳು,ಶ್ರವಣೇ-ಶ್ರೋತ್ರಗಳಾಗಿಧಾರೆ, ಶಶಿಭಾಸ್ಕರಾವುಭೌ- ಚಂದ್ರ ಸೂರ್ಯರಿಬ್ಬರೂನು, ನೇತ್ರೇಚ-ನೇತ್ರಗಳಾಗಿಧಾರೆ ॥೨೫॥ ವೇದಾಂಗಾನಿಚ-ಆರು ವೇದಾಂಗಗಳೂನು, ಯಜ್ಞಾಶ್ಚ –ಯಜ್ಞಗಳೂನು, ನಾನಾರೂಪಾಣಿ-ನಾನಾಬಗೆಗಳಾದ, ಸುವೃತ್ತಾನಿ-ಸಚ್ಚರಿತ್ರಗಳೂನು, ವಾಕ್ಯಾನಿಚ-ವಾಕ್ಯಗಳೂನು, ಯಾನಿ-ಯಾವುಗಳೋ, ತೇಜಃ-ತೇಜಸ್ಸು, ಸಿದ್ಧಿಶ್ಚ -ಸಿದ್ಧಿಯೂನು, ತಪಾಂಸಿಚ-ತಪಸ್ಸುಗಳೂನು, ಯಾನಿ-ಯಾವಗಳೋ, ಏತಾನಿ-ಅವುಗಳೆಲ್ಲಾ,ನರರೂಪಸ್ಯ-ಮನುಷ್ಯರೂಪನಾದ, ತಸ್ಯ-ಆ ಪುರುಷನ, ದೇಹಂ-ದೇಹವನ್ನು, ಶ್ರಿತಾನಿವೈ-ಆಶ್ರಯಿಸಿ ಕೊಂಡಿವೆ, ತೇನ-ಅಂಥಾ ಪುರುಷನಿಂದ, ಸ್ವಲ್ಪಮಾತ್ರೇಣ-ಕೊಂಚವಾದ, ಮುಷ್ಟಿಪ್ರಹಾರೇಣ-ಮುಷ್ಟಿಪ್ರಹಾರದಿಂದ, ಲೀಲಯಾ-ವಿಲಾಸದಿಂದ, ಪಾಣಿನಾ-ಹಸ್ತದಿಂದ, ತಾಡಿತಂ – ಹೊಡೆಯಲ್ಪಟ್ಟ, ರಕ್ಷಃ-ರಾಕ್ಷಸನು, ಮಹೀತಲೇ-ನೆಲದಲ್ಲಿ, ನಿಪಪಾತ-ಬಿದ್ದನು ॥೨೬॥ ಪತಿತಂ-ಬಿದ್ದಂಥಾ, ರಾಕ್ಷಸಂ-ರಾವಣನನ್ನು, ಜ್ಞಾತ್ವಾ-ತಿಳದು, ನಿಶಾಚರಾ-

---

ದ್ದನು, ಭೂಮಿಯು ವಕ್ಷಸ್ಥಳವಾಗಿಯೂ, ಅಂತರಿಕ್ಷವು ಶರೀರವಾಗಿಯೂ, ನಿಂತಿದ್ದಂಥಾದ್ದಾದನು ॥೨೦॥ ಇದಲ್ಲದೇ ಪ್ರಾತಸ್ಸಾಯಸ್ಸಂಧ್ಯೆಗಳೆಂಬ ಎರಡು ಸಂಧ್ಯೆಗಳೂ. ಶರೀರ ಸಂಧಿಗಳಾಗಿಯೂ, ಮೇಘಗಳು ಶಿಶ್ನವಾಗಿಯೂ, ಬ್ರಹ್ಮ ಉಪಬ್ರಹ್ಮರು ಬಾಹುಗಳಾಗಿಯೂ, ಭಗಪೂಷರೆಂಬ ರೀರ್ವರು ಹಸ್ತಗಳಾಗಿಯೂ, ಐರಾವತ, ವಿಶಾಲಾಕ್ಷ, ಶೇಷ, ವಾಸುಕಿ, ಕಂಬಳ, ಅಶ್ವತರ, ಕರ್ಕೋಟಕ, ಧನಂಜಯ, ನಾಗ, ತಕ್ಷಕ, ಉಪತಕ್ಷಕರೆಂಬ ಈ ಹತ್ತು ಸರ್ಪಶ್ರೇಷ್ಠಗಳೂ ಉಗರುಗಳಾಗಿಯೂ, ಅಗ್ನಿಯು ಮುಖವಾಗಿಯೂ, ಏಕಾದಶ ರುದ್ರರು ಸ್ಕಂಧಗಳಾಗಿಯೂ ಇರುತಿರ್ದರು ॥ ಇದೂಅಲ್ಲದೇ ಮಾಸಗಳು ದಂತಗಳಾಗಿಯೂ ಋತುಗಳು ಕೋರೆಹಲ್ಲುಗಳಾಗಿಯೂ, ಅಮಾವಾಸ್ಯಾಭಿಮಾನಿದೇವತೆಯೂ ಕುಹೂಎಂಬ ದೇವತೆಯೂಕೂಡ ನಾಸಾರೂಪವಾಗಿಯೂ, ವಾಯುಗಳು ನಾಸಾರಂಧ್ರಗಳಾಗಿಯೂ, ವಾಕ್ಸ್ವರೂಪಳಾದ ಸರಸ್ವತೀದೇವತೆಯು ಕಂಠವಾಗಿಯೂ ಅಶ್ವಿನೀ ದೇವತೆಗಳು ಶ್ರೋತ್ರಗಳಾಗಿಯೂ, ಚಂದ್ರ ಸೂರ್ಯರು ನೇತ್ರಗಳಾಗಿಯೂ, ವೇದಾಂಗಗಳಾದ ಶಿಕ್ಷಾಂಗಗಳೂ ಯಜ್ಞಗಳೂ ನಾನಾರೂಪವಾದ ಸಚ್ಚರಿತ್ರಗಳು ವಾಕ್ಯಗಳೂ ತೇಜಸ್ಸುಸಿದ್ಧಿಯು ತಪಸ್ಸುಗಳೆಂಬ ಇವುಗಳೆಲ್ಲ ಆತನ ದೇಹವನ್ನಾಶ್ರಯಿಸಿ ಕೊಂಡಿದ್ದವಷ್ಟೇ, ಆ ಮಹಾಪುರುಷನ ಮುಷ್ಟಿಪ್ರಹಾರ ಮಾತ್ರದಿಂದಲೇ ರಾವಣನು ನೆಲದಲ್ಲಿ ಬಿದ್ದು ಹೋದನು ॥೨೬॥ ಋುಗ್ನೆದಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪಸ್ಯತಸ್ಸ್ಯದೇಶಂಶ್ರಿತಾನಿವೈ । ತೇನಮುಷ್ಟಿಪ್ರಹಾರೇಣಸ್ವಲ್ಪಮಾತ್ರೇಣಲೀಲಯಾ । ಪಾತಿತಂ ರಕ್ಷೋನಿಪಪಾತಮ
ಹೀತಲೆ ॥೨೭॥ ಪತಿತಂರಾಕ್ಷಸಂಜ್ಞಾತ್ವಾವಿದ್ರಾವ್ಯಚನಿಶಾಚರಾನ್ । ಋಗ್ವೇದಪ್ರತಿಮಸ್ಸೋಥಪದ್ಮಮಾಲಾವಿಭೂಷಿ
ತಃ ॥ ಪ್ರವಿವೇಶಚಪಾತಾಳಂಗಚ್ಛತ್ಪರ್ವತಸನ್ನಿಭಃ । ಉತ್ಥಾಯಚದಶಗ್ರೀವಃಆಹೂಯಸಚಿವಾನ್ ಸ್ವಯಂ॥ ಕ್ವಗತ
ಸ್ಸಹಸಾಬ್ರೂತಪ್ರಹಸ್ತಶುಕಸಾರಣಾಃ । ಏವಮುಕ್ತಾ ರಾವಣೇನರಾಕ್ಷಸಾಸ್ತಮಥಾಬ್ರುವನ್ ॥ ಪ್ರವಿಷ್ಟಸ್ಸನರೋತ್ರೈವದೇ
ವದಾನವದರ್ಪಹಾ ॥ ಅಥಾಸಿಂಗೃಹ್ಯವೇಗೇನಗರುತ್ಮಾನಿವಪನ್ನಗಂ । ಶೀಘ್ರಂಗತ್ವಾಬಿಲದ್ವಾರಂಪ್ರವಿವೇಶಚದುರ್ಮತಿಃ॥
ಪ್ರವಿಶ್ಯಚಸತದ್ವಾರಂರಾವಣೋವರನಿರ್ಭಯಃ ॥ ಅಪಶ್ಯಚ್ಚನರಾಂಸ್ತತ್ರನೀಲಾಂಜನಚಯೋಪಮಾನ್ । ಕೇಯೂರಧಾ
ರಿಣಶ್ಶೂರಾನ್ ರಕ್ತಮಾಲ್ಯಾನುಲೇಪನಾನ್ ॥ ಅಂಗುಳೀಯಕಹಾರಾದ್ಯೈರ್ಭೂಷಣೈಶ್ಚ ವಿಭೂಷಿತಾನ್ ॥೩೨॥ ದದೃಶೇ
ತತ್ರನೃತ್ಯಂತಸ್ತಿಸ್ರಃಕೋಟ್ಯೋಮಹಾತ್ಮನಃ ॥ ನಿತ್ಯೋತ್ಸವಾಃಶಾಂತಭಯಾಃವಿಮಲಾಃಪಾವಕಪ್ರಭಾಃ॥೩೩॥ ಕ್ರೀಡಂ

---

ರಾಕ್ಷಸರನ್ನು, ವಿದ್ರಾವ್ಯ-ಓಡಿಸಿ, ಅಥ-ಬಳಿಕ, ಋಗ್ವೇದಪ್ರತಿಮಃ-ಋಗ್ವೇದಾಭಿಮಾನ ದೇವತೆಗೆ ಸಮಾನನಾದ, ಪದ್ಮಮಾಲಾವಿಭೂಷಿತಃ - ಕಮಲ ಮಾಲಾಲಂಕೃತನಾದ, ಗಚ್ಛತ್ಪರ್ವತಸನ್ನಿಭಃ- ನಡೆದು ಹೋಗುತಿರುವ ಬೆಟ್ಟಕ್ಕೆ ಸಮಾನನಾದ, ಸಃ-ಆ ಪುರುಷನು, ಪಾತಾಳಂ - ಪಾತಾಳವನ್ನು, ಪ್ರವಿವೇಶ-ಹೊಕ್ಕನು ॥೨೭॥ ದಶಗ್ರೀವಶ್ಚ-ರಾವಣನೂನು, ಉತ್ಥಾಯ-ಮ್ಯೆಲಕ್ಕೆದ್ದು, ಸಚಿವಾನ್-ಮಂತ್ರಿಗಳನ್ನು, ಆಹೂಯ-ಕರೆದು, ಹೇ ಪ್ರಹಸ್ತಶುಕಸಾರಣಾಃ-ಎಲೈ ಪ್ರಹಸ್ತನೆ, ಶುಕನೆ, ಸಾರಣನೆ, ಸಃ-ಆ ಪುರುಷನು, ಸ್ವಯಂ-ತಾನು, ಕ್ವಗತಃ- ಯಲ್ಲಿಹೋದನು, ಸಹಸಾ - ಜಾಗ್ರತೆಯಾಗಿ, ಬ್ರೂತ-ಹೇಳಿರಿ ॥ ೨೮ ॥ ರಾವಣೇನ-ರಾವಣನಿಂದ, ಏವಂ-ಈಪರಿಯಾಗಿ, ಉಕ್ತಾಃ-ಹೇಳಲ್ಪಟ್ಟ, ರಾಕ್ಷಸಾಃ-ರಾಕ್ಷಸರು, ದೇವದಾನವದರ್ಪಹಾ-ದೇವತೆಗಳ ರಾಕ್ಷಸರ ದರ್ಪವನ್ನು ಹೊಡೆಯುತಿರುವ, ನರಃ-ಆ ಪುರುಷನು, ಅತ್ರೈವ-ಈ ಬಿಲದ್ವಾರದಲ್ಲಿಯೆ,ಪ್ರವಿಷ್ಟಃ-ಹೊಕ್ಕನೆಂದು, ತಂ-ಆ ರಾವಣನನ್ನು ಕುರಿತು, ಅಥ-ಬಳಿಕ, ಅಬ್ರುವನ್-ಹೇಳಿದರು ॥೨೯॥ ಅಥ-ಅನಂತರದಲ್ಲಿ, ದುರ್ಮತಿಃ-ದುರ್ಬುದ್ಧಿಯುಳ್ಳ, ಸತು-ಆ ರಾವಣನಾದರೆ,ಅಸಿಂ-ಖಡ್ಗವನ್ನು, ಗರುತ್ಮಾನ್-ಗರುತ್ಮಂತನು, ಪನ್ನಗಮಿವ-ಸರ್ಪವನ್ನಂತೆ, ಗೃಹ್ಯ-ಹಿಡಿದುಕೊಂಡು, ವೇಗೇನ-ವೇಗದಿಂದ, ಶೀಘ್ರಂ-ಜಾಗ್ರತೆಯಾಗಿ, ಬಿಲದ್ವಾರಂ-ಬಿಲದ್ವಾರವನ್ನು, ಪ್ರವಿವೇಶ-ಪ್ರವೇಶಿಸಿದನು ॥ ೩೦ ॥ ಸರಾವಣಶ್ಚ-ಆ ರಾವಣನೂನು, ವರನಿರ್ಭಯಃ- ಬ್ರಹ್ಮವರದಿಂದ ನಿರ್ಭಯನಾಗಿ, ತದ್ವಾರಂ-ಆ ಬಿಲದ್ವಾರವನ್ನು, ಪ್ರವಿಶ್ಯಚ-ಪ್ರವೇಶಿಸಿ, ತತ್ರ-ಆ ಬಿಲದಲ್ಲಿ, ನೀಲಾಂಜನಚಯೋಪಮಾನ್ - ಕಾಡಿಗೆ ಬೆಟ್ಟಕ್ಕೆ ಸಮಾನರಾದ, ಕೇಯೂರಧಾರಿಣಃ- ಬಾಹುಪುರಿಗಳನ್ನು ಧರಿಸಿರುವ, ಶೂರಾನ್-ಶೂರರಾದ, ರಕ್ತಮಾಲ್ಯಾನುಲೇಪನಾನ್-ರಕ್ತ ಗಂಧ ಪುಷ್ಪಗಳುಳ್ಳ, ಅಂಗುಳೀಯಕಹಾರಾದ್ಯೈಃ-ಉಂಗುರಗಳೂ ಹಾರಗಳೂ ಮೊದಲಾಗುಳ್ಳ, ಭೂಷಣೈಶ್ಚ -ಭೂಷಣಗಳಿಂದಲೂ, ವಿಭೂಷಿತಾನ್-ಅಲಂಕೃತರಾದ, ನರಾನ್ - ಮನುಷ್ಯರನ್ನು, ಅಪಶ್ಯಚ್ಚ - ನೋಡಲೂ ನೋಡಿದನು ॥ ೩೧ ॥ ತತ್ರ-ಆ ಬಿಲದಲ್ಲಿ, ನೃತ್ಯಂತಃ - ನರ್ತನ ಮಾಡುತಿರುವ, ನಿತ್ಯೋತ್ಸವಾಃ-ನಿತ್ಯಸಂತೋಷಿಗಳಾದ, ಶಾಂತಭಯಾಃ-ಭಯರಹಿತರಾದ, ವಿಮಲಾಃ-ನಿರ್ಮಲರಾದ, ಪಾವಕಪ್ರಭಾಃ - ಅಗ್ನಿಯಂತೆ ಪ್ರಕಾಶಯುಳ್ಳ, ಮಹಾತ್ಮನಃ-ಆ ಮಹಾಪುರುಷನಸಂಬಂಧವಾದ, ತಿಸ್ರಃ - ಕೋಟ್ಯಃ-ಮೂರುಕೋಟಿಗಳು,ದೃಶ್ಯಂತೆ-ಕಾಣಲ್ಪಟ್ಟವು॥೩೨॥ ಭೀಮವಿಕ್ರಮಃ-ಭಯಂಕರವಾದ ಪರಾಕ್ರಮವುಳ್ಳ, ರಾಕ್ಷಸಃ-ರಾಕ್ಷಸನಾದ, ರಾವಣಃ-ರಾವಣನು, ದ್ವಾರಸ್ಥಃ-ದ್ವಾರದಲ್ಲಿ ನಿಂತವನಾಗಿ, ಕ್ರೀಡತಃ - ಆಡುತಿರುವ, ತಾನ್ಸರ್ವಾನ್ - ಆ ಪುರುಷರನ್ನಾದ

---

ಭಿಮಾನ ದೇವತೆಯಂತಿರುವ, ಮತ್ತು ಕಮಲಮಾಲಿಕಾಲಂಕೃತನಾದ ಆ ಮಹಾಪುರುಷನು ರಾವಣನನ್ನು ಮೂರ್ಛಿತನನ್ನಾಗಿ ತಿಳಿದು ರಾಕ್ಷಸರನ್ನೆಲ್ಲ ಓಡಿಸಿ ಸಂಚಾರ ಶೀಲವಾದ ಬೆಟ್ಟದಂತೆಪಾತಾಳವಂ ಪೊಕ್ಕನು ॥೨೭॥ ಆ ಸಮಯದಲ್ಲಿ ದಶಗ್ರೀವನಾದರೇ ಯಚ್ಚರಗೊಂಡವನಾಗಿ ಪ್ರಹಸ್ತಶುಕಸಾರಣರೆಂಬ ಮಂತ್ರಿಗಳಂ ಕರೆದಿಂತೆಂದನು. ಎಲೈ ಮಂತ್ರಿವರ್ಯಗಳಿರ್ರಾ! ತ್ವರಿತವಾಗಿ ಪೇಳಿರಿ ಆ ಮನುಷ್ಯನೆಲ್ಲಿಪೋದನು ಎಂಬದಾಗಿ ರಾವಣನಿಂದ ಪೃಚ್ಛಿತರಾದ ಆಮಂತ್ರಿಗಳಿಂತೆಂದರು, ಎಲೈ ಒಡೆಯನೇ ದೇವದಾನವರ ಗರ್ವವಂ ಮುರಿಯುತಿರುವ ಆ ನರನು ಈ ಬಿಲದ್ವಾರವನ್ನೇ ಪ್ರವೇಶಿಸಿದನು ಏಂಬದಾಗಿ ನುಡಿಯಲೂ ದುರ್ಬುದ್ಧಿಯುಳ್ಳ ಆ ರಾವಣನು ಗರುಡನು ಸರ್ಪವಂ ಗ್ರಹಿಸುವಂತೆ ಖಡ್ಗವಂ ತೆಗೆದುಕೊಂಡು ಶೀಘ್ರವಾಗಿ ಬಿಲದ್ವಾರವಂ ಪೊಕ್ಕನು ॥೩೦॥ ಬ್ರಹ್ಮವರದಿಂ ನಿರ್ಭಯನಾದ ಆ ರಾವಣನಾದರೇ ಆ ದ್ವಾರವಂ ಪೊಕ್ಕು ಅಲ್ಲಿ ಕಾಡಿಗೆ ಬೆಟ್ಟಗಳಂತಿರುವ ರಾಗಿಯೂ ಬಾಹುಪುರಿಗಳಂ ಧರಿಸಿರುವರಾಗಿಯೂ ಶೂರರಾಗಿಯೂ ಕೆಂಪಾದ ಪುಷ್ಪಗಳನ್ನು ಗಂಧಗಳನ್ನೂ ಸಹಾ ಧರಿಸಿರುವರಾಗಿಯೂ,ಅಂಗುಳ್ಯಾಭರಣಗಳೂ ಹಾರಗಳುಮುಂತಾದ ಒಡವೆಗಳಂ ಧರಿಸಿರುವರಾಗಿಯೂ ಇರುವ ಪುರುಷರಂ ಕಂಡನು॥೩೨॥ ಆ ಬಿಲದಲ್ಲಿ ನರ್ತನಮಾಡುತಿರುವರಾಗಿಯೂ ಸದಾ ಸಂತೋಷಿಗಳಾಗಿಯೂ ಭಯರಹಿತರಾಗಿಯೂ ನಿರ್ಮಲರಾಗಿಯೂ ಅಗ್ನಿಯಂತೆ ಕಂಗೊಳಿಸು ತಿರುವರಾಗಿಯೂ ಆ ಗಿರುವ ಮೂರುಕೋಟಿಜನರು ಕಾಣುತ್ತಿದ್ದರು ॥೩೩॥ ಭೀಮಪರಾಕ್ರಮಿಯಾದ ಆ ರಾವಣನು ದ್ವಾರದಲ್ಲಿ ನಿಂತವನಾಗಿ ಕ್ರೀಡಿಸುತಿರುವ ಆ ಪುರುಷರಂ ನೋಡುತಿದ್ದರೂ ಆ ಮೂರುಕೋಟಿಮಂದಿಯು ನಿರ್ಭೀತರಾಗಿದ್ದರು. ಆಪ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಃಪ್ರೇಕ್ಷತೇತಾನ್ಸ್ವೈರಾಕ್ಷಸೋಭೀಮವಿಕ್ರಮಃ । ದ್ವಾರಸ್ಥೋ ರಾವಣಸ್ತೇಷಾಂತಿಸ್ರಃಕೋಟ್ಯಸ್ತುನಿರ್ಭಯಾಃ॥೩೪॥ ಯ
ಥಾದೃಷ್ಟಸ್ಸತುನರಃತುಲ್ಯಾಸ್ತೇತಸ್ಯಸರ್ವಶಃ । ಏಕವರ್ಣಾಂಸ್ತ್ವೇಕಬಲಾನೇಕರೂಪಾನ್ಮಹೌಜಸಃ ॥ ಚತುರ್ಭುಜಾ
ನ್ಮಹೋತ್ಸಾಹಾನ್ ತತಾಪಶ್ಯತ್ಸರಾವಣಃ॥೩೫॥ ತಾನ್ದೃಷ್ಟ್ವಾಥದಶಗ್ರೀವಊರ್ಧ್ವರೋಮಾಬಭೂವಹ ॥೩೬॥ ಸ್ವ
ಯಂಭುವಾದತ್ತವರಸ್ತತಶ್ಶೀಘ್ರಂವಿನಿರ್ಯಯೌ । ಅಥಾಪಶ್ಯತ್ಪರಂತತ್ರಭುಜಂಗಶಯನೇಸ್ಥಿತಮ್ ॥೩೭॥ ಪಾಂಡುರೇಣಮ
ಹಾರ್ಹೇಣಕೌಸ್ತುಭೇನವಿರಾಜಿತಮ್ । ಶೇತೇಸಪುರುಷಸ್ತತ್ರಪಾವಕೇನಾವಕುಂಠಿತಃ ॥೩೮॥ ದಿವ್ಯಸ್ರಗನುಲೇಪೀಚದಿವ್ಯಾಭ
ರಣಭೂಷಿತಃ। ದಿವ್ಯಾಂಬರಧರಾಸಾಧ್ವೀತ್ರೈಲೋಕ್ಯಸ್ಯವಿಭೂಷಣಮ್ ॥೩೯॥ ವಾಲವ್ಯಜನಹಸ್ತಾಚದೇವೀತತ್ರವ್ಯವಸ್ಥಿ
ತಾ । ಲಕ್ಷ್ಮೀರ್ಬಹಿಸ್ಸಪದ್ಮಾವೈಭ್ರಾಜಂತೀಲೋಕಸುಂದರೀ ॥೪೦॥ಪ್ರಹೃಷ್ಟಸ್ಸತುಲಂಕೇಶೋದೃಷ್ಟ್ವಾತಾಂಚಾರುಹಾ
ಸಿನೀಮ್॥ಜಿಘೃಕ್ಷುಸ್ತದಾಸಾಧ್ವೀಂಸಿಂಹಾಸನಮುಪಾಶ್ರಿತಾಮ್॥೪೧॥ವಿನಾತುಸಚಿವೈಸ್ತತ್ರರಾವಣೋದುರ್ಮತಿಸ್ತದಾ।

---

ಪಿ, ಪ್ರೇಕ್ಷತೇ–ಕಂಡನು, ತೇಷಾಂ– ಆ ಪುರುಷರ, ತ್ರಿಸ್ರಃಕೋಟ್ಯಃ– ಮೂರುಕೋಟಿಗಳು, ನಿರ್ಭಯಾಃ–ಭಯವಿಲ್ಲದಿದ್ದರು ॥ ೩೪ ॥ ಸನರಸ್ತು–ಆಮ
ಹಾಪುರುಷನಾದರೆ, ಯಥಾ–ಹ್ಯಾಗೆ, ದೃಷ್ಟಃ–ಕಾಣಲ್ಪಟ್ಟನೋ, ತೇ– ಅವರು, ಸರ್ವಶಃ–ಸರ್ವಾಂಗಗಳಲ್ಲಿಯೂ, ತಸ್ಯ–ಆ ಪುರುಷನಿಗೆ, ತುಲ್ಯಾಃ–ಸ
ಮಾನರಾಗಿ, (ಆಸನ್–ಇದ್ದರು) ಸರಾವಣಃ–ಆ ರಾವಣನು, ತತ್ರ– ಆ ಬಿಲದಲ್ಲಿ, ಏಕವರ್ಣಾನ್–ಒಂದೇ ಬಣ್ಣವುಳ್ಳ, ಏಕಬಲಾನ್– ಒಂದೇ ವಿಧವಾದ ಸಾ
ಮರ್ಥ್ಯವುಳ್ಳ, ಏಕರೂಪಾನ್–ಒಂದೇವಿಧವಾದ ಆಕಾರಗಳುಳ್ಳ, ಮಹೌಜಸಃ–ಮಹಾತೇಜಸ್ಸುಳ್ಳ, ಚತುರ್ಭುಜಾನ್–ನಾಲ್ಕು ಭುಜಗಳುಳ್ಳ, ಮಹೋ
ತ್ಸಾಹಾನ್–ಮಹಾ ಸಂತೋಷಿಗಳಾದ, (ತಾನ್–ಅವರನ್ನು) ಅಪಶ್ಯತ್–ಕಂಡನು ॥೩೫॥ ಅಥ–ಬಳಿಕ, ದಶಗ್ರೀವಃ– ರಾವಣನು, ತಾನ್– ಆ ಮಹಾ
ಪುರುಷರನ್ನು, ದೃಷ್ಟ್ವಾ–ಕಂಡು, ಊರ್ಧ್ವರೋಮಾ–ಊರ್ಧ್ವಾಕಾರವಾದ ರೋಮಗಳುಳ್ಳವನು, ಬಭೂವಹ–ಆದನಷ್ಟೆ ॥೩೬॥ ಸ್ವಯಂಭುವಾ– ಬ್ರ
ಹ್ಮನಿಂದ, ದತ್ತವರಃ–ಕೊಡಲ್ಪಟ್ಟ ವರವುಳ್ಳವನಾದಕಾರಣ, ತತಃ–ಆ ಬಿಲದ ದೆಸೆಯಿಂದ, ಶೀಘ್ರಂ–ಜಾಗ್ರತೆಯಾಗಿ, ವಿನಿರ್ಯಯೌ– ಹೊರಟುಬಂದನು,
ಅಥ–ಬಳಿಕ, ತತ್ರ–ಆ ಬಹಿಃಪ್ರದೇಶದಲ್ಲಿ, ಭುಜಂಗಶಯನೇ–ಶೇಷಶಯನದಲ್ಲಿ, ಸ್ಥಿತಂ–ಇರುತಿರುವ, ಪಾಂಡರೇಣ–ಬಿಳುಪಾದ, ಮಹಾರ್ಹೇಣ – ಅಮೂಲ್ಯ
ವಾದ, ಕೌಸ್ತುಭೇನ–ಕೌಸ್ತುಭಮಣಿಯಿಂದ, ವಿರಾಜಿತಂ–ಹೊಳೆಯುತಿರುವ, ಪರಂ–ಮತ್ತೊಬ್ಬ ಪುರುಷನನ್ನು, ಅಪಶ್ಯತ್–ಕಂಡನು ॥೩೭॥ ಪಾವ
ಕೇನ–ಅಗ್ನಿಯಿಂದ, ಅವಕುಂಠಿತಃ–ಸುತ್ತಲ್ಪಟ್ಟ, ದಿವ್ಯಸ್ರಗನುಲೇಪೀಚ–ದೇವತಾ ಸಂಬಂಧವಾದ ಗಂಧ ಪುಷ್ಪಗಳುಳ್ಳ, ದಿವ್ಯಾಭರಣಭೂಷಿತಃ–ಮನೋ
ಹರವಾದ ಒಡವೆಗಳಿಂದಲಂಕೃತನಾದ, ಸಪುರುಷಃ– ಆ ಪುರುಷನು, ತತ್ರ–ಆ ಶೇಷಶಯನದಲ್ಲಿ, ಶೇತೇ–ಮಲಗಿದ್ದನು, ॥೩೮॥ದಿವ್ಯಾಂಬರಧರಾ–ದಿವ್ಯವ
ಸ್ತ್ರವಂ ಧರಿಸಿರುವ, ಸಾಧ್ವೀ–ಪತಿವ್ರತೆಯಾದ, ತ್ರೈಲೋಕ್ಯಸ್ಯ–ಲೋಕತ್ರಯಕ್ಕೆ, ವಿಭೂಷಣಂ–ಆಭರಣದೋಪಾದಿಯಲ್ಲಿರುವ, ಲೋಕಸುಂದರೀ–ಲೋ
ಕಸುಂದರಿಯಾದ, ಭ್ರಾಜಂತೀ–ಹೊಳೆಯುತಿರುವ, ಸಪದ್ಮಾ – ಕಮಲಗಳಿಂದೊಡಗೂಡಿದ, ಲಕ್ಷ್ಮೀ–ಲಕ್ಷ್ಮೀದೇವಿಯು, ವಾಲವ್ಯಜನಹಸ್ತಾಚ–ಚಾ
ಮರಿಯೇಹಸ್ತದಲ್ಲಿ ಉಳ್ಳವಳಾಗಿ, ತತ್ರ–ಆ ಸ್ಥಳದಲ್ಲಿ, ವ್ಯವಸ್ಥಿತಾ–ನಿಂತಿದ್ದಳು ॥೪೦॥ ತದಾ–ಆ ಕಾಲದಲ್ಲಿ, ಸಃ–ಪ್ರಸಿದ್ಧನಾದ, ಸಲೋಕೇಶಸ್ತು–ಆ ರಾವ
ಣನಾದರೆ, ಸಿಹ್ಮಾಸನಂ–ಸಿಹ್ಮಾಸನವನ್ನು, ಉಪಾಶ್ರಿತಾಂ–ಆಶ್ರಯಿಸಿರುವ, ಸಾಧ್ವೀಂ–ಪತಿವ್ರತೆಯಾದ, ಚಾರುಹಾಸಿನೀಂ–ಸೊಗಸಾದ ಕಿರುನಗೆಯುಳ್ಳ
ತಾಂ–ಆ ಲಕ್ಷ್ಮೀದೇವಿಯನ್ನು, ದೃಷ್ಟ್ವಾ –ಕಂಡು, ಜಿಘೃಕ್ಷುಃ–ಗ್ರಹಿಸಲಿಚ್ಛೆಯುಳ್ಳವನಾಗಿ, ಪ್ರಹೃಷ್ಟಃ–ಸಂತೋಷಿಸಿದನು ॥೪೧॥ ತತ್ರ–ಆಸ್ಥಳದ
ಲ್ಲಿ, ದುರ್ಮತಿಃ–ದುರ್ಬುದ್ಧಿಯುಳ್ಳ, ರಾವಣಃ– ರಾವಣನು, ಸಚಿವೈರ್ವಿನಾ–ಮಂತ್ರಿಗಳ ವಿನಹಾ, ಮನ್ಮಥೇನ–ಮನ್ಮಥನಿಂದ, ವಶೀಕೃತಃ– ಸ್ವಾಧೀನ
ಗೊಳಿಸಲ್ಪಟ್ಟವನಾಗಿ, ತದಾ–ಆ ಕಾಲದಲ್ಲಿ, ಹಸ್ತೈಃ–ಹಸ್ತಗಳಿಂದ, ತಾಂ–ಆ ಲಕ್ಷ್ಮೀದೇವಿಯನ್ನು, ಗೃಹೀತುಂ – ಹಿಡಿದುಕೊಳ್ಳುವದಕ್ಕೋಸ್ಕರ,

---

ಹಾಪುರುಷನಂತಿರುವ ಒಂದೇವಿಧವಾದ ಬಣ್ಣವುಳ್ಳ ಮತ್ತು ಮಹಾ ತೇಜಸ್ವಿಗಳಾದ ಚತುರ್ಭುಜಗಳಾಗಿರ್ಪ ಕಡು
ಸಂತೋಷಿಗಳಾದ ಅವರಂ ಕಂಡು ದಶಕಂಠನು ಊರ್ಧ್ವಾಕಾರವಾದ ರೋಮಂಗಳುಳ್ಳವನಾದನು ॥೩೬॥ ಬ್ರಹ್ಮದತ್ತ
ವರನಾದ ಆ ರಾವಣನು ಆ ಬಿಲದಿಂದ ಶೀಘ್ರನಾಗಿ ಹೊರಗೆ ಬಂದು ಅಲ್ಲಿ ಶೇಷಶಯನಶಾಯಿಯಾದ ಮತ್ತು ಬಿಳುಪಾಗಿ
ಯೂ ಅಮೂಲ್ಯವಾಗಿಯೂ ಇರುವ ಕೌಸ್ತುಭಮಾಣಿಕ್ಯದಿಂದ ಕಂಗೊಳಿಸುತಿರುವ ಮತ್ತೊಬ್ಬ ಪುರುಷನಂ ಕಂಡನು
ಅಲ್ಲಿ ಆ ಪುರುಷನು ಅಗ್ನಿಇಂದ ಸುತ್ತಿಕೊಳ್ಳಲ್ಪಟ್ಟವನಾಗಿಯೂ ದೇವತಾ ಸಂಬಂಧವಾದಗಂಧ ಪುಷ್ಪಗಳುಳ್ಳವನಾಗಿ
ಯೂ,ದಿವ್ಯಾಭರಣಗಳಿಂದ ಅಲಂಕೃತನಾಗಿಯೂ, ಇರುವನಾಗಿ ಶಯನಿಸಿದ್ದನು॥ ಆ ಎಡದಲ್ಲಿ ದಿವ್ಯಾಂಬರಧಾರಿಯಾಗಿ
ಯೂ ಸಾಧುಶೀಲಳಾಗಿಯೂ, ಲೋಕತ್ರಯಕ್ಕೂ ಆಭರಣಪ್ರಾಯಳಾಗಿಯೂ, ಲೋಕಸುಂದರಿಯಾಗಿಯೂ ಹೊ
ಳೆಯುತಿರುವ ಪದ್ಮಹಸ್ತಳಾದ ಲಕ್ಷ್ಮೀದೇವಿಯು, ಚೌರಿಗಳಂಪಿಡಿದುಕೊಂಡು ನಿಂತಿದ್ದಳು ॥೪೦॥ ಮಹಾಪ್ರಸಿದ್ಧನಾದ
ಆ ದಶಕಂಠನಾದರೆ ದುರ್ಬುದ್ಧಿಯುಳ್ಳವನಾದಕಾರಣ,ಸಿಹ್ಮಾಸನದ ಸಮೀಪದಲ್ಲಿರ್ಪ ಆ ಚಾರುಹಾಸಿನಿಯಂ ಕಂಡು,
ಕಡು ಸಂತುಷ್ಟನಾಗಿ, ಮಂತ್ರಿಗಳಿಲ್ಲದ ಈ ಸಮಯದಲ್ಲಿಯೇ ಆಕೆಯಂ ಹಿಡಿಯ ಬೇಕೆಂದು ಯೋಚಿಸಿ ಕೊಂಡು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹಸ್ತೈರ್ಗೃಹೀತುಂತಾವ್ಮೈಚ್ಛನ್ಮನ್ಮಥೇನವಶೀಕೃತಃ ॥೪೦॥ ಅಥಸುಪ್ತೋಮಹಾಬಾಹುಃಪಾವಕೇನಾವಕುಂಠಿತಃ। ಗೃಹೀತುಕಾಮಂತಂಜ್ಞಾತ್ವಾವ್ಯಪವಿಧ್ಯಪಟಂತದಾ ॥ ೪೧ ॥ ಜಹಾಸೋಚ್ಚೈರ್ಭೃಶಂದೇವತಂದೃಷ್ಟ್ವಾರಾಕ್ಷಸಾಧಿಪಮ್। ತೇಜಸಾತಸ್ಯಸಂದೀಪ್ತೋರಾವಣೋಲೋಕರಾವಣಃ। ಘ್ರಾಣವಾತೇನದೀರ್ಘೇಣತಸ್ಮಿನ್ರಾಮರಸಾತಲೇ। ಕೃತ್ತಮೂಲೋಯಥಾಶಾಖೀನಿಪಪಾತಮಹೀತಲೇ ॥೪೪॥ ಪತಿತಂರಾಕ್ಷಸಂಜ್ಞಾತ್ವಾವಚನಂಚೇದಮಬ್ರವೀತ್ ॥ ಉತ್ತಿಷ್ಠರಾಕ್ಷಸಶ್ರೇಷ್ಠಮೃತ್ಯುಸ್ತೇನಾದ್ಯವಿದ್ಯತೇ। ಪ್ರಜಾಪತಿವರೋರಕ್ಷ್ಯಃಯೇನಜೀವಸಿರಾವಣ ॥ಗಚ್ಛರಾವಣವಿಸ್ರಬ್ಧಂನಾತ್ರಮೃತ್ಯುರ್ಮರಣಂತವ ॥೪೬॥ ಲಬ್ಧಸಂಜ್ಞೋಮುಹೂರ್ತೇನರಾಕ್ಷಸೋಭೀಮವಿಕ್ರಮಃ॥ ತಂತುದೃಷ್ಟ್ವಾಮಹಾತ್ಮಾನಂರಾವಣೋಭಯಮಾಪಸಃ ॥೪೭॥ ಏವಮುಕ್ತಸ್ತದೋತ್ಥಾಯರಾವಣೋದೇವಕಂಟಕಃ ॥ ರೋಮಹರ್ಷಣಮಾಪನ್ನೋಹ್ಯಬ್ರವೀತ್ತಂಮಹಾಮುನಿಮ್॥೪೮॥ಕೋಭವಾನ್ಶೌರ್ಯಸಂಪನ್ನೋಯುಗಾಂತಾನಲಸನ್ನಿಭಃ॥ ಬ್ರೂಹಿತ್ವಂದೇವದೇವೋವಾಸರ್ವದೇಹೇಷುಸುಸಿ

ಐಚ್ಛತ್-ಇಚ್ಛೈಸಿದನು ॥೪೦॥ ಅಥ-ಬಳಿಕ, ಪಾವಕೇನ-ಅಗ್ನಿಯಿಂದ, ಅವಕುಂಠಿತಃ-ಸುತ್ತುಕೊಳ್ಳಲ್ಪಟ್ಟ, ಸುಪ್ತಃ-ಮಲಗಿರುವ, ಮಹಾಬಾಹುಃ-ದೊಡ್ಡಭುಜಗಳುಳ್ಳ, ದೇವಃ-ದೇವನು, ಗೃಹೀತುಕಾಮಂ-ಗ್ರಹಿಸಲಿಚ್ಛೆಯುಳ್ಳ, ತಂ-ಆ ರಾವಣನನ್ನು, ಜ್ಞಾತ್ವಾ-ಅರಿತು, ತದಾ-ಆ ಕಾಲದಲ್ಲಿ, ಪಟಂ-ಹೊದ್ದಿರುವ ವಸ್ತ್ರವನ್ನು, ವ್ಯಪವಿಧ್ಯ-ತೆಗದು, ತಂರಾಕ್ಷಸಾಧಿಪಂ-ಆ ರಾವಣನನ್ನು, ದೃಷ್ಟ್ವಾ-ಕಂಡು, ಭೃಶಂ-ಬಹಳವಾಗಿ, ಉಚ್ಚೈಃ-ಘಟ್ಟಿಯಾಗಿ, ಜಹಾಸ-ನಕ್ಕನು ॥೪೧॥ ಹೇರಾಮ-ಎಲೈ ಶ್ರೀರಾಮನೆ, ತಸ್ಯ- ಆ ವಿಷ್ಣುವಿನ, ತೇಜಸಾ-ತೇಜಸ್ಸಿನಿಂದ, ಲೋಕರಾವಣಃ-ಲೋಕಕಂಟಕನಾದ, ರಾವಣಃ-ರಾವಣನು, ಸಂದೀಪ್ತಃ-ಸುಡಲ್ಪಟ್ಟವನಾಗಿ, ದೀರ್ಘೇಣ-ದೀರ್ಘವಾದ, ಘ್ರಾಣವಾತೇನ-ಮೂಗಿನ ವಾಯುವಿನಿಂದ, ತಸ್ಮಿನ್ರಸಾತಲೇ-ಆ ಪಾತಾಳದಲ್ಲಿ, ಕೃತ್ತಮೂಲಃ-ಕತ್ತರಿಸಲ್ಪಟ್ಟ ಬುಡವುಳ್ಳ, ಶಾಖೀಯಥಾ-ಗಿಡದೋಪಾದಿಯಲ್ಲಿ, ಮಹೀತಲೇ-ನೆಲದಲ್ಲಿ, ನಿಪಪಾತ-ಬಿದ್ದುಹೋದನು ॥೪೪॥ ಪತಿತಂ-ಬಿದ್ದುಹೋದ, ರಾಕ್ಷಸಂ-ರಾವಣನನ್ನು, ಜ್ಞಾತ್ವಾ-ತಿಳದು, ಹೇರಾಕ್ಷಸಶ್ರೇಷ್ಠ-ಎಲೈ ರಾಕ್ಷಸೋತ್ತಮನೆ, ತೇ-ನಿನಿಗೆ, ಅದ್ಯ- ಈಗ, ಮೃತ್ಯುಃ-ಮರಣವು, ನವಿದ್ಯತೆ-ಇಲ್ಲಾ, ಪ್ರಜಾಪತಿವರಃ-ಬ್ರಹ್ಮವರವು, ರಕ್ಷ್ಯಃ-ಪಾಲಿಸತಕ್ಕದ್ದು. ಹೇರಾವಣ-ಎಲೈ ರಾವಣನೆ, ಯೇನ-ಯಾವವರದಿಂದ, ಜೀವಿಸಿ-ಬದುಕಿರುವಿಯೋ, ಹೇರಾವಣ-ಎಲೈರಾವಣನೆ, ತೇನ-ಆ ವರದಿಂದ, ಅತ್ರ-ಇಲ್ಲಿ, ತವ-ನಿನಿಗೆ, ಮರಣಂಮೃ-ಮರಣವಾದರೆ, ನ-ಇಲ್ಲಾ, ವಿಸ್ರಬ್ಧಂ-ನಂಬಿಕೆಯಾಗಿ, ಗಚ್ಛ-ಹೋಗು, ಉತ್ತಿಷ್ಠ-ಮೇಲಕ್ಕೇಳು, ಇತಿ-ಇಂತೆಂದು, ಇದಂವಚನಂ-ಈ ಮಾತನ್ನು, ಅಬ್ರವೀತ್- ನುಡಿದನು ॥೪೬॥ ಭೀಮವಿಕ್ರಮಃ-ಭಯಂಕರವಾದ ಪರಾಕ್ರಮವುಳ್ಳ, ರಾಕ್ಷಸಃ-ರಕ್ಕಸನಾದ, ಸರಾವಣಃ-ಆ ರಾವಣನು, ಮುಹೂರ್ತೇನ-ಸ್ವಲ್ಪಕಾಲದಲ್ಲಿ, ಲಬ್ಧಸಂಜ್ಞಃ-ಪ್ರಜ್ಞೆಯಂ ಹೊಂದಿದವನಾಗಿ, ತಂಮಹಾತ್ಮಾನಂತು-ಆ ಮಹಾಪುರುಷನನ್ನಾದರೆ, ದೃಷ್ಟ್ವಾ-ಕಂಡು. ಭಯಂ-ಭಯವನ್ನು, ಆಪ-ಹೊಂದಿದನು ॥ ತದಾ-ಆ ಕಾಲದಲ್ಲಿ, ಏವಂ-ಈ ಪರಿಯಾಗಿ, ಉಕ್ತಃ-ಪೇಳಲ್ಪಟ್ಟ, ದೇವಕಂಟಕಃ-ದೇವಶತ್ರುವಾದ, ರಾವಣಃ- ರಾವಣನು, ಉತ್ಥಾಯ-ಮೇಲಕ್ಕೆದ್ದು, ರೋಮಹರ್ಷಣಂ-ರೋಮಾಂಚನವನ್ನು, ಆಪನ್ನಃ-ಹೊಂದಿದವನಾಗಿ, ಮಹಾಮುನಿಂ-ಮಹಾಮುನಿಯಾದ, ತಂ-ಆ ಪುರುಷನನ್ನು ಕುರಿತು, ಅಬ್ರವೀದ್ಧಿ-ನುಡಿದನಪ್ಪೆ ॥ ೪೮॥ ಹೆದೇವ-ಎಲೈ ಸ್ವಾಮಿಯೆ, ಶೌರ್ಯಸಂಪನ್ನಃ-ಪರಾಕ್ರಮದಿಂದ ಯುಕ್ತನಾದ, ಯುಗಾಂತಾನಲಸನ್ನಿಭಃ-ಪ್ರಳಯಾಗ್ನಿಸದೃಶನಾದ, ಭವಾನ್-ನೀನು, ಕಃ-ಯಾರು, ಸರ್ವದೇಹೇಷು-ಸಮಸ್ತ ದೇಹಗಳಲ್ಲಿ, ಸಂಸ್ಥಿತಃ-ಇರುತಿರುವ, ದೇವೋವಾ-ದೇವನೋಯೇನು, ತ್ವಂ-ನೀನು, ಬ್ರೂಹಿ-ಪೇಳು ॥ ೪೯॥ ಏವಂ-ಈಪರಿಯಾಗಿ, ದುರಾತ್ಮನಾ-ದುರ್ಬುದ್ಧಿಯುಳ್ಳ, ತೇನರಾವಣೇನ-ಆ ರಾವಣನಿಂದ, ಉಕ್ತಃ- ಪೇಳಲ್ಪಟ್ಟ, ಸದೇವಃ-ಆ

ಮನ್ಮಥಾಕ್ರಾಂತ ಚಿತ್ತನಾಗಿ ಹಸ್ತಗಳಿಂದ ಗ್ರಹಿಸಲಿಚ್ಛೈಸಿದನು ॥೪೦॥ ಆ ಬಳಿಕ ಪಾವಕಾವಕುಂಠಿತನಾಗಿ ಶಯನಿಸಿರುವ ಮತ್ತೂ ದೊಡ್ಡ ದೊಡ್ಡ ಭುಜಗಳುಳ್ಳ ಆ ದೇವನು, ದಶಕಂಠನನ್ನು ಗ್ರಹಿಸಲಿಚ್ಛೆಯುಳ್ಳವನನ್ನಾಗರಿತು,ಆ ಸಮಯದಲ್ಲಿ ಹೊದಿಕೇ ವಸ್ತ್ರಮಂ ತೆಗದು, ರಾವಣನಂ ಕಂಡು ಅಟ್ಟಹಾಸವಂ ಗೈದನು ॥ ೪೧ ॥ ಎಲೈ ರಘು ನಂದನನೆ! ಆ ಶ್ರೀಮಹಾವಿಷ್ಣುವಿನ ತೇಜಸ್ಸಿನಿಂದ, ಲೋಕರಾವಣನಾದ ರಾವಣನು ಸುಡಲ್ಪಡುತ್ತಾ ಕತ್ತರಿಸಲ್ಪಟ್ಟ ಬುಡವುಳ್ಳ ಗಿಡವು ನೆಲದಲ್ಲಿ ಬಿದ್ದುಹೋಗುವಂತೆ ಆತನಘ್ರಾಣವಾತದಿಂದ ರಸಾತಲದಲ್ಲಿ ಬಿದ್ದುಹೋಗಲೂ ಆ ಮಹಾತ್ಮನಿಂತೆಂದುನುಡಿದನು॥೪೪॥ಎಲೈ ರಾಕ್ಷಸಶ್ರೇಷ್ಠನೆ!ನಿನಿಗೀಗಮೃತ್ಯುವುಂಟಾಗುವದಿಲ್ಲ,ಯಾವಬ್ರಹ್ಮವರದಿಂದ ನೀನು ಬದುಕಿರುವಿಯೋ ಅಂಥಾ ಬ್ರಹ್ಮನ ವರವು ಪರಿಪಾಲಿಸತಕ್ಕದ್ದು, ಆದಕಾರಣ ನಿನಿಗಿಲ್ಲಿ ಮರಣವಿಲ್ಲಾ ನಂಬಿಕೆಯಾಗಿ ಹೊರಟುಹೋಗು, ಏಳೆಂದು ನುಡಿಯುಲೂ, ಭೀಮಪರಾಕ್ರಮಿಯಾದ ಆ ರಾವಣನು ಎಚ್ಚರಗೊಂಡು,ಆ ಮಹಾ ಪುರುಷನಂಕಂಡು ಕಡುಭೀತನಾದನು ॥೪೭॥ ದೇವಕಂಟಕನಾದ ಆ ದಶಕಂಠನು ಈಪರಿಯಾಗಿ ಪೇಳಲ್ಪಟ್ಟು, ರೋಮಾಂಚಿತನಾಗಿ ಆ ಮಹಾಮುನಿಯಂ ಕುರಿತೀತೆಂದನು ॥೪೮॥ ಎಲೈ ಸ್ವಾಮಿಯೇ! ಪ್ರಳಯಾಗ್ನಿತುಲ್ಯನಾದ ಮತ್ತು ಮಹಾ ವೀರ್ಯಶಾಲಿಯಾದ ನೀನ್ಯಾರು? ಸರ್ವದೇಹಗಳಲ್ಲಿಯೂ ಇರುತಿರುವ ದೇವನೇ ಯೇನು ಪೇಳೆಂದು ದುರಾತ್ಮನಾದ ದಶಗ್ರೀವನಿಂದ ಕೇಳಲ್ಪಟ್ಟ ದೇವದೇವೋತ್ತಮನಾದ ಆ ಶ್ರೀಮನ್ನಾರಾಯಣನು ನಸುನಗೆಯುಳ್ಳವನಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಃ ॥೪೯॥ ಏವಮುಕ್ತಸ್ತತೇನಾಥರಾವಣೇನದುರಾತ್ಮನಾ । ಪ್ರತ್ಯುವಾಚಹಸನ್ದೇವೋಮೇಘಗಂಭೀರಯಾಗಿರಾ ॥೫೦॥ ಸತ್ವಂಮಯಾದಶಗ್ರೀವವಧ್ಯೋಸಿನಚಿರಾದಿಹ । ಏವಮುಕ್ತೋದಶಗ್ರೀವಃಪ್ರಾಂಜಲಿರ್ವಾಕ್ಯಮಬ್ರವೀತ್ ॥೫೧॥ ಪ್ರಜಾಪತೇಸ್ತುವಚನಾನ್ನಾಹಂಮೃತ್ಯುವಶಂಗತಃ। ನಸಜಾತೋಜನಿಷ್ಯೋವಾಮತ್ತುಲ್ಯೋವಾಸುರೇಷ್ವಪಿ॥ ಪ್ರಜಾಪತಿವರಂಯೋಹಿಲಂಘಯೇದ್ವೀರ್ಯಮಾಶ್ರಿತಃ॥೫೨॥ ನತತ್ರಪರಿಹಾರೋಸ್ತಿಪ್ರಯತ್ನಶ್ಚಾಪಿದುರ್ಲಭಃ ॥ ತ್ರೈಲೋಕ್ಯೇತಂನಪಶ್ಯಾಮಿಯಸ್ತತ್ಕುರ್ಯಾದ್ವರಂವೃಥಾ ॥೫೩॥ ಅಮರೋವಾಸುರಶ್ರೇಷ್ಠತೇನಮೇಂನಾವಿಶದ್ಭಯಮ್॥ ಅಥಾಪಿಚಭವೇನ್ಮೃತ್ಯುಸ್ತ್ವತ್ತೋಮೇನಾನ್ಯತಃಪ್ರಭೋ॥೫೪॥ ಆದಿತ್ಯಾವಸವೋರುದ್ರಾಃಮರುತೋಥಾಶ್ವಿನಾವಪಿ। ಸಿದ್ಧಾಶ್ಚ ಪಿತರಶ್ಚೈವಯಮೋವೈಶ್ರವಣಸ್ತಥಾ ॥ ಸಮುದ್ರಾಗಿರಯೋನದ್ಯೋವಿದ್ಯಾವೇದಾಸ್ತ್ರಯೋಗ್ನಯಃ। ಗ್ರಹಸ್ತಾರಾವಣೋವ್ಯೋಮಸಾಧ್ಯಾಗಂಧರ್ವಚಾರಣಾಃ॥ ಮಹರ್ಷಯೋವೇದವಿದೋಗರುಡೋಥಭುಜಂಗಮಾಃ । ಯೇಚಾನ್ಯೇಸಂಸ್ಥಿತಾದೇವಾದೈತ್ಯದಾನವರಾಕ್ಷಸಾಃ ॥ ಗಾತ್ರೇಪುಶ

---

ದೇವನು, ಅಥ-ಬಳಿಕ, ಹಸನ್-ನಗುತಿರುವನಾಗಿ, ಮೇಘಗಂಭೀರಯಾ-ಮೇಘದಂತೆ ಗಂಭೀರವಾದ, ಗಿರಾ-ಮಾತಿನಿಂದ, ಪ್ರತ್ಯುವಾಚ-ಪ್ರತ್ಯುತ್ತರವಂ ನುಡಿದನು ॥ ೫೦ ॥ ಹೆ ದಶಗ್ರೀವ-ಎಲೈ ರಾವಣನೆ, ನಚಿರಾತ್-ಸ್ವಲ್ಪಕಾಲದಲ್ಲಿ, ಇಹ-ಈಗಲೆ, ಸತ್ವಂ-ಆ ನೀನು, ಮಯಾ-ಎನ್ನಿಂದ, ವಧ್ಯಃ-ವಧಾರ್ಹನು, ಅಸಿ-ಆಗುತ್ತೀ, ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ದಶಗ್ರೀವಃ-ರಾವಣನು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ವಾಕ್ಯಂ-ವಚನವನ್ನು, ಅಬ್ರವೀತ್-ನುಡಿದನು ॥ ೫೧ ॥ ಅಹಂ-ನಾನು, ಪ್ರಜಾಪತೇಃ-ಬ್ರಹ್ಮನ, ವಚನಾತ್ತು-ಮಾತಿನದೆಸೆಯಿಂದಲಾದರೆ, ಅಹಂ-ನಾನು, ಮೃತ್ಯುವಶಂ-ಮೃತ್ಯು-ಯಮನ, ವಶಂ-ಸ್ವಾಧೀನವನ್ನು, ನಗತಃ-ಹೊಂದುವನಲ್ಲಾ, ಸುರೇಷ್ವಪಿ-ದೇವತೆಗಳಲ್ಲಿಯೂ ಕೂಡಾ, ಯಃ- ಯಾವನು, ವೀರ್ಯಂ-ಪರಾಕ್ರಮವನ್ನು, ಆಶ್ರಿತಃ-ಆಶ್ರೈಸಿದವನಾಗಿ, ಪ್ರಜಾಪತಿವರಂ-ಬ್ರಹ್ಮವರವನ್ನು, ಲಂಘಯೇತ್-ದಾಟುವನೋ, ಸಃ-ಅಂಥಾವನು, ಮತ್ತುಲ್ಯಃ-ನನ್ನ ಸಮಾನನು, ಜಾತೋವಾ-ಹುಟ್ಟಿದವನೂ, ನ-ಇಲ್ಲಾ -ಜನಿಷ್ಯೋವಾ-ಹುಟ್ಟತಕ್ಕವನೂನೂ, ನ-ಇಲ್ಲಾ ॥ ೫೨ ॥ ತತ್ರ- ಆ ಬ್ರಹ್ಮವರವಿಷಯವಾಗಿ, ಪರಿಹಾರಃ-ಪರಿಹಾರವು, ನಾಸ್ತಿ-ಇಲ್ಲಾ, ಪ್ರಯತ್ನಶ್ಚಾಪಿ - ಪ್ರಯತ್ನವೂಕೂಡಾ, ದುರ್ಲಭಃ-ಅಸಾಧ್ಯವು, ತ್ರೈಲೋಕ್ಯೇ -ಲೋಕತ್ರಯದಲ್ಲಿಯೂ, ಯಃ-ಯಾವನು, ಅಮರೋವಾ-ದೇವತೆಯೇ ಆಗಲೀ, ತದ್ವರಂ-ಆ ವರವನ್ನು, ವೃಥಾ-ವ್ಯರ್ಥವಾಗಿ, ಕುರ್ಯಾತ್-ಮಾಡುವನೋ, ತಂ-ಅಂಥಾಪುರುಷನನ್ನು, ನಪಶ್ಯಾಮಿ-ಕಾಣೆನು, ಹೆ ಸುರಶ್ರೇಷ್ಠ-ಎಲೈ ದೇವತಾಶ್ರೇಷ್ಠನೆ, ತೇನ-ಆದರಿಂದ, ಮಾಂ-ಎನ್ನನ್ನು, ಭಯಂ-ಭಯವು, ನಾವಿಶತ್-ಪ್ರವೇಶಮಾಡಲಿಲ್ಲಾ, ಅಥಾಪಿ-ಹೀಗಿದ್ದಾಗ್ಯೂ, ಮೃತ್ಯುಃ-ಮರಣವು, ಮೇ-ನನಗೆ, ತ್ವತ್ತಃ-ನಿನ್ನಿಂದಲೇ, ಭವೇತ್- ಆಗಲೀ, ಹೆಪ್ರಭೋ-ಎಲೈ ಸ್ವಾಮಿಯೇ! ಅನ್ಯತಃ-ಮತ್ತೊಬ್ಬನ ದೆಸೆಯಿಂದ, ನಭವೇತ್-ಆಗಬೇಡಾ ॥೫೪॥ ಮೇ-ಯನಗೆ, ತ್ವತ್ತಃ- ನಿನ್ನದೆಸೆಯಿಂದ, ಇದುಮರಣಂತು-ಈ ಮರಣವಾದರೆ, ಯಶಸ್ಯಂ-ಕೀರ್ತಿತರವು, ಶ್ಲಾಘನೀಯ್ಯಂಚ-ಸ್ತೋತ್ರಾರ್ಹವೂನೂ ಆದೀತು, ಅಥ-ಬಳಿಕ, ದೇವಸ್ಯ-ದೇವೋತ್ತಮನಾದ, ತಸ್ಯ- ಆ ಮಹಾಪುರುಷನ, ಗಾತ್ರೇ-ಶರೀರದಲ್ಲಿ, ಭೀಮವಿಕ್ರಮಃ-ಭೀಮ-ಭಯಂಕರವಾದ, ವಿಕ್ರಮಃ-ಪರಾಕ್ರಮವುಳ್ಳ, ರಾವಣಃ-ರಾವಣನು, ಸಚರಾಚರಂ-ಸ್ಥಾವರಜಂಗಮಗಳಿಂದೊಡಗೂಡಿದ, ಸಕಲಂ-ಸಮಸ್ತವಾದ, ತ್ರೈಲೋಕ್ಯಂ-ಲೋಕತ್ರಯವನ್ನು, ಅಪಶ್ಯತ್-ಕಂಡನು ॥೫೬॥ ಆದಿತ್ಯಾಃ-ದ್ವಾದಶಾದಿತ್ಯರುನ್ನು, ವಸವಃ-ಅಷ್ಟವಸುಗಳೂ, ರುದ್ರಾಃ-ಏಕಾದಶ ರುದ್ರರು, ಮರುತಃ-ಸಪ್ತ ಮರುತ್ತುಗಳೂ, ಅಥ-ಬಳಿಕ, ಅಶ್ವಿನಾವಪಿ-ಅಶ್ವಿನೀ ದೇವತೆಗಳೂನೂ, ಸಿದ್ಧಾಶ್ಚ -ಸಿದ್ಧರೂನೂ, ಪಿತರಶ್ಚೈವ-ಪಿತೃದೇವತೆಗಳೂನು, ಯಮಶ್ಚ -ಯಮನೂನೂ, ತಥಾ- ಹಾಗೆಯೆ, ವೈಶ್ರವಣಃ-ಕುಬೇರನೂನು, ಸಮುದ್ರಾಃ-ಸಪ್ತಸಮುದ್ರಗಳೂ, ಗಿರಯಃ-ಬೆಟ್ಟಗಳು, ನದ್ಯಃ-ನದಿಗಳೂ, ವಿದ್ಯಾಃ-ಚತುಷ್ಷಷ್ಟಿ ವಿದ್ಯೆಗಳು, ವೇದಾಃ-

---

ಗಿ ಗಂಭೀರವಾದ ವಾಕ್ಕಿನಿಂದ ಇಂತೆಂದುತ್ತರವಂ ಕೊಟ್ಟನು॥೫೦॥ ಎಲೈ ದಶಗ್ರೀವನೆ ! ಸ್ವಲ್ಪಕಾಲದಲ್ಲಿಯೇ ನೀನು ನನ್ನಿಂದ ವಧಿಸಲ್ಪಟ್ಟವನಾಗುವಿ, ಎಂಬದಾಗಿ ನುಡಿಯಲ್ಪಟ್ಟ ದಶಗ್ರೀವನು ಅಂಜಲಿಬದ್ಧನಾಗಿಂತೆಂದನು ॥೫೧॥ ಎಲೈ ಪುರುಷನೆ ! ನಾನು ಬ್ರಹ್ಮವರದಿಂದ ಮೃತ್ಯುವಶವಂ ಹೊಂದತಕ್ಕವನಲ್ಲಾ, ಯಾವಪುರುಷನು ವೀರ್ಯವನ್ನಾಶ್ರಯಿಸಿ, ಬ್ರಹ್ಮವರವನ್ನುಲ್ಲಂಘಿಸುವನೋ, ಅಂಥಾ ಪುರುಷನೇ ಆಗಲೀ ಅಥವಾ ನನಿಗೆ ಸದೃಶನೇಆಗಲೀ, ದೇವತೆಗಳಲ್ಲಿಯೂ ಸಹಾ ಈಗ ಹುಟ್ಟಿರಲಿಲ್ಲಾ ಮುಂದೆಯೂ ಹುಟ್ಟಲಾರನು ॥೫೨॥ ಆವಿಷಯದಲ್ಲಿ ಪರಿಹಾರವೂಯಿಲ್ಲಾ, ಆದರಪ್ರಯತ್ನವೂ ಕೂಡಾ ದುರ್ಲಭಮಾದದ್ದು, ಸುರನೇಆಗಲೀ ನರನೇಆಗಲೀ ಯಾವನು ಬ್ರಹ್ಮವರವಂ ಮಿಾರುವನೋ ಅಂಥಾ ಪುರುಷನು ಲೋಕತ್ರಯದಲ್ಲಿಯೇ ಇಲ್ಲಾ ॥ ೫೪ ॥ ಎಲೈ ಸುರಶ್ರೇಷ್ಠನೇ ಆ ವರದಿಂದ ನನಗೆಲ್ಲೆಲ್ಲಿಯೂ ಭಯಮಿಲ್ಲಾ, ಹೀಗಿದ್ದರೂ ನನಿಗೆ ಮರಣವೂ ನಿನ್ನಿಂದಲೇ ಉಂಟಾದೀತು, ಮತ್ತೊಬ್ಬನಿಂದುಂಟಾಗಬ್ಯಾಡ ನಿನ್ನಿಂದ ನನಿಗೆ ಮರಣವುಂಟಾದರೆ ಯಶಸ್ಕರವಾಗಿಯೂ ಶ್ಲಾಘನೀಯ್ಯವಾಗಿಯೂ ಇರುವದು ಎಂಬದಾಗಿ ನುಡಿದು ಆ ದೇವದೇವೋತ್ತಮನಾದ ಮಹಾಪುರುಷನ ಶರೀರದಲ್ಲಿ ಚರಾಚರಾತ್ಮಕವಾದ ಲೋಕತ್ರಯವಂ ಕಂಡನು ॥೫೬॥ (ಅದೆಂತೆನೇ) ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಸಪ್ತಮರುತ್ತುಗಳು, ಅಶ್ವಿನೀದೇವತೆಗಳೂ, ಸಿದ್ಧರು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯೇನೇಸ್ಥಸ್ಯದೃಶ್ಯಂತೇಸೂಕ್ಷ್ಮಮೂರ್ತಯಃ ॥೬೦॥ ಅಹರಾಮೋಥಧರ್ಮಾತ್ಮಾಹ್ಯಗಸ್ತ್ಯಂಮುನಿಸತ್ತಮಮ್ ॥ ದ್ವೀಪಸ್ಥಂ ಪುರುಷಃಕೋಸೌತಿಸ್ರಃಕೋಟ್ಯಶ್ಚತಾಶ್ಚಕಾಃ । ಶಯಾನಃಪುರುಷಃಕಶ್ಚದೈತ್ಯದಾನವದರ್ಪಹಾ ॥೬೧॥ ರಾಮಸ್ಯವಚನಂಶ್ರುತ್ವಾಸ್ಯಗಸ್ತ್ಯೋವಾಕ್ಯಮಬ್ರವೀತ್ । ಶ್ರೂಯತಾಮಭಿಧಾಸ್ಯಾಮಿದೇವದೇವಸ್ಸನಾತನಃ ॥ ಭಗವಾನ್ ಕಪಿಲೋರಾಮ ದ್ವೀಪಸ್ಥೋನರಉಚ್ಯತೇ । ಸವೈನಾರಾಯಣೋದೇವಶ್ಶಂಖಚಕ್ರಗದಾಧರಃ ॥ ವಿಧಾತಾಚೈವಭೂತಾನಾಂಸಂಹರ್ತಾಚತಥೈವಚ । ಅನಾದಿರಚ್ಯುತೋವಿಷ್ಣುಃಪ್ರಭವಶ್ಶಾಶ್ವತೋವ್ಯಯಃ ॥೬೪॥ ಯೇತುನೃತ್ಯಂತಿವೈತತ್ರಸುರಾಸ್ತೇತಸ್ಯಧೀಮತಃ । ತುಲ್ಯತೇಜಃಪ್ರತಾಪಾಸ್ತೇಕಪಿಲಸ್ಯನರಸ್ಯವೈ ॥೬೫॥ ನಾತಿಕ್ರುದ್ಧೇನದೃಷ್ಟಸ್ತುರಾಕ್ಷಸಃಪಾಪನಿಶ್ಚಯಃ । ನಬಭೂವತತೋರಾಮಭಸ್ಮಸಾದ್ರಾವಣಃಪ್ರಭೋ ॥೬೬॥ ಭಿನ್ನಗಾತ್ರೋನಗಪ್ರಖ್ಯೋರಾವಣಃಪತಿತೋಭುವಿ । ವಾಕ್ಶರೈಸ್ಸಂಬಿಭೇದಾಶುರ

---

ಚತುರ್ವೇದಗಳೂ, ತ್ರಯೋಗ್ನಯಃ-ಅಗ್ನಿತ್ರಯವೂ, ಗ್ರಹಾಃ-ನವಗ್ರಹಗಳೂ, ತಾರಾಗಣಾಃ-ನಕ್ಷತ್ರಗುಂಪುಗಳು, ವ್ಯೋಮ-ಅಂತರಿಕ್ಷವು, ಸಾಧ್ಯಾಃ-ಸಾಧ್ಯರೂ, ಗಂಧರ್ವಚಾರಣಾಃ-ಗಂಧರ್ವರೂ, ಚಾರಣರೂ, ಪದವಿದಃ-ವೇದಜ್ಞರಾದ, ಮಹರ್ಷಯಃ-ಮಹರ್ಷಿಗಳೂ,ಗರುಡಶ್ಚ-ಗರುಡನೂ, ಅಥ-ಬಳಿಕ, ಭುಜಂಗಮಾಃ-ಸರ್ಪಗಳೂ, ಅನ್ಯೇ-ಮತ್ತು ಕೆಲವರಾದ, ಯೇದೇವಾಶ್ಚ-ಯಾವ ದೇವತೆಗಳೂನೂ, ಸಂಸ್ಥಿತಾಃ-ಇರುತ್ತಾರೋ, ತೇಚ-ಆ ದೇವತೆಗಳೂನೂ, ದೈತ್ಯದಾನವರಾಕ್ಷಸಾಃ - ದೈತ್ಯದಾನವ ರಾಕ್ಷಸರೆಂಬ ಜಾತಿ ಭೇದಗಳೂನೂ, ಶಯನಸ್ಥಸ್ಯ-ಶೇಷಶಾಯಿಯಾದ ಆ ಶ್ರೀಮಹಾ ವಿಷ್ಣುವಿನ, ಗಾತ್ರೇಷು-ಅವಯವಗಳಲ್ಲಿ, ಸೂಕ್ಷ್ಮಮೂರ್ತಯಃ-ಸೂಕ್ಷ್ಮಾಕಾರವುಳ್ಳವರಾಗಿ, ದೃಶ್ಯಂತೇ- ಕಾಣಲ್ಪಟ್ಟರು ॥೬೦॥ ಅಥ-ಬಳಿಕ, ಧರ್ಮಾತ್ಮಾ-ಧರ್ಮಿಷ್ಠನಾದ, ರಾಮಃ-ಶ್ರೀರಾಮನು, ಮುನಿಸತ್ತಮಂ-ಋಷಿಶ್ರೇಷ್ಠನಾದ, ಅಗಸ್ತ್ಯಂ-ಅಗಸ್ತ್ಯಋಷಿಯಂ ಕುರಿತು, ದ್ವೀಪಸ್ಥಃ- ದ್ವೀಪಸ್ಥನಾದ, ಅಸೌ-ಪುರುಷಃ-ಈ ಪುರುಷನು, ಕಃ-ಯಾವನು, ತಾಸ್ತಿಸ್ರಃಕೋಟ್ಯಶ್ಚ -ಆ ಮೂರು ಕೋಟಿಗಳೂನೂ, ಕಾಃ-ಯಾರು, ಶಯಾನಃ-ಮಲಗಿರುವ, ದೈತ್ಯದಾನವದರ್ಪಹಾ-ದೈತ್ಯದಾನವರ ಗರ್ವಭಂಜಕನಾದ, ಪುರುಷಶ್ಚ-ಪುರುಷನೂನೂ, ಕಃ-ಯಾರು, ಇತಿ-ಇಂತೆಂದು, ಆಹ- ಹೇಳಿದನು ॥೬೧॥ ಅಗಸ್ತ್ಯಃ-ಅಗಸ್ತ್ಯಋಷಿಯು, ರಾಮಸ್ಯ-ಶ್ರೀರಾಮನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ವಾಕ್ಯಂ-ಮಾತನ್ನು, ಶ್ರೂಯತಾಂ-ಕೇಳಲ್ಪಡಲೀ, ಅಭಿಧಾಸ್ಯಾಮಿ-ಹೇಳುತ್ತೇನೆ, ಇತಿ-ಇಂತೆಂದು, ಅಬ್ರವೀತ್-ನುಡಿದನು, ಹೇರಾಮ, ಎಲೈ ಶ್ರೀರಾಮನೆ, ದ್ವೀಪಸ್ಥಃ-ದ್ವೀಪದಲ್ಲಿಯಿಪ್ಪ, ಕಪಿಲಃ-ಕಪಿಲವರ್ಣವುಳ್ಳ, ನರಃ-ಪುರುಷನು, ಭಗವಾನ್-ಷಡ್ಗುಣೈಶ್ವರ್ಯ ಸಂಪನ್ನನಾದ, ಸನಾತನಃ-ಅನಾದಿಸಿದ್ಧನಾದ, ದೇವದೇವಃ-ದೇವೋತ್ತಮನಾದವನು, ಸವೈ-ಆ ಪುರುಷನಾದರೆ, ಶಂಖಚಕ್ರಗದಾಧರಃ-ಶಂಖಚಕ್ರಗದೆಗಳಂ ಧರಿಸಿರುವ, ನಾರಾಯಣಃ-ಶ್ರೀಮಹಾ ವಿಷ್ಣುವು, ಭೂತಾನಾಂ-ಭೂತಗಳಿಗೆ, ವಿಧಾತಾಚೈವ, ಸೃಷ್ಟಿಕರ್ತನೂನೂ, ತಥೈವಚ-ಹಾಗೆಯೆ, ಸಂಹರ್ತಾಚ-ಸಂಹಾರಕನೂನೂ, ಅನಾದಿಃ-ಉತ್ಪತ್ತಿರಹಿತನು, ಅಚ್ಯುತಃ-ಚ್ಯುತಿ ರಹಿತನು, ವಿಷ್ಣುಃ-ಸರ್ವವ್ಯಾಪಕನು, ಪ್ರಭವಃ-ಸರ್ವಕ್ಕೂ ಉತ್ಪತ್ತಿಸ್ಥಾನ ಭೂತನು, ಶಾಶ್ವತಃ-ನಿತ್ಯನು, ಅವ್ಯಯಃ-ನಾಶರಹಿತನು ॥೬೪॥ ತತ್ರ-ಆ ಪಾತಾಳದಲ್ಲಿ, ಧೀಮತಃ-ಬುದ್ಧಿಶಾಲಿಯಾದ, ಕಪಿಲಸ್ಯ-ಕಪಿಲಬಣ್ಣವುಳ್ಳ, ನರಸ್ಯ-ಪುರುಷನ, ತುಲ್ಯತೇಜಃಪ್ರತಾಪಾಃ-ತುಲ್ಯ-ಸಮಾನವಾದ, ತೇಜಃಪ್ರತಾಪಾಃ-ತೇಜಸ್ಸೂನೂ ಪರಾಕ್ರಮವೂವುಳ್ಳವರಾಗಿ, ತತ್ರ-ಆ ಪಾತಾಳದಲ್ಲಿ, ಯೇತು-ಯಾರಾದರೆ, ನೃತ್ಯಂತಿವೈ- ನರ್ತನೇ ಮಾಡುತ್ತಿದ್ದರೋ, ತೇ-ಅವರು, ಸುರಾಃ-ದೇವತೆಗಳು ॥೬೫॥ ಹೇರಾಮ-ಎಲೈ ಶ್ರೀರಾಮನೇ, ಹೇಪ್ರಭೋ-ಎಲೈ ಸ್ವಾಮಿಯೆ, ಪಾಪನಿಶ್ಚಯಃ- ಪಾಪ ಬುದ್ಧಿಯುಳ್ಳ, ರಾಕ್ಷಸಃ-ರಾಕ್ಷಸನಾದ, ರಾವಣಃ-ರಾವಣನು, ಅತಿಕ್ರುದ್ಧೇನತು-ಅತ್ಯಂತ ಕ್ರುದ್ಧನಾದವನಿಂದಾದರೆ, ನದೃಷ್ಟಃ-ನೋಡಲ್ಪಡಲಿಲ್ಲಾ, ತತಃ - ಆ ಕಾರಣದದೆಶೆಯಿಂದ, ಭಸ್ಮಸಾತ್-ಭಸ್ಮೀಭೂತನು, ನಬಭೂವ-ಆಗಲಿಲ್ಲಾ ॥೬೬॥ ತಂ-ಆ ರಾವಣನನ್ನು, ವಾಕ್ಶರೈಃ-ಮಾತುಗಳೆಂಬ ಬಾಣಗಳಿಂದ, [illegible]

---

ಪಿತೃಗಳೂ, ಯಮನು, ಕುಬೇರನೂ, ಸಮುದ್ರಗಳೂ, ಗಿರಿಗಳೂ, ನದಿಗಳೂ, ಚತುಷ್ಷಷ್ಟಿವಿದ್ಯೆಗಳೂ, ಚತುರ್ವೇದಗಳೂ, ಅಗ್ನಿತ್ರಯವು, ನವಗ್ರಹಗಳೂ, ನಕ್ಷತ್ರಗುಂಪುಗಳೂ, ಗಗನವೂ, ವೇದಜ್ಞರಾದ ಮಹರ್ಷಿಗಳೂ, ಗರುಡ ಪಕ್ಷಿಗಳೂ, ಸರ್ಪಗಳೂ, ಇನ್ನೂ ಕೆಲವರಾದ ದೇವತೆಗಳೂ ಕೂಡ, ಆ ಮಹಾಪುರುಷನ ಅವಯವಗಳಲ್ಲಿ ಸೂಕ್ಷ್ಮ ಮೂರ್ತಿಗಳಾಗಿ ಕಾಣುತಿದ್ದರು ಎಂಬದಾಗಿ ಅಗಸ್ತ್ಯಮಹಾಮುನಿಯು ನುಡಿಯಲು; ಧರ್ಮಾತ್ಮನಾದ ಶ್ರೀರಾಮನು ಆ ಅಗಸ್ತ್ಯಮುನಿಯಂ ಕುರಿತಿಂತೆಂದನು,—ಆ ದ್ವೀಪದಲ್ಲಿದ್ದ ಪುರುಷನ್ಯಾರು? ಆ ಮೂರುಕೋಟಿ ದೇವತೆಗಳ್ಯಾರು? ದೈತ್ಯದಾನವರ ಗರ್ವ ಭಂಜಕನಾದ ಮತ್ತು ಮಲಗಿದ್ದ ಆ ಪುರುಷನ್ಯಾರು ? ಎಂಬದಾಗಿ ಶ್ರೀರಾಮನು ನುಡಿಯಲು; ಅಗಸ್ತ್ಯಮಹಾಮುನಿಯಿಂತೆಂದನು,—ಎಲೈ ಶ್ರೀರಾಮನೇ! ಹೇಳ್ವೆನು ಕೇಳು, ದೇವದೇವೋತ್ತಮನಾಗಿಯೂ, ಸನಾತನನಾಗಿಯೂ, ಷಡ್ಗುಣೈಶ್ವರ್ಯಸಂಪನ್ನನಾಗಿಯೂ,ಶಂಖಚಕ್ರಗದಾಧಾರಿಯಾಗಿಯೂ,ಜಗತ್ಸೃಷ್ಟಿಕರ್ತನಾಗಿಯೂ, ಜಗತ್ಸಂಹಾರಕನಾಗಿಯೂ, ಉತ್ಪತ್ತಿರಹಿತನಾಗಿಯೂ, ಚ್ಯುತಿರಹಿತನಾಗಿಯೂ, ಸರ್ವವ್ಯಾಪಕನಾಗಿಯೂ, ಪ್ರಪಂಚಕ್ಕೆಲ್ಲಾ ಉತ್ಪತ್ತಿಸ್ಥಾನಭೂತನಾಗಿಯೂ, ನಿತ್ಯನಾಗಿಯೂ, ನಾಶರಹಿತನಾಗಿಯೂ ಆಗಿರುವ ಶ್ರೀಮಹಾವಿಷ್ಣುವೇ ಆತನು॥೬೪॥ಆ ಪಾತಾಳಲೋಕದಲ್ಲಿ ಮಹಾಧೈರ್ಯಶಾಲಿಯಾದ ಮತ್ತು ಕಪಿಲಬಣ್ಣವುಳ್ಳ ಆ ಮಹಾತ್ಮನಿಗೆ ತುಲ್ಯರಾಗಿಯೂ, ಕಡುಪರಾಕ್ರಮಿಗಳಾಗಿಯೂಆಗಿರುವ ಆ ನರ್ತನಮಾಡುತ್ತಿದ್ದವರೆಲ್ಲರು ದೇವತೆಗಳು॥೬೫॥ಎಲೈರಘುನಂದನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹಸ್ಯಂ ಪಿಶುನೋ ಯಥಾ ॥೬೭॥ ಅಥ ದೀರ್ಘೇಣ ಕಾಲೇನ ಲಬ್ಧಸಂಜ್ಞಸ್ಸ ರಾಕ್ಷಸಃ । ಆಜಗಾಮ ಹತೌಜಾಸ್ತು ಯತ್ರ ತೇ ಸಚಿವಾಃ ಸ್ಥಿತಾಃ ॥೬೮॥ ತೈರೇವ ಸಹಿತೋ ಲಂಕಾಂ ಜಗಾಮಾಶು ದಶಾನನಃ ॥೬೯॥ ಶ್ರುತ್ವೈತದ್ವಚನಂ ಸರ್ವಮಾಶ್ಚರ್ಯಮಿತಿ ರಾಘವಃ ॥ ಪೂಜ್ಯಮಾನಾಃ ಸ್ಥಿತಾಸ್ತತ್ರ ಯೇ ರಾಮಸ್ಯ ಸಮೀಪತಃ ॥೭೦॥ ಆಶ್ಚರ್ಯಮಿತಿ ತತ್ರಾಹುರ್ವಾನರಾ ರಾಕ್ಷಸೈಸ್ಸಹ॥ ವಿಭೀಷಣಸ್ತು ರಾಮಸ್ಯ ಪಾರ್ಶ್ವಸ್ಥೋ ವಾಕ್ಯಮಬ್ರವೀತ್। ಆಶ್ಚರ್ಯಂ ಸ್ಮಾರಿತೋಸ್ಮ್ಯದ್ಯ ಯತ್ತದ್ವೃತ್ತಂ ಪುರಾತನಮ್॥ ಅಥಾಗಸ್ತ್ಯೋಽಬ್ರವೀತ್ಸರ್ವಮೇತದ್ರಾಮ ಶ್ರುತಂ ತ್ವಯಾ ॥೭೧॥ ದೃಷ್ಟ್ವಾ ಸಭಾಜಿತಾಶ್ಚಾಪಿ ರಾಮ ಯಾಸ್ಯಾಮಹೇ ವಯಮ್। ತಸ್ಯ ತದ್ವಚನಂ ಶ್ರುತ್ವಾ ರಾಮೋ ರಮಯತಾಂ ವರಃ ॥೭೨॥ —...ಅಧಿಕಪಾಠಸ್ಸಮಾಪ್ತಃ...—

ಆಪೃಚ್ಛ್ಯ ಚ ತದಾ ರಾಮೋ ದಕ್ಷಿಣಾಶಾಲಯಂ ಮುನಿಮ್ । ಪ್ರಾಂಜಲಿರ್ವಿನಯೋಪೇತ ಇದಮಾಹ ವಚೋಽರ್ಥವತ್॥೧॥

---

ಸ್ಯಂ-ರಹಸ್ಯವಾಗಿ, (ಅಥವಾ ರಹಸ್ಯಂ-ಮರ್ಮಸ್ಥಾನಗಳಲ್ಲಿ,) ಪಿಶುನೋಯಥಾ-ರಂಧ್ರಾನ್ವೇಷಿಯಂತೆ, ಆಶು-ಜಾಗ್ರತೆಯಾಗಿ, ಬಿಭೇದ-ಭೇದಿಸಿದನು,ಭಿನ್ನಗಾತ್ರಃ-ಭಿನ್ನ-ಭೇದಿಸಲ್ಪಟ್ಟ, ಗಾತ್ರಃ-ದೇಹವುಳ್ಳ, ನಗಪ್ರಖ್ಯಃ-ಬೆಟ್ಟಕ್ಕೆಸಮಾನನಾದ, ರಾವಣಃ-ರಾವಣನು, ಭುವಿ-ನೆಲದಲ್ಲಿ, ಪತಿತಃ-ಬಿದ್ದನು ॥೬೭॥ ಅಥ-ಬಳಿಕ, ದೀರ್ಘೇಣಕಾಲೇನ-ಬಹುಕಾಲದಿಂದ, ಲಬ್ಧಸಂಜ್ಞಃ-ಹೊಂದಲ್ಪಟ್ಟ ಪ್ರಜ್ಞೆಯುಳ್ಳವನಾಗಿ, ರಾಕ್ಷಸಃ-ರಾಕ್ಷಸನಾದ, ಸಃ-ಆ ರಾವಣನು, ಹತೌಜಾಃ-ಹತ-ಹೊಡೆಯಲ್ಪಟ್ಟ, ಓಜಾಃ-ತೇಜಸ್ಸುಳ್ಳವನಾಗಿ, ಯತ್ರತು-ಯಲ್ಲಾದರೆ, ತೇಸಚಿವಾಃ-ಆ ಮಂತ್ರಿಗಳು, ಸ್ಥಿತಾಃ-ಇರುತ್ತಿದ್ದರೋ, (ತತ್ರ-ಅಲ್ಲಿಗೆ,) ಆಜಗಾಮ-ಬಂದನು ॥೬೮॥ ದಶಾನನಃ-ರಾವಣನು, ತೈಃ-ಆ ಮಂತ್ರಿಗಳಿಂದ, ಸಹಿತಏವ-ಕೂಡಿದವನಾಗಿ, ಲಂಕಾಂ-ಲಂಕೆಯಂ ಕುರಿತು, ಆಶು-ಜಾಗ್ರತೆಯಾಗಿ, ಜಗಾಮ-ತೆರಳಿದನು ॥೬೯॥ ರಾಘವಃ-ಶ್ರೀರಾಮನು, ಸರ್ವಂ-ಸಮಸ್ತವಾದ, ಏತದ್ವಚನಂ- ಏತತ್-ಈ ಅಗಸ್ತ್ಯಋಷಿಯ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಆಶ್ಚರ್ಯಮಿತಿ- ಆಶ್ಚರ್ಯವೆಂದು, ಪ್ರಾಹ-ಹೇಳಿದನು, ತತ್ರ-ಆ ಸಭೆಯಲ್ಲಿ, ರಾಮಸ್ಯ-ಶ್ರೀ ರಾಮನ-ಸಮೀಪತಃ-ಬಳಿಯಲ್ಲಿ, ಪೂಜ್ಯಮಾನಾಃ-ಪೂಜಿಸಲ್ಪಡುತ್ತಿರುವರಾಗಿ, ಸ್ಥಿತಾಃ-ಇರುತ್ತಿದ್ದರೋ, ತೇವಾನರಾಃ- ಆ ಕಪಿಗಳು, ರಾಕ್ಷಸೈಸ್ಸಹ-ರಾಕ್ಷಸರೊಡನೆ, ತತ್-ಆ ಅಗಸ್ತ್ಯ ವಚನವನ್ನು, ಆಶ್ಚರ್ಯಮಿತಿ-ಆಶ್ಚರ್ಯಕರವೆಂದು, ಪ್ರಾಹುಃ-ಹೇಳಿದರು ॥ ೭೦ ॥ ರಾಮಸ್ಯ-ಶ್ರೀ ರಾಮನ, ಪಾರ್ಶ್ವಸ್ಥಃ-ಪಾರ್ಶ್ವದಲ್ಲಿರುವ, ವಿಭೀಷಣಸ್ತು-ವಿಭೀಷಣನಾದರೆ, ವಾಕ್ಯಂ-ಮಾತನ್ನು, ಪುರಾತನಂ-ಪುರಾತನವಾದ, ವೃತ್ತಂ - ಚರಿತ್ರೆಯು, ಯತ್-ಯಾವದೋ, ಆಶ್ಚರ್ಯಂ-ಆಶ್ಚರ್ಯಕರವಾದ, ತತ್-ಆ ವೃತ್ತಾಂತವನ್ನು, ಅದ್ಯ-ಈಗ, ಸ್ಮಾರಿತಃ-ಜ್ಞಾಪಕಮಾಡಿಸಲ್ಪಟ್ಟವನು, ಅಸ್ಮಿ-ಆವೆನು, ಇತಿ-ಇಂತೆಂದು, ಅಬ್ರವೀತ್- ನುಡಿದನು ॥೭೧॥ ಅಥ-ಬಳಿಕ, ಅಗಸ್ತ್ಯಃ-ಅಗಸ್ತ್ಯಋಷಿಯು, ಹೇರಾಮ-ಎಲೈ ಶ್ರೀರಾಮನೆ,ತ್ವಯಾ-ನಿನ್ನಿಂದ, ಸರ್ವಂ-ಸಮಸ್ತವಾದ, ಏತತ್-ಈ ವೃತ್ತಾಂತವು, ಶ್ರುತಂ-ಕೇಳಲ್ಪಟ್ಟಿತೋ, ಇತಿ-ಇಂತೆಂದು, ಅಬ್ರವೀತ್-ನುಡಿದನು, ಹೇರಾಮ- ಎಲೈ ಶ್ರೀರಾಮನೆ, ವಯಂ-ನಾವುಗಳು, ದೃಷ್ಟ್ವಾಃ-ಕಾಣಲ್ಪಟ್ಟೆವು, ಸಭಾಜಿತಾಶ್ಚಾಪಿ-ಬಹುಮಾನಿಸಲೂಪಟ್ಟೆವು, ಯಾಸ್ಯಾಮಹೇ-ಹೋಗಿಬರುತ್ತೇವೆ, ಇತಿ-ಇಂತೆಂದು, ಅಬ್ರವೀತ್-ನುಡಿದನು, ರಮಯತಾಂ-ರಂಜನೆಮಾಡುವರಲ್ಲಿ, ವರಃ-ಶ್ರೇಷ್ಠನಾದ, ರಾಮಃ-ಶ್ರೀರಾಮನು, ತಸ್ಯ-ಆ ಅಗಸ್ತ್ಯನ-ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಅಪೃಚ್ಛಚ್ಚ-ಪ್ರಶ್ನೆಮಾಡಿದನು. ॥ ೭೨ ॥ (ಹೆಚ್ಚು ಪಾಠ ಶ್ಲೋಕಗಳು ಮುಗಿದವು.)

ತದಾ-ಆ ಕಾಲದಲ್ಲಿ, ರಾಮಃ-ಶ್ರೀರಾಮನು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ವಿನಯೋಪೇತಃ-ವಿನಯ-ನಮ್ರಭಾವದಿಂದ, ಉಪೇತಃ-ಕೂಡಿದವನಾಗಿ, ದಕ್ಷಿಣಾಶಾಲಯಂ-ದಕ್ಷಿಣದಿಕ್ಕೇ ಮನೆಯಾಗಿವುಳ್ಳ, ಮುನಿಂ-ಅಗಸ್ತ್ಯಮುನಿಯಂ ಕುರಿತು, ಅರ್ಥವತ್- ಅರ್ಥಯುಕ್ತವಾದ, ಇದಂವಚಃ-ಈ ಮಾತನ್ನು, ಆಹ-ಹೇಳಿದನು ॥ ೧ ॥ ವಾಲಿನಃ-ವಾಲಿಯ, ರಾವಣಸ್ಯ-ರಾವಣನ, ಏತದ್ಬಲಂವೈ-ಈ ಬಲವಾದರೇ, ಅತುಲಂ-ಸಮಾನವಾದದ್ದೇ

---

ನೇ ! ಪಾಪನಿಶ್ಚಯಮುಳ್ಳ ಆ ರಾವಣನು ಅತಿಕೋಪದಿಂದ ನೋಡಲ್ಪಡಲಿಲ್ಲ, ಆದಕಾರಣ ಅವನು ಭಸ್ಮೀಭೂತನಾಗಲಿಲ್ಲ ॥೬೬॥ ದೃಷ್ಟಿಪ್ರಸರಣಮಾತ್ರದಿಂದಲೇ ಆ ದಶಕಂಠನು ಭಿನ್ನಗಾತ್ರನಾಗಿ ನೆಲದಲ್ಲಿ ಬಿದ್ದು ಹೋಗಲೂ, ಆ ಮಹಾತ್ಮನು ರಂಧ್ರಾನ್ವೇಷಿಯ ತೆರದಿ ಮಾತುಗಳೆಂಬ ಬಾಣಗಳಿಂದ ಆ ರಾವಣನಂ ಮರ್ಮಸ್ಥಾನಗಳಲ್ಲಿ ಭೇದಿಸಿದನು ॥೬೭॥ ಈಪರಿಯಾಗಿ ದಶಕಂಧರನು ಬಹುಕಾಲ ಮೂರ್ಛಿತನಾಗಿ ಬಿದ್ದಿದ್ದು ಎಚ್ಚರಗೊಂಡು ಕಳೆಗುಂದಿದ ಕಾಂತಿಯುಳ್ಳವನಾಗಿ, ಮಂತ್ರಿಗಳ ಸಮೀಪಕ್ಕೆ ಬಂದು, ಅವರಿಂದೊಡಗೂಡಿ ಲಂಕಾಪುರವಂ ಪ್ರವೇಶಿಸಿದನೆಂದು ಅಗಸ್ತ್ಯಮಹಾಮುನಿಯು ನುಡಿಯಲೂ, ಅದಂಕೇಳಿ ರಘುನಂದನನು ಮತ್ತೂ ಆತನ ಸಮೀಪವರ್ತಿಗಳಾದ ವಾನರರೂ ರಾಕ್ಷಸರೂ ಸಹಾ ಪರಮಾನಂದಭರಿತರಾದೆವೆಂದು ಹೇಳಲು, ವಿಭೀಷಣನಿಂತೆಂದನು,—ಪೂರ್ವಕಾಲದಲ್ಲಿ ನಡೆದಿರುವ ಅತ್ಯಾಶ್ಚರ್ಯಕರವಾಗಿರ್ಪ ಈ ವೃತ್ತಾಂತವನ್ನಿಂದಿಗೆ ಕೇಳಿ ಜ್ಞಾಪಿಸಿಕೊಂಡೆನೆಂದು ನುಡಿಯಲು, ಅಗಸ್ತ್ಯಮಹಾಮುನಿಯಿಂತೆಂದನು ಎಲೈ ಶ್ರೀರಾಮನೇ! ಈ ಸರ್ವವು ನಿನ್ನಿಂದ ಕೇಳಲ್ಪಟ್ಟಿತು, ನಾಂಪೋಗಿ ಬರುವೆನೆಂದು ನುಡಿಯಲೂ, ಶ್ರೀ ರಾಮನದಂ ಕೇಳೀ ॥೭೨॥ (—...ಅಧಿಕಪಾಠಸಮಾಪ್ತಃ...—) ಆಸಮಯದಲ್ಲಿ ಅಂಜಲಿಬದ್ಧನಾಗಿಯೂ ವಿನಯಯುಕ್ತನಾಗಿಯೂ ಇರುವನಾಗಿ, ಅಗಸ್ತ್ಯಮಹಾಮುನಿಯಂ ಕುರಿತು, ಅರ್ಥಯುಕ್ತವಾದ ಈ ವಾಕ್ಯವಂನುಡಿದನು ॥೧॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅತುಲಂಬಲಮೇತದ್ವೈವಾಲಿನೋರಾವಣಸ್ಯಚ । ನತ್ವೇತೌಹನುಮದ್ವೀರ್ಯ್ಯೈಸ್ಸಮಾವಿತಿಮತಿರ್ಮಮ ॥೧॥ ಶೌರ್ಯಂ ದಾಕ್ಷ್ಯಂಬಲಂಧೈರ್ಯ್ಯಂಪ್ರಾಜ್ಞತಾನಯಸಾಧನಮ್ । ವಿಕ್ರಮಶ್ಚ ಪ್ರತಾಪಶ್ಚ ಹನೂಮತಿಕೃತಾಲಯಾಃ ॥೨॥ ದೃಷ್ಟ್ವೋದಧಿಂವಿಷೀದಂತೀಂತದ್ವೈಷಕಪಿವಾಹಿನೀಮ್ । ಸಮಾಶ್ವಾಸ್ಯಕಪೀನ್ಭೂಯೋಯೋಜನಾನಾಂಶತಂಪ್ಲುತಃ ॥೩॥ ಧರ್ಷಯಿತ್ವಾಪುರೀಂಲಂಕಾಂರಾವಣಾಂತಃಪುರೇತದಾ । ದೃಷ್ಟ್ವಾಸಂಭಾಷಿತಾಚಾಪಿಸೀತಾವಿಶ್ವಾಸಿತಾತಥಾ ॥೪॥ ಸೇನಾಗ್ರಗಾಮಂತ್ರಿಸುತಾಃಕಿಂಕರಾರಾವಣಾತ್ಮಜಃ । ಏತೇಹನುಮತಾತತ್ರಹ್ಯೇಕೇನವಿನಿಪಾತಿತಾಃ ॥೫॥ ಭೂಯೋಬಂಧಾದ್ವಿಮುಕ್ತೇನ ಸಂಭಾಷಿತ್ವಾದಶಾನನಮ್ । ಲಂಕಾಭಸ್ಮೀಕೃತಾನೇನಪಾವಕೇನೇವಮೇದಿನೀ ॥೬॥ ನಕಾಲಸ್ಯನಶಕ್ರಸ್ಯನವಿಷ್ಣೋರ್ಧನದಸ್ಯವಾ । ಕರ್ಮಾಣಿತಾನಿಶ್ರೂಯಂತೇಯಾನಿಯುದ್ಧೇಹನೂಮತಃ ॥೭॥ ಏತಸ್ಯಬಾಹುವೀರ್ಯ್ಯೇನಲಂಕಾಸೀತಾಥಲಕ್ಷ್ಮಣಃ । ಪ್ರಾಪ್ತೋಮಯಾಜಯಶ್ಚೈವರಾಜ್ಯಂಮಿತ್ರಾಣಿಬಾಂಧವಾಃ ॥೮॥ ಹನೂಮಾನ್ಯದಿಮೇನಸ್ಯಾದ್ವಾನರಾಧಿಪತೇ

---

ಸರಿ, ಕಿಂತು-ಮತ್ತೇನೆಂದರೆ, ಏತೌ-ಇವರಿಬ್ಬರೂನು, ಹನುಮದ್ವೀರ್ಯ್ಯೈಃ-ಹನುಮಂತನ ಪರಾಕ್ರಮಗಳಿಂದ, ನಸಮೌ-ಸಮರಲ್ಲಾ-ಇತಿ- ಇಂತೆಂದು, ಮಮ-ನನಿಗೆ, ಮತಿಃ-ಮತಿಯು ॥೧॥ ಶೌರ್ಯಂ-ಶೂರತ್ವವೂ, ದಾಕ್ಷ್ಯಂ-ಸಾಮರ್ಥ್ಯವೂ, ಬಲಂ-ಶಕ್ತಿಯೂ, ಧೈರ್ಯಂ-ಧೈರ್ಯವೂ, ಪ್ರಾಜ್ಞತಾ-ಪಾಂಡಿತ್ಯವೂ, ನಯಸಾಧನಂ-ನೀತಿಸಾಧನೆಯು, ವಿಕ್ರಮಶ್ಚ-ನಡತೆಯೂನೂ, ಪ್ರತಾಪಶ್ಚ-ಪರಾಕ್ರಮವೂನೂ, ಹನೂಮತಿ- ಆಂಜನೇಯನಲ್ಲಿ, ಕೃತಾಲಯಾಃ-ಮಾಡಲ್ಪಟ್ಟ ಆಶ್ರಯಗಳುಳ್ಳವುಗಳಾಗಿವೆ ॥೨॥ ಏಷಕಪಿಃ-ಈ ವಾನರನು, ಉದಧಿಂ-ಸಮುದ್ರವನ್ನು, ದೃಷ್ಟ್ವಾ-ಕಂಡು, ತದಾ-ಆ ಕಾಲದಲ್ಲಿ, ವಿಷೀದಂತೀಂ-ದುಃಖಪಡುತಿರುವ, ಕಪಿವಾಹಿನೀಂ-ವಾನರಸೈನ್ಯವನ್ನು, ಸಮಾಶ್ವಾಸ್ಯ-ಸಮಾಧಾನಗೊಳಿಸಿ, ಭೂಯಃ-ಮತ್ತು, ಯೋಜನಾನಾಂ-ಗಾವುದಗಳ, ಶತಂ-ನೂರನ್ನು, ಪ್ಲುತಃ-ದಾಂಟಿದನು ॥೩॥ ಲಂಕಾಂಪುರೀಂ-ಲಂಕಾಪಟ್ಟಣಾಭಿಮಾನಿ ದೇವತೆಯನ್ನು, ಧರ್ಷಯಿತ್ವಾ- ತಿರಸ್ಕರಿಸಿ, ತದಾ-ಆ ಕಾಲದಲ್ಲಿ, ರಾವಣಾಂತಃಪುರೇ, ರಾವಣ-ರಾವಣನ, ಅಂತಃಪುರೇ, ಪುರಮಧ್ಯದಲ್ಲಿ, ಸೀತಾ-ಸೀತಾದೇವಿಯು, ದೃಷ್ಟ್ವಾ - ನೋಡಲ್ಪಟ್ಟಳು, ಸಂಭಾಷಿತಾಚಾಪಿ-ಮಾತಾಡಿಸಲ್ಪಟ್ಟಳು, ತಥಾ-ಹಾಗೆಯೇ, ವಿಶ್ವಾಸಿತಾ-ವಿಶ್ವಾಸವಂ ಹೊಂದಿಸಲ್ಪಟ್ಟಳು ॥೪॥ ತತ್ರ- ಆ ಲಂಕಾಪಟ್ಟಣದಲ್ಲಿ, ಏಕೇನಹನುಮತಾ-ಒಬ್ಬನಾದ ಆಂಜನೇಯನಿಂದ, ಸೇನಾಗ್ರಗಾಃ-ಸೇನೆಯ ಮುಂಭಾಗದಲ್ಲಿ ಹೋಗುತಿರುವ, ಮಂತ್ರಿಸುತಾಃ- ಮಂತ್ರಿಗಳ ಮಕ್ಕಳು, ಕಿಂಕರಾಃ-ಕಿಂಕರರು, ರಾವಣಾತ್ಮಜಃ-ರಾವಣನ ಮಗನಾದ ಅಕ್ಷನು, ಏತೇ-ಇವರೆಲ್ಲರು, ವಿನಿಪಾತಿತಾಃ- ಸಂಹಾರ ಮಾಡಲ್ಪಟ್ಟರು ॥೫॥ ಭೂಯಃ-ಮತ್ತು, ಬಂಧಾತ್- ಇಂದ್ರಜಿತ್ತಿನ ಬಂಧದಡಕೆಯಿಂದ, ವಿಮುಕ್ತೇನ-ಬಿಡಲ್ಪಟ್ಟ, ಅನೇನ - ಆಂಜನೇಯನಿಂದ ದಶಾನನಂ - ರಾವಣನನ್ನು ಕುರಿತು, ಸಂಭಾಷಿತ್ವಾ- ಮಾತನಾಡಿಸಿ, ಪಾವಕೇನ - ಅಗ್ನಿಯಿಂದ, ಮೇದಿನೀವ - ಭೂಮಿಯಂತೆ, ಲಂಕಾ-ಲಂಕಾಪಟ್ಟಣವು, ಭಸ್ಮೀಕೃತಾ-ಭಸ್ಮೀಭೂತವಾಗಿ ಮಾಡಲ್ಪಟ್ಟಿತು ॥೬॥ ಯುದ್ಧೇ-ಕಾಳಗದಲ್ಲಿ, ಹನೂಮತಃ- ಆಂಜನೇಯನ, ಯಾನಿಕರ್ಮಾಣಿ-ಯಾವ ಕರ್ಮಗಳು, ಶ್ರೂಯಂತೇ - ಕೇಳಲ್ಪಟ್ಟವೋ, ತಾನಿ-ಆ ಕರ್ಮಗಳು, ಕಾಲಸ್ಯ - ಯಮನಿಗೆ, ನ-ಇಲ್ಲಾ, ಶಕ್ರಸ್ಯ-ದೇವೇಂದ್ರನಿಗೆ, ನ-ಇಲ್ಲಾ, ವಿಷ್ಣೋಃ- ಶ್ರೀಮಹಾ ವಿಷ್ಣುವಿಗೆ, ನ-ಇಲ್ಲಾ, ಧನದಸ್ಯವಾ-ಕುಬೇರನಿಗಾಗಲೀ, ನ-ಇಲ್ಲಾ ॥೭॥ ಏತಸ್ಯ-ಈ ಆಂಜನೇಯನ, ಬಾಹುವೀರ್ಯ್ಯೇಣ-ಭುಜಪರಾಕ್ರಮದಿಂದ, ಮಯಾ-ನನ್ನಿಂದ, ಲಂಕಾ-ಲಂಕಾಪಟ್ಟಣವು, ಪ್ರಾಪ್ತಾ-ಹೊಂದಲ್ಪಟ್ಟಿತು, ಸೀತಾ-ಸೀತಾದೇವಿಯು, ಪ್ರಾಪ್ತಾ-ಹೊಂದಲ್ಪಟ್ಟಳು, ಅಥ-ಬಳಿಕ, ಲಕ್ಷ್ಮಣಃ-ಲಕ್ಷ್ಮಣನು, ಪ್ರಾಪ್ತಃ-ಹೊಂದಲ್ಪಟ್ಟನು, ಜಯಶ್ಚೈವ-ಜಯವೂಕೂಡಾ,ಪ್ರಾಪ್ತಃ-ಹೊಂದಲ್ಪಟ್ಟಿತು, ರಾಜ್ಯಂಚ-ರಾಜ್ಯವೂನು, ಮಿತ್ರಾಣಿಚ-ಸ್ನೇಹಿತರೂನು, ಬಾಂಧವಾಶ್ಚ-ಬಂಧುಗಳೂನು, ಪ್ರಾಪ್ತಾಃ-ಹೊಂದಲ್ಪಟ್ಟರು ॥೮॥ ವಾನರಾಧಿಪತೇಃ -ಸುಗ್ರೀವನಿಗೆ, ಸಖಾ-ಸ್ನೇಹಿತನಾದ, ಹನೂಮಾನ್-ಹನುಮಂತನು, ಮೇ-ಎನಗೆ, ನಸ್ಯಾದ್ಯದಿ-ಇಲ್ಲದೇಹೋದರೆ, ಜಾನಕ್ಯಾಃ-ಸೀತಾದೇವಿಯ, ಪ್ರವೃತ್ತಿಮಪಿ- ವಾರ್ತೆಯನ್ನೂ ಕೂಡ, ವೇತ್ತುಂ-ತಿಳಿ

---

ಎಲೈ ಮಹಾಮುನಿಯೇ! ವಾಲಿ ರಾವಣರ ಬಲವು ಅಸದೃಶವಾದದ್ದು, ಆದರೂ ಇವರೀರ್ವರು ಹನುಮಂತನಿಗೆ ಸರಿಯಾದವರಲ್ಲವೆಂದು ನನಿಗೆ ತೋರುತ್ತೆ ॥೧॥ ಯಾಕೆಂದರೆ ಶೌರ್ಯವು, ಸಾಮರ್ಥ್ಯವು, ಶಕ್ತಿಯು, ಧೈರ್ಯವು, ಪಾಂಡಿತ್ಯವು, ನೀತಿಸಾಧನತೆಯು, ವಿಕ್ರಮವು, ಪ್ರತಾಪವು, ಇವೆಲ್ಲ ಆ ವಾಯುನಂದನನಲ್ಲಿ ನೆಲಗೊಂಡಿರುವವು ॥೨॥ (ಅದುಹ್ಯಾಗೆಂದರೆ) ಸಮುದ್ರವಂಕಂಡು ದುಃಖಿಸುತ್ತಿರುವ ಕಪಿ ಸೈನ್ಯವನ್ನೆಲ್ಲಾ ಸಮಾಧಾನಗೊಳಿಸಿ, ನೂರುಯೋಜನಗಳಂದಾಂಟಿ, ಲಂಕಾಪುರವಂ ಹೆದರಿಸಿ, ಆ ರಾವಣಾಂತಃಪುರದಲ್ಲಿ ಸೀತೆಯಂ ಕಂಡು, ಸಂಭಾಷಣೆಯಂಗೈದು, ಸಮಾಧಾನಮಾಡಿ, ತಾನೋರ್ವನೇ ಪಂಚಸೇನಾನಾಯಕರನ್ನೂ, ಮಂತ್ರಿಪುತ್ರರನ್ನೂ, ಎಂಭತ್ತುಸಾವಿರ ಕಿಂಕರರನ್ನೂ, ಅಕ್ಷಕುಮಾರನನ್ನೂ ಸಹ ರಣರಂಗದಲ್ಲಿ ಕ್ಷೀಣಜೀವಿತವುಳ್ಳವರನ್ನಾಗಿ ಮಾಡಿ,ತಾನು ಬ್ರಹ್ಮಾಸ್ತ್ರಕ್ಕೆ ಸಿಲುಕಿ ಪುನಹಾ ವಿಮುಕ್ತನಾಗಿ, ರಾವಣನೊಡನೆ ಮಾತಾಡಿ,ಲಂಕೆಯಂ ಸುಟ್ಟು ಬಂದನಲ್ಲಾ ॥೬॥ ಸಂಗರದಲ್ಲಿ ಹನುಮಂತನು ಯಾವ ಕಾರ್ಯಗಳಂ ಮಾಡಿದನೋ,ಅಂಥಾ ಕೃತ್ಯಗಳಂ ಯಮೇಂದ್ರ ವಿಷ್ಣು ಕುಬೇರರೂ ಸಹಾ ಮಾಡಿರುವರೆಂದು ನಾಂ ಕೇಳಲಿಲ್ಲಾ, ॥೭॥ ಈತನ ಭುಜಪರಾಕ್ರಮದಿಂದ, ಲಂಕಾಪುರಿಯೂ,ಜನಕನಂದಿನಿಯೂ,ಲಕ್ಷ್ಮಣನೂ, ಜಯವೂ,ರಾಜ್ಯವೂ,ಮಿತ್ರರೂ, ಬಂಧುಗಳೂ ಸಹಾ ನನಿಗೆ ಲಭಿಸಿದರು ॥೮॥ ವಾನರೇಂದ್ರನ ಸಖನಾದ ಹನುಮಂತನಿಲ್ಲದಿದ್ದರೆ,ಜಾನಕಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ಸದಾ। ಪ್ರವೃತ್ತಿಮಪಿಕೋವೇತ್ತುಂಜಾನಕ್ಯಾಶ್ಶಕ್ತಿಮಾನ್ ಭವೇತ್॥೧೦॥ ಕಿಮರ್ಥಂವಾಲ್ಯನೇನೈವಸುಗ್ರೀವಪ್ರಿಯಕಾಮ್ಯಯಾ । ತದಾವೈರೇಸಮುತ್ಪನ್ನೇನದಗ್ಧೋವೀರುಧೋಯಥಾ ॥೧೧॥ ನಾಯಂವಿದಿತವಾನ್ ಮನ್ಯೇಹನೂಮಾನಾತ್ಮನೋಬಲಮ್। ಯದ್ದೃಷ್ಟವಾನ್ ಜೀವಿತೇಷ್ಟಂಕ್ಲಿಶ್ಯಂತಂವಾನರಾಧಿಪಮ್ ॥೧೨॥ ಏತನ್ಮೇಭಗವನ್ ಸರ್ವಂಹನೂಮತಿಮಹಾಮತೌ। ವಿಸ್ತರೇಣಯಥಾತತ್ವಂಕಥಯಾಮರಪೂಜಿತ॥೧೩॥ ರಾಘವಸ್ಯವಚಃಶ್ರುತ್ವಾಹೇತುಯುಕ್ತಮೃಷಿಸ್ತದಾ। ಹನೂಮತಸ್ಸಮಕ್ಷಂತಮಿದಂವಚನಮಬ್ರವೀತ್ ॥೧೪॥ ಸತ್ಯಮೇತದ್ರಘುಶ್ರೇಷ್ಠ ಯದ್ಬ್ರವೀಷಿಹನೂಮತಃ । ನಬಲೇವಿದ್ಯತೇತುಲ್ಯೋನಗತೌನಮತೌಪರಃ ॥೧೫॥ ಅಮೋಘಶಾಪೈಶ್ಶಾಪಸ್ತುದತ್ತೋಸ್ಯಋಷಿಭಿಃಪುರಾ । ನವೇತ್ತಾಹಿಬಲಂಯೇನಬಲೀಸನ್ನರಿಮರ್ದನಃ ॥೧೬॥ ಬಾಲ್ಯೇಪ್ಯೇತೇನಯತ್ಕರ್ಮಕೃತಂರಾಮಮಹಾಬಲ । ತನ್ನವರ್ಣಯಿತುಂಶಕ್ಯಮಿತಿತೂಷ್ಣೀಂಮಯಾಸ್ಯತೇ॥೧೭॥ ಯದಿವಾಸ್ತಿತ್ವಭಿಪ್ರಾಯಸ್ತಚ್ಛ್ರೋತುಂತವರಾಘವ। ಸಮಾಧಾಯಮತಿಂರಾಮನಿಶಾಮಯವದಾಮ್ಯಹಮ್॥

---

ಕೊಳ್ಳುವದಕ್ಕೋಸ್ಕರ, ಕಃ-ಯಾವನು, ಶಕ್ತಿಮಾನ್-ಸಾಮರ್ಥ್ಯವುಳ್ಳವನು, ಭವೇತ್-ಆಗುವನು ॥೧೦॥ ವಾಲೀ-ವಾಲಿಯು, ಸುಗ್ರೀವಪ್ರಿಯಕಾಮ್ಯಯಾ-ಸುಗ್ರೀವನಿಗೆ ಇಷ್ಟಮಾಡುವ ಇಚ್ಛೆಯಿಂದ, ಅನೇನೈವ-ಈ ಆಂಜನೇಯನಿಂದಲೆ, ವೈರೆ -ದ್ವೇಷವು, ಸಮುತ್ಪನ್ನೇಸತಿ-ಹುಟ್ಟುತ್ತಿರಲಾಗಿ, ತದಾ-ಆಕಾಲದಲ್ಲಿ, ಕಿಮರ್ಥಂ-ಯಾವನಿಮಿತ್ತವಾಗಿ, ವೀರುಧೋಯಥಾ-ಲತೆಗಳಂತೆ, ನದಗ್ಧಃ-ದಗ್ಧಮಾಡಲ್ಪಡಲಿಲ್ಲವೋ ॥೧೧॥ ಅಯಂ-ಈ, ಹನೂಮಾನ್-ಹನುಮಂತನು, ಆತ್ಮನಃ-ತನ್ನ, ಬಲಂ-ಬಲವನ್ನು, ನವಿದಿತವಾನ್-ತಿಳಿದವನಲ್ಲಾ, ಇತಿಮನ್ಯೇ-ಈಪ್ರಕಾರ ಎಣಿಸುತ್ತೇನೆ, ಯತ್-ಯಾವಕಾರಣದಿಂದ, ಜೀವಿತೇಷ್ಟಂ-ಪ್ರಾಣಕ್ಕಿಂತಲೂ ಇಷ್ಟನಾದ, ಕ್ಲಿಶ್ಯಂತಂ-ಕ್ಲೇಶಪಡುತಿರುವ, ವಾನರಾಧಿಪಂ-ವಾನರಾಧಿಪತಿಯಾದ ಸುಗ್ರೀವನನ್ನು, ದೃಷ್ಟವಾನ್-ನೋಡುತ್ತಿದ್ದನೊ ॥೧೨॥ ಹೇಭಗವನ್-ಎಲೈ ಷಡ್ಗುಣೈಶ್ವರ್ಯ ಸಂಪನ್ನನೇ, ಹೇ ಅಮರಪೂಜಿತ- ಎಲೈ ದೇವತೆಗಳಿಂದ ಪೂಜ್ಯನೆ, ಮಹಾಮತೌ-ಮಹಾಬುದ್ಧಿಶಾಲಿಯಾದ, ಹನೂಮತಿ-ಹನುಮದ್ವಿಷಯದಲ್ಲಿ, ವಿಸ್ತರೇಣ-ವಿಸ್ತಾರದಿಂದ,ಏತತ್ಸರ್ವಂ-ಈ ಸಕಲ ವೃತ್ತಾಂತವನ್ನು, ಯಥಾತತ್ವಂ-ವಸ್ತುಸ್ಥಿತಿಯಿದ್ದಂತೆ, ಕಥಯ-ಹೇಳು ॥೧೩ ॥ ರಾಘವಸ್ಯ-ಶ್ರೀರಾಮನ, ಹೇತುಯುಕ್ತಂ-ಹೇತುಗರ್ಭಿತವಾದ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ತದಾ-ಆ ಕಾಲದಲ್ಲಿ,ಋಷಿಃ-ಅಗಸ್ತ್ಯಋಷಿಯು, ಹನೂಮತಃ-ಹನುಮಂತನ, ಸಮಕ್ಷಂ-ಎದುರಾಗಿ, ತಂ-ಆ ಶ್ರೀರಾಮನಂಕುರಿತು, ಇದಂವಚನಂ-ಈ ಮಾತನ್ನು, ಅಬ್ರವೀತ್-ನುಡಿದು ॥೧೪॥ ಹೇರಘುಶ್ರೇಷ್ಠ-ಎಲೈರಘುಶ್ರೇಷ್ಠನೇ, ಯದ್ಬ್ರವೀಷಿ-ಯಾವಮಾತಂ ನುಡಿದಿಯೊ, ಏತತ್-ಈ ಮಾತು, ಸತ್ಯಂ-ಸತ್ಯವೇ, ಹನುಮತಃ-ಆಂಜನೇಯನಿಗೆ,ಬಲೆ-ಬಲದಲ್ಲಿಯೂ,ತುಲ್ಯಃ-ಸಮಾನನು, ನವಿದ್ಯತೆ-ಇಲ್ಲಾ, ಗತೌ-ಗಮನದಲ್ಲಿ, ನ-ಇಲ್ಲಾ, ಮತೌ-ಬುದ್ಧಿಯಲ್ಲಿ, ಪರಃ-ಮತ್ತೊಬ್ಬನು, ತುಲ್ಯಃ-ಸಮಾನನಾದವನು, ನ-ಇಲ್ಲಾ॥೧೫॥ ಪುರಾ-ಪೂರ್ವದಲ್ಲಿ, ಅಮೋಘಶಾಪೈಃ-ವ್ಯರ್ಥವಾಗದಿರುವ ಶಾಪವಚನಗಳುಳ್ಳ, ಋಷಿಭಿಃ-ಋಷಿಗಳಿಂದ, ಅಸ್ಯ-ಈ ಹನುಮಂತನಿಗೆ, ಶಾಪಃ-ಶಾಪವು, ದತ್ತಃ-ಕೊಡಲ್ಪಟ್ಟಿತು, ಯೇನ-ಯಾವಶಾಪದಿಂದಲೆ, ಬಲೀಸನ್-ಬಲಿಷ್ಠನಾದಾಗ್ಯೂ, ಅರಿಮರ್ದನಃ-ಶತೃಸಂಹಾರಕನಾದಾಗ್ಯೂ, ಬಲಂ-ಬಲವನ್ನು, ನವೇತ್ತಾಹಿ- ತಿಳಿದವನಲ್ಲಷ್ಟೆ ॥೧೬॥ ಹೆರಾಮ-ಎಲೈ ಶ್ರೀರಾಮನೆ, ಹೇಮಹಾಬಲ-ಎಲೈ ಮಹಾಬಲಿಷ್ಠನೆ, ಏತೇನ-ಈ ಆಂಜನೇಯನಿಂದ, ಬಾಲ್ಯೆಪಿ-ಬಾಲ್ಯದಲ್ಲಿಯೆ, ಯತ್ಕರ್ಮ-ಯಾವ ವ್ಯಾಪಾರವು, ಕೃತಂ-ಮಾಡಲ್ಪಟ್ಟಿತೋ, ತತ್-ಆ ಕರ್ಮವು, ವರ್ಣಯಿತುಂ-ವರ್ಣಿಸುವದಕ್ಕೋಸ್ಕರ, ನಶಕ್ಯಮಿತಿ-ಶಕ್ಯವಲ್ಲವೆಂದು, ಮಯಾ-ನನ್ನಿಂದ, ತೂಷ್ಣೀಂ-ತೂಷ್ಣೀಂಭಾವವಾಗಿ, ಆಸ್ಯತೆ-ಇರಲ್ಪಟ್ಟಿದೆ ॥೧೭ ॥ ಕಿಂತು-ಮತ್ತೇನಂದರೆ, ಹೆ ರಾಘವ-ಎಲೈ ಶ್ರೀರಾಮನೆ, ತತ್-ಅದನ್ನು, ಶ್ರೊ

---

ಯ ವಾರ್ತೆಯನ್ನಾದರೂ ತಿಳಿಯುವದಕ್ಕೆ ಯಾರು ಶಕ್ತನು ॥೧೦॥ ವಾಲಿ ಸುಗ್ರೀವರೀರ್ವರಿಗೆ ವೈರವು ಪುಟ್ಟಲೂ, ಈ ಹನುಮಂತನು ಸುಗ್ರೀವನಿಗೆ ಪ್ರಿಯವಂ ಮಾಡಬೇಕೆಂಬಿಚ್ಛೆಯಿಂದ, ಆ ವಾಲಿಯನ್ನು ಬಳ್ಳಿಗಳಂ ಸುಡುವಂತೆ ಯಾಕೆ ಸುಡಲಿಲ್ಲವೋ॥೧೧॥ಈ ವಾಯುನಂದನನು ತನ್ನ ಪ್ರಾಣಕ್ಕಿಂತಲೂ ಪ್ರೀತಿಪಾತ್ರನಾದ ಮತ್ತೂ ಕ್ಲೇಶಪಡುತಿರುವ ವಾನರಾಧಿಪನಂ ಕಂಡರೂ ಯಾವಕಾರಣದಿಂ ತೂಷ್ಣೀಂಭೂತನಾಗಿದ್ದನೋ ?ಆ ಕಾರಣದಿಂದ, ತನ್ನ ಬಲವನ್ನರಿತವನಲ್ಲಾ ಎಂದೆಣಿಸುತ್ತೇನೆ!॥೧೨॥ದೇವತೆಗಳಿಂದಲೂ ಕೂಡಾ ಪೂಜಿಸಲ್ಪಡುತ್ತಿರುವ ಎಲೈ ಷಡ್ಗುಣೈಶ್ವರ್ಯಸಂಪನ್ನನೆ, ಮಹಾ ಮತಿವಂತನಾದ ಈ ಹನುಮಂತನ ವಿಷಯದಲ್ಲಿ ವಿಸ್ತಾರವಾಗಿ ಈ ವೃತ್ತಾಂತವನ್ನೆಲ್ಲಾ ವಸ್ತುಸ್ಥಿತಿಯಿದ್ದಂತೆ ಹೇಳಬೇಕೆಂದಿಚ್ಛಿಸುತ್ತೆನೆಂದು ದಶರಥನಂದನನು ನುಡಿಯಲೂ, ಹೇತುಯುಕ್ತವಾದ ಆ ವಾಕ್ಯವಂ ಕೇಳಿ, ಅಗಸ್ತ್ಯ ಮಹಾಮುನಿಯು ಹನುಮಂತನ ಸಮಕ್ಷಮದಲ್ಲಿ ಈ ವಚನವಂ ಹೇಳಲೊಸಗಿದನು ॥೧೪॥ ಎಲೈ ರಘುಶ್ರೇಷ್ಠನೆ! ನೀನು ವಾಯುನಂದನನ ವಿಷಯವಾಗಿ ಹೇಳಿದೆಲ್ಲ ಖರೆ, ಬಲದಲ್ಲಿಯೂ ಗಮನದಲ್ಲಿಯೂ ಕೂಡಾ ಈತನಿಗೆ ಸದೃಶನಾದ ಪುರುಷನೇ ಇಲ್ಲಾ ॥೧೫॥ಈತನು ಪೂರ್ವಕಾಲದಲ್ಲಿ ಅಮೋಘವಾದ ಶಾಪವಚನಗಳುಳ್ಳ ಮಹರ್ಷಿಗಳಿಂದ ಈ ಹನುಮಂತನು ಶಪಿಸಲ್ಪಟ್ಟನು, ಶತೃನಾಶಕನಾಗಿಯೂ ಬಲವಂತನಾಗಿಯೂ ಇರುವನಾದರೂ ಆ ಶಾಪದಿಂದ ತನ್ನ ಶಕ್ತಿಯನ್ನರಿಯದೇ ಇರುತ್ತಾನಷ್ಟೆ ॥೧೬॥ ಎಲೈ ಮಹಾಭುಜಪರಾಕ್ರಮಿಯಾದ ಶ್ರೀರಾಮನೆ! ಬಾಲ್ಯದಲ್ಲಿಯೆ ಈ ಹನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸೂರ್ಯದತ್ತವರಶ್ರೀಮಾನ್ ಸುಮೇರುರ್ನಾಮಪರ್ವತಃ । ಯತ್ರರಾಜ್ಯಂಪ್ರಶಾಸ್ತ್ಯಸ್ಯ ಕೇಸರೀನಾಮವೈ ಪಿತಾ ॥೧೯॥ ತಸ್ಯ ಭಾರ್ಯಾಬಭೂವೇಷ್ಟಾಹ್ಯಂಜನೇತಿಪ್ರತಿಶ್ರುತಾ । ಜನಯಾಮಾಸತಸ್ಯಾಂವೈ ವಾಯುರಾತ್ಮಜಮುತ್ತಮಮ್ ॥೨೦॥ ಶಾಲಿಶೂಕನಿಭಾಭಾಸಂಪ್ರಸೂತೇಮಂದರೇಂಜನಾ । ಫಲಾನ್ಯಾಹರ್ತುಕಾಮಾವೈನಿಷ್ಕ್ರಾಂತಾಗಹನೇಚರಾ ॥ ೨೧ ॥ ಏಷಮಾತುರ್ವಿಯೋಗಾಚ್ಚ ಕ್ಷುಧಯಾಚಭೃಶಾರ್ದಿತಃ । ರುರೋದಶಿಶುರತ್ಯರ್ಥಂಶಿಶುಶ್ಶರವಣೇಯಥಾ ॥೨೨॥ ತದೋದ್ಯಂತಂವಿವಸ್ವಂತಂಜಪಾಪುಷ್ಪೋತ್ಕರೋಪಮಮ್ । ದದರ್ಶಫಲಲೋಭಾಚ್ಚಹ್ಯುತ್ಪಪಾತರವಿಂಪ್ರತಿ ॥೨೩॥ ಬಾಲಾರ್ಕಾಭಿಮುಖೋಬಾಲೋಬಾಲಾರ್ಕಇವಮೂರ್ತಿಮಾನ್। ಗೃಹೀತುಕಾಮೋಬಾಲಾರ್ಕಂಪ್ಲವತೇಂಬರಮಧ್ಯಗಃ ॥೨೪॥ ಏತಸ್ಮಿನ್ ಪ್ಲವಮಾನೇತುಶಿಶುಭಾವೇಹನೂಮತಿ। ದೇವದಾನವಸಿದ್ಧಾನಾಂವಿಸ್ಮಯಸ್ಸುಮಹಾನಭೂತ್ ॥೨೫॥ ನಾಪ್ಯೇವಂವೇಗವಾನ್

---

ತುಂ–ಕೇಳುವದಕ್ಕೋಸ್ಕರ, ಅಭಿಪ್ರಾಯಃ–ತಾತ್ಪರ್ಯವು, ಅಸ್ತಿನಾಯದಿ–ಇದ್ದದ್ದೇಆದರೆ, ಹೇರಾಮ–ಎಲೈ ಶ್ರೀರಾಮನೆ, ಮತಿಂ–ಬುದ್ಧಿಯನ್ನು, ಸಮಾಧಾಯ–ಸರಿಮಾಡಿಕೊಂಡು, ನಿಶಾಮಯ–ಕೇಳು, ಅಹಂ–ನಾನು, ವದಾಮಿ–ಹೇಳುತ್ತೇನೆ ॥೧೮॥ ಸೂರ್ಯದತ್ತವರಃ–ಸೂರ್ಯ–ಸೂರ್ಯನಿಂದ, ದತ್ತ–ಕೊಡಲ್ಪಟ್ಟ, ವರಃ–ವರವುಳ್ಳ, ಶ್ರೀಮಾನ್–ಸಂಪದ್ಯುಕ್ತಮಾದ, ಸುಮೇರುರ್ನಾಮ–ಸುಮೇರುವೆಂದು ಪ್ರಸಿದ್ಧವಾದ,ಪರ್ವತಃ–ಬೆಟ್ಟವು, ಅಸ್ತಿ–ಇಧೇ,ಯತ್ರ–ಯಾವ ಸುಮೇರುಪರ್ವತದಲ್ಲಿ, ಅಸ್ಯ–ಈ ಹನುಮಂತನ, ಪಿತಾ–ತಂದೆಯಾದ,ಕೇಸರೀನಾಮ–ಕೇಸರೀಎಂದು ಪ್ರಸಿದ್ಧನಾದ ವಾನರನು, ರಾಜ್ಯಂ–ರಾಜ್ಯವನ್ನು, ಪ್ರಶಾಸ್ತಿವೈ–ಆಳುತಿದ್ದನಷ್ಟೆ ॥೧೯॥ ತಸ್ಯ–ಆ ಕೇಸರಿಗೆ, ಇಷ್ಟಾ – ಇಷ್ಟಳಾದ, ಅಂಜನೇತಿ–ಅಂಜನಾ ಎಂದು, ಪ್ರತಿಶ್ರುತಾ–ಪ್ರಸಿದ್ಧಳಾದ,ಭಾರ್ಯಾ–ಹೆಂಡತಿಯು, ಬಭೂವ–ಆದಳು, ತಸ್ಯಾಂ–ಆ ಅಂಜನಾದೇವಿಯಲ್ಲಿ, ವಾಯುಃ–ವಾಯುವು, ಉತ್ತಮಂ–ಉತ್ತಮನಾದ,ಆತ್ಮಜಂ–ಕುಮಾರನನ್ನು, ಜನಯಾಮಾಸ–ಹುಟ್ಟಿಸಿದನು ॥೨೦॥ ಅಂಜನಾ– ಅಂಜನಾದೇವಿಯು, ಗಹನೇ–ಅರಣ್ಯದಲ್ಲಿ, ಚರಾ–ಸಂಚಾರಶೀಲಳಾದ, – ಶಾಲಿಶೂಕನಿಭಾಭಾಸಂ–ನೆಲ್ಲು ಮುಳ್ಳಿಗೆ ಸಮಾನಮಾದ ಕಾಂತಿಯುಳ್ಳ ಈ ಅಂಜನೇಯನನ್ನು, ಮಂದರೇ– ಮಂದರಪರ್ವತದಲ್ಲಿ, ಪ್ರಸೂತೇ – ಹೆತ್ತಳು, ಫಲಾನಿ–ಫಲಗಳನ್ನು, ಆಹರ್ತುಕಾಮಾ–ತೆಕ್ಕೊಂಡುಬರುವದಕ್ಕೆ ಇಚ್ಛೆಯುಳ್ಳವಳಾಗಿ, ನಿಷ್ಕ್ರಾಂತಾವೈ–ಹೊರಟುಹೋದಳು ॥೨೧॥ ಏಷಃ– ಶಿಶುಃ–ಈ ಶಿಶುವು, ಮಾತುಃ–ತಾಯಿಯ, ವಿಯೋಗಾಚ್ಚ–ವಿಯೋಗದ ದೆಸೆಯಿಂದಲೂ, ಕ್ಷುಧಯಾಚ–ಹಸುವಿನಿಂದಲೂ,ಭೃಶಾರ್ದಿತಃ–ಬಹಳ ಪೀಡಿತನಾಗಿ, ಶರವಣೇ–ಜಂಬುಹುಲ್ಲಿನ ವನದಲ್ಲಿ, ಶಿಶುರ್ಯಥಾ–ಕುಮಾರಸ್ವಾಮಿಯಂತೆ, ಅತ್ಯರ್ಥಂ–ಬಹಳವಾಗಿ, ರುರೋದ–ಅಳುತಿದ್ದನು ॥ ೨೨ ॥ ತದಾ–ಆಕಾಲದಲ್ಲಿ, ಉದ್ಯಂತಂ–ಹುಟ್ಟುತಿರುವ, ಜಪಾಪುಷ್ಪೋತ್ಕರೋಪಮಂ–ಜಪಾಪುಷ್ಪ–ಕೆಂಪು ದಾಶಿವಾಳದ ಪುಷ್ಪಗಳ, ಉತ್ಕರ–ಸಮೂಹಕ್ಕೆ, ಉಪಮಂ– ಸಮಾನಮಾದ, ವಿವಸ್ವಂತಂ–ಸೂರ್ಯನನ್ನು, ದದರ್ಶ–ಕಂಡನು, ರವಿಂಪ್ರತಿ–ಸೂರ್ಯನಂ ಕುರಿತು, ಫಲಲೋಭಾಚ್ಚ–ಫಲವೆಂಬ ಭ್ರಾಂತಿಯಿಂದ, ಉತ್ಪಪಾತಹಿ–ಮೇಲಕ್ಕೆ ಹಾರಿದನಷ್ಟೆ ॥ ೨೩॥ ಬಾಲಾರ್ಕಾಭಿಮುಖಃ–ಬಾಲ ಸೂರ್ಯನಿಗೆ ಅಭಿಮುಖನಾದ, ಬಾಲಾರ್ಕಇವ – ಸೂರ್ಯನಂತೆ, ಮೂರ್ತಿಮಾನ್–ಶರೀರಧಾರಿಯಾದ, ಬಾಲಃ–ಈ ಹುಡುಗನು, ಬಾಲಾರ್ಕಂ–ಹುಟ್ಟಿದ ಸೂರ್ಯನನ್ನು,ಗೃಹೀತುಕಾಮಃ–ಹಿಡಿದುಕೊಳ್ಳ ಲಿಚ್ಛೆಯುಳ್ಳವನಾಗಿ, ಅಂಬರಮಧ್ಯಗಃ–ಅಂತರಿಕ್ಷ ಮಧ್ಯಂಗತನಾಗಿ, ಪ್ಲವತೇ–ನ್ಯಾತಾಡುತ್ತಿದ್ದನು ॥೨೪॥ ಶಿಶುಭಾವೇ–ಬಾಲ ಭಾವವುಳ್ಳ, ಏತಸ್ಮಿನ್ಹನೂಮತಿ–ಈ ಅಂಜನೇಯನು, ಪ್ಲವಮಾನೇಸತಿ–ಲಂಘಿಸುತ್ತಿರುವಂಥಾವನಾಗು ತಿರಲೀಕಾಗಿ, ದೇವದಾನವಸಿದ್ಧಾನಾಂ–ದೇವದಾನವ ಸಿದ್ಧರಿಗೆ,ಸುಮಹಾನ್– ಬಹಳವಾದ, ವಿಸ್ಮಯಃ–

---

ಮಂತನಿಂದ ಯಾವಕೃತ್ಯವು ನಡೆಯಿಸಲ್ಪಟ್ಟಿತೋ, ಅದು ಬಣ್ಣಿಸಲಸಾಧ್ಯಮಾಗಿರುವದಾದ ಕಾರಣತೂಷ್ಣೀಂಭೂತನಾಗಿಧೇನೆ ॥೧೭॥ ಎಲೈ ರಘುನಂದನನೆ ! ಅದಂ ಶ್ರವಣಿಸಬೇಕೆಂದು ನಿನಿಗಭಿಪ್ರಾಯಮಿದ್ದರೆ, ಸಾವಧಾನಚಿತ್ತನಾಗಿ ಕೇಳು ಹೇಳ್ವೆನು ॥೧೮॥ (ಅದೆಂತೆನೆ) ಸೂರ್ಯನಿಂದ ದತ್ತವರಮುಳ್ಳ ಸುಮೇರುವೆಂಬ ಒಂದಾನೊಂದು ಪರ್ವತೋತ್ತಮ ವಿರುವದು, ಅಲ್ಲಿ ಈತನ ತಂದೆಯಾದ ಕೇಸರಿಯೆಂಬ ವಾನರನು ರಾಜ್ಯವನ್ನಾಳುತ್ತಿಧಾನೆ ॥೧೯॥ ಆತನಸತಿಯು ಅಂಜನೆಯೆಂದು ಪ್ರಖ್ಯಾತಳಾಗಿರುವಳು, ಆಕೆಯೊಳು ವಾಯುವು ಈ ಉತ್ತಮನಾದ ಕುಮಾರನಂ ಪುಟ್ಟಿಸಲೂ, ಆ ಅಂಜನಾದೇವಿಯು ಮಂದರಗಿರಿಯಲ್ಲಿ ನೆಲ್ಲಿನಮುಳ್ಳಿನಂತೆ ಸ್ವಲ್ಪ ಕೆಂಪಾಗಿ ಕಂಗೊಳಿಸುತ್ತಿರುವ ದೇಹಕಾಂತಿಯುಳ್ಳ ಈತನಂ ಹೆತ್ತು, ಫಲಗಳಂತರಬೇಕೆಂದು ಕಾಡಿನಲ್ಲಿ ಹೊರಟು ಹೋದಳು ॥೨೧॥ ಈ ಬಾಲಕನು ಮಾತೆಯ ಅಗಲಿಕೆಯಿಂದಲೂ ಹಶಿವಿನಿಂದಲೂ ಸಹಾ ಹೆದರಿದವನಾಗಿ, ಶರವಣವೆಂಬ ಕ್ಷೇತ್ರದಲ್ಲಿ ಹುಟ್ಟಿದಶಿಶುವಾದ ಕುಮಾರಸ್ವಾಮಿಯ ತೆರದಿ ಅಳುತಿದ್ದನು ॥೨೨॥ ಆಸಮಯದಲ್ಲಿ ಉದಯಿಸುತ್ತಿರುವ ಮತ್ತೂ ಕೆಂದಾಸಿವಾಳದಸಮೂಹದೋಪಾದಿಯುಳ್ಳಿರ್ಪ ಸೂರ್ಯನಂಕಂಡು, ಫಲವೆಂಬಭ್ರಾಂತಿಯಿಂದ ಆ ಸೂರ್ಯನಂ ಕುರಿತು ಮೇಲಕ್ಕೆ ಹಾರಿಗ್ರಹಿಸಲಿಚ್ಛೆಯುಳ್ಳವನಾಗಿರುವ ಕಾರಣ ಸೂರ್ಯಾಭಿಮುಖನಾದ,ಮತ್ತೂ ಬಾಲಸೂರ್ಯನಂತೆ ಕಂಗೊಳಿಸುತ್ತಿರುವ ದೇಹಕಾಂತಿಯುಳ್ಳ ಈಬಾಲಕನು, ಗಗನಮಧ್ಯಂಗತನಾಗಿ ಜೋಲಾಡುತಿದ್ದನು ॥೨೪॥ ಶಿಶುವಾಗಿರುವ ಈ ಆಂಜನೆಯನು ಲಂಘಿಸಧವನಾಗುತ್ತಿರಲೀಕಾಗಿ, ದೇವದಾನವ, ಸಿದ್ಧರಿಗೆ ಮಹಾ ವಿಸ್ಮಯ ಮುಂಟಾಯಿತು ॥೨೫॥ (ಅದೆಂತೆನೆ) ಹಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನ್ವಾಯುರ್ಗರುಡೋವಾಮನಸ್ತಥಾ । ಯಥಾಯಂವಾಯುಪುತ್ರಸ್ತು ಕ್ರಮತೇಂಬರಮುತ್ತಮಮ್ ॥೧೬॥ ಯದಿಶಿಶೋರ್ಭಿಷ್ಕೀಶೋರಸ್ಯಈದೃಶೌಗತಿವಿಕ್ರಮೌ । ಯೌವನಂಬಲಮಾಸಾದ್ಯಕಥಂವೇಗೋಭವಿಷ್ಯತಿ॥೧೭॥ ತಮನುಪ್ಲವತೇವಾಯುಃ ಪ್ಲವಂತಂಪುತ್ರಮಾತ್ಮನಃ । ಸೂರ್ಯದಾಹಭಯಾದ್ರಕ್ಷಂಸ್ತುಷಾರಚಯಶೀತಲಃ ॥೧೮॥ ಬಹುಯೋಜನಸಾಹಸ್ರಂಕ್ರಾಮತ್ಯೇಷಗತೋಂಬರಮ್ । ಪಿತುರ್ಬಲಾಚ್ಚ ವೀರ್ಯಾಚ್ಚ ಭಾಸ್ಕರಾಭ್ಯಾಶಮಾಗತಃ ॥೧೯॥ ಶಿಶುರೇಷತ್ವದೋಷಜ್ಞ ಇತಿಮತ್ವಾದಿನೇಶ್ವರಃ । ಕಾರ್ಯಂಚಾತ್ರಸಮಾಯತ್ತಮಿತ್ಯೇವಂನದದಾಹಸಃ ॥೨೦॥ ಯಮೇವದಿವಸಂಹ್ಯೇಷಗ್ರಹೀತುಂಭಾಸ್ಕರಂಪ್ಲುತಃ । ತಮೇವದಿವಸಂರಾಹುಃಜಿಘೃಕ್ಷತಿದಿವಾಕರಮ್ ॥೨೧॥ ಅನೇನಚಪರಾಮೃಷ್ಟೇರಾಮಸೂರ್ಯರಥೋಪರಿ । ಅಪಕ್ರಾಂತಸ್ತತಸ್ತ್ರಸ್ತೋರಾಹುಶ್ಚಂದ್ರಾರ್ಕಮರ್ದನಃ ॥೨೨॥ ಸಇಂದ್ರಭವನಂಗತ್ವಾಸರೋಷಂಸಿಂಹಿಕಾಸುತಃ । ಅಬ್ರವೀದ್ಭ್ರುಕುಟಿಂಕೃತ್ವಾದೇವಂದೇವಗಣೈರ್ವೃತಮ್ ॥೨೩॥ ಬುಭುಕ್ಷಾಪನಯಂದತ್ವಾಚಂದ್ರಾರ್ಕೌಮಮವಾಸವ ।

---

ಆಶ್ಚರ್ಯವು, ಅಭೂತ್–ಆಯಿತು, ವಾಯುಪುತ್ರಃ–ವಾಯುಪುತ್ರನಾದ, ಅಯಂತು–ಈ ಶಿಶುವಾದರೆ, ಉತ್ತಮಂ–ಉನ್ನತವಾದ, ಅಂಬರಂ–ಅಂತರಿಕ್ಷವನ್ನು, ಯಥಾ–ಹ್ಯಾಗೆ, ಕ್ರಮತೆ–ಆಕ್ರಮಿಸಿದನೊ, ಎವಂ–ಈ ಪರಿಯಾಗಿ, ವಾಯುರಪಿ–ವಾಯುವೂಕೂಡ, ವೇಗವಾನ್–ವೇಗವಂತನು, ನ–ಅಲ್ಲ, ಗರುಡಃ– ಗರುಡನು, ತಥಾ–ಹಾಗೆ,ವಾಮನಃ–ವಾಮನಮೂರ್ತಿಯು, ಎವಂ–ವೇಗವಾನ್– ಇಂಥಾ ವೇಗವುಳ್ಳವನು, ನ–ಅಲ್ಲ, ॥೧೬॥ ಶಿಶೋಃ–ಬಾಲ್ಯಾವಸ್ಥೆಯಂಹೊಂದಿದ, ಅಸ್ಯ–ಈ ವಾಯುಪುತ್ರನಿಗೆ, ಗತಿವಿಕ್ರಮೌ–ಗತಿಪರಾಕ್ರಮಗಳಾದರೆ ಈದೃಶೌಯದಿ–ಇಂಥಾವುಗಳಾದರೆ,ಯೌವನಂ–ಯವ್ವನಾವಸ್ಥೆಯನ್ನು, ಬಲಂ – ದೇಹತ್ರಾಣೆಯನ್ನು, ಆಸಾದ್ಯ – ಹೊಂದಿ, ಕಥಂವೇಗಃ–ಯಂಥಾವೇಗವುಳ್ಳವನು, ಭವಿಷ್ಯತಿ–ಆಗುವನೊ ॥ ೧೭ ॥ ವಾಯುಃ–ವಾಯುವು, ಪ್ಲವಂತಂ – ಹಾರುತಿರುವ, ಆತ್ಮನಃ–ತನ್ನ, ತಂಪುತ್ರಂ – ಆ ಮಗನನ್ನು, ಸೂರ್ಯದಾಹಭಯಾತ್ – ಸೂರ್ಯತಾಪದಿಂದ ಹುಟ್ಟಿದ ಭಯದವೇಳೆಯಿಂದ, ರಕ್ಷನ್ – ಸಂರಕ್ಷಿಸುತಿರುವನಾಗಿ, ತುಷಾರಚಯಶೀತಲಃ – ಮಂಜಿನರಾಶಿಯಂತೆ ಶೈತ್ಯಮುಳ್ಳವನಾಗಿ, ಅನುಪ್ಲವತೆ–ಅನುಸರಿಸಿ ಹಾರಿಬಂದನು ॥೧೮ ॥ ಎಷಃ–ಈಹುಡುಗನು, ಬಹುಯೋಜನಸಾಹಸ್ರಂ– ಅನೇಕಸಹಸ್ರ ಯೋಜನಗಳುಳ್ಳ, ಅಂಬರಂ – ಅಂತರಿಕ್ಷವನ್ನು, ಗತಃ–ಹೊಂದಿದವನಾಗಿ, ಕ್ರಾಮತಿ–ಆಕ್ರಮಿಸಿದನು, ಪಿತುಃ–ತಂದೆಯ, ಬಲಾಚ್ಚ – ಸಾಮರ್ಥ್ಯದಿಂದಲೂ, ವೀರ್ಯಾಚ್ಚ – ಸ್ವಸಾಮರ್ಥ್ಯದಿಂದಲೂ. ಭಾಸ್ಕರಾಭ್ಯಾಶಂ – ಸೂರ್ಯನ ಸಮೀಪವಂ ಕುರಿತು, ಆಗತಃ ಬಂದನು ॥ ೧೯ ॥ ಎಷಃ – ಇವನು, ಶಿಶುಃ–ಬಾಲನು, ಅದೋಷಜ್ಞಃ – ದೋಷವಂ ತಿಳಿದವನಲ್ಲ, ಇತಿ–ಇತೆಂದು, ಮತ್ವಾ–ತಿಳಿದು, ದಿನೇಶ್ವರಃ–ದಿನನಾಥನಾದ, ಸಃ–ಸೂರ್ಯನು, ಅತ್ರ–ಈ ಹುಡುಗನಲ್ಲಿ, ಕಾರ್ಯಂಚ–ಕರ್ತವ್ಯವೂಕೂಡ,ಸಮಾಯುಕ್ತಂ–ಬಹಳವಾಗಿಧೆಯೆಂದು, ನದದಾಹ–ದಹಿಸಲಿಲ್ಲ ॥ ೨೦ ॥ ಏಷಃ–ಈ ಶಿಶುವು, ಯಮೇವದಿವಸಂ–ಯಾವದಿವಸದಲ್ಲಿ, ಭಾಸ್ಕರಂ–ಸೂರ್ಯನನ್ನು, ಗೃಹೀತುಂ–ಹಿಡಿಯುವದಕ್ಕೋಸ್ಕರ, ಪ್ಲುತಃ–ಹಾರಿದನೋ, ತಮೇವದಿವಸಂ–ಆದಿವಸದಲ್ಲಿ, ರಾಹುಃ–ರಾಹುವು,ದಿವಾಕರಂ–ಸೂರ್ಯನಂನು, ಜಿಘೃಕ್ಷತಿ–ಗ್ರಹಿಸಲಿಚ್ಛೆಯುಳ್ಳವನಾದನು॥ ೨೧ ॥ ಹೇರಾಮ–ಎಲೈಶ್ರೀರಾಮನೆ, ಅನೇನ–ಈಶಿಶುವಿನಿಂದ, ಸೂರ್ಯರಥೋಪರಿ–ಸೂರ್ಯನರಥದಊರ್ಧ್ವಭಾಗವು, ಪರಾಮೃಷ್ಟೇಸತಿ–ಸ್ಪರ್ಶಿಸಲ್ಪಟ್ಟಂಥಾದ್ದಾಗುತಿರಲಿಕ್ಕಾಗಿ, ಅತಃ–ಈ ಶಿಶುವಿನದೆಸೆಯಿಂದ,ತ್ರಸ್ತಃ–ಭಯಗೊಂಡವನಾದ, ಚಂದ್ರಾರ್ಕಮರ್ದನಃ–ಚಂದ್ರಸೂರ್ಯರಂನುಂಗುತಿರುವ, ರಾಹುಃ–ರಾಹುವು, ಅಪಕ್ರಾಂತಃ – ಹೊರಟುಹೋದನು, ॥೨೨॥ ಸಿಂಹಿಕಾಸುತಃ–ಸಿಂಹಿಕಾದೇವಿಗೆ ಮಗನಾದ, ಸಃ–ಆರಾಹುವು, ಇಂದ್ರಭವನಂ – ದೇವೇಂದ್ರನಮನೆಯಂ ಕುರಿತು, ಗತ್ವಾ–ಹೋಗಿ, ದೇವಗಣೈಃ–ದೇವತಾತಂಡಗಳಿಂದ, ವೃತಂ–ಪರಿವೃತನಾದ, ದೇವಂ–ದೇವೇಂದ್ರನಂಕುರಿತು, ಭ್ರುಕುಟಿಂ–ಕಣ್ಣುಹುಬ್ಬುಗಳ ವಕ್ರತೆಯನ್ನು, ಕೃತ್ವಾ–ಮಾಡಿ, ಸರೋಷಂ–ರೋಷದಿಂ ದೊಡಗೂಡಿದಂತೆ, ಅಬ್ರವೀತ್–ನುಡಿದನು, ॥೨೩॥

---

ಹಾ ಈ ವಾಯುನಂದನನು ಗಗನದಲ್ಲಿ ಪೋಗುವಂತೆ, ಕಡುವೇಗವಾಗಿ ಗರುಡನು, ಮನಸ್ಸು, ವಾಯುವೂ ಸಹಾ ಹೋಗಲಾರರು ॥೧೬॥ ಬಾಲಕನಾದ ಈ ವಾಯುಪುತ್ರನಗತಿ ಪರಾಕ್ರಮಂಗಳು ಹೀಗಿರುವಾಗ, ಯೌವನಬಲವಂ ಹೊಂದಿ ಯಂಥಾ ವೇಗಮುಳ್ಳವನಾಗುವನೋ ಎಂಬದಾಗಿ ಆಶ್ಚರ್ಯಪಡುತಿದ್ದರು ॥೧೭॥ ಈಪರಿಯಾಗಿ ಲಂಘಿಸುತಿರುವ ತನ್ನ ಕುಮಾರನನ್ನು ವಾಯುವು, ಸೂರ್ಯನು ಸುಡುವನೆಂಬ ಭೀತಿಯಿಂದ ಮಂಜಿನಂತೆ ಥಂಡಿಯಾಗಿರುವನಾಗಿ, ರಕ್ಷಿಸುತ್ತಾ ಅನುಸರಿಸಿ ಬರುತಿದ್ದನು ॥೧೮॥ ಈ ಬಾಲಕನು ತಂದೆಯ ಬಲದಿಂದಲೂ ಸ್ವಸಾಮರ್ಥ್ಯದಿಂದಲೂ ಸಹಾ, ಅನೇಕ ಸಹಸ್ರಯೋಜನಗಳುಳ್ಳ ಅಂಬರವಂದಾಂಟಿ, ಸೂರ್ಯಸಮೀಪದಲ್ಲಿ ಬಂದನು ॥೧೯॥ ಆದಿನನಾಥನೂ ಸಹಾ, ಇವನು ಶಿಶುವು ದೋಷವನ್ನರಿತವನಲ್ಲಾ, ಮತ್ತೂ ಇವನಿಂದ ಮಹತ್ಕಾರ್ಯಮುಂಟಾಗುವದು, ಎಂಬದಾಗಿ ತಿಳಿದುಕೊಂಡು ಇವನಂ ಸುಡಲಿಲ್ಲಾ ॥೨೦॥ ಯಾವದಿವಸದಲ್ಲಿ ಈ ಹುಡುಗನು ಸೂರ್ಯನಂ ಹಿಡಿಯಬೇಕೆಂದು ಮೇಲಕ್ಕೆ ಹಾರಿ ಬಂದನೋ, ಆದೇದಿನದಲ್ಲಿಯೇ ರಾಹುವು ದಿವಾಕರನಂ ಗ್ರಹಿಸಲಿಚ್ಛೆಯುಳ್ಳವನಾಗಿದ್ದನು ॥೨೧॥ ಎಲೈ ಶ್ರೀರಾಮನೆ! ಈ ಬಾಲಕನಿಂದ ಸೂರ್ಯರಥದ ಉಪರಿಭಾಗವು ಸ್ಪರ್ಶಿಸಲ್ಪಡಲೂ,ಸೂರ್ಯಚಂದ್ರರಂ ನುಂಗುತ್ತಿರುವ ರಾಹುವು ಈ ಮಗುವಿಗೆ ಹೆದರಿ ಹಿಂದಕ್ಕೆ ಹೊರಟು ಕಡುಕೋಪಮುಳ್ಳವನಾಗಿ ಇಂದ್ರನ ಮಂದಿರವಂ ಹೊಕ್ಕು, ದೇವಗಣ ಪರಿವೃತನಾದ ದೇವೇಂದ್ರನಂ ಕುರಿತಿಂತೆಂದನು ॥೨೩॥ ಎಲೈ ವಾಸವನೆ! ಸೂರ್ಯಚಂದ್ರರನ್ನೆನಗೆ ಭುಜಿಸೆಂದು ಬಿಟ್ಟುಕೊ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಿಮಿದಂತತ್ತ್ವಯಾಕಾಲೇದತ್ತಮನ್ಯಸ್ಯವೃತ್ರಹನ್ ॥೩೪॥ ಅದ್ಯಾಹಂಪರ್ವಕಾಲೇತುಜಿಘೃಕ್ಷುಸ್ಸೂರ್ಯಮಾಗತಃ । ಅಥಾನ್ಯೋರಾಹುರಾಗತ್ಯಜಗ್ರಾಹಸಹಸಾರವಿಮ್ ॥೩೫॥ ಸರಾಹೋರ್ವಚನಂಶ್ರುತ್ವಾವಾಸವಸ್ಸಂಭ್ರಮಾನ್ವಿತಃ । ಉತ್ಪಪಾತಾಸನಂಹಿತ್ವಾಉದ್ವಹನ್ ಕಾಂಚನಸ್ರಜಮ್ ॥೩೬॥ ತತಃಕೈಲಾಸಕೂಟಾಭಂಚತುರ್ದಂತಂಮದಸ್ರವಮ್ । ಶೃಂಗಾರಧಾರಿಣಂಪ್ರಾಂಶುಂಸ್ವರ್ಣಘಂಟಾಟ್ಟಹಾಸಿನಮ್ ॥೩೭॥ ಇಂದ್ರಃಕರೀಂದ್ರಮಾರುಹ್ಯರಾಹುಂಕೃತ್ವಾಪುರಸ್ಸರಮ್ । ಪ್ರಾಯಾದ್ಯತ್ರಾಭವತ್ಸೂರ್ಯಸ್ಸಹಾನೇನಹನೂಮತಾ ॥ ೩೮ ॥ ಅಥಾತಿರಭಸೇನಾಗಾದ್ರಾಹುರುತ್ಸೃಜ್ಯವಾಸವಮ್ । ಅನೇನಚಸವೈದೃಷ್ಟಆಧಾವನ್ ಶೈಲಕೂಟವತ್॥೩೯॥ ತತಸ್ಸೂರ್ಯಂಸಮುತ್ಸೃಜ್ಯರಾಹುಮೇನಮವೇಕ್ಷ್ಯಚ । ಉತ್ಪಪಾತಪುನರ್ವ್ಯೋಮಗ್ರಹೀತುಂಸಿಂಹಿಕಾಸುತಮ್॥೪೦॥ ಉತ್ಸೃಜ್ಯಾರ್ಕಂಹನೂಮಂತಮಾಧಾವಂತಂಪ್ಲವಂಗಮಮ್। ದೃಷ್ಟ್ವಾರಾಹುಃಪರಾವೃತ್ಯಮುಖಶೇಷೋಪಯಾದ್ದ್ರುತಮ್ ॥೪೧॥ ಇಂದ್ರಮಾಶಂಸಮಾನಸ್ತುತ್ರಾತಾರಂಸಿಂಹಿಕಾಸುತಃ।

---

ಹೇವೃತ್ರಹನ್–ಎಲೈವೃತ್ರಾಸುರ ಸಂಹಾರಕನೇ, ಹೇವಾಸವ–ಎಲೈದೇವೇಂದ್ರನೆ, ಚಂದ್ರಾರ್ಕೌ–ಚಂದ್ರಸೂರ್ಯರನ್ನು, ಬುಭುಕ್ಷಾಪನಯಂ–ಭಕ್ಷ್ಯವನ್ನಾಗಿ, ದತ್ವಾ–ಕೊಟ್ಟು, ತ್ವಯಾ–ನಿನ್ನಿಂದ, ಕಾಲೇ–ಸಮಯದಲ್ಲಿ, ತತ್–ಆ ಭಕ್ಷ್ಯವು, ಅನ್ಯಸ್ಯ–ಮತ್ತೊಬ್ಬನಿಗೆ,ದತ್ತಂ–ಕೊಡಲ್ಪಟ್ಟಿತು, ಇದಂ–ಇದು, ಕಿಂ–ಯೇನು, ॥ ೩೪ ॥ ಅದ್ಯ–ಈಗ, ಅಹಂ–ನಾನು, ಪರ್ವಕಾಲೇತು–ಪರ್ವಕಾಲದಲ್ಲಾದರೆ, ಸೂರ್ಯಂ–ರವಿಯನ್ನು, ಜಿಘೃಕ್ಷುಃ–ಗ್ರಹಿಸಲಿಚ್ಛೆಯುಳ್ಳವನಾಗಿ, ಸೂರ್ಯಂ–ಸೂರ್ಯನಂಕುರಿತು, ಆಗತಃ–ಬಂದೆನು, ಅಥ–ಬಳಿಕ, ಅನ್ಯೋರಾಹುಃ–ಮತ್ತೊಬ್ಬರಾಹುವು, ಸಹಸಾ–ಶೀಘ್ರವಾಗಿ, ರವಿಂ–ಸೂರ್ಯನಂನು ಆಸಾದ್ಯ–ಹೊಂದಿ, ಜಗ್ರಾಹ–ಗ್ರಹಿಸಿದನು ॥ ೩೫ ॥ ಸಃವಾಸವಃ –ಆ ದೇವೇಂದ್ರನು, ರಾಹೋಃ–ರಾಹುವಿನ, ವಚನಂ–ಮಾತನ್ನು, ಶ್ರುತ್ವಾ–ಕೇಳಿ, ಸಂಭ್ರಮಾನ್ವಿತಃ–ತ್ವರೆಯಿಂದ ಕೂಡಿದವನಾಗಿ, ಆಸನಂ–ಪೀಠವನ್ನು, ಹಿತ್ವಾ–ಬಿಟ್ಟು, ಕಾಂಚನಸ್ರಜಂ–ಭಂಗಾರದ ಮಾಲೆಯನ್ನು, ಉದ್ವಹನ್–ವಹಿಸಿದವನಾಗಿ, ಉತ್ಪಪಾತ –ಮ್ಯಾಲಕ್ಕೆಹಾರಿದನು॥೩೬॥ ತತಃ–ಬಳಿಕ, ಇಂದ್ರಃ–ಇಂದ್ರನು, ಕೈಲಾಸಕೂಟಾಭಂ–ಕೈಲಾಸ ಶಿಖರದಂತೆ, ಹೊಳೆಯುತ್ತಿರುವ, ಚತುರ್ದಂತಂ–ನಾಲ್ಕು ದಂತಗಳುಳ್ಳ, ಮದಸ್ರವಂ–ಮದೋದಕವಂ ಸುರಿಸುತಿರುವ, ಶೃಂಗಾರಧಾರಿಣಂ–ಅಲಂಕಾರವಂ ಧರಿಸಿರುವ,ಪ್ರಾಂಶುಂ–ಉದ್ದವಾದ, ಸ್ವರ್ಣಘಂಟಾಟ್ಟಹಾಸಿನಂ, ಸ್ವರ್ಣಘಂಟಾ–ಸ್ವರ್ಣವಿಕಾರವಾದ ಘಂಟೆಗಳಿಂದ, ಅಟ್ಟಹಾಸಿನಂ–ಧ್ವನಿಯುಳ್ಳ, ಕರೀಂದ್ರಂ–ಆನೆಯನ್ನು, ಆರುಹ್ಯ–ಹತ್ತಿ, ರಾಹುಂ–ರಾಹುವಿನನ್ನು, ಪುರಸ್ಸರಂ–ಅಗ್ರೇಸರನನ್ನಾಗಿ, ಕೃತ್ವಾ–ಮಾಡಿ, ಯತ್ರ–ಯಾವ ಸ್ಥಳದಲ್ಲಿ, ಸೂರ್ಯಃ–ಸೂರ್ಯನು, ಅನೇನಹನೂಮತಾಸಹ–ಈ ಹನುಮಂತನಿಂದೊಡಗೂಡಿ,ಅಭವತ್–ಇದ್ದಾನೋ,ತತ್ರ–ಆ ಸ್ಥಳದಲ್ಲಿ, ಪ್ರಾಯಾತ್–ಹೊರಟನು ॥೩೮॥ ಅಥ–ಬಳಿಕ, ರಾಹುಃ– ರಾಹುವು, ವಾಸವಂ–ದೇವೇಂದ್ರನನ್ನು, ಉತ್ಸೃಜ್ಯ–ಬಿಟ್ಟು, ಅತಿರಭಸೇನ–ಅತಿವೇಗದಿಂದ, ಆಗಾತ್–ಬಂದನು, ಅನೇನಚ–ಈ ಹನುಮಂತನಿಂದ, ಶೈಲಕೂಟವತ್–ಬೆಟ್ಟದ ಶಿಖರದಂತೆ, ಆಧಾವನ್–ಓಡಿಬರುತ್ತಿರುವ, ಸವೈ – ಆ ರಾಹುವಾದರೋ, ದೃಷ್ಟಃ–ಕಾಣಲ್ಪಟ್ಟನು ॥ ೩೯ ॥ ತತಃ–ಬಳಿಕ, ಸೂರ್ಯಂ –ಸೂರ್ಯನನ್ನು, ಉತ್ಸೃಜ್ಯ–ಬಿಟ್ಟು, ಏನಂರಾಹುಂ – ಈ ರಾಹುವಿನನ್ನು, ಅವೇಕ್ಷ್ಯಚ–ನೋಡಿಕೂಡ, ಸಿಂಹಿಕಾಸುತಂ– ಸಿಂಹಿಕಾ ಸಿಂಹಿಕಾದೇವಿಯ, ಸುತಂ–ಮಗನಾದ ರಾಹುವಿನನ್ನು, ಗೃಹೀತುಂ – ಹಿಡಿದುಕೊಳ್ಳುವದ ಕ್ಕೋಸ್ಕರ, ವ್ಯೋಮ – ಅಂತರಿಕ್ಷವಂ ಕುರಿತು, ಪುನಃ – ಮತ್ತು, ಉತ್ಪಪಾತ–ಹಾರಿದನು ॥ ೪೦ ॥ ಉತ್ಸೃಷ್ಟಾರ್ಕಂ – ಬಿಡಲ್ಪಟ್ಟ ಸೂರ್ಯನುಳ್ಳ, ಆಧಾವಂತಂ – ಓಡಿಬರುತಿರುವ, ಪ್ಲವಂಗಮಂ – ವಾನರನಾದ, ಹನೂಮಂತಂ–ಅಂಜನೇಯನನ್ನು, ಮುಖಶೇಷಃ – ಮುಖಮಾತ್ರವಶೇಷವಾಗುಳ್ಳ, ರಾಹುಃ–ರಾಹುವು, ದೃಷ್ಟ್ವಾ–ಕಂಡು, ದ್ರುತಂ– ಶೀಘ್ರವಾಗಿ, ಪರಾವೃತ್ಯ–ಹಿಂತಿರುಗಿ, ಅಪಯಾತ್–ಓಡಿಹೋದನು ॥೪೧॥ ಸಿಂಹಿಕಾಸುತಃ–ಸಿಂಹಿಕಾ ಪುತ್ರನಾದರಾಹುವು, ಇಂದ್ರಂ–ಇಂದ್ರನನ್ನು, ತ್ರಾತಾರಂ–ಸಂರಕ್ಷಕನನ್ನಾಗಿ, ಆಶಂಸಮಾನಃ–ಹೇಳುತಿರುವನಾಗಿ, ಇಂದ್ರೇಂದ್ರೇತಿಚ–ಇಂದ್ರ–ಇಂದ್ರ ಎಂದು, ಸಂತ್ರಾಸಾತ್– ಭಯದದೆಸೆಯಿಂದ, ಮುಹುರ್ಮುಹುಃ– ಭಾರಿ

---

ಟು , ಸಮಯದಲ್ಲಿ ಮತ್ತೊಬ್ಬನಿಗೆ ಕೊಟ್ಟವನಾದೆ, ಇದೇನು, ಈಪರ್ವಕಾಲದಲ್ಲಾದರೆ, ನಾನು ಸೂರ್ಯನಂಗ್ರಹಿಸಬೇಕೆಂದು ಬಂದೆನು, ಇಷ್ಟರಲ್ಲಿ ಮತ್ತೊಬ್ಬ ರಾಹುವು ತ್ವರಿತವಾಗಿ ಬಂದು ಸೂರ್ಯನಂ ಪಿಡಿದನೆಂದು, ದೇವೇಂದ್ರನು ರಾಹುವಿನ ಮಾತಂಕೇಳಿ, ಪೀಠವಂ ಬಿಟ್ಟು ತ್ವರಿತವಾಗೆದ್ದು, ಕೈಲಾಸಗಿರಿಯ ಶಿಖರದೋಪಾದಿಯಾಗಿ ಹೊಳೆಯುತಿರುವದಾಗಿಯೂ, ನಾಲ್ಕು ದಂತಗಳುಳ್ಳದ್ದಾಗಿಯೂ, ಮದೋದಕವಂ ಸ್ರವಿಸುತ್ತಿರುವದಾಗಿಯೂ, ಅಲಂಕಾರ ಧಾರಿಯೂ, ಸುವರ್ಣನಿರ್ಮಿತವಾದ ಘಂಟೆಗಳ ಧ್ವನಿಯುಳ್ಳದ್ದಾಗಿಯೂ ಇರುವ ಐರಾವತವನ್ನೇರಿ, ರಾಹುವಿನನ್ನ ಗ್ರೇಸರನನ್ನಾಗಿ ಮಾಡಿಕೊಂಡು, ಯಾವ ಎಡದಲ್ಲಿ ಸೂರ್ಯನು ಹನೂಮತ್ಸಹಿತನಾಗಿದ್ದನೋ, ಆ ಪ್ರದೇಶಕ್ಕೆ ಬಂದನು ॥ ಅನಂತರದಲ್ಲಿ ರಾಹುವು ದೇವೇಂದ್ರನಂ ತೊರದು ಅತಿರಭಸದಿಂದ, ಗಿರಿ ಶಿಖರದ ರೀತಿ ಓಡಿಬರುತಿರಲು, ಈ ಹನುಮಂತನಿಂದ ಆತನು ನೋಡಲ್ಪಟ್ಟನು ॥೩೯॥ ಆಬಳಿಕ ವಾಯುಪುತ್ರನು ರಾಹುವಿನಂಕಂಡು ಸೂರ್ಯನಂಬಿಟ್ಟು ಆತನಂ ಹಿಡಿಯಬೇಕೆಂದು ಪುನಃ ಅಂಬರದಲ್ಲಿ ಹಾರಿ ಬರುತಿದ್ದನು ॥೪೦॥ ಸೂರ್ಯನಂತೊರದು ಓಡಿ ಬರುತಿರುವ ಆ ಹನುಮಂತನಂ ಕಂಡು, ರಾಹುವು ತ್ವರಿತವಾಗಿ ಹಿಂತಿರಿಗಿ ಇಂದ್ರನಂಕುರಿತು ರಕ್ಷಿಸೆಂದು ಕೂಗುತ್ತಾ ಓಡಿಹೋದ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಇಂದ್ರಂದ್ರೆತಿಚಸಂತ್ರಾಸಾನ್ಮಾಮುರ್ಮುರಭಾಷತ ॥೪೨॥ ರಾಹೋರ್ವಿಕ್ರೋಶಮಾನಸ್ಯಪ್ರಾಗೇವಾಲಕ್ಷಿತಸ್ವರಃ। ಶ್ರುತ್ವೇಂದ್ರ ಅಹಮೇವಾಭೈಷೀರಹಮೇನಂನಿಹನ್ಮಿಚ॥೪೩॥ಐರಾವತಂತತೋದೃಷ್ಟ್ವಾ ಮಹಾಂತಮಿದಮಿತ್ಯಪಿ। ಫಲಂತಂಹಸ್ತಿರಾಜಾನಮಭಿದುದ್ರಾವಮಾರುತಿಃ ॥೪೪॥ ತಥಾಸ್ಯಧಾವತೋರೂಪಮೈರಾವತಜಿಘೃಕ್ಷಯಾ । ಮುಹೂರ್ತಮಭವದ್ಘೋರಮಿಂದ್ರಾಗ್ನ್ಯೋರಿವಭಾಸ್ಕರಮ್ ॥೪೫॥ ಏವಮಾಧಾವಮಾನಂತುನಾತಿಕ್ರುದ್ಧಶ್ಶಚೀಪತಿಃ । ಹಸ್ತಾಂತೇನಾತಿಮುಕ್ತೇನಕುಲಿಶೇನಾಭ್ಯತಾಡಯತ್ ॥೪೬॥ ತತೋಗಿರೌಪಪಾತೈಷಇಂದ್ರವಜ್ರಾಭಿತಾಡಿತಃ । ಪತಮಾನಸ್ಯಚೈತಸ್ಯವಾಮೋಹನುರಭಜ್ಯತ॥೪೭॥ ತಸ್ಮಿಂಸ್ತುಪತಿತೇಬಾಲೇವಜ್ರತಾಡನವಿಹ್ವಲೇ। ಚುಕ್ರೋಧೇಂದ್ರಾಯಪವನಃಪ್ರಜಾನಾಮಶಿವಾಯಚ॥೪೮॥ ಪ್ರಚಾರಂಸತುಸಂಗೃಹ್ಯಪ್ರಜಾಸ್ವಂತರ್ಗತಃಪ್ರಭುಃ। ಗುಹಾಂಪ್ರವಿಷ್ಟಸ್ಸ್ವಸುತಂಶಿಶುಮಾದಾಯಮಾರುತಃ॥೪೯॥ ವಿಣ್ಮೂತ್ರಾಶಯಮಾವೃತ್ಯಪ್ರಜಾನಾಂಪರಮಾರ್ತಿಕೃತ್ । ರುರೋಧಸರ್ವಭೂತಾನಿಯಥಾವರ್ಷಾಣಿವಾಸವಃ॥೫೦॥ ವಾಯು

---

ಭಾರಿಗೂ, ಅಭಾಷತ-ಹೇಳಿದನು ॥೪೨॥ಇಂದ್ರಃ-ಇಂದ್ರನು, ಪ್ರಾಗೇವ-ಮೊದಲೇ, ಅಲಕ್ಷಿತಸ್ವರಃ-ತಿಳಿಯಲ್ಪಡದಿರುವ ಸ್ವರಮುಳ್ಳವನಾಗಿ, ವಿಕ್ರೋಶಮಾನಸ್ಯ-ದೀನಧ್ವನಿಯಿಂದ ಕೂಗುತಿರುವ, ರಾಹೋಃ-ರಾಹುವಿನ, ಧ್ವನಿಂ-ಶಬ್ದವನ್ನು, ಶ್ರುತ್ವಾ-ಕೇಳಿ, ಅಹಮೇವ-ನಾನೇ, ಏನಂ-ಈ ಹನುಮಂತನನ್ನು, ನಿಹನ್ಮಿಚ-ಹೊಡೆಯುವೆನು, ಮಾಭೈಷೀಃ-ಭಯಬೀಳಬೇಡಾ ಎಂದು, ಆಹ-ನುಡಿದನು॥೪೩॥ ತತಃ-ಬಳಿಕ, ಮಾರುತಿಃ- ಆಂಜನೇಯನು, ಮಹಾಂತಂ-ದೊಡ್ಡದಾದ, ಐರಾವತಂ-ಐರಾವತವನ್ನು, ದೃಷ್ಟ್ವಾ-ಕಂಡು, ಇದಮಾಯಾತಮಿತಿ-ಇದೊಂದು ಬಂತು ಎಂದು, ಫಲಂತಂ – ಧ್ವನಿಮಾಡುತಿರುವ, ಹಸ್ತಿರಾಜಾನಂ-ಐರಾವತವಂ ಕುರಿತು, ಅಭಿದುದ್ರಾವ-ಓಡಿಬಂದನು ॥೪೪॥ತಥಾ-ಆ ಪರಿಯಾಗಿ, ಐರಾವತ ಜಿಘೃಕ್ಷಯಾ – ಐರಾವತವಂ ಹಿಡಿದುಕೊಳ್ಳಲಿಚ್ಛೆಯಿಂದ,ಧಾವತಃ-ಓಡಿಬರುತಿರುವ, ಅಸ್ಯ-ಈ ಆಂಜನೇಯನ,ಘೋರಂ-ಭಯಂಕರವಾದ,ರೂಪಂ-ರೂಪವು, ಇಂದ್ರಾಗ್ನ್ಯೋಃ-ಇಂದ್ರ ಅಗ್ನಿಗಳ, ರೂಪಮಿವ-ಪ್ರಕೃತಿಯಂತೆ, ಮುಹೂರ್ತಂ-ಮುಹೂರ್ತ ಕಾಲವು, ಭಾಸ್ವರಂ-ಹೊಳೆಯುತಿರುವದು, ಅಭವತ್- ಆಯಿತು ॥೪೫॥ ಏವಂ-ಈ ಪರಿಯಾಗಿ, ಆಧಾವಮಾನಂತು-ಓಡಿಬರುತಿರುವ ಹನುಮಂತನನ್ನಾದರೆ, ನಾತಿಕ್ರುದ್ಧಃ-ಶಾನೆ ಕೋಪವಿಲ್ಲದಿರುವನಾಗಿ, ಶಚೀಪತಿಃ-ದೇವೇಂದ್ರನು, ಹಸ್ತಾಂತೇನ-ಹಸ್ತಾಗ್ರದಿಂದ, ಅತಿಮುಕ್ತೇನ-ಬಿಡಲ್ಪಟ್ಟ, ಕುಲಿಶೇನ-ವಜ್ರಾಯುಧದಿಂದ, ಅಭ್ಯತಾಡಯತ್-ಹೊಡೆದನು ॥೪೬॥ ತತಃ-ಬಳಿಕ, ಇಂದ್ರವಜ್ರಾಭಿತಾಡಿತಃ-ಇಂದ್ರನ ವಜ್ರಾಯುಧದಿಂ ಹೊಡೆಯಲ್ಪಟ್ಟವನಾಗಿ, ಗಿರೌ-ಬೆಟ್ಟದಲ್ಲಿ,ಪಪಾತ-ಬಿದ್ದನು, ಪತಮಾನಸ್ಯ- ಬೀಳುತಿರುವ, ಏತಸ್ಯಚ-ಈ ಆಂಜನೇಯನ,ವಾಮಃ-ಎಡಗಡೆಯಾದ,ಹನುಃ-ಕೆನ್ನೆಯು,ಅಭಜ್ಯತ-ಮುರಿದುಹೋಯಿತು॥೪೭॥ತಸ್ಮಿನ್ ಬಾಲೇ-ಆ ಬಾಲನು,ವಜ್ರತಾಡನವಿಹ್ವಲೇ- ವಜ್ರಾಯುಧ ಪ್ರಹಾರದಿಂದ ವಿಹ್ವಲಚಿತ್ತನಾಗಿ, ಪತಿತೇಸತಿ-ಬಿದ್ದವನಾಗುತಿರಲಿಕಾಗಿ, ಪವನಃ-ವಾಯುವು, ಇಂದ್ರಾಯ – ದೇವೇಂದ್ರನಿಗೋಸ್ಕರ, ಪ್ರಜಾನಾಂ-ಪ್ರಜೆಗಳಿಗೆ, ಅಶಿವಾಯಚ-ಅನಿಷ್ಟಕ್ಕೋಸ್ಕರವು, ಚುಕ್ರೋಧ-ಕ್ರೋಧಮಾಡಿದನು ॥೪೮॥ ಪ್ರಜಾಸು-ಪ್ರಜೆಗಳಲ್ಲಿ, ಅಂತರ್ಗತಃ-ಅಂತರ್ಯಾಮಿಯಾದ, ಪ್ರಭುಃ-ಸ್ವಾಮಿಯಾದ, ಸಮಾರುತಸ್ತು-ಆ ವಾಯುವಾದರೆ, ಪ್ರಚಾರಂ-ಸಂಚಾರವನ್ನು. ಸಂಗೃಹ್ಯ – ಸಂಕ್ಷೇಪಿಸಿ, ಸ್ವಸುತಂ-ತನ್ನ ಮಗನಾದ, ಶಿಶುಂ-ಶಿಶುವಿನನ್ನು, ಆದಾಯ-ತೆಗದುಕೊಂಡು, ಗುಹಾಂ-ಬೆಟ್ಟದ ಗುಹೆಯನ್ನು,ಪ್ರವಿಷ್ಟಃ-ಹೊಕ್ಕನು॥೪೯॥ವಿಣ್ಮೂತ್ರಾಶಯಂ-ವಿಣ್ಮೂತ್ರಸ್ಥಾನಗಳನ್ನು, ಆವೃತ್ಯ-ತಡೆಮಾಡಿ, ಪ್ರಜಾನಾಂ-ಪ್ರಜಗಳಿಗೆ, ಪರಮಾರ್ತಿಕೃತ್-ಬಹಳಬಾಧೆಯನ್ನು ಮಾಡುವನಾಗಿ, ವರ್ಷಾಣಿ-ಮಳೆಗಳನ್ನು, ವಾಸವೋಯಥಾ-ದೇವೇಂದ್ರನಂತೆ, ಸರ್ವಭೂತಾನಿ-ಸಮಸ್ತಭೂತಗಳನ್ನು, ರುರೋಧ-ತಡೆಮಾಡಿದನು ॥೫೦॥ ಭೂತಾನಿ- ಭೂತಗ

---

ನು॥೪೨॥ಈಪರಿಯಾಗಿ ದೀನಧ್ವನಿಯುಳ್ಳಂತೆ ಕೂಗುತ್ತಿರುವ ರಾಹುವಿನ ಧ್ವನಿಯಂಕೇಳಿ, ದೇವೇಂದ್ರನು ನಾನಿವನಂ ಕೊಲ್ಲುವೆನು ಹೆದರಬ್ಯಾಡೆಂದು ಹೇಳುತ್ತಿರಲೂ, ಆ ವಾಯುನಂದನನು ಮಹಾ ದೊಡ್ಡದಾಗಿರುವ ಗಜೇಂದ್ರನಾದ ಐರಾವತವಂ ಕಂಡು ಅದಂ ಫಲವೆಂದು ತಿಳಿದುಕೊಂಡು ಓಡಿಬಂದನು ॥೪೪॥ ಆ ಮಹಾಗಜವಂ ಹಿಡಿಯಬೇಕೆಂದು ಆಪರಿಯಾಗಿ ಓಡಿಬರುತಿರುವ ಈ ಹನುಮಂತನ ರೂಪವು ಇಂದ್ರಾಗ್ನಿಗಳ ರೂಪದಂತೆ ಮುಹೂರ್ತಮಾತ್ರವು ಹೊಳೆಯುತ್ತಿತ್ತು ॥೪೫॥ ಈಪರಿಯಾಗಿ ಓಡಿಬರುತ್ತಿರುವ ಹನುಮಂತನನ್ನು, ಇಂದ್ರನು ಬಹುಕೋಪವಿಲ್ಲದೇ ಇರುವನಾಗಿ, ಬೆರಳುಗಳಿಂದ ಹಿಡಿದುಕೊಂಡು ವಜ್ರಾಯುಧವಂ ಬಿಡಲೂ, ಹನುಮಂತನು ವಜ್ರಾಯುಧತಾಡಿತನಾಗಿ ಬೆಟ್ಟದಲ್ಲಿ ಬಿದ್ದುಹೋದನು, ಆ ಸಮಯದಲ್ಲಿ ಬೀಳುತ್ತಿರುವ ಈತನಿಗೆ ಎಡಭಾಗದ ಕೆನ್ನೆಯು ಮುರುದುಹೋಯಿತು, ॥೪೭॥ ಆ ಹನುಮಂತನಾದರೆ ವಜ್ರಾಯುಧದಿಂದ ಹೊಡೆಯಲ್ಪಟ್ಟು ಬಿದ್ದುಹೋಗಲೂ, ಸರ್ವಾಂತರ್ಯಾಮಿಯಾದ ವಾಯುವು ಇಂದ್ರನಿಗೂ ಪ್ರಜೆಗಳಿಗೂ ಅನಿಷ್ಟವನ್ನುಂಟುಮಾಡಬೇಕೆಂದು ಕಡುಕೋಪಮುಳ್ಳವನಾಗಿ, ಸಂಚಾರವಂ ಸಂಗ್ರಹಿಸಿ, ತನ್ನ ಮಗನಾದ ಶಿಶುವಿನಂತೆಗೆದುಕೊಂಡು, ಗುಹೆಯಂ ಹೊಕ್ಕನು ॥೪೯॥ ವಿಣ್ಮೂತ್ರಸ್ಥಾನಂಗಳಂ ತಡೆಮಾಡಿ ಪ್ರಜಗಳಿಗೆ ಮಹಾ ಬಾಧೆಯನ್ನುಂಟುಮಾಡುತ್ತಾ, ದೇವೇಂದ್ರನು ಮಳೆಯನಡ್ಡಿಮಾಡುವಂತೆ ವಾಯುವು ಸರ್ವಭೂತಂಗಳಂ ಸ್ತಂಭಿಸಿದನು ॥೫೦॥ ವಾಯುವಿನ ಕೋಪದಿಂದ ಭೂತಗಳೆಲ್ಲಾ ಉಚ್ಛ್ವಾಸನಿಶ್ವಾಸಗಳಿಲ್ಲದೆ ಕಾಷ್ಠಭೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರಕೋಪಾದ್ಭೂತಾನಿನಿರುಚ್ಛ್ವಾಸಾನಿಸರ್ವತಃ । ಸಂಧಿಭಿರ್ಭಿದ್ಯಮಾನೈಶ್ಚ ಕಾಷ್ಠಭೂತಾನಿಜಜ್ಞಿರೆ ॥೫೧॥ ನಿಸ್ಸ್ವಾಧ್ಯಾಯವಷಟ್ಕಾರಂನಿಷ್ಕ್ರಿಯಂಧರ್ಮವರ್ಜಿತಮ್। ವಾಯುಪ್ರಕೋಪಾತ್ತ್ರೈಲೋಕ್ಯಂನಿರಯಸ್ಥಮಿವಾಭವತ ॥೫೨॥ ತತೋಮರಾಸ್ಸಗಂಧರ್ವಾಸ್ಸಯಕ್ಷೋರಗರಾಕ್ಷಸಾಃ । ಪ್ರಜಾಪತಿಂಸಮಾಧಾವನ್ನ ಸುಖಾರ್ತಾಸ್ಸುಖೈಷಿಣಃ॥೫೩॥ ಊಚುಃಪ್ರಾಂಜಲಯೋದೇವಂಮಹೋದರನಿಭೋದರಾಃ । ತ್ವಯಾಸ್ಮ ಭಗವನ್ ಸೃಷ್ಟಾಃಪ್ರಜಾನಾಥಚತುರ್ವಿಧಾಃ ॥ ೫೪॥ ತ್ವಯಾದತ್ತೋಯಮಸ್ಮಾಕಂಆಯುಷಃಪವನಃಪತಿಃ । ಸೋಸ್ಮಾನ್ ಪ್ರಾಣೇಶ್ವರೋಭೂತ್ವಾ ಕಸ್ಮಾದೆಷೋದ್ಯ ಸತ್ತಮ॥ ರುರೋಧದುಃಖಂಜನಯನ್ ಅಂತಃಪುರಇವಸ್ತ್ರಿಯಃ ॥ ೫೫ ॥ತಸ್ಮಾತ್ತ್ವಾಂಶರಣಂಪ್ರಾಪ್ತಾ ವಾಯುನೋಪಹತಾಭೃಶಮ್। ವಾಯುಸಂರೋಧಜಂದುಃಖಮಿದಂನೋನುದಶತ್ರುಹನ್ ॥೫೬॥ ಏತತ್ಪ್ರಜಾನಾಂಶ್ರುತ್ವಾತುಪ್ರಜಾನಾಥಃಪ್ರಜಾಪತಿಃ। ಕಾರಣಾದಿತಿತಾಉಕ್ತ್ವಾ ಪ್ರಜಾಃಪುನರಭಾಷತ॥೫೭॥ಯಸ್ಮಿನ್ವಃ ಕಾರಣೇವಾಯುಃಚುಕ್ರೋಧಚರುರೋಧಚ। ಪ್ರಜಾಃಶೃಣುಧ್ವಂತತ್ಸರ್ವಂ ಶ್ರೋತವ್ಯಂಚಾತ್ಮನಃಕ್ಷಮಮ್ ॥೫೮॥ ಪುತ್ರಸ್ತಸ್ಯಾಮರೇಶೇನಇಂದ್ರೇಣಾದ್ಯನಿಪಾತಿತಃ। ರಾ

---

ಳು, ವಾಯುಪ್ರಕೋಪಾತ್-ವಾಯುವಿನ ಕೋಪದದೆಸೆಯಿಂದ, ಸರ್ವತಃ-ಸರ್ವಪ್ರದೇಶಗಳಲ್ಲಿಯೂ, ನಿರುಚ್ಛ್ವಾಸಾನಿ- ನಿಟ್ಟುಸುರು ಬಿಡದಿರುವರಾಗಿ, ಭಿದ್ಯಮಾನೈಶ್ಚ-ಭೇದಿಸಲ್ಪಟ್ಟ, ಸಂಧಿಭಿಃ-ಸಂಧಿಗಳಿಂದಲೂ, ಕಾಷ್ಠಭೂತಾನಿ-ಕಾಷ್ಠಪ್ರಾಯರು, ಜಜ್ಞಿರೆ-ಆದರು ॥೫೧॥ ತ್ರೈಲೋಕ್ಯಂ- ಲೋಕತ್ರಯವು, ನಿಸ್ಸ್ವಾಧ್ಯಾಯವಷಟ್ಕಾರಂ-ಅಧ್ಯಯನವ ಷಟ್ಕಾರಾದಿಗಳಿಂದ ರಹಿತವಾದ್ದಾಗಿ, ಧರ್ಮವರ್ಜಿತಂ-ಧರ್ಮಶೂನ್ಯವಾಗಿ, ನಿಷ್ಕ್ರಿಯಂ - ಕರ್ಮವಿಲ್ಲದ್ದಾಗಿ, ವಾಯುಪ್ರಕೋಪಾತ್-ವಾಯುವಿನ ಕೋಪದದೆಸೆಯಿಂದ, ನಿರಯಸ್ಥಮಿವ-ನರಕದಲ್ಲಿದ್ದಂತೇ, ಅಭವತ್-ಆಯಿತು ॥ ೫೨ ॥ ತತಃ-ಬಳಿಕ, ಸಗಂಧರ್ವಾಃ-ಗಂಧರ್ವರಿಂ ದೊಡಗೂಡಿದ, ಸಯಕ್ಷೋರಗರಾಕ್ಷಸಾಃ-ಯಕ್ಷಸರ್ಪ ರಾಕ್ಷಸರಿಂ ದೊಡಗೂಡಿದ, ಅಮರಾಃ-ದೇವತೆಗಳು, ಅಸುಖಾರ್ತಾಃ-ದುಃಖದಿಂದಾರ್ತರಾಗಿ,ಸುಖೈಷಿಣಃ-ಸುಖೇಚ್ಛೆಯುಳ್ಳವರಾಗಿ, ಪ್ರಜಾಪತಿಂ-ಬ್ರಹ್ಮನಂ ಕುರಿತು, ಸಮಾಧಾವನ್-ಓಡಿಬಂದರು ॥೫೩॥ ಪ್ರಾಂಜಲಯಃ-ಅಂಜಲಿಬದ್ಧರಾದ, ಮಹೋದರನಿಭೋದರಾಃ-ಮಹೋದರ-ಮಹೋದರ ರೋಗವುಳ್ಳವನಿಗೆ, ನಿಭ-ಸಮಾನವಾದ, ಉದರಾಃ - ಹೊಟ್ಟೆಗಳುಳ್ಳವರಾಗಿ, ದೇವಂ-ಬ್ರಹ್ಮದೇವನು ಕುರಿತು, ಊಚುಃ-ಹೇಳಿದರು ॥ ಹೇ ಭಗವನ್-ಎಲೈ ಭಗವಂತನೇ, ಹೇನಾಥ-ಎಲೈ ಸ್ವಾಮಿಯೇ,ತ್ವಯಾ-ನಿನ್ನಿಂದ, ಚತುರ್ವಿಧಾಃ-ನಾಲ್ಕುಬಗೆಗಳಾದ, ಪ್ರಜಾಃ-ಪ್ರಜೆಗಳು, ಸೃಷ್ಟಾಃ-ಸೃಷ್ಟಿಮಾಡಲ್ಪಟ್ಟರು ॥೫೪॥ ತ್ವಯಾ-ನಿನ್ನಿಂದ, ಅಸ್ಮಾಕಂ-ನಮ್ಮ, ಆಯುಷಃ-ಆಯುಸ್ಸಿಗೆ, ಅಯಂಪವನಃ-ಈ ವಾಯುವು, ಪತಿಃ-ಪತಿಯಾಗಿ, ದತ್ತಃ-ಕೊಡಲ್ಪಟ್ಟನು, ಸಏಷಃ-ಆ ಈ ವಾಯುವು, ಪ್ರಾಣೇಶ್ವರಃ-ಪ್ರಾಣಗಳಿಗೆಲ್ಲಾ ನಾಥನು ಭೂತ್ವಾ-ಆಗಿ, ಅದ್ಯ-ಈಗ, ಹೆಸತ್ತಮ-ಎಲೈಸತ್ಪುರುಷ ಶ್ರೇಷ್ಠನೇ, ಅಂತಃಪುರೆ-ಅಂತಃಪುರದಲ್ಲಿ, ಸ್ತ್ರೀಯಃಇವ-ಹೆಂಗಸರಂತೆ, ದುಃಖಂ - ದುಃಖವನ್ನು, ಜನಯನ್-ಹುಟ್ಟಿಸಿದವನಾಗಿ, ಕಸ್ಮಾತ್-ಯಾತರದೆಸೆಯಿಂದ, ಅದ್ಯ-ಈಗ, ರುರೋಧ-ಅಡ್ಡಗಿಸಿದನು ॥೫೫॥ ತಸ್ಮಾತ್-ಆ ಕಾರಣದದೆಸೆಯಿಂದ, ವಾಯುನಾ-ವಾಯುವಿನಿಂದ, ಭೃಶಂ - ಬಹಳವಾಗಿ, ಉಪಹತಾಃ - ಹೊಡೆಯಲ್ಪಟ್ಟವರಾಗಿ, ತ್ವಾಂ-ನಿನ್ನನ್ನು, ಶರಣಂ - ರಕ್ಷಕನನ್ನಾಗಿ, ಪ್ರಾಪ್ತಾಃ-ಹೊಂದಿದೆವು, ಹೆಶತ್ರುಹನ್-ಎಲೈಶತ್ರು ಸಂಹಾರಕನೇ, ನಃ-ನಮ್ಮಗಳಿಗೆ, ವಾಯುಸಂರೋಧಜಂ-ವಾಯುನಿರೋಧದಿಂದ ಹುಟ್ಟಿರುವ, ಇದಂದುಃಖಂ-ಈ ದುಃಖವನ್ನು, ನುದ-ಪರಿಹರಿಸು ॥೫೬॥ ಪ್ರಜಾನಾಥಃ-ಪ್ರಜೆಗಳಿಗೆಲ್ಲಾ ನಾಥನಾದ, ಪ್ರಜಾಪತಿಃ-ಚತುರ್ಮುಖ ಬ್ರಹ್ಮನು, ಪ್ರಜಾನಾಂ-ಪ್ರಜೆಗಳ, ಏತತ್ತು-ಈ ಮಾತನ್ನಾದರೇ, ಶ್ರುತ್ವಾ-ಕೇಳಿ, ಕರಣಾದಿತಿ-ಕಾರಣದದೆಸೆಯಿಂದಲೇ ಎಂದು,ತಾಃಪ್ರಜಾಃ-ಆಪ್ರಜೆಗಳಂ ಕುರಿತು, ಉಕ್ತ್ವಾ-ಹೇಳಿ, ಪುನಃ-ಮತ್ತು, ಅಭಾಷತ-ಮಾತನಾಡಿದನು॥೫೭॥ ಹೆಪ್ರಜಾಃ-ಎಲೈ ಪ್ರಜಗಳಿರ್ರ್ಯಾ,ಯಸ್ಮಿನ್ ಕಾರಣೇಹಿ-ಯಾವಕಾರಣದಲ್ಲಿ, ವಾಯುಃ-ವಾಯುವು-ಚುಕ್ರೋಧ-ಕ್ರೋಧಗೊಂಡನೋ,ರುರೋಧಚ-ತಡೆಮಾಡಿದನೋ, ಆತ್ಮನಃ-ತನಗೆ, ಕ್ಷಮಂ-ಯೋಗ್ಯವಾದ, ತತ್ಸರ್ವಂ-ಅದೆಲ್ಲಾ ಕೂಡ, ಶ್ರೋತವ್ಯಂ-ಕೇಳತಕ್ಕದ್ದು, ಶೃಣುಧ್ವಂ-ಕೇಳಿರಿ ॥೫೮॥ ತಸ್ಯ-ಆ ವಾಯುವಿನ, ಪುತ್ರಃ-ಮಗನು, ಅಮರೇಶೇನ-ದೇವತೆಗಳಿಗೆ ಅಧಿಪತಿಯಾದ, ಇಂದ್ರೇಣ-ದೇವೇಂದ್ರ

---

ತವಾಗಿ ಬಿದ್ದವು ॥೫೧॥ ಆಸಮಯದಲ್ಲಿ ಲೋಕತ್ರಯವು ಕರದಲ್ಲಿರುವಂತೆ ವಾಯುಕೋಪದಿಂದ, ಅಧ್ಯಯನವಷಟ್ಕಾರಾದಿ ರಹಿತವಾಗಿಯೂ, ಧರ್ಮಶೂನ್ಯವಾಗಿಯೂ, ಕರ್ಮವರ್ಜಿತವಾಗಿಯೂ ಇರುವಂಥಾದ್ದಾಯಿತು॥೫೨ ಆಬಳಿಕೆ ಗಂಧರ್ವ ಯಕ್ಷನಾಗರಾಕ್ಷಸರಿಂದೊಡಗೂಡಿದ ದೇವತೆಗಳೆಲ್ಲರು ಸಂತಪಿಸುತ್ತಾ ಸುಖೇಚ್ಛೆಯುಳ್ಳವರಾಗಿಬ್ರಹ್ಮನಂ ಕುರಿತು ಓಡಿಬಂದು ಅಂಜಲಿಬದ್ಧರಾಗಿಂತೆಂದು ನುಡಿದರು, ಎಲೈ ಪ್ರಜಾನಾಥನೆ, ನಿನ್ನಿಂದ ನಾವೆಲ್ಲರು ನಾಲ್ಕು ಬಗೆಯಾಗಿ ಸೃಜಿಸಲ್ಪಟ್ಟು, ನಮಿಗೆ ಆಯುಷವಾಗಿ ವಾಯುವು ಕೊಡಲ್ಪಟ್ಟತಷ್ಟೆ, ಅಂಥಾ ಪ್ರಾಣೇಶ್ವರನಾದ ವಾಯುವು ಭೂತಂಗಳಂ ಸ್ತಂಭಿಸಿ, ದುಃಖವನ್ನುಂಟುಮಾಡುತ್ತಾ, ಅಂತಃಪುರ ಸ್ತ್ರೀಯರತೆರದಿಯುಳ್ಳಿಯೊ ಔತುಕೊಂಡಿರುವನು ॥೫೫॥ ಆದಕಾರಣ ನಾವೆಲ್ಲರು ವಾಯುಪೀಡಿತರಾಗಿನಿನ್ನನ್ನೇಶರಣವಾಗಿ ಹೊಂದಿದ್ದೇವೆ,ಆದುಃಖವಂ ಪರಿಹರಿಸೆಂದು ಪ್ರಜೆಗಳೆಲ್ಲರೂ ಪ್ರಾರ್ಥಿಸಲೂ, ಪಿತಾಮಹನುಪ್ರಜೆಗಳಂ ಕುರಿತಿಂತೆಂದನು, ಎಲೈ ಪ್ರಜೆಗಳಿರ್ರಾ ! ಯಾವ ಹೇತುವಿನಿಂದ ವಾಯುವು ಕುಪಿತನಾಗಿರುವನೋ, ಅದಂ ಪೇಳ್ವೆನು ಕೇಳಿರಿ ॥೫೮॥ ನಿಮ್ಮೊಡೆಯನಾದ ಇಂದ್ರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹೋರ್ವಚನಮಾಸ್ಥಾಯರಾಜ್ಞಾವಃಕೋಪಿತೋನಿಲಃ ॥೫೯॥ ಅಶರೀರಶ್ಶರೀರೇಷುವಾಯುಶ್ಚರತಿಪಾಲಯನ್ । ಶರೀರಂ ಹಿವಿನಾವಾಯುಂಸಮತಾಂಯಾತಿರೇಣುಭಿಃ ॥೬೦॥ ವಾಯುಃಪ್ರಾಣಾಸ್ಸುಖಂವಾಯುಃವಾಯುಸ್ಸರ್ವಮಿದಂಜಗತ್। ವಾಯುನಾಸಂಪರಿತ್ಯಕ್ತಂನಸುಖಂವಿಂದತೇಹಿತತ್॥೬೧॥ ಅದ್ಯೈವಚಪರಿತ್ಯಕ್ತಂವಾಯುನಾಜಗದಾಯುಷಾ । ಅದ್ಯಸರ್ವೆ ನಿರುಚ್ಛ್ವಾಸಾಃಕಾಷ್ಠಕುಡ್ಯೋಪಮಾಃಸ್ಥಿತಾಃ ॥೬೨॥ ತದ್ಯಾಮತತ್ರಯತ್ರಾಸ್ತೆಮಾರುತೋರುಕ್ಪ್ರದೋಹಿವಃ। ಮಾವಿನಾಶಂಗಮಿಷ್ಯಾಮಃಅಪ್ರಸಾದ್ಯಾದಿತೆಸ್ಸುತಾಃ ॥೬೩॥ ತತಃಪ್ರಜಾಭಿಸ್ಸಹಿತಃಪ್ರಜಾಪತಿಃಸದೇವಗಂಧರ್ವಭುಜಂಗಗುಹ್ಯಕೈಃ । ಜಗಾಮತತ್ರಾಸ್ತಿಹಿಯತ್ರಮಾರುತಸ್ಸುತಂಸುರೇಂದ್ರಾಭಿಹತಂಪ್ರಗೃಹ್ಯಸಃ ॥ ೬೪ ॥ ತತೋರ್ಕವೈಶ್ವಾನರಕಾಂಚನಪ್ರಭಂಸುತಂತದೋತ್ಸಂಗಗತಂಸದಾಗತೇಃ । ಚತುರ್ಮುಖೋವೀಕ್ಷ್ಯಕೃಪಾಮಥಾಕರೋತ್ಸದೇವಗಂಧರ್ವಮಹರ್ಷಿರಾಕ್ಷಸಃ ॥೬೫ ॥ —...ಇತಿಶ್ರೀಮದುತ್ತರರಾಮಾಯಣೆ ಪಂಚ ತ್ರಿಂಶಸ್ಸರ್ಗಃ...—

---

ಸಿಂದ, ರಾಹೋಃ-ರಾಹುವಿನ, ವಚನಂ-ಮಾತನ್ನು, ಆಸ್ಥಾಯ-ಗ್ರಹಿಸಿ, ನಿಪಾತಿತಃ-ಬೀಳಿಸಲ್ಪಟ್ಟನು, ವಃ-ನಿಮ್ಮಗಳಿಗೆ, ರಾಜ್ಞಾ-ಅರಸಾದ ದೇವೇಂದ್ರನಿಂದ, ಅನಿಲಃ-ವಾಯುವು, ಕೋಪಿತಃ-ಸಂಜಾತಕೋಪಮುಳ್ಳವನಂತೇ ಮಾಡಲ್ಪಟ್ಟನು ॥೫೯॥ ಅಶರೀರಃ-ಶರೀರವಿಲ್ಲದವನಾದ, ವಾಯುಃ- ವಾಯುವು, ಶರೀರೇಷು-ಶರೀರಗಳಲ್ಲಿ, ಪಾಲಯನ್-ಸಂರಕ್ಷಣೆಮಾಡುತಿರುವನಾಗಿ,ಚರತಿ-ಸಂಚರಿಸುತ್ತಾನೆ,ಶರೀರಂಹಿವಿನಾ-ಶರೀರವಂಬಿಟ್ಟು,ವಾಯುಃ-ವಾಯುವು, ರೇಣುಭಿಃ-ಧೂಳಿಗಳಿಂದ, ಸಮತಾಂ-ಸಾಮ್ಯವನ್ನು, ಯಾತಿ-ಹೊಂದುತಾನೆ ॥೬೦॥ ವಾಯುಃ-ವಾಯುವೇ, ಪ್ರಾಣಾಃ-ಪ್ರಾಣಗಳು, ಸುಖಂ-ಸುಖಸ್ವರೂಪನು, ವಾಯುಃ-ವಾಯುವು, ಇದಂಜಗತ್ಸರ್ವಂ-ಈ ಸಮಸ್ತಜಗತ್ತೆಲ್ಲಾನು,ಹಿ-ಯಾವಕಾರಣದ ದೆಸೆಯಿಂದ, ವಾಯುನಾ-ವಾಯುವಿನಿಂದ, ಸಂಪರಿತ್ಯಕ್ತಂ-ಚನ್ನಾಗಿ ಬಿಡಲ್ಪಟ್ಟ, ತತ್-ಆ ಭೂತಸಮುದಾಯವು, ಸುಖಂ-ಸುಖವನ್ನು, ನವಿಂದೇತೆ-ಹೊಂದಲಾರದೋ ॥೬೧॥ ಜಗದಾಯುಷಾ, ಜಗತ್ತಿಗೆಲ್ಲಾ ಆಯುಸ್ಸ್ವರೂಪನಾದ, ವಾಯುನಾ-ವಾಯುವಿನಿಂದ,ಅದ್ಯೈವಚ-ಈಗಲೇನೆ, ಪರಿತ್ಯಕ್ತಂ-ಬಿಡಲ್ಪಟ್ಟಿತು, ಅದ್ಯ-ಈಗ, ಸರ್ವೆ-ಸಮಸ್ತರೂನು, ನಿರುಚ್ಛ್ವಾಸಾಃ-ಉಶ್ವಾಸದಿಂದ ಬಿಡಲ್ಪಟ್ಟವರಾಗಿ, ಸ್ಥಿತಾಃ-ನಿಂತರು ॥೬೨॥ತತ್-ಆ ಕಾರಣದದೆಸೆಯಿಂದ, ವಃ-ನಿಮಗೆ, ಮರುತ್ಪ್ರದಃ-ರೋಗವಂಕೊಟ್ಟಿರುವ, ಮಾರುತಃ-ವಾಯುವು, ಯತ್ರ-ಯಾವಸ್ಥಳದಲ್ಲಿ, ಆಸ್ತೆ-ಇರುತ್ತಾನೋ, ತತ್ರ-ಅಲ್ಲಿ, ಯಾಮ-ಹೊಗೋಣ-ಹೇ ಅದಿತೇಸ್ಸುತಾಃ- ಎಲೈ ಅದಿತಿಮಕ್ಕಳಿರ್ಯಾ-ಅಪ್ರಸಾದ್ಯ-ವಾಯುವಿನನ್ನು ಪ್ರಸನ್ನನಾಗಿಮಾಡಿಕೊಳ್ಳದೇ,ವಿನಾಶಂ-ವಿನಾಶವನ್ನು, ಮಾಗಮಿಷ್ಯಾಮಃ-ಹೊಂದಲಾರೆವು ॥೬೩॥ ತತಃ-ಬಳಿಕ, ಪ್ರಜಾಪತಿಃ-ಬ್ರಹ್ಮನು, ಸದೇವಗಂಧರ್ವಭುಜಂಗಗುಹ್ಯಕೈಃ-ದೇವತೆಗಳೂ, ಗಂಧರ್ವರೂ, ಸರ್ಪಗಳೂ, ಗುಹ್ಯಕರಿಂದೊಡಗೂಡಿದ, ಪ್ರಜಾಭಿಃ-ಪ್ರಜೆಗಳಿಂದ, ಸಹಿತಃ-ಕೂಡಿದವನಾಗಿ, ಸಃಮಾರುತಃ-ಆ ವಾಯುವು, ಸುರೇಂದ್ರಾಭಿಹತಂ-ದೇವೇಂದ್ರನಿಂದ ಹೊಡೆಯಲ್ಪಟ್ಟ, ಸುತಂ-ಕುವರನನ್ನು ಪ್ರಗೃಹ್ಯ-ಕರದುಕೊಂಡು, ಯತ್ರ-ಯಾವಸ್ಥಳದಲ್ಲಿ,ಅಸ್ತಿಹಿ-ಇದ್ದಾನೋ, ತತ್ರ-ಆ ಸ್ಥಳದಲ್ಲಿ, ಜಗಾಮ-ಬಂದನು ॥೬೪॥ ತತಃ-ಬಳಿಕ, ಚತುರ್ಮುಖಃ-ಬ್ರಹ್ಮನು, ತದಾ-ಆ ಕಾಲದಲ್ಲಿ, ಅರ್ಕವೈಶ್ವಾನರಕಾಂಚನಪ್ರಭಂ - ಸೂರ್ಯನ, ಅಗ್ನಿಯ, ಅಪರಂಜಿಗಳ ಕಾಂತಿಯೋಪಾದಿಯಲ್ಲಿ, ಪ್ರಭೆಯುಳ್ಳ, ಸದಾಗತೇಃ-ವಾಯುವಿನ, ಉತ್ಸಂಗಗತಂ-ತೊಡೆಯನ್ನು ಹೊಂದಿರುವ, ಸುತಂ-ಕುಮಾರನನ್ನು, ವೀಕ್ಷ್ಯ-ಕಂಡು-ಅಥ-ಬಳಿಕ - ಸದೇವಗಂಧರ್ವಮಹರ್ಷಿರಾಕ್ಷಸಃ-ದೇವತೆಗಳಿಂದಲೂ, ಗಂಧರ್ವರಿಂದಲೂ, ಮಹರ್ಷಿಗಳಿಂದಲೂ, ರಾಕ್ಷಸರಿಂದಲೂ ಒಡಗೂಡಿದವನಾಗಿ, ಕೃಪಾಂ-ದಯೆಯನ್ನು,ಅಕರೋತ್-ಮಾಡಿದನು॥೬೫॥ —...*ಇತಿಶ್ರೀಮದುತ್ತರರಾಮಾಯಣೆ ಪಂಚತ್ರಿಂಶಸ್ಸರ್ಗಃ*...—

---

ನು ರಾಹುವಿನ ಚಾಡಿಯಂಕೇಳಿ, ಆ ವಾಯುವಿನ ಶಿಶುವಿನನ್ನು ಹೊಡದಿರುವನಾದಕಾರಣ, ಆಪವನನೀಗ ಕುಪಿತನಾಗಿಹನು ॥೫೯॥ ಆ ವಾಯುವು ಶರೀರರಹಿತನಾದರೂ ದೇಹಿಗಳ ದೇಹಂಗಳಂ ಪರಿಪಾಲಿಸುತ್ತಾ ಶರೀರಗಳಲ್ಲಿ ಸಂಚರಿಸುತ್ತಿರುವನು. ಇದಲ್ಲದೇ ಅಶರೀರಿಯಾದ ವಾಯುವು ಧೂಳಿಗಳಂ ತಿರುವನು ॥೬೦॥ ವಾಯುವೇ ಪ್ರಾಣಗಳು, ಮತ್ತೂ ಸುಖಸ್ವರೂಪನಾದವನೂ ವಾಯುವೇ, ಅಂಥಾವಾಯುವಿನಿಂದ ಪರಿತ್ಯಕ್ತಮಾದದ್ದು ಸುಖಮಾಗಿರಲಾರದು ॥೬೧॥ ಜಗತ್ತಿಗೆಲ್ಲಾ ಪ್ರಾಣಭೂತನಾಗಿರುವ ವಾಯುವಿನಿಂದೀಗ, ಲೋಕವೆಲ್ಲಾ ಪರಿತ್ಯಕ್ತಮಾಗಿರುವದು, ಆದಕಾರಣ ಜನರೆಲ್ಲರು, ದಾರುಗಳಂತೆಯೂ ಗೋಡೆಗಳಂತೆಯೂ ಉಛ್ವಾಸನಿಶ್ವಾಸಗಳಿಲ್ಲದೇ ನಿಂತಿರುವರು ॥೬೨॥ ಎಲೈ ದೇವತೆಗಳಿರಾ! ನಿಮಿಗೆಲ್ಲಾ ರೋಗಕಾರಿಯಾದ ವಾಯುವೆಲ್ಲಿಹನೋ ಆ ಯಡಕ್ಕೆ ಹೋಗಿ ಆತನಂ ಪ್ರಾರ್ಥಿಸೋಣ, ಇಲ್ಲದಿದರ್ದಡೆ ವಿನಾಶಮುಂಟಾಗುವದೆಂದುನುಡಿದನು,ಬ್ರಂಹನು, ದೇವ,ಗಂಧರ್ವ, ಭುಜಂಗ, ಗುಹ್ಯಕಸಹಿತರಾದ ಪ್ರಜೆಗಳಿಂದೊಡಗೂಡಿದವನಾಗಿ, ವಾಯುವು ಸುರೇಂದ್ರತಾಡಿತನಾದ ತನ್ನ ಬಾಲಕನಂ ತೆಗದುಕೊಂಡುಪೋಗಿ ಯಾವ ಯಡದಲ್ಲಿದ್ದನೋ ಅಲ್ಲಿಗೆ ಬಂದವನಾದನು ॥೬೪॥ ಸಮನಂತರಕಾಲದಲ್ಲಿ ಚತುರ್ಮುಖನು ದೇವಗಂಧರ್ವ ಮಹರ್ಷಿರಾಕ್ಷಸರಿಂದೊಡಗೂಡಿ ವಾಯುವಿನ ತೊಡೆಯಮೇಲೆ ಮಲಗಿರುವ ಮತ್ತು ಅಗ್ನಿಯಂತೆಯೂ ಕಾಂಚನದಂತೆಯೂ ಕಂಗೊಳಿಸುತಿರುವ ದೇಹಕಾಂತಿಯುಳ್ಳ ಆ. ಶಿಶುವಿನಂ ಕಂಡು, ದಯೆಯಂ ಮಾಡಿದನು ॥೬೫॥

—...*ಉತ್ತರಕಾಂಡದಲ್ಲಿನ ೩೫ನೇ ಸರ್ಗಂ ಮುಗಿದುದು*...—

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತತಃಪಿತಾಮಹಂದೃಷ್ಟ್ವಾವಾಯುಃಪುತ್ರವಧಾರ್ದಿತಃ । ಶಿಶುಕಂತಂಸಮಾದಾಯಉತ್ತಸ್ಥೌವೇಗವತ್ತರಃ ॥೧॥ ತತಃಕುಂಡಲಮೌಳಿಸ್ರಕ್ತಪನೀಯವಿಭೂಷಣಃ । ಪಾದಯೋರ್ನ್ಯಪತದ್ವಾಯುಃತಿಸ್ರೋಪಸ್ಥಾಯವೇಧಸೇ॥೨॥ ತ್ರಿಗುಣಾಯತ್ರಿವೇದಾಯತ್ರಿಯುಗಾಯತ್ರಿಶಕ್ತಯೇ । ತ್ರಿಕಾಲಾಯತ್ರಿಧಾಮ್ನೇಚತ್ರಿಲೋಕಪತಯೇನಮಃ ॥೩॥ ಇತಿನತ್ವಾತತೋವಾಯುರ್ಬ್ರಹ್ಮಣೇನಂತಶಕ್ತಯೇ। ಶಿಶುಕಂತಂಸಮಾದಾಯಉಪತಸ್ಥೇಪಿತಾಮಹಮ್॥೪॥ ಶಿಶುಂಪಿತಾಮಹೋದೇವಃಹಸ್ತೇನಪರಿಮೃಷ್ಟವಾನ್ ॥೫॥ ಸತುವೇದವಿದಾತೇನಲಂಬಾಭರಣಶೋಭಿನಾ । ಸ್ಪೃಷ್ಟಮಾತ್ರಸ್ತತಸ್ಸೋಥಸಲೀಲಂಪದ್ಮಜನ್ಮನಾ। ಜಲಸಿಕ್ತಂಯಥಾಸಸ್ಯಂಪುನರ್ಜೀವಿತಮಾಪ್ತವಾನ್ ॥೬॥ ಪ್ರಾಣವಂತಮಿಮಂದೃಷ್ಟ್ವಾಪ್ರಾಣೋಗಂಧವ

---

ತತಃ–ಬಳಿಕ, ವಾಯುಃ–ವಾಯುವು, ಪುತ್ರವಧಾರ್ದಿತಃ–ಪುತ್ರನಪ್ರಹಾರದಿಂದ ದುಃಖಿತನಾಗಿ, ಪಿತಾಮಹಂ–ಬ್ರಹ್ಮನನ್ನು, ದೃಷ್ಟ್ವಾ–ಕಂಡು, ವೇಗವತ್ತರಃ–ಅತಿವೇಗವುಳ್ಳವನಾಗಿ, ತಂಶಿಶುಕಂ–ಆಸೂಕ್ಷ್ಮವಾದ ಮಗುವಿನನ್ನು, ಸಮಾದಾಯ–ಎತ್ತಿಕೊಂಡು, ಉತ್ತಸ್ಥೌ – ಮ್ಯಾಲಕ್ಕೆದ್ದನಿಷ್ಟ ॥೧॥ ತತಃ–ಬಳಿಕ–ಕುಂಡಲಮೌಳಿಸ್ರಕ್ತಪನೀಯವಿಭೂಷಣಃ–ಕುಂಡಲ–ಕುಂಡಲಗಳೂ, ಮೌಳಿ–ಕಿರೀಟವೂ, ಸ್ರಕ್–ಹಾರವೂ, ತಪನೀಯ–ಬಂಗಾರವಿಕಾರವಾದ, ವಿಭೂಷಣಃ–ಇತರಾಭರಣಗಳುಳ್ಳ, ವಾಯುಃ–ವಾಯುವು, ತಿಸ್ರಃ–ಮೂರಾವರ್ತಿಯು,ವೇಧಸೇ–ಬ್ರಹ್ಮನಿಗೋಸ್ಕರ, ಉಪಸ್ಥಾಯ–ಪ್ರದಕ್ಷಿಣಗಳಂಮಾಡಿ, ಪಾದಯೋಃ–ಪಾದಗಳಲ್ಲಿ, ನ್ಯಪತತ್–ಬಿದ್ದನು; ॥ ೨ ॥ ತ್ರಿಗುಣಾಯ – ಸತ್ವರಜಸ್ತಮೋಗುಣಗಳೆಂಬ ಮೂರುಗುಣಗಳುಳ್ಳ, ತ್ರಿವೇದಾಯ–ಋಗ್ಯಜುಸ್ಸಾಮಾತ್ಮಕವೇದಸ್ವರೂಪನಾದ, ತ್ರಿಯುಗಾಯ–ಕೃತತ್ರೇತದ್ವಾಪರಾಖ್ಯವಾದಯುಗತ್ರಯದಲ್ಲಿ ಏಕರೂಪನಾದ,( ಯದ್ವಾ–ತ್ರಿಯುಗಾಯ–ಕ್ಷುತ್ಪಿಪಾಸಗಳು, ಶೋಕಮೋಹಗಳು, ಜರಾಮರಣಗಳೆಂಬ ಯುಗ್ಮತ್ರಯವಂ ಸೃಷ್ಟಿಮಾಡಿದ) ತ್ರಿಶಕ್ತಯೇ–ಪ್ರಭುಮಂತ್ರೋತ್ಸಾಹಗಳೆಂಬ ಶಕ್ತಿತ್ರಯವುಳ್ಳ, (ಯದ್ವಾ–ಸೃಷ್ಟಿ ಸ್ಥಿತಿ ಲಯವೆಂಬ ಮೂರು ಕಾರ್ಯದಲ್ಲಿಯೂಸಮರ್ಥನಾದ,) ತ್ರಿಕಾಲಾಯ–ಭೂತಭವಿಷ್ಯದ್ವರ್ತಮಾನಕಾಲಸ್ವರೂಪನಾದ) ಯದ್ವಾ–ಪ್ರಾತರ್ಮಧ್ಯಾಹ್ನ ಸಾಯಾಹ್ನಕಾಲಗಳೆಂಬ ಕಾಲತ್ರಯವುಳ್ಳ, )ತ್ರಿಧಾಮ್ನೇಚ–ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರುಸ್ಥಾನಗಳುಳ್ಳ, (ಯದ್ವಾ–ಸತ್ಯಲೋಕ ವೈಕುಂಠಲೋಕ ಕೈಲಾಸಗಳೆಂಬ ಸ್ಥಾನತ್ರಯಗಳುಳ್ಳ, ತ್ರಿಲೋಕಪತಯೇ–ತ್ರಿಲೋಕಾಧಿಪತಿಯಾದ ಬ್ರಹ್ಮನಿಗೋಸ್ಕರ, ನಮಃ–ನಮಸ್ಕಾರವು, ಅಸ್ತು–ಆಗಲಿ ॥ ೩ ॥ ಇತಿ–ಈಪರಿಯಾಗಿ, ವಾಯುಃ–ವಾಯುವು, ಅನಂತಶಕ್ತಯೇ –ಅನಂತಶಕ್ತಿಗಳುಳ್ಳ, ಬ್ರಹ್ಮಣೇ–ಬ್ರಹ್ಮದೇವನಿಗೋಸ್ಕರ, ನತ್ವಾ–ನಮಸ್ಕಾರಮಾಡಿ, ತತಃ–ಬಳಿಕ, ತಂಶಿಶುಕಂ–ಆ ಬಾಲಕನನ್ನು, ಸಮಾದಾಯ–ತೆಗದುಕೊಂಡು, ಪಿತಾಮಹಂ–ಬ್ರಹ್ಮದೇವರಂ ಕುರಿತು, ಉಪತಸ್ಥೇ–ಸಮೀಪದಲ್ಲಿ ನಿಂತನು. ಪಿತಾಮಹೋದೇವಃ–ಬ್ರಹ್ಮದೇವನು, ಶಿಶುಂ–ಶಿಶುವಿನನ್ನು, ಹಸ್ತೇನ–ಹಸ್ತದಿಂದ, ಪರಿಮೃಷ್ಟವಾನ್–ಸ್ಪರ್ಶಮಾಡಿದನು. ॥೫॥ ಸತು–ಆ ಶಿಶುವಾದರೆ, ವೇದವಿದಾ–ವೇದಜ್ಞನಾದ, ಲಂಬಾಭರಣಶೋಭಿನಾ–ಲಂಬಾಯಮಾನವಾದ ಒಡವೆಗಳಿಂದ ಹೊಳೆಯುತಿರುವ, ತೇನಪದ್ಮಜನ್ಮನಾ–ಆ ಕಮಲಾಸನನಿಂದ, ಸ್ಪೃಷ್ಟಮಾತ್ರಃ–ಸ್ಪರ್ಶಮಾತ್ರ ಮಾಡಲ್ಪಟ್ಟವನಾದನು, ತತಃ–ಆ ಸ್ಪರ್ಶಮಾತ್ರದಿಂದಲೇ, ಅಥ–ಬಳಿಕ, ಸಃ–ಆ ಶಿಶುವು, ಸಲೀಲಂ–ವಿಲಾಸದಿಂದೊಡಗೂಡಿದಂತೆ, ಜಲಸಿಕ್ತಂ–ಉದಕದಿಂದನೆನಿಸಲ್ಪಟ್ಟ, ಸಸ್ಯಂಯಥಾ–ಪೈರಿನಂತೆ, ಪುನಃ–ಮತ್ತು,ಜೀವಿತಂ–ಪ್ರಾಣವನ್ನು, ಆಪ್ತವಾನ್–ಹೊಂದಿದನು ॥ ೬ ॥ ಪ್ರಾಣವಂತಂ–ಜೀವಿತನಾದ, ಇಮಂ–ಈ ಶಿಶುವಿನನ್ನು, ದೃಷ್ಟ್ವಾ–ಕಂಡು, ಪ್ರಾಣಃ–ಪ್ರಾಣಸ್ವರೂಪನಾದ, ಗಂಧವಹಃ–ವಾಯುವು, ಮುದಾ–ಸಂತೋಷದಿಂದ, ಸರ್ವಭೂತೇಷು–ಸರ್ವಭೂತಗಳಲ್ಲಿಯೂ, ಅವಿರುದ್ಧಂ–ವಿರುದ್ಧವಲ್ಲದೇ, ಯಥಾಪೂರ್ವಾ–ಪೂರ್ವ

---

ಆ ಬಳಿಕ ವಾಯುವು ಪುತ್ರನವಧೆಯಿಂ ದುಃಖಿತನಾಗಿ, ಪಿತಾಮಹನಂಕಂಡು, ಆ ಕೂಸನ್ನೆತ್ತಿಕೊಂಡು ತ್ವರಿತವಾಗೆದ್ದು ಮೂರುಸಲ ಪ್ರದಕ್ಷಣಗಳಂಗೈದು ಪಾದಗಳಲ್ಲಿ ಬಿದ್ದು ಇಂತೆಂದು ನುಡಿದನು ॥೨॥ ಸತ್ವ, ರಜ, ಸ್ತಮೋಗುಣಗಳೆಂಬ ಗುಣತ್ರಯವುಳ್ಳವನಾಗಿಯೂ, ಋಗ್ಯಜುಸ್ಸಾಮಗಳೆಂಬ ವೇದತ್ರಯಾತ್ಮಕನಾಗಿಯೂ, ಕೃತತ್ರೇತದ್ವಾಪರಗಳೆಂಬ ಮೂರುಯುಗಗಳಲ್ಲಿಯೂ ಏಕರೂಪವುಳ್ಳವನಾಗಿರುವನಾಗಿಯೂ ( ಅಥವಾ–ಕ್ಷುತ್ಪಿಪಾಸಂಗಳು, ಶೋಕಮೋಹಂಗಳು, ಜರಾಮರಣಂಗಳು, ಎಂಬಯುಗ್ಮತ್ರಯವಂ ಸೃಷ್ಟಿಸಿದವನಾಗಿಯೂ,) ಪ್ರಭುಮಂತ್ರೋತ್ಸಾಹಗಳೆಂಬ ಮೂರುಶಕ್ತಿಗಳುಳ್ಳವನಾಗಿಯೂ (ಹಾಗಲ್ಲದಿದ್ದರೆ – ಸೃಷ್ಟಿಸ್ಥಿತಿಲಯಗಳೆಂಬ ಕಾರ್ಯತ್ರಯದಲ್ಲಿಯೂ ಸಮರ್ಥನಾಗಿರುವನಾಗಿಯೂ) ಭೂತಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯಸ್ವರೂಪನಾಗಿಯೂ, ಸ್ವರ್ಗಮರ್ತ್ಯಪಾತಾಳಂಗಳೆಂಬ ಮೂರುಸ್ಥಾನಗಳುಳ್ಳವನಾಗಿಯೂ (ಅಥವಾ ಸತ್ಯಲೋಕ, ವೈಕುಂಠ, ಕೈಲಾಸಗಳೆಂಬಸ್ಥಾನತ್ರಯವುಳ್ಳವನಾಗಿಯೂ,) ತ್ರಿಲೋಕಾಧಿಪತಿಯಾಗಿಯೂ ಇರುವ, ಪಿತಾಮಹನಿಗೆನ್ನ ನಮಸ್ಕಾರವುಂಟಾಗಲೀ.ಎಂಬದಾಗಿ ಹೇಳುತ್ತಾ ವಂದನೆಯಂ ಗೈದು, ಆ ಬಾಲಕನನ್ನೆತ್ತಿಕೊಂಡು ಸಮೀಪದಲ್ಲಿ ನಿಂತವನಾಗಲೂ, ಆ ಪಿತಾಮಹನು ಶಿಶುವಿನನ್ನು ಕೈಯಿಂದ ಸವರಿದನು ॥೫॥ ಆ ಬಾಲಕನಾದರೆ ವೇದಜ್ಞನಾದ ಮತ್ತೂ ಲಂಬಾಯಮಾನವಾದ ಒಡವೆಗಳುಳ್ಳ ಪದ್ಮಸಂಭವನಿಂದ,ಸಲೀಲವಾಗಿ ಸ್ಪರ್ಶಮಾತ್ರಮಾಡಲ್ಪಟ್ಟವನಾಗಲೂ,ಒಣಗಿದ ಪೈರು ಉದಕದಿಂದತೊಯಿಸಲ್ಪಟ್ಟರೆ ಪುನಹಾ ಬೆಳೆಯುವಂತೆ, ಪುನಶ್ಚ ಜೀವಿತನಾದನು ॥೬॥ ಪ್ರಾಣನಂತನಾಗಿರುವ ತನ್ನಶಿಶುವಿನಂ ಕಂಡು, ಜಗತ್ಪ್ರಾಣ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹೋಮುದಾ । ಚಚಾರಸರ್ವಭೂತೇಷುಹ್ಯನಿರುದ್ಧಂಯಥಾಪುರಾ ॥೭॥ ಮರುದ್ರೋಗಾದ್ವಿನಿರ್ಮುಕ್ತಾಃಪ್ರಜಾಶ್ಚೈವಮು ದಿತಾಭವನ್। ಶೀತವಾತವಿನಿರ್ಮುಕ್ತಾಃಪದ್ಮಿನ್ಯಇವಪುಷ್ಪಿತಾಃ ॥೮॥ ತತಸ್ತ್ರಿಯುಗ್ಮಸ್ತ್ರಿಕಕುತ್ತ್ರಿಧಾಮಾತ್ರಿದಶಾರ್ಚಿ ತಃ । ಉವಾಚದೈವತಾನ್ಬ್ರಹ್ಮಾಮಾರುತಪ್ರಿಯಕಾಮ್ಯಯಾ ॥೯॥ ಭೋಮಹೇಂದ್ರಾಗ್ನಿವರುಣಮಹೇಶ್ವರಧನೇಶ್ವರಾಃ। ಜಾನತಾಮಪಿವಸ್ಸರ್ವಂವಕ್ಷ್ಯಾಮಿಶ್ರೂಯತಾಂಹಿತಮ್ ॥ ಅನೇನಶಿಶುನಾಕಾರ್ಯಂಕರ್ತವ್ಯಂವೋಭವಿಷ್ಯತಿ। ದದತಾಸ್ಯ ವರಾನ್ಸರ್ವೇಮಾರುತಸ್ಯಾದ್ಯತುಷ್ಟಿದಾನ್ ॥೧೧॥ ತತಸ್ಸಹಸ್ರನಯನಃಪ್ರೀತಿಯುಕ್ತಶ್ಶುಭಾನನಃ । ಕುಶೇಶಯಮಯೀಂ ಮಾಲಾಂಸಮುತ್ಕ್ಷಿಪ್ಯೇದಮಬ್ರವೀತ್॥೧೨॥ ಮತ್ಕರೋತ್ಸೃಷ್ಟವಜ್ರೇಣಹನುರಸ್ಯಯದಾಕ್ಷತಃ।ನಾಮ್ನಾ ವೈಕಪಿಶಾರ್ದೂಲೋಭವಿತಾಹನುಮಾನಿತಿ ॥೧೩॥ ಅಹಮೇವಾಸ್ಯದಾಸ್ಯಾಮಿಅಪರಂವರಮುತ್ತಮಮ್ । ಇತಃಪ್ರಭೃತಿವಜ್ರಸ್ಯಮಮ ವಧ್ಯೋಭವಿಷ್ಯತಿ॥ ೧೪॥ ಮಾರ್ತಾಂಡಸ್ತ್ವಬ್ರವೀತ್ತತ್ರಭಗವಾಂಸ್ತಿಮಿರಾಪಹಃ। ತೇಜಸೋಸ್ಯಮದೀಯಸ್ಯದದಾಮಿಶ

---

ದಂತೆ, ಚಚಾರಹ-ಸಂಚರಿಸಿದನಷ್ಟೆ॥೭॥ಮರುದ್ರೋಗಾತ್-ವಾಯುರೋಗದದೆಶೆಯಿಂದ, ವಿನಿರ್ಮುಕ್ತಾಃ-ಬಿಡಲ್ಪಟ್ಟ, ಪ್ರಜಾಶ್ಚ-ಪ್ರಜೆಗಳಾದರೆ, ಶೀತವಾತವಿನಿರ್ಮುಕ್ತಾಃ-ಶೀತಬಾಧೆಯಿಂದಲೂ, ವಾತರೋಗದಿಂದಲೂ ವಿನಿರ್ಮುಕ್ತವಾಗಿ, ಪುಷ್ಪಿತಾಃ-ಸಂಜಾತಪುಷ್ಪಗಳುಳ್ಳ,ಪದ್ಮಿನ್ಯಇವ-ಕಮಲಬಳ್ಳಿಗಳಂತೆ,ಮುದಿತಾಃ-ಸಂತೋಷಗೊಂಡವರು, ಭವನ್-ಆದರು॥೮॥ತತಃ-ಬಳಿಕ,ತ್ರಿಯುಗ್ಮಃ-ಐಶ್ವರ್ಯವೀರ್ಯಗಳೂ,ಯಶಃಕೀರ್ತಿಗಳೂ.ಜ್ಞಾನವೈರಾಗ್ಯಗಳುಎಂಬ ಮೂರು ಯುಗ್ಮಗಳುಳ್ಳವನು, (ಅಥವಾ, ತ್ರಿಯುಗ್ಮಃ-ಕ್ಷುತ್ಪಿಪಾಸ,ಶೋಕಮೋಹ-ಜರಾಮರಣಗಳೆಂಬ ಮೂರು ಯುಗ್ಮಗಳನ್ನು ಸೃಷ್ಟಿಸಿದವನು)ತ್ರಿಕಕುತ್-ತ್ರಿಮೂರ್ತಿಗಳಲ್ಲಿ ಮೊದಲನೆಯವನಾದ, (ಯದ್ವಾ-ತ್ರಿಲೋಕಗಳಲ್ಲಿಯೂಕೂಡಾಪ್ರಧಾನನಾದ)ತ್ರಿಧಾಮ-ಮೂರುಲೋಕಗಳೇ ಮನೆಯಾಗುಳ್ಳ, ಬ್ರಹ್ಮಾ-ಬ್ರಹ್ಮನು, ತ್ರಿದಶಾರ್ಚಿತಃ-ದೇವತೆಗಳಿಂದ ಪೂಜಿಮಾಡಲ್ಪಟ್ಟವನಾಗಿ,ಮಾರುತಪ್ರಿಯಕಾಮ್ಯಯಾ-ಮಾರುತ-ವಾಯುವಿಗೆ-ಪ್ರಿಯಕಾಮ್ಯಯಾ-ಇಷ್ಟವಂಮಾಡಲಿಚ್ಛೆಯಿಂದ, ದೈವತಾಃ-ದೇವತೆಗಳಂಕುರಿತು, ಉವಾಚ-ಪೇಳಿದನು॥೯॥ ಭೋಮಹೇಂದ್ರಾಗ್ನಿವರುಣಮಹೇಶ್ವರಧನೇಶ್ವರಾಃ-ಎಲೈ ಇಂದ್ರಾಗ್ನಿ ವರುಣ ಈಶಾನ ಕುಬೇರಗಳಿರ್ಯಾ, ಜಾನತಾಮಪಿ-ತಿಳಿದವರಾರರೂ,ವಃ-ನಿಮಗೆ,ಸರ್ವಂ-ಸಮಸ್ತವಾದ, ಹಿತಂ-ಹಿತವನ್ನು,ವಕ್ಷ್ಯಾಮಿ-ಪೇಳುವೆನು.ಶ್ರೂಯತಾಂ-ಕೇಳಲ್ಪಡಲಿ, ಅನೇನಶಿಶುನಾ-ಈ ಬಾಲನಿಂದ, ವಃ-ನಿಮ್ಮಗಳ, ಕಾರ್ಯಂ-ಕಾರ್ಯವು, ಕರ್ತವ್ಯಂ-ಮಾಡತಕ್ಕದ್ದಾಗಿ, ಭವಿಷ್ಯತಿ-ಆಗುವದು,ಸರ್ವೇ-ಸಮಸ್ತರಾದ ನೀವು,ಅದ್ಯ-ಈಗ, ಮಾರುತಸ್ಯ-ವಾಯುವಿಗೆ-ತುಷ್ಟಿದಾನ್-ಸಂತೋಷಕರಂಗಳಾದ,ವರಾನ್-ವರಗಳನ್ನು, ಅಸ್ಯ-ಈ ಹನುಮಂತನಿಗೆ, ದದತ- ಕೊಡಿರಿ ॥೧೧॥ ತತಃ-ಬಳಿಕ, ಸಹಸ್ರನಯನಃ-ದೇವೇಂದ್ರನು, ಪ್ರೀತಿಯುಕ್ತಃ-ಸಂತೋಷಯುಕ್ತನಾಗಿ, ಶುಭಾನನಃ-ಪ್ರಸನ್ನಮುಖನಾಗಿ, ಕುಶೇಶಯಮಯೀಂ-ಕಮಲವಿಕಾರವಾದ, ಮಾಲಾಂ-ಮಾಲಿಕೆಯನ್ನು, ಸಮುತ್ಕ್ಷಿಪ್ಯ-ಎತ್ತಿ, ಇದಂ-ಈ ಮುಂದೆಪೇಳತಕ್ಕಮಾತನ್ನು, ಅಬ್ರವೀತ್-ನುಡಿದನು ॥೧೨॥ ಮತ್ಕರೋತ್ಸೃಷ್ಟವಜ್ರೇಣ-ನನ್ನಹಸ್ತದಿಂದ ಬಿಡಲ್ಪಟ್ಟ ವಜ್ರಾಯುಧದಿಂದ,ಅಸ್ಯ-ಈ ಶಿಶುವಿನ, ಹನುಃ-ಕೆನ್ನೆಯು ಯದಾ-ಯಾವಕಾಲದಲ್ಲಿ, ಕ್ಷತಃ-ಘಾಯಮಾಡಲ್ಪಟ್ಟಿತೋ, ಏಷಃ-ಈ ಶಿಶುವು, ಕಪಿಶಾರ್ದೂಲಃ-ವಾನರಶ್ರೇಷ್ಠನಾಗಿ, ನಾಮ್ನಾ-ಪೆಸರಿನಿಂದ, ಹನುಮಾನಿತಿ-ಹನುಮಂತನೂ ಎಂದು, ಭವಿತಾ-ಆಗುವನು ॥೧೩॥ ಅಹಮೇವ-ನಾನೇ, ಅಸ್ಯ-ಈ ಹನುಮಂತನಿಗೆ, ಉತ್ತಮಂ-ಉತ್ಕೃಷ್ಟವಾದ, ಅಪರಂ-ಮತ್ತೊಂದಾದ, ವರಂ-ವರವನ್ನು, ದಾಸ್ಯಾಮಿ-ಕೊಡುತ್ತೇನೆ, ಇತಃಪ್ರಭೃತಿ-ಇದುಮೊದಲುಗೊಂಡು, ಮಮ-ನನ್ನ, ವಜ್ರಸ್ಯ-ವಜ್ರಾಯುಧಕ್ಕೆ, ಅವಧ್ಯಃ-ವಧಿಸಲಸಾಧ್ಯನು, ಭವಿಷ್ಯತಿ-ಆಗುವನು ॥೧೪॥ ತತ್ರ-ಆ ದೇವತಾಸಭೆಯಲ್ಲಿ, ಭಗವಾನ್-ಪೂಜ್ಯನಾದ, ತಿಮಿರಾಪಹಃ-ಅಂಧಕಾರಾಪ

---

ಹನು, ಕಡುಸಂತೋಷದಿಂದ, ಸರ್ವಭೂತಗಳಲ್ಲಿಯೂ ವಿರೋಧವಿಲ್ಲದೇ ಪೂರ್ವದಂತೆಯೆ ಸಂಚರಿಸಿದನು ॥೭॥ ವಾಯುರೋಗದಿಂದ ಬಿಡಗಡೆಯಾದ ಪ್ರಜೆಗಳೆಲ್ಲರು, ಶೀತಬಾಧೆಯಿಂದಲೂ ವಾತರೋಗದಿಂದಲೂ ಬಿಡಲ್ಪಟ್ಟು ಸಂಜಾತಪುಷ್ಪಗಳುಳ್ಳ ತಾವರೇಬಳ್ಳಿಗಳತೆರದಿ ಮುದಿತರಾದರು॥೮॥ಆಬಳಿಕ,ಐಶ್ವರ್ಯವೀರ್ಯಗಳೂ,ಯಶಃ ಕೀರ್ತಿಗಳೂ ಜ್ಞಾನವೈರಾಗ್ಯಗಳೂ ಎಂಬ ಯುಗ್ಮತ್ರಯಮುಳ್ಳವನಾಗಿಯೂ, ತ್ರಿಮೂರ್ತಿಗಳಲ್ಲಿಯೂ ಮುಖಂಡನಾಗಿರುವನಾಗಿಯೂ, ತ್ರೈಲೋಕ್ಯವೆ ಮಂದಿರವಾಗುಳ್ಳವನಾಗಿಯೂ, ಆಗಿರುವ ಚತುರ್ಮುಖನು, ವಾಯುವಿಗೆ ಪ್ರಿಯವನ್ನುಂಟುಮಾಡಬೇಕೆಂದಿಚ್ಛಿಸಿ, ದೇವತೆಗಳಂ ಕುರಿತಿಂತೆಂದನು ॥೯॥ ಎಲೈ ಇಂದ್ರ, ಅಗ್ನಿ, ವರುಣ, ಮಹೇಶ್ವರ, ಧನೇಶ್ವರಗಳಿರಾ ! ನೀವೆಲ್ಲರೂ ಬಲ್ಲವರೇಸರಿ, ಆದರೂ ಹಿತಕರವಾಗಿರ್ಪ ವಚನವಂ ಪೇಳ್ವೆನು ಕೇಳಿರಿ (ಅದೆಂತೆನೆ) ಈ ಬಾಲಕನಿಂದ ನಿಮ್ಮ ಕೃತ್ಯಗಳೆಲ್ಲಾ ಮಾಡ ತಕ್ಕದ್ದಾಗಿರುವವು, ಆದಕಾರಣ ನೀವುಗಳು ವಾಯುವಿಗೆ ಸಂತೋಷಕರವಾಗಿರುವಂತೆ, ಈ ಕುಮಾರನಿಗೀಗ ವರಗಳಂ ಕೊಡಿರೆಂದು ನುಡಿದವನಾಗಲೂ, ಸಹಸ್ರಾಕ್ಷನು ಪ್ರೀತಿಯುಳ್ಳವನಾಗಿ, ಪದ್ಮಮಾಲಿಕೆಯಂ ಪಿಡಿದುಕೊಂಡು ಇಂತೆಂದು ನುಡಿದನು ॥೧೨॥ ಎನ್ನಕರನಿರ್ಮುಕ್ತವಾದ ವಜ್ರಾಯುಧದಿಂದ ಈ ಬಾಲಕನ, ಯಡಗೆನ್ನೆಯು ಹೊಡದುಹೋಯಿತಾದಕಾರಣ, ಈ ಕಪಿವರನು ಹನುಮಂತನೆಂದು ಪ್ರಸಿದ್ಧನಾಗುವನು, ಇದಲ್ಲದೇ ಇದು ಮೊದಲ್ಗೊಂಡು ನನ್ನ ವಜ್ರಾಯುಧಕ್ಕೂ ಕೂಡಾ ವಧ್ಯನಾಗಬ್ಯಾಡೆಂದು ಸರ್ವೋ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಿಕಾಂಕಲಾಮ್ ॥೧೫॥ ಯದಾಚಶಾಸ್ತ್ರಾಣ್ಯಧ್ಯೇತುಂಶಕ್ತಿರಸ್ಯಭವಿಷ್ಯತಿ । ತದಾಸ್ಯಶಾಸ್ತ್ರಂದಾಸ್ಯಾಮಿಯೇನವಾಗ್ಮೀ ಭವಿಷ್ಯತಿ॥೧೬॥ ನಚಾಸ್ಯಭವಿತಾಕಶ್ಚಿತ್ಸದೃಶಶ್ಶಾಸ್ತ್ರದರ್ಶನೇ ॥೧೭॥ ವರುಣಶ್ಚ ವರಂಪ್ರಾದಾನ್ನಾಸ್ಯಮೃತ್ಯುರ್ಭವಿಷ್ಯತಿ। ವರ್ಷಾಯುತಶತೇನಾಪಿಮತ್ಪಾಶಾದುದಕಾದಪಿ ॥೧೮॥ ಯಮೋದಂಡಾದವಧ್ಯತ್ವಮರೋಗತ್ವಂಚನಿತ್ಯಶಃ ॥ ದಶತ್ರಸ್ಯವರಂತುಷ್ಟ ಅವಿಷಾದಂಸ್ಮ ಸಂಯುಗೇ ॥೧೯॥ ಗದೇಯಂಮಾಮಿಕಾನ್ಯೆನಂಸಂಯುಗೇಷುವಧಿಷ್ಯತಿ । ಇತಿಸ್ಮ ವರದಃಪ್ರಾಹತದಾಹ್ಯೇಕಾಕ್ಷಿಪಿಂಗಳಃ॥೨೦॥ ಮತ್ತೋಮದಾಯುಧಾನಾಂಚಅವಧ್ಯೋಯಂಭವಿಷ್ಯತಿ। ಇತ್ಯೇವಂಶಂಕರೇಣಾಪಿದತ್ತೋಸ್ಯಪರಮೋವರಃ ॥೨೧॥ ಸರ್ವೇಷಾಂಬ್ರಹ್ಮದಂಡಾನಾಮವಧ್ಯೋಯಂಭವಿಷ್ಯತಿ । ದೀರ್ಘಾಯುಶ್ಚ ಮಹಾತ್ಮಾ ಚ ಇತಿ ಬ್ರಹ್ಮಾ ಬ್ರವೀದ್ವಚಃ ॥೨೨॥ ವಿಶ್ವಕರ್ಮಾ ಸದೃಷ್ಟ್ವೈವೇನಂಬಾಲಸೂರ್ಯೋಪಮಂಶಿಶುಮ್ । ಶಿಲ್ಪಿನಾಂಪ್ರವರಃಪ್ರಾಹವರಮಸ್ಯಮಹಾತ್ಮನಃ ॥ ೨೩ ॥ ವಿನಿರ್ಮಿತಾನಿದೇವಾನಾಮಾಯುಧಾನೀಹಯಾನಿತು । ತೇಷಾಂಸಂಗ್ರಾಮಕಾಲೇತುಹ್ಯವ

---

ಹಾರಿಯಾದ, ಮಾರ್ತಾಂಡಸ್ತು-ಸೂರ್ಯನಾದರೆ, ಅಬ್ರವೀತ್-ನುಡಿದನು, ಅಸ್ಯ-ಈಹನುಮಂತನಿಗೆ, ಮದೀಯಸ್ಯ-ನನ್ನ ಸಂಬಂಧವಾದ, ತೇಜಸಃ-ಪ್ರಕಾಶದ, ಶತಿಕಾಂ-ನೂರಲ್ಲಿ ಒಂದಾದ, ಕಲಾಂ-ಕಲೆಯನ್ನು, ದದಾಮಿ-ಕೊಡುತ್ತೇನೆ, ಯದಾಚ-ಯಾವಾಗ, ಶಾಸ್ತ್ರಾಣಿ-ಶಾಸ್ತ್ರಗಳನ್ನು, ಅಧ್ಯೇತುಂ-ಅಧ್ಯಯನಮಾಡುವದಕ್ಕೋಸ್ಕರ, ಅಸ್ಯ-ಈ ಹನುಮಂತನಿಗೆ, ಶಕ್ತಿಃ-ಸಾಮರ್ಥ್ಯವು, ಭವಿಷ್ಯತಿ-ಉಂಟಾಗುವದೂ, ತದಾ-ಆ ಕಾಲದಲ್ಲಿ, ಅಸ್ಯ-ಈ ಹುಡುಗನಿಗೆ, ಶಾಸ್ತ್ರಂ-ಶಾಸ್ತ್ರವನ್ನು, ದಾಸ್ಯಾಮಿ-ಕೊಡುವೆನು. ಯೇನ-ಯಾವಶಾಸ್ತ್ರದಿಂದ, ವಾಗ್ಮೀ-ವಾಚಾಳುಕನು,ಭವಿಷ್ಯತಿ-ಆಗುವನೋ ಅಸ್ಯ-ಈ ಹನುಮಂತನಿಗೆ, ಕಶ್ಚಿತ್-ಒಬ್ಬಾನೊಬ್ಬನು, ಶಾಸ್ತ್ರದರ್ಶನೇ-ಶಾಸ್ತ್ರದ ನೋಡುವಿಕೆಯಲ್ಲಿ, ಸದೃಶಃ - ಸಮಾನನು, ನಭವಿತಾ-ಆಗಲಾರನು ॥ ೧೭ ॥ ವರುಣಶ್ಚ-ವರುಣನು, ವರಂ-ವರವನ್ನು, ಪ್ರಾದಾತ್-ಕೊಟ್ಟನು, ಅಸ್ಯ-ಈ ಹನುಮಂತನಿಗೆ, ವರ್ಷಾಯುತಶತೇನಾಪಿ- ಲಕ್ಷವರ್ಷಗಳಿಂದಲಾದರೂ, ಮತ್ಪಾಶಾತ್-ವರುಣಪಾಶದದೆಸೆಯಿಂದಲೂ ಉದಕಾದಪಿ-ನೀರಿನದೆಸೆಯಿಂದಲೂ, ಅಸ್ಯ-ಈಹನುಮಂತನಿಗೆ,ಮೃತ್ಯುಃ-ಮರಣವು,ನಭವಿಷ್ಯತಿ-ಆಗಲಾರದು ॥೧೮॥ಯಮಃ-ಯಮನು, ದಂಡಾತ್-ಕಾಲದಂಡದದೆಸೆಯಿಂದಲೂ, ಅವಧ್ಯತ್ವಂ-ವಧಿಸಲಸಾಧ್ಯತ್ವವನ್ನು, ನಿತ್ಯಶಃ-ನಿರಂತರವು, ಅರೋಗತ್ವಂಚ-ಆರೋಗ್ಯಭಾಗ್ಯವನ್ನು, ಸಂಯುಗೇ-ಕಾಳಗದಲ್ಲಿ, ಅವಿಷಾದಂ-ಬಳಲಿಕೆಯಿಲ್ಲದಿರೋಣವನ್ನು, ಅಸ್ಯ-ಈ ಆಂಜನೇಯನಿಗೆ, ವರಂ-ವರವನ್ನು, ತುಷ್ಟಃ-ಸಂತೋಷಯುಕ್ತನಾಗಿ, ದದೌಸ್ಮ-ಕೊಟ್ಟನಷ್ಟೆ ॥೧೯॥ ಮಾಮಿಕಾ-ನನ್ನ ಸಂಬಂಧವಾದ, ಇಯಂಗದಾ-ಈ ಗದೆಯು, ಸಂಯುಗೇಷು-ಕಾಳಗದಲ್ಲಿ, ಏನಂ-ಈ ಹನುಮಂತನನ್ನು, ನವಧಿಷ್ಯತಿ-ವಧಿಸಲಾರದು, ಇತಿ-ಹೀಗೆಂತೆಂದು, ವರದಃ-ವರಪ್ರದಾಯಕನಾದ, ಏಕಾಕ್ಷಿಪಿಂಗಳಃ-ಕುಬೇರನು, ತದಾ-ಆ ಕಾಲದಲ್ಲಿ, ಪ್ರಾಹಹಿ-ಪೇಳದನಷ್ಟೆ ॥೨೦॥ ಅಸ್ಯ-ಈ ಆಂಜನೇಯನು, ಮತ್ತಃ-ನನಿಗೂ, ಮದಾಯುಧಾನಾಂಚ-ನನ್ನ ಆಯುಧಗಳಿಗೂ,ಅವಧ್ಯಃ-ಅವಧ್ಯನು, ಭವಿಷ್ಯತಿ-ಆಗುವನು, ಇತ್ಯೇವಂ-ಈ ಪರಿಯಾಗಿ, ಪರಮಃ-ಶ್ರೇಷ್ಠವಾದ, ವರಃ-ವರವು,ಶಂಕರೇಣಾಪಿ-ಈಶಾನನಿಂದಲೂಕೂಡ, ದತ್ತಃ-ಕೊಡಲ್ಪಟ್ಟಿತು॥೨೧॥ಬ್ರಹ್ಮಾ-ಬ್ರಹ್ಮನು, ಸರ್ವೇಷಾಂ-ಸಮಸ್ತಗಳಾದ,ಬ್ರಹ್ಮದಂಡಾನಾಂ-ಬ್ರಹ್ಮಶಾಪಗಳಿಗೆ, ಅವಧ್ಯಃ-ವಧಿಸಲಸಾಧ್ಯನಾಗಿ, ದೀರ್ಘಾಯುಶ್ಚ-ದೀರ್ಘಾಯುಷ್ಮಂತನೂ,ಮಹಾತ್ಮಾಚ-ಮಹಾಪ್ರಭಾವವುಳ್ಳವನು, ಭವಿಷ್ಯತಿ-ಆಗುವನು, ಇತಿ-ಇಂತೆಂದು, ವಚಃ-ಮಾತನ್ನು, ಅಬ್ರವೀತ್-ನುಡಿದನು ॥೨೨॥ ಶಿಲ್ಪಿನಾಂ-ದೇವ ಶಿಲ್ಪಿಗಳೊಳಗೆ, ಪ್ರವರಃ-ಶ್ರೇಷ್ಠನಾದ, ವಿಶ್ವಕರ್ಮಾ-ವಿಶ್ವಕರ್ಮ ಬ್ರಹ್ಮನು, ಬಾಲಸೂರ್ಯೋಪಮಂ-ಬಾಲಸೂರ್ಯನಿಗೆ ಸಮಾನನಾದ, ಏನಂಶಿಶುಂ-ಈ ಬಾಲಕನನ್ನು,ದೃಷ್ಟ್ವಾ-ಕಂಡು, ಅಯಂ-ಈ ಬಾಲಕನು, ಸಂಗ್ರಾಮಕಾಲೇ-ಯುದ್ಧಕಾಲದಲ್ಲಿ,

---

ತ್ತಮವಾದ ಮತ್ತೊಂದು ವರವನ್ನೂ ಕೂಡಾ ಕೊಡುವೆನೆಂದು ನುಡಿಯಲೂ, ಮಾರ್ತಾಂಡನು ಕಡುಸಂತುಷ್ಟನಾಗಿ, ಎನ್ನ ತೇಜಸ್ಸಿನೊಳು ನೂರನೇಕಳೆಯನ್ನಿಯ್ಯುವೆನಲ್ಲದೆ, ಈಶಿಶುವಿಗೆ ಶಾಸ್ತ್ರಾಭ್ಯಾಸವಂಗೈಯ್ಯಲೂ ಶಕ್ತಿಯುಂಟಾದ ಸಮಯದಲ್ಲಿ ಈ ಬಾಲಕನು ಬಹಳವಾಚಾಳಕನಾಗುವಂತೆ ಶಾಸ್ತ್ರಂಗಳನ್ನಭ್ಯಾಸಮಾಡಿಸುವೆನು, ಹಾಗಾದೊಡೆ ಈತನಿಗೆ ಈಡಾಗಿರುವ ಶಾಸ್ತ್ರಜ್ಞನ್ಯಾರೂ ಇರಲಾರನೆಂದು ನುಡಿದನು ॥೧೭॥ ಆ ಬಳಿಕ ವರುಣನು ಈ ಬಾಲಕನಿಗೆ ಹತ್ತುಸಾವಿರ ವರುಷವಾದರೂ, ನನ್ನ ಪಾಶದಿಂದಲಾಗಲೀ ಉದಕದಿಂದಲಾಗಲೀ, ಯಾವದಿಂದಲೂ ಕೂಡಾ, ಮೃತ್ಯುವುಂಟಾಗಬ್ಯಾಡೆಂದು ವರವಂಕೊಡಲೂ, ಯಮನು ಕಡುಸಂತುಷ್ಟನಾಗಿ, ಕಾಲದಂಡದಿಂದ ಅವಧ್ಯತೆಯನ್ನೂ ನಿರಂತರವು ಆರೋಗ್ಯ ಭಾಗ್ಯವನ್ನೂ, ರಣರಂಗಗಳಲ್ಲಿ ಬಳಲಿಕೆಯಿಲ್ಲದೇ ಇರೋಣವನ್ನೂ,ಈ ವರಗಳನ್ನೆಲ್ಲಾ ಕೊಟ್ಟವನಾದನು ॥೧೯॥ ಆವೇಳೆಯಲ್ಲಿ ಕುಬೇರನು, ಎನ್ನ ಗದಾಯುಧದಿಂದೀಬಾಲಕನು ಕಾಳಗದಲ್ಲಿ ವಧಿಸಲಸಾಧ್ಯನಾಗಿರಲೆಂದು ವರವಂಕೊಡಲೂ, ಪರಮೇಶ್ವರನೂಕೂಡಾ, ನನಿಗೂ ನನ್ನ ಆಯುಧಗಳಿಗೂ ಸಹಾ ಅವಧ್ಯನಾಗಿರಲೆಂದು ಸರ್ವೋತ್ತಮವಾದ ವರವಂಕೊಟ್ಟನು ॥೨೧॥ ಬ್ರಹ್ಮದಂಡಗಳಿಗೆಲ್ಲಾ ಅವಧ್ಯನಾಗಿಯೂ, ದೀರ್ಘಾಯುಷ್ಮಂತನಾಗಿಯೂ, ಮಹಾಪ್ರಭಾವಮುಳ್ಳವನಾಗಿಯೂ ಇರುವಂಥಾವನಾಗೆಂದು ಬ್ರಹ್ಮನು ನುಡಿಯಲೂ, ದೇವಶಿಲ್ಪಿಗಳೊಳಗೆ ಉತ್ತಮನಾದ ವಿಶ್ವಕರ್ಮಬ್ರಹ್ಮನು, ಬಾಲಸೂರ್ಯನಂತೆ ಕಂಗೊಳಿಸುತ್ತಿರುವ ಈ ಬಾಲಕನಂ ಕಂಡು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಧ್ಯೋಯಂಭವಿಷ್ಯತಿ ॥೨೪॥ ತತಸ್ಸುರಾಣಾಂತುವರೈರ್ದೃಷ್ಟ್ವಾಹ್ಯೇನಮಲಂಕೃತಂ । ಚತುರ್ಮುಖಸ್ತುಷ್ಟಮುಖೋವಾ ಯುಮಾಹಜಗದ್ಗುರುಃ ॥೨೫॥ ಅಮಿತ್ರಾಣಾಂಭಯಕರೋಮಿತ್ರಾಣಾಮಭಯಂಕರಃ । ಅಜೇಯೋಭವಿತಾಪುತ್ರಸ್ತವಮಾ ರುತಮಾರುತಿಃ ॥೨೬॥ ರಾವಣೋತ್ಸಾದನಾರ್ಥಾನಿರಾಮಪ್ರೀತಿಕರಾಣಿಚ । ರೋಮಹರ್ಷಕರಾಣ್ಯೇಷಕರ್ತಾಕರ್ಮಾಣಿ ಸಂಯುಗೇ ॥೨೭॥ ಏವಮುಕ್ತ್ವಾತಮಾಮಂತ್ರ್ಯಮಾರುತಂತ್ವಮರಾಸ್ತದಾ । ಯಥಾಗತಂಯಯುಸ್ಸರ್ವೇಪಿತಾಮಹಪು ರೋಗಮಾಃ ॥೨೮॥ ಸೋಪಿಗಂಧವಹಃಪುತ್ರಂಪ್ರಗೃಹ್ಯಗೃಹಮಾನಯತ್ । ಅಂಜನಾಯಾಸ್ತದಾಖ್ಯಾಯವರಂದತ್ತಂವಿನಿ ರ್ಗತಃ ॥೨೯॥ ಪ್ರಾಪ್ಯರಾಮವರಾನೇಷವರದಾನಸಮನ್ವಿತಃ । ಬಲೇನಾತ್ಮನಿಸಂಸ್ಥೇನಸೋಪೂರ್ಯತಯಥಾರ್ಣವಃ ॥೩೦॥ ಬಲೇನಾಪೂರ್ಯಮಾಣೋಹಿಏಷವಾನರಪುಂಗವಃ । ಆಶ್ರಮೇಷುಮಹರ್ಷೀಣಾಮಪರಾಧ್ಯತಿನಿರ್ಭಯಃ ॥೩೧॥ ಸ್ರುಗ್ಭಾಂ ಡಾನ್ಯಗ್ನಿಮಾಜ್ಯಂಚವಲ್ಕಲಾನಾಂಚಸಂಚಯಾನ್ । ಭಗ್ನವಿಚ್ಛಿನ್ನವಿಧ್ವಸ್ತಾನ್ಮಹರ್ಷೀಣಾಂಕರೋತ್ಯಯಮ್ ॥೩೨॥

ಯಾನಿ-ಯಾವ, ಆಯುಧಾನಿ-ಆಯುಧಗಳು, ಇಹ-ಈ ಲೋಕದಲ್ಲಿ, ದೇವಾನಾಂ-ದೇವತೆಗಳಿಗೋಸ್ಕರ, ಅಭಿನಿರ್ಮಿತಾನಿ-ಸೃಷ್ಟಿಮಾಡಲ್ಪಟ್ಟಿವೆಯೋ, ತೇಷಾಂ-ಆ ಆಯುಧಗಳಿಗೆ, ಅವಧ್ಯಃ-ವಧಿಸಲಸಾಧ್ಯನು, ಭವಿಷ್ಯತಿ-ಆಗುವನು ॥೨೪॥ ತತಃ-ಬಳಿಕ, ಸುರಾಣಾಂ-ದೇವತೆಗಳ, ವರೈಃ-ವರಗಳಿಂದ, ಅಲಂಕೃತಂ-ಭೂಷಿಸಲ್ಪಟ್ಟ, ಏನಂ-ಈ ಹನುಮಂತನನ್ನು, ದೃಷ್ಟ್ವಾ-ಕಂಡು, ತುಷ್ಟಮುಖಃ-ಪ್ರಸನ್ನಮುಖನಾದ, ಜಗದ್ಗುರುಃ-ಜಗತ್ಸೃಷ್ಟಿ ಕರ್ತನಾದ, ಚತುರ್ಮುಖಃ-ಚತುರ್ಮುಖಬ್ರಹ್ಮನು, ವಾಯುಂ-ವಾಯುವಿನನ್ನು ಕುರಿತು, ಆಹ-ಹೇಳಿದನು ॥೨೫॥ ಹೇಮಾರುತ-ಎಲೈ ವಾಯುವೇ, ಮಾರುತಿಃ-ವಾಯುಪುತ್ರನೆಂದು ಪ್ರಸಿದ್ಧನಾದ, ತವಪುತ್ರಃ-ನಿನ್ನ ಮಗನು, ಅಮಿತ್ರಾಣಾಂ-ಶತ್ರುಗಳಿಗೆ, ಭಯಕರಃ-ಭಯಂಕರನಾಗಿ, ಮಿತ್ರಾಣಾಂ-ಮಿತ್ರರಿಗೆ, ಅಭಯಂಕರಃ-ಅಭಯಪ್ರದಾತನಾಗಿ, ಅಜೇಯಃ-ಜಯಿಸಲಸಾಧ್ಯನು, ಭವಿತಾ-ಆಗುವನು ॥೨೬॥ ಏಷಃ-ಈ ಹನುಮಂತನು, ಸಂಯುಗೇ-ಯುದ್ಧದಲ್ಲಿ, ರಾವಣೋತ್ಸಾದನಾರ್ಥಾನಿ-ರಾವಣನ ಮೂಲೋತ್ಪಾಟನವೇ ಪ್ರಧಾನವಾಗುಳ್ಳ, ರಾಮಪ್ರೀತಿಕರಾಣಿಚ-ಶ್ರೀರಾಮನಿಗೆ, ಸಂತೋಷಕರಂಗಳಾದ, ರೋಮಹರ್ಷಕರಾಣಿ-ರೋಮಾಂಚವನ್ನುಂಟುಮಾಡುವ, ಕರ್ಮಾಣಿ-ಕರ್ಮಗಳನ್ನು, ಕರ್ತಾ-ಮಾಡುವನು ॥೨೭॥ ಪಿತಾಮಹಪುರೋಗಮಾಃ-ಬ್ರಹ್ಮನೇ ಮೊದಲಾಗುಳ್ಳ, ಸರ್ವೇ-ಸಮಸ್ತರಾದ, ಅಮರಾಃ-ದೇವತೆಗಳು, ತದಾ-ಆ ಕಾಲದಲ್ಲಿ, ಏವಮುಕ್ತ್ವಾ-ಈ ಪ್ರಕಾರಹೇಳಿ, ತಂ ಮಾರುತಂ-ಆ ವಾಯುವಿನನ್ನು, ಆಮಂತ್ರ್ಯ-ಸಂಪತಿಸಿ, ಯಥಾಗತಂ-ಬಂದಂತೆ, ಯಯುಃ-ತೆರಳಿದರು ॥೨೮॥ ಸೋಪಿಗಂಧವಹಃ-ಆ ವಾಯುವು, ಪುತ್ರಂ-ಮಗನನ್ನು, ಪ್ರಗೃಹ್ಯ-ತೆಗದುಕೊಂಡು, ಗೃಹಂ-ಮನೆಯಂ ಕುರಿತು, ಆನಯತ್-ಕರದುಕೊಂಡು ಬಂದನು, ಅಂಜನಾಯಾಃ-ಅಂಜನಾದೇವಿಗೆ, ದತ್ತಂ-ಕೊಡಲ್ಪಟ್ಟ, ತದ್ವರಂ-ಆ ವರವನ್ನು, ಆಖ್ಯಾಯ-ಹೇಳಿ, ವಿನಿರ್ಗತಃ-ಹೊರಟನು ॥೨೯॥ ಹೇರಾಮ-ಎಲೈ ಶ್ರೀರಾಮನೇ, ಸಏಷಃ-ಆ ಯೀ ಆಂಜನೇಯನು, ವರಾನ್-ವರಗಳನ್ನು, ಪ್ರಾಪ್ಯ-ಹೊಂದಿ, ವರದಾನಸಮನ್ವಿತಃ-ದೇವತೆಗಳ ವರದಾನದಿಂ ಕೂಡಿದವನಾಗಿ, ಆತ್ಮನಿ-ತನ್ನ ದೇಹದಲ್ಲಿ, ಸಂಸ್ಥೇನ-ಯಿರುತಿರುವ, ಬಲೇನ-ತ್ರಾಣೆಯಿಂದ, ಅರ್ಣವೋಯಥಾ-ಕಡಲಿನಂತೇ, ಅಪೂರ್ಯತ-ಪೂರ್ಣನಾದನು ॥೩೦॥ ಬಲೇನ-ಬಲದಿಂದ, ಆಪೂರ್ಯಮಾಣಃ-ತುಂಬಿಸಲ್ಪಟ್ಟ, ಏಷವಾನರಪುಂಗವಃ-ಈ ವಾನರಶ್ರೇಷ್ಠನು, ನಿರ್ಭಯಃ-ನಿರ್ಭೀತನಾಗಿ, ಮಹರ್ಷೀಣಾಂ-ಮಹರ್ಷಿಗಳ, ಆಶ್ರಮೇಷು-ಆಶ್ರಮಗಳಲ್ಲಿ, ಅಪರಾಧ್ಯತಿ-ಅಪರಾಧಮಾಡಿದನು ॥೩೧॥ ಅಯಂ-ಈ ಆಂಜನೇಯನು, ಮಹರ್ಷೀಣಾಂ-ಋಷಿಗಳ, ಸ್ರುಗ್ಭಾಂಡಾನಿ-ಯಜ್ಞಪಾತ್ರೆಗಳನ್ನು, ಅಗ್ನಿಂ-ಅಗ್ನಿಯನ್ನು, ಆಜ್ಯಂಚ-ಆಜ್ಯವನ್ನು, ವಲ್ಕಲಾನಾಂಚ-ನಾರುಶೀರೆಗಳ ಸಂಚಯಾನ್-ರಾಶಿಗಳನ್ನು, ಭಗ್ನವಿಚ್ಛಿನ್ನವಿಧ್ವಸ್ತಾನ್-ಮುರಿದವುಗಳನ್ನಾಗಿಯೂ, ವಿಚ್ಛಿನ್ನಮಾಗಿಯೂ, ನಾಶಗೊಳಿಸಲ್ಪಟ್ಟವುಗಳನ್ನಾಗಿಯೂ, ಕರೋತಿ-ಮಾಡಿದನು ॥೩೨॥ ಮಹಾಬಲಃ-

ಇಂತೆಂದು ಹೇಳಿದನು, ನಾನು ದೇವತೆಗಳಿಗಾಗಿ ಯಾವಯಾವ ಆಯುಧಂಗಳಂ ನಿರ್ಮಿಸಿಹೇನೆಯೋ, ಅವುಗಳಿಗೆಲ್ಲಾ ಈ ಕುವರನು ಸಂಗರದೊಳು ಅವಧ್ಯನಾಗಿರಲೆಂದು ವರವಂ ಕೊಟ್ಟನು ॥೨೪॥ ಅನಂತರವು ಚತುರ್ಮುಖನು, ದೇವ ವರಗಳಿಂದಲಂಕೃತನಾದ ಈ ಬಾಲಕನಂ ಕಂಡು, ಸಂತುಷ್ಟಮುಖಮುಳ್ಳವನಾಗಿ, ಅಗ್ನಿಸಖನಂ ಕುರಿತಿಂತೆಂದನು ಎಲೈ ವಾಯುವೇ! ನಿನ್ನ ಪುತ್ರನಾದ ಈ ಹನುಮಂತನು ಹಗೆಯರಿಗೆ ಭಯಂಕರನಾಗಿಯೂ, ಮಿತ್ರರಿಗೆ ಅಭಯದಾಯಕನಾಗಿಯೂ ಜಯಿಸಲಶಾಧ್ಯನಾಗಿಯೂ ಇರುವನಾಗಿ, ರಣರಂಗದಲ್ಲಿ ರಾವಣನ ಮೂಲೋತ್ಪಾಟನವೆಂಬ ಕಾರ್ಯವೇ ಮುಖ್ಯವಾಗಿರುವ, ಮತ್ತೂ ಶ್ರೀರಾಮ ಮನಸ್ಸಂತೋಷಕರಂಗಳಾದ, ರೋಮಾಂಚವನ್ನುಂಟುಮಾಡುತ್ತಿರುವ ಕರ್ಮಗಳಂ ಗೈಯ್ಯುವನೆಂದು ನುಡಿದು, ಬ್ರಹ್ಮಮುಂತಾದ ದೇವತೆಗಳೆಲ್ಲರು ಬಂದಂತೆಯೇ ತೆರಳಲೂ, ಆ ವಾಯುವು ಪುತ್ರನಂ ತೆಗದುಕೊಂಡು ಆಂಜನಾದೇವಿಯ ಮಂದಿರವಂ ಹೊಂದಿಸಿ, ಆಕೆಗೆ ಆ ವರಗಳನ್ನೆಲ್ಲಾ ಹೇಳಿ ಹೊರಟು ಹೋದನು ॥೨೯॥ ಎಲೈ ರಘುನಂದನನೆ, ಈ ಹನುಮಂತನೀಪರಿಯಾಗಿ ವರಗಳಂ ಹೊಂದಿ, ವರದಾನಸಮನ್ವಿತನಾಗಿ, ದೇಹಶಕ್ತಿಯಿಂದ ಸಮುದ್ರದಂತೆ ತುಂಬಲ್ಪಟ್ಟನು ॥೩೦॥ ಮಹಾಬಲವಂತನಾದ ಈ ಹನುಮಂತನಾದರೆ, ನಿರ್ಭೀತನಾಗಿ, ಋಷ್ಯಾಶ್ರಮಗಳಂ ಪೊಕ್ಕು, ಸ್ರುಗ್ಭಾಂಡಗಳನ್ನೂ, ಅಗ್ನಿಯನ್ನೂ, ಆಜ್ಯವನ್ನೂ, ನಾರುಮಡಿಗಳ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಏವಂವಿಧಾನಿಕರ್ಮಾಣಿಕುರುತೇಸ್ಮ ಮಹಾಬಲಃ ॥೩೨॥ ಸರ್ವೇಷಾಂಬ್ರಹ್ಮ ದಂಡಾನಾಮವಧ್ಯಂಬ್ರಹ್ಮಣಾಕೃತಮ್। ಜಾನಂತಋಷಯಸ್ತಂವೈ ಕ್ಷಮಂತೇತಸ್ಯಶಕ್ತಿತಃ ॥೩೩॥ ಯದಾಕೇಸರಿಣಾತ್ವೇಷ ವಾಯುನಾಸೋಂಜನೇನಚ । ಪ್ರತಿಷಿದ್ಧೋಽಪಿ ಮರ್ಯಾದಾಂಲಂಘಯತ್ಯೇಷವಾನರಃ ॥೩೪॥ ತತೋಮಹರ್ಷಯಃಕ್ರುದ್ಧಾಭೃಗ್ವಾಂಗೀರಸವಂಶಜಾಃ । ಶೇಪುರೇನಂರಘುಶ್ರೇಷ್ಠ ನಾತಿಕ್ರುದ್ಧಾತಿಮನ್ಯವಃ ॥೩೫॥ ಬಾಧಸೇಯತ್ಸಮಾಶ್ರಿತ್ಯಬಲಮಸ್ಮಾನ್ ಪ್ಲವಂಗಮ । ತದ್ದೀರ್ಘಕಾಲಂವೇತ್ತಾಸಿ ನಾಸ್ಮಾಕಂಶಾಪಮೋಹಿತಃ ॥೩೬॥ ತತಸ್ತುಹೃತತೇಜೌಜಾಮಹರ್ಷಿವಚನೌಜಸಾ । ಏಷೋಽಶ್ರಮಾಣ್ಯನಾತ್ಯೇತಿಮೃದುಭಾವಂಗತಶ್ಚರನ್ ॥೩೭॥ ಅಥಋಕ್ಷರಜಾನಾಮವಾಲಿಸುಗ್ರೀವಯೋಃಪಿತಾ। ಸರ್ವವಾನರರಾಜಾಸೀತ್ತೇಜಸಾಮಿವಭಾಸ್ಕರಃ ॥೩೮॥ ಸತುರಾಜ್ಯಂಚಿರಂಕೃತ್ವಾವಾನರಾಣಾಂಹರೀಶ್ವರಃ । ತತಸ್ತ್ವೃಕ್ಷರಜಾನಾಮಕಾಲಧರ್ಮೇಣಸಂಗತಃ॥

---

ಮಹಾಬಲಿಷ್ಠನಾದವನಾಗಿ, ಏವಂವಿಧಾನಿ ಇಂಥಾಬಗೆಗಳುಳ್ಳ, ಕರ್ಮಾಣಿ-ಕರ್ಮಗಳನ್ನು, ಕುರುತೇಸ್ಮ-ಮಾಡಿದನಷ್ಟೇ ॥೩೨॥ ಋಷಯಃ- ಋಷಿಗಳು, ಸರ್ವೇಷಾಂ- ಸಮಸ್ತಗಳಾದ, ಬ್ರಹ್ಮದಂಡಾನಾಂ-ಬ್ರಹ್ಮಶಾಪಗಳಿಗೆ, ಅವಧ್ಯಂ-ನಾಶರಹಿತನಾಗಿ, ಬ್ರಹ್ಮಣಾ-ಬ್ರಹ್ಮದೇವರಿಂದ, ಕೃತಂ - ಮಾಡಲ್ಪಟ್ಟ ತಂ-ಆ ಆಂಜನೇಯನನ್ನು, ಜಾನಂತಃ-ತಿಳಿದವರಾಗಿ, ತಸ್ಯ-ಆ ಆಂಜನೇಯನ, ಶಕ್ತಿತಃ-ಸಾಮರ್ಥ್ಯದ ದೆಸೆಯಿಂದ, ಕ್ಷಮಂತೇವೈ-ಸಹಿಸಿದರಷ್ಟೇ॥ ಏಷಃ-ವಾನರಃ-ಈ ವಾನರನು, ಯದಾ-ಯಾವ ಕಾಲದಲ್ಲಿ, ಸಾಂಜನೇನ-ಅಂಜನಾದೇವಿಯಿಂ ದೊಡಗೂಡಿದ, ಕೇಸರಿಣಾ-ಕೇಸರಿಯಿಂದಲೂ, ವಾಯುನಾಚ-ವಾಯುವಿನಿಂದಲೂ, ಪ್ರತಿಷಿದ್ಧೋಽಪಿ-ಬ್ಯಾಡವೆಂದು ಹೇಳಲ್ಪಟ್ಟವನಾದರೂ, ಮರ್ಯಾದಾಂ-ಪಿತ್ರಾಜ್ಞೆಯನ್ನು ಲಂಘಯತ್ಯೇವ- ಉಲ್ಲಂಘಿಸಮಾಡುತಲೇ ಬಂದನು ॥೩೪॥ ತತಃ-ಬಳಿಕ, ಹೇ ರಘುಶ್ರೇಷ್ಠ-ಎಲೈ ಶ್ರೀರಾಮನೇ, ಭೃಗ್ವಾಂಗೀರಸವಂಶಜಾಃ - ಭೃಗುಋಷಿ-ಅಂಗೀರಸರ - ವಂಶದಲ್ಲಿ ಹುಟ್ಟಿದ, ಕ್ರುದ್ಧಾಃ-ಸ್ವಾಭಾವಿಕ ಕೋಪಮುಳ್ಳ, ಮಹರ್ಷಯಃ-ಋಷಿಗಳು, ನಾತಿಕ್ರೋಧಾತಿಮನ್ಯವಃ-ಬಹಳವಾಗಿ ಕೋಡಿಯಹೇಕೆಯಿಂದಲೂ ಅತ್ಯಾಗ್ರಹವು ಎರಡೂ ಇಲ್ಲದವರಾಗಿ, ಶೇಪುಃ-ಶಪಿಸಿದರು ॥ ೩೫ ॥ ಹೇ ಪ್ಲವಂಗಮ-ಎಲೈ ವಾನರನೆ, ಯದ್ಬಲಂ-ಯಾವಬಲವನ್ನು, ಸಮಾಶ್ರಿತ್ಯ-ಆಶ್ರಯಿಸಿ, ಅಸ್ಮಾನ್-ನಮ್ಮನ್ನು, ಬಾಧಸೆ, ಬಾಧೆಗೊಳಸುತ್ತಿಯೋ, ತತ್-ಆ ಬಲವನ್ನು, ಅಸ್ಮಾಕಂ-ನಮ್ಮ ಶಾಪಮೋಹಿತಃ-ಶಾಪದಿಂ ಮೋಹಿತನಾಗಿ, ದೀರ್ಘಕಾಲಂ-ಬಹುಕಾಲವು, ನವೇತ್ತಾಸಿ-ತಿಳಿಯದೇ ಹೋಗು ॥೩೬॥ ತತಃ-ಬಳಿಕ, ಮಹರ್ಷಿವಚನೌಜಸಾ-ಮಹರ್ಷಿ ಬ್ರಹ್ಮಋಷಿಗಳ, ವಚನ-ಮಾತಿನ,ಓಜಸಾ-ಪ್ರಭಾವದಿಂದ, ಹೃತತೇಜಾಃ-ಅಪಹರಿಸಲ್ಪಟ್ಟ ಅಂತಸ್ಸಾರ ಬಹಿರ್ಬಲಗಳುಳ್ಳವನಾಗಿ, ಏಷಃ-ಈ ಆಂಜನೇಯನು, ಮೃದುಭಾವಂ-ಮಾರ್ದವವನ್ನು, ಗತಃ-ಹೊಂದಿದವನಾಗಿ, ಚರನ್-ಸಂಚರಿಸುತಿರುವನಾಗಿ, ಆಶ್ರಮಾಣಿ-ಆಶ್ರಮಗಳನ್ನು ಕುರಿತು, ನಾತ್ಯೇತಿ-ಬಹಳವಾಗಿ ಬರುವದಿಲ್ಲಾ ॥೩೭॥ ಅಥ-ಬಳಿಕ, ಋಕ್ಷರಜಾನಾಮ-ಋಕ್ಷರಜಸ್ಸನೆಂದುಪ್ರಸಿದ್ಧನಾದ, ವಾಲಿಸುಗ್ರೀವಯೋಃ- ವಾಲಿಸುಗ್ರೀವರಿಬ್ಬರ, ಪಿತಾ-ತಂದೆಯು, ತೇಜಸಾಂ-ತೇಜಸ್ಸುಗಳಿಗೆ, ಭಾಸ್ಕರಇವ-ಸೂರ್ಯನಂತೆ, ಸರ್ವವಾನರರಾಜಾ - ಸಮಸ್ತವಾನರಗಳಿಗೂಕೂಡ, ಅರಸಾದಂಥಾವನು, ಆಸೀತ್-ಆದನು ॥೩೮॥ ಹೇರಾಮ-ಎಲೈ ಶ್ರೀರಾಮನೇ, ಸಃಹರೀಶ್ವರಃ- ಆ ವಾನರಾಧಿಪತಿಯಾದ, ಋಕ್ಷರಜಾಸ್ತು - ಋಕ್ಷರಜಸ್ಸನಾದರೆ, ವಾನರಾಣಾಂ-ಕಪಿಗಳ, ರಾಜ್ಯಂ-ರಾಜ್ಯವನ್ನು, ಚಿರಂ-ಬಹುಕಾಲ, ಕೃತ್ವಾ-ಮಾಡಿ, ತತಃ-ಬಳಿಕ, ಕಾಲಧರ್ಮೇಣ-ಮರಣರೂಪ ಧರ್ಮದಿಂದ, ಸಂಗತಃ-ಕೂಡಿದನು ॥೪೦॥ ತಸ್ಮಿನ್-ಆ ಋಕ್ಷರಜಸ್ಸನು, ಅಸ್ತಮಿತೇಸತಿ-ಮರಣವಂ ಹೊಂದಿದವನಾಗುತಿರಲೀಕಾಗಿ, ಮಂತ್ರಕೋವಿದೈಃ-ಮಂತ್ರಾಲೋಚ

---

ತಂಡಗಳನ್ನೂ, ಭಗ್ನಮಾಡುತ್ತಾ, ಈರೀತಿಯಾಗಿ ಮಹರ್ಷಿಗಳಿಗೆ ಅಪರಾಧಂಗಳಂಗೈಯ್ಯುತ್ತಿದ್ದನು॥೩೨॥ಆ ತಾಪಸೋತ್ತಮರೆಲ್ಲರು ಬ್ರಹ್ಮಶಾಪಗಳಿಗೆಲ್ಲಾ ಅವಧ್ಯನಾಗಿರುವಂತೆ ಬ್ರಹ್ಮನಿಂದಲೇ ಮಾಡಲ್ಪಟ್ಟ ಆ ಹನುಮಂತನಂ ತಿಳಿದಿರುವರಾದಕಾರಣ, ದೌಷ್ಟ್ಯವನ್ನೆಲ್ಲಾ ಸೈರಿಸುತ್ತಿದ್ದರು ॥೩೪॥ ಈತನಾದರೆ ಜನಕನಾದಕೇಸರಿಯಿಂದಲೂ, ವಾಯುವಿನಿಂದಲೂ,ಅಂಜನಾ ದೇವಿಯಿಂದಲೂ ಕೂಡಾ, ಯಷ್ಟು ತಡೆಯಲ್ಪಟ್ಟರೂ ಮರ್ಯಾದೋಲ್ಲಂಘನೆಯಂ ಗೈಯ್ಯುತಲೇ ಇದ್ದನು॥ ಎಲೈ ರಘುಕುಲಾನಂದಕರನೇ! ಆ ಬಳಿಕ ಭೃಗು, ಅಂಗೀರಸಮುನಿಗಳವಂಶಸ್ಥರಾದ ಮಹರ್ಷಿಗಳು ಈತನ ದೌಷ್ಟ್ಯವಂತಾಳದೆ ಕುಪಿತರಾದರೂ. ಅತಿಕ್ರೋಧವೂ ಆತ್ಯಾಗ್ರಹವೂ ಇಲ್ಲದವರಾಗಿಂತೆಂದು ಶಪಿಸಿದರು ॥೩೫॥ ಎಲೈ ವಾನರನೇ ! ಯಾವ ಬಲವನ್ನಾಶ್ರಯಿಸಿ ನಮ್ಮನ್ನು ಬಾಧಿಸುತ್ತಿರುವಿಯೋ, ಅದನ್ನೀಗ ನಮ್ಮ ಶಾಪಮೋಹಿತನಾಗಿ ದೀರ್ಘಕಾಲವು ತಿಳಿಯದಿರುವಂಥಾವನಾಗೆಂದು ಶಪಿಸಲೂ, ಈ ಹನುಮಂತನು ಮಹರ್ಷಿಗಳ ವಾಕ್ಪ್ರಭಾವದಿಂದಪಹೃತವಾದ ಅಂತಸ್ಸಾರಬಹಿರ್ಬಲಂಗಳುಳ್ಳವನಾಗಿ,ಮೃದುಭಾವವಂ ಹೊಂದಿ ಸಂಚರಿಸುತ್ತಾ, ಆಶ್ರಮಗಳಿಗೆ ಬಹಳವಾಗಿ ಬರುತ್ತಿರಲಿಲ್ಲಾ ॥೩೭॥ ಅನಂತರದಲ್ಲಿ ವಾಲಿ ಸುಗ್ರೀವರತಂದೆಯಾದ ಋಕ್ಷರಜಸ್ಸೆಂಬ ವಾನರನು, ತೇಜಸ್ಸುಗಳಿಗೆ ಸೂರ್ಯನು ರಾಜನಾಗಿರುವಂತೆ,ಕಪಿವರರಿಗೆಲ್ಲ ಒಡೆಯನಾಗಿದ್ದನು॥೩೯॥ಎಲೈ ರಘುನಂದನನೇ !ಆವಾನರೋತ್ತಮನು ದೀರ್ಘಕಾಲವು ರಾಜ್ಯಪರಿಪಾಲನೆ ಯಂಗೈಯ್ಯುತ್ತಿದ್ದು ಕಾಲಧರ್ಮವಂ ಹೊಂದಿದನು॥೪೦॥ ಆ ಋಕ್ಷರಜಸ್ಸೆಂಬ ವಾನರರಾಜನು ಲೋಕಾಂತರಗತನಾಗಲೂ,ಮಂತ್ರಕೋವಿದರಾದಮಂತ್ರಿಗಳಿಂದ ವಾಲಿಯುರಾಜನಾಗಿಯೂ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಸ್ಮಿನ್ಕರ್ಣ್ಣನ್ನಸ್ತಮಿತೇವಾಲೀವಮಂತ್ರಿಭಿರ್ಮಂತ್ರಕೋವಿದೈಃ। ಪಿತ್ರ್ಯೇಪದೇಕೃತೋರಾಜಾಸುಗ್ರೀವೋವಾಲಿನಃಪದೇ॥೪೧॥ ಸುಗ್ರೀವೇಣಸಮಂತ್ವಸ್ಯಅದ್ವೈಧ್ಯಂಛಿದ್ರವರ್ಜಿತಮ್। ಆಬಾಲ್ಯಂಸಖ್ಯಮಭವದನಿಲಸ್ಯಯಥಾಗ್ನಿನಾ ॥೪೨॥ ಏಷಶಾಪವಶಾದೇವನವೇದಬಲಮಾತ್ಮನಃ। ವಾಲಿಸುಗ್ರೀವಯೋರ್ವೈರಂಯದಾರಾಮಸಮುತ್ಥಿತಮ್ ॥೪೩॥ ನಸ್ಯಾದ್ಧಿರಾಮಸುಗ್ರೀವೋಭ್ರಾಮ್ಯಮಾಣಸ್ತುವಾಲಿನಾ। ವೇದಯಾನೋಯದಿಹ್ಯೇಷಬಲಮಾತ್ಮನಿಮಾರುತಿಃ। ಪರಿತ್ರಾಸ್ಯತಿಸುಗ್ರೀವಂವಧ್ಯಮಾನಂಹಿವಾಲಿನಾ॥೪೪॥ ಋಷಿಶಾಪಾದ್ಧತಬಲಸ್ತದೇಷಕಪಿಸತ್ತಮಃ। ಸಿಂಹಃಪಂಜರರುದ್ಧೋವಾಆಸ್ಥಿತಸ್ಸಹಿತೋರಣೇ ॥೪೫॥ ಪರಾಕ್ರಮೋತ್ಸಾಹಮತಿಪ್ರಭಾವೈಸ್ಸೌಶೀಲ್ಯಮಾಧುರ್ಯನಯಾನಯೈಶ್ಚ। ಗಾಂಭೀರ್ಯಚಾತುರ್ಯಸುವೀರ್ಯಧೈರ್ಯೈರ್ಹನೂಮತಃಕೋಪ್ಯಧಿಕೋಸ್ತಿಲೋಕೇ ॥೪೬॥ ಸಸೂತ್ರವೃತ್ತ್ಯರ್ಥಪದಂಮಹಾರ್ಥಂಸಸಂಗ್ರಹಂಸಾಧ್ಯತಿಯಃಕಪೀಂದ್ರಃ। ನ

ನೆಯಲ್ಲಿ ಪಂಡಿತರಾದ, ಮಂತ್ರಿಭಿಃ-ಮಂತ್ರಿಗಳಿಂದ, ವಾಲೀ-ವಾಲಿಯು, ಪಿತ್ರ್ಯೇಪದೇ-ತಂದೆಯಾದ ಋಕ್ಷರಜಸ್ಸಿನಸ್ಥಾನದಲ್ಲಿ, ರಾಜಾ-ಅರಸಾಗಿ, ಕೃತಃ-ಮಾಡಲ್ಪಟ್ಟನು, ಸುಗ್ರೀವಃ-ಸುಗ್ರೀವನು, ವಾಲಿನಃ-ವಾಲಿಯ, ಪದೇ-ಸ್ಥಾನದಲ್ಲಿ, ಕೃತಃ-ಮಾಡಲ್ಪಟ್ಟನು ॥೪೧॥ ಸುಗ್ರೀವೇಣಸಮಂ-ಸುಗ್ರೀವನೊಡನೆ-ಅಸ್ಯ-ಈ ಆಂಜನೇಯನಿಗೆ-ಛಿದ್ರವರ್ಜಿತಂ-ದೋಷರಹಿತವಾದ-ಅದ್ವೈಧ್ಯಂ - ಏಕವಾಕ್ಯತೆಯುಳ್ಳ, ಸಖ್ಯಂ-ಸ್ನೇಹವು, ಅನಿಲಸ್ಯ- ವಾಯುವಿಗೆ, ಅಗ್ನಿನಾಯಥಾ-ಅಗ್ನಿಯಿಂದಂತೆ, ಆಬಾಲ್ಯಂ-ಬಾಲ್ಯ ಮೊದಲುಗೊಂಡು, ಅಭವತ್-ಆಯಿತು ॥೪೨॥ ಏಷಃ-ಈ ಹನುಮಂತನು, ಶಾಪವಶಾದೇವ, ಶಾಪದವಶದಿಂದಲೇ-ಆತ್ಮನಃ-ತನ್ನ, ಬಲಂ-ಬಲವನ್ನು, ನವೇದ-ಅರಿಯನು, ಹೇ ರಾಮ-ಎಲೈ ಶ್ರೀರಾಮನೇ, ವಾಲಿಸುಗ್ರೀವಯೋಃ-ವಾಲಿ ಸುಗ್ರೀವರಿಬ್ಬರಿಗೂ, ಯದಾ-ಯಾವಾಗ, ವೈರಂ-ದ್ವೇಷವು, ಸಮುತ್ಥಿತಂ-ಹುಟ್ಟಿತೋ, ತದಾ-ಆಕಾಲದಲ್ಲಿ, ಹೇ ರಾಮ-ಎಲೈ ಶ್ರೀರಾಮನೇ, ಸುಗ್ರೀವಃ-ಸುಗ್ರೀವನು, ವಾಲಿನಾ-ವಾಲಿಯಿಂದ, ಭ್ರಾಮ್ಯಮಾಣಃ-ತಿರಿಗಿಸಲ್ಪಟ್ಟವನು, ನಸ್ಯಾತ್-ಆಗದೇಹೋಗುವನು, ಏಷಮಾರುತಿಃ-ಈದೆ ವಾಯುಪುತ್ರನಾದ ಆಂಜನೇಯನು, ಆತ್ಮನಿ-ತನ್ನ ದೇಹದಲ್ಲಿರುವ, ಬಲಂ-ತ್ರಾಣೆಯನ್ನು, ವೇದಯಾನೋಯದಿ, ತಿಳಿದವನೇ ಆದರೇ-ವಾಲಿನಾ-ವಾಲಿಯಿಂದ, ವಧ್ಯಮಾನಂ-ಹೊಡೆಯಲ್ಪಡುತಿರುವ, ಸುಗ್ರೀವಂ-ಸುಗ್ರೀವನನ್ನು, ಪರಿತ್ರಾಸ್ಯತಿಹಿ-ಸಂರಕ್ಷಣೇ ಮಾಡುವನಷ್ಟೆ ॥೪೪॥ ತಸ್ಮಾತ್ಕಾರಣಾತ್-ಆದಕಾರಣದಲೆಯಿಂದ, ಏಷಕಪಿಸತ್ತಮಃ-ಈ ವಾನರಶ್ರೇಷ್ಠನಾದ ಆಂಜನೇಯನು, ಋಷಿಶಾಪಾತ್-ಋಷಿಗಳ ಶಾಪದಿಂದ, ಹತಬಲಃ-ಹೊಡೆಯಲ್ಪಟ್ಟ ಬಲಮುಳ್ಳವನಾದಕಾರಣ, ಪಂಜರರುದ್ಧಃ-ಬೋನಿನಲ್ಲಿ ಅಡಗಿಸಲ್ಪಟ್ಟ, ಸಿಂಹೋವಾ-ಸಿಂಹದಂತೇ-ರಣೇ-ಕಾಳಗದಲ್ಲಿ, ಸಹಿತಃ-ಕೂಡಿದವನಾಗಿ-ಆಸ್ಥಿತಃ-ಇದ್ದಂಥಾವನಾದನು ॥೪೫॥ ಲೋಕೇ-ಲೋಕದಲ್ಲಿ, ಕೋಪಿ-ಯಾವನೂಕೂಡ, ಪರಾಕ್ರಮೋತ್ಸಾಹಮತಿಪ್ರಭಾವೈಃ- ಪರಾಕ್ರಮ-ಪರಾಕ್ರಮದಿಂದಲೂ, ಉತ್ಸಾಹ-ಉತ್ಸಾಹಶಕ್ತಿಯಿಂದಲೂ, ಮತಿ-ಬುದ್ಧಿಯಿಂದಲೂ, ಪ್ರಭಾವೈಃ-ಪ್ರಭಾವದಿಂದಲೂ, ಸೌಶೀಲ್ಯಮಾಧುರ್ಯನಯಾನಯೈಶ್ಚ, ಸೌಶೀಲ್ಯ - ಸತ್ಸ್ವಭಾವದಿಂದಲೂ, ಮಾಧುರ್ಯ - ವಾಙ್ಮಾಧುರ್ಯದಿಂದಲೂ, ನಯ-ನೀತಿಯಿಂದಲೂ, ಅನಯೈಶ್ಚ - ಧೂರ್ತತ್ವದಿಂದಲೂ, ಯದ್ವಾ - ನಯಾನಯೈಶ್ಚ-ಪ್ರವೃತ್ತಿನಿವೃತ್ತಿಗಳಿಂದಲೂ, ಗಾಂಭೀರ್ಯಚಾತುರ್ಯ ಸುವೀರ್ಯಧೈರ್ಯೈಃ - ಗಾಂಭೀರ್ಯ - ಅಗಾಧಮನೋಭಾವದಿಂದಲೂ, ಚಾತುರ್ಯ - ಚತುರತ್ವದಿಂದಲೂ, ಸುವೀರ್ಯ-ಸವಿಾಚೀನವಾದಸಾಮರ್ಥ್ಯದಿಂದಲೂ, ಧೈರ್ಯೈಃ - ಧೀರತೆಯಿಂದಲೂ, ಹನೂಮತಃ - ಆಂಜನೇಯನಿಗಿಂತಲೂ, ಅಧಿಕಃ-ಅಧಿಕನು, ಕೋಪಿ-ಯಾವನು, ಅಸ್ತಿ-ಇಧಾನೆ ॥೪೬॥ ಯಃಕಪೀಂದ್ರಃ-ಯಾವವಾನರಶ್ರೇಷ್ಠನಾದ ಆಂಜನೇಯನು, ಸಸೂತ್ರವೃತ್ತ್ಯರ್ಥಪದಂ - ಸೂತ್ರ-ಸೂತ್ರಗಳಿಂದಲೂ, ವೃತ್ತಿ-ಸೂತ್ರಾರ್ಥಮಾತ್ರಬೋಧಕವ್ಯಾಖ್ಯಾನದಿಂದಲೂ, ಅರ್ಥಪದಂ-ವಾರ್ತಿಕದಿಂದೊಡಗೂಡಿದ, ಮಹಾರ್ಥಂ- ಮಹಾಭಾಷ್ಯವನ್ನು, ಸಸಂಗ್ರಹಂ-ಪ್ರಕರಣಸಹಿತವಾಗಿ, ಸಾಧ್ಯತಿ-ಸಾಧಿಸುತ್ತಾನೋ, ಅಸ್ಯ-ಈ ಆಂಜನೇಯನಿಗೆ, ಶಾಸ್ತ್ರೇ-ಶಾಸ್ತ್ರದಲ್ಲಿಯೂ, ವೈಶಾರದೇ-ಪಾಂಡಿ

ಸುಗ್ರೀವನುಯುವರಾಜನಾಗಿಯೂ ಮಾಡಲ್ಪಟ್ಟರು! ವಾಯ್ವಗ್ನಿಗಳಿಗುಂಟಾಗಿರುವಸ್ನೇಹದತೆರದಿ, ಸುಗ್ರೀವನೊಡನೆ ಈ ಹನುಮಂತನಿಗೆ ನಿರ್ದೋಷವಾದ ಮತ್ತು ಏಕವಾಕ್ಯತೆಯುಳ್ಳಸ್ನೇಹವು, ಬಾಲ್ಯ ಮೊದಲ್ಗೊಂಡುಂಟಾದಂಥಾದ್ದಾಯಿತು ॥೪೨॥ ಎಲೈ ರಘುನಂದನನೇ! ವಾಲಿಸುಗ್ರೀವರೀರ್ವರಿಗೂವೈರರವು ಪುಟ್ಟಿದ ಸಮಯದಲ್ಲಿ, ಈ ಹನುಮಂತನು ಶಾಪವಶದಿಂದ ತನ್ನ ಬಲವನ್ನರಿಯಲಿಲ್ಲಾ ॥೪೩॥ ಈ ವಾಯುನಂದನನು ತನ್ನ ದೇಹಬಲವಂತಿಳಿದವನಾಗಿದ್ದರೆ, ಸುಗ್ರೀವನು ವಾಲಿಯಿಂಧ ತಿರುಗಿಸಲ್ಪಡುತ್ತಿರಲಿಲ್ಲಾ, ಮತ್ತೂ ಹ್ಯಾಗಾದರೂ ಈತನನ್ನಾಗಲೇ ರಕ್ಷಿಸುತಿದ್ದನು ॥ ೪೪ ॥ ಆ ಋಷಿಶಾಪದಿಂದೀಕಪಿವರನು ಹತದರ್ಪನಾಗಿ, ಪಂಜರದಲ್ಲಿ ಶಿಲುಕಿದ ಸಿಂಹದಂತೆ ವಾಲಿ ಸುಗ್ರೀವರೀರ್ವರ ರಣರಂಗದಲ್ಲಿ ತೂಷ್ಣೀಂಭೂತನಾಗಿ ನಿಂತಿದ್ದನು॥೪೫॥ ಈ ಲೋಕದಲ್ಲಿ ಪರಾಕ್ರಮದಿಂದಲೂ, ಉತ್ಸಾಹಶಕ್ತಿಯಿಂದಲೂ, ಬುದ್ಧಿಯಿಂದಲೂ, ಸತ್ಸ್ವಭಾವದಿಂದಲೂ, ವಾಙ್ಮಾಧುರ್ಯದಿಂದಲೂ, ಪ್ರವೃತ್ತಿನಿವೃತ್ತಿಗಳಿಂದಲೂ, ಗಾಂಭೀರ್ಯದಿಂದಲೂ, ಚಾತುರ್ಯದಿಂದಲೂ ವೀರ್ಯದಿಂದಲೂ, ಧೈರ್ಯದಿಂದಲೂ, ಯಾವಪುರುಷನು ಹನುಮಂತನಗಿಂತಲೂ, ಅಧಿಕನಾದವನ್ಯಾರು? ॥೪೬॥ ವಾನರೋತ್ತಮನಾದ ಯಾವ ಮಾರುತಿಯು ಸೂತ್ರಗಳಿಂದಲೂ ಸೂತ್ರಾರ್ಥಬೋಧಕವಾದ ವ್ಯಾಖ್ಯಾನದಿಂದಲೂ, ವಾರ್ತಿಕೆಯಿಂದಲೂ ಒಡಗೂಡಿದ, ಮಹಾಭಾಷ್ಯವನ್ನು ಪ್ರಕರಣಸಹಿತವಾಗಿ ಸಾಧಿಸುವ ಶಕ್ತಿಯುಂಟಾದವನೋ, ಅಂಥಾ ಈತನಿಗೆ, ಶಾಸ್ತ್ರದಲ್ಲಿಯೂ, ಪಾಂಡಿತ್ಯದಲ್ಲಿಯೂ, ಛಂದಶ್ಶಾಸ್ತ್ರದಲ್ಲಿಯೂ, ಸದೃಶನಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕ್ವಸ್ತಿ ಕಶ್ಚಿತ್ಸದೃಶೋಸ್ಯ ಶಾಸ್ತ್ರೇ ವೈಶಾರದೇ ಛಂದಗತೌ ತಥೈವ ॥ ೪೭ ॥ ಅಸೌ ಪುರಾ ವ್ಯಾಕರಣಂ ಗ್ರಹೀಷ್ಯನ್ ಸೂರ್ಯೋನ್ಮುಖಃ ಪೃಷ್ಠಗಮಃ ಕಪೀಂದ್ರಃ । ಉದ್ಯದ್ಗಿರೇರಸ್ತಗಿರಿಂ ಜಗಾಮ ಗ್ರಂಥಂ ಮಹದ್ಧಾರಯದಪ್ರಮೇಯಃ ॥ ೪೮ ॥ ಸರ್ವಾಸು ವಿದ್ಯಾಸು ತಪೋವಿಧಾನೇ ಪ್ರಸ್ಪರ್ಧತೇಯೋಹಿ ಗುರುಂ ಸುರಾಣಾಮ್ । ಸೋಯಂ ನವವ್ಯಾಕರಣಾರ್ಥವೇತ್ತಾ ಬ್ರಹ್ಮಾ ಭವಿಷ್ಯತ್ಯಪಿ ತೇ ಪ್ರಸಾದಾತ್ ॥ ೪೯ ॥ ಪ್ರಜಾಜಿಘೃಕ್ಷೋರಿವ ಸಾಗರಸ್ಯ ಲೋಕಾನ್ದಿಧಕ್ಷೋರಿವ ಪಾವಕಸ್ಯ । ಲೋಕಕ್ಷಯೇಷ್ವೇವ ಯಥಾಂತಕಸ್ಯ ಹನೂಮತಸ್ಥಾಸ್ಯತಿ ಕಃ ಪುರಸ್ತಾತ್ ॥ ೫೦ ॥ ಅಯಂ ಹಿ ಚಾನ್ಯೇ ಚ ಮಹಾಕಪೀಂದ್ರಾಸ್ಸುಗ್ರೀವಮೈಂದದ್ವಿವಿದಾಸ್ಸನೀಲಾಃ । ಸತಾರತಾರೇಯನಳಾಸ್ಸರಂಭಾಸ್ತ್ವತ್ಕಾರಣಾದ್ರಾಮ ಸುರೈರ್ಹಿ ಸೃಷ್ಟಾಃ ॥ ೫೧ ॥ ಗಜೋಗವಾಕ್ಷೋಗವಯಸ್ಸುದಂಷ್ಟ್ರಸ್ತಥರ್ಷಭೋ ಜ್ಯೋತಿಮುಖೋ ನಳಶ್ಚ । ಏತೇಪಿ ಋಕ್ಷೈಸ್ಸಹ ವಾನರೇಂದ್ರಾಸ್ತ್ವತ್ಕಾರಣಾದ್ರಾಮ ಸುರೈರ್ಹಿ ಸೃಷ್ಟಾಃ ॥ ೫೨ ॥ ತದೇತತ್ಕಥಿತಂ ಸರ್ವಂ ಯನ್ಮಾಂ ತ್ವಂ ಪರಿಪೃಚ್ಛಸಿ । ಹನೂಮತೋ ಬಾಲಭಾವೇ ಕರ್ಮೈತತ್ಕಥಿತಂ

---

ತ್ಯದಲ್ಲಿಯೂ, ತಥೈವ-ಹಾಗೆಯೇ-ಛಂದಗತೌ-ಛಂದಶ್ಶಾಸ್ತ್ರದಲ್ಲಿಯೂ, ಸದೃಶಃ-ಸಮಾನನಾದವನು, ಕಶ್ಚಿತ್-ಒಬ್ಬನೂ-ನಾಸ್ತಿ-ಇಲ್ಲವಷ್ಟೇ ॥೪೭॥ ಅಸೌ-ಕಪೀಂದ್ರಃ-ಈ ಕಪಿಶ್ರೇಷ್ಠನಾದ, ಆಂಜನೇಯನು, ಪುರಾ-ಪೂರ್ವಕಾಲದಲ್ಲಿ, ವ್ಯಾಕರಣಂ-ವ್ಯಾಕರಣಶಾಸ್ತ್ರವನ್ನು, ಗ್ರಹೀಷ್ಯನ್-ಅಭ್ಯಾಸಮಾಡಲಿಚ್ಛೈಸಿದವನಾಗಿ, ಸೂರ್ಯೋನ್ಮುಖಃ-ಸೂರ್ಯನಿಗೆ ಅಭಿಮುಖನಾಗಿ. ಪೃಷ್ಠಗಮಃ-ಹಿಂಭಾಗವಂ ಅನುಸರಿಸಿದವನಾಗಿ, ಉದ್ಯದ್ಗಿರೇಃ-ಉದಯಪರ್ವತದ ದೆಸೆಯಿಂದ, ಅಸ್ತಗಿರಿಂ-ಅಸ್ತಮಯ ಪರ್ವತವನ್ನು ಕುರಿತು, ಜಗಾಮ-ತೆರಳಿದನು, ಅಪ್ರಮೇಯಃ-ಇದು ಇಷ್ಟೇ ಎಂದು ತಿಳಿಯಲಸಾಧ್ಯವಾದ ಬಲವುಳ್ಳವನಾಗಿ, ಮಹತ್-ದೊಡ್ಡದಾದ, ಗ್ರಂಥಂ-ವ್ಯಾಕರಣಶಾಸ್ತ್ರರೂಪವಾದ ಗ್ರಂಥವನ್ನು, ಧಾರಯನ್-ಧರಿಸಿದನು॥೪೮॥ ಯಃ-ಯಾವ ಆಂಜನೇಯನು, ಸರ್ವಾಸು-ಸಮಸ್ತಗಳಾದ, ವಿದ್ಯಾಸು-ವಿದ್ಯೆಗಳಲ್ಲಿ-ತಪೋವಿಧಾನೇ-ತಪಸ್ಸು ಮಾಡುವದರಲ್ಲಿ, ಸುರಾಣಾಂ-ದೇವತೆಗಳ, ಗುರುಂ-ಗುರುವಾದ ಬೃಹಸ್ಪತಿಯನ್ನು, ಪ್ರಸ್ಪರ್ಧತೇ-ಸ್ಪರ್ಧೆಮಾಡುತ್ತಾನೋ, ಅಂದರೇ ಪ್ರತಿಭಟಿಸುತ್ತಾನೆಯೋ, ಸೋಯಂ-ಆ ಈ ಆಂಜನೇಯನು, ನವವ್ಯಾಕರಣಾರ್ಥವೇತ್ತಾ-ಒಂಭತ್ತು ವ್ಯಾಕರಣಗಳ ಅರ್ಥವಂ ತಿಳಿದಂಥಾವನಾಗಿ, ತೇಪ್ರಸಾದಾತ್-ನಿನ್ನ ಅನುಗ್ರಹದಿಂದ, ಬ್ರಹ್ಮಾ- ಚತುರ್ಮುಖಬ್ರಹ್ಮನು, ಭವಿಷ್ಯತಿ-ಆಗುವನು ॥೪೯॥ ಪ್ರಜಾಃ-ಪ್ರಜೆಗಳನ್ನು, ಜಿಘೃಕ್ಷೋಃ-ಗ್ರಹಿಸಲಿಚ್ಛೆಯುಳ್ಳ, ಸಾಗರಸ್ಯೇವ-ಸಮುದ್ರದಂತೇ, ಲೋಕಾನ್-ಲೋಕಗಳನ್ನು, ದಿಧಕ್ಷೋಃ-ದಹಿಸಲಿಚ್ಛೆಯುಳ್ಳ, ಪಾವಕಸ್ಯೇವ-ಅಗ್ನಿಯಂತೆ, ಲೋಕಕ್ಷಯೇ-ಲೋಕಸಂಹಾರಕಾಲದಲ್ಲಿ, ಅಂತಕಸ್ಯ ಯಥಾ-ಯಮಧರ್ಮರಾಯನಂತೆ, ಹನೂಮತಃ-ಆಂಜನೇಯನ, ಪುರಸ್ತಾತ್-ಮುಂದುಗಡೇ, ಕಃ-ಯಾವನು, ಸ್ಥಾಸ್ಯತಿ-ನಿಲ್ಲುತ್ತಾನೆ ॥೫೦॥ ಹೇ ರಾಮ-ಎಲೈ ಶ್ರೀರಾಮನೆ, ಅಯಂಚ-ಈ ಆಂಜನೇಯನು, ಅನ್ಯೇಚ-ಮತ್ತು ಕೆಲಬರಾದ, ಮಹಾಕಪೀಂದ್ರಾಃ-ಮಹಾ ಕಪಿಶ್ರೇಷ್ಠರಾದ, ಸುಗ್ರೀವಮೈಂದದ್ವಿವಿದಾಃ-ಸುಗ್ರೀವನು, ಮೈಂದನು, ದ್ವಿವಿದನೂ ಎಂಬವರು, ಸನೀಲಾಃ-ನೀಲನಿಂದೊಡಗೂಡಿದ, ಸತಾರತಾರೇಯನಳಾಃ-ಸತಾರ-ತಾರನಿಂದೊಡಗೂಡಿದ, ತಾರೆಯ-ಅಂಗದನೂ, ನಳಾಃ-ನಳನು, ಸರಂಭಾಃ-ರಂಭನಿಂದೊನಗೂಡಿದವರು, ತ್ವತ್ಕಾರಣಾತ್-ನಿನ್ನ ನಿಮಿತ್ತವಾಗಿ, ಸುರೈಃ-ದೇವತೆಗಳಿಂದ, ಸೃಷ್ಟಾಹಿ - ಸೃಷ್ಟಿಮಾಡಲ್ಪಟ್ಟವರಷ್ಟೆ ॥೫೧॥ ರಾಮ-ಎಲೈ ಶ್ರೀರಾಮನೆ, ಗಜಃ-ಗಜನು, ಗವಾಕ್ಷಃ-ಗವಾಕ್ಷನು, ಗವಯಃ-ಗವಯನು, ಸುದಂಷ್ಟ್ರಃ-ಸುದಂಷ್ಟ್ರನು, ತಥಾ-ಹಾಗೆಯೇ, ಋಷಭಃ-ಋಷಭನು, ಜ್ಯೋತಿಮುಖಃ-ಜ್ಯೋತಿಮುಖನು, ನಳಶ್ಚ-ನಳನು, ಏತೇವಾನರೇಂದ್ರಾಃಪಿ-ಈ ವಾನರೇಂದ್ರರೂ ಕೂಡ, ಋಕ್ಷೈಸ್ಸಹ-ಕರಡಿಗಳಿಂದೊಡಗೂಡಿ, ತ್ವತ್ಕಾರಣಾತ್-ನಿನ್ನ ನಿಮಿತ್ತವಾಗಿ, ಸುರೈಃ-ದೇವತೆಗಳಿಂದ, ಸೃಷ್ಟಾಹಿ-ಸೃಷ್ಟಿಮಾಡಲ್ಪಟ್ಟವರಷ್ಟೇ ॥೫೨॥ ತ್ವಂ-ನೀನು ಮಾಂ-ನನ್ನನ್ನು ಕುರಿತು, ಯತ್-ಪರಿಪೃಚ್ಛಸಿ-ಯಾವದು ಕೇಳಿದಿಯೋ, ತದೇತತ್ಸರ್ವಂ-ಅದೀಗಯಲ್ಲಾ, ಕಥಿತಂ-ಹೇಳಲ್ಪಟ್ಟಿತು, ಹನೂಮತಃ-ಹನುಮಂತನ, ಬಾಲ

---

ದವನು ॥ ೪೭ ॥ ಅಸದೃಶಪರಾಕ್ರಮಿಯಾದ ಈ ಕಪಿವರನು ಪೂರ್ವಕಾಲದಲ್ಲಿ ವ್ಯಾಕರಣಶಾಸ್ತ್ರಾಭ್ಯಾಸವಂ ಮಾಡಲಿಚ್ಛೈಸಿ, ಸೂರ್ಯೋನ್ಮುಖನಾಗಿ ಪೃಷ್ಠಭಾಗದಲ್ಲಿ ಉದಯಪರ್ವತದಿಂದ ಅಸ್ತಾಚಲದವರಿಗೂ ಪೋಗುತ್ತಾ ಶಾಸ್ತ್ರಾಭ್ಯಾಸವಂಗೈದನು ॥೪೮॥ ಇದಲ್ಲದೆ ಸರ್ವ ವಿದ್ಯೆಗಳಲ್ಲಿಯೂ ಮತ್ತೂ ತಪೋವಿಧಾನದಲ್ಲಿಯೂ, ಸಹಾ ಯಾವ ಪವನನಂದನನು, ಸುರಗುರುವಾದ ಬೃಹಸ್ಪತಿಯೊಡನೆ ಸ್ಪರ್ಧೆಯಂಗೈಯ್ಯುವನೋ, ಅಂಥಾ ಇವನು ವ್ಯಾಕರಣತತ್ವಜ್ಞನು, ನಿನ್ನನುಗ್ರಹದಿಂದ ಬ್ರಹ್ಮನಾಗುವನು ॥೪೯॥ ಪ್ರಜೆಗಳಂ ಗ್ರಹಿಸುತ್ತಿರುವ ಸಮುದ್ರದಂತೆಯೂ, ಲೋಕಂಗಳನ್ನೆಲ್ಲಾ ಸುಡುತಿರುವ ಅಗ್ನಿಯಂತೆಯೂ, ಪ್ರಳಯಕಾಲದಲ್ಲಿರುವ ಅಂತಕನಂತೆಯೂ, ಇರುವ ಈತನಮುಂದೆ ಯಾರು ನಿಲ್ಲುವರು ॥೫೦॥ ಎಲೈ ರಘುಕುಲತಿಲಕನೇ! ಈ ಹನುಮಂತನೂ, ಮತ್ತೂ ಇತರ ಕಪೀಂದ್ರರಾದ ಸುಗ್ರೀವ, ಮೈಂದ, ದ್ವಿವಿದ, ನೀಲ, ತಾರ, ಅಂಗದ, ರಂಭ, ಗಜ, ಗವಾಕ್ಷ, ಗವಯ, ಋಷಭ, ಜ್ಯೋತಿಮುಖ, ನಳರೆಂಬಿವರೆಲ್ಲರು ನಿನಿಗೋಸ್ಕರವಾಗಿಯೇ ದೇವತೆಗಳಿಂದ ಸೃಜಿಸಲ್ಪಟ್ಟಥಾರೆ ॥೫೨॥ ಎಲೈ ಶ್ರೀರಾಮನೆ! ನೀನು ನನ್ನನ್ನು ಕುರಿತು ಯಾವವಿಷಯವಂ ಪೃಚ್ಛಿಸಿದೆಯೋ ಅದನ್ನೆಲ್ಲಾ ನಿನಿಗೆ ಪೇಳಿದೆನು, ಹನುಮಂತನು ಬಾಲ್ಯದಲ್ಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಯಾ ॥೫೩॥ ಶ್ರುತ್ವಾಗಸ್ತ್ಯಸ್ಯಗದಿತಂರಾಮಸ್ಸೌಮಿತ್ರಿರೇವಚ। ವಿಸ್ಮಯಂಪರಮಂಜಗ್ಮುರ್ವಾನರಾರಾಕ್ಷಸೈಸ್ಸಹ॥

ಅಥ ಅಧಿಕಪಾಠ ಪ್ರಾರಂಭಃ.

*ಏತಚ್ಛ್ರುತ್ವಾತುನಿಖಿಲಂರಾಘವೋಗಸ್ತ್ಯಮಬ್ರವೀತ್। ಯದಿಋಕ್ಷರಜಾನಾಮವಾಲಿಸುಗ್ರೀವಯೋಃಪಿತಾ॥೫೪॥ ಜನನೀಕಾಹಿಭಗವನ್ನತ್ವಯಾಪರಿಕೀರ್ತಿತಾ। ವಾಲಿಸುಗ್ರೀವಯೋಬ್ರಹ್ಮನ್ಮಾತಾಕಾನಾಮತಃಸ್ಮೃತಾ ॥೫೫॥ ಏತದ್ಬ್ರಹ್ಮನ್ಸಮಾಚಕ್ಷ್ವಕೌತೂಹಲಮಿದಂಹಿನಃ। ಸಪ್ರೋಕ್ತೋ ರಾಘವೇಣೈವ ಮಗಸ್ತ್ಯೋವಾಕ್ಯಮಬ್ರವೀತ್॥೫೬॥ ಶೃಣುರಾಮಕಥಾಮೇತಾಂಯಥಾಪೂರ್ವಂಸಮಾಹಿತಃ। ನಾರದಃಕಥಯಾಮಾಸಮಮಾಶ್ರಮಮುಪಾಗತಃ ॥೫೭॥ ಕದಾಚಿದಟಮಾನೋಸಾವತಿಥಿರ್ಮಾಮುಪಾಗತಃ। ಅರ್ಚಿತಸ್ತುಯಥಾನ್ಯಾಯ್ಯಂವಿಧಿದೃಷ್ಟೇನಕರ್ಮಣಾ ॥೫೮॥ ಸುಖಾಸೀನಃಕಥಾಮೇನಾಂಮಯಾಪೃಷ್ಟಸ್ತುಕೌತುಕಾತ್। ಕಥಯಾಮಾಸಧರ್ಮಾತ್ಮಾಮಹರ್ಷೇಶ್ರೂಯತಾಮಿತಿ ॥೬೦॥ ಮೇರುರ್ನಗವರಶ್ರೀಮಾನ್ಜಾಂಬೂನದಮಯಶ್ಶುಭಃ। ತಸ್ಯಯನ್ಮಧ್ಯಮಂಶೃಂಗಂಸರ್ವದೈವತಪೂಜಿತಮ್ ॥೬೧॥ ತಸ್ಮಿನ್

---

ಭಾವೆ-ಬಾಲ್ಯದಲ್ಲಿ, ಎತತ್ಕರ್ಮ-ಈ ಕರ್ಮವು, ಮಯಾ-ನನ್ನಿಂದ, ಕಥಿತಂ-ಹೇಳಲ್ಪಟ್ಟಿತು ॥೫೩॥ ರಾಮಃ-ಶ್ರೀರಾಮನು, ಸೌಮಿತ್ರಿರೇವಚ-ಲಕ್ಷ್ಮಣನೂ, ಅಗಸ್ತ್ಯಸ್ಯ-ಅಗಸ್ತ್ಯಋಷಿಯ, ಗದಿತಂ-ಮಾತನ್ನು, ಶ್ರುತ್ವಾ-ಕೇಳಿ,ರಕ್ಷಸೈಸ್ಸಹ-ರಾಕ್ಷಸರೊಡನೆ, ವಾನರಾಃ-ವಾನರರು,ಪರಮಂ-ಶ್ರೇಷ್ಠವಾದ, ವಿಸ್ಮಯಂ-ಆಶ್ಚರ್ಯವನ್ನು, ಜಗ್ಮುಃ-ಐದಿದರು ॥೫೪॥ ರಾಘವಃ-ಶ್ರೀರಾಮನು, ನಿಖಿಲಂ-ಸಮಸ್ತವಾದ,ಏತತ್-ಈ ಮಾತನ್ನು, ಶ್ರುತ್ವಾ-ಕೇಳಿ,ಅಗಸ್ತ್ಯಂ-ಅಗಸ್ತ್ಯನುಕುರಿತು, ಅಬ್ರವೀತ್-ನುಡಿದನು, ಋಕ್ಷರಜಾನಾಮ-ಋಕ್ಷರಜಸ್ಸುಎಂದು, ಪ್ರಸಿದ್ಧನಾದ, ಯಃಪಃ-ಯಾವ ಇವನು, ವಾಲಿಸುಗ್ರೀವಯೋಃ-ವಾಲಿ ಸುಗ್ರೀವರಿಗೇ, ಪಿತಾ-ತಂದೆಯೆಂದು, ಪರಿಕೀರ್ತಿತಂ-ಹೇಳಲ್ಪಟ್ಟನು ॥೫೫॥ ಹೇ ಭಗವನ್-ಎಲೈ ಪೂಜ್ಯನಾದವನೇ, ತ್ವಯಾ-ನಿನ್ನಿಂದ, ಜನನೀ-ವಾಲಿಸುಗ್ರೀವರಿಗೆ ತಾಯಿ,ಕಾ-ಯಾರು, ನಪರಿಕೀರ್ತಿತಾಹಿ-ಹೇಳಲ್ಪಡಲಿಲ್ಲವಷ್ಟೆ, ಹೇಬ್ರಹ್ಮನ್-ಎಲೈ ಬ್ರಾಹ್ಮಣನೇ,ವಾಲಿಸುಗ್ರೀವಯೋಃ-ವಾಲಿಸುಗ್ರೀವರ, ಮಾತಾ-ತಾಯಿ, ನಾಮತಃ-ಹೆಸರಿನಿಂದ, ಕಾಸ್ಮೃತಾ-ಯಾವಳುಎಂದು ಹೇಳಲ್ಪಟ್ಟಳು, ಹೇಬ್ರಹ್ಮನ್-ಎಲೈ ಬ್ರಾಹ್ಮಣನೇ, ಏತತ್-ಇದನ್ನು, ಸಮಾಚಕ್ಷ್ವ-ಹೇಳು, ನಃ-ನಮಗೇ,ಇದಂ-ಇದು, ಕೌತೂಹಲಂ-ಕುತೂಹಲವು, ಅಸ್ತಿಹಿ-ಇದ್ದಿಯಷ್ಟೇ, ರಾಘವೇಣ-ಶ್ರೀರಾಮನಿಂದ,ಏವಂ-ಈಪರಿಯಾಗಿ, ಪ್ರೋಕ್ತಃ-ಹೇಳಲ್ಪಟ್ಟ, ಸಃಅಗಸ್ತ್ಯಃ-ಆ ಅಗಸ್ತ್ಯಋಷಿಯು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೫೬॥ ಹೇರಾಮ-ಎಲೈ ಶ್ರೀರಾಮನೇ, ಸಮಾಹಿತಃ-ಸಮಾಧಾನಚಿತ್ತನಾಗಿ, ಯಥಾಪೂರ್ವಂ-ಪೂರ್ವದಲ್ಲಿ ನಡೆದಂತೇ, ಏತಾಂ-ಕಥಾಂ-ಈ ಕಥೆಯನ್ನು, ಶೃಣು-ಕೇಳು, ನಾರದಃ-ನಾರದಋಷಿಯು, ಮಮ-ನನ್ನ, ಆಶ್ರಮಂ-ಆಶ್ರಮವಂಕುರಿತು, ಉಪಾಗತಃ-ಬಂದವನಾಗಿ, ಕಥಯಾಮಾಸ-ಹೇಳಿದನು ॥೫೭॥ ಕದಾಚಿತ್-ಒಂದಾನೊಂದುಕಾಲದಲ್ಲಿ, ಅಟಮಾನಃ-ಸಂಚರಿಸುತ್ತಿರುವ, ಅಸೌ-ಈ ನಾರದಋಷಿಯು, ಅತಿಥಿಃ-ಅಭ್ಯಾಗತನಾಗಿ, ಮಾಂ-ನನ್ನನ್ನು ಕುರಿತು, ಉಪಾಗತಃ-ಬಂದವನಾಗಿ,ವಿಧಿದೃಷ್ಟೇನ-ಶಾಸ್ತ್ರದೃಷ್ಟವಾದ, ಕರ್ಮಣಾ-ಸತ್ಕಾರದಿಂದ, ಯಥಾನ್ಯಾಯಂ- ಯಥಾಕ್ರಮವಾಗಿ, ಅರ್ಚಿತಃ- ಪೂಜಿಸಲ್ಪಟ್ಟನು ॥೫೮॥ ಸುಖಾಸೀನಃ-ಸುಖವಾಗಿ ಕೂತುಕೊಂಡವನಾಗಿ, ಮಯಾ-ನನ್ನಿಂದ, ಕೌತುಕಾತ್-ಕುತೂಹಲದದೆಸೆಯಿಂದ, ಪೃಷ್ಟಃ- ಕೇಳಲ್ಪಟ್ಟವನಾಗಿ, ಹೇಮಹರ್ಷೇ-ಎಲೈ ಮಹರ್ಷಿಯಾದ ಅಗಸ್ತ್ಯನೇ-ಶ್ರೂಯತಾಂ-ಕೇಳಲ್ಪಡಲಿ, ಇತಿ-ಇಂತೆಂದು ಏನಾಂಕಥಾಂ-ಈ ಕಥೆಯನ್ನು, ಧರ್ಮಾತ್ಮಾ-ಧರ್ಮಿಷ್ಠನಾದ, ಸಃ-ಆ ನಾರದಋಷಿಯು, ಕಥಯಾಮಾಸ-ಹೇಳಿದನು ॥೬೦॥ ನಗವರಃ-ಪರ್ವತಗಳಲ್ಲಿಶ್ರೇಷ್ಠವಾದ, ಶ್ರೀಮಾನ್-ಕಾಂತಿಯುಕ್ತವಾದ, ಜಾಂಬೂನದಮಯಃ-ಬಂಗಾರ ವಿಕಾರವಾದ, ಶುಭಃ-ಶುಭಕರವಾದ, ಮೇರುಃ-ಮೇರುಪರ್ವತವು, ಅಸ್ತಿ-ಇದೇ, ತಸ್ಯ-ಆ ಬೆಟ್ಟದ, ಮಧ್ಯಮಂ - ಮಧ್ಯವರ್ತಿಯಾದ, ಸರ್ವದೈವತಪೂಜಿತಂ-ಸರ್ವದೇವತೆಗಳಿಂದಲೂ ಪೂಜಿಸಲ್ಪಟ್ಟ, ಶೃಂಗಂ-ಶಿಖರವು, ಯತ್-ಯಾವದೋ ॥೬೧॥ ತಸ್ಮಿನ್-ಆ ಶಿಖರದಲ್ಲಿ-ಬ್ರಹ್ಮಣಃ-ಬ್ರಹ್ಮದೇವರ ಸಂಬಂಧಿಯಾದ, ಶತಯೋಜನಾ-ನೂರುಗಾವುದಉಳ್ಳ,ದಿವ್ಯಾ-ದೇವತಾಸಂಬಂಧವಾದ, ರಮ್ಯಾ- ಇಂಪಾದ, ಸಭಾ- ರಾಜ್ಯಾಸ

---

ಯೋ ಈ ಕಾರ್ಯಗಳನ್ನೆಲ್ಲಾ ಮಾಡಿರುವನೆಂದು, ಅಗಸ್ತ್ಯಮಹಾಮುನಿಯು ನುಡಿಯಲೂ, ರಾಮಲಕ್ಷ್ಮಣರು, ಮತ್ತೂ ಅಲ್ಲಿದ್ದ ವಾನರ ರಾಕ್ಷಸರೆಲ್ಲರೂ ಸಹಾ ಪರಮಾನಂದಭರಿತರಾದರು ॥೫೪॥ ಈ ವೃತ್ತಾಂತವನ್ನೆಲ್ಲ ಕೇಳಿ ರಘುನಂದನನು ಅಗಸ್ತ್ಯಮಹಾಮುನಿಯಂ ಕುರಿತಿಂತೆಂದನು, ಎಲೈ ಪೂಜ್ಯನೆ ! ಋಕ್ಷರಜಸ್ಸೆಂಬವಾನರೋತ್ತಮನು ವಾಲಿ ಸುಗ್ರೀವರ ಜನಕನೆಂದು ಹೇಳಿದಿರಷ್ಟೆ, ಇವರತಾಯಿಯಾರು, ಆಕೆಯ ಹೆಸರೇನು, ಇದಂ ಹೇಳುವಂಥಾವನಾಗು, ನಾಂ ಕೇಳಬೇಕೆಂದು ಬಹಳ ಕುತೂಹಲವುಳ್ಳವನಾಗಿಹೇನೆಂದು ರಾಮಚಂದ್ರನು ನುಡಿಯಲೂ, ಅಗಸ್ತ್ಯ ಮಹಾಮುನಿಯಿಂತೆಂದನು ॥೫೬॥ ಎಲೈ ಶ್ರೀರಾಮನೆ ! ಪೂರ್ವಕಾಲದಲ್ಲಿ ನಾರದಮಹಾಮುನಿಯು ನನ್ನ ಆಶ್ರಮಕ್ಕೆ ಬಂದು ಯಾವವಾರ್ತೆಯಂ ಹೇಳಿರುವನೋ, ಅದಂ ಹೇಳ್ವೆನು ಕೇಳು, (ಅದೆಂತೆನೆ) ಒಂದಾನೊಂದು ಸಮಯದಲ್ಲಿ ನಾರದಮಹಾಮುನಿಯು ಅತಿಥಿಯಾಗಿಬಂದು, ನನ್ನಿಂದ ಯಥಾಯೋಗ್ಯವಾಗಿ ಪೂಜಿಸಲ್ಪಟ್ಟು ಸುಖಾಸೀನನಾಗಿ ಈ ಕಥೆಯಂ ಹೇಳಿದನು, ಎಲೈ ಮಹರ್ಷಿಯೇ ಕೇಳು, ಸುವರ್ಣವಿಕಾರವಾದ ಮೇರುವೆಂಬ ಪರ್ವತೋತ್ತಮವಿರುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದಿವ್ಯಾಸಭಾರಮ್ಯಾಬ್ರಹ್ಮಣಶ್ಶತಯೋಜನಾ । ತಸ್ಯಾಮಾಸ್ತೇಸದಾದೇವಃಪದ್ಮಯೋನಿಶ್ಚತುರ್ಮುಖಃ ॥೬೨॥ಯೋಗಮ ಭ್ಯಸ್ಯತಸ್ತಸ್ಯನೇತ್ರಾಭ್ಯಾಂಯದ್ರಸೋದ್ರವತ । ತದ್ಗೃಹೀತಂಭಗವತಾಪಾಣಿನಾಚರ್ಚಿತಂಚತತ॥೬೩॥ ನಿಕ್ಷಿಪ್ತಮಾ ತ್ರಂತದ್ಭೂಮೌಬ್ರಹ್ಮಣಾಲೋಕಧಾರಿಣಾ । ತಸ್ಮಿನ್ನಶ್ರುಕಣೇರಾಮವಾನರಸ್ಸಂಬಭೂವಹ ॥೬೪॥ ಉತ್ಪನ್ನಮಾತ್ರಸ್ತು ತದಾವಾನರಸ್ಸನರೋತ್ತಮ । ಸಮಾಶ್ವಾಸ್ಯಪ್ರಿಯೈರ್ವಾಕ್ಯೈರುಕ್ತಃಕಿಲಮಹಾತ್ಮನಾ ॥೬೫॥ ಪಶ್ಯಶೈಲಂಸುವಿಸ್ತೀ ರ್ಣಂಸುರೈರಧ್ಯುಷಿತಂಸದಾ । ತಸ್ಮಿನ್ ರಮ್ಯೇಗಿರಿವರೇಬಹುಮೂಲಫಲಾಶನಃ॥೬೬॥ ಮಮಾಂತಿಕಚರೋನಿತ್ಯಂಭವವಾ ನರಪುಂಗವ । ಕಂಚಿತ್ಕಾಲಮಿಹಾಸ್ವತ್ವಂತವಶ್ರೇಯೋಭವಿಷ್ಯತಿ ॥೬೭॥ ಏವಮುಕ್ತಸ್ಸಚೈತೇನಬ್ರಹ್ಮಣಾವಾನರೋತ್ತ ಮಃ । ಪ್ರಣಮ್ಯಶಿರಸಾಪಾದೌದೇವದೇವಸ್ಯರಾಘವ॥೬೮॥ ಉಕ್ತವಾನ್ ಲೋಕಕರ್ತಾರಮಾದಿದೇವಂಪ್ರಜಾಪತಿಮ್। ಯ ಥಾಜ್ಞಾಪಯಸೇದೇವಸ್ಥಿತೋಹಂತವಶಾಸನೇ ॥೬೯॥ ಏವಮುಕ್ತ್ವಾಹರಿರ್ದೇವಂಯಯೌಹೃಷ್ಟಮನಾಸ್ತದಾ। ಸತದಾರವ

---

ವ್ಯ, ಅಸ್ತಿ—ಇದೇ—ತಸ್ಯಾಂ—ಆ ಮನೆಯಲ್ಲಿ, ಸದಾ—ನಿರಂತರವು, ದೇವಃ—ದೇವನಾದ, ಪದ್ಮಯೋನಿಃ—ಕಮಲಾಸನನಾದ, ಚತುರ್ಮುಖಃ— ಚತುರ್ಮುಖಬ್ರಹ್ಮ ನು, ಸದಾ—ನಿರಂತರವು, ಆಸ್ತೇ—ಇರ್ದಾನೆ ॥೬೨॥ ಯೋಗಂ—ಯೋಗವನ್ನು, ಅಭ್ಯಸ್ಯತಃ—ಸಾಧನಮಾಡುತ್ತಿರುವ, ತಸ್ಯ—ಆ ಬ್ರಹ್ಮನ, ನೇತ್ರಾಭ್ಯಾಂ— ನೇ ತ್ರಗಳ ದೆಸೆಯಿಂದ, ಯದ್ರಸಃ—ಯಾವ ಉದಕವು, ಅದ್ರವತ್—ಜಾರಿತೋ, ತತ್—ಆ ಉದಕವು, ಭಗವತಾ—ಪೂಜ್ಯನಾದ ಬ್ರಹ್ಮನಿಂದ, ಗೃಹೀತಂ—ತೆಗದು ಕೊಳ್ಳಲ್ಪಟ್ಟಿತು, ತತ್—ಆ ಉದಕವು, ಪಾಣಿನಾ—ಹಸ್ತದಿಂದ, ಚರ್ಚಿತಂಚ—ಉಜ್ಜಲ್ಪಟ್ಟಿತು ॥೬೩॥ ಹೇ ರಾಮ—ಎಲೈ ಶ್ರೀರಾಮನೆ, ಲೋಕಧಾರಿಣಾ— ಲೋಕಸೃಷ್ಟಿಕರ್ತನಾದ, ಬ್ರಹ್ಮಣಾ—ಬ್ರಹ್ಮದೇವರಿಂದ, ತತ್—ಆ ಉದಕವು, ಭೂಮೌ—ನೆಲದಲ್ಲಿ, ನಿಕ್ಷಿಪ್ತಮಾತ್ರಂ—ಇರಿಸಲ್ಪಟ್ಟಿತು,ತಸ್ಮಿನ್ ಅಶ್ರುಕಣೇ— ಆ ಕಣ್ಣೀರಿನ ಬಿಂದುವಿನಲ್ಲಿ, ವಾನರಃ ವಾನರನು, ಸಂಬಭೂವಹ—ಉತ್ಪನ್ನನಾದನು ॥೬೪॥ ಹೇ ನರೋತ್ತಮ—ಎಲೈ ಪುರುಷಶ್ರೇಷ್ಠನೇ, ತದಾ—ಆ ಕಾಲದಲ್ಲಿ, ಉತ್ಪನ್ನಮಾತ್ರಃ—ಹುಟ್ಟಿದವನು ಮಾತ್ರವೇಯಾದ, ಸವಾನರಃ—ಆ ಕಪಿಯು, ಮಹಾತ್ಮನಾ—ಮಹಾತ್ಮನಾದಬ್ರಹ್ಮನಿಂದ,ಪ್ರಿಯೈಃ— ಮಧು ರವಾದ, ವಾಕ್ಯೈಃ—ಮಾತುಗಳಿಂದ, ಸಮಾಶ್ವಾಸ್ಯ—ಸಮಾಧಾನಗೊಳಿಸಿ, ಉಕ್ತಃಕಿಲ—ಹೇಳಲ್ಪಟ್ಟನಷ್ಟೇ ॥೬೫॥ ಸದಾ— ನಿರಂತರವು, ಸುರೈಃ — ದೇ ವತೆಗಳಿಂದ, ಅಧ್ಯುಷಿತಂ—ವಾಸಮಾಡಲ್ಪಟ್ಟ, ಸುವಿಸ್ತೀರ್ಣಂ—ವಿಸ್ತಾರವಾದ, ಶೈಲಂ—ಪರ್ವತವನ್ನು, ಪಶ್ಯ—ನೋಡು, ರಮ್ಯೇ—ಮನೋಹರವಾದ ತಸ್ಮಿನ್‌ಗಿರಿವರೇ—ಆ ಪರ್ವತಶ್ರೇಷ್ಠದಲ್ಲಿ, ಬಹುಮೂಲ ಫಲಾಶನಃ— ಬಹು—ಬಹಳವಾದ, ಮೂಲಫಲ—ಕಂದಮೂಲಗಳು ಫಲಗಳೇ, ಅಶನಃ—ಅಶನವಾಗು ಳ್ಳವನಾಗಿರು ॥೬೬॥ ಹೇ ವಾನರಪುಂಗವ— ಎಲೈ ವಾನರಶ್ರೇಷ್ಠನೆ, ನಿತ್ಯಂ—ನಿರಂತರವು, ಮಮ—ನನ್ನ, ಅಂತಿಕಚರಃ— ಸಮೀಪದಲ್ಲಿ ಸಂಚರಿಸುವ ನು, ಭವ—ಆಗು, ತ್ವಂ—ನೀನು, ಇಹ—ಇಲ್ಲಿ, ಕಂಚಿತ್ಕಾಲಂ—ಕೆಲಕಾಲವು, ಆಸ್ವ—ಇರು, ॥೬೭॥ ಹೇ ರಾಘವ—ಎಲೈ ಶ್ರೀರಾಮನೇ, ಏವಂ—ಈ ಪರಿಯಾ ಗಿ, ಸವಾನರೋತ್ತಮಃ—ಆವಾನರ ಶ್ರೇಷ್ಠನು, ಏತೇನಬ್ರಹ್ಮಣಾ—ಈ ಬ್ರಹ್ಮನಿಂದ, ಉಕ್ತಃ—ಹೇಳಲ್ಪಟ್ಟವನಾಗಿ, ದೇವದೇವಸ್ಯ —ದೇವತಾಶ್ರೇಷ್ಠ ನಾದ ಬ್ರಹ್ಮನ,ಪಾದೌ— ಪಾದಗಳನ್ನು, ಶಿರಸಾ—ಶಿರಸ್ಸಿನಿಂದ, ಪ್ರಣಮ್ಯ—ನಮಸ್ಕರಿಸಿ, ಆದಿದೇವಂ— ಸೃಷ್ಟಿಕರ್ತರಲ್ಲಿ ಪ್ರಥಮನಾದ, ಲೋಕಕರ್ತಾ ರಂ— ಸೃಷ್ಟಿಕರ್ತನಾದ, ಪ್ರಜಾಪತಿಂ—ಬ್ರಹ್ಮನಂ ಕುರಿತು, ಹೇದೇವ—ಎಲೈ ಬ್ರಹ್ಮದೇವನೇ, ಯಥಾ—ಹ್ಯಾಗೆ, ಆಜ್ಞಾಪಯಸಿ — ಆಜ್ಞಾಪಿಸುತ್ತೀಯೋ, ತಥಾ—ಹಾಗೆಯೇ, ತವ—ನಿನ್ನ, ಶಾಸನೇ, ಆಜ್ಞೆಯಲ್ಲಿ, ಅಹಂ—ನಾನು, ಸ್ಥಿತೋಸ್ಮಿ—ಇರುತ್ತೇನೇ, ಇತಿ—ಇಂತೆಂದು—ಉಕ್ತವಾನ್—ಹೇಳಿದನು ॥೬೯॥ ಮು ಖ್ಯಾನಿ—ಶ್ರೇಷ್ಠಗಳಾದ, ಮಧೂನಿ—ಮಧುರಸಗಳನ್ನು, ಚಿನ್ವನ್—ಹುಡುಕುತಿರುವನಾಗಿ, ಅನೇಕಶಃ—ಬಹಳಬಗೆಗಳಾದ, ಪುಷ್ಪಾಣಿ—ಪುಷ್ಪಗಳನ್ನು,ಚಿ ನ್ವನ್—ಹುಡುಕುತಿರುವನಾಗಿ, ದಿನೇದಿನೇಚ— ಪ್ರತಿದಿವಸದಲ್ಲಿಯೂ, ಸಾಯಾಹ್ನೇ—ಸಾಯಂಕಾಲದಲ್ಲಿ, ಬ್ರಹ್ಮಣಃ—ಬ್ರಹ್ಮದೇವರ, ಅಂತಿಕಂ— ಸಮೀಪವಂ

---

ದು, ದೇವತೆಗಳಿಂದಲೂ ಸಹಾಪೂಜಿಸಲ್ಪಡುತ್ತಿರುವ ಅದರಮಧ್ಯಮಶೃಂಗದಲ್ಲಿ ಶತಯೋಜನವಿಸ್ತಾರವಾಗಿರ್ಪ ದಿವ್ಯ ವಾದ ಬ್ರಹ್ಮನ ಸಭೆಯಿರುವದು. ಅಲ್ಲಿ ಸರ್ವಲೋಕ ಪಿತಾಮಹನಾದ ನಾಷ್ಟಾಚತುರ್ಮುಖನು ಯೋಗಾಭ್ಯಾಸವಂ ಮಾಡುತ್ತಿರಲೂ, ನೇತ್ರಂಗಳಿಂದ ಕಂಬನಿಗಳು ಸುರಿಯಿತು, ಆ ಉದಕವನ್ನು ಕೈಯ್ಯಗಳಿಂದುಜ್ಜಿ ಭೂಮಿಯಲ್ಲಿ ಬಿಸಾ ಡಲೂ, ಆ ಅಶ್ರುಕಣದಿಂದ ಒಬ್ಬಾನೊಬ್ಬವಾನರನುಂಟಾದನು॥೬೪॥ಎಲೈ ನರೋತ್ತಮನೇ ಆ ಕಪಿಯುಹುಟ್ಟಿದವನಾ ಗುತಲೇ, ಬ್ರಹ್ಮನು ಪ್ರಿಯವಾಕ್ಯಗಳಿಂದ ಸಮಾಧಾನಗೊಳಿಸಿ ಇಂತೆಂದು ನುಡಿದನು,ಎಲೈ ವಾನರನೇ!ದೇವತೆಗಳಿಂದ ಧಿಷ್ಠಿತವಾದ ಈ ಶೈಲವಂ ನೋಡು, ಈ ಪರ್ವತೋತ್ತಮದಲ್ಲಿ ಫಲಮೂಲಗಳಂ ಭುಜಿಸುತ್ತಲೂ ನನ್ನ ಸಮೀಪದ ಲ್ಲಿ ಸಂಚರಿಸುತ್ತಲೂ ಕೆಲವು ಕಾಲವಿದ್ದರೇ ನಿನಗೆ ಶ್ರೇಯಸ್ಸುಂಟಾಗುವದು, ಎಂಬದಾಗಿ ಚತುರ್ಮುಖನು ನುಡಿಯಲೂ ಆ ವಾನರೋತ್ತಮನದಂ ಕೇಳಿ ನಮಸ್ಕಾರವಂ ಗೈದು ಅಂಜಲಿಬದ್ಧನಾಗಿಂತೆಂದನು॥೬೮॥ಎಲೈ ದೇವತಾಶ್ರೇಷ್ಠನೇ ! ನಿನ್ನ ಆಜ್ಞೆಯಂತೆ ನಡೆದುಕೊಳ್ಳುವೆನೆಂದು ಬ್ರಹ್ಮನಂಕುರಿತು ನುಡಿದು ಸಂತುಷ್ಟಾಂತರಂಗಮುಳ್ಳವನಾಗಿ, ಪುಷ್ಪ ಗಳಿಂದ ಕಂಗೊಳಿಸುತಿರುವದಾದ ಕಾರಣ ಬಹಳ ಸೊಬಗಾಗಿರುವ ಆ ವನದಲ್ಲಿಸಂಚರಿಸುತ್ತಾ ದಿನದಿನದಲ್ಲಿ, ಮಧು ಗಳನ್ನು, ಪುಷ್ಪಗಳನ್ನು ಹುಡುಕಿ ಹುಡುಕಿ ಬಹಳವಾಗಿ ತೆಗದುಕೊಂಡು, ಸಾಯಂಕಾಲದಲ್ಲಿ ಬ್ರಹ್ಮನ ಸಮೀಪಕ್ಕೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣೋಯೈತುಸ್ಸಲಪುಷ್ಪೋಪಶೋಭಿತೈಃ ॥ ಭ್ರಮನ್ನತಿಬಲಶ್ಶೈಲಂವನೇಫಲಕೃತಾಶನಃ ॥೧೯॥ ಚಿನ್ವನ್ಸ್ಮ ಫಲಾನಿಮುಖ್ಯಾನಿಚಿನ್ವನ್‌ ಪುಷ್ಪಾಣ್ಯನೇಕಶಃ । ದಿನೇದಿನೇಚಸಾಯಾಹ್ನೇಬ್ರಹ್ಮಣೋಂತಿಕಮಾಗಮತ್ ॥೨೦॥ ಗೃಹೀತ್ವಾರಾಮಮುಖ್ಯಾನಿಪುಷ್ಪಾಣಿಚಫಲಾನಿ ಚ॥ ಬ್ರಹ್ಮಣೋದೇವದೇವಸ್ಯಪಾದಮೂಲೇನ್ಯವೇದಯತ್ ॥ ೨೧ ॥ ಏವಂತಸ್ಯಗತಃಕಾಲೋಬಹುಃಪರ್ಯಟತೋಗಿರಿಮ್ ॥ ಕಸ್ಯಚಿತ್ತ್ವಥಕಾಲಸ್ಯಸಮತೀತಸ್ಯರಾಘವ ॥೨೨॥ ಋಕ್ಷರಾಡ್ವಾನರಸ್ತತ್ರ ತೃಷ್ಣಯಾಪರಿಪೀಡಿತಃ। ಉತ್ತರಂಮೇರುಶಿಖರಂಗತಸ್ತತ್ರಚದೃಷ್ಟವಾನ್ । ನಾನಾವಿಹಂಗಸಂಘುಷ್ಟಂಪ್ರಸನ್ನಸಲಿಲಂಸರಃ ॥೨೩॥ ಚಲತ್ಕೇಸರಮಾತ್ಮಾನಂಕೃತ್ವಾತಸ್ಯತಟೇಸ್ಥಿತಃ । ದದರ್ಶತಸ್ಮಿನ್ಸರಸಿವಕ್ತ್ರಚ್ಛಾಯಾಮಥಾತ್ಮನಃ ॥೨೪॥ ಕೋಯಮಸ್ಮಿನ್ಮಮರಿಪುರ್ವಸತ್ಯಂತರ್ಜಲೇಮಹಾನ್ । ರೂಪಂಚಾಂತರ್ಗತಂತತ್ರವೀಕ್ಷಿತೋಧೀರಜಾಯತ ॥೨೫॥ ಕ್ರೋಧಾವಿಷ್ಟಮನಾಹ್ಯೇಷನಿಯತಂಮಾಮವಮನ್ಯತೇ । ತದಸ್ಯದುಷ್ಟಭಾವಸ್ಯಕರ್ತವ್ಯೋನಿಗ್ರಹೋಮಯಾ ॥ ೨೬ ॥ ಏವಂಸಂಚಿಂತ್ಯಮನಸಾಗತ್ವಾವಾನರಚಾಪಲಾತ್ । ಆಪ್ಲುತ್ಯಚಾಪತತ್ತಸ್ಮಿನ್ಹ್ರದೇವಾನರಸತ್ತಮಃ ॥೨೭॥ ಉತ್ಪ್ಲುತ್ಯತಸ್ಮಾತ್ಸಂಹ್ಲಾದೋಮುದಿತಃಪ್ಲವಗಃಪುನಃ । ತಸ್ಮಿನ್ನೇವಕ್ಷಣೇರಾಮಸ್ತ್ರೀತ್ವಮಾಪಸವಾನರಃ ॥ ೨೮ ॥ ಮನೋಜ್ಞರೂಪಾಸಾನಾರೀಲಾವಣ್ಯಲಲಿತಾಶು

---

ಕುರಿತು, ಉಪಾಗಮತ್-ಬರುತಿದ್ದನು ॥೨೦॥ ಹೇ ರಾಮ-ಎಲೈ ಶ್ರೀರಾಮನೇ, ಮುಖ್ಯಾನಿ-ಮುಖ್ಯಗಳಾದ, ಪುಷ್ಪಾಣಿ-ಹೂವುಗಳನ್ನು, ಫಲಾನಿಚ-ಹಣ್ಣುಗಳನ್ನು, ಗೃಹೀತ್ವಾ-ತೆಗದುಕೊಂಡು, ದೇವದೇವಸ್ಯ-ದೇವೋತ್ತಮನಾದ, ಬ್ರಹ್ಮಣಃ - ಬ್ರಹ್ಮದೇವರ, ಪಾದಮೂಲೇ-ಚರಣಸನ್ನಿಧಿಯಲ್ಲಿ, ನ್ಯವೇದಯತ್-ಸಮರ್ಪಿಸಿದನು ॥೨೧॥ ಹೇ ರಾಘವ-ಎಲೈ ಶ್ರೀರಾಮನೇ, ಏವಂ-ಈ ಪರಿಯಾಗಿ, ಗಿರಿಂ-ಪರ್ವತದಲ್ಲಿ, ಪರ್ಯಟತಃ-ತಿರುಗುತಿರುವ, ತಸ್ಯ-ಆ-ಋಕ್ಷರಜಸ್ಸೆಂಬ ವಾನರನಿಗೆ, ಬಹುಃಕಾಲೋಗತಃ-ಅನೇಕ ಕಾಲವು ಕಳೆಯಿತು, ಅಥ-ಬಳಿಕ, ಕಸ್ಯಚಿತ್ಕಾಲಸ್ಯ - ಕೆಲವುಕಾಲವು, ಅತೀತಸ್ಯ ಸತಃ-ಕಳದುಹೋಗುತಿರಲಾಗಿ, ॥೨೨॥ ಋಕ್ಷರಾಟ್-ಋಕ್ಷರಜಸ್ಸೆಂಬ, ವಾನರಃ-ಕಪಿಯು-(ಯದ್ವಾಋಕ್ಷರಾಟ್-ಕರಡಿಗಳಿಗೆಅಧಿಪತಿಯಾದ,ವಾನರಃ-ಕಪಿಯು) ತತ್ರ-ಮೇರುಶೃಂಗದಲ್ಲಿ, ತೃಷ್ಣಯಾ-ನೀರಡಿಕೆಯಿಂದ,ಪರಿಪೀಡಿತಃ-ಬಾಧಿತನಾಗಿ, ಉತ್ತರಂಮೇರುಶಿಖರಂ- ಉತ್ತರದಿಕ್ಕಿನಲ್ಲಿರುವಮೇರುಶಿಖರವನ್ನು, ಗತಃ-ಹೊಂದಿದವನಾಗಿ,ತತ್ರ-ಆ ಮೇರುಶಿಖರದಲ್ಲಿ,ನಾನಾವಿಹಂಗಸಂಘುಷ್ಟಂ-ನಾನಾ-ಅನೇಕಬಗೆಗಳಾದ, ವಿಹಂಗ-ಪಕ್ಷಿಗಳಿಂದ,ಸಂಘುಷ್ಟಂ-ಧ್ವನಿಸೊಳಿಸುತಿರುವ, ಪ್ರಸನ್ನಸಲಿಲಂ-ನಿರ್ಮಲೋದಕಮುಳ್ಳ, ಸರಃ -ಸರೋವರವನ್ನೂ ಕೂಡ, ದೃಷ್ಟವಾನ್-ನೋಡಿದನು ॥ ೨೩ ॥ ತಸ್ಯ-ಆ ಸರೋವರದ, ತಟೇ-ದಡದಲ್ಲಿ, ಚಲತ್ಕೇಸರಂ- ಕದಲುತಿರುವಮುಖಕೇಶಗಳುಳ್ಳವನನ್ನಾಗಿ,ಆತ್ಮಾನಂ-ತನ್ನನ್ನು,ಕೃತ್ವಾ-ಮಾಡಿ, ತಸ್ಮಿನ್‌ಸರಸಿ-ಆ ಸರೋವರದಲ್ಲಿ,ಅಥ-ಬಳಿಕ, ಆತ್ಮನಃ-ತನ್ನ, ವಕ್ತ್ರಚ್ಛಾಯಾಂ-ಮುಖದಪ್ರತಿ ಬಿಂಬವನ್ನು,ದದರ್ಶ-ಕಂಡನು॥೨೪॥ ತತ್ರ-ಆ ಸರೋವರದಲ್ಲಿ,ಅಂತರ್ಗತಂ -ಒಳಗೆಪ್ರತಿಬಿಂಬಿತವಾದ, ರೂಪಂಚ-ರೂಪವನ್ನು, ವೀಕ್ಷಿತಃ-ನೋಡುತಿರುವ ಈ ಋಕ್ಷರಜಸ್ಸಿಗೇ, ಕೋಯಂ-ಯಾವ,ಮಹಾನ್ - ದೊಡ್ಡವನಾದ, ಮಮ-ಯನ್ನ,ರಿಪುಃ-ಶತೃವು,ಅಸ್ಮಿನ್ನಂತರ್ಜಲೇ, ಈ ಉದಕಮಧ್ಯದಲ್ಲಿ, ವಸತಿ-ಇರುತ್ತಾನೆ, ಇತಿ-ಇಂತೆಂದು, ಕ್ರೋಧಾವಿಷ್ಟಮನಾಃ-ಕ್ರೋಧವ್ಯಾಪ್ತಮಾದ ಮನವುಳ್ಳವನಾಗಿ, ಏಷಃ-ಇವನು, ಹಿ-ಯಾವಕಾರಣದ ದೆಸೆಯಿಂದ,ಮಾಂ-ನನ್ನನ್ನು, ಅವಮನ್ಯತೇ-ಅವಮಾನಮಾಡುತ್ತಾನೆಯೋ, ತತ್-ಆ ಕಾರಣದ ದೆಸೆಯಿಂದ, ದುಷ್ಟಭಾವಸ್ಯ-ದುಷ್ಟಸ್ವಭಾವಮುಳ್ಳ, ಅಸ್ಯ-ಈ ವಾನರನ,ನಿಗ್ರಹಃ-ನಿಗ್ರಹವು, ಮಯಾ-ನನ್ನಿಂದ,ಕರ್ತವ್ಯಃ-ಮಾಡತಕ್ಕ ನಿಯತಂ-ನಿಶ್ಚಯವು,ಇತಿ-ಇಂತೆಂದು, ಧೀಃ-ಬುದ್ಧಿಯು, ಅಜಾಯತ-ಹುಟ್ಟಿತು॥೨೫॥ ವಾನರಸತ್ತಮಃ-ವಾನರಶ್ರೇಷ್ಠನಾದ,ಸಃ-ಆ ಋಕ್ಷರಜಸ್ಸಿದನೇ, ಏವಂ-ಈ ಪರಿಯಾಗಿ, ಮನಸಾ-ಮನಸಿಂದ, ಸಂಚಿಂತ್ಯ-ಆಲೋಚಿಸಿ, ವಾನರಚಾಪಲಾತ್-ವಾನರನ ಚಪಲದದೆಸೆಯಿಂದ, ತಸ್ಮಿನ್‌ಹ್ರದೇ, ಆ ಸರೋವರದಲ್ಲಿ, ಆಪ್ಲುತ್ಯ-ಹಾರಿ-ಅಪತತ್-ಬಿದ್ದನು ॥೨೬॥ ಹೇರಾಮ-ಎಲೈ ಶ್ರೀರಾಮನೇ, ಪ್ಲವಗಃ-ಹಾರಿಬಿದ್ದ, ಸವಾನರಃ-ಆ ವಾನರನು, ತಸ್ಮಾತ್ ಆ ಸರೋವರದ ದೆಸೆಯಿಂದ, ಪುನಃ-ಮತ್ತು, ಉತ್ಪ್ಲುತ್ಯ-ಮೇಲಕ್ಕೆಹಾರಿ,ಸಂಹ್ಲಾದಃ-ಬಹಳಸಂತೋಷವ ಹೊಂದಿದವನಾಗಿ, ಮುದಿತಃ- ಸಂತುಷ್ಟನಾಗಿ, ತಸ್ಮಿನ್ನೇವಕ್ಷಣೇ-ಅದೇಕ್ಷಣದಲ್ಲಿ, ಸ್ತ್ರೀತ್ವಂ-ಹೆಣ್ಣುಭಾವವನ್ನು, ಆಪ-ಐದಿದನು ॥೨೭॥ ಮನೋಜ್ಞರೂಪಾ-ಮನಸ್ಸಿಗಿಂಪಾದ ರೂಪವುಳ್ಳ,

---

ಬಂದು ಆತನಿಗೆ ಮುಖ್ಯವಾದ ಆ ಫಲಪುಷ್ಪಗಳಂ ನಿವೇದಿಸುತಿದ್ದನು॥೨೧॥ ಎಲೈ ರಘುನಂದನನೇ, ಈ ಪರಿಯಾಗಿ ಆ ಗಿರಿವರದಲ್ಲಿ ತಿರುಗುತಿರುವ, ಆ ವಾನರನಿಗೆ ಬಹುಕಾಲವು ಕಳೆದು ಹೋಗಲೂ, ಒಂದಾನೊಂದು ಕಾಲದಲ್ಲಿ ಆ ವಾನರೋತ್ತಮನು ಬಹಳ ದಾಹವುಳ್ಳವನಾಗಿ ಮೇರುಶಿಖರದ ಉತ್ತರಭಾಗವಂ ಹೊಂದಿ, ಅಲ್ಲಿ ನಾನಾಪಕ್ಷಿಗಳಿಂದ ಶಬ್ದಾಯಮಾನವಾಗಿರ್ಪ ಮತ್ತು ನಿರ್ಮಲೋದಕವುಳ್ಳ ಸರೋವರವಂ ಕಂಡು ಅದರ ದಡದಲ್ಲಿ ನಿಂತವನಾಗಿ ತನ್ನ ಮುಖಚ್ಛಾಯೆಯಂ ಕಂಡು, ನನಗೆ ಶತೃವಾಗಿರುವ ಇವನು ಯಾರೊ ಈ ಉದಕ ಮಧ್ಯದಲ್ಲಿಹನು, ಎಂಬದಾಗಿ ಯೋಚಿಸಿ ಅಂತರ್ಗತವಾಗಿರುವ ಆ ರೂಪವಂ ಕಂಡು ನನ್ನಂ ತಿರಸ್ಕರಿಸುವನೆಂದು ಯೋಚಿಸಿ, ಕಡುಕೋಪವುಳ್ಳವನಾಗಿ ಇವನ ದೌಷ್ಟ್ಯಕ್ಕೆ ತಕ್ಕ ಶಿಕ್ಷೆಯಂ ಗೈಯ್ಯಬೇಕೆಂದು ಮನಸಾ ಚಿಂತಿಸಿ ಹಾರಿಬಂದು ವಾನರ ಚಾಪಲ್ಯದಿಂದ ಆ ಹ್ರದದಲ್ಲಿ ಧುಮಿಕಿದನು ॥೨೭॥ ಎಲೈ ಶ್ರೀರಾಮನೇ ! ಆ ವಾನರನಾದರೆ ಕಡು ಸಂತುಷ್ಟನಾಗಿ ಆ ಸರೋವರದಿಂದ ಮೇಲಕ್ಕೆ ಹಾರಿ ಬರುತಿರಲೂ ಸ್ತ್ರೀಭಾವವನ್ನೈದಿದವನಾದನು ॥ ೨೮ ॥ ಅದೆಂತೆನೆ,— ಮನೋಹರಾಂಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭಾ । ವಿಸ್ತೀರ್ಣಜಘನಾಸುಭ್ರೂಃನೀಲಕುಂಚಿತಮೂರ್ಧಜಾ ॥ ಮುಗ್ಧಸಸ್ಮಿತವಕ್ತ್ರಾಬ್ಜಪೀನಸ್ತನತಟಾಶುಭಾ । ಪ್ರಗತೀರಸ್ಥಿತಾಭಾತಿಋಜುರ್ಯಷ್ಟಿರ್ಲತಾಯಥಾ ॥೮೦॥ ತ್ರೈಲೋಕ್ಯಸುಂದರೀಕಾಂತಾಸರ್ವಚಿತ್ತಪ್ರಮಾಥಿನೀ। ಲಕ್ಷ್ಮೀರಿವ ಪದ್ಮರಹಿತಾಚಂದ್ರಜ್ಯೋತ್ಸ್ನೇವನಿರ್ಮಲಾ ॥ ರೂಪೇಣಾಭ್ಯಭವತ್ಸಾತುಶ್ರಿಯಂದೇವೀಮುಮಾಂತಥಾ । ದ್ಯೋತಯಂತೀ ದಿಶಸ್ಸರ್ವಾಸ್ತತ್ರಾಭೂತ್ಸಾವರಾಂಗನಾ ॥೮೧॥ ಏತಸ್ಮಿನ್ನಂತರೇದೇವೋನಿವೃತ್ತಸ್ಸುರನಾಯಕಃ । ಪಾದಾನುಪಾಸ್ಯದೇವಸ್ಯಬ್ರಹ್ಮಣಸ್ತೇನವೈಪಥಾ ॥೮೩॥ ತಸ್ಮಿನ್ಮಧ್ಯೇಚವೇಳಾಯಾಮಾದಿತ್ಯೋಪಿಪರಿಭ್ರಮನ್ । ತಸ್ಮಿನ್ಪ್ರದೇಶೇಸೋಪ್ಯಾಯಾದ್ಯಸ್ಮಿನ್ಸಾತನುಮಧ್ಯಮಾ ॥ ಯುಗಪತ್ತಾತದಾದೃಷ್ಟಾದೇವಾಭ್ಯಾಂಸುರಸುಂದರೀ । ಕಂದರ್ಪವಶಗೌತೌತುದೃಷ್ಟ್ವೈತಾಂಸಂಬಭೂವತುಃ ॥೮೫॥ ತತಃಕ್ಷುಭಿತಸರ್ವಾಂಗೌಸುರೇಂದ್ರತಪನಾವುಭೌ । ತದ್ರೂಪಮದ್ಭುತಂದೃಷ್ಟ್ವಾತ್ಯಕ್ತವೀರ್ಯೌಬಭೂವತುಃ ॥೮೬॥ ಸ್ತತಸ್ತಸ್ಯಾಂಸುರೇಂದ್ರೇಣರೇತೋವೈವಿನಿಪಾತಿತಮ್।ಅನಾಸಾದ್ಯೈವತಾಂನಾರೀಂಸವಿ

---

ಲಾವಣ್ಯಲಲಿತಾ-ಲಾವಣ್ಯ-ಸೌಂದರ್ಯದಿಂ, ಲಲಿತಾ-ಸುಂದರಳಾದ, ಶುಭಾ-ಶುಭಕರಳಾದ, ವಿಸ್ತೀರ್ಣಜಘನಾ-ವಿಸ್ತಾರವಾದ ಕಟಿ ಪ್ರದೇಶಭಾಗ ಮುಳ್ಳ, ಸುಭ್ರೂಃ-ಶುಭಕರವಾದ ಕಣ್ಣು ಹುಬ್ಬುಗಳುಳ್ಳ, ನೀಲಕುಂಚಿತಮೂರ್ಧಜಾ-ನೀಲ-ಕಪ್ಪಾಗಿರುವ, ಕುಂಚಿತ-ಗುಂಡುಗುಂಡಾಗಿರುವ, ಮೂರ್ಧಜ-ಕೂದಲುಗಳುಳ್ಳ, ಮುಗ್ಧಸಸ್ಮಿತವಕ್ತ್ರಾಬ್ಜ-ಸುಂದರವಾದ ಮುಗುಳುನಗೆಯುಳ್ಳ ಮುಖವುಳ್ಳ, ಪೀನಸ್ತನತಟಾ-ಬಲಿತಿರುವ ಸ್ತನಗಳ ತಟಗಳುಳ್ಳ, ಶುಭಾ-ಶುಭಕರಳಾದ, ಸಾನಾರೀ-ಆ ಸ್ತ್ರೀಯು, ಪ್ರಗತೀರೇ-ಆ ಮಡುವಿನ ದಡದಲ್ಲಿ, ಸ್ಥಿತಾ-ಇರುತ್ತಿರುವಳಾಗಿ, ಋಜುರ್ಯಷ್ಟಿಃ-ಋಜುವಾದ ದಂಡೆಮುಳ್ಳ, ಲತಾಯಥಾ-ಬಳ್ಳಿಯಂತೆ, ಭಾತಿ-ಪ್ರಕಾಶಿಸಿದಳು ||೮೦|| ತ್ರೈಲೋಕ್ಯಸುಂದರೀ-ಲೋಕತ್ರಯದಲ್ಲಿಯೂ ಸುಂದರಳಾದ, ಕಾಂತಾ-ಮನೋಹರಳಾದ, ಸರ್ವಚಿತ್ತಪ್ರಮಾಥಿನೀ-ಸರ್ವರ ಮನಸ್ಸುಗಳನ್ನು ಸೆಳೆಯುವಳಾದ, ಪದ್ಮರಹಿತಾ-ಕಮಲವಿಲ್ಲದ, ಲಕ್ಷ್ಮೀರಿವ-ಲಕ್ಷ್ಮಿಯಂತೇ, ಚಂದ್ರಜ್ಯೋತ್ಸ್ನೇವ-ಚಂದ್ರನಬೆಳದಿಂಗಳಂತೆ, ನಿರ್ಮಲಾ-ಶುಭ್ರವಾಗಿರುವ, ಸಾ-ಆ ಸ್ತ್ರೀಯು, ರೂಪೇಣ-ರೂಪದಿಂ, ಶ್ರಿಯಂದೇವೀಂ-ಲಕ್ಷ್ಮೀದೇವಿಯನ್ನು, ತಥಾ-ಹಾಗೆಯೇ, ಉಮಾಂ-ಪಾರ್ವತಿಯನ್ನು, ಅಭ್ಯಭವತ್-ತಿರಸ್ಕರಿಸಿದಳು ||೮೧|| ಸರ್ವಾಃ-ಸಮಸ್ತಗಳಾದ, ದಿಶಃ-ದಿಕ್ಕುಗಳನ್ನು, ದ್ಯೋತಯಂತೀ-ಪ್ರಕಾಶಮಾಡುತಿರುವ, ಸಾವರಾಂಗನಾ-ಆ ಶ್ರೇಷ್ಠವಾದಹೆಂಗಸು, ತತ್ರ-ಆ ಥಡದಲ್ಲಿ, ಅಭವತ್-ಇದ್ದಳು ||೮೨|| ಏತಸ್ಮಿನ್ನಂತರೇ-ಈ ಮಧ್ಯದಲ್ಲಿ, ಸುರನಾಯಕಃ-ದೇವತಾಧಿಪತಿಯಾದ, ದೇವಃ-ದೇವೇಂದ್ರನು, ಬ್ರಹ್ಮಣೋದೇವಸ್ಯ-ಬ್ರಹ್ಮದೇವರ, ಪಾದೌ-ಪಾದಗಳನ್ನು, ಉಪಾಸ್ಯ-ಸೇವಿಸಿ, ತೇನಪಥಾವೈ-ಅದೇ ಮಾರ್ಗದಿಂದಲೇ, ನಿವೃತ್ತಃ-ಹಿಂತಿರುಗಿದನು ||೮೩|| ತಸ್ಮಿನ್ಮಧ್ಯೇಚವೇಳಾಯಾಂ-ಆ ಮಧ್ಯವೇಳೆಯಲ್ಲಿ, ಆದಿತ್ಯೋಪಿ-ಸೂರ್ಯನೂಕೂಡ, ಪರಿಭ್ರಮನ್-ತಿರುಗುತಿರುವನಾಗಿ, ಯಸ್ಮಿನ್ಪ್ರದೇಶೇ-ಯಾವ ಪ್ರದೇಶದಲ್ಲಿ, ತನುಮಧ್ಯಮಾ-ಸೂಕ್ಷ್ಮಮಧ್ಯಳಾದ, ಸಾ-ಆ ಹೆಣ್ಣುಮಗಳು, ಅಸ್ತಿ-ಇರುತ್ತಾಳೋ, ತಸ್ಮಿನ್-ಆ ಪ್ರದೇಶದಲ್ಲಿ, ಆಯಾತ್-ಬಂದನು ||೮೪|| ಸಾಸುರಸುಂದರೀ-ಆ ದೇವತಾಸ್ತ್ರೀಯು, ಯುಗಪತ್-ಏಕಕಾಲದಲ್ಲಿ, ದೇವಾಭ್ಯಾಂ-ಇಂದ್ರಸೂರ್ಯರಿಬ್ಬರಿಂದ, ದೃಷ್ಟಾ-ನೋಡಲ್ಪಟ್ಟಳು, ತೌ-ಅವರಿಬ್ಬರು, ತಾಂತು-ಆ ಸ್ತ್ರೀಯನ್ನಾದರೆ, ದೃಷ್ಟ್ವಾ-ಕಂಡು, ಕಂದರ್ಪವಶಗೌ-ಕಾಮಾಸಕ್ತಚಿತ್ತರು, ಸಂಬಭೂವತುಃ-ಆದರು || ೮೫ || ತತಃ-ಬಳಿಕ, ಕ್ಷುಭಿತಸರ್ವಾಂಗೌ-ಕ್ಷೋಭಿಸಲ್ಪಟ್ಟ ಸರ್ವಾವಯವಗಳುಳ್ಳ, ಸುರೇಂದ್ರತಪನಾವುಭೌ-ದೇವೇಂದ್ರಸೂರ್ಯರಿಬ್ಬರೂನು, ಅದ್ಭುತಂ-ಆಶ್ಚರ್ಯಕರವಾದ, ತದ್ರೂಪಂ-ಆ ರೂಪವನ್ನು, ದೃಷ್ಟ್ವಾ-ಕಂಡು, ತ್ಯಕ್ತವೀರ್ಯೌ-ಬಿಡಲ್ಪಟ್ಟ ವೀರ್ಯಗಳುಳ್ಳವರು, ಬಭೂವತುಃ-ಆದರು || ೮೬ || ತತಃ-ಬಳಿಕ, ಸುರೇಂದ್ರೇಣ-ದೇವೇಂದ್ರನಿಂದ, ತಸ್ಯಾಂ-ಆ ಸ್ತ್ರೀಯಲ್ಲಿ, ರೇತೋವೈ-ರೇತಸ್ಸಾದರೇ, ವಿನಿಪಾತಿತಂ-

---

ರೂಪವುಳ್ಳವಳಾಗಿಯೂ, ಸೌಂದರ್ಯ ಸುಂದರಿಯಾದವಳಾಗಿಯೂ, ವಿಸ್ತಾರವಾದ ಜಘನಪ್ರದೇಶವುಳ್ಳವಳಾಗಿಯೂ, ಸೊಗಸಾದ ಕಣ್ಣು ಹುಬ್ಬುಗಳುಳ್ಳವಳಾಗಿಯೂ, ಕಪ್ಪಾಗಿಯೂ ಕುಟಿಲವಾಗಿಯೂ ಇರುವ ಮುಂಗುರುಳುಗಳುಳ್ಳವಳಾಗಿಯೂ, ಸುಂದರವಾಗಿಯೂ, ಮುಗುಳ್ನಗೆಯುಳ್ಳದ್ದಾಗಿಯೂ ಇರುವ ಮುಖವುಳ್ಳವಳಾಗಿಯೂ, ಬಲಿಷ್ಠವಾದ ಸ್ತನಗಳ ತಟಗಳುಳ್ಳವಳಾಗಿಯೂ, ಆಗಿರುವ ಆ ಅಂಗನಾಮಣಿಯು ಆ ಸರೋವರದ ಥಡದಲ್ಲಿ ನಿಂತುಕೊಂಡು ಋಜುವಾದ ದಂಡವುಳ್ಳ ಲತೆಯಂತೆಯೂ, ಲೋಕತ್ರಯದಲ್ಲಿಯೂ ಸುಂದರಳಾದ ಮತ್ತೂ ಸರ್ವರಮನಸ್ಸುಗಳಂ ಸೆಳೆಯುತ್ತಿರುವ, ಪದ್ಮರಹಿತಳಾದ ಸಾಕ್ಷಾಲಕ್ಷ್ಮೀದೇವಿಯೋಪಾದಿಯಾಗಿಯೂ, ನಿರ್ಮಲವಾದ ಚಂದಿಂಗಳಂತೆಯೂ ಹೊಳೆಯುತ್ತಿರುವಳಾಗಿ, ಸ್ವಕೀಯವಾದ ತೇಜಸ್ಸಿನಿಂದ ಶ್ರೀದೇವಿಯನ್ನೂ ಮತ್ತೂ ಪಾರ್ವತೀದೇವಿಯನ್ನೂ ಸಹಾ ತಿರಸ್ಕರಿಸುತ್ತಲೂ, ದಶದಿಕ್ಕುಗಳಂ ಕಂಗೊಳಿಸುತ್ತಲೂ ಆ ಥಡದಲ್ಲಿ ನಿಂತಿದ್ದವಳಾದಳು ||೮೧|| ಹೀಗಿರುವಲ್ಲಿ ದೇವತೆಗಳಿಗೊಡೆಯನಾದ ದೇವೇಂದ್ರನು ಬ್ರಹ್ಮದೇವರ ಪಾದಂಗಳಂ ಸೇವಿಸಿ, ಹಿಂತಿರುಗಿ ಆ ಮಾರ್ಗದಿಂದಲೇ ಬಂದವನಾದನು ||೮೩|| ಅದೇ ಸಮಯದಲ್ಲಿ ಸೂರ್ಯನೂ ಸಹ ಸಂಚರಿಸುತ್ತಾ ಆ ಕಾಂತಾಮಣಿ ಇರುವ ಪ್ರದೇಶವಂ ಹೊಕ್ಕನು. ಈಪರಿಯಾಗಿ ಆ ಸೂರ್ಯಸುರನಾಯಕರೀರ್ವರು ಏಕಕಾಲದಲ್ಲಿ ಬಂದವರಾಗಿ ಆ ಸುಂದರಿಯ ಸಂದರ್ಶನದಿಂದ ಮನ್ಮಥಾಕ್ರಾಂತ ಚಿತ್ತರಾದ ಕಾರಣ ಕ್ಷೋಭಿಸಲ್ಪಟ್ಟ ಸರ್ವಾಂಗಗಳುಳ್ಳವರಾಗಿ, ಆಕೆಯ ರೂಪವಂ ವೀಕ್ಷಿಸುತ್ತಲೇ ಸ್ಖಲಿತವಾದ ವೀರ್ಯವುಳ್ಳವರಾದರು ||೮೬|| ಎಲೈ ರಘುನಂದನನೇ ! ಅಸುರೇಂದ್ರನು ಆ ನಾರಿಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವೃತ್ತಮದೋಭವತ ॥೮೭॥ ತತಸ್ಸಾ ವಾನರಪತಿಂ ಪ್ರಾಸೂತ ಬಲಶಾಲಿನಮ್ । ಅಮೋಘರೇತಸಸ್ತಸ್ಯ ವಾಸವಸ್ಯ ಮಹಾತ್ಮನಃ ॥೮೮॥ ವಾಲೇಷು ಪತಿತಂ ಬೀಜಂ ವಾಲೀ ನಾಮ ಬಭೂವ ಸಃ ॥೮೯॥ ಭಾಸ್ಕರೇಣಾಪಿ ತಸ್ಯಾಂ ವೈ ಕಂದರ್ಪವಶವರ್ತಿನಾ । ಬೀಜಂ ನಿಷಿಕ್ತಂ ಗ್ರೀವಾಯಾಂ ವಿಧಾನಮನುವರ್ತಿನಾ ॥೯೦॥ ತೇನಾಪಿ ಶೋಭನತನುರ್ನೋಕ್ತಾ ಕಿಂಚಿದ್ವಚಶ್ಶುಭಮ್ । ನಿವೃತ್ತಮದನಶ್ಚಾಥ ಸೂರ್ಯೋಪಿ ಸಮಪದ್ಯತ ॥೯೧॥ ಗ್ರೀವಾಯಾಂ ಪತಿತೇ ಬೀಜೇ ಸುಗ್ರೀವಸ್ಸಮಜಾಯತ । ಏವಮುತ್ಪಾದಿತೌ ವೀರೌ ವಾನರೇಂದ್ರೌ ಮಹಾಬಲೌ ॥೯೨॥ ದತ್ವಾ ತು ಕಾಂಚನೀಂ ಮಾಲಾಂ ವಾನರೇಂದ್ರಸ್ಯ ವಾಲಿನಃ । ಅಕ್ಷಯ್ಯಾಂ ಗುಣಸಂಪೂರ್ಣಾಂ ಶಕ್ರಸ್ತು ತ್ರಿದಿವಂ ಯಯೌ ॥೯೩॥ ಸೂರ್ಯೋಪಿ ಸ್ವಸುತಸ್ಯೈವ ಸನ್ನಿರೂಪ್ಯ ಪವನಾತ್ಮಜಮ್ । ಕೃತ್ಯೇಷು ವ್ಯವಸಾಯೇಷು ಜಗಾಮ ಸವಿತಾಂಬರಮ್ ॥ ತಸ್ಯಾಂ ನಿಶಾಯಾಂ ವ್ಯುಷ್ಟಾಯಾಂ ಉದಿತೇ ಚ ದಿವಾಕರೇ । ಸ ತದ್ವಾನರರೂಪಂ ತು ಪ್ರತಿಪೇದೇ ಪುನರ್ನೃಪ ॥೯೫॥ ಸ ಏವ ವಾನರೋ ಭೂತ್ವಾ ಪುತ್ರೌ ಸ್ವಸ್ಯ ಪ್ಲವಂಗಮೌ ಪಿಂಗೇಕ್ಷಣೌ ಹರಿವರೌ

---

ಬಿಡಲ್ಪಟ್ಟಿತು, ತಾಂನಾರೀಂ-ಆ ಹೆಂಗಸನ್ನು, ಅನಾಸಾದ್ಯೈವ-ಹೊಂದದೇ, ಸಃ-ಆ ದೇವೇಂದ್ರನು, ನಿವೃತ್ತಮದಃ-ನಿವೃತ್ತವಾದ ಗರ್ವವುಳ್ಳವನು, ಅಭವತ್-ಆದನು ॥೮೭॥ ತತಃ-ಬಳಿಕ, ಸಾ-ಆಸ್ತ್ರೀಯು, ಬಲಶಾಲಿನಂ-ಬಲಶಾಲಿಯಾದ, ವಾನರಪತಿಂ-ವಾಲಿಯನ್ನು, ಪ್ರಾಸೂತ-ಹೆತ್ತಳು, ಅಮೋಘರೇತಸಃ-ವ್ಯರ್ಥವಾಗದಿರುವ ರೇತಸ್ಸುಳ್ಳ, ಮಹಾತ್ಮನಃ-ಮಹಾನುಭಾವನಾದ, ತಸ್ಯವಾಸವಸ್ಯ-ಆ ದೇವೇಂದ್ರನ, ಬೀಜಂ-ವೀರ್ಯವು, ವಾಲೇಷು-ಪುಚ್ಛಕೂದಲುಗಳಲ್ಲಿ, ಪತಿತಂ-ಬಿದ್ದಂಥಾದ್ದಾದಕಾರಣ, ವಾಲೀನಾಮ-ವಾಲೀಎಂದು ಪ್ರಸಿದ್ಧನಾದ, ಸಃ-ಆ ವಾನರನು, ಬಭೂವ-ಆದನು॥೮೯॥ ತಸ್ಯಾಂವೈ-ಆ ಸ್ತ್ರೀಯಲ್ಲಾದರೆ, ಕಂದರ್ಪವಶವರ್ತಿನಾ - ಮನ್ಮಥಾಧೀನನಾದ, ವಿಧಾನಂ - ಪುತ್ರೋತ್ಪತ್ತಿವಿಧಾನವನ್ನು, ಅನುವರ್ತಿನಾ-ಅನುಸರಿಸುತಿರುವ, ಭಾಸ್ಕರೇಣಾಪಿ-ಸೂರ್ಯನಿಂದಲೂ, ಬೀಜಂ-ವೀರ್ಯವು, ಗ್ರೀವಾಯಾಂ-ಕಂಠದಲ್ಲಿ, ನಿಷಿಕ್ತಂ-ಬಿಡಲ್ಪಟ್ಟಿತು ॥೯೦॥ ಶೋಭನತನುಃ-ಶುಭಕರವಾದ ಶರೀರವುಳ್ಳ ಆ ಹೆಂಗಸು, ತೇನಾಪಿ-ಆ ಸೂರ್ಯನಿಂದಲೂ, ಶುಭಂ-ಶುಭಕರವಾದ, ಕಿಂಚಿದ್ವಚಃ-ಯಾವಮಾತನ್ನು, ನೋಕ್ತಾ-ಹೇಳಲ್ಪಡಲಿಲ್ಲ, ಅಥ-ಬಳಿಕ,ಸೂರ್ಯೋಪಿ-ಸೂರ್ಯನೂಕೂಡ, ನಿವೃತ್ತಮದನಃ-ಹೋದಂಥಾ ಮನ್ಮಥವಿಕಾರವುಳ್ಳವನು, ಸಮಪದ್ಯತ-ಆದನು॥೯೧॥ ಗ್ರೀವಾಯಾಂ-ಕಂಠದಲ್ಲಿ, ಬೀಜೇ-ವೀರ್ಯವು, ಪತಿತೇಸತಿ-ಬಿದ್ದಂಥಾದ್ದಾಗುತಿರಲೀಕಾಗಿ, ಸುಗ್ರೀವಃ-ಸುಗ್ರೀವನು, ಸಮಜಾಯತ - ಹುಟ್ಟಿದನು, ಮಹಾಬಲೌ-ಮಹಾಬಲಿಷ್ಠರಾದ,ವೀರೌ-ಶೂರರಾದ, ವಾನರೇಂದ್ರೌ-ವಾನರಶ್ರೇಷ್ಠರು, ಏವಂ-ಈಪರಿಯಾಗಿ, ಉತ್ಪಾದಿತೌ-ಹುಟ್ಟಿಸಲ್ಪಟ್ಟರು॥೯೨॥ ವಾನರೇಂದ್ರಸ್ಯವಾಲಿನಃ-ವಾನರಾಧಿಪತಿಯಾದ ವಾಲಿಗೆ, ಅಕ್ಷಯ್ಯಾಂ-ನಾಶರಹಿತವಾದ, ಗುಣಸಂಪೂರ್ಣಾಂ-ಗುಣಗಳಿಂದ ಪೂರಿತವಾದ, ಕಾಂಚನೀಂ-ಭಂಗಾರವಿಕಾರವಾದ, ಮಾಲಾಂ-ಮಾಲಿಕೆಯನ್ನು, ದತ್ವಾ-ಕೊಟ್ಟು, ಶಕ್ರಸ್ತು-ದೇವೇಂದ್ರನಾದರೆ, ತ್ರಿದಿವಂ-ಸ್ವರ್ಗಲೋಕವಂ ಕುರಿತು, ಯಯೌ-ತೆರಳಿದನು ॥೯೩॥ ಸವಿತಾ-ಪ್ರಸವಕರ್ತೃವಾದ, ಸೂರ್ಯೋಪಿ-ಸೂರ್ಯನೂಕೂಡ, ಸ್ವಸುತಸ್ಯ-ತನ್ನ ಮಗನಾದ ಸುಗ್ರೀವನ, ಕೃತ್ಯೇಷು-ಕಾರ್ಯಗಳಲ್ಲಿ, ವ್ಯವಸಾಯೇಷು - ಉದ್ಯೋಗಗಳಲ್ಲಿ, ಏನಂಪವನಾತ್ಮಜಂ-ಈ ಆಂಜನೇಯನನ್ನು, ನಿರೂಪ್ಯ-ಆಜ್ಞೆಮಾಡಿ, ಅಂಬರಂ-ಅಂತರಿಕ್ಷವಂಕುರಿತು, ಜಗಾಮ-ತೆರಳಿದನು ॥೯೪॥ ಹೇನೃಪ-ಎಲೈ ಅರಸನೇ, ತಸ್ಯಾಂನಿಶಾಯಾಂ-ಆ ರಾತ್ರಿಯು, ವ್ಯುಷ್ಟಾಯಾಂಸತ್ಯಾಂ-ಬೆಳಗಾಗುತಿರಲೀಕಾಗಿ, ದಿವಾಕರೇ-ಸೂರ್ಯನು, ಉದಿತೇಸತಿ-ಹುಟ್ಟಿದವನಾಗುತಿರಲೀಕಾಗಿ, ಸಃ- ಆ ಋಕ್ಷರಜಸ್ಸು, ತದ್ವಾನರರೂಪಂ- ಆ ವಾನರರೂಪವನ್ನು, ಪುನಃ-ಮತ್ತು, ಪ್ರತಿಪೇದೆ-ಹೊಂದಿದವನು ॥೯೫॥ ಸಏವ-ಆ ಋಕ್ಷರಜಸ್ಸೇ-ವಾನರಃ-ವಾನರನು, ಭೂತ್ವಾ-ಆಗಿ, ಸ್ವಸ್ಯ-ತನ್ನ, ಪುತ್ರೌ-ಮಕ್ಕಳಾದ, ಪಿಂಗೇಕ್ಷಣೌ- ಕಪ್ಪಿಗಿರುವ ಕಣ್ಣುಗಳುಳ್ಳ, ಹರಿವರೌ-ವಾನರಶ್ರೇಷ್ಠರಾದ, ಕಾಮರೂಪಿಣೌ-ಕಾಮರೂಪಿಗಳಾದ, ಪ್ಲವಂಗಮೌ-ಕಪಿಗಳನ್ನು, ಅಪಶ್ಯತ್-ಕಂಡನು ॥೯೬॥

---

ಸಂಪರ್ಕವಂ ಗೈಯ್ಯದಿದ್ದರೂ, ಆತನಿಗೆ ರೇತಃ ಸ್ಖಲನವಾಗಿ ಒಂದು ತೊಟ್ಟು ಆ ವಾನರಿಯ ಬಾಲದಲ್ಲಿ ಬಿದ್ದು ಹೋಗಲು, ಆ ವಾಲಪ್ರದೇಶದಿಂದ ವಾಲಿಯೆಂಬ ವಾನರನುಂಟಾದನು ॥೮೯॥ ಮನ್ಮಥಬಾಣಗಳಿಂದ ನೊಂದವನಾದ ಆ ಸೂರ್ಯನಿಂದಲೂ ಕೂಡ ಆ ಬಾಲಕಿಯ ಕಂಠಪ್ರದೇಶದಲ್ಲಿ ವೀರ್ಯವು ಬಿಡಲ್ಪಟ್ಟಂಥಾದ್ದಾಗಲೂ ಆ ಭಾಸ್ಕರನು ಏನೂನುಡಿಯದೇ ಗತವಾದ ಮನ್ಮಥ ವಿಕಾರವುಳ್ಳವನಾದನು. ಈ ಪರಿಯಾಗಿ ಸೂರ್ಯನ ವೀರ್ಯವು ಆ ನಾರಿಯ ಗ್ರೀವಾಭಾಗದಲ್ಲಿ ಪತಿತವಾಗಲೂ, ಅದರಿಂದ ಸುಗ್ರೀವನು ಸಂಜನಿಸಿದವನಾದನು॥೯೧॥ ಎಲೈ ರಘುನಂದನನೇ! ಮಹಾ ಬಲವಂತರಾದ ಈ ವಾನರೇಂದ್ರರೀರ್ವರು ಈಪರಿಯಾಗಿ ಪುಟ್ಟಿದವರಾಗಲೂ, ದೇವೇಂದ್ರನಾದರೇ, ಸುವರ್ಣವಿಕಾರವಾದ ಮತ್ತು ಎಂದಿಗೂ ಚ್ಯುತಿ ಇಲ್ಲದಿರುವ, ಬಹುಗುಣಗಳುಳ್ಳ ಒಂದಾನೊಂದು ಮಾಲಿಕೆಯಂ ಕಪಿಸಾರ್ವಭೌಮನಾದ ವಾಲಿಗೆ ಕೊಟ್ಟವನಾಗಿ ಸ್ವರ್ಗವಂ ಕುರಿತು ತೆರಳಿದನು ॥೯೨॥ ಸಾಕ್ಷಾತ್ಸೂರ್ಯನೂ ಕೂಡ ತನ್ನ ಕುಮಾರನಾದ ಸುಗ್ರೀವನಿಗೆ ಸರ್ವಕಾರ್ಯಗಳಲ್ಲಿ ಸರ್ವೋದ್ಯೋಗಗಳಲ್ಲಿಯೂ ಕೂಡ, ವಾಯುನಂದನನಾದ ಈ ಆಂಜನೇಯನನ್ನು ಸರಿಸಿಕೊಂಡಿರೆಂದಾಜ್ಞಾಪಿಸಿ, ಗಗನಮಾರ್ಗದಲ್ಲಿ ಪೊರಟನು ॥೯೩॥ ಎಲೈ ನರನಾಥನೇ, ಆ ದಿನವು ಕಳೆದು ಸೂರ್ಯೋದಯವಾಗಲೂ, ಆ ಕೇಸರಿಯೆಂಬ ವಾನರನು, ಪುನಃ ವಾನರರೂಪವಂತಾಳಿ ತನ್ನ ಕುಮಾರರಾದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವೇಪಶ್ಯೇತಕಾಮರೂಪಿಣೌ ॥೯೫॥ ಮಧೂನ್ಯಮೃತಕಲ್ಪಾನಿ ಪಾಯಿತೌ ತೇನ ತೌ ತದಾ ॥೯೬॥ ಗೃಹೀತ್ವಾ ಋಕ್ಷರಜಾಸ್ತೌ ತು ಬ್ರಹ್ಮಣೋಽಂತಿಕಮಾಗಮತ್ । ದೃಷ್ಟ್ವಾ ಋಕ್ಷರಜಸಂ ಪುತ್ರಂ ಬ್ರಹ್ಮಾ ಲೋಕಪಿತಾಮಹಃ॥ ಬಹುಶಸ್ಸಾಂತ್ವಯಾಮಾಸ ಪುತ್ರಾಭ್ಯಾಂ ಸಹಿತಂ ಹರಿಮ್॥ ಸಾಂತ್ವಯಿತ್ವಾ ತತಃ ಪಶ್ಚಾದ್ದೇವದೂತಮಥಾಬ್ರವೀತ್ ॥೯೭॥ ಗಚ್ಛ ಮದ್ವಚನಾದ್ದೂತ ಕಿಷ್ಕಿಂಧಾಂ ನಾಮ ವೈ ಶುಭಾಮ್ । ಸಾ ಸರ್ವಗುಣಸಂಪನ್ನಾ ಮಹತೀ ಚ ಪುರೀ ಶುಭಾ ॥೯೮॥ ತತ್ರ ವಾನರಯೂಥಾನಿ ಬಹೂನಿ ನಿವಸಂತಿ ಚ । ಬಹುರತ್ನಸಮಾಕೀರ್ಣಾ ವಾನರೈಃ ಕಾಮರೂಪಿಭಿಃ॥೧೦೦॥ ಪುಣ್ಯಾ ಪಣವತೀ ದುರ್ಗಾ ಚಾತುರ್ವರ್ಣ್ಯಪುರಸ್ಕೃತಾ। ವಿಶ್ವಕರ್ಮಕೃತಾ ದಿವ್ಯಾ ಮನ್ನಿಯೋಗಾಚ್ಛೋಭನಾ ॥೧೦೧॥ ತತ್ರ ಋಕ್ಷರಜಸಂ ಪುತ್ರಂ ಸಪುತ್ರಂ ವಾನರರ್ಷಭಮ್। ಯೂಥಪಾಲಾನ್ ಸಮಾಹೂಯ ಯಾಂಶ್ಚಾನ್ಯಾನ್ ಪ್ರಾಕೃತಾನ್ ಹರೀನ್ ॥೧೦೨॥ ತೇಷಾಂ ಸಂಭಾವ್ಯ ಸ

---

ತದಾ-ಆಕಾಲದಲ್ಲಿ, ಅಮೃತಕಲ್ಪಾನಿ- ಅಮೃತಕ್ಕೆ ಸಮಾನಗಳಾದ, ಮಧೂನಿ-ಮದ್ಯಗಳನ್ನು, ತೇನ-ಆ ಋಕ್ಷರಜಸ್ಸಿನಿಂದ, ತೌ- ಆ ವಾಲಿ ಸುಗ್ರೀವರಿಬ್ಬರು, ಪಾಯಿತೌ-ಪಾನಮಾಡಿಸಲ್ಪಟ್ಟರು ॥೯೬॥ ಋಕ್ಷರಜಾಃ-ಋಕ್ಷರಜಸ್ಸು, ತೌ ತು- ಆ ಇಬ್ಬರನ್ನು, ಗೃಹೀತ್ವಾ-ಕರೆದುಕೊಂಡು, ಬ್ರಹ್ಮಣಃ-ಬ್ರಹ್ಮದೇವರ, ಅಂತಿಕಂ-ಸಮೀಪವಂ ಕುರಿತು, ಆಗಮತ್-ಬಂದನು, ಲೋಕಪಿತಾಮಹಃ- ಜಗತ್ತಿಗೆ ತಂದೆಯಾದ,ಬ್ರಹ್ಮಾ-ಚತುರ್ಮುಖಬ್ರಹ್ಮನು, ಪುತ್ರಂ-ಕುವರನಾದ, ಋಕ್ಷರಜಸಂ-ಋಕ್ಷರಜಸ್ಸಿನನ್ನು, ದೃಷ್ಟ್ವಾ-ಕಂಡು, ಪುತ್ರಾಭ್ಯಾಂ-ಮಕ್ಕಳೊಡನೇ, ಸಹಿತಂ - ಕೂಡಿಕೊಂಡಿರುವ, ಹರಿಂ-ಋಕ್ಷರಜಸ್ಸಿನನ್ನು, ಬಹುಶಃ-ಬಹುಪರಿಯಾಗಿ, ಸಾಂತ್ವಯಾಮಾಸ-ಸಮಾಧಾನಗೊಳಿಸಿದನು ॥೯೭॥ ತತಃ-ಬಳಿಕ, ಸಾಂತ್ವಯಿತ್ವಾ- ಸಮಾಧಾನಗೊಳಿಸಿ, ಪಶ್ಚಾತ್- ಅನಂತರದಲ್ಲಿ, ದೇವದೂತಂ-ದೇವತೆಗಳ ದೂತನಂಕುರಿತು, ಅಥ-ಬಳಿಕ, ಅಬ್ರವೀತ್ - ನುಡಿದನು ॥೯೮॥ ಹೇದೂತ- ಎಲೈ ದೂತನೇ, ಮದ್ವಚನಾತ್- ನನ್ನ ವಚನದದೆಸೆಯಿಂದ, ಕಿಷ್ಕಿಂಧಾಂನಾಮ - ಕಿಷ್ಕಿಂಧಾ ಪಟ್ಟಣವೆಂದು ಪ್ರಸಿದ್ಧವಾದ, ಶುಭಾಂ- ಶುಭಕರವಾದ ಪಟ್ಟಣವಂಕುರಿತು, ಗಚ್ಛ-ಹೋಗು, ಶುಭಾ-ಶುಭಕರವಾದ, ಸಾಪುರೀ-ಆ ಪಟ್ಟಣವು, ಸರ್ವಗುಣಸಂಪನ್ನಾ - ಸಮಸ್ತಗುಣಗಳಿಂದಲೂ ಕೂಡಿಕೊಂಡಿರುವದು, ಮಹತೀಚ-ದೊಡ್ಡದಾಗಿಯೂ ಯಿರುವದು, ತತ್ರ-ಆ ಪಟ್ಟಣದಲ್ಲಿ, ಬಹೂನಿ-ಅನೇಕಗಳಾದ, ವಾನರಯೂಥಾನಿ-ವಾನರತಂಡಗಳು, ವಸಂತಿ-ಇರುತ್ತವೆ ॥೯೯॥ ಬಹುರತ್ನಸಮಾಕೀರ್ಣಾ-ಅನೇಕಗಳಾದ ರತ್ನಗಳಿಂದ ತುಂಬಿರುವ ಆ ಪಟ್ಟಣವು, ಕಾಮರೂಪಿಭಿಃ-ಕಾಮರೂಪಿಗಳಾದ, ವಾನರೈಃ-ಕಪಿಗಳಿಂದ, ಪೂರ್ಣಾ-ತುಂಬಿರುವದು॥೧೦೦॥ಪುಣ್ಯಾ-ಪುಣ್ಯಕರವಾದ, ಆಪಣವತೀ-ಅಂಗಡಿಗಳುಳ್ಳ,ದುರ್ಗಾ-ದುರ್ಗಸ್ಥಾನವಾದ, ಚಾತುರ್ವರ್ಣ್ಯಪುರಸ್ಕೃತಾ-ಬ್ರಹ್ಮ ಕ್ಷತ್ರಿಯವೈಶ್ಯಶೂದ್ರಗಳೆಂಬನಾಲ್ಕುವರ್ಣಗಳಿಂದಲೂಅಲಂಕರಿಸಲ್ಪಟ್ಟ, ಶೋಭನಾ-ಶುಭಕರವಾದ,ದಿವ್ಯಾ-ಮನೋಹರವಾದ ಆ ಪಟ್ಟಣವು, ಮನ್ನಿಯೋಗಾಚ್ಚ -ನನ್ನ ಆಜ್ಞೆಯದೆಸೆಯಿಂದಲೂ, ವಿಶ್ವಕರ್ಮಕೃತಾ-ವಿಶ್ವಕರ್ಮಬ್ರಹ್ಮನಿಂದ ನಿರ್ಮಿಸಲ್ಪಟ್ಟಿಧೆ ॥೧೦೧॥ ತತ್ರ-ಆ ಪಟ್ಟಣದಲ್ಲಿ, ಸಪುತ್ರಂ-ಮಕ್ಕಳಿಂದ ಕೂಡಿಕೊಂಡಿರುವ, ವಾನರರ್ಷಭಂ-ವಾನರಶ್ರೇಷ್ಠನಾದ, ಪುತ್ರಂ-ಮಗನಾದ, ಋಕ್ಷರಜಸಂ- ಋಕ್ಷರಜಸ್ಸಿನನ್ನು, ಅನ್ಯಾಂಶ್ಚ -ಮತ್ತು ಕೆಲಬರಾದ, ಪ್ರಾಕೃತಾನ್-ಪಾಮರರಾದ, ಯೂಥಪಾಲಾನ್-ಯೂಥಪತಿಗಳಾದ,ಯಾನ್ಹರೀನ್-ಯಾವ ವಾನರಗಳುಂಟೋ, ತಾನ್-ಆ ವಾನರಗಳನ್ನು,ಸಮಾಹೂಯ-ಕರೆದು, ಸರ್ವೇಷಾಂ-ಸಮಸ್ತರಾದ,ತೇಷಾಂ-ಆ ವಾನರಗಳಿಗೆ, ಸಂಭಾವ್ಯ-ಬಹುಮಾನಮಾಡಿ, ಮದೀಯಜನಸಂಸದಿ, ನನ್ನ ಸಂಬಂಧವಾದ ಜನರಸಭೆಯಲ್ಲಿ, ಮಹಾಸನೇ, ದೊಡ್ಡ ಸಿಂಹಾಸನದಲ್ಲಿ, ಆರೋಪ್ಯ-ಹತ್ತಿಸಿ, ರಾಜಾನಂ-ಅರಸನನ್ನಾಗಿ, ಅಭಿಷೇಚಯ-ಅ

---

ಮತ್ತು ಕಾಮರೂಪಿಗಳಾಗಿರ್ಪ ಹಚ್ಚಗಿರುವ ಕಣ್ಣುಗಳುಳ್ಳ, ವಾನರೋತ್ತಮರಂ ಕಂಡು, ಅಮೃತ ತುಲ್ಯವಾದ ಮಧುಗಳಂ ತಂದು ಪಾನವಂ ಮಾಡಿಸಿ ಅವರೀರ್ವರಂ ಕರೆದುಕೊಂಡು ಚತುರ್ಮುಖನೆಡೆಗೆ ಬಂದವನಾಗಲೂ, ಲೋಕಪಿತಾಮಹನಾದ ಆ ಬ್ರಹ್ಮನು ಪುತ್ರಸಹಿತನಾಗಿ ಬಂದಿರ್ಪ ಆ ಋಕ್ಷರಜಸ್ಸನಂ ಕಂಡು, ಬಹುವಿಧವಾಗಿ ಸಮಾಧಾನಗೊಳಿಸಿದನಂತರಂ, ದೇವದೂತನಂ ಕುರಿತಿಂತೆಂದನು ॥೯೮॥ ಎಲೈ ದೂತನೇ! ಯನ್ನಾಜ್ಞೆಯಿಂದ ತ್ವರಿತವಾಗಿ ಕಿಷ್ಕಿಂಧಾ ಪಟ್ಟಣಕ್ಕೆ ಪೋಗಿಬಾರೈ, ಆ ನಗರವಾದರೆ ಸರ್ವಗುಣಗಳಿಂದ ಕೂಡಿರುವದಾಗಿಯೂ, ಶುಭಕರವಾಗಿಯೂ, ವಿಸ್ತಾರವಾಗಿಯೂ ಇರುವದು ॥೯೯॥ ಆ ಪುರವರದಲ್ಲಿ ಅನೇಕ ವಾನರಯೂಥಂಗಳು ನೆಲಗೊಂಡಿರುವವು. ಇದಲ್ಲದೆ, ಬಹು ರತ್ನಗಳಿಂದಲೂ, ಕಾಮರೂಪಿಗಳಾದ ವಾನರರಿಂದಲೂ ತುಂಬಿರುವಂಥಾದ್ದಾಗಿರುವದು, ಪುಣ್ಯಕರವಾಗಿಯೂ, ವ್ಯಾಪಾರವುಳ್ಳದ್ದಾಗಿಯೂ, ದುರ್ಗಮಸ್ಥಾನಂಗಳುಳ್ಳದ್ದಾಗಿಯೂ, ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣಸ್ಥರಿಂದ ತುಂಬಿದಂಥಾದ್ದಾಗಿಯೂ, ಇರುವದಾಗಿ, ಎನ್ನಾಜ್ಞೆಯಿಂದ ವಿಶ್ವಕರ್ಮ ನಿರ್ಮಿತವಾಗಿರುವದು ॥೧೦೧॥ ವಾನರೋತ್ತಮನಾದ ಈ ಋಕ್ಷರಜಸ್ಸೆಂಬ ಕುಮಾರನನ್ನು ಪುತ್ರಸಹಿತನಾಗಿ ಕರೆದುಕೊಂಡು ಪೋಗಿ ಆ ಪುರವರವಾಸಿಗಳಾಗಿರ್ಪ ಸಾಧಾರಣರಾದ ಇತರ ವಾನರರನ್ನೂ, ಯೂಥಪತಿಗಳನ್ನೂ ಸಹಾ ಕರೆಸಿ ನನ್ನ ಸಂಬಂಧಿಗಳಾದ ಅವರ ಸಭೆಯಲ್ಲಿ, ಅವರಿಗೆಲ್ಲಾ ಬಹುಮತಿಗಳನ್ನಿತ್ತು ಈ ಋಕ್ಷರಜಸ್ಸಿನನ್ನು, ಸಿಂಹಾಸನದಲ್ಲಿ ಕುಳ್ಳಿರಿಸಿ ರಾಜನನ್ನಾ



CC-0. Bhagavad Ramanuja National Research Institute, Melukote Collection.

ರ್ಕ್ಷಾಣಾಂಮದೀಯಜನಸಂಸದಿ। ಅಭಿಷೇಚಯರಾಜಾನಮಾರೋಪ್ಯಮಹದಾಸನೇ॥೧೦೩॥ದೃಷ್ಟಮಾತ್ರಾಶ್ಚ ತೇಸರ್ವೇ ವಾನರೇಣ ಚಧೀಮತಾ। ಅಸ್ಯರ್ಕ್ಷರಜಸೋನಿತ್ಯಂಭವಿಷ್ಯಂತಿವಶಾನುಗಾಃ ॥ ೧೦೪ ॥ ಇತ್ಯೇವಮುಕ್ತೇವಚನೇಬ್ರಹ್ಮಣಾತಂಹರೀಶ್ವರಮ್ ॥ ಪುರತಃಕೃತ್ವಾದೂತೋಸೌಪ್ರಯಯೌತಾಂಗುಹಾಂಶುಭಾಮ್ ॥ ಸಪ್ರವಿಶ್ಯಾನಿಲಗತಿಸ್ತಾಂಗುಹಾಂವಾನರೋತ್ತಮಮ್ ॥ ಸ್ಥಾಪಯಾಮಾಸರಾಜಾನಂಪಿತಾಮಹನಿಯೋಗತಃ ॥ ರಾಜಾಭಿಷೇಕವಿಧಿನಾಸಸ್ನಾತೋಽಥಾಭ್ಯರ್ಚಿತಸ್ತದಾ। ಸಬದ್ಧಮಕುಟಶ್ರೀಮಾನಭಿಷಿಕ್ತಸ್ಸ್ವಲಂಕೃತಃ ॥ ಆಜ್ಞಾಪಯಾಮಾಸಹರೀನ್ಸರ್ವಾನ್ಮುದಿತಮಾನಸಃ॥೧೦೭॥ ಸಪ್ತದ್ವೀಪಸಮುದ್ರಾಯಾಂಪೃಥಿವ್ಯಾಂಯೇಪ್ಲವಂಗಮಾಃ ॥ ವಾಲಿಸುಗ್ರೀವಯೋರೇವಹ್ಯೇಷತ್ವೃಕ್ಷರಜಾಃಪಿತಾ ।ಜನನೀಚೈವತುಹರಿರಿತ್ಯೇತದ್ಭದ್ರಮಸ್ತುತೇ ॥ ಯಶ್ಚೈತಚ್ಛ್ರಾವಯೇದ್ವಿದ್ವಾನ್ಯಶ್ಚೈತಚ್ಛೃಣುಯಾನ್ನರಃ । ಸಿಧ್ಯಂತಿತಸ್ಯಕಾರ್ಯಾಣಿಮನಸೋಹರ್ಷದಾನಿವೈ ॥೧೧೦॥ ಏತಚ್ಚ ಸರ್ವಂಕಥಿತಂಮಯಾವಿಭೋಪ್ರವಿಸ್ತರೇಣೇಹಯಥಾರ್ಥತಸ್ತವ । ಉತ್ಪತ್ತಿರ

---

ಭಿಷೇಕಮಾಡು ॥೧೦೩॥ ತೇಸರ್ವೇ-ಆ ವಾನರರೆಲ್ಲರು, ಧೀಮತಾ ಬುದ್ಧಿವಂತನಾದ, ವಾನರೇಣ-ಋಕ್ಷರಜಸ್ಸೆಂಬ ವಾನರನಿಂದ, ದೃಷ್ಟಮಾತ್ರಾಶ್ಚ-ನೋಡಲ್ಪಟ್ಟಮಾತ್ರರಾಗಿ, ಅಸ್ಯರ್ಕ್ಷರಜಸಃ-ಈ ಋಕ್ಷರಜಸ್ಸಿಗೆ, ನಿತ್ಯಂ-ನಿರಂತರವೂ, ವಶಾನುಗಾಃ-ಸ್ವಾಧೀನರು, ಭವಿಷ್ಯಂತಿ-ಆಗುವರು ॥೧೦೪॥ ಇತ್ಯೇವಂ-ಈ ಪರಿಯಾಗಿ, ವಚನೇ-ಮಾತು, ಬ್ರಹ್ಮಣಾ-ಬ್ರಹ್ಮದೇವರಿಂದ, ಉಕ್ತೇಸತಿ-ಹೇಳಲ್ಪಟ್ಟದ್ದಾಗುತ್ತಿರಲಾಗಿ, ಅಸೌದೂತಃ- ಈ ದೇವದೂತನು, ತಂಹರೀಶ್ವರಂ-ಆ ವಾನರಶ್ರೇಷ್ಠನಾದ ಋಕ್ಷರಜಸ್ಸಿನನ್ನು, ಪುರತಃ-ಮುಂದುಗಡೆ, ಕೃತ್ವಾ-ಮಾಡಿಕೊಂಡು, ಶುಭಾಂ-ಶುಭಕರವಾದ, ತಾಂಗುಹಾಂ-ಆ ಕಿಷ್ಕಿಂಧಾಪಟ್ಟಣದ ಗುಹೆಯನ್ನು ಕುರಿತು, ಪ್ರಯಯೌ-ತೆರಳಿದನು ॥೧೦೫॥ ಅನಿಲಗತಿಃ-ವಾಯುವೇಗವುಳ್ಳ, ಸಃ-ಆ ದೂತನು, ತಾಂಗುಹಾಂ-ಆ ಗುಹೆಯನ್ನು, ಪ್ರವಿಶ್ಯ-ಪ್ರವೇಶಿಸಿ, ವಾನರೋತ್ತಮಂ-ವಾನರಶ್ರೇಷ್ಠನಾದ ಋಕ್ಷರಜಸ್ಸಿನನ್ನು, ರಾಜಾನಂ-ಅರಸನನ್ನಾಗಿ, ಪಿತಾಮಹನಿಯೋಗತಃ- ಬ್ರಹ್ಮನ ಆಜ್ಞೆಯಿಂದ, ಸ್ಥಾಪಯಾಮಾಸ-ಪಟ್ಟಾಭಿಷೇಕಮಾಡಿದನು ॥೧೦೬॥ ಅಥ-ಬಳಿಕ, ರಾಜಾಭಿಷೇಕವಿಧಿನಾ-ರಾಜ-ರಾಜರ, ಅಭಿಷೇಕವಿಧಿನಾ- ಅಭಿಷೇಕಶಾಸ್ತ್ರದಿಂದ, ಸ್ನಾತಃ-ಅಭಿಷೇಕ ಮಾಡಲ್ಪಟ್ಟ, ಅಭ್ಯರ್ಚಿತಃ-ಬಹುಮಾನ ಮಾಡಲ್ಪಟ್ಟವನಾಗಿ, ತದಾ-ಆ ಕಾಲದಲ್ಲಿ, ಬದ್ಧಮಕುಟಃ-ಕಟ್ಟಲ್ಪಟ್ಟ ಕಿರೀಟವುಳ್ಳವನಾಗಿ, ಶ್ರೀಮಾನ್-ಸಂಪದ್ಯುಕ್ತನಾದ, ಸಃ-ಆ ಋಕ್ಷರಜಸ್ಸು, ಅಭಿಷಿಕ್ತಃ- ಪಟ್ಟಾಭಿಷಿಕ್ತನಾದವನಾಗಿ, ಅಲಂಕೃತಃ-ಅಲಂಕರಿಸಲ್ಪಟ್ಟವನಾದ ಕಾರಣವೇ, ಮುದಿತಮಾನಸಃ-ಸಂತೋಷಯುಕ್ತವಾದ ಮನಸ್ಸುಳ್ಳವನಾಗಿ, ಸರ್ವಾನ್ಹರೀನ್-ಸಮಸ್ತಗಳಾದ ವಾನರಗಳನ್ನು, ಆಜ್ಞಾಪಯಾಮಾಸ-ನಿಯೋಗಿಸಿದನು ॥೧೦೭॥ ಸಪ್ತದ್ವೀಪಸಮುದ್ರಾಯಾಂ-ಸಪ್ತದ್ವೀಪಗಳೂ, ಸಪ್ತಸಮುದ್ರಗಳೂಉಳ್ಳ, ಪೃಥಿವ್ಯಾಂ-ಭೂಮಿಯಲ್ಲಿ, ಪ್ಲವಂಗಮಾಃ-ವಾನರಗಳು, ಯೇ-ಯಾರುಂಟೋ, ತಾನ್ಹರೀನ್-ಅಂಥಾ ವಾನರಗಳನ್ನು, ಆಜ್ಞಾಪಯಾಮಾಸ-ಆಜ್ಞೆಮಾಡುತ್ತಾಯಿದನು ॥೧೦೮॥ ಹರಿಃ-ವಾನರನಾದ, ಏಷಋಕ್ಷರಜಾಸ್ತು-ಈ ಋಕ್ಷರಜಸ್ಸಾದರೆ, ವಾಲಿಸುಗ್ರೀವಯೋಃ- ವಾಲಿ ಸುಗ್ರೀವರಿಬ್ಬರಿಗೂ, ಪಿತೈವ-ತಂದೆಯಂತೆ, ಜನನೀಚೈವ-ತಾಯಿಯಂತೆಯು ಆಗಿಯಿದ್ದಾನೇ, ತೇ-ನಿನಗೆ, ಭದ್ರಂ-ಶುಭವು, ಅಸ್ತು-ಆಗಲೀ, ತದೇತತ್-ಆ ಈ ಕಥಾವೃತ್ತಾಂತವನ್ನು, ವಿದ್ವಾನ್-ವಿದ್ವಾಂಸನಾದ, ಯಃ-ಯಾರು, ಶ್ರಾವಯೇತ್-ಕೇಳಿಸುವನೋ, ಯೋನರಃ-ಯಾವಮನುಷ್ಯನೂ, ಏತತ್-ಈ ಕಥಾವೃತ್ತಾಂತವನ್ನು, ಶೃಣುಯಾತ್-ಕೇಳುವನೋ, ತಸ್ಯ-ಆಪುರುಷನ, ಮನಸಃ-ಮನಸ್ಸಿಗೆ, ಹರ್ಷದಾನಿವೈ-ಹರ್ಷಪ್ರದಾಯಕಂಗಳಾದ, ಕಾರ್ಯಾಣಿ-ಕಾರ್ಯಗಳು, ಸಿಧ್ಯಂತಿ-ಸಿದ್ಧಿಸುತ್ತವೆ ॥೧೧೦॥ ಹೇವಿಭೋ-ಎಲೈ ಪ್ರಭುವಾದ ಶ್ರೀರಾಮನೇ, ಮಯಾ-ಯನ್ನಿಂದ, ಇಹ-ಈಗ, ತವ-ನಿನಗೆ, ಪ್ರವಿಸ್ತರೇಣ-ವಿಸ್ತಾರದಿಂದ, ಏತತ್ಸರ್ವಂ-ಈ ಸಮಸ್ತವೂ, ಕಥಿತಂ-ಹೇಳಲ್ಪಟ್ಟಿತು, ರಜನೀಚರಾಣಾಂ- ರಾಕ್ಷಸರ, ಏಷೋತ್ಪತ್ತಿಃ-ಈ ಉತ್ಪತ್ತಿಯು, ತಥೈವ- ಹಾಗೆಯೇ, ಇಹ-

---

ಗಿ ಪಟ್ಟಾಭಿಷೇಕವಂಮಾಡು ॥೧೦೩॥ ಮಹಾ ಬುದ್ಧಿವಂತನಾದ ಈ ವಾನರನ ದರುಶನಮಾತ್ರದಿಂದಲೇ ಅವರೆಲ್ಲರೂ ಈತನಿಗೆ ಅಧೀನರಾಗಿರುವರೆಂದು ಚತುರ್ಮುಖ ಬ್ರಹ್ಮನು ನುಡಿಯಲೂ, ಆ ದೂತನು ಆ ಋಕ್ಷರಜಸ್ಸಿನಂ ಕರದುಕೊಂಡು ಶುಭಕರವಾದ ಆ ಕಿಷ್ಕಿಂಧಾಪುರವಂ ಕುರಿತು ತೆರಳಿ, ಕಡು ಜಾಗ್ರತೆಯಾಗಿ ಆ ನಗರಿಯಂ ಪೊಕ್ಕು ಬ್ರಹ್ಮನ ಆಜ್ಞೆಯಿಂದ ಪಟ್ಟಾಭಿಷೇಕವಂಗೈದನು ॥೧೦೬॥ ಅದೆಂತೆನೆ,— ಆ ವೇಳೆಯಲ್ಲಿ ರಾಜಾಭಿಷೇಕವಿಧಾನದಿಂದ, ಸ್ನಾನಮಾಡಿಸಲ್ಪಟ್ಟವನಾಗಿಯೂ, ಕಿರೀಟಧಾರಿಯಾಗಿಯೂ, ಚೆನ್ನಾಗಿ ಅಲಂಕರಿಸಲ್ಪಟ್ಟವನಾಗಿಯೂ ಇರುವನಾಗಿ, ಅಭಿಷೇಕಮಾಡಲ್ಪಟ್ಟ, ಕಡುಕಾಂತಿಯುಳ್ಳವನಾಗಿಯೂ, ಸಂತುಷ್ಟಾಂತರಂಗವುಳ್ಳವನಾಗಿಯೂ ಇರುವನಾಗಿ ಸಪ್ತದ್ವೀಪ ವಾಸಿಗಳಾಗಿರ್ಪ ಆ ಕಪಿಗಳಿಗೆಲ್ಲಾ ಆಜ್ಞೆಯಂಗೈಯ್ಯುತ್ತಿದ್ದನು ॥೧೦೮॥ ಎಲೈ ರಘುನಂದದನೇ ! ಈ ಋಕ್ಷರಜಸ್ಸೆಂಬ ವಾನರನಾದರೇ, ವಾಲಿ ಸುಗ್ರೀವರೀರ್ವರಿಗೆ ಜನಕನಾಗಿಯೂ, ಜನನಿಯಾಗಿಯೂ ಇರುವನು. ನಿನಿಗೆ ಶುಭವುಂಟಾಗಲಿ ಯಾವ ವಿದ್ವಾಂಸನು, ಈ ಕಥೆಯನ್ನು ಶ್ರವಣವಮಾಡಿಸುವನೋ, ಯಾವ ನರನು ಇದಂ ಕೇಳ್ವನೋ ಅವರಿಗೆಲ್ಲಾ ಸರ್ವ ಕಾರ್ಯ ಸಂಸಿದ್ಧಿಯುಂಟಾಗುವದು ॥೧೧೦॥ ಎಲೈ ಪ್ರಭುವೇ ! ಈ ಸಭೆಯಲ್ಲಿ ಇದನ್ನೆಲ್ಲ ವಿಸ್ತಾರವಾಗಿ

Funding: Tattva Heritage Foundation,Kolkata. Digitization: eGangotri.
CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಷಾರಜನೀಚರಾಣಾಮುಕ್ತಾ ತಥೈವೇಹ ಹರೀಶ್ವರಾಣಾಮ್ ॥೧೧೧॥ ಏತಾಂಶ್ರುತ್ವಾ ಕಥಾಂದಿವ್ಯಾಂಪುರಾಣಾಂರಾಘವಸ್ತದಾ । ಭ್ರಾತೃಭಿಸ್ಸಹಿತೋವೀರೋವಿಸ್ಮಯಂಪರಮಂಯಯೌ ॥೧೧೨॥ ರಾಘವೋಥಋಷೇರ್ವಾಕ್ಯಾದ್ಧೃಷ್ಟೋ ವಚನಮಬ್ರವೀತ್ । ಕಥೇಯಂಮಹತೀಪುಣ್ಯಾ ತ್ವತ್ಪ್ರಸಾದಾಚ್ಛ್ರುತಾಮಯಾ ॥೧೧೩॥ಬೃಹತ್ಕೌತೂಹಲಶ್ಚಾಸ್ಮಿ ಸಂವೃತ್ತೋ ಮುನಿಪುಂಗವ । ಉತ್ಪತ್ತಿರ್ಯಾದೃಶೀದಿವ್ಯಾ ವಾಲಿ ಸುಗ್ರೀವಯೋರ್ದ್ವಿಜ ॥ ಬ್ರಹ್ಮರ್ಷೇಮಮಕಿಂಚಿತ್ರಂಸುರೇಂದ್ರತಪನಾವುಭೌ ॥ ಜಾತೌವಾನರಶಾರ್ದೂಲೌಬಲೇನಬಲಿನಾಂವರೌ ॥೧೧೪॥ ಏವಮುಕ್ತೇ ಚರಾಮೇಣಕುಂಭಯೋನಿರಭಾಷತ । ಏವಮೇತನ್ಮಹಾಬಾಹೋವೃತ್ತಮಾಸೀತ್ಪುರಾಕಿಲ ॥೧೧೫॥ ಅಥಾಪರಾಂಕಥಾಂದಿವ್ಯಾಂಶೃಣುರಾಜನ್ ಪುರಾತನಾಮ್ ॥ ಯದರ್ಥಂರಾಮವೈದೇಹೀರಾವಣೇನಹೃತಾಪುರಾ॥೧೧೬॥ ತತ್ತೇಹಂಕೀರ್ತಯಿಷ್ಯಾಮಿಸಮಾಧಿಂಶ್ರವಣೇಕುರು। ಪುರಾಕೃತಯುಗೇರಾಮಪ್ರಜಾಪತಿಸುತಂಪ್ರಭುಮ್ ॥ ಸನತ್ಕುಮಾರಮಾಸೀನಂರಾವಣೋರಾಕ್ಷಸಾಧಿಪಃ । ದದರ್ಶಸೂ

---

ಈಗ, ಹರೀಶ್ವರಾಣಾಂಚ-ಕಪಿಗಳ, ಉತ್ಪತ್ತಿಶ್ಚ-ಹುಟ್ಟುವಿಕೆಯೂ, ಯಥಾರ್ಥತಃ-ಪ್ರಮಾಣದ ಪೇಳಿಯಿಂದ, ಉಕ್ತಾ-ಪೇಳಲ್ಪಟ್ಟಿತು ॥೧೧೧॥ ವೀರಃ-ಶೂರನಾದ, ರಾಘವಃ-ಶ್ರೀರಾಮನು, ತದಾ-ಆ ಕಾಲದಲ್ಲಿ, ಭ್ರಾತೃಭಿಃ-ತಮ್ಮಂದರಿಂದ, ಸಹಿತಃ-ಕೂಡಿದವನಾಗಿ, ದಿವ್ಯಾಂ- ಮನೋಹರವಾದ ಪುರಾಣಾಂ-ಪುರಾತನವಾದ, ಏತಾಂಕಥಾಂ-ಈ ಕಥೆಯನ್ನು, ಶ್ರುತ್ವಾ-ಕೇಳಿ, ಪರಮಂವಿಸ್ಮಯಂ-ಪರಮಾಶ್ಚರ್ಯವನ್ನು, ಯಯೌ-ಹೊಂದಿದನು ॥ ಅಥ-ಅನಂತರವು, ರಾಘವಃ-ಶ್ರೀರಾಮನು, ಋಷೇಃ-ಅಗಸ್ತ್ಯಋಷಿಯ, ವಾಕ್ಯಾತ್-ವಚನದವೇಳೆಯಿಂದ, ಹೃಷ್ಟಃ- ಸಂತೋಷಗೊಂಡವನಾಗಿ, ವಚನಂ-ಮಾತನ್ನು, ಅಬ್ರವೀತ್-ನುಡಿದನು, ತ್ವತ್ಪ್ರಸಾದಾತ್-ನಿನ್ನ ಅನುಗ್ರಹದ ಪೇಳಿಯಿಂದ, ಮಹತೀ-ದೊಡ್ಡದಾದ, ಪುಣ್ಯಾ-ಪುಣ್ಯಕರವಾದ, ಇಯಂಕಥಾ-ಈ ಕಥೆಯು, ಮಯಾ-ಯನ್ನಿಂದ, ಶ್ರುತಾ-ಕೇಳಲ್ಪಟ್ಟಿತು, ಹೇಮುನಿಪುಂಗವ-ಎಲೈ ಋಷಿಶ್ರೇಷ್ಠನೆ, ಹೇದ್ವಿಜ-ಎಲೈ ಬ್ರಾಹ್ಮಣನೆ, ವಾಲಿಸುಗ್ರೀವಯೋಃ-ವಾಲಿಸುಗ್ರೀವರಿಬ್ಬರ, ದಿವ್ಯಾ-ಮನೋಹರವಾದ, ಉತ್ಪತ್ತಿಃ-ಉತ್ಪತ್ತಿಯು, ಯಾದೃಶೀ-ಎಂಥಾದ್ದೆಂದು, ಬೃಹತ್ಕೌತೂಹಲಶ್ಚ - ದೊಡ್ಡದಾದ ಕುತೂಹಲವುಳ್ಳವನು, ಅಸ್ಮಿ-ಆಗಿದೇನು, ಹೇ ಬ್ರಹ್ಮರ್ಷೇ-ಎಲೈ ಬ್ರಾಹ್ಮಣಶ್ರೇಷ್ಠನೇ, ಮಮ-ನನಿಗೆ, ಚಿತ್ರಂ-ಆಶ್ಚರ್ಯವು, ಕಿಂ- ಯೇನು, ಸುರೇಂದ್ರತಪನೌ-ದೇವೇಂದ್ರಸೂರ್ಯರು, ಉಭೌ-ಇಬ್ಬರೂನು, ಬಲಿನಾಂ-ಬಲಿಷ್ಠರೊಳಗೆ, ವರೌ-ಶ್ರೇಷ್ಠರಾದ,ವಾನರಶಾರ್ದೂಲೌ-ವಾನರಶ್ರೇಷ್ಠರಾಗಿ, ಬಲೇನ-ಬಲದಿಂದ, ಜಾತೌ-ಹುಟ್ಟಿದರು ॥೧೧೪॥ ಏವಂ-ಈ ಪರಿಯಾಗಿ, ರಾಮೇಣ-ಶ್ರೀರಾಮನಿಂದ, ಉಕ್ತೇಚಸತಿ - ಪೇಳಲ್ಪಡುತ್ತಿರಲಿಕಾಗಿ, ಕುಂಭಯೋನಿಃ-ಅಗಸ್ತ್ಯಋಷಿಯು, ಅಭಾಷತ-ನುಡಿದನು, ಹೇಮಹಾಬಾಹೋ, ಎಲೈಮಹಾಭುಜ ಪರಾಕ್ರಮಶಾಲಿಯೇ, ಏತತ್-ಇದು, ಏವಂ-ಈಪ್ರಕಾರವೇ, ಪುರಾಕಿಲ-ಪೂರ್ವದಲ್ಲಿ, ವೃತ್ತಂ-ನಡೆದಂಥಾದ್ದು, ಆಸೀತ್‌ಕಿಲ-ಆಯಿತಷ್ಟೆ॥೧೧೫॥ ಹೇರಾಜನ್-ಎಲೈರಾಜನೇ, ಅಥ-ಬಳಿಕ, ದಿವ್ಯಾಂ-ಮನೋಹರವಾದ, ಪುರಾತನಾಂ-ಪೂರ್ವದಲ್ಲಿ ನಡೆದ, ಅಪರಾಂಕಥಾಂ-ಮತ್ತೊಂದುಕಥೆಯನ್ನು, ಶೃಣು-ಕೇಳು, ಹೇರಾಮ-ಎಲೈ ಶ್ರೀರಾಮನೆ,ಯದರ್ಥಂ-ಯಾವ ನಿಮಿತ್ತವಾಗಿ, ವೈದೇಹೀ-ಸೀತಾದೇವಿಯು, ಪುರಾ-ಪೂರ್ವದಲ್ಲಿ, ರಾವಣೇನ-ರಾವಣಾಸುರನಿಂದ, ಹೃತಾ- ಅಪಹರಿಸಲ್ಪಟ್ಟಳೋ, ತತ್-ಆ ಚರಿತ್ರೆಯನ್ನು, ತೇ-ನಿನಿಗೋಸುಗ, ಅಹಂ-ನಾನು, ಕೀರ್ತಯಿಷ್ಯಾಮಿ-ಪೇಳುವೆನು, ಶ್ರವಣೇ-ಕೇಳುವಿಕೆಯಲ್ಲಿ, ಸಮಾಧಿಂ-ಸಮಾಧಾನವನ್ನು, ಕುರು-ಮಾಡು, ॥೧೧೬॥ ಹೇರಾಮ-ಎಲೈ ಶ್ರೀರಾಮನೇ, ಪುರಾ-ಪೂರ್ವದಲ್ಲಿ, ಕೃತಯುಗೇ-ಕೃತಯುಗದಲ್ಲಿ,ಪ್ರಜಾಪತಿಸುತಂ-ಚತುರ್ಮುಖ ಬ್ರಹ್ಮಪುತ್ರನಾದ, ಪ್ರಭುಂ-ಸಮರ್ಥನಾದ, ಆಸೀನಂ-ಕುಳಿತುಕೊಂಡಿರುವ, ತೇಜಸಾ-ತೇಜಸ್ಸಿನಿಂದ, ಸೂರ್ಯಸಂಕಾಶಂ-ಸೂರ್ಯನಿಗೆ ಸಮಾನವಾಗಿ, ಜ್ವಲಂತಮಿವಸ್ಥಿತಂ-ಪ್ರಜ್ವಲಿಸುವವನಂತಿರುವ, ಸನತ್ಕುಮಾರಂ-ಸನತ್ಕುಮಾರನನ್ನು, ದದರ್ಶ-ಕಂಡನು ॥೧೧೭॥ ಹೇರಾಮ-ಎಲೈ ಶ್ರೀರಾಮನೆ, ರಾವಣಃ-ರಾವಣ

---

ಯೂ, ಯಥಾರ್ಥವಾಗಿಯೂ,ಪೇಳಿರುವೆನು. ರಾಕ್ಷಸರ ಉತ್ಪತ್ತಿಯೂ,ಕಪಿಯೂಥಪತಿಗಳ ಜನನವೂ ಈಪರಿಯಂಟಾಗಿರುವದೆಂದು ಕುಂಭಸಂಭವನು ನುಡಿದವನಾಗಲೂ,ದಿವ್ಯವಾಗಿರುವ ಈಕಥೆಯಂಕೇಳಿ, ಆವೇಳೆಯಲ್ಲಿ ರಘುನಂದನನು ತಮ್ಮಂದರಿಂದೊಡಗೂಡಿ, ಸಂತುಷ್ಟಾಂತರಂಗವುಳ್ಳವನಾಗಿಂತೆಂದನು. ಎಲೈಮಹರ್ಷಿಯೇ! ನಿಮ್ಮನುಗ್ರಹದಿಂ ಪುಣ್ಯಕರವಾಗಿರ್ಪ ಈ ಕಥೆಯಂ ಕೇಳಿದವನಾದೆನು,ವಾಲಿ ಸುಗ್ರೀವರೀರ್ವರ ಉತ್ಪತ್ತಿಯಂ ಕೇಳಬೇಕೆಂದು ನಾನು ಬಹಳ ಕುತೂಹಲವುಳ್ಳವನಾಗಿದ್ದೆನು, ಹಾಹಾಯೇನು ಆಶ್ಚರ್ಯಕರವಾಗಿರುವದು, ದೇವೇಂದ್ರಸೂರ್ಯರೆಂಬೀರ್ವರು ಬಲವಂತರೊಳಗೆ ಮುಖಂಡರಾದ ವಾನರೋತ್ತಮರಾಗಿ ಬಲದಿಂ ಪುಟ್ಟಿರುವರಲ್ಲಾ ಎಂಬದಾಗಿ ಶ್ರೀರಾಮನು ನುಡಿಯಲೂ ಆಗಸ್ತ್ಯಮಹಾಮುನಿಯು ಪುತ್ತಿಂತೆಂದನು, ಎಲೈ ಮಹಾ ಭುಜಪರಾಕ್ರಮಿಯೇ ! ಪೂರ್ವಕಾಲದಲ್ಲಿ, ಇವರೀರ್ವರ ಉತ್ಪತ್ತಿಯೂ, ಹೀಗೆಯೇ ಉಂಟಾಯಿತು, ನಿನಗೆ ದಿವ್ಯವಾದ ಮತ್ತೊಂದು ಕಥೆಯಂ ಪೇಳ್ವೆನು ಕೇಳು ಅದೇನೆಂದರೆ,— ಯಾತಕ್ಕೋಸುಗ, ಜನಕರಾಜನಂದಿನಿಯಾದ ಸೀತಾದೇವಿಯು ರಾವಣನಿಂದ ಪಹರಿಸಲ್ಪಟ್ಟಳೋ ಅದರಂ ಪೇಳ್ವೆನು, ಸಾವಧಾನಚಿತ್ತನಾಗಿ ಕೇಳು ॥೧೧೬॥ ಎಲೈ ರಘುಕುಲತಿಲಕನೇ! ಕಳೆದ ಕೃತಯುಗದಲ್ಲಿ ರಾಕ್ಷಸಾಧಿಪತಿಯಾದ ರಾವಣನು, ಸಾಕ್ಷಾತ್ ಬ್ರಹ್ಮಪುತ್ರನಾಗಿಯೂ, ಸಮರ್ಥನಾಗಿಯೂ, ತೇಜಸ್ಸಿನಿಂದ ಸೂರ್ಯನಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಯಸಂಕಾಶಂಜ್ವಲಂತಮಿವತೇಜಸಾ ॥೧೯॥ ವಿನಯಾವನತೋಭೂತ್ವಾಹ್ಯಭಿವಾದ್ಯ ಕೃತಾಂಜಲಿಃ । ಉಕ್ತವಾನ್ ರಾವಣೋ ರಾಮುತಮೃಷಿಂಸತ್ಯವಾದಿನಮ್ ॥೨೦॥ ಕೋಽಸ್ಮಿನ್ ಪ್ರವರೋಲೋಕೇದೇವಾನಾಂಬಲವತ್ತರಃ । ಯಂಸಮಾಶ್ರಿತ್ಯವಿಬುಧಾಃಜಯಂತಿಸಮರೇರಿಪೂನ್ ॥೨೧॥ ಕಥಯಂತಿದ್ವಿಜಾನಿತ್ಯಂಕಂಧ್ಯಾಯಂತಿಚಯೋಗಿನಃ॥ ಏತನ್ಮೇಶಂಸಭಗವನ್ ವಿಸ್ತರೇಣತಪೋಧನ ॥೨೨॥ ವಿದಿತ್ವಾಹೃದ್ಗತಂತಸ್ಯಧ್ಯಾನದೃಷ್ಟ್ಯಾಮಹಾಯಶಾಃ ॥ ಉವಾಚರಾವಣಂಪ್ರೇಮ್ಣಾಶ್ರೂಯತಾಮಿತಿಪುತ್ರಕ ॥೨೩॥ ಯೋವೈಭರ್ತಾಜಗತ್ಕೃತ್ಸ್ನಂಯಸ್ಯೋತ್ಪತ್ತಿಂನವಿದ್ಮಹೇ॥ ಸುರಾಸುರೈರ್ನತೋನಿತ್ಯಂಹರಿರ್ನಾರಾಯಣಃಪ್ರಭುಃ। ಯಸ್ಯನಾಭ್ಯುದ್ಭವೋಬ್ರಹ್ಮಾವಿಶ್ವಸ್ಯಜಗತಃಪತಿಃ । ಯೇನಸರ್ವಮಿದಂಸೃಷ್ಟಂವಿಶ್ವಂಸ್ಥಾವರಜಂಗಮಮ್ । ತಂಸಮಾಶ್ರಿತ್ಯವಿಧಿನಾವಿಬುಧಾಃಕರಿಮಧ್ವರೇ ॥ ಪಿಬಂತಿಹ್ಯಮೃತಂಚೈವಮಾನವಾಶ್ಚ ಯಜಂತಿತಮ್ ॥೨೪॥ ಪುರಾಣೈಶ್ಚ್ಯವೇದೈಶ್ಚ ಪಾಂಚರಾತ್ರೈಸ್ತಥೈವಚ ॥ ಧ್ಯಾಯಂತಿಯೋಗಿನೋನಿತ್ಯಂಕ್ರತುಭಿಶ್ಚ ಯಜಂತಿತಮ್॥೨೫॥ ದೈ

---

ನು, ಸತ್ಯವಾದಿನಂ-ಸತ್ಯವಾದಿಯಾದ, ತಮೃಷಿಂ-ಆ ಸನತ್ಕುಮಾರನಂ ಕುರಿತು, ವಿನಯಾ ಅವನತೋಭೂತ್ವಾ - ವಿನಯದಿಂದನಮ್ರನಾಗಿ, ಅಭಿವಾದ್ಯ-ನಮಸ್ಕರಿಸಿ-ಕೃತಾಂಜಲಿಃ-ಅಂಜಲಿಬದ್ಧನಾಗಿ, ಉಕ್ತವಾನ್-ಹೇಳಿದನಷ್ಟೇ, ಅಸ್ಮಿನ್‌ಲೋಕೇ- ಈ ಲೋಕದಲ್ಲಿ, ದೇವಾನಾಂ-ದೇವತೆಗಳೊಳಗೆ, ಬಲವತ್ತರಃ-ಬಲಿಷ್ಠನಾದ, ಪ್ರವರಃ-ಶ್ರೇಷ್ಠನು, ಕಃ-ಯಾರು, ಯಂ-ಯಾವನನ್ನು, ಸಮಾಶ್ರಿತ್ಯ-ಆಶ್ರಯಿಸಿ, ವಿಬುಧಾಃ-ದೇವತೆಗಳು, ಸಮರೇ-ಕಾಳಗದಲ್ಲಿ, ರಿಪೂನ್-ಶತ್ರುಗಳನ್ನ, ಜಯಂತಿ-ಜಯಿಸುತ್ತಾರೊ ॥೨೧॥ ದ್ವಿಜಾಃ-ಬ್ರಾಹ್ಮಣರು, ಕಂ-ಯಾವನನ್ನು, ನಿತ್ಯಂ-ನಿತ್ಯನನ್ನಾಗಿ, ಕಥಯಂತಿ-ಹೇಳುತ್ತಾರೋ, ಯೋಗಿನಃ-ಯೋಗಿಗಳು, ಕಂ-ಯಾವನನ್ನು, ಧ್ಯಾಯಂತಿಚ-ಧ್ಯಾನಮಾಡುತ್ತಾರೋ, ಹೇತಪೋಧನ- ಎಲೈ ತಪಸ್ಸೇ ಧನವಾಗುಳ್ಳವನೇ, ಹೇಭಗವನ್-ಎಲೈ ಪೂಜ್ಯನೇ, ಏತತ್-ಇದನ್ನ, ವಿಸ್ತರೇಣ-ವಿಸ್ತಾರದಿಂದ, ಮೇ-ಯನಗೆ, ಶಂಸ-ಹೇಳು, ತಸ್ಯ-ಆ ರಾವಣನ, ಹೃದ್ಗತಂ - ಹೃದಯಾಭಿಪ್ರಾಯವನ್ನು, ಧ್ಯಾನದೃಷ್ಟ್ಯಾ-ಧ್ಯಾನದೃಷ್ಟಿಯಿಂದ, ವಿದಿತ್ವಾ-ತಿಳಿದು, ಮಹಾಯಶಾಃ- ಮಹಾಯಶೋಪೇತನಾದ, ಸನತ್ಕುಮಾರಋಷಿಯು, ಪ್ರೇಮ್ಣಾ-ವಿಶ್ವಾಸದಿಂದ, ಹೇಪುತ್ರಕ-ಎಲೈಮಗನೇ, ಶ್ರೂಯತಾಂ-ಕೇಳಲ್ಪಡಲಿ, ಇತಿ-ಇಂತೆಂದು, ರಾವಣಂ-ರಾವಣನಂ ಕುರಿತು, ಉವಾಚ-ಹೇಳಿದನು॥೨೩॥ ಯಃ-ಯಾವನು, ಕೃತ್ಸ್ನಂ-ಸಮಸ್ತವಾದ, ಜಗತ್-ಜಗತ್ತುವಿನನ್ನು, ಭರ್ತಾ-ಭರಿಸುವನೋ, ಯಸ್ಯ-ಯಾವ ಪುರುಷನ, ಉತ್ಪತ್ತಿಂ-ಜನನವನ್ನು, ನವಿದ್ಮಹೆ-ತಿಳಿಯಲಾರೆವೋ, ಸುರಾಸುರೈಃ-ದೇವರಾಕ್ಷಸರಿಂದ, ನಿತ್ಯಂ- ನಿರಂತರವು, ನತಃ-ನಮಸ್ಕಾರ ಮಾಡಲ್ಪಟ್ಟವನು, ನಾರಾಯಣಃ-ಉದಕವೇ ಆಧಾರವಾಗುಳ್ಳವನು, ಪ್ರಭುಃ-ಸಮರ್ಥನಾದವನು,ಹರಿರ್ವೈ-ನಾರಾಯಣನಷ್ಟೇ, ಯಸ್ಯ- ಯಾವಶ್ರೀಮಹಾವಿಷ್ಣುವಿನ-ನಾಭ್ಯುದ್ಭವಃ-ನಾಭಿಯಲ್ಲಿಹುಟ್ಟಿದ, ಬ್ರಹ್ಮಾ-ಚತುರ್ಮುಖನು, ವಿಶ್ವಸ್ಯ-ಸಮಸ್ತವಾದ, ಜಗತಃ-ಜಗತ್ತಿಗೆ, ಪತಿಃ-ಪತಿಯಾಗಿದ್ದಾನೋ, ಯೇನ-ಯಾವ ವಿಷ್ಣುವಿನಿಂದ, ಸ್ಥಾವರಜಂಗಮಂ-ಚರಾಚರಾತ್ಮಕವಾದ, ಇದಂವಿಶ್ವಂ-ಈ ಪ್ರಪಂಚವು, ಸರ್ವಂ-ಸಮಸ್ತವೂನು, ಸೃಷ್ಟಂ-ಸೃಜಿಸಲ್ಪಟ್ಟಿತೋ, ತಂಹರಿಂ-ಆ ಶ್ರೀಮಹಾವಿಷ್ಣುವಿನನ್ನು, ಸಮಾಶ್ರಿತ್ಯ-ಆಶ್ರಯಿಸಿ, ವಿಬುಧಾಃ-ದೇವತೆಗಳು, ಅಧ್ವರೇ, ಯಜ್ಞದಲ್ಲಿ, ವಿಧಿನಾ- ಶಾಸ್ತ್ರವಿಧಾನದಿಂದ, ಅಮೃತಂ-ಅಮೃತವನ್ನು, ಪಿಬಂತಿ-ಪಾನಮಾಡುತ್ತಾರಷ್ಟೇ, ಮಾನವಾಶ್ಚ-ಮನುಷ್ಯರೂನು, ತಂ-ಆ ವಿಷ್ಣುವಿನಂಕುರಿತು, ಯಜಂತಿ- ಯಜ್ಞಮಾಡುತ್ತಾರೆ ॥೨೪॥ ತಥೈವ-ಹಾಗೆಯೇ, ಯೋಗಿನಃ-ಯೋಗಿಗಳು, ಪುರಾಣೈಶ್ಚ -ಪುರಾಣಗಳಿಂದಲೂ, ವೇದೈಶ್ಚ -ವೇದಗಳಿಂದಲೂ, ಪಾಂಚರಾತ್ರೈಶ್ಚ-ಪಂಚರಾತ್ರಗಳಿಂದಲೂ, ನಿತ್ಯಂ-ನಿರಂತರವೂ, ಧ್ಯಾಯಂತಿ-ಧ್ಯಾನಮಾಡುತ್ತಾರೆ, ಕ್ರತುಭಿಶ್ಚ -ಕ್ರತುಗಳಿಂದ, ಯಜಂತಿ- ಯಜ್ಞಮಾಡುತ್ತಾರೆ ॥

---

ತೆ ಕಂಗೊಳಿಸುತಿರುವನಾಗಿಯೂ, ಇರುವಸನತ್ಕುಮಾರಮುನಿಯಂ ವೀಕ್ಷಿಸಿ ವಿನಯದಿಂದ ವಂದನೆಯಂಗೈದು, ಅಂಜಲಿಬದ್ಧನಾಗಿ, ಆ ಋಷಿಯಂ ಕುರತಿಂತೆಂದನು ॥ ಎಲೈ ಬ್ರಹ್ಮನಿಷ್ಠಾಪರನೇ ! ಈ ಲೋಕದೊಳು ಯಾವಪುರುಷನು ಉತ್ತಮನಾಗಿರುವನು ? ದೇವತೆಗಳೊಳಗೆ ಬಲವಂತನ್ಯಾರು? ಯಾವ ಪುರುಷನನ್ನಾಶ್ರಯಿಸಿ ದೇವತೆಗಳೆಲ್ಲ ಸಂಗರದಲ್ಲಿ ಶತ್ರುಗಳಂ ಗೆಲ್ಲುವರು ? ಬ್ರಾಹ್ಮಣರೆಲ್ಲರು ಯಾವ ಪುರುಷನಂ ಹೇಳ್ವರು ? ಇದಲ್ಲದೇ ಯೋಗಿಗಳು ಯಾವಾತನನ್ನು ಧ್ಯಾನಿಸುತ್ತಿರುವರು ? ಇದನ್ನೆಲ್ಲಾ ನನಿಗೆ ವಿಸ್ತಾರವಾಗಿ ಹೇಳೆಂದು ರಾವಣನು ಬೇಡಲೂ, ಮಹಾ ಯಶಸ್ವಿಯಾದ ಆ ಸನತ್ಕುಮಾರ ಋಷಿಯು ಧ್ಯಾನದೃಷ್ಟಿಯಿಂದ ಆ ರಾವಣನ ಮನೋಭಿಪ್ರಾಯವನರಿತು, ಆತನಂ ಕುರಿತಿಂತೆಂದನು ॥೨೩॥ ಎಲೈ ಬಾಲಕನೇ ಪೇಳ್ವೆನು ಕೇಳು, ಯಾವ ಪುರುಷನು ಈ ಜಗಕ್ಕೆಲ್ಲಾ ಭರ್ತನಾಗಿರುವನೋ ಯಾವಾತನಉತ್ಪತ್ತಿಯಂಕಾಣೆವೋ, ಸುರಾಸುರರಿಂದ ನಿರಂತರವೂ ನಮಸ್ಕರಿಸಲ್ಪಡುತ್ತಿರುವನಾಗಿಯೂ, ಉದಕವೇ ಆಧಾರವಾಗುಳ್ಳವನಾಗಿಯೂ, ಸಮರ್ಥನಾಗಿಯೂ ಇರುವಂಥಾವನು ಶ್ರೀಮನ್ನಾರಾಯಣನಷ್ಟೇ. ಯಾವ ಮಹಾವಿಷ್ಣುವಿನ ನಾಭೀಪ್ರದೇಶದಿಂ ಸಂಭೂತನಾದ ಸಾಕ್ಷಾಚ್ಚತುರ್ಮುಖನು ಈ ಪ್ರಪಂಚಕ್ಕೆಲ್ಲಾ ಪತಿಯಾಗಿರುವನೋ ಚರಾಚರಾತ್ಮಕವಾದ ಈ ಪ್ರಪಂಚವು ಯಾವಾತನಿಂದ ನಿರ್ಮಿಸಲ್ಪಟ್ಟತೋ ಅಂಥಾ ನಾರಾಯಣಮೂರ್ತಿಯನ್ನು ಆಶ್ರಯಿಸಿ ದೇವತೆಗಳು, ಯಾಗಂಗಳಲ್ಲಿ ಶಾಸ್ತ್ರವಿಧಾನದಿಂ ಅಮೃತಪಾನವಂ ಗೈಯ್ಯುತ್ತಿರುವರು, ಮಾನವರೆಲ್ಲರು ಆತನಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ಯದಾನವರಕ್ಷಾಂಸಿಯೇಚಾನ್ಯೇಚಾಮರದ್ವಿಷಃ ॥ ಸರ್ವಾನ್ ಜಯಂತಿಸಂಗ್ರಾಮೇತಂಸ್ಮೃತ್ವಾನನ್ಯಚೇತಸಃ ॥೧೮॥ ಶ್ರು ತ್ವಾ ಮಹರ್ಷೇಸ್ತದ್ವಾಕ್ಯಂರಾವಣೋರಾಕ್ಷಸಾಧಿಪಃ । ಉವಾಚಪ್ರಣತೋಭೂತ್ವಾಪುನರೇವಮಹಾಮುನಿಮ್ ॥೧೯॥ ದೈತ್ಯದಾನವರಕ್ಷಾಂಸಿಯೇಹತಾಸ್ಸಮರೇರಯಃ । ಕಾಂಗತಿಂಪ್ರತಿಪದ್ಯಂತೇಕಿಂಚತೇಹರಿಣಾಹತಾಃ ॥೨೦॥ ರಾವಣಸ್ಯವ ಚಶ್ಶ್ರುತ್ವಾಪ್ರತ್ಯುವಾಚಮಹಾಮುನಿಃ ।ದೈವತೈರ್ನಿಹತಾನಿತ್ಯಂಪ್ರಾಪ್ನುವಂತಿನಭಸ್ಥಲಮ್ ॥೨೧॥ಪುನಸ್ತಸ್ಮಾತ್ಪರಿ ಭ್ರಷ್ಟಾಜಾಯಂತೇವಸುಧಾತಲೇ । ಪೂರ್ವಾರ್ಜಿತೈಸ್ಸುಖೈರ್ದುಃಖೈರ್ಜಾಯಂತೇಚಮ್ರಿಯಂತಿಚ ॥೨೨॥ ಯೇಯೇಹತಾ ಶ್ಚಕ್ರಧರೇಣರಾಜನ್ ತ್ರೈಲೋಕ್ಯನಾಥೇನಜನಾರ್ದನೇನ । ತೇತೇಗತಾಸ್ತಂನಿಲಯಂನರೇಂದ್ರಾಃಕ್ರೋಧೋಪಿದೇವಸ್ಯವರೇಣತು ಲ್ಯಃ ॥೨೩॥ ಶ್ರುತ್ವಾತತಸ್ತದ್ವಚನಂನಿಶಾಚರಸ್ಸನತ್ಕುಮಾರಸ್ಯಮುಖಾದ್ವಿನಿರ್ಗತಮ್ । ತದಾಪ್ರಹೃಷ್ಟಸ್ಸಬಭೂವ ವಿಸ್ಮಿತಃಕಥಂನುಯಾಸ್ಯಾಮಿಹರಿಂಮಹಾಹವೇ ॥೨೪॥ ಏವಂಚಿಂತಯತಸ್ತಸ್ಯರಾವಣಸ್ಯದುರಾತ್ಮನಃ ॥ ಪುನರೇವಾಪರಂ

---

ದೈತ್ಯದಾನವರಕ್ಷಾಂಸಿ–ದೈತ್ಯರೂ, ದಾನವರೂ–ರಾಕ್ಷಸರೂ, ಅನ್ಯೇ–ಮತ್ತು, ಕೆಲಬರಾದ, ಅಮರದ್ವಿಷಃ–ದೇವಶತ್ರುಗಳು, ಯೇಚ–ಯಾರುಂಟೋ, ತೇ–ಅವರು, ಅನನ್ಯಚೇತಸಃ–ಇತರರಲ್ಲಿ ಮನಸ್ಸುಇಲ್ಲದವರಾಗಿ, ತಂ–ಆ ವಿಷ್ಣುವಿನನ್ನು, ಸ್ಮೃತ್ವಾ–ಸ್ಮರಿಸಿ, ಸಂಗ್ರಾಮೇ–ಕಾಳಗದಲ್ಲಿ, ಸರ್ವಾನ್–ಸರ್ವಶತ್ರುಗಳನ್ನು, ಜಯಂತಿ–ಜಯಿಸುತ್ತಾರೆ ॥೧೮॥ ರಾಕ್ಷಸಾಧಿಪಃ–ರಾಕ್ಷಸಾಧಿಪತಿಯಾದ, ರಾವಣಃ–ರಾವಣನು, ಮಹರ್ಷೇಃ–ಮಹರ್ಷಿಯಾದ, ಸನತ್ಕುಮಾರನ, ತದ್ವಾಕ್ಯಂ–ಆ ಮಾತನ್ನು, ಶ್ರುತ್ವಾ–ಕೇಳಿ, ಪ್ರಣತಃ–ನಮ್ರನು, ಭೂತ್ವಾ–ಆಗಿ, ಪುನಃ–ಮತ್ತು, ಮಹಾಮುನಿಮೇವ – ಮಹರ್ಷಿ ಯಾದ ಸನತ್ಕುಮಾರನನ್ನೆ ಕುರಿತು, ಉವಾಚ–ಹೇಳಿದನು ॥೧೯॥ ದೈತ್ಯದಾನವರಕ್ಷಾಂಸಿ–ದೈತ್ಯರೂ ದಾನವರೂ ರಾಕ್ಷಸರೂ ಎಂಬ, ಯೇಅರಯಃ–ಯಾವ ಶತ್ರುಗಳು, ಸಮರೇ–ಕಾಳಗದಲ್ಲಿ, ಹತಾಃ–ಹೊಡೆಯಲ್ಪಡುತ್ತಾರೋ,ಕಿಂಚ–ಇಷ್ಟುಮಾತ್ರವಲ್ಲ, ಹರಿಣಾ–ಶ್ರೀ ಮಹಾವಿಷ್ಣುವಿನಿಂದ,ಹತಾಃ–ಹೊಡೆಯಲ್ಪಟ್ಟ, ತೇ–ಅವರು, ಕಾಂಗತಿಂ–ಯಾವ ಗತಿಯನ್ನು, ಪ್ರತಿಪದ್ಯಂತೇ–ಹೊಂದುವರೊ, ರಾವಣಸ್ಯ–ರಾವಣನ, ವಚಃ–ಮಾತನ್ನು,ಶ್ರುತ್ವಾ–ಕೇಳಿ, ಮಹಾಮುನಿಃ – ಮಹರ್ಷಿಯಾದ ಸನತ್ಕುಮಾರನು, ಪ್ರತ್ಯುವಾಚ – ಪ್ರತ್ಯುತ್ತರಕೊಟ್ಟನು ॥ ದೈವತೈಃ – ದೇವತೆಗಳಿಂದ, ನಿಹತಾಃ–ಹೊಡೆಯಲ್ಪಟ್ಟವರು, ನಿತ್ಯಂ–ಪ್ರಳಯಕಾಲಪರ್ಯಂತವಾಗಿರುವ, ನಭಸ್ಥಲಂ–ಸ್ವರ್ಗಲೋಕವನ್ನು, ಪ್ರಾಪ್ನುವಂತಿ–ಹೊಂದುತ್ತಾರೆ ॥೨೧॥ ತಸ್ಮಾತ್ ಆ ಸ್ವರ್ಗದಿಂದ, ಪುನಃ–ಮತ್ತೂ, ಪರಿಭ್ರಷ್ಟಾಃ–ಜಾರಿಬೀಳುತಿರುವರಾಗಿ, ವಸುಧಾತಲೇ–ಭೂಪ್ರದೇಶದಲ್ಲಿ, ಜಾಯಂತೇ–ಹುಟ್ಟುತ್ತಾರೆ, ಪೂರ್ವಾರ್ಜಿತೈಃ–ಪೂರ್ವಜನ್ಮಾರ್ಜಿತವಾದ, ಸುಖದುಃಖೈಃ–ಸುಖದುಃಖಗಳಿಂದ, ಜಾಯಂತೇ–ಹುಟ್ಟುತಾರೇ – ಮ್ರಿಯಂತೇಚ–ಸಾಯುತ್ತಾರೇ ॥೨೨॥ ಯೇ ಯೇ–ಯಾರು ಯಾರು, ತ್ರೈಲೋಕ್ಯನಾಥೇನ–ಲೋಕತ್ರಯಾಧಿಪತಿಯಾದ, ಚಕ್ರಧರೇಣ–ಚಕ್ರಧಾರಿಯಾದ, ಜನಾರ್ದನೇನ–ಶ್ರೀ ಮಹಾವಿಷ್ಣುವಿನಿಂದ ಹತಾಃ–ಹೊಡೆಯಲ್ಪಟ್ಟವರೋ, ತೇತೇನರೇಂದ್ರಾಃ–ಆಯಾ ಅರಸುಗಳು, ತಂನಿಲಯಂ – ಅದೇ ಸ್ಥಾನವನ್ನೇ, ಗತಾಃ–ಹೊಂದುತ್ತಾರೇ, ದೇವಸ್ಯ ಶ್ರೀ ಮಹಾವಿಷ್ಣುವಿನ,ಕ್ರೋಧೋಪಿ–ಕ್ರೋಧವೂಕೂಡ, ವರೇಣ–ವರದೊಡನೇ, ತುಲ್ಯಃ–ಸಮಾನವಾದ್ದು ॥೨೩॥ ತತಃ–ಬಳಿಕ–ಸನಿಶಾಚರಃ–ಆ ರಾವ ಣನು, ಸನತ್ಕುಮಾರಸ್ಯ–ಸನತ್ಕುಮಾರ ಋಷಿಯ, ಮುಖಾತ್–ಮುಖದದೆಸೆಯಿಂದ, ವಿನಿರ್ಗತಂ–ಹೊರಟುಬಂದಿರುವ,ತದ್ವಚನಂ –ಆಮಾತನ್ನು,ಶ್ರು ತ್ವಾ–ಕೇಳಿ, ತದಾ–ಆಕಾಲದಲ್ಲಿ, ಪ್ರಹೃಷ್ಟಃ – ಸಂತೋಷಗೊಂಡವನು, ಬಭೂವ– ಆದನು, ಮಹಾಹವೇ–ಮಹಾ ಯುದ್ಧದಲ್ಲಿ, ಹರಿಂ– ಶ್ರೀಮಹಾ ವಿಷ್ಣುವಿನನ್ನು, ಕಥಂ–ಹ್ಯಾಗೆ, ಯಾಸ್ಯಾಮಿ–ಹೊಂದುವೆನು, ಇತಿ–ಇಂತೆಂದು, ವಿಸ್ಮಿತಃ–ಆಶ್ಚರ್ಯಯುಕ್ತನಾದಂಥಾವನು, ಬಭೂವ–ಆದನು ॥೨೪॥

---

ನುದ್ದೇಶಿಸಿ ಅಷ್ಟಾದಶಪುರಾಣಗಳಿಂದಲೂ, ಚತುರ್ವೇದಂಗಳಿಂದಲೂ, ಪಾಂಚರಾತ್ರಗಳಿಂದಲೂ, ಕೂಡ ಯಾಗಂಗ ಳಿಂಗೈಯ್ಯುತ್ತಿರುವರು, ಯೋಗಿಗಳೆಲ್ಲರು ಆತನನ್ನೆ ಧ್ಯಾನಿಸುತ್ತಿರುವರು. ದೈತ್ಯ, ದಾನವ, ರಾಕ್ಷಸರೂ ಮತ್ತು ದೇ ವಶತ್ರುಗಳಾದ ಮತ್ತು ಕೆಲಬರೂ ಸಹ, ಸಾವಧಾನಚಿತ್ತರಾಗಿ ಆ ಮಹಾನುಭಾವನಂ ಸ್ಮರಿಸಿ,ಸಂಗರದಲ್ಲಿ ಶತ್ರುಗಳಂ ಗೆ ಲ್ಲುವರೆಂದು ಸನತ್ಕುಮಾರಮುನಿಯು ನುಡಿಯಲೂ, ರಾಕ್ಷಸಾಧಿಪತಿಯಾದ ರಾವಣನು ಆತನ ವಾಕ್ಯವಂ ಕೇಳಿ ವಿಧೆಯನಾಗಿ ಮತ್ತಿಂತೆಂದನು ॥೧೯॥ ಎಲೈ ಮಹಾಮುನಿಯೆ,ದೈತ್ಯದಾನವ ರಾಕ್ಷಸರೆಂಬಅಸುರಜಾತೀಯ್ಯರು ಅರ ರಿಇಂದ, ಸಂಗರದಲ್ಲಿ ಹತರಾಗಿ, ಯಾವಗತಿಯಂ ಹೊಂದುವರೋ, ನನಗೆ ಪೇಳಬೇಕೆಂದು ರಾವಣನವಾಕ್ಯವಂ ಕೇ ಳಿ, ಆ ಮಹರ್ಷಿಯು ಇತೆಂದುತ್ತರವಂ ಕೊಟ್ಟನು ॥೨೦॥ ದೇವತೆಗಳಿಂದ ಹತರಾದವರು ಪ್ರಳಯಕಾಲ ಪರಿಯಂ ತರವು ಸ್ವರ್ಗವಾಸಿಗಳಾಗಿದ್ದು ಪುನಃ ಆಸ್ವರ್ಗದಿಂ ಪರಿಭ್ರಷ್ಟರಾಗಿ ಭೂಮಂಡಲದಲ್ಲಿಜನಿಸಿ ಪೂರ್ವಾರ್ಜಿತವಾದ ಸುಖ ದುಃಖಗಳಿಂದ ಹುಟ್ಟುತ್ತಲೂ, ಸಾಯುತ್ತಲೂ, ಇರುತ್ತಾರೇ ॥೨೨॥ ಎಲೈ ರಾಜನೇ! ಚಕ್ರಪಾಣಿಯಾಗಿಯೂಲೋ ಕತ್ರಯಕ್ಕೂ ಸ್ವಾಮಿಯಾಗಿಯೂ, ಇರುವ ಶ್ರೀಮಹಾವಿಷ್ಣುವಿನಿಂದ ಹತರಾದವರ್ಯ್ಯಾರೋ ಅವರೆಲ್ಲರು ತಥಾವಿಧಪ್ರ ಸಿದ್ಧವಾದ ಆ ಶ್ರೀಮನ್ನಾರಾಯಣನ ಸ್ಥಾನವನ್ನೆ ಹೊಂದುವರು, ಆದಕಾರಣ ಆ ಮಹಾನುಭಾವನ ಕ್ರೋಧವೂ ಕೂಡ, ವರದೊಡನೆ ಸಮಾನವಾಗಿರುವದು ಎಂದು ಸನತ್ಕುಮಾರನ ಮುಖದಿಂ ನಿರ್ಗತವಾದ ಆ ವಾಕ್ಯವಂಕೇಳಿ ರಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಾಕ್ಯಂವ್ಯಾಜಹಾರಮಹಾಮುನಿಃ ॥೧೩೫॥ಮನಸಶ್ಚೆ ಪ್ಸಿತಂಯತ್ತೇ ಭವಿಷ್ಯತಿತವಾಹವೇ। ಸುಖೀಭವಮಹಾಬಾಹೋ ಕಂಚಿತ್ಕಾಲಮುದೀಕ್ಷಯ ॥೧೩೬॥ ಏವಂಶ್ರುತ್ವಾಮಹಾಬಾಹುಸ್ತಮೃಷಿಂಪ್ರತ್ಯುವಾಚಸಃ । ಕೀದೃಶಂಲಕ್ಷಣಂತಸ್ಯಬ್ರೂಹಿಸರ್ವಮಶೇಷತಃ ॥೧೩೭॥ರಾಕ್ಷಸೇಶವಚಶ್ಶ್ರುತ್ವಾ ಸಮುನಿಃಪ್ರತ್ಯುವಾಚತಮ್ । ಶ್ರೂಯತಾಂಸರ್ವಮಾಖ್ಯಾಸ್ಯೇತವರಾಕ್ಷಸಪುಂಗವ ॥ ೧೩೮ ॥ ಸಹಿಸರ್ವಗತೋದೇವಸ್ಸೂಕ್ಷ್ಮೋವ್ಯಕ್ತಸ್ಸನಾತನಃ । ತೇನಸರ್ವಮಿದಂವ್ಯಾಪ್ತಂತ್ರೈಲೋಕ್ಯಂಸಚರಾಚರಮ್ ॥ ೧೩೯ ॥ ಸಭೂಮೌದಿವಿಪಾತಾಳೇಪರ್ವತೇಷುವನೇಷುಚ । ಓಂಕಾರಶ್ಚೈವಸತ್ಯಂಚಸಾವಿತ್ರೀಪೃಥಿವೀಚಸಃ ॥೧೪೦॥ ಧರಾಧರಧರೋದೇವೋಹ್ಯನಂತಇತಿವಿಶ್ರುತಃ । ಅಹಶ್ಚ ರಾತ್ರಿಶ್ಚ ಉಭೇಚಸಂಧ್ಯೇದಿವಾಕರಶ್ಚೈವಯಮಶ್ಚ ಸೋ

---

ಏವಂ-ಈ ಪರಿಯಾಗಿ, ಚಿಂತಯತಃ-ಆ ಲೋಚಿಸುತಿರುವ, ದುರಾತ್ಮನಃ-ದುಷ್ಟಬುದ್ಧಿಯುಳ್ಳ, ತಸ್ಯರಾವಣಸ್ಯ-ಆ ರಾವಣನಂ ಕುರಿತು,ಮಹಾಮುನಿಃ-ಮಹಾಋಷಿಯಾದ ಸನತ್ಕುಮಾರನು, ಅಪರಂವಾಕ್ಯಂ-ಮತ್ತೊಂದು ಮಾತನ್ನು, ಪುನರೇವ-ಮತ್ತೂನು, ವ್ಯಾಜಹಾರ-ಪೇಳಿದನು ॥೩೫॥ ಹೇ ಮಹಾಬಾಹೋ, ಎಲೈ ಮಹಾಭುಜಪರಾಕ್ರಮಶಾಲಿಯೇ, ಆಹವೇ-ಯುದ್ಧದಲ್ಲಿ, ತೇ-ನಿನಗೆ, ಮನಸಃ-ಮನಸ್ಸಿನ, ಈಪ್ಸಿತಂಚ-ಇಷ್ಟವೂಕೂಡೆ,ಯತ್- ಯಾತದಸ್ತೋ, ತತ್-ಅದು, ತವ-ನಿನಿಗೆ, ಭವಿಷ್ಯತಿ-ಆಗುತದೆ, ಸುಖೀಭವ-ಸುಖವಂತನಾಗಿರು, ಕಂಚಿತ್ಕಾಲಂ-ಕೆಲಕಾಲವು, ಉದೀಕ್ಷಯ-ನಿರೀಕ್ಷಿಸು ॥೧೩೬॥ ಏವಂ-ಈಪರಿಯಾಗಿ, ಶ್ರುತ್ವಾ-ಕೇಳಿ, ಮಹಾಬಾಹುಃ-ಮಹಾ ಭುಜಗಳುಳ್ಳ, ಸಃ-ಆ ರಾವಣನು, ತಮೃಷಿಂ-ಆ ಸನತ್ಕುಮಾರನಂ ಕುರಿತು, ತಸ್ಯ-ಆ ಶ್ರೀಮಹಾವಿಷ್ಣುವಿನ, ಲಕ್ಷಣಂ-ಸ್ವರೂಪವು, ಕೀದೃಶಂ- ಯಂಥಾದ್ದು. ಸರ್ವಂ-ಸಮಸ್ತವನ್ನೂ,ಅಶೇಷತಃ- ಸಮಗ್ರವಾಗಿ, ಬ್ರೂಹಿ-ಪೇಳು ಎಂದನು ॥ ರಾಕ್ಷಸೇಶವಚಃ-ರಾವಣಾಸುರನ ವಾಕ್ಕನ್ನು, ಶ್ರುತ್ವಾ-ಕೇಳಿ, ಸಮುನಿಃ-ಆ ಸನತ್ಕುಮಾರನು, ತಂ-ಆ ರಾವಣನಂಕುರಿತು, ಹೇ ರಾಕ್ಷಸಪುಂಗವ- ಎಲೈ ರಾಕ್ಷಸಶ್ರೇಷ್ಠನೇ, ಶ್ರೂಯತಾಂ-ಕೇಳಲ್ಪಡಲೀ, ತವ-ನಿನಗೆ-ಸರ್ವಂ-ಸಮಸ್ತವನ್ನು, ಆಖ್ಯಾಸ್ಯೇ-ಪೇಳುತ್ತೇನೆ, ಇತಿ-ಇಂತೆಂದು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥೧೩೮॥ ಸಃದೇವಃ-ಆ ದೇವರು, ಸರ್ವಗತಃ-ಸಮಸ್ತವನ್ನೂ ಹೊಂದಿದವನು, ಸೂಕ್ಷ್ಮಃ-ಸೂಕ್ಷ್ಮರೂಪವುಳ್ಳವನು, ಅವ್ಯಕ್ತಃ-ನಾಶರಹಿತನು, ಸನಾತನಃ-ಅನಾದಿಸಿದ್ಧನು, ತೇನ-ಆ ವಿಷ್ಣುವಿನಿಂದ, ಸಚರಾಚರಂ-ಜಂಗಮ ಸ್ಥಾವರಾತ್ಮಕವಾದ ಸರ್ವಂ-ಸಮಸ್ತವಾದ, ಇದಂತ್ರೈಲೋಕ್ಯಂ-ಈ ಲೋಕತ್ರಯವು, ವ್ಯಾಪ್ತಂ-ವ್ಯಾಪಿಸಲ್ಪಟ್ಟಿಧೆ ॥೧೩೯॥ ಸಃ-ಆ ವಿಷ್ಣುವು, ಭೂಮೌ-ಭೂಮಿಯಲ್ಲಿ, ದಿವಿ-ಅಂತರಿಕ್ಷದಲ್ಲಿ, ಪಾತಾಳೇ-ಪಾತಾಳದಲ್ಲಿಯು, ಪರ್ವತೇಷು-ಬೆಟ್ಟಗಳಲ್ಲಿಯೂ, ವನೇಷುಚ-ವನಗಳಲ್ಲಿಯೂ, ಅಸ್ತಿ-ಇಧಾನೇ. ಸಃ-ಆತನು, ಓಂಕಾರಶ್ಚ-ಓಂಕಾರ ಸ್ವರೂಪನು, ಸತ್ಯಂಚ-ಸತ್ಯಸ್ವರವವನು, ಸಾವಿತ್ರೀಚ-ಸಾವಿತ್ರೀಸ್ವರೂಪನು, ಪೃಥಿವೀಚ-ಪೃಥವೀಸ್ವರೂಪನು, ಧರಾಧರಧರಃ-ಬೆಟ್ಟಗಳಂ ಹೊತ್ತಿರುವನು, ಅನಂತಃ- ನಾಶರಹಿತನಾದ, (ಯದ್ವಾ ಅಸಂಖ್ಯಾತನಾದ)ಯದ್ವಾ ಅನಂತಮೂರ್ತಿ ಎಂಬಂಥಾ,ದೇವಇತಿ-ದೇವರೂ ಎಂದುವಿಶ್ರುತಃ-ಪ್ರಸಿದ್ಧನು,(ಸಏವ) ಆತನೇ,ಅಹಶ್ಚ-ಅಹರಭಿಮಾನದೇವತೆಯು, ರಾತ್ರಿಶ್ಚ-ರಾತ್ರ್ಯಭಿಮಾನದೇವತೆಯು, ಉಭೇ-ಎರಡಾದ,ಸಂಧ್ಯೇ-ಸಂಧ್ಯಾಸ್ವರೂಪನು, ದಿವಾಕರಶ್ಚೈವ-ಸೂರ್ಯನೂನು, ಯಮಶ್ಚ-ಯಮನೂನು, ಸೋಮಶ್ಚ-ಸೋಮನೂನು, ಸರ್ವಃ-ಸರ್ವಸ್ವರೂಪನು, ಅತಿಕಾಯಃ-ಅತ್ಯಂತಬಹಳವಾದಶರೀರವುಳ್ಳವನು, ಅನಿಲಃ-ವಾಯುಸ್ವರೂಪನು, ಅನಲಶ್ಚ-ಅಗ್ನಿಯೂನು, ಸಏವ-ಆತನೆ-ಬ್ರಹ್ಮರುದ್ರಾಶ್ಚ-ನಾಲ್ಕುಬ್ರಹ್ಮರೂ ಏಕಾದಶರುದ್ರರೂ, ಆಪಃ-ಉದಕಗಳೂ, ಸ

---

ವಣನು ಆವೇಳೆಯಲ್ಲಿ ಬಹಳಸಂತೋಷಗೊಂಡು ಹರಿಯಂಕುರಿತು ರಣರಂಗದಲ್ಲಿ ಹ್ಯಾಗೆ ಪೋಗಲೆಂದು ಚಿಂತಿಸುತ್ತಿರಲೂ, ಆ ಮಹಾಮುನಿಯು ಮತ್ತೊಂದು ವಾಕ್ಯವಂ ಪೇಳಿದನು॥೧೩೫॥ ಎಲೈಮಹಾಭುಜ ಪರಾಕ್ರಮಿಯಾದ ದಶಕಂಠನೇ, ನಿನ್ನಮನೋಭೀಷ್ಟವು ಆಹವದಲ್ಲುಂಟಾಗುವದು ಸುಖವಾಗಿರು ಸ್ವಲ್ಪಕಾಲವಂ ನಿರೀಕ್ಷಿಸೆಂದು ಸನತ್ಕುಮಾರ ವಾಕ್ಯವಂಕೇಳಿ ದಶಕಂಧರನು ಆ ಮಹರ್ಷಿಯಂ ಕುರಿತಿಂತೆಂದನು, ಎಲೈ ಮಹಾಮುನಿಯೇ ಆತನಲಕ್ಷಣವಂತ್ಥಾದ್ದು, ಅದನ್ನೆಲ್ಲಾ ನನಗೆನಿರೂಪಿಸೆಂದು ರಾವಣನು ಪುನಶ್ಚ ಪೃಚ್ಛಿಸಲೂ, ಆ ಮಹಾಮುನಿಯು ಇಂತೆಂದುತ್ತರವಂ ಕೊಟ್ಟನು: ಎಲೈ ರಾಕ್ಷಸೇಂದ್ರನೇ ಅದಂ ಪೇಳ್ವೆನುಕೇಳು ॥೧೩೮॥ಆ ಶ್ರೀಮನ್ನಾರಾಯಣ ಮೂರ್ತಿಯಾದರೆ, ಸರ್ವಾಂಗತನಾಗಿಯೂ, ಸೂಕ್ಷ್ಮರೂಪ ಮುಳ್ಳವನಾಗಿಯೂ, ನಾಶರಹಿತನಾಗಿಯೂ, ಅನಾದಿ ಸಿದ್ಧನಾಗಿಯೂ, ಇರುವನಾಗಿ, ಚರಾಚರಾತ್ಮಕವಾದ ಈ ತ್ರೈಲೋಕ್ಯವನ್ನು, ವ್ಯಾಪಿಸಿಕೊಂಡಿರುವನು, (ಆದ್ದರಿಂದ ಭೂಮಂಡಲದಲ್ಲಿಯು, ಅಂತರಿಕ್ಷದಲ್ಲಿಯೂ, ಪಾತಾಳ ಲೋಕದಲ್ಲಿಯೂ, ವನಗಳಲ್ಲಿಯೂಸಹ,ಸಾವಿತ್ರೀಸ್ವರೂಪನಾಗಿಯೂ, ಧರಾರೂಪನಾಗಿಯೂ, ಭೂಧರ ಧಾರಿಯಾಗಿಯೂ, ನಾಶರಹಿತನಾಗಿಯೂ, ಇರುವನೆಂದು ಪ್ರಸಿದ್ಧವಾಗಿರುವದು, ಇದಲ್ಲದೇ ಅಹರಭಿ ಮಾನಿದೇವತೆಯಾಗಿಯೂ, ರಾತ್ರ್ಯಭಿಮಾನಿ ದೇವತೆಯಾಗಿಯೂ, ಎರಡು ವಿಧವಾಗಿರುವ ಸಂಧ್ಯಾಸ್ವರೂಪನಾಗಿಯೂ, ಸೂರ್ಯಸ್ವರೂಪನಾಗಿಯೂ, ಯಮಸ್ವರೂಪ ನಾಗಿಯೂ, ಚಂದ್ರರೂಪನಾಗಿಯೂ, ಸರ್ವಸ್ವರೂಪನಾಗಿಯೂ, ಬಹು ವಿಧವಾಗಿರುವ ದೊಡ್ಡದಾದ ಶರೀರವುಳ್ಳವನಾಗಿಯೂ, ವಾಯುಸ್ವರೂಪ ನಾಗಿಯೂ,ಅಗ್ನಿರೂಪ ನಾಗಿಯೂ, ಬ್ರಹ್ಮರೂಪ ನಾಗಿಯೂ, ಏಕಾದಶ ರುದ್ರರಾಗಿಯೂ, ಉದಕ ರೂಪನಾಗಿಯೂ, ವೈಕುಂಠ

CC-0. Bhagavad Ramanuja National Research Institute, Melukote Collection.

ಮಃ । ಸರ್ವೋತಿಕಾಯಯೋಹ್ಯನಿಲೋನಲಶ್ಚ ಸಬ್ರಹ್ಮರುದ್ರಾಶ್ಚ ಸಪಿತಾಮಹಃ ॥೧೪೧॥ ವಿದ್ಯೋತತಿಜ್ವಲತಿಭಾತಿಚಪಾತಿಲೋ ಕಾನ್ ಸೃಜತ್ಯಯಂಸಂಹರತಿಪ್ರಶಾಸ್ತಿ । ಕ್ರೀಡಾಂಕರೋತ್ಯವ್ಯಯಲೋಕನಾಥೋವಿಷ್ಣುಃಪುರಾಣೋಭವನಾಶಕೃತ್ತುಃ ॥ ಅಥವಾಬಹುನಾತೇನಕಿಮುಕ್ತೇನದಶಾನನ। ತೇನಸರ್ವಮಿದಂವ್ಯಾಪ್ತಂತ್ರೈಲೋಕ್ಯಂಸಚರಾಚರಂ ॥೧೪೩॥ ನೀಲೋತ್ಪಲದಳಶ್ಯಾಮಃಕಿಂಜಲ್ಕಾರುಣವಸ್ತ್ರಕಃ । ಪ್ರಾವೃಟ್ಕಾಲೇಯಥಾವ್ಯೋಮ್ನಿ ಸತಟಿತ್ತೋಯದೋಯಥಾ। ಶ್ರೀಮಾನ್ ಮೇಘವಪು ಶ್ಶ್ಯಾಮಃಶುಭಃಪಂಕಜಲೋಚನಃ ।ಶ್ರೀವತ್ಸೇನೋರಸಾಯುಕ್ತಶ್ಶಶಾಂಕಕೃತಲಕ್ಷಣಃ ॥೧೪೪॥ ತಸ್ಯನಿತ್ಯಂಶರೀರಸ್ಥಾ ಮೇಘಸ್ಥೇವಶತಹ್ರದಾ । ಸಂಗ್ರಾಮರೂಪಿಣೀಲಕ್ಷ್ಮೀರ್ದೇಹಮಾವೃತ್ಯತಿಷ್ಠತಿ॥೧೪೫॥ನಶಕ್ಯೋನಸುರೈರ್ದ್ರಷ್ಟುಂನಾಸು ರೈರ್ನಚಪನ್ನಗೈಃ ।ಯಸ್ಯಪ್ರಸಾದಂಕುರುತೆಸವೈತಂದ್ರಷ್ಟುಮರ್ಹತಿ ॥೧೪೬॥ ನಹಿಯಜ್ಞಫಲೈಸ್ತಾತನತಪೋಭಿಸ್ತು

---

ಏವ-ಆತನೆ॥೧೪೧॥ ಅವ್ಯಯಲೋಕನಾಥಃ-ನಾಶರಹಿತನಾದಲೋಕಸ್ವಾಮಿಯಾದ,ಪುರಾಣಃ-ಪುರಾತನನಾದ,ಭವನಾಶಹೇತುಃ- ಸಂಸಾರನಾಶಕ್ಕೆಕಾರ ಣೀಭೂತನಾದವಿಷ್ಣುಃ-ಶ್ರೀಮನ್ನಾರಾಯಣಮೂರ್ತಿಯು,ವಿದ್ಯೋತತಿ-ಸ್ವಯಂಪ್ರಕಾಶನಾಗಿದ್ದಾನೆ,ಜ್ವಲತಿ-ಅಗ್ನಿಯಂತೆಪ್ರಜ್ವಲಿಸುತ್ತಾನೆ, ಭಾತಿಚ- ಸೂರ್ಯನಂತೆಹೊಳೆಯುತ್ತಿದ್ದಾನೆ, ಲೋಕಾನ್-ಲೋಕಗಳನ್ನು ಪಾತಿ-ಪರಿಪಾಲಿಸುತ್ತಾನೆ, ಅಯಂ-ಈವಿಷ್ಣುವೇಸೃಜತಿ-ಸೃಷ್ಟಿಯನ್ನೂ ಮಾಡುತ್ತಾನೇ, ಸಂಹರತಿ-ಸಂಹಾರವಂಮಾಡುತ್ತಾನೆ,ಪ್ರಶಾಸ್ತಿ-ಶಿಕ್ಷಿಸುತ್ತಾನೇ,ಕ್ರೀಡಾಂ-ಜಗದ್ವ್ಯಾಪಾರರೂಪವಾದಕ್ರೀಡೆಯನ್ನು,ಕರೋತಿ-ಮಾಡುತ್ತಿದ್ದಾನೆ॥೧೪೨॥ಅ ಥವಾ-ಹಾಗಲ್ಲದೆಹೋದರೇ, ಹೇದಶಾನನ-ಎಲೈ ರಾವಣನೇ, ಬಹುನಾ-ಬಹುಪ್ರಕಾರವಾದ, ಉಕ್ತೇನ-ಮಾತುಗಳಿಂದ,ಕಿಂ-ಏನು, ತೇನ-ಆ ಪ್ರಸಿದ್ಧನಾದ, ತೇನ-ಆಶ್ರೀಮಹಾವಿಷ್ಣುವಿನಿಂದ,ಸರ್ವಂ-ಸಮಸ್ತವಾದ, ಸಚರಾಚರಂ-ಸ್ಥಾವರ ಜಂಗಮಗಳಿಂದ ಕೂಡಿಕೊಂಡಿರುವ,ಇದಂತ್ರೈಲೋಕ್ಯಂ-ಈ ಲೋಕತ್ರ ಯವು,ವ್ಯಾಪ್ತಂ-ವ್ಯಾಪಿಸಲ್ಪಟ್ಟಿದೆ॥೧೪೩॥ ನೀಲೋತ್ಪಲದಳಶ್ಯಾಮಃ-ನೀಲೋತ್ಪಲ-ಕಪ್ಪಾದ ನೈದಲೇ ಹುವ್ವಿನ,ದಳ-ದಳದಂತೆ,ಶ್ಯಾಮಃ-ಕಪ್ಪಾಗಿರುವ,ಕಿಂ ಜಲ್ಕಾರುಣ ವಸ್ತ್ರಕಃ, ಕಿಂಜಲ್ಕ-ಕೇಸರಿಗಳಂತೆ, ಅರುಣ-ಕೆಂಪಾದ, ವಸ್ತ್ರಕಃ-ವಸ್ತ್ರವುಳ್ಳವನು,ಪ್ರಾವೃಟ್ಕಾಲೆ-ವರ್ಷಾಕಾಲದಲ್ಲಿ ವ್ಯೋಮ್ನಿ-ಅಂತ ರಿಕ್ಷದಲ್ಲಿ,ಸತಟಿತ್ತೋಯದೋಯಥಾ, ಮಿಂಚುಗಳಿಂದೊಡಗೂಡಿದಮೇಘದಂತಿರುವ,ಶ್ರೀಮಾನ್-ಕಾಂತಿಯುಕ್ತನು, ಮೇಘವಪುಃ-ಮೇಘದಶರೀರದಂತೆ-ಶ್ಯಾ ಮಃ-ಕಪ್ಪಾದವನು, ಶುಭಃ-ಶುಭಕರನಾದವನು, ಪಂಕಜಲೋಚನಃ-ಕಮಲಗಳೋಪಾದಿಯಾದ ನೇತ್ರಗಳುಳ್ಳವನು, ಶ್ರೀವತ್ಸೇನ- ಶ್ರೀವತ್ಸದಿಂದಯು ಕ್ತನಾದ, ಉರಸಾ-ವಕ್ಷಸ್ಥಲದಿಂದಲೂ, ಯುಕ್ತಃ-ಕೂಡಿಕೊಂಡಿರುವನು, ಶಶಾಂಕ ಕೃತಲಕ್ಷಣಃ-ಶಶಾಂಕ-ಚಂದ್ರರೇಖೆಯಿಂದ, ಕೃತ-ಮಾಡಲ್ಪಟ್ಟ, ಲಕ್ಷಣಃ-ಚಿಹ್ನೆಯುಳ್ಳವನು, ನಿತ್ಯಂ-ಸರ್ವಕಾಲದಲ್ಲಿಯೂ, ತಸ್ಯ-ಆ ಶ್ರೀಮಹಾವಿಷ್ಣುವಿನ,ಶರೀರಸ್ಥಾ-ಶರೀರದಲ್ಲಿ ಇರುವ, ಸಂಗ್ರಾಮರೂಪಿಣೀ-ಯು ದ್ಧಸ್ವರೂಪವಾದ, ಲಕ್ಷ್ಮೀಃ-ಜಯಲಕ್ಷ್ಮಿಯು,ಮೇಘಸ್ಥಾ-ಮೇಘದಲ್ಲಿರುವ, ಶತಹ್ರದೇವ-ಮಿಂಚಿನಂತೆ, ದೇಹಂ-ಶರೀರವನ್ನು, ಆವೃತ್ಯ- ಸುತ್ತುಕೊಂ ಡು, ತಿಷ್ಠತಿ-ಇರುತ್ತಾಳೆ ॥೧೪೫॥ ಸಃ-ಆ ಶ್ರೀಮಹಾವಿಷ್ಣುವು-ಸುರೈಃ-ದೇವತೆಗಳಿಂದ, ದ್ರಷ್ಟುಂ-ನೋಡುವದಕ್ಕೋಸ್ಕರ, ನಶಕ್ಯಃ-ಶಕ್ಯನಲ್ಲ, ಅ ಸುರೈಃ-ರಾಕ್ಷಸರಿಂದ, ನಶಕ್ಯಃ-ಸಾಧ್ಯನಲ್ಲ, ಪನ್ನಗೈಶ್ಚ-ಸರ್ಪಗಳಿಂದಲೂ, ನಶಕ್ಯಃ-ಸಾಧ್ಯನಲ್ಲ, ಯಸ್ಯ-ಯಾವನಿಗೆ, ಪ್ರಸಾದಂ - ಅನುಗ್ರಹವ ನ್ನು, ಕುರುತೆ-ಮಾಡುತ್ತಾನೊ, ಸಃ-ಆ ಭಕ್ತನು, ತಂ- ಆ ಶ್ರೀಮನ್ನಾರಾಯಣನನ್ನು, ದ್ರಷ್ಟುಂ- ನೋಡುವದಕ್ಕೆ, ಅರ್ಹತಿ- ಅರ್ಹನಾಗುತ್ತಾ ನೇ ॥೧೪೬॥ ಭಗವಾನ್-ಭಗವಂತನು, ಯಜ್ಞಫಲೈಃ-ಯಜ್ಞರೂಪವಾದ ಕರ್ಮಫಲಗಳಿಂದ, ದ್ರಷ್ಟುಂ- ನೋಡುವದಕ್ಕೋಸುಗ, ನಶಕ್ಯತೆ- ಸಾಧ್ಯನ ಲ್ಲ, ಹೇ ತಾತ-ಎಲೊ ಅಪ್ಪ, ಸಂಚಿತೈಃ-ಸಂಪಾದಿಸಲ್ಪಟ್ಟ, ತಪೋಭಿಃ- ತಪಸ್ಸುಗಳಿಂದಲೂ,ದ್ರಷ್ಟುಂ-ನೋಡುವದಕ್ಕೋಸ್ಕರ, ನಶಕ್ಯತೆ-ಸಾಧ್ಯವ

---

ತಿಯಾಗಿಯೂ, ಪುರಾಣ ಪುರುಷನಾಗಿಯೂ, ಸಂಸಾರನಾಶ ಹೇತುಭೂತನಾಗಿಯೂ ಇರುವನಾಗಿ,ಜ್ಯೋತಿಸ್ಸ್ವರೂಪ ವಾಗಿಪ್ರಕಾಶಿಸುತ್ತಲೂಅಗ್ನಿಯಂತೆ ಪ್ರಜ್ವಲಿಸುತ್ತಲೂ,ಸೂರ್ಯನಂತೆಕಂಗೊಳಿಸುತ್ತಲು,ಸೃಷ್ಟಿಸ್ಥಿತಿಲಯಂಗಳಂಗೈಯು ತ್ತಲೂ, ಇರುತ್ತಿದ್ದಾನೇ ॥೧೪೨॥ ಎಲೈ ದಶಕಂಠನೇ ಬಹಳ ಮಾತುಗಳಿಂದೇನು ಪ್ರಯೋಜನವು,ಆಮಹಾ ಪುರುಷನಿಂ ದ ಚರಾಚರಾತ್ಮಕವಾದ ಜಗತ್ತ್ರಯವು ವ್ಯಾಪಿಸಲ್ಪಟ್ಟಿದೆ ಆತನು ಕನ್ನೈದಿಲೆಯ ಯಸಳೆಯಂತೆ ಶ್ಯಾಮಲವರ್ಣ ವುಳ್ಳವನಾಗಿಯೂ, ಪೂಗೋಳಿಯಂತೆ ಕೆಂಪಾದ ವಸ್ತ್ರಗಳ ನ್ನುಟ್ಟವನಾಗಿಯೂ, ಇರುವನಾಗಿ ವರ್ಷಾಸಮಯದ ಲ್ಲಿ ಗಗನದಲ್ಲಿರುವ ಮಿಂಚಿನಿಂ ದೊಡಗೂಡಿದ ಮೇಘದಂತೆ ಹೊಳೆಯುತ್ತಿರುವನಾಗಿಯೂ, ಕಡುಕಾಂತಿ ಯುಳ್ಳವನಾ ಗಿಯೂ ಮೇಘದೋಪಾದಿಯಲ್ಲಿರುವ ದೇಹವುಳ್ಳವನಾಗಿಯೂ, ಶ್ಯಾಮಲ ಬಣ್ಣವುಳ್ಳವನಾಗಿಯೂ, ಶುಭಕರನಾಗಿ ಯೂ, ತಾವರೆಯಸಳೆಯಂತೆ ವಿಸ್ತಾರವಾದ ನೇತ್ರಗಳುಳ್ಳವನಾಗಿಯೂ, ಶ್ರೀವತ್ಸವೆಂಬ ಚಿಹ್ನವುಳ್ಳವನಾಗಿಯೂ, ಚಂದ್ರರೇಖೆಯಿಂದ ಮಾಡಲ್ಪಟ್ಟ ಗುರುತುಳ್ಳವನಾಗಿಯೂ, ಇರುವನು ॥೧೪೪॥ ಸದಾಕಾಲದಲ್ಲಿಯೂ ಶ್ರೀಮಹಾ ವಿಷ್ಣುವಿನ ದೇಹದಲ್ಲಿರುವ ಯುದ್ಧಸ್ವರೂಪಳಾದ ಜಯಲಕ್ಷ್ಮಿಯು ಮೇಘವರ್ತಿಯಾದ ಮಿಂಚಿನಂತೆ ಹೊಳೆಯುತ್ತಿ ರುವಳು ॥೧೪೫॥ಆ ಮಹಾನುಭಾವನು, ದೇವಾಸುರನಾಗಾದಿಗಳಿಂದ ನೋಡಲಸಾಧ್ಯ ನಾಗಿರುವನು, ಯಾವ ಪುರು ಷನಿಗೆ,ಪ್ರಸಾದವಂ ಅನುಗ್ರಹಿಸುವನೋ, ಅಂಥಾಪುರುಷನು ಆತನಂನೋಡುವನು ॥೧೪೬॥ಎಲೈ ದಶಕಂಠನೇ ಯಜ್ಞ

Funding: Tattva Heritage Foundation,Kolkata. Digitization: eGangotri.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಂಚಿತೈಃ । ಶಕ್ಯತೇಭಗವಾನ್ ದ್ರಷ್ಟುಂನದಾನೇನನಚೇಜ್ಯಯಾ ॥೧೪೮॥ ತದ್ಭಕ್ತೈಸ್ತದ್ಗತಪ್ರಾಣೈಸ್ತಚ್ಚಿತ್ತೈಸ್ತತ್ಪರಾ ಯಣೈಃ । ಶಕ್ಯತೇಭಗವಾನ್ ದ್ರಷ್ಟುಂಜ್ಞಾನನಿರ್ದಗ್ಧಕಲ್ಮಷೈಃ ॥೧೪೯॥ ಅಥವಾರಾಕ್ಷಸೇಂದ್ರತ್ವಂಯದಿತಂದ್ರಷ್ಟುಮಿಚ್ಛಸಿ । ಕಥಯಿಷ್ಯಾಮಿತೇಸರ್ವಂಶ್ರೂಯತಾಂಯದಿರೋಚತೇ ॥ ೧೫೦ ॥ ಕೃತೇಯುಗೇವ್ಯತೀತೇತುಮುಖೇತ್ರೇತಾಯುಗಸ್ಯತು । ಹಿತಾರ್ಥಂದೇವಮರ್ತ್ಯಾನಾಂಭವಿತಾನೃಪವಿಗ್ರಹಃ॥೧೫೧॥ಇಕ್ಷ್ವಾಕೂಣಾಂಚಯೋರಾಜಾಭಾವ್ಯೋದಶರಥೋಭುವಿ॥ ತಸ್ಯಸೂನುರ್ಮಹಾತೇಜಾರಾಮೋನಾಮಭವಿಷ್ಯತಿ॥೧೫೨॥ಮಹಾತೇಜಾಮಹಾಬುದ್ಧಿರ್ಮಹಾಬಲಪರಾಕ್ರಮಃ॥ ಆದಿತ್ಯಇವದುಷ್ಪ್ರೇಕ್ಷ್ಯಸ್ಸಮರೇಶತ್ರುಭಿಸ್ಸದಾ॥೧೫೩॥ ಭವಿತಾಹಿತಥಾರಾಮೋನರೋನಾರಾಯಣಃಪ್ರಭುಃ ॥ ಪಿತುರ್ನಿಯೋಗಾತ್ಸವಿಭುರ್ದಂಡಕೇವಿಜನೇವನೇ ॥೧೫೪॥ ವಿಚರಿಷ್ಯತಿಧರ್ಮಾತ್ಮಾ ಸಹಭ್ರಾತ್ರಾ ಮಹಾಯಶಾಃ ॥ ತಸ್ಯಪತ್ನೀಮಹಾಭಾಗಾಲಕ್ಷ್ಮೀಸ್ಸೀತೇತಿವಿಶ್ರುತಾ ॥೧೫೫॥ದುಹಿತಾಜನಕಸ್ಯೇಷ್ಟಾ ಉತ್ಥಿತಾವಸುಧಾತಲಾತ್ ॥ ರೂಪೇಣಾಪ್ರತಿಮಾಲೋಕೇಸರ್ವಲ

---

ಲ್ಲಾ ॥ ಭಗವಾನ್-ಪೂಜ್ಯನಾದ, ಶ್ರೀ ಮಹಾವಿಷ್ಣುವು, ತದ್ಭಕ್ತೈಃ-ಆಶ್ರೀಮಹಾವಿನಲ್ಲಿ ಭಕ್ತಿಯುಳ್ಳಂಥಾವರಿಂದಲೂ, ತದ್ಗತಪ್ರಾಣೈಃ-ಆವಿಷ್ಣುವಿನಲ್ಲಿ ಇರಿಸಲ್ಪಟ್ಟ ಪ್ರಾಣಶಕ್ತಿಯುಳ್ಳ,ಜ್ಞಾನನಿರ್ದಗ್ಧಕಲ್ಮಷೈಃ-ಜ್ಞಾನ-ಜ್ಞಾನದಿಂದ,ನಿರ್ದಗ್ಧ-ದಹಿಸಲ್ಪಟ್ಟ,ಕಲ್ಮಷೈಃ-ಪಾಪಗಳುಳ್ಳ,ತತ್ಪರಾಯಣೈಃ-ಆಸಕ್ತಿಯುಳ್ಳ, ತಚ್ಚಿತ್ತೈಃ ಆವಿಷ್ಣುವಿನಲ್ಲೆ ಮನಸ್ಸುಳ್ಳಭಕ್ತರಿಂದಲೂದ್ರಷ್ಟುಂ-ನೋಡುವದಕ್ಕೋಸ್ಕರ, ಶಕ್ಯತೆ-ಸಾಧ್ಯನಾಗುತ್ತಾನೆ॥೧೪೯॥ ಅಥವಾ-ಹಾಗಲ್ಲವೆಹೋದರೆ-ಹೇ ರಾಕ್ಷಸೇಂದ್ರ-ಎಲೈ ರಾಕ್ಷಸಾಧಿಪತಿಯೇ,ತ್ವಂ-ನೀನು,ತಂ-ಆವಿಷ್ಣುವಿನನ್ನು,ದ್ರಷ್ಟುಂ-ನೋಡುವದಕ್ಕೋಸ್ಕರ,ಇಚ್ಛಸಿಯದಿ- ಇಚ್ಛೆಸುವನಾದರೇ-ಶ್ರೂಯತಾಂ-ಕೇಳಲ್ಪಡಲೀ, ರೋಚತೆಯದಿ-ಸಮ್ಮತವಾದರೆ,ತೇ-ನಿನಗೆ, ಸರ್ವಂ-ಸಮಸ್ತವನ್ನು, ಕಥಯಿಷ್ಯಾಮಿ-ಹೇಳುವೆನು॥೧೫೦॥ ಕೃತೇಯುಗೇ-ಕೃತಯುಗವು; ವ್ಯತೀತೇಸತಿ-ಕಳೆಯುತಿರಲೀಕಾಗಿ, ತ್ರೇತಾಯುಗಸ್ಯ-ತ್ರೇತಾಯುಗದ, ಮುಖೇತು-ಆದಿಭಾಗದಲ್ಲಾದರೇ, ದೇವಮರ್ತ್ಯಾನಾಂ-ದೇವತೆಗಳಗೂ ಮನುಷ್ಯರಿಗೂ, ಹಿತಾರ್ಥಂ-ಹಿತಕ್ಕೋಸುಗ, ನೃಪವಿಗ್ರಹಃ-ರಾಜಶರೀರವುಳ್ಳವನು, ಭವಿತಾ-ಆಗುವನು ॥೧೫೧॥ ಇಕ್ಷ್ವಾಕೂಣಾಂ-ಇಕ್ಷ್ವಾಕುವಂಶಸ್ಥರಿಗೆ, ಯಃ-ಯಾವನು, ರಾಜಾ-ಅರಸೊ, ಸಃ-ಅಂಥಾ, ದಶರಥಃ-ದಶರಥರಾಯನು,ಭುವಿ,ನೆಲದಲ್ಲಿ, ಭಾವ್ಯಃ-ಆಗುವನು, ತಸ್ಯ-ಆ ದಶರಥರಾಯನಿಗೆ, ಮಹಾತೇಜಾಃ-ಮಹಾ ತೇಜೋವಂತನಾದ, ರಾಮೋನಾಮ-ರಾಮನೆಂದುಪ್ರಸಿದ್ಧನಾದ, ಸೂನುಃ-ಕುವರನು, ಭವಿಷ್ಯತಿ-ಆಗುವನು ॥೧೫೨॥ ಮಹಾತೇಜಾಃ-ಮಹಾ ತೇಜಸ್ವಿಯಾದ, ಮಹಾಬುದ್ಧಿಃ-ಮಹಾ ಬುದ್ಧಿಶಾಲಿಯಾದ, ಮಹಾಬಲಪರಾಕ್ರಮಃ-ದೊಡ್ಡದಾದ ಬಲವನ್ನು ಪರಾಕ್ರಮವನ್ನೂಉಳ್ಳ, ಆದಿತ್ಯಇವ-ಸೂರ್ಯನಂತೆ, ಸಮರೇ- ಕಾಳಗದಲ್ಲಿ, ಶತ್ರುಭಿಃ-ಶತ್ರುಗಳಿಂದ, ಸದಾ-ಸರ್ವಕಾಲದಲ್ಲಿ, ದುಷ್ಪ್ರೇಕ್ಷ್ಯಃ- ನೋಡಲಸಾಧ್ಯನು ॥೧೫೩॥ ನಾರಾಯಣಃ-ನಾರಾಯಣನು,ತಥಾ-ಹಾಗೆಯೇ,ರಾಮಃ-ರಾಮನೆಂದು ನರಃ-ಮನುಷ್ಯನಾಗಿ, ಭವಿತಾ-ಆಗುವನು, ಪಿತುಃ-ತಂದೆಯ, ನಿಯೋಗಾತ್-ಆಜ್ಞೆಯಪಕೆಯಿಂದ, ವಿಭುಃ-ಸಮರ್ಥನಾದಆ ಶ್ರೀರಾಮನು,ಧರ್ಮಾತ್ಮಾ-ದರ್ಮಿಷ್ಠನಾದ, ಮಹಾಯಶಾಃ-ಮಹಾಯಶೋವಂತನಾದ, ಸಃ-ಆ ಶ್ರೀರಾಮನು ವಿಜನೆ-ಜನರಹಿತವಾದ,ದಂಡಕೆವನೆ-ದಂಡಕಾರಣ್ಯದಲ್ಲಿ,ಭ್ರಾತ್ರಾಸಹ-ತಮ್ಮಂದಿರೊಡಗೂಡಿ,ವಿಚರಿಷ್ಯತಿ-ಸಂಚಾರಮಾಡುವನು, ತಸ್ಯ-ಆ ಶ್ರೀಮಹಾವಿಷ್ಣುವಿಗೆ, ಪತ್ನೀ-ಹೆಂಡತಿಯಾದ, ಮಹಾಭಾಗಾ-ಮಹಾ ಪುಣ್ಯವಂತಳಾದ, ಲಕ್ಷ್ಮೀಃ-ಲಕ್ಷ್ಮೀದೇವಿಯು,ಜನಕಸ್ಯ-ಜನಕರಾಯನಿಗೆ, ಇಷ್ಟಾ-ಇಷ್ಟಳಾದ, ದುಹಿತಾ-ಮಗಳಾದ, ವಸುಧಾತಲಾತ್-ಭೂಪ್ರದೇಶದ ದೆಸೆಯಿಂದ, ಉತ್ಥಿತಾ-ಹುಟ್ಟಿದ, ಸೀತೇತಿ-ಸೀತಾದೇವಿಯೆಂದು, ವಿಶ್ರುತಾ-ಪ್ರಸಿದ್ಧಳಾಗುವಳು ॥೧೫೫॥ ರೂಪೇಣ-ರೂಪದಿಂದ, ಲೊಕೆ-ಲೋಕದಲ್ಲಿ, ಅಪ್ರತಿಮಾ-ಸಮಾನರಹಿತಳಾದ, ಸರ್ವಲಕ್ಷಣಲಕ್ಷಿತಾ, ಸರ್ವ- ಸಮ

---

ಫಲಗಳಿಂದಲೂ ತಪಗಳಿಂದಲೂ, ಪೂರ್ವಾರ್ಜಿತವಾದ ಪುಣ್ಯಂಗಳಿಂದಲೂ, ದಾನದಿಂದಲೂ,ಸಹಕಾಣಾಫಂಥಾವನಲ್ಲ; ಆದರೆ, ಆತನ ಭಕ್ತರಾಗಿಯೂ, ಆತನಲ್ಲಿಯೆ ಯಿಡಲ್ಪಟ್ಟ ಪ್ರಾಣಂಗಳುಳ್ಳವರಾಗಿಯೂ, ತದೇಕಾಯತ್ತ ಚಿತ್ತರಾಗಿಯು ಪಾಪರಹಿತರಾಗಿಯೂ, ಇರುವವರಿಂದ ನೋಡುವದಕ್ಕೆ ಸಾಧ್ಯನಾಗಿರುವನು, ಇತರರಿಗೆ ಕಾಣತಕ್ಕವನಲ್ಲಾ ॥೧೪೯॥ ಎಲೈ ರಾಕ್ಷಸೇಂದ್ರನೇ, ನೀನು ಆತನಂ ಕಾಣಬೇಕೆಂದಿಚ್ಛೆಯುಳ್ಳವನಾದರೇ, ಅದಂಪೇಳ್ವೆನು ಕೇಳು, ಈ ಕೃತಯುಗವು ಕಳದುಹೋಗಿ ತ್ರೇತಾಯುಗವು ಪುಟ್ಟಲೂ, ದೇವಮನುಷ್ಯರ ಹಿತಾರ್ಥವಾಗಿ ರಾಜನಾಗಿ ಹುಟ್ಟುವನು ॥೧೫೧॥ (ಅದೆಂತೆನೇ) ಇಕ್ಷ್ವಾಕುವಂಶದಲ್ಲಿ ದಶರಥನೆಂಬ ಒಬ್ಬಾನೊಬ್ಬ ಅರಸುಂಟಾಗುವನು ಆ ನರನಾಥನಿಗೆ ಮಹಾತೇಜಸ್ವಿಯಾದ ರಾಮನೆಂದು ಕುವರನುಂಟಾಗುವನು ॥೧೫೨॥ ಕಡುತೇಜಸ್ವಿಯಾಗಿಯೂ, ಮಹಾಮತಿವಂತನಾತಯೂ ಅತಿಶಯವಾದ ಬಲವೂ ಪರಾಕ್ರಮವೂ, ಉಳ್ಳವನಾಗಿಯೂ, ರಣರಂಗದಲ್ಲಿ, ಸೂರ್ಯನತೆರದಿ ನೋಡಲಸಾಧ್ಯನಾಗಿಯೂ, ರಾಮನೆಂದು ಪ್ರಸಿದ್ಧನಾಗಿಯೂ, ಸಮರ್ಥನಾಗಿಯೂ, ಇರುವನಾಗಿ, ನಾರಾಯಣನು ಉತ್ಪನ್ನನಾಗುವನಷ್ಟೇ, ಧರ್ಮಾತ್ಮನಾದ ಮತ್ತು ಮಹಾಕೀರ್ತಿವಂತನಾದ ಆ ಮಹಾನುಭಾವನು, ಜನಕನಾಜ್ಞೆಯಿಂದ ಲಕ್ಷ್ಮಣನಿಂದೊಡಗೂಡಿ ನಿರ್ಜನವಾದ ದಂಡಕಾರಣ್ಯದಲ್ಲಿ ಸಂಚರಿಸುತ್ತಿರುವನು, ಆತನಿಗೆಸತಿಯಾದ ಮಹಾಭಾಗ್ಯವತಿಯಾಗಿ ರ್ಪ ಲಕ್ಷ್ಮೀದೇವಿಯು, ವಸುಧಾತಲದಿಂ ದುತ್ಪನ್ನಳಾಗಿ ಜನಕರಾಜನಿಗೆ ಇಷ್ಟಳಾದ ಕುವರಿಯಾಗಿ ಸೀತೆಯೆಂದು ಪ್ರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕ್ಷಣಲಕ್ಷಿತಾ । ಛಾಯೇವಾನುಗತಾ ರಾಮಂ ನಿಶಾಕರಮಿವ ಪ್ರಭಾ ॥೧೫೬॥ ಚಾರುಶೀಲಗುಣೋಪೇತಾ ಸಾಧ್ವೀ ಧೈರ್ಯಸಮನ್ವಿತಾ । ಸಹಸ್ರಾಂಶೋರ್ ರಶ್ಮಿರಿವ ಹ್ಯೇಕಮೂರ್ತಿರಿವ ಸ್ಥಿತಾ ॥೧೫೭॥ ಏವಂ ತೇ ಸರ್ವಮಾಖ್ಯಾತಂ ಮಯಾ ರಾವಣ ವಿಸ್ತರಾತ್ । ಮಹತೋ ದೇವದೇವಸ್ಯ ಶಾಶ್ವತಸ್ಯಾವ್ಯಯಸ್ಯ ಚ ॥೧೫೮॥ ಏವಂ ಶ್ರುತ್ವಾ ಮಹಾಬಾಹೂ ರಾಕ್ಷಸೇಂದ್ರಃ ಪ್ರತಾಪವಾನ್ । ತ್ವಯಾ ಸಹ ವಿರೋಧೇಪ್ಸುಶ್ಚಿಂತಯಾಮಾಸ ರಾಘವ ॥೧೫೯॥ ಸನತ್ಕುಮಾರವಾಕ್ಯಂ ತು ಚಿಂತಯಾನೋ ಮುಹುರ್ಮುಹುಃ । ರಾವಣೋ ಮುಮುದೇ ಶ್ರೀಮಾನ್ ಯುದ್ಧಾರ್ಥೀ ವಿಚಚಾರ ಹ ॥೧೬೦॥ ಶ್ರುತ್ವಾ ಚ ತಾಂ ಕಥಾಂ ರಾಮೋ ವಿಸ್ಮಯೋತ್ಫುಲ್ಲಲೋಚನಃ । ಶಿರಸಶ್ಚಾಲನಂ ಕೃತ್ವಾ ವಿಸ್ಮಯಂ ಪರಮಂ ಗತಃ ॥೧೬೧॥ ಶ್ರುತ್ವಾ ತು ವಾಕ್ಯಂ ಸ ನರೇಶ್ವರಸ್ತದಾ ಮುದಾ ಯುತೋ ವಿಸ್ಮಯಮಾನಚಕ್ಷುಃ । ಪುನಶ್ಚ ತಂ ಜ್ಞಾನವತಾಂ ಪ್ರಧಾನಂ ಉವಾಚ ವಾಕ್ಯಂ ವದ ಮೇ ಪುರಾತನಮ್ ॥೧೬೨॥ ತತಃ ಸ ಸುಮಹಾತೇ

---

ಸ್ತಂಗಳಾದ, ಲಕ್ಷಣ-ಲಕ್ಷಣಗಳಿಂದ, ಲಕ್ಷಿತಾ-ಕೂಡಿಕೊಂಡಿರುವಳಾಗಿ, ನಿಶಾಕರಂ-ಚಂದ್ರನನ್ನು, ಪ್ರಭೇವ-ಕಾಂತಿಯಂತೇ-ಛಾಯೇವ-ನೆರಳಂತೆ, ರಾಮಂ-ಶ್ರೀ ರಾಮನನ್ನು, ಅನುಗತಾ-ಅನುಸರಿಸಿಬರುತ್ತಿರುವ, ಚಾರುಶೀಲಗುಣೋಪೇತಾ-ಚಾರು -ಮನೋಹರವಾದ, ಶೀಲ-ಸ್ವಭಾವದಿಂದಲೂ, ಗುಣ-ಗುಣಗಳಿಂದಲೂ, ಉಪೇತಾ-ಕೂಡಿಕೊಂಡಿರುವ, ಸಾಧ್ವೀ-ಪತಿವ್ರತೆಯಾದ, ಧೈರ್ಯ ಸಮನ್ವಿತಾ-ಧೈರ್ಯದಿಂದ ಕೂಡಿಕೊಂಡಿರುವ ಆ ಸೀತಾದೇವಿಯು, ಸಹಸ್ರಾಂಶೋಃ-ಸೂರ್ಯನ,ರಶ್ಮಿರಿವ, ಕಿರಣಗಳಂತೆ, ಏಕಮೂರ್ತಿರಿವ-ರಾಮದೇವರಿಗೆ ಏಕಶರೀರವೋಎಂಬಂತೆ, ಸ್ಥಿತಾ-ಇರುವಳು ॥೧೫೭॥ಹೇರಾವಣ-ಎಲೈ ರಾವಣನೇ, ಏವಂ-ಈಪರಿಯಾಗಿ, ದೇವದೇವಸ್ಯ-ದೇವದೇವೋತ್ತಮನಾದ,ಮಹತಃ-ದೊಡ್ಡವನಾದ, ಶಾಶ್ವತಸ್ಯ-ಶಾಶ್ವತನಾದ,ಅವ್ಯಯಸ್ಯ, ನಾಶರಹಿತನಾದ ಶ್ರೀ ಮಹಾವಿಷ್ಣುವಿನ, ಸರ್ವಂ-ಸಮಸ್ತ ಚರಿತ್ರವು,ತೇ-ನಿನಗೆ, ಮಯಾ-ನನ್ನಿಂದ,ವಿಸ್ತರಾತ್-ವಿಸ್ತಾರದಿಂದ, ಆಖ್ಯಾತಂ-ಹೇಳಲ್ಪಟ್ಟಿತು ॥೧೫೮॥ಹೇ ರಾಘವ, ಎಲೈ ಶ್ರೀರಾಮನೇ, ಮಹಾಬಾಹುಃ-ಮಹಾಭುಜಗಳುಳ್ಳ, ಪ್ರತಾಪವಾನ್-ಪರಾಕ್ರಮಶಾಲಿಯಾದ, ರಾಕ್ಷಸೇಂದ್ರಃ-ರಾಕ್ಷಸಶ್ರೇಷ್ಠನಾದ ರಾವಣನು, ಏವಂ-ಈಪರಿಯಾಗಿ, ಶ್ರುತ್ವಾ-ಕೇಳಿ, ತ್ವಯಾಸಹ-ನಿನ್ನೊಡನೇ, ವಿರೋಧೇಪ್ಸುಃ-ದ್ವೇಷಿಸಲಿಚ್ಛೆಯುಳ್ಳವನಾಗಿ, ಚಿಂತಯಾಮಾಸ-ಆಲೋಚಿಸಿದನು ॥೫೯॥ ಶ್ರೀಮಾನ್-ಸಂಪದ್ಯುಕ್ತನಾದ, ರಾವಣಃ-ರಾವಣನು, ಸನತ್ಕುಮಾರವಾಕ್ಯಂತು- ಸನತ್ಕುಮಾರನ ಮಾತನ್ನು, ಮುಹುರ್ಮುಹುಃ-ಬಾರಿಬಾರಿಗೂ, ಚಿಂತಯಾನಃ-ಆಲೋಚಿಸುತ್ತಿರುವನಾಗಿ, ಮುಮುದೇ-ಸಂತೋಷಿಸಿದನು, ಯುದ್ಧಾರ್ಥೀ-ಯುದ್ಧವಂ ಇಚ್ಛಿಯಿಸುತ್ತಿರುವನಾಗಿ, ವಿಚಚಾರಹ-ಸಂಚರಿಸಿದನು ॥೧೬೦॥ ರಾಮಃ-ಶ್ರೀರಾಮನು, ತಾಂಕಥಾಂ-ಆ ಕಥಾವೃತ್ತಾಂತವನ್ನು, ಶ್ರುತ್ವಾ-ಕೇಳಿ, ವಿಸ್ಮಯೋತ್ಫುಲ್ಲ ಲೋಚನಃ-ಆಶ್ಚರ್ಯದಿಂ ವಿಸ್ತಾರವಾದ ನೇತ್ರಗಳುಳ್ಳವನಾಗಿ, ಶಿರಸಃ-ಶಿರಸ್ಸಿನ, ಚಾಲನಂ-ಕಂಪನವನ್ನು, ಕೃತ್ವಾ-ಮಾಡಿ, ಪರಮಂ-ಹೆಚ್ಚಾದ, ವಿಸ್ಮಯಂ-ಆಶ್ಚರ್ಯವನ್ನು, ಗತಃ-ಹೊಂದಿದನು ॥೧೬೧॥ ನರೇಶ್ವರಃ-ಮನುಷ್ಯಾಧಿಪತಿಯಾದ ಆ ಶ್ರೀರಾಮನು, ವಾಕ್ಯಂ-ವಚನವನ್ನು, ಶ್ರುತ್ವಾತು- ಕೇಳ್ಯಾದರೆ, ತದಾ- ಆ ಕಾಲದಲ್ಲಿ, ಮುದಾ-ಸಂತೋಷದಿಂದ, ಯುತಃ-ಕೂಡಿಕೊಂಡಿರುವನಾಗಿ, ವಿಸ್ಮಯಮಾನಚಕ್ಷುಃ-ವಿಸ್ಮಯಮಾನ-ಆಶ್ಚರ್ಯಯುಕ್ತವಾದ, ಚಕ್ಷುಃ-ನೇತ್ರಗಳುಳ್ಳವನಾಗಿ, ಜ್ಞಾನವತಾಂ-ಜ್ಞಾನಿಗಳೊಳಗೆ, ಪ್ರಧಾನಂ-ಶ್ರೇಷ್ಠನಾದ, ತಂ-ಆ ಸನತ್ಕುಮಾರನಂ ಕುರಿತು, ಪುರಾತನಂ-ಕೇವಲ ಪ್ರಾಚೀನವಾದ, ಕಥೆಯನ್ನು, ಮೇ-ಯನಗೆ, ವದ-ಹೇಳು, ಇತಿ-ಇಂತೆಂದು,ಪುನಶ್ಚ-ಮತ್ತು,ವಾಕ್ಯಂ-ಮಾತನ್ನು,ಉವಾಚ-ಹೇಳಿದನು ॥೧೬೨॥ ತತಃ-ಬಳಿಕ, ಮಹಾತೇಜಾಃ-ಮಹಾ ತೇಜಸ್ವಿಯಾದ, ಮಹಾಯಶಾಃ-ಮಹಾ ಕೀರ್ತಿವಂತನಾದ, ಕುಂಭಯೋನಿಃ-ಅಗಸ್ತ್ಯಋಷಿಯು ಪ್ರಣತಂ-ನಮ್ರ

---

ಖ್ಯಾತಳಾಗುವಳು, ಆಕೆಯೂ ರೂಪದಿಂದ ಅಸದೃಶಳಾಗಿಯೂ, ಸಾಮುದ್ರಿಕೋಕ್ತ ಸರ್ವಲಕ್ಷಣಗಳಿಂದ ಯುಕ್ತಳಾಗಿಯೂ, ಚಂದ್ರನನ್ನಾಶ್ರಯಿಸಿದ ಪ್ರಭೆಯತೆರದಿ ರಾಮನನ್ನನುಸರಿಸುತ್ತಿರುವಳಾಗಿಯೂ, ಮನೋಹರವಾದ ಶೀಲ ಸ್ವಭಾವದಿಂದಲೂ, ಗುಣಗಳಿಂದಲೂ ಕೂಡಿಕೊಂಡಿರುವಳಾಗಿಯೂ, ಪತಿವ್ರತೆಯಾಗಿಯೂ, ಧೈರ್ಯಯುಕ್ತಳಾಗಿಯು ಇರುವ ಆಕೆಯು ಸೂರ್ಯ ಕಿರಣಗಳಂತೆಯೂ, ಆದಂಪತಿಗಳಿಗೆ ಏಕಶರೀರವೋ ಯೇನೋಎಂಬಂತೆ ತೋರುವಂತೆಯೂ, ಇರುವಂಥಾವಳಾಗುವಳು ॥೧೫೭॥ಎಲೈ ದಶಕಂಧರನೇ ದೇವದೇವೋತ್ತಮನಾಗಿಯೂ, ಅಧಿಕನಾಗಿಯೂ, ಶಾಶ್ವತನಾಗಿಯೂ, ನಾಶರಹಿತನಾಗಿಯೂ ಇರುವ ಆ ಶ್ರೀಮಹಾವಿಷ್ಣುವಿನ ಚರಿತ್ರೆಯನ್ನೆಲ್ಲಾ ನಿನಗೆ ಹೇಳಿದೆನು, ಎಂದು ಸನತ್ಕುಮಾರನು ನುಡಿದವನಾದನು ॥೧೫೮॥ ಎಲೈ ರಘುನಂದನನೆ, ಮಹಾ ಭುಜಪರಾಕ್ರಮಿಯಾದ ದಶಕಂಧರನು, ಈ ವಾಕ್ಯವಂ ಕೇಳಿ, ನಿನ್ನೊಡನೇ ವಿರೋಧವನ್ನಿಚ್ಛಿಸುತ್ತಲೂ, ಬಾರಿ ಬಾರಿಗೂ ಸನತ್ಕುಮಾರನ ವಾಕ್ಯವಂ ಚಿಂತಿಸುತ್ತಲೂ, ಇರುವನಾಗಿ, ಸಂತೋಷಿಸುತ್ತಾ ಯುದ್ಧಾರ್ಥಿಯಾಗಿ ಸಂಚರಿಸುತ್ತಿದ್ದನೆಂದು ಕುಂಭ ಸಂಭವನಿಂದ ಹೇಳಲ್ಪಟ್ಟ ಆ ವಾಕ್ಯವಂಕೇಳಿ ರಘುನಂದನನು ಆಶ್ಚರ್ಯದಿಂ ವಿಶಾಲವಾದ ನೇತ್ರಗಳುಳ್ಳವನಾಗಿಯೂ, ತಲೆದೂಗುತ್ತಿರುವನಾಗಿಯೂ, ಪರಮಾನಂದ ಭರಿತನಾಗಿಯೂ ಇರುವನಾಗಿ, ಮತ್ತೊಂದು ಪೂರ್ವ ಕಥೆಯಂ ಹೇಳೆಂದು ಜ್ಞಾನವಂತರೊಳಗೆ ಉತ್ತಮನಾದ ಅಗಸ್ತ್ಯ ಮಹಾಮುನಿಯಂ ಕುರಿತು ನುಡಿದನು ॥೧೬೨॥ ಆ ಬಳಿಕ ಅತಿತೇಜಸ್ವಿಯಾಗಿಯೂ, ಮಹಾ ಯಶೋವಂತನಾಗಿಯೂ, ಆಗಿರುವ ಕುಂಭಸಂಭವನು, ವಿನಯಸಂಪನ್ನನಾದ, ಶ್ರೀರಾಮ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚಾಪಿ ಕುಂಭಯೋನಿರ್ಮಹಾಯಶಾಃ । ಉವಾಚ ರಾಮಂ ಪ್ರಣತಂ ಪಿತಾಮಹ ಇವೇಶ್ವರಮ್ ॥೧೩॥ ಶ್ರೂಯತಾಮಿತಿ ಚಾಮಂ
ತ್ರ್ಯ ರಾಮಂ ಸತ್ಯಪರಾಕ್ರಮಮ್ । ಕಥಾಶೇಷಂ ಮಹಾತೇಜಾಃ ಕಥಯಾಮಾಸ ಸ ಪ್ರಭುಃ ॥೧೪॥ ಯಥಾಖ್ಯಾನಂ ಶ್ರುತಂ ಚೈ
ವ ಯಥಾವೃತ್ತಂ ಚ ತತ್ತಥಾ । ಪ್ರೀತಾತ್ಮಾ ಕಥಯಾಮಾಸ ರಾಘವಾಯ ಮಹಾಮತಿಃ ॥೧೫॥ ಏತದರ್ಥಂ ಮಹಾಬಾಹೋ
ರಾವಣೇನ ದುರಾತ್ಮನಾ । ಸುತಾ ಜನಕರಾಜಸ್ಯ ಹೃತಾ ರಾಮ ಮಹಾಮತೇ ॥೧೬॥ ಏತಾಂ ಕಥಾಂ ಮಹಾಬಾಹೋ ನಾರದಸ್ಸ
ಮಹಾಯಶಾಃ । ಕಥಯಾಮಾಸ ದುರ್ಧರ್ಷೋ ಮೇರೌ ಗಿರಿವರೋತ್ತಮೇ ॥೧೭॥ ದೇವಗಂಧರ್ವಸಿದ್ಧಾನಾಮೃಷೀಣಾಂ ಚ ಮ
ಹಾತ್ಮನಾಮ್ । ಕಥಾಶೇಷಂ ಪುನಸ್ಸೋಽಥ ಕಥಯಾಮಾಸ ರಾಘವ ॥೧೮॥ ನಾರದಸ್ಸುಮಹತೇಜಾಃ ಪ್ರಹಸನ್ನಿವ ಮಾನದ ।
ತಾಂ ಕಥಾಂ ಶೃಣು ರಾಜೇಂದ್ರ ಮಹಾಪಾಪಪ್ರಣಾಶಿನೀಮ್ ॥೧೯॥ ಯಾಂ ತು ಶ್ರುತ್ವಾ ಮಹಾಬಾಹೋ ಋಷಯೋ ದೈವತೈಸ್ಸ
ಹ । ಊಚುಸ್ತಂ ನಾರದಂ ಸರ್ವೇ ಹರ್ಷಪರ್ಯಾಕುಲೇಕ್ಷಣಾಃ ॥೨೦॥ ಯಶ್ಚೇಮಾಂ ಶ್ರಾವಯೇನ್ನಿತ್ಯಂ ಶೃಣುಯಾಚ್ಚಾಪಿ ಭಕ್ತಿ
ತಃ । ಸಪುತ್ರಪೌತ್ರವಾನ್ ರಾಮ ಸ್ವರ್ಗಲೋಕೇ ಮಹೀಯತೇ ॥೨೧॥ ತತಸ್ಸ ರಾವಣೋ ರಾಮ ಪರ್ಯಟನ್ ಪೃಥಿವೀಮಿಮಾಮ್ ।

---

ನಾದ, ರಾಮಂ-ಶ್ರೀರಾಮನಂ ಕುರಿತು, ಪಿತಾಮಹಃ-ಬ್ರಹ್ಮನು, ಈಶ್ವರಮಿವ-ಈಶ್ವರನೋಪಾದಿಯಲ್ಲಿ, ಪ್ರವಃ-ಮತ್ತು, ಉವಾಚ-ಹೇಳಿದನು ॥೧೩॥ ಮಹಾತೇಜಾಃ-ಬ್ರಹ್ಮತೇಜಸ್ವಿಯಾದ, ಪ್ರಭುಃ-ಸಮರ್ಥನಾದ, ಸಃ-ಆ ಅಗಸ್ತ್ಯಋಷಿಯು, ಶ್ರೂಯತಾಮಿತಿ- ಕೇಳಲ್ಪಡಲೀಎಂದು, ಸತ್ಯಪರಾಕ್ರಮಂ-ಸತ್ಯದಿಂದಲೇ ಪರಾಕ್ರಮವನ್ನು ಮಾಡುತ್ತಿರುವ, ರಾಮಂ-ಶ್ರೀ ರಾಮನನ್ನು, ಆಮಂತ್ರ್ಯ-ಕರದು, ಕಥಾಶೇಷಂ-ಮಿಕ್ಕಾದ ವೃತ್ತಾಂತವನ್ನು, ಕಥಯಾಮಾಸ-ನುಡಿದನು ॥೧೪॥ ಮಹಾಮತಿಃ-ಮಹಾ ಬುದ್ಧಿಶಾಲಿಯಾದ ಆಗಸ್ತ್ಯಋಷಿಯು, ಪ್ರೀತಾತ್ಮಾ- ಸಂತುಷ್ಟಮನಸುಳ್ಳವನಾಗಿ, ಆಖ್ಯಾನಂ-ವೃತಾಂತವು, ಯಥಾಶ್ರುತಂ-ಹ್ಯಾಗೆ ಕೇಳಲ್ಪಟ್ಟಿತ್ತೊ, ಯಥಾ-ಹ್ಯಾಗೆ, ವೃತ್ತಂಚ-ನಡಿಯಿತೋ, ತತ್-ಆ ಉಪಾಖ್ಯಾನವನ್ನು, ತಥೈವ- ಹಾಗೆ, ರಾಘವಾಯ-ಶ್ರೀ ರಾಮನಿಗೋಸ್ಕರ, ಕಥಯಾಮಾಸ-ಹೇಳಿದನು ॥೧೫॥ ಹೇ ಮಹಾಬಾಹೋ-ಎಲೈ ಮಹಾ ಭುಜಪರಾಕ್ರಮಶಾಲಿಯೇ, ಹೇರಾಮ-ಎಲೈ ಶ್ರೀರಾಮನೆ, ಹೇ ಮಹಾಮತೇ-ಎಲೈ ಮಹಾ ಬುದ್ಧಿಶಾಲಿಯೇ, ದುರಾತ್ಮನಾ-ದುಷ್ಟಮನಸುಳ್ಳ, ರಾವಣೇನ-ರಾವಣಾಸುರನಿಂದ, ಏತದರ್ಥಂ-ಈ ನಿನ್ನಿಂಧ ದ್ವೇಷನಿಮಿತ್ತವಾಗಿ, ಜನಕರಾಜಸ್ಯ-ಜನಕಮಹಾರಾಯನ, ಸುತಾ-ಕೊಮಾರ್ತಿಯಾದ ಸೀತಾದೇವಿಯು, ಹೃತಾ-ಅಪಹರಿಸಲ್ಪಟ್ಟಳು ॥ ಹೇ ಮಹಾಬಾಹೋ, ಎಲೈ ಭುಜಪರಾಕ್ರಮಶಾಲಿಯೇ, ಏತಾಂಕಥಾಂ-ಈ ಕಥೆಯನ್ನು, ಮಹಾಯಶಾಃ-ಮಹಾ ಕೀರ್ತಿವಂತನಾದ, ಸಃ-ಪ್ರಸಿದ್ಧನಾದ, ದುರ್ಧರ್ಷಃ-ತಿರಸ್ಕರಿಸಲಸಾಧ್ಯನಾದ, ನಾರದಃ-ನಾರದಋಷಿಯು, ಗಿರಿವರೋತ್ತಮೇ-ಪರ್ವತಶ್ರೇಷ್ಠವಾದ, ಮೇರೌ-ಮೇರುಪರ್ವತದಲ್ಲಿ, ಕಥಯಾಮಾಸ-ಹೇಳಿದನು ॥೧೭॥ ಹೇ ರಾಘವ ಎಲೈ ಶ್ರೀರಾಮನೇ, ದೇವಗಂಧರ್ವಸಿದ್ಧಾನಾಂ-ದೇವಗಂಧರ್ವಸಿದ್ಧರ, ಋಷೀಣಾಂಚ-ಋಷಿಗಳ, ಮಹಾತ್ಮನಾಂಚ-ಮಹಾತ್ಮರ, ಕಥಾಶೇಷಂ-ಮಿಕ್ಕಾದ ಕಥೆಯನ್ನು, ಸುಮಹಾತೇಜಾಃ-ಮಹಾ ತೇಜೋವಂತನಾದ, ಸಃನಾರದಃ-ಆ ನಾರದಋಷಿಯು, ಪ್ರಹಸನ್ನಿವ-ನಗುತ್ತಿರುವನಂತೇ, ಪುನಶ್ಚ-ಮತ್ತು, ಅಥ-ಬಳಿಕ, ಕಥಯಾಮಾಸ-ಹೇಳಿದನು ॥೧೮॥ ಹೇ ಮಾನದ, ಎಲೈ ಮಾನಪ್ರದಾಯಕನೇ-ಹೇ ರಾಜೇಂದ್ರ-ಎಲೈ ರಾಜಶ್ರೇಷ್ಠನೇ, ತಾಂಕಥಾಂ-ಆ ವೃತ್ತಾಂತವನ್ನು, ಶೃಣು-ಕೇಳು, ಮಹಾ ಪಾಪಪ್ರಣಾಶಿನೀಂ-ಮಹಾ ಪಾಪಗಳನನ್ನು ಹೋಗಲಾಡಿಸುತಿರುವ, ಯಾಂತು-ಯಾವ ಕಥೆಯನ್ನು, ಶೃತ್ವಾತು-ಕೇಳಿ ಆದರೆ, ಋಷಯಃ-ಋಷಿಗಳು,ದೈವತೈಸಹ-ದೇವತೆಗಳೊಡನೆ ಕೂಡಿ, ಸರ್ವೇ-ಸಮಸ್ತರೂ, ಹರ್ಷಪರ್ಯಾಕುಲೇಕ್ಷಣಾಃ-ಸಂತೋಷದಿಂದ ಆ ನಂದಬಾಷ್ಪಗಳುಳ್ಳವರಾಗಿ, ತಂನಾರದಂ-ಆ ನಾರದಋಷಿಯನ್ನು ಕುರಿತು,ಊಚುಃ-ಹೇಳಿದರು ॥೨೦॥ ಯಶ್ಚ-ಯಾವ ಪುರುಷನು, ಇಮಾಂ-ಈ ಕಥಾವೃತಾಂತವನ್ನು, ನಿತ್ಯಂ-ನಿರಂತರವು, ಶ್ರಾವಯೇತ್-ಕೇಳುವನೋ, ಯಶ್ಚಾಪಿ-ಯಾರುಕೂಡ, ಭಕ್ತಿತಃ-ಭಕ್ತಿಯಿಂದ, ಶೃಣುಯಾತ್-ಕೇಳುವನೋ, ಸಃ-ಆಪುರುಷನು, ಪುತ್ರಪೌತ್ರವಾನ್-ಮಕ್ಕಳುಮರಿಮಕ್ಕಳುಗಳುಳ್ಳವನಾಗಿ, ಸ್ವರ್ಗಲೋಕೇ-ಸ್ವರ್ಲೋಕದಲ್ಲಿ, ಮಹೀಯತೇ-ಮಹಾತ್ಮನಾಗಿರುತ್ತಾನೆ ॥೨೧॥ ಹೇ ರಾಮ-ಎಲೈ ಶ್ರೀರಾಮನೇ, ತತಃ-ಬಳಿಕ, ಸರಾವಣಃ-ಆ ರಾವಣಾಸುರನು, ವಿಜಯಾ

---

ನನ್ನು ಕೇಳೆಂದಭಿಮುಖನಾಗಿ ಮಾಡಿಕೊಂಡು ಆ ಕಥಾ ಶೇಷವನ್ನು, ತಾನು ಕೇಳಿದಂತೆಯೂ, ಪೂರ್ವದಲ್ಲಿ ನಡದಂತೆಯೂ, ಹೇಳಿದವನಾದನು ॥೧೫॥ ಎಲೈ ಮಹಾ ಬುದ್ಧಿವಂತನಾದ ಶ್ರೀರಾಮನೆ ಜನಕ ನಂದಿನಿಯಾದ ಸೀತಾದೇವಿಯು, ಇದಕ್ಕೋಸ್ಕರ, ದುರಾತ್ಮನಾದ ರಾವಣನಿಂದ ಪರಿಹರಿಸಲ್ಪಟ್ಟಳೂ॥೧೬॥ ಎಲೈ ಮಹಾಭುಜ ಪರಾಕ್ರಮಿಯೇ, ಮಹಾಯಶೋವಂತನಾಗಿಯೂ, ತಿರಸ್ಕರಿಸ ಲಸಾಧ್ಯನಾಗಿಯೂ, ಆಗಿರುವ ನಾರದಮಹಾಮುನಿಯು, ಪರ್ವತೋತ್ತಮವಾದ ಮೇರುಗಿರಿಯಲ್ಲಿ ಈಕಥೆಯಂಪೇಳಿ, ಮಹಾತ್ಮರಾದ ದೇವ, ಗಂಧರ್ವರ, ಸಿದ್ಧರ, ಋಷಿಗಳ, ಸಂಬಂಧವಾದ ಮತ್ತು ಕೆಲವಾದ ಯಾಯಾ ಕಥೆಗಳಂ ನುಡಿದಿಹನೋ, ಮತ್ತು, ಯಾವಕಥೆಯಂ ಕೇಳಿ, ಋಷಿಗಳು, ದೇವತೆಗಳಂ ದೊಡಗೂಡಿ ಹರುಷದಿಂಧ ವ್ಯಾಕುಲವಾದ ನೇತ್ರಂಗಳುಳ್ಳವರಾಗಿ, ನಾರದ ಮಹಾಮುನಿಯಂ ಕುರಿತು, ನುಡಿದರೋ ಸರ್ವಪಾಪ ನಾಶಕವಾದ ಆ ಕಥೆಯಂ ಪೇಳ್ವೆನು ಕೇಳು, ಯಾವ ಪುರುಷನು ಕಡು ಭಕ್ತಿಯಿಂದ ಈ ಕಥೆಯಂ ಶ್ರವಣಮಾಡಿಸುವನೋ, ಮತ್ತು, ಯಾವಪುರುಷನು, ಕಥಾಶ್ರವಣವಂ ಗೈಯ್ಯುವನೋ ಆಪುರುಷನು ಪುತ್ರ ಪೌತ್ರ ಸಹಿತನಾಗಿ ಸ್ವರ್ಗಲೋಕದಲ್ಲಿ ಪೂಜಿಸಲ್ಪಡುತ್ತಿರುವನು ॥೨೧॥ ಎಲೈ ರಘುನಂದನನೇ ಸಮನಂತರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಿಜಯಾರ್ಥೀ ಮಹಾಶೂರೈಃ ರಾಕ್ಷಸೈಃ ಪರಿವಾರಿತಃ ॥ ೧೨ ॥ ದೈತ್ಯದಾನವರಕ್ಷಸ್ಸು ಯಂ ಶೃಣೋತ್ಯಧಿಕಂ ಬಲೇ । ತ
ಮಾಹ್ವಯತಿ ಯುದ್ಧಾರ್ಥೀ ರಾವಣೋ ಬಲದರ್ಪಿತಃ ॥ ೧೩ ॥ ಏವಂ ಸಂಪರ್ಯಟನ್ ಸರ್ವಾಂ ಪೃಥಿವೀಂ ಪೃಥಿವೀಪತೇ । ಬ್ರಹ್ಮ
ಲೋಕಾನ್ನಿವರ್ತಂತಂ ಸಮಾಸಾದ್ಯಾಥ ರಾವಣಃ ॥ ೧೪ ॥ ವ್ರಜಂತಂ ಮೇಘಪೃಷ್ಠಸ್ಥಂ ಅಂಶುಮಂತಮಿವಾಪರಮ್ । ತಂ
ಚಾಭಿಪದ್ಯ ಪ್ರೀತಾತ್ಮಾ ಹ್ಯಭಿವಾದ್ಯ ಕೃತಾಂಜಲಿಃ ॥ ೧೫ ॥ ಉವಾಚ ಹೃಷ್ಟಚಿತ್ತಸ್ತು ರಾವಣೋ ನಾರದಂ ತದಾ । ಆ ಬ್ರಹ್ಮ
ಭವನಾಲ್ಲೋಕಾಸ್ತ್ವಯಾ ದೃಷ್ಟಾ ಹ್ಯನೇಕಶಃ ॥ ೧೬ ॥ ಕಸ್ಮಿನ್ ಲೋಕೇ ಮಹಾಭಾಗ ಮಾನವಾ ಬಲವತ್ತರಾಃ । ಯೋದ್ಧುಮಿ
ಚ್ಛಾಮಿ ತೈಸ್ಸಾರ್ಧಂ ಯಥಾಕಾಮಂ ಯದೃಚ್ಛಯಾ ॥ ೧೭ ॥ ತಚ್ಛ್ರುತ್ವಾ ನಾರದೋ ವಾಕ್ಯಂ ರಾವಣಸ್ಯ ದುರಾತ್ಮನಃ । ಚಿಂ
ತಯಿತ್ವಾ ಮುಹೂರ್ತಂ ತು ಮಹಾತ್ಮಾ ಪ್ರತ್ಯುವಾಚ ತಮ್ ॥ ೧೮ ॥ ಅಸ್ತಿ ರಾಜನ್ ಮಹಾದ್ವೀಪಃ ಕ್ಷೀರೋದಸ್ಯ ಸಮೀಪತಃ ।
ಯತ್ರ ತೇ ಚಂದ್ರಸಂಕಾಶಾ ಮಾನವಾಸ್ಸುಮಹಾಬಲಾಃ ॥ ೧೯ ॥ ಮಹಾಕಾಯಾ ಮಹಾವೀರ್ಯಾ ಮೇಘಸ್ತನಿತನಿಸ್ವನಾಃ । ಮ

---

ರ್ಥೀ-ಜಯವನ್ನು ಕೋರುತ್ತಿರುವವನಾಗಿ, ಇಮಾಂ ಪೃಥಿವೀಂ-ಈ ಭೂಮಿಯಲ್ಲಿ, ಪರ್ಯಟನ್-ತಿರುಗುತ್ತಿರುವವನಾಗಿ, ಮಹಾಶೂರೈಃ-ಮಹಾ ಶೂರರಾದ, ರಾಕ್ಷಸೈಃ-ರಾಕ್ಷಸರಿಂದ, ಪರಿವಾರಿತಃ-ಸುತ್ತುಕೊಳ್ಳಲ್ಪಟ್ಟವನಾಗಿ, ಬಲದರ್ಪಿತಃ-ಬಲದಿಂದ ಗರ್ವಿತನಾದ, ರಾವಣಃ-ರಾವಣನು, ದೈತ್ಯದಾನವ ರಕ್ಷಸ್ಸು- ದೈತ್ಯ ದಾನವ ರಾಕ್ಷಸರಲ್ಲಿಯೂ, ಯಂ-ಯಾವನನ್ನು, ಬಲಾಧಿಕಂ-ಬಲದಿಂದ ಅಧಿಕನನ್ನಾಗಿ, ಶೃಣೋತಿ-ಕೇಳುತ್ತಾನೋ, ತಂ-ಆ ಪುರುಷನನ್ನು, ಯುದ್ಧಾರ್ಥೀ-ಯುದ್ಧವನ್ನು ಬೇಡುತ್ತಿರುವನಾಗಿ, ಆಹ್ವಯತಿ-ಕರೆಯುತ್ತಾನೆ ॥ ೧೩ ॥ ಹೇ ಪೃಥಿವೀಪತೇ-ಎಲೈ ಭೂಮಂಡಲಾಧಿಪತಿಯಾದ ಶ್ರೀರಾಮನೇ ಸ ರಾವಣಃ-ಆ ರಾವಣನು, ಏವಂ-ಈಪರಿಯಾಗಿ, ಸರ್ವಾಂ ಪೃಥಿವೀಂ-ಸಮಸ್ತ ಭೂಮಂಡಲವಂ ಕುರಿತು, ಪರ್ಯಟನ್-ತಿರುಗುತ್ತಿರುವವನಾಗಿ ಬ್ರಹ್ಮಲೋಕಾತ್-ಬ್ರಹ್ಮಲೋಕದ ಕಡೆಯಿಂದ, ನಿವರ್ತಂತಂ-ಹಿಂದೆ ತಿರುಗಿದ-ಥಾವನಾಗಿ, ವ್ರಜಂತಂ-ಹೋಗುತ್ತಿರುವ, ಮೇಘಪೃಷ್ಠಸ್ಥಂ-ಮೇಘಪಾರ್ಶ್ವದಲ್ಲಿ ಇರುತ್ತಿರುವ, ಅಪರಂ-ಮತ್ತೊಬ್ಬನಾದ, ಅಂಶುಮಂತಮಿವಸ್ಥಿತಂ-ಸೂರ್ಯನಂತಿರುವ, ತಂ ನಾರದಂ-ಆ ನಾರದರನ್ನು, ಸಮಾಸಾದ್ಯ-ಹೊಂದಿ, ಅಭಿಪದ್ಯ-ಆಲಿಂಗನೆಮಾಡಿ, ಅಭಿವಾದ್ಯಚ-ನಮಸ್ಕಾರವನ್ನೂ ಮಾಡಿ, ಪ್ರೀತಾತ್ಮಾ-ಸಂತೋಷಯುಕ್ತ ಮನಸ್ಸುಳ್ಳವನಾಗಿ, ಕೃತಾಂಜಲಿಃ-ಬದ್ಧಾಂಜಲಿಪುಟನಾಗಿ, ಹೃಷ್ಟಚಿತ್ತಃ-ಸಂತೋಷಚಿತ್ತನಾಗಿ, ಉವಾಚ-ಹೇಳಿದನು ॥೧೫॥ ಹೇ ಮಹಾಭಾಗ-ಎಲೈ ಪುಣ್ಯವಂತನಾದ ನಾರದಋಷಿಯೇ, ತ್ವಯಾ-ನಿನ್ನಿಂದ, ಆ ಬ್ರಹ್ಮಭವನಾತ್-ಬ್ರಹ್ಮಲೋಕ ಮೊದಲಾಗಿ, ಲೋಕಾಃ-ಲೋಕಗಳು, ಅನೇಕಶಃ-ಅನೇಕಾವರ್ತಿಯಾಗಿ, ದೃಷ್ಟಾಹಿ- ನೋಡಲ್ಪಟ್ಟವಷ್ಟೇ ॥೧೬॥ ಕಸ್ಮಿನ್ ಲೋಕೇ-ಯಾವ ಲೋಕದಲ್ಲಿ, ಮಾನವಾಃ-ಮನುಷ್ಯರು, ಬಲವತ್ತರಾಃ-ಬಲಾಧಿಕರೊ, ತೈಸ್ಸಾರ್ಧಂ-ಅವರಿಂದ ಕೂಡ, ಯಥಾಕಾಮಂ-ಇಷ್ಟಾನುಸಾರವಾಗಿ, ಯದೃಚ್ಛಯಾ-ಸ್ವೇಚ್ಛೆಯಿಂದ, ಯೋದ್ಧುಂ-ಯುದ್ಧಮಾಡುವದಕ್ಕೋಸ್ಕರ, ಇಚ್ಛಾಮಿ-ಇಚ್ಛೆಸುತ್ತೇನೆ ॥೧೭॥ ನಾರದಃ-ನಾರದಋಷಿಯು, ದುರಾತ್ಮನಃ-ದುಷ್ಟಬುದ್ಧಿಯುಳ್ಳ, ರಾವಣಸ್ಯ-ರಾವಣನ, ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ಮುಹೂರ್ತಂ-ಮುಹೂರ್ತಕಾಲವು, ಚಿಂತಯಿತ್ವಾ-ಆಲೋಚಿಸಿ, ಮಹಾತ್ಮಾ-ಮಹಾ ಮನಸ್ವಿಯಾದ ಕಾರಣ, ತಂ-ಆ ರಾವಣನಂ ಕುರಿತು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥೧೮॥ ಹೇ ರಾಜನ್-ಎಲೈ ಅರಸೇ, ಕ್ಷೀರೋದಸ್ಯ-ಕ್ಷೀರಸಮುದ್ರದ, ಸಮೀಪತಃ-ಸಮೀಪದಲ್ಲಿ ಮಹಾದ್ವೀಪಃ-ದೊಡ್ಡದಾದ ದ್ವೀಪವು, ಅಸ್ತಿ-ಇದೆ, ಯತ್ರ-ಯಾವದ್ವೀಪದಲ್ಲಿ, ತೇ-ಆ ಪ್ರಸಿದ್ಧರಾದ, ಚಂದ್ರಸಂಕಾಶಾಃ-ಚಂದ್ರನಿಗೆ ಸಮಾನರಾದ, ಮಹಾಬಲಾಃ-ಮಹಾಬಲಿಷ್ಠರಾದ, ಮಹಾಕಾಯಾಃ-ಮಹಾ ಶರೀರಗಳುಳ್ಳ, ಮಹಾವೀರ್ಯಾಃ-ಮಹಾಪರಾಕ್ರಮಶಾಲಿಗಳಾದ, ಮೇಘಸ್ತನಿತನಿಸ್ವನಾಃ-ಮೇಘಘರ್ಜನದಂತೆ ಧ್ವನಿಯುಳ್ಳ, ಮಹಾತ್ಮಾನಃ-ಮಹಾಮನಸ್ವಿಗಳಾದ, ಧೈರ್ಯವಂತಃ-ಧೈರ್ಯಶಾಲಿಗಳಾದ, ಮಹಾಪರಿಘಬಾಹವಃ-ದೊಡ್ಡದಾದ ಲಾಳುಂಡಿಗೆಯಂತೆ ಭುಜಗಳುಳ್ಳ, ಮಾನವಾಃ-ಮನುಷ್ಯರು, ಸಂತಿ-ಇರುತ್ತಾರೋ, ತೇ ಮಾನವಾಃ-ಆ ಮನುಷ್ಯರು, ತಸ್ಮಿನ್ ಶ್ವೇತದ್ವೀಪೇ-ಆ ಶ್ವೇತದ್ವೀಪದಲ್ಲಿ, ಮಯಾ-ನನ್ನಿಂದ, ದೃಷ್ಟಾಃ-ಕಾಣಲ್ಪಟ್ಟರಷ್ಟೇ, ಹೇ ರಾಕ್ಷಸಾಧಿಪ-

---

ಕಾಲದಲ್ಲಿ, ಆ ದಶಕಂಧರನು, ವಿಜಯೇಚ್ಛೆಯುಳ್ಳವನಾಗಿ, ಕಡುಶೂರರಾದ ರಾಕ್ಷಸರಿಂ ಪರಿವೃತನಾಗಿ, ಧರಾತಲದಲ್ಲಿ ಸಂಚರಿಸುತ್ತಾ ದೈತ್ಯ, ದಾನವ, ರಾಕ್ಷಸರಲ್ಲಿ, ಯಾವ ಪುರುಷನು ಬಲಾಧಿಕನೆಂದು ಕೇಳಿದರೂ ಆತನನ್ನು ಕಾಳಗಕ್ಕೆ ಕರೆಯುತ್ತಿದ್ದನು ॥೧೩॥ ಎಲೈ ನರನಾಥನೇ ಯಾವ ಪರಿಯಾಗಿ ರಾವಣನು ಭೂಮಂಡಲದಲ್ಲಿ ಸಂಚರಿಸುತ್ತಿರುವನಾಗಿ, ಬ್ರಹ್ಮಲೋಕದಿಂ ಹಿಂತಿರುಗಿ ಬರುತ್ತಿರುವ ಮೇಘಪೃಷ್ಠವರ್ತಿಯಾಗಿರ್ಪ ಅಪರ ಚಂದ್ರನಂತೆ ಗಮಿಸುತ್ತಿರುವ ನಾರದಮುನಿಯಂ ಕಂಡು ಸಂತುಷ್ಟವಾದ ಮನವುಳ್ಳವನಾಗಿ ವಂದನೆಯಂಗೈದು ಅಂಜಲಿಬದ್ಧನಾ ಗಿಂತೆಂದು ನುಡಿದನು॥ ಎಲೈ ಪೂಜ್ಯನೇ ಸತ್ಯಲೋಕ ಮೊದಲ್ಗೊಂಡು ಅನೇಕ ಲೋಕಂಗಳು ತಂಮಿಂದ ಕಾಣಲ್ಪಟ್ಟರುವವು, ಯಾವ ಲೋಕದಲ್ಲಿ ಮನುಷ್ಯರು ಬಲಾಧಿಕರಾಗಿರುವರೋ, ಅವರೊಡನೆ ಕಾಳಗಿಸಲೂ ಇಚ್ಛೆಸುವೆನೆಂ ದುಸುರಿದನು ॥ ಮಹಾತ್ಮನಾದ ನಾರದಮುನಿಯು, ದುರಾತ್ಮನಾದ ರಾವಣನ ವಾಕ್ಯವಂಕೇಳಿ, ಸ್ವಲ್ಪಕಾಲವು ಚಿಂತಿಸಿ ಇಂತೆಂದುತ್ತರವಂ ಕೊಟ್ಟನು ॥೨೮॥ ಎಲೈ ರಾಜನೇ ಕ್ಷೀರಸಮುದ್ರದ ಸಮೀಪದಲ್ಲಿ ಒಂದಾನೊಂದು ಮಹಾದ್ವೀಪ ವಿರುವದು, ಅಲ್ಲಿರುವ ನರರೆಲ್ಲರು ಚಂದ್ರಸದೃಶರಾಗಿಯೂ, ಕಡುಬಲವಂತ ರಾಗಿಯೂ, ದೀರ್ಘದೇಹಮುಳ್ಳವರಾಗಿಯೂ, ಅತಿ ವೀರರಾಗಿಯೂ, ಸಿಡಿಲಿನಂತೆ ಧ್ವನಿಯುಳ್ಳವರಾಗಿಯೂ, ಮಹಾಬುದ್ಧಿಶಾಲಿ ಗಳಾಗಿಯೂ, ಧೈರ್ಯವಂತರಾಗಿಯೂ, ಪ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹಾತ್ಮಾನೋಧೈರ್ಯವಂತೋಮಹಾಪರಿಘಬಾಹವಃ ॥೧೮೦॥ ಶ್ವೇತದ್ವೀಪೇಮಯಾದೃಷ್ಟಾಮಾನವಾರಾಕ್ಷಸಾಧಿಪ । ಬಲವೀ
ರ್ಯ್ಯಸ್ಸದೋಪೇತಾನ್ಯಾದೃಶಾಂಸ್ತ್ವಮಿಹೇಚ್ಛಸಿ ॥೧೮೧॥ ನಾರದಸ್ಯವಚಃಶ್ರುತ್ವಾರಾವಣಃಪ್ರತ್ಯುವಾಚಹ । ಕಥಂನಾರ
ದಜಾಯಂತೆತಸ್ಮಿನ್ದ್ವೀಪೇಮಹಾಬಲಾಃ ॥೧೮೨॥ ಶ್ವೇತದ್ವೀಪೇಕಥಂವಾಸಃಪ್ರಾಪ್ತಸ್ತೈಸ್ತುಮಹಾತ್ಮಭಿಃ । ಏತನ್ಮೇಸರ್ವ
ಮಾಖ್ಯಾಹಿಪ್ರಭೋನಾರದತತ್ತ್ವತಃ ॥೧೮೩॥ ತ್ವಯಾದೃಷ್ಟಂಜಗತ್ಕೃತ್ಸ್ನಂಹಸ್ತಾಮಲಕವತ್ಸದಾ । ರಾವಣಸ್ಯವಚಃ
ಶ್ರುತ್ವಾನಾರದಃಪ್ರತ್ಯುವಾಚಹ ॥೧೮೪॥ ಅನನ್ಯಮಾನಸಾನಿತ್ಯಂನಾರಾಯಣಪರಾಯಣಾಃ । ತದಾರಾಧನಸಕ್ತಾಶ್ಚ
ತಚ್ಚಿತ್ತಾಸ್ತತ್ಪರಾಯಣಾಃ ॥೧೮೫॥ ಏಕಾಂತಭಾವಾನುಗತಾಸ್ತೇನರಾರಾಕ್ಷಸಾಧಿಪ । ತಚ್ಚಿತ್ತಾಸ್ತದ್ಗತಪ್ರಾಣಾನರಾ
ರಾವಣತೇಸದಾ ॥೧೮೬॥ ಶ್ವೇತದ್ವೀಪೇತುಯೈರ್ವಾಸಃಆರ್ಜಿತಸ್ತುಮಹಾತ್ಮಭಿಃ । ಯೇಹತಾಲೋಕನಾಥೇನಶಾರ್ಙ್ಗಮಾಯ
ಮ್ಯಸಂಯುಗೇ ॥೧೮೭॥ ಚಕ್ರಾಯುಧೇನದೇವೇನತೇಷಾಂವಾಸಸ್ತ್ರಿವಿಷ್ಟಪೇ । ನಹಿಯಜ್ಞಫಲೈಸ್ತಾತನತಪೋಭಿರ್ನಸಂಯಮೈಃ ॥

---

ಎಲೈ ರಾಕ್ಷಸನಾಥನೇ, ತ್ವಂ-ನೀನು, ಇಹ-ಈಗ, ಬಲವೀರ್ಯೈಃ-ದೇಹತ್ರಾಣದಿಂದಲೂ ಪರಾಕ್ರಮದಿಂದಲೂ, ಸದಾ ನಿರಂತರವೂ, ಉಪೇತಾನ್-ಕೂಡಿ
ಕೊಂಡಿರುವ, ಯಾದೃಶಾನ್-ಯಂಥಾವರನ್ನು, ಇಚ್ಛಸಿ-ಅಪೇಕ್ಷಿಸುತ್ತೀಯೋ ॥೧೮೧॥ ನಾರದಸ್ಯ-ನಾರದಋಷಿಯ, ವಚಃ-ವಚನವನ್ನು, ಶ್ರುತ್ವಾ-
ಕೇಳಿ, ಪ್ರತ್ಯುವಾಚಹ-ಪ್ರತ್ಯುತ್ತರ ಕೊಟ್ಟನು, ಹೇ ನಾರದ ಎಲೈನಾರದಋಷಿಯೆ, ತಸ್ಮಿನ್ದ್ವೀಪೇ- ಆ ಶ್ವೇತದ್ವೀಪದಲ್ಲಿ, ಮಹಾಬಲಾಃ- ಮಹಾ ಬಲಿ
ಷ್ಠರು, ಕಥಂಜಾಯಂತೆ-ಹ್ಯಾಗೆ ಹುಟ್ಟುತ್ತಾರೇ, ಶ್ವೇತದ್ವೀಪೇ-ಶ್ವೇತದ್ವೀಪದಲ್ಲಿ, ಮಹಾತ್ಮಭಿಃ-ಮಹಾ ಶರೀರಧಾರಿಗಳಾದ, ತೈಃ- ಆ ಮಾನವರಿಂದ, ವಾ
ಸಃ-ನಿವಾಸವು, ಕಥಂಪ್ರಾಪ್ತಃ-ಹ್ಯಾಗೆ ಹೊಂದಲ್ಪಟ್ಟಿತು, ಹೇಪ್ರಭೋ-ಎಲೈ ಸಮರ್ಥನಾದವನೇ, ಹೇನಾರದ-ಎಲೈ ನಾರದಋಷಿಯೇ, ಮೇ-ನನಗೆ, ಏ
ತತ್ಸರ್ವಂ-ಈ ಸಮಸ್ತ ವೃತ್ತಾಂತವನ್ನು, ತತ್ತ್ವತಃ-ಯಥಾರ್ಥವಾಗಿ, ಆಖ್ಯಾಹಿ-ಹೇಳು ॥೧೮೩॥ ಕೃತ್ಸ್ನಂ-ಸಮಸ್ತವಾದ, ಜಗತ್- ಲೋಕವು,
ತ್ವಯಾ-ನಿನ್ನಿಂದ, ಹಸ್ತಾಮಲಕವತ್-ಕರತಲಾಮಲಕವಾಗಿ, ಸದಾ-ನಿರಂತರವು, ದೃಷ್ಟಂ-ನೋಡಲ್ಪಟ್ಟಿದೆ, ರಾವಣಸ್ಯ-ರಾವಣನ, ವಚಃ- ವಾಕ್ಯ
ವನ್ನು, ಶ್ರುತ್ವಾ-ಕೇಳಿ, ನಾರದಃ-ನಾರದಋಷಿಯು, ಪ್ರತ್ಯುವಾಚಹ-ಪ್ರತ್ಯುತ್ತರ ಕೊಟ್ಟನು ॥೧೮೪॥ ಹೇ ರಾಕ್ಷಸಾಧಿಪ-ಎಲೈ ರಾಕ್ಷಸಾಧಿಪತಿಯೇ,
ತೇನರಾಃ- ಆ ಮನುಷ್ಯರು, ನಿತ್ಯಂ-ನಿರಂತರವು, ಅನನ್ಯಮಾನಸಾಃ-ಇತರಮನಸ್ಕರಲ್ಲದೇ ಇರುವರಾಗಿ, ನಾರಾಯಣಪರಾಯಣಾಃ-ನಾರಾಯಣನಲ್ಲಿ
ಆಸಕ್ತರಾಗಿ, ತದಾರಾಧನಸಕ್ತಾಶ್ಚ-ಭಗವದಾರಾಧನದಲ್ಲಿ ತತ್ಪರರಾಗಿ, ತಚ್ಚಿತ್ತಾಃ-ಆ ನಾರಾಯಣನಲ್ಲಿ ಮನಸ್ಸುಳ್ಳವರಾದಕಾರಣ, ತತ್ಪರಾಯಣಾಃ-
ತದೇಕಾಯತ್ತಚಿತ್ತರಾಗಿ ॥೧೮೫॥ ಏಕಾಂತಭಾವಾನುಗತಾಃ-ಏಕಾಂತಭಾವ-ಪರಮೈಕಾಂತವನ್ನು, ಅನುಗತಾಃ-ಹೊಂದಿರುತ್ತಾರೇ, ಹೇರಾವಣ-ಎಲೈ
ರಾವಣನೇ, ತೇನರಾಃ-ಆ ಮನುಷ್ಯರು, ಸದಾ-ನಿರಂತರವು, ತಚ್ಚಿತ್ತಾಃ-ಆ ನಾರಾಯಣನಲ್ಲಿ ಚಿತ್ತಮುಳ್ಳವರಾಗಿ, ತದ್ಗತಪ್ರಾಣಾಃ-ಆ ನಾರಾ
ಯಣನಲ್ಲಿ ಹೊಂದಿರುವ ಪ್ರಾಣಗಳುಳ್ಳವರಾಗಿದ್ಧಾರೇ, ಮಹಾತ್ಮಭಿಃ-ಮಹಾತ್ಮರಾದ, ಯೈಃ-ಯಾವ ಮನುಷ್ಯರಿಂದ, ಶ್ವೇತದ್ವೀಪೇ-ಶ್ವೇತದ್ವೀಪದಲ್ಲಿ, ವಾ
ಸಃ-ನಿವಾಸವು, ಆರ್ಜಿತಃ-ಸಂಪಾದಿಸಲ್ಪಟ್ಟಿತೋ ॥೧೮೬॥ ಲೋಕನಾಥೇನ-ಲೋಕಸ್ವಾಮಿಯಾದ, ಚಕ್ರಾಯುಧೇನ, ಚಕ್ರವೇ ಆಯುಧವಾಗುಳ್ಳ, ದೇ
ವೇನ-ನಾರಾಯಣನಿಂದ, ಸಂಯುಗೇ-ಕಾಳಗದಲ್ಲಿ, ಶಾರ್ಙ್ಗಂ-ಶಾರ್ಙ್ಗವೆಂಬ ಧನುಸ್ಸನ್ನು, ಆಯಮ್ಯ-ಬಿಗಿಸಿ, ಯೇ-ಯಾರು,ಹತಾಃ-ಹೊಡಿಯಲ್ಪಟ್ಟ
ರೋ, ತೇಷಾಂ-ಅವರಿಗೆ, ತ್ರಿವಿಷ್ಟಪೇ-ಸ್ವರ್ಗದಲ್ಲಿ, ವಾಸಃ-ವಾಸವು, ಯದ್ವಾ-ತ್ರಿವಿಷ್ಟಪೇ-ತೃತೀಯಲೋಕರೂಪವಾದ ವೈಕುಂಠದಲ್ಲಿ, ವಾಸಃ- ವಾಸ
ವು ॥೧೮೭॥ ಹೇತಾತ-ಎಲೈ ತಂದೆಯೇ-ಸಲೋಕಃ-ಆ ವೈಕುಂಠಲೋಕವು, ಯಜ್ಞಫಲೈಃ-ಯಜ್ಞಫಲಗಳಿಂದ, ನಪ್ರಾಪ್ಯತೇ-ಹೊಂದಲ್ಪಡುವದಿಲ್ಲಾ, ತ
ಪೋಭಿಃ-ತಪಸ್ಸುಗಳಿಂದ, ನಪ್ರಾಪ್ಯತೇ-ಹೊಂದಲ್ಪಡುವದಿಲ್ಲಾ, ಸಂಯಮೈಃ-ಯೋಗಾದಿಗಳಿಂದ, ನಪ್ರಾಪ್ಯತೇ-ಹೊಂದಲ್ಪಡುವದಿಲ್ಲ, ಮುಖ್ಯೈಃ- ಪ್ರಧಾನ
ಗಳಾದ, ದಾನಮುಖ್ಯೈಃ-ಷೋಡಶಮಹಾದಾನಗಳ ಫಲಗಳಿಂದಲೂ, ಸುಖಂ-ಸುಖವಾಗಿ, ನಪ್ರಾಪ್ಯತೇ-ಹೊಂದಲ್ಪಡುವದಿಲ್ಲಾ, ನಾರದಸ್ಯ-ನಾರದನ,ವಚಃ-

---

ರಿಘಾಯುಧದೋಪಾದದಲ್ಲಿರುವ ಬಾಹುಗಳುಳ್ಳವರಾಗಿಯೂ, ಇರುವರು ॥೧೮೦॥ ಎಲೈ ರಾಕ್ಷಸೇಂದ್ರನೇ ಬಲವೀರ್ಯದಿಂ
ಕೂಡಿದವರಾದ, ಯಂಥಾ ಪುರುಷರಂ ವೀಕ್ಷಿಸಲಿಚ್ಛಿಸುವಿಯೋ, ಅಂಥಾ ಪುರುಷರು ಆಶ್ವೇತದ್ವೀಪದಲ್ಲಿ ನನ್ನಿಂದ ಕಾ
ಣಲ್ಪಟ್ಟಹರೆಂದು ನಾರದಮುನಿಯಿಂದ ನುಡಿಯಲ್ಪಟ್ಟ ಆ ವಾಕ್ಯವಂ ಕೇಳಿ ದಶಕಂಠ ನಿಂತೆಂದುತ್ತರವಂ ಕೊಟ್ಟನು॥
ಎಲೈ ನಾರದನೇ ಆಶ್ವೇತದ್ವೀಪದಲ್ಲಿ, ಮಹಾಬಲವಂತರು ಹ್ಯಾಗೆ ಪುಟ್ಟುವರು, ಆ ಮಹಾತ್ಮರಿಂದ ಹ್ಯಾಗೆ ವಾಸ ಮಾ
ಡಲ್ಪಡುತ್ತದೇ, ಇದನ್ನೆಲ್ಲಾ ಎನಗೆ ವಿಸ್ತರಿಸಿಪೇಳು, ಈ ಜಗವೆಲ್ಲಾ ಹಸ್ತಾಮಲಕವಾಗಿ ಸರ್ವ ಕಾಲದಲ್ಲಿಯೂ,
ನೋಡಲ್ಪಡುತ್ತಿರುವದೆಂದು ಪೇಳುತ್ತಿರುವರಾವಣನ ವಾಕ್ಯವಂ ಕೇಳಿ ನಾರದನಿಂತೆಂದನು ॥೧೮೪॥ ಅಲ್ಲಿ ವಾಸಿಸುತ್ತಿರು
ವ ಜನರೆಲ್ಲರು, ಸರ್ವ ಕಾಲದಲ್ಲಿಯೂ, ಅನನ್ಯ ಚಿತ್ತರಾಗಿಯೂ, ನಾರಾಯಣ ಪರಾಯಣರಾಗಿಯೂ, ಆತನ ಆರಾ
ಧನದಲ್ಲಿಯೇ ಆಸಕ್ತರಾಗಿಯೂ, ತದೇಕಾಯುತ್ತ ಚಿತ್ತರಾಗಿಯೂ, ಏಕಾಂತ ಭಾವನೆಯಂ ಹೊಂದಿದವರಾಗಿಯೂ,
ಆತನಂ ಹೊಂದಿರುವ ಪ್ರಾಣಂಗಳುಳ್ಳವರಾಗಿಯೂ, ಇರುವರು ॥೧೮೬॥ ಲೋಕಸ್ವಾಮಿಯಾಗಿರ್ಪ ಚಕ್ರಾಯುಧ
ಧಾರಿಯಾದ ಆ ಶ್ರೀಮಹಾ ವಿಷ್ಣುವಿನಿಂದ ಆಹವದಲ್ಲಿ ಯಾರು ಕೊಲ್ಲಲ್ಪಟ್ಟರೋ ಅವರಿಗೆಲ್ಲಾ ತೃತೀಯ ಲೋ
ಕರೂಪವಾದ ವೈಕುಂಠದಲ್ಲಿ ವಾಸ ಉಂಟಾಗುವದು, ಆವಾಸವು ಯಜ್ಞಫಲಗಳಿಂದಲೂ, ತಪಸ್ಸುಗಳಿಂದಲೂ, ಸಂ

CC-0. Bhagavad Ramanuja National Research Institute, Melukote Collection.

ನಚವಾನಫತ್ರೈರಸ್ತ್ರೈಶ್ಶಕ್ಯಃ ಸಲೋಕಃಪ್ರಾಪ್ಯತೇಸುಖಮ್ । ನಾರದಸ್ಯವಚಃಶ್ರುತ್ವಾ ದಶಗ್ರೀವಸ್ಸುವಿಸ್ಮಿತಃ ॥೧೯॥ ಧ್ಯಾತ್ವಾತುಸುಚಿರಂಕಾಲಂತೇನಯೋತ್ಸ್ಯಾಮಿಸಂಯುಗೇ । ಆಪೃಚ್ಛ್ಯನಾರದಂಪ್ರಾಯಾಚ್ಛ್ವೇತದ್ವೀಪಾಯರಾವಣಃ ॥೨೦॥ ನಾರದೋಪಿಚಿರಂಧ್ಯಾತ್ವಾ ಕೌತೂಹಲಸಮನ್ವಿತಃ । ದಿದೃಕ್ಷುಃಪರಮಾಶ್ಚರ್ಯಂತತ್ರೈವತ್ವರಿತಂಯಯೌ ॥೨೧॥ ಸಹಿಂಕೇಶಿಕರೋವಿಪ್ರೋನಿತ್ಯಂಚಸಮರಪ್ರಿಯಃ । ರಾವಣೋಪಿಯಯೌತತ್ರರಾಕ್ಷಸೈಸ್ಸಹರಾಘವ ॥೨೨॥ ಮಹತಾಸಿಂಹನಾದೇನ ನಾದಯನ್ ಸದಿಶೋದಶ । ಗತೇತುನಾರದೇತತ್ರರಾವಣೋಪಿಮಹಾಯಶಾಃ ॥೨೩॥ ಪ್ರಾಪಶ್ವೇತಂಮಹಾದ್ವೀಪಂದುರ್ಲಭಂಯತ್ಸುರೈರಪಿ । ತೇಜಸಾತಸ್ಯದ್ವೀಪಸ್ಯರಾವಣಸ್ಯ ಬಲೀಯಸಃ ॥೨೪॥ ತತ್ತಸ್ಯಪುಷ್ಪಕಂಯಾನಂವಾತವೇಗಗತಂಹತಂ । ಅವಸ್ಥಾತುಂನಶಕ್ನೋತಿವಾತಾಹತಇವಾಂಬುದಃ ॥೨೫॥ ಸಚಿವಾರಾಕ್ಷಸೇಂದ್ರಸ್ಯದ್ವೀಪಮಾಸಾದ್ಯದುರ್ದಶಂ । ಅಬ್ರುವನ್ರಾವಣಂಭೀತಾರಾಕ್ಷಸಾಃಜಾತಸಾಧ್ವಸಾಃ ॥೨೬॥ ರಾಕ್ಷಸೇಂದ್ರವಯಂಮೂಢಾಭ್ರಷ್ಟಸಂಜ್ಞಾ ವಿಚೇತನಾಃ । ಅವ

---

ವಚನವನ್ನು, ಶ್ರುತ್ವಾ-ಕೇಳಿ, ದಶಗ್ರೀವಃ-ರಾವಣನು, ಸುವಿಸ್ಮಿತಃ-ಆಶ್ಚರ್ಯಯುಕ್ತನಾಗಿ, ಸುಚಿರಂಕಾಲಂ-ಬಹುಕಾಲವು, ಸಂಯುಗೇ, ಕಾಳಗದಲ್ಲಿ, ತೇನ-ಆ ನಾರಾಯಣನೊಡನೆ, ಯೋತ್ಸ್ಯಾಮಿ-ಯುದ್ಧಮಾಡುವೆನು, ಇತಿ-ಇಂತೆಂದು, ಧ್ಯಾತ್ವಾತು, ಧ್ಯಾನಮಾಡ್ಯಾದರೆ॥೧೯॥ ರಾವಣಃ-ರಾವಣನು, ನಾರದಂ-ನಾರದ ಋಷಿಯನ್ನು, ಆಪೃಚ್ಛ್ಯ-ಅಪ್ಪಣೆಕೇಳಿ, ಶ್ವೇತದ್ವೀಪಾಯ-ಶ್ವೇತದ್ವೀಪಕ್ಕೋಸ್ಕರ, ಪ್ರಾಯಾತ್-ಹೊರಟನು, ನಾರದೋಪಿ-ನಾರದನೂ ಕೂಡ, ಚಿರಂ-ಬಹುಕಾಲವು, ಧ್ಯಾತ್ವಾ-ಧ್ಯಾನಮಾಡಿ, ಕೌತೂಹಲಸಮನ್ವಿತಃ-ಅಪೇಕ್ಷೆಯಿಂದಯುಕ್ತನಾಗಿ, ತತ್ರೈವ-ಆವೈಕುಂಠದಲ್ಲಿಯೇ, ಪರಮಾಶ್ಚರ್ಯಂ-ಬಹಳಾಶ್ಚರ್ಯವನ್ನು, ದಿದೃಕ್ಷುಃ-ನೋಡಲಿಚ್ಛೆಯುಳ್ಳವನಾಗಿ, ಯಯೌ-ತೆರಳಿದನು॥೨೧॥ ಹೇರಾಘವ-ಎಲೈ ಶ್ರೀರಾಮನೇ, ಹಿ-ಯಾವಕಾರಣದದೆಶೆಯಿಂದ-ಸವಿಪ್ರಃ-ಆ ಬ್ರಹ್ಮಋಷಿಯಾದ ನಾರದನು, ಕೇಶಿಕರಃ-ಕೇಶಾಕೇಶಿ ಯುದ್ಧವನ್ನು ಮಾಡಿಸುವಸ್ವಭಾವನು, ನಿತ್ಯಂಚ-ನಿರಂತರವೂನು, ಸಮರಪ್ರಿಯಃ-ಕಾಳಗದಲ್ಲಿ ವಿಶ್ವಾಸಮುಳ್ಳವನಾದನೋ, ರಾವಣೋಪಿ-ರಾವಣಾಸುರನೂಕೂಡ, ತತ್ರ-ಆ ವೈಕುಂಠದಲ್ಲಿ, ರಾಕ್ಷಸೈಸ್ಸಹ-ರಾಕ್ಷಸರೊಡನೆ, ಮಹತಾ-ದೊಡ್ಡದಾದ, ಸಿಂಹನಾದೇನ-ಕೋಲಾಹಲಧ್ವನಿಯಿಂದ, ದಶದಿಶಃ-ಹತ್ತುದಿಕ್ಕುಗಳನ್ನು, ನಾದಯನ್-ಪ್ರತಿಧ್ವನಿಗೊಳಿಸುವನಾಗಿ, ಯಯೌ-ತೆರಳಿದನು॥ ನಾರದೇ-ನಾರದಋಷಿಯು, ತತ್ರ-ಆ ಶ್ವೇತದ್ವೀಪದಲ್ಲಿ, ಗತೇತು-ಹೋದಂಥಾವನಾಗತಿರಲಿಕಾಗಿ, ಯತ್-ಯಾವಶ್ವೇತದ್ವೀಪವು, ಸುರೈರಪಿ-ದೇವತೆಗಳಿಂದಲೂನು, ದುರ್ಲಭಂ-ಹೊಂದಲಸಾಧ್ಯವೋ, ತತ್-ಅಂಥಾ, ಶ್ವೇತಂ-ಮಹಾದ್ವೀಪಂ-ಶ್ವೇತದ್ವೀಪವನ್ನು, ಮಹಾಯಶಾಃ - ಮಹಾಕೀರ್ತಿವಂತನಾದ, ರಾವಣೋಪಿ-ರಾವಣನೂಕೂಡ, ಪ್ರಾಪ-ಹೊಂದಿದನು ॥೨೩॥ ಬಲೀಯಸಃ-ಬಲಿಷ್ಠನಾದ, ತಸ್ಯರಾವಣಸ್ಯ-ಆರಾವಣಸಂಬಂಧಿಯಾದ, ಯಾನಂ-ವಾಹನವಾದ, ತತ್ಪುಷ್ಪಕಂ-ಆ ಪುಷ್ಪಕವು, ವಾಯುವೇಗಗತಂ-ವಾಯುವೇಗವನ್ನು ಹೊಂದಿದಂಥಾದ್ದಾಗಿ, ತಸ್ಯದ್ವೀಪಸ್ಯ-ಆ ಶ್ವೇತದ್ವೀಪದ, ತೇಜಸಾ-ತೇಜಸ್ಸಿನಿಂದ, ಹತಂ-ಹೊಡಿಯಲ್ಪಟ್ಟಿತು ॥೨೪॥ ವಾತಾಹತಃ-ಘಾಳಿಯಿಂದ ಹೊಡೆಯಲ್ಪಟ್ಟ, ಅಂಬುದಇವ-ಮೇಘದಂತೆ, ಅವಸ್ಥಾತುಂ-ನಿಲ್ಲುವದಕ್ಕೋಸ್ಕರ, ನಶಕ್ನೋತಿ-ಸಮರ್ಥವಾಗದೆ ಹೋಯಿತು ॥೨೫॥ ರಾಕ್ಷಸೇಂದ್ರಸ್ಯ-ರಾಕ್ಷಸಾಧಿಪತಿಯಾದ ರಾವಣನ, ಸಚಿವಾಃ-ಮಂತ್ರಿಗಳಾದ, ರಾಕ್ಷಸಾಃ-ರಾಕ್ಷಸರು, ದುರ್ದಶಂ-ನೋಡಲಿಕೆ ಅಸಾಧ್ಯವಾದ, ದ್ವೀಪಂ-ಶ್ವೇತದ್ವೀಪವನ್ನು, ಆಸಾದ್ಯ-ಹೊಂದಿ, ಜಾತಸಾಧ್ವಸಾಃ-ಜಾತ-ಹುಟ್ಟಿದ, ಸಾಧ್ವಸಾಃ-ಭಯಕಂಪವುಳ್ಳವರಾದಕಾರಣ, ಭೀತಾಃ-ಭಯಗೊಂಡವರಾಗಿ, ರಾವಣಂ-ರಾವಣನಂ ಕುರಿತು, ಅಬ್ರುವನ್-ನುಡಿದರು ॥೨೬॥ ಹೇ. ರಾಕ್ಷಸೇಂ

---

ಯೋಗಾದಿಗಳಿಂದಲೂ, ದಾನ ಫಲಗಳಿಂದಲೂ, ದೊರೆಯುವದಲ್ಲಾ, ಎಂಬದಾಗಿ ನಾರದಮುನಿಯ ವಾಕ್ಯವಂಕೇಳಿ ದಶಕಂಠನು ಹರ್ಷಗೊಂಡು, ಸ್ವಲ್ಪಕಾಲವು ಚಿಂತಿಸಿ ಆತನೊಡನೆ ಸಂಗರವಂ ಗಯ್ಯುವೆನೆಂದು ನಾರದಮುನಿಗೆ ಹೇಳಿ ಆಶ್ವೇತ ದ್ವೀಪವಂಕುರಿತು ತೆರಳಿದನು ॥೨೦॥ ಆಮಹಾ ಮುನಿಯಾದರೇ, ಬಹುಕಾಲವು ಯೋಚಿಸಿ ಕೌತೂಹಲಯುಕ್ತನಾಗಿ ಆ ಆಶ್ಚರ್ಯವಂ ಕಾಣಲಿಚ್ಛೆಯುಳ್ಳವನಾಗಿ, ಆಶ್ವೇತದ್ವೀಪಕ್ಕೆತ್ವರಿತವಾಗಿಹೊರಟು ಹೋದನು॥೨೧ ಎಲೈ ರಘುನಂದನನೇ ಆ ಮಹರ್ಷಿಯಾದರೇ, ಕೇಶಾಕೇಶಿಎಂಬ ಯುದ್ಧವನ್ನು, ಮಾಡಿಸುತ್ತಿರುವನಾಗಿಯೂ, ಸದಾ ಕಾಲದಲ್ಲಿಯೂ, ಕಾಳಗದಲ್ಲಿಯೇ ವಿಶ್ವಾಸವುಳ್ಳವನಾಗಿಯೂ, ಇರುವನಷ್ಟೇ, ರಾವಣನಾದರೇ ರಾಕ್ಷಸರಿಂದೊಡಗೂಡಿ ಆ ವೈಕುಂಠದಲ್ಲಿ ಸಿಂಹನಾದಗಳಿಂದ ದಶ ದಿಕ್ಕುಗಳನ್ನು ಪ್ರತಿಧ್ವನಿ ಗೊಳಿಸುತ್ತಿರುವನಾಗಿ ತೆರಳಿದನು॥೨೨॥ ನಾರದ ಮಹಾಮುನಿಯು ಆಶ್ವೇತದ್ವೀಪವಂ ಕುರಿತು ತೆರಳಲೂ, ಮಹಾ ಕೀರ್ತಿವಂತನಾದ ಆರಾವಣನೂಕೂಡ ದೇವತೆಗಳಿಂದಲೂ ಕೂಡ ಹೊಂದಲಸಾಧ್ಯವಾದ ಆ ಮಹಾದ್ವೀಪವಂ ಹೊಕ್ಕನು, ಮಹಾಬಲವಂತನಾದ ಆ ರಾವಣನ ಪುಷ್ಪಕ ವಿಮಾನವು ವಾಯುವೇಗದಂತೆ ವೇಗವುಳ್ಳಂಥಾದ್ದಾದರೂ ಆ ದ್ವೀಪದ ತೇಜಸ್ಸಿನಿಂದ, ಹೊಡೆಯಲ್ಪಟ್ಟು ಬಿರುಗಾಳಿಯಿಂದ ಮೇಘಂಗಳು ಹ್ಯಾಗೆನಿಲ್ಲಲಾರವೋ ಹಾಗೆ ನಿಲ್ಲದೇಹೋಯಿತು ॥೨೫॥ ಆ ರಾಕ್ಷಸೇಂದ್ರನ ಮಂತ್ರಿಗಳಾದರೆ ನೋಡಲಸಾಧ್ಯವಾಗಿರುವ ಆ ದ್ವೀಪವಂಕಂಡು ಭೀತರಾಗಿ ರಾವಣನಂಕುರಿತಿಂತೆಂದರು॥೨೬॥ ೨

Funding: Tattva Heritage Foundation,Kolkata. Digitization: eGangotri.



ನ್ಸ್ಥಾತುಂನಶಕ್ಷ್ಯಾಮೋಯುದ್ಧಂಕರ್ತುಂಕಥಂಚನ ॥೯೭॥ ಏವಮುಕ್ತ್ವಾದುದ್ರುವುಸ್ತೇಸರ್ವಏವನಿಶಾಚರಾಃ । ರಾವಣೋಽಪಿಚತದ್ಯಾನಂಪುಷ್ಪಕಂಹೇಮಭೂಷಿತಂ । ವಿಸರ್ಜಯಾಮಾಸತದಾಸಹಭೃತ್ಯೈಃಕ್ಷಣದಾಚರೈಃ ॥೯೮॥ ಗತೇತುಪುಷ್ಪಕೇರಾಮರಾವಣೋರಾಕ್ಷಸಾಧಿಪಃ । ಕೃತ್ವಾರೂಪಂಮಹಾಭೀಮಂಸರ್ವರಾಕ್ಷಸವರ್ಜಿತಃ ॥೯೯॥ ಪ್ರವಿವೇಶತದಾತಸ್ಮಿನ್ ಶ್ವೇತದ್ವೀಪೇಸರಾಕ್ಷಸಃ । ಪ್ರವಿಶನ್ನೇವತತ್ರಾಶುನಾರೀಭಿರುಪಲಕ್ಷಿತಃ ॥ ಏಕಯಾಸುಸ್ಮಿತಂಕೃತ್ವಾಹಸ್ತೇಗೃಹ್ಯದಶಾನನಃ । ಪೃಷ್ಟಶ್ಚಾಗಮನಂಬ್ರೂಹಿಕಿಮರ್ಥಮಿಹಚಾಗತಃ ॥ ಕೋವಾತ್ವಂಕಸ್ಯವಾಪುತ್ರಃಕೇನವಾಪ್ರಹಿತೋವದ ॥೧೦೦॥ ಇತ್ಯುಕ್ತೋರಾವಣೋರಾಜನ್ ಕ್ರುದ್ಧೋವಚನಮಬ್ರವೀತ್ । ಅಹಂವಿಶ್ರವಸಃಪುತ್ರಃರಾವಣೋನಾಮರಾಕ್ಷಸಃ । ಯುದ್ಧಾರ್ಥಮಿಹಸಂಪ್ರಾಪ್ತಃನಚಪಶ್ಯಾಮಿಕಂಚನ ॥೧೦೨॥ ಏವಂಕಥಯತಸ್ತಸ್ಯರಾವಣಸ್ಯದುರಾತ್ಮನಃ । ಪ್ರಾಹಸಂಸ್ತತ್ರತಾಸ್ಸರ್ವಾಸುಸ್ವರಂಯುವತೀಜನಾಃ ॥೧೦೩॥ ತಾಸಾಮೇವತತಃಕ್ರುದ್ಧೋಬಾಲಯಾಗೃಹ್ಯಚಾನ್ಯಯಾ । ಭ್ರಾಮಿತಸ್ತುಸಖೀಮ

---

ದ್ರ–ಎಲೈ ರಾಕ್ಷಸಾಧಿಪತಿಯೇ, ವಯಂ–ನಾವುಗಳು, ಮೂಢಾಃ–ಮೋಹವನ್ನು ಹೊಂದಿಧೇವೆ, ಭ್ರಷ್ಟಸಂಜ್ಞಾಃ–ಭ್ರಷ್ಟ–ಹೋದಂಥಾ– ಸಂಜ್ಞಾಃ– ಪ್ರಜ್ಞೆಯುಳ್ಳವರಾಗಿಧೇವೆ, ವಿಚೇತನಾಃ–ಚೈತನ್ಯರಹಿತರಾಗಿ, ಅವಸ್ಥಾತುಂ–ನಿಲ್ಲೋದಕ್ಕೋಸ್ಕರ, ನಶಕ್ಷ್ಯಾಮಃ– ಸಮರ್ಥರಾಗಲಾರೆವು, ಯುದ್ಧಂ–ಯುದ್ಧವನ್ನು, ಕರ್ತುಂ–ಮಾಡುವದಕ್ಕೋಸುಗ, ಕಥಂಚನಶಕ್ಷ್ಯಾಮಃ–ಹ್ಯಾಗೆತಾನೆಸಮರ್ಥರಾಗುವವು ॥೯೭॥ ಏವಂ–ಈಪರಿಯಾಗಿ, ಉಕ್ತ್ವಾ–ಹೇಳಿ, ಸರ್ವಏವ–ಸಮಸ್ತರಾದ, ತೇನಿಶಾಚರಾಃ–ಆ ರಾಕ್ಷಸರು, ದುದ್ರುವುಃ–ಓಡಿದರು, ರಾವಣೋಽಪಿ–ರಾವಣನೂಕೂಡ, ಹೇಮಭೂಷಿತಂ– ಭಂಗಾರ ರೇಕುಗಳಿಂದ ಅಲಂಕೃತವಾದ, ಯಾನಂ–ವಾಹನವಾದ, ತತ್ಪುಷ್ಪಕಂಚ–ಆ ವಿಮಾನವನ್ನೂ ಕೂಡ, ತದಾ–ಆ ಕಾಲದಲ್ಲಿ, ಭೃತ್ಯೈಃ–ಕ್ಷಣದಾಚರೈಸ್ಸಹ–ಆ ರಾಕ್ಷಸರೊಡನೆ, ವಿಸರ್ಜಯಾಮಾಸ–ಬಿಟ್ಟುಬಿಟ್ಟನು ॥೯೮॥ ಹೇರಾಮ–ಎಲೈ ಶ್ರೀರಾಮನೇ, ಪುಷ್ಪಕೇ–ಪುಷ್ಪಕ ವಿಮಾನವು, ಗತೇತು–ಹೋಗುತಿರಲಾಗಿ, ರಾಕ್ಷಸಾಧಿಪಃ–ರಕ್ಕಸರಿಗೆಲ್ಲಾ ಅಧಿಪತಿಯಾದ, ರಾಕ್ಷಸಃ–ರಾಕ್ಷಸನಾದ, ಸರಾವಣಃ–ಆ ರಾವಣನು, ಸರ್ವರಾಕ್ಷಸವರ್ಜಿತಃ–ಸಮಸ್ತ ರಾಕ್ಷಸರಿಂದ ಬಿಬಿಡಲ್ಪಟ್ಟವನಾಗಿ, ಮಹಾಭೀಮಂ–ಮಹಾ ಭಯಂಕರವಾದ, ರೂಪಂ–ಆಕಾರವನ್ನು, ಕೃತ್ವಾ–ಮಾಡಿ, ತದಾ–ಆ ಕಾಲದಲ್ಲಿ, ತಸ್ಮಿನ್ ಶ್ವೇತದ್ವೀಪೇ–ಆಶ್ವೇತದ್ವೀಪದಲ್ಲಿ, ಪ್ರವಿವೇಶಹ–ಹೊಕ್ಕನು ॥೯೯॥ ದಶಾನನಃ–ರಾವಣನು, ತತ್ರ–ಆಶ್ವೇತದ್ವೀಪದಲ್ಲಿ, ಪ್ರವಿಶನ್ನೇವ–ಹೊಕ್ಕವನಾಗಿಯೇ, ಆಶು–ಶೀಘ್ರವಾಗಿ, ನಾರೀಭಿಃ–ಸ್ತ್ರೀಯರುಗಳಿಂದ, ಉಪಲಕ್ಷಿತಃ–ನೋಡಲ್ಪಟ್ಟನು, ಏಕಯಾ–ಒಬ್ಬಳಿಂದ–ಸುಸ್ಮಿತಂ–ಮಂದಸ್ಮಿತವನ್ನು, ಕೃತ್ವಾ–ಮಾಡಿ, ಹಸ್ತೇ– ಹಸ್ತದಲ್ಲಿ, ಗೃಹ್ಯ–ಹಿಡಿದುಕೊಂಡು, ಆಗಮನಂ–ಆಗಮನವನ್ನು, ಬ್ರೂಹಿ–ಹೇಳು, ಇಹಚ–ಇಲ್ಲಿಗೆ, ಕಿಮರ್ಥಂ–ಯಾತಕ್ಕೋಸ್ಕರ–ಆಗತಃ–ಬಂದವನಾದೆ, ಇತಿ–ಈಪರಿಯಾಗಿ, ಪೃಷ್ಟಶ್ಚ–ಕೇಳಲ್ಪಟ್ಟನು ‖ ೧೦೧ ‖ ತ್ವಂ–ನೀನು, ಕೋವಾ–ಯಾವನು, ಕಸ್ಯವಾ – ಯಾವನ, ಪುತ್ರಃ–ಪುತ್ರನು, ಕೇನವಾ– ಯಾರಿಂದತಾನೇ, ಪ್ರಹಿತಃ–ಕಳುಹಿಸಲ್ಪಟ್ಟೆ, ವದ–ಹೇಳು ॥೧೦೦॥ ಹೇ ರಾಜನ್–ಎಲೈಶ್ರೀರಾಮನೇ, ಇತಿ–ಈಪರಿಯಾಗಿ, ಉಕ್ತಃ – ಹೇಳಲ್ಪಟ್ಟ, ರಾವಣಃ–ರಾವಣನು, ಕೃದ್ಧಃ–ಕೋಪಿಷ್ಟನಾಗಿ, ಅಹಂ – ನಾನು, ವಿಶ್ರವಸಃ–ವಿಶ್ರವಸ್ಸಿಗೇ, ಪುತ್ರಃ–ಕುವರನಾದ, ರಾವಣೋನಾಮ – ರಾವಣನೆಂದು, ಪ್ರಸಿದ್ಧನಾದ, ರಾಕ್ಷಸಃ–ರಾಕ್ಷಸನು, ಯುದ್ಧಾರ್ಥಂ–ಯುದ್ಧಾರ್ಥವಾಗಿ, ಇಹ–ಇಲ್ಲಿಗೆ, ಸಂಪ್ರಾಪ್ತಃ–ಬಂದೆನು, ಇಹ–ಇಲ್ಲಿ, ಕಂಚನ– ಒಬ್ಬಾತನನ್ನು, ನಚಪಶ್ಯಾಮಿ–ಕಾಣೆನು ॥೧೦೨॥ ಏವಂ–ಈಪರಿಯಾಗಿ, ಕಥಯತಃ–ಮಾತನಾಡುತಿರುವ, ತಸ್ಯದುರಾತ್ಮನಃ–ಆದುಷ್ಟಬುದ್ಧಿಯುಳ್ಳ ರಾವಣಸ್ಯ–ರಾವಣನನ್ನು, ಅನಾದೃತ್ಯ–ಅನಾದರಣೆಮಾಡಿ, ತತಃ–ಬಳಿಕ, ಸರ್ವಾಃ–ಸಮಸ್ತರಾದ, ತೇಯುವತೀಜನಾಃ– ಆ ಹೆಂಗಸರೆಲ್ಲರೂ, ಪ್ರಹಸನ್–ನಕ್ಕರು॥ ತತಃ–ಬಳಿಕ, ಕೃದ್ಧಃ–ಕೋಪಿಷ್ಟನಾದ, ಸದಶಾನನಃ–ಆ ದಶಮುಖನು, ತಾಸಾಮೇವ–ಆ ಹೆಂಗಸರೊಳಗೇನೆ, ಬಾಲಯಾ–ಹುಡಿಗಿಯಾದ, ಅನ್ಯಯಾ–ಮ

---

ಲೈ ರಾಕ್ಷಸೇಂದ್ರನೇ ನಾವೆಲ್ಲರೂ ಮೂಢರಾಗಿಯೂ, ಮತಿ ಗೆಟ್ಟವರಾಗಿಯೂ, ಚೈತನ್ಯ ಹೀನರಾಗಿಯೂ, ಆಗಿಧೇವೆ ಆದಕಾರಣ ಯುದ್ಧಾರ್ಥವಾಗಿ ಹ್ಯಾಗಾದರೂ ನಿಲ್ಲಲಾರೆವು ಎಂದು ನುಡಿದು ಅವರೆಲ್ಲರೂ ಓಡಿಪೋಗಲೂ, ರಾವಣನು ಸಹ ಸುವರ್ಣಾಭರಣಗಳುಳ್ಳ ಆ ಪುಷ್ಪಕ ವಿಮಾನವನ್ನು ಮಂತ್ರಿಗಳನ್ನೂ ಸಹಾ ತೊರೆದು ಕಡುಭಯಂಕರವಾಗಿರುವ ರೂಪವಂ ತಾಳಿ ಏಕಾಂಗಿಯಾಗಿ ಆ ವೇಳೆಯಲ್ಲಿ ಆಶ್ವೇತದ್ವೀಪವಂ ಪ್ರವೇಶಿಸುತ್ತ ಸ್ತ್ರೀಯರಿಂದ ಕಾಣಲ್ಪಡಲೂ, ಒಬ್ಬಾನೊಬ್ಬ ಅಂಗನೆಯು ನಕ್ಕು ಆ ದಶಕಂಠನಂ ಹಸ್ತದಿಂ ಗ್ರಹಿಸಿ ಆಗಮನ ಕಾರ್ಯವಂ ಹೇಳು ಯಾತಕ್ಕೋಸುಗ ಇಲ್ಲಿಗೆ ಬಂದವನಾದೆ ? ನೀನ್ಯಾರು ? ಯಾರಮಗನು ? ಯಾರಿಂದ ಪ್ರೇರಿತನಾದೆ ? ಹೇಳೆಂದು ನುಡಿಯಲೂ, ಆ ರಾವಣನು ಕುಪಿತನಾಗಿಂತೆಂದನು ॥೧೦೦॥ ನಾನು ವಿಶ್ರವಸ್ಸಿನ ಕುಮಾರನು ರಾವಣಾಸುರನೆಂದು ನಾಮಧೇಯ ಮುಳ್ಳವನು ಯುದ್ಧಾರ್ಥಿಯಾಗಿಲ್ಲಿಗೆ ಬಂದೆ, ಯಾರನ್ನೂ ಕಾಣೆನು, ಎಂಬದಾಗಿ ನುಡಿಯುತ್ತಿರುವ ಆ ದುರಾತ್ಮನಾದ ರಾವಣನ ವಾಕ್ಯವಂಕೇಳಿ ಆ ಅಂಗನೆಯರೆಲ್ಲರು ಸುಸ್ವರವಾಗಿ ನಕ್ಕರು ॥೧೦೪॥ ಆ ಬಳಿಕ ಕುಪಿತನಾದ ದಶಕಂಠನು ಆ ಹೆಂಗಳಲ್ಲಿ ಮತ್ತೊಬ್ಬ ಹುಡುಗಿಯಿಂದ ಹಿಡಿದುಕೊಳ್ಳಲ್ಪಟ್ಟು, ತಿರುಗಿಸಲ್ಪಟ್ಟವನಾಗಿ, ಸಖೀ ಮಧ್ಯದಲ್ಲಿ, ಎತ್ತಿ ಹಾಕಲ್ಪಟ್ಟವನಾಗಲೂ, ಮತ್ತೊರ್ವಳು ದಶಶಿರಗಳುಳ್ಳದ್ದಾಗಿಯೂ, ಇಪ್ಪತ್ತು ಭುಜಗಳುಳ್ಳದ್ದಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಧ್ಯೇವಿಕ್ಷಿಪ್ತಸ್ಸದಶಾನನಃ॥೧೫॥ ಸಖೀಮನ್ಯಾಂಸಮಾಕೃಷ್ಯಪಶ್ಯತ್ವಂಕೀಟಮಾಗತಂ। ದಶಾಸ್ಯಂವಿಂಶತಿಭುಜಂಕೃಷ್ಣಾಂಜನಸಮಪ್ರಭಮ್ ।ಹಸ್ತಾದ್ಧಸ್ತಂಸಚಕ್ಷಿಪ್ತೋಭ್ರಾಮ್ಯತೇಶ್ರಮಲಾಲಸಃ॥೧೬॥ ಭ್ರಾಮ್ಯಮಾಣೇನಬಲಿನಾರಾಕ್ಷಸೇನಪಿಪಕ್ಷಿತಾ । ಪಾಣಾವೇಕಾಥಸಂದಷ್ಟಾರೋಷೇಣವನಿತಾಶುಭಾ ॥೧೭॥ ಮುಕ್ತಸ್ತಯಾಶುಭಃಕೀಟೋಧುನ್ವಂತ್ಯಾಹಸ್ತವೇದನಾತ್ ।ಗೃಹೀತ್ವಾನ್ಯಾತುಲಂಕೇಶಂಉತ್ಪಪಾತವಿಹಾಯಸಾ॥೧೮॥ತತಸ್ತಾಮಪಿಸಂಕ್ರುದ್ಧೋವಿದದಾರನಖೈರ್ಭೃಶಂ॥ ತಯಾಸಚವಿನಿರ್ಧೂತಸ್ಸಹಸೈವನಿಶಾಚರಃ ॥೧೯॥ ಪಪಾತಚಾಂಭಸೋಮಧ್ಯೇಸಾಗರಸ್ಯಭಯಾತುರಃ। ಪರ್ವತಸ್ಯೇವಶಿಖರಂಯಥಾವಜ್ರವಿದಾರಿತಮ್॥೨೦॥ ಪ್ರಾಪತತ್ಸಾಗರಸ್ಯೈವಜಲೇತಸ್ಥೌನಿಪಾತಿತಃ। ಏವಂಸರಾವಣೋರಾಮಶ್ವೇತದ್ವೀಪನಿವಾಸಿಭಿಃ ॥೨೧॥ಸ್ತ್ರೀಜನೈರ್ವಿನಿಗೃಹ್ಯಾಶುಭ್ರಾಮಿತಶ್ಚ ತತಸ್ತತಃ । ನಾರದೋಪಿಮಹಾತೇಜಾರಾವಣಂವೀಕ್ಷ್ಯಧರ್ಷಿತಂ॥ವಿಸ್ಮಯಂಸುಚಿರಂಗತ್ವಾಪ್ರಜಹಾಸನನರ್ತಚ।ತತಸ್ಸಸಾಗರಜಲಾಜ್ಜಲಕ್ಲಿನ್ನಶಿರೋರುಹಃ। ದಕ್ಷಿಣಂತೀರಮಾ

---

ತ್ತೊಬ್ಬಳಾದ ಹೆಂಣುಮಗಳಿಂದ, ಗೃಹ್ಯ-ಹಿಡುಕೊಂಡು, ಸಖೀಮಧ್ಯೇ-ಸಖೀಜನರ ಮಧ್ಯದಲ್ಲಿ, ಭ್ರಾಮಿತಃ-ತಿರಗಿಸಲ್ಪಟ್ಟವನಾಗಿ, ವಿಕ್ಷಿಪ್ತಃ- ಎತ್ತಿಹಾಕಲ್ಪಟ್ಟನು ॥೧೫॥ ಅನ್ಯಾಂ-ಮತ್ತೊಬ್ಬಳಾದ, ಸಖೀಂ-ಸಖಿಯನ್ನು, ಸಮಾಕೃಷ್ಯ-ಕರೆದು, ತ್ವಂ-ನೀನು, ದಶಾಸ್ಯಂ-ಹತ್ತು ಮುಖಗಳುಳ್ಳ, ವಿಂಶತಿಭುಜಂ-ಇಪ್ಪತ್ತು ಭುಜಗಳುಳ್ಳ, ಕೃಷ್ಣಾಂಜನಸಮಪ್ರಭಂ-ಕಪ್ಪಾಗಿರುವ ಕಾಡಿಗೆಗೆ ಸಮವಾದ ಕಾಂತಿಯುಳ್ಳ, ಆಗತಂ-ಬಂದಿರುವ, ಕೀಟಂ- ಹುಳವನ್ನು, ಪಶ್ಯ-ನೋಡು ॥೧೬॥ ಹಸ್ತಾತ್-ಹಸ್ತದ ಪಕೆಯಿಂದ, ಹಸ್ತಂ-ಮತ್ತೊಬ್ಬಳ ಹಸ್ತವಂ ಕುರಿತು, ಸಚ-ಆ ರಾವಣನೂ, ಕ್ಷಿಪ್ತಃ-ಎತ್ತಿಹಾಕಲ್ಪಟ್ಟವನಾಗಿ, ಶ್ರಮಲಾಲಸಃ-ಶ್ರಮೆಯಿಂದ ಬಡಲಿದವನಾಗಿ, ಭ್ರಾಮ್ಯತೇ-ತಿರುಗಿಸಲ್ಪಟ್ಟನು, ಭ್ರಾಮ್ಯಮಾಣೇನ-ತಿರಗಿಸಲ್ಪಡುತ್ತಿರುವ, ಪಿಪಕ್ಷಿತಾ-ಪಂಡಿತನಾದ, ಬಲಿನಾ-ಬಲವಂತನಾದ, ರಾಕ್ಷಸೇನ-ರಾವಣನಿಂದ, ರೋಷೇಣ-ಕೋಪದಿಂದ, ಅಥ-ಬಳಿಕ, ಶುಭಾ-ಶುಭಕರಳಾದ, ಏಕಾ-ವನಿತಾ-ಒಬ್ಬ ಹೆಂಗಸು, ಪಾಣೌ-ಹಸ್ತದಲ್ಲಿ, ಸಂದಷ್ಟಾ-ಕಚ್ಚಲ್ಪಟ್ಟಳು ॥೧೭॥ ಹಸ್ತವೇದನಾತ್-ಹಸ್ತ-ಕೈಯಲ್ಲಿ, ವೇದನಾತ್ - ಬಾಧೆಯಿಂದ, ಧೂನ್ವತ್ಯಾ-ಕೊಡಹುತಿರುವ, ತಯಾ-ಆ ಹೆಂಗಸಿನಿಂದ ಶುಭಃ-ಶುಭಕರವಾದ, ಕೀಟಃ-ಹುಳವು, ಮುಕ್ತಃ-ಬಿಡಲ್ಪಟ್ಟಿತು,ಅನ್ಯಾತು-ಮತ್ತೊಬ್ಬ ಹೆಂಗಸಾದರೋ, ಲಂಕೇಶಂ-ಲಂಕಾಧಿಪತಿಯಾದ ರಾವಣನನ್ನು, ಗೃಹೀತ್ವಾ-ಹಿಡಿದುಕೊಂಡು, ವಿಹಾಯಸಾ - ಅಂತರಿಕ್ಷಮಾರ್ಗದಿಂದ, ಉತ್ಪಪಾತ-ಹಾರಿದಳು ॥೧೮॥ ತತಃ-ಬಳಿಕ, ಸಂಕ್ರುದ್ಧಃ-ಕೋಪಿಷ್ಠನಾಗಿ, ಭೃಶಂ-ಬಹಳವಾಗಿ, ನಖೈಃ-ಉಗರುಗಳಿಂದ, ತಾಮಪಿ - ಅವಳನ್ನೂ ಕೂಡ, ವಿದದಾರ-ಸೀಳಿದನು, ನಿಶಾಚರಃ-ರಾಕ್ಷಸನಾದಸಃ -ಆ ರಾವಣನು, ತಯಾಚ, ಆ ಹೆಂಗಸಿನಿಂದಲೂ, ಸಹಸೈವ - ಜಾಗ್ರತೆಯಾಗಿಯೇ, ವಿನಿರ್ಧೂತಃ- ವಿಶೇಷವಾಗಿ, ಕೊಡಹಲ್ಪಟ್ಟವನಾದಕಾರಣ, ಭಯಾತುರಃ-ಭಯದಿಂದ ದೀನನಾಗಿ, ಸಾಗರಸ್ಯ-ಕಡಲಿನ, ಅಂಭಸಃ-ನೀರಿನ, ಮಧ್ಯೇ - ಮಧ್ಯದಲ್ಲಿ, ಪಪಾತಚ- ಬೀಳಲೂ ಬಿದ್ದನು ॥೧೯॥ ವಜ್ರವಿದಾರಿತಂ-ವಜ್ರಾಯುಧದಿಂದ ಸೀಳಲ್ಪಟ್ಟ, ಪರ್ವತಸ್ಯ-ಬೆಟ್ಟದ, ಶಿಖರಂಯಥಾ-ಶೃಂಗದಂತೆ, ಪ್ರಾಪತತ್-ಬಿದ್ದನು,ನಿಪಾತಿತಃ-ಬಿದ್ದವನಾಗಿ, ಸಾಗರಸ್ಯ-ಕಡಲಿನ, ಜಲೇಏವ-ನೀರಿನಲ್ಲೇ, ತಸ್ಥೌ-ಇದ್ದನು, ಹೆ ರಾಮ-ಎಲೈ ಶ್ರೀರಾಮನೇ ಏವಂ-ಈ ಪರಿಯಾಗಿ, ಸರಾವಣಃ-ಆ ರಾವಣನು, ಶ್ವೇತದ್ವೀಪನಿವಾಸಿಭಿಃ-ಶ್ವೇತದ್ವೀಪನಿವಾಸಿಗಳಾದ, ಸ್ತ್ರೀಜನೈಃ-ಸ್ತ್ರೀಜನರಿಂದ, ವಿನಿಗೃಹ್ಯ-ನಿಗ್ರಹಿಸಿ, ತತಸ್ತತಃ-ಅಲ್ಲಲ್ಲಿ, ಆಶು, ಜಾಗ್ರತೆಯಾಗಿ, ಭ್ರಾಮಿತಶ್ಚ -ತಿರಗಿಸಲ್ಪಟ್ಟನು ॥೨೦॥ ಮಹಾತೇಜಾಃ-ಮಹಾ ತೇಜಸ್ವಿಯಾದ, ನಾರದೋಪಿ-ನಾರದಋಷಿಯು, ರಾವಣಂ-ರಾವಣನನ್ನು, ಧರ್ಷಿತಂ-ತಿರಸ್ಕೃತನನ್ನಾಗಿ, ವೀಕ್ಷ್ಯ-ಕಂಡು, ಸುಚಿರಂ-ಬಹುಕಾಲವು, ವಿಸ್ಮಯಂ-ಆಶ್ಚರ್ಯವನ್ನು, ಗತ್ವಾ-ಹೊಂದಿ, ಪ್ರಜಹಾಸ-ನಕ್ಕನು, ನನರ್ತಚ-ನರ್ತನವನ್ನು ಮಾಡಿದನು ॥೨೧॥ ತತಃ-ಬಳಿಕ, ಸಃ-ಆ ರಾವಣನು, ಸಾಗರಜಲಾತ್-ಸಮುದ್ರದ ನೀರಿನದೆಸೆಯಿಂದ, ಜಲಕ್ಲಿನ್ನ

---

ಯೂ, ಕರೀ ಕಾಡಿಗೆಯ ಬೆಟ್ಟಕ್ಕೆ ಸಮಾದವಾದ ಪ್ರಭೆಯುಳ್ಳದ್ದಾಗಿಯೂ, ಆಗಿರುವ ಹುಳು ಬಂದಿಹುದು, ನೀಂ ನೋಡೆಂದು ರಾವಣನಂ ಗ್ರಹಿಸಿದಳು. ಒಬ್ಬರಕೈಯಿಂದ ಮತ್ತೊಬ್ಬರ ಕೈಯಲ್ಲಿ ಎತ್ತಿಹಾಕಲ್ಪಡುತ್ತಾ ಶ್ರಮೆಯಿಂದ ಬಳಲಿದವನಾಗಿ ತಿರುಗಿಸಲ್ಪಡುತಿದ್ದನು ॥೧೬॥ ಈ ಪರಿಯಾಗಿ ತಿರುಗಿಸಲ್ಪಡುತಿರುವ ಬಲವಂತನಾದ, ಮಹಾಪಂಡಿತನಾದ ಆ ರಾವಣನೆಂಬ ಕೀಟದಿಂದ ಒಬ್ಬ ಹೆಂಗಸು ಹಸ್ತದಲ್ಲಿ ಕಚ್ಚಲ್ಪಟ್ಟವಳಾಗಿ, ಕೈಯ ನೋವಿನಿಂದ ಆ ಹುಳುವಂ ಬಿಡಲೂ, ಮತ್ತೋರ್ವ ವನಿತೆಯು ಲಂಕೇಶ್ವರನಾದ,ದಶಕಂಠನಂ ಪರಿಗ್ರಹಿಸಿ ಗಗನಮಾರ್ಗದಲ್ಲಿ ಹಾರಿದಳು ॥೧೮॥ ಸಮನಂತರದಲ್ಲಿ ದಶಕಂಧರನು ಸಂಕ್ರುದ್ಧನಾಗಿ ಉಗುರುಗಳಿಂದ ಪರಚಿದವನಾಗಲೂ, ಆ ಬಾಲಕಿಯಿಂದ ತ್ವರಿತವಾಗಿ ಕೊಡಹಲ್ಪಟ್ಟು ಭೀತಿಯಿಂದ ಆತುರನಾಗಿ, ವಜ್ರಾಯುಧದಿಂದ ಸೀಳಲ್ಪಟ್ಟ ಬೆಟ್ಟದಶಿಖರದಂತೆ ಸಮುದ್ರೋದಕ ಮಧ್ಯದಲ್ಲಿ ಬಿದ್ದುಹೋಗಿ ನೀರಿನಲ್ಲಿಯೇನಿಂತುಕೊಂಡನು ॥೧೯॥ ಎಲೈ ರಘುನಂದನನೆ ! ಆರಾವಣನು ಈ ಪರಿಯಾಗಿ, ಶ್ವೇತದ್ವೀಪ ವಾಸಿಗಳಾದ ಸ್ತ್ರೀಯರಿಂದ ಗ್ರಹಿಸಲ್ಪಟ್ಟು ಅಲ್ಲಲ್ಲಿ ತಿರುಗಿಸಲ್ಪಟ್ಟನು ॥೨೦॥ ಮಹಾ ತೇಜಸ್ವಿಯಾದ ನಾರದ ಮುನಿಯಾದರೆ ತಿರಸ್ಕೃತನಾದ ರಾವಣನಂ ಕಂಡು, ಮಹಾ ವಿಸ್ಮಯವನ್ನೈದಿ ನಗುತ್ತಾ ನರ್ತಿಸಿದನು॥೨೧॥ಆ ಬಳಿಕ ದಶಕಂಠನು ಜಲದಿಂದ ತೋಯಿಸಲ್ಪಟ್ಟ ಕಂಠಂಗಳುಳ್ಳವನಾಗಿ, ಸಮುದ್ರೋ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಾದ್ಯ ಚಿಂತಯಾಮಾಸ ವಿಸ್ಮಿತಃ । ಯೇ ಮಯಾ ನಿರ್ಜಿತಾ ಲೋಕಾನ್ ತೇಷು ಭಯಮಿಹಾದ್ಯ ಕಿಮ್ ॥೨೧೫॥ ಸ್ವಭಾವತೋಽಲ್ಪವೀರ್ಯಾ
ಣಾಂ ವಿರುದ್ಧಂ ಯೋಷಿತಾಮಿದಂ । ನೂನಮೇತಸ್ಯ ಲೋಕಸ್ಯ ಮಾನವಾಃ ಪ್ರಭವಿಷ್ಣವಃ ॥೨೧೬॥ ಸ್ತ್ರೀರೂಪವಿಗ್ರಹಧರಾ ಯಾ
ನ್ಮಮಾಚಷ್ಟ ನಾರದಃ । ಬಲವದ್ಭಿಸ್ತು ಸಂಧೇಯಮಿತಿ ಸಂಚಿಂತ್ಯ ನಿಶ್ಚಿತಮ್ । ಭೂಯಸ್ತಾಸಾಂ ಪ್ರವೃತ್ತ್ಯರ್ಥಂ ತದ್ವನಂ ಸಮ
ಲೋಡಯತ್ ॥೨೧೭॥ ಅಥಾಪಶ್ಯನ್ಮಹಾತ್ಮಾನಂ ಪಿತಾಮಹಸುತಂ ಪ್ರಭುಮ್ । ಸನತ್ಕುಮಾರಮಾಸೀನಂ ಸರ್ವಯೋಗಭೃ
ತಾಂ ವರಮ್ । ಜಾಜ್ವಲ್ಯಮಾನಂ ತಪಸಾ ಸಮಿದ್ಧಿರಿವ ಪಾವಕಂ ॥೨೧೯॥ ಅಪಶ್ಯದ್ದಕ್ಷಿಣೇ ಪಾರ್ಶ್ವೇ ವಿಚರಂತಂ ಗುಹಾಶ್ರಯಂ ।
ಸ ತಂ ದೃಷ್ಟ್ವಾ ತಪೋವೃದ್ಧಮಭಿವಾದ್ಯ ಕೃತಾಂಜಲಿಃ ॥೨೨೦॥ ವ್ರೀಡಿತಃ ಪರಿಪಪ್ರಚ್ಛ ಬ್ರಹ್ಮರ್ಷಿಂ ಸತ್ಯವಾದಿನಂ । ಭಗ
ವನ್ ಕೇನ ಲೋಕೋಽಯಂ ಕಲ್ಪಿತಸ್ಸುಮಹಾತ್ಮನಾ ॥೨೨೧॥ ಕೇವಾ ಲೋಕೇ ವಸಂತ್ಯಸ್ಮಿನ್ ಸರ್ವಜ್ಞಾನವತಾಂ ವರ । ಕಿಂಚ ತ್ವಂ

---

ಶಿರೋರುಹಃ-ನೀರಿನಿಂದ ನೆನಿಸಲ್ಪಟ್ಟ ಕೂದಲುಳ್ಳವನಾಗಿ, ದಕ್ಷಿಣಂತೀರಂ-ದಕ್ಷಿಣದಡವನ್ನು, ಆಸಾದ್ಯ-ಹೊಂದಿ-ವಿಸ್ಮಿತಃ-ಆಶ್ಚರ್ಯಯುಕ್ತನಾಗಿ, ಚಿಂ
ತಯಾಮಾಸ-ಆಲೋಚಿಸಿದನು ॥೨೧೪॥ ಯೇಲೋಕಾಃ-ಯಾವ ಲೋಕಗಳು, ಮಯಾ-ನನ್ನಿಂದ, ನಿರ್ಜಿತಾಃ-ಜಯಿಸಲ್ಪಟ್ಟವೋ, ತೇಷು-ಆ ಲೋಕಗ
ಳಲ್ಲಿ, ಈ ದೃಶಂ-ಇಥಾ, ಭಯಂ-ಭಯವು, ನ-ಇಲ್ಲಾ ॥೨೧೫॥ ಸ್ವಭಾವತಃ-ಸ್ವಭಾವದ ದೆಸೆಯಿಂದ, ಅಲ್ಪವೀರ್ಯಾಣಾಂ-ಸ್ವಲ್ಪ ಸಾಮರ್ಥ್ಯಮುಳ್ಳ
ಯೋಷಿತಾಂ-ಹೆಂಗಸುಗಳಿಗೆ, ಇದಂ-ಇದು, ವಿರುದ್ಧಂ-ವಿರುದ್ಧವು, ಏತಸ್ಯಲೋಕಸ್ಯ-ಈ ಲೋಕದಲ್ಲಿ, ಮಾನವಾಃ-ಮನುಷ್ಯರು, ಸ್ತ್ರೀರೂಪವಿಗ್ರಹ
ಧರಾಃ-ಸ್ತ್ರೀಯರುಗಳ ಆಕಾರವಾದ ಶರೀರವನ್ನು ಧರಿಸಿರುವರಾದಾಗ್ಯೂ, ಪ್ರಭವಿಷ್ಣವಃ- ಸಮರ್ಥರು, ನಾರದಃ- ನಾರದಋಷಿಯು, ಮಮ- ನನಿಗೆ,
ಯಾನ್-ಯಾವ ಮನುಷ್ಯರನ್ನು, ಆಚಷ್ಟ-ಹೇಳಿದನೋ-ತತ್-ಅದು, ನೂನಂ-ನಿಶ್ಚಯವು, ಬಲವದ್ಭಿಃ-ಬಲವಂತರೊಡನೆ, ಸಂಧೇಯಂ- ಸಂಧಿಮಾಡಿ
ಕೊಳ್ಳತಕ್ಕದ್ದು, ನಿಶ್ಚಿತಂ-ನಿಶ್ಚಯವು, ಇತಿ-ಇಂತೆಂದು, ಸಂಚಿಂತ್ಯ-ಆಲೋಚಿಸಿ,ಭೂಯಃ-ಮತ್ತು,ತಾಸಾಂ-ಆಸ್ತ್ರೀಯರುಗಳ,ಪ್ರವೃತ್ತ್ಯರ್ಥಂ-ವರ್ತಮಾ
ನತಿಳುಕೊಳ್ಳುವದಕ್ಕೋಸುಗ, ತದ್ವನಂ-ಆ ವನವನ್ನು, ಸಮಲೋಡಯತ್-ಕಲುಷವಾಗಿ ಮಾಡಿದನು ॥೨೧೭॥ ಅಥ-ಬಳಿಕ, ಮಹಾತ್ಮಾನಂ-ಮಹಾ
ತ್ಮನಾದ, ಪಿತಾಮಹಸುತಂ-ಬ್ರಹ್ಮಕುಮಾರನಾದ, ಪ್ರಭುಂ-ಸಮರ್ಥನಾದ ಆಸೀನಂ - ಕುಳಿತುಕೊಂಡಿರುವ, ಸರ್ವಯೋಗಭೃತಾಂ-ಸಮಸ್ತ ಲೌಕಿಕಾ
ಯೋಗಾದ್ಯನೇಕ ಯೋಗಗಳನ್ನು, ಮಾಡುತಿರುವರೊಳಗೆ, ವರಂ-ಶ್ರೇಷ್ಠನಾದ, ಸಮಿದ್ಭಿಃ-ಸಮಿತ್ತುಗಳಿಂದ, ಪಾವಕಮಿವ-ಅಗ್ನಿಯಂತೆ-ತಪಸಾ-ತಪ
ಸ್ಸಿನಿಂದ, ಜಾಜ್ವಲ್ಯಮಾನಂ-ಹೊಳೆಯುತಿರುವ, ಸನತ್ಕುಮಾರು-ಸನತ್ಕುಮಾರನನ್ನು,ಅಪಶ್ಯತ್-ಕಂಡನು॥೨೧೯॥ದಕ್ಷಿಣೇಪಾರ್ಶ್ವೇ-ದಕ್ಷಿಣಪಾರ್ಶ್ವದಲ್ಲಿ
ವಿಚರಂತಂ-ಸಂಚರಿಸುತಿರುವ,ಗುಹಾಶ್ರಯಂ-ಗುಹೆಗಳೆ ಆಶ್ರಯವಾಗುಳ್ಳ,ತಪೋವೃದ್ಧಂ-ತಪಸ್ಸಿನಿಂದ ವೃದ್ಧನಾದ,ತಂ-ಆಸನತ್ಕುಮಾರನನ್ನು,ಅಪಶ್ಯತ್-
ಕಂಡನು, ಸಃ-ಆ ರಾವಣನು, ಸತ್ಯವಾದಿನಂ-ಸತ್ಯವಾದಿಯಾದ,ತಂಬ್ರಹ್ಮರ್ಷಿಂ-ಆಬ್ರಹ್ಮರ್ಷಿಯಾದ ಸನತ್ಕುಮಾರನನ್ನು,ದೃಷ್ಟ್ವಾ-ಕಂಡು, ಅಭಿವಾ
ದ್ಯ-ನಮಸ್ಕರಿಸಿ, ಕೃತಾಂಜಲಿಃ-ಅಂಜಲಿಬದ್ಧನಾಗಿ, ವ್ರೀಳಿತಃ-ಸಂಜಾತನಾಚಿಕೆಯುಳ್ಳವನಾಗಿ, ಪರಿಪಪ್ರಚ್ಛ-ಕೇಳಿದನು ॥೨೨೦॥ಹೇಭಗವನ್- ಎಲೈ ಪೂ
ಜ್ಯನೇ, ಅಯಂಲೋಕಃ-ಈ ಲೋಕವು, ಸುಮಹಾತ್ಮನಾ-ಮಹಾತ್ಮನಾದ, ಕೇನ-ಯಾವನಿಂದ, ಕಲ್ಪಿತಃ-ನಿರ್ಮಿಸಲ್ಪಟ್ಟಿತು ॥೨೨೧॥ ಸರ್ವಜ್ಞಾನವತಾಂ- ಸ
ರ್ವಜ್ಞರೊಳಗೆ, ವರಂ-ಶ್ರೇಷ್ಠನಾದ, ಹೇ ಬ್ರಹ್ಮರ್ಷೇ-ಎಲೈ ಬ್ರಹ್ಮರ್ಷಿಯೇ, ಅಸ್ಮಿನ್ಲೋಕೇ-ಈ ಲೋಕದಲ್ಲಿ, ಕೇವಾ-ಯಾರುತಾನೇ-ವಸಂತಿ-ಇರುತ್ತಾರೆ,

---

ದಕದ ದೆಶೆಯಿಂದ ದಕ್ಷಿಣಧಡವಂಪೊಂದಿ, ವಿಸ್ಮಿತನಾಗಿ, ಯಾವಯಾವ ಲೋಕಂಗಳು ನನ್ನಿಂದ ಜಯಿಸಲ್ಪಟ್ಟವೋ,
ಅವುಗಳಲ್ಲಿ ಇಂತಾಭೀತಿ ಯುಂಟಾಗಲಿಲ್ಲಾ, ಎಂಬದಾಗಿ ಚಿಂತಿಸುತಿದ್ದನು ॥೨೧೫॥ ಸ್ವಭಾವದಿಂದಲ್ಪವೀರ್ಯವಂತ
ರಾದ, (ಅಂದರೆ ಅಬಲೆಯರೆಂದು ಪ್ರಸಿದ್ಧರಾದ) ಸ್ತ್ರೀಯರಿಗೆ ಇದು ವಿರುದ್ಧವಾದದ್ದು, ಈ ಲೋಕದ ಜನರು ಸ್ತ್ರೀ
ರೂಪವಂ ತಾಳಿದವರಾದರೂ ಮಹಾಸಮರ್ಥರಾಗಿರುವರು, ನಾರದ ಮಹಾಮುನಿಯು ನುಡಿದಿರುವವಾಕ್ಯವು ನಿಶ್ಚ
ಯವು, ಬಲವಂತರ ಸಂಗಡ ಸಂಧಿಯಂ ಮಾಡಿಕೊಳ್ಳಬೇಕು, ಇದು ನಿಶ್ಚಯವೆಂದು ಚಿಂತಿಸಿ, ಪುನಹಾ ಆ ಅಂಗನೆ
ಯರ ವರ್ತಮಾನವನ್ನರಿತು ಕೊಳ್ಳುವದಕ್ಕೋಸುಗ ಆ ವನವನ್ನು ಕಲುಷವಾಗಿ ಮಾಡಿದನು ॥೨೧೭॥ ಆ ಬಳಿಕ ದಶ
ಕಂಠನು ಮಹಾಮನಸ್ವಿಯಾಗಿಯೂ, ಸಮರ್ಥನಾಗಿಯೂ, ಯೋಗಿಗಳೊಳಗೆ ಉತ್ತಮನಾಗಿಯೂ, ಸಮಿತ್ತುಗಳಿಂ
ದ ಅಗ್ನಿಯು ಪ್ರಜ್ವಲಿಸುತೆರದಿ ತಪದಿಂದ ಕಂಗೊಳಿಸುತ್ತಿರುವನಾಗಿಯೂ, ಕಡಲಿನ ದಕ್ಷಿಣತೀರದಲ್ಲಿ ಸಂಚರಿಸು
ತಿರುವನಾಗಿಯೂ, ಗುಹೆಗಳೇ ಆಶ್ರಯವಾಗುಳ್ಳವನಾಗಿಯೂ,ಸತ್ಯವಾದ ವಚನವುಳ್ಳವನಾಗಿಯೂ, ಬ್ರಹ್ಮರ್ಷಿಯಾ
ಗಿಯೂ ಇರುವ, ಚತುರ್ಮುಖ ಬ್ರಹ್ಮಪುತ್ರನಾದ, ಸನತ್ಕುಮಾರ ಮುನಿಯಂ ವೀಕ್ಷಿಸಿ, ವಂದನೆಯಂ ಗೈದು ಅಂಜಲಿ
ಬದ್ಧನಾಗಿಂತೆಂದುನುಡಿದವನಾದನು ॥೨೨೦॥ ಎಲೈ ಪೂಜ್ಯನೆ! ಈಲೋಕವು ಯಾವ ಮಹಾತ್ಮನಿಂದ ಸೃಜಿಸಲ್ಪಟ್ಟಿತು?
ಈ ಜಗದಲ್ಲಿ ಸರ್ವಜ್ಞರ್ಯಾರು ನೀನು ಯಾವವಸ್ತುವಿನಂ ಧ್ಯಾನಿಸುತ್ತೀ, ಇದನ್ನೆಲ್ಲಾ ನನಿಗೆವಿಸ್ತರಿಸಿ ಪೇಳು, ನೀಂಸ
ರ್ವಜ್ಞನೆಂದು ನಾಂ ಕೇಳಿಬಲ್ಲೆನು, ಎಂಬಧಾಗಿ ದಶಕಂಠನಿಂದ ಕೇಳಲ್ಪಟ್ಟ ಮಹಾತೇಜಸ್ವಿಯಾದ ಸನತ್ಕುಮಾರ
ಮಹಾಮುನಿಯು ಆ ದಶಕಂಠನ ಮನೋಗತವಾದ ಅಭಿಪ್ರಾಯವೆಂನರಿತು, ನಸುನಗೆಯುಳ್ಳವನಾಗಿಂತೆಂದನು॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಧ್ಯಾಯಸೇಬ್ರಹ್ಮನ್ ಕಂಸಮಸುಸಮಾಧಿನಾ ॥೧೨॥ ಏತನ್ಮೇ ಬ್ರೂಹಿತತ್ಸರ್ವಂಸರ್ವಜ್ಞೋ ಹ್ಯಸಿಮೇಶ್ರುತಃ। ಏವಮುಕ್ತೋ ಮಹಾತೇಜಾವಿದಿತ್ವಾತಸ್ಯಹೃದ್ಗತಮ್ ॥೧೩॥ ಉವಾಚವಾಕ್ಯಂಪ್ರಹರ್ಸನ್ ಶ್ರೂಯತಾಮಿತಿಪುತ್ರಕ । ಯೋಹಿವೈಸರ್ವಮಿದಂಬಿಭರ್ತಿ ಸಚರಾಚರಮ್ ॥೧೪॥ ತ್ರೈಲೋಕ್ಯಂಸರ್ವಭೂತಾತ್ಮಾ ಯಸ್ಯೋತ್ಪತ್ತಿಂನವಿದ್ಮಹೇ। ಯಮಾಹುರ್ವೇದವಿದುಷಃಪುರುಷಂತಮಸಃಪರಮ್। ಯಸ್ಯನಾಭಿಭವೋಬ್ರಹ್ಮಾ ಪಿತಾಮಮಪಿತಾಮಹಃ। ಕೈಲಾಸನಿಲಯಶ್ಶ್ರೀಮಾನ್ ಹರಶ್ಚ ಕ್ರೋಧಸಂಭವಃ । ಯಂಸಮಾಶ್ರಿತ್ಯವಿಬುಧಾವಿಧಿನಾಹವಿರಧ್ವರೇ ॥೧೬॥ ಪಿಬಂತಿಚಾಮೃತಂಹೃಷ್ಟಾಃಪರಿಭೂಯದಿತೇಸ್ಸುತಾನ್ । ಯಸ್ಯಶ್ವಾಸಾನಿಲೋದ್ಭೂತಾಃಸ್ತ್ರಿಯಸ್ತ್ವಾಮಪರಾಜಿತಮ್ ॥೧೭॥ ಗೃಹೀತ್ವಾಸುಮಹಾವೇಗಾಶ್ಚಿಕ್ಷಿಪುಸ್ಸಾಗರಾಂಭಸಿ । ಯೇನದೈತ್ಯಾಮಹಾವೀರ್ಯಾದಾನವಾಶ್ಚ ಸನ್ನೈರುತಾಃ ॥೧೮॥ ನಿಹತಾಬಹುರೂಪೇಣಬಹವೋಬಾ

---

ಕಿಂಚ-ಯಾವ ವಸ್ತುವಿನಂ ಕುರಿತು, ಸುಸಮಾಧಿನಾ-ಸಮಾಧಿಯೋಗದದೆಶೆಯಿಂದ, ತ್ವಂ-ನೀನು,ಧ್ಯಾಯಸೇ-ಧ್ಯಾನಮಾಡುತ್ತೀ, ಮೇ-ಯನಗೆ, ವದ-ಹೇಳು ॥೧೨॥ ತದೇತತ್-ಅದು, ಸರ್ವಂ-ಸಮಸ್ತವನ್ನು, ಬ್ರೂಹಿ-ಹೇಳು, ಸರ್ವಜ್ಞಃ-ಸರ್ವಜ್ಞನಾಗಿ, ಮೇ-ನನ್ನಿಂದ, ಶ್ರುತಃ-ಕೇಳಲ್ಪಟ್ಟವನು, ಅಸಿಹಿ-ಆಗಿದ್ದೀಯಷ್ಟೆ, ಏವಂ- ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಮಹಾತೇಜಾಃ-ಮಹಾತೇಜೋವಂತನಾದ ಸನತ್ಕುಮಾರನು, ತಸ್ಯ-ಆ ರಾವಣನ, ಹೃದ್ಗತಂ-ಮನಸ್ಸಿನ ಅಭಿಪ್ರಾಯವನ್ನು, ವಿದಿತ್ವಾ-ತಿಳಿದು, ಪ್ರಹರ್ಸನ್-ನಗುವವನಾಗಿ, ಹೇಪುತ್ರಕ-ಎಲೋಮಗನೆ,ಶ್ರೂಯತಾಂ-ಕೇಳಲ್ಪಡಲಿ,ಇತಿ-ಇಂತೆಂದು, ವಾಕ್ಯಂ-ವಾಕ್ಯವನ್ನು, ಉವಾಚ-ಹೇಳಿದನು, ॥೧೩॥ ಯೋವೈ-ಯಾವನೇನಾದರೆ, ಸಚರಾಚರಂ - ಜಂಗಮಸ್ಥಾವರಗಳಿಂ ದೊಡಗೂಡಿದ, ಇದಂಸರ್ವಂ-ಸಮಸ್ತವಾದ, ತ್ರೈಲೋಕ್ಯಂ-ಲೋಕತ್ರಯವನ್ನು, ಬಿಭರ್ತ್ಯೇವ-ಭರಿಸಿದ್ದಾನೆಯೊ, ಯಃ-ಯಾವನು, ಸರ್ವಭೂತಾತ್ಮಾ-ಸರ್ವಭೂತಗಳಿಗೂ ಚೈತನ್ಯರೂಪನೊ, ಯಸ್ಯ-ಯಾವನಿಗೆ, ಉತ್ಪತ್ತಿಂ-ಉತ್ಪತ್ತಿಯನ್ನು, ನವಿದ್ಮಹೆ-ತಿಳಿಯಲಾರೆವೊ, ವೇದವಿದುಷಃ-ವೇದಜ್ಞರು, ಯಂಪುರುಷಂ-ಯಾವ ಪುರುಷನನ್ನು, ತಮಸಃ-ಪ್ರಕೃತಿಗಿಂತಲೂ, ಪರಂ-ಭಿನ್ನನಾಗಿ, ಆಹುಃ-ಹೇಳುವರೊ ॥೧೪॥ ಆದಿತ್ಯರೂಪಂ-ಸೂರ್ಯನ [ಸ್ವರೂಪವನ್ನಾಗಿಯೂ, ಅಜರಂ-ವಾರ್ಧಿಕ್ಯಾವಸ್ಥಾರಹಿತನನ್ನಾಗಿಯು, ಪರಮಾತ್ಮಾನಂ-ಪರಮಾತ್ಮನನ್ನಾಗಿಯೂ, ಈಶ್ವರಂ-ಜಗನ್ನಿಯಾಮಕನನ್ನಾಗಿಯು ಆಹುಃ-ಹೇಳುವರೋ, ಮಮ-ನನಗೆ, ಪಿತಾ-ತಂದೆಯಾದ, ಪಿತಾಮಹಃ-ಪಿತಾಮಹನೆಂದು ಪೆಸರುಳ್ಳ, ಬ್ರಹ್ಮಾ-ಚತುರ್ಮುಖಬ್ರಹ್ಮನು, ಯಸ್ಯ-ಯಾವ ಪುರುಷನ, ನಾಭಿಭವಃ-ನಾಭಿಪ್ರದೇಶದಿಂದ ಪುಟ್ಟಿದವನೋ॥೧೫॥ ಕೈಲಾಸನಿಲಯಃ-ಕೈಲಾಸವೇ ನಿವಾಸವಾಗುಳ್ಳ, ಶ್ರೀಮಾನ್-ಸಂಪದ್ಯುಕ್ತನಾದ, ಹರಶ್ಚ -ಶಿವನೂನು, ಕ್ರೋಧಸಂಭವಃ-ಕೋಪದದೆಶೆಯಿಂದ ಹುಟ್ಟಿದವನೋ, ವಿಬುಧಾಃ-ದೇವತೆಗಳು, ಯಂ-ಯಾವ ಪುರುಷನನ್ನು ಸಮಾಶ್ರಿತ್ಯ- ಆಶ್ರಯಿಸಿ, ವಿಧಿನಾ-ವಿಧಾಯಕಶಾಸ್ತ್ರದಿಂದ, ಅಧ್ವರೇ-ಯಜ್ಞದಲ್ಲಿ, ಹವಿಃ-ಹವಿರ್ದ್ರವ್ಯವನ್ನು, ಹೃಷ್ಟಾಃ- ಸಂತೋಷಯುಕ್ತರಾಗಿ, ದಿತೇಃ-ದಿತಿಯ, ಸುತಾನ್-ಕುವರರಾದ ದೈತ್ಯರನ್ನು, ಪರಿಭೂಯ-ತಿರಸ್ಕರಿಸಿ, ಅಮೃತಂಚ-ಅಮೃತವನ್ನು ಕೂಡ, ಪಿಬಂತಿ-ಪಾನಮಾಡುತ್ತಾರೋ ॥೧೬॥ ಯಸ್ಯ-ಯಾವಪುರುಷನ,ಶ್ವಾಸಾನಿಲೋದ್ಭೂತಾಃ-ನಿಟ್ಟುಸುರು ಘಾಳಿಯಿಂದ ಹುಟ್ಟಿದ, ಸ್ತ್ರಿಯಃ-ಸ್ತ್ರೀರುಗಳು-ಅಪರಾಜಿತಂ-ಯಲ್ಲೀ ಪರಾಜಯವಿಲ್ಲದಿರುವ, ತ್ವಾಂ-ನಿನ್ನನ್ನು, ಗೃಹೀತ್ವಾ-ಹಿಡಿದುಕೊಂಡು, ಸುಮಹಾವೇಗಾಃ-ಮಹಾ ವೇಗಶಾಲಿಗಳಾಗಿ, ಸಾಗರಾಂಭಸಿ-ಸಮುದ್ರೋದಕಗಳಲ್ಲಿ, ಚಿಕ್ಷಿಪುಃ-ಯುತ್ತಿಹಾಕಿದರೋ ॥೧೭॥ ಬಹುರೂಪೇಣ-ನಾನಾರೂಪಿಯಾದ, ಯೇನ-ಯಾವ ಮಹಾಪುರುಷನಿಂದ, ಮಹಾವೀರ್ಯಾಃ-ಮಹಾ ಸಾಮರ್ಥ್ಯವುಳ್ಳ, ದೈತ್ಯಾಃ-ದೈತ್ಯರುನ್ನು, ಸನ್ನೈರ್ಋತಾಃ-ನಿರುಋತರೆಂಬ ರಾಕ್ಷಸರಿಂದೊಡಗೂಡಿದ, ಬಹವಃ-ಅನೇಕಸಂಖ್ಯಾಕರಾದ,ಬಾಹುಶಾಲಿನಃ-ಭುಜಪರಾಕ್ರಮದಿಂದ ಒಪ್ಪುತಿರುವ, ದಾನವಾಶ್ಚ-ದಾನವರೂನು,ನಿಹತಾಃ-ಹೊಡೆಯಲ್ಪಟ್ಟರೋ, ಸುಮಹಾತ್ಮನಾ-ಮಹಾತ್ಮನಾದ, ಲೋಕನಾಥೇನ-ಲೋಕಸ್ವಾಮಿಯಾ

---

ಎಲೈ ಬಾಲಕನೆ ಕೇಳು, ಯಾವ ಪುರುಷನು ಚರಾಚರಾತ್ಮಕವಾದ ಈ ಪ್ರಪಂಚವನ್ನೆಲ್ಲಾ ಭರಿಸುತ್ತಿರುವನೋ, ಯಾವ ಮಹಾನುಭಾವನ ಉತ್ಪತ್ತಿಯನ್ನು ತಿಳಿಯಲಾರೆವೋ? ವೇದಜ್ಞರೆಲ್ಲರು ಯಾವ ಪುರುಷನನ್ನು ಪ್ರಕೃತಿಗಿಂತಲೂ ಭಿನ್ನನಾಗಿರುವನೆಂಬದಾಗಿಯೂ, ಸೂರ್ಯಸ್ವರೂಪನಾಗಿಯೂ, ಜರಾಮರಣವರ್ಜಿತನಾಗಿಯೂ, ಪರಮಾತ್ಮನಾಗಿಯೂ, ಜಗನ್ನಿಯಾಮಕನಾಗಿಯೂ, ಇರುವನೆಂದು ಹೇಳುತ್ತಿರುವರೋ? ನನ್ನ ಜನಕನಾದ ಸಾಕ್ಷಾಚ್ಚತುರ್ಮುಖನು ಯಾವ ಮಹಾನುಭಾವನನಾಭಿಯಲ್ಲಿ ಸಂಜನಿಸಿದನೋ? ಇದಲ್ಲದೆ ಕೈಲಾಸವಾಸಿಯಾದ ಮತ್ತೂ ಸಂಪದ್ಯುಕ್ತನಾದ ಶಂಕರನೂ ಸಹಾ ಯಾವಪುರುಷನಕೋಪದಿಂದ ಪುಟ್ಟಿದವನಾದನೋ? ಇದೂ ಅಲ್ಲದೆ ಸುರಲ್ಲರೆರು ಯಾವ ಹರಿಯನ್ನಾಶ್ರಯಿಸಿ ಯಾಗದಲ್ಲಿ ಅಮೃತಪಾಶನೆಯಂಗೈದು ಅಸುರರಂತಿರಸ್ಕರಿಸಿ ಕಡುಸಂತುಷ್ಟರಾಗಿರುವರೊ॥೧೬॥ ಇಷ್ಟು ಮಾತ್ರವಲ್ಲದೆ ಯಾವ ಮಹಾನುಭಾವನ ನಿಟ್ಟುಸುರಗಳಿಂದ ಪುಟ್ಟದ ಅಬಲೆಯರು ತಿರಸ್ಕರಿಸಲಸಾಧ್ಯನಾದ ನಿನ್ನಂ ಪಿಡಿದುಕೊಂಡು ಕಡು ವೇಗವುಳ್ಳವರಾಗಿ, ಲವಣಸಮುದ್ರದಲ್ಲಿ ಬಿಸಾಡಿದವರಾದರೋ? ಮತ್ತು ನಾನಾ ರೂಪಿಯಾದ ಯಾವ ಮಹಾ ಪುರುಷನಿಂದ ಕಡುಪರಾಕ್ರಮಿಗಳಾಗಿರ್ಪ ದೈತ್ಯ ದಾನವ ರಾಕ್ಷಸರೇ ಮೊದಲಾದ ಬಹುಮಂದಿಯು ನಿಹತರಾದರೋ? ಅಂಥಾ ಮಹಾತ್ಮನಾಗಿಯೂ, ಲೋಕಸ್ವಾಮಿಯಾಗಿಯೂ, ಮಹಾನುಭಾವನಾಗಿಯೂ ಇ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹುಶಾಲಿನಃ । ತೇನಾಯಂಲೋಕನಾಥೇನಕಲ್ಪಿತಸ್ಸುಮಹಾತ್ಮನಾ ॥೩೦॥ ಗೋವಿಂದೇನನಿವಾಸಾರ್ಥಂಲೋಕೋವ್ಯಸ್ಸುಮ
ಹಾತ್ಮನಾ । ಅರ್ಚಯಂತಿಜಗನ್ನಾಥಂನಾರಾಯಣಪರಾಯಣಾಃ॥೩೧॥ ಅದ್ವೇಷಾಸ್ಸರ್ವಭೂತೇಷುಮಹಾಯೋಗಬ
ಲಾಶ್ರಯಾಃ । ಯಜಂತಿಪಂಚಭಿರ್ಯಜ್ಞೈಸ್ಸತತಂಮಧುಸೂದನಮ್ ॥೩೨॥ ಏಕಾಂತಿನೋಮಹಾಸತ್ತ್ವಾವಸಂತಿಸುಸ
ಮಾಹಿತಾಃ । ಯಃಪುರಾಣೇಚವೇದೇಚಪಾಂಚರಾತ್ರೇಚಪಠ್ಯತೇ ॥೩೩॥ ಸಾಂಖ್ಯಯೋಗೇಚಮುನಿಭಿರ್ಧ್ಯಾಯತೇಚೇಜ್ಯತೆ
ಚಯಃ । ಮುನಿಭಿರ್ದೇವಸಂಘೈಶ್ಚ ಸ್ಥಾಪ್ಯತೇಭಗವಾನ್ ಹರಿಃ ॥೩೪॥ ಮಧುಕೈಟಭಯೋರ್ಹಂತಾಯಸ್ತಮನ್ವೇಷ್ಟು
ಮರ್ಹಸಿ । ಪಿತಾಮಹೋಪಿತಂದೇವಂನಚಜಾನಾತಿರಾವಣ ॥೩೫॥ ಯಸ್ತುನಿತ್ಯಂವಿಜಾನಾತಿಹರಿಂನಾರಾಯಣಂವಿ
ಭುಮ್ । ಜಗದಾಭರಣಂಪುಣ್ಯಂತಸ್ಯಮೋಕ್ಷೋನಸಂಶಯಃ ॥೩೬॥ ಏತಚ್ಛ್ರುತ್ವಾಮುನೇರ್ವಾಕ್ಯಂಪ್ರಸನ್ನೇನಾಂತ
ರಾತ್ಮನಾ । ಪುನರೇವತತೋರಕ್ಷಃಪಪ್ರಚ್ಛಮುನಿಪುಂಗವಮ್ ॥೩೭॥ ಕಥಂಚದೃಶ್ಯತೇದೇವಃಕಥಂಚಶ್ರೂಯತೇಭುವಿ।

---

ದ, ತೇನ-ಆ ಪುರುಷನಿಂದ, ಅಯಂಲೋಕಃ-ಈ ಲೋಕವು, ಕಲ್ಪಿತಃ-ನಿರ್ಮಿಸಲ್ಪಟ್ಟಿತು ॥೩೦॥ ಸುಮಹಾತ್ಮನಾ-ಮಹಾ ಮನಸ್ವಿಯಾದ, ಗೋವಿಂ
ದೇನ-ಗೋವಿಂದನಿಂದ, ನಿವಾಸಾರ್ಥಂ-ತಾನು ವಾಸಮಾಡುವದಕ್ಕೋಸ್ಕರ, ಲೋಕಃ-ಲೋಕವು, ಕಲ್ಪಿತಃ-ಕಲ್ಪಿಸಲ್ಪಟ್ಟಿತು, ನಾರಾಯಣಪರಾಯ
ಣಾಃ-ನಾರಾಯಣನಲ್ಲಿ ಭಕ್ತರಾದಂಥಾವರು, ಸರ್ವಭೂತೇಷು ಸರ್ವಭೂತಗಳಲ್ಲಿಯು, ಅದ್ವೇಷಾಃ-ದ್ವೇಷರಹಿತರಾದಂಥಾವರಾಗಿ, ಮಹಾಯೋಗಬಲಾಶ್ರ
ಯಾಃ-ಮಹತ್ತರವಾದ ಯೋಗಶಕ್ತಿಯನ್ನು ಆಶ್ರಯಿಸಿದಂಥಾವರಾಗಿ, ಜಗನ್ನಾಥಂ-ಲೋಕನಾಥನಾದ, ಮಧುಸೂದನಂ-ನಾರಾಯಣನನ್ನು, ಅರ್ಚ
ಯಂತಿ-ಪೂಜಿಸುತ್ತಾರೆ, ಸತತಂ-ನಿರಂತರವೂನು, ಪಂಚಭಿರ್ಯಜ್ಞೈಃ-ಪಂಚಮಹಾ ಯಜ್ಞಗಳಿಂದ-ಯಜಂತಿ-ಯಾಗಮಾಡುತ್ತಾರೇ ॥೩೨॥ ಮಹಾ
ಸತ್ತ್ವಾಃ-ಸರ್ವಗುಣಾಢ್ಯರಾದ, ಏಕಾಂತಿನಃ-ಏಕಾಂತಭಕ್ತರು, ಸುಸಮಾಹಿತಾಃ-ಯಾವ ಭಗವಂತನಲ್ಲಿ ಇರಿಸಲ್ಪಟ್ಟ ಚಿತ್ತಮುಳ್ಳವರಾಗಿ ವಸಂತಿ-ಇರು
ತ್ತಾರೋ; ಯಃ- ಯಾವ ಪುರುಷನು, ಪುರಾಣೇಚ-ಪುರಾಣದಲ್ಲಿಯು, ವೇದೇಚ-ವೇದದಲ್ಲಿಯು, ಪಾಂಚರಾತ್ರೇಚ-ಪಾಂಚರಾತ್ರಾಗಮದಲ್ಲಿಯು, ಪಠ್ಯತೇ-
ಹೇಳಲ್ಪಡುತ್ತಾನೋ॥೩೩॥ ಯಃ-ಯಾವ ಪುರುಷನು, ಸಾಂಖ್ಯಯೋಗೇಚ-ಸಾಂಖ್ಯಶಾಸ್ತ್ರದಲ್ಲಿಯೂ ಕೂಡ, ಮುನಿಭಿಃ-ಋಷಿಗಳಿಂದ, ಧ್ಯಾಯತೇ-
ಧ್ಯಾನಮಾಡಲ್ಪಡುತ್ತಾನೋ-ಇಜ್ಯತೇಚ-ಯಜ್ಞಮಾಡಲ್ಪಡುತ್ತಾನೋ, ಯಃ-ಯಾವ, ಭಗವಾನ್-ಪೂಜ್ಯನಾದ, ಹರಿಃ-ಶ್ರೀ ಮಹಾವಿಷ್ಣುವು, ದೇವ
ಸಂಘೈಶ್ಚ-ದೇವತಾತಂಡಗಳಿಂದಲೂ, ಮುನಿಭಿಃ- ಋಷಿಗಳಿಂದಲೂ, ಸ್ಥಾಪ್ಯತೇ-ಹೃದಯದಲ್ಲಿ ಧ್ಯಾನಮಾಡಲ್ಪಡುತ್ತಾನೋ, ಯಃ-ಯಾವ ಪುರುಷ
ನು, ಮಧುಕೈಟಭಯೋಃ-ಮಧುಕೈಟಭರೆಂಬ ರಾಕ್ಷಸರಿಗೆ, ಹಂತಾ-ಸಂಹಾರಕರ್ತನೋ, ತಂ-ಅಂಥಾವನಾದ ನಾರಾಯಣನನ್ನು, ಅನ್ವೇಷ್ಟುಂ-ಹುಡು
ಕುವದಕ್ಕೋಸ್ಕರ, ಅರ್ಹಸಿ, ಯೋಗ್ಯನಾಗು ॥೩೪॥ ಹೇ ರಾವಣ ಎಲೈ ರಾವಣನೇ, ಪಿತಾಮಹೋಪಿ-ಬ್ರಹ್ಮದೇವರೂಕೂಡ, ತಂದೇವಂ- ಆ ದೇ
ವರನ್ನು, ನಜಾನಾತಿ-ಅರಿಯನು ॥೩೫॥ ಯಸ್ತು-ಯಾವ ಪುರುಷನಾದರೇ, ನಿತ್ಯಂ-ನಿರಂತರವು, ವಿಭುಂ-ಲೋಕಸ್ವಾಮಿಯಾದ, ನಾರಾಯಣಂ-ಉ
ದಕವೇ ಆಧಾರವಾಗುಳ್ಳ, ಜಗದಾಭರಣಂ- ಜಗತ್ತಿಗೆ ಭೂಷಣಪ್ರಾಯನಾದ, ಪುಣ್ಯಂ-ಪುಣ್ಯಕರನಾದ, ಹರಿಂ- ಸರ್ವಪಾಪಪರಿಹಾರಕನಾದ ಶ್ರೀಮನ್ನಾ
ರಾಯಣನನ್ನು, ವಿಜಾನಾತಿ, ತಿಳಿಯುತ್ತಾನೋ, ತಸ್ಯ-ಅವನಿಗೆ, ಮೋಕ್ಷಃ-ಮುಕ್ತಿಯು, ಸಂಶಯಃ-ಸಂಶಯವು, ನ-ಇಲ್ಲಾ ॥೩೬॥ ತತಃ- ಬಳಿ
ಕ, ರಕ್ಷಃ-ರಾಕ್ಷಸನಾದ ರಾವಣನು, ಮುನೇಃ-ಸನತ್ಕುಮಾರನ, ಏತದ್ವಾಕ್ಯಂ-ಈ ಮಾತನ್ನು, ಶ್ರುತ್ವಾ-ಕೇಳಿ, ಪ್ರಸನ್ನೇನ-ನಿರ್ಮಲವಾದ, ಅಂತರಾ
ತ್ಮನಾ-ಮನಸ್ಸಿನಿಂದ, ಪುನರೇವ-ಮತ್ತೂ, ಮುನಿಪುಂಗವಂ-ಋಷಿಶ್ರೇಷ್ಠನಾದ ಸನತ್ಕುಮಾರನಂ ಕುರಿತು, ಪಪ್ರಚ್ಛ-ಕೇಳಿದನು ॥೩೭॥ ದೇವಃ-ಶ್ರೀ

---

ರುವ ಗೋವಿಂದನಿಂದ ಈ ಜಗವು ತಾನು ವಾಸಿಸುವದಕ್ಕೋಸುಗ ಸೃಜಿಸಲ್ಪಟ್ಟಿತು ॥೩೦॥ ಯಾವ ನಾರಾಯಣನ
ಲ್ಲಿ ಭಕ್ತಿಯುಳ್ಳವರೆಲ್ಲರು ಸರ್ವಭೂತಂಗಳಲ್ಲಿಯೂ ದ್ವೇಷವಿಲ್ಲದವರಾಗಿಯೂ, ಮಹತ್ತರವಾದ ಯೋಗಶಕ್ತಿಯ
ನ್ನಾಶ್ರಯಿಸಿದವರಾಗಿಯೂ, ಏಕಾಂತಭಕ್ತರಾಗಿಯೂ, ಕಡುಬಲಶಾಲಿಗಳಾಗಿಯೂ ಇರುವರಾಗಿ, ಲೋಕನಾಥನಾದ
ಮತ್ತೂ ಮಧ್ವಾಸುರ ಸಂಹಾರಕನಾದ ಭಗವಂತನನ್ನಾರಾಧಿಸುತ್ತಲು, ಸಂತತವು ಆತನನ್ನು ಧ್ಯೇಶಿಸಿ, ಪಂಚಮಹಾ
ಯಜ್ಞಂಗಳಿಂಗೈಯ್ಯುತ್ತಲೂ ಇರುವರಾಗಿ ಆ ಭಗವಂತನಲ್ಲಿಯೇ ಶಿಲುಕಿದ ಮನಮುಳ್ಳವರಾಗಿರುತ್ತಾರೋ?॥೩೨॥
ಮತ್ತೂ ಯಾವ ಮಹಾ ಪುರುಷನು ಪುರಾಣಂಗಳಲ್ಲಿಯೂ, ಪಾಂಚರಾತ್ರಗಳಲ್ಲಿಯೂ ಸಾಂಖ್ಯಯೋಗಂಗಳಲ್ಲಿಯೂ
ಸಹಾ ಪೇಳಲ್ಪಡುತಿರುವನೋ? ಇದೂಅಲ್ಲದೇ ಮುನಿಗಳಿಂದಲೂ, ದೇವಸಂಘಗಳಿಂದಲೂ ಸಹಾ ಧ್ಯಾನಿಸಲ್ಪಡುತ್ತ
ಲೂ, ಯಾಗ ಮಾಡಲ್ಪಡುತ್ತಲೂ, ಹೃದಯದಲ್ಲಿ ನಿಲ್ಲಿಸಲ್ಪಡುತ್ತಲೂ ಇರುವ ಯಾವ ಹರಿಯು ಮಧುಕೈಟಭರಂ ನಿ
ಗ್ರಹಿಸಿದವನಾಗಿರುವನೋ? ಅಂತಾ ಮಹಾ ಪುರುಷನಂ ಹುಡುಕುವಂಥಾವನಾಗು. ಎಲೈ ರಾವಣನೇ ! ಸಾಕ್ಷಾಚ್ಚ
ತುರ್ಮುಖನೂ ಸಹಾ ಆ ಭಗವಂತನನ್ನು ಅರಿಯಲಾರನು ॥೩೫॥ ಯಾವ ಪುರುಷನು ಲೋಕನಾಥನಾಗಿಯೂ, ಉ
ದಕವೇ ಆಧಾರವಾಗುಳ್ಳವನಾಗಿಯೂ, ಜಗತ್ತೆಲ್ಲಾ ಆಭರಣಪ್ರಾಯವಾದಿಯಾಗಿರುವನಾಗಿಯೂ, ಪುಣ್ಯಾಕರನಾಗಿಯೂ
ಸರ್ವ ಪಾಪ ಪರಿಹಾರಕನಾಗಿಯೂ ಇರುವ ಆ ಹರಿಯಂ ಧ್ಯಾನಿಸುತಿರುವನೊ ಅಂಥಾ ಮಹಾನುಭಾವನಿಗೆ ಮೋಕ್ಷ
ಮುಂಟಾಗುವದೇ ಹೊರ್ತು ಇತರರಿಗುಂಟಾಗಲಾರದು. ಈ ವಿಷಯದಲ್ಲಿ ಸಂಶಯವಿಲ್ಲ ಎಂಬದಾಗಿ ಸನತ್ಕುಮಾರ
ಮುನಿಯಿಂದ ಪೇಳಲ್ಪಟ್ಟವಾಕ್ಯವಂ ಕೇಳಿದ ಬಳಿಕ ದಶಕಂಠನು ನಿರ್ಮಲಚಿತ್ತಮುಳ್ಳವನಾಗಿ ಪುತ್ತಿಂತೆಂದನು॥೩೭॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಥಂಚಕ್ರೀಡತೇಲೋಕೇದ್ರಷ್ಟುಂವಾಶಕ್ಯತೇಕಥಮ್ ॥ ೨೩೮ ॥ ಕಿಯತ್ಕಾಲೇನವಾಬ್ರಹ್ಮನ್ ಲೋಕೋಯಂತಪಸಾಮಯಾ । ಶಕ್ಯಃಪ್ರವೇಷ್ಟುಂತದ್ಬ್ರೂಹಿಸರ್ವಂಹಿವಿದಿತಂತವ ॥ ೨೩೯ ॥ ಆಕರ್ಣ್ಯಸಸ್ಪೃಹಂತಸ್ಯವಾಕ್ಯಂವಾಕ್ಯವಿಶಾರದಃ । ಪ್ರತ್ಯುವಾಚಮುನಿರ್ಧೀಮಾನ್ ತತ್ಸರ್ವಮನುಪೂರ್ವಶಃ ॥ ೨೪೦ ॥ ಸಹಿಸರ್ವಗತೋದೇವಸ್ಸೂಕ್ಷ್ಮೋವ್ಯಕ್ತಸ್ಸನಾತನಃ । ಯೇನಸರ್ವಮಿದಂವ್ಯಾಪ್ತಂತ್ರೈಲೋಕ್ಯಂಸಚರಾಚರಮ್ ॥ ೨೪೧ ॥ ಸಭೂಮೌದಿವಿಪಾತಾಳೇಪರ್ವತೇಷುವನೇಷುಚ । ಸಾಗರೇಷುಚಸರ್ವೇಷುವಸತೀಹಸರಿತ್ಸುಚ ॥ ೨೪೨ ॥ ಅಹಶ್ಚರಾತ್ರಿಶ್ಚ ಉಭೇಚಸಂಧ್ಯೇದಿವಾಕರಶ್ಚೈವಯಮಶ್ಚ ಸೋಮಃ । ಸಏವ ಕಾಲೋವರುಣಸ್ಸಏವಸಬ್ರಹ್ಮರುದ್ರೇಂದ್ರಮುಖಾಸ್ಸಚಾಗ್ನಿಃ ॥ ೨೪೩ ॥ ಓಂಕಾರೋಭೂರ್ಭುವಸ್ಸ್ವಶ್ಚ ಗಾಯತ್ರೀಸಂಧ್ಯೈವಚ । ಧರಾಧರಧರೋದೇವಸ್ಸೋನಂತಇತಿವಿಶ್ರುತಃ ॥ ೨೪೪ ॥ ವಿದ್ಯೋತತಿಜ್ವಲತಿವರ್ಷತಿವಾತಿಪಾತಿಗರ್ಜತ್ಯುಪೈತಿತ

---

ಮಹಾವಿಷ್ಣುವು, ಕಥಂಚ–ಹ್ಯಾಗೆ, ದೃಶ್ಯತೇ–ಕಾಣಲ್ಪಡುತ್ತಾನೆ, ಭುವಿ–ಭೂಮಿಯಲ್ಲಿ, ಕಥಂಚ–ಹ್ಯಾಗೆ, ಶ್ರೂಯತೇ– ಕೇಳಲ್ಪಡುತ್ತಾನೆ, ಲೋಕೇ–ಲೋಕದಲ್ಲಿ, ಕಥಂಚ–ಹ್ಯಾಗೇ, ಕ್ರೀಡತೇ–ವಿಹರಿಸುತ್ತಾನೇ, ದ್ರಷ್ಟುಂವಾ–ನೋಡುವದಕ್ಕೋಸ್ಕರವೇ ಆಗಲೀ, ಕಥಂ–ಹ್ಯಾಗೆ, ಶಕ್ಯತೇ– ಸಾಧ್ಯನಾಗುತ್ತಾನೇ ॥ ೨೩೮ ॥ ಹೇ ಬ್ರಹ್ಮನ್–ಎಲೈ ಬ್ರಹ್ಮಋಷಿಯೇ; ಕಿಯತ್ಕಾಲೇನವಾ–ಎಷ್ಟು ಕಾಲದಿಂದಲೇ ಆಗಲೀ, ಅಯಂಲೋಕಃ–ಈ ವೈಕುಂಠಲೋಕವು, ಮಯಾ–ನನ್ನಿಂದ, ತಪಸಾ–ತಪಸ್ಸಿನಿಂದ, ಪ್ರವೇಷ್ಟುಂ–ಪ್ರವೇಶಮಾಡುವದಕ್ಕೋಸ್ಕರ, ಶಕ್ಯಃ–ಅರ್ಹವು, ಹಿ–ಯಾವಕಾರಣದ ದೆಸೆಯಿಂದ, ಸರ್ವಂ– ಸಮಸ್ತವೂ, ತವ–ನಿನಗೇ, ವಿದಿತಂ–ತಿಳದಿದ್ದಿಯೋ, ತತ್–ಆ ಕಾರಣದ ದೆಸೆಯಿಂದ, ಬ್ರೂಹಿ–ಹೇಳು ॥ ೨೩೯ ॥ ಧೀಮಾನ್–ಜ್ಞಾನಸಂಪನ್ನನಾದ, ವಾಕ್ಯವಿಶಾರದಃ–ಮಾತುಗಳಲ್ಲಿ ಸಮರ್ಥನಾದ, ಮುನಿಃ–ಸನತ್ಕುಮಾರಮುನಿಯು, ಸಸ್ಪೃಹಂ–ಅಪೇಕ್ಷೆಯಿಂದೊಡಗೂಡಿದ್ದ, ತಸ್ಯ–ಆ ರಾವಣನ, ವಾಕ್ಯಂ–ಮಾತನ್ನು–ಆಕರ್ಣ್ಯ–ಕೇಳಿ, ತತ್ಸರ್ವಂ–ಆ ಸಮಸ್ತವನ್ನು, ಅನುಪೂರ್ವಶಃ–ಕ್ರಮವಾಗಿ, ಪ್ರತ್ಯುವಾಚ–ಪ್ರತ್ಯುತ್ತರ ಕೊಟ್ಟನು ॥ ೨೪೦ ॥ ಸಃ–ಆ ಮಹಾಪುರುಷನು, ಸರ್ವಗತಃ–ಸರ್ವಾಂತರ್ಯಾಮಿಯಾದ, ದೇವಃ–ದೇವರು, ಸೂಕ್ಷ್ಮಃ–ಅಣುರೂಪನು, ಅವ್ಯಕ್ತಃ–ಬಾಹ್ಯದೃಷ್ಟಿಗೆ ಗೋಚರನಲ್ಲ, ಸನಾತನಃ–ಅನಾದಿಸಿದ್ಧನು, ಯೇನ– ಯಾವ ಪುರುಷನಿಂದ, ಸಚರಾಚರಂ – ಚರಾಚರಗಳಿಂದ ಕೂಡಿಕೊಂಡಿರುವ, ಸರ್ವಂ – ಸಮಸ್ತಮಾದ, ಇದಂ ತ್ರೈಲೋಕ್ಯಂ– ಈ ಲೋಕತ್ರಯವು, ವ್ಯಾಪ್ತಂ–ವ್ಯಾಪಿಸಲ್ಪಟ್ಟಿದ್ದಿಯೊ ॥ ೨೪೧ ॥ ಸಃ – ಆ ಪುರುಷನು, ಭೂಮೌ–ನೆಲದಲ್ಲಿ, ದಿವಿ–ಸ್ವರ್ಗದಲ್ಲಿ, ಪಾತಾಳೇ–ಪಾತಾಳದಲ್ಲಿ, ಪರ್ವತೇಷು–ಬೆಟ್ಟಗಳಲ್ಲಿ, ವನೇಷುಚ–ವನಗಳಲ್ಲಿಯು, ಸರ್ವೇಷು, ಸಮಸ್ತವಾದ, ಸಾಗರೇಷುಚ– ಸಮುದ್ರಗಳಲ್ಲಿಯೂ, ಸರಿತ್ಸುಚ–ನದಿಗಳಲ್ಲಿಯು, ಇಹ–ಈಗ, ವಸತಿ–ಇರುತ್ತಾನೆ, ಸಏವ–ಅವನೇ, ಅಹಶ್ಚ–ಹಗಲೂನು, ರಾತ್ರಿಶ್ಚ–ರಾತ್ರಿಯೂನು, ಉಭೇ–ಎರಡಾದ– ಸಂಧ್ಯೇಚ–ಸಂಧ್ಯಾಕಾಲಗಳೂನು, ದಿವಾಕರಶ್ಚ–ಸೂರ್ಯನೂನು, ಯಮಶ್ಚ–ಯಮನೂನು, ಸೋಮಶ್ಚ–ಚಂದ್ರನೂನು, ಸಏವ–ಆ ಪುರುಷನೇ, ಕಾಲಃ–ಕಾಲಸ್ವರೂಪನು, ವರುಣಶ್ಚ ವರುಣನು, ಸಃ–ಆ ಪುರುಷನೇ, ಬ್ರಹ್ಮರುದ್ರೇಂದ್ರಮುಖಾಃ–ಬ್ರಹ್ಮನೂ ರುದ್ರನೂ ಇಂದ್ರನೂ ಮೊದಲಾಗುಳ್ಳವರು, ಅಗ್ನಿಶ್ಚ–ಅಗ್ನಿಯೂನು ॥ ೨೪೩ ॥ ಸಃ– ಆ ಪುರುಷನು, ಓಂಕಾರಃ–ಓಂಕಾರಸ್ವರೂಪನು, ಭೂರ್ಭುವಸ್ಸ್ವಶ್ಚ–ಭೂಲೋಕಭುವರ್ಲೋಕ– ಸುವರ್ಲೋಕವೂನು, ಗಾಯತ್ರೀ–ಗಾಯತ್ರ್ಯಭಿಮಾನದೇವತೆಯೂನು, ಸಂಧ್ಯೈವಚ–ಸಂಧ್ಯಾದೇವತೆಯೂನು, ಸಃ–ಆ ಪುರುಷನು,ಧರಾಧರಧರಃ–ಬೆಟ್ಟಗಳಂ ಧರಿಸಿ

---

ಎಲೈ ಬ್ರಹ್ಮನಿಷ್ಠಾಪರನೇ! ನಾರಾಯಣ ಮೂರ್ತಿಯಾದ ಆ ಭಗವಂತನು ಹ್ಯಾಗೆ ಕಾಣಲ್ಪಡುತ್ತಾನೋ? ಈ ಧರಾತಲದಲ್ಲಿ ಆತನಂ ಕೇಳುವದು ಹ್ಯಾಗೋ? ಈ ಲೋಕದಲ್ಲಿ ಹ್ಯಾಗೆ ವಿಹರಿಸುತ್ತಿದ್ದಾನೋ? ಆ ಮಹಾನುಭಾವನಂ ವೀಕ್ಷಿಸುವದಕ್ಕಾಗಲೀ ಶ್ರವಣಿಸುವದಕ್ಕಾಗಲೀ ಹ್ಯಾಗೆ ಸಾಧ್ಯವಾಗುವದೋ? ಆ ಭಗವಂತನ ಲೋಕವು ನನಗೆ ಯಾವಾಗ ಲಭಿಸುವದೋ? ಯಾವ ತಪದಿಂದ ನಾನು ವೈಕುಂಠವಂ ಹೊಕ್ಕುವೆನೋ ಇದನ್ನೆಲ್ಲಾ ದಯಪಾಲಿಸಿ ಹೇಳು ನೀನಿದನ್ನೆಲ್ಲಾ ಅರಿತಿರುವಂಥಾವನಾಗಿದ್ದೀ ಎಂಬುದಾಗಿ ರಾವಣನಿಂದ ನುಡಿಯಲ್ಪಟ್ಟ ವಾಕ್ಯವಂ ಕೇಳಿ, ಸನತ್ಕುಮಾರ ಮುನಿಯು ಯಥಾಕ್ರಮವಾಗಿ ಅದನ್ನೆಲ್ಲಾ ವಿಸ್ತರಿಸಿ, ಹೇಳಿದವನಾದನು ॥ ೨೪೦ ॥ (ಅಂದೆಂತೆನೆ) ಆ ಮಹಾಪುರುಷನು ಸರ್ವಾಂತರ್ಯಾಮಿಯಾದ ಭಗವಂತನಾಗಿಯೂ, ಅಣುರೂಪಿಯಾಗಿಯೂ, ಬಾಹ್ಯದೃಷ್ಟಿಗೆ ಅಗೋಚರನಾಗಿಯೂ, ಅನಾದಿಸಿದ್ಧನಾಗಿಯೂ ಇರುವನಾಗಿ, ಚರಾಚರಾತ್ಮಕವಾದ ಈ ಜಗತ್ತ್ರಯಮಂ ವ್ಯಾಪಿಸಿಕೊಂಡು, ಭೂವ್ಯೋಮ ಪಾತಾಳ ಪರ್ವತ ವನಂಗಳಲ್ಲಿಯೂ, ಚತುಸ್ಸಮುದ್ರಂಗಳಲ್ಲಿಯೂ, ಗಂಗಾದಿ ನದಿಗಳಲ್ಲಿಯೂ ಸಹಾ ಈಗಲೂ ಇರುವಂಥಾವನಾಗಿದ್ದಾನೆ. ಇದಲ್ಲದೆ ಅಹೋರಾತ್ರಿಸ್ವರೂಪನಾಗಿಯೂ, ಉಭಯಾತ್ಮಕವಾದ ಸಂಧ್ಯಾರೂಪಿಯೂ ಆಗಿಯೂ, ಸೂರ್ಯ ಯಮ ಚಂದ್ರರ ರೂಪವಾಗಿ ಕಾಣುವಂಥಾವನಾಗಿಯೂ, ಕಾಲಸ್ವರೂಪನಾಗಿಯೂ, ವರುಣ ಬ್ರಹ್ಮ ಇಂದ್ರ ರುದ್ರರೇ ಮುಂತಾದವರ ರೂಪಂಗಳಂ ತಾಳಿದವನಾಗಿಯೂ, ಅಗ್ನಿಸ್ವರೂಪಿಯಾದಿಯೂ, ಓಂಕಾರಸ್ವರೂಪನಾಗಿಯೂ, ಭೂಲೋಕ ಭುವರ್ಲೋಕ ಸುವರ್ಲೋಕಂಗಳೆಂಬ ಲೋಕತ್ರಯಾತ್ಮಕನಾಗಿಯೂ, ಗಾಯತ್ರೀಸ್ವರೂಪನಾಗಿಯೂ, ಸಂಧ್ಯಾರೂಪನಾಗಿಯೂ, ಭೂಧರಧಾರಿಯಾಗಿಯೂ, ಅನಂತನೆಂದು ಪ್ರಸಿದ್ಧನಾಗಿಯೂ ಇ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪತೇದಹತೇಸಚೈವ । ಲೋಕಾನ್ ಸೃಜತ್ಯವತಿಸಂಹರತೇಸದೈವದೈತ್ಯಾನ್ ಸಏವದಹತೇಜಗತಿಪ್ರಸಹ್ಯ ॥೨೪೫॥ ನೇನಶಕ್ಯ ಸ್ಸುರೈರ್ದ್ರಷ್ಟುಂನಾಸುರೈರ್ನಚಪನ್ನಗೈಃ । ಪ್ರಸಾದಂಕುರುತೇಯಸ್ಯ ಸವೈತಂದ್ರಷ್ಟುಮರ್ಹತಿ ॥೨೪೬॥ ತದ್ಗತೈಸ್ತದ್ಗ ತಪ್ರಾಣೈಶ್ಶುಚಿಭಿಸ್ತತ್ಪರಾಯಣೈಃ । ಶಕ್ಯಃಪ್ರವೇಷ್ಟುಂಲೋಕೋಯಂಜ್ಞಾನನಿರ್ಧೂತಕಿಲ್ಬಿಷೈಃ ॥೨೪೭॥ ಏವಂವಿಧೈ ರಯಂಲೋಕಃಪ್ರಾಪ್ಯತೇಪುರುಷೋತ್ತಮೈಃ । ಅಕಾಮಕಾರಿಭಿರ್ದೇವೈರಕ್ರೋಧೈರ್ದಗ್ಧತಾಮಸೈಃ ॥೨೪೮॥ ಯಸ್ಸೈವ ಸುಮಹಾಕಾಯಃಪ್ರವಿಷ್ಟೋಲೋಕಮವ್ಯಯಮ್ । ಆಸ್ತೇತಥೈವಹರಿಣಾಕೃತಾತೇನಮಹಾಪುರೀ ॥೨೪೯॥ ಅಷ್ಟಾವಿಂಶೇ ಯುಗೇಪ್ರಾಪ್ತೇಮನೋರಸ್ಯವಿವಸ್ವತಃ । ವೈಷ್ಣವೀಂಮೂರ್ತಿಮಾವಿಶ್ಯಲೋಕಮೇನಂಪ್ರವೇಕ್ಷ್ಯಸಿ ॥೨೫೦॥ ನಾತಃಪರತ ರಂಶ್ರೋತುಂಮತ್ತೋವೈರಾಕ್ಷಸೇಶ್ವರ । ಉತ್ತಿಷ್ಠಗಚ್ಛಭದ್ರಂತೇಪ್ರಾಪ್ಸ್ಯಸೇಗತಿಮೀಪ್ಸಿತಾಮ್ ॥೨೫೧॥ ಏವಮುಕ್ತ

ರುವನು, ಅನಂತಇತಿ-ಅನಂತನೂಎಂದು, ವಿಶ್ರುತಃ-ಪ್ರಸಿದ್ಧನು, ಸಏವದೇವಃ- ಆ ದೇವರೇ, ವಿದ್ಯೋತತೇ-ಸ್ವಯಂಪ್ರಕಾಶನಾಗಿದ್ಧಾನೆ, ಜ್ವಲತಿ- ಪ್ರಜ್ವಲಿಸುತ್ತಾನೆ, ವರ್ಷತಿ-ವರ್ಷಿಸುತ್ತಾನೆ, ವಾತಿ-ಬೀಸುತ್ತಾನೆ, ಪಾತಿ-ರಕ್ಷಿಸುತ್ತಾನೆ, ಗರ್ಜತಿ-ಗರ್ಜನೆಮಾಡುತ್ತಾನೇ, ಉಪೈತಿ-ಹೊಂದಿರುತ್ತಾನೆ, ತಪತೇ-ತಪಿಸುತ್ತಾನೆ, ಸಚೈವ-ಅವನೇ, ದಹತೇ-ದಹಿಸುತ್ತಾನೇ, ಸಃ-ಆ ದೇವರು, ಲೋಕಾನ್- ಲೋಕಗಳನ್ನು, ಸದೈವ-ನಿರಂತರದಲ್ಲಿಯು, ಸೃಜತಿ-ಸೃಷ್ಟಿಮಾಡುತ್ತಾನೇ, ಅವತಿ-ರಕ್ಷಿಸುತ್ತಾನೆ, ಸಂಹರತೇ-ಸಂಹಾರಮಾಡುತ್ತಾನೆ, ಸಏವ-ಅತನೇ, ಜಗತಿ-ಲೋಕದಲ್ಲಿ, ಪ್ರಸಹ್ಯ-ಬಲಾತ್ಕರಿಸಿ, ದೈತ್ಯಾನ್- ರಾಕ್ಷಸರನ್ನು, ದಹತೇ-ಸುಡುತ್ತಾನೇ ॥೨೪೫॥ ಸಃ-ಆ ಪುರುಷನು, ಸುರೈಃ-ದೇವತೆಗಳಿಂದ, ದ್ರಷ್ಟುಂ-ನೋಡುವದಕ್ಕೋಸ್ಕರ, ನಶಕ್ಯಃ-ಸಾಧ್ಯನಲ್ಲಾ,ಅಸುರೈಃ-ರಾಕ್ಷಸರಿಂದ, ನ-ಸಾಧ್ಯನಲ್ಲಾ, ಪನ್ನಗೈಶ್ಚ-ಸರ್ಪಗಳಿಂದ, ನ-ಸಾಧ್ಯನಲ್ಲಾ, ಯಸ್ಯ-ಯಾವನಿಗೆ-ಪ್ರಸಾದಂ-ಅನುಗ್ರಹವನ್ನು, ಕುರುತೇ-ಮಾಡುತ್ತಾನೊ, ಸಃ-ಆ ಪುರುಷನು, ತಂ- ಆ ಶ್ರೀ ಮಹಾವಿಷ್ಣುವಿನನ್ನು, ದ್ರಷ್ಟುಂ-ನೋಡುವದಕ್ಕೋಸ್ಕರ, ಅರ್ಹತಿ- ಯೋಗ್ಯನಾಗುತ್ತಾನೆ ॥೨೪೬॥ ತದ್ಗತೈಃ-ಆ ಭಗವದಾಶ್ರಿತರಾದ, ತದ್ಗತಪ್ರಾಣೈಃ-ಆ ಭಗವಂತನನ್ನೇ ಹೊಂದಿದ ಪ್ರಾಣಶಕ್ತಿಯುಳ್ಳ, ಶುಚಿಭಿಃ-ಶುಚಿರ್ಭೂತರಾದ, ತತ್ಪರಾಯಣೈಃ-ಆ ಭಗವಂತನಲ್ಲಿ ಆಸಕ್ತರಾದ, ಜ್ಞಾನನಿರ್ಧೂತಕಿಲ್ಬಿಷೈಃ-ಜ್ಞಾನದಿಂದ ಕೊಡೆಹಲ್ಪಟ್ಟ ಪಾಪಗಳುಳ್ಳವರಿಂದ, ಅಯಂಲೋಕಃ- ಈ ಲೋಕವು, ಪ್ರವೇಷ್ಟುಂ-ಪ್ರವೇಶಿಸುವದಕ್ಕೋಸ್ಕರ, ಶಕ್ಯಃ-ಸಾಧ್ಯವು ॥೨೪೭॥ ಏವಂವಿಧೈಃ-ಇಂಥಾವರಾದ, ಅಕಾಮಕಾರಿಭಿಃ- ಕಾಮ್ಯಫಲವನ್ನು, ಕೋರದೆಯಿರುವ, ಪುರುಷೋತ್ತಮೈಃ-ಪುರುಷಶ್ರೇಷ್ಠರಿಂದ, ಅಯಂಲೋಕಃ-ಈ ಲೋಕವು; ಪ್ರಾಪ್ಯತೇ-ಹೊಂದಲ್ಪಡುತ್ತೆ, ದೇವೈಶ್ಚ-ದೇವತೆಗಳಿಂದಲೂ, ಅಕ್ರೋಧೈಃ-ಕೋಪರಹಿತರಾದಂಥಾವರಿಂದಲೂ, ದಗ್ಧತಾಮಸೈಃ-ದಹಿಸಲ್ಪಟ್ಟ ತಮೋಗುಣವುಳ್ಳಂಥಾವರಿಂದಲೂ, ಪ್ರಾಪ್ಯತೇ-ಹೊಂದಲ್ಪಡುತ್ತೆ ॥೨೪೮॥ ಯಃ-ಯಾವ ಪುರುಷನು, ಸುಮಹಾಕಾಯಃ, ದೊಡ್ಡ ಶರೀರಮುಳ್ಳವನಾಗಿ, ಅವ್ಯಯಂ-ನಾಶರಹಿತವಾದ, ಲೋಕಂ-ಲೋಕವನ್ನು, ಪ್ರವಿಷ್ಟಃ-ಹೊಕ್ಕನೋ, ತೇನಹರಿಣಾ- ಅಂಥಾ ಶ್ರೀಮಹಾವಿಷ್ಣುವಿನಿಂದ, ಮಹಾಪುರೀ-ದೊಡ್ಡಪಟ್ಟಣವು,ಕೃತಾ-ಮಾಡಲ್ಪಟ್ಟಂಥಾದ್ದಾಗಿ,ತಥೈವ-ಹಾಗೇ, ಆಸ್ತೇ-ಇಧೆ ॥೨೪೯॥ ಅಸ್ಯವಿವಸ್ವತಃ-ಈ ವಿವಸ್ವತನೆಂಬ, ಮನೋಃ-ಮನುವಿನ, ಅಷ್ಟಾವಿಂಶೇ-ಇಪ್ಪತ್ತೆಂಟನೇದಾದ, ಯುಗೇ-ಯುಗವು, ಪ್ರಾಪ್ತೇ-ಬಂದಿರಲಾಗಿ, ವೈಷ್ಣವೀಂ-ವಿಷ್ಣುಸಂಬಂಧವಾದ, ಮೂರ್ತಿಂ-ಶರೀರವನ್ನು, ಆವಿಶ್ಯ-ಹೊಕ್ಕು,ಏನಂಲೋಕಂ-ಈ ವೈಕುಂಠಲೋಕವನ್ನು,ಪ್ರವೇಕ್ಷ್ಯಸಿ-ಪ್ರವೇಶಮಾಡುತ್ತಿ ॥೨೫೦॥ ಹೇ ರಾಕ್ಷಸೇಶ್ವರ-ಎಲೈ ರಾಕ್ಷಸಾಧಿಪತಿಯೇ, ಮತ್ತಃ-ನನ್ನ ದೆಸೆಯಿಂದ, ಅತಃ-ಇದಕ್ಕಿಂತಲೂ, ಪರತರಂ-ಹೆಚ್ಚಾಗಿರುವದು, ಶ್ರೋತುಂ-ಕೇಳುವದಕ್ಕೋಸ್ಕರ, ನವೈ-ಇಲ್ಲವಷ್ಟೇ, ಉತ್ತಿಷ್ಠ-ಮ್ಯಾಲಕ್ಕೆ ಏಳು, ಗಚ್ಛ-ಹೋಗು, ತೇ-ನಿನಗೆ, ಭದ್ರಂ-ಶುಭವು, ಅಸ್ತು-ಆಗಲಿ, ಈಪ್ಸಿತಾಂ-ಇಷ್ಟವಾದ, ಗತಿಂ-ಗತಿಯನ್ನು, ಪ್ರಾಪ್ಸ್ಯತೆ-ಹೊಂದುವಿ ॥೨೫೧॥ ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ ರಾವಣನು,

ರುವನಾಗಿ, ಸ್ವಯಂಪ್ರಕಾಶಿಸುತಲೂ ಪ್ರಜ್ವಲಿಸುತ್ತಲೂ, ವರ್ಷಿಸುತ್ತಲೂ, ಬೀಸುತ್ತಲೂ, ಪರಿಪಾಲಿಸುತ್ತಲೂ ಗರ್ಜಿಸುತ್ತಲೂ, ತಪಿಸುತ್ತಲೂ, ದಹಿಸುತ್ತಲೂ, ಸಂತತವು ಸೃಷ್ಟಿಸ್ಥಿತಿಲಯಗಳೆಂಬ ಕಾರ್ಯತ್ರಯವೆಂಗೈಯ್ಯುತ್ತಲೂ, ರಕ್ಕಸರಂ ಕೊಲ್ಲುತ್ತಲೂ ಇರುವಂಥಾವನಾಗಿಧಾನೆ ॥೨೪೫॥ ಆ ಮಹಾನುಭಾವನು ದೇವದಾನವ ನಾಗಾದಿಗಳಿಗೂ ಸಹಾ ವೀಕ್ಷಿಸಲಸಾಧ್ಯನಾಗಿರುವನು. ಆದರೆ ಆತನ ಕರುಣಾರಸಕ್ಕೆ ಪಾತ್ರರಾದವರಿಗೆ ಮಾತ್ರ ಕಾಣುವಂಥಾವನಾಗುವನು ॥೨೪೬॥ ಆತನನ್ನೇ ಹೊಂದಿರುವರಾಗಿಯೂ, ಆತನಿಗೆ ಒಪ್ಪಿಸಿದ ಪ್ರಾಣಗಳುಳ್ಳವರಾಗಿಯೂ, ಪರಿಶುದ್ಧರಾಗಿಯೂ, ಆತನಲ್ಲಿಯೇ ಆಸಕ್ತಿಯುಳ್ಳವರಾಗಿಯೂ, ಜ್ಞಾನದಿಂದ ಹೋಗಲಾಡಿಸಲ್ಪಟ್ಟ ಪಾಪವುಳ್ಳವರಾಗಿಯೂ ಫಲಾಪೇಕ್ಷೆಯಿಲ್ಲದೇ ಕರ್ಮಂಗಳಂಗೈಯ್ಯುತ್ತಿರುವರಾಗಿಯೂ, ಕ್ರೋಧವನ್ನೀಗಿದವರಾಗಿಯೂ, ದಹಿಸಲ್ಪಟ್ಟ ತಮೋಗುಣವುಳ್ಳವರಾಗಿಯೂ ಇರುವ ಪುರುಷಶ್ರೇಷ್ಠರಿಂದ ಈ ವೈಕುಂಠವು ಹೊಂದಲ್ಪಡುವದೇ ಹೊರ್ತು ಇತರರಿಗೆ ಲಭಿಸಲಾರದು ॥೨೪೮॥ ಎಲೈ ದಶಕಂಧರನೇ ! ಯಾವ ಪುರುಷನು ಮಹಾಶರೀರವುಳ್ಳವನಾಗಿ, ಅವ್ಯಯವಾದ ಲೋಕವಂ ಹೊಕ್ಕನೋ, ಅಂಥಾ ಶ್ರೀ ಮಹಾವಿಷ್ಣುವಿನಿಂದ ಆ ಪುರವರವು ನಿರ್ಮಿತವಾಗಿಧೆ. ವೈವಸ್ವತ ಮನುವಿನ ಇಪ್ಪತ್ತೆಂಟನೇ ಯುಗವು ಪುಟ್ಟಿದಂಥಾದ್ದಾಗಲೂ, ನೀನು ವೈಷ್ಣವ ಶರೀರವಂ ಹೊಕ್ಕು, ಈ ಶಾಶ್ವತವಾದ ವೈ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ತಥೇತ್ಯುಕ್ತ್ವಾ ತಂ ಪ್ರಣಮ್ಯಾಭಿಪೂಜ್ಯ ಚ । ಸಮಾಸಾದ್ಯ ಮಹತ್ಸೈನ್ಯಂ ಯಯೌ ಲಂಕಾಮಶಂಕಿತಃ ॥೫೦॥ ನಾರದೋಪಿ ಪ್ರಹೃಷ್ಟಾತ್ಮಾ ದೃಷ್ಟ್ವಾ ಸರ್ವಮಶೇಷತಃ । ದ್ರುತಂ ಮೇರುಮುಪಾಗಮ್ಯ ವಿವೇಶ ತಾಂ ಶುಭಾಂ ಸಭಾಂ ॥೫೧॥ ತಸ್ಯಾಂ ಬ್ರಹ್ಮಾಣಮಾಸೀನಮಭಿವಾದ್ಯ ಕೃತಾಂಜಲಿಃ । ದೇವರ್ಷಿ ಸಂಶ್ರಾವಯಾಮಾಸ ಸಮೀಪೇ ಪದ್ಮಜನ್ಮನಃ ॥೫೨॥ ನಿಶಮ್ಯ ಸುಮಹತ್ಪುಣ್ಯಮಾಖ್ಯಾನಂ ಪದ್ಮಸಂಭವಃ । ನಾರದಂ ಸಂಪರಿಷ್ವಜ್ಯ ಪ್ರಾಹ ಭೂತಭವಿಷ್ಯವಿತ್ ॥೫೩॥ ಹಿರಣ್ಯಕಶಿಪುಃ ಪೂರ್ವಂ ಬಭೂವೈಷ ನಿಶಾಚರಃ । ಅವಧ್ಯೋ ಬಹುಭಿರ್ಯೋಗೈರ್ವರದಾನಾನ್ಮಹಾಬಲಃ ॥೫೪॥ ಸ ಕದಾಚಿನ್ಮಹಾತ್ಮಾನಂ ಪದ್ಮನಾಭಮಧೋಕ್ಷಜಂ । ಸಭಾಯಾಂ ಗರ್ಹಯಾಮಾಸ ದರ್ಪಾತ್ ನೃಸಿಂಹವಪುಷಂ ಹರಿಂ ॥೫೫॥ ಸಮುದ್ಗೃಹ್ಯ ನಖೈಸ್ತೀಕ್ಷ್ಣೈರ್ದೀರ್ಯಮಾಣಸ್ಯ ಸಂಯುಗೇ । ರಕ್ತಸಂಸ್ಪರ್ಶಜಂ ದಿವ್ಯಂ ಚಕ್ಷುರ್ದೈತ್ಯಪತೇರಭೂತ್ ॥೫೬॥ ಸ ತು ತದ್ರಾಕ್ಷಸಂ

---

ತಥೇತಿ-ಹಾಗೆ ಆಗಲೆಂದು, ಉಕ್ತ್ವಾ-ಹೇಳಿ, ತಂ-ಆ ಸನತ್ಕುಮಾರನನ್ನು ಕುರಿತು, ಪ್ರಣಮ್ಯ-ನಮಸ್ಕರಿಸಿ, ಅಭಿಪೂಜ್ಯಚ-ಪೂಜೆಯನ್ನು ಮಾಡಿ, ಮಹತ್-ದೊಡ್ಡದಾದ, ಸೈನ್ಯಂ-ದಂಡಿನನ್ನು, ಸಮಾಸಾದ್ಯ-ಹೊಂದಿ, ಲಂಕಾಂ-ಲಂಕಾಪಟ್ಟಣವಂ ಕುರಿತು, ಅಶಂಕಿತಃ-ನಿರ್ಭಯನಾಗಿ, ಯಯೌ-ತೆರಳಿದನು ॥೫೦॥ ನಾರದೋಪಿ-ನಾರದನೂ ಕೂಡ, ಪ್ರಹೃಷ್ಟಾತ್ಮಾ-ಸಂತೋಷಚಿತ್ತನಾಗಿ, ಸರ್ವಂ-ಸಮಸ್ತವನ್ನು, ಅಶೇಷತಃ-ನಿಶ್ಶೇಷವಾಗಿ, ದೃಷ್ಟ್ವಾ-ಕಂಡು, ದ್ರುತಂ-ಶೀಘ್ರವಾಗಿ, ಮೇರುಂ-ಮೇರುಪರ್ವತವಂ ಕುರಿತು, ಉಪಾಗಮ್ಯ-ಬಂದು, ಶುಭಾಂ-ಶುಭಕರವಾದ, ತಾಂಸಭಾಂ- ಆ ಬ್ರಹ್ಮಸಭೆಯನ್ನು, ವಿವೇಶ-ಪ್ರವೇಶಿಸಿದನು ॥೫೧॥ ತಸ್ಯಾಂ-ಆ ಸಭೆಯಲ್ಲಿ, ಆಸೀನಂ-ಕುಳಿತುಕೊಂಡಿರುವ, ಬ್ರಹ್ಮಾಣಂ-ಬ್ರಹ್ಮದೇವರನ್ನು, ಸಮಭಿವಾದ್ಯ-ಚೆನ್ನಾಗಿ ನಮಸ್ಕರಿಸಿ, ಕೃತಾಂಜಲಿಃ-ಬದ್ಧಾಂಜಲನಾಗಿ, ಪದ್ಮಜನ್ಮನಃ-ಚತುರ್ಮುಖಬ್ರಹ್ಮನ, ಸಮೀಪೇ-ಸಮೀಪದಲ್ಲಿ, ದೇವರ್ಷಿ-ದೇವತೆಗಳಂ ಕುರಿತು, ಸಂಶ್ರಾವಯಾಮಾಸ-ಕೇಳಿಸಿದನು ॥೫೨॥ ಭೂತಭವಿಷ್ಯವಿತ್-ಭೂತಭವಿಷ್ಯದರ್ಥಗಳಂ ತಿಳಿದುಕೊಂಡಿರುವ, ಪದ್ಮಸಂಭವಃ-ಚತುರ್ಮುಖನು, ಪುಣ್ಯಂ-ಪುಣ್ಯಕರವಾದ, ಸುಮಹತ್-ದೊಡ್ಡದಾದ, ಆಖ್ಯಾನಂ-ಕಥೆಯನ್ನು, ನಿಶಮ್ಯ-ಕೇಳಿ, ನಾರದಂ-ನಾರದಋಷಿಯನ್ನು, ಸಂಪರಿಷ್ವಜ್ಯ-ಆಲಿಂಗನೆಮಾಡಿ, ಪ್ರಾಹ-ಹೇಳಿದನು ॥೫೩॥ ಏಷನಿಶಾಚರಃ-ಈ ರಾವಣನು, ಪೂರ್ವಂ-ಪೂರ್ವಜನ್ಮದಲ್ಲಿ, ಬಹುಭಿಃ-ಅನೇಕಗಳಾದ, ಯೋಗೈಃ- ತಪೋಯೋಗಗಳಿಂದ, ಮಹಾಬಲಃ-ಮಹಾ ಬಲಿಷ್ಠನಾಗಿ, ವರದಾನಾತ್-ಬ್ರಹ್ಮವರಪ್ರದಾನದಿಂದ, ಅವಧ್ಯಃ-ವಧಿಸಲಸಾಧ್ಯನಾಗಿ, ಹಿರಣ್ಯಕಶಿಪುಃ-ಹಿರಣ್ಯಕಶಿಪುವೆಂಬುವನು, ಬಭೂವ-ಆದನು ॥೫೪॥ ಸಃ-ಆ ಹಿರಣ್ಯಕಶಿಪುವು, ಕದಾಚಿತ್-ಒಂದಾನೊಂದುಕಾಲದಲ್ಲಿ, ಮಹಾತ್ಮಾನಂ-ಮಹಾಧೈರ್ಯಶಾಲಿಯಾದ, ಅಧೋಕ್ಷಜಂ-ತಿರಸ್ಕೃತವಾದ ಇಂದ್ರಿಯವ್ಯಾಪಾರಮುಳ್ಳ, ಪದ್ಮನಾಭಂ-ಕಮಲಕ್ಕೆ ಸದೃಶವಾದ ನಾಭಿಯುಳ್ಳ, ನೃಸಿಂಹವಪುಷಂ-ನೃಸಿಂಹಶರೀರಧಾರಿಯಾದ, ಹರಿಂ-ಶ್ರೀಮಹಾವಿಷ್ಣುವಿನನ್ನು, ಸಭಾಯಾಂ ಸಭೆಯಲ್ಲಿ, ದರ್ಪಾತ್-ಗರ್ವದದೆಸೆಯಿಂದ, ಗರ್ಹಯಾಂ-ನಿಂದೆಮಾಡಿದವನು, ಬಭೂವ-ಆದನು ॥೫೫॥ ತೇನ-ಆ ಶ್ರೀಮಹಾವಿಷ್ಣುವಿನಿಂದ, ಸಮುದ್ಗೃಹ್ಯ-ಹಿಡಿದುಕೊಂಡು, ಸಂಯುಗೇ-ಯುದ್ಧದಲ್ಲಿ, ನಖೈಃ-ಉಗುರುಗಳಿಂದ, ದೀರ್ಯಮಾಣಸ್ಯ-ಸೀಳಲ್ಪಡುತ್ತಿರುವ, ದೈತ್ಯಪತೇಃ-ಹಿರಣ್ಯಕಶಿಪುವಿಗೆ, ರಕ್ತಸಂಸ್ಪರ್ಶಜಂ-ರಕ್ತಸ್ಪರ್ಶದಿಂದ ಹುಟ್ಟಿದ, ದಿವ್ಯಂ-ದೇವತಾಸಂಬಂಧವಾದ, ಚಕ್ಷುಃ-ಜ್ಞಾನದೃಷ್ಟಿಯು, ಅಭೂತ್-ಆಯಿತು, ಸತು-ಆ ಹಿರಣ್ಯಕಶಿಪುವಾದರೆ, ರಾಕ್ಷಸಂ-ರಕ್ಷಸ್ಸಂಬಂಧವಾದ, ತಜ್ಜನ್ಮ-ಆಜನ್ಮವನ್ನು, ತಸ್ಮಾತ್-ಆಜನ್ಮವಾದನಂತರದಲ್ಲಿ ಮನುಷ್ಯಜನ್ಮನಃ-ಮನುಷ್ಯೋತ್ಪನ್ನ

---

ಕುಂಠವೆಂಬ ಲೋಕವಂ ಪ್ರವೇಶಮಾಡುವಂಥಾವನಾಗುತ್ತೀ. ಸಮನಂತರದಲ್ಲಿ ನಡೆಯುವ ವೃತ್ತಾಂತವನ್ನು ನನ್ನಿಂದ ಪೇಳಲು ಕೇಳಲಾಗದು. ನಿನಗೆ ಶುಭಮುಂಟಾಗಲಿ, ಗಮಿಸುವಂಥಾವನಾಗು, ನಿನಗಿಷ್ಟವಾಗಿರುವ ಗತಿಯಂ ಹೊಂದುಂಥಾವನಾಗುತ್ತಿ ಸಂತಪಿಸಬೇಡೆಂದು ಸನತ್ಕುಮಾರ ಮುನಿಯಿಂದ ಪೇಳಲ್ಪಟ್ಟವನಾಗಿ, ದಶಕಂಧರನು ಆ ಮಾತಿಗೆಪ್ಪಿ ಆ ಮಹಾಮುನಿಯಂ ಪರಿಪೂಜಿಸಿ, ಪ್ರದಕ್ಷಿಣ ನಮಸ್ಕಾರವಂಗೈದು, ಸೈನ್ಯಸಮೇತನಾಗಿಯೂ ನಿರ್ಭೀತನಾಗಿಯೂ ಇರುವನಾಗಿ, ಲಂಕಾಪುರಿಯಂ ಕುರಿತು ತೆರಳಿದನು ॥೫೦॥ ಮಹಾತ್ಮನಾದ ನಾರದಮುನಿಯಾದರೆ ಆ ರಾವಣನಪರಾಭವವಂ ಕಂಡು ಹೃಷ್ಟಚಿತ್ತನಾಗಿ, ಮೇರುಗಿರಿಯಂ ಕುರಿತು ತ್ವರಿತವಾಗಿ ಪೋಗಿ ದೇವಸಭೆಯಂ ಹೊಕ್ಕನು ॥೫೧॥ ಆ ಸಭೆಯಲ್ಲಿ ಕುಳಿತಿರುವ ಬ್ರಹ್ಮನಂ ಕಂಡು ವಂದನೆಯಂಗೈದು ಅಂಜಲಿಬದ್ಧನಾಗಿ ಆತನ ಸಮೀಪದಲ್ಲಿ ದೇವತೆಗಳಿಗೆಲ್ಲಾ ಈ ವೃತ್ತಾಂತವನ್ನರುಹಿದವನಾಗಲು ಭೂತಭವಿಷ್ಯದ್ವರ್ತಮಾನಂಗಳಂ ತಿಳಿದಿರುವ ಪಿತಾಮಹನು ಪುಣ್ಯಕರವಾದ ಈ ಆಖ್ಯಾನವಂ ಕೇಳಿ, ನಾರದನನ್ನಪ್ಪಿಕೊಂಡು ಇಂತೆಂದು ನುಡಿದನು ॥೫೩॥ ಈ ರಾವಣನೆಂಬ ರಕ್ಕಸನು ಪೂರ್ವಕಾಲದಲ್ಲಿ ಹಿರಣ್ಯಕಶಿಪುವೆಂಬ ಪೆಸರುಳ್ಳವನಾಗಿ ಸಂಜನಿಸಿ, ತಪದಿಂದ ಕಡು ಬಲವಂತನಾಗಿಯೂ, ವರದಿಂದ ಅವಧ್ಯನಾಗಿಯೂ ಇರುವನಾಗಿದ್ದನು ॥೫೪॥ ಆ ಹಿರಣ್ಯಕಶಿಪುವು ಒಂದಾನೊಂದುಕಾಲದಲ್ಲಿ ಮಹಾತ್ಮನಾಗಿಯೂ, ತಾವರೇ ಹುವ್ವಿನೋಪಾದಿಯಲ್ಲಿರುವ ನಾಭಿಯುಳ್ಳವನಾಗಿಯೂ, ತಿರಸ್ಕೃತವಾದ ಇಂದ್ರಿಯವ್ಯಾಪಾರವುಳ್ಳವನಾಗಿಯೂ, ನರಸಿಂಹರೂಪವಂ ತಾಳಿದವನಾಗಿಯೂ ಇರುವ ಶ್ರೀ ಹರಿಯನ್ನು ಗರ್ವದಿಂದ ಸಭೆಯಲ್ಲಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜನ್ಮ ತಸ್ಮಾನ್ಮನುಷ್ಯಜನ್ಮನಃ। ಭಾವಿನೀಂನಿಧನಪ್ರಾಪ್ತಿಂಪಶ್ಯನ್ದಿವ್ಯೇನಚಕ್ಷುಷಾ॥೫೯॥ಶ್ರೀವತ್ಸಾಂಕಂತದಂಕಸ್ಥಃ ಪ್ರಾಹದೈತ್ಯಶ್ಶನೈರಿದಮ್। ನಖೈರ್ವಿಭಿನ್ನಹೃದಯಃಕ್ಷಣಂದೀನಃಕೃತಾಂಜಲಿಃ ॥ ೬೦ ॥ ತಪ್ತಹಾಟಕಕೇಶಾಂತಜ್ವಲತ್ಪಾವಕಲೋಚನ । ವಜ್ರಾಯುಧನಖಸ್ಪರ್ಶದಿವ್ಯಸಿಂಹನಮೋಸ್ತುತೇ ॥ ೬೧॥ ಕೈಟಭಾರೇಹರೇದೇವವಿಷ್ಣೋವಿಪುಲವಿಕ್ರಮ । ತ್ರಾಹಿಮಾಂಭೂತಭವ್ಯೇಶಶರಣಾಗತವತ್ಸಲ ॥೬೨॥ ತ್ವದ್ಧತೇರಾಕ್ಷಸೇಭಾವೇಮಾನುಷೇಚಪದೇವಿಭೋ । ಪ್ರಾಪ್ನುಯಾಂತ್ವನ್ಮಯೋಲೋಕಂಲೋಕನಾಥಪ್ರಸೀದಮೆ ॥೬೩॥ ಏವಮುಕ್ತಸ್ತಥೇತ್ಯುಕ್ತ್ವಾ ಯಯೌದೈತ್ಯಪತಿಂಹರಿಃ। ಹಂಸಯುಕ್ತವಿಮಾನೇನಕಿಂಕಿಣೀಜಾಲಮಾಲಿನಾ ॥೬೪॥ ಸಏವಚಪುನಸ್ತತ್ರರಾಕ್ಷಸೋಭೂನ್ಮಹಾಸುರಃ । ರಾಕ್ಷಸೇನವಿ

ನಾದಭಗವಂತನದೆಸೆಯಿಂದ, ಭಾವಿನೀಂ-ಮುಂದೆ ಆಗತಕ್ಕ, ನಿಧನಪ್ರಾಪ್ತಿಂ-ಮರಣಪ್ರಾಪ್ತಿಯನ್ನು,ದಿವ್ಯೇನ-ದೇವತಾಸಂಬಂಧವಾದ, ಚಕ್ಷುಷಾ-ಜ್ಞಾನಚಕ್ಷುಸ್ಸಿನಿಂದ, ಪಶ್ಯನ್ - ನೋಡುತ್ತಿರುವನಾಗಿ ॥೫೯॥ ತದಂಕಸ್ಥಃ-ತತ್-ಆ ಮಹಾವಿಷ್ಣುವಿನ, ಅಂಕಸ್ಥಃ-ತೊಡೇಮೇಲೆಇರುವ, ದೈತ್ಯಃ-ಹಿರಣ್ಯಕಶಿಪು, ನಖೈಃ-ಉಗುರುಗಳಿಂದ, ವಿಭಿನ್ನಹೃದಯಃ-ಭೇದಿಸಲ್ಪಟ್ಟವಕ್ಷಸ್ಥಳವುಳ್ಳವನಾಗಿ, ಕ್ಷಣಂ-ಕ್ಷಣಕಾಲವು, ದೀನಃ-ದೀನನಾಗಿ, ಕೃತಾಂಜಲಿಃ-ಬದ್ಧಾಂಜಲಿಪುಟನಾಗಿ, ಶನೈಃ-ಮೆಲ್ಲಮೆಲ್ಲಗೆ, ಶ್ರೀವತ್ಸಾಂಕಂ-ಶ್ರೀವತ್ಸವೆಂಬಗುರುತುಳ್ಳವಿಷ್ಣುವಿನಂಕುರಿತು, ಇದಂ-ಈ ವಕ್ಷ್ಯಮಾಣ ವಚನವನ್ನು, ಪ್ರಾಹ-ಹೇಳಿದನು ॥ ೬೦ ॥ ಹೆತಪ್ತಹಾಟಕಕೇಶಾಂತ-ಎಲೈ ಪುಟಪಾಕ ಶೋಭಿತವಾದ ಚಿನ್ನದಂತಿರುವ ಕೂದಲುಗಳಕೊನೆಗಳುಳ್ಳವನೇ, ಹೆಜ್ವಲತ್ಪಾವಕಲೋಚನ-ಪ್ರಜ್ವಲಿಸುತ್ತಿರುವ ಅಗ್ನಿಯಂತೆಇರುವ, ನೇತ್ರಗಳುಳ್ಳವನೇ, ಹೇವಜ್ರಾಯುಧನಖಸ್ಪರ್ಶ-ಎಲೈ ವಜ್ರಾಯುಧದಂತೆ ಕಠೋರವಾದ ಉಗುರುಗಳ ಸ್ಪರ್ಶೆಯುಳ್ಳವನೆ, ಹೆದಿವ್ಯಸಿಂಹ-ಎಲೈ ದೇವತಾಸಿಂಹಸ್ವರೂಪನೆ, ತೇ - ನಿನಗೆ, ನಮಃ-ನಮಸ್ಕಾರವು, ಅಸ್ತು-ಆಗಲಿ॥ ೬೧॥ ಹೆಕೈಟಭಾರೆ-ಎಲೈಕೈಟಭಾಸುರನ ಸಹ್ಮಾರಕನೆ, ಹೇಹರೇ-ಎಲೈಸರ್ವಪಾಪ ಪರಿಹಾರಕನೇ, ಹೆದೇವ-ಎಲೈಸ್ವಾಮಿಯೆ,ಹೆವಿಷ್ಣೋ-ಎಲೈ ಸರ್ವವ್ಯಾಪಕನೆ, ಹೆವಿಪುಲವಿಕ್ರಮ-ಎಲೈ ವಿಸ್ತಾರವಾದಪರಾಕ್ರಮವುಳ್ಳವನೇ, ಹೆಭೂತಭವ್ಯೇಶ-ಎಲೈಭೂತಭವ್ಯಭವಿಷ್ಯತ್ತುಗಳಿಗೆ ಅಧಿಪತಿಯೇ, ಹೆಶರಣಾಗತವತ್ಸಲ-ಎಲೈಭಕ್ತರಲ್ಲಿವತ್ಸಲನೆ, ಮಾಂ-ಯನ್ನನ್ನು, ತ್ರಾಹಿ-ಸಂರಕ್ಷಣೆಮಾಡು ॥ ೬೨ ॥ ಹೆವಿಭೋ-ಎಲೈಸ್ವಾಮಿಯೆ, ಹೇಲೋಕನಾಥ-ಎಲೈಜಗನ್ನಾಥನೆ, ರಾಕ್ಷಸೇಭಾವೇ-ರಾಕ್ಷಸತ್ವವು, ಮಾನುಷೇಚಪದೇ-ಮನುಷ್ಯಾವತಾರದಲ್ಲಿ, ತ್ವದ್ಧತೇ-ನಿನ್ನಿಂದ ಹೊಡೆಯಲ್ಪಟ್ಟದ್ದಾಗುತ್ತಿರಲಿಕಾಗಿ, ತ್ವನ್ಮಯಃ-ನಿನ್ನಸ್ವರೂಪನಾಗಿ, ಲೋಕಂ-ನಿನ್ನ ಲೋಕವನ್ನು, ಪ್ರಾಪ್ನುಯಾಂ-ಹೊಂದುವೆನು ॥ ೬೩ ॥ ಮೆ-ಯನಗೆ ಪ್ರಸೀದ-ಪ್ರಸನ್ನನಾಗು, ಏವಂ-ಈ ಪರಿಯಾಗಿ, ಉಕ್ತಃ ಹೇಳಲ್ಪಟ್ಟ ಹರಿಃ-ಶ್ರೀಮಹಾವಿಷ್ಣುವು ತಥೇತಿ-ಅದೇಪ್ರಕಾರವಾಗಲೆಂದು, ದೈತ್ಯಪತಿಂ-ಹಿರಣ್ಯಕಶಿಪುವಿನಂಕುರಿತು, ಉಕ್ತ್ವಾ-ಹೇಳಿ, ಕಿಂಕಿಣೀಜಾಲಮಾಲಿನಾ - ಘಂಟೆಗಳಸಮೂಹದಿಂ ಕೂಡಿದ ಪಙ್ಕ್ತಿಗಳುಳ್ಳ, ಹಂಸಯುಕ್ತವಿಮಾನೇನ - ಹಂಸಗಳುಕಟ್ಟಿದ ವಿಮಾನದಿಂದ, ಯಯೌ-ತೆರಳಿದನು ॥೬೪॥ ಸಏವರಾಕ್ಷಸಃ - ಅದೇರಾಕ್ಷಸನಾದಹಿರಣ್ಯಕಶಿಪುವೆ,ಪುನಶ್ಚ-ಮತ್ತು ತತ್ರ-ಅಲ್ಲಿ,ಮಹಾಸುರಃ-ರಾವಣನಾದವನು, ಅಭೂತ್-ಆದನು, ರಾಕ್ಷಸೇನ-ರಾಕ್ಷಸಸಂಬಂಧವಾದ, ವಿಧಾನೇನ-ವಿಧಿಯಿಂದ, ಸದಾ-ನಿರಂತರವು, ತದ್ಭಾವಭಾವಿತಃ-ಆ ವಿಷ್ಣುಭಾವನೆಯಲ್ಲೆ ಭಾ

ನಿಂದಿಸಲು, ಆ ನಾರಾಯಣನು ರಣರಂಗದಲ್ಲಿ ಉಗುರುಗಳಿಂದ ಆ ರಕ್ಕಸನಂ ಶೀಳಿದವನಾಗಲು, ಆ ರಕ್ತಸಂಸ್ಪರ್ಶೆಯಿಂದ ಜ್ಞಾನದೃಷ್ಟಿಯುಂಟಾಗಿ ಮುಂದೆ ತನಗೆ ಪ್ರಾಪ್ತವಾಗುವ ರಾಕ್ಷಸಜನ್ಮವನ್ನೂ, ಮತ್ತೂ ಮನುಷ್ಯನಿಂದುಂಟಾಗುವ ಮರಣವನ್ನೂ ಸಹಾ ಆ ದಿವ್ಯ ಚಕ್ಷುಸ್ಸಿನಿಂದ ವೀಕ್ಷಿಸಿ, ಆತನ ಸಮೀಪವರ್ತಿಯಾಗಿ ಉಗುರುಗಳಿಂದ ಶೀಳಲ್ಪಟ್ಟ ಹೃದಯವುಳ್ಳವನಾದ ಕಾರಣ, ದೀನನಾಗಿಯೂ ಅಂಜಲಿಬದ್ಧನಾಗಿಯೂ ಇರುವನಾಗಿ ಶ್ರೀ ಮಹಾವಿಷ್ಣುವಿನನ್ನಿಂತೆಂದು ಸ್ತುತಿಸಿದನೆಂತೆನೆ,—ಅಪರಂಜಿಯ ಬಣ್ಣದಂತೆ ಬಣ್ಣವುಳ್ಳ ಕೊನೆ ಕೂದಲುಗಳುಳ್ಳವನಾಗಿಯೂ, ಪ್ರಜ್ವಲಿಸುತಿರುವ ಅಗ್ನಿಯೋಪಾದಿಯುಳ್ಳಿರುವ ನೇತ್ರಂಗಳುಳ್ಳವನಾಗಿಯೂ, ವಜ್ರಾಯುಧದ ತೆರದಿ ಕಡು ತೀಕ್ಷ್ಣವಾಗಿರುವ ನಖಸಂಸ್ಪರ್ಶೆಯುಳ್ಳವನಾಗಿಯೂ, ದೇವತಾಸಿಂಹಸ್ವರೂಪಿಯಾಗಿಯೂ, ಕೈಟಭಾಸುರಸಂಹಾರಕನಾಗಿಯೂ, ಸರ್ವಪಾಪ ಪರಿಹಾರಕನಾಗಿಯೂ, ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವನಾಗಿಯೂ, ವಿಸ್ತಾರವಾದ ಪರಾಕ್ರಮವುಳ್ಳವನಾಗಿಯೂ, ಭೂತ ಭವಿಷ್ಯತ್ತುಗಳಿಗೆ ಅಧಿಪತಿಯಾಗಿಯೂ, ನೀನೇ ರಕ್ಷಕನೆಂದು ನಂಬಿದವರಲ್ಲಿ ವಾತ್ಸಲ್ಯವುಳ್ಳವನಾಗಿಯೂ ಇರುವ ಎಲೈ ಹರಿಯೇ ! ನಿನಿಗೆ ನಮಸ್ಕಾರವು, ನನ್ನನ್ನು ಉದ್ಧಾರಮಾಡು ॥೬೨॥ ಎಲೈ ಲೋಕಸ್ವಾಮಿಯೇ!ಎನ್ನರಾಕ್ಷಸತ್ವವು ಮನುಷ್ಯಾವತಾರದಲ್ಲಿ ನಿನ್ನಿಂದ ಹತವಾದಂಥಾದ್ದಾಗಲೂ, ನಿನ್ನ ಸ್ವರೂಪನಾಗಿ ವೈಕುಂಠವಂ ಹೊಂದುವೆನು. ನೀನು ಪ್ರಸನ್ನನಾಗೆಂದು ಪ್ರಾರ್ಥಿಸಲೂ, ಭಗವಂತನು ಹಾಗೇಆಗಲೆಂದು ನುಡಿದು, ಕಿರುಗೆಜ್ಜೇ ತಂಡಗಳ ಬಂತಿಗಳುಳ್ಳದ್ದಾಗಿಯೂ, ಹಂಸಯುಕ್ತವಾಗಿಯೂ ಇರುವ ವಿಮಾನವನ್ನೇರಿ ತೆರಳಿದವನಾದನು॥೬೪॥ಬಳಿಕಆ ಹಿರಣ್ಯಕಶಿಪುವೆಂಬ ರಕ್ಕಸನೇ ರಾವಣನೆಂಬ ಮಹಾಸುರನಾಗಿಜನಿಸಿ, ರಕ್ಷಸ್ಸಂಬಂಧವಾದ

CC-0. Bhagavad Ramanuja National Research Institute, Melukote Collection.

ಧ್ಯಾನೇನಸದಾತದ್ಭಾವಭಾವಿತಃ ॥೧೬೫॥ ಮಾನುಷತ್ವಮುಪಾಗಮ್ಯಲೋಕಾನ್ ಹಂತುಂಕೃತೋದ್ಯಮಮ್ । ತೃತೀಯಂಚ ಹತಂತೇನಶ್ವೇತದ್ವೀಪಂಪ್ರವೇಕ್ಷ್ಯತಿ ॥೧೬೬॥ ವೈಷ್ಣವಂತೇಜಆವಿಶ್ಯ ಯಥೋಕ್ತಂಬ್ರಹ್ಮವಾದಿನಾ । ಮಯಾಪಿಚೇಹಸಂಸ್ಥೇನದೃಷ್ಟಮೇವಾಕ್ಷದರ್ಶನಾತ್ ॥೧೬೭॥ ಮಯಾಪ್ರಲಂಬಿತಂಸರ್ವಂದೇವಸ್ಯಪರಮಾತ್ಮನಃ । ಯಸ್ತ್ವಿದಂಪಠತೇನಿತ್ಯಂಪುಣ್ಯಮಾಖ್ಯಾನಮಾದಿತಃ । ನಾರದೋಕ್ತಂಮನುಷ್ಯೋವೈಸಯಾತಿಪರಮಾಂಗತಿಮ್ ॥೧೬೮॥ ವೈಷ್ಣವಂಪರಮಾಖ್ಯಾನಂ ಸರ್ವಪಾಪಪ್ರಣಾಶನಮ್ । ನಿತ್ಯಂಚಶೃಣುಯಾದ್ಯಸ್ತು ಸೋಪಿಪಾಪಾತ್ಪ್ರಮುಚ್ಯತೇ । ಜಾತಿಸ್ಮರತ್ವಂವಿಪ್ರತ್ವಂಕುಲೇಮಹತಿಸಂಭವಮ್ । ಸರ್ವಜ್ಞತಾಂಚಲಭತೇನಾತ್ರಕಾರ್ಯಾವಿಚಾರಣಾ ॥೧೭೦॥ ಸಚಸಂಸ್ತೂಯಚಹರಿಂಪ್ರಪಿತ್ಯಕಮಲೋದ್ಭವಃ । ಅನುಭಾವ್ಯಸುರಾನ್ಸರ್ವಾನ್ಯಯೌಸ್ವಂಲೋಕಮೀಶ್ವರಃ ॥೧೭೧॥ ನಾರದಸ್ತು ತತಸ್ತಸ್ಮಾನ್ಮೇರುಪೃಷ್ಠೇಪರಿಭ್ರಮನ್ । ಸತುಮಾಮಾಜಗಾಮಾಶುದಿದೃಕ್ಷುರ್ದ್ವಾದಶಾತ್ಮಕಮ್ ॥೧೭೨॥ ಸಮಯಾಶಾಸ್ತ್ರತಸ್ಸಮ್ಯಗಭಿಪಾ

---

ವಪ್ರಳಯವಾದನು ॥೧೬೫॥ ಲೋಕಾನ್-ಲೋಕಗಳನ್ನು, ಹಂತುಂ - ಸಂಹಾರಮಾಡುವದಕ್ಕೋಸ್ಕರ, ಕೃತೋದ್ಯಮಂ - ಮಾಡಲ್ಪಟ್ಟ ಪ್ರಯತ್ನವುಳ್ಳ, ಮಾನುಷತ್ವಂ-ಮನುಷ್ಯಾವತಾರವನ್ನು, ಉಪಾಗ್ಯ-ಹೊಂದಿ, ತೃತೀಯಂ-ಮೂರನೇಜನ್ಮವು, ತೇನ-ಆ ಶ್ರೀಮಹಾವಿಷ್ಣುವಿನಿಂದ, ಹತಂಚೇತ್- ಕೊಲೆ ಯಲ್ಪಟ್ಟದ್ದೇಆದರೆ, ಪ್ರವೇಕ್ಷ್ಯತಿ-ಪ್ರವೇಶಿಸುತ್ತಾನೆ ॥೧೬೬॥ ಬ್ರಹ್ಮವಾದಿನಾ-ಬ್ರಹ್ಮಜ್ಞಾನಿಯಾದ ಸನತ್ಕುಮಾರನಿಂದ, ಯಥಾ-ಹ್ಯಾಗೆ-ಉಕ್ತಂ-ಹೇ ಳಲ್ಪಟ್ಟಿತ್ತೊ, ತಥಾ-ಹಾಗೆಯೆ ವೈಷ್ಣವಂ-ವಿಷ್ಣುಸಂಬಂಧವಾದ, ತೇಜಃ-ತೇಜಸ್ಸನ್ನು, ಆವಿಶ್ಯ-ಪ್ರವೇಶಿಸಿ, ಶ್ವೇತದ್ವೀಪಂ-ಶ್ವೇತದ್ವೀಪವನ್ನು, ಪ್ರವೇ ಕ್ಷ್ಯತಿ-ಪ್ರವೇಶಿಸುತ್ತಾನೆ ॥೧೬೬॥ ಮಯಾ-ನನ್ನಿಂದ, ಇಹ-ಇಲ್ಲಿ, ಸಂಸ್ಥೇನಾಪಿ-ಇರುವನಾದರು, ಅಕ್ಷದರ್ಶನಾತ್-ಜ್ಞಾನದೃಷ್ಟಿಯದೆಶೆಯಿಂದ, ದೃ ಷ್ಟಮೇವ-ಕಾಣಲ್ಪಟ್ಟಿತ್ತೆ, ಮಯಾ-ನನ್ನಿಂದ, ಪರಮಾತ್ಮನಃ-ಪರಮಾತ್ಮಸ್ವರೂಪನಾದ, ದೇವಸ್ಯ-ಶ್ರೀಮಹಾವಿಷ್ಣುವಿನ, ಸರ್ವಂ-ಸಮಸ್ತವು, ಅವ ಲಂಬಿತಂ-ಆಶ್ರಯಿಸಲ್ಪಟ್ಟಿತ್ತೆ ॥೧೬೭॥ ಯಃಮನುಷ್ಯಸ್ತು-ಯಾವ ಮನುಷ್ಯನಾದರೇ, ಆದಿತಃ-ಮೊದಲಿನಿಂದಲೂ, ನಾರದೋಕ್ತಂ-ನಾರದಋಷಿಯಿಂ ದ ಹೇಳಲ್ಪಟ್ಟ, ಪುಣ್ಯಂ-ಪುಣ್ಯಕರವಾದ, ಇದಮಾಖ್ಯಾನಂ-ಈ ಉಪಾಖ್ಯಾನವನ್ನು, ನಿತ್ಯಂ-ನಿರಂತರವು, ಪಠತೇ-ಪಠನೆ ಮಾಡುತ್ತಾನೊ, ಸಃ- ಆ ಮನುಷ್ಯನು, ಪರಮಾಂ-ಉತ್ಕೃಷ್ಟವಾದ, ಗತಿಂ-ಗತಿಯನ್ನು, ಯಾತಿ-ಹೊಂದುತ್ತಾನೆ ॥೧೬೮॥ ಯಸ್ತು-ಯಾವ ಪುರುಷನಾದರೇ, ವೈಷ್ಣವಂ- ವಿಷ್ಣುಸಂಬಂಧವಾದ, ಸರ್ವಪಾಪಪ್ರಣಾಶನಂ-ಸಮಸ್ತಗಳಾದಪಾಪಗಳನ್ನು ನಾಶಮಾಡುತಿರುವ, ಉಪಾಖ್ಯಾನಂ-ಪರಮಾಖ್ಯಾನವನ್ನು, ನಿತ್ಯಂಚ-ನಿರಂ ತರವೂನು, ಶೃಣುಯಾತ್-ಶ್ರವಣಮಾಡುವನೊ, ಸೋಪಿ-ಆತನೂಕೂಡ, ಪಾಪಾತ್-ಪಾಪದದೆಶೆಯಿಂದ, ಪ್ರಮುಚ್ಯತೇ-ಬಿಡಲ್ಪಡುತ್ತಾನೇ, ಜಾತಿಸ್ಮ ರತ್ವಂ-ಪೂರ್ವಜನ್ಮಸ್ಮರಣೆಯನ್ನು, ವಿಪ್ರತ್ವಂ-ಬ್ರಾಹ್ಮಣತ್ವವನ್ನು, ಮಹತಿಕುಲೇ-ಮಹಾಕುಲದಲ್ಲಿ, ಸಂಭವಂ-ಉತ್ಪತ್ತಿಯನ್ನು, ಸರ್ವಜ್ಞತಾಂಚ- ಸರ್ವಜ್ಞತ್ವವನ್ನೂ ಕೂಡ, ಲಭತೇ-ಹೊಂದುತ್ತಾನೇ, ಅತ್ರ-ಈ ಅರ್ಥದಲ್ಲಿ, ವಿಚಾರಣಾ-ಚರ್ಚೆಯು, ನಕಾರ್ಯಾ-ಮಾಡತಕ್ಕದ್ದಲ್ಲಾ ॥೧೭೦॥ ಈಶ್ವರಃ-ಪ್ರಭುವಾದ, ಸಕಮಲೋದ್ಭವಃ - ಕಮಲದಲ್ಲಿ ಹುಟ್ಟಿದ ಆ ಚತುರ್ಮುಖಬ್ರಹ್ಮನು, ಹರಿಂ - ಶ್ರೀಮಹಾವಿಷ್ಣುವಿನನ್ನು, ಸಂಸ್ತೂಯಚ- ಸ್ತೋತ್ರವನ್ನೂ ಮಾಡಿ, ಸರ್ವಾನ್-ಸಮಸ್ತರಾದ, ಸುರಾನ್-ದೇವತೆಗಳನ್ನು, ಅನುಭಾವ್ಯ-ನೋಡಿ, ಸ್ವಂ-ಸ್ವಕೀಯ್ಯವಾದ, ಲೋಕಂ-ಲೋಕವ ನ್ನು ಕುರಿತು,ಯಯೌ-ತೆರಳಿದನು ॥ ೧೭೧ ॥ ಸನಾರದಸ್ತು-ಆನಾರದನಾದರೇ, ತತಃ-ಬಳಿಕ, ತಸ್ಮಾತ್-ಆ ಸತ್ಯಲೋಕದದೆಶೆಯಿಂದ, ಮೇರುಪೃ ಷ್ಠೇ-ಮೇರುಪಾರ್ಶ್ವದಲ್ಲಿ, ಪರಿಭ್ರಮನ್ - ತಿರುಗುತಿರುವನಾಗಿ, ದ್ವಾದಶಾತ್ಮಕಂ - ಸೂರ್ಯನನ್ನು, ದಿದೃಕ್ಷುಃ - ನೋಡಲಿಚ್ಛೆಯುಳ್ಳವನಾಗಿ,ಮಾಂ- ನನ್ನನ್ನು ಕುರಿತು, ಆಶು-ಜಾಗ್ರತೆಯಾಗಿ, ಆಜಗಾಮ-ಬಂದನು ॥ ೧೭೨ ॥ ಸಃ-ಆ ನಾರದಋಷಿಯು, ಮಯಾ-ನನ್ನಿಂದ, ಶಾಸ್ತ್ರತಃ-ಯಥಾ

---

ವಿಧಾನದಿಂದ ಆ ಶ್ರೀ ಮಹಾವಿಷ್ಣುವಿನ ಭಾವನದಲ್ಲಿಯೇ ಭಾವವುಳ್ಳವನಾದನು ॥೧೬೫॥ ಲೋಕಕ್ಷಯವನ್ನೈಯು ಲೂ ಮಾತ್ರಿಸುತಿರುವ ಈ ರಾಕ್ಷಸ ಜನ್ಮವು ಆ ಶ್ರೀ ಹರಿಯಿಂದ ಹತವಾದೊಡೆ ವೈಕುಂಠವಂ ಹೊಂದುವನೆಂದು ಸನ ತ್ಕುಮಾರಮುನಿಯಿಂದ ಹೇಳಲ್ಪಟ್ಟಂತೆ ನಾನು ಇಲ್ಲಿರುವನಾದರೂ, ಜ್ಞಾನ ದೃಷ್ಟಿಯಿಂದ ಶ್ರೀ ಮಹಾವಿಷ್ಣುವಿನ ಈ ಸರ್ವವಿಷಯವನ್ನು ನೋಡಿದವನಾದೆನು. ನಾರದೋಕ್ತವಾಗಿಯೂ, ಪುಣ್ಯಕರವಾಗಿಯೂ ಇರುವ ಈ ಉಪಾ ಖ್ಯಾನವನ್ನು ಯಾರು ಶ್ರವಣ ಮಾಡಿಸುವನೋ, ಆತನು ಉತ್ಕೃಷ್ಟವಾದ ಗತಿಯಂ ಹೊಂದುವನು ॥೧೬೮॥ ಯಾವ ಪುರುಷನು ಪಾಪಪರಿಹಾರಕವಾಗಿಯೂ ವಿಷ್ಣುಸಂಬಂಧವಾಗಿಯೂ ಇರುವ ಈ ಉಪಾಖ್ಯಾನವನ್ನು ನಿತ್ಯವು ಕೇ ಳುವಂಥಾವನಾಗುವನೋ ಆ ಪುರುಷನು ಸರ್ವಪಾಪಗಳಿಂದ ಮುಕ್ತನಾಗುವದಲ್ಲದೇ, ಪೂರ್ವಜಾತಿ ಸ್ಮರಣೆಯ ನ್ನೂ, ಬ್ರಾಹ್ಮಣ್ಯವನ್ನೂ, ಸತ್ಕುಲಪ್ರಸೂತಿತ್ವವನ್ನೂ, ಸರ್ವಜ್ಞತ್ವವನ್ನೂ ಹೊಂದುವಂಥಾವನಾಗುವನು. ಈ ವಿಷಯದಲ್ಲಿ ಚರ್ಚೆಯುಂಟೈಯ್ಯತಕ್ಕದ್ದಲ್ಲಾ ಎಂಬದಾಗಿ ಕಮಲಾಸನನು ಹರಿಯಂ ಸ್ತುತಿಸಿ, ಇಂದ್ರಾದಿ ದೇವತೆಗಳೆಲ್ಲ ರಂ ವೀಕ್ಷಿಸಿ, ತನ್ನ ಲೋಕವಂ ಕುರಿತು ತೆರಳಿದನು ॥೧೭೧॥ ಆ ಬಳಿಕ ನಾರದ ಮಹಾಮುನಿಯು ಸೂರ್ಯನಂ ಕಾಣ

Funding: Tattva Heritage Foundation,Kolkata. Digitization: eGangotri.
CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದ್ಯಾಭಿಪೂಜಿತಃ । ಆಖ್ಯಾನಮಿದಮಾಚಷ್ಟ ಮಮಾನುಗ್ರಹಕಾಮ್ಯಯಾ ॥೨೩॥ ಮಯಾಪ್ಯೇತತ್ಸದಸ್ಯೇತ್ಯ ಪಾವನಾ
ರ್ಥಂ ಮನೋರಮಮ್ । ಭಕ್ತ್ಯಾ ತವ ಮಹಾಬಾಹೋ ಕಥಾಮೃತಮುದಾಹೃತಮ್ ॥೨೪॥ ಏತದರ್ಥಂ ಮಹಾಬಾಹೋ
ರಾವಣೇನ ದುರಾತ್ಮನಾ । ವಿಜ್ಞಾಯ ಚ ಹೃತಾ ಸೀತಾ ತ್ವತ್ತೋ ಮರಣಕಾಂಕ್ಷಯಾ ॥೨೫॥ ಭವಾನ್ನಾರಾಯಣೋ ದೇವ
ಶ್ಶಂಖಚಕ್ರಗದಾಧರಃ । ಶಾರ್ಙ್ಗಪದ್ಮಾಯುಧಧರಃ ಸರ್ವದೇವನಮಸ್ಕೃತಃ ॥೨೬॥ ಶ್ರೀವತ್ಸಾಂಕೋ ಹೃಷೀಕೇಶಸ್ಸರ್ವ
ದೇವಾಭಿಪೂಜಿತಃ । ಪದ್ಮನಾಭೋ ಮಹಾಯೋಗೀ ಭಕ್ತಾನಾಮಭಯಪ್ರದಃ ॥೨೭॥ ವಧಾರ್ಥಂ ರಾವಣಸ್ಯ ತ್ವಂ ಪ್ರವಿ
ಷ್ಟೋ ಮಾನುಷೀಂ ತನುಮ್ । ಕಿನ್ನವೇತ್ಸಿ ತ್ವಮಾತ್ಮಾನಂ ರಾಮ ನಾರಾಯಣೋ ಹ್ಯಹಮ್ ॥೨೮॥ ತ್ರಿಗುಣಶ್ಚ ತ್ರಿವೇದೀ ಚ ತ್ರಿ
ಧಾಮಾ ತ್ರಿಪದಾತ್ಮಕಃ । ತ್ರಿಕಾಲಕರ್ಮಾ ತ್ರೈವಿದ್ಯಃ ತ್ರಿದಶಾರಿಪ್ರಮರ್ದನಃ ॥೨೯॥ ತ್ವಯಾಕ್ರಾಂತಾಸ್ತ್ರಯೋ ಲೋಕಾಃ

---

ಶಾಸ್ತ್ರವಾಗಿ, ಸಮ್ಯಕ್-ಚನ್ನಾಗಿ, ಅಭಿವಾದ್ಯ-ನಮಸ್ಕರಿಸಿ, ಅಭಿಪೂಜಿತಃ-ಪೂಜಿಸಲ್ಪಟ್ಟವನಾಗಿ, ಮಮ-ನನಗೆ, ಅನುಗ್ರಹಕಾಮ್ಯಯಾ-ಅನು
ಗ್ರಹ ಮಾಡಬೇಕೆಂಬ ಇಚ್ಛೆಯಿಂದ, ಇದಂ ಆಖ್ಯಾನಂ-ಈ ಉಪಾಖ್ಯಾನವನ್ನು, ಆಚಷ್ಟ-ಹೇಳಿದನು ॥೨೩॥ ಮಯಾಪಿ-ನನ್ನಿಂದಲೂ ಕೂಡ, ಹೇ ಮ
ಹಾಬಾಹೋ-ಎಲೈ ಮಹಾ ಭುಜಪರಾಕ್ರಮಶಾಲಿಯೇ, ಎತತ್ಸದಸಿ-ಈ ಸದಸ್ಸಿನಲ್ಲಿ, ಎತ್ಯ-ಬಂದು, ಮನೋರಮಂ- ಮನೋಹರವಾದ, ಕಥಾಮೃ
ತಂ-ಅಮೃತದೋಪಾದಿಯಲ್ಲಿರುವ ಕಥೆಯು, ಪಾವನಾರ್ಥಂ-ಲೋಕಪರಿಶುದ್ಧ್ಯರ್ಥವಾಗಿ, ಭಕ್ತ್ಯಾ-ಭಕ್ತಿಯಿಂದ, ತವ-ನಿನಗೆ, ಉದಾಹೃತಂ- ಹೇಳಲ್ಪ
ಟ್ಟಿತು ॥೨೪॥ ಹೇ ಮಹಾಬಾಹೋ, ಎಲೈ ಮಹಾ ಭುಜಪರಾಕ್ರಮಿಯೇ, ಎತದರ್ಥಂ-ಈ ಅರ್ಥವನ್ನು, ವಿಜ್ಞಾಯ-ತಿಳಿದು, ದುರಾತ್ಮನಾ-ದುಷ್ಟ
ನಾದ, ರಾವಣೇನ-ರಾವಣನಿಂದ, ತ್ವತ್ತಃ-ನಿನ್ನ ಕಡೆಯಿಂದ, ಮರಣಕಾಂಕ್ಷಯಾ-ಮರಣದಲ್ಲಿ ಇಚ್ಛೆಯಿಂದ, ಸೀತಾ-ಸೀತಾದೇವಿಯು, ಹೃತಾ-ಅಪಹರಿಸ
ಲ್ಪಟ್ಟಳು, ಭವಾನ್-ನೀನು, ನಾರಾಯಣಃ- ಉದಕವೇ ಸ್ಥಾನವಾಗುಳ್ಳ, ಶಂಖಚಕ್ರಗದಾಧರಃ-ಶಂಖಚಕ್ರಗದೆಗಳನ್ನು ಧರಿಸಿರುವ, ಶಾರ್ಙ್ಗಪದ್ಮಾಯು
ಧಧರಃ-ಶಾರ್ಙ್ಗ-ಧನುಸ್ಸಿನನ್ನು, ಪದ್ಮ-ಕಮಲಗಳನ್ನು, ಆಯುಧಧರಃ-ಆಯುಧಗಳನ್ನೂ ಧರಿಸಿರುವ, ಸರ್ವದೇವನಮಸ್ಕೃತಃ-ಸಮಸ್ತ ದೇವತೆಗಳಿಂ
ದ ನಮಸ್ಕರಿಸಲ್ಪಟ್ಟ, ಶ್ರೀವತ್ಸಾಂಕಃ-ಶ್ರೀವತ್ಸವೇ ಲಾಂಛನವಾಗುಳ್ಳ, ಹೃಷೀಕೇಶಃ-ಇಂದ್ರಿಯಗಳಿಗೆಲ್ಲಾ ನಿಯಾಮಕನಾದ, ಸರ್ವದೇವಾಭಿಪೂಜಿತಃ-ಸ
ಮಸ್ತ ದೇವತೆಗಳಿಂದಲೂ ಪೂಜಿಸಲ್ಪಟ್ಟ, ಪದ್ಮನಾಭಃ-ಚತುರ್ದಶಭುವನಾತ್ಮಕವಾದ ಪದ್ಮವೇ ನಾಭಿಯಲ್ಲಿ ಉಳ್ಳ, ಮಹಾಯೋಗೀ-ಮಹಾಜ್ಞಾನಿಯಾ
ದ, ಭಕ್ತಾನಾಂ-ಭಕ್ತರಿಗೆ, ಅಭಯಪ್ರದಃ-ಅಭಯಪ್ರದಾಯಕನಾದ, ದೇವಃ-ವಿಷ್ಣುವು, ರಾವಣಸ್ಯ-ರಾವಣನ, ವಧಾರ್ಥಂ-ಸಂಹಾರಕ್ಕೋಸ್ಕರ, ತ್ವಂ-
ನೀನು, ಮಾನುಷೀಂ-ಮನುಷ್ಯಸಂಬಂಧವಾದ, ತನುಂ-ಶರೀರವನ್ನು, ಪ್ರವಿಷ್ಟಃ-ಪ್ರವೇಶಮಾಡಿದೆ, ಹೇ ರಾಮ-ಎಲೈ ಶ್ರೀರಾಮನೇ, ಅಹಂ- ನಾನು,
ನಾರಾಯಣೋಹಿ-ನಾರಾಯಣನಲ್ಲವೇ, ಇತಿ-ಇಂತೆಂದು, ತ್ವಂ-ನೀನು, ಆತ್ಮಾನಂ-ನಿನ್ನನ್ನು, ನವೇತ್ಸಿಕಿಂ-ತಿಳಿಯಲಿಲ್ಲವೋ ಏನು ॥೨೮॥ ಹೇಮ
ಹಾಭಾಗ-ಎಲೈ ಪುಣ್ಯಶಾಲಿಯೇ, ಮಾಮುಹ್ಯಸ್ವ-ಮೋಹವ ಹೊಂದಬೇಡ, ಆತ್ಮಾನಂ-ತನ್ನನ್ನು, ಆತ್ಮನಾ-ಮನಸ್ಸಿನಿಂದ, ಸ್ಮರಚ- ಸ್ಮರಣೆಮಾ
ಡಿಕೋ, ಹಿ- ಯಾವಕಾರಣದ ಕಡೆಯಿಂದ, ತ್ವಂ-ನೀನು, ಗುಹ್ಯಾತ್-ರಹಸ್ಯ ವಸ್ತುವಿಗಿಂತಲೂ, ಗುಹ್ಯತರಃ-ಅತಿರಹಸ್ಯವಾಗಿರುವನು, ಏವಂ-ಈ ಪರಿಯಾ
ಗಿ, ಪಿತಾಮಹಃ-ಬ್ರಹ್ಮನು, ಆಹ-ಹೇಳಿದನು ॥೨೯॥ ತ್ರಿಗುಣಶ್ಚ-ಸತ್ವರಜಸ್ತಮವೆಂಬ ಗುಣತ್ರಯಮುಳ್ಳವನು, ತ್ರಿವೇದೀಚ-ಋಗ್ಯಜುಸ್ಸಾಮಾತ್ಮಕ-ವೇ

---

ಬೇಕೆಂದು ಆ ಸಭೆಯಿಂದ ಬಂದು ಮೇರು ಗಿರಿಯ ಪೃಷ್ಠ ಭಾಗದಲ್ಲಿ ಬರುತಿರುವವನಾಗಿ, ನನ್ನ ಸಮೀಪಕ್ಕೆ ಬಂದವನಾ
ಗಲೂ, ಎನ್ನಿಂದ ಯಥಾವಿಧಿಯಾಗಿ ಪೂಜಿಸಲ್ಪಟ್ಟವನಾಗಿ, ನನ್ನಲ್ಲಿ ಅನುಗ್ರಹಿಸಿ, ಈ ಆಖ್ಯಾನವಂ ಹೇಳಿದವನಾದ
ನು ॥೨೩॥ ಎಲೈ ಮಹಾಭುಜಪರಾಕ್ರಮಿಯಾದ ಶ್ರೀರಾಮನೇ! ನಾನೀ ಸಭೆಯಲ್ಲಿ ಮನೋಹಾರಿಯಾದ ಈ ಕಥಾ
ಮೃತವನ್ನು ನಿನ್ನ ಭಕ್ತಿಯಿಂದ ಹೇಳಿದವನಾದೆನು ॥೨೪॥ ಎಲೈ ಮಹಾಬಾಹುಗಳುಳ್ಳವನೇ ! ದುರಾತ್ಮನಾದ ರಾವಣ
ನು ಈ ಅರ್ಥವನ್ನರಿತು ತನ್ನ ಸಂಹಾರಕ್ಕೋಸುಗ ಸೀತಾಪಹಾರವಂಗೈದನು ॥೨೫॥ ಉದಕವೇ ಸ್ಥಾನವಾಗುಳ್ಳ
ವನಾಗಿಯೂ, ಶಂಖಚಕ್ರ ಗದಾಧಾರಿಯಾಗಿಯೂ, ಶಾರ್ಙ್ಗವೆಂಬ ಕೋದಂಡವನ್ನೂ ಪದ್ಮವನ್ನೂ ಸಹಾ ಧರಿಸಿದವ
ನಾಗಿಯೂ, ದೇವಾದಿ ದೇವತೆಗಳಿಂದ ನಮಸ್ಕರಿಸಲ್ಪಡುತಿರುವನಾಗಿಯೂ, ಶ್ರೀವತ್ಸವೆಂಬ ಚಿಹ್ನೆಯೇ ಗುರ್ತಾಗುಳ್ಳವ
ನಾಗಿಯೂ, ಚಕ್ಷುರಾದೀಂದ್ರಿಯಂಗಳಿಗೆ ನಿಯಾಮಕನಾಗಿಯೂ, ಚತುರ್ದಶಭುವನಾತ್ಮಕವಾದ ಪದ್ಮವೇ ನಾಭಿಯಾ
ಗಿಉಳ್ಳವನಾಗಿಯೂ, ಮಹಾಜ್ಞಾನಿಯಾಗಿಯೂ, ಭಕ್ತರಿಗೆ ಅಭಯಪ್ರದಾನಂಗೈಯ್ಯುವವನಾಗಿಯೂ ಇರುವ ಶ್ರೀಮ
ಹಾವಿಷ್ಣುವೇ ನೀನು ॥೨೭॥ ದಶಕಂಠನ ಸಂಹಾರಾರ್ಥವಾಗಿ ಮಾನುಷಾವತಾರವಂತಾಳಿ ಸಂಜನಿಸಿದವನಾದೆ.
ನೀನೇ ನಾರಾಯಣನೆಂದು ಯಾಕೆ ನಿನಿಗೆ ತಿಳಿಯದು ? ॥೨೮॥ ಎಲೈ ಮಹಾ ಪುಣ್ಯವಂತನೇ ! ನೀನು ಮೋಹವಂ
ಹೊಂದಬಾಡ, ಮನದಿಂದ ಸ್ಮರಿಸಿಕೋ, ನೀನು ರಹಸ್ಯ ವಸ್ತುವಿಗಿಂತಲೂ ಅತಿಗೋಪ್ಯವಾಗಿರುವನೆಂದು ಪಿತಾಮಹ
ನು ನುಡಿದನು ॥೨೯॥ ಎಲೈ ಪೂಜ್ಯನೇ ! ಸತ್ವರಜಸ್ತಮಸ್ಸುಗಳೆಂಬ ಗುಣತ್ರಯಮುಳ್ಳವನಾಗಿಯೂ, ಋಗ್ಯಜು

CC-0. Bhagavad Ramahuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪುರಾಣೈರ್ವಿಕ್ರಮೈಸ್ತ್ರಿಭಿಃ । ತ್ವಂ ಮಹೇಂದ್ರಾನುಜಃ ಶ್ರೀಮಾನ್ ಬಲಿಬಂಧನಕಾರಣಾತ್ ॥ ೨೮೧ ॥ ಅದಿತ್ಯಾಂ ಗರ್ಭಸಂಭೂತೋ ವಿಷ್ಣುಸ್ತ್ವಂ ಹಿ ಸನಾತನಃ । ಲೋಕಾನನುಗ್ರಹೀತುಂ ವೈ ಪ್ರವಿಷ್ಟೋ ಮಾನುಷೀಂ ತನುಮ್ ॥ ತದಿದಂ ಸಾಧಿತಂ ಕಾರ್ಯಂ ಸುರಾಣಾಂ ಸುರಸತ್ತಮ ॥ ೨೮೪ ॥ ಸೀತಾ ಲಕ್ಷ್ಮೀರ್ಮಹಾಭಾಗಾ ಸಂಭೂತಾ ವಸುಧಾತಲೇ । ತ್ವದರ್ಥಮಿಯಮುತ್ಪನ್ನಾ ಜನಕಸ್ಯ ಗೃಹೇ ಶುಭಾ ॥ ೨೮೫ ॥ ಲಂಕಾಮಾನೀಯ ಯತ್ನೇನ ಮಾತೇವ ಪರಿರಕ್ಷಿತಾ । ಏವಮೇತತ್ಸಮಾಖ್ಯಾತಂ ತವ ರಾಮ ಮಹಾಯಶಃ ॥ ೨೮೬ ॥ ಮಮಾಪಿ ನಾರದೇನೋಕ್ತಂ ಋಷಿಣಾ ದೀರ್ಘಜೀವಿನಾ । ಯಥಾಹ ಸನತ್ಕುಮಾರೇಣ ವ್ಯಾ

ವೇದತ್ರಯಸ್ವರೂಪನು, ತ್ರಿಧಾಮಾ–ಸ್ವರ್ಗಮರ್ತ್ಯ ಪಾತಾಳಗಳೆಂಬ ಮೂರು ಸ್ಥಾನಗಳುಳ್ಳವನು, (ಯದ್ವಾ) ವೈಕುಂಠ ಸೂರ್ಯಮಂಡಲಭಕ್ತಹೃದಯಗಳೆಂಬ ಮೂರು ಸ್ಥಾನಗಳುಳ್ಳವನು, ತ್ರಿಪದಾತ್ಮಕಃ–ಜಗತ್ತಿಗಿಂತಲೂ ಮೂರುಪಾದ ಅಧಿಕವಾಗಿ ಉಳ್ಳವನು (ಯದ್ವಾ)–ತ್ರಿಪದಾತ್ಮಕಃ–ತ್ರಿವಿಕ್ರಮಸ್ವರೂಪನು) ತ್ರಿಕಾಲಕರ್ಮಾ, ತ್ರಿ–ಮೂರಾದ, ಕಾಲ–ಭೂತಭವಿಷ್ಯದ್ವರ್ತಮಾನಕಾಲಗಳೂ, ಕರ್ಮಾ–ಸಂಚಿತಪ್ರಾರಬ್ಧಗಳೆಂಬ ಕರ್ಮತ್ರಯವೂ ಉಳ್ಳವನು, ತ್ರೈವಿದ್ಯಃ–ಕರ್ಮಜ್ಞಾನಯೋಗಗಳೆಂಬ ತ್ರಿವಿದ್ಯಾಸ್ವರೂಪನು, ತ್ರಿದಶಾರಿಪ್ರಮರ್ದನಃ – ದೇವಶತ್ರುಗಳನ್ನೆಲ್ಲಾ ಸಂಹಾರಮಾಡುವನು ತ್ವಯಾ–ನಿನ್ನಿಂದ, ತ್ರಯೋಲೋಕಾಃ–ಮೂರುಲೋಕಗಳು, ಪುರಾಣೈಃ–ಪುರಾತನಗಳಾದ, ತ್ರಿಭಿಃ– ಮೂರಾದ, ವಿಕ್ರಮೈಃ– ಪಾದನ್ಯಾಸಗಳಿಂದ, ಆಕ್ರಾಂತಾಃ–ಆಕ್ರಮಿಸಲ್ಪಟ್ಟವು. ತ್ವಂ–ನೀನು, ಬಲಿಬಂಧನಕಾರಣಾತ್–ಬಲಿಚಕ್ರವರ್ತಿಯ ಬಂಧನನಿಮಿತ್ತವಾಗಿ, ಶ್ರೀಮಾನ್–ಸಂಪದ್ಯುಕ್ತನಾದ, ಮಹೇಂದ್ರಾನುಜಃ–ಉಪೇಂದ್ರನೆಂದು ಹೆಸರುಳ್ಳವನಾಗಿ, ಅದಿತ್ಯಾಃ–ಅದಿತಿದೇವಿಯ, ಗರ್ಭಸಂಭೂತಃ–ಗರ್ಭದಲ್ಲಿ ಹುಟ್ಟಿದವನಾದೆ ॥೨೮೧॥ ತ್ವಂ–ನೀನು, ಸನಾತನಃ–ಅನಾದಿಸಿದ್ಧನಾದ, ವಿಷ್ಣುರ್ಹಿ–ವಿಷ್ಣುವಷ್ಟೆ, ಲೋಕಾನ್–ಲೋಕಗಳನ್ನು, (ಅಥವಾ–ಜನರನ್ನು) ಅನುಗ್ರಹೀತುಂ–ಅನುಗ್ರಹಮಾಡುವದಕ್ಕೋಸ್ಕರ, ಮಾನುಷೀಂ–ಮನುಷ್ಯಸಂಬಂಧವಾದ, ತನುಂ–ಶರೀರವನ್ನು, ಪ್ರವಿಷ್ಟಃ–ಪ್ರವೇಶಮಾಡಿದ್ದೀ, ಹೇ ಸುರಸತ್ತಮ–ಎಲೈ ಸುರಶ್ರೇಷ್ಠನೇ, ತತ್–ತಸ್ಮಾತ್ಕಾರಣಾತ್–ಆ ಕಾರಣದಿಂದಲೇ, ಸುರಾಣಾಂ–ದೇವತೆಗಳ, ಇದಂ ಕಾರ್ಯಂ–ಈ ಕಾರ್ಯವು, ಸಾಧಿತಂ–ಸಾಧಿಸಲ್ಪಟ್ಟಿತು, ಪಾಪಂ– ಪಾಪಿಷ್ಠನಾದ, ರಾವಣಃ– ರಾವಣನು, ಸಪುತ್ರಗಣಬಾಂಧವಃ– ಪುತ್ರಬಂಧುಗಳೊಡಗೂಡಿದವನಾಗಿ, ನಿಹತಃ–ಸಂಹಾರಮಾಡಲ್ಪಟ್ಟನು ॥೨೮೨॥ ಸರ್ವೇ ಸುರಾಃ–ಸಮಸ್ತರಾದ ದೇವತೆಗಳೂ, ತಪೋಧನಾಃ–ತಪಸ್ಸೇ ಧನವಾಗುಳ್ಳ, ಋಷಯಶ್ಚ–ಋಷಿಗಳೂನು, ಪ್ರಹೃಷ್ಟಾಃ–ಸಂತೋಷಗೊಂಡರು, ಹೇ ಸುರೇಶ್ವರ–ಎಲೈ ದೇವನಾಥನೇ, ಸರ್ವಂ–ಸಮಸ್ತವಾದ, ಜಗತ್–ಜಗತ್ತೆಲ್ಲಾ, ತ್ವತ್ಪ್ರಸಾದಾತ್–ನಿನ್ನ ಅನುಗ್ರಹದಿಂದಲೆಯಿಂದ, ಪ್ರಶಾಂತಂ– ತಣ್ಣಗಾದಂಥಾದ್ದಾಯಿತು ॥೨೮೪॥ ಮಹಾಭಾಗ–ಮಹಾ ಪುಣ್ಯವಂತಳಾದ, ಶುಭಾ–ಶುಭಕರಳಾದ, ಲಕ್ಷ್ಮೀಃ–ಲಕ್ಷ್ಮೀದೇವಿಯು, ತ್ವದರ್ಥಂ–ನಿನ್ನ ನಿಮಿತ್ತವಾಗಿ, ಇಯಂ ಸೀತಾ–ಈ ಸೀತಾಸ್ವರೂಪಳಾಗಿ, ಜನಕಸ್ಯ–ಜನಕರಾಯನ, ಗೃಹೇ–ಗೃಹದಲ್ಲಿ, ಸಮುತ್ಪನ್ನಾ, ಅಭಿವ್ಯಕ್ತಳಾಗಿ, ವಸುಧಾತಲೇ– ಭೂಪ್ರದೇಶದಲ್ಲಿ, ಸಂಭೂತಾ–ಹುಟ್ಟಿದಳು ॥೨೮೫॥ ಲಂಕಾಂ–ಲಂಕಾಪಟ್ಟಣವನ್ನು ಕುರಿತು, ಆನೀಯ–ಕರೆದುಕೊಂಡುಹೋಗಿ, ಯತ್ನೇನ–ಪ್ರಯತ್ನದಿಂದ ಮಾತೇವ–ತಾಯಿಯೋಪಾದಿಯಲ್ಲಿ, ಪರಿರಕ್ಷಿತಾ–ಸಂರಕ್ಷಣೆ ಮಾಡಲ್ಪಟ್ಟಳು, ಹೇ ರಾಮ, ಎಲೈ ಶ್ರೀರಾಮನೇ, ಹೇ ಮಹಾಯಶಾಃ– ಎಲೈ ಮಹಾಕೀರ್ತಿವಂತನೇ, ಏವಂ–ಈಪರಿಯಾಗಿ, ಸಮಾಖ್ಯಾತಂ– ಹೇಳಲ್ಪಟ್ಟಿತು ॥೨೮೬॥ ಮಮಾಪಿ–ನನಗೂನು, ದೀರ್ಘಜೀವಿನಾ–ಚಿರಜೀವಿಯಾದ, ಋಷಿಣಾ–ಋಷಿಯಾದ, ನಾರದೇನ–ನಾರದನಿಂದ, ಉಕ್ತಂ–ಹೇಳಲ್ಪಟ್ಟಿತು, ಯಥಾ–ಹ್ಯಾಗೆ–ಸನತ್ಕುಮಾರೇಣ–ಸನತ್ಕುಮಾರನಿಂದ, ತಸ್ಯ ರಕ್ಷಸಃ–ಆ ರಾವಣಾಸುರನಿ

ಸಾಮಗಳೆಂಬ ವೇದತ್ರಯಾತ್ಮಕನಾಗಿಯೂ, ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಸ್ಥಾನಂಗಳುಳ್ಳವನಾಗಿಯೂ (ಅಥವಾ ವೈಕುಂಠವು ಸೂರ್ಯಮಂಡಲವು ಭಕ್ತಜನ ಚಿತ್ತವು ಎಂಬ ಮೂರು ಸ್ಥಳಗಳಲ್ಲಿರುವನಾಗಿಯೂ) ತ್ರಿವಿಕ್ರಮ ಸ್ವರೂಪನಾಗಿಯೂ, ಭೂತ ಭವಿಷ್ಯದ್ವರ್ತಮಾನಂಗಳೆಂಬ ತ್ರಿಕಾಲಗಳಲ್ಲಿಯೂ ಆಗಾಮಿಸಂಚಿತ ಪ್ರಾರಬ್ಧಗಳೆಂಬ ಕರ್ಮತ್ರಯವುಳ್ಳವನಾಗಿಯೂ, ಕರ್ಮಜ್ಞಾನಯೋಗಗಳೆಂಬ ತ್ರಿವಿದ್ಯಾಸ್ವರೂಪನಾಗಿಯೂ, ರಾಕ್ಷಸರ ಸಂಹಾರಕನಾಗಿಯೂ ಇರುವ ನಿನ್ನಿಂದ ಪೂರ್ವಕಾಲದಲ್ಲಿ ಬಲಿಚಕ್ರವರ್ತಿಯ ಬಂಧನಾರ್ಥವಾಗಿ ಲೋಕತ್ರಯವು ಮೂರು ಪಾದನ್ಯಾಸಗಳಿಂದ ವ್ಯಾಪಿಸಲ್ಪಟ್ಟಂಥಾದ್ದಾಯಿತು, ಮತ್ತು ಅದಿತಿದೇವಿಗರ್ಭದಲ್ಲಿ ಉಪೇಂದ್ರನೆಂದು ಪ್ರಸಿದ್ಧನಾಗಿ ಸಂಜನಿಸಿದವನಾಗಿಯೂ, ಲೋಕಾನುಗ್ರಹಾರ್ಥವಾಗಿ ಈಗ ಮಾನುಷವಿಗ್ರಹವಂ ಧರಿಸಿದವನಾಗಿಯೂ ಇರುವನಾಗಿ, ದೇವಕಾರ್ಯವಂ ಸಾಧಿಸಿದವನಾದೆ. ಕಡು ಪಾಪಿಯಾದ ದಶಕಂಧರನು ಸುತ ಬಂಧುಸಹಿತನಾಗಿ ನಿನ್ನಿಂದ ಕೊಲ್ಲಲ್ಪಟ್ಟನು ॥೨೮೩॥ ಎಲೈ ಸುರೇಶ್ವರನೇ! ನಿನ್ನ ಅನುಗ್ರಹದಿಂದ ಜಗವೆಲ್ಲಾ ತಣ್ಣಗಿರುವದು. ದೇವತೆಗಳೂ ತಪಸ್ಸೇ ಧನವಾಗುಳ್ಳ ಋಷಿಗಳೂ ಸಹಾ ಸಂತುಷ್ಟರಾಗಿರುವರು. ಸಾಕ್ಷಾಲ್ಲಕ್ಷ್ಮೀದೇವಿಯು ಭೂಮಂಡಲದಲ್ಲಿ ಸೀತೆಯೆಂದು ಪ್ರಸಿದ್ಧಳಾಗಿ ನಿನಗೋಸುಗ ಜನಕರಾಜನ ಮಂದಿರದಲ್ಲಿ ಜನಿಸಿದವಳಾದಳು ॥೨೮೫॥ ಎಲೈ ರಘುನಂದನನೇ! ನಿನ್ನ ಸತಿಯಾದ ಸೀತಾದೇವಿಯು ದಶಕಂಠನಿಂದ ಅಪಹರಿಸಲ್ಪಟ್ಟು, ಜನನಿಯಂತೆ ರಕ್ಷಿಸಲ್ಪಟ್ಟಳು. ಇದನ್ನೆಲ್ಲ ನಿನಗೆ ವಿಸ್ತಾರವಾಗಿ ಹೇಳಿದೆನು ॥೨೮೬॥ ಸನತ್ಕುಮಾರಮುನಿಯು ಆ ರಾವಣನಿಗೆ ಉಸುರಿದಂತೆ ದೀರ್ಘಜೀವಿಯಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಖ್ಯಾತಂ ತಸ್ಯ ರಕ್ಷಸಃ ॥೧೭॥ ತೇನಾಪಿ ಚ ತದೇವಾಶು ಕೃತಂ ಸರ್ವಮಶೇಷತಃ । ಯಶ್ಚೈತಚ್ಛ್ರಾವಯೇಚ್ಛ್ರಾದ್ಧೇ ವಿದ್ವಾನ್ ಬ್ರಾಹ್ಮಣಸನ್ನಿಧೌ ॥೧೮॥ ಅನಂತಮಕ್ಷಯಂ ದತ್ತಂ ಪಿತೄಣಾಮುಪತಿಷ್ಠತಿ । ಏತಾಂ ಶ್ರುತ್ವಾ ಕಥಾಂ ದಿವ್ಯಾಂ ರಾಮೋ ರಾಜೀವಲೋಚನಃ ॥೧೯॥ ಪರಂ ವಿಸ್ಮಯಮಾಪನ್ನೋ ಭ್ರಾತೃಭಿಸ್ಸಹ ರಾಘವಃ । ವಾನರಾಸ್ಸಹಸುಗ್ರೀವಾ ರಾಕ್ಷಸಾಸ್ಸವಿಭೀಷಣಾಃ ॥೨೦॥ ರಾಜಾನಸ್ಸಹ ಮುಖ್ಯಾಮಾತ್ಯಾ ಯೇ ಚಾನ್ಯೇ ಚ ಸಮಾಗತಾಃ । ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾ ಧರ್ಮಸಮನ್ವಿತಾಃ ॥ ಸರ್ವೇ ಚೋತ್ಫುಲ್ಲನಯನಾಸ್ಸರ್ವೇ ಹರ್ಷಸಮನ್ವಿತಾಃ । ರಾಮಮೇವಾನುಪಶ್ಯಂತಿ ಭೃಶಮತ್ಯಂತಹರ್ಷಿತಾಃ । ಅಗಸ್ತ್ಯಸ್ತ್ವಬ್ರವೀದ್ರಾಮಂ ಸರ್ವಮೇತಚ್ಛ್ರುತಂ ತ್ವಯಾ । ದೃಷ್ಟಸ್ಸಂಭಾಷಿತಶ್ಚಾಪಿ ರಾಮ ಗಚ್ಛಾಮಹೇ ವಯಂ ॥೨೧॥

ಅಧಿಕಪಾಠಸ್ಸಮಾಪ್ತಃ.

ಶ್ರುತ್ವೈತದ್ರಾಘವೋ ವಾಕ್ಯಮಗಸ್ತ್ಯಸ್ಯೋಗ್ರತೇಜಸಃ । ಪ್ರಾಂಜಲಿಃ ಪ್ರಣತಶ್ಚಾಪಿ ಮಹರ್ಷಿಮಿದಮಬ್ರವೀತ್ ॥೨೨॥ ಅದ್ಯ ಮೇ ದೇವತಾ ಹೃಷ್ಟಾಃ ಪಿತರಃ ಪ್ರಪಿತಾಮಹಾಃ । ಯುಷ್ಮಾಕಂ ದರ್ಶನಾದೇವ ನಿತ್ಯಂ ತುಷ್ಟಾಸ್ಸಬಾಂಧವಾಃ ॥೨೩॥ ವಿ

---

ಗೆ, ವ್ಯಾಖ್ಯಾತಂ-ಹೇಳಲ್ಪಟ್ಟಿತೋ, ತೇನಾಪಿ-ಆ ರಾವಣನಿಂದಲೂ ಕೂಡ, ತದೇವ-ಅದೇ, ಸರ್ವಂ-ಸಮಸ್ತವೂನು, ಆಶು-ಜಾಗ್ರತೆಯಾಗಿ, ಅಶೇಷತಃ-ಸಮಗ್ರವಾಗಿ, ಕೃತಂ-ಮಾಡಲ್ಪಟ್ಟಿತು ॥೧೭॥ ಯಶ್ಚ-ಯಾವ, ವಿದ್ವಾನ್-ವಿದ್ವಾಂಸನು, ಶ್ರಾದ್ಧೇ-ಶ್ರಾದ್ಧಕಾಲದಲ್ಲಿ, ಬ್ರಾಹ್ಮಣಸನ್ನಿಧೌ-ಬ್ರಾಹ್ಮರಸನ್ನಿಧಿಯಲ್ಲಿ, ಏತತ್-ಈ ಉಪಾಖ್ಯಾನವನ್ನು, ಶ್ರಾವಯೇತ್-ಕೇಳಿಸುವನೋ ॥೧೮॥ ಅನಂತಂ-ಅಸಂಖ್ಯಾತವಾದ, ಪಿತೄಣಾಂ-ಪಿತೃಗಳಿಗೆ, ದತ್ತಂ-ಕೊಡಲ್ಪಟ್ಟ ದಾನವು, ಅಕ್ಷಯಂ-ಅಕ್ಷಯವಾಗಿ, ಉಪತಿಷ್ಠತಿ-ಉಪಯೋಗಿಸುತ್ತದೆ, ರಾಜೀವಲೋಚನಃ-ಕಮಲಗಳೋಪಾದಿಯಲ್ಲಿ ನೇತ್ರಗಳುಳ್ಳ, ರಾಘವಃ-ರಘುಕುಲೋತ್ಪನ್ನನಾದ, ರಾಮಃ-ಶ್ರೀರಾಮನು, ಭ್ರಾತೃಭಿಸ್ಸಹ-ತಮ್ಮಂದಿಯರೊಡನೇ,ದಿವ್ಯಾಂ-ಮನೋಹರವಾದ, ಏತಾಂ ಕಥಾಂ-ಈ ಕಥೆಯನ್ನು, ಶ್ರುತ್ವಾ-ಕೇಳಿ, ಪರಂ-ಅತ್ಯಂತವಾಗಿ, ವಿಸ್ಮಯಂ-ಆಶ್ಚರ್ಯವನ್ನು, ಆಪನ್ನಃ-ಹೊಂದಿದನು ॥೧೯॥ ಸಹಸುಗ್ರೀವಾಃ-ಸುಗ್ರೀವನಿಂದೊಡಗೂಡಿದ, ವಾನರಾಶ್ಚ-ಕಪಿಗಳೂನು, ಸವಿಭೀಷಣಾಃ-ವಿಭೀಷಣನಿಂದೊಡಗೂಡಿದ, ರಾಕ್ಷಸಾಶ್ಚ-ರಾಕ್ಷಸರೂನು, ರಾಜಾನಶ್ಚ-ಅರಸರೂನು, ಮುಖ್ಯಾಮಾತ್ಯಾಃ-ಮುಖ್ಯ ಮಂತ್ರಿಗಳೂ, ಅನ್ಯೇ ಮತ್ತು ಕೆಲಬರಾದ, ಯೇ-ಯಾರು, ಸಮಾಗತಾಃ-ಬಂದಿರುವರೋ, ತೇಪಿ-ಅವರೂನು, ಬ್ರಾಹ್ಮಣಾಃ-ಬ್ರಾಹ್ಮಣರೂನು, ಕ್ಷತ್ರಿಯಾಃ-ಕ್ಷತ್ರಿಯರೂನು, ವೈಶ್ಯಾಃ-ವೈಶ್ಯರು, ಧರ್ಮಸಮನ್ವಿತಾಃ-ಧರ್ಮದಿಂದ ಕೂಡಿಕೊಂಡಿರುವ, ಶೂದ್ರಾಶ್ಚ-ಶೂದ್ರರೂನು, ಸರ್ವೇಚ-ಸಮಸ್ತರೂನು, ಉತ್ಫುಲ್ಲನಯನಾಃ-ವಿಕಸಿತಂಗಳಾದ ನೇತ್ರಗಳುಳ್ಳವರಾದರು, ಸರ್ವೇ-ಸಮಸ್ತರೂನು, ಹರ್ಷಸಮನ್ವಿತಾಃ-ಆನಂದದಿಂದ ಕೂಡಿಕೊಂಡಿರುವರಾದರು, ಭೃಶಂ-ಬಹಳವಾಗಿ, ಅತ್ಯಂತಹರ್ಷಿತಾಃ-ಅತ್ಯಂತ-ಅಪಾರವಾದ, ಹರ್ಷಿತಾಃ-ಸಂತೋಷಮುಳ್ಳವರಾಗಿ, ರಾಮಮೇವ-ಶ್ರೀ ರಾಮನನ್ನೇ, ಅನುಪಶ್ಯಂತಿ-ನೋಡುತ್ತಲಿದ್ದರು ॥೨೦॥ ಹೇರಾಮ-ಎಲೈ ಶ್ರೀರಾಮನೇ, ತ್ವಯಾ-ನಿನ್ನಿಂದ, ಸರ್ವಂ-ಸಮಸ್ತವಾದ, ಏತತ್- ಈ ಉಪಾಖ್ಯಾನವು, ಶ್ರುತಂ- ಕೇಳಲ್ಪಟ್ಟಿತೇ, ತ್ವಂ-ನೀನು, ದೃಷ್ಟಃ-ನೋಡಲ್ಪಟ್ಟಿ, ಸಂಭಾಷಿತಶ್ಚ-ಮಾತಾಡಿಸಲೂಪಟ್ಟಿ, ವಯಂ-ನಾವುಗಳು, ಗಚ್ಛಾಮಹೇ-ಹೋಗುತ್ತೇವೆ, ಇತಿ-ಇಂತೆಂದು, ರಾಮಂ-ಶ್ರೀ ರಾಮನು ಕುರಿತು, ಅಗಸ್ತ್ಯಸ್ತು-ಅಗಸ್ತ್ಯಋಷಿಯಾದರೋ, ಅಬ್ರವೀತ್-ನುಡಿದನು. ॥೨೧॥

ರಾಘವಃ-ಶ್ರೀರಾಮನು, ಉಗ್ರತೇಜಸಃ-ಉಗ್ರ-ಭಯಂಕರವಾದ, ತೇಜಸಃ-ತೇಜಸ್ಸುಳ್ಳ, ಅಗಸ್ತ್ಯಸ್ಯ-ಅಗಸ್ತ್ಯಋಷಿಯ-ಏತದ್ವಾಕ್ಯಂ-ಈಮಾತನ್ನು, ಶ್ರುತ್ವಾ-ಕೇಳಿ, ಪ್ರಣತಃ-ನಮಸ್ಕಾರವನ್ನು, ಮಾಡಿದವನಾಗಿ, ಪ್ರಾಂಜಲಿಶ್ಚೈವ-ಅಂಜಲಿಬದ್ಧನು ಆಗಿ, ಮಹರ್ಷಿಂ-ಅಗಸ್ತ್ಯಋಷಿಯಂಕುರಿತು, ಇದಂ-ಈ ವಚನವನ್ನು, ಅಬ್ರವೀತ್-ನುಡಿದನು ॥೨೨॥ ಅದ್ಯ-ಈಗ, ಮೇ-ಯನಗೆ, ದೇವತಾಃ-ದೇವತೆಗಳು, ಸರ್ವೇ-ಸಮಸ್ತರಾದ, ಪಿತರಃ-ಪಿತೃಗಳು, ಪ್ರಪಿ

---

ದ ನಾರದಮಹಾಮುನಿಯು ನನಗೆ ಹೇಳಿದವನಾದನು ॥೧೭॥ ಆ ದಶಕಂಠನಿಂದ ತ್ವರಿತವಾಗಿ ಇದೆಲ್ಲಾ ಮಾಡಲ್ಪಟ್ಟಿತು, ಯಾವಪಂಡಿತನು ಈ ಆಖ್ಯಾನವನ್ನು ಶ್ರಾದ್ಧಕಾಲದಲ್ಲಿ ಶ್ರವಣಮಾಡಿಸುವನೋ, ಆತನ ಪಿತೃಗಳಿಗೆ ಅಪರಿಮಿತವಾಗಿಯೂ, ನಾಶರಹಿತವಾಗಿಯೂ ಇರುವ ದಾನವು ಮಾಡಲ್ಪಟ್ಟಂತೆ ಆಗುವದೆಂದು ಅಗಸ್ತ್ಯಮಹಾಮುನಿಯಿಂದ ವ್ಯಾಖ್ಯಾತವಾದ ಈ ಉಪಾಖ್ಯಾನವನ್ನು ಶ್ರವಣಿಸಿ, ಪುಂಡರೀಕಾಕ್ಷನಾದ ಶ್ರೀರಾಮನು ಅನುಜಸಹಿತನಾಗಿ ಆಶ್ಚರ್ಯಭರಿತನಾಗಲೂ, ಆ ಸಭೆಯಲ್ಲಿ ಕುಳಿತಿರುವ ಸುಗ್ರೀವನೇ ಮೊದಲಾದ ವಾನರರೂ, ವಿಭೀಷಣಸಹಿತರಾದ ರಾಕ್ಷಸರೂ, ರಾಜರೂ, ಮಂತ್ರಿಗಳೂ, ಮತ್ತೂ ಕಡುಧರ್ಮಿಷ್ಠರಾದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂದು ಪ್ರಸಿದ್ಧರಾದ ಚತುರ್ವರ್ಣಸ್ಥರೂ, ಇವರೆಲ್ಲರು ಸಂತುಷ್ಟಾಂತರಂಗವುಳ್ಳವರಾಗಿಯೂ, ವಿಕಸಿತವಾದ ನೇತ್ರಂಗಳುಳ್ಳವರಾಗಿಯೂ ಇರುವರಾಗಿ, ಶ್ರೀರಾಮನನ್ನೇ ವೀಕ್ಷಿಸುತ್ತಿರಲೂ, ಅಗಸ್ತ್ಯಮಹಾಮುನಿಯು ರಘುನಂದನನಂ ಕುರಿತಿಂತೆಂದನು, ಎಲೈ ರಘುಕುಲತಿಲಕನೆ! ನಿನ್ನನ್ನು ನೋಡಿ ಮಾತನಾಡಿಸಿ ಇದನ್ನೆಲ್ಲಾ ನುಡಿದಿರುವೆನು, ಎಲ್ಲವನ್ನೂ ಕೇಳಿದೆಯಾ ಇನ್ನು ನಾವು ಹೋಗಿಬರುವೆವೆಂದು ಕುಂಭಸಂಭವನು ನುಡಿದವನಾದನು ॥೨೧॥ ಬಳಿಕಾ ರಘುವೀರನು ಅಗಸ್ತ್ಯಮುನಿಯ ವಾಕ್ಯವಂ ಕೇಳಿ ಅಂಜಲಿಬದ್ಧನಾಗಿಯೂ ವಿನಯವಂತನಾಗಿಯೂ ಇರುವನಾಗಿ ಆ ಮಹರ್ಷಿಯಂ ಕುರಿತಿಂತೆಂದನು ॥೨೨॥ ಎಲೈ ಪೂಜ್ಯನೆ! ತಮ್ಮ ಸಂದರ್ಶನದಿಂದ ನಮ್ಮ ದೇವ, ಪಿತೃ, ಪಿತಾಮಹರು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜ್ಞಾಪ್ಯಂತುಮಮೈತದ್ಧಿ ಯದ್ವದಾಮ್ಯಾಗತಸ್ಸ್ಪೃಹಃ । ತದ್ಭವದ್ಭಿರ್ಮಮಕೃತೇಕರ್ತವ್ಯಮನುಕಂಪಯಾ ॥೨೬॥ ಪೌರಜಾನಪದಾರ್ಸ್ಥಾಪ್ಯಸ್ವಕಾರ್ಯೇಷ್ವಹಮಾಗತಃ । ಕ್ರತೂನೇವಕರಿಷ್ಯಾಮಿಪ್ರಭಾವಾದ್ಭವತಾಂಸತಾಂ ॥೨೭॥ ಸದಸ್ಯಾಮಮಯಜ್ಞೇಷುಭವಂತೋನಿತ್ಯಮೇವತತ್ । ಭವಿಷ್ಯಥಮಹಾವೀರ್ಯಾಮಮಾನುಗ್ರಹಕಾಂಕ್ಷಿಣಃ ॥೨೮॥ ಅಹಂಯುಷ್ಮಾಂಸ್ತಪಸಾಶ್ರಿತ್ಯತಪೋನಿರ್ಧೂತಕಲ್ಮಷಾನ್ । ಅನುಗ್ರಹೀತಃಪಿತೃಭಿರ್ಭವಿಷ್ಯಾಮಿಸುನಿರ್ವೃತಃ ॥ ತದಾಗಂತವ್ಯಮನಿಶಂಭವದ್ಭಿರಿಹಸಂಗತ್ಯೈಃ ॥೨೯॥ ಅಗಸ್ತ್ಯಾದ್ಯಾಸ್ತುತಚ್ಛ್ರುತ್ವಾ ಋಷಯಸ್ಸಂಶಿತವ್ರತಾಃ । ಏವಮಸ್ತ್ವಿತಿತಂಚೋಕ್ತ್ವಾ ಪ್ರಯಾತುಮುಪಚಕ್ರಮುಃ ॥೩೦॥ ಏವಮುಕ್ತ್ವಾಗತಾಸ್ಸರ್ವೇಋಷಯಸ್ತೇಯಥಾಗತಂ । ರಾಘವಶ್ಚ ತಮೇವಾರ್ಥಂಚಿಂತಯಾಮಾಸವಿಸ್ಮಿತಃ ॥೩೧॥ ತತೋಸ್ತಂಭಾಸ್ಕರೇಯಾತೇವಿಸೃಜ್ಯನೃಪವಾನರಾನ್ । ಸಂಧ್ಯಾಮುಪಾಸ್ಯವಿಧಿವತ್ತದಾನರವರೋತ್ತಮಃ ॥ ಪ್ರವೃತ್ತಾಯಾಂರಜನ್ಯಾಂತುಸೋಂತಃಪುರಚರೋಭವತ್ ॥೩೨॥ —…ಷಟ್ತ್ರಿಂಶಸ್ಸರ್ಗಃ…—

ತಾಮಹರು, ಸಬಾಂಧವಾಃ- ಬಂಧುಸಹಿತರಾಗಿ, ಯುಷ್ಮಾಕಂ- ನಿಮ್ಮ, ದರ್ಶನಾದೇವ- ದರ್ಶನದಿಂದಲೇ, ನಿತ್ಯತುಷ್ಟಾಃ-ನಿರಂತರವೂ ತೃಪ್ತರಾದರು ॥೨೫॥ ಅಹಂ-ನಾನು, ಆಗತಸ್ಪೃಹಃ-ಪ್ರಾಪ್ತವಾದ ಇಚ್ಛೆಯುಳ್ಳವನಾಗಿ, ವಿಜ್ಞಾಪ್ಯಂ-ವಿಜ್ಞಾಪನೆಮಾಡತಕ್ಕ, ಯಾತ್- ಯಾವಕಾರ್ಯವನ್ನು, ವದಾಮಿ-ಹೇಳುತ್ತೇನೆಯೊ, ಮಮ-ನನ್ನ, ಏತತ್-ಈ, ತತ್-ಆಕಾರ್ಯವು, ಭವದ್ಭಿಃ-ನಿಮ್ಮಿಂದ, ಮಮಕೃತೇ-ನನ್ನ ನಿಮಿತ್ತವಾಗಿ, ಅನುಕಂಪಯಾ-ಕೃಪೆಯಿಂದ, ಕರ್ತವ್ಯಂ-ಮಾಡತಕ್ಕದ್ದು ॥೨೬॥ ಅಹಂ-ನಾನು, ಸ್ವಕಾರ್ಯೇಷು ಸ್ವಸ್ವಕಾರ್ಯದಲ್ಲಿ, ಪೌರಜಾನಪದಾನ್-ಪುರಸ್ಥರನ್ನು ದೇಶದಲ್ಲಿ ಇರುವರನ್ನು, ಸ್ಥಾಪ್ಯ-ಇರಿಸಿ, ಆಗತಃ-ಬಂದವನಾಗಿ, ಸತಾಂ-ಸತ್ಪುರುಷರಾದ, ಭವತಾಂ-ನಿಮ್ಮ, ಪ್ರಭಾವಾತ್-ಅನುಗ್ರಹದ ದೆಸೆಯಿಂದ, ಕ್ರತೂನ್-ಯಜ್ಞಗಳನ್ನು, ಕರಿಷ್ಯಾಮಿ-ಮಾಡುವೆನು ॥೨೭॥ ಹೇ ಮಹಾವೀರ್ಯಾಃ-ಎಲೈ ಮಹಾ ಸಾಮರ್ಥ್ಯವುಳ್ಳವರೇ, ಭವಂತಃ-ನೀವು, ಮಮ-ನನ್ನ, ಯಜ್ಞೇಷು-ಯಾಗಗಳಲ್ಲಿ, ನಿತ್ಯಮೇವ-ನಿರಂತರವು, ಮಮ-ನನಗೆ, ಅನುಗ್ರಹಕಾಂಕ್ಷಿಣಃ-ಅನುಗ್ರಹವನ್ನು ಮಾಡಬೇಕೆಂಬ ಇಚ್ಛೆಯುಳ್ಳವರಾಗಿ, ಸದಸ್ಯಾಃ-ಸದಸ್ಯರು, ಭವಿಷ್ಯಥ-ಆಗಿರಿ ॥೨೮॥ ಅಹಂ-ನಾನು, ತಪೋನಿರ್ಧೂತಕಲ್ಮಷಾನ್-ತಪಸ್ಸಿನಿಂದ ಕೊಡಲ್ಪಟ್ಟ ಪಾಪಗಳುಳ್ಳ, ಯುಷ್ಮಾನ್-ನಿಮ್ಮಗಳನ್ನು, ತಪಸಾಶ್ರಿತ್ಯ-ಆಶ್ರಯಿಸಿ, ಪಿತೃಭಿಃ-ಪಿತೃಗಳಿಂದ, ಅನುಗ್ರಹೀತಃ-ಅನುಗ್ರಹಿಸಲ್ಪಟ್ಟವನಾಗಿ, ಸುನಿರ್ವೃತಃ-ಸುಖಿತನಾದಂಥಾವನು, ಭವಿಷ್ಯಾಮಿ-ಆಗುವೆನು ॥೨೯॥ ತತ್-ಆ ಕಾರಣದ ದೆಸೆಯಿಂದ, ಇಹ-ಇಲ್ಲಿ, ಸಂಗತ್ಯೈಃ-ಕೂಡಿರುವ, ಭವದ್ಭಿಃ-ನಿಂಮಗಳಿಂದ, ತದಾ-ಆಕಾಲದಲ್ಲಿ, ಅನಿಶಂ-ನಿರಂತರವು, ಆಗಂತವ್ಯಂ-ಬರತಕ್ಕದ್ದು ॥೩೦॥ ಅಗಸ್ತ್ಯಾದ್ಯಾಃ-ಅಗಸ್ತ್ಯಋಷಿಯೇ ಮೊದಲಾಗುಳ್ಳ, ಸಂಶಿತವ್ರತಾಃ-ತೀಕ್ಷ್ಣವಾದ ನಿಯಮನಿಷ್ಠಾಪರರಾದ, ಋಷಯಃ-ಋಷಿಗಳು, ತತ್-ಆ ಶ್ರೀರಾಮನ ವಚನವನ್ನು, ಶ್ರುತ್ವಾ-ಕೇಳಿ, ಏವಂ-ಈಪರಿಯಾಗಿ, ಅಸ್ತ್ವಿತಿ-ಆಗಲೀ ಎಂದು, ಸಂಶ್ರುತ್ಯ- ಪ್ರತಿಜ್ಞೆಮಾಡಿ, ಪ್ರಯಾತುಂ-ಪ್ರಯಾಣಮಾಡುವದಕ್ಕೋಸ್ಕರ, ಉಪಚಕ್ರಮುಃ-ಉಪಕ್ರಮಿಸಿದರು ॥೩೧॥ ಸರ್ವೇ-ಸಮಸ್ತರಾದ, ತೇಋಷಯಃ-ಆ ಋಷಿಗಳು, ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಯಥಾಗತಂ-ಬಂದಂತೆ, ಗತಾಃ-ಹೊರಟುಹೋದರು, ಮಹಾತ್ಮಾನಃ-ಮಹಾಮನಸ್ವಿಗಳಾದ ಆ ತಾಪಸರು, ಅಭಿವಾದ್ಯ-ನಮಸ್ಕರಿಸಿ, ರಾಘವೇಣ-ಶ್ರೀ ರಾಮನಿಂದ, ವಿಸರ್ಜಿತಾಃ-ಬಿಡಲ್ಪಟ್ಟರು ॥೩೦॥ ರಾಘವಶ್ಚ-ಶ್ರೀರಾಮನೂಸಹ, ವಿಸ್ಮಿತಃ-ಆಶ್ಚರ್ಯಯುಕ್ತನಾಗಿ, ತಮೇವಾರ್ಥಂ-ಆ ಪ್ರಯೋಜನವನ್ನೇ, ಚಿಂತಯಾಮಾಸ-ಯೋಚಿಸಿದನು, ತತಃ-ಬಳಿಕ, ಭಾಸ್ಕರೇ-ಸೂರ್ಯನು, ಅಸ್ತಂ-ಅಸ್ತಮಾನವನ್ನು, ಯಾತೇಸತಿ- ಹೊಂದಿದಂಥಾವನಾಗುತಿರಲೀಕಾಗಿ, ನರವರೋತ್ತಮಃ-ನರಶ್ರೇಷ್ಠರಲ್ಲಿ ಉತ್ತಮನಾದ, ಸಃ- ಆ ಶ್ರೀರಾಮನು, ನೃಪವಾನರಾನ್-ನೃಪ- ರಾಜನನ್ನು, ವಾನರಾನ್-ಕಪಿಗಳನ್ನೂ ಸಹಾ, ವಿಸೃಜ್ಯ-ತೊರೆದು, ತದಾ-ಆ ವೇಳೆಯಲ್ಲಿ, ವಿಧಿವತ್-ಯಥಾವಿಧಿಯಾಗಿ, ಸಂಧ್ಯಾಂ- ಸಾಯಂಸಂಧ್ಯಾದೇವಿಯನ್ನು, ಉಪಾಸ್ಯ-ಧ್ಯಾನಿಸಿ, ರಜನ್ಯಾಂತು-ರಾತ್ರಿಯಾದರೆ, ಪ್ರವೃತ್ತಾಯಾಂಸತ್ಯಾಂ-ಪ್ರವರ್ತಿಸಿದಂಥಾದ್ದಾಗಲೂ, ಅಂತಃಪುರಚರಃ- ರಾಣೀವಾಸ ಸ್ಥಳದಲ್ಲಿ ಸಂಚರಿಸುವವನು, ಅಭವತ್-ಆದನು ॥೩೨॥ —…ಇತಿಶ್ರೀಮದುತ್ತರರಾಮಾಯಣೆ ಷಟ್ತ್ರಿಂಶಸ್ಸರ್ಗಃ…—

ಮತ್ತೂ ಬಂಧುಜನರೂ ಸಹಾ ಸಂತುಷ್ಟರಾದರು, ನಾಂ ಹೇಳುವ ಈ ನನ್ನ ವಿಜ್ಞಾಪನೆಯಂ ದಯಪಾಲಿಸಿ ಕೇಳಿ ಕೃಪೆಯಿಂದ ಈ ಕೃತ್ಯವಂನೆರವೇರಿಸಿ ಕೊಡಬೇಕೆಂದು ಬೇಡುವೆನು ॥೨೬॥ (ಅದೆಂತೆನೆ) ಪುರವಾಸಿಗಳನ್ನೂ ಎನ್ನ ದೇಶದಲ್ಲಿರುವಜನರನ್ನೂ, ಅವರವರ ಕೃತ್ಯಗಳಲ್ಲಿ ನಿಯಮಿಸಿ, ಸತ್ಪುರುಷರಾದ ತಮ್ಮ ಅನುಗ್ರಹದಿಂದ ಯಾಗಂಗಳಂಗೈಯ್ಯುವೆನು, ಆದಕಾರಣ ತಾವೆಲ್ಲ ನನ್ನಲ್ಲಿ ಅನುಗ್ರಹಿಸಿ, ಆ ಯಜ್ಞದಲ್ಲಿ ಸಭಿಕರಾಗಿರಿ ॥೨೮॥ ನಾನಾದರೆ ತಪದಿಂದ ಪಾಪರಹಿತರಾದ ನಿಮ್ಮನ್ನು ಆಶ್ರಯಿಸಿ ಪಿತೃಗಳಿಂದ ಅನುಗ್ರಹಿಸಲ್ಪಟ್ಟು ಸುಖಿತನಾಗುವೆನು, ಆ ಬಳಿಕ ತಾವೆಲ್ಲ ತಮ್ಮ ಸ್ಥಳಗಳಿಗೆ ದಯಮಾಡಿಸಬಹುದೆಂದು ರಘುನಂದನನು ನುಡಿಯಲೂ, ಅಗಸ್ತ್ಯನೇ ಮುಂತಾದ ಋಷಿಗಳೆಲ್ಲರು ಆ ವಾಕ್ಯವಂಕೇಳಿ ಹಾಗೆ ಆಗಬಹುದು ಪುನಹಾ ಬರುವೆವು ನೀನು ಚಿಂತಿಸಬೇಡೆಂದು ಹೇಳಿ, ಹೊರಡಲುದ್ಯುಕ್ತರಾಗಿ ಪೋಗಿ ಬರುವೆವೆಂದು ಹೇಳಲೂ, ರಾಘವನು ಆ ಮಹರ್ಷಿಗಳಿಗೆಲ್ಲಾ ವಂದನೆಯಂಗೈದು ಕಳುಹಿಸಿಕೊಟ್ಟು, ವಿಸ್ಮಿತನಾಗಿ ಆ ಅರ್ಥವನ್ನೇ ಚಿಂತಿಸುತಿದ್ದವನಾದನು ॥೩೧॥ ಅನಂತರವು ಸೂರ್ಯಾಸ್ತಮಾನವಾಗಲೂ, ನರೋತ್ತಮನಾದ ಶ್ರೀರಾಮನು, ಆ ವೇಳೆಯಲ್ಲಿದ್ದ ನೃಪವಾನರರಂ ಕಳುಹಿಸಿಕೊಟ್ಟು, ಸಾಯಂತನ ಸಂಧ್ಯಾನುಷ್ಠಾನವಂಗೈದು, ರಾತ್ರಿಯಾಗಲೂ ಸುಖವಾಗಿ ಅಂತಃಪುರದಲ್ಲಿ ಸಂಚರಿಸುತಿದ್ದನು ॥೩೨॥ —…೩೬ನೆಯ ಸರ್ಗಂ ಮುಗಿದುದು…—

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅಭಿಷಿಕ್ತೇ ತು ಕಾಕುತ್ಸ್ಥೇ ಧರ್ಮೇಣ ವಿದಿತಾತ್ಮನಿ । ವ್ಯತೀತಾ ಸಾ ನಿಶಾ ಪುಣ್ಯಾ ಪೌರಾಣಾಂ ಹರ್ಷವರ್ಧಿನೀ ॥೧॥ ತಸ್ಯಾಂ ರಜನ್ಯಾಂ ವ್ಯುಷ್ಟಾಯಾಂ ಪ್ರಾತರೇವ ಪ್ರಹರ್ಷಿಣಃ । ವಂದಿನಃ ಪರ್ಯುಪಾತಿಷ್ಠನ್ ಸೌಮ್ಯಾ ನೃಪತಿವೇಶ್ಮನಿ ॥೨॥ ತೇ ರಕ್ತಕಂಠಿನಸ್ಸರ್ವೇ ಕಿನ್ನರಾ ಇವ ಶಿಕ್ಷಿತಾಃ । ತುಷ್ಟುವುರ್ನೃಪತಿಂ ಸುಪ್ತಂ ಯಥಾಕಾಲಂ ಮನೀಷಿಣಃ ॥೩॥ ವೀರ ಸೌಮ್ಯ ವಿಬುಧ್ಯಸ್ವ ಕೌಸಲ್ಯಾಪ್ರೀತಿವರ್ಧನ । ಜಗದ್ಧಿ ಸರ್ವಂ ಸ್ವಪಿತಿ ತ್ವಯಿ ಸುಪ್ತೇ ನರಾಧಿಪ ॥೪॥ ವಿಕ್ರಮಸ್ತೇ ಯಥಾ ವಿಷ್ಣೋ ರೂಪಂ ಚೈವಾಶ್ವಿನೋರಿವ । ಬುದ್ಧ್ಯಾ ಬೃಹಸ್ಪತೇಸ್ತುಲ್ಯಃ ಪ್ರಜಾಪತಿಸಮೋ ಹ್ಯಸಿ ॥೫॥ ಕ್ಷಮಯಾ ಪೃಥಿವೀತುಲ್ಯಃ ತೇಜಸಾ ಭಾಸ್ಕರೋಪಮಃ । ವೇಗಸ್ತೇ ವಾಯುನಾ ತುಲ್ಯೋ ಗಾಂಭೀರ್ಯಮುದಧೇರಿವ ॥೬॥ ಅಪ್ರಕಂಪ್ಯೋ ಯಥಾ ಸ್ಥಾಣುಶ್ಚಂದ್ರೇ ಸೌಮ್ಯತ್ವಮೀದೃಶಮ್ ॥೭॥ ನೇದೃಶಾಃ ಪಾರ್ಥಿವಾಃ ಪೂರ್ವಂ ಭವಿತಾರೋ ನರಾಧಿಪ । ಯಥಾ ತ್ವಮಸಿ ದುರ್ಧರ್ಷೋ ಧರ್ಮನಿತ್ಯಃ ಪ್ರಜಾಹಿತಃ ॥೮॥ ನ ತ್ವಾಂ

ವಿದಿತಾತ್ಮನಿ–ತಿಳಿಯಲ್ಪಟ್ಟ ಆತ್ಮನುಳ್ಳ, ಕಾಕುತ್ಸ್ಥೇ ತು–ಶ್ರೀರಾಮನಾದರೆ, ಧರ್ಮೇಣ–ಧರ್ಮದಿಂದ, ಅಭಿಷಿಕ್ತೇ ಸತಿ– ಅಭಿಷೇಕಮಾಡಲ್ಪಟ್ಟವನಾಗಿ, ಪೌರಾಣಾಂ–ಪಟ್ಟಣಸ್ಥರಿಗೆ, ಹರ್ಷವರ್ಧಿನೀ–ಸಂತೋಷವನ್ನು ವೃದ್ಧಿಗೊಳಿಸುತಿರುವ, ಪುಣ್ಯಾ–ಪುಣ್ಯಕರವಾದ, ಸಾ ನಿಶಾ– ಆ ರಾತ್ರಿಯು, ವ್ಯತೀತಾ–ಕಳದು ಹೋಯಿತು ॥೧॥ ತಸ್ಯಾಂ ರಜನ್ಯಾಂ– ಆ ರಾತ್ರಿಯು, ವ್ಯುಷ್ಟಾಯಾಂ ಸತ್ಯಾಂ–ಕಳದುಹೋದುದಾದ್ದರಿಂದ ಬೆಳಗಾಗಲಾಗಿ, ಅವನಿಪನ ವೇಶ್ಮನಿ–ಅರಮನೆಯಲ್ಲಿ, ಪ್ರಾತರೇವ–ಪ್ರಾತಃಕಾಲದಲ್ಲಿಯೇ, ಸೌಮ್ಯಾಃ–ಅಕ್ರೂರರಾದ, ವಂದಿನಃ–ಸ್ತುತಿಪಾಠಕರು, ನೃಪತಿವೇಶ್ಮನಿ–ಅರಮನೆಯಲ್ಲಿ, ಪರ್ಯುಪಾತಿಷ್ಠನ್–ಬಂದುನಿಂತರು ॥೨॥ ರಕ್ತಕಂಠಿನಃ–ರಾಗಯುಕ್ತವಾದ ಕಂಠಸ್ವರಗಳುಳ್ಳ, ಮನೀಷಿಣಃ–ಪಂಡಿತರಾದ, ಸರ್ವೇ–ಸಮಸ್ತರಾದ, ತೇ–ಆ ಸ್ತುತಿಪಾಠಕರು, ಶಿಕ್ಷಿತಾಃ–ಗಾನಶಿಕ್ಷಿತರಾದ, ಕಿಂನರಾ ಇವ–ದೇವಗಾಯಕರಂತೆ, ಸುಪ್ತಂ–ಮಲಗಿರುವ, ನೃಪತಿಂ–ರಾಜನನ್ನು, ಯಥಾಕಾಲಂ–ಕಾಲವನ್ನತಿಕ್ರಮಿಸದೆ, ತುಷ್ಟುವುಃ–ಸ್ತುತಿಸಿದರು ॥೩॥ ಹೇ ವೀರ–ಎಲೈ ಶೂರನೇ, ಹೇ ಸೌಮ್ಯ–ಎಲೈ ಕೋಪರಹಿತನೆ, ವಿಬುಧ್ಯಸ್ವ–ಎಚ್ಚರಗೊಳ್ಳು, ಕೌಸಲ್ಯಾಪ್ರೀತಿವರ್ಧನ–ಕೌಸಲ್ಯಾದೇವಿಗೆ ವಿಶ್ವಾಸವಂ ವೃದ್ಧಿಗೊಳಿಸುವವನೆ, ಹೇ ನರಾಧಿಪ–ಎಲೈ ನರಪತಿಯೆ, ತ್ವಯಿ–ನೀನು, ಸುಪ್ತೇ ಸತಿ– ಮಲಗಿದವನಾಗಲು ಕಿರಲೀಕಾರಿ, ಸರ್ವಂ–ಸಮಸ್ತವಾದ, ಜಗತ್–ಲೋಕವು, ಸ್ವಪಿತಿಹಿ–ನಿದ್ರೆ ಹೋಗುವದಷ್ಟೆ ॥೪॥ ತೇ–ನಿನ್ನ, ವಿಕ್ರಮಃ–ಪರಾಕ್ರಮವು, ವಿಷ್ಣೋರಿವ–ವಿಷ್ಣುವಿನಂತೆಯು, ತೇ–ನಿನ್ನ, ರೂಪಂ–ಸೌಂದರ್ಯವು, ಅಶ್ವಿನೋರಿವ–ಅಶ್ವಿನೀದೇವತೆಗಳ ರೂಪದಂತೆಯು, (ವರ್ತತೇ–ಇರುವದು) ಬುದ್ಧ್ಯಾ–ಮತಿಯಿಂದ, ಬೃಹಸ್ಪತೇಃ–ಸುರಗುರುವಿಗೆ, ತುಲ್ಯಃ–ಸದೃಶನಾಗಿ, ಪ್ರಜಾಪತಿಸಮಃ–ಬ್ರಹ್ಮನಿಗೆ ಸರಿಯಾಗಿರುವನು,ಅಸಿ–ಆಗಿದ್ದಿ ॥೫॥ ಕ್ಷಮಯಾ–ಸೈರಣೆಯಿಂದ, ಪೃಥಿವೀತುಲ್ಯಃ–ಭೂಮಿಗೆಸಮಾನವಾದವನು, ತೇಜಸಾ–ತೇಜಸ್ಸಿನಿಂದ, ಭಾಸ್ಕರೋಪಮಃ–ಸೂರ್ಯನೇ ಉಪಮಾನವಾಗಿರುವನು, ತೇ–ನಿನ್ನ, ವೇಗಃ–ಬಲವು, ವಾಯುನಾ–ವಾಯುವಿನೊಡನೆ, ತುಲ್ಯಃ–ಸರಿಯಾಗಿರುವದು, ಗಾಂಭೀರ್ಯಂ–ಗಂಭೀರತೆಯು, ಉದಧೇರಿವ–ಸಮುದ್ರನಂತೆ,(ಅಸ್ತಿ–ಇದೆ) ॥೬॥ ಸ್ಥಾಣುರ್ಯಥಾ–ಶಿವನಂತೆ, ಅಪ್ರಕಂಪ್ಯಃ–ಕಂಪಿಸಲಸಾಧ್ಯನು, ಈದೃಶಂ–ಇಂಥಾ, ಸೌಮ್ಯತ್ವಂ–ಅಕ್ರೌರ್ಯವು, ಚಂದ್ರೇ–ಚಂದಿರನಲ್ಲಿರುವದು ॥೭॥ ಹೇ ನರಾಧಿಪ– ಎಲೈ ನರಪತಿಯೇ, ತ್ವಂ–ನೀನು, ದುರ್ಧರ್ಷಃ–ತಿರಸ್ಕರಿಸಲಸಾಧ್ಯನಾಗಿಯೂ, ಧರ್ಮನಿತ್ಯಃ–ಧರ್ಮದಲ್ಲಿಯೇ ನಿಯತನಾಗಿಯೂ, ಪ್ರಜಾಹಿತಃ–ಜನಗಳಿಗೆಲ್ಲಾ ಹಿತಕರನಾಗಿಯೂ, ಯಥಾ–ಹ್ಯಾಗೆ, ಅಸಿ–ಇದ್ದೀಯೋ, ತಥಾ–ಹಾಗೆ, ಈದೃಶಾಃ–ಇಂಥಾ, ಪಾರ್ಥಿವಾಃ–ರಾಜರು, ಪೂರ್ವಂ–ಮೊದಲು, ನಭವಿತಾರಃ–ಆಗಿರಲಿಲ್ಲಾ ॥೮॥ ಹೇ ಪುರುಷರ್ಷಭ–ಎಲೈ ಪುರುಷಶ್ರೇಷ್ಠನೆ, ಕೀರ್ತಿರ್ವೈ–ಯಶಸ್ಸೂ, ಲಕ್ಷ್ಮೀಶ್ಚ–ಐಶ್ವರ್ಯವೂ ಸಹ,ತ್ವಾಂ–ನಿನ್ನನ್ನು,ನಜಹಾತಿ–

ಮಹಾಜ್ಞಾನಿಯಾದ ಶ್ರೀರಾಮನು ಪಟ್ಟಾಭಿಷಿಕ್ತನಾಗಲೂ, ಪುರವಾಸಿ ಗಳಿಗೆಲ್ಲಾ ಸಂತೋಷದಾಯಕವಾಗಿರ್ಪ ಮತ್ತು ಪುಣ್ಯಕರವಾದ ಆರಾತ್ರಿಯು ಕಳದಂಥಾದ್ದಾಯಿತು, ಆ ಬಳಿಕ ಪ್ರಾತಃಕಾಲವಾಗಲೂ ಸೌಮ್ಯರಾದ ಸ್ತುತಿಪಾಠಕರು ಅರಮನೆಯಲ್ಲಿ ಬಂದು ನಿಂತರು ॥೨॥ ಸುಸ್ವರವಾದ ಕಂಠಧ್ವನಿ ಯುಳ್ಳವರಾಗಿಯೂ, ಪಂಡಿತರಾಗಿಯೂ ಇರುವ ಸ್ತುತಿಪಾಠಕರು ಗಾನವಿದ್ಯಾ ಶಿಕ್ಷಿತರಾದ ದೇವಗಾಯಕರ ತೆರದಿ, ಸುಖಸುಪ್ತನಾಗಿರುವ ಶ್ರೀರಾಮನಂ ಸ್ತುತಿಸಿದವರಾದದೆಂತೆನೆ ॥೩॥ ವೀರನಾಗಿಯೂ, ಸೌಮ್ಯನಾಗಿಯೂ ಕೌಸಲ್ಯಾದೇವಿಗೆ ಆನಂದವನ್ನುಂಟು ಮಾಡುತಿರುವನಾಗಿಯೂ ಇರುವ, ಎಲೈ ಅರಸೆ! ಎಚ್ಚರಗೊಳ್ಳು, ನೀನು ಶಯನಿಸಿದವನಾದೊಡೆ, ಜಗವೆಲ್ಲಾ ನಿದ್ರೆಯಂಗೈಯುತ್ತಿರುವದು, ನಿನ್ನ ಪರಾಕ್ರಮವು ವಿಷ್ಣುವಿನ ಪರಾಕ್ರಮದಂತಿಹದು, ರೂಪವಾದರೆ ಅಶ್ವಿನೀ ದೇವತೆಗಳ ತೆರದಿ ಸರ್ವೋತ್ಕೃಷ್ಟವಾಗಿರುವದು, ಇದಲ್ಲದೆ ಮತಿಯಿಂದ ಸೂರ್ಯನಿಗೆ ಸಮಾನನಾಗಿಯೂ, ಬ್ರಹ್ಮ ಸದೃಶನಾಗಿಯೂ, ಸೈರಣೆಯಿಂದ, ಧರಾಸದೃಶನಾಗಿಯೂ, ತೇಜಸ್ಸಿನಿಂದ ಸೂರ್ಯನಂತೆ ಕಂಗೊಳಿಸುತ್ತಿರುವನಾಗಿಯೂ, ವೇಗದಲ್ಲಿ ವಾಯುತುಲ್ಯನಾಗಿಯೂ, ಸಮುದ್ರದಂತೆ ಗಾಂಭೀರ್ಯ ಗುಣವುಳ್ಳವನಾಗಿಯೂ, ಸಾಕ್ಷಾಚ್ಛಂಕರನಂತೆ ಕಂಪಿಸಲಸಾಧ್ಯನಾಗಿಯೂ, ಚಂದಿರನ ತೆರದಿ ಸೌಮ್ಯಗುಣವುಳ್ಳವನಾಗಿಯೂ, ಇರುವಂಥಾವನಾಗಿದ್ದೀ ॥೭॥ ನಿನ್ನಂತೆ ತಿರಸ್ಕರಿಸಲಸಾಧ್ಯನಾಗಿಯೂ, ಧರ್ಮಪರನಾಗಿಯೂ, ಪ್ರಜಾಹಿತ ಕರನಾಗಿಯೂ, ಇರುವ ನರನಾಥರ್ಯಾರು ಪೂರ್ವಕಾಲದಲ್ಲಿರಲಿಲ್ಲಾ ॥೮॥ ಎಲೈ ಪುರುಷಶ್ರೇಷ್ಠನೆ! ಕೀರ್ತಿಯೂ, ಲಕ್ಷ್ಮಿಯು, ಕಾಂತಿಯೂ, ಐಶ್ವರ್ಯವು, ಧರ್ಮವೂ ಸಹಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜಹಾತಿಕೀರ್ತಿರ್ವಿಮಲಾಲಕ್ಷ್ಮೀಶ್ಚ ಪುರುಷರ್ಷಭ । ಶ್ರೀಶ್ಚ ಧರ್ಮಶ್ಚ ಕಾಕುತ್ಸ್ಥ ತ್ವಯಿನಿತ್ಯಂಪ್ರತಿಷ್ಠಿತಾಃ॥೯॥ ಏತಾಶ್ಚಾನ್ಯಾಶ್ಚ ಮಧುರಾವಂದಿಭಿಃಪರಿಕೀರ್ತಿತಾಃ ।ಸ್ತುತಯಃಸ್ತುತಿತತ್ತ್ವಜ್ಞೈರ್ಬೋಧಯಂತಿಸ್ಮ ರಾಘವಮ್॥೧೦॥ ಸತದ್ವಿಹಾಯಶಯನಂಪಾಂಡುರಚ್ಛದಾಸ್ತೃತಂ ।ಉತ್ತಸ್ಥೌ ನಾಗಶಯನಾದ್ಧರಿರ್ನಾರಾಯಣೋಯಥಾ ॥೧೧॥ ತಮುತ್ಥಿತಂಮಹಾಬಾಹುಂಪ್ರಹ್ವಾಃಪ್ರಾಂಜಲಯೋನರಾಃ । ಸಲಿಲಂಭಾಜನೈಶ್ಶುಭ್ರೈರುಪತಸ್ಥುಸ್ಸಹಸ್ರಶಃ ॥೧೨॥ ಕೃತೋದಕಶ್ಶುಚಿರ್ಭೂತ್ವಾ ಕಾಲೇಹುತಹುತಾಶನಃ । ದೇವಗೃಹಂಜಗಾಮಾಶುಪುಣ್ಯಮಿಕ್ಷ್ವಾಕುಸೇವಿತಮ್ ॥೧೩॥ ತತ್ರದೇವಾನ್ಪಿತೄನ್ವಿಪ್ರಾನರ್ಚಯಿತ್ವಾಯಥಾವಿಧಿ । ಬಾಹ್ಯಕಕ್ಷ್ಯಾಂತರಂರಾಮೋನಿರ್ಜಗಾಮಜನೈರ್ವೃತಃ॥೧೪॥ ಉಪತಸ್ಥುರ್ಮಹಾತ್ಮಾನಂಮಂತ್ರಿಣಸ್ಸಪುರೋಹಿತಾಃ । ವಸಿಷ್ಠಪ್ರಮುಖಾಸ್ಸರ್ವೇದೀಪ್ಯಮಾನಾಇವಾಗ್ನಯಃ॥೧೫॥ ಕ್ಷತ್ರಿಯಾಶ್ಚ ಮಹಾತ್ಮಾನೋ ನಾನಾಜನಪದೇಶ್ವರಾಃ । ರಾಮಸ್ಯೋಪವಿಶಂತಿಸ್ಮಪಾರ್ಶ್ವಂಶಕ್ರಸ್ಯತುಯಥಾಮರಾಃ ॥೧೬॥ ಭರತೋಲಕ್ಷ್ಮಣಶ್ಚಾಥಶತ್ರುಘ್ನ

---

ಬಿಡುವದಿಲ್ಲ, ಹೇ ಕಾಕುತ್ಸ್ಥ–ಎಲೈ ಕಕುತ್ಸ್ಥವಂಶೋತ್ಪನ್ನನೆ, ಶ್ರೀಶ್ಚ–ಸಂಪತ್ತೂ, ಧರ್ಮಶ್ಚ–ಧರ್ಮವೂಕೂಡ, ತ್ವಯಿ–ನಿನ್ನಲ್ಲಿ, ನಿತ್ಯಂ– ಸದಾಕಾಲದಲ್ಲಿಯೂ, ಪ್ರತಿಷ್ಠಿತಾಃ–ಇಡಲ್ಪಟ್ಟಿವೆ ॥೯॥ ಮಧುರಾಃ–ಮನೋಹರವಾದ, ಏತಾಃ–ಇವುಗಳು, ಅನ್ಯಾಶ್ಚ–ಇನ್ನು ಕೆಲವಾದ, ಸ್ತುತಯಃ–ಸ್ತೋತ್ರಗಳು, ಸ್ತುತಿತತ್ವಜ್ಞೈಃ–ಸ್ತೋತ್ರತತ್ವಂಗಳನ್ನರಿತಿರುವ,ವಂದಿಭಿಃ–ಸ್ತುತಿಪಾಠಕರಿಂದ, ಪರಿಕೀರ್ತಿತಾಃ–ಹೇಳಲ್ಪಟ್ಟವು (ತೇ–ಆ ವಂದಿಗಳು) ರಾಘವಂ–ಶ್ರೀ ರಾಮನನ್ನು, ಬೋಧಯಂತಿಸ್ಮ–ಎಬ್ಬಿಸಿದರಷ್ಟೆ॥೧೦॥ ಸಃ–ಆ ರಘುನಂದನನು, ಪಾಂಡುರಚ್ಛದಾಸ್ತೃತಂ– ಬಿಳೀವಸ್ತ್ರದಿಂ ದಾಚ್ಛಾದಿತವಾದ, ತಚ್ಛಯನಂ–ಆ ಹಾಸಿಗೆಯನ್ನು, ವಿಹಾಯ–ತೊರೆದು,ನಾರಾಯಣಃ–ಉದಕವೇ ಆಧಾರವಾಗುಳ್ಳ, ಹರಿಃ–ಶ್ರೀಮಹಾವಿಷ್ಣುವು, ನಾಗಶಯನಾತ್–ಶೇಷರೂಪವಾದ ಹಾಸಿಗೆಯಿಂದ, ಯಥಾ–ಹ್ಯಾಗೆ, ಉತ್ತಸ್ಥೌ–ಎದ್ದನೋ,ತಥಾ–ಹಾಗೆ,ಉತ್ತಸ್ಥೌ–ಎದ್ದವನಾದನು॥೧೧॥ಉತ್ಥಿತಂ–ಎದ್ದ,ಮಹಾಬಾಹುಂ–ಮಹಾ ಭುಜಪರಾಕ್ರಮಿಯಾದ,ತಂ–ಆ ಶ್ರೀರಾಮನಂ ಕುರಿತು,ಪ್ರಾಂಜಲಯಃ–ಅಂಜಲಿಬದ್ಧರಾದ,ನರಾಃ–ಮನುಷ್ಯರು,ಪ್ರಹ್ವಾಃ–ನಮ್ರರಾಗಿ, ಶುಭ್ರೈಃ–ಬೆಳ್ಳಗಿರುವ, ಸಹಸ್ರಶಃ–ಅನೇಕವಾದ, ಭಾಜನೈಃ–ಪಾತ್ರೆಗಳಿಂದ,ಸಲಿಲಂ–ಉದಕವನ್ನು, ಉಪತಸ್ಥುಃ–ತೆಗೆದುಕೊಂಡುಬಂದರು॥೧೨॥ಸಃ–ಆ ಶ್ರೀರಾಮನು,ಕೃತೋದಕಃ–ಉಪಯೋಗಿಸಲ್ಪಟ್ಟ ಜಲವುಳ್ಳವನಾದಕಾರಣ, ಶುಚಿರ್ಭೂತ್ವಾ–ಪರಿಶುದ್ಧನಾಗಿ,ಕಾಲೇ– ಪ್ರಾತಃಕಾಲದಲ್ಲಿ, ಹುತಹುತಾಶನಃ–ಹವನ ಮಾಡಲ್ಪಟ್ಟ ಅಗ್ನಿಯುಳ್ಳವನಾಗಿ, ಪುಣ್ಯಂ–ಪುಣ್ಯಕರವಾದ, ಇಕ್ಷ್ವಾಕುಸೇವಿತಂ–ಇಕ್ಷ್ವಾಕುವಂಶಸ್ಥರಿಂದ ಸೇವಿಸಲ್ಪಟ್ಟ, ದೇವಗೃಹಂ–ವೇದಿಕಾಮಂದಿರವನ್ನು ಕುರಿತು, ಜಗಾಮ–ಹೊರಟನು॥೧೩॥ ತತ್ರ–ಆ ಮನೆಯಲ್ಲಿ, ರಾಮಃ–ಶ್ರೀರಾಮನು, ದೇವಾನ್– ದೇವತೆಗಳನ್ನೂ, ಪಿತೄನ್–ಪಿತೃದೇವತೆಗಳನ್ನೂ, ವಿಪ್ರಾನ್–ಬ್ರಾಹ್ಮಣರನ್ನೂ, ಯಥಾವಿಧಿ–ಯಥಾವಿಧಾನವಾಗಿ, ಅರ್ಚಯಿತ್ವಾ–ಪೂಜಿಸಿ, ಬಾಹ್ಯಕಕ್ಷ್ಯಾಂತರಂ– ಹೊರತೊಟ್ಟಿಯ ಮಧ್ಯಪ್ರದೇಶವಂ ಕುರಿತು, ಜನೈಃ–ಜನರಿಂದ, ವೃತಃ–ಸುತ್ತುವರಲ್ಪಟ್ಟವನಾಗಿ, ನಿರ್ಜಗಾಮ–ಹೊರಟುಬಂದನು ॥೧೪॥ಮಹಾತ್ಮಾನಃ–ಮಹಾಮನಸ್ವಿಗಳಾದ, ಸಪುರೋಹಿತಾಃ–ಪುರೋಹಿತರಿಂದೊಡಗೂಡಿದ, ಸರ್ವೇ–ಸಮಸ್ತರಾದ,ಮಂತ್ರಿಣಃ–ಅಮಾತ್ಯರು, ದೀಪ್ಯಮಾನಾಃ–ಪ್ರಜ್ವಲಿಸುತ್ತಿರುವ, ಅಗ್ನಯಃಇವ–ಅಗ್ನಿಗಳಂತೆ, ಉಪತಸ್ಥುಃ–ಸಮೀಪದಲ್ಲಿ ನಿಂತರು ॥೧೫॥ ನಾನಾಜನಪದೇಶ್ವರಾಃ–ನಾನಾದೇಶಗಳ ಅಧಿಪತಿಗಳಾದ, ಮಹಾತ್ಮಾನಃ– ಮಹಾನುಭಾವರಾದ, ಕ್ಷತ್ರಿಯಾಶ್ಚ–ಕ್ಷತ್ರಿಯರೂಕೂಡಾ, ಅಮರಾಸ್ತು–ದೇವತೆಗಳಾದರೆ, ಶಕ್ರಸ್ಯ–ದೇವೇಂದ್ರನಿಗೆ, ಯಥಾ–ಹ್ಯಾಗೋ, ತಥಾ–ಹಾಗೆ, ರಾಮಸ್ಯ–ಶ್ರೀರಾಮನ, ಪಾರ್ಶ್ವಂ–ಪಕ್ಕೆಯನ್ನು, ವಿವಿಶುಃ–ಹೊಕ್ಕರು ॥೧೬॥ ಅಥ–ಬಳಿಕ, ಭರತಃ–ಭರತನು,ಲಕ್ಷ್ಮಣಶ್ಚ–ಲಕ್ಷ್ಮಣನೂಸಹ, ಪ

---

ನ್ನನ್ನಗಲದೇ, ಸದಾಕಾಲದಲ್ಲಿಯೂ, ನಿನ್ನಲ್ಲಿಯೇ ಪ್ರತಿಷ್ಠಿತವಾಗಿರುವವು, ಈ ಪರಿಯಾದ ಸ್ತುತಿಗಳನ್ನೂ, ಮತ್ತೂ ಮನೋಹರವಾದ, ಇತರ ಸ್ತೋತ್ರಗಳನ್ನೂ ಸಹ, ಸ್ತುತಿತತ್ವಜ್ಞರಾದ ಸ್ತುತಿಪಾಠಕರು,ಹೊಗಳುತ್ತಾ ಶ್ರೀರಾಮನನ್ನೆಚ್ಚರಗೊಳಿದವರಾಗಲೂ, ಆ ರಘುನಂದನನು, ಶ್ರೀಮನ್ನಾರಾಯಣನು ನಾಗಶಯನದಿಂದ ಏಳುವಂತೆ, ಬಿಳೀವಸ್ತ್ರವಂ ಹಾಸಿರುವ ಶಯನವಂ ತೊರೆದುಎದ್ದವನಾದನು ॥೧೧॥ ಈಪರಿಯಾಗಿ ಶಯನದಿಂದ ಎದ್ದವನಾದ ಮತ್ತೂ ಮಹಾಭುಜಪರಾಕ್ರಮಿಯಾದ ರಘುನಂದನನಿಗೋಸುಗ,ವಿನಯವಂತರಾಗಿಯೂ ಅಂಜಲಿಬದ್ಧರಾಗಿಯೂ ಇರುವ ನರರು ಶುಭ್ರವಾದ ಪಾತ್ರೆಗಳಲ್ಲಿ ಉದಕವಂತಂದು ಕೊಡಲೂ, ಆ ಜಲವನ್ನುಪಯೋಗಿಸಿಕೊಂಡು, ಶುಚಿರ್ಭೂತನಾಗಿ, ಪ್ರಾತಃಕಾಲೀನ ನಿತ್ಯಕರ್ಮವನ್ನೂ ಔಪಾಸನೆಯನ್ನೂ ಸಹಾ ಗೈದು, ಇಕ್ಷ್ವಾಕು ಕುಲಸ್ಥರಿಂದ ಸೇವಿಸಲ್ಪಟ್ಟ, ಮತ್ತೂ ಪುಣ್ಯಸಂಪಾದಕವಾದ ವೇದಿಕಾಗೃಹವಂ ಪೊಕ್ಕು, ಆ ಮಂದಿರದಲ್ಲಿ, ದೇವ, ಪಿತೃ,ಬ್ರಾಹ್ಮಣರಿಗೆ ಯಥಾ ವಿಧಿಯಾಗಿ ತೃಪ್ತಿಯಂಗೈದು, ಜನರಿಂದೊಡಗೂಡಿ, ಹೊರತೊಟ್ಟಿಯಂ ಪೊಕ್ಕನು ॥೧೪॥ ಆ ಎಡದಲ್ಲಿ ಅಗ್ನಿಯಂತೆ ಕಂಗೊಳಿಸುತ್ತಿರುವರಾಗಿಯೂ, ಮಹಾತ್ಮರಾಗಿಯೂ, ಪುರೋಹಿತರಿಂದೊಡಗೂಡಿದವರಾಗಿಯೂ, ಇರುವ, ವಸಿಷ್ಠನೇಮೊದಲಾದ ಮಂತ್ರಿಗಳೂ, ನಾನಾದೇಶಗಳಿಗೆ ಅಧಿಪತಿಗಳಾಗಿರ್ಪ ಮತ್ತೂ ಮಹಾತ್ಮರಾದ ಕ್ಷತ್ರಿಯ ಶ್ರೇಷ್ಠ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ಚ ಮಹಾಬಲಃ । ಉಪಾಸಾಂಚಕ್ರಿರೇಹೃಷ್ಟಾವೇದಾಸ್ತ್ರಯಇವಾಧ್ವರಮ್ ॥ ೧೭ ॥ ಪ್ರಯುತಾಂಜಲಯೋಭೃತ್ಯಾಃ ಕಿಂಕರಾಮುದಿತಾನನಾಃ । ಭೃತ್ಯಾಶ್ಚ ರಾಮಂಪಾರ್ಶ್ವಸ್ಥಾ ಬಹವಸ್ಸಮುಪಾಸಿರೆ ॥ ೧೮ ॥ ವಾನರಾಶ್ಚ ಮಹಾವೀರ್ಯಾ ವಿಂಶತಿಃ ಕಾಮರೂಪಿಣಃ । ಸುಗ್ರೀವಪ್ರಮುಖಾರಾಮಮುಪಾಸತಮಹೌಜಸಃ ॥ ೧೯ ॥ ವಿಭೀಷಣಶ್ಚ ರಕ್ಷೋಭಿಶ್ಚತುರ್ಭಿಃಪರಿವಾರಿತಃ । ಉಪಾಸ್ತೆ ತಂಮಹಾತ್ಮಾನಂಧನೇಶಮಿವಗುಹ್ಯಕಾಃ ॥ ೨೦ ॥ ತಥಾನಿಗಮವೃದ್ಧಾಶ್ಚ ಕುಲೀನಾಯೇಚಮಾನವಾಃ । ಶಿರಸಾವಂದ್ಯರಾಜಾನಮುಪಾಸತವಿಚಕ್ಷಣಾಃ ॥ ೨೧ ॥ ತಥಾಪರಿವೃತೋರಾಜಾಶ್ರೀಮದ್ಭಿಃಋಷಿಸತ್ತಮೈಃ । ರಾಜಭಿಶ್ಚ ಮಹಾವೀರ್ಯೈರ್ವಾನರೈಶ್ಚ ಸರಾಕ್ಷಸೈಃ ॥ ೨೨ ॥ ಯಥಾದೇವೇಶ್ವರೋನಿತ್ಯಮೃಷಿಭಿಸ್ಸಮುಪಾಸ್ಯತೆ । ಅಧಿಕಸ್ತೆನರೂಪೇಣ ಸಹಸ್ರಾಕ್ಷಾದ್ವಿ ರೋಚತೆ ॥ ೨೩ ॥ ತೇಷಾಂಸಮುಪವಿಷ್ಟಾನಾಂತಾಸ್ತಾಸ್ಸುಮಧುರಾಃ ಕಥಾಃ । ಕಥ್ಯಂತೆಧರ್ಮಸಂಯುಕ್ತಾಃ ಪುರಾಣಜ್ಞೈರ್ಮಹರ್ಷಿಭಿಃ ॥ ೨೪ ॥ —:ಇತಿಶ್ರೀಮದುತ್ತರರಾಮಾಯಣೆ ಸಪ್ತತ್ರಿಂಶಸ್ಸರ್ಗಃ:—

---

ಹಾಬಲಾಃ-ಕಡುಪರಾಕ್ರಮಿಯಾದ, ಶತೃಘ್ನಶ್ಚ-ಶತೃಘ್ನನೂ ಸಹ, ತ್ರಯೋವೇದಾಃ-ಮೂರುವೇದಗಳು, ಅಧ್ವರಮಿವ-ಯಾಗವನ್ನಂತೆ, ಹೃಷ್ಟಾಃ-ಸಂತುಷ್ಟರಾಗಿ, ಉಪಾಸಾಂಚಕ್ರಿರೆ-ಸಮೀಪದಲ್ಲಿದ್ದರು ॥ ೧೭ ॥ ಮುದಿತಾನನಾಃ-ಸಂತುಷ್ಟವಾದ ಮುಖಗಳುಳ್ಳ, ಕಿಂಕರಾಃ-ಸೇವಕರು, ಬಹವಃ-ಅನೇಕರಾದ, ಭೃತ್ಯಾಶ್ಚ-ಚಾಕರರೂ ಸಹ, ಪ್ರಯುತಾಂಜಲಯಃ-ಅಂಜಲಿಬದ್ಧರಾದವರು, ಭೂತ್ವಾ-ಆಗಿ, ಪಾರ್ಶ್ವಸ್ಥಾಃ-ಸಮೀಪದಲ್ಲಿರುವರಾಗಿ, ಸಮುಪಾಸಿರೆ-ಉಪಾಸಿಸುತ್ತಿದ್ದರು ॥ ೧೮ ॥ ಮಹಾವೀರ್ಯಾಃ-ಮಹಾಪರಾಕ್ರಮಶಾಲಿಗಳಾದ, ಕಾಮರೂಪಿಣಃ-ಸ್ವೇಚ್ಛಾರೂಪಿಗಳಾದ, ಮಹೌಜಸಃ-ಮಹಾತೇಜಸ್ವಿಗಳಾದ, ಸುಗ್ರೀವಪ್ರಮುಖಾಃ-ಸುಗ್ರೀವನೇ ಮೊದಲಾಗಿಉಳ್ಳ, ವಿಂಶತಿರ್ವಾನರಾಃ-ಇಪ್ಪತ್ತುಮಂದಿ ವಾನರರು, ರಾಮಂ-ಜಾನಕೀಪತಿಯನ್ನು, ಉಪಾಸತ-ಉಪಾಸಿಸುತ್ತಿದ್ದರು ॥ ೧೯ ॥ ಚತುರ್ಭಿಃ-ನಾಲ್ವರಾದ, ರಕ್ಷೋಭಿಃ-ರಕ್ಕಸರಿಂದ, ಪರಿವಾರಿತಃ-ಸುತ್ತುವರಲ್ಪಟ್ಟ, ವಿಭೀಷಣಶ್ಚ-ವಿಭೀಷಣನೂ ಸಹ, ಮಹಾತ್ಮಾನಂ-ಮಹಾಮನಸ್ವಿಯಾದ, ತಂ-ಆ ಶ್ರೀರಾಮನನ್ನು, ಧನೇಶಂ-ಕುಬೇರನನ್ನು, ಗುಹ್ಯಕಾಇವ-ಗುಹ್ಯಕರಂತೆ, ಉಪಾಸ್ತೆ-ಸಮೀಪವರ್ತಿಗಳಾಗಿದ್ದರು ॥ ೨೦ ॥ ತಥಾ-ಹಾಗೆಯೆ, ನಿಗಮವೃದ್ಧಾಃ-ವೇದಜ್ಞರೊಳಗೆ ವೃದ್ಧರಾದ, ಕುಲೀನಾಃ-ಸತ್ಕುಲಪ್ರಸೂತರಾದ, ಮಾನವಾಃ-ಮನುಷ್ಯರು, ಯೆ-ಯಾರೋ, ವಿಚಕ್ಷಣಾಃ-ವಿದ್ವಾಂಸರಾದ, ತೆ-ಅವರು, ರಾಜಾನಂ-ಒಡೆಯನನ್ನು ಕುರಿತು, ಶಿರಸಾ-ಶಿರದಿಂದ, ವಂದ್ಯ-ನಮಸ್ಕರಿಸಿ, ಉಪಾಸತ-ಸಮೀಪದಲ್ಲಿ ನಿಂತರು ॥ ೨೧ ॥ ಶ್ರೀಮದ್ಭಿಃ-ಕಾಂತಿಯುಕ್ತರಾದ, ಋಷಿಸತ್ತಮೈಃ-ಮುನಿಶ್ರೇಷ್ಠರಿಂದಲೂ, ಮಹಾವೀರ್ಯೈಃ-ಮಹಾಪರಾಕ್ರಮಿಗಳಾದ, ರಾಜಭಿಶ್ಚ-ಅರಸರಿಂದಲೂ, ಸರಾಕ್ಷಸೈಃ-ರಾಕ್ಷಸರಿಂ ದೊಡಗೂಡಿದ, ವಾನರೈಶ್ಚ-ಕಪಿಗಳಿಂದಲೂ ಸಹ, ಪರಿವೃತಃ-ಸುತ್ತುವರಲ್ಪಟ್ಟ, ರಾಜಾ-ಒಡೆಯನಾದ ಶ್ರೀರಾಮನು, ದೇವೇಶ್ವರಃ-ದೇವೇಂದ್ರನು, ಯಥಾ-ಹ್ಯಾಗೆ, ಋಷಿಭಿಃ-ಮುನಿಗಳಿಂದ, ನಿತ್ಯಂ-ನಿರಂತರವು, ಸಮುಪಾಸ್ಯತೆ-ಉಪಾಸಿಸಲ್ಪಡುವನೋ, ತಥಾ-ಹಾಗೆ, ತೇನರೂಪೇಣ-ಆ ರೂಪದಿಂದ, ಸಹಸ್ರಾಕ್ಷಾತ್-ಇಂದ್ರನಿಗಿಂತಲೂ, ಅಧಿಕಃ-ಅತಿಶಯನಾಗಿ, ವಿರೋಚತೆ-ಹೊಳೆಯುತ್ತಿದ್ದನು ॥ ೨೩ ॥ ತೇಷಾಂ-ಅವರು, ಸಮುಪವಿಷ್ಟಾನಾಂಸತಾಂ-ಕುಳಿತಿರುವ ಠಾಗುತಿರಲಿಕಾಗಿ, ಪುರಾಣಜ್ಞೈಃ-ಪುರಾಣಗಳನ್ನರಿತಿರುವ, ಮಹರ್ಷಿಭಿಃ-ಮಹಾಮುನಿಗಳಿಂದ, ಧರ್ಮಸಂಯುಕ್ತಾಃ-ಧರ್ಮದಿಂದೊಡಗೂಡಿದ, ಮಧುರಾಃ-ಮನೋಹರವಾದ, ತಾಸ್ತಾಃಕಥಾಃ-ಆಯಾ ಇತಿಹಾಸಗಳು, ಕಥ್ಯಂತೆ-ಹೇಳಲ್ಪಡುತ್ತಿದ್ದವು. —:*ಇತಿಶ್ರೀಮದುತ್ತರ ರಾಮಾಯಣೆ ಸಪ್ತ ತ್ರಿಂಶಸ್ಸರ್ಗಃ:—

---

ರೂ ಇವರೆಲ್ಲರು,ದೇವತೆಗಳು ಇಂದ್ರನ ಪಾರ್ಶ್ವದಲ್ಲಿ ಉಪಾಸಿಸುವಂತೆ,ಆ ರಘುನಂದನನ ಪಾರ್ಶ್ವಭಾಗದಲ್ಲಿ ನಿಂತರು॥ ಕಡುಬಲಶಾಲಿಗಳಾದ ಭರತ, ಲಕ್ಷ್ಮಣ, ಶತೃಘ್ನರೆಂಬೀ ಮೂರುಮಂದಿ ತಂಮಂದರು, ಋಗ್ಯಜುಸ್ಸಾಮಂಗಳೆಂಬ ಮೂರುವೇದಂಗಳು ಅಧ್ವರದಲ್ಲಿ ಸಮೀಪವರ್ತಿಗಳಾಗಿರುವಂತೆ ಸಾನ್ನಿಧ್ಯದಲ್ಲಿದ್ದರು ॥ ೧೭ ॥ ಇದಲ್ಲದೆ ಸಂತುಷ್ಟವಾದ ಮುಖಗಳುಳ್ಳ ಬಹುಮಂದಿ ಕಿಂಕರರೂ,ಅನೇಕರಾದ ಭೃತ್ಯರೂ ಸಹಾ, ಅಂಜಲಿಬದ್ಧರಾಗಿ ಪಾರ್ಶ್ವದಲ್ಲಿ ನಿಂತಿದ್ದರು ಮತ್ತು ಕಾಮರೂಪಿಗಳಾಗಿಯೂ, ಕಡುಪರಾಕ್ರಮಶಾಲಿಗಳಾಗಿಯೂ, ಮಹಾತೇಜಸ್ವಿಗಳಾಗಿಯೂ ಇರುವ, ಸುಗ್ರೀವನೇ ಮುಂತಾದ ಇಪ್ಪತ್ತುಮಂದಿ ವಾನರರೂ, ಮತ್ತೂ ನಾಲ್ವರಾದ ಮಂತ್ರಿಗಳಿಂದೊಡಗೂಡಿದ ವಿಭೀಷಣನೂ ಸಹಾ, ಮಹಾನುಭಾವನಾದ ಆ ರಘುನಂದನನನ್ನು, ಗುಹ್ಯಕರು ಕುಬೇರನನ್ನು ಉಪಾಸಿಸುವಂತೆ, ಉಪಾಸಿಸುತ್ತಿದ್ದರು ॥ ೨೦ ॥ ಸತ್ಕುಲಪ್ರಸೂತರಾದವರೂ, ವೇದದಕ್ಷರಾದವರೂ, ಪಂಡಿತರೂ ಸಹಾ, ಶಿರದಿಂ ವಂದನೆಯಂ ಗೈದು ಸಮೀಪದಲ್ಲಿ ನಿಂತಿದ್ದರು, ॥ ೨೧ ॥ ಆ ರಾಘವನು. ಕಡುತೇಜಸ್ವಿಗಳಾದ ಋಷಿಶ್ರೇಷ್ಠರಿಂದಲೂ, ಮಹಾ ಪರಾಕ್ರಮಶಾಲಿಗಳಾದ ರಾಜರಿಂದಲೂ,ವಾನರರಿಂದಲೂ, ವಿಭೀಷಣಾದಿ ರಾಕ್ಷಸರಿಂದಲೂ ಸಹಾ ಸದಾಕಾಲದಲ್ಲಿಯೂ ಪರಿವೃತನಾಗಿ, ಋಷಿಗಳಿಂದ ಪರಿವೃತನಾದ ಸಾಕ್ಷಾದ್ದೇವೇಂದ್ರನಿಗಿಂತಲೂ, ಅಧಿಕವಾಗಿ ರೂಪದಿಂ ಪೊಳೆಯುತ್ತಿದ್ದನು ॥ ೨೩ ॥ ಈಪರಿಯಾಗಿ ಸಭೆಯುಸೇರಿರಲೂ, ಅಷ್ಟಾದಶಪುರಾಣ ರಹಸ್ಯಗಳನ್ನರಿತಿರುವ ಮಹರ್ಷಿಗಳು,ಧರ್ಮಯುಕ್ತವಾದ ಮತ್ತೂ, ಮನೋಹಾರಿಗಳಾಗಿರ್ಪ ಆಯಾಕಥೆಗಳಂ ಪೇಳುತಿದ್ದರು ॥ ೨೪ ॥

—:*ಉತ್ತರಕಾಂಡದಲ್ಲಿನ ೩೭ನೇ ಸರ್ಗಂ ಮುಗಿದುದು*:—

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಏವಮಾಸ್ತೇ ಮಹಾಬಾಹುರಹನ್ಯಹನಿ ರಾಘವಃ । ಪ್ರಶಾಸತ್ಸರ್ವಕಾರ್ಯಾಣಿ ಪೌರಜಾನಪದೇಷು ಚ ॥೧॥ ತತಃ ಕತಿಪಯಾಹಸ್ಸು ವೈದೇಹಂ ಮಿಥಿಲಾಧಿಪಮ್ । ರಾಘವಃ ಪ್ರಾಂಜಲಿರ್ಭೂತ್ವಾ ವಾಕ್ಯಮೇತದುವಾಚ ಹ ॥೨॥ ಭವಾನ್ಹಿ ಗತಿರವ್ಯಗ್ರಾ ಭವತಾ ಪಾಲಿತಾ ವಯಮ್ ॥ ಭವತಸ್ತಪಸೋಗ್ರೇಣ ರಾವಣೋ ನಿಹತೋ ಮಯಾ । ಇಕ್ಷ್ವಾಕೂಣಾಂ ಚ ಸರ್ವೇಷಾಂ ಮೈಥಿಲಾನಾಂ ಚ ಸರ್ವಶಃ ॥ ಅತುಲಾಃ ಪ್ರೀತಯೋ ರಾಜರ್ಷೇ ಸಂಬಂಧಕಪುರೋಗಮಾಃ ॥೪॥ ತದ್ಭವಾನ್ ಸ್ವಪುರಂ ಯಾತು ರತ್ನಾನ್ಯಾದಾಯ ಪಾರ್ಥಿವ ॥ ಭರತಶ್ಚ ಸಹಾಯಾರ್ಥಂ ಪೃಷ್ಠತಸ್ತೇನುಯಾಸ್ಯತಿ ॥೫॥ ತಥೇತ್ಯುಕ್ತ್ವಾ ತು ಜನಕೋ ರಾಘವಂ ವಾಕ್ಯಮಬ್ರವೀತ್ । ಪ್ರೀತೋಸ್ಮಿ ಭವತೋ ರಾಜರ್ಷೇ ದರ್ಶನೇನ ಜಯೇನ ಚ ॥೬॥ ಯಾನ್ಯಾಹೃತಾನಿ ರತ್ನಾನಿ ಮದರ್ಥಂ ಸಂಚಿತಾನಿ ವೈ । ದುಹಿತ್ರೇ ತಾನಿ ವೈ ರಾಜರ್ಷೇ ಸರ್ವಾಣ್ಯೇವ ದದಾಮಿ ಮೇ ॥೭॥ ಏವಮುಕ್ತ್ವಾ ತು ಕಾಕುತ್ಸ್ಥಂ ಜನಕೋ ಹೃಷ್ಟಮಾನಸಃ । ಪ್ರಯಯೌ ಮಿಥಿಲಾಂ ಶ್ರೀಮಾಂಸ್ತಮನುಜ್ಞಾಪ್ಯ ರಾಘವಮ್ ॥೮॥ ತತಃ ಪ್ರಯಾತೇ ಜನಕೇ ಕೈಕೇಯಂ ಮಾತುಲಂ ಪ್ರಭುಮ್ ।

---

ಮಹಾಬಾಹುಃ-ಮಹಾಭುಜಪರಾಕ್ರಮಿಯಾದ, ರಾಘವಃ-ಶ್ರೀರಾಮನು, ಅಹನ್ಯಹನಿ-ಪ್ರತಿದಿನದಲ್ಲಿಯೂ, ಏವಂ-ಈ ಪರಿಯಾಗಿ, ಆಸ್ತೇ-ಇದ್ದನು, ಪೌರಜಾನಪದೇಷು ಚ-ಪಟ್ಟಣಸ್ಥರ ವಿಷಯದಲ್ಲಿಯೂ, ದೇಶವಾಸಿಗಳ ವಿಷಯದಲ್ಲಿಯೂ ಸಹ, ಸರ್ವಕಾರ್ಯಾಣಿ- ಎಲ್ಲಾ ಕೃತ್ಯಗಳನ್ನು, ಪ್ರಶಾಸತ್-ಆಜ್ಞಾಪಿಸುತಿದ್ದನು ॥೧॥ ತತಃ-ಬಳಿಕ, ಕತಿಪಯಾಹಸ್ಸು-ಕೆಲವು ದಿನಗಳಲ್ಲಿ, ರಾಘವಃ-ಶ್ರೀರಾಮನು, ಪ್ರಾಂಜಲಿಃ-ಅಂಜಲಿಬದ್ಧನು, ಭೂತ್ವಾ-ಆಗಿ, ಮಿಥಿಲಾಧಿಪಂ-ಮಿಥಿಲಾಪುರಿ ಗಧಿಪತಿಯಾದ, ವೈದೇಹಂ-ಜನಕರಾಜನಂ ಕುರಿತು, ಏತದ್ವಾಕ್ಯಂ-ಈ ಮಾತನ್ನು, ಉವಾಚಹ- ಹೇಳಿದನೈ ॥೨॥ ಭವಾನ್ಹಿ-ನೀನೆ, ಅವ್ಯಗ್ರಾ-ಅನನ್ಯವಾದ, ಗತಿಃ-ಗಮ್ಯಸ್ಥಾನವು, ವಯಂ-ನಾವು, ಭವತಾ-ನಿನ್ನಿಂದ, ಪಾಲಿತಾಃ- ಕನ್ಯಾಪ್ರದಾನಾದಿಗಳಿಂದ ಪರಿಪಾಲಿಸಲ್ಪಟ್ಟೆವು, ಭವತಃ-ನಿಮ್ಮ, ಉಗ್ರೇಣ-ಭಯಂಕರವಾದ, ತಪಸಾ-ತಪದಿಂದ, ರಾವಣಃ-ರಾವಣನು, ಮಯಾ-ನನ್ನಿಂದ, ನಿಹತಃ- ಹೊಡೆಯಲ್ಪಟ್ಟನು ॥೩॥ ಹೇ ರಾಜರ್ಷೇ-ಎಲೈ ಅರಸೆ, ಸರ್ವೇಷಾಂ-ಸಮಸ್ತರಾದ, ಇಕ್ಷ್ವಾಕೂಣಾಂ ಚ-ಇಕ್ಷ್ವಾಕುವಂಶಸ್ಥರಿಗೂ, ವಿದೇಹಾನಾಂ ಚ-ವಿದೇಹಕುಲಸ್ಥರಿಗೂ ಸಹ, ಸರ್ವಶಃ-ಸರ್ವಪ್ರಕಾರದಲ್ಲಿಯೂ, ಸಂಬಂಧಕಪುರೋಗಮಾಃ-ನೆಂಟತನವೇ ಮೊದಲಾಗಿಉಳ್ಳ, ಪ್ರೀತಯಃ-ವಿಶ್ವಾಸಗಳು, ಅತುಲಾಃ-ಅಸದೃಶವಾಗಿರುವವು ॥೪॥ ಹೇ ಪಾರ್ಥಿವ-ಎಲೈ ರಾಜನೆ, ತತ್-ಆ ಕಾರಣದ ದೆಸೆಯಿಂದ, ಭವಾನ್-ನೀನು, ರತ್ನಾನಿ-ನಮ್ಮಿಂದ ಕೊಡಲ್ಪಡುವ ಉತ್ತಮ ವಸ್ತುಗಳನ್ನು, ಆದಾಯ-ತೆಗೆದುಕೊಂಡು, ಸ್ವಪುರಂ-ತನ್ನ ಪಟ್ಟಣವಂ ಕುರಿತು, ಯಾತು-ತೆರಳು, ಭರತಶ್ಚ-ಭರತನೂ ಸಹ, ಸಹಾಯಾರ್ಥಂ-ಸಹಾಯಕ್ಕೋಸುಗ, ತೇ-ನಿನ್ನ, ಪೃಷ್ಠತಃ-ಹಿಂದುಕಡೆ, ಅನುಯಾಸ್ಯತಿ-ಅನುಸರಿಸಿ ಬರುತ್ತಿರುವನು ॥೫॥ ಜನಕಃ - ಜನಕರಾಯನು, ತಥೇತಿ- ಹಾಗೆ ಆಗಲೆಂದು, ಉಕ್ತ್ವಾ ತು-ಹೇಳಿದರೆ, ಹೇ ರಾಜರ್ಷೇ-ಎಲೈ ಅರಸೇ, ಭವತಃ-ನಿನ್ನ, ದರ್ಶನೇನ-ನೋಡೋಣದರಿಂದಲೂ, ಜಯೇನ ಚ-ರಾವಣನ ಜಯದಿಂದಲೂ ಸಹ, ಪ್ರೀತಃ-ಸಂತುಷ್ಟನು, ಅಸ್ಮಿ ಆದೆನು, (ಇತಿ-ಇಂತೆಂದು,) ರಾಘವಂ-ಶ್ರೀರಾಮನಂ ಕುರಿತು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೬॥ ಹೇ ರಾಜರ್ಷೇ-ಎಲೈ ಅರಸೆ, ಮದರ್ಥಂ-ನನ್ನ ಬಹುಮಾನಕ್ಕೋಸ್ಕರ, ಸಂಚಿತಾನಿ-ಸಂಪಾದಿಸಲ್ಪಟ್ಟ, ಆಹೃತಾನಿ-ತರಲ್ಪಟ್ಟ, ರತ್ನಾನಿ-ಅಮೂಲ್ಯವಸ್ತುಗಳು, ಯಾನಿ-ಯಾವವೋ, ಸರ್ವಾಣಿ-ಸಮಸ್ತವಾದ, ತಾನಿ ವೈ-ಅವುಗಳನ್ನೆಲ್ಲಾ, ಮೇ-ನನ್ನ, ದುಹಿತ್ರೇ-ಮಗಳಿಗೋಸ್ಕರ, ದದಾಮ್ಯೇವ-ಕೊಡಲೇ ಕೊಡುವೆನು ॥೭॥ ಶ್ರೀಮಾನ್-ಕಾಂತಿಯುಕ್ತನಾದ, ಜನಕಸ್ತು-ಜನಕರಾಜನಾದರೆ, ಹೃಷ್ಟಮಾನಸಃ-ಸಂತೋಷಾಂತರಂಗಮುಳ್ಳವನಾಗಿ, ಏವಂ- ಈ ಪರಿಯಾಗಿ, ಕಾಕುತ್ಸ್ಥಂ-ಕಕುತ್ಸ್ಥವಂಶೋತ್ಪನ್ನನಾದ, ತಂ ರಾಘವಂ-ಆ ಶ್ರೀರಾಮನನ್ನು ಕುರಿತು, ಉಕ್ತ್ವಾ-ಹೇಳಿ, ಅನುಜ್ಞಾಪ್ಯ- ಅಪ್ಪಣೆಯಂ ಕೊಟ್ಟು, ಮಿಥಿಲಾಂ-ಮಿಥಿಲಾಪುರಿಯಂ ಕುರಿತು, ಪ್ರಯಯೌ-ಪೊರಟನು ॥೮॥ ಜನಕೇ-ಜನಕರಾಜನು, ಪ್ರಯಾತೇ ಸತಿ- ಹೊರಟು ಹೋದವನಾಗುತ್ತಿರಲಾಗಿ, ತತಃ-ಬಳಿಕ, ರಾಘವಃ-ಶ್ರೀರಾಮನು, ಪ್ರಾಂಜಲಿಃ-ಅಂಜಲಿಬದ್ಧನಾದವನು, ಭೂತ್ವಾ-ಆಗಿ, ಪ್ರಭುಂ-ಅರಸಾದ, ಮಾತುಲಂ-ಸೋದರಮಾವನಾದ, ಕೈ

---

ಮಹಾ ಭುಜಪರಾಕ್ರಮಿಯಾದ ರಘುನಂದನನು, ಪ್ರತಿದಿನದಲ್ಲಿಯೂ ಈ ಪರಿಯಾಗಿ ಇರುತಿರುವನಾಗಿ, ಪುರವಾಸಿಗಳ ಮತ್ತೂ ದೇಶದಲ್ಲಿರುವ ಜನಗಳ ಕೃತ್ಯಗಳಂ ನಡೆಯಿಸುತ್ತಿದ್ದನು ॥೧॥ ಈ ಪರಿ ಕೆಲದಿನಗಳು ಕಳೆದಬಳಿಕ, ಕಕುತ್ಸ್ಥ ಕುಲತಿಲಕನಾದ ಶ್ರೀರಾಮನು ಅಂಜಲಿಬದ್ಧನಾಗಿ, ಮಿಥಿಲಾಪುರಿ ಗಧಿಪತಿಯಾದ ಜನಕರಾಜನಂ ಕುರಿತಿಂತೆಂದನು, ಎಲೈ ನರನಾಥನೆ! ನೀನೆ ಗತಿಯು, ನಿನ್ನಿಂದ ನಾವೆಲ್ಲ ಕನ್ಯಾಪ್ರದಾನ ರೂಪವಾದ ಧರ್ಮದಿಂದ, ಪರಿಪಾಲಿಸಲ್ಪಟ್ಟೆವು, ತಮ್ಮ ತಪದಿಂ ರಾವಣನು ನನ್ನಿಂದ ಹತನಾದನು, ಇಕ್ಷ್ವಾಕುವಂಶಸ್ಥರಿಗೂ ಮಿಥಿಲರಾಜ ಕುಲಸ್ಥರಿಗೂ ಸಹಾ ಉಂಟಾಗಿರುವ ಸಂಬಂಧವೇ ಮುಂತಾದ ವಿಶ್ವಾಸಂಗಳು ಅಸದೃಶಂಗಳಾಗಿರುವವು, ಆದಕಾರಣ ಪ್ರೀತಿಯಿಂದ ನಾನೀಯುವ ಉತ್ತಮವಸ್ತುಗಳಂ ಸ್ವೀಕರಿಸಿ, ತಮ್ಮ ಪುರವಂ ಕುರಿತು ತೆರಳಬಹುದು, ಸಹಾಯಾರ್ಥವಾಗಿ ಎನ್ನನುಜನಾದ ಭರತನು ತಮ್ಮ ಹಿಂದುಕಡೆ ಬರುವಂಥಾವನಾಗುವನೆಂದು ರಘುನಂದನು ನುಡಿಯಲೂ, ಆ ವಾಕ್ಯವಂ ಕೇಳಿ ಜನಕರಾಯನಿಂತೆಂದನು, ಎಲೈ ರಾಜನೆ! ನಿನ್ನ ದರ್ಶನದಿಂದಲೂ ವಿಜಯದಿಂದಲೂ ನಾನು ಸಂತುಷ್ಟನಾದೆನು, ಎನಗೆ ಬಹುಮಾನಾರ್ಥವಾಗಿ ತಂದಿರ್ಪ ವಸ್ತುಗಳನ್ನೆಲ್ಲಾ ಎನ್ನ ನಂದಿನಿಯಾದ ಜಾನಕಿಗೀಯುವೆಂಥಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಾಘವಃಪ್ರಾಂಜಲಿರ್ಭೂತ್ವಾವಾಕ್ಯಮೇತದುವಾಚಹ ||೯|| ಇದಂರಾಜ್ಯಮಹಂಚೈವಭರತಶ್ಚ ಸಲಕ್ಷ್ಮಣಃ | ಆಯತ್ತಾ ಸ್ತ್ವಯಿನೋನಾಥಗತಿಶ್ಚ ಪುರುಷರ್ಷಭ ||೧೦||ರಾಜಾಹಿವೃದ್ಧ ಸ್ಸಂತಾಪಂತ್ವದರ್ಥಮುಪಯಾಸ್ಯತಿ | ತಸ್ಮಾದ್ಗಮನಮ ದ್ಯೈವರೋಚಯೇತವಪಾರ್ಥಿವ||೧೧||ಲಕ್ಷ್ಮಣಶ್ಚಾ ನುಯಾತಾರ್ಥಂಪೃಷ್ಠ ತೋನುಗಮಿಷ್ಯತಿ | ಧನಮಾದಾಯವಿಪುಲಂ ರತ್ನಾನಿವಿವಿಧಾನಿಚ ||೧೨|| ಯುಧಾಜಿತ್ತು ತಥೇತ್ಯಾಹಗಮನಂಪ್ರತಿರಾಘವಮ್ | ರತ್ನಾನಿಚಧನಂಚೈವತ್ವಯ್ಯೇವಾಕ್ಷಯ ಮಸ್ತ್ವಿತಿ ||೧೩|| ಪ್ರದಕ್ಷಿಣಂಸರಾಜಾನಂಕೃತ್ವಾ ಕೇಕಯವರ್ಧನಃ | ರಾಮೇಣಹಿಕೃತಃಪೂರ್ವಂಅಭಿವಾದ್ಯಪ್ರದಕ್ಷಿ ಣಮ್ ||೧೪|| ಲಕ್ಷ್ಮಣೇನಸಹತೇಜಾಃಪ್ರಯಾತಃಕೇಕಯೇಶ್ವರಃ | ಜಿತೇಸುರೇಯಥಾವೃತ್ರೇವಿಷ್ಣುನಾಸಹವಾಸವಃ ||೧೫|| ತಂವಿಸೃಜ್ಯತತೋರಾಮೋವಯಸ್ಯಮಕುತೋಭಯಮ್ |ಪ್ರತರ್ದನಂಕಾಶಿಪತಿಂಪರಿಷ್ವಜ್ಯೇದಮಬ್ರವೀತ್ ||೧೬|| ದರ್ಶಿ

---

ಕೆಯಂ-ಕೇಕಯದೇಶಾಧೀಶ್ವರನಾದ ಯುಧಾಜಿತುವಿನನ್ನು ಕುರಿತು, ಏತತ್-ಈ ಮುಂದೆ ಹೇಳುವ, ವಾಕ್ಯಂ-ಮಾತನ್ನು, ಉವಾಚಹ-ಹೇಳಿದನಷ್ಟೆ|| ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ಇದಂರಾಜ್ಯಂ-ಈ ರಾಜ್ಯವು, ಸಲಕ್ಷ್ಮಣಃ-ಲಕ್ಷ್ಮಣಸಹಿತನಾದ, ಅಹಂಚೈವ-ನಾನೂಸಹ,ತ್ವಯಿ-ನಿನ್ನಲ್ಲಿ,ಆ ಯತ್ತಾಃ-ಆಸಕ್ತಚಿತ್ತರಾಗಿಧೇವೆ, ಹೆನಾಥ-ಎಲೈಪತಿಯೆ, ನಃ-ನಮಿಗೆ, ಗತಿಃ-ಆಪದ್ಬಂಧುವು ||೧೦|| ವೃದ್ಧಃ-ಮುದುಕನಾದ, ರಾಜಾ- ಕೇಕಯರಾ ಜನು, ತ್ವದರ್ಥಂ-ನಿಸಿಗೋಸ್ಕರ, ಸಂತಾಪಂ-ಮನೋವ್ಯಸನವನ್ನು, ಉಪಯಾಸ್ಯತಿ-ಹೊಂದುವನು, ಹೇ ಪಾರ್ಥಿವ-ಎಲೈ ಅರಸೆ, ತಸ್ಮಾತ್-ಆ ಕಾರ ಣದವೆಸೆಯಿಂದ, ತವ-ನಿನ್ನ, ಗಮನಂ-ಹೊರಡೋಣವು, ಅದ್ಯೈವ-ಈಗಲೆ, ರೋಚಯೆ, ಕೋರುತ್ತೇವೆ ||೧೧|| ಲಕ್ಷ್ಮಣಶ್ಚ - ಲಕ್ಷ್ಮಣನೂಸಹ, ಅ ನುಯಾತಾರ್ಥಂ-ಅನುಸರಿಸಿ, ಬರೋಣವೆಂಬ ಉಪಚಾರಕ್ಕೋಸ್ಕರ, ವಿಪುಲಂ-ಅಧಿಕವಾದ, ಧನಂ-ದ್ರವ್ಯವನ್ನೂ, ವಿವಿಧಾನಿ-ನಾನಾಬಗೆಗಳಾದ, ರ ತ್ನಾನಿಚ-ರತ್ನಗಳನ್ನೂಸಹ, (ಅಥವಾ ಉತ್ತಮವಾದ ವಸ್ತುಗಳನ್ನೂ ಸಹ) ಆದಾಯ-ತೆಗದುಕೊಂಡು,ಪೃಷ್ಠತಃ-ಹಿಂದುಗಡೆ, ಅನುಗಮಿಷ್ಯತಿ- ಅನುಸರಿಸಿ ಬರುವನು ||೧೨|| ಯುಧಾಜಿತ್-ಯುಧಾಜಿತುವು, ಗಮನಂಪ್ರತಿ-ಹೊರಡುವಿಕೆಯಂ ಕುರಿತು, ತಥೇತಿ-ಹಾಗೇ ಆಗಲೆಂದು, ಆಹ- ಹೇಳಿದ ನು, ಕಿಂತು-ಮತ್ತೇನಂದರೆ, ರತ್ನಾನಿಚ-ರತ್ನಗಳೂ,ಧನಂಚೈವ-ದ್ರವ್ಯವೂಸಹ, ತ್ವಯ್ಯೇವ-ನಿನಲ್ಲಿಯೇ, ಅಕ್ಷಯಂ-ನಾಶರಹಿತವಾಗಿ, ಅಸ್ತು- ಆ ಗಲಿ, ಇತಿ-ಇಂತೆಂದು, ರಾಘವಂ-ಶ್ರೀರಾಮನಂ ಕುರಿತು, ಆಹ-ನುಡಿದನು ||೧೩|| ರಾಮೇಣ-ಶ್ರೀರಾಮನಿಂದ, ಪೂರ್ವಂ-ಮೊದಲು, ಅಭಿವಾದ್ಯ-ನಮ ಸ್ಕರಿಸಿ, ಪ್ರದಕ್ಷಿಣಂ-ಪ್ರದಕ್ಷಿಣವು, ಕೃತಃ-ಮಾಡಲ್ಪಟ್ಟ, ಕೆಕಯವರ್ಧನಃ-ಕೇಕಯ ವಂಶಾಭಿವೃದ್ಧಿ ಕರನಾದ, ಸಃ-ಆ ಯುಧಾಜಿತುವು, ರಾಜಾನಂ-ಪ ಟ್ಟಾಭಿಷಿಕ್ತನಾದ ಶ್ರೀ ರಾಮನಂಕುರಿತು, ಪ್ರದಕ್ಷಿಣಂ-ಪ್ರದಕ್ಷಿಣವನ್ನು, ಕೃತ್ವಾ-ಮಾಡಿ, ಪ್ರಯಾತಃ-ಹೊರಟನು ||೧೪|| ಅಸುರೆ-ರಾಕ್ಷಸನಾದ, ವೃ ತ್ರೆ-ವೃತ್ರನು, ಜಿತೆಸತಿ-ಜಯಿಸಲ್ಪಟ್ಟವನಾಗುತಿರಲೀಕಾಗಿ, ವಾಸವಃ-ದೇವೇಂದ್ರನು,ವಿಷ್ಣುನಾಸಹ-ಉಪೇಂದ್ರನೊಡನೆ, ಯಥಾ-ಹ್ಯಾಗೆ, ಪ್ರಯಾತಃ- ಹೊರಟನೋ, ತಥಾ-ಹಾಗೆ, ಮಹಾತೇಜಾಃ-ಅತಿ ತೇಜಸ್ವಿಯಾದ, ಕೇಕಯದೇಶಾಧಿಪತಿಯು, ಲಕ್ಷ್ಮಣೇನಸಹ-ಲಕ್ಷ್ಮಣನೊಡನೆ ಪ್ರಯಾತಃ- ಹೊರಟ ನು ||೧೫|| ರಾಮಃ-ಶ್ರೀರಾಮನು, ತಂ-ಆಯುಧಾಜಿತುವಿನನ್ನು, ವಿಸೃಜ್ಯ-ಕಳುಹಿಸಿಕೊಟ್ಟು, ತತಃ-ಬಳಿಕ,ಅಕುತೋಭಯಂ-ಎಲ್ಲೆಲ್ಲಿಯೂ ಅಂಜದಿ ರುವ, ವಯಸ್ಯಂ-ಸ್ನೇಹಿತನಾದ, ಪ್ರತರ್ದನಂ-ಪ್ರತರ್ದನನೆಂಬ, ಕಾಶಿಪತಿಂ-ಕಾಶೀದೇಶದ ರಾಜನನ್ನು, ಪರಿಷ್ವಜ್ಯ-ಅಪ್ಪಿಕೊಂಡು, ಇದಂ-ಈ ಮಾತ ನ್ನು, ಅಬ್ರವೀತ್, ನುಡಿದನು ||೧೬|| ಹೇ ರಾಜನ್-ಎಲೈ ಅರಸೆ, ಭವತಾ-ನಿನ್ನಿಂದ, ಪ್ರೀತಿಃ-ವಿಶ್ವಾಸವು, ದರ್ಶಿತಾ-ತೋರಿಸಲ್ಪಟ್ಟಿತು, ಪರಾ-

---

ವನಾಗು, ನಾಂ ಪೋಗಿಬರುವೆನೆಂದು ನುಡಿದು, ಕಡುತೇಜಸ್ವಿಯಾಗಿಯೂ ಸಂತುಷ್ಟಾಂತರಂಗಮುಳ್ಳವನಾಗಿಯೂ ಇರುವನಾಗಿ, ಮಿಥಿಲಾಪುರವಂ ಕುರಿತು ತೆರಳಿದವನಾದನು ||೮|| ಈಪರಿ ಜನಕರಾಯನು ಹೊರಡಲೂ ರಘುನಂ ದನನು ಅಂಜಲಿಬದ್ಧನಾಗಿ ಮಾತುಲನಾದ ಮತ್ತೂ ಕೇಕಯದೇಶಾಧೀಶ್ವರನಾದ ಯುಧಾ ಜಿತುವಿನಂ ಕುರಿತಿಂತೆಂದ ನು ||೯|| ಎಲೈ ಪುರುಷಶ್ರೇಷ್ಠನೆ ! ಈ ರಾಜ್ಯವೂ, ನಾನು, ಲಕ್ಷ್ಮಣನು, ಭರತನೂ ಸಹಾ ನಿನಿಗ ಧೀನರಾಗಿಧೇ ವೆ, ನೀನೆ ಆಪ್ತಬಂಧುವು, ವೃದ್ಧನಾದ ಕೇಕಯರಾಜನು ನಿನಿಗೋಸುಗ ಸಂತಪಿಸುತ್ತಾ ಹುಡುಕಿಕೊಂಡು ಬರುವ ನು, ಆದಕಾರಣ ನೀನೀಗಲೇ ತೆರಳುವದುತ್ತಮವಾಗಿರುವದೆಂದೆಣಿಸುತ್ತೇನೆ, ನಾಗು ಕಳುಹಿಸೋಣವೆಂಬ ಉಪಚಾ ರಾರ್ಥವಾಗಿ ಲಕ್ಷ್ಮಣನು ಬಹುರತ್ನಗಳನ್ನೂ ಅನೇಕವಾದ ದ್ರವ್ಯವನ್ನೂ ಸಹಾ ತೆಗದುಕೊಂಡು, ನಿನ್ನ ಸಂಗಡಬ ರುವೆನೆಂದು ರಾಘವನು ನುಡಿಯಲೂ, ಯುಧಾ ಜಿತುವು ಪ್ರಯಾಣವಿಷಯದಲ್ಲಿ ಹಾಗೇ ಅಗಲೆಂದೊಪ್ಪಿಕೊಂಡು, ರಾ ಮನಂ ಕುರಿತಿಂತೆಂಧನು, ಎಲೈ ರಘುನಂದನನೆ, ರತ್ನದ್ರವ್ಯಾದಿಗಳೆಲ್ಲಾ ನಿನ್ನಲ್ಲಿಯೇ ಅಕ್ಷಯವಾಗಿರಲೀ, ಎನಗೇ ನೂ ವಿಶೇಷವಾಗಿ ಬಹುಮಾನವಂಗೈಯ್ಯಬೇಡ, ನಾಂ ಪೋಗಿಬರುವೆನೆಂದು ನುಡಿದು, ರಘುನಂದನನಿಂದ ವಂದಿತನಾ ಗಿ, ತಾನೂ, ಸಹ ಪ್ರದಕ್ಷಿಣವಂಗೈದು, ಲಕ್ಷ್ಮಣನಿಂದೊಡಗೂಡಿ ಕಡುತೇಜಸ್ವಿಯಾಗಿ, ವೃತ್ರಸಂಹಾರವಾದ ಬಳಿಕ ಉಪೇಂದ್ರಸಹಿತನಾದ ದೇವೇಂದ್ರನುತೆರಳುವತೆರದಿ ತೆರಳಿದನು||೧೫||ಈಪರಿಯಾಗಿ ಆ ಯುಧಾಜಿತುವಿನಂ ಕಳುಹಿಸಿ ಕೊಟ್ಟು, ಎಲ್ಲೆಲ್ಲಿಯೂ ಅಂಜದಿರುವನಾಗಿಯೂ, ಕಾಶೀಪುರಿಗಧಿಪತಿಯಾಗಿಯೂ,ಸಖನಾಗಿಯೂ ಇರುವ,ಪ್ರತರ್ದನ ನೆಂಬರಾಜನನ್ನಪ್ಪಿ ಕೊಂಡು ಕಡುಸಂತುಷ್ಟನಾಗಿಂತೆಂದು ನುಡಿದನು ||೧೬|| ಎಲೈ ರಾಜನೆ ! ನಿನ್ನಿಂದಲೂ, ಎನ್ನನುಜ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ವಾಭವತಾಪ್ರೀತಿರ್ದರ್ಶಿತಂಸೌಹೃದಂಪರಮ್। ಉದ್ಯೋಗಶ್ಚ ಕೃತೋರಾಜನ್ ಭರತೇನತ್ವಯಾಸಹ॥೧೭॥ತತ್ತ್ವಮದ್ಯೈವ ಕಾಶೇಯಪುರೀಂವಾರಾಣಸೀಂವ್ರಜ।ರಮಣೀಯಾಂತ್ವಯಾಗುಪ್ತಾಂಸುಪ್ರಾಕಾರಾಂಸುತೋರಣಾಮ್॥೧೮॥ಏತಾವದುಕ್ತ್ವಾ ಕಾಕುತ್ಸ್ಥ ಉತ್ಥಾಯಪರಮಾಸನಾತ್ ।ಪರ್ಯಷ್ವಜತಧರ್ಮಾತ್ಮಾ ನಿರಂತರಮುರೋಗತಮ್ ॥೧೯॥ ವಿಸರ್ಜಯಾಮಾಸತದಾಕೌಸಲ್ಯಾನಂದವರ್ಧನಃ ।೨೦॥ ರಾಘವೇಣಾಭ್ಯನುಜ್ಞಾತಃಕಾಶೀಶೋಹ್ಯಕುತೋಭಯಃ ।ವಾರಾಣಸೀಂಯಯೌತೂರ್ಣಂರಾಘವೇಣವಿಸರ್ಜಿತಃ ॥೨೧॥ವಿಸೃಜ್ಯತಂವಯಸ್ಯಂಸತ್ರಿಶತಂಪೃಥಿವೀಪತೀನ್ ।ಪ್ರಹಸನ್ ರಾಘವೋವಾಕ್ಯಮುವಾಚಮಧುರಾಕ್ಷರಮ್॥೨೨॥ಭವತಾಂಪ್ರೀತಿರವ್ಯಗ್ರಾತೇಜಸಾಪರಿರಕ್ಷಿತಾ। ಧರ್ಮಶ್ಚ ನಿಯತೋನಿತ್ಯಂಸತ್ಯಂಚಭವತಾಂಸದಾ॥೨೩॥ಯುಷ್ಮಾಕಂಚಪ್ರಭಾವೇಣತೇಜಸಾಚಮಹಾತ್ಮನಾಮ್।ಹತೋದುರಾತ್ಮಾ ದುರ್ಬುದ್ಧೀರಾವಣೋರಾಕ್ಷಸಾಧಿಪಃ ॥೨೪॥ ಹೇತುಮಾತ್ರಮಹಂತತ್ರ ಭವತಾಂತೇಜಸಾಹತಃ ।ರಾವಣಸ್ಸಗಣೋಯುದ್ಧೇ ಸಪುತ್ರಸ್ಸಹಬಾಂಧವಃ ॥೨೫॥

---

ಉತ್ಕೃಷ್ಟವಾದ, ಸೌಹೃದಂ-ಸಖಿತ್ವವು, ದರ್ಶಿತಂ-ನೋಡಿಸಲ್ಪಟ್ಟಿತು, ಭರತೇನ-ಭರತನಿಂದಲೂ, ತ್ವಯಾಸಹ-ನಿನ್ನಿಂದಲುಸಹ, ಉದ್ಯೋಗಶ್ಚ-ಪ್ರಯತ್ನವೂಕೂಡಾ, ಕೃತಃ-ಮಾಡಲ್ಪಟ್ಟಿತು ॥೧೭॥ತತ್-ಆಕಾರಣದ ದೆಸೆಯಿಂದ, ತ್ವಂ-ನೀನು,ಅದ್ಯೈವ-ಈಗಲೇ, ರಮಣೀಯಾಂ-ಮನೋಹರವಾದ, ತ್ವಯಾ-ನಿನ್ನಿಂದ, ಗುಪ್ತಾಂ-ಪರಿಪಾಲಿಸಲ್ಪಡುತಿರುವ, ಸುಪ್ರಾಕಾರಾಂ-ಒಳ್ಳೆ ಕೋಟೆಯುಳ್ಳ,ಸುತೋರಣಾಂ-ಸಮೀಚೀನವಾದಹೊರಬಾಗಿಲುಗಳುಳ್ಳ, ಕೌಶೇಯಾಂ-ರೇಷ್ಮೆಯಿಂದ ಮಾಡಲ್ಪಟ್ಟ ಮೊಗಟವೇಮುಂತಾದವುಗಳುಳ್ಳ, ವಾರಾಣಸೀಂ-ವಾರಾಣಸೀಯೆಂಬ,ಪುರೀಂ-ಪುರವಂಕುರಿತು, ವ್ರಜ-ಹೊರಡು ॥ ಧರ್ಮಾತ್ಮಾ-ಧರ್ಮಸ್ವಭಾವವುಳ್ಳ, ಕಾಕುತ್ಸ್ಥಃ-ಶ್ರೀರಾಮನು,ಏತಾವತ್-ಇಷ್ಟುಮಾತ್ರವು, ಉಕ್ತ್ವಾ-ಹೇಳಿ, ಪರಮಾಸನಾತ್-ಸಿಂಹಾಸನದಿಂದ, ಉತ್ಥಾಯ-ಮೇಲಕ್ಕೆದ್ದು, ಉರೋಗತಂಯಥಾಭವತಿಯಥಾ-ವಕ್ಷಸ್ಥಲವಂ ಪೊಂದಿದಂತೆ, ನಿರಂತರಂ-ದೃಢವಾಗಿ, ಪರಿಷ್ವಜತ- ಅಪ್ಪಿಕೊಂಡನು ॥೧೯॥ ಕೌಸಲ್ಯಾನಂದವರ್ಧನಃ-ಕೌಸಲ್ಯಾದೇವಿಗೆ ಸಂತೋಷವಂ ವೃದ್ಧಿಗೊಳಸುತ್ತಿರುವ ಶ್ರೀರಾಮನು, ತದಾ-ಆ ಕಾಲದಲ್ಲಿ, ವಿಸರ್ಜಯಾಮಾಸ-ಕಳುಹಿಸಿಕೊಟ್ಟನು ॥೨೦॥ ರಾಘವೇಣ-ಶ್ರೀರಾಮನಿಂದ, ಅಭ್ಯನುಜ್ಞಾತಃ-ಅಪ್ಪಣೆಯಂ ತೆಗದುಕೊಂಡ, ಅಕುತೋಭಯಃ-ಎಲ್ಲೆಲ್ಲಿಯೂ ಅಂಜದಿರುವ, ಕಾಶೀಶಃ-ಕಾಶೀದೇಶಾಧಿಪತಿಯು, ರಾಘವೇಣ-ಶ್ರೀರಾಮನಿಂದ, ವಿಸರ್ಜಿತಃ-ಕಳುಹಿಸಿಕೊಡಲ್ಪಟ್ಟವನಾಗಿ, ವಾರಾಣಸೀಂ-ಕಾಶೀಪುರಿಯನ್ನು ಕುರಿತು, ತೂರ್ಣಂ-ಜಾಗ್ರತೆಯಾಗಿ, ಯಯೌ-ಪೊರಟನು ॥೨೧॥ ತಂವಯಸ್ಯಂ-ಆ ಸ್ನೇಹಿತನನ್ನು, ವಿಸೃಜ್ಯ-ಕಳುಹಿಸಿಕೊಟ್ಟು, ಸರಾಘವಃ-ಆ ಶ್ರೀರಾಮನು, ಪ್ರಹಸನ್-ನಗುತ್ತಿರುವನಾಗಿ,ತ್ರಿಶತಂ-ಮುನ್ನೂರು ಮಂದಿಯಾದ, ಪೃಥಿವೀಪತೀನ್-ಅರಸರಂ ಕುರಿತು, ಮಧುರಾಕ್ಷರಂ-ಮನೋಹರವಾದ ಅಕ್ಷರಗಳುಳ್ಳಂತೆ, ವಾಕ್ಯಂ-ಮಾತನ್ನು, ಉವಾಚ- ಪೇಳದನು ॥ ೨೨ ॥ ಭವತಾಂ-ನಿಮ್ಮ, ತೇಜಸಾ-ತೇಜಸ್ಸಿನಿಂದ, ಪ್ರೀತಿಃ - ವಿಶ್ವಾಸವು, ಅವ್ಯಗ್ರಾ-ಅನನ್ಯಚಿತ್ತವಾಗಿ, ಪ್ರತಿಷ್ಠಿತಾ-ಸ್ಥಾಪಿಸಲ್ಪಟ್ಟಿತು, ಧರ್ಮಶ್ಚ - ಧರ್ಮವೂಸಹ, ನಿಯತಃ - ನಿಶ್ಚಯವಾಗಿಮಾಡಲ್ಪಟ್ಟಿತು, ಭವತಾಂ-ನಿಮ್ಮ, ಸತ್ಯಂಚ-ಯಥಾರ್ಥವೂ ಸಹ,ನಿಯತಂ - ನಿಶ್ಚಯವಾಗಿರುವದು ॥ ೨೩ ॥ ಮಹಾತ್ಮನಾಂ-ಮಹಾನುಭಾವರಾದ, ಯುಷ್ಮಾಕಂ-ನಿಮ್ಮ, ಪ್ರಭಾವೇನಚ-ಮಹಾತ್ಮ್ಯದಿಂದಲೂ, ತೇಜಸಾಚ-ತೇಜಸ್ಸಿನಿಂದಲೂ ಸಹ, ದುರಾತ್ಮಾ - ದುರ್ವ್ಯಾಪಾರಿಯಾದ, ರಾಕ್ಷಸಾಧಿಪಃ-ರಕ್ಕಸರಿಗೆಲ್ಲಾ ಒಡೆಯನಾದ, ದುರ್ಬುದ್ಧಿಃ-ಕೆಟ್ಟಮತಿಯುಳ್ಳ, ರಾವಣಃ-ರಾವಣನು, ಹತಃ-ಮೃತನಾದನು ॥ ೨೪ ॥ ತತ್ರ-ಆರಾವಣಸಂಹಾರದಲ್ಲಿ, ಅಹಂ-ನಾನು, ಹೇತುಮಾತ್ರಂ-ಕಾರಣಮಾತ್ರವು, ಸಗಣಃ-ಸಮುದಾಯಗಳಿಂದೊಡಗೂಡಿದ, ಸಪುತ್ರಃ-ಪುತ್ರಸಹಿತನಾದ, ಸಹಬಾಂಧವಃ-ಬಂಧುಗಳಿಂದ ಯುಕ್ತನಾದ, ರಾವಣಃ-ರಾವಣನು, ಯುದ್ಧೇ-ಕಾಳಗದಲ್ಲಿ, ಭವತಾಂ-ನಿಮ್ಮ, ತೇಜಸಾ-ತೇಜಸ್ಸಿನಿಂದ, ಹತಃ-ಹೊಡೆಯಲ್ಪಟ್ಟನು ॥ ೨೫ ॥ ಜನಕರಾಜಸ್ಯ- ಜನಕರಾಜನ, ತನಯಾಂ-ಪು

---

ನಾದ ಭರತನಿಂದಲೂ ಸಹಾ, ಮಹಾಪ್ರೀತಿಯೂ ಸೌಹಾರ್ದವೂ, ಉದ್ಯೋಗವೂ ಸಹಾ ಮಾಡಲ್ಪಟ್ಟನ್ನು, ನೀನಿಲ್ಲಿಗೆ ಬಂದು ಬಹುದಿನವಾಯಿತು, ಆದಕಾರಣ ತ್ವರಿಮಾಗಿ ತೆರಳಿ, ಸಮೀಚೀನವಾದ ಪ್ರಾಕಾರವುಳ್ಳ, ಸುಂದರತರವಾಗಿರುವ ಹೊರಬಾಗಿಲುಗಳುಳ್ಳ,ಮತ್ತೂ ರೇಶ್ಮೆಯಿಂದ ಮಾಡಲ್ಪಟ್ಟ ಮೊಗಟಗಳುಳ್ಳ, ನಿನ್ನ ರಾಜಧಾನಿಯಾದ ವಾರಾಣಸಿಯೆಂಬ ಪುರವಂ ಪೊಂದೆಂದು ನಿರೂಪಿಸಿ, ಸಿಂಹಾಸನದಿಂದಿಳಿದು, ಹರ್ಷದಿಂದಾ ಲಿಂಗನವಂಗೈದು ಆತನಂಕಳುಹಿಸಿಕೊಟ್ಟನು ॥೨೦॥ ಆವೇಳೆಯಲ್ಲಿ ಈಪರಿಯಾಗಿ ರಘುನಂದನನಿಂದಾಜ್ಞಪ್ತನಾದ ಕಾಶೀರಾಜನು, ಶ್ರೀರಾಮನನ್ನಗಲಿ ತ್ವರಿತವಾಗಿ ವಾರಾಣಸೀಪುರಿಯಂ ಕುರಿತು ತೆರಳಿದನು ॥೨೧॥ ಕಾಶೀರಾಜನೀಪರಿಪೊರಟು ಹೋಗಲೂ, ರಘುನಂದನನು ತನಿಗೆ ಸಹಾಯಾರ್ಥವಾಗಿ ಬಂದಿರ್ಪ, ಮುನ್ನೂರುಮಂದಿಯಾದ ನರನಾಥರಂಕಂಡು ನಸುನಗೆಯುಳ್ಳವನಾಗಿಂತೆಂದನು ॥೨೨॥ ಎಲೈ ಭೂಪತಿಗಳಿರಾ ! ನಿಮ್ಮ ಪ್ರಭಾವದಿಂ ವಿಶ್ವಾಸವು ಏಕರೀತಿಯಾಗಿ ಪರಿಪಾಲಿಸಲ್ಪಟ್ಟದ್ದಲ್ಲದೇ, ಧರ್ಮವು ಸತ್ಯವೂಸಹಾ ನಿಯಮಿಸಲ್ಪಟ್ಟವು, ರಾಕ್ಷಸಾಧಿಪತಿಯಾಗಿದ್ದ ದುರಾತ್ಮನಾದ ಆ ರಾವಣನು ಪುತ್ರಬಂಧುಸಹಿತನಾಗಿ ಮಹಾತ್ಮರಾದ ತಮ್ಮ ಪ್ರಭಾವದಿಂದ ಆಹವದಲ್ಲಿ ಹತನಾದನು, ಅವನಸಂಹಾರಕ್ಕೆ ನಾನು ಹೇತುಮಾತ್ರವು, ಮಹಾಮತಿವಂತನಾದ ಭರತನು, ಕಾನನದಲ್ಲಿ ಅಪಹೃತಳಾದ ಜನಕನಂದಿಯಂಕೇಳಿ, ನಿಮ್ಮೆಲ್ಲರಂ ಕ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭವಂತಶ್ಚ ಸಮಾನೀತಾ ಭರತೇನ ಮಹಾತ್ಮನಾ । ಶ್ರುತ್ವಾ ಜನಕರಾಜಸ್ಯ ಕಾನನೇ ತನಯಾಂ ಹೃತಾಂ ॥ ೨೬ ॥ ಉದ್ಯುಕ್ತಾನಾಂ ಚ ಸರ್ವೇಷಾಂ ಪಾರ್ಥಿವಾನಾಂ ಮಹಾತ್ಮನಾಂ । ಕಾಲೋ ವ್ಯತೀತಸ್ಸುಮಹಾನ್ ಗಮನೇ ರೋಚತಾಂ ಮನಃ ॥ ೨೭ ॥ ಪ್ರತ್ಯೂಚುಸ್ತಂ ಚ ರಾಜಾನೋ ಹರ್ಷೇಣ ಮಹತಾನ್ವಿತಾಃ ॥ ೨೮ ॥ ದಿಷ್ಟ್ಯಾ ತ್ವಂ ವಿಜಯೀ ರಾಮ ರಾಜ್ಯಂ ಚಾಪಿ ಪ್ರತಿಷ್ಠಿತಂ । ದಿಷ್ಟ್ಯಾ ಪ್ರತ್ಯಾಹೃತಾ ಸೀತಾ ದಿಷ್ಟ್ಯಾ ಶತ್ರುಃ ಪರಾಜಿತಃ ॥ ೨೯ ॥ ಏಷ ನಃ ಪರಮಃ ಕಾಮ ಏಷ ನಃ ಕೀರ್ತಿರುತ್ತಮಾ । ಯತ್ತ್ವಾಂ ವಿಜಯಿನಂ ರಾಮ ಪಶ್ಯಾಮೋ ಹತಶಾತ್ರವಂ ॥ ೩೦ ॥ ಉಪಪನ್ನಂ ಚ ಕಾಕುತ್ಸ್ಥ ಯತ್ತ್ವಮಸ್ಮಾನ್ ಪ್ರಶಂಸಸಿ ॥ ಪ್ರಶಂಸಾರ್ಹಾ ಹಿ ಜಾನಂತಿ ಪ್ರಶಂಸಾಂ ವಕ್ತುಮೀದೃಶೀಂ ॥ ೩೧ ॥ ಆಪೃಚ್ಛಾಮೋ ಗಮಿಷ್ಯಾಮೋ ಹೃದಿಸ್ಥೋ ನಸ್ಸದಾ ಭವಾನ್ । ವರ್ತಾಮಹೇ ಮಹಾಬಾಹೋ ಪ್ರೀತ್ಯಾ ತ್ವಯಿ ಸಮನ್ವಿತಾಃ ॥ ಭವೇಚ್ಚ ತೇ ಮಹಾರಾಜ ಪ್ರೀತಿರಸ್ಮಾಸು ನಿತ್ಯದಾ ॥ ೩೨ ॥ ದಿಷ್ಟ್ಯಾ ವೈ ಕಮಲದಳ

---

ತ್ರಿಕೆಯನ್ನು, ಕಾನನೇ-ಕಾಡಿನಲ್ಲಿ, ಹೃತಾಂ-ಅಪಹರಿಸಲ್ಪಟ್ಟವಳನ್ನಾಗಿ, ಶ್ರುತ್ವಾ-ಕೇಳಿ, ಮಹಾತ್ಮನಾ-ಒಳ್ಳೇ ಬುದ್ಧಿಯುಳ್ಳ, ಭರತೇನ-ಭರತನಿಂದ, ಭವಂತಶ್ಚ-ನೀವೂಸಹಾ, ಸಮಾನೀತಾಃ-ಕರೆಯಿಸಲ್ಪಟ್ಟರಿ ॥ ೨೬ ॥ ಕಿಂಚ-ಇಷ್ಟುಮಾತ್ರವಲ್ಲ, ಗಮನೇ-ಪ್ರಯಾಣದಲ್ಲಿ, ಮನಃ-ಮನವನ್ನು, ರೋಚತಾಂ-ಕಾಂಕ್ಷಿಸುತ್ತಿರುವರಾದಕಾರಣ, ಉದ್ಯುಕ್ತಾನಾಂ-ಸನ್ನದ್ಧರಾದ, ಮಹಾತ್ಮನಾಂ-ಮಹಾನುಭಾವರಾದ, ಸರ್ವೇಷಾಂ-ಸಮಸ್ತರಾದ, ಪಾರ್ಥಿವಾನಾಂ-ಅರಸರಿಗೆ, ಸುಮಹಾನ್-ಮಹತ್ತರವಾದ, ಕಾಲಃ-ಸಮಯವು, ವ್ಯತೀತಃ-ಕಳೆದುಹೋಯಿತು ॥ ೨೭ ॥ ರಾಜಾನಶ್ಚ-ಅರಸರೂಸಹ, ಮಹತಾ-ಮಹತ್ತರವಾದ, ಹರ್ಷೇಣ-ಸಂತೋಷದಿಂದ, ಅನ್ವಿತಾಃ-ಕೂಡಿದವರಾಗಿ, ತಂ-ಆ ಶ್ರೀರಾಮನಂ ಕುರಿತು, ಪ್ರತ್ಯೂಚುಃ-ಪ್ರತ್ಯುತ್ತರವಂಕೊಟ್ಟರು ॥ ೨೮ ॥ ಹೇ ರಾಮ-ಎಲೈ ಶ್ರೀರಾಮನೆ, ತ್ವಂ-ನೀನು, ದಿಷ್ಟ್ಯಾ-ದೇವಾಧೀನದಿಂದ, ವಿಜಯೀ-ಜಯಮುಳ್ಳವನಾದೆ, ರಾಜ್ಯಂಚಾಪಿ-ರಾಜ್ಯವೂಸಹ, ಪ್ರತಿಷ್ಠಿತಂ-ನಿಲ್ಲಿಸಲ್ಪಟ್ಟಿತು, ದಿಷ್ಟ್ಯಾ-ದೈವಗತಿಯಿಂದ, ಸೀತಾ-ಸೀತಾದೇವಿಯು, ಪ್ರತ್ಯಾಹೃತಾ-ಪುನಹಾತರಲ್ಪಟ್ಟಳು, ಶತ್ರುಃ-ವಿರೋಧಿಯಾದ ರಾವಣನು, ದಿಷ್ಟ್ಯಾ-ದೈವಾಧೀನದಿಂದ, ಪರಾಜಿತಃ-ಸೋಲಿಸಲ್ಪಟ್ಟನು ॥ ೨೯ ॥ ಹೇ ರಾಮ-ಎಲೈ ಶ್ರೀರಾಮನೆ, ತ್ವಾಂ-ನಿನ್ನನ್ನು, ಹತಶಾತ್ರವಂ-ಕೊಲೆಯಲ್ಪಟ್ಟ ಶತ್ರುಗಳುಳ್ಳವನನ್ನಾಗಿ, ವಿಜಯಿನಂ-ಜಯಶಾಲಿಯಾದವನನ್ನಾಗಿ, ಪಶ್ಯಾಮಃ ಇತಿ ಯತ್-ನೋಡುವೆವೆಂಬದ್ಯಾವದೋ, ಏಷಃ-ಇದು, ನಃ-ನಮ್ಮ, ಪರಮಃ-ಉತ್ಕೃಷ್ಟವಾದ, ಕಾಮಃ-ಕೋರಿಕೆಯು, ಏಷಃ-ಇದು, ನಃ-ನಮಗೆ, ಉತ್ತಮಾ-ಅತಿಶಯವಾದ, ಕೀರ್ತಿಃ-ಯಶಸ್ಸು ॥ ೩೦ ॥ ಹೇ ಕಾಕುತ್ಸ್ಥ-ಎಲೈ ಶ್ರೀರಾಮನೆ, ತ್ವಂ-ನೀನು, ಅಸ್ಮಾನ್-ನಮ್ಮನ್ನು, ಪ್ರಶಂಸಸೀತಿ ಯತ್-ಸ್ತುತಿಸುತ್ತೀಯೆಂಬದ್ಯಾವದೋ, (ತತ್-ಅದು,) ಉಪಪನ್ನಂ-ಯುಕ್ತವು, ಪ್ರಶಂಸಾರ್ಹಾಃ-ಪ್ರಶಂಸಿಸುವದಕ್ಕೆ ಯೋಗ್ಯರಾದವರು, ಈದೃಶೀಂ-ಇಂಥಾ, ಪ್ರಶಂಸಾಂ-ಸ್ತುತಿಯನ್ನು, ವಕ್ತುಂ-ಹೇಳುವದಕ್ಕೆ, ಜಾನಂತಿ ಹಿ-ಬಲ್ಲರಷ್ಟೆ ॥ ೩೧ ॥ ಗಮಿಷ್ಯಾಮಃ-ಹೋಗುತ್ತೇವೆ, ಆಪೃಚ್ಛಾಮಃ-ಹೇಳುತ್ತೇವೆ, ಭವಾನ್-ನೀನು, ಸದಾ-ನಿರಂತರವು, ನಃ-ನಿಮ್ಮ, ಹೃದಿಸ್ಥಃ-ಹೃದಯವರ್ತಿಯಾಗಿದ್ದಿ, ಹೇ ಮಹಾಬಾಹೋ-ಎಲೈ ಭುಜಪರಾಕ್ರಮಿಯೆ, ತ್ವಯಿ-ನಿನ್ನಲ್ಲಿ, ಪ್ರೀತ್ಯಾ-ವಿಶ್ವಾಸದಿಂದ, ಸಮನ್ವಿತಾಃ-ಕೂಡಿಕೊಂಡಿರುವರಾಗಿ, ವರ್ತಾಮಹೇ-ಇರುತ್ತೇವೆ, ಹೇ ಮಹಾರಾಜ - ಎಲೈ ಮಹಾರಾಯನೆ, ತೇ-ನಿನ್ನ, ಪ್ರೀತಿಃ-ವಿಶ್ವಾಸವು, ನಿತ್ಯದಾ-ನಿರಂತರವು, ಅಸ್ಮಾಸು-ನಮ್ಮಲ್ಲಿ, ಭವತಿ-ಇರುವದು ॥ ೩೨ ॥ ಶರದಿ-ಶರತ್ಕಾಲದಲ್ಲಿ, ನಿಶಿ-ಅರ್ಧರಾತ್ರಿಯಲ್ಲಿರುವ, ಪೂರ್ಣಚಂದ್ರಮಿವ-ಪೂರ್ಣಿಮಾ ಚಂದ್ರನಂತೆ, ಭ್ರಾಜತ್-ಹೊಳೆಯುತಿರುವ, ಕಮಲದಳೇಕ್ಷಣಂ-ಕಮಲಪತ್ರಗಳಂತಿರುವ ನೇತ್ರಗಳುಳ್ಳ, ಸುನಾಸಂ-ಸಮೀಚೀನವಾದ ಮೂಗುಳ್ಳ, ತಾಮ್ರೋಷ್ಠಂ-ಕೆಂಪಾದ ತುಟಿಗಳುಳ್ಳ, ಶುಕ್ಲ

---

ರೆಯಿಸಿಕೊಂಡನು ॥ ೨೬ ॥ ನೀವೆಲ್ಲರು ಪ್ರಯಾಣನಿಶ್ಚಯವಂಗೈದು ಸನ್ನದ್ಧರಾಗಿ ಬರುವವರೊಳಗೆ, ಮಹತ್ತರವಾದ ಸಮಯವು ಮೀರಿತಲ್ಲಾ, ಎಂದು ಶ್ರೀರಾಮನು ನುಡಿಯಲೂ, ಆ ರಾಜರೆಲ್ಲರು ಹರ್ಷಯುಕ್ತರಾಗಿಂತೆಂದುತ್ತರವಂ ಕೊಟ್ಟರು ॥ ೨೮ ॥ ಎಲೈ ರಘುನಂದನನೆ ! ನೀನು ದೈವಾಧೀನದಿಂದ ರಾವಣನಂ ಜಯಿಸಿದವನಾದೆ, ರಾಜ್ಯವು ಸ್ಥಿರವಾಗಿ ನಿಂತಿತು, ದಶಕಂಠನಿಂದ ಪಹೃತಳಾದ ಜನಕನಂದಿನಿಯು, ದೈವಗತಿಯಿಂದ ಪುನಃ ಪಡೆಯಲ್ಪಟ್ಟಳು, ಪ್ರಬಲನಾದ ಆ ಶತ್ರುವೂ ಕೂಡಾ ಪರಾಜಿತನಾದನು ನಮಗೆಲ್ಲಾ ಇದೇ ಇಷ್ಟವಾದದ್ದು, ಇದೇ ನಮಗೆ ಯಶಸ್ಸು, ಎಲೈ ರಘುನಂದನನೆ ! ಶತ್ರುಸಂಹಾರವಂಗೈದು ಜಯಶಾಲಿಯಾದ ನಿನ್ನನ್ನೆಂದಿಗೆ ನೋಡುವೆವೋ ಏನೋ ಎಂದು ಸಂತಪಿಸುತಿದ್ದೆವು ॥ ೩೦ ॥ ಎಲೈ ರಾಘವನೆ ! ನಮ್ಮಗಳನ್ನು ಈಪರಿಯಾಗಿ ನೀನು ಪ್ರಶಂಸಿಸುತ್ತೀ ಇದುಯುಕ್ತವೇ ಸರಿ (ಹ್ಯಾಗಂದರೆ) ಪ್ರಶಂಸೆಗೆ ಅರ್ಹರಾದವರು ಪ್ರಶಂಸೆಯಂಗೈಯ್ಯಲೂ ಬಲ್ಲವರಲ್ಲವೇ (ಅಂದರೆ ಪ್ರಶಂಸಾರ್ಹನಾದ ಕಾರಣ ನಮ್ಮನ್ನೀಪರಿಯಾಗಿ ಸ್ತುತಿಸಿದವನಾದೆ ಎಂಬಭಾವವು) ॥ ೩೧ ॥ ಎಲೈ ಮಹಾಭುಜಪರಾಕ್ರಮಿಯೆ ! ನಾವು ಹೋಗಿ ಬರುವೆವು ಅಪ್ಪಣೆಯಂಕೊಡು, ನೀನು ಸಂತತವು ನಮ್ಮ ಮನದಲ್ಲಿಯೇ ಇರುವಂಥಾವನಾದ್ದೀ, ನಾವುಗಳೂ ಸಹಾ ನಿನ್ನನ್ನೆಡಬಿಡದೇ ಇರಬೇಕೆಂದು ಕೋರುತ್ತೇವೆ, ನಿನಿಗೂ ಸಹ ನಮ್ಮ ವಿಷಯದಲ್ಲಿ ಹಾಗೆಯೇ ಇರಬಹುದು ॥ ೩೨ ॥ ಕಮಲಪತ್ರಗಳಂತಿರುವ ನೇತ್ರಗಳುಳ್ಳದ್ದಾಗಿಯೂ, ಸಮೀಚೀನವಾದ ನಾಸಿಕೆಯುಳ್ಳದ್ದಾಗಿಯೂ, ಕೆಂಪಾದತುಟಿಯು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕ್ಷೇಣಾಂಸುನಾ ಸಂತಾವೊ್ರಪ್ತಂ ಮುಖಮಿದಮದ್ಯ ಶುಕ್ಲದಂತಮ್ । ಪಶ್ಯಾಮೋ ವಿಜಯಿನಮಾಹವೇಷು ನಿತ್ಯಂ ಭ್ರಾಜಂತಂ ನಿಶಿಕರ ದೀಪಪೂರ್ಣಚಂದ್ರಮ್ ॥೩೩॥

—॥॥✱ಇತಿ ಶ್ರೀಮದುತ್ತರರಾಮಾಯಣೆ ಅಷ್ಟತ್ರಿಂಶಸ್ಸರ್ಗಃ✱॥॥—

ಇತ್ಯುತ್ಸುಕಾಹಿರಾಜಾನೋ ಹರ್ಷೇಣ ಮಹತಾನ್ವಿತಾಃ । ಊಚುಃ ಪ್ರಾಂಜಲಯಸ್ಸರ್ವೇ ರಾಘವಂ ಗಮನೋದ್ಯತಾಃ ॥ ಪೂಜಿತಾಶ್ಚ ತ್ವಯಾ ರಾಮ ಮಾನಿತಾಶ್ಚ ವಿಶೇಷತಃ । ಗಮಿಷ್ಯಾಮೋ ಮಹಾರಾಜ ಸ್ವಾನ್ ಸ್ವಾನ್ ದೇಶಾನ್ ರಘೂತ್ತಮ ॥ ತಥೇತ್ಯುಕ್ತವತಾ ತೇನ ರಘೂಣಾಂ ಪ್ರವರೇಣ ತೇ । ಪೂಜಿತಾಶ್ಚ ಮಹಾತ್ಮಾನೋ ಜಗ್ಮುರ್ದೇಶಾನ್ ಸ್ವಕಾನ್ ಸ್ವಕಾನ್ ॥೩॥ ತೇ ಪ್ರಯಾತಾ ಮಹಾತ್ಮಾನಃ ಪಾರ್ಥಿವಾಸ್ಸರ್ವತೋದಿಶಮ್ । ಕಂಪಯಂತೋ ಮಹೀಂ ವೀರಾಃ ಸ್ವಪುರಾಣಿ ಪ್ರಹೃಷ್ಟವತ್ ॥೪॥ ಅಕ್ಷೌಹಿಣೀಸಹಸ್ರೈಸ್ತು ಸಮವೇತಾಸ್ತ್ವನೇಕಶಃ । ಹೃಷ್ಟಾಃ ಪ್ರತಿಗತಾಸ್ಸರ್ವೇ ರಾಘವಾರ್ಥೇ ಸಮಾಗತಾಃ ॥೫॥ ಊಚುಶ್ಚೈವ ಮಹೀಪಾಲಾ ಬಲದರ್ಪಸಮನ್ವಿತಾಃ । ನಹಿ ಸ್ಮ ರಾವಣಂ ಯುದ್ಧೇ ಪಶ್ಯಾಮಃ ಪುರತಃ ಸ್ಥಿತಮ್ । ಭರತೇನ ವಯಂ ಪಶ್ಚಾತ್ಸ

---

ದಂತಂ-ಬಿಳುಪಾದ ಹಲ್ಲುಗಳುಳ್ಳ, ಆಹವೇಷು-ಕಾಳಗಗಳಲ್ಲಿ, ನಿತ್ಯಂ-ನಿರಂತರವು, ವಿಜಯಿನಃ-ಜಯಶಾಲಿಯಾದ, ತೇ-ನಿನ್ನ, ಇದಂಮುಖಂ-ಈ ಮುಖವನ್ನು, ಅದ್ಯ-ಈಗ, ದಿಷ್ಟ್ಯಾ-ದೈವಾಧೀನದಿಂದ, ಪಶ್ಯಾಮಃ-ಕಂಡೆವು ॥೩೩॥

ಇತಿ ಶ್ರೀಮದುತ್ತರರಾಮಾಯಣೆ ಅಷ್ಟತ್ರಿಂಶಸ್ಸರ್ಗಃ.

ಉತ್ಸುಕಾಃ-ಉತ್ಕಂಠಿತರಾದ, ಮಹತಾ-ಮಹತ್ತರವಾದ, ಹರ್ಷೇಣ-ಸಂತೋಷದಿಂದ, ಅನ್ವಿತಾಃ-ಕೂಡಿಕೊಂಡಿರುವ, ಪ್ರಾಂಜಲಯಃ - ಅಂಜಲಿಬದ್ಧರಾದ, ಸರ್ವೇ-ಸಮಸ್ತರಾದ, ರಾಜಾನಃ-ಅರಸರು, ಗಮನೋದ್ಯತಾಃ-ಪ್ರಯಾಣೋನ್ಮುಖರಾಗಿ, ರಾಘವಂ-ಶ್ರೀರಾಮನಂ ಕುರಿತು ಇತಿ-ಈಮುಂದೆ ಹೇಳುವಂತೆ, ಊಚುಃ-ಹೇಳಿದರಷ್ಟೆ ॥೧॥ ಹೇರಾಮ-ಎಲೈಶ್ರೀರಾಮನೆ, ತ್ವಯಾ-ನಿನ್ನಿಂದ, ಪೂಜಿತಾಶ್ಚ-ಪೂಜಿಸಲೂಪಟ್ಟೆವು, ಹೇರಘೂತ್ತಮ-ಎಲೈರಘುಶ್ರೇಷ್ಠನೆ, ತ್ವಯಾ-ನಿನ್ನಿಂದ, ಮಾನಿತಾಶ್ಚ-ಸನ್ಮಾನಿಸಲ್ಪಟ್ಟೆವು. ಹೇಮಹಾರಾಜ-ಎಲೈ ಮಹಾರಾಜನೆ, ಸ್ವಾನ್ ಸ್ವಾನ್‌ದೇಶಾನ್-ನಮ್ಮನಮ್ಮ ದೇಶಗಳಂ ಕುರಿತು, ಗಮಿಷ್ಯಾಮಃ-ಹೋಗುವೆವು, ಇತ್ಯೂಚುಃ-ಇಂತೆಂದು ನುಡಿದರು. ॥೨॥ ತಥೇತಿ-ಹಾಗೆ ಆಗಲೆಂದು-ಉಕ್ತವತಾ-ಹೇಳಿದ, ರಘೂಣಾಂಪ್ರವರೇಣ-ರಘುವಂಶಸ್ಥರೊಳಗೆ ಶ್ರೇಷ್ಠನಾದ, ತೇನ-ಆ ಶ್ರೀರಾಮನಿಂದ, ಪೂಜಿತಾಃ-ಪೂಜಿಸಲ್ಪಟ್ಟ, ಮಹಾತ್ಮನಃ-ಮಹಾನುಭಾವರಾದ, ತೇ-ಆರಾಜರು, ಸ್ವಕಾನ್-ಸ್ವಕಾನ್-ಸ್ವಕೀಯವಾದ ದೇಶಾನ್-ದೇಶಗಳಂಕುರಿತು, ಜಗ್ಮುಃ-ತೆರಳಿದರು ॥೩॥ ವೀರಾಃ-ಶೂರರಾದ, ಮಹಾತ್ಮಾನಃ-ಮಹಾಮನಸ್ವಿಗಳಾದ, ತೇಪಾರ್ಥಿವಾಃ-ಆ ರಾಜರು, ಸ್ವಪುರಾಣಿ-ತಮ್ಮ ಪುರಗಳಂ ಕುರಿತು, ಪ್ರಹೃಷ್ಟವತ್-ಸಂತೋಷವಾಗಿ, ಸರ್ವತೋದಿಶಂ-ಎಲ್ಲದಿಕ್ಕುಗಳಲ್ಲಿಯೂ, ಮಹೀಂ-ಭೂಮಿಯನ್ನು, ಕಂಪಯಂತಃ-ಕಂಪೀಭೂತವಾಗಿ ಮಾಡುತಿರುವರಾಗಿ, ಪ್ರಯಾತಾಃ-ಹೊರಟರು॥೪॥ ತೈಃಅಕ್ಷೌಹಿಣೀಸಹಸ್ರೈಃ ಆಅನೇಕ ಅಕ್ಷೌಹಿಣಿಗಳಿಂದ, ಸಮವೇತಾಃ-ಕೂಡಿಕೊಂಡಿರುವ, ರಾಘವಾರ್ಥೇ-ಶ್ರೀರಾಮನಿಗೋಸ್ಕರ, ಸಮಾಗತಾಃ-ಬಂದಿದ್ದ, ಅನೇಕಶಃ-ಅನೇಕರಾದ ಸರ್ವೇತು-ಸಮಸ್ತರಾದ ರಾಜರಾದರೆ, ಹೃಷ್ಟಾಃ-ಸಂತುಷ್ಟರಾಗಿ,ಪ್ರತಿಗತಾಃ-ಹಿಂದಕ್ಕೆ ಹೊರಟುಹೋದರು ॥೫॥ ಬಲದರ್ಪಸಮನ್ವಿತಾಃ-ಬಲದಿಂದಲೂಗರ್ವದಿಂದಲೂ ಕೂಡಿಕೊಂಡಿರುವ, ಮಹೀಪಾಲಾಃ-ಭೂಪಾಲಕರು, ರಾವಣಂ-ರಾವಣನನ್ನು,ಯುದ್ಧೇ-ಕಾಳಗದಲ್ಲಿ, ಪುರತಃ-ಮುಂದುಗಡೆ,ಸ್ಥಿತಂ-ಇರುವನನ್ನಾಗಿ, ನಹಿಪಶ್ಯಾಮಸ್ಮ-ನೋಡಲಿಲ್ಲವಷ್ಟೆ, ಇತ್ಯೇವ-ಹೀಗೆಂದೆ, ಊಚುಶ್ಚ-ಹೇಳಲೂ ಹೇಳುತಿದ್ದರು॥೬॥ಭರತೇನ-ಭರತನಿಂದ, ವಯಂ-ನಾವು, ಪಶ್ಚಾತ್-ರಾವ

---

ಳ್ಳದ್ದಾಗಿಯೂ, ಬಿಳುಪಾದ ದಂತಂಗಳುಳ್ಳದ್ದಾಗಿಯೂ, ಮತ್ತೂ ಶರತ್ಕಾಲೀನವಾದ ಪೂರ್ಣ ಚಂದ್ರನತೆರದಿ ನಿರಂತರವು ಹೊಳೆಯುತ್ತಿರುವದಾಗಿಯೂ, ಇರುವ, ನಿನ್ನ ಮುಖವನಿಂದಿಗೆ ಕಂಡೆವು ... ... ॥೩೩॥

—॥॥✱ಉತ್ತರಕಾಂಡದಲ್ಲಿನ ೩೮ ನೆಯ ಸರ್ಗಂಮುಗಿದುದು✱॥॥—

ಈಪರಿಯಾಗಿ ಮಹಾ ಉತ್ಕಂಠೆಯುಳ್ಳವರಾಗಿಯೂ, ಕಡುಹರ್ಷಮುಳ್ಳರಾಗಿ, ಅಂಜಲಿಬದ್ಧರಾಗಿಯೂ, ಇರುವ ಆರಾಜರೆಲ್ಲರು, ಪ್ರಯಾಣೋನ್ಮುಖರಾಗಿ, ರಾಘವನಂ ಕುರಿತಿಂತೆಂದರು ॥೧॥ ಎಲೈ ಶ್ರೀರಾಮನೆ ! ನಿನ್ನಿಂದ ಪೂಜಿಸಲ್ಪಟ್ಟವರಾಗಿಯೂ, ವಿಶೇಷವಾಗಿ ಬಹುಮಾನಿಸಲ್ಪಟ್ಟವರಾಗಿಯೂ, ಆಗಿಧೇವೆ, ನಾವುಗಳು ನಮ್ಮನಮ್ಮ ದೇಶಂಗಳಿಗೆ ತೆರಳುವೆವೆಂದು ನುಡಿಯಲೂ, ಆಮಾತಂಕೇಳಿ ರಾಘವನು, ಕಡುಸಂತೋಷಿಯಾಗಿ ಅವರೆಲ್ಲರಂ ಕಳುಹಿಸಿಕೊಟ್ಟನು ॥೨॥ ಮಹಾಶೂರರಾದ ಆವಸುಧಾಪತಿಗಳೆಲ್ಲರು, ಮಹಾಹರ್ಷಗೊಂಡು ಭೂಮಿಯಂ ಕಂಪಿಸುತ್ತಾ ದಿಕ್ಕುದಿಕ್ಕುಗಳಲ್ಲಿಯೂ ತಮ್ಮತಮ್ಮ ಪುರಗಳಂಕುರಿತು ತೆರಳಿದರು (ಅದೆಂತೆನೆ) ಶ್ರೀರಾಮನಿಗೋಸುಗ ಅನೇಕ ಅಕ್ಷೌಹಿಣೀ ಸೈನ್ಯಪರಿವೃತರಾಗಿ ಬಂದಿದ್ದ, ಆ ನರನಾಥರೆಲ್ಲರು ಗುಂಪು ಶೇರಿ ಕಡುಸಂತುಷ್ಟರಾಗಿ ಹಿಂದಿರಿಗಿ ಪೋಗುತ್ತಾ ಬಲದಿಂದಲೂ, ಗರ್ವದಿಂದಲೂ, ಒಡಗೂಡಿದವರಾಗಿಂತೆಂದು ನುಡಿದರು, ಹಾಹಾ ರಾವಣನನ್ನು,ರಣರಂಗದಲ್ಲಿ,ಕಾಣದೇಹೋದೆವಲ್ಲ, ಅವನ ಸಂಹಾರವಾದ ಬಳಿಕ, ಭರತನಿಂದಾನಿರರ್ಥಕವಾಗಿ ಕರೆಯಿಸಲ್ಪಟ್ಟೆವು, ಶ್ರೀರಾಮನ ಭುಜಪರಾಕ್ರಮ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಾನೀತಾನಿರರ್ಥಕಮ್ ||೭|| ಹತಾಹಿರಾಕ್ಷಸಾಸ್ತತ್ರಪಾರ್ಥಿವೈಸ್ಸ್ಯುರ್ನಸಂಶಯಃ । ರಾಮಸ್ಯಬಾಹುವೀರ್ಯೇಣಪಾಲಿತಾ ಲಕ್ಷ್ಮಣಸ್ಯಚ । ಸುಖಂಪಾರೆಸಮುದ್ರಸ್ಯಯುಧ್ಯೇಮಯದಿವಿಜ್ವರಾಃ ||೮|| ಏತಾಶ್ಚಾನ್ಯಾಶ್ಚ ರಾಜಾನಃಕಥಾಸ್ತತ್ರಸಹಸ್ರಶಃ । ಕಥಯಂತಸ್ಸ್ವರಾಷ್ಟ್ರಾಣಿವಿವಿಶುಸ್ತೆಮಹಾರಥಾಃ ||೯|| ಸ್ವಾನಿರಾಜ್ಯಾನಿಮುಖ್ಯಾನಿಋದ್ಧಾನಿಮುದಿತಾನಿಚ । ರಮ್ಯಾನಿಧನಧಾನ್ಯೈಶ್ಚ ಪೂರ್ಣಾನಿವಸುಮಂತಿಚ ||೧೦|| ತದಾಪುರಾಣಿತೇಗತ್ವಾ ರತ್ನಾನಿವಿವಿಧಾನಿಚ । ರಾಮಸ್ಯಪ್ರಿಯಕಾಮ್ಯಾರ್ಥಮುಪಹಾರಂನೃಪಾದದುಃ ||೧೧|| ಅಶ್ವಾರತ್ನಾನಿವಸ್ತ್ರಾಣಿಹಸ್ತಿನಶ್ಚಮದೋತ್ಕಟಾನ್ । ಚಂದನಾನಿಚದಿವ್ಯಾನಿದಿವ್ಯಾನ್ಯಾಭರಣಾನಿಚ ||೧೨|| ಮಣಿಮುಕ್ತಾಪ್ರವಾಳಾಂಶ್ಚ ದಾಸೀರೂಪಸಮನ್ವಿತಾಃ । ಅಜಾವಿಕಂಚವಿವಿಧಂರಥಾಂಶ್ಚ ವಿವಿಧಾನ್ಬಹೂನ್ ||೧೩|| ಭರತೋಲಕ್ಷ್ಮಣಶ್ಚೈವಶತ್ರುಘ್ನಶ್ಚ ಮಹಾರಥಃ । ಆದಾಯತಾನಿರತ್ನಾನ್ಯಯೋಧ್ಯಾಮಗಮನ್ಪುರೀಮ್ ||೧೪|| ಆಗತಾಶ್ಚ ಪುರೀಂರಮ್ಯಾಮಯೋಧ್ಯಾಂಪುರುಷರ್ಷಭಾಃ । ದದುಸ್ಸರ್ವಾಣಿರತ್ನಾನಿರಾಘವಾಯಮಹಾತ್ಮನೇ ||೧೫|| ಪ್ರತಿಗೃಹ್ಯಚತತ್ಸರ್ವಂಪ್ರೀತಿಯುಕ್ತಸ್ಸರಾಘವಃ । ಸರ್ವಾಣಿತಾನಿಪ್ರದದೌ ಸುಗ್ರೀವಾ

---

ಣವಧಾನಂತರದಲ್ಲಿ, ನಿರರ್ಥಕಂ-ವ್ಯರ್ಥವಾಗಿ, ಸಮಾನೀತಾಃ-ಕರೆಯಲ್ಪಟ್ಟೆವು, ||೭|| ತತ್ರ-ಆರಣರಂಗದಲ್ಲಿ, ರಾಮಸ್ಯ-ಶ್ರೀರಾಮನ, ಲಕ್ಷ್ಮಣಸ್ಯಚ-ಮತ್ತೂ ಲಕ್ಷ್ಮಣನ, ಬಾಹುವೀರ್ಯೇಣ-ಭುಜಪರಾಕ್ರಮದಿಂದ, ಸಮುದ್ರಸ್ಯ-ಕಡಲಿನ, ಪಾರಂ-ದಡದಲ್ಲಿ, ಸುಖಂ-ಸುಖವಾಗಿ, ಪಾಲಿತಾಃ-ಪಾಲಿಸಲ್ಪಟ್ಟವರಾದಕಾರಣ, ವಿಜ್ವರಾಃ - ನಿರುಪಾಧಿಕವಾಗಿ, ಯುಧ್ಯೇಮಯದಿ-ಯುದ್ಧ ಮಾಡಿದ್ದಾದರೆ, ರಾಕ್ಷಸಾಃ-ರಕ್ಕಸರು, ಪಾರ್ಥಿವೈಃ-ರಾಜರಿಂದ, ಹತಾಃ-ಹೊಡೆಯಲ್ಪಟ್ಟವರು-ಸ್ಯುರ್ಹಿ-ಆಗುವರಷ್ಟೆ || ನಸಂಶಯಃ-ಸಂದೇಹವಿಲ್ಲ ||೮|| ತತ್ರ-ಆಮಾರ್ಗದಲ್ಲಿ, ಏತಾಃ-ಇವುಗಳನ್ನೂ, ಅನ್ಯಾಃ-ಮತ್ತು ಕೆಲವಾದ, ಸಹಸ್ರಶಃ-ಅನೇಕವಾದ, ಕಥಾಶ್ಚ -ಕಥೆಗಳನ್ನೂ ಸಹ, ಕಥಯಂತಃ-ಹೇಳುತಿರುವ, ಮಹಾರಥಾಃ-ಮಹಾರಥಿಕರಾದ, ತೇರಾಜಾನಃ-ಆರಾಜರು, ಸ್ವರಾಷ್ಟ್ರಾಣಿ-ತಮ್ಮ ದೇಶಗಳನ್ನು, ವಿವಿಶುಃ-ಹೊಕ್ಕರು ||೯|| ತೇನೃಪಾಃ-ಆರಾಜರು, ಮುಖ್ಯಾನಿ-ಉತ್ತಮವಾದ, ಋದ್ಧಾನಿ-ಒಡೆಯಿಡಲ್ಪಟ್ಟಧಾನ್ಯವುಳ್ಳ, (ಅಥವಾ ಸಮೃದ್ಧಮಾದ,) ಮುದಿತಾನಿಚ-ಸಂತುಷ್ಟವುಳ್ಳದ, ರಮ್ಯಾಣಿ-ಸುಂದರವಾದ, ಧನಧಾನ್ಯೈಶ್ಚ-ಧನದಿಂದಲೂ ಧಾನ್ಯದಿಂದಲೂಸಹ, ಪೂರ್ಣಾನಿ-ತುಂಬಿರುವ, ವಸುಮಂತಿಚ-ಮಹಾನಿಧಿಗಳುಳ್ಳ, ಸ್ವಾನಿ-ಸ್ವಕೀಯವಾದ, ರಾಜ್ಯಾನಿ-ರಾಜ್ಯಗಳನ್ನು, ಪುರಾಣಿ-ಪಟ್ಟಣಗಳನ್ನೂ ಸಹ, ಕುರಿತು, ಗತ್ವಾ-ಪೋಗಿ, ತದಾ-ಆಕಾಲದಲ್ಲಿ, ವಿವಿಧಾನಿ-ನಾನಾಬಗೆಗಳಾದ. ರತ್ನಾನಿ-ರತ್ನಗಳನ್ನು, ಧನಾನಿಚ-ದ್ರವ್ಯಗಳನ್ನೂ ಸಹ, ರಾಮಸ್ಯ-ಶ್ರೀರಾಮನಿಗೆ, ಪ್ರಿಯಕಾಮ್ಯಾರ್ಥಂ-ಪ್ರೀತಿಗೋಸ್ಕರ, ಉಪಹಾರಂ-ಕಾಣಿಕೆಯನ್ನಾಗಿ, ದದುಃ-ಕೊಟ್ಟರು ||೧೧|| ಅಶ್ವರತ್ನಾನಿ-ಉತ್ತಮಾಶ್ವಗಳನ್ನು, ವಸ್ತ್ರಾಣಿ-ವಸ್ತ್ರಗಳನ್ನು, ಮದೋತ್ಕಟಾನ್-ಮದವೇರಿರುವ, ಹಸ್ತಿನಶ್ಚ -ಆನೆಗಳನ್ನು, ದಿವ್ಯಾನಿ-ಉತ್ತಮವಾದ, ಚಂದನಾನಿಚ-ಚಂದನಗಂಧಗಳನ್ನೂ, ದಿವ್ಯಾನಿ-ಅಮೂಲ್ಯವಾದ, ಆಭರಣಾನಿಚ-ಒಡಿವೆಗಳನ್ನೂ, ಮಣಿಮುಕ್ತಾಪ್ರವಾಳಾಂಶ್ಚ-ಮಣಿ-ರತ್ನಗಳನ್ನೂ, ಮುಕ್ತಾ-ಮುತ್ತುಗಳನ್ನೂ, ಪ್ರವಾಳಾಶ್ಚ -ಹವಳಗಳನ್ನೂ, ರೂಪಸಮನ್ವಿತಾಃ-ರೂಪವತಿಗಳಾದ, ದಾಸೀಶ್ಚ-ಚಾಕರೀ ಮಾಡುವ ಸ್ತ್ರೀಯರನ್ನೂ, ವಿವಿಧಂ-ನಾನಾವಿಧವಾದ, ಅಜಾವಿಕಂಚ-ಚರ್ಮವಿಕಾರವಾಗಿರುವ ಹಾಸಿಗೆವಿಶೇಷವನ್ನು, ವಿವಿಧಾನ್-ನಾನಾ ಬಣ್ಣಗಳುಳ್ಳ, ಬಹೂನ್-ಅನೇಕವಾದ, ರಥಾಂಶ್ಚ-ರಥಗಳನ್ನು ಸಹ, ದದುಃ-ಕೊಟ್ಟರು || ೧೩ || ಭರತಃ ಭರತನು, ಲಕ್ಷ್ಮಣಶ್ಚೈವ - ಲಕ್ಷ್ಮಣನೂ, ಮಹಾರಥಃ-ಮಹಾರಥಿಕನಾದ, ಶತ್ರುಘ್ನಶ್ಚ - ಶತ್ರುಘ್ನನೂ ಸಹ, ತಾನಿರತ್ನಾನಿ-ಆ ಉತ್ತಮವಾದ ವಸ್ತುಗಳನ್ನು, ಆದಾಯ- ತೆಗದುಕೊಂಡು, ಅಯೋಧ್ಯಾಂಪುರೀಂ-ಅಯೋಧ್ಯಾಪಟ್ಟಣವನ್ನು, ಅಗಮನ್-ಹೊಂದಿದರು || ೧೪ || ರಮ್ಯಾಂ-ಸೊಗಸಾದ, ಅಯೋಧ್ಯಾಂಪುರೀಂ-ಅಯೋಧ್ಯಾಪಟ್ಟಣವನ್ನು ಕುರಿತು, ಆಗತಾಃ-ಬಂದ, ಪುರುಷರ್ಷಭಾಃ-ಪುರುಷಶ್ರೇಷ್ಠರು, ಸರ್ವಾಣಿ-ಸಮಸ್ತವಾದ, ರತ್ನಾನಿ-ರತ್ನಗಳನ್ನು, ಮಹಾತ್ಮನೇ-ಯಶಸ್ವಿಯಾದ, ರಾಘವಾಯ-ಶ್ರೀರಾಮನಿಗೆ-ದದುಃ-ಕೊಟ್ಟರು ||೧೫|| ರಾಘವಃ-ಶ್ರೀರಾಮನು, ತತ್ಸರ್ವಂ- ಅದನ್ನೆಲ್ಲ, ಪ್ರತಿಗೃಹ್ಯಚ-ಸ್ವೀಕರಿಸಲೂ ಸ್ವೀಕರಿಸಿ, ಪ್ರೀತಿಯುಕ್ತಃ-ವಿಶ್ವಾಸದಿಂ ಕೂಡಗೂಡಿದವನಾಗಿ, ತಾನಿ

---

ದಿಂದಲೂ, ಲಕ್ಷ್ಮಣನ ಬಾಹು ವೀರ್ಯದಿಂದಲೂ ಸಹಾ ಪರಿಪಾಲಿಸಲ್ಪಟ್ಟವರಾಗಿ, ಸಮುದ್ರತೀರದಲ್ಲಿ, ಸುಖವಾಗಿ ನೆಲೆಗೊಂಡು ಯುದ್ಧಮಂ ಗೈಯ್ಯುತ್ತಿದ್ದರೆ ಆ ರಾಕ್ಷಸರೆಲ್ಲರೂ, ನರನಾಥರಿಂದಾ, ಹತರಾಗುತಿದ್ದರೆಂಬದಾಗಿಯೂ, ಮತ್ತು, ಕೆಲವಿಧವಾಗಿಯೂ, ಮಾತನಾಡುತ್ತಾ ತಮ್ಮ ತಮ್ಮ ದೇಶಂಗಳಂ ಪೊಕ್ಕರು ||೯|| ಪ್ರಸಿದ್ಧಗಳಾಗಿಯೂ, ಸಮೃದ್ಧಂಗಳಾಗಿಯೂ, ಸಂತುಷ್ಟವಾಗಿಯೂ, ಮನೋಹರವಾಗಿಯೂ, ಧನಧಾನ್ಯಗಳಿಂದ, ತುಂಬಿದಂಥಾವುಗಳಾಗಿಯೂ, ದ್ರವ್ಯಸಮೃದ್ಧಂಗಳಾಗಿಯೂ, ಇರುವ, ತಮ್ಮ ಪುರಗಳಂ ಪೊಕ್ಕು, ಶ್ರೀರಾಮನ ಪ್ರೀತಿಗೋಸ್ಕರ, ಬಗೆ ಬಗೆಯಾದ ಕಾಣಿಕೆಗಳನ್ನಿತ್ತರು, (ಅದೆಂತೆನೆ) ಉತ್ತಮಾಶ್ವಗಳನ್ನು, ಅಮೂಲ್ಯವಾದ ವಸ್ತ್ರಗಳನ್ನು, ಮದವೇರಿದ ಆನೆಗಳನ್ನು, ದಿವ್ಯವಾದ ಚಂದನಗಳನ್ನು, ಉತ್ತಮವಾದ ಒಡವೆಗಳನ್ನು, ರತ್ನಗಳನ್ನು, ಇಂದ್ರನೀಲಾದಿಮಣಿಗಳನ್ನು, ಮುತ್ತುಗಳನ್ನು, ಹವಳಗಳನ್ನು, ರೂಪವತಿಯರಾದ ದಾಶಿಯರನ್ನು, ಚರ್ಮನಿರ್ಮಿತವಾದ ಶಯ್ಯಾವಿಶೇಷಂಗಳನ್ನು, ಬಗೆಬಗೆಗಳಾದ ರಥಗಳನ್ನು, ಸಹಾ ಕೊಟ್ಟವರಾಗಲೂ, ಮಹಾರಥಿಕರಾದ ಭರತ ಲಕ್ಷ್ಮಣ ಶತ್ರುಘ್ನರೆಂಬೀಮೂವ್ವರೂ, ಅವುಗಳಂತೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ರುಮಹಾತ್ಮನೇ ॥೧೬॥ ವಿಭೀಷಣಾಯ ಚ ದದೌ ಯೇ ಚಾನ್ಯೇ ಋಕ್ಷವಾನರಾಃ । ಹನೂಮತ್ಪ್ರಮುಖಾ ವೀರಾ ರಾಕ್ಷಸಾ ಶ್ಚ ಮಹಾಬಲಾಃ ॥೧೭॥ ತೇ ಸರ್ವೇ ಹೃಷ್ಟಮನಸೋ ರಾಮದತ್ತಾನಿ ತಾನ್ಯಥ । ಶಿರೋಭಿರ್ಧಾರಯಾಮಾಸುರ್ಬಾಹುಭಿಶ್ಚ ಮಹಾಬಲಾಃ ॥೧೮॥ ಪಪುಶ್ಚೈವ ಸುಗಂಧೀನಿ ಮಧೂನಿ ವಿವಿಧಾನಿ ಚ । ಮಾಂಸಾನಿ ಚ ಸುಮೃಷ್ಟಾನಿ ಫಲಾನ್ಯಾಸ್ವಾದಯಂತಿ ಚ ॥೧೯॥ ಏವಂ ತೇಷಾಂ ನಿವಸತಾಂ ಮಾಸಸ್ಸಾಗ್ರೋ ವ್ಯತೀಯತ । ಮುಹೂರ್ತಮಿವ ತೇ ಸರ್ವೇ ರಾಮಭಕ್ತ್ಯಾ ಚ ಮೇನಿರೇ ॥೨೦॥ ರೇಮೇ ರಾಮಸ್ಸ ತೈಸ್ಸಾರ್ಧಂ ವಾನರೈಃ ಕಾಮರೂಪಿಭಿಃ ॥ ರಾಜಭಿಶ್ಚ ಮಹಾವೀರ್ಯೈ ರಾಕ್ಷಸೈಶ್ಚ ಮಹಾಬಲೈಃ ॥೨೧॥ ಏವಂ ತೇಷಾಂ ಯಯೌ ಮಾಸೋ ದ್ವಿತೀಯಶ್ಶೈಶಿರಸ್ಸುಖಮ್ । ವಾನರಾಣಾಂ ಚ ಹೃಷ್ಟಾನಾಂ ರಾಕ್ಷಸಾನಾಂ ಚ ಸರ್ವಶಃ ॥೨೨॥ ಇಕ್ಷ್ವಾಕುನಗರೇ ರಮ್ಯೇ ಪರಾಂ ಪ್ರೀತಿಮುಪಾಸತಾಮ್ । ರಾಮಸ್ಯ ಪ್ರೀತಿಕರಣೈಃ ಕಾಲಸ್ತೇಷಾಂ ಸುಖಂ ಯಯೌ ॥೨೩॥

—…* ಇತಿ ಶ್ರೀಮದುತ್ತರಕಾಂಡೇ ಏಕೋನಚತ್ವಾರಿಂಶಸ್ಸರ್ಗಃ *…—

---

ಸರ್ವಾಣಿ-ಅವುಗಳನ್ನೆಲ್ಲ, ಮಹಾತ್ಮನೇ-ಮಹಾನುಭಾವನಾದ, ಸುಗ್ರೀವಾಯ-ಸುಗ್ರೀವನಿಗೆ, ಪ್ರದದೌ-ಕೊಟ್ಟನು॥೧೬॥ ಹನೂಮತ್ಪ್ರಮುಖಾಃ-ಹನುಮಂತನೇ ಮೊದಲಾಗಿಉಳ್ಳ, ವೀರಾಃ-ಶೂರರಾದ, ಅನ್ಯೇ-ಇತರರಾದ, ಋಕ್ಷವಾನರಾಃ-ಋಕ್ಷ-ಕರಡಿಗಳು, ವಾನರಾಃ-ಕಪಿಗಳು, ಮಹಾಬಲಾಃ-ಕಡುಪರಾಕ್ರಮಿಗಳಾದ, ರಾಕ್ಷಸಾಶ್ಚ-ರಾಕ್ಷಸರೂ ಸಹ, ಯೇ-ಯಾರೋ, (ತೇಭ್ಯಶ್ಚ-ಅವರುಗಳಿಗೂ) ವಿಭೀಷಣಾಯ ಚ-ವಿಭೀಷಣನಿಗೂ ಸಹ-ದದೌ ಕೊಟ್ಟನು॥ ಅಥ-ಬಳಿಕ, ಮಹಾಬಲಾಃ-ಬಹು ಬಲಶಾಲಿಗಳಾದ, ತೇ ಸರ್ವೇ-ಅವರೆಲ್ಲರು, ಹೃಷ್ಟಮನಸಃ-ಹೃಷ್ಟ-ಸಂತುಷ್ಟವಾದ, ಮನಸಃ-ಮನಸ್ಸುಳ್ಳವರಾಗಿ, ರಾಮದತ್ತಾನಿ-ಶ್ರೀ ರಾಮನಿಂದ ಕೊಡಲ್ಪಟ್ಟ, ತಾನಿ-ಆ ಆಭರಣಗಳನ್ನು, ಶಿರೋಭಿಃ-ಶಿರಸ್ಸುಗಳಿಂದಲೂ, ಬಾಹುಭಿಶ್ಚ-ಭುಜಗಳಿಂದಲೂ ಸಹ, ಧಾರಯಾಮಾಸುಃ-ಧರಿಸಿದರು ॥೧೮॥ ಸುಗಂಧೀನಿ-ಸುವಾಸನೆಯುಳ್ಳ, ವಿವಿಧಾನಿ-ನಾನಾವಿಧಗಳಾದ, ಮಧೂನಿ-ಮದ್ಯಗಳನು, ಪಪುಶ್ಚ-ಪಾನವನ್ನೂ ಮಾಡಿದರು; ಸುಮೃಷ್ಟಾನಿ-ಅಟ್ಟಡಿಗೆಯಾದ, ಮಾಂಸಾನಿ ಚ-ಮಾಂಸಗಳನ್ನೂ, ಫಲಾನಿ-ಫಲಗಳನ್ನೂ ಸಹ, ಆಸ್ವಾದಯಂತಿ ಚ-ಉಣ್ಣುತ್ತಲೂ ಇದ್ದರು॥೧೯॥ ಏವಂ-ಈಪರಿಯಾಗಿ, ನಿವಸತಾಂ-ಇರುವ, ತೇಷಾಂ-ಅವರಿಗೆ, ಸಾಗ್ರಃ-ಐದಾರುದಿನಗಳಿಂದಅಧಿಕವಾದ, ಮಾಸಃ-ತಿಂಗಳು ವ್ಯತೀಯತ-ಕಳೆದುಹೋಯಿತು, ತೇ ಸರ್ವೇ-ಅವರೆಲ್ಲರು; ರಾಮಭಕ್ತ್ಯಾ - ಶ್ರೀರಾಮನಭಕ್ತಿಯಿಂದ, ಮುಹೂರ್ತಮಿವ-ಮುಹೂರ್ತವನ್ನಂತೆ, ಮೇನಿರೇ - ತಿಳಿದುಕೊಂಡರು ॥೨೦॥ ರಾಮಃ-ಶ್ರೀರಾಮನು, ಕಾಮರೂಪಿಭಿಃ - ಸ್ವೇಚ್ಛಾ ರೂಪಿಗಳಾದ ತೈರ್ವಾನರೈಸ್ಸಾರ್ಧಂ-ಆಕಪಿಗಳಸಂಗಡಲೂ, ಮಹಾವೀರ್ಯೈಃ-ಕಡುಶೂರರಾದ, ರಾಜಭಿಶ್ಚ-ಅರಸರಸಂಗಡಲೂ, ಮಹಾಬಲೈಃ - ಅತಿಬಲಿಷ್ಠರಾದ, ರಾಕ್ಷಸೈಶ್ಚ - ಅಸುರರಿಂದಲೂ ಸಹ, ರೇಮೇ-ರಮಿಸುತಿದ್ದನು ॥ ೨೧ ॥ ಸರ್ವಶಃ- ಸರ್ವಪ್ರಕಾರದಲ್ಲಿಯೂ; ಏವಂ-ಈಪರಿಯಾಗಿ, ಹೃಷ್ಟಾನಾಂ-ಸಂತುಷ್ಟರಾಗಿರುವ, ತೇಷಾಂ ವಾನರಾಣಾಂ-ಆ ಕಪಿಗಳಿಗೂ, ರಾಕ್ಷಸಾನಾಂ ಚ-ರಕ್ಕಸರಿಗೂ ಸಹ, ಶೈಶಿರಃ-ಶಿಶಿರಋತುಸಂಬಂಧವಾದ, ದ್ವಿತೀಯೋ ಮಾಸಃ-ಎರಡನೆಯ ತಿಂಗಳು, ಸುಖಂ-ಸುಖವಾಗಿ, ಯಯೌ-ತೆರಳಿತು॥೨೨॥ ರಮ್ಯೇ-ಮನೋಹರವಾದ, ಇಕ್ಷ್ವಾಕುನಗರೇ-ಇಕ್ಷ್ವಾಕುರಾಯನ ರಾಜಧಾನಿಯಾದ ಅಯೋಧ್ಯಾಪಟ್ಟಣದಲ್ಲಿ, ಪರಾಂ-ಅತಿಶಯವಾದ, ಪ್ರೀತಿಂ-ಸಂತೋಷವನ್ನು, ಉಪಾಸತಾಂ-ಉಪಾಸಿಸುತ್ತಿರುವ, ತೇಷಾಂ-ಅವರಿಗೆ, ರಾಮಸ್ಯ-ಶ್ರೀರಾಮನಿಗೆ, ಪ್ರೀತಿಕರಣೈಃ-ವಿಶ್ವಾಸವಾಡೋಣದರಿಂದ, ಕಾಲಃ-ಸಮಯವು, ಸುಖಂ-ಸುಖವಾಗಿ, ಯಯೌ-ಕಳೆದುಹೋಯಿತು ॥೨೩॥ ಇತಿಶ್ರೀಮದುತ್ತರ ರಾಮಾಯಣೇ ಏಕೋನಚತ್ವಾರಿಂಶಸ್ಸರ್ಗಃ.

---

ಗೆದುಕೊಂಡು, ಅಯೋಧ್ಯಾಪುರವಂ ಪೊಕ್ಕು, ಅದನ್ನೆಲ್ಲಾ ಶ್ರೀರಾಮನಿಗೆ ಒಪ್ಪಿಸಿದವರಾಗಲೂ, ಆ ರಘುನಂದನನು, ಅವುಗಳನ್ನೆಲ್ಲಾ ಸ್ವೀಕರಿಸಿ, ಸುಗ್ರೀವ ವಿಭೀಷಣರಿಗೂ, ಮತ್ತೂ ಕಡುವೀರರಾಗಿಯೂ, ಮಹಾಬಲವಂತರಾಗಿಯೂ, ಇರುವ ಹನುಮಂತನೇ ಮೊದಲಾದ, ಋಕ್ಷವಾನರರಿಗೂ, ರಾಕ್ಷಸರಿಗೂ ಸಹ ಕೊಟ್ಟವನಾದನು ॥೧೭॥ ಆ ಬಳಿಕ ಕಪಿರಾಕ್ಷಸರೆಲ್ಲರು ರಾಮದತ್ತವಾಗಿರುವ ಒಡವೆಗಳಂ, ಶಿರಗಳಿಂದಲೂ ಬಾಹುಗಳಿಂದಲೂ ಸಹ ಧರಿಸಿಗೊಂಡು, ಸುವಾಸನೆಯುಳ್ಳ ಮತ್ತೂ ನಾನಾವಿಧವಾದ ಮಧುಗಳಂ ಪಾನಮಾಡಿ, ಅಟ್ಟಡಿಗೆಯಾದ ಮಾಂಸಗಳನ್ನೂ, ರುಚಿಕರವಾದ ಫಲಂಗಳನ್ನೂ ಸಹಾ ಭುಜಿಸುತ್ತಲೂ, ಅದನ್ನೆಲ್ಲಾ ಶ್ರೀರಾಮನಿಗೊಪ್ಪಿಸುತ್ತಲೂ ಇರಲು ಮುಹೂರ್ತಮಾತ್ರದಂತೆ ಒಂದುಮಾಸವು ಕಳೆದುಹೋಯಿತು, ॥೨೦॥ ಆ ರಘುಕುಲತಿಲಕನಾದರೆ, ಕಾಮ ರೂಪಿಗಳಾಗಿರುವ ಕಪಿಗಳಸಂಗಡಲೂ, ಕಡುಪರಾಕ್ರಮಿಗಳಾದ ರಾಜರೊಡನೆಯೂ, ಮಹಾಬಲಶಾಲಿಗಳಾದ ರಾಕ್ಷಸರಸಂಗಡಲೂ ಸಹ ವಿಹಾರಶೀಲನಾಗಿದ್ದನು ॥೨೧॥ ಈಪರಿ ಅಯೋಧ್ಯಾಪುರದಲ್ಲಿರುವ ಮತ್ತು ಸರ್ವವಿಷಯದಲ್ಲಿಯೂ ಕಡುಸಂತುಷ್ಟರಾಗಿರುವ ಆ ಹರಿರಾಕ್ಷಸರಿಗೆ ಶ್ರೀರಾಮನಿಗಿಷ್ಟವಾಗಿರುವಕಾರ್ಯಂಗಳಂಗೈಯ್ಯೋಣದರಿಂದ ಸುಖವಾಗಿ, ಶಿಶಿರಋತು ಸಂಬಂಧವಾದ ಎರಡನೇಮಾಸವು ಸಹಾ ಕಳೆದು ಹೋದಂತಾಯಿತು ॥೨೩॥

—…* ಉತ್ತರರಾಮಾಯಣದಲ್ಲಿನ ೩೯ನೆಯ ಸರ್ಗಂ ಮುಗಿದುದು *…—



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಥಾತೇಷಾಂನಿವಸತಾಂಋಕ್ಷವಾನರರಕ್ಷಸಾಮ್ । ರಾಘವಸ್ತುಮಹಾತೇಜಾಸ್ಸುಗ್ರೀವಮಿದಮಬ್ರವೀತ್ ॥೧॥ ಗಮ್ಯತಾಂಸೌಮ್ಯಕಿಷ್ಕಿಂಧಾಂದುರಾಧರ್ಷಾಂಸುರಾಸುರೈಃ । ಪಾಲಯಸ್ವಸಹಾಮಾತ್ಯೈಃರಾಜ್ಯಂನಿಹತಕಂಟಕಮ್ ॥೨॥ ಅಂಗದಂಚಮಹಾಬಾಹೋಪ್ರೀತ್ಯಾಪರಮಯಾನ್ವಿತಃ । ಪಶ್ಯತ್ವಂಹನುಮಂತಂಚನಳಂಚಸುಮಹಾಬಲಮ್ ॥೩॥ ಸುಷೇಣಂಶ್ವಶುರಂವೀರಂತಾರಂಚಬಲಿನಾಂವರಮ್ । ಕುಮುದಂಚೈವದುರ್ಧರ್ಷಂನೀಲಂಚೈವಮಹಾಬಲಮ್ ॥೪॥ ವೀರಂಶತಬಲಿಂಚೈವಮೈಂದಂದ್ವಿವಿದಮೇವಚ । ಪಶ್ಯಪ್ರೀತಿಸಮಾಯುಕ್ತೋಗಂಧಮಾದನಮೇವಚ ॥೫॥ ಗಜಂಗವಾಕ್ಷಂಗವಯಂಶರಭಂಚಮಹಾಬಲಮ್ । ಋಕ್ಷವಂತಂಚದುರ್ಧರ್ಷಂಜಾಂಬವಂತಂಮಹಾಬಲಮ್ ॥೬॥ ಯೇಚಾನ್ಯೇಸುಮಹಾತ್ಮಾನೋಮದರ್ಥೇತ್ಯಕ್ತಜೀವಿತಾಃ । ಪಶ್ಯತ್ವಂಪ್ರೀತಿಸಂಯುಕ್ತೋಮಾಚೈಷಾಂವಿಪ್ರಿಯಂಕೃಥಾಃ ॥೭॥ ಏವಮುಕ್ತ್ವಾಚಸುಗ್ರೀವಂಪ್ರಶಸ್ಯಚಪುನಃಪುನಃ । ವಿಭೀಷಣಮಥೋವಾಚರಾಮೋಮಧುರಯಾಗಿರಾ ॥೮॥ ಲಂಕಾಂಪ್ರಶಾಧಿಧರ್ಮೇಣಸಮರ್ಥೋಹ್ಯಸಿಪಾರ್ಥಿವ । ಪುರಸ್ಯರಾಕ್ಷಸಾನಾಂಚಭ್ರಾತುರ್ವೈಶ್ರವಣಸ್ಯಚ ॥೯॥ ಮಾಚಬುದ್ಧಿಮಧರ್ಮೇತ್ವಂಕುರ್ಯಾ ರಾಜನ್ಕ

---

ತೇಷಾಂಋಕ್ಷವಾನರರಕ್ಷಸಾಂ-ಆ ಋಕ್ಷಕಪಿರಾಕ್ಷಸರು, ತಥಾನಿವಸತಾಂಸತಾಂ-ಆ ಪರಿಯಾಗಿರಲು, ಮಹಾತೇಜಾಃ-ಅತಿ ತೇಜಸ್ವಿಯಾದ, ರಾಘವಸ್ತು-ಶ್ರೀರಾಮನಾದರೋ, ಸುಗ್ರೀವಂ-ಸುಗ್ರೀವನಂ ಕುರಿತು, ಇದಂ-ಈ ಮುಂದೆ ಹೇಳುವ ಮಾತನ್ನು, ಅಬ್ರವೀತ್-ನುಡಿದನು ॥೧॥ ಹೆ ಸೌಮ್ಯ- ಎಲೈ ಕ್ರೌರ್ಯವಿಲ್ಲದವನೆ, ಸುರಾಸುರೈಃ-ದೇವರಾಕ್ಷಸರಿಂದ, ದುರಾಧರ್ಷಾಂ-ತಿರಸ್ಕರಿಸಲಸಾಧ್ಯವಾದ, ಕಿಷ್ಕಿಂಧಾಂ-ಕಿಷ್ಕಿಂಧಾ ಪಟ್ಟಣವಂಕುರಿತು, ಗಮ್ಯತಾಂ-ಪೋಗಲ್ಪಡಲಿ, ಅಮಾತ್ಯೈಸ್ಸಹ-ಮಂತ್ರಿಗಳೊಡಗೂಡಿ, ರಾಜ್ಯಂ-ರಾಜ್ಯವನ್ನು, ನಿಹತಕಂಟಕಂ-ನಿಷ್ಕಂಟಕವಾಗಿ, ಪಾಲಯಸ್ವ- ರಕ್ಷಿಸುವಂಥಾವನಾಗು ॥೨॥ ಹೆಮಹಾಬಾಹೋ-ಎಲೈ ಮಹಾ ಭುಜಪರಾಕ್ರಮಿಯೆ, ತ್ವಂ-ನೀನು, ಪರಮಯಾ-ಅತಿಶಯವಾದ, ಪ್ರೀತ್ಯಾ-ವಿಶ್ವಾಸದಿಂದ, ಅನ್ವಿತಃ-ಕೂಡಿಕೊಂಡವನಾಗಿ, ಅಂಗದಂಚ-ಅಂಗದನನ್ನೂ, ಹನುಮಂತಂಚ-ಆಂಜನೇಯನನ್ನೂ, ಸುಮಹಾಬಲಂ-ಬಹುಬಲಶಾಲಿಯಾದ, ನಲಂಚ- ನಲನನ್ನೂ ಸಹ, ಪಶ್ಯ-ನೋಡು ॥೩॥ ಶ್ವಶುರಂ-ಮಾವನಾದ, ವೀರಂ-ಶೂರನಾದ, ಸುಷೇಣಂ-ಸುಷೇಣನನ್ನೂ, ಬಲಿನಾಂ-ಬಲವಂತರೊಳಗೆ, ವರಂ-ಉತ್ತಮನಾದ, ತಾರಂಚ-ತಾರನನ್ನೂ, ದುರ್ಧರ್ಷಂ-ಹೊಂದಲಸಾಧ್ಯನಾದ, ಕುಮುದಂಚೈವ-ಕುಮುದನನ್ನೂ, ಮಹಾಬಲಂ-ಅತಿ ಬಲಿಷ್ಠನಾದ, ನೀಲಂಚೈವ-ನೀಲನನ್ನೂ, ವೀರಂ-ಶೂರನಾದ, ಶತಬಲಿಂಚೈವ-ಶತಬಲಿಯೆಂಬ ವಾನರನನ್ನೂ, ಮೈಂದಂ-ಮೈಂದನನ್ನೂ, ದ್ವಿವಿದಮೇವಚ-ದ್ವಿವಿದನನ್ನೂ, ಗಂಧಮಾದನಮೇವಚ-ಗಂಧಮಾದನನನ್ನೂ ಸಹ, ಪ್ರೀತಿಸಮಾಯುಕ್ತಃ-ವಿಶ್ವಾಸಯುಕ್ತನಾಗಿ, ಪಶ್ಯ-ನೋಡು ॥೫॥ ಗಜಂ-ಗಜನನ್ನೂ, ಗವಾಕ್ಷಂ-ಗವಾಕ್ಷನನ್ನು, ಗವಯಂ-ಗವಯನನ್ನು, ಮಹಾಬಲಂ-ಬಹು ಬಲಾಢ್ಯನಾದ, ಶರಭಂಚ-ಶರಭನನ್ನು ದುರ್ಧರ್ಷಂ-ತಿರಸ್ಕರಿಸಲಸಾಧ್ಯನಾದ, ಋಕ್ಷವಂತಂಚ-ಋಕ್ಷವಂತನೆಂಬಾತನನ್ನು, ಮಹಾಬಲಂ-ಅತಿ ಬಲಿಷ್ಠನಾದ, ಜಾಂಬವಂತಂ-ಜಾಂಬವಂತನನ್ನೂ ಸಹ, ಪಶ್ಯ-ನೋಡು ॥೬॥ ಸುಮಹಾತ್ಮಾನಃ-ಒಳ್ಳೇ ಮಹಾನುಭಾವರಾದ, ಅನ್ಯೇ-ಇತರರಾದ, ಯೇ-ಯಾರು, ಮದರ್ಥೇ-ನನಿಗೋಸ್ಕರ, ತ್ಯಕ್ತಜೀವಿತಾಃ-ಬಿಡಲ್ಪಟ್ಟ ಪ್ರಾಣವುಳ್ಳವರಾಗಿದ್ದರೋ, (ಅವರನ್ನು) ತ್ವಂ-ನೀನು, ಪ್ರೀತಿಸಂಯುಕ್ತಃ-ವಿಶ್ವಾಸವುಳ್ಳವನಾಗಿ, ಪಶ್ಯ-ನೋಡು, ಏಷಾಂ-ಇವರಿಗೆ, ವಿಪ್ರಿಯಂ-ಅಪಕಾರವನ್ನು, ಮಾಕೃಥಾಃ-ಮಾಡಬೇಡ ॥೭॥ ರಾಮಃ-ಶ್ರೀರಾಮನು, ಸುಗ್ರೀವಂ-ಸುಗ್ರೀವನಂ ಕುರಿತು, ಏವಂ-ಈ ಪರಿಯಾಗಿ, ಉಕ್ತ್ವಾ-ಹೇಳಿ, ಪುನಃಪುನಃ-ಬಾರಿಬಾರಿಗೂ, ಪ್ರಶಸ್ಯಚ-ಪ್ರಶಂಸೆಯನ್ನು ಮಾಡಿ, ಅಥ-ಬಳಿಕ, ಮಧುರಯಾ-ಮನೋಹರವಾದ, ಗಿರಾ-ವಾಕ್ಕಿನಿಂದ, ವಿಭೀಷಣಂ-ವಿಭೀಷಣನನ್ನು ಕುರಿತು, ಉವಾಚ - ಹೇಳಿದನು ॥ ಹೇಪಾರ್ಥಿವ-ಎಲೈಅರಸೆ, ಲಂಕಾಂ-ಲಂಕಾಪಟ್ಟಣವನ್ನು, ಧರ್ಮೇಣ-ಧರ್ಮದಿಂದ, ಪ್ರಶಾಧಿ-ಪರಿಪಾಲಿಸು, ಸಮರ್ಥಃ-ಶಕ್ತಿಯುಳ್ಳವನು, ಅಸಿ - ಆಗಿದ್ದೀ, ಪುರಸ್ಯ-ಪುರವರ್ತಿಗಳಾದ, ರಾಕ್ಷಸಾನಾಂ - ರಕ್ಕಸರಿಗೂ, ಭ್ರಾತುಃ-ಅಣ್ಣನಾದ, ವೈಶ್ರವಣಸ್ಯಚ-ಕುಬೇರನಿಗೂಸಹ, ಸಮ್ಮತೋಸಿ-ಆಪ್ತನಾಗಿದ್ದೀ ॥

---

ಆ ಕರಡಿಗಳು ವಾನರರು ರಾಕ್ಷಸರು ಸಹ ಆಪರಿಯಾಗಿ ಇರುತಿದ್ದವರಾಗಲು, ಕಡುತೇಜಸ್ವಿಯಾದ ಶ್ರೀರಾಮನು ಸುಗ್ರೀವನಂ ಕುರಿತು ನಿರೂಪಿಸಿದನದೆಂತನೆ,—॥೧॥ ಎಲೈ ಮಹಾಭುಜಪರಾಕ್ರಮವುಳ್ಳ ಸುಗ್ರೀವನೆ! ದೇವ ರಾಕ್ಷಸರಿಂದಲೂ ಸಹ ಹೊಂದಲಸಾಧ್ಯವಾದ ಕಿಷ್ಕಿಂಧಾಪುರಿಗೆ ಗಮಿಸಿ, ನಿಷ್ಕಂಟಕವಾಗಿ ಮಂತ್ರಿಗಳೊಡನೆ ರಾಜ್ಯವಂ ಪರಿಪಾಲಿಸುತ್ತ ಅಂಗದನನ್ನು, ಮಹಾಬಲವಂತನಾದ ಹನುಮಂತನನ್ನು, ನಳನನ್ನು, ಮಾವನಾದ ಸುಷೇಣನನ್ನು, ಬಲಶಾಲಿಗಳೊಳಗೆ ಉತ್ತಮನಾದ ತಾರನನ್ನು, ಹೊಂದಲಶಕ್ಯನಾದ ಕುಮುದನನ್ನು, ಬಹುಬಲಾಢ್ಯನಾದ ನೀಲನನ್ನು, ವೀರನಾದ ಶತಬಲಿಯನ್ನು, ಕಡುಶೂರರಾದ ಮೈಂದದ್ವಿವಿದರನ್ನು ಮತ್ತು ಬಹು ಬಾಹುಬಲವುಳ್ಳ, ಗಜ, ಗವಾಕ್ಷ, ಗವಯ, ಶರಭ, ಜಾಂಬವಂತರನ್ನು ಸಹ ಪ್ರೀತಿಯಿಂದ ನೋಡುತ್ತಿರು ॥೬॥ ಇವರಲ್ಲದೆ ಮಹಾನುಭಾವರಾದ ಯಾವ ಯಾವ ವಾನರರು, ನನಿಗೋಸುಗ ಪ್ರಾಣಂಗಳಂ ತೊರೆದಿದ್ದರೊ, ಅವರಿಗೆಲ್ಲ ಅಪಕೃತಿಯಂ ಗೈಯದೆ ಪ್ರೀತಿ ಯುಕ್ತನಾಗಿರೆಂದು ಬಾರಿಬಾರಿಗು ಸುಗ್ರೀವನಿಗೆ ನಿರೂಪಿಸಿ, ಪ್ರಶಂಸೆಯಂ ಗೈದು, ವಿಭೀಷಣನಂ ಕುರಿತು ನುಡಿಯುವನದೆಂತೆನೆ ॥೮॥ ಎಲೈರಾಜನೆ! ಧರ್ಮದಿಂದ ಲಂಕಾಪುರಿಯಂ ಪರಿಪಾಲಿಸುವದಕ್ಕೆ ನೀನು ಅರ್ಹನಾಗಿದ್ದೀ, ಆ ಪುರವರಕ್ಕು, ರಾಕ್ಷಸರಿಗು, ನಿಮ್ಮಣ್ಣನಾದ ಕುಬೇರನಿಗು ಸಹ ಪರಮ ಸಮ್ಮತನಾಗಿದ್ದೀ ॥೯॥ ಎಲೈ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಥಂಚನ । ಬುದ್ಧಿಮಂತೋ ಹಿ ರಾಜಾನೋ ಧ್ರುವಮಶ್ನಂತಿ ಮೇದಿನೀಮ್ ॥೧೦॥ ಅಹಂ ತು ನಿತ್ಯಶೋ ರಾಜನ್ ಸುಗ್ರೀವಸಹಿತಸ್ತ್ವಯಾ । ಸ್ಮರ್ತವ್ಯಃ ಪರಯಾ ಪ್ರೀತ್ಯಾ ಗಚ್ಛ ತ್ವಂ ವಿಗತಜ್ವರಃ ॥೧೧॥ ರಾಮಸ್ಯ ವಚನಂ ಶ್ರುತ್ವಾ ಋಕ್ಷವಾನರರಾಕ್ಷಸಾಃ । ಸಾಧು ಸಾಧ್ವಿತಿ ಕಾಕುತ್ಸ್ಥಂ ಪ್ರಶಶಂಸುಃ ಪುನಃ ಪುನಃ ॥೧೨॥ ತವ ಬುದ್ಧಿರ್ಮಹಾಬಾಹೋ ವೀರ್ಯಮದ್ಭುತಮೇವ ಚ । ಮಾಧುರ್ಯಂ ಪರಮಂ ರಾಮ ಸ್ವಯಂಭೋರಿವ ನಿತ್ಯದಾ ॥೧೩॥ ತೇಷಾಮೇವಂ ಬ್ರುವಾಣಾನಾಂ ವಾನರಾಣಾಂ ಚ ರಕ್ಷಸಾಮ್ । ಹನುಮಾನ್ ಪ್ರಣತೋ ಭೂತ್ವಾ ರಾಘವಂ ವಾಕ್ಯಮಬ್ರವೀತ್ ॥೧೪॥ ಸ್ನೇಹೋ ಮೇ ಪರಮೋ ರಾಮ ತ್ವಯಿ ನಿತ್ಯಂ ಪ್ರತಿಷ್ಠಿತಃ । ಭಕ್ತಿಶ್ಚ ನಿಯತಾ ವೀರ ಭಾವೋ ನಾನ್ಯತ್ರ ಗಚ್ಛತಿ ॥೧೫॥ ಯಾವದ್ರಾಮಕಥಾಂ ವೀರ ಶ್ರೋಷ್ಯೇಹಂ ಪೃಥಿವೀತಲೇ । ತಾವಚ್ಛರೀರೇ ವತ್ಸ್ಯಂತಿ ಮಮ ಪ್ರಾಣಾ ನ ಸಂಶಯಃ ॥೧೬॥ ಏವಂ ಬ್ರುವಾಣಂ ರಾಜೇಂದ್ರೋ ಹನೂಮಂತಮಥಾಸನಾತ್ । ಉತ್ಥಾಯ ಚ ಪರಿಷ್ವಜ್ಯ ವಾಕ್ಯಮೇತದುವಾಚ ಹ ॥೧೭॥ ಏವಮೇತತ್ಕಪಿಶ್ರೇಷ್ಠ ಭವಿತಾ ನಾತ್ರ ಸಂಶಯಃ ॥ ೧೮॥ ಲೋಕಾ ಹಿ

---

ಹೇರಾಜನ್-ಎಲೈ ಅರಸೆ, ತ್ವಂ-ನೀನು, ಅಧರ್ಮೇ-ಅಧರ್ಮದಲ್ಲಿ, ಬುದ್ಧಿಂ-ಮತಿಯನ್ನು, ವ್ಯಸನೇ-ವ್ಯಸನದಲ್ಲೂ, ಮಾಕಾರ್ಷೀಃ-ಮಾಡಬೇಡ, ಬುದ್ಧಿಮಂತಃ-ಮತಿವಂತರಾದ, ರಾಜಾನಃ-ಅರಸರು, ಮೇದಿನೀಂ-ಭೂಮಿಯನ್ನು, ಧ್ರುವಂ-ಶಾಶ್ವತವಾಗಿ, ಅಶ್ನಂತಿ-ಭುಜಿಸುವರಷ್ಟೆ ॥ ೧೦ ॥ ಹೇರಾಜನ್-ಎಲೈರಾಜನೆ, ಅಹಂತು-ನಾನಾದರೆ, ಸುಗ್ರೀವಸಹಿತಃ – ಸುಗ್ರೀವಯುಕ್ತನಾಗಿ, ನಿತ್ಯಶಃ-ನಿರಂತರವು, ತ್ವಯಾ-ನಿನ್ನಿಂದ, ಪರಯಾಪ್ರೀತ್ಯಾ-ಬಹಳ ವಿಶ್ವಾಸದಿಂದ, ಸ್ಮರ್ತವ್ಯಃ-ಸ್ಮರಿಸತಕ್ಕವನು, ತ್ವಂ-ನೀನು, ವಿಗತಜ್ವರಃ-ಕ್ಲೇಶವಿಲ್ಲದವನಾಗಿ,ಗಚ್ಛ-ಹೊರಡು॥೧೧॥ ಋಕ್ಷವಾನರರಾಕ್ಷಸಾಃ-ಭಲ್ಲೂಕ ಕಪಿ, ರಾಕ್ಷಸರು, ರಾಮಸ್ಯ-ಶ್ರೀರಾಮನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಸಾಧುಸಾಧ್ವಿತಿ-ಬಹು ಚನ್ನಾಗಿದೆಯೆಂದು, ಪುನಃಪುನಃ-ಬಾರಿಬಾರಿಗೂ, ಕಾಕುತ್ಸ್ಥಂ-ಶ್ರೀರಾಮನನ್ನು, ಪ್ರಶಶಂಸುಃ-ಸ್ತುತಿಸಿದರು ॥೧೨॥ ಹೇ ಮಹಾಬಾಹೋ-ಎಲೈ ಅತಿಭುಜಬಲಮುಳ್ಳವನೆ, ಹೇ ರಾಮ- ಎಲೈ ಶ್ರೀರಾಮನೆ, ಸ್ವಯಂಭೋರಿವ-ಬ್ರಹ್ಮನಂತೆ, ತವ-ನಿನ್ನ, ಬುದ್ಧಿಃ-ಮತಿಯು, ಅದ್ಭುತಂ-ಆಶ್ಚರ್ಯಕರವಾದ, ವೀರ್ಯಮೇವಚ-ಶೌರ್ಯವೂನು, ಪರಮಂ-ಅತಿಶಯವಾದ, ಮಾಧುರ್ಯಂಚ-ಮಧುರತೆಯೂಸಹ, ನಿತ್ಯದಾ-ನಿರಂತರವು, (ಸಂತಿ-ಇರುತ್ತವೆ) ॥೧೩॥ ತೇಷಾಂವಾನರಾಣಾಂ-ಆ ವಾನರರು,ರಕ್ಷಸಾಂಚ-ರಕ್ಕಸರುಸಹಾ, ಏವಂ-ಈಪರಿಯಾಗಿ, ಬ್ರುವಾಣಾನಾಂಸತಾಂ-ಹೇಳುತಿರುವಂಥಾವರಾಗುತಿರಲಾಗಿ, ಹನೂಮಾನ್-ಆಂಜನೇಯನು, ಪ್ರಣತೋಭೂತ್ವಾ-ವಿಧೇಯನಾಗಿ, ರಾಘವಂ-ಶ್ರೀರಾಮನಂ ಕುರಿತು, ವಾಕ್ಯಂ-ವಚನವನ್ನು,ಅಬ್ರವೀತ್-ನುಡಿದನು॥೧೪॥ ಹೇ ರಾಮ-ಎಲೈ ಶ್ರೀರಾಮನೆ,ಮೇ-ನನಿಗೆ, ಪರಮಃ-ಅತಿಶಯವಾದ, ಸ್ನೇಹಃ-ಸಖನಲ್ಲಿರತಕ್ಕ ಪ್ರೀತಿಯು, ತ್ವಯಿ-ನಿನ್ನಲ್ಲಿ, ನಿತ್ಯಂ-ಸದಾಕಾಲದಲ್ಲಿಯು, ಪ್ರತಿಷ್ಠಿತಃ-ನಿಂತಿದೆ, ಭಕ್ತಿಶ್ಚ-ಉತ್ತಮನಲ್ಲಿರತಕ್ಕ ಪ್ರೀತಿಯು, ನಿಯತಾ-ನಿಶ್ಚಯವಾಗಿರುವದು, ಹೆ ವೀರ ಎಲೈಶೂರನೆ, ಭಾವಃ-ಅಭಿಪ್ರಾಯವು, ಅನ್ಯತ್ರ-ಮತ್ತೊಂದುಕಡೆ, ನಗಚ್ಛತಿ-ಹೋಗುವದಿಲ್ಲ ॥೧೫॥ ಹೇವೀರ-ಎಲೈ ಶೂರನೆ, ಅಹಂ-ನಾನು, ಪೃಥಿವೀತಲೆ-ಭೂಪ್ರದೇಶದಲ್ಲಿ, ರಾಮಕಥಾಂ-ರಾಮಚರಿತ್ರೆಯನ್ನು, ಯಾವತ್-ಎದುವರಿಗೂ, ಶ್ರೋಷ್ಯೇ-ಕೇಳುವೆನೊ, ತಾವತ್-ಅದುವರಿಗು, ಮಮ-ನನ್ನ, ಪ್ರಾಣಾಃ-ಪ್ರಾಣಗಳು, ಶರೀರೆ-ದೇಹದಲ್ಲಿ, ವತ್ಸ್ಯಂತಿ-ಇರುವವು,ನಸಂಶಯಃ-ಸಂದೇಹವಿಲ್ಲ ॥೧೬॥ ರಾಜೇಂದ್ರಃ-ರಾಜಾಧಿರಾಜನಾದ ಶ್ರೀರಾಮನು, ಆಸನಾತ್-ಪೀಠದಿಂದ, ಉತ್ಥಾಯ-ಎದ್ದು, ಏವಂ-ಈ ಪರಿಯಾಗಿ, ಬ್ರುವಾಣಂ-ಹೇಳುತಿರುವ, ಹನೂಮಂತಂ-ಆಂಜನೇಯನನ್ನು, ಅಥ-ಬಳಕ, ಪರಿಷ್ವಜ್ಯ-ಅಪ್ಪಿಕೊಂಡು, ಏತದ್ವಾಕ್ಯಂ-ಈ ಮಾತನ್ನು, ಉವಾಚಹ – ಹೇಳಿದನಷ್ಟೆ ॥೧೭॥ ಹೇ ಕಪಿಶ್ರೇಷ್ಠ-ಎಲೈ ವಾನರೋತ್ತಮನೆ, ಏತತ್-ಈ ನಿನ್ನ ಮನೋಭೀಷ್ಟವು, ಏವಂ-ಈಪರಿಯಾಗಿ, ಭವಿತಾ-ಆಗುವದು, ಅತ್ರ-

---

ರಾಜನೇ ! ನೀನು ವ್ಯಸನಕಾಲದಲ್ಲಿಯೂ ಕೂಡ ಅಧರ್ಮದೊಳು ಮತಿಯಂ ಗೆಯ್ಯಬೇಡ, ಬುದ್ಧಿವಂತರಾದ ರಾಜರು ಶಾಶ್ವತವಾಗಿ ಭೂಮಿಯನ್ನನುಭವಿಸುವರಷ್ಟೆ ॥೧೦॥ ಸುಗ್ರೀವ ಸಹಿತನಾದ ನನ್ನನ್ನು, ವಿಶ್ವಾಸದಿಂದ ಪ್ರತಿದಿನದಲ್ಲಿಯೂ, ಸ್ಮರಿಸುತಿರು, ಸಮಾಧಾನ ಚಿತ್ತನಾಗಿ ತೆರಳು, ಎಂಬದಾಗಿ ರಘುನಂದನನು ನಿರೂಪಿಸಲು, ಆವಾಕ್ಯವಂ ಕೇಳಿ, ಜಾಂಬವಂತನೇ ಮುಂತಾದ ಋಕ್ಷರು, ವಾನರರು, ರಾಕ್ಷಸರು ಇವರೆಲ್ಲರು, ಸಾಧುಸಾಧುವೆಂದು ಶ್ರೀರಾಮನಂ ಬಾರಿಬಾರಿಗು ಪ್ರಶಂಸಿಸಿದರದೆಂತೆನೆ ॥೧೨॥ ಎಲೈ ಮಹಾಭುಜಪರಾಕ್ರಮ ಮುಳ್ಳವನೆ! ನಿನ್ನ ಮತಿಯು, ವೀರ್ಯವು ಸಹ ಆಶ್ಚರ್ಯಕರವಾಗಿರುವವು, ಮಾಧುರ್ಯ ಮಾದರೆ ಸಾಕ್ಷಾಚ್ಚತುರ್ಮುಖನಿಗಿರುವ ತೆರದಿ ಸರ್ವೋತ್ಕೃಷ್ಟವಾಗಿರುವದು. ಎಂಬದಾಗಿ ಕಪಿ ರಾಕ್ಷಸರೆಲ್ಲರು ಶ್ಲಾಘಿಸುತ್ತಿರಲು, ಹನುಮಂತನು ವಿನಯವಂತನಾಗಿ ಶ್ರೀರಾಮನಂ ಕುರಿತಿಂತೆಂದನು॥೧೪॥ ಓ ಶ್ರೀರಾಮನೆ! ನನಿಗೆ ಸ್ನೇಹವು ಭಕ್ತಿಯು ಸಹ ನಿನ್ನಲ್ಲಿಯೆ ನಿಶ್ಚಂಚಲವಾಗಿ ಸದಾಕಾಲದಲ್ಲಿಯು ಯಿರುವದು, ಎನ್ನ ಮನವು ಮತ್ತೊಂದುಕಡೆ ಚಲಿಸಲಾರದು ॥೧೫॥ ನಾನು ಎದುವರಿವಿಗು ಈ ಧರಾತಲದಲ್ಲಿ ನಿನ್ನ ಕಥೆಯಂ ಕೇಳುತ್ತಿರುವೆನೋ, ಅದುವರಿವಿಗು ನನ್ನ ಪ್ರಾಣಗಳು ಶರೀರದಲ್ಲಿರುವವು, ಈವಿಷಯದಲ್ಲಿ ಸಂಶಯವಿಲ್ಲ, ಎಂಬದಾಗಿ ಹನುಮಂತನು ನುಡಿದವನಾಗಲೂ, ಶ್ರೀರಾಮನು ಸಿಂಹಾಸನದಿಂದೆದ್ದು ಆತನನ್ನಪ್ಪಿಕೊಂಡು ಈ ವಾಕ್ಯವಂ ಹೇಳಲೊಸಗಿದನದೆಂತೆನೆ ॥೧೭॥ ಎಲೈ ಕಪಿವರನೆ! ಇದು ನೀನಪೇಕ್ಷಿಸಿದಂತೆಯೇ

CC-0. Bhagavad Ramanuja National Research Institute, Melukote Collection.

ಯಾವತ್ಸ್ಥಾಸ್ಯಂತಿತಾವತ್ಸ್ಥಾಸ್ಯತಿಮೇಕಥಾ । ಚರಿಷ್ಯತಿಕಥಾಯಾವಲ್ಲೋಕಾನಸಾಹಿಮಾಮಿಕಾ ॥ ತಾವಚ್ಛರೀರೇವ
ತ್ಸ್ಯಂತಿಪ್ರಾಣಾಸ್ತವನಸಂಶಯಃ॥೧೯॥ತತೋಹಾರಂಚಚಂದ್ರಾಭಂಮುಚ್ಯಕಂಠಾತ್ಸರಾಘವಃ। ವೈಡೂರ್ಯತರಳಂಸ್ನೇಹಾ
ದಾಬಬಂಧಹನೂಮತಃ ॥೨೦॥ ತೇನೋರಸಿನಿಬದ್ಧೇನಹಾರೇಣಸಮಹಾಕಪಿಃ । ರರಾಜಹೇಮಶೈಲೇಂದ್ರಶ್ಚಂದ್ರೇಣಾಕ್ರಾಂತ
ಮಸ್ತಕಃ॥೨೧॥ಶ್ರುತ್ವಾತುರಾಘವಸ್ಯೈತದುತ್ಥಾಯೋತ್ಥಾಯವಾನರಾಃ। ಪ್ರಣಮ್ಯಶಿರಸಾಪಾದೌಪ್ರಜಗ್ಮುಸ್ತೇಮಹಾಬ
ಲಾಃ॥ ಸುಗ್ರೀವಶ್ಚೈವರಾಮೇಣಪರಿಷ್ವಕ್ತೋಮಹಾಭುಜಃ। ವಿಭೀಷಣಶ್ಚ ಧರ್ಮಾತ್ಮಾನಿರಂತರಮುರೋಗತಃ ॥೨೩॥
ಸರ್ವೇಚತೇಬಾಷ್ಪಗಳಾಸ್ಸಾಶ್ರುನೇತ್ರಾವಿಚೇತಸಃ । ಸಂಮೂಢಾಇವದುಃಖೇನತ್ಯಜಂತೋರಾಘವಂತದಾ ॥೨೪॥ ಕೃತಪ್ರ
ಸಾದಾಸ್ತೇನೈವರಾಘವೇಣಮಹಾತ್ಮನಾ। ಜಗ್ಮುಸ್ಸ್ವಂಸ್ವಂಗೃಹಂಸರ್ವೇದೇಹೀದೇಹಮಿವತ್ಯಜನ್ ॥೨೫॥

—…* ಇತಿ ಶ್ರೀಮದುತ್ತರಕಾಂಡೇ ಚತ್ವಾರಿಂಶಸ್ಸರ್ಗಃ. *…—

---

ಆ ವಿಷಯದಲ್ಲಿ, ಸಂಶಯಃ-ಸಂದೇಹವು, ನ-ಇಲ್ಲ ॥೧೮॥ ಲೋಕಾಃ-ಲೋಕಂಗಳಾದರೋ, ಯಾವತ್-ಎದುವರಿವಿಗೆ, ಸ್ಥಾಸ್ಯಂತಿ-ನಿಲ್ಲುವವೋ, ತಾವತ್-ಆದುವರಿವಿಗೂ, ಮೇ-ನನ್ನ, ಕಥಾ-ಚರಿತ್ರೆಯು, ಸ್ಥಾಸ್ಯತಿ-ನಿಲ್ಲುವದು, ಮಾಮಿಕಾ-ನನ್ನ ಸಂಬಂಧವಾದ, ಏಷಾಕಥಾ-ಈ ಚರಿತ್ರೆಯು, ಲೋಕೇಷು-ಲೋಕಂಗಳಲ್ಲಿ, ಯಾವತ್-ಎದುವರಿಗು, ಚರಿಷ್ಯತಿ-ಪ್ರಕಾಶವಾಗಿರುವದೋ, ತಾವತ್-ಅಷ್ಟು ಪರ್ಯಂತರವು, ತವ-ನಿನ್ನ, ಪ್ರಾಣಾಃ-ಪ್ರಾಣಗಳು, ಶರೀರೇ-ದೇಹದಲ್ಲಿ, ವತ್ಸ್ಯಂತಿ-ಇರುತ್ತವೆ, ನಸಂಶಯಃ-ಸಂದೇಹವಿಲ್ಲ ॥೧೯॥ ತತಃ-ಆನಂತರದಲ್ಲಿ, ಸರಾಘವಃ- ಆ ಶ್ರೀರಾಮನು, ಚಂದ್ರಾಭಂ-ಚಂದ್ರನ ಕಾಂತಿಯಂತೆ ಕಾಂತಿಯುಳ್ಳ, ವೈಡೂರ್ಯತರಳಂ- ವೈಡೂರ್ಯವೇ ನಾಯಕಮಣಿಯಾಗಿ ಉಳ್ಳ, ಹಾರಂ-ಹಾರವನ್ನು, ಕಂಠಾತ್- ಕೊರಳ ದೆಸೆಯಿಂದ, ಮುಚ್ಯ-ತೆಗದು, ಸ್ನೇಹಾತ್-ಮೈತ್ರಿಯಿಂದ, ಹನೂಮತಃ-ಆಂಜನೇಯನ, (ಕಂಠೇ-ಕೊರಳಿನಲ್ಲಿ) ಆಬಬಂಧ-ಕಟ್ಟಿದನು ॥೨೦॥ ಉರಸಿ- ವಕ್ಷಸ್ಥಲದಲ್ಲಿ, ನಿಬದ್ಧೇನ-ಕಟ್ಟಲ್ಪಟ್ಟ, ತೇನಹಾರೇಣ- ಆಹಾರದಿಂದ, ಸಮಹಾಕಪಿಃ- ಆ ಮಹಾವಾನರನು, ಚಂದ್ರೇಣ- ಚಂದ್ರನಿಂದ, ಆಕ್ರಾಂತಮಸ್ತಕಃ-ಆಕ್ರಮಿಸಲ್ಪಟ್ಟ ಶಿಖರವುಳ್ಳ, ಹೇಮಶೈಲೇಂದ್ರಃಇವ-ಮೇರುಪರ್ವತದೋಪಾದಿಯಲ್ಲಿ, ರರಾಜ-ಹೊಳೆಯುತಿದ್ದನು ॥೨೧॥ ಮಹಾಬಲಾಃ-ಅತಿ ಬಲಾಢ್ಯರಾದ, ತೇವಾನರಾಃ-ಆ ಕಪಿಗಳು, ರಾಘವಸ್ಯ-ಶ್ರೀರಾಮನ, (ಏತತ್-ಈ ವಚನವನ್ನಾದರೋ)ಶ್ರುತ್ವಾ-ಕೇಳಿ, ಉತ್ಥಾಯೋತ್ಥಾಯ-ಎದ್ದೆದ್ದು,ಶಿರಸಾ-ಶಿರದಿಂದ, ಪ್ರಣಮ್ಯ-ನಮಸ್ಕರಿಸಿ, ಪಾದೌ-ಪಾದಗಳನ್ನು, ಪ್ರಜಗ್ಮುಃ-ಹೊಂದಿದರು ॥೨೨॥ ಮಹಾಬಲಃ-ಬಹುಬಲಿಷ್ಠನಾದ, ಸುಗ್ರೀವಶ್ಚ-ಸುಗ್ರೀವನೂ ಸಹ, ಧರ್ಮಾತ್ಮಾ-ಧರ್ಮಿಷ್ಠನಾದ, ವಿಭೀಷಣಶ್ಚ-ವಿಭೀಷಣನೊಡನೆ, ನಿಂತರಂ- ಗಾಢವಾಗಿ, ಉರೋಗತಃ-ಆಲಿಂಗಿಸಲ್ಪಟ್ಟನು ॥೨೩॥ ಬಾಷ್ಪಗಳಾಃ-ಬಾಷ್ಪ- ಕಂಬನಿಗಳಿಂದ, ಗಳಾಃ-ವಿಸ್ವರವಾದ ಕಂಠಧ್ವನಿಯುಳ್ಳವರಾದ, ಸಾಶ್ರುನೇತ್ರಾಃ-ಕಣ್ಣೀರಿನಿಂ ದೊಡಗೂಡಿದ, ನೇತ್ರಗಳುಳ್ಳ, ವಿಚೇತಸಃ-ಮತಿಗೆಟ್ಟ, ತೇಸರ್ವೇ-ಅವರೆಲ್ಲರು, ಸಂಮೂಢಾಇವ-ಪ್ರಜ್ಞೆಯಿಲ್ಲದವರಂತೆ, ದುಃಖೇನ-ವ್ಯಸನದಿಂದ, ರಾಘವಂ-ಶ್ರೀರಾಮನನ್ನು, ತ್ಯಜಂತಃ- ಬಿಡುತಿರುವರು (ಅಭವನ್-ಆದರು) ॥೨೪॥ ಮಹಾತ್ಮಾನಾ-ಮಹಾನುಭಾವನಾದ, ತೇನರಾಘವೇಣೈವ-ಆ ಶ್ರೀರಾಮನಿಂದಲೇ, ಕೃತಪ್ರಸಾದಾಃ-ಮಾಡಲ್ಪಟ್ಟ ಅನುಗ್ರಹವುಳ್ಳ, ಸರ್ವೇ-ಎಲ್ಲರು, ದೇಹಂ-ಶರೀರವನ್ನು, ಬಿಡುತಿರುವ, ದೇಹೀವ-ಪ್ರಾಣಿಯಂತೆ, (ಶ್ರೀರಾಮ ವಿಯೋಗದಿಂದ ಖಿನ್ನರಾಗಿ) ಸ್ವಂಸ್ವಂಗೃಹಂ-ತಮ್ಮತಮ್ಮ ಮನೆಗಳನ್ನು, ಜಗ್ಮುಃ-ಹೊಂದಿದರು ॥೨೫॥ ಇತಿ ಶ್ರೀಮದುತ್ತರರಾಮಾಯಣೇ ಚತ್ವಾರಿಂಶಸ್ಸರ್ಗಃ

---

ಆಗುವದು, ಈ ಲೋಕಂಗಳೆಲ್ಲ ನಿಲ್ಲುವ ವರಿವಿಗೂ ನನ್ನ ಕಥೆಯು ನಿಲ್ಲುವಂಥಾ ದಾಗುವದು, ನನ್ನ ಸಂಬಂಧವಾದ ಚರಿತ್ರೆಯು ಎದುವರಿಗು ಪ್ರಸಿದ್ಧಿಯಾಗಿರುವದೋ, ಅದು ವರಿವಿಗು ನಿನ್ನ ಪ್ರಾಣಗಳು ದೇಹದಲ್ಲಿರುವಂಥಾವು ಗಳಾಗುವವು (ಅಂದರೆ ಅದುವರಿವಿಗೂ ನೀನು ಸ್ಥಿರವಾಗಿರುತ್ತೀ ಎಂಬಭಾವವು) ಈ ವಿಷಯದಲ್ಲಿ ಸಂದೇಹವೇ ಇಲ್ಲ, ಎಂಬದಾಗಿ ರಘುನಂದನನು ನುಡಿದು, ಚಂದ್ರನತೆರದಿ ಕಂಗೊಳಿಸಿರುವದಾಗಿಯೂ, ವೈಡೂರ್ಯಮಣಿ ನಾಯಕವಾದ ಪದಕವುಳ್ಳದ್ದಾಗಿಯೂ, ಇರುವ ಹಾರವಂ ಸ್ವಕಂಠದಿಂತೆಗದು,ಸ್ನೇಹಭಾವದಿಂ ಹನುಮಂತನ ಕಂಠದಲ್ಲಿ ಕಟ್ಟಿದಂಥಾವನಾಗಲೂ, ಆಹಾರದಿಂದ ಹನುಮಂತನು ಚಂದ್ರನಿಂದಾಕ್ರಾಂತವಾದ ಶಿಖರವುಳ್ಳ ಮೇರುಗಿರಿಯ ತೆರದಿ ಹೊಳೆಯುತಿದ್ದನು ॥೨೧॥ ಕಡುಪರಾಕ್ರಮಿಗಳಾದ ಆ ವಾನರರಾದರೆ, ಶ್ರೀರಾಮನಿಂದ ನುಡಿಯಲ್ಪಟ್ಟ, ಆವಾಕ್ಯವಂ ಕೇಳಿ, ಎದ್ದೆದ್ದು ಪ್ರಣಾಮಂಗಳಂಗೈದು ಪಾದಸಮೀಪಕ್ಕೆ ಬರಲೂ, ರಘುನಂದನನು, ಸುಗ್ರೀವ ವಿಭೀಷಣರೀರ್ವರಂ ಗಾಢವಾಗಿ ಆಲಿಂಗನವಂಗೈದವನಾದನು ॥೨೩॥ ಆವೇಳೆಯಲ್ಲಿ ವಾನರರೆಲ್ಲರು ಕಂಬನಿಗಳಿಂದ ಕಟ್ಟಲ್ಪಟ್ಟ ಕಂಠಗಳುಳ್ಳವರಾಗಿಯೂ, ಆಶ್ರುಪೂರಿತವಾದ ನೇತ್ರಗಳುಳ್ಳವರಾಗಿಯೂ, ಮನೆಗೆಟ್ಟವರಾಗಿಯೂ ರಾಮನನ್ನಿಂದಿಗೆ ಅಗಲಬೇಕೆಂಬ ದುಃಖದಿಂದ ಮೂಢರಂತಿರುವರಾಗಿಯೂ ಇರುವರಾಗಿ,ಆ ಮಹಾನುಭಾವನಿಂದನುಗ್ರಹಿಸಲ್ಪಟ್ಟು, ದೇಹವಂತ್ಯಜಿಸುವದೇಹಿಯಂತೆ ಮಹಾದುಃಖವುಳ್ಳವರಾಗಿ, ಸ್ವಮಂದಿರಗಳಂ ಪೊಂದಿದವರಾದರು ॥೨೫॥

—…* ಉತ್ತರರಾಮಾಯಣದಲ್ಲಿನ ೪೦ನೆಯಸರ್ಗಂ ಮುಗಿದುದು *…—

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಿಸೃಜ್ಯಚಮಹಾಬಾಹುಃಋಕ್ಷವಾನರರಾಕ್ಷಸಾನ್ । ಭ್ರಾತೃಭಿಸ್ಸಹಿತೋರಾಮಃಪ್ರಮುಮೋದಸುಖೀಸುಖಮ್ ॥೧॥ ಅಥಾಪರಾಹ್ಣಸಮಯೇಭ್ರಾತೃಭಿಸ್ಸಹರಾಘವಃ । ಶುಶ್ರಾವಮಧುರಾಂವಾಣೀಮಂತರಿಕ್ಷಾತ್ಪ್ರಭಾಷಿತಾಮ್ ॥೨॥ ಸೌಮ್ಯರಾಮ ನಿರೀಕ್ಷಸ್ವ ಸೌಮ್ಯೇನವದನೇನಮಾಮ್ । ಕೈಲಾಸಶಿಖರಾತ್ಪ್ರಾಪ್ತಂವಿದ್ಧಿಮಾಂಪುಷ್ಪಕಂಪ್ರಭೋ ॥೩॥ ತವಶಾಸನಮಾಜ್ಞಾಯಗತೋಽಸ್ಮಿಧನದಂಪ್ರತಿ । ಉಪಸ್ಥಾತುಂನರಶ್ರೇಷ್ಠ ಸಚಮಾಂಪ್ರತ್ಯಭಾಷತ ॥೪॥ ನಿರ್ಜಿತಸ್ತ್ವಂನರೇಂದ್ರೇಣರಾಘವೇಣ ಮಹಾತ್ಮನಾ । ನಿಹತ್ಯಯುಧಿದುರ್ಧರ್ಷಂರಾವಣಂರಾಕ್ಷಸಾಧಿಪಮ್ ॥೫॥ ಮಮಾಪಿಪರಮಾಪ್ರೀತಿರ್ಹತೇತಸ್ಮಿನ್ ದುರಾತ್ಮನಿ । ರಾವಣೇಸಗಣೇಸೌಮ್ಯ ಸಪುತ್ರಾಮಾತ್ಯಬಾಂಧವೇ ॥೬॥ ಸತ್ವಂರಾಮೇಣಲಂಕಾಯಾಂನಿರ್ಜಿತಃಪರಮಾತ್ಮನಾ । ವಹ ಸೌಮ್ಯತಮೇವತ್ವಮಹಮಾಜ್ಞಾಪಯಾಮಿತೇ ॥೭॥ ಏಷಮೇಪರಮಃಕಾಮೋಯತ್ತ್ವಂರಾಘವನಂದನಮ್ । ವಹೇರ್ಲೋಕಸ್ಯಸಂಯಾನಂಗಚ್ಛಸ್ವವಿಗತಜ್ವರಃ ॥೮॥ ತಚ್ಛಾಸನಮಹಂಜ್ಞಾತ್ವಾಧನದಸ್ಯಮಹಾತ್ಮನಃ । ತ್ವತ್ಸಕಾಶಂಪುನಃಪ್ರಾ

---

ಮಹಾಬಾಹುಃ-ಮಹಾ ಭುಜಪರಾಕ್ರಮಿಯಾದ, ಸುಖೀ-ಸುಖವಂತನಾದ, ರಾಮಃ-ಶ್ರೀರಾಮನು ಸಹ, ಋಕ್ಷವಾನರ ರಾಕ್ಷಸಾನ್- ಕರಡಿಗಳನ್ನೂ, ಕಪಿಗಳನ್ನೂ, ರಕ್ಕಸರನ್ನೂ ಸಹ, ವಿಸೃಜ್ಯ-ತೊರೆದು, ಭ್ರಾತೃಭಿಃ-ತಮ್ಮಂದಿರಿಂದ, ಸಹಿತಃ-ಕೂಡಿದವನಾಗಿ, ಸುಖಂ-ಸುಖವಾಗಿ, ಪ್ರಮುಮೋದ-ಸಂತೋಷಿಸಿದನು ॥೧॥ ಅಥ-ಬಳಿಕ, ರಾಘವಃ-ಶ್ರೀರಾಮನು, ಭ್ರಾತೃಭಿಸ್ಸಹ-ಸಹಜರಿಂದೊಡಗೂಡಿ, ಅಪರಾಹ್ಣಸಮಯೇ, ಮಧ್ಯಾಹ್ನಾತೀತವಾದ ಸಮಯದಲ್ಲಿ, ಅಂತರಿಕ್ಷಾತ್-ಅಂತರಿಕ್ಷಗತವಾದ ಪುಷ್ಪಕವಿಮಾನದಿಂದ, ಪ್ರಭಾಷಿತಾಂ-ಹೇಳಲ್ಪಟ್ಟ, ಮಧುರಾಂ - ಮನೋಹರವಾದ, ವಾಣೀಂ-ವಾಕ್ಯವನ್ನು, ಶುಶ್ರಾವ-ಕೇಳಿದನು, ॥೨॥ ಹೇಸೌಮ್ಯ-ಎಲೈ ಸೌಮ್ಯನೆ,ಹೇರಾಮ-ಎಲೈಶ್ರೀರಾಮನೆ, ಸೌಮ್ಯೇನ-ಕ್ರೌರ್ಯಮಿಲ್ಲದಿರುವ, ವದನೇನ-ಮುಖದಿಂದ, ಮಾಂ-ನನ್ನನ್ನು, ನಿರೀಕ್ಷಸ್ವ-ನೋಡು, ಹೇಪ್ರಭೋ-ಎಲೈಸ್ವಾಮಿಯೆ, ಮಾಂ-ನನ್ನನ್ನು, ಕೈಲಾಸಶಿಖರಾತ್-ಕೈಲಾಸಪರ್ವತದ ಶಿಖರದದೆಸೆಯಿಂದ, ಪ್ರಾಪ್ತಂ-ಬಂದಿರುವ, ಪುಷ್ಪಕಂ-ಪುಷ್ಪಕ ವಿಮಾನವನ್ನಾಗಿ, ವಿದ್ಧಿ-ಅರಿತುಕೊ ॥೩॥ ಹೇ ನರಶ್ರೇಷ್ಠ-ಎಲೈ ಪುರುಷೋತ್ತಮನೆ, ತವ-ನಿನ್ನ, ಶಾಸನಂ-ಆಜ್ಞೆಯನ್ನು, ಆಜ್ಞಾಯ-ಹೊಂದಿ, ಉಪಸ್ಥಾತುಂ-ಸೇವಿಸುವದಕ್ಕೋಸ್ಕರ, ಧನದಂಪ್ರತಿ-ಕುಬೇರನಂ ಕುರಿತು, ಗತಃ-ಪೋದವನು, ಅಸ್ಮಿ-ಆದೆನು, ಸಚ-ಆ ಕುಬೇರನಾದರೆ,ಮಾಂ-ನನ್ನನ್ನು ಕುರಿತು, ಪ್ರತ್ಯಭಾಷತ-ಪ್ರತ್ಯುತ್ತರ ಕೊಟ್ಟನು ॥೪॥ ದುರ್ಧರ್ಷಂ-ತಿರಸ್ಕರಿಸಲಸಾಧ್ಯನಾದ, ರಾಕ್ಷಸಾಧಿಪಂ-ರಾಕ್ಷಸನಾಥನಾದ, ರಾವಣಂ-ರಾವಣನನ್ನು,ಯುಧಿ-ಕಾಳಗದಲ್ಲಿ, ನಿಹತ್ಯ-ಸಂಹರಿಸಿ, ಮಹಾತ್ಮನಾ-ಮಹಾನುಭಾವನಾದ,ನರೇಂದ್ರೇಣ-ನರನಾಥನಾದ, ರಾಘವೇಣ-ಶ್ರೀರಾಮನಿಂದ, ತ್ವಂ-ನೀನು,ನಿರ್ಜಿತಃ-ಜಯಿಸಲ್ಪಟ್ಟೆ॥೫॥ಹೆ ಸೌಮ್ಯ-ಎಲೈ ಕೋಪರಹಿತನೇ,ದುರಾತ್ಮನಿ-ದುರ್ವ್ಯಾಪಾರಿಯಾದ,ಸಗಣೇ-ಸಮೂಹದಿಂದೊಡಗೂಡಿದ,ಸಪುತ್ರಾಮಾತ್ಯಬಾಂಧವೇ-ಪುತ್ರಮಂತ್ರಿಬಂಧುಗಳಿಂದ ಯುಕ್ತನಾದ, ತಸ್ಮಿನ್-ಆ ದಶಕಂಠನು,ಹತೇಸತಿ-ಸಂಹರಿಸಲ್ಪಟ್ಟವನಾಗುತಿರಲೇಕಾಗಿ,ಮಮಾಪಿ-ನನಿಗೂಸಹ, ಪರಮಾ-ಉತ್ತಮವಾದ, ಪ್ರೀತಿಃ-ಸಂತೋಷವು॥೬॥ ಸಃ-ಆ ರಾವಣನ ಅಧೀನದಲ್ಲಿದ್ದ, ತ್ವಂ-ನೀನು, ಪರಮಾತ್ಮನಾ- ಪರಮಾತ್ಮಸ್ವರೂಪಿಯಾದ,ರಾಮೇಣ-ಶ್ರೀರಾಮನಿಂದ, ಲಂಕಾಯಾಂ-ಲಂಕಾಪಟ್ಟಣದಲ್ಲಿ, ವಿನಿರ್ಜಿತಃ-ಜಯಿಸಲ್ಪಟ್ಟೆ, ಹೇ ಸೌಮ್ಯ-ಎಲೈ ಕ್ರೌರ್ಯಮಿಲ್ಲದವನೆ, ತಮೇವ-ಆಶ್ರೀರಾಮನನ್ನೆ, ವಹ-ವಹಿಸು, ಅಹಂ-ನಾನು,ತೇ-ನಿನಿಗೆ, ಆಜ್ಞಾಪಯಾಮಿ-ಆಜ್ಞಾಪಿಸುತ್ತೇನೆ ॥೭॥ತ್ವಂ-ನೀನು, ರಾಘವನಂದನಂ-ರಾಘವ- ರಘುವಂಶಸ್ಥರಿಗೆ, ನಂದನಂ-ಆನಂದಕರನಾದ ಶ್ರೀರಾಮನನ್ನು,ಲೋಕಸ್ಯ-ಲೋಕದ, ಸಂಯಾನಂ-ಸಂಚಾರವಂಕುರಿತು, ವಹೇರಿತಿಯತ್-ವಹಿಸುವಂಥಾಪ್ಪದ್ದು ಗುತೀಎಂಬದ್ಯಾವದೋ, ಏಷಃ-ಇದು, ಮೇ-ನನಿಗೆ, ಪರಮಃ-ಉತ್ಕೃಷ್ಟವಾದ, ಕಾಮಃ-ಕೋರಿಕೆಯು, ತ್ವಂ-ನೀನು, ವಿಗತಜ್ವರಃ-ಕ್ಲೇಶವಿಲ್ಲದೆ, ಗಚ್ಛ-ಹೊರಡು, ॥೮॥ ಮಹಾತ್ಮನಃ-ಮಹಾನುಭಾವನಾದ,ಧನದಸ್ಯ-ಕುಬೇರನ, ತಚ್ಛಾಸನಂ-ಆ ಆಜ್ಞೆಯನ್ನು,

---

ಮಹಾ ಭುಜಪರಾಕ್ರಮಿಯಾದ ರಘುನಂದನನು ಆ ಕಪಿರಾಕ್ಷಸರಂ ಕಳುಹಿಸಿಕೊಟ್ಟು, ಭ್ರಾತೃಗಳಿಂದೊಡಗೂಡಿ ಸುಖವಾಗಿದ್ದವನಾದನು ॥೧॥ ಅನಂತರವು ಅಪರಾಹ್ಣಕಾಲದಲ್ಲಿ ಶ್ರೀರಾಮನು ತಮ್ಮಂದರಸಂಗಡ ಸಂಭಾಷಿಸುತ್ತಿರಲೂ, ಗಗನಂಗತವಾದ ಪುಷ್ಪಕವಿಮಾನದಿಂನುಡಿಯಲ್ಪಟ್ಟ, ಮತ್ತು ಮನೋಹರವಾದವಾಕ್ಯವಂ ಕೇಳಿದನು॥೨॥ಎಲೈ ಸೌಮ್ಯನೆ!ಸೌಮ್ಯವಾದ ನಿನ್ನ ಮುಖದಿಂದ ನನ್ನಂ ವೀಕ್ಷಿಸು,ನನ್ನನ್ನು ಕೈಲಾಸಗಿರಿಯಿಂದಸಂಪ್ರಾಪ್ತವಾಗಿರುವ ಪುಷ್ಪಕವಿಮಾನವನ್ನಾಗಿ ತಿಳಿದುಕೋ, ನಿನ್ನ ಆಜ್ಞಾನುಸಾರವಾಗಿ ಕುಬೇರನ ಸನ್ನಿಧಿಗೆ ಪೋಗಲೂ, ಆತನಿಂತೆಂದುತ್ತರವಂ ಕೊಟ್ಟನು. ತಿರಸ್ಕರಿಸಲಸಾಧ್ಯನಾಗಿಯೂ, ರಾಕ್ಷಸಾಧಿಪತಿಯಾಗಿಯೂ ಇರುವ ರಾವಣನನ್ನು ರಣರಂಗದಲ್ಲಿ ಸಂಹರಿಸಿ, ಮಹಾತ್ಮನಾದ ರಘುನಂದನನಿಂದ ನೀನು ಜಯಿಸಲ್ಪಟ್ಟೆ, ಆ ದುರಾತ್ಮನಾದ ರಾವಣನು ಪುತ್ರಮಂತ್ರಿಸಹಿತನಾಗಿ ಹತನಾದನೆಂಬದು, ಆತನ ಭ್ರಾತನಾದ ನನಿಗೂ ಸಹ ಬಹುಪ್ರೀತಿಕರವಾಗಿದೆ, ಆತನ ವಶದಲ್ಲಿದ್ದ ನೀನು ಪರಮಾತ್ಮನಾದ ಶ್ರೀರಾಮನಿಂದ, ಲಂಕಾಪುರದಲ್ಲಿಯೇ ಜಯಿಸಲ್ಪಟ್ಟೆ, ಆದಕಾರಣ ಆ ರಘುನಂದನನಿಗೆ ವಾಹನವಾಗಿರೆಂದು ನಿನಿಗಾಜ್ಞಾಪಿಸುತ್ತೇನೆ, ನೀನು ರಘುನಂದನನಂ ವಹಿಸಿಕೊಂಡು, ಲೋಕಸಂಚಾರವಂ ಗೈಯ್ಯು



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ತಃಸ್ವಯಂಪ್ರತಿಗೃಹಾಣಮಾಂ॥ಬಾಢಮಿತ್ಯೇವಕಾಕುಸ್ಥಃಪುಷ್ಪಕಂಸಮಪೂಜಯತ । ಲಾಜಾಕ್ಷತೈಶ್ಚ ಪುಷ್ಪೈಶ್ಚ ಗಂಧೈಶ್ಚ ಸಸುಗಂಧಿಭಿಃ ॥೧೦॥ ಗಮ್ಯತಾಂಚಯಥಾಕಾಮಮಾಗಚ್ಛೇತ್ವಾಂಯದಾಸ್ಮರೇ ॥ ಸಿದ್ಧಾನಾಂಚಪಥಾಸೌಮ್ಯಮಾವಿಷಾದೇನಯೋಜಯ ॥೧೧॥ ಏವಮಸ್ತ್ವಿತಿರಾಮೇಣವಿಸೃಷ್ಟಃಪುಷ್ಪಕಃಪುನಃ। ಅಭಿಪ್ರೇತಾಂದಿಶಂಪ್ರಾಯಾತ್ಪುಷ್ಪಕಃಪುಷ್ಪಮೋದಿತಃ॥೧೨॥ ಏವಮಂತರ್ಹಿತೇತಸ್ಮಿನ್ ಪುಷ್ಪಕೇವಿಬುಧಾತ್ಮನಿ । ಭರತಃಪ್ರಾಂಜಲಿರ್ವಾಕ್ಯಮುವಾಚರಘುನಂದನಮ್ ॥೧೩॥ಅತ್ಯದ್ಭುತಾನಿದೃಶ್ಯಂತೇತ್ವಯಿರಾಜ್ಯಂಪ್ರಶಾಸತಿ। ಅಮಾನುಷಾಣಾಂಸತ್ವಾನಾಂವ್ಯಾಹೃತಾನಿಮುಹುರ್ಮುಹುಃ॥ ೧೪॥ಅನಾಮಯಶ್ಚ ಮರ್ತ್ಯಾನಾಂಸಾಗ್ರೋಮಾಸೋಗತೋಹ್ಯಯಮ್ ।ಜೀರ್ಣಾನಾಮಪಿಸತ್ವಾನಾಂಮೃತ್ಯುರ್ನಾಯಾತಿರಾಘವ ॥೧೫॥ಪುತ್ರಾನ್ನಾರ್ಯಃಪ್ರಸೂಯಂತೇವಪುಷ್ಮಂತಶ್ಚ ಮಾನವಾಃ । ಹರ್ಷಶ್ಚಾಪ್ಯಧಿಕೋರಾಜನ್ ಜನಸ್ಯ

---

ಅಹಂ-ನಾನು, ಸ್ವಯಂ-ನನ್ನಷ್ಟಕ್ಕೆ ನಾನೆ,ತ್ವತ್ಸಕಾಶಂ-ನಿನ್ನ ಸಮೀಪವನ್ನು ಕುರಿತು, ಪುನಃ-ಮತ್ತೂ, ಪ್ರಾಪ್ತಃ-ಬಂದೆನು, ಮಾಂ-ನನ್ನನ್ನು, ಪ್ರತಿಗೃಹಾಣ,ಪರಿಗ್ರಹಿಸು ॥೯॥ ಬಾಢಮಿತ್ಯೇವ-ಹಾಗೇ ಆಗಲೆಂದು, ರಾಮಃ-ಶ್ರೀರಾಮನು, ಲಾಜಾಕ್ಷತೈಶ್ಚ -ಅರಳುಗಳಿಂದಲೂ ಅಕ್ಷತೆಗಳಿಂದಲೂ, ಪುಷ್ಪೈಶ್ಚ -ಹುವ್ವುಗಳಿಂದಲೂ,ಸಸುಗಂಧಿಭಿಃ-ಸುವಾಸನೆಗಳಿಂದ ಯುಕ್ತವಾದ, ಗಂಧೈಶ್ಚ -ಗಂಧಗಳಿಂದಲೂ ಸಹ, ಪುಷ್ಪಕಂ-ಪುಷ್ಪಕವಿಮಾನವನ್ನು, ಸಮಪೂಜಯತ್-ಅರ್ಚಿಸಿದವನಾದನು ॥ಯಥಾಕಾಮಂ-ಸ್ವೇಚ್ಛೆಯಾಗಿ, ಗಮ್ಯತಾಂ-ಪೋಗಲ್ಪಡಲಿ, ಯದಾ-ಯಾವಾಗ, ತ್ವಾಂ-ನಿನ್ನನ್ನು, ಸ್ಮರೇ-ಸ್ಮರಿಸುವೆನೋ ತದಾ-ಆವಾಗ, ಆಗಚ್ಛ-ಭಾ, ಸಿದ್ಧಾನಾಂಪಥಾ-ಗಗನಮಾರ್ಗದಿಂದ, ವಿಷಾದೇನ-ನನ್ನಗಲಿಕೆಯಿಂದುಂಟಾದ ದುಃಖದಿಂದ, ಮಾಯೋಜಯ-ಸೇರಬೇಡ,(ಅಂದರೆ ದುಃಖಿಸದೆ ತೆರಳು) (ಅಥವಾ, ಸಿದ್ಧಾನಾಂಪಥಾ-ಆಕಾಶಮಾರ್ಗದಿಂದ, ಮಾಂ-ನನ್ನನ್ನು, ಅವಿಷಾದೇನ-ಶ್ರಮೆಯಿಲ್ಲದೆ, ಯೋಜಯ-ಸೇರಿಸು) ಸಿದ್ಧಾನಾಂಚಗತೌಸೌಮ್ಯ ಎಂಬದಾಗಿ ಪಾಠಾಂತರ (ಈ ಪಾಠದಲ್ಲಿ, ಸಿದ್ಧಾನಾಂಗತೌ-ಆಕಾಶಮಾರ್ಗದಲ್ಲಿ, ಮಾ-ನನ್ನನ್ನು, ಅವಿಷಾದೇನ-ಶ್ರಮೆಯಿಲ್ಲದೆ, ಯೋಜಯ- ಸೇರಿಸು,(ಅಥವಾ ಸಿದ್ಧಾನಾಂಚಗತೌ-ಆಕಾಶಮಾರ್ಗದಲ್ಲಿ, ವಿಷಾದೇನ-ದುಃಖದಿಂದ,ಮಾಯೋಜಯ-ಸೇರಬೇಡ ॥೧೧॥ ಪುಷ್ಪಕಃ-ಪುಷ್ಪಕವಿಮಾನವು, ಏವಮಸ್ತ್ವಿತಿ-ಹಾಗೇ ಆಗಲೆಂದು, ರಾಮೇಣ- ಶ್ರೀರಾಮನಿಂದ, ಪುನಃ-ಮತ್ತು, ವಿಸೃಷ್ಟಃ-ಬಿಡಲ್ಪಟ್ಟಿತು, ಪುಷ್ಪಕಃ-ಪುಷ್ಪಕವಿಮಾನವು, ಪುಷ್ಪಪೂಜಿತಃ-ಹುವ್ವುಗಳಿಂದ ಪೂಜಿಸಲ್ಪಟ್ಟದ್ದಾಗಿ, ಅಭಿಪ್ರೇತಾಂ-ಇಷ್ಟವಾದ, ದಿಶಂ-ದಿಕ್ಕನ್ನು ಕುರಿತು, ಪ್ರಾಯಾತ್ - ಹೊರಟು ಹೋಯಿತು ॥ ೧೨ ॥ ವಿಬುಧಾತ್ಮನಿ - ದೇವತಾಸ್ವರೂಪವಾಗಿರುವ, ತಸ್ಮಿನ್ ಪುಷ್ಪಕೇ-ಆ ಪುಷ್ಪಕವಿಮಾನವು, ಏವಂ-ಈಪರಿಯಾಗಿ, ಅಂತರ್ಹಿತೇಸತಿ-ಅದೃಶ್ಯಮಾದಂಥಾದ್ದಾಗುತಿರಲೀಕಾಗಿ, ಭರತಃ-ಭರತನು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ರಘುನಂದನಂ-ಶ್ರೀರಾಮನಂ ಕುರಿತು, ವಾಕ್ಯಂ-ಮಾತನ್ನು ಉವಾಚ - ಪೇಳಿದನು, ॥೧೩॥ ತ್ವಯಿ-ನೀನು, ರಾಜ್ಯಂ-ರಾಜ್ಯವನ್ನು, ಪ್ರಶಾಸತಿಸತಿ-ಪರಿಪಾಲಿಸುತ್ತಿರುವನಾಗುತ್ತಿರಲೀಕಾಗಿ, ಅತ್ಯದ್ಭುತಾನಿ-ಅತಿವಿಚಿತ್ರಗಳು, ದೃಶ್ಯಂತೇ-ಕಾಣಲ್ಪಡುತ್ತಿವೆ, ಅಮಾನುಷಾಣಾಂ-ದೇವತಾಸಂಬಂಧವಾದ, ಸತ್ವಾನಾಂ-ಜಂತುಗಳವಾಕ್ಕುಗಳು, ಮುಹುರ್ಮುಹುಃ-ಬಾರಿಬಾರಿಗೂ, ವ್ಯಾಹೃತಾನಿ-ಪೇಳಲ್ಪಡುತ್ತಿವೆ ॥೧೪॥ ಅಯಂ-ಈ ಅಭಿಷೇಕಾನಂತರಕಾಲವು, ಸಾಗ್ರಃ-ಅಗ್ರಭಾಗದಿಂದೊಡಗೂಡಿದ್ದಾಗಿ, ಮಾಸಃ-ತಿಂಗಳು, ಗತಃ-ಕಳೆಯಿತು, (ಏತಾವನ್ಮಾತ್ರೇಣ-ಇಷ್ಟುಮಾತ್ರದಿಂದಲೆ, ) ಮರ್ತ್ಯಾನಾಂ-ಮನುಷ್ಯರಿಗೆ, ಅನಾಮಯಶ್ಚ-ಕ್ಷೇಮವೂಕೂಡ, ( ಪ್ರಾದುರ್ಭೂತಃ-ಪುಟ್ಟಿತು) ಹೆ ರಾಮ-ಎಲೈಶ್ರೀರಾಮನೆ, ಜೀರ್ಣಾನಾಂ-ಮುದಿಯಾದ, ಸತ್ವಾನಾಮಪಿ-ಜಂತುಗಳಿಗೂಕೂಡ, ಮೃತ್ಯುಃ-ಮರಣರೂಪಧರ್ಮವು, ನಾಯಾತಿ-ಬರುವದಿಲ್ಲ ॥೧೫॥ ನಾರ್ಯಃ-ಸ್ತ್ರೀಯರು, ಪುತ್ರಾನ್-ಮಕ್ಕಳನ್ನು, ಪ್ರಸೂಯಂತೆ-ಹೆರುವರು, ಮಾನವಾಃ-ಮನುಷ್ಯರು, ವಪುಷ್ಮಂತಶ್ಚ-ಹೃಷ್ಟಪುಷ್ಟವಾದ ದೇಹಮುಳ್ಳವರು, ಹೇರಾಜನ್-ಎಲೈಅರಸೆ, ಪುರವಾಸಿನಃ - ಪಟ್ಟಣದಲ್ಲಿರುವ, ಜನಸ್ಯ-ಜನರಿಗೆ, ಹರ್ಷಶ್ಚಾಪಿ-ಸಂತೋಷವುಕೂಡ, ಅ

---

ವಿ ಎಂಬದ್ಯಾವದೋ, ಅದೆನನಿಗೆ ಬಹಳ ಇಷ್ಟವಾಗಿರುವದು, ಚಿಂತಿಸದೇ ಪೋಗೆಂದು, ಮಹಾತ್ಮನಾದ ಆ ಧನಪತಿಯ ವಾಕ್ಯವಂ ಕೇಳಿ, ಪುನಃ ನಿನ್ನ ಸನ್ನಿಧಿಗೆ ಬಂದೆನು, ನನ್ನನ್ನು ಪರಿಗ್ರಹಿಸು, ಎಂಬದಾಗಿ ಪುಷ್ಪಕವಿಮಾನವು ನುಡಿಯಲೂ, ರಘುನಂದನ ನದನ್ನಂಗೀಕರಿಸಿ, ಲಾಜಗಳಿಂದಲೂ, ಅಕ್ಷತೆಗಳಿಂದಲೂ, ಗಂಧಪುಷ್ಪಾದಿಗಳಿಂದಲೂ ಸಹ, ಆ ವಿಮಾನವನ್ನರ್ಚಿಸಿ ಇಂತೆಂದು ಪೇಳಿದನು ॥೧೦॥ ಎಲೈ ಪುಷ್ಪಕವೆ! ಈಗ ನಿನಿಗಿಷ್ಟವಿದ್ದಂತೆ ಪೋಗಿ, ನಾಂ ಸ್ಮರಿಸಿದ ವೇಳೆಯಲ್ಲಿ ಬಂದು ನನ್ನಂ ಶ್ರಮಿಸದೇ ದೇವಮಾರ್ಗದಲ್ಲಿ ತೆಗದುಕೊಂಡುಹೋಗು, ಈಗ ಚಿಂತಿಸಬೇಡ, ಎಂಬದಾಗಿ ರಘುನಂದನನಿಂದ ನುಡಿಯಲ್ಪಟ್ಟ ಆವಿಮಾನವು ಹಾಗೆ ಆಗಲೆಂದು ಒಡಂಬಟ್ಟು, ಹೊರಟು ಹೋಗಲು, ಭರತನು ಅಂಜಲಿಬದ್ಧನಾಗಿ ರಾಮನಂ ಕುರಿತಿಂತೆಂದು ನುಡಿದನು ॥೧೩॥ಎಲೈ ಶ್ರೀರಾಮನೆ! ನೀನು ರಾಜ್ಯಪರಿಪಾಲನೆಯಂ ಗೈಯ್ಯುತ್ತಿರಲೂ, ಅತ್ಯದ್ಭುತಂಗಳು ಕಾಣುವವು, ದೇವತಾ ವಚನಂ ಗಳಾಗಾಗ್ಯೆ ಪೇಳಲ್ಪಡುವವು, ನೀನು ಪಟ್ಟಾಭಿಷಿಕ್ತನಾಗಿ ಒಂದು ಮಾಸವಾಯಿತು, ಇದರೊಳಗಾಗಿಯೇ ಜನರಿಗೆ ಮಹಾಕ್ಷೇಮವುಂಟಾಗಿದೆ. ಅದು ಹ್ಯಾಗೆಂದರೆ, ಮುದಿಜೀವಂಗಳಿಗೂ ಸಹ ಮೃತ್ಯುವು ಸಂಭವಿಸಲಿಲ್ಲ, ಇದಲ್ಲದೆ ಸ್ತ್ರೀಯ್ಯರೆಲ್ಲರು ಪುತ್ರರಂ ಪಡೆಯು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪುರವಾಸಿನಃ ॥೧೬॥ ಕಾಲೇಚವಾಸವೋವರ್ಷಂಪಾತಯತ್ಯಮೃತೋಪಮಮ್। ವಾಯುವಶ್ಚಾಭಿತೋವಾಂತಿಸ್ಪರ್ಶವಂತಃಸುಖಪ್ರದಾಃ ॥೧೭॥ ಈದೃಶೋನಶ್ಚಿರಂರಾಜಾಭವತ್ವಿತಿನರೇಶ್ವರ। ಕಥಯಂತಿಪುರೇಪೌರಾಃನಾಗಾಜನಪದೇಷುಚ ॥೧೮॥ ಏತಾವಾಚಸ್ಸುಮಧುರಾಭರತೇನಸಮೀರಿತಾಃ। ಶ್ರುತ್ವಾರಾಮೋಮುದಾಯುಕ್ತಃಪ್ರಮುಮೋದಸುಖೀಸುಖಮ್ ॥೧೯॥

ಇತಿ ಶ್ರೀಮದುತ್ತರ ರಾಮಾಯಣೇ ಏಕಚತ್ವಾರಿಂಶಸ್ಸರ್ಗಃ.

ವಿಸೃಜ್ಯಚತತೋರಾಮಃಪುಷ್ಪಕಂಹೇಮಭೂಷಿತಮ್ । ಪ್ರವಿವೇಶಮಹಾಬಾಹುರಶೋಕವನಿಕಾಂತದಾ॥೧॥ಚಂದನಾಗರುಚೂತೈಶ್ಚ ತುಂಗಕಾಲೇಯಕೈರಪಿ। ದೇವದಾರುವನೈಶ್ಚಾಪಿಸಮಂತಾದುಪಶೋಭಿತಾಮ್ ॥೨॥ ಚಂಪಕಾಶೋಕಪುನ್ನಾಗಮಧೂಕಪನಸಾಸನೈಃ। ಶೋಭಿತಾಂಪಾರಿಜಾತೈಶ್ಚ ವಿಧೂಮಜ್ವಲನಪ್ರಭೈಃ॥೩॥ ಕರ್ಣಿಕಾರವನೈಶ್ಚೈವಶೋಭಿತಾಂಹೇಮಸುಪ್ರಭೈಃ।ಪ್ರಿಯಂಗುಭಿಃಕದಂಬೈಶ್ಚ ತಥಾಕುರವಕೈರಪಿ ॥೪॥ ಜಂಬೂಭಿಃಪಾಟಲೀಭಿಶ್ಚ ಕೋವಿದಾರೈಶ್ಚ

---

ಧಿಕಃ-ಹೆಚ್ಚಾಗಿದೆ ॥೧೬॥ ವಾಸವಶ್ಚ-ದೇವೇಂದ್ರನೂಸಹ, ಕಾಲೇ - ಸಮಯದಲ್ಲಿ, ಅಮೃತೋಪಮಂ-ಅಮೃತತುಲ್ಯವಾದ, ವರ್ಷಂ - ಮಳೆಯನ್ನು,ಪಾತಯತಿ-ಬೀಳಿಸುತ್ತಾನೆ, ವಾಯವಶ್ಚ -ಗಾಳಿಗಳೂಸಹ, ಸ್ಪರ್ಶವಂತಃ-ಸ್ಪರ್ಶೆಯುಳ್ಳವುಗಳಾಗಿ,ಸುಖಪ್ರದಾಃ-ಸುಖದಾಯಕವಾಗಿ, ಅಭಿತಃ-ಎಲ್ಲೆಲ್ಲಿಯೂ ವಾಂತಿ-ಬೀಸುತ್ತವೆ, ॥ ೧೭ ॥ ಹೇನರೇಶ್ವರ-ಎಲೈನರಪತಿಯೆ, ಈದೃಶಃ-ಇಂತಾ, ರಾಜಾ-ಅರಸು, ನಃ-ನಮಗೆ, ಚಿರಂ-ಬಹುಕಾಲವು,ಭವತು-ಆಗಲಿ, ಇತಿ-ಇಂತೆಂದು, ಪೌರಾಃ-ಪಟ್ಟಣಸ್ಥರು, ಜನಾಃ-ದೇಶವಾಸಿಗಳಾದ ಜನರು, ಪುರೇ-ನಗರದಲ್ಲಿಯೂ, ಜನಪದೇಷುಚ-ದೇಶಗಳಲ್ಲಿಯೂಸಹ, ಕಥಯಂತಿ-ಪೇಳುತ್ತಾರೆ ॥೧೮॥ ಸುಮಧುರಾಃ-ಮನೋಹರವಾದ ಏತಾಃವಾಚಃ-ಈ ವಾಕ್ಯಗಳು, ಭರತೇನ-ಭರತನಿಂದ, ಸಮೀರಿತಾಃ-ಪೇಳಲ್ಪಟ್ಟವು, ಸುಖೀ, ಸುಖವಂತನಾದ, ರಾಮಃ-ಶ್ರೀರಾಮನು, ತತ್-ಆವಾಕ್ಯವನ್ನು ಶ್ರುತ್ವಾ-ಕೇಳಿ, ಮುದಾ-ಸಂತೋಷದಿಂದ, ಯುಕ್ತಃ-ಕೂಡಿಕೊಂಡವನಾಗಿ, ಸುಖಂ-ಸುಖವಾಗಿ,ಪ್ರಮುಮೋದ-ಸಂತೋಷಿಸುತಿದ್ದನು ॥೧೯॥ ಇತಿಶ್ರೀಮದುತ್ತರರಾಮಾಯಣೇ ಏಕಚತ್ವಾರಿಂಶಸ್ಸರ್ಗಃ.

ಮಹಾಬಾಹುಃ-ಮಹಾಭುಜಪರಾಕ್ರಮಿಯಾದ, ರಾಮಃ-ಶ್ರೀರಾಮನು, ತತಃ-ಬಳಿಕ, ಹೇಮಭೂಷಿತಂ-ಸುವರ್ಣವಡಿವೆಗಳಿಂದಲಂಕೃತವಾದ, ಪುಷ್ಪಕಂ-ಪುಷ್ಪಕವಿಮಾನವನ್ನು, ವಿಸೃಜ್ಯ-ತೊರೆದು, ತದಾ-ಆಸಮಯದಲ್ಲಿ, ಅಶೋಕವನಿಕಾಂ-ಉದ್ಯಾವನವನ್ನು, ಪ್ರವಿವೇಶ-ಹೊಕ್ಕನು ॥೧॥ ಚಂದನಾಗರುಚೂತೈಶ್ಚ -ಚಂದನ-ಕೆಂಪಾದ ಗಂಧದ ವೃಕ್ಷಗಳಿಂದಲೂ, ಅಗರು- ಕಪ್ಪಾಗಿರುವ ಶ್ರೀಗಂಧವೃಕ್ಷಗಳಿಂದಲೂ, ಚೂತೈಶ್ಚ -ಮಾವಿನ ಮರಗಳಿಂದ, ತುಂಗಸಾಲೆಯಕೈರಪಿ - ತುಂಗ-ಪುನ್ನಾಗ ವೃಕ್ಷಗಳಿಂದಲೂ ಸಾಲೆಯಕೈರಪಿ - ರಕ್ತಚಂದನ ವೃಕ್ಷಗಳಿಂದಲೂ, ದೇವದಾರುವನೈಶ್ಚಾಪಿ - ದೇವದಾರುತೋಟಗಳಿಂದಲೂ, ಸಮಂತಾತ್-ಎಲ್ಲಾಕಡೆಯಲ್ಲಿಯೂ, ಉಪಶೋಭಿತಾಂ-ಕಂಗೊಳಸುತಿರುವ, ॥೨॥ ಚಂಪಕಾಶೋಕಪುಂನಾಗಮಧೂಕಪನಸಾಸನೈಃ-ಚಂಪಕ-ಸಂಪಿಗೆವೃಕ್ಷಗಳಿಂದಲೂ, ಅಶೋಕ-ಅಶೋಕವೃಕ್ಷಗಳಿಂದಲೂ, ಪುನ್ನಾಗ-ಸುರಹೊನ್ನೆ ಗಿಡಗಳಿಂದಲೂ, ಮಧೂಕ -ಇಪ್ಪೇಮರಗಳಿಂದಲೂ, ಪನಸ-ಹಲಸಿನ ಮರಗಳಿಂಸಲೂ, ಅಸನೈಃ-ಹೊನ್ನೆ ಮರಗಳಿಂದಲೂ, ವಿಧೂಮಜ್ವಲನಪ್ರಭೈಃ - ವಿಧೂಮ-ಹೊಗೆಯಿಲ್ಲದಿರುವ, ಜ್ವಲನ-ಅಗ್ನಿಯ, ಪ್ರಭೈಃ-ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ, ಪಾರಿಜಾತೈಶ್ಚ -ಪಾರಿಜಾತವೃಕ್ಷಗಳಿಂದಲೂ ಸಹ, ಶೋಭಿತಾಂ-ಕಂಗೊಳಸುತ್ತಿರುವ ॥೩॥ ಹೇಮಸುಪ್ರಭೈಃ-ಅಪರಂಜಿಯಂತೆ ಬಹುಕಾಂತಿಯುಳ್ಳ, ಕರ್ಣಿಕಾರವನೈಶ್ಚೈವ-ಬೆಟ್ಟದಾವರೆಗಳ ವನಗಳಿಂದಲೂ ಪ್ರಿಯಂಗುಭಿಃ-ಪ್ರೇಂಕಣದ ಗಿಡಗಳಿಂದಲೂ, ಕದಂಬೈಶ್ಚ -ಕಚಲು ಗಿಡಗಳಿಂದಲೂ, ತಥಾ-ಹಾಗೆ, ಕುರುವಕೈರಪಿ-ಕೆಂಪುಗೋರಂಟೀ ಗಿಡಗಳಿಂದಲೂ, ಶೋಭಿತಾಂ-ಹೊಳೆಯುತ್ತಿರುವ ॥೪॥

---

ತ್ತಿರುವರು, ಮಾನವರೆಲ್ಲರು ಹೃಷ್ಟವಾಗಿಯೂ ಪುಷ್ಟವಾಗಿಯೂ ಇರುವ ಶರೀರವುಳ್ಳವರಾಗಿಥಾರೆ, ಪುರದಲ್ಲಿರ್ಪ ಜನರಿಗೆಲ್ಲ ಹರ್ಷವು ಹೆಚ್ಚುತ್ತಿರುವದು, ಇಂದ್ರನು ಅಮೃತತುಲ್ಯವಾದ ವರ್ಷವನ್ನು ಕಾಲಕಾಲದಲ್ಲಿ ಸುರಿಸುತ್ತಿರುವನು ಸುಖವಾಗಿ ತಂಗಾಳಿಯೂ ಬೀಸುವದು ಎಲೈ ನರಪತಿಯೆ! ಇಂಥಾ ರಾಜನು ಬಹುಕಾಲವು ನಮಗರಸಾಗಿರಲೆಂದು ಪುರವಾಸಿಗಳು ದೇಶದಲ್ಲಿರುವವರೂ ಸಹಾ ಪೇಳುತ್ತಿರುವರು ಎಂಬದಾಗಿ ಭರತನಿಂದ ಪೇಳಲ್ಪ ವಾಕ್ಯವಂ ಕೇಳಿ ರಘುನಂದನನು, ಸಂತುಷ್ಟಾಂತರಂಗವುಳ್ಳವನಾಗಿ ಸುಖವಾಗಿದ್ದನು ॥೧೯॥

—:·:·✻ ಉತ್ತರರಾಮಾಯಣದಲ್ಲಿನ ೪೧ನೆಯ ಸರ್ಗಂ ಮುಗಿದುದು ✻·:·:—

ಸಮನಂತರಕಾಲದಲ್ಲಿ ಮಹಾ ಭುಜಬಲಶಾಲಿಯಾದ ದಶರಥನಂದನನು ಆ ಪುಷ್ಪಕವಿಮಾನವಂ ಕಳುಹಿಸಿಕೊಟ್ಟು ಚಂದನ, ಅಗರು, ಚೂತ, ತುಂಗ, ಕಾಲೆಯಕ, ದೇವದಾರು, ಚಂಪಕ, ಅಶೋಕ, ಪುನ್ನಾಗ, ಮಧೂತ, ಪನಸ, ಅಸನ, ಪಾರಿಜಾತ, ಕರ್ಣಕಾರ, ಪ್ರಿಯಂಗು,ಕದಂಬ, ಕುರವಕ, ಜಂಬು, ಪಾಟಲೀ, ಕೋವಿದಾರಾದಿವೃಕ್ಷಗಳಿಂದ ಕಂಗೊಳಿಸುತಿರುವದಾಗಿಯೂ, ಸರ್ವದಾ ಪುಷ್ಪಸಮೃದ್ಧಂಗಳಾಗಿ ಫಲಭರಿತವಾಗಿರ್ಪ ಮತ್ತೂ ಮನೋಹರವಾದ ಇನ್ನು ಕಲವೃಕ್ಷಗಳಿಂ ಪ್ರಕಾಶಿಸುತ್ತಿರುವದಾಗಿಯೂ, ದಿವ್ಯವಾದ ಗಂಧರಸಂಗಳುಳ್ಳ ಮತ್ತೂ ಬಲಿತಿರು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಂವೃತಾಮ್ । ಸರ್ವದಾಕುಸುಮೈರನ್ಯೈಃಫಲವದ್ಭಿರ್ಮನೋರಮೈಃ ॥೫॥ ದಿವ್ಯಗಂಧರಸೋಪೇತೈಸ್ತರುಣಾಂಕುರಪ
ಲ್ಲವೈಃ । ತಥೈವತರುಭಿರ್ದಿವ್ಯೈಃಶಿಲ್ಪಿಭಿಃಪರಿಕಲ್ಪಿತೈಃ ॥೬॥ ಚಾರುಪಲ್ಲವಪುಷ್ಪಾಢ್ಯೈರ್ಮತ್ತಭ್ರಮರಸಂಕುಲೈಃ ।
ಕೋಕಿಲೈರ್ಭೃಂಗರಾಜೈಶ್ಚ ನಾನಾವರ್ಣೈಶ್ಚ ಪಕ್ಷಿಭಿಃ ॥೭॥ ಶೋಭಿತಾಂಶತಶಶ್ಚಿತ್ರೈಶ್ಚೂತವೃಕ್ಷಾವತಂಸಕೈಃ ॥೮॥ ಶಾತಕುಂ
ಭನಿಭಾಃ ಕೇಚಿತ್ಕೇಚಿದಗ್ನಿಶಿಖೋಪಮಾಃ । ನೀಲಾಂಜನನಿಭಾಶ್ಚಾನ್ಯೇ ಭಾಂತಿತತ್ರಸ್ಮ ಪಾದಪಾಃ ॥೯॥ ಸುರಭೀಣಿಚಪುಷ್ಪಾ
ಣಿಮಾಲ್ಯಾನಿವಿವಿಧಾನಿಚ । ದೀರ್ಘಿಕಾವಿವಿಧಾಕಾರಾಃಪೂರ್ಣಾಃಪರಮವಾರಿಣಾ ॥೧೦॥ ಮಹಾರ್ಹಮಣಿಸೋಪಾನಾಃ
ಸ್ಫಾಟಿಕಾಂತರಕುಟ್ಟಿಮಾಃ । ಫುಲ್ಲಪದ್ಮೋತ್ಪಲವನಾಶ್ಚಕ್ರವಾಕೋಪಶೋಭಿತಾಃ ॥೧೧॥ ನತ್ಯೂಹರುತಸಂಘುಷ್ಟಾಃ
ಹಂಸಸಾರಸನಾದಿತಾಃ । ತರುಭಿಃಪುಷ್ಪಶಬಳೈಸ್ತೀರಜೈರುಪಶೋಭಿತಾಃ ॥೧೨॥ ಪ್ರಾಸಾದೈರ್ವಿವಿಧಾಕಾರೈಶ್ಶೋಭಿತಾ

---

ಜಂಬೂಭಿಃ–ನೇರಳೆಮರಗಳಿಂದಲೂ, ಪಾಟಲೀಭಿಶ್ಚ–ಪಾದಿರೀಗಿಡಗಳಿಂದಲೂ, ಕೋವಿದಾರೈಶ್ಚ–ಕೆಂಪುಕಾಂಚಿವಾಳದ ಗಿಡಗಳಿಂದಲೂಸಹ, ಸಂವೃತಾಂ–
ವ್ಯಾಪ್ತವಾದ, ಸರ್ವದಾ–ಯಾವಾಗಲು, ಕುಸುಮೈಃ–ಪುಷ್ಪಿಸಿರುವ, ಫಲವದ್ಭಿಃ–ಹಣ್ಣುಗಳುಳ್ಳ, ಮನೋರಮೈಃ–ಮನೋಹರವಾದ, ಅನ್ಯೈಃ–ಮ
ತ್ತು ಕೆಲವೃಕ್ಷಗಳಿಂದಲೂ ॥೫॥ ದಿವ್ಯಗಂಧರಸೋಪೇತೈಃ–ಉತ್ತಮವಾದ ಗಂಧವುಳ್ಳ ರಸಗಳಿಂದೊಡಗೂಡಿದ, ತರುಣಾಂಕುರಪಲ್ಲವೈಃ–ಬಲಿತಿರುವ
ಮೊಳಕೆಗಳೂ ಚಿಗುರುಗಳೂಉಳ್ಳ, ಶಿಲ್ಪಿಭಿಃ–ಋತುಗಳಿಂದ, ಅಥವಾ ದೋಹಳಕವೇ ಮುಂತಾದವುಗಳಿಂದ, ಪರಿಕಲ್ಪಿತೈಃ–ಕಲ್ಪಿಸಲ್ಪಟ್ಟ, ದಿವ್ಯೈಃ–ಉ
ತ್ತಮವಾದ, ತರುಭಿಃ–ವೃಕ್ಷಗಳಿಂದಲೂ, ತಥೈವ–ಹಾಗೆಯೆ, ಚಾರುಪಲ್ಲವ ಪುಷ್ಪಾಢ್ಯೈಃ–ಸೊಗಸಾಗಿರುವ ಚಿಗುರುಗಳಿಂದಲೂ ಪುಷ್ಪಗಳಿಂದಲೂ ಸ
ಹ ತುಂಬಿರುವ, ಮತ್ತ ಭ್ರಮರಸಂಕುಲೈಃ–ಮದಿಸಿರುವ ದುಂಬಿಗಳಿಂದ ವ್ಯಾಪ್ತವಾದ, ಕೋಕಿಲೈಃ–ಕೋಗಿಲೆಗಳಿಂದಲೂ, ಭೃಂಗರಾಜೈಶ್ಚ ಕುಕ್ಕುಟೀ
ಹಕ್ಕಿಗಳಿಂದಲೂ, ನಾನಾವರ್ಣೈಃ–ವಿವಿಧಬಣ್ಣಗಳುಳ್ಳ, ಪಕ್ಷಿಭಿಶ್ಚ–ಹಕ್ಕಿಗಳಿಂದಲೂ, ಚೂತವೃಕ್ಷಾವತಂಸಕೈಃ–ಚೂತವೃಕ್ಷವೆ ಶಿರೋಭೂಷಣವಾಗಿರುವ
ಶತಶಃ–ಅನೇಕವಾದ, ಚಿತ್ರೈಶ್ಚ–ಚಿತ್ರಗಳಿಂದಲೂ ಸಹ, ಶೋಭಿತಾಂ – ಕಂಗೊಳಿಸುತ್ತಿರುವ, (ಅಶೋಕವನಿಕಾಂ–ಶೋಕನಾಶಕವಾದ ಉದ್ಯಾನವನನ್ನು
ಪ್ರವಿವೇಶ–ಹೊಕ್ಕನು) ॥೮॥ ತತ್ರ–ಆವನದಲ್ಲಿ, ಕೇಚಿತ್ಪಾದಪಾಃ–ಕೆಲವೃಕ್ಷಗಳು, ಶಾತಕುಂಭನಿಭಾಃ–ಭಂಗಾರಿನ ಸದೃಸವಾಗಿ, ಭಾಂತಿಸ್ಮ–ಹೊಳೆಯುತ್ತಿ
ದ್ದವು, ಕೇಚಿತ್–ಕೆಲವು, ಅಗ್ನಿಶಿಖೋಪಮಾಃ–ಅಗ್ನಿಜ್ವಾಲೆಗೆ ಸಮಾನವಾಗಿ ಪ್ರಕಾಶಿಸುತ್ತಿದ್ದವು, ಅನ್ಯೇಚ–ಮತ್ತುಕೆಲವಾದರೆ, ನೀಲಾಂಜನನಿಭಾಃ–
ಕರೀಕಾಡಿಗೆಗೆ ಸಮಾನವಾಗಿ, ಭಾಂತಿಸ್ಮ–ಹೊಳೆಯುತ್ತಿದ್ದವು ॥೯॥ ಸುರಭೀಣಿ–ಪರಿಮಳಯುಕ್ತವಾದ, ಪುಷ್ಪಾಣಿಚ–ಹುವ್ವುಗಳೂನು, ವಿವಿಧಾನಿ–
ನಾನಾ ಬಗೆಗಳಾದ, ಮಾಲ್ಯಾನಿಚ–ಪುಷ್ಪಮಾಲಿಕೆಗಳೂನು, ಪರಮವಾರಿಣಾ–ಉತ್ತಮವಾದ ಉದಕದಿಂದ, ಪೂರ್ಣಾಃ– ತುಂಬಿರುವ, ವಿವಿಧಾಕಾ
ರಾಃ–ನಾನಾತರಹವಾಗಿರುವ, ಸ್ಫಾಟಿಕಾಂತರಕುಟ್ಟಿಮಾಃ–ಸ್ಫಟಿಕಮಣಿವಿಕಾರವಾದ ನಿಬದ್ಧಭೂಮಿಗಳುಳ್ಳ, ಮಹಾರ್ಹಮಣಿಸೋಪಾನಾಃ–ಅಮೂಲ್ಯರ
ತ್ನನಿರ್ಮಿತವಾದ ಸೋಪಾನಗಳುಳ್ಳ, , ಫುಲ್ಲಪದ್ಮೋತ್ಪಲವನಾಃ–ವಿಕಸಿತವಾದ ಕಮಲಗಳ ಮತ್ತು ನೈದಿಲೆಗಳ ವನವುಳ್ಳ, ಚಕ್ರವಾಕೋಪಶೋಭಿ
ತಾಃ–ಚಕ್ರವಾಕಪಕ್ಷಿಗಳಿಂದ ಕಂಗೊಳಿಸುತ್ತಿರುವ, ನತ್ಯೂಹರುತಸಂಘುಷ್ಟಾಃ–ಪಕ್ಷಿವಿಶೇಷಗಳ ಶಬ್ದಗಳಿಂದ ವ್ಯಾಪ್ತವಾದ, ಹಂಸಸಾರಸನಾದಿತಾಃ– ಹಂಸ
ಪಕ್ಷಿಗಳಿಂದ ಸಾರಸಪಕ್ಷಿಗಳಿಂದಲೂ, ಶಬ್ದಾಯಮಾನವಾದ, ಪುಷ್ಪಶಬಳೈಃ–ಹುವ್ವುಗಳಿಂದ ವ್ಯಾಪ್ತವಾದ, ತೀರಜೈಃ–ಧಡದಲ್ಲಿ ಪುಟ್ಟಿದ, ತರುಭಿಃ– ವೃಕ್ಷ
ಗಳಿಂದ, ಉಪಶೋಭಿತಾಃ–ಪ್ರಕಾಶಿಸುತ್ತಿರುವ, ವಿವಿಧಾಕಾರೈಃ–ನಾನಾಬಗೆಯಾಗಿರುವ ಪ್ರಾಸಾದೈಃ–ಉಪ್ಪರಿಗೆಗಳಿಂದಲೂ, ವಿವಿಧಾಕಾರೈಃ–ನಾನಾವಿಧ

---

ವ ಮೊಲಕೆಗಳೂ ಪಲ್ಲವಗಳೂ ಉಳ್ಳ ಮತ್ತು ಕೆಲವೃಕ್ಷಶ್ರೇಷ್ಠಗಳಿಂದ ವ್ಯಾಪ್ತವಾದಂಥಾದ್ದಾಗಿಯೂ, ಸೊಗಸಾ
ಗಿರುವ ಚಿಗುರುಗಳಿಂದಲೂ ಪುಷ್ಪಗಳಿಂದಲೂ ಸಹ ಸಮೃದ್ಧವಾಗಿರ್ಪ,ಮತ್ತು ಮದಿಸಿದ ದುಂಬಿಗಳಿಂದ ಸಂಕುಲವಾ
ದ, ಮತ್ತು ಕೆಲವೃಕ್ಷಗಳಿಂದಲೂ, ಕೋಗಿಲೆ, ಭೃಂಗರಾಜ ಮುಂತಾದ ನಾನಾ ಬಣ್ಣವಾದ ಪಕ್ಷಿಗಳಿಂದಲೂ, ಬಗೆಬ
ಗೆಯಾದ ಚಿತ್ರಗಳಿಂದಲೂ ಸಹ ಕಂಗೊಳಿಸುತ್ತಿರುವ, ಮತ್ತೂ ಶೋಕಪರಿಹಾರಕವಾದ ಉದ್ಯಾನವನವಂ ಹೊಕ್ಕ
ನು ॥೮॥ ಆ ಅಶೋಕವನದಲ್ಲಿರುವ ವೃಕ್ಷಂಗಳಲ್ಲಿ ಕೆಲವು ಅಪರಂಜಿಯ ಬಣ್ಣವಾಗಿಯು ಮತ್ತು ಕೆಲವು ಅಗ್ನಿಜ್ವಾ
ಲೆಯು ತೆರದಿ ಕೆಂಪಾಗಿಯೂ ಇನ್ನು ಕೆಲವು ಕಾಡಿಗೆಯಂತೆ ಕಪ್ಪಾಗಿಯೂ ಹೊಳೆಯುತ್ತಿದ್ದವು ಇದಲ್ಲದೇ ಪರಿಮಳ
ಯುಕ್ತವಾದ ಪುಷ್ಪಗಳೂ ಮತ್ತೂ ವಿವಿಧವಾದ ಪೂಮಾಲಿಕೆಗಳು ಸಹ ಇರುವಂಥಾದ್ದಾಗಿತ್ತು, ನಾನಾ ವಿಕಾರವಾ
ಗಿಯೂ, ಉತ್ತಮವಾದ ಉದಕದಿಂದ ಸಂಪೂರ್ಣವಾಗಿಯೂ, ಅಮೂಲ್ಯವಾದ ರತ್ನಗಳಿಂದ ಮಾಡಲ್ಪಟ್ಟ ಪಾವಟಿಗೆ
ಗಳುಳ್ಳದ್ದಾಗಿಯೂ, ಸ್ಫಟಿಕಮಣಿಮಯವಾದ ನಿಬದ್ಧಭೂಮಿಗಳುಳ್ಳದ್ದಾಗಿಯೂ, ವಿಕಸಿತವಾದ ಕಮಲಗಳೂ ನೈದಿ
ಲೆಗಳೂ ಉಳ್ಳ ವನಗಳುಳ್ಳದ್ದಾಗಿಯೂ, ಚಕ್ರವಾಕಪಕ್ಷಿಗಳಿಂದ ಕಂಗೊಳಿಸುತ್ತಿರುವ ದಾಗಿಯೂ, ನತ್ಯೂಹಗಳೆಂಬ
ಪಕ್ಷಿ ವಿಶೇಷಗಳಿಂದ ವ್ಯಾಪ್ತವಾದದ್ದಾಗಿಯೂ, ಹಂಸೆಗಳಿಂದಲೂ ಸಾರಸ ಪಕ್ಷಿಗಳಿಂದಲೂ ಸಹ ಶಬ್ದಾಯಮಾ
ನವಾಗಿ ಧಡದಲ್ಲಿರುವ ವೃಕ್ಷಗಳಿಂದ ಹೊಳೆಯುತ್ತಿರುವದಾಗಿಯೂ, ನಾನಾ ವಿಧವಾದ ಪ್ರಾಸಾದಗಳಿಂದ ಪ್ರಕಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ಚ ಶಿಲಾತಲ್ಪೈಃ ॥೧೩॥ ತತ್ರತತ್ರವನೋದ್ದೇಶೈರ್ವೈಡೂರ್ಯ್ಯಮಣಿಸನ್ನಿಭೈಃ । ಶಾದ್ವಲೈಃ ಪರಮೋಪೇತಾಃ ಪುಷ್ಪಿತದ್ರುಮಸಂಯುತಾಃ ॥೧೪॥ ತತ್ರ ಸಂಘರ್ಷಜಾತಾನಾಂ ವೃಕ್ಷಾಣಾಂ ಪುಷ್ಪಶಾಲಿನಾಮ್। ಪ್ರಸ್ತರಾಃ ಪುಷ್ಪಶಬಲಾಃ ನಭಸ್ತಾರಾಗಣೈರಿವ॥ ನಂದನಂ ತು ಯಥೇಂದ್ರಸ್ಯ ಬ್ರಾಹ್ಮಂ ಚೈತ್ರರಥಂ ಯಥಾ । ತಥಾರೂಪಂ ಚ ರಾಮಸ್ಯ ಕಾನನಂ ಸನ್ನಿವೇಶಿತಮ್ ॥೧೬॥ ಬಹ್ವಾಸನಕುಥೋಪೇತಾಂ ಪುಷ್ಪಿತದ್ರುಮಸಂಯುತಾಮ್ । ಅಶೋಕವನಿಕಾಂ ಸ್ಫೀತಾಂ ಪ್ರವಿಶ್ಯ ರಘುನಂದನಃ ॥೧೭॥ ಆಸನೇ ಚ ಶುಭಾಕಾರೇ ಪುಷ್ಪಸ್ತಬಕಶೋಭಿತೇ । ಕುಥಾಸ್ತರಣಸಂವೀತೇ ರಾಮಃ ಸನ್ನಿಷಸಾದ ಹ ॥೧೮॥ ಸೀತಾಂ ಸಂಗೃಹ್ಯ ಬಾಹುಭ್ಯಾಂ ಮಧು ಮೈರೇಯಮುತ್ತಮಮ್ । ಪಾಯಯಾಮಾಸ ಕಾಕುತ್ಸ್ಥಃ ಶಚೀಮಿಂದ್ರೋ ಯಥಾಮೃತಮ್ ॥೧೯॥ ಮಾಂಸಾನಿ ಚ ವಿಚಿತ್ರಾಣಿ ಫಲಾನಿ ವಿವಿಧಾನಿ ಚ । ರಾಮಸ್ಯಾಭ್ಯವಹಾರಾರ್ಥಂ ಕಿಂಕರಾಸ್ತೂರ್ಣಮಾನಯನ್ ॥೨೦॥ ಉಪನೃತ್ಯಂತಿ ರಾ

---

ವಾಗಿರುವ, ಶಿಲಾತಲ್ಪೈಶ್ಚ-ಪಾಷಾಣಪ್ರದೇಶಗಳಿಂದಲೂ, ಶೋಭಿತಾಃ-ಹೊಳೆಯುತ್ತಿರುವ, ತತ್ರತತ್ರವನೋದ್ದೇಶೈಃ-ಆ ಯಾವನಗಳಪ್ರಾಂತ್ಯದಲ್ಲಿ, ವೈಡೂರ್ಯಮಣಿ ಸನ್ನಿಭೈಃ-ವೈಡೂರ್ಯಮಣಿಗಳಿಗೆ ಸಮಾನವಾಗಿರುವ, ಶಾದ್ವಲೈಃ-ಪೈರುಗಳುಳ್ಳ ಭೂಮಿಗಳಿಂದ, ಪರಮೋಪೇತಾಃ-ಅಧಿಕವಾಗಿ ಯುಕ್ತವಾದ, ಪುಷ್ಪಿತದ್ರುಮಸಂಯುತಾಃ-ಪುಷ್ಪಿಸಿರುವ ವೃಕ್ಷಗಳಿಂದ ಯುಕ್ತವಾದ, ವಾಪೀಶ್ಚ-ಕಲ್ಲುಕಟ್ಟಿಭಾವಿಗಳೂನು, ಭಾಂತಿಸ್ಮ-ಪ್ರಕಾಶಿಸುತ್ತಿದ್ದವು ॥೧೪॥ ತತ್ರ-ಆ ಅಶೋಕವನದಲ್ಲಿ, ಸಂಘರ್ಷಜಾತಾನಾಂ-ಸ್ಪರ್ಧೆಯಿಂದ ಹುಟ್ಟಿದ, ಪುಷ್ಪಶಾಲಿನಾಂ-ಪುಷ್ಪಗಳಿಂದೊಪ್ಪುತ್ತಿರುವ, ವೃಕ್ಷಾಣಾಂ-ವೃಕ್ಷಗಳ ಅಧಸ್ತಾತ್-ಅಧೋಭಾಗದಲ್ಲಿ) ಪ್ರಸ್ತರಾಃ-ಮಲಗುವದಕ್ಕಾಗಿ ಮಾಡಲ್ಪಟ್ಟ ಶಿಲೆಗಳು, ಪುಷ್ಪಶಬಲಾಃ-ಪುಷ್ಪಗಳಿಂದ ವ್ಯಾಪ್ತವಾದಂಥಾದ್ದಾಗಿ, ತಾರಾಗಣೈಃ-ನಕ್ಷತ್ರಗುಂಪುಗಳಿಂದ, ನಭಃಇವ-ಅಂತರಿಕ್ಷದಂತೇ, ಭಾಂತಿ-ಹೊಳೆಯುತ್ತಿದ್ದವು ॥೧೫॥ ಇಂದ್ರಸ್ಯ-ದೇವೇಂದ್ರನ, ನಂದನಂತು-ನಂದನ ವನವಾದರೆ, ಯಥಾ-ಹ್ಯಾಗೋ, ಬ್ರಾಹ್ಮಂ-ಬ್ರಹ್ಮಸಂಬಂಧವಾದ, ಚೈತ್ರರಥಂ-ಚೈತ್ರರಥವೆಂಬವನವು,ಯಥಾ-ಹ್ಯಾಗೋ, ತಥಾ-ಹಾಗೆ, ರೂಪಂ-ಆಕಾರವುಳ್ಳಂತೆ, ರಾಮಸ್ಯ-ಶ್ರೀರಾಮನ, ವನಂ-ಉದ್ಯಾನವನವು, ಸನ್ನಿವೇಶಿತಂ-ಮಾಡಲ್ಪಟ್ಟಿತ್ತು ॥೧೬॥ ರಘುನಂದನಃ-ರಘುವಂಶೋತ್ಪನ್ನನಾದ, ರಾಮಃ-ಶ್ರೀರಾಮನು, ಬಹ್ವಾಸನಕುಥೋಪೇತಾಂ-ಬಹು-ಅನೇಕವಾದ, ಆಸನ-ಪೀಠಗಳಿಂದಲೂ, ಕುಥ-ದರ್ಭಾಸ್ತರಣಗಳಿಂದಲೂ, ಉಪೇತಾಂ-ಕೂಡಿಕೊಂಡಿರುವ, ಪುಷ್ಪಿತದ್ರುಮಭೂಷಿತಾಂ-ವಿಕಸಿತವಾದಪುಷ್ಪಗಳುಳ್ಳ ವೃಕ್ಷಗಳಿಂದಲಂಕೃತವಾದ, ಸ್ಫೀತಾಂ-ಅತಿಶಯವಾದ, ಅಶೋಕವನಿಕಾಂ-ಅಶೋಕವನವನ್ನು, ಪ್ರವಿಶ್ಯ-ಪ್ರವೇಶವನ್ನುಮಾಡಿ, ಪುಷ್ಪಸ್ತಬಕಶೋಭಿತೇ-ಪುಷ್ಪಗಳಗೊಂಚಲುಗಳಿಂದ ಪ್ರಕಾಶಿಸುತ್ತಿರುವ, ಕುಥಾಸ್ತರಣಸಂವೀತೇ-ದರ್ಭಾಸನಗಳಿಂದವ್ಯಾಪ್ತವಾದ, ಶುಭಾಕಾರೇ-ಶುಭಕರವಾದ ಆಕಾರವುಳ್ಳ, ಆಸನೇ-ಪೀಠದಲ್ಲಿ;ಸನ್ನಿಷಸಾದಹ-ಕುಳಿತುಕೊಂಡನು॥೧೮॥ಕಾಕುತ್ಸ್ಥಃ-ಶ್ರೀರಾಮನು, ಸೀತಾಂ-ಸೀತಾದೇವಿಯನ್ನು, ಬಾಹುಭ್ಯಾಂ-ಭುಜಗಳಿಂದ, ಸಂಗೃಹ್ಯ-ಹಿಡಿದುಕೊಂಡು, ಉತ್ತಮಂ-ಶ್ರೇಷ್ಠವಾದ, ಮೈರೇಯಕಂ-ಆರೇಹುವ್ವು ಬೆಲ್ಲ ಉದುಕವು, ಇವುಗಳಿಂದ ಮಾಡಲ್ಪಟ್ಟ, ಮಧು-ಮದ್ಯವನ್ನು, ಇಂದ್ರಃ-ದೇವೇಂದ್ರನು, ಶಚೀಂ-ಶಚೀದೇವಿಯನ್ನು, ಸಂಗೃಹ್ಯ-ಗ್ರಹಿಸಿ, ಅಮೃತಂ-ಅಮೃತವನ್ನು, ಯಥಾಪಾಯಯಾಮಾಸ-ಹ್ಯಾಗೆ ಪಾನಮಾಡಿಸಿದನೋ, ತಥಾ-ಹಾಗೆ, ಪಾಯಯಾಮಾಸ-ಪಾನಮಾಡಿಸಿದನು ॥೧೯॥ ವಿಚಿತ್ರಾಣಿ-ನಾನಾವಿಧವಾಗಿರುವ, ಮಾಂಸಾನಿಚ-ಮಾಂಸಗಳನ್ನೂ, ವಿವಿಧಾನಿ-ನಾನಾಬಗೆಗಳಾದ, ಫಲಾನಿಚ-ಹಣ್ಣುಗಳನ್ನೂ ಸಹ, ಕಿಂಕರಾಃ-ಚಾಕರರು, ರಾಮಸ್ಯ-ಶ್ರೀರಾಮನ, ಅಭ್ಯವಹಾರಾರ್ಥಂ-ಫಲಹಾರಕ್ಕೋಸ್ಕರ, ತೂರ್ಣಂ-ಜಾಗ್ರತೆಯಾಗಿ, ಆನಯನ್-ತಂದುಕೊಟ್ಟರು ॥೨೦॥ನೃ

---

ಶಿಸುತ್ತಿರುವದಾಗಿಯೂ ವೈಡೂರ್ಯಮಣಿಗಳಂತಿರುವ ಪೈರುಗಳಿಂದ ಸುತ್ತು ಬಾರಲ್ಪಟ್ಟದ್ದಾಗಿಯೂ, ಇರುವ ಕಲ್ಲುಕಟ್ಟಿಭಾವಿಗಳುಅಲ್ಲಲ್ಲಿಯಿದ್ದವು ॥ ೧೪ ॥ ಆ ವನದಲ್ಲಿ ಪರಸ್ಪರ ಸ್ಪರ್ಧೆಯಿಂದ ಪುಟ್ಟಿದ ಮತ್ತೂ ಪುಷ್ಪಿಸಿರುವ ವೃಕ್ಷಗಳ ಕುಸುಮಗಳಿಂದ ವ್ಯಾಪ್ತವಾದ ಪಾಷಾಣಗಳು, ನಕ್ಷತ್ರ ತಂಡಗಳಿಂದ ಅಂತರಿಕ್ಷವು ಕಂಗೊಳಿಸುವಂತೆ ಕಂಗೊಳಿಸುತಿದ್ದವು, ॥ ೧೫ ॥ ಇಂದ್ರನ ಉದ್ಯಾನ ವನವಾದ ನಂದನವನವು ಹ್ಯಾಗೋ, ಮತ್ತು ಚತುರ್ಮುಖನ ಸಂಬಂಧವಾದ ಚೈತ್ರರಥವೆಂಬ ವನವು ಯಾವ ರೀತಿಯಾಗಿರುವದೋ, ಅಂತಾರೂಪವುಳ್ಳಂತೆ ಆ ಶ್ರೀರಾಮನ ಉದ್ಯಾನವನವು ನಿರ್ಮಿಸಲ್ಪಟ್ಟಿತು, ॥೧೬॥ ಆ ರಘುಕುಲತಿಲಕನು, ನಾನಾ ಬಗೆಗಳಾದ ಪೀಠಂಗಳಿಂದಲು ದರ್ಭಾಸ್ತರಣಗಳಿಂದಲು ಒಡಗೂಡಿದಂಥಾದ್ದಾಗಿಯು, ಸಂಜಾತ ಪುಷ್ಪಗಳುಳ್ಳ ವೃಕ್ಷಗಳಿಂದ ಯುಕ್ತವಾದದ್ದಾಗಿಯು ಇರುವ ಅಶೋಕವನವಂ ಹೊಕ್ಕು, ಪೂ ಗುಚ್ಛಗಳಿಂದ ಕಂಗೊಳಿಸುತ್ತಿರುವ ಮತ್ತು ದರ್ಭಾಸನದಿಂದ ಸಂವೀತವಾದ ಮತ್ತು ಶುಭಕರವಾಗಿರ್ಪ ಆಸನದಲ್ಲಿ ಕುಳಿತುಕೊಂಡು, ಸೀತಾ ದೇವಿಯಂ ಭುಜಗಳಿಂದ ಪಿಡಿದು ಕೊಂಡು, ದೇವೇಂದ್ರನು ಶಚೀದೇವಿಯಂ ಪರಿಗ್ರಹಿಸಿ ಅಮೃತಪ್ರಾಶನೆಯಂ ಮಾಡಿಸಿದ ತೆರದಿ, ಮದ್ಯವನ್ನು ಮತ್ತು ಆರೇ ಹುವ್ವು ಬೆಲ್ಲನೀರು ಇವುಗಳಂ ಬೆರಸಿ ಮಾಡಿದ ಮದ್ಯವಿಶೇಷವನ್ನು ಸಹ ಪಾನ ಮಾಡಿಸಿದಂಥಾವನಾದನು ॥ ಆಬಳಿಕ ಪರಿಚಾರಕರು ಶ್ರೀರಾಮನ ಭೋಜನಾರ್ಥವಾಗಿ ವಿಚಿತ್ರವಾದ ಮಾಂಸಗಳನ್ನು, ನಾನಾವಿಧವಾದ ಫಲಗಳನ್ನು ಸಹ ತ್ವರಿತವಾಗಿ ತಂದು ಕೊಟ್ಟರು ॥೨೦ ॥ ನರ್ತನದಲ್ಲಿಯು ಗಾನವಂ ಗೈಯುವದರಲ್ಲಿಯು ಸಹ ನಿಪುಣ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜಾನಂನೃತ್ತಗೀತವಿಶಾರದಾಃ । ಬಾಲಾಶ್ಚ ರೂಪವತ್ಯಶ್ಚ ಸ್ತ್ರಿಯಃಪಾನವಶಾನುಗಾಃ ॥ ಏವಂರಾಮೋಮುದಾಯುಕ್ತಸ್ಸೀತಾಂಸುರುಚಿರಾನನಾಮ್ । ರಮಯಾಮಾಸವೈದೇಹೀಮಹನ್ಯಹನಿದೇವವತ್ ॥೧೧॥ ತಥಾತುರಮಮಾಣಸ್ಯತಸ್ಯ ಸಂಶ್ಯೈಶಿರಶ್ಶುಭಃ । ಅತ್ಯಕ್ರಾಮನ್ನರೇಂದ್ರಸ್ಯರಾಘವಸ್ಯಮಹಾತ್ಮನಃ ॥೧೨॥ ಪೂರ್ವಾಹ್ಣೇ ಪೌರಕಾರ್ಯಾಣಿಕೃತ್ವಾ ಧರ್ಮೇಣಧರ್ಮವಿತ್ । ಶೇಷಂದಿವಸಭಾಗಾರ್ಧಮಂತಃಪುರಗತೋಭವತ್ ॥೧೪॥ ಸೀತಾಚದೇವಕಾರ್ಯಾಣಿಕೃತ್ವಾ ಪೌರ್ವಾಹ್ಣಿಕಾನಿತು । ಶ್ವಶ್ರೂಣಾಮವಿಶೇಷಣಸರ್ವಾಸಾಂಪ್ರಾಂಜಲಿಸ್ತಥಾ ॥೧೫॥ ತತೋರಾಮಮುಪಾಗಚ್ಛದ್ವಿಚಿತ್ರಬಹುಭೂಷಣಾ । ತ್ರಿವಿಷ್ಟಪೆ ಸಹಸ್ರಾಕ್ಷಮುಪವಿಷ್ಟಂಶಚೀಯಥಾ ॥೧೬॥ ದೃಷ್ಟ್ವಾತುರಾಘವಃಪತ್ನೀಂಕಲ್ಯಾಣೇನಸಮನ್ವಿತಾಮ್ । ಪ್ರಹರ್ಷಮತುಲಂಲೇಭೆಸಾಧುಸಾಧ್ವಿತಿಚಾಬ್ರವೀತ್ ॥೧೭॥ ಅಪತ್ಯಲಾಭೋವೈದೇಹಿಮಮಾಯಂಸಮುಪಸ್ಥಿತಃ । ಕಿಮಿಚ್ಛಸಿಹಕಃಕಾಮೊ

---

ತ್ತಗೀತವಿಶಾರದಾಃ – ನರ್ತನದಲ್ಲಿ ಗಾನದಲ್ಲಿಯೂ ಪಂಡಿತರಾದ, ರೂಪವತ್ಯಶ್ಚ – ಸುರೂಪಿಗಳೂ ಆದ, ಬಾಲಾಶ್ಚ – ಬಾಲಕೀಯ್ಯರೂ ಆದ, ಸ್ತ್ರಿಯಃ – ಸ್ತ್ರೀಯರು, ಪಾನವಶಾನುಗಾಃ – ಪಾನದಿಂದ ವ್ಯಮರತರವರಾಗಿ, ರಾಜಾನಮುಪ – ರಾಜಸನ್ನಿಧಾನದಲ್ಲಿ, ನೃತ್ಯಂತಿ – ನರ್ತನಮಾಡುತಿದ್ದರು ॥ ೧೧ ॥ ಏವಂ – ಈ ಪರಿಯಾಗಿ, ರಾಮಃ – ಶ್ರೀರಾಮನು, ಮುದಾ – ಸಂತೋಷದಿಂದ, ಯುಕ್ತಃ – ಕೂಡಿಕೊಂಡವನಾಗಿ, ಮುಚಿರಾನನಾಂ – ಸಂತುಷ್ಟವಾದ ಮುಖವುಳ್ಳ, ವೈದೇಹೀಂ – ಜನಕರಾಜನ ಕುವರಿಯಾದ, ಸೀತಾಂ – ಸೀತಾದೇವಿಯನ್ನು, ದೇವವತ್ – ದೇವರಂತೆ – ಅಹನ್ಯಹನಿ – ಪ್ರತಿದಿನದಲ್ಲಿಯು, ರಮಯಾಮಾಸ, ರಮಿಸುವಂತೆ ಮಾಡಿಸಿದನು ॥೧೨॥ ತಥಾ – ಆ ರೀತಿಯಾಗಿ, ರಮಮಾಣಸ್ಯ – ರಮಿಸುತ್ತಿರುವ, ನರೇಂದ್ರಸ್ಯ – ರಾಜನಾದ, ಮಹಾತ್ಮನಃ – ಮಹಾಮನಸ್ವಿಯಾದ, ತಸ್ಯ – ರಾಘವಸ್ಯ – ಆ ಶ್ರೀರಾಮನಿಗೆ, ಏವಂ – ಈ ಪರಿಯಾಗಿ, ಶುಭಂ – ಶುಭಕರವಾದ, ಶೈಶಿರಃ – ಶಿಶಿರಋತುವಿನಕಾಲವು, ಅತ್ಯಕ್ರಾಮತ್ – ಕಳದುಹೋಯಿತು ॥ ೧೩ ॥ ಧರ್ಮವಿತ್ – ಧರ್ಮಜ್ಞನಾದ ಶ್ರೀರಾಮನು, ಪೂರ್ವಾಹ್ಣೇ – ಮಧ್ಯಾಹ್ನದೊಳಗಾಗಿ, ಧರ್ಮೇಣ – ಧರ್ಮದಿಂದ, ಪೌರಕಾರ್ಯಾಣಿ – ಪಟ್ಟಣಸ್ಥರ ಕಾರ್ಯಗಳನ್ನು, ಕೃತ್ವಾ – ಮಾಡಿ, ಶೇಷಂ – ಉಳಿದಿರುವ, ದಿವಸಭಾಗಾರ್ಧಂ ಹಗಲಿನ ಅರ್ಧಭಾಗದಲ್ಲಿ, ಅಂತಃಪುರಚರಃ – ರಾಣೀವಾಸಸ್ಥಳದಲ್ಲಿ ತಿರುಗುವನು, ಅಭವತ್ – ಆದನು ॥೧೪॥ ಸೀತಾಚ – ಸೀತಾದೇವಿಯು ಸಹ, ಪೌರ್ವಾಹ್ಣಿಕಾನಿ – ಪೂರ್ವಾಹ್ಣದಲ್ಲಿ ಮಾಡತಕ್ಕ, ದೇವಕಾರ್ಯಾಣಿತು – ದೇವಕಾರ್ಯಗಳನ್ನಾದರೆ, ಕೃತ್ವಾ – ಮಾಡಿ, ಸರ್ವಾಸಾಂ – ಸಮಸ್ತರಾದ, ಶ್ವಶ್ರೂಣಾಂ – ಅತ್ತೆಯರಿಗೆ, ಅವಿಶೇಷೇಣ – ಏಕರೀತಿಯಾಗಿ, ಪ್ರಾಂಜಲಿಃ – ಅಂಜಲಿಬದ್ಧಳಾಗಿ, ತಥಾ – ಹಾಗೆ, ಕೃತ್ವಾ – ಮಾಡಿ, ವಿಚಿತ್ರಕೃತಭೂಷಣಾ – ಆಶ್ಚರ್ಯಕರವಾಗಿ ಮಾಡಲ್ಪಟ್ಟ ಆಭರಣಗಳುಳ್ಳವಳಾಗಿ, ತತಃ – ಬಳಿಕ, ರಾಮಂ – ಶ್ರೀರಾಮನನ್ನು, ತ್ರಿವಿಷ್ಟಪೆ – ಸ್ವರ್ಗದಲ್ಲಿ, ಉಪವಿಷ್ಟಂ – ಕುಳಿತಿರುವ, ಸಹಸ್ರಾಕ್ಷಂ – ದೇವೇಂದ್ರನನ್ನು, ಶಚೀಯಥಾ – ಶಚೀದೇವಿಯಂತೆ, ಉಪಾಗಚ್ಛತ್ – ಸಮೀಪದಲ್ಲಿ ಬಂದಳು ॥೧೬॥ ರಾಘವಃ – ಶ್ರೀರಾಮನು, ಕಲ್ಯಾಣೇನ – ಶುಭದಿಂದ, ಸಮನ್ವಿತಾಂ – ಕೂಡಿಕೊಂಡಿರುವ, ಪತ್ನೀಂ – ಸತಿಯನ್ನು, ದೃಷ್ಟ್ವಾತು – ಕಾಣುತಲೆ, ಅತುಲಂ – ಅಸದೃಶವಾದ, ಪ್ರಹರ್ಷಂ – ಸಂತೋಷವನ್ನು, ಲೇಭೆ – ಹೊಂದಿದನು, ಸಾಧುಸಾಧ್ವಿತಿ – ಬಹುಚನ್ನಾಗಿ ಥೆಯೆಂದು, ಅಬ್ರವೀಚ್ಚ – ಹೇಳಲೂ ಹೇಳಿದನು ॥೧೭॥ ಹೆವರಾನನೆ – ಎಲೈ ಸುಮುಖಿಯೆ, ಹೆವೈದೇಹೀ – ಎಲೈ ಮಿಥಿಲರಾಜಪುತ್ರಿಯೆ, ಮಮ – ನನಿಗೆ, ಅಯಮಪತ್ಯಲಾಭಃ – ಈ ಸಂತಾನಪ್ರಾಪ್ತಿಯು, ಸಮುಪಸ್ಥಿತಃ – ಸನಿಹವರ್ತಿಯಾಗಿಥೆ, ಕಿಮಿಚ್ಛಸಿ – ಯೇನಪೇಕ್ಷಿಸುತ್ತಿ, ಕೇಕಾಮಃ – ಯಾವಕೋರಿಕೆಯು, ಸ

---

ರಾದಂಥಾವರಾಗಿಯು, ರೂಪವತಿಗಳಾಗಿಯು, ಬಾಲ ವಯಸ್ಸುಳ್ಳವರಾಗಿಯು ಇರುವ ಸ್ತ್ರೀಯರು ಮದ್ಯ ಪಾನದಿಂದ ವ್ಯಮರತವರಾಗಿ, ಒಡೆಯನಾದ ಶ್ರೀರಾಮನ ಸನ್ನಿಧಿಯಲ್ಲಿ ನರ್ತಿಸುತಿದ್ದರು ॥೧೧॥ ಈ ಪರಿಯಾಗಿ ರಘು ನಂದನನು ಪ್ರತಿ ದಿನದಲ್ಲಿಯು ಸಂತೋಷಯುಕ್ತನಾಗಿ, ಸುಂದರವಾದ ಮುಖವುಳ್ಳ ಸೀತಾದೇವಿಯಂ ಸಂತೋಷಗೊಳಿಸುತ್ತಿದ್ದನು ॥೧೨॥ ಮಹಾನುಭಾವನಾದ ಮತ್ತು ನರನಾಥನಾದ ಆ ಶ್ರೀರಾಮ, ಆ ಪರಿಕ್ರೀಡಿಸುತಿರಲು, ಶುಭಕರವಾದ ಶಿಶಿರಋತುಕಳೆದು ಹೋದಂಥಾದ್ದಾಯಿತು ॥೧೩॥ ಧರ್ಮಜ್ಞನಾದ ಆ ರಘುನಂದನನು, ಪೂರ್ವಾಹ್ಣದಲ್ಲಿ ಪೌರಕಾರ್ಯಗಳಂಗೈದು, ಮಧ್ಯಾಹ್ನ ಕಾಲದೊಳು ರಾಣಿ ವಾಸಸ್ಥಳಗಳಲ್ಲಿ ಸಂಚರಿಸುತ್ತಿದ್ದನು ॥೧೪॥ ಸೀತಾದೇವಿಯು ಕೂಡ ಪೂರ್ವಾಹ್ಣದಲ್ಲಿ ಮಾಡತಕ್ಕದೇವಕಾರ್ಯಂಗಳನ್ನೆಲ್ಲ ಗೈದು, ಏಕರೀತಿಯಾಗಿ ಅತ್ತೆಯರೆಲ್ಲರಿಗು ವಂದನೆಗಳಂ ಮಾಡಿ, ಆಬಳಿಕ ನಾನಾಬಗೆಗಳಾದ ಅನೇಕ ಆಭರಣಗಳಿಂದಲಂಕೃತಳಾಗಿ, ಸ್ವರ್ಗಲೋಕದೊಳು ಶಚೀದೇವಿಯು ಸುಖಾಸೀನನಾಗಿರ್ಪ ಸಹಸ್ರಾಕ್ಷನ ಸನ್ನಿಧಿಗೆ ಬರುವತೆರದಿ, ಶ್ರೀರಾಮನಂ ಕುರಿತು ಬಂದಂಥಾವಳಾದಳು ॥೧೬॥ ಆರಘುಕುಲ ತಿಲಕನಾದರೆ, ಶುಭಯುಕ್ತಳಾದ ಆಸತಿಯಾದ ಸೀತಾದೇವಿಯಂ ಕಂಡು, ಕಡುಸಂತೋಷವಂ ಹೊಂದಿ ಬಹು ಚನ್ನಾಗಿಥೆಯೆಂದು ನುಡಿದವನಾದನು ॥೧೭॥ ಎಲೈ ಸೀತಾದೇವಿಯೇ! ನನಿಗೆ ಸಂತಾನಪ್ರಾಪ್ತಿಯು, ಸಮುಪಸ್ಥಿತವಾಗಿರುವದು, ಯಾವದನ್ನಪೇಕ್ಷಿಸುತ್ತಿ, ನಿನಿಗೆ ಪ್ರಿಯಮಾಗಿರುವದ್ದಾವದೋ, ಅದಂ ಪೇಳೆಂದು ಶ್ರೀರಾಮನು ನುಡಿಯಲೂ, ಸೀತಾದೇವಿಯು ನಸುನಗೆಯುಳ್ಳವಳಾಗಿ, ರಘುನಂದನನಂ ಕುರಿತಿಂತೆಂದಳು, ಎಲೈ ರಘುವನೇ! ಗಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬ್ರೂಹಿಸರ್ವಂವರಾನನೇ ||೨೮|| ಪ್ರಹಸಂತೀತ್ವವೈದೇಹೀರಾಮಂವಾಕ್ಯಮಥಾಬ್ರವೀತ್||೨೯||ತಪೋವನಾನಿಪುಣ್ಯಾನಿದ್ರಷ್ಟುಮಿಚ್ಛಾಮಿರಾಘವ| ಗಂಗಾತೀರನಿವಿಷ್ಟಾನಿಋಷೀಣಾಂಪುಣ್ಯಕರ್ಮಣಾಮ್ |ಫಲಮೂಲಾಶಿನಾಂವೀರಪಾದಮೂಲೇಷುವರ್ತಿತುಮ್ ||೩೦|| ಏಷಮೇಪರಮಃಕಾಮೋಯನ್ಮೂಲಫಲಭೋಜಿಷು | ಅಪ್ಯೇಕರಾತ್ರಂಕಾಕುತ್ಸ್ಥವಸೇಯಂಪುಣ್ಯಕೀರ್ತಿಷು ||೩೧|| ತಥೇತಿಚಪ್ರತಿಜ್ಞಾತಂರಾಮೇಣಾಕ್ಲಿಷ್ಟಕರ್ಮಣಾ | ವಿಸ್ರಬ್ಧಾಭವವೈದೇಹೀಶ್ವೋಗಮಿಷ್ಯಸ್ಯಸಂಶಯಃ ||೩೨|| ಏವಮುಕ್ತ್ವಾತುಕಾಕುತ್ಸ್ಥೋಮೈಥಿಲೀಂಜನಕಾತ್ಮಜಾಮ್ | ಮಧ್ಯಕಕ್ಷ್ಯಾಂತರಂರಾಮೋನಿರ್ಜಗಾಮಸುಹೃದ್ವೃತಃ

…*ಇತಿ ಶ್ರೀಮದುತ್ತರರಾಮಾಯಣೇ ದ್ವಿಚತ್ವಾರಿಂಶಸ್ಸರ್ಗಃ.*

ತತೋಪವಿಷ್ಟಂರಾಜಾನಮುಪಾಸಂತವಿಚಕ್ಷಣಾಃ| ಕಥಾನಾಂಬಹುರೂಪಾಣಾಂಹಾಸ್ಯಕಾರಾಸ್ಸಮಂತತಃ ||೧||

---

ರ್ವಂ-ಸಮಸ್ತವಾದ, ಕಾಮಂ-ಅಪೇಕ್ಷೆಯನ್ನು,ಬ್ರೂಹಿ-ಹೇಳು ||೨೮|| ಅಥ-ಬಳಿಕ, ವೈದೇಹೀತು-ಸೀತಾದೇವಿಯಾದರೋ,ಪ್ರಹಸಂತೀ -ನಗುತಿರುವಳಾ. ರಾಮಂ-ಶ್ರೀರಾಮನು ಕುರಿತು, ವಾಕ್ಯಂ-ವಚನವನ್ನು, ಅಬ್ರವೀತ್-ನುಡಿದಳು, ಹೆ ರಾಘವ-ಎಲೈ ಶ್ರೀರಾಮನೆ,ಗಂಗಾತೀರೆ-ಗಂಗಾನದಿಯದಡದಲ್ಲಿ, ನಿವಿಷ್ಟಾನಿ-ಪ್ರತಿಷ್ಠಾಪಿತಂಗಳಾದ, ಪುಣ್ಯಕರ್ಮಣಾಂ-ಪುಣ್ಯಕರವಾದ ಕರ್ಮಗಳುಳ್ಳ, ಋಷೀಣಾಂ-ಮುನಿಗಳ, ಪುಣ್ಯಾನಿ-ಪುಣ್ಯಸಂಪಾದಕವಾದ ತಪೋವನಾನಿ-ತಪೋವನಗಳನ್ನು, ದ್ರಷ್ಟುಂ-ನೋಡುವದಕ್ಕೋಸುಗ, ಇಚ್ಛಾಮಿ-ಬಯಿಸುವೆನು, ಹೆವೀರ-ಎಲೈ ಶೂರನೆ, ಫಲಮೂಲಾಶಿನಾಂ-ಫಲಗಳನ್ನು ಕಂದಮೂಲಗಳನ್ನು ಭುಜಿಸುತಿರುವ ಋಷಿಗಳ, ಪಾದಮೂಲೇಷು-ಪಾದಗಳ ಸನ್ನಿಧಿಯಲ್ಲಿ, ವರ್ತಿತುಂ-ಇರುವದಕ್ಕೋಸ್ಕರ, ಇಚ್ಛಾಮಿ-ಅಪೇಕ್ಷಿಸುತ್ತೇನೆ ||೩೦|| ಹೆಕಾಕುತ್ಸ್ಥ-ಎಲೈ ಕಕುತ್ಸ್ಥವಂಶೋತ್ಪನ್ನನೆ, ಪುಣ್ಯಕೀರ್ತಿಷು-ಪುಣ್ಯದಿಂದ ಹೆಸರುವಾಸಿಪಡಿರುವ,ಮೂಲಫಲಭೋಜಿಷು-ಕಂದಮೂಲಗಳನ್ನು ಫಲಗಳನ್ನು ಉಣ್ಣುತಿರುವ ಋಷಿಗಳಲ್ಲಿ, ಏಕರಾತ್ರಮಪಿ-ಒಂದುರಾತ್ರಿಯೊಳಾದರು, ವಸೇಯಮಿತಿಯತ್-ಇರುವನೆಂಬದ್ಯಾವದೋ, ಏಷಕಾಮಃ-ಈಬಯಿಸುವಿಕೆಯು, ಮೆ-ನನಿಗೆ, ಪರಮಃ-ಉತ್ಕೃಷ್ಟವಾಗಿಥೆ ||೩೧|| ಹೆವೈದೇಹಿ-ಎಲೈ ಸೀತೆಯೆ,ವಿಸ್ರಬ್ಧಾಭವ-ನಂಬಿರು, ಶ್ವಃ-ನಾಳೆ, ಗಮಿಷ್ಯಸಿ-ಹೋಗುವಿ, ನಸಂಶಯಃ-ಸಂದೇಹವಿಲ್ಲ, ತಥೇತಿ-ನೀಹೇಳದಂತೆಯೆ ಆಗಲೆಂದು,ಅಕ್ಲಿಷ್ಟಕರ್ಮಣಾ-ಕ್ಲೇಶವಿಲ್ಲದೆ ವ್ಯಾಪಾರವಂಗೈಯುತಿರುವ, ರಾಮೇಣ-ಶ್ರೀರಾಮನಿಂದ, ಪ್ರತಿಜ್ಞಾತಂ-ಪ್ರತಿಜ್ಞೆ ಮಾಡಲ್ಪಟ್ಟಿತು || ೩೦ || ಕಾಕುತ್ಸ್ಥಃ-ಕಕುತ್ಸ್ಥವಂಶೋತ್ಪನ್ನನಾದ, ರಾಮಃ-ಶ್ರೀರಾ ಮನು,ಜನಕಾತ್ಮಜಾಂ-ಜನಕರಾಯನಮಗಳಾದ, ಮೈಥಿಲೀಂ-ಸೀತಾದೇವಿಯಂ ಕುರಿತು ಏವಂ-ಈಪರಿ, ಉಕ್ತ್ವಾ-ಹೇಳಿ,ಸುಹೃದ್ವೃತಃ-ಸ್ನೇಹಿತರಿಂದೊಡಗೂಡಿದವನಾಗಿ, ಮಧ್ಯಕಕ್ಷ್ಯಾಂತರಂ-ಮಧ್ಯವರ್ತಿಯಾದ ತೊಟ್ಟಿಮನೆಯ ಮಧ್ಯಪ್ರದೇಶಮಂಕುರಿತು, ನಿರ್ಜಗಾಮ-ಹೊರಟುಬಂದನು||೩೩||

—…*ಇತಿಶ್ರೀಮದುತ್ತರರಾಮಾಯಣೇ ದ್ವಿಚತ್ವಾರಿಂಶಸ್ಸರ್ಗಃ*…—

ತತ್ರ-ಆತೊಟ್ಟಿಮನೆಯಲ್ಲಿ, ಉಪವಿಷ್ಟಂ-ಕುಳಿತುಕೊಂಡಿರುವ, ರಾಜಾನಂ-ಅರಸಾದ ಶ್ರೀರಾಮನಂಕುರಿತು, ಬಹುರೂಪಾಣಾಂ-ನಾನಾಬಗೆಗಳಾದ, ಕಥಾನಾಂ-ಕಥೆಗಳೊಳಗೆ, ವಿಚಕ್ಷಣಾಃ-ಪಂಡಿತರಾದ, ಹಾಸ್ಯಕಾರಾಃ-ಹಾಸ್ಯರಸಪ್ರಧಾನಶಬ್ದಗಳಂ ನುಡಿಯುತಿರುವರು, ಸಮಂತತಃ-ಎಲ್ಲಾ ಕಡೆಯಲ್ಲಿಯು, ಉಪಾಸಂತ-ಸಮೀಪವರ್ತಿಗಳಾದರು ||೧|| ವಿಜಯಃ-ವಿಜಯನು, ಮಧುಮತ್ತಶ್ಚ-ಮಧುಮತ್ತನು, ಕಾಶ್ಯಪಃ - ಕಾಶ್ಯಪನು, ಪಿಂಗಳಃ-ಪಿಂಗಳನು, ಕುಟಃ-ಕುಟನೆಂಬವನು, ಸುರಾಜಃ-ಸುರಾಜನು, ಕಾಳಿಯಃ-ಕಾಳಿಯನು, ಭದ್ರಃ-ಭದ್ರನು, ಸಮಾಗಧಃ - ಮಾಗಧನೆಂಬವನಿಂ ದೊಡಗೂ

---

ಗಾನದೀ ತೀರದೊಳು, ಪ್ರತಿಷ್ಠಾಪಿತಂಗಳಾಗಿರ್ಪ, ಋಷ್ಯಾಶ್ರಮಗಳನ್ನು, ಮತ್ತು ಪುಣ್ಯ ಸಂಪಾದಕವಾದ ತಪೋವನಗಳನ್ನು, ನೋಡಲಿಚ್ಛಿಸುವೆನು, ಎಲೈ ಶೂರನೆ ! ಫಲಗಳನ್ನು ಕಂದಮೂಲಂಗಳನ್ನು ಭುಜಿಸುತಿರುವ, ಮುನಿಗಳ ಸನ್ನಿಧಿಯಲ್ಲಿ ಇರಬೇಕೆಂದು ಸಂತತವು ಬಯಿಸುತ್ತಿಥೇನೆ, ಎಲೈ ಕಕುತ್ಸ್ಥ ಕುಲತಿಲಕನೆ, ಪುಣ್ಯದಿಂದ ಹೆಸರುವಾಸಿಯಂ ಪಡದಿರುವ, ಮತ್ತು ಫಲಮೂಲಾಶನಿಗಳಾದ, ಋಷಿಸಾನ್ನಿಧ್ಯದಲ್ಲಿ ಏಕರಾತ್ರಿಯಾದರು ಇರಬೇಕೆಂಬ ಹಾರೈಸುವಿಕೆ ಯಾವದೋ, ಅದೇನನಿಗೆ ಬಹಳ ಇಷ್ಟವಾಗಿರುವದು, ಎಂಬದಾಗಿ ಸೀತಾದೇವಿಯು ಹೇಳಲೂ, ರಘುವೀರನಿಂತೆಂದನು ||೩೧|| ಹೆ ಜನಕನಂದಿನಿಯೇ, ನಂಬಿರುವಂಥಾವಳಾಗು, ನಾಳೆಯೇ ತೆರಳುವಿ, ಈ ವಿಷಯದಲ್ಲಿ ಸಂಶಯವಿಲ್ಲ, ಎಂಬದಾಗಿ ಸೀತಾದೇವಿಯಂ ಕುರಿತು ನುಡಿದು ಸಖರಿಂದೊಡಗೂಡಿ, ನಡುಮನೆ ತೊಟ್ಟಿಯ ಮಧ್ಯಪ್ರದೇಶದಲ್ಲಿ ಬಂದವನಾದನು. ||೩೩|| *ಉತ್ತರ ರಾಮಾಯಣದಲ್ಲಿನ೪೨ ನೆಯ ಸರ್ಗಂಮುಗಿದುದು.*

ಆ ತೊಟ್ಟಿಮನೆಯಲ್ಲಿ ಕುಳಿತುಕೊಂಡಿರುವ ಒಡೆಯನಾದ ಶ್ರೀರಾಮನಂಕುರಿತು, ನಾನಾವಿಧವಾದ ಕಥೆಗಳಲ್ಲಿ, ಪಂಡಿತರಾದ ಹಾಸ್ಯಕಾರರೆಲ್ಲರು ಯಲ್ಲಾ ಕಡೆಯಲ್ಲಿಯು ಬಂದು ನಿಂತರದೆಂತೆನೆ ||೧|| ವಿಜಯ, ಮಧು ಮತ್ತ, ಕಾಶ್ಯಪ, ಪಿಂಗಳ, ಕುಟ, ಸುರಾಜ, ಕಾಳಿಯ, ಭದ್ರ, ದಂತವಕ್ರ, ಮಾಗಧರೆಂಬಿವರೆಲ್ಲರು, ಕಡು ಸಂತೋಷವು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಿಜಯೋಮಧುಮತ್ತಶ್ಚ ಕಾಶ್ಯಪಃಪಿಂಗಳಃಕುಟಃ। ಸುರಾಜಃಕಾಳಿಯೋಭದ್ರೋದಂತವಕ್ತ್ರಸ್ಸುಮಾಗಧಃ ॥೨॥ ಏತೇಕಥಾ ಬಹುವಿಧಾಃಪರಿಹಾಸಸಮನ್ವಿತಾಃ । ಕಥಯಂತಿಸ್ಮ ಸಂಹೃಷ್ಟಾ ರಾಘವಸ್ಯಮಹಾತ್ಮನಃ॥೩॥ತತಃಕಥಾಯಾಂಕಸ್ಯಾಂಚಿ ದ್ರಾಘವಸ್ಸಮಭಾಷತ । ಕಾಃಕಥಾನಗರೇಭದ್ರವರ್ತಂತೇವಿಷಯೇಷುಚ ॥೪॥ ಮಾಮಾಶ್ರಿತಾನಿಕಾನ್ಯಾಹುಃಪೌರಜಾನಪ ದಾಜನಾಃ । ಕಿಂಚಸೀತಾಂಸಮಾಶ್ರಿತ್ಯಭರತಂಕಿಂನುಲಕ್ಷ್ಮಣಮ್ ॥ ಕಿಂನುಶತ್ರುಘ್ನಮಾಶ್ರಿತ್ಯಕೈಕೇಯೀಂಮಾತರಂಚ ಮೇ ॥೫॥ ವಕ್ತವ್ಯತಾಂಚರಾಜಾನೋವನೇರಾಜ್ಯೇವ್ರಜಂತಿಹಿ ।ಏವಮುಕ್ತಸ್ತುರಾಮೇಣಭದ್ರಃಪ್ರಾಂಜಲಿರಬ್ರವೀತ್ ॥೬॥ ಸ್ಥಿತಾಃಕಥಾಶ್ಶುಭಾರಾಜನ್ವರ್ತಂತೇಪುರವಾಸಿನಾಮ್ ॥೭॥ ಅಯಂತುವಿಜಯಸ್ಸೌಮ್ಯದಶಗ್ರೀವವಧಾರ್ಜಿತಃ । ಭೂ ಯಿಷ್ಠಂಸ್ವಪುರೇಪೌರೈಃಕಥ್ಯತೇಪುರುಷರ್ಷಭ ॥೮॥ಏವಮುಕ್ತಸ್ತುಭದ್ರೇಣರಾಘವೋವಾಕ್ಯಮಬ್ರವೀತ್ । ಕಥಯಸ್ವ ಯಥಾತತ್ತ್ವಂಸರ್ವಂನಿರವಶೇಷತಃ ॥ ೯ ॥ ಶುಭಾಶುಭಾನಿವಾಕ್ಯಾನಿಯಾನ್ಯಾಹುಃಪುರವಾಸಿನಃ । ಶ್ರುತ್ವೇದಾನೀಂ

---

ಡಿದ, ದಂತವಕ್ತ್ರಃ-ದಂತವಕ್ತ್ರನುಎಂಬ, ಏತೇ-ಇವರು, ಪರಿಹಾಸಸಮನ್ವಿತಾಃ-ಹಾಸ್ಯರಸದಿಂದ ಕೂಡಿದವರಾಗಿ, ಸಂಹೃಷ್ಟಾಃ-ಸಂತೋಷಚಿತ್ತರಾಗಿ, ಬಹುವಿಧಾಃ-ನಾನಾಬಗೆಗಳಾದ, ಕಥಾಃ-ಕಥೆಗಳನ್ನು, ಮಹಾತ್ಮನಃ - ಮಹಾಮನಸ್ವಿಯಾದ, ರಾಘವಸ್ಯ-ಶ್ರೀರಾಮನಿಗೆ, ಕಥಯಂತಿಸ್ಮ-ಹೇಳುತಿದ್ದರಷ್ಟೆ ॥೩॥ ತತಃ-ಬಳಿಕ, ರಾಘವಃ-ಶ್ರೀರಾಮನು, ಕಸ್ಯಾಂಚಿತ್ - ಒಂದಾನೊಂದಾದ,ಕಥಾಯಾಂ-ಪ್ರಸ್ತಾವದಲ್ಲಿ, ಹೇಭದ್ರ-ಎಲೈಭದ್ರನೆ, ನಗರೇ-ಪುರದಲ್ಲಿ, ವಿಷಯೇಷುಚ-ದೇಶಗಳಲ್ಲಿಯು, ಕಾಃಕಥಾ-ಯೇನುಪ್ರಸ್ತಾವವು, ವರ್ತತೇ-ನಡಿಯುತ್ತಿದೆ, ಇತಿ-ಇಂತೆಂದು, ಸಮಭಾಷತ-ಕೇಳಿದನು ॥೪॥ ಪೌರಜಾನಪದಾಃ-ಪೌರ-ಪಟ್ಟಣವಾಸಿಗಳಾದ, ಜಾನಪದಾಃ-ದೇಶವಾಸಿಗಳಾದ,ಜನಾಃ-ಜನರು, ಮಾಂ-ನನ್ನನ್ನು, ಆಶ್ರಿತಾನಿ-ಆಶ್ರಯಿಸಿದ, ಕಾನಿ-ಯಾವಮಾತುಗಳನ್ನು, ಆಹುಃ - ಹೇಳುವರು, ಸೀತಾಂ-ಸೀತಾದೇವಿಯನ್ನು, ಸಮಾಶ್ರಿತ್ಯ-ಆಶ್ರಯಿಸಿ, ಕಿಮಾಹುಃ-ಯೇನುನುಡಿಯುತ್ತಾರೆ, ಭರತಂ-ಭರತನಂನು, ಲಕ್ಷ್ಮಣಂ-ಲಕ್ಷ್ಮಣನನ್ನು, ಶತ್ರುಘ್ನಂ-ಶತ್ರುಘ್ನನನ್ನು, ಮೇ-ನನಗೆ,ಮಾತರಂ-ತಾಯಿಯಾದ, ಕೈಕೇಯೀಂಚ-ಕೈಯಿಕೆಯನ್ನು ಸಹ,ಆಶ್ರಿತ್ಯ-ಆಶ್ರಯಿಸಿ, ಕಿಂನುಕಿಂನು-ಯಾವಯಾವಮಾತುಗಳನ್ನು, ಆಹುಃ-ಹೇಳುತಿದ್ದಾರೆ ॥೫॥ರಾಜಾನಃ-ಅರಸರು,ನವೇ-ನೂತನವಾಗಿ ಪ್ರಾಪ್ತವಾದ, ರಾಜ್ಯೇ-ರಾಜ್ಯದಲ್ಲಿ, ವಕ್ತವ್ಯತಾಂ-ಒಳ್ಳೆದಲ್ಲವ್ವೆಂದು ಪ್ರಸ್ತಾವೋಚಿತವಾಗಿ ಸಂಭಾಷಣಯೋಗ್ಯತ್ವವನ್ನು, ವ್ರಜಂತಿಹಿ-ಹೊಂದುತ್ತಾರಷ್ಟೆ, ಏವಂ-ಈಪರಿಯಾಗಿ, ರಾಮೇಣ-ಶ್ರೀರಾಮನಿಂದ, ಉಕ್ತಃ-ಹೇಳಲ್ಪಟ್ಟ, ಭದ್ರಃ-ಭದ್ರನೆಂಬವನು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ಅಬ್ರವಿತ್-ನುಡಿದನು ॥೬॥ ಹೇರಾಜನ್-ಎಲೈ ಅರಸೆ, ಪುರವಾಸಿನಾಂ-ಪಟ್ಟಣವಾಸಿಗಳೊಳಗೆ, ಶುಭಾಃ-ಶುಭಕರವಾದ,ಕಥಾಃ-ಪ್ರಸ್ತಾವಗಳು, ಸ್ಥಿತಾಃ-ಇರುವವುಗಳಾಗಿ, ವರ್ತಂತೇ-ಪ್ರವರ್ತಿಸಿವೆ ॥೭॥ ಹೇಸೌಮ್ಯ-ಎಲೈಸೌಮ್ಯನೆ-ಹೇ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ದಶಗ್ರೀವವಧಾರ್ಜಿತಃ-ರಾವಣನ ಸಂಹಾರದಿಂದ ಸಂಪಾದಿಸಲ್ಪಟ್ಟ, ಅಯಂವಿಜಯಸ್ತು-ಈ ಜಯವಾದರೆ, ಸ್ವಪುರೇ-ನಮ್ಮ ಪಟ್ಟಣದಲ್ಲಿ, ಪೌರೈಃ-ಪಟ್ಟಣಸ್ಥರಿಂದ, ಭೂಯಿಷ್ಠಂ-ಬಹಳವಾಗಿ,ಕಥ್ಯತೇ-ಹೇಳಲ್ಪಡುತ್ತೆ, ॥೮॥ ಭದ್ರೇಣ-ಭದ್ರನೆಂಬ ದೂತನಿಂದ, ಏವಮುಕ್ತಃ-ಈಪರಿ ಹೇಳಲ್ಪಟ್ಟ, ರಾಮಃ-ಶ್ರೀರಾಮನು, ವಾಕ್ಯಂ-ವಚನವನ್ನು, ಅಬ್ರವೀತ್-ನುಡಿದನು, ಯಥಾತತ್ತ್ವಂ-ನಡದಂತೆ, ಸರ್ವಂ-ಸಮಸ್ತವನ್ನು, ನಿರವಶೇಷತಃ-ನಿಶ್ಶೇಷವಾಗಿ, ಕಥಯಸ್ವ-ಹೇಳು ॥೯॥ ಪುರವಾಸಿನಃ-ಪಟ್ಟಣವಾಸಿಗಳು, ಶುಭಾಶುಭಾನಿ-ಶುಭಗಳೇ ಆಗಲಿ ಅಶುಭಗಳೆ ಆಗಲಿ, ಯಾನಿವಾಕ್ಯಾನಿ-ಯಾವಮಾತುಗಳನ್ನು, ಆಹುಃ-ಹೇಳುತ್ತಿರುವರೋ,ಇದಾನೀಂ-ಈಗ, ಶ್ರುತ್ವಾ-

---

ಳ್ಳವರಾಗಿಯೂ, ಹಾಸ್ಯರಸವೇ ಪ್ರಧಾನವಾಗಿ ಉಳ್ಳವರಾಗಿಯು ಇರುವರಾಗಿ, ನಾನಾಕಥೆಗಳನ್ನು, ಮಹಾತ್ಮನಾದ ಶ್ರೀರಾಮನಿಗೆ ಶ್ರವಣ ಮಾಡಿಸುತಿದ್ದರು ॥೩॥ ಆಬಳಿಕ ಒಂದಾನೊಂದು ಕಥೆಯಲ್ಲಿ ರಘುನಂದನನು ಭದ್ರಕನಂಕುರಿತು, ಎಲೈ ಭದ್ರನೆ! ಪಟ್ಟಣದಲ್ಲಿಯು ದೇಶದಲ್ಲಿಯು, ಏನು ವರ್ತಮಾನ ವಿರುವದು ॥ ೪ ॥ ಪಟ್ಟಣವಾಸಿಗಳು ದೇಶವಾಸಿಗಳು ಸಹ ನನ್ನ ವಿಷಯವಾಗಿಯೂ ಸೀತಾದೇವಿಯ ವಿಷಯವಾಗಿಯೂ, ಭರತನ ವಿಷಯವಾಗಿಯೂ, ಲಕ್ಷ್ಮಣನ ವಿಷಯವಾಗಿಯೂ, ಶತ್ರುಘ್ನನ ವಿಷಯವಾಗಿಯೂ, ಕೈಕೇಯೀದೇವಿಯ ವಿಷಯವಾಗಿಯೂ, ನಮ್ಮ ಜನನಿಯಾದ ಕೌಸಲ್ಯಾದೇವಿಯ ವಿಷಯವಾಗಿಯೂ, ಯೇನೇನು ನುಡಿಯುತಿರುವರೊ? ಅವುಗಳನ್ನೆಲ್ಲ ಹೇಳುವಂಥಾವನಾಗು, ಯಾಕಂದರೆ ನೂತನವಾಗಿ, ಸಂಪ್ರಾಪ್ತವಾದ ರಾಜ್ಯದೊಳು ರಾಜರು ಅವಶ್ಯವಾಗಿ ಇಂಥಾವುಗಳಂ ಕೇಳಬೇಕಾಗಿರುವವಷ್ಟೆ, ಆದಕಾರಣ ಇವುಗಳಂ ನನಗೆ ನಿರೂಪಿಸೆಂದು ರಘುನಂದನನು ನಿರೂಪಿಸಲು, ಭದ್ರನೆಂಬುವನು ಅಂಜಲಿಬದ್ಧನಾ ಗಿಂತೆಂದು ನುಡಿದನು ॥೬॥ ಎಲೈ ಒಡೆಯನೆ! ಪಟ್ಟಣಸ್ಥರೊಳಗೆ ಅನೇಕ ಶುಭವರ್ತಮಾನಗಳಿರುವವು ॥೭॥ ಎಲೈಸೌಮ್ಯನೆ ರಾವಣನ ವಧೆಯಿಂದ ಸಂಪಾದಿಸಲ್ಪಟ್ಟಿರುವ ಈ ಜಯವಾದರೆ ನಮ್ಮ ಪುರದಲ್ಲೆಲ್ಲ ಎಲ್ಲರಿಂದಲು ಶ್ಲಾಘಿಸಲ್ಪಡುತ್ತಿರುವದು ಎಂಬದಾಗಿ ಭದ್ರನು ಬಿನ್ನವಿಸಲು, ರಘುನಂದನನು ಆತನಂಕುರಿತು, ಎಲೈ ಭದ್ರನೆ! ನಡೆದಂತೆಯೇ ಸರ್ವವನ್ನು ಹೇಳುವಂಥಾವನಾಗು ॥೯॥ ಒಳ್ಳೆಮಾತುಗಳನ್ನೇ ಆಗಲಿ ಅಥವಾ ಕೆಟ್ಟಮಾತು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶುಭಂಕುರ್ಯಾಂನಕುರ್ಯಾಮಶುಭಾನಿಚ ॥೧೦॥ ಕಥಯಸ್ವಚವಿಸ್ರಬ್ಧೋ ನಿರ್ಭಯೋವಿಗತಜ್ವರಃ। ಕಥಯಂತಿಯಥಾಪೌರಾ ಜನಾಜನಪದೇಷುಚ ॥೧೧॥ ರಾಘವೇಣೈವಮುಕ್ತಸ್ತು ಭದ್ರಸ್ಸುರುಚಿರಂವಚಃ । ಪ್ರತ್ಯುವಾಚಮಹಾಬಾಹುಂಪ್ರಾಂಜಲಿಸ್ಸುಸಮಾಹಿತಃ ॥೧೨॥ ಶೃಣುರಾಜನ್ಯಥಾಪೌರಾಃಕಥಯಂತಿಶುಭಾಶುಭಮ್ । ಚತ್ವರಾಪಣವೀಥೀಷುವನೇಷೂಪವನೇಷುಚ ॥ ೧೩ ॥ ದುಷ್ಕರಂಕೃತವಾನ್ರಾಮಸ್ಸಮುದ್ರೇಸೇತುಬಂಧನಮ್ । ಅಕೃತಂಪೂರ್ವಕೈಃಕೈಶ್ಚಿದ್ದೇವೈರಪಿಸದಾನವೈಃ ॥೧೪॥ ರಾವಣಶ್ಚ ದುರಾಧರ್ಷೋಹತಸ್ಸಬಲವಾಹನಃ । ವಾನರಾಶ್ಚ ವಶಂನೀತಾಋಕ್ಷಾಶ್ಚ ಸಹರಾಕ್ಷಸೈಃ ೧೫॥ ಸಹತ್ವಾರಾವಣಂಯುದ್ಧೇ ಸೀತಾಮಾಹೃತ್ಯರಾಘವಃ । ಅಮರ್ಷಂಪೃಷ್ಠತಃಕೃತ್ವಾಸ್ವವೇಶ್ಮಪುನರಾನಯತ್ ॥೧೬॥ ಕೀದೃಶಂಹೃದಯೇತಸ್ಯಸೀತಾಸಂಭೋಗಜಂಸುಖಮ್ ॥೧೭॥ ಅಂಕಮಾರೋಪ್ಯತುಪುರಾರಾವಣೇನಬಲಾದ್ಧೃತಾಮ್ । ಲಂಕಾ

---

ಕೇಳಿ, ಶುಭಂ–ಕಲ್ಯಾಣವನ್ನು, ಕುರ್ಯಾಂ–ಮಾಡುವೆನು, ಅಶುಭಾನಿಚ–ಪಾಪಕಾರ್ಯಗಳನ್ನು, ನಕುರ್ಯಾಂ–ಮಾಡಲಾರೆನು ॥೧೦॥ ಪೌರಾಃ–ಪಟ್ಟಣಸ್ಥರಾದ, ಜನಾಃ–ಜನಗಳು, ಜನಪದೇಷುಚ–ದೇಶಗಳಲ್ಲಿಯು, ಯಥಾಕಥಯಂತಿ–ಹ್ಯಾಗೆ ಹೇಳುವರೊ, ವಿಸ್ರಬ್ಧಃ–ನಂಬಿಕೆಯುಳ್ಳವನಾಗಿ, ನಿರ್ಭಯಃ–ಭಯವಿಲ್ಲದವನಾಗಿ, ವಿಗತಜ್ವರಃ–ಹೋದಂಥಾ ಸಂತಾಪಮುಳ್ಳವನಾಗಿ, ತಥಾ–ಹಾಗೆಯೆ, ಕಥಯಸ್ವ–ಹೇಳು ॥೧೧॥ ರಾಘವೇಣ–ಶ್ರೀರಾಮನಿಂದ, ಏವಮುಕ್ತಃ–ಈಪರಿ ಹೇಳಲ್ಪಟ್ಟ, ಭದ್ರಸ್ತು– ಭದ್ರನಾದರೆ, ಸುಸಮಾಹಿತಃ–ಸಮಾಧಾನಚಿತ್ತನಾಗಿ, ಪ್ರಾಂಜಲಿಃ–ಅಂಜಲಿಬದ್ಧನಾಗಿ, ಮಹಾಬಾಹುಂ–ಮಹಾಭುಜಪರಾಕ್ರಮಿಯಾದ ಶ್ರೀರಾಮನಂ ಕುರಿತು, ಸುರುಚಿರಂ–ಬಹುಮನೋಹರವಾದ, ವಚಃ–ಮಾತನ್ನು, ಪ್ರತ್ಯುವಾಚ–ಪ್ರತ್ಯುತ್ತರಕೊಟ್ಟನು॥೧೨॥ ಹೇರಾಜನ್–ಎಲೈರಾಜನೆ, ಪೌರಾಃ–ಪಟ್ಟಣಸ್ಥರು, ಚತ್ವರಾಪಣವೀಥೀಷು–ಚತ್ವರ–ಅಂಗಳಗಳಲ್ಲಿ, ವೀಥೀಷು–ಬೀದಿಗಳಲ್ಲಿ, ವನೇಷು–ವನಗಳಲ್ಲಿಯು, ಉಪವನೇಷುಚ–ಉದ್ಯಾನಗಳಲ್ಲಿಯು, ಶುಭಾಶುಭಂ–ಶುಭಾಶುಭಕರವಾದದ್ದನ್ನು, ಯಥಾ–ಹ್ಯಾಗೆ, ಕಥಯಂತಿ–ಹೇಳುತ್ತಾರೆ, ತಥಾ–ಹಾಗೆ, ಶೃಣು–ಕೇಳು, ರಾಮಃ–ಶ್ರೀರಾಮನು, ಪೂರ್ವಕೈಃ–ಪ್ರಾಚೀನರಾದ, ಸದಾನವೈಃ–ರಾಕ್ಷಸರಿಂದೊಡಗೂಡಿದ, ಕೈಶ್ಚಿತ್‌ದೇವೈರಪಿ–ಯಾವದೇವತೆಗಳಿಂದಲೂ ಕೂಡ, ಅಕೃತಂ–ಮಾಡಲ್ಪಡದಿರುವ, ದುಷ್ಕರಂ–ಅಸಾಧ್ಯವಾದ, ಸಮುದ್ರೇ–ಕಡಲಿನಲ್ಲಿ, ಸೇತುಬಂಧನಂ – ಸೇತುಬಂಧನವನ್ನು, ಕೃತವಾನ್–ಮಾಡಿದನು॥೧೪॥ ದುರಾಧರ್ಷಃ–ತಿರಸ್ಕರಿಸಲಸಾಧ್ಯನಾದ, ಸಬಲವಾಹನಃ–ಸೇನೆಗಳಿಂದಲೂ ವಾಹನಗಳಿಂದಲೂ ಒಡಗೂಡಿದ, ರಾವಣಶ್ಚ–ರಾವಣನುಸಹ, ಹತಃ – ಕೊಲ್ಲಲ್ಪಟ್ಟನು, ವಾನರಾಶ್ಚ –ಕಪಿಗಳು, ಋಕ್ಷಾಶ್ಚ –ಕರಡಿಗಳೂ ಸಹ, ರಾಕ್ಷಸೈಸ್ಸಹ–ರಾಕ್ಷಸರೊಡನೆ,ವಶಂ–ಸ್ವಾಧೀನತೆಯನ್ನು, ನೀತಾಃ–ಹೊಂದಿಸಲ್ಪಟ್ಟರು ॥೧೫॥ ಸರಾಘವಃ–ಅಂತಾ ಶ್ರೀರಾಮನು, ಯುದ್ಧೇ–ಕಾಳಗದಲ್ಲಿ, ರಾವಣಂ–ರಾವಣನನ್ನು, ಹತ್ವಾ–ಸಂಹರಿಸಿ, ಸೀತಾಂ–ಸೀತಾದೇವಿಯನ್ನು, ಆಹೃತ್ಯ–ಕರೆದುಕೊಂಡು, ಅಮರ್ಷಂ–ಕೋಪವನ್ನು, ಪೃಷ್ಠತಃ–ಹಿಂದುಗಡೆ, ಕೃತ್ವಾ–ಮಾಡಿ, ಸ್ವವೇಶ್ಮ–ತನ್ನ ಮನೆಯನ್ನು ಕುರಿತು, ಪುನಃ–ಮತ್ತೆ, ಆನಯತ್–ಕರದುಕೊಂಡುಬಂದನು, ॥೧೬॥ ತಸ್ಯ–ಆ ಶ್ರೀರಾಮನ, ಹೃದಯೇ–ಮನದಲ್ಲಿ, ಸೀತಾಸಂಭೋಗಜಂ–ಸೀತಾಸಂಗಮದಿಂದ ಹುಟ್ಟಿದ ಸುಖಂ–ಸುಖವು, ಕೀದೃಶಂ–ಎಂಥಾದ್ದೋ ॥೧೭॥ ಪುರಾ–ಪೂರ್ವದಲ್ಲಿ, ರಾವಣೇನ–ರಾವಣನಿಂದ, ಬಲಾತ್–ದೇಹತ್ರಾಣೆಯಿಂದ, ಅಂಕಂ–ತೊಡೆಯನ್ನು, ಆರೋಪ್ಯ–ಏರಿಸಿ, ಹೃತಾಂ–ಅಪಹರಿಸಲ್ಪಟ್ಟ, ಲಂಕಾಂಪುರೀಮಪಿ–ಲಂಕಾಪಟ್ಟಣವನ್ನು ಸಹ, ನೀತಾಂ–ಹೊಂದಿಸಲ್ಪಟ್ಟ, ಅಶೋಕವನಿಕಾಂ–ಅಶೋಕವ

---

ಗಳನ್ನೇ ಆಗಲಿ, ಪುರವಾಸಿಗಳು ಏನೇನು ನಡಿಯುತ್ತಿಹರೋ,ಅವುಗಳನ್ನೀಗ ಕೇಳಿ ಶುಭವಾದರೆ ಮಾಡುವಂಥಾವನಾಗುವೆನು, ಅಶುಭವನ್ನೆಂದಿಗು ಮಾಡುವದಿಲ್ಲ ॥೧೦॥ ಆದಕಾರಣ ನೀನು ನಂಬಿಕೆಯುಳ್ಳವನಾಗಿಯೂ, ಅಂಜದೇಇರುವನಾಗಿಯೂ, ಸಂತಾಪ ವಿಲ್ಲದವನಾಗಿಯೂ, ಇರುವನಾಗಿ, ಪುರವಾಸಿಗಳು ದೇಶವಾಸಿಗಳು ಯೇನೇನು ಮಾತಾಡುತ್ತಿರುವರೋ, ಅವುಗಳನ್ನುಯಥಾರ್ಥವಾಗಿಪೇಳುವಂಥಾವನಾಗೆಂದು, ಶ್ರೀರಾಮನಿಂದ ಆಜ್ಞಪ್ತನಾದಆ ಭದ್ರನುಅಂಜಲಿಬದ್ಧನಾಗಿಯೂ, ಸಮಾಧಾನಚಿತ್ತನಾಗಿಯೂ ಇರುವನಾಗಿ, ಮಹಾ ಭುಜಪರಾಕ್ರಮಿಯಾದಶ್ರೀರಾಮನಂ ಕುರಿತು, ಎಲೈ ಒಡೆಯನೆ ಪಟ್ಟಣಸ್ಥರು ಅಂಗಳಗಳಲ್ಲಿಯು ಮಂಡಿಗಳಲ್ಲಿಯು ಬೀದಿಗಳಲ್ಲಿಯು ವನಗಳಲ್ಲಿಯೂ ಸಹ ಶುಭವಾಗಿಯು ಅಶುಭವಾಗಿಯೂ ಯಾವಯಾವ ಮಾತುಗಳಂ ನುಡಿದಿಹರೋ, ಅವುಗಳಂ ಪೇಳ್ವೆನುಕೇಳು ॥೧೩॥ ಪೂರ್ವಿಕರಾದ ಯಾವ ದೇವತೆಗಳಿಂದಲು ದಾನವರಿಂದಲು ಸಹ ಮಾಡಲ್ಪಡದೇ ಇರುವ,ಮತ್ತು ಇತರರು ಮಾಡಲಸಾಧ್ಯವಾದ ಸೇತುಬಂಧವಂ ಶ್ರೀರಾಮನು ಸಮುದ್ರದಲ್ಲಿ ಮಾಡಿದಂಥಾವನಾದನು ॥೧೪॥ ಹೊಂದಲಸಾಧ್ಯನಾದದಶಕಂಠನು ಸೇನಾಸಮೇತನಾಗಿಯೂ,ವಾಹನಗಳಿಂದೊಡಗೂಡಿದವನಾಗಿಯೂ ಇರುವನಾಗಿ, ಹತನಾದನಲ್ಲ. ವಾನರ ಋಕ್ಷರಾಕ್ಷಸರೆಮುಂತಾದವ ರೆಲ್ಲರು ಸ್ವಾಧೀನಗೊಳಿಸಲ್ಪಟ್ಟರಲ್ಲ॥೧೫॥ ಇಂಥಾ ದುರ್ಘಟವಾದ ಕಾರ್ಯಂಗಳಂಗೈದ ಆ ಶ್ರೀರಾಮನು ಕಾಳಗದಲ್ಲಿ ದಶಕಂಠನಂ ಕೊಂದು ಸೀತಾದೇವಿಯನ್ನು ಕರೆದುಕೊಂಡು, ಕೋಪವಂ ಹಿಂಭಾಗದಲ್ಲಿ ತೊರೆದು ತನ್ನ ಮನೆಯಂಶೇರಿಸಿದನಷ್ಟೆ, ಸೀತಾದೇವಿಯ ಸಂಭೋಗದಿಂದುಂಟಾದ ಸುಖವು ಆತನ ಮನದಲ್ಲಿ ಹ್ಯಾಗಿರುವದೋ ಏನೋ ॥೧೭॥ ಯಾಕಂದರೆ,—ಪೂರ್ವ ಕಾಲದಲ್ಲಿ ಆದರೆ, ತೊಡೆಯಮೇಲೆ ಕುಳ್ಳಿರಿಸಿಕೊಂಡು, ಬಲಾತ್ಕಾರದಿಂ ರಾವ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮುಪೇಪುರೀಂ.ನೀತಾಮಶೋಕವನಿಕಾಂಗತಾಮ್ ॥ ರಕ್ಷಸಾಂವಶಮಾಪನ್ನಾಂಕಥಂರಾಮೋನಕುತ್ಸ್ಯತಿ ॥೧೮॥ ಅಸ್ಮಾ
ಕಮಪಿದಾರೇಷುಸಹನೀಯಂಭವಿಷ್ಯತಿ । ಯಥಾಹಿಕುರುತೇರಾಜಾಪ್ರಜಾತಮನುವರ್ತತೇ ॥೧೯॥ ಏವಂಬಹುವಿಧಾವಾ
ಚೋವದಂತಿಪುರವಾಸಿನಃ । ನಗರೇಷುಚಸರ್ವೇಷುರಾಜಞ್ಜನಪದೇಷುಚ ॥೨೦॥ ತಸ್ಯೈತದ್ಭಾಷಿತಂಶ್ರುತ್ವಾರಾಘವಃ
ಪರಮಾರ್ಥವಿತ್ । ಉವಾಚಸರ್ವಾನ್ಸುಹೃದಃಕಥಮೇತನ್ನಿವೇದ್ಯತಾಮ್ ॥೨೧॥ ಸರ್ವೇಚಶಿರಸಾಭೂಮಾವಭಿವಾದ್ಯಪ್ರ
ಣಮ್ಯಚ । ಪ್ರತ್ಯೂಚೂರಾಘವಂದೀನಮೇವಮೇತನ್ನಸಂಶಯಃ ॥೨೨॥ ಶ್ರುತ್ವಾತುವಾಕ್ಯಂಕಾಕುತ್ಸ್ಥಸ್ಸರ್ವೇಷಾಂಸ
ಮುದೀರಿತಮ್ । ವಿಸರ್ಜಯಾಮಾಸತದಾಸರ್ವಾಂಸ್ತಾನ್ ಶತ್ರುತಾಪನಃ॥ ॥೨೩॥

...* ಇತಿಶ್ರೀಮದುತ್ತರರಾಮಾಯಣೇ ತ್ರಿಚತ್ವಾರಿಂಶಸ್ಸರ್ಗಃ.*...

ವಿಸೃಜ್ಯತುಸುಹೃದ್ವರ್ಗಂಬುದ್ಧ್ಯಾನಿಶ್ಚಿತ್ಯರಾಘವಃ। ಸಮೀಪೇದ್ವಾಸ್ಥಮಾಸೀನಮಿದಂವಚನಮಬ್ರವೀತ್॥೧॥ ಶೀ
ಘ್ರಮಾನಯಸೌಮಿತ್ರಿಂಲಕ್ಷ್ಮಣಂಶುಭಲಕ್ಷಣಮ್ । ಭರತಂಚಮಹಾಭಾಹುಂಶತ್ರುಘ್ನಮಪರಾಜಿತಮ್ ॥೨॥ ರಾಮ

---

ನವನ್ನು. ಗತಾಂ-ಹೊಂದಿದ, ರಕ್ಷಸಾಂ-ರಾಕ್ಷಸರ, ವಶಂ-ಸ್ವಾಧೀನತೆಯನ್ನು, ಆಪನ್ನಾಂ-ಹೊಂದಿರುವ, ಸೀತಾಂ-ಸೀತಾದೇವಿಯನ್ನು ಕುರಿತು ರಾಮಃ-ಶ್ರೀರಾಮನು, ಕಥಂ-ಹ್ಯಾಗೆ. ನಕುತ್ಸ್ಯತಿ-ನಿಂದಿಸಲಿಲ್ಲವೋ, ॥೧೮॥ ರಾಜಾ-ಅರಸು, ಯಥಾ-ಹ್ಯಾಗೆ, ಕುರುತೇ-ಮಾಡುತ್ತಾನೋ,ಪ್ರಜಾಃ-ಜನವು, ತಂ-ಆ ಅರಸನ್ನು, ಅನುವರ್ತತೇಹಿ-ಅನುಸರಿಸುತದಷ್ಟೆ, ಅಸ್ಮಾಕಂ-ನಮ್ಮ, ದಾರೇಷ್ವಪಿ-ಹೆಂಡತಿಗಳಲ್ಲಿಯುಕೂಡ, ಸಹನೀಯ್ಯಂ-ಸಹಿಸತಕ್ಕದ್ದು, ಭವಿಷ್ಯತಿ-ಆಗುವದು, ॥೧೯॥ ಹೇರಾಜನ್-ಎಲೈ ಒಡೆಯನೆ, ಏವಂ-ಈಪರಿಯಾಗಿ, ಬಹುವಿಧಾಃ-ನಾನಾಬಗೆಗಳಾದ, ವಾಚಃ-ಮಾತುಗಳನ್ನು, ನಗರೇಷುಚ-ಪಟ್ಟಣಗಳಲ್ಲಿಯು, ಸರ್ವೇಷು-ಸಮಸ್ತವಾದ,ಜನಪದೇಷುಚ-ದೇಶಗಳಲ್ಲಿಯು,ಪುರವಾಸಿನಃ-ಪಟ್ಟಣಸ್ಥರು,ವದಂತಿ-ಹೇಳುತ್ತಾರೆ ॥೨೦॥ ಪರಮಾರ್ಥವಿತ್- ವಾಸ್ತವಿಕಾರ್ಥಜ್ಞನಾದ, ರಾಘವಃ-ಶ್ರೀರಾಮನು, ತಸ್ಯ-ಆಭದ್ರನ,ಏತದ್ಭಾಷಿತಂ -ಈಮಾತನ್ನು,ಶ್ರುತ್ವಾ-ಕೇಳಿ, ಸರ್ವಾನ್-ಸಮಸ್ತರಾದ,ಸುಹೃದಃ-ಸ್ನೇಹಿತರಂಕುರಿತು, ಏತತ್-ಇದು, ಕಥಂ-ಹ್ಯಾಗೆ-ನಿವೇದ್ಯತಾಂ – ತಿಳುಹಿಸಲ್ಪಡಲಿ, ಇತಿ-ಇಂತೆಂದು-ಉವಾಚಹೇಳಿದನು ॥ ೨೧ ॥ ಸರ್ವೇಚ-ಸಮಸ್ತರೂನು,ರಾಘವಂ-ಶ್ರೀರಾಮನಂಕುರಿತು, ಶಿರಸಾ-ಶಿರಸ್ಸಿನಿಂದ, ಭೂಮೌ-ನೆಲದಲ್ಲಿ, ಅಭಿವಾದ್ಯ-ವಂದಿಸಿ, ಪ್ರಣಮ್ಯಚ-ನಮಸ್ಕಾರವನ್ನೂ ಮಾಡಿ ,ಏತತ್-ಇದು,ಏವಮೇವಹಿ-ಹೀಗೆಸರಿ, ಸಂಶಯೋನ-ಸಂದೇಹವಿಲ್ಲ, ಇತಿ-ಇಂತೆಂದು-ಪ್ರತ್ಯೂಚುಃ-ಪ್ರತ್ಯುತ್ತರಕೊಟ್ಟರು॥೨೨॥ ಶತ್ರುತಾಪನಃ- ಶತ್ರುಸಂಹಾರಕನಾದ,ಕಾಕುತ್ಸ್ಥಃ-ಶ್ರೀರಾಮನು, ತದಾ-ಆಕಾಲದಲ್ಲಿ, ಸಮುದೀರಿತಂ-ಹೇಳಲ್ಪಟ್ಟ, ಸರ್ವೇಷಾಂ-ಎಲ್ಲರ,ವಾಕ್ಯಂ – ಮಾತನ್ನು, ಶ್ರುತ್ವಾತು-ಕೇಳಿಯಾದರೆ, ಸರ್ವಾನ್-ಸಮಸ್ತರಾದ, ತಾನ್-ಆದೂತರನ್ನು, ವಿಸರ್ಜಯಾಮಾಸ-ತೊರೆದನು ... ... ॥೨೩॥

ಇತಿ ಶ್ರೀಮದುತ್ತರ ರಾಮಾಯಣೇ ತ್ರಿಚತ್ವಾರಿಂಶ ಸ್ಸರ್ಗಃ.

ರಾಘವಸ್ತು-ಶ್ರೀರಾಮನಾದರೆ, ಸುಹೃದ್ವರ್ಗಂ-ಸ್ನೇಹಿತರಸಮೂಹವನ್ನು, ವಿಸೃಜ್ಯ-ತೊರೆದು, ಬುದ್ಧ್ಯಾ-ಮತಿಯಿಂದ, ನಿಶ್ಚಿತ್ಯ-ಕರ್ತವ್ಯಾಂಶವನ್ನು ನಿಶ್ಚಯಿಸಿ,ಸಮೀಪೇ-ಸನ್ನಿಧಾನದಲ್ಲಿ,ಆಸೀನಂ-ಕುಳಿತಿರುವ, ದ್ವಾಸ್ಥಂ-ದ್ವಾರಪಾಲಕನನ್ನು ಕುರಿತು,ಇದಂವಚನಂ-ಈಮಾತನ್ನು-ಅಬ್ರವೀತ್, ನುಡಿದನು ॥ ೧॥ಸೌಮಿತ್ರಿಂ-ಸುಮಿತ್ರಾದೇವಿಯಪುತ್ರನಾದ, ಶುಭಲಕ್ಷಣಂ-ಸಮೀಚೀನವಾದಲಕ್ಷಣಗಳುಳ್ಳ, ಲಕ್ಷ್ಮಣಂ-ಲಕ್ಷ್ಮಣನನ್ನು, ಮಹಾಭಾಗಂ-ಮಹಾಪುಣ್ಯವಂತನಾದ, ಭರತಂಚ-ಭರತನನ್ನು, ಅಪರಾಜಿತಂ-ಪರಾಜಯವನ್ನು ಹೊಂದದಿರುವ, ಶತ್ರುಘ್ನಂಚ-ಶತ್ರುಘ್ನನುನ್ನೂಸಹ, ಶೀಘ್ರಂ-ಜಾಗ್ರತೆಯಾಗಿ, ಆನಯ-ಕರದುಕೊಂಡುಬಾ, ॥೨॥ ದ್ವಾಸ್ಥಃ-ದ್ವಾರಪಾಲಕನು, ರಾಮಸ್ಯ-ಶ್ರೀರಾಮನ, ಭಾಷಿತಂ-ಮಾತನ್ನು, ಶ್ರುತ್ವಾ-ಕೇ

---

ಣನಿಂದ ಅಪಹರಿಸಲ್ಪಟ್ಟವಳಾದ ಕಾರಣ ಅಶೋಕವನವನ್ನು ಹೊಂದಿಸಲ್ಪಟ್ಟಂಥಾವಳಾಗಿಯೂ, ರಾಕ್ಷಸರ ಅಧೀನದಲ್ಲಿ ಶಿಲುಕಿದವಳಾಗಿಯೂ ಇರುವ ಸಿತಾದೇವಿಯನ್ನು ಶ್ರೀರಾಮನುಯಾಕೆನಿಂದಿಸಲಿಲ್ಲವೋ॥೧೮॥ರಾಜನುಹ್ಯಾಗೆ ನಡೆಯುತ್ತಿರುವನೋ ಪ್ರಜರೆಲ್ಲರು ಆತನನ್ನನುವರ್ತಿಸುವರಷ್ಟೆ?ಆದಕಾರಣ ನಮ್ಮ ಹೆಂಡತಿಗಳಲ್ಲಿಯೂಕೂಡ ಈನಡತೆಗಳಂ ನಾವೆಲ್ಲರುಸ್ಥೈರಿಸಬೇಕಾಯಿತಲ್ಲ. ಎಂಬದಾಗಿ ಪಟ್ಟಣಸ್ಥರೆಲ್ಲರುವಿಥವಿಥವಾಗಿ ಪುರಗಳಲ್ಲಿಯು ದೇಶಗಳಲ್ಲಿಯೂ, ಮಾತಾಡಿಕೊಳ್ಳುತ್ತಿರುವರೆಂದು ಭದ್ರನು ಬಿಂನವಿಸಲು, ಪರಮಾರ್ಥವಂ ಬಲ್ಲವನಾದ ಶ್ರೀರಾಮನು ಆಮಾತಂ ಕೇಳಿ, ಸಖರಂಕುರಿತು, ಎಲೈ ಸಖರೆ! ಈಮಾತು ನಿಶ್ಚಯವಾಗಿರುವದೇ ಏನು? ನಿರೂಪಿಸುವಂಥಾಗಿರೆಂದು ನುಡಿದವನಾದನು ॥೨೧॥ ಬಳಿಕ ಆ ಸಖರೆಲ್ಲರು ಸಾಷ್ಟಾಂಗ ಪ್ರಣಾಮವಂ ಗೈದು, ಇದು ನಿಶ್ಚಯವೆಂದು ಶ್ರೀರಾಮನಂ ಕುರಿತು ದೈನ್ಯವಾಗಿ ಪೇಳಿದರು ॥೨೨॥ ಅವರೆಲ್ಲರು ಪೇಳಿದ ಈ ವಾಕ್ಯವಂ ಕೇಳಿ ಆಬಳಿಕ ರಘುನಂದನನು, ಅವರೆಲ್ಲರಂ ಕಳುಹಿಸಿಕೊಟ್ಟಂಥಾವನಾದನು, ...*ಉತ್ತರರಾಮಾಯಣದಲ್ಲಿನ ೪೩ನೆಯ ಸರ್ಗಂ ಮುಗಿದುದು.*...

ರಘುನಂದನನು ಅವರೆಲ್ಲರಂ ಕಳುಹಿಸಿಕೊಟ್ಟು, ಕರ್ತವ್ಯಾಂಶನವನ್ನು ತನ್ನ ಮತಿಯಿಂದ ನಿಶ್ಚಯಿಸಿಗೊಂಡು ಸಮೀ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ವಭಾಷಿತಂಶ್ರುತ್ವಾದ್ವಾಸ್ಸ್ಥೋಮೂರ್ಧ್ನಿಕೃತಾಂಜಲಿಃ । ಲಕ್ಷ್ಮಣಸ್ಯಗೃಹಂಗತ್ವಾಪ್ರವಿವೇಶಾನಿವಾರಿತಃ ||೩|| ಉವಾಚವಿಜಯಂಪ್ರೀತ್ಯಾ... ಉವಾಚಚಮಹಾತ್ಮಾನಂವರ್ಧಯಿತ್ವಾಕೃತಾಂಜಲಿಃ ||೪|| ದ್ರಷ್ಟುಮಿಚ್ಛತಿರಾಜಾತ್ವಾಂಗಮ್ಯತಾಂತತ್ರಮಾಚಿರಮ್। ಯಾವದ್ಭರತಶತ್ರುಘ್ನೌತ್ವರಯಾಮಿಸ್ವಪಾಜ್ಞಯಾ ||೫|| ಬಾಢಮಿತ್ಯೇವಸೌಮಿತ್ರಿಶ್ಶ್ರುತ್ವಾ ರಾಘವಶಾಸನಮ್ । ಪ್ರಾದ್ರವ ದ್ರಥಮಾರುಹ್ಯರಾಘವಸ್ಯನಿವೇಶನಮ್ ||೬|| ಪ್ರಯಾಂತಂಲಕ್ಷ್ಮಣಂದೃಷ್ಟ್ವಾದ್ವಾಸ್ಸ್ಥೋಭರತಮಂತಿಕಾತ್ । ಉವಾಚಪ್ರಾಂಜಲಿರ್ವಾಕ್ಯಂರಾಜಾತ್ವಾಂದ್ರಷ್ಟುಮಿಚ್ಛತಿ ||೭|| ಭರತಸ್ತುವಚಶ್ಶ್ರುತ್ವಾದ್ವಾಸ್ಸ್ಥಾದ್ರಾಮಸಮೀರಿತಮ್ । ಉತ್ಪಪಾತಾಸನಾತ್ತೂರ್ಣಂಪದ್ಭ್ಯಾಮೇವಯಯೌಬಲೀ ||೮|| ದೃಷ್ಟ್ವಾಪ್ರಯಾಂತಂಭರತಂತ್ವರಮಾಣಃಕೃತಾಂಜಲಿಃ। ಶತ್ರುಘ್ನಭವನಂಗತ್ವಾರಾಮವಾಕ್ಯಂಜಗಾದಸಃ ||೯|| ಏಹ್ಯಾಗಚ್ಛರಘುಶ್ರೇಷ್ಠ ರಾಜಾತ್ವಾಂದ್ರಷ್ಟುಮಿಚ್ಛತಿ । ಗತೋಹಿ

---

ಃ, ಮೂರ್ಧ್ನಿ---ಮಂಡೆಯಲ್ಲಿ, ಕೃತಾಂಜಲಿಃ-ಮಾಡಲ್ಪಟ್ಟ ಅಂಜಲಿಯುಳ್ಳವನಾಗಿ,ಲಕ್ಷ್ಮಣಸ್ಯ-ಲಕ್ಷ್ಮಣನ,ಗೃಹಂ-ಮನೆಯನ್ನು ಕುರಿತು, ಗತ್ವಾ-ಪೋಗಿ, ಅನಿವಾರಿತಃ-ಅಡ್ಡಗಿಸಲ್ಪಡದಿರುವನಾಗಿ,ಗೃಹಂ-ಮನೆಯನ್ನು,ಪ್ರವಿವೇಶ-ಹೊಕ್ಕನು ||೩||ಮಹಾತ್ಮಾನಂ-ಮಹಾಮನಸ್ವಿಯಾದ ಲಕ್ಷ್ಮಣನಂಕುರಿತು,ವರ್ಧಯಿತ್ವಾ-ಜಯಜಯವೆಂದು ಆಶೀರ್ವಾದವಂಮಾಡಿ,ಕೃತಾಂಜಲಿಃ-ಅಂಜಲಿಬದ್ಧನಾಗಿ, ಉವಾಚಚ - ಪೇಳಲೂಪೇಳಿದನು ||೪|| ರಾಜಾ - ಒಡೆಯನಾದ ಶ್ರೀರಾಮನು, ತ್ವಾಂ-ನಿನ್ನನ್ನು, ದ್ರಷ್ಟುಂ-ನೋಡುವದಕ್ಕೆ, ಇಚ್ಛತಿ-ಅಪೇಕ್ಷಿಸುತ್ತಾನೆ, ತತ್ರ-ಅಲ್ಲಿ, ಮಾಚಿರಂ-ಜಾಗ್ರತೆಯಾಗಿ, ಗಮ್ಯತಾಂ-ಹೋಗಲ್ಪಡಲಿ, ನೃಪಾಜ್ಞಯಾ-ರಾಜಾಜ್ಞೆಯಿಂದ, ಯಾವತ್-ಯಷ್ಟರೊಳಗಾಗಿ, ಭರತ ಶತ್ರುಘ್ನೌ-ಭರತಶತ್ರುಘ್ನರಂ ಕುರಿತು, ಯಾಮಿ-ಪೋಗುವೆನೋ, ತಾವತ್-ಅದರೊಳಗಾಗಿ,ತ್ವರ-ಜಾಗ್ರತೆಮಾಡು ||೫|| ಸೌಮಿತ್ರಿಃ-ಲಕ್ಷ್ಮಣಸ್ವಾಮಿಯು, ರಾಘವಶಾಸನಂ-ಶ್ರೀರಾಮನ ಆಜ್ಞೆಯನ್ನು, ಶ್ರುತ್ವಾ-ಕೇಳಿ, ಬಾಢಮಿತ್ಯೇವ-ಹಾಗೆಯೇ ಆಗಲೆಂದು, ರಥಂ-ತೇರನ್ನು, ಆರುಹ್ಯ-ಏರಿ, ರಾಘವಸ್ಯ-ಶ್ರೀರಾಮನ, ನಿವೇಶನಂ-ಮನೆಯನ್ನು ಕುರಿತು, ಪ್ರಾದ್ರವತ್-ಓಡಿಬಂದನು ||೬|| ಪ್ರಯಾತಂ-ಹೊರಟ, ಲಕ್ಷ್ಮಣಂ-ಲಕ್ಷ್ಮಣನನ್ನು, ದೃಷ್ಟ್ವಾ-ಕಂಡು, ದ್ವಾಸ್ಸ್ಥಃ-ದ್ವಾರಪಾಲಕನು, ಭರತಂ- ಭರತನ, ಅಂತಿಕಾತ್ -ಸಮೀಪದಲ್ಲಿ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ರಾಜಾ -ಶ್ರೀರಾಮನು, ತ್ವಾಂ-ನಿನ್ನನ್ನು, ದ್ರಷ್ಟುಂ- ನೋಡುವದಕ್ಕೆ, ಇಚ್ಛತಿ ಅಪೇಕ್ಷಿಸುತ್ತಾನೆ, (ಇತಿ-ಇಂತೆಂದು) ವಾಕ್ಯಂ-ಮಾತನ್ನು, ಉವಾಚ-ಪೇಳಿದನು ||೭|| ಬಲೀ-ಬಲವಂತನಾದ, ಭರತಸ್ತು - ಭರತನಾದರೆ,ದ್ವಾಸ್ಸ್ಥಾತ್-ದ್ವಾರಪಾಲಕನ ದೆಸೆಯಿಂದ, ರಾಮಸಮೀರಿತಂ-ಶ್ರೀರಾಮನಿಂದ ಹೇಳಿಕಳುಹಿಸಲ್ಪಟ್ಟ, ವಚಃ- ಮಾತನ್ನು, ಶ್ರುತ್ವಾ-ಕೇಳಿ, ಆಸನಾತ್-ಪೀಠದಿಂದ, ತೂರ್ಣಂ-ಜಾಗ್ರತೆಯಾಗಿ, ಉತ್ಪಪಾತ-ಎದ್ದು, ಪದ್ಭ್ಯಾಮೇವ-ಕಾಲುಗಳಿಂದಲೆ, ಯಯೌ-ತೆರಳಿದನು ||೮|| ಸಃ-ಆ ದ್ವಾರಪಾಲಕನು,ಭರತಂ-ಭರತನನ್ನು, ಪ್ರಯಾಂತಂ-ಪೋಗುತ್ತಿರುವನನ್ನಾಗಿ, ದೃಷ್ಟ್ವಾ - ಕಂಡು, ತ್ವರಮಾಣಃ-ಜಾಗ್ರತೆ ಪಡಿಸುತ್ತಿರುವನಾಗಿ, ಶತ್ರುಘ್ನಭವನಂ ಶತ್ರುಘ್ನನ ಮನೆಯನ್ನು ಕುರಿತು, ಗತ್ವಾ-ಪೋಗಿ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ರಾಮವಾಕ್ಯಂ-ಶ್ರೀರಾಮನ ವಚನವನ್ನು, ಜಗಾದ- ಪೇಳಿದನು ||೯|| ಹೇರಘುಶ್ರೇಷ್ಠ - ಎಲೈರಘುವಂಶಸ್ಥರೊಳಗೆ ಉತ್ತಮನೆ, ರಾಜಾ-ಶ್ರೀರಾಮನು, ತ್ವಾಂ-ನಿನ್ನನ್ನು, ದ್ರಷ್ಟುಂ - ನೋಡುವದಕ್ಕೆ, ಇಚ್ಛತಿ-ಅಪೇಕ್ಷಿಸುತ್ತಾನೆ, ಏಹಿ-ಬಾ, ಆಗಚ್ಛ-ತೆರಳು, ಲಕ್ಷ್ಮಣಃ-ಲಕ್ಷ್ಮಣನು, ಪೂರ್ವಂ-ಮೊದಲು, ಗತೋಹಿ-ಪೋಗಿರುವನಷ್ಟೆ, ಮಹಾಯಶಾಃ - ಮ

---

ಹಾಕೀರ್ತಿಯಾಗಿರ್ಪ ದ್ವಾರಪಾಲಕನಂ ಕರೆದು, ಎಲೈ ದ್ವಾರಪಾಲಕನೇ ! ಸುಮಿತ್ರಾನಂದನನಾದ ಮತ್ತು ಸಲ್ಲಕ್ಷಣಯುಕ್ತನಾದ ಲಕ್ಷ್ಮಣನನ್ನೂ, ಮಹಾ ಭುಜಪರಾಕ್ರಮಿಯಾದ ಭರತನನ್ನೂ, ಎಂದೆಂದಿಗೂ ಪರಾಜಯವಂ ಪೊಂದದೇ ಇರುವ ಶತ್ರುಘ್ನನನ್ನೂ ಕರೆದುಕೊಂಡು ಬಾಯೆಂದು ನುಡಿಯಲೂ, ಆತನು ಈ ಮಾತಂ ಕೇಳಿ, ಅಂಜಲಿಬದ್ಧನಾಗಿ, ಲಕ್ಷ್ಮಣನ ಮಂದಿರಕ್ಕೆ ಪೋಗಿ, ಜಯಜಯ ಎಂದು ಆಶೀರ್ವಾದವಂಗೈದು, ಲಕ್ಷ್ಮಣನಂಕುರಿತು, ಎಲೈ ಲಕ್ಷ್ಮಣನೆ! ಒಡೆಯನಾದ ಶ್ರೀರಾಮನು ನಿನ್ನಂ ಕಾಣಲಿಚ್ಛಿಸುತ್ತಾನೆ, ರಾಜಾಜ್ಞೆಯಿಂದ ನಾನು ಭರತಶತ್ರುಘ್ನರಂ ಕುರಿತು ಪೋಗಿ ಬರುವದರೊಳಗೆ, ನೀನು ತೆರಳುವಂಥಾವನಾಗು, ಸಾವಕಾಶವಂ ಮಾಡ ಬೇಡೆಂದು ನುಡಿದವನಾಗಲೂ," ಲಕ್ಷ್ಮಣಸ್ವಾಮಿಯು, ಆ ಶ್ರೀರಾಮನಾಜ್ಞೆಯಂ ಕೇಳಿ, ಹಾಗೆಯೇ ಆಗಲೆಂದು ನಿರೂಪಿಸಿ, ರಥವನ್ನೇರಿ ತ್ವರಿತವಾಗಿ ಅರಮನೆಯಂಕುರಿತು ತೆರಳಿದವನಾದನು ||೬|| ಈಪರಿಯಾಗಿ ತೆರಳಿದ ಲಕ್ಷ್ಮಣನಂ ಕಂಡು, ದ್ವಾರಪಾಲಕನು ಭರತನ ಮಂದಿರಕ್ಕೆ ಪೋಗಿ, ಆತನ ಸಮೀಪದಲ್ಲಿ ಅಂಜಲಿಬದ್ಧನಾಗಿ, ಆತನಂ ಕುರಿತು, ಎಲೈ ಭರತನೆ!ರಾಜನು ನಿನ್ನಂ ಕಾಣಲಿಚ್ಛಿಸುತ್ತಾನೆ, ತ್ವರಿತವಾಗಿ ತೆರಳೆಂದು ನುಡಿಯಲೂ, ಭರತನು ಶ್ರೀರಾಮನು ಹೇಳಿ ಕಳುಹಿಸಿರುವ ಈ ಮಾತಂ ದ್ವಾರಪಾಲಕನ ಮುಖದಿಂ ಕೇಳಿ, ಪೀಠದಿಂದಿಳಿದು ಕಾಲುನಡೆಯಿಂದಲೇ ನಡೆದುಕೊಂಡು ಬಂದನು ||೮|| ಈ ಪರಿ ಭರತನು ಹೊರಟ ಬಳಿಕ, ಆ ದ್ವಾರಪಾಲಕನು ಶತ್ರುಘ್ನನ ಮನೆಗೆ ಪೋಗಿ, ಎಲೈ ಶತ್ರುಘ್ನನೆ! ರಾಜನು ನಿನ್ನ ಕಾಣಲಿಚ್ಛಿಸುತ್ತಾನೆ, ಬಾಬಾ ತ್ವರಿತವಾಗಿ ತೆರಳು, ಮೊದಲೆ ಲಕ್ಷ್ಮಣ ಭರತರೀರ್ವರು ಪೋಗಿಹರು, ಎಂಬದಾಗಿ ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲಕ್ಷ್ಮಣಃಪೂರ್ವಂಭರತಶ್ಚ ಮಹಾಯಶಾಃ ॥೧೦॥ ಶ್ರುತ್ವಾತುವಚನಂತಸ್ಯಶತ್ರುಘ್ನಃಪರಮಾಸನಾತ್ । ಶಿರಸಾಪ್ರಾಪ್ಯಧ ರಣೀಂಪ್ರಯಯೌಯತ್ರರಾಘವಃ ॥ ೧೧ ॥ ದ್ವಾಸ್ಥಸ್ತ್ವಾಗಮ್ಯರಾಮಾಯಸರ್ವಾನೇವಕೃತಾಂಜಲಿಃ । ನಿವೇದಯಾ ಮಾಸತದಾಭ್ರಾತೄನ್‌ಸ್ವಾನ್‌ಸಮುಪಸ್ಥಿತಾನ್ ॥ ೧೨ ॥ ಕುಮಾರಾನಾಗತಾನ್‌ಶ್ರುತ್ವಾ ಚಿಂತಾವ್ಯಾಕುಲಿತೇಂದ್ರಿಯಃ। ಅವಾಙ್ಮುಖೋದೀನಮನಾದ್ವಾಸ್ಥಂವಚನಮಬ್ರವೀತ್ ॥೧೩॥ ಪ್ರವೇಶಯಕುಮಾರಾಂಸ್ತ್ವಂಮತ್ಸಮೀಪಂತ್ವರಾನ್ವಿ ತಃ। ಏತೇಷುಜೀವಿತಂಮಹ್ಯಮೇತೇಪ್ರಾಣಾಃಪ್ರಿಯಾಮಮ ॥೧೪॥ ಆಜ್ಞಪ್ತಾಸ್ತುನರೇಂದ್ರೇಣಕುಮಾರಾಶ್ಶುಕ್ಲವಾಸಸಃ। ಪ್ರಹ್ವಾಃಪ್ರಾಂಜಲಯೋಭೂತ್ವಾವಿವಿಶುಸ್ತೇಸಮಾಹಿತಾಃ॥೧೫॥ ತೇತುದೃಷ್ಟ್ವಾಮುಖಂತಸ್ಯಸಗ್ರಹಂಶಶಿನಂಯಥಾ।ಸಂ ಧ್ಯಾಗತಮಿವಾದಿತ್ಯಂಪ್ರಭಯಾಪರಿವರ್ಜಿತಮ್ ॥೧೬॥ ಬಾಷ್ಪಪೂರ್ಣೇಚನಯನೇದೃಷ್ಟ್ವಾರಾಮಸ್ಯಧೀಮತಃ । ಹತ ಶೋಭಂಯಥಾಪದ್ಮಂಮುಖಂವೀಕ್ಷ್ಯಚತಸ್ಯತೇ ॥೧೭॥ ತತೋಭಿವಾದ್ಯತ್ವರಿತಾಃಪಾದೌರಾಮಸ್ಯಮೂರ್ಧಭಿಃ।ತಸ್ಥುಃ

ಮಹಾಕೀರ್ತಿವಂತನಾದ, ಭರತಶ್ಚ-ಭರನೂಕೂಡ, ಗತಃ-ಹೋಗಿರುವನು, ॥೧೦॥ ತಸ್ಯ-ಆ ದ್ವಾರಪಾಲಕನ, ವಚನಂತು-ಮಾತನ್ನಾದರೆ, ಶ್ರುತ್ವಾ-ಕೇಳಿ, ಶತ್ರುಘ್ನಃ-ಶತ್ರುಘ್ನನು, ಪರಮಾಸನಾತ್, ಉತ್ತಮವಾದ ಪೀಠದಿಂದ, (ಉತ್ಥಾಯ-ಎದ್ದು,) ಶಿರಸಾ-ಶಿರಸ್ಸಿನಿಂದ, ಧರಣೀಂ- ಭೂಮಿಯನ್ನು, ಪ್ರಾಪ್ಯ-ಹೊಂದಿ, ಯತ್ರ-ಯಾವ ಸ್ಥಳದಲ್ಲಿ, ರಾಘವಃ-ಶ್ರೀರಾಮನಿಹನೋ, ತತ್ರ-ಅಲ್ಲಿ, ಪ್ರಯಯೌ-ತೆರಳಿದನು ॥೧೧॥ ತದಾ- ಆ ವೇಳೆಯಲ್ಲಿ, ದ್ವಾಸ್ಥಸ್ತು-ದ್ವಾರಪಾಲಕನಾದರೆ, ಕೃತಾಂಜಲಿಃ-ಅಂಜಲಿಬದ್ಧನಾಗಿ, ಆಗಮ್ಯ-ಬಂದು, ಸಮುಪಸ್ಥಿತಾನ್-ಬಂದಿರ್ಪ, ಸರ್ವಾನ್ - ಸಮಸ್ತರಾದ, ಸ್ವಾನ್-ಸ್ವಕೀಯರಾದ, ಭ್ರಾತೄನ್-ತಮ್ಮಂದಿಯರನ್ನು, ರಾಮಾಯ-ಶ್ರೀರಾಮನಿಗೆ, ನಿವೇದಯಾಮಾಸ-ತಿಳುಹಿಸಿದನು ॥೧೨॥ ಆಗತಾನ್- ಬಂದಿರುವ, ಕುಮಾರಾನ್-ಬಾಲಕರನ್ನು, ಶ್ರುತ್ವಾ-ಕೇಳಿ, ಚಿಂತಾವ್ಯಾಕುಲಿತೇಂದ್ರಿಯಃ- ಆಲೋಚನೆಯಿಂದ ವ್ಯಾಕುಲವಾದ ಇಂದ್ರಿಯಗಳುಳ್ಳವನಾದ ಕಾರಣ, ಅವಾಙ್ಮುಖಃ- ತಲೆಬೊಗ್ಗಿಸಿಕೊಂಡವನಾದ ಶ್ರೀರಾಮನು, ದೀನಮನಾಃ-ದೈನ್ಯವಾದ ಮನವೃತ್ತಿ ವನಾಗಿ, ದ್ವಾಸ್ಥಂ-ದ್ವಾರಪಾಲಕನಂ ಕುರಿತು, ವಚನಂ - ಮಾತನ್ನು, ಅಬ್ರವೀತ್ -ನುಡಿದನು ॥೧೩॥ ತ್ವಂ-ನೀನು, ತ್ವರಾನ್ವಿತಃ- ತ್ವರೆಯಿಂದೊಡಗೂಡಿದವನಾಗಿ, ಮತ್ಸಮೀಪಂ- ನನ್ನ ಸಮೀಪವಂಕುರಿತು, ಕುಮಾರಾನ್-ಬಾಲಕರನ್ನು, ಪ್ರವೇಶಯ-ಪ್ರವೇಶಮಾಡಿಸು, ಮಹ್ಯಂ- ನನ್ನ, ಜೀವಿತಂ-ಬದುಕೋಣವು, ಏತೇಷು- ಇವರುಗಳಲ್ಲಿ, ( ವರ್ತತೆ-ಇರುವದು ) ಏತೇ-ಇವರು, ಪ್ರಾಣೇಭ್ಯಃ-ಪ್ರಾಣಗಳಿಗಿಂತಲು, ಮಮ-ನನಿಗೆ, ಪ್ರಿಯಾಃ-ಪ್ರೀತಿಪಾತ್ರರು ॥೧೪॥ ನರೇಂದ್ರೇಣ- ನರನಾಥನಿಂದ, ಆಜ್ಞಪ್ತಾಃ-ಆಜ್ಞಾಪಿಸಲ್ಪಟ್ಟ, ಶುಕ್ಲವಾಸಸಃ-ನವರಾಗಿರುವ ವಸ್ತ್ರಗಳುಳ್ಳ, ಪ್ರಹ್ವಾಃ-ವಿಧೇಯರಾದ, ಸಮಾಹಿತಾಃ-ಸಾವಧಾನಚಿತ್ತರಾದ, ತೇ ಕುಮಾರಾಃ-ಆ ದಶರಥನಂದನರಾದ ಭರತ ಲಕ್ಷ್ಮಣಶತ್ರುಘ್ನರು, ಪ್ರಾಂಜಲಯಃ-ಅಂಜಲಿಬದ್ಧರು, ಭೂತ್ವಾ-ಆಗಿ, ವಿವಿಶುಃ-ಪ್ರವೇಶಿಸಿದರು ॥೧೫॥ ತೇಪ್ರಸಿದ್ಧರಾದ, ತೇತು-ಆಭರತಾದಿಗಳಾದರೆ, ಸಗ್ರಹಂ-ಉಪರಾಗಯುಕ್ತನಾದ, ಶಶಿನಂಯಥಾ-ಚಂದ್ರನಂತೆ, ಸಂಧ್ಯಾಗತಂ-ಸಂಧ್ಯಾಕಾಲವನ್ನು ಹೊಂದಿದ, ಆದಿತ್ಯಮಿವ-ಸೂರ್ಯನಂತೆ, ಪ್ರಭಯಾ-ಕಾಂತಿಯಿಂದ, ಪರಿವರ್ಜಿತಂ-ಹೀನವಾದ, ತಸ್ಯ-ಆ ಶ್ರೀರಾಮನ, ಮುಖಂ-ಮುಖವನ್ನು, ದೃಷ್ಟ್ವಾ-ಕಂಡು, ಧೀಮತಃ-ಮತಿವಂತನಾದ, ತಸ್ಯರಾಮಸ್ಯ-ಆ ಶ್ರೀರಾಮನ, ಬಾಷ್ಪಪೂರ್ಣೇ-ಕಂಬನಿಗಳಿಂದತುಂಬಿದ, ನಯನೇಚ-ನೇತ್ರಗಳನ್ನೂ ಹತ ಶೋಭಂ - ಹೋದೆಮಲ್ಪಟ್ಟ ಕಾಂತಿಯುಳ್ಳ, ಪದ್ಮಂ ಯಥಾ-ಕಮಲದಂತಿರುವ, ಮುಖಂಚ-ಮುಖವನ್ನೂ ಸಹ, ವೀಕ್ಷ್ಯ-ಕಂಡು, ತತಃ-ಬಳಿಕ,

ತಿಳುಹಲು. ಆತನು ಈ ಮಾತಂಕೇಳಿ ರಘುನಂದನನಿಗೆ ಪ್ರಣಾಮವಂ ಗೈದು, ಆತನಿರುವ ಯಡಕ್ಕೆ ಗಮಿಸಿದವನಾದನು ॥೧೧॥ ಆ ದ್ವಾರಪಾಲಕನಾದರೆ ಈಪರಿ ಅವರೆಲ್ಲರಂ ಕರೆದುಕೊಂಡು ಅಂಜಲಿಬದ್ಧನಾಗಿ ಶ್ರೀರಾಮನ ಸಮೀಪಕ್ಕೆ ಹೋಗಿ ಎಲೈ ಶ್ರೀರಾಮನೆ! ನಿನ್ನ ತಮ್ಮಂದರಾದ ಲಕ್ಷ್ಮಣ ಭರತ ಶತೃಘ್ನರು ಮೂವ್ವರು ಬಂದಿಹರೆಂದು ಬಿನ್ನವಿಸಲೂ ಆ ಮಾತಂ ಕೇಳಿ ರಘುನಂದನನು ಚಿಂತೆಯಿಂದ ವ್ಯಾಕುಲವಾದ ಮನಸ್ಸುಳ್ಳವನಾಗಿಯೂ, ತಲೆ ಬೊಗ್ಗಿಸಿಕೊಂಡವನಾಗಿಯೂ, ದೈನ್ಯವಾದ ಮನವುಳ್ಳವನಾಗಿಯೂ, ಇರುವನಾಗಿ, ದ್ವಾರರಕ್ಷಕನಂ ಕುರಿತು, ಎಲೈ ದ್ವಾರಪಾಲಕನೆ ಕೇಳು, ನೀನು ಅತಿ ತ್ವರೆಯುಳ್ಳವನಾಗಿ ನನ್ನ ಸಮೀಪಕ್ಕೆ ಬಾಲಕರಂ ಕರೆದುಕೊಂಬಾ, ಇವರಲ್ಲಿಯೆ ನನ್ನ ಪ್ರಾಣವಿರ್ಪುದು ಎನ್ನ ಪ್ರಾಣಗಳಿಗಿಂತಲು ಇವರು ಪ್ರೀತಿಪಾತ್ರರಾಗಿಹರು, ಎಂಬದಾಗಿ ನುಡಿಯಲುರಘುನಂದನನಿಂದ ಆಜ್ಞಾಪಿಸಲ್ಪಟ್ಟವರಾದ ಮತ್ತು ತೆಳುವಾಗಿರ್ಪ ವಸ್ತ್ರಗಳನ್ನುಟ್ಟಿರುವ ಆಮೂವ್ವರು, ವಿಧೇಯರಾಗಿಯೂ,ಅಂಜಲಿಬದ್ಧರಾಗಿಯೂ ಇರುವರಾಗಿ ಶ್ರೀ ರಾಮನ ಸನ್ನಿಧಿಗೆ ಬಂದವರಾದರು॥೧೫॥ಆ ಲಕ್ಷ್ಮಣ ಭರತ ಶತ್ರುಘ್ನರಾದರೆ, ರಾಹುಗ್ರಸ್ತನಾದಚಂದಿರನಂತೆಯೂ, ಸಂಧ್ಯಾಕಾಲದೊಳು ಪ್ರಭೆ ಇಲ್ಲದಿರುವ ಸೂರ್ಯನಂತೆಯೂ ಕಾಂತಿಹೀನವಾದ ಕಮಲದಂತೆಯೂ, ಇರುವ ಶ್ರೀರಾಮನ ಮುಖವನ್ನೂ, ಕಂಬನಿಗಳಿಂದತುಂಬಿರುವ ಕಣ್ಣುಗಳನ್ನೂಸಹ ಕಂಡು, ತ್ವರೆಯುಳ್ಳವರಾಗಿಶ್ರೀರಾಮನ ಪಾದಗಳಿಗೆ ವಂದಿಸಿ ಅಂಜಲಿಬದ್ಧರಾಗಿ ನಿಂತವರಾಗಲೂ, ಶ್ರೀರಾಮನು ಕಂಬನಿಗಳಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸನಾಹಿತಾಸ್ಸರ್ವೇ ರಾಮಶ್ಚಾಶ್ರೂಣ್ಯವರ್ತಯತ ॥೧೮॥ ತಾನ್ ಪರಿಷ್ವಜ್ಯ ಬಾಹುಭ್ಯಾಮುತ್ಥಾಪ್ಯ ಚ ಮಹಾಬಲಃ । ಆಸನೇಷ್ವಾಸತೇತ್ಯುಕ್ತ್ವಾ ತತೋ ವಾಕ್ಯಂ ಜಗಾದ ಹ ॥೧೯॥ ಭವಂತೋ ಮಮ ಸರ್ವಸ್ವಂ ಭವಂತೋ ಮಮ ಜೀವಿತಂ । ಭವದ್ಭಿಶ್ಚ ಕೃತಂ ರಾಜ್ಯಂ ಪಾಲಯಾಮಿ ನರೇಶ್ವರಾಃ ॥೨೦॥ ಭವಂತಃ ಕೃತಶಾಸ್ತ್ರಾರ್ಥಾಃ ಬುದ್ಧ್ಯಾ ಚ ಪರಿನಿಷ್ಠಿತಾಃ । ಸಂಭೂಯ ಚ ಮದರ್ಥೋಯಮನ್ವೇಷ್ಟವ್ಯೋ ನರೇಶ್ವರಾಃ ॥೨೧॥ ತಥಾ ವದತಿ ಕಾಕುತ್ಸ್ಥೇ ಅವಧಾನಪರಾಯಣಾಃ । ಉದ್ವಿಗ್ನಮನಸಸ್ಸರ್ವೇ ಕಿನ್ನು ರಾಜಾಭಿಧಾಸ್ಯತಿ ॥೨೨॥ ...ಇತಿ ಶ್ರೀಮದುತ್ತರರಾಮಾಯಣೇ ಚತುಶ್ಚತ್ವಾರಿಂಶಸ್ಸರ್ಗಃ...

ತೇಷಾಂ ಸಮುಪವಿಷ್ಟಾನಾಂ ಸರ್ವೇಷಾಂ ದೀಪ್ತತೇಜಸಾಂ । ಉವಾಚ ವಾಕ್ಯಂ ಕಾಕುತ್ಸ್ಥೋ ಮುಖೇನ ಪರಿಶುಷ್ಯತಾ ॥ ಸರ್ವೇ ಶೃಣುತ ಭದ್ರಂ ವೋ ಮಾ ಕುರುಧ್ವಂ ಮನೋವ್ಯಥಾಂ । ಪೌರಾಣಾಂ ಮಮ ಸೀತಾಯಾಂ ಯಾದೃಶೀ ವರ್ತತೇ ಕಥಾ ॥೨॥ ಪೌರಾಪವಾದಸ್ಸುಮಹಾಂಸ್ತಥಾ ಜನಪದಸ್ಯ ಚ । ವರ್ತತೇ ಮಯಿ ಬೀಭತ್ಸೋ ಮಮ ಮರ್ಮಾಣಿ ಕೃಂತತಿ ॥೩॥ ಅಹಂ ಕಿಲ

ತಸ್ಯ ರಾಮಸ್ಯ- ಆ ಶ್ರೀರಾಮನ, ಪಾದೌ-ಪಾದಗಳನ್ನು, ಮೂರ್ಧಭಿಃ-ಶಿರಸ್ಸುಗಳಿಂದ, ಅಭಿವಾದ್ಯ-ವಂದಿಸಿ, ತ್ವರಿತಾಃ-ತ್ವರೆಯುಳ್ಳವರಾಗಿ, ಸರ್ವೇ-ಎಲ್ಲರು, ಸಮಾಹಿತಾಃ-ಸಾವಧಾನಚಿತ್ತರಾಗಿ, ತಸ್ಥುಃ-ನಿಂತರು, ರಾಮಶ್ಚ-ಶ್ರೀರಾಮನು ಸಹ, ಅಶ್ರೂಣಿ-ಕಂಬನಿಗಳನ್ನು, ಅವರ್ತಯತ್-ಬಿಟ್ಟನು, ॥೧೮॥ ಮಹಾಬಲಃ-ಅತಿಬಲಿಷ್ಠನಾದ ಶ್ರೀರಾಮನು, ಬಾಹುಭ್ಯಾಂ-ಭುಜಗಳಿಂದ, ತಾನ್-ಆ ತಮ್ಮಂದಿರನ್ನು, ಪರಿಷ್ವಜ್ಯ-ಅಪ್ಪಿಕೊಂಡು,-ಉತ್ಥಾಪ್ಯ ಚ-ಮೇಲಕ್ಕೆ ಎಬ್ಬಿಸಿ, ಆಸನೇಷು-ಪೀಠಗಳಲ್ಲಿ, ಆಸತ-ಕುಳಿತುಕೊಳ್ಳಿರಿ, ಇತ್ಯುಕ್ತ್ವಾ- ಈ ಪರಿ ಹೇಳಿ,ತತಃ-ಬಳಿಕ, ವಾಕ್ಯಂ-ವಚನವನ್ನು, ಜಗಾದಹ-ಹೇಳಿದನಷ್ಟೆ ॥೧೯॥ ಹೇ ನರೇಶ್ವರಾಃ-ಎಲೈ ಅರಸರೆ, ಭವಂತಃ-ನೀವುಗಳು, ಮಮ-ನನಗೆ,ಸರ್ವಸ್ವಂ-ಸಮಸ್ತಸ್ವತ್ತು ರೂಪರಾದವರು, ಭವಂತಃ-ನೀವು, ಮಮ-ನನಗೆ, ಜೀವಿತಂ-ಪ್ರಾಣವು, ಭವದ್ಭಿಶ್ಚ-ನಿಮ್ಮಿಂದಲೆ, ಕೃತಂ-ಮಾಡಲ್ಪಟ್ಟ, ರಾಜ್ಯಂ-ರಾಜ್ಯವನ್ನು, ಪಾಲಯಾಮಿ- ಪರಿಪಾಲಿಸುತ್ತಿದ್ದೇನೆ ॥೨೦॥ ಹೇ ನರೇಶ್ವರಾಃ-ಎಲೈ ನರಪತಿಗಳಿರಾ, ಭವಂತಃ-ನೀವು, ಕೃತಶಾಸ್ತ್ರಾರ್ಥಾಃ-ಅನುಷ್ಠಾನಮಾಡಲ್ಪಟ್ಟ ಶಾಸ್ತ್ರಾರ್ಥವುಳ್ಳವರು, ಬುದ್ಧ್ಯಾ ಚ-ಮತಿಯಲ್ಲಿಯೂ ಕೂಡೆ, ಪರಿನಿಷ್ಠಿತಾಃ-ನಿಶ್ಚಯಜ್ಞಾನವುಳ್ಳವರು,ಸಂಭೂಯ-ಎಲ್ಲರು ಸೇರಿ,ಅಯಂ ಮದರ್ಥಃ-ಈ ನನ್ನರ್ಥವು, ಅನ್ವೇಷ್ಟವ್ಯಃ-ಹುಡುಕತಕ್ಕದ್ದು ॥೨೧॥ ಕಾಕುತ್ಸ್ಥೇ-ಶ್ರೀರಾಮನು, ತಥಾ-ಆ ಪರಿಯಾಗಿ, ವದತಿ ಸತಿ-ಹೇಳುತ್ತಿರುವ ನಾಗುತ್ತಿರಲಿಕ್ಕಾಗಿ, ಅವಧಾನಪರಾಯಣಾಃ- ತದೇಕಧ್ಯಾನನಿಷ್ಠರಾಗಿ, ಸರ್ವೇ-ಎಲ್ಲರು, ರಾಜಾ-ಅರಸು, ಕಿನ್ನು-ಯಾವದನ್ನು, ಅಭಿಧಾಸ್ಯತಿ-ನುಡಿಯುವನೋ, ಇತಿ-ಇಂತೆಂದು, ಉದ್ವಿಗ್ನಮನಸಃ-ಹೆದರಿದ ಮನಸ್ಸುಳ್ಳವರಾದರು. ✳ಇತಿ ಶ್ರೀಮದುತ್ತರ ರಾಮಾಯಣೇ ಚತುಶ್ಚತ್ವಾರಿಂಶಸ್ಸರ್ಗಃ.✳

ದೀಪ್ತತೇಜಸಾಂ-ಹೊಳೆಯುತ್ತಿರುವ ಕಾಂತಿಗಳುಳ್ಳ, ತೇಷಾಂ ಸರ್ವೇಷಾಂ-ಅವರೆಲ್ಲರು, ಸಮುಪವಿಷ್ಟಾನಾಂ ಸತಾಂ-ಕುಳಿತುಕೊಂಡವರಾಗುತ್ತಿರಲಿಕ್ಕಾಗಿ, ಪರಿಶುಷ್ಯತಾ-ಒಣಗುತ್ತಿರುವ, ಮುಖೇನ-ಮುಖದಿಂದ ಕೂಡಿಕೊಂಡಿರುವ, ಕಾಕುತ್ಸ್ಥಃ-ಶ್ರೀರಾಮನು, ವಾಕ್ಯಂ-ಮಾತನ್ನು, ಉವಾಚ-ಹೇಳಿದನು ॥೧॥ ಸರ್ವೇ-ನೀವೆಲ್ಲರು, ಶೃಣುತ-ಕೇಳಿರಿ, ವಃ-ನಿಮಗೆ, ಭದ್ರಂ-ಶುಭವಾಗಲಿ, ಮನೋವ್ಯಥಾಂ-ಮನಃ-ಮನದಲ್ಲಿ, ವ್ಯಥಾಂ-ಖೇದವನ್ನು, ಮಾಕುರುಧ್ವಂ-ಮಾಡಬ್ಯಾಡಿರಿ, ಪೌರಣಾಂ-ಪಟ್ಟಣಸ್ಥರೊಳಗೆ, ಸೀತಾಯಾಂ-ಸೀತಾವಿಷಯದಲ್ಲಿ, ಮಮ-ನನ್ನ, ಕಥಾ-ಚರಿತ್ರೆಯು, ಯಾದೃಶೀ-ಯಂಥಾದಷ್ಟಾಗಿ, ವರ್ತತೇ-ಇರುತದೋ ॥೨॥ ಸುಮಹಾನ್-ಮಹತ್ತರನಾದ, ಪೌರಾಪವಾದಃ-ಪಟ್ಟಣಸ್ಥಜನರ ದೋಷಾರೋಪಣೆಯು, ತಥಾ-ಹಾಗೆ, ಜನಪದಸ್ಯ ಚ-ದೇಶದ, ಅಪವಾದಃ-ದೋಷಾರೋಪಣಮಾತು, ಮಯಿ-ನನ್ನ ವಿಷಯವಾಗಿ, ಬೀಭತ್ಸಃ-ಜುಗುಪ್ಸೆಯನ್ನು ಉಂಟುಮಾಡುವದಾಗಿ, ವರ್ತತೇ-ಪ್ರವರ್ತಿಸಿಧೆ, ಮಮ-ನನ್ನ, ಮರ್ಮಾಣಿ-ಮರ್ಮಸ್ಥಾನಗಳನ್ನು, ಕೃಂತತಿ-ಕತ್ತರಿಸುತ್ತದೆ(ಪಾ-ಬೀಭತ್ಸಾ-ನಿಂದೆಯು-ಮಯಿ-ನನ್ನಲ್ಲಿ ವರ್ತತೇ-ಇದೆ)॥೩॥ಅಹಂ ಕಿಲ-ನಾನಾದರೆ, ಮಹಾತ್ಮನಾಂ-ಮಹಾಮನಸ್ವಿಗಳಾದ, ಇಕ್ಷ್ವಾಕೂಣಾಂ-ಇಕ್ಷ್ವಾಕುವಂಶಸ್ಥರಾಜರ, ಕುಲೇ-ವಂಶದಲ್ಲಿ, ಜಾತಃ-ಹುಟ್ಟಿದವ

ಸುರಿಸುತ್ತಾ, ಭುಜಗಳಿಂ ಆ ತಮ್ಮಂದಿರನ್ನಪ್ಪಿಕೊಂಡು, ಪೀಠಂಗಳಲ್ಲಿ ಕುಳಿತುಕೊಳ್ಳಿರೆಂದು ನಿರೂಪಿಸಿ, ಎಲೈ ನರಪತಿಗಳಿರಾ! ನೀವುಗಳು ಎನ್ನ ಸರ್ವ ಸ್ವತ್ತು ರೂಪರಾಗಿಧೀರಿ, ನೀವೆ ನನ್ನ ಪ್ರಾಣಂಗಳು, ನಿಮ್ಮಿಂದ ಮಾಡಲ್ಪಟ್ಟ ಈ ರಾಜ್ಯವಂ ಪರಿಪಾಲಿಸುತಿಧೇನೆ ॥೨೦॥ ನೀವೆಲ್ಲರು ಶಾಸ್ತ್ರಾರ್ಥವನ್ನರಿತವರು, ಮತಿವಿಷಯದಲ್ಲಿ ಆದರೆ ನಿಶ್ಚಯಜ್ಞಾನಮುಳ್ಳವರು ಆದಕಾರಣ ಎಲ್ಲರು ಸೇರಿ, ಈ ನನ್ನ ಅರ್ಥವನ್ನು ಹುಡುಕುವಂಥಾವರಾಗಿರೆಂದು ನಿರೂಪಿಸಿದವನಾಗಲೂ, ಆ ತಮ್ಮಂದಿರೆಲ್ಲರು ಶ್ರೀರಾಮನು ಯೇನೋ ಹೇಳುವನೆಂದು ಹೆದರಿದ ಮನವುಳ್ಳವರಾದರು॥೨೨॥

...✳ಉತ್ತರರಾಮಾಯಣದಲ್ಲಿನ ೪೪ ನೆಯ ಸರ್ಗಂ ಮುಗಿದುದು.✳...

ಮಹಾ ತೇಜಸ್ವಿಗಳಾದ ಅವರೆಲ್ಲರು ಕುಳಿತುಕೊಂಡವರಾಗಲೂ, ಶ್ರೀರಾಮನು ಕಂಗೆಟ್ಟ ಮುಖಮುಳ್ಳವನಾಗಿ, ಎಲೈ ಬಾಲಕರೆ ಕೇಳಿರಿ, ನಿಮಗೆಲ್ಲ ಶುಭವಾಗಲಿ, ಮನದೊಳು ವ್ಯಸನವಂ ಗೈಯಬ್ಯಾಡಿರಿ, ಸೀತಾವಿಷಯವಾಗಿ ನನ್ನ ಕಥೆಯು ಯಂಥಾದ್ದಾಗಿರುವದೋ ಹೇಳುವೆನು॥೨॥ ಪುರವಾಸಿಗಳು ಆರೋಪಿಸಿರ್ಪ ನಿಂದೆಯು ಮಹತ್ತರವಾದದ್ದು,



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕುಲೇಜಾತಶ್ಚೇಕ್ಷ್ವಾಕೂಣಾಂಮಹಾತ್ಮನಾಮ್। ಸೀತಾಂಪಾಪಸಮಾಚಾರಾಮಾನಯೇಯಂಕಥಂಪುನಃ ॥೪॥ ಜಾನಾಸಿ ಹಿಯಥಾ ಸೌಮ್ಯದಂಡಕೇವಿಜನೇವನೇ । ರಾವಣೇನಹೃತಾಸೀತಾಸಚವಿಧ್ವಂಸಿತೋಮಯಾ ॥೫॥ ಪ್ರತ್ಯಕ್ಷಂತವಸೌಮಿತ್ರೇದೇವಾನಾಂ ಹವ್ಯವಾಹನಃ । ಅಪಾಪಾಂಮೈಥಿಲೀಮಾಹವಾಯುಶ್ಚಾಕಾಶಗೋಚರಃ ॥೬॥ ಚಂದ್ರಾದಿತ್ಯೌಚಶಂಸೇತೇಸುರಾಣಾಂಸ ನ್ನಿಧೌಪುರಾ । ಋಷೀಣಾಂಚೈವಸರ್ವೇಷಾಮಪಾಪಾಂಜನಕಾತ್ಮಜಾಮ್ ॥೭॥ ಏವಂಶುದ್ಧಸಮಾಚಾರಾದೇವಗಂಧರ್ವ ಸನ್ನಿಧೌ । ಲಂಕಾದ್ವೀಪೇಮಹೇಂದ್ರೇಣಮಮಹಸ್ತೇನಿವೇಶಿತಾ ॥೮॥ ಅಂತರಾತ್ಮಾಚಮೇವೇತ್ತಿಸೀತಾಂಶುದ್ಧಾಂಯಶಸ್ವಿನೀಮ್। ತತೋಗೃಹೀತ್ವಾವೈದೇಹೀಮಯೋಧ್ಯಾಮಹಮಾಗತಃ ॥೯॥ ಅಯಂತುಮೇಮಹಾನ್ವಾದಃಶೋಕಶ್ಚಹೃದಿವರ್ತತೇ। ಪೌರಾ ಪವಾದಸ್ಸುಮಹಾಂಸ್ತಥಾಜನಪದಸ್ಯಚ ॥೧೦॥ ಅಕೀರ್ತಿರ್ಯಸ್ಯಗೀಯೇತಲೋಕೇಭೂತಸ್ಯಕಸ್ಯಚಿತ್ । ಪತತ್ಯೇವಾಧ ಮಾಁಲ್ಲೋಕಾನ್ಯಾವಚ್ಛಬ್ದಸ್ಸಕೀರ್ತ್ಯತೇ ॥೧೧॥ ಅಕೀರ್ತಿರ್ನಿಂದ್ಯತೇದೇವೈಃಕೀರ್ತಿರ್ದೇವೇಷುಪೂಜ್ಯತೇ । ಕೀರ್ತ್ಯ

---

ನಾಗಿ, ಪಾಪಸಮಾಚಾರಾಂ-ಪಾಪಪ್ರಪಾದೆಯುಳ್ಳ ಸೀತಾದೇವಿಯನ್ನು, ಪುನಃ-ಮತ್ತು, ಕಥಮಾನಯೇಯಂ-ಹ್ಯಾಗೆಕರದುಕೊಂಡು ಬರಲಿ,॥೪॥ಹೇಸೌ ಮ್ಯ-ಎಲೈ ಸೌಮ್ಯನಾದಲಕ್ಷ್ಮಣನೆ, ಯಥಾ-ಹ್ಯಾಗೆ,ವಿಜನೇ-ಜನರಹಿತವಾದ, ದಂಡಕೇವನೇ-ದಂಡಕಾರಣ್ಯದಲ್ಲಿ,ರಾವಣೇನ-ರಾವಣನಿಂದ, ಹೃತಾ-ಅಪಹರಿಸ ಲ್ಪಟ್ಟಳೋ, ಸಚ-ಆರಾವಣನುಕೂಡ,ಮಯಾ-ನನ್ನಿಂದ, ವಿಧ್ವಂಸಿತಃ-ಧ್ವಂಸಿಸಲ್ಪಟ್ಟನೋ, ತಥಾ-ಹಾಗೆ,ಜಾನಾಸಿಹಿ-ತಿಳಿದಿದ್ದೀಯಷ್ಟೆ ॥೫॥ ಹೇಸೌಮಿ ತ್ರೇ-ಎಲೈ ಲಕ್ಷ್ಮಣನೆ,ತವ-ನಿನ್ನ,ಪ್ರತ್ಯಕ್ಷಂ-ಎದುರಾಗಿ,ದೇವಾನಾಂ-ದೇವತೆಗಳೊಳಗೆ,ಹವ್ಯವಾಹಃ - ಅಗ್ನಿಯು, ಮೈಥಿಲೀಂ-ಸೀತಾದೇವಿಯನ್ನು,ಅ ಪಾಪಾಂ-ಪಾಪರಹಿತಳನ್ನಾಗಿ, ಪ್ರಾಹ-ಪೇಳಿದನು, ಆಕಾಶಗೋಚರಃ-ಗಗನಮಾರ್ಗದಲ್ಲಿ ಸಂಚರಿಸುತ್ತಿರುವ,ವಾಯುವೂಕೂಡ, ಪ್ರಾಹ-ಪೇಳಿದನು,ಪುರಾ- ಪೂರ್ವದಲ್ಲಿ, ಸುರಾಣಾಂ-ದೇವತೆಗಳ, ಸನ್ನಿಧೌ-ಸಮೀಪದಲ್ಲಿ, ಋಷೀಣಾಂ-ಮುನಿಗಳ, ಸನ್ನಿಧೌಚ- ಸಮೀಪದಲ್ಲಿಯೂ ಕೂಡ,ಚಂದ್ರಾದಿತ್ಯೌಚ - ಚಂದ್ರಸೂರ್ಯರು ಸಹ, ಶಂಸೇತೇ-ಪೇಳಿದರು ॥೭॥ ಏವಂ-ಈಪರಿಯಾಗಿ, ಶುದ್ಧಸಮಾಚಾರಾ-ಪರಿಶುದ್ಧವಾದ ನಡತೆಯುಳ್ಳ, ಸೀತಾ-ಸೀತಾದೇವಿಯು, ದೇವಗಂಧರ್ವಸನ್ನಿಧೌ-ದೇವ-ದೇವತೆಗಳ, ಗಂಧರ್ವ-ಗಂಧರ್ವರ, ಸನ್ನಿಧೌ-ಸಮೀಪದಲ್ಲಿ, ಲಂಕಾದ್ವೀಪೇ-ಲಂಕಾದ್ವೀಪದಲ್ಲಿ, ಮಹೇಂದ್ರೇಣ-ದೇವೇಂದ್ರನಿಂದ, ಮಮ-ನನ್ನ, ಹಸ್ತೇ-ಕೈಯಲ್ಲಿ, ನಿವೇಶಿತಾ-ಇರಿಸಲ್ಪಟ್ಟಳು ॥೮॥ ಮೇ-ನನ್ನ, ಅಂತರಾತ್ಮಾಚ-ಮನವೂ ಸಹ, ಯಶಸ್ವಿನೀಂ-ಕೀರ್ತಿವಂತಳಾದ, ಸೀ ತಾಂ-ಸೀತಾದೇವಿಯನ್ನು, ಶುದ್ಧಾಂ-ಪರಿಶುದ್ಧಳಾದವಳನ್ನಾಗಿ, ವೇತ್ತಿ-ತಿಳಿದುಕೊಂಡಿದೆ, ಅತಃ-ಈಕಾರಣದ ದೆಶೆಯಿಂದ, ವೈದೇಹೀಂ-ಸೀತಾದೇವಿಯ ನ್ನು, ಗೃಹೀತ್ವಾ-ಕರೆದುಕೊಂಡು, ಅಹಂ-ನಾನು, ಅಯೋಧ್ಯಾಂ-ಅಯೋಧ್ಯಾಪಟ್ಟಣವ ಕುರಿತು, ಆಗತಃ-ಬಂದೆನು ॥೯॥ ಮೇ-ನನ್ನ ಹೃದಿ- ಮನದಲ್ಲಿ, ಶೋಕಃ-ದುಃಖಾಕರವಾದ, ಮಹಾನ್-ದೊಡ್ಡದಾದ, ಅಯಂವಾದಃ-ಈಪ್ರವಾದೆಯು, ವರ್ತತೇ-ಇರುತಿದೆ, ಪೌರಾಪವಾದಃ-ಪೌರ-ಪಟ್ಟಣ ಸ್ಥರ, ಅಪವಾದಃ-ನಿಂದಾವಾರ್ತೆಯು, ಸುಮಹಾನ್-ದೊಡ್ಡದಾಗಿಧೆ, ಜನಪದಸ್ಯ - ದೇಶವಾಸಿಗಳಾದ ಜನರ (ಅಪವಾದಃ-ನಿಂದೆಯು) ತಥಾ-ಹಾ ಗೆಯೆ (ವರ್ತತೇ-ಇಧೆ) ॥೧೦॥ ಯಸ್ಯಕಸ್ಯಚಿತ್-ಯಾವದೋ ಒಂದಾದ, ಭೂತಸ್ಯ-ಭೂತಕ್ಕೆ, ಲೋಕೇ-ಲೋಕದಲ್ಲಿ, ಅಕೀರ್ತಿಃ-ಅಪಯಶಸ್ಸು, ಜಾ ಯೇತ-ಹುಟ್ಟೀತೋ, ಶಬ್ದಸ್ತು-ಶಬ್ದವಾದರೆ, ಯಾವತ್ಕೀರ್ತ್ಯತೇ-ಯಷ್ಟುಪರ್ಯಂತವು ಹೇಳಲ್ಪಡುತ್ತದೊ, ತಾವತ್-ಅದುವರಿಗು, ಸಃ-ಆಪುರುಷನು, ಅಧಮಾನ್ಲೋಕಾನ್-ನಿಕೃಷ್ಟಲೋಕಗಳಲ್ಲಿ, ಪತತಿ-ಬೀಳುವನು ॥೧೧॥ ಅಕೀರ್ತಿಃ-ಅಪಕೀರ್ತಿಯು, ದೇವೈಃ-ದೇವತೆಗಳಿಂದ, ನಿಂದ್ಯತೇ-ನಿಂದಿಸಲ್ಪಡುತ್ತ

---

ದೇಶದೊಳು ಈಗ ಯಾವ ನನ್ನ ಚರಿತ್ರೆಯು ಇರುವಂಥಾವಾಗಿಧೆಯೋ, ಅದು ನನ್ನ ಪೂರ್ವಿಕರನ್ನೆಲ್ಲ ಕತ್ತರಿಸು ತ್ತಿರುವದು ॥ ೩ ॥ ನಾನಾದರೆ ಮಹಾತ್ಮರಾದ ಇಕ್ಷ್ವಾಕು ಕುಲಸ್ಥರಾಜರವಂಶದಲ್ಲಿ ಹುಟ್ಟಿದವನು, ಪಾಪಪ್ರಪಾದೆ ಯುಳ್ಳ ಸೀತಾದೇವಿಯನ್ನು ಹ್ಯಾಗೆ ಕರೆದುಕೊಳ್ಳಲಿ ॥೪॥ ಎಲೈ ಲಕ್ಷ್ಮಣನೆ ! ವಿಜನವಾಗಿರ್ಪ ದಂಡಕವನದಲ್ಲಿ ಸೀತಾದೇವಿಯು ರಾವಣನಿಂದ ಪಹರಿಸಲ್ಪಡಲೂ, ಆ ದಶಕಂಧರನು ನನ್ನಿಂದ ಧ್ವಂಸಿತನಾದನು ಇದೆಲ್ಲ ನಿನಗೆ ಗೊ ತ್ತಾಗಿಹೋ ಇರುವದಷ್ಟೆ ॥೫॥ನಿನ್ನೆದುರಾಗಿಯೇ, ದೇವತೆಗಳ್ ಮತ್ತು ಋಷಿಗಳ್ ಸಮಕ್ಷಮ ದೇವತೆಗಳೊಳಗೆ ಅ ಗ್ನಿಯೂ, ಆಕಾಶಗಾಮಿಯಾದವಾಯುವೂ, ಸೂರ್ಯಚಂದ್ರರು ಇವರೆಲ್ಲರು, ಸೀತಾದೇವಿಯು ಪಾಪಿಯಲ್ಲ ಎಂದು ಪೇಳಿರುವರಷ್ಟೆ ॥೭॥ ಈಪರಿಪರಿಶುದ್ಧಳಾದ ಜನಕನಂದಿನಿಯನ್ನು ದೇವಗಂಧರ್ವ ಸಮಕ್ಷಮದಲ್ಲಿ, ದೇವೇಂದ್ರನು ನನ್ನ ಹಸ್ತದೊಳಿರಿಸಿದನಾದಕಾರಣ, ಮಹಾಯಶೋವಂತಳಾದ 'ಸೀತಾದೇವಿಯು ಪರಿಶುದ್ಧಳಾಗಿರುವಳೆಂದು ಎನ್ನ ಮನಕ್ಕೂ ಕೂಡಾ ಗೊತ್ತಾಗಿಧೆ, ಈ ಹೇತುವಿನಿಂದ ನಾನು ಆಕೆಯನ್ನು ಈ ಅಯೋಧ್ಯಾಪುರಕ್ಕೆ ಕರೆದುಕೊಂಡು ಬಂದೆನು ॥೯॥ ಈಗ ಪಟ್ಟಣದಲ್ಲಿಯೂ ದೇಶದಲ್ಲಿಯೂ ಸಹ ಬಹಳ್ ಮಾತುಗಳು ಹುಟ್ಟಿದಂಥಾದ್ದಾಗಿವೆ, ಯನಗೆ ಆ ಮಾತುಗಳ ಕೇಳೋಣದರಿಂದ ಬಹಳ ದುಃಖವುಂಟಾಗಿಧೆ, ಪೌರಾಪವಾದವೆಂಬದು ಮಹತ್ತರವಾದದ್ದು, ಲೋಕ ದೊಳು ಯಾವಪುರುಷನಿಗಾಗಲಿ ಅಪಕೀರ್ತಿಯು ಹುಟ್ಟಿದರೆ, ಆ ಕೆಟ್ಟಶಬ್ದವು ಅಣಗಿಹೋಗುವವರಿಗು, ಆ ಪುರುಷ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಥಂ ಹಿ ಸರ್ವಾರಂಭಸ್ಸರ್ವೇಷಾಮ್ ಮಹಾತ್ಮನಾಮ್ ॥೧೦॥ ಅಪ್ಯಹಂ ಜೀವಿತಂ ಜಹ್ಯಾಂ ಯುಷ್ಮಾನ್ ವಾ ಪುರುಷರ್ಷಭಾಃ । ಅಪ ವಾದಭಯಾದ್ಭೀತಃ ಕಿಂ ಪುನರ್ಜನಕಾತ್ಮಜಾಮ್ ॥೧೧॥ ತಸ್ಮಾದ್ಭವಂತಃ ಪಶ್ಯಂತು ಪತಿತಂ ಶೋಕಸಾಗರೇ । ನಹಿ ಪಶ್ಯಾಮ್ಯ ಹಂ ಭೂತಂ ಕಿಂಚಿದ್ದುಃಖಮತೋಽಧಿಕಮ್ ॥೧೨॥ ಶ್ವಸ್ತ್ವಂ ಪ್ರಭಾತೇ ಸೌಮಿತ್ರೇ ಸುಮಂತ್ರಾಧಿಷ್ಠಿತಂ ರಥಮ್ । ಆರುಹ್ಯ ಸೀತಾಮಾ ರೋಪ್ಯ ವಿಷಯಾಂತೇ ಸಮುತ್ಸೃಜ ॥೧೩॥ ಗಂಗಾಯಾಸ್ತು ಪರೇ ಪಾರೇ ವಾಲ್ಮೀಕೇಸ್ತು ಮಹಾತ್ಮನಃ । ಆಶ್ರಮೋ ದಿವ್ಯಸಂ ಕಾಶಸ್ತಮಸಾತೀರಮಾಶ್ರಿತಃ ॥೧೪॥ ತತ್ರೈನಾಂ ವಿಜನೇ ದೇಶೇ ವಿಸೃಜ್ಯ ರಘುನಂದನ । ಶೀಘ್ರಮಾಗಚ್ಛ ಸೌಮಿತ್ರೇ ಕುರುಷ್ವ ವಚನಂ ಮಮ ॥೧೫॥ ನಚಾಸ್ಮಿ ಪ್ರತಿವಕ್ತವ್ಯಸ್ಸೀತಾಂ ಪ್ರತಿ ಕಥಂಚನ । ತಸ್ಮಾತ್ತ್ವಂ ಗಚ್ಛ ಸೌಮಿತ್ರೇ ನಾತ್ರ ಕಾರ್ಯಾ ವಿಚಾ ರಣಾ ॥೧೬॥ ಅಪ್ರೀತಿರ್ಹಿ ಪರಾ ಮಹ್ಯಂ ಭವೇತ್ತು ಪ್ರತಿವಾರಣೇ । ಶಾಪಿತಾ ಹಿ ಮಯಾ ಯೂಯಂ ಪಾದಾಭ್ಯಾಂ ಜೀವಿತೇನ

---

ದೇ, ಕೀರ್ತಿಃ-ಕೀರ್ತಿಯು, ದೇವೇಷು-ದೇವತೆಗಳಲ್ಲಿ, ಪೂಜ್ಯತೆ-ಪೂಜಿಸಲ್ಪಡುತ್ತೆ, ಮಹಾತ್ಮನಾಂ-ಮಹಾತ್ಮರ, ಸರ್ವಃ-ಸಮಸ್ತವಾದ, ಸಮಾರಂಭಃ-ಉದ್ಯೋಗವೂ, ಕೀರ್ತ್ಯರ್ಥಮೇವ – ಕೀರ್ತಿನಿಮಿತ್ತವಾಗಿಯಷ್ಟೇ ॥ ೧೦ ॥ ಹೆ ಪುರುಷರ್ಷಭಾಃ-ಎಲೈ ಪುರುಷಶ್ರೇಷ್ಠರೇ, ಅಹಂ-ನಾನು, ಅಪ ವಾದಭಯಾತ್-ಅಪವಾದ, ಜನಾಪವಾದದ, ಭಯಾತ್-ಭಯದದೆಸೆಯಿಂದ, ಭೀತಃ – ಭಯಗೊಂಡವನಾಗಿ, ಜೀವಿತಮಪಿ – ಪ್ರಾಣವನ್ನಾದರೂನು, ಜಹ್ಯಾಂ – ಬಿಡುವೆನು, ಯುಷ್ಮಾನ್ವಾ – ನಿಮ್ಮನ್ನಾದರೂ, ಜಹ್ಯಾಂ-ಬಿಡುವೆನು, ಜನಕಾತ್ಮಜಾಂ – ಸೀತಾದೇವಿಯನ್ನು, ಕಿಂಪುನಃ – ಇನ್ನು ಹೇಳತಕ್ಕದ್ದೇನು ॥ ೧೧ ॥ ತಸ್ಮಾತ್ – ಆದಕಾರಣದದೆಸೆಯಿಂದ, ಭವಂತಃ – ನೀವು, ಶೋಕಸಾಗರೆ-ಶೋಕವೆಂಬ ಸಮುದ್ರದಲ್ಲಿ,ಪತಿತಂ-ಬಿದ್ದಿರುವ, ವ ನನ್ನನ್ನು, ಪಶ್ಯಂತು – ನೋಡಿರಿ, ಅಹಂ-ನಾನು, ಅತಃ – ಇದಕ್ಕಿಂತಲೂ, ಅಧಿಕಂ- ಹೆಚ್ಚಾಗಿ, ಭೂತಂ – ಪುಟ್ಟಿದ, ಕಿಂಚಿದುಃಖಂ – ಯಾ ವದಾದೊಂದು ದುಃಖವನ್ನು, ನಹಿಪಶ್ಯಾಮಿ – ನೋಡಲಿಲ್ಲಾ ॥ ೧೨ ॥ ಹೆ ಸೌಮಿತ್ರೆ-ಎಲೈ ಲಕ್ಷ್ಮಣನೇ, ತ್ವಂ – ನೀನು, ಶ್ವಃ- ನಾಳೆ ಪ್ರಭಾತೆ-ಪ್ರಾತಃಕಾಲದಲ್ಲಿ, ಸುಮಂತ್ರಾಧಿಷ್ಠಿತಂ- ಸುಮಂತ್ರನಿಂದ ಅಧಿಷ್ಠಾನ ಮಾಡಲ್ಪಟ್ಟ, ರಥಂ – ರಥವನ್ನು, ಆರುಹ್ಯ – ಹತ್ತಿ, ಸೀತಾಂ-ಸೀತಾದೇವಿಯನ್ನು, ಆರೋಪ್ಯ-ಏರಿಸಿಕೊಂಡು, ವಿಷಯಾಂತೆ – ವಿಷಯ-ದೇಶದ, ಅಂತೆ – ಕೊನೆಯಲ್ಲಿ, ಸಮುತ್ಸೃಜ – ಬಿಟ್ಟುಬಿಡು ॥ ೧೩ ॥ ಗಂಗಾಯಾಃ-ಗಂಗಾನದಿಯ, ಅಪರೆಪಾರೆ-ಪಶ್ಚಿಮತೀರದಲ್ಲಿ, ಸುಮಹಾತ್ಮನಃ-ಮಹಾ ಮನಸ್ವಿಯಾದ, ವಾಲ್ಮೀಕೆಃ-ವಾಲ್ಮೀಕಿ ಋಷಿಯ, ದಿವ್ಯಸಂಕಾಶಃ- ದಿ ವ್ಯಸ್ಥಲಕ್ಕೆ ಸಮಾನವಾದ, ತಮಸಾತೀರಂ-ತಮಸಾನದೀ ದಡವನ್ನು, ಆಶ್ರಿತಃ-ಪೊಂದಿರುವ, ಆಶ್ರಮಃ-ಆಶ್ರಮವು, ಅಸ್ತಿ-ಇಧೆ ॥೧೪॥ ಹೆ ರಘುನಂದನ-ಎಲೈ ರಘುವಂಶೋತ್ಪನ್ನನಾದ,ಹೆ ಸೌಮಿತ್ರೆ-ಎಲೈ ಲಕ್ಷ್ಮಣನೇ-ತತ್ರ-ಆ ಆಶ್ರಮದಲ್ಲಿ, ವಿಜನೆ-ಜನರಹಿತವಾದ, ದೆಶೆ-ಪ್ರದೇಶದಲ್ಲಿ, ವಿಸೃಜ್ಯ-ಬಿಟ್ಟು, ಶೀಘ್ರಂ-ಜಾಗ್ರತೆಯಾಗಿ, ಆಗಚ್ಛ-ಬಾರೈ, ಮಮ-ಯನ್ನ, ವಚನಂ-ಮಾತನ್ನು, ಕುರುಷ್ವ-ಮಾಡು ॥೧೫॥ ಹೇ ಸೌಮಿತ್ರೆ-ಎಲೈ ಲಕ್ಷ್ಮಣನೆ, ಸೀತಾಂಪ್ರತಿ-ಸೀತಾದೇವಿಯನ್ನು ಕುರಿತು, ಕಥಂಚನ-ಹ್ಯಾಗಾದರು, ಪ್ರತಿವಕ್ತವ್ಯಃ-ಪ್ರತ್ಯುತ್ತರ ಹೇಳತಕ್ಕವನು, ನಾಸ್ಮಿ-ಆಗಲಾರೆನು, ತಸ್ಮಾತ್ ಆಕಾರಣದ ದೆಸೆಯಿಂದ, ತ್ವಂ-ನೀನು, ಗಚ್ಛ-ಪೋಗು, ಅತ್ರ-ಈ ಅರ್ಥದಲ್ಲಿ, ವಿಚಾರಣಾ-ಚರ್ಚೆಯು, ನಕಾರ್ಯಾ-ಮಾಡತಕ್ಕದ್ದಲ್ಲಾ ॥೧೬॥ ಪ್ರತಿ ವಾರಣೆ-ನಿರೋಧವೂ, ಕೃತೆಸತಿ-ಮಾಡಲ್ಪಟ್ಟದ್ದಾದರೇ, ಮಹ್ಯಂ-ನನಿಗೋಸುಗ, ಪರಾ-ಅಧಿಕವಾದ, ಅಪ್ರೀತಿಃ-ಅವಿಶ್ವಾಸವೂ, ಭವೇತ್-ಆಧೀತು

---

ನು ಅಧೋಲೋಕಗಳಲ್ಲಿ ಬಿದ್ದು ಹೋಗಿಯೇ ಇರುವನು, ಇದಲ್ಲದೆ ದೇವತೆಗಳು ಕೂಡಾ,ಆ ಅಪಯಶಸ್ಸನ್ನು ನಿಂದಿಸುತ್ತಲೂ ಕೀರ್ತಿಯನ್ನು ಪೂಜಿಸುತ್ತಲೂ ಇರುವರು, ಆದಕಾರಣ ಮಹಾತ್ಮರೆಲ್ಲರು ಕೀರ್ತಿಗೋಸುಗವೇ ಎಲ್ಲಾ ಕಾರ್ಯಂಗಳಂ ಗೈಯುತ್ತಿರುವರು ॥೧೦॥ ಎಲೈ ಪುರುಷಶ್ರೇಷ್ಠರೆ! ಅಪವಾದ ಭೀತಿಗೆ ಹೆದರಿದವನಾಗಿ ಪ್ರಾಣವನ್ನಾದರು ನೀಗುವೆನು,ಅಥವಾ ಸಹಜರಾದ ನಿಮ್ಮಗಳನ್ನಾದರೂ ಬಿಡುವೆನುಹೀಗಿರುವಲ್ಲಿ ಸೀತಾದೇವಿಯಂ ವಿಷಯದಲ್ಲಿ ಯೇನು ಹೇಳತಕ್ಕದ್ದಾಗಿರುವದು (ಅಂದರೆ ಸೀತೆಯನ್ನು ಹ್ಯಾಗಾದರು ಬಿಡುವೆನೆಂದು ಭಾವವು) ಆದ ಕಾರಣ ಶೋಕಸಮುದ್ರದಲ್ಲಿ ಮುಳಿಗಿಸಿರ್ಪ ನನ್ನನ್ನು ನೋಡಿರಿ. ಇದಕ್ಕಿಂತಲು ಹೆಚ್ಚಾದ ದುಃಖವು ಯಾವದೊಂದು ಇಲ್ಲ,॥ ಎಲೈಲಕ್ಷ್ಮಣನೆ!ನೀನುನಾಳೆಯದಿನಪ್ರಾತಃಕಾಲದೊಳುಸುಮಂತ್ರನಿಂದರಥವಂಕಟ್ಟಿಸಿ,ಅದರೊಳುಸೀತಾದೇವಿಯನ್ನೇರಿಸಿ ನಮ್ಮ ದೇಶದ ತುದಿಭಾಗದಲ್ಲಿ ಬಿಟ್ಟುಬಿಡು ॥೧೩॥ ಎಲೈಲಕ್ಷ್ಮಣನೆ ! ಗಂಗಾನದಿಯ ಅತ್ತಕಡೆಯ ತೀರಕೂ ತಮಸಾ ನದಿಯ ದಡಕೂ ಮಧ್ಯಭಾಗದಲ್ಲಿ ವಾಲ್ಮೀಕಿ ಮಹಾಮುನಿಯ ದಿವ್ಯಾಶ್ರಮ ವಿರ್ಪುದು ಜನರಹಿತ ವಾದ ಆ ಯಡದಲ್ಲಿ ಈ ಸೀತಾದೇವಿಯಂ ಬಿಟ್ಟು, ನೀನು ತ್ವರಿತವಾಗಿ ಹಿಂತಿರಿಗಿಬಾ ಸೀತಾವಿಷಯವಂ ಕುರಿತು ಎನ್ನಮಾತಿಗೆ ಪ್ರತ್ಯುತ್ತರವಂ ಪೇಳದೆ ಮಾಡುವಂಥಾವನಾಗು ಎಲೈ ಸುಮಿತ್ರಾನಂದನನೆ ಈ ವಿಷಯದಲ್ಲಿ ಚರ್ಚಿಸದೆ ತ್ವರಿತವಾಗಿ ನೀನು ತೆರಳು. ಈ ಮಾತಿಗೆ ನೀನು ಬದುಲುಪೇಳಿದರೆ ನನಿಗೆ ಅವಿಶ್ವಾಸವುಂಟಾಗುವದಲ್ಲದೆ ನೀವುಗಳು ಎಂನ್ನ ಪಾದಗಳಿಂದಲು ಪ್ರಾಣದಿಂದಲೂ ಶಪಿಸಲ್ಪಡುವಿರಿ. ನಾನು ಮಾತಾಡುವ ಮಧ್ಯದಲ್ಲಿ ನನ್ನನ್ನು ಸಮಾಧಾನಗೊಳಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚ ॥೧೯॥ ಯೇ ಮಾಂ ವಾಕ್ಯಾಂತರೇ ಬ್ರೂಯುರನುನೇತುಂ ಕಥಂಚನ । ಅಹಿತಾನಾಮತೇನಿತ್ಯಂಮದಭೀಷ್ಟವಿಘಾತನಾತ್ ।
ಮಾನಯಂತುಭವಂತೋಮಾಂಯದಿಮಚ್ಛಾಸನೇಸ್ಥಿತಾಃ । ಇತೋಽದ್ಯನೀಯತಾಂಸೀತಾಕುರುಧ್ವಂವಚನಂಮಮ ॥೨೧॥
ಪೂರ್ವಮುಕ್ತೋಹಮನಯಾಗಂಗಾತೀರೇನುಹಾಶ್ರಮಾನ್ । ಪಶ್ಯೇಯಮಿತಿತಸ್ಯಾಶ್ಚ ಕಾಮಸ್ಸಂವರ್ತ್ಯತಾಮಯಂ ॥೨೨॥ ಏ
ವಮುಕ್ತ್ವಾ ತು ಕಾಕುತ್ಸ್ಥೋ ಬಾಷ್ಪೇಣಪಿಹಿತೇಕ್ಷಣಃ । ಪ್ರವಿವೇಶಸ್ವಭವನಂಭ್ರಾತೃಭಿಃಪರಿವಾರಿತಃ ॥೨೩॥

...ಇತಿ ಶ್ರೀಮದುತ್ತರ ರಾಮಾಯಣೇ ಪಂಚ ಚತ್ವಾರಿಂಶಸ್ಸರ್ಗಃ...

ತತೋರಜನ್ಯಾಂವ್ಯುಷ್ಟಾಯಾಂಲಕ್ಷ್ಮಣೋದೀನಚೇತಸಃ । ಸುಮಂತ್ರಮಬ್ರವೀದ್ವಾಕ್ಯಂಮುಖೇನಪರಿಶುಷ್ಯತಾ ॥ ಸಾರಥೇತುರಗಾನ್ ಶೀಘ್ರಂಯೋಜಯಸ್ವರಥೋತ್ತಮೇ । ಸ್ವಾಸ್ತೀರ್ಣಂರಾಜಭವನಾತ್ಸೀತಾಯಾಶ್ಚಾಸನಂಕುರು ॥೨॥ ಸೀ
ತಾಹಿರಾಜಭವನಾದಾಶ್ರಮಂಪುಣ್ಯಕರ್ಮಣಾಂ । ಮಯಾನೇಯಾಮಹರ್ಷೀಣಾಂಶೀಘ್ರಮಾನೀಯತಾಂರಥಃ ॥೩॥

---

ಮಯಾ-ನನ್ನಿಂದ, ಯೂಯಂ-ನೀವುಗಳು, ಪಾದಾಭ್ಯಾಂ-ಪಾದಗಳೊಡನೆ, ಜೀವಿತೇನಚ-ಪ್ರಾಣದಿಂದ, ಶಾಪಿತಾಃ- ಶಪಿಸಲ್ಪಡತಕ್ಕವರಾಗುವಿರಿ ॥೧೯॥ ಯೇ-ಯಾರು, ವಾಕ್ಯಾಂತರೇ- ಮಾತನಾಡುವ ಮಧ್ಯದಲ್ಲಿ, ಕಥಂಚನ-ಅತಿಪ್ರಯಾಸದಿಂದ, ಮಾಂ- ನನ್ನನ್ನು, ಅನುನೇತುಂ-ಸಮ್ಮತಿ ಗೊಳಿಸುವದ ಕ್ಕೋಸುಗ, ಬ್ರೂಯುಃ-ಹೇಳುವಿರೋ, ತೇ-ಅವರುಗಳು, ಮದಭೀಷ್ಟವಿಘಾತನಾತ್-ನನ್ನ ಅಭೀಷ್ಟದ ಘಾತದದೆಸೆಯಿಂದ, ನಿತ್ಯಂ-ಯಾವಾಗ್ಯೂ, ಅಹಿತಾ ನಾಮ-ಶತ್ರುಗಳಷ್ಟೇ, ॥೨೦॥ ಮಚ್ಛಾಸನೇ-ನನ್ನ ಆಜ್ಞೆಯಲ್ಲಿ, ಸ್ಥಿತಾಯದಿ- ಇರುತ್ತಿರುವರೆ ಆದರೇ, ಭವಂತಃ-ನೀವು, ಮಾಂ-ನನ್ನನ್ನು, ಮಾನ ಯಂತು-ಬಹುಮತಿಮಾಡಿರಿ, ಅದ್ಯ-ಈಗಲೆ, ಇತಃ-ಈ ಪಟ್ಟಣದದೆಸೆಯಿಂದ, ಸೀತಾ-ಸೀತಾದೇವಿಯು, ನೀಯತಾಂ- ತೆಗದುಕೊಂಡುಹೋಗಲ್ಪಡಲೀ, ಮಮ-ನನ್ನ, ವಚನಂ-ಮಾತನ್ನು, ಕುರುಧ್ವಂ-ಮಾಡು ॥೨೧॥ ಅಹಂ-ನಾನು, ಪೂರ್ವಂ-ಪೂರ್ವದಲ್ಲಿ, ಅನಯಾ-ಈ ಸೀತಾದೇವಿಯಿಂದ, ಗಂಗಾತೀರೇ- ಗಂಗಾನದಿಯ ದಡದಲ್ಲಿ, ಮಹಾಶ್ರಮಾನ್-ದೊಡ್ಡ ಆಶ್ರಮಗಳನ್ನು, ಪಶ್ಯೇಯಮಿತಿ-ನೋಡುವೆನೆಂದು, ಉಕ್ತಃ-ಹೇಳಲ್ಪಟ್ಟೆನು, ತಸ್ಯಾಃ-ಆ ಸೀತಾದೇವಿ ಯ, ಅಯಂಕಾಮಶ್ಚ-ಈ ಕೋರಿಕೆಯು, ಸಂವರ್ತ್ಯತಾಂ- ನೆರವೇರಿಸಲ್ಪಡಲೀ ॥೨೨॥ ಕಾಕುತ್ಸ್ಥಃ-ಶ್ರೀರಾಮನು, ಏವಂ-ಈಪರಿ, ಉಕ್ತ್ವಾತು-ಹೇಳಿ ಯಾದರೆ, ಬಾಷ್ಪೇಣ-ಕಣ್ಣೀರಿನಿಂದ, ಪಿಹಿತೇಕ್ಷಣಃ-ಪಿಹಿತ-ತುಂಬಲ್ಪಟ್ಟ (ಮುಚ್ಚಲ್ಪಟ್ಟ) ಈಕ್ಷಣಃ-ನೇತ್ರಗಳುಳ್ಳವನಾಗಿ, ಭ್ರಾತೃಭಿಃ- ತಮ್ಮಂದಿರಿಂದ, ಪರಿವಾರಿತಃ-ಸುತ್ತಿಕೊಳ್ಳಲ್ಪಟ್ಟವನಾಗಿ, ಸ್ವಭವನಂ-ತನ್ನ ಮನೆಯನ್ನು, ವಿವೇಶ-ಹೊಕ್ಕನು ॥೨೩॥

—...*ಇತಿಶ್ರೀಮದುತ್ತರರಾಮಾಯಣೇ ಪಂಚಚತ್ವಾರಿಂಶಸರ್ಗಃ*...—

ತತಃ-ಬಳಿಕ, ರಜನ್ಯಾಂ-ರಾತ್ರಿಯು, ವ್ಯುಷ್ಟಾಯಾಂ-ಕಳೆಯುತ್ತಿರಲೂ, ಲಕ್ಷ್ಮಣಃ- ಲಕ್ಷ್ಮಣನು, ದೀನಚೇತಸಃ-ದೈನ್ಯವುಳ್ಳ ಮನವುಳ್ಳವನಾ ಗಿ, ಸುಮಂತ್ರಂ-ಸುಮಂತ್ರನ ಕುರಿತು, ಪರಿಶುಷ್ಯತಾ-ಬಾಡಿದ, ಮುಖೇನ-ಮುಖದಿಂದ ಕೂಡಿಕೊಂಡಿರುವನಾಗಿ, ವಾಕ್ಯಂ-ವಚನವನ್ನು, ಅಬ್ರವೀತ್- ನುಡಿದನು ॥೧॥ ಹೇಸಾರಥೇ-ಎಲೈ ಸಾರಥಿಯೇ ತುರಗಾನ್-ಕುದುರೆಗಳನ್ನು, ಶೀಘ್ರಂ-ಜಾಗ್ರತೆಯಾಗಿ, ರಥೋತ್ತಮೇ- ಉತ್ತಮವಾದ ರಥದಲ್ಲಿ, ಯೋ ಜಯಸ್ವ-ಕಟ್ಟು, ರಾಜಭವನಾತ್-ಅರಮನೆಯದೆಸೆಯಿಂದ, ಸೀತಾಯಾಶ್ಚ-ಸೀತಾದೇವಿಯ, ಆಸನಂ-ಆಸನವನ್ನು, ಆನೀಯ-ತೆಗದುಕೊಂಡುಬಂದು, ಸ್ವಾಸ್ತೀರ್ಣಂ-ಚನ್ನಾಗಿ ಹಾಸಲ್ಪಟ್ಟದ್ದನ್ನಾಗಿ, ಕುರು-ಮಾಡು ॥೨॥ ಸೀತಾ-ಸೀತಾದೇವಿಯು, ರಾಜಭವನಾತ್-ಅರಮನೆಯದೆಸೆಯಿಂದ, ಪುಣ್ಯ ಕರ್ಮಣಾಂ-ಪುಣ್ಯಕರವಾದ ವ್ಯಾಪಾರವುಳ್ಳ, ಮಹರ್ಷೀಣಾಂ-ಋಷಿಗಳ, ಆಶ್ರಮಂ-ಆಶ್ರಮವನ್ನು ಕುರಿತು, ಮಯಾ-ನನ್ನಿಂದ, ನೇಯಾ-ಕರದು ಕೊಂಡುಹೋಗತಕ್ಕವಳೂ,ಶೀಘ್ರಂ-ಜಾಗ್ರತೆಯಾಗಿ, ರಥಃ-ರಥವು, ಆನೀಯತಾಂ-ತರಲ್ಪಡಲೀ॥೩॥ಸುಮಂತ್ರಸ್ತು-ಸುಮಂತ್ರನಾದರೋ, ತಥೇತ್ಯುಕ್ತ್ವಾ-

---

ಸುವದಕ್ಕೋಸುಗ ಯಾರು ಮಾತನಾಡುವಂಥಾವರಾಗುವರೊ ಅವರು ಎನ್ನ ಅಭಿಲಾಷೆಯಂ ನೆರವೇರಿಸದೆ ಇರೋಣದರಿಂ ದ ನನಗೆಶತ್ರುಗಳಾಗಿರುವರೆಂದೆಣಿಸುತ್ತೇನೆ ॥೨೦॥ ನೀವ ನನ್ನಾಜ್ಞೆಯೊಳಿರುವಂಥಾವರಾದಾಗ, ಈಗಲೇ ಸೀತೆಯಂ ಕರೆದುಕೊಂಡು ಪೋಗಿ ನಾ ಪೇಳಿದ ತೆರದಿ ಮಾಡುವಂಥಾವರಾಗಿ ಎನ್ನಮಾನವಂ ಕಾಪಾಡಿರಿ॥೨೧॥ ಪೂರ್ವದಲ್ಲಿಯೆ ಸೀತೆಯು ಗಂಗಾನದಿಯ ದಡದಲ್ಲಿರ್ಪ ಮಹರ್ಷಿಗಳ ಆಶ್ರಮಗಳಂ ವೀಕ್ಷಿಸಲಪೇಕ್ಷಿಸಿದಳು, ಆದಕಾರಣ ಆಕೆಯ ಅ ಭಿಲಾಷೆಯನ್ನು ನೆರವೇರಿಸಿರೆಂದು ಶ್ರೀರಾಮನು ನಿರೂಪಿಸಿ, ಕಂಬನಿಗಳಿಂದ ಕಲುಷವಾದ ನೇತ್ರಗಳುಳ್ಳವನಾಗಿ, ತ ಮ್ಮಂದರ ಸಂಗಡಮನೆಯಂ ಪ್ರವೇಶಿಸಿದಂಥಾವನಾದನು ॥೨೩॥

—...ಉತ್ತರ ರಾಮಾಯಣದಲ್ಲಿನ ೪೫ನೆಯ ಸರ್ಗಂ ಮುಗಿದುದು...—

ಬಳಿಕ ಪ್ರಾತಃಕಾಲವಾಗಲು ಲಕ್ಷ್ಮಣನು ದೀನಮನಸ್ಕನಾಗಿಯೂ, ಕಂಗೆಟ್ಟ ಮುಖವುಳ್ಳವನಾಗಿಯೂ ಇರು ವನಾಗಿ, ಸುಮಂತ್ರನಂ ಕುರಿತು ಎಲೈ ಸಾರಥಿಯಾದ ಸುಮಂತ್ರನೆ ! ಕುದುರೆಗಳಂ ರಥಕ್ಕೆ ಕಟ್ಟಿ ಸೀತಾದೇವಿಯ ಹಾಸಿಗೆಯಂ, ಅದರೊಳು ಚನ್ನಾಗಿ ಹಾಸುವಂಥಾವನಾಗು, ಯಾಕೆಂದರೆ ಆಕೆಯು ಪುಣ್ಯಕಾರಿಗಳಾದ ಋಷಿಗಳ ಆಶ್ರಮಕ್ಕೆ ಪೋಗಬೇಕಾಗಿದೆ, ತ್ವರಿತವಾಗಿ ರಥವಂ ತರಿಸೆಂದು ನಿರೂಪಿಸಲೂ,ಆಸುಮಂತ್ರನು ಹಾಗೆಯೆ ಆಗಲೆಂದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸುಮಂತ್ರಸ್ತು ತಥೇತ್ಯುಕ್ತ್ವಾ ಯುಕ್ತಂಪರಮವಾಜಿಭಿಃ । ರಥಂಸುರುಚಿರಪ್ರಖ್ಯಂಸ್ವಾಸ್ತೀರ್ಣಂಶುಭಶಯ್ಯಯಾ ॥ ಆದಾಯೋವಾಚಸೌಮಿತ್ರಿಂಮಿತ್ರಾಣಾಂಹರ್ಷವರ್ಧನಮ್ ॥೪॥ ರಥೋಯಂಸಮನುಪ್ರಾಪ್ತೋಯತ್ಕಾರ್ಯಂಕ್ರಿಯತಾಂಪ್ರಭೋ ॥೫॥ ಏವಮುಕ್ತಸ್ಸುಮಂತ್ರೇಣರಾಜವೇಶ್ಮಸಲಕ್ಷ್ಮಣಃ । ಪ್ರವಿಶ್ಯಸೀತಾಮಾಸಾದ್ಯವ್ಯಾಜಹಾರನರರ್ಷಭಃ ॥೬॥ ಗಂಗಾತೀರೇಮಯಾದೇವಿಮುನೀನಾಮಾಶ್ರಮೇಶುಭೇ । ಪುಣ್ಯೇಚಋಷಿಜುಷ್ಟೇಚನೇಯಾನೇಯಾಭವಿಷ್ಯಸಿ ॥೭॥ ತ್ವಯಾಕಾಲೇಚನೃಪತಿರ್ವರಂಪ್ರಯಾಚಿತಃಪ್ರಭುಃ । ನೃಪೇಣಚಪ್ರತಿಜ್ಞಾತ್ತಂಸ್ವಾಶ್ರಮಂಪ್ರತಿಧೀಮತಾ ॥೮॥ ಶೀಘ್ರಂಮಯೋಪನೇಯಾಸಿಶಾಸನಾತ್ಪಾರ್ಥಿವಸ್ಯನಃ ॥೯॥ ಏವಮುಕ್ತಾತುವೈದೇಹೀಲಕ್ಷ್ಮಣೇನಮಹಾತ್ಮನಾ । ಪ್ರಹರ್ಷಮತುಲಂಲೇಭೇಗಮನಂಸಮರೋಚಯತ್ ॥೧೦॥ ವಾಸಾಂಸಿಚಮಹಾರ್ಹಾಣಿರತ್ನಾನಿವಿವಿಧಾನಿಚ । ಗೃಹೀತ್ವಾತಾನಿವೈದೇಹೀಗಮನಾಯೋಪಚಕ್ರಮೇ ॥೧೧॥ ಇಮಾನಿಮುನಿಪತ್ನೀನಾಂದಾಸ್ಯಾಮ್ಯಾಭರಣಾನ್ಯಹಮ್ । ವಸ್ತ್ರಾಣಿಚಮಹಾರ್ಹಾಣಿರತ್ನಾನಿವಿವಿಧಾನಿ

---

ಹಾಗೆ ಆಗಲೆಂದು ಹೇಳಿ, ಪರಮವಾಜಿಭಿಃ-ಉತ್ತಮಾಶ್ವಗಳಿಂದ, ಯುಕ್ತಂ-ಕೂಡಿಕೊಂಡಿರುವ, ಸುರುಚಿರಪ್ರಖ್ಯಂ-ಸುರುಚಿರ-ಚೆನ್ನಾಗಿ ಮನೋಹರಮಾದ, ಪ್ರಖ್ಯಂ-ಪ್ರಕಾಶಮುಳ್ಳ, ಶುಭಶಯ್ಯಯಾ-ಶುಭಕರವಾದ ಹಾಸಿಕೆಯಿಂದ, ಸ್ವಾಸ್ತೀರ್ಣಂ-ಹಾಸಲ್ಪಟ್ಟ, ರಥಂ-ರಥವನ್ನು, ಆದಾಯ-ತೆಗದುಕೊಂಡು ಬಂದು, ಮಿತ್ರಾಣಾಂ-ಸ್ನೇಹಿತರಿಗೆ, ಹರ್ಷವರ್ಧನಂ-ಸಂತೋಷವನ್ನುಂಟುಮಾಡುವ, ಸೌಮಿತ್ರಿಂ-ಲಕ್ಷ್ಮಣನಂ ಕುರಿತು, ಉವಾಚ-ಹೇಳಿದನು ॥೪॥ ಅಯಂರಥಃ-ಈತೇರು, ಸಮನುಪ್ರಾಪ್ತಃ-ಬಂದಿಧೆ, ಹೇಪ್ರಭೋ-ಎಲೈ ಸ್ವಾಮಿಯೆ, ಯತ್-ಯಾವದು, ಕರ್ತವ್ಯಂ-ಮಾಡತಕ್ಕದ್ದೊ, ತತ್ ಕ್ರಿಯತಾಂ-ಅದುಮಾಡಲ್ಪಡಲಿ, ಸುಮಂತ್ರೇಣ-ಸುಮಂತ್ರನಿಂದ, ಏವಮುಕ್ತಃ-ಈಪರಿಹೇಳಲ್ಪಟ್ಟ, ನರರ್ಷಭಃ-ಮನುಷ್ಯಶ್ರೇಷ್ಠನಾದ, ಸಲಕ್ಷ್ಮಣಃ-ಆ ಲಕ್ಷ್ಮಣನು, ರಾಜವೇಶ್ಮ-ಅರಮನೆಯನ್ನು, ಪ್ರವಿಶ್ಯ-ಹೊಕ್ಕು, ಸೀತಾಂ-ಸೀತಾದೇವಿಯನ್ನು, ಆಸಾದ್ಯ-ಹೊಂದಿ, ವ್ಯಾಜಹಾರ-ಹೇಳಿದನು, ಹೇಮಹಾದೇವಿ-ಎಲೈ ಸೀತಾದೇವಿಯೆ, ಗಂಗಾತೀರೇ-ಗಂಗಾನದಿಯ ದಡದಲ್ಲಿ, ಮುನೀನಾಂ-ಋಷಿಗಳ, ಶುಭೇ-ಶುಭಕರವಾದ, ಪುಣ್ಯೇ-ಪುಣ್ಯಕರವಾದ, ಋಷಿಜುಷ್ಟೇ-ಋಷಿ-ಋಷಿಗಳಿಂದ, ಜುಷ್ಟೇ-ವ್ಯಾಪ್ತವಾದ, ಮುನೀನಾಂ-ಋಷಿಗಳ, ಆಶ್ರಮೇ-ಆಶ್ರಮದಲ್ಲಿ, ಮಯಾ-ನನ್ನಿಂದ, ನೇಯಾ-ತೆಗದುಕೊಂಡು ಹೋಗತಕ್ಕವಳು, ಭವಿಷ್ಯಸಿ-ಆಗುವಿ ॥ ೬ ॥ ನೃಪತಿಃ-ಅರಸುಆದ, ಪ್ರಭುಃ-ಸ್ವಾಮಿಯು, ತ್ವಯಾ-ನಿನ್ನಿಂದ, ಕಾಲೇ-ಒಂದಾನೊಂದುಕಾಲದಲ್ಲಿ, ವರಂ-ಇಷ್ಟಾರ್ಥವಂ ಕುರಿತು, ಯಾಚಿತಃ-ಪ್ರಾರ್ಥಿಸಲ್ಪಟ್ಟನು, ಧೀಮತಾ-ಬುದ್ಧಿಶಾಲಿಯಾದ, ನೃಪೇಣ-ಶ್ರೀರಾಮನೆಂಬ ರಾಜನಿಂದ, ಸ್ವಾಶ್ರಮಂ-ಆಶ್ರಮವನ್ನು ಕುರಿತು, ಪ್ರತಿಜ್ಞಾತ್ತಂ-ಅಜ್ಞಾಪನೆಮಾಡಲ್ಪಟ್ಟಿತು, ॥ ೮ ॥ ನಃ-ನಮ್ಮಗೆ, ಪಾರ್ಥಿವಸ್ಯ-ಒಡೆಯನಾದ ಶ್ರೀರಾಮನ, ಶಾಸನಾತ್-ಆಜ್ಞೆಯದೆಸೆಯಿಂದ, ಶೀಘ್ರಂ-ಜಾಗ್ರತೆಯಾಗಿ, ಮಯಾ-ನನ್ನಿಂದ, ಉಪನೇಯಾ-ಕರದುಕೊಂಡು ಹೋಗತಕ್ಕವಳು, ಅಸಿ-ಆಗಿದ್ದಿ ॥ ೯ ॥ ಮಹಾತ್ಮನಾ-ಮಹಾತ್ಮನಾದ, ಲಕ್ಷ್ಮಣೇನ-ಲಕ್ಷ್ಮಣಸ್ವಾಮಿಯಿಂದ, ಏವಂ-ಈಪರಿಯಾಗಿ, ಉಕ್ತಾ-ಹೇಳಲ್ಪಟ್ಟ, ಅತುಲಂ-ಸಮಾನರಹಿತವಾದ, ಪ್ರಹರ್ಷಂ-ಸಂತೋಷವನ್ನು, ಲೇಭೇ-ಹೊಂದಿದಳು, ಗಮನಂ-ಪ್ರಯಾಣವನ್ನು ಕುರಿತು, ಸಮರೋಚಯತ್-ಸಮ್ಮತಿಸಿದಳು, ॥ ೧೦ ॥ ಮಹಾರ್ಹಾಣಿ-ಅಮೂಲ್ಯಗಳಾದ, ವಾಸಾಂಸಿ-ವಸ್ತ್ರಗಳನ್ನು, ವಿವಿಧಾನಿಚ-ನಾನಾಬಗೆಗಳಾದ, ತಾನಿ-ಪ್ರಸಿದ್ಧಗಳಾದ, ರತ್ನಾನಿ-ರತ್ನಾಭರಣಗಳನ್ನು, ಗೃಹೀತ್ವಾ-ತೆಗದುಕೊಂಡು, ವೈದೇಹೀ-ಸೀತಾದೇವಿಯು, ಗಮನಾಯ-ಪ್ರಯಾಣಕ್ಕೋಸ್ಕರ, ಉಪಚಕ್ರಮೇ-ಆರಂಭಿಸಿದಳು, ॥ ೧೧ ॥ ಅಹಂ-ನಾನು, ಮುನಿಪತ್ನೀನಾಂ-ಋಷಿಗಳ ಹೆಂಡತಿಗಳಿಗೆ, ಮಹಾರ್ಹಾಣಿ-ಬಹುಅಮೂಲ್ಯಗಳಾದ, ಇಮಾನಿವಸ್ತ್ರಾಣಿಚ-ಈ ದುಕೂಲಗಳನ್ನು, ವಿವಿಧಾನಿ-ನಾನಾವಿಧಂಗಳಾದ, ರತ್ನಾನಿ-ರತ್ನಮಯಂ

---

ನುಡಿದು, ಉತ್ತಮಾಶ್ವಗಳಿಂದ ಯುಕ್ತವಾದಂಥಾದ್ದಾಗಿಯೂ, ಬಹುರಮ್ಯವಾದ ಪ್ರಕಾಶೆಯುಳ್ಳದ್ದಾಗಿಯೂ, ಶುಭಕರವಾಗಿರ್ಪ ಹಾಸಿಗೆಯುಳ್ಳಂಥಾದ್ದಾಗಿಯೂ ಇರುವ ರಥವಂ ತೆಗದು ಕೊಂಡುಬಂದು ಸ್ನೇಹಿತರಿಗೆಲ್ಲ ಆನಂದವನ್ನುಂಟು ಮಾಡುತ್ತಿರುವ ಲಕ್ಷ್ಮಣನಂಕುರಿತು, ಎಲೈಸಮರ್ಥನೆ! ರಥವುಬಂದು ಸಿದ್ಧವಾಗಿರುವದು, ಮುಂದೆ ಯಾವ ಕಾರ್ಯವಂಗೈಯ್ಯಬೇಕೋ ಅದಂ ಮಾಡುವಂಥಾವನಾಗೆಂದು ನುಡಿವನಾದನು ॥೫॥ ಈಪರಿ ಸುಮಂತ್ರನಿಂದ ಹೇಳಲ್ಪಟ್ಟವನಾದ ಆ ಲಕ್ಷ್ಮಣನು ಸೀತಾದೇವಿಯಬಳಿಗೆ ಪೋಗಿ, ಸೀತೆಯಂ ಕುರಿತು, ಎಲೈ ತಾಯಿಯೇ! ಪುಣ್ಯಸಂಪಾದಕವಾಗಿಯೂ, ಋಷಿಗಳಿಂದ ಸೇವಿಸಲ್ಪಡುತ್ತಿರುವದಾಗಿಯೂ ಇರುವ ಗಂಗಾನದೀತೀರದಲ್ಲಿರ್ಪ ಋಷ್ಯಾಶ್ರಮವಂ ಕುರಿತು ಕರೆದುಕೊಂಡು ಪೋಗುವೆನು, ನಿನ್ನಪತಿಯಾದ ಶ್ರೀರಾಮನು ನಿನ್ನಿಂದ ಪ್ರಾರ್ಥಿಸಲ್ಪಟ್ಟನಂತೆ, ಆದಕಾರಣ ಈಗ ನನಗೆ ಆಜ್ಞಾಪಿಸಿಧಾನೆಂದು ನುಡಿದವನಾಗಲೂ, ಜನಕನಂದಿನಿಯಾದ ಸೀತಾದೇವಿಯು ಪರಮಾನಂದಭರಿತಳಾಗಿ, ಪ್ರಯಾಣವನ್ನಿಚ್ಛಿಸಿ, ಅಮೂಲ್ಯವಾದ ವಸ್ತ್ರಗಳನ್ನೂ, ನಾನಾಬಗೆಗಳಾದ ರತ್ನಗಳನ್ನೂ ಸಹ ತೆಗದುಕೊಂಡು ಹೊರಡಲುದ್ಯುಕ್ತಳಾಗಿ, ಎಲೈ ಲಕ್ಷ್ಮಣನೆ! ಈ ಒಡಿವೆಗಳನ್ನು ಬಹಳ ಬೆಲೆಯುಳ್ಳ ಶೀರೆಗಳನ್ನು ಕುಪ್ಪಸಗಳನ್ನು ಇವುಗಳನ್ನೆಲ್ಲ ಋಷಿಪತ್ನಿಗಳಿಗೆ ಈಯ್ಯುವಂಥಾವಳಾಗುವೆನೆಂದು ನುಡಿಯಲು, ಹಾಗೆಯೇ ಆಗಬಹುದೆಂಬದಾಗಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚ ॥೧೨॥ ಸೌಮಿತ್ರಿಸ್ತು ತಥೇತ್ಯುಕ್ತ್ವಾ ರಥಮಾರೋಪ್ಯ ಮೈಥಿಲೀಮ್ । ಪ್ರಯಯೌ ಶೀಘ್ರತುರಗೋ ರಾಮಸ್ಯಾಜ್ಞಾಮನುಸ್ಮರನ್ ॥೧೩॥ ಅಬ್ರವೀಚ್ಚ ತದಾ ಸೀತಾ ಲಕ್ಷ್ಮಣಂ ಲಕ್ಷ್ಮಿವರ್ಧನಮ್ । ಅಶುಭಾನಿ ಬಹೂನ್ಯದ್ಯ ಪಶ್ಯಾಮಿ ರಘುನಂದನ ॥ ನಯನಂ ಮೇ ಸ್ಫುರತ್ಯದ್ಯ ಗಾತ್ರೋತ್ಕಂಪಶ್ಚ ಜಾಯತೇ । ಹೃದಯಂ ಚೈವ ಸೌಮಿತ್ರೇ ಅಸ್ವಸ್ಥಮಿವ ಲಕ್ಷಯೇ ॥೧೫॥ ಔತ್ಸುಕ್ಯಂ ಪರಮಂ ಚಾಪಿ ಅಧೃತಿಶ್ಚ ಪರಾ ಮಮ । ಶೂನ್ಯಾಮಿವ ಚ ಪಶ್ಯಾಮಿ ಪೃಥಿವೀಂ ಪೃಥುಲೋಚನ ॥೧೬॥ ಅಪಿ ಸ್ವಸ್ತಿ ಭವೇತ್ತಸ್ಯ ಭ್ರಾತುಸ್ತೇ ಭ್ರಾತೃಭಿಸ್ಸಹ । ಶ್ವಶ್ರೂಣಾಂ ಚೈವ ಮೇ ವೀರ ಸರ್ವಾಸಾಮವಿಶೇಷತಃ ॥೧೭॥ ಪುರೇ ಜನಪದೇ ಚೈವ ಕುಶಲಂ ಪ್ರಾಣಿನಾಮಪಿ । ಇತಿ ಕೃತ್ವಾಂಜಲಿಂ ಸೀತಾ ದೇವತಾ ಅಭ್ಯಯಾಚತ ॥೧೮॥ ಲಕ್ಷ್ಮಣೋಽರ್ಥಂ ತು ತಂ ಶ್ರುತ್ವಾ ಶಿರಸಾ ವಂದ್ಯ ಮೈಥಿಲೀಮ್ । ಶಿವಮಿತ್ಯಬ್ರವೀದ್ಧೃಷ್ಟೋ ಹೃದಯೇನ ವಿಶುಷ್ಯತಾ ॥೧೯॥ ತತೋ ವಾಸಮುಪಾಗಮ್ಯ ಗೋಮತೀತೀರ ಆಶ್ರಮೇ । ಪ್ರಭಾತೇ ಪುನರುತ್ಥಾಯ ಸೌಮಿತ್ರಿಸ್ಸೂತಮಬ್ರವೀತ್ ॥೨೦॥ ಯೋಜಯಸ್ವ ರಥಂ ಶೀಘ್ರಮದ್ಯ ಭಾಗೀರಥೀಜ

---

ಗಳಾದ, ಇಮಾನ್ಯಾಭರಣಾನಿ ಚ-ಈ ವಡಿವೆಗಳನ್ನು, ದಾಸ್ಯಾಮಿ-ಕೊಡುತ್ತೇನೆ ॥ ೧೨ ॥ ಸೌಮಿತ್ರಿಸ್ತು-ಲಕ್ಷ್ಮಣಸ್ವಾಮಿಯಾದರೆ, ತಥೇತ್ಯುಕ್ತ್ವಾ-ಹಾಗೇಆಗಲೆಂದು, ರಥಂ-ರಥವನ್ನು, ಮೈಥಿಲೀಂ-ಸೀತಾದೇವಿಯನ್ನು, ಆರೋಪ್ಯ-ಏರಿಸಿ, ಶೀಘ್ರತುರಗಃ-ಶೀಘ್ರ-ವೇಗದಿಂದ ಪೋಗುತ್ತಿರುವ, ತುರಗಃ-ಕುದುರೆಗಳುಳ್ಳವನಾಗಿ, ರಾಮಸ್ಯ-ಶ್ರೀರಾಮನ, ಆಜ್ಞಾಂ-ಆಜ್ಞೆಯನು, ಅನುಸ್ಮರನ್-ಜ್ಞಾಪಿಸಿಕೊಳ್ಳುತ್ತಿರುವನಾಗಿ, ಪ್ರಯಯೌ-ತೆರಳಿದನು॥ ತದಾ-ಆಕಾಲದಲ್ಲಿ, ಸೀತಾ-ಸೀತಾದೇವಿಯು, ಲಕ್ಷ್ಮಿವರ್ಧನಂ-ಭಾಗ್ಯಲಕ್ಷ್ಮಿಯನ್ನು ವೃದ್ಧಿಗೊಳಿಸುತ್ತಿರುವ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಅಬ್ರವೀಚ್ಚ-ನುಡಿದಳು, ಹೇರಘುನಂದನ-ಎಲೈ ರಘುನಂದನನೇ, ಅದ್ಯ-ಈಗ, ಬಹೂನಿ-ಅನೇಕಗಳಾದ, ಅಶುಭಾನಿ-ಅಶುಭಗಳನ್ನು, ಪಶ್ಯಾಮಿ-ಕಾಣುತ್ತೇನೆ ॥೧೪॥ ಹೇಸೌಮಿತ್ರೇ-ಎಲೈಲಕ್ಷ್ಮಣನೆ, ಅದ್ಯ-ಈಗ, ಮೇ-ನನ್ನ, ನಯನಂ-ದಕ್ಷಿಣನೇತ್ರವು, ಸ್ಫುರತಿ-ಅದುರುತ್ತದೆ, ಗಾತ್ರೋತ್ಕಂಪಶ್ಚ-ಗಾತ್ರ-ಅವಯವಗಳ, ಉತ್ಕಂಪಶ್ಚ-ಕಂಪವು, ಜಾಯತೇ-ಆಗುತ್ತದೆ, ಹೃದಯಂಚೈವ-ಮನವನ್ನೂನು, ಅಸ್ವಸ್ಥಮಿವ-ಸ್ವಾಸ್ಥ್ಯರಹಿತವನ್ನಾಗಿ, ಲಕ್ಷಯೇ-ಕಾಣುತ್ತೇನೆ, ॥ ೧೫ ॥ ಹೇಪೃಥುಲೋಚನ-ಎಲೈವಿಸ್ತಾರವಾದ ನೇತ್ರಗಳುಳ್ಳವನೆ, ಪರಮಂ-ಬಹಳವಾದ, ಔತ್ಸುಕ್ಯಂ-ಉತ್ಕಂಠೆಯೂನೂ, ಅಸ್ತಿ-ಇದೆ, ಮಮ-ನನಗೆ, ಪರಾ-ಬಹಳವಾದ, ಅಧೃತಿಶ್ಚ-ಅಧೈರ್ಯವೂ ಇದೆ, ಪೃಥಿವೀಂ-ನೆಲವನ್ನು, ಶೂನ್ಯಾಮಿವ-ನಿರ್ಜನವನ್ನಾಗಿ, ಪಶ್ಯಾಮಿ-ಕಾಣುತ್ತೇನೆ ॥೧೬॥ ಹೇವೀರ-ಎಲೈಶೂರನೆ, ಭ್ರಾತೃಭಿಸ್ಸಹ-ತಮ್ಮಂದಿರೊಡಗೂಡೆ, ತೇ-ನಿನ್ನ, ಭ್ರಾತುಃ-ಅಣ್ಣನಾದ, ತಸ್ಯ-ಆ ಶ್ರೀರಾಮನಿಗೆ, ಸ್ವಸ್ತಿ-ಕ್ಷೇಮವು, ಭವೇದಪಿ-ಆಗುವದು, ಸರ್ವಾಸಾಂ-ಸಮಸ್ತರಾದ, ಮೇ-ನನ್ನ, ಶ್ವಶ್ರೂಣಾಂ-ಅತ್ತೆಯರಿಗೆ, ಅವಿಶೇಷತಃ-ಸಾಮಾನ್ಯವಾಗಿ, ಸ್ವಸ್ತಿಭವೇದಪಿ-ಕ್ಷೇಮವಾಗಿದೀತೆ॥೧೭॥ಪುರೇ-ಪಟ್ಟಣದಲ್ಲಿಯೂ, ಜನಪದೇಚೈವ-ದೇಶದಲ್ಲಿಯೂಕೂಡ, ಪ್ರಾಣಿನಾಂ-ಜೀವಧಾರಿಗಳಿಗೆ, ಕುಶಲಮಪಿ-ಕ್ಷೇಮವಾದೀತೆ, ಇತಿ-ಇಂತೆಂದು, ಸೀತಾ-ಸೀತಾದೇವಿಯು, ಅಂಜಲಿಂಕೃತ್ವಾ-ಕೈಮುಗಿಯುವಿಕೆಯನ್ನು ಮಾಡಿ, ದೇವತಾಃ-ದೇವತೆಗಳನ್ನು, ಅಭ್ಯಯಾಚತ-ಬೇಡಿದಳು॥೧೮॥ ಲಕ್ಷ್ಮಣಃ-ಲಕ್ಷ್ಮಣನು, ತಮರ್ಥಂ-ಆ ದುರ್ನಿಮಿತ್ತರೂಪವಾದ, ವಸ್ತುವಿನನ್ನು, ಶ್ರುತ್ವಾ-ಕೇಳಿ, ಮೈಥಿಲೀಂ-ಸೀತಾದೇವಿಯನ್ನು ಕುರಿತು, ಶಿರಸಾ-ಮಂಡೆಯಿಂದ, ವಂದ್ಯ- ನಮಸ್ಕರಿಸಿ, ವಿಶುಷ್ಯತಾ- ಶೋಷಿಸುತ್ತಿರುವ, ಹೃದಯೇನ-ಹೃದಯದಿಂದ, ಹೃಷ್ಟಃ- ಸಂತೋಷ ಮುಳ್ಳವನಂತೆ, ಶಿವಮಸ್ತ್ವಿತಿ -ಒಳ್ಳೇದಾಗಲೆಂದು, ಅಬ್ರವೀತ್ - ನುಡಿದನು, ಗೋಮತೀತೀರೇ- ಗೋಮತೀನದಿಯ ದಡದಲ್ಲಿರುವ, ಆಶ್ರಮೇ-ಆಶ್ರಮದಲ್ಲಿ, ವಾಸಂ - ವಾಸವನ್ನು, ಉಪಾಗಮ್ಯ-ಹೊಂದಿ, ತತಃ-ಬಳಿಕ, ಪ್ರಭಾತೇ-ಪ್ರಾತಃಕಾಲದಲ್ಲಿ, ಪುನಃ-ಮತ್ತು, ಉತ್ಥಾಯ-ಎದ್ದು, ಸೌಮಿತ್ರಿಃ-ಲಕ್ಷ್ಮಣನು, ಸೂತಂ-ಸಾರಥಿಯಾದ ಸುಮಂತ್ರನಂಕುರಿತು, ಅಬ್ರವೀತ್-ನುಡಿದನು, ॥ ೨೦ ॥ ಪರ್ವತೇ-ಪರ್ವತದಲ್ಲಿ, ತ್ರ್ಯಂಬಕಃ-ಈಶ್ವರನು, ಯಥಾ-ಹ್ಯಾಗೊ, ತಥಾ-

---

ಲಕ್ಷ್ಮಣನು ಪೇಳಿ, ಸೀತಾದೇವಿಯನ್ನು ರಥದಲ್ಲಿ ಕುಳ್ಳಿರಿಸಿ, ರಾಮಾಜ್ಞೆಯಂ ಸ್ಮರಿಸುತ್ತಾ ರಥವಂ ತರುಬಿಕೊಂಡು ಹೊರಟಂಥಾವನಾದನು ॥೧೩॥ ಆವೇಳೆಯಲ್ಲಿ ಸೀತಾದೇವಿಯು ಲಕ್ಷ್ಮಣನಂ ಕುರಿತು, ಎಲೈ ಲಕ್ಷ್ಮಣನೆ! ಬಹಳವಾದ ದುಶ್ಶಕುನಂಗಳಂ ಕಾಣುತ್ತಿದ್ದೇನೆ (ಅದೇನೆಂದರೆ) ನನ್ನ ಬಲಗಣ್ಣು ಅದುರುತ್ತಿದೆ, ಮತ್ತು ಮೈಯೆಲ್ಲ ಕಂಪಿಸುತ್ತಿದೆ, ಮನವು ಕಳವಳಗೊಂಡಿದೆ, ಋಷ್ಯಾಶ್ರಮಗಳಂ ನೋಡಬೇಕೆಂಬ ಉತ್ಕಂಠೆಯಾದರೆ ಬಹಳವಾಗಿದೆ, ಅಷ್ಟರೊಳಗಾಗಿ ಯೇನಾಗುವದೋ ಏನೋ ಎಂಬ ಅಧೈರ್ಯವು ಬಹಳವಾಗಿದೆ. ಈ ಭೂಮಿಯನ್ನೆಲ್ಲ ಶೂನ್ಯವಾಗಿರುವಂತೆ ನೋಡುತ್ತಿದ್ದೇನೆ, ಆದಕಾರಣ ಪಟ್ಟಣದಲ್ಲಿಯೂ ದೇಶದಲ್ಲಿಯೂ ಇರುವ ಪ್ರಾಣಿಗಳಿಗೆಲ್ಲ ಕ್ಷೇಮವುಂಟಾಗಲೆಂದು ಸೀತಾದೇವಿಯು ಕೈಮುಗಿದು ದೇವತೆಗಳಂ ಬೇಡಿದಂಥಾವಳಾದಳು ॥೧೮॥ ಲಕ್ಷ್ಮಣನಾದರೆ ಅದಂ ಕೇಳಿ, ಸೀತಾದೇವಿಗೆ ವಂದನೆಯಂಗೈದು ಬತ್ತಿದ ಮುಖಮುಳ್ಳವನಾಗಿ ವಳ್ಳೇದಾಗಲೆಂದು ಮನಸಾ ಪೇಳಿದವನಾಗಿ, ಅಲ್ಲಿಂದ ಮುಂದಕ್ಕೆ ತೆರಳಿ ಗೋಮತೀ ತೀರದಲ್ಲಿರ್ಪ ಋಷ್ಯಾಶ್ರಮದಲ್ಲಿ ನೆಲಗೊಂಡಿದ್ದು, ಪ್ರಾತಃಕಾಲದೊಳು ಎಚ್ಚರಗೊಂಡು, ಸಾರಥಿಯಂ ಕುರಿತು, ಎಲೈ ಸಾರಥಿಯಾದ ಸುಮಂತ್ರನೆ! ರಥವನ್ನು ತ್ವರಿತವಾಗಿ ಸಿದ್ಧಗೊಳಿಸು, ಪರಮೇಶ್ವರನು ಗಂಗೆಯನ್ನು ಶಿರದಿಂ ಧರಿಸುವತೆರದಿ ಭಾಗೀರಥೀ ಜಲವಂ ಧರಿಸುವೆನು (ಅಂದರೆ ಗಂಗೋದಕ ಸ್ನಾನವನ್ನೀಗಲೇಗೈಯ್ಯುವೆನೆಂದು ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬಲಮ್ । ಶಿರಸಾಧಾರಯಿಷ್ಯಾಮಿತ್ಯ್ರಂಬಿಕಃಪರ್ವತೇಯಥಾ ॥೧೧॥ ಸೋಶ್ವಾನ್ ರಥೇ ರಜ್ಜ್ವಾಥಚತುರೋರಥ್ಯಾನ್ಯುಜ್ಯಾಪ್ಯಮ ನೋಜವಾನ್ । ಆರೋಹಸ್ವೇತಿವೈದೇಹೀಂಸೂತಃಪ್ರಾಂಜಲಿರಬ್ರವೀತ್ ॥೧೨॥ ಸಾತುಸೂತಸ್ಯವಚನಾದಾರುರೋಹರ ಥೋತ್ತಮಮ್ । ಸೀತಾಸೌಮಿತ್ರಿಣಾಸಾರ್ಧಂಸುಮಂತ್ರೇಣಚಧೀಮತಾ ॥೧೩॥ ಅಥಾರ್ಧದಿವಸಂಗತ್ವಾ ಭಾಗೀರಥ್ಯಾ ಜಲಾಶಯಮ್ । ನಿರೀಕ್ಷ್ಯಲಕ್ಷ್ಮಣೋದೀನಃಪ್ರರುರೋದಮಹಾಸ್ವನಮ್ ॥೧೪॥ ಸೀತಾತುಪರಮಾಯತ್ತಾದೃಷ್ಟ್ವಾಲ ಕ್ಷ್ಮಣಮಾತುರಮ್ । ಉವಾಚವಾಕ್ಯಂಧರ್ಮಜ್ಞಂಕಿಮಿದಂರುದ್ಯತೇತ್ವಯಾ ॥೧೫॥ ಜಾಹ್ನವೀತೀರಮಾಸಾದ್ಯಚಿರಾ ಭಿಲಷಿತಂಮಮ । ಹರ್ಷಕಾಲೇಕಿಮರ್ಥಂಮಾಂವಿಷಾದಯಸಿಲಕ್ಷ್ಮಣ ॥೧೬॥ ನಿತ್ಯಂತ್ವಂರಾಮಪಾರ್ಶ್ವೇಷುವರ್ತಸೇಪು ರುಷರ್ಷಭ । ಕಚ್ಚಿದ್ವಿನಾಕೃತಸ್ತೇನದ್ವೈಮಾತ್ರಾಚ್ಛೋಕಮಾಗತಃ ॥೧೭॥ ಮಮಾಪಿದಯಿತೋರಾಮೋಜೀವಿತಾದಪಿ ಲಕ್ಷ್ಮಣ । ನಚಾಹಮೇವಂಶೋಚಾಮಿಮೈವಂತ್ವಂಬಾಲಿಶೋಭವ ॥೧೮॥ ತಾರಯಸ್ವಚಮಾಂಗಂಗಾಂದರ್ಶಯಸ್ವಚತಾಪ

---

ಈಗ, ಭಾಗೀರಥೀಜಲಂ-ಗಂಗಾಜಲವನ್ನು, ಶಿರಸಾ-ಶಿರಸ್ಸಿನಿಂದ, ಅದ್ಯ-ಈಗ, ಧಾರಯಿಷ್ಯಾಮಿ-ಧರಿಸುವೆನು, ಶೀಘ್ರಂ-ಜಾಗ್ರತೆಯಾಗಿ, ರಥಂ-ರಥವನ್ನು, ಯೋಜಯಸ್ವ-ಅಶ್ವಗಳಿಂದ ಕೂಡಿಸು ॥೧೧॥ ಸಃಸೂತಃ-ಆ ಸುಮಂತ್ರನು, ಮನೋಜವಾನ್-ಮನೋವೇಗವುಳ್ಳ, ಚತುರಃ-ನಾಲ್ಕಾದ, ಅಶ್ವಾನ್-ಕುದುರೆಗಳನ್ನು, ರಥೇ-ರಥದಲ್ಲಿ, ರಜ್ಜ್ವಾ-ಹಗ್ಗದಿಂದ, ಯುಜ್ಯಾಪ್ಯ-ಸೇರಿಸಿ, ಅಥ-ಬಳಿಕ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ವೈದೇಹೀಂ-ಸೀತಾದೇವಿಯನ್ನು, ಆರೋಹಸ್ವೇತಿ-ಏರೆಂದು, ಅಬ್ರವೀತ್-ನುಡಿದನು ॥೧೨॥ ಸಾತುಸೀತಾ- ಆ ಸೀತಾದೇವಿಯು ಆದರೆ, ಸೂತಸ್ಯ-ಸಾರಥಿಯ, ವಚನಾತ್- ಮಾತಿನ ದೆಸೆಯಿಂದ, ಸೌಮಿತ್ರಿಣಾಸಾರ್ಧಂ-ಲಕ್ಷ್ಮಣನೊಡನೆ, ಧೀಮತಾ-ಬುದ್ಧಿವಂತನಾದ, ಸುಮಂತ್ರೇಣಚಸಾರ್ಧಂ-ಸುಮಂತ್ರನೊಡನೆಗೂಡ, ರಥೋತ್ತಮಂ-ಉತ್ತಮ ರಥವನ್ನು, ಆರುರೋಹ-ಏರಿದಳು ॥೧೩॥ ಅಥ-ಬಳಿಕ, ಲಕ್ಷ್ಮಣಃ-ಲಕ್ಷ್ಮಣನು, ಅರ್ಧದಿವಸಂಗತ್ವಾ- ಮಧ್ಯಾಹ್ನಪರಿಯಂತರವೂ ಪ್ರಯಾಣಿಸಿ, ಭಾಗೀರಥ್ಯಾಃ-ಗಂಗಾನದಿಯ, ಜಲಾಶಯಂ- ಪ್ರವಾಹವನ್ನು, ನಿರೀಕ್ಷ್ಯ-ಕಂಡು, ದೀನಃ-ದೀನನಾಗಿ, ಮಹಾಸ್ವನಂ-ಮಹಾಧ್ವನಿಯುಳ್ಳವನಂತೆ, ಪ್ರರುರೋದ-ಅತ್ತನು ॥೧೪॥ ಪರಮಾಯತ್ತಾ-ಬಹಳ ಅಸ್ವತಂತ್ರಳಾದ, ಸೀತಾ-ಸೀತಾದೇವಿಯು, ಆತುರಂ-ಮನೋರೋಗಮುಳ್ಳ, ಧರ್ಮಜ್ಞಂ-ಧರ್ಮವನ್ನು ತಿಳಿದಿರುವ, ತಂಲಕ್ಷ್ಮಣಂ-ಆ ಲಕ್ಷ್ಮಣನನ್ನು, ದೃಷ್ಟ್ವಾ-ಕಂಡು, ತ್ವಯಾ-ನಿನ್ನಿಂದ, ರುದ್ಯತೇ-ಅಳಲ್ಪಡುತ್ತದೆ, ಇದಂ- ಇದು, ಕಿಂ-ಯೇನು, ಇತಿ-ಇತೆಂದು, ವಾಕ್ಯಂ-ಮಾತನ್ನು, ಉವಾಚ-ಪೇಳಿದಳು ॥೧೫॥ ಹೆ ಲಕ್ಷ್ಮಣ-ಎಲೈ ಲಕ್ಷ್ಮಣನೇ, ಮಮ-ನನ್ನಿಂದ, ಚಿರಾಭಿಲಷಿತಂ-ಬಹುಕಾಲದಿಂ ಅಪೇಕ್ಷಿಸಲ್ಪಟ್ಟ, ಜಾಹ್ನವೀತೀರಂ-ಗಂಗಾತೀರವನ್ನು, ಆಸಾದ್ಯ-ಹೊಂದಿ, ಹರ್ಷಕಾಲೇ-ಸಂತೋಷಕಾಲದಲ್ಲಿ, ಕಿಮರ್ಥಂ-ಯಾಕೆ, ಮಾಂ-ನನ್ನನ್ನು, ವಿಷಾದಯಸಿ-ದುಃಖಗೊಳಿಸುತ್ತೀ ॥೧೬॥ ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೇ, ತ್ವಂ-ನೀನು, ನಿತ್ಯಂ- ಸದಾಕಾಲವೂ, ರಾಮಪಾರ್ಶ್ವೇಷು-ಶ್ರೀರಾಮನ ಸನ್ನಿಧಿಯಲ್ಲಿಯೆ, ವರ್ತಸೇ-ಇರುತ್ತೀ, ದ್ವೈಮಾತ್ರಾತ್-ಆ ಶ್ರೀರಾಮನ ದೆಸೆಯಿಂದ, ವಿನಾಕೃತಃ-ಬ್ಯಾರೆಮಾಡಲ್ಪಟ್ಟವನಾಥೆ, ತೇನ-ಆ ಕಾರಣದಿಂ, ಶೋಕಂ-ದುಃಖವನ್ನು, ಆಗತಃಕಚ್ಚಿತ್-ಹೊಂದಿದ್ದೀಯೊ ಯೇನು ॥೧೭॥ ಹೆ ಲಕ್ಷ್ಮಣ-ಎಲೈ ಲಕ್ಷ್ಮಣನೇ, ರಾಮಃ-ಶ್ರೀರಾಮನು, ಮಮಾಪಿ-ನನಗೂಕೂಡ, ಜೀವಿತಾದಪಿ-ಪ್ರಾಣಕ್ಕಿಂತಲೂ, ದಯಿತಃ-ಪ್ರಾಣನಾಯಕನು, ರಾಮಂ-ಶ್ರೀರಾಮನಂ ಕುರಿತು, ಏವಂ-ಈ ಪ್ರಕಾರವಾಗಿ, ನಶೋಚಾಮಿ-ದುಃಖಿಸುವದಿಲ್ಲ, ತ್ವಂ-ನೀನು, ಬಾಲಿಶಾಇವ-ಹುಡುಗನ್ನ, ನಭವ-ಆಗಬೇಡ ॥ ೧೮ ॥ ಮಾಂ-ನನ್ನನ್ನು, ಗಂಗಾಂಚ-ಗಂ

---

ಡಿದವನಾಗಲೂ, ಆ ಸುಮಂತ್ರನು ತ್ವರಿತವಾಗಿ ತೇರಿಗೆ ಮನೋವೇಗವುಳ್ಳ ಕುದುರೆಗಳಂ ಕಟ್ಟಿ, ಕೈಮುಗಿದುಕೊಂಡು ಸೀತಾದೇವಿಯಂ ಕುರಿತು ಎಲೈ ದೇವಿಯೇ! ರಥವನ್ನೇರೆಂದು ನಿರೂಪಿಸಿದಂಥಾವನಾದನು ॥೧೨॥ ಆ ಜನಕನಂದಿನಿಯಾದ ಸೀತಾದೇವಿಯಾದರೆ, ಸಾರಥಿಯ ವಚನವಂಕೇಳಿ ಲಕ್ಷ್ಮಣನೊಡನೆಯೂ ಸುಮಂತ್ರನೊಡನೆಯೂ ಆ ಉತ್ತಮವಾದ ತೇರಿನಲ್ಲಿ ಕುಳಿತುಕೊಂಡಂಥಾವಳಾದಳು. ॥೧೩॥ ಆ ಬಳಿಕ ಲಕ್ಷ್ಮಣನು ಸೀತಾದೇವಿಯ ಸಂಗಡ ಮಧ್ಯಾಹ್ನದವರಿವಿಗೂ ಪ್ರಯಾಣಿಸಿ, ಗಂಗೋದಕವಂ ಕಂಡು, ಘಟ್ಟಿಯಾಗಿ ಅತ್ತಂಥಾವನಾದನು ॥೧೪॥ ಆ ವೇಳೆಯೊಳು ಸೀತಾದೇವಿಯಾದರೆ ಮಹಾ ಆತುರನಾಗಿ ಅಳುತ್ತಿರುವ ಮತ್ತು ಧರ್ಮಜ್ಞನಾದ ಲಕ್ಷ್ಮಣನಂ ಕಂಡು, ಎಲೈ ಲಕ್ಷ್ಮಣನೆ! ಬಹುಕಾಲದಿಂದ ನಾನಿಚ್ಛಿಸುತ್ತಿದ್ದ ಗಂಗಾತೀರವಂ ಹೊಂದಿ, ಸಂತೋಷಕಾಲದೊಳು ನನ್ನನ್ನು ಯಾಕೆ ದುಃಖಗೊಳಿಸುವಂಥಾವನಾಗಿದ್ದೀ ॥೧೬॥ ನೀನು ಸದಾಕಾಲದಲ್ಲಿಯೂ ಶ್ರೀರಾಮನ ಸನ್ನಿಧಿಯಲ್ಲಿಯೇ ಇರುವಂಥಾವನು, ಆತನಂಬಿಟ್ಟು ಯೆಂದಿಗೂ ಹೊರಗೆಬಂದವನಲ್ಲಾ, ಆದರಿಂದ ಈರೀತಿಯಾಗಿ ಅಳುವಂಥಾವನಾಗಿದ್ದೀಯೋಯೇನು ॥೧೭॥ ಕೇಳೆಲೈ ಲಕ್ಷ್ಮಣನೆ! ಶ್ರೀರಾಮನು ನನಿಗೂ ಕೂಡಾ ಪ್ರಾಣಗಳಿಗಿಂತಲೂ ಅತಿಶಯವಾಗಿರುವನು, ಆದರು ನೀನು ಹುಡುಗನತೆರದಿ ಅಳುವಂತೆ ನಾನು ಅಳುವದಿಲ್ಲ. ಆದಕಾರಣ ನೀನು ಈ ವ್ಯಸನವಂ ಬಿಟ್ಟು, ಎನ್ನನ್ನು ಗಂಗಾನದಿಯಂ ದಾಂಟಿಸಿ ತಾಪಸರಂ ತೋರಿಸುವಂಥಾವನಾಗು, ಆ ಗಂಗಾತೀರವಾಸಿಗಳಾಗಿರ್ಪ ಋಷಿಗಳಿಗೆಲ್ಲ ಧನವನ್ನೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪಸರ್ಗ । ತೇಭ್ಯೋಧನಾನಿವಾಸಾಂಸಿದಾಸ್ಯಾಮ್ಯಾಭರಣಾನಿಚ ॥೧೯॥ ತತಃಕೃತ್ವಾ ಮಹರ್ಷೀಣಾಂಯಥಾರ್ಹಮಭಿವಾದನಮ್ । ತತ್ರಚೈಕಾಂನಿಶಾಮುಷ್ಯಯಾಸ್ಯಾಮಸ್ತಾಂಪುರೀಂಪುನಃ ॥೨೦॥ ಮಮಾಪಿಪದ್ಮಪತ್ರಾಕ್ಷಂಸಿಂಹೋರಸ್ಕಂ ಕೃಶೋದರಮ್ । ತ್ವರತೇಹಿಮನೋದ್ರಷ್ಟುಂರಾಮಂರಮಯತಾಂವರಮ್ ॥೨೧॥ ತಸ್ಯಾಸ್ತದ್ವಚನಂಶ್ರುತ್ವಾ ಪ್ರಮೃಜ್ಯ ನಯನೇಶುಭೇ । ತಿತೀರ್ಷುರ್ಲಕ್ಷ್ಮಣೋಗಂಗಾಂನಾವಿಕಾನಬ್ರವೀತ್ತದಾ ॥೨೨॥ ಶೀಘ್ರಮಾನಯತಾದ್ಯೈವನಾವಂರಮ್ಯಾಮಲಂಕೃತಾಮ್ ॥೨೩॥ ತಸ್ಯತದ್ವಚನಂಶ್ರುತ್ವಾದಾಶಾಃಪ್ರಾಂಜಲಯೋಬ್ರುವನ್ । ಸಜ್ಜಾನೌರಿಯಮಸ್ತೀತಿಸೌಮಿತ್ರಿಂತಂಸಸಂಭ್ರಮಾಃ ॥೨೪॥ *ಇತಿ ಶ್ರೀಮದುತ್ತರರಾಮಾಯಣೇ ಷಟ್ಚತ್ವಾರಿಂಶಸ್ಸರ್ಗಃ*

ಅಥನಾವಂಸುವಿಸ್ತೀರ್ಣಾಂನೈಷಾದೀಂರಾಘವಾನುಜಃ। ಆರುರೋಹಸಮಾಯುಕ್ತಾಂಪೂರ್ವಮಾರೋಪ್ಯಮೈಥಿಲೀಂ ॥

---

ಗಾನದಿಯನ್ನೂ ಕೂಡ, ತಾರಯಸ್ವ-ದಾಟಿಸು, ತಾಪಸಾಂಶ್ಚ-ಋಷಿಗಳನ್ನು, ದರ್ಶಯಸ್ವ-ತೋರಿಸು, ತೇಭ್ಯಃ-ಅವರುಗಳಿಗೆ, ಧನಾನಿ-ದ್ರವ್ಯಗಳನ್ನು, ವಾಸಾಂಸಿ-ವಸ್ತ್ರಗಳನ್ನು, ಆಭರಣಾನಿಚ-ಒಡವೆಗಳನ್ನು, ದಾಸ್ಯಾಮಿ-ಕೊಡುವೆನು ॥ ೧೯ ॥ ತತಃ-ಬಳಿಕ, ಮಹರ್ಷೀಣಾಂ-ಮಹಾಋಷಿಗಳಿಗೆ, ಯಥಾರ್ಹಂ-ಯಥಾಯೋಗ್ಯವಾಗಿ, ಅಭಿವಾದನಂ-ನಮಸ್ಕಾರವನ್ನೂ, ಕೃತ್ವಾ-ಮಾಡಿ, ತತ್ರ-ಅಲ್ಲಿ, ಏಕಾಂನಿಶಾಂ- ಒಂದು ರಾತ್ರಿಯಲ್ಲಿ, ಉಷ್ಯ-ವಾಸವಾಗಿದ್ದು, ತಾಂಪುರೀಂ-ಆ ಅಯೋಧ್ಯಾಪಟ್ಟಣವನ್ನು ಕುರಿತು, ಯಾಸ್ಯಾಮಃ-ಹೊರಡೋಣ ॥೨೦॥ ಮಮಾಪಿಮನೋಪಿ-ನನ್ನ ಮನಸ್ಸೂ ಕೂಡ, ಪದ್ಮಪತ್ರಾಕ್ಷಂ-ಪದ್ಮ-ಕಮಲದ, ಪತ್ರ-ಎಲೆಗಳಂತೆ, ಅಕ್ಷಂ-ನೇತ್ರಗಳುಳ್ಳ, ಸಿಂಹೋರಸ್ಕಂ-ಸಿಂಹದಂತಿರುವ ವಕ್ಷಸ್ಥಳಮುಳ್ಳ, ಕೃಶೋದರಂ-ಸೂಕ್ಷ್ಮವಾದ ಹೊಟ್ಟೆಯುಳ್ಳ, ರಮಯತಾಂ-ರಮಿಸುವರೊಳಗೆ, ವರಂ-ಉತ್ತಮನಾದ, ರಾಮಂ-ಶ್ರೀರಾಮನನ್ನು, ದ್ರಷ್ಟುಂ - ನೋಡುವದಕ್ಕೆ, ತ್ವರತೇ-ತ್ವರೆಪಡುತ್ತಿದೆ ॥ ೨೧ ॥ ತಸ್ಯಾಃ-ಆ ಸೀತಾದೇವಿಯ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಶುಭೇ-ಶುಭಕರವಾದ, ನಯನೇ-ನೇತ್ರಗಳನ್ನು, ಪ್ರಮೃಜ್ಯ-ಒರಸಿಗೊಂಡು, ತದಾ-ಆ ಸಮಯದಲ್ಲಿ, ಲಕ್ಷ್ಮಣಃ-ಲಕ್ಷ್ಮಣನು, ಗಂಗಾಂ-ಗಂಗಾನದಿಯನ್ನು, ತಿತೀರ್ಷುಃ-ದಾಟಲಿಚ್ಛೆಯುಳ್ಳವನಾಗಿ, ನಾವಿಕಾನ್-ಹಡಗು ನಡೆಸುವರನ್ನು ಕುರಿತು, ಅಬ್ರವೀತ್-ನುಡಿದನು ॥೨೨॥ ಅಲಂಕೃತಾಂ-ಅಲಂಕೃತವಾದ, ರಮ್ಯಾಂ-ಮನೋಹರವಾದ, ನಾವಂ-ಹಡಗನ್ನು, ಶೀಘ್ರಂ-ಜಾಗ್ರತೆಯಾಗಿ, ಅದ್ಯೈವ-ಈಗಲೇ; ಆನಯತ-ತೆಗದುಕೊಂಡು ಬನ್ನಿರಿ ॥ ೨೩ ॥ ತಸ್ಯ-ಆ ಲಕ್ಷ್ಮಣನ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ದಾಶಾಃ-ನಾವಿಕರು, ಪ್ರಾಂಜಲಯಃ-ಅಂಜಲಿಬದ್ಧರಾಗಿ, ಇಯಂನೌಃ-ಈ ಹಡಗು, ಸಜ್ಜಾ -ಸನ್ನದ್ಧವಾಗಿ, ಅಸ್ತೀತಿ-ಇಥೆಯೆಂದು, ಸಸಂಭ್ರಮಾಃ-ತ್ವರೆಯುಳ್ಳವರಾಗಿ, ತಂಲಕ್ಷ್ಮಣಂ- ಆ ಸೌಮಿತ್ರಿಯನ್ನು ಕುರಿತು, ಅಬ್ರವೀತ್-ನುಡಿದರು ॥೨೪॥

—…*ಇತಿ ಶ್ರೀಮದುತ್ತರರಾಮಾಯಣೇ ಷಟ್ಚತ್ವಾರಿಂಶಸ್ಸರ್ಗಃ.*…—

ರಾಘವಾನುಜಃ-ಶ್ರೀರಾಮನ ತಮ್ಮನಾದ, ಸಃ- ಆ ಲಕ್ಷ್ಮಣನು, ನೈಷಾದೀಂ- ಗುಹನ ಸಂಬಧವಾದ, ಸುವಿಸ್ತೀರ್ಣಾಂ-ವಿಸ್ತಾರವಾದ, ಸಮಾಯುಕ್ತಾಂ-ಸನ್ನದ್ಧವಾದ, ನಾವಂ-ವಾಡೆಯನ್ನು, ಮೈಥಿಲೀಂ-ಸೀತಾದೇವಿಯನ್ನು, ಪೂರ್ವಂ-ಮೊದಲು, ಆರೋಪ್ಯ-ಏರಿಸಿ, ಅಥ-ಬಳಿಕ, ಆರುರೋಹ-ಏರಿದನು ॥೧॥ ಲಕ್ಷ್ಮಣಃ-ಲಕ್ಷ್ಮಣನು, ಸರಥಂ-ರಥಯುಕ್ತನಾದ, ಸುಮಂತ್ರಂ-ಸಾರಥಿಯಾದ ಸುಮಂತ್ರನನ್ನು, ಸ್ಥೀಯತಾಮಿತ್ಯೈವ-

---

ವಸ್ತ್ರಗಳನ್ನು, ಒಡವೆಗಳನ್ನೂ ಸಹ ಕೊಟ್ಟು, ಆ ಮಹರ್ಷಿಪಾದಗಳಿಗೆರಗಿ, ಅವರ ಆಶ್ರಮದಲ್ಲಿ ಒಂದುರಾತ್ರಿಯು ಸೆ ರೆಗೊಂಡಿದ್ದು, ಆ ಅಯೋಧ್ಯಾಪುರವಂ ಕುರಿತು ತೆರಳುವಂಥಾವರಾಗೋಣ ॥೨೦॥ (ಯಾಕಂದರೆ) ತಾವರೆ ಯೆಸಳೋಪಾಧಿಯಾಗಿ ವಿಸ್ತಾರವಾಗಿಯೂ ಕೆಂಪಾಗಿಯೂ ಇರುವ ಕಣ್ಣುಗಳುಳ್ಳವನಾಗಿಯೂ, ಸಿಂಹದ ಯದೆಯಂತಿರುವ ಯದೆಯುಳ್ಳವನಾಗಿಯೂ, ಕೃಶವಾಗಿರ್ಪ ಉದರವುಳ್ಳವನಾಗಿಯೂ, ರಮಿಸುವರೊಳಗೆ ಉತ್ತಮನಾದಂಥಾವನಾಗಿಯೂ ಇರುವ ಶ್ರೀರಾಮನಂ ಕಾಣಬೇಕೆಂದು ಎನ್ನ ಮನವು ತ್ವರೆಗೊಳಿಸುತ್ತಿದೆ, ಎಂಬದಾಗಿ ಸೀತಾದೇವಿಯು ನುಡಿಯಲೂ, ಆ ಮಾತಂ ಕೇಳಿ ಲಕ್ಷ್ಮಣನು ಕಣ್ಣುಗಳಂಒರಿಸಿಕೊಂಡು, ಗಂಗಾನದಿಯಂ ದಾಂಟಲಿಚ್ಛೆಯುಳ್ಳವನಾಗಿ, ಹಡಗು ನಡಿಸುತ್ತಿರುವ ನಾವಿಕರೆಂಬವರಂ ಕುರಿತು, ಎಲೈ ನಾವಿಕರುಗಳಿರಾ! ಚನ್ನಾಗಿ ಅಲಂಕರಿಸಲ್ಪಟ್ಟ ಹಡಗನ್ನು ತೆಗದುಕೊಂಡು ಬನ್ನಿರಿ, ಎಂಬದಾಗಿ ನಿರೂಪಿಸಲೂ, ಅವರುಗಳು ಆ ಮಾತಂ ಕೇಳಿ, ಕೈಮುಗಿದುಕೊಂಡು ತ್ವರೆಯುಳ್ಳವರಾಗಿ, ಎಲೈ ಲಕ್ಷ್ಮಣನೇ ! ಇದಿಗೋ ಹಡಗು ಸಿದ್ಧವಾಗಿರುವದೆಂದು ಉತ್ತರವಂ ಕೊಟ್ಟಂಥಾವರಾದರು ॥೨೪॥

ಉತ್ತರರಾಮಾಯಣದಲ್ಲಿನ ೪೬ನೆಯ ಸರ್ಗಂ ಮುಗಿದುದು.

ಬಳಿಕ ಆ ಲಕ್ಷ್ಮಣನು, ಗುಹನ ಸಂಬಂಧಿಗಳಾದ ಆ ನಾವಿಕರಿಂದ ತರಲ್ಪಟ್ಟ ನಾವೆಯೊಳು, ಸೀತಾದೇವಿಯನ್ನು ಪ್ರಥಮತಃ ಏರಿಸಿ, ರಥವನ್ನೀದಡದಲ್ಲಿ ನಿಲ್ಲಿಸಿಗೊಂಡಿರೆಂದು ಸುಮಂತ್ರನಿಗೆ ನಿರೂಪಿಸಿ, ತಾನು ಆ ನಾವೆಯಲ್ಲಿ ಕುಳಿತು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸುಮಂತ್ರಂಚೈವಸರಥಂಸ್ಥೀಯತಾಮಿತಿಲಕ್ಷ್ಮಣಃ । ಉವಾಚಶೋಕಸಂತಪ್ತಃಪ್ರಯಾಹೀತಿಚನಾವಿಕಮ್ ॥೨॥ ತತಸ್ತೀರಮುಪಾಗಮ್ಯಭಾಗೀರಥ್ಯಾಸ್ಸಲಕ್ಷ್ಮಣಃ । ಉವಾಚಮೈಥಿಲೀಂವಾಕ್ಯಂಪ್ರಾಂಜಲಿರ್ಬಾಷ್ಪಗದ್ಗದಮ್॥೩॥ ಹೃದ್ಗತಂಮೇಮಹಚ್ಛಲ್ಯಮುಕ್ತೋಸ್ಮ್ಯಾರ್ಯೇಣಧೀಮತಾ । ಅಸ್ಮಿನ್ನಿಮಿತ್ತೇವೈದೇಹಿಲೋಕಸ್ಯವಚನೀಕೃತಃ ॥ ೪ ॥ ಶ್ರೇಯೋಹಿಮರಣಂಮೇದ್ಯಮೃತ್ಯೋರ್ವಾಯತ್ಪರಂಭವೇತ್ ॥ ನಚಾಸ್ಮಿನ್ನೀದೃಶೇಕಾರ್ಯೇನಿಯೋಜ್ಯೋಲೋಕನಿಂದಿತೇ ॥೫॥ ಪ್ರಸೀದನಚಮೇರೋಷಂಕರ್ತುಮರ್ಹಸಿಸುವ್ರತೇ । ಇತ್ಯಂಜಲಿಕೃತೋಭೂಮೌನಿಪಪಾತಸಲಕ್ಷ್ಮಣಃ ॥೬॥ ರುದಂತಂಪ್ರಾಂಜಲಿಂದೃಷ್ಟ್ವಾಕಾಂಕ್ಷಂತಂಮೃತ್ಯುಮಾತ್ಮನಃ । ಮೈಥಿಲೀಭೃಶಸಂವಿಗ್ನಾಲಕ್ಷ್ಮಣಂವಾಕ್ಯಮಬ್ರವೀತ್ ॥೭॥ ಕಿಮಿದಂನಾವಗಚ್ಛಾಮಿಬ್ರೂಹಿತತ್ತ್ವೇನರಾಘವ । ಪಶ್ಯಾಮಿತ್ವಾಂಚನಸ್ವಸ್ಥಮಪಿಕ್ಷೇಮಂಮಹೀಪತೇಃ ॥೮॥ ಶಾಪಿತೋಸಿನರೇಂದ್ರೇಣಯತ್ತ್ವಂಸಂತಾಪಮಾತ್ಮನಃ । ತದ್ಬ್ರೂಯಾಸ್ಸನ್ನಿಧೌಮಹ್ಯಮಹಮಾಜ್ಞಾಪಯಾಮಿತೇ॥೯॥ ವೈದೇಹ್ಯಾಚೋ

---

ನಿಲ್ಲೆಂದೆ ಹೇಳಿ, ಶೋಕಸಂತಪ್ತಃ-ದುಃಖಾಕ್ರಾಂತನಾಗಿ, ನಾವಿಕಂ-ಹಡಗುನಡೆಸುವನನ್ನು, ಪ್ರಯಾಹೀತಿ-ತೆರಳೆಂದು, ಉವಾಚ-ಹೇಳಿದನು ॥೨॥ ತತಃ-ಬಳಿಕ, ಸಲಕ್ಷ್ಮಣಃ-ಆ ಲಕ್ಷ್ಮಣನು, ಭಾಗೀರಥ್ಯಾಃ-ಗಂಗಾನದಿಯ, ತೀರಂ-ದಡವನ್ನು, ಉಪಾಗಮ್ಯ-ಹೊಂದಿ, ಪ್ರಾಂಜಲಿಃ- ಅಂಜಲಿಬದ್ಧನಾಗಿ, ಬಾಷ್ಪಗದ್ಗದಂ-ಕಂಬನಿಗಳಿಂದ ವಿಕಾರಧ್ವನಿಯುಳ್ಳವನಂತೆ, ಮೈಥಿಲೀಂ-ಸೀತಾದೇವಿಯನ್ನು ಕುರಿತು, ಉವಾಚ-ಹೇಳಿದನು ॥೩॥ ಹೆ ವೈದೇಹಿ- ಎಲೈ ಸೀತಾದೇವಿಯೇ, ಧೀಮತಾ-ಬುದ್ಧಿಶಾಲಿಯಾದ, ಆರ್ಯೇಣ-ಅಣ್ಣನಿಂದ, ಉಕ್ತಃ-ಹೇಳಲ್ಪಟ್ಟವನು, ಅಸ್ಮಿ-ಆದೆನು, ಅಸ್ಮಿನ್ನಿಮಿತ್ತೇ-ಈ ನಿಮಿತ್ತದಲ್ಲಿ, ಲೋಕಸ್ಯ-ಜನಕ್ಕೆ, ವಚನೀಕೃತಃ-ಮಾತುಗಳಿಗೆ ವಿಷಯೀಕೃತನಾದೆ, ಮೇ-ನನಗೆ, ಮಹತ್-ಬಹಳ ದೊಡ್ಡದಾದ, ಶಲ್ಯಂ- ಬಾಣದಮುಳ್ಳು, ಹೃದ್ಗತಂ-ಹೃದಯವನ್ನು ಹೊಂದಿತು ॥೪॥ ಮೇ-ನನಗೆ, ಅದ್ಯ-ಈಗ, ಮರಣಂ-ಮರಣವು, ಶ್ರೇಯಃ-ಶ್ರೇಯಸ್ಕರವು, ಮೃತ್ಯೋರ್ವಾ-ಮೃತ್ಯುಗಿಂತಲೂ, ಪರಂ-ಹೆಚ್ಚಾಗಿ, ಯದ್ಭವೇತ್-ಯಾವದಾಧೀತೋ, ತದ್ವಾ-ಅದಾದರೂನು, ಶ್ರೇಯಃ-ಶ್ರೇಯಸ್ಸು, ಭವೇತ್-ಆಗುವದು, ಲೋಕನಿಂದಿತೇ-ಲೋಕ- ಜನರಿಂದ, ನಿಂದಿತೇ-ನಿಂದಿಸಲ್ಪಟ್ಟ, ಈದೃಶೇಕಾರ್ಯೇ-ಇಂಥಾಕಾರ್ಯದಲ್ಲಿ, ನಿಯೋಜ್ಯಃ-ನಿಯೋಗಿಸತಕ್ಕವನು, ನಚಾಸ್ಮಿ- ಆಗದೆ ಹೋಗುವೆನು ॥೫॥ ಹೆಸುವ್ರತೇ-ಎಲೈ ಮಹಾಪತಿವ್ರತೆಯೇ, ಮೇ-ನನಗೆ, ಪ್ರಸೀದ-ಪ್ರಸನ್ನಳಾಗು, ರೋಷಂ-ರೋಷವನ್ನು, ಕರ್ತುಂ-ಮಾಡುವದಕ್ಕೋಸುಗ, ನಾರ್ಹಸಿ-ಅರ್ಹಳಾಗಬ್ಯಾಡ, ಇತಿ-ಇಂತೆಂದು, ಸಲಕ್ಷ್ಮಣಃ-ಆಲಕ್ಷ್ಮಣನು,ಅಂಜಲಿಕೃತಃ-ಕೃತವಾದ ಅಂಜಲಿಯುಳ್ಳವನಾಗಿ,ಭೂಮೌ-ನೆಲದಲ್ಲಿ,ಪಪಾತ-ಬಿದ್ದನು॥೬॥ರುದಂತಂ ರೋದನಮಾಡುತ್ತಿರುವ, ಪ್ರಾಂಜಲಿಂ-ಅಂಜಲಿಬದ್ಧನಾದ, ಆತ್ಮನಃ-ತನಗೆ, ಮೃತ್ಯುಂ-ಮರಣವನ್ನು, ಕಾಂಕ್ಷಂತಂ-ಬೇಡುತ್ತಿರುವ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಭೃಶಸಂವಿಗ್ನಾ-ಮತ್ತೂ ಗಾಬರಿಬಿದ್ದವಳಾಗಿ,ಮೈಥಿಲೀ-ಸೀತಾದೇವಿಯು,ವಾಕ್ಯಂ-ಮಾತನ್ನು,ಅಬ್ರವೀತ್-ನುಡಿದಳು॥೭॥ ಹೆರಾಘವ-ಎಲೈ ರಘುವಂಶೋತ್ಪನ್ನನೆ, ಇದಂ-ಈದುಃಖಾವಸ್ಥೆಯು, ಕಿಂ-ಯೇನು, ನಾವಗಚ್ಛಾಮಿ-ತಿಳಿಯದೆ ಹೋದೆ, ಸತ್ಯೇನ - ಯಥಾರ್ಥದಿಂದ, ಬ್ರೂಹಿ-ಹೇಳು, ತ್ವಾಂ-ನಿನ್ನನ್ನು, ಸ್ವಸ್ಥಂ - ಸ್ವಸ್ಥಚಿತ್ತನನ್ನಾಗಿ, ನಪಶ್ಯಾಮಿ-ಕಾಣೆನು, ಮಹೀಪತೇಃ-ಶ್ರೀರಾಮನಿಗೆ, ಕ್ಷೇಮಂಚ- ಕ್ಷೇಮವನ್ನು, ನಪಶ್ಯಾಮಿ-ಕಾಣೆನು ॥೮॥ ಯದ್ಯಸ್ಮಾತ್ಕಾರಣಾತ್-ಯಾವಕಾರಣದ ದೆಸೆಯಿಂದ, ಆತ್ಮನಃ-ಮನಸ್ಸಿನಲ್ಲಿ, ಸಂತಾಪಂ-ಸಂಕಟವನ್ನು, ತ್ವಂ-ನೀನು, ಪ್ರಾಪ್ನೋಸಿ-ಹೊಂದಿರುತ್ತಿಯೋ, ತತಃ-ಆ ಕಾರಣದ ದೆಸೆಯಿಂದ, ನರೇಂದ್ರೇಣ-ಅರಸಿನಿಂದ, ಶಾಪಿತಃ-ಶಪಿಸಲ್ಪಟ್ಟವನು, ಅಸಿ-ಆಗಿದ್ದೀಯೊ, ತೇ-ನಿನಗೆ, ಅಹಂ-ನಾನು, ಆಜ್ಞಾಪಯಾಮಿ-ಆಜ್ಞಾಪಿಸುತ್ತೇನೆ, ಸನ್ನಿಧೌ-ನನ್ನ ಸನ್ನಿಧಿಯಲ್ಲಿ, ಮಹ್ಯಂ-ನನಗೋಸುಗ, ತತ್-ಆಶೋಕಕಾರಣವನ್ನು, ಬ್ರೂಯಾಃ-ಹೇಳು ॥೯॥ ವೈದೇಹ್ಯಾ-ಸೀತಾದೇವಿಯಿಂದ, ಚೋದ್ಯಮಾನಃ-ಪ್ರೇರಿಸಲ್ಪಟ್ಟವನಾಗಿ, ಲಕ್ಷ್ಮಣಃ-ಲಕ್ಷ್ಮಣನು, ದೀನಚೇತನಃ- ದೈನ್ಯವಾದ

---

ಕೊಂಡು, ನಡೆಯಿಸಬಹುದೆಂದು ಆ ನಾವಿಕನಿಗೆ ಪೇಳಿದಂಥಾವನಾಗಲೂ, ಆ ನಾವಿಕನು ಆಚೇಕಡೆಯ ಧಡವನ್ನು ಹೊಂದಿಸಿದಂಥಾವನಾದನು. ಆ ಬಳಿಕ ಲಕ್ಷ್ಮಣನು ಕಂಬನಿಗಳಂ ಸುರಿಸುತ್ತಾ ಕೈಮುಗಿದುಕೊಂಡು ಸೀತಾದೇವಿಯಂ ಕುರಿತು, ಎಲೈ ಸೀತಾದೇವಿಯೆ ! ಶ್ರೀರಾಮನಿಂದ ನಾನು ಆಜ್ಞಾಪಿಸಲ್ಪಟ್ಟಿಧೇನೆ, ಈ ವಿಷಯದಲ್ಲಿ ಜನಗಳ ಮಾತಿಗೆ ಗುರಿಯಾದಂಥಾವನಾಗಿದೆ, ನನಿಗೆ ಮಹಾಶಲ್ಯವು ಹೃದ್ಗತವಾಗಿಧೆ, ಹಾಹಾ ! ಈಗ ನನಿಗೆ ಮರಣವು ಸಂಭವಿಸಿದರೆ ಶ್ರೀಯಸ್ಸು, ಅದಕ್ಕಿಂತಲು ಅತಿಶಯವಾಗಿರುವದು ಯೇನಾದೀತೋ, ಆದಾದರು ಒಳ್ಳೇದೇಸರಿ, ಲೋಕನಿಂದಿತವಾದ ಈ ಕೆಲಸದಲ್ಲಿ ನಿಯೋಗಿಸಲ್ಪಟ್ಟೆನಲ್ಲ ॥೫॥ ಎಲೈ ಪತಿವ್ರತೆಯೇ ! ನನಿಗೆ ಪ್ರಸನ್ನಳಾದಂಥಾವಳಾಗು, ಕೋಪವಂಗಯ್ಯುವಂಥಾವಳಾಗಬೇಡೆಂದು ಕೈಮುಗಿದುಕೊಂಡು ನುಡಿಯುತ್ತಾ ನೆಲದಲ್ಲಿ ಬಿದ್ದಂಥಾವನಾದನು ॥೬॥ ಈಪರಿ ರೋದನಂಗೈಯ್ಯುತ್ತಲೂ ಕೈಮುಗಿಯುತ್ತಲೂ, ತನಗೆ ಮೃತ್ಯುವಿನಂನಪೇಕ್ಷಿಸುತ್ತಲೂ ಇರುವ ಲಕ್ಷ್ಮಣನಂ ಕುರಿತು, ಸೀತಾದೇವಿಯು ಸಂತಪಿಸುತ್ತಿರುವಳಾಗಿ, ಎಲೈಲಕ್ಷ್ಮಣನೇ ! ಈ ದುಃಖಾವಸ್ಥೆಯು ಯಾತರಿಂದುಂಟಾಯಿತೊ ನನಿಗೆ ತಿಳಿಯದು, ಯಥಾರ್ಥದಿಂ ಪೇಳುವಂಥಾವನಾಗು, ನಿನಿಗೆ ಸ್ವಸ್ಥಚಿತ್ತತೆ ಯಿದ್ದಂತೆ ತೋರುವದಿಲ್ಲ, ಶ್ರೀರಾಮನು ಕ್ಷೇಮವಾಗಿರುವನೋ ಏನೋ ತಿಳಿಯಲಿಲ್ಲವಲ್ಲ, ನೀನೀಪರಿ ಸಂತಪಿಸುತ್ತಿದ್ದೀಯಾದಕಾರಣ, ನರೇಂದ್ರ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದ್ಯಮಾನಸ್ತು ಲಕ್ಷ್ಮಣೋದೀನಚೇತನಃ । ಅವಾಙ್ಮುಖೋಬಾಷ್ಪಗಳೋವಾಕ್ಯಮೇತದುವಾಚಹ ॥೧೦॥ ಶ್ರುತ್ವಾಪರಿಷದೋಮಧ್ಯೇಹ್ಯಪವಾದಂಸುದಾರುಣಮ್ । ಪುರೇಜನಪದೇಚೈವತ್ವತ್ಕೃತೇಜನಕಾತ್ಮಜೇ ॥೧೧॥ ರಾಮಸ್ಸಂತಪ್ತಹೃದಯೋಮಾಂನಿಯೊಜ್ಯಗೃಹಂಗತಃ । ವನಂಪ್ರಾಪಯಿತುಂತ್ವಾಂವೈನಿರ್ದೋಷಾಮಪಿಮೈಥಿಲಿ ॥೧೨॥ ನತಾನಿವಚನೀಯಾನಿಮಯಾದೇವಿತವಾಗ್ರತಃ । ಯಾನಿರಾಜ್ಞಾ ಹೃದಿನ್ಯಸ್ತಾನ್ಯಮರ್ಷಃಪೃಷ್ಠತಃಕೃತಃ ॥೧೩॥ ಸಾತ್ವಂತ್ಯಕ್ತಾ ನೃಪತಿನಾನಿರ್ದೋಷಾಮಮಸನ್ನಿಧೌ । ಪೌರಾಪವಾದಭೀತೇನಗ್ರಾಹ್ಯಂದೇವಿನತೇನ್ಯಥಾ ॥೧೪॥ ಆಶ್ರಮಾಂತೇಷುಚಮಯಾತ್ಯಕ್ತವ್ಯಾತ್ವಂಭವಿಷ್ಯಸಿ ॥೧೫॥ ರಾಜ್ಞಶ್ಶಾಸನಮಾಜ್ಞಾಯತವೈವಂಕಿಲದೌಹೃದಮ್ । ತದೇತಜ್ಜಾಹ್ನವೀತೀರೇಬ್ರಹ್ಮರ್ಷೀಣಾಂತಪೋವನಮ್ ॥ ಪುಣ್ಯಂಚರಮಣೀಯಂಚಮಾವಿಷಾದಂಕೃಥಾಶ್ಶುಭೇ ॥೧೬॥ ರಾಜ್ಞೋದಶರಥಸ್ಯೇಷ್ಟಃಪಿತುರ್ಮೇಮುನಿಪುಂ

---

ಬುದ್ಧಿಯುಳ್ಳವನಾಗಿ, ಅವಾಙ್ಮುಖಃ-ಬೊಗ್ಗಿದಮುಖವುಳ್ಳವನಾಗಿ, ಏತತ್-ಈ ವಕ್ಷ್ಯಮಾಣವಾದ, ವಚಃ-ಮಾತನ್ನು, ಉವಾಚಃ-ಹೇಳಿದನಷ್ಟೆ ॥೧೦॥ ಹೆ ಜನಕಾತ್ಮಜೇ-ಎಲ್ಲೈ ಸೀತಾದೇವಿಯೆ, ತತ್ಕೃತೇ-ನಿನ್ನನಿಮಿತ್ತವಾಗಿ, ಪರಿಷದಃ-ಸಭೆಯ, ಮಧ್ಯೇ-ಮಧ್ಯದಲ್ಲಿ, ಪುರೇ-ಗ್ರಾಮದಲ್ಲಿಯೂನೂ, ಜನಪದೇಚೈವ-ದೇಶದಲ್ಲಿಯೂನು ಹುಟ್ಟಿರುವ, ಸುದಾರುಣಂ-ಬಹಳ ಕ್ರೂರವಾದ, ಅಪವಾದಂ- ಅಪವಾದವನ್ನು, ಶ್ರುತ್ವಾ-ಕೇಳಿ, ಹೆ ಮೈಥಿಲೀ-ಎಲ್ಲೈ ಸೀತಾದೇವಿಯೇ, ಸಂತಪ್ತಹೃದಯಃ-ಸಂತಪ್ತ-ತಪಿಸಲ್ಪಟ್ಟ, ಹೃದಯಃ-ಮನಸ್ಸುಳ್ಳವನಾಗಿರುವ, ರಾಮಃ-ಶ್ರೀರಾಮನು, ನಿರ್ದೋಷಾಮಪಿ-ದೋಷವಿಲ್ಲದವಳಾದರೂನು, ತ್ವಾಂ-ನಿನ್ನನ್ನು, ವನಂ-ಅರಣ್ಯವನ್ನು, ಪ್ರಾಪಯಿತುಂ-ಹೊಂದಿಸುವದಕ್ಕೋಸುಗ, ಮಾಂ-ನನ್ನನ್ನು ಕುರಿತು, ನಿಯೋಜ್ಯ-ಆಜ್ಞಾಪಿಸಿ, ಗೃಹಂ-ಮನೆಯಂಕುರಿತು, ಗತಃ-ಹೋದನು ॥೧೨॥ ರಾಜ್ಞಾ-ಅರಸನಿಂದ, ಅಮರ್ಷಃ-ರೋಷವು, ಪೃಷ್ಠತಃ-ಹಿಂದುಗಡೆ, ಕೃತಃ- ಮಾಡಲ್ಪಟ್ಟಿತು, ಯಾನಿಹೃದಿನ್ಯಸ್ತಾನಿ-ಯಾನಿ-ಯಾವ ಸಂಕಟಕರವಾದ ಮಾತುಗಳು, ಹೃದಿ-ಹೃದಯದಲ್ಲಿ, ನ್ಯಸ್ತಾನಿ- ಇರಿಸಲ್ಪಟ್ಟವೋ, ಹೆದೇವಿ-ಎಲ್ಲೈ ಸೀತಾದೇವಿಯೇ, ತವ-ನಿನ್ನ, ಅಗ್ರತಃ-ಮುಂದುಗಡೇ, ತಾನಿ-ಆ ಮಾತುಗಳು, ಮಯಾ-ನನ್ನಿಂದ, ನವಚನೀಯಾನಿ-ಹೇಳತಕ್ಕವುಗಳಲ್ಲಾ ॥೧೩॥ ಮಮ-ನನ್ನ, ಸನ್ನಿಧೌ-ಸಮೀಪದಲ್ಲಿ, ನಿರ್ದೋಷಾ-ದೋಷರಹಿತಳಾದ, ಸಾತ್ವಂ-ಆ ನೀನು, ಪೌರಾಪವಾದ ಭೀತೇನ-ಪೌರ-ಪಟ್ಟಣಸ್ಥರಲ್ಲಿ, ಅಪವಾದ-ಇಲ್ಲದದೋಷಮಾತುಗಳ ದೆಸೆಯಿಂದ, ಭೀತೇನ-ಭೀತನಾದ, ನೃಪತಿನಾ- ಅರಸಾದ ಶ್ರೀರಾಮನಿಂದ, ತ್ಯಕ್ತಾ-ಪರಿತ್ಯಾಗ ಮಾಡಲ್ಪಟ್ಟೆ, ಹೆದೇವಿ- ಎಲ್ಲೈ ಸೀತಾದೇವಿಯೇ, ತೇ-ನಿನಗೆ, ಗ್ರಾಹ್ಯಂ-ಗ್ರಹಿಸತಕ್ಕದ್ದು, ಅನ್ಯಥಾ-ಮತ್ತೊಂದು ಬಗೆಯಾಗಿ, ನ-ಇಲ್ಲಾ ॥೧೪॥ ಮಯಾ-ನನ್ನಿಂದ, ತ್ವಂ- ನೀನು, ಆಶ್ರಮಾಂತೇಷು-ಆಶ್ರಮಗಳ ಸಮೀಪಗಳಲ್ಲಿ, ತ್ಯಕ್ತವ್ಯಾ-ತ್ಯಾಗಮಾಡತಕ್ಕವಳು, ಭವಿಷ್ಯಸಿ-ಆಗುವೀ ॥೧೫॥ ರಾಜ್ಞಃ-ಅರಸಾದ ಶ್ರೀರಾಮನ, ಶಾಸನಂ-ಆಜ್ಞಾವಚನವನ್ನು, ಆದಾಯ-ತೆಗದುಕೊಂಡು, ತವ-ನಿನಗೆ, ದೌಹೃದಂ-ಗರ್ಭಲಕ್ಷಣವನ್ನು, ಏವಂಕಿಲ-ಹೀಗೆಇಷ್ಟೆ, ಹೆ ಶುಭೇ-ಎಲ್ಲೈ ಶುಭಕರಳೇ, ಜಾಹ್ನವೀತೀರೇ-ಗಂಗಾತೀರದಲ್ಲಿ, ಬ್ರಹ್ಮರ್ಷೀಣಾಂ-ಬ್ರಹ್ಮ ಋಷಿಗಳ, ತಪೋವನಂ-ತಪೋವನವು, ತದೇತತ್-ಆ ಇದು, ಪುಣ್ಯಂಚ-ಪುಣ್ಯಕರಮಾದ್ದು, ರಮಣೀಯ್ಯಂಚ-ಮನೋಹರಮಾದ್ದೂ ಹೌದು, ವಿಷಾದಂ-ವ್ಯಸನವನ್ನು, ಮಾಕೃಥಾಃ-ಮಾಡಬ್ಯಾಡ ॥೧೬॥ ಮೇ-ನನಗೆ, ಪಿತುಃ-ತಂದೆಯಾದ, ರಾಜ್ಞಃ-ರಾಜನಾದ, ದಶರಥಸ್ಯ-ದಶರಥರಾಯನಿಗೆ, ಇಷ್ಟಃ-ಪ್ರಿಯನಾದ, ಪರಮಕಸ್ಸಖಾ-ಪರಮಮಿತ್ರನಾದ, ಮುನಿಪುಂಗವಃ - ಋಷಿಶ್ರೇ

---

ನಾದ ಶ್ರೀರಾಮನಿಂದ ಶಪಿಸಲ್ಪಟ್ಟಿರಬಹುದು, ನಿನಿಗೀಗ ನಾನು ಆಜ್ಞಾಪಿಸುತ್ತೇನೆ ಆ ಸಂಕಟಕ್ಕೆ ಕಾರಣವನ್ನು ನನ್ನ ಸನ್ನಿಧಾನದಲ್ಲಿ ಹೇಳುವಂಥಾವನಾಗೆಂದು ಸೀತಾದೇವಿಯು ನಿರೂಪಿಸಿದಂಥಾವಳಾಗಲು, ಲಕ್ಷ್ಮಣನು ದೈನ್ಯಮತಿಯುಳ್ಳವನಾಗಿಯೂ, ತಲೆಬೊಗ್ಗಿಕೊಂಡವನಾಗಿಯೂ, ಕಂಬನಿಗಳಿಂದ ಕಲುಷವಾದ ಕಂಠಸ್ವರಮುಳ್ಳವನಾಗಿಯೂ ಈ ಮಾತಂ ಹೇಳಲೊಸಗಿದನು ॥೧೦॥ ಎಲ್ಲೈ ಜಾನಕೀದೇವಿಯೆ ! ಪಟ್ಟಣದಲ್ಲಿಯೂ ದೇಶದಲ್ಲಿಯೂ ಇರುವ ನಿನ್ನ ನಿಮಿತ್ತವಾದ ಅಪವಾದವನ್ನು ಸಭಾಮಧ್ಯದಲ್ಲಿ ಕೇಳಿದಂಥಾವನಾಗಿ, ಸಂತಪಿಸುತ್ತಿರುವ ಮನವುಳ್ಳವನಾಗಿ, ದೋಷಲೇಶವಾದರೂ ಇಲ್ಲದಿರುವ ನಿನ್ನನ್ನು ಅರಣ್ಯಕ್ಕೆ ಕರೆದುಕೊಂಡು ಪೋಗುವದಕ್ಕೋಸುಗ, ಎನಗೆ ಆಜ್ಞೆಯನ್ನಿತ್ತು ಮಂದಿರವಂ ಕುರಿತು ತೆರಳಿದವನಾದನು ॥೧೨॥ ಎಲ್ಲೈ ದೇವಿಯೆ ! ಆ ರಘುನಂದನನು ನಿರೂಪಿಸಿರುವ ವಚನವನ್ನು ನಿನ್ನ ಸಮಕ್ಷಮದಲ್ಲಿ ಹೇಳಲಾರೆ, ನಿರ್ದೋಷಳಾದ ಅಂಥಾ ನೀನು, ಪುರವಾಸಿಗಳಾದ ಜನಗಳ ಮಾತುಗಳಿಗೆ ಹದರಿದವನಾದ ಆ ಶ್ರೀರಾಮನಿಂದ ಪರಿತ್ಯಕ್ತಳಾದಂಥಾವಳಾದೆ, ನಿನ್ನ ಸಂಗ್ರಹಣವೆಂಬದನ್ನು ಯಾವಬಗೆಯಲ್ಲಿ ಆದರು ಕಾಣೆನು. ಗರ್ಭಿಣಿಯಾದ ನಿನ್ನ ಇಷ್ಟಾರ್ಥವು ಅವಶ್ಯವಾಗಿ ನೆರವೇರಿಸುವದಕ್ಕೋಸುಗ, ರಾಜಾಜ್ಞೆಯಾದಂತೆ ನಾನು ಋಷ್ಯಾಶ್ರಮಗಳ ಸಮೀಪದಲ್ಲಿ ನಿನ್ನನ್ನು ಬಿಟ್ಟು ಹೊರಟುಹೋಗುವೆನು, ಎಲ್ಲೈ ಶುಭಕರಳೇ ! ಪುಣ್ಯಕರವಾದ ಗಂಗಾತೀರದಲ್ಲಿರ್ಪ ರಮಣೀಯವಾದ ಮಹಾಮುನಿಗಳ ತಪೋವನವು ಇದಿಗೋ ಇಲ್ಲಿಯೇ ಕಾಣುತ್ತಿರುವದು, ಚಿಂತಿಸಬ್ಯಾಡ ॥೧೬॥ ನಮ್ಮ ತಂದೆಯಾದ ದಶರಥ ರಾಜನಿಗೆ ಪ್ರೀತಿಪಾತ್ರನಾಗಿಯೂ, ಸ್ನೇಹಿತನಾಗಿಯೂ, ಕಡು ಕೀರ್ತಿವಂತನಾಗಿಯೂ ಇರುವ ವಾಲ್ಮೀಕಿಯೆಂಬ ಮಹಾಮುನಿ ಇರುವನು, ನೀನು ಆ ಮಹಾಮುನಿಯ ಸನ್ನಿಧಿಗೆ ಪೋಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗವಃ । ಸಚಾಪರಮಕೋವಿಪ್ರೋವಾಲ್ಮೀಕಿಸ್ಸುಮಹಾಯಶಾಃ ॥೧೭॥ ಪಾದಚ್ಛಾಯಾಮುಪಾಗಮ್ಯಸುಖಮಸ್ಯಮಹಾತ್ಮನಃ । ಉಪವಾಸಪರೈಕಾಗ್ರಾವಸತ್ವಂಜನಕಾತ್ಮಜೆ ॥೧೮॥ ಪತಿವ್ರತಾತ್ವಮಾಧಾಯರಾಮಂಕೃತ್ವಾಸದಾಹೃದಿ । ಶ್ರೇಯಸ್ತೆಪರಮಂದೇವಿತಥಾಕೃತ್ವಾಭವಿಷ್ಯತಿ ॥ ॥೧೯॥

—···*ಇತಿ ಶ್ರೀಮದುತ್ತರ ರಾಮಾಯಣೆ ಸಪ್ತಚತ್ವಾರಿಂಶಸ್ಸರ್ಗಃ.*···—

ಲಕ್ಷ್ಮಣಸ್ಯವಚಃಶ್ರುತ್ವಾದಾರುಣಂಜನಕಾತ್ಮಜಾ । ಪರಂವಿಷಾದಮಾಗಮ್ಯವೈದೇಹೀನಿಪಪಾತಹ॥೧॥ ಸಾಮುಹೂರ್ತಮಿವಾಸಂಜ್ಞಾಬಾಷ್ಪವ್ಯಾಕುಲಿತೇಕ್ಷಣಾ । ಲಕ್ಷ್ಮಣಂದೀನಯಾವಾಚಾಹ್ಯುವಾಚಜನಕಾತ್ಮಜಾ ॥೨॥ ಮಾಮಿಕೇಯಂತನುರ್ನೂನಂಸೃಷ್ಟಾದುಃಖಾಯಲಕ್ಷ್ಮಣ।ಧಾತ್ರಾಯಸ್ಯಾಸ್ತಥಾಮೇದ್ಯದುಃಖಮೂರ್ತಿಃಪ್ರದೃಶ್ಯತೆ॥೩॥ ಕಿನ್ನುಪಾಪಂಕೃತಂಪೂರ್ವಂಕೋವಾದಾರೈರ್ವಿಯೋಜಿತಃ।ಯಾಹಂಶುದ್ಧಸಮಾಚಾರಾತ್ಯಕ್ತಾನೃಪತಿನಾಸತೀ ॥೪॥ ಪುರಾಹ

---

ನಾದ, ಸುಮಹಾಯಶಾಃ- ಮಹಾಕೀರ್ತಿವಂತನಾದ, ವಿಪ್ರಃ-ಬ್ರಾಹ್ಮಣನಾದ, ವಾಲ್ಮೀಕಿಃ-ವಾಲ್ಮೀಕಿಋಷಿಯು, ಅಸ್ತಿ-ಇರ್ಥಾನೆ ॥೧೭॥ ಹೆ ಜನಕಾತ್ಮಜೆ-ಎಲೈ ಸೀತಾದೇವಿಯೇ, ಮಹಾತ್ಮನಃ-ಮಹಾ ಮನವುಳ್ಳ, ಅಸ್ಯ-ಈವಾಲ್ಮೀಕಿಋಷಿಯ, ಪಾದಚ್ಛಾಯಾಂ-ಪಾದಗಳ ನೆರಳನ್ನು,ಉಪಾಗಮ್ಯ ಹೊಂದಿ, ತ್ವಂ-ನೀನು, ಸುಖಂ-ಸುಖವಾಗಿ, ಉಪವಾಸಪರಾ-ಉಪವಾಸವ್ರತದಲ್ಲಿ ಆಸಕ್ತಳಾಗಿ, ಏಕಾಗ್ರಾ-ಏಕಾಗ್ರಚಿತ್ತಳಾಗಿ, ವಸ-ಇರು॥೧೮॥ ಹೆದೆವಿ-ಎಲೈ ಸೀತಾದೇವಿಯೆ, ಸದಾ-ಸರ್ವಕಾಲದಲ್ಲಿಯೂ,ರಾಮಂ-ಶ್ರೀರಾಮನನ್ನು, ಹೃದಿ-ಮನಸ್ಸಿನಲ್ಲಿ, ಕೃತ್ವಾ-ಮಾಡಿ, ಪತಿವ್ರತಾತ್ವಂ- ಪಾತಿವ್ರತ್ಯಧರ್ಮವನ್ನು, ಆಧಾಯ-ಸಂಪಾದಿಸಿ,ತಥಾ-ಆ ಪ್ರಕಾರ, ಕೃತ್ವಾ-ಮಾಡಿದರೆ, ತೆ-ನಿನಗೆ, ಪರಮಂ-ಉತ್ಕೃಷ್ಟವಾದ,ಶ್ರೇಯಃ-ಶ್ರೇಯಸ್ಸು,ಭವಿಷ್ಯತಿ-ಆಗುವದು. ॥೧೯॥

*ಇತಿ ಶ್ರೀಮದುತ್ತರ ರಾಮಾಯಣೆ ಸಪ್ತಚತ್ವಾರಿಂಶ ಸ್ಸರ್ಗಃ.*

ಜನಕಾತ್ಮಜಾ-ಜನಕರಾಯನ ಮಗಳಾದ, ವೈದೇಹೀ-ಸೀತಾದೇವಿಯು, ದಾರುಣಂ-ಕ್ರೂರವಾದ, ಲಕ್ಷ್ಮಣಸ್ಯ-ಲಕ್ಷ್ಮಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಪರಂ-ಮತ್ತೂನು, ವಿಷಾದಂ-ವ್ಯಸನವನ್ನು, ಆಗಮ್ಯ-ಹೊಂದಿ, ನಿಪಪಾತಹ-ಕೆಳಗೆಬಿದ್ದಳು ॥ ೧ ॥ ಸಾಜನಕಾತ್ಮಜಾ -ಆ ಸೀತಾದೇವಿಯು, ಮುಹೂರ್ತಂ-ಮುಹೂರ್ತಕಾಲವು, ಅಸಂಜ್ಞೇವ-ಪ್ರಜ್ಞೆಇಲ್ಲದವಳಂತಿರುವಳಾಗಿ, ಬಾಷ್ಪವ್ಯಾಕುಲಿತೇಕ್ಷಣಾ- ಬಾಷ್ಪ-ಕಂಬನಿಗಳಿಂದ, ವ್ಯಾಕುಲಿತ-ವ್ಯಾಕುಲವಾಗಿ ಮಾಡಲ್ಪಟ್ಟ, ಈಕ್ಷಣಾ-ನೇತ್ರಗಳುಳ್ಳವಳಾಗಿ, ದೀನಯಾ-ದೈನ್ಯಮುಳ್ಳ, ವಾಚಾ-ಮಾತಿನಿಂದ, ಲಕ್ಷ್ಮಣಂ - ಲಕ್ಷ್ಮಣಸ್ವಾಮಿಯಂ ಕುರಿತು, ಉವಾಚಹ-ಹೇಳಿದಳಷ್ಟೆ ॥೨॥ ಹೆಲಕ್ಷ್ಮಣ-ಎಲೈ ಲಕ್ಷ್ಮಣನೆ, ನೂನಂ-ನಿಶ್ಚಯವಾಗಿ, ಯಸ್ಯಾಃಮೆ- ಯಾವನನ್ನ, ಮೂರ್ತಿಃ-ಶರೀರವು, ತಥಾ-ಅಧರಿಯಾಗಿ ದುಃಖಂ-ದುಃಖಕರವಾಗಿ, ಪ್ರದೃಶ್ಯತೆ-ಕಾಣಲ್ಪಡುತ್ತೊ, ಮಾಮಿಕಾ-ನನ್ನಸಂಬಂಧವಾದ, ಇಯಂತನುಃ-ಈ ಶರೀರವು, ಧಾತ್ರಾ-ಬ್ರಹ್ಮದೇವರಿಂದ,ದುಃಖಾಯೈನ-ದುಃಖಕ್ಕೋಸ್ಕರವೆ, ಸೃಷ್ಟಾ-ಸೃಜಿಸಲ್ಪಟ್ಟಿತು ॥ ೩ ॥ ಶುದ್ಧಸಮಾಚಾರಾ-ಶುದ್ಧ-ಪರಿಶುದ್ಧವಾದ, ಸಮಾಚಾರಾ-ಸದಾಚಾರವುಳ್ಳ, ಸತೀ-ಪತಿವ್ರತೆಯಾದ ಯಾಹಂ-ಯಾವನಾನು, ನೃಪತಿನಾ-ಅರಸಾದ ಶ್ರೀರಾಮನಿಂದ, ತ್ಯಕ್ತಾ-ಬಿಡಲ್ಪಟ್ಟನೊ, ತಯಾ-ಅಂಥಾನನ್ನಿಂದ, ಪೂರ್ವಂ-ಪೂರ್ವಜನ್ಮದಲ್ಲಿ, ಕಿನ್ನುಪಾಪಂ - ಯಾವಪಾಪವು, ಕೃತಂ ಮಾಡಲ್ಪಟ್ಟಿತೊ, ಕೋವಾ-ಯಾವನುತಾನೆ, ದಾರೈಃ-ಹೆಂಡತಿಯಿಂದ,

---

ಅನಶನವ್ರತದಲ್ಲಿ ಆಸಕ್ತಿಯುಳ್ಳವಳಾಗಿಯೂ, ಏಕಾಗ್ರವಾದ ಚಿತ್ತಮುಳ್ಳವಳಾಗಿಯೂ ಇರುವಳಾಗಿ ಸುಖವಾಗಿರು॥೧೮॥ ಎಲೈ ಸೀತಾದೇವಿಯೇ! ಆರೀತಿಯಾಗಿ ಸದಾಕಾಲದಲ್ಲಿಯೂ ಶ್ರೀ ರಾಮನನ್ನೇ ಚಿಂತಿಸುತ್ತಿರುವಳಾಗಿಯೂ, ಪಾತಿವ್ರತ್ಯಧರ್ಮವನ್ನನುಸರಿಸುತ್ತಿರುವಳಾಗಿಯೂ ಇರುವಳಾಗಿದ್ದರೆ ನಿನಿಗೆ ಶ್ರೇಯಸ್ಸುಂಟಾಗುವದು. ॥೧೯॥

—···*ಉತ್ತರರಾಮಾಯಣದಲ್ಲಿನ ೪೭ನೆಯ ಸರ್ಗಂ ಮುಗಿದುದು.*···—

ಜನಕರಾಜ ನಂದಿನಿಯಾದ ಆ ಸೀತಾದೇವಿಯು ಕಡು ದಾರುಣವಾದ ಲಕ್ಷ್ಮಣನ ವಾಕ್ಯವಂ ಕೇಳಿ, ಮಹಾ ದುಃಖಮುಳ್ಳವಳಾಗಿ ಕೆಳಗೆ ಬಿದ್ದು, ಸ್ವಲ್ಪಹೊತ್ತು ಪ್ರಜ್ಞೆತಪ್ಪಿದವಳಾಗಿಯೂ ಕಂಬನಿಗಳಿಂದ ವ್ಯಾಕುಲವಾದ ಕಂಣುಗಳುಳ್ಳವಳಾಗಿಯೂ ಇರುವಳಾಗಿ ದೀನವಾದ ವಾಕ್ಕಿನಿಂದ ಲಕ್ಷ್ಮಣನಂ ಕುರಿತು, ಎಲೈ ಲಕ್ಷ್ಮಣನೆ ! ನನ್ನ ಶರೀರವು ದುಃಖಗಳನ್ನನುಭವಿಸುವದಕ್ಕೋಸುಗವೇ ಬ್ರಹ್ಮನಿಂದ ನಿರ್ಮಿಸಲ್ಪಟ್ಟಧೆಯೋ ಯೇನೋ, ಯಾಕಂದರೆ, ನನ್ನ ದೇಹವು ಸದದುಃಖ ವಿಕಾರವಾಗಿಯೇ ಇರುವದು ॥೩॥ ಪರಿಶುದ್ಧವಾದ ಸದಾಚಾರವುಳ್ಳವಳಾಗಿಯೂ ಪತಿವ್ರತೆಯಾಗಿಯೂ ಇರುವ ಯಾವ ನಾನು ನರನಾಥನಾದ ಶ್ರೀರಾಮನಿಂದ ಪರಿತ್ಯಜಿಸಲ್ಪಟ್ಟಂಥಾವಳಾದೆನೊ, ಅಂಥಾ ನಾನು ಪೂರ್ವಜನ್ಮದಲ್ಲಿ ಯಾವಯಾವ ಪಾಪಂಗಳಂಗೈದೆನೊ, ಯಾವ ದಂಪತಿಗಳಿಗೆ ವಿಯೋಗವನ್ನುಂಟುಮಾಡಿದೆನೋ ಯೇನೊ, ಆದಕಾರಣ ಈಗೆನಗೆ ಮಹಾ ದುಃಖವು ಸಂಭವಿಸಿದಂಥಾದ್ದಾಯಿತು ॥೪॥ ಕೇಳೆಲೈ ಲಕ್ಷ್ಮಣನೆ ! ಪೂರ್ವಕಾಲದೊಳು ನಾನು ಶ್ರೀ ರಾಮನ ಪಾದಸೇವೆಯಂ ಗೈಯುತ್ತಾ, ಆತನೊಡನೆ ಈ ಋಷ್ಯಾಶ್ರಮಗಳಲ್ಲಿ ವಾಸಿಸು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪಾಶ್ರಮೇವಾಸಂರಾಮಪಾದಾನುವರ್ತಿನೀ ।ನಾಚಿಂತಯಂವೈಸೌಮಿತ್ರೇದುಃಖೇನಪರಿವರ್ತಿನಿ। ಸಾಕಥಂಹ್ಯಾಶ್ರಮೇಸೌಮ್ಯವತ್ಸ್ಯಾಮಿವಿಜನೀಕೃತಾ ॥೫॥ಆಖ್ಯಾಸ್ಯಾಮಿಚಕಸ್ಯಾಹಂದುಃಖಂದುಃಖಪರಾಯಣಾ ॥೬॥ ಕಿಂಚವಕ್ಷ್ಯಾಮಿಮುನಿಷುಕಿಂಮಯಾಪಕೃತಂನೃಪೇ। ಕಸ್ಮಿನ್ವಾಕಾರಣೇತ್ಯಕ್ತಾ ರಾಘವೇಣಮಹಾತ್ಮನಾ ॥೭॥ ನಖಲ್ವದ್ಯೈವಸೌಮಿತ್ರೇಜೀವಿತಂಜಾಹ್ನವೀತಟೇ। ತ್ಯಜೇಯಂರಾಜವಂಶಸ್ತು ಭರ್ತುರ್ಮೇಪರಿಹಾಸ್ಯತೇ ॥೮॥ಯಥಾಜ್ಞಾಂಕುರುಸೌಮಿತ್ರೇತ್ಯಜಮಾಂದುಃಖಭಾಗಿನೀಮ್। ನಿದೇಶೇಸ್ಥೀಯತಾಂರಾಜ್ಞಶ್ಶೃಣುಚೇದಂವಚೋಮಮ ॥೯॥ ಶ್ವಶ್ರೂಣಾಮವಿಶೇಷೇಣಪ್ರಾಂಜಲಿಪ್ರಶ್ರಯೇಣಚ। ಶಿರಸಾವಂದ್ಯಚರಣೌಕುಶಲಂಬ್ರೂಹಿಪಾರ್ಥಿವಮ್ ॥೧೦॥ ಜಾನಿಷೇಹಿಯಥಾಶುದ್ಧಾಸೀತಾತತ್ವೇನರಾಘವ। ಭಕ್ತ್ಯಾಚಪರಯಾಯುಕ್ತಾ ಹಿತಾಚತವನಿತ್ಯಶಃ॥೧೧॥ ಅಹಂತ್ಯಕ್ತಾತ್ವಯಾವೀರಪ್ರಜಾವಾದಸ್ಯಭೀರುಣಾ॥

---

ವಿಯೋಜಿತಃ-ವಿಯೋಗವನ್ನು ಹೊಂದಿಸಲ್ಪಟ್ಟನೊ, ಪುರಾ-ಪೂರ್ವದಲ್ಲಿ, ಅಹಂ-ನಾನು, ರಾಮಪಾದಾನುವರ್ತಿನೀ- ರಾಮ-ಶ್ರೀರಾಮನ, ಪಾದ-ಪಾದಗಳನ್ನು, ಅನುವರ್ತಿನೀ-ಅನುಸರಿಸಿರುವಳಾಗಿ, ಆಶ್ರಮೇ-ಆಶ್ರಮದಲ್ಲಿ, ವಾಸಂ-ಇರುವಿಕೆಯನ್ನು, ಆಶ್ರಿತಾ-ಆಶ್ರಯಿಸಿದವಳಾಗಿ, ದುಃಖೇನ-ದುಃಖದಿಂದ, ಪರಿವರ್ತಿನೀ - ಇರುತಿದ್ದವಳಾಗಿ, ನಾಚಿಂತಯಂ-ಚಿಂತಿಸಲ್ಲಿದ್ದೆನೊ, ಹೇಸೌಮಿತ್ರೇ-ಎಲೈ ಲಕ್ಷ್ಮಣನೆ, ಹೆಸೌಮ್ಯ-ಎಲೈಸೌಮ್ಯನೆ, ಸಾ-ಅಂಥಾನಾನು, ಆಶ್ರಮೇ-ಋಷ್ಯಾಶ್ರಮದಲ್ಲಿ, ವಿಜನೀಕೃತಾ-ಜನರಹಿತಳಾಗಿ ಮಾಡಲ್ಪಟ್ಟವಳಾಗಿ, ಕಥಂವತ್ಸ್ಯಾಮಿ-ಹ್ಯಾಗೆ ಇರಲಿ, ಅಹಂ-ನಾನು, ದುಃಖಪರಾಯಣಾ - ದುಃಖಾಕ್ರಾಂತಳಾಗಿ, ದುಃಖಂ- ದುಃಖವನ್ನು, ಕಸ್ಯ - ಯಾರಿಗೆ - ಆಖ್ಯಾಸ್ಯಾಮಿ-ಪೇಳಲೀ ॥೬॥ ಮುನಿಷು-ಋಷಿಗಳಲ್ಲಿ, ಕಿಂವಕ್ಷ್ಯಾಮಿ-ಯೆನು ಹೇಳಲೀ, ನೃಪೇ-ಅರಸನವಿಷಯವಾಗಿ, ಮಯಾ-ಯನ್ನಿಂದ, ಕಿಮಪಕೃತಂ-ಯೆನು ಅಪಕಾರವಮಾಡಲ್ಪಟ್ಟಿತ್ತು, ಕಸ್ಮಿನ್ವಾಕಾರಣೇ-ಯಾವಕಾರಣದಲ್ಲಿ, ಮಹಾತ್ಮನಾ-ಮಹಾತ್ಮನಾದ, ರಾಘವೇಣ-ಶ್ರೀರಾಮನಿಂದ, ತ್ಯಕ್ತಾ-ಬಿಡಲ್ಪಟ್ಟೆನೋ ॥೭॥ ಹೆಸೌಮಿತ್ರೇ-ಎಲೈ ಲಕ್ಷ್ಮಣನೇ, ಅದ್ಯೈವ-ಈಗಲೇ, ಜಾಹ್ನವೀತಟೇ-ಗಂಗಾತೀರದಲ್ಲಿ, (ಪಾ॥-ಜಾಹ್ನವೀಜಲೇ-ಗಂಗೋದಕದಲ್ಲಿ) ಜೀವಿತಂ-ಪ್ರಾಣವನ್ನು, ನತ್ಯಜೇಯಂ-ಬಿಡಲಾರೆನಷ್ಟೇ, ರಾಜವಂಶಸ್ತು-ರಾಜರವಂಶವಾದರೇ, ಮೇ-ನನ್ನ, ಭರ್ತುಃ-ಗಂಡನವಿಷಯವಾಗಿ ಪರಿಹಾಸ್ಯತೆ-ಪರಿಹಾಸವಮಾಡಲ್ಪಡುತ್ತೆ (ಅಥವಾ-ಮೇಭರ್ತುಃ-ನನ್ನಪತಿಯು, ರಾಜವಂಶಸ್ತು-ರಾಜಕುಲವಾದರೆ, ಪರಿಹಾಸ್ಯತೆ-ವಿಚ್ಛಿತ್ತಿಯಾಗುವದು)॥೮॥ ಹೆ ಸೌಮಿತ್ರೇ ಎಲೈ ಲಕ್ಷ್ಮಣನೇ, ಯಥಾಜ್ಞಾಂ-ರಾಜಾಜ್ಞಾನುಸಾರನಾಗಿ, ಕುರು-ಮಾಡು, ದುಃಖಭಾಗಿನೀಂ ದುಃಖಪಾತ್ರಳಾದ, ಮಾಂ-ನನ್ನನ್ನು, ತ್ಯಜ-ಬಿಡು, ರಾಜ್ಞಃ-ಅರಸಾದ ಶ್ರೀರಾಮನ, ನಿದೇಶೇ-ಆಜ್ಞಾವಚನದಲ್ಲಿ, ಸ್ಥೀಯತಾಂ-ಇರಿಸಲ್ಪಡಲೀ, ಮಮ-ನನ್ನ, ಇದಂ-ಈ ವಕ್ಷ್ಯಮಾಣಮಾಣಮಾದ, ವಚಃ-ಮಾತನ್ನು ಶೃಣುಷ್ವ-ಕೇಳಲುಕೇಳು ॥೯॥ ಶ್ವಶ್ರೂಣಾಂ-ಅತ್ತೆರಗಳಗೆ, ಅವಿಶೇಷೇಣ-ಸರ್ವಸಾಧಾರಣವಾಗಿ, ಪ್ರಶ್ರಯೇಣ-ನಮ್ರಭಾವದಿಂದ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ಶಿರಸಾ-ಶಿರಸ್ಸಿನಿಂದ, ಚರಣೌ- ಪಾದಗಳನ್ನು, ವಂದ್ಯ-ನಮಸ್ಕರಿಸಿ, ಪಾರ್ಥಿವಂ-ಅರಸನನ್ನು ಕುರಿತು, ಕುಶಲಂ-ಕ್ಷೇಮವನ್ನು, ಬ್ರೂಹಿ-ಪೇಳು ॥೧೦॥ ಹೆ ರಾಘವ-ಎಲೈ ಶ್ರೀರಾಮನೆ, ತತ್ವೇನ-ಯಥಾರ್ಥದಿಂದ, ಸೀತಾ-ಸೀತಾದೇವಿಯು, ಯಥಾ-ಹ್ಯಾಗೆ, ಶುದ್ಧಾ- ಶುದ್ಧಳೊ, ತಥಾ-ಹಾಗೆಯೇ, ಜಾನೀಷೇಹಿ-ತಿಳದಿದ್ದೀಯಷ್ಟೇ, ಪರಮಯಾ-ಬಹಳವಾದ, ಭಕ್ತ್ಯಾಚ-ಭಕ್ತಿಯಿಂದಲೂ, ಯುಕ್ತಾ-ಕೂಡಿದವಳು, ತವ- ನಿನಗೆ, ನಿತ್ಯಶಃ-ನಿತ್ಯವೂನು,ಹಿತಾಚ-ಹಿತಕರಳೂ ॥೧೧॥ ಹೇ ವೀರ-ಎಲೈ ಶೂರನೆ, ಪ್ರಜಾವಾದಸ್ಯ-ಜನಪ್ರವಾದದ ದೆಶೆಯಿಂದ, ಭೀರುಣಾ-ಭಯಗೊಂಡ

---

ತ್ತಿರುವಾಗ ಎಷ್ಟುದುಃಖಗಳು ಸಂಭವಿಸಿದರು ಯೋಚಿಸದಿದ್ದೆ, ಅಂಥಾ ನಾನೀಗ ಒಬ್ಬಂಟಿಗಳಾಗಿ ಹ್ಯಾಗಿರಲಿ, ಹಾಹಾ! ಈಗ ಸಂಭವಿಸಿರುವ ಈ ದುಃಖವನ್ನು ಯಾರಿಗೆ ಪೇಳಲಿ, ನಾನು ನಾಥನಾದ ಶ್ರೀರಾಮನ ವಿಷಯದಲ್ಲಿ ಯೇನಪರಾಧವಂ ಗೈದೆ, ಋಷಿಗಳಿಗೆಲ್ಲ ಏನಂತ ಪೇಳಲೀ, ಮಹಾತ್ಮನಾದ ರಾಘವನು ಯಾತಕ್ಕೋಸುಗ ನನ್ನ ಪರಿತ್ಯಜಿಸಿದನೋ? ಎಲೈ ಲಕ್ಷ್ಮಣನೆ ! ಗಂಗೋದಕದಲ್ಲಿ ಬಿದ್ದು ಈಗಲೇ ಪ್ರಾಣವಂ ಬಿಡಲಾರೆ, ಯಾಕಂದರೆ ಎನ್ನ ಪತಿಯ ರಾಜಕುಲವು ವಿಚ್ಛಿತ್ತಿಯುಂಟಾದಂಥಾದ್ದಾಗುವದು (ಅಂದರೆ ನಾನು ಗರ್ಭಿಣಿಯಾಗಿರೋಣದರಿಂದ ಪ್ರಾಣವಂ ನೀಗಿದರೆ ನನ್ನ ಪತಿಯ ರಾಜಸಂತಾನಕ್ಕೆ ವಿಚ್ಛಿತ್ತಿಯುಂಟಾಗುವದು ಅದಕಾರಣ ಪ್ರಸವವಾಗುವವರಿಗು ಜೀವಂತಳಾಗಿರಬೇಕೇ ಹೊರ್ತು ಪ್ರಾಣವಂ ನೀಗುವದು ಯುಕ್ತವಲ್ಲ ಎಂಬ ಭಾವವು.) ನಿಮ್ಮಣ್ಣನ ಆಜ್ಞೆಯು ಯಾವ ಪರಿಯಾಗಿ ಆಗಿರುವದೋ ಹಾಗೆಯೇ ಮಾಡುವಂಥಾವನಾಗಿ, ದುಃಖಪಾತ್ರಳಾದ ನನ್ನನ್ನು ಬಿಟ್ಟು, ಆತನ ಆಜ್ಞಾವಚನದಲ್ಲಿರುವಂಥಾವನಾಗು, ಮತ್ತೂ ನಾಂ ಪೇಳುವ ಈ ವಚನವನ್ನಾದರಿಸಿ ಕೇಳುವಂಥಾವನಾಗು ॥೯॥ (ಅದೇನಂದರೆ) ನಮ್ಮತ್ತೆಯರಾದ ಕೌಸಲ್ಯಾ ಸುಮಿತ್ರಾದಿಗಳಿಗೆಲ್ಲ ಸರ್ವಸಾಧಾರಣವಾಗಿ, ವಿನಯಭಾವದಿಂದ ಕೈಮುಗಿದು ಅವರ ಪಾದಗಳಿಗೆ ವಂದನೆಯಂಗೈದು, ಒಡೆಯನಾದ ಶ್ರೀರಾಮನಂ ಕುರಿತು ಎಲೈ ಶ್ರೀರಾಮನೆ ! ಸೀತೆಯಾದ ನಾನು ಹ್ಯಾಗೆ ಪರಿಶುದ್ಧಳಾಗಿಧೇನೆಯೋ ಹಾಗೆಯೇ ನೀನು ತಿಳಿದಂಥಾವನಾಗಿದ್ದಿಯಷ್ಟೆ, ನಿನ್ನಲ್ಲಿ ಭಕ್ತಿಯಿಂದೊಡಗೂಡಿದವಳಾಗಿಯೂ, ನಿರಂತರವು ಹಿತಕರಳಾಗಿಯೂ ಇಧೇನೆ, ನೀನು ಕಡು ಶೂರನಾದರು ಪ್ರಜೆಗಳ ಮಾತುಗಳಿಗೆ ಅಂಜಿದವನಾಗಿ ನನ್ನ ಪರಿತ್ಯಜಿಸಿದಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಚ್ಚತೇವಚನೀಯಂಸ್ಯಾದಪವಾದಸಮುತ್ಥಿತಮ್ । ಮಯಾಚಪರಿಹರ್ತವ್ಯಂತ್ವಂಹಿಮೇಪರಮಾಗತಿಃ॥೧೩॥ ವಕ್ತವ್ಯ ಶ್ಚೈವನೃಪತಿರ್ಧರ್ಮೇಣಸುಸಮಾಹಿತಃ । ಯಥಾಭ್ರಾತೃಷುವರ್ತೇಥಾಸ್ತಥಾಪೌರೇಷುನಿತ್ಯದಾ ॥೧೪॥ ಪರಮೋಹ್ಯೇ ಷಧರ್ಮಸ್ಸ್ಯಾದೇಷಾಕೀರ್ತಿರನುತ್ತಮಾ ॥ ಯತ್ತ್ವಂಪೌರಜನಂಮಾಂಚಧರ್ಮೇಣಸಮವಾಪ್ನುಯಾಃ ॥೧೫॥ ಅಹಂತು ನಾನುಶೋಚಾಮಿಸ್ವಶರೀರಂನರರ್ಷಭ । ಯಥಾಪವಾದಂಪೌರಾಣಾಂತಥೈವರಘುನಂದನ ॥೧೬॥ ಪತಿರ್ಹಿದೈವತಂನಾ ರ್ಯಾಃಪತಿರ್ಬಂಧುಃಪತಿರ್ಗತಿಃ ॥ ಪ್ರಾಣೈರಪಿಪ್ರಿಯಂತಸ್ಮಾದ್ಭರ್ತುಃಕಾರ್ಯಂವಿಶೇಷತಃ ॥೧೭॥ ಏವಂಬ್ರುವಂತ್ಯಾಂಸೀ ತಾಯಾಂಲಕ್ಷ್ಮಣೋದೀನಚೇತನಃ । ಶಿರಸಾಧರಣೀಂಗತ್ವಾವ್ಯಾಹರ್ತುಂನಶಶಾಕಹ ॥೧೮॥ ಪ್ರದಕ್ಷಿಣಂತುಕೃತ್ವಾತಾಂ ರುದನ್ನೇವಮಹಾಸ್ವನಮ್ । ಆರುರೋಹಪುನರ್ನಾವಂನಾವಿಕಂಚಾಭ್ಯಚೋದಯತ್ ॥೧೯॥ ಸಗತ್ವಾಚೋತ್ತರಂತೀರಂ ಶೋಕಭಾರಸಮನ್ವಿತಃ । ಸಂಮೂಢಇವದುಃಖೇನರಥಮಧ್ಯಾರುಹದ್ದ್ರುತಮ್ ॥೨೦॥ ಮುಹುರ್ಮುಹುರಪಾವೃತ್ಯದೃ

---

ಡವನಾದ, ತ್ವಯಾ-ನಿನ್ನಿಂದ, ಅಹಂ-ನಾನು, ತ್ಯಕ್ತಾ-ಬಿಡಲ್ಪಟ್ಟೆನು ॥೧೨॥ ತೇ-ನಿನಗೆ, ಅಪವಾದಸಮುತ್ಥಿತಂ-ಜನಾಪವಾದದಿಂದ ಹುಟ್ಟಿದ, ಯದ್ವಚನೀಯಂ-ಯಾವನಿಂದ ನೀಯುವುಂಟೋ, ಮಯಾಚ-ನನ್ನಿಂದ, ತತ್-ಆನಿಂದಾವಚನವು, ಪರಿಹರ್ತವ್ಯಂ-ಪರಿಹರಿಸತಕ್ಕದ್ದು, ತ್ವಂ-ನೀನು, ಮೇಯುನಗೆ, ಪರಮಾಗತಿರ್ಹಿ-ಪರಮಶರಣವು ॥೧೩॥ನೃಪತಿಃ-ಅರಸಾದಶ್ರೀರಾಮನು, ಸುಸಮಾಹಿತಃ-ಸಮಾಧಾನಚಿತ್ತನಾಗಿ, ಧರ್ಮೇಣ-ಧರ್ಮದಿಂದ, ವಕ್ತವ್ಯಶ್ಚ-ಹೇಳತಕ್ಕವನು, ತ್ವಂ-ನೀನು, ಭ್ರಾತೃಷು-ಅಣ್ಣತಮ್ಮಂದರುಗಳಲ್ಲಿ, ಯಥಾವರ್ತೇಥಾಃ-ಹ್ಯಾಗೆ ನಡಕೊಂಡಿದ್ದೀಯೋ, ತಥಾ-ಹಾಗೆಯೆ, ಪೌರೇಷು-ಪಟ್ಟಣಸ್ಥರಲ್ಲಿಯೂನು, ನಿತ್ಯಶಃ-ನಿರಂತರದಲ್ಲಿಯೂ, ವರ್ತೇಥಾಃ-ಇರು ॥೧೪॥ ಏಷಃ-ಇದು, ಪರಮಃ-ಶ್ರೇಷ್ಠವಾದ, ಧರ್ಮಃ-ಧರ್ಮವು, ಸ್ಯಾದ್ಧಿ-ಆಗುವದಷ್ಟೇ-ಏಷಾ-ಇದು,ಅನುತ್ತಮಾಕೀರ್ತಿಃ-ಸರ್ವೋತ್ತಮವಾದಕೀರ್ತಿಯು, ಯತ್-ಯಾವಕಾರಣದದೆಶೆಯಿಂದ, ತ್ವಂ-ನೀನು, ಪೌರಜನಂ-ಪಟ್ಟಣಸ್ಥಜನರನ್ನು,ಮಾಂಚ-ನನ್ನನ್ನೂ ಕೂಡ ಧರ್ಮೇಣ-ಧರ್ಮದಿಂದ, ಸಮಂ-ಸಮವಾಗಿ, ಅವಾಪ್ನುಯಾಃ-ಹೊಂದಿದ್ದೋ ॥೧೫॥ಹೇ ನರರ್ಷಭ-ಎಲೈ ಪುರುಷಶ್ರೇಷ್ಠನೇ, ಅಹಂತು-ನಾನು ಆದರೆ, ಸ್ವಶರೀರಂ-ನನ್ನ ಶರೀರವಂ ಕುರಿತು, ನಾನುಶೋಚಾಮಿ-ದುಃಖಿಸುವದಿಲ್ಲಾ, ಹೇರಘುನಂದನ-ಎಲೈರಘುಕುಲಾನಂದಕರನೇ, ತ್ವಂ-ನೀನು, ಅಪವಾದಂ-ಅಪವಾದವಂ ಕುರಿತು, ಯಥಾಶೋಚಸಿ-ಹ್ಯಾಗೆ ದುಃಖಿಸುತ್ತೀಯೊ, ತಥಾ-ಹಾಗೆಯೇ, ಅಹಂ-ನಾನು,ಪೌರಾಣಾಂ-ಪಟ್ಟಣಸ್ಥರ, ಅಪವಾದಂ-ಅಪವಾದವನ್ನು ಕುರಿತು, ಅನುಶೋಚಾಮಿ-ದುಃಖಿಸುತ್ತೇನೆ ॥೧೬॥ ಹಿಯಸ್ಮಾತ್-ಯಾವಕಾರಣದ ದೆಶೆಯಿಂದ, ನಾರ್ಯಾಃ-ಸ್ತ್ರೀಗೆ, ಪತಿಃ-ಗಂಡನೆ, ದೈವತಂ-ದೇವರೊ, ಪತಿಃ-ಗಂಡನು, ಬಂಧುಃ - ನೆಂಟನೊ, ಪತಿಃ-ಪತಿಯೇ,ಗತಿಃ - ಗಮ್ಯಸ್ಥಾನವೊ, ತಸ್ಮಾತ್-ಆಕಾರಣದ ದೆಶೆಯಿಂದ, ಭರ್ತುಃ-ಪತಿಗೆ, ವಿಶೇಷತಃ-ವಿಶೇಷವಾಗಿ, ಪ್ರಾಣೈರಪಿ-ಪ್ರಾಣಗಳಿಂದಲಾದರೂ, ಪ್ರಿಯಂ-ಇಷ್ಟವನ್ನು, ಕಾರ್ಯಂ-ಮಾಡತಕ್ಕದ್ದು ॥೧೭॥ ಏವಂ-ಈ ಪ್ರಕಾರವಾಗಿ, ಸೀತಾಯಾಃ-ಸೀತಾದೇವಿಯು, ಬ್ರುವಂತ್ಯಾಂ-ಸತ್ಯಾಂ-ಹೇಳುತ್ತಿರುವ ಳಾಗುತ್ತಿರಲೀಕಾಗಿ, ಲಕ್ಷ್ಮಣಃ-ಲಕ್ಷ್ಮಣನು, ದೀನಚೇತನಃ-ದೈನ್ಯವಾದ ಮನಸ್ಸುಳ್ಳವನಾಗಿ, ಶಿರಸಾ-ಶಿರಸ್ಸಿನಿಂದ, ಧರಣೀಂ-ಭೂಮಿಯನ್ನು, ಗತ್ವಾ-ಹೊಂದಿ, ವ್ಯಾಹರ್ತುಂ-ಹೇಳುವದಕ್ಕೆ, ನಶಶಾಕಹ-ಸಮರ್ಥನಾಗಲಿಲ್ಲವಷ್ಟೆ ॥೧೮॥ ಮಹಾಸ್ವನಂ-ಮಹಾಧ್ವನಿಯುಳ್ಳಂತೆ, ರುದನ್ನೇವ-ಅಳುತ್ತಿರುವವನಾಗಿಯೇ, ತಾಂ - ಆ ಸೀತಾದೇವಿಯನ್ನು ಕುರಿತು, ಪ್ರದಕ್ಷಿಣಂತು-ಪ್ರದಕ್ಷಿಣ ನಮಸ್ಕಾರವನ್ನಾದರೆ, ಕೃತ್ವಾ-ಮಾಡಿ, ಪುನಃ-ಮತ್ತು, ನಾವಂ-ಹಡಗನ್ನು, ಆರುರೋಹ-ಏರಿದನು, ನಾವಿಕಂಚ- ಹಡಗುನಡಿಸುವವನನ್ನೂ ಕೂಡ, ಅಭ್ಯಚೋದಯತ್- ತ್ವರೆಮಾಡಿಸಿದನು ॥೧೯॥ ಸಃ-ಆ ಲಕ್ಷ್ಮಣನು, ಶೋಕಭಾರಸಮನ್ವಿತಃ-ಶೋಕಾತಿಶಯದಿಂದ ಕೂಡಿಕೊಂಡವನಾಗಿ, ಉತ್ತರಂತೀರಂ-ಉತ್ತರ ಘಡವನ್ನು, ಗತ್ವಾ-ಹೊಂದಿ, ಸಂಮೂಢಇವ-ಪ್ರಜ್ಞೆಯಿಲ್ಲದವನಂತೆ, ದುಃಖೇನ-ದುಃಖದಿಂದ, ದ್ರುತಂ-ಜಾಗ್ರತೆಯಾಗಿ, ರಥಂ-ರಥವನ್ನು, ಅಧ್ಯಾರುಹತ್-ಏರಿದನು ॥೨೦॥ ಲಕ್ಷ್ಮಣಃ-ಲಕ್ಷ್ಮಣನು, ಅನಾಥವತ್-ನಾಥರಹಿ

---

ಥಾವನಾದೆ ॥೧೩॥ ನಿನಿಗೆ ಜನಾಪವಾದದಿಂದುಂಟಾದ ನಿಂದೆಯೆಂಬದ್ಯಾವದೊ ಅದು ನನ್ನಿಂದಲೆ ಪರಿಹರಿಸಲ್ಪಡಬೇಕಲ್ಲ, ಯಾಕಂದರೆ, ನೀನೆ ನನಿಗೆ ಮುಖ್ಯವಾಗಿ ಗತಿಪ್ರದಾಯಕನಾಗಿದ್ದಿ, ಎಂಬದಾಗಿ ಹೇಳತಕ್ಕದಲ್ಲದೆ, ಸಾವಧಾನ ಚಿತ್ತನಾಗಿ ನಿರಂತರವು ಧರ್ಮವಾಗಿ ತಮ್ಮಂದರ ವಿಷಯದಲ್ಲಿ ಹ್ಯಾಗೆ ಇರುವಂಥಾವನಾಗಿದ್ದೀಯೊ ಹಾಗೆಯೆ ಪ್ರಜೆಗಳ ವಿಷಯದಲ್ಲಿ ಇರುವಂಥಾವನಾಗು, ಪುರವರ್ತಿಗಳಾದ ಜನಗಳನ್ನು ನನ್ನನ್ನು ಸಹಸಮಾನವಾಗಿ ಯಾವಕಾರಣದಿಂದ ತಿಳಿದಂಥಾವನಾದೆಯೊ, ಆ ಕಾರಣದಿಂದ ನಿನಿಗೆ ಇದೆ ಮಹಾ ಧರ್ಮವಾಗಿಯೂ, ಉತ್ತಮವಾದ ಕೀರ್ತಿಯಾಗಿಯೂ ಇರುವದು ॥೧೫॥ ನಾನಾದರೆ ನನ್ನ ಶರೀರವಂಕುರಿತು ವ್ಯಸನಪಡುವದೇಯಿಲ್ಲ, ಆದರೆ ಪಟ್ಟಣಸ್ಥರಿಂದ ಕಟ್ಟಲ್ಪಟ್ಟ ಅಪವಾದವಂ ಕುರಿತು ನೀನು ಹ್ಯಾಗೆ ಸಂತಪಿಸುತ್ತಿದ್ಧೀಯೋ ಹಾಗೆಯೇ ನಾನು ಕೂಡಾ ಸಂತಪಿಸುತ್ತಿದ್ಧೇನೆ, ಯಾಕಂದರೆ ಸ್ತ್ರೀಯಾದಂಥಾವಳಿಗೆ ಪತಿಯೇ ದೈವವು, ಪತಿಯೇ ಬಂಧುವು, ಪತಿಯೇ ಗತಿಯು, ಆದಕಾರಣ ಪತಿಯ ಕಾರ್ಯವು ಪ್ರಾಣಗಳಿಗಿಂತಲು ಇಷ್ಟವಾಗಿರುವದು, ಎಂಬದಾಗಿ ಹೇಳಂದು ಸೀತಾದೇವಿಯು ನಿರೂಪಿಸುತ್ತಿರುವಳಾದಂಥಾವಳಾಗಲು, ಲಕ್ಷ್ಮಣನು ದೀನಮನಸ್ಕನಾಗಿ ನಮನಮುಂಗೈದು ಬರು..ಾತು ಹೇ..ವದಕ್ಕೆ ಶಕ್ತಿ ..ದ ಇ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಷ್ಟ್ವಾ ಸೀತಾಮನಾಥವತ್ । ವೇಷ್ಟಂತೀಂ ಪರತೀರಸ್ಥಾಂ ಲಕ್ಷ್ಮಣಃ ಪ್ರಯಯಾವಥ ॥೧॥ ದೂರಸ್ಥಂ ರಥಮಾಲೋಕ್ಯ ಲಕ್ಷ್ಮಣಂ ಚ ಮುಹುರ್ಮುಹುಃ । ನಿರೀಕ್ಷಮಾಣಾಮುದ್ವಿಗ್ನಾಂ ಸೀತಾಂ ಶೋಕಸ್ಸಮಾವಿಶತ್ ॥೨॥ ಸಾ ದುಃಖಭಾರಾವನತಾ ತಪಸ್ವಿನೀ ಯಶೋಧನಾ ನಾಥಮಪಶ್ಯತೀ ಸತೀ । ರುರೋದ ವ್ಯೈ ಬರ್ಹಿಣನಾದಿತೇ ವನೇ ಮಹಾಸ್ವನಂ ದುಃಖಪರಾಯಣಾ ಸತೀ ॥

—॥ ಇತಿ ಶ್ರೀಮದುತ್ತರರಾಮಾಯಣೇ ಅಷ್ಟಚತ್ವಾರಿಂಶಸ್ಸರ್ಗಃ ॥—

ಸೀತಾಂ ರುದಂತೀಂ ತಾಂ ದೃಷ್ಟ್ವಾ ಯೇ ತತ್ರ ಮುನಿದಾರಕಾಃ । ಪ್ರಾದ್ರವನ್ ಯತ್ರ ಭಗವಾನಾಸ್ತೇ ವಾಲ್ಮೀಕಿರಗ್ರಧೀಃ ॥ ಅಭಿವಾದ್ಯ ಮುನೇಃ ಪಾದೌ ಮುನಿಪುತ್ರಾ ಮಹರ್ಷಯೇ । ಸರ್ವಂ ನಿವೇದಯಾಮಾಸುಸ್ತಸ್ಯಾಸ್ತು ರುದಿತಸ್ವನಮ್ ॥೨॥ ಅದೃಷ್ಟಪೂರ್ವಾ ಭಗವನ್ ಕಸ್ಯಾಪ್ಯೇಷಾ ಮಹಾತ್ಮನಃ । ಪತ್ನೀ ಶ್ರೀರಿವ ಸಂಮೋಹಾದ್ವಿಭಾತಿ ವಿಕೃತಸ್ವನಾ ॥೩॥ ಭಗವನ್ ಸಾ

---

ತಳಾದವಳಂತೇ, ವೇಷ್ಟಂತೀಂ–ಹೊರಳಾಡುತ್ತಿರುವ, ಪರತೀರಸ್ಥಾಂ–ಆಚೆಯ ಧಡದಲ್ಲಿರುವ, ಸೀತಾಂ–ಸೀತಾದೇವಿಯನ್ನು, ಮುಹುರ್ಮುಹುಃ–ಬಾರಿಬಾರಿಗೂ, ಅಪಾವೃತ್ಯ–ಹಿಂತಿರುಗಿ, ದೃಷ್ಟ್ವಾ–ಕಂಡು, ಅಥ–ಬಳಿಕ, ಪ್ರಯಯೌ–ಹೊರಟನು ॥೧॥ ದೂರಸ್ಥಂ–ದೂರದಲ್ಲಿರುವ, ರಥಂ–ರಥವನ್ನು, ಆಲೋಕ್ಯ–ನೋಡಿ, ಲಕ್ಷ್ಮಣಂಚ–ಲಕ್ಷ್ಮಣನನ್ನು, ಮುಹುರ್ಮುಹುಃ–ಬಾರಿಬಾರಿಗೂ, ನಿರೀಕ್ಷಮಾಣಾಂ – ನೋಡುತ್ತಿರುವ, ಉದ್ವಿಗ್ನಾಂ– ಹೆದರಿದ, ಸೀತಾಂ–ಸೀತಾದೇವಿಯನ್ನು, ಶೋಕಃ–ವ್ಯಸನವು, ಸಮಾವಿಶತ್–ಪ್ರವೇಶಿಸಿತು ॥೨॥ ದುಃಖಭಾರಾವನತಾ–ದುಃಖ–ದುಃಖದ, ಭಾರ – ಅತಿಶಯದಿಂದ, ಅವನತಾ–ಬೊಗ್ಗಿದವಳಾದ, ತಪಸ್ವಿನೀ–ದುಃಖಿತಳಾದ, ಯಶೋಧನಾ–ಯಶಸ್ಸೇ ಧನವಾಗುಳ್ಳ, ನಾಥಮಪಶ್ಯತೀ–ಪತಿಯನ್ನು ಕಾಣದಿರುವ, ಸತೀ–ಪತಿವ್ರತೆಯಾದ, ಸಾ–ಆ ಸೀತಾದೇವಿಯು, ದುಃಖಪರಾಯಣಾ ಸತೀ–ದುಃಖಾಕ್ರಾಂತಳಾಗಿ, ಬರ್ಹಿಣನಾದಿತೇ–ಬರ್ಹಿಣ–ನವಿಲುಗಳಿಂದ, ನಾದಿತ–ಶಬ್ದಾಯಮಾನವಾದ, ವನೇ–ಅರಣ್ಯದಲ್ಲಿ, ಮಹಾಸ್ವನಂ ಯಥಾ ಭವತೀ ತಥಾ–ದೊಡ್ಡ ಧ್ವನಿಯುಂಟಾಗೋಣವಾಗ್ಯೋ ಹಾಗೆ, ರುರೋದವ್ಯೈ–ರೋದನಮಾಡಿದಳು ಮಂಥಾವಳಾದಳಷ್ಟೆ ॥೩॥

—॥ ಇತಿಶ್ರೀಮದುತ್ತರರಾಮಾಯಣೇ ಅಷ್ಟಚತ್ವಾರಿಂಶಸ್ಸರ್ಗಃ ॥—

ತತ್ರ–ಆ ವನದಲ್ಲಿ, ರುದಂತೀಂ–ರೋದನಮಾಡುತ್ತಿರುವ, ತಾಂ ಸೀತಾಂ–ಆ ಸೀತಾದೇವಿಯನ್ನು, ದೃಷ್ಟ್ವಾ–ಕಂಡು, ಮುನಿದಾರಕಾಃ–ಋಷಿಗಳ ಮಕ್ಕಳು, ಯೇ–ಯಾರುಂಟೋ, ತೇ–ಆ ಹುಡುಗರು, ಅಗ್ರಧೀಃ–ಅಗ್ರ–ಶ್ರೇಷ್ಠವಾದ, ಧೀಃ–ಬುದ್ಧಿಯುಳ್ಳ, ಭಗವಾನ್ – ಪೂಜ್ಯನಾದ, ವಾಲ್ಮೀಕಿಃ–ವಾಲ್ಮೀಕಿಋಷಿಯು, ಯತ್ರ–ಯಾವ ಆಶ್ರಮದಲ್ಲಿ, ಆಸ್ತೇ–ಇದ್ದಾನೆಯೋ, ತತ್ರ–ಅಲ್ಲಿ, ಪ್ರಾದ್ರವನ್–ಓಡಿಹೋದರು ॥೧॥ ಮುನಿಪುತ್ರಾಃ– ಋಷಿಪುತ್ರರು, ಮುನೇಃ–ವಾಲ್ಮೀಕಿಋಷಿಯ, ಪಾದೌ–ಚರಣಗಳಂಕುರಿತು, ಅಭಿವಾದ್ಯ–ವಂದಿಸಿ, ಮಹರ್ಷಯೇ–ವಾಲ್ಮೀಕಿಋಷಿಗೋಸುಗ, ಸರ್ವಂ– ಸಮಸ್ತವಾದ, ತಸ್ಯಾಃ–ಆ ಸೀತಾದೇವಿಯ, ರುದಿತಸ್ವನಂ–ರೋದನ ಧ್ವನಿಯನ್ನು, ನಿವೇದಯಾಮಾಸುಃ–ತಿಳಿಸಿದರು ॥೨॥ ಹೆ ಭಗವನ್–ಎಲೈ ಪೂಜ್ಯನೆ, ಅದೃಷ್ಟಪೂರ್ವಾ–ಪೂರ್ವದಲ್ಲಿ ನೋಡಲ್ಪಡದಿರುವ, ಏಷಾ–ಈ ಎದುರಾಗಿರುವ ಹೆಂಗಸು, ಮಹಾತ್ಮನಃ– ಮಹಾಮನಸ್ವಿಯಾದ, ಕಸ್ಯಪತ್ನೀ, ಯಾರ ಹೆಂಡತಿಯೊ, ಸಮ್ಮೋಹಾತ್–ಮೋಹದ ದೆಶೆಯಿಂದ, ವಿಕೃತಸ್ವನಾ–ವಿಕಾರಧ್ವನಿಯುಳ್ಳ, ಶ್ರೀರಿವ–ಲಕ್ಷ್ಮೀದೇವಿಯಂತೇ, ವಿಭಾತಿ–ಪ್ರಕಾಶಿಸುತ್ತಾಳೇ॥೩॥ ಹೆ ಭಗರ್ವ –ಎಲೈ ಪೂಜ್ಯನೇ, ಖಾತ್–ಅಂತರಿಕ್ಷದ ದೆಶೆಯಿಂದ, ಚ್ಯುತಾಂ–ಜಾರಿರುವ, ದೇವತಾಮಿವ, ದೇವತೆಯಂತಿರುವ,ಇಮಾಂ – ಈ ಹೆಂಗಸನ್ನು,

---

ಳುವನಾಗಿ, ಘಟ್ಟಿಯಾಗಿ ಅಳುತ್ತಲೇ ಪ್ರದಕ್ಷಿಣಮಂಗೈದು, ಹಿಂತಿರಿಗಿ ಹಡಗಿನಲ್ಲಿ ಕುಳಿತುಕೊಂಡು, ಆ ನಾವಿಕನನ್ನು ನಡೆಯಿಸೆಂದು ಪ್ರೇರಿಸಿದಂಥಾವನಾಗಿ, ಉತ್ತರಧಡಕ್ಕೆ ಸೇರಿ, ಶೋಕಾತಿರೇಕವುಳ್ಳವನಾದಕಾರಣ ಮೂರ್ಛನಂತಿರುವನಾಗಿ, ತ್ವರಿತವಾಗಿ ತೇರನ್ನೇರಿ ಅತ್ತಕಡೆಯ ಧಡದಲ್ಲಿ ಅನಾಥಳಂತೆ ಹೊರಳಾಡುತ್ತಿರುವ ಸೀತಾದೇವಿಯನ್ನು, ಬಾರಿಬಾರಿಗೂ ಹಿಂತಿರಿಗಿ ನೋಡುತ್ತಾ ಮುಂದೆ ತೆರಳಿದನು ॥೧॥ ದೂರದಲ್ಲಿರ್ಪ ರಥವನ್ನೂ ಲಕ್ಷ್ಮಣನನ್ನೂ ಸಹ ವೀಕ್ಷಿಸುತ್ತಿರುವ ಸೀತಾದೇವಿಯನ್ನು ಮಹಾದುಃಖವು ಹೊಕ್ಕಂಥಾದ್ದಾಯಿತು ॥೨॥ ದುಃಖಾತಿಶಯದಿಂದ ಬೊಗ್ಗಿದಂಥಾವಳಾಗಿಯೂ, ಯಶಸ್ಸೇ ಧನವಾಗಿ ಉಳ್ಳವಳಾಗಿಯೂ, ಪತಿಯನ್ನು ಕಾಣದಿರುವಳಾಗಿಯೂ, ಪತಿವ್ರತೆಯಾಗಿಯೂ ಇರುವ ಸೀತಾದೇವಿಯು,ನವಿಲುಗಳಿಂದ ಶಬ್ದಾಯಮಾನವಾದ ಅರಣ್ಯದೊಳು, ದುಃಖಾಕ್ರಾಂತಳಾಗಿ ಘಟ್ಟಿಯಾಗಿ ಅಳುತ್ತಿದ್ದಳು, ॥೩॥ —॥ ಉತ್ತರರಾಮಾಯಣದಲ್ಲಿನ ೪೮ನೆಯ ಸರ್ಗಂ ಮುಗಿದುದು ॥—

ಆ ವನದಲ್ಲಿ ಇರುವ ಋಷಿಗಳ ಮಕ್ಕಳೆಲ್ಲರು ಈಪರಿಯಾಗಿ ಅಳುತ್ತಿರುವ ಸೀತಾದೇವಿಯಂ ಕಂಡು, ವಾಲ್ಮೀಕಿ ಮುನಿಯ ಸಮೀಪಕ್ಕೆ ಓಡಿಪೋಗಿ, ಆತನಪಾದಗಳಿಗೆ ಎರಗಿ, ಆ ಸೀತಾದೇವಿಯ ರೋದನವನ್ನೆಲ್ಲ ಆ ಮಹರ್ಷಿಗೆ ಬಿನ್ನವಿಸುವರದೆಂತೆನೆ ॥೨॥ ಎಲೈ ಪೂಜ್ಯನೆ ಕೇಳು ! ನಾವೆಂದಿಗು ನೋಡದಿರುವ ಮತ್ತು ಈಗ ನಾವುಕಂಡ ಈ ಹೆಂಗಸು ಯಾವಮಹಾತ್ಮನ ಹೆಂಡತಿಯೋ ಏನೊ ನಮಗೆ ಗೊತ್ತಿಲ್ಲ, ಮೋಹದದೆಶೆಯಿಂದ ವಿಕಾರಧ್ವನಿಯುಳ್ಳವಳಾಗಿ ಸಾಕ್ಷಾಲ್ಲಕ್ಷ್ಮೀದೇವಿಯಂತೆ ಹೊಳೆಯುತ್ತಿಧಾಳೆ, ಅಂತರಿಕ್ಷದಿಂದ ಜಾರಿದ ದೇವತೆಯೋ ಏನೊ ಎಂಬಂತಿರುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಧು ಪಶ್ಯೈನಾಂದೇವತಾಮಿವಖಾಚ್ಚ್ಯುತಾಮ್ । ನದ್ಯಾಸ್ತೀರೇತುಭಗವನ್ವರಸ್ತ್ರೀಕಾಪಿದುಃಖಿತಾ ‖೪‖ ದೃಷ್ಟಾಸ್ಮಾಭಿಸ್ಸ್ರರುದಿತಾದೃಢಶೋಕಪರಾಯಣಾ । ಅನರ್ಹಾದುಃಖಶೋಕಾರ್ತಾಏಕಾದೀನಾಹ್ಯನಾಥವತ್ ‖೫‖ ನಹ್ಯೇನಾಂಮಾನುಷೀಂವಿದ್ಮಸ್ಸತ್ಕ್ರಿಯಾಸ್ಯಾಃಪ್ರಯುಜ್ಯತಾಮ್ ‖೬‖ ಆಶ್ರಮಸ್ಯಾವಿದೂರೇಸಾವ್ಯಕ್ತಂಹಿಶರಣಂಗತಾ ‖ ತ್ರಾತಾರಮಿಚ್ಛತೇ ಸಾಧ್ವೀಂಭಗವಂಸ್ತ್ರಾತುಮರ್ಹಸಿ ‖೭‖ ತೇಷಾಂತದ್ವಚನಂಶ್ರುತ್ವಾಬುದ್ಧ್ಯಾನಿಶ್ಚಿತ್ಯಧರ್ಮವಿತ್ । ಮನಸಾಲಬ್ಧಚಕ್ಷುಷ್ಮಾನ್ಪ್ರಾದ್ರವದ್ಯತ್ರಮೈಥಿಲೀ ‖೮‖ ತಂತುದೇಶಮಭಿಪ್ರೇತ್ಯಕಿಂಚಿತ್ಪದ್ಭ್ಯಾಂಮಹಾಮುನಿಃ । ಅರ್ಘ್ಯಮಾದಾಯರುಚಿರಂಜಾಹ್ನವೀತೀರಮಾಶ್ರಿತಾಮ್ ‖೯‖ ದದರ್ಶರಾಘವಸ್ಯೇಷ್ಟಾಂಪತ್ನೀಂಸೀತಾಮನಾಥವತ್ । ತಾಂಸೀತಾಂಶೋಕಭಾರಾರ್ತಾಂವಾಲ್ಮೀಕಿರ್ಮುನಿಪುಂಗವಃ ‖ ಉವಾಚಮಧುರಾಂವಾಣೀಂಹ್ಲಾದಯನ್ನಿವತೇಜಸಾ ‖೧೦‖ ಸ್ನುಷಾ

---

ಸಾಧು-ಚನ್ನಾಗಿ, ಪಶ್ಯ-ನೋಡು, ಹೆ ಭಗವನ್-ಎಲೈ ಪೂಜ್ಯನೇ, ನದ್ಯಾಃ-ಗಂಗಾನದಿಯ, ತೀರೇತು-ದಡದಲ್ಲಾದರೋ, ಕಾಪಿ-ಒಬ್ಬಾನೊಬ್ಬಳಾದ, ವರಸ್ತ್ರೀ-ಶ್ರೇಷ್ಠಳಾದ ಹೆಂಗಸು, ದುಃಖಿತಾ-ಶೋಕಿಸುತ್ತಿದ್ದಾಳೇ ‖೪‖ ದೃಢಶೋಕಪರಾಯಣಾ-ದೃಢ-ದೃಢವಾದ, ಶೋಕ-ಶೋಕದಲ್ಲೀ, ಪರಾಯಣಾ-ಆಸಕ್ತಿಯುಳ್ಳ, ಪ್ರರುದಿತಾ- ರೋದನ ಧ್ವನಿಮಾಡುತ್ತಿರುವ, ಅನರ್ಹಾ-ದುಃಖಕ್ಕೆ ಅರ್ಹಳಲ್ಲದಿರುವ, ದುಃಖಶೋಕಾರ್ತಾ-ಮನೋವ್ಯಥೆಯಿಂದಲೂ, ಬಾಹ್ಯವ್ಯಸನದಿಂದಲೂ ಮುಗ್ಗಿಹೋದ, ಅನಾಥವತ್- ನಾಥನಿಲ್ಲದವಳಂತೆ, ದೀನಾ-ದೈನ್ಯಳಾದ, ಏಕಾ-ಒಬ್ಬಳೇ, ಅಸ್ಮಾಭಿಃ-ನಮ್ಮಿಂದ, ದೃಷ್ಟಾ - ಕಾಣಲ್ಪಟ್ಟಳು ‖೫‖ ಏನಾಂ-ಈ ಹೆಂಗಸನ್ನು, ಮಾನುಷೀಂ-ಮನುಷ್ಯಸ್ತ್ರೀಯನ್ನಾಗಿ, ನವಿದ್ಮಹೆ-ತಿಳಿಯಲಾರೆವು, ಅಸ್ಯಾಃ-ಈ ಹೆಂಗಸಿಗೆ, ಸತ್ಕ್ರಿಯಾ-ಪೂಜೆಯು, ಪ್ರಯುಜ್ಯತಾಂ-ಮಾಡಲ್ಪಡಲೀ ‖೬‖ ಹೆ ಭಗವನ್-ಎಲೈ ಪೂಜ್ಯನೇ, ಆಶ್ರಮಸ್ಯ-ಆಶ್ರಮಕ್ಕೆ, ಅವಿದೂರೇ-ಸಮೀಪದಲ್ಲಿ, ಸಾ - ಆ ಹೆಂಗಸು, ವ್ಯಕ್ತಂ- ವ್ಯಕ್ತವಾಗಿ, ಶರಣಂ-ಸಂರಕ್ಷಣವನ್ನು, ಗತಾ-ಹೊಂದಿದ್ದಾಳೇ, ತ್ರಾತಾರಂ-ಸಂರಕ್ಷಕರ್ತನನ್ನು, ಇಚ್ಛತೇ - ಇಚ್ಛೈಸುತ್ತಾಳೇ, ಸಾಧ್ವೀ-ಪತಿವ್ರತೆಯಾಗಿದ್ದಾಳೇ, ತ್ರಾತುಂ-ಸಂರಕ್ಷಣೆ ಮಾಡುವದಕ್ಕೋಸ್ಕರ, ಅರ್ಹಸಿ-ಯೋಗ್ಯನಾಗು ‖೭‖ ಧರ್ಮವಿತ್-ಧರ್ಮಜ್ಞನಾದ ವಾಲ್ಮೀಕಿಋಷಿಯು, ತೇಷಾಂ-ಆ ಋಷಿಪುತ್ರರ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಮನಸಾ-ಮನಸ್ಸಿನಿಂದ, ಲಬ್ಧಚಕ್ಷುಷ್ಮಾನ್- ಲಬ್ಧ- ಹೊಂದಲ್ಪಟ್ಟ, ಚಕ್ಷುಷ್ಮಾನ್-ಜ್ಞಾನದೃಷ್ಟಿಯುಳ್ಳವನಾಗಿ, ಬುಧ್ಯಾ-ಬುದ್ಧಿಯಿಂದ, ನಿಶ್ಚಿತ್ಯ-ನಿಶ್ಚಯಿಸಿ, ಯತ್ರ-ಯಾವ ಸ್ಥಳದಲ್ಲಿ, ಮೈಥಿಲೀ-ಸೀತಾದೇವಿಯು, ಆಸ್ತೆ-ಇದ್ದಾಳೆಯೋ, ತತ್ರ-ಅಲ್ಲಿ, ಪ್ರಾದ್ರವತ್-ಓಡಿಬಂದನು ‖೮‖ ಮಹಾಮುನಿಃ-ಮಹಾಋಷಿಯಾದ ವಾಲ್ಮೀಕಿಯು, ತಂದೇಶಂತು-ಆ ಪ್ರದೇಶವಂ ಕುರಿತು, ಕಿಂಚಿತ್-ಕೊಂಚವಾಗಿ, ಪದ್ಭ್ಯಾಂ-ಪಾದಗಳಿಂದ, ಅಭಿಪ್ರೇತ್ಯ-ನಡೆದುಬಂದು, ರುಚಿರಂ-ಮನೋಹರವಾದ, ಅರ್ಘ್ಯಂ-ಪೂಜಾದ್ರವ್ಯವನ್ನು, ಆದಾಯ- ತೆಗೆದುಕೊಂಡುಬಂದು, ಜಾಹ್ನವೀತೀರಂ-ಗಂಗಾನದಿಯ ದಡವನ್ನು, ಆಶ್ರಿತಾಂ-ಆಶ್ರಯಿಸಿರುವ, ರಾಘವಸ್ಯ-ಶ್ರೀರಾಮನಿಗೆ, ಇಷ್ಟಾಂ-ಇಷ್ಟಳಾದ, ಪತ್ನೀ-ಹೆಂಡತಿಯಾದ, ಅನಾಥವತ್-ನಾಥನಿಲ್ಲದವಳಂತಿರುವ, ಸೀತಾಂ-ಸೀತಾದೇವಿಯನ್ನು, ದದರ್ಶ-ಕಂಡನು ‖೯‖ ಮುನಿಪುಂಗವಃ- ಋಷಿಶ್ರೇಷ್ಠನಾದ, ವಾಲ್ಮೀಕಿಃ-ವಾಲ್ಮೀಕಿಋಷಿಯು, ಶೋಕಭಾರಾರ್ತಾಂ-ಶೋಕಾತಿಶಯದಿಂ ಬಳಲುತಿರುವ, ತಾಂಸೀತಾಂ-ಆ ಸೀತಾದೇವಿಯಂ ಕುರಿತು, ತೇಜಸಾ-ತೇಜಸ್ಸಿನಿಂದ, ಹ್ಲಾದಯನ್ನಿವ-ಸಂತೋಷಗೊಳಿಸುವ ನಂತಿರುವನಾಗಿ, ಮಧುರಾಂ-ಮನೋಹರವಾದ, ವಾಣೀಂ-ಮಾತನ್ನು, ಉವಾಚ-ಹೇಳಿದನು ‖ ಹೆ ಪತಿವ್ರತೆ-ಎಲೌ ಪತಿವ್ರತೆಯೇ, ತೇ-ನಿನಗೆ, ಸ್ವಾಗತಂ-ಸುಖಾಗಮನವೇ, ತ್ವಂ-ನೀನು, ದಶರಥಸ್ಯ-ದಶರಥರಾಯನ, ಸ್ನುಷಾ-ಸೊಸೆಯು, ರಾಮ

---

ಈಕೆಯನ್ನು ಚನ್ನಾಗಿ ನೋಡುವಂಥಾವನಾಗು, ಈ ಗಂಗಾನದಿಯ ತೀರದಲ್ಲಿಯೇ ಸಂತಪಿಸುತ್ತಾ ಒಬ್ಬಾಳೊಬ್ಬ ಉತ್ತಮಾಂಗನೆಯಿರುವಳು, ನಾವು ಕಂಡುಬಂದೆವು, ಆಕೆಯು ದುಃಖಾಕ್ರಾಂತಳಾಗಿಯೂ ಅಳುತಿರುಳಾಗಿ ದುಃಖಿಸುವದಕ್ಕೆ ಅರ್ಹಳಾಗದಿದ್ದರೂ ಕೂಡ ಮನೋವ್ಯಥೆಯಿಂದಲೂ ಬಾಹ್ಯವ್ಯಸನದಿಂದಲೂ ಮುಗ್ಗಿಹೋದ ಅನಾಥಳಂತೆ ದೈನ್ಯಮುಳ್ಳವಳಾಗಿಯೂ ಇರುವಳಾಗಿ ಓರ್ವಳೆ ಇದ್ದಾಳೆ, ಈ ಹೆಂಗಸನ್ನು ಮನುಷ್ಯಸ್ತ್ರೀಯನನ್ನಾಗಿ ತಿಳಿಯಲಾರೆವು, ಈಕೆಗೆ ಸತ್ಕಾರವಂ ಗೈಯ್ಯುವಂಥಾವನಾಗು, ನಮ್ಮ ಆಶ್ರಮಸಮೀಪದಲ್ಲಿಯೆ ಆ ಉತ್ತಮಸ್ತ್ರೀಯು ವ್ಯಕ್ತವಾಗಿ ಶರಣವಂಹೊಂದಿ ರಕ್ಷಕನನ್ನಿಚ್ಛೈಸುತ್ತಿದ್ದಾಳೆ. ಮಹಾ ಪತಿವ್ರತೆಯಾದ ಆಕೆಯಂ ಪರಿಪಾಲಿಸುವಂಥಾವನಾಗೆಂದು, ಬಾಲಕರು ಪೇಳಿದ ಆ ವಾಕ್ಯವಂ ಕೇಳಿ, ಮಹಾಧರ್ಮಿಷ್ಠನಾದ ಆ ವಾಲ್ಮೀಕಿಮುನಿಯು, ಧ್ಯಾನನಿಷ್ಠನಾಗಿ, ಮತಿಯಿಂದ ಕರ್ತವ್ಯಾಂಶವಂ ನಿಶ್ಚಯಿಸಿ, ಸೀತಾದೇವಿಯ ಸಮೀಪಕ್ಕೆ ತ್ವರಿತವಾಗಿ ಓಡಿದಂಥಾವನಾದನು ‖೮‖ ಆ ವಾಲ್ಮೀಕಿಮಹರ್ಷಿಯು ಗಂಗಾತೀರದಲ್ಲಿರುವ ಆ ಸೀತಾದೇವಿಯಂ ಕುರಿತು ಅರ್ಘ್ಯವಂ ತೆಗೆದುಕೊಂಡು ಸ್ವಲ್ಪ ದೂರವಿರುವ ಆ ಸ್ಥಳಕ್ಕೆ ಕಾಲುನಡೆಯಿಂದಲೆ ಬಂದು, ಶ್ರೀರಾಮನ ಇಷ್ಟಪತ್ನಿಯಾದ, ಮತ್ತೂ ಅನಾಥಳಂತೆ ಶೋಕಾತಿಶಯದಿಂದ ಸಂತಪಿಸುತ್ತಿರುವ ಆ ಸೀತಾದೇವಿಯಂ ಕಂಡು, ಸ್ವಕೀಯ್ಯವಾದ ತೇಜಸ್ಸಿನಿಂದ ಸಂತೋಷಗೊಳಿಸುವನೋ ಯೇನೋ ಯೆಂಬಂತಿರುವನಾಗಿ, ಮನೋಹಾರಿಯಾದ ಈ ಮಾತಂ ಹೇಳಲೋಸಗಿದನದೆಂತೆನೆ ‖೧೦‖ ಎಲೈ ಪತಿವ್ರತಾಶಿರೋಮಣಿಯೆ ! ಸುಖವಾಗಿ ಬಂದಂಥಾವಳಾದೆಯೋ ಯೇನು, ನೀನು ದಶರಥರಾಜನ ಸೊಸೆಯು, ಶ್ರೀ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದಶರಥಸ್ಯತ್ವಂರಾಮಸ್ಯಮಹಿಷೀಸತೀ । ಜನಕಸ್ಯಸುತಾರಾಜ್ಞಃಸ್ವಾಗತಂತೇಪತಿವ್ರತೇ ॥೧೧॥ ಆಯಾಂತ್ಯೇವಹಿವಿಜ್ಞಾತಾಮಯಾಧರ್ಮಸಮಾಧಿನಾ । ಕಾರಣಂಚೈವಸರ್ವಂಮೇವಿದಿತಂತವತತ್ವತಃ ॥೧೨॥ ಸರ್ವಂಚವಿದಿತಂಮಹ್ಯಂತ್ರೈಲೋಕ್ಯೇಯುದ್ಧಿವರ್ತತೇ ॥೧೩॥ ಅಪಾಪಾಂವದ್ಮಿಸೀತೇತ್ವಾಂತಪೋಲಬ್ಧೇನಚಕ್ಷುಷಾ । ವಿಶುದ್ಧಭಾವಾವೈದೇಹಿಸಾಂಪ್ರತಂಮಯಿವರ್ತಸೇ ॥೧೪॥ ಆಶ್ರಮಸ್ಯಾವಿದೂರೇಮೇತಾಪಸ್ಯಸ್ತಪಸಿಸ್ಥಿತಾಃ । ತಾಸ್ತ್ವಾಂವತ್ಸೇಯಥಾವತ್ಸಾಂಪಾಲಯಿಷ್ಯಂತಿನಿತ್ಯಶಃ ॥೧೫॥ ಇದಮರ್ಘ್ಯಂಪ್ರತೀಚ್ಛತ್ವಂವಿಸ್ರಬ್ಧಾವಿಗತಜ್ವರಾ । ಯಥಾಸ್ಮದ್ಗೃಹಮಭ್ಯೇತ್ಯವಿಷಾದಂಚೈವಮಾಕೃಥಾಃ ॥೧೬॥ ಶ್ರುತ್ವಾತುಭಾಷಿತಂಸೀತಾಮುನೇಃಪರಮಮದ್ಭುತಮ್ । ಶಿರಸಾವಂದ್ಯಚರಣೌತಥೇತ್ಯಾಹಕೃತಾಂಜಲಿಃ ॥೧೭॥ ತಂಪ್ರಯಾಂತಂಮುನಿಂಸೀತಾಪ್ರಾಂಜಲಿಃಪೃಷ್ಠತೋಽನ್ವಗಾತ್ ॥೧೮॥ ತಂದೃಷ್ಟ್ವಾಮುನಿಮಾಯಾಂತಂವೈದೇಹ್ಯಾನುಗತಂತದಾ । ತಾಪಸ್ಯಸ್ತುಮುದಾಯುಕ್ತಾವಚನಂಚೇದಮಬ್ರುವನ್ ॥೧೯॥ ಸ್ವಾಗತಂತೇಮುನಿಶ್ರೇಷ್ಠ ಚಿರಸ್ಯಾಗಮನಂಪ್ರಭೋ ।

---

ಸ್ಯ-ಶ್ರೀರಾಮನಿಗೆ, ಮಹಿಷೀ-ಪಟ್ಟದರಾಣಿಯಾದ, ಸತೀ-ಪತಿವ್ರತೆಯು, ಜನಕಸ್ಯರಾಜ್ಞಃ-ಜನಕರಾಯನಿಗೆ, ಸುತಾ-ಕುಮಾರಿಯು ॥೧೧॥ ಆಯಾಂತ್ಯೇವ-ಬರುತ್ತಿರುವಳಾಗಿ, ಧರ್ಮಸಮಾಧಿನಾ-ಧರ್ಮದಿಂದ, ಸಮಾಧಿಯೋಗಮುಳ್ಳ, ಮಯಾ-ಯನ್ನಿಂದ, ವಿಜ್ಞಾತಾ-ತಿಳಿಯಲ್ಪಟ್ಟವಳು, ಅಸಿ- ಆಗಿದ್ದೀಯೆ, ತವ-ನಿನ್ನ, ಸರ್ವಂ-ಸಮಸ್ತಮಾದ,ಕಾರಣಂ- ಪ್ರಯಾಣಕಾರಣವು, ಮೇ-ನನಗೆ, ತತ್ವತಃ-ಯಥಾರ್ಥವಾಗಿ, ವಿದಿತಂ- ತಿಳಿಯಿತು ಪದ್ಯುತ್ರೈಲೋಕ್ಯೇ-ಲೋಕತ್ರಯದಲ್ಲಿಯೂ, ಯತ್-ಯಾವದು, ವರ್ತತೇ-ಯಿದ್ದಿಯೋ, ತತ್ಸರ್ವಂ-ಆಸಮಸ್ತವೂನು, ಮಹ್ಯಂ-ಯನ್ನಿಂದ, ವಿದಿತಂ-ತಿಳಿಯಲ್ಪಟ್ಟಿದೆ ಹೇಸೀತೇ-ಎಲೇ ಸೀತೆಯೇ, ತ್ವಾಂ-ನಿನ್ನನ್ನು, ತಪೋಲಬ್ಧೇನ-ತಪದಿಂದ ಪ್ರಾಪ್ತವಾದ, ಚಕ್ಷುಷಾ-ಜ್ಞಾನಚಕ್ಷುಸ್ಸಿನಿಂದ, ಅಪಾಪಾಂ-ಪಾಪರಹಿತಳನ್ನಾಗಿ, ವೇದ್ಮಿ-ತಿಳಿದಿದ್ದೇನೆ ॥೧೩॥ಹೆ ವೈದೇಹಿ-ಎಲೈ ಸೀತಾದೇವಿಯೇ, ಸಾಂಪ್ರತಂ-ಯೀಗ, ಮಯಿ-ನನ್ನಲ್ಲಿ, ವಿಶುದ್ಧಭಾವಾ-ಶುದ್ಧಸ್ವಭಾವ ಮುಳ್ಳವಳಾಗಿ, ವರ್ತಸೇ-ಇರು ॥೧೪॥ ಹೆವತ್ಸೇ-ಎಲೈ ಹುಡುಗಿಯೇ, ಮೇ-ಆಶ್ರಮಸ್ಯ-ನನ್ನ ಆಶ್ರಮಕ್ಕೆ, ಅವಿದೂರೇ-ಸಮೀಪದಲ್ಲಿ, ತಾಪಸ್ಯಃ-ಋಷಿಪತ್ನಿಗಳು, ತಪಸಿ-ಚಾಂದ್ರಾಯಣಾದಿ ವ್ರತಗಳಲ್ಲಿ, ಸ್ಥಿತಾಃ-ಇರುತ್ತಾರೆ, ತಾಃ-ಅವರುಗಳು,ತ್ವಾಂ-ನಿನ್ನನ್ನು, ವತ್ಸಾಂಯಥಾ-ಮಗಳಂತೇ, ನಿತ್ಯಶಃ- ನಿರಂತರವು, ಪಾಲಯಿಷ್ಯಂತಿ-ಪರಿಪಾಲನೆ ಮಾಡುವರು ॥೧೫॥ ತ್ವಂ-ನೀನು, ಇದಂಅರ್ಘ್ಯಂ-ಈ ಅರ್ಘ್ಯವನ್ನು, ವಿಸ್ರಬ್ಧಾಃ-ವಿಶ್ವಾಸಮುಳ್ಳವಳಾಗಿ, ವಿಗತಜ್ವರಾ -ವಿಗತ-ಹೋದಂಥಾ,ಜ್ವರಾ-ತಾಪಮುಳ್ಳವಳಾಗಿ, ಪ್ರತೀಚ್ಛ- ಪರಿಗ್ರಹಿಸು, ಯಥಾ- ಯಥಾಶಾಸ್ತ್ರವಾಗಿ, ಅಸ್ಮದ್ಗೃಹಂ-ನನ್ನ ಮನೆಯಂ ಕುರಿತು, ಅಭ್ಯೇತ್ಯ-ಬಂದು, ವಿಷಾದಂ-ವ್ಯಸನವನ್ನು, ಮಾಕೃಥಾಃ-ಮಾಡಬ್ಯಾಡ ॥೧೬॥ ಸೀತಾ-ಸೀತಾದೇವಿಯು, ಮುನೇಃ- ವಾಲ್ಮಿಕಿಋಷಿಯ, ಪರಂ-ಉತ್ಕೃಷ್ಟವಾದ, ಅದ್ಭುತಂ-ಆಶ್ಚರ್ಯಕರವಾದ, ಭಾಷಿತಂ-ಮಾತನ್ನು, ಶ್ರುತ್ವಾ-ಕೇಳಿ, ಶಿರಸಾ-ಶಿರಸ್ಸಿನಿಂದ, ಚರಣೌ-ಪಾದಗಳನ್ನು, ವಂದ್ಯ-ನಮಸ್ಕರಿಸಿ ಕೃತಾಂಜಲಿಃ- ಅಂಜಲಿಬದ್ಧಳಾಗಿ, ತಥೇತಿ-ಹಾಗೆ ಆಗಲೆಂದು, ಆಹ-ಹೇಳಿದಳು ॥೧೭॥ ಸೀತಾ- ಸೀತಾದೇವಿಯು, ಕೃತಾಂಜಲಿಃ- ಅಂಜಲಿಬದ್ಧಳಾಗಿ, ಪ್ರಯಾಂತಂ-ಪ್ರಯಾಣವಂ ಮಾಡುತ್ತಿರುವ, ತಂಮುನಿಂ-ಆ ಋಷಿಯಂ ಕುರಿತು, ಪೃಷ್ಠತಃ-ಹಿಂದುಗಡೆ, ಅನ್ವಗಾತ್-ಅನುಸರಿಸಿ ಬಂದಳು. ತದಾ-ಆ ಕಾಲದಲ್ಲಿ, ತಾಪಸ್ಯಃ-ಋಷಿಪತ್ನಿಗಳು, ವೈದೇಹ್ಯಾ-ಸೀತಾದೇವಿಯಿಂದ, ಅನುಗತಂ-ಅನುಸರಿಸಲ್ಪಟ್ಟ, ಆಯಾಂತಂ-ಬರುತ್ತಿರುವ, ತಂಮುನಿಂ-ಆ ಋಷಿಯನ್ನು, ದೃಷ್ಟ್ವಾ-ಕಂಡು, ಮುದಾ-ಸಂತೋಷದಿಂದ, ಯುಕ್ತಾಃ-ಕೂಡಿದವರಾಗಿ, ಇದಂವಚನಂ-ಈ ಮಾತನ್ನು, ಅಬ್ರುವನ್-ನುಡಿದರು ॥೧೯॥ ಹೆ ಮುನಿಶ್ರೇಷ್ಠ ಎಲೈ ವಾಲ್ಮೀಕಿಋಷಿಯೇ, ತೇ-ನಿನಗೆ, ಸ್ವಾಗತಂ-ಸುಖಾಗಮನವೇ, ಹೆ ಪ್ರಭೋ-ಎಲೈ ಸ್ವಾಮಿಯೇ, ಚಿರಸ್ಯ-ಬಹುಕಾಲಕ್ಕೆ- ಆಗಮನಂ-

---

ರಾಮನ ಪತ್ನಿಯು, ಮಹಾ ಪತಿವ್ರತೆಯಾದಂಥಾವಳು, ಜನಕಮಹಾರಾಜನ ಪುತ್ರಿಯು, ನೀನಿಲ್ಲಿಗೆ ಬರುತ್ತೀಯೆಂಬದಾಗಿ, ನಾನು ಸಮಾಧಿನಿಷ್ಠನಾಗಿರುವಾಗ ಜ್ಞಾನದೃಷ್ಟಿಯಿಂದ ನನಗೆ ಗೊತ್ತಾಗಿತ್ತು, ನಿನ್ನ ಪ್ರಯಾಣಕಾರಣವೂ ಮತ್ತು ಲೋಕತ್ರಯದಲ್ಲಿ ಯಾವದ್ಯಾವದು ನಡೆಯುತ್ತಿರುವದೋ ಅದೆಲ್ಲ ನನಗೆ ತಿಳಿದಿರುವದು ॥೧೩॥ ಎಲೈ ಸೀತಾದೇವಿಯೆ ! ನೀನು ಪಾಪರಹಿತಳೆಂಬದಾಗಿ ನಾನು ಜ್ಞಾನದೃಷ್ಟಿಯಿಂದ ತಿಳಿದಂಥಾವನಾಗಿದ್ದೇನೆ, ಪರಿಶುದ್ಧವಾದ ಸ್ವಭಾವವುಳ್ಳವನಾಗಿ ಈಗ ನನ್ನಲ್ಲಿರು ॥೧೪॥ ಕೇಳಲೈ ಮಗಳೆ ! ಎನ್ನಾಶ್ರಮಸಮೀಪದಲ್ಲಿ ಅನೇಕ ಋಷಿಪತ್ನಿಗಳು, ಚಾಂದ್ರಾಯಣಾದಿ ವ್ರತಗಳಂ ಗಯ್ಯುತ್ತಾ ಪರಿಶುದ್ಧರಾಗಿದ್ದಾರೆ, ಆ ಸ್ತ್ರೀಯರೆಲ್ಲರು ನಿನ್ನನ್ನು ಪ್ರತಿದಿನವು ಮಗಳನ್ನು ಕಾಪಾಡುವಂತೆ ಕಾಪಾಡುವರು ॥೧೫॥ ನೀನು ನಂಬಿಕೆಯುಳ್ಳವಳಾಗಿ ಸಂತಾಪವಂ ತ್ಯಜಿಸಿ, ಯಥಾಶಾಸ್ತ್ರವಾಗಿ, ಈ ಅರ್ಘ್ಯವಂ ಪರಿಗ್ರಹಿಸಿ ನಮ್ಮ ಮನಿಗೆ ಬಾಮ್ಮ, ಚಿಂತಿಸಬೇಡೆಂದು ನುಡಿಯುತ್ತಿರುವ ಆ ಮಹರ್ಷಿಯ ಉತ್ತಮವಾದ ವಾಕ್ಯವಂ ಕೇಳಿ, ಆತನ ಪಾದಂಗಳಿಗೆ, ವಂದನೆಯಂಗೈದು ಕೈಮುಗಿದುಕೊಂಡು ಹಾಗೆಯೇ ಆಗಲೆಂದು ಹೇಳಿದಂಥಾವಳಾಗಿ, ಆ ಮಹಾಮುನಿಯ ಹಿಂದುಗಡೆ ಗಮಿಸಿದಂಥಾವಳಾದಳು ॥೧೮॥ ಆ ವೇಳೆಯಲ್ಲಿ ಋಷಿಪತ್ನಿಗಳೆಲ್ಲರು, ಸೀತಾದೇವಿಯಂ ಕರೆದುಕೊಂಡು ಬರುತ್ತಿರುವ ಆ ವಾಲ್ಮೀಕಿಮಹರ್ಷಿಯಂ ಕಂಡು, ಕಡು ಸಂತುಷ್ಟರಾಗಿ, ಆತನಂ ಕುರಿತು, ಎಲೈ ಮುನಿಶ್ರೇಷ್ಠನೆ ! ಸುಖಾಗಮನವೇ ಏನು? ಬಹುಕಾಲಕ್ಕೆ ಬರೋಣವಾಯಿತು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅಭಿವಾದಯಾಮಶ್ಶೌಂಸರ್ವಾ ಉಚ್ಯತಾಂಕಿಂಚಕುರ್ಮಹೇ ॥೨೦॥ ತಾಸಾಂತದ್ವಚನಂಶ್ರುತ್ವಾವಾಲ್ಮೀಕಿರಿದಮಬ್ರವೀತ್ । ಸೀತೇಯಂಸಮನುಪ್ರಾಪ್ತಾ ಪತ್ನೀರಾಮಸ್ಯಧೀಮತಃ ॥೨೧॥ ಸ್ನುಷಾದಶರಥಸ್ಯೈಷಾಜನಕಸ್ಯಸುತಾಸತೀ । ಅಪಾಪಾಪತಿನಾತ್ಯಕ್ತಾ ಪರಿಪಾಲ್ಯಾಮಯಾಸದಾ ॥೨೨॥ ಇಮಾಂಭವತ್ಯಃಪಶ್ಯಂತುಸ್ನೇಹೇನಪರಮೇಣಚ । ಗೌರವಾನ್ಮಮವಾಕ್ಯಾಚ್ಚಪೂಜ್ಯಾವೋಸ್ತು ವಿಶೇಷತಃ ॥೨೩॥ ಮುಹುರ್ಮುಹುಶ್ಚ ವೈದೇಹೀಂಪರಿಸಾಂತ್ವ್ಯಮಹಾಯಶಾಃ । ಸ್ವಮಾಶ್ರಮಂಶಿಷ್ಯವೃತಃಪುನರಾಯಾನ್ಮಹಾತಪಾಃ ॥೨೪॥ * ಇತ್ಯುತ್ತರ ರಾಮಾಯಣೇ ಏಕೋನ ಪಂಚಾಶಸ್ಸರ್ಗಃ. *

ದೃಷ್ಟ್ವಾತು ಮೈಥಿಲೀಂಸೀತಾಮಾಶ್ರಮಂಸಂಪ್ರವೇಶಿತಾಮ್ । ಸಂತಾಪಮಕರೋದ್ಘೋರಂಲಕ್ಷ್ಮಣೋದೀನಚೇತಸಃ ॥೧॥ ಅಬ್ರವೀಚ್ಚ ಮಹಾತೇಜಾಸ್ಸುಮಂತ್ರಂಮಂತ್ರಸಾರಥಿಮ್ । ಸೀತಾಸಂತಾಪಜಂದುಃಖಂಪಶ್ಯರಾಮಸ್ಯಸಾರಥೇ॥

---

ಚರಣಂಗಳು, ಅಸ್ತು-ಆಯಿತು, ತ್ವಾಂ-ನಿನ್ನನ್ನು ಕುರಿತು, ಸರ್ವಾಃ-ಸಮಸ್ತರೂನು, ಅಭಿವಾದಯಾಮಃ- ನಮಸ್ಕರಿಸುತ್ತೇವೆ, ಕಿಂಚ- ಯಾವದನ್ನು, ಕುರ್ಮಹೇ-ಮಾಡುವೆವೋ, ಉಚ್ಯತಾಂ-ಹೇಳಲ್ಪಡಲೀ ॥೨೦॥ ವಾಲ್ಮೀಕಿಃ-ವಾಲ್ಮೀಕಿ ಋಷಿಯು, ತಾಸಾಂ-ಆ ಋಷಿಪತ್ನಿಗಳ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು, ಇಯಂಸೀತಾ-ಈ ಸೀತಾದೇವಿಯು, ಧೀಮತಃ-ಬುದ್ಧಿಶಾಲಿಯಾದ, ರಾಮಸ್ಯ-ಶ್ರೀರಾಮನಿಗೆ, ಪತ್ನೀ-ಹೆಂಡತಿಯು, ಸಮನುಪ್ರಾಪ್ತಾ-ಬಂದಿದ್ದಾಳೆ ॥೨೧॥ ಏಷಾ-ಈ ಸೀತಾದೇವಿಯು, ದಶರಥಸ್ಯ-ದಶರಥಮಹಾರಾಯನಿಗೆ, ಸ್ನುಷಾ-ಸೊಸೆಯು, ಜನಕಸ್ಯ-ಜನಕರಾಯನಿಗೆ, ಸುತಾ-ಮಗಳಾಗಿದ್ದಾಳೇ ಸತೀ-ಮಹಾ ಪತಿವ್ರತೆಯು, ಅಪಾಪಾ-ಪಾಪರಹಿತಳಾದರು, ಪತಿನಾ-ಗಂಡನಿಂದ, ತ್ಯಕ್ತಾ-ಪರಿತ್ಯಾಗ ಮಾಡಲ್ಪಟ್ಟವಳು, ಮಯಾ-ನನ್ನಿಂದ, ಸದಾ-ನಿರಂತರವೂನು, ಪರಿಪಾಲ್ಯಾ-ಸಂರಕ್ಷಣೆ ಮಾಡತಕ್ಕವಳು ॥೨೨॥ ಭವತ್ಯಃ- ನೀವುಗಳು, ಇಮಾಂ-ಈ ಸೀತಾದೇವಿಯನ್ನು, ಪರಮೇಣ-ಬಹಳವಾದ, ಸ್ನೇಹೇನ-ಸ್ನೇಹದಿಂದ, ಪಶ್ಯಂತು-ನೋಡಿರಿ, ವಃ-ನಿಮ್ಮಗಳಿಗೆ, ಮಮ-ನನ್ನ, ವಾಕ್ಯಸ್ಯ-ಮಾತಿನ, ಗೌರವಾತ್- ಗೌರವದ ದೆಸೆಯಿಂದ, ವಿಶೇಷತಃ- ವಿಶೇಷವಾಗಿ, ಪೂಜ್ಯಾ- ಪೂಜಾಯೋಗ್ಯಳು, ಅಸ್ತು-ಆಗಲೀ ॥೨೩॥ ಮಹಾಯಶಾಃ- ಮಹಾಕೀರ್ತಿವಂತನಾದ, ಮಹಾತಪಾಃ- ಮಹಾತಪಸ್ವಿಯಾದ ವಾಲ್ಮೀಕಿಋಷಿಯು, ಮುಹುರ್ಮುಹುಃ-ಬಾರಿಬಾರಿಗೂ, ವೈದೇಹೀಂ- ಸೀತಾದೇವಿಯನ್ನು, ಪರಿಸಾಂತ್ವ್ಯ-ಸಮಾಧಾನ ಗೊಳಿಸಿ, ಶಿಷ್ಯವೃತಃ-ಶಿಷ್ಯರಿಂದ ಪರಿವೃತನಾಗಿ, ಸ್ವಂ-ಸ್ವಕೀಯವಾದ, ಆಶ್ರಮಂ- ಆಶ್ರಮವಂ ಕುರಿತು, ಪುನರಾಯಾತ್-ತಿರುಗಿಹೊರಟು ಬಂದನು. ... ... ॥೨೪॥

ಇತಿ ಶ್ರೀಮದುತ್ತರ ರಾಮಾಯಣೇ ಏಕೋನಪಂಚಾಶ ಸ್ಸರ್ಗಃ.

ಲಕ್ಷ್ಮಣಃ-ಲಕ್ಷ್ಮಣನು, ಮೈಥಿಲೀಂ- ಜನಕರಾಯನ ಮಗಳಾದ, ಸೀತಾಂ- ಸೀತಾದೇವಿಯನ್ನು, ಆಶ್ರಮಂ- ವಾಲ್ಮೀಕಾಶ್ರಮವನ್ನು, ಸಂಪ್ರವೇಶಿತಾಂ-ಪ್ರವೇಶ ಮಾಡಿಸಲ್ಪಟ್ಟವಳನ್ನಾಗಿ, ದೃಷ್ಟ್ವಾ-ಕಂಡು, ದೀನಚೇತನಃ-ದೀನವಾದ ಬುದ್ಧಿಯುಳ್ಳವನಾಗಿ, ಘೋರಂ- ಕ್ರೂರವಾದ, ಸಂತಾಪಂ-ಸಂಕಟವನ್ನು, ಅಕರೋತ್-ಮಾಡಿದನು ॥೧॥ ಮಹಾತೇಜಾಃ-ಮಹಾತೇಜೋವಂತನಾದ ಲಕ್ಷ್ಮಣಸ್ವಾಮಿಯು, ಮಂತ್ರಸಾರಥಿಂ-ಆಲೋಚನಾಪರನಾಗಿ ಸಾರಥಿಯಾದ, ಸುಮಂತ್ರಂ-ಸುಮಂತ್ರನಂಕುರಿತು, ಅಬ್ರವೀಚ್ಚ-ನುಡಿದನು, ಹೇಸಾರಥೇ-ಎಲೈ ಸಾರಥಿಯೇ, ರಾಮಸ್ಯ-ಶ್ರೀರಾಮನಿಗೆ, ಸೀತಾಸಂತಾಪಜಂ-ಸೀತಾ-ಸೀತಾದೇವಿಯ, ಸಂತಾಪಜಂ-ಸಂತಾಪದಿಂದ ಹುಟ್ಟಿದ, ದುಃಖಂ-ದುಃಖವನ್ನು, ಪಶ್ಯ- ನೋಡು ॥೨॥ ರಾಘವಸ್ಯ - ಶ್ರೀರಾಮನಿಗೆ, ಪತ್ನೀಂ-ಹೆಂಡತಿಯಾದ, ಶುದ್ಧಸಮಾಚಾರಾಂ-ಪರಿಶುದ್ಧವಾದ ಚರಿತ್ರೆಯುಳ್ಳ, ಜನಕಾತ್ಮಜಾಂ-ಜನಕಪುತ್ರಿಯಾದ ಸೀತಾದೇವಿಯನ್ನು, ವಿ

---

ಎಲ್ಲರು ವಂದನೆಗಳಂ ಗಯ್ಯುತ್ತೇವೆ, ಯಾವ ಕಾರ್ಯವಂಗೈಯ್ಯಬೇಕೊ ಅಪ್ಪಣೆಯನ್ನೀಯುವನಾಗೆಂದು ಪ್ರಾರ್ಥಿಸಿದಂಥಾವರಾಗಲೂ, ಆ ಮಾತಂ ಕೇಳಿ, ವಾಲ್ಮೀಕಿಮುನಿಯು, ಮಹಾ ಮತಿವಂತನಾದ ಶ್ರೀರಾಮನ ಪತ್ನಿಯಾದ ಈ ಸೀತಾದೇವಿಯು ಬಂದಿರುವಳು, ಈಕೆಯು ದಶರಥರಾಜನ ಸೊಸೆಯು, ಜನಕರಾಜನ ಕುವರಿಯು, ಮಹಾ ಪತಿವ್ರತೆಯಾದಂಥಾವಳು, ಪಾಪರಹಿತಳಾದಂಥಾವಳು, ಇಂಥಾವಳಾದರೂ ಈಕೆಯು ಪತಿಯಿಂದಪರಿತ್ಯಕ್ತಳಾಗಿರುವಳು, ಆದಕಾರಣ ನಾನೀಕೆಯಂ ನಿತ್ಯವು ಪಾಲಿಸಬೇಕಾಗಿದೆ, ಈಕೆಯನ್ನು ನೀವೆಲ್ಲರು ಮಹಾ ವಿಶ್ವಾಸದಿಂದ ನೋಡುತ್ತಿರುವರಾಗಿ, ಎನ್ನ ಮಾತಿನ ಗೌರವದಿಂದ ವಿಶೇಷವಾಗಿ ಪೂಜಿಸುತ್ತಿರೆಂದು ನಿರೂಪಿಸಿ, ಬಾರಿಬಾರಿಗೂ ಸೀತಾ ದೇವಿಯಂ ಸಮಾಧಾನಗೊಳಿಸಿ, ಶಿಷ್ಯರಿಂದೊಡಗೂಡಿ, ತನ್ನ ಆಶ್ರಮಕ್ಕೆ ಪುನಹಾ ಬಂದವನಾದನು. ॥೨೪॥

—...*ಉತ್ತರರಾಮಾಯಣದಲ್ಲಿನ ೪೯ನೆಯ ಸರ್ಗಂ ಮುಗಿದುದು*...—

ವಾಲ್ಮೀಕಿಮುನಿಯ ಆಶ್ರಮವಂ ಪ್ರವೇಶಿಸಿದಂಥಾವಳಾದ ಆ ಸೀತಾದೇವಿಯಂಕಂಡು, ದೀನಮನಸ್ಕನಾಗಿ, ಘೋರವಾಗಿ ಸಂತಪಿಸುತ್ತಾ ಸಾರಥಿಯಾದ ಸುಮಂತನಂ ಕುರಿತು, ಎಲೈ ಸಾರಥಿಯೇ ! ಶ್ರೀರಾಮನಿಗೆ ಸಂಭವಿಸಿರುವ ಸೀತಾವಿಷಯವಾದ ದುಃಖವನ್ನು ನೋಡುವಂಥಾವನಾಗು, ಶ್ರೀರಾಮನ ಸತಿಯಾದ ಮತ್ತು ಪರಿಶುದ್ಧವಾದಸ್ವಭಾವವುಳ್ಳ, ಜನಕಪುತ್ರಿಯಾದ ಸೀತಾದೇವಿಯನ್ನಗಲಿದಂಥಾದ್ದಾಯಿತಲ್ಲ, ಇದಕ್ಕಿಂತಲೂ ಅಧಿಕವಾದ ವ್ಯಸನವು ಯಾವುದಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅತೋದುಃಖತರಂಕಿನ್ನು ರಾಘವಸ್ಯ ಭವಿಷ್ಯತಿ। ಪತ್ನೀಂಶುದ್ಧಸಮಾಚಾರಾಂವಿಸೃಜ್ಯ ಜನಕಾತ್ಮಜಾಮ್ ॥೩॥ ವ್ಯಕ್ತಂದೈ
ವಾದಹಂಮನ್ಯೇರಾಘವಸ್ಯಪರಾಭವಮ್ । ವೈದೆಹ್ಯಾಸಾರಥೆಸಾರ್ಧಂದೈವಂಹಿದುರತಿಕ್ರಮಮ್ ॥೪॥ ಯೋಹಿದೇವಾನ್
ಸಗಂಧರ್ವಾನ್ ಅಸುರಾನ್ ಸಹರಾಕ್ಷಸೈಃ । ನಿಹನ್ಯಾದ್ರಾಘವಃಕ್ರುದ್ಧಸ್ಸದೈವಂಸಮುಪಾಸತೇ ॥೫॥ ಪುರಾಮಮಪಿತುರ್ವಾ
ಕ್ಯಾದ್ದಂಡಕೇವಿಜನೇವನೇ । ಉವಾಸನವವರ್ಷಾಣಿಪಂಚಚೈವಸುದಾರುಣೇ ॥೬॥ ಅತೋದುಃಖತರಂಭೂಯಸ್ಸೀತಾಯಾವಿ
ಪ್ರವಾಸನಮ್ ॥ ಪೌರಾಣಾಂವಚನಂಶ್ರುತ್ವಾನೃಶಂಸಂಪ್ರತಿಭಾತಿಮೇ ॥೭॥ ಕೋನುಧರ್ಮಾಶ್ರಯಸ್ಸೂತಕರ್ಮಣ್ಯಸ್ಮಿನ್
ಯಶೋಹರಃ। ಮೈಥಿಲೀಂಪ್ರತಿಸಂಪ್ರಾಪ್ತಃಪೌರೈರ್ಹೀನಾರ್ಥವಾದಿಭಿಃ ॥೮॥ ಏತಾಬಹುವಿಧಾವಾಚಶ್ಶ್ರುತ್ವಾಲಕ್ಷ್ಮಣ
ಭಾಷಿತಾಃ । ಸುಮಂತ್ರಃಪ್ರಾಂಜಲಿಃಪ್ರಾಜ್ಞೋವಾಕ್ಯಮೇತದುವಾಚಹ ॥೯॥ ನಸಂತಾಪಸ್ತ್ವಯಾಕಾರ್ಯಸ್ಸೌಮಿತ್ರೇಮೈ
ಥಿಲೀಂಪ್ರತಿ । ದೃಷ್ಟಮೇತತ್ಪುರಾವಿಪ್ರೈಃಪಿತುಸ್ತೇಲಕ್ಷ್ಮಣಾಗ್ರತಃ ॥೧೦॥ ಭವಿಷ್ಯತಿದೃಢಂರಾಮೋ ದುಃಖಪ್ರಾಯೋಽಲ್ಪ

---

ಸೃಜ್ಯ-ಬಿಟ್ಟು, ಅತಃ-ಇದಕ್ಕಿಂತಲೂ, ದುಃಖತರಂ-ಅತಿಶಯವಾದ ದುಃಖವು, ಕಿನ್ನು ಭವಿಷ್ಯತಿ-ಏನು ಆಗುವದು ॥೩॥ ಹೆ ಸಾರಥೆ-ಎಲೈ ಸುಮಂತ್ರ
ನೇ, ವೈದೆಹ್ಯಾಸಾರ್ಧಂ-ಸೀತಾದೇವಿಯೊಡನೆ, ರಾಘವಸ್ಯ-ಶ್ರೀರಾಮನಿಗೆ, ಪರಾಭವಂ-ತಿರಸ್ಕಾರವನ್ನು, ದೈವಾತ್-ದೈವಾಧೀನದಿಂದ, ವ್ಯಕ್ತಂ - ಸ್ಪ
ಷ್ಟವಾಗಿ, ಅಹಂ-ನಾನು, ಮನ್ಯೆ-ತಿಳಿಯುತ್ತೇನೆ, ದೈವಂ-ದೈವವು, ದುರತಿಕ್ರಮಂ-ಉಲ್ಲಂಘಿಸಲಸಾಧ್ಯವು ॥೪॥ ಯಃ-ಯಾವ ಶ್ರೀರಾಮನು, ಕ್ರುದ್ಧಃ-
ಕೋಪಿಷ್ಠನಾದರೇ, ಸಗಂಧರ್ವಾನ್-ಗಂಧರ್ವರಿಂ ದೊಡಗೂಡಿದ, ದೇವಾನ್-ದೇವತೆಗಳನ್ನು, ರಾಕ್ಷಸೈಸ್ಸಹ-ರಾಕ್ಷಸರಿಂ ದೊಡಗೂಡಿ, ಅಸುರಾನ್-ದೈ
ತ್ಯರನ್ನು, ನಿಹನ್ಯಾತ್-ಹೊಡೆಯುವನೊ, ಸಃ-ಆ ಶ್ರೀರಾಮನು, ದೈವಂ-ಅದೃಷ್ಟಾಭಿಮಾನಿ ದೇವತೆಯನ್ನು, ಸಮುಪಾಸತೆ - ಉಪಾಸನೆಮಾಡುತ್ತಿ
ರ್ಧಾನೆ ॥೫॥ ಪುರಾ-ಪೂರ್ವದಲ್ಲಿ, ಮಮ-ನನ್ನ, ಪಿತುಃ-ತಂದೆಯ, ವಾಕ್ಯಾತ್-ಮಾತಿನ ದೆಸೆಯಿಂದ, ವಿಜನೆ-ಜನರಹಿತವಾದ, ಸುದಾರುಣೆ-ಮಹಾಭ
ಯಂಕರವಾದ, ದಂಡಕೆವನೆ-ದಂಡಕಾರಣ್ಯದಲ್ಲಿ, ಪಂಚನವವರ್ಷಾಣಿಚ-ಹದಿನಾಲ್ಕುವರುಷಗಳು, ಉವಾಸ-ಇದ್ದನು ॥೬॥ ಅತಃ-ಇದಕ್ಕಿಂತಲೂ, ಭೂ
ಯಃ-ಮತ್ತು, ನೃಶಂಸಂ-ಘಾತಕವಾದ, ಪೌರಾಣಾಂ-ಪಟ್ಟಣಸ್ಥರ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಸೀತಾಯಾಃ- ಸೀತಾದೇವಿಯ, ವಿಪ್ರ
ವಾಸನಂ- ಅರಣ್ಯಕ್ಕೆ ಕಳುಹಿಸಿಕೊಡೋಣವು, ದುಃಖತರಂ-ಅತಿಶಯವಾದ ದುಃಖಕರವಾಗಿ, ಮೆ-ನನಿಗೆ, ಪ್ರತಿಭಾತಿ-ತೋರುತ್ತದೆ ॥೭॥ ಹೆ ಸೂತ-
ಎಲೈ ಸಾರಥಿಯೇ, ಕೊನು-ಯಾವೊನು ತಾನೆ, ಯಶೋಹರಃ-ಕೀರ್ತಿಯನ್ನು ಹೋಗಲಾಡಿಸುತ್ತಿರುವ, ಅಸ್ಮಿನ್ಕಾರ್ಯಣಿ-ಈ ಕರ್ಮದಲ್ಲಿ, ಮೈಥಿಲೀಂಪ್ರ
ತಿ-ಸೀತಾದೇವಿಯಂ ಕುರಿತು, ಹೀನಾರ್ಥವಾದಿಭಿಃ-ನಿಂದಾರ್ಥವನ್ನು ಪೇಳುತ್ತಿರುವ, ಪೌರೈಸ್ಸಹ-ಪಟ್ಟಣಸ್ಥರೊಡನೆ, ಧರ್ಮಾಶ್ರಯಃ-ಧರ್ಮಕ್ಕೆ ಆಶ್ರ
ಯನಾಗಿ, ಪ್ರತಿಸಂಪ್ರಾಪ್ತಃ-ಪ್ರತಿಭಟನಾಗಿ ಬಂದಾನು, ॥೮॥ ಪ್ರಾಜ್ಞಃ-ಪ್ರಜ್ಞಾವಂತನಾದ, ಸುಮಂತ್ರಃ-ಸುಮಂತ್ರನು, ಬಹುವಿಧಾಃ-ನಾನಾ ಬಗೆ
ಗಳಾದ, ಲಕ್ಷ್ಮಣಭಾಷಿತಾಃ-ಲಕ್ಷ್ಮಣಸ್ವಾಮಿಯಿಂದ ನುಡಿಯಲ್ಪಟ್ಟ, ಏತಾವಾಚಃ-ಈಮಾತುಗಳನ್ನು, ಶ್ರುತ್ವಾ-ಕೇಳಿ,ಕೃತಾಂಜಲಿಃ- ಅಂಜಲಿಬ
ದ್ಧನಾಗಿ, ಏತದ್ವಾಕ್ಯಂ-ಈ ವಕ್ಷ್ಯಮಾಣವಾದ ವಾಕ್ಯವನ್ನು, ಉವಾಚಹ-ಪೇಳಿದನು ॥೯॥ ಹೆ ಸೌಮಿತ್ರೆ-ಎಲೈ ಸುಮಿತ್ರಾದೇವಿಯ ಕುವರನಾದ,
ಹೆ ಲಕ್ಷ್ಮಣ-ಎಲೈ ಲಕ್ಷ್ಮಣನೇ, ಮೈಥಿಲೀಂಪ್ರತಿ- ಸೀತಾದೇವಿಯುಂಕುರಿತು, ತ್ವಯಾ-ನಿನ್ನಿಂದ, ಸಂತಾಪಃ-ಪಶ್ಚಾತ್ತಾಪವು, ನಕಾರ್ಯಾ-ಮಾಡತಕ್ಕ
ದ್ದಲ್ಲ, ಏತತ್-ಇದು, ಪುರಾ-ಪೂರ್ವದಲ್ಲಿ, ತೆ-ನಿನ್ನ, ಪಿತುಃ-ತಂದೆಯ, ಅಗ್ರತಃ-ಮುಂದುಗಡೆ, ವಿಪ್ರೈಃ-ಬ್ರಾಹ್ಮಣರಿಂದ, ದೃಷ್ಟಂ- ನೋಡಲ್ಪಟ್ಟಿ
ದೆ ॥೧೦॥ ರಾಮಃ-ಶ್ರೀರಾಮನು, ದುಃಖಪ್ರಾಯಃ-ಬಹುದುಃಖವುಳ್ಳವನು, ಅಲ್ಪಸೌಖ್ಯವಾನ್-ಸ್ವಲ್ಪಸುಖವಂತನು, ಭವಿಷ್ಯತಿ-ಆಗುವನು, ದೃಢಂ- ನಿ

---

ರುವದು. ॥೩॥ ಕೇಳೆಲೈಸಾರಥಿಯೆ! ಸೀತಾದೇವಿಯೊಡನೆ ಶ್ರೀರಾಮನಿಗೆ ತಿರಸ್ಕಾರವು ದೈವಾಧೀನದಿಂ ಸ್ಪಷ್ಟವಾಯಿ
ತೆಂಬದಾಗಿ ತಿಳಿಯುತ್ತೇನೆ, ದೈವಗತಿಯು ದಾಂಟಲಶಾಧ್ಯವಾಗಿರುವದು. (ಯಾಕೆಂದರೆ, ಯಾವ ಶ್ರೀರಾಮನು) ಕುಪಿತ
ನಾದಂಥಾವನಾದರೆ ಗಂಧರ್ವಸಹಿತರಾದ ದೇವತೆಗಳನ್ನೂ ರಾಕ್ಷಸರಿಂದೊಡಗೂಡಿದ ಅಸುರರನ್ನೂ ಹೊಡೆಯುವಂಥಾ
ವನಾಗುವನೋ, ಅಂಥಾ ಶ್ರೀರಾಮನೂಕೂಡ ದೈವವನ್ನುಪಾಸಿಸುತಿಧಾನೆ ॥೫॥ ಪೂರ್ವಕಾಲದಲ್ಲಿ ತಂದೆಯ ವಾಕ್ಯ
ದಿಂ ಮಹಾದಾರುಣವಾಗಿರುವ, ಮತ್ತು ಜನರಹಿತವಾಗಿರ್ಪ ದಂಡಕಾರಣ್ಯದೊಳು ಹದಿನಾಲ್ಕುವರುಷಗಳು ವಾಸಿ
ಸುತಿದ್ದನು. ಮತ್ತು ಕ್ರೂರವಾದ ಪಟ್ಟಣಸ್ಥರ ವಾಕ್ಯವಂ ಕೇಳಿ, ಸೀತಾದೇವಿಯಂ ಅರಣ್ಯಕ್ಕೆ ಕಳುಹಿಸಿ ಕೊಟ್ಟ
ದ್ದು, ಅದಕ್ಕಿಂತಲೂ ದುಃಖತರವಾಗಿರುವದೆಂದು, ತೋರುತ್ತದೆ. ಯಶೋನಾಶಕರವಾದ ಈ ಕಾರ್ಯದಲ್ಲಿ ಸೀ
ತಾದೇವಿಯಂ ಕುರಿತು ನಿಂದನಂ ಗೈಯ್ಯುತ್ತಿರುವ ಪಟ್ಟಣಸ್ಥರ ಸಂಗಡ ಧರ್ಮವಂನಾಶ್ರಯಿಸಿದವನಾಗಿ, ಯಾವ ಪು
ರುಷನುತಾನೆ ಪ್ರತಿಭಟಿಸುವನೆಂದು ನಾನಾ ಬಗೆಯಾಗಿ ಪೇಳುತ್ತಿರುವ ಲಕ್ಷ್ಮಣನ ಮಾತುಗಳಂ ಕೇಳಿ ಸುಮಂತ್ರನು
ಅಂಜಲಿಬದ್ಧನಾಗಿ ಈ ವಾಕ್ಯವಂ ಪೇಳಲೊಸಗಿದನೆಂತೆನೆ:- ॥೯॥ ಎಲೈ ಸುಮಿತ್ರಾಪುತ್ರನಾದ ಲಕ್ಷ್ಮಣನೆ ! ಸೀತಾದೇ
ವಿಯಂ ಕುರಿತು ಚಿಂತಿಸಬೇಡ, ಪೂರ್ವಕಾಲದೊಳ್ ನಿಮ್ಮ ತಂದೆಯಾದ ದಶರಥರಾಯನ ಮುಂದೆ, ಬ್ರಾಹ್ಮಣರಿಂದ
ದೃಷ್ಟವಾಗಿಯೇಯಿತ್ತು. (ಅದೇನೆಂದರೆ) ರಾಮನು ಬಹು ದುಃಖವುಳ್ಳವನಾಗಿಯೂ, ಅಲ್ಪಸೌಖ್ಯವುಳ್ಳವನಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸೌಮಿತ್ರೇ । ಪ್ರಾಪ್ಸ್ಯತೇಚಮಹಾಬಾಹುಃವಿಪ್ರಯೋಗಂಪ್ರಿಯೈರ್ಧ್ರುವಮ್ ॥೧೧॥ ತ್ವಾಂಚೈವಮೈಥಿಲೀಂಚೈವಶತ್ರುಘ್ನಭರತಾವುಭೌ । ಸಂತ್ಯಜಿಷ್ಯತಿಧರ್ಮಾತ್ಮಾ ಕಾಲೇನಮಹತಾಮಹಾನ್ ॥೧೨॥ ಇದಂತ್ವಯಿನವಕ್ತವ್ಯಂಸೌಮಿತ್ರೇಭರತೇಪಿವಾ। ರಾಜ್ಞಾವೋವ್ಯಾಹೃತಂವಾಕ್ಯಂದುರ್ವಾಸಾಯದುವಾಚಹ ॥ ೧೩ ॥ ಮಹಾಜನಸಮೀಪೇಚಮಮಚೈವನರರ್ಷಭ। ಋಷಿಣಾವ್ಯಾಹೃತಂವಾಕ್ಯಂವಸಿಷ್ಠಸ್ಯಚಸಂನಿಧೌ ॥೧೪॥ಋಷೇಸ್ತುವಚನಂಶ್ರುತ್ವಾಮಾಮಾಹಪುರುಷರ್ಷಭಃ। ಸೂತನಕ್ವಚಿದೇವಂತೇವಕ್ತವ್ಯಂಜನಸನ್ನಿಧೌ । ತದಹಂಲೋಕಪಾಲಸ್ಯವಾಕ್ಯಂತತ್ಸುಸಮಾಹಿತಂ। ನೈವಜಾತ್ವನೃತಂಕಾರ್ಯಮಿತಿಮಾಂಸೌಮ್ಯದರ್ಶನಮ್ ॥೧೬॥ ಸರ್ವಥೈವನಕರ್ತವ್ಯಂಮಯಾಸೌಮ್ಯತವಾಗ್ರತಃ। ಯದಿತೇಶ್ರವಣೇಶ್ರದ್ಧಾ ಶ್ರೂಯತಾಂರಘುನಂದನ॥೧೭॥ ಯದ್ಯಪ್ಯಹಂನರೇಂದ್ರೇಣರಹಸ್ಯಂಶ್ರಾವಿತಃಪುರಾ । ತಥಾಪ್ಯುದಾಹರಿಷ್ಯಾಮಿದೈವಂಹಿಸುಮಹಾದ್ಭುತಮ್ ॥೧೮॥ ಯೇನೇದಮೀದೃಶಂಪ್ರಾಪ್ತಂದುಃಖಂಶೋಕಸಮನ್ವಿತಮ್। ನತ್ವಯಾಭರತೇವಾಚ್ಯಂಶತ್ರುಘ್ನಸ್ಯಾಪಿಸಂನಿ

---

ಶ್ಚಯವು, ಮಹಾಬಾಹುಃ-ಮಹಾಭುಜಪರಾಕ್ರಮ ಶಾಲಿಯಾದ ಶ್ರೀರಾಮನು, ಪ್ರಿಯೈಃ-ಇಷ್ಟರಾದ, ಕಳತ್ರಭ್ರಾತ್ರಾದಿಗಳಿಂದ, ವಿಪ್ರಯೋಗಂ- ವಿಯೋಗವನ್ನು, ಪ್ರಾಪ್ಸ್ಯತೇ-ಹೊಂದುವನು, ಧ್ರುವಂ-ನಿಶ್ಚಯವು, ॥೧೧॥ ಮಹಾನ್-ಮಹಾತ್ಮನಾದ, ಧರ್ಮಾತ್ಮಾ-ಧರ್ಮಿಷ್ಠನಾದ ಶ್ರೀರಾಮನು, ತ್ವಾಂಚೈವ-ನಿನ್ನನ್ನು, ಮೈಥಿಲೀಂಚೈವ-ಸೀತಾದೇವಿಯನ್ನು, ತಥಾ-ಹಾಗೆಯೇ, ಶತ್ರುಘ್ನಭರತೌ-ಭರತಶತ್ರುಘ್ನರನ್ನು, ಮಹತಾಕಾಲೇನ-ಬಹಳದಿವಸದಲ್ಲಿ ಸಂತ್ಯಜಿಷ್ಯತಿ-ಬಿಡುವನು ॥ಹೆ ಸೌಮಿತ್ರೇ-ಎಲೈ ಲಕ್ಷ್ಮಣನೇ, ದುರ್ವಾಸಾಃ-ದುರ್ವಾಸಮುನಿಯು,ಯತ್- ಯಾವಮಾತನ್ನು, ಉವಾಚಹ-ಹೇಳಿದನೊ, ಇದಂ-ಈ ಮಾತು, ತ್ವಯಿ-ನಿನ್ನಲ್ಲಿ ಯಾಗಲೀ, ಭರತೇಪಿವಾ-ಭರತನಲ್ಲೇ ಆಗಲೀ-ನವಕ್ತವ್ಯಂ-ಹೇಳತಕ್ಕದ್ದಲ್ಲಾ, (ಇತಿ-ಇಂತೆಂದು, ರಾಜ್ಞಾ- ದಶರಥರಾಜನಿಂದ, ವಾಕ್ಯಂ-ಮಾತು, ವ್ಯಾಹೃತಂ-ಹೇಳಲ್ಪಟ್ಟಿತು, ॥೧೩॥ ಹೇ ನರರ್ಷಭ- ಎಲೈ ನರಶ್ರೇಷ್ಠನೆ, ಮಹಾಜನಸಮೀಪೇಚ-ದೊಡ್ಡವರ ಸಮೀಪದಲ್ಲಿ, ವಸಿಷ್ಠಸ್ಯಚ-ವಸಿಷ್ಠ ಋಷಿಯ, ಸಂನಿಧೌಚ-ಸಂನಿಧಾನದಲ್ಲಿಯೂ, ಋಷಿಣಾ-ದೂರ್ವಾಸಋಷಿಯಿಂದ, ವಾಕ್ಯಂ-ವಚನವು, ವ್ಯಾಹೃತಂ-ಹೇಳಲ್ಪಟ್ಟಿತು ॥೧೪॥ ಋಷೇಃ-ದುರ್ವಾಸಋಷಿಯ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಪುರುಷರ್ಷಭಃ-ಪುರುಷಶ್ರೇಷ್ಠನಾದ ದಶರಥರಾಜನು, ಮಾಂ-ನನ್ನನ್ನು ಕುರಿತು, ಆಹ-ಹೇಳಿದನು, ಹೆಸೂತ-ಎಲೈ ಸಾರಥಿಯೇ-ಕ್ವಚಿತ್-ಒಂದಾನೊಂದು ಸ್ಥಳದಲ್ಲಿಯೂ ಕೂಡ, ಜನಸನ್ನಿಧೌ-ಜನರ ಸಮೀಪದಲ್ಲಿ,ತೇ-ನಿನ್ನಿಂದ, ನವಕ್ತವ್ಯಂ-ಹೇಳತಕ್ಕದ್ದಲ್ಲಾ ॥೧೫॥ ಹೆ ಸೌಮ್ಯ-ಎಲೈ ಸೌಮ್ಯನೆ, ಸುಸಮಾಹಿತಂ-ಚನ್ನಾಗಿ, ಹೇಳಲ್ಪಟ್ಟ, ತಸ್ಯಲೋಕಪಾಲಸ್ಯ-ಆ ದಶರಥರಾಜನ, ತದ್ವಾಕ್ಯಂ-ಆ ಮಾತನ್ನು, ಅಹಂ-ನಾನು, ಜಾತು-ಯಾವಕಾಲದಲ್ಲಾದರು, ಅನೃತಂ-ಸುಳ್ಳಾಗಿ, ನಕಾರ್ಯಂ-ಮಾಡತಕ್ಕದ್ದಲ್ಲ, ಇತಿ- ಇಂತೆಂದು, ಮೇ-ನನ್ನ, ದರ್ಶನಂ-ಮತವು ॥ ೧೬ ॥ ಹೆ ಸೌಮ್ಯ-ಎಲೈ ಕೋಪವಿಲ್ಲದವನೆ, ತವ-ನಿನ್ನ, ಅಗ್ರತಃ-ಮುಂದೆ, ಸರ್ವಥೈವ- ಸರ್ವಪ್ರಕಾರದಲ್ಲಿಯು, ಮಯಾ-ನನ್ನಿಂದ, ನವಕ್ತವ್ಯಂ-ಹೇಳತಕ್ಕದ್ದಲ್ಲ, ಹೆ ರಘುನಂದನ-ಎಲೈರಘುಕುಲಾನಂದಕರನೆ, ತೇ-ನಿನಗೆ, ಶ್ರವಣಶ್ರದ್ಧಾ-ಕೇಳಬೇಕೆಂಬಿಚ್ಛೆಯು, ಅಸ್ತಿಯದಿ-ಇದ್ದದ್ದಾದರೆ, ಶ್ರೂಯತಾಂ-ಕೇಳಲ್ಪಡಲಿ. ॥೧೭॥ ಪುರಾ-ಪೂರ್ವಕಾಲದಲ್ಲಿ, ರಹಸ್ಯಂ-ಗೂಢವಾಗಿ, ಯದ್ಯಪಿ-ಹ್ಯಾಗೂ, ಅಹಂ- ನಾನು, ನರೇಂದ್ರೇಣ-ದಶರಥರಾಜನಿಂದ, ಶ್ರಾವಿತಃ-ಕೇಳಿಸಲ್ಪಟ್ಟೆನು, ಹಿಯಸ್ಮಾತ್-ಯಾವಕಾರಣದ ದೆಸೆಯಿಂದ, ದೈವಂ-ಪ್ರಾಚೀನಕರ್ಮವು,ಸುಮಹಾದ್ಭುತಂ-ಆಶ್ಚರ್ಯಕರಮಾಗಿರುವದೊ, (ಅಂದರೆ ಅತಿಕ್ರಮಿಸ ಲಸಾಧ್ಯವಾಗಿರುವದೊ) ತತ್-ಆ ಕಾರಣದ ದೆಸೆಯಿಂದ,ತಥಾಪಿ-ಅಂಥಾ ರಹಸ್ಯವಾದ ಮಾತನ್ನೂ ಕೂಡ, ಉದಾಹರಿಷ್ಯಾಮಿ-ಹೇಳುವೆನು ॥೧೮॥ ಯೇನ-ಯಾವನಿನ್ನಿಂದ, ಶೋಕಸಮನ್ವಿತಂ-ಅಂತಸ್ತಾಪದಿಂದ ಯುಕ್ತನಾದ, ಈದೃಶಂದುಃಖಂ- ಇಂಥಾ ವ್ಯಸನವು, ಪ್ರಾಪ್ತಂ-ಹೊಂದಲ್ಪಟ್ಟಿತ್ತೊ, ತೇನತ್ವಯಾ-ಅಂತಾ ನಿನ್ನಿಂದ, ಭರತೇ-ಭರತನಲ್ಲಿಯೂ, ಶತ್ರುಘ್ನಸ್ಯ-ಶತ್ರುಘ್ನನ, ಸನ್ನಿಧಾವಪಿ- ಸಮೀಪದ

---

ಯೂ, ಇಷ್ಟರಾದ ಕಳತ್ರಭ್ರಾತ್ರಾದಿಗಳಿಂ ವಿಯೋಗವಂ ಪಡಿಯುವವನಾಗಿಯೂ ಇರುವನು. ಇದು ನಿಶ್ಚಯವು ಆ ದಕಾರಣ ಧರ್ಮಸ್ವಭಾವಮುಳ್ಳ ಶ್ರೀರಾಮನು ಬಹುದಿನಗಳು ನಿನ್ನನ್ನೂ ಸೀತಾದೇವಿಯನ್ನೂ,ಭರತಶತ್ರುಘ್ನರನ್ನೂ ಸಹಬಿಡುವಂಥಾವನಾಗುವನು. ॥೧೨॥ ಎಲೈಲಕ್ಷ್ಮಣನೆ ! ಪೂರ್ವಕಾಲದಲ್ಲಿ ವಸಿಷ್ಠರುಷಿಯು ಆಶ್ರಮದೊಳು ಮಹಾಜನಗಳೆಲ್ಲರು ಶೇರಿರುವಾಗ ನನ್ನ ಸಮಕ್ಷಮದಲ್ಲಿ, ದೂರ್ವಾಸಮಹಾಮುನಿಯು ಯಾವ ಮಾತು ಹೇಳಿದಂಥಾವನಾದನೋ ಅದಂ ಕೇಳಿ ದಶರಥರಾಜನು ನಿನಿಗೂ ಭರತನಿಗೂ, ಮತ್ತು ಇನ್ಯಾರಿಗೂ ಸಹ ತಿಳುಹಿಸಬೇಡವೆಂದು ಎನಗೆ ಆಜ್ಞಾಪಿಸಿದಂಥಾವನಾದನು ॥೧೪॥ ಆತನು ನಿರೂಪಿಸಿರುವ ಮಾತನ್ನು ನಾನು ಯಾವಕಾಲದಲ್ಲಿ ಆದರೂಸುಳ್ಳು ಮಾಡಕೂಡದೆಂದು ಎನ್ನಮತವು. ಆಮಾತು ಹ್ಯಾಗಾದರೂ, ನಿನ್ನ ಮುಂದೆ ಹೇಳತಕ್ಕದ್ದಲ್ಲವೆ ಅಲ್ಲ. ಆದರೆ ನಿನಗೆ ಕೇಳಬೇಕೆಂದಿಚ್ಛೆ ಇದ್ದಲ್ಲಿ ಕೇಳು. ದೈವಗತಿಯು ಮೀರಲಾಗದು. ನಾನು ಹ್ಯಾಗಾದರೂ ರಹಸ್ಯವಾಗಿ ಕೇಳಿದಂಥಾವನಾಗಿದ್ದೇನೆ, ಅದನ್ನೂ ಕೂಡ ನಿನಿಗೆ ಹೇಳುವೆನು, ನಿನಿಗೆ ಇಷ್ಟು ವ್ಯಸನವು ಈಗ ಸಂಭವಿಸಿ ಇರೋಣದರಿಂದ ಹೇಳಬೇಕಾಯಿತು, ನೀನು ಭರತ ಶತ್ರುಘ್ನರಿಗೆ ಈ ಮಾತನ್ನು ತಿಳಿಸಬೇಲೆಂದು ಸುಮಂತ್ರನಿಂದ ನಿರೂಪಿಸಲ್ಪಟ್ಟ ವಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಧ್ಯಾ॥೧೯॥ ತಚ್ಛ್ರುತ್ವಾ ಭಾಷಿತಂ ತಸ್ಯ ಗಂಭೀರಾರ್ಥಪದಂ ಮಹತ್। ಸತ್ಯಂ ಬ್ರೂಹೀತಿ ಸೌಮಿತ್ರಿಸ್ಸೂತಂ ವಾಕ್ಯಮಥಾಬ್ರವೀತ್॥

—…ಇತಿ ಶ್ರೀಮದುತ್ತರರಾಮಾಯಣೇ ಪಂಚಾಶಸ್ಸರ್ಗಃ.…—

ತತಸ್ಸಂಚೋದಿತಸ್ಸೂತೋ ಲಕ್ಷ್ಮಣೇನ ಮಹಾತ್ಮನಾ। ತದ್ವಾಕ್ಯಂ ವ್ಯಾಹೃತಂ ಪ್ರೋಕ್ತಂ ವ್ಯಾಹರ್ತುಮುಪಚಕ್ರಮೇ ॥೧॥ ಪುರಾ ಹಿ ನಾಮ್ನಾ ದುರ್ವಾಸಾ ಅತ್ರೇಃ ಪುತ್ರೋ ಮಹಾಮುನಿಃ। ವಸಿಷ್ಠಸ್ಯಾಶ್ರಮೇ ಪುಣ್ಯೇ ಸವಾರ್ಷಿಕಮುವಾಸ ಹ ॥೨॥ ತಮಾಶ್ರಮಂ ಮಹಾತೇಜಾಃ ಪಿತಾ ತೇ ಸುಮಹಾಯಶಾಃ। ಪುರೋಧಸಂ ಮಹಾತ್ಮಾನಂ ದಿದೃಕ್ಷುರಗಮತ್ಸ್ವಯಮ್॥೩॥ ಸ ದೃಷ್ಟ್ವಾ ಸೂರ್ಯಸಂಕಾಶಂ ಜ್ವಲಂತಮಿವ ತೇಜಸಾ। ಉಪವಿಷ್ಟಂ ವಸಿಷ್ಠಸ್ಯ ಸವ್ಯೇ ಪಾರ್ಶ್ವೇ ಮಹಾಮುನಿಮ್ ॥೪॥ ತೌ ಮುನೀ ತಾಪಸಶ್ರೇಷ್ಠೌ ವಿನೀತಸ್ತ್ವಭ್ಯವಾದಯತ ॥೫॥ ಸ ತಾಭ್ಯಾಂ ಪೂಜಿತೋ ರಾಜಾ ಸ್ವಾಗತೇನಾಸನೇನ ಚ। ಪಾದ್ಯೇನ ಫಲಮೂಲೈಶ್ಚ ಉವಾಸ ಮುನಿಭಿಸ್ಸಹ ॥೬॥ ತೇಷಾಂ ತತ್ರೋಪವಿಷ್ಟಾನಾಂ ತಾಸ್ತಾಸ್ಸುಮಧುರಾಃ ಕಥಾಃ। ಬಭೂವುಃ ಪರಮರ್ಷೀಣಾಂ

---

ಲ್ಲಿಯೂ ಕೂಡೆ, ನವಾಚ್ಯಂ-ಹೇಳತಕ್ಕದ್ದಲ್ಲ ॥ಗಂಭೀರಾರ್ಥಪದಂ-ಗಂಭೀರವಾದ ಅರ್ಥವೂ ಪದಗಳೂಉಳ್ಳ, ಮಹತ್-ಮಹತ್ತರವಾದ, ತಸ್ಯ-ಆ ಸು ಮಂತ್ರನ, ತದ್ಭಾಷಿತಂ-ಆ ಮಾತನ್ನು, ಶ್ರುತ್ವಾ-ಕೇಳಿ, ವಾಕ್ಯವಿತ್-ವಾಕ್ಯಾರ್ಥಜ್ಞನಾದ, ಸೌಮಿತ್ರಿಃ-ಲಕ್ಷ್ಮಣನು, ಸತ್ಯಂಬ್ರೂಹೀತಿ- ಯಥಾರ್ಥವನ್ನು ಹೇಳೆಂದು, ಸೂತಂ-ಸುಮಂತ್ರನಂ ಕುರಿತು, ವಾಕ್ಯಂ-ಮಾತನ್ನು. ಅಬ್ರವೀತ್-ನುಡಿದನು. ॥೨೧॥

✻…—ಇತಿ ಶ್ರೀಮದುತ್ತರರಾಮಾಯಣೇ ಪಂಚಾಶಸ್ಸರ್ಗಃ.✻…—

ತತಃ-ಬಳಿಕ, ಸೂತಃ-ಸುಮಂತ್ರನು, ಮಹಾತ್ಮನಾ-ಮಹಾನುಭಾವನಾದ, ಲಕ್ಷ್ಮಣೇನ, ಲಕ್ಷ್ಮಣನಿಂದ, ಸಂಚೋದಿತಃ-ಪ್ರೇರೇಪಿಸಲ್ಪಟ್ಟವನಾಗಿ, ಋಷಿಣಾ-ದೂರ್ವಾಸಮುನಿಯಿಂದ, ಪ್ರೋಕ್ತಂ-ಹೇಳಲ್ಪಟ್ಟ, ತದ್ವಾಕ್ಯಂ-ಆ ಮಾತನ್ನು, ವ್ಯಾಹರ್ತುಂ-ಹೇಳುವದಕ್ಕೆ, ಉಪಚಕ್ರಮೇ-ಪ್ರಾರಂಭಿಸಿದನು॥೧॥ ಪುರಾ-ಪೂರ್ವಕಾಲದಲ್ಲಿ ಆದರೆ, ದುರ್ವಾಸಾನಾಮ-ದೂರ್ವಾಸನೆಂದು ಪ್ರಸಿದ್ಧನಾದ, ಅತ್ರೇಃಪುತ್ರಃ-ಅತ್ರಿಋಷಿಯ ಪುತ್ರನಾದ,ಸಮಹಾಮುನಿಃ-ಆ ಮಹರ್ಷಿಯು, ಪುಣ್ಯೇ-ಪುಣ್ಯಕರವಾದ, ವಸಿಷ್ಠಸ್ಯ-ವಸಿಷ್ಠಋಷಿಯ, ಆಶ್ರಮೇ-ಆಶ್ರಮದಲ್ಲಿ, ವಾರ್ಷಿಕಂ-ವರ್ಷಾಕಾಲದಲ್ಲಿ ಹುಟ್ಟಿದ ಚಾತುರ್ಮಾಸ್ಯವೆಂಬ ವ್ರತವನ್ನುದ್ದೇಶಿಸಿ, ಉವಾಸಹ-ಇದ್ದನಷ್ಟೆ ॥೨॥ ಮಹಾತೇಜಾಃ-ಅತಿ ತೇಜಸ್ವಿಯಾದ, ಸುಮಹಾಯಶಾಃ-ಬಹಳ ಕೀರ್ತಿವಂತನಾದ, ತೇಪಿತಾ- ನಿನ್ನ ತಂದೆಯು, ಮಹಾತ್ಮಾನಂ-ಮಹಾ ಮನಸ್ವಿಯಾದ, ಪುರೋಧಸಂ-ಪುರೋಹಿತನಾದ ವಸಿಷ್ಠಮುನಿಯನ್ನು, ದಿದೃಕ್ಷುಃ-ನೋಡಲಿಚ್ಛೆಯುಳ್ಳವನಾಗಿ, ಸ್ವಯಂ-ತಾನು, ತಮಾಶ್ರಮಂ-ಆಶ್ರಮವಂ ಕುರಿತು, ಅಗಮತ್-ಬಂದನು ॥೩॥ ಸಃ-ಆತನು, ವಸಿಷ್ಠಸ್ಯ-ವಸಿಷ್ಠಮುನಿಯ, ಸವ್ಯೇಪಾರ್ಶ್ವೇ-ಬಲ ಭಾಗದಲ್ಲಿ, ಉಪವಿಷ್ಟಂ-ಕುಳಿತುಕೊಂಡಿರುವ, ತೇಜಸಾ-ತೇಜಸ್ಸಿನಿಂದ, ಜ್ವಲಂತಮಿವಸ್ಥಿತಂ-ಹೊಳೆಯುತ್ತಿರುವ, ಸೂರ್ಯಸಂಕಾಶಂ-ಸೂರ್ಯಸದೃಶನಾದ, ಮಹಾಮುನಿಂ-ಋಷಿಯನ್ನು, ದೃಷ್ಟ್ವಾ-ಕಂಡು, ವಿನೀತಃ-ನಮ್ರನಾಗಿ ತಾಪಸಶ್ರೇಷ್ಠೌ-ಋಷಿಶ್ರೇಷ್ಠರಾದ, ತೌಮುನೀ-ಆ ಋಷಿಗಳನ್ನು ಕುರಿತು-ಅಭ್ಯವಾದಯತ್- ನಮಸ್ಕರಿಸಿದನು ॥೪॥ ಸರಾಜಾ-ಆದಶರಥರಾಜನು, ತಾಭ್ಯಾಂ-ಆ ಮುನಿಗಳಿಂದ, ಸ್ವಾಗತೇನ-ಕುಶಲ ಪ್ರಶ್ನೆಯಿಂದಲೂ,ಆಸನೇನಚ-ಪೀಠದಿಂದಲೂ, ಪಾದ್ಯೇನ-ಪಾದೋದಕದಿಂದಲೂ, ಫಲಮೂಲೈಶ್ಚ-ಫಲಗಳಿಂದಲೂ ಕಂದಮೂಲಗಳಿಂದಲೂ ಸಹ, ಪೂಜಿತಃ – ಪೂಜಿಸಲ್ಪಟ್ಟವನಾಗಿ, ಮುನಿಭಿಸ್ಸಹ- ರುಷಿಗಳಸಂಗಡೆ, ಉವಾಸ-ದ್ದನು ॥೫॥ ಮಧ್ಯಾಹ್ನಗತೇಹನಿ-ಮಧ್ಯಾಹ್ನಕಾಲದಲ್ಲಿ, ತೇಷಾಂ-ಮಹರ್ಷೀಣಾಂ-ಆ ಋಷಿಶ್ರೇಷ್ಠರು,ಸಮುಪವಿಷ್ಟಾನಾಂ-ತತ್ರ –ಕುಳಿತುಕೊಂಡವರಾಗುತಿರಲೀಕಾಗಿ,ಸಮಧುರಾಃ – ಮಧುರರಸದಿಂ ದೊಡಗೂಡಿದ, ತಾಸ್ತಾಃಕಥಾಃ – ಆಯಾಯಕಥೆಗಳು, ಬಭೂವುಃ-

---

ಕ್ಯವಂ ಕೇಳಿ ಲಕ್ಷ್ಮಣನು ಸತ್ಯವಾಗಿ ಹೇಳೆಂದು ಸುಮಂತ್ರನನ್ನು ಕುರಿತು ನುಡಿದಂಥಾವನಾದನು. ॥೨೧॥

—…ಉತ್ತರರಾಮಾಯಣದಲ್ಲಿನ ೫೦ನೆಯ ಸರ್ಗಂ ಮುಗಿದುದು.…—

ಆ ಬಳಿಕ ಸುಮಂತ್ರನು ಮಹಾತ್ಮನಾದ ಲಕ್ಷ್ಮಣನಿಂದ ಪ್ರೇರಿಸಲ್ಪಟ್ಟವನಾಗಿ, ಆ ದೂರ್ವಾಸಮುನಿಯು ನಿರೂಪಿಸಿದ ಆ ಮಾತಂ ಹೇಳಲುಪಕ್ರಮಿಸಿದಂಥಾವನಾದನದೆಂತೆನೆ. ॥೧॥ ಕೇಳೆಲೈ ಲಕ್ಷ್ಮಣನೇ! ಪೂರ್ವಕಾಲದಲ್ಲಿ ಅತ್ರಿ, ಮಹಾ ಮುನಿಯ ಪುತ್ರನಾದ ದೂರ್ವಾಸ ಮಹರ್ಷಿಯು ಪುಣ್ಯಕರವಾದ ವಸಿಷ್ಠ ಋಷಿಯ ಆಶ್ರಮದಲ್ಲಿ ಚಾತುರ್ಮಾಸ್ಯ ವ್ರತಕ್ಕೋಸುಗ ನಿಂತಿದ್ದನು, ॥೨॥ ಆ ಸಮಯದಲ್ಲಿ ದಶರಥರಾಜನುಮಹಾ ತೇಜಸ್ವಿಯಾದ ಮತ್ತು ಪುರೋಹಿತನಾದ ವಸಿಷ್ಠಮುನಿಯುಂ ಕಾಣುವದಕ್ಕೋಸುಗ ಆ ಆಶ್ರಮವಂ ಕುರಿತು ಹೋದಂಥಾವನಾದನು. ॥೩॥ ಆಗ ಕಿರಣಗಳಿಂದ ಸೂರ್ಯನು ಕಂಗೊಳಿಸುವಂತೆ ಬ್ರಹ್ಮ ತೇಜಸ್ಸಿನಿಂದ ಹೊಳೆಯುತ್ತಿರುವನಾಗಿ, ಆ ವಸಿಷ್ಠಮುನಿಯ ಪಾರ್ಶ್ವದಲ್ಲಿ ಕುಳಿತಿದ್ದ ಮಹಾಮುನಿಯಾದ ದೂರ್ವಾಸನಂ ಕಂಡು ಆತನಿಗೂ ವಸಿಷ್ಠಋಷಿಗೂ ಸಹಾ ವಿಧೇಯನಾಗಿ, ವಂದನೆಯಂಗೈದವನಾಗಲೂ,ಆ ಮಹಾ ಮುನಿಗಳೀರ್ವರೂ ಎಲೈ ರಾಜನೆ ಕ್ಷೇಮವೇ ? ಸುಖವಾಗಿ ಬಂದೆಯಾ? ಎಂಬುದಾಗಿ ಹೇಳಿ ಅರ್ಘ್ಯಪಾದ್ಯ ಕಂದಮೂಲಾದಿಗಳಿಂದ ಉಪಚರಿಸಲ್ಪಟ್ಟು ಕೂತುಕೊಂಡು ಮಧ್ಯಾಹ್ನಕಾಲದಲ್ಲಿ ಅವರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣಾಂಮಧ್ವ್ಯಾದಿತ್ಯಗತೇಽನಿ ॥೭॥ ತತಃಕಥಾಯಾಂಕಸ್ಯಾಂಚಿತ್ಪ್ರಾಂಜಲಿಃಪ್ರಗ್ರಹೋನೃಪಃ। ಉವಾಚತಂಮಹಾತ್ಮಾನಮ ತ್ರೇಃಪುತ್ರಂತಪೋಧನಮ್ ॥೮॥ ಭಗವನ್ಕಿಂಪ್ರಮಾಣೇನಮಮವಂಶೋಭವಿಷ್ಯತಿ । ಕಿಮಾಯುಶ್ಚಹಿಮೇರಾಮಃಪುತ್ರಾ ಶ್ಚಾನ್ಯೇಕಿಮಾಯುಷಃ ॥೯॥ ರಾಮಸ್ಯಹಿಸುತಾಯೇಸ್ಯುಸ್ತೇಷಾಮಾಯುಃಕಿಯದ್ಭವೇತ್ । ಕಾಮ್ಯಯಾಭಗವನ್ಬ್ರೂ ಹಿವಂಶಸ್ಯಾಸ್ಯಗತಿಂಮಮ ॥೧೦॥ ತಚ್ಛ್ರುತ್ವಾವ್ಯಾಹೃತಂವಾಕ್ಯಂರಾಜ್ಞಾದಶರಥೇನತು।ದುರ್ವಾಸಾಸ್ಸುಮಹಾತೇಜಾವ್ಯಾ ಹರ್ತುಮುಪಚಕ್ರಮೇ ॥೧೧॥ ಶೃಣುರಾಜನ್ಪುರಾವೃತ್ತಂಪುರಾದೈವಾಸುರೇಯುಧಿ । ದೈತ್ಯಾಸ್ಸುರೈರ್ಭನ್ಯಮಾನಾಭೃ ಗುಪತ್ನೀಮುಪಾಶ್ರಿತಾಃ॥೧೨॥ತಯಾದತ್ತಾಭಯಾಸ್ತತ್ರನ್ಯವಸನ್ನಿರ್ಭಯಾಸ್ತದಾ॥೧೩॥ ತಯಾಪರಿಗೃಹೀತಾಂಸ್ತಾನ್ ದೃಷ್ಟ್ವಾಕ್ರುದ್ಧಸ್ಸುರೋತ್ತಮಃ । ಚಕ್ರೇಣಶಿತಧಾರೇಣಭೃಗುಪತ್ನ್ಯಾಶ್ಶಿರೋಽಹರತ್ ॥೧೪॥ ತತಸ್ತಾಂನಿಹತಾಂದೃಷ್ಟ್ವಾ ಪತ್ನೀಂಭೃಗುಕುಲೋದ್ವಹಃ। ಶಶಾಪಸಹಸಾಕ್ರುದ್ಧೋವಿಷ್ಣುಂರಿಪುಬಲಾರ್ದನಮ್॥೧೫॥ ಯಸ್ಮಾದವಧ್ಯಾಂಮೇಭಾರ್ಯಾಂ

---

ಆದವು ॥೭॥ತತಃ-ಬಳಿಕ, ಕಸ್ಯಾಂಚಿತ್ಕಥಾಯಾಂ-ಒಂದಾನೊಂದುಕಥೆಯಲ್ಲಿ ಪ್ರಗ್ರಹಃ-ವಿನಯವಂತನಾದ, ನೃಪಃ-ದಶರಥರಾಜನು,ಪ್ರಾಂಜಲಿಃ-ಅಂಜಲಿಬ ದ್ಧನಾಗಿ, ತಪೋಧನಂ ತಪವೇಧನವಾಗಿಉಳ್ಳ,ಮಹಾತ್ಮಾನಂ-ಮಹಾಮನಸ್ವಿಯಾದ, ಅತ್ರೇಃಪುತ್ರಂ-ಅತ್ರಿಋಷಿಯಪುತ್ರನಾದ, ತಂ-ಆ ದೂರ್ವಾಸಮುನಿಯ ನ್ನು ಕುರಿತು, ಉವಾಚ ನುಡಿದನು ॥೮॥ಹೇಭಗವನ್- ಎಲೈ ಪೂಜ್ಯನೆ,ಮಮ-ನನ್ನ, ವಂಶಃ-ಕುಲವು, ಕಿಂಪ್ರಮಾಣೇನ-ಯಾವಪ್ರಮಾಣದಿಂದ, ಭವಿಷ್ಯ ತಿ-ಆಗುವದು,ಮೇರಾಮಃ-ನನ್ನ ಶ್ರೀರಾಮನು, ಕಿಮಾಯುಃ-ಯಂಥಾ ಆಯುಸ್ಸುಳ್ಳವನು, ಅನ್ಯೇಪುತ್ರಾಶ್ಚ -ಇತರಮಕ್ಕಳುಸಹ,ಕಿಮಾಯುಷಃ-ಯಾವ ವಿ ಧವಾದ ಆಯುಸ್ಸುಳ್ಳವರು.॥೯॥ರಾಮಸ್ಯ-ಶ್ರೀರಾಮನಿಗೆ,ಸುತಾಃ-ಕುಮಾರರು, ಯೇ-ಯಾರು, ಸ್ಯುಃ-ಆಗುವರೋ, ತೇಷಾಂ-ಅವರಿಗೆ, ಆಯುಃ-ಆಯುಸ್ಸು, ಕಿಯತ್- ಯಷ್ಟುಮಾತ್ರವು, ಭವೇತ್-ಆಗುತ್ತದೆ, ಹೇಭಗವನ್-ಎಲೈ ಪೂಜ್ಯನೆ, ಕಾಮ್ಯಯಾ-ಇಚ್ಛೆಯಿಂದ,ಮಮ-ನನ್ನ, ಅಸ್ಯ-ವಂಶಸ್ಯ-ಈ ವಂಶದ,ಗ ತಿಂ-ನಡಿಯುವ ಕ್ರಮವನ್ನು, ಬ್ರೂಹಿ-ಹೇಳು ॥೧೦॥ ದಶರಥೇನರಾಜ್ಞಾ-ದಶರಥರಾಯನಿಂದ, ವ್ಯಾಹೃತಂ-ಹೇಳಲ್ಪಟ್ಟ, ತದ್ವಾಕ್ಯಂ-ಆ ಮಾತನ್ನು, ಶ್ರು ತ್ವಾ-ಕೇಳಿ, ಸುಮಹಾತೇಜಾಃ-ಮಹಾತಪೋಜನ್ಯ ತೇಜಸ್ಸುಉಳ್ಳ,ದುರ್ವಾಸಾಃ-ದುರ್ವಾಸಮಹಾಮುನಿಯು, ವ್ಯಾಹರ್ತುಂ-ಹೇಳುವದಕ್ಕೋಸುಗ, ಉಪಚ ಕ್ರಮೇ- ಆರಂಭಿಸಿದನು ॥೧೧॥ಹೇ ರಾಜನ್-ಎಲೈ ದಶರಥರಾಯನೇ,ಪುರಾವೃತ್ತಂ-ಪೂರ್ವಕಥೆಯನ್ನು, ಶೃಣು-ಕೇಳು, ಪುರಾ-ಪೂರ್ವದಲ್ಲಿ, ದೈವಾಸುರೇ- ದೇವರಾಕ್ಷಸ ಸಂಬಂಧವಾದ,ಯುಧಿ-ಯುದ್ಧದಲ್ಲಿ, ದೈತ್ಯಾಃ-ರಾಕ್ಷಸರು,ಸುರೈಃ-ದೇವತೆಗಳಿಂದ, ಹನ್ಯಮಾನಾಃ - ಹೊಡೆಯಲ್ಪಟ್ಟವರಾಗಿ, ಭೃಗುಪತ್ನೀಂ- ಭೃಗುಋಷಿಯ ಹೆಂಡತಿಯನ್ನು, ಉಪಾಶ್ರಿತಾಃ-ಆಶ್ರಯಿಸಿದರು॥೧೨॥ತಯಾ-ಆಭೃಗುಋಷಿಯ ಪತ್ನಿಯಿಂದ, ದತ್ತಾಭಯಾಃ-ದತ್ತ - ಕೊಡಲ್ಪಟ್ಟ, -ಅಭಯಾಃ-ಅಭಯವುಳ್ಳವರಾಗಿ, ತದಾ-ಆ ಕಾಲದಲ್ಲಿ, ನಿರ್ಭಯಾಃ-ಭಯರಹಿತರಾಗಿ, ತತ್ರ-ಆಭೃಗುಪತ್ನಿಯ ಆಶ್ರಮದಲ್ಲಿ, ನ್ಯವಸನ್-ಇದ್ದರು॥೧೩ ತಯಾ-ಆಭೃಗುಪತ್ನಿಯಿಂದ, ಪರಿಗೃಹೀತಾನ್-ಗ್ರಹಿಸಲ್ಪಟ್ಟ, ತಾನ್-ಆ ರಾಕ್ಷಸರನ್ನು,ದೃಷ್ಟ್ವಾ-ಕಂಡು, ಕ್ರುದ್ಧಃ-ಕೋಪಿಷ್ಠನಾಗಿ, ಸುರೋತ್ತಮಃ- ಶ್ರೀಮಹಾ ವಿಷ್ಣುವು, ಶಿತಧಾರೇಣ-ಶಿತ-ತೀಕ್ಷ್ಣವಾದ, ಧಾರೇಣ-ಹದವುಳ್ಳ, ಚಕ್ರೇಣ-ಚಕ್ರದಿಂದ, ಭೃಗುಪತ್ನ್ಯಾಃ-ಭೃಗುಋಷಿಯಪತ್ನಿಯ, ಶಿರಃ- ತಲೆಯನ್ನು, ಅಹರತ್-ಅಪಹರಿಸಿದನು ॥೧೪॥ ತತಃ-ಬಳಿಕ, ಭೃಗುಕುಲೋದ್ವಹಃ-ಭೃಗುವಂಶೋದ್ಧಾರಕನಾದ ಭೃಗುಋಷಿಯು, ನಿಹತಾಂ- ಹೊಡಿ ಯಲ್ಪಟ್ಟ, ತಾಂಪತ್ನೀಂ-ಆ ಹೆಂಡತಿಯನ್ನು, ದೃಷ್ಟ್ವಾ-ಕಂಡು, ಸಹಸಾ-ಶೀಘ್ರವಾಗಿ, ಕ್ರುದ್ಧಃ-ಕೋಪಿಷ್ಠನಾಗಿ, ರಿಪುಬಲಾರ್ದನಂ - ಶತ್ರುಸೈನ್ಯ ಸಂಹಾರಕನಾದ, ವಿಷ್ಣುಂ-ಶ್ರೀ ಮಹಾವಿಷ್ಣುವಿನನ್ನು, ಶಶಾಪ-ಶಪಿಸಿದನು ॥೧೫॥ ಹೇ ಜನಾರ್ದನ-ಎಲೈ ದುಷ್ಟಜನಸಂಹಾರಕನೇ, ತ್ವಂ- ನೀನು,

---

ಸಂಗಡ ಮಧುರವಾಗಿ ಮಾತಾಡುತ್ತಿದ್ದನು ॥೭॥ ಆ ಬಳಿಕ ಒಂದಾನೊಂದು ಪ್ರಸ್ತಾವದಲ್ಲಿ ದಶರಥರಾಜನು ಅಂಜ ಲಿಬದ್ಧನಾಗಿ ತಪವೇ ಧನವಾಗಿಉಳ್ಳ ಮಹಾತ್ಮನಾದ ಅತ್ರಿಮುನಿ ಪುತ್ರನಂ ಕುರಿತು ಎಲೈ ಪೂಜ್ಯನೇ! ನಮ್ಮ ವಂಶವು ಎದುವರಿಗೆ ಅವಿಚ್ಛಿನ್ನವಾಗಿರುವದು. ಎನ್ನ ಮಗನಾದ ಶ್ರೀರಾಮನಿಗೆ ಎಷ್ಟುಆಯುಸ್ಸು? ಆತನ ತಮ್ಮಂದರಾದ ಭರತ ಶತ್ರುಘ್ನ ಲಕ್ಷ್ಮಣರಿಗೆ ಎಷ್ಟು ಆಯುಸ್ಸೋ? ರಾಮನಿಗೆ ಎಷ್ಟು ಮಂದಿ ಮಕ್ಕಳಾಗುವರು? ಅವರ ಆಯುಸ್ಸು ಯಾ ವರೀತಿಯಾಗಿರುವದು? ಇದನ್ನೆಲ್ಲ ನಿರೂಪಿಸುವಂಥಾವನಾಗೆಂದು ಪ್ರಾರ್ಥಿಸಿದಂಥಾವನಾಗಲು, ಆ ವಾಕ್ಯವಂ ಕೇಳಿ, ಕಡು ತೇಜಸ್ವಿಯಾದ ದೂರ್ವಾಸ ಮುನಿಯು ಹೇಳಲುಪಕ್ರಮಿಸಿದನದೆಂತೆನೆ॥೧೦॥ಎಲೈ ರಾಜಾ! ಪೂರ್ವದಲ್ಲಿ ನಡೆದ ರಾಜರದೊಂದು ಕಥೆಯಂ ಹೇಳ್ವೆನು ಕೇಳು. ಪೂರ್ವಕಾಲದೊಳು, ದೇವರಾಕ್ಷಸರ ಸಂಬಂಧವಾದ ಕಾಳಗದಲ್ಲಿ, ರಕ್ಕಸರೆಲ್ಲ ದೇವತೆಗಳಿಂದ ಹೊಡೆಯಲ್ಪಟ್ಟವರಾಗಿ, ಭೃಗುಋಷಿಯ ಪತ್ನಿಯನ್ನಾಶ್ರಯಿಸಿ, ಆಕೆಯಿಂದ ಅಭಯ ವಂಪಡೆದು, ನಿರ್ಭಯರಾಗಿದ್ದಂಥಾವರಾದರು ॥೧೩॥ ಆ ಸಮಯದೊಳು, ದೇವತಾಶ್ರೇಷ್ಠನಾದ ಶ್ರೀ ಮಹಾವಿ ಷ್ಣುವು, ಆಕೆಯಿಂದ ಪರಿಗ್ರಹಿಸಲ್ಪಟ್ಟ ರಕ್ಕಸರಂ ಕಂಡು, ಕಡುಕೋಪವುಳ್ಳವನಾಗಿ, ಬಹಳ ಹದವುಳ್ಳ ಚಕ್ರಾ ಯುಧದಿಂದ ಆಕೆಯ ಮಂಡೆಯಂ ಹೊಡದನು ॥೧೪॥ ಸಮನಂತಕಾಲದೊಳು ಆ ಭೃಗುಮುನಿಯು ಸಾಯುಗೊಲ್ಲ ಲ್ಪಟ್ಟ ತನ್ನ ಪತ್ನಿಯಂ ಕಂಡು ಕುಪಿತನಾಗಿ, ಶತ್ರುಸೈನ್ಯಮಾರಕನಾದ, ಆ ಶ್ರೀ ಮಹಾವಿಷ್ಣುವಿನಂ ಕುರಿತು, ಎ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅವಧೀಃಕ್ರೋಧಮೂರ್ಛಿತಃ । ತಸ್ಮಾತ್ತ್ವಂಮಾನುಷೇಲೋಕೇಜನಿಷ್ಯಸಿಜನಾರ್ದನ ।೧೬॥ ತತ್ರಪತ್ನೀವಿಯೋಗಂತ್ವಂ
ಪ್ರಾಪ್ಸ್ಯಸೇಬಹುವಾರ್ಷಿಕಮ್ । ಶಾಪೋಪಹತಚೇತಾಸ್ಸಆತ್ಮನಾಭಾವಿತೋಽಭವತ್ ॥೧೭॥ ಪುನರೇವಯಯೌಶಾಪಂಸಋಷಿ
ರ್ದುರ್ಮದದುರ್ಧರ್ಷಃ । ವಿಷ್ಣುಶಕ್ತಿಮವಿದ್ವಾನ್ಸಪ್ರಪೇದೇಶಾಪಮೂಢತಾಮ್ ॥೧೮॥ ಚಿರಕಾಲಮಸಂಜ್ಞೋಽಭೂಚ್ಛಾ
ಪಾಂಧತಮಸಾವೃತಃ । ದೃಷ್ಟ್ವಾವ್ಯಸಪ್ತರ್ಷಯಶ್ಚೈನಂಕೃಪಾಂಚಕ್ರುಶ್ಚಭಕ್ತಿಭಿಃ । ಸಕ್ತಶಾಪಃಪುನಸ್ತಸ್ಥೌಮಂದಂ
ಭೃಗುರಥಾಬ್ರವೀತ್ । ರಕ್ಷಧ್ವಂಮಾಂಮುನಿಶ್ರೇಷ್ಠಾಃಶಾಪಾನ್ಮತ್ಪುರತಃಸ್ಥಿತಾಃ ॥೨೦॥ ಶ್ರುತ್ವಾತುಭೃಗುವಾಕ್ಯಂತಮಾಹು
ಃ ಪರಮರ್ಷಯಃ । ಸ್ತುತ್ಯೈರ್ಬ್ರಹ್ಮೇಶಶಕ್ರಾದ್ಯೈಸ್ಸ್ತೂಯಮಾನಮಹರ್ನಿಶಮ್ । ನಾರಾಯಣಂಪ್ರಪದ್ಯಸ್ವಸ್ತೋತ್ರೈ
ರೇವಚಸುವ್ರತ ॥೨೧॥ ತೇಷಾಂತುವಚನಂಶ್ರುತ್ವಾಭೃಗುಃಶಾಪೇನಪೀಡಿತಃ । ಅರ್ಚಯಾಮಾಸತಂದೇವಂನಾರಾಯಣಮ

---

ಯಸ್ಮಾತ್-ಯಾವಕಾರಣದ ದೆಸೆಯಿಂದ, ಕ್ರೋಧಮೂರ್ಛಿತಃ-ಕ್ರೋಧಾವಿಷ್ಟನಾಗಿ, ಅವಧ್ಯಾಂ-ವಧಿಸಲರ್ಹಳಲ್ಲದಿರುವ, ಮೇ-ನನ್ನ, ಭಾರ್ಯಾಂ-ಪ ತ್ನಿಯನ್ನು, ಅವಧೀಃ-ಕೊಂದೆಯೋ, ತಸ್ಮಾತ್-ಆ ಕಾರಣದ ದೆಸೆಯಿಂದ, ತ್ವಮಪಿ-ನೀನೂನು, ಮಾನುಷೇಲೋಕೇ- ಮನುಷ್ಯಲೋಕದಲ್ಲಿ, ಜನಿಷ್ಯಸಿ-ಹುಟ್ಟುವೀ ॥೧೬॥ ತತ್ರ-ಆ ಮನುಷ್ಯಜನ್ಮದಲ್ಲಿ, ತ್ವಂ-ನೀನು, ಬಹುವಾರ್ಷಿಕಂ-ಅನೇಕಸಂವತ್ಸರಗಳು, ಪತ್ನೀವಿಯೋಗಂ-ಭಾರ್ಯಾವಿಯೋಗವನ್ನು, ಪ್ರಾಪ್ಸ್ಯಸೇ-ಹೊಂದುವೀ, ಶಾಪೋಪಹತಚೇತಾಃ-ಶಾಪ-ಶಾಪದಿಂದ, ಉಪಹತ-ಹೊಡೆಯಲ್ಪಟ್ಟ, ಚೇತಾಃ-ಮನವುಳ್ಳ, ಸಃ-ಆ ಶ್ರೀಮಹಾವಿಷ್ಣುವು, ಆತ್ಮನಾ-ತನ್ನ ಆತ್ಮದಿಂದ, ಭಾವಿತಃ-ಧ್ಯಾನಮಾಡಲ್ಪಟ್ಟವನು, ಅಭವತ್-ಆದನು ॥೧೭॥ ದುರ್ಮದದುರ್ಧರ್ಷಃ-ದುರ್ಮದ-ದುಷ್ಟಗರ್ವದಿಂ, ದುರ್ಧರ್ಷಃ-ನಿಗ್ರಹಿಸಲಸಾಧ್ಯನಾದ, ಸಋಷಿಃ-ಆ ಭೃಗು ಋಷಿಯು, ಪುನರೇವ-ಮತ್ತೊಮ್ಮೆ, ಶಾಪಂ-ಶಾಪವನ್ನು, ಯಯೌ-ಹೊಂದಿದನು, ವಿಷ್ಣುಶಕ್ತಿಂ- ವಿಷ್ಣುವಿನ ಸಾಮರ್ಥ್ಯವನ್ನು, ಅವಿದ್ವಾನ್-ತಿಳಿಯದೆ ಹೋದಂಥಾವನಾದ ಕಾರಣ, ಶಾಪಮೂಢತಾಂ-ಶಾಪ-ಶಾಪದಿಂದ, ಮೂಢತಾಂ-ಮೌಢ್ಯವನ್ನು ಪ್ರಪೇದೇ-ಹೊಂದಿದನು ॥೧೮॥ ಶಾಪಾಂಧತಮಸಾವೃತಃ-ಶಾಪ-ಶಾಪವೆಂಬ, ಅಂಧತಮಸಾ-ಗಾಢಾಂಧಕಾರದಿಂದ, ಆವೃತಃ - ವ್ಯಾಪ್ತನಾದಂಥಾವನಾಗಿ, ಚಿರಕಾಲಂ-ಬಹುಕಾಲವು, ಅಸಂಜ್ಞಃ-ಪ್ರಜ್ಞಾಶೂನ್ಯನು, ಅಭೂತ್-ಆದನು, ಸಪ್ತರ್ಷಯಶ್ಚ -ವಸಿಷ್ಠಾದಿಸಪ್ತಋಷಿಗಳೂನು, ಏನಂ-ಈ ಭೃಗು ಋಷಿಯನ್ನು, ದೃಷ್ಟ್ವಾ-ಕಂಡು, ಭಕ್ತಿಭಿಃ-ಭಕ್ತಿಗಳಿಂದ, ಕೃಪಾಂ-ದಯೆಯನ್ನು, ಚಕ್ರುಃ-ಮಾಡಿದರು ॥೧೯॥ ಪುನಃ-ಮತ್ತು, ಸಕ್ತಶಾಪಃ-ಸಕ್ತ ಸಂಬಂಧಿಸಿದ, ಶಾಪಃ-ಶಾಪವನ್ನುಳ್ಳವನಾಗಿ, ತಸ್ಥೌ-ನಿಂತನು, ಅಥ-ಬಳಿಕ, ಭೃಗುಃ-ಭೃಗುಋಷಿಯು, ಮಂದಂ-ಮೆಲ್ಲಮೆಲ್ಲಗೆ, ಅಬ್ರವೀತ್- ನುಡಿದನು, ಹೇಮುನಿಶ್ರೇಷ್ಠಾಃ-ಎಲೈ ಋಷಿಶ್ರೇಷ್ಠಗಳಿರಾ, ಮತ್ಪುರತಃ-ನನ್ನ ಮುಂದುಗಡೇ, ಸ್ಥಿತಾಃ-ನಿಂತಿರುರವರಾಗಿ, ಮಾಂ-ನನ್ನನ್ನು, ಶಾಪಾತ್-ಶಾಪದದೆಸೆಯಿಂದ, ರಕ್ಷಧ್ವಂ-ಸಂರಕ್ಷಣೆಯಂಮಾಡಿರಿ, ಭೃಗುವಾಕ್ಯಂ-ಭೃಗುಋಷಿಯ ವಾಕ್ಯವನ್ನು, ಶ್ರುತ್ವಾ-ಕೇಳಿ, ಮಹರ್ಷಯಃ-ಋಷಿಗಳು, ತಂ-ಆ ಭೃಗುಋಷಿಯಂ ಕುರಿತು, ಆಹುಃ-ಹೇಳಿದರು ॥೨೦॥ ಹೇ ಸುವ್ರತ-ಎಲೈ ನಿಯಮನಿಷ್ಠಾಪರನೇ, ಸ್ತುತ್ಯೈಃ -ಸ್ತೋತ್ರಾರ್ಹರಾದ, ಬ್ರಹ್ಮೇಶಶಕ್ರಾದ್ಯೈಃ-ಬ್ರಹ್ಮದೇವರೂ, ಈಶ್ವರನೂ, ದೇವೇಂದ್ರನೆ ಮದಲಾಗುಳ್ಳವರಿಂದ, ಅಹರ್ನಿಶಂ-ಹಗಲುರಾತ್ರಿಯು, ಸ್ತೂಯಮಾನಂ-ಸ್ತೋತ್ರಮಾಡಲ್ಪಡುತ್ತಿರುವ ನಾರಾಯಣಂ-ಶ್ರೀಮಹಾ ವಿಷ್ಣುವಿನನ್ನು, ಸ್ತೋತ್ರೈರೇವ-ಸ್ತೋತ್ರಗಳಿಂದಲೇ, ಪ್ರಪದ್ಯಸ್ವ-ಶರಣವನ್ನಾಗಿ ಹೊಂದು ॥೨೧॥ ತೇಷಾಂ-ಆ ಸಪ್ತಋಷಿಗಳ, ವಚನಂತು, ಮಾತನ್ನಾದರೋ, ಶ್ರುತ್ವಾ-ಕೇಳಿ, ಶಾಪೇನ-ಶಾಪದಿಂದ, ಪೀಡಿತಃ-ಬಾಧಿಸಲ್ಪಟ್ಟ, ಭೃಗುಃ-ಭೃಗುಋಷಿಯು, ಅಭೀಷ್ಟದಂ-ಇಷ್ಟಾರ್ಥ

---

ಲೈ ದುಷ್ಟಜನಸಂಹಾರಕನೆ ! ನೀನು ಕ್ರೋಧಾಭಿವಿಷ್ಟನಾಗಿ, ವಧಿಸುವದಕ್ಕೆ ಯೋಗ್ಯಳಾಗದಿರುವ ಎನ್ನ ಸತಿಯನ್ನು ಯಾವಕಾರಣದಿಂದ ವಧಿಸಿದಂಥಾವನಾದೆಯೋ, ಆಕಾರಣದ ದೆಶೆಯಿಂದ ನೀನು ಮನುಷ್ಯಲೋಕದಲ್ಲಿ ಹುಟ್ಟುವಂಥಾವನಾಗಿ, ಬಹುವರ್ಷಗಳು ಪತ್ನೀವಿಯೋಗವಂ ಪಡೆದು ಸಂತಪಿಸುತ್ತಿರೆಂದು, ದಾರುಣವಾಗಿ ನುಡಿದವನಾಗಲು, ಆ ಶಾಪದಿಂದ ಮನಗೆಟ್ಟವನಾದ ಶ್ರೀ ಮಹಾವಿಷ್ಣುವು ಮನದಿಂದ ಭಾವಿಸಿಕೊಂಡಂಥಾವನಾದನು ॥೧೭॥ ಕೆಟ್ಟಕೊಬ್ಬಿನಿಂದ ನಿಗ್ರಹಿಸಲಸಾಧ್ಯನಾದ ಆ ಭೃಗುಮುನಿಯಾದರೆ, ವಿಷ್ಣುಶಕ್ತಿಯನ್ನರಿಯದೆ ಈಪರಿ ಶಾಪವಂ ಕೊಟ್ಟದ್ದರಿಂದ, ತಾನು ಮತ್ತು ಶಾಪದಿಂದ ಮೌಢ್ಯವಂ ಪಡದು, ಶಾಪವೆಂಬ ಕಾರ್ಗತ್ತಲೆಯಿಂದ ವ್ಯಾಪ್ತನಾದಂಥಾವನಾಗಿ, ಬಹುಕಾಲವು ಪ್ರಜ್ಞೆತಪ್ಪಿ ಬಿದ್ದಿರಲೂ, ಆತನಂ ಕಂಡು ಆವೇಳೆಯಲ್ಲಿ ಸಪ್ತರ್ಷಿಗಳು ಕೃಪೆಯಂಗೈದರು ॥೧೯॥ ಬಳಿಕಾ ಭೃಗುಮುನಿಯು ಶಾಪಮೋಹಿತನಾಗಿ ಆ ಋಷಿಗಳಂ ಕುರಿತು, ಎಲೈ ಮುನಿಶ್ರೇಷ್ಠರುಗಳಿರಾ ! ಶಾಪದದೆಶೆಯಿಂದ ನನ್ನಂ ಕಾಪಾಡಿರೆಂದು ಮೆಲ್ಲಮೆಲ್ಲನೆ ಪ್ರಾರ್ಥಿಸಿದಂಥಾವನಾಗಲೂ, ಆ ಮಹರ್ಷಿಗಳು ಆ ವಾಕ್ಯವಂ ಕೇಳಿ, ಸ್ತೋತ್ರಾರ್ಹರಾದ ಬ್ರಹ್ಮ, ಈಶ, ಇಂದ್ರರೆಮೊದಲಾದವರಿಂದ ಸದಾಕಾಲದಲ್ಲಿಯೂ ಸ್ತುತಿಸಲ್ಪಡುತ್ತಿರುವ ಶ್ರೀಮನ್ನಾರಾಯಣನನ್ನು ಸ್ತುತಿಸಿ, ಆತನನ್ನೇ ಶರಣಾಗಿ ಪೊಂದಿದರೆ ನಿನಿಗೆ ಶಾಪನಿವೃತ್ತಿಯುಂಟಾಗುವದೆಂದು ಪೇಳಿದ್ದು, ಆ ವಾಕ್ಯವಂಕೇಳಿ, ಆ ಭೃಗುಮಹಾಮುನಿಯು ಶಾಪಪೀಡಿತನಾಗಿ, ಇಷ್ಟಾರ್ಥದಾಯಕನಾದ ಆ ಶ್ರೀಮನ್ನಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಭೀಷ್ಟದಮ್ ||೨೦|| ಭೃಗುಣಾರಾಧಿತೋವಿಷ್ಣು ರಾಗತಸ್ತ್ವಪಿತಂಭೃಗುಮ್ । ತದಾಬ್ರವೀದ್ದೇವದೇವಃಪ್ರೀತಿಮಾನ್ ಭಕ್ತವ ತ್ಸಲಃ ||೨೧|| ಲೋಕಾನಾಂತುಹಿತಾರ್ಥಾಯಶಾಪಸ್ತೇಗೃಹ್ಯತೇಮಯಾ । ಮಾಭೈಷೀರನೃತಂವಾಕ್ಯಂನಭವಿಷ್ಯತಿತೇಭೃ ಗೋ||೨೪|| ಸಂಮೋಚಯಿತ್ವಾಶಾಪಾತ್ತ್ವಾಮಹಮೇನಂಗೃಹೀತವಾನ್ । ಇತ್ಯುಕ್ತ್ವಾಂತರಧಾದ್ವಿಷ್ಣುಃಪರಮಾತ್ಮಾ ಸ ನಾತನಃ ||೨೫|| ಭೃಗುಸ್ಸ್ವಶಾಪಾನ್ಮುಕ್ತೋಥಚಚಾರಸುಮಹತ್ತಪಃ । ನಾರಾಯಣಂಹೃದಿಧ್ಯಾಯನ್ ಪರಮಾತ್ಮಾನ ಮವ್ಯಯಮ್ ।। ಇತಿಶಪ್ತೋಮಹಾತೇಜಾಭೃಗುಣಾಪೂರ್ವಜನ್ಮನಿ । ಇಹಾಗತೋಹಿಪುತ್ರತ್ವಂತವಪಾರ್ಥಿವಸತ್ತಮ ||೨೭|| ರಾಮಇತ್ಯಭಿವಿಖ್ಯಾತಸ್ತ್ರಿಷುಲೋಕೇಷುಮಾನದ । ತತ್ಫಲಂಪ್ರಾಪ್ಯತೇಚಾಪಿಭೃಗುಶಾಪಕೃತಂಮಹತ್ । ಅಯೋಧ್ಯಾಯಾಃ ಪತೀರಾಮೋದೀರ್ಘಕಾಲಂಭವಿಷ್ಯತಿ । ತತ್ರಪತ್ನೀವಿಯೋಗಂಚದೀರ್ಘಕಾಲಂಗಮಿಷ್ಯತಿ ||೨೯|| ಸುಖಿತಾಶ್ಚ ಸಮೃದ್ಧಾ ಶ್ಚ ಭವಿಷ್ಯಂತ್ಯಸ್ಯಚಾನುಜಾಃ ||೩೦|| ದಶವರ್ಷಸಹಸ್ರಾಣಿದಶವರ್ಷಶತಾನಿಚ । ರಾಮೋರಾಜ್ಯಮುಪಾಸಿತ್ವಾಬ್ರಹ್ಮ

---

ಪ್ರಸನ್ನನಾದ, ತಂನಾರಾಯಣಂದೇವಂ-ಆ ನಾರಾಯಣ ಸ್ವಾಮಿಯನ್ನು, ಅರ್ಚಯಾಮಾಸ-ಪೂಜಿಸಿದನು ||೨೦||ಭೃಗುಣಾ-ಭೃಗುಋಷಿಯಿಂದ, ಆರಾ ಧಿತಃ-ಪೂಜಿಸಲ್ಪಟ್ಟ, ವಿಷ್ಣುಃ-ಶ್ರೀಮಹಾವಿಷ್ಣುವು, ತಂಭೃಗುಮಪಿ-ಆ ಭೃಗುಋಷಿಯನ್ನು ಕುರಿತು,ಆಗತಃ-ಬಂದನು, ತದಾ-ಆ ಕಾಲದಲ್ಲಿ, ದೇವದೇ ವಃ-ದೇವತಾಶ್ರೇಷ್ಠನಾದ, ಭಕ್ತವತ್ಸಲಃ-ಭಕ್ತರಲ್ಲಿ ವಾತ್ಸಲ್ಯಮುಳ್ಳ ಶ್ರೀ ಮಹಾವಿಷ್ಣುವು, ಪ್ರೀತಿಮಾನ್-ವಿಶ್ವಾಸಮುಳ್ಳವನಾಗಿ, ಅಬ್ರವೀತ್-ನುಡಿದ ನು ||೨೧|| ಹೇ ಭೃಗೋ-ಎಲೈ ಭೃಗುಋಷಿಯೇ, ಲೋಕಾನಾಂತು-ಲೋಕಗಳಿಗೆ, ಹಿತಾರ್ಥಾಯ-ಹಿತಕ್ಕೋಸ್ಕರ,ತೇಶಾಪಃ-ನಿನ್ನ ಶಾಪವು,ಮಯಾ-ನನ್ನಿಂ ದ, ಗೃಹ್ಯತೇ-ಗ್ರಹಿಸಲ್ಪಡುತ್ತೆ, ಮಾಭೈಷೀಃ-ಭಯಬೀಳಬ್ಯಾಡ, ತೇವಾಕ್ಯಂ-ನಿನ್ನ ಮಾತು, ಅನೃತಂ-ಸಟೆಯು, ನಭವಿಷ್ಯತಿ-ಆಗುವದಿಲ್ಲಾ ||೨೪|| ಶಾ ಪಾತ್-ಶಾಪದ ದೆಸೆಯಿಂದ, ತ್ವಾಂ-ನಿನ್ನನ್ನು, ಸಂಮೋಚಯಿತ್ವಾ-ಬಿಡಿಸಿ, ಅಹಂ-ನಾನು, ಏನಂ-ಈ ಶಾಪವನ್ನು, ಗೃಹೀತವಾನ್-ಗ್ರಹಿಸಿದೆನೇ, ಇತಿ-ಈಪರಿಯಾಗಿ,ಉಕ್ತ್ವಾ-ಹೇಳಿ,ಪರಮಾತ್ಮಾ-ಪರಮಾತ್ಮಸ್ವರೂಪನಾದ, ಸನಾತನಃ-ಅನಾದಿಸಿದ್ಧನಾದ, ವಿಷ್ಣುಃ-ಶ್ರೀಮಹಾವಿಷ್ಣುವು, ಅಂತರಧಾ ತ್-ಅಂತರ್ಧಾನವನ್ನು ಹೈದಿದನು ||೨೫|| ಅಥ-ಬಳಿಕ, ಭೃಗುಃ-ಭೃಗುಋಷಿಯು, ಸ್ವಶಾಪಾತ್-ತನ್ನ ಶಾಪದ ದೆಸೆಯಿಂದ,ಮುಕ್ತಃ-ಬಿಡಲ್ಪಟ್ಟವನಾಗಿ, ಪರಮಾತ್ಮಾನಂ-ಪರಮಾತ್ಮಸ್ವರೂಪನಾದ,ಅವ್ಯಯಂ-ನಾಶರಹಿತನಾದ, ನಾರಾಯಣಂ-ಶ್ರೀ ಮಹಾವಿಷ್ಣುವನ್ನು, ಹೃದಿ-ಮನಸ್ಸಿನಲ್ಲಿ, ಧ್ಯಾಯನ್- ಧ್ಯಾನಮಾಡುತ್ತಿರುವನಾಗಿ, ಸುಮಹತ್-ಬಹಳವಾದ,ತಪಃ-ತಪವನ್ನು, ಚಚಾರ-ಮಾಡಿದನು ||೨೬|| ಹೇ ಪಾರ್ಥಿವಸತ್ತಮ, ಎಲೈರಾಜಶ್ರೇಷ್ಠನೇ, ಮ ಹಾತೇಜಾಃ-ಮಹಾ ತೇಜಸ್ವಿಯಾದ ಶ್ರೀ ಮಹಾವಿಷ್ಣುವು,ಇತಿ-ಈ ಪೂರ್ವೋಕ್ತಪ್ರಕಾರವಾಗಿ, ಪೂರ್ವಜನ್ಮನಿ-ಪೂರ್ವಜನ್ಮದಲ್ಲಿ, ಭೃಗುಣಾ-ಭೃಗುಋಷಿ ಯಿಂದ, ಶಪ್ತಃ-ಶಪಿಸಲ್ಪಟ್ಟವನಾಗಿ, ಇಹ-ಈಗ, ತವ-ನಿನಗೆ, ಪುತ್ರತ್ವಂ- ಪುತ್ರಭಾವವನ್ನು, ಆಗತೋಹಿ-ಹೊಂದಿದನಷ್ಟೆ ||೨೭|| ಹೇ ಮಾನದ-ಎಲೈ ಮಾನಪ್ರದಾಯಕನೆ,ರಾಮಇತಿ-ರಾಮನೂ ಎಂದು, ತ್ರಿಷುಲೋಕೇಷು-ಮೂರುಲೋಕಗಳಲ್ಲಿ, ಅಭಿವಿಖ್ಯಾತಃ-ಎಲ್ಲಾ ಕಡೆಯಲ್ಲಿಪ್ರಸಿದ್ಧನಾಗಿ, ಭೃಗುಶಾ ಪಕೃತಂ-ಭೃಗು-ಭೃಗುಋಷಿಯ,ಶಾಪ-ಶಾಪದಿಂದ,ಕೃತಂ-ಮಾಡಲ್ಪಟ್ಟ,ಮಹತ್-ಮಹತ್ತರವಾದ, ತತ್ಫಲಂಚಾಪಿ-ಆ ಶಾಪಫಲವನ್ನೂ ಕೂಡ, ಪ್ರಾಪ್ಯ ತೇ-ಹೊಂದುತ್ತಾನೆ ||೨೯|| ಅಯೋಧ್ಯಾಯಾಃ-ಅಯೋಧ್ಯಾಪಟ್ಟಣಕ್ಕೆ, ಪತಿಃ-ಪ್ರಭುವಾಗಿ, ರಾಮಃ-ಶ್ರೀರಾಮನು, ದೀರ್ಘಕಾಲಂ-ಬಹುಕಾಲವು,ಭವಿ ಷ್ಯತಿ-ಆಗುವನು,ತತ್ರ-ಆರಾಮಾವತಾರದಲ್ಲಿ, ದೀರ್ಘಕಾಲಂ-ಬಹುಕಾಲವು ಪತ್ನೀವಿಯೋಗಂಚ-ಹೆಂಡತಿಯ ವಿರಹವನ್ನು,ಗಮಿಷ್ಯತಿ-ಹೊಂದುವನು, ಅ ಸ್ಯ-ಈ ಶ್ರೀರಾಮನ, ಅನುಜಾಶ್ಚ-ತಮ್ಮಂದಿರೂನು, ಸುಖಿತಾಶ್ಚ-ಸುಖಮುಳ್ಳವರಾಗಿ, ಸಮೃದ್ಧಾಶ್ಚ-ಬಹಳ ಐಶ್ವರ್ಯವಂತರೂ, ಭವಿಷ್ಯಂತಿ-ಆಗುವ ರು ||೩೦|| ರಾಮಃ-ಶ್ರೀರಾಮನು, ದಶವರ್ಷಸಹಸ್ರಾಣಿ-ಹತ್ತುಸಾವಿರ ವರ್ಷಗಳೂನು, ದಶವರ್ಷ-ಶತಾನಿಚ-ಹೆಚ್ಚಾಗಿ ಒಂದುಸಾವಿರ ವರ್ಷವೂನು,

---

ರಾಯಣನನ್ನು ಪೂಜಿಸಿದಂಥಾವನಾದನು ||೨೦|| ಆ ಶ್ರೀಮಹಾವಿಷ್ಣುವು ಭಕ್ತರಲ್ಲಿ ವಿಶ್ವಾಸವುಳ್ಳವನಾದ ಕಾರ ಣ, ಭೃಗುಮುನಿಯಿಂದ ಆರಾಧಿಸಲ್ಪಟ್ಟು ಆ ವೇಳೆಯಲ್ಲಿ ಪ್ರೀತಿಯುಳ್ಳವನಾಗಿ, ಆತನಂ ಕುರಿತು ಎಲೈ ಮುನಿಯೇ ! ಹೆದರಬೇಡ ನಿನ್ನ ವಾಕ್ಯವ್ಯರ್ಥವಾಗುವದಿಲ್ಲ, ಲೋಕಗಳ ಹಿತಕ್ಕೋಸುಗ ನಿನ್ನ ಶಾಪವಂಗ್ರಹಿಸುತ್ತೇನೆಂದು ನುಡಿ ದು, ಶಾಪದಿಂದಾತನಂ ಬಿಡಗಡೆಯಾದವನನ್ನಾಗಿ ಮಾಡಿ, ಅದನ್ನು ತಾನು ತೆಗದುಕೊಂಡು ಅಂತರ್ಧಾನವನ್ನೈದಿದನು|| ಅನಂತರದಲ್ಲಿ ಭೃಗುಮುನಿಯು ಶಾಪದಿಂದ ಬಿಡಿಸಲ್ಪಟ್ಟವನಾಗಿ,ನಾಶರಹಿತನಾಗಿಯೂ ಪರಮಾತ್ಮಸ್ವರೂಪನಾಗಿಯೂ ಇರುವ ನಾರಾಯಣನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಮಹಾ ತಪವಂಗೈಯುತ್ತಿದ್ದನು ||೨೭|| ಎಲೈ ರಾಜಶ್ರೇಷ್ಠ ನೇ! ಈಪರಿ ಪೂರ್ವಜನ್ಮದಲ್ಲಿ ಮಹಾತೇಜಸ್ವಿಯಾದ ಶ್ರೀಮನ್ನಾರಾಯಣನು ಭೃಗುಮಹಾಮುನಿಯಿಂದ ಶಪಿಸಲ್ಪಟ್ಟ ವನಾಗಿ ಈಗ ನಿನ್ನ ಕುಮಾರನಾಗಿ ಸಂಜನಿಸಿ ಶ್ರೀರಾಮನೆಂದು ಮೂರುಲೋಕಗಳಲ್ಲಿಯೂ ಪ್ರಖ್ಯಾತನಾಗಿರುವ ನು, ಅಯೋಧ್ಯಾಪುರಿಗೆ ಬಹುಕಾಲವು ಅಧಿಪತಿಯಾಗಿರುವನು, ಆ ಸಮಯದಲ್ಲಿ ಬಹುಕಾಲವು ಪತ್ನೀವಿಯೋಗವಂ ಪಡೆಯುವನು, ಈತನ ತಮ್ಮಂದಿರಾದ ಭರತ ಲಕ್ಷ್ಮಣ ಶತ್ರುಘ್ನರು ಸುಖಿತರಾಗಿಯೂ ಮಹದೈಶ್ವರ್ಯ ಸಂಪನ್ನರಾಗಿ ಯೂ ಇರುವರು. ||೩೦|| ಎಲೈ ರಾಜನೇ ! ನಿನ್ನ ಕುಮಾರನಾದ ಶ್ರೀರಾಮನು ೧೧ ಸಾವಿರ ವರುಷಗಳು ರಾಜ್ಯಭಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲೋಕಂಗಮಿಷ್ಯತಿ ||೩೧|| ಸಮೃದ್ಧೈರ್ಹಯಮೇಧೈಶ್ಚ ಇಷ್ಟ್ವಾ ಪರಪುರಂಜಯಃ | ರಾಜವಂಶಾಂಶ್ಚ ಕಾಕುತ್ಸ್ಥೋ ಬಹೂನ್ ಸಂಸ್ಥಾಪಯಿಷ್ಯತಿ ||೩೨|| ದ್ವೌಪುತ್ರೌತುಭವಿಷ್ಯೇತೆ ಸೀತಾಯಾಂರಾಘವಸ್ಯತು | ಅನ್ಯತ್ರನತ್ವಯೋಧ್ಯಾಯಾಂ ಸತ್ಯಮೇತನ್ನಸಂಶಯಃ ||೩೩|| ಸೀತಾಯಾಶ್ಚ ತತಃಪುತ್ರಾವಭಿಷೇಕ್ಷ್ಯತಿರಾಘವಃ ||೩೪|| ಸಸರ್ವಮಖಿಲಂರಾಜ್ಞೋ ವಂಶಸ್ಯಾಸ್ಯ ಗತಾಗತಮ್ | ಆಖ್ಯಾಯ ಸುಮಹಾತೇಜಾಸ್ತೂಷ್ಣೀಮಾಸೀನ್ಮಹಾಮುನಿಃ ||೩೫|| ತೂಷ್ಣೀಂಭೂತೇಮುನೌತಸ್ಮಿನ್ ರಾಜಾ ದಶರಥಸ್ತದಾ | ಅಭಿವಾದ್ಯಮಹಾತ್ಮಾನಂಪುನರಾಯಾತ್ಪುರೋತ್ತಮಮ್ ||೩೬|| ಏತದ್ವಚೋಮಯಾತತ್ರಮುನಿನಾ ವ್ಯಾಹೃತಂಪುರಾ | ಶ್ರುತಂಹೃದಿನಿಕ್ಷಿಪ್ತಂನಾನ್ಯಥಾತದ್ಭವಿಷ್ಯತಿ ||೩೭|| ಏವಂಗತೇನಸಂತಾಪಂಗಂತುಮರ್ಹಸಿಲಕ್ಷ್ಮಣ | ಸೀತಾರ್ಥೇರಾಘವಾರ್ಥೇವಾದೃಢೋಭವನರೋತ್ತಮ ||೩೮|| ತಚ್ಛ್ರುತ್ವಾ ವ್ಯಾಹೃತಂವಾಕ್ಯಂಸೂತಸ್ಯಪರಮಾದ್ಭುತಂ | ಪ್ರಹರ್ಷಮತುಲಂಲೇಭೆಸಾಧುಸಾಧ್ವಿತಿಚಾಬ್ರವೀತ್ ||೩೯|| ತತಸ್ಸಂವದತೋರೇವಂಸೂತಲಕ್ಷ್ಮಣಯೋಃಪಥಿ | ಅರ್ಕ

---

ರಾಜ್ಯಂ-ರಾಜ್ಯವನ್ನು, ಉಪಾಸಿತ್ವಾ-ಅನುಭವಿಸಿ, ಬ್ರಹ್ಮಲೋಕಂ-ಬ್ರಹ್ಮಲೋಕವಂ ಕುರಿತು, ಗಮಿಷ್ಯತಿ-ಹೋಗುವನು ||೩೧|| ಪರಪುರಂಜಯಃ-ಶತ್ರುಸಂಹಾರಕನಾದ, ಕಾಕುತ್ಸ್ಥಃ-ಶ್ರೀರಾಮನು, ಸಮೃದ್ಧೈಃ-ಸಂಪೂರ್ಣಗಳಾದ, ಹಯಮೇಧೈಶ್ಚ-ಅಶ್ವಮೇಧಗಳಿಂದಲೂನು, ಇಷ್ಟ್ವಾ- ದೇವತಾತುಷ್ಟಿಮಾಡಿ, ಬಹೂನ್-ಅನೇಕಂಗಳಾದ, ರಾಜವಂಶಾನ್-ರಾಜವಂಶಗಳನ್ನು, ಸಂಸ್ಥಾಪಯಿಷ್ಯತಿ-ಪ್ರತಿಷ್ಠಾಪಿಸುತ್ತಾನೆ ||೩೨|| ರಾಘವಸ್ಯತು-ಶ್ರೀರಾಮನಿಗಾದರೆ, ಸೀತಾಯಾಂ-ಸೀತಾದೇವಿಯಲ್ಲಿ, ದ್ವೌಪುತ್ರೌ-ಇಬ್ಬರು ಮಕ್ಕಳು, ಅನ್ಯತ್ರ-ಮತ್ತೊಂದುಕಡೆಯಲ್ಲಿ, ಭವಿಷ್ಯೇತೆ-ಆಗುವರು, ಅಯೋಧ್ಯಾಯಾಂತು-ಅಯೋಧ್ಯಾಪಟ್ಟಣದಲ್ಲಾದರೆ, ನಭವಿಷ್ಯೇತೆ-ಆಗುವದಿಲ್ಲ-ಏತತ್-ಇದು, ಸತ್ಯಂ-ಯಥಾರ್ಥವು, ಸಂಶಯೋನ-ಸಂಶಯವಿಲ್ಲ ||೩೩|| ತತಃ-ಬಳಿಕ, ರಾಘವಃ-ಶ್ರೀರಾಮನು, ಸೀತಾಯಾಃ-ಸೀತಾದೇವಿಯ, ಪುತ್ರೌ-ಮಕ್ಕಳಾದ ಕುಶಲವರನ್ನು, ಅಭಿಷೇಕ್ಷ್ಯತಿ-ಪಟ್ಟಾಭಿಷೇಕ ಮಾಡಿಸುವನು ||೩೪|| ಸುಮಹಾತೇಜಾಃ-ಮಹಾ ತೇಜಸ್ವಿಯಾದ, ಸಮಹಾಮುನಿಃ-ಆ ದೂರ್ವಾಸಋಷಿಯು, ಅಸ್ಯರಾಜ್ಞಃ-ಈ ದಶರಥರಾಯನ ವಂಶಸ್ಯ-ವಂಶದ, ಸರ್ವಂ-ಸಮಸ್ತವಾದ, ಗತಾಗತಂ-ವೃದ್ಧಿಕ್ರಮವನ್ನು, ಅಖಿಲಂ-ನಿಶ್ಶೇಷವಾಗಿ, ಆಖ್ಯಾಯ-ಹೇಳಿ, ತೂಷ್ಣೀಂ-ಸುಮ್ಮನೆ, ಆಸೀತ್-ಆದನು ||೩೫|| ತದಾ-ಆಕಾಲದಲ್ಲಿ, ತಸ್ಮಿನ್ಮುನೌ-ಆದೂರ್ವಾಸಋಷಿಯು, ತೂಷ್ಣೀಂಭೂತೇಸತಿ-ಸುಮ್ಮನಾದವನಾಗುತಿರಲಾಗಿ, ದಶರಥೋರಾಜಾ-ದಶರಥಮಹಾರಾಯನು, ಮಹಾತ್ಮಾನಂ-ಪೂಜ್ಯನಾದ ದೂರ್ವಾಸಋಷಿಯನ್ನು, ಅಭಿವಾದ್ಯ-ನಮಸ್ಕರಿಸಿ, ಪುರೋತ್ತಮಂ-ಅಯೋಧ್ಯಾಪಟ್ಟಣವನ್ನು ಕುರಿತು, ಪುನಃ-ಮತ್ತು, ಆಯಾತ್-ಬಂದನು ||೩೬|| ತತ್ರ-ಆ ಋಷ್ಯಾಶ್ರಮದಲ್ಲಿ, ಪುರಾ-ಪೂರ್ವದಲ್ಲಿ, ಮುನಿನಾ-ದೂರ್ವಾಸಋಷಿಯಿಂದ, ವ್ಯಾಹೃತಂ-ಹೇಳಲ್ಪಟ್ಟ-ಏತದ್ವಚಃ-ಈಮಾತು, ಮಯಾ-ನನ್ನಿಂದ, ಶ್ರುತಂ-ಕೇಳಲ್ಪಟ್ಟದ್ದಾಗಿ, ಹೃದಿ-ಮನದಲ್ಲಿ, ನಿಕ್ಷಿಪ್ತಂ-ಇರಿಸಲ್ಪಟ್ಟಿತು, ತತ್-ಆಮಾತು, ಅನ್ಯಥಾ-ಮತ್ತೊಂದುಬಗೆಯಾಗಿ, ನಭವಿಷ್ಯತಿ-ಆಗಲಾರದು ||೩೭|| ಹೆಲಕ್ಷ್ಮಣ-ಎಲೈ ಲಕ್ಷ್ಮಣನೆ, ಏವಂ-ಈಪರಿಯಾಗಿ, ಗತೇಸತಿ-ಆಗುತ್ತಿರಲಾಗಿ, ಸಂತಾಪಂ-ಪರಿತಾಪವನ್ನು, ಗಂತುಂ-ಹೊಂದುವದಕ್ಕೋಸ್ಕರ-ನಾರ್ಹಸಿ-ಅರ್ಹನಾಗಬ್ಯಾಡ, ಹೆನರೋತ್ತಮ-ಎಲೈ ನರಶ್ರೇಷ್ಠನೇ, ಸೀತಾರ್ಥೇ-ಸೀತಾನಿಮಿತ್ತವಾಗಾಗಲೀ, ರಾಘವಾರ್ಥೇವಾ-ಶ್ರೀರಾಮನನಿಮಿತ್ತವಾಗಿಯೇ ಆಗಲೀ, ದೃಢಃ-ದೃಢಚಿತ್ತನು, ಭವ-ಆಗು. ||೩೮|| ಸೂತಸ್ಯ-ಸಾರಥಿಯಿಂದ, ವ್ಯಾಹೃತಂ-ಹೇಳಲ್ಪಟ್ಟ ಪರಮಾದ್ಭುತಂ-ಅತ್ಯಾಶ್ಚರ್ಯಕರವಾದ, ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ಅತುಲಂ-ಸಮಾನವಿಲ್ಲದಿರುವ, ಪ್ರಹರ್ಷಂ-ಸಂತೋಷವನ್ನು, ಲೇಭೇ-ಹೊಂದಿದನು, ಸಾಧುಸಾಧ್ವಿತಿ-ಒಳ್ಳೆದುಒಳ್ಳೆದೆಂದು, ಅಬ್ರವೀಚ್ಚ-ನುಡಿದನು ||೩೯|| ತತಃ-ಬಳಿಕ, ಸೂತಲಕ್ಷ್ಮಣಯೋಃ- ಸುಮಂತ್ರಲಕ್ಷ್ಮಣ

---

ವಂಗೈಯ್ದು ಬ್ರಹ್ಮಲೋಕವಂ ಪೊಂದುವನು. ಆತನು ಪ್ರಭುತ್ವವಂಗೈಯುವಾಗ ಹಗೆಯರಂಗೆಲ್ಲುತ್ತಲೂ, ಅಶ್ವಮೇಧಯಾಗಂಗಳಂಗೈಯುತ್ತಲೂ ಇರುವನಾಗಿ, ಅನೇಕ ರಾಜವಂಶಗಳನ್ನು ಸ್ಥಾಪಿಸುವನು, ಈತನಿಗಾದರೆ ಸೀತಾದೇವಿಯೊಳು ಈರ್ವರು ಮಕ್ಕಳುಂಟಾಗುವರು, ಆ ಮಕ್ಕಳೀರ್ವರು ಅಯೋಧ್ಯಾಪಟ್ಟಣದಲ್ಲಿ ಹುಟ್ಟುವದಿಲ್ಲ, ಬೇರೊಂದು ಸ್ಥಳದಲ್ಲಿಯೇ ಜನಿಸುವರು. ಇದು ಸತ್ಯವು. ||೩೩|| ಅನಂತರದಲ್ಲಿ ಶ್ರೀರಾಮನು ಆ ಸೀತಾದೇವಿಯ ಪುತ್ರರಾದ ಆವರೀರ್ವರನ್ನೇ ರಾಜ್ಯದೊಳು ಪಟ್ಟಾಭಿಷೇಕವಂ ಮಾಡುವನೆಂದು, ದೂರ್ವಾಸ ಮಹಾಮುನಿಯು ಇದನ್ನೆಲ್ಲಾ ಹೇಳಿ ತೂಷ್ಣೀಂಭೂತನಾದನು. ||೩೫|| ಆ ಮಹಾಮುನಿಯು ಈಪರಿ ಹೇಳಿ ನಿಲ್ಲಿಸಿದವನಾಗಲು, ದಶರಥರಾಜನು ಆತನಿಗೆ ಕೈಮುಗಿದು ಪುನಹ ಪುರವಂಕುರಿತು ಬಂದಂಥಾವನಾದನು ||೩೬|| ಎಲೈ ಲಕ್ಷ್ಮಣನೇ! ಪೂರ್ವಕಾಲದೊಳು ಆವಸಿಷ್ಠಾಶ್ರಮದಲ್ಲಿ ದುರ್ವಾಸಮುನಿಯು ಹೇಳಿದ ಈ ಮಾತನ್ನು ನಾನು ಕೇಳಿದಂಥಾವನಾಗಿ ಯೆನ್ನ ಮನದಲ್ಲಿಯೇ ಇಟ್ಟುಕೊಂಡಿದ್ದೇನೆ. ಆತನು ಹೇಳಿದಂತೆಯೇ ಆಗುವದೇ ಹೊರ್ತು ಬೇರೊಂದುವಿಧವಾಗಿ ಆಗಲಾರದು ಎಲೈ ಪುರುಷಶ್ರೇಷ್ಠನಾದ ಲಕ್ಷ್ಮಣನೇ! ಸೀತಾದೇವಿಗೂ ಶ್ರೀರಾಮನಿಗೂ ಹೀಗೆ ಸಂಭವಿಸಿತೆಂದು ನೀನು ಚಿಂತಿಸದಿರು, ಎಂಬದಾಗಿ ಸುಮಂತ್ರನು ನಿರೂಪಿಸಿದ ಅತ್ಯಾಶ್ಚರ್ಯಕರವಾದ ಆ ವಾಕ್ಯವಂ ಕೇಳಿ ಲಕ್ಷ್ಮಣನು ಮಹಾ ಸಂತೋಷವಂ ಪೊಂದಿ ಬಹಳ ಚನ್ನಾಗಿಧೆಯೆಂದು ಹೇಳಿದಂಥಾವನಾದನು ||೩೯|| ಆ ಬಳಿಕ ದಾರಿಯಲ್ಲಿ ಈ ಪರಿಯಾಗಿ ಆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚಾಸ್ತಂಗತೇ ವಾಸಂಗೋಮತ್ಯಾಂತಾವುಷತುಃ॥೪೦॥—*ಇತಿಶ್ರೀಮದುತ್ತರರಾಮಾಯಣೇ ಏಕಪಂಚಾಶಸ್ಸರ್ಗಃ*—

ತತ್ರತಾಂರಜನೀಮುಷ್ಯಗೋಮತ್ಯಾಂರಘುನಂದನಃ । ಪ್ರಭಾತೇಪುನರುತ್ಥಾಯಲಕ್ಷ್ಮಣಃಪ್ರಯಯೌತದಾ॥೧॥ ತತೋರ್ಧದಿವಸೇಪ್ರಾಪ್ತೇಪ್ರವಿವೇಶಮಹಾರಥಃ। ಅಯೋಧ್ಯಾಂರತ್ನಸಂಪೂರ್ಣಾಂಹೃಷ್ಟಪುಷ್ಟಜನಾವೃತಾಂ ॥೨॥ ಸೌಮಿತ್ರಿಸ್ತುಪರಂದೈನ್ಯಂಜಗಾಮಸುಮಹಾಮತಿಃ । ರಾಮಪಾದೌಸಮಾಸಾದ್ಯವಕ್ಷ್ಯಾಮಿಕಿಮಿಹಾಗತಃ॥೩॥ ತಸ್ಯೈವಂಚಿಂತಯಾನಸ್ಯಭವನಂಶಶಿಸನ್ನಿಭಮ್ । ರಾಮಸ್ಯಪರಮೋದಾರಂಪುರಸ್ತಾತ್ಸಮದೃಶ್ಯತ ॥೪॥ ರಾಜ್ಞಸ್ತುಭವನದ್ವಾರಿಸೋವತೀರ್ಯರಥೋತ್ತಮಾತ್ । ಅವಾಙ್ಮುಖೋದೀನಮನಾಃಪ್ರವಿವೇಶಾನಿವಾರಿತಃ॥೫॥ ಸದೃಷ್ಟ್ವಾರಾಘವಂದೀನಮಾಸೀನಂಪರಮಾಸನೇ । ನೇತ್ರಾಭ್ಯಾಮಶ್ರುಪೂರ್ಣಾಭ್ಯಾಂದದರ್ಶಾಗ್ರಜಮಗ್ರತಃ॥೬॥ ಜಗ್ರಾಹಚರಣೌತಸ್ಯಲಕ್ಷ್ಮಣೋದೀನಚೇ

---

ಸ್ವಾಮಿಗಳಿಬ್ಬರೂನು, ಏವಂ–ಈಪರಿಯಾಗಿ, ಪಥಿ–ಮಾರ್ಗದಲ್ಲಿ, ಸಂವದತೋಸ್ತತೋಃ–ಮಾತನಾಡುವರಾಗುತ್ತಿರಲೂ, ಅರ್ಕೇಚ–ಸೂರ್ಯನೂಕೂಡ, ಅಸ್ತಂಗತೇಸತಿ–ಅಸ್ತಮಯಪರ್ವತವನ್ನು ಹೊಂದುತಿರಲಾಗಿ, ಅಥ–ಬಳಿಕ, ತೌ–ಆ ಸುಮಂತ್ರಲಕ್ಷ್ಮಣರು. ಗೋಮತ್ಯಾಂ–ಗೋಮತೀನದಿಯಲ್ಲಿ' ವಾಸಂ–ವಾಸವನ್ನು, ಊಷತುಃ–ಮಲಗಿದ್ದರು ॥ ೪೦ ॥

—…*ಇತಿಶ್ರೀಮದುತ್ತರರಾಮಾಯಣೇ ಏಕಪಂಚಾಶಸ್ಸರ್ಗಃ*…—

ಟೀ॥ ರಘುನಂದನಃ–ರಘುಕುಲಾನಂದಕರನಾದ, ಲಕ್ಷ್ಮಣಃ–ಲಕ್ಷ್ಮಣಸ್ವಾಮಿಯು, ತತ್ರಗೋಮತ್ಯಾಂ–ಆ ಗೋಮತೀ ನದಿಯ ತೀರದಲ್ಲಿ, ತಾಂ ರಜನೀಂ–ಆ ರಾತ್ರಿಯನ್ನು, ಉಷ್ಯ–ಇದ್ದು, ಪ್ರಭಾತೇ–ಪ್ರಾತಃಕಾಲದಲ್ಲಿ, ಪುನಃ–ಮತ್ತೂ, ಉತ್ಥಾಯ–ಎದ್ದು, ತದಾ– ಆ ಕಾಲದಲ್ಲಿ, ಪ್ರಯಯೌ–ಪ್ರಯಾಣಿಸಿದನು ೧॥ ತತಃ–ಬಳಿಕ, ಅರ್ಧದಿವಸೇ–ಮಧ್ಯಾಹ್ನವು, ಪ್ರಾಪ್ತೇಸತಿ–ಪ್ರಾಪ್ತನಾಗುತ್ತಿರಲಾಗಿ, ಮಹಾರಥಃ– ಮಹಾರಥಿಕನಾದ ಲಕ್ಷ್ಮಣನು, ರತ್ನಸಂಪೂರ್ಣಾಂ–ರತ್ನ–ರತ್ನಗಳಿಂದ, ಸಂಪೂರ್ಣಾಂ–ತುಂಬಿರುವ, ಹೃಷ್ಟಪುಷ್ಟಜನಾವೃತಾಂ–ಹೃಷ್ಟ– ಮನಸ್ಸಂತೋಷದಿಂದ ಯುಕ್ತರಾದ, ಪುಷ್ಟ–ಬಾಹ್ಯಸಂತೋಷದಿಂದುಬ್ಬಿದ, ಜನ–ಜನರಿಂದ, ಆವೃತಾಂ–ಸುತ್ತಿಕೊಳ್ಳಲ್ಪಟ್ಟ, ಅಯೋಧ್ಯಾಂ–ಅಯೋಧ್ಯಾ ಪಟ್ಟಣವನ್ನು, ಪ್ರವಿವೇಶ–ಹೊಕ್ಕನು॥ ಮಹಾಮತಿಃ–ಮಹಾಬುದ್ಧಿಶಾಲಿಯಾದ, ಸೌಮಿತ್ರಿಃ–ಲಕ್ಷ್ಮಣನು, ಪರಂದೈನ್ಯಂ–ಬಹಳವಾದ ದೀನತ್ವವನ್ನು, ಜಗಾಮ–ಹೊಂದಿದನು, ಇಹ–ಇಲ್ಲಿಗೆ, ಆಗತಃ–ಬಂದವನಾಗಿ, ರಾಮಪಾದೌ–ಶ್ರೀರಾಮನ ಪಾದಗಳನ್ನು, ಸಮಾಸಾದ್ಯ–ಹೊಂದಿ, ಕಿಂವಕ್ಷ್ಯಾಮಿ–ಯೇನುಹೇಳುವೆನು ॥೩॥ ಏವಂ–ಈಪರಿ, ಚಿಂತಯಾನಸ್ಯ–ಚಿಂತಿಸುತ್ತಿರುವ, ತಸ್ಯ–ಆ ಲಕ್ಷ್ಮಣಸ್ವಾಮಿಗೆ, ಶಶಿಸನ್ನಿಭಂ–ಚಂದ್ರನಿಗೆ ಸಮಾನವಾದ, ಪರಮೋದಾರಂ– ಅತ್ಯುನ್ನತವಾದ, ರಾಮಸ್ಯ–ಶ್ರೀರಾಮನ, ಭವನಂ–ಮನೆಯು, ಪುರಸ್ತಾತ್–ಮುಂದುಗಡೆ, ಸಮದೃಶ್ಯತ–ಕಾಣಿಸಲ್ಪಟ್ಟಿತು ॥೪॥ ರಾಜ್ಞಸ್ತು–ಶ್ರೀರಾಮನ, ಭವನದ್ವಾರಿ– ಮನೆಬಾಗಲಲ್ಲಿ, ಸಃ–ಲಕ್ಷ್ಮಣನು, ರಥೋತ್ತಮಾತ್– ರಥಶ್ರೇಷ್ಠದಿಂದ, ಅವತೀರ್ಯ–ಇಳಿದು, ಅವಾಙ್ಮುಖಃ–ಅಧೋಮುಖನಾಗಿ, ದೀನಮನಾಃ–ದೀನವಾದ ಮನಮುಳ್ಳವನಾಗಿ, ಅನಿವಾರಿತಃ–ತಡೆಮಾಡಲ್ಪಡದಿರುವನಾಗಿ, ಪ್ರವಿವೇಶ–ಹೊಕ್ಕನು ॥೫॥ ದೃಷ್ಟ್ವಾ–ಕಂಡು, ಅಶ್ರುಪೂರ್ಣಾಭ್ಯಾಂ–ಕಂಬನಿಗಳಿಂದ ತುಂಬಿದ, ನೇತ್ರಾಭ್ಯಾಂ–ಕಣ್ಣುಗಳಿಂದ, ಉಪಲಕ್ಷಿತಂ–ಕೂಡಿಕೊಂಡಿರ್ದ–ಉತ್ತಮವಾದ ಪೀಠದಲ್ಲಿ, ಆಸೀನಂ– ಕುಳಿತುಕೊಂಡಿರುವ, ದೀನಂ– ದೈನ್ಯವುಳ್ಳ, ಅಗ್ರಜಂ–ಅಣ್ಣನಾದ, ರಾಘವಂ–ಶ್ರೀರಾಮನನ್ನು, ಲಕ್ಷ್ಮಣಃ–ಲಕ್ಷ್ಮಣನು, ದದರ್ಶ–ಕಂಡನು ॥೬॥ ಸುಸಮಾಹಿತಃ–ಸಾವಧಾನಚಿತ್ತನಾದರು, ಲಕ್ಷ್ಮಣಃ–ಲಕ್ಷ್ಮಣನು, ದೀನಚೇತನಃ–ದೈನ್ಯವಾದ ಮನಸ್ಸುಳ್ಳವನಾಗಿ, ತಸ್ಯ–ಆ ಶ್ರೀರಾಮನ, ಚರಣೌ–ಕಾಲುಗಳನ್ನು, ಜಗ್ರಾಹ–ಗ್ರಹಿಸಿದನು, ಪ್ರಾಂಜ

---

ಲಕ್ಷ್ಮಣ ಸುಮಂತ್ರರೀರ್ವರೂ ಮಾತನಾಡುತ್ತಿರಲು, ಸೂರ್ಯನು ಅಸ್ತಾಚಲವನ್ನೈದಿದನು. ಬಳಿಕ ಅವರೀರ್ವರೂ ಗೋಮತೀನದಿಯ ತೀರದಲ್ಲಿ ಇಳಿಕೊಂಡರು. ॥೪೦॥

—…*ಉತ್ತರರಾಮಾಯಣದಲ್ಲಿ ೫೧ ನೆಯ ಸರ್ಗಂ ಮುಗಿದುದು*…—

ರಘುಕುಲಾನಂದಕರನಾದ ಲಕ್ಷ್ಮಣನು ಆಗೋಮತೀ ತೀರದಲ್ಲಿ ಮಲಗಿದ್ದು ಪ್ರಾತಃಕಾಲದಲ್ಲಿ ಎಚ್ಚರಗೊಂಡು ಮುಂದಕ್ಕೆ ಪಯಣವಂಗೈದು ಮಧ್ಯಾಹ್ನ ಕಾಲದೊಳು, ಸಮಸ್ತರತ್ನಗಳಿಂದ ತುಂಬಿದಂಥಾದ್ದಾಗಿಯೂ, ಹೃಷ್ಟರಾಗಿಯೂ ಪುಷ್ಟರಾಗಿಯೂ ಇರುವ ಜನಗಳಿಂದ ವ್ಯಾಪ್ತವಾದದ್ದಾಗಿಯೂ ಇರುವ ಆ ಅಯೋಧ್ಯಾಪುರವಂ ಪ್ರವೇಶಿಸಿ ಮಹಾದೈನ್ಯವಂಪೊಂದಿ ರಾಮಸನ್ನಿಧಿಗೆ ಪೋಗಿ ಯೇನೆಂತ ಬಿನ್ನವಿಸಲೆಂದು ಚಿಂತಿಸುತ್ತಿದ್ದನು. ಈಪರಿ ಯೋಚಿಸುತ್ತಿರುವ ಆ ಲಕ್ಷ್ಮಣನಿಗೆ ಚಂದ್ರಸದೃಶವಾದ ಆ ಶ್ರೀರಾಮನಮಂದಿರವೂಕೂಡ ಮುಂದುಗಡೆ ಕಾಣಿಸಿದಂಥಾದ್ದಾಯಿತು ॥ ೪ ॥ ಆ ಅರಮನೆಯಬಾಗಲಿನಲ್ಲಿಯೇ ರಥದಿಂದಿಳಿದು, ತಲೆಬೊಗ್ಗಿಸಿಕೊಂಡವನಾಗಿಯೂ, ದೀನಮನಸ್ಕನಾಗಿಯೂ ಇರುವನಾಗಿ ತಡೆಯಿಲ್ಲದೆ ಆ ಮನೆಯಂಪ್ರವೇಶಿಸಿ ದಂಥಾವನಾಗಲು, ಈತನಂ ಕಂಡುಕಂಬನಿಗಳಂ ಸುರಿಸುತ್ತಾ ದೀನನಾಗಲು ಪೀಠದಲ್ಲಿ ಕುಳಿತಿರುವ ಆ ಶ್ರೀರಾಮನಂ ಕಂಡು ಲಕ್ಷ್ಮಣನು ದೈನ್ಯವಾದ ಮ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಸಃ । ಉವಾಚದೀನಯಾವಾಚಾಪ್ರಾಂಜಲಿಸ್ಸುಸಮಾಹಿತಃ ॥೭॥ ಆರ್ಯಸ್ಯಾಜ್ಞಾಂಪುರಸ್ಕೃತ್ಯವಿಸೃಜ್ಯಜನಕಾತ್ಮಜಾಂ। ಗಂಗಾತೀರೇಯಥೋದ್ದಿಷ್ಟೇವಾಲ್ಮೀಕೇರಾಶ್ರಮೇಶುಭೇ ॥ ಪುನರಸ್ಮ್ಯಾಗತೋವೀರಪಾದಮೂಲಮುಪಾಸಿತುಮ್ ॥೮॥ ಮಾ ಶುಚಃಪುರುಷವ್ಯಾಘ್ರಕಾಲಸ್ಯಗತಿರೀದೃಶೀ । ತ್ವದ್ವಿಧಾನಹಿಶೋಚಂತಿಸತ್ತ್ವವಂತೋಮನಸ್ವಿನಃ ॥೯॥ ಸರ್ವೇಕ್ಷಯಾಂತಾನಿಚಯಾಃಪತನಾಂತಾಸ್ಸಮುಚ್ಛ್ರಯಾಃ । ಸಂಯೋಗಾವಿಪ್ರಯೋಗಾಂತಾಮರಣಾಂತಂಹಿಜೀವಿತಮ್ ॥೧೦॥ ತಸ್ಮಾತ್ಪುತ್ರೇಷುದಾರೇಷುಮಿತ್ರೇಷುಚಧನೇಷುಚ । ನಾತಿಪ್ರಸಂಗಃಕರ್ತವ್ಯೋವಿಪ್ರಯೋಗೋಹಿತೈರ್ಧ್ರುವಃ ॥೧೧॥ ಶಕ್ತಸ್ತ್ವಮಾತ್ಮನಾತ್ಮಾನಂವಿನೇತುಂಮನಸೈವಹಿ । ಲೋಕಾನ್ಸರ್ವಾಂಶ್ಚ ಕಾಕುತ್ಸ್ಥ ಕಿಂಪುನರ್ದುಃಖಮೀದೃಶಮ್ ॥೧೨॥ ನೇದೃಶೇಷುವಿಮುಹ್ಯಂತಿ ತ್ವದ್ವಿಧಾಃಪುರುಷರ್ಷಭಾಃ । ಅಪವಾದಸ್ಸಕಿಲತೇಪುನರೇಷ್ಯತಿರಾಘವ ॥೧೩॥ ಯದರ್ಥಂಮೈಥಿ

ಲಿಃ-ಅಂಜಲಿಬದ್ಧನಾಗಿ, ದೀನಯಾ-ಗದ್ಗದಧ್ವನಿಯುಳ್ಳ, ವಾಚಾ-ವಾಕ್ಯದಿಂದ, ಉವಾಚ- ಹೇಳಿದನು ॥೭॥ ಹೆ ವೀರ-ಎಲೈ ಶೂರನೆ, ಆರ್ಯಸ್ಯ-ಪೂಜ್ಯನಾದ ನಿನ್ನ, ಆಜ್ಞಾಂ-ಅಪ್ಪಣೆಯನ್ನು, ಪುರಸ್ಕೃತ್ಯ-ಮುಂದುಮಾಡಿಕೊಂಡು, ಗಂಗಾತೀರೇ-ಗಂಗಾ ನದಿಯ ತೀರದಲ್ಲಿರುವ, ಯಥೋದ್ದಿಷ್ಟೇ-ಉದ್ದೇಶಮಾಡಲ್ಪಟ್ಟ, ಶುಭೇ-ಶುಭಕರವಾದ, ವಾಲ್ಮೀಕೇರಾಶ್ರಮೇ-ವಾಲ್ಮೀಕಿಋಷಿಯ ಆಶ್ರಮದಲ್ಲಿ, ಜನಕಾತ್ಮಜಾಂ-ಸೀತಾದೇವಿಯನ್ನು, ವಿಸೃಜ್ಯ-ಬಿಟ್ಟು, ಪಾದಮೂಲಂ-ಪಾದಪ್ರದೇಶವನ್ನು, ಉಪಾಸಿತುಂ-ಸೇವಿಸುವದಕ್ಕೋಸ್ಕರ, ಪುನರಾಗತಃ-ಮತ್ತೂ ಬಂದವನು, ಅಸ್ಮಿ-ಆಗಿದ್ದೇನೆ ॥೮॥ ಹೆ ಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೆ, ಮಾಶುಚಃ-ಅಳಬೇಡ, ಕಾಲಸ್ಯಗತಿಃ-ಕಾಲಗತಿಯು, ಈದೃಶೀ-ಹೀಗಿರುವದು, ಸತ್ವವಂತಃ-ಬಲವಂತರಾದ, ಮನಸ್ವಿನಃ-ಒಳ್ಳೇ ಮನುಸ್ಸುಳ್ಳ, ತ್ವದ್ವಿಧಾಃ-ನಿನ್ನಂಥವರು, ನಶೋಚಂತಿಹಿ-ದುಃಖಿಸುವದಿಲ್ಲವಷ್ಟೆ ॥೯॥ ಸರ್ವೇ-ಸಮಸ್ತವಾದ, ನಿಚಯಾಃ-ಗುಂಪುಗಳು, ಕ್ಷಯಾಂತಾಃ-ನಾಶವೇ ತುದಿಯಾಗಿ ಉಳ್ಳವವು, ಸಮುಚ್ಛ್ರಯಾಃ-ಅಭಿವೃದ್ಧಿಗಳು, ಪತನಾಂತಾಃ- ಬೀಳುವಿಕೆಯೆ ಕೊನೆಯಾಗಿ ಉಳ್ಳವುಗಳು, ಸಂಯೋಗಾಃ- ಕೂಡುವಿಕೆಯು, ವಿಪ್ರಯೋಗಾಂತಾಃ-ಕಾಣದೇ ಹೋಗುವಿಕೆಯೇ ಅಂತವಾಗಿ ಉಳ್ಳವುಗಳು, ಜೀವಿತಂ-ಬದುಕೋಣವು, ಮರಣಾಂತಂಹಿ-ಮೃತಿಯೇ ತುದಿಯಾಗಿ ಉಳ್ಳದ್ದು ॥೧೦॥ ತಸ್ಮಾತ್-ಆ ಕಾರಣದ ದೆಸೆಯಿಂದ, ಪುತ್ರೇಷು-ಮಕ್ಕಳ ವಿಷಯದಲ್ಲಿಯು, ದಾರೇಷು-ಹೆಂಡತಿಯ ವಿಷಯವಾಗಿಯು, ಮಿತ್ರೇಷುಚ-ಸ್ನೇಹಿತರಲ್ಲಿಯು, ಧನೇಷುಚ-ದ್ರವ್ಯಗಳಲ್ಲಿಯು, ಅತಿಪ್ರಸಂಗಃ-ಬಹಳ ಸಂಬಂಧವು, ನಕರ್ತವ್ಯಃ-ಮಾಡತಕ್ಕದಲ್ಲ, ತೈಃ-ಅವರೊಡನೆ,ವಿಪ್ರಯೋಗಃ-ವಿಯೋಗವು, (ಭವತಿಹಿ-ಆಗುವದಷ್ಟೆ) ಧ್ರುವಃ-ನಿಶ್ಚಯವು ॥ ೧೧ ॥ ಹೇ ಕಾಕುತ್ಸ್ಥ-ಎಲೈ ಶ್ರೀರಾಮನೇ, ಆತ್ಮನಾ-ನಿನ್ನಷ್ಟಕ್ಕೆ ನೀನೇ, ಮನಸೈವಹಿ-ಮನಸ್ಸಿನಿಂದಲೇ, ಆತ್ಮಾನಂ-ಸ್ವಾತ್ಮನನ್ನು, ಸರ್ವಾನ್-ಸಮಸ್ತವಾದ, ಲೋಕಾಂಶ್ಚ-ಲೋಕಗಳನ್ನೂ ಕೂಡ, ವಿನೇತುಂ- ಶಿಕ್ಷಿಸುವದಕ್ಕೆ, ತ್ವಂ-ನೀನು, ಶಕ್ತಃ-ಸಮರ್ಥನು, ಈದೃಶಂ-ಇಂಥಾ, ದುಃಖಂಪುನಃ-ವ್ಯಸನವಾದರೆ, ಕಿಂ-ಯೇನು ॥೧೨॥ ಹೇ ರಾಘವ- ಎಲೈ ಶ್ರೀರಾಮನೇ, ತ್ವದ್ವಿಧಾಃ-ನಿನ್ನಂಥಾವರಾದ, ಪುರುಷರ್ಷಭಾಃ-ಪುರುಷಶ್ರೇಷ್ಠರು, ಈದೃಶೇಷು-ಇಂಥಾ ವ್ಯಸನಗಳಲ್ಲಿ, ನವಿಮುಹ್ಯಂತಿ, ಮೋಹಿತರಾಗುವದಿಲ್ಲಾ, ತೇ-ನಿನಗೆ, ಸಃ ಅಪವಾದಃ-ಅಂಥಾ ಅಪವಾದವು, ಪುನಃ-ಮತ್ತು, ಏಷ್ಯತಿ-ಬರುವದು ॥೧೩॥ ಹೆ ನೃಪ-ಎಲೈ ರಾಜನೇ, ಅಪವಾದಭಯಾತ್- ಅಪವಾದಭಯದ ದೆಸೆಯಿಂದ, ಯದರ್ಥಂ-ಯಾತಕ್ಕೋಸ್ಕರ, ಮೈಥಿಲೀ- ಸೀತಾದೇವಿಯು, ತ್ಯಕ್ತಾ- ಬಿಡಲ್ಪಟ್ಟಳೊ, ಹೇ ರಾಜನ್-ಎಲೈ ಅರಸೇ, ಸೋಪವಾದಃ- ಆ ಅಪ

ವಸ್ಸುಳ್ಳವನಾಗಿ ಆತನಪಾದಗಳಂ ಗ್ರಹಿಸಿ ಕೈಮುಗಿದುಕೊಂಡು ಸಾವಧಾನಚಿತ್ತನಾಗಿ ಗದ್ಗದಧ್ವನಿಯುಳ್ಳಂತೆ ಈ ಮಾತಂ ನುಡಿದಂಥಾವನಾದನು ॥೭॥ ಎಲೈ ವೀರನೇ ! ಪೂಜ್ಯನಾದ ನಿನ್ನಾಜ್ಞೆಯಾದಂತೆ ಜನಕರಾಜನ ಮಗಳಾದ ಸೀತಾದೇವಿಯಂ ಕರೆದುಕೊಂಡುಹೋಗಿ ಗಂಗಾತೀರದಲ್ಲಿರುವ ವಾಲ್ಮೀಕಿ ಮುನಿಯ ಆಶ್ರಮದೊಳು ಬಿಟ್ಟು ನಿನ್ನ ಪಾದಸೇವೆಯಂಗೈಯುವದಕ್ಕೋಸ್ಕರ ಯಿಲ್ಲಿಗೆ ಬಂದಂಥಾವನಾದೆ ನೀನಳಬೇಡ. ಕಾಲಗತಿಯು ಈ ರೀತಿಯಾಗಿರುವದು, ನಿನ್ನಂಥಾ ಮಹಾತ್ಮರು ಅಳುವದಿಲ್ಲ, ಯಾಕಂದರೆ ಎಲ್ಲಾ ಗುಂಪುಗಳೂ ನಾಶವಾಗುವವರಿವಿಗೂ, ಅಭಿವೃದ್ಧಿಗಳು ಕೆಳಗೆಬೀಳುವವರಿಗೂ, ಸಂಯೋಗವೆಂಬದು ಅದೃಶ್ಯವಾಗುವವರಿಗೂ, ಬದುಕುವಿಕೆಯೂ, ಮರಣವಂ ಪೊಂದುವವರೆಗೂ, ಈರೀತಿಯಾಗಿರುವದು. ಆದಕಾರಣ ಪುತ್ರ ಮಿತ್ರ ಕಳತ್ರಧನಾದಿಗಳವಿಷಯದಲ್ಲಿ ಬಹಳ ಪ್ರೀತಿಯಂಗೈಯಬಾರದಲ್ಲಾ, ಅವುಗಳಿಂದ ಹ್ಯಾಗಾದರೂ ವಿಯೋಗವುಂಟಾಗುವದು ॥೧೧॥ ಎಲೈ ಶ್ರೀರಾಮನೇ ! ನೀನೇ ಮನಸ್ಸಿನಿಂದ ಸ್ವಾತ್ಮನನ್ನೂ ಸಮಸ್ತವಾದ ಲೋಕಂಗಳನ್ನೂ ಕೂಡ ಶಿಕ್ಷಿಸುವದಕ್ಕೆ ಸಮರ್ಥನಾಗಿದ್ದೀ, ಈ ದುಃಖವೇನು? ಇಂಥಾ ವ್ಯಸನಕಾಲದಲ್ಲಿ ನಿನ್ನಂಥಾ ಪುರುಷಶ್ರೇಷ್ಠರು ಮೋಹವನ್ನೈಯುವದಿಲ್ಲ. ಈಪರಿ ನೀನು ಮೋಹಿತನಾದರೆ ಅದೇ ಅಪವಾದವೇ ನಿನಗೆ ಬರುವಂಥಾದ್ದಾಗುವದು, ಎಲೈ ರಾಜನೇ ! ಯಾವ ಅಪವಾದಕ್ಕೆ ಅಂಜಿದವನಾಗಿ, ಸೀತಾದೇವಿಯಂ ತೊರೆದಂಥಾವನಾದೆಯೋ ಅಂಥಾ ಅಪವಾದವೇ ಪಟ್ಟಣದಲ್ಲಿಯೂ, ದೇಶದಲ್ಲಿಯೂ ಹುಟ್ಟುತ್ತದೆ. (ಅಂದರೆ) ಜನಗಳಿಗೋಸ್ಕರ ಸೀತಾದೇವಿಯಂ ತ್ಯೂರೆದು ಆಕೆಯಂ ಕುರಿತು ಚಿಂತಿಸುತ್ತಿದ್ದಾನೆಂದು ಜನಗಳು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ಲೀತ್ಯಕ್ತ್ವಾಹ್ಯಪವಾದಭಯಾನ್ನೃಪ । ಸೋಪವಾದಃಪುರೇರಾಜನ್ ಭವಿಷ್ಯತಿನಸಂಶಯಃ ॥೧೪॥ ಸತ್ವಂಪುರುಷಶಾರ್ದೂಲ ಧೈರ್ಯೇಣಸುಸಮಾಹಿತಃ । ತ್ಯಜೇಮಾಂದುರ್ಬಲಾಂಬುದ್ಧಿಂಸಂತಾಪಂಮಾಕುರುಷ್ವಹ ॥೧೫॥ ಏವಮುಕ್ತಸ್ತು ಕಾಕುತ್ಸ್ಥೋಲಕ್ಷ್ಮಣೇನಮಹಾತ್ಮನಾ । ಉವಾಚಪರಮಪ್ರೀತ್ಯಾಸೌಮಿತ್ರಿಂಮಿತ್ರವತ್ಸಲಮ್ ॥೧೬॥ ಏವಮೇತನ್ನರಶ್ರೇಷ್ಠ ಯಥಾವದಸಿಲಕ್ಷ್ಮಣ । ಪರಿತೋಷಶ್ಚ ಮೇವೀರಮಮಕಾರ್ಯಾನುಶಾಸನೇ ॥೧೭॥ ನಿವೃತ್ತಿಶ್ಚ ಕೃತಾಸೌಮ್ಯ ಸಂತಾಪಶ್ಚ ನಿರಾಕೃತಃ । ಭವದ್ವಾಕ್ಯೈಸ್ಸುಮಧುರೈರನುನೀತೋಽಸ್ಮಿ ಲಕ್ಷ್ಮಣ ॥೧೮॥

—…ಇತಿ ಶ್ರೀಮದುತ್ತರರಾಮಾಯಣೇ ದ್ವಿಪಂಚಾಶಸ್ಸರ್ಗಃ…—

ಲಕ್ಷ್ಮಣಸ್ಯತುತದ್ವಾಕ್ಯಂನಿಶಮ್ಯಪರಮಾದ್ಭುತಮ್ । ಸುಪ್ರೀತಶ್ಚಾಭವದ್ರಾಮೋವಾಕ್ಯಂಚೈತದುವಾಚಹ ॥೧॥ ದುರ್ಲಭಾತ್ವೀದೃಶೀಬುದ್ಧಿರಸ್ಮಿನ್ಕಾಲೇವಿಶೇಷತಃ । ಸದೃಶಸ್ತ್ವಂಮಹಾಬುದ್ಧೇ ಲಕ್ಷ್ಮಣಾಯತಲೋಚನ ॥ ಯತ್ತ್ವಮ

---

ವಾದವು, ಪುರೇ-ಪಟ್ಟಣದಲ್ಲಿ, ಭವಿಷ್ಯತಿ-ಉಂಟಾಗುವದು, ನಸಂಶಯಃ-ಸಂದೇಹವಿಲ್ಲ ॥೧೪॥ ಹೆ ಪುರುಷಶಾರ್ದೂಲ-ಎಲೈಪುರುಷಶ್ರೇಷ್ಠನೆ, ಸತ್ವಂ-ಆ ನೀನು, ಧೈರ್ಯೇಣ-ಧೈರ್ಯದಿಂದ, ಸುಸಮಾಹಿತಃ-ಕೂಡಿದವನಾಗಿ, ದುರ್ಬಲಾಃ-ಬಲಹಾನಿಕರವಾದ, ಇಮಾಂಬುದ್ಧಿಂ-ಈ ಬುದ್ಧಿಯನ್ನು, ತ್ಯಜ- ಬಿಡು, ಸಂತಾಪಂ-ಸಂತಾಪವನ್ನು, ಮಾಕುರುಷ್ವಹ-ಮಾಡಬ್ಯಾಡ ॥೧೫॥ ಏವಂ-ಈಪರಿಯಾಗಿ, ಮಹಾತ್ಮನಾ-ಮಹಾನುಭಾವನಾದ, ಲಕ್ಷ್ಮಣೇನ-ಲಕ್ಷ್ಮಣನಿಂದ, ಉಕ್ತಃ-ಹೇಳಲ್ಪಟ್ಟ, ಕಾಕುತ್ಸ್ಥಸ್ತು-ಶ್ರೀರಾಮನಾದರೆ, ಪರಮಪ್ರೀತ್ಯಾ-ಬಹಳ ವಿಶ್ವಾಸದಿಂದ, ಮಿತ್ರವತ್ಸಲಂ-ಸ್ನೇಹಿತರಲ್ಲಿ ವಾತ್ಸಲ್ಯವುಳ್ಳ, ಸೌಮಿತ್ರಿಂ-ಲಕ್ಷ್ಮಣನಂ ಕುರಿತು, ಉವಾಚ-ನುಡಿದನು ॥೧೬॥ ಹೆ ನರಶ್ರೇಷ್ಠ-ಎಲೈ ಪುರುಷಶ್ರೇಷ್ಠನೆ, ಹೇ ಲಕ್ಷ್ಮಣ-ಎಲೈ ಲಕ್ಷ್ಮಣನೆ, ಯಥಾ-ಹ್ಯಾಗೆ, ತ್ವಂ-ನೀನು, ವದಸಿ-ಹೇಳುತ್ತೀಯೊ, ಏತತ್-ಇದು, ಏವಮೇವ-ಹೀಗೇಸರಿ, ಹೆ ವೀರ-ಎಲೈ ಶೂರನೆ, ಮಮ-ನನ್ನ, ಕಾರ್ಯಾನುಶಾಸನೇ-ಕಾರ್ಯವಂ ನಡೆಯಿಸುವದರಲ್ಲಿ, ಮೇ-ನನಗೆ, ಪರಿತೋಷಶ್ಚ-ಸಂತೋಷವು ॥೧೭॥ ಹೆ ಸೌಮ್ಯ-ಎಲೈ ಕೋಪರಹಿತನೆ, ನಿವೃತ್ತಿಶ್ಚ-ಜ್ಞಾನಮಾರ್ಗವು ಕೂಡಾ, (ಪಾ* ನಿರ್ವೃತಿಃ-ಸುಖವು, ಕೃತಂ-ಮಾಡಲ್ಪಟ್ಟಿತು) ಕೃತಾ-ಸಂಪಾದಿಸಲ್ಪಟ್ಟಿತು, ಹೆಲಕ್ಷ್ಮಣ-ಎಲೈ ಲಕ್ಷ್ಮಣನೆ, ಸುಮಧುರೈಃ-ಬಹಳ ಮನೋಹರವಾದ, ಭವದ್ವಾಕ್ಯೈಃ-ನಿನ್ನ ಮಾತುಗಳಿಂದ, ಅನುನೀತಃ-ಶಿಕ್ಷಿತನು, ಅಸ್ಮಿ-ಆದೆನು, ಸಂತಾಪಶ್ಚ-ಮನೋರೋಗವೂಕೂಡ, ನಿರಾಕೃತಃ-ಹೋಗಲಾಡಿಸಲ್ಪಟ್ಟಿತು.

—…ಇತಿಶ್ರೀಮದುತ್ತರ ರಾಮಾಯಣೇ ದ್ವಿಪಂಚಾಶಸ್ಸರ್ಗಃ…—

ರಾಮಃ-ಶ್ರೀರಾಮನು, ಪರಮಾದ್ಭುತಂ-ಅತ್ಯಾಶ್ಚರ್ಯಕರವಾದ, ಲಕ್ಷ್ಮಣಸ್ಯ-ಲಕ್ಷ್ಮಣನ, ತದ್ವಾಕ್ಯಂ-ಆ ಮಾತನ್ನು, ನಿಶಮ್ಯ-ಕೇಳಿ, ಸುಪ್ರೀತಶ್ಚ-ಸಂತೋಷಿಸಿದವನು, ಅಭವತ್-ಆದನು, ಏತದ್ವಾಕ್ಯಂಚ-ಈ ಮುಂದೆ ಹೇಳುವ ಮಾತನ್ನು ಕೂಡೆ, ಉವಾಚ, ಹೇಳಿದನು ॥೧॥ ಹೇಮಹಾಬುದ್ಧೇ-ಎಲೈ ಮಹಾ ತಿಳುವಳಿಕೆ ಯುಳ್ಳವನೆ, ಅಸ್ಮಿನ್ಕಾಲೆ, ಈ ಕಾಲದಲ್ಲಿ, ಈದೃಶೀ-ಇಂಥಾ, ಬುದ್ಧಿಸ್ತು-ಮತಿಯಾದರೆ, ವಿಶೇಷತಃ-ಬಹಳವಾಗಿ, ದುರ್ಲಭಾ-ಹುಟ್ಟತಕ್ಕದ್ದಲ್ಲ, ಹೆ ಲಕ್ಷ್ಮಣ-ಎಲೈ ಲಕ್ಷ್ಮಣನೆ, ಹೆ ಆಯತಲೋಚನ-ಎಲೈ ವಿಶಾಲಾಕ್ಷನೆ, ತ್ವಂ-ನೀನು, ಸದೃಶಃ-ನನ್ನ ಮನಸ್ಸಿಗೆ ಸರಿಯಾಗಿದ್ದಿ, ಹೆ ಸೌಮ್ಯ-ಎಲೈ ಕೋಪರಹಿತನೆ, ಹೆ ಶುಭಲಕ್ಷಣ-ಶುಭಕರವಾದ ಲಕ್ಷಣವುಳ್ಳವನೆ, ಯತ್-ಯಾವ ಕಾರ್ಯವನ್ನು ಕುರಿತು, ಮೇ-ನನ್ನ, ಹೃದಯಂ-ಮನಸ್ಸು, ವರ್ತತೆ-ಇರುತ್ತದೆಯೋ, ಹೇ ಸೌಮಿತ್ರೇ- ಎಲೈ ಸುಮಿತ್ರಾಪುತ್ರನೆ, ಅದ್ಯ-ಈಗ, ಚತುರೋದಿವಸಾಃ-ನಾಲ್ಕು ದಿವಸಗಳಲ್ಲಿ, ಕಾರ್ಯಾನುಶಾಸನಂ-ಪ್ರಜಾಕಾರ್ಯದ ಮಾತನ್ನು, ಅಕುರ್ವತಃ- ಮಾಡದಿರುವ, ಮಮ- ನನಗೆ, ತತ್-ಆ ಮಾಡದೆ ಇರುವಿಕೆಯು, ಮೇ-ನನ್ನ, ಮರ್ಮಾಣಿ- ಮರ್ಮಗಳ

---

ಘಾತನಾಡಿಕೊಳ್ಳುವರೆಂಬ ಭಾವವು. ॥೧೪॥ ಎಲೈ ಪುರುಷಶ್ರೇಷ್ಠನಾದ ಶ್ರೀರಾಮನೆ! ಅಂಥಾ ಧೀರನಾದ ನೀನು ಸಾವಧಾನಚಿತ್ತನಾಗಿ ಈ ಅಹಿತ ಬುದ್ಧಿಯಂ ಬಿಟ್ಟು ಧೈರ್ಯವಾಗಿ ಸಂತಪಿಸದಿರೆಂದು ಮಹಾತ್ಮನಾದ ಲಕ್ಷ್ಮಣನಿಂದ ಹೇಳಲ್ಪಟ್ಟವನಾಗಿ ಶ್ರೀರಾಮನಿಂತೆಂದು ನುಡಿದನು. ॥೧೬॥ ಎಲೈ ಲಕ್ಷ್ಮಣನೇ! ನೀನು ಹೇಳಿದ್ದೆಲ್ಲಾ ನಿಶ್ಚಯವು, ನಾ ಹೇಳಿದ ಈ ಕಾರ್ಯವಂ ನೆರವೇರಿಸದಂಥಾವನಾದೆ, ಈವಿಷಯದಲ್ಲಿ ಯೆನಗೆ ಬಹಳ ಸಂತೋಷವು, ಯೆನಗೆ ಜ್ಞಾನಮಾರ್ಗವನ್ನೂ ಕೂಡ ಸಂಪಾದಿಸಿಕೊಟ್ಟಂಥಾವನಾದೆ, ಮೃದುವಾದ ನಿನ್ನ ಮಾತುಗಳಿಂದ ಶಿಕ್ಷಿಸಲ್ಪಟ್ಟವನಾಗಿ ಮನೋರೋಗವಂ ಬಿಟ್ಟೆನು. ॥೧೮॥ —…*ಉತ್ತರರಾಮಾಯಣದಲ್ಲಿನ ೫೨ನೆಯ ಸರ್ಗಂ ಮುಗಿದುದು*…—

ಆ ಶ್ರೀರಾಮನಾದರೆ ಲಕ್ಷ್ಮಣನು ನಿರೂಪಿಸಿದ, ಅತ್ಯಾಶ್ಚರ್ಯಕರವಾಗಿರ್ಪ ಆ ವಾಕ್ಯವಂ ಕೇಳಿ ಸುಪ್ರೀತನಾಗಿ ಆ ಲಕ್ಷ್ಮಣನಂ ಕುರಿತು, ವಿಸ್ತಾರಾಕ್ಷನಾಗಿಯೂ ಶುಭಕರವಾದ ಲಕ್ಷಣಗಳುಳ್ಳವನಾಗಿಯೂ ಇರುವ ಎಲೈ ಲಕ್ಷ್ಮಣನೆ! ಈ ಸಮಯದಲ್ಲಿಯೂ ಕೂಡಾ ಇಂಥಾ ಬುದ್ಧಿಯಿರುವದು ಬಹುದುರ್ಲಭವು, ನನ್ನಮನಕ್ಕೆ ಸರಿಯಾಗಿದ್ದೀ ॥೨॥ ಈಗ ನಾಲ್ಕು ದಿನಗಳಿಂದ ಪ್ರಜೆಗಳ ವಿಚಾರಣೆಗಳಂಗೈಯ್ಯದಿರೋಣವು, ನನ್ನ ಮರ್ಮಗಳನ್ನೆಲ್ಲಾ ಭೇದಿಸುತ್ತಿರುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಹೃದಯಂಸೌಮ್ಯವರ್ತತೇಶುಭಲಕ್ಷಣ ॥೨॥ ಚತುರೋದಿವಸಾನದ್ಯಮಮಕಾರ್ಯಾಸುಶಾಸನಮ್ । ಅಕುರ್ವತೋಹಿಸೌಮಿತ್ರೇತನ್ಮೇಮರ್ಮಾಣಿಕೃಂತತಿ ॥೩॥ ಆಹೂಯಂತಾಂಪ್ರಕೃತಯಃಪುರೋಧಾಮಂತ್ರಿಣಸ್ತಥಾ । ಕಾರ್ಯಾರ್ಥಿನಶ್ಚಪುರುಷಾಸ್ತ್ರಿಯಶ್ಚಪುರುಷರ್ಷಭ ॥೪॥ ಪೌರಕಾರ್ಯಾಣಿಯೋರಾಜಾನಕರೋತಿದಿನೇದಿನೇ । ಸಮೃತೋನರಕೇಘೋರೇಪಾತ್ಯತೇನಾತ್ರಸಂಶಯಃ ॥೫॥ ಶ್ರೂಯತೇಹಿಪುರಾರಾಜಾನೃಗೋನಾಮಮಹಾಯಶಾಃ । ಪೃಥಿವ್ಯಾಂಪೃಥಿವೀಪಾಲೋಬ್ರಹ್ಮಣ್ಯಸ್ಸತ್ಯವಾಕ್ಶುಚಿಃ ॥೬॥ ಸಕದಾಚಿದ್ಗವಾಂಕೋಟಿಂಸವತ್ಸಾಂರತ್ನಭೂಷಿತಾಮ್ । ಬ್ರಾಹ್ಮಣೇಭ್ಯೋದದೌರಾಜಾಪುಷ್ಕರೇಷುಸದಕ್ಷಿಣಾಮ್ ॥೭॥ ತತಸ್ಸಂಘಾದ್ಗತಾಧೇನುಸ್ಸವತ್ಸಾಬಹುದೋಹನಾ । ಬ್ರಾಹ್ಮಣಸ್ಯಾನಿವೇಶಸ್ಯದರಿದ್ರಸ್ಯೋಂಛವೃತ್ತಿನಃ ॥೮॥ ಸವಿನಷ್ಟಾಂಕ್ಷುಧಾರ್ತೋವೈಅನ್ವಿಷ್ಯತ್ತತ್ರತತ್ರಚ ॥ ನಾಪಶ್ಯತ್ಸರ್ವರಾಜ್ಯೇಷುಸಂವತ್ಸರಗಣಾನ್ಬಹೂನ್ ॥೯॥ ತತಃಕನಖಲಂಗತ್ವಾಜೀರ್ಣವತ್ಸಾಂನಿರಾಮಯಾಮ್ । ದದರ್ಶತಾಂಸ್ವಕಾಂಧೇನುಂಬ್ರಾಹ್ಮಣಸ್ಯನಿವೇಶನೇ॥ ಅಥತಾಂನಾಮಧೇಯೇನಸ್ವಕೇನೋವಾಚಬ್ರಾಹ್ಮಣಃ । ಆಗಚ್ಛಶಬಲೇತ್ವೇವಂಸಾಚಶುಶ್ರಾವಗೌಸ್ಸ್ವನಮ್ ॥೧೧॥ ತಸ್ಯ

---

ನ್ಕೃಂತತಿ- ತತ್ತರಿಸುತ್ತದೆ ॥೩॥ ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ಪ್ರಕೃತಯಃ-ಪ್ರಜೆಗಳು, ಪುರೋಧಾಃ-ಪುರೋಹಿತರಾದ ವಸಿಷ್ಠಾದಿಗಳು, ತಥಾ-ಹಾಗೆಯೆ, ಮಂತ್ರಿಣಶ್ಚ-ಮಂತ್ರಿಗಳೂ, ಆಹೂಯಂತಾಂ-ಕರೆಯಿಸಲ್ಪಡಲಿ, ಕಾರ್ಯಾರ್ಥಿನಶ್ಚ - ಕಾರ್ಯಗಳನ್ನಪೇಕ್ಷಿಸುತಿರುವ, ಪುರುಷಾಃ- ಪುರುಷರು, ಸ್ತ್ರಿಯಶ್ಚ-ಹೆಂಗಳುಹ, ಆಹೂಯಂತಾಂ- ಕರೆಯಲ್ಪಡಲೀ ॥೪॥ ಯೋರಾಜಾ-ಯಾವ ಅರಸು, ದಿನೇದಿನೇ-ಪ್ರತಿದಿವಸದಲ್ಲಿಯೂ, ಪೌರಕಾರ್ಯಾಣಿ-ಪ್ರಜೆಗಳ ಕೆಲಸಗಳನ್ನು, ನಕುರ್ವತಿ-ಮಾಡುವದಿಲ್ಲವೋ, ಸಃ-ಆ ಅರಸು, ಮೃತಃ-ಮರಣವನ್ನು ಹೊಂದಿದವನಾಗಿ, ಘೋರೇ-ಭಯಂಕರವಾದ, ನರಕೇ-ನರಕದಲ್ಲಿ, ಪಾತ್ಯತೆ- ಬೀಳಲ್ಪಡುತ್ತಾನೆ, ಅತ್ರ-ಈ ಅರ್ಥದಲ್ಲಿ, ಸಂಶಯಃ-ಸಂದೇಹವು, ನ-ಇಲ್ಲ ॥೫॥ ಪುರಾ- ಪೂರ್ವದಲ್ಲಿ, ಪೃಥಿವ್ಯಾಂ-ಭೂಮಿಯಲ್ಲಿ, ಮಹಾಯಶಾಃ-ಮಹಾಕೀರ್ತಿವಂತನಾದ, ಬ್ರಹ್ಮಣ್ಯಃ-ಬ್ರಾಹ್ಮಣಪ್ರಿಯನಾದ, ಸತ್ಯವಾಕ್-ಸತ್ಯವಂತನಾದ, ಶುಚಿಃ- ಪರಿಶುದ್ಧನಾದ, ನೃಗೋನಾಮ-ನೃಗನೆಂದು ಪ್ರಸಿದ್ಧನಾದ, ರಾಜಾ-ಅರಸು, ಪೃಥಿವೀಪಾಲಃ-ಭೂಪಾಲಕನಾಗಿ, ಶ್ರೂಯತೆಹಿ-ಕೇಳಲ್ಪಡುತ್ತಾನಷ್ಟೇ॥೬॥ ಸಃ-ಆತನು, ಕದಾಚೇತ್-ಒಂದಾನೊಂದು ಕಾಲದಲ್ಲಿ, ಪುಷ್ಕರೇಷು-ತೀರ್ಥವಿಶೇಷಗಳಲ್ಲಿ, ಬ್ರಾಹ್ಮಣೇಭ್ಯಃ-ಬ್ರಾಹ್ಮಣರಿಗೋಸುಗ, ರತ್ನಭೂಷಿತಾಂ-ರತ್ನಗಳಿಂದಲಂಕೃತವಾದ, ಸವತ್ಸಾಂ-ಕರುವಿನಿಂದೊಡಗೂಡಿದ, ಸದಕ್ಷಿಣಾಂ-ದಕ್ಷಿಣಾಯುಕ್ತವಾದ, ಗವಾಂ-ಆಕಳುಗಳ, ಕೋಟಿಂ- ಕೋಟಿಯನ್ನು, ದದೌ-ಕೊಟ್ಟನು ॥೭॥ ತತಃ-ಬಳಿಕ, ಸವತ್ಸಾ-ಕರುವಿನಿಂದೊಡಗೂಡಿದ, ಬಹುದೋಹನಾ-ಬಹಳ ಹಾಲನ್ನು ಕರೆಯುತ್ತಿರುವ, ಧೇನುಃ-ಆಕಳು, ಅನಿಕೇಶಸ್ಯ-ಮನೆ ಇಲ್ಲದಿರುವ, ದರಿದ್ರಸ್ಯ-ದರಿದ್ರನಾದ, ಉಂಛವೃತ್ತಿನಃ-ಒಂದೊಂದುಕಾಳನ್ನಾರಿಸಿ ಅದರಿಂದ ಜೀವಿಸುವ, ಬ್ರಾಹ್ಮಣಸ್ಯ-ಬ್ರಾಹ್ಮಣನ ಸಂಬಂಧವಾದ, ಸಂಘಾತ್-ಗೋತಂಡದ ದೆಸೆಯಿಂದ, ಗತಾ-ಹೊರಟುಹೋಯಿತು ॥೮॥ ಸಃ-ಆ ಬ್ರಾಹ್ಮಣನು, ಕ್ಷುಧಾ-ಹಸಿವಿನಿಂದ, ಆರ್ತಃ- ದೀನನಾಗಿ, ವಿನಷ್ಟಾಂ-ತಪ್ಪಿಸಿಕೊಂಡುಹೋದ ಗೋವಿನನ್ನು, ತತ್ರತತ್ರ-ಅಲ್ಲಲ್ಲಿ, ಅನ್ವಿಷ್ಯನ್-ಹುಡುಕುತ್ತಿರುವನಾಗಿ, ಸರ್ವರಾಜ್ಯೇಷು- ಸಮಸ್ತರಾಜ್ಯಗಳಲ್ಲಿಯು, ಬಹೂನ್ಸಂವತ್ಸರಗಣಾನ್-ಅನೇಕ ಸಂವತ್ಸರ ಗುಂಪುಗಳನ್ನು, ನಾಪಶ್ಯತ್-ನೋಡಲಿಲ್ಲ ॥೯॥ ತತಃ-ಬಳಿಕ, ಕನಖಲಂ-ಕನಖಲವೆಂಬ ಗ್ರಾಮವನ್ನು ಕುರಿತು, ಗತ್ವಾ-ಹೊಂದಿ, ಜೀರ್ಣವತ್ಸಾಂ-ಬತ್ತಿಹೋದ ಕರುವುಳ್ಳ, ನಿರಾಮಯಾಂ-ರೋಗರಹಿತವಾದ, ಸ್ವಕಾಂ-ಸ್ವಕೀಯವಾದ, ತಾಂಧೇನುಂ-ಆ ಆಕಳನ್ನು, ಬ್ರಾಹ್ಮಣಸ್ಯ-ಬ್ರಾಹ್ಮಣನ, ನಿವೇಶನೇ-ಮನೆಯಲ್ಲಿ, ದದರ್ಶ-ಕಂಡನು ॥೧೦॥ ಅಥ-ಬಳಿಕ, ಬ್ರಾಹ್ಮಣಃ-ದ್ವಿಜನು, ತಾಂ-ಆ ಆಕಳನ್ನು, ಸ್ವಕೇನ-

---

ಕಾರಣ, ಮಂತ್ರಿಗಳನ್ನೂ, ಪುರೋಹಿತರನ್ನೂ, ಜನಗಳನ್ನೂ, ಕಾರ್ಯಾರ್ಥಿಗಳಾದ ಪುರುಷರನ್ನೂ, ಸ್ತ್ರೀಯರನ್ನೂ ಇವರುಗಳನ್ನೆಲ್ಲ ಕರೆಯಿಸುವಂಥಾವನಾಗು ॥೪॥ ಯಾವರಾಜನು ಪ್ರತಿದಿನವು ಪಟ್ಟಣಸ್ಥರಕಾರ್ಯಗಳನ್ನು ಮಾಡುವದಿಲ್ಲವೋ, ಆ ರಾಜನು ಘೋರವಾದ ನರಕದಲ್ಲಿ ಬಿದ್ದಿರುವನು. ಈ ವಿಷಯದಲ್ಲಿ ಸಂದೇಹವಿಲ್ಲ. ಈ ಭಾಗದಲ್ಲಿ ಒಂದಾನೊಂದು ಕಥೆಯಂ ಪೇಳ್ವೆನುಕೇಳು ॥೫॥ ಈ ಧರಾತಲದಲ್ಲಿ ಪೂರ್ವಕಾಲದೊಳು ನೃಗನೆಂಬರಾಜನು ಮಹಾ ಯಶೋವಂತನಾಗಿಯೂ, ಭೂಪತಿಯಾಗಿಯೂ, ಬ್ರಾಹ್ಮಣ ಪ್ರಿಯನಾಗಿಯೂ, ಸತ್ಯವಂತನಾಗಿಯೂ, ಪರಿಶುದ್ಧನಾಗಿಯೂ ಇರುತ್ತಿದ್ದನು ॥೬॥ ಆ ನರನಾಥನು ಒಂದಾನೊಂದು ಕಾಲದೊಳು, ತೀರ್ಥವಿಶೇಷಗಳಲ್ಲಿ, ಬ್ರಾಹ್ಮಣರಿಗೆ ರತ್ನಾಲಂಕೃತವಾದ ಮತ್ತು ವತ್ಸಯುಕ್ತವಾದ ಕೋಟಿ ಗೋವುಗಳನ್ನು, ದಕ್ಷಿಣಾಯುಕ್ತವಾಗಿ ಕೊಟ್ಟಂಥಾವನಾದನು ॥೭॥ ಆ ಬಳಿಕ ಉಂಛವೃತ್ತಿ ಮಾಡಿಕೊಂಡು ಮನೆಯಿಲ್ಲದಿರುವ ದರಿದ್ರನಾದ ಓರ್ವ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟದ್ದು ಆಕಳುಗಳ ಮಂದೆಯ ದೆಶೆಯಿಂದ ಬಹಳ ಹಾಲುಕರಿಯುತ್ತಿರುವ ಒಂದಾನೊಂದು ಗೋವು ಕರುವಿನಿಂದೊಡಗೂಡಿ ತಪ್ಪಿಸಿಗೊಂಡು ಹೊರಟು ಹೋದಂಥಾದ್ದಾಯಿತು ॥೮॥ ಆ ಬ್ರಹ್ಮಣನು ಓಡಿಪೋದ ಆ ಹಸುವಿನಂ ಹುಡುಕಿಕೊಂಡು ದೇಶ ದೇಶಗಳಲ್ಲಿಯೂ ಅಲ್ಲಲ್ಲಿ ಹುಡಿಕಿದರೂ ಅನೇಕ ವರುಷಗಳು ಅದು ದೊರಿಯಲಿಲ್ಲ. ಅನಂತರದೊಳು ಒಂದಾನೊಂದು ದಿನದಲ್ಲಿ ಕನಖಲವೆಂಬ ಗ್ರಾಮಕ್ಕೆಪೋಗಿ, ರೋಗವಿಲ್ಲದಿದ್ದರೂ ಜೀರ್ಣವಾದ ಕರುವುಳ್ಳ ತನ್ನ ಧೇನುವಿನನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಂ ಸ್ವರಂ ನಾಜ್ಞಾಯತ್ ಕ್ಷುಧಾರ್ತಸ್ಯ ದ್ವಿಜಸ್ಯ ವೈ । ಅನ್ವಗಾತ್ಪೃಷ್ಠತಸ್ಸಾ ಗೌರ್ಗಚ್ಛಂತಂ ಪಾವಕೋಪಮಮ್ ॥೧೦॥ ಯೋಪಿ ಪಾಲಯತೇ ವಿಪ್ರಸ್ಸೋಪಿ ಗಾಮನ್ವಗಾದ್ದ್ರುತಮ್ । ಗತ್ವಾ ತಮೃಷಿಮಾಚಷ್ಟೇ ಮಮ ಗೌರಿತಿ ಸತ್ವರಃ ॥ ಸ್ಪರ್ಶಿತಾ ರಾಜಸಿಂಹೇನ ಮಹ್ಯಂ ದಾನೇ ನೃಗೇಣ ಹ ॥೧೨॥ ತಯೋರ್ಬ್ರಾಹ್ಮಣಯೋರ್ವಾದೋ ಮಹಾನಾಸೀದ್ವಿಪಶ್ಚಿತೋಃ । ವಿವದಂತೌ ತತೋನ್ಯೋನ್ಯಂ ರಾಜಾನಮಭಿಜಗ್ಮತುಃ ॥೧೩॥ ತೌ ರಾಜಭವನದ್ವಾರಿ ಅಪ್ರಾಪ್ಯ ನೃಗಶಾಸನಮ್ । ಅಹೋರಾತ್ರಾಣ್ಯನೇಕಾನಿ ವಸಂತೌ ಕ್ರೋಧಮಾಯತುಃ ॥೧೪॥ ಊಚತುಶ್ಚ ಮಹಾತ್ಮಾನೌ ತಾವುಭೌ ದ್ವಿಜಸತ್ತಮೌ । ಕ್ರುದ್ಧೌ ಪರಮಸಂತಪ್ತೌ ವಾಕ್ಯಂ ಘೋರಾಭಿಸಂಹಿತಮ್ ॥೧೫॥ ಅರ್ಥಿನಾಂ ಕಾರ್ಯಸಿದ್ಧ್ಯರ್ಥಂ ಯಸ್ಮಾತ್ತ್ವಂ ನೈಷಿ ದರ್ಶನಮ್ । ಅದೃಶ್ಯಸ್ಸರ್ವಭೂತಾನಾಂ ಕೃಕಲಾಸೋ ಭವಿಷ್ಯಸಿ ॥೧೬॥ ಬಹುವರ್ಷಸಹಸ್ರಾಣಿ ಬಹುವರ್ಷಶತಾನಿ ಚ । ಶ್ವಭ್ರೇ ತ್ವಂ ಕೃಕಲಾಸೋ ವೈ ದೀರ್ಘಕಾಲಂ ವಸಿಷ್ಯಸಿ ॥೧೭॥ ಉತ್ಪತ್ಸ್ಯತಿ ಹಿ ಲೋಕೇಸ್ಮಿನ್ ಯದೂನಾಂ ಕೀರ್ತಿವರ್ಧನಃ । ವಾಸುದೇವ ಇತಿ ಖ್ಯಾ

---

ತವಾದ, ನಾಮಧೇಯೇನ-ಹೆಸರಿನಿಂದ, ಹೇಶಬಳೇ-ಎಲೈ ಆಕಳೆ, ಆಗಚ್ಛ-ಬಾರಮ್ಮಾ, ಇತ್ಯೇವಂ-ಈ ಪರಿಯಾಗಿ, ಉವಾಚ-ಹೇಳಿದನು, ಸಾಚ-ಆ ಗೋವುಕೂಡ, ಸ್ವನಂ-ಬ್ರಾಹ್ಮಣಧ್ವನಿಯನ್ನು, ಶುಶ್ರಾವ-ಕೇಳಿದಳು. ॥೧೧॥ ಕ್ಷುಧಾರ್ತಸ್ಯ-ಹಸಿವಿನಿಂದ ಪೀಡಿತನಾದ, ತಸ್ಯದ್ವಿಜಸ್ಯ-ಆ ಬ್ರಾಹ್ಮಣನ, ತಂ ಸ್ವರಂ-ಆ ಸ್ವರವನ್ನು, ಅಜ್ಞಾಯ-ತಿಳಿದು, ಸಾಗೌಃ-ಆ ಗೋವು, ಗಚ್ಛಂತಂ-ಮುಂದೆ ಹೋಗುತ್ತಿರುವ, ಪಾವಕೋಪಮಂ-ಅಗ್ನಿಸದೃಶನಾದ ಬ್ರಾಹ್ಮಣನಂ ಕುರಿತು, ಪೃಷ್ಠತಃ-ಹಿಂದುಗಡೆ, ಅನ್ವಗಾತ್-ಅನುಸರಿಸಿ ಹೋಯಿತು. ॥೧೦॥ ಯಃವಿಪ್ರಃ-ಯಾವ ಬ್ರಾಹ್ಮಣನು, ಪಾಲಯತೇ-ಪರಿಪಾಲಿಸುತ್ತಿದ್ದನೋ, ಸೋಪಿ-ಆ ಬ್ರಾಹ್ಮಣನೂ ಸಹ, ಗಾಂ-ಗೋವಿನನ್ನು, ದ್ರುತಂ-ಜಾಗ್ರತೆಯಾಗಿ, ಅನ್ವಗಾತ್-ಅಟ್ಟಿಕೊಂಡು ಬಂದನು, ತಮೃಷಿಂಚ-ತೆಗದುಕೊಂಡು ಹೋಗುತ್ತಿರುವ ಆ ಋಷಿಯಂಕುರಿತು, ಗತ್ವಾ-ಹೋಗಿ, ಮಮ-ನನ್ನ, ಗೌರಿತಿ-ಆಕಳೆಂದು, ಸತ್ವರಃ-ತ್ವರೆಯಿಂದ ಕೂಡಿದವನಾಗಿ, ಉವಾಚ-ನುಡಿದನು, ಮಹ್ಯಂ-ನನಗೋಸ್ಕರ, ರಾಜಸಿಂಹೇನ-ರಾಜೋತ್ತಮನಾದ, ನೃಗೇಣ-ನೃಗರಾಜನಿಂದ, ದಾನೇ-ಗೋದಾನಕಾಲದಲ್ಲಿ, ಸ್ಪರ್ಶಿತಾ-ಕೊಡಲ್ಪಟ್ಟಿತು, ಇತಿ-ಇಂತೆಂದು, ಉವಾಚ-ನುಡಿದನು. ॥೧೨॥ ವಿಪಶ್ಚಿತೋಃ-ವಿದ್ವಾಂಸರಾದ, ತಯೋರ್ಬ್ರಾಹ್ಮಣಯೋಃ-ಅವರಿಬ್ಬರಿಗೂ, ಮಹಾನ್-ಮಹತ್ತರವಾದ, ವಾದಃ-ವಿವಾದವು, ಆಸೀತ್-ಆಯಿತು, ತತಃ-ಬಳಿಕ, ಅನ್ಯೋನ್ಯಂ-ಪರಸ್ಪರವಾಗಿ, ವಿವದಂತೌ-ವಾದಮಾಡುತ್ತಿರುವರಾಗಿ, ರಾಜಾನಂ-ನೃಗರಾಜನಂಕುರಿತು, ಅಭಿಜಗ್ಮತುಃ-ಬಂದರು, ತೌ-ಆ ಬ್ರಾಹ್ಮರಿಬ್ಬರು, ರಾಜಭವನದ್ವಾರಿ-ಅರಮನೆಯ ಬಾಗಿಲಿನಲ್ಲಿ, ನೃಗಶಾಸನಂ-ರಾಜಾಜ್ಞೆಯನ್ನು, ಅಪ್ರಾಪ್ಯ-ಹೊಂದದೆ, ಅನೇಕಾನಿ-ಬಹಳವಾದ, ಅಹೋರಾತ್ರಾಣಿ-ಹಗಲು ರಾತ್ರಿಗಳಲ್ಲಿ, ನಿವಸಂತೌ-ಇರುತ್ತಿರುವರಾಗಿ, ಕ್ರೋಧಂ-ಕೋಪವನ್ನು, ಆಯತುಃ-ಹೊಂದಿದರು. ॥೧೪॥ ಮಹಾತ್ಮಾನೌ-ಮಹಾ ಮನಸ್ವಿಗಳಾದ, ದ್ವಿಜಸತ್ತಮೌ-ಬ್ರಾಹ್ಮಣಶ್ರೇಷ್ಠರಾದ, ತಾವುಭೌ-ಅವರಿಬ್ಬರೂ, ಕ್ರುದ್ಧೌ-ಕುಪಿತರಾಗಿ, ಪರಮಸಂತಪ್ತೌ-ಬಹಳ ಸಂಕಟ ಪಟ್ಟವರಾಗಿ, ಘೋರಾಭಿಸಂಹಿತಂ-ಕಠಿನವಾದ ಅಕ್ಷರಗಳಿಂದ ಹೇಳಲ್ಪಟ್ಟ, ವಾಕ್ಯಂ-ಮಾತನ್ನು, ಊಚತುಃ-ಹೇಳಿದರು ॥೧೫॥ ಅರ್ಥಿನಾಂ-ಯಾಚಕರ, ಕಾರ್ಯಸಿದ್ಧ್ಯರ್ಥಂ-ಕಾರ್ಯನಿಮಿತ್ತವಾಗಿ, ಯಸ್ಮಾತ್-ಯಾವಕಾರ್ಯದ ದೆಸೆಯಿಂದ, ತ್ವಂ-ನೀನು, ದರ್ಶನಂ-ದೃಷ್ಟಿಗೋಚರತ್ವವನ್ನು, ನೈಷಿ-ಹೊಂದಲಿಲ್ಲವೋ, ತಸ್ಮಾತ್-ಆ ಕಾರಣದ ದೆಸೆಯಿಂದ, ಸರ್ವಭೂತಾನಾಂ-ಸಮಸ್ತಪ್ರಾಣಿಗಳಿಗೂ, ಅದೃಶ್ಯಃ-ಕಾಣದಿರುವನಾಗಿ, ಕೃಕಲಾಸಃ-ಓತೀಕ್ಯಾತವು, ಭವಿಷ್ಯಸಿ-ಆಗುವಿ, ಬಹುವರ್ಷಸಹಸ್ರಾಣಿ-ಅನೇಕ ಸಂವತ್ಸರ ಸಹಸ್ರಗಳು, ಬಹುವರ್ಷಶತಾನಿಚ - ಅನೇಕ ಸಂವತ್ಸರಗಳು, ತ್ವಂ-ನೀನು, ಶ್ವಭ್ರೇ-ಗುಣಿಯಲ್ಲಿ, ಕೃಕಲಾಸಃ-ಓತೀಕ್ಯಾತೆಯಾಗಿ, ದೀರ್ಘಕಾಲಂ-ಅನೇಕ ಕಾಲವು, ವಸಿಷ್ಯಸಿ-ಇರುತ್ತೀ. ॥೧೭॥ ಆ

---

ಓರ್ವಬ್ರಾಹ್ಮಣನ ಮನೆಯೊಳು ಕಂಡು ಎಲೈ ಶಬಳೆಯೆ! ಬಾರಮ್ಮಾ ಎಂಬದಾಗಿ ತಾನಿಟ್ಟ ನಾಮಧೇಯದಿಂದ ಆ ಧೇನುವಿನಂ ಕರೆದಂಥಾವನಾಗಲೂ, ಆ ಆಕಳು ಆ ಮಾತಂ ಕೇಳಿ, ಹಸಿವಿನಿಂದ ಪೀಡಿತನಾದ ಆ ಬ್ರಾಹ್ಮಣನ ಸ್ವರವಂ ಕಂಡು ಹಿಡಿದು, ಪೋಗುತ್ತಿರುವ ಆತನ ಹಿಂದುಗಡೆ ಬಂದಂಥಾದ್ದಾಯಿತು ॥೧೦॥ ಆ ಆಕಳನ್ನು ಯಾವ ಬ್ರಾಹ್ಮಣನು ಪರಿಪಾಲಿಸುತ್ತಿದ್ದನೊ ಆತನು ಕೂಡ ತ್ವರಿತವಾಗಿ ಓಡಿಬಂದು, ಈಹಸುವು ನನ್ನದು, ನೃಗರಾಜನು ನನಗೆ ದಾನವಾಗಿ ಕೊಟ್ಟನು, ಯಾಕೆ ನೀನು ಕರೆದುಕೊಂಡು ಹೋಗುತ್ತಿಯೆಂಬದಾಗಿ ನುಡಿದವನಾಗಲೂ, ಪಂಡಿತರಾದ ಆ ಬ್ರಾಹ್ಮಣೋತ್ತಮರೀರ್ವರಿಗೆ ಮಹತ್ತರವಾದ ವಿವಾಹವು ನಡೆದು, ಒಬ್ಬರಿಗೊಬ್ಬರು ಜಗಳವಂಗೈದು ರಾಜನಂ ಕುರಿತು ಬಂದು ಅರಮನೆಯ ಬಾಗಿಲಿನಲ್ಲಿ ಅನೇಕದಿನಗಳು ಕಾದುಕೊಂಡಿದ್ದರು. ರಾಜಾಜ್ಞೆಯಂ ಪಡೆಯದೆ ಕಡುಕುಪಿತರಾಗಿ ಸಂತಪಿಸುತ್ತಾ ಘೋರವಾದ ಈ ವಾಕ್ಯವನ್ನು ಆ ರಾಜನಂ ಕುರಿತು, ಎಲೈ ರಾಜನೆ ! ಯಾಚಕರಿಗೆ ನೀನು ಯಾವಕಾರಣದ ದೆಶೆಯಿಂದ ದರುಶನವಂ ಕೊಡುವದಿಲ್ಲವೋ, ಆ ಹೇತುವಿನಿಂದ ನೀನು ಅನೇಕವರುಷಗಳು ಸರ್ವಪ್ರಾಣಿಗಳಿಗೂ ಅದೃಶ್ಯನಾಗಿ, ಒಂದಾನೊಂದು ಗುಣಿಯೊಳು ಓತೀ ಕ್ಯಾತೆಯ ರೂಪವಾಗಿ ಬಹು ಕಾಲವಿರುವಂಥಾವನಾಗೆಂದು ಶಪಿಸಿದವರಾದರು. (ಬಳಿಕ ಆ ನೃಗರಾಜನಿಂದ ಪ್ರಾರ್ಥಿತರಾಗಿ ಆಗ ಹೇಳುವರದೆಂತೆನೆ,—) ಎಲೈರಾಜನೆ ! ಶ್ರೀಮಹಾವಿಷ್ಣುವು ಮಾನುಷರೂಪವಂತಾಳಿ, ಯದುಕುಲಕ್ಕೆ ಯಶಸ್ಸಂಪಾದಕನಾಗಿ, ವಸುದೇವ ಪುತ್ರ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕೋ ವಿಷ್ಣುಃ ಪುರುಷವಿಗ್ರಹಃ ॥೧೯॥ ಸ ತೇ ಮೋಕ್ಷಯಿತಾ ರಾಜನ್ ತಸ್ಮಾಚ್ಛಾಪಾದ್ಭವಿಷ್ಯತಿ । ಕೃತಾ ಚ ತೇನ ಕಾಲೇನ ನಿಷ್ಕೃತಿಸ್ತೇ ಭವಿಷ್ಯತಿ ॥೨೦॥ ಏವಂ ತೌ ಶಾಪಮುತ್ಸೃಜ್ಯ ಬ್ರಾಹ್ಮಣೌ ವಿಗತಜ್ವರೌ ॥ ತಾಂ ಗಾಂ ಹಿ ದುರ್ಬಲಾಂ ವೃದ್ಧಾಂ ದದತುಃ ಬ್ರಾಹ್ಮಣಾಯ ವೈ ॥೨೧॥ ಏವಂ ಸ ರಾಜಾ ತಂ ಶಾಪಮುಪಭುಂಕ್ತೇ ಸುದಾರುಣಮ್ । ಕಾರ್ಯಾರ್ಥಿನಾಂ ವಿಮರ್ದೋ ಹಿ ರಾಜ್ಞಾಂ ದೋಷಾಯ ಕಲ್ಪತೇ ॥೨೨॥ ತಚ್ಛೀಘ್ರಂ ದರ್ಶನಂ ಮಹ್ಯಮಭಿವರ್ತಂತು ಕಾಂಕ್ಷಿಣಃ । ಅಕೃತಸ್ಯ ಹಿ ಕಾರ್ಯಸ್ಯ ಫಲಂ ನೋಪೈತಿ ಪಾರ್ಥಿವಃ ॥ ತಸ್ಮಾದ್ಗಚ್ಛ ಪ್ರತೀಕ್ಷಸ್ವ ಸೌಮಿತ್ರೇ ಕಾರ್ಯವಾನ್ ಜನಃ ॥೨೩॥ ತಚ್ಛೀಘ್ರಂ ದರ್ಶನಂ ಮಹ್ಯಮಭಿವರ್ತಂತು ಕಾಂಕ್ಷಿಣಃ ॥೨೪॥ —⁝* ಇತಿ ಶ್ರೀಮದುತ್ತರಕಾಂಡೇ ತ್ರಿಪಂಚಾಶಸ್ಸರ್ಗಃ.*⁝—

ರಾಮಸ್ಯ ವಚನಂ ಶ್ರುತ್ವಾ ಲಕ್ಷ್ಮಣಃ ಪರಮಾರ್ಥವಿತ್ । ಉವಾಚ ಪ್ರಾಂಜಲಿರ್ವಾಕ್ಯಂ ರಾಘವಂ ದೀಪ್ತತೇಜಸಮ್ ॥೧॥ ಅಲ್ಪಾಪರಾಧೇ ಕಾಕುತ್ಸ್ಥ ದ್ವಿಜಾಭ್ಯಾಂ ಶಾಪ ಈರಿತಃ । ಮಹಾನ್ ನೃಗಸ್ಯ ರಾಜರ್ಷೇರ್ಯಮದಂಡ ಇವಾಪರಃ ॥೨॥ ಶ್ರುತ್ವಾ

---

ವಿಷ್ಣುಃ-ಶ್ರೀಮಹಾವಿಷ್ಣುವು, ಪುರುಷವಿಗ್ರಹಃ-ಮನುಷ್ಯಶರೀರವುಳ್ಳವನಾಗಿ, ಯದೂನಾಂ-ಯದುವಂಶದ ರಾಜರಿಗೆ, ಕೀರ್ತಿವರ್ಧನಃ-ಯಶಸ್ಸಂಪಾದಕನಾದ, ವಾಸುದೇವಇತಿ-ವಸುದೇವ ಪುತ್ರನಾದ ಶ್ರೀಕೃಷ್ಣನೆಂದು, ಖ್ಯಾತಃ-ಪ್ರಖ್ಯಾತನಾಗಿ, ಅಸ್ಮಿನ್ಲೋಕೇ- ಈ ಮನುಷ್ಯಲೋಕದೊಳ್, ಉತ್ಪತ್ಸ್ಯತಿ-ಹುಟ್ಟುತ್ತಾನೆ ॥೧೯॥ ಹೇ ರಾಜನ್-ಎಲೈ ನೃಗರಾಜನೇ, ಸಃ-ಆ ಶ್ರೀಕೃಷ್ಣನು, ಶಾಪಾತ್-ಈ ಶಾಪದದೆಸೆಯಿಂದ, ತೇ-ನಿನ್ನನ್ನು, ಮೋಕ್ಷಯಿತಾ-ಬಿಡಿಸುವನು, ಭವಿಷ್ಯತಿ-ಆಗುವನು, ತೇನಕಾಲೇನ-ಆ ಕಾಲದಿಂದ, ತೇ-ನಿನಿಗೆ, ಕೃತಾ-ಮಾಡಲ್ಪಟ್ಟದ್ದು, ಭವಿಷ್ಯತಿ-ಆಗುವದು ॥೨೦॥ ಏವಂ-ಈಪರಿಯಾಗಿ, ತೌಬ್ರಾಹ್ಮಣೌ-ಆ ಬ್ರಾಹ್ಮಣರು, ಶಾಪಂ-ಶಾಪವನ್ನು, ಉತ್ಸೃಜ್ಯ-ಬಿಟ್ಟು, ವಿಗತಜ್ವರೌ-ವಿಗತ-ಹೋದಂಥಾ, ಜ್ವರೌ - ಸಂತಾಪಮುಳ್ಳವರಾಗಿ, ದುರ್ಬಲಾಂ-ಬಲಹೀನವಾದ, ವೃದ್ಧಾಂ-ಮುದಿಯಾದ, ತಾಂಗಾಂ-ಆ ಗೋವಿನನ್ನು, ಬ್ರಾಹ್ಮಣಾಯ-ಮತ್ತೊಬ್ಬ ಬ್ರಾಹ್ಮಣನಿಗೋಸ್ಕರ, ದದತುಃ-ಕೊಟ್ಟರು ॥೨೧॥ ಏವಂ-ಈ ಪರಿಯಾಗಿ, ಸರಾಜಾ-ಆ ಅರಸು, ಸುದಾರುಣಂ-ದಾರುಣವಾದ, ತಂಶಾಪಂ-ಆ ಶಾಪವನ್ನು, ಉಪಭುಂಕ್ತೇ-ಅನುಭವಿಸುತ್ತಿದ್ದಾನೇ, ಕಾರ್ಯಾರ್ಥಿನಾಂ-ರಾಜಕಾರ್ಯವನ್ನು ಬೇಡುತ್ತಿರುವ ಪ್ರಜೆಗಳ, ವಿಮರ್ದಃ-ಕಲಹವು, ರಾಜ್ಞಾಂ-ಅರಸುಗಳಿಗೆ, ದೋಷಾಯ-ದೋಷಕ್ಕೋಸುಗ, ಕಲ್ಪತೇ-ಆಗುತ್ತದೇ ॥೨೨॥ತತ್-ಆ ಕಾರಣದ ದೆಸೆಯಿಂದ, ಶೀಘ್ರಂ-ಜಾಗ್ರತೆಯಾಗಿ, ಕಾಂಕ್ಷಿಣಃ-ರಾಜಕಾರ್ಯ ನಿರೀಕ್ಷಣಕರ್ತರು, ಮಹ್ಯಂ-ನನಿಗೆ, ದರ್ಶನಂ-ದರುಶನವನ್ನು, ಅಭಿವರ್ತಂತು-ಎದುರಾಗಿ ನಿಲ್ಲಲೀ, ಪಾರ್ಥಿವಃ-ಅರಸು, ಅಕೃತಸ್ಯ-ಕರ್ತವ್ಯಮಾಡದೆ ಇರುವ, ಕಾರ್ಯಸ್ಯ-ಕಾರ್ಯದ, ಫಲಂ-ಫಲವನ್ನು, ನೋಪೈತಿ-ಹೊಂದುವದಿಲ್ಲಾ, ತಸ್ಮಾತ್-ಆ ಕಾರಣದ ದೆಸೆಯಿಂದ, ಹೇ ಸೌಮಿತ್ರೇ-ಎಲೈ ಲಕ್ಷ್ಮಣಸ್ವಾಮಿಯೇ, ಗಚ್ಛ-ಹೋಗು, ಕಾರ್ಯವಾನ್-ರಾಜಕಾರ್ಯಮುಳ್ಳ, ಜನಃ-ಜನವು, ಅಸ್ತಿಯದಿ-ಇದ್ದದ್ದಾದರೇ, ಪ್ರತೀಕ್ಷಸ್ವ-ನಿರೀಕ್ಷಿಸು ॥೨೩॥

—⁝*ಇತಿ ಶ್ರೀಮದುತ್ತರರಾಮಾಯಣೇ ತ್ರಿಪಂಚಾಶಸ್ಸರ್ಗಃ.*⁝—

ಟೀ॥ ರಾಘವಸ್ಯ-ಶ್ರೀರಾಮನ, ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಪರಮಾರ್ಥವಿತ್-ಯಥಾರ್ಥವನ್ನು ತಿಳಿದಿರುವ, ಲಕ್ಷ್ಮಣಃ-ಲಕ್ಷ್ಮಣಸ್ವಾಮಿಯು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ದೀಪ್ತತೇಜಸಂ-ದೀಪ್ತ-ಹೊಳೆಯುತ್ತಿರುವ, ತೇಜಸಂ-ಪ್ರಕಾಶಮುಳ್ಳ, ರಾಘವಂ-ಶ್ರೀರಾಮನಂಕುರಿತು, ವಾಕ್ಯಂ-ಮಾತನ್ನು, ಉವಾಚ-ಹೇಳಿದನು ॥೧॥ ಹೇಕಾಕುತ್ಸ್ಥ-ಎಲೈಶ್ರೀರಾಮನೇ, ರಾಜರ್ಷೇಃ-ರಾಜರ್ಷಿಯಾದ, ನೃಗಸ್ಯ-ನೃಗರಾಯನಿಗೆ, ಅಲ್ಪಾಪರಾಧೇಸತಿ-ಸ್ವಲ್ಪಾಪರಾಧವಿಷಯವಾಗಿ, ಅಪರಃ-ಮತ್ತೊಂದಾದ, ಯಮದಂಡಇವ-ಯಮನದಂಡದಂತೇ, ಮಹಾನ್-ದೊಡ್ಡದಾದ, ಶಾಪಃ-ಶಾಪವು, ದ್ವಿಜಾಭ್ಯಾಂ-ಬ್ರಾಹ್ಮಣರಿಂದ, ಈರಿತಃ-ಪ್ರೇರೇಪಿಸಲ್ಪಟ್ಟಿತು॥೨॥ಹೇ ಪುರುಷರ್ಷಭ-ಎಲೈ ಶ್ರೀರಾಮನೇ, ನೃಗೋರಾಜಾ-ನೃಗಚಕ್ರವರ್ತಿಯು, ಆ

---

ನಾದ ಶ್ರೀ ಕೃಷ್ಣನೆಂದು ಖ್ಯಾತನಾಗಿ ಈ ಲೋಕದೊಳು ಸಂಜನಿಸುವನು, ಆ ಮಹಾನುಭಾವನು ನಿನಿಗೀಶಾಪ ವಿಮೋಚನೆಯಂಗೈಯ್ಯುವನು, ಆಗ ನಿನಿಗೆ ಸುಖವುಂಟಾಗುವದೆಂದು ಶಾಪ ವಿಮೋಚನ ಕಾಲವನ್ನೂ ಸಹ ಹೇಳಿ, ಆಬ್ರಾಹ್ಮಣೋತ್ತಮರೀರ್ವರೂ ಸಂತಾಪವಿಲ್ಲದೆ ಇರುವರಾಗಿ, ಬಲಹೀನವಾಗಿರ್ಪ ಮತ್ತು ಮುದಿಯಾದ ಆ ಆಕಳನ್ನು ಮತ್ತೊರ್ವಬ್ರಾಹ್ಮಣನಿಗೆ ಕೊಟ್ಟವರಾದರು. ॥೨೧॥ ಕೇಳೆಲೈ ಲಕ್ಷ್ಮಣನೇ! ಆ ರಾಜನು ಈಪರಿಕಡುದಾರುಣವಾದ ಆ ಶಾಪವನ್ನನುಭವಿಸುತ್ತಿದ್ದಾನೆ, ರಾಜಕಾರ್ಯಗಳನ್ನು ಬೇಡುತ್ತಿರುವ ಜನಗಳ ಕಲಹವು ಕೂಡಾ ರಾಜನಿಗೆ ದೋಷಾಕರವಾಗಿರುವದು. ॥೨೨॥ ಆದಕಾರಣ ರಾಜಕಾರ್ಯಾರ್ಥವಾಗಿ ನಿರೀಕ್ಷಿಸಿಕೊಂಡಿರುವರು. ಎದುರಾಗಿ ಬರುವಂಥಾವರಾಗಲಿ, ರಾಜನಾದವನು ಅವರ ಕಾರ್ಯಗಳಂ ಮಾಡದಿದ್ದರೆ ಪ್ರಯೋಜನವಿಲ್ಲ, ಆದಕಾರಣ ಕೆಲಸಗಾರರನ್ನು ಕರೆದುಕೊಂಡು ಬರುವಂಥಾವನಾಗೆಂದು ಶ್ರೀರಾಮನುಲಕ್ಷ್ಮಣನಂ ಕುರಿತು ನಿರೂಪಿಸಿದಂಥಾವನಾದನು.

—⁝*ಉತ್ತರರಾಮಾಯಣದಲ್ಲಿನ ೫೩ನೆಯ ಸರ್ಗಂ ಮುಗಿದುದು*⁝—

ಪರಮಾರ್ಥಜ್ಞನಾದ ಲಕ್ಷ್ಮಣನು ಶ್ರೀರಾಮನ ವಾಕ್ಯವಂ ಕೇಳಿ, ಕೈಮುಗಿದುಕೊಂಡು ಕಂಗೊಳಿಸುತ್ತಿರುವ ಕಾಂತಿಯುಳ್ಳ ಕಾಕುತ್ಸ್ಥನಂಕುರಿತು, ಎಲೈ ರಾಘವನೇ! ಸ್ವಲ್ಪವಾದ ಅಪರಾಧಕ್ಕೋಸುಗ ಆ ಬ್ರಾಹ್ಮಣೋತ್ತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತುಶಾಪಸಂಯುಕ್ತಮಾತ್ಮಾನಂಪುರುಷರ್ಷಭ । ಕಿಮುವಾಚನೃಗೋರಾಜಾದ್ವಿಜೌಕ್ರೋಧಸಮನ್ವಿತೌ ॥೩॥ ಲಕ್ಷ್ಮಣೇನೈವಮುಕ್ತಸ್ತುರಾಘವಃ ಪುನರಬ್ರವೀತ । ಶೃಣುಸೌಮ್ಯಯಥಾಪೂರ್ವಂಸರಾಜಾಶಾಪವಿಕ್ಷತಃ ॥೪॥ ಅಥಾಧ್ವನಿಗತೌವಿಪ್ರೌವಿಜ್ಞಾಯಸನೃಗಸ್ತದಾ। ಆಹೂಯಮಂತ್ರಿಣಸ್ಸರ್ವಾನ್ನೈಗಮಾನ್ಸಪುರೋಧಸಃ ॥೫॥ ತಾನುವಾಚನೃಗೋರಾಜಾಸರ್ವಾಶ್ಚಪ್ರಕೃತೀಸ್ತದಾ। ದುಃಖೇನಸುಸಮಾವಿಷ್ಟಃಶ್ರೂಯತಾಂಮೇಸಮಾಹಿತೈಃ ॥೬॥ ನಾರದಃಪರ್ವತಶ್ಚೈವಮಮದತ್ವಾಮಹದ್ಭಯಮ್। ಗತೌತ್ರಿಭುವನಂವಿಪ್ರೌವಾಯುಭೂತಾವನಿಂದಿತೌ ॥೭॥ ಕುಮಾರೋಯಂವಸುರ್ನಾಮಸಇಹಾದ್ಯಾಭಿಷಿಚ್ಯತಾಮ್। ಶ್ವಭ್ರಂಚೈವಸುಖಸ್ಪರ್ಶಂಕ್ರಿಯತಾಂಶಿಲ್ಪಿನಿರ್ಮಿತಮ್ ॥೮॥ ವರ್ಷಘ್ನಮೇಕಂಶ್ವಭ್ರಂತುಹಿಮಘ್ನಮಪರಂತಥಾ । ಗ್ರೀಷ್ಮಘ್ನಂಚಸುಖಸ್ಪರ್ಶಮೇಕಂಕುರ್ವಂತುಶಿಲ್ಪಿನಃ ॥೯॥ ಫಲವಂತಶ್ಚಯೇವೃಕ್ಷಾಃಪುಷ್ಪವಂತಶ್ಚ

---

ತ್ಮಾನಂ-ತನ್ನನ್ನು, ಶಾಪಸಂಯುಕ್ತಂ-ಶಾಪದಿಂದ ಕೂಡಿಕೊಂಡಿರುವವನನ್ನಾಗಿ, ಶ್ರುತ್ವಾತು-ಕೇಳಿಯಾದರೆ, ಕ್ರೋಧಸಮನ್ವಿತೌ-ಕೋಪದಿಂದ ಕೂಡಿಕೊಂಡಿರುವ, ದ್ವಿಜೌ-ಆ ಬ್ರಾಹ್ಮಣರನ್ನು ಕುರಿತು, ಕಿಮುವಾಚ-ಯೇನುಹೇಳಿದನು, ॥೧೩॥ ಲಕ್ಷ್ಮಣೇನ-ಲಕ್ಷ್ಮಣನಿಂದ, ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ರಾಘವಸ್ತು-ಶ್ರೀರಾಮನಾದರೆ, ಪುನಃ-ತಿರುಗ, ಅಬ್ರವೀತ್-ಮಾತಾಡಿದನು, ಹೆ ಸೌಮ್ಯ- ಎಲೈ ಸೌಮ್ಯನೇ, ಯಥಾಪೂರ್ವಂ-ಪೂರ್ವಕಾಲದಲ್ಲಿ ನಡೆದುತೆ, ಸರಾಜಾ-ಆ ಅರಸು, ಶಾಪವಿಕ್ಷತಃ-ಶಾಪದಿಂದ ಹೊಡೆಯಲ್ಪಟ್ಟನೋ, ತಥಾ-ಹಾಗೆಯೇ, ಶೃಣು-ಕೇಳು ॥೪॥ ಅಥ-ಅನಂತರದಲ್ಲಿ, ಸನೃಗಃ-ಆನೃಗರಾಯನು, ಅಧ್ವನಿಗತೌ-ಅಧ್ವನಿ-ಮಾರ್ಗದಲ್ಲಿ, ಗತೌ-ಹೋಗುತ್ತಿರುವ, ವಿಪ್ರೌ-ಬ್ರಾಹ್ಮಣರನ್ನು, ವಿಜ್ಞಾಯ-ತಿಳಿದು, ಸರ್ವಾನ್-ಸಮಸ್ತರಾದ, ನೈಗಮಾನ್-ಪಟ್ಟಣಸ್ಥ ಜನರನ್ನು, ಸಪುರೋಧಸಃ-ಪುರೋಹಿತರಿಂದೊಡಗೂಡಿದ, ಮಂತ್ರಿಣಃ-ಮಂತ್ರಿಗಳನ್ನು, ಆಹೂಯ-ಕರೆಸಿ ॥ ೫ ॥ ನೃಗೋರಾಜಾ-ನೃಗರಾಯನು, ತದಾ-ಆ ಕಾಲದಲ್ಲಿ, ದುಃಖೇನ-ದುಃಖದಿಂದ, ಸುಸಮಾವಿಷ್ಟಃ-ಆಕ್ರಾಂತನಾಗಿ, ಸರ್ವಾಃ-ಸಮಸ್ತರಾದ, ಪ್ರಕೃತೀಃ – ಪ್ರಜೆಗಳನ್ನು ಕುರಿತು, ತಾನ್-ಆ ಮಂತ್ರಿಗಳನ್ನು ಕುರಿತು, ಮೇ-ನನ್ನ, ವಚಃ-ವಾಕ್ಯವು, ಸಮಾಹಿತೈಃ-ಸಮಾಧಾನಚಿತ್ತರಾದ ನಿಮ್ಮಗಳಿಂದ, ಶ್ರೂಯತಾಂ-ಕೇಳಲ್ಪಡಲಿ, ಇತಿ-ಈಪರಿಯಾಗಿ, ಉವಾಚ-ಹೇಳಿದನು ॥ ೬ ॥ ನಾರದಃ-ನಾರದಋಷಿಯು, ಪರ್ವತಶ್ಚೈವ-ಪರ್ವತಋಷಿಯು, ಮಹತ್- ದೊಡ್ಡದಾದ, ಭಯಂ-ಭಯಂಕರವಾದ, ಶಾಪಂ-ಶಾಪವನ್ನು, ಮಮ-ನನಗೆ, ದತ್ವಾ-ಕೊಟ್ಟು, ಅನಿಂದಿತೌ- ದೋಷರಹಿತರಾದ, ವಿಪ್ರೌ-ಬ್ರಾಹ್ಮಣರು, ವಾಯುಭೂತೌ-ಗಾಳಿಯಶರೀರವುಳ್ಳವರಾಗಿ, ತ್ರಿಭುವನಂ-ಸ್ವರ್ಗಲೋಕವನ್ನು ಕುರಿತು, ಯಯೌ- ಹೊರಟುಹೋದರು ॥೭॥ ಅಯಂಕುಮಾರಃ-ಈ ಕುಮಾರನು, ವಸುರ್ನಾಮ-ವಸುವೆಂದು ಪ್ರಸಿದ್ಧನು, ಸಃ-ಆ ಕುಮಾರನು, ಇಹ-ಈ ದೇಶದಲ್ಲಿ, ಅದ್ಯ-ಈಗಲೇ, ಅಭಿಷಿಚ್ಯತಾಂ-ಪಟ್ಟಾಭಿಷೇಕಮಾಡಿಸಲ್ಪಡಲೀ, ಶ್ವಭ್ರಂ-ಗುಣಿಯು, ಸುಖಸ್ಪರ್ಶಂ-ಸುಖಕರವಾದ ಸ್ಪರ್ಶವುಳ್ಳದ್ದಂತೇ, ಶಿಲ್ಪಿನಿರ್ಮಿತಂ – ಶಿಲ್ಪಿ-ಬಡಿಗೀ ಕೆಲಸದವರಿಂದ, ನಿರ್ಮಿತಂ-ನಿರ್ಮಿತವಾದ್ದಾಗಿ, ಕ್ರಿಯತಾಂ-ಮಾಡಲ್ಪಡಲೀ ॥೮॥ ಶಿಲ್ಪಿನಃ-ಕಾಮಾಟಿಗರು, ವರ್ಷಘ್ನಂ-ಮಳೆಯನ್ನು ಹೊಡಿಯುತ್ತಿರುವ, ಏಕಂ-ಒಂದಾದ, ಶ್ವಭ್ರಂ-ಗರ್ತವನ್ನು, ತಥಾ-ಹಾಗೆಯೇ, ಹಿಮಘ್ನಂ-ಹಿಮವನ್ನು ಹೋಗಲಾಡಿಸುತ್ತಿರುವ, ಅಪರಂ-ಮತ್ತೊಂದುಗರ್ತವನ್ನು, ಗ್ರೀಷ್ಮಘ್ನಂಚ-ಗ್ರೀಷ್ಮಕಾಲಿಕವಾದ ತಾಪವನ್ನು ಹೊಡಿಯುತ್ತಿರುವ, ಸುಖಸ್ಪರ್ಶಂ-ಸುಖಕರವಾದ ಸ್ಪರ್ಶಯುಳ್ಳ, ಏಕಂ-ಒಂದು ಗರ್ತವನ್ನು, ಕುರ್ವಂತು-ಮಾಡಲೀ, ಯೇವೃಕ್ಷಾಃ-ಯಾವ ವೃಕ್ಷಗಳು, ಫಲವಂತಃ-ಫಲಗಳಿಂದ ಕೂಡಿಕೊಂಡಿರುವವೋ, ಪುಷ್ಪವತ್ಯಃ-ಹುವ್ವುಗಳುಳ್ಳ, ಯಾಲತಾಃ-ಯಾವ ಬಳ್ಳಿಗಳುಂಟೋ, ಗುಲ್ಮಿನಃ-ಪೊದೆಯಿಂದ ಯುಕ್ತವಾದ, ಬಹ್ವಾಸ್ವಾದಾಃ-ಬಹುರುಚಿಕರವಾದ, ಬಹುವಿಧಾಃ-ಬಹುಬಗೆಗಳಾದ, ತಾಃ-ಆ ಲತೆಗಳು, ಆರೋಪ್ಯಂತಾಂ-ಸ್ಥ

---

ಮುನೀಶ್ವರರೂ ಯಮದಂಡದೋಪಾದಿಯಲ್ಲಿ ಕಡುಭಯಂಕರವಾಗಿರುವ ಈ ಶಾಪವಂಕೊಟ್ಟವರಾಗಲೂ, ಆ ನೃಗರಾಜನದಂ ಕೇಳಿ, ಕುಪಿತರಾದ ಆ ಬ್ರಾಹ್ಮಣರಂ ಕುರಿತು, ಯೇನು ಪೇಳಿದನೆಂದು ಪ್ರಶ್ನೆಯಂಗೈದವನಾಗಲೂ, ಶ್ರೀರಾಮನು ಮತ್ತಿಂತೆಂದನು, ಎಲೈ ಲಕ್ಷ್ಮಣನೆ ! ಪೂರ್ವದಲ್ಲಿ ಆ ರಾಜನು ಹ್ಯಾಗೆ ನಿರೂಪಿಸಿದಂಥಾವನಾದನೊ ಅದಂ ಪೇಳ್ವೆನು ಕೇಳು, ಆ ಬ್ರಾಹ್ಮಣರೀರ್ವರೂ ಈಪರಿ ಆ ನೃಗರಾಜನಿಗೆ ಶಾಪವಂಕೊಟ್ಟು ದಾರಿಯೊಳು ಹೊರಟುಹೋಗಲು ಬಳಿಕ, ಆ ರಾಜನು, ಮಂತ್ರಿಗಳನ್ನೂ ಪುರೋಹಿತನನ್ನೂ ಪಟ್ಟಣಸ್ಥರನ್ನೂ ಇವರುಗಳನ್ನೆಲ್ಲ ಕರೆಯಿಸಿ, ದುಃಖಾಕ್ರಾಂತನಾಗಿ, ಆ ಜನಗಳಂ ಕುರಿತು ಎಲೈ ಜನಗಳಿರಾ! ಕೇಳಿರಿ, ನಾರದಋುಷಿಯು ಪರ್ವತಕಮುನಿಯು ಯಂಬ ಪೂಜ್ಯರಾದ ಮಹರ್ಷಿಗಳೀರ್ವರು, ನನಗೆ ಮಹಾದಾರುಣವಾದ ಶಾಪವಂ ಕೊಟ್ಟು ವಾಯುವೇಗದಂತೆ ವೇಗವುಳ್ಳವರಾಗಿ ಸ್ವರ್ಗವಂ ಕುರಿತು ತೆರಳಿದವರಾದರು. ॥೭॥ ಎನ್ನ ಕುಮಾರನಾದ ವಸುವೆಂಬ ಈ ಬಾಲಕನು ಈಗ ಈ ದೇಶದೊಳು ಪಟ್ಟಾಭಿಷೇಕ ಮಾಡಲ್ಪಡಲಿ, ಬಡಿಗಿ ಕೆಲಸಗಾರರಿಂದ ಸುಖವಾಗಿರುವಂತೆ ಗುಣಿಗಳಂ ಮಾಡಿಸುವಂಥಾವರಾಗಿರಿ, ಅದರೊಳು ಒಂದು ಗರ್ತವು ಮಳೆಸುರಿದರೆ ಒಳಗಡೆ ಹನಿಗಳು ಬೀಳದಂತೆಯೂ, ಮತ್ತೊಂದು ಹಿಮಕಾಲದಲ್ಲಿ ಬೆಚ್ಚಗಿರುವಂತೆಯೂ, ಇನ್ನೊಂದು ಬಿಸಿಲುಕಾಲದಲ್ಲಿ ಸುಖವಾಗಿ ಥಣ್ಣಗಿರುವಂತೆಯೂ, ಕೆಲಸಗಾರರು ಮಾಡುವದಲ್ಲದೆ, ಫಲಭರಿತವಾದ ವೃಕ್ಷಗಳೂ, ಮತ್ತು ಪುಷ್ಪಿಸಿದವುಗಳಾಗಿಯೂ ಪೊದೆಗಳಾಗಿಯೂ ಬಹು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಾಲತಾಃ।ಆರೋಪ್ಯಂತಾಂಬಹುವಿಧಾಬಹ್ವ್ಯಾಸ್ಸ್ಥಾಪ್ಯಂತಾಶ್ಚ ಗುಲ್ಮಿನಃ॥೧೦॥ಕ್ರಿಯತಾಂರಾಮಣೀಯಂಚಶ್ವಭ್ರಾಣಾಂಸರ್ವ ತೋದಿಶಂ। ಸುಖಮತ್ರವಸಿಷ್ಯಾಮಿಯಾವತ್ಕಾಲಸ್ಯಪರ್ಯಯಃ ॥೧೧॥ ಪುಷ್ಪಾಣಿಚಸುಗಂಧೀನಿತೇಷುಕುರ್ವಂತುನಿತ್ಯಶಃ। ಪರಿವಾರ್ಯ ಯಥಾಮೇಸ್ಯುರಭ್ಯರ್ಧಂಯೋಜನಂತಥಾ ॥೧೨॥ ಏವಂಕೃತ್ವಾವಿಧಾನಂಸಸಂದಿದೇಶಸುತಂತದಾ । ಧರ್ಮನಿ ತ್ಯಃಪ್ರಜಾಃಪುತ್ರಕ್ಷತ್ರಧರ್ಮಣಪಾಲಯ ॥೧೩॥ ಪ್ರತ್ಯಕ್ಷಂತೇಯಥಾಶಾಪೋದ್ವಿಜಾಭ್ಯಾಂಮಯಿಪಾತಿತಃ । ನರಶ್ರೇಷ್ಠ ಸರೋಷಾಭ್ಯಾಮಪರಾಧೇಪಿತಾದೃಶೇ ॥೧೪॥ ಮಾಕೃಥಾಸ್ತ್ವಂತುಸಂತಾಪಂಮತ್ಕೃತೇಪುರುಷರ್ಷಭ । ಕೃತಾಂತಃಕುಶ ಲಃಪುತ್ರಯೇನಾಸ್ಮಿವ್ಯಸನೀಕೃತಃ ॥೧೫॥ ಪ್ರಾಪ್ತವ್ಯಾನ್ಯೇವಪ್ರಾಪ್ನೋತಿಗಂತವ್ಯಾನ್ಯೇವಗಚ್ಛತಿ । ಲಬ್ಧವ್ಯಾನ್ಯೇವಲಭತೇ ದುಃಖಾನಿಚಸುಖಾನಿಚ ॥೧೬॥ ಪೂರ್ವಜಾತ್ಯಂತರೇವತ್ಸಮಯಾಪಾಪಂಮಹತ್ಕೃತಂ । ತಸ್ಮಾತ್ಪ್ರಾಪ್ತಂಮಯಾಪುತ್ರ ಮಾವಿಷಾದಂಕುರುಷ್ವಹ ॥೧೭॥ ಏವಮುಕ್ತ್ವಾನೃಗಸ್ತತ್ರಸುತಂರಾಜಾಮಹಾಯಶಾಃ । ಶ್ವಭ್ರಂಜಗಾಮಸುಕೃತಂ

---

ಪಿಸಲ್ಪಡಲೀ ॥೧೦॥ ಸರ್ವತೋದಿಶಂ-ಸಮಸ್ತ ದಿಕ್ಕುಗಳಲ್ಲಿ, ಶ್ವಭ್ರಾಣಾಂ-ಗರ್ತಗಳಿಗೆ, ರಾಮಣೀಯಂಚ-ಮನೋಹಾರಿತ್ವವು, ಕ್ರಿಯತಾಂ-ಮಾಡಲ್ಪ ಡಲೀ, ಯಾವತ್ಕಾಲಸ್ಯ-ಎಷ್ಟುಪರಿಯಂತರವೂ, ಕಾಲಪರ್ಯಯಃ-ಕಾಲಪರಿವರ್ತನವಾಗುವದೋ,ತಾವತ್-ಅಷ್ಟುಪರ್ಯಂತವೂ,ಅತ್ರ-ಈ ಗುಣಿಗಳಲ್ಲಿ, ಸುಖಂ-ಸುಖವಾಗಿ, ವಸಿಷ್ಯಾಮಿ-ಇರುವೆನು, ಸುಗಂಧೀನಿ-ಪರಿಮಳಯುಕ್ತವಾದ, ಪುಷ್ಪಾಣಿಚ-ಹುವುಗಳೂನು, ತೇಷು-ಆ ಗುಣಿಗಳಲ್ಲಿ, ಕುರ್ವಂತು- ಮಾಡಿರೀ, ಯಥಾ-ಹ್ಯಾಗೆ, ಮೇ-ನನಿಗೆ, ಅಭ್ಯರ್ಧಂ-ಅಧಿಕವಾದ ಅರ್ಧವುಳ್ಳ, ಯೋಜನಂ - ಮದುಗಾವುದವು, ಪರಿವಾರ್ಯ-ಸುತ್ತುಕೊಂಡು,ಸ್ಯುಃ- ಇರುವವೋ, ತಥಾ-ಹಾಗೆಯೇ, ಕುರ್ವಂತು-ಮಾಡಿರೀ ॥೧೨॥ ಸಃ-ಆ ನೃಗರಾಯನು-ಏವಂ-ಈ ಪರಿಯಾಗಿ, ವಿಧಾನಂ-ಅಜ್ಞೆಯನ್ನು, ಕೃತ್ವಾ-ಮಾ ಡಿ, ತದಾ-ಆ ಕಾಲದಲ್ಲಿ, ಸುತಂ-ಕುವರನನ್ನು ಕುರಿತು, ಸಂದಿದೇಶ-ಅಜ್ಞಾಪಿಸಿದನು, ಹೇಪುತ್ರ-ಎಲೈ ಮಗನೇ, ಕ್ಷತ್ರಧರ್ಮಣ-ರಾಜಧರ್ಮದಿಂದ, ಧರ್ಮನಿ ತ್ಯಃ-ಧರ್ಮದಲ್ಲಿ ಶಾಶ್ವತಬುದ್ಧಿಯುಳ್ಳವನಾಗಿ, ಪ್ರಜಾಃ-ಪ್ರಜೆಗಳನ್ನು, ಪಾಲಯ-ಸಂರಕ್ಷಿಸು ॥೧೩॥ ಹೇನರಶ್ರೇಷ್ಠ-ಎಲೈ ಪುರುಷಶ್ರೇಷ್ಠನೇ, ತೇ-ನಿನ್ನ, ಪ್ರತ್ಯಕ್ಷಂ-ಎದುರಾಗಿ, ತಾದೃಶೇ-ಅಂಥಾಸ್ವಲ್ಪದ, ಅಪರಾಧೇಪಿ-ಅಪರಾಧದಲ್ಲಿಯೂ ಕೂಡ, ಸರೋಷಾಭ್ಯಾಂ-ರೋಷಗಳಿಂದ ಕೂಡಿಕೊಂಡಿರುವ ಬ್ರಾಹ್ಮಣ ರಿಂದ, ಶಾಪಃ-ಶಾಪವು, ಯಥಾ-ಹ್ಯಾಗೆ, ಮಯಿ-ನನ್ನಲ್ಲಿ, ಪಾತಿತಃ-ಬಿಡಲ್ಪಟ್ಟಿತೋ ॥೧೪॥ಹೇ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೇ, ಮತ್ಕೃತೇ- ನನ್ನನಿಮಿತ್ತವಾಗಿ, ತ್ವಂತು-ನೀನಾದರೆ, ಸಂತಾಪಂ-ಸಂತಾಪವನ್ನು, ಮಾಕೃಥಾಃ-ಮಾಡಬ್ಯಾಡ. ಹೇಪುತ್ರ-ಎಲೈ ಮಗನೇ, ಯೇನ - ಯಾವಯಮನಿಂ ದ, ವ್ಯಸನೀಕೃತಃ-ವ್ಯಥೆಯುಳ್ಳವನಾಗಿ ಮಾಡಲ್ಪಟ್ಟೆನೊ, ಸಃ-ಕೃತಾಂತಃ-ಆ ಯಮನು, ಕುಶಲಃ-ಕ್ಷೇಮವುಳ್ಳವನಾಗಿರಲೀ ॥೧೫॥ ಪುರುಷಃ- ಪು ರುಷನು, ದುಃಖಾನಿಚ-ದುಃಖಗಳನ್ನು, ಸುಖಾನಿಚ-ಸುಖಗಳನ್ನು, ಪ್ರಾಪ್ತವ್ಯಾನ್ಯೇವ-ಹೊಂದತಕ್ಕವುಗಳನ್ನೇ, ಪ್ರಾಪ್ನೋತಿ - ಹೊಂದುತ್ತಾನೇ, ಗಂತವ್ಯಾನ್ಯೇವ-ಹೊಗತಕ್ಕವುಗಳನ್ನೆ,ಗಚ್ಛತಿ-ಹೊಂದುತ್ತಾನೇ,ಲಬ್ಧವ್ಯಾನ್ಯೇವ-ಹೊಂದತಕ್ಕವುಗಳನ್ನೇ,ಲಭತೇ-ಹೊಂದುತ್ತಾನೇ॥೧೬॥ಹೇವತ್ಸ-ಎಲೈ ಹು ಡುಗನೇ, ಪೂರ್ವಜಾತ್ಯಂತರೇ, ಪ್ರಾಚೀನವಾದ ಜನ್ಮದಲ್ಲಿ, ಮಯಾ-ನನ್ನಿಂದ, ಮಹತ್ಪಾಪಂ-ಮಹಾಪಾಪವು, ಕೃತಂ-ಮಾಡಲ್ಪಟ್ಟಿತು, ತಸ್ಮಾತ್-ಆ ಪಾಪದ ದೆಶೆಯಿಂದ, ಮಯಾ-ನನ್ನಿಂದ, ಇದಂ-ಇದು, ಪ್ರಾಪ್ತಂ, ಹೊಂದಲ್ಪಟ್ಟಿತು, ಹೆ ಪುತ್ರ-ಎಲೈ ಮಗನೇ, ವಿಷಾದಂ-ವ್ಯಸನವನ್ನು, ಮಾಕುರು ಷ್ವಹ-ಮಾಡಬ್ಯಾಡೆ ॥೧೭॥ ಹೆ ಪುರುಷರ್ಷಭ-ಎಲೈ ಲಕ್ಷ್ಮಣನೆ, ಮಹಾಯಶಾಃ-ಮಹಾಕೀರ್ತಿವಂತನಾದ, ನೃಗೋರಾಜಾ-ನೃಗರಾಯನು, ಸುತಂ-

---

ರುಚಿಕರವಾಗಿಯೂ ಇರುವ ಲತೆಗಳು ಯಾವವೋ ಅಂಥಾಲತೆಗಳೂ ಸಹ ಸ್ಥಾಪಿಸಲ್ಪಡಲಿ.॥೧೦॥ ಆ ಗುಣಿಗಳ ಸುತ್ತು ಮುತ್ತಲೂ ಮನೋಹರವಾಗಿರುವಂತೆ ಮಾಡಿಸುವಂಥಾವರಾಗಿ, ಎನಗೆ ಈ ಶಾಪಮೋಕ್ಷಕಾಲವು ಒದಗುವವರಿಗೂ ಈ ಗುಣಿಗಳಲ್ಲಿ ಸುಖವಾಗಿರುವೆನೂ ॥೧೧॥ ಆಗರ್ತಗಳಲ್ಲಿರುವ ನನ್ನ ಸುತ್ತುಮುತ್ತಲು ಪರಿಮಳಯುಕ್ತವಾದ ಪು ಷ್ಪಗಳ ಸುವಾಸನೆಯು ಪ್ರತಿದಿನವೂ ಒಂದೂವರೆ ಗಾವುದದವರಿಗೂ ಹ್ಯಾಗೆ ವ್ಯಾಪಿಸುವದೋ ಹಾಗೆ ಮಾಡುವಂಥಾ ವರಾಗಿರೆಂದು ಆಜ್ಞೆಯಂಕೊಟ್ಟು, ಆ ವೇಳೆಯಲ್ಲಿ ಕುಮಾರನಂ ಕುರಿತು, ಎಲೈ ಬಾಲಕನೆ! ರಾಜಧರ್ಮದಿಂದ ಧರ್ಮ ದಲ್ಲಿಯೆ ಶಾಶ್ವತಬುದ್ಧಿಯುಳ್ಳವನಾಗಿ ಪ್ರಜೆಗಳಂ ಪರಿಪಾಲಿಸುತ್ತಿರು, (ಯಾಕೆಂದರೆ) ನಿನ್ನ ಸಮಕ್ಷಮದಲ್ಲಿಯೆ ಸ್ವ ಲ್ಪವಾದ ಆ ಅಪರಾಧಕ್ಕೋಸುಗ, ನಾರದಪರ್ವತಕರೀರ್ವರೂ ಬಹಳ ಕೋಪಮುಳ್ಳವರಾಗಿ, ನನಿಗೆ ಶಾಪವಂ ಕೊಟ್ಟಂಥಾವರಾದರಲ್ಲ, (ಅಂದರೆ ನೀನು ಇಂಥಾ ಅಪರಾಧಗಳಿಗೆ ಶಿಲುಕಬೇಡೆಂದು ಭಾವವು) ॥೧೪॥ ಎಲೈ ಪುರುಷ ಶ್ರೇಷ್ಠನೆ! ನನಿಗೋಸುಗ ನೀನು ಚಿಂತಿಸಬೇಡ, ಯಾವ ಯಮನಿಂದ ನಾನು ದುಃಖಿತನಾದಂಥಾವನಾದೆನೋ, ಅಂ ಥಾ ಯಮನು ಕ್ಷೇಮವಾಗಿರಲಿ, ॥೧೫॥ ಕೇಳೈ ಮಗನೆ! ಲೋಕದೊಳು ಯಾವ ಪುರುಷನಾದರೂ ಸರಿಯೆ, ಸುಖ ಗಳನ್ನೇ ಆಗಲಿ ದುಃಖಗಳನ್ನೇ ಆಗಲಿ ಯಾವದನ್ನು ಅನುಭವಿಸಬೇಕೊ ಅದನ್ನೆ ಹೊಂದುವಂಥಾವನಾಗುವನು, ಮ ತ್ತು ಯಾವದು ಹೋಗಬೇಕಾಗಿರುವದೋ ಅದೇ ಹೋಗುವದು, ಯಾವದು ಲಭಿಸಬೇಕೋ ಅದೇ ದೊರೆಯುವ ದು, ಪೂರ್ವಜನ್ಮದಲ್ಲಿ ನಾನು ಯೇನೇನು ಪಾಪಂಗಳಂ ಗೈದಿದ್ದೆನೋ, ಅದರಫಲವು ಈಗ ಅವಶ್ಯಕವಾಗಿ ಅನುಭ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬಾಸಾಯ ಪುರುಷರ್ಷಭ ॥೧೮॥ ಏವಂಪ್ರವಿಶ್ಯ ನೃಗಃಶ್ವಭ್ರಮಂತರ್ವಿಭೂಷಿತಂ । ದ್ವಿಜಾಜ್ಞಾಂಧಾರಯಾಮಾಸ ಬಹುವರ್ಷಗಣಾಯುತಮ್ ॥೧೯॥

*ಇತಿ ಶ್ರೀಮದುತ್ತರರಾಮಾಯಣೇ ಚತುಃಪಂಚಾಶಸ್ಸರ್ಗಃ.*

ಏಷತೇನೃಗಶಾಪಸ್ಯವಿಸ್ತರೋಭಿಹಿತೋಮಯಾ।ಯದ್ಯಸ್ತಿಶ್ರವಣೇಶ್ರದ್ಧಾಶೃಣುಷ್ವೇವಾಪರಾಂಕಥಾಮ್ ॥೧॥ಏವಮು ಕ್ತಸ್ತುರಾಮೇಣಸೌಮಿತ್ರಿಃಪುನರಬ್ರವೀತ್।ತೃಪ್ತಿರಾಶ್ಚರ್ಯಭೂತಾನಾಂಕಥಾನಾಂನಾಸ್ತಿಮೇನೃಪ ॥ ಲಕ್ಷ್ಮಣೇನೈವಮುಕ್ತಸ್ತುರಾಮಇಕ್ಷ್ವಾಕುನಂದನಃ । ಕಥಾಂಪರಮಧರ್ಮಾತ್ಮಾವ್ಯಾಹರ್ತುಮುಪಚಕ್ರಮೇ ॥೩॥ ಆಸೀದ್ರಾಜಾನಿಮಿರ್ನಾಮ ಇಕ್ಷ್ವಾಕೂಣಾಂಮಹಾತ್ಮನಃ। ಪುತ್ರೋದ್ವಾದಶಮೋವೀರಧರ್ಮೇಚಪರಿನಿಷ್ಠಿತಃ ॥೪॥ಸರಾಜಾವೀರ್ಯಸಂಪನ್ನಃಪುರಂದೇವಪುರೋಪಮಮ್ ।ನಿವೇಶಯಾಮಾಸತದಾಆಭ್ಯಾಶೇಗೌತಮಸ್ಯತು ॥೫॥ ಪುರಸ್ಯಸುಕೃತಂನಾಮವೈಜಯಂತಮಿತಿಶ್ರುತಮ್।

---

ಕುವರನನ್ನು ಕುರಿತು, ಏವಂ-ಈ ಪರಿಯಾಗಿ, ಉಕ್ತ್ವಾ-ಪೇಳಿ, ಸುಕೃತಂ-ಶಿಲ್ಪಿಗಳಿಂದ ಮಾಡಲ್ಪಟ್ಟ, ಶ್ವಭ್ರಂ-ಗರ್ತವನ್ನು ಕುರಿತು, ವಾಸಾಯ-ಇರುವದಕ್ಕೋಸ್ಕರ, ಜಗಾಮ-ತೆರಳಿದನು ॥೧೮॥ ನೃಗಃ-ಆನೃಗರಾಯನು, ಏವಂ-ಈ ಪರಿಯಾಗಿ, ಅಂತರ್ವಿಭೂಷಿತಂ-ಅಂತಃ-ಒಳಗೆ, ವಿಭೂಷಿತಂ-ಅಲಂಕರಿಸಲ್ಪಟ್ಟ, ಶ್ವಭ್ರಂ-ಗುಣಿಯನ್ನು, ಪ್ರವಿಶ್ಯ-ಪ್ರವೇಶಿಸಿ, ದ್ವಿಜಾಜ್ಞಾಂ-ಬ್ರಾಹ್ಮಣಾಜ್ಞೆಯನ್ನು, ಬಹುವರ್ಷಗಣಾಯುತಂ- ಅನೇಕಸಂವತ್ಸರಗಳ ಸಮೂಹದಿಂದ ಕೂಡಿಕೊಂಡಿರುವಕಾಲವು, ಧಾರಯಾಮಾಸ-ಧರಿಸಿದನು ॥೧೯॥

—⋯*ಇತಿ ಶ್ರೀಮದುತ್ತರ ರಾಮಾಯಣೇ ಚತುಃಪಂಚಾಶ ಸ್ಸರ್ಗಃ.*⋯—

ತೇ-ನಿನಗೆ, ನೃಗಶಾಪಸ್ಯ-ನೃಗರಾಯನ, ಶಾಪಸ್ಯ-ಶಾಪವಚನವನದ, ಏಷಃ-ಈ, ವಿಸ್ತರಃ-ವಿಸ್ತಾರವು, ಮಯಾ-ನನ್ನಿಂದ, ಅಭಿಹಿತಃ-ಪೇಳಲ್ಪಟ್ಟಿತು, ಶ್ರವಣೇ-ಶ್ರವಣದಲ್ಲಿ, ಶ್ರದ್ಧಾ-ಭಕ್ತಿಯು, ಅಸ್ತಿಯದಿ-ಇದ್ದದ್ದೇ ಆದರೇ, ಅಪರಾಂಕಥಾಂ-ಮತ್ತೊಂದು ಕಥೆಯನ್ನು, ಶೃಣುಷ್ವ-ಕೇಳು ॥೧॥ ರಾಮೇಣ-ಶ್ರೀರಾಮನಿಂದ, ಏವಂ-ಈಪರಿ, ಉಕ್ತಃ-ಪೇಳಲ್ಪಟ್ಟ, ಸೌಮಿತ್ರಿಃ-ಲಕ್ಷ್ಮಣಸ್ವಾಮಿಯು, ಪುನಃ-ಮತ್ತು-ಅಬ್ರವೀತ್-ನುಡಿದನು, ಹೇನೃಪ-ಎಲೈ ಅರಸೇ, ಆಶ್ಚರ್ಯಭೂತಾನಾಂ-ಆಶ್ಚರ್ಯಕರಂಗಳಾದ, ಕಥಾನಾಂ-ಕಥೆಗಳ ವಿಷಯವಾಗಿ, ಮೇ-ನನಗೆ, ತೃಪ್ತಿಃ-ಸಾಕೆಂಬ ಬುದ್ಧಿಯು, ನಾಸ್ತಿ-ಇಲ್ಲ ॥೨॥ ಲಕ್ಷ್ಮಣೇನ-ಲಕ್ಷ್ಮಣಸ್ವಾಮಿಯಿಂದ,ಏವಮುಕ್ತಃ-ಈಪರಿಯಾಗಿ ಪೇಳಲ್ಪಟ್ಟವನಾಗಿ, ಪರಮಧರ್ಮಾತ್ಮಾ- ಬಹಳ ಧರ್ಮಿಷ್ಠನಾದ, ಇಕ್ಷ್ವಾಕುನಂದನಃ-ಇಕ್ಷ್ವಾಕು ವಂಶಕ್ಕೆ ಆನಂದಕರನಾದ, ರಾಮಃ-ಶ್ರೀರಾಮನು, ಕಥಾಂ-ಕಥೆಯನ್ನು, ವ್ಯಾಹರ್ತುಂ-ಪೇಳುವದಕ್ಕೋಸ್ಕರ, ಉಪಚಕ್ರಮೇ-ಉಪಕ್ರಮಿಸಿದನು ॥೩॥ ಹೆ ವೀರ-ಎಲೈ ಶೂರನೇ, ಮಹಾತ್ಮನಃ-ಮಹಾತ್ಮನಾದ, ಇಕ್ಷ್ವಾಕೋಃ-ಇಕ್ಷ್ವಾಕು ಮಹಾರಾಯನಿಗೆ, ದ್ವಾದಶಮಃ- ಹನ್ನೆರಡನೆ ಯವನಾದ, ಪುತ್ರಃ-ಪುತ್ರನಾದ, ನಿಮಿರ್ನಾಮ-ನಿಮಿ ಎಂದು ಪ್ರಸಿದ್ಧನಾದ, ರಾಜಾ-ಅರಸು, ಧರ್ಮೇಚ-ಧರ್ಮದಲ್ಲಿಯೂ, ಪರಿನಿಷ್ಠಿತಃ-ಶ್ರದ್ಧಾವಂತನಾದವನು, ಆಸೀತ್-ಆದನು॥೪॥ ವೀರ್ಯಸಂಪನ್ನಃ-ಶೌರ್ಯದಿಂದ ಕೂಡಿಕೊಂಡಿರುವ,ಸರಾಜಾ-ಆ ನಿಮಿರಾಯನು, ಗೌತಮಸ್ಯ-ಗೌತಮಋಷಿಯ, ಅಭ್ಯಾಶೇ-ಸಮೀಪದಲ್ಲಿ, ದೇವಪುರೋಪಮಂ-ಸ್ವರ್ಗಲೋಕಕ್ಕೆಸಮಾನವಾದ, ಪುರಂ-ಪಟ್ಟಣವನ್ನು,ತದಾ-ಆ ಕಾಲದಲ್ಲಿ, ನಿವೇಶಯಾಮಾಸ-ವಾಸಮಾಡಿದನು॥

---

ವಿಸಬೇಕಾಯಿತು, ಆದಕಾರಣ ನೀನು ವ್ಯಸನಿಸಬೇಡ, ಎಂಬದಾಗಿ ಮಹಾಯಶೋವಂತನಾದ ನೃಗರಾಜನು ಪುತ್ರನಿಗೆ ನಿರೂಪಿಸಿ, ಮಣ್ಣುಕೆಲಸಗಾರರಿಂದ ಸುಖವಾಗಿರುವಂತೆ ಮಾಡಲ್ಪಟ್ಟ ಗರ್ತವಂ ಕುರಿತು ತೆರಳಿ, ಒಳಗೆ ಅಲಂಕರಿಸಲ್ಪಟ್ಟ ಆಗುಣಿಯಂಹೊಕ್ಕು, ಬಹುವರ್ಷಗಳು ಆಬ್ರಾಹ್ಮಣಾಜ್ಞೆಯಂ ಧರಿಸಿದಂಥಾವನಾದನೆಂದು ಶ್ರೀರಾಮನು ಲಕ್ಷ್ಮಣನಿಗೆ ಪೇಳಿದಂಥಾವನಾದನು ॥೧೯॥

—⋯ಃಉತ್ತರ ರಾಮಾಯಣದಲ್ಲಿನ ೫೪ ನೆಯ ಸರ್ಗಂ ಮುಗಿದುದು⋯—

ಎಲೈ ಲಕ್ಷ್ಮಣನೆ! ಈ ನೃಗೋಪಾಖ್ಯಾನವನ್ನು ವಿಸ್ತಾರವಾಗಿ ಪೇಳಿದಂಥಾವನಾದೆನು, ನಿನಗೆ ಕೇಳಬೇಕೆಂಬ ಭಕ್ತಿ ಇದ್ದರೆ ಮತ್ತೊಂದು ಕಥೆಯಂ ಪೇಳ್ವೆನು ಕೇಳೆಂದು ರಘುನಂದನನು ನಿರೂಪಿಸಿದವನಾಗಲು, ಸುಮಿತ್ರಾಪುತ್ರನಾದ ಲಕ್ಷ್ಮಣನು, ಶ್ರೀರಾಮನಂ ಕುರಿತು, ಎಲೈ ಒಡೆಯನೆ! ಆಶ್ಚರ್ಯಕರವಾದ ಕಥೆಗಳಂ ಕೇಳುವದರಲ್ಲಿ ಎನಗೆ ತೃಪ್ತಿಯಿಲ್ಲವೇಇಲ್ಲ, ಆದಕಾರಣ ಇನ್ನೊಂದು ಇತಿಹಾಸವಪೇಳಿದರೆ ಕೇಳುವೆನೆಂದು ಪೇಳಿದಂಥಾವನಾದನು॥೨॥ ಇಕ್ಷ್ವಾಕುಕುಲವನ್ನೆ ಸಂತೋಷಗೊಳಿಸುತ್ತಿರುವ ಶ್ರೀರಾಮನು ಲಕ್ಷ್ಮಣನಿಂದ ಈಪರಿ ಪೇಳಲ್ಪಟ್ಟವನಾಗಿ, ಮತ್ತೊಂದು ಇತಿಹಾಸಂಪೇಳ ಲುಪಕ್ರಮಿಸಿದನದೆಂತೆನೆ ॥೩॥ ಎಲೈ ಲಕ್ಷ್ಮಣನೆ ಕೇಳು ಮಹಾತ್ಮನಾದ ಇಕ್ಷ್ವಾಕುಮಹಾರಾಜನಿಗೆ ಹನ್ನೆರಡನೆಯಮಗನಾದ ನಿಮಿಯೆಂದು ಪ್ರಸಿದ್ಧನಾದ.ಅರಸು ಮಹಾಧರ್ಮವಂತನಾಗಿದ್ದನು ॥೪॥ ಕಡುಪರಾಕ್ರಮಿಯಾದ ಆರಾಜನು ಗೌತಮಮುನಿಯ ಆಶ್ರಮದ ಸಮೀಪದೊಳುಇಂದ್ರನ ರಾಜಧಾನಿಯಾದ ಅಮರಾವತೀ ಪುರದಂತಿರುವ ಪಟ್ಟಣವಂಗಟ್ಟಿಸಿ ಆನಗರಿಗೆ ವೈಜಯಂತವೆಂಬ ನಾಮಧೇಯವನಂ ಗೈದು, ಅತಿಯಶೋವಂತನಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಿವೇಶಂ ತತ್ರ ರಾಜರ್ಷಿರ್ನಿಮಿಶ್ಚಕ್ರೇ ಮಹಾಯಶಾಃ ॥೬॥ ತಸ್ಯ ಬುದ್ಧಿಸ್ಸಮುತ್ಪನ್ನಾ ನಿವೇಶ್ಯ ಸುಮಹತ್ಪುರಮ್ । ಯಜೇಯಂ ದೀರ್ಘಸತ್ರೇಣ ಪಿತುಃ ಪ್ರಹ್ಲಾದಯನ್ಮನಃ ॥೭॥ ತತಃ ಪಿತರಮಾಮಂತ್ರ್ಯ ಇಕ್ಷ್ವಾಕುಂ ಹಿ ಮನೋಸ್ಸುತಮ್ । ವಸಿಷ್ಠಂ ವರಯಾಮಾಸ ಪೂರ್ವಂ ಬ್ರಹ್ಮರ್ಷಿಸತ್ತಮಮ್ ॥೮॥ ಅನಂತರಂ ಸ ರಾಜರ್ಷಿರ್ನಿಮಿರಿಕ್ಷ್ವಾಕುನಂದನಃ । ಅತ್ರಿಮಂಗಿರಸಂ ಚೈವ ಭೃಗುಂ ಚೈವ ತಪೋನಿಧಿಮ್ ॥೯॥ ತಮುವಾಚ ವಸಿಷ್ಠಸ್ತು ನಿಮಿಂ ರಾಜರ್ಷಿಸತ್ತಮಮ್ । ವೃತೋಽಹಂ ಪೂರ್ವಮಿಂದ್ರೇಣ ಪ್ರತೀಕ್ಷಸ್ವ ತದಂತರಮ್ ॥೧೦॥ ತಮಧ್ವರಮಥೋ ವಿಪ್ರೋ ಗೌತಮಃ ಪ್ರತ್ಯಪೂಜಯತ್ । ವಸಿಷ್ಠೋಽಪಿ ಮಹಾತೇಜಾ ಇಂದ್ರಯಜ್ಞಮಥಾಕರೋತ್ ॥೧೧॥ ನಿಮಿರ್ಹಿ ರಾಜಾ ತಾನ್ವಿಪ್ರಾನ್ ಸಮಾನೀಯ ನರಾಧಿಪಃ । ಯಜತೇ ಹಿಮವತ್ಪಾರ್ಶ್ವೇ ಸ್ವಪುರಸ್ಯ ಸಮೀಪತಃ ॥೧೨॥ ಪಂಚವರ್ಷಸಹಸ್ರಾಣಿ ರಾಜಾ ದೀಕ್ಷಾಮುಪಾಗಮತ್ ॥೧೩॥ ಇಂದ್ರಯಜ್ಞಾವಸಾನೇ ತು ವಸಿಷ್ಠೋ ಭಗವಾನೃಷಿಃ । ಸಕಾಶಮಾಗತೋ ರಾಜ್ಞೋ ಹೌತ್ರಂ ಕರ್ತುಮನಿಂದಿತಃ ॥೧೪॥ ತಮಪಶ್ಯದಥಾ ... ತಪಸಾಭಿಪ್ರ

---

ಪುರಸ್ಯತು–ಪಟ್ಟಣಕ್ಕಾದರೆ, ವೈಜಯಂತಮಿತಿನಾಮ–ವೈಜಯಂತವೆಂದು ನಾಮಧೇಯವು, ಕೃತಮಿತಿ–ಮಾಡಲ್ಪಟ್ಟಿತೂ ಎಂದು, ಶೃತಂ–ಕೇಳಲ್ಪಟ್ಟಿದೆ, ತತ್ರ–ಆ ವೈಜಯಂತವೆಂಬ ಪಟ್ಟಣದಲ್ಲಿ, ಮಹಾಯಶಾಃ–ಮಹಾಕೀರ್ತಿವಂತನಾದ, ನಿಮಿಃ–ನಿಮಿಯೆಂಬ, ರಾಜರ್ಷಿಃ–ರಾಜರ್ಷಿಯು, ನಿವೇಶಂ–ಸ್ಥಾನವನ್ನು, ಚಕ್ರೇ–ಮಾಡಿದನು ॥೬॥ ಮಹತ್–ದೊಡ್ಡದಾದ, ಪುರಂ–ಪಟ್ಟಣದಲ್ಲಿ ನಿವೇಶ್ಯ–ವಾಸವಂ ಮಾಡಿ, ಪಿತುಃ–ತಂದೆಯಾದ ಇಕ್ಷ್ವಾಕುಮಹಾರಾಯನ, ಮನಃ–ಮನಸ್ಸನನ್ನು, ಪ್ರಹ್ಲಾದಯನ್–ಸಂತೋಷಪಡಿಸುತ್ತಿರುವನಾಗಿ, ದೀರ್ಘಸತ್ರೇಣ–ಬಹುಕಾಲಿಕವಾದ, ಸತ್ರೇಣ–ಯಾಗದಿಂದ, ಯಜೇಯಮಿತಿ–ಯಜ್ಞಮಾಡುತ್ತೇನೆಂದು, ತಸ್ಯ–ಆ ನಿಮಿಗೆ, ಬುದ್ಧಿಃ–ಬುದ್ಧಿಯು, ಸಮುತ್ಪನ್ನಾ–ಹುಟ್ಟಿತು ॥೭॥ ತತಃ–ಬಳಿಕ, ಮನೋಃ–ಮನುಚಕ್ರವರ್ತಿಗೆ, ಸುತಂ–ಕುವರನಾದ, ಪಿತರಂ–ತಂದೆಯಾದ ಇಕ್ಷ್ವಾಕುಮಹಾರಾಯನನ್ನು, ಆಮಂತ್ರ್ಯ–ಆಲೋಚಿಸಿ, ಪೂರ್ವಂ–ಮೊದಲು, ಬ್ರಹ್ಮರ್ಷಿಸತ್ತಮಂ–ಬ್ರಹ್ಮರ್ಷಿಶ್ರೇಷ್ಠನಾದ, ವಸಿಷ್ಠಂ–ವಸಿಷ್ಠಋಷಿಯನ್ನು, ವರಯಾಮಾಸ–ಆರ್ತ್ವಿಜ್ಯಾರ್ಥವಾಗಿ ವರಿಸಿದನು ॥೮॥ ಅನಂತರಂ–ಬಳಿಕ, ಇಕ್ಷ್ವಾಕುನಂದನಃ–ಇಕ್ಷ್ವಾಕುಕುಮಾರನಾದ, ರಾಜರ್ಷಿಃ–ರಾಜರ್ಷಿಯಾದ, ಸನಿಮಿಃ–ಆ ನಿಮಿಚಕ್ರವರ್ತಿಯು, ಅತ್ರಿಂ–ಅತ್ರಿಋಷಿಯನ್ನು, ಅಂಗಿರಸಂ–ಅಂಗಿರಸಋಷಿಯನ್ನು, ತಪೋನಿಧಿಂ–ತಪಸ್ಸೆ ನಿಕ್ಷೇಪಭೂತನಾದ, ಭೃಗುಂಚೈವ–ಭೃಗುಋಷಿಯನ್ನು, ವರಯಾಮಾಸ–ವರಿಸಿದನು ॥೯॥ ವಸಿಷ್ಠಸ್ತು–ವಸಿಷ್ಠಋಷಿಯಾದರೆ, ರಾಜರ್ಷಿಸತ್ತಮಂ–ರಾಜಋಷಿಗಳೊಳಗೆ ಶ್ರೇಷ್ಠನಾದ, ತಂನಿಮಿಂ–ಆ ನಿಮಿರಾಯನಂಕುರಿತು, ಅಹಂ–ನಾನು, ಇಂದ್ರೇಣ–ಇಂದ್ರನಿಂದ, ಪೂರ್ವಂ–ಮೊದಲೆ, ವೃತಃ–ವರಿಸಲ್ಪಟ್ಟನು, ತದಂತರಂ–ಆ ಸಾವಕಾಶವನ್ನು, ಪ್ರತೀಕ್ಷಸ್ವ–ನಿರೀಕ್ಷಿಸು ॥೧೦॥ ಅಥ–ಅನಂತರದಲ್ಲಿ, ವಿಪ್ರಃ–ಬ್ರಾಹ್ಮಣನಾದ, ಗೌತಮಃ–ಗೌತಮಋಷಿಯು, ತಮಧ್ವರಂ–ಆ ಯಜ್ಞವನ್ನು, ಪ್ರತ್ಯಪೂಜಯತ್–ಪೂಜಿಸಿದನು, ಮಹಾತೇಜಾಃ–ಮಹಾ ತೇಜಸ್ವಿಯಾದ, ವಸಿಷ್ಠೋಪಿ–ವಸಿಷ್ಠಋಷಿಯೂನು, ಅಥ–ಬಳಿಕ, ಇಂದ್ರಯಜ್ಞಂ–ಇಂದ್ರಸಂಬಂಧವಾದ ಯಜ್ಞವನ್ನು, ಅಕರೋತ್–ಮಾಡಿಸಿದನು ॥೧೧॥ ನರಾಧಿಪಃನಿಮಿಃ–ನಿಮಿಚಕ್ರವರ್ತಿಯು, ತಾನ್–ವಿಪ್ರಾನ್–ಆ ಬ್ರಾಹ್ಮಣರನ್ನು, ಸಮಾನೀಯ–ಕರಿಸಿ, ಸ್ವಪುರಸ್ಯ–ತನ್ನ ಪಟ್ಟಣದ, ಸಮೀಪತಃ–ಸಮೀಪದಲ್ಲಿ, ಹಿಮವತ್ಪಾರ್ಶ್ವೇ–ಹಿಮವತ್ಪರ್ವತದ ಪ್ರದೇಶದಲ್ಲಿ, ಯಜತೇ–ಯಜ್ಞಮಾಡುತ್ತಿದ್ದನು ॥೧೨॥ ರಾಜಾ–ಅರಸು, ಪಂಚವರ್ಷಸಹಸ್ರಾಣಿ–ಐದುಸಾವಿರ ವರುಷಗಳು, ದೀಕ್ಷಾಂ–ಯಜ್ಞದೀಕ್ಷೆಯನ್ನು, ಉಪಾಗಮತ್–ಹೊಂದಿದನು ॥೧೩॥ ಇಂದ್ರಯಜ್ಞಾವಸಾನೇತು, ಇಂದ್ರ–ದೇವೇಂದ್ರನ, ಯಜ್ಞಾವಸಾನೇತು–ಯಜ್ಞಪೂರ್ತಿಯಾಗುತ್ತಿರಲಿಕಾಗಿ, ಭಗವಾನ್–ಪೂಜ್ಯನಾದ, ಅನಿಂದಿತಃ–ನಿರ್ದೋಷಿಯಾದ, ವಸಿಷ್ಠಋಷಿಃ–ವಸಿಷ್ಠಋಷಿಯು, ಹೌತ್ರಂ–ಹೌತ್ರವೆಂಬ ಆರ್ತ್ವಿಜ್ಯವನ್ನು, ಕರ್ತುಂ–ಮಾಡುವದಕ್ಕೋಸುಗ, ರಾಜ್ಞಃ–ನಿಮಿಚಕ್ರವರ್ತಿಯ, ಸಕಾಶಂ–ಸಮೀಪವಂಕುರಿತು, ಆಗತಃ–ಬಂದನು ॥೧೪॥ ಅಥ–ಬಳಿಕ, ಬ್ರಹ್ಮಸತ್ತಮಃ–

---

ಗಿ ಅದರೊಳು ವಾಸಿಸುತ್ತಿದ್ದನು ॥೬॥ ಆ ನರನಾಥನಿಗೆ ಆ ಪುರದಲ್ಲಿಯೆ ವಾಸಿಸುತ್ತಾ, ತಂದೆಯಾದ ಇಕ್ಷ್ವಾಕುಮಹಾರಾಜನಿಗೆ ಆನಂದವನ್ನುಂಟುಮಾಡುತ್ತಿರುವನಾಗಿ, ಮಹಾಯಾಗಂಗಳಂ ಗೈಯ್ಯಬೇಕೆಂದು ಮತಿಯುಂಟಾಗಿ ಮನುಪುತ್ರನಾದ ಆ ಜನಕನಸಂಗಡ ಯೋಚಿಸಿ, ಪ್ರಥಮತಃ ವಸಿಷ್ಠ ಮಹಾಮುನಿಗೆ ಆರ್ತ್ವಿಜ್ಯಾರ್ಥವಾಗಿ ವರಣೆಯಂಕೊಟ್ಟು, ಅನಂತರದೊಳು ಅತ್ರಿ ಮುನಿಯನ್ನು ಇವರೀರ್ವರಂ ವರಿಸಿದಂಥಾವನಾದನು ॥೯॥ ಆ ವೇಳೆಯೊಳು ವಸಿಷ್ಠಮುನಿಯಾದರೆ ರಾಜರ್ಷಿ ಶ್ರೇಷ್ಠನಾದ ನಿಮಿಚಕ್ರವರ್ತಿಯಂ ಕುರಿತು ಎಲೈ ರಾಜನೇ! ನಾನು ಪೂರ್ವದಲ್ಲಿಯೇ ಇಂದ್ರನಿಂದ ವರಿಸಲ್ಪಟ್ಟಿದ್ದೇನೆ, ಅಲ್ಲಿಂದ ಬರುವವರೆಗೂ ನಿರೀಕ್ಷಿಸಬೇಕೆಂದು ನಿರೂಪಿಸಿದಂಥಾವನಾದನು. ಅನಂತರದೊಳು ಗೌತಮ ಮುನಿಯು, ಆ ನಿಮಿಚಕ್ರವರ್ತಿ ಯಜ್ಞವನ್ನು ಪೂಜಿಸಿದಂಥಾವನಾದನು. ಮಹಾ ತೇಜಸ್ವಿಯಾದ ವಸಿಷ್ಠಋಷಿಯಾದರೆ ಇಂದ್ರನ ಯಾಗವಂಮಾಡಿಸುವದಕ್ಕೆ ಹೊರಟು ಹೋದನು ॥೧೧॥ ನರನಾಥನಾದ ಆ ನಿಮಿರಾಜನು ಆ ಬ್ರಾಹ್ಮಣರಂ ಕರದುಕೊಂಡು ತನ್ನ ಪಟ್ಟಣದ ಸಮೀಪದಲ್ಲಿರ್ಪ ಹಿಮವತ್ಪರ್ವತದ ಪಾರ್ಶ್ವದಲ್ಲಿ ಯಜ್ಞ ಮಾಡಲುಪಕ್ರಮಿಸಿ ಐದುಸಾವಿರ ವರುಷಗಳು ದೀಕ್ಷೆಯನ್ನೈದಿದನು ॥೧೩॥ ಇಂದ್ರನ ಯಜ್ಞ ಪರಿಸಮಾಪ್ತಿಯಾದ ಬಳಿಕ ಪೂಜ್ಯನಾದ ಆ ವಸಿಷ್ಠ ಮುನಿಯು ಹೌತ್ರವೆಂಬ ಆರ್ತ್ವಿಜ್ಯವಂಗೈಯುವದಕ್ಕೋಸುಗ ನಿಮಿರಾಜನ ಸಮೀಪಕ್ಕೆ ಬಂದ ಬಳಿಕ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಿತಮ್ । ಕ್ರೋಧೇನಮಹತಾವಿಷ್ಟೋವಸಿಷ್ಠೋಬ್ರಹ್ಮಸತ್ತಮಃ । ಸರಾಜ್ಞೋದರ್ಶನಾಕಾಂಕ್ಷೀಮುಹೂರ್ತಂಸಮುಪಾವಿಶತ ॥೧೫॥ತಸ್ಮಿನ್ನಹನಿರಾಜರ್ಷಿಃನಿದ್ರಾಮಾಗತವಾನ್ಸುಖಮ್॥೧೬॥ತತೋಮನ್ಯುರ್ವಸಿಷ್ಠಸ್ಯಪ್ರಾದುರಾಸೀನ್ಮಹಾತ್ಮನಃ । ಅದರ್ಶನೇನರಾಜರ್ಷೇರ್ವ್ಯಾಹರ್ತುಮುಪಚಕ್ರಮೇ ॥೧೭॥ ಯಸ್ಮಾತ್ತ್ವಮನ್ಯಂವೃತವಾನ್ಮಾಮವಜ್ಞಾಯಪಾರ್ಥಿವ । ಚೇತನೇನವಿನಾಭೂತೋದೇಹಸ್ತವಭವಿಷ್ಯತಿ ॥೧೮॥ ತತಃಪ್ರಬುದ್ಧೋರಾಜರ್ಷಿಃಶ್ರುತ್ವಾಶಾಪಮುದಾಹೃತಮ್ । ಬ್ರಹ್ಮಯೋನಿಮಥೋವಾಚಸಂರಂಭಾತ್ಕ್ರೋಧಮೂರ್ಛಿತಃ ॥೧೯॥ ಅಜಾನತಶ್ಶಯಾನಸ್ಯಕ್ರೋಧೇನಕಲುಷೀಕೃತಃ।ಮುಕ್ತವಾನ್ಮಮಶಾಪಾಗ್ನಿಂಯಮದಂಡಮಿವಾಪರಮ್ ॥೨೦॥ ತಸ್ಮಾತ್ತವಾಪಿಬ್ರಹ್ಮರ್ಷೇಚೇತನೇನವಿನಾಕೃತಃ। ದೇಹಸ್ಸುರುಚಿರಪ್ರಖ್ಯೋಭವಿಷ್ಯತಿನಸಂಶಯಃ ... ... ॥೨೧॥

—...ಇತಿ ಶ್ರೀಮದುತ್ತರರಾಮಾಯಣೇ ಪಂಚಪಂಚಾಶಸ್ಸರ್ಗಃ...—

ರಾಮಸ್ಯಭಾಷಿತಂಶ್ರುತ್ವಾಲಕ್ಷ್ಮಣಃಪರವೀರಹಾ।ಉವಾಚಪ್ರಾಂಜಲಿರ್ವಾಕ್ಯಂರಾಘವಂದೀಪ್ತತೇಜಸಮ್॥೧॥ ನಿ

---

ಬ್ರಾಹ್ಮಣಶ್ರೇಷ್ಠನಾದ, ವಸಿಷ್ಠಃ-ವಸಿಷ್ಠಋಷಿಯು, ತಮಧ್ವರಂ-ಆ ಯಜ್ಞವನ್ನು, ಗೌತಮೇನ- ಗೌತಮಋಷಿಯಿಂದ, ಅಭಿಪೂರಿತಂ- ಪೂರ್ತಿಮಾಡಲ್ಪಟ್ಟದ್ದಾಗಿ, ಅಪಶ್ಯತ್-ಕಂಡನು, ಮಹತಾ-ಬಹಳವಾದ, ಕ್ರೋಧೇನ-ಕೋಪದಿಂದ, ಆವಿಷ್ಟಃ-ವ್ಯಾಪ್ತನಾಗಿ, ಸಃ-ಆ ವಸಿಷ್ಠಋಷಿಯು, ರಾಜ್ಞಃ-ನಿಮಿಚಕ್ರವರ್ತಿಯ, ದರ್ಶನಾಕಾಂಕ್ಷೀ-ದರ್ಶವನ್ನಪೇಕ್ಷಿಸುತ್ತಿರುವವನಾಗಿ, ಮುಹೂರ್ತಂ-ಮುಹೂರ್ತಕಾಲವು, ಸಮುಪಾವಿಶತ್-ಕುಳಿತುಕೊಂಡನು॥೧೫॥ ತಸ್ಮಿನ್ ಅಹನಿ-ಆ ಹಗಲಿನಲ್ಲಿ, ರಾಜರ್ಷಿಃ-ರಾಜರ್ಷಿಯಾದ ನಿಮಿಚಕ್ರವರ್ತಿಯು, ಸುಖಂ-ಸುಖವಾಗಿ, ನಿದ್ರಾಂ-ನಿದ್ರೆಯನ್ನು, ಆಗತವಾನ್-ಹೊಂದಿದನು॥ ತತಃ-ಬಳಿಕ, ರಾಜರ್ಷೇಃ-ರಾಜರ್ಷಿಯಾದ ನಿಮಿಚಕ್ರವರ್ತಿಯ, ಅದರ್ಶನೇನ-ನೋಡೋಣವಿಲ್ಲದ್ದರಿಂದ, ಮಹಾತ್ಮನಃ-ಮಹಾ ಪ್ರಭಾವವಂತನಾದ, ವಸಿಷ್ಠಸ್ಯ-ವಸಿಷ್ಠಋಷಿಗೆ, ಮನ್ಯುಃ-ಕೋಪವು, ಪ್ರಾದುರಾಸೀತ್-ಹುಟ್ಟಿತು, ವ್ಯಾಹರ್ತುಂ-ಹೇಳುವದಕ್ಕೋಸ್ಕರ, ಉಪಚಕ್ರಮೇ-ಆರಂಭಿಸಿದನು ॥೧೭॥ ಹೇಪಾರ್ಥಿವ-ಎಲೈ ನಿಮಿಚಕ್ರವರ್ತಿಯೆ, ಯಸ್ಮಾತ್-ಯಾವಕಾರಣದ ದೆಸೆಯಿಂದ, ಮಾಂ-ನನ್ನನ್ನು, ಅವಜ್ಞಾಯ, ಅವಮಾನಮಾಡಿ, ತ್ವಂ-ನೀನು,ಅನ್ಯಂ-ಮತ್ತೊಬ್ಬನನ್ನು, ವೃತವಾನ್-ವರಿಸಿದೆಯೋ, ತಸ್ಮಾತ್-ಆ ಕಾರಣದ ದೆಸೆಯಿಂದ, ತವ-ನಿನ್ನ, ದೇಹಃ-ದೇಹವು, ಚೇತನೇನ-ಜೀವದಿಂದ, ವಿನಾಭೂತಃ-ಇಲ್ಲದಂಥಾದ್ದು, ಭವತಿ-ಆಗುವದು ॥೧೮॥ ತತಃ-ಬಳಿಕ, ಪ್ರಬುದ್ಧಃ-ಹೆಚ್ಚರಗೊಂಡ, ರಾಜರ್ಷಿಃ-ನಿಮಿಚಕ್ರವರ್ತಿಯು, ಉದಾಹೃತಂ- ಹೇಳಲ್ಪಟ್ಟ, ಶಾಪಂ-ಶಾಪವನ್ನು, ಶ್ರುತ್ವಾ-ಕೇಳಿ, ಸಂರಂಭಾತ್-ಕ್ರೋಧದ ದೆಸೆಯಿಂದ, ಕ್ರೋಧಮೂರ್ಛಿತಃ-ಅತಿಕೋಪದಿಂದ ವ್ಯಾಪ್ತನಾಗಿ, ಬ್ರಹ್ಮಯೋನಿಂ-ವಸಿಷ್ಠಋಷಿಯನ್ನು ಕುರಿತು, ಅಥ-ಬಳಿಕ-ಉವಾಚ-ಹೇಳಿದನು ॥೧೯॥ ಕ್ರೋಧೇನ-ಕೋಪದಿಂದ,ಕಲುಷೀಕೃತಃ-ಕಲುಷಚಿತ್ತನಾಗಿಮಾಡಲ್ಪಟ್ಟ,ತ್ವಂ-ನೀನು,ಶಯಾನಸ್ಯ-ಮಲಗಿರುವ, ಅಜಾನತಃ-ತಿಳಿಯದಿರುವ, ಮಮ-ಯನಗೆ, ಯತ್-ಯಾವಕಾರಣದ ದೆಸೆಯಿಂದ,ಅಪರಂ-ಮತ್ತೊಂದಾದ, ಯಮದಂಡಮಿವ-ಯಮದಂಡದಂತೇ,ಶಾಪಾಗ್ನಿಂ-ಶಾಪ-ಶಾಪವೆಂಬ, ಅಗ್ನಿಂ-ಅಗ್ನಿಯನ್ನು, ಮುಕ್ತವಾನ್-ಬಿಟ್ಟೆಯೋ॥೨೦॥ ತಸ್ಮಾತ್-ಆಕಾರಣದದೆಸೆಯಿಂದ, ಹೇಬ್ರಹ್ಮರ್ಷೇ-ಎಲೈಬ್ರಾಹ್ಮಣಶ್ರೇಷ್ಠನೆ,ಸುಚಿರಪ್ರಖ್ಯಃ-ಬಹಳ ಇಂಪಾದಕಾಂತಿಯುಳ್ಳ. ತವ-ನಿನ್ನ,ದೇಹೋಪಿ-ದೇಹವೂನು, ಚೇತನೇನ-ಜೀವಾತ್ಮನಿಂದ, ವಿನಾಕೃತಃ-ರಹಿತವಾದ್ದು,ಭವಿಷ್ಯತಿ-ಆಗುವದು, ಸಂಶಯೋನ-ಸಂಶಯುಮಿಲ್ಲ॥ —ಇತಿಶ್ರೀಮದುತ್ತರರಾಮಾಯಣೇ ಪಂಚಪಂಚಾಶಸ್ಸರ್ಗಃ—

ಪರವೀರಹಃ-ಶತ್ರುಸಂಹಾರಕನಾದ, ಲಕ್ಷ್ಮಣಃ-ಲಕ್ಷ್ಮಣಸ್ವಾಮಿಯು, ರಾಮಸ್ಯ-ಶ್ರೀರಾಮನ, ಭಾಷಿತಂ-ಮಾತನ್ನು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ದೀಪ್ತತೇಜಸಃ-ಪ್ರಜ್ವಲಿತವಾದ ತೇಜಸ್ಸುವುಳ್ಳ, ರಾಘವಂ-ಶ್ರೀರಾಮನಂ ಕುರಿತು, ಹೆ ಕಾಕುತ್ಸ್ಥ- ಎಲೈ ಶ್ರೀರಾಮನೇ, ದೇವಸಮ್ಮತೌ-ದೇವ

---

ಗೌತಮಮುನಿಯಿಂದ ಪೂರ್ತಿಮಾಡಲ್ಪಡುತ್ತಿರುವ ಆಯಾಗವಂ ಕಂಡು ಕೋಪಾಟೋಪಮುಳ್ಳವನಾಗಿ ರಾಜನಂಕಂಡು ಮಾತಾಡಬೇಕೆಂದು ಮುಹೂರ್ತಮಾತ್ರವು ಕುಳಿತಿದ್ದನು ॥೧೫॥ ಆದಿನದಲ್ಲಿ ನಿಮಿರಾಜನು ಸುಖವಾಗಿ ನಿದ್ದೆಪೋದನು ॥೧೬॥ಅನಂತರದೊಳು ಮಹಾತ್ಮನಾದವಸಿಷ್ಠಮುನಿಗೆ ನಿಮಿಚಕ್ರವರ್ತಿಯ ದರ್ಶನಾಭಾವದಿಂದ ಕೋಪನ್ನಸಂಜನಿಸಿ ಈಪರಿ ಪೇಳಲುಪಕ್ರಮಿಸಿದನು ॥೧೭॥ ಎಲೈ ರಾಜನೇ! ಎನಗಪಮಾನವಂಗೈಯ್ದು ಮತ್ತೋರ್ವನಿಗೆ ನೀನು ಯಾವಕಾರಣದಿಂದ ವರಣೆಯಂಕೊಟ್ಟಂಥಾವನಾದೆಯೋ ಆದಕಾರಣದಿಂದ ನಿನ್ನ ದೇಹವು ನಿರ್ಜೀವವಾದಂಥಾದ್ದಾಗಲೆಂದು ಶಾಪವಂಕೊಟ್ಟವನಾದನು ॥೧೮॥ ಬಳಿಕ ಆರಾಜನು ವಸಿಷ್ಠಮುನಿಯಿಂದ ಕೊಡಲ್ಪಟ್ಟ ಆಶಾಪವಚನವಂ ಕೇಳಿ ರೋಷದಿಂದ ವ್ಯಮರತವನಾಗಿ ವಸಿಷ್ಠಮುನಿಯಂ ಕುರಿತು ಎಲೈ ಮುನಿಯೆ! ತಿಳಿಯದೆಮಲಗಿರುವ ನನಿಗೆ ಯಮದಂಡದೋಪಾದಿಯುಳ್ಳಿರ್ಪ ಶಾಪಾಗ್ನಿಯಂ, ಯಾವಕಾರಣದಿಂದ ಬಿಟ್ಟಂಥಾವನಾದೆಯೊ ಆ ಹೇತುವಿನಿಂದ ಸುವರ್ಣಚ್ಛಾಯೆಯುಳ್ಳ ನಿನ್ನ ದೇಹವೂಕೂಡ ಜೀವರಹಿತವಾದಂಥಾದ್ದಾಗುವದು, ಈ ವಿಷಯದಲ್ಲಿ ಸಂಶಯವಿಲ್ಲವೆಂದು ನುಡಿದವನಾದನು ॥೨೧॥ —...ಉತ್ತರರಾಮಾಯಣದಲ್ಲಿನ ೫೫ನೆಯ ಸರ್ಗಂಮುಗಿದುದು...—

ಶತ್ರುಸಂಹಾರಕನಾದ ಲಕ್ಷ್ಮಣನು ಶ್ರೀರಾಮನಿಂದ ನಿರೂಪಿಸಲ್ಪಟ್ಟ ಆ ವಾಕ್ಯವಂಕೇಳಿ ಕೈಮುಗಿದು, ಕಂಗೊ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಥಂತೌ ದ್ವಿಜಪಾರ್ಥಿವೌ । ಪುನರ್ದೇಹೇನ ಸಂಯೋಗಂ ಜಗ್ಮತುರ್ದೇವಸಮ್ಮತೌ ॥೧॥ ಲಕ್ಷ್ಮಣೇ ನೋಕ್ತೇ ಕ್ಷಿಪ್ತದೇಹೌ ಕಾಕುತ್ಸ್ಥ ಕಥಂತೌ ದ್ವಿಜಪಾರ್ಥಿವೌ । ಪುನರ್ದೇಹೇನ ಸಂಯೋಗಂ ಜಗ್ಮತುರ್ದೇವಸಮ್ಮತೌ ॥೧॥ ಲಕ್ಷ್ಮಣೇ ನೈವಮುಕ್ತಸ್ತು ರಾಮ ಇಕ್ಷ್ವಾಕುನಂದನಃ । ಪ್ರತ್ಯುವಾಚ ಮಹಾತೇಜಾ ಲಕ್ಷ್ಮಣಂ ಪುರುಷರ್ಷಭಮ್ ॥೨॥ ತೌ ಪರಸ್ಪರಶಾಪೇನ ದೇಹಮುತ್ಸೃಜ್ಯ ಧಾರ್ಮಿಕೌ । ಅಭೂತಾಂ ನೃಪವಿಪ್ರರ್ಷೀ ವಾಯುಭೂತೌ ತಪೋಧನೌ ॥೩॥ ಅಶರೀರಶ್ಶರೀರಸ್ಯ ಕೃತೇನ್ಯಸ್ಯ ಮಹಾಮುನಿಃ । ವಸಿಷ್ಠಸ್ತು ಮಹಾತೇಜಾ ಜಗಾಮ ಪಿತರಂ ಪ್ರತಿ ॥೪॥ ಸೋಭಿವಾದ್ಯ ಪಿತುಃ ಪಾದೌ ದೇವದೇವಸ್ಯ ಧೀಮತಃ । ಪಿತಾಮಹಮಥೋವಾಚ ವಾಯುಭೂತ ಇದಂ ವಚಃ ॥೬॥ ಭಗವನ್ನಿಮಿಶಾಪೇನ ವಿದೇಹೋಸ್ಮಿ ಕೃತಃ ಪ್ರಭೋ । ಲೋಕನಾಥ ಮಹಾದೇವ ವಾಯುಭೂತೋಹಮಬ್ಜಜ ॥೭॥ ಸರ್ವೇಷಾಂ ದೇಹಹೀನಾನಾಂ ಮಹದ್ದುಃಖಂ ಭವಿಷ್ಯತಿ । ಲುಪ್ಯಂತೇ ಸರ್ವಕಾರ್ಯಾಣಿ ಹೀನದೇಹಸ್ಯ ವೈ ಪ್ರಭೋ ॥೮॥ ದೇಹಸ್ಯಾನ್ಯಸ್ಯ ಸದ್ಭಾವೇ ಪ್ರಸಾದಂ ಕರ್ತುಮರ್ಹಸಿ ॥೯॥ ತಮುವಾಚ ತತೋ ಬ್ರಹ್ಮಾ ಸ್ವಯಂಭೂರಮಿತಪ್ರಭಃ । ಮಿತ್ರಾವರುಣಜಂ ತೇಜ ಆವಿಶ ತ್ವಂ ಮಹಾಯಶಃ ॥೧೦॥ ಅಯೋನಿಜಸ್ತ್ವಂ ಭವಿತಾತ

ತೆಗಳಿಗೆ ಇಷ್ಟರಾದ, ತೌ–ದ್ವಿಜಪಾರ್ಥಿವೌ–ಆ ವಸಿಷ್ಠಋಷಿ ನಿಮಿಚಕ್ರವರ್ತಿಗಳಿಬ್ಬರೂನು, ನಿಕ್ಷಿಪ್ತದೇಹೌ–ಪರಿತ್ಯಾಗ ಮಾಡಲ್ಪಟ್ಟ ದೇಹವುಳ್ಳವರಾಗಿ, ಪುನಃ–ಮತ್ತು, ದೇಹೇನ–ದೇಹದಿಂದ, ಸಂಯೋಗಂ–ಸಂಬಂಧವನ್ನು, ಕಥಂಜಗ್ಮತುಃ–ಹ್ಯಾಗೆ ಹೊಂದಿದರು ॥೧॥ ಲಕ್ಷ್ಮಣೇನ–ಲಕ್ಷ್ಮಣಸ್ವಾಮಿಯಿಂದ, ಏವಮುಕ್ತಃ–ಈಪರಿಯಾಗಿ ಕೇಳಲ್ಪಟ್ಟ, ಮಹಾತೇಜಾಃ–ಮಹಾ ಪ್ರಭಾವವುಳ್ಳ, ಇಕ್ಷ್ವಾಕುನಂದನಃ–ಇಕ್ಷ್ವಾಕುವಂಶಕ್ಕೆ ಆನಂದಕರನಾದ, ರಾಮಃ–ಶ್ರೀರಾಮನು, ಪುರುಷರ್ಷಭಂ–ಪುರುಷಶ್ರೇಷ್ಠನಾದ, ಲಕ್ಷ್ಮಣಂ–ಲಕ್ಷ್ಮಣನನ್ನು ಕುರಿತು, ಪ್ರತ್ಯುವಾಚ–ಪ್ರತ್ಯುತ್ತರ ಕೊಟ್ಟನು ॥೨॥ ಧಾರ್ಮಿಕೌ–ಧರ್ಮಿಷ್ಠರಾದ, ತಪೋಧನೌ–ತಪಸ್ಸೇಧನವಾಗುಳ್ಳ, ತೌ–ನೃಪವಿಪ್ರಋಷೀ–ರಾಜರ್ಷಿ ಬ್ರಹ್ಮಋಷಿಗಳಿಬ್ಬರೂನು, ಪರಸ್ಪರಶಾಪೇನ–ಅನ್ಯೋನ್ಯಶಾಪದಿಂದ, ದೇಹೌ–ಶರೀರಗಳನ್ನು, ಉತ್ಸೃಜ್ಯ–ಬಿಟ್ಟು, ವಾಯುಭೂತೌ–ಗಾಳಿಯ ಸ್ವರೂಪರು, ಅಭೂತಾಂ–ಆದರು ॥೩॥ ಅಶರೀರಃ–ಶರೀರರಹಿತನಾದ, ಮಹಾಮುನಿಃ–ಮಹರ್ಷಿಯಾದ, ಮಹಾತೇಜಾಃ–ಮಹಾ ತೇಜಸ್ವಿಯಾದ, ವಸಿಷ್ಠಸ್ತು–ವಸಿಷ್ಠಋಷಿಯಾದರೆ, ಅನ್ಯಸ್ಯ–ಮತ್ತೊಂದಾದ, ಶರೀರಸ್ಯ–ಶರೀರದ, ಕೃತೇ–ನಿಮಿತ್ತವಾಗಿ, ಪಿತರಂಪ್ರತಿ–ತಂದೆಯಾದ ಬ್ರಹ್ಮನಂ ಕುರಿತು, ಜಗಾಮ–ತೆರಳಿದನು ॥೪॥ ವಾಯುಭೂತಃ–ಗಾಳಿಯೋಪಾದಿಯಲ್ಲಿರುವ, ಸಃ–ಆ ವಸಿಷ್ಠಋಷಿಯು, ದೇವದೇವಸ್ಯ–ದೇವತಾ ಶ್ರೇಷ್ಠನಾದ, ಧೀಮತಃ–ಜ್ಞಾನವಂತನಾದ, ಪಿತುಃ–ತಂದೆಯ, ಪಾದೌ–ಪಾದಗಳನ್ನು, ಅಭಿವಾದ್ಯ–ವಂದಿಸಿ, ಅಥ–ಬಳಿಕ, ಪಿತಾಮಹಂ–ಬ್ರಹ್ಮದೇವರನ್ನು ಕುರಿತು, ಇದಂವಚಃ–ಈ ಮಾತನ್ನು, ಉವಾಚ–ಹೇಳಿದನು ॥೫॥ ಹೇ ಭಗವನ್–ಎಲೈ ಪೂಜ್ಯನಾದ, ಹೇ ಪ್ರಭೋ–ಎಲೈ ಸ್ವಾಮಿಯೇ, ಹೇ ಲೋಕನಾಥ–ಎಲೈ ಲೋಕನಾಥನೇ, ಹೇ ಮಹಾದೇವ–ಎಲೈ ದೊಡ್ಡದೇವನೇ, ಅಬ್ಜಜ–ಎಲೈ ಕಮಲಾಸನನೇ, ಅಹಂ–ನಾನು, ನಿಮಿಶಾಪೇನ–ನಿಮಿಚಕ್ರವರ್ತಿಯ ಶಾಪದಿಂದ, ವಿದೇಹಃ–ದೇಹರಹಿತನಾಗಿ, ಕೃತಃ–ಮಾಡಲ್ಪಟ್ಟನು, ಅಸ್ಮಿ–ಆದೆನು ॥೭॥ ಸರ್ವೇಷಾಂ–ಸಮಸ್ತರಾದ, ದೇಹಹೀನಾನಾಂ–ಶರೀರವಿಲ್ಲದ ಜನರಿಗೆ, ಮಹತ್–ಬಹಳವಾದ, ದುಃಖಂ–ವ್ಯಸನವು, ಭವಿಷ್ಯತಿ–ಆಗುವದು, ಹೇ ಪ್ರಭೋ–ಎಲೈಸ್ವಾಮಿಯೇ, ಹೀನದೇಹಸ್ಯ–ದೇಹವಿಲ್ಲದವನಿಗೆ, ಸರ್ವಕಾರ್ಯಾಣಿ–ಸಮಸ್ತ ಕರ್ಮಗಳು, ಲುಪ್ಯಂತೇ–ಲೋಪವನ್ನು ಹೊಂದುತ್ತವೇ ॥೮॥ ಅನ್ಯಸ್ಯ– ದೇಹಸ್ಯ–ಮತ್ತೊಂದು ಶರೀರದ, ಸದ್ಭಾವೇ–ಉಂಟಾಗೋಣದರಲ್ಲಿ, ಪ್ರಸಾದಂ–ಅನುಗ್ರಹವನ್ನು, ಕರ್ತುಂ–ಮಾಡುವದಕ್ಕೋಸ್ಕರ, ಅರ್ಹಸಿ–ಯೋಗ್ಯನಾಗು ॥೯॥ ತತಃ–ಬಳಿಕ, ಅಮಿತಪ್ರಭಃ–ಅಪಾರಪ್ರಕಾಶವುಳ್ಳ, ಸ್ವಯಂಭೂಃ–ಸ್ವಯಂವ್ಯಕ್ತನಾದ, ಬ್ರಹ್ಮಾ–ಚತುರ್ಮುಖಬ್ರಹ್ಮನು, ತಂ–ಆ ವಸಿಷ್ಠಋಷಿಯಂ ಕುರಿತು, ಉವಾಚ–ಹೇಳಿದನು, ಹೇಮ

ಳಿಸುತ್ತಿರುವ ಕಾಂತಿಯುಳ್ಳ ಕಾಕುಸ್ಥನಂ ಕುರಿತು ಎಲೈ ಒಡೆಯನೇ! ದೇವತೆಗಳಿಗೆಲ್ಲಾ ಪ್ರೀತಿಪಾತ್ರರಾದ ವಸಿಷ್ಠನಿಮಿಗಳೀರ್ವರೂ ದೇಹವಂ ಪರಿತ್ಯಜಿಸಿ ಮತ್ತು ಅದರಸಂಗಡ ಸಂಯೋಗವಂ ಹ್ಯಾಗೆಪಡೆದರೋ ನಿರೂಪಿಸ ಬೇಕೆಂದು ಪ್ರಶ್ನೆಯಂಗೈದವನಾಗಲು ಇಕ್ಷ್ವಾಕು ಕುಲಕ್ಕೆಲ್ಲ ಆನಂದಕರನಾದ ರಘುನಂದನನು ಲಕ್ಷ್ಮಣನಂ ಕುರಿತು ಉತ್ತರವಂ ಕೊಟ್ಟನದೆಂತೆನೆ:—ಕೇಳೆಲೈ ಲಕ್ಷ್ಮಣನೇ ಮಹಾಧರ್ಮಿಷ್ಠರಾದ ಆ ಋಷಿರಾಜರೀರ್ವರೂ ಪರಸ್ಪರ ಶಾಪದಿಂದ ದೇಹಂಗಳಂ ತೊರೆದು ವಾಯುಸ್ವರೂಪರಾದರು ॥೪॥ ಶರೀರ ರಹಿತನಾಗಿಯೂ ಮಹರ್ಷಿಯಾಗಿಯೂ, ಅತಿತೇಜಸ್ವಿಯಾಗಿಯೂ ಇರುವ ಆ ವಸಿಷ್ಠ ಋಷಿಯಾದರೆ ಮತ್ತೊಂದು ಶರೀರವಂ ಪಡೆಯುವದಕ್ಕೋಸುಗ ಗಾಳಿಯರೂಪವಾಗಿ ತಂದೆಯಾದ ಬ್ರಹ್ಮನ ಸಮೀಪವಂ ಕುರಿತು ತೆರಳಿ ಆತನ ಪಾದಗಳಿಗೆ ವಂದಿಸಿ ಈ ಮಾತಂ ಹೇಳಲೊಸಗಿದನದೆಂತೆನೆ ॥೭॥ ಪೂಜ್ಯನಾಗಿಯೂ ಲೋಕಸ್ವಾಮಿಯಾಗಿಯೂ, ದೊಡ್ಡದೇವನಾಗಿಯೂ, ಕಮಲ ಸಂಭವನಾಗಿಯೂ, ಇರುವ ಜನಕನಾದ ಬ್ರಹ್ಮನೆ, ನಿಮಿಚಕ್ರವರ್ತಿಯ ಶಾಪದಿಂದ ದೇಹರಹಿತನಾದ ಕಾರಣ ವಾಯುರೂಪ ಮಾಗಿದ್ದೇನೆ, ದೇಹಹೀನರಾದ ಸರ್ವರಿಗೂ ಇದು ಮಹಾದುಃಖಕರವಾದದ್ದು, ಯಾಕೆಂದರೆ:—ದೇಹವಿಲ್ಲದವರಿಗೆ ಎಲ್ಲಾ ಕೆಲಸಗಳೂ ಲೋಪವಾಗುವವು, ಆದಕಾರಣ ಯನಗೆ ಮತ್ತೊಂದು ದೇಹವ ನುಂಟುಮಾಡೆಂದು ನುಡಿದವನಾದನು ॥೯॥ ಬಳಿಕ ಅತಿತೇಜಸ್ವಿಯಾಗಿಯೂ, ಸ್ವಯಂವ್ಯಕ್ತನಾಗಿಯೂ ಇರುವ ಆ ಬ್ರಹ್ಮನು ಆ ವಸಿಷ್ಠ ಋಷಿಯಂ ಕುರಿತು ಎಲೈ ಮಹಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಾಪಿದ್ವಿಜಸತ್ತಮ । ಧರ್ಮೇಣಮಹತಾಯುಕ್ತಂಪುನರೆಷ್ಯಸಿಮೆವಶಮ್॥೧೧॥ ಏವಮುಕ್ತಸ್ತುದೇವೇನಅಭಿವಾದ್ಯಪ್ರದಕ್ಷಿಣಮ್ । ಕೃತ್ವಾಪಿತಾಮಹಂತೂರ್ಣಂಪ್ರಯಯೌವರುಣಾಲಯಮ್ ॥ ೧೨ ॥ ತಮೇವಕಾಲಂಮಿತ್ರೋಪಿವರುಣತ್ವಮಕಾರಯತ್ । ಕ್ಷೀರೋದೇನಸಹೋಪೇತಃಪೂಜ್ಯಮಾನಸ್ಸುರೇಶ್ವರೈಃ॥೧೩॥ ಏತಸ್ಮಿನ್ನೇವಕಾಲೇತುಊರ್ವಶೀಪರಮಾಪ್ಸರಾಃ। ಯದೃಚ್ಛಯಾಸಮುದ್ರೇಶಮಾಯಯೌಸಖೀಭಿರ್ವೃತಾ॥೧೪॥ತಾಂದೃಷ್ಟ್ವಾರೂಪಸಂಪನ್ನಾಂಕ್ರೀಡಂತೀಂವರುಣಾಲಯೆ। ಆವಿಶತ್ಪರಮೋಹರ್ಷೋವರುಣಂಚೋರ್ವಶೀಕೃತೇ ॥೧೫॥ಸತಾಂಪದ್ಮಪಲಾಶಾಕ್ಷೀಂಪೂರ್ಣಚಂದ್ರನಿಭಾನನಾಂ। ವರುಣೋವರಯಾಮಾಸಮೈಥುನಾಯಾಪ್ಸರೋವರಾಮ್ ॥೧೬॥ ಪ್ರತ್ಯುವಾಚತತಸ್ಸಾತುವರುಣಂಪ್ರಾಂಜಲಿಸ್ಥಿತಾ । ಮಿತ್ರೇಣಾಹಂವೃತಾಸಾಕ್ಷಾತ್ಪೂರ್ವಮೇವಸುರೇಶ್ವರ ॥೧೭॥ ವರುಣಸ್ತ್ವಬ್ರವೀದ್ವಾಕ್ಯಂಕಂದರ್ಪಶರಪೀಡಿತಃ। ಇದಂತೇಜಸ್ಸಮುತ್ಸ್ರಕ್ಷ್ಯೇಕುಂಭೇಸ್ಮಿನ್ದೇವನಿರ್ಮಿತೇ ॥೧೮॥ ಏವಮುತ್ಸೃಜ್ಯಸುಶ್ರೋಣಿತ್ವಯ್ಯಹಂವರವರ್ಣಿನಿ । ಕೃತಕಾಮೋಭವಿಷ್ಯಾ

---

ಹಾಯಶಾಃ-ಎಲೈ ಮಹಾಕೀರ್ತಿವಂತನೇ, ತ್ವಂ-ನೀನು, ಮಿತ್ರಾವರುಣಜಂ-ಸೂರ್ಯವರುಣದೇವರಿಂದ ಪುಟ್ಟಿದ, ತೇಜಃ- ತೇಜಸ್ಸನ್ನು, ಆವಿಶ- ಪ್ರವೇಶಿಸು ॥೧೦॥ ಹೇ ದ್ವಿಜಸತ್ತಮ-ಎಲೈ ಬ್ರಾಹ್ಮಣಶ್ರೇಷ್ಠನೇ, ತತ್ರಾಪಿ-ಆ ಜನ್ಮದಲ್ಲಿಯೂಕೂಡ, ತ್ವಂ-ನೀನು, ಅಯೋನಿಜಃ-ಯೋನಿಯೊಳಗೆ ಹುಟ್ಟದವನಲ್ಲವನಾಗಿ, ಭವಿತಾ-ಆಗುವಿ, ಮಹತಾ-ದೊಡ್ಡದಾದ, ಧರ್ಮೇಣ-ಧರ್ಮದಿಂದ, ಯುಕ್ತಃ-ಕೂಡಿದವನಾಗಿ, ಪುನಃ-ಮತ್ತು, ಮೇ-ನನ್ನ ವಶಂ- ಸ್ವಾಧೀನವನ್ನು, ಏಷ್ಯಸಿ-ಹೊಂದುವಿ ॥೧೧॥ ಏವಂ-ಈಪರಿಯಾಗಿ, ದೇವೇನ-ಬ್ರಹ್ಮದೇವರಿಂದ, ಉಕ್ತಸ್ತು-ಹೇಳಲ್ಪಟ್ಟವನಾಗಿ, ಪಿತಾಮಹಂ-ಬ್ರಹ್ಮದೇವನಂಕುರಿತು, ಪ್ರದಕ್ಷಿಣಂ-ಪ್ರದಕ್ಷಿಣವನ್ನು, ಕೃತ್ವಾ-ಮಾಡಿ, ಅಭಿವಾದ್ಯ-ಪ್ರಣಾಮವಂ ಮಾಡಿ, ತೂರ್ಣಂ-ಜಾಗ್ರತೆಯಾಗಿ, ವರುಣಾಲಯಂ- ವರುಣನ ಮನೆಯಂ ಕುರಿತು, ಪ್ರಯಯೌ-ತೆರಳಿದನು ॥೧೨॥ ತಮೇವಕಾಲಂ-ಅದೇಕಾಲದಲ್ಲಿ, ಮಿತ್ರಃ-ಸೂರ್ಯನು, ಸುರೇಶ್ವರೈಃ-ದೇವತಾಶ್ರೇಷ್ಠರಿಂದ,ಪೂಜ್ಯಮಾನಃ-ಪೂಜಿಸಲ್ಪಟ್ಟವನಾಗಿ, ಕ್ಷೀರೋದೇನಸಹ-ಕ್ಷೀರಸಮುದ್ರದಿಂದೊಡಗೂಡಿ, ಉಪೇತಃ-ಕೂಡಿದವನಾಗಿ, ವರುಣತ್ವಂ-ವರುಣರಾಜ್ಯಭಾರವನ್ನು,ಅಕಾರಯತ್-ಮಾಡಿದನು॥೧೩॥ಏತಸ್ಮಿನ್ನೇವಕಾಲೇತು, ಇದೆ ಕಾಲದಲ್ಲಾದರೆ, ಊರ್ವಶೀ -ಊರ್ವಶಿಯೆಂಬ, ಪರಮಾಪ್ಸರಾಃ-ಶ್ರೇಷ್ಠಳಾದ, ಅಪ್ಸರಸ್ತ್ರೀಯು, ಸಖೀಭಿಃ-ಸಖೀಜನರಿಂದ, ವೃತಾ-ಸುತ್ತಿಕೊಳಲ್ಪಟ್ಟವಳಾಗಿ, ಸಮುದ್ರೇಶಂ-ಸಮುದ್ರನನ್ನು ಕುರಿತು, ಯದೃಚ್ಛಯಾ-ಸ್ವೇಚ್ಛೆಯಿಂದ, ಆಯಯೌ-ಬಂದಳು ॥೧೪॥ ರೂಪಸಂಪನ್ನಾಂ-ಸೌಂದರ್ಯದಿಂ ಕೂಡಿಕೊಂಡಿರುವ, ವರುಣಾಲಯೆ - ಸಮುದ್ರದಲ್ಲಿ, ಕ್ರೀಡಂತೀಂ-ವಿಹರಿಸುತ್ತಿರುವ, ತಾಂ- ಆಊರ್ವಶಿಯನ್ನು, ದೃಷ್ಟ್ವಾ-ಕಂಡು, ಊರ್ವಶೀಕೃತೇ-ಊರ್ವಶೀನಿಮಿತ್ತವಾಗಿ, ಪರಮಃ-ಅಧಿಕವಾದ, ಹರ್ಷಃ-ಸಂತೋಷವು, ವರುಣಂಚ-ವರುಣನನ್ನು, ಆವಿಶತ್-ಹೊಕ್ಕಿತು ॥೧೫॥ ಸೊವರುಣಃ-ಆ ವರುಣನು, ಪೂರ್ಣಚಂದ್ರನಿಭಾನನಾಂ-ಪೂರ್ಣಚಂದ್ರನಿಗೆ ಸಮಾನವಾದ, ಮುಖವುಳ್ಳ, ಪದ್ಮಪಲಾಶಾಕ್ಷೀಂ-ಪದ್ಮಗಳ ದಳಗಳಿಗೆ ಸಮಾನವಾದ ನೇತ್ರಗಳುಳ್ಳ, ಅಪ್ಸರೋವರಾಂ-ಅಪ್ಸರಸ್ತ್ರೀಯರೊಳಗೆ ಶ್ರೇಷ್ಠಳಾದ, ತಾಂ-ಆ ಊರ್ವಶಿಯನ್ನು, ಮೈಥುನಾಯ-ಮಿಥುನೀಭಾವಕ್ಕೋಸುಗ, ವರಯಾಮಾಸ-ವರಿಸಿದನು ॥೧೬॥ ತತಃ-ಬಳಿಕ, ಸಾ-ಆ ಊರ್ವಶಿಯು, ಪ್ರಾಂಜಲಿಃ-ಅಂಜಲಿಬದ್ಧಳಾಗಿ, ಸ್ಥಿತಾ-ನಿಂತವಳಾಗಿ, ಹೆ ಸುರೇಶ್ವರ- ಎಲೈ ದೇವತಾಶ್ರೇಷ್ಠನೆ, ಅಹಂ-ನಾನು, ಮಿತ್ರೇಣ-ಸೂರ್ಯನಿಂದ, ಪೂರ್ವಮೇವ-ಮೊದಲೇ, ಸಾಕ್ಷಾತ್- ಪ್ರತ್ಯಕ್ಷವಾಗಿ, ವೃತಾ-ವರಿಸಲ್ಪಟ್ಟಿದ್ದೇನೆ, ಇತಿ-ಇಂತೆಂದು, ಪ್ರತ್ಯುವಾಚ-ಪ್ರತ್ಯುತ್ತರ ಕೊಟ್ಟಳು ॥೧೭॥ ವರುಣಸ್ತು-ವರುಣನಾದರೆ ಕಂದರ್ಪಶರಪೀಡಿತಂ-ಕಾಮಬಾಣಗಳಿಂದ ಬಾಧಿತನಾಗಿ, ಇದಂ-ಈ ನನ್ನ ಸಂಬಂಧವಾದ, ತೇಜಃ-ರೇತಸ್ಸನನ್ನು, ದೇವನಿರ್ಮಿತೇ-ದೇವತೆಗಳಿಂದ ನಿರ್ಮಿಸಲ್ಪಟ್ಟ, ಅಸ್ಮಿನ್‌ಕುಂಭೇ-ಈ ಕುಂಭದಲ್ಲಿ, ಸಮುತ್ಸ್ರಕ್ಷ್ಯೇ-ಬಿಟ್ಟುಬಿಡುತ್ತೇನೆ, ಹೇ ವರವರ್ಣಿನೀ-ಎಲೈ ಶ್ರೇಷ್ಠವಾದ ರೂಪವುಳ್ಳವಳೆ, ಹೆ ಸುಶ್ರೋಣಿ-ಎಲೈ ಶೋಭನಕರವಾದ ಶ್ರೋಣಿಗಳುಳ್ಳವ

---

ಯಶೋವಂತನೇ ! ನೀನು ಸೂರ್ಯವರುಣರಿಂ ಸಂಜನಿಸಿದ ತೇಜಸ್ಸನ್ನುಪ್ರವೇಶಿಸು, ಆಜನ್ಮದಲ್ಲಿಯೂ ಕೂಡ ಅಯೋನಿಜನಾಗಿಯೂ ಮಹಾಧರ್ಮವಂತ ನಾಗಿಯೂ ಇರುವನಾಗಿ ಯೆನ್ನಧೀನದಲ್ಲಿರುವಿ ಎಂಬದಾಗಿ ಬ್ರಹ್ಮನಿಂದನಿರೂಪಿಸಲ್ಪಟ್ಟು ಆತನಿಗೆ ಪ್ರದಕ್ಷಿಣ ನಮಸ್ಕಾರಂಗಳಂಗೈದು ವರುಣನಮಂದಿರವಂಕುರಿತು ತೆರಳಿದನು ॥೧೨॥ಆ ವೇಳೆಯಲ್ಲಿ ಸೂರ್ಯನೂಕೂಡ ಕ್ಷೀರಸಮುದ್ರ ದಿಂದೊಡಗೂಡಿ ದೇವತಾಶ್ರೇಷ್ಠರಿಂದ ಪೂಜಿಸಲ್ಪಡುತ್ತಾ ವರುಣನ ರಾಜ್ಯವನ್ನಾಳುತ್ತಿದ್ದನು ॥೧೩॥ ಈಸಮಯದಲ್ಲಿ ಊರ್ವಶಿಯೆಂಬ ಅಪ್ಸರಸ್ತ್ರೀಯು ಸಖೀಜನರಿಂದೊಡಗೂಡಿ ಸಮುದ್ರನಂ ಕುರಿತು ಸ್ವೇಚ್ಛೆಯಾಗಿ ಬಂದಂಥಾವಳಾದಳು ॥೧೪॥ ಸಮುದ್ರದಲ್ಲಿ ಕ್ರೀಡಿಸುತ್ತಿರುವ ಮಹಾರೂಪವತಿಯಾದ ಆ ಊರ್ವಶಿಯಂ ಕಂಡು ಮಹಾಸಂತೋಷವಂ ಹೊಂದಿದವನಾದನು ॥ ೧೫ ॥ ತಾವರೆ ಯೆಸಳಂತೆ ವಿಸ್ತಾರವಾದ ನೇತ್ರಗಳುಳ್ಳವಳಾಗಿಯೂ ಪೂರ್ಣವಾಚಂದ್ರನಿಗೆ ಸರಿಯಾದ ಮುಖವುಳ್ಳವಳಾಗಿಯೂ, ಇರುವ ಆ ಅಪ್ಸರಾಂಗನೆಯನ್ನು ಮಿಥುನಿಭಾವಕ್ಕೋಸುಗ ವರಿಸಿದಂಥಾವನಾದನು ॥೧೬॥ ಆ ಊರ್ವಶಿಯಾದರೆ ಅಂಜಲಿಬದ್ಧಳಾಗಿ ನಿಂತು ವರುಣನಂ ಕುರಿತು ಎಲೈ ಸುರೇಶ್ವರನೇ ನಾನು ಸೂರ್ಯನಿಂದ ಪೂರ್ವದಲ್ಲಿಯೇ ಪ್ರತ್ಯಕ್ಷವಾಗಿ ವರಿಸಲ್ಪಟ್ಟದ್ದೇನೆಂದು ಪ್ರತ್ಯುತ್ತರವಂ ಕೊಡಲು ವರುಣನು ಮನ್ಮಥಬಾಣಗಳಿಂದ ನೊಂದವನಾಗಿ ಎಲೈ ಊರ್ವಶಿಯೇ ದೇವನಿರ್ಮಿತವಾದ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಿಯದಿ ನೇಚ್ಛಸಿ ಸಂಗಮಮ್ ॥೧೮॥ ತಸ್ಯ ತಲ್ಲೋಕಪಾಲಸ್ಯ ವರುಣಸ್ಯ ಸುಭಾಷಿತಮ್ । ಊರ್ವಶೀ ಪರಮಪ್ರೀತಾ ಶ್ರುತ್ವಾ ವಾಕ್ಯಮುವಾಚ ಹ ॥೧೯॥ ಕಾಮಮೇತದ್ಭವತ್ವೇವಂ ಹೃದಯಂ ಮೇ ತ್ವಯಿ ಸ್ಥಿತಮ್ । ಭಾವಶ್ಚಾಪ್ಯಧಿಕಸ್ತುಭ್ಯಂ ದೇಹಸ್ತು ಮಿತ್ರಸ್ಯ ತು ಪ್ರಭೋ ॥೨೦॥ ಊರ್ವಶ್ಯಾ ಚೈವಮುಕ್ತಸ್ತು ರೇತಸ್ತನ್ಮಹದದ್ಭುತಮ್ । ಜ್ವಲದಗ್ನಿಶಿಖಾಪ್ರಖ್ಯಂ ತಸ್ಮಿನ್ಕುಂಭೇ ನ್ಯವಾಸೃಜತ್ ॥೨೧॥ ಊರ್ವಶೀ ತ್ವಗಮತ್ತತ್ರ ಮಿತ್ರೋ ಯತ್ರ ದೇವತಾ ॥೨೨॥ ತಾಂ ತು ಮಿತ್ರಸ್ಸುಸಂಕ್ರುದ್ಧ ಊರ್ವಶೀಮಿದಮಬ್ರವೀತ್ । ಮಯಾ ನಿಮಂತ್ರಿತಾ ಪೂರ್ವಂ ಕಸ್ಮಾತ್ತ್ವಮಸಿ ವರ್ಜಿತಾ । ಪತಿಮನ್ಯಂ ವೃತವತೀ ತಸ್ಮಾತ್ತ್ವಂ ದುಷ್ಟಚಾರಿಣೀ ॥೨೩॥ ಅನೇನ ದುಷ್ಕೃತೇನ ತ್ವಂ ಮತ್ಕ್ರೋಧಕಲುಷೀಕೃತಾ । ಮನುಷ್ಯಲೋಕಮಾಸ್ಥಾಯ ಕಂಚಿತ್ಕಾಲಂ ನಿವತ್ಸ್ಯಸಿ ॥೨೪॥ ಬುಧಸ್ಯ ಪುತ್ರೋ ರಾಜರ್ಷಿಃ ಕಾಶೀರಾಜಃ ಪುರೂರವಾಃ । ತಮದ್ಯ ಗಚ್ಛ ದುರ್ಬುದ್ಧೇ ಸ ತೇ ಭರ್ತಾ ಭವಿಷ್ಯತಿ ॥೨೫॥ ತತಸ್ಸಾ ಶಾ

---

ಶೀ ಸಂಗಮಂ-ಸಂಗಮವನ್ನು, ನೇಚ್ಛಸಿಯದಿ-ಇಚ್ಛಯಿಸದವಳಲ್ಲದೆ ಹೋದರೆ, ತ್ವಯಿ-ನಿನ್ನ ವಿಷಯವಾಗಿ, ಏವಂ-ಈಪರಿಯಾಗಿ, ಉತ್ಸೃಜ್ಯ-ಬಿಟ್ಟು, ಅಹಂ-ನಾನು, ಕೃತಕಾಮಃ-ಜಯಿಸಲ್ಪಟ್ಟ ಕಾಮವುಳ್ಳವನು ॥೧೮॥ ಲೋಕಪಾಲಸ್ಯ-ದಿಕ್ಪಾಲಕರಾದ, ತಸ್ಯವರುಣಸ್ಯ-ಆ ವರುಣನ-ತತ್ಸುಭಾಷಿತಂ-ಆವ ಳ್ಳೇ ಮಾತನ್ನು, ಶ್ರುತ್ವಾ-ಕೇಳಿ, ಊರ್ವಶೀ-ಊರ್ವಶಿಯು, ಪರಮಪ್ರೀತಾ-ಬಹಳ ಸಂತೋಷಗೊಂಡವಳಾಗಿ, ವಾಕ್ಯಂ-ಮಾತನ್ನು, ಉವಾಚಹ-ಹೇಳಿ ದಳು ॥೧೯॥ ಹೇಪ್ರಭೋ-ಎಲೊ ಸ್ವಾಮಿಯೇ ! ಏತತ್-ಇದು, ಕಾಮಂ-ಅತ್ಯಂತವಾಗಿ, ಏವಂ-ಈಪರಿಯಾಗಿ, ಭವತು-ಆಗಲಿ, ಮೇ - ನನ್ನ, ಹೃದಯಂ-ಮನಸ್ಸು, ತ್ವಯಿ-ನಿನ್ನಲ್ಲಿ ಸ್ಥಿತಂ-ನಿಂತಿಥೇ, ತುಭ್ಯಂ-ನಿನ್ನ, ಭಾವಶ್ಚ-ಅಭಿಪ್ರಾಯವೂ ಕೂಡ, ಅಭ್ಯಧಿಕಃ-ಹೆಚ್ಚಾಗಿಥೆ, ದೇಹಸ್ತು- ಶರೀರವಾದರೆ, ಮಿತ್ರಸ್ಯ-ಸ್ನೇಹಿತನ ಸಂಬಂಧಿಯಾದದ್ದು, (ಯದ್ವಾ-ಸೂರ್ಯನ ಸಂಬಂಧವಾದದ್ದು,) ॥೨೦॥ ಊರ್ವಶ್ಯಾಚ- ಊರ್ವಶೀದೇವಿಯಿಂದಲೂ, ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ ವರುಣನು, ಅದ್ಭುತಂ-ಆಶ್ಚರ್ಯಕರವಾದ, ಜ್ವಲದಗ್ನಿಶಿಖಾಪ್ರಖ್ಯಂ- ಜ್ವಲತ್- ಪ್ರಜ್ವಲಿಸುತ್ತಿರುವ, ಅಗ್ನಿ-ಅಗ್ನಿಯ, ಶಿಖಾ-ಜ್ವಾಲೆಯ, ಪ್ರಖ್ಯಂ-ಕಾಂತಿಯಂತೆ ಕಾಂತಿಯುಳ್ಳ, ರೇತಃ-ವೀರ್ಯವನ್ನು, ತಸ್ಮಿನ್ಕುಂಭೇ-ಆ ಕುಂಭದಲ್ಲಿ, ಅವಾಸೃಜತ್-ಬಿಟ್ಟನು ॥೨೧॥ ಊರ್ವಶೀ-ಊರ್ವಶೀದೇವಿಯು, ಮಿತ್ರೋದೇವತಾ-ಸೂರ್ಯನೆಂಬ ದೇವರು, ಯತ್ರ-ಯಾವಸ್ಥಳದಲ್ಲಿ, ಅಸ್ತಿ-ಇಧಾನೊ, ತತ್ರ-ಆಸ್ಥಳದಲ್ಲಿ ಅಗಮತ್-ಹೋದಳು ॥೨೨॥ ಮಿತ್ರಃ-ಸೂರ್ಯನು, ತಾಂಊರ್ವಶೀಂ-ಆ ಊರ್ವಶಿಯನ್ನು, ಸುಸಂಕ್ರುಧ್ಯ-ಅಪ್ಪಿಕೊಂಡು, ಇದಂ-ಈ ವಕ್ಷ್ಯಮಾಣವಚನವನ್ನು, ಅಬ್ರವೀತ್-ನುಡಿದನು ಮಯಾ-ನನ್ನಿಂದ, ಪೂರ್ವಮೇವ- ಮೊದಲೆ, ನಿಮಂತ್ರಿತಾ- ನಿಯಮಿಸಲ್ಪಟ್ಟವಳಾಗಿ, ತ್ವಂ-ನೀನು, ಕಸ್ಮಾತ್ - ಯಾತರದೆಸೆಯಿಂದ, ವರ್ಜಿತಾ-ಬಿಡಲ್ಪಟ್ಟಂಥಾವಳು, ಅಸಿ-ಆದೆ, ಅನ್ಯಂಪತಿಂ-ಮತ್ತೊಬ್ಬಪತಿಯನ್ನು, ವೃತವತೀ-ವರಿಸಿದ್ದೀಯಿ, ತಸ್ಮಾತ್-ಆಕಾರಣದದೆಸೆಯಿಂದ, ತ್ವಂ-ನೀನು, ದುಷ್ಟಚಾರಿಣೀ-ದುಷ್ಟಕಾರ್ಯವನ್ನು ಮಾಡಿದವಳು॥೨೩॥ ಅನೇನ-ದುಷ್ಕೃತೇನ-ಈದುಷ್ಟವ್ಯಾಪಾರದಿಂದ, ತ್ವಂ-ನೀನು, ಮತ್ಕ್ರೋಧಕಲುಷೀಕೃತಾ-ಮತ್-ನನ್ನ, ಕ್ರೋಧ-ಕೋಪದಿಂದ, ಕಲುಷೀಕೃತಾ-ಕಲುಷಚಿತ್ತಳಾಗಿ ಮಾಡಲ್ಪಟ್ಟವಳಾಗಿ, ಮನುಷ್ಯಲೋಕಂ- ಭೂಲೋಕವನ್ನು, ಆಸ್ಥಾಯ-ಹೊಂದಿ, ಕಂಚಿತ್ಕಾಲಂ-ಸ್ವಲ್ಪಕಾಲವು, ನಿವತ್ಸ್ಯಸಿ-ಇರುವಿ, ॥೨೪॥ ಬುಧಸ್ಯ-ಬುಧನಿಗೆ, ಪುತ್ರಃ-ಮಗನಾದ, ರಾಜರ್ಷಿಃ-ರಾಜರ್ಷಿಯಾದ, ಕಾಶೀರಾಜಃ-ಕಾಶೀಪಟ್ಟಣಕ್ಕೆ ಅಧಿಪತಿಯಾದ, ಪುರೂರವಾಃ-ಪುರೂರವಸ್ಸೆಂಬ ಅರಸು, ಅಸ್ತಿ-ಇಧಾನೆ, ಹೇದುರ್ಬುದ್ಧೇ-ಎಲೈದುಷ್ಟಬುದ್ಧಿಯುಳ್ಳವಳೆ, ತಂ-ಆಪುರೂರವಸ್ಸನನ್ನು ಕುರಿತು, ಅದ್ಯ-ಈಗ, ಗಚ್ಛ-ಹೋಗು, ಸಃ-ಆ ಪುರೂರವಸ್ಸು, ತೇ-ನಿನಗೆ, ಭರ್ತಾ-ಪತಿಯು, ಭವಿಷ್ಯತಿ-ಆಗುವನು॥೨೫॥ ತತಃ-ಬಳಿಕ, ಸಾ-ಆ ಊರ್ವಶಿಯು, ಶಾಪದೋಷೇಣ-ಶಾಪ-ಶಾಪವೆಂಬ, ದೋಷೇಣ-ದೋಷದಿಂದ, ಪುರೂರವಸಂ-ಪುರೂರವಸ್ಸನನ್ನು ಕುರಿತು, ಅಭ್ಯ

---

ಈ ಕುಂಭದಲ್ಲಿ ಯೆನ್ನ ಸಂಬಂಧವಾದ ತೇಜಸ್ಸಂ ಬಿಡುವೆನು, ಎಲೈ ಉತ್ತಮಾಂಗನೆಯೇ, ನೀನು ಸಂಗಮವನ್ನಿಚ್ಛಿಸದಿದ್ದರೆ ನಾನೀಪರಿ ನಿನ್ನವಿಷಯವಾಗಿ ಬಿಟ್ಟು ಕಾಮನಂಜೈಸುವೆನೆಂದು ನುಡಿದವನಾದನು ॥೧೮॥ ಲೋಕಪಾಲಕನಾದ ವರುಣನ ಆ ವಾಕ್ಯವಂ ಕೇಳಿ ಊರ್ವಶಿಯು ಆತನಂ ಕುರಿತು ಹೇಳುವಳೆಂತೆನೆ ॥೧೯॥ ಎಲೈ ಸ್ವಾಮಿಯೆ ! ಇದು ಅವಶ್ಯಕವಾಗಿ, ಯನ್ನ ಮನವು ನಿನ್ನಲ್ಲಿಯೇ ನಿಂತಿಥೆ ನಿನ್ನಭಿಪ್ರಾಯವೂ ಕೂಡ ನನ್ನಲ್ಲಿ ಮತ್ತೂ ಅಧಿಕವಾಗಿಥೆ, ದೇಹವಾದರೆ ಮಿತ್ರನದಾಗಿಥೆ ಯೆಂದು ಹೇಳಿದಂಥಾವಳಾಗಲು ಅತ್ಯಾಶ್ಚರ್ಯಕರವಾಗಿರ್ಪ ಮತ್ತು ಪ್ರಜ್ವಲಿಸುತ್ತಿರುವ ಅಗ್ನಿಜ್ವಾಲೆಯ ಕಾಂತಿಯೋಪಾದಿಯಲ್ಲಿ ಕಾಂತಿಯುಳ್ಳ ರೇತಸ್ಸನ್ನು ಆ ಕುಂಭದಲ್ಲಿ ಬಿಟ್ಟಂಥಾವನಾದನು ॥೨೧॥ ಆ ಊರ್ವಶಿಯಾದರೆ ಸೂರ್ಯನು ಯಾವಯೆಡದಲ್ಲಿ ಇದ್ದಂಥಾವನಾದನೋ ಆ ಸ್ಥಳಕ್ಕೆ ಹೊರಟಳು ॥೨೨॥ ಸೂರ್ಯನು ಆ ಊರ್ವಶಿಯಂ ಕಂಡು ಎಲೈ ಉತ್ತಮಾಂಗನೆಯೆ! ನನ್ನಿಂದ ಪೂರ್ವದಲ್ಲಿಯೆ ವರಿಸಲ್ಪಟ್ಟ ನೀನು ಯಾಕೆ ತ್ವರಿತವಾಗಿ ಬರಲಿಲ್ಲ, ನೀನು ಮತ್ತೋರ್ವನಂ ವರಿಸಿದ್ದೆಯೋ ಹೇನೋ, ಅದರಿಂದ ಕೆಟ್ಟ ಕೆಲಸವಂ ಗೈಯ್ಯುವಂಥಾವಳು, ಈ ದುಷ್ಕಾರ್ಯದಿಂ ನೀನು ಎನ್ನ ಕೋಪದಿಂದ ಪಾಪಿಷ್ಠಳಾಗಿ, ಕೆಲಕಾಲವು ಮನುಷ್ಯಲೋಕದೊಳು ದೇಹಶಾರೂಪದಿಂದಲೇ ಇರುವಂಥಾವಳಾಗು ॥೨೪॥ ಬುಧನ ಮಗನಾದ ಪುರೂರವಸ್ಸೆಂಬುವನು ಕಾಶೀದೇಶದ ಅರಸಾಗಿಹನು ಆತನನ್ನುದ್ದೇಶಿಸಿ ತೆರಳುವಂಥಾವಳಾಗು, ಅವನು ನಿನಿಗೆ ಪತಿಯಾಗುವನೆಂದು ಶಪಿಸಿದಂಥಾವನಾದನು ॥೨೫॥ ಬಳಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪದೋಷೇಣಪುರೂರವಸಮಭ್ಯಗಾತ ॥ ಪ್ರತಿಯಾತಾಪುರೂರವಂಬುಧಸ್ಯಾತ್ಮಜಮೌರಸಂ ॥೨೫॥ ತಸ್ಯಜಜ್ಞೇತತಶ್ಶ್ರೀಮಾನಾಯುಃಪುತ್ರೋಮಹಾಬಲಃ । ನಹುಷೋಯತ್ರಪುತ್ರಸ್ತುಬಭೂವೇಂದ್ರಸಮದ್ಯುತಿಃ॥೨೬॥ ವಜ್ರಮುತ್ಸೃಜ್ಯವೃತ್ರಾಯಭ್ರಾಂತೇಥತ್ರಿದಶೇಶ್ವರೇ । ಶತಂವರ್ಷಸಹಸ್ರಾಣಿಯೇನೇಂದ್ರತ್ವಂಪ್ರಶಾಸಿತಂ ॥೨೭॥ ಸಾತೇನಶಾಪೇನಜಗಾಮಭೂಮಿಂತದೋರ್ವಶೀಚಾರುದತೀಸುನೇತ್ರಾ।ಬಹೂನಿವರ್ಷಾಣ್ಯವಸಚ್ಚಸುಭ್ರೂಃಶಾಪಕ್ಷಯಾದಿಂದ್ರಸದೋಯಯೌಚ॥೨೮॥

—ಇತಿ ಶ್ರೀಮದುತ್ತರ ರಾಮಾಯಣೇ ಷಟ್ಪಂಚಾಶಸ್ಸರ್ಗಃ—

ತಾಂಶ್ರುತ್ವಾದಿವ್ಯಸಂಕಾಶಾಂಕಥಾಮದ್ಭುತದರ್ಶನಾಂ।ಲಕ್ಷ್ಮಣಃಪರಮಪ್ರೀತೋರಾಘವಂವಾಕ್ಯಮಬ್ರವೀತ್॥೧॥ ನಿಕ್ಷಿಪ್ತದೇಹೌಕಾಕುತ್ಸ್ಥಕಥಂತೌದ್ವಿಜಪಾರ್ಥಿವೌ । ಪುನರ್ದೇಹೇನಸಂಯೋಗಂಜಗ್ಮತುರ್ದೇವಸಮ್ಮತೌ ॥೨॥ ತಸ್ಯತದ್ಭಾಷಿತಂಶ್ರುತ್ವಾರಾಮಸ್ಸತ್ಯಪರಾಕ್ರಮಃ । ತಾಂಕಥಾಂಕಥಯಾಮಾಸವಸಿಷ್ಠಸ್ಯಮಹಾತ್ಮನಃ । ಯಸ್ತುಕುಂಭೋರ

---

ಗಾತ್–ಹೊರಟಳು ॥೨೫॥ ಬುಧಸ್ಯ–ಬುಧನಿಗೆ, ಔರಸಂ–ಆತ್ಮಜಂ–ಔರಸಪುತ್ರನಾದ, ಪುರೂರವಂ–ಪುರೂರವಸ್ಸಿನಂ ಕುರಿತು,ಪ್ರತಿಯಾತಾ–ಹೊಂದಿದಳು॥ ತತಃ–ಬಳಿಕ, ತಸ್ಯ–ಆ ಪುರೂರವಸ್ಸಿಗೆ, ಆಯುಃ–ಆಯುಸ್ಸೆಂಬ ಶ್ರೀಮಾನ್–ಸಂಪದ್ಯುಕ್ತನಾದ, ಮಹಾಬಲಃ–ಮಹಾ ಬಲಿಷ್ಠನಾದ, ಪುತ್ರಃ–ಪುತ್ರನು, ಜಜ್ಞೇ–ಆದನು, ಯತ್ರ–ಯಾವ ಆಯುಸ್ಸು ಎಂಬವನಲ್ಲಿ, ಇಂದ್ರಸಮದ್ಯುತಿಃ–ಇಂದ್ರ–ದೇವೇಂದ್ರನಿಗೆ, ಸಮ–ಸಮಾನವಾದ, ದ್ಯುತಿಃ–ಕಾಂತಿಯುಳ್ಳ, ನಹುಷಃ–ನಹುಷನೂ ಎಂಬ, ಪುತ್ರಸ್ತು–ಮಗನಾದರೆ, ಬಭೂವ–ಆದನೋ ॥೨೬॥ ಅಥ–ಬಳಿಕ, ತ್ರಿದಶೇಶ್ವರೇ–ದೇವೇಂದ್ರನು, ವೃತ್ರಾಯ–ವೃತ್ರಾಸುರನಿಗೋಸುಗ, ವಜ್ರಂ–ವಜ್ರಾಯುಧವನ್ನು, ಉತ್ಸೃಜ್ಯ–ಬಿಟ್ಟು, ಭ್ರಾಂತೇಸತಿ–ಭ್ರಮಣವನ್ನು ಹೊಂದಿದಂಥಾವನಾಗತಿರಲಾಗಿ, ಯೇನ–ಯಾವ ನಹುಷನಿಂದ, ಶತಂವರ್ಷಸಹಸ್ರಾಣಿ–ಲಕ್ಷ ವರುಷಗಳು, ಇಂದ್ರತ್ವಂ–ಇಂದ್ರನ ಪ್ರಭುತ್ವವು, ಪ್ರಶಾಸಿತಂ–ಮಾಡಲ್ಪಟ್ಟಿತೋ ॥೨೭॥ ಸಾ–ಅಂಥಾಪ್ರಸಿದ್ಧಳಾದ, ಚಾರುದತೀ–ಚಾರು–ಮನೋಹರವಾದ, ದತೀ–ದಂತಗಳುಳ್ಳ, ಸುನೇತ್ರಾ–ಒಳ್ಳೇ ನೇತ್ರಗಳುಳ್ಳ, ಸುಭ್ರೂಃ–ಒಳ್ಳೆ ಕಣ್ಣುಬ್ಬುಗಳುಳ್ಳ, ಊರ್ವಶೀ–ಊರ್ವಶೀಯು, ತೇನಶಾಪೇನ–ಆ ಶಾಪದಿಂದ, ತದಾ–ಆ ಕಾಲದಲ್ಲಿ, ಭೂಮಿಂ–ನೆಲವನ್ನು, ಜಗಾಮ–ಹೊಂದಿದಳು ॥೨೮॥ ಬಹೂನಿವರ್ಷಾಣಿ– ಬಹು ವರ್ಷಗಳು, ಅವಸಚ್ಚ–ಭೂಮಿಯಲ್ಲಿ ಇರಲೂ ಇದ್ದಳು, ಶಾಪಕ್ಷಯಾತ್–ಶಾಪಪರಿಹಾರಾನಂತರದಲ್ಲಿ, ಇಂದ್ರಸದಃ–ಇಂದ್ರನ ಸಭೆಯನ್ನು ಕುರಿತು,ಯಯೌ–ತೆರಳಿದಳು.

—···✻ಉತ್ತರರಾಮಾಯಣೇ ಷಟ್ಪಂಚಾಶಸ್ಸರ್ಗಃ.✻···—

ಲಕ್ಷ್ಮಣಃ–ಲಕ್ಷ್ಮಣನು,ದಿವ್ಯಸಂಕಾಶಾಂ–ದೇವತಾಸಂಬಂಧವಾದ,ಅದ್ಭುತದರ್ಶನಾಂ–ಆಶ್ಚರ್ಯಕರವಾದ ನೋಡುವಿಕೆಯುಳ್ಳ, ತಾಂಕಥಾಂ–ಆ ಕಥೆಯನ್ನು,ಶ್ರುತ್ವಾ–ಕೇಳಿ,ಪರಮಪ್ರೀತಃ–ಸಂತೋಷಚಿತ್ತನಾಗಿ, ರಾಘವಂ–ಶ್ರೀರಾಮನನ್ನು ಕುರಿತು, ಅಬ್ರವೀತ್–ನುಡಿದನು॥೧॥ಹೇಕಾಕುತ್ಸ್ಥ–ಎಲೈಕಕುತ್ಸ್ಥವಂಶೋತ್ಪನ್ನನಾದ ಶ್ರೀರಾಮನೇ, ನಿಕ್ಷಿಪ್ತದೇಹೌ–ನೆಲದಲ್ಲಿ ಇರಸಲ್ಪಟ್ಟ ಶರೀರಗಳುಳ್ಳ, ದೇವಸಮ್ಮತೌ–ದೇವತೆಗಳಿಗೆ ಇಷ್ಟರಾದ, ತೌದ್ವಿಜಪಾರ್ಥಿವೌ–ಆ ವಸಿಷ್ಠ ನಿಮಿಚಕ್ರವರ್ತಿಗಳಿಬ್ಬರೂನು, ಪುನಃ–ಮತ್ತು, ದೇಹೇನ–ಶರೀರದಿಂದ, ಸಂಯೋಗಂ–ಸಂಬಂಧವನ್ನು, ಕಥಂಜಗ್ಮತುಃ–ಹ್ಯಾಗೆ ಹೊಂದಿದರು ॥೨॥ ಸತ್ಯಪರಾಕ್ರಮಃ–ಸತ್ಯ–ಸತ್ಯದಿಂದಲೇ, ಪರಾಕ್ರಮಃ–ಶತ್ರುಸಂಹಾರಕನಾದ, ರಾಮಃ–ಶ್ರೀರಾಮನು, ತಸ್ಯ–ಆ ಲಕ್ಷ್ಮಣನ,ತದ್ಭಾಷಿತಂ–ಆಮಾತನ್ನು, ಶ್ರುತ್ವಾ–ಕೇಳಿ, ಮಹಾತ್ಮನಃ–ಮಹಾತ್ಮನಾದ, ವಸಿಷ್ಠಸ್ಯ–ವಸಿಷ್ಠ ಋಷಿಯ, ತಾಂಕಥಾಂ–ಆ ಉತ್ಪತ್ತಿಕಥೆಯನ್ನು, ಕಥಯಾಮಾಸ–ಹೇಳಿದ

---

ಳ ಆ ಊರ್ವಶಿಯು ಶಾಪದೋಷದಿಂದ ಪುರೂರವಸ್ಸಿನಂ ಕುರಿತು ಬಂದಂಥಾವಳಾಗಿ, ಬುಧನ ಔರಸಪುತ್ರನಾದ ಆ ಪುರೂ ರವಸ್ಸಿನಂ ಪೊಂದಿದಂಥಾವಳಾದಳು॥೨೬॥ಅನಂತರದಲ್ಲಿ ಆ ಪುರೂರವಸ್ಸಿಗೆ ಆಯುಷನೆಂಬ ಸಂಪದ್ಯುಕ್ತನಾದ ಕುಮಾರನು ಸಂಜನಿಸಿದನು, ದೇವೇಂದ್ರನು ವೃತ್ರಾಸುರಸಂಹಾರಕ್ಕೋಸುಗ ವಜ್ರಾಯುಧವಂಬಿಟ್ಟು, ಭ್ರಮಣವಂ ನೈದಿದಂಥಾವನಾಗಲೂ ಯಾವ ಪುರುಷನು ಇಂದ್ರತ್ವವಂ ಪಡೆದು ಲಕ್ಷವರುಷಗಳುತ್ರೈಲೋಕ್ಯವನ್ನಾಳುತಿದ್ದನೊ, ಅಂಥಾ ನಹುಷನೆಂಬ ಕುಮಾರನು ಆತನಿಗೆ ಪುಟ್ಟಿದಂಥಾವನಾದನು ॥೨೭॥ ಅಂತಾ ಪ್ರಸಿದ್ಧಳಾಗಿಯೂ, ಮನೋಹರವಾದ ದಂತಗಳುಳ್ಳವಳಾಗಿಯೂ, ತಾವರೇ ಯೆಸಳೆಯಂತಿರುವ ಕಂಣುಗಳುಳ್ಳವಳಾಗಿಯೂ ಇರುವ ಆ ಊರ್ವಶಿಯೂ ಕೂಡಾ, ಶಾಪದದೆಶೆಯಿಂದ, ಆವೇಳೆಯೊಳು ಅನೇಕವರ್ಷಗಳು ಭೂಮಿಯಲ್ಲಿದ್ದು ಶಾಪಪರಿಹಾರವಾದ ಬಳಿಕ ಇಂದ್ರಸಭೆಯಂ ಕುರಿತು ಪೋದಂಥಾವಳಾದಳೆಂದು ಶ್ರೀರಾಮನು ಲಕ್ಷ್ಮಣನಿಗೆ ಈ ಇತಿಹಾಸವಂ ನಿರೂಪಿಸಿದಂಥಾವನಾದನು ॥೨೮॥

—✻ಇತಿ ಶ್ರೀಮದುತ್ತರ ರಾಮಾಯಣದಲ್ಲಿನ ೫೬ನೆಯ ಸರ್ಗಂಮುಗಿದುದು.✻—

ಅತ್ಯಾಶ್ಚರ್ಯಕರವಾಗಿರುವ ಮತ್ತು ದೇವತಾಸಂಬಂಧವಾದ ಈ ಕಥೆಯಂ ಕೇಳಿ, ಲಕ್ಷ್ಮಣನು ಪರಮಾನಂದ ಭರಿತನಾಗಿ, ಶ್ರೀರಾಮನಂಕುರಿತು, ಎಲೈ ರಾಮನೆ! ದೇವತೆಗಳಿಗೆಲ್ಲಾ ಪ್ರೀತಿಪಾತ್ರರಾದ ಆ ವಸಿಷ್ಠ ಋಷಿಯು ನಿಮಿ ಚಕ್ರವರ್ತಿಯು ಎಂಬ ಅವರೀರ್ವರುಪರಸ್ಪರ ಶಾಪಗಳಿಂದ ದೇಹವಿಲ್ಲದವರಾಗಿ ಶರೀರ ಸಂಬಂಧವನ್ನು ಹ್ಯಾಗೆಪಡದಂಥಾವರಾದರೋ, ಅದಂ ನಿರೂಪಿಸುವಂಥಾವನಾಗೆಂದು ಕೇಳಿದವನಾದನು॥೧॥ ಸತ್ಯಪರಾಕ್ರಮಿಯಾದ ಶ್ರೀರಾಮ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಘುಶ್ರೇಷ್ಠ ತೇಜಃಪೂರ್ಣೋ ಮಹಾತ್ಮನೋಃ। ತಸ್ಮಿನ್ ತೇಜೋಮಯಾವಿಪ್ರೌ ಸಂಭೂತಾವೃಷಿಸತ್ತಮೌ ॥೪॥ ಪೂರ್ವಂ ಸಮಭವತ್ತತ್ರ ಹ್ಯಗಸ್ತ್ಯೋ ಭಗವಾನೃಷಿಃ । ನಾಹಂ ಸುತಸ್ತವೇತ್ಯುಕ್ತ್ವಾ ಮಿತ್ರಂ ತಸ್ಮಾದಪಾಕ್ರಮತ್ ॥೫॥ ತದ್ಧಿ ತೇಜಸ್ತು ಮಿತ್ರಸ್ಯ ಊರ್ವಶ್ಯಾಃ ಪೂರ್ವಮಾಹಿತಂ । ತಸ್ಮಿಂಸ್ತ್ಸಮಭವತ್ಕುಂಭೇ ತತ್ತೇಜೋ ಯತ್ರ ವಾರುಣಂ ॥೬॥ ಕಸ್ಯಚಿತ್ತ್ವಥ ಕಾಲಸ್ಯ ಮಿತ್ರಾವರುಣಸಂಭವಃ । ವಸಿಷ್ಠಸ್ತೇಜಸಾ ಯುಕ್ತೋ ಜಜ್ಞೇ ಚೇಕ್ಷ್ವಾಕುದೈವತಮ್ ॥೭॥ ತಮಿಕ್ಷ್ವಾಕುರ್ಮಹಾತೇಜಾ ಜಾತಮಾತ್ರಮನಿಂದಿತಂ । ವವ್ರೇ ಪುರೋಹಿತಂ ಸೌಮ್ಯ ವಂಶಸ್ಯಾಸ್ಯ ಭವಾಯ ನಃ ॥೮॥ ಏವಂ ತ್ವಪೂರ್ವದೇಹಸ್ಯ ವಸಿಷ್ಠಸ್ಯ ಮಹಾತ್ಮನಃ । ಕಥಿತೋ ನಿರ್ಗಮಸ್ಸೌಮ್ಯ ನಿಮೇಶ್ಶೃಣು ಯಥಾಭವತ್ ॥೯॥ ದೃಷ್ಟ್ವಾ ವಿದೇಹರಾಜಾನಮೃಷಯಸ್ಸರ್ವ ಏವ ತೇ । ತಂ ತತೋ ಯೋಜಯಾಮಾಸುರ್ಯಾಗದೀಕ್ಷಾಂ ಮನೀಷಿಣಃ ॥೧೦॥ ತಂ ಚ ದೇಹಂ ನರೇಂದ್ರಸ್ಯ ರಕ್ಷಂತಿಸ್ಮ ದ್ವಿಜೋತ್ತಮಾಃ । ಗಂಧೈರ್ಮಾ

---

ನು ॥೩॥ ಹೇ ರಘುಶ್ರೇಷ್ಠ–ಎಲೈ ರಘುಕುಲೋತ್ಪನ್ನನಾದ ಲಕ್ಷ್ಮಣನೆ, ಮಹಾತ್ಮನೋಃ, ಮಹಾತ್ಮರಾದ ಮಿತ್ರಾವರುಣರ, ತೇಜಃಪೂರ್ಣಃ–ತೇಜಃ–ವೀರ್ಯದಿಂದ, ಪೂರ್ಣಃ–ತುಂಬಿರುವ, ಕುಂಭಃ–ಕಲಶವು, ಯಃ–ಯಾವದುಂಟೋ, ತಸ್ಮಿನ್–ಆ ಕುಂಭದಲ್ಲಿ, ತೇಜೋಮಯೌ–ತೇಜಸ್ವಿಗಳಾದ, ಋಷಿಸತ್ತಮೌ–ಋಷಿಶ್ರೇಷ್ಠರಾದ, ವಿಪ್ರೌ–ಇಬ್ಬರುಬ್ರಾಹ್ಮಣರು, ಸಂಭೂತೌ–ಹುಟ್ಟಿದರು ॥೪॥ ಪೂರ್ವಂ–ಮೊದಲು, ತತ್ರ–ಆ ಕುಂಭದಲ್ಲಿ, ಭಗವಾನ್–ಪೂಜ್ಯನಾದ, ಅಗಸ್ತ್ಯಃ–ಅಗಸ್ತ್ಯನೆಂಬ, ಋಷಿಃ–ಋಷಿಯು, ಸಮಭವತ್–ಎದ್ದನು, ಅಹಂ–ನಾನು, ತವ–ನಿನಗೆ, ಸುತಃ–ಕುವರನು, ನ–ಅಲ್ಲ, ಇತಿ–ಇಂತೆಂದು, ಮಿತ್ರಂ–ಸೂರ್ಯನನ್ನು ಕುರಿತು, ಉಕ್ತ್ವಾ–ಪೇಳಿ, ತಸ್ಮಾತ್–ಆ ಕುಂಭದ ದೆಸೆಯಿಂದ, ಅಪಾಕ್ರಮತ್–ಹುಟ್ಟಿದನು ॥೫॥ ಮಿತ್ರಸ್ಯ–ಸೂರ್ಯನ, ತತ್ತೇಜಃ–ಆ ತೇಜಸ್ಸು, ಊರ್ವಶ್ಯಾಃ–ಊರ್ವಶೀ ನಿಮಿತ್ತನಾಗಿ, ಪೂರ್ವಂ–ಮೊದಲು, ತಸ್ಮಿನ್–ಆ ಕುಂಭದಲ್ಲಿ, ಆಹಿತಂ–ಇರಿಸಲ್ಪಟ್ಟಿತು, ತಸ್ಮಿನ್ ಕುಂಭೇ–ಆ ಕುಂಭದಲ್ಲಿ, ವಾರುಣಂ–ವರುಣಸಂಬಂಧಿಯಾದ, ತತ್ತೇಜಃ–ಆ ತೇಜಸ್ಸು, ಯತ್ರ–ಯಾವ ಕುಂಭದಲ್ಲಿತ್ತೋ ॥೬॥ ಕಸ್ಯಚಿತ್ಕಾಲಸ್ಯಾಥ–ಕೆಲವುಕಾಲಕ್ಕೆ ಅನಂತರದಲ್ಲಿ, ಮಿತ್ರಾವರುಣಸಂಭವಃ–ಮಿತ್ರಾವರುಣರಿಬ್ಬರಿಂದ ಹುಟ್ಟಿದ, ತೇಜಸಾ–ತೇಜಸ್ಸಿನಿಂದ, ಯುಕ್ತಃ– ಕೂಡಿಕೊಂಡಿರುವ, ಇಕ್ಷ್ವಾಕುದೈವತಂ–ಇಕ್ಷ್ವಾಕು ವಂಶಕ್ಕೆ ದೇವತಾಸ್ವರೂಪನಾದ, ವಸಿಷ್ಠಃ–ವಸಿಷ್ಠಋಷಿಯು, ಜಜ್ಞೇ–ಹುಟ್ಟಿದನು, ಹೆ ಸೌಮ್ಯ–ಎಲೈ ಸೌಮ್ಯನೇ, ಮಹಾತೇಜಾಃ–ಮಹಾ ಪರಾಕ್ರಮಶಾಲಿಯಾದ, ಇಕ್ಷ್ವಾಕುಃ–ಇಕ್ಷ್ವಾಕು ಮಹಾರಾಯನು, ಜಾತಮಾತ್ರಂ–ಆಗತಾನೆ ಹುಟ್ಟಿದ, ಅನಿಂದಿತಂ–ದೋಷರಹಿತನಾದ, ತಂ–ಆ ವಸಿಷ್ಠನನ್ನು, ನಃ–ನಮ್ಮ, ಅಸ್ಯವಂಶಸ್ಯ–ಈ ವಂಶಕ್ಕೆ, ಪುರೋಹಿತಂ–ಪುರೋಹಿತನನ್ನಾಗಿ, ವವ್ರೇ–ವರಿಸಿದನು ॥೮॥ ಹೇ ಸೌಮ್ಯ–ಎಲೈ ಪ್ರಸನ್ನನೇ, ಏವಂ–ಈಪರಿಯಾಗಿ, ಅಪೂರ್ವದೇಹಸ್ಯ–ನೂತನವಾದ ಶರೀರಮುಳ್ಳ, ಮಹಾತ್ಮನಃ–ಮಹಾತ್ಮನಾದ, ವಸಿಷ್ಠಸ್ಯ–ವಸಿಷ್ಠಋಷಿಯ, ನಿರ್ಗಮಃ–ಉತ್ಪತ್ತಿಯು, ಕಥಿತಃ–ಪೇಳಲ್ಪಟ್ಟಿತು, ನಿಮೇಃ–ನಿಮಿಚಕ್ರವರ್ತಿಯ, ಕಥಾಂ–ಕಥೆಯನ್ನು, ಶೃಣು–ಕೇಳು, ಯಥಾ–ಹ್ಯಾಗೆ, ಅಭವತ್–ಆದನೋ ॥೯॥ ತತಃ–ಬಳಿಕ, ಸರ್ವೇ–ಸಮಸ್ತರಾದ, ಮನೀಷಿಣಃ–ಬುದ್ಧಿಶಾಲಿಗಳಾದ, ತೇ ಋಷಯಃ–ಆ ಋಷಿಗಳು, ತಂ ವಿದೇಹರಾಜಾನಂ–ಆ ದೇಹರಹಿತನಾದ, ರಾಜಾನಂ–ಅರಸನನ್ನು, ಯಾಗದೀಕ್ಷಾಂ–ಯಾಗದೀಕ್ಷೆಯನ್ನು ಕುರಿತು, ಯೋಜಯಾಮಾಸುಃ–ನಿಯಮಿಸಿದರು ॥೧೦॥ ದ್ವಿಜೋತ್ತಮಾಃ–ಬ್ರಾಹ್ಮಣಶ್ರೇಷ್ಠರು, ನರೇಂದ್ರಸ್ಯ–ನಿಮಿಚಕ್ರವರ್ತಿಯ, ತಂ ಚ ದೇಹಂ–ಆ ಶರೀರವನ್ನು, ಪೌರಭೃತ್ಯಸಮನ್ವಿತಾಸ್ಸಂತಃ–ಪಟ್ಟಣಸ್ಥರಿಂದಲೂ ಸೇವಕರಿಂದಲೂ ಕೂಡಿಕೊಂಡಿರುವರಾಗಿ, ಗಂಧೈಃ–ಗಂಧಗಳಿಂದಲೂ, ಮಾಲ್ಯೈಃ–ಪುಷ್ಪಗಳಿಂದಲೂ, ನರೇಂದ್ರಸ್ಯ–ನಿಮಿಚಕ್ರವರ್ತಿಯ, ತಂ ಚ ದೇಹಂ–ಆ ಶರೀರವನ್ನು, ರಕ್ಷಂತಿಸ್ಮ–ಸಂರಕ್ಷಿ

---

ನು, ಆ ಲಕ್ಷ್ಮಣನು ಪೇಳಿದ ಆ ವಾಕ್ಯವಂ ಕೇಳಿ, ಮಹಾತ್ಮನಾದ ವಸಿಷ್ಠ ಋಷಿಯ ಉತ್ಪತ್ತಿ ಕ್ರಮವನ್ನು ನಿರೂಪಿಸುವನದೆಂತೆನೆ ॥೩॥ ಕೇಳೆಲೈ ಲಕ್ಷ್ಮಣನೆ! ಮಹಾತ್ಮರಾದ ಮಿತ್ರಾವರುಣರ ತೇಜಸ್ಸಿನಿಂದ ಯಾವ ಕುಂಭವು ತುಂಬಲ್ಪಟ್ಟಂಥಾದ್ದಾಯಿತೋ, ಆ ಕುಂಭದಲ್ಲಿ ಮಹಾತೇಜಸ್ವಿಗಳಾದ ಈರ್ವರು ಋಷಿಶ್ರೇಷ್ಠರು ಪುಟ್ಟಿದ್ದಂಥಾವರಾದರು ॥೪॥ ಆ ಕುಂಭದೊಳು ಪೂಜ್ಯನಾದ ಅಗಸ್ತ್ಯ ಮಹಾಮುನಿಯು, ಸಂಜನಿಸಿ ಸೂರ್ಯನಂ ಕುರಿತು ನಾನು ನಿನ್ನ ಮಗನಲ್ಲವೆಂಬದಾಗಿ ನಿರೂಪಿಸಿ, ಆ ಕುಂಭದಿಂದೆದ್ದನು ॥೫॥ ಯಾವ ಕುಂಭದಲ್ಲಿ ವರುಣನ ತೇಜಸ್ಸು ಬಿದ್ದಂಥಾದ್ದಾಯಿತೊ, ಆ ಕುಂಭದ ಉಪರಿಭಾಗದಲ್ಲಿ ಮಿತ್ರನ ತೇಜಸ್ಸೂ ಬಿದ್ದಂಥಾದ್ದಾಗಿತ್ತು. ಆದಕಾರಣ ಈಪರಿಯಾಗಿ ಪೇಳಿದ್ದಂಥಾವನಾದನು ॥೬॥ ಕೆಲವು ಕಾಲವಾದ ಬಳಿಕ ಇಕ್ಷ್ವಾಕು ಕುಲಕ್ಕೆಲ್ಲಾ ದೈವಸ್ವರೂಪನಾಗಿಯೂ ಮಹಾತೇಜೋವಂತನಾಗಿಯೂ ಇರುವ ವಸಿಷ್ಠ ಮುನಿಯು ಮಿತ್ರಾವರುಣರೀರ್ವರ ತೇಜಸ್ಸಿನಿಂದ ಸಂಭೂತನಾದನು ॥೭॥ ನಿರ್ದೋಷವಾಗಿ ಪುಟ್ಟಿದ ಆ ವಸಿಷ್ಠ ಮುನಿಯನ್ನು ಕಡುತೇಜಸ್ವಿಯಾದ ಇಕ್ಷ್ವಾಕು ಮಹಾರಾಯನು ಈ ವಂಶಕ್ಕೆ ಪುರೋಹಿತನನ್ನಾಗಿವರಿಸಿದನು ॥೮॥ ಪೂರ್ವದಲ್ಲಿ ದೇಹವಿಲ್ಲದೆ ಇರುವ ಮಹಾತ್ಮನಾದ ವಸಿಷ್ಠ ಮುನಿಗೆ ಈಪರಿ ಪುನಹ ಶರೀರಮುಂಟಾಯಿತು ಆ ನಿಮಿರಾಜನಿಗೆ ಗತಮಾದ ಶರೀರವು ಹ್ಯಾಗೆ ಉಂಟಾಯಿತೋ ಅದಂ ಪೇಳ್ವೆನು ಕೇಳು ॥೯॥ ಆ ನಿಮಿಚಕ್ರವರ್ತಿಗೆ ಶರೀರವು ಹೋದಬಳಿಕ ಋಷಿಗಳೆಲ್ಲರೂ ಆ ರಾಜನಂ ಕಂಡು ಆತನನ್ನು ಯಜ್ಞದೀಕ್ಷೆಯಂ ಕುರಿತು ನಿಯಮಿಸಿದಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲ್ಯೈರ್ಗಂಧೈರ್ವಸ್ತ್ರೈಶ್ಚ ಪೌರಭೃತ್ಯೈಸ್ಸಮನ್ವಿತಾಃ ॥೧೧॥ ತತೋಯಜ್ಞೇ ಸಮಾಪ್ತೇತುಭೃಗುಸ್ತತ್ರೇದಮಬ್ರವೀತ್। ಆನೇಷ್ಯಾಮಿ ತೇಚೇತಸ್ತುಷ್ಟೋಸ್ಮಿತವಪಾರ್ಥಿವ ॥೧೨॥ ಸುಪ್ರೀತಾಶ್ಚ ಸುರಾಸ್ಸರ್ವೇ ನಿಮೇಶ್ಚೇತಸ್ತದಾಬ್ರುವನ್। ವರಂವರಯರಾಜರ್ಷೇಕ್ವ ತೇಚೇತೋನಿರುಪ್ಯತಾಂ ॥೧೩॥ ಏವಮುಕ್ತಸ್ಸುರೈಸ್ಸರ್ವೈರ್ನಿಮೇಶ್ಚೇತಸ್ತದಾಬ್ರವೀತ್ । ನೇತ್ರೇಷುಸರ್ವಭೂತಾನಾಂವಸೇ ಯಂಸುರಸತ್ತಮಾಃ॥೧೪॥ ಬಾಢಮಿತ್ಯೇವವಿಬುಧಾನಿಮೇಶ್ಚೇತಸ್ತಥಾಬ್ರುವನ್। ನೇತ್ರೇಷುಸರ್ವಭೂತಾನಾಂವಾಯುಭೂತ ಶ್ಚರಿಷ್ಯಸಿ ॥೧೫॥ ತ್ವತ್ಕೃತೇಚನಿಮಿಷ್ಯಂತಿಚಕ್ಷೂಂಷಿಪೃಥಿವೀಪತೇ । ವಾಯುಭೂತೇನಚರತಾವಿಶ್ರಮಾರ್ಥಂಮುಹು ರ್ಮುಹುಃ ॥೧೬॥ ಏವಮುಕ್ತ್ವಾತುವಿಬುಧಾಸ್ಸರ್ವೇಜಗ್ಮುರ್ಯಥಾಗತಂ । ಋಷಯೋಪಿಮಹಾತ್ಮಾನೋನಿಮೇರ್ದೇಹಂಸ ಮಾಹರನ್ ॥೧೭॥ ಅರಣೀಂತತ್ರನಿಕ್ಷಿಪ್ಯಮಥನಂಚಕ್ರುರೋಜಸಾ । ಮಂತ್ರಹೋಮೈರ್ಮಹಾತ್ಮಾನಃಪುತ್ರಹೇತೋರ್ನಿ ಮೇಸ್ತದಾ ॥ ೧೮ ॥ ಅರಣ್ಯಾಂಮಥ್ಯಮಾನಾಯಾಂಪ್ರಾದುರ್ಭೂತೋಮಹಾತಪಾಃ। ಮಥನಾನ್ಮಿಥಿರಿತ್ಯಾಹುರ್ಜನನಾ

---

ಪಿದನಷ್ಟ ॥೧೧॥ ತತಃ-ಬಳಿಕ, ಯಜ್ಞೇ-ಯಜ್ಞವು, ಸಮಾಪ್ತೇತು-ಸಂಪೂರ್ಣವಾಗುತಿರಲಿಕಾಗಿ, ಭೃಗುಃ-ಭೃಗುಋಷಿಯು, ತತ್ರ-ಆ ಸಮಯದಲ್ಲಿ, ಹೇ ಪಾರ್ಥಿವ-ಎಲೈ ನಿಮಿಚಕ್ರವರ್ತಿಯೇ, ತವ-ನಿನಗೆ, ತುಷ್ಟಃ-ಸಂತುಷ್ಟನು, ಅಸ್ಮಿ-ಆದೆನು, ತೇ-ನಿನ್ನ, ಚೇತಃ-ಜೀವವನ್ನು, ಆನೇಷ್ಯಾಮಿ-ತರಿಸ್ಸ್ತೇನೆ ॥೧೨॥ ತದಾ-ಆ ಕಾಲದಲ್ಲಿ, ಸುಪ್ರೀತಾಃ-ಸಂತುಷ್ಟರಾದ, ಸರ್ವೇಸುರಾಃ - ಸಮಸ್ತ ದೇವತೆಗಳು, ನಿಮೇಃ-ನಿಮಿಚಕ್ರವರ್ತಿಯ, ಚೇತಃ-ಜೀವವನ್ನು ಕುರಿತು-ಅಬ್ರುವನ್-ನುಡಿದರು, ಹೇರಾಜರ್ಷೇ-ಎಲೈರಾಜರ್ಷಿಯೆ,-ತೇ-ನಿನ್ನ, ಚೇತಃ-ಜೀವವು, ಕ್ವ-ಯಲ್ಲಿ, ನಿರುಪ್ಯತಾಂ-ಇರಿಸಲ್ಪಡಲಿ,ವರಂ-ಸಿವವನ್ನು, ವರಯ-ಬೇಡು,॥೧೩॥ತದಾ-ಆಕಾಲದಲ್ಲಿ, ಸರ್ವೈಃ-ಸಮಸ್ತರಾದ ಸುರೈಃ-ದೇವತೆಗಳಿಂದ, ಏವಂ-ಈಪರಿಯಾಗಿ,ಉಕ್ತಃ-ಹೇಳಲ್ಪಟ್ಟನಿಮೇಃ-ವನಿಮಿಚಕ್ರವರ್ತಿಯ, ಚೇತಃ-ಜೀವನವು, ಹೇಸುರಸತ್ತಮಾಃ-ಎಲೈ ದೇವತಾಶ್ರೇಷ್ಠರೆ, ಸರ್ವಭೂತಾನಾಂ-ಸಮಸ್ತಭೂತಗಳ, ನೇತ್ರೇಷು-ನೇತ್ರಗಳಲ್ಲಿ, ವಸೇಯಂ-ಇರುವೆನೂ ಎಂದು, ಅಬ್ರವೀತ್-ನುಡಿದಿತು ॥೧೪॥ ವಿಬುಧಾಃ-ದೇವತೆಗಳು,ನಿಮೇಃ-ನಿಮಿಚಕ್ರವರ್ತಿಯ, ಚೇತಃ-ಜೀವವನ್ನು ಕುರಿತು,ತಥಾ-ಹಾಗೆಯೆ, ಬಾಢಮಿತ್ಯೇವ-ಅಂಗೀಕರಿಸಿದ್ದೇವೆ, ಸರ್ವಭೂತಾನಾಂ-ಸಮಸ್ತಭೂತಗಳ, ನೇತ್ರೇಷು-ಕಣ್ಣುಗಳಲ್ಲಿ, ವಾಯುಭೂತಃ-ವಾಯುಸ್ವರೂಪನಾಗಿ, ಚರಿಷ್ಯಸಿ-ಸಂಚರಿಸುವೀ, ಇತಿ-ಇಂತೆಂದು, ಅಬ್ರುವನ್-ನುಡಿದರು ॥ ೧೫ ॥ ಹೇಪೃಥಿವೀಪತೇ-ಎಲೈರಾಜನೆ, ತ್ವತ್ಕೃತೇ-ನಿನ್ನನಿಮಿತ್ತವಾಗಿ,ಚಕ್ಷೂಂಷಿ-ನೇತ್ರಗಳು, ವಿಶ್ರಮಾರ್ಥಂ-ಕಣ್ಣುಗಳಂ ತೆರೆಯುವಿಕೆಯಿಂದ, ಪುಟ್ಟಿದಶ್ರಮಪರಿಹಾರಾರ್ಥವಾಗಿ, ಚರತಾ-ಸಂಚಾರಮಾಡುತ್ತಿರುವ, ವಾಯುಭೂತೇನ - ವಾಯುಶರೀರಮುಳ್ಳನಿನ್ನಿಂದ, ನಿಮಿಷ್ಯಂತಿ-ನಿಮೀಲನವನ್ನು ಮಾಡುತವೆ ॥ ೧೬ ॥ ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಸರ್ವೇ-ಸಮಸ್ತರಾದ, ವಿಬುಧಾಃ-ದೇವತೆಗಳು, ಯಥಾಗತಂ-ಬಂದಂತೆ, ಜಗ್ಮುಃ-ತೆರಳಿದರು, ಮಹಾತ್ಮಾನಃ-ಮಹಾಮನಸ್ವಿಗಳಾದ, ಋಷಯೋಪಿ-ಋಷಿಗಳೂನು, ನಿಮೇಃ-ನಿಮಿಚಕ್ರವರ್ತಿಯ, ದೇಹಂ-ಶರೀರವನ್ನು, ಸಮಾಹರನ್-ತೆಗದುಕೊಂಡುಬಂದರು ॥೧೭॥ ಮಹಾತ್ಮಾನಃ-ಮಹಾಮನಸ್ವಿಗಳಾದ ಋಷಿಗಳು, ತದಾ-ಆ ಕಾಲದಲ್ಲಿ, ನಿಮೇಃ-ನಿಮಿಚಕ್ರವರ್ತಿಗೆ, ಪುತ್ರಹೇತೋಃ-ಪುತ್ರೋತ್ಪತ್ತಿ ರೂಪಕಾರಣದಿಂದ, ಮಂತ್ರಹೋಮೈಃ-ಪುತ್ರಕಾಮೇಷ್ಟಿ ಮಂತ್ರಪೂರ್ವಕವಾದ, ಹೋಮಗಳಿಂದ, ತತ್ರ-ಆ ಶರೀರದಲ್ಲಿ, ಅರಣೀಂ-ಅರಣಿಯನ್ನು, ನಿಕ್ಷಿಪ್ಯ-ಇರಿಸಿ, ಓಜಸಾ-ಸಾಮರ್ಥ್ಯದಿಂದ, ಮಥನಂ-ಮಥನವನ್ನು, ಚಕ್ರುಃ-ಮಾಡಿದರು ॥೧೮॥ ಮಥ್ಯಮಾನಾಯಾಂ-ಮಥಿಸಲ್ಪಟ್ಟ, ಅರಣ್ಯಾಂ-ಅರಣಿಯಲ್ಲಿ, ಮಹಾತಪಾಃ-ಮಹಾತಪಸ್ವಿಯಾದ ಅರಸು, ಪ್ರಾದುರ್ಭೂತಃ-ಹುಟ್ಟಿದಂಥಾವನಾದನು, ಮಥನಾತ್-ಮಥನದದೆಸೆಯಿಂದ, ಮಿಥಿರಿತಿ-ಮಿಥಿರಾಯನೆಂತಲೂ, ಆಹುಃ-ಹೇಳಿದರು, ಜನನಾತ್-ಹುಟ್ಟೋಣದರದೆಸೆಯಿಂ

---

ಥಾವರಾಗಿ ಆ ರಾಜನ ದೇಹವನ್ನು ತೈಲಕಟಾಹದಲ್ಲಿರಿಸಿ ಗಂಧ ಮಾಲ್ಯಾದಿಗಳಿಂದ ಪಾಲಿಸಿದಂಥಾವರಾದರು ॥೧೧॥ ಆ ಯಜ್ಞ ಪರಿಪೂರ್ತಿಯಾದ ಬಳಿಕ ಭೃಗುಋಷಿಯು ಸಂತೋಷಚಿತ್ತನಾಗಿ ಆ ರಾಜನಂ ಕುರಿತು ಎಲೈ ರಾಜನೇ! ನಿನ್ನ ದೇಹವಂ ತೆರಿಸುವೆನೆಂದು ನುಡಿದಂಥಾವನಾದನು. ಆವೇಳೆಯಲ್ಲಿ ದೇವತೆಗಳೆಲ್ಲರೂ ಸಂತುಷ್ಟರಾಗಿ ಆ ನಿಮಿಚಕ್ರವರ್ತಿಯ ಜೀವವಂಕುರಿತು ಎಲೈರಾಜನೇ! ನಿನ್ನ ಜೀವವು ಎಲ್ಲಿಡಲಿ, ವರವಂ ಬೇಡೆಂದು ನಿರೂಪಿಸಿದಂಥಾವರಾಗಲು, ಆ ವೇಳೆಯಲ್ಲಿ ದೇವತೆಗಳಿಂದೀಪರಿ ಹೇಳಲ್ಪಟ್ಟ ಆ ರಾಜನ ಜೀವವು ಎಲೈ ದೇವತೆಗಳಿರಾ! ಸಮಸ್ತ ಭೂತಗಳ ನೇತ್ರಗಳಲ್ಲಿ ಇರಬೇಕೆಂದಿಚ್ಛೈಸುತ್ತೇನೆ, ಈ ವರವಂ ಕೊಡಬೇಕೆಂದು ಬಿನ್ನವಿಸಲು, ಅವರೆಲ್ಲರೂ ನೀನಪೇಕ್ಷಿಸಿದಂತೆಯೇ ಆಗಲಿ, ಸರ್ವಪ್ರಾಣಿಗಳ ಕಂಣುಗಳಲ್ಲಿ ವಾಯುಭೂತನಾಗಿ ಸಂಚರಿಸುವಂಥಾವನಾಗುವಿ, ವಾಯುರೂಪವಾಗಿ ಸಂಚರಿಸುತ್ತಿರುವ ನಿನ್ನ ಆಯಾಸಪರಿಹಾರಕ್ಕೋಸುಗ ಯೆಲ್ಲಾ ಪ್ರಾಣಿಗಳೂ ಬಾರಿಬಾರಿಗೂ ಕಂಣುಗಳನ್ನು ಮುಚ್ಚುವಂಥಾವರಾಗುವರೆಂದು ನಿರೂಪಿಸಿದಂಥಾವರಾಗಿ, ಆ ದೇವತೆಗಳು ಹೊರಟುಹೋದಂಥಾವರಾದರು. ಮಹಾತ್ಮರಾದ ಆ ಋಷಿಗಳು ನಿಮಿಚಕ್ರವರ್ತಿಯ ದೇಹವಂ ತೆಗದುಕೊಂಡುಪೋಗಿ ಪುತ್ರೋತ್ಪತ್ತಿಗೋಸುಗ ಪುತ್ರಕಾಮೇಷ್ಟಿ ಮಂತ್ರಪೂರ್ವಕವಾಗಿ ಹೋಮವಂಗೈದು ಆ ಶರೀರದಲ್ಲಿ ಅರಣಿಯನ್ನಿಟ್ಟು ಮಥಿಸಿದಂಥಾವರಾದರು॥೧೮॥ಆ ಅರಣಿಯು ಮಥಿಸಲ್ಪಡಲು ಮಹಾತಪಸ್ವಿಯಾದ ಅರಸು ಹುಟ್ಟಿದಂಥಾವನಾದನು. ಆ ಮಥನದಿಂದ ಹುಟ್ಟಿದನಾದಕಾರಣ ಮಿಥಿಯೆಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜನಕೋಭವತ್ ‖೧೯‖ ತಸ್ಮಾದ್ವಿದೇಹಾತ್ಸಂಭೂತೋವೈದೇಹಸ್ತು ತತಸ್ಸ್ಮೃತಃ । ಏವಂವಿದೇಹರಾಜಶ್ಚ ಜನಕಃಪೂರ್ವಕೋಭವತ್ ‖ ಮಿಥಿರ್ನಾಮಮಹಾತೇಜಾಸ್ತೇನಾಯಂಮೈಥಿಲೋಭವತ್ ... ... ‖೨೦‖

✻ಇತಿ ಶ್ರೀಮದುತ್ತರ ರಾಮಾಯಣೇ ಸಪ್ತ ಪಂಚಾಶಸ್ಸರ್ಗಃ✻

ಏವಂಬ್ರುವತಿರಾಮೇತುಲಕ್ಷ್ಮಣಃಪರವೀರಹಾ। ಪ್ರತ್ಯುವಾಚಮಹಾತ್ಮಾನಂಜ್ವಲಂತಮಿವತೇಜಸಾ ‖೧‖ ಮಹದದ್ಭುತಮಾಶ್ಚರ್ಯಂವಿದೇಹಸ್ಯಪುರಾತನಂ । ನಿವೃತ್ತಂರಾಜಶಾರ್ದೂಲವಸಿಷ್ಠಸ್ಯನಿಮೇಸ್ಸಹ‖೨‖ನಿಮಿಸ್ತುಕ್ಷತ್ರಿಯಶ್ಶೂರೋವಿಶೇಷೇಣಚದೀಕ್ಷಿತಃ । ನಕ್ಷಮಾಂಕೃತವಾನ್ರಾಜಾವಸಿಷ್ಠಸ್ಯಮಹಾತ್ಮನಃ ‖೩‖ ಏವಮುಕ್ತಸ್ತುತೇನಾಯಂಶ್ರೀಮಾನ್ ಕ್ಷತ್ರಿಯಪುಂಗವಃ । ಉವಾಚಲಕ್ಷ್ಮಣಂವಾಕ್ಯಂಸರ್ವಶಾಸ್ತ್ರವಿಶಾರದಂ‖೪‖ ರಾಮೋರಮಯತಾಂಶ್ರೇಷ್ಠೋ ಭ್ರಾತರಂದೀಪ್ತತೇಜಸಂ। ನಸರ್ವತ್ರಕ್ಷಮಾವೀರಪುರುಷೇಷುಪ್ರದೃಶ್ಯತೇ ‖೫‖ ಸೌಮಿತ್ರೇದುಸ್ಸಹೋರೋಷೋಯಥಾಕ್ಷಾಂತೋಯಯಾ

---

ದ, ಜನಕಃ-ಜನಕನೂ ಎಂಬ ಹೆಸರುಳ್ಳವನು‌ಅಭವತ್-ಆದನು ‖೧೯‖ ಯಸ್ಮಾತ್-ಯಾವಕಾರಣದದೆಸೆಯಿಂದ, ವಿದೇಹಾತ್-ದೇಹರಹಿತನಾದ ನಿಮಿಚಕ್ರವರ್ತಿಯಿಂದ, ಸಂಭೂತಃ-ಹುಟ್ಟಿದನೋ, ತತಃ-ಆಕಾರಣದದೆಸೆಯಿಂದ, ವೈದೇಹಸ್ತು-ವಿದೇಹನೆಂತಲೂನು, ಸ್ಮೃತಃ-ಹೇಳಲ್ಪಟ್ಟನು ‖೧೯‖ ಏವಂ-ಈಪರಿಯಾಗಿ, ವಿದೇಹರಾಜಶ್ಚ-ವಿದೇಹರಾಯನೆಂಬ ಹೆಸರುಳ್ಳ, ಜನಕಃ-ಜನಕನು, ಮಹಾತೇಜಾಃ-ಮಹಾತೇಜೋವಂತನಾಗಿ, ಮಿಥಿರ್ನಾಮ-ಮಿಥಿರಾಯನೆಂದು ಪ್ರಸಿದ್ಧನಾಗಿ, ಪೂರ್ವಕಃ-ಈ ವಂಶಕ್ಕೆಪೂರ್ವಿಕನು, ಅಭವತ್-ಆದನು, ತೇನ-ಆಕಾರಣದಿಂದ, ಅಯಂ-ಈ ವಂಶವು, ಮೈಥಿಲಃ-ಮೈಥಿಲವಂಶವೆಂದು ಪ್ರಸಿದ್ಧವಾದದ್ದು, ಅಭವತ್-ಆಯಿತು .. ... ‖೨೦‖

—:::✻ಇತಿ ಶ್ರೀಮದುತ್ತರ ರಾಮಾಯಣೇ ಸಪ್ತಪಂಚಾಶಸ್ಸರ್ಗಃ.✻:::—

ರಾಮೇ-ಶ್ರೀರಾಮನು, ಏವಂಬ್ರುವತಿಸತಿ-ಈಪರಿಹೇಳಿದವನಾಗಲಾಗಿ, ಪರವೀರಹಾ-ಶತ್ರುಸಂಹಾರಕನಾದ, ಲಕ್ಷ್ಮಣಃ-ಲಕ್ಷ್ಮಣನು,ತೇಜಸಾ-ತೇಜಸ್ಸಿನಿಂದ, ಜ್ವಲಂತಮಿವ-ಪ್ರಜ್ವಲಿಸುತ್ತಾನೋ ಎಂಬಂತಿರುವ, ಮಹಾತ್ಮಾನಂ-ಮಹಾತ್ಮನಾದ ಶ್ರೀರಾಮನಂ ಕುರಿತು, ಪ್ರತ್ಯುವಾಚ-ಪ್ರತ್ಯುತ್ತರಹೇಳಿದನು ‖೧‖ ಹೇ ರಾಜಶಾರ್ದೂಲ-ಎಲೈ ರಾಜಶ್ರೇಷ್ಠನೇ, ವಸಿಷ್ಠಸ್ಯ-ವಸಿಷ್ಠಋಷಿಗೂನು, ವಿದೇಹಸ್ಯ-ದೇಹರಹಿತನಾದ,ನಿಮೇಸ್ಸಹ - ನಿಮಿಚಕ್ರವರ್ತಿಗೂ ಕೂಡ, ಪುರಾತನಂ-ಪುರಾತನವಾದ, ಮಹತ್-ದೊಡ್ಡದಾದ, ಅದ್ಭುತಂ-ಅತ್ಯಾಶ್ಚರ್ಯಕರವಾದ, ಆಶ್ಚರ್ಯಂ-ವಿಸ್ಮಯಾವಹವಾದ ಕಾರ್ಯವು, ನಿವೃತ್ತಂ-ನಡಿಸಲ್ಪಟ್ಟಿತು ‖ ೨ ‖ ನಿಮಿಸ್ತು-ನಿಮಿಚಕ್ರವರ್ತಿಯಾದರೆ, ಕ್ಷತ್ರಿಯಃ-ಕ್ಷತ್ರಿಯನು, ಶೂರಃ-ಶೂರನು, ವಿಶೇಷೇಣಚ-ವಿಶೇಷದಿಂದ, ದೀಕ್ಷಿತಃ-ಯಜ್ಞದೀಕ್ಷಾಬದ್ಧನು, ರಾಜಾ-ನಿಮಿಚಕ್ರವರ್ತಿಯು, ಮಹಾತ್ಮನಃ-ಮಹಾತಪಸ್ವಿಯಾದ, ವಸಿಷ್ಠಸ್ಯ-ವಸಿಷ್ಠಋಷಿಯ ವಿಷಯವಾದ, ಕ್ಷಮಾಂ-ಉಪಶಾಂತಿಯನ್ನು, ನಕೃತವಾನ್-ಮಾಡದೆ ಹೋದನು ‖೩‖ ತೇನ-ಆ ಲಕ್ಷ್ಮಣಸ್ವಾಮಿಯಿಂದ, ಉಕ್ತಃ-ಹೇಳಲ್ಪಟ್ಟ, ಕ್ಷತ್ರಿಯಪುಂಗವಃ-ರಾಜಶ್ರೇಷ್ಠನಾದ, ಶ್ರೀಮಾನ್-ಸಂಪದ್ಯುಕ್ತನಾದ, ರಮಯತಾಂ-ರಂಜನೆಮಾಡುವರಲ್ಲಿ, ಶ್ರೇಷ್ಠಃ-ಶ್ರೇಷ್ಠನಾದ, ಅಯಂ-ಈ ಶ್ರೀರಾಮನು, ಸರ್ವಶಾಸ್ತ್ರವಿಶಾರದಂ-ಸರ್ವಶಾಸ್ತ್ರಗಳಲ್ಲಿಯೂ ಸಮರ್ಥನಾದ, ದೀಪ್ತತೇಜಸಂ-ಪ್ರಜ್ವಲಿಸುತ್ತಿರುವ ತೇಜಸ್ಸುಳ್ಳ, ಭ್ರಾತರಂ-ತಮ್ಮನಾದ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ವಾಕ್ಯಂ-ಮಾತನ್ನು, ಉವಾಚ-ಹೇಳಿದನು. ‖ ೪ ‖ ಹೇವೀರ-ಎಲೈಶೂರನೆ, ಸರ್ವತ್ರಪುರುಷೇಷು-ಸಮಸ್ತಪುರುಷರಲ್ಲಿ, ಕ್ಷಮಾ-ಉಪಶಾಂತಿಯು, ನಪ್ರದೃಶ್ಯತೇ-ಕಾಣಲ್ಪಡುವದಿಲ್ಲ. ‖ ೫ ‖ ಹೇಸೌಮಿತ್ರೇ-ಎಲೈಲಕ್ಷ್ಮಣನೆ, ದುಸ್ಸಹಃ-ಸಹಿಸಲಸಾಧ್ಯವಾದ, ರೋಷಃ-ರೋಷವು, ಯಯಾತಿನಾ-ಯಯಾತಿಮಹಾರಾಯನಿಂದ, ಯಥಾ-ಹ್ಯಾಗೆ, ಕ್ಷಾಂತಃ-ಉಪಶಾಂತಿಮಾಡಿಕೊಳ್ಳಲ್ಪಟ್ಟಿತೋ,ಸತ್ವಾನುಗಂ-ಸತ್ವಗುಣವನ್ನು ಅನುಸರಿಸಿ ಬಂದಿರುವ, ಪಾ

---

ಬದಾಗಿಯೂ ಜನನದ ದೆಶೆಯಿಂದ ಜನಕನೆಂಬದಾಗಿಯೂ ದೇಹರಹಿತನಾದ ನಿಮಿಚಕ್ರವರ್ತಿಯ ದೇಹದಿಂದ ಹುಟ್ಟಿದನಾದಕಾರಣ ವೈದೇಹನೆಂಬದಾಗಿಯೂ ಹೇಳಲ್ಪಟ್ಟನು. ಈ ಪರಿಯಾಗಿ ವಿದೇಹರಾಜನೆಂಬದಾಗಿ ಹೆಸರುಳ್ಳ ಜನಕನು ಕಡು ತೇಜೋವಂತನಾಗಿಯೂ ಮಿಥಿಯೆಂಬದಾಗಿ ಪ್ರಖ್ಯಾತಿಯುಳ್ಳವನಾಗಿಯೂ ಇರುವನಾಗಿ ಈ ವಂಶಕ್ಕೆ ಪೂರ್ವಿಕನಾದಂಥಾವನಾದನು. ಆ ಕಾರಣದಿಂದ ಈ ಕುಲಕ್ಕೆ ಮೈಥಿಲವಂಶವೆಂಬದಾಗಿ ಪ್ರಸಿದ್ಧಿಯುಂಟಾಯಿತು. ‖೨೦‖

—:::✻ಉತ್ತರರಾಮಾಯಣದಲ್ಲಿನ ೫೭ನೆ ಸರ್ಗಂ ಮುಗಿದುದು.✻:::—

ಈಪರಿ ಶ್ರೀರಾಮನು ನಿರೂಪಿಸಿದವನಾಗಲು, ಶತ್ರುನಾಶಕನಾದ ಲಕ್ಷ್ಮಣನು ತೇಜಸ್ಸಿನಿಂದ ಪ್ರಜ್ವಲಿಸುತ್ತಾನೋ ಏನೋ ಎಂಬಂತಿರುವ ಶ್ರೀರಾಮನಂ ಕುರಿತು ಎಲೈ ರಾಮನೇ ! ವಸಿಷ್ಠಮುನಿಗೂ ನಿಮಿಚಕ್ರವರ್ತಿಗೂ ಕೂಡ ಉಂಟಾದ ದೇಹೋತ್ಪತ್ತಿಯು ಅತ್ಯಾಶ್ಚರ್ಯಕರವಾಗಿಯೂ ಬಹಳ ಪುರಾತನವಾಗಿಯೂ ಇರುವಂಥಾದ್ದು, ಆ ನಿಮಿಚಕ್ರವರ್ತಿಯಾದರೆ ವಸಿಷ್ಠ ಋಷಿಯ ವಿಷಯವಾಗಿ ಕ್ಷಮಿಸದೆ ಹೋದನೆಂಬದಾಗಿ ಲಕ್ಷ್ಮಣನು ಹೇಳಿದವನಾಗಲು, ರಾಮನು ಆತನಂ ಕುರಿತು ಮತ್ತಿಂತೆಂದನು ‖೪‖ ಎಲೈ ಶೂರನೇ! ಸೈರಣೆಯೆಂಬುದು ಸರ್ವರಲ್ಲಿಯೂ ಇರುವದಿಲ್ಲ, ರೋ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ರಿನಾ । ಸತ್ತ್ವಾನುಗಂ ಪುರಸ್ಕೃತ್ಯ ತನ್ನಿಬೋಧ ಸಮಾಹಿತಃ ॥೬॥ ನಹುಷಸ್ಯ ಸುತೋ ರಾಜಾ ಯಯಾತಿಃ ಪೌರವರ್ಧನಃ । ತಸ್ಯ ಭಾರ್ಯಾದ್ವಯಂ ಸೌಮ್ಯ ರೂಪೇಣಾಪ್ರತಿಮಂ ಭುವಿ ॥೭॥ ಏಕಾ ತು ತಸ್ಯ ರಾಜರ್ಷೇರ್ನಾಹುಷಸ್ಯ ಪುರಸ್ಕೃತಾ । ಶರ್ಮಿಷ್ಠಾ ನಾಮ ದೈತೇಯೀ ದುಹಿತಾ ವೃಷಪರ್ವಣಃ ॥೮॥ ಅನ್ಯಾ ತೂಶನಸಃ ಪುತ್ರೀ ಯಯಾತೇಃ ಪುರುಷರ್ಷಭ । ನ ತು ಸಾ ದಯಿತಾ ರಾಜ್ಞೋ ದೇವಯಾನೀ ಸುಮಧ್ಯಮಾ ॥೯॥ ತಯೋಃ ಪುತ್ರೌ ತು ಸಂಭೂತೌ ರೂಪವಂತೌ ಸಮಾಹಿತೌ । ಶರ್ಮಿಷ್ಠಾ ಜನಯತ್ಪೂರುಂ ದೇವಯಾನೀ ಯದುಂ ತದಾ ॥೧೦॥ ಪೂರುಸ್ತು ದಯಿತೋ ರಾಜ್ಞೋ ಗುಣೈರ್ಮಾತೃಕೃತೇನ ಚ । ತತೋ ದುಃಖಸಮಾವಿಷ್ಟೋ ಯದುರ್ಮಾತರಮಬ್ರವೀತ್ ॥೧೧॥ ಭಾರ್ಗವಸ್ಯ ಕುಲೇ ಜಾತಾ ದೇವಸ್ಯಾಕ್ಲಿಷ್ಟಕರ್ಮಣಃ । ಸಹಸೇ ಹೃದ್ಗತಂ ದುಃಖಮವಮಾನಂ ಚ ದುಸ್ಸಹಮ್ ॥೧೨॥ ಆವಾಂ ಚ ಸಹಿತೌ ದೇವಿ ಪ್ರವಿಶಾವ ಹುತಾಶನಮ್ । ರಾಜಾ ತು ರಮತಾಂ ಸಾರ್ಧಂ ದೈತ್ಯ

---

ರ್ಗಂ-ಮಾರ್ಗವನ್ನು, ಪುರಸ್ಕೃತ್ಯ-ಅನುಸರಿಸಿ, ಸಮಾಹಿತಃ-ಸಮಾಧಾನಚಿತ್ತನಾಗಿ, ತಂ-ಆ ಯಯಾತಿ ವೃತ್ತಾಂತವನ್ನು, ನಿಬೋಧ-ತಿಳಿದುಕೋ ॥೬॥ ನಹುಷಸ್ಯ-ನಹುಷಚಕ್ರವರ್ತಿಗೆ, ಸುತಃ-ಕುವರನಾದ, ಯಯಾತಿಃ-ಯಯಾತಿಯೆಂಬ, ರಾಜಾ-ಅರಸು, ಪೌರವರ್ಧನಃ-ಪೌರ-ಪಟ್ಟಣಸ್ಥರನ್ನು, ವರ್ಧನಃ-ವೃದ್ಧಿಗೊಳಿಸುವವನಾದನು, ಹೇಸೌಮ್ಯ-ಎಲೈ ಸೌಮ್ಯನೆ, ತಸ್ಯ-ಆ ಯಯಾತಿಮಹಾರಾಯನಿಗೆ, ಭಾರ್ಯಾದ್ವಯಂ-ಇಬ್ಬರುಹೆಂಡತೀರು, ಭುವಿ-ನೆಲದಲ್ಲಿ, ರೂಪೇಣ-ಸೌಂದರ್ಯದಿಂದ, ಅಪ್ರತಿಮಂ-ಸಮಾನವಿಲ್ಲದವರೂ, ತಸ್ಯ-ಆ ಈ ರಾಜರ್ಷೇಃ-ರಾಜರ್ಷಿಯಾದ, ನಹುಷಸ್ಯ-ನಹುಷಚಕ್ರವರ್ತಿ ಮಗನಾದ ಯಯಾತಿಗೆ, ಏಕಾ-ಒಬ್ಬಳಾದ, ಶರ್ಮಿಷ್ಠಾನಾಮ-ಶರ್ಮಿಷ್ಠೆ ಎಂದು ಪ್ರಸಿದ್ಧಳಾದ, ದೈತೇಯೀ-ರಾಕ್ಷಸಸ್ತ್ರೀಯಾದ, ವೃಷಪರ್ವಣಃ-ವೃಷಪರ್ವನೆಂಬ ರಾಕ್ಷಸನ, ದುಹಿತಾ-ಮಗಳು, ಪುರಸ್ಕೃತಾ-ಪೂಜ್ಯಳಾದವಳು ॥೮॥ ಅನ್ಯಾತು-ಮತ್ತೊಬ್ಬಳಾದರೆ, ಉಶನಸಃ-ಶುಕ್ರಾಚಾರ್ಯನಿಗೆ, ಪುತ್ರೀ-ಮಗಳು, ಹೇಪುರುಷರ್ಷಭ-ಎಲೈಪುರುಷಶ್ರೇಷ್ಠನಾದ ಲಕ್ಷ್ಮಣನೆ, ಸುಮಧ್ಯಮಾ-ಒಳ್ಳೆಮಧ್ಯಪ್ರದೇಶವುಳ್ಳ, ದೇವಯಾನಿ-ದೇವಯಾನಿ ಎಂಬ, ಸಾ-ಆ ಶುಕ್ರಾಚಾರ್ಯನಮಗಳು, ಯಯಾತೇಃರಾಜ್ಞಃ-ಯಯಾತಿಮಹಾರಾಯನಿಗೆ, ನದಯಿತಾ-ವಿಶ್ವಾಸಪಾತ್ರಳಲ್ಲದೇಹೋದಳು. ॥೯॥ ತಯೋಃ - ಅವರಿಬ್ಬರಿಗೂ, ರೂಪವಂತೌ-ಸೌಂದರ್ಯವಂತರಾದ, ಸಮಾಹಿತೌ-ಒಳ್ಳೆಮನಸ್ವಿಗಳಾದ, ಪುತ್ರೌ-ಇಬ್ಬರುಮಕ್ಕಳು, ಸಂಭೂತೌ-ಹುಟ್ಟಿದರೂ. ಶರ್ಮಿಷ್ಠಾ - ಶರ್ಮಿಷ್ಠೆ ಎಂಬವಳು, ಪೂರುಂ - ಪೂರುಚಕ್ರವರ್ತಿಯನ್ನು, ಅಜನಯತ್-ಹಡೆದಳು. ತದಾ-ಆಕಾಲದಲ್ಲಿ, ದೇವಯಾನೀ - ದೇವಯಾನಿಯು, ಯದುಂ-ಯದುರಾಯನನ್ನು, ಅಜನಯತ್ - ಹಡೆದಳು, ॥ ೧೦ ॥ ಪೂರುಸ್ತು - ಪೂರುಚಕ್ರವರ್ತಿಯಾದರೆ, ಗುಣೈಃ - ಸೌಶೀಲ್ಯಾದಿಗುಣಗಳಿಂದ, ಮಾತೃಕೃತೇನಚ-ತಾಯಿಯಿಂದ ಮಾಡಲ್ಪಟ್ಟ ವಿಶ್ವಾಸದಿಂದಲೂ, ರಾಜ್ಞಃ-ಯಯಾತಿರಾಯನಿಗೆ, ದಯಿತಃ-ಇಷ್ಟನಾದನು, ತತಃ-ಬಳಿಕ, ದುಃಖಸಮಾವಿಷ್ಟಃ-ದುಃಖದಿಂದ ಕೂಡಿಕೊಂಡಿರುವ, ಯದುಃ-ಯದುರಾಯನು, ಮಾತರಂ-ತಾಯಿಯಂ ಕುರಿತು, ಅಬ್ರವೀತ್-ನುಡಿದನು, ॥೧೧॥ ಭಾರ್ಗವಸ್ಯ-ಭೃಗುವಂಶೋತ್ಪನ್ನನಾದ, ಅಕ್ಲಿಷ್ಟಕರ್ಮಣಃ-ಕ್ಲೇಶವಿಲ್ಲದ ವ್ಯಾಪಾರವುಳ್ಳ, ದೇವಸ್ಯ-ಶುಕ್ರಾಚಾರ್ಯನ-ಕುಲೇ-ವಂಶದಲ್ಲಿ, ಜಾತಾ-ಹುಟ್ಟಿದ, ತ್ವಂ-ನೀನು, ಹೃದ್ಗತಂ-ಮನೋಗತವಾದ, ದುಃಖಂ-ವ್ಯಸನವನ್ನು, ದುಸ್ಸಹಂ-ಸಹಿಸಲಸಾಧ್ಯವಾದ, ಅವಮಾನಂಚ-ಅವಮಾನವನ್ನು, ಸಹಸೇ-ಸಹಿಸಿಕೊಂಡಿದ್ದೀ ॥೧೨॥ ಹೇದೇವಿ-ಎಲೈದೇವಯಾನಿಯೆ, ಆವಾಂಚ-ನಾವಿಬ್ಬರು, ಸಹಿತೌ-ಕೂಡಿದವರಾಗಿ, ಹುತಾಶನಂ-ಅಗ್ನಿಯಲ್ಲಿ, ಪ್ರವಿಶಾವ-ಪ್ರವೇಶಮಾಡೋಣ, ರಾಜಾತು-

---

ಷವೆಂಬದು ಯಯಾತಿರಾಜನಿಂದ ಹ್ಯಾಗೆ ಸ್ವೈರಿಸಲ್ಪಟ್ಟಿತೋ ಹಾಗೆ ಎಲ್ಲರೂ ತಾಳಲಾರರು. ಸತ್ವಗುಣ ಪ್ರಧಾನವಾದ ಆ ಯಯಾತಿರಾಜನ ವೃತ್ತಾಂತವಂ ಪೇಳ್ವೆನು ತಿಳಿದುಕೋ. ॥೬॥ ಕೇಳೆಲೈ ಲಕ್ಷ್ಮಣನೇ ! ನಹುಷಚಕ್ರವರ್ತಿಗೆ ಸುತನಾದ ಯಯಾತಿಯೆಂಬರಸು ಪಟ್ಟಣಸ್ಥರೆಲ್ಲರಂ ವೃದ್ಧಿಗೊಳಿಸುತ್ತಿದ್ದನು. ಆ ರಾಜನಿಗೆ ಕಡುರೂಪವತಿಗಳಾದ ಈರ್ವರು ಸತಿಗಳಿದ್ದರು. ಅವರೀರ್ವರಲ್ಲಿ ಒಬ್ಬಾಕೆಯು ಶರ್ಮಿಷ್ಠಳೆಂದು ಪ್ರಸಿದ್ಧಳಾದ ಆ ರಾಕ್ಷಸಸ್ತ್ರೀಯು, ವೃಷಪರ್ವನೆಂಬ ರಕ್ಕಸನಮಗಳಾದ ಆಕೆಯು ಬಹು ಪೂಜ್ಯಳಾಗಿದ್ದಳು ॥೮॥ ಮತ್ತೊರ್ವಳಾದರೆ ಶುಕ್ರಾಚಾರ್ಯನ ಪುತ್ರಿಕೆಯು ದೇವಯಾನಿಯೆಂಬದಾಗಿ ಪ್ರಸಿದ್ಧಳಾದವಳು. ಆಕೆಯು ಯಯಾತಿರಾಜನಿಗೆ ವಿಶ್ವಾಸಪಾತ್ರಳಾಗಲಿಲ್ಲ ॥೯॥ ಅವರೀರ್ವರಲ್ಲಿ ಇಬ್ಬರು ಕುಮಾರರುಂಟಾದರು, ಶರ್ಮಿಷ್ಠಳೆಂಬಾಕೆಯ ಮಗನೇ ಪೂರುಚಕ್ರವರ್ತಿಯು, ದೇವಯಾನಿಯೆಂಬಾಕೆಯ ಮಗನೇಯದುರಾಜನು ॥೧೦॥ ಆ ಪೂರುಚಕ್ರವರ್ತಿಯಾದರೆ ಸೌಶೀಲ್ಯಾದಿ ಗುಣಗಳಿಂದಲೂ ತಾಯಿಯಿಂದ ಮಾಡಲ್ಪಟ್ಟ ವಿಶ್ವಾಸದಿಂದಲೂ ಕೂಡ ಅರಸಿಗೆ ಪ್ರೀತಿಪಾತ್ರನಾದನು. ಆ ಬಳಿಕ ಯದುರಾಜನು ದುಃಖದಿಂದ ಸಂತಪಿಸುತ್ತಾ ತಾಯಿಯಂ ಕುರಿತು ಎಲೈ ಜನನಿಯೇ! ನೀನು ಕ್ಲೇಶವಿಲ್ಲದೆ ಕಾರ್ಯಗಳಂ ಗೈಯುತ್ತಿರುವ ದೇವನಾದ ಶುಕ್ರಾಚಾರ್ಯನ ವಂಶದಲ್ಲಿ ಉತ್ಪನ್ನಳಾದವಳು, ಮನಸ್ಸಿನಲ್ಲಿರುವ ಈ ವ್ಯಸನವನ್ನೂ ಅವಮಾನವನ್ನೂ ಕೂಡ ಸೈರಿಸಿಕೊಂಡಿದ್ದೀಯಲ್ಲಾ ॥೧೨॥ ಕೇಳೆಲೈ ತಾಯಿಯೇ! ನಾವಿಬ್ಬರೂ ಅವಮಾನವಂ ಸೈರಿಸಿಕೊಂಡಿರುವದಕ್ಕಿಂತಲೂ ಪ್ರಾಣವನ್ನೀಯುವದು ಉತ್ತಮವು. ಆದಕಾರಣ ಅಗ್ನಿಪ್ರವೇಶವಂಗೈಯೋಣ, ಈ ನರನಾಥನಾದರೆ ದೈತ್ಯೇಂದ್ರನ ಪುತ್ರಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪುತ್ರ್ಯಾ ಬಹುಕ್ಷಪಾಃ ||೧೩|| ಯದಿವಾಸಹನೀಯಂತೇಮಾಮನುಜ್ಞಾತುಮರ್ಹಸಿ | ಕ್ಷಮೇತ್ವಂನಕ್ಷಮಿಷ್ಯೇಹಂಮರಿಷ್ಯಾಮಿನಸಂಶಯಃ ||೧೪|| ಪುತ್ರಸ್ಯಭಾಷಿತಂಶ್ರುತ್ವಾ ಪರಮಾರ್ತಸ್ಯರೋದತಃ | ದೇವಯಾನೀತುಸಂಕ್ರುದ್ಧಾ ಸಸ್ಮಾರಪಿತರಂತದಾ ||೧೫|| ಇಂಗಿತಂತದಭಿಜ್ಞಾಯದುಹಿತುರ್ಭಾರ್ಗವಸ್ತದಾ | ಆಗತಸ್ತ್ವರಿತಂತತ್ರದೇವಯಾನೀತುಯತ ಸಾ ||೧೬|| ದೃಷ್ಟ್ವಾ ಚಾಪ್ರಕೃತಿಸ್ಥಾಂತಾಮಪ್ರಹೃಷ್ಟಾಮಚೇತನಾಂ | ಪಿತಾದುಹಿತರಂವಾಕ್ಯಂಕಿಮೇತದಿತಿಚಾಬ್ರವೀತ್ ||೧೭|| ಪೃಚ್ಛಂತಮಸಕೃತ್ತಂವೈಭಾರ್ಗವಂದೀಪ್ತತೇಜಸಂ | ದೇವಯಾನೀತುಸಂಕ್ರುದ್ಧಾಪಿತರಂವಾಕ್ಯಮಬ್ರವೀತ್ ||೧೮|| ಅಹಮಗ್ನಿಂವಿಷಂತೀಕ್ಷ್ಣಮಪೋವಾಮುನಿಸತ್ತಮ | ಭಕ್ಷಯಿಷ್ಯೇಪ್ರವೇಕ್ಷ್ಯಾಮಿನತುಶಕ್ಷ್ಯಾಮಿಜೀವಿತುಂ ||೧೯|| ನಮಾಂತ್ವಮವಜಾನೀಷೇದುಃಖಿತಾಮವಮಾನಿತಾಂ | ವೃಕ್ಷಸ್ಯಾವಜ್ಞಯಾಬ್ರಹ್ಮನ್ ಛಿದ್ಯಂತೇವೃಕ್ಷಜೀವಿನಃ ||೨೦|| ಅವಜ್ಞಯಾಚರಾಜರ್ಷಿಃಪರಿಭೂಯಚಭಾರ್ಗವ | ಮಯ್ಯವಜ್ಞಾಂಪ್ರಯುಂಕ್ತೇಹಿನಚಮಾಂಬಹುಮನ್ಯತೇ ||೨೧|| ತಸ್ಯಾಸ್ತದ್ವಚನಂಶ್ರುತ್ವಾಕೋಪ

ಯಯಾತಿರಾಯನಾದರೆ, ದೈತ್ಯಪುತ್ರ್ಯಾಸಾರ್ಧಂ-ದೈತ್ಯನ ಮಗಳಿಂದೊಡಗೂಡಿ, ಬಹುಕ್ಷಪಾಃ-ಬಹಳರಾತ್ರಿಗಳಲ್ಲಿ, ರಮತಾಂ-ವಿಹರಿಸಲೀ ||೧೩|| ತೇ-ನಿನಗೆ, ಸಹನೀಯಂ-ಸಹಿಸತಕ್ಕದ್ದಾಗಿ, ಯದಿವಾ-ಇದ್ದಪಕ್ಷದಲ್ಲಿ, ಮಾಂ-ನನ್ನನ್ನು ಕುರಿತು, ಅನುಜ್ಞಾತುಂ-ಅಪ್ಪಣೆಕೊಡುವದಕ್ಕೋಸುಗ, ಅರ್ಹಸಿ-ಯೋಗ್ಯಳಾಗು, ತ್ವಂ-ನೀನು, ಕ್ಷಮ-ಕ್ಷಮಿಸು, ಅಹಂ-ನಾನು, ನಕ್ಷಮಿಷ್ಯೇ-ಸಹಿಸಲಾರೆನು, ಮರಿಷ್ಯಾಮಿ-ಸಾಯುವೆನು, ನಸಂಶಯಃ-ಸಂಶಯವಿಲ್ಲ|| ಪರಮಾರ್ತಸ್ಯ-ಪರಮದುಃಖಿತನಾದ, ರೋದತಃ-ಅಳುತ್ತಿರುವ, ಪುತ್ರಸ್ಯ-ಮಗನ, ಭಾಷಿತಂ-ಮಾತನ್ನು, ಶ್ರುತ್ವಾ-ಕೇಳಿ, ದೇವಯಾನೀತು - ದೇವಯಾನಿಯಾದರೆ, ಸಂಕ್ರುದ್ಧಾ-ಕೋಪಿಷ್ಠಳಾಗಿ, ತದಾ-ಆಕಾಲದಲ್ಲಿ, ಪಿತರಂ-ತಂದೆಯಾದಶುಕ್ರಾಚಾರ್ಯರನ್ನು, ಸಸ್ಮಾರ-ಸ್ಮರಿಸಿದಳು, ||೧೫|| ತದಾ-ಆಕಾಲದಲ್ಲಿ, ಭಾರ್ಗವಃ-ಶುಕ್ರಾಚಾರ್ಯನು, ದುಹಿತುಃ-ಮಗಳ, ತದಿಂಗಿತಂ-ಆ ಅಭಿಪ್ರಾಯವನ್ನು, ಅಭಿಜ್ಞಾಯ-ತಿಳಿದು, ಸಾದೇವಯಾನೀ-ಆದೇವಯಾನಿಯು,ಯತ್ರ-ಯಲ್ಲಿದ್ದಾಳೋ, ತತ್ರ-ಅಲ್ಲಿ, ತ್ವರಿತಂ-ಜಾಗ್ರತೆಯಾಗಿ, ಆಗತಃ-ಬಂದನು, ||೧೬|| ಅಪ್ರತಿಕೃತಾಂ-ಅಸ್ವಸ್ಥಳಾಗಿ, ಅಪ್ರಹೃಷ್ಟಾಂ-ಸಂತೋಷವಿಲ್ಲದಿರುವ, ಅಚೇತನಾಂ-ಕ್ಷೋಭಬೀಳುತಿರುವಮನಸುಳ್ಳ, ತಾಂ-ದುಹಿತರಂ-ಆ ದೇವಯಾನಿಯನ್ನು, ದೃಷ್ಟ್ವಾ-ಕಂಡು, ಪಿತಾ-ತಂದೆಯಾದಶುಕ್ರಾಚಾರ್ಯನು,ಏತತ್-ಇದು, ಕಿಮಿತಿಚ-ಏನೆಂದು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು, ||೧೭|| ದೇವಯಾನೀತು-ದೇವಯಾನಿಯಾದರೆ, ಸಂಕ್ರುದ್ಧಾ-ಕೋಪಗೊಂಡವಳಾಗಿ, ಅಸಕೃತ್-ಬಾರಿಬಾರಿಗೂ, ಪೃಚ್ಛಂತಂ-ಕೇಳುತ್ತಿರುವ, ದೀಪ್ತತೇಜಸಂ-ದೀಪ್ತ-ಪ್ರಜ್ವಲಿಸುತ್ತಿರುವ, ತೇಜಸಂ-ಬ್ರಹ್ಮತೇಜಸ್ಸುಳ್ಳ,ಭಾರ್ಗವಂ-ಭೃಗುವಂಶೋತ್ಪನ್ನನಾದ, ಪಿತರಂ-ತಂದೆಯಾದ, ತಂ-ಆ ಶುಕ್ರಾಚಾರ್ಯನಂಕುರಿತು,ಅಬ್ರವೀತ್-ನುಡಿದಳು, ||೧೮|| ಹೇಮುನಿಸತ್ತಮ-ಎಲೈಮುನಿಶ್ರೇಷ್ಠನೆ, ಅಹಂ-ನಾನು, ಅಗ್ನಿಂ-ಅಗ್ನಿಯನ್ನು, ಪ್ರವೇಕ್ಷ್ಯಾಮಿ-ಪ್ರವೇಶಿಸುತ್ತೇನೆ, ತೀಕ್ಷ್ಣಂ-ಕ್ರೂರವಾದ, ವಿಷಂ-ವಿಷವನ್ನಾದರೂ, ಭಕ್ಷಯಿಷ್ಯೇ-ಭಕ್ಷಣೆಮಾಡುತ್ತೇನೆ, ಅಪೋವಾ-ವಿಷಮಿಶ್ರೋದಕವನ್ನಾದರೂನು ಪಾನಮಾಡುತ್ತೇನೆ, ಜೀವಿತಂ-ಬದುಕುವದಕ್ಕೋಸ್ಕರ, ನತುಶಕ್ಷ್ಯಾಮಿ-ಸಮರ್ಥಳಾಗಲಾರೆನು || ೧೯ || ತ್ವಂ-ನೀನು, ಅವಮಾನಿತಾಂ-ಅವಮತನಮಾಡಲ್ಪಟ್ಟ, ದುಃಖಿತಾಂ-ದುಃಖಿಸುತಿರುವ, ಮಾಂ-ನನ್ನನ್ನು,ನಾವಜಾನೀಷೇ-ತಿಳಿಯದೆಹೋದೆ, ಹೇಬ್ರಹ್ಮನ್-ಎಲೈಬ್ರಹ್ಮನೆ, ವೃಕ್ಷಸ್ಯ-ಗಿಡಕ್ಕೆ, ಅವಜ್ಞಯಾ-ಛೇದನಾರೂಪ ಅವಮಾನದಿಂದ, ವೃಕ್ಷಜೀವಿನಃ-ವೃಕ್ಷದಿಂದಜೀವನಮಾಡುವರೆಲ್ಲರೂನು, ಛಿದ್ಯಂತೇ-ವ್ಯಸನವನ್ನು ಬೀಳುತ್ತಾರೆ || ೨೦ || ಹೇಭಾರ್ಗವ - ಎಲೈಶುಕ್ರಾಚಾರ್ಯನೆ, ರಾಜರ್ಷಿಃ-ರಾಜಋಷಿಯಾದ ಯಯಾತಿಯು, ಅವಜ್ಞಯಾ-ಅವಮಾನದಿಂದ, ಪರಿಭೂಯ-ತಿರಸ್ಕರಿಸಿ, ಮಯಿ-ನನ್ನಲ್ಲಿ, ಅವಜ್ಞಾಂ - ಅವಮಾನಮಾತುಗಳನ್ನು, ಪ್ರಯುಂಕ್ತೇ-ಪ್ರಯೋಗಿಸುತ್ತಾನೆ, ಮಾಂ-ನನ್ನನ್ನು, ನಬಹುಮನ್ಯತೆ-ಬಹುಮಾನಮಾಡುವದಿಲ್ಲ ||೨೧|| ತಸ್ಯಾಃ-ಆದೇವಯಾನಿಯ, ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ಕೋಪನ-

ಕೆಯಾದ ಶರ್ಮಿಷ್ಠಳೊಡನೆ ಚಿರಕಾಲವು ರಮಿಸುತ್ತಿರಲಿ ||೧೩|| ನಿನಗೆ ಸೈರಣೆಇದ್ದರೆ ಎನಗಪ್ಪಣೆಯಂಕೊಡು, ನಾನು ಸೈರಿಸಲಾರೆನು, ಹ್ಯಾಗಾದರೂ ಸಾಯಬೇಕೆಂದು ನಿಶ್ಚಯಿಸಿದ್ದೇನೆಂದು ನಿರೂಪಿಸಿದ ಪುತ್ರನ ವಾಕ್ಯವಂಕೇಳಿ ಆದೇವಯಾನೆಯಾದರೆ ರೋಷಾವೇಶವುಳ್ಳವಳಾಗಿ ತಂದೆಯಾದ ಶುಕ್ರಾಚಾರ್ಯನಂ ಸ್ಮರಿಸಿದಂಥಾವಳಾದಳು. ||೧೫|| ಆ ವೇಳೆಯೊಳು ಭಾರ್ಗವನು ಕುವರಿಯ ಅಭಿಪ್ರಾಯವನ್ನರಿತು ಆಕೆ ಇರುವ ಸ್ಥಳಕ್ಕೆ ತ್ವರಿತಮಾಗಿ ಬಂದು ಸ್ವಸ್ಥಚಿತ್ತಳಾಗದಿರುವಳಾಗಿಯೂ ಸಂತೋಷಶೂನ್ಯಳಾಗಿಯೂ ಸಂತಪಿಸುತ್ತಿರುವ ಮನವುಳ್ಳವಳಾಗಿಯೂ ಇರುವ ಆ ದೇವಯಾನಿಯೆಂಬ ಕುವರಿಯಂ ಕಂಡು ಯಾಕೀಪರಿ ರೋದಿಸುತ್ತಿದ್ದೀ ಯೆಂಬದಾಗಿ ಕೇಳಿದಂಥಾವನಾಗಲು, ಆ ದೇವಯಾನಿಯು ಕುಪಿತಳಾಗಿ, ಬಾರಿಬಾರಿಗೂ ಕೇಳುತ್ತಿರುವ ಜನಕನಂ ಕುರಿತು ಪೇಳಿದಳದೆಂತೆನೆ ||೧೮|| ಎಲೈ ಋಷಿಶ್ರೇಷ್ಠನೇ ! ನಾನು ಅಗ್ನಿಪ್ರವೇಶವನ್ನಾದರೂ ಗೈಯುವೆನು, ಕ್ರೂರವಾದ ವಿಷವನ್ನಾದರೂ ಭಕ್ಷಿಸುವೆನು, ಅಥವಾ ಭಾವಿಯಲ್ಲಾದರೂ ಬೀಳುವೆನು, ನಾ ಬದುಕಲಾರೆ, ಎನಗೆ ಸಂಭವಿಸಿರುವ ಈ ದುಃಖವು ನಿನಗೆ ತಿಳಿಯದೆ ಹೋಯಿತಲ್ಲಾ ವೃಕ್ಷಮೂಲಕವಾಗಿ ಜೀವಿಸತಕ್ಕವರು ವೃಕ್ಷಕ್ಕೆ ಸಂಭವಿಸಿದ ಛೇದನದಿಂದ ಕ್ಲೇಶಪಡುವವರಲ್ಲಾ, ಕೇಳೆಲೈ ಜನಕನೇ ! ರಾಜರ್ಷಿಯಾದ ಯಯಾತಿಯು ಅವಮಾನದಿಂದ ತಿರಸ್ಕರಿಸಿ ನನ್ನನ್ನು ಬಹುಮಾನವಂಗೈಯ್ಯುವದೇ ಇಲ್ಲಾ, ಆದಕಾರಣ ನಾನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಾಭಿಪರಿಪ್ಲುತಃ । ವ್ಯಾಹರ್ತುಮುಪಚಕ್ರಾಮಭಾರ್ಗವೋನಹುಷಾತ್ಮಜಂ । ಯಸ್ಮಾನ್ಮಾಮವಜಾನೀಷೇನಾಹುಷತ್ವಂ ದುರಾತ್ಮವಾನ್ । ಜರಯಾಪರಯಾಜೀರ್ಣಶ್ಶೈಥಿಲ್ಯಮುಪಯಾಸ್ಯಸಿ ॥೨೩॥ ಏವಮುಕ್ತ್ವಾದುಹಿತರಂಸಮಾಶ್ವಾಸ್ಯಚ ಭಾರ್ಗವಃ । ಪುನರ್ಜಗಾಮಬ್ರಹ್ಮರ್ಷಿರ್ಭವನಂಸ್ವಂಮಹಾಯಶಾಃ ॥೨೪॥ ಸಏವಮುಕ್ತ್ವಾದ್ವಿಜಪುಂಗವಾಗ್ರ್ಯಸ್ಸುತಾಂಸಮಾಶ್ವಾಸ್ಯಚದೇವಯಾನೀಂ । ಪುನರ್ಯಯೌಸೂರ್ಯಸಮಾನತೇಜಾದತ್ವಾಂಚಶಾಪಂನಹುಷಾತ್ಮಜಾಯ ॥೨೫॥

—...ಇತಿ ಶ್ರೀಮದುತ್ತರರಾಮಾಯಣೇ ಅಷ್ಟಪಂಚಾಶಸ್ಸರ್ಗಃ...—

ಶ್ರುತ್ವಾತೂಶನಸಂಕ್ರುದ್ಧಂತದಾರ್ತೋನಹುಷಾತ್ಮಜಃ । ಜರಾಂಪರಿಮಿತಾಂಪ್ರಾಪ್ಯಯದುಂವಚನಮಬ್ರವೀತ್ ॥ ಯದೋತ್ವಮಸಿಧರ್ಮಜ್ಞೋಮದರ್ಥಂಪ್ರತಿಗೃಹ್ಯತಾಂ । ಜರಾಂಪರಿಮಿತಾಂಪುತ್ರಭೋಗೈರಂಸ್ಯೇಮಹಾಯಶಃ ॥೨॥ ನ

---

ಕೋಪದಿಂದ, ಅಭಿಪ್ಲುತಃ-ವ್ಯಾಪ್ತನಾದಂಥಾವನಾಗಿ, ಭಾರ್ಗವಃ-ಶುಕ್ರಾಚಾರ್ಯನು, ನಹುಷಾತ್ಮಜಂ-ನಹುಷನಮಗನಾದ ಯಯಾತಿಯನ್ನು ಕುರಿತು, ವ್ಯಾಹರ್ತುಂ-ಹೇಳುವದಕ್ಕೋಸ್ಕರ, ಉಪಚಕ್ರಾಮ-ಉಪಕ್ರಮಿಸಿದನು ॥೨೨॥ ಹೇನಾಹುಷ-ಎಲೈ ನಹುಷಪುತ್ರನೆ, ದುರಾತ್ಮವಾನ್-ದುಷ್ಟಬುದ್ಧಿಯುಳ್ಳ ತ್ವಂ-ನೀನು, ಯಸ್ಮಾತ್-ಯಾವಕಾರಣದ ದೆಸೆಯಿಂದ, ಮಾಂ-ನನ್ನನ್ನು, ಅವಜಾನಿಷೇ-ಅವಮಾನಗೊಳಿಸಿದ್ದೀಯೋ, ತಸ್ಮಾತ್-ಆ ಕಾರಣದ ದೆಸೆಯಿಂದ, ಪರಯಾ-ಬಹಳವಾದ, ಜರಯಾ-ವಾರ್ಧಿಕಾವಸ್ಥೆಯಿಂದ, ಜೀರ್ಣಃ-ಶಿಥಿಲವಾದ ಶರೀರಮುಳ್ಳವನಾಗಿ, ಶೈಥಿಲ್ಯಂ-ದೇಹದಾರ್ಢ್ಯ ತಪ್ಪಿಹೋಗುವಿಕೆಯನ್ನು, ಉಪಯಾಸ್ಯಸಿ-ಹೊಂದುವಿ ॥೨೩॥ ಏವಂ-ಈಪರಿಯಾಗಿ, ಬ್ರಹ್ಮರ್ಷಿಃ-ಬ್ರಹ್ಮಋಷಿಯಾದ, ಭಾರ್ಗವಃ-ಶುಕ್ರಾಚಾರ್ಯನು, ಉಕ್ತ್ವಾ-ಹೇಳಿ, ದುಹಿತರಂ-ಮಗಳನ್ನು, ಸಮಾಶ್ವಾಸ್ಯ-ಸಮಾಧಾನಗೊಳಿಸಿ, ಮಹಾಯಶಾಃ-ಮಹಾ ಕೀರ್ತಿವಂತನಾದ ಕಾರಣ, ಪುನಃ-ಮತ್ತು, ಸ್ವಂಭವನಂ-ತನ್ನ ಮನೆಯಂ ಕುರಿತು, ಜಗಾಮ-ತೆರಳಿದನು ॥೨೪॥ ಸೂರ್ಯಸಮಾನತೇಜಾಃ-ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ದ್ವಿಜಪುಂಗವಾಗ್ರ್ಯಃ-ಬ್ರಾಹ್ಮಣಶ್ರೇಷ್ಠರಲ್ಲಿ ಅಗ್ರೇಸರನಾದ, ಸಃ-ಆಶುಕ್ರಾಚಾರ್ಯನು, ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಸುತಾಂ-ಮಗಳಾದ, ದೇವಯಾನೀಂಚ-ದೇವಯಾನಿಯನ್ನು, ಸಮಾಶ್ವಾಸ್ಯಚ-ಸಮಾಧಾನವೂ ಗೊಳಿಸಿ, ನಹುಷಾತ್ಮಜಾಯ-ಯಯಾತಿ ಮಹಾರಾಯನಿಗೋಸುಗ, ಶಾಪಂ-ಶಾಪವನ್ನು, ದತ್ವಾ-ಕೊಟ್ಟು, ಪುನಃ-ಮತ್ತು, ಯಯೌ-ತೆರಳಿದನು ॥೨೫॥ —...*ಇತಿ ಶ್ರೀಮದುತ್ತರರಾಮಾಯಣೇ ಅಷ್ಟಪಂಚಾಶಸ್ಸರ್ಗಃ*...—

ತದಾ-ಆ ಕಾಲದಲ್ಲಿ, ಉಶನಸಂ-ಶುಕ್ರಾಚಾರ್ಯನನ್ನು, ಕ್ರುದ್ಧಂ-ಕೋಪಿಷ್ಠನನ್ನಾಗಿ, ಶ್ರುತ್ವಾ-ಕೇಳಿ, ನಹುಷಾತ್ಮಜಃ-ಯಯಾತಿಯು, ಆರ್ತಃ-ದೀನನಾಗಿ, ಪರಿಮಿತಾಂ-ಪರಿಮಿತವಾದ, ಜರಾಂ-ವಾರ್ಧಿಕಾವಸ್ಥೆಯನ್ನು, ಪ್ರಾಪ್ಯ-ಹೊಂದಿ, ಯದುಂ-ಯದುಚಕ್ರವರ್ತಿಯನ್ನು ಕುರಿತು, ವಚನಂ- ಮಾತನ್ನು, ಅಬ್ರವೀತ್-ನುಡಿದನು ॥ ೧ ॥ ಹೆ ಯದೋ-ಎಲೈ ಯದುಚಕ್ರವರ್ತಿಯೆ, ಹೆ ಮಹಾಯಶಃ-ಎಲೊ ಮಹಾಕೀರ್ತಿವಂತನೆ, ತ್ವಂ-ನೀನು, ಧರ್ಮಜ್ಞಃ-ಧರ್ಮವನ್ನು ತಿಳಿದವನು, ಅಸಿ-ಆಗಿದ್ದೀ, ಹೆ ಪುತ್ರ-ಎಲೈ ಮಗನೇ, ಪರಿಮಿತಾ-ಮಿತವಾಗಿ ಬರುತ್ತಿರುವ, ಜರಾ-ವಾರ್ಧಿಕಾವಸ್ಥೆಯು, ಮದರ್ಥಂ-ನನ್ನ ನಿಮಿತ್ತವಾಗಿ, ಪ್ರತಿಗೃಹ್ಯತಾಂ-ಪ್ರತಿಗ್ರಹಿಸಲ್ಪಡಲೀ, ಭೋಗೈಃ-ಭೋಗಗಳಿಂದ, ಅಹಂ-ನಾನು, ರಂಸ್ಯೇ-ವಿಹರಿಸುವೆನು ॥೨॥ ಹೆ ನರರ್ಷಭ-ಎಲೈ ಮನುಷ್ಯಶ್ರೇಷ್ಠನೇ, ವಿಷಯೇಷು-ವಿಷಯಗಳಲ್ಲಿ, ಅಹಂತಾವತ್-ನಾನಾದರೇ, ಕೃತಕೃತ್ಯಃ-ಕೃತಪ್ರಯೋಜನಮುಳ್ಳವನು, ನಾಸ್ಮಿ-ಆಗಲಿಲ್ಲಾ, ತಥಾ-ಹಾಗೆಯೇ, ಕಾಮಂ-ಕೋರಿಕೆಯನ್ನು, ಅನುಭೂಯ, ಅನುಭವಿಸಿ, ತತಃ-ಬಳಿಕ, ಜರಾಂ-ವಾರ್ಧಿಕಾವಸ್ಥೆಯನ್ನು, ಪ್ರಾಪ್ಸ್ಯಾಮಿ-ಹೊಂದು

---

ಜೀವಿಸುವದಕ್ಕಿಂತಲೂ ಮರಣಧರ್ಮವನ್ನೈಯುವದೇ ಉತ್ತಮವೆಂದು ಹೇಳುತ್ತಿರುವ ಆ ಪುತ್ರಿಕೆಯ ವಾಕ್ಯವಂ ಕೇಳಿ ಶುಕ್ರಾಚಾರ್ಯನು ಕಡುಕೋಪಮುಳ್ಳವನಾಗಿ ನಹುಷಾತ್ಮಜನಾದ ಆ ಯಯಾತಿರಾಜನಂ ಕುರಿತು ಹೇಳಲೊಸಗಿದನದೆಂತೆನೆ, ॥೨೨॥ ಎಲೈ ದುರ್ಬುದ್ಧಿಯುಳ್ಳ ನಹುಷಾತ್ಮಜನೇ ! ನೀನು ಯಾವಕಾರಣದಿಂದ ನನ್ನನ್ನುಯನಗೆ ಅವಮಾನವಂ ಮಾಡಿದಂಥಾವನಾದೆಯೋ ಆ ಹೇತುವಿನಿಂದ ನೀನು ಮುದಿತನಮುಳ್ಳವನಾಗಿ ಶಿಥಿಲವಾದ ಶರೀರಮುಳ್ಳವನಾಗಿ ದೇಹದಾರಢ್ಯವಿಲ್ಲದಂಥಾವನಾಗೆಂದು ಶಾಪವಂ ಕೊಟ್ಟು, ಕುವರಿಯಂ ಸಮಾಧಾನಗೊಳಿಸಿ ಮಹಾಯಶೋವಂತನಾಗಿ ತನ್ನ ಮನೆಯಂ ಕುರಿತು ತೆರಳಿದಂಥಾವನಾದನು. ॥೨೪॥ ಕೇಳೆಲೈ ಲಕ್ಷ್ಮಣನೇ ! ಬ್ರಾಹ್ಮಣೋತ್ತಮನಾದ ಆ ಶುಕ್ರಾಚಾರ್ಯನು ಸಂಪ್ರಾಪ್ತನಾಗಿ ನಹುಷಾತ್ಮಜನಾದ ಯಯಾತಿರಾಜನಿಗೆ ಈಪರಿ ಶಾಪವಂಕೊಟ್ಟು ತನ್ನ ಮಗಳಾದ ದೇವಯಾನಿಯೆಂ ಬಾಕೆಯನ್ನು ಸಮಾಧಾನಗೊಳಿಸಿ ಸೂರ್ಯನಂತೆ ಮಹಾಪ್ರಕಾಶವುಳ್ಳವನಾಗಿ ಪುನಃ ಹೊರಟುಹೋದನು. ॥೨೫॥ ...ಇತಿ ಶ್ರೀಮದುತ್ತರರಾಮಾಯಣದಲ್ಲಿನ ೫೮ನೆಯ ಸರ್ಗಂಮುಗಿದುದು...

ನಹುಷಪುತ್ರನಾದ ಆ ಯಯಾತಿರಾಜನು ಶುಕ್ರಾಚಾರ್ಯನು ಕುಪಿತನಾದನೆಂಬ ವಾರ್ತೆಯಂ ಕೇಳಿ ಮುದಿತನವಂ ಪೊಂದಿ ಮಗನಾದ ಯದುವಿನಂಕುರಿತು ಪೇಳುವನದೆಂತೆನೆ ॥೧॥ ಎಲೈ ಮಗನಾದ ಯದುರಾಜನೆ ನೀನು ಮಹಾಧರ್ಮಜ್ಞನು, ನನಿಗೋಸುಗ ಈ ಮುದಿತನವನ್ನು ತೆಗದುಕೋ, ನಾನು ಭೋಗಗಳಿಂದ ಇನ್ನೂ ತೃಪ್ತನಾಗಲಿಲ್ಲವಂ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಾವತ್ಕೃತಕೃತ್ಯೋಸ್ಮಿ ವಿಷಯೇಷು ನರರ್ಷಭ । ಅನುಭೂಯ ಯಥಾಕಾಮಂ ತತಃ ಪ್ರಾಪ್ಸ್ಯಾಮ್ಯಹಂ ಜರಾಂ ॥೩॥ ಯದುಸ್ತದ್ವಚನಂ ಶ್ರುತ್ವಾ ಪ್ರತ್ಯುವಾಚ ನರರ್ಷಭಂ । ಪುತ್ರಸ್ತೇ ದಯಿತಃ ಪೂರುಃ ಪ್ರತಿಗೃಹ್ಣಾತು ವೈ ಜರಾಂ ॥೪॥ ಬಹಿಷ್ಕೃತೋಹಮರ್ಥೇಷು ಸನ್ನಿಕರ್ಷಾಚ್ಚ ಪಾರ್ಥಿವ । ಪ್ರತಿಗೃಹ್ಣಾತು ವೈ ರಾಜನ್ ಯಸ್ಸಹಾಶ್ನಾತಿ ಭೋಜನಂ ॥೫॥ ತಸ್ಯ ತದ್ವಚನಂ ಶ್ರುತ್ವಾ ರಾಜಾ ಪೂರುಮಥಾಬ್ರವೀತ್ । ಇಯಂ ಜರಾ ಮಹಾಬಾಹೋ ಮದರ್ಥಂ ಪ್ರತಿಗೃಹ್ಯತಾಂ ॥೬॥ ನಾಹುಷೇಣೈವಮುಕ್ತಸ್ತು ಪೂರುಃ ಪ್ರಾಂಜಲಿರಬ್ರವೀತ್ । ಧನ್ಯೋಸ್ಮ್ಯನುಗೃಹೀತೋಸ್ಮಿ ಶಾಸನೇಸ್ಮಿ ತವ ಸ್ಥಿತಃ ॥೭॥ ಪೂರೋರ್ವಚನಮಾಜ್ಞಾಯ ನಾಹುಷಃ ಪರಯಾ ಮುದಾ । ಪ್ರಹರ್ಷಮತುಲಂ ಲೇಭೇ ಜರಾಂ ಸಂಕ್ರಾಮಯಚ್ಚ ತಾಂ ॥೮॥ ತತಸ್ಸ ರಾಜಾ ತರುಣಃ ಪ್ರಾಪ್ಯ ಯಜ್ಞಾನ್ ಸಹಸ್ರಶಃ । ಬಹುವರ್ಷಸಹಸ್ರಾಣಿ ಪಾಲಯಾಮಾಸ ಮೇದಿನೀಂ ॥೯॥ ಅಥ ದೀರ್ಘಸ್ಯ ಕಾಲಸ್ಯ ರಾಜಾ ಪೂರುಮಥಾಬ್ರವೀತ್ । ಆನಯಸ್ವ ಜರಾಂ ಪುತ್ರ ನ್ಯಾಸಂ ನಿರ್ಯಾತಯಸ್ವ ಮೇ ॥೧೦॥ ನ್ಯಾಸಭೂತಾ ಮಯಾ ಪುತ್ರ ತ್ವ

---

ವೆನು ॥೩॥ ಯದುಃ-ಯದುರಾಯನು, ತದ್ವಚನಂ-ಆ ಯಯಾತಿಮಾತನ್ನು, ಶ್ರುತ್ವಾ-ಕೇಳಿ, ನರರ್ಷಭಂ-ಯಯಾತಿ ಮಹಾರಾಯನಂ ಕುರಿತು, ಪ್ರತ್ಯುವಾಚ-ಪ್ರತ್ಯುತ್ತರ ಕೊಟ್ಟನು, ತೇ-ನಿನಗೆ, ದಯಿತಃ-ಇಷ್ಟನಾದ, ಪುತ್ರಃ-ಮಗನಾದ, ಪೂರುಃ-ಪೂರುಚಕ್ರವರ್ತಿಯು, ಜರಾಂ- ವಾರ್ಧಿಕಾವಸ್ಥೆಯನ್ನು, ಪ್ರತಿಗೃಹ್ಣಾತು-ಪ್ರತಿಗ್ರಹಿಸಲಿ ॥೪॥ ಹೇ ಪಾರ್ಥಿವ-ಎಲೈ ರಾಜನೇ, ಅಹಂ-ನಾನು, ಅರ್ಥೇಷು-ಐಶ್ವರ್ಯಗಳ ವಿಷಯವಾಗಿ, ಸನ್ನಿಕರ್ಷಾಚ್ಚ-ಸಮೀಪದ ವೇಳೆಯಿಂದಲೂ, ಬಹಿಷ್ಕೃತಃ-ಬ್ಯಾಹ್ಯರೇ ಮಾಡಲ್ಪಟ್ಟಿದ್ದೇನೆ, ಹೇ ರಾಜನ್-ಎಲೈ ಅರಸೇ, ಯಃ-ಯಾರು, ಭೋಜನಂ-ಭೋಜನವನ್ನೂ, ಸಹಾಶ್ನಾತಿ-ಕೂಡೆಮಾಡುತ್ತಾನೊ, ಸಃ-ಅವನೇ, ಪ್ರತಿಗೃಹ್ಣಾತು-ಪ್ರತಿಗ್ರಹಿಸಲೀ ॥೫॥ ತಸ್ಯ-ಆ ಯದುಚಕ್ರವರ್ತಿಯ, ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ರಾಜಾ-ಯಯಾತಿರಾಜನು, ಅಥ-ಬಳಿಕ, ಪೂರುಂ-ಪುರುಚಕ್ರವರ್ತಿಯಂ ಕುರಿತು, ಅಬ್ರವೀತ್-ನುಡಿದನು, ಹೆ ಮಹಾಬಾಹೋ- ಎಲೈ ಮಹಾ ಭುಜಪರಾಕ್ರಮಶಾಲಿಯೆ, ಇಯಂಜರಾ-ಈ ವಾರ್ಧಿಕಾವಸ್ಥೆಯು, ಮದರ್ಥಂ-ನನ್ನ ನಿಮಿತ್ತವಾಗಿ, ಪ್ರತಿಗೃಹ್ಯತಾಂ- ಪರಿಗ್ರಹಿಸಲ್ಪಡಲಿ॥೬॥ ನಾಹುಷೇಣ-ನಹುಷನ ಮಗನಾದ ಯಯಾತಿರಾಜನಿಂದ, ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಪೂರುಃ-ಪೂರುಚಕ್ರವರ್ತಿಯು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ಅಬ್ರವೀತ್-ನುಡಿದನು, ಧನ್ಯಃ-ಧನ್ಯನು, ಅಸ್ಮಿ-ಆದೆನು, ಅನುಗೃಹೀತಂ-ಅನುಗ್ರಹಿಸಲ್ಪಟ್ಟವನು, ಅಸ್ಮಿ-ಆದೆನು, ತವ- ನಿನ್ನ, ಶಾಸನೆ-ಆಜ್ಞಾವಚನದಲ್ಲಿ, ಸ್ಥಿತಃ-ಇರುವೆನು, ಅಸ್ಮಿ-ಆಗಿದ್ದೇನೆ ॥೭॥ ನಾಹುಷಃ-ನಹುಷನ ಮಗನಾದ ಯಯಾತಿರಾಜನು, ಪೂರೋಃ- ಪೂರುಚಕ್ರವರ್ತಿಯ, ವಚನಂ-ಮಾತನ್ನು, ಆಜ್ಞಾಯ-ತಿಳಿದು, ಪರಯಾ-ಬಹಳವಾದ, ಮುದಾ-ಸಂತೋಷದಿಂದ, ತಾಂಜರಾಂ-ಆ ವಾರ್ಧಿಕಾವಸ್ಥೆಯನ್ನು, ಸಂಕ್ರಾಮಯತ್-ಕದುಲಿಸಿದಂಥಾವನಾದನು, ಅತುಲಂ-ಅಸದೃಶವಾದ, ಪ್ರಹರ್ಷಂ-ಸಂತೋಷವನ್ನು, ಲೇಭೆ-ಹೊಂದಿದನು॥೮॥ ತತಃ-ಬಳಿಕ, ತರುಣಃ-ಯೌವನಶಾಲಿಯಾದ, ಸರಾಜಾ-ಆ ಯಯಾತಿರಾಜನು, ಸಹಸ್ರಶಃ-ಅನೇಕಗಳಾದ, ಯಜ್ಞಾನ್-ಯಾಗಂಗಳನ್ನು, ಪ್ರಾಪ್ಯ-ಹೊಂದಿ, ಬಹುವರ್ಷಸಹಸ್ರಾಣಿ-ಅನೇಕ ಸಹಸ್ರ ವರುಷಗಳು, ಮೇದಿನೀಂ-ಭೂಮಿಯನ್ನು, ಪಾಲಯಾಮಾಸ-ಆಳಿದನು ॥೯॥ ಅಥ-ಬಳಿಕ, ದೀರ್ಘಸ್ಯಕಾಲಸ್ಯ-ಬಹುಕಾಲವು ಕಳದಂಥಾದ್ದಾಗುತ್ತಿರಲಿಕಾಗಿ, ರಾಜಾ-ಯಯಾತಿರಾಜನು, ಪೂರುಂ-ಪುರುಚಕ್ರವರ್ತಿಯಂ ಕುರಿತು, ಅಬ್ರವೀತ್-ನುಡಿದನು; ಹೆ ಪುತ್ರ-ಎಲೈ ಮಗನೇ, ಜರಾಂ-ಮುದಿತನವನ್ನು, ಆನಯಸ್ವ-ತರಿಸು, ನ್ಯಾಸಂ-ನನ್ನಲ್ಲಿಟ್ಟದ್ದನ್ನು, ನಿರ್ಯಾತಯಸ್ವ-ಹೋಗಲಾಡಿಸು ॥೧೦॥ ಹೆಪುತ್ರ-ಎಲೈ ಮಗನೇ, ಜರಾ-ಮುದಿತನವು, ಮಯಾ-ನನ್ನಿಂದ, ನ್ಯಾಸಭೂತಾ-ಇರಿಸಲ್ಪಟ್ಟದ್ದಾಗಿ, ತ್ವಯಿ-ನಿನ್ನಲ್ಲಿ, ಸಂಕ್ರಾಮಿತಾ-ಪ್ರತಿಫಲಿಸಲ್ಪಟ್ಟಂಥಾದ್ದಾಯಿತು, ತಸ್ಮಾತ್-

---

ಬದಾಗಿ ನುಡಿಯಲು ಯದುರಾಯನು ಆವಾಕ್ಯವಂಕೇಳಿ ತಂದೆಯಂ ಕುರಿತು. ಎಲೈ ತಂದೆಯೇ ! ನಿನಗೆ ಪ್ರೀತಿಪಾತ್ರನಾಗಿಯೂ ಮತ್ತು ಸಕಲೈಶ್ವರ್ಯಗಳಿಂದಲೂ ಯಾರು ನಿನ್ನಿಂದ ಪೋಷಿಸಲ್ಪಟ್ಟನೋ, ಅಂಥಾ ಪೂರುವೇ ಈಗ ಈ ಮುದಿತನವನ್ನು ಪರಿಗ್ರಹಿಸುವಂಥಾವನಾಗಲಿ, ನಾನಿದುವರಿಗೂ ನಿನ್ನ ಸಮೀಪದಲ್ಲಿಲ್ಲದೆ ಐಶ್ವರ್ಯಾದಿಗಳಿಂದ ಬಹಿಷ್ಕೃತನಾಗಿದ್ದೆನು, ಯಾವನು ನಿನ್ನ ಸಂಗಡ ಭಜಿಸುತ್ತಿದ್ದನೋ ಆತನೇ ಈ ಜರಾವಸ್ಥೆಯಂ ಪರಿಗ್ರಹಿಸಲೆಂದು ನಿರೂಪಿಸಲು ಆಮಾತಂ ಕೇಳಿ ರಾಜನು ಪೂರುಚಕ್ರವರ್ತಿಯಂ ಕುರಿತು ಎಲೈ ಮಹಾಭುಜಪರಾಕ್ರಮಿಯೇ ! ಈ ವೃದ್ಧಾಪ್ಯವನ್ನು ನೀನು ತೆಗದುಕೋಯೆಂಬದಾಗಿ ಹೇಳಿದಂಥಾವನಾದನು ॥೬॥ ನಹುಷಪುತ್ರನಾದ ಯಯಾತಿರಾಜನಿಂದ ಈಪರಿ ಹೇಳಲ್ಪಟ್ಟ ಆಪೂರುಚಕ್ರವರ್ತಿಯು ಅಂಜಲಿಬದ್ಧನಾಗಿ ಎಲೈ ರಾಜನೇ ! ನಾನು ಧನ್ಯನಾದೆನು, ಇಂದಿಗೆ ಅನುಗ್ರಹಿಸಲ್ಪಟ್ಟೆನು, ತಮ್ಮಪ್ಪಣೆಯಾದಂತೆ ನಡೆದುಕೊಳ್ಳುವೆನೆಂದು ನುಡಿದವನಾಗಲು, ಆ ರಾಜನು ಪರಮಹರುಷವಂ ಪೊಂದಿ ಆಮುದಿತನವಂ ಬದಲಾಯಿಸಿ ಯೌವನಸ್ಥನಾಗಿ ಅನೇಕ ಯಾಗಂಗಳಂಗೈಯ್ಯುತ್ತಾ ಬಹುಸಹಸ್ರ ವರುಷಗಳು ಭೂಮಿಯನ್ನಾಳುತಿದ್ದನು ॥೯॥ ಈಪರಿ ಬಹುಕಾಲವು ಕಳೆದ ಬಳಿಕ ಆಯಯಾತಿರಾಜನು ಪೂರುಚಕ್ರವರ್ತಿಯಂ ಕುರಿತು ಎಲೈ ಮಗನೇ ! ನಾನು ನಿನಗೆಕೊಟ್ಟದ್ದ ನನ್ನ ಜರಾವಸ್ಥೆಯನ್ನು ನನಗೆ ಕೊಡುವಂಥಾವನಾಗು ॥೧೦॥ ಯಾವ ಮುದಿತನವು ಶುಕ್ರಾಚಾರ್ಯರಿಂದ ಎನಗೆ ಸಂಭವಿಸಿದಂಥಾದ್ದಾಯಿತೋ, ಅಂಥಾ ವಾರ್ಧಿಕಾವಸ್ಥೆಯನ್ನು ನೀ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಿಸಂಕ್ರಾಮಿತಾಜರಾ । ತಸ್ಮಾತ್ಪೂರೋಮಯಾಜಾತಃ ಪ್ರತಿದೇಹಿಜರಾಂಮಮ ॥೧೧॥ ಪ್ರೀತಶ್ಚಾಸ್ಮಿಮಹಾಬಾಹೋ ಶಾಸನಸ್ಯಪ್ರತಿಗ್ರಹಾತ್ ।ತ್ವಾಂಚಾಹಮಭಿಷೇಕ್ಷ್ಯಾಮಿಪ್ರೀತಿಯುಕ್ತೋನರಾಧಿಪಂ ॥೧೨॥ ಏವಮುಕ್ತ್ವಾಸುತಂಪೂರುಂ ಯಯಾತಿರ್ನಹುಷಾತ್ಮಜಃ । ದೇವಯಾನೀಸುತಂಕ್ರುದ್ಧೋ ರಾಜಾವಾಕ್ಯಮುವಾಚಹ ॥೧೩॥ ರಾಕ್ಷಸಸ್ತ್ವಂಮಯಾಜಾತಃಪುತ್ರರೂಪೋದುರಾಸದಃ । ಪ್ರತಿಹಂಸಿಮಮಾಜ್ಞಾಂಯತ್ಪ್ರಜಾರ್ಥೇವಿಫಲೋಭವ ॥ ೧೪ ॥ ಪಿತರಂಗುರುಭೂತಂ ಮಾಂಯಸ್ಮಾತ್ವಮವಮನ್ಯಸೆ । ರಾಕ್ಷಸಾನ್ಯಾತುಧಾನಾಂಸ್ತ್ವಂಜನಯಿಷ್ಯಸಿದಾರುಣಾನ್ ॥೧೫॥ ನತುಸೋಮಕುಲೋತ್ಪನ್ನೆವಂಶೆಸ್ಥಾಸ್ಯತಿದುರ್ಮತೆಃ।ವಂಶೋಪಿಭವತಸ್ತುಲ್ಯೋದುರ್ವಿನೀತೋಭವಿಷ್ಯತಿ ॥೧೬॥ ತಮೇವಮುಕ್ತ್ವಾರಾಜರ್ಷಿಃಪೂರುಂರಾಜ್ಯವಿವರ್ಧನಂ । ಅಭಿಷೆಕೆನಸಂಪೂಜ್ಯ ಆಶ್ರಮಂಪ್ರವಿವೇಶಹ ॥೧೭॥ ತತಃಕಾಲೆನಮಹತಾದಿಷ್ಟಾಂತಮುಪಜಗ್ಮಿವಾನ್ । ತ್ರಿದಿವಂಸಗತೋರಾಜಾಯಯಾತಿರ್ನಹುಷಾತ್ಮಜಃ ॥೧೮॥ಪೂರುಸ್ತ್ವಕಾರಯದ್ರಾಜ್ಯಂಧರ್ಮೇಣ

---

ಆಕಾರಣದ ದೆಶೆಯಿಂದ, ಹೆ ಪೂರೊ–ಎಲೈ ಪೂರುವೆ, ಮಯಾ–ನನ್ನಿಂದ, ಜಾತಃ–ಹುಟ್ಟಿದ ನೀನು, ಮಮ–ನನಿಗೆ, ಜರಾಂ–ಮುದಿತನವನ್ನು,ಪ್ರತಿದೆಹಿ–ಮರಳಿಕೊಡು॥೧೧॥ಹೆ ಮಹಾಬಾಹೊ–ಎಲೈ ಮಹಾ ಭುಜಪರಾಕ್ರಮಶಾಲಿಯೆ,ಶಾಸನಸ್ಯ–ಅಜ್ಞದ, ಪ್ರತಿಗ್ರಹಾತ್–ಸ್ವೀಕಾರದ ದೆಶೆಯಿಂದ,ಪ್ರೀತಃ–ಸಂತುಷ್ಟನು, ಅಸ್ಮಿ–ಆದೆನು, ತ್ವಾಂಚ – ನಿನ್ನನ್ನೂ ಕೂಡೆ, ಪ್ರೀತಿಯುಕ್ತಃ – ಸಂತೋಷಯುಕ್ತನಾಗಿ, ನರಾಧಿಪಂ – ರಾಜನನ್ನಾಗಿ, ಅಭಿಷೆಕ್ಷ್ಯಾಮಿ–ಪಟ್ಟಾಭಿಷೇಕ ಮಾಡುವೆನು ॥೧೨॥ ಏವಂ–ಈಪರಿಯಾಗಿ, ನಹುಷಾತ್ಮಜಃ – ನಹುಷಪುತ್ರನಾದ, ಯಯಾತಿಃ–ಯಯಾತಿರಾಜನು, ಸುತಂ–ಕುಮಾರನಾದ, ಪೂರುಂ – ಪೂರುಚಕ್ರವರ್ತಿಯನ್ನು, ಕುರಿತು, ಉಕ್ತ್ವಾ–ಹೇಳಿ, ದೆವಯಾನೀಸುತಂ – ದೇವಯಾನಿಯ ಕುಮಾರನಾದ ಯದು ಚಕ್ರವರ್ತಿಯಂ ಕುರಿತು, ಕ್ರುದ್ಧಃ–ಕುಪಿತನಾಗಿ, ರಾಜಾ–ಯಯಾತಿರಾಜನು, ವಾಕ್ಯಂ–ಮಾತನ್ನು, ಉವಾಚಹ – ಪೇಳಿದನಷ್ಟೆ ॥ ೧೩ ॥ ಮಯಾ–ನನ್ನಿಂದ, ಪುತ್ರರೂಪಃ–ಮಗನ ರೂಪವಾಗಿ, ಜಾತಃ–ಹುಟ್ಟಿದ, ತ್ವಂ–ನೀನು, ದುರಾಸದಃ–ಹೊಂದಲಸಾಧ್ಯನಾದ, ರಾಕ್ಷಸಃ–ರಾಕ್ಷಸನಾಗಿ, ಮಮ–ನನ್ನ, ಆಜ್ಞಾಂ – ಅಪ್ಪಣೆಯನ್ನು, ಪ್ರತಿಹಂಸೀತ್–ಭಂಗಪಡಿಸಿದೆ ಯೆಂಬದ್ಯಾವದೋ, ತೆನ–ಆ ಕಾರಣದ ದೆಶೆಯಿಂದ, ಪ್ರಜಾರ್ಥೆ – ಪ್ರಜಾಪಾಲನಾರ್ಥವಾಗಿ, ವಿಫಲಃ–ಪ್ರಯೋಜನಮಿಲ್ಲ, ಭವ–ಆಗು ॥ ೧೪ ॥ ಯಸ್ಮಾತ್–ಯಾವಕಾರಣದ ದೆಶೆಯಿಂದ, ಪಿತರಂ–ತಂದೆಯಾದ, ಗುರುಭೂತಂ–ಗುರುವಾದ, ಮಾಂ–ನನ್ನನ್ನು, ತ್ವಂ–ನೀನು, ಅವಮನ್ಯಸೆ–ಅವಮಾನವನ್ನು ಮಾಡಿದೆಯೊ, ತಸ್ಮಾತ್–ಆ ಕಾರಣದ ದೆಶೆಯಿಂದ, ತ್ವಂ– ನೀನು, ರಾಕ್ಷಸಾನ್–ರಕ್ಕಸರನ್ನೂ, ದಾರುಣಾನ್–ಕ್ರೂರರಾದ, ಯಾತುಧಾನಾನ್–ಯಾತುಧಾನರೆಂಬ ರಾಕ್ಷಸಜಾತಿ ಭೇದಗಳನ್ನು, ಜನಯಿಷ್ಯಸಿ–ಹುಟ್ಟಿಸುವ ಥಾವನಾಗು ॥೧೫॥ ಹೆ ದುರ್ಮತೆ–ಎಲೈ ದುರ್ಬುದ್ಧಿಯುಳ್ಳವನೆ, (ಭವಾನ್–ನೀನು,) ಸೋಮಕುಲೋತ್ಪನ್ನೆ–ಚಂದ್ರವಂಶದಲ್ಲಿ ಹುಟ್ಟಿದ, ಅಸ್ಮಿನ್ವಂಶೆ–ಈ ವಂಶದಲ್ಲಿ, ನಸ್ಥಾಸ್ಯತಿ–ನಿಲ್ಲುವದಿಲ್ಲ, ಭವತಃ–ನಿನ್ನ, ವಂಶೋಪಿ–ಕುಲವೂಕೂಡೆ, ತುಲ್ಯಃ–ನಿನಿಗೆ ಸದೃಶವಾಗಿ, ದುರ್ವಿನೀತಃ–ದುಷ್ಟಮಾದದ್ದು, ಭವಿಷ್ಯತಿ–ಆಗುವದು ॥೧೬॥ ರಾಜರ್ಷಿಃ–ರಾಜರ್ಷಿಯಾದ ಯಯಾತಿ ಮಹಾರಾಜನು, ತಂ–ಆ ಯದುಚಕ್ರವರ್ತಿಯಂ ಕುರಿತು, ಏವಂ– ಈಪರಿಯಾಗಿ, ಉಕ್ತ್ವಾ–ಹೇಳಿ, ರಾಜ್ಯವಿವರ್ಧನಂ–ರಾಜ್ಯಾಭಿವೃದ್ಧಿಕರನಾದ, ಪೂರುಂ–ಪೂರುಚಕ್ರವರ್ತಿಯನ್ನು,ಅಭಿಷೆಕೇಣ–ಪಟ್ಟಾಭಿಷೇಕದಿಂದ,ಸಂಪೂಜ್ಯ–ಮರ್ಯಾದಿಸಿ, ಆಶ್ರಮಂ–ಚತುರ್ಥಾಶ್ರಮವನ್ನು, ಪ್ರವಿವೆಶ–ಹೊಕ್ಕನು ॥೧೭॥ ತತಃ–ಬಳಿಕ, ಮಹಾಕಾಲೆನ–ಬಹಳಕಾಲದಿಂದ, ದಿಷ್ಟಾಂತಂ–ಮರಣಾವಸ್ಥೆಯನ್ನು, ಉಪಜಜ್ಞಿವಾನ್–ಹೊಂದಿದ, ನಹುಷಾತ್ಮಜಃ–ನಹುಷರಾಜನ ಮಗನಾದ, ಯಯಾತಿಃ–ಯಯಾತಿಯೆಂಬ, ಸರಾಜಾ–ಆ ರಾಜನು, ತ್ರಿದಿವಂ– ಸ್ವರ್ಗವನ್ನು, ಗತಃ–ಹೊಂದಿದನು ॥೧೮॥ ಪೂರುಶ್ಚ–ಪೂರುಚಕ್ರವರ್ತಿಯೂ ಕೂಡ, ಮಹತಾ–ಬಲಿತಿರುವ, ಧರ್ಮೆಣ–ಧರ್ಮದಿಂದ, ವೃತಃ–ಕೂಡಿಕೊಂ

---

ನೆನುಭವಿಸಿದಂಥಾವನಾದೆ, ಆದಕಾರಣ ನೀನೆ ಯೆನ್ನಪುತ್ರನು, ನನ್ನ ವಾರ್ಧಿಕಾವಸ್ಥೆಯನ್ನು ಪುನಹಕೊಡು ॥೧೧॥ಎನ್ನಾಜ್ಞೆಯಂತೆ ನೀನು ಪರಿಗ್ರಹಿಸಿದ್ದರಿಂದ ನಾನು ಸಂತುಷ್ಟನಾಗಿದ್ದೇನೆ, ವಿಶ್ವಾಸ ಪೂರ್ವಕವಾಗಿ ನಿನ್ನನ್ನು ರಾಜನನ್ನಾಗಿ ನಿನಗೆ ಪಟ್ಟಾಭಿಷೇಕವಂ ಮಾಡಿಸುವೆನೆಂದು ಪೂರುಚಕ್ರವರ್ತಿಯಂ ಕುರಿತು ನಿರೂಪಿಸಿ ದೇವಯಾನಿಯಕುಮಾರನಾದ ಯದುವಿನಂಕುರಿತು ಈ ಮಾತನ್ನು ಪೇಳಿದಂಥಾವನಾದನು ॥೧೩॥ ಎಲೈ ಪುತ್ರನೇ! ನೀನು ಯೆನ್ನಾಜ್ಞೆಗೆ ಪ್ರತಿಯಂ ಗೈದವನಾದೆ, ಯಾದಕಾರಣ ಹೊಂದಲಸಾಧ್ಯವಾದ ರಾಕ್ಷಸನಾಗಿ ರಾಜ್ಯಪದವಿಯಂ ಪೊಂದಬೇಡ, ಗುರುಭೂತನಾದ ಮತ್ತು ತಂದೆಯಾದ ನನ್ನನ್ನು ಯಾವ ಹೇತುವಿನಿಂದ ನೀನವಮಾನವಂ ಮಾಡಿದಿಯೋ ಆ ಕಾರಣದಿಂದ ಯಾತುಧಾನರೆಂಬ ದಾರುಣರಾದ ರಾಕ್ಷಸಜಾತಿಯರನ್ನು ಉತ್ಪನ್ನ ಮಾಡುವಂಥಾವನಾಗುವಿ, ಎಲೈ ದುರ್ಬುದ್ಧಿಯುಳ್ಳವನೇ! ಚಂದ್ರವಂಶೋತ್ಪನ್ನವಾದ ಈ ಕುಲದಲ್ಲಿ ನೀನು ನಿಲ್ಲಬೇಡ, ನಿನ್ನವಂಶವೂಕೂಡ ನೀನು ಹ್ಯಾಗೆ ಕೊಬ್ಬಿದವನಾಗಿದ್ದೀಯೊ ಹಾಗೆಯೇ ಅಶಿಕ್ಷಿತವಾದಂಥಾ ದ್ದಾಗಲೆಂದು ಯದುರಾಜನಿಗೆ ಶಾಪವಂ ಕೊಟ್ಟು ಪೂರು ಚಕ್ರವರ್ತಿಗೆ ಪಟ್ಟಾಭಿಷೇಕವಂಮಾಡಿ ತಾನು ಆಶ್ರಮಸ್ವೀಕಾರವಂಗೈದನು ॥೧೭॥ ನಹುಷಪುತ್ರನಾದ ಆ ಯಯಾತಿರಾಜನು ಬಹುಕಾಲವಾದ ಬಳಿಕ ಮರಣಧರ್ಮವನ್ನೈದಿ ಸ್ವರ್ಗಸ್ಥನಾದನು ॥೧೮॥ ಆಪೂರುವೆಂಬ ರಾಜನಾದರೆ ಅರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಹತಾನೃಪಃ । ಪ್ರತಿಷ್ಠಾನೇಪುರವರೇಕಾಶೀರಾಜ್ಯೇಮಹಾಯಶಾಃ ॥೧೯॥ ಯದುಸ್ತು ಜನಯಾಮಾಸಯಾತುಧಾನಾನ್ ಸ ಹಸ್ರಶಃ । ಪುರೇಕ್ರೌಂಚವನೇದುರ್ಗೇರಾಜವಂಶಂಚಶಾಶ್ವತಮ್ ॥೨೦॥ ಏಷತೂಶನಸಾಮುಕ್ತಃ ಶಾಪೋತ್ಸರ್ಗೋ ಯಯಾ ತಿನಾ । ಧಾರಿತಃಕ್ಷತ್ರಧರ್ಮೇಣಯನ್ನಿಮಿಶ್ಚಕ್ಷಮೇನಚ ॥೨೧॥ ಏತತ್ತೇ ಸರ್ವಮಾಖ್ಯಾತಂದರ್ಶನಂಸರ್ವಕಾಂಕ್ಷಿಣಾಮ್ । ಅನುವರ್ತಾಮಹೇಸೌಮ್ಯದೋಷೋನಸ್ಯಾದ್ಯಥಾನೃಪೇ ॥೨೨॥

...ಇತಿ ಶ್ರೀಮದುತ್ತರ ರಾಮಾಯಣೇಏಕೋನಷಷ್ಟಿತಮಸ್ಸರ್ಗಃ....

ತಯೋಸ್ಸಂವದತೋರೇವಂರಾಮಲಕ್ಷ್ಮಣಯೋಸ್ತದಾ । ವಾಸಂತಿಕೀನಿಶಾಪ್ರಾಪ್ತಾನಶೀತಾನಚಘರ್ಮದಾ ॥೧॥ ತತಃ ಪ್ರಭಾತೇವಿಮಲೇಕೃತ್ವಾಪೌರ್ವಾಹ್ಣಿಕೀಂಕ್ರಿಯಾಮ್ । ಅಭಿಚಕ್ರಾಮಕಾಕುತ್ಸ್ಥೋದರ್ಶನಂಪೌರಕಾರ್ಯವಿತ್ ॥೨॥

*ಅಥ ಅಧಿಕಪಾಠಪ್ರಾರಂಭಃ.

ಧರ್ಮಾಸನಗತೋರಾಜಾರಾಮೋರಾಜೀವಲೋಚನಃ । ರಾಜಧರ್ಮಾನವೇಕ್ಷದ್ವೈ ಬ್ರಾಹ್ಮಣೈಃನೈಗಮೈಸ್ಸಹ ॥೩॥

---

ಡನನಾಗಿ, ಮಹಾಯಶಾಃ-ಬಹು ಕೀರ್ತಿವಂತನಾಗಿ, ಕಾಶೀರಾಜ್ಯೇ-ಕಾಶೀದೇಶದಲ್ಲಿ, ಪ್ರತಿಷ್ಠಾನೇ-ಪ್ರತಿಷ್ಠಾನವೆಂಬ, ಪುರವರೇ-ಶ್ರೇಷ್ಠವಾದ ಪಟ್ಟಣದಲ್ಲಿ, ರಾಜ್ಯಂ-ರಾಜ್ಯವನ್ನು, ಅಕಾರಯತ್-ಮಾಡಿದನು ॥೧೯॥ ಯದುಸ್ತು-ಯದುರಾಜನಾದರೆ,ಸಹಸ್ರಶಃ-ಅನೇಕರಾದ, ಯಾತುಧಾನಾನ್-ರಾಕ್ಷಸ ಜಾತೀಯರನ್ನು, ಜನಯಾಮಾಸ-ಹುಟ್ಟಿಸಿದನು, ಕ್ರೌಂಚವನೇ-ಕ್ರೌಂಚವನವೆಂಬ, ದುರ್ಗೇ-ದುರ್ಗಮಸ್ಥಾನವಾದ,ಪುರೇ-ಪಟ್ಟಣದಲ್ಲಿ, ರಾಜವಂಶಂ-ರಾಜಕುಲವನ್ನು, ಶಾಶ್ವತಂ-ಚ್ಯುತಿಯಿಲ್ಲದಂತೆ, ಅಕರೋತ್-ಮಾಡಿದನು ॥೨೦॥ ಉಶನಸಾ-ಶುಕ್ರಾಚಾರ್ಯನಿಂದ, ಮುಕ್ತಃ-ಬಿಡಲ್ಪಟ್ಟ, ಶಾಪೋತ್ಸರ್ಗಃ-ಶಾಪರೂಪವಾದ ಉತ್ಸರ್ಗವು, ಯಯಾತಿನಾ-ಯಯಾತಿರಾಜನಿಂದ, ಕ್ಷತ್ರಧರ್ಮೇಣ-ರಾಜಧರ್ಮದಿಂದ, ಧಾರಿತಃ-ಧರಿಸಲ್ಪಟ್ಟಿತು, ಯತ್-ಯಾವ ಬ್ರಹ್ಮಶಾಪವನ್ನು, ನಿಮಿಶ್ಚ-ನಿಮಿಚಕ್ರವರ್ತಿಯೂಕೂಡ, ನಕ್ಷಮೇ-ಸೈರಿಸಲಿಲ್ಲ, ॥೨೧॥ ಹೆ ಸೌಮ್ಯ-ಎಲೈ ಕೋಪವಿಲ್ಲದಿರುವ ಲಕ್ಷ್ಮಣನೆ, ತೇ-ನಿನಿಗೆ, ಏತತ್ಸರ್ವಂ-ಇದೆಲ್ಲ, ಆಖ್ಯಾತಂ-ಹೇಳಲ್ಪಟ್ಟಿತು, ಸರ್ವಕಾಂಕ್ಷಿಣಾಂ-ಸಮಸ್ತವನ್ನು ಇಚ್ಛೈಸುತ್ತಿರುವ, ದರ್ಶನಂ-ದರ್ಶನವನ್ನು, ಅನುವರ್ತಾಮಹೇ-ಅನುಸರಿಸಿ ಹೋಗೋಣ, ಯಥಾ-ಹ್ಯಾಗೆ, ನೃಪೇ-ರಾಜನಲ್ಲಿ, ದೋಷಃ-ದೋಷವು, ನಸ್ಯಾತ್-ಇಲ್ಲವೆ ಹೋದೀತೋ. ॥೨೨॥

—...*ಇತಿ ಶ್ರೀಮದುತ್ತರರಾಮಾಯಣೇ ಏಕೋನಷಷ್ಟಿತಮಸ್ಸರ್ಗಃ.*...—

ತದಾ-ಆ ವೇಳೆಯಲ್ಲಿ, ತಯೋಃ-ರಾಮಲಕ್ಷ್ಮಣಯೋಃ-ಆ ರಾಮಲಕ್ಷ್ಮಣರೀರ್ವರು, ಏವಂ-ಈಪರಿಯಾಗಿ, ಸಂವದತೋಸ್ಸತೋಃ- ಮಾತನಾಡುವರಾಗುತಿರಲೀಕಾಗಿ, ವಸಂತಿಕೀ-ವಸಂತಸಂಬಂಧವಾದ,ಯಾನಿಶಾ-ಯಾವರಾತ್ರಿಯು, ನಶೀತಾ-ಥಂಡಿಯಾಗಿರಲಿಲ್ಲವೋ, ಘರ್ಮದಾ-ಉಷ್ಣವನ್ನು ಕೊಡುವಂಥಾದ್ದು, ನಚ-ಅಲ್ಲವೋ, ಸಾನಿಶಾ-ಅಂಥಾ ರಾತ್ರಿಯು, ಪ್ರಾಪ್ತಾ-ಸಂಭವಿಸಿತು ॥೧॥ ತತಃ-ಬಳಿಕ, ವಿಮಲೇ-ನಿರ್ಮಲವಾಗಿ, ಪ್ರಭಾತೇಸತಿ-ಪ್ರಾತಃಕಾಲವಾಗುತಿರಲೀಕಾಗಿ, ಪೌರ್ವಾಹ್ಣಿಕೀಂ-ಪ್ರಾತಃಕಾಲದಲ್ಲಿ ಮಾಡತಕ್ಕ, ಕ್ರಿಯಾಂ-ಸಂಧ್ಯಾವಂದನಾದಿ ಕ್ರಿಯೆಗಳನ್ನು, ಕೃತ್ವಾ-ಮಾಡಿ, ಪೌರಕಾರ್ಯವಿತ್-ಪಟ್ಟಣಸ್ಥರ ಕಾರ್ಯವನ್ನು ತಿಳಿದಿರುವ, ಕಾಕುತ್ಸ್ಥಃ-ಶ್ರೀ ರಾಮನು, ದರ್ಶನಂ-ಕಾರ್ಯಾರ್ಥಿಗಳ ದರ್ಶನವಂ ಕುರಿತು, ಅಭಿಚಕ್ರಾಮ-ಹೊರಟನು ॥೨॥ ರಾಜೀವಲೋಚನಃ-ಕೆಂದಾವರೆಯೋಪಾದಿಯಲ್ಲಿರುವ ನೇತ್ರಗಳುಳ್ಳ, ರಾಜಾ-ಅರಸಾದ, ರಾಮಃ-ಶ್ರೀರಾಮನು, ಧರ್ಮಾಸನಗತಃ-ವಿಚಾರ ಮಾಡತಕ್ಕವರು ಕೂಡುವ ಪೀಠವನ್ನು ಹೊಂದಿದವನಾಗಿ, ಬ್ರಾಹ್ಮಣೈಃ-ಬ್ರಾಹ್ಮಣರಿಂದಲೂ, ನೈಗಮೈಸ್ಸಹ-ಪ್ರಜೆಗಳಿಂದಲೂ, ಒಡಗೂಡಿ,ರಾಜಧರ್ಮಾನ್-ರಾಜನೀತಿಗಳನ್ನು, ಅನ್ವೈಕ್ಷಯತ್-ನೋಡುತ್ತಿದ್ದನು ॥೩॥ ಪುರೋಹಿತಾ-ಪುರೋಹಿತನಾದ, ವಸಿಷ್ಠೇನ-ವಸಿಷ್ಠಋಷಿಯಿಂದ, ಋಷಿಣಾ-ಮುನಿಯಾದ, ಕಾಶ್ಯಪೇನಚ-

---

ಸಾಗಿ ಕಾಶೀದೇಶಕ್ಕೆ ಸೇರಿದ ಪ್ರತಿಷ್ಠಾನವೆಂಬ ಪಟ್ಟಣದೊಳು ಅರಸಾಗಿ ಧರ್ಮದಿಂದ ರಾಜ್ಯಪರಿಪಾಲನೆಯಂ ಗೈಯುತ್ತಿದ್ದನು ॥೧೯॥ ಯದುರಾಜನಾದರೆ ಅನೇಕರಾದ ಯಾತುಧಾನರೆಂಬ ರಕ್ಕಸ ಜಾತೀಯರನ್ನು ಪುಟ್ಟಿಸಿದಂಥಾವನಾಗಿ ಕ್ರೌಂಚವನವೆಂಬ ದುರ್ಗಮವಾದ ಪಟ್ಟಣದಲ್ಲಿ ರಾಜವಂಶವನ್ನು ಶಾಶ್ವತವಾಗಿ ನಿಲ್ಲಿಸಿದಂಥಾವನಾದನು॥೨೦ ಈ ಶಾಪವು ಶುಕ್ರಾಚಾರ್ಯರಿಂದ ಯಯಾತಿರಾಯನಿಗೆ ಕೊಡಲ್ಪಟ್ಟಂಥಾದ್ದಾಯಿತು. ಇದನ್ನು ಆತನು ಸೈರಿಸಿಗೊಂಡು ಕ್ಷತ್ರಧರ್ಮದಿಂದ ಧರಿಸಿದವನಾದನು. ನಿಮಿಚಕ್ರವರ್ತಿಯು ವಸಿಷ್ಠ ಶಾಪವನ್ನು ಹ್ಯಾಗೆ ಸೈರಿಸಲಿಲ್ಲ, ಕೇಳೆಲೈ ಲಕ್ಷ್ಮಣನೇ! ಇದನ್ನೆಲ್ಲಾ ನಿನಗೆ ಪೇಳಿದಂಥಾವನಾದೆನು, ರಾಜನಿಗೆ ಹ್ಯಾಗೆ ದೋಷವಿಲ್ಲದಿರುವದೋ ಹಾಗೆ ಮಾಡುವದಕ್ಕೋಸುಗ ಪ್ರಯೋಜನೇಚ್ಛೆಯುಳ್ಳವರ ದರ್ಶನವನ್ನು ಮಾಡುವಂಥಾವರಾಗೋಣ. ॥೨೨॥

—...ಇತಿ ಶ್ರೀಮದುತ್ತರರಾಮಾಯಣದಲ್ಲಿನ ೫೯ನೆಯ ಸರ್ಗಂಮುಗಿದುದು...—

ಆ ರಾಮ ಲಕ್ಷ್ಮಣರೀರ್ವರೂ ಆ ವೇಳೆಯೊಳು ಈಪರಿ ಮಾತಾಡುತ್ತಿರಲು ಬಹಳ ಥಂಡಿಯಾಗಿಯೂ ಶಖೆಯಾಗಿಯೂ ಇಲ್ಲದಿರುವ ವಸಂತಕಾಲದ ರಾತ್ರಿಯುಪ್ರಾಪ್ತವಾಯಿತು. ಬಳಿಕ ಪ್ರಾತಃಕಾಲವಾಗಲು ರಘುನಂದನನು ಪ್ರಾತಃಕಾಲೀನವಾದ ಅನ್ಹಿಕವಂಗೈದು ಕಾರ್ಯಾರ್ಥಿಗಳಂ ಕಾಣುವದಕ್ಕೋಸುಗ ಕಚ್ಚೇರಿಯಂ ಕುರಿತು ತೆರಳಿದನು॥೨ ಕೆಂಗಣ್ಣುಗಳುಳ್ಳವನಾದ ಆ ಶ್ರೀರಾಮನು ಆಸ್ಥಾನದೊಳು ಸಿಹ್ಮಾಸನದಲ್ಲಿ ಕುಳಿತುಕೊಂಡು ಧರ್ಮಗಳಂ ಹುಡುಕು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪುರೋಧಸಾವಸಿಷ್ಠೇನ ಋಷಿಣಾ ಕಾಶ್ಯಪೇನಚ । ಮಂತ್ರಿಭಿರ್ವ್ಯವಹಾರಜ್ಞೈಸ್ತಥಾನ್ಯೈರ್ಧರ್ಮಪಾರಗೈಃ ॥೪॥ ಭ್ರಾತೃಭಿಶ್ಚ ಮಹದ್ಭಿಶ್ಚ ರಾಜಭಿಸ್ಸಾ ಸಭಾ ತದಾ । ಸಭೇವಚ ಮಹೇಂದ್ರಸ್ಯ ಯಮಸ್ಯ ವರುಣಸ್ಯಚ । ಶುಶುಭೇ ರಾಜಸಿಂಹಸ್ಯ ರಾಮಸ್ಯಾಕ್ಲಿಷ್ಟಕರ್ಮಣಃ ॥೫॥ ಅಥ ರಾಮೋಽಬ್ರವೀತ್ತತ್ರ ಲಕ್ಷ್ಮಣಂ ಶುಭಲಕ್ಷಣಮ್ । ನಿರ್ಗಚ್ಛ ತ್ವಂ ಮಹಾಬಾಹೋ ಸುಮಿತ್ರಾನಂದವರ್ಧನ ॥೬॥ ಕಾರ್ಯಾರ್ಥಿನಸ್ತು ಸೌಮಿತ್ರೇ ವ್ಯಾಹರ್ತುಂ ತ್ವಮುಪಕ್ರಮ । ರಾಮಸ್ಯಾಜ್ಞಾಂ ಪುರಸ್ಕೃತ್ಯ ಲಕ್ಷ್ಮಣಃ ಪರವೀರಹಾ ॥೭॥ ದ್ವಾರದೇಶಮುಪಾಗಮ್ಯ ಹ್ಯರ್ಥಿನಸ್ಸಮುಪಾಹ್ವಯತ್ । ನಕಶ್ಚಿದಬ್ರವೀತ್ತತ್ರ ಮಮ ಕಾರ್ಯಮಿಹಾದ್ಯ ವೈ ॥೮॥ ನಾಧಯೋ ವ್ಯಾಧಯಶ್ಚೈವ ರಾಮೇ ರಾಜ್ಯಂ ಪ್ರಶಾಸತಿ । ನ ದುರ್ಭಿಕ್ಷಂ ನ ದಾರಿದ್ರ್ಯಂ ನ ನರಕಂ ನ ಕುರೂಪತಾ ॥೯॥ ಪಕ್ವಸಸ್ಯಾ ವಸುಮತೀ ಸರ್ವೌಷಧಿಸಮನ್ವಿತಾ । ನಬಾಲೋ ಮ್ರಿಯತೇ ತತ್ರ ನ ಯುವಾ ನಚ ಮಧ್ಯಮಃ ॥೧೦॥ ಧರ್ಮೇಣ ಶಾಸಿ

---

ಕಾಶ್ಯಪನಿಂದಲೂ, ವ್ಯವಹಾರಜ್ಞೈಃ-ವ್ಯಾಜ್ಯಗಳನ್ನು ತಿಳಿದಿರುವ, ಮಂತ್ರಿಭಿಃ-ಮಂತ್ರಿಗಳಿಂದಲು, ತಥಾ-ಹಾಗೆ, ಧರ್ಮಪಾರಗೈಃ-ಧರ್ಮ-ಧರ್ಮಗಳ ವಿಷಯವಾಗಿ, ಪಾರಗೈಃ-ಪಾರಂಗತರಾದ, ಅನ್ಯೈಃ-ಮತ್ತೂ ಕೆಲಬರಿಂದಲೂ, ಭ್ರಾತೃಭಿಶ್ಚ-ತಮ್ಮಂದರಿಂದಲೂ, ಮಹದ್ಭಿಶ್ಚ-ಮಹಾತ್ಮ್ಯರುಳ್ಳವರಿಂದಲೂ, ರಾಜಭಿಶ್ಚ-ರಾಜರಿಂದಲೂ, ಉಪಲಕ್ಷಿತಾ-ಕೂಡಿಕೊಂಡಿರುವ, ಅಕ್ಲಿಷ್ಟಕರ್ಮಣಃ-ಕ್ಲೇಶವಿಲ್ಲದ ಕಾರ್ಯವನ್ನು ಮಾಡುತ್ತಿರುವ, ರಾಜಸಿಂಹಸ್ಯ-ರಾಜಶ್ರೇಷ್ಠನಾದ, ರಾಮಸ್ಯ-ಶ್ರೀರಾಮನ, ಸಾಸಭಾ-ಆ ಸಭೆಯು, ಮಹೇಂದ್ರಸ್ಯ-ದೇವೇಂದ್ರನ, ಯಮಸ್ಯಚ-ಯಮಧರ್ಮನ, ವರುಣಸ್ಯಚ- ವರುಣನ, ಸಭೇವ-ಸದಸ್ಸಿನಂತೆ, ಶುಶುಭೆ-ಹೊಳೆಯುತ್ತಿತ್ತು ॥೫॥ ಅಥ-ಬಳಿಕ, ತತ್ರ-ಆ ಸಭೆಯಲ್ಲಿ, ರಾಮಃ-ಶ್ರೀರಾಮನು, ಶುಭಲಕ್ಷಣಂ- ಶುಭಕರವಾದ ಲಕ್ಷಣಗಳುಳ್ಳ, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, ಅಬ್ರವೀತ್-ನುಡಿದನು, ಹೇ ಮಹಾಬಾಹೋ-ಎಲೈ ಮಹಾ ಭುಜಪರಾಕ್ರಮಶಾಲಿಯೆ, ಹೇ ಸುಮಿತ್ರಾನಂದವರ್ಧನ-ಸುಮಿತ್ರಾದೇವಿಗೆ ಸಂತೋಷವನ್ನುಂಟುಮಾಡುವನೆ, ತ್ವಂ-ನೀನು, ನಿರ್ಗಚ್ಛ-ಹೋಗು ॥೬॥ ಹೇ ಸೌಮಿತ್ರೇ-ಎಲೈಲಕ್ಷ್ಮಣನೆ, ತ್ವಂ-ನೀನು, ಕಾರ್ಯಾರ್ಥಿನಃ-ವ್ಯವಹಾರಾರ್ಥಿಗಳನ್ನು, ಕುರಿತು, ವ್ಯಾಹರ್ತುಂ-ಹೇಳುವದಕ್ಕೋಸ್ಕರ, ಉಪಕ್ರಮ-ಪ್ರಾರಂಭಿಸು, ಪರವೀರಹಾ-ಶತ್ರುಸಂಹಾರಕನಾದ, ಲಕ್ಷ್ಮಣಃ-ಲಕ್ಷ್ಮಣಸ್ವಾಮಿಯು, ರಾಮಸ್ಯ-ಶ್ರೀ ರಾಮನ, ಆಜ್ಞಾಂ-ಅಪ್ಪಣೆಯನ್ನು, ಅಭಿಸೃತ್ಯ-ಕೇಳಿ, ದ್ವಾರದೇಶಂ-ದ್ವಾರಪ್ರದೇಶವನ್ನು-ಕುರಿತು, ಉಪಾಗಮ್ಯ-ಬಂದು, ಅರ್ಥಿನಃ-ವ್ಯವಹಾರಾರ್ಥಿಗಳನ್ನು, ಸಮುಪಾಹ್ವಯತ್-ಕರೆದನು ॥೭॥ ತತ್ರ-ಆ ರಾಜದ್ವಾರದಲ್ಲಿ, ಮಮ-ನನ್ನ, ಕಾರ್ಯಂ-ಕಾರ್ಯವು, ಅದ್ಯ-ಈಗ, ಇಹ-ಇಲ್ಲಿ, (ಭವಿತವ್ಯಂ-ಆಗತಕ್ಕದ್ದೆಂದು,) ಕಶ್ಚಿತ್-ಯಾರೂನು, ನಾಬ್ರವೀತ್ ಹೇಳಲಿಲ್ಲ, ರಾಮೇ-ಶ್ರೀರಾಮನು, ರಾಜ್ಯಂ-ರಾಜ್ಯವನ್ನು, ಪ್ರಶಾಸತಿಸತಿ-ಸಂರಕ್ಷಿಸುವನಾಗುತಿರಲಿಕಾಗಿ, ಆಧಯಃ-ಮನೋವ್ಯಥೆಗಳು, ವ್ಯಾಧಯಶ್ಚ-ರೋಗಗಳೂನು, ನ-ಇಲ್ಲ, ದುರ್ಭಿಕ್ಷಂ-ಕ್ಷಾಮವು, ನ-ಇಲ್ಲ, ದಾರಿದ್ರ್ಯಂ-ದರಿದ್ರತೆಯು, ನ-ಇಲ್ಲ, ನರಕಂ-ನರಕಪ್ರಸ್ತಾವವು, ನ-ಇಲ್ಲ, ಕುರೂಪತಾ-ಕುತ್ಸಿತರೂಪವುಳ್ಳೋಣವು, ನ-ಇಲ್ಲ ॥೮॥ ವಸುಮತಿ-ಭೂಮಿಯು, ಪಕ್ವಸಸ್ಯಾ-ವರ್ಷದಿಂದ ಪರಿಪಕ್ವವಾದ ಪೈರುಗಳುಳ್ಳದ್ದಾಗಿಯೂ, ಸರ್ವೌಷಧಿಸಮನ್ವಿತಾ-ಸರ್ವ-ಸಮಸ್ತವಾದ, ಓಷಧಿ-ಮೂಲಿಕೆಗಳಿಂದ, ಸಮನ್ವಿತಾ-ಕೂಡಿದಂಥಾದ್ದಾಗಿಯೂ, (ಅವರ್ತ್ತತ-ಇತ್ತು) ತತ್ರ-ಆ ವೇಳೆಯಲ್ಲಿ, ಬಾಲಃ-ಹುಡುಗನು, ನಮ್ರಿಯತೆ-ಮೃತನಾಗುತ್ತಿರಲಿಲ್ಲ, ಯುವಾ-ಯೌವನವುಳ್ಳವನು, ನಮ್ರಿಯತೆ-ಸಾಯುತ್ತಿರಲಿಲ್ಲ, ಮಧ್ಯಮಶ್ಚ-ಮಧ್ಯಮವಯಸ್ಸುಳ್ಳವನೂ ಕೂಡ, ನಮ್ರಿಯತೆ-ಮರಣವಂ ಹೊಂದುತ್ತಿರಲಿ

---

ತ್ತಿದ್ದನು. ಆವೇಳೆಯೊಳ್ ಬ್ರಾಹ್ಮಣರಿಂದಲೂ, ಪುರವಾಸಿಗಳಿಂದಲೂ, ಪುರೋಹಿತನಾದ ವಸಿಷ್ಠಮುನಿಯಿಂದಲೂ, ಮಹರ್ಷಿಯಾದ ಕಾಶ್ಯಪನಿಂದಲೂ, ವ್ಯವಹಾರಗಳನ್ನರಿತಿರುವ ಮಂತ್ರಿಗಳಿಂದಲೂ, ಧರ್ಮಶಾಸ್ತ್ರಪಾರಂಗತರಾದ ಮತ್ತು ಕೆಲಬರಿಂದಲೂ, ತಮ್ಮಂದರಾದ ಭರತಾದಿಗಳಿಂದಲೂ, ಮಹಾತ್ಮರಾದ ರಾಜರುಗಳಿಂದಲೂ ಯುಕ್ತಮಾದ ಆ ಸಭೆಯು ದೇವೇಂದ್ರನ ಒಡ್ಡೋಲಗದಂತೆಯೂ, ವರುಣನ ಆಸ್ಥಾನದಂತೆಯೂ, ಯಮನ ಕಚ್ಚೇರಿಯಂತೆಯೂ, ಕಂಗೊಳಿಸುತ್ತಿತ್ತು ॥೫॥ ಬಳಿಕ ಶ್ರೀರಾಮನು ಲಕ್ಷ್ಮಣನಂ ಕುರಿತು, ಎಲೈ ಸುಮಿತ್ರಾಪುತ್ರನಾದ ಲಕ್ಷ್ಮಣನೆ! ನೀನು ಪೋಗಿ ವ್ಯವಹಾರಿಗಳ್ ಯಾರಾದರು ಬಂದಿಹರೋಯೇನೊ ನೋಡಿ ಕರೆದುಕೊಂಡು ಬರುವಂಥಾವನಾಗೆಂದು ನಿರೂಪಿಸಿದವನಾಗಲೂ, ಶತ್ರುಸಂಹಾರಕನಾದ ಆ ಲಕ್ಷ್ಮಣನು ಶ್ರೀರಾಮನ ಆಜ್ಞಾವಚನವಂ ಕೇಳಿ, ಆಸ್ಥಾನದ ಬಾಗಿಲಿನಲ್ಲಿ ಕಾರ್ಯಾರ್ಥಿಗಳ್ಗಂ ಕರೆದಂಥಾವನಾದನು. ಆ ವೇಳೆಯೊಳ್ ಯಾವ ಪುರುಷನಾದರು ಎನ್ನ ಕಾರ್ಯಮಿರುವದೆಂದು ಓರ್ವನು ಹೇಳಲಿಲ್ಲ. ಯಾಕೆಂದರೆ, ರಘುಕುಲತಿಲಕನಾದ ಶ್ರೀರಾಮನು ರಾಜ್ಯಪರಿಪಾಲನೆಯಂ ಗೈಯುವವೇಳೆಯು ಮನೋವ್ಯಾಧಿಗಳೂ ಶರೀರ ರೋಗಗಳೂ, ದುರ್ಭಿಕ್ಷವೂ, ದಾರಿದ್ರ್ಯವೂ, ನರಕವೂ, ಕುರೂಪತ್ವವೂ ಇವುಗಳ್ಲಿ ಯಾವದೊಂದು ಇರಲಿಲ್ಲ, ಮತ್ತು ಭೂಮಿಯು ಕಾಲಕಾಲದಲ್ಲಿ ಫಲಿಸುವಂಥಾದ್ದಾಗಿಯೂ, ಸಮಸ್ತವಾದ ಮೂಲಿಕಾ ವಿಶೇಷಗಳಿಂದ ಯುಕ್ತಮಾದದ್ದಾಗಿಯೂ ಇದ್ದಂಥಾದ್ದಾಯಿತು ॥೧೦॥ ಆ ರಾಮರಾಜ್ಯದೊಳ್ ಬಾಲಕನಾಗಲೀ ಯೌವನಸ್ಥನಾಗಲೀ ಮಧ್ಯವಯಸ್ಸಿಯಾಗಲೀ ಮೃತನಾಗುತಿರಲಿಲ್ಲ, ಧರ್ಮದಿಂದಲೆ ಸಮಸ್ತವು ಶಿಕ್ಷಿಸಲ್ಪಡುತ್ತಿತ್ತು,

೮೭

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಂಸರ್ವಂನಚಬಾಧಾಚಜೀವಿನಾಮ್ ।ದೃಶ್ಯತೇನಚಕಾರ್ಯಾರ್ಥೀರಾಮೇರಾಜ್ಯಂಪ್ರಶಾಸತಿ ॥೧೧॥ ಲಕ್ಷ್ಮಣಃಪ್ರಾಂಜಲಿ ರ್ಭೂತ್ವಾರಾಮಾಯೈವಂನ್ಯವೇದಯತ್ ॥೧೨॥ ಅಥರಾಮಸ್ಸಧರ್ಮಾತ್ಮಾಸೌಮಿತ್ರಿಂಪುನರಬ್ರವೀತ್ ॥೧೨॥ ಭೂಯ ಏವಹಿಗಚ್ಛತ್ವಂಅರ್ಥಿನಂಪ್ರವಿಚಾರಯ ॥೧೩॥ ಸಮ್ಯಕ್ಪ್ರಣೀತಯಾನೀತ್ಯಾನಾಧರ್ಮೋವಿದ್ಯತೇಕ್ವಚಿತ್ ।ತಸ್ಮಾದ್ರಾಜಭ ಯಾತ್ಸರ್ವೇರಕ್ಷಂತಿಸ್ಮಪರಸ್ಪರಮ್ ॥೧೪॥ ಬಾಣಾಇವಮಯಾಮುಕ್ತಾ ಇಹರಕ್ಷಂತಿಮೇಪ್ರಜಾಃ। ತಥಾಪಿತ್ವಂಮಹಾಬಾ ಹೋಪ್ರಜಾರಕ್ಷಂತಿತತ್ಪರಃ ॥೧೫॥ ಏವಮುಕ್ತಸ್ತುಸೌಮಿತ್ರಿರ್ನಿರ್ಜಗಾಮನೃಪಾಲಯಾತ್ । ಅಥಾಪಶ್ಯದ್ದ್ವಾರದೇಶೇ ಶ್ವಾನಂಪಾದದ್ವಯಸ್ಥಿತಮ್ ॥೧೬॥ ತಮೇವವೀಕ್ಷಮಾಣಂವೈವಿಕ್ರೋಶಂತಂಮುಹುರ್ಮುಹುಃ। ದೃಷ್ಟ್ವಾಸತುಲಕ್ಷ್ಮಣಸ್ತಂ ವೈಪಪ್ರಚ್ಛಸವೀರ್ಯವಾನ್ ॥೧೭॥ ಕಿಂತೇಕಾರ್ಯಂಮಹಾಭಾಗವಿಸ್ರಬ್ಧಂಬ್ರೂಹಿಮಾಚಿರಮ್ । ಲಕ್ಷ್ಮಣಸ್ಯವಚಶ್ಶ್ರು

---

ಲ್ಲಿ, ಸರ್ವಂ-ಸಮಸ್ತವೂನು, ಧರ್ಮೇಣ-ಧರ್ಮದಿಂದಲೆ, ಶಾಸಿತಂ-ಶಿಕ್ಷಿಸಲ್ಪಡುತ್ತಿತ್ತು ||೧೧|| ರಾಮೇ-ಶ್ರೀರಾಮನು, ರಾಜ್ಯಂ-ರಾಜ್ಯವನ್ನು, ಪ್ರಶಾಸತಿಸ ತಿ-ಪರಿಪಾಲಿಸುವಂಥಾವನಾಗುತ್ತಿರಲಿಕಾಗಿ, ಜೀವಿನಾಂ-ಪ್ರಾಣಧಾರಿಗಳಿಗೆ, ಬಾಧಾ-ಬಾಧೆಯು, ನ-ಇಲ್ಲ, (ಅತಃ-ಈ ಕಾರಣದ ದೆಸೆಯಿಂದ,) ಕಾರ್ಯಾ ರ್ಥೀ-ವ್ಯವಹಾರವನ್ನಿಟ್ಟುಸುವನು, ನಚದೃಶ್ಯತೆ-ಕಾಣಲ್ಪಡಲೇ ಇಲ್ಲ, ಲಕ್ಷ್ಮಣಃ-ಲಕ್ಷ್ಮಣಸ್ವಾಮಿಯು, ಪ್ರಾಂಜಲಿಃ-ಅಂಜಲಿಬದ್ಧನಾದವನು, ಭೂತ್ವಾ-ಆಗಿ, ರಾಮಾಯ-ಶ್ರೀರಾಮನಿಗೆ, ಏವಂ-ಈಪರಿಯಾಗಿ, ನ್ಯವೇದಯತ್-ತಿಳುಹಿಸಿದನು ||೧೨|| ಅಥ-ಬಳಿಕ, ಧರ್ಮಾತ್ಮಾ-ಧರ್ಮಸ್ವಭಾವವುಳ್ಳ, ರಾಮಃ-ಶ್ರೀರಾಮನು, ಸೌಮಿತ್ರಿಂ-ಲಕ್ಷ್ಮಣನನ್ನು ಕುರಿತು, ಪುನಃ-ಮತ್ತು, ಅಬ್ರವೀತ್-ನುಡಿದನು, ಭೂಯಯೇವ-ಮತ್ತೊನು, ತ್ವಂ-ನೀನು, ಗಚ್ಛ-ತೆರಳು, ಅರ್ಥಿನಃ-ವ್ಯವಹಾರಾರ್ಥಿಗಳನ್ನು, ಸಮ್ಯಕ್-ಚನ್ನಾಗಿ, ಪ್ರಣೀತಯಾ-ಶಿಕ್ಷಿತವಾದ, ನಿತ್ಯಾ-ನೀತಿಯಿಂದ, ಪ್ರವಿಚಾರಯ- ವಿಚಾರಿಸು|| ಕ್ವಚಿತ್-ಒಂದಾನೊಂದು ಸ್ಥಳದಲ್ಲಿಯೂ, ಅಧರ್ಮಃ-ಅಧರ್ಮವು, ನವಿದ್ಯತೆ-ಇರುವದಿಲ್ಲ, ತಸ್ಮಾತ್-ಆ ಕಾರಣದ ದೆಸೆಯಿಂದ, ಸರ್ವೇ-ಯಲ್ಲರು, ರಾಜಭಯಾತ್-ರಾಜನ ಭೀತಿಯ ದೆಸೆಯಿಂದ, ಪರಸ್ಪರಂ-ಒಬ್ಬರನ್ನೊಬ್ಬರು, ರಕ್ಷಂತಿಸ್ಮ-ಸಂರಕ್ಷಣೆ ಮಾಡುತ್ತಿದ್ದಾರಷ್ಟೆ ||೧೪|| ಮಯಾ-ನನ್ನಿಂದ, ಮುಕ್ತಾಃ-ಬಿಡಲ್ಪಟ್ಟ, ಬಾಣಾಏವ-ಸರಳುಗಳೆ, ಮೇ-ನನ್ನ, ಪ್ರಜಾಃ-ಜನಗಳನ್ನು, ಇಹ-ಈಗಲೂ, ರಕ್ಷಂತಿ-ಪಾಲಿಸುತ್ತವೆ, ಹೇ ಮಹಾಬಾಹೋ-ಎಲೈ ಮಹಾಭುಜಗಳುಳ್ಳವನೆ, ತಥಾಪಿ-ಹಾಗಾದರೂ, ತ್ವಂ-ನೀನು, ಪ್ರಜಾರಕ್ಷಣತತ್ಪರಃ-ಪ್ರಜಾ-ಪ್ರಜೆಗಳ, ರಕ್ಷಣ-ಸಂರಕ್ಷಣೆಯಲ್ಲಿ, ತತ್ಪರಃ- ಆಸಕ್ತಿಯುಳ್ಳವನು, (ಭವ-ಆಗು,) ||೧೫|| ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಸೌಮಿತ್ರಿಃ-ಲಕ್ಷ್ಮಣಸ್ವಾಮಿಯು, ನೃಪಾಲಯಾತ್-ಅರಮನೆಯ ದೆಸೆಯಿಂದ,ನಿರ್ಜಗಾಮ-ಹೊರಟನು, ಅಥ-ಬಳಿಕ, ಪಾದದ್ವಯಸ್ಥಿತಂ-ಎರಡು ಕಾಲುಗಳಿಂದ ನಿಂತಿರುವ, ತಮೇವ, ಆ ಶ್ರೀರಾಮನನನ್ನೇ, ವೀಕ್ಷಮಾಣಂ-ನೋಡುತ್ತಿರುವ, ಮುಹುರ್ಮುಹುಃ-ಬಾರಿಬಾರಿಗೂ, ವಿಕ್ರೋಶಂತಂ-ಕೂಗುತ್ತಿರುವ, ಶ್ವಾನಂ-ಶುನಕವನ್ನು, ದ್ವಾರದೇಶೆ-ರಾಜದ್ವಾರದಬಾಗಿಲಿನಲ್ಲಿ, ಅಪಶ್ಯತ್-ಕಂಡನು ||೧೬|| ಅಥ-ಅನಂತರದಲ್ಲಿ,ವೀರ್ಯವಾನ್-ಪರಾಕ್ರಮಶಾಲಿಯಾದ, ಸಲಕ್ಷ್ಮಣಃ-ಆ ಲಕ್ಷ್ಮಣನು, ತಂ-ಆ ನಾಯಿಯನ್ನು, ದೃಷ್ಟ್ವಾ-ಕಂಡು, ಹೇ ಮಹಾಭಾಗ-ಎಲೈ ಪುಣ್ಯಶಾಲಿಯೆ, ತೇ-ನಿನಗೆ, ಕಿಂಕಾರ್ಯಂ-ಯೇನುಕಾರ್ಯವು, ವಿಸ್ರಬ್ಧಂ-ನಂಬಿಕೆಯುಳ್ಳದ್ದಾಗಿ, ಬ್ರೂಹಿ-ಹೇಳು, ಮಾಚಿರಂ-ಸಾವಕಾಶವಂಗೈಯಬ್ಯಾಡ, (ಇತಿ-ಇಂತೆಂದು,) ಪಪ್ರಚ್ಛ-ಕೇಳಿದನು ||೧೭|| ಲಕ್ಷ್ಮಣಸ್ಯ-ಲಕ್ಷ್ಮಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಸಾರಮೇಯಃ-ನಾ

---

ಆದಕಾರಣ ಶ್ರೀರಾಮನು ರಾಜ್ಯಪರಿಪಾಲನೆಯಂ ಗೈಯ್ಯುತ್ತಿರುವ ಸಮಯದೊಳು, ಯಾವ ಪ್ರಾಣಿಗೂ ಕೂಡಾ ಬಾಧೆಯೆಂಬುವದಿಲ್ಲವೇಯಿಲ್ಲ, ಇದರಿಂದ ಯಾವಕಾರ್ಯಾರ್ಥಿಯಾದರು ಆಬಾಗಿಲನಲ್ಲಿರದಿರಲೂ, ಲಕ್ಷ್ಮಣನು ಪುನಹಾ ಬಂದು ಯಾವ ವ್ಯವಹಾರಿಯೂ ಇಲ್ಲ, ಎಂಬದಾಗಿ ರಘುನಂದನನಿಗೆ ಬಿನ್ನವಿಸಿದಂಥಾವ ನಾದನು||೧೨|| ಆಬಳಿಕ ಧರ್ಮಾತ್ಮನಾದ ಶ್ರೀರಾಮನು ಲಕ್ಷ್ಮಣನಂ ಕುರಿತು, ಎಲೆ ಲಕ್ಷ್ಮಣನೆ! ಚನ್ನಾಗಿ ವ್ಯವಹಾರ ವಿಮರ್ಶೆಯಂಗೆಯ್ಯುತ್ತಿದ್ದರೆ ನಮಿಗೆ ಯಾವ ವಿಧದಲ್ಲಿಯಾಗಲಿ ಅಧರ್ಮ ಮುಂಟಾಗಲಾರದು. ಆದಕಾರಣ ನೀನು ಪುನಃ ಪೋಗಿ ಪುತಾರಿರುವರೊ ವಿಚಾರಿಸುವಂಥಾವನಾಗು, ಅದರಿಂದ ಜನರೆಲ್ಲರು ರಾಜನಿಗೆಹೆದರಿ ಒಬ್ಬರನ್ನೊಬ್ಬರು ಆಟಂಕಪಡಿಸದೆ ಇರುವಂಥಾವರಾಗಿಧಾರೆ, ಆದರೆ ನನ್ನಿಂದ ಬಿಡಲ್ಪಟ್ಟ ನಿಡಿಗೋಲುಗಳೆ ಪ್ರಜೆಗಳೆಲ್ಲರಂ ಪರಿಪಾಲಿಸುತ್ತಿರುವದು. ಹಾಗಾದರು ನೀನು ಜನಗಳ ಸಂರಕ್ಷಣೆಯೊಳು ಆಸಕ್ತಿಯುಳ್ಳವನಾಗೆಂದು ನಿರೂಪಿಸಿದಂಥಾವನಾದನು ||೧೫||ಸುಮಿತ್ರಾ ಪುತ್ರನಾದ ಲಕ್ಷ್ಮಣನು ಈಪರಿ ಶ್ರೀರಾಮನಿಂದ ಆಜ್ಞಾಪಿಸಲ್ಪಟ್ಟವನಾಗಿ, ಅರಮನೆಯಿಂದ ಹೊರಗೆ ಬಂದು ಬಳಿಕ, ಆದ್ವಾರದ ಸಮೀಪದೊಳು ಎರಡುಕಾಲುಗಳಿಂದ ನಿಂತುಕೊಂಡು ಬಾರಿಬಾರಿಗೂ ಕೂಗುತ್ತಿರುವ ಒಂದಾನೊಂದು ನಾಯಿಯಂ ಕಂಡು, ಆಶುನಕವಂ ಕುರಿತು, ಎಲೈ ಪುಣ್ಯಕರವಾದ ಶುನಕವೆ! ನಿನಿಗೇನು ಕಾರ್ಯವಿಧೆ? ಯಾಕೆ ಇಲ್ಲಿನಿಂತಿದ್ದೀ? ತ್ವರಿತವಾಗಿ ಪೇಳೆಂದು ಕೇಳಿಧವನಾಗಲು ಆಸಾರಮೇಯವು ಆವಾಕ್ಯವಂ ಕೇಳಿ, ಲಕ್ಷ್ಮಣನಂ ಕುರಿತು ಪೇಳುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ವಾ ಸಾರಮೇಯೋಭ್ಯಭಾಷತ ॥೧೮॥ ಸರ್ವಭೂತಶರಣ್ಯಾಯ ರಾಮಾಯಾಕ್ಲಿಷ್ಟಕಾರಿಣೇ । ಭಯೇಷ್ವಭಯದಾತ್ರೇ ಚ ತಸ್ಮೈ ವಕ್ತುಂ ಸಮುತ್ಸಹೇ ॥೧೯॥ ಏತಚ್ಛ್ರುತ್ವಾ ತು ವಚನಂ ಸಾರಮೇಯಸ್ಯ ಲಕ್ಷ್ಮಣಃ । ರಾಘವಾಯ ತದಾ ವಕ್ತುಂ ಪ್ರವಿವೇಶ ನೃಪಾಲಯಮ್ ॥೨೦॥ ನಿವೇದ್ಯ ರಾಮಾಯ ಪುನರ್ನಿರ್ಜಗಾಮ ನೃಪಾಲಯಾತ್ । ವಕ್ತವ್ಯಂ ಯದಿ ತೇ ಕಿಂಚಿತ್ತತ್ತ್ವಂ ಬ್ರೂಹಿ ನೃಪಾಯ ವೈ ॥೨೧॥ ಲಕ್ಷ್ಮಣಸ್ಯ ವಚಶ್ಶ್ರುತ್ವಾ ಸಾರಮೇಯೋಭ್ಯಭಾಷತ । ಸರ್ವಜ್ಞಸ್ಸರ್ವದರ್ಶೀ ಚ ರಾಮೋ ರಮಯತಾಂ ವರಃ ॥೨೨॥ ಸ ಸೋಮಸ್ಸ ಚ ಮೃತ್ಯುಶ್ಚ ಸ ಯಮೋ ಧನದಸ್ತಥಾ । ವಹ್ನಿಶ್ಶತಕ್ರತುಶ್ಚೈವ ಸೂರ್ಯೋ ವಾಯುರಪಾಂಪತಿಃ ॥೨೩॥ ತಸ್ಯ ತದ್ಬ್ರೂಹಿ ಸೌಮಿತ್ರೇ ಪ್ರಜಾಪಾಲಸ್ಯ ರಾಘವ । ಅನಾಜ್ಞಪ್ತಸ್ತು ಸೌಮಿತ್ರೇ ಪ್ರವೇಷ್ಟುಂ ನೋತ್ಸಹೇ ಸಭಾಮ್ ॥೨೪॥ ಆನೃಶಂಸ್ಯಾನ್ಮಹಾಭಾಗ ಪ್ರವೇಶಯ ಮಹಾಮತೇ । ನೃಪಾಲಯಂ ಪ್ರವಿಶ್ಯಾಥ ಲಕ್ಷ್ಮಣೋ ವಾಕ್ಯಮಬ್ರವೀತ್ ॥ ಶ್ರೂಯತಾಂ ಮಮ ವಿಜ್ಞಾಪ್ಯಂ ಕೌಸಲ್ಯಾನಂದವರ್ಧನ । ಯತ್ತ್ವಯೋಕ್ತಂ ಮಹಾಬಾಹೋ ಶಾಸನಂ ಕೃತವಾನಹಮ್ ॥೨೫॥

---

ಯಿಯು, ಅಭ್ಯಭಾಷತ–ಮಾತಾಡಿತು ॥೧೮॥ ಸರ್ವಭೂತಶರಣ್ಯಾಯ–ಸಮಸ್ತ ಭೂತಗಳಿಗೂ ರಕ್ಷಕನಾದ, ಅಕ್ಲಿಷ್ಟಕಾರಿಣೇ–ಕ್ಲೇಶವಿಲ್ಲದೇ ಕಾರ್ಯವಂ ಮಾಡುತ್ತಿರುವ, ಭಯೇಷು–ಭೀತಿಕಾಲಗಳಲ್ಲಿ, ಅಭಯದಾತ್ರೇಚ–ಅಭಯವನ್ನು, ಕೊಡುತ್ತಿರುವ, ತಸ್ಮೈರಾಮಾಯ–ಆ ಶ್ರೀ ರಾಮನಿಗೆ, ವಕ್ತುಂ–ಹೇಳುವದಕ್ಕೋಸ್ಕರ, ಸಮುತ್ಸಹೇ–ಉದ್ಯುಕ್ತನಾಗಿದ್ದೇನೆ ॥೧೯॥ ಲಕ್ಷ್ಮಣಃ–ಲಕ್ಷ್ಮಣಸ್ವಾಮಿಯು, ಸಾರಮೇಯಸ್ಯ–ನಾಯಿಯ, ಏತದ್ವಚನಂ–ಈ ಮಾತನ್ನು, ಶ್ರುತ್ವಾ–ಕೇಳಿ, ತದಾ–ಆ ಸಮಯದಲ್ಲಿ, ರಾಘವಾಯ–ಶ್ರೀರಾಮನಿಗೆ, ವಕ್ತುಂ–ಹೇಳುವದಕ್ಕೋಸ್ಕರ, ನೃಪಾಲಯಂ–ಅರಮನೆಯನ್ನು, ಪ್ರವಿವೇಶ–ಹೊಕ್ಕನು ॥೨೦॥ ರಾಮಾಯ–ಶ್ರೀರಾಮನಿಗೆ, ನಿವೇದ್ಯ–ತಿಳುಹಿಸಿ, ಪುನಃ–ಮತ್ತು, ನೃಪಾಲಯಾತ್–ಅರಮನೆಯ ದೆಸೆಯಿಂದ, ನಿರ್ಜಗಾಮ– ಹೊರಟನು, ತೇ–ನಿನಿಗೆ, ಕಿಂಚಿತ್–ಕೊಂಚವಾದರು, ವಕ್ತವ್ಯಂಯದಿ–ಹೇಳತಕ್ಕದ್ದು ಇದ್ದರೆ, ತತ್–ಅದನ್ನು, ನೃಪಾಯ–ಅರಸಿಗೆ, ತ್ವಂ–ನೀನು, ಬ್ರೂಹಿ–ಹೇಳು ॥ ಲಕ್ಷ್ಮಣಸ್ಯ–ಲಕ್ಷ್ಮಣನ, ವಚಃ–ಮಾತನ್ನು, ಶ್ರುತ್ವಾ–ಕೇಳಿ, ಸಾರಮೇಯಃ–ನಾಯಿಯು, ಅಭ್ಯಭಾಷತ–ನುಡಿಯಿತು, ರಮಯತಾಂ–ರಂಜನೆಮಾಡುವವರೊಳಗೆ, ವರಃ–ಉತ್ತಮನಾದ, ರಾಮಃ–ಶ್ರೀರಾಮನು, ಸರ್ವದರ್ಶೀಚ–ಸರ್ವವನ್ನೂ ಕಂಡೇಇದ್ದಾನೆ, ಸರ್ವಜ್ಞಃ – ಸಮಸ್ತವನ್ನು ತಿಳಿದಿದ್ದಾನೆ ॥೨೨॥ ಸಃ–ಆ ಶ್ರೀರಾಮನೆ, ಸೋಮಃ – ಚಂದ್ರನು, ಸಃ–ಆತನೆ, ಮೃತ್ಯುಃ–ಮೃತ್ಯುವು, ಯಮಃ–ಯಮನು, ತಥಾ–ಹಾಗೆಯೆ,ಸಃ–ಆತನೆ ಧನದಃ–ಕುಬೇರನು ಸಃ–ಆತನೆ, ವಹ್ನಿಃ–ಅಗ್ನಿಯು, ಶತಕ್ರತುಶ್ಚ – ದೇವೇಂದ್ರನೂ, ಸೂರ್ಯಶ್ಚ – ಸೂರ್ಯನೂ, ವಾಯುಃ–ವಾಯುವೂ, ಅಪಾಂಪತಿಃ– ವರುಣನೂ, (ಸಏವ–ಆತನೆ) ॥೨೩॥ ಹೆ ಸೌಮಿತ್ರೇ–ಎಲೈ ಸುಮಿತ್ರಾಪುತ್ರನೆ, ಪ್ರಜಾಪಾಲಸ್ಯ–ಪ್ರಜಾಪರಿಪಾಲಕನಾದ, ತಸ್ಯ–ಆ ಶ್ರೀರಾಮನಿಗೆ, ತ್ವಂ–ನೀನು, ಬ್ರೂಹಿ–ಹೇಳು, ಹೆ ರಾಘವ–ಎಲೈ ರಘುವಂಶೋತ್ಪನ್ನನೆ, ಹೆಸೌಮಿತ್ರೇ–ಎಲೈ ಲಕ್ಷ್ಮಣನೆ, ಅನಾಜ್ಞಪ್ತಃ–ಅಪ್ಪಣೆಯಿಲ್ಲದವನಾಗಿ, ಸಭಾಂ–ಸಭೆಯನ್ನು, ಪ್ರವೇಷ್ಟುಂ–ಪ್ರವೇಶಮಾಡುವದಕ್ಕೆ, ನೋತ್ಸಹೇ–ಉದ್ಯುಕ್ತನಾಗಲಾರೆನು, ಹೆ ಮಹಾಭಾಗ–ಎಲೈ ಪುಣ್ಯಶಾಲಿಯೇ, ಹೇ ಮಹಾಮತೇ– ಎಲೈ ಮಹಾ ಬುದ್ಧಿಶಾಲಿಯೆ, ಆನೃಶಂಸಾತ್–ಕ್ರೌರ್ಯಮಿಲ್ಲದೆ ಇರೋಣದ ದೆಸೆಯಿಂದ, ಪ್ರವೇಶಯ–ಪ್ರವೇಶಮಾಡಿಸು, ಅಥ–ಬಳಿಕ, ನೃಪಾಲಯಂ– ಅರಮನೆಯನ್ನು, ಪ್ರವಿಶ್ಯ–ಹೊಕ್ಕು, ಅಥ–ಬಳಿಕ, ಲಕ್ಷ್ಮಣಃ–ಲಕ್ಷ್ಮಣನು, ವಾಕ್ಯಂ–ಮಾತನ್ನು, ಅಬ್ರವೀತ್–ನುಡಿದನು, ಹೇ ಕೌಸಲ್ಯಾನಂದವರ್ಧನ– ಎಲೈ ಕೌಸಲ್ಯಾದೇವಿಗೆ ಆನಂದವನ್ನು ವೃದ್ಧಿಗೊಳಿಸುತ್ತಿರುವನೆ, ಮಮ–ನನ್ನ, ವಿಜ್ಞಾಪ್ಯಂ–ವಿಜ್ಞಾಪನೆಯ್ಯವಾದ ವಚನವು, ಶ್ರೂಯತಾಂ–ಕೇಳಲ್ಪಡಲಿ, ಹೆ ಮಹಾಬಾಹೋ–ಎಲೈ ಮಹಾ ಭುಜಪರಾಕ್ರಮಶಾಲಿಯೇ, ಯಾತ್–ಯಾವಮಾತು, ತ್ವಯಾ–ನಿನ್ನಿಂದ, ಉಕ್ತಂ–ಹೇಳಲ್ಪಟ್ಟಿತೊ, ತಚ್ಛಾಸನಂ–ಆ

---

ದೆಂತೆನೆ ॥೧೮॥ ಲೋಕಗಳಿಗೆಲ್ಲ ಸಂರಕ್ಷಕನಾಗಿಯೂ, ಕ್ಲೇಶವಿಲ್ಲದೆ ಕಾರ್ಯವಂ ಗೈಯುತ್ತಿರುವವನಾಗಿಯೂ, ಭಯಕಾಲಗಳಲ್ಲಿ ಅಭಯಪ್ರದನ್ನಿಯ್ಯುವವನಾಗಿಯೂ ಇರುವ ಆ ಶ್ರೀರಾಮನಿಗೆ ವಿಜ್ಞಾಪಿಸುವದಕ್ಕೋಸ್ಕರ ನಿಂತಿದ್ದೇನೆಂದು ನುಡಿದಂಥಾದಾಗಲು, ಆ ವಚನವಂ ಕೇಳಿ ಲಕ್ಷ್ಮಣನು ಶ್ರೀರಾಮನಿಗೆ ತಿಳಿಸುವದಕ್ಕೆ ಅರಮನೆಯಂ ಹೊಕ್ಕು, ಆ ವಾಕ್ಯವಂ ಬಿನ್ನವಿಸಿ, ಪುನಃ ಅಲ್ಲಿಂದ ಬಂದು, ಎಲೈ ನಾಯಿಯೆ ! ನೀನು ಯಾವಸಂಗತಿಯನ್ನಾದರು ಅರಿಕೆ ಮಾಡಬೇಕಾಗಿದ್ದರೆ ರಾಜಸಂನಿಧಾನದೊಳು ಹೇಳು ಎಂಬದಾಗಿ ನಿರೂಪಿಸಿದಂಥಾವನಾದನು ॥೨೧॥ ಆ ಸಾರಮೇಯನು ಲಕ್ಷ್ಮಣನಿಂದ ಹೇಳಲ್ಪಟ್ಟ ವಾಕ್ಯವಂಕೇಳಿ ಇಂತೆಂದು ನುಡಿದಂಥಾದ್ದಾಯಿತದೆಂತೆನೆ, ಸರ್ವಜ್ಞನಾಗಿಯೂ, ರಂಜನೆಯಂ ಗೈಯುವರೊಳಗೆ ಉತ್ತಮನಾಗಿಯೂ ಇರುವ ಶ್ರೀರಾಮನು ಸರ್ವವನ್ನು ತಿಳಿದೇಇದ್ದಾನೆ. ಮತ್ತು ಆ ರಘುನಂದನನೆ ಚಂದ್ರ, ಮೃತ್ಯು, ಯಮ, ಕುಬೇರ, ವಹ್ನಿ, ಇಂದ್ರ, ಸೂರ್ಯ, ವಾಯು, ವರುಣರರೂಪವಾಗಿ ಇರುವಂಥಾವನಾಗಿದ್ದಾನೆ, ಆದಕಾರಣ ಎಲೈ ಲಕ್ಷ್ಮಣನೆ ಆತನ ಆಜ್ಞೆಯಿಲ್ಲದೆ ನಾನು ಸಭಾಪ್ರವೇಶವಂ ಗೈಯಲು ಎನಗೆ ಇಷ್ಟವಿಲ್ಲ, ಎಲೈ ಮಹಾ ತಿಳುವಳಿಕೆಯುಳ್ಳವನೆ ! ನೀನು ಕುಪಿತನಾಗದೆ ನನ್ನನ್ನು ಪ್ರವೇಶ ಮಾಡಿಸುವಂಥಾವನಾಗೆಂದು ಪ್ರಾರ್ಥಿಸಲು, ಲಕ್ಷ್ಮಣನು ಅರಮನೆಯಂ ಪ್ರವೇಶಿಸಿ ಶ್ರೀರಾಮನಂ ಕುರಿತು, ಎಲೈ ಕೌಸಲ್ಯಾ ನಂದನನಾದ ಶ್ರೀರಾಮನೆ ! ಎನ್ನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ವಾವೈತಿಷ್ಠತಿಚದ್ವಾರಿಕಾರ್ಯಾರ್ಥೀಸಮುಪಾಗತಃ । ಲಕ್ಷ್ಮಣಸ್ಯವಚಃಶ್ರುತ್ವಾರಾಮೋವಚನಮಬ್ರವೀತ್ ॥೭॥ ತಂಪ್ರವೇಶಯಸೌಮಿತ್ರೇಕಾರ್ಯಾರ್ಥೀಯತ್ರತಿಷ್ಠತಿ। ರಾಮಸ್ಯಾಜ್ಞಾಮಭಿಶ್ರುತ್ಯಲಕ್ಷ್ಮಣಃಪರವೀರಹಾ ॥೮॥ ದ್ವಾರಸ್ಥಂವಿದಿತ್ವಾ ರಿಸ್ಥಿತಂಶ್ವಾನಂಲಕ್ಷ್ಮಣೋವಾಕ್ಯಮಬ್ರವೀತ್ । ಆಗಚ್ಛಸಾರಮೇಯತ್ವಂಬ್ರೂಹಿಯತ್ತೇವಿವಕ್ಷಿತಮ್ ॥೯॥ ಅಥಪಶ್ಯತ್ತ ಸಂತ್ರಸ್ತೋರಾಮಂಶ್ವಾಭಿನ್ನಮಸ್ತಕಃ । ತಂತುದೃಷ್ಟ್ವಾಸರಾಜಾನಂಭಯಂತ್ಯಕ್ತ್ವಾಬ್ರವೀದ್ವಚಃ ॥೧೦॥ ರಾಜೈವಕರ್ತಾಭೂತಾನಾಂರಾಜೈವಚವಿನಾಶಕಃ । ರಾಜಾಸುಪ್ತೇಷುಜಾಗರ್ತಿರಾಜಾಪಾಲಯತೇಪ್ರಜಾಃ ॥೧೧॥ ರಾಜನೀತ್ಯಾಂಸುನೀತಾಯಾಂಧರ್ಮಂರಕ್ಷಂತಿರಕ್ಷಿತಾಃ । ಯದ್ಯಾನಪಾಲಯೇದ್ರಾಜಾಧರ್ಮಂನಿಘ್ನಂತಿತೇಪ್ರಜಾಃ ॥೧೨॥ ರಾಜಾಕರ್ತಾಚ ಗೋಪ್ತಾಚಸರ್ವಸ್ಯಜಗತಃಪಿತಾ। ರಾಜಾಕಾರಯಿತಾಚೈವರಾಜಾಸರ್ವಮಿದಂಜಗತ್ ॥೧೩॥ ಧಾರಣಾದ್ಧರ್ಮಮಿತ್ಯಾಹು

---

ಆಜ್ಞೆಯನ್ನು, ಅಹಂ-ನಾನು, ಕೃತವಾನ್-ಮಾಡಿದನು, ಕಾರ್ಯಾರ್ಥೀ-ವ್ಯವಹಾರಾರ್ಥಿಯಾಗಿ, ಶ್ವಾನೆ-ನಾಯಿಯಾದರೆ, ಸಮುಪಾಗತಃ- ಬಂದದ್ದಾಗಿ, ದ್ವಾರಿ-ಬಾಗಿಲಿನಲ್ಲಿ, ತಿಷ್ಠತಿ-ಇದೆ ॥೬॥ ರಾಮಃ-ಶ್ರೀರಾಮನು, ಲಕ್ಷ್ಮಣಸ್ಯ-ಲಕ್ಷ್ಮಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಹೇ ಸೌಮಿತ್ರೇ- ಎಲೈ ಲಕ್ಷ್ಮಣನೆ, ಕಾರ್ಯಾರ್ಥೀ-ವ್ಯವಹಾರಾರ್ಥಿಯಾಗಿ, ಯತ್ರತಿಷ್ಠತಿ-ಎಲ್ಲಿಧೆಯೋ, ತಂ-ಆ ನಾಯಿಯನ್ನು, ಪ್ರವೇಶಯ-ಪ್ರವೇಶಮಾಡಿಸು, ಇತಿ-ಇಂತೆಂದು, ಅಬ್ರವೀತ್-ನುಡಿದನು ॥೭॥ ಪರವೀರಹಾ-ಶತ್ರುನಾಶಕನಾದ, ಲಕ್ಷ್ಮಣಃ-ಲಕ್ಷ್ಮಣನು, ರಾಮಸ್ಯ-ಶ್ರೀರಾಮನ, ಆಜ್ಞಾಂ-ಅಪ್ಪಣೆಯನ್ನು, ಅಭಿಶ್ರುತ್ಯ-ಕೇಳಿ, ದ್ವಾರಿ-ಬಾಗಿಲಿನಲ್ಲಿ, ಸ್ಥಿತಂ-ನಿಂತಿರುವ, ಶ್ವಾನಂ-ನಾಯಿಯನ್ನು ಕುರಿತು, ಲಕ್ಷ್ಮಣಃ-ಲಕ್ಷ್ಮಣನು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು, ಹೆ ಸಾರಮೇಯ-ಎಲೈ ನಾಯಿಯೆ, ಆಗಚ್ಛ-ಬಾ, ತೇ-ನಿನ್ನ, ವಿವಕ್ಷಿತಂ-ಹೇಳತಕ್ಕದ್ದು, ಯತ್- ಯಾವದೋ, ತತ್- ಅದನ್ನು, ಬ್ರೂಹಿ-ಹೇಳು ॥೮॥ ಅಥ-ಬಳಿಕ, ಸಂತ್ರಸ್ತಃ-ಅಂಜಿದಂಥಾದ್ದಾಗಿ, ಭಿನ್ನಮಸ್ತಕಃ-ಭಿನ್ನ-ಭೇದಿಸಲ್ಪಟ್ಟ, ಮಸ್ತಕಃ-ಶಿರಸ್ಸುಳ್ಳ,ಶ್ವಾ-ನಾಯಿಯು, ರಾಮಂತು, ಶ್ರೀರಾಮನನ್ನಾದರೆ, ಅಪಶ್ಯತ್-ಕಂಡಂಥಾದ್ದಾಯಿತು ॥೯॥ ಸಃ-ಆ ನಾಯಿಯು, ರಾಜಾನಂ-ಒಡೆಯನಾದ, ತಂ- ಆ ಶ್ರೀರಾಮನನ್ನು, ದೃಷ್ಟ್ವಾ-ಕಂಡು, ಭಯಂ-ಭೀತಿಯನ್ನು, ತ್ಯಕ್ತ್ವಾ-ಬಿಟ್ಟು, ವಚಃ-ಮಾತನ್ನು, ಅಬ್ರವೀತ್-ನುಡಿಯಿತು॥೧೦॥ ರಾಜೈವ-ಅರಸೆ, ಭೂತಾನಾಂ-ಭೂತಗಳಿಗೆ, ಕರ್ತಾ-ಸೃಷ್ಟಿಕರ್ತನು, ರಾಜೈವಚ-ರಾಜನೆ, ವಿನಾಶಕಃ-ನಾಶವನ್ನು ಮಾಡುವನು, ರಾಜಾ-ಅರಸು, ಸುಪ್ತೇಷು-ಮಲಗಿರುವ ವೇಳೆಗಳಲ್ಲಿ, ಜಾಗರ್ತಿ-ಕಾಯುತ್ತಾನೆ, ರಾಜಾ-ಅರಸೆ, ಪ್ರಜಾಃ-ಪ್ರಜೆಗಳನ್ನು, ಪಾಲಯತೇ-ಪರಿಪಾಲಿಸುತ್ತಾನೆ ॥೧೧॥ ರಾಜನೀತ್ಯಾಂ- ರಾಜನೀತಿಯು, ಸುನೀತಾಯಾಂ-ಚನ್ನಾಗಿ ಶಿಕ್ಷಿಸಲ್ಪಡುತ್ತಿರಲೀಕಾಗಿ, ರಕ್ಷಿತಾಃ-ಪರಿಪಾಲಿತರಾದ ಜನಗಳು, ಧರ್ಮಂ-ಧರ್ಮವನ್ನು, ರಕ್ಷಂತಿ-ಕಾಯುವರುವ ರಾಜಾ-ಅರಸು, ಯದಾ-ಯಾವ ಕಾಲದಲ್ಲಿ, ನಪಾಲಯೇತ್-ರಕ್ಷಿಸುವದಿಲ್ಲವೋ, ತದಾ-ಆ ವೇಳೆಯಲ್ಲಿ, ಪ್ರಜಾಃ-ಪ್ರಜೆಗಳು, ಧರ್ಮಂ-ಧರ್ಮವನ್ನು, ನಿಘ್ನಂತಿ-ಭಂಗಪಡಿಸುತ್ತಾರೆ ॥೧೨॥ ರಾಜಾ-ಅರಸು, ಸರ್ವಸ್ಯ-ಸಮಸ್ತವಾದ, ಜಗತಃ-ಜಗತ್ತಿಗೆ, ಕರ್ತಾ-ಕರ್ತನು, ಗೋಪ್ತಾಚ- ಸಂರಕ್ಷಿಸುವನೂ, ಪಿತಾಚ-ತಂದೆಯೂನು, ರಾಜಾ-ಅರಸೆ, ಕಾರಯಿತಾಚೈವ-ಧರ್ಮವನ್ನೂ ಮಾಡಿಸುವನು, ರಾಜಾ-ಅರಸೇ, ಇದಂ-ಈಪರಿ ದೃಶ್ಯಮಾನದ, ಜಗತ್-ಲೋಕವು ॥೧೩॥ ಧಾರಣಾತ್-ಎಲ್ಲರು ಧರಿಸೋಣದರಿಂದ ಧರ್ಮಮಿತಿ-ಧರ್ಮವೆಂದು, ಆಹುಃ-ಹೇಳುತ್ತಾರೆ, ಧರ್ಮೇಣ-ಧರ್ಮದಿಂದ, ಪ್ರಜಾಃ-ಪ್ರಜೆಗಳು, ವಿಧೃತಾಃ-ಧರಿಸಲ್ಪಟ್ಟರು, ಯಸ್ಮಾತ್-ಯಾವಕಾರಣದ ದೆಸೆಯಿಂದ, ಧರ್ಮಃ-ಧರ್ಮವು, ಸಚರಾಚರಂ- ಚರಾಚರಗಳಿಂದೊಡಗೂಡಿದ, ತ್ರೈ

---

ವಿಜ್ಞಾಪನೆಯಂ ಲಾಲಿಸು, ತಮ್ಮ ಅಪ್ಪಣೆಯಂತೆ ಮಾಡಿಧೇನೆ, ನಾಯಿಯಾದರೆ ಕಾರ್ಯಾರ್ಥಿಯಾಗಿ ದ್ವಾರದಲ್ಲಿಯೇ ನಿಂತಿಧೆಂದು ಬಿನ್ನವಿಸಿದವನಾಗಲೂ,ಆ ವಾಕ್ಯವಂ ಕೇಳಿ ರಘುನಂದನನು, ಎಲೈ ಲಕ್ಷ್ಮಣನೆ ಆಶುನಕನು ಎಲ್ಲಿರುವದೊ ಆದಂ ತ್ವರಿತಮಾಗಿ ಕರೆಯಿಸೆಂದು ನುಡಿದವನಾದನು ಶತ್ರುಸಂಹಾರಕನಾದ ಲಕ್ಷ್ಮಣನು ರಾಮನ ಆಜ್ಞಾವಚನವಂಕೇಳಿ, ಬಾಗಿಲಿನ ಬಳಿಯಲ್ಲಿರುವ ಆನಾಯಿಯಸಮೀಪಕ್ಕೆ ಪೋಗಿ,ಎಲೈ ಶುನಕವೆ ಬಾ, ನೀನು ಯಾವವಿಷಯವಂ ಪೇಳಬೇಕೆಂದು ಬಂದಿದ್ಧೀಯೋ ಆದಂನು ತಿಳುಹಿಸೆಂದು ನುಡಿದಂಥಾವನಾದನು ॥೮॥ ಬಳಿಕ ಒಡೆದುಹೋದ ಮಂಡೆಯುಳ್ಳ ಆ ನಾಯಿಯು ಶ್ರೀರಾಮನಂ ಕಂಡು ಹೆದರಿದಂಥಾದ್ದಾದರೂ ಕೂಡಾ, ಭೀತಿಯಂತೊರೆದು ಈ ಪರಿಅರಿಕೆಯಂ ಮಾಡಿದಂಥಾದ್ದಾಯಿತು ॥೧೦॥ ಎಲೈ ಮಹಾರಾಜನೇ! ಸರ್ವಪ್ರಾಣಿಗಳಿಗೂ ರಾಜನೆ ಕರ್ತನು, ನಾಶವಂಗೈಯುವನು ಸಹ ರಾಜನೆ, ಎಲ್ಲರುನಿದ್ರಿಸುವ ವೇಳೆಯೊಳು ರಾಜನೇ ಜಾಗರೂಕನಾಗಿ ಪರಿಪಾಲಿಸುತ್ತಾನೆ ॥೧೧॥ ರಾಜನೀತಿಯು ಚನ್ನಾಗಿ ಶಿಕ್ಷಿಸಲ್ಪಡಲೂ, ಪರಿಪಾಲಿತರಾದ ಜನರೆಲ್ಲರು ಧರ್ಮವಂ ಕಾಯುತ್ತಿರುವರು, ಅರಸಾದವನು ಯಾವಾಗ ಚನ್ನಾಗಿ ಪಾಲಿಸುವದಿಲ್ಲವೋ, ಆಗ ಪ್ರಜೆರೆಲ್ಲರು ಧರ್ಮಹಾನಿಯಂ ಗೈಯುವರು ॥೧೨॥ ರಾಜನೇ ಎಲ್ಲಾ ವಿಷಯುಗಳಿಗೂ ಕರ್ತನು, ಸಂರಕ್ಷಕನು, ಜಗಕ್ಕೆಲ್ಲ ಜನಕನೋ ಪಾದಿಯಲ್ಲಿರುವನು ಎಲ್ಲಾ ವಿಷಯುಗಳನ್ನೂ ಮಾಡಿಸುವನು, ಈ ಜಗತ್ತೆಲ್ಲ ರಾಜಸ್ವರೂಪವಾಗಿರುವದು, ಯಾವ ಹೇತುವಿನಿಂದ ಚರಾಚರಾತ್ಮಕವಾದ ಈ ಪ್ರಪಂಚವನ್ನೆಲ್ಲ ಧರ್ಮವು ಧರಿಸಿದಂಥಾದ್ದಾಗಿಧೆಯೋ, ಆಧರಿಸೋಣದರಿಂದ ಧರ್ಮವೆಂಬದಾಗಿ ಪೆಸರುಂಟಾಯಿತು, ಅಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಧರ್ಮೇಣವಿಧೃತಾಃಪ್ರಜಾಃ । ಯಸ್ಮಾದ್ಧಾರಯತೇಧರ್ಮಃತ್ರೈಲೋಕ್ಯಂಸಚರಾಚರಮ್ ॥೩೪॥ ಧಾರಣಾದ್ವಾದಿಶಾಂ ಚೈವಧರ್ಮೇಣಾರಂಜಯತ್ಪ್ರಜಾಃ।ತಸ್ಮಾದ್ಧಾರಣಇತ್ಯುಕ್ತಸ್ಸಧರ್ಮ ಇತಿನಿಶ್ಚಯಃ॥೩೫॥ಏಷರಾಮಪರೋಧರ್ಮೋ ರಕ್ಷಣಾತ್ಪ್ರೇತ್ಯಚೇಹಚ । ತ್ವಂಪ್ರಮಾಣಂಪ್ರಮಾಣಾನಾಂಭಾಸಿರಾಘವಸುವ್ರತ ॥೩೬॥ ವಿದಿತಶ್ಚೈವತೇಧರ್ಮಸ್ಸದ್ಭಿರಾಚರಿತಶ್ಚ ವೈ । ಧರ್ಮಾಣಾಂಪರಮೋಧರ್ಮೋ ಗುಣಾನಾಂಸಾಗರೋಪಮಃ । ಅಜ್ಞಾನಾತ್ತುಮಯಾರಾಜ ಉಕ್ತಸ್ತ್ವಂರಾಜಸತ್ತಮ।ಪ್ರಸಾದಯಾಮಿಶಿರಸಾನತ್ವಂಕ್ರೋದ್ಧುಮಿಹಾರ್ಹಸಿ ॥೩೭॥ ಶುನಸ್ತುವಚನಂಶ್ರುತ್ವಾರಾಘವೋವಾಕ್ಯಮಬ್ರವೀತ್। ಕಿಂತೇವಾಕ್ಯಂಕರೋಮ್ಯದ್ಯವಿಸ್ರಬ್ಧಂಬ್ರೂಹಿಮಾಚಿರಮ್ ॥೩೯॥ ರಾಮಸ್ಯವಚನಂಶ್ರುತ್ವಾಸಾರಮೇಯೋಬ್ರವೀದಿದಮ್। ಧರ್ಮೇಣರಾಷ್ಟ್ರಂವಿಂದೇತಧರ್ಮೇಣೈವಾನುಪಾಲಯೇತ್ ॥೪೦॥ ಧರ್ಮಾಚ್ಛರಣ್ಯತಾಂಯಾತಿರಾಜಾಸರ್ವಭಯಾಪಹಃ । ಇದಂತುವಿಜ್ಞಾಪ್ಯಮೇತಚ್ಛ್ರೂಯತಾಂಮಮರಾಘವ ॥೪೧॥ ಭಿಕ್ಷುಸ್ಸರ್ವಾರ್ಥಸಿದ್ಧೋಯಃಬ್ರಾಹ್ಮಣಾವಸಥೇವಸ । ತೇನದ

---

ಲೋಕ್ಯಂ-ಲೋಕತ್ರಯವನ್ನು, ಧಾರಯತೆ-ಧರಿಸಿವೆ ॥೩೪॥ ದಿಶಾಂ-ದಿಕ್ಕುಗಳ, ಧಾರಣಾದ್ವಾ-ಧರಿಸೋಣದರ ದೆಶೆಯಿಂದಲಾದರೂ, ಧರ್ಮೇಣ-ಧರ್ಮದಿಂದ, ಪ್ರಜಾಃ-ಜನಗಳನ್ನು, ಅರಂಜಯತ್-ರಂಜನೆಯಂಗೈಯುವನು, ತಸ್ಮಾತ್-ಆ ಕಾರಣದ ದೆಶೆಯಿಂದ, ಧಾರಣಇತಿ-ಧಾರಣವೆಂದು, ಸಧರ್ಮಃ-ಆ ಧರ್ಮವು, ಉಕ್ತಃ-ಹೇಳಲ್ಪಡುತ್ತೆ, ಇತಿ-ಇಂತೆಂದು, ನಿಶ್ಚಯಃ-ಶಾಸ್ತ್ರನಿಶ್ಚಯವು ॥೩೫॥ ಹೆ ರಾಮ-ಎಲೈ ಶ್ರೀರಾಮನೆ, ರಕ್ಷಣಾತ್- ಜನಸಂರಕ್ಷಣೆಯದೆಶೆಯಿಂದ, ಪ್ರೇತ್ಯಚ-ಪರಲೋಕದಲ್ಲಿಯೂ, ಇಹಚ-ಇಹಲೋಕದಲ್ಲಿಯೂ, ಏಷಧರ್ಮಃ-ಈಧರ್ಮವು, ಪರಃ-ಉತ್ತಮವಾದದ್ದು, ಹೆ ರಾಘವ-ಎಲೈ ಶ್ರೀರಾಮನೆ, ಹೆಸುವ್ರತ-ಎಲೈ ಒಳ್ಳೇ ನಿಯಮವುಳ್ಳವನೆ, ಪ್ರಮಾಣಾನಾಂ-ಪ್ರಮಾಣಗಳೊಳಗೆ, ತ್ವಂ-ನೀನು, ಪ್ರಮಾಣಂ-ಪ್ರಮಾಣವಾಗಿ, ಭಾಸಿ-ಹೊಳೆಯುತಿದ್ದೀ॥೩೬॥ತೆ-ನಿನಗೆ, ಸದ್ಭಿಃ-ಸತ್ಪುರುಷರಿಂದ, ಆಚರಿತಃ-ಆದರಿಸಲ್ಪಟ್ಟ, ಧರ್ಮಃ-ಧರ್ಮವು, ವಿದಿತಏವ-ತಿಳಿದೆಇದೆ, ತ್ವಂ-ನೀನು, ಧರ್ಮಾಣಾಂ-ಧರ್ಮಗಳೊಳಗೆ, ಪರಮೋಧರ್ಮಃ-ಮಹಾಧರ್ಮಸ್ವರೂಪನು, ಗುಣಾನಾಂ-ಸೌಶೀಲ್ಯಾದಿಗುಣಗಳಿಗೆ, ಸಾಗರೋಪಮಃ - ಸಮುದ್ರಪ್ರಾಯನು, ॥೩೭॥ ಹೆರಾಜನ್-ಎಲೈರಾಜನೆ, ಹೆರಾಜಸತ್ತಮ-ಎಲೈರಾಜಶ್ರೇಷ್ಠನೆ, ಅಜ್ಞಾನಾತ್-ಅಜ್ಞಾನದದೆಶೆಯಿಂದ, ತ್ವಂ-ನೀನು, ಮಯಾ - ನನ್ನಿಂದ, ಉಕ್ತಃ-ಹೇಳಲ್ಪಟ್ಟೆ, ಶಿರಸಾ-ಶಿರಸ್ಸಿನಿಂದ, ತ್ವಾಂ-ನಿನ್ನನ್ನು, ಪ್ರಸಾದಯಾಮಿ-ಪ್ರಸನ್ನನಾಗಿ ಮಾಡಿಕೊಳ್ಳುತ್ತೇನೆ (ಅಂದರೆ ಕೇಳಿಕೊಳ್ಳುತ್ತೇನೆ) ತ್ವಂ-ನೀನು, ಕ್ರೋದ್ಧುಂ-ಕೋಪಮಾಡುವದಕ್ಕೋಸ್ಕರ, ಇಹ-ಈಗ, ನಾರ್ಹಸಿ-ಯೋಗ್ಯನಾಗಬೇಡ ॥೩೮॥ ರಾಘವಃ-ಶ್ರೀರಾಮನು, ಶುನಃ-ನಾಯಿಯ, ವಚನಂ-ಮಾತನ್ನು, ಶ್ರುತ್ವಾ- ಕೇಳಿ, ವಾಕ್ಯಂ-ಮಾತನ್ನು,ಅಬ್ರವೀತ್- ನುಡಿದನು, ತೆ-ನಿನಗೆ,ಕಾರ್ಯಂ-ಕಾರ್ಯವು. ಕಿಂ-ಏನು, ಅದ್ಯ-ಈಗ, ವಿಸ್ರಬ್ಧಂ-ನಂಬಿಕೆಯಾಗಿ, ಬ್ರೂಹಿ-ಹೇಳು, ಮಾಚಿರಂ - ಸಾವಕಾಶಂಗೈಯಬೇಡ, ಕರೋಮಿ-ಮಾಡುವೆನು, ॥ ೩೯ ॥ ರಾಮಸ್ಯ-ಶ್ರೀರಾಮನ, ವಚನಂ-ಮಾತನ್ನು, ಶ್ರುತ್ವಾ - ಕೇಳಿ, ಸಾರಮೇಯಃ-ನಾಯಿಯು, ಇದಂ-ಈಮಾತನ್ನು, ಅಬ್ರವೀತ್ - ನುಡೀತು, ಸರ್ವಭಯಾಪಹಃ - ಸರ್ವ-ಸಮಸ್ತರಾದಜನಗಳ, ಭಯಾಪಹಃ-ಭೀತಿನಾಶಕನಾದ, ರಾಜಾ-ಅರಸು, ಧರ್ಮೇಣ-ಧರ್ಮದಿಂದ, ರಾಷ್ಟ್ರಂ - ದೇಶವನ್ನು, ವಿಂದೇತ-ಹೊಂದುವನು, ಧರ್ಮೇಣೈವ-ಧರ್ಮದಿಂದಲೆ, ಅನುಪಾಲಯೇತ್-ಪರಿಪಾಲಿಸಬೇಕು, ಧರ್ಮಾತ್ - ಧರ್ಮದದೆಶೆಯಿಂದಲೆ, ಶರಣ್ಯತಾಂ - ಸಂರಕ್ಷಣಕರ್ತೃತ್ವವನ್ನು, ಯಾತಿ-ಹೊಂದುತ್ತಾನೆ, ಹೇರಾಘವ - ಎಲೈಶ್ರೀರಾಮನೆ, ಅತಃ - ಈ ಕಾರಣದದೆಶೆಯಿಂದ, ಮಮ - ನನ್ನ, ಇದಂವಿಜ್ಞಾಪ್ಯಂತು- ಈ ವಿಜ್ಞಾಪನೀಯ್ಯಾಂಶವಾದರೆ, ಶ್ರೂಯತಾಂ-ಕೇಳಲ್ಪಡಲಿ ॥ ೪೧ ॥ ಸರ್ವಾರ್ಥಸಿದ್ಧಃ-ಸರ್ವಾರ್ಥಸಿದ್ಧನೆಂಬ, ಭಿಕ್ಷುಃ-ಸನ್ಯಾಸಿಯು, ಬ್ರಾಹ್ಮಣಾವಸಥೇಷು-

---

ಥಾ ಧರ್ಮದಿಂದ ಪ್ರಜೆಗಳೆಲ್ಲರು ಧರಿಸಲ್ಪಡುತ್ತಾರೆ, ಅಥವಾ ದಿಕ್ಕುಗಳನ್ನೆಲ್ಲ ಧರಿಸೋಣದರಿಂದ ಧರ್ಮವೆಂದು ಪ್ರಸಿದ್ಧಿಯುಂಟಾಯಿತು. ಅಂಥಾ ಧರ್ಮದಿಂದ ರಾಜನಾದವನು ಪ್ರಜೆಗಳನ್ನು ರಂಜಿಸುವಂಥಾವನಾಗುವನು, ಆಕಾರಣದ ದೆಶೆಯಿಂದ ಧರ್ಮವು ಧಾರಣವೆಂದು ಹೇಳಲ್ಪಡುವದೆಂದು ಶಾಸ್ತ್ರನಿಶ್ಚಯವಿರುವದು ಎಲೈ ಮಹಾ ನಿಯಮವಂತನಾದ ಶ್ರೀರಾಮನೆ ! ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಕೂಡಾ ಈ ಧರ್ಮವೆ ಮುಖ್ಯವಾಗಿರುವದು, ಎಲೈ ರಘುಕುಲಾ ನಂದಕರನೆ ! ಈ ಪ್ರಮಾಣಗಳಿಗೆಲ್ಲ ನೀನೇಪ್ರಮಾಣವಾಗಿದ್ದೀ,ಸತ್ಪುರುಷರಿಂದಾ ಚರಿಸಲ್ಪಟ್ಟ ಧರ್ಮವು ನಿನಿಗೆ ತಿಳಿದೆ ಇಧೆಯಷ್ಟೆ, ನೀನು ಧರ್ಮಗಳೊಳಗೆ ಉತ್ತಮ ಧರ್ಮರೂಪವಾಗಿಯೂ, ಗುಣಗಳೊಳಗೆ ಸಮುದ್ರಪ್ರಾಯನಾಗಿಯೂ ಇದ್ದೀ॥೩೭॥ ಎಲೈರಾಜೋತ್ತಮನಾದ ಶ್ರೀರಾಮನೆ! ನಾನು ಅಜ್ಞಾನದಿಂದೀಪರಿ ಹೇಳಿದನು. ಈ ವಿಷಯದಲ್ಲಿ ಕೋಪವಂ ಗೈಯಬೇಡೆಂದು ಬೇಡಿಕೊಳ್ಳುತ್ತೇನೆಂದು ನುಡಿಯುತ್ತಿರುವ ಆ ಶುನಕನವಾಕ್ಯವಂಕೇಳಿ ಶ್ರೀರಾಮನಿಂತೆಂದನು, ಎಲೈಸಾರಮೇಯುವೆ ! ಈಗನಾನು ನಿನಗೆ ಯಾವಕಾರ್ಯವಂ ಮಾಡಿಕೊಡಲಿ ಜಾಗ್ರತೆಯಾಗಿ ಹೇಳು, ಎಂಬದಾಗಿ ನಿರೂಪಿಸಲು, ಆ ಶುನಕವು ಶ್ರೀರಾಮನಂ ಕುರಿತು ಎಲೈ ರಘುನಂದನನೆ ! ಅರಸಾದವನು ಧರ್ಮದಿಂದ ರಾಷ್ಟ್ರವಂಪಡೆಯಬೇಕು. ಮತ್ತು ಧರ್ಮದದೆಶೆಯಿಂದಲೆರಕ್ಷಣ ಕರ್ತೃತ್ವವಂ ಪೊಂದುವನು. ಈ ಹೇತುವಿನಿಂದ ನನ್ನ ವಿಜ್ಞಾಪನೀಯ್ಯಾಂಶವು ಯಾವದೊ ಅದಂ ಬಿನ್ನವಿಸುವೆನುಕೇಳು. ॥೪೧॥ ಬ್ರಾಂಹಣರಮನೆಗಳಲ್ಲಿ ವಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ತಃ ಪ್ರಹರೋ ಮೇ ನಿಷ್ಕಾರಣಮನಾಗಸೇ ||೪೦|| ಏತಚ್ಛ್ರುತ್ವಾ ತು ರಾಮೇಣ ದ್ವಾಸ್ಥಸ್ಸಂಪ್ರೇಷಿತಸ್ತದಾ । ಆನೀತಶ್ಚ ದ್ವಿಜಸ್ತೇನ ಸರ್ವಸಿದ್ಧಾರ್ಥಕೋವಿದಃ ||೪೩|| ಅಥ ದ್ವಿಜರ್ಷಭಸ್ತತ್ರ ರಾಮಂ ದೃಷ್ಟ್ವಾ ಮಹಾದ್ಯುತಿಃ । ಕಿಂ ತೇ ರಾಮ ಮಯಾ ಕಾರ್ಯಂ ತದ್ಬ್ರೂಹಿ ತ್ವಮನಾನಘ ||೪೪|| ಏವಮುಕ್ತಸ್ತು ವಿಪ್ರೇಣ ರಾಮೋ ವಚನಮಬ್ರವೀತ್ । ತ್ವಯಾ ದತ್ತಃ ಪ್ರಹರೋಽಯಂ ಸಾರಮೇಯಸ್ಯ ವೈ ದ್ವಿಜ ||೪೫|| ಕಿಂ ನಾಮಾಪಕೃತಂ ವಿಪ್ರ ದಂಡೇನಾಭಿಹತೋ ಯತಃ ||೪೬|| ಕ್ರೋಧಃ ಪ್ರಾಣಹರಶ್ಶತ್ರುಃ ಕ್ರೋಧಃ ಕಾರ್ಯಹರೋ ರಿಪುಃ । ಕ್ರೋಧೋ ಹ್ಯಸಿರ್ಮಹಾತೀಕ್ಷ್ಣಃ ಸರ್ವಂ ಕ್ರೋಧೋಽಪಕರ್ಷತಿ ||೪೭|| ತಪತೇ ಜಪತೇ ವಾಪಿ ಯಸ್ತು ದಾನಂ ಪ್ರಯಚ್ಛತಿ । ಕ್ರೋಧಸ್ತು ಸರ್ವಂ ದಹತಿ ತಸ್ಮಾತ್ಕ್ರೋಧಂ ವಿಸರ್ಜಯೇತ್ ||೪೮|| ಇಂದ್ರಿಯಾಣಾಂ ಪ್ರಹೃಷ್ಟಾನಾಂ ಹಯಾನಾಮಿವ ಧಾವತಾಮ್ । ಕುರ್ವೀತ ಧೃತ್ಯಾ ಸಾರಥ್ಯಂ ಸಂಗೃಹ್ಯೇಂದ್ರಿಯಗೋಚರಮ್ ||೪೯|| ಕರ್ಮಣಾ ಮ

---

ಬ್ರಾಹ್ಮಣರ ಮನೆಗಳಲ್ಲಿ, ವರ್ತ-ಇರುತಿರುವವನು, ಯಃ-ಯಾವನೋ, ತೇನ-ಆ ಸನ್ಯಾಸಿಯಿಂದ, ಅನಾಗಸೇ-ನಿರಪರಾಧಿಯಾದ, ಮೇ-ನನಗೆ, ನಿಷ್ಕಾರಣಂ-ಕಾರಣವಿಲ್ಲದೆ, ಪ್ರಹಾರಃ-ಪ್ರಹಾರವು, ದತ್ತಃ-ಕೊಡಲ್ಪಟ್ಟಿತು ||೪೦|| ಏತತ್-ಇದನ್ನು, ಶ್ರುತ್ವಾ-ಕೇಳಿ, ರಾಮೇಣ-ಶ್ರೀರಾಮನಿಂದ, ದ್ವಾಸ್ಥಃ-ದ್ವಾರಪಾಲಕನು, ಸಂಪ್ರೇಷಿತಃ-ಕಳುಹಿಸಲ್ಪಟ್ಟನು, ತೇನ-ಆ ದ್ವಾರಪಾಲಕನಿಂದ, ಸರ್ವಸಿದ್ಧಾರ್ಥಕೋವಿದಃ-ಸರ್ವ-ಸಮಸ್ತರಾದ, ಸಿದ್ಧಾರ್ಥ-ನಿಷ್ಪನ್ನಪ್ರಯೋಜನವುಳ್ಳವರಲ್ಲಿ, ಕೋವಿದಃ-ಸಮರ್ಥನಾದ, ದ್ವಿಜಶ್ಚ-ಬ್ರಾಹ್ಮಣನೂ ಸಹ, ಆನೀತಃ-ಕರೆಯಿಸಲ್ಪಟ್ಟನು ||೪೩|| ಅಥ-ಬಳಿಕ, ತತ್ರ-ಆ ಅರಮನೆಯಲ್ಲಿ, ಮಹಾದ್ಯುತಿಃ-ಮಹಾ ತೇಜೋವಂತನಾದ, ದ್ವಿಜರ್ಷಭಃ-ಬ್ರಾಹ್ಮಣಶ್ರೇಷ್ಠನು, ರಾಮಂ-ಶ್ರೀರಾಮನನ್ನು, ದೃಷ್ಟ್ವಾ-ಕಂಡು, ಹೇ ರಾಮ-ಎಲೈ ಶ್ರೀರಾಮನೆ, ಮಯಾ-ನನ್ನಿಂದ, ತೇ-ನಿನಗೆ, ಕಿಂಕಾರ್ಯಂ-ಯೇನುಕಾರ್ಯವು, ಹೇ ಅನಘ-ಎಲೈ ನಿರ್ದೋಷಿಯೆ, ತತ್-ಅದನ್ನು, ಮಮ-ನನಗೆ, ತ್ವಂ-ನೀನು. ಬ್ರೂಹಿ-ಹೇಳು ||೪೪|| ಏವಂ-ಈಪರಿಯಾಗಿ, ವಿಪ್ರೇಣ-ಬ್ರಾಹ್ಮಣನಿಂದ, ಉಕ್ತಃ-ಹೇಳಲ್ಪಟ್ಟ, ರಾಮಃ-ಶ್ರೀರಾಮನು, ವಚನಂ-ಮಾತನ್ನು, ಅಬ್ರವೀತ್-ನುಡಿದನು, ಹೇ ದ್ವಿಜ-ಎಲೈ ಬ್ರಾಹ್ಮಣನೆ, ತ್ವಯಾ-ನಿನ್ನಿಂದ, ಸಾರಮೇಯಸ್ಯ-ನಾಯಿಗೆ, ಅಯಂಪ್ರಹಾರಃ-ಈ ಪ್ರಹಾರವು, ದತ್ತಃ- ಕೊಡಲ್ಪಟ್ಟಿತು, ಹೇ ವಿಪ್ರ-ಎಲೈ ಬ್ರಾಹ್ಮಣನೆ, ತೇನ- ಆ ನಾಯಿಯಿಂದ, ಕಿಂನಾಮಅಪಕೃತಂ-ಏನಪಕಾರವು ಮಾಡಲ್ಪಟ್ಟಿತು, ದಂಡೇನ-ದಂಡದಿಂದ, ಯತಃ-ಯಾವಕಾರಣದ ದೆಸೆಯಿಂದ, ಅಭಿಹತಃ-ಹೊಡೆಯಲ್ಪಟ್ಟಿತೋ, ತತ್-ಅದನ್ನು, ಬ್ರೂಹಿ-ಹೇಳು ||೪೬|| ಕ್ರೋಧಃ-ಕೋಪವು, ಪ್ರಾಣಹರಃ- ಪ್ರಾಣಾಪಹಾರಿಯಾದ, ಶತ್ರುಃ-ವಿರೋಧಿಯು, ಕ್ರೋಧಃ-ರೋಷವು, ಕಾರ್ಯಹರಃ-ಕಾರ್ಯಘಾತಿಯಾದ, ರಿಪುಃ - ಶತೃವು, ಕ್ರೋಧಃ - ಕೋಪವೆಂಬ, ಅಸಿಃ- ಖಡ್ಗವು, ಮಹಾತೀಕ್ಷ್ಣಃ-ಬಹಳ ಹದವುಳ್ಳದ್ದು, ಕ್ರೋಧಃ-ಕ್ರೋಧವು, ಸರ್ವಂ-ಸಮಸ್ತವನ್ನು, ಅಪಕರ್ಷತಿ-ಕಳೆಯುತ್ತಿಧೆ ||೪೭|| ಯಸ್ತು-ಯಾವಪುರುಷನಾದರೆ, ತಪತೇ-ತಪಸ್ಸು ಮಾಡುವನೊ, ಜಪತೇ - ಜಪವಂಗೈಯ್ಯುವನೋ, ದಾನಂವಾ-ದಾನವನ್ನಾದರೂ, ಪ್ರಯಚ್ಛತಿ-ಕೊಡುವನೋ, ತತ್ಸರ್ವಂ-ಅದನ್ನೆಲ್ಲ, ಕ್ರೋಧಃ-ಕೋಪವು, ದಹತಿ-ದಹಿಸುತ್ತದೆ, ತಸ್ಮಾತ್-ಆ ಕಾರಣದ ದೆಸೆಯಿಂದ, ಕ್ರೋಧಂ-ಕೋಪವನ್ನು, ವಿಸರ್ಜಯೇತ್-ಬಿಡಬೇಕು ||೪೮|| ಪ್ರಹೃಷ್ಟಾನಾಂ-ಸಂತುಷ್ಟವಾದ, ಹಯಾನಾಮಿವ-ಕುದುರೆಗಳಂತೆ, ಧಾವತಾಂ-ಓಡಿಹೋಗುತ್ತಿರುವ, ಇಂದ್ರಿಯಾಣಾಂ- ಇಂದ್ರಿಯಗಳಿಗೆ, ಇಂದ್ರಿಯಗೋಚರಂ-ಚಕ್ಷುರಾದೀಂದ್ರಿಯಗಳಿಗೆ ಗೋಚರವಾದ ಪದಾರ್ಥವನ್ನು, ಸಂಗೃಹ್ಯ-ತೋರಿಸಿ, ಧೃತ್ಯಾ-ಧೈರ್ಯದಿಂದ, ಸಾರಥ್ಯಂ-ಸಾರಥ್ಯವನ್ನು, ಕುರ್ವೀತ-ಮಾಡಬೇಕು ||೪೯|| ಚರತಿ-ಸಂಚರಿಸುತ್ತಿರುವ, ಲೋಕಸ್ಯ-ಜನಕ್ಕೆ, ಕರ್ಮಣಾ-ಕರ್ಮದಿಂದಲೂ, ಮನಸಾ- ಮನದಿಂದಲೂ, ವಾಚಾ-ವಾಕ್ಕಿನಿಂದಲೂ, ಚಕ್ಷುಷಾ-ಕಣ್ಣಿನಿಂದಲೂ, ಶ್ರೇಯಃ-ಒಳ್ಳೆ ಯತನವನ್ನು, ಸಮಾಚರೇತ್-ಮಾಡತಕ್ಕದ್ದು, ಅಸ್ಯ-ಈಪರಿಮಾಡುವ ಪುರು

---

ಸನಾಡುತ್ತಿರುವ ಸರ್ವಾರ್ಥಸಿದ್ಧನೆಂಬ ಭಿಕ್ಷುಕನು ಯಾರೊ, ಆತನು ನಿರಪರಾಧಿಯಾದ ನನ್ನನ್ನು ನಿಷ್ಕಾರಣವಾಗಿ ಹೊಡೆದಂಥಾವನಾದನೆಂದು ವಿಜ್ಞಾಪಿಸಿದಂಥಾದ್ದಾಗಲೂ ಶ್ರೀರಾಮನು ಆ ವಾಕ್ಯವಂ ಕೇಳುತಲೆ ದ್ವಾರಪಾಲನಂ ಕಳುಹಿಸಿ ಆ ಸರ್ವಾರ್ಥಸಿದ್ಧಕನೆಂಬ ಸನ್ಯಾಸಿಯಂ ಕರೆಯಿಸಿದಂಥಾವನಾದನು ||೪೩|| ಬಳಿಕ ಮಹಾತೇಜೋವಂತನಾದ ಆ ಭಿಕ್ಷುಕನು ಆ ಒಡ್ಡೋಲಗದೊಳು ಶ್ರೀರಾಮನಂ ಕಂಡು ಎಲೈ ಮಹಾ ತಿಳುವಳಿಕೆಯುಳ್ಳ ಶ್ರೀರಾಮನೇ ! ನನ್ನಿಂದ ನಿನಿಗೇನು ಕಾರ್ಯವಿರುವದು, ಅದಂ ಹೇಳುವಂಥಾವನಾಗೆಂದು ನುಡಿದವನಾಗಲು, ಶ್ರೀರಾಮನು ಆ ಮಾತಂ ಕೇಳಿ. ಇಂತೆಂದು ನುಡಿದನು. ಎಲೈ ಬ್ರಾಹ್ಮಣೋತ್ತಮನಾದ ಭಿಕ್ಷುವೆ ! ನಿನ್ನಿಂದ ಈ ನಾಯಿಯು ಹೊಡೆಯಲ್ಪಟ್ಟಿಧೆ. ನಿನಿಗೆ ಏನಪರಾಧವಂ ಮಾಡಿತು. ದಂಡದಿಂದ ಯಾಕೆ ಹೊಡದೆ. ಕೋಪವೆಂಬದು ಪ್ರಾಣವನ್ನಪಹರಿಸುವ ಶತೃವು, ಕ್ರೋಧವು ಕಾರ್ಯಹಾನಿಕರವಾದ ರಿಪುವು, ರೋಷವು ತೀಕ್ಷ್ಣವಾದ ಕತ್ತಿಯೋಪಾದಿಯಲ್ಲಿರುವದು. ಕೋಪವು ಸಮಸ್ತವನ್ನು ಹೋಗಲಾಡಿಸುವದು. ಯಾವಪುರುಷನಾದರೂ ಸರಿಯೇ ತಪಿಸುತ್ತಿರಲಿ ಜಪವಂ ಗೈಯ್ಯುತ್ತಿರಲೀ ದಾನವಂ ಕೊಡುತ್ತಿರಲೀ ಏನು ಮಾಡುತ್ತಿರಲೀ ಕೋಪವುಂಟಾದೊಡೆ ಆ ಕೋಪವು ಇವುಗಳನ್ನೆಲ್ಲ ಅಪಹರಿಸುವದಾದ ಕಾರಣ ಕೋಪವಂ ಬಿಡಬೇಕು. ||೪೯|| ಸಾರಥಿಯಾದವನು ಓಡಿ ಹೋಗುತ್ತಿರುವ ಕುದುರೆಗಳನ್ನು ತಡಿಸಿ ಹ್ಯಾಗೆ ಸಾರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಕಾವಾಚಾಚಕ್ಷುಷಾಚಸಮಾಚರೇತ । ಶ್ರೇಯೋಲೋಕಸ್ಯಚರತೋನಚದ್ವೇಷ್ಟಾಸ್ಯವಿದ್ಯತೇ ॥೫೦॥ ನತತ್ಕುರ್ಯಾದಸಿಸ್ತೀಕ್ಷ್ಣಸ್ಸರ್ಪೋವಾದುರತಿಕ್ರಮಃ । ಅಗ್ನಿರ್ವಾನಿತ್ಯಸಂಕ್ರುದ್ಧೋಯತ್ಕುರ್ಯಾದ್ದುರನುಷ್ಠಿತಃ ॥೫೧॥ ವಿನೀತವಿನಯಸ್ಯಾಪಿಪ್ರಕೃತಿರ್ನವಿಲೀಯತೇ । ಪ್ರಕೃತೇರ್ಗುಣಶೂನ್ಯಸ್ಯಸರ್ವಂಭವತಿನಿಶ್ಚಯಃ ॥೫೨॥ ಸ್ನಾನಂದಾನಂತಪೋಹೋಮಃಸ್ವಾಧ್ಯಾಯಂಪಿತೃತರ್ಪಣಮ್ । ಯತ್ನಾದ್ಯತ್ಕುರುತೇವಿಪ್ರಃಕ್ರೋಧೇಸರ್ವಂನಿರರ್ಥಕಮ್ ॥೫೩॥ ಏವಮುಕ್ತಸ್ಸವಿಪ್ರೋವೈರಾಮೇಣಾಕ್ಲಿಷ್ಟಕರ್ಮಣಾ । ದ್ವಿಜಸ್ಸರ್ವಾರ್ಥಸಿದ್ಧಶ್ಚ ಅಬ್ರವೀನ್ನೃಪಸನ್ನಿಧೌ ॥೫೪॥ ಮಯಾದತ್ತಪ್ರಹಾರೋಯಂಕ್ರೋಧೇನಾಕ್ರಾಂತಚೇತಸಾ । ಭಿಕ್ಷಾರ್ಥಮಟಮಾನೇನಕ್ಷುಧಾಸಂಪೀಡಿತೇನಚ ॥೫೫॥ ಭಿಕ್ಷಾಮಲಭಮಾನೇನಭಿಕ್ಷಾಕಾಲೇಮಯಾವಿಭೋ । ರಥ್ಯಾಸ್ಥಿತಸ್ತ್ವಯಂಶ್ವಾವೈಗಚ್ಛಗಚ್ಛೇತಿಭಾಷಿತಃ ॥೫೬॥ ಅಥಸ್ವರೇಣಾಗಚ್ಛಂತಂರಥ್ಯಾಂತೇವಿಷ

---

ಷನಿಗ, ದ್ವೇಷ್ಟಾ–ದ್ವೇಷವನ್ನು ಮಾಡತಕ್ಕವನು, ನ–ಇಲ್ಲ ॥೫೦॥ ದುರನುಷ್ಠಿತಃ–ದುರಾಗ್ರಹವುಳ್ಳಪುರುಷನು,ನಿತ್ಯಸಂಕ್ರುದ್ಧಃ–ಯಾವಾಗಲೂ ಕೋಪಿಷ್ಠನಾಗಿ, ಯತ್–ಯಾವ ಕಾರ್ಯವನ್ನು, ಕುರ್ಯಾತ್–ಮಾಡುವನೋ, ತತ್–ಅಂಥಾ ದುಷ್ಕಾರ್ಯವನ್ನು, ತೀಕ್ಷ್ಣಃ–ಕ್ರೂರವಾದ, ಅಸಿಃ–ಖಡ್ಗವು, ದುರತಿಕ್ರಮಃ–ಅತಿಕ್ರಮಿಸಲಾಗದ, ಸರ್ಪೋವಾ–ಹಾವಾಗಲಿ, ಅಗ್ನಿರ್ವಾ–ಅಗ್ನಿಯೇಆಗಲಿ, ನಕುರ್ಯಾತ್–ಮಾಡಲಾರದು ॥೫೧॥ ವಿನೀತವಿನಯಸ್ಯಾಪಿ–ವಿನೀತ–ಶಿಕ್ಷಿತವಾದ, ವಿನಯಸ್ಯಾಪಿ–ವಿನಯವುಳ್ಳವನಾದರೂ, ಗುಣಶೂನ್ಯಸ್ಯ–ಗುಣಗಳಿಂದ ಶೂನ್ಯನಾದ ಪುರುಷನ, ಪ್ರಕೃತಿಃ–ಸ್ವಭಾವವು, ನವಿಲೀಯತೇ–ನಾಶನವನ್ನು ಹೊಂದುವದಿಲ್ಲ, ಪ್ರಕೃತೇಃ–ಸ್ವಭಾವದ ದೆಶೆಯಿಂದ, ಸರ್ವಂ–ಸಮಸ್ತವು, ಭವತಿ–ಆಗುತ್ತದೆ, ನಿಶ್ಚಯಃ–ನಿಶ್ಚಯವು ॥೫೨॥ ವಿಪ್ರಃ–ಬ್ರಾಹ್ಮಣನು, ಸ್ನಾನಂ–ಸ್ನಾನವನ್ನೇ ಆಗಲಿ, ದಾನಂ–ದಾನವನ್ನೇ ಆಗಲಿ, ತಪಃ–ತಪವನ್ನೆ ಆಗಲಿ, ಸ್ವಾಧ್ಯಾಯಂ–ಅಧ್ಯಯನವನ್ನೇ ಆಗಲಿ, ಪಿತೃತರ್ಪಣಂ–ಪಿತೃಪ್ರೀತಿಯಾಗಿ ಮಾಡತಕ್ಕ ತರ್ಪಣವನ್ನೇ ಆಗಲಿ, ಯತ್ನಾತ್–ಪ್ರಯತ್ನದ ದೆಶೆಯಿಂದ, ಯತ್–ಯಾವದನ್ನು, ಕುರುತೇ–ಮಾಡುತ್ತಾನೆಯೋ, ಕ್ರೋಧೇ–ಕೋಪವು ಬಂದಂಥಾದ್ದಾಗುತಿರಲೀಕಾಗಿ, ಸರ್ವಂ–ಸಮಸ್ತವು, ನಿರರ್ಥಕಂ–ವ್ಯರ್ಥವು॥೫೩॥ ಏವಂ–ಈಪರಿಯಾಗಿ, ಅಕ್ಲಿಷ್ಟಕರ್ಮಣಾ–ಅನಾಯಾಸ ವ್ಯಾಪಾರಿಯಾದ, ರಾಮೇಣ–ಶ್ರೀ ರಾಮನಿಂದ, ಉಕ್ತಃ–ಹೇಳಲ್ಪಟ್ಟ, ಸವಿಪ್ರಃ–ಬ್ರಾಹ್ಮಣರಿಂದೊಡಗೂಡಿದ, ದ್ವಿಜಃ–ಬ್ರಾಹ್ಮಣನಾದ, ಸರ್ವಾರ್ಥಸಿದ್ಧಃ–ಸರ್ವಾರ್ಥಸಿದ್ಧನು, ನೃಪಸನ್ನಿಧೌ–ರಾಜ ಸನ್ನಿಧಾನದಲ್ಲಿ, ಅಬ್ರವೀತ್–ನುಡಿದನು ॥೫೪॥ ಭಿಕ್ಷಾರ್ಥಂ–ಅಶನಾರ್ಥವಾಗಿ, ಅಟಮಾನೇನ–ಸಂಚರಿಸುತ್ತಿರುವ, ಕ್ಷುಧಾ–ಹಶಿವಿನಿಂದ, ಸಂಪೀಡಿತೇನಚ–ಬಾಧಿತನೂಆದಕಾರಣ, ಕ್ರೋಧೇನ–ಕೋಪದಿಂದ, ಆಕ್ರಾಂತಚೇತಸಾ–ಆಕ್ರಾಂತ–ಆಕ್ರಮಿಸಲ್ಪಟ್ಟ, ಚೇತಸಾ–ಮನುಸ್ಸುಳ್ಳ, ಮಯಾ–ನನ್ನಿಂದ, ಅಯಂ–ಈ ನಾಯಿಯು,ದತ್ತಪ್ರಹಾರಃ–ದತ್ತ–ಕೊಡಲ್ಪಟ್ಟ, ಪ್ರಹಾರಃ–ದೆಬ್ಬೆಯುಳ್ಳದ್ದು (ಅಭೂತ್–ಆಯಿತು ॥೫೫॥ ಹೆ ವಿಭೋ–ಎಲೈ ಸ್ವಾಮಿಯೆ, ಭಿಕ್ಷಾಕಾಲೇ–ಯತಿಭೋಜನಕಾಲದಲ್ಲಿ, ಭಿಕ್ಷಾಂ–ಭಿಕ್ಷೆಯನ್ನು, ಅಲಭಮಾನೇನ–ಹೊಂದದಿರುವ, ಮಯಾ–ನನ್ನಿಂದ, ರಥ್ಯಾಸ್ಥಿತಃ–ರಾಜಬೀದಿಯಲ್ಲಿರುವ, ಅಯಂಶ್ವಾವೈ–ಈ ನಾಯಿಯಾದರೈಗಚ್ಛಗಚ್ಛೇತಿ–ಹೋಗುಹೋಗೆಂದು,ಭಾಷಿತಃ–ಹೇಳಲ್ಪಟ್ಟಿತು॥ ಅಥ–ಬಳಿಕ, ಸ್ವರೇಣ–ಸ್ವರದಿಂದ, ಅಗಚ್ಛಂತಂ–ಪೋಗದಿರುವ, ವಿಷಮೇ–ಸಂಚರಿಸುವದಕ್ಕೆ ಅಶಕ್ಯವಾದ, ರಥ್ಯಾಂತೇ–ಬೀದಿಯ ತುದಿಯಲ್ಲಿ, ಸ್ಥಿತಂ–ಇರುತಿರುವ ನಾಯಿಯನ್ನು, ಕ್ಷುಧಯಾ–ಕ್ಷುಡ್ವ್ಯಾಧೆಯಿಂದ, ಆವಿಷ್ಟಃ–ವ್ಯಾಪ್ತನಾಗಿ, ಅಪಶ್ಯಂ–ನೋಡಿದೆನು, ಹೇ ರಾಘವ–ಎಲೈ ಶ್ರೀರಾಮನೆ, ತತಃ–

---

ಧ್ಯವಂಗೈಯ್ಯುವನೋ ಹಾಗೆ ಪುರುಷನು ಇಂದ್ರಿಯಂಗಳಂ ನಿಗ್ರಹಿಸಬೇಕು॥೫೦॥ ಯಾವ ಪುರುಷನಾದರೆ ಕರ್ಮದಿಂದಲಾಗಲೀ ಮನದಿಂದಲಾಗಲೀ ವಾಕ್ಕಾವಿನಿಂದಲಾಗಲೀ ನೋಟದಿಂದಲಾಗಲೀ ಜನಗಳಿಗೆ ಶ್ರೇಯಸ್ಸಂನು ಗೈಯ್ಯುತ್ತಿರುವನೋ ಆತನಿಗೆ ದ್ವೇಷಿಗಳ್ಯಾರು ಇರುವದಿಲ್ಲ. ಆಪರಿ ಮಾಡದೇ ನಿರಂತರವು ಕುಪಿತನಾಗುವ ದುರ್ಮಾರ್ಗನಾದ ಪುರುಷನು ಮಾಡತಕ್ಕ ದುಷ್ಟ ಕೆಲಸಗಳನ್ನು ಬಹಳ ಹದವಾದ ಖಡ್ಗವೇ ಆಗಲೀ ಮಹಾರೋಷವುಳ್ಳ ಸರ್ಪವೇ ಆಗಲೀ ಅಗ್ನಿಯೇ ಆಗಲಿ ಯಾವದೂ ಮಾಡಲಾರದು. ಸ್ವಾಭಾವಿಕವಾಗಿ ದುರ್ಮಾರ್ಗನಾದ ಪುರುಷನಿಗೆ ವಿನಯವಾಗಿರಬೇಕೆಂದು ಎಷ್ಟು ಶಿಕ್ಷೆಯಂ ಗೈದರು ಆತನ ಪ್ರಕೃತಿಯು ಬದಲಾಯಿಸಲಾರದು. ಇದೇನಿಶ್ಚಯವು॥೫೨॥ ಬ್ರಾಹ್ಮಣನಾದವನು ಸ್ನಾನವನ್ನಾಗಲಿ ದಾನವನ್ನಾಗಲಿ ತಪವಂನಾಗಲಿ ಹೋಮವನ್ನಾಗಲಿ ವೇದಾಧ್ಯಯನವನ್ನಾಗಲಿ ಪಿತೃತರ್ಪಣವನ್ನಾಗಲಿ ಮಹಾ ಪ್ರಯಾಸದಿಂದ ಯಾವ ಕರ್ಮವನ್ನಾಚರಿಸುತಿದ್ದರೂ ಕೋಪವುಂಟಾದೊಡೆ ಅದೆಲ್ಲ ವ್ಯರ್ಥವಾಗುವದೆಂದು ಶ್ರೀರಾಮನಿಂದ ನಿರೂಪಿಸಲ್ಪಟ್ಟವನಾದ ಆ ಸರ್ವಾರ್ಥಸಿದ್ಧನೆಂಬ ಬ್ರಾಹ್ಮಣೋತ್ತಮನು ರಾಜಸನ್ನಿಧಾನದಲ್ಲಿ ಈಪರಿ ಹೇಳಿದಂಥಾವನಾದನದೆಂತೆನೆ ॥೫೪॥ ಹಶಿವಿನಿಂದಬಾಧಿತನಾಗಿ ಭಿಕ್ಷಾರ್ಥವಾಗಿ ತಿರುಗುತ್ತಿರುವ ಮತ್ತು ಕೋಪದಿಂದಾಕ್ರಮಿಸಲ್ಪಟ್ಟ ಮನವುಳ್ಳ ನನ್ನಿಂದ ಈ ನಾಯಿಯು ಹೊಡೆಯಲ್ಪಟ್ಟಂಥಾದ್ದಾಯಿತು॥೫೫॥ ಯಾಕೆಂದರೆ ಕೇಳೈಪ್ರಭುವೆ ಭಿಕ್ಷಾಕಾಲದಲ್ಲಿ ಭಿಕ್ಷೆಯಂ ಪೊಂದದೆ ನಾನು ತಿರುಗುತಿರಲೂ ಸಂಣದಾಗಿರುವ ಒಂದಾನೊಂದು ದಾರಿಯೊಳು ಅಡ್ಡವಾಗಿ ಮಲಗಿದ್ದ ಈನಾಯಿಯನ್ನು, ನಡೆನಡೆ ಎಂಬದಾಗಿ ನುಡಿದಂಥಾವನಾದೆ. ಎಷ್ಟಟ್ಟಲೂಗಿದರು ಈ ನಾಯಿಯೂ ಪೋಗದಿರಲು ಹಶುದನಿಂದ ಪೀಡಿತನಾಗಿ ಈ ನಾಯಿಯಂ ಹೊಡೆದಂಥಾವನಾಗಿದ್ದೇನೆ.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಸ್ಥಿತಮ್ । ಅಪಶ್ಯಂಕ್ಷುಧಯಾವಿಷ್ಟಸ್ತತೋದತ್ತೋಸ್ಯರಾಘವ ॥೫೭॥ ಪ್ರಹಾರೋರಾಜರಾಜೇಂದ್ರಶಾಧಿಮಾಮಪರಾಧಿನಮ್ । ತ್ವಯಾಶಾಸ್ತಸ್ಯರಾಜೇಂದ್ರನಾಸ್ತಿಮೇನರಕಾದ್ಭಯಮ್ ॥೫೮॥ ಅಥರಾಮೇಣತೇಪೃಷ್ಟಾಸ್ಸರ್ವ ಏವಸಭಾಸದಃ । ಕಿಂಕಾರ್ಯಮಸ್ಯತದ್ಬ್ರೂಹಿದಂಡೋವಾಕೋನಿಪಾತ್ಯತಾಮ್ ॥೫೯॥ ಸಮ್ಯಕ್ಪ್ರಣಿಹಿತೇದಂಡೇರಾಜಾಭವತಿರಕ್ಷಿತಾ। ಭೃಗ್ವಾಂಗಿರಸಕುತ್ಸಾದ್ಯಾಸ್ಸವಸಿಷ್ಠಾತ್ರಿಕಶ್ಯಪಾಃ ॥೬೦॥ ಧರ್ಮವಾದನಮುಖ್ಯಾಶ್ಚ ಸಚಿವಾನೈಗಮಾಸ್ತಥಾ । ಏತೇಚಾನ್ಯೇಚಬಹವಃಪಂಡಿತಾಸ್ತತ್ರಸಂಗತಾಃ ॥೬೧॥ ಅವಧ್ಯೋಬ್ರಾಹ್ಮಣೋದಂಡ್ಯ ಏವಂಶಾಸ್ತ್ರವಿದೋವಿದುಃ। ಬ್ರುವಂತೋರಾಘವಂಸರ್ವೇರಾಜಧರ್ಮೇಷ್ವಧಿಷ್ಠಿತಾಃ॥೬೨॥ ಅಥತೇಮುನಯಸ್ಸರ್ವೇರಾಮಮೇವಾಬ್ರುವನ್ ಪುನಃ । ರಾಜಾಶಾಸ್ತಾಹಿಸರ್ವಸ್ಯತ್ವಂವಿಶೇಷೇಣರಾಘವ । ತ್ರೈಲೋಕ್ಯಸ್ಯಭವೇಚ್ಛಾಸ್ತಾದೇವೋವಿಷ್ಣುಸ್ಸನಾತನಃ ॥ ೬೩ ॥ ಏವಮುಕ್ತೇತುತೈಸ್ಸರ್ವೈಶ್ಶ್ವಾವೈವಚನಮಬ್ರವೀತ್ । ಯದಿತುಷ್ಟೋಸಿಮೇರಾಮಯದಿದೇಯೋವರೋಮಮ ॥೬೪॥ ಪ್ರತಿಜ್ಞಾತಂತ್ವಯಾವೀರಕಿಂ

---

ಬಳಿಕ, ಅಸ್ಯ–ಈ ಶುನಕಕ್ಕೆ, ಪ್ರಹಾರಃ–ದಂಡಪ್ರಹಾರವು, ದತ್ತಃ–ಕೊಡಲ್ಪಟ್ಟಿತು ॥೫೭॥ ಹೇ ರಾಜರಾಜೇಂದ್ರ– ಎಲೈ ರಾಜಾಧಿರಾಜನೆ, ಅಪರಾಧಿನಂ–ನಾಯಿಯ ವಿಷಯದಲ್ಲ ಅಪರಾಧಿಯಾದ, ಮಾಂ–ನನ್ನನ್ನು, ಶಾಧಿ–ಯಥಾಶಾಸ್ತ್ರಮಾಗಿ ಶಿಕ್ಷಿಸು, ಹೆ ರಾಜೇಂದ್ರ– ಎಲೈ ರಾಜಶ್ರೇಷ್ಠನೆ, ತ್ವಯಾ–ನಿನ್ನಿಂದ, ಶಾಸ್ತಸ್ಯ–ಶಿಕ್ಷಿತನಾದ, ಮೇ–ನನಿಗೆ, ನರಕಾತ್–ನರಕದ ದೆಶೆಯಿಂದ, ಭಯಂ–ಭೀತಿಯು, ನ–ಇಲ್ಲ, (ಇತಿ–ಇಂತೆಂದು, ಅಬ್ರವೀತ್–ನುಡಿದನು) ॥೫೮॥ ಅಥ–ಬಳಿಕ, ಅಸ್ಯ–ಈ ಸನ್ಯಾಸಿಗೆ, ಕೋದಂಡಃ–ಯೇನು ದಂಡವು, ನಿಪಾತ್ಯತಾಂ–ಮಾಡಲ್ಪಡಲಿ, ಕಿಂಕಾರ್ಯಂ–ಯೆನು ಮಾಡತಕ್ಕದ್ದು, ತತ್–ಅದನ್ನು, ಬ್ರೂತ–ಪೇಳಿರಿ, ಇತಿ–ಈಪರಿಯಾಗಿ, ರಾಮೇಣ–ಶ್ರೀ ರಾಮನಿಂದ, ಸರ್ವಏವ–ಸಮಸ್ತಸಭಿಕರಾದ, ತೇ–ಆ ಮಹರ್ಷಿಗಳು, ಪೃಷ್ಟಾಃ–ಕೇಳಲ್ಪಟ್ಟರು ॥೫೯॥ ಸಮ್ಯಕ್–ಚನ್ನಾಗಿ, ದಂಡೆ–ಶಿಕ್ಷೆಯು, ಪ್ರಣಿಹಿತೆಸತಿ–ಮಾಡಲ್ಪಟ್ಟದ್ದಾಗುತಿರಲೀಕಾಗಿ, ರಾಜಾ–ಅರಸು, ರಕ್ಷಿತಾ– ಸಂರಕ್ಷಣೆಕರ್ತನು, ಭವತಿ–ಆಗುತ್ತಾನೆ ॥೫೯॥ ಭೃಗ್ವಾಂಗಿರಸಕುತ್ಸಾದ್ಯಾಃ–ಭೃಗು, ಭೃಗುಋಷಿಯು, ಆಂಗಿರಸ–ಆಂಗಿರಸ ಮುನಿ, ಕುತ್ಸ–ಕುತ್ಸಋಷಿಯೆ, ಆದ್ಯಾಃ–ಮೊದಲಾಗಿ ಉಳ್ಳ, ಸವಸಿಷ್ಠಾತ್ರಿಕಶ್ಯಪಾಃ–ವಸಿಷ್ಠ ಅತ್ರಿ ಕಶ್ಯಪರಿಂದೊಡಗೂಡಿದ, ಧರ್ಮವಾದನಮುಖ್ಯಾಶ್ಚ–ಧರ್ಮಶಾಸ್ತ್ರದಲ್ಲಿಮುಖ್ಯರಾಗಿರುವ, ಸಚಿವಾಃ–ಮಂತ್ರಿಗಳೂ, ತಥಾ–ಹಾಗೆಯೆ, ನೈಗಮಾಶ್ಚ–ಪ್ರಜೆಗಳೂ, ಏತೆಚ–ಇವರುಗಳು, ಅನ್ಯೆಚ–ಇನ್ನು ಕೆಲವರಾದ, ಬಹವಃ– ಅನೇಕರಾದ, ಪಂಡಿತಾಃ–ಪಂಡಿತರು, ತತ್ರ–ಆ ಸಭೆಯಲ್ಲಿ, ಸಂಗತಾಃ–ಸೇರಿದವರಾದರು ॥೬೧॥ ಬ್ರಾಹ್ಮಣಃ–ಬ್ರಾಹ್ಮಣನು, ಅವಧ್ಯಃ–ವಧಾರ್ಹನಲ್ಲ, ಅದಂಡ್ಯಃ–ಶಿಕ್ಷಾರ್ಹನಲ್ಲ, ಎವಂ–ಈಪರಿಯಾಗಿ, ಶಾಸ್ತ್ರವಿದಃ–ಶಾಸ್ತ್ರಜ್ಞರು, ವಿದುಃ–ಹೇಳುತ್ತಾರೆ, ಇತಿ–ಇಂತೆಂದು, ಬ್ರುವಂತಃ–ಪೇಳುತ್ತಿರಪರಾಗಿ, ಸರ್ವೆ–ಎಲ್ಲರು, ರಾಜಧರ್ಮೇಷು–ರಾಜಧರ್ಮಗಳಲ್ಲಿ, ರಾಘವಂ–ಶ್ರೀರಾಮನನ್ನು, ಅಧಿಷ್ಠಿತಾಃ–ಅಧಿಕಾರಿಯನ್ನಾಗಿ ಪೇಳಿ, ಸ್ಥಿತಾಃ–ನಿಂತರು ॥೬೨॥ ಅಥ–ಬಳಿಕ, ಸರ್ವೆ–ಸಮಸ್ತರಾದ, ತೆಮುನಯಃ–ಆ ಋಷಿಗಳು, ರಾಮಮೆವ–ಶ್ರೀ ರಾಮನನ್ನೆ ಕುರಿತು, ಹೆ ರಾಘವ–ಎಲೈ ಶ್ರೀರಾಮನೆ, ರಾಜಾ–ಅರಸು, ಸರ್ವಸ್ಯ–ಸಮಸ್ತಕ್ಕು, ಶಾಸ್ತಾಹಿ–ಶಿಕ್ಷಾಕರ್ತನಷ್ಟೆ, ತ್ವಂ–ನೀನು, ವಿಶೆಷೇಣ–ಅತಿಶಯಮಾಗಿ, ತ್ರೈಲೋಕ್ಯಸ್ಯ–ಲೋಕತ್ರಯಕ್ಕೂ, ಶಾಸ್ತಾ–ಶಿಕ್ಷಾಕರ್ತನಾದ, ಸನಾತನಃ–ಅನಾದಿಸಿದ್ಧನಾದ, ದೆವಃ–ದೆವನಾದ, ವಿಷ್ಣುಃ–ವಿಷ್ಣುವು, ಭವೆತ್–ಆಗುವಿ ॥೬೩॥ ಎವಂ–ಈಪರಿಯಾಗಿ, ಸರ್ವೈಃ–ಸಮಸ್ತರಾದ, ತೈಃ–ಅವರುಗಳಿಂದ, ಉಕ್ತೆಸತಿ–ಪೇಳಲ್ಪಟ್ಟದ್ದಾಗುತಿರಲೀಕಾಗಿ, ಶ್ವಾವೈ–ನಾಯಿಯಾದರೆ, ವಚನಂ–ಮಾತನ್ನು, ಅಬ್ರವೀತ್–ನುಡಿದಂಥಾದ್ದಾಯಿತು, ಹೆ ರಾಮ–ಎಲೈ ಶ್ರೀರಾಮನೆ, ಮೇ–ನನಿಗೆ, ತುಷ್ಟಃ–ಸಂತುಷ್ಟನು, ಅಸಿಯದಿ–ಆಗಿದ್ದರೆ, ಮಮ–ನನಿಗೆ, ವರಃ–ವರವು, ದೆಯೋಯದಿ–ಕೊಡ

---

ಆದಕಾರಣ ಅಪರಾಧಿಯಾದ ನನ್ನನ್ನು ಶಿಕ್ಷಿಸಿದಂಥವನಾದರೆ ಎನಗೆ ನರಕ ಭೀತಿಯುಂಟಾಗಲಾರದೆಂದು ಅಪರಾಧಿಯು ಬಿನ್ನವಿಸಿದವನಾದನು ॥೫೮॥ ಬಳಿಕ ರಘುನಂದನನು ಸಂಸ್ಥಾನದಲ್ಲಿರುವ ಪಂಡಿತರಂ ಕುರಿತು ಎಲೈ ಪಂಡಿತರುಗಳಿರಾ! ಇದಕ್ಕೆ ಯಾವವಿಧವಾದ ದಂಡನೆಯಂಗೈಯಬೇಕು ? ಅರಸಾದವನುಚನ್ನಾಗಿ ಶಿಕ್ಷಿಸಿದವನಾದರೆ ರಾಜನಾದವನಿಗೆ ಸಾರ್ಥಕವು, ಎಂಬದಾಗಿ ನಿರೂಪಿಸಿದವನಾಗಲೂ, ಭೃಗು, ಆಂಗೀರಸ ಕಶ್ಯಪ, ಕುತ್ಸ, ವಸಿಷ್ಠ, ಅತ್ರಿ ಮೊದಲಾದ ಬ್ರಹ್ಮರ್ಷಿಗಳೂ ಮತ್ತೂ ವ್ಯವಹಾರಕಾಂಡದಲ್ಲಿ ಮುಖಂಡರಾದ ಮಂತ್ರಿಗಳೂ ವರ್ತಕರೂ, ಇವರಲ್ಲದೆ ಆ ವೇಳೆಯೊಳು ಆ ಒಡ್ಡೋಲಗದಲ್ಲಿ ಶೇರಿದ ಪಂಡಿತರು ಇವರೆಲ್ಲರು, ಎಲೈಒಡೆಯನೆ ! ಬ್ರಾಹ್ಮಣನು ಅವಧ್ಯನಾದಕಾರಣ ದಂಡಿಸಬಾರದೆಂದು ಶಾಸ್ತ್ರಜ್ಞರೆಲ್ಲ ಪೇಳುತ್ತಿರುವರು, ಈ ವಿಷಯದೊಳು ನೀನೇ ಅಧಿಕಾರಿಯೆ ಹೊರತು ಬೇರೊಬ್ಬನಿಲ್ಲ, ಯಾಕಂದರೆ ಅರಸನಾದವನು ಎಲ್ಲಾ ವಿಷಯಗಳಿಗೂ ಶಿಕ್ಷಾಕರ್ತನಾಗಿರುವನು, ನೀನಾದರೆ ನೋ ಮೂಜಗಗಳಿಗೂ ಕೂಡಶಿಕ್ಷೆಯಂ ಗೈಯುವದಕ್ಕೆ ಕರ್ತನಾಗಿಯೂ ಅನಾದಿಸಿದ್ಧನಾಗಿಯೂಸಾಕ್ಷಾಚ್ಛ್ರೀಮಹಾವಿಷ್ಣುವಿನ ಸ್ವರೂಪನಾಗಿಯೂ ಇರುವಂಥಾವನು ಇಂಥಾನಿನಿಗೆ ಪೇಳಲೂ ಯಾರಿಗೆ ಶಕ್ತಿಯೂ ಇರುವದೆಂದು ತಿಳಿಸಿದವರಾಗಲೂ ಆಸಮಯದೊಳು ಆನಾಯಿಯೇ ಪೇಳುವದದೆಂತೆನೆ,—ಎಲೈ ರಘುಕುಲತಿಲಕನಾದ ಶೂರನೆ ! ನೀನುಎನ್ನ ವಿಷಯದಲ್ಲಿ ಸಂತುಷ್ಟನಾಗಿದ್ದು ನನಿಗೆ ವರವನ್ನೀಯುವನಾಗಿದ್ದರೆ ನಾ ಬೇಡಿದಂತೆ ನೀಂ ಮಾಡಿಸುವಂಥಾವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಿಂ ಕರೋಮೀತಿ ಮೇ ಶ್ರುತಮ್ ॥ ಪ್ರಯಚ್ಛ ಬ್ರಾಹ್ಮಣಸ್ಯಾಸ್ಯ ಕೌಲಪತ್ಯಂ ನರಾಧಿಪ ॥೬೪॥ ಕಾಲಾಂತರೇ ಮಹಾಭಾಗ ಕೌಲಪತ್ಯಂ ಪ್ರದೀಯತಾಮ್ । ಏತಚ್ಛ್ರುತ್ವಾ ತು ರಾಮೇಣ ಕೌಲಪತ್ಯೇಭಿಷೇಚಿತಃ ॥೬೫॥ ಪ್ರಯಯೌ ಬ್ರಾಹ್ಮಣೋ ಹೃಷ್ಟಃ ಗಜಸ್ಕಂಧೇನ ಸೋರ್ಚಿತಃ ॥೬೬॥ ಅಥ ತೇ ರಾಮಸಚಿವಾಃ ಸ್ಮಯಮಾನಾ ವಚೋಬ್ರುವನ್ । ವರೋಯಂ ದತ್ತ ಏವಾಸ್ಯ ನ ತು ಶಾಪೋ ಮಹಾದ್ಯುತೇ । ಏವಮುಕ್ತಸ್ತು ಸಚಿವೈ ರಾಮೋ ವಚನಮಬ್ರವೀತ್ ॥೬೭॥ ನ ಯೂಯಂ ಗತಿತತ್ತ್ವಜ್ಞಾಃ ಶ್ವಾ ವೈ ಜಾನಾತಿ ಕಾರಣಮ್ ॥೬೮॥ ಅಥ ಪೃಷ್ಟಸ್ತು ರಾಮೇಣ ಸಾರಮೇಯೋಬ್ರವೀದಿದಮ್ । ಅಹಂ ಕುಲಪತಿಸ್ತತ್ರ ಹ್ಯಾಸಂ ಶಿಷ್ಟಾನ್ನಭೋಜನಃ ॥೬೯॥ ದೇವದ್ವಿಜಾತಿಪೂಜಾಯಾಂ ದಾಸದಾಸೀಷು ರಾಘವ । ಸಂವಿಭಾಗೀ ಶುಭಗತಿರ್ದೇವದ್ರವ್ಯಸ್ಯ ರಕ್ಷಿತಾ ॥೭೦॥ ವಿನೀತಶ್ಶೀಲಸಂಪನ್ನಸ್ಸರ್ವಸತ್ತ್ವಹಿತೇರತಃ । ಸೋಹಂ ಪ್ರಾಪ್ತ ಇಮಾಂ ಘೋರಾಮವಸ್ಥಾಮಧಮಾಂ ಗತಿಮ್ ॥೭೧॥ ಏವ

---

ತಕ್ಕದ್ದೆ ಆದರೆ, ಹೆ ವೀರ-ಎಲೈ ಶೂರನೆ, ತ್ವಯಾ-ನಿನ್ನಿಂದ, ಕಿಂಕರೋಮೀತಿ-ಏನು ಮಾಡಲೆಂದು, ಪ್ರತಿಜ್ಞಾತಂ-ಪ್ರತಿಜ್ಞೆ ಮಾಡಲ್ಪಟ್ಟಿತು, ಮೇ-ನನ್ನಿಂದ, ಶ್ರುತಂ-ಕೇಳಲ್ಪಟ್ಟಿತು, ಹೆ ನರಾಧಿಪ-ಎಲೈ ರಾಜನೆ, ಅಸ್ಯಬ್ರಾಹ್ಮಣಸ್ಯ-ಈ ಬ್ರಾಹ್ಮಣನಿಗೆ, ಕೌಲಪತ್ಯಂ-ಅಗ್ರಹಾರಾಧಿಪತ್ಯವನ್ನು, ಪ್ರಯಚ್ಛ-ಕೊಡು, ಹೇ ಮಹಾಭಾಗ-ಎಲೈ ಪುಣ್ಯವಂತನೆ, ಕಾಲಾಂತರೇ-ಮತ್ತೊಂದು ಕಾಲದಲ್ಲಿ, ಕೌಲಪತ್ಯಂ-ಕುಲಾಧಿಪತಿತ್ವವು, ಪ್ರದೀಯತಾಂ-ಕೊಡಲ್ಪಡಲಿ, ಏತತ್- ಈ ಶುನಕವಾಕ್ಯವನ್ನು, ಶ್ರುತ್ವಾತು-ಕೇಳಿ ಆದರೆ, ರಾಮೇಣ-ಶ್ರೀರಾಮನಿಂದ, ಕೌಲಪತ್ಯೇ-ಅಗ್ರಹಾರದ ಯಾಜಮಾನ್ಯದಲ್ಲಿ, ಅಭಿಷೇಚಿತಃ-ಪಟ್ಟಾಭಿಷೇಕ ಮಾಡಲ್ಪಟ್ಟ, ಬ್ರಾಹ್ಮಣಃ-ಬ್ರಾಹ್ಮಣನಾದ, ಸಃ-ಆ ಸನ್ಯಾಸಿಯು, ಗಜಸ್ಕಂಧೇನ-ಆನೆಯ ಹೆಗಲಿನಲ್ಲಿ, ಅರ್ಚಿತಃ- ಪೂಜಿಸಲ್ಪಟ್ಟನು ॥೬೬॥ ಅಥ-ಬಳಿಕ, ತೇ-ಆ, ರಾಮಸಚಿವಾಃ-ಶ್ರೀರಾಮನ ಮಂತ್ರಿಗಳು, ಸ್ಮಯಮಾನಾಃ-ಆಶ್ಚರ್ಯಗೊಂಡವರಾಗಿ, ಹೆಮಹಾದ್ಯುತೇ-ಎಲೈ ಮಹಾಪ್ರಕಾಶವುಳ್ಳ ಶ್ರೀರಾಮನೆ, ಅಸ್ಯ-ಈ ಸನ್ಯಾಸಿಗೆ, ಅಯಂವರಏವ-ಈ ಉತ್ತಮನಾದ ಮರ್‍ಯಾದೆಯೇ, ದತ್ತಃ-ಕೊಡಲ್ಪಟ್ಟಿತು, ಶಾಪಸ್ತು- ಶಿಕ್ಷಾರೂಪವಾದ ಶಾಪವಾದರೆ, ನದತ್ತಃ-ಕೊಡಲ್ಪಡಲಿಲ್ಲ, ಇತಿ-ಇಂತೆಂದು, ವಚಃ-ಮಾತನ್ನು, ಅಬ್ರುವನ್-ನುಡಿದರು ॥೬೭॥ ಯೂಯಂ-ನೀವುಗಳು, ಗತಿತತ್ವಜ್ಞಾಃ-ಗತಿ-ಮುಂಸಾಗತಕ್ಕ ಕಾರ್ಯದ, ತತ್ವಜ್ಞಾಃ-ಯಥಾರ್ಥವನ್ನು ತಿಳಿದವರು, ನ-ಅಲ್ಲ, ಶ್ವಾವೈ-ಶುನಕವಾದರೆ, ಕಾರಣಂ-ಹೇತುವಿನನ್ನು, ಜಾನಾತಿ-ಬಲ್ಲುದಾದ್ದು ॥೬೮॥ ಅಥ-ಬಳಿಕ, ಸಾರಮೇಯಸ್ತು-ನಾಯಿಯಾದರೆ, ರಾಮೇಣ-ಶ್ರೀರಾಮನಿಂದ, ಪೃಷ್ಟಃ-ಕೇಳಲ್ಪಟ್ಟದ್ದಾಗಿ, ಇದಂ- ಈ ಮಾತನ್ನು, ಅಬ್ರವೀತ್-ನುಡಿದಂಥಾದ್ದಾಯಿತು ॥೬೮॥ ಹೆ ರಾಘವ-ಎಲೈ ಶ್ರೀರಾಮನೆ, ತತ್ರ-ಆ ಅಧಿಕಾರದಲ್ಲಿ, ಅಹಂ-ನಾನು, ಶಿಷ್ಟಾನ್ನಭೋಜನಃ- ಶಿಷ್ಟ-ಶಿಷ್ಟರಾದವರ, ಅನ್ನ-ಅನ್ನವನ್ನು, ಭೋಜನಃ-ಭುಜಿಸುತ್ತಿರುವನಾಗಿ, ಕುಲಪತಿಃ-ಗ್ರಾಮಾಧಿಪತಿಯು, ಆಸಂ-ಆಗಿದ್ದೆನು ॥೬೯॥ ದೇವದ್ವಿಜಾತಿಪೂಜಾಯಾಂ-ದೇವ, ದೇವತೆಗಳ, ದ್ವಿಜಾತಿ-ಬ್ರಾಹ್ಮಣರ, ಪೂಜಾಯಾಂ-ಪೂಜೆಯಲ್ಲಿ, ದಾಸದಾಸೀಷು-ದಾಸ-ಚಾಕರರಲ್ಲಿಯೂ, ದಾಸೀಷು- ಚಾಕರಿಯಂ ಗೈಯುವ ಹೆಂಗಳಲ್ಲಿಯು, ಸಂವಿಭಾಗೀ-ಚನ್ನಾಗಿ ಭಾಗಿಸಿ ಕೊಡತಕ್ಕವನಾಗಿದ್ದೆ, ಶುಭಗತಿಃ-ಶುಭಕರವಾದ ಮಾರ್ಗವುಳ್ಳವನಾಗಿದ್ದೆ, ದೇವದ್ರವ್ಯಸ್ಯ-ದೇವತಾದ್ರವ್ಯಕ್ಕೆ, ರಕ್ಷಿತಾ-ಸಂರಕ್ಷಣಕರ್ತನಾಗಿದ್ದೆ ॥೭೦॥ ವಿನೀತಃ-ವಿನಯಸಂಪನ್ನನಾದ, ಶೀಲಸಂಪನ್ನಃ-ಸತ್ವಭಾವ ಯುಕ್ತನಾದ, ಸರ್ವಸತ್ವಹಿತೇ-ಸಮಸ್ತವಾದ ಜಂತುಗಳಿಗೆಹಿತವಂಮಾಡುವದರಲ್ಲಿ, ರತಃ-ಆಸಕ್ತನಾದ, ಸೋಹಂ-ಆಯಾನಾನು, ಘೋರಾಂ-ಭಯಂಕರವಾದ, ಇಮಾಂ-ಇಂಥಾ, ಅಧಮಾಂ-ನೀಚವಾದ, ಗತಿಂ-ಗತಿಯನ್ನು, ಪ್ರಾಪ್ತಃ-ಹೊಂದಿದೆ, ಏಷವಿಪ್ರಃ-ಈ ಬ್ರಾಹ್ಮಣನಾದರೆ, ಕ್ರೋಧಾನ್ವಿತಃ-ಕೋಪಯುಕ್ತನು, ತ್ಯಕ್ತಧರ್ಮಃ-

---

ನಾಗು ನಾನೇನುಮಾಡಲೆಂದು ಪೂರ್ವದಲ್ಲಿಯೇ ನಿನ್ನಿಂದ ಪ್ರತಿಜ್ಞೆ ಮಾಡಲ್ಪಟ್ಟಿತಲ್ಲ. ಆ ಮಾತು ನನ್ನಿಂದಲೂ ಕೇಳಲ್ಪಟ್ಟಿತು ಕೇಳೆಲೈರಾಜನೆ! ಈ ಸರ್ವಾರ್ಥಸಿದ್ಧನೆಂಬ ಬ್ರಾಹ್ಮಣನಿಗೆ ಅಗ್ರಹಾರದ ಯಾಜಮಾನ್ಯವಂ ಕೊಡುವಂಥಾವನಾಗು, ಮತ್ತೊಂದು ಕಾಲದೊಳು ಕುಲಪತಿತ್ವವ ನೀಯುವಂಥಾವನಾಗೆಂದು ನುಡಿಯಲೂ, ಈ ವಾಕ್ಯವಂ ಕೇಳಿ ರಘುನಂದನನು ಸರ್ವಾರ್ಥಸಿದ್ಧನೆಂಬ ಆ ಬ್ರಾಹ್ಮಣನನ್ನು ಆ ಅಧಿಪತ್ಯದಲ್ಲಿ ಅಭಿಷೇಕವಂ ಗೈದು, ಆನೇಯ ಮೇಲೆ ಕುಳ್ಳಿರಿಸಿ ಪೂಜೆಯಂ ಮಾಡಿ, ಮೆರವಣಿಗೆಯಂ ಮಾಡಿಸಿದಂಥಾವನಾಗಲೂ, ಆ ಬ್ರಾಹ್ಮಣನು ಮಹಾಸಂತೋಷ ಮುಳ್ಳವನಾಗಿ ಹೊರಟು ಹೋದನು ॥೬೬॥ ಅನಂತರದಲ್ಲಿ ಶ್ರೀರಾಮನ ಮಂತ್ರಿಗಳು ಮುಗುಳು ನಗೆಯುಳ್ಳವರಾಗಿ ರಘುನಂದನನಂ ಕುರಿತು, ಎಲೈಶ್ರೀರಾಮನೆ! ಈ ಅಪರಾಧಿಗೆ ಮಾಡಿದ ದಂಡನೆಯು ವರರೂಪವಾಗಿಯೇ ಇರುವದೇ ಹೊರತು ಶಿಕ್ಷೆಯಾಗಿಲ್ಲ, ಎಂದು ನುಡಿಯಲೂ, ರಘುನಂದನನು ಮತ್ತಿಂತೆಂದನು ॥೬೭॥ ಎಲೈ ಮಂತ್ರಿಗಳಿರಾ! ಇವರ ತತ್ವವಂ ನೀವರಿತವರಲ್ಲ, ಈ ಪರಿ ಯಾವ ಕಾರಣದಿಂದ ಮಾಡಲ್ಪಟ್ಟಿತೋ, ಅದನ್ನು ಈ ನಾಯಿ ತಿಳಿದಿರಬಹುದು ಅದಂಕೇಳೋಣೆಂದು ಪೇಳಿ ಶ್ರೀರಾಮನು ನಾಯಿಯಂ ಕುರಿತು ಪ್ರಶ್ನೆಯಂಗೈಯಲೂ, ಆ ಸಾರಮೇಯವು ಮತ್ತಿಂತೆಂದು ಪೇಳಿದಂಥಾದ್ದಾಯಿತದೆಂತೆನೆ,—ಎಲೈ ರಘುನಂದನನೆ! ನಾನು ಗ್ರಾಮಾಧಿಕಾರಿಯಾಗಿ ಶಿಷ್ಟರ ಅನ್ನವಂ ಭುಜಿಸುತ್ತಾ ದೇವಬ್ರಾಹ್ಮಣರ ಪೂಜೆಯಲ್ಲಿಯೂ, ದಾಸಜನರಿಗೂ ಪರಿಚಾರವೃತ್ತಿಯಂ ಗೈಯುತ್ತಿರುವ ಸ್ತ್ರೀಯರಿಗೂ ಸಹ ವಿಭಾಗವಂಮಾಡಿ ಕೊಡುವದರಲ್ಲಿಯೂ ಅಧಿಕಾರಿಯಾಗಿ ದೈವದ್ರವ್ಯವಂ ರಕ್ಷಿಸುತ್ತಾ (ಅಂದರೆ ಪಾರಪತ್ಯೇಗಾರ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕ್ರೋಧಾನ್ವಿತೋವಿಪ್ರಸ್ತ್ಯಕ್ತಧರ್ಮೋಹಿತೇರತಃ । ಕ್ರೂರೋನೃಶಂಸಃಪುರುಷೋವಿದ್ವಾನ್ಮಾನೀನಧಾರ್ಮಿಕಃ ॥೨೦॥ ಕುಲಾನಿಪಾತಯತ್ಯೇಷಸಪ್ತಸಪ್ತಚರಾಘವ । ತಸ್ಮಾತ್ಸರ್ವಾಸ್ವವಸ್ಥಾಸುಕೌಲಪತ್ಯಂನರೋಚಯೇತ ॥೨೩॥ ಯಇಚ್ಛೇನ್ನರಕಂಗಂತುಂಸಪುತ್ರಪಶುಬಾಂಧವಃ । ದೇವೇಷ್ವಧಿಕೃತಃಸಸ್ಯಾದ್ಗೋಷುಚಬ್ರಾಹ್ಮಣೇಷುಚ॥೨೪॥ಬ್ರಹ್ಮಸ್ವಂದೇವತಾದ್ರವ್ಯಂಸ್ತ್ರೀಣಾಂಬಾಲಧನಂಚಯತ್ । ದತ್ತಂಹರತಿಯೋಭೂಯಇಷ್ಟೈಸ್ಸಹವಿನಶ್ಯತಿ ॥೨೫॥ ಬ್ರಾಹ್ಮಣದ್ರವ್ಯಮಾದತ್ತೇದೇವಾನಾಂಯಶ್ಚ ರಾಘವ । ಸದ್ಯಃಪತತಿಘೋರೇಸನರಕೇವೀಚಿಸಂಜ್ಞಿಕೇ ॥೨೬॥ಮನಸಾಪಿಹಿದೇವಸ್ವಂಬ್ರಹ್ಮಸ್ವಂವಾಯಇಚ್ಛತಿ । ನರಯಾನ್ನಿರಯಂಚೈವಪತತೇಸನರಾಧಮಃ ॥೨೭॥ ಏತಚ್ಛ್ರುತ್ವಾತುರಾಮೋವೈವಿಸ್ಮಯೋತ್ಫುಲ್ಲಲೋಚನಃ।

---

ಬಿಡಲ್ಪಟ್ಟ ಧರ್ಮವುಳ್ಳವನು, ಅಹಿತೇ- ಕೆಟ್ಟದ್ದನ್ನು ಮಾಡುವದರಲ್ಲಿ, ರತಃ-ಆಸಕ್ತಿಯುಳ್ಳವನು, ಕ್ರೂರಃ-ಕಠಿಣನು, ನೃಶಂಸಃಪುರುಷಃ-ಘಾತಕಪುರುಷನು, ವಿದ್ವಾನ್ಮಾನೀ-ಪಂಡಿತನೆಂಬದಾಗಿ ತಿಳಿದುಕೊಂಡಿರುವನು, ನಧಾರ್ಮಿಕಃ-ಧರ್ಮಿಷ್ಠನಲ್ಲ ॥೨೦॥ ಹೇ ರಾಘವ-ಎಲೈ ಶ್ರೀರಾಮನೆ, ಏಷಃ-ಈ ಸನ್ಯಾಸಿಯು, ಸಪ್ತಸಪ್ತಿಚ-ಏಳೇಳುಕುಲಗಳನ್ನು, ಪಾತಯಕುಲಾನಿ-ನರಕದಲ್ಲಿ ಹಾಕಿಸುತ್ತಾನೆ, ತಸ್ಮಾತ್-ಆ ಕಾರಣದ ದೆಸೆಯಿಂದ, ಸರ್ವಾಸ್ವವಸ್ಥಾಸು-ಎಲ್ಲಾ ಅವಸ್ಥೆಗಳಲ್ಲಿಯೂ, ಕೌಲಪತ್ಯಂ-ಧರ್ಮಾಧಿಕಾರವನ್ನು, ನರೋಚಯೇತ್-ಸಮ್ಮತಿಸಬಾರದು ॥೨೩॥ ಯಃ-ಯಾವ ಪುರುಷನು, ಸಪುತ್ರಪಶುಬಾಂಧವಃ-ಮಕ್ಕಳು ಪಶುಗಳು ಬಂಧುಗಳು ಇವರಿಂದೊಡಗೂಡಿದವನಾಗಿ, ನರಕಂ-ನರಕವನ್ನು, ಗಂತುಂ-ಹೊಂದುವದಕ್ಕೋಸ್ಕರ, ಇಚ್ಛೇತ್-ಅಪೇಕ್ಷಿಸುವನೊ, ಸಃ-ಆ ಪುರುಷನು, ದೇವೇಷು-ದೇವತೆಗಳಲ್ಲಿಯೂ, ಗೋಷುಚ-ಗೋವುಗಳಲ್ಲಿಯೂ, ಬ್ರಾಹ್ಮಣೇಷುಚ-ಬ್ರಾಹ್ಮಣರಲ್ಲಿಯೂ, ಅಧಿಕೃತಃ-ಅಧಿಕಾರವುಳ್ಳವನು, ಸ್ಯಾತ್-ಆಗುವನು ॥೨೪॥ ಯಃ-ಯಾವ ಪುರುಷನು, ಬ್ರಹ್ಮಸ್ವಂ-ಬ್ರಾಹ್ಮಣಸ್ವತ್ತಿನನ್ನು, ದೇವತಾದ್ರವ್ಯಂ-ದೈವಸ್ವವನ್ನು, ಸ್ತ್ರೀಣಾಂ-ಹೆಂಗಸರ ದ್ರವ್ಯವನ್ನು, ಬಾಲಧನಂ-ಹುಡುಗರ ದ್ರವ್ಯವನ್ನು, ಯತ್-ಯಾವದು, ದತ್ತಂ-ಕೊಡಲ್ಪಟ್ಟಿತ್ತೊ, ತತ್-ಅದನ್ನು, ಹರತಿ- ಅಪಹರಿಸುತ್ತಾನೊ, ಸಃ-ಆ ಪುರುಷನು, ಭೂಯಃ-ಮತ್ತು, ಇಷ್ಟೈಸ್ಸಹ-ಪ್ರೀತಿಪಾತ್ರರಾದ ಪುತ್ರಾದಿಗಳಿಂದೊಡಗೂಡಿ, ವಿನಶ್ಯತಿ-ನಾಶವಾಗುವನು ॥೨೫॥ ಹೆ ರಾಘವ-ಎಲೈ ಶ್ರೀರಾಮನೆ, ಯಃ-ಯಾವನು, ಬ್ರಾಹ್ಮಣದ್ರವ್ಯಂ-ಬ್ರಾಹ್ಮಣಸ್ವತ್ತನ್ನು, ದೇವಾನಾಂಚ-ದೇವದ್ರವ್ಯವನ್ನು, ಆದತ್ತೇ-ಅಪಹರಿಸುವನೊ, ಸಃ-ಆ ಪುರುಷನು, ವೀಚಿಸಂಜ್ಞಿಕೇ-ವೀಚಿಯೆಂಬ ಹೆಸರುಳ್ಳ, ಘೋರೇ-ಭಯಂಕರವಾದ, ನರಕೇ-ನರಕದಲ್ಲಿ, ಸದ್ಯಃ-ತಕ್ಷಣದಲ್ಲಿ, ಪತತಿ-ಬೀಳುತ್ತಾನೆ ॥ ಯಃ-ಯಾವ ಪುರುಷನನ್ನು, ಮನಸಾಪಿ-ಮನದಿಂದಲೂ, ದೇವಸ್ವಂ-ದೇವತಾದ್ರವ್ಯವನ್ನು, ಬ್ರಹ್ಮಸ್ವಂವಾ-ಬ್ರಾಹ್ಮಣಸ್ವತ್ತಿನನ್ನೆ ಆಗಲಿ, ಇಚ್ಛತಿ-ಅಪೇಕ್ಷಿಸುತ್ತಾನೊ, ಸನರಾಧಮಃ-ಆ ನೀಚಪುರುಷನು, ನಿರಯಾತ್-ನರಕದ ದೆಸೆಯಿಂದ, ನಿರಯಂಚೈವ-ನರಕದಲ್ಲಿಯೆ, ಪತತೇ-ಬೀಳುತ್ತಾನೆ, ಏತತ್-ಈ ವೃತ್ತಾಂತವನ್ನು, ಶ್ರುತ್ವಾ-ಕೇಳಿ, ರಾಮಃ-ಶ್ರೀರಾಮನು, ವಿಸ್ಮಯೋತ್ಫುಲ್ಲಲೋಚನಃ-ಆಶ್ಚರ್ಯದಿಂದ ವಿಸ್ತಾರವಾದ ನೇತ್ರಗಳುಳ್ಳವನಾದನು, ಮಹಾತೇಜಾಃ-ಮಹಾ ಸಾಮರ್ಥ್ಯವುಳ್ಳ, ಶ್ವಾಪಿ-ನಾಯಿಯೂ ಕೂಡ, ಯತಏವ-ಯಾವ ಪ್ರದೇಶದಿಂದ, ಆಗತಃ-ಬಂದಿತ್ತೊ, ತತಃ-ಅಲ್ಲಿಗೆ, ಅಗಚ್ಛತ್- ಹೋಯಿತು, ಮನಸ್ವೀ-ಒಳ್ಳೆ ಮನಸ್ಸುಳ್ಳದ್ದು, ಪೂರ್ವಜಾತಿಜ್ಞಃ-ಪೂರ್ವಜನ್ಮ ಸ್ಮರಣೆಯುಳ್ಳದ್ದು, ಜಾತಿಮಾತ್ರೇಣ-ಜಾತಿಯಿಂದ ಮಾತ್ರವೆ, ದೂಷಿತಃ-

---

ನಾಗಿ) ವಿನಯ ಸಂಪನ್ನನಾಗಿಯೂ,ಸತ್ಸ್ವಭಾವವುಳ್ಳವನಾಗಿಯೂ, ಸರ್ವಪ್ರಾಣಿಗಳ ಹಿತವನ್ನೆಸೈಯುತ್ತಿರುವನಾಗಿಯೂ ಇದ್ದೆನಾದಕಾರಣ ಈಗ ಇಂಥಾಭಯಂಕರವಾದ ಅವಸ್ಥೆಯಂ ಪೊಂದಿದೆನು ॥೨೨॥ ಈ ಬ್ರಾಹ್ಮಣನಾದರೆ ಕಡುಕೋಪವುಳ್ಳವನಾಗಿಯೂ, ಧರ್ಮವಂ ನೀಗಿದವನಾಗಿಯೂ, ಸರ್ವಜೀವರಾಶಿಗಳಿಗೆ ಹಿತವಂಸೈಯದಿರುವನಾಗಿಯೂ, ಕ್ರೂರನಾಗಿಯೂ, ಘಾತಕನಾಗಿಯೂ. ನಾನೇಪಂಡಿತನೆಂದರಿತು ಕೊಂಡಿರುವನಾಗಿಯೂ, ಅಧರ್ಮಿಷ್ಠನಾಗಿಯೂ ಇರುವನಾದಕಾರಣ ಸಪ್ತಕುಲಗಳನ್ನು ನರಕದಲ್ಲಿ ಕೆಡಹುವನು. ತಸ್ಮಾತ ಹ್ಯಾಗಾದರು ಕುಲಪತಿತ್ವವಂ ಸಮ್ಮತಿಸಬಾರದು. ಯಾವ ಪುರುಷನು ಪುತ್ರಾದಿಗಳ ಸಹಿತನಾಗಿ ನರಕದಲ್ಲಿರಬೇಕೆಂದಿಚ್ಛಿಸುವನೋ, ದೇವ ವಿಷಯದಲ್ಲಿಯೂ ಗೋವುಗಳವಿಷಯದಲ್ಲಿಯೂ, ಬ್ರಾಹ್ಮಣರ ವಿಷಯದಲ್ಲಿಯೂ, ಧರ್ಮಾಧಿಕಾರವಂ ಮಾಡುವಂಥಾವನಾಗುವನು ॥೨೪॥ ಬ್ರಹ್ಮಸ್ವವನ್ನುದೈವ ದ್ರವ್ಯವನ್ನು ಸ್ತ್ರೀದ್ರವ್ಯವನ್ನು, ಬಾಲಧನವನ್ನೂ ಇವುಗಳೆನ್ನೆಲ್ಲಾ ಯಾವ ಪುರುಷನು ಇಚ್ಛಿಸುವಂಥಾವ ನಾಗುವನೋ, ಅವನು ಇಷ್ಟರಿಂ ದೊಡಗೂಡಿ ನರಕದೊಳು ಬೀಳುವಂಥಾವನಾಗುವನು ॥೨೫॥ಎಲೈ ರಘುನಂದನನೆ!ಯಾವ ಪುರುಷನು ಬ್ರಾಹ್ಮಣ ದ್ರವ್ಯವನ್ನೂ ದೇವದ್ರವ್ಯವನ್ನೂಸಹ ಅಪಹರಿಸುವನೋ, ಅಂಥಾ ಪುರುಷನು ತಕ್ಷಣದಲ್ಲಿಯೆ ವೀಚಿಯೆಂಬ ನರಕದಲ್ಲಿ ಬಿದ್ದಿರುವನು ॥೨೬॥ ಮತ್ತೂ ಯಾವನರನು ದೈವಸ್ವವನ್ನೂ ಬ್ರಾಹ್ಮಣದ್ರವ್ಯವನ್ನು ತೆಗದುಕೊಳ್ಳಬೇಕೆಂದು ಮನದಿಂದಲಾದರೂ ಇಚ್ಛಿಸುವಂಥಾವ ನಾಗುವನೋ, ಆತನುಕ್ರಮವಾಗಿ ಒಂದು ನರಕದಿಂದ ಮತ್ತೊಂದು ನರಕವನ್ನು ಹೊಂದುವ ನಾಗುವನೆಂದು ನಾಯಿಯಿಂದ ಕೇಳಲ್ಪಟ್ಟ ವಾಕ್ಯವನ್ನು ಶ್ರೀರಾಮನು ಕೇಳಿ, ಆಶ್ಚರ್ಯದಿಂ ವಿಕಸಿತವಾದ ನೇತ್ರಗಳುಳ್ಳವನಾದನು, ಜಾತಿಮಾತ್ರದಿಂದ ದೂಷಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ವಾಪ್ಯಗಚ್ಛನ್ಮಹಾತೇಜಾಯತ ಏವಾಗತಸ್ತತಃ ॥೨೮॥ ಮನಸ್ವೀ ಪೂರ್ವಜಾತಿಜ್ಞೋ ಜಾತಿಮಾತ್ರೇಣ ದೂಷಿತಃ। ವಾರಾಣಸ್ಯಾಂ ತದಾ ಶ್ವಾ ವೈ ಪ್ರಾಯಂ ಚೈವಾವಿಶತ್ಸ್ವಯಮ್. ॥೨೯॥ —…*ಅಧಿಕಪಾಠಸ್ಸಮಾಪ್ತಃ.*…—

ತತಸ್ಸುಮಂತ್ರಸ್ತ್ವಾಗಮ್ಯ ರಾಘವಂ ವಾಕ್ಯಮಬ್ರವೀತ್ । ಏತೇ ನಿವಾರಿತಾ ರಾಜನ್ ದ್ವಾರಿ ತಿಷ್ಠಂತಿ ತಾಪಸಾಃ ॥೩॥ ಭಾರ್ಗವಂ ಚ್ಯವನಂ ನಾಮ ಪುರಸ್ಕೃತ್ಯ ಮಹರ್ಷಯಃ । ದರ್ಶನಂ ತೇ ಮಹಾರಾಜ ಚೋದಯಂತಿ ಕೃತತ್ವರಾಃ । ಪ್ರೀಯಮಾಣಾ ನರವ್ಯಾಘ್ರ ಯಮುನಾತೀರವಾಸಿನಃ ॥೪॥ ತಸ್ಯ ತದ್ವಚನಂ ಶ್ರುತ್ವಾ ರಾಮಃ ಪ್ರೋವಾಚ ಧರ್ಮವಿತ್ । ಪ್ರವೇಶ್ಯಂತಾಂ ಮಹಾತ್ಮಾನೋ ಭಾರ್ಗವಪ್ರಮುಖಾ ದ್ವಿಜಾಃ ॥೫॥ ದ್ವಾಸ್ಥಸ್ತ್ವಾಜ್ಞಾಂ ಪುರಸ್ಕೃತ್ಯ ರಾಜ್ಞೋ ಮೂರ್ಧ್ನಿ ಕೃತಾಂಜಲಿಃ। ಪ್ರವೇಶಯಾಮಾಸ ತತಸ್ತಾಪಸಾನ್ ಧರ್ಮಸಂಹಿತಾನ್ ॥೬॥ ಶತಂ ಸಮಧಿಕಂ ತತ್ರ ದೀಪ್ಯಮಾನಂ ಸ್ವತೇಜಸಾ । ಪ್ರವಿಷ್ಟಂ ರಾಜಭವನಂ ತಾಪಸಾನಾಂ ಮಹಾತ್ಮನಾಮ್ ॥೭॥ ತೇ ದ್ವಿಜಾಃ ಪೂರ್ಣಕಲಶೈಸ್ಸರ್ವತೀರ್ಥಾಂಬುಸತ್ಕೃತಮ್। ಗೃಹೀತ್ವಾ ಫಲಮೂಲಂ ಚ ರಾಮಸ್ಯಾಭ್ಯಾಹರನ್ ಬಹು ॥೮॥ ಪ್ರತಿಗೃಹ್ಯ ಮಹರ್ಷೀಣಾಂ ರಾಮಃ ಪ್ರೀತಿಪುರಸ್ಕೃತಮ್। ತೀರ್ಥೋದ

---

ದೂಷಿಸಲ್ಪಟ್ಟದ್ದು, ತದಾ—ಆ ವೇಳೆಯಲ್ಲಿ, ಶ್ವಾಪಿ—ನಾಯಿಯಾದರೆ, ವಾರಾಣಸ್ಯಾಂ—ಕಾಶಿಯಲ್ಲಿ, ಸ್ವಯಮೇವ—ತಾನೆ, ಪ್ರಾಯಂ— ಪ್ರಾಯೋಪವೇಶವನ್ನು, ಆವಿಶತ್—ಪ್ರವೇಶಿಸಿತು. ॥೨೯॥ —…*ಇತಿ ಅಧಿಕಪಾಠ ಸ್ಸಮಾಪ್ತಃ.*…—

ತತಃ—ಬಳಿಕ, ಸುಮಂತ್ರಸ್ತು—ಸುಮಂತ್ರನಾದರೆ, ಆಗಮ್ಯ—ಬಂದು, ರಾಘವಂ—ಶ್ರೀರಾಮನಂ ಕುರಿತು, ವಾಕ್ಯಂ—ಮಾತನ್ನು, ಅಬ್ರವೀತ್— ನುಡಿದನು, ಹೆ ರಾಜನ್—ಎಲೈ ಅರಸೆ, ಏತೇ ತಾಪಸಾಃ—ಈ ಋಷಿಗಳು, ನಿವಾರಿತಾಃ—ತಡೆಮಾಡಲ್ಪಟ್ಟವರಾಗಿ, ದ್ವಾರಿ—ಬಾಗಿಲಲ್ಲಿ, ತಿಷ್ಠಂತಿ—ಇದ್ದಾರೆ॥೩॥ ಹೇ ಮಹಾರಾಜ—ಎಲೈ ಮಹಾರಾಜನೆ, ಹೆ ನರವ್ಯಾಘ್ರ—ಎಲೈ ಪುರುಷಶ್ರೇಷ್ಠನೆ, ಭಾರ್ಗವಂ ಚ್ಯವನಂ ನಾಮ—ಭಾರ್ಗವಚ್ಯವನನೆಂಬ ಮುನಿಯನ್ನು, ಪುರಸ್ಕೃತ್ಯ—ಮುಂದುಮಾಡಿಕೊಂಡು, ಯಮುನಾತೀರವಾಸಿನಃ—ಯಮುನಾನದಿಯ ತೀರದಲ್ಲಿರುವ, ಮಹರ್ಷಯಃ—ಮಹಾಮುನಿಗಳು, ಪ್ರೀಯಮಾಣಾಃ—ಸಂತೋಷಗೊಂಡವರಾಗಿ, ತೇ—ನಿನ್ನ, ದರ್ಶನಂ—ದರ್ಶನವನ್ನು ಕುರಿತು, ಕೃತತ್ವರಾಃ—ಮಾಡಲ್ಪಟ್ಟ ತ್ವರೆಯುಳ್ಳವರಾಗಿ, ಚೋದಯಂತಿ—ತಿಳುಹಿಸೆಂದು ಪ್ರೇರೇಪಿಸುತ್ತಿದ್ದಾರೆ ॥೪॥ ಧರ್ಮವಿತ್—ಧರ್ಮಜ್ಞನಾದ, ರಾಮಃ—ಶ್ರೀರಾಮನು, ತಸ್ಯ—ಆ ಸುಮಂತ್ರನ, ತದ್ವಚನಂ—ಆ ಮಾತನ್ನು, ಶ್ರುತ್ವಾ—ಕೇಳಿ, ಮಹಾತ್ಮಾನಃ—ಮಹಾ ಮನಸ್ವಿಗಳಾದ, ಭಾರ್ಗವಪ್ರಮುಖಾಃ—ಭಾರ್ಗವಚ್ಯವನನೆ ಮೊದಲಾಗಿ ಉಳ್ಳ, ದ್ವಿಜಾಃ—ಬ್ರಾಹ್ಮಣರು, ಪ್ರವೇಶ್ಯಂತಾಂ—ಪ್ರವೇಶಮಾಡಿಸಲ್ಪಡಲಿ, ಇತಿ—ಇಂತೆಂದು, ಪ್ರೋವಾಚ—ನುಡಿದನು ॥೫॥ ದ್ವಾಸ್ಥಸ್ತು—ದ್ವಾರಪಾಲಕನಾದರೆ, ರಾಜ್ಞಃ—ರಾಜನ, ಆಜ್ಞಾಂ—ಅಪ್ಪಣೆಯನ್ನು, ಪುರಸ್ಕೃತ್ಯ—ಮುಂದುಮಾಡಿ, ಮೂರ್ಧ್ನಿ—ಶಿರಸ್ಸಿನಲ್ಲಿ, ಕೃತಾಂಜಲಿಃ—ಮಾಡಲ್ಪಟ್ಟ ಅಂಜಲಿಯುಳ್ಳವನಾಗಿ, ತತಃ—ಬಳಿಕ, ಧರ್ಮಸಂಹಿತಾನ್— ಧರ್ಮಬದ್ಧರಾದ, ತಾಪಸಾನ್—ಋಷಿಗಳನ್ನು, ಪ್ರವೇಶಯಾಮಾಸ—ಪ್ರವೇಶಮಾಡಿಸಿದನು ॥೬॥ ಮಹಾತ್ಮನಾಂ—ಮಹಾ ಮನಸ್ವಿಗಳಾದ, ತಾಪಸಾನಾಂ—ಮುನಿಗಳ, ಸ್ವತೇಜಸಾ—ಸ್ವಕೀಯವಾದ ಬ್ರಹ್ಮತೇಜಸ್ಸಿನಿಂದ, ದೀಪ್ಯಮಾನಂ—ಹೊಳೆಯುತ್ತಿರುವ, ಸಮಧಿಕಂ—ಕೊಂಚ ಹೆಚ್ಚು ಸಂಖ್ಯೆಯುಳ್ಳ, ಶತಂ—ನೂರು ಸಂಖ್ಯೆಯು, ತತ್ರ—ಆ ವೇಳೆಯಲ್ಲಿ, ರಾಜಭವನಂ—ಅರಮನೆಯನ್ನು, ಪ್ರವಿಷ್ಟಂ—ಪ್ರವೇಶಿಸಿತು ॥೭॥ ತೇ ದ್ವಿಜಾಃ—ಆ ಬ್ರಾಹ್ಮಣರು, ಪೂರ್ಣಕಲಶೈಃ—ಪೂರ್ಣಕುಂಭಗಳಿಂದ, ಸತ್ಕೃತಂ—ಪೂಜಾರ್ಥವಾಗಿ ತರಲ್ಪಟ್ಟ, ಸರ್ವತೀರ್ಥಾಂಬು—ಸಮಸ್ತವಾದ ತೀರ್ಥಗಳ ಉದಕವನ್ನು, ಫಲಮೂಲಂ ಚ—ಫಲ—ಹಣ್ಣುಗಳನ್ನು, ಮೂಲಂ ಚ—ಕಂದಮೂಲಗಳನ್ನೂ, ಗೃಹೀತ್ವಾ—ತೆಗದುಕೊಂಡು, ರಾಮಸ್ಯ—ಶ್ರೀರಾಮನಿಗೆ, ಬಹು—ಅನೇಕ ಪ್ರಕಾರವಾಗಿ, ಅಭ್ಯಾಹರನ್—ಕಾಣಿಕೆ ಮಾಡಿದರು ರಾಮಃ—ಶ್ರೀರಾಮನು, ಮಹರ್ಷೀಣಾಂ—ಮಹಾಮುನಿಗಳ, ಪ್ರೀತಿಪುರಸ್ಕೃತಂ—ವಿಶ್ವಾಸಪುರಸ್ಸರವಾಗಿ, ಸರ್ವಾಣಿ—ಸಮಸ್ತವಾದ, ತೀರ್ಥೋದಕಾನಿ—

---

ತವಾದರೂ ಪೂರ್ವಜಾತಿ ಸ್ಮರಣೆಯುಳ್ಳ, ಆ ಸಾರಮೇಯವಾದರೆ ಬಂದಂತೆಯೇ ಹೊರಟು ಕಾಶೀ ಪುರಿಗೆ ಪೋಗಿ ಪ್ರಾಯೋಪವೇಶನಂಗೈದಂಥಾದ್ದಾಯಿತು. —…ಅಧಿಕಪಾಠಸ್ಸಮಾಪ್ತಃ…—

ಬಳಿಕ ಸುಮಂತ್ರನು ಬಂದಂಥಾವನಾಗಿ, ಶ್ರೀರಾಮನಂ ಕುರಿತು, ಎಲೈ ಶ್ರೀರಾಮನೆ! ಯಮುನಾತೀರ ವಾಸಿಗಳಾದ ಮತ್ತು ಭಾರ್ಗವಚ್ಯವನನೇ ಮೊದಲಾದ ತಾಪಸೋತ್ತಮರೆಲ್ಲರು, ನಿನ್ನ ಸಂದರ್ಶನಾರ್ಥವಾಗಿ ಬಂದು ಬಾಗಿಲಲ್ಲಿ ಕಾದುಕೊಂಡಿದ್ದಾರೆ. ಮಹಾ ಸಂತೋಷಚಿತ್ತರಾಗಿ ಸನ್ನಿಧಿಯಲ್ಲಿ ತಿಳುಹಿಸಬೇಕೆಂದು ನನ್ನನ್ನು ಕಳುಹಿಸಿಕೊಟ್ಟಿದ್ದಾರೆಂದು ನುಡಿದವನಾಗಲೂ, ಮಹಾ ಧರ್ಮಿಷ್ಠನಾದ ಶ್ರೀರಾಮನು ಆ ವಾಕ್ಯವಂ ಕೇಳಿ, ದ್ವಾರಪಾಲಕನಂ ಕುರಿತು, ಎಲೈ ದ್ವಾರಪಾಲಕನೆ! ಬ್ರಾಹ್ಮಣೋತ್ತಮರನ್ನು ಒಳಗೆ ಬಿಡುವಂಥಾವನಾಗೆಂದು ನಿರೂಪಿಸಿದವನಾದನು ಬಳಿಕ ಆ ದ್ವಾರಪಾಲಕನಾದರೆ ಒಡೆಯನ ಆಜ್ಞೆಯಂ ಸ್ವೀಕರಿಸಿ, ಅಂಜಲಿಬದ್ಧನಾಗಿ, ಮಹಾ ಧರ್ಮಿಷ್ಠರಾದ ಆ ತಾಪಸೋತ್ತಮರಂ ಪ್ರವೇಶ ಮಾಡಿಸಿದಂಥಾವನಾದನು ॥೬॥ ಆ ಬಾಗಿಲಲ್ಲಿದ್ದ ಮತ್ತೂ ನೂರುಮಂದಿಗೆ ಸ್ವಲ್ಪ ಹೆಚ್ಚಾದ ಆ ಬ್ರಾಹ್ಮಣೋತ್ತಮರೆಲ್ಲರು, ಕಳಶಗಳಲ್ಲಿ ತುಂಬಿದ ತೀರ್ಥವನ್ನೂ ಕಂದಮೂಲಗಳನ್ನು ತೆಗದುಕೊಂಡು, ಅರಮನೆಯಂ ಪ್ರವೇಶಿಸಿ, ಶ್ರೀರಾಮನಿಗೆ ಸಮರ್ಪಿಸಿದಂಥಾವರಾದರು ॥೮॥ ಬಳಿಕ ಶ್ರೀರಾಮನು ವಿಶ್ವಾಸಪೂರ್ವಕವಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಾನಿಸರ್ವಾಣಿಫಲಾನಿವಿವಿಧಾನಿಚ ॥೯॥ ಉವಾಚಚಮಹಾಬಾಹುಸ್ಸರ್ವಾನೇವಮಹಾಮುನೀನ್ । ಇಮಾನ್ಯಾಸನಮುಖ್ಯಾನಿಯಥಾರ್ಹಮುಪವಿಶ್ಯತಾಮ್ ॥೧೦॥ ರಾಮಸ್ಯಭಾಷಿತಂಶ್ರುತ್ವಾ ಸರ್ವಏವಮಹರ್ಷಯಃ । ಬೃಸೀಷುರುಚಿರಾಖ್ಯಾಸು ನಿಷೇದುಃಕಾಂಚನೇಷುಚ ॥೧೧॥ ಉಪವಿಷ್ಟಾನೃಷೀಂಸ್ತತ್ರದೃಷ್ಟ್ವಾ ಪರಪುರಂಜಯಃ । ಪ್ರಯತಃಪ್ರಾಂಜಲಿರ್ಭೂತ್ವಾ ರಾಘವೋವಾಕ್ಯಮಬ್ರವೀತ್ ॥೧೨॥ ಕಿಮಾಗಮನೇಕಾರ್ಯಂವಃಕಿಂಕರೋಮಿಸಮಾಹಿತಃ । ಆಜ್ಞಾಪ್ಯೋಽಹಂಮಹರ್ಷೀಣಾಂ ಸರ್ವಕಾಮಕರಸ್ಸುಖಂ ॥೧೩॥ ಇದಂರಾಜ್ಯಂಚಸಕಲಂಜೀವಿತಂಚಹೃದಿಸ್ಥಿತಮ್ । ಸರ್ವಮೇತದ್ದ್ವಿಜಾರ್ಥಂಮೇಸತ್ಯಮೇತದ್ಬ್ರವೀಮಿವಃ ॥೧೪॥ ತಸ್ಯತದ್ವಚನಂಶ್ರುತ್ವಾ ಸಾಧುವಾದೋಮಹಾನಭೂತ್ । ಋಷೀಣಾಮುಗ್ರತಪಸಾಂಯಮುನಾತೀರವಾಸಿನಾಮ್ ॥೧೫॥ ಊಚುಶ್ಚತೇಮಹಾತ್ಮಾನೋಹರ್ಷೇಣಮಹತಾನ್ವಿತಾಃ । ಉಪಪನ್ನಂನರಶ್ರೇಷ್ಠ ತವೈವಭುವಿನಾನ್ಯತಃ ॥೧೬॥ ಬಹವಃಪಾರ್ಥಿವಾರಾಜನ್ ಅತಿಕ್ರಾಂತಾಮಹಾಬಲಾಃ । ಕಾರ್ಯಗೌರವಮಜ್ಞಾತ್ವಾ ಪ್ರತಿಜ್ಞಾಂನಸೋ

---

ತೀರ್ಥೋದಕಗಳನ್ನು, ವಿವಿಧಾನಿ–ನಾನಾಬಗೆಗಳಾದ, ಫಲಾನಿಚ–ಫಲಗಳನ್ನೂ ಸಹ, ಪ್ರತಿಗೃಹ್ಯ–ಪರಿಗ್ರಹಿಸಿ ॥೯॥ ಮಹಾಬಾಹುಃ–ಮಹಾ ಭುಜಪರಾಕ್ರಮಿಯಾದ ಶ್ರೀರಾಮನು, ಸರ್ವಾನೇವ–ಸಮಸ್ತರಾದ, ಮಹಾಮುನೀನ್–ಮಹರ್ಷಿಗಳಂ ಕುರಿತು, ಇಮಾನಿ–ಈ, ಆಸನಮುಖ್ಯಾನಿ–ಮುಖ್ಯವಾದ ಪೀಠಗಳಲ್ಲಿ, ಯಥಾರ್ಹಂ–ಯಥಾಯೋಗ್ಯವಾಗಿ, ಉಪವಿಶ್ಯತಾಂ–ಕುಳಿತುಕೊಳ್ಳಲ್ಪಡಲಿ, ಇತಿ–ಇಂತೆಂದು,ಉವಾಚ–ಪೇಳಿದನು॥೧೦॥ ರಾಮಸ್ಯ–ಶ್ರೀರಾಮನ, ಭಾಷಿತಂ–ಮಾತನ್ನು, ಶ್ರುತ್ವಾ–ಕೇಳಿ, ಸರ್ವಏವ–ಸಮಸ್ತರಾದ, ಮಹರ್ಷಯಃ–ಮುನಿಗಳು, ರುಚಿರಾಖ್ಯಾಸು–ಮನೋಹರವಾದ ಕಾಂತಿಯುಳ್ಳ, ಬೃಸೀಷು–ದರ್ಭಾಸನಗಳಲ್ಲಿಯೂ, ಕಾಂಚನೇಷುಚ–ಭಂಗಾರ ವಿಕಾರವಾದ ಆಸನಗಳಲ್ಲಿಯೂ, ನಿಷೇದುಃ–ಕುಳಿತುಕೊಂಡರು ॥೧೧॥ ತತ್ರ–ಆ ಪೀಠಗಳಲ್ಲಿ, ಉಪವಿಷ್ಟಾನ್–ಕುಳಿತುಕೊಂಡಿರುವ, ಋಷೀನ್–ಮುನಿಗಳನ್ನು, ದೃಷ್ಟ್ವಾ–ಕಂಡು, ಪರಪುರಂಜಯಃ–ಶತ್ರುಸಂಹಾರಕನಾದ, ಪ್ರಯತಃ–ಏಕಾಗ್ರಚಿತ್ತನಾದ, ರಾಘವಃ–ಶ್ರೀರಾಮನು, ಪ್ರಾಂಜಲಿಃ–ಅಂಜಲಿಬದ್ಧನಾದವನು, ಭೂತ್ವಾ–ಆಗಿ, ವಾಕ್ಯಂ–ಮಾತನ್ನು, ಅಬ್ರವೀತ್–ನುಡಿದನು, ವಃ–ನಿಮ್ಮ ಸಂಬಂಧವಾದ, ಆಗಮನಕಾರ್ಯಂ–ಬಂದಕಾರ್ಯವು, ಕಿಂ–ಏನು, ಸಮಾಹಿತಃ–ಸಮಾಧಾನ ಚಿತ್ತನಾಗಿ, ಕಿಂಕರೋಮಿ–ಏನು ಮಾಡಲಿ, ಸರ್ವಕಾಮಕರಃ– ಸಕಲ ಕೋರಿಕೆಗಳನ್ನು ಮಾಡಿಕೊಡುತ್ತಿರುವ, ಅಹಂ–ನಾನು, ಮಹರ್ಷೀಣಾಂ–ಮಹಾಮುನಿಗಳಿಗೆ, ಸುಖಂ–ಅನಾಯಾಸವಾಗಿ, ಆಜ್ಞಾಪ್ಯಃ–ಆಜ್ಞಾಪಿಸತಕ್ಕವನಾಗಿಧೇನೆ॥೧೩॥ ಸಕಲಂ–ಸಮಸ್ತವಾದ, ಇದಂರಾಜ್ಯಂತು–ಈ ರಾಜ್ಯವೂ, ಜೀವಿತಂಚ–ಪ್ರಾಣವೂ, ಹೃದಿ–ಮನದಲ್ಲಿ, ಸ್ಥಿತಂ–ಇರುವ, ಮೇ–ನನ್ನ, ಏತತ್ಸರ್ವಂ–ಈ ಸಮಸ್ತವೂ, ದ್ವಿಜಾರ್ಥಂ–ಬ್ರಾಹ್ಮಣರ ನಿಮಿತ್ತವಾದದ್ದು, ವಃ–ನಿಮ್ಮಗಳಿಗೆ, ಏತತ್–ಇದನ್ನು, ಸತ್ಯಂ–ಯಥಾರ್ಥವಾಗಿ, ಬ್ರವೀಮಿ–ಪೇಳುತ್ತೇನೆ ॥೧೪॥ ತಸ್ಯ–ಆ ಶ್ರೀರಾಮನ, ತದ್ವಚನಂ–ಆ ಮಾತನ್ನು, ಶ್ರುತ್ವಾ–ಕೇಳಿ, ಉಗ್ರತಪಸಾಂ–ಭಯಂಕರವಾದ ತಪಸ್ಸುಳ್ಳ, ಯಮುನಾತೀರವಾಸಿನಾಂ–ಯಮುನಾನದಿಯ ಧಡದಲ್ಲಿ ವಾಸಿಸುತ್ತಿರುವ, ಋಷೀಣಾಂ–ಮುನಿಗಳ, ಮಹಾನ್–ದೊಡ್ಡದಾದ, ಸಾಧುವಾದಃ–ಒಳ್ಳೇದೊಳ್ಳೇದೆಂಬ ವಾದವು, ಅಭೂತ್–ಆಯಿತು ॥೧೫॥ ಮಹತಾಹರ್ಷೇಣ–ಬಹಳ ಸಂತೋಷದಿಂದ, ಅನ್ವಿತಾಃ–ಕೂಡಿಕೊಂಡಿರುವ, ಮಹಾತ್ಮಾನಃ–ಮಹಾ ಮನಸ್ವಿಗಳಾದ, ತೇ–ಆ ಮಹರ್ಷಿಗಳು, ಹೇನರಶ್ರೇಷ್ಠ–ಎಲೈ ಉತ್ತಮಪುರುಷನೆ, ಭುವಿ–ನೆಲದಲ್ಲಿ, ತವೈವ–ನಿನಿಗೇನೆ, ಇದಂ–ಈ ಮಾತು, ಉಪಪನ್ನಂ– ಒಪ್ಪಿಧೆ, ಅನ್ಯತಃ–ಮತ್ತೊಬ್ಬನಿಗೆ, ನ–ಇಲ್ಲ ॥೧೬॥ ಹೆ ರಾಜನ್–ಎಲೈ ಶ್ರೀರಾಮನೆ, ಮಹಾಬಲಾಃ–ಮಹಾಬಲಿಷ್ಠರಾದ, ಬಹವಃ–ಅನೇಕರಾದ, ಪಾರ್ಥಿವಾಃ– ಅರಸ

---

ಗಿ ಆ ಮಹರ್ಷಿಗಳು ಸಮರ್ಪಿಸಿದಂಥಾ ಆ ತೀರ್ಥೋದಕಗಳನ್ನೂ, ನಾನಾವಿಧವಾದ ಫಲಗಳನ್ನು ಇವುಗಳನ್ನೆಲ್ಲ ತೆಗದುಕೊಂಡು, ಆ ತಾಪಸರಂ ಕುರಿತು, ಎಲೈ ಮಹಾಮುನಿಗಳಿರಾ ! ಈ ಪೀಠಂಗಳಲ್ಲಿ ಕುಳಿತುಕೊಳ್ಳಿರೆಂದು ನಿರೂಪಿಸಿದವನಾಗಲೂ, ಆ ವಾಕ್ಯವಂ ಕೇಳಿ, ಮಹಾಮುನಿಗಳೆಲ್ಲರು ಮನೋಹರವಾದ ಕಾಂತಿಯುಳ್ಳ ದರ್ಭಾಸನಗಳಲ್ಲಿಯೂ, ಸುವರ್ಣವಿಕಾರವಾದ ಪೀಠಗಳಲ್ಲಿಯೂ, ಕುಳಿತುಕೊಂಡಂಥಾವರಾದರು ॥೧೧॥ ಆ ಸಭೆಯಲ್ಲಿ ಕುಳಿತಿರುವ ಆ ಮಹರ್ಷಿಗಳಂ ಕಂಡು, ಶ್ರೀರಾಮನು ಅಂಜಲಿಬದ್ಧನಾಗಿ ಅವರುಗಳಂ ಕುರಿತು, ಎಲೈ ಮಹಾಮುನಿಗಳಿರಾ ! ತಾವು ಬಂದಕಾರ್ಯವೇನು, ನಾನು ಸಾವಧಾನಚಿತ್ತನಾಗಿ ಯಾವಕಾರ್ಯವಂ ಗೈಯಲಿ ತಮ್ಮಿಂದ ಆಜ್ಞಾಪಿಸಲ್ಪಟ್ಟವನಾಗಿ ಸಮಸ್ತ ಅಭಿಲಾಷೆಗಳನ್ನು ಸುಖವಾಗಿ ಮಾಡುವೆನು ॥೧೩॥ ಈ ರಾಜ್ಯವೂ ಎನ್ನ ಹೃದಯದಲ್ಲಿರುವ ಪ್ರಾಣಗಳೂ, ಇದೆಲ್ಲ ಬ್ರಾಹ್ಮಣ ಪ್ರೀತಿಗಾಗಿಯೆ ಸತ್ಯವಾಗಿರುವದೆಂದು ನಿರೂಪಿಸಿದವನಾಗಲೂ, ಆ ಯಮುನಾತೀರವಾಸಿಗಳಾದ ಮಹರ್ಷಿಗಳೆಲ್ಲರು ಬಹಳ ಚನ್ನಾಗಿಧೆಯೆಂದು ಶ್ಲಾಘಿಸಿದಂಥಾವರಾಗಿ ಎಲೈ ರಘುಶ್ರೇಷ್ಠನೇ ! ಈ ಭೂಮಂಡಲದಲ್ಲಿ ಈರೀತಿ ಪೇಳುವ ಮಹಾನುಭಾವನು ಮತ್ತಾರೂ ಇಲ್ಲ, ಈಮಾತುನಿನಿಗೆ ಸಲ್ಲುವದು, ಮಹಾಬಲವಂತರಾದ ಅನೇಕನೃಂದಿ ರಾಜರುಗಳು, ಕಾರ್ಯ ಗುರುತ್ವವಂ ತಿಳಿಯದೆ ಪ್ರತಿಜ್ಞೆಯಂ ಗೈಯಲಾರರು, ನೀನಾದರೆ ಬ್ರಾಹ್ಮಣ ಗೌರವದಿಂದ ಆಕಾರಣವನ್ನರಿಯದೆ ಪ್ರತಿಜ್ಞೆಯಂ ಮಾಡಿದಂಥಾವನಾದೆ. ನೀನೀಕಾರ್ಯವಂ ಮಾಡುವದಕ್ಕೂ, ಋಷಿಗಳನ್ನೆಲ್ಲ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಷ್ಯರಭೋಚರ್ಯ ॥೧೭॥ ತ್ವಯಾಪುನರ್ಬ್ರಾಹ್ಮಣಗೌರವಾದಿಯಂಕೃತಾಪ್ರತಿಜ್ಞಾಹ್ಯನವೇಕ್ಷ್ಯಕಾರಣಮ್ । ಕುರುಷ್ವ ಕರ್ತಾಹ್ಯಸಿನಾತ್ರಸಂಶಯೋಮಹಾಭಯಾತ್ತ್ರಾತುಮೃಷೀಂಸ್ತ್ವಮರ್ಹಸಿ ... ॥೧೮॥

—···✻ಇತಿ ಶ್ರೀಮದುತ್ತರರಾಮಾಯಣೆ ಷಷ್ಟಿತಮಸ್ಸರ್ಗಃ.✻···—

ಏವಂಬ್ರುವಾಣೇಷ್ವೃಷಿಷುಕಾಕುತ್ಸ್ಥೋವಾಕ್ಯಮಬ್ರವೀತ್। ಕಿಂಕಾರ್ಯಂಬ್ರೂತಭವತಾಂಭಯಂನಾಶಯಿತಾಸ್ಮಿವಃ ॥೧॥ ತಥಾವದತಿಕಾಕುತ್ಸ್ಥೇಭಾರ್ಗವೋವಾಕ್ಯಮಬ್ರವೀತ್। ಭಯಂನಃಶೃಣುಯನ್ಮೂಲಂದೇಶಸ್ಯಚನರೇಶ್ವರ ॥೨॥ ಪೂರ್ವಂಕೃತಯುಗೇರಾಮದೈತೇಯಸ್ಸುಮಹಾಬಲಃ । ಲೋಲಾಪುತ್ರೋಭವಜ್ಜ್ಯೇಷ್ಠೋ ಮಧುರ್ನಾಮಮಹಾಬಲಃ ॥೩॥ ಬ್ರಹ್ಮಣ್ಯಶ್ಚಶರಣ್ಯಶ್ಚಬುದ್ಧ್ಯಾಚಪರಿನಿಷ್ಠಿತಃ । ಸುರೈಶ್ಚಪರಮೋದಾರೈಃಪ್ರೀತಿಸ್ತಸ್ಯಾತುಲಾಭವತ್॥೪॥ ಸಮಧುರ್ವೀರ್ಯಸಂಪನ್ನೋಧರ್ಮೇಣಸುಸಮಾಹಿತಃ । ಬಹುವರ್ಷಸಹಸ್ರಾಣಿರುದ್ರಪ್ರೀತ್ಯಾಕರೋತ್ತಪಃ ॥೫॥ ರುದ್ರಃಪ್ರೀತೋ

---

ರು, ಕಾರ್ಯಗೌರವಂ–ಕಾರ್ಯಾತಿಶಯವನ್ನು, ಅಜ್ಞಾತ್ವಾ–ತಿಳಿಯದೆ,ಅತಿಕ್ರಾಂತಾಃ–ಅತಿಕ್ರಮಿಸಿದವರಾಗಿ,ಪ್ರತಿಜ್ಞಾಂ–ಶಪಥವನ್ನು,ನಾಭ್ಯಚೋದಯನ್–ಸಂಮತಿಸದೆ ಹೋದರು ॥೧೭॥ ತ್ವಯಾಪುನಃ–ನಿನ್ನಿಂದಾದರೆ, ಬ್ರಾಹ್ಮಣಗೌರವಾತ್–ಬ್ರಾಹ್ಮಣರಲ್ಲಿ ಗುರುತ್ವದ ದೆಸೆಯಿಂದ, ಕಾರಣಂ–ಕಾರಣವನ್ನು, ಅನವೇಕ್ಷ್ಯ–ಕಾಣದೆ, ಪ್ರತಿಜ್ಞಾ–ಪ್ರತಿಜ್ಞೆಯು, ಕೃತಾಹಿ–ಮಾಡಲ್ಪಟ್ಟಿತಷ್ಟೆ, ಕುರುಷ್ವ–ಮಾಡು, ಕರ್ತಾ– ಕರ್ತೃತ್ವವುಳ್ಳವನು, ಅಸಿ– ಆಗಿದ್ದಿ, ಅತ್ರ–ಈ ಅರ್ಥದಲ್ಲಿ, ಸಂಶಯಃ–ಸಂದೇಹವು, ನ–ಇಲ್ಲ, ಮಹಾಭಯಾತ್–ಮಹಾ ಭೀತಿಯ ದೆಸೆಯಿಂದ, ಋಷೀನ್–ಮುನಿಗಳನ್ನು,ತ್ರಾತುಂ–ಸಂರಕ್ಷಣೆಮಾಡುವದಕ್ಕೋಸ್ಕರ, ತ್ವಂ–ನೀನು, ಅರ್ಹಸಿ–ಯೋಗ್ಯನಾಗು. ॥೧೮॥

—···✻ಇತಿ ಶ್ರೀಮದುತ್ತರ ರಾಮಾಯಣೆಷಷ್ಟಿತಮಸ್ಸರ್ಗಃ.✻···—

ಏವಂ–ಈಪರಿಯಾಗಿ, ಋಷಿಷು–ಬ್ರಾಹ್ಮಣರು, ಬ್ರುವಾಣೇಷುಸತ್ಸು–ಹೇಳುವಂಥಾವರಾಗುತ್ತಿರಲಿಕಾಗಿ, ಕಾಕುತ್ಸ್ಥಃ–ಶ್ರೀರಾಮನು, ಭವತಾಂ–ನಿಮ್ಮಗಳ, ಕಾರ್ಯಂ–ಕೆಲಸವು, ಕಿಂ–ಯೇನು, ಬ್ರೂತ–ಹೇಳಿರಿ, ಅಹಂ–ನಾನು, ಭಯಂ–ಭೀತಿಯನ್ನು, ನಾಶಯಿತಾಸ್ಮಿ–ಹೋಗಲಾಡಿಸುವೆನು, ಇತಿ–ಇಂತೆಂದು, ವಾಕ್ಯಂ–ಮಾತನ್ನು, ಅಬ್ರವೀತ್–ನುಡಿದನು, ॥೧॥ ಕಾಕುತ್ಸ್ಥೇ–ಶ್ರೀರಾಮನು, ತಥಾ–ಅಪರಿಯಾಗಿ, ವದತಿಸತಿ–ಹೇಳುವಂಥಾವನಾಗುತಿರಲಿಕಾಗಿ, ಭಾರ್ಗವಃ–ಭಾರ್ಗವ ಚ್ಯವನನೆಂಬ ಋಷಿಯು, ಹೇನರೇಶ್ವರ–ಎಲೈನರಪತಿಯೇ, ನಃ–ನಮಿಗೂ, ದೇಶಸ್ಯಚ–ದೇಶಕ್ಕೂ, ಭಯಂ–ಭೀತಿಯು, ಯನ್ಮೂಲಂ–ಯಾವದು ಮೂಲಕಾರಣವಾಗಿ ಉಳ್ಳದ್ದೋ, ತತ್–ಅದನ್ನು, ಶೃಣು–ಕೇಳು, ಇತಿ–ಇಂತೆಂದು, ವಾಕ್ಯಂ–ಮಾತನ್ನು, ಅಬ್ರವೀತ್–ನುಡಿದನು ॥೨॥ ಹೇರಾಮ–ಎಲೈಶ್ರೀರಾಮನೆ, ಪೂರ್ವಂ–ಪೂರ್ವದಲ್ಲಿ, ಕೃತಯುಗೇ–ಕೃತಯುಗದಲ್ಲಿ, ಸುಮಹಾಬಲಃ–ಮಹಾದೆಹತ್ರಾಣೆಯುಳ್ಳ, ಮಹಾಬಲಃ–ಮಹಾಸೈನ್ಯವುಳ್ಳ, ಮಧುರ್ನಾಮ–ಮಧುವೆಂದು ಪ್ರಸಿದ್ಧನಾದ,ದೈತೇಯಃ–ರಾಕ್ಷಸನಾದ, ಜ್ಯೇಷ್ಠಃ–ದೊಡ್ಡವನಾದ, ಲೋಲಾಪುತ್ರಃ–ಲೋಲಾದೇವಿಯಪುತ್ರನು, ಅಭವತ್–ಆದನು ॥೩॥ ಬ್ರಹ್ಮಣ್ಯಶ್ಚ–ಬ್ರಾಹ್ಮಣವಿಶ್ವಾಸವುಳ್ಳವನು, ಶರಣ್ಯಶ್ಚ–ರಕ್ಷಕನು, ಬುಧ್ಯಾ–ಮತಿಯಿಂದ, ಪರಿನಿಷ್ಠಿತಃ–ನಿಷ್ಠೆಯಜ್ಞಾನಮುಳ್ಳವನು, ಪರಮೋದಾರೈಃ–ಬಹಳಶ್ರೇಷ್ಠರಾದ, ಸುರೈಃ–ದೇವತೆಗಳಿಂದ, ತಸ್ಯ–ಆ ಮಧ್ವಸುರನಿಗೆ, ಅತುಲಾ–ಸಮಾನಮಿಲ್ಲದಿರುವ, ಪ್ರೀತಿಃ–ವಿಶ್ವಾಸವು, ಅಭವತ್–ಆಯಿತು ॥೪॥ ವೀರ್ಯಸಂಪನ್ನಃ–ಪರಾಕ್ರಮದಿಂದ ಕೂಡಿಕೊಂಡಿರುವ, ಸಃಮಧುಃ–ಆ ಮಧುವೆಂಬ ರಾಕ್ಷಸನು, ಧರ್ಮೇಣ–ಧರ್ಮದಿಂದ, ಸುಸಮಾಹಿತಃ–ಕೂಡಿಕೊಂಡಿರುವನಾಗಿ, ಬಹುವರ್ಷಸಹಸ್ರಾಣಿ–ಅನೇಕಸಂವತ್ಸರಗಳು, ರುದ್ರಪ್ರೀತ್ಯಾ–ಶಿವಪ್ರೀತಿಯಿಂದ, ತಪಃ–ತಪಸ್ಸನ್ನು, ಅಕರೋತ್–ಮಾಡಿದನು ॥ ೫ ॥ ಸರುದ್ರಃ–ಆ ಶಿವನು, ಪ್ರೀತಃ–ಸಂತೋಷಗೊಂಡವನು, ಅಭವತ್–ಆದನು, ತಸ್ಮೈ–ಆರಾಕ್ಷಸನಿಗೆ, ವರಂ–ವರವನ್ನು, ದಾತುಂ – ಕೊ

---

ಭೀತಿಯುದೆಸೆಯಿಂದ ಬಿಡಗಡೆ ಮಾಡುವದಕ್ಕೂ ಸಹ ಶಕ್ತಿಯುಳ್ಳವನಾಗಿದ್ದೀ. ಆದಕಾರಣ ನಮ್ಮಗಳ ಕಾರ್ಯವಂ ಮಾಡುವಂಥಾವನಾಗು ॥೧೫॥ —···✻ಉತ್ತರರಾಮಾಯಣದಲ್ಲಿನ ೬೦ ನೆಯ ಸರ್ಗಂಮುಗಿದುದು.✻···—

ಈಪರಿ ಋಷಿಗಳೆಲ್ಲರು ಹೇಳಿದಂಥಾವರಾಗಲೂ, ರಘುನಂದನನು, ಆ ಮುನಿಗಳಂ ಕುರಿತು, ಎಲೈ ಮಹರ್ಷಿಗಳಿರಾ ! ತಮ್ಮ ಕಾರ್ಯವು ಏನಿರುವದು ! ನಾನು ಆ ಭೀತಿಯಂ ಹೋಗಲಾಡಿಸುವೆನು, ಹೇಳುವಂಥಾವರಾಗಿರೆಂದು ನಿರೂಪಿಸಿದಂಥಾವನಾದನು ॥೧॥ ಆ ರೀತಿಯಾಗಿ ಶ್ರೀರಾಮನು ಹೇಳಿದನನಾಗಲೂ, ಆ ಭಾರ್ಗವಚ್ಯವನನೆಂಬ ಮಹಾಮುನಿಯು, ಕೇಳೆಲೈರಘುನಂದನನೆ ! ನಮಿಗೆ ಉಂಟಾಗಿರುವ ಭೀತಿಯಂ ಹೇಳುವೆವು, ಅದೇನೆಂದರೆ, ಪೂರ್ವದೊಳು ಕೃತಯುಗದಲ್ಲಿ ಲೋಲಾದೇವಿಯ ಜ್ಯೇಷ್ಠಪುತ್ರನಾದ ಮಧ್ವಸುರನೆಂಬ ಮಹಾಬಲವಂತನಾದ ರಾಕ್ಷಸನಿದ್ದನು ॥ ಆತನು ಬ್ರಾಹ್ಮಣ ಪ್ರಿಯನಾಗಿಯೂ, ಶರಣಾಗತ ರಕ್ಷಕನಾಗಿಯೂ, ಮಹಾಮತಿವಂತನಾಗಿಯೂ, ದೇವತೆಗಳಿಗೆಲ್ಲ ಪ್ರೀತಿಪಾತ್ರನಾಗಿಯೂ, ಧರ್ಮಿಷ್ಠನಾಗಿಯೂ, ವೀರ್ಯವಂತನಾಗಿಯೂ ಇರುವನಾಗಿ ಪರಮೇಶ್ವರನ ಪ್ರೀತಿಗೋಸುಗ, ಅನೇಕ ಸಹಸ್ರವರುಷಗಳು ತಪವಂಗೈದಂಥಾವನಾದನು ॥೫॥ ಅನಂತರದೊಳು ಈಶ್ವರನು ಸಂತುಷ್ಟಾಂತರಂ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭವತ್ತಸ್ಮೈವರಂದಾತುಂಯಯೌಚಸಃ । ಬಹುಮಾನಶ್ಚ ರುದ್ರೇಣದತ್ತಸ್ತಸ್ಯಾದ್ಭುತೋವರಃ॥೬॥ ಶೂಲಂಶೂಲಾದ್ವಿನಿಷ್ಕ್ರಮ್ಯಮಹಾವೀರ್ಯಂಮಹಾಪ್ರಭಮ್।ದದೌಮಹಾತ್ಮಾ ಸುಪ್ರೀತೋವಾಕ್ಯಮೇತದುವಾಚಹ॥೭॥ ತ್ವಯಾಯಮತುಲೋಧರ್ಮೋ ಮತ್ಪ್ರಸಾದಕೃತಶ್ಶುಭಃ । ಪ್ರೀತ್ಯಾಪರಮಯಾಯುಕ್ತೋದದಾಮ್ಯಾಯುಧಮುತ್ತಮಂ ॥೮॥ ಯಾವತ್ಸುರೈಶ್ಚ ವಿಪ್ರೈಶ್ಚ ನವಿರುದ್ಧೋಮಹಾಸುರ। ತಾವಚ್ಛೂಲಂತವೇದಂಸ್ಯಾದನ್ಯಥಾನಾಶಮಾಪ್ನುಯಾತ್॥೯॥ ಯಶ್ಚ ತ್ವಾಮಭಿಯುಂಜೀತಯುದ್ಧಾಯವಿಗತಜ್ವರಃ । ತಂಶೂಲಂಭಸ್ಮಸಾತ್ಕೃತ್ವಾಪುನರೇಷ್ಯತಿತೇಕರಂ ॥೧೦॥ ಏವಂರುದ್ರಾದ್ವರಂಲಬ್ಧ್ವಾಭೂಯಏವಮಹಾಸುರಃ ।ಪ್ರಣಿಪತ್ಯಮಹಾದೇವಂವಾಕ್ಯಮೇತದುವಾಚಹ॥೧೧॥ ಭಗವನ್ಮಮವಂಶಸ್ಯ ಶೂಲಮೇತದನುತ್ತಮಂ । ಭವೇತ್ತು ಸತತಂದೇವಸುರಾಣಾಮೀಶ್ವರೋಹ್ಯಸಿ ॥೧೨॥ ಏವಂಬ್ರುವಾಣಂತಂದೇವಃಸರ್ವಭೂತಪತಿಶ್ಶಿವಃ । ಪ್ರತ್ಯುವಾಚಮಹಾತೇಜಾನೈತದೇವಂಭವಿಷ್ಯತಿ ॥೧೩॥ ಮಾಭೂತ್ತೇ ವಿಫಲಾವಾಣೀಮತ್ಪ್ರಸಾದಾತ್ಕೃತಾಶುಭಾ ।

---

ಬಹುಮಾನಶ್ಚ–ಬಹುಮತಿಯೂ, ತಸ್ಯ–ಆರಕ್ಕಸನಿಗೆ, ಅದ್ಭುತಃ–ಅಸಾಧ್ಯವಾದ, ವರಶ್ಚ–ವರವೂಸಹ, ದತ್ತಃ–ಕೊಡಲ್ಪಟ್ಟಿತು,॥೬॥ಮಹಾತ್ಮಾ–ಮಹಾತ್ಮನಾದಪರಮೇಶ್ವರನು, ಸುಪ್ರೀತಃ–ಸಂತುಷ್ಟನಾಗಿ, ಶೂಲಾತ್–ಶೂಲದದೆಶೆಯಿಂದ, ಮಹಾಪ್ರಭಂ–ಮಹಾತೇಜಸ್ಸುಳ್ಳ, ಮಹಾವೀರ್ಯಂ–ಮಹಾಶಕ್ತಿಯುಳ್ಳ, ಶೂಲಂ–ಶೂಲವನ್ನು, ವಿನಿಷ್ಕ್ರಮ್ಯ–ತೆಗದು–ದದೌ–ಕೊಟ್ಟನು, ಎತದ್ವಾಕ್ಯಂ–ಈಮಾತನ್ನು, ಉವಾಚಹ–ಪೇಳಿದನಷ್ಟೆ ॥೭॥ ತ್ವಯಾ–ನಿನ್ನಿಂದ, ಅತುಲಃ–ಅಸದೃಶವಾದ, ಮತ್ಪ್ರಸಾಧಕೃತಃ–ನನ್ನ ಅನುಗ್ರಹದಿಂದ ಮಾಡಲ್ಪಟ್ಟ, ಶುಭಃ–ಶುಭಕರವಾದ, ಧರ್ಮಃ–ಧರ್ಮವು,ಲಬ್ಧಃ–ಹೊಂದಲ್ಪಟ್ಟಿತು, ಪರಮಯಾ–ಬಹಳವಾದ, ಪ್ರೀತ್ಯಾ–ಸಂತೊಷದಿಂದ, ಯುಕ್ತಃ–ಕೂಡಿದವನಾಗಿ, ಉತ್ತಮಂ–ಉತ್ಕೃಷ್ಟವಾದ, ಆಯುಧಂ–ಆಯುಧವನ್ನು, ದದಾಮಿ–ಕೊಡುತ್ತೇನೆ ॥೮॥ ಹೇಮಹಾಸುರ–ಎಲೈಮಹಾರಾಕ್ಷಸನೆ, ತ್ವಂ–ನೀನು, ಯಾವತ್–ಎಷ್ಟುಪರ್ಯಂತವು, ಸುರೈಃ–ದೇವತೆಗಳಿಂದಲೂ, ವಿಪ್ರೈಶ್ಚ–ಬ್ರಾಹ್ಮಣರಸಂಗಡಲೂ, ನವಿರುದ್ಧಃ–ವಿರೋಧಮಾಡಲ್ಪಡುವದಿಲ್ಲವೊ, ತಾವತ್–ಅಷ್ಟುವರಿವಿಗೂ, ಇದಂಶೂಲಂ–ಈಶೂಲವು, ತವ–ನಿನ್ನದಾಗಿ, ಸ್ಯಾತ್–ಇದ್ದೀತು, ಅನ್ಯಥಾ–ಇಲ್ಲದ್ದೇಹೋದರೇ ನಾಶಂ–ಅದರ್ಶನವನ್ನು, ಆಪ್ನುಯಾತ್–ಹೊಂದುವದು ॥ ೯ ॥ ಯಶ್ಚ–ಯಾವಪುರುಷನಾದರೆ, ವಿಗತಜ್ವರಃ–ಸಂತಾಪವಿಲ್ಲದವನಾಗಿ, ಯುದ್ಧಾಯ–ಕಾಳಗಕ್ಕೋಸುಗ, ತ್ವಾಂ–ನಿನ್ನನ್ನು, ಅಭಿಯುಂಜೀತ–ಎದುರಾಗಿ ಕರೆಯುವನಾಗುವನೋ, ತಂ–ಅವನನ್ನು, ಶೂಲಂವೈ–ಶೂಲವಾದರೆ, ಭಸ್ಮಸಾತ್ಕೃತ್ವಾ–ಭಸ್ಮೀಭೂತನನ್ನಾಗಿಮಾಡಿ, ತೇ–ನಿನ್ನ, ಕರಂ–ಹಸ್ತವನ್ನು ಕುರಿತು, ಪುನಃ–ಮತ್ತು, ಏಷ್ಯತಿ–ಬರುವದು ॥ ೧೦ ॥ ಏವಂ–ಈಪರಿಯಾಗಿ, ಮಹಾಸುರಃ–ಮಹಾರಾಕ್ಷಸನು, ರುದ್ರಾತ್–ರುದ್ರನದೆಶೆಯಿಂದ, ವರಂ–ವರವನ್ನು, ಲಬ್ಧ್ವಾ–ಹೊಂದಿ, ಭೂಯಏವ–ಮತ್ತೂನೂ, ಪ್ರಣಿಪತ್ಯ–ನಮಸ್ಕರಿಸಿ, ಮಹಾದೇವಂ–ಶಿವನನ್ನು ಕುರಿತು, ಏತದ್ವಾಕ್ಯಂ–ಈಮಾತನ್ನು, ಉವಾಚಹ–ಪೇಳಿದನಷ್ಟೆ ॥ ೧೧ ॥ ಹೆಭಗವನ್–ಎಲೈಸ್ವಾಮಿಯೆ, ಹೆದೇವ–ಎಲೈಮಹಾದೇವನೆ, ತ್ವಂ–ನೀನು, ಸುರಾಣಾಂ–ದೇವತೆಗಳಿಗೆ, ಈಶ್ವರಃ–ಅಧಿಪತಿಯಾದವನು, ಅಸಿಹಿ–ಆಗಿದೀಯಷ್ಟೆ, ಮಮ–ನನ್ನ, ವಂಶಸ್ಯ–ಕುಲಕ್ಕೆ, ಅನುತ್ತಮಂ–ಸರ್ವೋತ್ತಮವಾದ, ಏತಚ್ಛೂಲಂ–ಈತ್ರಿಶೂಲವು, ಸತತಂ–ನಿರಂತರವು, ಭವೇತ್–ಆಗಲಿ, ॥ ೧೨ ॥ ಏವಂ–ಈಪರಿಯಾಗಿ, ಬ್ರುವಾಣಂ–ಪೇಳುತ್ತಿರುವ, ತಂ–ಆ ಮಧ್ವಸುರನಂ ಕುರಿತು–ಸರ್ವಭೂತಪತಿಃ–ಸಮಸ್ತಪ್ರಾಣಿಗಳಿಗೂ ಅಧಿಪತಿಯಾದ, ಮಹಾತೇಜಾಃ–ಬಹುತೇಜೋವಂತನಾದ, ದೇವಃ–ಸ್ವಾಮಿಯಾದ, ಶಿವಃ–ಶಿವನು, ಪ್ರತ್ಯುವಾಚಹ–ಪ್ರತ್ಯುತ್ತರಕೊಟ್ಟನು, ಏತತ್–ನೀಬೇಡಿದ ಈವರವು, ಏವಂ–ಈಪರಿಯಾಗಿ, ನಭವಿಷ್ಯತಿ–ಆಗಲಾರದು ॥೧೩॥ ತೇ–ನಿನ್ನ, ವಾಣೀ–ವಾಕ್ಕು, ವಿಫಲಾ–ವ್ಯರ್ಥವಾದ್ದಾಗಿ, ಮಾಭೂತ್–ಆಗಬೇಡ, ಮತ್ಪ್ರಸಾದಾತ್–ನನ್ನ ಅನುಗ್ರಹದದೆಶೆಯಿಂದ, ಶುಭಾ–ಶುಭಕರವಾದದ್ದಾಗಿ, ಕೃತಾ–ಮಾಡಲ್ಪಟ್ಟದ್ದು, ಭ

---

ಗವುಳ್ಳವನಾಗಿ, ಆತನಿಗೆ ವರವಂಕೊಡಲೂ ಬಂದಂಥಾವನಾಗಿ, ತನ್ನ ಕೈಯಲ್ಲಿದ್ದ ಶೂಲಾಯುಧದ ದೆಶೆಯಿಂದ, ಮಹಾಕಾಂತಿಯುಳ್ಳ ಮತ್ತೊಂದು ಶೂಲವಂ ಸೃಜಿಸಿ, ಸಂತೋಷಚಿತ್ತನಾಗಿ ಈ ಮಾತಂ ಹೇಳಲೊಸಗಿದನದೆಂತೆನೆ, ಎಲೈ ರಕ್ಕಸನೇ ! ಎನ್ನ ಅನುಗ್ರಹದಿಂದ ನೀನು ಮಹಾ ಧರ್ಮವಂಗೈದಂಥಾವನಾದೆ ಆದಕಾರಣ ನಾಂ ಸಂತುಷ್ಟನಾಗಿ ಈ ಉತ್ತಮವಾದ ಆಯುಧವನ್ನೀಯುವೆನು ॥೮॥ ಎಲೈ ಮಹಾರಾಕ್ಷಸನೇ ! ನೀನು ದೇವತೆಗಳ ಸಂಗಡಲೂ ಬ್ರಾಹ್ಮಣರ ಸಂಗಡಲೂ ಎದುವರಿವಿಗೂ ವಿರೋಧವಂ ಗೈಯುವದಿಲ್ಲವೋ, ಅದುವರಿಗೂ ಈ ಆಯುಧವು ನಿನ್ನ ಅಧೀನದಲ್ಲಿರುವದು, ನೀನು ಯಾವಾಗ ವಿರೋಧವಂ ಗೈಯುವಿಯೊ ಆಗ ಈ ಆಯುಧವು ಅದರ್ಶನವಾಗುವದು ॥೯॥ ಯಾವ ಪುರುಷನಾದರೆ ನಿರ್ಭೀತನಾಗಿ ನಿನ್ನನ್ನು ಕಾಳಗಕ್ಕೆ ಕರೆಯುವನೋ, ಆಗ ನೀನು ಈ ಶೂಲಾಯುಧ ಪ್ರಯೋಗವಂಗೈದರೆ ಇದು ಆ ಶತ್ರುವಿನನ್ನು ಭಸ್ಮಮಾಡಿ ಪುನಃ ನಿನ್ನ ಬಳಿಗೆ ಬರುವಂಥಾದ್ದಾಗುವದೆಂದು ಪರಮೇಶ್ವರನು ವರವಂ ಕೊಡಲೂ, ಆ ಮಧ್ವಸುರನು ಈಶ್ವರನಿಗೆ ವಂದಿಸಿ ಮತ್ತಿಂತೆಂದನು,—ಎಲೈ ಪೂಜ್ಯನೆ ! ನೀನು ದೇವೋತ್ತಮನಾಗಿದ್ದಿ, ಈ ಸರ್ವೋತ್ತಮವಾದ ಶೂಲವು ನನ್ನ ವಂಶಸ್ಥರಿಗೆಲ್ಲ ಅವಿಚ್ಛಿನ್ನವಾಗಿ ಇರುವಂತೆ ನನಿಗೆ ವರವಂ ಕೊಡಬೇಕೆಂದು ಪ್ರಾರ್ಥಿಸಿದವನಾಗಲೂ, ಆ ಪರಮೇಶ್ವರನು ಎಲೈರಾಕ್ಷಸೋತ್ತಮನೆ ! ಆಪರಿ ಆಗಲಾರದು, ಆದರೆ ಎನ್ನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭವತಃಪುತ್ರಮೇಕಂತುಶೂಲಮೇತದ್ಭಜಿಷ್ಯತೆ ॥೧೪॥ ಯಾವತ್ಕರಸ್ಥಶ್ಶೂಲೋಯಂಭವಿಷ್ಯತಿಸುತಸ್ಯತೆ । ಅವಧ್ಯಃಸರ್ವಭೂತಾನಾಂಶೂಲಹಸ್ತೋಭವಿಷ್ಯತಿ ॥೧೫॥ ಏವಂಮಧುರ್ವರಂಲೆಭೆದೆವಾತ್ಸುಮಹದದ್ಭುತಂ । ತಚ್ಛೂಲಮಾರಾಧಯಿತುಂಕಾಲಕಾಲಸ್ಯಭಕ್ತಿತಃ ॥೧೬॥ ತಸ್ಯಪತ್ನೀಮಹಾಭಾಗಾಪ್ರಿಯಾಕುಂಭಿನಸೀತಿಯಾ । ವಿಶ್ವಾವಸೋರಪತ್ಯಂಸಾಹ್ಯನಲಾಯಾಂಮಹಾಪ್ರಭೊ ॥೧೭॥ ತಸ್ಯಾಃಪುತ್ರೋಮಹಾವೀರ್ಯೋಲವಣೊನಾಮದಾರುಣಃ । ಬಾಲ್ಯಾತ್ಪ್ರಭೃತಿದುಷ್ಟಾತ್ಮಾ ಪಾಪಾನ್ಯೇವಸಮಾಚರತ ॥೧೮॥ ತಂಪುತ್ರಂದುರ್ವಿನೀತಂತುದೃಷ್ಟ್ವಾದುಃಖಸಮನ್ವಿತಃ । ಮಧುಸ್ಸಶೋಕಮಾಪೆದೆ ನಚೈನಂಕಿಂಚಿದಬ್ರವೀತ ॥೧೯॥ ಸವಿಹಾಯಇಮಂಲೊಕಂಪ್ರವಿಷ್ಟೋವರುಣಾಲಯಂ । ಶೂಲಂನಿವೇಶ್ಯಲವಣೆವರಂತಸ್ಮೈನ್ಯವೆದಯತ ॥೨೦॥ ಸಪ್ರಭಾವೆನಶೂಲಸ್ಯದೌರಾತ್ಮ್ಯಾದಾತ್ಮನಸ್ತಥಾ । ಸಂತಾಪಯತಿಲೋಕಾಂಸ್ತ್ರೀನ್ ವಿಶೆಷೇಣತುತಾಪಸಾನ್ ॥೨೧॥ ಏವಂಪ್ರಭಾವೋಲವಣಃಶೂಲಂಚೈವತಥಾವಿಧಮ್ । ಶ್ರುತ್ವಾಪ್ರಮಾಣಂಕಾಕುತ್ಸ್ಥತ್ವಂಹಿನಃಪರ

---

ಮತು-ಆಗಲಿ, ಏತಚ್ಛೂಲಂ-ಈ ಶೂಲವು, ಭವತಃ-ನಿನ್ನ, ಪುತ್ರಂ-ಮಗನನ್ನು, ಏಕಂತು-ಒಬ್ಬನನ್ನು ಮಾತ್ರವೆ-ಭಜಿಷ್ಯತಿ-ಹೊಂದಿರುವದು, ॥೧೪॥ ಅಯಂತ್ರಿಶೂಲಃ- ಈ ತ್ರಿಶೂಲವು, ಯಾವತ್-ಎದುವರಿವಿಗೂ, ತೆ-ನಿನ್ನ, ಸುತಸ್ಯ-ಮಗನ, ಕರಸ್ಥಃ - ಹಸ್ತಗತವಾದದ್ದು -ಭವಿಷ್ಯತಿ-ಆಗುವದೊ, ತಾವತ್-ಅದುವರಿವಿಗೂ, ಶೂಲಹಸ್ತಃ-ಶೂಲವೇಹಸ್ತದಲ್ಲಿ ಉಳ್ಳವನಾಗಿ, ಸರ್ವಭೂತಾನಾಂ - ಸಮಸ್ತಪ್ರಾಣಿಗಳಿಗೂ, ಅವಧ್ಯಃ - ವಧಿಸಲಸಾಧ್ಯನು, ಭವಿಷ್ಯತಿ-ಆಗುವನು, ಮಧುಃ-ಮಧುವೆಂಬ ರಾಕ್ಷಸನು, ಏವಂ-ಈಪರಿಯಾಗಿ, ಕಾಲಕಾಲಸ್ಯ-ಯಮನಿಗೂ ಯಮಸ್ವರೂಪನಾದ ಪರಮೇಶ್ವರನ, ತಚ್ಛೂಲಂ-ಆ ಶೂಲವನ್ನು, ಭಕ್ತಿತಃ-ಭಕ್ತಿಯದೆಸೆಯಿಂದ, ಆರಾಧಯಿತುಂ-ಪೂಜೆಮಾಡುವದಕ್ಕೋಸ್ಕರ,ದೆವಾತ್-ಪರಮೇಶ್ವರನ ದೆಸೆಯಿಂದ, ಸುಮಹತ್-ಬಹಳದೊಡ್ಡದಾದ, ಅದ್ಭುತಂ-ಆಶ್ಚರ್ಯಕರವಾದ, ವರಂ-ವರವನ್ನು, ಲೇಭೆ-ಹೊಂದಿದನು ॥ ೧೬ ॥ ಹೆಮಹಾಪ್ರಭೊ-ಎಲೈರಾಜನೆ, ತಸ್ಯ-ಆರಾಕ್ಷಸನಿಗೆ, ಪ್ರಿಯಾ-ಇಷ್ಟಳಾದ, ಪತ್ನೀ-ಹೆಂಡತಿಯಾದ, ಮಹಾಭಾಗಾ - ಬಹುಪುಣ್ಯಶಾಲಿಯಾದ, ಕುಂಭೀನಸೀತಿ-ಕುಂಭೀನಸೀಎಂಬವಳು, ಯಾ-ಯಾವಾಕೆಯೊ, ಸಾ-ಆಕೆಯು, ಅನಲಾಯಾಂ-ಅನಲೆಎಂಬವಳಲ್ಲಿ, ವಿಶ್ವಾವಸೋಃ-ವಿಶ್ವಾವಸುವಿಗೆ, ಅಪತ್ಯಂ-ಮಗಳಾದಳು, ॥೧೭॥ ತಸ್ಯಾಃ-ಆ ಕುಂಭೀನಸಿಗೆ, ಪುತ್ರಃ-ಮಗನಾದ, ಮಹಾವೀರ್ಯಃ-ಮಹಾಸಾಮರ್ಥ್ಯವಂತನಾದ, ದಾರುಣಃ-ಕ್ರೂರನಾದ, ಬಾಲ್ಯಾತ್ಪ್ರಭೃತಿ-ಬಾಲ್ಯಾವಸ್ಥೆಮೊದಲ್ಗೊಂಡು, ದುಷ್ಟಾತ್ಮಾ-ದುರ್ಬುದ್ಧಿಯುಳ್ಳ, ಲವಣೊನಾಮ-ಲವಣಾಸುರನೆಂದು ಪ್ರಸಿದ್ಧನು, ಪಾಪಾನ್ಯೆವ-ಪಾಪಗಳನ್ನೆ, ಸಮಾಚರತ್-ಮಾಡಿದನು ॥೧೮॥ ಮಧುಃ-ಮಧುವೆಂಬರಾಕ್ಷಸನು, ದುರ್ವಿನೀತಂ-ದುಷ್ಟಬುದ್ಧಿಯುಳ್ಳ, (ಅಥವಾಶಿಕ್ಷಿಸಲಸಾಧ್ಯನಾದ,) ತಂಪುತ್ರಂ-ಆ ಮಗನನ್ನು, ದೃಷ್ಟ್ವಾ-ಕಂಡು, ದುಃಖಸಮನ್ವಿತಃ-ದುಃಖದಿಂದ ಕೂಡಿದವನಾಗಿ, ಶೋಕಂ-ಮನೊವ್ಯಥೆಯನ್ನು, ಆಪೇದೆ-ಹೊಂದಿದನು, ಏನಂ-ಈಮಗನನು ಕುರಿತು, ಕಿಂಚಿತ್ - ಒಂದಾನೊಂದುಮಾತನ್ನಾದರೂ, ನಾಬ್ರವೀತ್ - ನುಡಿಯಲಿಲ್ಲ, ॥೧೯॥ ಸಃ-ಆ ಮಧ್ವಸುರನು, ಇಮಂಲೋಕಂ-ಈಲೋಕವನ್ನು, ವಿಹಾಯ-ಬಿಟ್ಟು, ವರುಣಾಲಯಂ-ಸಮುದ್ರವನ್ನು, ಪ್ರವಿಷ್ಟಃ-ಪ್ರವೇಶಿಸಿದವನಾಗಿ, ಲವಣೆ - ಲವಣಾಸುರನಲ್ಲಿ, ಶೂಲಂ - ತ್ರಿಶೂಲವನ್ನು, ನಿವೇಶ್ಯ-ಇರಿಸಿ-ತಸ್ಮೈ-ಆ ಲವಣಾಸುರನಿಗೆ, ವರಂ-ಶಿವವರವನ್ನು, ನ್ಯವೆದಯತ್-ತಿಳುಹಿಸಿದನು ॥೨೦॥ ಸಃ-ಆ ಲವಣಾಸುರನು, ಆತ್ಮನಃ-ತನ್ನ, ದೌರಾತ್ಮ್ಯಾತ್-ದೌಷ್ಟ್ಯದ ದೆಸೆಯಿಂದಲೂ, ತಥಾ-ಹಾಗೆಯೆ, ಶೂಲಸ್ಯ-ತ್ರಿಶೂಲದ, ಪ್ರಭಾವೆನ-ಮಾಹಾತ್ಮ್ಯದಿಂದಲೂ, ತ್ರೀನ್‌ಲೋಕಾನ್-ಮೂರುಲೋಕಗಳನ್ನು, ಸಂತಾಪಯತಿ-ಸಂಕಟಪಡಿಸುತ್ತಾನೆ, ತಾಪಸಾಂಸ್ತು-ಋಷಿಗಳನ್ನಾದರೆ, ವಿಶೆಷೇಣ-ಬಹಳವಾಗಿ, ಸಂತಾಪಯತಿ-ಸಂತಾಪಗೊಳಿಸುತ್ತಾನೆ ॥೨೧॥ ಲವಣಃ-ಲವಣಾ

---

ನುಗ್ರಹದದೆಸೆಯಿಂದ ನಿನ್ನ ಮನೋರಥದಂತೆ ನಿನ್ನ ಪುತ್ರನಿಗೆ ಮಾತ್ರ ಲಭಿಸುವದು, ಈ ಶೂಲವಂಪಿಡಿದುಕೊಂಡು ನಿನ್ನ ಕುಮಾರನು ಸಂಚರಿಸುವನಾದೊಡೆ ಸರ್ವಭೂತಗಳಿಗೂ ಅವಧ್ಯನಾಗಿರುವನೆಂಬದಾಗಿ ಪರಮೇಶ್ವರನಿಂದ ಮಧ್ವಸುರನು ವರವಂ ಪಡದು ಯಮನಿಗೂ ಕೂಡಾ ಯಮಪ್ರಾಯನಾದ ಪರಮೇಶ್ವರನ ಆ ಶೂಲಾಯುಧವಂ ಕಾಲಕಾಲದಲ್ಲಿ ಭಕ್ತಿ ಪೂರ್ವಕವಾಗಿ ಪೂಜೆಯಂಗೈಯುತ್ತಿದ್ದನು ॥೧೬॥ ಕೇಳೆಲೈ ರಘುನಂದನನೆ ! ವಿಶ್ವಾವಸುವಿನ ಸತಿಯಾದ ಅನಲೆಯೆಂಬಾಕೆಯೊಳು ಜನಿಸಿದ ಕುಂಭೀನಸೀ ಎಂಬ ಮಹಾಪುಣ್ಯವತಿಯು ಆ ಮಧ್ವಸುರನಿಗೆ ಪ್ರೀತಿಪಾತ್ರಳಾದ ಪತ್ನಿಯಾಗಿದ್ದಳು ॥೧೭॥ ಆಕೆಯ ಪುತ್ರನಾದ ಲವಣನೆಂಬ ಮಹಾರಾಕ್ಷಸನು ಬಹಳ ದಾರುಣನಾಗಿಯೂ, ಬಾಲ್ಯಮೊದಲ್ಗೊಂಡು ದುರ್ಬುದ್ಧಿಯುಳ್ಳವನಾಗಿಯೂ, ಪಾಪಗಳನ್ನೆ ಮಾಡುವಂಥಾವನಾಗಿಯೂ ಇದ್ದನು ॥ ೧೮ ॥ ಶಿಕ್ಷಿಸಲಸಾಧ್ಯನಾದ ಆ ಕುವರನಂ ಕಂಡು, ಮಧ್ವಸುರನು ದುಃಖಾನ್ವಿತನಾಗಿ ಸಂತಪಿಸುತ್ತಿದ್ದನೇ ಹೊರತು ಆ ಪುತ್ರನಂ ಕುರಿತು ಏನೂ ಪೇಳಲಿಲ್ಲ ॥೧೯॥ ಈಪರಿಯಾಗಿದ್ದು ಕೆಲವುದಿನವಾದ ಬಳಿಕ ಈ ಭೂಲೋಕವಂ ತೊರೆದು ಸಮುದ್ರವಂ ಹೊಕ್ಕು, ಆ ಶೂಲಾಯುಧವಂ ಲವಣಾಸುರನಿಗೆ ಕೊಟ್ಟು, ಅದರ ಮಾಹಾತ್ಮ್ಯವಂ ಪೇಳಿದವನಾದನು ॥೨೦॥ ಆ ಲವಣಾಸುರನು ಈ ಶೂಲಪ್ರಭಾವದಿಂದಲೂ ತನ್ನ ದುರ್ನಡತೆಯಿಂದಲೂ ಸಹ ಮೂಜಗಗಳಂ ವಿಶೇಷವಾಗಿ ಬಾಧಿಸುತ್ತಿಧಾನೆ ॥೨೧॥ ಲವಣಾಸುರನು ಇಂಥಾ ಪರಾಕ್ರಮವುಳ್ಳವನು, ಶೂಲಾಯುಧವಾದರೆ ಆ ರೀತಿಯಾಗಿರುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಾಗತಿಃ ॥ ೨೨ ॥ ಬಹವಃಪಾರ್ಥಿವಾರಾಮಭಯಾರ್ತೈರೃಷಿಭಿಃಪುರಾ । ಅಭಯಂಯಾಚಿತಾವೀರತ್ರಾತಾರಂನಚವಿದ್ಮಹೇ ॥ ೨೩ ॥ ತತ್ಪರಿತ್ರಾತೇನಯಂರಾವಣಂಶ್ರುತ್ವಾಹತಂಸಬಲವಾಹನಮ್ । ತ್ರಾತಾರಂವಿದ್ಮಹೇರಾಮನಾನ್ಯಂಭುವಿನರಾಧಿಪಮ್ ॥ ೨೪ ॥ ತತ್ಪರಿತ್ರಾತುಮಿಚ್ಛಾಮೋಲವಣಾದ್ಭಯಪೀಡಿತಾಃ ॥ ೨೫ ॥

—...*ಇತಿ ಶ್ರೀಮದುತ್ತರರಾಮಾಯಣೇ ಏಕಷಷ್ಟಿತಮ ಸ್ಸರ್ಗಃ*...—

ತಥೋಕ್ತಸ್ತಾನೃಷೀನ್ ರಾಮಃಪ್ರತ್ಯುವಾಚಕೃತಾಂಜಲಿಃ । ಕಿಮಾಹಾರಃಕಿಮಾಚಾರೋಲವಣಃಕ್ವಚವರ್ತತೇ ॥ ೧ ॥ ರಾಘವಸ್ಯವಚಃಶ್ರುತ್ವಾಋಷಯಸ್ಸರ್ವಏವತೇ । ತತೋನಿವೇದಯಾಮಾಸುರ್ಲವಣೋವವೃಧೇಯಥಾ ॥ ೨ ॥ ಆಹಾರಸ್ಸರ್ವಸತ್ವಾನಿವಿಶೇಷೇಣಚತಾಪಸಾಃ । ಆಚಾರೋರೌದ್ರತಾನಿತ್ಯಂವಾಸೋಮಧುವನೇಸದಾ ॥ ೩ ॥ ಹತ್ವಾದಶಸಹಸ್ರಾಣಿಸಿಂಹ

---

ಸುರನು, ಏವಂಪ್ರಭಾವಃ-ಇಂಥಾ ಪ್ರಭಾವವುಳ್ಳವನು- ಶೂಲಂಚೈವ-ತ್ರಿಶೂಲವೂನು, ತಥಾವಿಧಂ-ಅಂಥಾದ್ದು, ಹೇ ಕಾಕುತ್ಸ್ಥ-ಎಲೈ ಶ್ರೀರಾಮನೆ, ತ್ವಂ-ನೀನು ನಃ-ನಮಿಗೆ, ಪ್ರಮಾಣಂ-ಪ್ರಮಾಣವು, ಪರಮಾಗತಿರ್ಹಿ-ಶರಣ್ಯನಷ್ಟೆ ॥ ೨೨ ॥ ಹೇರಾಮ-ಎಲೈ ಶ್ರೀರಾಮನೇ, ಪುರಾ-ಪೂರ್ವದಲ್ಲಿ, ಭಯಾರ್ತೈಃ-ಭಯದಿಂದೀನರಾದ, ಋಷಿಭಿಃ-ಮುನಿಗಳಿಂದ, ಬಹವಃ ಪಾರ್ಥಿವಾಃ-ಬಹುಮಂದಿರಾಜರು, ಅಭಯಂ-ಅಭಯವನ್ನು ಕುರಿತು, ಯಾಚಿತಾಃ-ಪ್ರಾರ್ಥಿಸಲ್ಪಟ್ಟರು, ತ್ರಾತಾರಂ-ಸಂರಕ್ಷಣಕರ್ತನನ್ನು, ನಚವಿದ್ಮಹೆ-ತಿಳಿಯಲಿಲ್ಲ ॥ ೨೩ ॥ ಹೇರಾಮ-ಎಲೈ ಶ್ರೀರಾಮನೆ,ತೇವಯಂ-ಆ ನಾವುಗಳು, ಸಬಲವಾಹನಂ-ಸೈನ್ಯದಿಂದಲೂ ವಾಹನಗಳಿಂದಲೂ ಒಡಗೂಡಿದ, ರಾವಣಂ-ರಾವಣಾಸುರನನ್ನು, ತ್ವಯಾ-ನಿನ್ನಿಂದ, ಹತಂ-ಹೊಡೆಯಲ್ಪಟ್ಟವನನ್ನಾಗಿ, ಶ್ರುತ್ವಾ-ಕೇಳಿ, ಭುವಿ-ನೆಲದಲ್ಲಿ, ತ್ವಾಂ-ನಿನ್ನನ್ನು, ತ್ರಾತಾರಂ-ರಕ್ಷಕನನ್ನಾಗಿ, ವಿದ್ಮಹೆ-ತಿಳಿದಿಧ್ದೇವೆ, ಅನ್ಯಂನರಾಧಿಪಂ – ಮತ್ತೊರ್ವರಾಜನನ್ನು, ನವಿದ್ಮಹೆ-ಕಾಣೆವು ॥ ೨೪ ॥ ತತ್-ಆಕಾರಣದ ದೆಸೆಯಿಂದ, ಲವಣಾತ್-ಲವಣಾಸುರನ ದೆಸೆಯಿಂದ, ಭಯಪೀಡಿತಾಃ-ಭೀತಿಯಿಂದ ಬಾಧಿತರಾದ ನಾವುಗಳು- ಪರಿತ್ರಾತುಂ-ಸಂರಕ್ಷಣೆಯು ಹೊಂದುವದಕ್ಕೋಸ್ಕರ, ಇಚ್ಛಾಮಃ-ಅಪೇಕ್ಷಿಸುತ್ತೇವೆ ॥ ೨೫ ॥

## ಇತಿಶ್ರೀಮದುತ್ತರರಾಮಾಯಣೆ ಏಕ ಷಷ್ಟಿತಮಸ್ಸರ್ಗಃ.

ತಥಾ-ಆಪರಿಯಾಗಿ, ಉಕ್ತಃ-ಪೇಳಲ್ಪಟ್ಟ, ರಾಮಃ-ಶ್ರೀರಾಮನು, ಕೃತಾಂಜಲಿಃ-ಅಂಜಲಿಬದ್ಧನಾಗಿ, ತಾನೃಷೀನ್‌ಪ್ರತಿ- ಆಮುನಿಗಳಂಕುರಿತು, ಲವಣಃ-ಲವಣಾಸುರನು, ಕಿಮಾಹಾರಃ-ಏನುಆಹಾರವುಳ್ಳವನು, ಕಿಮಾಚಾರಃ-ಏನಾಚಾರವುಳ್ಳವನು, ಕ್ವಚ-ಎಲ್ಲಿಇದರೆ, ವರ್ತತೆ- ಇಧಾನೆ, ಇತಿ-ಇಂತೆಂದು, ಉವಾಚ-ಪೇಳಿದನು ॥ ೧ ॥ ಸರ್ವೆ-ಸಮಸ್ತರಾದ, ತೇಋಷಯಃ-ಆ ಋಷಿಗಳು, ರಾಘವಸ್ಯ-ಶ್ರೀರಾಮನ, ವಚಃ – ವಾಕ್ಯವನ್ನು, ಶ್ರುತ್ವೈವ-ಕೇಳುತ್ತಲೆ, ಲವಣಃ-ಲವಣಾಸುರನು ಯಥಾ-ಹ್ಯಾಗೆ, ವವೃಧೆ-ವೃದ್ಧಿ ಹೊಂದಿದನೋ, ತಥಾ-ಹಾಗೆ, ತತಃ-ಬಳಿಕ, ನಿವೆದಯಾಮಾಸುಃ-ತಿಳಿಸಿದರು ॥ ೨ ॥ ಆಹಾರಃ-ಆಹಾರವು, ಸರ್ವಸತ್ವಾನಿ-ಸಮಸ್ತಜಂತುಗಳು, ವಿಶೆಷೇಣಚ-ವಿಶೇಷವಾಗಿ, ತಾಪಸಾಃ-ಋಷಿಗಳು, ಆಚಾರಃ-ಆಚಾರವು, ನಿತ್ಯಂ-ನಿರಂತರವು, ರೌದ್ರತಾ-ಕ್ರೌರ್ಯವು, ವಾಸಃ-ನಿವಾಸಸ್ಥಳವು, ಸದಾ-ಸರ್ವಕಾಲದಲ್ಲಿಯೂ, ಮಧುವನೆ-ಮಧ್ವಾಸುರನ ವನದಲ್ಲಿ ॥ ೩ ॥ ದಶಸಹಸ್ರಾಣಿ-ಹತ್ತುಸಾವಿರ ಸಂಖ್ಯೆಯುಳ್ಳ, ಸಿಂಹ ವ್ಯಾಘ್ರಮೃಗದ್ವಿಪಾನ್-ಸಿಂಹ-ಸಿಂಹಗಳನ್ನು, ವ್ಯಾಘ್ರ-ಹುಲಿಗಳನ್ನು, ಮೃಗ-ಮೃಗಗಳನ್ನು, ದ್ವಿಪಾನ್-ಆನೆಗಳನ್ನು, ಮನುಷ್ಯಾಂಶ್ಚೈವ-ಮನುಷ್ಯರನ್ನೂ, ಹತ್ವಾ-ಹೊಡೆದು, ನಿತ್ಯಂ-ದಿನದಿನದಲ್ಲಿಯೂ,ಆನ್ಹಿಕಂ-ಹಗಲುಮಾಡತಕ್ಕ, ಆಹಾರಂ-ಭೋಜನವನ್ನು,

---

ದು, ಇದನ್ನೆಲ್ಲಕೇಳಿ ನಿನಿಗೆ ತೋರುವಂತೆ ಮಾಡುವಂಥಾವನಾಗು ನೀನೇ ಗತಿಯು ಇನ್ನ್ಯಾರೂ ಇಲ್ಲ ॥ ೨೨ ॥ ಎಲೈ ಶೂರನಾದ ಶ್ರೀರಾಮನೆ! ಪೂರ್ವದಲ್ಲಿ ಭಯಪೀಡಿತರಾದ ನಾವುಗಳು ಅನೇಕ ರಾಜರನ್ನು ಅಭಯಪ್ರದಾನವಂಗೈಯ್ಯಬೇಕೆಂದು ಪ್ರಾರ್ಥಿಸಿದೆವು, ಅವರು ಯಾರೂ ಪಾಲಿಸಲಿಲ್ಲ ॥ ೨೩ ॥ ಅಂಥಾ ಬಾಧಿತರಾದ ನಾವುಗಳು, ರಾವಣಾಸುರನು ಪುತ್ರ, ಬಂಧು ಮಂತ್ರಿ ಮಿತ್ರಸಹಿತನಾಗಿ ನಿನ್ನಿಂದ ಹತನಾದನೆಂಬ ವಾರ್ತೆಯಂಕೇಳಿ, ನಿನ್ನನ್ನೇ ರಕ್ಷಕನೆಂದರಿತುಕೊಂಡಿಧ್ದೇವೆ, ಆದಕಾರಣ ಲವಣಾಸುರನಿಂದ ಪರಿಪರಿಯಾಗಿ ಬಾಧಿತರಾದ ನಮ್ಮನ್ನು ಪಾಲಿಸುವಂಥಾವನಾಗು ॥ ೨೫ ॥

—...*ಉತ್ತರರಾಮಾಯಣದಲ್ಲಿನ ೬೧ ನೆಯ ಸರ್ಗಂ ಮುಗಿದುದು*...—

ಆಪರಿ ಪೇಳಲ್ಪಟ್ಟ ಶ್ರೀರಾಮನು, ಅಂಜಲಿಬದ್ಧನಾಗಿ ಆ ಮಹಾಮುನಿಗಳಂ ಕುರಿತು, ಎಲೈ ಋಷಿಗಳಿರಾ! ಆ ಲವಣಾಸುರನು ಯಾವ ಸ್ಥಳದಲ್ಲಿರುವನು? ಆತನ ಆಹಾರವೇನು? ಅವನ ಆಚಾರವೆಂಥಾದ್ದು? ಇದಂ ಪೇಳುವಂಥಾವರಾಗಿರೆಂದು ನಿರೂಪಿಸಿದವನಾಗಲೂ, ಈ ವಾಕ್ಯವಂಕೇಳಿ ಮುನಿಗಳೆಲ್ಲರು, ಆ ಲವಣಾಸುರನು ಹ್ಯಾಗೆ ವೃದ್ಧಿಯನ್ನೈದಿದನೋ ಅದನ್ನೆಲ್ಲ ಪೇಳಿದಂಥಾವರಾದರದಂತೆನೆ ॥ ೨ ॥ ಈ ಭೂಮಂಡಲದಲ್ಲಿರುವ ಎಲ್ಲಾ ಜಂತುಗಳೂ ಆ ರಕ್ಕಸನ ಆಹಾರವಾಗಿರುವದಲ್ಲದೆ ತಾಪಸರು ವಿಶೇಷವಾಗಿ ಆಹಾರಭೂತರಾಗಿರುವರು. ರೌದ್ರವೆಂಬದೇ ಆಚಾರವು, ನಿರಂತರವು ಮಧುವನದಲ್ಲಿ ವಾಸವು ॥ ೩ ॥ ಆ ದುಷ್ಟನಾದ ರಕ್ಕಸನು ಪ್ರತಿದಿನವು ಹತ್ತುಸಾವಿರ ಸಂಖ್ಯೆಯುಳ್ಳ ಸಿಂಹಗಳನ್ನೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವ್ಯಾಘ್ರಾನ್ಮೃಗದ್ವಿಪಾನ್ । ಮಾನುಷಾಂಶ್ಚೈವ ಕುರುತೇ ನಿತ್ಯಮಾಹಾರಮಾಹ್ನಿಕಂ ॥೪॥ ತತೋಽಪರಾಣಿ ಸತ್ತ್ವಾನಿ ಖಾದತೇ ಸ ಮಹಾಬಲಃ । ಸಂಹಾರೇ ಸಮನುಪ್ರಾಪ್ತೇ ವ್ಯಾದಿತಾಸ್ಯ ಇವಾಂತಕಃ ॥೫॥ ತಚ್ಛ್ರುತ್ವಾ ರಾಘವೋ ವಾಕ್ಯಮುವಾಚ ಸ ಮಹಾಮುನೀನ್ । ಘಾತಯಿಷ್ಯಾಮಿ ತದ್ರಕ್ಷೋ ವ್ಯಪಗಚ್ಛತು ವೋ ಭಯಂ ॥೬॥ ತಥಾ ತೇಷಾಂ ಪ್ರತಿಜ್ಞಾಯ ಮುನೀನಾಮುಗ್ರತೇಜಸಾಂ । ಸ ಭ್ರಾತೄನ್ ಸಹಿತಾನ್ ಸರ್ವಾನ್ ಉವಾಚ ರಘುನಂದನಃ ॥೭॥ ಕೋ ಹಂತಾ ಲವಣಂ ವೀರಾಃ ಕಸ್ಯಾಂಶಸ್ಸ ವಿಧೀಯತಾಂ । ಭರತಸ್ಯ ಮಹಾಬಾಹೋಃ ಶತ್ರುಘ್ನಸ್ಯ ಚ ಧೀಮತಃ ॥೮॥ ರಾಘವೇಣೈವಮುಕ್ತಸ್ತು ಭರತೋ ವಾಕ್ಯಮಬ್ರವೀತ್ । ಅಹಮೇನಂ ವಧಿಷ್ಯಾಮಿ ಮಮಾಂಶಸ್ಸ ವಿಧೀಯತಾಂ ॥೯॥ ಭರತಸ್ಯ ವಚಶ್ಶ್ರುತ್ವಾ ಧೈರ್ಯಶೌರ್ಯಸಮನ್ವಿತಃ । ಲಕ್ಷ್ಮಣಾವರಜಸ್ತಸ್ಥೌ ಹಿತ್ವಾ ಸೌವರ್ಣಮಾಸನಂ ॥೧೦॥ ಶತ್ರುಘ್ನಸ್ತ್ವಬ್ರವೀದ್ವಾಕ್ಯಂ ಪ್ರಣಿಪತ್ಯ ನರಾಧಿಪಂ । ಕೃತಕರ್ಮಾ ಮಹಾಬಾಹುರ್ಮಧ್ಯಮೋ ರಘುನಂದನಃ ॥೧೧॥ ಆರ್ಯೇಣ ಹಿ ಪುರಾ ಶೂನ್ಯಾ ತ್ವಯೋಧ್ಯಾ ರಕ್ಷಿತಾ ಪುರೀ । ಸಂತಾಪಂ ಹೃದಯೇ ಕೃತ್ವಾ ಆರ್ಯಸ್ಯಾಗಮನಂ ಪ್ರತಿ ॥೧೨॥ ದುಃಖಾನಿ ಚ ಬಹೂನೀಹ ಅನುಭೂತಾನಿ ಪಾರ್ಥಿವ । ಶಯಾನೋ ದುಃಖಶಯ್ಯಾಸು ನಂದಿಗ್ರಾ

---

ಕುರುತೇ-ಮಾಡುತ್ತಾನೆ ॥ ೪ ॥ ತತಃ-ಬಳಿಕ, ಮಹಾಬಲಃ-ಅತಿಬಲವುಳ್ಳ, ಸಃ-ಆ ಲವಣಾಸುರನ, ಸಂಹಾರೇ-ಮರಣಕಾಲವು, ಸಮನುಪ್ರಾಪ್ತೇಸತಿ-ಬಂದಂಥಾದ್ದಾಗುತಿರಲೀಕಾಗಿ, ವ್ಯಾದಿತಾಸ್ಯಃ-ತೆರೆಯಲ್ಪಟ್ಟ ಮುಖವುಳ್ಳ, ಅಂತಕಇವ-ಯಮನಂತೆ, ಅಪರಾಣಿ-ಮತ್ತೂ ಕೆಲವಾದ, ಸತ್ವಾನಿ-ಜಂತುಗಳನ್ನು, ಖಾದತೇ-ಉಣ್ಣುತ್ತಾನೆ॥೫॥ ರಾಘವಃ-ಶ್ರೀರಾಮನು, ತತ್ ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ಮಹಾಮುನೀನ್ - ಮಹರ್ಷಿಗಳಂ ಕುರಿತು, ವಃ-ನಿಮ್ಮಗಳ, ಭಯಂ-ಭೀತಿಯು, ವ್ಯಪಗಚ್ಛತು-ಪೋಗಲಿ, ತದ್ರಕ್ಷಃ-ಆ ಲವಣಾಸುರನನ್ನು, ಘಾತಯಿಷ್ಯಾಮಿ-ಕೊಡೆಸುವೆನು ॥ ೬ ॥ ರಘುನಂದನಃ-ಶ್ರೀರಾಮನು, ಉಗ್ರತೇಜಸಾಂ-ಭಯಂಕರವಾದ ಪರಾಕ್ರಮವುಳ್ಳ, ತೇಷಾಂ ಮುನೀನಾಂ-ಆ ಋಷಿಗಳಿಗೆ, ತಥಾ-ಆಪರಿಯಾಗಿ, ಪ್ರತಿಜ್ಞಾಯ-ಪ್ರತಿಜ್ಞೆಮಾಡಿ, ಸಹಿತಾನ್-ಕೇರಿರುವ, ಸರ್ವಾನ್ ಭ್ರಾತೄನ್-ಸಮಸ್ತ ತಂಮಂದರಂ ಕುರಿತು, ಉವಾಚ-ಪೇಳಿದನು ॥೭॥ ಹೆ ವೀರಾಃ-ಎಲೈ ಪರಾಕ್ರಮಶಾಲಿಗಳಿರಾ! ಲವಣಂ-ಲವಣಾಸುರನನ್ನು, ಕಃ-ಯಾವೋನು, ಹಂತಾ-ಕೊಡೆಯುವನು, ಸಃ-ಆಲವಣಾಸುರನು, ಕಸ್ಯ-ಯಾರಿಗೆ, ಅಂಶಃ-ಪಾಲಾಗಿ, ವಿಧೀಯ್ಯತಾಂ-ಮಾಡಲ್ಪಲಿ, ಮಹಾಬಾಹೋಃ-ಮಹಾ ಭುಜಪರಾಕ್ರಮಶಾಲಿಯಾದ, ಭರತಸ್ಯ-ಭರತನಿಗೋ, ಧೀಮತಃ-ಬುದ್ಧಿಮಂತನಾದ, ಶತ್ರುಘ್ನಸ್ಯಚ-ಶತ್ರುಘ್ನನಿಗೋ ॥೮॥ ರಾಘವೇಣ-ಶ್ರೀರಾಮನಿಂದ, ಏವಂ-ಈಪರಿಯಾಗಿ, ಉಕ್ತಃ-ಪೇಳಲ್ಪಟ್ಟ, ಭರತಃ-ಭರತನು, ಅಹಂ-ನಾನು, ಏನಂ ಈ ಲವಣಾಸುರನನ್ನು, ವಧಿಷ್ಯಾಮಿ-ಸಂಹಾರಮಾಡುವೆನು, ಸಃ-ಆ ಲವಣಾಸುರನು, ಮಮ-ನನ್ನ, ಅಂಶಃ-ಭಾಗವಾಗಿ, ವಿಧೀಯ್ಯತಾಂ-ಮಾಡಲ್ಪಡಲಿ ॥ ೯ ॥ ಭರತಸ್ಯ-ಭರತನ, ವಚಃ-ವಾಕ್ಯವನ್ನು, ಶ್ರುತ್ವಾ-ಕೇಳಿ, ಧೈರ್ಯಶೌರ್ಯಸಮನ್ವಿತಃ-ಧೀರತ್ವಶೂರತ್ವಗಳಿಂದ ಕೂಡಿಕೊಂಡಿರುವ, ಲಕ್ಷ್ಮಣಾವರಜಃ-ಶತ್ರುಘ್ನನು, ಸೌವರ್ಣಂ-ಸುವರ್ಣವಿಕಾರವಾದ, ಆಸನಂ-ಪೀಠವನ್ನು, ಹಿತ್ವಾ-ಬಿಟ್ಟು, ತಸ್ಥೌ-ನಿಂತನು ॥ ೧೦ ॥ ಶತ್ರುಘ್ನಸ್ತು-ಶತ್ರುಘ್ನನಾದರೆ, ನರಾಧಿಪಂ-ನರಪತಿಯಾದ ಶ್ರೀರಾಮನಂ ಕುರಿತು, ಪ್ರಣಿಪತ್ಯ-ನಮಸ್ಕರಿಸಿ, ಮಹಾಬಾಹುಃ-ಮಹಾಭುಜಪರಾಕ್ರಮಿಯಾದ, ಮಧ್ಯಮಃ-ಎರಡನೆಯವನಾದ ಭರತನು, ಕೃತಕರ್ಮಾ-ಕೃತಕಾರ್ಯನಾಗಿಧಾನೆ, ಇತಿ-ಇಂತೆಂದು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧೧॥ ಆರ್ಯೇಣ-ಪೂಜ್ಯನಾದ ನಿನ್ನಿಂದ, ಪುರಾ-ಪೂರ್ವದಲ್ಲಿ, ಶೂನ್ಯಾ-ರಹಿತವಾದ, ಅಯೋಧ್ಯಾ-ಅಯೋಧ್ಯಾಪಟ್ಟಣವು, ರಕ್ಷಿತಾ-ಸಂರಕ್ಷಿಸಲ್ಪಟ್ಟಿತು, ಆರ್ಯಸ್ಯ-ಪೂಜ್ಯನಾದ ನಿನ್ನ, ಆಗಮನಂಪ್ರತಿ-ಬರುವಿಕೆಯನ್ನು ಉದ್ದೇಶಿಸಿ, ಸಂತಾಪಂ-ಸಂಕಟವನ್ನು, ಹೃದಯೇ-ಮನಸ್ಸಿನಲ್ಲಿ, ಕೃತ್ವಾ-ಮಾಡಿ, ಬಹೂನಿ-

---

ಹುಲಿಗಳನ್ನೂ, ಜಿಂಕೆಗಳನ್ನೂ, ಆನೆಗಳನ್ನೂ, ಮನುಷ್ಯರನ್ನೂ ಸಹ ಕೊಂದು ಬಳಿಕ ಉತ್ತಮವಾದ ಜಂತುಗಳನ್ನು ಹಗಿಲಲ್ಲಿ ಭುಜಿಸುವನು. ಕಾಲಗನು ಸಂಭವಿಸಿದರೆ ಬಾಯಿಯಂ ತೆರದುಕೊಂಡು ಬರುವ ಸಾಕ್ಷಾದ್ಯಮನೋ ಏನೋ ಎಂಬಂತೆ ಸಂಚರಿಸುವನು ಎಂಬದಾಗಿ ನುಡಿದಂಥಾವರಾದರು॥೫॥ ಆಬಳಿಕ ಶ್ರೀರಾಮನು ಈಮಾತಂ ಕೇಳಿ, ಎಲೈ ಮುನಿಗಳಿರಾ! ಆ ಲವಣಾಸುರನಂ ಕೊಲ್ಲಿಸುವೆನು, ನೀವುಗಳು ಅಂಜಬೇಡಿರೆಂದು ಆ ಮಹರ್ಷಿಗಳಿಗೆ ವಾಕ್ಯವಂ ಕೊಟ್ಟು, ತಮ್ಮಂದರಾದ ಭರತಾದಿಗಳಂ ಕುರಿತು, ಎಲೈ ಶೂರರಾದ ಸಹಜರೆ! ಈ ಲವಣಾಸುರನಂ ಸಂಹರಿಸತಕ್ಕವನ್ಯಾರು? ಈ ಕಾರ್ಯವು ಭರತನಭಾಗವೆ? ಅಥವಾ ಶತ್ರುಘ್ನನ ಭಾಗವೆ? ಕೇಳಬೇಕೆಂದು ನಿರೂಪಿಸಲೂ, ಆ ವಾಕ್ಯವಂ ಕೇಳಿ ಭರತನು ನಾನು ಈ ರಾಕ್ಷಸನಂ ಸಂಹರಿಸುವೆನೆಂದು ನುಡಿದನು ॥೯॥ ಧೈರ್ಯದಿಂದಲೂ ಶೌರ್ಯದಿಂದಲೂ ಕೂಡಿಕೊಂಡಿರುವ ಮಹಾ ಭುಜಪರಾಕ್ರಮಿಯಾದ ಶತ್ರುಘ್ನನು ಆ ಭರತನ ವಾಕ್ಯವಂ ಕೇಳಿ, ಸುವರ್ಣನಿರ್ಮಿತವಾದ ಪೀಠದಿಂದೆದ್ದು ನಿಂತುಕೊಂಡು, ಜಗಕ್ಕೆಲ್ಲಾ ಒಡೆಯನಾದ ಶ್ರೀರಾಮನಿಗೆ ಕೈಮುಗಿದು ಎಲೈ ರಾಜೋತ್ತಮನೆ! ಈ ಅಯೋಧ್ಯಾಪುರಿಯು ನಿನ್ನಿಂದ ಪರಿತ್ಯಕ್ತವಾಗಿರುವ ವೇಳೆಯೊಳು, ಭರತನು ಸಂತಪಿಸುತ್ತಾ ನಿನ್ನ ಆಗಮನವಂ ನಿರೀಕ್ಷಿಸಿಗೊಂಡು, ಇಲ್ಲಿ ಅನೇಕದುಃಖಗಳನ್ನನುಭವಿಸುತ್ತಲೂ ದುಃಖಕರವಾದ ಹಾಸಿಗೆಯೊಳು ಮಲಗುತ್ತಲೂ, ಫಲಗಳನ್ನೂ ಕಂದ ಮೂಲಗಳನ್ನೂ ಭುಜಿಸುತ್ತಿರುವನಾಗಿ ಜಡೆಗಳಂ ಧರಿಸಿಕೊಂಡು ನಾರುಮಡಿಗಳನ್ನುಡುತ್ತಲೂ ಇಂಥಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮೇವಸತ್ಪುರಾ ॥೧೩॥ ಫಲಮೂಲಾಶನೋಭೂತ್ವಾ ಜಟೀಚೀರಧರಸ್ತಥಾ । ಅನುಭೂಯೇದೃಶಂದುಃಖಮೇಷರಾಘವನಂದನಃ ॥ ಪ್ರೇಷ್ಯೇಮಯಿಸ್ಥಿತೇರಾಜನ್ನಭೂಯಃಕ್ಲೇಶಮಾಪ್ನುಯಾತ್ ॥೧೪॥ ತಥಾಬ್ರುವತಿಶತ್ರುಘ್ನೇ ರಾಘವಃಪುನರಬ್ರವೀತ್। ಏವಮೇವಾಸ್ತು ಕಾಕುತ್ಸ್ಥ ಕ್ರಿಯತಾಂಮಮಶಾಸನಂ। ರಾಜ್ಯೇತ್ವಾಮಭಿಷೇಕ್ಷ್ಯಾಮಿಮಧೋಸ್ತುನಗರೇಶುಭೇ॥೧೫॥ ನಿವೇಶಯಮಹಾಬಾಹೋಭರತಂಯದ್ಯಪೇಕ್ಷಸೇ। ಶೂರಸ್ತ್ವಂಕೃತವಿದ್ಯಶ್ಚ ಸಮರ್ಥಸ್ತ್ವಂನಿವೇಶನೇ॥೧೬॥ನಗರಂಮಧುನಾಜುಷ್ಟಂತಥಾಜನಪದಾಞ್ಛುಭಾನ್ ॥೧೭॥ ಯೋಹಿಶತ್ರುಂಸಮುತ್ಪಾಟ್ಯ ಪಾರ್ಥಿವಸ್ಯಪುನಃಕ್ಷಯೇ । ನವಿಧತ್ತೇನೃಪಂತತ್ರ ಸ ನರಕಂಸಹಿಗಚ್ಛತಿ ॥೧೮॥ ಸತ್ವಂಹತ್ವಾಮಧುಸುತಂಲವಣಂಪಾಪನಿಶ್ಚಯಂ । ರಾಜ್ಯಂಪ್ರಶಾಧಿಧರ್ಮೇಣವಾಕ್ಯಂಮೇಯದ್ಯಪೇಕ್ಷಸೇ ॥೨೦॥ ಉತ್ತರಂಚನವಕ್ತವ್ಯಂಶೂರವಾಕ್ಯಾಂತರೇಮಮ । ಬಾಲೇನಪೂರ್ವಜಸ್ಯಾಜ್ಞಾ ಕರ್ತವ್ಯಾನಾತ್ರಸಂಶ

---

ಅನೇಕವಾದ, ದುಃಖಾನಿ-ದುಃಖಗಳು, ಅನುಭೂತಾನಿ-ಅನುಭವಿಸಲ್ಪಟ್ಟವು, ಹೆ ಪಾರ್ಥಿವ-ಎಲೈರಾಜನೆ, ಪುರಾ-ಪೂರ್ವದಲ್ಲಿ, ದುಃಖಶಯ್ಯಾಸು-ವ್ಯಸನವನ್ನುಂಟುಮಾಡುತ್ತಿರುವ ದರ್ಭಶ್ಯಾಸ್ತ್ರಣರೂಪವಾದ ಹಾಸಿಗೆಗಳಲ್ಲಿ, ಶಯಾನಃ-ಮಲಗಿದವನಾಗಿ, ನಂದಿಗ್ರಾಮೆ-ನಂದಿಗ್ರಾಮದಲ್ಲಿ, ಅವಸತ್-ಇದ್ದನು ॥೧೩॥ ಏಷರಾಘವನಂದನಃ-ಈ ಭರತನು, ಫಲಮೂಲಾಶನಃ-ಫಲಗಳನ್ನೂ ಕಂದಮೂಲಗಳನ್ನು ಭುಜಿಸುತ್ತಿರುವನು, ಭೂತ್ವಾ- ಆಗಿ, ತಥಾ-ಹಾಗೆಯೆ, ಜಟೀ-ಜಟಾಧಾರಿಯು, ಚೀರಧರಃ-ನಾರು ಮಡಿಯನ್ನುಟ್ಟವನಾಗಿ, ಈದೃಶಂ-ಇಂಥಾದ್ದಾದ, ದುಃಖಂ-ದುಃಖವನ್ನು, ಅನುಭೂಯ-ಅನುಭವಿಸಿ, ಹೆ ರಾಜನ್-ಎಲೈ ಒಡೆಯನೆ, ಪ್ರೇಷ್ಯೇ-ಭೃತ್ಯನಾದ, ಮಯಿ-ನಾನು, ಸ್ಥಿತೇಸತಿ-ಇರಲೀಕಾಗಿ, ಭೂಯಃ-ಮತ್ತೂ, ಕ್ಲೇಶಂ-ದುಃಖವನ್ನು, ನಾಪ್ನುಯಾತ್-ಹೊಂದಬೇಡ ॥೧೪॥ ಶತ್ರುಘ್ನೇ-ಶತ್ರುಘ್ನನು, ತಥಾ-ಆ ಪರಿಯಾಗಿ, ಬ್ರುವತಿಸತಿ-ಹೇಳದವನಾಗುತ್ತಿರಲೀಕಾಗಿ, ರಾಘವಃ-ಶ್ರೀರಾಮನು, ಪುನಃ-ಮತ್ತು, ಅಬ್ರವೀತ್-ನುಡಿದನು ॥೧೫॥ ಹೆ ಕಾಕುತ್ಸ್ಥ-ಎಲೈ ಕಕುತ್ಸ್ಥವಂಶೋತ್ಪನ್ನನೆ, ಮಮ-ನನ್ನ, ಶಾಸನಂ-ಆಜ್ಞಾವಚನವು, ಕ್ರಿಯತಾಂ-ಮಾಡಲ್ಪಡಲಿ, ಏವಮೇವ-ಹೀಗೆಯೆ, ಅಸ್ತು-ಆಗಲೀ, ಮಧೋಃ-ಮಧ್ವಸುರನ, ರಾಜ್ಯೇ-ರಾಜ್ಯದಲ್ಲಿ, ಶುಭೇ-ಶುಭಕರವಾದ, ನಗರೆ-ಪಟ್ಟಣದಲ್ಲಿ, ತ್ವಾಂ-ನಿನ್ನನ್ನು, ಅಭಿಷೇಕ್ಷ್ಯಾಮಿ-ಅಭಿಷೇಕಮಾಡುವೆನು ॥೧೬॥ ಹೆಮಹಾಬಾಹೊ-ಎಲೈ ಮಹಾಭುಜಪರಾಕ್ರಮ ಶಾಲಿಯೆ, ಕೃತವಿದ್ಯಃ-ವಿದ್ಯಾಭ್ಯಾಸಮಾಡಿದ, ಶೂರಃ-ಶೂರನಾದ, ತ್ವಂ-ನೀನು, ಭರತಂ-ಭರತನನ್ನು, ಅಪೇಕ್ಷ್ಯಸೆಯದಿ-ಅಕ್ಷೇಕ್ಷಣಿಯ್ಯನೆಂದು ನೋಡುವನಾದರೆ, ಸಮರ್ಥಃ-ಸಮರ್ಥನಾಗಿ, ನಿವೇಶನೆ-ಮನೆಯಲ್ಲಿ, ನಿವೇಶಯ-ಇರಿಸು ॥೧೭॥ ಮಧುನಾ- ಮಧ್ವಸುರನಿಂದ, ಜುಷ್ಟಂ- ಹೊಂದಲ್ಪಟ್ಟ, ನಗರಂ-ಪಟ್ಟಣವನ್ನು, ತಥಾ-ಹಾಗೆ, ಶುಭಾನ್-ಶುಭಕರವಾದ, ಜನಪದಾನ್-ದೇಶಗಳನ್ನು, ಜಯ-ಜಯಿಸು ॥೧೮॥ ಯಃ-ಯಾವ ಪುರುಷನು, ಶತ್ರುಂ-ಶತ್ರುವಿನನ್ನು, ಸಮುತ್ಪಾಟ್ಯ- ಮೂಲೋತ್ಪಾಟನೆಮಾಡಿ, ಪಾರ್ಥಿವಸ್ಯ-ರಾಜನ, ಕ್ಷಯೆಸತಿ- ನಾಶವಾಗುತಿರಲೀಕಾಗಿ, ತತ್ರ-ಆ ದೇಶದಲ್ಲಿ, ನೃಪಂ- ರಾಜನನ್ನು, ಪುನಃ-ಮತ್ತು, ನವಿಧತ್ತೆ, ಮಾಡುವದಿಲ್ಲವೋ, ಸಃ-ಆ ಪುರುಷನು, ನರಕಂ-ನರಕವನ್ನು ಗಚ್ಛತಿಹಿ-ಹೊಂದುವನಷ್ಟೆ ॥೧೯॥ ಸತ್ವಂ-ಅನೀತಿಯುಂಬಲ್ಲ ನೀನು, ಮೆ-ನನ್ನ, ವಾಕ್ಯಂ-ವಚನವನ್ನು, ಅಪೇಕ್ಷ್ಯಸೆ-ಇಚ್ಛೈಸಿದವನಾದರೆ, ಪಾಪನಿಶ್ಚಯಂ-ಪಾಪದಲ್ಲಿಯೆಬುದ್ಧಿಯುಳ್ಳ, ಮಧುಸುತಂ-ಮಧ್ವಸುರನಿಗೆ ಕುವರನಾದ, ಲವಣಂ-ಲವಣಾಸುರನನ್ನು, ಹತ್ವಾ-ಕೊಂದು-ಧರ್ಮೇಣ-ಧರ್ಮದಿಂದ, ರಾಜ್ಯಂ-ರಾಜ್ಯವನ್ನು, ಪ್ರಶಾಧಿ- ಪರಿಪಾಲಿಸು ॥೨೦॥ ಹೆ ಶೂರ-ಎಲೈ ವೀರನೆ, ಮಮ-ನನ್ನ, ವಾಕ್ಯಾಂತರೆ-ವಾಕ್ಯ ಮಧ್ಯಭಾಗದಲ್ಲಿ, ಉತ್ತರಂ-ಪ್ರತ್ಯುತ್ತರವು, ನವಕ್ತವ್ಯಂ-ಹೇಳತಕ್ಕದ್ದಲ್ಲ, ಬಾಲೇನ-ಚಿಕ್ಕವನಿಂದ, ಪೂರ್ವಜಸ್ಯ-ಜ್ಯೇಷ್ಠನ-ಆಜ್ಞಾ-ಅಪ್ಪಣೆಯು, ಕರ್ತವ್ಯಾ-ಮಾಡತಕ್ಕದ್ದು, ಅತ್ರ-ಈ ಅರ್ಥದಲ್ಲಿ, ಸಂಶಯೋನ-ಸಂದೇಹವಿ

---

ದುಃಖಗಳಂ ಸೈರಿಸಿಗೊಂಡು ನಂದಿಗ್ರಾಮದೊಳು ಪೂರ್ವದಲ್ಲಿ ಇದ್ದಂಥಾವನಾದನು. ಈಗ ಈ ಕಾರ್ಯಕ್ಕೆಪ್ರೇಷ್ಯನಾದ ನಾನಿರಲೂ, ಈಭರತನು ಮತ್ತೂ ಕ್ಲೇಶವಂ ಹೊಂದಲಾಗದು, ಎಂಬದಾಗಿ ಶತ್ರುಘ್ನನು ನುಡಿದವನಾಗಲೂ, ಶ್ರೀರಾಮನು ಆ ಮಾತಿಗೆ ಮೆಚ್ಚಿದವನಾಗಿ ಎಲೈಶತ್ರುಘ್ನನೆ ! ಶುಭಕರವಾದ ಆ ಮಧ್ವಸುರನ ರಾಜ್ಯದೊಳು ನಿನಿಗೆ ಪಟ್ಟಾಭಿಷೇಕವಂ ಮಾಡಿಸುವೆನು, ಭರತನು ಪೂರ್ವದಲ್ಲಿ ಬಹುಕಷ್ಟಗಳನ್ನನುಭವಿಸಿಧಾನೆ, ಈಗ ಪೋಗಲಾಗದೆಂಬದಾಗಿ ನಿನಿಗಿಷ್ಟವಿದ್ದರೆ ಆತನು ಇಲ್ಲಿಯೇ ಇರಲಿ, ನೀನು ಆ ರಕ್ಕಸನಂ ಕೊಲ್ಲುವದಕ್ಕೆ ಸಮರ್ಥನಾಗಿಯೂ, ಶೂರನಾಗಿಯೂ ಇರುವನಾದಕಾರಣ ಆ ಮಧ್ವಸುರನ ಪಟ್ಟಣವನ್ನು ಸ್ವಾಧೀನಮಾಡಿಕೊಳ್ಳುವದಕ್ಕೆ ಶಕ್ತನಾಗಿದ್ದೀ ॥೧೮॥ ಯಾವ ಪುರುಷನಾದರೆ ಶತ್ರುವಿನಂ ಕೊಂದು ಆ ರಾಜ್ಯದಲ್ಲಿ ರಾಜನನ್ನು ನಿಯಾಮಿಸುವದಿಲ್ಲವ್ರೋ, ಅವನು ನರಕವಂ ಪೊಂದುವನು ॥ ಎಲೈ ಶತ್ರುಘ್ನನೆ ! ಎನ್ನಮಾತಂ ನೀನು ಕೇಳುವನಾದರೆ ಅಂಥಾ ರಾಜನೀತಿಯನ್ನರಿತಿರುವ ನೀನು ಮಧುಸುತನಾದ ಮಹಾ ದುರ್ಬುದ್ಧಿಯುಳ್ಳ ಆ ಲವಣಾಸುರನಂ ನಿಗ್ರಹಿಸಿ, ಧರ್ಮವಾಗಿ ರಾಜ್ಯಪರಿಪಾಲನೆಯಂ ಮಾಡುತ್ತಿರು, ಈ ವಿಷಯದಲ್ಲಿ ಎನಗೆ ಪ್ರತ್ಯುತ್ತರವನ್ನಿಯ್ಯಬ್ಯಾಡ, ಲೋಕದಲ್ಲಿ ಅಣ್ಣನಾದವನ ಮಾತನ್ನು ತಮ್ಮನಾದವನು ಅವಶ್ಯವಾಗಿ ಕೇಳಬೇಕಾದ್ದು ಸಹಜವಷ್ಟೆ, ಆದಕಾರಣ ನೀನು ವಸಿಷ್ಠಮುನಿಯೆ ಮೊದಲಾದವರೆಲ್ಲರಿಂದಲೂ ಮಂತ್ರಪುರಸ್ಸ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಃ॥೨೧॥ ಅಭಿಷೇಕಂಚಕಾಕುತ್ಸ್ಥ ಪ್ರತೀಚ್ಛ ಸ್ವಮಯೋದ್ಯತಂ। ವಸಿಷ್ಠಪ್ರಮುಖೈಸ್ಸರ್ವೈರ್ವಿಧಿಮಂತ್ರಪುರಸ್ಕೃತಮ್॥

ಇತ್ಯುತ್ತರರಾಮಾಯಣೇ ದ್ವಿಷಷ್ಟಿತಮಸ್ಸರ್ಗಃ.

ಏವಮುಕ್ತಸ್ತು ರಾಮೇಣಪರಾಂವ್ರೀಳಾಮುಪಾಗತಃ । ಶತ್ರುಘ್ನೋವೀರ್ಯಸಂಪನ್ನೋಮಂದಂಮಂದಮುವಾಚಹ॥ ಅಧರ್ಮಂವಿದ್ಮಿ ಕಾಕುತ್ಸ್ಥ ಹ್ಯಸ್ಮಿನ್ನರ್ಥೆ ನರೇಶ್ವರ। ಕಥಂತಿಷ್ಠತ್ಸುಜ್ಯೇಷ್ಠೇಷು ಕನೀಯಾನಭಿಷಿಚ್ಯತೇ॥ ತ್ವತ್ತೋ ಮಯಾಶ್ರುತಂ ವೀರಶ್ರುತಿಭ್ಯಶ್ಚ ತಥಾಶ್ರುತಂ ॥೨॥ ಅವಶ್ಯಕರಣೀಯಂಚಶಾಸನಂಪುರುಷರ್ಷಭ । ತವಚೈವಮಹಾಬಾಹೋ ಕೇನಾಪಿದು ರತಿಕ್ರಮಂ ॥೩॥ಮಯಾಪಿನೊತ್ತರಂವಾಚ್ಯಂಮಧ್ಯಮೆಪ್ರತಿಜಾನತಿ । ವ್ಯಾಹೃತಂತದ್ವಿಭೋ ಘೋರಂಹಂತಾಸ್ಮಿ ಲವಣಂ ಮೃಧೇ॥೪॥ ತಸ್ಯೈವಂಮೆದುರುಕ್ತಸ್ಯದುರ್ಗತಿಃಪುರುಷರ್ಷಭ ॥೫॥ ಉತ್ತರಂಹಿನವಕ್ತವ್ಯಂಜ್ಯೇಷ್ಠೇನಾಭಿಹಿತೇಸತಿ। ಅ ಧರ್ಮಸಹಿತಂಚೈವಪರಲೋಕವಿವರ್ಜಿತಂ॥೬॥ ಸೋಹಂದ್ವಿತೀಯಂಕಾಕುತ್ಸ್ಥ ನವಕ್ಷ್ಯಾಮಿತವೋತ್ತರಂ। ಮಾದ್ವಿತೀಯ

---

ಲ್ಲ॥೨೧॥ಹೆ ಕಾಕುತ್‌ಸ್ಥ-ಎಲೈಕಕುತ್‌ಸ್ಥ ವಂಶೋತ್ಪನ್ನನೆ,ವಸಿಷ್ಠಪ್ರಮುಖೈಃ-ವಸಿಷ್ಠಋಷಿಯೆ ಮೊದಲಾಗಿಉಳ್ಳ, ವಿಧಿಮಂತ್ರಪುರಸ್ಕೃತಂ-ಪ್ರಯೊ ಗಮಂತ್ರಗಳಿಂದ ಪುರಸ್ಕರಿಸಲ್ಪಟ್ಟ,ಮಯಾ-ನನ್ನಿಂದ, ಉದ್ಯತಂ-ಪ್ರಯತ್ನಮಾಡಲ್ಪಟ್ಟ, ಅಭಿಷೇಕಂ-ಪಟ್ಟಾಭಿಷೇಕವನ್ನು,ಪ್ರತೀಚ್ಛಸ್ವ-ಸಿರೀಕ್ಷಿಸು॥

—⋯✻ಇತಿ ಶ್ರೀಮದುತ್ತರರಾಮಾಯಣೆ ದ್ವಿಷಷ್ಟಿತಮಸ್ಸರ್ಗಃ.✻⋯—

ರಾಮೇಣ-ಶ್ರೀ ರಾಮನಿಂದ; ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ವೀರ್ಯಸಂಪನ್ನಃ-ಶೌರ್ಯದಿಂ ಕೂಡಿಕೊಂಡಿರುವ, ಶತ್ರುಘ್ನಃ-ಶತ್ರುಘ್ನ ನು, ಪರಾಂ-ಬಹಳವಾದ, ವ್ರೀಳಾಂ-ನಾಚಿಕೆಯನ್ನು, ಉಪಾಗತಃ-ಹೊಂದಿದವನಾಗಿ, ಮಂದಂಮಂದಂ-ಮೆಲ್ಲಮೆಲ್ಲಗೆ, ಉವಾಚಹ-ಹೇಳಿದನು॥೧॥ಹೆಕಾ ಕುತ್‌ಸ್ಥ-ಎಲೈಕಕುತ್‌ಸ್ಥವಂಶೋತ್ಪನ್ನನೆ, ಹೆನರೇಶ್ವರ-ಎಲೈ ಮನುಷ್ಯಾಧಿಪತಿಯೆ, ಅಸ್ಮಿನ್ನರ್ಥೆ-ಈ ಅರ್ಥದಲ್ಲಿ, ಅಧರ್ಮಂ- ಅಧರ್ಮವನ್ನಾಗಿ, ವೆದ್ಮಿ-ತಿಳಿದುಕೊಂಡಿದ್ದೇನೆ, ಜ್ಯೇಷ್ಠೇಷು-ಹಿರಿಯರು, ತಿಷ್ಠತ್ಸುಸತ್ಸು-ಇರುವರಾಗುತ್ತಿರಲೀಕಾಗಿ, ಕನೀಯಾನ್-ಕಿರಿಯವನು, ಕಥಂ-ಹ್ಯಾಗೆ, ಅಭಿಷಿಚ್ಯತೆ- ಅಭಿಷೇಕಮಾಡಲ್ಪಡುವನು ॥೨॥ ಹೆವೀರ-ಎಲೈ ಶೂರನೆ, ಮಯಾ-ನನ್ನಿಂದ, ತ್ವತ್ತಃ-ನಿನ್ನ ದೆಸೆಯಿಂದ, ಶ್ರುತಂ-ಕೇಳಲ್ಪಟ್ಟಿತ್ತು, ಶ್ರುತಿಭಿಶ್ಚ-ವೇದಗಳಿಂದ ಲೂ,ತಥಾ-ಹಾಗೆ, ಶ್ರುತಂ-ಕೇಳಲ್ಪಟ್ಟಿತ್ತು, ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ,ಹೆಮಹಾಬಾಹೊ-ಎಲೈ ಮಹಾಭುಜಗಳುಳ್ಳವನೆ, ತವ-ನಿನ್ನ,ಶಾ ಸನಂ-ಆಜ್ಞಾವಚನವು, ಅವಶ್ಯಕರಣೀಯ್ಯಮೆವ-ಮುಖ್ಯವಾಗಿ ಮಾಡತಕ್ಕದ್ದೇಸರಿ, ಕೇನಾಪಿ-ಯಾರಿಂದಲೂ, ದುರತಿಕ್ರಮಂ-ಅತಿಕ್ರಮಿಸ ಲಸಾಧ್ಯವಾ ದದ್ದು ॥೩॥ ಮಧ್ಯಮೆ-ಮಧ್ಯಮಪುತ್ರನಾದ ಭರತನು, ಪ್ರತಿಜಾನತಿಸತಿ-ಪ್ರತಿಜ್ಞೆಮಾಡಿದವನಾಗು ತಿರಲೀಕಾಗಿ, ಮಯಾಪಿ- ನನ್ನಿಂದಲೂ, ಉತ್ತ ರಂ-ಉತ್ತರವು, ನವಾಚ್ಯಂ-ಹೇಳತಕ್ಕದ್ದಲ್ಲ, ಹೆ ವಿಭೋ-ಎಲೈ ಪ್ರಭುವೆ, ತತ್-ಆ ಕಾರಣದ ದೆಸೆಯಿಂದ,ವ್ಯಾಹೃತಂ-ಹೇಳಲ್ಪಟ್ಟ, ಘೋರಂ-ಭಯಂ ಕರನಾದ, ಲವಣಂ-ಲವಣಾಸುರನನ್ನು, ಮೃಧೆ-ಕಾಳಗದಲ್ಲಿ, ಹಂತಾಸ್ಮಿ-ಹೊಡೆಯುವೆನು ॥೪॥ ಹೆ ಪುರುಷರ್ಷಭ- ಎಲೈ ಪುರುಷಶ್ರೇಷ್ಠನೆ, ಏವಂ- ಈಪರಿಯಾಗಿ, ದುರುಕ್ತಸ್ಯ-ದುರ್ಭಾಷೆಗಳನ್ನಾಡುತ್ತಿರುವ, ತಸ್ಯಮೆ-ಆ ನನಿಗೆ, ದುರ್ಗತಿಃ-ದುರ್ಗತಿಯು ॥೫॥ ಜ್ಯೇಷ್ಠೇನ-ದೊಡ್ಡವನಿಂದ, ಅಭಿಹಿತೇಸ ತಿ-ಹೇಳಲ್ಪಟ್ಟದ್ದಾಗುತಿರಲೀಕಾಗಿ, ಅಧರ್ಮಸಹಿತಂಚೈವ-ಅಧರ್ಮಯುಕ್ತಮಾದದ್ದಾಗಲಿ, ಪರಲೋಕವಿವರ್ಜಿತಂ- ಪರಲೋಕದಿಂದ ಬಿಡಲ್ಪಟ್ಟದ್ದೇಆ ಗಲೀ, ಉತ್ತರಂ-ಉತ್ತರವು, ನವಕ್ತವ್ಯಂಹಿ-ಹೇಳತಕ್ಕದ್ದಲ್ಲವಷ್ಟೆ ॥೬॥ ಹೆ ಕಾಕುತ್‌ಸ್ಥ-ಎಲೈ ಶ್ರೀರಾಮನೆ, ಸೋಹಂ-ಅಂಥಾನಾನು, ದ್ವಿತೀಯ್ಯಂ- ಎರಡನೆಯದಾದ, ಉತ್ತರಂ-ಪ್ರತ್ಯುತ್ತರವನ್ನು, ತವ-ನಿನಿಗೆ, ನವಕ್ಷ್ಯಾಮಿ-ಹೇಳಲಾರೆನು, ಹೆ ರಾಘವ-ಎಲೈ ಶ್ರೀರಾಮನೆ, ಮಯಿ - ನನ್ನವಿ

---

ರವಾಗಿ ಮಾಡಲ್ಪಡುವಂತೆ ನನ್ನಿಂದ ನಿಶ್ಚಯಿಸಲ್ಪಟ್ಟ ಪಟ್ಟಾಭಿಷೇಕವನ್ನು ಪರಿಗ್ರಹಿಸುವಂಥಾವನಾಗು ॥೨೧॥

—⋯✻ಉತ್ತರರಾಮಾಯಣದಲ್ಲಿನ ೬೨ ನೆಯ ಸರ್ಗಂ ಮುಗಿದುದು✻⋯—

ಈಪರಿ ಶ್ರೀರಾಮನಿಂದ ನಿರೂಪಿಸಲ್ಪಟ್ಟವನಾದ ಮತ್ತು ಮಹಾಶೂರನಾದ ಆ ಶತ್ರುಘ್ನನು, ವ್ರೀಳಾಭರಿತನಾಗಿ ಮೆಲ್ಲಮೆಲ್ಲನೆ ಶ್ರೀರಾಮನಂ ಕುರಿತು ಹೇಳಿದನದೆಂತೆನೆ॥೧॥ಎಲೈ ನರಪತಿಯಾದ ಶ್ರೀರಾಮನೇ! ಹಿರಿಯರುಮಹೋನ್ನ ತರಾಗಿರುವಾಗ ಕಿರಿಯವರು ರಾಜ್ಯದಲ್ಲಿ ಪಟ್ಟಾಭಿಷಿಕ್ತರಾಗುವದು ಯುಕ್ತವಾದ್ದಲ್ಲವೆಂದು ಶ್ರುತಿಸ್ಮೃತಿಗಳು ಹೇಳುತ್ತಿ ರುವವೆಂದು ನಾನು ತಮ್ಮಿಂದಲೇ ಕೇಳಿಯಿದ್ದೇನಲ್ಲ, ತಮ್ಮ ಮಾತು ಯಾರಿಂದಲೂ ಕೂಡಾ ತೊರೆಯಲಾಗದು, ತಮ್ಮ ಆಜ್ಞೆಯು ಅವಶ್ಯಮಾಡತಕ್ಕದ್ದಾಗಿರುವದು, ನಿನ್ನಮಾತಿಗೆ ಉತ್ತರವಂ ಕೊಡಲಾರೆನು. ತಮ್ಮಿಂದ ನಿರೂಪಿಸಲ್ಪಟ್ಟಂ ತೆ ಆ ಲವಣಾಸುರನಂ ಕಾಳಗದೊಳು ಖಂಡಿಸುವೆನು, ನನಿಗಿಂತಲೂ ಜ್ಯೇಷ್ಠನಾದ ಭರತನು ಹೊರಡಲುದ್ಯುಕ್ತನಾಗಿ ರುವಾಗ, ನಾಂಪೋಗುವೆನೆಂದು ದುಷ್ಟಮಾತುಗಳಂ ನುಡಿದದ್ದಕ್ಕೆ ನನಿಗೆ ಈ ಅವಮಾನವೇ ಸಾಕಾಗಿರುವದು, ಸರ್ವ ಜ್ಯೇಷ್ಠನಾದ ನೀನು ಆಜ್ಞಾಪಿಸಿದವನಾದರೆ, ಆ ಮಾತು ಪರಲೋಕಹಾನಿಕರವಾಗಿ ಇದ್ದಾಗ್ಯೂ, ಅಧರ್ಮವನ್ನುಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ತು ದಂಡೋವೈ ನಿಪತೇನ್ಮಯಿ ರಾಘವ ॥೭॥ ಅಹಂ ಕಾಮಕರೋ ರಾಜಂಸ್ತವಾಸ್ಮಿ ಪುರುಷರ್ಷಭ । ಅಧರ್ಮಂ ಜಹಿ ಕಾಕುತ್ಸ್ಥ ಮತ್ಕೃತೇ ರಘುನಂದನ ॥೮॥ ಏವಮುಕ್ತೇ ತು ಶೂರೇಣ ಶತ್ರುಘ್ನೇನ ಮಹಾತ್ಮನಾ । ಉವಾಚ ರಾಮಸ್ಸಂಹೃಷ್ಟೋ ಲಕ್ಷ್ಮಣಂ ಭರತಂ ತದಾ ॥೯॥ ಸಂಭಾರಾನಭಿಷೇಕಸ್ಯ ಆನಯಧ್ವಂ ಸಮಾಹಿತಾಃ । ಅದ್ಯೈವ ಪುರುಷವ್ಯಾಘ್ರಮಭಿಷೇಕ್ಷ್ಯಾಮಿ ದುರ್ಜಯಂ ॥೧೦॥ ಪುರೋಧಸಂ ಚ ಕಾಕುತ್ಸ್ಥ ನೈಗಮಾನೃತ್ವಿಜಸ್ತಥಾ । ಮಂತ್ರಿಣಶ್ಚೈವ ಮೇ ಸರ್ವಾನಾನಯಧ್ವಂ ಮಮಾಜ್ಞಯಾ ॥೧೧॥ ರಾಜ್ಞಶ್ಶಾಸನಮಾಜ್ಞಾಯ ತಥಾಕುರ್ವನ್ಮಹಾರಥಾಃ । ಅಭಿಷೇಕಸಮಾರಂಭಂ ಪುರಸ್ಕೃತ್ಯ ಪುರೋಧಸಂ । ಪ್ರವಿಷ್ಟಾ ರಾಜಭವನಂ ಪುರಂದರಗೃಹೋಪಮಂ ॥೧೨॥ ತತೋಭಿಷೇಕೋ ವವೃಧೇ ಶತ್ರುಘ್ನಸ್ಯ ಮಹಾತ್ಮನಃ । ಸಂಪ್ರಹರ್ಷಕರಶ್ಶ್ರೀಮಾನ್ ರಾಘವಸ್ಯ ಪುರಸ್ಯ ಚ ॥೧೩॥ ಅಭಿಷಿಕ್ತಸ್ತು ಶತ್ರುಘ್ನೋ ಬಭೌ ಚಾದಿತ್ಯಸಂನಿಭಃ । ಅಭಿಷಿಕ್ತಃ ಪುರಾ ಸ್ಕಂದಸ್ಸೇಂದ್ರೈರಿವ ಮರುದ್ಗಣೈಃ ॥೧೪॥ ಅಭಿಷಿಕ್ತೇ ತು ಶತ್ರುಘ್ನೇ ರಾಮೇಣಾಕ್ಲಿಷ್ಟಕರ್ಮಣಾ । ಪೌರಾಃ ಪ್ರಮುದಿತಾ ಆಸನ್ ಬ್ರಾಹ್ಮಣಾ

---

ಮಾನಿಪತೇತ್-ಬೀಳಬ್ಯಾಡ ॥೭॥ ಹೇ ರಾಜನ್-ಎಲೈ ರಾಜನೆ, ಹೇ ಪುರುಷರ್ಷಭ-ಎಲೈ ಪುರುಷರಲ್ಲಿ, ದ್ವಿತೀಯ್ಯಃ-ಎರಡನೇದಾದ, ದಂಡಃ-ಶಿಕ್ಷೆಯು, ಮಾನಿಪತೇತ್-ಬೀಳಬ್ಯಾಡ ॥೭॥ ಹೇ ರಾಜನ್-ಎಲೈ ರಾಜನೆ, ಹೇ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ಅಹಂ-ನಾನು, ತವ-ನಿನ್ನ, ಕಾಮಕರಃ-ಇಷ್ಟಾನುಸಾರವಾಗಿ ನಡೆಯುವನು, ಹೇ ಕಾಕುತ್ಸ್ಥ-ಎಲೈ ಕಕುತ್ಸ್ಥವಂಶೋತ್ಪನ್ನನೆ, ರಘುನಂದನ-ಎಲೈ ಶ್ರೀರಾಮನೆ, ಮತ್ಕೃತೇ-ನನ್ನ ನಿಮಿತ್ತವಾಗಿ, ಅಧರ್ಮಂ-ಅಧರ್ಮವನ್ನು, ಜಹಿ-ಹೊಡಿ, ಏವಂ-ಈ ಪರಿಯಾಗಿ, ಮಹಾತ್ಮನಾ-ಮಹಾಮನಸ್ವಿಯಾದ, ಶೂರೇಣ-ವೀರನಾದ, ಶತ್ರುಘ್ನೇನ-ಶತ್ರುಘ್ನನಿಂದ, ಉಕ್ತೇಸತಿ-ಹೇಳಲ್ಪಟ್ಟದ್ದಾಗುತಿರಲಿಕಾಗಿ, ಸಂಹೃಷ್ಟಃ-ಸಂತೋಷಗೊಂಡ, ರಾಮಃ-ಶ್ರೀರಾಮನು, ತದಾ-ಆ ವೇಳೆಯಲ್ಲಿ, ಲಕ್ಷ್ಮಣಂ-ಲಕ್ಷ್ಮಣನನ್ನು, ಭರತಂಚ-ಭರತನನ್ನೂ ಕುರಿತು, ಉವಾಚ - ಹೇಳಿದನು ॥೯॥ ಸಮಾಹಿತಾಃ-ಸಮಾಧಾನ ಚಿತ್ತರಾಗಿ, ಅಭಿಷೇಕಸ್ಯ-ಪಟ್ಟಾಭಿಷೇಕದ, ಸಂಭಾರಾನ್-ಸಾಮಗ್ರಿಗಳನ್ನು, ಆನಯಧ್ವಂ-ತರಿಸಿರಿ, ಅದ್ಯೈವ-ಈಗಲೇ, ಪುರುಷವ್ಯಾಘ್ರಂ-ಪುರುಷಶ್ರೇಷ್ಠನಾದ, ದುರ್ಜಯಂ-ಜಯಿಸಲಸಾಧ್ಯನಾದ ಶತ್ರುಘ್ನನನ್ನು, ಅಭಿಷೇಕ್ಷ್ಯಾಮಿ-ಪಟ್ಟಾಭಿಷೇಕಮಾಡುವೆನು ॥೧೦॥ ಹೇ ಕಾಕುತ್ಸ್ಥ-ಎಲೈ ಭರತನೆ, ಮಮ-ನನ್ನ, ಆಜ್ಞಯಾ-ಆಜ್ಞೆಯಿಂದ, ಪುರೋಧಸಂಚ-ಪುರೋಹಿತನಾದ ವಸಿಷ್ಠಋಷಿಯನ್ನೂ, ನೈಗಮಾನ್-ವೇದಜ್ಞರಾದ, ಋತ್ವಿಜಶ್ಚ-ಋತ್ವಿಕ್ಕುಗಳನ್ನು, ತಥಾ-ಹಾಗೆಯೆ, ಮೇ-ನನ್ನ, ಸರ್ವಾನ್-ಸಮಸ್ತರಾದ, ಮಂತ್ರಿಣಶ್ಚ-ಮಂತ್ರಿಗಳನ್ನೂ, ಆನಯಧ್ವಂ-ಕರೆಯಿಸಿರಿ ॥೧೧॥ ರಾಜ್ಞಃ-ಒಡೆಯನ, ಶಾಸನಂ-ಆಜ್ಞೆಯನ್ನು, ಆಜ್ಞಾಯ-ತಿಳಿದು, ಮಹಾರಥಾಃ-ಮಹಾರಥಿಕರು, ತಥಾ-ಹಾಗೆ, ಅಕುರ್ವನ್-ಮಾಡಿದರು, ಅಭಿಷೇಕಸಮಾರಂಭಂ-ಪಟ್ಟಾಭಿಷೇಕದ ಉದ್ಯೋಗವುಳ್ಳ, ಪುರೋಧಸಂ-ಪುರೋಹಿತನನ್ನು, ಪುರಸ್ಕೃತ್ಯ-ಮುಂದೆಮಾಡಿ, ಪುರಂದರಗೃಹೋಪಮಂ-ದೇವೇಂದ್ರನಮನೆಗೆ ಸಮಾನವಾದ, ರಾಜಭವನಂ-ಅರಮನೆಯನ್ನು, ಪ್ರವಿಷ್ಟಾಃ-ಹೊಕ್ಕರು ॥೧೨॥ ತತಃ-ಬಳಿಕ, ಮಹಾತ್ಮನಃ- ಮಹಾನುಭಾವನಾದ, ಶತ್ರುಘ್ನಸ್ಯ-ಶತ್ರುಘ್ನನಿಗೆ, ಶ್ರೀಮಾನ್-ಸಂಪದ್ಯುಕ್ತವಾದ, ಅಭಿಷೇಕಃ-ಪಟ್ಟಾಭಿಷೇಕವು, ರಾಘವಸ್ಯ-ಶ್ರೀರಾಮನಿಗೆ, ಪುರಸ್ಯಚ-ಪಟ್ಟಣದವರಿಗೂ ಸಹ, ಸಂಪ್ರಹರ್ಷಕರಃ-ಸಂತೋಷಕರವಾಗಿ, ವವೃಧೇ-ವೃದ್ಧಿಹೊಂದಿತು ॥೧೩॥ ಅಭಿಷಿಕ್ತಃ-ಅಭಿಷೇಕಮಾಡಲ್ಪಟ್ಟ, ಆದಿತ್ಯಸನ್ನಿಭಃ-ಸೂರ್ಯಸದೃಶನಾದ, ಶತ್ರುಘ್ನಃ-ಶತ್ರುಘ್ನನು, ಸೇಂದ್ರೈಃ-ಇಂದ್ರಾದಿಗಳೊಡಗೂಡಿದ, ಮರುದ್ಗಣೈಃ-ದೇವತಾತಂಡಗಳಿಂದ, ಪುರಾ-ಪೂರ್ವದಲ್ಲಿ, ಅಭಿಷಿಕ್ತಃ-ಪಟ್ಟಾಭಿಷೇಕಮಾಡಲ್ಪಟ್ಟ, ಸ್ಕಂದಇವ-ಕುಮಾರಸ್ವಾಮಿಯಂತೆ, ಬಭೌ-ಹೊಳೆಯುತ್ತಿದ್ದನು ॥೧೪॥ ಶತ್ರುಘ್ನೇ-ಶತ್ರುಘ್ನನು, ಅಕ್ಲಿಷ್ಟಕರ್ಮಣಾ-

---

ಟುಮಾಡುವದಾದಾಗ್ಯೂ ಹ್ಯಾಗಾದರೂ ಸರಿಯೇ ಪ್ರತ್ಯುತ್ತರವನ್ನೀಯದೆ ಅವಶ್ಯವಾಗಿ ಮಾಡಬೇಕಾಗಿರುವದು ॥ ಎಲೈ ರಘುನಂದನನೆ ! ಈ ಪಟ್ಟಾಭಿಷೇಕರೂಪವಾದ ದಂಡನೆಯನ್ನು ಎನಗೆ ಕೊಡುವಂಥಾವನಾಗಬ್ಯಾಡೆಂದು ನಾನು ಎರಡನೆಯಮಾತಂ ಹೇಳುವೆನು ದಯವಾಲಿಸಿ ಕೇಳುವಂಥಾವನಾಗು, ನಾನು ತಮ್ಮ ಇಷ್ಟಾನುಸಾರವೇ ನಡೆಯುತ್ತಿರುವನು, ಎನಗೆ ಅಧರ್ಮವಂ ಗಟ್ಟಬ್ಯಾಡೆಂದು ಶತ್ರುಘ್ನನು ವಿನಯ ಪುರಸ್ಸರವಾಗಿ ಹೇಳಿದವನಾದರೂ ಕೂಡಾ ಆ ಮಾತಂ ಕೇಳಿದೇ ಶ್ರೀರಾಮನು ಮಹಾ ಸಂತೋಷಮುಳ್ಳವನಾಗಿ, ಭರತಲಕ್ಷ್ಮಣರಂ ಕುರಿತು, ಎಲೈ ಸಹೋದರರೆ ! ಪಟ್ಟಾಭಿಷೇಕ ಮಹೋತ್ಸವಕ್ಕೆ ಬೇಕಾದ ಪದಾರ್ಥಗಳಂ ಸಿದ್ಧಗೊಳಿಸಿರಿ, ಈಗಲೇ ಈ ಶತ್ರುಘ್ನನಿಗೆ ಪಟ್ಟಾಭಿಷೇಕವಂ ಮಾಡಿಸುವೆನು. ಆದಕಾರಣ ಎನ್ನಾಜ್ಞೆಯಿಂದ ಪುರೋಹಿತನನ್ನೂ ವೇದಜ್ಞರನ್ನೂ ಋತ್ವಿಜರನ್ನೂ ಮಂತ್ರಿಗಳನ್ನೂ ಇವರುಗಳನ್ನೆಲ್ಲ ಕರೆಯಿಸುವಂಥಾವರಾಗಿರೆಂದು ಶ್ರೀರಾಮನು ನಿರೂಪಿಸಿದವನಾಗಲೂ, ಆ ಮಹಾರಥಿಕರು ಒಡೆಯನಾಜ್ಞೆಯಾದಂತೆ ಪುರೋಹಿತರೆ ಮುಂತಾದವರನ್ನೆಲ್ಲ ಕರೆಯಿಸಿ, ಸಾಮಗ್ರಿಗಳಂ ಸಿದ್ಧಮಾಡಿ ಅರಮನೆಗೆ ಪ್ರನಹಾ ಬಂದವರಾದರು ॥೧೨॥ ಬಳಿಕ ಶ್ರೀರಾಮನಿಗೂ ಪಟ್ಟಣಸ್ಥರಿಗೂ ಸಹ ಆನಂದವಂ ವೃದ್ಧಿಗೊಳಿಸುತ್ತಿರುವ, ಮತ್ತು ಸಂಪದ್ಯುಕ್ತವಾದ ಶತ್ರುಘ್ನನ ಪಟ್ಟಾಭಿಷೇಕವು ವೃದ್ಧಿಹೊಂದಿದಂಥಾದ್ದಾಯಿತು ॥೧೩॥ ಸೂರ್ಯಸದೃಶನಾದ ಆ ಶತ್ರುಘ್ನನು ಪಟ್ಟಾಭಿಷಿಕ್ತನಾಗಿ ಇಂದ್ರಸಹಿತರಾದ ದೇವಗಣಂಗಳಿಂದ ಅಭಿಷೇಕ ಮಾಡಲ್ಪಟ್ಟ ಕುಮಾರಸ್ವಾಮಿಯಂತೆ ಹೊಳೆಯುತ್ತಿದ್ದನು ॥೧೪॥ ಈಪರಿ ಶ್ರೀರಾಮನಿಂದಶತ್ರುಘ್ನನು ಪಟ್ಟಾಭಿಷೇಕ ಮಾಡಲ್ಪಟ್ಟವನಾಗಲೂ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ಚ ಬಹುಶ್ರುತಾಃ ॥೧೫॥ ಕೌಸಲ್ಯಾಚಸುಮಿತ್ರಾಚಮಂಗಳಂಕೈಕಯೀತಥಾ। ಚಕ್ರುಸ್ತಾ ರಾಜಭವನೆಯಾಶ್ಚಾನ್ಯಾ ರಾಜಯೋಷಿತಃ ॥೧೬॥ಋಷಯಶ್ಚ ಮಹಾತ್ಮಾನೋಯಮುನಾತೀರವಾಸಿನಃ। ಹತಂಲವಣಮಾಶಂಸುಶ್ಶತ್ರುಘ್ನಸ್ಯಾಭಿಷೇಚನಾತ್ ॥೧೭॥ ತತೋಭಿಷಿಕ್ತಂಕಾಕುತ್ಸ್ಥಮಂಕಮಾರೋಪ್ಯ ರಾಘವಃ। ಉವಾಚಮಧುರಾಂವಾಣೀಂತೇಜಸ್ತಸ್ಯಾಭಿಪೂರಯನ್ ॥೧೮॥ ಅಯಂಶರಸ್ತ್ವಮೋಘಸ್ತು ದಿವ್ಯಃಪರಪುರಂಜಯಃ। ಅನೇನಲವಣಂಸೌಮ್ಯ ಹಂತಾಸಿ ರಘುನಂದನ ॥೧೯॥ ಸೃಷ್ಟಃಶರೋಯಂಕಾಕುತ್ಸ್ಥ ಯದಾಶೇತೆಮಹಾರ್ಣವೆ। ಸ್ವಯಂಭೂರಜಿತೋದೇವೋಯಂನಾಪಶ್ಯನ್ ಸುರಾಸುರಾಃ॥೨೦॥ ಅದೃಶ್ಯಸ್ಸರ್ವಭೂತಾನಾಂತೇನಾಯಂಹಿಶರೋತ್ತಮಃ। ಸೃಷ್ಟಃಕ್ರೋಧಾಭಿಭೂತೇನವಿನಾಶೆ ಸರ್ವರಕ್ಷಸಾಂ ॥೨೧॥ ಮಧುಕೈಟಭಯೋರ್ವೀರವಿಘಾತೆವರ್ತಮಾನಯೋಃ। ಸ್ರಷ್ಟುಕಾಮೇನಲೋಕಾಂಸ್ತ್ರೀನ್ ತೌ ಚಾನೇನಹತೌಯುಧಿ॥೨೨॥ಕ್ಷಾತ್ರ

---

ಕ್ಲೇಶವಿಲ್ಲದೇ ಕಾರ್ಯವಂಗೈಯುತ್ತಿರುವ, ರಾಮೇಣ-ಶ್ರೀರಾಮನಿಂದ, ಅಭಿಷಿಕ್ತೇಸತಿ-ಪಟ್ಟಾಭಿಷೇಕ ಮಾಡಲ್ಪಟ್ಟವನಾಗುತಿರಲಿಕಾಗಿ, ಪೌರಾಃ-ಪಟ್ಟಣಸ್ಥರೂ, ಬಹುಶ್ರುತಾಃ-ಬಹುಶಾಸ್ತ್ರಜ್ಞರಾದ, ಬ್ರಾಹ್ಮಣಶ್ಚ-ಬ್ರಾಹ್ಮಣರೂ, ಪ್ರಮುದಿತಾಃ-ಸಂತೋಷಗೊಂಡವರು, ಅಭವನ್-ಆದರು ॥೧೫॥ ಕೌಸಲ್ಯಾಚ-ಕೌಸಲ್ಯಾದೇವಿಯೂ, ಸುಮಿತ್ರಾಚ-ಸುಮಿತ್ರಾದೇವಿಯೂ, ತಥಾ-ಹಾಗೆಯೆ, ಕೈಕಯೀ-ಕೈಕೇಯೀದೇವಿಯೂ, ಅನ್ಯಾಃ-ಮತ್ತುಕೆಲಬರಾದ, ರಾಜಯೋಷಿತಃ-ರಾಜಸ್ತ್ರೀರುಗಳು, ಯಾಃ-ಯಾರುಂಟೋ, ತಾಶ್ಚ-ಅವರುಗಳು ಸಹ, ರಾಜಭವನೆ-ಅರಮನೆಯಲ್ಲಿ, ಮಂಗಳಂ-ಮಂಗಳಾಶಾಸನವನ್ನು, ಚಕ್ರುಃ-ಮಾಡಿದರು ॥೧೬॥ ಮಹಾತ್ಮಾನಃ-ಮಹಾಮುನಿಗಳಾದ, ಯಮುನಾತೀರವಾಸಿನಃ- ಯಮುನಾ ನದೀದಡದಲ್ಲಿರುವ, ಋಷಯಶ್ಚ-ಋಷಿಗಳೂ, ಶತ್ರುಘ್ನಸ್ಯ-ಶತ್ರುಘ್ನನಿಗೆ, ಅಭಿಷೇಚನಾತ್-ಪಟ್ಟಾಭಿಷೇಕ ಮಾತ್ರದಿಂದಲೆ, ಲವಣಂ-ಲವಣಾಸುರನನ್ನು, ಹತಂ-ಕೊಲ್ಲಲ್ಪಟ್ಟವನನ್ನಾಗಿ, ಆಶಂಸುಃ-ಹೇಳಿದರು ॥೧೭॥ ರಾಘವಃ-ಶ್ರೀರಾಮನು, ತತಃ-ಬಳಿಕ, ಅಭಿಷಿಕ್ತಂ-ಪಟ್ಟಾಭಿಷಿಕ್ತನಾದ, ಕಾಕುತ್ಸ್ಥಂ- ಶತ್ರುಘ್ನನನ್ನು, ಅಂಕಂ-ತೊಡೆಯನ್ನು, ಆರೋಪ್ಯ-ಏರಿಸಿ, ತಸ್ಯ-ಆ ಶತ್ರುಘ್ನನಿಗೆ, ತೇಜಃ-ಪರಾಕ್ರಮವನ್ನು, ಅಭಿಪೂರಯನ್-ತುಂಬಿದಂಥಾವನಾಗಿ, ಮಧುರಾಂ-ಮನೋಹರವಾದ, ವಾಣೀಂ-ಮಾತನ್ನು, ಉವಾಚ-ನುಡಿದನು ॥೧೮॥ ಪರಪುರಂಜಯಃ-ಶತ್ರುಸಂಹಾರಕವಾದ,ದಿವ್ಯಃ-ಮನೋಹರವಾದ,ಅಯಂಶರಸ್ತು-ಈ ಬಾಣವಾದರೆ, ಅಮೋಘಃ-ವ್ಯರ್ಥವಾದದ್ದಲ್ಲ, ಹೆ ರಘುನಂದನ-ಎಲೈ ಶತ್ರುಘ್ನನೆ, ಹೆ ಸೌಮ್ಯ, ಎಲೈ ಕೋಪರಹಿತನೆ, ಅನೇನ-ಈ ಬಾಣದಿಂದ, ಲವಣಂ-ಲವಣಾಸುರನನ್ನು, ಹಂತಾ-ಸಂಹಾರಕನು, ಅಸಿ-ಆಗಿದ್ದಿ ॥೧೯॥ ಹೆ ಕಾಕುತ್ಸ್ಥ-ಎಲೈಕಕುತ್ಸ್ಥವಂಶೋತ್ಪನ್ನನಾದ ಶತ್ರುಘ್ನನೆ, ಯದಾ-ಯಾವ ಕಾಲದಲ್ಲಿ, ಅಜಿತಂ-ಅಪಾರಶಕ್ತಿಯುಳ್ಳ, ಸ್ವಯಂಭೂರ್ದೇವಃ-ಚತುರ್ಮುಖ ಬ್ರಹ್ಮದೇವನು, ಮಹಾರ್ಣವೆ- ಸಮುದ್ರದಲ್ಲಿ, ಶೇತೆ-ಮಲಗಿರುವನೋ, ಸುರಾಸುರಾಃ-ದೇವರಾಕ್ಷಸರು, ಯಂ-ಯಾವ ಬ್ರಹ್ಮನನ್ನು, ನಾಪಶ್ಯನ್-ಕಾಣದೇ ಹೋದರೋ, ತದಾ – ಆ ಕಾಲದಲ್ಲಿ, ಅಯಂಶರಃ-ಈ ಬಾಣವು, ಸೃಷ್ಟಃ-ಸೃಜನೆಮಾಡಲ್ಪಟ್ಟಿತು ॥೨೦॥ ಸರ್ವಭೂತಾನಾಂ-ಸಮಸ್ತವಾದ ಭೂತಗಳಿಗೂ,ಅದೃಶ್ಯಃ-ಕಾಣಿಸದೇಇರುವ, ಅಯಂಶರೋತ್ತಮಃ-ಈಬಾಣಶ್ರೇಷ್ಠವು, ಸರ್ವರಕ್ಷಸಾಂ-ಸಮಸ್ತರಾದ ರಾಕ್ಷಸರ, ವಿನಾಶೆ-ನಾಶಪಡಿಸುವಾಗಿ, ಕ್ರೋಧಾಭಿಭೂತೇನ- ಕೋಪಪಡೆದ ಆ ವಿಷ್ಣುವಿನಾದ, ತೇನ-ಆ ಬ್ರಹ್ಮನಿಂದ, ಸೃಷ್ಟಃ-ನಿರ್ಮಿಸಲ್ಪಟ್ಟಿತು ॥೨೧॥ ಹೆವೀರ-ಎಲೈ ಶೂರನೆ, ಮಧುಕೈಟಭಯೋಃ-ಮಧುಕೈಟಭರೆಂಬ ರಾಕ್ಷಸರು, ವಿಘಾತೆ-ಕಾಳಗದಲ್ಲಿ, ವರ್ತಮಾನಯೊತ್ಸತೋಃ-ಇರುವಂಥಾವರಾಗುತ್ತಿರಲಿಕಾಗಿ, ತ್ರೀನ್‌ಲೋಕಾನ್-ಮೂರು ಲೋಕಗಳನ್ನು, ಸ್ರಷ್ಟುಕಾಮೇನ-ಸೃಜಿಸಬೇಕೆಂಬಿಚ್ಛೆಯುಳ್ಳ, ಅನೇನ-ಈ ಶ್ರೀಮಹಾ ವಿಷ್ಣುವಿನಿಂದ, ಯುಧಿ-ಕಾಳಗದಲ್ಲಿ, ತೌ-ಆ ಮಧುಕೈಟಭರೀರ್ವರು, ಹತೌ- ಕೊಲ್ಲಲ್ಪಟ್ಟರು ॥೨೨॥

---

ಪಟ್ಟಣಸ್ಥರೂ ಬ್ರಾಹ್ಮಣರೂ ಇವರೆಲ್ಲರು ಸಂತೋಷಚಿತ್ತವುಳ್ಳವರಾದರು ॥೧೫॥ ಆ ಅಂತಃಪುರದಲ್ಲಿರುವ ಕೌಸಲ್ಯಾದೇವಿಯೂ ಕೈಕಯೀ ದೇವಿಯೂ ಮತ್ತೂ ಇತರ ಉತ್ತಮಾಂಗನೆಯರು ಇವರೆಲ್ಲರು ಮಂಗಳಾಚರಣೆಯಂ ಮಾಡಿದಂಥಾವರಾದರು ॥೧೬॥ ಆಗ ಯಮುನಾತೀರವಾಸಿಗಳಾದ ಋಷಿಗಳೆಲ್ಲರು ಶತ್ರುಘ್ನನ ಪಟ್ಟಾಭಿಷೇಕಮಾತ್ರದಿಂದಲೆ ಲವಣಾಸುರನು ಹತನಾದನೆಂದು ಭಾವಿಸಿದಂಥಾವರಾದರು॥೧೭॥ ಆ ಬಳಿಕ ಶ್ರೀರಾಮನು ಪಟ್ಟಾಭಿಷಿಕ್ತನಾದ ಆ ಶತ್ರುಘ್ನನನ್ನು, ತೊಡೆಯಮೇಲೆ ಕುಳ್ಳಿರಿಸಿಕೊಂಡು ಆತನಿಗೆ ತೇಜಸ್ಸಂನು ತುಂಬುತ್ತಿರುವನಾಗಿ ಮಧುರವಾದ ವಾಕ್ಯವಂ ಹೇಳಿದನದೆಂತೆನೆ॥೧೮॥ ಎಲೈರಘುನಂದನನೆ! ಹಗೆಯರ ಶರೀರಗಳಂ ಧ್ವಂಸಿಸುತ್ತಿರುವ ದಿವ್ಯವಾದ ಈ ಬಾಣವು ಅಮೋಘವಾದದ್ದು, ಇದರಿಂದ ಆ ಲವಣಾಸುರನಂ ಕೊಡೆಯುವಂಥಾವನಾಗು.॥೧೯॥ ದೇವಾದಿಗಳೂ ಕೂಡಾ ಯಾವ ಮಹಾತ್ಮನಂ ಕಾಣುವದಿಲ್ಲವೋ ಅಂಥಾ ಸ್ವಯಂಭುವೆನಿಸಿದ ದೇವನು ಸಮುದ್ರಶಾಯಿಯಾಗಿರುವ ವೇಳೆಯೊಳು ಈ ಬಾಣವಂ ಸೃಜಿಸಿದಂಥಾವನಾದನು ॥೨೦॥ ರಾಕ್ಷಸಸಂಹಾರಕೋಸುಗ ಆತನಿಂದ ಮಾಡಲ್ಪಟ್ಟ ಈ ಬಾಣವು ಸರ್ವಭೂತಗಳಿಗೂ ಅದೃಶ್ಯವಾಗಿರುವದು ॥೨೧॥ ಮಧುಕೈಟಭರೀರ್ವರ ಕಾಳಗವು ಪ್ರಸಕ್ತವಾಗಲು ಮೂಜಗಗಳನ್ನು ಸೃಜಿಸಬೇಕೆಂಬಿಚ್ಛೆಯುಳ್ಳ ಭಗವಂತನಿಂದ ಈ ಬಾಣದಿಂದಲೆ ಅವರೀರ್ವರು ಹತರಾದರು ॥೨೨॥ ಲೋಕತ್ರಯಹಿತಕ್ಕೋಸುಗ ಈಶರಮುಖ್ಯದಿಂದ ಆ ಮಧುಕೈಟಭರಂ ಸಂಹರಿಸಿ ಬಳಿಕ ಆ ಶ್ರೀಮನ್ನಾರಾಯಣನು, ಬ್ರಹ್ಮಮುಖದಿಂದಲೋ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೌ ಜಗತೋರ್ಹ್ಯರ್ಥೇ ಕೈಟಭಂಚ ಮಧುಂತಥಾ । ಅನೇನಶರಮುಖ್ಯೇನ ಹತ್ವಾಲೋಕಾಂಶ್ಚಕಾರಸಃ ॥೬೩॥ ನಾಯಂಮಯಾ ಶರಃಪೂರ್ವಂರಾವಣಸ್ಯವಧಾರ್ಥಿನಾ । ಮುಕ್ತಶ್ಶತ್ರುಘ್ನಲೋಕಾನಾಂಮಹಾಂಸ್ತ್ರಾಸೋಭವೇದಿತಿ ॥೬೪॥ ಯಚ್ಚತಸ್ಯ ಮಹಚ್ಛೂಲಂತ್ರ್ಯಂಬಕೇಣಮಹಾತ್ಮನಾ । ದತ್ತಂಶತ್ರುವಿನಾಶಾಯಮಧೋರಾಯುಧಮುತ್ತಮಂ ॥೬೫॥ ತತ್ಸನಿಕ್ಷಿಪ್ಯ ಭವನೇ ಪೂಜ್ಯಮಾನಂಪುನಃಪುನಃ । ದಿಶಸ್ಸರ್ವಾಸ್ಸಮಾಸಾದ್ಯಪ್ರಾಪ್ನೋತ್ಯಾಹಾರಮುತ್ತಮಂ ॥೬೬॥ ಯದಾತುಯುದ್ಧಮಾಕಾಂಕ್ಷನ್ಕಶ್ಚಿದೇನಂಸಮಾಹ್ವಯೇತ್ । ತದಾಶೂಲಂಗೃಹೀತ್ವಾತಂಭಸ್ಮಕುರ್ಯಾತ್ಸರಾಕ್ಷಸಃ ॥೬೭॥ ಸತ್ವಂಪುರುಷಶಾರ್ದೂಲತಮಾಯುಧವಿವರ್ಜಿತಂ । ಅಪ್ರವಿಷ್ಟಪುರಂಪೂರ್ವಂದ್ವಾರಿತಿಷ್ಠಧೃತಾಯುಧಃ ॥೬೮॥ ಅಪ್ರವಿಷ್ಟಂಚಭವನಂಯುದ್ಧಾಯಪುರುಷರ್ಷಭ । ಆಹ್ವಯೇಥಾಮಹಾಬಾಹೋತದಾಹಂತಾಸಿರಾಕ್ಷಸಂ ॥ ಅನ್ಯಥಾಕ್ರಿಯಮಾಣೇತುಅವಧ್ಯಸ್ಸಭವಿಷ್ಯತಿ । ಯದಿತ್ವೇವಂಕೃತೇವೀರವಿನಾಶಮುಪಯಾಸ್ಯತಿ ॥೭೦॥ ಏತತ್ತೇಸರ್ವಮಾಖ್ಯಾತಂಶೂಲಸ್ಯಚವಿಪರ್ಯಯಂ । ಶ್ರೀಮತ

---

ಸಃ-ಆ ಶ್ರೀಮಹಾವಿಷ್ಣುವು, ಜಗತಃ-ಲೋಕದ, ಅರ್ಥೇ-ಪ್ರಯೋಜನ ನಿಮಿತ್ತವಾಗಿ, ಕೈಟಭಂ-ಕೈಟಭಾಸುರನೆಂಬ, ತಥಾ-ಹಾಗೆಯೆ,ಮಧುಂ-ಮಧ್ವಸುರನೆಂಬ, ತೌ-ಆ ಇಬ್ಬರನ್ನು, ಅನೇನ ಶರಮುಖ್ಯೇನ-ಈ ಮುಖ್ಯವಾದ ಬಾಣದಿಂದ, ಹತ್ವಾ-ಹೊಡೆದು, ತತಃ-ಬಳಿಕ, ಲೋಕಾನ್- ಲೋಕಗಳನ್ನು, ಚಕಾರ-ಮಾಡಿದನು ॥೬೩॥ ಹೇ ಶತ್ರುಘ್ನ-ಎಲೈ ಶತ್ರುಘ್ನನೆ, ಪೂರ್ವಂ-ಮೊದಲು, ರಾವಣಸ್ಯ-ರಾವಣಾಸುರನ, ವಧಾರ್ಥಿನಾ-ಸಂಹಾರವನ್ನಿಚ್ಛಿಸುತ್ತಿರುವ, ಮಯಾ-ನನ್ನಿಂದ, ಅಯಂಶರಃ - ಈ ಬಾಣವು, ಲೋಕಾನಾಂ-ಲೋಕಗಳಿಗೆ, ಮಹಾನ್-ಬಹಳವಾದ, ತ್ರಾಸಃ-ಭಯವು, ಭವೇದಿತಿ-ಆಗುವದೆಂದು, ನಮುಕ್ತಃ-ಬಿಡಲ್ಪಡಲಿಲ್ಲ ॥೬೪॥ ಮಹಾತ್ಮನಾ-ಮಹಾತ್ಮನಾದ, ತ್ರ್ಯಂಬಕೇನ - ತ್ರ್ಯಂಬಕನಿಂದ ತಸ್ಯಮಧೋಃ- ಆ ಮಧ್ವಾಸುರನಿಗೆ, ವಿನಾಶಾಯ -ಶತ್ರುನಾಶಾರ್ಥವಾಗಿ, ಮಹತ್-ದೊಡ್ಡದಾದ, ಶೂಲಂ-ಶೂಲವೆಂಬ, ಉತ್ತಮಂ-ಉತ್ಕೃಷ್ಟವಾದ, ಯಧಾಯುಧಂ-ಯಾವ ಆಯುಧವುದತ್ತಂ- ಕೊಡಲ್ಪಟ್ಟಿತೋ ॥೬೫॥ ತತ್-ಅದನ್ನು, ಸಃ-ಆರಾಕ್ಷಸನು, ಭವನೇ-ಮನೆಯಲ್ಲಿ, ಪುನಃ ಪುನಃ-ಬಾರಿಬಾರಿಗೂ, ಪೂಜ್ಯಮಾನಂ - ಪೂಜಿಸಲ್ಪಡುತಿರುವದನ್ನಾಗಿ, ಭವನೇ - ಮನೆಯಲ್ಲಿ, ನಿಕ್ಷಿಪ್ಯ- ಇರಿಸಿ,ಸರ್ವಾಃ-ಸಮಸ್ತವಾದ, ದಿಶಃ-ದಿಕ್ಕುಗಳನ್ನು, ಸಮಾಸಾದ್ಯ-ಹೊಂದಿ, ಉತ್ತಮಂ - ಶ್ರೇಷ್ಠವಾದ, ಆಹಾರಂ- ಆಹಾರವನ್ನು, ಪ್ರಾಪ್ನೋತಿ - ಹೊಂದುತ್ತಾನೆ॥೬೬॥ ಯದಾತು- ಯಾವಕಾಲದಲ್ಲಿ ಆದರೆ, ಕಶ್ಚಿತ್-ಯಾವನಾದರು, ಯುದ್ಧಂ - ಕಾಳಗವನ್ನು, ಆಕಾಂಕ್ಷನ್- ಕೋರುತ್ತಿರುವನಾಗಿ, ಏನಂ-ಈಮಧ್ವಸುರನನ್ನು, ಸಮಾಹ್ವಯೇತ್-ಕರೆಯುವನೋ, ತದಾ-ಆ ಕಾಲದಲ್ಲಿ, ಸರಾಕ್ಷಸಃ-ಆ ರಾಕ್ಷಸನು, ಶೂಲಂ-ಶೂಲಾಯುಧವನ್ನು, ಗೃಹೀತ್ವಾ-ತೆಗದುಕೊಂಡು, ತಂ-ಆ ಶತ್ರುವಿನನ್ನು, ಭಸ್ಮ-ಬೂದಿಯನ್ನಾಗಿ, ಕುರ್ಯಾತ್ - ಮಾಡಿದನು ॥೬೭॥ ಹೇ ಪುರುಷಶಾರ್ದೂಲ - ಎಲೈ ಪುರುಷಶ್ರೇಷ್ಠನೆ,ಸತ್ವಂ-ಆ ಈನೀನು, ಧೃತಾಯುಧಃ-ಧರಿಸಲ್ಪಟ್ಟ ಆಯುಧಗಳುಳ್ಳವನಾಗಿ, ಆಯುಧವಿವರ್ಜಿತಂ- ಆಯುಧದಿಂದ ರಹಿತನಾದ, ಅಪ್ರವಿಷ್ಟಪುರಂ- ಪ್ರವೇಶಿಸಲ್ಪಡದಿರುವ ಪುರವುಳ್ಳ, ತಂ-ಆ ರಾಕ್ಷಸನಂಕುರಿತು, ಪೂರ್ವಂ-ಮೊದಲೆ, ದ್ವಾರಿ-ಬಾಗಿಲಲ್ಲಿ, ತಿಷ್ಠ-ನಿಂತಿರು, ॥೬೮॥ ಹೇ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ,ಹೇ ಮಹಾಬಾಹೋ- ಎಲೈ ಮಹಾಭುಜಪರಾಕ್ರಮಶಾಲಿಯೆ, ಭವನಂ-ಮನೆಯನ್ನು, ಅಪ್ರವಿಷ್ಟಂಚ - ಹೊಕ್ಕದೇಲೂಇರುವ ರಾಕ್ಷಸನನ್ನು, ಯುದ್ಧಾಯ- ಕಾಳಗಕ್ಕೋಸ್ಕರ, ಆಹ್ವಯೇಥಾಃ-ಕರೆಯುವನಾಗು, ತದಾ-ಆ ವೇಳೆಯಲ್ಲಿ, ರಾಕ್ಷಸಂ-ರಕ್ಕಸನನ್ನು, ಹಂತಾಸಿ-ಸಂಹಾರಕನಾಗುವಿ, ಅನ್ಯಥಾ-ಮತ್ತೊಂದುಬಗೆಯಾಗಿ, ಕ್ರಿಯಮಾಣೇತು-ಮಾಡಲ್ಪಟ್ಟದ್ದೇಆದರೆ, ಸಃ-ಆಲವಣಾಸುರನು, ಅವಧ್ಯಃ-ವಧಿಸಲಸಾಧ್ಯನು, ಭವಿಷ್ಯತಿ-ಆಗುವನು, ಹೇ ವೀರ-ಎಲೈಶೂರನೆ, ಏವಂ- ಈ ನಾನುಪೇಳದಂತೆ, ಕೃತೇಯದಿ-ಮಾಡಲ್ಪಟ್ಟದ್ದಾದರೆ, ವಿನಾಶಂ-ನಾಶವನ್ನು, ಉಪಯಾಸ್ಯಸಿ-ಹೊಂದುವನು ॥೭೦॥ ತೇ-ನಿನಿಗೆ,ಏತತ್-ಈ ಲವಣಾಸುರವಧೋ

---

ಕಗಳನ್ನೆಲ್ಲ ಸೃಜಿಸಿದಂಥವನಾದನು ॥ ೬೩ ॥ ಕೇಳೆಲೈ ಶತ್ರುಘ್ನನೆ! ಲೋಕಗಳಿಗೆ ಮಹಾಭೀತಿ ಯುಂಟಾಗುವದೆಂದು ಯೋಚಿಸಿ ನಾನು ರಾವಣ ಸಂಹಾರವಂ ಗೈಯುವ ವೇಳೆಯೊಳು ಈಬಾಣವಂಬಿಡಲಿಲ್ಲ॥೬೪॥ ಶತ್ರು ಸಂಹಾರಾರ್ಥವಾಗಿ ಮಧ್ವಸುರನಿಗೆ ಪರಮೇಶ್ವರನಿಂದ ಪ್ರಾಪ್ತವಾದ ಯಾವಶೂಲವೆಂಬ ಮಹದಾಯುಧವು ಆಲವಣಾಸುರನ ವಶದಲ್ಲಿ ಇರುವದೊ ಆ ರಕ್ಕಸನು ಕಾಲಕಾಲದಲ್ಲಿ ಪೂಜಿಸುತ್ತಿರುವ ಆ ಶೂಲಾಯುಧವನ್ನು ಮನೆಯೊಳಿಟ್ಟು ದಿಕ್ಕುದಿಕ್ಕುಗಳಲ್ಲಿಯೂ ಸಂಚರಿಸಿ ಆಹಾರವಂ ಪಡೆಯುತ್ತಿರುವನು ಯಾವ ವೇಳೆಯೊಳಾದರೆ ಪರಪುರುಷನು ಯುದ್ಧಾರ್ಥಿಯಾಗಿ ಬಂದು ಈ ಲವಣಾಸುರನಂ ಕರೆಯುವನೋ ಆಗ ಅವನು ಶೂಲವಂ ಪಿಡಿದುಕೊಂಡು ಆ ಶತ್ರುವಿನಂಭಸ್ಮ ಮಾಡುವನು ॥೬೭॥ ಎಲೈಪುರುಷಶ್ರೇಷ್ಠನೆ! ಇದನ್ನೆಲ್ಲ ನನ್ನಿಂದ ತಿಳಿದುಕೊಂಡಿರುವ ನೀನು ಆಯುಧಪಾಣಿಯಾಗಿ ಆ ಲವಣಾಸುರನು ಆಯುಧಪಾಣಿಯಾಗದೇಲು ಪುರಪ್ರವೇಶವಂಗೈಯದೇಲೂ ಇರುವಸಮಯದಲ್ಲೆ ಬಾಗಿಲಲ್ಲಿ ನಿಂತುಕೊಂಡು, ಅವನು ಮನೆಗೆ ಪೋಗುವದರೊಳಗಾಗಿ ಕಾಳಗಕ್ಕೆ ಕರೆಯುವಂಥಾವನಾದರೆ ನೀನು ಆತನಂ ಜಯಿಸುವಂಥಾವನಾಗುವಿ. ಹಾಗೆ ಮಾಡದಿದ್ದರೆ ಆ ಅಸುರನು ವಧಿಸಲಸಾಧ್ಯನಾಗುವನು. ನೀನು ಈಪರಿ ಮಾಡಿದರೆ ಅವನು ನಾಶವಂಪೊಂದುವನು॥೭೦॥ ಎಲೈಶತ್ರುಸಂಹಾರಕನಾದ ಶತ್ರುಘ್ನನೆ! ಪರಮೇಶ್ವರ ತ್ರಿಶೂಲದ ವೃತ್ತಾಂತವನ್ನೆಲ್ಲ ನಿನಿಗೆ ಪೇಳಿದಂಥಾವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ಶಿತಿಕಂಠಸ್ಯಕೃತ್ಯಂಹಿದುರತಿಕ್ರಮಂ ॥೨೧॥ —...ಇತಿಶ್ರೀಮದುತ್ತರರಾಮಾಯಣೇ ತ್ರಿಷಷ್ಟಿತಮಸ್ಸರ್ಗಃ...—

ಏವಮುಕ್ತ್ವಾತುಕಾಕುತ್ಸ್ಥಂಪ್ರಶಸ್ಯಚಪುನಃಪುನಃ । ಪುನರೇವಾಪರಂವಾಕ್ಯಂಉವಾಚರಘುನಂದನಃ ॥೧॥ ಇಮಾನ್ಯಶ್ವಸಹಸ್ರಾಣಿಚತ್ವಾರಿಪುರುಷರ್ಷಭ । ರಥಾನಾಂಚಸಹಸ್ರಾಣಿಗಜಾನಾಂಶತಮುತ್ತಮಂ । ಅಂತರಾಪಣವೀಥ್ಯಶ್ಚನಾನಾಪಣ್ಯೋಪಶೋಭಿತಾಃ । ಅನುಗಚ್ಛಂತುಶತ್ರುಘ್ನಂತಥೈವನಟನರ್ತಕಾಃ ॥೨॥ ಹಿರಣ್ಯಸ್ಯಸುವರ್ಣಸ್ಯನಿಯುತಂಪುರುಷರ್ಷಭ । ಗೃಹೀತ್ವಾಗಚ್ಛವಸ್ತ್ರಾಣಿಪರ್ಯಾಪ್ತಧನವಾಹನಃ ॥೪॥ ಬಲಂಚಸುಭೃತಂವೀರಹೃಷ್ಟಪುಷ್ಟಮನುತ್ತಮಂ। ಸಂಭಾಷ್ಯಸಂಪ್ರದಾನೇನರಂಜಯಸ್ವನರೋತ್ತಮ ॥೫॥ ನಹ್ಯರ್ಥಾಯತ್ರತಿಷ್ಠಂತಿನದಾರಾನಚಬಾಂಧವಾಃ । ಸುಹೃದೋಭೃತ್ಯವರ್ಗಶ್ಚತತ್ರತಿಷ್ಠಂತಿರಾಘವ ॥೬॥ ತತೋಹೃಷ್ಟಜನಾಕೀರ್ಣಾಂಪ್ರಸ್ಥಾಪ್ಯಮಹತೀಂಚಮೂಂ । ಏಕಏವಧನುಷ್ಪಾಣಿಸ್ತದ್ಗಚ್ಛತ್ವಂಮಧೋರ್ವನಂ ॥೭॥ ಯಥಾತ್ವಾಂನಪ್ರಜಾನಾತಿಗಚ್ಛಂತಂಯುದ್ಧಕಾಂಕ್ಷಿಣಂ। ಲವಣಸ್ತುಮ

---

ಷಾಯುವು, ಸರ್ವಂ-ಸಮಸ್ತವು, ಶೂಲಸ್ಯ-ತ್ರಿಶೂಲದ, ವಿಪರ್ಯಯಂ- ವ್ಯತ್ಯಾಸವೂ,ಆಖ್ಯಾತಂ- ಹೇಳಲ್ಪಟ್ಟಿತು, ಶ್ರೀಮತಃ-ಸಂಪದ್ಯುಕ್ತನಾದ, ಶಿತಿಕಂಠಸ್ಯ-ಪರಮೇಶ್ವರನ, ಕೃತ್ಯಂ-ಕಾರ್ಯವು, ಮನತಿಕ್ರಮಂಹಿ-ಅತಿಕ್ರಮಿಸಲಸಾಧ್ಯವಾದ್ದಷ್ಟೆ॥ ॥೨೧॥

—...ಇತಿ ಶ್ರೀಮದುತ್ತರ ರಾಮಾಯಣೇ ತ್ರಿಷಷ್ಟಿತಮಸ್ಸರ್ಗಃ...—

ರಘುನಂದನಃ-ರಘುಕುಲಾ ನಂದಕರನಾದ ಶ್ರೀರಾಮನು, ಏವಂ-ಈ ಪರಿಯಾಗಿ, ಕಕುತ್‌ಸ್ಥಂ-ಶತ್ರುಘ್ನನಂ ಕುರಿತು, ಉಕ್ತ್ವಾ-ಹೇಳಿ,ಪುನ ಪುನಃ-ಬಾರಿಬಾರಿಗು, ಪ್ರಶಸ್ಯಚ-ಶ್ಲಾಘನೆಯನ್ನೂ ಮಾಡಿ, ಪುನರೇವ-ಮತ್ತೂನೆ, ಅಪರಂ-ಮತ್ತೊಂದಾದ, ವಾಕ್ಯಂ-ಮಾತನ್ನು, ಉವಾಚ-ಹೇಳಿದನು ॥೧॥ ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ಇಮಾನಿ-ಈ ಪರಿದೃಶ್ಯಮಾನವಾದ, ಚತ್ವಾರಿ-ನಾಲ್ಕಾದ, ಅಶ್ವಸಹಸ್ರಾಣಿ-ಸಹಸ್ರ ಕುದುರೆಗಳು, ರಥಾನಾಂ-ರಥಗಳ, ಚತ್ವಾರಿಸಹಸ್ರಾಣಿ-ನಾಲ್ಕು ಸಹಸ್ರಗಳೂ, ಗಜಾನಾಂ-ಆನೆಗಳ, ಉತ್ತಮಂ-ಉತ್ಕೃಷ್ಟವಾದ, ಶತಂ-ನೂರು, ನಾನಾಪಣ್ಯೋಪಶೋಭಿತಾಃ-ಅನೇಕ ಬಗೆಗಳಾದ ವ್ಯಾಪಾರದ್ರವ್ಯಗಳಿಂದ ಕಂಗೊಳಸುತ್ತಿರುವ, ಅಂತರಾಪಣವೀಥ್ಯಶ್ಚ-ಒಳಗಡೆಯ ಅಂಗಡೀಬೀದಿಗಳೂ, ತಥೈವ-ಹಾಗೆಯೆ, ನಟನರ್ತಕಾಃ-ನಟರೂ ನರ್ತಕರೂಸಹ, ಶತ್ರುಘ್ನಂ-ಶತ್ರುಘ್ನನನ್ನು, ಅನುಗಚ್ಛಂತು-ಅನುಸರಿಸಿಹೊರಡಲಿ ॥೨॥ ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ಹಿರಣ್ಯಸ್ಯ-ಬೆಳ್ಳೀನಾಣ್ಯದ, ಸುವರ್ಣಸ್ಯ-ಚಿನ್ನದ ನಾಣ್ಯದ, ನಿಯುತಂ-ಲಕ್ಷಸಂಖ್ಯೆಯನ್ನು, ವಸ್ತ್ರಾಣಿಚ- ಬಟ್ಟೆಗಳನ್ನು, ಪರ್ಯಾಪ್ತಧನವಾಹನಃ-ಸಾಕಾದಧನದ ವಾಹನಗಳುಳ್ಳವನಾಗಿ, ಗೃಹೀತ್ವಾ-ತೆಗದುಕೊಂಡು, ಗಚ್ಛ-ತೆರಳು * ಹೆವೀರ - ಎಲೈಶೂರನೆ, ಸುಭೃತಂ-ಚೆನ್ನಾಗಿ ರಕ್ಷಿಸಲ್ಪಟ್ಟ, ಅನುತ್ತಮಂ-ಸರ್ವೋತ್ತಮವಾದ, ಹೃಷ್ಟಪುಷ್ಟಂ-ಹೃಷ್ಟಸಂತೋಷಗೊಂಡ, ಪುಷ್ಟಂ-ಚೆನ್ನಾಗಿ ಪೋಷಿಸಲ್ಪಟ್ಟ, ಬಲಂಚ-ಸೇನೆಯನ್ನೂ, ಸಂಭಾಷ್ಯ-ಮಾತಾಡಿಸಿ, ಸಂಪ್ರದಾನೇನ-ಧನಪ್ರದಾನದಿಂದ, ರಂಜಯಸ್ವ-ಸಂತೋಷಗೊಳಿಸು * ಹೆ ರಾಘವ-ಎಲೈರಘುವಂಶೋತ್ಪನ್ನನೆ, ಅರ್ಥಾಃ-ದ್ರವ್ಯಗಳು, ಯತ್ರ-ಯಾವ ಪುರುಷನಲ್ಲಿ, ನತಿಷ್ಠಂತಿ-ಇರುವದಿಲ್ಲವೋ, ತತ್ರ-ಆ ಸ್ಥಳದಲ್ಲಿ, ದಾರಾಃ-ಹೆಂಡತಿಗಳೂ, ನತಿಷ್ಠಂತಿ-ಇರುವದಿಲ್ಲ, ಬಾಂಧವಾಶ್ಚ-ನೆಂಟರುಸಹ, ನತಿಷ್ಠಂತಿ-ನಿಲ್ಲಲಾರರು, ಯತ್ರ-ಎಲ್ಲಿ, ಅರ್ಥಃ-ದ್ರವ್ಯವು, ತಿಷ್ಠತಿ-ಇರುತಡೋ, ತತ್ರ-ಅಲ್ಲಿ, ಸುಹೃದಃ-ಸ್ನೇಹಿತರು, ಭೃತ್ಯವರ್ಗಶ್ಚ-ಸೇವಕರ ಸಮೂಹವು, ತಿಷ್ಠಂತಿ-ಇರುತ್ತಾರೆ ॥೬॥ ತತಃ-ಬಳಿಕ, ಹೃಷ್ಟಜನಾಕೀರ್ಣಾಂ- ಸಂತೋಷಗೊಂಡ ಜನರಿಂದ ವ್ಯಾಪ್ತವಾದ, ಮಹತೀಂ-ಮಹತ್ತರವಾದ, ಚಮೂಂ-ಸೈನ್ಯವನ್ನು, ಪ್ರಸ್ಥಾಪ್ಯ-ಕಳುಹಿಸಿಕೊಟ್ಟು, ಏಕಏವ-ಒಬ್ಬನೆ, ತ್ವಂ-ನೀನು, ಧನುಷ್ಪಾಣಿಃ-ಕೋದಂಡಪಾಣಿಯಾಗಿ, ತತ್-ಆ, ಮಧೋಃ-ಮಧ್ವಸುರನ, ವನಂ-ವನವಂಕುರಿತು, ಗಚ್ಛ-ಹೋಗು ॥೭॥ ಮಧೋಃ-ಮಧುವೆಂಬ ದೈತ್ಯನಿಗೆ, ಪುತ್ರಃ-

---

ನಾದನು ಆ ಶಿತಿಕಂಠನಕೃತ್ಯವು ಮೀರಲಶಕ್ಯವಾಗಿರುವದು ... ... ... ॥೧೨॥

—*ಉತ್ತರ ರಾಮಾಯಣದಲ್ಲಿ ೬೩ನೆಯಸರ್ಗಂಮುಗಿದುದು*—

ಈ ಪರಿಯಾಗಿ ರಘುನಂದನನು ಬಾರಿಬಾರಿಗೂ ಶ್ಲಾಘಿಸಿ ಶತ್ರುಘ್ನನಂಕುರಿತು ಮತ್ತಿಂತೆಂದನು ॥೧॥ ಎಲೈಪುರುಷಶ್ರೇಷ್ಠನೆ! ನಾಲ್ಕುಸಾವಿರ ಕುದುರೆಗಳನ್ನು ರಥಗಳನ್ನೂ ಉತ್ತಮವಾದ ನೂರು ಆನೆಗಳನ್ನೂ ಮಧ್ಯ ದಾರಿಯೊಳು ಮಾರುವ ಪದಾರ್ಥಗಳಿಂದ ಸಮೃದ್ಧವಾದ ಮಳಿಗೆಗಳೂ, ನಟ್ಟುವಿಗರೂ ವೇಶ್ಯಾಸ್ತ್ರೀಯರು ಇವರೆಲ್ಲ ನಿನ್ನನ್ನನುಸರಿಸಿ ಬರುವಂಥಾವರಾಗುವರು ॥೩॥ ಎಲೈಶತ್ರುಘ್ನನೇ ! ಲಕ್ಷಸಂಖ್ಯಾಕವಾದ ಬೆಳ್ಳಿಯನಾಣ್ಯವನ್ನೂ ಹಾಗೆಯೆಸುವರ್ಣದನಾಣ್ಯವನ್ನೂ ಉತ್ತಮವಾದ ವಸ್ತ್ರಗಳನ್ನು, ಮತ್ತೂ ಬೇಕಾದ ಧನಗಳನ್ನೂ, ವಾಹನಗಳನ್ನೂ ತೆಗದುಕೊಂಡು. ಹೊರಡುವಂಥಾವನಾಗು, ಮತ್ತು ಸಂತೋಷಚಿತ್ತರಾಗಿಯೂ, ಆಹಾರಾದಿಗಳಿಂದ ಪುಷ್ಟರಾಗಿಯೂ, ಇರುವಂತೆ ಜನಗಳಿಗೆ ವೇತನಾದಿಗಳಂ ಕೊಟ್ಟು, ಸಂತೋಷ ಗೊಳಿಸುವಂಥಾವನಾಗು ಯಾಕೆಂದರೆ ದ್ರವ್ಯವೆಂಬದು ಎಲ್ಲಿರುವದಿಲ್ಲವೋ ಆ ಎಡದಲ್ಲಿ ದಾರಾಪುತ್ರಸಖರೇ ಮುಂತಾದವರ್ಯಾರೂ ನಿಲ್ಲುವದಿಲ್ಲ ಆದಕಾರಣ ಸಂತೋಷಚಿತ್ತರಾದ ಜನಗ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಧೋಃಪ್ರತ್ಯಸ್ತಥಾಗಚ್ಛರಶಂಕಿತಃ ॥೮॥ ನತಸ್ಯಮೃತ್ಯುರನ್ಯೋಸ್ತಿ ಕಶ್ಚಿದ್ಧಿ ಪುರುಷರ್ಷಭ । ದರ್ಶನಂಯೋಭಿಗಚ್ಛೇತ ಸವ ಧ್ಯೋಲವಣೇನಹಿ ॥೯॥ ತಂಚಗ್ರೀಷ್ಮೇವ್ಯಪಾಯೇತುವರ್ಷರಾತ್ರಉಪಸ್ಥಿತೇ । ಹನ್ಯಾಸ್ತ್ವಂಲವಣಂಸೌಮ್ಯಸಹಿ ಕಾಲೋ ಸ್ಯದುರ್ಮತೇಃ ॥೧೦॥ ಮಹರ್ಷೀಂಸ್ತು ಪುರಸ್ಕೃತ್ಯಪ್ರಯಾಂತುತವಸೈನಿಕಾಃ । ಯಥಾಗ್ರೀಷ್ಮಾವಶೇಷೇಣತರೇಯುರ್ಜಾ ಹ್ನವೀಜಲಂ ॥೧೧॥ ತತಃಸ್ಥಾಪ್ಯಂಬಲಂಸರ್ವಂನದೀತೀರೇಸಮಾಹಿತಃ । ಅಗ್ರತೋಧನುಷಾಸಾರ್ಧಂಗಚ್ಛತ್ವಂಲಘುವಿ ಕ್ರಮ ॥೧೨॥ ಏವಮುಕ್ತಸ್ತುರಾಮೇಣಶತ್ರುಘ್ನಸ್ತಾನ್ಮಹಾಬಲಾನ್ । ಸೇನಾಮುಖ್ಯಾನ್ಸಮಾನೀಯಸ್ತತೋವಾಕ್ಯ ಮುವಾಚಹ ॥೧೩॥ ಏತೇವೋಗಣಿತಾವಾಸಾಯತ್ರಯತ್ರನಿವತ್ಸ್ಯಥ । ಸ್ಥಾತವ್ಯಂಚಾವಿರೋಧೇನಯಥಾಬಾಧಾನಕಸ್ಯಚಿತ್ ॥ ತಥಾತಾಂಸ್ತುಸಮಾಜ್ಞಾಪ್ಯಪ್ರಸ್ಥಾಪ್ಯಚಮಹದ್ಬಲಂ । ಕೌಸಲ್ಯಾಂಚಸುಮಿತ್ರಾಂಚಕೈಕೇಯೀಂಚಾಭ್ಯವಾದಯತ್ । ರಾ

---

ಮಗನಾದ, ಲವಣಸ್ತು-ಲವಣಾಸುರನಾದರೆ, ಯಥಾ-ಹ್ಯಾಗೆ, ತ್ವಾಂ-ನಿನ್ನನ್ನು, ಯುದ್ಧಕಾಂಕ್ಷಿಣಂ-ಕಾಳಗಿಸ ಬಿಚ್ಛೆಯುಳ್ಳವನನ್ನಾಗಿ, ಗಚ್ಛಂತಂ-ಹೋಗುತ್ತಿರುವವನನ್ನಾಗಿ, ನಪ್ರಜಾನಾತಿ-ತಿಳಿಯದಿರುವನೋ, ತಥಾ-ಹಾಗೆ, ಅಶಂಕಿತಃ-ಭೀತಿಯಿಲ್ಲದವನಾಗಿ, ಗಚ್ಛ-ಹೋಗು ॥೮॥ ಹೇ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ತಸ್ಯ-ಆ ಲವಣಾಸುರನಿಗೆ, ಅನ್ಯಃ-ಮತ್ತೊಂದಾದ, ಕಶ್ಚಿತ್-ಯಾವದೊಂದು, ಮೃತ್ಯುಃ-ಮೃತ್ಯುವು, ನಾಸ್ತಿ-ಇಲ್ಲ, ಯಃ-ಯಾವನು, ದರ್ಶನಂ-ದರ್ಶನವನ್ನು, ಅಭಿಗಚ್ಛೇತ-ಹೊಂದುವನೋ, ಸಃ-ಆ ಪುರುಷನು, ಲವಣೇನ-ಲವಣನಿಂದ, ವಧ್ಯೋಹಿ-ವಧಿಸತಕ್ಕವನಷ್ಟೆ ॥೯॥ ಹೇ ಸೌಮ್ಯ-ಎಲೈ ಕೋಪರಹಿತನೆ, ಗ್ರೀಷ್ಮೇವ್ಯಪಾಯೇತು-ಗ್ರೀಷ್ಮಋತುವು ಕಳೆದುಹೋಗುತಿರಲೀಕಾಗಿ, ವರ್ಷರಾತ್ರೇ-ವರ್ಷಾಕಾಲಿಕವಾದ ರಾತ್ರಿಯು, ಉಪಸ್ಥಿತೇಸತಿ-ಪ್ರಾಪ್ತವಾಗುತಿರಲೀಕಾಗಿ, ತ್ವಂ-ನೀನು, ಲವಣಂ-ಲವಣಾಸುರನನ್ನು, ಹನ್ಯಾಃ-ಹೊಡೆಯುವಿ, ಅಸ್ಯದುರ್ಮತೇಃ-ಈದುರ್ಬುದ್ಧಿಯುಳ್ಳ ಲವಣಾಸುರನಿಗೆ, ಕಾಲಃ-ಮರಣಸಮಯವು, ಸಹಿ-ಅದಷ್ಟೆ, * ಮಹರ್ಷೀಂಸ್ತು-ಮಹಾ ಮುನಿಗಳನ್ನಾದರೆ, ಪುರಸ್ಕೃತ್ಯ-ಮುಮ್ದುಮಾಡಿಕೊಂಡು, ಯಥಾ-ಹ್ಯಾಗೆ, ಗ್ರೀಷ್ಮಾವಶೇಷೇಣ-ಗ್ರೀಷ್ಮಋತುವು ಸ್ವಲ್ಪ ಉಳಿದಿರಲೀಕಾಗಿಯೆ, ಜಾಹ್ನವೀಜಲಂ - ಗಂಗೋದಕವನ್ನು, ತರೆಯು-ದಾಟುವಿರೋ, ತಥಾ-ಹಾಗೆ, ತವ-ನಿನ್ನ, ಸೈನಿಕಾಃ-ಸೇನಾಜನರು, ಪ್ರಯಾಂತು, ಹೊರಡಲಿ, ಹೇ ಲಘುವಿಕ್ರಮ-ಎಲೈ ಮಹಾಪರಾಕ್ರಮಿಯೆ, ತತಃ-ಬಳಿಕ, ನದೀತೀರೇ-ಗಂಗಾನದಿಯ ದಡದಲ್ಲಿ, ಸರ್ವಂ-ಸಮಸ್ತವಾದ, ಬಲಂ-ಸೇನೆಯನ್ನು, ಸ್ಥಾಪ್ಯ-ನಿಲ್ಲಿಸಿ, ಧನುಷಾಸಾರ್ಧಂ-ಬಿಲ್ಲಿನಿಂದೊಡಗೂಡಿ, ತ್ವಂ-ನೀನು, ಅಗ್ರತಃ-ಮುಂದೆ, ಗಚ್ಛ-ಹೋಗು ॥ ಏವಂ-ಈ ಪರಿಯಾಗಿ, ರಾಮೇಣ-ಶ್ರೀರಾಮನಿಂದ, ಉಕ್ತಃ-ಹೇಳಲ್ಪಟ್ಟ, ಶತ್ರುಘ್ನಃ-ಶತ್ರುಘ್ನನು, ಮಹಾಬಲಾನ್-ಬಹುಬಲಾಢ್ಯರಾದ, ತಾನ್‌ಸೇನಾಮುಖ್ಯಾನ್-ಆ ಸೈನ್ಯದಲ್ಲಿ ಮುಖಂಡರನ್ನು, ಸಮಾನೀಯ-ಕರೆದು, ತತಃ-ಬಳಿಕ, ವಾಕ್ಯಂ-ಮಾತನ್ನು, ಉವಾಚಹ-ಹೇಳಿದನಷ್ಟೆ ॥೧೩॥ ವಃ-ನಿಮ್ಮಗಳ, ವಾಸಾಃ-ನಿವಾಸಸ್ಥಾನಗಳು, ಗಣಿತಾಃ-ಎಣಿಸಲ್ಪಡಲಿ, ಯತ್ರಯತ್ರ - ಯಾವಯಾವ ಸ್ಥಳದಲ್ಲಿ, ನಿವತ್ಸ್ಯಥ-ಇರುವಿರೋ, ತತ್ರತತ್ರ-ಆಯಾಯ ಸ್ಥಳಗಳಲ್ಲಿ, ಕಸ್ಯಚಿತ್-ಯಾರಿಗೂ, ಯಥಾ-ಹ್ಯಾಗೆ, ಬಾಧಾ-ಉಪದ್ರವವು, ನ-ಇಲ್ಲ ತಥಾ-ಹಾಗೆ, ಅವಿರೋಧೇನ - ವಿರೋಧವಿಲ್ಲದಭಾವದಿಂದ, ಸ್ಥಾತವ್ಯಂ-ಇರತಕ್ಕದ್ದು ॥೧೪॥ ತಥಾ-ಆ ಪರಿಯಾಗಿ, ತಾಂಸ್ತು-ಆ ಸೇನಾಧ್ಯಕ್ಷರು ಕುರಿತಾದರೆ, ಸಮಾಜ್ಞಾಪ್ಯ-ಅಜ್ಞಾಪಿಸಿ, ಮಹದ್ಬಲಂ-ಬಹಳವಾದ ಸೇನೆಯನ್ನು, ಪ್ರಸ್ಥಾಪ್ಯಚ-ಕಳುಹಿಸಿಕೊಟ್ಟು, ಕೌಸಲ್ಯಾಂಚ- ಕೌಸಲ್ಯಾದೇವಿಯನ್ನೂ, ಸುಮಿತ್ರಾಂಚ-ಸುಮಿತ್ರಾದೇವಿಯನ್ನೂ, ಕೈಕೇಯೀಂಚ- ಕೈಕೆಯಿದೇವಿಯನ್ನು ಕುರಿತು, ಅಭ್ಯವಾದಯತ್- ನಮಸ್ಕರಿಸಿದನು, ಶತ್ರು

---

ಳಿಂದ ವ್ಯಾಪ್ತವಾದದ್ದಾಗಿರುವ ಸೇನೆಯಂನು ಪ್ರಥಮತಃ ಕಳುಹಿಸಿಕೊಟ್ಟು, ನೀನೊರ್ವನೇ ಚಂಡ ಪಾಣಿಯಾಗಿ, ಆ ಮಧುವೆಂಬ ರಕ್ಕಸನ ವನವಂ ಕುರಿತುತೆರಳಿದಂಥಾವನಾಗಿ ಆ ಲವಣಾಸುರನುಯುದ್ಧಕಾಂಕ್ಷಿಯಾಗಿ ನೀನು ಬಂದಿದ್ದೀ ಎಂಬದಾಗಿ ಹ್ಯಾಗೆ ಅರಿಯದಿರುವನೋ ಹಾಗೆ ಹೋಗುವಂಥಾವನಾಗು. ಈಪರಿ ಮಾಡದಿದ್ದರೆ ಆ ಲವಣಾಸುರನಿಗೆ ಮೃತ್ಯು ಉಂಟಾಗಲಾರದು. ಅವನಿಗೆ ತಿಳಿಯುವಂತೆ ಅಭಿಮುಖವಾಗಿ, ಯಾವ ಪುರುಷನು ಬರುವನೋ ಆತನು ವಧ್ಯನಾಗುವನು. ಈ ಗ್ರೀಷ್ಮಕಾಲವು ಕಳೆದು ವರ್ಷಋತುವು ಸಂಭವಿಸಲೂ, ಆದುಷ್ಟನಿಗೆ ಮರಣ ಕಾಲವು ಸಂಭವಿಸುವದು ಆದ ಕಾರಣ ನೀನು ಆವೇಳೆಯಲ್ಲಿ ಆ ರಾಕ್ಷಸನಂ ಸಂಹರಿಸುವಂಥಾವನಾಗು, ಮತ್ತು ಈ ಗ್ರೀಷ್ಮಋತುವು ಸ್ವಲ್ಪ ಉಳಿದಿರುವಾಗಲೇ ನಿನ್ನ ಸೇನಾಜನರು ಮಹರ್ಷಿಗಳಂ ಪುರಸ್ಕರಿಸಿ ಹೊರಡಲಿ. ಈಪರಿಯಾಗಿ ಸೇನೆಯಂ ಕಳುಹಿಸಿ ಗಂಗಾತೀರದಲ್ಲಿ ಅದಿರುವಾಗಲೇ ನೀನು ಹೋಗಿ ಸೇರಿ ಆ ಸೇನೆಯ ಮುಂಭಾಗದಲ್ಲಿ ಕೋದಂಡಪಾಣಿಯಾಗಿ ತೆರಳುವಂಥಾವನಾಗೆಂದು ಶ್ರೀರಾಮನಿಂದ ನಿರೂಪಿಸಲ್ಪಟ್ಟವನಾಗಿ ಆ ಶತ್ರುಘ್ನನು ಸೇನೆಯಲ್ಲಿ ಮುಖಂಡರಾದವರಂ ಕರೆಯಿಸಿ ಬಳಿಕ ಈಮಾತಂ ಹೇಳಲೊಸಗಿದ ನದೆಂತೆನೆ ॥೧೩॥ ಎಲೈ ಸೈನಿಕರೆ ! ನಿಮಿಗೆ ಕ್ಲುಪ್ತಮಾಡಿರುವ ಎಡಗಳಲ್ಲಿ ಯಾರಿಗೂ ಬಾಧೆ ಇಲ್ಲದಂತೆ ಅಲ್ಲಲ್ಲಿ ಇಳಿದುಕೊಂಡು ಪ್ರಯಾಣವಂ ಮಾಡುವಂಥಾವರಾಗಿರೆಂದು ನಿರೂಪಿಸಿ ಸೇನೆಯಂ ಕಳುಹಿಸಿದಂಥಾವನಾಗಿ ಕೌಸಲ್ಯೆ, ಸುಮಿತ್ರೆ, ಕೈಕೇಯಿ ಮೊದಲಾದ ತಾಯಿಗಳಿಗೆ ಪ್ರಥಮತಃ ನಮಸ್ಕಾರ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಂಪ್ರದಕ್ಷಿಣಂಕೃತ್ವಾಶಿರಸಾಭಿಪ್ರಣಮ್ಯಚ । ರಾಮೇಣಚಾಭ್ಯನುಜ್ಞಾತಶ್ಶತ್ರುಘ್ನಶ್ಶತ್ರುತಾಪನಃ ॥೧೬॥ ಲಕ್ಷ್ಮಣಂಭರತಂಚೈವಪ್ರಣಮ್ಯಚಕೃತಾಂಜಲಿಃ । ಪುರೋಧಸಂವಸಿಷ್ಠಂಚಶತ್ರುಘ್ನಃಪ್ರಯತಾತ್ಮವಾನ್ । ಪ್ರದಕ್ಷಿಣಮಥೋಕೃತ್ವಾನಿರ್ಜಗಾಮಮಹಾಬಲಃ —...ಇತಿಶ್ರೀಮದುತ್ತರರಾಮಾಯಣೇ ಚತುಃಷಷ್ಟಿತಮಸ್ಸರ್ಗಃ...—

ಪ್ರಸ್ಥಾಪ್ಯತದ್ಬಲಂಸರ್ವಂಮಾಸಮಾತ್ರೋಷಿತಃಪಥಿ । ಏಕಏವಾಶುಶತ್ರುಘ್ನೋಜಗಾಮತ್ವರಿತಂತದಾ ॥೧॥ ದ್ವಿರಾತ್ರಮಂತರೇಶೂರಉಷ್ಯರಾಘವನಂದನಃ । ವಾಲ್ಮೀಕೇರಾಶ್ರಮಂಪುಣ್ಯಮಗಚ್ಛದ್ವಾಸಮುತ್ತಮಂ ॥೨॥ ಸೋಭಿವಾದ್ಯಮಹಾತ್ಮಾನಂವಾಲ್ಮೀಕಿಂಮುನಿಸತ್ತಮಂ । ಕೃತಾಂಜಲಿರಥೋಭೂತ್ವಾವಾಕ್ಯಮೇತದುವಾಚಹ ॥೩॥ ಭಗವನ್ವಸ್ತುಮಿಚ್ಛಾಮಿಗುರೋಃಕೃತ್ಯಾದಿಹಾಗತಃ । ಶ್ವಃಪ್ರಭಾತೇಗಮಿಷ್ಯಾಮಿಪ್ರತೀಚೀಂವಾರುಣೀಂದಿಶಂ ॥೪॥ ಶತ್ರುಘ್ನಸ್ಯವಚಶ್ಶ್ರುತ್ವಾಪ್ರಹಸ್ಯಮುನಿಸತ್ತಮಃ । ಪ್ರತ್ಯುವಾಚಮಹಾತ್ಮಾನಂಸ್ವಾಗತಂತೇಮಹಾಯಶಃ ॥೫॥ ಸ್ವಮಾಶ್ರಮಮಿದಂಸೌ

---

ತಾಪನಃ-ಶತ್ರುಸಂಹಾರಕನಾದ, ಶತ್ರುಘ್ನಃ-ಶತ್ರುಘ್ನನು, ರಾಮಂ-ಶ್ರೀರಾಮನನ್ನು ಕುರಿತು, ಪ್ರದಕ್ಷಿಣಂ-ಪ್ರದಕ್ಷಿಣವನ್ನು, ಕೃತ್ವಾ-ಮಾಡಿ, ಶಿರಸಾ-ತಲೆಯಿಂದ, ಅಭಿಪ್ರಣಮ್ಯಚ- ನಮಸ್ಕಾರವನ್ನುಮಾಡಿ, ರಾಮೇಣ-ಶ್ರೀರಾಮನಿಂದ, ಅಭ್ಯನುಜ್ಞಾತಃ-ಅಪ್ಪಣೆಯಂ ಪಡೆದವನಾಗಿ, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನೂ, ಭರತಂಚ-ಭರತನನ್ನೂ ಕುರಿತು, ಪ್ರಣಮ್ಯೈವ-ನಮಸ್ಕರಿಸಿ, ಕೃತಾಂಜಲಿಃ-ಅಂಜಲಿಬದ್ಧನಾಗಿ, ಪ್ರಯತಾತ್ಮವಾನ್-ಸಮಾಧಾನಚಿತ್ತನಾಗಿ, ಮಹಾಬಲಃ- ಮಹಾಬಲಿಷ್ಠನಾದ, ಶತ್ರುಘ್ನಂ-ಶತ್ರುಘ್ನನು, ಪುರೋಧಸಂ-ಪುರೋಹಿತನಾದ, ವಸಿಷ್ಠಂ - ವಸಿಷ್ಠಮುನಿಯಂಕುರಿತು, ಪ್ರದಕ್ಷಿಣಂ-ಪ್ರದಕ್ಷಿಣವನ್ನು, ಕೃತ್ವಾ-ಮಾಡಿ, ಅಥೊ-ಬಳಿಕ, ನಿರ್ಜಗಾಮ-ತೆರಳಿದನು .. .. ॥೧೭॥

ಇತಿ ಶ್ರೀಮದುತ್ತರರಾಮಾಯಣೇ ಚತುಃಷಷ್ಟಿತಮಸ್ಸರ್ಗಃ.

ಸರ್ವಂ-ಸಮಸ್ತವಾದ, ತದ್ಬಲಂ-ಆ ಸೈನ್ಯವನ್ನು, ಪ್ರಸ್ಥಾಪ್ಯ-ಕಳುಹಿಸಿ, ಪಥಿ-ಮಾರ್ಗದಲ್ಲಿ, ಮಾಸಮಾತ್ರೋಷಿತಃ-ಒಂದು ಮಾಸವು ಇದ್ದಂಥವನಾಗಿ, ಶತ್ರುಘ್ನಃ-ಶತ್ರುಘ್ನನು, ತದಾ-ಆಕಾಲದಲ್ಲಿ, ಏಕಏವ-ಒಬ್ಬನೆ, ಆಶು-ಜಾಗ್ರತೆಯಾಗಿ, ತ್ವರಿತಂ-ವೇಗಯುಕ್ತವನಂತೆ, ಜಗಾಮ - ಹೊರಟನು ॥೧॥ ಶೂರಃ-ವೀರನಾದ, ರಾಘವನಂದನಃ-ರಘುಕುಲಾನಂದಕರನಾದ ಶತ್ರುಘ್ನನು, ಅಂದರೆ ಮಾರ್ಗಮಧ್ಯದಲ್ಲಿ ದ್ವಿರಾತ್ರಂ ಎರಡು ರಾತ್ರಿಗಳಲ್ಲಿ, ಉಷ್ಯ - ಇದ್ದು, ವಾಲ್ಮೀಕೇಃ-ವಾಲ್ಮೀಕಿಮುನಿಗೆ, ಉತ್ತಮಂವಾಸಂ-ಉತ್ತಮಸ್ಥಾನವಾದ, ಪುಣ್ಯಂ-ಪುಣ್ಯಕರವಾದ, ಆಶ್ರಮಂ-ಆಶ್ರಮವಂ ಕುರಿತು, ಅಗಚ್ಛತ್-ಹೋದನು, ॥೨॥ ಸಃ-ಆಶತ್ರುಘ್ನನು, ಮುನಿಸತ್ತಮಂ-ಋಷಿಶ್ರೇಷ್ಠನಾದ, ಮಹಾತ್ಮಾನಂ-ಮಹಾಮನಸ್ವಿಯಾದ, ವಾಲ್ಮೀಕಿಂ-ವಾಲ್ಮೀಕಿಮುನಿಯಂಕುರಿತು, ಅಭಿವಾದ್ಯ-ನಮಸ್ಕರಿಸಿ, ಅಥೊ - ಅನಂತರದಲ್ಲಿ, ಕೃತಾಂಜಲಿಃ - ಅಂಜಲಿಬದ್ಧನು, ಭೂತ್ವಾ-ಆಗಿ, ಏತದ್ವಾಕ್ಯಂ- ಈ ಮಾತನ್ನು, ಉವಾಚಹ-ಹೇಳಿದನಷ್ಟೆ ॥ ೩ ॥ ಹೇಭಗವನ್-ಎಲೈಪೂಜ್ಯನೆ, ಗುರೋಃಕೃತ್ಯಾತ್-ದೊಡ್ಡ ಕಾರ್ಯನಿಮಿತ್ತವಾಗಿ, ಆಗತಃ-ಬಂದೆನು, ಇಹ-ಇಲ್ಲಿ, ವಸ್ತುಂ-ಇರುವದಕ್ಕೋಸ್ಕರ, ಇಚ್ಛಾಮಿ - ಅಪೇಕ್ಷಿಸುತ್ತೇನೆ, ಶ್ವಃ-ನಾಳೆ, ಪ್ರಭಾತೇ-ಪ್ರಾತಃಕಾಲದಲ್ಲಿ, ವಾರುಣೀಂ-ವರುಣಸಂಬಂಧಿಯಾದ, ಪ್ರತೀಚೀಂದಿಶಂ-ಪಶ್ಚಿಮದಿಕ್ಕನ್ನು ಕುರಿತು, ಗಮಿಷ್ಯಾಮಿ-ಹೋಗುವೆನು, ॥ ೪ ॥ ಮುನಿಸತ್ತಮಃ-ಋಷಿಶ್ರೇಷ್ಠನಾದ ವಾಲ್ಮೀಕಿಯು, ಶತ್ರುಘ್ನಸ್ಯ - ಶತ್ರುಘ್ನನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ಪ್ರಹಸ್ಯ-ನಕ್ಕು, ಮಹಾತ್ಮಾನಂ-ಮಹಾಮನಸ್ವಿಯಾದ ಶತ್ರುಘ್ನನಂಕುರಿತು, ಪ್ರತ್ಯುವಾಚ-ಉತ್ತರಕೊಟ್ಟನು, ಹೇಮಹಾಯಶಃ-ಎಲೈಕೀರ್ತಿವಂತನೆ, ತೇ-ನಿನಗೆ, ಸ್ವಾಗತಂ-ಸುಖಾಗಮನವೆ ॥೫॥ ಹೇಸೌಮ್ಯ-ಎಲೈಕೋಪವಿಲ್ಲದವನೆ, ಇದಂ-ಆಶ್ರಮಂ-ಈ ಆಶ್ರಮವು, ರಾಘವಾನಾಂ-ರಘುಕುಲೋತ್ಪನ್ನರ, ಕುಲಸ್ಯ-ವಂಶಕ್ಕೆ, ಸ್ವಂಹಿ-ಸ್ವಕೀಯ್ಯವಾದದ್ದಷ್ಟೆ, ಮೇ-ನನ್ನ ದೆಸೆಯಿಂದ, ನಿರ್ವಿಶಂಕಂ-ನಿಸ್ಸಂಶಯವಾಗಿ

---

ವಂ ಮಾಡಿ ಬಳಿಕ ಶ್ರೀರಾಮನಿಗೆ ಪ್ರದಕ್ಷಿಣಂಗೈದು ಕೈಮುಗಿದು ಅಪ್ಪಣೆಯಂ ತೆಗದುಕೊಂಡವನಾಗಿ ಭರತ ಲಕ್ಷ್ಮಣರೀರ್ವರಿಗೂ ಪುರೋಹಿತನಾದ ವಸಿಷ್ಠ ಮಹಾಮುನಿಗೂ ವಂದನೆಯಂ ಗೈದು ಸಾವಧಾನಚಿತ್ತನಾಗಿ ತೆರಳಿದಂಥವನಾದನು —...ಉತ್ತರರಾಮಾಯಣ ದಲ್ಲಿನ ೬೪ನೇ ಸರ್ಗಂ ಮುಗಿದುದು...—

ಆವೇಳೆಯಲ್ಲಿ ಈಪರಿ ಸೇನೆಯಂಕಳುಹಿಸಿ, ಶತ್ರುಘ್ನನು ತಾನೋರ್ವನೆ ತ್ವರಿತವಾಗಿ ಹೊರಟು ಒಂದು ಮಾಸವು ದಾರಿಯಲ್ಲಿದ್ದು ತ್ವರಿತವಾಗಿ ತೆರಳಿ, ಮಧ್ಯಮಾರ್ಗದಲ್ಲಿ ಎರಡು ರಾತ್ರಿಗಳು ಇದ್ದು ಕೊಂಡು ವಾಲ್ಮೀಕಿ ಮಹಾಮುನಿಯ ಆಶ್ರಮವಂ ಹೊಕ್ಕು, ಮುನಿಶ್ರೇಷ್ಠನಾದ ಆ ಮಹರ್ಷಿಗೆ ವಂದನೆಯಂಗೈದು, ಈ ಮಾತಂ ಪೇಳುವನದೆಂತನೆ ॥೩॥ ಎಲೈ ಪೂಜ್ಯನೇ! ನಾನು ಮಹತ್ತರವಾದ ಕಾರ್ಯಕ್ಕೋಸುಗ ಬಂದಿಧೇನೆ, ತಮ್ಮ ಆಶ್ರಮದಲ್ಲಿ ಈ ರಾತ್ರಿಯು ನೆಲಗೊಂಡಿದ್ದು, ನಾಳೆಯ ಪ್ರಾತಃಕಾಲದೊಳು ಪಶ್ಚಿಮದಿಕ್ಕಿನಲ್ಲಿ ಪ್ರಯಾಣವಂ ಮಾಡಬಿಚ್ಛೆಸುತ್ತೇನೆಂದು ವಿಜ್ಞಾಪಿಸಲೂ, ಆ ವಾಲ್ಮೀಕಿ ಮಹರ್ಷಿಯೂ ಆ ವಾಕ್ಯವಂ ಕೇಳಿ, ಎಲೈ ಮಹಾ ಯಶೋವಂತನಾದ ಶತ್ರುಘ್ನನೇ! ಸುಖವಾಗಿ ಬಂದೆಯಾ? ಈ ಆಶ್ರಮವು ರಘುವಂಶಸ್ಥ ರಾಜರಿಗೆಲ್ಲ ಸ್ವಕೀಯವಾಗಿಯೇ ಇರುವದು. ನಾನು ಈಯ್ಯುವ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವೈರಾಘವಾಣಾಂಕುಲಸ್ಯಹಿ। ಆಸನಂಪಾದ್ಯಮರ್ಘ್ಯಂಚನಿರ್ವಿಶಂಕಂಪ್ರತೀಚ್ಛ ವೈ ॥೬॥ ಪ್ರತಿಗೃಹ್ಯತತಃಪೂಜಾಂಫಲಂ ಮೂಲಂಚಭೋಜನಂ। ಭಕ್ಷಯಾಮಾಸಕಾಕುತ್ಸ್ಥಸ್ತೃಪ್ತಿಂಚಪರಮಾಂಗತಃ ॥೭॥ ಸತುಭುಕ್ತ್ವಾ ಮಹಾಬಾಹುರ್ಮಹರ್ಷಿಂತಮುವಾಚಹ। ಪೂರ್ವಯಜ್ಞವಿಭೂತೀಯಂಕಸ್ಯಾಶ್ರಮಸಮೀಪತಃ ॥೮॥ ತಸ್ಯತದ್ವಚನಂಶ್ರುತ್ವಾ ವಾಲ್ಮೀಕಿರ್ವಾಕ್ಯಮಬ್ರವೀತ್। ಶತ್ರುಘ್ನಶೃಣುಯಸ್ಯೇದಂಬಭೂವಾಯತನಂಪುರಾ ॥೯॥ ಯುಷ್ಮಾಕಂಪೂರ್ವಕೋರಾಜಾಸುದಾಸಸ್ತಸ್ಯಭೂಪತೇಃ। ಪುತ್ರೋಮಿತ್ರಸಹೋನಾಮವೀರ್ಯವಾನತಿಧಾರ್ಮಿಕಃ ॥೧೦॥ ಸಬಾಲಏವಸೌದಾಸೋಮೃಗಯಾಮುಪಚಕ್ರಮೇ। ಚಂಚೂರ್ಯಮಾಣಂದದೃಶೇಸಶೂರೋರಾಕ್ಷಸದ್ವಯಂ ॥೧೧॥ ಶಾರ್ದೂಲರೂಪಿಣೌಘೋರೌಮೃಗಾನ್ಬಹುಸಹಸ್ರಶಃ। ಭಕ್ಷಯಾನಾವಸಂತುಷ್ಟೌಪರ್ಯಾಪ್ತಿಂಚನಜಗ್ಮತುಃ ॥೧೨॥ ಸತುತೌರಾಕ್ಷಸೌದೃಷ್ಟ್ವಾನಿರ್ಮೃಗಂಚವನಂ ಕೃತಂ। ಕ್ರೋಧೇನಮಹತಾವಿಷ್ಟೋಜಘಾನೈಕಂಮಹೇಷುಣಾ ॥೧೩॥ ವಿನಿಪಾತ್ಯತಮೇಕಂತುಸೌದಾಸಃಪುರುಷರ್ಷಭಃ। ವಿಜ್ವರೋವಿಗತಾಮರ್ಷೋಹತಂರಕ್ಷೋಽಭ್ಯವೈಕ್ಷತ ॥೧೪॥ ನಿರೀಕ್ಷಮಾಣಂತಂದೃಷ್ಟ್ವಾಸಹಾಯಸ್ತಸ್ಯರಕ್ಷಸಃ। ಸಂತಾ

---

ಆಸನಂ–ಪೀಠವನ್ನು, ಪಾದ್ಯಂ–ಪಾದೋದಕವನ್ನು, ಅರ್ಘ್ಯಂ–ಅರ್ಘ್ಯವನ್ನು, ಪ್ರತೀಚ್ಛ–ತೆಗೆದುಕೋ, ॥೬॥ ಕಾಕುತ್ಸ್ಥಃ–ಶತ್ರುಘ್ನನು, ತತಃ–ಅನಂತರ, ಮುನಿಯುದೆಸೆಯಿಂದ, ಪೂಜಾಂ–ಪೂಜೆಯನ್ನು, ಫಲಂ–ಫಲವನ್ನು, ಮೂಲಂ–ಕಂದಮೂಲವನ್ನು, ಭೋಜನಂಚ–ಭೋಜನವನ್ನು ಸಹ, ಭಕ್ಷಯಾಮಾಸ–ಭುಜಿಸಿದನು, ಪರಮಾಂ–ಬಹಳವಾದ, ತೃಪ್ತಿಂಚ–ತೃಪ್ತಿಯನ್ನೂ ಸಹ, ಗತಃ–ಹೊಂದಿದನು, ॥೭॥ ಮಹಾಬಾಹುಃ–ಮಹಾಭುಜಪರಾಕ್ರಮಿಯಾದ, ಸತು–ಆ ಶತ್ರುಘ್ನನಾದರೆ, ಭುಕ್ತ್ವಾ–ಭೋಜನಮಾಡಿ, ತಂಮಹರ್ಷಿಂ–ಆಮಹಾಮುನಿಯಂ ಕುರಿತು, ಆಶ್ರಮಸಮೀಪತಃ – ಆಶ್ರಮಸಮೀಪದಲ್ಲಿ, ಇಯಂ–ಈ ಪರಿದೃಶ್ಯಮಾನವಾದ, ಪೂರ್ವಯಜ್ಞವಿಭೂತಿಃ–ಪೂರ್ವ–ಪೂರ್ವಕಾಲದ, ಯಜ್ಞವಿಭೂತಿ–ಯಜ್ಞಸಮೃದ್ಧಿಯು, ಕಸ್ಯ – ಯಾರದು, ಇತಿ–ಇಂತೆಂದು–ಉವಾಚಹ – ಪೇಳಿದನು, ॥೮॥ ತಸ್ಯ–ಆಶತ್ರುಘ್ನನ, ತದ್ವಚನಂ–ಆ ಮಾತನ್ನು, ಶ್ರುತ್ವಾ–ಕೇಳಿ, ವಾಲ್ಮೀಕಿಃ–ವಾಲ್ಮೀಕಿಮುನಿಯು, ಹೇಶತ್ರುಘ್ನ–ಎಲೈ ಶತ್ರುಘ್ನನೆ, ಪುರಾ–ಪೂರ್ವದಲ್ಲಿ, ಇದಮಾಯತನಂ – ಈಯಜ್ಞಶಾಲೆಯು, ಯಸ್ಯ–ಯಾರದೊ, ತತ್–ಅದನ್ನು, ಶೃಣು–ಕೇಳು, ಇತಿ–ಇಂತೆಂದು, ವಾಕ್ಯಂ–ಮಾತನ್ನು, ಅಬ್ರವೀತ್–ನುಡಿದನು, ॥೯॥ ಯುಷ್ಮಾಕಂ–ನಿಮ್ಮಗಳಿಗೆ, ಪೂರ್ವಕಃ–ಪೂರ್ವಿಕನಾದ, ಸುದಾಸಃ – ಸುದಾಸನೆಂಬ, ರಾಜಾ–ಅರಸು, ಆಸೀತ್–ಆದನು, ತಸ್ಯಭೂಪತೇಃ–ಆ ರಾಜನಿಗೆ, ಪುತ್ರಃ–ಮಗನಾದ, ಮಿತ್ರಸಹೋನಾಮ–ಮಿತ್ರಸಹನೆಂದ ಪ್ರಸಿದ್ಧನಾದ ಅರಸು, ವೀರ್ಯವಾನ್–ಮಹಾಪರಾಕ್ರಮ ಶಾಲಿಯು, ಅತಿಧಾರ್ಮಿಕಃ–ಮಹಾಧರ್ಮಿಷ್ಠನು ॥೧೦॥ ಸಸೌದಾಸಃ–ಆ ಸುದಾಸ ಪುತ್ರನಾದ ಮಿತ್ರಸಹನು, ಬಾಲಏವ–ಹುಡುಗನಾಗಿಯೆ, ಮೃಗಯಾಂ–ಬ್ಯಾಂಟೆಯನ್ನು, ಉಪಚಕ್ರಮೆ–ಪ್ರಾರಂಭಿಸಿದನು, ಶೂರಃ–ವೀರನಾದ, ಸಃ–ಆ ಸುದಾಸಪುತ್ರನು, ಚಂಚೂರ್ಯಮಾಣಂ–ನೊಗಸಿನಿಂದ ಥಳಕುತ್ತಿರುವ, ರಾಕ್ಷಸದ್ವಯಃ–ಇಬ್ಬರು ರಾಕ್ಷಸರನ್ನು, ದದೃಶೆ–ಕಂಡನು ॥೧೧॥ ಶಾರ್ದೂಲರೂಪಿಣೌ–ವ್ಯಾಘ್ರರೂಪವಂಧರಿಸಿರುವ, ಘೋರೌ–ಭಯಂಕರರಾದ ಈದ್ವೈತ್ಯರು, ಬಹುಸಹಸ್ರಶಃ–ಅನೇಕ ಸಹಸ್ರಗಳಾದ, ಮೃಗಾನ್–ಮೃಗಗಳನ್ನು, ಭಕ್ಷಯಾನೌ–ಭಕ್ಷಿಸುತ್ತಿದ್ದರೂ, ಅಸಂತುಷ್ಟಾ–ಅತೃಪ್ತರಾಗಿ, ಪರ್ಯಾಪ್ತಿಂ–ಸಾಕೆಂಬಬುದ್ಧಿಯನ್ನು, ನಜಗ್ಮತುಃ–ಹೊಂದಲಿಲ್ಲ ॥೧೨॥ ಸತು–ಆ ಸೌದಾಸನಾದರೆ, ತೌರಾಕ್ಷಸೌ– ಆವ್ಯಾಘ್ರರೂಪಿಗಳಾದರಾಕ್ಷಸರನ್ನು, ವನಂ–ವನವನ್ನು, ನಿರ್ಮೃಗಂಚ–ಮೃಗಹೀನವನ್ನಾಗಿ, ಕೃತಂ–ಮಾಡಲ್ಪಟ್ಟದ್ದನ್ನಾಗಿ, ದೃಷ್ಟ್ವಾ–ಕಂಡು, ಮಹತಾ–ಮಹತ್ತರವಾದ, ಕ್ರೋಧೇನ–ಕೋಪದಿಂದ, ಆವಿಷ್ಟಃ–ಕೂಡಿದವನಾಗಿ, ಮಹೇಷುಣಾ–ಮಹಾಬಾಣದಿಂದ, ಏಕಂ–ಒಬ್ಬ ರಾಕ್ಷಸನನ್ನು, ಜಘಾನ–ಹೊಡೆದನು ॥೧೩॥ ಹೇ ಪುರುಷರ್ಷಭ–ಎಲೈ ಪುರುಷಶ್ರೇಷ್ಠನೆ, ಸೌದಾಸಃ–ಸುದಾಸನಪುತ್ರನು, ಏಕಂ–ಒಬ್ಬನಾದ, ತಂರಾಕ್ಷಸಂ–ಆರಕ್ಕಸನನ್ನು, ವಿನಿಪಾತ್ಯ–ಬೀಳಿಸಿ, ವಿಜ್ವರಃ–ಸಂತಾಪಹೀನನಾಗಿ, ವಿಗತಾಮರ್ಷಃ–ಗತವಾದ ಕೋಪವುಳ್ಳವನಾಗಿ, ಹತಂ–ಹತನಾದ, ರಕ್ಷಃ–ರಕ್ಕಸನನ್ನು, ಅಭ್ಯವೈಕ್ಷತ–ನೋಡಿದನಷ್ಟೆ ॥ ನಿರೀ

---

ಈ ಅರ್ಘ್ಯಾದಿಗಳಂ ಸ್ವೀಕರಿಸುವಂಥಾವನಾಗೆಂದು ಎರೂಪಿಸಿದವನಾದನು ॥೬॥ ಬಳಿಕ ಶತ್ರುಘ್ನನು ಆ ಮಹಾಮುನಿಯಿಂದ ಕೊಡಲ್ಪಟ್ಟ ಆ ಫಲಮೂಲಾದಿಗಳಂ ಪರಿಗ್ರಹಿಸಿ, ಭುಜಿಸಿದಂಥಾವನಾಗಿ, ತೃಪ್ತಿಯಂ ಪೊಂದಿ, ಆ ಮಹಾಮುನಿಯಂ ಕುರಿತು ಎಲೈ ಪೂಜ್ಯನೇ! ತಮ್ಮ ಆಶ್ರಮ ಸಮೀಪದಲ್ಲಿರ್ಪ ಈ ಯಜ್ಞ ಸಮೃದ್ಧಿಯು ಪೂರ್ವದಲ್ಲಿ ಯಾರಿಂದ ಮಾಡಲ್ಪಟ್ಟದ್ದು, ಇದಂ ಕೇಳಲಿಚ್ಛಿಸುತ್ತೇನೆಂದು ಬಿನ್ನವಿಸಿದವನಾಗಲೂ, ಆ ಮಹಾಮುನಿಯು ಕೇಳೆಲೈಶತ್ರುಘ್ನನೇ! ಈ ಯಾಗಶಾಲಾ ವೃತ್ತಾಂತವಂ ಪೇಳುವೆನು ॥೯॥ ಅದು ಹ್ಯಾಗೆಂದರೆ, ನಿಮ್ಮ ವಂಶದೊಳು ಸುದಾಸನೆಂಬ ಮಹಾ ರಾಜನಿದ್ದನು. ಆ ನರನಾಥನಿಗೆ ಮಿತ್ರಸಹನೆಂಬ ಮಹಾ ಧರ್ಮಿಷ್ಠನಾದ ಕುವರನುಂಟಾದನು॥೧೦॥ ಆ ಸುದಾಸಪುತ್ರನು ಬಾಲ್ಯದಲ್ಲಿಯೇ ಬ್ಯಾಂಟೆಯಾಡಲುಪಕ್ರಮಿಸಿ, ಥಳಥಳಕುತ್ತಿರುವ ರಾಕ್ಷಸದ್ವಯವಂ ಕಂಡನು ॥೧೧॥ ಆ ರಾಕ್ಷಸರಿೀರ್ವರು ಹುಲಿಯ ರೂಪವಾಗಿ, ಅನೇಕ ಸಹಸ್ರ ಮೃಗಗಳಂ ಭಕ್ಷಿಸಿದರೂ ತೃಪ್ತರಾಗದಿದ್ದರು ॥೧೨॥ ಆ ಸೌದಾಸನೆಂಬ ಮಹಾರಾಜನಾದರೆ ವ್ಯಾಘ್ರರೂಪವಾಗಿರುವ ಆ ರಾಕ್ಷಸರನ್ನೂ, ಮೃಗಗಳಿಲ್ಲದಂತೆ ಮಾಡಲ್ಪಟ್ಟಿರುವ ಆ ವನವನ್ನೂ ಸಹಾ ಕಂಡು, ಕಡುಕೋಪವುಳ್ಳವನಾಗಿ, ಮಹಾ ಬಾಣದಿಂದ ಓರ್ವರಕ್ಕಸನಂ ಹೊಡದು ಕಡವಿ ರೋಷವಂ ತೀರಿಸಿಕೊಂಡು ಅದಂ ನೋಡುತ್ತಿದ್ದನು ॥೧೪॥ ಆ ರಾಕ್ಷಸನಿಗೆ ಸಹಾಯಭೂತನಾಗಿರುವ ಮತ್ತೋರ್ವ ರಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪಮುಕರೋದ್ಘೋರಂ ಸೌದಾಸಂಚೇದಮಬ್ರವೀತ್ ॥೧೫॥ ಯಸ್ಮಾದನಪರಾಧಂತ್ವಂ ಸಹಾಯಂ ಮಮ ಜಘ್ನಿವಾನ್ । ತಸ್ಮಾತ್ತವಾಪಿ ಪಾಪಿಷ್ಠ ಪ್ರದಾಸ್ಯಾಮಿ ಪ್ರತಿಕ್ರಿಯಾಂ ॥೧೬॥ ಏವಮುಕ್ತ್ವಾತು ತಂ ರಕ್ಷಸ್ತತ್ರೈವಾಂತರಧೀಯತ । ಕಾಲಪರ್ಯಾಯಯೋಗೇನ ರಾಜಾ ಮಿತ್ರಸಹೋಭವತ್ ॥೧೭॥ ರಾಜಾತು ಯಜತೇ ಯಜ್ಞಂ ಅಸ್ಯಾಶ್ರಮಸಮೀಪತಃ । ಅಶ್ವಮೇಧಂ ಮಹಾಯಜ್ಞಂ ತಂ ವಸಿಷ್ಠೋಭ್ಯಪಾಲಯತ್ ॥೧೮॥ ತತ್ರ ಯಜ್ಞೋ ಮಹಾನಾಸೀದ್ಬಹುವರ್ಷಸಹಸ್ರಕಂ । ಸಮೃದ್ಧಃ ಪರಯಾ ಲಕ್ಷ್ಮ್ಯಾ ದೇವಯಜ್ಞಸಮೋಭವತ್ ॥೧೯॥ ಅಥಾವಸಾನೇ ಯಜ್ಞಸ್ಯ ಪೂರ್ವವೈರಮನುಸ್ಮರನ್ । ವಸಿಷ್ಠರೂಪೀ ರಾಜಾನಮಿತಿ ಹೋವಾಚ ರಾಕ್ಷಸಃ ॥೨೦॥ ಅದ್ಯ ಯಜ್ಞಸ್ಯಾವಸಾನೇ ಸಾಮಿಷಂ ಭೋಜನಂ ಮಮ । ದೀಯತಾಮಿತಿ ಶೀಘ್ರಂ ವೈ ನಾತ್ರ ಕಾರ್ಯಾ ವಿಚಾರಣಾ ॥೨೧॥ ತತಶ್ಶ್ರುತ್ವಾ ವ್ಯಾಹೃತಂ ವಾಕ್ಯಂ ರಕ್ಷಸಾ ಕಾಮರೂಪಿಣಾ । ಭಕ್ಷ್ಯಸಂಸ್ಕಾರಕುಶಲಮುವಾಚ ಪೃಥಿವೀಪತಿಃ ॥೨೨॥ ಹವಿಷ್ಯಂ ಸಾಮಿಷಂ ಸ್ವಾದು ಯಥಾ ಭವತಿ ಭೋಜನಂ । ತಥಾ ಕುರುಷ್ವ ಶೀಘ್ರಂ ವೈ ಪರಿತುಷ್ಯೇದ್ಯಥಾ ಗು

---

ಕ್ಷಮಾಣಾಂ-ನೋಡುತ್ತಿರುವ, ತಂ-ಆ ಸೌದಾಸನನ್ನು ಕಂಡು, ತಸ್ಯರಕ್ಷಸಃ-ಆ ಮೃತನಾದ ಅಸುರನಿಗೆ, ಸಹಾಯಃ-ಸಹಾಯಭೂತನಾದ ಎರಡನೆಯ ರಾಕ್ಷಸನು, ಘೋರಂ-ಭಯಂಕರವಾದ, ಸಂತಾಪಂ-ಸಂಕಟವನ್ನು, ಅಕರೋತ್-ಮಾಡಿದನು, ಸೌದಾಸಂಚ-ಸೌದಾಸನನ್ನೂ ಕುರಿತು, ಇದಂ-ಈ ವಕ್ಷ್ಯಮಾಣವಚನವನ್ನು, ಅಬ್ರವೀತ್-ನುಡಿದನು ॥೧೫॥ ಹೇ ಪಾಪಿಷ್ಠ-ಎಲೈ ಪಾಪಿಯೆ, ಯಸ್ಮಾತ್-ಯಾವಕಾರಣದ ದೆಸೆಯಿಂದ, ತ್ವಂ-ನೀನು, ಅನಪರಾಧಂ-ಅಪರಾಧವಿಲ್ಲದಿರುವ, ಮಮ-ನನ್ನ, ಸಹಾಯಂ- ಸಹಾಯಭೂತನಾದ ರಕ್ಕಸನನ್ನು, ಜಘ್ನಿವಾನ್-ಕೊಂದೆಯೋ, ತಸ್ಮಾತ್-ಆ ಕಾರಣದ ದೆಸೆಯಿಂದ, ತವಾಪಿ-ನಿನಿಗೂ, ಪ್ರತಿಕ್ರಿಯಾಂ-ಪ್ರತ್ಯುಪಕಾರವನ್ನು, ಪ್ರದಾಸ್ಯಾಮಿ-ಮಾಡುವೆನು ॥೧೬॥ ಏವಂ-ಈ ಪರಿಯಾಗಿ, ತಂ-ಆ ಸುದಾಸನ ಮಗನಂ ಕುರಿತು, ಉಕ್ತ್ವಾತು-ಹೇಳಿಯಾದರೆ, ರಕ್ಷಃ-ಅಸುರನು, ತತ್ರೈವ-ಅಲ್ಲಿಯೆ, ಅಂತರಧೀಯತ-ಅಂತರ್ಧಾನವನ್ನೈದಿದನು, ಕಾಲಪರ್ಯಾಯಯೋಗೇನ-ಕಾಲಕ್ರಮದ ಸಂಬಂಧದಿಂದ, ಮಿತ್ರಸಹಃ-ಮಿತ್ರಸಹನು, ರಾಜಾ-ದೊರೆಯು, ಅಭವತ್-ಆದನು ॥೧೭॥ ರಾಜಾತು-ಸೌದಾಸನಾದರೆ, ಅಸ್ಯಾಶ್ರಮಸಮೀಪತಃ-ಈ ಆಶ್ರಮಸಮೀಪದಲ್ಲಿ, ಅಶ್ವಮೇಧಂ-ಅಶ್ವಮೇಧವೆಂಬ, ಯಜ್ಞಂ-ಯಾಗವನ್ನು, ಯಜತೇ-ಮಾಡುತ್ತಿದ್ದನು, ವಸಿಷ್ಠಃ-ವಸಿಷ್ಠ ಋಷಿಯು, ತಂ ಮಹಾಯಜ್ಞಂ-ಆ ಯಾಗವನ್ನು, ಅಭ್ಯಪಾಲಯತ್-ನಡೆಯಿಸಿದನು ॥೧೮॥ ತತ್ರ-ಆ ಯಾಗಶಾಲೆಯಲ್ಲಿ, ಮಹಾನ್-ಮಹತ್ತರವಾದ, ಯಜ್ಞಃ-ಅಶ್ವಮೇಧಯಾಗವು, ಪರಯಾ-ಸರ್ವೋತ್ಕೃಷ್ಟವಾದ, ಲಕ್ಷ್ಮ್ಯಾ-ಐಶ್ವರ್ಯದಿಂದ, ಸಮೃದ್ಧಃ-ತುಂಬಿದಂಥಾದ್ದಾಗಿ, ಬಹುವರ್ಷಸಹಸ್ರಕಂ-ಅನೇಕ ಸಾವಿರ ವರುಷಗಳು, ಆಸೀತ್-ಆಯಿತು, ತತ್-ಅದು, ದೇವಯಜ್ಞಸಮಃ-ದೇವತಾಯಜ್ಞಕ್ಕೆ ಸಮಾನವಾದದ್ದು, ಅಭೂತ್-ಆಯಿತು, ॥೧೯॥ ಅಥ-ಬಳಿಕ, ಯಜ್ಞಸ್ಯ-ಯಾಗದ, ಅವಸಾನೇ-ಮುಗಿಯುವ ಕಾಲದಲ್ಲಿ, ಪೂರ್ವವೈರಂ-ಪೂರ್ವದಿಂದಿರುವ ದ್ವೇಷವನ್ನು, ಅನುಸ್ಮರನ್-ಸ್ಮರಿಸಿಕೊಂಡಂಥಾವನಾಗಿ, ರಾಕ್ಷಸಃ-ಅಸುರನು, ವಸಿಷ್ಠರೂಪೀ-ವಸಿಷ್ಠರೂಪವನ್ನು ಧರಿಸಿದವನಾದವನಾಗಿ, ರಾಜಾನಂ-ಸೌದಾಸರಾಜನನ್ನು ಕುರಿತು, ಇತಿ-ಇಂತೆಂದು, ಉವಾಚಹ-ಹೇಳಿದನಷ್ಟೆ ॥೨೦॥ ಅದ್ಯ-ಈಗ, ಯಜ್ಞಸ್ಯ-ಅಶ್ವಮೇಧಯಾಗದ, ಅವಸಾನೇ-ಪೂರ್ತಿಯಾಗುತಿರಲಾಗಿ, ಮಮ-ನನಗೆ, ಸಾಮಿಷಂ-ಮಾಂಸಸಹಿತವಾದ, ಭೋಜನಂ-ಭೋಜನವು, ಶೀಘ್ರಂ-ಜಾಗ್ರತೆಯಾಗಿ, ದೀಯತಾಂ-ಕೊಡಲ್ಪಡಲಿ, ಅತ್ರ-ಈ ಅರ್ಥದಲ್ಲಿ, ವಿಚಾರಣಾ-ಚರ್ಚೆಯು, ನಕಾರ್ಯಾ-ಮಾಡತಕ್ಕದ್ದಲ್ಲ ॥೨೧॥ ಪೃಥಿವೀಪತಿಃ-ಸೌದಾಸರಾಜನು, ಕಾಮರೂಪಿಣಾ-ಸ್ವೇಚ್ಛಾರೂಪಿಯಾದ, ರಕ್ಷಸಾ-ರಕ್ಕಸನಿಂದ, ವ್ಯಾಹೃತಂ-ಹೇಳಲ್ಪಟ್ಟ, ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ಭಕ್ಷ್ಯಸಂಸ್ಕಾರಕುಶಲಂ-ಭಕ್ಷ್ಯ-ಭಕ್ಷ್ಯಗಳ, ಸಂಸ್ಕಾರ-ಮಾಡುವಿಕೆಯಲ್ಲಿ, ಕುಶಲಂ-ಚತುರನಾದ ಪರಿಚಾರಕನಂ ಕುರಿತು, ಉವಾಚ - ಹೇಳಿದನು ॥೨೨॥ ಗುರುಃ-ಗುರುವಾದ ವಸಿಷ್ಠಮುನಿಯು, ಯಥಾ-ಹ್ಯಾಗೆ, ಪರಿತುಷ್ಯೇತ್-ತೃಪ್ತನಾಗುವನೋ, ತಥಾ-ಹಾಗೆ, ಹವಿಷ್ಯಂ-ಹವಿರ್ಯೋಗ್ಯವಾದ, ಸಾಮಿಷಂ-

---

ಕ್ಷಸನು ನೋಡುತ್ತಿರುವ ಆ ರಾಜನಂ ಕಂಡು ಸಂತಪಿಸುತ್ತಿರುವನಾಗಿ, ಆ ರಾಜನಂ ಕುರಿತು ಎಲೈ ಪಾಪಿಯೇ! ನೀನು ಅಪರಾಧವೊಂದೂ ಮಾಡದಿರುವ ಎನ್ನ ಸಹಾಯಭೂತನಾದ ಈ ರಕ್ಕಸನಂ ಕೊಂದಂಥಾವನಾದೆ, ಇದಕ್ಕೆ ನಿನಿಗೂ ಪ್ರತ್ಯುಪಕಾರವಂ ಮಾಡುವೆನೆಂದು ನುಡಿದು ಅಲ್ಲಿಯೇ ಅಂತರ್ಧಾನವನ್ನೈದಿದನು. ಆ ಮಿತ್ರಸಹನೆಂಬ ಸುದಾಸನ ಕುಮಾರನು ಗೈಯುತಿದ್ದ ಕರ್ಮಯೋಗದಿಂದ ರಾಜನಾದಂಥಾವನಾದನು. ॥೧೭॥ ಅನಂತರದಲ್ಲಿ ಆ ಸೌದಾಸನೆಂಬ ನರನಾಥನಾದರೆ, ಈ ಆಶ್ರಮ ಸಮೀಪದಲ್ಲಿ ಅಶ್ವಮೇಧವೆಂಬ ಮಹಾ ಯಾಗವಂಗೈಯಲಿಚ್ಛಿಸಿದವನಾಗಿ, ವಸಿಷ್ಠ ಮಹಾಮುನಿಗೆ ವರಣೆಯಂ ಕೊಟ್ಟು, ಅನೇಕ ಸಹಸ್ರ ವರುಷಗಳು ದೀಕ್ಷಾಬದ್ಧನಾಗಿ, ದೇವಯಜ್ಞಕ್ಕೆ ಸಮಾನವಾಗಿರುವಂತೆ ಆ ಯಾಗವನ್ನು ಪೂರ್ತಿ ಮಾಡಿದಂಥಾವನಾದನು. ॥೧೯॥ ಆ ಯಜ್ಞ ಪರಿಸಮಾಪ್ತಿ ಕಾಲದಲ್ಲಿ ಆ ವ್ಯಾಘ್ರರೂಪವಾಗಿರ್ದ ರಕ್ಕಸನು ಪೂರ್ವವೈರವಂ ಜ್ಞಾಪಿಸಿಗೊಂಡು, ವಸಿಷ್ಠರೂಪವಂ ತಾಳಿ, ರಾಜನ ಸಮೀಪಕ್ಕೆ ಗಮಿಸಿ, ಆ ರಾಜನಂ ಕುರಿತು ಎಲೈ ರಾಜನೇ! ಈ ದಿನ ಯಾಗ ಪರಿಸಮಾಪ್ತಿಯಾಗಲೂ, ನನಿಗೆ ಮಾಂಸಸಹಿತವಾದ ಆಹಾರವಂ ತ್ವರಿತವಾಗಿ ಕೊಡುವಂಥಾವನಾಗು, ಈ ಅರ್ಥದಲ್ಲಿ ಚರ್ಚಿಸ ಬೇಡ ಎಂಬದಾಗಿ ನುಡಿಯಲೂ, ಆ ವಾಕ್ಯವಂ ಕೇಳಿ, ಸೌದಾಸನು ಭಕ್ಷ್ಯಗಳಂಗೈಯುವದರಲ್ಲಿ ಮಹಾ ಚತುರನಾದ ಅಡಿಗೆಯವನಂ ಕುರಿತು ಎಲೈ ಬಾಣಸಿಗನೇ! ನಮ್ಮ ಗುರುವಾದ ವಸಿಷ್ಠ ಮಹಾಮುನಿಯು ಹ್ಯಾಗೆ ಒಪ್ಪುವಂಥಾವನಾಗುವನೋ ಹಾಗೆ ಹವಿರ್ಯೋಗ್ಯವಾಗಿಯೂ, ಮಾಂಸಸಹಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರುಃ ||೨೩|| ಶಾಸನಾತ್ಪಾರ್ಥಿವೇಂದ್ರಸ್ಯ ಸೂದಸ್ಸಂಭ್ರಾಂತಮಾನಸಃ । ಸಚರಕ್ಷಃಪುನಸ್ತತ್ರ ಸೂದವೇಷಮಥಾಕರೋತ್ || ಸಮಾನುಷಮಥೋಮಾಂಸಂಪಾರ್ಥಿವಾಯನ್ಯವೇದಯತ್ । ಇದಂಸ್ವಾದುಹವಿಷ್ಯಂಚಸಾಮಿಷಂಚೇಹಪೂಜಿತಂ ||೨೪|| ಸ ಭೋಜನಂವಸಿಷ್ಠಾಯ ಪತ್ನ್ಯಾಸಾರ್ಧಮುಪಾಹರತ್ । ಮದಯಂತ್ಯಾ ನರವ್ಯಾಘ್ರ ಹ್ಯಾಮಿಷಂರಕ್ಷಸಾಹೃತಂ ||೨೫|| ಜ್ಞಾತ್ವಾತದಾಮಿಷಂವಿಪ್ರೋ ಮಾನುಷಂಭೋಜನಾಗತಂ। ಕ್ರೋಧೇನಮಹತಾವಿಷ್ಟೋ ವ್ಯಾಹರ್ತುಮುಪಚಕ್ರಮೇ ||೨೬|| ಯಸ್ಮಾತ್ತ್ವಂಭೋಜನಂರಾಜನ್ಮಮೈತದ್ದಾತುಮಿಚ್ಛಸಿ । ತಸ್ಮಾದ್ಭೋಜನಮೇತತ್ತೇ ಭವಿಷ್ಯತಿನಸಂಶಯಃ ||೨೭|| (ತತಃಕ್ರುದ್ಧಸ್ತುಸೌದಾಸಸ್ತೋಯಂಜಗ್ರಾಹಪಾಣಿನಾ। ವಸಿಷ್ಠಂಶಪ್ತುಮಾರೇಭೇಭಾರ್ಯಾಚೈನಮವಾರಯತ್ * ರಾಜನ್ ಪ್ರಭುರ್ಯತೋಸ್ಮಾಕಂವಸಿಷ್ಠೋ ಭಗವಾನೃಷಿಃ । ಪ್ರತಿಶಪ್ತುಂನಶಕ್ತಸ್ತ್ವಂದೇವತುಲ್ಯಂಪುರೋಧಸಂ||ತತಃಕ್ರೋಧಮಯಂ ತೋಯಂತೇಜೋಬಲಸಮನ್ವಿತಂ||ವ್ಯಸರ್ಜಯತಧರ್ಮಾತ್ಮಾ ತತಃಪಾದೌಸಿಷೇಚಚ।ತೇನಾಸ್ಯರಾಜ್ಞಸ್ತೌಪಾದೌಯದಾಕ

---

ಮಾಂಸಯುಕ್ತನಾದ, ಭೋಜನಂ-ಭೋಜನಪದಾರ್ಥವನ್ನು, ಸ್ವಾದುಯಥಾ ಭವತಿತಥಾ-ರುಚಿಯಾಗಿರುವಂತೆ, ಶೀಘ್ರಂ-ಜಾಗ್ರತೆಯಾಗಿ, ಕುರುಷ್ವ-ಮಾಡು ||೨೩|| ಪಾರ್ಥಿವೇಂದ್ರಸ್ಯ-ಸೌದಾಸರಾಜನ, ಶಾಸನಾತ್-ಆಜ್ಞೆಯ ದೆಸೆಯಿಂದ, ಸೂದಃ - ಪರಿಚಾರಕನು, ಸಂಭ್ರಾಂತಮಾನಸಃ-ಭ್ರಾಂತಚಿತ್ತನಾದನು, ಅಥ-ಬಳಿಕ, ಸಚರಕ್ಷಃ-ಆ ರಕ್ಕಸನು, ಪುನಃ-ಮತ್ತು, ತತ್ರ-ಆಯಜ್ಞಶಾಲೆಯಲ್ಲಿ, ಸೂದವೇಷಂ-ಅಡಿಗೆಯವನವೇಷವನ್ನು, ಅಕರೋತ್ - ಮಾಡಿದನು ||೨೪|| ಸಃ-ಆ ರಾಕ್ಷಸನು, ಅಥೋ-ಅನಂತರದಲ್ಲಿ, ಮಾನುಷಂ-ಮನುಷ್ಯಸಂಬಂಧವಾದ, ಮಾಂಸಂ-ಮಾಂಸವನ್ನು, ಪಾರ್ಥಿವಾಯ-ಅರಸಿಗೆ, ಇದಂ-ಈಭೋಜನವು, ಸ್ವಾದು-ರುಚಿಕರವಾದ್ದು, ಹವಿಷ್ಯಂ-ಹವಿರ್ಭಾಗಯೋಗ್ಯವಾದದ್ದು, ಸಾಮಿಷಂ-ಮಾಂಸಯುಕ್ತವಾದದ್ದು, ಇಹ-ಇಲ್ಲಿ, ಪೂಜಿತಂ-ಶ್ಲಾಘ್ಯವಾದದ್ದು, (ಇತಿ-ಇಂತೆಂದು) ನ್ಯವೇದಯತ್-ತಿಳುಹಿಸಿದನು ||೨೫|| ಹೆ ನರವ್ಯಾಘ್ರ-ಎಲೈ ನರಶ್ರೇಷ್ಠನಾದ ಶತ್ರುಘ್ನನೆ, ಸಃ-ಆಸೌದಾಸನು, ಪತ್ನ್ಯಾ-ಹೆಂಡತಿಯಾದ, ಮದಯಂತ್ಯಾಸಾರ್ಧಂ-ಮದಯಂತಿಯಿಂದೊಡಗೂಡಿ, ವಸಿಷ್ಠಾಯ-ವಸಿಷ್ಠಮುನಿಗೋಸ್ಕರ, ರಕ್ಷಸಾ-ರಾಕ್ಷಸನಿಂದ, ಆಹೃತಂ-ತರಲ್ಪಟ್ಟ, ಆಮಿಷಂ-ಮಾಂಸರೂಪವಾದ, ಭೋಜನಂ-ತಿನ್ನುವಪದಾರ್ಥವನ್ನು, ಉಪಾಹರದ್ಧಿ-ಸಮರ್ಪಿಸಿದನಷ್ಟೆ ||೨೬|| ವಿಪ್ರಃ-ಬ್ರಾಹ್ಮಣನಾದ ವಸಿಷ್ಠಮುನಿಯು, ಭೋಜನಾಗತಂ-ಭೋಜನಕಾಲದಲ್ಲಿ ಪ್ರಾಪ್ತವಾದ, ತದಾಮಿಷಂ-ಆ ಮಾಂಸವನ್ನು, ಮಾನುಷಂ-ಮನುಷ್ಯಸಂಬಂಧವಾದದ್ದನ್ನಾಗಿ, ಜ್ಞಾತ್ವಾ-ಅರಿತು, ಮಹತಾಕ್ರೋಧೇನ-ಬಹಳಕೋಪದಿಂದ, ಆವಿಷ್ಟಃ-ಪ್ರಜ್ಞೆಇಲ್ಲದವನಾಗಿ, ವ್ಯಾಹರ್ತುಂ-ಶಾಪವಿಡುವದಕ್ಕೆ, ಉಪಚಕ್ರಮೆ-ಪ್ರಾರಂಭಿಸಿದನು ||೨೭|| ಹೆರಾಜನ್-ಎಲೈ ಸೌದಾಸನೆ, ತ್ವಂ-ನೀನು, ಮಮ-ನನಗೆ, ಯಸ್ಮಾತ್-ಯಾವಕಾರಣದ ದೆಸೆಯಿಂದ, ಏತತ್-ಈ ಮನುಷ್ಯಮಾಂಸರೂಪವಾದ, ಭೋಜನಂ - ಊಟವನ್ನು, ದಾತುಂ - ಕೊಡುವದಕ್ಕೆ, ಇಚ್ಛಸಿ-ಅಪೇಕ್ಷಿಸುತ್ತೀಯೊ", ತಸ್ಮಾತ್-ಆಕಾರಣದದೆಸೆಯಿಂದ, ತೇ-ನಿನಗೆ, ಏತದ್ಭೋಜನಂ-ಇದೇಮನುಷ್ಯಮಾಂಸರೂಪವಾದ ಭೋಜನವೆ, ಭವಿಷ್ಯತಿ-ಆಗುವದು, ಸಂಶಯಃ-ಸಂದೇಹವು, ನ-ಇಲ್ಲ ||೨೮|| ತತಃ-ಬಳಿಕ, ಕ್ರುದ್ಧಃ-ಕುಪಿತನಾದ, ಸೌದಾಸಸ್ತು-ಸೌದಾಸನಾದರೆ, ಪಾಣಿನಾ-ಹಸ್ತದಿಂದ, ತೋಯಂ-ಉದಕವನ್ನು, ಜಗ್ರಾಹ-ತೆಗದುಕೊಂಡನು, ವಸಿಷ್ಠಂ-ವಸಿಷ್ಠನನ್ನು, ಶಪ್ತುಂ-ಶಪಿಸುವದಕ್ಕೆ, ಆರೇಭೆ-ಪ್ರಾರಂಭಿಸಿದನು, ಭಾರ್ಯಾಚ-ಹೆಂಡತಿಯಾದ ಮದಯಂತಿಯು, ಏನಂ-ಈ ಸೌದಾಸನನ್ನು, ಅವಾರಯತ್-ನಿವಾರಿಸಿದಳು, * (ಹೆರಾಜನ್-ಎಲೈ ಅರಸೆ, ಯತಃ-ಯಾವಕಾರಣದದೆಸೆಯಿಂದ, ಭಗವಾನ್-ಪೂಜ್ಯನಾದ, ವಸಿಷ್ಠಋಷಿಃ-ವಸಿಷ್ಠಮುನಿಯು, ಅಸ್ಮಾಕಂ-ನಮಗೆ, ಪ್ರಭುಃ-ಉಪದೇಶಕರ್ತನಾದ ಸ್ವಾಮಿಯೋ, ತಸ್ಮಾತ್-ಆಕಾರಣದದೆಸೆಯಿಂದ, ದೇವತುಲ್ಯಂ-ದೇವತಾಸದೃಶನಾದ, ಪುರೋಹಿತಂ-ಪುರೋಹಿತನನ್ನು, ಪ್ರತಿಶಪ್ತುಂ-ಪ್ರತಿಯಾಗಿ ಶಪಿಸುವದಕ್ಕೆ, ತ್ವಂ-ನೀನು, ನಶಕ್ತಃ-ಸಮರ್ಥನಲ್ಲ, * ತತಃ-ಬಳಿಕ, ಕ್ರೋಧಮಯಂ-ಕೋಪಪ್ರಚುರವಾ

---

ತವಾಗಿಯೂ, ರುಚಿಕರವಾಗಿಯೂ ಇರುವಂತೆ ತ್ವರಿತವಾಗಿ ಅಡಿಗೆಯಂ ಮಾಡುವಂಥಾವನಾಗೆಂದು ನುಡಿದವನಾದನು ||೨೩|| ಬಳಿಕ ಆ ಅಡಿಗೆಯುವನು ಒಡೆಯುನ ಈ ವಾಕ್ಯವಂ ಕೇಳಿ ಭ್ರಾಂತ ಚಿತ್ತನಾಗಲೂ, ಆ ರಕ್ಕಸನು ಪರಿಚಾರಕನ ವೇಷವಂ ತಾಳಿ, ಮನುಷ್ಯನ ಮಾಂಸವಂ ತೆಗದುಕೊಂಡು ಬಂದು ಎಲೈ ಒಡೆಯನೇ! ಬಹುರುಚಿಯಾಗಿಯೂ ಹವಿಸ್ಸಿಗೆ ಯೋಗ್ಯವಾಗಿಯೂ, ಮಾಂಸಸಹಿತವಾಗಿಯೂ, ಪೂಜಾರ್ಹವಾಗಿಯೂ ಇರುವ ಆಹಾರವಿದಿಗೋ ಸಿದ್ಧವಾಗಿರುವದೆಂದು ರಾಜನಿಗೆ ಬಿನ್ನವಿಸಿದವನಾದನು ||೨೪|| ಕೇಳೆಲೈ ಶತ್ರುಘ್ನನೇ! ಬಳಿಕ ಆ ಸೌದಾಸನೆಂಬ ಮಹಾ ರಾಜನು ಮದಯಂತಿ ಎಂಬ ಭಾರ್ಯೆಯಿಂದ ಸಹಿತನಾಗಿ ಆಹಾರವನ್ನು ವಸಿಷ್ಠಮಹಾಮುನಿಗೆ ಸಮರ್ಪಿಸಿದಂಥಾವನಾಗಲೂ, ಭೋಜನ ಕಾಲದಲ್ಲಿ ಸಂಪ್ರಾಪ್ತವಾದ ಆ ಮನುಷ್ಯನ ಮಾಂಸವಂಕಂಡು ಕಡುಕೋಪವುಳ್ಳವನಾಗಿ ಆ ರಾಜನಂ ಶಪಿಸಿದನದೆಂತೆನೆ ||೨೭|| ಎಲೈ ರಾಜನೇ ! ಮಹಾ ಮುನಿಯಾಗಿರುವ ನನಿಗೆ ಇಂಥಾ ಆಹಾರವನ್ನು ಕೊಡಬೇಕೆಂದು ನೀನು ಯಾವ ಕಾರಣದಿಂದ ಬಯಸಿದಂಥಾವನಾದೆಯೋ, ಆ ಕಾರಣದಿಂದ ನೀನು ಇಂಥಾ ಮಾಂಸಸಹಿತವಾದ ಭೋಜನವನ್ನೇ ಮಾಡುವಂಥಾವನಾಗುವಿ, ಈ ವಿಷಯದಲ್ಲಿ ಸಂದೇಹವಿಲ್ಲೆಂದು ಶಪಿಸಿದವನಾದನು. ಆ ಬಳಿಕ ಸೌದಾಸನೆಂಬ ರಾಜನು ಮಹಾ ರೋಷವುಳ್ಳವನಾಗಿ ಕೈಯಿಂದ ಜಲವಂ ಪರಿಗ್ರಹಿಸಿ, ವಸಿಷ್ಠ ಋಷಿಗೆ ಪ್ರತಿಯಾಗಿ ಶಾಪವನ್ನೀಯ್ಯಲುಪಕ್ರಮಿಸಲೂ, ಆತನ ಹೆಂಡತಿಯಾದ ಮತ್ತೂ ಮಹಾ ಪತಿವ್ರತೆಯಾದ ಮದಯಂತಿಯು,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲ್ಮಾಷತಾಂಗತೌ। ತದಾಪ್ರಭೃತಿರಾಜಾಸೌಸೌದಾಸಸ್ಸುಮಹಾಯಶಾಃ। ಕಲ್ಮಾಷಪಾದಸ್ಸಂವೃತ್ತಃ ಖ್ಯಾತಶ್ಚೈವತಥಾ ನೃಪಃ॥ ಸರಾಜಾಸಹಪತ್ನ್ಯಾವೈಪ್ರಣಿಪತ್ಯಮುಹುರ್ಮುಹುಃ। ಪುನರ್ವಸಿಷ್ಠಂಪ್ರೋವಾಚೆಯದುಕ್ತಂಬ್ರಹ್ಮರೂಪಿಣಾ॥ ತಚ್ಛ್ರುತ್ವಾಪಾರ್ಥಿವೇಂದ್ರಸ್ಯರಕ್ಷಸಾವಿಕೃತಂಚತತ್। ಪುನಃಪ್ರೋವಾಚರಾಜಾನಂವಸಿಷ್ಠಃಪುರುಷರ್ಷಭ ॥೨೦॥ ಮಯಾರೋಷಪರೀತೇನಯದಿದಂವ್ಯಾಹೃತಂವಚಃ। ನೈತಚ್ಛಕ್ಯಂವೃಥಾಕರ್ತುಂಪ್ರದಾಸ್ಯಾಮಿಚತೇವರಂ॥೨೧॥ ಕಾಲೋದ್ವಾದಶವರ್ಷಾಣಿಶಾಪಸ್ಯಾಂತೇಭವಿಷ್ಯತಿ। ಮತ್ಪ್ರಸಾದಾಚ್ಚರಾಜೇಂದ್ರ ಅತೀತಂನಸ್ಮರಿಷ್ಯಸಿ ॥ ೨೨ ॥ ಏವಂಸರಾಜಾತಂಶಾಪಮುಪಭುಜ್ಯಾರಿಮರ್ದನಃ। ಪ್ರತಿಲೇಭೆಪುನಾರಾಜ್ಯಂಪ್ರಜಾಶ್ಚೈವಾನ್ವಪಾಲಯತ ॥೨೩॥ ತಸ್ಯಕಲ್ಮಾಷಪಾದ

---

ದ, ತೇಜೋಬಲಸಮನ್ವಿತಂ-ಪರರದೇಹವನ್ನು ಸುಡುವಸಾಮರ್ಥ್ಯದಿಂದ ಯುಕ್ತವಾದ, ತೋಯಂ-ಶಾಪೋದಕವನ್ನು, ವ್ಯಸರ್ಜಯತ-ಬಿಟ್ಟನು *) ಧರ್ಮಾತ್ಮಾ-ಧರ್ಮದಲ್ಲಿಯೇ ತಗಲಿದ ಮನವುಳ್ಳ ಆ ಸೌದಾಸನು, ತತಃ-ಆ ಉದಕದಿಂದ, ಪಾದೌ-ತನ್ನ ಪಾದಗಳನ್ನು, ಸಿಷೇಚ-ನನೆಸಿದನು, ತೇನ-ಆ ಪಾದಪ್ರಕ್ಷಾಳನದಿಂದ, ಅಸ್ಯರಾಜ್ಞಃ-ಈ ಸೌದಾಸನ, ತೌಪಾದೌ-ಆ ಕಾಲುಗಳು, ಯದಾ-ಯಾವಕಾಲದಲ್ಲಿ, ಕಲ್ಮಾಷತಾಂ-ಕಲುಷತ್ವವನ್ನು, ಗತೌ-ಹೊಂದಿದವೋ, ತದಾಪ್ರಭೃತಿ-ಅದುಮೊದಲ್ಗೊಂಡು, ಸುಮಹಾಯಶಾಃ-ಮಹಾಕೀರ್ತಿವಂತನಾದ ಸೌದಾಸಃ-ಸುದಾಸನಮಗನಾದ, ಅಸೌರಾಜಾ-ಈ ಅರಸು, ಕಲ್ಮಾಷಪಾದಃ-ಕಲ್ಮಷಯುಕ್ತವಾದ ಪಾದಗಳುಳ್ಳವನು, ಸಂವೃತ್ತಃ-ಆದನು, ನೃಪಃ-ಸೌದಾಸನು, ತಥಾ-ಹಾಗೆ, ಕಲ್ಮಾಷಪಾದಃ-ಕಲ್ಮಾಷಪಾದನೆಂದು, ಖ್ಯಾತಶ್ಚೈವ ಪ್ರಸಿದ್ಧನೂ ಆದನು। ಸರಾಜಾ-ಆ ಸೌದಾಸನು, ಪತ್ನ್ಯಾಸಹವೈ-ಪತ್ನಿಯಿಂದ ಯುಕ್ತನಾಗಿಯೆ, ಮುಹುರ್ಮುಹುಃ-ಬಾರಿಬಾರಿಗೂ, ಪ್ರಣಿಪತ್ಯ-ನಮಸ್ಕರಿಸಿ, ಬ್ರಹ್ಮರೂಪಿಣಾ-ಬ್ರಹ್ಮಸ್ವರೂಪಿಯಾದ ನಿನ್ನಿಂದ, ಯತ್-ಯಾವಭೋಜನವು, ಉಕ್ತಂ-ಹೇಳಲ್ಪಟ್ಟಿತೋ, ತದ್ದತ್ತಮಿತಿ-ಅದು ಕೊಡಲ್ಪಟ್ಟಿತೆಂದು, ಪುನಃ-ಮತ್ತು, ವಸಿಷ್ಠಂ-ವಸಿಷ್ಠನಂಕುರಿತು, ಪ್ರೋವಾಚ-ಹೇಳಿದನು ॥೧೯॥ ಪಾರ್ಥಿವೇಂದ್ರಸ್ಯ-ಆ ಸೌದಾಸರಾಜನ, ತತ್-ಆ ವಚನವನ್ನು, ಶ್ರುತ್ವಾ-ಕೇಳಿ, ರಕ್ಷಸಾ-ರಾಕ್ಷಸನಿಂದ, ವಿಕೃತಂ-ವಿಕಾರವಾಗಿ ಮಾಡಲ್ಪಟ್ಟ, ತತ್-ಆ ಭೋಜನವನ್ನು, ಜ್ಞಾತ್ವಾ-ತಿಳಿದು, ವಸಿಷ್ಠಃ-ವಸಿಷ್ಠಋಷಿಯು, ರಾಜಾನಂ-ಅರಸನನ್ನು ಕುರಿತು, ಪುನಃ-ಮತ್ತು, ಪ್ರೋವಾಚ-ಹೇಳಿದನು ॥೨೦॥ ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ರೋಷಪರೀತೇನ-ರೋಷಾಕ್ರಾಂತನಾದ, ಮಯಾ-ನನ್ನಿಂದ, ಯದಿದಂವಚಃ-ಯಾವಈಮಾತು, ವ್ಯಾಹೃತಂ-ಹೇಳಲ್ಪಟ್ಟಿತೋ, ಏತತ್-ಈಶಾಪ ವಚನವು, ವೃಥಾ-ವ್ಯರ್ಥವಾಗಿ, ಕರ್ತುಂ-ಮಾಡುವದಕ್ಕೆ, ನಶಕ್ಯಂ-ಆಗಲಾರದು, ತೇ-ನಿನಗೆ, ವರಂಚ-ಶಾಪವಿಮೋಚನ ರೂಪವಾದವರವನ್ನೂ, ಪ್ರದಾಸ್ಯಾಮಿ-ಕೊಡುವೆನು, ಅಸ್ಯಶಾಪಸ್ಯ-ಈ ಶಾಪಕ್ಕೆ, ದ್ವಾದಶವರ್ಷಾಣಿ-ಹನ್ನೆರಡುವರುಷಗಳು, ಕಾಲಃ-ಅವಧಿಕಾಲವು, ಮತ್ಪ್ರಸಾದಾತ್-ನನ್ನ ಅನುಗ್ರಹದದೆಸೆಯಿಂದ, ಭವಿಷ್ಯತಿ-ಆಗುವದು, ಹೆ ರಾಜೇಂದ್ರ-ಎಲೈ ರಾಜಶ್ರೇಷ್ಠನೆ, ಅತೀತಂ-ಗತವಾದದ್ದನ್ನು, ನಸ್ಮರಿಷ್ಯಸಿ-ಸ್ಮರಿಸಬೇಡ ॥೨೨॥ ಏವಂ-ಈ ಪರಿಯಾಗಿ, ಅರಿಮರ್ದನಃ-ಶತ್ರುಸಂಹಾರಕನಾದ, ಸರಾಜಾ-ಆ ಕಲ್ಮಾಷಪಾದರಾಜನು, ತಂಶಾಪಂ-ಆ ಶಾಪವನ್ನು, ಉಪಭುಜ್ಯ-ಅನುಭವಿಸಿ, ಪುನಃ-ಮತ್ತು, ರಾಜ್ಯಂ-ರಾಜ್ಯವನ್ನು, ಪ್ರತಿಲೇಭೆ-ಹೊಂದಿದನು, ಪ್ರಜಾಶ್ಚೈವ-ಪ್ರಜೆಗಳನ್ನೂ ಸಹ, ಅನ್ವಪಾಲಯತ್ - ಪರಿಪಾಲಿಸಿದನು ॥೨೩॥ ಹೆ ರಾಘವ-ಎಲೈ ಶತ್ರುಘ್ನನೆ, ಯತ್-ಯಾವದನ್ನು, ಮಾಂ-ನನ್ನನ್ನು, ಪೃಚ್ಛಸಿ-ಕೇಳಿದೆಯೋ, ತಸ್ಯಕಲ್ಮಾಷಪಾದಸ್ಯ-ಆಕ

---

ಆ ವೇಳೆಯಲ್ಲಿ ಅಡ್ಡವಾಗಿ ಬಂದು ಎಲೈ ರಾಜನೇ! ನಮಗೆ ಉಪದೇಶವಂ ಮಾಡುವದರಲ್ಲಿ ಪ್ರಭುವಾಗಿಯೂ ಪೂಜ್ಯನಾಗಿಯೂ, ದೇವತಾಸದೃಶನಾಗಿಯೂ, ಪುರೋಹಿತನಾಗಿಯೂ ಇರುವ ವಸಿಷ್ಠ ಮಹಾಮುನಿಗೆ ಪ್ರತಿಯಾಗಿ ಶಾಪವನ್ನೀಯಲು, ನೀನು ಅರ್ಹನಲ್ಲವೆಂಬದಾಗಿ ಹೇಳಲು, ಆ ಅರಸು ಆ ಮಾತಂ ಕೇಳಿ, ಕ್ರೋಧ ಪ್ರಚುರವಾಗಿ ಸಗೆಯರಂ ಹೋಗಲಾಡಿಸುವದರಲ್ಲಿ ಸಮರ್ಥವಾದ ತೇಜಸ್ಸಿನಿಂದಲೂ, ಬಲದಿಂದಲೂ ಯುಕ್ತವಾದದ್ದಾಗಿರುವ ಆ ಉದಕವಂ ತನ್ನ ಪಾದಗಳ ಮೇಲೆ ಬಿಟ್ಟುಕೊಂಡು ಅದರಿಂದ ಕಾಲುಗಳಂ ತೊಳದುಕೊಂಡನು. ಅದರಿಂದ ಆರಾಜಪಾದಗಳುಕೊಳತು ಹೋಯಿತು. ಆಹೇತುವಿನಿಂದ ಅದುಮೊದಲುಗೊಂಡು ಆ ನರನಾಥನಿಗೆಕಲ್ಮಾಷಪಾದನೆಂದು ಹೆಸರುಂಟಾಯಿತು ॥೧೮॥ ಆ ಮಿತ್ರಸಹನೆಂಬ ರಾಜನು ಪತ್ನಿಯಿಂದೊಡಗೂಡಿದವನಾಗಿ ಬಾರಿಬಾರಿಗೂ ನಮಸ್ಕಾರವಂಮಾಡಿ, ಎಲೈ ಪೂಜ್ಯನೇ! ಬ್ರಹ್ಮಸ್ವರೂಪನಾದ ನಿನ್ನಿಂದಯೇನು ಹೇಳಲ್ಪಟ್ಟಿತೋ ಅದೇ ನನ್ನಿಂದ ಸಿದ್ಧಗೊಳಿಸಲ್ಪಟ್ಟಿತೆಅಂದರೆ, (ತಮ್ಮ ಆಜ್ಞೆಯ ವಿನಹಾ ನಾನು ಮಾಡಿಸಲಿಲ್ಲವೆಂದು ನುಡಿದವನಾಗಲು) ಆ ವಸಿಷ್ಠ ಮಹಾಮುನಿಯು ರಕ್ಕಸನಿಂದ ಮಾಡಲ್ಪಟ್ಟ ಆ ವಿಕಾರವನ್ನು ಧ್ಯಾನದೃಷ್ಟಿಯಿಂದ ಕಂಡಂಥಾವನಾಗಿ ರಾಜನಂ ಕುರಿತು ಮತ್ತಿಂತೆಂದನು ॥೨೦॥ ಎಲೈ ಅರಸೆ! ಕ್ರೋಧಾಕ್ರಾಂತನಾದ ನನ್ನಿಂದ ಯಾವಮಾತು ಹೇಳಲ್ಪಟ್ಟಿತೋ, ಅದು ಅನ್ಯಥಾ ಆಗಲಾರದು, ನಿನಗೆ ಸಂತುಷ್ಟನಾಗಿ ಆಶಾಪಕ್ಕೆ ಅವಧಿರೂಪವಾಗಿ ವರವನ್ನೀಯುವೆನು, ಕೇಳು, ಅದೇನಂದರೆ, ಈ ಶಾಪಕ್ಕೆ ಹನ್ನೆರಡುವರುಷಗಳಕಾಲವು ಮಿತಿಯುಂಮಾಡುವೆನು, ಕಳದುಹೋದದ್ದನ್ನು ಕುರಿತು ಚಿಂತಿಸಬೇಡೆಂದು ನುಡಿದವನಾದನು॥ ಕೇಳೆಲೈ ಶತ್ರುಘ್ನನೆ! ಶತ್ರುಸಂಹಾರಕನಾದ ಮಿತ್ರಸಹನೆಂಬ ನರನಾಥನು ಈಪರಿಯಾಗಿ ಆ ಶಾಪವನ್ನು ಅನುಭವಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ಯಯಜ್ಞಸ್ಯಾಯತನಂಶುಭಂ । ಆಶ್ರಮಸ್ಯಸಮೀಪೇಸ್ಯಯನ್ಮಾಂಪೃಚ್ಛಸಿರಾಘವ ॥೩೪॥ ತಸ್ಯತಾಂಪಾರ್ಥಿವೇಂದ್ರಸ್ಯಕಥಾಂಶ್ರುತ್ವಾ ಸುದಾರುಣಾಂ । ವಿವೇಶಪರ್ಣಶಾಲಾಂಸಃಮಹರ್ಷಿಮಭಿವಾದ್ಯಚ ... ... ॥೩೫॥

—...*ಇತಿ ಶ್ರೀಮದುತ್ತರರಾಮಾಯಣೇ ಪಂಚಷಷ್ಟಿತಮ ಸ್ಸರ್ಗಃ*...—

* ಯಾಮೇವರಾತ್ರಿಂಶತ್ರುಘ್ನಃಪರ್ಣಶಾಲಾಂಸಮಾವಿಶತ । ತಾಮೇವರಾತ್ರಿಂಸಾಸೀತಾಪ್ರಸೂತಾದಾರಕದ್ವಯಂ॥ ತತೋರ್ಧರಾತ್ರಸಮಯೇಬಾಲಕಾಮುನಿದಾರಕಾಃ । ವಾಲ್ಮೀಕೇಃಪ್ರಿಯಮಾಚಖ್ಯುಸ್ಸೀತಾಯಾಃಪ್ರಸವಂಶುಭಂ ॥೨॥ ಭಗವನ್ರಾಮಪತ್ನೀಸಾಪ್ರಸೂತಾದಾರಕದ್ವಯಂ। ತಸ್ಯರಕ್ಷಾಂಮಹಾತೇಜಃಕುರುಭೂತವಿನಾಶಿನೀಂ ॥೩॥ ತೇಷಾಂತದ್ವಚನಂಶ್ರುತ್ವಾಮಹಾಹರ್ಷಮುಪಾಗಮತ ॥೪॥ ಬಾಲೌಚಂದ್ರಪ್ರತೀಕಾಶೌದೇವಪುತ್ರೋಪಮೌಜಸಾ । ಜಗಾಮತತ್ರಹೃಷ್ಟಾತ್ಮಾದದರ್ಶಚಕುಮಾರಕೌ ॥೫॥ ಭೂತಘ್ನೀಂಚಾಕರೋತ್ತಾಭ್ಯಾಂರಕ್ಷಾಂರಕ್ಷೋವಿನಾಶಿನೀಂ । ಕುಶಮು

---

ಲ್ಮಾಷಪಾದರಾಜನ, ಯಜ್ಞಸ್ಯ–ಯಾಗದ, ಶುಭಂ–ಶುಭಕರವಾದ, ಆಯತನಂ–ಶಾಲೆಯು, ಅಸ್ಯಆಶ್ರಮಸ್ಯ–ಈ ಆಶ್ರಮಕ್ಕೆ, ಸಮೀಪೇ– ಸಮೀಪದಲ್ಲಿ, (ವರ್ತತೇ–ಇರುವದು) ॥೩೪॥ ಸಃ–ಆ ಶತ್ರುಘ್ನನು, ತಸ್ಯಪಾರ್ಥಿವೇಂದ್ರಸ್ಯ–ಆ ರಾಜಶ್ರೇಷ್ಠನ, ಸುದಾರುಣಾಂ–ಬಹಳ ಭಯಂಕರವಾದ, ತಾಂಕಥಾಂ–ಆ ಕಥೆಯನ್ನು, ಶ್ರುತ್ವಾ–ಕೇಳಿ, ಮಹರ್ಷಿಂ–ವಾಲ್ಮೀಕಿ ಮಹಾಮುನಿಯನ್ನು ಕುರಿತು, ಅಭಿವಾದ್ಯ–ನಮಸ್ಕರಿಸಿ, ಪರ್ಣಶಾಲಾಂ– ಪರ್ಣಶಾಲೆಯನ್ನು, ವಿವೇಶ–ಹೊಕ್ಕನು ॥೩೫॥

—...*ಇತಿ ಶ್ರೀಮದುತ್ತರರಾಮಾಯಣೇ ಪಂಚಷಷ್ಟಿತಮಸ್ಸರ್ಗಃ.*...—

ಶತ್ರುಘ್ನಃ–ಶತ್ರುಘ್ನನು, ಯಾಮೇವರಾತ್ರಿಂ–ಯಾವ ರಾತ್ರಿಯಲ್ಲಿ, ಪರ್ಣಶಾಲಾಂ–ಪರ್ಣಶಾಲೆಯನ್ನು, ಸಮಾವಿಶತ್–ಹೊಕ್ಕನೋ, ತಾಂರಾತ್ರಿಮೇವ–ಅದೇರಾತ್ರಿಯಲ್ಲಿಯೆ, ಸಾಸೀತಾ–ಆ ಸೀತಾದೇವಿಯು, ದಾರಕದ್ವಯಂ–ಇಬ್ಬರುಮಕ್ಕಳನ್ನು, ಪ್ರಸೂತಾ–ಹೆತ್ತಳು ॥ ೧ ॥ ತತಃ–ಬಳಿಕ, ಅರ್ಧರಾತ್ರಸಮಯೆ, ಸವರಾತ್ರಿಕಾಲದಲ್ಲಿ, ಬಾಲಕಾಃ–ಹುಡುಗರಾದ, ಮುನಿದಾರಕಾಃ–ಋಷಿಪುತ್ರರು, ವಾಲ್ಮೀಕೇಃ–ವಾಲ್ಮೀಕಿಮುನಿಗೆ, ಪ್ರಿಯಂ–ಇಷ್ಟವಾದ, ಸೀತಾಯಾಃ–ಸೀತಾದೇವಿಯ, ಶುಭಂ–ಶುಭಕರವಾದ, ಪ್ರಸವಂ–ಶಿಶುಜನನವನ್ನು, ಆಚಖ್ಯುಃ–ಹೇಳಿದರು ॥೨॥ಹೆ ಭಗವನ್–ಎಲೈ ಪೂಜ್ಯನೆ, ರಾಮಪತ್ನೀ, ಶ್ರೀರಾಮನಹೆಂಡತಿಯಾದ, ಸಾ–ಆಸೀತಾದೇವಿಯು, ದಾರಕದ್ವಯಂ–ಇಬ್ಬರುಶಿಶುಗಳನ್ನು, ಪ್ರಸೂತಾ–ಹೆತ್ತಳು, ಹೆಮಹಾತೇಜಃ–ಎಲೈ ಅತಿತೇಜಸ್ಸುಳ್ಳವನೆ, ತಸ್ಯ–ಆ ಅವಳಅವಳಮಕ್ಕಳಿಗೆ, ಭೂತವಿನಾಶಿನೀಂ–ಭೂತದೋಷಗಳನ್ನು ಪರಿಹಾರಮಾಡುತ್ತಿರುವ,ರಕ್ಷಾಂ–ರಕ್ಷೆಯನ್ನು,ಕುರು–ಮಾಡು, ॥೩॥ ತೇಷಾಂ–ಆ ಬಾಲಕರ, ತದ್ವಚನಂ–ಆ ಮಾತನ್ನು, ಶ್ರುತ್ವಾ–ಕೇಳಿ, ಮಹಾಹರ್ಷಂ–ಬಹಳಸಂತೋಷವನ್ನು, ಉಪಾಗಮತ್–ಹೊಂದಿದನು॥ ಹೃಷ್ಟಾತ್ಮಾ–ಸಂತೋಷಯುಕ್ತವಾದ ಮನಸ್ಸುಳ್ಳ ವಾಲ್ಮೀಕಿಋಷಿಯು, ತತ್ರ–ಆ ಪರ್ಣಶಾಲೆಯಲ್ಲಿ, ಚಂದ್ರಪ್ರತೀಕಾಶಃ – ಚಂದ್ರಸದೃಶರಾದ, ದೇವಪುತ್ರೋಪಮೌಜಸೌ – ದೇವಪುತ್ರ–ದೇವತಾಮಕ್ಕಳಿಗೆ, ಉಪಮ–ಸಮಾನವಾದ, ಓಜಸಾ–ತೇಜಸ್ಸುಳ್ಳ, ಬಾಲೌ– ಕುಮಾರಕೌ– ಎಳೆಕೂಸುಗಳಂ ಕುರಿತು, ಜಗಾಮ–ತೆರಳಿದನು, ದದರ್ಶಚ– ನೋಡಲೂನೋಡಿದನು ॥೫॥ ಸದ್ವಿಜಸ್ತು–ಆ ವಾಲ್ಮೀಕಿಮುನಿಯಾದರೆ, ಕುಶಮುಷ್ಟಿಂ–ದರ್ಭೆಯಕೊನೆಗಳನ್ನು, ಲವಂಚ–ಬುಡಗಳನ್ನು, ಉಪಾದಾಯ – ತೆಗದುಕೊಂಡು, ತಾಭ್ಯಾಂ–ಆ ಮಕ್ಕಳಿಗೆ, ಭೂತಘ್ನೀಂ–ಶಿಶುಘಾತಕವಾದ ಭೂತಗಳನ್ನು ಹೊಡೆಯುತ್ತಿರುವ, ರಕ್ಷೋವಿನಾಶಿನೀಂ–ರಾಕ್ಷಸಬಾಧಾ ಪರಿಹಾರವಾದ, ರಕ್ಷಾಂ–ರಕ್ಷೆಯನ್ನು,ಅಕರೋತ್–ಮಾಡಿದನು, ವಾಲ್ಮೀಕಿಃ–ವಾಲ್ಮೀಕಿ ಋಷಿಯು, ತಾ

---

ಸಿದಂಥಾವನಾಗಿ ಪುನಹಾತನ್ನ ರಾಜ್ಯವಂಪಡೆದು ಪ್ರಜೆಗಳನೆಲ್ಲ ಪರಿಪಾಲಿಸುತ್ತಿದ್ದನು ॥ ೩೪ ॥ ಈ ಆಶ್ರಮ ಸಮೀಪದಲ್ಲಿರುವ ಯಾವಯಾಗಶಾಲೆಯನ್ನು ನೀನುಕೇಳಿದವನಾದೆಯೋ, ಶುಭಕರವಾದ ಆಶಾಲೆಯುಕಲ್ಮಾಷಪಾದನೆಂಬ ರಾಜನದೆಂದು ನಿರೂಪಿಸಲೂ ಆ ಶತ್ರುಘ್ನನು ಮಹಾದಾರುಣವಾದ ಆಕಥೆಯುಂಕೇಳಿ ಆ ವಾಲ್ಮೀಕಿಮಹಾಮುನಿಗೆ ವಂದನೆಯಂಗೈದು ಪರ್ಣಶಾಲೆಯಂ ಹೊಕ್ಕನು ... ... ॥೩೫ ॥

ಉತ್ತರರಾಮಾಯಣದಲ್ಲಿನ ೬೫ನೇಯ ಸರ್ಗಂಮುಗಿದುದು.

ಯಾವರಾತ್ರಿಯೊಳು ಶತ್ರುಘ್ನನು ವಾಲ್ಮೀಕಿ ಋಷಿಯ ಆಶ್ರಮ ಪ್ರವೇಶವಂಗೈದನೋ, ಆರಾತ್ರಿಯಲ್ಲಿ ಸೀತಾದೇವಿಯು ಅವಳಿಜವಳಿ ಮಕ್ಕಳಂಹೆತ್ತಂಥಾವಳಾದಳು ॥೧॥ ಬಳಿಕ ಅರ್ಧರಾತ್ರಿವೇಳೆಯೊಳು ಮುನಿಬಾಲಕರು, ವಾಲ್ಮೀಕಿಮಹಾಮುನಿಗೆ ಬಹಳಪ್ರೀತಿದಾಯಕವಾದ ಈ ಸೀತಾದೇವಿಯ ಪ್ರಸುವ ವಾರ್ತೆಯಂ ಪೇಳುವರದೆಂತೆನೆ ॥೨॥ ಎಲೈ ಪೂಜ್ಯನೆ ಶ್ರೀರಾಮನಪತ್ನಿಯಾದ ಆಸೀತಾದೇವಿಯು ಇಬ್ಬರುಕುಮಾರರಂ ಹಡದಿರುವಳು ಆಶಿಶುಗಳಿಗೆಭೂತಪರಿಹಾರಾರ್ಥವಾಗಿ ರಕ್ಷೆಯಂಗೈಯುವಂಥಾವ ನಾಗೆಂದು ನುಡಿಯಲೂ ವಾಲ್ಮೀಕಿ ಮಹರ್ಷಿಯು ಆ ಬಾಲಕರವಾಕ್ಯಂ ಕೇಳಿ ಮಹಾಹರ್ಷವನ್ನೈದಿ ತೇಜಸ್ಸಿನಿಂದದೇವತಾ ಪುತ್ರರಿಗೆ ಸಮಾನರಾಗಿಯೂ ಚಂದಿರನತೆರದಿ ಆ ಹ್ಲಾದವನ್ನುಂಟುಮಾಡುವರಾಗಿಯೂ ಇರುವ ಆ ಬಾಲಕರೀರ್ವರೂ ಸಂಜನಿಸಿರುವ ಪ್ರದೇಶಕ್ಕೆಗಮಿಸಿ ಆಕುಮಾರರಂಕಂಡು ಅವರೀರ್ವರಿಗೆ ಭೂತವಿನಾಶಕವಾಗಿಯೂ ರಾಕ್ಷಸಪರಿಹಾರಕ ವಾಗಿಯೂ ಇರುವಂತೆ ರಕ್ಷೋಘ್ನ ಮಂತ್ರಗಳಿಂದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಷ್ಟಿಮುಪಾದಾಯಲವಂಚೈವಸತದ್ದ್ವಿಜಃ । ವಾಲ್ಮೀಕಿಃಪ್ರದದೌತಾಭ್ಯಾಂರಕ್ಷಾಂಭೂತವಿನಾಶಿನೀಂ ॥೬॥ ಯಸ್ತಯೋಃ ಪೂರ್ವಜೋಹ್ಯಾಸೀತ್ಸಕುಶೈರ್ಮಂತ್ರಸಂಸ್ಕೃತೈಃ । ನಿರ್ಮಾರ್ಜನೀಯಸ್ತುಭವೇತ್ಕುಶಇತ್ಯಸ್ಯನಾಮತತ್ ॥೭॥ ಯಶ್ಚಾಪರೋಭವೇತ್ತಾಭ್ಯಾಂಲವೇನಸಸಮಾಹಿತಃ । ನಿರ್ಮಾರ್ಜನೀಯೋವೃದ್ಧಾಭಿಃಲವಶ್ಚೇತ್ಯೇವನಾಮತಃ ॥ ೮ ॥ ಏವಂಕುಶಲವೌನಾಮ್ನಾತಾವುಭೌಯಮಜಾತಕೌ । ಮತ್ಕೃತಾಭ್ಯಾಂಚನಾಮಭ್ಯಾಂಖ್ಯಾತಿಯುಕ್ತೌಭವಿಷ್ಯತಃ ॥೯॥ ಇತ್ಯುಕ್ತ್ವಾ ತಾಸ್ಸಮುನಿಶ್ರೇಷ್ಠಃಮುನಿಪತ್ನೀಸ್ಸಮಾಹಿತಃ । ವಾಲ್ಮೀಕಿಃಪ್ರದದೌತಾಭ್ಯಾಂರಕ್ಷಾಂಭೂತವಿನಾಶಿನೀಮ್ ॥೧೦॥ ತಾಂರಕ್ಷಾಂಜಗೃಹುಸ್ತಾಶ್ಚಮುನಿಹಸ್ತಾತ್ಸಮಾಹಿತಾಃ । ಅಕುರ್ವಂಶ್ಚತಥಾರಕ್ಷಾಂತಯೋರ್ವಿಗತಕಲ್ಮಷಾಃ ॥೧೧॥ ತಥಾತಾಂ ಕ್ರಿಯಮಾಣಾಂಚರಕ್ಷಾಂಜನ್ಮನಾಮಚ । ಸಂಕೀರ್ತನಂಚರಾಮಸ್ಯಸೀತಾಯಾಃಪ್ರಸವಂಶುಭಂ । ಅರ್ಧರಾತ್ರೇತುಶತ್ರುಘ್ನಃಶುಶ್ರಾವಸುಮಹತ್ಪ್ರಿಯಮ್ ॥೧೨॥ ಪರ್ಣಶಾಲಾಂತತೋಗತ್ವಾಮಾತರ್ದಿಷ್ಟ್ಯೇತಿಸೋಽಬ್ರವೀತ್ ॥೧೩॥ ತಥಾತಸ್ಯ

---

ಭ್ಯಾಂ-ಆ ಶಿಶುಗಳಿಗೆ, ಭೂತವಿನಾಶಿನೀಂ-ಭೂತಪರಿಹಾರಕವಾದ, ರಕ್ಷಾಂ-ರಕ್ಷೆಯನ್ನು, ಪ್ರದದೌ-ಕೊಟ್ಟನು ॥ ೬ ॥ ತಯೋಃ-ಇಬ್ಬರಲ್ಲಿ ಪೂರ್ವಜಃ-ಮೊದಲುಹುಟ್ಟಿದ, ಯಃ-ಯಾವಬಾಲಕನು, ಮಂತ್ರಸಂಸ್ಕೃತೈಃ-ಮಂತ್ರಗಳಿಂದ ಸಂಸ್ಕಾರಮಾಡಲ್ಪಟ್ಟ, ಕುಶೈಃ-ದರ್ಭೆಗಳಿಂದ, ನಿರ್ಮಾರ್ಜನೀಯಃ-ಮಾರ್ಜನಾರ್ಹನು, ಆಸೀತ್-ಆದನೊ, ಸಃ-ಅವನು, ಕುಶಇತಿ-ಕುಶನೆಂದು, ಭವೇತ್-ಆಗುವನು, ಅಸ್ಯ-ಇವನಿಗೆ, ತತ್-ಅದೆ, ನಾಮ-ನಾಮಧೇಯವು, ॥ ೭ ॥ ತಾಭ್ಯಾಂ-ಅವರಿಬರಲ್ಲಿ, ಅಪರಃ-ಮತ್ತೊಬ್ಬನಾದ, ಯಃ-ಯಾವಶಿಶುವು, ಲವೇನ-ಕುಶಮೂಲಗಳಿಂದ, ಸಮಾಹಿತಃ-ಅಭಿಮಂತ್ರಿಸಲ್ಪಟ್ಟವನಾಗಿ, ವೃದ್ಧಾಭಿಃ-ಮುದಿಕಿಯವರಿಂದ, ನಿರ್ಮಾರ್ಜನೀಯಃ-ಮಾರ್ಜನಾರ್ಹನು, ಭವೇತ್-ಆಗುವನೊ, ಸಃ-ಅವನು, ನಾಮತಃ - ಹೆಸರಿಂದ, ಲವಇತ್ಯೇವ-ಲವನೆಂಬವನೆ, ಭವೇತ್-ಆಗುವನು, ॥ ೮ ॥ ಏವಂ-ಈ ಪರಿಯಾಗಿ, ನಾಮ್ನಾ-ಹೆಸರಿನಿಂದ, ಕುಶಲವೌ-ಕುಶಲವರೆಂದು, ಮತ್ಕೃತಾಭ್ಯಾಂ-ನನ್ನಿಂದಮಾಡಲ್ಪಟ್ಟ ನಾಮಭ್ಯಾಂ-ಹೆಸರುಗಳಿಂದ, ಯಮಜಾತಕೌ-ಅವಳಿಜವಳಿಯಾಗಿ, ಹುಟ್ಟಿದವನಾದ, ತಾವುಭೌ-ಆ ಬಾಲಕರಿಬ್ಬರು, ಖ್ಯಾತಿಯುಕ್ತೌ-ಪ್ರಸಿದ್ಧಿಯಿಂದಕೂಡಿದವರು, ಭವಿಷ್ಯತಃ-ಆಗುವರು, ಇತಿ-ಈಪರಿಯಾಗಿ, ಮುನಿಶ್ರೇಷ್ಠಃ-ಋಷಿಶ್ರೇಷ್ಠರಾದ, ಸವಾಲ್ಮೀಕಿಃ-ಆ ವಾಲ್ಮೀಕಿಋಷಿಯು, ಸಮಾಹಿತಃ-ಸಮಾಧಾನಚಿತ್ತನಾಗಿ, ಮುನಿಪತ್ನೀಃ-ಋಷಿಪತ್ನಿಗಳಂಕುರಿತು, ಉಕ್ತ್ವಾ-ಹೇಳಿ, ತಾಭ್ಯಾಂ-ಆ ಕೂಸುಗಳಿಗಿಬ್ಬರಿಗೂ, ಭೂತವಿನಾಶಿನೀಂ-ಭೂತಗಳನ್ನು ಹೊಗಲಾಡಿಸುತ್ತಿರುವ, ರಕ್ಷಾಂ-ರಕ್ಷೆಯನ್ನು, ದದೌ-ಕೊಟ್ಟನು ॥೧೦॥ ತಾಃ-ಆ ಸ್ತ್ರೀಯರುಗಳು,ಸಮಾಹಿತಾಃ-ಸಮಾಧಾನಚಿತ್ತರಾಗಿ, ಮುನಿಹಸ್ತಾತ್-ಋಷಿಹಸ್ತದದೆಸೆಯಿಂದ, ತಾಂರಕ್ಷಾಂ-ಆ ಅಭಿಮಂತ್ರಿತವಾದ ರಕ್ಷಾಬಂಧನವನ್ನು,ಜಗೃಹುಃ-ತೆಗದುಕೊಂಡರು, ತಥಾ-ಹಾಗೆ, ತಯೋಃ-ಅವರಿಬ್ಬರಿಗೂ, ರಕ್ಷಾಂ-ರಕ್ಷೆಯನ್ನೂ, ಅಕುರ್ವಂಶ್ಚ-ಮಾಡಲೂಮಾಡಿದರು ॥೧೧॥ ತಥಾ-ಹಾಗೆ, ಕ್ರಿಯಮಾಣಾಂ-ಮಾಡಲ್ಪಡುತ್ತಿರುವ-ತಾಂರಕ್ಷಾಂ-ಆರಕ್ಷೆಯನ್ನು, ಜನ್ಮ-ಉತ್ಪತ್ತಿಯನ್ನು, ನಾಮಚ-ಹೆಸರನ್ನು, ರಾಮಸ್ಯ-ಶ್ರೀರಾಮನ, ಸಂಕೀರ್ತನಂಚ-ಶ್ಲಾಘನೆಯನ್ನು, ಸೀತಾಯಾಃ-ಸೀತಾದೇವಿಯ, ಶುಭಂ-ಶುಭಕರವಾದ, ಸುಮಹತ್ಪ್ರಿಯಂ-ಬಹಳ ಇಷ್ಟವಾದ, ಪ್ರಸವಂ-ಜನನವನ್ನು, ಅರ್ಧರಾತ್ರೇ-ಅರ್ಧರಾತ್ರಕಾಲದಲ್ಲಿ, ಶತ್ರುಘ್ನಃ-ಶತ್ರುಘ್ನನು, ಶುಶ್ರಾವ-ಕೇಳಿದನು, ॥೧೨॥ತತಃ-ಬಳಿಕ, ಸಃ-ಆಶತ್ರುಘ್ನನು, ಪರ್ಣಶಾಲಾಂ-ಪರ್ಣಶಾಲೆಯನ್ನು, ಗತ್ವಾ-ಹೊಂದಿ, ಹೇಮಾತಃ-ಎಲೈತಾಯಿಯೆ, ದಿಷ್ಟ್ಯಾ-ದೈವಾಧೀನದಿಂದ ಪ್ರಸವಿಸಿದೆಂದು, ಅಬ್ರವೀತ್-ನುಡಿದನು, ತಥಾ-ಆಪರಿಯಾಗಿ, ಮುನೇಃ-ವಾಲ್ಮೀಕಿಮುನಿಯ,ಆಶ್ರಮೇ-ಆಶ್ರಮದಲ್ಲಿ, ಮಹಾತ್ಮನಃ-ಮಹಾಮನಸ್ವಿಯಾದ, ತಸ್ಯಶತ್ರುಘ್ನಸ್ಯ-ಆಶತ್ರುಘ್ನನು, ಪ್ರಹೃಷ್ಟಸ್ಯಸತಃ - ಸಂತೋಷಚಿತ್ತನಾಗುತಿರ

---

ಸಾಗ್ರಗಳಾದ ದರ್ಭೆಗಳನ್ನೂ ಮೋಟಕುದರ್ಭೆಗಳನ್ನೂ ಅಭಿಮಂತ್ರಿಸಿ, ಭೂತಪರಿಹಾರಕವಾದ ರಕ್ಷೆಯಂಗೈದು, ಆ ಶಿಶುಗಳಿಗೋಸುಗ ಋಷಿಪತ್ನಿಗಳಕೈಗೆ ಕೊಟ್ಟು ಎಲೈ ಋಷಿಪತ್ನಿಗಳಿರಾ ! ಆಬಾಲಕರೀರ್ವರಲ್ಲಿ ಯಾವನು ಪ್ರಥಮತಃ ಪುಟ್ಟಿದನೋ ಆ ಶಿಶುವಿಗೆ ನೀವುಗಳು ಈಕುಶಗಳಿಂದ ರಕ್ಷೆಯಂ ಗೈದರೆ ಅವನು ಕುಶನೆಂದುಪೆಸರುಳ್ಳವನಾಗುವನು. ಮತ್ತು ಎರಡನೇಸಲ ಯಾವ ಕೂಸುಪುಟ್ಟಿತೊ ಆ ಕೂಸಿಗೆ ಈಲವಗಳಿಂದ ಮಾರ್ಜನೆಯಂ ಗೈಯುವೆಂಥಾವರಾದರೆ ಆ ಶಿಶುವುಲವನೆಂದು ಪ್ರಸಿದ್ಧನಾಗುವನು. ಈಪರಿ ಆ ಬಾಲಕರೀರ್ವರು ನನ್ನಿಂದ ಮಾಡಲ್ಪಟ್ಟಕುಶಲವರೆಂಬ ನಾಮಧೇಯವುಳ್ಳವರಾಗಿ, ಮಹಾಪ್ರಖ್ಯಾತರಾಗುವರೆಂದು ಋಷಿಪತ್ನಿಗಳಂ ಕುರಿತುಪೇಳಿ ಆರಕ್ಷೆಯಂ ಕೊಟ್ಟವನಾಗಲು ಆ ಮುನಿಪತ್ನಿಗಳು ಸಾವಧಾನಚಿತ್ತರಾಗಿ ಆ ಮಹಾಮುನಿಯಹಸ್ತದಿಂದ ಅವುಗಳಂ ತೆಗದುಕೊಂಡು ಪೋಗಿ ಆ ಶಿಶುಗಳಿಗೆ ರಕ್ಷೆಯಂಗೈದರು.॥೧೧॥ಆ ಅರ್ಧರಾತ್ರವೇಳೆಯಲ್ಲಿ ಶತ್ರುಘ್ನನು ಸೀತಾದೇವಿಯ ಪ್ರಸುವವನ್ನೂ ಆ ವಾಲ್ಮೀಕಿಮುನಿಯಿಂದಮಾಡಲ್ಪಟ್ಟ ಆರಕ್ಷೆಯನ್ನೂ, ಆ ಬಾಲಕರ ನಾಮಧೇಯಗಳನ್ನೂ,ಶ್ರೀರಾಮಸಂಕೀರ್ತನೆಯನ್ನೂ, ಇವುಗಳನ್ನೆಲ್ಲಾ ಕೇಳಿದವನಾಗಿ, ಆ ಪರ್ಣಶಾಲೆಗೆಪೋಗಿ, ಎಲೈ ತಾಯಿಯೆ ! ದೈವಾಧೀನದಿಂದ ಇಷ್ಟುಮಾತ್ರವಾಯಿತಲ್ಲ ಎಂಬದಾಗಿ ಪೇಳಿದವನಾದನು ॥೧೩॥ ಆ ಪರಿಯಾಗಿ ಸಂತೋಷವಂಪೊಂದಿದ ಮಹಾತ್ಮನಾದ ಆ ಶತ್ರುಘ್ನನು, ಆ ವಾಲ್ಮೀಕಿಮುನಿಯ ಆಶ್ರಮದಲ್ಲಿರುವಾಗ ಶ್ರಾವಣಮಾಸದ ಸಂಬಂಧವಾದ ವರ್ಷಋತುವು ಕಳೆದಂಥಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರಹೃಷ್ಟಸ್ಯ ಶತ್ರುಘ್ನಸ್ಯ ಮಹಾತ್ಮನಃ। ವ್ಯತೀತಾ ವಾರ್ಷಿಕೀ ರಾತ್ರಿಃ ಶ್ರಾವಣೀ ಲಘುವಿಕ್ರಮಾ ॥೧೪॥ ಪ್ರಭಾತೇ ಸುಮಹಾ ತೇಜಾಃ ಕೃತ್ವಾ ಪೌರ್ವಾಹ್ಣಿಕಂ ಕ್ರಮಮ್ । ಮುನಿಂ ಪ್ರಾಂಜಲಿರಾಮಂತ್ರ್ಯ ಪ್ರಯಾತ ಪಶ್ಚಿಮ್ಮುಖಂ ಕವಿಃ ॥೧೫॥ ಸಗತ್ವಾ ಯಮುನಾತೀರಂ ಸಪ್ತರಾತ್ರೋಷಿತಃ ಪಥಿ । ಋಷೀಣಾಂ ಪುಣ್ಯಕೀರ್ತೀನಾಮಾಶ್ರಮೇ ವಾಸಮಭ್ಯಯಾತ್ ॥೧೬॥ ಸತತ್ರ ಮುನಿಭಿಸ್ಸಾರ್ಧಂ ಭಾರ್ಗವಪ್ರಮುಖೈರ್ನೃಪಃ । ಕಥಾಭಿರ್ಬಹುರೂಪಾಭಿರ್ವಾಸಂ ಚಕ್ರೇ ಮಹಾಯಶಾಃ ॥೧೭॥

...ಇತಿ ಶ್ರೀಮದುತ್ತರ ರಾಮಾಯಣೇ ಷಟ್‌ಷಷ್ಟಿತಮಸ್ಸರ್ಗಃ...—

ಅಥ ರಾತ್ರ್ಯಾಂ ವ್ಯತೀತಾಯಾಂ ಶತ್ರುಘ್ನೋ ಭೃಗುನಂದನಮ್। ಪಪ್ರಚ್ಛ ಚ್ಯವನಂ ವಿಪ್ರಂ ಲವಣಸ್ಯ ಬಲಾಬಲಮ್ ॥೧॥ ಶೂಲಸ್ಯ ಚ ಬಲಂ ಬ್ರಹ್ಮನ್ ಕೇ ಚ ಪೂರ್ವಂ ನಿಪಾತಿತಾಃ । ಅನೇನ ಶೂಲಮುಖ್ಯೇನ ದ್ವಂದ್ವಯುದ್ಧಮುಪಾಗತಾಃ ॥೨॥ ತಸ್ಯ ತದ್ವಚನಂ ಶ್ರುತ್ವಾ ಶತ್ರುಘ್ನಸ್ಯ ಮಹಾತ್ಮನಃ । ಪ್ರತ್ಯುವಾಚ ಮಹಾತೇಜಾಶ್ಚ್ಯವನೋ ರಘುನಂದನಮ್ ॥೩॥ ಅಸಂಖ್ಯೇಯಾನಿ ಕ

ಳೀಕವಾಗಿ, ಶ್ರಾವಣೀ-ಶ್ರಾವಣಮಾಸದಲ್ಲಿನ, ವಾರ್ಷಿಕೀ-ವರ್ಷಋತುಸಂಬಂಧವಾದ, ರಾತ್ರಿಃ-ರಾತ್ರಿಯು, ವ್ಯತೀತಾ-ಕಳೆದುಹೋಯಿತು ॥೧೪॥ ಸುಮಹಾತೇಜಾಃ-ಅತಿತೇಜಸ್ವಿಯಾದ, ಕವಿಃ - ಪಂಡಿತನಾದ ಶತ್ರುಘ್ನಃ-ಶತ್ರುಘ್ನನು, ಪ್ರಭಾತೇ-ಪ್ರಾತಃಕಾಲದಲ್ಲಿ, ಪೌರ್ವಾಹ್ಣಿಕಂ-ಪ್ರಾತಃಕಾಲದಲ್ಲಿ ಮಾಡತಕ್ಕ, ಕ್ರಮಂ-ಸಂಧ್ಯಾವಂದನಾದಿ ಕ್ರಮಗಳನ್ನು, ಕೃತ್ವಾ-ಮಾಡಿ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ಮುನಿಂ-ವಾಲ್ಮೀಕಿಋಷಿಯನ್ನು, ಆಮಂತ್ರ್ಯ-ಕೇಳಿ, ಪಶ್ಚಿಮ್ಮುಖಂ-ಪಶ್ಚಿಮದಿಕ್ಕನ್ನು ಕುರಿತು, ಪ್ರಾಯಾತ್-ಹೊರಟನು ॥೧೫॥ ಸಃ-ಆ ಶತ್ರುಘ್ನನು, ಯಮುನಾತೀರಂ-ಯಮುನಾನದಿಯ ದಡವನ್ನು, ಗತ್ವಾ-ಹೊಂದಿ, ಪಥಿ-ಮಾರ್ಗದಲ್ಲಿ, ಸಪ್ತರಾತ್ರೋಷಿತಃ-ಏಳುರಾತ್ರಿ ಇದ್ದವನಾಗಿ, ಪುಣ್ಯಕೀರ್ತೀನಾಂ-ಪುಣ್ಯಕರವಾದ ಯಶಸ್ಸುಳ್ಳ, ಮುನಿಗಳ, ಆಶ್ರಮೇ-ಆಶ್ರಮದಲ್ಲಿ, ವಾಸಂ-ವಾಸವನ್ನು, ಅಭ್ಯಯಾತ್-ಹೊಂದಿದನು ॥೧೬॥ ಮಹಾಯಶಾಃ-ಬಹು ಕೀರ್ತಿವಂತನಾದ, ಸನೃಪಃ-ಆ ಶತ್ರುಘ್ನನು, ತತ್ರ- ಆಯಮುನಾತೀರದಲ್ಲಿ, ಭಾರ್ಗವಪ್ರಮುಖೈಃ-ಭಾರ್ಗವಚ್ಯವನನೆ ಮೊದಲಾಗಿಉಳ್ಳ, ಮುನಿಭಿಸ್ಸಾರ್ಧಂ-ಋಷಿಗಳಸಂಗಡೆ, ಬಹುರೂಪಾಭಿಃ-ನಾನಾಬಗೆಗಳಾದ, ಕಥಾಭಿಃ-ಕಥೆಗಳಿಂದ ವಾಸಂ-ನಿವಾಸವನ್ನು, ಚಕ್ರೇ-ಮಾಡಿದನು ॥೧೭॥

—...✳ಇತಿ ಶ್ರೀಮದುತ್ತರ ರಾಮಾಯಣೆ ಷಟ್ಷಷ್ಟಿತಮಸ್ಸರ್ಗಃ.✳...—

ಅಥ-ಬಳಿಕ, ರಾತ್ರ್ಯಾಂ-ರಾತ್ರಿಯು, ವ್ಯತೀತಾಯಾಂಸತ್ಯಾಂ-ಕಳೆದು ಹೋಗಲಿಕ್ಕಾಗಿ, ಶತ್ರುಘ್ನಃ- ಶತ್ರುಘ್ನನು, ಭೃಗುನಂದನಂ-ಭೃಗುವಂಶೋತ್ಪನ್ನನಾದ, ಚ್ಯವನಂ-ಚ್ಯವನನೆಂಬ, ವಿಪ್ರಂ-ಬ್ರಾಹ್ಮಣನಂಕುರಿತು, ಲವಣಸ್ಯ-ಲವಣಾಸುರನ, ಬಲಾಬಲಂ-ಪ್ರಾಬಲ್ಯದೌರ್ಬಲ್ಯಗಳನ್ನು, ಪಪ್ರಚ್ಛ-ಕೇಳಿದನು ॥೧॥ ಹೆ ಬ್ರಹ್ಮನ್-ಎಲೈ ಬ್ರಾಹ್ಮಣನೆ, ಪೂರ್ವಂ-ಪೂರ್ವದಲ್ಲಿ, ದ್ವಂದ್ವಯುದ್ಧಂ-ಬಾಹುಯುದ್ಧವನ್ನು, ಉಪಾಗತಾಃ- ಹೊಂದಿದವರಾಗಿ, ಅನೇನಶೂಲಮುಖ್ಯೇನ-ಈ ಶ್ರೇಷ್ಠವಾದ ತ್ರಿಶೂಲದಿಂದ, ಕೇಚ-ಯಾರು,ನಿಪಾತಿತಾಃ-ಬೀಳಿಸಲ್ಪಟ್ಟರು, ತಸ್ಯಶೂಲಸ್ಯ-ಆ ಶೂಲಾಯುಧದ, ಬಲಂಚ-ಸಾಮರ್ಥ್ಯವನ್ನೂ ಸಹ, ಬ್ರೂಹಿ-ಹೇಳು ॥೨॥ ಮಹಾತ್ಮನಃ-ಮಹಾಮನಸ್ವಿಯಾದ, ತಸ್ಯಶತ್ರುಘ್ನಸ್ಯ-ಆಶತ್ರುಘ್ನನ, ತದ್ವಚನಂ-ಮಾತನ್ನು, ಶ್ರುತ್ವಾ-ಕೇಳಿ, ಮಹಾತೇಜಾಃ-ಅತಿ ತೇಜಸ್ವಿಯಾದ, ಚ್ಯವನಃ-ಚ್ಯವನಋಷಿಯು, ರಘುನಂದನಂ-ಶತ್ರುಘ್ನನಂಕುರಿತು, ಪ್ರತ್ಯುವಾಚ- ಉತ್ತರಕೊಟ್ಟನು ॥೩॥ ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ಅಸ್ಯ-ಈ ಲವಣಾಸುರನ, ಯಾನಿಕರ್ಮಾಣಿ-ಯಾವಕೆಲಸಗಳು, ಅಸಂಖ್ಯೆಯಾನಿ-ಅಪಾರವಾಗಿ ಇಧೆಯೋ, ಇಕ್ಷ್ವಾಕುವಂಶಪ್ರಭವಂ-ಇಕ್ಷ್ವಾಕುಮಹಾರಾಜನ ವಂಶದಲ್ಲಿಹುಟ್ಟಿದ, ವೃತ್ತಂ-ಚರಿತ್ರೆಯು, ಯತ್-ಯಾವದೋ, ತತ್-ಅದನ್ನು, ಮ-ನ

ದ್ದಾಯಿತು ॥೧೪॥ ಬಳಿಕ ಪ್ರಾತಃಕಾಲವಾಗಲೂ ಮಹಾ ತೇಜೋವಂತನಾದ ಆ ಶತ್ರುಘ್ನನು ಪ್ರಾತಃಕಾಲೀನವಾದ ಆಹ್ನಿಕವಂಗೈದು, ಅಂಜಲಿಬದ್ಧನಾಗಿ ಮುನಿಯಿಂದ ಅಪ್ಪಣೆಯಂತೆಗೆದುಕೊಂಡು, ಪಶ್ಚಿಮ ಮುಖವಾಗಿತೆರಳಿ, ಏಳುರಾತ್ರಿಗಳು ಮಾರ್ಗದಲ್ಲಿ ಉಳಕೊಂಡಿದ್ದು, ಯಮುನಾತೀರಕ್ಕೆ ಪೋಗಿ, ಅಲ್ಲಿರುವ ಮಹರ್ಷಿಗಳ ಆಶ್ರಮದಲ್ಲಿ ನಿಂತಂಥಾವನಾದನು ॥೧೬॥ ಆ ಎಡದಲ್ಲಿ ಭಾರ್ಗವಚ್ಯವನನೇ ಮೊದಲಾದ ಮಹರ್ಷಿಗಳ ಸಂಗಡಶೇರಿ, ಅನೇಕವಿಧವಾದಪುಣ್ಯಕಥೆಗಳಂ ಕೇಳುತ್ತಾ ನೆಲೆಗೊಂಡಿದ್ದನು ॥೧೭॥

—✳ಉತ್ತರ ರಾಮಾಯಣದಲ್ಲಿ ೬೬ನೆಯ ಸರ್ಗಂ ಮುಗಿದುದು.✳—

ಆರಾತ್ರಿಯು ಕಳೆದು ಹೋಗಲೂ, ಶತ್ರುಘ್ನನು ಭೃಗುಋಷಿಯ ಪುತ್ರನಾದ ಚ್ಯವನನೆಂಬ ಮುನಿಯನ್ನು ಲವಣಾಸುರನ ಬಲಗಳನ್ನು ಶೂಲಾಯುಧದ ಸಾಮರ್ಥ್ಯವಂನೂ ಕೇಳಿದ್ದಲ್ಲದೆ ಪೂರ್ವದಲ್ಲಿ ಲವಣಾಸುರನನ್ನೆದಿರಿಸಿ ಈ ಶೂಲಾಯುಧದಿಂದ ಯಾರು ಯಾರು ಹತರಾದರೊ ಅವರುಗಳನ್ನೆಲ್ಲ ಪೇಳುವಂಥಾವರಾಗಬೇಕೆಂದು ಪೃಚ್ಛಿಸಿದಂಥಾವನಾಗಲೂ, ಆ ವಾಕ್ಯವಂಕೇಳಿ ಚ್ಯವನಮಹಾಮುನಿಯು, ಶತ್ರುಘ್ನನಂಕುರಿತು ಎಲೈಪುರುಷಶ್ರೇಷ್ಠನೆ. ಈ ಲವಣಾಸುರನುಮಾಡಿರುವ ಕಾರ್ಯಗಳು, ಅಸಂಖ್ಯಾತವಾಗಿರುವವು. ಅನ್ನುಗಳಪೈಕಿ ಇಕ್ಷ್ವಾಕುವಂಶದಲ್ಲಿ ಪುಟ್ಟಿದ ಓರ್ವ ಕಥೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಮಾತ್ಮಾ ನಿಬೋಧಾಸ್ಯ ಪುರುಷರ್ಷಭ। ಇಕ್ಷ್ವಾಕುವಂಶಪ್ರಭವಂ ಯದ್ವೃತ್ತಂ ತಚ್ಛೃಣುಷ್ವ ಮೇ ॥೪॥ ಅಯೋಧ್ಯಾಯಾಂ ಪುರಾ ರಾಜಾ ಯುವನಾಶ್ವಸುತೋ ಬಲೀ। ಮಾಂಧಾತೇತಿ ಪ್ರವಿಖ್ಯಾತಸ್ತ್ರಿಷು ಲೋಕೇಷು ವೀರ್ಯವಾನ್ ॥೫॥ ಸ ಕೃತ್ವಾ ಪೃಥಿವೀಂ ಕೃತ್ಸ್ನಾಂ ಶಾಸನೇ ಪೃಥಿವೀಪತಿಃ। ಸುರಲೋಕಮಥೋ ಜೇತುಮುದ್ಯೋಗಮಕರೋನ್ನೃಪಃ ॥೬॥ ಇಂದ್ರಸ್ಯ ಚ ಭಯಂ ತೀವ್ರಂ ಸುರಾಣಾಂ ಚ ಮಹಾತ್ಮನಾಂ। ಮಾಂಧಾತರಿ ಕೃತೋದ್ಯೋಗೇ ದೇವಲೋಕಜಿಗೀಷಯಾ ॥೭॥ ಅರ್ಧಾಸನೇನ ಶಕ್ರಸ್ಯ ರಾಜ್ಯಾರ್ಧೇನ ಚ ಪಾರ್ಥಿವಃ। ವಂದ್ಯಮಾನಸ್ಸುರಗಣೈಃ ಪ್ರತಿಜ್ಞಾಮಧ್ಯರೋಹತ ॥೮॥ ತಸ್ಯ ಪಾಪಮಭಿಪ್ರಾಯಂ ವಿದಿತ್ವಾ ಪಾಕಶಾಸನಃ। ಸಾಂತ್ವಪೂರ್ವಮಿದಂ ವಾಕ್ಯಮುವಾಚ ಯುವನಾಶ್ವಜಂ ॥೯॥ ರಾಜಾ ತ್ವಂ ಮಾನುಷೇ ಲೋಕೇ ನ ತಾವತ್ಪುರುಷರ್ಷಭ। ಅಕೃತ್ವಾ ಪೃಥಿವೀಂ ವಶ್ಯಾಂ ದೇವರಾಜ್ಯಮಿಹೇಚ್ಛಸಿ ॥೧೦॥ ಯದಿ ವೀರ ಸಮಗ್ರಾ ತೇ ಮೇದಿನೀ ನಿಖಿಲಾ ವಶೇ। ದೇವರಾಜ್ಯಂ ಕುರುಷ್ವೇಹ ಸಮೃದ್ಧಬಲವಾಹನಃ ॥೧೧॥ ಇಂದ್ರಮೇವಂ ಬ್ರುವಾಣಂ ತು ಮಾಂಧಾತಾ ವಾಕ್ಯಮಬ್ರವೀತ್। ಕ್ವ ಮೇ ಶಕ್ರ ಪ್ರ

---

ನ್ನ ದೆಸೆಯಿಂದ, ಶೃಣುಷ್ವ–ಕೇಳು, ॥೪॥ ಪುರಾ–ಪೂರ್ವದಲ್ಲಿ, ಅಯೋಧ್ಯಾಯಾಂ – ಅಯೋಧ್ಯಾ ಪಟ್ಟಣದಲ್ಲಿ, ಬಲೀ–ಬಲವಂತನಾದ, ತ್ರಿಷು ಲೋಕೇಷು–ಮೂರು ಲೋಕಗಳಲ್ಲಿಯೂ ಕೂಡ, ಪ್ರವಿಖ್ಯಾತಃ–ಪ್ರಸಿದ್ಧನಾದ, ವೀರ್ಯವಾನ್–ಪರಾಕ್ರಮಶಾಲಿಯಾದ, ಯುವನಾಶ್ವಸುತಃ– ಯುವನಾಶ್ವನೆಂಬವನಿಗೆ ಕುಮಾರನಾದ, ಮಾಂಧಾತೇತಿ–ಮಾಂಧಾತನೆಂದು, ರಾಜಾ–ಅರಸು, ಆಸೀತ್–ಆದನು ॥೫॥ ಪೃಥಿವೀಪತಿಃ–ಭೂಮಿಗೆ ಅಧಿಪತಿಯಾದ, ಸನೃಪಃ–ಆ ಮಾಂಧಾತರಾಜನು, ಕೃತ್ಸ್ನಾಂ–ಸಮಸ್ತವಾದ, ಪೃಥಿವೀಂ–ಭೂಮಿಯನ್ನು, ಶಾಸನೇ–ಆಜ್ಞಾವಚನದಲ್ಲಿ, ಕೃತ್ವಾ–ಮಾಡಿ, ಅಥೋ– ಅನಂತರದಲ್ಲಿ, ಸುರಲೋಕಂ–ದೇವಲೋಕವನ್ನು, ಜೇತುಂ–ಜಯಿಸುವದಕ್ಕೋಸ್ಕರ, ಉದ್ಯೋಗಂ–ಪ್ರಯತ್ನವನ್ನು, ಅಕರೋತ್–ಮಾಡಿದನು ॥೬॥ ಮಾಂಧಾತರಿ–ಮಾಂಧಾತನು, ದೇವಲೋಕಜಿಗೀಷಯಾ–ಸುರಲೋಕವನ್ನು ಜಯಿಸಲಿಚ್ಛೆಯಿಂದ, ಕೃತೋದ್ಯೋಗೇಸತಿ–ಮಾಡಲ್ಪಟ್ಟ ಪ್ರಯತ್ನ ಮುಳ್ಳವನಾಗುತ್ತಿರಲೀಕಾಗಿ, ಮಹಾತ್ಮನಾಂ–ಮಹಾಧೈರ್ಯಶಾಲಿಗಳಾದ, ಸುರಾಣಾಂಚ–ದೇವತೆಗಳಿಗೂ, ಇಂದ್ರಸ್ಯಚ–ಇಂದ್ರನಿಗೂ, ತೀವ್ರಂ–ಮಹತ್ತರವಾದ, ಭಯಂ–ಭೀತಿಯು, ಆಸೀತ್–ಆಯಿತು ॥೭॥ ಪಾರ್ಥಿವಃ–ಅರಸಾದ ಮಾಂಧಾತನು, ಸುರಗಣೈಃ–ದೇವಸಂಘಗಳಿಂದ, ವಂದ್ಯಮಾನಃ–ನಮಸ್ಕರಿಸಲ್ಪಡುತ್ತಿರುವನಾಗಿ, ಶಕ್ರಸ್ಯ–ಇಂದ್ರನ,ಅರ್ಧಾಸನೇನ–ಅರ್ಧಾಸನದಿಂದಲೂ, ರಾಜ್ಯಾರ್ಧೇನ–ತ್ರೈಲೋಕ್ಯದಲ್ಲಿ ಅರ್ಧರಾಜ್ಯವನ್ನು,ಪ್ರತಿಜ್ಞಾಂ–ಪ್ರತಿಜ್ಞೆಯನ್ನು,ಅಧ್ಯರೋಹತ–ಮಾಡಿದನು,॥೮॥ಪಾಕಶಾಸನಃ–ದೇವೇಂದ್ರನು, ತಸ್ಯ–ಆ ರಾಜನ, ಪಾಪಂ–ಪಾಪಕರವಾದ, ಅಭಿಪ್ರಾಯಂ–ತಾತ್ಪರ್ಯವನ್ನು, ವಿದಿತ್ವಾ–ತಿಳಿದು, ಯುವನಾಶ್ವಜಂ–ಯುವನಾಶ್ವನಮಗನಾದ ಮಾಂಧಾತನಂಕುರಿತು, ಸಾಂತ್ವಪೂರ್ವಂ–ಸಮಾಧಾನಪೂರ್ವಕವಾಗಿ, ಇದಂ ವಾಕ್ಯಂ–ಈ ಮಾತನ್ನು, ಉವಾಚ–ಹೇಳಿದನು ॥೯॥ ಹೇ ಪುರುಷರ್ಷಭ–ಎಲೈ ಪುರುಷಶ್ರೇಷ್ಠನೆ, ತ್ವಂ–ನೀನು, ಮಾನುಷೇಲೋಕೇತಾವತ್–ಮನುಷ್ಯಲೋಕದಲ್ಲಿಮಾತ್ರವೆ, ರಾಜಾ–ಅರಸು, ನ–ಅಲ್ಲ, ಪೃಥಿವೀಂ–ಭೂಮಿಯನ್ನು, ವಶ್ಯಾಂ–ಸ್ವಾಧೀನವನ್ನಾಗಿ, ಅಕೃತ್ವಾ–ಮಾಡಿಕೊಳ್ಳದೆ, ಇಹ–ಈಗ,ದೇವರಾಜ್ಯಂ–ದೇವತೆಗಳ ರಾಜ್ಯವನ್ನು, ಇಚ್ಛಸಿ–ಕೋರುವಿ ॥೧೦॥ ಹೆ ವೀರ–ಎಲೈ ಶೂರನೆ, ತೇ–ನಿನಗೆ, ನಿಖಿಲಾ–ಸಮಸ್ತವಾದ, ಸಮಗ್ರಾ–ಸಂಪೂರ್ಣವಾದ, ಮೇದಿನೀ–ಭೂಮಿಯು, ವಶೇಯದಿ–ಸ್ವಾಧೀನದಲ್ಲಿರುವದಾದರೆ, ಸಮೃದ್ಧಬಲವಾಹನಃ–ಸಂಪೂರ್ಣವಾದ ಸೇನೆಯು ವಾಹನಗಳೂಉಳ್ಳವನಾಗಿ, ಇಹ–ಈಗ, ದೇವರಾಜ್ಯಂ–ದೇವತೆಗಳರಾಜ್ಯವನ್ನು, ಕುರುಷ್ವ, ಮಾಡು, ॥೧೧॥ ಮಾಂಧಾತಾ–ಮಾಂಧಾತನು, ಏವಂಬ್ರುವಾಣಂ–ಈಪರಿ ಮಾತಾಡುತ್ತಿರುವ, ಇಂದ್ರಂ–ದೇವೇಂದ್ರನಂಕುರಿತು, ಹೆ ಶಕ್ರ–ಎಲೈ ದೇವೇಂದ್ರನೆ, ಪೃಥಿವೀತಲೇ–ಭೂಮಂಡಲದಲ್ಲಿ, ಶಾಸನಂ–ಆಜ್ಞೆಯು, ಕ್ವಪ್ರತಿಹತಂ–ಎಲ್ಲಿ ಭಗ್ನವಾಗಿದೆ (ಇತಿ–ಇಂತೆಂದು) ವಾಕ್ಯಂ–ಮಾತ

---

ಯಂ ಪೇಳ್ವೆನುಕೇಳು ॥೪॥ ಅದೇನಂದರೆ,— ಅಯೋಧ್ಯಾಪುರದಲ್ಲ ರಾಜನಾದ ಮತ್ತು ಯುವನಾಶ್ವನೆಂಬನರನಾಥನ ಪುತ್ರನಾದ ಮಾಂಧಾತನೆಂದು ಲೋಕತ್ರಯದಲ್ಲಿಯೂ ಪ್ರಖ್ಯಾತನಾದ ಮಹಾವೀರನಿದ್ದನು. ಆ ರಾಜನು ಈ ಭೂಮಂಡಲವನ್ನೆಲ್ಲ ತನ್ನಧೀನವಮಾಡಿಕೊಂಡು, ಸುರಲೋಕವಂ ಗೆಲ್ಲಬೇಕೆಂದು ಇಚ್ಛೈಸಿದವನಾಗಿ ಪ್ರಯತ್ನವಂಮಾಡಿದವನಾಗಲೂ, ದೇವೇಂದ್ರನಿಗೂ ದೇವತೆಗಳಿಗೂ ಸಹಮಹಾಭಯ ಮುಂಟಾಯಿತು ॥೭॥ ಯಾಕಂದರೆ ಆ ಮಾಂಧಾತನು ಇಂದ್ರನ ಅರ್ಧಸಿಂಹಾಸನದಲ್ಲಿ ಕುಳಿತುಕೊಂಡು ತ್ರೈಲೋಕ್ಯರಾಜ್ಯದೊಳು ಅರ್ಧರಾಜ್ಯವನ್ನು ತಾನು ಅನುಭವಿಸುತ್ತಲೂ, ದೇವತೆಗಳಿಂದ ನಮಸ್ಕರಿಸಲ್ಪಡುತ್ತಲೂ ಇರಬೇಕೆಂದು ಪ್ರತಿಜ್ಞೆಯಂ ಮಾಡಿದವನಾದನು ॥೮॥ ಈರಾಜನಿಗೆ ಪುಟ್ಟಿದ ಈ ಪಾಪಾಭಿಪ್ರಾಯವನ್ನರಿತು, ಇಂದ್ರನು ಸಾಮೋಪಾಯದಿಂದ ಆ ಮಾಂಧಾತರಾಜನಂಕುರಿತು, ಎಲೈ ಅರಸೆ! ನೀನು ಮಾನುಷಲೋಕದಲ್ಲಿಮಾತ್ರ ರಾಜನಲ್ಲ, ಭೂಮಂಡವನ್ನೆಲ್ಲ ಆಧೀನವಮಾಡಿಕೊಳ್ಳದೆ ದೇವರಾಜ್ಯವನ್ನಿಚ್ಛೈಸುತ್ತೀ, ಈಧರಾತಲವೆಲ್ಲ ನಿನ್ನಧೀನವಾದರೆ, ಆಗ ಸಂಪೂರ್ಣವಾದ ಸೇನೆಯೂ, ಸಾಮರ್ಥ್ಯವು ವಾಹನಗಳೂ ಉಳ್ಳವನಾಗಿ, ಈ ದೇವರಾಜ್ಯವಂ ಪಾಲಿಸುವಂಥಾವನಾಗೆಂದು ನುಡಿದವನಾಗಲೂ, ಆರಾಜನು ಈ ಪರಿಪೇಳುತ್ತಿರುವ ಇಂದ್ರನಂಕುರಿತು, ಎಲೈ ಇಂದ್ರನೆ ಎನ್ನಾಜ್ಞೆಯು ಧರಾತಲದೊಳು ಎಲ್ಲಿನಡೆಯುವದಿಲ್ಲಪೇಳುವಂಥಾವನಾಗಂ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಿಹತಂಶಾಸನಂಪೃಥಿವೀತಲೇ ॥೧೨॥ ತಮುವಾಚಸಹಸ್ರಾಕ್ಷಂಲವಣೋನಾಮರಾಕ್ಷಸಃ । ಮಧುಪುತ್ರೋಮಧುವನೇನತ್ವಾ
ಜ್ಞಾಂತೇಕುರುತೇನಘ॥೧೩॥ತಚ್ಛ್ರುತ್ವಾವಿಪ್ರಿಯಂವಾಕ್ಯಂಸಹಸ್ರಾಕ್ಷೇಣಭಾಷಿತಂ। ವ್ರೀಳಿತೋವಾಙ್ಮುಖೋಭೂತ್ವಾವ್ಯಾ
ಹರ್ತುಂನಶಶಾಕಹ ॥೧೪॥ ಆಮಂತ್ರ್ಯತುಸಹಸ್ರಾಕ್ಷಂಹ್ರಿಯಾಕಿಂಚಿದವಾಙ್ಮುಖಃ । ಪುನರೇವಾಗಮಚ್ಛೀಘ್ರಮಿಮಂ
ಲೋಕಂನರೇಶ್ವರಃ ॥೧೫॥ ಸಕೃತ್ವಾಹೃದಯೇಮರ್ಷಂಸಭೃತ್ಯಬಲವಾಹನಃ । ಆಜಗಾಮಮಧೋಃಪುತ್ರಂವಶೇಕರ್ತು
ಮರಿಂದಮಃ ॥೧೬॥ ಸಕಾಂಕ್ಷಮಾಣೋಲವಣಂಯುದ್ಧಾಯಪುರುಷರ್ಷಭಃ। ದೂತಂಸಂಪ್ರೇಷಯಾಮಾಸಸಕಾಶಂಲವ
ಣಸ್ಯಹಿ॥೧೭॥ ಸಗತ್ವಾವಿಪ್ರಿಯಾಣ್ಯಾಹಬಹೂನಿಮಧುನಸ್ಸುತಂ । ವದಂತಮೇವಂತಂದೂತಂಭಕ್ಷಯಾಮಾಸರಾಕ್ಷಸಃ॥
ಚಿರಾಯಮಾಣೇದೂತೇತುರಾಜಾಕ್ರೋಧಸಮನ್ವಿತಃ । ಆಹ್ವಯಾಮಾಸತದ್ರಕ್ಷಶ್ಶರವೃಷ್ಟ್ಯಾಸಮಂತತಃ ॥೧೯॥ ಪ್ರಹ
ಸ್ಯಲವಣಶ್ಶೂಲಮೈಶಂಜಗ್ರಾಹಪಾಣಿನಾ । ವಧಾಯಸಾನುಬಂಧಸ್ಯಮುಮೋಚಾಯುಧಮುತ್ತಮಂ ॥೨೦॥ ತಚ್ಛೂ

---

ನ್ನು, ಅಬ್ರವೀತ್-ನುಡಿದನು॥೧೨॥ಹೇಅನಘ-ಎಲೈ ನಿರ್ದೋಷನಾದ ಮಾಂಧಾತನೇ,ಮಧುವನೇ-ಮಧುವನದಲ್ಲಿ,ಮಧುಪುತ್ರಃ-ಮಧ್ವಸುರನಿಗೆಮಗನಾದ,
ಲವಣೋನಾಮ-ಲವಣನೆಂದು ಪ್ರಸಿದ್ಧನಾದ, ರಾಕ್ಷಸಃ-ಅಸುರನು, ತೇ-ನಿನ್ನ, ಆಜ್ಞಾಂ-ಆಜ್ಞೆಯನ್ನು, ನಕುರುತೇ-ಮಾಡುವದಿಲ್ಲ, ಇತಿ-ಇಂತೆಂದು,
ಸಹಸ್ರಾಕ್ಷಃ-ದೇವೇಂದ್ರನು, ತಂ-ಆರಾಜನಂಕುರಿತು, ಉವಾಚ-ಪೇಳಿದನು ॥೧೩॥ ಸಹಸ್ರಾಕ್ಷೇಣ-ದೇವೇಂದ್ರನಿಂದ, ಭಾಷಿತಂ-ಪೇಳಲ್ಪಟ್ಟ, ವಿಪ್ರಿಯಂ-
ಅಹಿತಮಾದ,ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ವ್ರೀಳಿತಃ-ನಾಚಿಕೆಯುಳ್ಳವನಾಗಿ, ಅವಾಙ್ಮುಖಃ-ತಲೆಬೊಗ್ಗಿಸಿದವನು, ಭೂತ್ವಾ - ಆಗಿ,ವ್ಯಾ
ಹರ್ತುಂ-ಮಾತಾಡುವದಕ್ಕೆ, ನಶಶಾಕಹ-ಸಮರ್ಥನಾಗಲಿಲ್ಲ॥೧೪॥ನರೇಶ್ವರಃ-ಅರಸು, ಹ್ರಿಯಾ-ನಾಚಿಕೆಯಿಂದ, ಕಿಂಚಿತ್-ಸ್ವಲ್ಪವಾಗಿ, ಅವಾಙ್ಮುಖಃ-ಬೊ
ಗ್ಗಿದಮುಖವುಳ್ಳವನಾಗಿ, ಸಹಸ್ರಾಕ್ಷಂ-ದೇವೇಂದ್ರನನ್ನು, ಆಮಂತ್ರ್ಯ-ಕೇಳಿ, ಇಮಂಲೋಕಂ-ಈಮನುಷ್ಯಲೋಕವಂಕುರಿತು, ಪುನರೇವ-ಮತ್ತೂನ್ನೆ,
ಶೀಘ್ರಂ-ಜಾಗ್ರತೆಯಾಗಿ, ಆಗಮತ್-ಬಂದನು, ॥೧೫॥ ಅರಿಂದಮಃ-ಶತ್ರುಸಂಹಾರಕನಾದ, ಸಃ-ಆ ಮಾಂಧಾತನು, ಹೃದಯೇ-ಮನದಲ್ಲಿ,ಅಮರ್ಷಂ-ಕೋ
ಪವನ್ನು, ಕೃತ್ವಾ-ಮಾಡಿ, ಸಭೃತ್ಯಬಲವಾಹನಃ-ಸೇವಕರಿಂದಲೂ ಸೈನ್ಯದಿಂದಲೂ, ವಾಹನಗಳಿಂದಲೂ ಒಡಗೂಡಿದವನಾಗಿ, ಮಧೋಃ-ಮಧುವೆಂಬ
ರಾಕ್ಷಸನ,ಪುತ್ರಂ-ಮಗನಾದಲವಣಾಸುರನನ್ನು, ವಶೇ-ಸ್ವಾಧೀನದಲ್ಲಿ, ಕರ್ತುಂ- ಮಾಡಿಕೊಳ್ಳುವದಕ್ಕೋಸ್ಕರ, ಆಜಗಾಮ-ಬಂದನು ॥೧೬॥ ಪುರುಷರ್ಷ
ಭಃ-ಪುರುಷಶ್ರೇಷ್ಠನಾದ, ಸಃ- ಆಮಾಂಧಾತನು, ಲವಣಂ-ಲವಣಾಸುರನನ್ನು,ಯುದ್ಧಾಯ-ಕಾಳಗಕ್ಕೋಸುಗ, ಕಾಂಕ್ಷಮಾಣಃ - ಅಪೇಕ್ಷಿಸಿದವನಾಗಿ,
ಲವಣಸ್ಯ-ಲವಣಾಸುರನ, ಸಕಾಶಂಪ್ರತಿ-ಸಮೀಪವನ್ನು, ಕುರಿತು, ದೂತಂ-ದೂತನನ್ನು, ಸಂಪ್ರೇಷಯಾಮಾಸಹಿ - ಕಳುಹಿಸಿಕೊಟ್ಟನಷ್ಟೆ॥೧೭॥ ಸಃ-
ಆದೂತನು, ಮಧುನಃ-ಮಧ್ವಸುರನ, ಸುತಂ-ಕುಮಾರನಾದ ಲವಣನಂ ಕುರಿತು, ಗತ್ವಾ-ಪೋಗಿ, ಬಹೂನಿ-ಅನೇಕವಾದ, ವಿಪ್ರಿಯಾಣಿ-ವಿರುದ್ಧಮಾತು
ಗಳನ್ನು, ಆಹ-ನುಡಿದನು, ಏವಂ-ಈಪರಿಯಾಗಿ, ವದಂತಂ-ಪೇಳುತ್ತಿರುವ,ತಂದೂತಂ-ಆದೂತನನ್ನು, ರಾಕ್ಷಸಃ-ಲವಣಾಸುರನು,ಭಕ್ಷಯಾಮಾಸ-ಭು
ಜಿಸಿದನು, ॥೧೮॥ದೂತೇತು-ದೂತನಾದರೆ, ಚಿರಾಯಮಾಣೇಸತಿ-ಸಾವಕಾಶಾಶಮಾಡಿದವನಾಗುತಿರಲಿಕಾಗಿ, ರಾಜಾ-ಮಾಂಧಾತರಾಜನು, ಕ್ರೋಧಸಮನ್ವಿ
ತಃ-ಕೋಪದಿಂದಕೂಡಿದವನಾಗಿ, ಶರವೃಷ್ಟ್ಯಾ-ಬಾಣವರ್ಷದಿಂದ, ತದ್ರಕ್ಷಃ-ಆ ಲವಣಾಸುರನನ್ನು, ಸಮಂತತಃ-ಎಲ್ಲಾ ಕಡೆಯಲ್ಲಿ,ಆಹ್ವಯಾಮಾಸ-
ಕರೆದನು ॥೧೯॥ ಲವಣಃ-ಲವಣಾಸುರನು, ಪ್ರಹಸ್ಯ-ನಕ್ಕು, ಐಶಂ-ಈಶ್ವರಸಂಬಂಧವಾದ, ಶೂಲಂ-ತ್ರಿಶೂಲವನ್ನು, ಪಾಣಿನಾ-ಹಸ್ತದಿಂದ, ಜಗ್ರಾಹ-
ತೆಗದುಕೊಂಡನು, ಸಾನುಬಂಧಸ್ಯ-ಪರಿವಾರಸಮೇತನಾದ ಮಾಂಧಾತರಾಜನ, ವಧಾಯ - ಸಂಹಾರಕ್ಕೋಸುಗ, ಉತ್ತಮಂ-ಉತ್ಕೃಷ್ಟವಾದ, ಆಯು
ಧಂ-ತ್ರಿಶೂಲಾಯುಧವನ್ನು, ಮುಮೋಚ-ಬಿಟ್ಟನು॥೨೦॥ತಚ್ಛೂಲಂತು-ಆಶೂಲವಾದರೆ,ದೀಪ್ಯಮಾನಂ-ಹೊಳೆಯುತ್ತಿರುವದಾಗಿ, ಸಭೃತ್ಯಬಲವಾಹನಂ-

---

ದು ನುಡಿದನು ॥೧೨॥ ಬಳಿಕ ಇಂದ್ರನು ಆ ರಾಜನಂಕುರಿತು, ಎಲೈ ಅರಸೆ, ಮಧ್ವಸುರನಪುತ್ರನಾದ ಲವಣನೆಂಬ
ಮಹಾರಾಕ್ಷಸನು ಮಧುವನದಲ್ಲಿಹನು, ಅವನು ನಿನ್ನ ಆಜ್ಞೆಯಂತೆ ನಡೆಯುವದಿಲ್ಲೆಂದು ನುಡಿಯಲೂ, ಈ ಮಾತಂ
ಕೇಳಿ ನಾಚಿಕೆಗೊಂಡು ಅವಾಙ್ಮುಖನಾಗಿ ಮಾತಾಡುವದಕ್ಕೂ ಕೂಡಾ ಶಕ್ತಿಯಿಲ್ಲದವನಾಗಿ, ತೆರಳುವೆನೆಂದು ಇಂದ್ರ
ನಿಗೆ ಪೇಳಿ, ಮತ್ತೂ ಭೂಲೋಕಕ್ಕೆ ಬಂದು, ಸೇನೆಯಿಂದೊಡಗೂಡಿದವನಾಗಿ, ಆ ಮಧುಪುತ್ರನಾದ ಲವಣಾಸುರ
ನಂ ಸ್ವಾಧೀನಮಾಡಿಕೊಳ್ಳುವದಕ್ಕೋಸುಗ, ಆ ರಕ್ಕಸನಂ ಕಾಳಗಕ್ಕೆ ಕರೆಯುವದಕ್ಕೆ, ಅವನಸಮೀಪಕ್ಕೆ ದೂತ
ನಂ ಕಳುಹಿಸಿದಂಥಾವನಾದನು ॥೧೩॥ ಬಳಿಕ ಆದೂತನು ಲವಣಾಸುರನಬಳಿಗೆ ಪೋಗಿ, ಪರುಷವಾದ ಅನೇಕಮಾ
ತುಗಳಂ ನುಡಿದವನಾಗಲೂ, ಆದುಷ್ಟರಕ್ಕಸನು ಈಪರಿ ಪೇಳುತ್ತಿರುವ ಆ ದೂತನಂ ಭುಜಿಸಿದಂಥಾವನಾದನು, ॥೧೪॥
ಆದೂತನು ಬರುವದಕ್ಕೆ, ಸಾವಕಾಶವಾಗಲು, ಆ ಮಾಂಧಾತನು ಕೋಪೋದ್ರೇಕವುಳ್ಳವನಾಗಿ, ಎಲ್ಲಾ ಕಡೆಯಲ್ಲಿ
ಯೂ ಬಾಣವರುಷವಂ ಸುರಿಸುತ್ತಾ ಆ ರಾಕ್ಷಸನನ್ನು ಕಾಳಗಕ್ಕೆ ಕರೆದಂಥಾವನಾಗಲೂ, ಆ ಲವಣಾಸುರನು ನಸುನ
ಗೆಯುಳ್ಳವನಾಗಿ, ಶಿವಸಂಬಂಧವಾದ ಆತ್ರಿಶೂಲವಂಪಾಣಿಯಿಂದ ಪಿಡಿದುಕೊಂಡು ತೂಗಿಬಿಟ್ಟವನಾಗಲೂ, ದಶದಿ
ಕ್ಕುಗಳಲ್ಲಿಯೂ ಹೊಳೆಯುತ್ತಿರುವ ಆ ಉತ್ತಮವಾದ ಶೂಲಾಯುಧವು, ಭೃತ್ಯರಿಂದಲೂ ಸೇನೆಯಿಂದಲೂ ವಾಹನಗ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲಂದೀಪ್ಯಮಾನಂತುಸಭೃತ್ಯಬಲವಾಹನಂ ।ಭಸ್ಮ ಕೃತ್ವಾ ನೃಪಂಭೂಯೋಲವಣಸ್ಯಾಗಮತ್ಕರಂ॥೧॥ಏವಂಸರಾಜಾಬಲವಾನ್ಹತಸ್ಸಬಲವಾಹನಃ । ತಂಶೂಲಿನಂಸಮಾಸಾದ್ಯಮಹಾವೀರ್ಯಮನುತ್ತಮಂ ॥೨॥ ಏತತ್ತೇಸರ್ವಮಾಖ್ಯಾತಂಲವಣಸ್ಯಮಹದ್ಬಲಂ । ಶೂಲಸ್ಯಚಬಲಂಘೋರಮಪ್ರಮೇಯಂನರರ್ಷಭ । ವಿನಾಶಶ್ಚೈವಮಾಂಧಾತುಃಯತ್ನಾರ್ವಾಭವಪಾರ್ಥಿವ ॥೩॥ ಶ್ವಃಪ್ರಭಾತೇತುಲವಣಂವಧಿಷ್ಯತಿನಸಂಶಯಃ । ಅಗೃಹೀತಾಯುಧಂಕ್ಷಿಪ್ರಂಧ್ರುವೋಹಿವಿಜಯಸ್ತವ॥ಲೋಕಾನಾಂಸ್ವಸ್ತಿಚೈವಸ್ಯಾತ್ಕೃತೇಸ್ಮಿನ್ಕರ್ಮಣಿತ್ವಯಾ ... ... ... ॥೪॥

—···✳ಇತಿ ಶ್ರೀಮದುತ್ತರರಾಮಾಯಣೆ ಸಪ್ತಷಷ್ಟಿತಮಸ್ಸರ್ಗ.✳···—

ಕಥಾಂಕಥಯತಾಂತೇಷಾಂಜಯಂಚಾಕಾಂಕ್ಷತಾಂಶುಭಂ । ವ್ಯತೀತಾರಜನೀಶೀಘ್ರಂಶತ್ರುಘ್ನಸ್ಯಮಹಾತ್ಮನಃ॥೧॥ತತಃಪ್ರಭಾತೇವಿಮಲೇತಸ್ಮಿನ್ಕಾಲೇಸರಾಕ್ಷಸಃ ।ನಿರ್ಗತಸ್ತುಪುರಾದ್ವೀರೋಭಕ್ಷಾರ್ಥಂಭೀಮವಿಕ್ರಮಃ॥೨॥ ಏತಸ್ಮಿನ್ನಂ

---

ಸೇವಕರಿಂದಲು ಸೈನ್ಯಗಳಿಂದಲೂ ವಾಹನಗಳಿಂದಲೂಒಡಗೂಡಿದ,ನೃಪಂ-ರಾಜನನ್ನು,ಭಸ್ಮಕೃತ್ವಾ-ಭಸ್ಮವನ್ನಾಗಿಮಾಡಿ,ಭೂಯಃ-ಮತ್ತು,ಲವಣಸ್ಯ-ಲವಣಾಸುರನ, ಕರಂ-ಹಸ್ತವನ್ನು, ಅಗಮತ್-ಹೊಂದಿತು॥೧॥ಏವಂ-ಈಪರಿಯಾಗಿ, ಬಲವಾನ್-ಬಲಿಷ್ಠನಾದ,ಸರಾಜಾ-ಆ ಮಾಂಧಾತೃಮಹಾರಾಜನು,ಸಬಲವಾಹನಃ-ಸೈನ್ಯದಿಂದಲೂ ವಾಹನಗಳಿಂದಲೂ ಸಹಿತನಾಗಿ,ಮಹಾವೀರ್ಯಂ-ಮಹಾಸಾಮರ್ಥ್ಯವುಳ್ಳ,ಅನುತ್ತಮಂ-ಸರ್ವೋತ್ಕೃಷ್ಟನಾದ,ಶೂಲಿನಂ-ತ್ರಿಶೂಲಧಾರಿಯಾದ, ತಂ-ಆ ಲವಣಾಸುರನನ್ನು, ಸಮಾಸಾದ್ಯ-ಹೊಂದಿ, ಹತಃ-ಸತ್ತುಹೋದನು ॥೨॥ ಹೇನರರ್ಷಭ-ಎಲೈಮನುಷ್ಯಶ್ರೇಷ್ಠನೆ, ಹೇಪಾರ್ಥಿವ-ಎಲೈ ಅರಸೆ, ತೇ-ನಿನಗೆ, ಲವಣಸ್ಯ-ಲವಣಾಸುರನ, ಸರ್ವಂ-ಸಮಸ್ತವಾದ, ಮಹತ್-ಬಹಳವಾದ, ಏತದ್ಬಲಂ-ಈಬಲವು, ಶೂಲಸ್ಯ-ತ್ರಿಶೂಲದ, ಘೋರಂ-ಭಯಂಕರವಾದ, ಬಲಂಚ - ಬಲವೂನು, ಆಖ್ಯಾತಂ-ಹೇಳಲ್ಪಟ್ಟಿತು, ಮಾಂಧಾತುಃ-ಮಾಂಧಾತನ, ವಿನಾಶಶ್ಚ-ನಾಶವು, ಆಖ್ಯಾತಃ-ನಿರೂಪಿಸಲ್ಪಟ್ಟಿತು, ಯತ್ನವಾನ್-ಪ್ರಯತ್ನವುಳ್ಳವನು, ಭವ-ಆಗು ॥೩॥ ಶ್ವಃ-ನಾಳೆ, ಪ್ರಭಾತೇ-ಪ್ರಾತಃಕಾಲದಲ್ಲಿ, ಅಗೃಹೀತಾಯುಧಂ-ಗ್ರಹಿಸಲ್ಪಡದಿರುವತ್ರಿಶೂಲವುಳ್ಳ, ಲವಣಂ-ಲವಣಾಸುರನನ್ನು, ಕ್ಷಿಪ್ರಂ-ಜಾಗ್ರತೆಯಾಗಿ, ವಧಿಷ್ಯಸಿ-ಹೊಡೆಯುವಿ-ಸಂಶಯಃ-ಸಂದೇಹವು, ನ-ಇಲ್ಲ, ತವ-ನಿನಗೆ, ಜಯಃ-ಜಯವು, ಧ್ರುವೋಹಿ-ನಿಶ್ಚಯವಷ್ಟೆ, ತ್ವಯಾ-ನಿನ್ನಿಂದ, ಅಸ್ಮಿನ್ಕರ್ಮಣಿ-ಈ ಲವಣಾಸುರನ ಸಂಹಾರರೂಪವಾದಕರ್ಮವು, ಕೃತೇಸತಿ- ಮಾಡಲ್ಪಟ್ಟದ್ದಾಗುತಿರಲೀಕಾಗಿ, ಲೋಕಾನಾಂಚೈವ-ಎಲ್ಲಾಲೋಕಗಳಿಗೂ, ಸ್ವಸ್ತಿ-ಕ್ಷೇಮವು, ಸ್ಯಾತ್-ಆದೀತು ... ॥೪॥

—···✳ಇತಿ ಶ್ರೀಮದುತ್ತರ ರಾಮಾಯಣೆ ಸಪ್ತಷಷ್ಟಿತಮಸ್ಸರ್ಗಃ.✳···—

ಮಹಾತ್ಮನಃ-ಮಹಾಧೈರ್ಯಶಾಲಿಯಾದ, ಶತ್ರುಘ್ನಸ್ಯ- ಶತ್ರುಘ್ನನಿಗೆ, ಶುಭಂ-ಶುಭವನ್ನು, ಜಯಂಚ, ಜಯವನ್ನೂ, ಆಕಾಂಕ್ಷತಾಂ - ಅಪೇಕ್ಷಿಸುತ್ತಿರುವ, ತೇಷಾಂ-ಋಷಿಗಳ, ಕಥಾಂ-ಕಥೆಯನ್ನು, ಕಥಯತಾಂಸತಾಂ-ಹೇಳುತ್ತಿರುವರಾಗುತಿರಲೀಕಾಗಿ, ರಜನೀ-ರಾತ್ರಿಯು, ಶೀಘ್ರಂ-ಜಾಗ್ರತೆಯಾಗಿ, ವ್ಯತೀತಾ-ಕಳದುಹೋಯಿತು ॥೧॥ ತತಃ-ಬಳಿಕ, ಪ್ರಭಾತೇ-ಪ್ರಾತಃಕಾಲವು, ವಿಮಲೇಸತಿ-ನಿರ್ಮಲವಾಗುತಿರಲೀಕಾಗಿ, ತಸ್ಮಿನ್ಕಾಲೇ-ಆಕಾಲಲ್ಲಿ, ಭೀಮಪರಾಕ್ರಮಃ-ಭಯಂಕರವಾದ ಪರಾಕ್ರಮವುಳ್ಳ, ವೀರಃ-ಶೂರನಾದ,ಸರಾಕ್ಷಸಸ್ತು-ಆಲವಣಾಸುರನಾದರೆ,ಭಕ್ಷಾರ್ಥಂ-ಆಹಾರಾರ್ಥವಾಗಿ, ಪುರಾತ್-ಪಟ್ಟಣದದೆಶೆಯಿಂದ, ನಿರ್ಗತಃ-ಹೊರಟುಹೋದನು॥೨॥ಏತಸ್ಮಿನ್ನಂತರೆ, ಈಮಧ್ಯಕಾಲದಲ್ಲಿ, ವೀರಃ-ಶೂರನಾದ, ಶತ್ರುಘ್ನಃ-ಶತ್ರುಘ್ನನು,ಯಮುನಾಂನದೀಂ-ಯಮುನಾನದಿಯನ್ನು, ತೀರ್ತ್ವಾ - ದಾಟಿ, ಧನುಷ್ಪಾಣಿಃ-ಧನುರ್ಧಾರಿಯಾಗಿ, ಮಧುಪುರದ್ವಾರಿ-ಮಧ್ವಸುರನ ಊರು ಬಾಗಿಲಲ್ಲಿ,

---

ಳಿಂದಲೂ ಸಮೇತನಾದ ಆ ಮಾಂಧಾತರಾಜನನ್ನು ಭಸ್ಮೀಭೂತನನ್ನಾಗಿಮಾಡಿ, ಪುನಃ ಆಲವಣಾಸುರನ ಹಸ್ತವನ್ನೈದಿದಂಥಾದ್ದಾಯಿತು ॥೧॥ ಎಲೈ ಪುರುಷಶ್ರೇಷ್ಠನಾದ ಶತ್ರುಘ್ನನೆ, ಮಹಾಬಲವಂತನಾದ ಆ ಮಾಂಧಾತನೆಂಬರಾಜನು, ಆಶೂಲಾಯುಧವಂ ಪೊಂದಿ ಈಪರಿಹತನಾದನು.ಈ ಲವಣಾಸುರನ ಬಲವನ್ನೂ ಶೂಲಾಯುಧದ ಸಾಮರ್ಥ್ಯವನ್ನೂ, ನಿಮ್ಮಪೂರ್ವಿಕನಾದ ಮಾಂಧಾತರಾಜನ ವಿನಾಶವನ್ನೂ, ಇದನ್ನೆಲ್ಲಾ ಪೇಳಿದೆನು, ನೀನು ಯತ್ನಿಸು, ನಾಳೆಪ್ರಾತಃಕಾಲದೊಳು ನಿರಾಯುಧನಾದ ಆ ದುಷ್ಟರಾಕ್ಷಸನಂ ಸಂಹರಿಸುವಿ ಈ ಅರ್ಥದಲ್ಲಿ ಸಂದೇಹವಿಲ್ಲ, ನೀನೀಕಾರ್ಯವಂಗೈದರೆ ಲೋಕಂಗಳೆಲ್ಲ ಕ್ಷೇಮವಾಗಿರುವೆಂದು ಭಾರ್ಗವಚ್ಯವನನೆಂಬ ಮಹಾಮುನಿಯು ಶತ್ರುಘ್ನನಂ ಕುರಿತುಪೇಳಿದವನಾದನು ॥೪॥ —···ಉತ್ತರರಾಮಾಯಣ ದಲ್ಲಿನ ೬೭ನೇ ಸರ್ಗಂ ಮುಗಿದುದು···—

ಮಹಾತ್ಮನಾದ ಶತ್ರುಘ್ನನಿಗೆ ಜಯವನ್ನಿಚ್ಛಿಸುತ್ತಾ, ಆ ಮಹಾಮುನಿಗಳು ಆಪರಿಯಾಗಿ ಕಥೆಗಳಂ ಪೇಳುತ್ತಿರಲೂ, ಪ್ರಾತಃಕಾಲವಾಯಿತು ॥೧॥ ಬಳಿಕ ಸೂರ್ಯೋದಯವಾಗಲೂ, ಮಹಾಪರಾಕ್ರಮಿಯಾದ ಆ ಲವಣಾಸುರನು, ಆ ವೇಳೆಯಲ್ಲಿ ಆಹಾರಾರ್ಥವಾಗಿ, ಪುರದಿಂ ಪೊರಮಟ್ಟನು ॥೨॥ ಇಷ್ಟರೊಳಗಾಗಿ ವೀರನಾದ, ಶತ್ರುಘ್ನನು

CC-0. Bhagavad Ramanuja National Research Institute, Melukote Collection.

ತರೇವೀರಶತ್ರುಘ್ನೋಯಮುನಾಂನದೀಂ। ತೀರ್ತ್ವಾಮಧುಪುರದ್ವಾರಿಧನುಷ್ಪಾಣಿರತಿಷ್ಠತ॥೩॥ ತತೋರ್ಧದಿವಸೇಪ್ರಾಪ್ತೆ ಕ್ರೂರಕರ್ಮಾಸರಾಕ್ಷಸಃ। ಅಗಚ್ಛದ್ಬಹುಸಾಹಸ್ರಂಪ್ರಾಣಿನಾಮುದ್ವಹನ್ಭರಂ॥೪॥ ತತೋದದರ್ಶಶತ್ರುಘ್ನಂಸ್ಥಿತಂದ್ವಾರಿಧೃತಾಯುಧಂ। ತಮುವಾಚತತೋರಕ್ಷಃಕಿಮನೇನಕರಿಷ್ಯಸಿ॥೫॥ ಈದೃಶಾನಾಂಸಹಸ್ರಾಣಿಸಾಯುಧಾನಾಂನರಾಧಮ। ಭಕ್ಷಿತಾನಿಮಯಾರೋಷಾತ್ಕಾಲಮಾಕಾಂಕ್ಷಸೇನುಕಿಂ॥೬॥ ಆಹಾರಶ್ಚಾಪ್ಯಸಂಪೂರ್ಣೋಮಮಾಯಂಪುರುಷಾಧಮ। ಸ್ವಯಂಪ್ರವಿಷ್ಟೋಸಿಮುಖಂಕಥಂಯಾಸ್ಯಸಿದುರ್ಮತೇ॥೭॥ ತಸ್ಯೈವಂಭಾಷಮಾಣಸ್ಯಹಸತಶ್ಚಮುಹುರ್ಮುಹುಃ। ಶತ್ರುಘ್ನೋವೀರ್ಯಸಂಪನ್ನೋರೋಷಾದಶ್ರೂಣ್ಯವರ್ತಯತ್ ॥೮॥ ತಸ್ಯರೋಷಾಭಿಭೂತಸ್ಯಶತ್ರುಘ್ನಸ್ಯಮಹಾತ್ಮನಃ। ತೇಜೋಮಯಾಮರೀಚ್ಯಸ್ತುಸರ್ವಗಾತ್ರೈರ್ವಿನಿರ್ಯಯುಃ॥೯॥ ಉವಾಚಚಸುಸಂಕ್ರುದ್ಧಶ್ಶತ್ರುಘ್ನಸ್ತಂನಿಶಾಚರಂ। ಯೋದ್ಧುಮಿಚ್ಛಾಮಿದುರ್ಬುದ್ಧೇದ್ವಂದ್ವಯುದ್ಧಂತ್ವಯಾಸಹ॥೧೦॥ ಪುತ್ರೋದಶರಥಸ್ಯಾಹಂಭ್ರಾತಾರಾಮಸ್ಯಧೀಮತಃ। ಶತ್ರುಘ್ನೋನಿತ್ಯ

---

ಅತಿಷ್ಠತ-ನಿಂತನು, ॥ ೩ ॥ ತತಃ-ಬಳಿಕ, ಅರ್ಧದಿವಸೆ, ಮಧ್ಯಾಹ್ನವು, ಪ್ರಾಪ್ತೆಸತಿ-ಬಂದದ್ದಾಗುತಿರಲೀಕಾಗಿ,ಕ್ರೂರಕರ್ಮಾ-ಭಯಂಕರ ವ್ಯಾಪಾರವುಳ್ಳ, ಸರಾಕ್ಷಸಃ- ಆಲವಣಾಸುರನು, ಬಹುಸಾಹಸ್ರಂ-ಅನೇಕಸಹಸ್ರ ಸಂಖ್ಯೆಯುಳ್ಳ, ಪ್ರಾಣಿನಾಂ-ಜೀವರಾಶಿಗಳ, ಭರಂ-ಭಾರವನ್ನು, ಉದ್ವಹನ್-ಹೊರುವನಾಗಿ, ಆಗಚ್ಛತ್-ಬಂದನು ॥ ೪ ॥ ತತಃ-ಬಳಿಕ, ದ್ವಾರಿ-ಬಾಗಿಲಲ್ಲಿ, ಸ್ಥಿತಂ-ನಿಂತಿರುವ, ಧೃತಾಯುಧಂ-ಧರಿಸಲ್ಪಟ್ಟ ಆಯುಧವುಳ್ಳ, ಶತ್ರುಘ್ನಂ-ಶತ್ರುಘ್ನನನ್ನು, ದದರ್ಶ-ಕಂಡನು, ತತಃ-ಬಳಿಕ, ರಕ್ಷಃ-ರಾಕ್ಷಸನು, ಅನೇನ-ಈ ನನ್ನಿಂದ, ಕಿಂಕರಿಷ್ಯಸಿ-ಏನುಮಾಡುವಿ, ಹೆ ನರಾಧಮ-ಎಲೈ ನೀಚನಾದ ಮನುಷ್ಯನೆ, ಸಾಯುಧಾನಾಂ-ಆಯುಧ ಸಹಿತರಾದ, ಈ ದೃಶಾನಾಂ-ಇಂಥಾವರ, ಸಹಸ್ರಾಣಿ-ಸಾವಿರಗಳು, ಮಯಾ-ನನ್ನಿಂದ, ರೋಷಾತ್-ಕೋಪದ ದೆಸೆಯಿಂದ, ಭಕ್ಷಿತಾನಿ-ತಿನ್ನಲ್ಪಟ್ಟವು, ಕಿಂ-ಯಾಕೆ, ಕಾಲಂ-ಮರಣಕಾಲವನ್ನು, ಆಕಾಂಕ್ಷಸೇನು-ಅಪೇಕ್ಷಿಸುವಿ, ಇತಿ- ಇಂತೆಂದು, ತಂ-ಆ ಶತ್ರುಘ್ನನಂ ಕುರಿತು, ಉವಾಚ-ಹೇಳಿದನು ॥೬॥ ಹೆ ಪುರುಷಾಧಮ-ಎಲೈ ನೀಚಮನುಷ್ಯನೆ, ಮಮ-ಎನಗೆ, ಅಯಮಾಹಾರಶ್ಚ-ಈ ತಂದಿರುವ ಆ ಹಾರವೂನು, ಅಸಂಪೂರ್ಣಃ-ಸಾಕಾಗಲಾರದು, ಹೆ ದುರ್ಮತೆ-ಎಲೈ ದುರ್ಬುದ್ಧಿಯುಳ್ಳವನೆ, ಸ್ವಯಂ - ನೀನೆ,ಮುಖಂ-ನನ್ನ ಮುಖವನ್ನು, ಕಥಂ-ಹ್ಯಾಗೆ, ಪ್ರವಿಷ್ಟಃ-ಪ್ರವೇಶಿಸಿದವನು, ಅಸಿ-ಆದೆ ॥೭॥ ಏವಂ-ಈಪರಿಯಾಗಿ, ತಸ್ಯ-ಆ ಲವಣಾಸುರನು,ಭಾಷಮಾಣಸ್ಯ-ಮಾತಾಡುತ್ತಿರುವ,ಮುಹುರ್ಮುಹುಃ-ಬಾರಿಬಾರಿಗೂ, ಹಸತಶ್ಚ ಸತಃ-ನಗುತ್ತಿರುವನಾಗುತಿರಲೀಕಾಗಿ,ಅಥವಾ-ಏವಂ-ಈಪರಿಯಾಗಿ, ಭಾಷಮಾಣಸ್ಯ-ಮಾತಾಡುತ್ತಿರುವ, ಮುಹುರ್ಮುಹುಃ-ಬಾರಿಬಾರಿಗು, ಹಸತಶ್ಚ-ನಗುತ್ತಲೂ ಇರುವ, ತಸ್ಯ-ಆ ಲವಣಾಸುರನನ್ನು ಅನಾದರಿಸಿ, ವೀರ್ಯಸಂಪನ್ನಃ- ಸಾಮರ್ಥ್ಯದಿಂದ ಕೂಡಿಕೊಂಡಿರುವ, ಶತ್ರುಘ್ನಃ-ಶತ್ರುಘ್ನನು ರೋಷಾತ್- ಕೋಪದ ದೆಸೆಯಿಂದ, ಅಶ್ರೂಣಿ-ಕಂಬನಿಗಳನ್ನು, ಅವರ್ತಯತ್-ಬಿಟ್ಟನು ॥೮॥ ರೋಷಾಭಿಭೂತಸ್ಯ-ಕ್ರೋಧಾಕ್ರಾಂತನಾದ, ಮಹಾತ್ಮನಃ-ಮಹಾ ಧೈರ್ಯಶಾಲಿಯಾದ, ತಸ್ಯಶತ್ರುಘ್ನಸ್ಯ-ಆ ಶತ್ರುಘ್ನನ-ಸರ್ವಗಾತ್ರೈಃ- ಸರ್ವಾವಯವಗಳಿಂದಲೂ, ತೇಜೋಮಯಾಃ-ತೇಜೋವಿಕಾರಂಗಳಾದ, ಮರೀಚ್ಯಸ್ತು-ಜ್ವಾಲೆಗಳಾದರೆ, ವಿನಿರ್ಯಯುಃ-ಹೊರಟು ಬಂದವು ॥೯॥ ಸುಸಂಕ್ರುದ್ಧಃ- ಬಹಳ ಕೋಪಿಷ್ಟನಾದ, ಶತ್ರುಘ್ನಃ-ಶತ್ರುಘ್ನನು, ತಂನಿಶಾಚರಂ-ಆ ಲವಣಾಸುರನಂ ಕುರಿತು, ಹೆ ದುರ್ಬುದ್ಧೆ-ಎಲೈ ದುಷ್ಟಮತಿಯುಳ್ಳವನೆ,ತ್ವಯಾಸಹ-ನಿನ್ನೊಡನೆ,ದ್ವಂದ್ವಯುದ್ಧಂ-ಬಾಹು ಯುದ್ಧವನ್ನು, ಯೊದ್ಧುಂ-ಮಾಡುವದಕ್ಕೆ, ಇಚ್ಛಾಮಿ-ಅಪೇಕ್ಷಿಸುತ್ತೇನೆ ॥೧೦॥ ಅಹಂ-ನಾನು, ದಶರಥಸ್ಯ-ದಶರಥ ರಾಜನಿಗೆ,

---

ಯಮುನಾನದಿಯುಂದಾಂಟಿ, ಮಧ್ವಸುರನ ಊರುಬಾಗಿಲಲ್ಲಿ ಕೋದಂಡಪಾಣಿಯಾಗಿ ಕಾದುಕೊಂಡಿದ್ದನು ॥೩॥ ಬಳಿಕ ಮಧ್ಯಾನ್ಹ ಕಾಲವಾಗಲೂ, ಕ್ರೂರವ್ಯಾಪಾರಿಯಾದ ಆ ಲವಣಾಸುರನು, ಅನೇಕ ಸಹಸ್ರಜೀವರಾಶಿಗಳಂಕೊಂದು, ಅವುಗಳಂ ಹೊತ್ತುಕೊಂಡು ಬಂದವನಾಗಿ, ದ್ವಾರಪ್ರದೇಶದಲ್ಲಿ ಆಯುಧವಂಧರಿಸಿಗೊಂಡು ನಿಂತಿರುವ ಆ ಶತ್ರುಘ್ನನಂಕಂಡು, ಎಲೈ ಮನುಷ್ಯನೆ ! ಈ ನನ್ನಿಂದ ನಿನಿಗೆ ಏನು ಕಾರ್ಯವಿಧೆ, ಇಂಥಾ ಆಯುಧಪಾಣಿಗಳಾದ ಅನೇಕ ಸಹಸ್ರಮಂದಿಯು, ಮಹಾರೋಷದಿಂದ, ನನ್ನಿಂದ ಭುಜಿಸಲ್ಪಟ್ಟರು, ನೀನು ಮರಣ ಕಾಲವನ್ನಿಚ್ಛಿಸುವಿಯೋ ಏನು ॥೬॥ ಎಲೈ ನೀಚಮನುಷ್ಯನೆ ! ಹಾಗಾದರೆ ನನಿಗೆ ಈಗ ತಂದಿರ್ಪ ಆಹಾರವು ಸಾಲದು, ನೀನೆ ಎನ್ನಮುಖವಂ ಪ್ರವೇಶಿಸಿದೆ, ಇನ್ನು ಹ್ಯಾಗೆ ಪೋಗುವಿ, ಎಂಬದಾಗಿ, ಆ ಲವಣಾಸುರನು ಮಾತಾಡುತ್ತಲೂ ಬಾರಿಬಾರಿಗೂ ನಗುತ್ತಲೂ ಇರುವಂಥಾವನಾಗಲೂ, ಮಹಾವೀರ್ಯಶಾಲಿಯಾದ ಆ ಶತ್ರುಘ್ನನು ರೋಷದಿಂದ ಕಂಬನಿಗಳಂ ಸುರಿಸಿದವನಾದನು ॥೮॥ ಈ ಪರಿಯಾಗಿ ಅತಿಕೋಪವುಳ್ಳ ಆ ಶತ್ರುಘ್ನನದೇಹದಿಂದ ತೇಜೋವಿಕಾರವಾದ ಮರೀಚಿಗಳು ಹೊರಟುಬಂದವು॥೯॥ ಆ ವೇಳೆಯಲ್ಲಿ ಶತ್ರುಘ್ನನು ಆ ರಕ್ಕಸನಂಕುರಿತು, ಎಲೈ ಕೆಟ್ಟಮತಿಯುಳ್ಳವನೆ ! ನಾನು ನಿನ್ನಸಂಗಡ ದ್ವಂದ್ವಯುದ್ಧವಂಗೈಯಬೇಕೆಂದು ಇಚ್ಛಿಸುತ್ತೇನೆ, ನಾನು ದಶರಥಮಹಾರಾಜನಪುತ್ರನು ಮಹಾಬುದ್ಧಿವಳಿಕೆಯುಳ್ಳ ಶ್ರೀರಾಮನ ಅನುಜನು, ನಿರಂತರವು ಶತ್ರುಗಳನ್ನು ಧ್ವಂಸಿಸುತ್ತಿರುವ ಶತ್ರುಘ್ನನೆಂಬವನು, ನಿನ್ನ ಸಂಹಾರಾರ್ಥವಾಗಿ ಬಂದಿಧೇನೆ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶತ್ರುಘ್ನೋ ವಧಕಾಂಕ್ಷೀ ತವಾಗತಃ ॥೧೧॥ ತಸ್ಯ ಮೇ ಯುದ್ಧಕಾಮಸ್ಯ ದ್ವಂದ್ವಯುದ್ಧಂ ಪ್ರದೀಯತಾಂ । ಶತ್ರುಸ್ತ್ವಂ ಸ
ರ್ವಭೂತಾನಾಂ ನ ಮೇ ಜೀವನ್ ಗಮಿಷ್ಯಸಿ ॥೧೨॥ ತಸ್ಮಿಂಸ್ತಥಾ ಬ್ರುವಾಣೇ ತು ರಾಕ್ಷಸಃ ಪ್ರಹಸನ್ನಿವ । ಪ್ರತ್ಯುವಾಚ ನರ
ಶ್ರೇಷ್ಠಂ ದಿಷ್ಟ್ಯಾ ಪ್ರಾಪ್ತೋಸಿ ದುರ್ಮತೇ ॥೧೩॥ ಮಮ ಮಾತೃಷ್ವಸುರ್ಭ್ರಾತಾ ರಾವಣೋ ರಾಕ್ಷಸಾಧಿಪಃ । ಹತೋ ರಾಮೇ
ಣ ದುರ್ಬುದ್ಧೇ ಸ್ತ್ರೀಹೇತೋಃ ಪುರುಷಾಧಮ ॥೧೪॥ ತಚ್ಚ ಸರ್ವಂ ಮಯಾ ಕ್ಷಾಂತಂ ರಾವಣಸ್ಯ ಕುಲಕ್ಷಯಂ । ಅವಜ್ಞಾಂ ಪು
ರತಃ ಕೃತ್ವಾ ಮಯಾ ಯೂಯಂ ವಿಶೇಷತಃ ॥೧೫॥ ನ ಹತಾಶ್ಚ ಹಿ ಮೇ ಸರ್ವೇ ಪರಿಭೂತಾಸ್ತೃಣಂ ಯಥಾ । ಭೂತಾಶ್ಚೈವ ಭವಿ
ಷ್ಯಾಶ್ಚ ಯೂಯಂ ಚ ಪುರುಷಾಧಮಾಃ ॥೧೬॥ ತಸ್ಯ ತೇ ಯುದ್ಧಕಾಮಸ್ಯ ಯುದ್ಧಂ ದಾಸ್ಯಾಮಿ ದುರ್ಮತೇ । ಈಪ್ಸಿತಂ ಯಾದೃಶಂ ತು
ಭ್ಯಂ ಸಜ್ಜಯೇ ಯಾವದಾಯುಧಂ ॥ ತಿಷ್ಠ ತ್ವಂ ಚ ಮುಹೂರ್ತಂ ತು ಯಾವದಾಯುಧಮಾನಯೇ ॥೧೭॥ ತಮುವಾಚಾಥ ಶ
ತ್ರುಘ್ನಃ ಕ್ವ ಮೇ ಜೀವನ್ ಗಮಿಷ್ಯಸಿ । ಶತ್ರುರ್ಯದೃಚ್ಛಯಾ ದೃಷ್ಟೋ ನ ಮೋಕ್ತವ್ಯಃ ಕೃತಾತ್ಮನಾ ॥೧೮॥ ಯೋ ಹಿ ವಿಕ್ಲಬಯಾ

---

ಪುತ್ರಃ-ಮಗನು, ಧೀಮತಃ-ಮತಿವಂತನಾದ, ರಾಮಸ್ಯ-ಶ್ರೀರಾಮನಿಗೆ, ಭ್ರಾತಾ-ತಮ್ಮನಾದ, ನಿತ್ಯಶತ್ರುಘ್ನಃ-ನಿರಂತರವು ಶತ್ರುಸಂಹಾರಕನಾದ ಅ
ಥವಾ ನಿರಂತರವೂ ಶತ್ರುಗಳಾದ ಕಾಮಕ್ರೋಧಾದಿ ಅರಿಷಡ್ವರ್ಗಗಳಂ ಜಯಿಸಿರುವ, ಶತ್ರುಘ್ನಃ-ಶತ್ರುಘ್ನನೆಂಬವನು, ತವ-ನಿನ್ನ, ವಧಕಾಂಕ್ಷೀ-ಸಂ
ಹಾರವನ್ನು ಇಚ್ಛೆಸುತ್ತಿರುವನಾಗಿ, ಆಗತಃ-ಬಂದಿರ್ದೇನೆ ॥೧೧॥ ತಸ್ಯ-ಅಂಥಾ, ಯುದ್ಧಕಾಮಸ್ಯ-ಕಾಳಗವನ್ನು ಇಚ್ಛೆಸುತ್ತಿರುವ, ಮೇ-ನನಗೆ, ದ್ವಂದ್ವ
ಯುದ್ಧಂ-ಬಾಹುಯುದ್ಧವನ್ನು, ಪ್ರದೀಯತಾಂ-ಕೊಡಲ್ಪಡಲಿ, ಸರ್ವಭೂತಾನಾಂ-ಸರ್ವಪ್ರಾಣಿಗಳಿಗೂ, ಶತ್ರುಃ-ವೈರಿಯಾದ, ತ್ವಂ-ನೀನು, ಮೇ-ನ
ನ್ನ ದೆಸೆಯಿಂದ, ಜೀವನ್-ಬದುಕುತ್ತಿರುವನಾಗಿ, ನಗಮಿಷ್ಯಸಿ-ಹೋಗಲಾರೆ ॥೧೨॥ ತಸ್ಮಿನ್-ಆ ಶತ್ರುಘ್ನನು, ತದಾ-ಅಪರಿಯಾಗಿ, ಬ್ರುವಾಣೇಸತಿ-ಹೇಳು
ತ್ತಿರುವನಾಗುತಿರಲಿಕಾಗಿ, ರಾಕ್ಷಸಃ-ಲವಣಾಸುರನು, ಪ್ರಹಸನ್ನಿವ-ನಗುವನಂತಿರುವನಾಗಿ, ಹೆ ದುರ್ಮತೇ-ಎಲೈ ದುರ್ಬುದ್ಧಿಯುಳ್ಳವನೆ, ದಿಷ್ಟ್ಯಾ-ದೈ
ವಾಧೀನದಿಂದ, ಪ್ರಾಪ್ತಃ-ಬಂದವನು, ಅಸಿ-ಆದೆ, ಇತಿ-ಇಂತೆಂದು, ನರಶ್ರೇಷ್ಠಂ-ಶತ್ರುಘ್ನನಂ ಕುರಿತು, ಪ್ರತ್ಯುವಾಚ-ಉತ್ತರಕೊಟ್ಟನು ॥೧೩॥ ಹೆ ಪುರು
ಷಾಧಮ-ಎಲೈ ಪುರುಷನೀಚನೆ, ಹೆ ದುರ್ಬುದ್ಧೇ-ಎಲೈ ಕೆಟ್ಟಮತಿಯುಳ್ಳವನೆ, ಮಮ-ನನಗೆ, ಮಾತೃಷ್ವಸುಃ-ಮಾತೃ-ತಾಯಿಯಾದ ಕುಂಭೀನಸಿಗೆ,
ಸ್ವಸುಃ-ಬಂಧುತ್ವದಿಂದ ತಂಗಿಯಾದ, ಶೂರ್ಪನಖಿಗೆ, ಭ್ರಾತಾ-ಅಣ್ಣನಾದ, ರಾಕ್ಷಸಾಧಿಪಃ-ರಾಕ್ಷಸಾಧಿಪತಿಯಾದ, ರಾವಣಃ-ರಾವಣನು, ರಾಮೇಣ-
ಶ್ರೀರಾಮನಿಂದ, ಸ್ತ್ರೀಹೇತೋಃ-ಸ್ತ್ರೀನಿಮಿತ್ತವಾಗಿ, ಹತಃ-ಹೊಡೆಯಲ್ಪಟ್ಟನು ॥೧೪॥ ಮಯಾ-ನನ್ನಿಂದ, ರಾವಣಸ್ಯ-ರಾವಣಾಸುರನ, ಕುಲಕ್ಷಯಂ-
ಕುಲನಾಶನವನ್ನು, (ಕೃತ್ವಾ-ಕೇಳ) ತತ್ಸರ್ವಂ-ಅದೆಲ್ಲ, ಮಯಾ-ನನ್ನಿಂದ, ಕ್ಷಾಂತಂ-ಸೈರಿಸಲ್ಪಟ್ಟಿತು, ಹೆ ಪುರುಷಾಧಮ-ಎಲೈ ನೀಚಪುರುಷನೆ, ಅ
ವಜ್ಞಾಂ-ಅವಮಾನವನ್ನು, ಪುರತಃ-ಮುಂದುಗಡೆ, ವಿಶೇಷತಃ-ವಿಶೇಷವಾಗಿ, ಕೃತ್ವಾ-ಮಾಡಿ, ಮಯಾ-ನನ್ನಿಂದ, ಸರ್ವೇ-ಸಮಸ್ತರಾದ, ಯೂಯಂ
ಚ-ನೀವುಗಳು ಸಹ, ನಹತಾಃ-ಕೊಡೆಯಲ್ಪಡಲಿಲ್ಲ, ಭೂತಾಶ್ಚ-ಕಳದುಹೋದವರು, ಭವಿಷ್ಯಾಶ್ಚ-ಮುಂದೆ ಹುಟ್ಟತಕ್ಕವರೂ, ಯೂಯಂಚ-ನೀವುಗಳೂಸ
ಹ, ತೃಣಂಯಥಾ-ತೃಣದಂತೆ, ಮಯ-ನನ್ನಿಂದ, ಪರಿಭೂತಾಃ-ತಿರಸ್ಕರಿಸಲ್ಪಟ್ಟವರಾದಿರಿ ॥೧೬॥ ಹೇ ದುರ್ಮತೇ-ಎಲೈ ದುರ್ಬುದ್ಧಿಯುಳ್ಳವನೆ, ತಸ್ಯ-
ಅಂಥಾ, ಯುದ್ಧಕಾಮಸ್ಯ-ಯುದ್ಧವನ್ನು ಅಪೇಕ್ಷಿಸುತ್ತಿರುವ, ತೇ-ನಿನಗೆ, ಯುದ್ಧಂ-ಕಾಳಗವನ್ನು, ದಾಸ್ಯಾಮಿ-ಕೊಡುವೆನು, ಯಾವತ್-ಎಷ್ಟರೊ
ಳಗಾಗಿ, ಆಯುಧಂ-ತ್ರಿಶೂಲವನ್ನು, ಸಜ್ಜಯೇ-ಸಿದ್ಧಗೊಳಿಸುವೆನೋ, ತುಭ್ಯಂ-ನಿನಗೆ, ಈಪ್ಸಿತಂ-ಇಷ್ಟವು-ಯಾದೃಶಂ- ಎಂಥಾದ್ದೋ, ತಥಾ-ಹಾಗೆ,
ಮುಹೂರ್ತಂ-ಸ್ವಲ್ಪಕಾಲವು, ತ್ವಂ-ನೀನು, ತಿಷ್ಠ-ಇರು, ಯಾವತ್-ಎಷ್ಟು ಪರಿಯಂತರಕ್ಕು, ಆಯುಧಂ-ಶೂಲಾಯುಧವನ್ನು, ಆನಯೇ-ತರುತ್ತೇನೆ
ಯೊ ॥೧೭॥ ಅಥ-ಬಳಿಕ, ಶತ್ರುಘ್ನಃ-ಶತ್ರುಘ್ನನು, ತಂ-ಆ ಲವಣಾಸುರನಂ ಕುರಿತು, ಉವಾಚ-ಹೇಳಿದನು, ಮೇ-ನನ್ನ ದೆಸೆಯಿಂದ, ಜೀವನ್-ಬದು
ಕಿದವನಾಗಿ, ಕ್ವಗಮಿಷ್ಯಸಿ-ಎಲ್ಲಿಹೋಗುವಿ, ಯದೃಚ್ಛಯಾ-ಸ್ವೇಚ್ಛೆಯಿಂದ, ದೃಷ್ಟಃ-ಕಾಣಲ್ಪಟ್ಟ, ಶತ್ರುಃ-ಶತ್ರುವು, ಕೃತಾತ್ಮನಾ- ಕೃತಜ್ಞನಿಂದ, ನ
ಮೋಕ್ತವ್ಯಃ-ಬಿಡತಕ್ಕವನಲ್ಲ. ಯೋಹಿ-ಯಾವ ಪುರುಷನಾದರೆ, ವಿಕ್ಲಬಯಾ-ಕಲುಷವಾದ, ಬುದ್ಧ್ಯಾ-ಮತಿಯಿಂದ, ಶತ್ರವೇ-ವೈರಿಗೆ, ಪ್ರಸರಂ-ಗಮ

---

ಆವಕಾರಣ ನನಗೆ ಯುದ್ಧವಂನೀಯುವಂಥಾವನಾಗು, ಸರ್ವಪ್ರಾಣಿಗಳಿಗೂ ಶತ್ರುವಾದ ನೀನು ಎನ್ನದುರಾಗಿ ಬಂದು
ಬದುಕಿ ಎಲ್ಲಿಹೋಗುವಿ, ಎಂಬದಾಗಿ ಆ ಶತ್ರುಘ್ನನು ನುಡಿದವನಾಗಲೂ, ಆ ಲವಣಾಸುರನು, ಶತ್ರುಘ್ನನಂ ಕುರಿತು
ಎಲೈ ದುರ್ಬುದ್ಧಿಯುಳ್ಳವನೆ! ದೇವಾಧೀನದಿಂದ ನೀನು ಬಂದವನಾದೆ ॥೧೩॥ ಎಲೈ ದುರ್ಬುದ್ಧಿಯುಳ್ಳ ನೀಚಮನು
ಷ್ಯನೆ! ನಮ್ಮ ತಾಯಿಯಾದ ಕುಂಭೀನಸಿಗೆ ಬಾಂಧವ್ಯದಿಂದ ತಂಗಿಯಾದ ಶೂರ್ಪನಖಿಗೆ ತಮ್ಮನಾದ, ಮತ್ತೂ ರಾ
ಕ್ಷಸಾಧಿಪತಿಯಾದ ರಾವಣಾಸುರನು ಸ್ತ್ರೀನಿಮಿತ್ತವಾಗಿ, ಶ್ರೀರಾಮನಿಂದ ಹತನಾದನು. ಈ ಸ್ವಲ್ಪವಿಷಯಕ್ಕೆ ನಾನು
ಗಮಿಸುವದು ಅವಮಾನವೆಂದರಿತು ರಾವಣಕುಲಕ್ಷಯವಂ ಸೈರಿಸಿ ನಿಮ್ಮಗಳಂ ಬಿಟ್ಟೆನು, ಕೇಳೆಲೈ ಪುರುಷಾಧಮನೆ!
ಪೂರ್ವದಲ್ಲಿದ್ದವರು, ಈಗಿರುವರು ಮುಂದೆಹುಟ್ಟತಕ್ಕವರು, ನೀವುಗಳು ಇವರೆಲ್ಲ ನನಗೆ ತೃಣಪ್ರಾಯರಾದ ಕಾರಣ
ಇವರಂಕೊಲ್ಲುವದು ಎನಗೊಂದು ವಿಷಯವಲ್ಲ. ಈ ಹೇತುವಿನಿಂದ ನೀವುಗಳು ನನ್ನಿಂದ ಹತರಾಗಲಿಲ್ಲ. ಅಂಥಾ ಅ
ಲಕ್ಷ್ಯಭೂತನಾದ ಮತ್ತೂ ಈಗಕಾಳಗವನ್ನು ಇಚ್ಛಿಸುತ್ತಿರುವ ನಿನಗೆ ಇಷ್ಟವಿದ್ದಂತೆ ಯುದ್ಧವಂ ಕೊಡುವೆನು. ಸ್ವ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬುದ್ಧ್ಯಾಪ್ರಸರಂಶತ್ರವೇದದೌ । ಸಹತೋಮಂದಬುದ್ಧಿತ್ವಾದ್ಯಥಾಕಾಪುರುಷಸ್ತಥಾ ॥೧೯॥

—...ಇತಿಶ್ರೀಮದುತ್ತರ ರಾಮಾಯಣೇ ಅಷ್ಟಷಷ್ಟಿತಮಸ್ಸರ್ಗಃ...—

ತಚ್ಛ್ರುತ್ವಾಭಾಷಿತಂತಸ್ಯಶತ್ರುಘ್ನಸ್ಯಮಹಾತ್ಮನಃ । ಕ್ರೋಧಮಾಹಾರಯತ್ತೀವ್ರಂತಿಷ್ಠತಿಷ್ಠೇತಿಚಾಬ್ರವೀತ್॥೧॥ ಪಾಣೌಪಾಣಿಂವಿನಿಷ್ಪಿಷ್ಯದಂತಾನ್ ಕಟಕಟಾಪ್ಯಚ । ಲವಣೋರಘುಶಾರ್ದೂಲಮಾಹ್ವಯಾಮಾಸಚಾಸಕೃತ್ ॥೨॥ ತಮಾಹ್ವಯಂತಂಸೌಮಿತ್ರಿಃಲವಣಂಘೋರದರ್ಶನಂ । ಶತ್ರುಘ್ನೋದೇವಶತ್ರುಘ್ನ ಇದಂವಚನಮಬ್ರವೀತ್ ॥೩॥ ಶತ್ರುಘ್ನೋನತಥಾರಾಜಾಯಥಾನ್ಯೇನಿರ್ಜಿತಾಸ್ತ್ವಯಾ । ತದದ್ಯಬಾಣನಿಹತೋವ್ರಜತ್ವಂಯಮಸಾದನಂ ॥೪॥ಋಷಯೋಪ್ಯದ್ಯಪಾಪಾತ್ಮನ್ಯತ್ವಯಾಹಿಂಸಿತಾಃಪುರಾ । ಪಶ್ಯಂತುವಿಪ್ರಾವಿದ್ವಾಂಸಸ್ತ್ರಿದಶಾಇವರಾವಣಂ ॥೫॥ ತ್ವಯಿಮದ್ಬಾಣನಿರ್ದಗ್ಧೇ ಪತಿತೇದ್ಯನಿಶಾಚರೇ । ಪುರಂಜನಪದಂಚಾಪಿಕ್ಷೇಮಮೇತದ್ಭವಿಷ್ಯತಿ ॥೬॥ ಅದ್ಯಮದ್ಬಾಹುನಿಷ್ಕ್ರಾಂತಶ್ಶರೋವಜ್ರ

ನಕ್ಕೆ ಅವಕಾಶವನ್ನು, ದದೌ–ಕೊಡುತ್ತಾನೊ, ಸಃ–ಆ ಪುರುಷನು, ಯಥಾ–ಹ್ಯಾಗೆ, ಕಾಪುರುಷಃ–ನೀಚಪುರುಷನು, ಮಂದಬುದ್ಧಿತ್ವಾತ್– ನೀಚಬುದ್ಧಿಯುಳ್ಳವನಾದ ಹೇತುವಿನಿಂದ, ಹತಃ–ಹತನಾಗುವನೋ, ತಥಾ–ಹಾಗೆ, ಹತಃ–ಹೊಡೆಯಲ್ಪಡುತ್ತಾನೆ. ॥೧೯॥

—...ಇತಿ ಶ್ರೀಮದುತ್ತರರಾಮಾಯಣೇ ಅಷ್ಟಷಷ್ಟಿತಮಸ್ಸರ್ಗಃ...—

ಮಹಾತ್ಮನಃ–ಮಹಾ ಧೈರ್ಯಶಾಲಿಯಾದ, ತಸ್ಯಶತ್ರುಘ್ನಸ್ಯ– ಆ ಶತ್ರುಘ್ನನ, ತದ್ಭಾಷಿತಂ–ಆ ಮಾತನ್ನು, ಶ್ರುತ್ವಾ–ಕೇಳಿ, ತೀವ್ರಂ–ತೀಕ್ಷ್ಣವಾದ, ಕ್ರೋಧಂ–ಕೋಪವನ್ನು, ಆಹಾರಯತ್–ಮಾಡಿದವನಾದನು, ತಿಷ್ಠತಿಷ್ಠೇತಿ–ನಿಲ್ಲುನಿಲ್ಲೆಂದು,ಅಬ್ರವೀಚ್ಚ–ಪೇಳಲೂ ಪೇಳಿದನು ॥೧॥ ಲವಣಃ– ಲವಣಾಸುರನು, ಪಾಣೌ–ಹಸ್ತದಲ್ಲಿ, ಪಾಣಿಂ–ಕೈಯನ್ನು, ವಿನಿಷ್ಪಿಷ್ಯ–ಪಿಡಿದು, ದಂತಾನ್–ಹಲ್ಲುಗಳನ್ನು, ಕಟಕಟಾಪ್ಯಚ–ಕಟಕಟವೆಂದು ಶಬ್ದವಾಗುವಂತೆ ಮಾಡಿ, ರಘುಶಾರ್ದೂಲಂ–ರಘುವಂಶಸ್ಥರಲ್ಲಿ ಶ್ರೇಷ್ಠನಾದ ಶತ್ರುಘ್ನನನ್ನು, ಅಸಕೃತ್ – ಬಾರಿಬಾರಿಗೂ, ಆಹ್ವಯಾಮಾಸಚ – ಕರೆಯಲೂ ಕರೆದನು ॥೨॥ ಸೌಮಿತ್ರಿಃ–ಸುಮಿತ್ರಾಪುತ್ರನಾದ, ದೇವಶತ್ರುಘ್ನಃ–ದೇವವೈರಿಗಳನ್ನು ಸಂಹರಿಸುತ್ತಿರುವ, ಶತ್ರುಘ್ನಃ–ಶತ್ರುಘ್ನನು, ಆಹ್ವಯಂತಂ–ಕರೆಯುತ್ತಿರುವ, ಘೋರದರ್ಶನಂ–ಭಯಂಕರವಾದ ದೃಷ್ಟಿಯುಳ್ಳ, ತಂಲವಣಂ–ಆ ಲವಣಾಸುರನಂ ಕುರಿತು, ಇದಂ ವಚನಂ–ಈ ಮಾತನ್ನು, ಅಬ್ರವೀತ್–ನುಡಿದನು ॥೩॥ ಯಥಾ–ಹ್ಯಾಗೆ, ತ್ವಯಾ–ನಿನ್ನಿಂದ, ಅನ್ಯೇ–ಇತರರು, ನಿರ್ಜಿತಾಃ–ಜಯಿಸಲ್ಪಟ್ಟರೊ, ತಥಾ–ಹಾಗೆ, ರಾಜಾ–ಅರಸಾದ,ಶತ್ರುಘ್ನಃ–ಶತ್ರುಘ್ನನು, ನ–ಅಲ್ಲ, ತತ್–ಆಕಾರಣದದೆಸೆಯಿಂದ,ತ್ವಂ–ನೀನು, ಬಾಣನಿಹತಃ–ಬಾಣಗಳಿಂದ ಹೊಡೆಯಲ್ಪಟ್ಟವನಾಗಿ, ಯಮಸಾದನಂ–ಯಮನಮನೆಯಂ ಕುರಿತು, ವ್ರಜ–ತೆರಳು, ॥೪॥ ಹೆ ಪಾಪಾತ್ಮನ್–ಎಲೈ ಪಾಪಿಷ್ಠನೆ, ತ್ವಯಾ–ನಿನ್ನಿಂದ, ಪುರಾ–ಪೂರ್ವದಲ್ಲಿಯೆ, ಋಷಯಃ–ಯಾವ ಋಷಿಗಳು, ಹಿಂಸಿತಾಃ–ಬಾಧಿಸಲ್ಪಟ್ಟರೋ, ತೇ–ಅಂಥಾ, ವಿಪ್ರಾಃ–ಬ್ರಾಹ್ಮಣರಾದ, ವಿದ್ವಾಂಸಃ–ಪಂಡಿತರು, ತ್ರಿದಶಾಃ–ದೇವತೆಗಳು,ರಾವಣಮಿವ–ರಾವಣನನ್ನಂತೆ, ತ್ವಾಂ–ನಿನ್ನನು, ಅದ್ಯ–ಈಗ, ಪಶ್ಯಂತು–ನೋಡಲಿ ॥೫॥ ಹೆ ನಿಶಾಚರ–ಎಲೈ ರಾಕ್ಷಸನೆ, ತ್ವಯಿ–ನೀನು, ಮದ್ಬಾಣನಿರ್ದಗ್ಧೇ–ನನ್ನ ಬಾಣದಿಂದ ದಹಿಸಲ್ಪಟ್ಟವನಾಗಿ, ಪತಿತೇಸತಿ–ಬಿದ್ದವನಾಗುತಿರಲಿಕ್ಕಾಗಿ, ಏತತ್ಪುರಂ–ಈ ಪಟ್ಟಣದಲ್ಲಿಯೂ, ಜನಪದಂಚಾಪಿ–ದೇಶದಲ್ಲಿಯೂ, ಕ್ಷೇಮಂ–ಕ್ಷೇಮವು, ಅದ್ಯ–ಈಗಲೆ, ಭವಿಷ್ಯತಿ–ಆಗುವದು ॥೬॥ಅದ್ಯ–ಈಗ, ಮದ್ಬಾಣನಿಷ್ಕ್ರಾಂತಂ–ನನ್ನ ಭುಜದ ದೆಸೆಯಿಂದ ಹೊರಡುತ್ತಿರುವ, ವಜ್ರನಿಭಾನ

ಲ್ಪಕಾಲವು ಇಲ್ಲಿಯೆ ನಿಂತಿರು. ನಾನು ಎನ್ನ ಆಯುಧವಂ ಸಿದ್ಧಗೊಳಿಸಿಕೊಂಡು ಅದಂ ತರುವೆನೆಂದು ನುಡಿದವನಾದನು. ಸಮನಂತರ ಕಾಲದೊಳಾ ಆಶತ್ರುಘ್ನನು ಲವಣಾಸುರನಂ ಕುರಿತು ಎಲೈನೀಚನೆ ಎನ್ನ ಕೈಗೆ ಸಿಲುಕಿ ಬದುಕಿದವನಾಗಿ ಎಲ್ಲಿಪೋಗುವಿ?ಬುದ್ಧಿವಂತನಾದ ಪುರುಷನು ಅದೃಷ್ಟವಶಾತ್ ಶಿಕ್ಕಿದಶತ್ರುವಿನಂ ಬಿಡಲಾರೆನು. ಯಾವ ಪುರುಷನುಮತಿಗೆಟ್ಟವನಾಗಿ ಪರನಿಗೆ ಅವಕಾಶವನ್ನೀಯುವನೊ ಅವನುಮಂದಮತಿ ಯುಳ್ಳವನಾದ್ದರಿಂದ ಕಾಪುರುಷನ ತೆರದಿ ಹತನಾಗುವನೆಂದು ನಿರೂಪಿಸಿದವನಾದನು. ॥೧೯॥

—...ಉತ್ತರ ರಾಮಾಯಣ ದಲ್ಲಿನ ೬೮ನೇ ಸರ್ಗಂ ಮುಗಿದುದು...—

ಮಹಾತ್ಮನಾದ ಆ ಶತ್ರುಘ್ನನ ವಾಕ್ಯವಂ ಕೇಳಿ ಲವಣಾಸುರನು, ಮಹಾಕೋಪವಂ ಗೈದು,ನಿಲ್ಲುನಿಲ್ಲೆಂದು ಪೇಳಿ ಕೈಗಳಂತಟ್ಟಿ ಹಲ್ಲುಕಚ್ಚಿಕೊಂಡು, ಬಾರಿಬಾರಿಗೂ ಶತ್ರುಘ್ನನಂಕರೆದವನಾಗಲೂ ಆ ರಾಮಾನುಜನು ಎಲೈ ರಾಕ್ಷಸನೆ ! ನಿನ್ನಿಂದ ಜಯಿಸಲ್ಪಟ್ಟ ರಾಜರಂತೆ ಈ ಶತ್ರುಘ್ನನು ಸೋಲತಕ್ಕವನಲ್ಲ ಈಕ್ಷಣದಲ್ಲಿ ನಿನ್ನನ್ನು ಕೊಲ್ಲುವೆನು. ಎನ್ನ ಬಾಣದಿಂದ ನೀನುಹತನಾಗಿ ಯಮಮಂದಿರವಂ ಪೊಕ್ಕುವೀ ಎಲೈಪಾಪಿಯೆ ! ಪೂರ್ವದಲ್ಲಿ ನಿನಿಂದ ಜಯಿಸಲ್ಪಟ್ಟ ಋಷಿಗಳ್ಯಾರೊ ಅವರೆಲ್ಲರೂ ದೇವತೆಗಳೂ ಕೊಲ್ಲಲ್ಪಡುತಿದ್ದ ರಾವಣನನ್ನು ಕಂಡತೆರದಿ ನಿನ್ನನ್ನು ನೋಡುತ್ತಿರಲಿ. ಈಕ್ಷಣದಲ್ಲಿ ನನ್ನಬಾಣಗಳಿಂದ ದಹಿಸಲ್ಪಟ್ಟು ಕೆಳಗೆ ಬೀಳುವಿ. ಈಪಟ್ಟಣಕ್ಕೂ ದೇಶಕ್ಕೂ ಕ್ಷೇಮ ವುಂಟಾಗುವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಿಭಾನನಃ । ಪ್ರವೇಕ್ಷ್ಯತಿತ್ವದ್ಧೃದಯಂಪದ್ಮಮಂಶುರಿವಾರ್ಕಜಃ ॥೭॥ ಏವಮುಕ್ತೋಮಹಾವೃಕ್ಷಂಲವಣಃ ಕ್ರೋಧಮೂರ್ಛಿತಃ। ಶತ್ರುಘ್ನೋರಸಿಚಿಕ್ಷೇಪತಂಶೂರಶ್ಶತಧಾಚ್ಛಿನತ ॥೮॥ ತದ್ದೃಷ್ಟ್ವಾವಿಫಲಂಕರ್ಮ ರಾಕ್ಷಸಃಪುನರೇವಸಃ। ಪಾದಪಾನ್ಸುಬಹೂನ್ಗೃಹ್ಯಶತ್ರುಘ್ನೇವ್ಯಸೃಜದ್ಬಲೀ॥೯॥ ಶತ್ರುಘ್ನಶ್ಚಾಪಿತೇಜಸ್ವೀವೃಕ್ಷಾನಾಪತತೋಬಹೂನ್ । ತ್ರಿಭಿಶ್ಚತುರ್ಭಿರೇಕೈಕಂಚಿಚ್ಛೇದನತಪರ್ವಭಿಃ ॥೧೦॥ ತತೋಬಾಣಮಯಂವರ್ಷಂವ್ಯಸೃಜದ್ರಾಕ್ಷಸೋರಸಿ । ಶತ್ರುಘ್ನೋವೀರ್ಯಸಂಪನ್ನೋವಿವ್ಯಥೇನಚರಾಕ್ಷಸಃ ॥೧೧॥ತತಃಪ್ರಹಸ್ಯಲವಣೋವೃಕ್ಷಮುತ್ಪಾಟ್ಯಲೀಲಯಾ। ಶಿರಸ್ಯಭ್ಯಹನಚ್ಛೂರಂಸ್ರಸ್ತಾಂಗಸ್ಸಮುಮೋಹವೈ ॥೧೨॥ ತಸ್ಮಿನ್ನಿಪತಿತೇವೀರೇಹಾಹಾಕಾರೋಮಹಾನಭೂತ್ । ಋಷೀಣಾಂದೇವಸಂಘಾನಾಂ ಗಂಧರ್ವಾಪ್ಸರಸಾಮಪಿ ॥೧೩॥ ಸತುವಿಜ್ಞಾಯತುಹತಂಶತ್ರುಘ್ನಂಭುವಿಪಾತಿತಂ। ರಕ್ಷೋಲಬ್ಧಾಂತರಮಪಿನವಿವೇಶಸ್ವಮಾಲಯಂ ॥೧೪॥ ನಾಪಿಶೂಲಂಪ್ರಜಗ್ರಾಹತಂದೃಷ್ಟ್ವಾಭುವಿಪಾತಿತಂ । ತತೋಹತಇತಿಜ್ಞಾತ್ವಾತಾನ್ಭಕ್ಷಾನ್ಸಮುದಾಹ

---

ನಃ-ವಜ್ರಾಯುಧಕ್ಕೆ ಸಮಾನವಾದ ಮುಖವುಳ್ಳ, ಶರಃ-ಬಾಣವು, ಪದ್ಮಂ-ಕಮಲವನ್ನು, ಅರ್ಕಜಃ-ಸೂರ್ಯನಿಂದ ಹುಟ್ಟಿದ, ಅಂಶುರಿವ-ಕಿರಣದಂತೆ, ತ್ವದ್ಧೃದಯಂ - ನಿನ್ನ ವಕ್ಷಸ್ಥಲವನ್ನು, ಪ್ರವೇಕ್ಷ್ಯತಿ-ಹೊಕ್ಕುವದು॥೭॥ ಏವಂ-ಈಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಲವಣಃ-ಲವಣಾಸುರನು, ಕ್ರೋಧಮೂರ್ಛಿತಃ-ಕೋಪಾಕ್ರಾಂತನಾಗಿ, ಮಹಾವೃಕ್ಷಂ-ದೊಡ್ಡ ಗಿಡವನ್ನು, ಶತ್ರುಘ್ನೋರಸಿ-ಶತ್ರುಘ್ನನ ವಕ್ಷಸ್ಥಲದಲ್ಲಿ, ಚಿಕ್ಷೇಪ-ಎಸದನು, ಶೂರಃ-ಶೂರನಾದ ಶತ್ರುಘ್ನನು, ತಂ-ಆ ಮಹಾವೃಕ್ಷವನ್ನು, ಶತಧಾ-ನೂರುಬಗೆಗಳಾಗಿ, ಅಚ್ಛಿನತ್-ಕತ್ತರಿಸಿದನು ॥೮॥ ಬಲೀ-ಬಲಂತನಾದ, ಸರಾಕ್ಷಸಃ-ಆ ಲವಣಾಸುರನು, ತತ್ಕರ್ಮ-ಆ ಕಾರ್ಯವನ್ನು, ವಿಫಲಂ-ವ್ಯರ್ಥವನ್ನಾಗಿ, ದೃಷ್ಟ್ವಾ-ಕಂಡು, ಸುಬಹೂನ್-ಅನೇಕವಾದ, ಪಾದಪಾನ್-ಗಿಡಗಳನ್ನು, ಗೃಹ್ಯ-ತೆಗದುಕೊಂಡು, ಶತ್ರುಘ್ನೇ-ಶತ್ರುಘ್ನನಲ್ಲಿ, ವ್ಯಸೃಜತ್-ಬಿಟ್ಟನು ॥೯॥ ತೇಜಸ್ವೀ-ಮಹಾ ಪರಾಕ್ರಮಶಾಲಿಯಾದ, ಶತ್ರುಘ್ನಶ್ಚಾಪಿ-ಶತ್ರುಘ್ನನೂ ಸಹ, ಬಹೂನ್-ಅನೇಕಂಗಳಾದ, ಆಪತತಃ-ಬರುತ್ತಿರುವ, ವೃಕ್ಷಾನ್-ಮರಗಳನ್ನು, ನತಪರ್ವಭಿಃ-ನತ-ಬೊಗ್ಗಿರುವ, ಪರ್ವಭಿಃ-ಕೊಣಿಗಳುಳ್ಳ, ತ್ರಿಭಿಃ-ಮೂರುಬಾಣಗಳಿಂದಲೂ, ಚತುರ್ಭಿಃ-ನಾಲ್ಕುಬಾಣಗಳಿಂದಲೂ, ಏಕೈಕಂ-ಒಂದೊಂದನ್ನು, ಚಿಚ್ಛೇದ-ಕತ್ತರಿಸಿದನು ॥೧೦॥ ತತಃ-ಬಳಿಕ, ವೀರ್ಯಸಂಪನ್ನಃ-ಸಾಮರ್ಥ್ಯದಿಂದ ಕೂಡಿಕೊಂಡಿರುವ, ಶತ್ರುಘ್ನಃ-ಶತ್ರುಘ್ನನು, ರಾಕ್ಷಸೋರಸಿ-ರಕ್ಕಸನ ಎದೆಯಲ್ಲಿ, ಬಾಣಮಯಂ-ಬಾಣವಿಕಾರವಾದ, ವರ್ಷಂ-ವೃಷ್ಟಿಯನ್ನು, ವ್ಯಸೃಜತ್-ಸುರಿಸಿದನು, ರಾಕ್ಷಸಶ್ಚ-ರಾಕ್ಷಸನು ಸಹ, ನವಿವ್ಯಥೇ-ವ್ಯಸನಪಡಲಿಲ್ಲ ॥೧೧॥ ತತಃ-ಬಳಿಕ, ಲವಣಃ-ಲವಣಾಸುರನು, ಪ್ರಹಸ್ಯ-ನಕ್ಕು, ಲೀಲಯಾ-ವಿಲಾಸಮಾತ್ರದಿಂದ, ವೃಕ್ಷಂ-ಗಿಡವನ್ನು, ಉತ್ಪಾಟ್ಯ-ಕೀಳಿ, ಶೂರಂ-ವೀರನಾದ ಶತ್ರುಘ್ನನನ್ನು, ಶಿರಸಿ-ಶಿರಸ್ಸಿನಲ್ಲಿ, ಅಭ್ಯಹನತ್-ಹೊಡೆದನು, ಸ್ರಸ್ತಾಂಗಃ-ಜಾರಿಬಿದ್ದ ಶರೀರವುಳ್ಳವನಾಗಿ, ಸಃ-ಆ ಶತ್ರುಘ್ನನು, ಮುಮೋಹವೈ-ಮೂರ್ಛಿತನಾದನಷ್ಟೆ ॥೧೨॥ ವೀರೇ-ಶೂರನಾದ, ತಸ್ಮಿನ್-ಆ ಶತ್ರುಘ್ನನು, ನಿಪತಿತೇಸತಿ-ಬಿದ್ದವನಾಗುತಿರಲಾಗಿ, ಋಷೀಣಾಂ-ಮುನಿಗಳ, ದೇವಸಂಘಾನಾಂ-ದೇವತಾಸಂಘಗಳ, ಗಂಧರ್ವಾಪ್ಸರಸಾಂ-ಗಂಧರ್ವ-ಗಂಧರ್ವರ, ಅಪ್ಸರಸಾಂ-ಅಪ್ಸರಸ್ತ್ರೀಯರ, ಮಹಾನ್-ಮಹತ್ತರವಾದ, ಹಾಹಾಕಾರೋಪಿ-ಹಾಹಾಎಂಬ ಶಬ್ದವೂಕೂಡ, ಅಭೂತ್-ಆಯಿತು, ಸರಕ್ಷಸ್ತು-ಆರಾಕ್ಷಸನಾದರೆ, ಭುವಿ-ನೆಲದಲ್ಲಿ, ಪಾತಿತಂ-ಬೀಳಿಸಲ್ಪಟ್ಟ, ಶತ್ರುಘ್ನಂ-ಶತ್ರುಘ್ನನನ್ನು, ಹತಂ-ಮೃತನನ್ನಾಗಿ, ವಿಜ್ಞಾಯ-ತಿಳಿದುಕೊಂಡು, ಲಬ್ಧಾಂತರಮಪಿ-ಲಬ್ಧ-ಪಡೆಯಲ್ಪಟ್ಟ, ಅಂತರಮಪಿ-ಅವಕಾಶವುಳ್ಳವನಾದರು, ಸ್ವಂ-ಸ್ವಕೀಯವಾದ, ಆಲಯಂ-ಮನೆಯನ್ನು, ನವಿವೇಶ-ಹೊಕ್ಕಲಿಲ್ಲ ॥೧೪॥ ಭುವಿ-ನೆಲದಲ್ಲಿ, ಪಾತಿತಂ-ಬೀಳಿಸಲ್ಪಟ್ಟ, ತಂ-ಆ ಶ

---

ದು. ಸೂರ್ಯಸಂಬಂಧವಾದ ಕಿರಣಂಗಳು ಕಮಲವಂ ಹೊಕ್ಕುವತೆರದಿ ಎನ್ನ ಸರಳುಗಳು ವಜ್ರಾಯುಧದಂತೆ ಮಹಾಹದಮುಳ್ಳವುಗಳಾಗಿ ನಿನ್ನಯುದೆಯಂ ಪ್ರವೇಶಿಸುವದೆಂದು ಹೇಳಿದವನಾದನು ॥೭॥ ಈಪರಿಯಾಗಿ ಶತ್ರುಘ್ನದಿಂದ ನಿರೂಪಿಸಲ್ಪಟ್ಟವನಾದ ಆ ಲವಣಾಸುರನು, ಕ್ರೋಧಮೂರ್ಛಿತನಾಗಿ ವೃಕ್ಷವಂ ತೆಗದುಕೊಂಡು ಶತ್ರುಘ್ನನ ವಕ್ಷಸ್ಥಲದಲ್ಲಿ ಬೀಳುವಂತೆ ಎಸೆದವನಾಗಲೂ ಶೂರನಾದ ಆಶತ್ರುಘ್ನನು ಶತಧಾ ಆ ವೃಕ್ಷವನ್ನು ಛೇದಿಸಿದವನಾದನು॥೮॥ನಿಷ್ಫಲವಾದ ಆಕಾರ್ಯವಂ ಕಂಡು ಆರಕ್ಕಸನು ಮತ್ತು ಅನೇಕವಾದ ಗಿಡಗಳಂತೆಗದುಕೊಂಡು ಆ ರಕ್ಕಸನು ಮತ್ತು ಅನೇಕವಾದ ಗಿಡಗಳಂ ತೆಗದುಕೊಂಡು ಶತ್ರುಘ್ನನಮೇಲೆ ಬಿಡುತ್ತಿದ್ದನು. ಆವೇಳೆಯಲ್ಲಿ ಮಹಾ ತೇಜಸ್ವಿಯಾದ ಶತ್ರುಘ್ನನು ಕೂಡ ಸುತ್ತಮುತ್ತಲೂ ಬರುತಿರುವ ಆ ವೃಕ್ಷಗಳನ್ನೆಲ್ಲ ಮೂರು ಬಾಣಗಳಿಂದಲೂ, ನಾಲ್ಕು ಬಾಣಗಳಿಂದಲೂ, ಆ ವೃಕ್ಷಗಳಂ ಖಂಡಿಸಿ ಕಡು ಪರಾಕ್ರಮಿಯಾಗಿ ಆ ರಕ್ಕಸನ ಮೇಲೆ ಬಾಣವರ್ಷವಂ ಸುರಿಸಿದವನಾದರೂ ಆ ರಾಕ್ಷಸನು ಹೆದರಲಿಲ್ಲ ॥೧೧॥ ಬಳಿಕ ಆ ಲವಣಾಸುರನು ವಿಲಾಸಮಾತ್ರದಿಂದ ಒಂದಾನೊಂದು ವೃಕ್ಷವಂ ಕಿತ್ತುಕೊಂಡು ಬಲಾತ್ಕರಿಸಿ ಶತ್ರುಘ್ನನಂ ಮಂಡೆಯೋಳ್ ಹೊಡದವನಾಗಲೂ ಆಶತ್ರುಘ್ನನು ಕೈಕಾಲುಗಳು ಸೋತವನಾಗಿ ಮೂರ್ಛಿತನಾದನು.॥೧೨॥ ಆಮಹಾವೀರನು ಮೂರ್ಛಾಕ್ರಾಂತನಾಗಿ ಬಿದ್ದವನಾಗಲೂಋಷಿಗಳೂ ದೇವತೆಗಳೂಗಂಧರ್ವರೂ,ಅಪ್ಸರಸ್ತ್ರೀಯರೂ ಇವರೆಲ್ಲರೂ ಹಾ ಹಾ ಹಾ ಹಾಎಂದು ಕೂಗಿದಂಥಾವರಾದರು॥೧೩॥ ಆ ಲವಣಾಸುರನಾದರೆ ನೆಲದಲ್ಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರತ ॥೧೫॥ ಮುಹೂರ್ತಾಲ್ಲಬ್ಧಸಂಜ್ಞಸ್ತು ಪುನಸ್ತಸ್ಥೌ ಧೃತಾಯುಧಃ । ಶತ್ರುಘ್ನೋ ವೈ ಪುರದ್ವಾರಿ ಮುನಿಭಿಸ್ಸಂಪ್ರಪೂಜಿತಃ ॥೧೬॥ ತತೋ ದಿವ್ಯಮಮೋಘಂ ತು ಜಗ್ರಾಹ ಶರಮುತ್ತಮಂ । ಜ್ವಲಂತಂ ತೇಜಸಾ ಘೋರಂ ಪೂರಯಂತಂ ದಿಶೋ ದಶ ॥೧೭॥ ವಜ್ರಾನನಂ ವಜ್ರವೇಗಂ ಮೇರುಮಂದರಗೌರವಂ । ನತಂ ಪರ್ವಸು ಸರ್ವೇಷು ಸಂಯುಗೇಷ್ವಪರಾಜಿತಂ ॥೧೮॥ ಅಸೃಕ್ಚಂದನದಿಗ್ಧಾಂಗಂ ಚಾರುಪತ್ರಂ ಪತತ್ರಿಣಂ । ದಾನವೇಂದ್ರಾಚಲೇಂದ್ರಾಣಾಮಸುರಾಣಾಂ ಚ ದಾರುಣಂ ॥೧೯॥ ತಂ ದೀಪ್ತಮಿವ ಕಾಲಾಗ್ನಿಂ ಯುಗಾಂತೇ ಸಮುಪಸ್ಥಿತೇ । ದೃಷ್ಟ್ವಾ ಸರ್ವಾಣಿ ಭೂತಾನಿ ಪರಿತ್ರಾಸಮುಪಾಗಮನ್ ॥೨೦॥ ಸದೇವಾಸುರಗಂಧರ್ವತಾಪಸಂ ಸಾಪ್ಸರೋಗಣಂ । ಜಗದ್ಧಿ ಸರ್ವಮಸ್ವಸ್ಥಂ ಪಿತಾಮಹಮುಪಸ್ಥಿತಂ ॥೨೧॥ ಊಚುಶ್ಚ ಸರ್ವದೇವೇಶಂ ವರದಂ ಪ್ರ

---

ತ್ರುಘ್ನನನ್ನು, ದೃಷ್ಟ್ವಾ-ಕಂಡು, ತತಃ-ಬಳಿಕ, ಹತಇತಿ-ಮೃತನಾದನೆಂದು, ಜ್ಞಾತ್ವಾ-ತಿಳಿದು, ಶೂಲಂ-ಶೂಲವನ್ನು, ನಪ್ರತಿಜಗ್ರಾಹ-ಪರಿಗ್ರಹಿಸಲಿಲ್ಲ, ತಾನ್ಭಕ್ಷಾನ್-ಆ ಭಕ್ಷಣಯೋಗ್ಯವಾದ ಮೃಗಗಳನ್ನು, ಸಮುದಾಹರತ್-ಭುಂಜಿಸಿದನು ॥೧೫॥ ಮುಹೂರ್ತಾತ್-ಮುಹೂರ್ತಕಾಲದಲಿ, ಲಬ್ಧಸಂಜ್ಞಃ-ಹೊಂದಲ್ಪಟ್ಟ ಪ್ರಜ್ಞೆಯುಳ್ಳ, ಶತ್ರುಘ್ನಃ-ಶತ್ರುಘ್ನನು, ಮುನಿಭಿಃ-ಋಷಿಗಳಿಂದ, ಸಂಪ್ರಪೂಜಿತಃ-ಪೂಜಿಸಲ್ಪಟ್ಟವನಾಗಿ, ಪುರದ್ವಾರಿ-ಊರುಬಾಗಿಲಲ್ಲಿ, ಪುನಃ-ಮತ್ತು, ಧೃತಾಯುಧಃ-ಧರಿಸಲ್ಪಟ್ಟ ಆಯುಧವುಳ್ಳವನಾಗಿ, ತಸ್ಥೌ-ನಿಂತನು ॥೧೬॥ ತತಃ-ಬಳಿಕ, ತೇಜಸಾ-ತೇಜಸ್ಸಿನಿಂದ, ಜ್ವಲಂತಂ-ಹೊಳೆಯುತ್ತಿರುವ, ದಶದಿಶಃ-ಹತ್ತುದಿಕ್ಕುಗಳನ್ನು, ಪೂರಯಂತಂ-ಧ್ವನಿಗೊಳಿಸುತ್ತಿರುವ, ಘೋರಂ-ಭಯಂಕರವಾದ, ಉತ್ತಮಂ - ಉತ್ಕೃಷ್ಟವಾದ, ವಜ್ರಾನನಂ - ವಜ್ರಾಯುಧಕ್ಕೆ ಸಮಾನವಾದ ಮುಖವುಳ್ಳ, ವಜ್ರವೇಗಂ-ವಜ್ರಾಯುಧದ ವೇಗದಂತೆ ವೇಗವುಳ್ಳ, ಮೇರುಮಂದರಗೌರವಂ - ಮೇರುಗಿರಿಯಂತೆಯೂ ಮಂದರಪರ್ವತದಂತೆಯೂ ಭಾರವುಳ್ಳ, ಸರ್ವೇಷು-ಸಮಸ್ತವಾದ, ಪರ್ವಸು-ಗೆಣ್ಣುಗಳಲ್ಲಿ, ನತಂ-ಬೊಗ್ಗಿರುವ, ಸಂಯುಗೇಷು-ಕಾಳಗಗಳಲ್ಲಿ, ಅಪರಾಜಿತಂ-ಪರಾಜಯವಿಲ್ಲದಿರುವ, ಅಸೃಕ್ಚಂದನ ದಿಗ್ಧಾಂಗಂ-ಅಸೃಕ್-ರಕ್ತವೆಂಬ, ಚಂದನ-ಶ್ರೀಗಂಧದಿಂದ, ದಿಗ್ಧ-ಲೇಪನಮಾಡಲ್ಪಟ್ಟ, ಅಂಗ-ಅವಯವಗಳುಳ್ಳ, ಚಾರುಪತ್ರಂ- ಮನೋಹರವಾದ ಗರಿಗಳುಳ್ಳ, ಪತತ್ರಿಣಂ-ಪಕ್ಷಿಯಂತೆ ಗಮನಶೀಲವಾದಗರಿಗಳುಳ್ಳ, ಪತತ್ರಿಣಂ-ಪಕ್ಷಿಯಂತೆ ಗಮನಶೀಲವಾದ, ದಾನವೇಂದ್ರಾಚಲೇಂದ್ರಾಣಾಂ- ದಾನವೇಂದ್ರ- ರಾಕ್ಷಸಶ್ರೇಷ್ಠರಿಗೂ, ಅಚಲೇಂದ್ರಾಣಾಂ-ಪರ್ವತಶ್ರೇಷ್ಠಗಳಿಗೂ, ಅಸುರಾಣಾಂಚ-ರಾಕ್ಷಸರಿಗೂ, ದಾರುಣಂ-ಸಂಹಾರಕವಾದ, ಅಮೋಘಂ- ವ್ಯರ್ಥವಾಗದಿರುವ, ಉತ್ತಮಂಶರಂ-ಉತ್ತಮವಾದ ಬಾಣವನ್ನು, ಜಗ್ರಾಹ-ತೆಗೆದುಕೊಂಡನು ॥೧೯॥ ಯುಗಾಂತೇ-ಪ್ರಳಯಕಾಲವು, ಸಮುಪಸ್ಥಿತೇ-ಪ್ರಾಪ್ತವಾಗುತಿರಲಿಕಾಗಿ, ಕಾಲಾಗ್ನಿಮಿವ-ಪ್ರಳಯಾಗ್ನಿಯಂತೆ, ದೀಪ್ತಂ-ಹೊಳೆಯುತ್ತಿರುವ, ತಂ-ಆ ಬಾಣವನ್ನು, ದೃಷ್ಟ್ವಾ-ಕಂಡು,ಸರ್ವಾಣಿ-ಸಮಸ್ತವಾದ, ಭೂತಾನಿ-ಪ್ರಾಣಿಗಳು, ಪರಿತ್ರಾಸಂ-ಭೀತಿಯನ್ನು, ಉಪಾಗಮನ್-ಹೊಂದಿದರು ॥೨೦॥ ಸದೇವಾಸುರಗಂಧರ್ವತಾಪಸಂ-ದೇವತೆಗಳಿಂದಲೂ ರಾಕ್ಷಸರಿಂದಲೂ ಗಂಧರ್ವರಿಂದಲೂ ತಾಪಸರಿಂದಲೂ ಒಡಗೂಡಿದ, ಸಾಪ್ಸರೋಗಣಂ-ಅಪ್ಸರಸ್ತ್ರೀಸಂಘದಿಂದ ಯುಕ್ತವಾದ, ಸರ್ವಂ-ಸಮಸ್ತವಾದ, ಜಗತ್-ಲೋಕದಲ್ಲಿರುವ ಜನವು, ಅಸ್ವಸ್ಥಂ-ಸ್ವಸ್ಥಚಿತ್ತವಿಲ್ಲದ್ದಾಗಿ, ಪಿತಾಮಹಂ-ಬ್ರಹ್ಮನಂ ಕುರಿತು, ಉಪಸ್ಥಿತಂ-ಹೊಂದಿತು ॥೨೧॥ ಸರ್ವದೇವೇಶಂ-ಸಮಸ್ತ ದೇವತೆಗಳಿಗೂ ಸ್ವಾಮಿಯಾದ, ವರದಂ-ವರಪ್ರದಾತನಾದ, ಪ್ರಪಿತಾಮಹಂ-ಲೋಕಕ್ಕೆಲ್ಲ ಪ್ರಪಿತಾಮಹನಾದ ಚತುರ್ಮುಖನಂ ಕುರಿತು, ಊಚುಶ್ಚ - ಹೇಳ

---

ಬಿದ್ದಿರುವ ಆ ಶತ್ರುಘ್ನನಂ ಕಂಡು ಹತನಾದನೆಂದರಿತು ತನಗೆ ಅವಕಾಶ ವಿದ್ದರೂ ಮನೆಗೆ ಪೋಗದೇಲೂ ಶೂಲವಂ ತೆಗೆದುಕೊಂಡು ಬರದೇಲೂ ಇದ್ದವನಾಗಿ ತಾನು ತಂದಿದ್ದ ಆ ಜೀವರಾಶಿಗಳನ್ನು, ಭುಂಜಿಸುತ್ತಾ ಕುಳಿತುಕೊಂಡಿದ್ದನು॥ ಪುನಃ ಪ್ರಜ್ಞೆಯಂ ಪಡೆದವನಾದ ಶತ್ರುಘ್ನನು ಎದ್ದವನಾಗಿ ಆಯುಧವಂ ಪಿಡಿದುಕೊಂಡುಮುನಿಗಳಿಂದ ಪೂಜಿಸಲ್ಪಡುತ್ತಾ ಆ ದ್ವಾರಪ್ರದೇಶದಲ್ಲಿ ನಿಂತುಕೊಂಡನು॥೧೬॥ ಬಳಿಕ ಶತ್ರುಘ್ನನು ದೇವತಾ ಸಂಬಂಧವಾಗಿಯೂ,ಅಮೋಘವಾಗಿಯೂ, ಸ್ವಕೀಯವಾದ ತೇಜಸ್ಸಿನಿಂದ ಕಂಗೊಳಿಸುತ್ತಿರುವದಾಗಿಯು, ದಿಕ್ಕು ದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟು ಮಾಡುತ್ತಿರುವದಾಗಿಯೂ, ವಜ್ರಾಯುಧದಂತೆ ಬಹಳ ಕಡವುಳ್ಳದ್ದಾಗಿಯೂ, ಬಹುವೇಗವುಳ್ಳದ್ದಾಗಿ ಮೇರುಗಿರಿಯಂತೆಯೂ ಮಂದರ ಪರ್ವತದಂತೆಯೂ ಬಹಳ ಭಾರವುಳ್ಳದ್ದಾಗಿಯೂ, ಗೆಣ್ಣು ಗೆಣ್ಣುಗಳಲ್ಲಿಯೂ ಬೊಗ್ಗಿರುವಂಥಾದ್ದಾಗಿಯೂ,ಸಂಗರಗಳಲ್ಲಿ ಎಂದಿಗು ಪರಾಜಯವಂ ಪಡೆಯದೆ ಇರುವದ್ದಾಗಿಯೂ, ರಕ್ತವೆಂಬ ಚಂದನಗಂಧದಿಂದ ವ್ಯಾಪ್ತವಾದ ಆಕಾರ ವುಳ್ಳದ್ದಾಗಿಯೂ, ಮನೋಹರವಾದ ಗರಿಗಳುಳ್ಳದ್ದಾಗಿಯೂ, ಪಕ್ಷಿಯ ತೆರದಿ ಬರುತ್ತಿರುವ ದಾಗಿಯೂ, ರಾಕ್ಷಸೋತ್ತಮರನ್ನು ಪರ್ವತ ಶ್ರೇಷ್ಠಗಳನ್ನು ಅಸುರರೆಂಬ ರಾಕ್ಷಸ ಜಾತೀಯರನ್ನು ಸಹ ಭೇದಿಸುತ್ತಿರುವದಾಗಿಯೂ ಇರುವ ಉತ್ತಮರಾದ ನಿಡಿಗೋಲನ್ನು ಪಿಡಿದವನಾಗಲೂ, ಸಮಸ್ತ ಭೂತಗಳು ಪ್ರಳಯ ಕಾಲದೊಳು ಹೊಳೆಯುತ್ತಿರುವ ಕಾಲಾಗ್ನಿಯಂ ಕಂಡು ಹೆದರುವ ತೆರದಿ ಭೀತಿಯಂ ಪೊಂದಿದರು ॥೨೦॥ ಆ ವೇಳೆಯಲ್ಲಿ ದೇವರಾಕ್ಷಸ ಗಂಧರ್ವ ತಾಪಸರಿಂದಲೂ ಅಪ್ಸರಸ್ತ್ರೀಯರಿಂದಲೂ ಒಡಗೂಡಿದ ಜಗವೆಲ್ಲ ಅಸ್ವಸ್ಥವಾದಂಥಾದ್ದಾಗಿ, ಚತುರ್ಮುಖ ಬ್ರಹ್ಮನ ಸಮೀಪಕ್ಕೆ ಗಮಿಸಿ, ದೇವೋತ್ತಮನಾಗಿಯೂ ವರಪ್ರದಾತನಾಗಿಯೂ, ಜಗಕ್ಕೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪಿತಾಮಹಂ । ಕಚ್ಚಿಲ್ಲೋಕಕ್ಷಯೋದೇವಸಂಪ್ರಾಪ್ತೋವಾಯುಗಕ್ಷಯಃ॥೨೨॥ ನೇದೃಶಂದೃಷ್ಟಪೂರ್ವಂಚನಶ್ರುತಂಪ್ರಪಿತಾಮಹ।ದೇವಾನಾಂಭಯಸಮ್ಮೋಹೋಲೋಕಾನಾಂಸಂಕ್ಷಯಂಪ್ರತಿ॥೨೩॥ತೇಷಾಂತದ್ವಚನಂಶ್ರುತ್ವಾಬ್ರಹ್ಮಾಲೋಕಪಿತಾಮಹಃ । ಭಯಕಾರಣಮಾಚಷ್ಟೇದೇವಾನಾಮಭಯಂಕರಃ ॥೨೪॥ ವಧಾಯಲವಣಸ್ಯಾಜೌಶರಶ್ಶತ್ರುಘ್ನಧಾರಿತಃ । ತೇಜಸಾಯಸ್ಯಸರ್ವೇಸ್ಥಸಮೂಢಾಸ್ಸುರಸತ್ತಮಾಃ ॥೨೫॥ ಏಷೋಹಿಪೂರ್ವಂದೇವಸ್ಯಲೋಕಕರ್ತುಸ್ಸನಾತನಃ । ಶರಸ್ತೇಜೋಮಯೋಪೇತಾಸ್ಸಯೇನವೋಭಯಮಾಗತಂ ॥ ೨೬ ॥ ಏಷವೈಕೈಟಭಸ್ಯಾರ್ಥೇಮಧುನಶ್ಚದುರಾತ್ಮನಃ । ಸೃಷ್ಟೋಮಹಾತ್ಮನಾತೇನವಧಾರ್ಥಂದೈತ್ಯಯೋಸ್ತಯೋಃ॥೨೭॥ಏಕಏವಪ್ರಜಾನಾತಿವಿಷ್ಣುಸ್ತೇಜೋಮಯಂಶರಂ । ಏಷಚೈವತನುಃಪೂರ್ವಾವಿಷ್ಣೋಸ್ತಸ್ಯಮಹಾತ್ಮನಃ ॥೨೮॥ ಇತೋಗಚ್ಛತಪಶ್ಯಧ್ವಂವಧ್ಯಮಾನಂಮಹಾತ್ಮನಾ । ರಾಮಾನುಜೇನವೀರೇಣಲವಣಂರಾಕ್ಷಸೋತ್ತಮಮ್ ॥೨೯॥ ತಸ್ಯತೇದೇವದೇವಸ್ಯನಿಶಮ್ಯವಚನಂಸುರಾಃ । ಆಜಗ್ಮುರ್ಯತ್ರಯುಧ್ಯೇತೇಶತ್ರುಘ್ನಲವಣಾವು

---

ಲೂ ಹೇಳಿದರು, ಹೇ ದೇವ-ಎಲೈ ಸ್ವಾಮಿಯೆ, ಲೋಕಕ್ಷಯಃಕಚ್ಚಿತ್-ಲೋಕನಾಶವೋ ಏನು, ಅಥವಾ-ಹಾಗಲ್ಲದಿದ್ದರೆ, ಯುಗಕ್ಷಯಃ- ಪ್ರಳಯಕಾಲವು,ಸಂಪ್ರಾಪ್ತಃ-ಸಂಭವಿಸಿತೇನು॥೨೨॥ಹೆ ಪ್ರಪಿತಾಮಹ-ಎಲೈ ಚತುರ್ಮುಖಬ್ರಹ್ಮನೆ, ಈದೃಶಂ-ಇಂಥಾದ್ದು, ನದೃಷ್ಟಪೂರ್ವಂ-ಪೂರ್ವದಲ್ಲಿ ನೋಡಲ್ಪಡಲಿಲ್ಲ, ಲೋಕಾನಾಂ-ಲೋಕಗಳ, ಸಂಕ್ಷಯಂಪ್ರತಿ-ನಾಶನವನ್ನು ಕುರಿತು, ದೇವಾನಾಂ-ದೇವತೆಗಳಿಗೆ, ಭಯಸಂಮೋಹಃ-ಭೀತಿಯು ಮೋಹವು, ಭವತಿ-ಆಗುತಿಥೆ ॥೨೩॥ ತೇಷಾಂ-ಆ ಲೋಕವಾಸಿಗಳ, ತದ್ವಚನಂ-ಆ ಮಾತನ್ನು, ಶೃತ್ವಾ-ಕೇಳಿ, ಲೋಕಪಿತಾಮಹಃ-ಲೋಕಗಳಿಗೆಲ್ಲ ಪಿತಾಮಹನಾದ, ದೇವಾನಾಂ-ದೇವತೆಗಳಿಗೆ, ಅಭಯಂಕರಃ-ಅಭಯಪ್ರದಾತನಾದ, ಬ್ರಹ್ಮಾ-ಚತುರ್ಮುಖನು, ಭಯಕಾರಣಂ-ಭೀತಿಯ ಹೇತುವಿನನ್ನು, ಆಚಷ್ಟೇ- ಹೇಳಿದನು ॥ ಲವಣಸ್ಯ-ಲವಣಾಸುರನ, ಆಜೌ-ಯುದ್ಧದಲ್ಲಿ, ವಧಾಯ-ಸಂಹಾರಕ್ಕೋಸುಗ, ಶರಃ-ಬಾಣವು, ಶತೃಘ್ನಧಾರಿತಃ-ಶತೃಘ್ನ- ಶತೃಘ್ನನಿಂದ, ಧಾರಿತಃ-ಧರಿಸಲ್ಪಟ್ಟಿಥೆ, ಹೆ ಸುರಸತ್ತಮಾಃ-ಎಲೈ ದೇವತಾಶ್ರೇಷ್ಠರುಗಳಿರಾ, ಯಸ್ಯ-ಯಾವ ಬಾಣದ, ತೇಜಸಾ-ತೇಜಸ್ಸಿನಿಂದ, ಸರ್ವೆ-ನೀವೆಲ್ಲರು,ಸಂಮೂಢಾಃ-ಮೋಹಿಸಲ್ಪಟ್ಟವರು, ಸ್ಥ-ಆದಿರೊ ॥೨೫॥ ಏಷಬಾಣಃ-ಈ ಬಾಣವಾದರೆ, ಪೂರ್ವಂ-ಪೂರ್ವದಲ್ಲಿ, ಲೋಕಕರ್ತುಃ-ಸೃಷ್ಟಿಕರ್ತನಾದ, ದೇವಸ್ಯ-ದೇವನಾದ ಶ್ರೀಮಹಾವಿಷ್ಣುವಿನ, ಸನಾತನಃ-ಅನಾದಿಸಿದ್ಧವಾದ, ತೇಜೋಮಯಃ-ತೇಜಸ್ವರೂಪವಾದ್ದು, ಹೆ ವತ್ಸಾಃ-ಎಲೈ ಬಾಲಕರೆ, ಯೇನ-ಯಾವ ಬಾಣದಿಂದ, ವಃ-ನಿಮಗೆ, ಭಯಂ-ಭೀತಿಯು, ಆಗತಂ-ಪ್ರಾಪ್ತವಾಯಿತೊ ॥೨೬॥ ಏಷಃ-ಈ ಬಾಣವು, ಮಹಾತ್ಮನಾ-ಮಹಾಧೀರನಾದ, ತೇನ-ಆ ಶ್ರೀಮಹಾವಿಷ್ಣುವಿನಿಂದ, ಕೈಟಭಸ್ಯ-ಕೈಟಭಾಸುರನ, ದುರಾತ್ಮನಃ-ದುಷ್ಟನಾದ, ಮಧುನಶ್ಚ-ಮಧುವೆಂಬ ರಾಕ್ಷಸನ, ಅರ್ಥೆ-ನಿಮಿತ್ತವಾಗಿ, ತಯೋರ್ದೈತ್ಯಯೋಃ-ಆ ರಾಕ್ಷಸರ, ವಧಾರ್ಥಂ-ಸಂಹಾರಾರ್ಥವಾಗಿ, ಸೃಷ್ಟಃ-ಸೃಜಿಸಲ್ಪಟ್ಟಿತು ॥೨೭॥ ವಿಷ್ಣುಃ-ಶ್ರೀ ಮಹಾವಿಷ್ಣುವು, ಏಕಏವ-ಒಬ್ಬನೆ, ತೇಜೋಮಯಂ-ತನ್ನ ತೇಜೋವಿಕಾರವಾದ, ಶರಂ-ಬಾಣವನ್ನು, ಪ್ರಜಾನಾತಿ-ತಿಳಿದಿಥಾನೆ, ಏಷಃ-ಈ ಬಾಣವು, ಮಹಾತ್ಮನಃ-ಮಹಾನುಭಾವನಾದ, ತಸ್ಯವಿಷ್ಣೋಃ-ಆ ಶ್ರೀಮಹಾವಿಷ್ಣುವಿಗೆ, ಪೂರ್ವಾ-ಪುರಾತನವಾದ, ತನುಃ-ಶರೀರವು ॥೨೮॥ ಇತಃ-ಇಲ್ಲಿಂದ, ಗಚ್ಛತ-ಹೊರಡಿರಿ, ಮಹಾತ್ಮನಾ-ಮಹಾಧೈರ್ಯಶಾಲಿಯಾದ, ವೀರೇಣ-ಶೂರನಾದ, ರಾಮಾನುಜೇನ-ಶ್ರೀರಾಮನ ತಮ್ಮನಾದ ಶತ್ರುಘ್ನನಿಂದ, ವಧ್ಯಮಾನಂ-ಹೊಡೆಯಲ್ಪಡುತ್ತಿರುವ, ರಾಕ್ಷಸೋತ್ತಮಂ-ರಾಕ್ಷಸಶ್ರೇಷ್ಠನಾದ, ಲವಣಂ-ಲವಣಾಸುರನನ್ನು, ಪಶ್ಯಧ್ವಂ-ನೋಡಿರಿ ॥೨೯॥ ತೆಸುರಾಃ-ಆ ದೇವತೆಗಳು, ದೇವದೇವಸ್ಯ- ದೇವೋತ್ತಮನಾದ

---

ಲ್ಲ ಪಿತಾಮಹನಾಗಿಯೂ ಇರುವ ಆ ಬ್ರಹ್ಮನಂ ಕುರಿತು, ಎಲೈಭಗವಂತನೆ ! ಇದು ಲೋಕನಾಶವನವೇ ? ಅಥವಾ ಪ್ರಳಯಕಾಲವು ಪದಗಿತೇ ಏನು ಇಂಥಾದ್ದನ್ನು ನಾವೆಂದಿಗೂ ಕಾಣಲಿಲ್ಲ. ಈಗ ಸಂಭವಿಸಿರುವ ಲೋಕನಾಶನವು ದೇವತೆಗಳಾದ ನಮಗೆಲ್ಲ ಬಹು ಭಯವಾಗಿಯೂಮೋಹಕರವಾಗಿಯೂಇರುವದೆಂದು ಕೇಳಿದವರಾಗಲೂ.ಜಗತ್ಪಿತಾಮಹನಾದ ಮತ್ತೂ ಅಭಯ ಪ್ರದಾತನಾದ ಆ ಚತುರ್ಮುಖ ಬ್ರಹ್ಮನು ಆ ಮಾತಂ ಕೇಳಿ ಅವರುಗಳಂ ಕುರಿತು ಆ ಭೀತಿಯ ಕಾರಣವಂ ಪೇಳುವನ ದೆಂತನೆ ॥೨೪॥ ಎಲೈ ದೇವತಾ ಶ್ರೇಷ್ಠರುಗಳಿರಾ ಕೇಳಿ. ಲವಣಾಸುರನ ಸಂಹಾರಗೋಸ್ಕರ, ಒಂದಾನೊಂದು ಬಾಣವು ಶತ್ರುಘ್ನನಿಂದ ಧರಿಸಲ್ಪಟ್ಟಿಥೆ, ಅದರ ತೇಜಸ್ಸಿನಿಂದ ನೀವೆಲ್ಲರು ಮೋಹಿಸಲ್ಪಟ್ಟಂಥಾವರಾದಿರಿ, ಯಾವ ತೇಜೋವಿಶೇಷದಿಂದ ಈಗಲೇ ನೀವುಗಳು ಮೋಹಿತರಾದರೋ, ಅಂಥಾ ಈ ಬಾಣವು ಪೂರ್ವದಲ್ಲಿ, ದೇವೋತ್ತಮನಾದ ಮತ್ತು ಲೋಕಕರ್ತನಾದ ಶ್ರೀಮಹಾವಿಷ್ಣುವಿನ ಅನಾದಿ ಸಿದ್ಧವಾದ ಬಾಣವು, ಮಹಾನುಭಾವನಾದ ಆ ಶ್ರೀಮನ್ನಾರಾಯಣನು, ದುಷ್ಟಮತಿಯುಳ್ಳ ಮಧುಕೈಟಭ ರೆಂಬೀರ್ವ ರಾಕ್ಷಸರ ಸಂಹಾರಾರ್ಥವಾಗಿ ಈ ಉತ್ತಮವಾದ ನಿಡಿಗೋಲನ್ನು ಸೃಜಿಸಿದವನಾದನು, ತೇಜೋವಿಕಾರವಾದ ಇದನ್ನು ಆತನೊರ್ವನೆ ತಿಳಿದಿಥಾನೆ, ಮಹಾನು ಭಾವನಾದ ಆತನ ಪೂರ್ವಶರೀರವೇ ಈ ಬಾಣರೂಪವಾಗಿರುವದು, ಇದರಿಂದ ಈ ಭೀತಿಯುಂಟಾಗಿರುವದು, ಆದಕಾರಣ ನೀವೆಲ್ಲರು ಇಲ್ಲಿಂದ ಹೊರಡಿರಿ, ಕಡುಶೂರನಾದ ಆ ರಾಮಾನುಜನಿಂದ ವಧಿಸಲ್ಪಡುತ್ತಿರುವ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭೌ ॥೩೦॥ ತಂಶರಂದಿವ್ಯಸಂಕಾಶಂಶತ್ರುಘ್ನಕರಧಾರಿತಂ॥ ದದೃಶುಸ್ಸರ್ವಭೂತಾನಿಯುಗಾಂತಾಗ್ನಿಮಿವೋತ್ಥಿತಂ ॥೩೧॥ ಆಕಾಶಮಾವೃತಂದೃಷ್ಟ್ವಾದೇವೈರ್ಹಿರಘುನಂದನಃ । ಸಿಂಹನಾದಂಭೃಶಂಕೃತ್ವಾದದರ್ಶಲವಣಂಪುನಃ ॥೩೨॥ ಆಹೂತಶ್ಚಪುನಸ್ತೇನಶತ್ರುಘ್ನೇನಮಹಾತ್ಮನಾ । ಲವಣಃಕ್ರೋಧಸಂಯುಕ್ತೋಯುದ್ಧಾಯಸಮುಪಸ್ಥಿತಃ ॥೩೩॥ ಆಕರ್ಣಾತ್ಸವಿಕೃಷ್ಯಾಥತದ್ಧನುರ್ಧನ್ವಿನಾಂವರಃ । ತಂಮುಮೋಚಮಹಾಬಾಣಂಲವಣಸ್ಯಮಹೋರಸಿ ॥೩೪॥ ಉರಸ್ತಸ್ಯವಿದಾರ್ಯಾಶುಪ್ರವಿವೇಶರಸಾತಲಂ । ಗತ್ವಾರಸಾತಲಂದಿವ್ಯಶ್ಶರೋವಿಬುಧಪೂಜಿತಃ। ಪುನರೇವಾಗಮತ್ತೂರ್ಣಮಿಕ್ಷ್ವಾಕುಕುಲನಂದನಂ ॥೩೫॥ ಶತ್ರುಘ್ನಶರನಿರ್ಭಿನ್ನೋ ಲವಣಸ್ಸನಿಶಾಚರಃ । ಪಪಾತಸಹಸಾಭೂಮೌವಜ್ರಾಹತಇವಾಚಲಃ ॥೩೬॥ ತಚ್ಚದಿವ್ಯಂಮಹಚ್ಛೂಲಂಹತೇಲವಣರಾಕ್ಷಸೇ । ಪಶ್ಯತಾಂಸರ್ವಭೂತಾನಾಂರುದ್ರಸ್ಯವಶಮನ್ವಗಾತ್ ॥೩೭॥ತತಶ್ಚತೇದೇವಮಹರ್ಷಯಶ್ಚಗಂಧರ್ವಸಿದ್ಧಾಸ್ಸಹಿತಾಪ್ಸರೋಭಿಃ । ಅಪೂಜಯನ್ದಾಶರಥಿಂಸಮೇತಾದಿಷ್ಟ್ಯೇತಿದಿಷ್ಟ್ಯೇತಿಮುಹುರ್ನದಂ

---

ಬ್ರಹ್ಮನ, ವಚನಂ-ಮಾತನ್ನು, ನಿಶಮ್ಯ-ಕೇಳಿ, ಯತ್ರ-ಎಲ್ಲಿ, ಶತ್ರುಘ್ನಲವಣೌ-ಶತ್ರುಘ್ನಲವಣರೆಂಬ, ಉಭೌ-ಇಬ್ಬರು, ಯುಧ್ಯೇತೇ- ಯುದ್ಧಮಾಡುತ್ತಿದ್ದರೋ, ತತ್ರ-ಅಲ್ಲಿ, ಆಜಗ್ಮುಃ-ಬಂದರು ॥೩೦॥ ಸರ್ವಭೂತಾನಿ-ಸಮಸ್ತಪ್ರಾಣಿಗಳು, ಶತ್ರುಘ್ನಕರಧಾರಿತಂ- ಶತ್ರುಘ್ನನಕೈಯಿಂದ ಧರಿಸಲ್ಪಟ್ಟ, ಯುಗಾಂತಾಗ್ನಿಮಿವ-ಪ್ರಳಯಾಗ್ನಿಯಂತೆ, ಉತ್ಥಿತಂ-ಎದ್ದಿರುವ, ದಿವ್ಯಸಂಕಾಶಂ-ದೇವತಾಶ್ರೇಷ್ಠರಿಗೆ ಸಮಾನವಾದ,ತಂಶರಂ- ಆ ಬಾಣವನ್ನು, ದದೃಶುಃ-ಕಂಡರು ॥೩೧॥ ರಘುನಂದನಃ-ಶತ್ರುಘ್ನನು, ದೇವೈಃ-ದೇವತೆಗಳಿಂದ, ಆವೃತಂ-ತುಂಬಿರುವ, ಆಕಾಶಂ - ಗಗನವನ್ನು, ದೃಷ್ಟ್ವಾ-ಕಂಡು, ಭೃಶಂ-ಬಹಳವಾಗಿ, ಸಿಂಹನಾದಂ-ಕೋಲಾಹಲಧ್ವನಿಯನ್ನು, ಕೃತ್ವಾ-ಮಾಡಿ, ಲವಣಂ-ಲವಣಾಸುರನನ್ನು,ಪುನಃ-ಮತ್ತು, ದದರ್ಶ-ನೋಡಿದನು॥೩೨॥ ಮಹಾತ್ಮನಾ-ಮಹಾಧೈರ್ಯಶಾಲಿಯಾದ, ತೇನಶತ್ರುಘ್ನೇನ-ಆ ಶತ್ರುಘ್ನನಿಂದ, ಪುನಃ-ಮತ್ತು, ಆಹೂತಃ-ಕರೆಯಲ್ಪಟ್ಟ, ಲವಣಃ- ಲವಣಾಸುರನು, ಕ್ರೋಧಸಂಯುಕ್ತಃ-ಕೋಪಯುಕ್ತನಾಗಿ, ಯುದ್ಧಾಯ-ಕಾಳಗಕ್ಕೋಸುಗ, ಸಮುಪಸ್ಥಿತಃ-ಬಂದುನಿಂತನು॥೩೩॥ಅಥ-ಬಳಿಕ, ಧನ್ವಿನಾಂ-ಧನುರ್ಧಾರಿಗಳೊಳಗೆ, ವರಃ-ಶ್ರೇಷ್ಠನಾದ, ಸಃ-ಆ ಶತ್ರುಘ್ನನು, ತದ್ಧನುಃ-ಆ ಕೋದಂಡವನ್ನು, ಆಕರ್ಣಾತ್-ಕಿವಿವರೆಗೂ, ವಿಕೃಷ್ಯ-ಸೆಳೆದು, ತಂಮಹಾಬಾಣಂ-ಆ ಮಹಾಬಾಣವನ್ನು, ಲವಣಸ್ಯ-ಲವಣಾಸುರನ, ಮಹೋರಸಿ-ದೊಡ್ಡದಾದ ಎದೆಯಲ್ಲಿ, ಮುಮೋಚ-ಬಿಟ್ಟನು ॥೩೪॥ ದಿವ್ಯಃ-ದೇವತಾಸಂಬಂಧವಾದ, ಶರಃ-ಬಾಣವು, ತಸ್ಯ-ಆ ಲವಣಾಸುರನ, ಉರಃ-ವಕ್ಷಸ್ಥಲವನ್ನು, ವಿದಾರ್ಯ-ಸೀಳಿ, ರಸಾತಲಂ-ಪಾತಾಳಲೋಕವನ್ನು, ಆಶು-ಜಾಗ್ರತೆಯಾಗಿ, ಪ್ರವಿವೇಶ-ಹೊಕ್ಕಿತು, ರಸಾತಲಂ-ಪಾತಾಳಲೋಕವನ್ನು ಕುರಿತು, ಗತ್ವಾ-ಹೋಗಿ, ತೂರ್ಣಂ-ಜಾಗ್ರತೆಯಾಗಿ, ವಿಬುಧಪೂಜಿತಃ- ದೇವತೆಗಳಿಂದ ಪೂಜಿಸಲ್ಪಟ್ಟದ್ದಾಗಿ, ಪುನರೇವ-ಮತ್ತೂ, ಇಕ್ಷ್ವಾಕುಕುಲನಂದನಂ-ಇಕ್ಷ್ವಾಕುಕುಲಾನಂದಕರನಾದ ಆ ಶತ್ರುಘ್ನನನ್ನು, ಅಗಮತ್ - ಹೊಂದಿತು ॥ ೩೫ ॥ ನಿಶಾಚರಃ-ರಾಕ್ಷಸನಾದ, ಸಲವಣಃ - ಆ ಲವಣಾಸುರನು, ಶತ್ರುಘ್ನಶರನಿರ್ಭಿನ್ನಃ - ಶತ್ರುಘ್ನನ ಬಾಣದಿಂದ ಭೇದಿಸಲ್ಪಟ್ಟವನಾಗಿ, ಸಹಸಾ-ಜಾಗ್ರತೆಯಾಗಿ, ಭೂಮೌ-ನೆಲದಲ್ಲಿ, ವಜ್ರಾಹತಃ-ವಜ್ರಾಯುಧದಿಂದ ಹೊಡೆಯಲ್ಪಟ್ಟ, ಅಚಲಇವ-ಬೆಟ್ಟದಂತೆ, ಪಪಾತ- ಬಿದ್ದನು ॥೩೬॥ ಲವಣರಾಕ್ಷಸೇ-ಲವಣನೆಂಬ ರಾಕ್ಷಸನು, ಹತೇಸತಿ-ಹೊಡೆಯಲ್ಪಟ್ಟವನಾಗುತಿರಲಾಗಿ, ದಿವ್ಯಂ-ದೇವತಾಸಂಬಂಧವಾದ, ಮಹತ್- ದೊಡ್ಡದಾದ, ತಚ್ಛೂಲಂ-ಆತ್ರಿಶೂಲವು, ಸರ್ವಭೂತಾನಾಂ-ಸಮಸ್ತಪ್ರಾಣಿಗಳು, ಪಶ್ಯತಾಂಸತಾಂ-ನೋಡುತ್ತಿರುವ ರಾಗುತಿರಲಾಗಿ, ರುದ್ರಸ್ಯ- ಪರಮೇಶ್ವರನ, ವಶಂ-ಅಧೀನವಾಗಿ, ಅನ್ವಗಾತ್-ಹೊರಡಿತು ॥೩೭॥ ತತಃ-ಬಳಿಕ, ತೇ-ಆ, ದೇವಮಹರ್ಷಯಶ್ಚ - ದೇವತೆಗಳೂ ಮಹರ್ಷಿಗಳೂ, ಗಂಧ

---

ಮತ್ತು ರಾಕ್ಷಸೋತ್ತಮನಾದ ಆ ಲವಣಾಸುರನಂ ನೋಡಿರೆಂದು, ವಾರಿಜಾಸನನು ನಿರೂಪಿಸಿದವನಾಗಲು ದೇವೋತ್ತಮನಾದ ಆತನವಾಕ್ಯವಂ ಕೇಳಿ ದೇವತೆಗಳೆಲ್ಲ, ಶತ್ರುಘ್ನ ಲವಣರೀರ್ವರು ಯಾವ ಎಡದಲ್ಲಿ ಸಂಗರವಂಗೈಯುತ್ತಿದ್ದರೋ ಆ ಎಡಕ್ಕೆ ಬಂದವರಾಗಿ, ಪ್ರಳಯಾಗ್ನಿಯಂತೆ ಮಹಾ ಭೀತಿದಾಯಕ ಮಾಗಿಯೂ ಸರ್ವೋತ್ತಮವಾಗಿಯೂ ಇರುವ, ಮತ್ತು ಶತ್ರುಘ್ನನಿಂದ ಧರಿಸಲ್ಪಟ್ಟ ಕಡುಭಯಂಕರವಾದ ಆ ನಿಡಿಗೋಲನ್ನು ಕಂಡವರಾದರು॥೩೧॥ ಆ ರಘುವೀರನಾದ ಶತ್ರುಘ್ನನಾದರೆ, ದೇವತೆಗಳಿಂದ ವ್ಯಾಪ್ತವಾದ ಗಗನ ಮಂಡಲವನ್ನು ನೋಡಿ, ಅಟ್ಟಹಾಸವಂಗೈದು ಪುನಃ ಆ ಲವಣಾಸುರನಂ ಸಂಗರಕ್ಕೆ ಕರೆದವನಾಗಲೂ, ಆರಕ್ಕಸನು ಕೆಂಗಣ್ಣುಗಳುಳ್ಳವನಾಗಿಕಾಳಗಕ್ಕೋಸುಗ ನಿಂತವನಾದನು ॥೩೩॥ ಧನುರ್ಧಾರಿಗಳೊಳಗೆ ಉತ್ತಮನಾದ ಆ ಶತ್ರುಘ್ನನು,ಕೋದಂಡವನ್ನು ಕಿವಿಯವರೆಗೂ ಸೆಳೆದು, ಬಳಿಕ ಆಮಹಾಬಾಣವಂ ಲವಣಾಸುರನ ಎದೆಯಮೇಲೆ ಬಿಟ್ಟವನಾಗಲೂ, ಆ ಶರವು ಭಿರ್ರನೆಪೋಗಿ ಆ ರಕ್ಕಸನ ಉರಸ್ಥಳವಂ ಭೇದಿಸಿ, ಪಾತಾಳವಂಹೊಕ್ಕು,ಪುನಃ ತ್ವರೆಯಾಗಿ ರಘುನಂದನನಂ ಪೊಂದಿದಂಥಾದ್ದಾಯಿತು॥೩೫॥ ಆಲವಣಾಸುರನೆಂಬ ನಿಶಾಚರನಾದರೆ ಶತ್ರುಘ್ನನ ಬಾಣದಿಂದ ಭೇದಿಸಲ್ಪಟ್ಟ ಎದೆಗುಂಡಿಗೆಯುಳ್ಳವನಾಗಿ, ವಜ್ರಾಯುಧದಿಂದ ಹೊಡೆಯಲ್ಪಟ್ಟಬೆಟ್ಟದಂತೆ ಕೆಳಗೆ ಕೂಲಿದನು ॥೩೬॥ ಈಪರಿ ಆವಣಾಸುರನುಹತನಾಗಲು, ಆ ಶಿವಸಂಬಂಧವಾದ ತ್ರಿಶೂಲವು ದೇವತೆಗಳೆಲ್ಲರು ನೋಡುತ್ತಿರುವಾಗಲೇ ಶಂಕರನ ಸನ್ನಿಧಿಯಂ ಪೊಂದಿತು ॥೩೭॥ ಬಳಿಕಾದರೆ ಆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಃ ॥೨೮॥ ಏಕೇಷುಪಾತೇನಭಯಂನಿಹತ್ಯಲೋಕತ್ರಯಸ್ಯಾಸ್ಯರಘೋತ್ತಮಸ್ಸಃ । ತಮೋವಿದಾರ್ಯಾಥರರಾಜವೀರಸ್ಸೂರ್ಯೋಯಥಾಚಾರುಸಹಸ್ರರಶ್ಮಿಃ ॥೨೯॥ —...ಇತಿಶ್ರೀಮದುತ್ತರ ರಾಮಾಯಣೆ ಏಕೋನ ಸಪ್ತತಿತಮಸ್ಸರ್ಗಃ...—

ಹತೇತುಲವಣೇದೇವಾಸ್ಸೇಂದ್ರಾಸ್ಸಾಗ್ನಿಪುರೋಗಮಾಃ । ಊಚುಸ್ಸುಮಧುರಾಂವಾಣೀಂಶತ್ರುಘ್ನಂಶತ್ರುತಾಪನಂ॥೧॥ದಿಷ್ಟ್ಯಾತ್ವಂವಿಜಯೀವತ್ಸದಿಷ್ಟ್ಯಾಲವಣರಾಕ್ಷಸಃ । ಹತಃಪುರುಷಶಾರ್ದೂಲವರಂವರಯರಾಘವ ॥೨॥ ವರದಾಸ್ಸ್ಮಮಹಾಬಾಹೋಸರ್ವಏವಸಮಾಗತಾಃ । ವಿಜಯಾಕಾಂಕ್ಷಿಣಸ್ತುಭ್ಯಂಅಮೋಘಂದರ್ಶನಂಚನಃ ॥೩॥ ದೇವಾನಾಂಭಾಷಿತಂಶ್ರುತ್ವಾಶೂರೋಮೂರ್ಧ್ನಿಕೃತಾಂಜಲಿಃ । ಪ್ರತ್ಯುವಾಚಮಹಾಬಾಹುಶ್ಶತ್ರುಘ್ನಃಪ್ರಯತಾತ್ಮವಾನ್ ॥೪॥ ಇಮಾಂಮಧುಪುರೀಂರಮ್ಯಾಂಮಧುರಾಂದೇವನಿರ್ಮಿತಾಂ । ನಿವೇಶಂಪ್ರಾಪ್ನುಯಾಂಶೀಘ್ರಮೇಷಮೇಸ್ತುವರೋಮತಃ॥೫॥ ತಂದೇವಾಃ

---

ರ್ವಸಿದ್ಧಾಃ-ಗಂಧರ್ವರೂ ಸಿದ್ಧರೂಸಹ, ಅಪ್ಸರೋಭಿಃ-ಅಪ್ಸರ ಸ್ತ್ರೀಯರಿಂದ, ಸಹಿತಾಃ-ಕೂಡಿದವರಾಗಿ, ಸಮೇತಾಃ-ಸೇರಿದವರಾಗಿ, ದಿಷ್ಟ್ಯೇತಿದಿಷ್ಟ್ಯಾ ಇತಿ-ದೈವಾಧೀನದಿಂದ, ಇತಿ-ಇಂತೆಂದು, ಮುಹುರ್ಮುಹುಃ-ಬಾರಿಬಾರಿಗು, ನದಂತಃ-ಕೂಗುತ್ತಿರುವರಾಗಿ, ದಾಶರಥಿಂ-ಶತ್ರುಘ್ನನನ್ನು, ಅಪೂಜಯನ್-ಶ್ಲಾಘಿಸಿದರು ॥೨೮॥ ಅಥ-ಅನಂತರದಲ್ಲಿ, ವೀರಃ-ಶೂರನಾದ, ರಘೂತ್ತಮಃ-ರಘುವಂಶೋತ್ಪನ್ನರಲ್ಲಿ ಶ್ರೇಷ್ಠನಾದ, ಸಃ-ಆ ಶತ್ರುಘ್ನನು, ಏಕೇಷುಪಾತೇನ-ಒಂದು ಬಾಣಪ್ರಯೋಗದಿಂದ, ಅಸ್ಯಲೋಕತ್ರಯಸ್ಯ-ಈ ಸ್ವರ್ಗಮರ್ತ್ಯ ಪಾತಾಳಗಳೆಂಬ ಲೋಕತ್ರಯಕ್ಕು,ಭಯಂ-ಭಯಂಕರನಾದ ಲವಣಾಸುರನನ್ನು, ನಿಹತ್ಯ-ಹೊಡೆದು, ತಮಃ-ಅಂಧಕಾರವನ್ನು, ವಿದಾರ್ಯ-ಪರಿಹರಿಸಿ, ಚಾರುಸಹಸ್ರರಶ್ಮಿಃ-ಮನೋಹರವಾದ ಸಹಸ್ರಕಿರಣಗಳುಳ್ಳ, ಸೂರ್ಯೋಯಥಾ-ಸೂರ್ಯನಂತೆ, ರರಾಜ-ಹೊಳೆಯುತ್ತಿದ್ದನು ॥೨೯॥

—...*ಇತಿ ಶ್ರೀಮದುತ್ತರ ರಾಮಾಯಣೆ ಏಕೋನಸಪ್ತತಿತ್ತಮಸ್ಸರ್ಗಃ.*...—

ಲವಣೇತು-ಲವಣಾಸುರನಾದರೆ, ಹತೇಸತಿ-ಸಂಹೃತನಾಗುತಿರಲೀಕಾಗಿ, ಸೇಂದ್ರಾಃ-ಇಂದ್ರಸಹಿತರಾದ, ಸಾಗ್ನಿಪುರೋಗಮಾಃ-ಅಗ್ನಿಯೇಮೊದಲಾದವರಿಂದೊಡಗೂಡಿದ, ದೇವಾಃ-ದೇವತೆಗಳು, ಶತ್ರುತಾಪನಂ-ಶತ್ರುವಿನಂ ಧ್ವಂಸಮಾಡಿದ,ಶತ್ರುಘ್ನಂ-ಶತ್ರುಘ್ನನಂಕುರಿತು, ಮಧುರಾಂ-ಮನೋಹರವಾದ, ವಾಣೀಂ-ವಾಕನ್ನು, ಊಚುಃ-ಪೇಳದರು ॥೧॥ ಹೆ ವತ್ಸ-ಎಲೈ ಬಾಲಕನೆ, ದಿಷ್ಟ್ಯಾ-ದೈವಧೀನದಿಂದ, ತ್ವಂ-ನೀನು, ವಿಜಯೀ-ಜಯಶೀಲನಾದೆ ಹೆ ಪುರುಷಶಾರ್ದೂಲ - ಎಲೈ ಪುರುಷಶ್ರೇಷ್ಠನೆ, ಲವಣರಾಕ್ಷಸಃ -ಲವಣಾಸುರನು,ದಿಷ್ಟ್ಯಾ-ದೈವಾಧೀನದಿಂದ,ಹತಃ- ಹೊಡೆಯಲ್ಪಟ್ಟನು, ಹೇರಾಘವ-ಎಲೈ ರಘುವಂಶೋತ್ಪನ್ನನೆ, ವರಂ-ವರವನ್ನು,ವರಯ-ಬೇಡು ॥೨॥ಹೇ ಮಹಾಬಾಹೋ-ಎಲೈ ಮಹಾಭುಜಪರಾಕ್ರಮಶಾಲಿಯೆ, ತುಭ್ಯಂ-ನಿನಿಗೆ, ವಿಜಯಾಕಾಂಕ್ಷಿಣಃ - ಜಯವನ್ನೆ ಬಯಸುತ್ತಿರುವರಾಗಿ,ವರದಾಃ -ವರಪ್ರದಾತೃಗಳಾದ,ಸರ್ವಏವ-ಎಲ್ಲರು,ಸಮಾಗತಾಃ-ಬಂದವರು,ಸ್ಮ- ಆಗಿದ್ದೇವೆ, ನಃ-ನಮ್ಮ, ದರ್ಶನಂ-ದರ್ಶನವು, ಅಮೋಘಂ-ವ್ಯರ್ಥವಾದದ್ದಲ್ಲ॥೩ ॥ ಶೂರಃ-ವೀರನಾದ, ಮಹಾಬಾಹುಃ-ಮಹಾಭುಜಪರಾಕ್ರಮಿಯಾದ, ಪ್ರಯತಾತ್ಮವಾನ್-ನಿಶ್ಚಂಚಲವಾದ ಮನಸ್ಸುಳ್ಳ, ಶತ್ರುಘ್ನಃ-ಶತ್ರುಘ್ನನು, ದೇವಾನಾಂ-ದೇವತೆಗಳ, ಭಾಷಿತಂ- ಮಾತನ್ನು, ಶ್ರುತ್ವಾ-ಕೇಳ, ಮೂರ್ಧ್ನಿ- ಶಿರಸ್ಸಿನಲ್ಲಿ, ಕೃತಾಂಜಲಿಃ-ಮಾಡಲ್ಪಟ್ಟ ಅಂಜಲಿಯುಳ್ಳವನಾಗಿ, ಪ್ರತ್ಯುವಾಚ - ಪ್ರತ್ಯುತ್ತರಕೊಟ್ಟನು॥ರಮ್ಯಾಂ-ಮನೋಹರವಾದ,ದೇವನಿರ್ಮಿತಾಂ-ದೇವತೆಗಳಿಂದ ನಿರ್ಮಿಸಲ್ಪಟ್ಟ, ಮಧುರಾಂ-ಮಧುರೆಯೆಂಬ, ಇಮಾಂಮಧುಪುರೀಂ-ಈಮಧ್ವಾಸುರನ ಪಟ್ಟಣವನ್ನು,ನಿವೇಶಂ-ಸ್ಥಾನವನ್ನಾಗಿ,ಶೀಘ್ರಂ-ತ್ವರಿಯ್ಯವಾಗಿ, ಪ್ರಾಪ್ನುಯಾಂ-ಹೊಂದುವನು, ಏಷವರಃ-ಈ ವರವು, ಮೇ-ನನಿಗೆ, ಮತಃ- ಸಂಮತವಾದ್ದು, ಅಸ್ತು-ಆಗಲೀ ॥೫॥ಮಹಾತ್ಮಾನಃ-

---

ದೇವತೆಗಳು, ಮಹರ್ಷಿಗಳೂ, ಗಂಧರ್ವರೂ, ಸಿದ್ಧರು, ಅಪ್ಸರಸ್ತ್ರೀಯರೂ ಇವರೆಲ್ಲರು ಗುಂಪುಶೇರಿ, ದೈವಾಧೀನದಿಂದ ಈ ಲವಣಾಸುರನು ಹತನಾದನೆಂದು ಕೂಗುತ್ತಿರುವರಾಗಿ, ಶತ್ರುಘ್ನನಂ ಶ್ಲಾಘಿಸಿದಂಥಾವರಾದರು ॥೨೮॥ ಅನಂತರದೊಳು ಆ ರಘುವೀರನಾದ ರಾಮಾನುಜನು ಒಂದು ಬಾಣಪಾತದಿಂದಲೇ ಲೋಕತ್ರಯ ಭಯವಂನೀಗಿದವನಾಗಿ, ಸೂರ್ಯನು ಅಂಧಕಾರ ವಿನಾಶನವಂಗೈದು ಕಂಗೊಳಿಸುವಂತೆ ಕಂಗೊಳಿಸುತ್ತಿದ್ದನು ॥೨೯॥

—...ಉತ್ತರರಾಮಾಯಣದಲ್ಲಿನ ೬೯ನೆಯ ಸರ್ಗಂ ಮುಗಿದುದು...—

ಈಪರಿ ಆ ಲವಣಾಸುರನು ಹತನಾಗಲೂ, ಇಂದ್ರ ಸಹಿತರಾದ ಅಗ್ನಿಯೇ ಮುಂತಾದ ದೇವತೆಗಳೆಲ್ಲರೂ ಶತ್ರುಘ್ನನಂ ಕುರಿತು ಎಲೈ ಮಹಾಶೂರನೇ ! ದೈವಾಧೀನದಿಂದೀ ರಾಕ್ಷಸನು ಹತನಾದನು. ನೀನು ಜಯಶಾಲಿಯಾದವನಾದೆ. ನಿನಿಗೇನು ವರವಂ ಬೇಕೋ ಬೇಡುವಂಥಾವನಾಗು. ವರಪ್ರದಾತರಾದ ನಾವೆಲ್ಲರು ಶೇರಿಧೇವೆ, ನಿನಿಗೆ ಜಯವಂ ಕಾಂಕ್ಷಿಸುತ್ತಿದ್ದೆವು, ನಮ್ಮ ಸಂದರುಶನವು ವ್ಯರ್ಥವಾದದ್ದಲ್ಲ ಎಂಬದಾಗಿ ಪೇಳಿದವರಾಗಲೂ, ಆ ವಾಕ್ಯವಂ ಕೇಳಿ ಶತ್ರುಘ್ನನುಕೈಮುಗಿದು ಕೊಂಡವನಾಗಿ, ಆ ದೇವತೆಗಳಂ ಕುರಿತು ಎಲೈ ದೇವತೆಗಳಿರಾ ! ಮಹಾ ಮನೋಹರವಾಗಿಯೂ, ದೇವನಿರ್ಮಿತವಾಗಿಯೂ ಇರುವ ಈ ಮಧುರಾ ಪಟ್ಟಣದೊಳು ವಾಸಿಸಲಿಚ್ಛಿಸುತ್ತೇನೆ, ಈವರವನ್ನೆನಗೆ ಕೊಡಬೇಕೆಂಬದಾಗಿ ಪ್ರಾರ್ಥಿಸಿದವನಾದನು॥೫॥ ಆಗ ದೇವತೆಗಳು ಸಂತುಷ್ಟಾಂತರಂಗವುಳ್ಳವರಾಗಿ, ಆ ಶತ್ರುಘ್ನನಂಕು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರೀತಮನಸೋಬಾಢಮಿತ್ಯೇವರಾಘವಂ । ಭವಿಷ್ಯತಿಪುರೀರಮ್ಯಾ ಶೂರಸೇನಾನಸಂಶಯಃ । ತೇತಥೋಕ್ತ್ವಾ ಮಹಾತ್ಮಾನೋ ದಿವಮಾರುರುಹುಸ್ತದಾ ॥೬॥ ಶತ್ರುಘ್ನೋಪಿಮಹಾತೇಜಾಸ್ತಾಂಸೇನಾಂಸಮುಪಾನಯತ್ । ಸಾಸೇನಾಶೀಘ್ರಮಾಗಮ್ಯ ಶ್ರುತ್ವಾ ಶತ್ರುಘ್ನಶಾಸನಂ । ನಿವೇಶನಂಚಚಕ್ರೇಸಾಮಧುರಾಯಾಂಮಹಾಬಲಾ ॥೭॥ ಸಾಪುರೀದಿವ್ಯಸಂಕಾಶಾವರ್ಷೇದ್ವಾದಶಮೇ ಶುಭಾ । ನಿವಿಷ್ಟಾ ಶೂರಸೇನಾನಾಂವಿಷಯಶ್ಚಾಕುತೋಭಯಃ ।೮। ಕ್ಷೇತ್ರಾಣಿಸಸ್ಯಯುಕ್ತಾನಿಕಾಲೇವರ್ಷತಿವಾಸವಃ ೯॥ ಅರೋಗಾವೀರಪುರುಷಾಶತ್ರುಘ್ನಭುಜಪಾಲಿತಾ । ಅರ್ಧಚಂದ್ರಪ್ರತೀಕಾಶಾಯಮುನಾತೀರಮಾಶ್ರಿತಾ ॥೧೦॥ ಶೋಭಿತಾ ಗೃಹಮುಖ್ಯೈಶ್ಚ ಶೋಭಿತಾಚತ್ವರಾಪಣೈಃ ॥೧೧॥ ಯಚ್ಚತೇನಮಹಚ್ಛುಭ್ರಂಲವಣೇನಕೃತಂಪುರಾ । ಶೋಭಯಾಮಾಸಶತ್ರುಘ್ನೋನಾನಾವರ್ಣೇನತದ್ಗೃಹಂ ॥೧೨॥ ಆರಾಮೈಶ್ಚ ವಿಹಾರೈಶ್ಚ ತಟಾಕೈಶ್ಚ ಸಮಂತತಃ । ಶೋಭಿತಾಂಶೋಭನೀಯೈಶ್ಚ ಯೇಚಾನ್ಯೇದಿವ್ಯಮಾನುಷಾಃ ॥೧೩॥ ತಾಂಪುರೀಂದಿವ್ಯಸಂಕಾಶಾಂನಾನಾಪಣ್ಯೋಪಶೋಭಿತಾಂ । ನಾನಾದೇಶಗತೈಶ್ಚಾಪಿ ವಣಿ

---

ಮಹಾ ಮನಸ್ವಿಗಳಾದ, ತೇ-ಆ,ದೇವಾಃ-ದೇವತೆಗಳು, ಪ್ರೀತಮನಸಃ-ವಿಶ್ವಾಸಗೊಂಡ ಮನಸ್ಸುಳ್ಳವರಾಗಿ, ಬಾಢಮಿತ್ಯೇವ-ಹಾಗೆಸರಿ, ರಮ್ಯಾ-ಮನೋಹರವಾದ, ಪುರೀ-ಪಟ್ಟಣವು, ಶೂರಸೇನಾ-ಶೂರರ ಸೈನ್ಯವುಳ್ಳದ್ದು, ಭವಿಷ್ಯತಿ-ಆಗುವದು, ನಸಂಶಯಃ-ಸಂದೇಹವಿಲ್ಲ,(ಇತಿ-ಇಂತೆಂಬು) ರಾಘವಂ-ಆ ಶತ್ರುಘ್ನನಂ ಕುರಿತು, ತಥಾ-ಹಾಗೆ, ಉಕ್ತ್ವಾ-ಹೇಳಿ,ತದಾ-ಆ ಕಾಲದಲ್ಲಿ,ದಿವಂ-ಸ್ವರ್ಗಲೋಕವನ್ನು, ಆರುರುಹುಃ-ಏರಿದರು ॥೬॥ಮಹಾತೇಜಾಃ-ಅತಿತೇಜೋವಂತನಾದ, ಶತ್ರುಘ್ನೋಪಿ-ಶತ್ರುಘ್ನನೂಕೂಡ, ತಾಂಸೇನಾಂ-ಆ ಸೈನ್ಯವನ್ನು, ಸಮುಪಾನಯತ್-ತೆಗೆದುಕೊಂಡುಬಂದನು, ಮಹಾಬಲಾ-ಅತಿಪ್ರಬಲವಾದ, ಸಾ-ಪ್ರಸಿದ್ಧವಾದ, ಸಾಸೇನಾ-ಆ ಸೇನೆಯು, ಶತ್ರುಘ್ನಶಾಸನಂ-ಶತ್ರುಘ್ನನ ಆಜ್ಞೆಯನ್ನು, ಶ್ರುತ್ವಾ-ಕೇಳಿ,ಶೀಘ್ರಂ-ಜಾಗ್ರತೆಯಾಗಿ, ಆಗಮ್ಯ-ಬಂದು, ಮಧುರಾಯಾಂ-ಮಧುರಾಪಟ್ಟಣದಲ್ಲಿ, ನಿವೇಶನಂ-ಠಾಣ್ಯವನ್ನು, ಚಕ್ರೇ-ಮಾಡಿತು ॥೭॥ ದಿವ್ಯಸಂಕಾಶಾ-ಅಮರಾವತೀಪಟ್ಟಣಕ್ಕೆ ಸಮಾನವಾದ, ಶುಭಾ-ಶುಭಕರವಾದ, ಸಾಪುರೀ-ಆ ಪಟ್ಟಣವು, ದ್ವಾದಶಮೇ-ಹನ್ನೆರಡನೆಯದಾದ, ವರ್ಷೇ-ಸಂವತ್ಸರದಲ್ಲಿ, ನಿವಿಷ್ಟಾ-ಪ್ರವೇಶಿಸಲ್ಪಟ್ಟಿತು, ಶೂರಸೇನಾನಾಂ-ಶೂರಸೇನರಾಜರ, ವಿಷಯಶ್ಚ-ದೇಶವೂ, ಅಕುತೋಭಯಃ-ನಿರ್ಭಯವಾಯಿತು,ಕ್ಷೇತ್ರಾಣಿ-ನೆಲಗಳು,ಸಸ್ಯಯುಕ್ತಾನಿ-ಪೈರುಗಳಿಂದ ಯುಕ್ತವಾದವು, ವಾಸವಃ-ಪರ್ಜನ್ಯನು, ಕಾಲೇ-ಕಾಲದಲ್ಲಿ, ವರ್ಷತಿ-ವರ್ಷಿಸುತ್ತಿದ್ದನು ॥೯॥ಅರೋಗಾ-ರೋಗವಿಲ್ಲದಿರುವ,ವೀರಪುರುಷಾ-ಶೂರರಾದವರುಳ್ಳ, ಶತ್ರುಘ್ನಭುಜಪಾಲಿತಾ-ಶತ್ರುಘ್ನನ ಭುಜದಿಂದ ಪರಿಪಾಲಿಸಲ್ಪಟ್ಟ, ಅರ್ಧಚಂದ್ರಪ್ರತೀಕಾಶಾ-ಅರ್ಧಚಂದ್ರನಿಗೆ ಸಮಾನವಾದ, ಯಮುನಾತೀರಂ-ಯಮುನಾತೀರವನ್ನು, ಆಶ್ರಿತಾ-ಆಶ್ರಯಿಸಿರುವ, (ಸಾ-ಆ ಪಟ್ಟಣವು) ಗೃಹಮುಖ್ಯೈಶ್ಚ-ಉತ್ತಮವಾದ, ಮನೆಗಳಿಂದಲೂ, ಶೋಭಿತಾ- ಹೊಳೆಯುತ್ತಿತ್ತು, ಚತ್ವರಾಪಣೈಃ-ಚತ್ವರ-ಅಂಗಳಗಳಿಂದಲೂ, ಆಪಣೈಃ-ಮಳಿಗೆಗಳಿಂದಲೂ, ಶೋಭಿತಾ-ಪ್ರಕಾಶಿಸುತ್ತಿತ್ತು ॥೧೧॥ ಮಹತ್-ದೊಡ್ಡದಾದ, ಯಚ್ಚ-ಯಾವ ಮನೆಯೂ ಕೂಡಾ, ತೇನಲವಣೇನ-ಆ ಲವಣಾಸುರನಿಂದ, ಪುರಾ-ಪೂರ್ವದಲ್ಲಿ, ಶುಭ್ರಂ-ಬೆಳ್ಳಗೆ, ಕೃತಂ-ಮಾಡಲ್ಪಟ್ಟಿತ್ತೋ, ತದ್ಗೃಹಂ-ಆ ಮನೆಯನ್ನು, ಶತ್ರುಘ್ನಃ-ಶತ್ರುಘ್ನನು, ನಾನಾವರ್ಣೇನ-ನಾನಾಬಗೆಗಳಾದ ವರ್ಣದಿಂದ, ಶೋಭಯಾಮಾಸ-ಕಂಗೊಳಿಸುವಂತೆ ಮಾಡಿದನು॥೧೨॥ ಆರಾಮೈಶ್ಚ - ಉದ್ಯಾನವನಗಳಿಂದಲೂ, ವಿಹಾರೈಶ್ಚ-ವಿಹಾರಸ್ಥಾನಗಳಿಂದಲೂ, ಸಮಂತತಃ-ಎಲ್ಲಾಕಡೆಯಲ್ಲಿ,ತಟಾಕೈಶ್ಚ-ಕೆರೆಗಳಿಂದಲೂ, ಶೋಭಿತಾಂ-ಪ್ರಕಾಶಿಸಲ್ಪಟ್ಟ, ಅನ್ಯೇ-ಮತ್ತು ಕೆಲವಾದ, ದಿವ್ಯಮಾನುಷಾಃ-ದೇವತಾ ಸಂಬಂಧಗಳಾಗಿಯೂ ಮನುಷ್ಯಸಂಬಂಧಗಳಾಗಿಯೂ ಇರುವವು, ಯೇ-ಯಾವುಗಳೋ, ಶೋಭನೀಯೈಃ-ಪ್ರಕಾಶಯೋಗ್ಯಗಳಾದ, ತೈಃ-ಆ ಪದಾರ್ಥಗಳಿಂದ, ಶೋಭಿತಾಂ-ಕಂಗೊಳಿಸುತ್ತಿರುವ, ದಿವ್ಯಸಂಕಾಶಾಂ-ದೇವತಾಪುರಿ

---

ರಿತು ಎಲೈ ಶೂರನೇ! ನಿನ್ನ ಅಭಿಮತದಂತೆ ಈ ಪುರಿಯು ವೀರರಾದ ಸೇನಾಜನಗಳುಳ್ಳದ್ದಾಗಿಯೂ, ಮನೋಹಾರಿಯಾಗಿಯೂ ಇರುವದೆಂದು ನಿರೂಪಿಸಿ, ಸುರಲೋಕವಂ ಕುರಿತು ತೆರಳಿದರು ॥೬॥ ಮಹಾ ತೇಜೋವಂತನಾದ ಆ ಶತ್ರುಘ್ನನಾದರೆ, ಆ ಸೇನೆಯಂ ಕರೆಯಿಸಿದಂಥಾವನಾಗಲೂ , ಮಹಾ ಪ್ರಸಿದ್ಧವಾದ ಆ ಸೇನೆಯು ಶತ್ರುಘ್ನನ ಆಜ್ಞೆಯಂ ಕೇಳಿ, ತ್ವರೆಯಾಗಿ ಬಂದು, ಮಧುರಾಪಟ್ಟಣದಲ್ಲಿ ಇಳಿದುಕೊಂಡಂಥಾದ್ದಾಯಿತು ॥೭॥ ಅಮರಾವತೀಪುರಿಗೆ ಸಮಾನವಾದ ಆ ಮಧುರಾಪುರಿಯು, ಹನ್ನೆರಡುವರುಷಗಳು ಕಟ್ಟಲ್ಪಟ್ಟಂಥಾದ್ದಾಯಿತು, ಶೂರಸೇನರಾಜರ ಕುಲವು ಕೂಡಾ ನಿರ್ಭಯವಾಗಿ ಮಾಡಲ್ಪಟ್ಟಿತು, ಆ ದೇಶದಲ್ಲಿರ್ಪ ಕ್ಷೇತ್ರಗಳೆಲ್ಲ ಪೈರುಗಳುಳ್ಳಂಥಾವುಗಳಾದವು, ಕಾಲಕಾಲದಲ್ಲಿ ಪರ್ಜನ್ಯನು ವರ್ಷಿಸುತ್ತಿದ್ದನು, ॥೯॥ ಅರ್ಧಚಂದ್ರನಿಗೆ ಸದೃಶವಾಗಿರ್ಪ ಮತ್ತೂ ಯಮುನಾತೀರದಲ್ಲಿರುವ ಆ ಮಧುರಾಪುರಿಯು, ರೋಗರಹಿತರಾದ ಜನಗಳುಳ್ಳದ್ದಾಗಿಯೂ, ವೀರರಾದ ಪುರುಷರುಗಳುಳ್ಳದ್ದಾಗಿಯೂ, ಶತ್ರುಘ್ನನ ಬಾಹುವಿಂದ ಪರಿಪಾಲಿಸಲ್ಪಟ್ಟದ್ದಾಗಿಯೂ, ಉತ್ತಮವಾದ ಮನೆಗಳಿಂದಲೂ ಅಂಗಳಗಳಿಂದಲೂ ಮಳಿಗೆಗಳಿಂದಲೂ ಸಹ ಹೊಳೆಯುತ್ತಿರುವದಾಗಿಯೂ ಇದ್ದಂಥಾದ್ದಾಯಿತು, ಇದಲ್ಲದೆ ಪೂರ್ವದಲ್ಲಿ ಲವಣಾಸುರನು ಯಾವ ಮಂದಿರಕ್ಕೆ ಶುಭ್ರವಾಗಿರುವಂತೆ ಬಣ್ಣವನ್ನು ಹಾಕಿಸಿದ್ದನೋ, ಆ ಮನೆಯನ್ನು ನಾನಾಬಣ್ಣಗಳಿಂದ ಪ್ರಕಾಶಮಾನವಾಗಿರುವಂತೆ ಮಾಡಿಸಿ, ಸುತ್ತುಮುತ್ತಲೂ ಉದ್ಯಾನವನಗಳಿಂದಲೂ, ವಿಹಾರಭೂಮಿಗಳಿಂದಲೂ,ಕೆರೆಗಳಿಂದಲೂ, ಭಾವಿಗ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗ್ಭಿರುಪಶೋಭಿತಾಂ॥೧೪॥ ತಾಂಸಮೃದ್ಧಾಂಸಮೃದ್ಧಾರ್ಥಃಶತ್ರುಘ್ನೋಭರತಾನುಜಃ । ನಿರೀಕ್ಷ್ಯಪರಮಪ್ರೀತ್ಯಾಪರಂಹರ್ಷಮುಪಾಗಮತ್ ॥೧೫॥ ತಸ್ಯಬುದ್ಧಿಸ್ಸಮುತ್ಪನ್ನಾನಿವೇಶ್ಯಮಧುರಾಂಪುರೀಂ। ರಾಮಪಾದೌನಿರೀಕ್ಷೇಯಂವರ್ಷೇದ್ವಾದಶಮೇಶುಭೇ॥೧೬॥

—…*ಇತಿಶ್ರೀಮದುತ್ತರರಾಮಾಯಣೆ ಸಪ್ತತಿತಮಸ್ಸರ್ಗಃ*…—

ತತೋದ್ವಾದಶಮೇವರ್ಷೇಶತ್ರುಘ್ನೋರಾಮಪಾಲಿತಾಂ। ಅಯೋಧ್ಯಾಂಚಕಮೇಗಂತುಂಅಲ್ಪಭೃತ್ಯಬಲಾನುಗಃ॥೧॥ ತತೋಮಂತ್ರಿಪುರೋಗಾಂಶ್ಚ ಬಲಮುಖ್ಯಾನ್ನಿವರ್ತ್ಯಚ। ಜಗಾಮರಥಮುಖ್ಯೇನಹಯಾನಾಂಚಶತೇನಸಃ॥೨॥ ಸಗತ್ವಾಗಣಿತಾನ್ವಾಸಾನ್ಸಪ್ತಾಷ್ಟೌರಘುನಂದನಃ । ವಾಲ್ಮೀಕ್ಯಾಶ್ರಮಮಾಸಾದ್ಯವಾಸಂಚಕ್ರೇಮಹಾರಥಃ॥೩॥ ಸೋಭಿವಾದ್ಯತತಃಪಾದೌವಾಲ್ಮೀಕೇಃಪುರುಷರ್ಷಭಃ। ಪಾದ್ಯಮರ್ಘ್ಯಂತಥಾತಿಥ್ಯಂಜಗ್ರಾಹಮುನಿಹಸ್ತತಃ ॥೪॥ ಬಹುರೂಪಾಸ್ಸ

---

ಗೆ ಸಮಾನವಾದ, ನಾನಾಪಣ್ಯೋಪಶೋಭಿತಾಂ-ಅನೇಕ ವ್ಯಾಪಾರಗಳಿಂದ ಹೊಳೆಯುತ್ತಿರುವ, ನಾನಾದೇಶಾಗತೈಃ-ಬಹುದೇಶಗಳಿಂದ ಬಂದಿರ್ಪ, ವಣಿಗ್ಭಿಶ್ಚ-ವರ್ತಕರಿಂದಲೂ, ಉಪಶೋಭಿತಾಂ – ಎಸೆಯುತ್ತಿರುವ, ತಾಂ-ಪ್ರಸಿದ್ಧವಾದ, ತಾಂಪುರೀಂ-ಆ ಪಟ್ಟಣವನ್ನು, ನಿರೀಕ್ಷ್ಯ-ನೋಡಿ, ಸಮೃದ್ಧಾರ್ಥಃ-ಸಂಪೂರ್ಣವಾದ ಪ್ರಯೋಜನವುಳ್ಳ, ಭರತಾನುಜಃ-ಭರತ-ಭರತನಿಗೆ, ಅನುಜಃ-ತಮ್ಮನಾದ, ಶತ್ರುಘ್ನಃ-ಶತ್ರುಘ್ನನು, ಪರಮಪ್ರೀತ್ಯಾ-ಬಹಳ ಮನಸ್ಸಂತೋಷದಿಂದ, ಪರಮಹರ್ಷಂ-ಮಹಾಸಂತೋಷವನ್ನು, ಉಪಾಗಮತ್-ಹೊಂದಿದನು ॥೧೫॥ಮಧುರಾಂಪುರೀಂ-ಮಧುರಾಪಟ್ಟಣವನ್ನು, ನಿವೇಶ್ಯ-ಸ್ಥಾಪಿಸಿ, ಶುಭೇ-ಶುಭಕರವಾದ, ದ್ವಾದಶಮೇ-ಹನ್ನೆರಡನೆಯ ವರುಷದಲ್ಲಿ, ರಾಮಪಾದೌ-ಶ್ರೀರಾಮನ ಪಾದಗಳನ್ನು, ನಿರೀಕ್ಷೇಯಮಿತಿ-ನೋಡಬೇಕೆಂದು, ತಸ್ಯ-ಆ ಶತ್ರುಘ್ನನಿಗೆ, ಬುದ್ಧಿಃ-ಮತಿಯು, ಸಮುತ್ಪನ್ನಾ-ಹುಟ್ಟಿತು ॥ ೧೬ ॥

—…ಇತಿಶ್ರೀ ಮದುತ್ತರರಾಮಾಯಣೆ ಸಪ್ತತಿತಮಸ್ಸರ್ಗಃ…—

ತತಃ-ಬಳಿಕ, ಶತ್ರುಘ್ನಃ-ಶತ್ರುಘ್ನನು, ದ್ವಾದಶಮೇ-ಹನ್ನೆರಡನೆಯದಾದ, ವರ್ಷೇ-ಸಂವತ್ಸರದಲ್ಲಿ, ಅಲ್ಪಭೃತ್ಯಬಲಾನುಗಃ-ಸ್ವಲ್ಪವಾದ ಸೇವಕರಿಂದಲೂ ಸೇನೆಯಿಂದಲೂ ಅನುಸರಿಸಲ್ಪಟ್ಟವನಾಗಿ, ರಾಮಪಾಲಿತಾಂ-ಶ್ರೀರಾಮನಿಂದ ಪರಿಪಾಲಿಸಲ್ಪಟ್ಟ, ಅಯೋಧ್ಯಾಂ-ಅಯೋಧ್ಯಾಪಟ್ಟಣವನ್ನು ಕುರಿತು, ಗಂತುಂ-ಪ್ರಯಾಣಮಾಡುವದಕ್ಕೋಸುಗ, ಚಕಮೇ-ಇಚ್ಛೈಸಿದನು ॥ ೧ ॥ ತತಃ-ಬಳಿಕ, ಸಃ-ಆ ಶತ್ರುಘ್ನನು, ಮಂತ್ರಿಪುರೋಗಾಂಶ್ಚ-ಮಂತ್ರಿಗಳೆ ಮೊದಲಾದವರನ್ನೂ, ಬಲಮುಖ್ಯಾಂಶ್ಚ-ಸೈನ್ಯಾಧಿಪತಿಗಳನ್ನೂ ಸಹ, ನ್ಯವರ್ತ್ಯ-ಹಿಂತಿರಿಗಿಸಿ, ರಥಮುಖ್ಯೇನ-ಉತ್ತಮವಾದ ರಥದಿಂದ, ಹಯಾನಾಂ-ಕುದುರೆಗಳ, ಶತೇನಚ-ನೂರರಿಂದಲೂ (ಸಹಿತಃ-ಕೂಡಿದವನಾಗಿ) ಜಗಾಮ-ತೆರಳಿದನು ॥೨॥ ಮಹಾರಥಃ-ಮಹಾರಥಿಕನಾದ, ಸ ರಘುನಂದನಃ-ಆ ಶತ್ರುಘ್ನನು, ಸಪ್ತಚ ಅಷ್ಟಾಚ-ಏಳೆಂಟಾದ, ಗಣಿತಾನ್-ಸಂಖ್ಯೆಯುಳ್ಳ, ವಾಸಾನ್-ನಿವಾಸಗಳನ್ನು, ಗತ್ವಾ-ಸೇರಿ, ವಾಲ್ಮೀಕ್ಯಾಶ್ರಮಂ-ವಾಲ್ಮೀಕಿಮುನಿಯ ಆಶ್ರಮವನ್ನು, ಆಸಾದ್ಯ-ಹೊಂದಿ, ವಾಸಂ-ನಿವಾಸವನ್ನು, ಚಕ್ರೇ-ಮಾಡಿದನು ॥೩॥ ಪುರುಷರ್ಷಭಃ-ಪುರುಷಶ್ರೇಷ್ಠನಾದ, ಸಃ-ಆ ಶತ್ರುಘ್ನನು, ವಾಲ್ಮೀಕೇಃ-ವಾಲ್ಮೀಕಿಋಷಿಯ, ಪಾದೌ-ಪಾದಗಳನ್ನು ಕುರಿತು, ಅಭಿವಾದ್ಯ-ನಮಸ್ಕರಿಸಿ, ತತಃ-ಬಳಿಕ, ಮುನಿಹಸ್ತತಃ-ವಾಲ್ಮೀಕಿಋಷಿಯ ಹಸ್ತದಿಂದ, ಪಾದ್ಯಂ-ಪಾದ್ಯವನ್ನೂ, ಅರ್ಘ್ಯಂ-ಅರ್ಘ್ಯವನ್ನೂ, ತಥಾ-ಹಾಗೆಯೆ, ಆತಿಥ್ಯಂಚ-ಅತಿಥಿಸತ್ಕಾರವನ್ನೂ ಸಹ ಜಗ್ರಾಹ-ತೆಗೆದುಕೊಂಡನು ॥೪॥ ಸಮುನಿಃ-ಆ ವಾಲ್ಮೀಕಿಮುನಿಯು, ತತ್ರ-ಆ ಆಶ್ರಮದಲ್ಲಿ, ಮಹಾತ್ಮನೇ-ಮಹಾಮತಿವಂತನಾದ, ಶತ್ರುಘ್ನಾಯ-ಶತ್ರುಘ್ನನಿಗೋಸುಗ, ಬಹುರೂಪಾಃ-ಅನೇಕ ಬಗೆಗಳಾದ, ಸುಮಧುರಾಃ-ಕರ್ಣಶ್ರಾವ್ಯವಾದ, ಸಹಸ್ರಶಃ-ಅನೇಕವಾದ, ಕಥಾಃ-ಕಥೆಗಳನ್ನು, ಕಥ

---

ಳಿಂದಲೂ, ಮತ್ತೂ ಆ ಮಾನುಷವಾದ ಪ್ರಕಾಶಪದಾರ್ಥಗಳಿಂದಲೂ ಸಹ ಕಂಗೊಳಿಸುತ್ತಿರುವದಾಗಿಯೂ, ಅಮರಾಪುರಿಗೆ ಸಮಾನವಾಗಿರುವಂಥಾದ್ದಾಗಿಯೂ,ನಾನಾವಿಧವಾದ ಮಾರುವ ಪದಾರ್ಥಗಳಿಂದ ಹೊಳೆಯುತ್ತಿರುವದಾಗಿಯೂ,ದೇಶದೇಶಗಳಿಂದ ಬಂದ ವರ್ತಕರಿಂದ ಎಸೆಯುತ್ತಿರುವದಾಗಿಯೂ, ಮಹದೈಶ್ವರ್ಯವುಳ್ಳದ್ದಾಗಿಯೂ ಇರುವ ಆ ಪುರಿಯಂ ಕಂಡು, ಮಹಾಹರ್ಷವನ್ನೈದಿ,ತಾನು ಸ್ಥಾಪಿಸಿದ ಆಪಟ್ಟಣದಲ್ಲಿರುವಾಗ ಹನ್ನೆರಡನೆಯವರುಷದಲ್ಲಿ,ಶ್ರೀರಾಮನ ಪಾದ ಸಂದರ್ಶನವಂ ಗೈಯಬೇಕೆಂದು, ಆತನಿಗೆ ಮತಿ ಯುಂಟಾಯಿತು ॥೧೫॥

—…ಉತ್ತರರಾಮಾಯಣದಲ್ಲಿನ ೭೦ನೆಯ ಸರ್ಗಂ ಮುಗಿದು…—

ಬಳಿಕ ಹನ್ನೆರಡನೆಯ ವರ್ಷದಲ್ಲಿ ಶತ್ರುಘ್ನನು ಅಲ್ಪಭೃತ್ಯರಿಂದಲೂ ಸೇನೆಯಿಂದಲೂ ಒಡಗೂಡಿ ಅಯೋಧ್ಯಾಪುರವಂ ಕುರಿತು ತೆರಳಲಿಚ್ಛೈಸಿದವನಾಗಿ, ಮಂತ್ರಿಮುಂತಾದವರನ್ನೂ ಸೇನೆಯಲ್ಲಿ ಮುಖಂಡರನ್ನೂ ಇವರುಗಳನ್ನೆಲ್ಲ ಹಿಂತಿರಿಗಿಸಿ, ನೂರುಕುದುರೆಗಳಂ ತೆಗೆದುಕೊಂಡು ಉತ್ತಮವಾದ ರಥದಲ್ಲಿ ಕುಳಿತುಕೊಂಡು ತೆರಳಿ, ಏಳೆಂಟುದಿನಗಳಲ್ಲಿ ಪ್ರಯಾಣವಂಮಾಡಿ, ವಾಲ್ಮೀಕಿಮುನಿಯ ಆಶ್ರಮದಲ್ಲಿ ಇಳಿದುಕೊಂಡನು ॥೩॥ ಅನಂತರದೊಳು ಪುರುಷಶ್ರೇಷ್ಠನಾದ ಆ ಶತ್ರುಘ್ನನು ವಾಲ್ಮೀಕಿಮಹರ್ಷಿಯಪಾದಗಳಿಗೆ ವಂದನೆಯಂಗೈದು, ಆ ಮಹರ್ಷಿಯಿಂದ ಪಾದ್ಯಾರ್ಘ್ಯಾತಿಥ್ಯಾದಿಗಳಂ ಪರಿಗ್ರಹಿಸಿದವನಾಗಲೂ, ಆ ಮಹಾಮುನಿಯು ಮಹಾನುಭಾವನಾದ ಆ ಶತ್ರುಘ್ನನಿಗೆ ಮನೋಹರವಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಧುರಾಃಕಥಾಸ್ತತ್ರಸಹಸ್ರಶಃ । ಕಥಯಾಮಾಸಸಮುನಿಶ್ಶತ್ರುಘ್ನಾಯಮಹಾತ್ಮನೇ॥೫॥ ಉವಾಚಚಪುನಸ್ತಸ್ಯಲವಣಸ್ಯವಧಾಶ್ರಿತಂ । ಸುದುಷ್ಕರಂಕೃತಂಕರ್ಮಪೂರ್ವಕೈರಕೃತಂತವ ॥೬॥ ಬಹವಃಪಾರ್ಥಿವಾಸ್ಸೌಮ್ಯಹತಾಸ್ಸಬಲವಾಹನಾಃ । ಲವಣೇನಮಹಾಯುದ್ಧೇಯುಧ್ಯಮಾನಾದುರಾತ್ಮನಾ ॥೭॥ ತ್ವಯಾತುನಿಹತಃಪಾಪೋಲೀಲಯಾಪುರುಷರ್ಷಭ।ಜಗತಶ್ಚಭಯಂತತ್ರಪ್ರಶಾಂತಂತವತೇಜಸಾ ॥೮॥ ರಾವಣಸ್ಯವಧೋಘೋರೋಯತ್ನೇನಮಹತಾಕೃತಃ । ಇದಂತುಸುಮಹತ್ಕರ್ಮತ್ವಯಾಕೃತಮಯತ್ನತಃ ॥೯॥ ಪ್ರೀತಿಶ್ಚಾಪಿಪರಾಜಾತಾದೇವಾನಾಂಲವಣೇಹತೇ । ಭೂತಾನಾಂಚೈವಸರ್ವೇಷಾಂಜಗತಶ್ಚಪ್ರಿಯಂಕೃತಂ ॥೧೦॥ ತಚ್ಚಯುದ್ಧಂಮಯಾದೃಷ್ಟಂಯಥಾವತ್ಪುರುಷರ್ಷಭ । ಸಭಾಯಾಂವಾಸವಸ್ಯಾಥಉಪವಿಷ್ಟೇನರಾಘವ ॥೧೧॥ ಮಮಾಪಿಪರಮಾಪ್ರೀತಿರ್ಹೃದಿಶತ್ರುಘ್ನವರ್ತತೇ । ಉಪಾಘ್ರಾಸ್ಯಾಮಿತೇಮೂರ್ಧ್ನಿಸ್ನೇಹಸ್ಯೈಷಪರಾಗತಿಃ ॥೧೨॥ ಇತ್ಯುಕ್ತ್ವಾಮೂರ್ಧ್ನಿಶತ್ರುಘ್ನಂಉಪಾಘ್ರಾಯಮಹಾಮುನಿಃ । ಆತಿಥ್ಯಮಕರೋತ್ತೇಷಾಂಯೆ

---

ಯಾಮಾಸ-ಹೇಳಿದನು ||೫|| ತಸ್ಯ-ಆ ಶತ್ರುಘ್ನನಿಗೆ, ಲವಣಸ್ಯ-ಲವಣಾಸುರನ, ವಧಾಶ್ರಿತಂ-ವಧೆಯನ್ನು ಹೊಂದಿದ, ಸುದುಷ್ಕರಂ-ಮಾಡಲಸಾಧ್ಯವಾದ, ತವ-ನಿನ್ನ, ಪೂರ್ವಕೈಃ-ಪ್ರಾಚೀನರಿಂದ, ಅಕೃತಂ-ಮಾಡಲ್ಪಡದಿರುವ, ಕರ್ಮ-ವ್ಯಾಪಾರವು, ತ್ವಯಾ-ನಿನ್ನಿಂದ, ಕೃತಂ-ಮಾಡಲ್ಪಟ್ಟಿತೆಂದು, ಪುನಃ-ಮತ್ತು, ಉವಾಚ-ಹೇಳಿದನು ||೬|| ಹೆ ಸೌಮ್ಯ-ಎಲೈ ಕೋಪರಹಿತನೆ, ಬಹವಃ-ಅನೇಕರಾದ, ಪಾರ್ಥಿವಾಃ-ಅರಸರು, ಸಬಲವಾಹನಾಃ-ಸೇನೆಗಳಿಂದಲೂ ವಾಹನಗಳಿಂದಲೂ ಒಡಗೂಡಿದವರಾಗಿ, ದುರಾತ್ಮನಾ-ದುರ್ಬುದ್ಧಿಯುಳ್ಳ, ಲವಣೇನ-ಲವಣಾಸುರನಿಂದ, ಮಹಾಯುದ್ಧೇ-ದೊಡ್ಡ ಕಾಳಗದಲ್ಲಿ, ಯುಧ್ಯಮಾನಾಃ-ಕಾಳಗಿಸಲ್ಪಟ್ಟವರಾಗಿ, ಹತಾಃ-ಸತ್ತುಹೋದರು ||೭|| ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ಪಾಪಃ-ಪಾಪಿಷ್ಠನಾದ ಲವಣಾಸುರನು, ತ್ವಯಾ-ನಿನ್ನಿಂದ, ಲೀಲಯಾತು-ವಿಲಾಸಮಾತ್ರದಿಂದಲೆ, ನಿಹತಃ-ಹೊಡೆಯಲ್ಪಟ್ಟನು, ತತ್ರ-ಆ ಮಧುವನದಲ್ಲಿ, ತವ-ನಿನ್ನ, ತೇಜಸಾ-ತೇಜಸ್ಸಿನಿಂದ, ಜಗತಃ-ಲೋಕದ, ಭಯಂಚ-ಭೀತಿಯೂ, ಪ್ರಶಾಂತಂ-ಥಣ್ಣಗಾಯಿತು ||೮|| ರಾವಣಸ್ಯ-ರಾವಣಾಸುರನ, ಘೋರಃ-ಭಯಂಕರವಾದ, ವಧಃ-ಸಂಹಾರವು, ಮಹತಾಯತ್ನೇನ-ಮಹಾಪ್ರಯತ್ನದಿಂದ, ಕೃತಃ-ಮಾಡಲ್ಪಟ್ಟಿತು, ಸುಮಹತ್-ಬಹಳದೊಡ್ಡದಾದ, ಇದುಕರ್ಮತು-ಈ ಲವಣಾಸುರನ ಸಂಹಾರರೂಪವಾದ ವ್ಯಾಪಾರವಾದರೆ, ತ್ವಯಾ-ನಿನ್ನಿಂದ, ಅಯತ್ನತಃ-ಅಪ್ರಯತ್ನವಾಗಿ, ಕೃತಂ-ಮಾಡಲ್ಪಟ್ಟಿತು ||೯|| ಲವಣೇ-ಲವಣಾಸುರನು, ಹತೇಸತಿ-ಹೊಡೆಯಲ್ಪಟ್ಟವನಾಗುತಿರಲಿೀಕಾಗಿ, ದೇವಾನಾಂಚ-ದೇವತೆಗಳಿಗೂ, ಸರ್ವೇಷಾಂ-ಸಮಸ್ತರಾದ, ಭೂತಾನಾಂಚೈವ-ಪ್ರಾಣಿಗಳಿಗೂ,ಪರಾ-ಬಹಳವಾದ, ಪ್ರೀತಿಃ-ಸಂತೋಷವು, ಜಾತಾ-ಆಯಿತು, ಜಗತಶ್ಚ-ಲೋಕಕ್ಕೇನೆ. ಪ್ರಿಯಂ-ಇಷ್ಟವು,ಕೃತಂ-ಮಾಡಲ್ಪಟ್ಟಿತು, ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ಹೆ ರಾಘವ-ಎಲೈ ರಘುವಂಶೋತ್ಪನ್ನನೆ,ಅಥ-ಬಳಿಕ,ವಾಸವಸ್ಯ-ದೇವೇಂದ್ರನ, ಸಭಾಯಾಂ-ಸಭೆಯಲ್ಲಿ, ಉಪವಿಷ್ಟೇನ-ಕುಳಿತುಕೊಂಡಿರುವ, ಮಯಾ-ನನ್ನಿಂದ, ತಚ್ಚಯುದ್ಧಂ-ಆಯುದ್ಧವು, ಯಥಾವತ್-ನಡೆದಂತೆ, ದೃಷ್ಟಂ- ನೋಡಲ್ಪಟ್ಟಿತು|| ಹೇ ಶತೃಘ್ನ-ಎಲೈ ಶತೃಘ್ನನೆ, ಮಮಾಪಿ-ನನಿಗೂಕೂಡ, ಹೃದಿ-ಹೃದಯದಲ್ಲಿ, ಪರಮಾ-ಬಹಳವಾದ, ಪ್ರೀತಿಃ-ಸಂತೋಷವು, ವರ್ತತೆ-ಇಧೆ,ತೇ-ನಿನ್ನ, ಮೂರ್ಧ್ನಿ-ಶಿರಸ್ಸಿನಲ್ಲಿ, ಉಪಾಘ್ರಾಸ್ಯಾಮಿ-ಆಘ್ರಾಣಮಾಡುತ್ತೇನೆ, ಸ್ನೇಹಸ್ಯ-ವಿಶ್ವಾಸಕ್ಕೆ, ಏಷಃ-ಇದೆ, ಪರಾಗತಿಃ-ಪರಮಗತಿಯು, (ಅಂದರೆ ಪರಮಾವಧಿಭೂತವು) ||೧೨|| ಇತಿ-ಈಪರಿಯಾಗಿ, ಉಕ್ತ್ವಾ-ಹೇಳಿ, ಮೂರ್ಧ್ನಿ-ಶಿರಸ್ಸಿನಲ್ಲಿ, ಶತುಘ್ನಂ-ಶತ್ರುಘ್ನನನ್ನು, ಉಪಾಘ್ರಾಯ, ಆಘ್ರಾಣಿಸಿ, ತಸ್ಯ-ಆತನಿಗೆ, ಯೆ-ಯಾರು, ಪಾದಾನುಗಾಃ-ಸೇವಕರೋ, ತೇಷಾಂಚ-ಅವರಿಗೂಕೂಡ, ಮಹಾಮುನಿಃ-ವಾಲ್ಮೀಕಿಋಷಿಯು, ಆತಿಥ್ಯಂ-ಅತಿಥಿಸತ್ಕಾ

---

ದ ಅನೇಕಕಥೆಗಳಂ ಪೇಳಿದವನಾಗಿ, ಮತ್ತಿಂತೆಂದನು, ಎಲೈ ಶತ್ರುಘ್ನನೆ ! ನಿಮ್ಮ ಪೂರ್ವೀಕರ್ಯಾರೂ ಮಾಡದಿರುವ ದುಷ್ಕರವಾದ ಲವಣಾಸುರನ ಸಂಹಾರವಂ ನೀನು ಮಾಡಿದಂಥಾವನಾದೆ, ದುರಾತ್ಮನಾದ ಆ ಲವಣಾಸುರನಿಂದ ಬಹುಮಂದಿ ರಾಜರುಗಳು ಸೇನೆಗಳಿಂದಲೂ ವಾಹನಗಳಿಂದಲೂ ಒಡಗೂಡಿದವರಾಗಿ ರಣರಂಗದೊಳು ಹತನಾದರು, ಎಲೈ ಪುರುಷಶ್ರೇಷ್ಠನೆ ! ಕಡುಪಾಪಿಯಾದ ಆ ರಕ್ಕಸನನ್ನು ನೀನು ವಿಲಾಸ ಮಾತ್ರದಿಂದ ಕೊಂದವನಾದೆ, ನಿನ್ನ ಪ್ರಭಾವದಿಂದ ಲೋಕಭೀತಿಯೆಲ್ಲ ಪ್ರಶಾಂತವಾಯಿತು, ಇಷ್ಟು ಸುಲಭವಾಗಿ ರಾವಣನ ವಧೆಯು ಆಗಲಿಲ್ಲ, ಅದು ಮಹಾಪ್ರಯತ್ನದಿಂ ಮಾಡಲ್ಪಟ್ಟಿತು. ಈ ಮಹಾಕಾರ್ಯವಂ ನೀನು ಅಪ್ರಯತ್ನವಾಗಿ ಮಾಡಿದಂಥಾವನಾದೆ, ಆ ಲವಣಾಸುರನ ಸಂಹಾರವು ದೇವತೆಗಳಿಗೂ ಸಮಸ್ತಪ್ರಾಣಿಗಳಿಗೂ ಲೋಕಕ್ಕೂ ಸಹಾ ಮಹಾ ಸಂತೋಷವಾಯಿತು, ನೀನು ಜಗಕ್ಕೆಲ್ಲಾ "ಮಹತ್ತರವಾದ ಪ್ರೀತಿಯಂಗೈದೆ॥೧೦॥ ಕೇಳೆಲೈ ನರಶ್ರೇಷ್ಠನೆ ! ಇಂದ್ರನಸಭೆಯೊಳು ಕುಳಿತಿದ್ದ ನನ್ನಿಂದ ಆ ಲವಣಾಸುರನಿಗೂ ನಿನಿಗೂ ಸಂಭವಿಸಿದ ಕಾಳಗವು ಚನ್ನಾಗಿ ನೋಡಲ್ಪಟ್ಟಿತು, ಆ ದುಷ್ಟನಸಂಹಾರವಾದದ್ದು ನನಿಗೂ ಕೂಡ ಬಹು ಹರುಷವಾಗಿರುವದು, ನಿನ್ನ ಮಂಡೆಯೊಳು ಆ ಘ್ರಾಣವಂಗೈಯ್ಯುವೆನು, ನಿನ್ನಲ್ಲಿರುವ ವಿಶ್ವಾಸಕ್ಕೆ ಇದೆ ಪರಮಾವಧಿಯು, ಎಂಬದಾಗಿ ಆ ವಾಲ್ಮೀಕಿಮುನಿಯು ಪೇಳಿದಂಥಾವನಾಗಿ, ಶತೃಘ್ನನ ಶಿರದೊಳು ಆ ಘ್ರಾಣವಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚತಸ್ಯಪದಾನುಗಾಃ ॥೧೩॥ ಸಭುಕ್ತ್ವಾ ನರಶ್ರೇಷ್ಠೋ ಗೀತಮಾಧುರ್ಯಮುತ್ತಮಮ್ । ಶುಶ್ರಾವರಾಮಚರಿತಂತಸ್ಮಿನ್ ಕಾಲೇಯಥಾಕ್ರಮಮ್ ॥೧೪॥ ತಂತ್ರೀಲಯಸಮಾಯುಕ್ತಂತ್ರಿಸ್ಥಾನಕರಣಾನ್ವಿತಮ್ । ಸಂಸ್ಕೃತಂಲಕ್ಷಣೋಪೇತಂಸಮತಾಳಸಮನ್ವಿತಮ್ ॥೧೫॥ ಶುಶ್ರಾವರಾಮಚರಿತಂತಸ್ಮಿನ್ ಕಾಲೇಪುರಾಕೃತಮ್ ॥೧೬॥ ತಾನ್ಯಕ್ಷರಾಣಿಸತ್ಯಾನಿಯಥಾವೃತ್ತಾನಿಸರ್ವಶಃ । ಶ್ರುತ್ವಾಪುರುಷಶಾರ್ದೂಲೋವಿಸಂಜ್ಞೋಬಾಷ್ಪಲೋಚನಃ ॥ ೧೭ ॥ ಸಮುಹೂರ್ತಮಿವಾಸಂಜ್ಞೋನಿಶಮ್ಯಚಮುಹುರ್ಮುಹುಃ । ಸಂವೃತ್ತಮಿವತತ್ಸರ್ವಂತಸ್ಮಿನ್ ಕಾಲೇಪ್ರಶುಶ್ರುವಾನ್ ॥೧೮॥ ಪದಾನುಗಾಶ್ಚ ಯೇರಾಜ್ಞಸ್ತಾಂಶ್ರುತ್ವಾಗೀತಸಂಪದಮ್।ಅವಾಙ್ಮುಖಾಶ್ಚ ದೀನಾಶ್ಚ ಆಶ್ಚರ್ಯಮಿತಿಚಾಬ್ರುವನ್ ॥೧೯॥ ಪರಸ್ಪರಂಚತೇತತ್ರಸೈನಿಕಾಸ್ಸಂಬಭಾಷಿರೇ। ಕಿಮಿದಂಕ್ವಚವರ್ತಾಮಃಕಿಮೇತತ್ಸ್ವಪ್ನದರ್ಶನಮ್॥೨೦॥ಅರ್ಥೋಯೋನಃಪುರಾದೃಷ್ಟಸ್ತಮಾಶ್ರಮಪ

ರವನ್ನು, ಅಕರೋತ್-ಮಾಡಿದನು ॥೧೩॥ ನರಶ್ರೇಷ್ಠಃ-ಪುರುಷಶ್ರೇಷ್ಠನಾದ, ಸಃ-ಆ ಶತ್ರುಘ್ನನು, ಭುಕ್ತ್ವಾ-ಭೋಜನಮಾಡಿದವನಾಗಿ, ಗೀತಮಾಧುರ್ಯಂ-ಗೀತ-ಗಾನದಿಂದ, ಮಾಧುರ್ಯಂ-ಮಧುರರಸವುಳ್ಳ, ಉತ್ತಮಂ-ಉತ್ಕೃಷ್ಟವಾದ, ರಾಮಚರಿತಂ-ಶ್ರೀ ರಾಮನ ಚರಿತ್ರೆಯನ್ನು, ತಸ್ಮಿನ್‌ಕಾಲೇ- ಆ ಕಾಲದಲ್ಲಿ, ಯಥಾಕ್ರಮಂ-ಕ್ರಮವಾಗಿ, ಶುಶ್ರಾವ-ಕೇಳಿದನು ॥೧೪॥ ತಂತ್ರೀಲಯಾಸಮಾಯುಕ್ತಂ-ತಂತ್ರೀ-ವೀಣೆಯಿಂದಲೂ, ಲಯ-ತಾಳಪ್ರಮಾಣದಿಂದಲೂ, ಸಮಾಯುಕ್ತಂ-ಕೂಡಿಕೊಂಡಿರುವ, ತ್ರಿಸ್ಥಾನಕರಣಾನ್ವಿತಂ-ತ್ರಿ-ಹೃದಯ ಕಂಠ ಮುಖಗಳೆಂಬ ಮೂರಾದ, ಸ್ಥಾನ- ವರ್ಣೋತ್ಪತ್ತಿಸ್ಥಾನಗಳೆಂಬ, ಕರಣ-ಸಾಧನಗಳಿಂದ, ಅನ್ವಿತಂ-ಕೂಡಿಕೊಂಡಿರುವ, ಸಂಸ್ಕೃತಂ-ಸಂಸ್ಕೃತ ಶಬ್ದವಾದ, ಲಕ್ಷಣೋಪೇತಂ- ವ್ಯಾಕರಣಲಕ್ಷಣಗಳಿಂದ ಯುಕ್ತವಾದ, ಸಮತಾಳಸಮನ್ವಿತಂ-ಸಮ-ಗಾನಸದೃಶವಾದ, ತಾಳ-ತಾಳದಿಂದ, ಸಮನ್ವಿತಂ-ಕೂಡಿಕೊಂಡಿರುವ (ಪಾ-ಸಮತಾರಸಮನ್ವಿತಂ-ಸಮ-ಸಮಸ್ವರದಿಂದಲೂ, ತಾರ-ಉಚ್ಚ ಸ್ವರದಿಂದಲೂ, ಸಮನ್ವಿತಂ-ಕೂಡಿಕೊಂಡಿರುವ, ಪುರಾಕೃತಂ-ಪೂರ್ವದಲ್ಲಿ ಮಾಡಲ್ಪಟ್ಟ, ರಾಮಚರಿತಂ-ಶ್ರೀರಾಮನ ಚರಿತ್ರೆಯ ರೂಪವಾದ, ಗ್ರಂಥವನ್ನು, ತಸ್ಮಿನ್ಕಾಲೇ-ಆ ವೇಳೆಯಲ್ಲಿ, ಶುಶ್ರಾವ-ಕೇಳಿದನು ॥೧೫॥ ಪೂರ್ವಶಃ-ಪೂರ್ವಕಾಲದಲ್ಲಿ, ಯಥಾ-ಹ್ಯಾಗೆ,ವೃತ್ತಾನಿ-ಪ್ರವೃತ್ತಿಸಿದಂಥಾವುಗಳಾಗಿವೆಯೋ, ತಾನಿ-ಅಂಥಾ, ಸತ್ಯಾನಿ-ಯಥಾರ್ಥವಾದ ಅಥವಾ ನಡೆದಂತೆ ಪೇಳುತ್ತಿರುವ, ಅಕ್ಷರಾಣಿ-ಅಕ್ಷರಗಳನ್ನು, ಶ್ರುತ್ವಾ-ಕೇಳಿ, ಪುರುಷಶಾರ್ದೂಲಃ-ಪುರುಷಶ್ರೇಷ್ಠನಾದ ಶತ್ರುಘ್ನನು, ಬಾಷ್ಪಲೋಚನಃ-ಕಂಬನಿಗಳಿಂದ ಯುಕ್ತವಾದಕಣ್ಣುಗಳುಳ್ಳವನಾಗಿ, ವಿಸಂಜ್ಞಃ-ಪ್ರಜ್ಞೆತಪ್ಪಿದವನು, (ಅಭೂತ್-ಆದನು) ॥೧೭॥ ಸಃ-ಆ ಶತ್ರುಘ್ನನು, ಮುಹೂರ್ತಂ-ಸ್ವಲ್ಪಕಾಲವು, ಮುಹುರ್ಮುಹುಃ-ಬಾರಿಬಾರಿಗು, ಅಸಂಜ್ಞಃ-ವ್ಯಾಮೋಹಿತವನಾಗಿ, ನಿಶಮ್ಯ-ಕೇಳಿ, ತಸ್ಮಿನ್‌ಕಾಲೇ-ಆ ಸಮಯದಲ್ಲಿ, ಸಂವೃತ್ತಮಿವ-ನಡೆದಂತೆ, ತತ್ಸರ್ವಂ-ಅದನ್ನೆಲ್ಲ, ಪ್ರಶುಶ್ರುವಾನ್- ಕೇಳಿದವನಾದನು ॥೧೮॥ ರಾಜ್ಞಃ-ರಾಜನಾದ ಶತ್ರುಘ್ನನಿಗೆ, ಯೇ-ಯಾರು, ಪದಾನುಗಾಃ-ಪಾದಸೇವಕರೋ, ತೇ-ಅವರುಗಳು, ತಾಂಗೀತಸಂಪದಂ ಆಗಾನಸಂಪತ್ತನ್ನು, ಶ್ರುತ್ವಾ-ಕೇಳಿ, ಅವಾಙ್ಮುಖಾಃ-ತಲೆ ಬೊಗ್ಗಿಸಿದವರಾಗಿಯೂ, ದೀನಾಶ್ಚ-ದೈನ್ಯಮುಳ್ಳವರೂ ಆಗಿ, ಆಶ್ಚರ್ಯಮಾಶ್ಚರ್ಯಮಿತಿ- ಅಚ್ಚರಿಯಮಚ್ಚರಿಯಮೆಂದು, ಅಬ್ರುವನ್-ನುಡಿದನು ॥೧೯॥ ತತ್ರ-ಆ ಸ್ಥಳದಲ್ಲಿ, ತೇಸೈನಿಕಾಃ-ಆ ಸೇನಾಜನಗಳು, ಪರಸ್ಪರಂ-ಅನ್ಯೋನ್ಯವಾಗಿ, ಇದಂಕಿಂ- ಇದೇನು, ಕ್ವ-ಎಲ್ಲಿ, ವರ್ತಾಮಃ-ಇರ್ಧೇವೆ, ಏತತ್-ಇದು, ಸ್ವಪ್ನದರ್ಶನಂ-ಸ್ವಪ್ನಸಂದರ್ಶನವೋ ಎನು,ಇತಿ-ಇಂತೆಂದು, ಸಂಬಭಾಷಿರೇ-ಮಾತಾಡಿದರು ॥೨೦॥ ಪುರಾ-ಪೂರ್ವದಲ್ಲಿ, ಯಃಅರ್ಥಃ-ಯಾವಅರ್ಥವು, ದೃಷ್ಟಃ-ಪ್ರತ್ಯಕ್ಷವಾಗಿ ಅನುಭವಿಸಲ್ಪಟ್ಟಿತೋ, ತಂ-ಅದೇ ಅರ್ಥವನ್ನು, ಆಶ್ರಮಪದೇ- ಆಶ್ರಮ

ಗೈದು ಆತನಿಗೂ, ಮತ್ತು ಆತನ ಸೇವಕರಿಗೂ ಸಹ ಆತಿಥ್ಯವಂ ಮಾಡಿದಂಥಾವನಾದನು ॥೧೩॥ ಆ ನರಪತಿಯಾದ ಶತ್ರುಘ್ನನು ಭುಜಿಸಿದವನಾಗಿ, ಗಾನದಿಂ ಕರ್ಣಶ್ರಾವ್ಯಮಾಗಿಯೂ ಉತ್ತಮವಾಗಿಯೂ ಇರುವ ರಾಮಚರಿತ್ರೆಯನ್ನು, ಯಥಾಕ್ರಮವಾಗಿ ಆ ವೇಳೆಯೊಳು ಕೇಳಿದನದೆಂತೆನೆ ॥೧೪॥ ವೀಣಾಧ್ವನಿಯಿಂದಲೂ ತಾಳಪ್ರಮಾಣದಿಂದಲೂ ಸಹ ಒಡಗೂಡಿದಂಥಾದ್ದಾಗಿಯೂ, ಹೃದಯಕಂಠ ಮುಖಗಳೆಂದು ತ್ರಿವಿಧವಾದ, ವರ್ಣೋತ್ಪತ್ತಿ ಸ್ಥಾನಗಳೆಂಬ ಸಾಧನಗಳಿಂದ ಯುಕ್ತಮಾದದ್ದಾಗಿಯೂ, ಸಂಸ್ಕೃತಶಬ್ದಂಗಳುಳ್ಳದ್ದಾಗಿಯೂ, ವ್ಯಾಕರಣಲಕ್ಷಣ ಲಕ್ಷಿತಮಾಗಿಯೂ, ಸಮಸ್ವರದಿಂದಲೂ ಉಚ್ಚೈಸ್ಸ್ವರದಿಂದಲೂ ಕೂಡಿದಂಥಾದ್ದಾಗಿಯೂ, ಇರುವ ಪೂರ್ವದಲ್ಲಿ ಮಾಡಲ್ಪಟ್ಟ ಶ್ರೀರಾಮಚರಿತ್ರೆಯ ರೂಪಮಾಗಿರ್ಪ ಗ್ರಂಥವನ್ನು ಕೇಳಿದಂಥಾವನಾದನು ॥೧೬॥ ಸರ್ವಪ್ರಕಾರದಲ್ಲಿಯೂ ಪೂರ್ವದಲ್ಲಿ ಹ್ಯಾಗೆ ನಡೆದುಇತ್ತೊ, ಹಾಗೆ ಸತ್ಯವಾದ ಆವರ್ಣಗಳಂ ಕೇಳಿ, ಶತ್ರುಘ್ನನು ಕಂಬನಿಗಳಿಂದ ತುಂಬಿದ ಕಂಣುಗಳುಳ್ಳವನಾಗಿ ಪ್ರಜ್ಞೆತಪ್ಪಿ ಸ್ವಲ್ಪಕಾಲವು ಬಾರಿಬಾರಿಗೂ ವ್ಯಾಮೋಹಿತವನಾಗಿ, ಆ ವೇಳೆಯೊಳು ನಡದಂತೆ ಅದನ್ನೆಲ್ಲ ಪುನಃ ಕೇಳಿದನು ॥೧೮॥ ಆ ರಾಜನ ಸೇವಕರೆಲ್ಲರು ಆಗಾನ ಸಂಪತ್ತನ್ನು ಕೇಳಿ, ಅವಾಙ್ಮುಖರಾಗಿಯೂ ದೀನರಾಗಿಯೂ ಇರುವರಾಗಿ, ಹಾಹಾ ಇದೇನು ಆಶ್ಚರ್ಯವು, ನಾವುಗಳು ಎಲ್ಲಿಧೇವೆ, ಸ್ವಪ್ನವೋ ಯೇನೊ, ಯಾವ ಅರ್ಥವನ್ನು ನಾವುಗಳು ಕಂಡಿಧೇವೆಯೋ, ಆ ಅರ್ಥವನ್ನು ಈ ಆಶ್ರಮದಲ್ಲಿ ಕೇಳುತ್ತಿಧೆವೇ ಇದು ಗಾನವೆ ಇರಬಹುದೆಂದು ಪರಸ್ಪರವಾಗಿ ಮಾತಾಡಿಕೊಂಡು, ಅತ್ಯಾಶ್ಚರ್ಯಭರಿತರಾಗಿ, ಶತ್ರುಘ್ನನಂ ಕುರಿತು, ಎಲೈ ರಾಜನೆ ! ಈ ಆಶ್ರಮದಲ್ಲಿ ಗಾನವು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದೇಪುನಃ । ಶೃಣುಮಃ ಕಿನ್ವಿದಂ ಸ್ವಪ್ನೋ ಗೀತಮೇವ ಶ್ರುತಂ ಭವೇತ್ ॥ ೨೧ ॥ ವಿಸ್ಮಯಂ ತೇ ಪರಂ ಗತ್ವಾ ಶತ್ರುಘ್ನಮಿದಮಬ್ರುವನ್ । ಸಾಧು ಪೃಚ್ಛ ನರಶ್ರೇಷ್ಠ ವಾಲ್ಮೀಕಿಂ ಮುನಿಪುಂಗವಮ್ ॥ ೨೨ ॥ ಶತ್ರುಘ್ನಸ್ತ್ವಬ್ರವೀತ್ಸರ್ವಾನ್ ಕೌತೂಹಲಸಮನ್ವಿತಾನ್ । ಸೈನಿಕಾನಕ್ಷಮೋಸ್ಮಾಕಂ ಪರಿಪ್ರಷ್ಟುಮಿಹೇದೃಶಮ್ ॥ ೨೩ ॥ ಆಶ್ಚರ್ಯಾಣಿ ಬಹೂನೀಹ ಭವಂತ್ಯಸ್ಯಾಶ್ರಮೇ ಮುನೇಃ । ನ ತು ಕೌತೂಹಲಾದ್ಯುಕ್ತಮನ್ವೇಷ್ಟುಂ ತಂ ಮಹಾಮುನಿಮ್ ॥ ೨೪ ॥ ಏವಂ ಸ ವಾಕ್ಯಮುಕ್ತ್ವಾ ತು ಸೈನಿಕಾನ್ ರಘುನಂದನಃ । ಅಭಿವಾದ್ಯ ಮಹರ್ಷಿಂ ತಂ ತಂ ನಿವೇಶಂ ಯಯೌ ತದಾ ... ... ॥ ೨೫ ॥

—...ಇತಿ ಶ್ರೀಮದುತ್ತರರಾಮಾಯಣೆ ಏಕಸಪ್ತತಿತಮಸ್ಸರ್ಗಃ...—

ತಂ ಶಯಾನಂ ನರವ್ಯಾಘ್ರಂ ನಿದ್ರಾ ನಾಭ್ಯಾಗಮತ್ತದಾ ॥ ಚಿಂತಯಂತಮನೇಕಾಗ್ರಂ ರಾಮಗೀತಮನುತ್ತಮಂ ॥ ೧ ॥ ತಸ್ಯ ಶಬ್ದಂ ಸುಮಧುರಂ ತಂತ್ರೀಲಯಸಮನ್ವಿತಂ । ಶ್ರುತ್ವಾ ರಾತ್ರಿರ್ಜಗಾಮಾಶು ಶತ್ರುಘ್ನಸ್ಯ ಮಹಾತ್ಮನಃ ॥ ೨ ॥ ತಸ್ಯಾಂ ನಿಶಾಯಾಂ ವ್ಯುಷ್ಟಾಯಾಂ ಕೃತ್ವಾ ಪೌರ್ವಾಹ್ಣಿಕಂ ಕ್ರಮಂ । ಉವಾಚ ಪ್ರಾಂಜಲಿರ್ವಾಕ್ಯಂ ಶತ್ರುಘ್ನೋ ಮುನಿಪುಂಗವಂ ॥

---

ಸ್ಥಾನದಲ್ಲಿ, ಪುನಃ-ಮತ್ತು, ಶೃಣುಮಃ-ಕೇಳುತ್ತಿದ್ದೇವೆ, ಇದಂ-ಇದು, ಸ್ವಪ್ನಃ ಕಿಂ-ಸ್ವಪ್ನವೋ ಏನು, ಗೀತಮೇವ-ಗಾನವೇ, ಶ್ರುತಂ-ಕೇಳಲ್ಪಟ್ಟದ್ದು, ಭವೇತ್-ಆಗುವದೋ ಏನೋ ॥ ೨೧ ॥ ತೇ-ಅವರುಗಳು, ಪರಂ ವಿಸ್ಮಯಂ-ಮಹದಾಶ್ಚರ್ಯವನ್ನು, ಗತ್ವಾ-ಹೊಂದಿ, ಶತ್ರುಘ್ನಂ-ಶತ್ರುಘ್ನನಂ ಕುರಿತು, ಹೇ ನರಶ್ರೇಷ್ಠ-ಎಲೈ ನರಶ್ರೇಷ್ಠನೆ, ಮುನಿಪುಂಗವಂ-ಋಷಿಶ್ರೇಷ್ಠನಾದ, ವಾಲ್ಮೀಕಿಂ-ವಾಲ್ಮೀಕಿಯನ್ನು, ಸಾಧು-ಚನ್ನಾಗಿ, ಪೃಚ್ಛ-ಕೇಳು, ಇತಿ-ಇಂತೆಂದು, ಇದಂ-ಈ ಮಾತನ್ನು, ಅಬ್ರುವನ್-ನುಡಿದರು ॥ ೨೨ ॥ ಶತ್ರುಘ್ನಸ್ತು- ಶತ್ರುಘ್ನನಾದರೋ, ಕೌತೂಹಲಸಮನ್ವಿತಾನ್- ಕುತೂಹಲಯುಕ್ತರಾದ, ಸರ್ವಾನ್-ಸಮಸ್ತರಾದ, ಸೈನಿಕಾನ್-ಸೇನಾಮುಖಂಡರಂ ಕುರಿತು, ಇಹ-ಇಲ್ಲಿ, ಈದೃಶಂ- ಇಂಥಾ ವ್ಯಾಪಾರವನ್ನು, ಪರಿಪ್ರಷ್ಟುಂ-ಕೇಳುವದಕ್ಕೆ, ಅಸ್ಮಾಕಂ-ನಮಿಗೆ, ಅಕ್ಷಮಃ-ಯೋಗ್ಯವಲ್ಲ ॥ ೨೩ ॥ ಇಹ-ಇಲ್ಲಿ, ಅಸ್ಯಮುನೇಃ-ಈ ಋಷಿಯ, ಆಶ್ರಮೇ-ಆಶ್ರಮದಲ್ಲಿ, ಬಹೂನಿ-ನಾನಾಬಗೆಗಳಾದ, ಆಶ್ಚರ್ಯಾಣಿ-ಆಶ್ಚರ್ಯಗಳು, ಭವಂತಿ-ಇವೆ, ಕಿಂತು-ಮತ್ತೇನಂದರೆ, ಕೌತೂಹಲಾತ್- ಕುತೂಹಲದದೆಸೆಯಿಂದ, ತಂ ಮಹಾಮುನಿಂ- ಆ ಮಹರ್ಷಿಯಂ ಕುರಿತು, ಅನ್ವೇಷ್ಟುಂ-ಅನುಸರಿಸಿ ಕೇಳುವದಕ್ಕೋಸ್ಕರ, ನಯುಕ್ತಂ-ಯುಕ್ತವಲ್ಲ, ಇತಿ-ಇಂತೆಂದು,(ಅಬ್ರವೀತ್-ನುಡಿದನು ॥ ೨೪ ॥ ಏವಂ-ಈಪರಿಯಾಗಿ, ಸ ರಘುನಂದನಃ-ಆ ಶತ್ರುಘ್ನನು, ವಾಕ್ಯಂ-ಮಾತನ್ನು, ಸೈನಿಕಾನ್-ಸೇನಾಜನಗಳಂ ಕುರಿತು, ಉಕ್ತ್ವಾ-ಪೇಳಿ, ತಂ ಮಹರ್ಷಿಂ-ಆ ವಾಲ್ಮೀಕಿ ಮುನಿಯನ್ನು, ಅಭಿವಾದ್ಯ-ನಮಸ್ಕರಿಸಿ, ತದಾ-ಆ ಕಾಲದಲ್ಲಿ, ತಂ ನಿವೇಶಂ-ಆ ಸ್ಥಳವಂ ಕುರಿತು, ಯಯೌ-ತೆರಳಿದನು. ॥ ೨೫ ॥

—...ಇತಿ ಶ್ರೀಮದುತ್ತರರಾಮಾಯಣೆ ಏಕಸಪ್ತತಿತಮಸ್ಸರ್ಗಃ...—

ಶಯಾನಂ-ಮಲಗಿರುವ, ನರವ್ಯಾಘ್ರಂ-ಮನುಷ್ಯಶ್ರೇಷ್ಠನಾದ, ಅನೇಕಾಗ್ರಂ-ಅನೇಕ ಮುಖಗಳುಳ್ಳ, ಅನುತ್ತಮಂ-ಸರ್ವೋತ್ತಮವಾದ, ರಾಮಗೀತಂ-ರಾಮಚರಿತ್ರೆಯನ್ನು, ಚಿಂತಯಂತಂ-ಆಲೋಚಿಸುತಿರುವ, ತಂ-ಆ ಶತ್ರುಘ್ನನಂ ಕುರಿತು, ನಿದ್ರಾ-ನಿದ್ರೆಯು, ತದಾ-ಆ ಕಾಲದಲ್ಲಿ, ನಾಭ್ಯಾಗಮತ್-ಬರಲಿಲ್ಲಾ ॥ ೧ ॥ ಮಹಾತ್ಮನಃ-ಮಹಾಮನಸ್ವಿಯಾದ, ತಸ್ಯ ಶತ್ರುಘ್ನಸ್ಯ-ಆ ಶತ್ರುಘ್ನನಿಗೆ, ಸುಮಧುರಂ-ಮಹಾ ಮನೋಹರವಾದ, ತಂತ್ರೀಲಯ ಸಮನ್ವಿತಂ-ವೀಣಾತಾಳ ಪ್ರಮಾಣಗಳಿಂದ ಕೂಡಿಕೊಂಡಿರುವ, ಶಬ್ದಂ-ಗಾನಧ್ವನಿಯನ್ನು, ಶ್ರುತ್ವಾ-ಕೇಳಿ, ರಾತ್ರಿಃ-ರಾತ್ರಿಯು, ಆಶು-ಜಾಗ್ರತೆಯಾಗಿ, ಜಗಾಮ-ತೆರಳಿತು ॥ ೨ ॥ ತಸ್ಯಾಂ ನಿಶಾಯಾಂ-ಆ ರಾತ್ರಿಯು, ವ್ಯುಷ್ಟಾಯಾಂ ಸತ್ಯಾಂ-ತಿಳಿಯುತ್ತಿರಲಿಕಾಗಿ, ಶತ್ರುಘ್ನಃ- ಶತ್ರುಘ್ನನು, ಪೌರ್ವಾಹ್ಣಿಕಂ-ಪ್ರಾತಃಕಾಲೀನವಾದ, ಕ್ರಮಂ-ನಿತ್ಯಕರ್ಮವನ್ನು, ಕೃತ್ವಾ-ಮಾಡಿ, ಪ್ರಾಂಜಲಿಃ-ಅಂಜಲಿಬದ್ಧನಾಗಿ, ಮುನಿಪುಂಗವಂ- ವಾಲ್ಮೀಕಿಋಷಿಯಂ ಕುರಿತು, ವಾಕ್ಯಂ-ಮಾತನ್ನು, ಉವಾಚ-ಪೇಳಿದನು ॥ ೩ ॥ ಹೆ ಭಗವನ್-ಎಲೈ ಪೂಜ್ಯನೇ, ರಘುನಂದನಂ-ರಘುಕುಲಾನಂದಕರನಾದ, ರಾಘವಂ-ಶ್ರೀರಾಮನನ್ನು,

---

ಕೇಳಲ್ಪಡುತ್ತದೆ, ವಾಲ್ಮೀಕಿಮಹರ್ಷಿಯಂ ಕೇಳುವಂಥಾವನಾಗೆಂದು ಪೇಳಲೂ, ಆ ಶತ್ರುಘ್ನನು ಬಹಳ ಕುತೂಹಲವುಳ್ಳ ಅವರುಗಳಂ ಕುರಿತು, ಎಲೈ ಸೇನಾಜನರೆ! ಇಂಥಾವಿಷಯವಂ ಇಲ್ಲಿ ಕೇಳುವದು ಯುಕ್ತವಲ್ಲ, ಈ ಮಹಾಮುನಿಯ ಆಶ್ರಮದಲ್ಲಿ ಇಂಥಾ ಆಶ್ಚರ್ಯಂಗಳು ಅನೇಕವಿರುವವು, ನಾವು ಕೌತೂಹಲದಿಂದ ಆ ಮುನಿಯಂ ಕೇಳಲಾಗದು, ಎಂಬದಾಗಿ ಪೇಳಿ, ಆ ಮಹರ್ಷಿಯ ಸನ್ನಿಧಿಗೆ ಪೋಗಿ, ಆ ಮಹಾಮುನಿಗೆ ವಂದನೆಯಂಗೈದು, ತಾನಿಳಿದಿದ್ದ ಪ್ರದೇಶಕ್ಕೆ ಹೊರಟುಹೋದನು —...ಉತ್ತರರಾಮಾಯಣದಲ್ಲಿನ ೭೧ ನೆಯ ಸರ್ಗಂ ಮುಗಿದುದು...—

ಆ ವೇಳೆಯೊಳು ಬಹುಮುಖವಾಗಿರುವ ಮತ್ತು ಸರ್ವೋತ್ತಮವಾದ ಶ್ರೀರಾಮನ ಗೀತವನ್ನು ಚಿಂತಿಸುತ್ತಾ ಮಲಗಿರುವ ಆ ಶತ್ರುಘ್ನನಿಗೆ ನಿದ್ರೆಯೇ ಬರಲಿಲ್ಲಾ, ಆ ರಾತ್ರಿಯಾದರೆ ಬಹು ರಮಣೀಯವಾಗಿಯೂ, ವೀಣಾತಾಳ ಪ್ರಮಾಣಂಗಳಿಂದ ಕೂಡಿದಂಥಾದ್ದಾಗಿಯೂ ಇರುವ ಆ ಶಬ್ದವಂ ಕೇಳಿ ಚಲಿಸಿದಂಥಾದ್ದಾಯಿತು ॥ ೨ ॥ ಆ ರಾತ್ರಿಯು ಕಳೆದುಹೋಗಲೂ, ಆ ಶತ್ರುಘ್ನನು ಪ್ರಾತಃಕಾಲೀನವಾದ, ಆಹ್ನಿಕವಂಗೈದು ಋಷಿಶ್ರೇಷ್ಠನಾದ ವಾಲ್ಮೀಕಿಮುನಿಯಂ ಕುರಿಯು, ಕೈಮುಗಿದು ಎಲೈ ಪೂಜ್ಯನೆ! ರಘುವಂಶಸ್ಥರಿಗೆಲ್ಲ ಆನಂದವನ್ನುಂಟು ಮಾಡುತ್ತಿರುವ ಶ್ರೀರಾಮನಂ ನೋ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭಗರ್ವ್‌ದ್ರಷ್ಟುಮಿಚ್ಛಾಮಿರಾಘವಂರಘುನಂದನಮ್ । ತ್ವಯಾನುಜ್ಞಾತುಮಿಚ್ಛಾಮಿಸರ್ವೈಭಿಸ್ಸಂಶಿತವ್ರತೈಃ ॥೪॥ ಇತ್ಯೇವಂವಾದಿನಂತಂತುಶತ್ರುಘ್ನಂಶತ್ರುತಾಪನಂ । ವಾಲ್ಮೀಕಿಸ್ತಂಪರಿಷ್ವಜ್ಯವಿಸಸರ್ಜಚರಾಘವಮ್ ॥೫॥ ಸೋಭಿವಾದ್ಯಮಹಾತ್ಮಾನಂಜ್ವಲಂತಮಿವತೇಜಸಾ ॥ ವಾಲ್ಮೀಕಿಂಮುನಿಶಾರ್ದೂಲಂಅಯೋಧ್ಯಾಂಪ್ರಯಯೌತದಾ ॥೬॥ ಸತ್ವಯೋಧ್ಯಾಸಮಾಸಾದ್ಯನಾನಾಪಣ್ಯೋಪಶೋಭಿತಾಂ। ಪ್ರವಿವೇಶಮಹಾಬಾಹುರ್ಯತ್ರರಾಮೋಮಹಾದ್ಯುತಿಃ॥ ಸೋಭಿವಾದ್ಯಮಹಾತ್ಮಾನಂಜ್ವಲಂತಮಿವತೇಜಸಾ । ಉವಾಚಪ್ರಾಂಜಲಿರ್ವಾಕ್ಯಂರಾಮಂಸತ್ಯಪರಾಕ್ರಮಂ ॥೮॥ ಯಥಾಜ್ಞಪ್ತಂಮಹಾರಾಜಸರ್ವಂತತ್ಕೃತವಾನಹಂ । ಹತಸ್ಸಲವಣಃಪಾಪಃಪುರೀಸಾಚನಿವೇಶಿತಾ ॥೯॥ ದ್ವಾದಶೈತೇಗತಾವರ್ಷಾಸ್ತ್ವಾಂವಿನಾರಘುನಂದನ। ನೋತ್ಸಹೇಯಮಹಂವಸ್ತುಂತ್ವಯಾವಿರಹಿತೋನೃಪ ॥೧೦॥ ಸಮೇಪ್ರಸಾದಂಕಾಕುಸ್ಥಕುರುಷ್ವಾಮಿತವಿಕ್ರಮ । ಮಾತೃಹೀನೋಯಥಾವತ್ಸೋನಚಿರಂಪ್ರವಸಾಮ್ಯಹಂ॥೧೧॥ ಏವಂಬ್ರುವಾಣಂಶತ್ರುಘ್ನಂಪರಿಷ್ವಜ್ಯೇದಮಬ್ರವೀತ್।

---

ದ್ರಷ್ಟುಂ – ನೋಡುವದಕ್ಕೋಸ್ಕರ, ಇಚ್ಛಾಮಿ–ಇಚ್ಛೈಸುತ್ತೇನೆ, ಸಂಶಿತವ್ರತೈಃ – ತೀಕ್ಷ್ಣವಾದ ತಪೋವ್ರತವುಳ್ಳ, ಏಭಿಸ್ಸಹ – ಈ ಋಷಿಗಳೊಡಗೂಡಿರುವ, ತ್ವಯಾ–ನಿನ್ನಿಂದ, ಅನುಜ್ಞಾತುಂ – ಅಪ್ಪಣೆಯನ್ನು ತೆಗದುಕೊಳ್ಳುವದಕ್ಕೋಸುಗ, ಇಚ್ಛಾಮಿ – ಇಚ್ಛೈಸುತ್ತೇನೆ ॥ ೪ ॥ ಇತ್ಯೇವಂ–ಈ ಪರಿಯಾಗಿ, ವಾದಿನಂ– ಮಾತನಾಡುತ್ತಿರುವ, ಶತ್ರುತಾಪನಂ–ಶತ್ರು ಸಂಹಾರಕನಾದ, ತಂ – ಆ ಪ್ರಸಿದ್ಧನಾದ, ತಂಶತ್ರುಘ್ನಂ–ಆಶತ್ರುಘ್ನನನ್ನು, ವಾಲ್ಮೀಕಿಃ–ವಾಲ್ಮೀಕಿಋಷಿಯು, ಪರಿಷ್ವಜ್ಯ–ಅಪ್ಪಿಕೊಂಡು, ರಾಘವಂ–ಶ್ರೀರಾಮನನ್ನುದ್ದೇಶಿಸಿ, ವಿಸಸರ್ಜ–ಕಳುಹಿಸಿಕೊಟ್ಟನು ॥ ೫ ॥ ಸಃ–ಆಶತ್ರುಘ್ನನು, ಮಹಾತ್ಮಾನಂ–ಮಹಾಮನಸ್ವಿಯಾದ, ತೇಜಸಾ–ತಪಸ್ತೇಜಸ್ಸಿನಿಂದ, ಜ್ವಲಂತಮಿವ– ಪ್ರಜ್ವಲಿಸುತ್ತಾನೋ ಎಂಬಂತಿರುವ, ಮುನಿಶಾರ್ದೂಲಂ–ಋಷಿ ಶ್ರೇಷ್ಠನಾದ, ವಾಲ್ಮೀಕಿಂ–ವಾಲ್ಮೀಕಿಋಷಿಯಂ ಕುರಿತು, ಅಭಿವಾದ್ಯ–ವಂದಿಸಿ, ತದಾ–ಆ ಕಾಲದಲ್ಲಿ, ಅಯೋಧ್ಯಾಂ – ಅಯೋಧ್ಯಾಪಟ್ಟಣವನ್ನು ಕುರಿತು, ಪ್ರಯಯೌ – ತೆರಳಿದನು ॥ ೬ ॥ ಸತು–ಆ ಶತ್ರುಘ್ನನಾದರೆ, ನಾನಾಪಣ್ಯೋಪಶೋಭಿತಾಂ–ನಾನಾ – ಅನೇಕಂಗಳಾದ, ಪಣ್ಯ–ವ್ಯಾಪಾರಮಾಡತಕ್ಕ ದ್ರವ್ಯಗಳಿಂದ, ಉಪಶೋಭಿತಾಂ–ಹೊಳೆಯುತ್ತಿರುವ, ಅಯೋಧ್ಯಾಂ – ಅಯೋಧ್ಯಾಪಟ್ಟಣವನ್ನು, ಆಸಾದ್ಯ–ಹೊಂದಿ, ಮಹಾಬಾಹುಃ- ಮಹಾಭುಜ ಪರಾಕ್ರಮಶಾಲಿಯಾದ, ಮಹಾದ್ಯುತಿಃ–ಮಹಾತೇಜಸ್ವಿಯಾದ, ರಾಮಃ–ಶ್ರೀರಾಮನು, ಯತ್ರ – ಯಾವಸ್ಥಳದಲ್ಲಿ, ಆಸ್ತೆ–ಇದ್ದಾನೋ, ತತ್ರ–ಆಸ್ಥಳಕ್ಕೆ, ಪ್ರವಿವೇಶ–ಹೊಕ್ಕನು ॥೭॥ ಸಃ–ಆ ಶತ್ರುಘ್ನನು, ತೇಜಸಾ–ಪರಾಕ್ರಮದಿಂದ, ಜ್ವಲಂತಮಿವ–ಹೊಳೆಯುತ್ತಿರುವನೆಂತಿರುವ, ಸತ್ಯಪರಾಕ್ರಮಂ–ಸತ್ಯದೊಡಲೆ ಶತ್ರುಸಂಹಾರಕನಾದ, ಮಹಾತ್ಮಾನಂ–ದೊಡ್ಡಮನಸ್ಸುಳ್ಳ, ರಾಮಂ–ಶ್ರೀರಾಮನಂ ಕುರಿತು, ಅಭಿವಾದ್ಯ–ವಂದಿಸಿ, ಪ್ರಾಂಜಲಿಃ–ಅಂಜಲಿಬದ್ಧನಾಗಿ, ವಾಕ್ಯಂ–ವಚನವನ್ನು, ಉವಾಚ–ಹೇಳಿದನು ॥೮॥ ಹೆ ಮಹಾರಾಜ–ಎಲೈ ಮಹಾರಾಜನೇ ! ಯಥಾ–ಹ್ಯಾಗೆ, ಆಜ್ಞಪ್ತಂ–ಆಜ್ಞಾಪಿಸಲ್ಪಟ್ಟಿತ್ತೋ, ಅಹಂ–ನಾನು, ತತ್ಸರ್ವಂ–ಆಸಮಸ್ತ ಕಾರ್ಯವನ್ನು, ಕೃತವಾನ್–ಮಾಡಿದೆನು, ಪಾಪಃ– ಪಾಪಿಷ್ಠನಾದ, ಸಲವಣಃ–ಆ ಲವಣಾಸುರನು, ಹತಃ–ಹೊಡೆಯಲ್ಪಟ್ಟನು, ಸಾಚಪುರೀ–ಆ ಮಧುರಾ ಪಟ್ಟಣವೂನು, ನಿವೇಶಿತಾ–ಪ್ರವೇಶಿಸಲ್ಪಟ್ಟಿತೂ ॥೯॥ ಹೆ ರಘುನಂದನ–ಎಲೈ ಶ್ರೀರಾಮನೇ ! ತ್ವಾಂವಿನಾ–ನಿನ್ನ ವಿನಾಹಿಸಿ, ಏತೇ–ಈ ಪೂರ್ವೋಕ್ತಗಳಾದ, ದ್ವಾದಶವರ್ಷಾಃ–ಹನ್ನೆರಡು ವರುಷಗಳು, ಗತಾಃ–ಕಳದವು, ಹೆನೃಪ–ಎಲೈ ರಾಜನೇ ಅಹಂ–ನಾನು, ತ್ವಯಾ–ನಿನ್ನಿಂದ, ವಿರಹಿತಃ–ವಿಯುಕ್ತನಾಗಿ, ವಸ್ತುಂ– ಇರುವದಕ್ಕೋಸುಗ, ನೋತ್ಸಹೇಯಂ–ಸಮರ್ಥನಾಗಲಾರೆನು ॥೧೦॥ ಹೆ ಕಾಕುತ್ಸ್ಥ–ಎಲೈ ಕಕುತ್ಸ್ಥವಂಶೋತ್ಪನ್ನನೇ, ಹೆ ಅಮಿತವಿಕ್ರಮ–ಎಲೈ ಅಪಾರವಾದ ಪರಾಕ್ರಮಿಯೇ, ಮಾತೃಹೀನಃ–ತಾಯಿಯಿಂದ ಹೀನವಾದ, ವತ್ಸೋಯಥಾ–ಶಿಶುವಿನಂತೆ, ಚಿರಂ–ಬಹುಕಾಲವು, ಸಃ–ಆ ಈ, ಅಹಂ–ನಾನು, ನಪ್ರವಸಾಮಿ – ಇರಲಾರೆನು, ಮೇ–ನನಗೆ, ಪ್ರಸಾದಂ–ಅನುಗ್ರಹವನ್ನು, ಕುರುಷ್ವ–ಮಾಡು ॥೧೧॥ಏವಂ–ಈ ಪರಿಯಾಗಿ, ಬ್ರುವಾಣಂ–ಹೇಳುತಿರುವ,ಶತ್ರುಘ್ನಂ–ಶತ್ರುಘ್ನನನ್ನು,

---

ಇಚ್ಛೈಸುತ್ತೇನೆ, ತೀಕ್ಷ್ಣವಾದ ತಪೋವ್ರತವುಳ್ಳ ಈ ಮಹಾಮುನಿಗಳಿಂದೊಡಗೂಡಿ ತಾನು ಅಪ್ಪಣೆಯಂ ಕೊಡಬೇಕೆಂದು ಪೇಳಿದವನಾಗಲೂ, ಆ ಮಹರ್ಷಿಯು ಶತ್ರುಸಂಹಾರಕನಾದ ಆಶತ್ರುಘ್ನನನ್ನಪ್ಪಿಕೊಂಡು, ಕಳುಹಿಸಿಕೊಟ್ಟನು ॥೫॥ ಆ ವೇಳೆಯೊಳು ಶತ್ರುಘ್ನನಾದರೆ,ಬ್ರಹ್ಮತೇಜಸ್ಸಿನಿಂದ ಪ್ರಜ್ವಲಿಸುತ್ತಿರುವನೋ ಏನೋ ಎಂಬಂತಿರುವ ಮುನಿಶ್ರೇಷ್ಠನಾದ ನುತಸ್ತ್ರೋ ಮಹಾನುಭಾವನಾದ ಆ ವಾಲ್ಮೀಕಿಮಹರ್ಷಿಯಂ ಕುರಿತು ವಂದನೆಯಂಗೈದು, ಅಯೋಧ್ಯಾಪುರವಂ ಕುರಿತು ತೆರಳಿದವನಾಗಿ ಬಗೆಬಗೆಗಳಾದ ಮಾರುವ ಪದಾರ್ಥಗಳಿಂದ ಕಂಗೊಳಿಸುತ್ತಿರುವ ಆ ಅಯೋಧ್ಯಾಪುರವಂಪೊಕ್ಕು, ಮಹಾಭುಜ ಪರಾಕ್ರಮಿಯಾದ ಶ್ರೀರಾಮನಿರುವ ಪ್ರದೇಶವಂ ಪ್ರವೇಶಿಸಿದಂಥಾವನಾದನು ॥೭॥ ಆಶತ್ರುಘ್ನನು ಮಹಾನುಭಾವನಾಗಿಯೂ, ತೇಜಸ್ಸಿನಿಂದ ಕಂಗೊಳಿಸುವಂಥಾವನಾಗಿಯೂ ಸತ್ಯವಾದಪರಾಕ್ರಮ ಮುಳ್ಳವನಾಗಿಯೂ ಇರುವ ಶ್ರೀರಾಮನಂ ಕಂಡು ಅಂಜಲಿಬದ್ಧನಾಗಿ, ಎಲೈಮಹಾರಾಜನೇ ! ಅಪ್ಪಣೆಯಾದಂತೆ ಕಾರ್ಯವನ್ನೆಲ್ಲ ಮಾಡಿದೆನು, ಪಾಪಿಯಾದ ಆ ಲವಣಾಸುರನು ಹತನಾದನು, ಆಪುರಿಯಂ ಸ್ವಾಧೀನಮಾಡಿಕೊಂಡೆನು, ನಿನ್ನನ್ನಗಲಿ ಹನ್ನೆರಡು ವರುಷಗಳಾದವು, ನಿನ್ನಿಂದವಿರಕ್ತನಾಗಿ ತಾಯಿಯಿಂದ ಹೀನವಾದ ಬಾಲಕನಂತೆ ಬಹುಕಾಲವು ನಾನಿರಲಾರೆನು, ಎನಗೆ ಅನುಗ್ರಹಿಸು ವಂಥಾವನಾಗೆಂದು ನುಡಿದಂಥಾವನಾಗಲೂ,ರಘುನಂದನನು, ಈ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಾವಿಷಾದಂಕೃಥಾಶ್ಶೂರನೈತತ್ಕ್ಷತ್ರಿಯಚೇಷ್ಟಿತಂ ॥೧೨॥ ನಾವಸೀದಂತಿರಾಜಾನೋವಿಪ್ರವಾಸೇಷುರಾಘವ । ಪ್ರಜಾಶ್ಚ ಪರಿಪಾಲ್ಯಾಹಿಕ್ಷತ್ರಧರ್ಮೇಣರಾಘವ ॥೧೩॥ ಕಾಲೇಕಾಲೇಚಮಾಂವೀರಅಯೋಧ್ಯಾಮವಲೋಕಿತುಂ। ಆಗಚ್ಛತ್ವಂನರಶ್ರೇಷ್ಠ ಗಂತಾಸಿಚಪುರಂತವ॥೧೪॥ ಮಮಾಪಿತ್ವಂಸುದಯಿತಃಪ್ರಾಣೈರಪಿನಸಂಶಯಃ । ಅವಶ್ಯಂಕರಣೀಯಂಚರಾಜ್ಯಸ್ಯಪರಿಪಾಲನಂ ॥೧೫॥ ತಸ್ಮಾತ್ತ್ವಂಚಸಕಾಕುತ್ಸ್ಥ ಸಪ್ತರಾತ್ರಂಮಯಾಸಹ । ಊರ್ಧ್ವಂಗಂತಾಸಿಮಧುರಾಂಸಭೃತ್ಯಬಲವಾಹನಃ ॥೧೬॥ ರಾಮಸ್ಯೈತದ್ವಚಃಶ್ರುತ್ವಾಧರ್ಮಯುಕ್ತಂಮನೋಗತಂ । ಶತ್ರುಘ್ನೋದೀನಯಾವಾಚಾ ಬಾಢಮಿತ್ಯೇವಚಾಬ್ರವೀತ್ ॥೧೭॥ ಸಪ್ತರಾತ್ರಂಚಕಾಕುತ್ಸ್ಥೋ ರಾಘವಸ್ಯಯಥಾಜ್ಞಯಾ। ಉಷ್ಯತತ್ರಮಹೇಷ್ವಾಸೋಗಮನಾಯೋಪಚಕ್ರಮೇ ॥೧೮॥ ಆಮಂತ್ರ್ಯತುಮಹಾತ್ಮಾನಂರಾಮಂಸತ್ಯಪರಾಕ್ರಮಂ। ಭರತಂಲಕ್ಷ್ಮಣಂಚೈವಮಹಾರಥಮುಪಾರುಹತ್। ದೂರಂತಾಭ್ಯಾಮನುಗತೋಲಕ್ಷ್ಮಣೇನಮಹಾತ್ಮನಾ । ಭರತೇನಚಶತ್ರುಘ್ನೋಜಗಾಮಾಶುಪುರಂತದಾ ॥೨೦॥

—…ಇತಿ ಶ್ರೀಮದುತ್ತರ ರಾಮಾಯಣೇ ದ್ವಿ ಸಪ್ತತಿತಮಸ್ಸರ್ಗಃ…—

---

ಪರಿಷ್ವಜ್ಯ–ಅಪ್ಪಿಕೊಂಡು, ಇದಂ–ಈ ಮಾತನ್ನು, ಅಬ್ರವೀತ್–ನುಡಿದನು, ಹೆ ಶೂರ–ಎಲೈ ಶೂರನೇ ವಿಷಾದಂ–ವ್ಯಸನವನ್ನು, ಮಾಕೃಥಾಃ–ಮಾಡಬ್ಯಾಡ, ಏತತ್–ಇದು, ಕ್ಷತ್ರಿಯಚೇಷ್ಟಿತಂ–ಕ್ಷತ್ರಿಯರ ವ್ಯಾಪಾರವು, ನ–ಅಲ್ಲಾ, ಹೆ ರಾಘವ–ಎಲೈ ಶ್ರೀರಾಮನೆ, ರಾಜಾನಃ– ಅರಸುಗಳು, ವಿಪ್ರವಾಸೇಷು–ದೇಶಾಂತರವನ್ನು ಕುರಿತು ಪ್ರಯಾಣಮಾಡುವ ವಿಷಯದಲ್ಲಿ, ನಾವಸೀದಂತಿ–ವ್ಯಸನಬೀಳುವದಿಲ್ಲಾ, ಹೆ ರಾಘವ– ಎಲೈರಘುವಂಶೋತ್ಪನ್ನನೇ, ಪ್ರಜಾಃ–ಪ್ರಜೆಗಳು, ಕ್ಷತ್ರಧರ್ಮೇಣ–ರಾಜಧರ್ಮದಿಂದ, ಪರಿಪಾಲ್ಯಾಹಿ–ಸಂರಕ್ಷಣೆಮಾಡತಕ್ಕವರಷ್ಟೇ ॥೧೩॥ ಹೆವೀರ–ಎಲೈಶೂರನೇ, ಹೇನರಶ್ರೇಷ್ಠ–ಎಲೈ ನರಶ್ರೇಷ್ಠನೇ, ಹೆಪರಂತಪ–ಎಲೈ ತಪೋವಂತನೇ,ಕಾಲೇಕಾಲೇ–ಆಯಾಯ ಸಮಯಗಳಲ್ಲಿ, ಮಾಂ–ನನ್ನನ್ನು, ಅವಲೋಕಿತುಂ–ನೋಡುವದಕ್ಕೋಸ್ಕರ, ತ್ವಂ–ನೀನು, ಆಗಚ್ಛ–ಬರುತ್ತಿರು, ಗಂತಾಸಿ–ಹೋಗುತ್ತಿರು ॥೧೪॥ ಮಮಾಪಿ–ನನಗೂಕೂಡ, ತ್ವಂ–ನೀನು, ಪ್ರಾಣೈರಪಿ–ಪ್ರಾಣಗಳಿಂತಲೂ, ಸುದಯಿತಃ–ಇಷ್ಟನಾದವನು, ನಸಂಶಯಃ–ಸಂಶಯವಿಲ್ಲಾ, ರಾಜ್ಯಸ್ಯ–ರಾಜ್ಯದ, ಪರಿಪಾಲನಂ–ಸಂರಕ್ಷಣೆಯು, ಅವಶ್ಯಂ– ಅವಶ್ಯವಾಗಿ, ಕರಣೀಯಂ–ಮಾಡತಕ್ಕದ್ದು ॥೧೫॥ ಹೆ ಕಕುತ್ಸ್ಥ–ಎಲೈ ಕಾಕುತ್ಸ್ಥರಾಜ ವಂಶೋತ್ಪನ್ನನೇ, ತಸ್ಮಾತ್ – ಆ ಕಾರಣದ ದೆಸೆಯಿಂದ, ಮಯಾಸಹ–ನನ್ನೊಡಗೂಡ, ಸಪ್ತರಾತ್ರಂ–ಏಳುರಾತ್ರಿಯು, ವಸ–ಇರು, ಊರ್ಧ್ವಂ– ಬಳಿಕ, ಸಭೃತ್ಯಬಲವಾಹನಃ–ಸೇವಕ ಸೈನ್ಯ ವಾಹನಗಳಿಂದೊಡಗೂಡಿದವನಾಗಿ, ಮಧುರಾಂ–ಮಧುರಾಪಟ್ಟಣವನ್ನು ಕುರಿತು, ಗಂತಾಸಿ–ಹೋಗುವಂತೇ ॥೧೬॥ . ಶತ್ರುಘ್ನಃ–ಶತ್ರುಘ್ನನು,ರಾಮಸ್ಯ–ಶ್ರೀರಾಮನ, ಧರ್ಮಯುಕ್ತಂ–ಧರ್ಮದಿಂದ ಕೂಡಿಕೊಂಡಿರುವ, ಮನೋಗತಂ–ಅಂತರಂಗದಲ್ಲಿರುವ, ತದ್ವಚಃ–ಆ ಮಾತನ್ನು, ಶ್ರುತ್ವಾ–ಕೇಳಿ, ದೀನಯಾ– ದೀನವಾದ, ವಾಚಾ–ವಾಕ್ಕಿನಿಂದ, ಬಾಢಮಿತ್ಯೇವಚ–ಅಂಗೀಕಾರವೇ ಸರೀಎಂದು, ಅಬ್ರವೀತ್–ನುಡಿದನು ॥೧೭॥ ಕಾಕುತ್ಸ್ಥಃ–ಕಕುತ್ಸ್ಥವಂಶೋತ್ಪನ್ನನಾದ ಶತ್ರುಘ್ನನು, ರಾಘವಸ್ಯ–ಶ್ರೀರಾಮನ, ಯಥಾಜ್ಞಯಾ–ಆಜ್ಞೆಯಂತೇ, ಸಪ್ತರಾತ್ರಂ–ಏಳುರಾತ್ರಿಗಳು, ತತ್ರ–ಆ ಅಯೋಧ್ಯಾಪಟ್ಟಣದಲ್ಲಿ, ಉಷ್ಯ–ಇದ್ದು–ಮಹೇಷ್ವಾಸಃ–ಮಹಾಧನುರ್ಧಾರಿಯಾಗಿ, ಗಮನಾಯ–ಪ್ರಯಾಣಕ್ಕೋಸ್ಕರ, ಉಪಚಕ್ರಮೇ–ಯತ್ನಿಸಿದನು ॥೧೮॥ ಮಹಾತ್ಮಾನಂ–ಮಹಾತ್ಮನಾದ, ಸತ್ಯಪರಾಕ್ರಮಂ–ಸಫಲವಾದ ಪರಾಕ್ರಮವುಳ್ಳ, ರಾಮಂ–ಶ್ರೀರಾಮನನ್ನು, ಭರತಂ–ಭರತನನ್ನು, ಆಮಂತ್ರ್ಯ–ಸಮ್ಮತಿಸಿ–ಮಹಾರಥಂ–ದೊಡ್ಡರಥವನ್ನು, ಉಪಾರುಹತ್–ಏರಿದನು ॥೧೯॥ ಶತ್ರುಘ್ನಃ–ಶತ್ರುಘ್ನನು, ಮಹಾತ್ಮನಾ–ಮಹಾಮನಸ್ವಿಯಾದ, ಲಕ್ಷ್ಮಣೇನ–ಲಕ್ಷ್ಮಣನಿಂದಲೂ ಭರತೇನಚ–ಭರತನಿಂದಲೂ, ತಾಭ್ಯಾಂ–ಅವರಿಬ್ಬರಿಂದಲೂ, ದೂರಂ–ಬಹುದೂರವು, ಅನುಗತಃ–ಹಿಂದೆ ಬರಲ್ಪಟ್ಟವನಾಗಿ, ತದಾ–ಆ ಕಾಲದಲ್ಲಿ, ಪುರಂ–ಮಧುರಾಪಟ್ಟಣವನ್ನು ಕುರಿತು, ಆಶು–ಜಾಗ್ರತೆಯಾಗಿ, ಜಗಾಮ–ತೆರಳಿದನು ॥೨೦॥

—…*ಇತಿ ಶ್ರೀಮದುತ್ತರ ರಾಮಾಯಣೇ ದ್ವಿಸಪ್ತತಿತಮಸ್ಸರ್ಗಃ.*…—

---

ಪರಿ ಹೇಳುತ್ತಿರುವ ಆ ಶತ್ರುಘ್ನ ನನ್ನಪ್ಪಿಕೊಂಡು, ಎಲೈಶೂರನೆ ! ವ್ಯಸನಿಸಬೇಡ, ಇದುಕ್ಷತ್ರಿಯರ ವ್ಯಾಪಾರವಲ್ಲ, ಅರಸುಗಳು ದೇಶಾಂತರವಂ ಕುರಿತು ತೆರಳುವವಿಷಯದೊಳು ಚಿಂತಿಸುವದಿಲ್ಲ, ರಾಜಧರ್ಮದಿಂದ ಪ್ರಜಾಪರಿಪಾಲನೆಯಂಗೈಯುವರು, ನೀನಾಪುರಿಯಲ್ಲಿ ಇದ್ದುಕೊಂಡು ಕಾಲಕಾಲದಲ್ಲಿ ನನ್ನನ್ನು ನೋಡುವದಕ್ಕೆ ಬರುತ್ತಲೂ ಹೋಗುತ್ತಲೂ ಇರುವಂಥಾವನಾಗು, ನೀನು ನನಿಗೂ ಕೂಡ ಪ್ರಾಣಗಳಿಗಿಂತಲೂ ಪ್ರೀತಿಪಾತ್ರನು, ಪ್ರಜಾಸಂರಕ್ಷಣೆಯು ಅವಶ್ಯಕವಾಗಿ ಮಾಡತಕ್ಕದ್ದೆಂದು ನಿರೂಪಿಸಿದವನಾಗಲೂ, ಧರ್ಮಯುಕ್ತವಾದ ಈವಾಕ್ಯವಂಕೇಳಿ, ಶತ್ರುಘ್ನನು ದೀನವಾದ ವಾಕ್ಕಿನಿಂದ ಒಪ್ಪಿಕೊಂಡು, ಒಡೆಯನ ಆಜ್ಞೆಯಂತೆ ಏಳುದಿನಗಳು ಆ ಅಯೋಧ್ಯಾ ಪುರದಲ್ಲಿದ್ದು, ಹೊರಡಲುಜ್ಜಗಿಸಿದನು ॥೧೮॥ ಬಳಿಕ ಆ ಶತ್ರುಘ್ನನು ಸತ್ಯಪರಾಕ್ರಮಿಯಾದ ಶ್ರೀರಾಮನನ್ನೂ ಭರತನನ್ನೂ, ಮಹಾರಥಿಕನಾದ ಶತ್ರುಘ್ನನನ್ನೂ ಸಹಕೇಳಿದವನಾಗಿ, ರಥವನ್ನೇರಿ,ಭರತ ಲಕ್ಷ್ಮಣರಿಂದ ಬಹುದೂರವು ಸಾಗುಕಳುಹಿಸಲ್ಪಟ್ಟವನಾಗಿ, ತನ್ನಮಧುರಾ ಪುರಿಯಂ ಕುರಿತು ತೆರಳಿದವನಾದನು. ॥೨೦॥

—…ಉತ್ತರರಾಮಾಯಣದಲ್ಲಿನ ೭೨ನೆಯ ಸರ್ಗಂ ಮುಗಿದುದು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ರಸ್ಥಾಪ್ಯತುಸಶತ್ರುಘ್ನಂಭ್ರಾತೃಭ್ಯಾಂಸಹರಾಘವಃ । ಪ್ರಮುಮೋದಸುಖೀರಾಜ್ಯಂಧರ್ಮೇಣಪರಿಪಾಲಯನ್ ॥೧॥ ತತಃಕತಿಪಯಾಹಸ್ಸುವೃದ್ಧೋಜಾನಪದೋದ್ವಿಜಃ । ಮೃತಂಬಾಲಮುಪಾದಾಯರಾಜದ್ವಾರಮುಪಾಗಮತ್ ॥೨॥ ಬ್ರುವನ್ ಬಹುವಿಧಾವಾಚಃಸ್ನೇಹದುಃಖಸಮನ್ವಿತಃ । ಅಸಕೃತ್ಪುತ್ರಪುತ್ರೇತಿವಾಕ್ಯಮೇತದುವಾಚಹ ॥೩॥ ಕಿನ್ನುಮೇದುಷ್ಕೃತಂ ಕರ್ಮಪೂರ್ವಂದೇಹಾಂತರೇಕೃತಂ । ಯದಹಂಪುತ್ರಮೇಕಂತ್ವಾಂಪಶ್ಯಾಮಿನಿಧನಂಗತಂ । ಅಪ್ರಾಪ್ತಯೌವನಂಬಾಲಂಪಂಚವರ್ಷಸಮನ್ವಿತಂ ॥೪॥ ಅಕಾಲೇಕಾಲಮಾಪನ್ನೋದುಃಖಾಯಮಮಪುತ್ರಕ ॥೫॥ ಅಲ್ಪೈರಹೋಭಿರ್ನಿಧನಂಗಮಿಷ್ಯಾಮಿನಸಂಶಯಃ । ಅಹಂಚಜನನೀಚೈವತವಶೋಕೇನಪುತ್ರಕ ॥೬॥ ನಸ್ಮರಾಮ್ಯನೃತಂತೂಕ್ತಂನಚಹಿಂಸಾಂಕರೋಮ್ಯಹಂ । ಸರ್ವೇಷಾಂಪ್ರಾಣಿನಾಂದುಃಖಂಕೃತಂನೈವಸ್ಮರಾಮ್ಯಹಂ ॥೭॥ ಕೇನಾದ್ಯದುಷ್ಕೃತೇನಾಯಂಬಾಲಏವಮಮಾತ್ಮಜಃ । ಅಕೃತ್ವಾಪಿತೃಕಾರ್ಯಾಣಿನೀತೋವೈವಸ್ವತಕ್ಷಯಂ ॥೮॥ ನೇದೃಶಂದೃಷ್ಟಪೂರ್ವಂಮೇಶ್ರುತಂವಾಘೋರದರ್ಶನಂ । ಮೃ

---

ಸರಾಘವಃ–ಆ ಶ್ರೀರಾಮನು, ಭ್ರಾತೃಭ್ಯಾಂಸಹ–ತಮ್ಮಂದಿರೊಡಗೂಡಿ, ಶತ್ರುಘ್ನಂ–ಶತ್ರುಘ್ನನನ್ನು, ಪ್ರಸ್ಥಾಪ್ಯ–ಕಳುಹಿಸಿ, ರಾಜ್ಯಂ–ರಾಜ್ಯವನ್ನು, ಧರ್ಮೇಣ–ಧರ್ಮದಿಂದ, ಪರಿಪಾಲಯನ್–ಪಾಲನೆಮಾಡುತ್ತಿರುವವನಾಗಿ,ಸುಖೀ–ಸುಖವಂತನಾಗಿ, ಪ್ರಮುಮೋದ, ಸಂತೋಷಿಸಿದನು ॥೧॥ ತತಃ–ಬಳಿಕ, ಕತಿಪಯಾಹಸ್ಸು–ಕೆಲವು ದಿವಸಗಳಲ್ಲಿ, ವೃದ್ಧಃ–ವೃದ್ಧನಾದ, ಜಾನಪದಃ–ಕೋಸಲದೇಶವಾಸಿಯಾದ, ದ್ವಿಜಃ–ಬ್ರಾಹ್ಮಣನು, ಮೃತಂ–ಮೃತಪಟ್ಟ, ಬಾಲಂ–ಶಿಶುವಿನನ್ನು, ಉಪಾದಾಯ–ತೆಗದುಕೊಂಡು, ರಾಜದ್ವಾರಂ–ರಾಜದ್ವಾರವನ್ನು ಕುರಿತು, ಉಪಾಗಮತ್–ಬಂದನು ॥೨॥ ಸ್ನೇಹದುಃಖಸಮನ್ವಿತಃ–ಸ್ನೇಹ–ಪುತ್ರಪ್ರೇಮೆಯಿಂದ ಹುಟ್ಟಿದ, ದುಃಖ–ದುಃಖದಿಂದ, ಸಮನ್ವಿತಃ–ಕೂಡಿದವನಾಗಿ, ಪುತ್ರಪುತ್ರೇತಿ–ಮಗನೇ ಮಗನೆಎಂಬದಾಗಿ, ಬಹುವಿಧಾಃ–ನಾನಾಬಗೆಗಳಾದ,ವಾಚಃ–ವಾಕ್ಕುಗಳನ್ನು, ಅಸಕೃತ್ ಬಾರಿಬಾರಿಗೂ,ಬ್ರುವನ್–ಪೇಳುತ್ತಿರುವವನಾಗಿ,ಏತದ್ವಾಕ್ಯಂ–ಈಮಾತನ್ನು,ಉವಾಚಹ–ಪೇಳಿದನಷ್ಟೆ॥ ಮೇ–ನನ್ನಿಂದ, ಪೂರ್ವದೇಹಾಂತರೇ–ಪೂರ್ವ–ಪೂರ್ವಜನ್ಮದಲ್ಲಿ, ದೇಹಾಂತರೇ–ಮತ್ತೊಂದು ದೇಹದಲ್ಲಿ,ಕೃತಂ–ಮಾಡಲ್ಪಟ್ಟ,ದುಷ್ಕೃತಂ–ಪಾಪರೂಪವಾದ, ಕರ್ಮ–ಕರ್ಮವು, ಕಿಂನು–ಯಂಥಾದ್ದೋ, ಯತ್–ಯಾವ ಕಾರಣದ ದೆಶೆಯಿಂದ, ಅಹಂ–ನಾನು, ಅಪ್ರಾಪ್ತಯೌವನಂ– ಪ್ರಾಪ್ತವಾದ ಯೌವನವಿಲ್ಲದಿರುವ, ಪಂಚವರ್ಷಸಮನ್ವಿತಂ–ಐದುವರ್ಷಗಳಿಂದ ಕೂಡಿಕೊಂಡಿರುವ, ಬಾಲಂ–ಹುಡುಗನಾದ, ಏಕಂ–ಪುತ್ರಂ–ಒಬ್ಬನೇ ಮಗನಾದ,ತ್ವಾಂ–ನಿನ್ನನ್ನು, ನಿಧನಂ–ಮರಣವನ್ನು, ಗತಂ–ಹೊಂದಿದವನನ್ನಾಗಿ, ಪಶ್ಯಾಮಿ–ನೋಡುತ್ತೇನೆಯೋ ॥೪॥ ಹೆ ಪುತ್ರಕ–ಎಲೊಮಗನೆ, ಮಮ– ನನಗೆ, ದುಃಖಾಯ–ದುಃಖಕ್ಕೋಸುಗ, ಅಕಾಲೇ–ಅಕಾಲದಲ್ಲಿ, ಕಾಲಂ–ಮರಣಕಾಲವನ್ನು, ಆಪನ್ನಃ–ಹೊಂದಿದಂಥಾವನಾದೆ ॥೫॥ ಅಲ್ಪೈರಹೋಭಿಃ–ಸ್ವಲ್ಪ ದಿವಸಗಳಿಂದಲೇ ಅಹಂ–ನಾನು, ನಿಧನಂ–ಮರಣವನ್ನು, ಗಮಿಷ್ಯಾಮಿ–ಹೊಂದುವೆನು, ನಸಂಶಯಃ–ಸಂಶಯವಿಲ್ಲಾ, ಹೆ ಪುತ್ರಕ–ಎಲೋ ಪುತ್ರನೇ, ತವ–ನಿನ್ನ, ಶೋಕೇನೈವ–ವ್ಯಸನದಿಂದಲೇ, ಜನನೀಚ–ತಾಯಿಯೂನು, ನಿಧನಂ–ಮರಣವನ್ನು, ಗಮಿಷ್ಯತಿ–ಹೊಂದುವಳು, ಅಹಂ–ನಾನು, ಅನೃತಂ– ಸುಳ್ಳುಮಾತುಗಳನ್ನು, ನಸ್ಮರಾಮಿ–ಸ್ಮರಿಸಿದವನಲ್ಲಾ, ನೋಕ್ತಂ–ಹೇಳಲ್ಪಡಲಿಲ್ಲಾ, ಹಿಂಸಾಂಚ–ಪರಹಿಂಸೆಯನ್ನೂ ಕೂಡ, ಅಹಂ–ನಾನು, ನಸ್ಮರಾಮಿ–ಸ್ಮರಿಸಿದವನಲ್ಲ, ಸರ್ವೇಷಾಂ–ಸಮಸ್ತಗಳಾದ, ಪ್ರಾಣಿನಾಂ–ಪ್ರಾಣಿಗಳಿಗೆ,ಕೃತಂ–ಮಾಡಲ್ಪಟ್ಟ, ದುಃಖಂ–ದುಃಖವನ್ನು,ಅಹಂ–ನಾನು, ನಸ್ಮರಾಮಿ–ಸ್ಮರಿಸಿದವನಲ್ಲಾ ॥೭॥ ಅದ್ಯ–ಈಗ, ಬಾಲಃ–ಬಾಲನಾದ,ಮಮ–ನನ್ನ ಅಯಂ–ಆತ್ಮಜಃ–ಈಕೊಮಾರನು,ಕೇನದುಷ್ಕೃತೇನೈವ–ಯಾವಪಾಪದಿಂದಲೇ,ಪಿತೃಕಾರ್ಯಾಣಿ–ತಂದೆತಾಯಿಗಳ ಕಾರ್ಯಗಳನ್ನು, ಅಕೃತ್ವಾ–ಮಾಡದೆ, ವೈವಸ್ವತಕ್ಷಯಂ–ಯಮಧರ್ಮರಾಯನ ಮನೆಯಂ ಕುರಿತು,ನೀತಃ–ಹೊಂದಿಸಲ್ಪಟ್ಟನೊ ॥೮॥ ಶ್ರೀರಾಮವಿಷಯೇ–ಶ್ರೀರಾಮನ ದೇಶದಲ್ಲಿ, ಯಥಾ–ಹ್ಯಾಗೆ, ಅಪ್ರಾಪ್ತಕಾಲಾನಾಂ–ಮರಣಕಾಲವಲ್ಲದವರಿಗೆ, ಮೃತ್ಯುಃ–ಮರಣವೂ, ತಥಾ–ಹಾಗೆ, ಈದೃಶಂ–ಇಂಥಾ ಕಾರ್ಯವು, ಮೇ–ನನ್ನಿಂದ, ನದೃಷ್ಟಪೂರ್ವಂ–ಪೂರ್ವದಲ್ಲಿ ನೋಡಲಿಲ್ಲಾ, ಘೋರದರ್ಶನಂ–ಘೋರ–ಭಯಂಕರವಾದ, ದರ್ಶನಂ–ನೋಡುವಿಕೆಯು

---

ಆ ಶ್ರೀರಾಮನು ಶತ್ರುಘ್ನನಂ ಕಳುಹಿಸಿಕೊಟ್ಟು, ತಮ್ಮಂದಿರಿಂ ದೊಡಗೂಡಿ ಸುಖವಂತನಾಗಿ,ರಾಜ್ಯವಂಧರ್ಮದಿಂ ಪರಿಪಾಲಿಸುತ್ತಾ ಸಂತೋಷವಾಗಿದ್ದನು ॥೧॥ ಬಳಿಕ ಕೆಲವು ದಿನಗಳಾದಮೇಲೆ ದೇಶದಲ್ಲಿರುವ ಓರ್ವವೃದ್ಧಬ್ರಾಹ್ಮಣನು, ಮೃತನಾದ ಬಾಲಕನಂ ತೆಗದು ಕೊಂಡು ರಾಜದ್ವಾರದಲ್ಲಿಬಂದು, ಪುತ್ರಸ್ನೇಹದಿಂ ಪುಟ್ಟಿದ ದುಃಖದಿಂದಯುಕ್ತನಾಗಿ, ವಿಧವಿಧವಾಗಿ ಮಾತಾಡುತ್ತಲೂ, ಅಯ್ಯೋಪುತ್ರನೆ ಎಂದು ಕೂಗುತ್ತಲೂ, ನಾನು, ಪೂರ್ವಜನ್ಮದಲ್ಲಿ ಎಂಥಾ ಪಾಪವಂ ಗೈದಿದ್ದೆನೋ ಯೇನೋ, ಯೌವನ ಪ್ರಾದುರ್ಭಾವ ವಿಲ್ಲದಿರುವ ಐದುವರುಷ ವಯಸ್ಸುಳ್ಳ ಏಕಪುತ್ರನಾದ ನಿನ್ನನ್ನು ಮರಣವಂ ಪೊಂದಿದವ ನನ್ನಾಗಿಕಂಡೆನಲ್ಲಾ, ಎಲೈಮಗನೆ ! ಎನಗೆ ದುಃಖಕ್ಕೋಸುಗ ಅಕಾಲದಲ್ಲಿ ಮೃತನಾದೆ, ನಾನು ನಿನ್ನ ಜನನಿಯು ಸಹ ಕೆಲವು ದಿನದಲ್ಲಿಯೇ, ನಿನ್ನಸಂಬಂಧವಾದ್ಯ ಈಶೋಕದಿಂದ ಮೃತರಾಗುವೆವು, ಅರ್ಥದಲ್ಲಿ ಸಂದೇಹವಿಲ್ಲ, ನಾನು ಯಾರಿಗೂ ಸುಳ್ಳು ಹೇಳಿದವನಲ್ಲಾ, ಯಾವ ಪ್ರಾಣಿಗೂ ದುಃಖವನ್ನುಂಟುಮಾಡಿದವನಲ್ಲಾ, ಇಂಥಾ ಎನ್ನಬಾಲಕನೀಗ ಯಾವ ಪಾಪಕರ್ಮದಿಂದ ಹತನಾದನೋ ಹಾಹಾಪಿತೃ ಕರ್ಮಗಳಂ ಗೈಯದೆ ಯಮನಮಂದಿರವಂಪೊಂದಿದನು, ಈ ರಾಮನ ರಾಜ್ಯದಲ್ಲಿರುವಂತೆ ಬಾಲಕನ ಮೃತಿಯನ್ನು ನಾನು ಪೂರ್ವದಲ್ಲಿ ಎಲ್ಲಿಯೂ ನೋಡಲೂ ಇಲ್ಲಾ, ಕೇಳಲೂ ಇಲ್ಲ. ರಾಮನದುಷ್ಕರ್ಮವು ಮಹತ್ತರವಾದದ್ದು, ಅದರಿಂದಲೆ ಈ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ಯುರಪ್ರಾಪ್ತಕಾಲಾನಾಂ ಶ್ರೀರಾಮವಿಷಯೇ ಯಥಾ ॥೯॥ ರಾಮಸ್ಯ ದುಷ್ಕೃತಂ ಕಿಂಚಿನ್ಮಹದಸ್ತಿ ನ ಸಂಶಯಃ। ಯಥಾಹ್ಯ
ವಿಷಯಸ್ಥಾನಾಂ ಬಾಲಾನಾಂ ಮೃತ್ಯುರಾಗತಃ ॥೧೦॥ ತ್ವಂ ರಾಜನ್ ಜೀವಯಸ್ವೈನಂ ಬಾಲಂ ಮೃತ್ಯುವಶಂ ಗತಂ। ರಾಜದ್ವಾ
ರಿ ಮರಿಷ್ಯೇ ವಾ ಪತ್ನ್ಯಾ ಸಾರ್ಧಮನಾಥವತ್ ॥೧೧॥ ಬ್ರಹ್ಮಹತ್ಯಾಂ ತತೋ ರಾಮ ಸಮುಪೇತ್ಯ ಸುಖೀ ಭವ । ಭ್ರಾತೃಭಿಸ್ಸಹಿ
ತೋ ರಾಜನ್ ದೀರ್ಘಮಾಯುರವಾಪ್ಸ್ಯಸಿ ॥೧೨॥ ಇತ್ಯೇವಂ ವಿಲಪನ್ವಿಪ್ರಃ ಪತ್ನ್ಯಾ ಸಾರ್ಧಮನಾಥವತ್ । ದ್ವಾರಿ ತಿಷ್ಠಂ
ಶ್ಚ ರಾಮಸ್ಯ ಭೃಶಂ ಶೋಕಾಭಿಪೀಡಿತಃ ॥೧೩॥ ರಾಮಂ ಗರ್ಹಯಮಾಣಸ್ತು ಭ್ರಾತೄಂಶ್ಚಾಸ್ಯಾತಿದುಃಖಿತಃ । ವಸಿಷ್ಠವಾ
ಮದೇವಾರ್ಚ್ಯ ಋತ್ವಿಜಶ್ಚಾಭಿಸಮ್ಮತಾನ್ ॥೧೪॥ ಉಷಿತಾಸ್ಮ ಸುಖಂ ರಾಜ್ಯೇ ತವಾಸ್ಮಿನ್ ಸುಮಹಾಬಲ। ಇದಂ ತು ಪತಿತಂ
ಕಸ್ಮಾತ್ತವ ರಾಮ ವಶೇ ಸ್ಥಿತೇ ॥೧೫॥ ಕಾಲಸ್ಯ ವಶಮಾಪನ್ನಾಃ ಸ್ವಲ್ಪಂ ವಾ ನಹಿ ನಸ್ಸುಖಂ ॥೧೬॥ ಸಂಪ್ರತ್ಯನಾಥೋ ವಿಷ
ಯ ಇಕ್ಷ್ವಾಕೂಣಾಂ ಮಹಾತ್ಮನಾಂ। ರಾಮಂ ನಾಥಮಿಹಾಸಾದ್ಯ ಬಾಲಾಂತಕರಣಂ ನೃಪಂ ॥೧೭॥ ರಾಜದೋಷೈರ್ವಿಪ

---

ಕ್ಷೆ, ಈದೃಶಂ–ಇಂಥಾ ಪಾಪವು, ನಶ್ರುತಂ ವಾ–ಕೇಳಲ್ಪಡಲೂ ಇಲ್ಲ ॥೯॥ ಅಸ್ಯ ರಾಮಸ್ಯ–ಈ ಶ್ರೀರಾಮನ, ವಿಷಯಸ್ಥಾನಾಂ–ದೇಶವಾಸಿಗಳಾದ, ಬಾಲಾನಾಂ–
ಬಾಲಕರಿಗೆ, ಯಥಾ–ಹ್ಯಾಗೆ, ಮೃತ್ಯುಃ–ಮರಣವು, ಆಗತಃ–ಪ್ರಾಪ್ತವಾಯಿತೋ, ತಥಾ–ಹಾಗೆ, ಅನ್ಯವಿಷಯಸ್ಥಾನಾಂ–ಅನ್ಯ–ಇತರವಾದ, ವಿಷಯ–
ದೇಶಗಳಲ್ಲಿ, ಸ್ಥಾನಾಂ – ಇರುತಲಿರುವ, ಬಾಲಾನಾಂ – ಬಾಲರಿಗೆ, ಮೃತ್ಯುತಃ – ಮರಣದದೆಸೆಯಿಂದ, ಭಯಂ–ಭಯವು, ಹಿ–ಯಾವ ಕಾರಣದ ದೆ
ಸೆಯಿಂದ, ನ–ಇಲ್ಲವೋ, ತಸ್ಮಾತ್–ಆ ಕಾರಣದ ದೆಸೆಯಿಂದ, ರಾಮಸ್ಯ–ಶ್ರೀರಾಮನ ಸಂಬಂಧವಾದ, ಕಿಂಚಿತ್–ಯಾವದೊ ಒಂದಾದ, ಮಹತ್– ದೊಡ್ಡ
ದಾದ, ದುಷ್ಕೃತಂ–ಪಾಪವು, ಅಸ್ತಿ–ಇದೇ, ನಸಂಶಯಃ–ಸಂಶಯವಿಲ್ಲ ॥೧೦॥ ಹೇರಾಜನ್–ಎಲೈರಾಜನೆ, ತ್ವಂ–ನೀನು, ಮೃತ್ಯುವಶಂ–ಮೃತ್ಯುವಾದಯ
ಮನವಶವಂನು, ಗತಂ–ಹೊಂದಿದ, ಏನಂ ಬಾಲಂ–ಈ ಬಾಲಕನನ್ನು, ಜೀವಯಸ್ವ–ಬದುಕಿಸು, ಅಥವಾ–ಹಾಗಲ್ಲದೇ ಹೋದರೆ, ಅನಾಥವತ್–ದಿಕ್ಕಿಲ್ಲದವನಂತೆ,
ಪತ್ನ್ಯಾ ಸಾರ್ಧಂ–ಹೆಂಡತಿಯೊಡನೆ, ರಾಜದ್ವಾರಿ–ಅರಮನೆಯ ಬಾಗಿಲಲ್ಲಿ, ಮರಿಷ್ಯೇ–ಸಾಯುವೆನು ॥೧೧॥ ತತಃ–ಬಳಿಕ, ಹೇರಾಮ–ಎಲೈ ಶ್ರೀರಾಮನೆ, ಬ್ರಂ
ಹಹತ್ಯಾಂ–ಬ್ರಹ್ಮಹತ್ಯೆಯನ್ನು, ಸಮುಪೇತ್ಯ–ಹೊಂದಿ, ಸುಖೀಭವ–ಸುಖವಂತನಾಗಿರು, ಹೇ ರಾಜನ್–ಎಲೈ ಅರಸೇ, ಭ್ರಾತೃಭಿಃ– ತಮ್ಮಂದರಿಂದ, ಸಹಿ
ತಃ–ಕೂಡಿದವನಾಗಿ, ದೀರ್ಘಂ–ದೀರ್ಘವಾದ, ಆಯುಃ–ಆಯುಸ್ಸಿನನ್ನು, ಅವಾಪ್ಸ್ಯಸಿ–ಹೊಂದುವಿ ॥೧೨॥ ಇತ್ಯೇವಂ–ಈ ಪರಿಯಾಗಿ, ವಿಲಪನ್– ಪ್ರಲಾ
ಪಿಸುತ್ತಿರುವ, ವಿಪ್ರಃ–ಬ್ರಾಹ್ಮಣನು, ಪತ್ನ್ಯಾ ಸಾರ್ಧಂ–ಪತ್ನಿಯೊಡಗೂಡಿ, ಅನಾಥವತ್–ಪೋಷಕನಿಲ್ಲದವನಂತೆ, ರಾಮಸ್ಯ–ಶ್ರೀರಾಮನ, ದ್ವಾರಿ–
ಬಾಗಲಿನಲ್ಲಿ, ತಿಷ್ಠನ್–ಇರುತಿರುವನಾಗಿ, ಭೃಶಂ–ಅತ್ಯಂತವಾಗಿ, ಶೋಕಾಭಿಪೀಡಿತಃ–ಶೋಕದಿಂದ ಬಾಧಿತನಾದನು ॥೧೩॥ ರಾಮಂ–ಶ್ರೀರಾಮನನ್ನು, ಅ
ಸ್ಯ–ಈ ಶ್ರೀರಾಮನ, ಭ್ರಾತೄಂಶ್ಚ–ತಮ್ಮಂದರನ್ನು, ವಸಿಷ್ಠ ವಾಮದೇವಾರ್ಚ್ಯ–ವಸಿಷ್ಠ–ವಸಿಷ್ಠ ಋಷಿಯೇ, ವಾಮದೇವ–ವಾಮದೇವನೇ, ಅರ್ಚ್ಯ–
ಮೊದಲಾಗುಳ್ಳ, ಅಭಿಸಮ್ಮತಾನ್–ರಾಜನಿಗೆ ಇಷ್ಟರಾದ, ಋತ್ವಿಜಶ್ಚ –ಋತ್ವಿಕ್ಕುಗಳನ್ನು, ಗರ್ಹಯಮಾಣಃ–ನಿಂದಿಸುತಿರುವನಾಗಿ, ಅತಿದುಃಖಿತಃ–
ಅತ್ಯಂತದುಖಮುಳ್ಳವನಾಗಿ ॥೧೪॥ ಹೆ ಸುಮಹಾಬಲ–ಎಲೈ ಮಹಾ ಬಲಶಾಲಿಯೇ, ಹೆ ರಾಮ–ಎಲೈ ಶ್ರೀರಾಮನೆ, ತವ–ನಿನ್ನ, ಅಸ್ಮಿನ್ ರಾಜ್ಯೇ–
ಈ ರಾಜ್ಯದಲ್ಲಿ, ಸುಖಂ–ಸುಖವಾಗಿ, ಉಷಿತಾಃ–ಇದ್ದವರು, ಸ್ಮ–ಆದವು, ತವ–ನಿನ್ನ, ವಶೇ–ಸ್ವಾಧೀನದಲ್ಲಿ, ಸ್ಥಿತೇ– ಇರುತಿರುವ ನಮಿಗೆ, ಇದಂ ತು– ಈ
ವ್ಯಸನವಾದರೆ, ಯಸ್ಮಾತ್–ಯಾವದರ ದೆಸೆಯಿಂದ, ಪತಿತಂ ತು–ಪ್ರಾಪ್ತವಾಯಿತೊ, ಬಾಲಾಃ–ಬಾಲಕರು, ಕಾಲಸ್ಯ–ಯಮನ, ವಶಂ–ಸ್ವಾಧೀನವನ್ನು,
ಆಪನ್ನಾಃ–ಹೊಂದಿದರು, ನಃ–ನಮಿಗೆ, ಸ್ವಲ್ಪಂ ವಾ–ಕಿಂಚಿತ್ತಾದರೂ, ಸುಖಂ–ಸುಖವು, ನಹಿ–ಇಲ್ಲವಷ್ಟೇ ॥೧೬॥ ಇಹ– ಈ ದೇಶದಲ್ಲಿ, ಬಾಲಾಂತಕರ
ಣಂ–ಬಾಲರಿಗೆ ನಾಶಕರನಾದ, ರಾಮಂ–ಶ್ರೀರಾಮನನ್ನು, ನಾಥಂ–ಸ್ವಾಮಿಯಾದ, ನೃಪಂ – ಅರಸನನ್ನಾಗಿ, ಆಸಾದ್ಯ–ಹೊಂದಿ, ಮಹಾತ್ಮನಾಂ–
ಮಹಾತ್ಮರಾದ, ಇಕ್ಷ್ವಾಕೂಣಾಂ–ಇಕ್ಷ್ವಾಕು ವಂಶಸ್ಥರಾಜರ, ವಿಷಯಃ – ದೇಶವು, ಸಂಪ್ರತಿ–ಈಗ, ಅನಾಥಃ– ದಿಕ್ಕಿಲ್ಲದ್ದು, ಅಭವತ್– ಆಯಿ
ತು ॥೧೭॥ ಪ್ರಜಾಃ–ಜನರು, ಅವಿಧಿಪಾಲಿತಾಃ–ಅವಿಧಿಯಿಂದ ಪರಿಪಾಲನೆ ಮಾಡಲ್ಪಟ್ಟವರಾಗಿ, ರಾಜದೋಷೈಃ–ರಾಜನ ದೋಷಗಳಿಂದ, ವಿಪದ್ಯಂತೆ–

---

ದೇಶದಲ್ಲಿರ್ಪ ಬಾಲಕರಿಗೆ ಅಕಾಲದಲ್ಲಿ ಮರಣವು ಸಂಭವಿಸುವದು ಇತರದೇಶಗಳಲ್ಲಿ ಎಲ್ಲಿಯೂ ಹುಡುಗರಿಗೆ ಮೃತ್ಯು
ವಿನಿಂದ ಭೀತಿಯೆಂಬುವದು ಇಲ್ಲವೇ ಇಲ್ಲ. ಎಲೈ ರಾಜನೆ ! ಮೃತ್ಯುವಿನ ಅಧೀನಕ್ಕೆ ಶಿಲುಕಿದ ಈ ಬಾಲಕನಂ ನೀನು ಬ
ದುಕಿಸು ಇಲ್ಲದಿದ್ದರೆ ಈ ಅರಮನೆಯ ಬಾಗಿಲಲ್ಲಿ ನಾನು ಭಾರ್ಯೆಯಿಂ ದೊಡಗೂಡಿ ಅನಾಥನಂತೆ ಸಾಯುವೆನು. ಬಳಿ
ಕ ಈ ಬ್ರಹ್ಮಹತ್ಯೆಯಿಂ ಪಡೆದವನಾಗಿ ನೀನು ಸುಖಿಯಾಗಿ ತಂಮಂದರಿಂದೊಡಗೂಡಿ, ದೀರ್ಘಾಯುಷ್ಮಂತನಾಗಿರು, ಎಂ
ಬದಾಗಿ ವಿಲಾಪಿಸುತ್ತಾ ಪತ್ನೀ ಸಹಿತನಾಗಿ, ಶ್ರೀರಾಮನ ಮನೆಯ ಬಾಗಿಲಲ್ಲಿ ನಿಂತುಕೊಂಡು, ಶೋಕಾಕ್ರಾಂತ
ನಾಗಿ, ಶ್ರೀರಾಮನನ್ನೂ ಆತನ ತಮ್ಮಂದರನ್ನೂ ಸಮುಖಪಂಡಿತರಾದ ವಸಿಷ್ಠ ವಾಮದೇವರೇ ಮೊದಲಾದವರನ್ನೂ
ಸಹ ನಿಂದಿಸುತ್ತಾ, ಅಯ್ಯೋ ರಾಮನೆ ! ನಿನ್ನ ಸಂಬಂಧವಾದ ಈ ರಾಜ್ಯದಲ್ಲಿ ಸುಖವಾಗಿದ್ದೆವು, ನಿನ್ನಧೀನದಲ್ಲಿರುವ ನ
ಮಿಗೆ ಇಂಥಾ ಕಷ್ಟವು ಯಾಕೆ ಸಂಭವಿಸಿತೋ, ಬಾಲಕರು ಮರಣವಂ ಪೊಂದಿದರು, ನಮಿಗೆ ಕಿಂಚಿತ್ತಾದರು ಸುಖವಿಲ್ಲ
ದೇ ಪೋಯಿತೆ ಮಹಾನುಭಾವರಾದ ಇಕ್ಷ್ವಾಕು ಮಹಾರಾಜರ ಈ ದೇಶವು, ಬಾಲಕರಿಗೆಲ್ಲಾ ನಾಶವಂ ಗೈಯುತ್ತಿರು
ವ ರಾಮನನ್ನು ನಾಥನನ್ನಾಗಿ ಪೊಂದಿ ಅನಾಯಿಕವಾಯಿತಲ್ಲಾ ॥೧೭॥ ಅವಿಧಿಯಾಗಿ ಪರಿಪಾಲಿಸಲ್ಪಟ್ಟ ಪ್ರಜೆಗಳು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದ್ಯಂತೇಪ್ರಜಾಹ್ಯವಿಧಿಪಾಲಿತಾಃ। ಅಸದ್ವೃತ್ತೇತುನೃಪತಾವಕಾಲೇಮ್ರಿಯತೇಜನಃ ॥೧೮॥ ಯದಾಪುರೇಷ್ವಯುಕ್ತಾನಿಜನಾಜನಪದೇಷುಚ। ಕುರ್ವತೇನಚರಕ್ಷಾಸ್ತಿತದಾಕಾಲಕೃತಂಭಯಂ॥೧೯॥ ಸುವ್ಯಕ್ತಂರಾಜದೋಷೋಯಂಭವಿಷ್ಯತಿನಸಂಶಯಃ। ಪುರೇಜನಪದೇವಾಪಿತದಾಬಾಲವಧೋಹ್ಯಯಂ॥೨೦॥ ಏವಂಬಹುವಿಧೈರ್ವಾಕ್ಯೈ ರುಪರುಧ್ಯಮುಹುರ್ಮುಹುಃ। ರಾಜಾನಂದುಃಖಸಂತಪ್ತಸ್ಸುತಂತಮುಪಗೂಹತೇ ... ... ॥೨೧॥

—…ಇತಿಶ್ರೀಮದುತ್ತರ ರಾಮಾಯಣೇತ್ರಿಸಪ್ತತಿತಮಸ್ಸರ್ಗಃ.…—

ತಥಾತುಕರುಣಂತಸ್ಯದ್ವಿಜಸ್ಯಪರಿದೇವನಂ। ಶುಶ್ರಾವರಾಘವಸ್ಸರ್ವಂದುಃಖಶೋಕಸಮನ್ವಿತಂ ॥೧॥ ಸತುದುಃಖೇನ ಸಂತಪ್ತೋಮಂತ್ರಿಣಸ್ಸಮುಪಾಹ್ವಯತ್। ವಸಿಷ್ಠಂವಾಮದೇವಂಚಭ್ರಾತರೌಸಹನೈಗಮಾನ್ ॥೨॥ ತತೋದ್ವಿಜಾವಸಿಷ್ಠೇನ ಸಾರ್ಧಮಷ್ಟೌಪ್ರವೇಶಿತಾಃ। ರಾಜಾನಂದೇವಸಂಕಾಶಂವರ್ಧಸ್ವೇತಿತದಾಬ್ರುವನ್ ॥೩॥ ಮಾರ್ಕಂಡೇಯೋಥಮೌದ್ಗಲ್ಯೋ

---

ವಿಪತ್ತನ್ನು ಪಡೆಯುತ್ತಾರೇ, ನೃಪತೌ-ರಾಜನು, ಅಸದ್ವೃತ್ತೇತುಸತಿ-ದುರ್ವ್ಯಾಪಾರ ಮುಳ್ಳವನಾಗುತಿರಲೀಕಾಗಿ, ಜನಃ-ಜನವು, ಅಕಾಲೇ-ಅಕಾಲದಲ್ಲಿ, ಮ್ರಿಯ್ಯತೇ-ಸಾಯುತ್ತದೆ ॥೧೮॥ಯದಾ-ಯಾವ ಕಾಲದಲ್ಲಿ, ಜನಪದೇಷುಚ-ದೇಶಗಳಲ್ಲಿಯೂ, ಪುರೇಷುಚ-ಪಟ್ಟಣಗಳಲ್ಲಿಯೂ, ಜನಾಃ- ಜನರು, ಅಯುಕ್ತಾನಿ-ನಿಷಿದ್ಧಕಾರ್ಯಗಳನ್ನು, ಕುರ್ವತೇ-ಮಾಡುವರೋ, ರಕ್ಷಾಚ-ಸಂರಕ್ಷಣೆಯೂನು, ನಾಸ್ತಿ-ಇಲ್ಲವೋ, ತದಾ-ಆ ಕಾಲದಲ್ಲಿ, ಕಾಲಕೃತಂ-ಯಮನಿಂದ ಮಾಡಲ್ಪಟ್ಟ, ಭಯಂ-ಭಯವು, ಭವತಿ-ಆಗುತ್ತದೇ ॥೧೯॥ ಅಯಂ-ಇದು, ರಾಜದೋಷಃ-ರಾಜನ ದೋಷವು, ಸುವ್ಯಕ್ತಂ- ಸ್ಪಷ್ಟವಾಗಿ, ಭವಿಷ್ಯತಿ-ಆಗುವದು, ನಸಂಶಯಃ-ಸಂಶಯಮಿಲ್ಲಾ, ಪುರೇ-ಪಟ್ಟಣದಲ್ಲಾಗಲಿ, ಜನಪದೇವಾಪಿ-ದೇಶದಲ್ಲಿಯೇಆಗಲಿ, ತದಾ-ಆ ಕಾಲದಲ್ಲಿ, ಅಯಂ ಬಾಲವಧಃ-ಈ ಬಾಲರ ಮರಣವು, ಭವತಿಹಿ-ಆಗುವದಷ್ಟೇ ॥೨೦॥ ಏವಂ-ಈ ಪರಿಯಾಗಿ, ಬಹುವಿಧೈಃ-ಅನೇಕಬಗೆಗಳಾದ, ವಾಕ್ಯೈಃ - ಮಾತುಗಳಿಂದ, ಮುಹುರ್ಮುಹುಃ-ಭಾರಿಭಾರಿಗೂ, ರಾಜಾನಂ-ಅರಸಿನನ್ನು, ಉಪರುಧ್ಯ-ತಡೆಮಾಡಿ, ದುಃಖಸಂತಪ್ತಃ-ದುಃಖದಿಂದ ಪರಿತಪಿಸುತಿರುವನಾಗಿ,ತಂ-ಸುತಂ-ಆ ಶಿಶುವಿನನ್ನು, ಉಪಗೂಹತೇ, ಬಚ್ಚಿ ಇಟ್ಟುಕೊಂಡನೂ ॥೨೧॥

—…ಇತಿ ಶ್ರೀಮದುತ್ತರ ರಾಮಾಯಣೇ ತ್ರಿಸಪ್ತತಿತಮ ಸ್ಸರ್ಗಃ…—

ರಾಘವಃ-ಶ್ರೀರಾಮನು, ದುಃಖಶೋಕಸಮನ್ವಿತಂ-ದುಃಖದಿಂದಲೂ ಅಂತಸ್ತಾಪದಿಂದಲೂ, ಯುಕ್ತವಾದ, ತಥಾ-ಆಪರಿಯಾಗಿ, ಕರುಣಂ-ದಯೆಯನ್ನುಂಟು ಮಾಡುತ್ತಿರುವ, ಸರ್ವಂ-ಸಮಸ್ತವಾದ, ತಸ್ಯದ್ವಿಜಸ್ಯ-ಆಬ್ರಾಹ್ಮಣನ, ಪರಿದೇವನಂತು-ರೋದನವನ್ನಾದರೆ, ಶುಶ್ರಾವ-ಕೇಳಿದನು ॥೧॥ ಸತು-ಆಶ್ರೀರಾಮನಾದರೆ,ದುಃಖೇನ-ವ್ಯಸನದಿಂದ,ಸಂತಪ್ತಃ-ಸಂತಪಿಸುತ್ತಿರುವನಾಗಿ,ಸಹನೈಗಮಾನ್-ಪುರವಾಸಿಗಳೊಡಗೂಡಿದ,ಮಂತ್ರಿಣಃ-ಅಮಾತ್ಯರನ್ನು,ಭ್ರಾತರೌ-ತಂಮಂದರಾದ ಭರತಲಕ್ಷ್ಮಣರನ್ನೂ, ವಸಿಷ್ಠಂ-ವಸಿಷ್ಠಮುನಿಯನ್ನು, ವಾಮದೇವಂಚ-ವಾಮದೇವನೆಂಬ ಋಷಿಯನ್ನುಸಹ, ಸಮುಪಾಹ್ವಯತ್-ಕರೆಯಿಸಿದನು ॥ ೨ ॥ ತತಃ-ಬಳಿಕ,ದ್ವಿಜಾಃ-ಬ್ರಾಹ್ಮಣರಾದ,ಅಷ್ಟೌ-ಎಂಟುಮಂದಿಯು,ವಸಿಷ್ಠೇನಸಾರ್ಧಂ-ವಸಿಷ್ಠಋಷಿಯೊಡನೆ, ಪ್ರವೇಶಿತಾಃ-ಪ್ರವೇಶಿಸಲ್ಪಟ್ಟವರಾಗಿ, ದೇವಸಂಕಾಶಂ-ದೇವತಾಸದೃಶನಾದ,ರಾಜಾನಂ-ಒಡೆಯನಾದಶ್ರೀರಾಮನನ್ನು, ತದಾ-ಆಸಮಯದಲ್ಲಿ, ವರ್ಧಸ್ವೇತಿ-ವೃದ್ಧಿಹೊಂದೆಂದು, ಅಬ್ರುವನ್-ನುಡಿದರು, ॥೩॥ ಅಥ-ಬಳಿಕ, ಮಾರ್ಕಂಡೇಯಃ-ಮಾರ್ಕಂಡೇಯನು,ಮೌದ್ಗಲ್ಯಃ-ಮೌದ್ಗಲ್ಯನು, ವಾಮದೇವಶ್ಚ-ವಾಮ

---

ಆಪತ್ತಿನನ್ನು ಹೊಂದುವರು ಇದಲ್ಲದೆ ರಾಜನು ಕೆಟ್ಟನಡತೆ ಯುಳ್ಳವನಾದರೆ ಜನವು ಅಸಮಯದಲ್ಲಿ ಮೃತರಾಗುವರು ॥೧೮॥ ಯಾವಾಗ ಜನಗಳು ದೇಶಗಳಲ್ಲಿಯೂ ಪಟ್ಟಣಗಳಲ್ಲಿಯೂ ಅಯುಕ್ತವಾದ ಕಾರ್ಯಂಗಳಂ ಗೈಯ್ಯುವರೋ ಆಗ ಸಂರಕ್ಷಣೆಯು ಇಲ್ಲದೆ ಯಮಭೀತಿಯುಂಟಾಗುತ್ತದೆ ॥೧೯॥ ಹ್ಯಾಗಾದರೂ ದೇಶದೊಳಾಗಲೀ ಪುರದಲ್ಲಿ ಆಗಲೀ ಈ ಬಾಲವಧೆಯು ರಾಜದೋಷದಿಂದಲೇ ಉಂಟಾಗುತ್ತದೆಯೇ ಹೊರ್ತು ಬ್ಯಾರೆ ಯಾವ ವಿಧದಿಂದಲೂ ಸಂಭವಿಸುವದಿಲ್ಲ ಎಂಬದಾಗಿ ನಾನಾಬಗೆಗಳಾದ ಮಾತುಗಳಿಂದ ಬಾರಿಬಾರಿಗೂ ರಾಜನಂ ಪಿಡಿದು, ದುಃಖಾಕ್ರಾಂತನಾಗಿ ಆ ವೃದ್ಧಬ್ರಾಹ್ಮಣನು ಬಾಲಕನಂ ಬಚ್ಚಿಟ್ಟುಕೊಂಡಂಥಾವನಾದನು ... ... ॥೨೧॥

—…ಉತ್ತರರಾಮಾಯಣದಲ್ಲಿನ ೭೩ ನೆಯ ಸರ್ಗಂ ಮುಗಿದುದು…—

ರಘುನಂದನನು ಆ ಪರಿಕರುಣವಾಗಿಯೂ, ದುಃಖದಿಂದಲೂ ಶೋಕದಿಂದಲೂ ಒಡಗೂಡಿದ ಆ ಬ್ರಾಹ್ಮಣನ ವಿಲಾಪವಂ ಕೇಳಿ, ದುಃಖದಿಂ ಸಂತಪಿಸುತ್ತಿರುವನಾಗಿ, ಮಂತ್ರಿಗಳನ್ನೂ,ವಸಿಷ್ಠ ವಾಮದೇವರನ್ನು, ಪುರವಾಸಿಗಳನ್ನೂ ಸಹ ಕರೆಯಿಸಿದವನಾದನು ॥೨॥ ಬಳಿಕ ಆ ಬ್ರಾಹ್ಮಣೋತ್ತಮರಾದ, ಮಾರ್ಕಂಡೇಯ, ಮೌದ್ಗಲ್ಯ, ಜಾಬಾಲಿ, ಕಾಶ್ಯಪ, ವಾಮದೇವ, ಗೌತಮ, ನಾರದರು ಎಂಬ ಇವರೆಲ್ಲರು ಬಂದವರಾಗಿ, ರಾಜನಿಗೆ ಆಶೀರ್ವಾದವಂಗೈಯ್ಯಲು, ರಘುನಂದನನು ಸಂಪ್ರಾಪ್ತರಾದ ಆ ಮಹರ್ಷಿಗಳಿಗೆ ವಂದನೆಯಂಗೈದು, ಮಂತ್ರಿಗಳನ್ನೂ ಪುರವಾಸಿಗಳನ್ನೂ ಆ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಾಮದೇವಶ್ಚ ಕಾಶ್ಯಪಃ। ಕಾತ್ಯಾಯನೋಥಜಾಬಾಲಿರ್ಗೌತಮೋಂಗಿರಸಸ್ತಥಾ॥೪॥ ಏತೇದ್ವಿಜರ್ಷಭಾಸ್ಸರ್ವೇ ಆಸನೇಷೂಪವೇಶಿತಾಃ ॥೫॥ ಮಹರ್ಷೀನ್ ಸಮನುಪ್ರಾಪ್ತಾನಭಿವಾದ್ಯಕೃತಾಂಜಲಿಃ । ಮಂತ್ರಿಣೋನೈಗಮಾಂಶ್ಚೈವಯಥಾರ್ಹಮನುಕೂಲತಃ॥೬॥ ತೇಷಾಂಸಮುಪವಿಷ್ಟಾನಾಂಸರ್ವೇಷಾಂದೀಪ್ತತೇಜಸಾಂ । ರಾಘವಸ್ಸರ್ವಮಾಚಷ್ಟೇದ್ವಿಜೋಯಮುಪರೋದತೆ ॥೭॥ತಸ್ಯತದ್ವಚನಂಶ್ರುತ್ವಾರಾಜ್ಞೋದೀನಸ್ಯನಾರದಃ। ಪ್ರತ್ಯುವಾಚಶುಭಂವಾಕ್ಯಂಋಷೀಣಾಂಸನ್ನಿಧೌನೃಪಂ ॥೮॥ಶೃಣುರಾಜನ್ ಯಥಾಕಾಲೇಪ್ರಾಪ್ತೋಬಾಲಸ್ಯ ಸಂಕ್ಷಯಂ। ಶ್ರುತ್ವಾ ಕರ್ತವ್ಯತಾಂರಾಜನ್ ಕುರುಷ್ವರಘುನಂದನ॥ ಪುರಾಕೃತಯುಗೇರಾಮಬ್ರಾಹ್ಮಣಾವೈತಪಸ್ವಿನಃ। ಅಬ್ರಾಹ್ಮಣಸ್ತದಾರಾಜನ್ನತಪಸ್ವೀಕಥಂಚನ ॥೧೦॥ ತಸ್ಮಿನ್ಯುಗೇಪ್ರಜ್ವಲಿತೇಬ್ರಹ್ಮಭೂತೇತ್ವನಾವೃತೇ । ಅಮೃತ್ಯವಸ್ತದಾಸರ್ವೇಜಜ್ಞಿರೇದೀರ್ಘದರ್ಶಿನಃ॥೧೧॥ತತಸ್ತ್ರೇತಾಯುಗಂನಾಮ

ದೇವನು, ಕಾಶ್ಯಪಃ-ಕಾಶ್ಯಪನು, ಕಾತ್ಯಾಯನಃ-ಕಾತ್ಯಾಯನನು, ಅಥ-ಬಳಿಕ, ಜಾಬಾಲಿಃ-ಜಾಬಾಲಿಯು, ಗೌತಮಃ-ಗೌತಮನು, ತಥಾ-ಹಾಗೆ, ನಾರದಃ-ನಾರದನು ಎಂಬ, ಸರ್ವೇ-ಸಮಸ್ತರಾದ,ಏತೇದ್ವಿಜರ್ಷಭಾಃ-ಈ ಬ್ರಾಹ್ಮಣಶ್ರೇಷ್ಠರು, ಆಸನೇಷು-ಪೀಠಗಳಲ್ಲಿ, ಉಪವೇಶಿತಾಃ-ಕುಳ್ಳಿರಿಸಲ್ಪಟ್ಟರು॥೫॥ ಕೃತಾಂಜಲಿಃ-ಅಂಜಲಿಬದ್ಧರಾಗಿ, ಸಮನುಪ್ರಾಪ್ತಾನ್-ಬಂದಿರುವ, ತಾನ್ ಮಹರ್ಷೀನ್-ಆಮಹಾಮುನಿಗಳನ್ನು ಕುರಿತು, ಅಭಿವಾದ್ಯ-ನಮಸ್ಕರಿಸಿ, ಮಂತ್ರಿಣಃ -ಮಂತ್ರಿಗಳನ್ನು,ನೈಗಮಾಂಶ್ಚ-ಪಟ್ಟಣಸ್ಥರುನ್ನು,ಯಥಾರ್ಹಂ-ಯಥಾಯೋಗ್ಯವಾಗಿ, ಅನುಕೂಲತಃ-ಅನುಕೂಲವಿದ್ದಂತೆ, (ಆಸನೇಷು-ಉಪವೇಶಿತಾಃ-ಪೀಠಗಳಲ್ಲಿ ಕುಳ್ಳಿರಿಸಲ್ಪಟ್ಟರು॥೬॥ದೀಪ್ತತೇಜಸಾಂ-ಕಂಗೊಳಿಸುತ್ತಿರುವ, ಸರ್ವೇಷಾಂ-ಸಮಸ್ತರಾದ, ತೇಷಾಂ-ಅವರು,ಉಪವಿಷ್ಟಾನಾಂಸತಾಂ, ಕುಳಿತುಕೊಂಡವರಾಗುತಿರಲಿಕಾಗಿ,ರಾಘವಃ-ಶ್ರೀರಾಮನು,ಅಯಂದ್ವಿಜಃ-ಈ ಬ್ರಾಹ್ಮಣನು,ಉಪರೋದತೆ-ಅಳುತ್ತಿರುವನು,ಇತಿ-ಇಂತೆಂದು,ಸರ್ವಂ-ಸಮಸ್ತವನ್ನು, ಆಚಷ್ಟೆ-ಪೇಳಿದನು॥೭॥ ನಾರದಃ-ನಾರದಮುನಿಯು, ದೀನಸ್ಯ-ದುಃಖಿತನಾದ, ತಸ್ಯರಾಜ್ಞಃ-ಆಶ್ರೀರಾಮನ, ತದ್ವಚನಂ-ಆಮಾತನ್ನು, ಶ್ರುತ್ವಾ-ಕೇಳಿ, ಋಷೀಣಾಂ-ಮುನಿಗಳ, ಸನ್ನಿಧೌ-ಸಮೀಪದಲ್ಲಿ, ನೃಪಂ-ರಾಜನಂಕುರಿತು, ಶುಭಂ-ಶುಭಕರವಾದ, ವಾಕ್ಯಂ-ಮಾತನ್ನು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥೮॥ ಹೇರಾಜನ್-ಎಲೈಅರಸೆ, ಬಾಲಸ್ಯ-ಕುಮಾರನೂಕೂಡೆ, ಸಂಕ್ಷಯಂ-ನಾಶವನ್ನು, ಅಕಾಲೇ-ಅಸಮಯದಲ್ಲಿ, ಯಥಾ-ಯಾವಪ್ರಕಾರದಿಂದ, ಪ್ರಾಪ್ತಃ-ಪಡೆದನೊ, ಹೇರಘುನಂದನ-ಎಲೈರಾಘವನೆ, ಹೇರಾಜನ್-ಎಲೈಅರಸೆ, (ತತ್-ಅದನ್ನು) ಶೃಣು-ಕೇಳು, ಕರ್ತವ್ಯತಾಂ-ಮಾಡತಕ್ಕದ್ದುನ್ನು, ಶ್ರುತ್ವಾ-ಕೇಳಿ, ಕುರುಷ್ವ-ಮಾಡು, ॥೯॥ ಹೇರಾಮ-ಎಲೈಶ್ರೀರಾಮನೆ, ಪುರಾ-ಪೂರ್ವಕಾಲದಲ್ಲಿ, ಕೃತಯುಗೇ - ಕೃತಯುಗದಲ್ಲಿ, ಬ್ರಾಹ್ಮಣಾವೈ-ಬ್ರಾಹ್ಮಣರೆ, ತಪಸ್ವಿನಃ-ಅನಶನವೆ ಮುಂತಾದವುಗಳಿಂದ ಕಾಯಕ್ಲೇಶವನ್ನೂ ಮಾಡುತ್ತಿರುವರು, ( ಭವಂತಿ-ಆಗುತ್ತಾರೆ ) ಹೇರಾಜನ್-ಎಲೈಅರಸೆ, ತತಃ-ಆಕಾರಣದಿಂದ, ಅಬ್ರಾಹ್ಮಣಃ-ಬ್ರಾಹ್ಮಣವ್ಯತಿರಿಕ್ತನು, ಕಥಂಚನ-ಹ್ಯಾಗಾದರು, ತಪಸ್ವೀ-ತಪಸ್ವಿಯಾದವನು,ನಭವತಿ-ಆಗಲಾರನು॥ ಬ್ರಹ್ಮಭೂತೆ-ಬ್ರಾಹ್ಮಣವರ್ಣಪ್ರಧಾನವಾದ, ಅನಾವೃತೆ-ಅಜ್ಞಾನದಿಂದಾವರಿಸಲ್ಪಡದಿರುವ, ತಸ್ಮಿನ್ಯುಗೇ-ಆ ಕೃತಯುಗವು,ಪ್ರಜ್ವಲಿತೇಸತಿ-ತಪಸ್ಸಿನಿಂದ, ಪ್ರಕಾಶಿಸುತ್ತಿರುವಂಥಾದ್ದಾಗಲು, ತದಾ-ಆಕಾಲದಲ್ಲಿ, ಸರ್ವೇ-ಸಮಸ್ತರು, ಅಮೃತ್ಯವಃ-ಮರಣರಹಿತರಾಗಿ, ದೀರ್ಘದರ್ಶಿನಃ-ಅತೀತಅನಾಗತ ವಿಷಯಗಳನ್ನರಿತವರಾಗಿ, ಜಜ್ಞಿರೆ-ಹುಟ್ಟಿದರು ॥೧೧॥ ತತಃ-ಬಳಿಕ,ವಪುಷ್ಮತಾಂ-ದೃಢಶರೀರಿಗಳಾದ, ಮಾನವಾನಾಂ-ಮನುವಂಶಸ್ಥರಾದ ಕ್ಷತ್ರಿಯರ ಸಂಬ

ವರವರ ಯೋಗ್ಯತಾನುಸಾರವಾಗಿ ಹಸ್ತಾಲಂಬನ ದೃಷ್ಟಿಪ್ರಸರಣ ಮುಂತಾದವುಗಳಿಂದ ಬಹುಮಾನ ಮಾಡಿದಂಥಾವನಾಗಿ, ಪೀಠಂಗಳಲ್ಲಿ ಕುಳ್ಳಿರಿಸಿಕೊಂಡನು ॥೬॥ ಕಂಗೊಳಿಸುತ್ತಿರುವ ದೇಹಕಾಂತಿಗಳುಳ್ಳ ಅವರೆಲ್ಲರು ಕೂತುಕೊಂಡವರಾಗಲೂ, ರಘುನಂದನನು, ಅವರಂ ಕುರಿತು, ಎಲೈ ಬ್ರಾಹ್ಮಣರೆ ! ಈ ವಿಪ್ರನು ರೋದನವಂ ಗೈಯುತ್ತಿರುವನೆಂದು ಎಲ್ಲವನ್ನು ಪೇಳಿದಂಥಾವನಾದನು॥೭॥ಋಷಿ ಸಂನಿಧಾನದೊಳು ಮಹಾ ದುಃಖಿತನಾದ ಶ್ರೀರಾಮನ ವಾಕ್ಯವಂಕೇಳಿ ನಾರದ ಮಹರ್ಷಿಯು ಒಡೆಯನಾದ ಶ್ರೀರಾಮನಂ ಕುರಿತು ಇಂತೆಂದುತ್ತರವಂ ಕೊಟ್ಟನು ॥೮॥ ಎಲೈ ರಘುನಂದನನೆ ! ಈ ಬಾಲಕನು ಯಾವಕಾರಣದಿಂದ ಅಕಾಲದಲ್ಲಿ ಮರಣವಂ ಪೊಂದಿದನೋ, ಅದಂ ಪೇಳ್ವೆನು ಕೇಳು, ಅವಕ್ಕೆ ಪ್ರತಿಕ್ರಿಯೆಯಂ ಕೇಳಿ ಬಳಿಕ ಅದನ್ನು ಮಾಡುವಂಥಾವನಾಗೆಂದು ನುಡಿದು, ಬಾಲಕನ ವಧೆಗೆ ಕಾರಣವಂ ಪೇಳುವದಕ್ಕೆ ಚತುರ್ಯುಗಧರ್ಮಂಗಳಂ ನಿರೂಪಿಸುವನದೆಂತೆನೆ ॥೯॥ ಕೇಳೆಲೈ ರಘುನಂದನನೆ ! ಪೂರ್ವಕಾಲದೊಳು ಕೃತಯುಗದಲ್ಲಿ ಬ್ರಾಹ್ಮಣರೇ ಅನಶನವ್ರತ ಮುಂತಾದವುಗಳಿಂದ ಕಾಯಕ್ಲೇಶವಂ ಗೈಯುತ್ತಾ ತಪವಂ ಮಾಡುವಂಥಾವರಾಗುವರು, ಬ್ರಾಹ್ಮಣೇತರನು ಯಾವ ವಿಧವಾಗಿ ಆದರು ತಪಸ್ವಿ ಯಾವದಿಲ್ಲ (ಅಂದರೆ ನಿತ್ಯಕರ್ಮವನ್ನು ಮಾತ್ರ ಮಾಡಿಕೊಳ್ಳ ಬೇಕೆಂಬ ಭಾವವು) ॥೧೦॥ ತಪದಿಂ ಹೊಳೆಯುತ್ತಿರುವದಾಗಿಯೂ, ಬ್ರಹ್ಮವರ್ಣಪ್ರಧಾನವಾಗಿಯೂ, ಅಜ್ಞಾನಾವರಣದಿಂದ ಆ ವರಿಸಲ್ಪಡದಿರುವದಾಗಿಯೂ ಇರುವ ಆ ಕೃತಯುಗದಲ್ಲಿ, ನರರೆಲ್ಲರು ಮರಣಹೇತುವಾದ ಅಧರ್ಮಲೇಶವಾದರು ಇಲ್ಲದೇ ಇರೋಣದರಿಂದ ಮರಣಧರ್ಮರಹಿತರಾಗಿಯೂ, ಅಜ್ಞಾನರಹಿತರಾದಕಾರಣ ಜ್ಞಾನದೃಷ್ಟಿಯಿಂದ ಭೂತಭವಿಷ್ಯದ್ವರ್ತಮಾನಂಗಳ ನ್ನರಿತವರಾಗಿಯೂ ಇರುವರು,॥೧೧॥ ಆ ಬಳಿಕ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮಾನವಾನಾಂವಪುಷ್ಮತಾಂ। ಕ್ಷತ್ರಿಯಾಸ್ತತ್ರಜಾಯಂತೆಪೂರ್ವೇಣತಪಸಾನ್ವಿತಾಃ॥೧೨॥ ವೀರ್ಯೇಣತಪಸಾಚೈವತೆಧಿಕಾಃ ಪೂರ್ವಜನ್ಮನಿ। ಮಾನವಾಯೆಮಹಾತ್ಮಾನಸ್ತತ್ರತ್ರೇತಾಯುಗೆಮತೆ ॥೧೩॥ ಬ್ರಹ್ಮಕ್ಷತ್ರಂತತಸ್ಸರ್ವಂಯತ್ಪೂರ್ವಮ ಪರಂಚಯತ್। ಯುಗಯೋರುಭಯೋರಾಸೀತ್ಸಮವೀರ್ಯಸಮನ್ವಿತಂ ॥೧೪॥ ಅಪಶ್ಯಂತಸ್ತುತೆಸರ್ವವಿಶೆಷಮಧಿಕಂತತಃ। ಸ್ಥಾಪನಂಚಕ್ರಿರೆತತ್ರಚಾತುರ್ವರ್ಣ್ಯಸ್ಯಸರ್ವತಃ ॥೧೫॥ ತಸ್ಮಿನ್ಯುಗೆಪ್ರಜ್ವಲಿತೆಬ್ರಹ್ಮಭೂತೆಹ್ಯನಾವೃತೆ। ಅಧರ್ಮಃ ಪಾದಮೆಕಂತುಪಾತಯತ್ಪೃಥಿವೀತಲೆ ॥೧೬॥ ಅಧರ್ಮೇಣಹಿಸಂಯುಕ್ತಂತೆಜೊಮಂದಂಭವಿಷ್ಯತಿ । ಅಧರ್ಮೇಣಹಿಸಂ ಯುಕ್ತಾಸ್ತೆನಮಂದಾಅಭವನ್ಪ್ರಜಾಃ॥೧೭॥ಆಮಿಷಂಯಚ್ಚ ಸರ್ವೇಷಾಂರಾಜಸಂಹಿಮಲಂಭೃಶಂ। ಅನೃತಂನಾಮತದ್ಭೂ

---

ಥವಾದ, ತ್ರೇತಾಯುಗೇನಾಮ-ತ್ರೇತಾಯುಮೆಂದು ಪ್ರಸಿದ್ಧವಾದದ್ದು (ಭವತಿ-ಆಗುವದು ) ತತ್ರ-ಆತ್ರೇತಾಯುಗದಲ್ಲಿ, ಕ್ಷತ್ರಿಯಾಃ-ಕ್ಷತ್ರಿಯರು, ಪೂರ್ವೇಣತಪಸಾ-ಹಿಂದಿನತಪಸ್ಸಿನಿಂದ, ಅನ್ವಿತಾಃ-ಕೂಡಿದವರಾಗಿ, ಜಾಯಂತೇ-ಹುಟ್ಟುವರು, ॥೧೨॥ಮತೇ-ಸಮ್ಮತವಾದ, ಅತ್ರತ್ರೇತಾಯುಗೆ, ಈತ್ರೇತಾಯುಗ ದಲ್ಲಿ,ಮಹಾತ್ಮಾನಃ-ಮಹಾನುಭಾವರಾದ, ಯೆಮಾನವಾಃ-ಯಾವಮನುಷ್ಯರು, ಸಂತಿ-ಇದ್ದಾರೊ, (ತೇಭ್ಯಃ-ಅವರಿಗಿಂತಲೂ,) ಪೂರ್ವಜನ್ಮನಿ-ಮೊದಲ ನೇದಾದ, ಕೃತಯುಗದಲ್ಲಿ, ಯೇ-ಯಾವಮನುಷ್ಯರೊ,(ತೇ-ಅವರು, ) ವೀರ್ಯೇಣ-ಪರಾಕ್ರಮದಿಂದಲೂ, ತಪಸಾಚೈವ-ತಪಸ್ಸಿನಿಂದಲೂ,ಅಧಿಕಾಃ-ಹೆಚ್ಚಾದವರು ॥೧೩ ॥ಉಭಯೋಃ-ಎರಡಾದ, ಯುಗಯೋಃ-ಕೃತತ್ರೇತಾಯುಗಗಳಲ್ಲಿ, ಯತ್ಪೂರ್ವಂ-ಯಾವಬ್ರಹ್ಮಪೂರ್ವಕವಾಗಿರುವದುಅತಿಶಯವಾಗಿತ್ತೋ, ಯತ್-ಯಾವದು, ಅಪರಂಚ-ಎರಡನೆದೊ, ಸರ್ವಂ-ಸಮಸ್ತವಾದ, ಬ್ರಹ್ಮಕ್ಷತ್ರಂ-ಬ್ರಾಹ್ಮಣ ಕ್ಷತ್ರಿಯಜಾತಿಯು, ತತಃ-ಬಳಿಕ, ಸಮವೀರ್ಯಸಮನ್ವಿತಂ – ಸಮವಾದವೀರ್ಯದಿಂದಕೂಡಿದ್ದು, ಆಸೀತ್-ಆಯಿತು, ॥೧೪॥ ತೇಸರ್ವೇ-ಅವರೆಲ್ಲರು, ತತಃ-ಆ ಕ್ಷತ್ರಿಯವಂಶಕ್ಕಿಂತಲೂ, ( ಬ್ರಾಹ್ಮಣಜಾತಿಗೆ)ಅಧಿಕಂ-ಅತಿಶಯವನ್ನು, ವಿಶೇಷಂತು-ವಿಶೇಷವನ್ನೂ ಕೂಡ, ಅಪಶ್ಯಂತಃ-ಕಾಣದಿರುವರಾಗಿ, ತತ್ರ-ಆ ಯುಗದಲ್ಲಿ, ಸರ್ವತಃ-ಸರ್ವಪ್ರಕಾರದಲ್ಲಿಯೂ,ಅಥವಾ ಸರ್ವಪ್ರದೇಶದಲ್ಲಿಯೂ, ಚಾತುರ್ವರ್ಣ್ಯಸ್ಯ-ನಾಲ್ಕುವರ್ಣಗಳ, ಸ್ಥಾಪನಂ-ನಿಲ್ಲಿಸೋಣದರನ್ನು, ಚಕ್ರಿರೆ- ಮಾಡಿದರು ॥ ೧೫ ॥ ಬ್ರಹ್ಮಭೂತೆ-ಬ್ರಾಹ್ಮಣಪ್ರಚುರವಾದ, ಅನಾವೃತೆ – ಅಜ್ಞಾನದಿಂದಾ ಮರೆಸಲ್ಪಡದಿರುವ, ತಸ್ಮಿನ್ಯುಗೆ, ಆ ಕೃತಯುಗವು, ಪ್ರಚಲಿತೆಸತಿ – ಕದಲಿದಂಥಾದ್ದಾಗಲೂ, ( ತಸ್ಮಿನ್ಯುಗೆಪ್ರಜ್ವಲಿತೆಧರ್ಮಭೂತೆಹ್ಯನಾವೃತೆ ಎಂಬದಾಗಿ ಪಾಠಾಂತರವು ) ಈ ಪಾಠದಲ್ಲಿ, ಧರ್ಮಭೂತೆ-ಯಜ್ಞಾದಿ ಧರ್ಮಪ್ರಧಾನವಾದ, ಅನಾವೃತೆ-ಅಧರ್ಮಾ ವರಣರಹಿತವಾದ, ತಸ್ಮಿನ್ – ಆ ತ್ರೇತಾಯುಗವು, ಪ್ರಜ್ವಲಿತೆಸತಿ – ಹೊಳೆಯುತ್ತಿರುವಂಥಾ ದ್ದಾಗಲೂ, (ಅಂದರೆ-ತ್ರೇತಾಯುಗವು ಪ್ರವರ್ತಿಸಲೂ ) ಅಧರ್ಮಸ್ತು-ಅಧರ್ಮವಾದರೇ, ಏಕಂಪಾದಂ – ಒಂದುಪಾದವನ್ನು ( ಅಂದರೆಚತುರ್ಥಾಂಶವನ್ನು ) ಪೃಥಿವೀತಲೆ-ಭೂಪ್ರದೇಶದಲ್ಲಿ, ಅಪಾತಯತ್-ಬೀಳಿಸಿತು ॥ ೧೬ ॥ ಹಿಯಸ್ಮಾತ್-ಯಾವಕಾರಣದ ದೆಸೆಯಿಂದ, ತೆಜಃ-ತೇಜಸ್ಸು, ಅಧರ್ಮೇಣ- ಅಧರ್ಮದಿಂದ, ಸಂಯುಕ್ತಂ-ಕೂಡಿದಂಥಾದ್ದಾಯಿತೋ, ತತ್ – ಆ ಕಾರಣದದೆಸೆಯಿಂದ, ಮಂದಂ – ಕಮ್ಮಿಯಾದಂಥಾದ್ದು, ಭವಿಷ್ಯತಿ – ಆಯಿತು, ಪ್ರಜಾಃ-ಜನರು, ಯಸ್ಮಾತ್-ಯಾವಕಾರಣದ ದೆಸೆಯಿಂದ, ಅಧರ್ಮೇಣ – ಧರ್ಮಾಭಾವದಿಂದ, ಸಂಯುಕ್ತಾಃ – ಕೂಡಿದಂಥಾವನಾದರೊ, ( ತೆನ-ಆ ಕಾರಣದಿಂದ, ) ಮಂದಾಃ-ಮಂದಬುದ್ಧಿಯುಳ್ಳವರು, ಅಭವನ್-ಆದರು ॥ ೧೭ ॥ ಸರ್ವೇಷಾಂ-ಕೃತಯುಗ ಬ್ರಾಹ್ಮಣ ಕ್ಷತ್ರಿಯರಿಗೆಲ್ಲಾ, ಭೃಶಂ – ಬಹಳವಾಗಿ, ಮಲಂ-ಕೊಳೆಯಂತೆ ನಿಂದ್ಯವಾದ, ರಾಜಸಂ-ರಜೋಗುಣ ಸಂಬಂಧವಾದ, ಆಮಿಷಂ-ಜೀವನೋಪಾಯವು, ಯತ್-ಯಾವದೋ, ಅನೃತಂನಾಮ – ಕೃಷಿ ಎಂದು ಪ್ರಸಿದ್ಧವಾಗಿ, ಯತ್-ಯಾವದು, ಅಸ್ತಿ-ಇರುವದೋ, ತತ್-ಅದು, ಪಾದೇನ-ನಾಲ್ಕುಭಾಗಗಳಲ್ಲಿ ಒಂದುಭಾಗದಿಂದ, ಭೂತಂ-ನಿತಂಥಾದ್ದಾಯಿ

---

ದೃಢಗಾತ್ರರಾಗಿಯೂ, ಮನುವಂಶಸ್ಥರಾಗಿಯೂ ಇರುವ ಕ್ಷತ್ರಿಯರ ಸಂಬಂಧವಾಗಿರ್ಪ ತ್ರೇತಾಯುಗವೆಂದು ಪ್ರಸಿದ್ಧವಾದದ್ದು ಹುಟ್ಟುವಂಥಾದ್ದಾಗುವದು, ಆ ಯುಗದಲ್ಲಿ ಕ್ಷತ್ರಿಯರು ಪೂರ್ವ ತಪದಿಂದ ಕೂಡಿದಂಥಾವರಾಗಿ ಜನಿಸುವರು,॥೧೨॥ಸರ್ವಜನ ಸಾಧಾರಣವಾಗಿರ್ಪ ಈ ತ್ರೇತಾಯುಗದಲ್ಲಿ ಆದರೆ, ಯಾವ ಮನುಷ್ಯರು ಮಹಾತ್ಮರಾಗಿಹರೋ. ಇತರರುಗಳಿಗಿಂತಲೂ ಪೂರ್ವೀಕರಾದ ಕೃತಯುಗದಜನಗಳು ವೀರ್ಯದಿಂದಲು ತಪದಿಂದಲೂ ಅಧಿಕರಾದವರು ( ಅಂದರೆ ಆ ಜನಗಳು ಗೈಯ್ಯುವಷ್ಟು ತಪವಂ ಮಾಡಲಾರರು, ಮತ್ತು ಅಷ್ಟುಶಕ್ತಿಯು ಇವರಿಗೆ ಸಾಲದೆಂಬ ಭಾವವು) ॥೧೩॥ ಕೃತಯುಗದಲ್ಲಿ ಯಾವ ಬ್ರಾಹ್ಮಣಜಾತಿಯು ಉತ್ಕೃಷ್ಟವಾಗಿಯೂ, ಯಾವ ಕ್ಷತ್ರಿಯ ಜಾತಿಯು ಅಪಕೃಷ್ಟವಾಗಿ ಇದ್ದಂಥಾದ್ದಾದವೋ, ಆ ಯೆರಡು ಜಾತಿಗಳು ತ್ರೇತಾಯುಗದಲ್ಲಿ ಸಮವಾದ ತೇಜಸ್ಸುಳ್ಳಂಥಾವುಗಳಾದವು ॥೧೪॥ ಆ ವೇಳೆಯಲ್ಲಿ ಅವರೆಲ್ಲರು ಆ ಕ್ಷತ್ರಿಯವಂಶಕ್ಕಿಂತಲೂ ಬ್ರಾಹ್ಮಣಜಾತಿಯು ಅಧಿಕವಾಗಿರುವದೆಂಬದನ್ನೂ ವಿಶೇಷವನ್ನೂ ಸಹಾ ಕಾಣದೇ, ಎಲ್ಲಾ ದೇಶಗಳಲ್ಲಿಯೂ ನಾಲಕ್ಕು ವರ್ಣಗಳಾಗಿರುವಂತೆ ಸ್ಥಾಪಿಸಿದರು ॥೧೫॥ ಬ್ರಾಹ್ಮಣ ಪ್ರಚುರವಾಗಿಉಳ್ಳ ಮತ್ತೂ ಅಜ್ಞಾನದಿಂದಾ ಮರೆಸಲ್ಪಡದಿರುವ ಆ ತ್ರೇತಾಯುಗವು ಹೊಳೆಯುತ್ತಿರುವಂಥಾದ್ದಾಗಲೂ, ಅಧರ್ಮವು ಚತುರ್ಥಾಂಶದಲ್ಲಿ ಒಂದು ಪಾಲು ಪ್ರವರ್ತಿಸಿದಂಥಾದ್ದಾಯಿತು, ಅಧರ್ಮದಿಂದ ಯುಕ್ತವಾದಕಾರಣ ತೇಜಸ್ಸು ಕಮ್ಮಿಯಾದಂಥಾದ್ದಾಯಿತು, ಹಾಗೆಯೆ ಜನರೆಲ್ಲರು ಅಧರ್ಮಯುಕ್ತರಾದಕಾರಣ ಮಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಂಪಾದೇನಪೃಥಿವೀತಲೇ ॥೧೮॥ ಅನೃತಂಪಾತಯಿತ್ವಾತುಪಾದಮೇಕಂತುಧರ್ಮತಃ ॥೧೯॥ ಅನೃತೇಪತಿತೇರಾಮಧರ್ಮಪಾ ದಃಪ್ರಣಶ್ಯತಿ । ತತಃಪ್ರಾದುಷ್ಕೃತಂಪೂರ್ವಮಾಯುಷಃಪರಿನಿಷ್ಠಿತಂ ॥೨೦॥ ಪತಿತೇತ್ವನೃತೇತಸ್ಮಿನ್ನಧರ್ಮೇಚಮಹೀತಲೇ। ಶುಭಾನ್ಯೇವಾಚರನ್ಲೋಕೇಸತ್ಯಧರ್ಮಪರಾಯಣಾಃ ॥ ತ್ರೇತಾಯುಗೇತುವರ್ತಂತೇಬ್ರಾಹ್ಮಣಾಃಕ್ಷತ್ರಿಯಾಶ್ಚಯೇ ॥೨೧॥ ತಪೋತಪ್ಯಂತತೇಸರ್ವೇಶುಶ್ರೂಷಾಮಪರೇಜನಾಃ ॥೨೨॥ ಸಧರ್ಮಃಪರಮಸ್ತೇಷಾಂವೈಶ್ಯಶೂದ್ರಾನಥಾಗಮತ್ । ಪೂಜಾಂಚಸರ್ವವರ್ಣಾನಾಂಶೂದ್ರಾಶ್ಚಕ್ರುರಶೇಷತಃ ॥೨೩॥ ಏತಸ್ಮಿನ್ನಂತರೇತೇಷಾಮಧರ್ಮೇಚಾನೃತೇಚಹ। ತತಃಪೂರ್ವೇ ಪುನರ್ಹ್ರಾಸಮಾಜಗ್ಮುರ್ನೃಪಸತ್ತಮ ॥೨೪॥ ತತಃಪಾದಮಧರ್ಮಸ್ಯದ್ವಿತೀಯಮವತಾರಯತ್। ತತೋದ್ವಾಪರಸಂಜ್ಞಾಸಾಯುಗಸ್ಯಸಮಜಾಯತ ॥೨೫॥ ತಸ್ಮಿನ್ದ್ವಾಪರಸಂಖ್ಯಾತೇವರ್ತಮಾನೇಯುಗಕ್ಷಯೇ । ಅಧರ್ಮಶ್ಚಾನೃತಂ

ತು ॥೧೮॥ ಅಧರ್ಮತಃ-ಅಧರ್ಮವು, ಏಕಂಪಾದಂ-ಅನೃತ ಲಕ್ಷಣವಾದ ಜೀವನೋಪಾಯವನ್ನು, ಪಾತಯಿತ್ವಾ-ಬೀಳಿಸಿ, (ಸ್ಥಿತವಾನ್-ನಿಂತಿತು) ॥೧೯॥ ಅನೃತೇ-ಕೃಷಿಯಿಂದುಂಟಾಗುವ ಜೀವನೋಪಾಯವು, ಪತಿತೇಸತಿ-ಬಿದ್ದಂಥಾದ್ದಾಗಲೂ, ಧರ್ಮಪಾದಃ-ಧರ್ಮದಲ್ಲಿ ಪಾದಭಾಗವು, ಪ್ರಣಶ್ಯತಿ – ನಾಶವಾಯಿತು, ತತಃ-ಆದರಿಂದ, ಪೂರ್ವಂ-ಮೊದಲೂ, ಆಯುಷಃ-ಆಯುಸ್ಸಿನ, ಪರಿನಿಷ್ಠಿತಂ-ವಿನಾಶವು, ಪ್ರಾದುಷ್ಕೃತಂ-ಹುಟ್ಟಿದಂಥಾದ್ದಾಯಿತು ॥೨೦॥ ಮಹೀತಲೇ-ಭೂಪ್ರದೇಶದಲ್ಲಿ, ಅಧರ್ಮೇ-ಅಧರ್ಮದಿಂದಹುಟ್ಟಿದ ಆಯುಸ್ಸಿನಕ್ಷೀಣಮುಳ್ಳ, ತಸ್ಮಿನ್ನನೃತೇತು-ಆಕೃಷಿಜೀವನವಾದರೆ, ಪತಿತೇಸತಿ-ಪ್ರವರ್ತಿಸಿದಂಥಾದ್ದಾಗಲೂ, ಲೋಕೇ-ಲೋಕದಲ್ಲಿ, ಸತ್ಯಧರ್ಮಪರಾಯಣಾಃ-ಸತ್ಯದಲ್ಲಿಯೂ ಧರ್ಮದಲ್ಲಿಯು ಆಸಕ್ತಿಯುಳ್ಳ, ಬ್ರಾಹ್ಮಣಾಃ-ಬ್ರಾಹ್ಮಣ ಜಾತಿಯ್ಯರಾಗಿ, ಕ್ಷತ್ರಿಯಾಶ್ಚ-ಕ್ಷತ್ರಿಯರೂ ಆಗಿ, ಯೇತು-ಯಾರಾದರೇ, ತ್ರೇತಾಯುಗೇ-ತ್ರೇತಾಯುಗದಲ್ಲಿ, ವರ್ತಂತೇ-ಇರುವರೋ, ತೇ-ಅವರು, ಶುಭಾನ್ಯೇವ- ಶುಭಗಳನ್ನೆ, ಆಚರನ್-ಆಚರಿಸಿದರು ॥೨೧॥ ಸರ್ವೇ-ಸಮಸ್ತರಾದ, ತೇ- ಆ ಬ್ರಾಹ್ಮಣಕ್ಷತ್ರಿಯರು, ತಪಃ-ತಪಸ್ಸನ್ನು, ಅತಪ್ಯಂತ-ಮಾಡಿದರು, ಅಪರೇ-ಇತರರಾದ ಶೂದ್ರಾದಿಗಳ ರೂಪವಾಗಿರುವ, ಜನಾಃ-ಜನರು, ಶುಶ್ರೂಷಾಂ-ಪೂರ್ವವರ್ಣಸ್ಥರಾದ ಬ್ರಾಹ್ಮಣರಪೂಜೆಯನ್ನು ಕ್ಷತ್ರಿಯರ ಸೇವೆಯನ್ನು, (ಅಕುರ್ವನ್-ಮಾಡಿದರು) ॥೨೨॥ ತೇಷಾಂ-ಅವರ, ಪರಮಃ-ಉತ್ತಮವಾದ, ಸಧರ್ಮಃ-ಆ ಅಧರ್ಮವು, ವೈಶ್ಯಾನ್-ವೈಶ್ಯರನ್ನು, ಶೂದ್ರಾನ್-ಶೂದ್ರರನ್ನು, ಅಥ ಬಳಿಕ, ಅಗಮತ್-ಹೊಂದಿತು, ಶೂದ್ರಾಶ್ಚ-ಶೂದ್ರರು, ಸರ್ವವರ್ಣಾನಾಂ-ಸಮಸ್ತ ವರ್ಣಸ್ಥರ, ಪೂಜಾಂ-ಪೂಜೆಯನ್ನು, ಅಶೇಷತಃ-ಸಮಗ್ರವಾಗಿ, ಚಕ್ರುಃ-ಮಾಡಿದರು ॥೨೩॥ ಏತಸ್ಮಿನ್ನಂತರೇ-ಈ ತ್ರೇತಾಯುಗಾವಸಾನಕಾಲದಲ್ಲಿ, ಅಧರ್ಮೇ-ಅಧರ್ಮಕಾರ್ಯವಾದ ಆಯುಸ್ಸಿನ ಕ್ಷೀಣವು, ಅನೃತೇಚ-ಕೃಷ್ಯಾದ್ಯುಪಾಯವೂಕೂಡ, ಪ್ರವೃತ್ತೇಯೋಸ್ಸತೋಃ-ಪ್ರವರ್ತಿಸಿದಂಥಾವುಗಳಾಗುತಿರಲೀಕಾಗಿ, ಹೆ ನೃಪಸತ್ತಮ-ಎಲೈ ನೃಪಶ್ರೇಷ್ಠನಾದ ಶ್ರೀರಾಮನೆ, ತತಃ-ಬಳಿಕ, ಪೂರ್ವೇ-ಪೂರ್ವಿಕರು, ಪುನಃ-ಮತ್ತು, ಹ್ರಾಸಂ-ನಾಶವನ್ನು, ಆಗನ್-ಹೊಂದಿದರು ॥೨೪॥ ತತಃ-ಬಳಿಕ, ಸಃಅಧರ್ಮಃ-ಆ ಅಧರ್ಮವು, ದ್ವಿತೀಯ್ಯಂಪಾದಂ-ಎರಡನೆಪಾದವನ್ನು, ಅವತಾರಯತ್-ಇಳಿಸಿತು, ತತಃ-ಆ ಕಾರಣದುದೆಸೆಯಿಂದ, ಯುಗಸ್ಯ-ಯುಗಕ್ಕೆ, ಸಾ-ಆ ಪ್ರಸಿದ್ಧವಾದ ದ್ವಾಪರಸಂಜ್ಞಾ, ದ್ವಾಪರವೆಂಬ ಹೆಸರು, ಸಮಜಾಯತ-ಹುಟ್ಟಿದ-ಥಾದಾಯಿತು ॥೨೫॥ ಹೆ ಪುರುಷರ್ಷಭ-ಎಲೈ ಪುರುಷಶ್ರೇಷ್ಠನೆ, ದ್ವಾಪರಸಂಖ್ಯಾತೇ-ದ್ವಾಪರವೆಂದೆನಿಸಲ್ಪಟ್ಟ, ತಸ್ಮಿನ್ಯುಗಕ್ಷಯೇ-ಆಯುಗದ ಅಂತಭಾಗವು, ವರ್ತಮಾನೇಸತಿ-ನಡೆಯುತ್ತಿರುವದಾದಂಥಾದ್ದಾಗುತಿರಲೀಕಾಗಿ,

ದಬುದ್ಧಿಯುಳ್ಳವರಾದರು ॥೧೮॥ ಆ ಕೃತಯುಗ ಬ್ರಾಹ್ಮಣ ಕ್ಷತ್ರಿಯರಿಗೆ ಮಲದಂತೆ ಬಹು ನಿಂದ್ಯವಾದ ಜೀವನವಾವದೋ, ಅಂಥಾ ಕೃಷಿಯೆಂಬ ಜೀವನವು ನಾಲ್ಕರಲ್ಲಿ ಒಂದುಪಾಲು ಉಂಟಾಯಿತು, ಅಧರ್ಮವು ಈ ಪರಿ ಒಂದು ಪಾದವನ್ನೂರಿ ನಿಂತದಂಥಾದ್ದಾಯಿತು. ॥೧೯॥ ಎಲೈ ಶ್ರೀರಾಮನೆ ! ಈ ರೀತಿಯಾಗಿ ಕೃಷಿಮೂಲಕವಾದ ಜೀವನೋಪಾಯವು ಪ್ರಾಪ್ತವಾಗಲೂ, ಧರ್ಮದೊಳು ಪಾದಭಾಗವು ನಾಶವಾಯಿತು, ಆದರಿಂದ ಆಯುಸ್ಸು ಕೂಡಾ ಕ್ಷೀಣವಾಗುತ್ತಾ ಬಂದಂಥಾದ್ದಾಯಿತು ॥೨೦॥ ಈ ಭೂಮಂಡಲದಲ್ಲಿ ಅಧರ್ಮವೂ ಕೃಷಿಯಿಂದ ಜೀವಿಸೋಣವು ಇವೆರಡು ಸಂಭವಿಸಲೂ, ಸತ್ಯದಲ್ಲಿಯೂ ಧರ್ಮದಲ್ಲಿಯೂ ಆ ಸಕ್ತರಾದ ಬ್ರಾಹ್ಮಣರೂ ಕ್ಷತ್ರಿಯರೂ ಇವರೆಲ್ಲರು ತಪಗಳಂಗೈಯ್ಯುತ್ತಿದ್ದರು. ಇತರರಾದ ವೈಶ್ಯ ಶೂದ್ರರಾದರೆ ತಮಗಿಂತಲೂ ಉತ್ತಮವರ್ಣಸ್ಥರಾದ ಬ್ರಾಹ್ಮಣಕ್ಷತ್ರಿಯರ ಸೇವೆಯಂ ಮಾಡುತ್ತಿರುವರು ॥೨೨॥ ಆ ಬ್ರಾಹ್ಮಣ ಕ್ಷತ್ರಿಯರ ಉತ್ತಮರಾದ ಧರ್ಮವು ವೈಶ್ಯ ಶೂದ್ರರಂ ಪೊಂದಿದಂಥಾದ್ದಾಯಿತು, ಬಳಿಕ ಶೂದ್ರರು ಬ್ರಾಹ್ಮಣಾದಿ ಮೂರುವರ್ಣಸ್ಥರ ಪೂಜೆಯನ್ನು ಸಂಪೂರ್ಣವಾಗಿ ಮಾಡಿದರು ॥೨೩॥ ಎಲೈ ಶ್ರೀರಾಮನೇ ! ತ್ರೇತಾಯುಗಾವಸಾನದಲ್ಲಿ ಅಧರ್ಮದಿಂದುಂಟಾದ ಆಯುಸ್ಸಿನ ಕ್ಷೀಣವು ಕೃಷ್ಯಾದಿ ಜೀವನವು ಅಧಿಕವಾದದ್ದಾಗಲೂ, ಪೂರ್ವವರ್ಣಸ್ಥರಾದ ಬ್ರಾಹ್ಮಣ ಕ್ಷತ್ರಿಯರು ಮತ್ತೂ ಹ್ರಾಸವಂಪೊಂದಿದರು ॥೨೪॥ ಬಳಿಕ ಆ ಅಧರ್ಮವು ಎರಡನೆಯ ಪಾದವನ್ನೂರಿದಂಥಾದ್ದಾಗಲೂ, ಆಗ ಯುಗಕ್ಕೆ ದ್ವಾಪರವೆಂದು ಪೆಸರುಂಟಾಯಿತು ॥೨೫॥ ದ್ವಾಪರವೆಂದು ಪ್ರಸಿದ್ಧವಾದ ಆಯುಗದೊಳು ಅಧರ್ಮವು ಅದರಿಂದುಂಟಾದ ಆಯುಃಕ್ಷೀಣವು ಕೃಷ್ಯಾದಿ ಜೀವನವು ಇದೆಲ್ಲ ಇನ್ನೂ ವೃದ್ಧಿಯಂಪೊಂದಿ, ವೈಶ್ಯರೂ ಸಹ ತಪಿಸುವಂ ಉಂಟಾಗಿ, ಮೂರು ಯುಗಗ್ಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚೈವವೆವೃಧೆಪುರುಷರ್ಷಭ ॥೧೬॥ ತಸ್ಮಿನ್ದ್ವಾಪರಸಂಖ್ಯಾತೇತಪೋವೈಶ್ಯಾನ್ಸಮಾವಿಶತ । ತ್ರಿಭ್ಯೋಯುಗೇಭ್ಯಸ್ತ್ರೀನ್ ವರ್ಣಾನ್ಕ್ರಮಾದ್ವೈತಪಆವಿಶತ ॥೧೭॥ನಶೂದ್ರೋಲಭತೇಕರ್ತುಂತಪಉಗ್ರಂನರರ್ಷಭ। ಹೀನವರ್ಣೋನರಶ್ರೇಷ್ಠ ತಪ್ಯತೆಸುಮಹತ್ತಪಃ॥೧೮॥ಭವಿಷ್ಯಾಶೂದ್ರಜಾತೀನಾಂತಪಶ್ಚರ್ಯಾಕಲೌಯುಗೆ। ಅಧರ್ಮಃಪರಮೋರಾಮದ್ವಾಪರೆಶೂದ್ರಜನ್ಮನಃ॥೧೯॥ ಸವೈವಿಷಯಪರ್ಯಂತೆತವರಾಜನ್ಮಹಾತಪಾಃ। ಶೂದ್ರಸ್ತಪ್ಯತಿದುರ್ಬುದ್ಧಿಸ್ತೆನಬಾಲವಧೋಹ್ಯಯಂ॥ ಯೊಹ್ಯಧರ್ಮಮಕಾರ್ಯಂವಾವಿಷಯೆಪಾರ್ಥಿವಸ್ಯತು । ಕರೊತಿರಾಜಶಾರ್ದೂಲಪುರೆವಾದುರ್ಮತಿರ್ನರಃ । ಕ್ಷಿಪ್ರಂಹಿನರಕಂಯಾಂತಿಸಚರಾಜಾನಸಂಶಯಃ ॥೨೧॥ ಚತುರ್ಥಂತಸ್ಯಪಾಪಸ್ಯಭಾಗಮೆಶ್ನಾತಿಪಾರ್ಥಿವ॥೨೨॥ ಅಧೀತಸ್ಯಚ ತಪ್ತಸ್ಯಕರ್ಮಣಸ್ಸುಕೃತಸ್ಯಚ । ಷಷ್ಠಂಭಜತಿಭಾಗಂತುಪ್ರಜಾಧರ್ಮೆಣಪಾಲಯನ್ ॥೨೩॥ ಷಡ್ಭಾಗಸ್ಯಚಭೊಕ್ತಾಸೌರಕ್ಷತೆನಪ್ರಜಾಃಕಥಂ ॥ ೨೪ ॥ ಸತ್ವಂಪುರುಷಶಾರ್ದೂಲಮಾರ್ಗಸ್ವವಿಷಯಂಸ್ವಕಂ। ದುಷ್ಕೃತಂಯತ್ರಪಶ್ಯೆಥಾ

---

ಅಧರ್ಮಶ್ಚ–ಅಧರ್ಮವು, ಅನೃತಂಚೈವ–ಕೃಷಿಮೂಲಕವಾಗಿ ಜೀವನವೂಕೂಡ, ವ್ಯವೃಧೆ–ವೃದ್ಧಿ ಹೊಂದಿತು, ||೧೬|| ತಸ್ಮಿನ್ದ್ವಾಪರಸಂಖ್ಯಾತೆ–ದ್ವಾಪರವೆಂದೆಣಿಸಲ್ಪಟ್ಟ ಆಯುಗದಲ್ಲಿ, ತಪಃ–ತಪಸ್ಸು–ವೈಶ್ಯಾನ್–ವೈಶ್ಯರನ್ನು, ಸಮಾವಿಶತ್–ಹೊಂದಿತು, ತ್ರಿಭ್ಯಃ–ಮೂರಾದ, ಯುಗೇಭ್ಯಃ–ಯುಗಗಳ ದೆಶೆಯಿಂದ, ತ್ರೀನ್‌ವರ್ಣಾನ್–ಬ್ರಾಹ್ಮಣ್ಯಾದಿ ಮೂರುವರ್ಣಗಳನ್ನು, ಕ್ರಮಾತ್–ಕ್ರಮವಾಗಿ, ತಪಃ–ಉಪವಾಸಾದಿಗಳಿಂ ದುಂಟಾಗುವ ಕ್ಲೇಶಸಹನೆಯು, ಆವಿಶತ್–ಪ್ರವೇಶಿಸಿತು ||೧೭|| ಹೆ ನರರ್ಷಭ–ಎಲೈ ಪುರುಷಶ್ರೇಷ್ಠನೆ, ಶೂದ್ರಃ–ನಾಲ್ಕನೆಯ ವರ್ಣಸ್ಥನು, ಉಗ್ರಂ–ಘೋರವಾದ, ತಪಃ–ತಪಸ್ಸನ್ನು, ಕರ್ತುಂ–ಮಾಡುವದಕ್ಕೆ, (ಅರ್ಹತಾಂ–ಯೋಗ್ಯತೆಯನ್ನು) ನಲಭತೆ–ಹೊಂದುವದಿಲ್ಲ, ಹೆ ನರಶ್ರೇಷ್ಠ–ಎಲೈ ಪುರುಷಶ್ರೇಷ್ಠನೆ, ಹೀನವರ್ಣಃ– ನಿಕೃಷ್ಟಜಾತೀಯನಾದ ಶೂದ್ರನು, ಸುಮಹತ್–ಮಹತ್ತರವಾದ, ತಪಃ–ತಪಸ್ಸನ್ನು, ತಪ್ಯತೆ–ಮಾಡುತ್ತಿರುವನು ||೧೮|| ಶೂದ್ರಜಾತೀನಾಂ– ಶೂದ್ರಜಾತಿಯಲ್ಲಿ ಹುಟ್ಟಿದವರಿಗೆ, ತಪಶ್ಚರ್ಯಾ–ತಪಶ್ಚರಣೆಯು, ಕಲೌಯುಗೆ, ಕಲಿಯುಗದಲ್ಲಿ, ಭವಿಷ್ಯಾ–ಆಗತಕ್ಕದ್ದು, ಹೆ ರಾಮ – ಎಲೈ ಶ್ರೀರಾಮನೆ, ಶೂದ್ರಜನ್ಮನಃ–ಶೂದ್ರನಾಗಿ ಹುಟ್ಟಿದವನಿಗೆ, ದ್ವಾಪರೆ–ದ್ವಾಪರಯುಗದಲ್ಲಿ (ತಪಸ್ಸುಮಾಡೋಣವು) ಪರಮಃಅಧರ್ಮಃ– ಮಹಾಅಧರ್ಮವು (ಅಂದರೆ ಧರ್ಮವಲ್ಲ) ||೧೯|| ಹೆ ರಾಜನ್–ಎಲೈ ಅರಸೆ, ದುರ್ಬುದ್ಧಿಃ–ಕೆಟ್ಟಮತಿಯುಳ್ಳ, ಸಶೂದ್ರೋವೈ–ಆ ಶೂದ್ರನಾದರೆ, ಮಹಾತಪಾಃ–ಅತಿ ತಪಸ್ವಿಯಾಗಿ, ತವ–ನಿನ್ನ, ವಿಷಯಪರ್ಯಂತೆ–ದೇಶದೊಳಗಾಗಿ, ತಪ್ಯತಿ–ತಪಿಸುತ್ತಿಧಾನೆ, ತೆನ–ಆ ಕಾರಣದಿಂದ, ಅಯಂ– ಈ, ಬಾಲವಧಃ– ಬಾಲಕನಮೃತಿಯು, (ಅಭೂತ್–ಆಯಿತು) ||೨೦|| ಹೆ ರಾಜಶಾರ್ದೂಲ–ಎಲೈ ರಾಜೋತ್ತಮನೆ, ಪಾರ್ಥಿವಸ್ಯ–ರಾಜನ, ವಿಷಯೆ–ದೇಶದಲ್ಲಿಯಾದರೂಸರಿಯೇ, ಪುರೆವಾ–ಪಟ್ಟಣದಲ್ಲಿ ಆದರೂಸರಿಯೇ, ದುರ್ಮತಿಃ–ದುರ್ಬುದ್ಧಿಯುಳ್ಳ, ಯೊನರಸ್ತು–ಯಾವ ಮನುಷ್ಯನಾದರೆ, ಅಧರ್ಮಂ– ಧರ್ಮರಾಹಿತ್ಯವನ್ನಾಗಲಿ, ಅಕಾರ್ಯಂವಾ–ಕೆಟ್ಟ ಕೆಲಸವನ್ನಾಗಲಿ, ಕರೊತಿ–ಮಾಡುವನೋ, ಸಃ–ಅವನು, ಕ್ಷಿಪ್ರಂ–ಜಾಗ್ರತೆಯಾಗಿ, ನರಕಂ–ನರಕವನ್ನು, ಯಾತಿ–ಹೊಂದುವನು, ಸರಾಜಾಚ–ಆ ರಾಜನೂಕೂಡ, (ನರಕಂಯಾತಿ–ನರಕವಂ ಹೊಂದುವನು) ನಸಂಶಯಃ–ಸಂದೇಹವಿಲ್ಲ ||೨೧|| (ಅದು ಯಾಕಂದರೆ) ಪಾರ್ಥಿವಃ– ಅರಸು, ತಸ್ಯಪಾಪಸ್ಯ–ಆ ಪಾಪದ, ಚತುರ್ಥಂಭಾಗಂ–ನಾಲ್ಕನೆಯ ಅಂಶವನ್ನು, ಅಪ್ನೋತಿ–ಹೊಂದುವನು ||೨೨|| ಕಿಂತು–ಮತ್ತೇನಂದರೆ, ಧರ್ಮೆಣ–ಧರ್ಮದಿಂದ, ಪ್ರಜಾಃ–ಜನಗಳನ್ನು, ಪಾಲಯನ್–ಪರಿಪಾಲಿಸುತ್ತಿರುವ ರಾಜನು, ಅಧೀತಸ್ಯ–ಅಧ್ಯಯನಮಾಡಲ್ಪಟ್ಟವನ, ಷಷ್ಠಂಭಾಗಂ–ಆರನೆಯ ಅಂಶವನ್ನು, ತಪ್ತಸ್ಯ–ತಪಸ್ಸುಮಾಡಿದವನ ಆರನೆಯಭಾಗವನ್ನು, ಸುಕೃತಸ್ಯಕರ್ಮಣಃ–ಪುಣ್ಯಕರ್ಮದ, ಷಷ್ಠಂಭಾಗಂಚ–ಆರನೆಯಅಂಶವನ್ನು, ಭಜತಿ – ಹೊಂದುವನು ||೨೩|| ಷಡ್ಭಾಗಸ್ಯಚ–ಆರಲ್ಲಿ ಬಂದುಹಿಸ್ಸೆಯನ್ನು. ಭೋಕ್ತಾ–ಅನುಭವಿಸುತ್ತಿರುವ, ಅಸೌ–ಈ ರಾಜನು, ಪ್ರಜಾಃ– ಜನಗಳನ್ನು, ಕಥಂನರಕ್ಷತೆ–ಹ್ಯಾಗೆಸಂರಕ್ಷಣೆ ಮಾಡದೇಇರುವ ॥ ೨೪ ॥ ಹೆ ಪುರುಷಶಾರ್ದೂಲ–ಎಲೈ ಪುರುಷಶ್ರೇಷ್ಠನೆ, ಸತ್ವಂ – ಅಂತಾಸೀನು, ಸ್ವಕಂ–ಸ್ವಕೀಯ

---

ಳಿಂದಲೂ ಕ್ರಮವಾಗಿ ತಪಸ್ಸು ಬ್ರಾಹ್ಮಣ ಕ್ಷತ್ರಿಯ ವೈಶ್ಯರೆಂಬ ತ್ರಿವರ್ಣಸ್ಥರಂ ಪೊಂದಿದಂಥಾದ್ದಾಯಿತು. ನಿಕೃಷ್ಟ ಜಾತಿಯವನಾದ ಪುರುಷನು ತಪವಂಗೈಯುವದಕ್ಕೆ ಅರ್ಹನಲ್ಲ, ಅಂಥಾವನು ಯಾವನೋ ತಪಸ್ಸನ್ನು ಮಾಡುತ್ತಿಧಾನೆ, ಶೂದ್ರನಾದವನು ಈ ದ್ವಾಪರಯುಗದಲ್ಲಿ ತಪಸ್ಸನ್ನು ಮಾಡಬಾರದು, ಅವನಿಗೆ ತಪಶ್ಚರಣೆಯು ಕಲಿಯುಗದಲ್ಲಿ ಉಂಟಾಗುವದು, ಈಗ ಅವನು ಮಾಡುವದು ಬಹಳ ಅಧರ್ಮವು ॥೧೯॥ ಎಲೈ ಶ್ರೀರಾಮನೇ ! ದುರ್ಬುದ್ಧಿಯುಳ್ಳ ಆ ಶೂದ್ರನು ನಿನ್ನ ದೇಶದೊಳಗಾಗಿ ಮಹಾ ತಪಸ್ವಿಯಾಗಿ ತಪವಂಗೈಯುತ್ತಿರುವನು, ಅದರಿಂದ ಈ ಬಾಲನ ವಧೆಯುಂಟಾಯಿತು ॥೨೦॥ ಕೇಳೆಲೈ ರಾಜೋತ್ತಮನೇ ! ರಾಜನ ದೇಶದಲ್ಲಿಯಾಗಲೀ ಪುರದಲ್ಲಿಯೇ ಆಗಲಿ ಯಾವ ಪುರುಷನಾದರೆ ಅಧರ್ಮವನ್ನೇ ಆಗಲೀ ಅಕಾರ್ಯವನ್ನೇ ಆಗಲೀ ಮಾಡುತ್ತಿರುವನೋ, ಅಂಥಾ ಮತಿಗೆಟ್ಟ ಪುರುಷನೂ ಆ ರಾಜನು ಸಹಾ ತ್ವರೆಯಾಗಿ ನರಕವಂ ಪೊಂದುವರು. ಯಾಕಂದರೆ ಅರಸಾದವನು ತನ್ನ ದೇಶದಲ್ಲಿ ಜನಗಳು ಮಾಡುವ ಪಾಪದಲ್ಲಿ ನಾಲ್ಕನೆಯ ಅಂಶವಂ ಪಡೆಯುವನು ಆದಕಾರಣ ರಾಜನೂ ಕೂಡಾ ಆ ಪಾಪವನ್ನನುಭವಿಸುವನು. ಇದಲ್ಲದೆ ಧರ್ಮವಾಗಿ ಪ್ರಜಾಪರಿಪಾಲನೆಯಂಗೈಯುವ ರಾಜನು, ತನ್ನ ದೇಶದೊಳು ಅಧ್ಯಯನ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ್ತತ್ರಯತ್ನಂಸಮಾಚರ ॥೨೫॥ಏವಂಚೇದ್ಧರ್ಮವೃದ್ಧಿಶ್ಚ ನೃಣಾಂಚಾಯುರ್ವಿವರ್ಧನಂ । ಭವಿಷ್ಯತಿನರಶ್ರೇಷ್ಠ ಬಾಲಶ್ಚಾಯಂಜೀವಿಷ್ಯತಿ॥೨೬॥

—...ಇತಿ ಶ್ರೀಮದುತ್ತರರಾಮಾಯಣೇ ಚತುಸ್ಸಪ್ತತಿತಮಸ್ಸರ್ಗಃ...—

ನಾರದಸ್ಯತುತದ್ವಾಕ್ಯಂಶ್ರುತ್ವಾಮೃತಮಯಂತದಾ। ಪ್ರಹರ್ಷಮತುಲಂಲೇಭೇರಾಮೋಲಕ್ಷ್ಮಣಮಬ್ರವೀತ ॥೧॥ ಗಚ್ಛಸೌಮ್ಯದ್ವಿಜಶ್ರೇಷ್ಠಂಸಮಾಶ್ವಾಸಯಲಕ್ಷ್ಮಣ। ಬಾಲಸ್ಯಚಶರೀರಂತತ್ತೈಲದ್ರೋಣ್ಯಾಂನಿಧಾಪಯ॥೨॥ ಗಂಧೈಶ್ಚ ಪರಮೋದಾರೈಸ್ತೈಲೈಶ್ಚಾಪಿಸುಗಂಧಿಭಿಃ । ಯಥಾನಕ್ಷೀಯತೆಬಾಲಸ್ತಥಾಸೌಮ್ಯವಿಧೀಯತಾಂ॥೩॥ ಯಥಾಶರೀರಂಬಾಲಸ್ಯಗುಪ್ತಂಸ್ಯಾತ್ಕ್ಲಿಷ್ಟಕರ್ಮಣಃ। ವಿಪತ್ತಿರಪಿಭೇದೋವಾನಭವೇಚ್ಚ ತಥಾಕುರು ॥೪॥ ತಥಾಸಂದಿಶ್ಯಕಾಕುತ್ಸ್ಥೋ ಲಕ್ಷ್ಮಣಂಶುಭಲಕ್ಷಣಂ । ಮನಸಾಪುಷ್ಪಕಂದಧ್ಯಾವಾಗಚ್ಛೇತಿಮಹಾಯಶಾಃ ॥೫॥ ಇಂಗಿತಂಸತುವಿಜ್ಞಾಯಪುಷ್ಪಕೋಹೇಮ

---

ವಾದ, ವಿಷಯಂ–ದೇಶವನ್ನು, ಮಾರ್ಗಸ್ವ–ಹುಡುಕು, ದುಷ್ಕೃತಂ–ಪಾಪವನ್ನು, ಯತ್ರ–ಯೆಲ್ಲಿ, ಪಶ್ಯೆಥಾಃ–ನೋಡುವಿಯೋ, ತತ್ರ– ಅಲ್ಲಿ, ಯತ್ನಂ–ನಿರಾಕರಣಪ್ರಯತ್ನವನ್ನು, ಸಮಾಚರ–ಮಾಡು, ॥೨೫॥ ಹೆ ನರಶ್ರೇಷ್ಠ–ಎಲೈ ಪುರುಷಶ್ರೇಷ್ಠನೆ, ಏವಂಚೇತ್–ಹೀಗಾದರೆ, ಧರ್ಮವೃದ್ಧಿಶ್ಚ–ಧರ್ಮಾಭಿವೃದ್ಧಿಯೂ, ಭವಿಷ್ಯತಿ–ಆಗುವದು, ನೃಣಾಂ–ಮನುಷ್ಯರಿಗೆ, ಆಯುರ್ವಿವರ್ಧನಂಚ–ಆಯುಸ್ಸಿನ ಅಭಿವೃದ್ಧಿಯೂಕೂಡ, ಭವಿಷ್ಯತಿ–ಆಗುವದು, ಅಯಂಬಾಲಶ್ಚ–ಈ ಹುಡುಗನೂಕೂಡ, ಜಿಜೀವಿಷುಃ–ಬದುಕಲಿಚ್ಛೆಯುಳ್ಳವನು, (ಭವಿಷ್ಯತಿ–ಆಗುವನು) ॥೨೬॥

—...ಇತಿಶ್ರೀಮದುತ್ತರರಾಮಾಯಣೇ ಚತುಸ್ಸಪ್ತತಿತಮಸ್ಸರ್ಗಃ...—

ರಾಮಃ–ಶ್ರೀರಾಮನು, ಅಮೃತಮಯಂ–ಅಮೃತವಿಕಾರವಾದ, ನಾರದಸ್ಯ–ನಾರದಮುನಿಯ, ತದ್ವಾಕ್ಯಂತು–ಆ ಮಾತನ್ನಾದರೆ, ಶ್ರುತ್ವಾ–ಕೇಳಿ, ತದಾ–ಆ ಸಮಯದಲ್ಲಿ, ಅತುಲಂ–ಅಸದೃಶವಾದ, ಪ್ರಹರ್ಷಂ–ಸಂತೋಷವನ್ನು, ಲೇಭೇ–ಹೊಂದಿದನು, ಲಕ್ಷ್ಮಣಂ–ಲಕ್ಷ್ಮಣನನ್ನು ಕುರಿತು, ಅಬ್ರವೀತ್–ನುಡಿದನು ॥೧॥ ಹೆ ಸೌಮ್ಯ ಎಲೈ ಕ್ರೂರತೆಯಿಲ್ಲದವನೆ, ಗಚ್ಛ–ತೆರಳು–ಹೆಲಕ್ಷ್ಮಣ–ಎಲೈ ಲಕ್ಷ್ಮಣನೆ, ದ್ವಿಜಶ್ರೇಷ್ಠಂ–ಬ್ರಾಹ್ಮಣೋತ್ತಮನನ್ನು, ಸಮಾಶ್ವಾಸಯ–ಸಮಾಧಾನಗೊಳಿಸು, ಬಾಲಸ್ಯ–ಬಾಲಕನ, ತಚ್ಛರೀರಂ–ಆ ಕಳೇಬರವನ್ನು, ತೈಲದ್ರೋಣ್ಯಾಂ – ಯೆಣ್ಣೆಯಪೀಪಾಯಿನಲ್ಲಿ, ನಿಧಾಪಯ–ಇರಿಸಿ ॥೨॥ ಹೆ ಸೌಮ್ಯ–ಎಲೈ ಸೌಮ್ಯನೆ, ಬಾಲಃ–ಹುಡುಗನು, ಯಥಾ–ಹ್ಯಾಗೆ, ನಕ್ಷೀಯತೇ– ಕ್ಷೀಣವಾಗುವದಿಲ್ಲವೋ, ತಥಾ– ಹಾಗೆ, ಪರಮೋದಾರೈಃ–ಮಹಾ ಗಂಭೀರವಾದ, ಗಂಧೈಶ್ಚ–ಗಂಧಗಳಿಂದಲೂ, ಚಾರುಸುಗಂಧಿಭಿಃ–ಪಳ್ಳೇಸುವಾಸನೆಯುಳ್ಳ, ತೈಲೈಶ್ಚ–ತೈಲಗಳಿಂದಲು ಸಹ, ವಿಧೀಯತಾಂ–ಮಾಡಲ್ಪಡಲಿ ॥೩॥ಕ್ಲಿಷ್ಟಕರ್ಮಣಃ–ಕಷ್ಟಕರ್ಮವುಳ್ಳ, ಬಾಲಸ್ಯ–ಮಗುವಿನ, ಶರೀರಂ–ದೇಹವು, ಗುಪ್ತಂ – ಸಂರಕ್ಷಿಸಲ್ಪಟ್ಟಂಥಾದ್ದು, ಯಥಾಸ್ಯಾತ್–ಹ್ಯಾಗೆಇದ್ದೀತೊ ವಿಪತ್ತಿರಪಿ–ಸ್ವರೂಪನಾಶವಾಗಲೀ, ಭೇದೋವಾ–ಕೀಲುಮುಂತಾದವುಗಳಮುರಿಯೋಣವಾಗಲೀ, ಯಥಾ–ಹ್ಯಾಗೆ, ನಭವೇತ್–ಆಗದೇ ಇದ್ದೀತೊ, ತಥಾ–ಹಾಗೆ, ಕುರು–ಮಾಡು ॥೪॥ ಮಹಾಯಶಾಃ–ಅತಿಕೀರ್ತಿವಂತನಾದ, ಕಾಕುತ್ಸ್ಥಃ–ಶ್ರೀರಾಮನು, ಶುಭಲಕ್ಷಣಂ–ಶುಭಲಕ್ಷಣಕರವಾದ ಗುರ್ತುಗಳುಳ್ಳ, ಲಕ್ಷ್ಮಣಂ–ಲಕ್ಷ್ಮಣನಂಕುರಿತು, ತಥಾ–ಹಾಗೆ, ಸಂದಿಶ್ಯ–ಅಜ್ಞಾಪಿಸಿ, ಮನಸಾ – ಮನದಿಂದ, ಪುಷ್ಪಕಂ–ಪುಷ್ಪಕವಿಮಾನವನ್ನು, ಆಗಚ್ಛೇತಿ–ಬಾಯೆಂದು,ದಧ್ಯೌ–ಧ್ಯಾನಿಸಿದನು ॥ ೫ ॥ ಹೇಮಭೂಷಿತಃ–ಸುವರ್ಣಾಲಂಕೃತವಾದ, ಸಪುಷ್ಪಕಸ್ತು–ಆ ಪುಷ್ಪಕವಿಮಾನವಾದರೆ, ಅಥವಾಪುಷ್ಪಕಾಧಿಷ್ಠಿತವಾದ ದೇವತೆಯಾದರೆ, ರಾಘವಸ್ಯ–ಶ್ರೀರಾಮನ, ಇಂಗಿತಂ–ಮನೋಭಿಪ್ರಾಯವನ್ನು, ವಿಜ್ಞಾಯ–ತಿಳದು, ರಾಘವಸ್ಯ–

---

ಮಾಡುವದರಲ್ಲಿಯೂ, ತಪಶ್ಚರಣದಲ್ಲಿಯೂ ಪುಣ್ಯಕರ್ಮಗಳಲ್ಲಿಯೂ ಸಹ ಷಷ್ಠಾಂಶವಂ ಪಡೆಯುವನು. ಈಪರಿಯಾಗಿ ಷಷ್ಠಾಂಶವನ್ನನುಭವಿಸುವನು, ಯಾಕೆ ರಕ್ಷಿಸದೆ ಇರುವನು, ಆದಕಾರಣ ನೀನು ನಿನ್ನ ದೇಶವನ್ನೆಲ್ಲ ಹುಡಿಕಿ, ಪಾಪವನ್ನು ಎಲ್ಲಿ ಕಾಣುವಿಯೋ ಅಲ್ಲಿ ಅದನ್ನು ಹೋಗಲಾಡಿಸುವ ಪ್ರಯತ್ನವಂ ಮಾಡುವಂಥಾವನಾಗು, ಈ ರೀತಿಯಾಗಿ ನೀನು ಗೈಯುವನಾದರೆ, ಧರ್ಮಾಭಿವೃದ್ಧಿಯೂ, ಮನುಷ್ಯರಿಗೆ ಆಯುರ್ವೃದ್ಧಿಯೂ ಉಂಟಾಗುವದಲ್ಲದೆ ಈ ಮೃತನಾದ ಬಾಲಕನು ಜೀವಿಸುವನೆಂದು ನಾರದ ಮಹಾಮುನಿಯು ನಿರೂಪಿಸಿದಂಥಾವನಾದನು ॥೨೬॥

—...ಉತ್ತರರಾಮಾಯಣದಲ್ಲಿನ ೭೪ನೆಯ ಸರ್ಗಂ ಮುಗಿದುದು...—

ಅಮೃತವಿಕಾರವಾದ ಆ ನಾರದಮಹಾಮುನಿಯ ವಾಕ್ಯವಂ ಕೇಳಿ, ಶ್ರೀರಾಮನು ಆ ವೇಳೆಯೊಳು ಲಕ್ಷ್ಮಣನಂ ಕುರಿತು, ಎಲೈಲಕ್ಷ್ಮಣನೇ ! ನೀನು ಪೋಗಿ ಆ ಬ್ರಾಹ್ಮಣೋತ್ತಮನಂ ಸಮಾಧಾನಗೊಳಿಸಿ, ಆ ಬಾಲಕನ ಶರೀರವಂ ತೈಲದಿಂದ ತುಂಬಲ್ಪಟ್ಟ ದ್ರೋಣಿಯೊಳಿರಿಸಿ,ದುರ್ಗಂಧವು ಪುಟ್ಟದಂತೆಯೂ ದೇಹವು ಕೊಳತುಹೋಗದಂತೆಯೂ ಇಡುವದಕ್ಕೆ ಸುಗಂಧ ಪದಾರ್ಥಗಳಿಂದ ವಾಸನೆಯಂ ಕಟ್ಟಿಸಿ, ಸಂಧಿಬಂಧಗಳು ಕಿತ್ತು ಹೋಗದಂತೆ ಸಂರಕ್ಷಿಸುವಂಥಾವನಾಗೆಂದು ಪೇಳಿ, ಮನಸಾ ಪುಷ್ಪಕ ವಿಮಾನವಂ ಸ್ಮರಿಸಿದವನಾದನು ॥೫॥ ಸುವರ್ಣವಿಕಾರವಾದ ಆ ಪುಷ್ಪಕವಿಮಾನವಾದರೆ, ಆ ಶ್ರೀರಾಮನ ಅಭಿಪ್ರಾಯವನ್ನರಿತು, ತ್ವರಿತವಾಗಿ ಆತನ ಸನ್ನಿಧಿಗೆ ಬಂದು, ನಮಸ್ಕಾರವಂಮಾಡಿ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭೂಷಿತಃ । ಆಜಗಾಮಮುಹೂರ್ತೇನಸಮೀಪಂರಾಘವಸ್ಯವೈ॥೬॥ ಸೋಬ್ರವೀತ್ಪ್ರಣತೋಭೂತ್ವಾ ಅಯಮಸ್ಮಿ ನರಾಧಿಪ। ವಶ್ಯಸ್ತವಮಹಾಬಾಹೋಕಿಂಕರಸ್ಸಮುಪಸ್ಥಿತಃ ॥೭॥ ಭಾಷಿತಂರುಚಿರಂಶ್ರುತ್ವಾಪುಷ್ಪಕಸ್ಯನರಾಧಿಪಃ। ಅಭಿವಾದ್ಯ ಮಹರ್ಷೀಂಸ್ತಾನ್ವಿಮಾನಂಸಾಧ್ಯರೋಹತ॥೮॥ ಧನುರ್ಗೃಹೀತ್ವಾತೂಣೀಚಖಡ್ಗಂಚರುಚಿರಪ್ರಭಂ।ನಿಕ್ಷಿಪ್ಯನಗರೇವೀರೌಸೌಮಿತ್ರಿಭರತಾವುಭೌ । ಪ್ರಾಯಾತ್ಪ್ರತೀಚೀಂಸದಿಶಂವಿಚಿನ್ವಂತಸ್ತತಸ್ತತಃ ॥೯॥ ಉತ್ತರಾಮಗಮಚ್ಛ್ರೀಮಾನ್ದಿಶಂಹಿಮವತಾವೃತಾಂ। ಅಪಶ್ಯಮಾನಸ್ತತ್ರಾಪಿಸ್ವಲ್ಪಮಪ್ಯಥದುಷ್ಕೃತಂ। ಪೂರ್ವಾಮಪಿದಿಶಂಸರ್ವಾಮಥಾಪಶ್ಯನ್ನರಾಧಿಪಃ ॥೧೦॥ ಪ್ರವಿಶುದ್ಧಸಮಾಚಾರಾಮಾದರ್ಶತಲನಿರ್ಮಲಾಂ । ಪುಷ್ಪಕಸ್ಥೋಮಹಾಬಾಹುಸ್ತದಾಪಶ್ಯನ್ನರಾಧಿಪಃ॥ ದಕ್ಷಿಣಾಂದಿಶಮಾಕ್ರಾಮಂಸ್ತತೋರಾಜರ್ಷಿನಂದನಃ । ಮಲಯಸ್ಯೋತ್ತರೇಪಾರ್ಶ್ವೇದದರ್ಶಸುಮಹತ್ಸರಃ॥೧೨॥ ತಸ್ಮಿನ್ ಸರಸಿತಪ್ಯಂತಂತಾಪಸಂಸುಮಹತ್ತಪಃ । ದದರ್ಶರಾಘವಶ್ಶ್ರೀಮಾನ್ಲಂಬಮಾನಮಧೋಮುಖಂ॥೧೩॥ ರಾಘವಸ್ತಮು

---

ಶ್ರೀರಾಮನ, ಸಮೀಪಂ-ಸನ್ನಿಧಾನವಂಕುರಿತು, ಮುಹೂರ್ತೇನ-ಸ್ವಲ್ಪಕಾಲದಲ್ಲಿ, ಆಜಗಾಮ-ಬಂದಿತು, ॥ ೬ ॥ ಹೇನರಾಧಿಪ-ಎಲೈಜನಪತಿಯೆ, ಪ್ರಣತೋಭೂತ್ವಾ-ವಿಧೇಯನಾಗಿ, ಅಯಂ-ಈಪರಿದೃಶ್ಯಮಾನನಾಗಿ, ಅಸ್ಮಿ-ಆಗಿಯಿಧ್ಧೇನೆ,ಹೆಮಹಾಬಾಹೊ-ಎಲೈಭುಜಪರಾಕ್ರಮಿಯೆ, ತವ-ನಿನಗೆ, ವಶ್ಯಃ-ಅಧೀನನಾದ, ಕಿಂಕರಃ-ಚಾಕರನು, ಸಮುಪಸ್ಥಿತಃ-ಬಂದಿಧ್ಧಾನೆ, ಇತಿ-ಇಂತೆಂದು, ಸಃ-ಆ ಪುಷ್ಪಕಾಭಿಮಾನಿದೇವತೆಯು, ಅಬ್ರವೀತ್-ಹೇಳಿತು॥೭॥ ನರಾಧಿಪಃ-ಜನಪತಿಯಾದ, ಸಃ-ಆಶ್ರೀರಾಮನು, ರುಚಿರಂ-ಮನೋಹರವಾದ, ಪುಷ್ಪಕಸ್ಯ-ಪುಷ್ಪಕವಿಮಾನಸ್ಥದೇವತೆಯ-ಭಾಷಿತಂ-ಮಾತನ್ನು,ಶೃತ್ವಾ-ಕೇಳಿ, ತಾನ್ಮಹರ್ಷೀನ್-ಆ ಮಹಾಮುನಿಗಳನ್ನು ಕುರಿತು, ಅಭಿವಾದ್ಯ-ನಮಸ್ಕರಿಸಿ, ವಿಮಾನಂ-ಪುಷ್ಪಕವಿಮಾನವನ್ನು, ಅಧ್ಯರೋಹತ-ಏರಿದನು॥೮॥ ಸಃ-ಆ ಶ್ರೀರಾಮನು, ಉಭೌ-ಇಬ್ಬರಾದ, ವೀರೌ-ಶೂರರಾದ, ಸೌಮಿತ್ರಿಭರತೌ-ಲಕ್ಷ್ಮಣಭರತರನ್ನು,ನಗರೇ-ಪಟ್ಟಣದಲ್ಲಿ, ನಿಕ್ಷಿಪ್ಯ-ಇರಿಸಿ, ಧನುಃ-ಕೋದಂಡವನ್ನು, ತೂಣೀಚ-ಸರಳುಬತ್ತಳಿಕೆಗಳನ್ನು, ರುಚಿರಪ್ರಭಂ-ಮನೋಹರವಾದಕಾಂತಿಯುಳ್ಳ, ಖಡ್ಗಂಚ-ಕತ್ತಿಯನ್ನೂ ಸಹ, ಗೃಹೀತ್ವಾ-ತೆಗೆದುಕೊಂಡು, ಪ್ರತೀಚೀಂದಿಶಂ-ಪಶ್ಚಿಮದಿಕ್ಕಿನಲ್ಲಿ, ತತಸ್ತತಃ-ಅಲ್ಲಲ್ಲಿ, ವಿಚಿನ್ವನ್-ಹುಡುಕುತ್ತಿರುವನಾಗಿ, ಪ್ರಾಯಾತ್-ತೆರಳಿದನು, ॥೯॥ ಶ್ರೀಮಾನ್-ಸಂಪದ್ಯುಕ್ತನಾದ, ನರಾಧಿಪಃ-ಶ್ರೀರಾಮನು, ಅಥ-ಬಳಿಕ, ಹಿಮವತಾ-ಹಿಮವತ್ಪರ್ವತದಿಂದ, ಆವೃತಾಂ-ಆಚ್ಛಾದಿತವಾದ, ಉತ್ತರಾಂದಿಶಂ-ಉತ್ತರ ದಿಕ್ಕನ್ನು, ಅಗಮತ್-ಹೊಂದಿದನು ॥೧೦॥ ಅತ್ರಾಪಿ-ಅಲ್ಲಿಯೂಕೂಡ, ಸ್ವಲ್ಪಂ-ಸ್ವಲ್ಪವಾದ, ದುಷ್ಕೃತಮಪಿ - ಪಾಪವನ್ನಾದರೂ, ಅಪಶ್ಯಮಾನಃ-ಕಾಣದಿರುವನಾಗಿ, ಅಥ-ಬಳಿಕ, ಸರ್ವಾಂ-ಸಮಸ್ತವಾದ, ಪೂರ್ವಾಂದಿಶಂ-ಪೂರ್ವದಿಕ್ಕನೆಲ್ಲ, ಅಪಶ್ಯತ್-ಕಂಡನು, ಮಹಾಬಾಹುಃ-ಮಹಾಭುಜಪರಾಕ್ರಮಿಯಾದ, ನರಾಧಿಪಃ-ಜನಪತಿಯಾದಶ್ರೀರಾಮನು, ಪುಷ್ಪಕಸ್ಥಃ-ಪುಷ್ಪಕವಿಮಾನದಲ್ಲಿರುವನಾಗಿ,, ತದಾ-ಆಸಮಯದಲ್ಲಿ, ಪ್ರವಿಶುದ್ಧಸಮಾಚಾರಾಂ-ವಿಶೇಷವಾಗಿಪರಿಶುದ್ಧವಾದ ವಾರ್ತೆಗಳುಳ್ಳ, ಆದರ್ಶತಲನಿರ್ಮಲಾಂ-ದರ್ಪಣ ಪ್ರದೇಶದಂತೆ ಸ್ವಚ್ಛವಾಗಿರುವಭೂಮಿಯನ್ನು, ಅಪಶ್ಯತ್-ಕಂಡನು,॥೧೧ ತತಃ-ಬಳಿಕ; ರಾಜರ್ಷಿನಂದನಃ-ರಾಜರ್ಷಿಯಾದದಶರಥಕುಮಾರನು, ದಕ್ಷಿಣಾಂದಿಶಂ-ದಕ್ಷಿಣದೇಶದಲ್ಲಿ, ಆಕ್ರಾಮನ್-ತಿರುಗುತ್ತಿರುವನಾಗಿ, ಮಲಯಸ್ಯ-ಮಲಯಪರ್ವತದ, ಉತ್ತರೇಪಾರ್ಶ್ವೇ-ಉತ್ತರಪಕ್ಕದಲ್ಲಿ, ಸಮಹತ್-ದೊಡ್ಡದಾದ, ಸರಃ-ಸರೋವರವನ್ನು, ದದರ್ಶ-ಕಂಡನು ॥೧೨॥ ಶ್ರೀಮಾನ್-ಸಂಪದ್ಯುಕ್ತನಾದ, ರಾಘವಃ-ಶ್ರೀರಾಮನು, ತಸ್ಮಿನ್‌ಸರಸಿ-ಆ ಸರೋವರದಲ್ಲಿ, ಮಹಾತಪಃ-ಮಹತ್ತರವಾದತಪವನ್ನು, ತಪ್ಯಂತಂ-ಮಾಡುತ್ತಿರುವ,ಅಧೋಮುಖಂ-ತಲೆಕೆಳಗಾಗಿ, ಲಂಬಮಾನಂ-ಜೋಲಾಡುತ್ತಿರುವ, ತಾಪಸಂ-ಋಷಿಯನ್ನು,ದದರ್ಶ-ಕಂಡನು, ॥ ೧೩ ॥ ರಾಘವಃ-ಶ್ರೀರಾಮನು, ತದಾ-ಆಸಮಯದಲ್ಲಿ,ಉತ್ತಮಂ-ಉತ್ಕೃಷ್ಟವಾದ, ತಪಃ-ತಪಸ್ಸನ್ನು, ತಪ್ಯಂತಂ-ಮಾಡುತ್ತಿರುವ, ತಂ-ಆತಾಪಸನನ್ನು, ಉಪಾಗಮ್ಯ-ಹೊಂದಿ,ಹೆಸು

---

ನಿನ್ನ ಸ್ವಾಧೀನದಲ್ಲಿರುವ ಮತ್ತೂ ಕಿಂಕರನಾದ ನಾನು ಬಂದಿಧ್ಧೇನೆಂದು ಹೇಳಲೂ, ಆ ರಘುನಂದನನು ಕರ್ಣಶ್ರಾವ್ಯವಾಗಿರ್ಪ ಆ ವಾಕ್ಯವಂ ಕೇಳಿ, ಆ ಮಹಾಮುನಿಗಳಿಗೆಲ್ಲ ವಂದನೆಯಂಗೈದು, ಕೋದಂಡವನ್ನೂ ಸರಳು ಬತ್ತಳಿಕೆಗಳನ್ನೂ ಖಡ್ಗವನ್ನೂ ಸಹ ತೆಗದುಕೊಂಡು, ಲಕ್ಷ್ಮಣ ಭರತರೀರ್ವರಂ ಪುರದಲ್ಲಿರಿಸಿ, ಆ ಪುಷ್ಪಕವಿಮಾನವನ್ನೇರಿ, ಪಶ್ಚಿಮದಿಕ್ಕಿನಲ್ಲಿ ಅಲ್ಲಲ್ಲಿ ಹುಡಿಕಿ, ಹಿಮವತ್ಪರ್ವತದಿಂದಾಶ್ರಯಿಸಲ್ಪಟ್ಟ ಉತ್ತರದಿಕ್ಕಿಗೆ ಪೋಗಿ, ಅಲ್ಲಿಯೂ ಕೂಡಾ ಸ್ವಲ್ಪ ಪಾಪವನ್ನಾದರೂ ಕಾಣದೆ, ಪೂರ್ವದಿಕ್ಕಿನಲ್ಲಿ ಗಮಿಸಿ, ಅಲ್ಲಿ ಹುಡಿಕಿದಂಥಾವನಾಗಿ, ಆ ವೇಳೆಯೊಳು ಬಹಳ ಶುದ್ಧವಾದ ವಾರ್ತೆಗಳುಳ್ಳದ್ದಾಗಿಯೂ ದರ್ಪಣಪ್ರದೇಶದಂತೆ ನಿರ್ಮಲವಾಗಿಯೂ ಇರುವ, ಭೂಪ್ರದೇಶವನ್ನು ಕಂಡಂಥಾವನಾದನು ॥೧೧॥ ಬಳಿಕ ರಾಜರ್ಷಿಯಾದ ದಶರಥಮಹಾರಾಜನಿಗೆ ಕುಮಾರನಾದ ಆ ಶ್ರೀರಾಮನು ದಕ್ಷಿಣದಿಕ್ಕಿಗೆ ಪೋಗಿ, ಮಲಯ ಪರ್ವತದ ಉತ್ತರಭಾಗದಲ್ಲಿ ಮಹತ್ತರವಾದ ಸರೋವರವಂ ಕಂಡು, ಆ ಸರೋವರದೊಳು, ಅಧೋಮುಖನಾಗಿ ಜೋಲಾಡುತ್ತಾ ಮಹಾ ತಪವಂಗೈಯುತ್ತಿರುವ ಓರ್ವ ತಾಪಸನಂ ವೀಕ್ಷಿಸಿ, ಆತನ ಸಮೀಪದಲ್ಲಿ ಗಮಿಸಿ, ಆ ವೇಳೆಯೊಳು ಆತನಂ ಕುರಿತು, ಎಲೈ ಮಹಾನಿಯಮವಂತನೇ ! ನೀನು ಧನ್ಯನಾಗಿದ್ದೀ, ಎಲೈ ತಪೋವೃದ್ಧನೇ ! ನೀನು ಯಾವ ಜಾತಿಯಲ್ಲಿ ಹುಟ್ಟಿದವನು, ತಿಳಿದು ಕೊಳ್ಳಬೇಕೆಂಬ ಕುತೂಹಲದಿಂದ ಕೇಳು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಷಾಗಮ್ಯ ತಪ್ಯಂತಂತಪಉತ್ತಮಂ । ಉವಾಚಸತದಾವಾಕ್ಯಂಧನ್ಯಸ್ತ್ವಮಸಿಸುವ್ರತ ॥೧೪॥ ಕಸ್ಯಾಂಯೋನ್ಯಾಂತಪೋವೃದ್ಧ ವರ್ತಸೆದೃಢವಿಕ್ರಮ । ಕೌತೂಹಲಾತ್ತ್ವಾಂಪೃಚ್ಛಾಮಿರಾಮೋದಾಶರಥಿರ್ಹ್ಯಹಂ॥೧೫॥ ಕೋರ್ಥೋಮನೀಷಿತಸ್ತುಭ್ಯಂಸ್ವರ್ಗಲಾಭೋವರಾಶ್ರಯಃ । ಪ್ರತಪ್ಸ್ಯಸಿಯದರ್ಥಂತ್ವಂವದಸ್ವಾನ್ಯೈಸ್ಸುದುಷ್ಕರಂ । ಯಮಾಶ್ರಿತ್ಯತಪಸ್ತಪ್ತಂ ಶ್ರೋತುಮಿಚ್ಛಾಮಿತಾಪಸ ॥೧೬॥ ಬ್ರಾಹ್ಮಣೋವಾಸಿಭದ್ರಂತೇಕ್ಷತ್ರಿಯೋವಾಸಿದುರ್ಜಯಃ । ವೈಶ್ಯಸ್ತೃತೀಯವರ್ಣೋವಾಶೂದ್ರೋವಾಸತ್ಯವಾಗ್ಭವ ॥೧೭॥ —…ಇತಿಶ್ರೀಮದುತ್ತರರಾಮಾಯಣೇ ಪಂಚಸಪ್ತತಿತಮಸ್ಸರ್ಗಃ…—

ತಸ್ಯತದ್ವಚನಂಶ್ರುತ್ವಾ ರಾಮಸ್ಯಾಕ್ಲಿಷ್ಟಕರ್ಮಣಃ। ಅವಾಕ್ಛಿರಾಸ್ತಥಾಭೂತ್ವಾವಾಕ್ಯಮೇತದುವಾಚಹ ॥೧॥ ಶೂದ್ರಯೋನ್ಯಾಂಪ್ರಸೂತೋಸ್ಮಿ ಶಂಬುಕೋನಾಮನಾಮತಃ । ದೇವತ್ವಂಪ್ರಾರ್ಥಯೇರಾಮಸಶರೀರೋಮಹಾಯಶಃ॥೨॥ ನಮಿಥ್ಯಾಹಂವದೇರಾಮದೇವಲೋಕಜಿಗೀಷಯಾ । ಶೂದ್ರಂಮಾಂವಿದ್ಧಿಕಾಕುತ್ಸ್ಥತಪಉಗ್ರಂಸಮಾಸ್ಥಿತಂ ॥೩॥ ಭಾ

---

ವ್ರತ–ಎಲೈಒಳ್ಳೆನಿಯಮಮುಳ್ಳವನೆ, ತ್ವಂ–ನೀನು, ಧನ್ಯೋಸಿ–ಧನ್ಯನಾಗಿದ್ದಿ – ಇತಿ–ಇಂತೆಂದು, ಉವಾಚ–ಹೇಳಿದನು ॥ ೧೪ ॥ ಕಸ್ಯಾಂಯೋನ್ಯಾಂ–ಯಾವಯೋನಿಯಲ್ಲಿ, ವರ್ತಸೆ–ಉತ್ಪನ್ನನಾಗಿದ್ದಿ, ಹೆತಪೋವೃದ್ಧ–ಎಲೈತಪಸ್ಸಿನಿಂದ ವೃದ್ಧನೆ, ಹೆದೃಢವಿಕ್ರಮ–ಎಲೈ ದೃಢವಾದ ಪರಾಕ್ರಮಮುಳ್ಳವನೇ. ಕೌತುಹಲಾತ್–ಕುತೂಹಲದಿಂದ, ತ್ವಾಂ–ನಿನ್ನನ್ನು, ಪೃಚ್ಛಾಮಿ–ಕೇಳುತ್ತೇನೆ, ಅಹಂ–ನಾನಂ, ದಾಶರಥಿಃ–ದಶರಥಪುತ್ರನಾದ, ರಾಮಃ–ಶ್ರೀರಾಮನು ॥ ೧೫ ॥ ಹೇತಾಪಸಸ್ಯ–ಎಲೈಋುಷಿಯೆ, ತುಭ್ಯಂ–ನಿನ್ನ, ವರಾಶ್ರಯಃ–ತಪಸ್ಸಿನಿಂದ ಸಂತುಷ್ಟರಾದ, ದೇವತೆಗಳವರದಿಂದ ಪಡೆಯತಕ್ಕ, ಮನೀಷಿತಃ–ಇಷ್ಟವಾದ, ಅರ್ಥಃ–ಪ್ರಯೋಜನವು, ಸ್ವರ್ಗಲಾಭೋವಾ–ಸ್ವರ್ಗವೇಲಾಭವಾಗುಳ್ಳದ್ದೆ (ಅಥವಾಕೋರ್ಥಃ–ಯಾವಪ್ರಯೋಜನಮುಳ್ಳದ್ದು ಯಂ–ಯಾವದನ್ನು, ಸಮಾಶ್ರಿತ್ಯ–ಆಶ್ರಯಿಸಿ, ಅನ್ಯೈಃ–ನಿನಗಿಂತಲೂ ಇತರರಿಂದ, ಸುದುಷ್ಕರಂ–ಮಾಡಲಸಾಧ್ಯವಾದ,ತಪಃ–ತಪಸ್ಸು, ತಪ್ತಂ–ಮಾಡಲ್ಪಟ್ಟಿತು, ಯದರ್ಥಂ–ಯಾತಕ್ಕೋಸ್ಕರ, ತ್ವಂ–ನೀನು, ಪ್ರತಪ್ಸ್ಯಸಿ–ಉಪವಾಸಾದಿಗಳಿಂದ ಕ್ಲೇಶಪಡುತ್ತೀ, ವದ–ಹೇಳು ॥೧೬॥ಬ್ರಾಹ್ಮಣಃ–ಬ್ರಾಹ್ಮಣನು, ಅಸಿವಾ–ಆಗಿದ್ದರೆ, ತೇ–ನಿನಗೆ, ಭದ್ರಂ–ಶುಭವಾಗಲೀ, ಕ್ಷತ್ರಿಯೋವಾಸಿ–ಕ್ಷತ್ರಿಯನೇ ಆಗಿದ್ದರೆ, ದುರ್ಜಯಃ– ಜಯಿಸಲಸಾಧ್ಯನಾಗು, ತೃತೀಯವರ್ಣಃ–ಮೂರನೆಜಾತೀಯ್ಯನಾದ, ವೈಶ್ಯೋವಾ–ವೈಶ್ಯನಾದವನೇ ಏನು, ಶೂದ್ರೋವಾ–ಶೂದ್ರನೇಯೇನು, ಸತ್ಯವಾಕ್– ನಿಶ್ಚಯವಚನಮುಳ್ಳವನು, ಭವ–ಆಗು ॥೧೭॥ —…*ಇತಿಶ್ರೀಮದುತ್ತರರಾಮಾಯಣೇ ಪಂಚ ಸಪ್ತತಿತಮಸ್ಸರ್ಗಃ*…—

ಅಕ್ಲಿಷ್ಟಕರ್ಮಣಃ–ಕ್ಲೇಶವಿಲ್ಲದೇ ಕಾರ್ಯಗಳಂಮಾಡುತ್ತಿರುವ, ತಸ್ಯರಾಮಸ್ಯ–ಆ ಶ್ರೀರಾಮನ, ವಚನಂ–ಮಾತನ್ನು, ಶ್ರುತ್ವಾ–ಕೇಳಿ, ತಥಾ–ಹಾಗೆ, ಅವಾಕ್ಛಿರಾಃ–ತಲೆ ಬೊಗ್ಗಿಸಿಕೊಂಡವನು, ಭೂತ್ವಾ–ಆಗಿ, ಏತದ್ವಾಕ್ಯಂ–ಈ ಮಾತನ್ನು, ಉವಾಚಹ–ಹೇಳಿದನಷ್ಟೆ॥೧॥ ಹೆ ರಾಮ– ಎಲೈ ಶ್ರೀರಾಮನೆ, ಶೂದ್ರಯೋನ್ಯಾಂ–ಶೂದ್ರಸ್ತ್ರೀಯಲ್ಲಿ, ಪ್ರಸೂತಃ–ಹುಟ್ಟಿದವನು, ಅಸ್ಮಿ–ಆಗಿಧೇನೆ, ನಾಮತಃ–ಹೆಸರಿನಿಂದ, ಶಂಬುಕೋನಾಮ – ಶಂಬುಕನೆಂದು ಪ್ರಸಿದ್ಧನಾದವನು, ಹೆ ಮಹಾಯಶಃ–ಎಲೈ ಮಹಾಕೀರ್ತಿಶಾಲಿಯೆ, ಸಶರೀರಃ–ದೇಹಸಹಿತನಾಗಿ, ದೇವತ್ವಂ– ದೇವತಾಭಾವವನ್ನು, ಪ್ರಾರ್ಥಯೆ, ಬೇಡುತ್ತೇನೆ ॥೨॥ ಹೆ ರಾಮ–ಎಲೈ ಶ್ರೀರಾಮನೆ, ದೇವಲೊಕಜಿಗೀಷಯಾ–ದೇವಲೋಕವನ್ನು ಜಯಿಸಬೇಕೆಂಬ ಬಿಚ್ಛೆಯಿಂದ, ಉಗ್ರಂ–ಘೋರವಾದ, ತಪಃ–ತಪಸ್ಸಿನಲ್ಲಿ, ಸಮಾಸ್ಥಿತಂ–ಇರುವ, ಮಾಂ–ನನ್ನನ್ನು, ಶೂದ್ರಂ–ಶೂದ್ರನನ್ನಾಗಿ, ವಿದ್ಧಿ–ತಿಳಿದುಕೋ, ಹೆ ಕಾಕುತ್ಸ್ಥ– ಎಲೈಕಕುತ್ಸ್ಥವಂಶೋತ್ಪನ್ನನೆ, ಅಹಂ–ನಾನು, ಮಿಥ್ಯಾ–ಸುಳ್ಳನ್ನು, ನವದೆ–ಹೇಳಲಾರೆನು ॥೩॥ ರಾಘವಃ–ಶ್ರೀರಾಮನು, ಕೋಶಾತ್– ವರೆಯಿಂದ, ವಿಮಲಂ–

---

ತ್ತೇನೆ, ನಾನು ದಶರಥ ಪುತ್ರನಾದ ರಾಮನು, ಎಲೈ ತಾಪಸನೇ ! ನಿನ್ನ ತಪದಿಂದ ಸಂತುಷ್ಟರಾದ ದೇವತೆಗಳಿಂದ ಪಡೆಯತಕ್ಕ ಇಷ್ಟವಾದ ಪ್ರಯೋಜನವು ಸ್ವರ್ಗ ಪ್ರಯೋಜನವುಳ್ಳದ್ದೋ ಏನು ? ಯಾವದನ್ನಾಶ್ರಯಿಸಿ ದುಷ್ಕರ ಮಾದ ಈ ತಪವಂ ಮಾಡಿದಂಥಾವನಾದೆ ? ಯಾಕೆ ನೀನು ಉಪವಾಸಾದಿಗಳಿಂದ ಕ್ಲೇಶಪಡುತ್ತೀ ? ನೀನು ಬ್ರಾಹ್ಮಣನಾದರೆ ನಿನಿಗೆ ಶುಭವಾಗಲಿ, ಕ್ಷತ್ರಿಯನಾದರೆ ಜಯಿಸಲಸಾಧ್ಯನಾಗು, ಅಥವಾ ಮೂರನೆಯ ವರ್ಣಸ್ಥನಾದ ವೈಶ್ಯನೋ ಶೂದ್ರನೋ ಸತ್ಯವಾಗಿ ಹೇಳುವಂಥಾವನಾಗೆಂದು ನುಡಿದವನಾದನು ॥೧೭॥

—…ಉತ್ತರರಾಮಾಯಣದಲ್ಲಿನ ೭೫ ನೆಯ ಸರ್ಗಂ ಮುಗಿದುದು…—

ಕ್ಲೇಶವಿಲ್ಲದೆ ಕಾರ್ಯವಂಗೈಯುತ್ತಿರುವ ಆ ಶ್ರೀರಾಮನ ಆ ವಾಕ್ಯವಂ ಕೇಳಿ, ಆ ತಾಪಸನು ತಲೆಯುಂ ಬೊಗ್ಗಿಸಿದವನಾಗಿ, ಶ್ರೀರಾಮನಂ ಕುರಿತಿಂತೆಂದನು ॥೧॥ ಎಲೈ ಮಹಾಯಶೋವಂತನಾದ ಶ್ರೀರಾಮನೇ ! ನಾನು ಶೂದ್ರಸ್ತ್ರೀಯಲ್ಲಿ ಪುಟ್ಟಿದವನು, ಹೆಸರಿಂದ ಶಂಬುಕನೆಂದು ಪ್ರಸಿದ್ಧನಾದವನು, ಶರೀರದಿಂದೊಡಗೂಡಿದವನಾಗಿ ದೇವತ್ವವಂ ಪ್ರಾರ್ಥಿಸುತ್ತೇನೆ, ದೇವಲೋಕವಂ ಜಯಿಸಲಿಚ್ಛೆಯಿಂದ ಈ ತಪವಂಗೈಯುತ್ತಿಧೇನೆ, ನಾನು ಸುಳ್ಳುಹೇಳತಕ್ಕವನಲ್ಲ, ಶೂದ್ರನನ್ನಾಗರಿತುಕೋ ಎಂಬದಾಗಿ ನುಡಿದವನಾಗಲೂ, ಶ್ರೀರಾಮನು ತ್ವರೆಯಾಗಿ ವರೆಯಿಂದ ಬ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಷತಸ್ತಸ್ಯ ಶೂದ್ರಸ್ಯ ಖಡ್ಗಂಸುರುಚಿರಪ್ರಭಂ । ನಿಷ್ಕೃಷ್ಯ ಕೋಶಾದ್ವಿಮಲಂಶಿರಶ್ಚಿಚ್ಛೇದರಾಘವಃ ॥ ೪ ॥ ತಸ್ಮಿನ್ ಶೂದ್ರೇ
ಹತೇದೇವಾಸ್ಸೇಂದ್ರಾಸ್ಸಾಗ್ನಿಪುರೋಗಮಾಃ । ಸಾಧುಸಾಧ್ವಿತಿಕಾಕುತ್ಸ್ಥಂಪ್ರಶಶಂಸುರ್ಮುಹುರ್ಮುಹುಃ ॥೫॥ ಪುಷ್ಪ
ವೃಷ್ಟಿರ್ಮಹತ್ಯಾಸೀದ್ದಿವ್ಯಾನಾಂಚಸುಗಂಧಿನಾಂ। ಪುಷ್ಪಾಣಾಂವಾಯುಮುಕ್ತಾನಾಂಸರ್ವತಃಪ್ರಪಪಾತಹ ॥೬॥ ಸುಪ್ರೀ
ತಾಶ್ಚಾಬ್ರುವನ್ದೇವಾಃರಾಮಂಸತ್ಯಪರಾಕ್ರಮಂ । ಸುರಕಾರ್ಯಮಿದಂಸೌಮ್ಯಸುಕೃತಂತೇಮಹಾಮತೇ॥೭॥ಗೃಹಾಣಚವರಂ
ಸೌಮ್ಯಯಂತ್ವಮಿಚ್ಛಸಿಸುವ್ರತ । ಸ್ವರ್ಗಭಾಙ್ನಹಿಶೂದ್ರೋಯಂತ್ವತ್ಕೃತೇರಘುನಂದನ ॥ ೮ ॥ ದೇವಾನಾಂಭಾಷಿತಂಶ್ರು
ತ್ವಾರಾಘವಸ್ಸುಸಮಾಹಿತಃ । ಉವಾಚಪ್ರಾಂಜಲಿರ್ವಾಕ್ಯಂಸಹಸ್ರಾಕ್ಷಂಪುರಂದರಮ್ ॥೯॥ ಯದಿದೇವಾಃಪ್ರಸನ್ನಾ ಮೇ
ದ್ವಿಜಪುತ್ರಸ್ಸಜೀವತು । ದಿಶಂತುವರಮೇತನ್ಮೇ ಈಪ್ಸಿತಂಪರಮಂಮಮ ॥೧೦॥ ಮಮಾಪಚಾರಾದ್ಬಾಲೋಸೌಬ್ರಾಹ್ಮ
ಣಸ್ಯೈಕಪುತ್ರಕಃ । ಅಪ್ರಾಪ್ತಕಾಲಃಕಾಲೇನನೀತೋವೈವಸ್ವತಕ್ಷಯಮ್ ॥೧೧॥ ತಂಜೀವಯತಭದ್ರಂವೋನಾನೃತಂಕ

---

ನಿರ್ಮಲವಾದ, ಸುರುಚಿರಪ್ರಭಂ-ಮನೋಹರವಾದ ಕಾಂತಿಯುಳ್ಳ, ಖಡ್ಗಂ-ಕತ್ತಿಯನ್ನು, ನಿಷ್ಕೃಷ್ಯ-ತೆಗದು, ಭಾಷತಃ-ಮಾತಾಡುತ್ತಿರುವ, ತಸ್ಯ ಶೂದ್ರಸ್ಯ-ಆ ಶೂದ್ರನ, ಶಿರಃ-ಮಂಡೆಯನ್ನು, ಚಿಚ್ಛೇದ-ಕತ್ತರಿಸಿದನು ॥೪॥ ತಸ್ಮಿನ್ ಶೂದ್ರೇ-ಆಶೂದ್ರನು, ಹತೇಸತಿ-ಕೊಲೆಯಲ್ಪಟ್ಟವನಾಗುತ್ತಿರಲಿ ಕಾಗಿ, ಸೇಂದ್ರಾಃ-ಇಂದ್ರಸಹಿತರಾದ, ಸಾಗ್ನಿಪುರೋಗಮಾಃ-ಅಗ್ನಿಯೇ ಮುಂತಾದವರಿಂ ಕೂಡಗೂಡಿದ, ದೇವಾಃ-ದೇವತೆಗಳು, ಸಾಧುಸಾಧ್ವಿತಿ-ಬಹಳ ಚಂದವಾಯಿತೆಂದು,ಮುಹುರ್ಮುಹುಃ-ಬಾರಿಬಾರಿಗೂ, ಕಾಕುತ್ಸ್ಥಂ-ಶ್ರೀರಾಮನನ್ನು, ಪ್ರಶಶಂಸುಃ-ಸ್ತುತಿಸಿದರು ॥೫॥ ಮಹತೀ-ದೊಡ್ಡದಾದ, ಪುಷ್ಪವೃಷ್ಟಿಃ-ಪುಷ್ಪಗಳ ವರ್ಷವು, ಆಸೀತ್-ಆಯಿತು, ವಾಯುಮುಕ್ತಾನಾಂ-ವಾಯುವಿನಿಂದ ಬಿಡಲ್ಪಟ್ಟ, ದಿವ್ಯಾನಾಂ-ದೇವತಾಸಂಬಂಧಗಳಾದ, ಸುಗಂಧಿನಾಂ-ಪರಿಮಳಯುಕ್ತಂಗಳಾದ,ಪುಷ್ಪಾಣಾಂ-ಕುಸುಮಗಳ, ವೃಷ್ಟಿಶ್ಚ-ಮಳೆಯೂನು,ಸರ್ವತಃ-ಯಲ್ಲಾಕಡೆಯಲ್ಲಿಯೂ, ಪ್ರಪಪಾತಹ-ಬಿದ್ದಂಥಾದ್ದಾಯಿತಷ್ಟೆ ॥ ೬ ॥ ಸುಪ್ರೀತಾಃ-ಸಂತುಷ್ಟರಾದ, ದೇವಾಶ್ಚ-ದೇವತೆಗಳೂನು, ಸತ್ಯಪರಾಕ್ರಮಂ-ಸಫಲವಾದಪರಾಕ್ರಮವುಳ್ಳ, ರಾಮಂ- ಶ್ರೀರಾಮನಂಕುರಿತು, ಹೇಮಹಾಮತೇ-ಎಲೋಬುದ್ಧಿಶಾಲಿಯೆ, ಹೇಸೌಮ್ಯ-ಎಲೈ ಸೌಮ್ಯನೆ, ಇದಂಸುರಕಾರ್ಯಂ-ಈ ದೇವಕಾರ್ಯವು, ತೇ-ನಿನ್ನಿಂದ, ಸುಕೃತಂ-ಚನ್ನಾಗಿ ಮಾಡಲ್ಪಟ್ಟಿತ್ತು ॥ ೭ ॥ ಹೇಸೌಮ್ಯ-ಎಲೈ ಸೌಮ್ಯನೆ, ಹೇಸುವ್ರತ-ಸಮೀಚೀನ ನಿಯಮವುಳ್ಳವನೆ, ತ್ವಂ-ನೀನು, ಯಂ-ಯಾವವರವನ್ನು, ಇಚ್ಛಸಿ-ಇಚ್ಛೈಸುತ್ತೀಯೊ, ತಂ-ಅಂಥಾ, ವರಂ-ವರವನ್ನು, ಗೃಹಾಣ-ತೆಗದುಕೊ, ಹೇರಘುನಂದನ-ಎಲೈಶ್ರೀರಾಮನೆ, ತ್ವತ್ಕೃತೇ-ನಿನ್ನನಿಮಿತ್ತವಾಗಿ, ಅಯಂ ಶೂದ್ರಃ-ಈ ಶೂದ್ರನು, ಸ್ವರ್ಗಭಾಕ್-ಸ್ವರ್ಗವನ್ನು ಹೊಂದಿದವನು, ನಹಿ-ಆಗಲಿಲ್ಲವಷ್ಟೆ॥೮॥ದೇವಾನಾಂ-ದೇವತೆಗಳ, ಭಾಷಿತಂ-ಮಾತನ್ನು, ಶ್ರುತ್ವಾ-ಕೇಳಿ, ರಾಘವಃ-ಶ್ರೀರಾಮನು, ಸುಸಮಾಹಿತಃ-ಸಮಾಧಾನಚಿತ್ತನಾಗಿ, ಸಹಸ್ರಾಕ್ಷಂ-ಸಹಸ್ರನೇತ್ರಗಳುಳ್ಳ, ಪುರಂದರಂ-ದೇವೇಂದ್ರನಂಕುರಿತು, ಪ್ರಾಂಜಲಿಃ-ಅಂಜಲಿಬದ್ಧನಾಗಿ, ವಾಕ್ಯಂ-ಮಾತನ್ನು, ಉವಾಚ-ಹೇಳಿದನು ॥ ೯ ॥ ದೇವಾಃ-ದೇವತೆಗಳು, ಮೇ-ನನಗೆ, ಪ್ರಸನ್ನಾಯದಿ-ಪ್ರಸನ್ನರಾದರೆ, ಸದ್ವಿಜಪುತ್ರಃ-ಆಬ್ರಾಹ್ಮಣನ ಮಗನು, ಜೀವತು-ಬದುಕಲಿ, ಏತತ್ವರಂ-ಈವರವನ್ನು, ಮೇ-ನನಗೆ-ದಿಶಂತು-ಕೊಡಲಿ, ಮಮ-ನನಗೆ,ಪರಮಂಈಪ್ಸಿತಂ-ಬಹಳ ಇಷ್ಟವಾದದ್ದು. ॥ ೧೦ ॥ ಅಸೌ-ಈ ಬಾಲಕನಾದ, ಬ್ರಾಹ್ಮಣಸ್ಯ-ಬ್ರಾಹ್ಮಣನ, ಏಕಪುತ್ರಕಃ-ಒಬ್ಬನೇಮಗನು, ಮಮ-ನನ್ನ, ಅಪಚಾರಾತ್-ದುಷ್ಕೃತ್ಯದದೆಶೆಯಿಂದ, ಅಪ್ರಾಪ್ತಕಾಲಃ-ಮರಣಕಾಲವಲ್ಲದಕಾಲವಾದವನಾದರೂ,ಕಾಲೇನ-ಯಮನಿಂದ,ವೈವಸ್ವತಕ್ಷಯಂ-ಯಮನಮನೆಯನ್ನು, ನೀತಃ-ಹೊಂದಿಸಲ್ಪಟ್ಟನು, ॥ ೧೧ ॥ತಂ-ಆಶಿಶುವಿನನ್ನು, ಜೀವಯತಾ-ಬದುಕಿಸಿರೀ, ವಃ-ನಿಮಗೆ, ಭದ್ರಂ-ಶುಭವು, ಅಸ್ತು-ಆಗಲೀ, ದ್ವಿಜಸ್ಯ-ಬ್ರಾಹ್ಮಣನಿಗೆ, ತೇ-ನಿನ್ನ, ಸುತಂ-ಮಗನನ್ನು, ಜೀವಯಿಷ್ಯಾಮಿ-ಬದುಕಿಸುವೆನು, ಇತಿ-ಇಂತೆಂದು, ಅರ್ಥಃ-ಅರ್ಥವು, ಮೇ-ನನ್ನಿಂದ, ಸಂಶ್ರುತಃ-ಪ್ರತಿಜ್ಞೆ

---

ಡ್ಗವಂ ಕೆಳೆದು ಆ ಶೂದ್ರನ ಮಂಡೆಯಂ ಹೊಡದನು ॥೪॥ ಆ ಶೂದ್ರನು ಹತನಾಗಲೂ ಇಂದ್ರಸಹಿತರಾದ ಮತ್ತೂ ಅಗ್ನಿಯೆ ಮೊದಲಾದ ದೇವತೆಗಳು ಬಾರಿಬಾರಿಗೂ ಶ್ರೀರಾಮನಂ ಕುರಿತು ಬಹುಚಂದವಾಯಿತೆಂದು ಶ್ಲಾಘಿಸಿದರು. ಮಹತ್ತರವಾದ ಪುಷ್ಪವೃಷ್ಟಿಯು, ವಾಯುವಿನಿಂದ ಬಿಡಲ್ಪಟ್ಟ ಮತ್ತು ಸುವಾಸನೆಯುಳ್ಳ ಉತ್ತಮವಾದ ಪುಷ್ಪಗಳವರ್ಷವು ಸಹ ಎಲ್ಲಾ ಕಡೆಯಲ್ಲಿಯು ಬಿದ್ದಂಥಾದ್ದಾಯಿತು. ಆಗ ದೇವತೆಗಳು ಸಂತುಷ್ಟರಾಗಿ ಸತ್ಯಪರಾಕ್ರಮಿಯಾದ, ಶ್ರೀರಾಮನಂಕುರಿತು, ಎಲೈ ಮಹಾತಿಳುವಳಿಕೆಯುಳ್ಳವನೆ ದೇವಕಾರ್ಯವನ್ನು ಚನ್ನಾಗಿ ಮಾಡಿದಂಥಾವನಾದೆ, ನಿನ್ನಿಂದ ಈ ಶೂದ್ರನು ಸ್ವರ್ಗವಂ ಪೊಂದಿದವನಾಗಲಿಲ್ಲ. ನೀನು ಯಾವ ವರವನ್ನಿಚ್ಛೈಸುತ್ತೀಕೇಳುವಂಥಾವನಾಗೆಂದು ನುಡಿದವನಾಗಲೂ, ರಘುನಂದನನು ಸಾವಧಾನಚಿತ್ತನಾಗಿ ಆ ವಾಕ್ಯವಂಕೇಳಿ ಅಂಜಲಿಬದ್ಧನಾಗಿ ಇಂದ್ರನಂ ಕುರಿತು ಎಲೈದೇವತೆಗಳಿರಾ ! ನೀವುಗಳು ನನಗೆ ಪ್ರಸನ್ನರಾಗಿದ್ದರೆ ಆ ಬ್ರಾಹ್ಮಣನ ಬಾಲಕನು ಜೀವಿಸಲಿ ಈ ವರಂ ನನಗೆ ಕೊಡುವಂಥಾವರಾಗಿರಿ. ಇದೆ ನನಗೆ ಬಹಳ ಇಷ್ಟವಾದದ್ದು. ಎನ್ನಪಚಾರದಿಂದ ಬ್ರಾಹ್ಮಣನ ಏಕಪುತ್ರನಾದ ಈ ಬಾಲಕನು. ಮರಣಕಾಲವಲ್ಲದ ಕಾಲವುಳ್ಳವನಾದರೂ ಕಾಲಪುರುಷನಿಂದ ಯಮ ಮಂದಿರವಂ ಶೇರಿಸಲ್ಪಟ್ಟನು. ಆದಕಾರಣ ಆ ಹುಡುಗನಂ ಬದುಕಿಸುವಂಥಾವರಾಗಿರಿ ನಿಮಗೆ ಶುಭವಾಗಲಿ. ನಿನ್ನ ಮಾತನ್ನು ಅನೃತವನ್ನಾಗಿ ಮಾಡಬೇಡಿರಿ, ಬ್ರಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ರ್ನಮರ್ಹಥ । ದ್ವಿಜಸ್ಯಸಂಶ್ರುತೋಥೋಮಜೀವಯಿಷ್ಯಾಮಿತೆಸುತಂ ॥೧೦॥ ರಾಘವಸ್ಯತುತದ್ವಾಕ್ಯಂಶ್ರುತ್ವಾ ವಿಬುಧಸತ್ತಮಾಃ । ಪ್ರತ್ಯೂಚೂರಾಘವಂಪ್ರೀತಾದೇವಾಃಪ್ರೀತಿಸಮಾಧಿನಾ ॥೧೧॥ ನಿರ್ವೃತೋಭವಕಾಕುತ್ಸ್ಥಸೊಸ್ಮಿನ್ನಹನಿಬಾಲಕಃ । ಜೀವಿತಂಪ್ರಾಪ್ತವಾರ್ಭೂಯಃಸಮೇತಶ್ಶಾಪಿಬಂಧುಭಿಃ ॥೧೨॥ ಯಸ್ಮಿನ್ಮುಹೂರ್ತೆಕಾಕುತ್ಸ್ಥಶೂದ್ರೋಯಂವಿನಿಪಾತಿತಃ । ತಸ್ಮಿನ್ಮುಹೂರ್ತೆಬಾಲೋಸೌಜೀವೇನಸಮಯುಜ್ಯತ ॥೧೩॥ ಸ್ವಸ್ತಿಪ್ರಾಪ್ನುಹಿಭದ್ರಂತೆಸಾಧಯಾಮಃನರರ್ಷಭ। (ಸಾಧುಯಾಮೇತಿ ಪಾಠಾಂತರಂ) ಅಗಸ್ತ್ಯಸ್ಯಾಶ್ರಮಪದಂದ್ರಷ್ಟ್ಯಾಮಸ್ತ್ವನ್ಮಹಾಯಶಃ ॥೧೪॥ ತಸ್ಯದೀಕ್ಷಾಸಮಾಪ್ತಾಹಿಬ್ರಹ್ಮರ್ಷೆಸ್ಸುಮಹಾದ್ಯುತೆಃ । ದ್ವಾದಶಂಹಿಗತಂವರ್ಷಂಜಲಶಯ್ಯಾಮುಪಾಸತಃ ॥೧೫॥ ಕಾಕುತ್ಸ್ಥತದ್ಗಮಿಷ್ಯಾಮೊಮುನಿಂತಮಭಿನಂದಿತುಂ। ತ್ವಂಚಾಪ್ಯಾಗಚ್ಛಭದ್ರಂತೆಮುನಿಂತಮಭಿವಾದಿತುಂ॥ ಸತಥೆತಿಪ್ರತಿಜ್ಞಾಯದೇವಾನಾಂರಘುನಂದನಃ । ಆರುರೋಹವಿಮಾನಂತತ್ಪುಷ್ಪಕಂಹೆಮಭೂಷಿತಂ ॥೧೬॥

---

ಮಾಡಲ್ಪಟ್ಟಿತ್ತು, ತಂ-ಆ ಅರ್ಥವನ್ನು, ಅನ್ಯತಂ-ಸುಳ್ಳಾದಂಥಾದ್ದನ್ನಾಗಿ, ಕರ್ತುಂ-ಮಾಡುವದಕ್ಕೋಸುಗ, ನಾರ್ಹಥ-ಯೋಗ್ಯರಾಗಬೇಡಿರಿ ॥೧೦॥ ರಾಘವಸ್ಯ-ಶ್ರೀರಾಮನ, ತದ್ವಾಕ್ಯಂತು-ಆ ಮಾತನ್ನಾದರೆ, ಶ್ರುತ್ವಾ-ಕೇಳಿ, ವಿಬುಧಸತ್ತಮಾಃ-ದೇವತಾಶ್ರೇಷ್ಠರಾದ, ದೇವಾಃ-ದೇವತೆಗಳು, ರಾಘವಂ-ಶ್ರೀರಾಮನಂ ಕುರಿತು, ಪ್ರೀತಾಃ-ಸಂತುಷ್ಟರಾಗಿ, ಪ್ರೀತಿಸಮಾಧಿನಾ-ವಿಶ್ವಾಸದಿಂದಲೂ ಪ್ರಾಪ್ತವಾದ, ಸಮಾಧಿನಾ - ಧ್ಯಾನಯೋಗದಿಂದ, ಪ್ರತ್ಯೂಚುಃ-ಪ್ರತ್ಯುತ್ತರಕೊಟ್ಟರು ॥೧೧॥ ಹೆ ಕಾಕುತ್ಸ್ಥ-ಎಲೈ ಕಕುತ್ಸ್ಥ ವಂಶೋದ್ಭವನಾದ ಶ್ರೀರಾಮನೇ, ನಿರ್ವೃತಃ-ಸುಖಿತನಾಗಿ, ಭವ-ಇರು, ಸಃಬಾಲಕಃ-ಆ ಬಾಲಕನು, ಅಸ್ಮಿನ್ಅಹನಿ-ಈ ದಿವಸದಲ್ಲೇ, ಜೀವಿತಂ-ಪ್ರಾಣವನ್ನು, ಪ್ರಾಪ್ತವಾನ್-ಹೊಂದಿದವನಾದನು, ಭೂಯಃ-ಮತ್ತೂ ಬಂಧುಭಿಶ್ಚಾಪಿ-ಬಂಧುಗಳಾದ ಮಾತಾಪಿತ್ರಾದಿಗಳಿಂದಲೂನು, ಸಮೇತಃ-ಕೂಡಿದವನಾದನು ॥೧೨॥ ಹೆ ಕಾಕುತ್ಸ್ಥ-ಎಲೈ ಶ್ರೀರಾಮನೆ, ಯಸ್ಮಿನ್ಮುಹೂರ್ತೆ-ಯಾವ ಮುಹೂರ್ತದಲ್ಲಿ, ಅಯಂಶೂದ್ರಃ-ಈ ಶೂದ್ರನು, ವಿನಿಪಾತಿತಃ-ಹೊಡಿಯಲ್ಪಟ್ಟನೋ, ತಸ್ಮಿನ್ಮುಹೂರ್ತೆ-ಆ ಕ್ಷಣದಲ್ಲೇ, ಏಷಃಬಾಲಃ-ಈ ಬಾಲಕನು, ಜೀವೇನ-ಜೀವದಿಂದ, ಸಮಯುಜ್ಯತ-ಕೂಡಿದನು ॥೧೩॥ ಹೆ ನರರ್ಷಭ-ಎಲೈ ನರಶ್ರೇಷ್ಠನೇ, ಸ್ವಸ್ತಿ-ಶುಭವನ್ನು, ಪ್ರಾಪ್ನುಹಿ-ಹೊಂದು, ತೆ-ನಿನಗೆ, ಭದ್ರಂ-ಶುಭವನ್ನು, ಸಾಧಯಾಮಃ-ಸಾಧಿಸಿಕೊಡುತ್ತೇವೆ (ಸಾಧುಯಾಮೇತಿಪಾಠೆ-ಸಾಧು-ಚನ್ನಾಗಿ, ತೇ-ನಿನಗೆ, ಭದ್ರಂ-ಮಂಗಳವು, ಅಸ್ತು-ಆಗಲೀ, ಯಾಮ-ಹೋಗಿಬರುತ್ತೇವೆ) ಹೆ ಮಹಾಯಶಃ-ಎಲೈಮಹಾ ಕೀರ್ತಿವಂತನೆ, ಅಗಸ್ತ್ಯಸ್ಯ-ಅಗಸ್ತ್ಯನ ತತ್-ಆ ಪ್ರಸಿದ್ಧವಾದ, ಆಶ್ರಮಪದಂ-ಆಶ್ರಮಸ್ಥಾನವನ್ನು, ದ್ರಕ್ಷ್ಯಾಮಃ-ನೋಡೋಣ ॥೧೪॥ ಜಲಶಯ್ಯಾಂ-ನೀರೆಂಬಶಯ್ಯೆಯಲ್ಲಿ, ಉಪಾಸತಃ- ಕುಳಿತುಕೊಂಡಿರುವ, ಸುಮಹಾದ್ಯುತೇಃ-ಮಹಾ ತೇಜಸ್ವಿಯಾದ, ತಸ್ಯಬ್ರಹ್ಮರ್ಷೇಃ-ಆ ಅಗಸ್ತ್ಯಋಷಿಯ,ದೀಕ್ಷಾ-ದೀಕ್ಷೆಯು, ಸಮಾಪ್ತಾಹಿ-ಪೂರ್ತಿಯಾಯಿತಷ್ಟೆ, ಹಿ-ಯಾವ ಕಾರಣದಿಂದ, ದ್ವಾದಶಂ-ಹನ್ನೆರಡನೆಯದಾದ, ವರ್ಷಂ-ಸಂವತ್ಸರವು, ಗತಂ-ಕಳೆದುಹೋಯಿತು ॥೧೫॥ ಹೆಕಾಕುತ್ಸ್ಥ-ಎಲೈಶ್ರೀರಾಮನೇ, ತತ್-ಆದಕಾರಣದಿಂದ, ತಂಮುನಿಂ-ಆ ಋಷಿಯಂಕುರಿತು, ಅಭಿನಂದಿತುಂ-ಸಂತೋಷಗೊಳಿಸುವದಕ್ಕೋಸ್ಕರ, ಗಮಿಷ್ಯಾಮಃ-ಹೋಗೋಣ,ತೆ-ನಿನಗೆ, ಭದ್ರಂ-ಮಂಗಳವಾಗಲೀ, ತ್ವಂಚಾಪಿ-ನೀನೂಕೂಡ, ತಂಮುನಿಂ-ಆ ಋಷಿಯನ್ನು,ಅಭಿವಾದಿತುಂ-ನಮಸ್ಕಾರಮಾಡುವದ ಕ್ಕೋಸ್ಕರ, ಆಗಚ್ಛ-ಬಾರೈಯ್ಯ॥ ರಘುನಂದನಃ-ರಘುಕುಲಾ ನಂದಕರನಾದ, ಸಃ-ಆ ಶ್ರೀರಾಮನು, ತಥೆತಿ-ಹಾಗೆ ಆಗಲೆಂದು, ದೇವಾನಾಂ-ದೇವತೆಗಳಿಗೆ, ಪ್ರತಿಜ್ಞಾಯ-ಪ್ರತಿಜ್ಞೆಮಾಡಿ, ಹೆಮಭೂಷಿತಂ-ಚಿನ್ನದಿಂದ ಅಲಂಕೃತವಾದ, ಪುಷ್ಪಕಂ-ಪುಷ್ಪಕವೆಂಬ, ತದ್ವಿಮಾನಂ-ಆ ವಿಮಾನವನ್ನು, ಆರುರೋಹ-ಏರಿದನು ॥೧೬॥

---

ಹ್ಮಣನಿಗೆ ಆತನ ಕುಮಾರನಂ ಬದುಕಿಸುವೆನೆಂದು ವಾಗ್ದಾನವಂ ಮಾಡಿಧೇನೆಂದು ಕೇಳಿದವನಾಗಲೂ, ದೇವತೆಗಳು ಆ ವಾಕ್ಯವಂಕೇಳಿ, ಸಂತುಷ್ಟಾಂತರಂಗವುಳ್ಳವರಾಗಿ ಶ್ರೀರಾಮನಂಕುರಿತು ಉತ್ತರವಂ ಹೇಳಲೊಸಗಿದನದೆಂತೆನೆ ॥೧೧॥ ಎಲೈ ಶ್ರೀರಾಮನೆ! ನೀನು ಚಿಂತಿಸದೇ ಸುಖವಾಗಿರು ಆ ಬಾಲಕನು ಇದೇ ದಿನದಲ್ಲಿಯೇ ಮತ್ತು ಜೀವವಂ ಪಡೆದು ಬಂಧುಗಳಾದ ಮಾತಾ ಪಿತ್ರಾದಿಗಳ ಸಂಗಡ ಶೇರಿದನು. ಯಾವ ಮುಹೂರ್ತದಲ್ಲಿ ಈ ಶೂದ್ರನು ನಿಹತನಾದನೋ ಅದೇ ಮುಹೂರ್ತದಲ್ಲಿಯೇ ಬಾಲಕನು ಜೀವದಿಂದ ಕೂಡಿದವನಾದನು. ಶುಭವಂಪೊಂದು. ಎಲೈ ಪುರುಷಶ್ರೇಷ್ಠನೆ! ನಿನಿಗೆ ಶುಭವಂ ಸಾಧಿಸಿ ಕೊಡುವೆವು. ನಾವು ಪೋಗಿ ಬರುವೆವು. ಎಲೈ ಮಹಾ ಯಶೋವಂತನೇ! ಅಗಸ್ತ್ಯಮಹಾಮುನಿಯ ಆಶ್ರಮವಂ ನೋಡೋಣ, ಯಾಕಂದರೆ ಆ ಮಹಾತ್ಮನಾದ ಅಗಸ್ತ್ಯ ಮಹಾ ಮುನಿಯು ಹನ್ನೆರಡು ವರ್ಷಗಳು ಉದಕವೆಂಬ ಹಾಶಿಗೆಯೊಳು ಕುಳಿತುಕೊಂಡು ಉಪಾಸಿಸುವಂತೆ ಸಂಕಲ್ಪವಂ ಗೈದು ದೀಕ್ಷಾಬದ್ಧನಾಗಿದ್ದನು. ಅದು ಈಗ ಪರ್ಯಾಪ್ತಿಯಾಗಿರುವದು. ಆದಕಾರಣ ಆತನಂ ಸಂತೋಷಗೊಳಿಸುವದಕ್ಕೋಸುಗ, ನಾವೆಲ್ಲರು ಹೋಗುತ್ತೇವೆ ಆ ಮಹಾಮುನಿಗೆ ವಂದಿಸುವದಕ್ಕೆ ನೀನು ಬರುವಂಥಾವನಾಗು, ನಿನಿಗೆ ಕ್ಷೇಮ ಉಂಟಾಗುವದೆಂದು ನಿರೂಪಿಸಿದವರಾಗಲೂ, ಆ ಶ್ರೀರಾಮನು ಹಾಗೆಯೇ ಆಗಲಿ ನಾನು ಬರುವೆನೆಂದುಪೇಳಿ ಸುವರ್ಣಾಲಂಕೃತವಾದ ಆ ಪುಷ್ಪಕ ವಿಮಾನವನ್ನೇರಿದನು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



## ಅಧಿಕಪಾಠ ಪ್ರಾರಂಭಃ.

ಅಥತಸ್ಮಿನ್ವನೋದ್ದೇಶೇರಮ್ಯೇಪಾದಪಶೋಭಿತೇ । ನದ್ಯಾಕೀರ್ಣೆಗಿರಿವರೇಕೋಕಿಲಸ್ವನಮಂಡಿತೇ ॥೧॥ ನಾನಾಪಕ್ಷಿರವೋದ್ಘುಷ್ಟೇನಾನಾಮೃಗಸಮಾಕುಲೇ । ಸಿಂಹವ್ಯಾಘ್ರಸಮಾಕೀರ್ಣೆನಾನಾದ್ವಿಜಗಣಾಯುತೇ ॥೨॥ ಗೃಧ್ರೋಲೂಕೌ ಪ್ರವಸತೋಬಹೂನ್ವರ್ಷಗಣಾನಪಿ । ಅಥೋಲೂಕಸ್ಯಭವನಂಗೃಧ್ರಃಪಾಪವಿನಿಶ್ಚಯಃ ॥೩॥ ಮಮೇದಮಿತಿಕೃತ್ವಾ ಸೌಕಲಹಂತೇನಚಾಕರೋತ್ । ರಾಜಾಸರ್ವಸ್ಯಲೋಕಸ್ಯರಾಮೋರಾಜೀವಲೋಚನಃ ॥೪॥ ತಂಪ್ರಪದ್ಯಾವಹೇಶೀಘ್ರಂ ಕಸ್ಯೈತದ್ಭವನಂಭವೇತ್ । ಇತಿಕೃತ್ವಾಮತಿಂಸಾಧ್ವೀಂಸಂರಂಭಾದ್ರಾಘವಂತತಃ॥೫॥ಗೃಧ್ರೋಲೂಕೌಪ್ರಪತ್ಸ್ಯೇತಾಂ ಜಾತರೋಷಾವಮರ್ಷಿಣೌ । ರಾಮಂಪ್ರಪದ್ಯತೌಶೀಘ್ರಂಕ್ರೋಧವ್ಯಾಕುಲಚೇತಸೌ । ಪಸ್ಪರ್ಶತುಸ್ತದಾತೂರ್ಣಂ ಚರಣೌರಾಘವಸ್ಯಹ ॥೬॥ ಅಥದೃಷ್ಟ್ವಾನರೇಂದ್ರಂತಂಗೃಧ್ರೋವಚನಮಬ್ರವೀತ್ ॥೭॥ ಸುರಾಣಾಮಸುರಾಣಾಂಚ

## ಅಧಿಕಪಾಠಃ

ಅಥ–ಬಳಿಕ, ಪಾದಪಶೋಭಿತೇ–ಪಾದಪದ–ವೃಕ್ಷಗಳಿಂದ, ಶೋಭಿತೇ–ಹೊಳೆಯುತಿರುವ, ನದ್ಯಾಕೀರ್ಣೆ–ನದಿಗಳಿಂದ ವ್ಯಾಪ್ತವಾದ, ಗಿರಿವರೇ–ಶ್ರೇಷ್ಠವಾದ ಪರ್ವತಗಳುಳ್ಳ, ಕೋಕಿಲಸ್ವನಮಂಡಿತೇ-ಕೋಕಿಲಧ್ವನಿಗಳಿಂದ ಅಲಂಕೃತವಾದ, ನಾನಾಪಕ್ಷಿರವೋದ್ಘುಷ್ಟೇ–ನಾನಾಪಕ್ಷಿ–ಅನೇಕ ಪಕ್ಷಿಗಳ, ರವ–ಧ್ವನಿಗಳಿಂದ, ಉದ್ಘುಷ್ಟೇ–ಧ್ವನಿಗೊಳಿಸುತ್ತಿರುವ, ನಾನಾಮೃಗಸಮಾಕುಲೇ–ಅನೇಕವಿಧಗಳಾದ ಮೃಗಗಳಿಂದ ತುಂಬಿರುವ, ಸಿಂಹವ್ಯಾಘ್ರಸಮಾಕೀರ್ಣೆ–ಸಿಂಹಗಳೂ ಶಾರ್ದೂಲಗಳಿಂದಲೂ ವ್ಯಾಪ್ತವಾದ, ನಾನಾದ್ವಿಜಗಣಾಯುತೇ – ಅನೇಕಬಗೆಗಳಾದ ಪಕ್ಷಿ ತಂಡೆಗಳಿಂದಕೂಡಿಕೊಂಡಿರುವ, ರಮ್ಯೇ–ಮನೋಹರವಾದ, ತಸ್ಮಿನ್ವನೋದ್ದೇಶೇ–ಆ ವನಪ್ರದೇಶದಲ್ಲಿ, ಗೃಧ್ರೋಲೂಕೌ–ಒಂದು ಹದ್ದೂ ಒಂದು ಗೂಬೆ ಎಂಬ ಎರಡೂ, ಬಹೂನ್ವರ್ಷಗಣಾನಪಿ–ಅನೇಕವರ್ಷಗಳು, ಪ್ರವಸತಃ–ಇದ್ದವು ॥೨॥ ಅಥ–ಬಳಿಕ, ಪಾಪವಿನಿಶ್ಚಯಃ–ಪಾಪಬುದ್ಧಿಯುಳ್ಳ, ಗೃಧ್ರಃ–ಹದ್ದು, ಉಲೂಕಸ್ಯ–ಗೂಬೆಯ, ಭವನಂ–ಮನೆಯುನ್ನು, ಇದಂ–ಈ ಮನೆಯು, ಮಮೇತಿ– ನನ್ನದೂಎಂದು, ಅಸೌ–ಈ ಹದ್ದು, ತೇನ–ಆ ಗೂಬೆಯೊಡನೆ, ಕಲಹಂಚ- ಕಲಹವನ್ನು, ಅಕರೋತ್–ಮಾಡಿತು, ಸರ್ವಸ್ಯ–ಸಮಸ್ತವಾದ, ಲೋಕಸ್ಯ–ಲೋಕಕ್ಕೆ, ರಾಜಾ–ಅರಸಾದ, ರಾಜೀವಲೋಚನಃ–ಪುಂಡರೀಕಾಕ್ಷನಾದ, ರಾಮಃ-ಶ್ರೀರಾಮನು, ಅಸ್ತಿ–ಇರ್ಥಾನೇ ॥೪॥ ತಂ–ಆ ಶ್ರೀರಾಮನನ್ನು, ಶೀಘ್ರಂ–ಜಾಗ್ರತೆಯಾಗಿ, ಪ್ರಪದ್ಯಾವಹೇ–ಹೊಂದೋಣ, ಏತತ್ಭವನಂ–ಈ ಮನೆಯು, ಕಸ್ಯ–ಯಾರದು, ಭವೇತ್–ಆಗುವದು, ಇತಿ–ಇಂತೆಂದು, ಸಾಧ್ವೀಂ–ಒಳ್ಳೆದಾದ, ಮತಿಂ–ಬುದ್ಧಿಯನ್ನು, ಕೃತ್ವಾ–ಮಾಡಿ, ತತಃ- ಬಳಿಕ, ರಾಘವಂ–ಶ್ರೀರಾಮನನ್ನು ಕುರಿತು, ಜಾತರೋಷೌ–ಜಾತ–ಹುಟ್ಟಿದ, ರೋಷೌ–ಕ್ರೋಧಮುಳ್ಳ, ಅಮರ್ಷಿಣೌ–ಮನದಲ್ಲಿ ಮಹಾರೋಷವಮುಳ್ಳ, ಗೃಧ್ರೋಲೂಕೌ–ಹದ್ದು ಗೂಬೆಗಳೆರಡೂನು, ಸಂರಂಭಾತ್–ಕೋಪದದೆಸೆಯಿಂದ, ಪ್ರಪತ್ಸ್ಯೇತಾಂ–ಹೊಂದಿದವು ॥೬॥ ಕ್ರೋಧವ್ಯಾಕುಲಚೇತಸೌ – ಕ್ರೋಧವಾಪ್ತವಾದ ಮನಸ್ಸುಳ್ಳ, ತೌ–ಆ ಪ್ರಸಿದ್ಧವಾದ ಹದ್ದುಗೂಬೆಗಳು, ರಾಮಂ–ಶ್ರೀರಾಮನನ್ನು ಕುರಿತು, ಶೀಘ್ರಂ–ಜಾಗ್ರತೆಯಾಗಿ, ಪ್ರಪದ್ಯ–ಹೊಂದಿ, ತದಾ–ಆ ಕಾಲದಲ್ಲಿ, ತೂರ್ಣಂ–ಜಾಗ್ರತೆಯಾಗಿ, ರಾಘವಸ್ಯ–ಶ್ರೀರಾಮನ, ಚರಣೌ–ಪಾದಗಳನ್ನು, ಪಸ್ಪರ್ಶತುಃ– ಸ್ಪರ್ಶಮಾಡಿದವು ॥೭॥ ಅಥ–ಬಳಿಕ, ಗೃಧ್ರಃ–ಹದ್ದು, ತಂನರೇಂದ್ರಂ–ಆ ಮನುಷ್ಯಶ್ರೇಷ್ಠನಾದ, ಶ್ರೀರಾಮನನ್ನು, ದೃಷ್ಟ್ವಾ–ಕಂಡು, ವಚನಂ-ಮಾತನ್ನು, ಅಬ್ರವೀ

## ಅಧಿಕ ಪಾಠ ಪ್ರಾರಂಭಃ.

ಅನಂತರದಲ್ಲಿ ವೃಕ್ಷಗಳಿಂದ ಕಂಗೊಳಿಸುತ್ತಿರುವದಾಗಿಯೂ, ನದಿಗಳಿಂದ ಆಕ್ರಮಿಸಲ್ಪಟ್ಟದ್ದಾಗಿಯೂ, ಪರ್ವತೋತ್ತಮಗಳುಳ್ಳದ್ದಾಗಿಯೂ, ಕೋಗಿಲೆಗಳ ಶಬ್ದಗಳಿಂದ ಅಲಂಕರಿಸಲ್ಪಟ್ಟದ್ದಾಗಿಯೂ, ನೋಡುವದಕ್ಕೆ ಬಹಳ ಮನೋಹರವಾಗಿರುವದಾಗಿಯೂ, ಬಗೆಬಗೆಗಳಾದ ಪಕ್ಷಿಗಳ ಕೂಗುಗಳಿಂದ ಶಬ್ದಾಯಮಾನವಾದಂಥಾದ್ದಾಗಿಯೂ, ಅನೇಕ ಮೃಗಗಳಿಂದ ವ್ಯಾಪ್ತವಾದದ್ದಾಗಿಯೂ, ಸಿಂಹಗಳಿಂದಲೂ, ಪುಲಿಗಳಿಂದಲೂ, ತುಂಬಿದಂಥಾದ್ದಾಗಿಯೂ ಇರುವ ಒಂದಾನೊಂದು ವನದೊಳು ಬಹುವರುಷಗಳಿಂದ ಒಂದು ಗೃಧ್ರವು ಒಂದು ಗೂಬೆಯು ವಾಸಿಸುತ್ತಿದ್ದವು ॥೨॥ ಬಳಿಕ ಪಾಪಮತಿಯುಳ್ಳ ಆ ಹದ್ದು ಗೂಬೆಯ ಮನೆಯನ್ನಾಕ್ರಮಿಸಿ, ಈ ಮಂದಿರವು ನನ್ನದೆಂದು ಆ ಉಲೂಕದ ಸಂಗಡ ಕಲಹವಂ ಮಾಡಿದಂಥಾದ್ದಾಗಲೂ, ಅವೆರಡು ಬಹುದೂರವು ಜಗಳವಂಗೈದು, ಬಳಿಕ ಒಳ್ಳೇಬುದ್ಧಿಯಂ ಮಾಡಿದವದೆಂತೆನೆ, ಲೋಕಕ್ಕೆಲ್ಲಾ ಪ್ರಭುವಾದ ಮತ್ತು ಪುಂಡರೀಕಾಕ್ಷನಾದ ಶ್ರೀರಾಮನಬಳಿಗೆ ಗಮಿಸಿ ಈ ಮನೆಯು ಯಾರದೋ ಗೊತ್ತುಮಾಡಿ ಕೊಳ್ಳೋಣೆಂದು ಯೋಚಿಸಿ, ಮಹಾರೋಷ ಮುಳ್ಳವುಗಳಾಗಿ ತ್ವರೆಯಿಂದ ರಘುನಂದನನ ಸನ್ನಿಧಿಗೆ ಬಂದು, ಶ್ರೀರಾಮನ ಪಾದಗಳಂ ಪಿಡಿದವು ॥೬॥ ಸಮನಂತರ ಕಾಲದೊಳು ಆ ಗೃಧ್ರವು ಶ್ರೀರಾಮನಂ ಕಂಡು ಆತನಂಕುರಿತು ಪೇಳುವದದೆಂತೆನೆ, ಎಲೈ ಮಹಾತಿಳುವಳಿಕೆಯುಳ್ಳ ಶ್ರೀರಾಮನೇ! ನೀನು ದೇವತೆಗಳಿಗೂ ರಾಕ್ಷಸರಿಗೂ ಸಹಾ ಮುಖಂಡನಾಗಿಯೂ, ಬೃಹಸ್ಪತಿ ಸ್ವರೂಪನಾಗಿಯೂ, ಶುಕ್ರನಾಗಿಯೂ, ವಸಿಷ್ಠಮುನಿಯಾಗಿಯೂ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ವಂಪ್ರಧಾನತಮೋಮತಃ । ಬೃಹಸ್ಪತಿಶ್ಚ ಶುಕ್ರಶ್ಚ ವಸಿಷ್ಠಸ್ತ್ವಂಮಹಾಮತೇ॥೮॥ ಪರಾಪರಜ್ಞೋ ಭೂತಾನಾಂಕಾಂತ್ಯಾ ಚಂದ್ರಇವಾಪರಃ । ದುರ್ನಿರೀಕ್ಷ್ಯೋಯಥಾಸೂರ್ಯೋ ಹಿಮವಾಂಶ್ಚೈವಗೌರವೇ॥೯॥ ಸಾಗರಶ್ಚಾಪಿಗಾಂಭೀರ್ಯೇ ಲೋಕಪಾಲಸಮೋಹ್ಯಸಿ । ಕ್ಷಾಂತ್ಯಾಧರಿತ್ರೀತುಲ್ಯೋಸಿ ಶೀಘ್ರತ್ವೇಹ್ಯನಿಲೋಪಮಃ ॥೧೦॥ ಗುರುಸ್ತ್ವಂಸತ್ವಸಂಪನ್ನಃ ಕೀರ್ತಿಯುಕ್ತೋಸಿರಾಘವ । ಅಮರ್ಷೀದುರ್ಜಯೋಜೇತಾ ಸರ್ವಾಸ್ತ್ರವಿಧಿಪಾರಗಃ॥೧೧॥ ಶೃಣುಷ್ವಮಮವೈರಾಮವಿಜ್ಞಾಪ್ಯಂರಘುನಂದನ । ಮಮಾಲಯಂಪೂರ್ವಕೃತಂದುರ್ಬುದ್ಧಿ ರಜಿತಾತ್ಮವಾನ್ ॥ ಉಲೂಕೋಹರತೇರಾಜನ್ ತತ್ರತ್ವಂತ್ರಾತುಮರ್ಹಸಿ । ಏವಮುಕ್ತಸ್ತುಗೃಧ್ರೇಣಉಲೂಕೋವಾಕ್ಯಮಬ್ರವೀತ ॥೧೩॥ ಸೋಮಾಚ್ಛತಕ್ರತೋಸ್ಸೂರ್ಯಾದ್ಧನದಾಚ್ಚ ಯಮಾತ್ತಥಾ । ಜಾಯತೇವೈನೃಪೋರಾಮಕಿಂಚಿದ್ಭವತಿಮಾನುಷಃ ॥೧೪॥ ಸರ್ವದೇವಮಯಸ್ತ್ವಂತುನಾರಾಯಣಇವಾಪರಃ ।

---

ತ್-ನುಡಿಯಿತು, ಹೇಮಹಾಮತೇ-ಎಲೈಬುದ್ಧಿಶಾಲಿಯೆ, ತ್ವಂ-ನೀನು, ಸುರಾಣಾಂ-ದೇವತೆಗಳಿಗೂನು, ಅಸುರಾಣಾಂಚ-ರಾಕ್ಷಸರಿಗೂನು, ಪ್ರಧಾನತಮಃ-ಶ್ರೇಷ್ಠನಾದಂಥವನಾಗಿ, ಮತಃ-ಸಮ್ಮತನು, ತ್ವಂ-ನೀನು, ಬೃಹಸ್ಪತಿಃ-ಬೃಹಸ್ಪತಿಯು, ಶುಕ್ರಶ್ಚ-ಶುಕ್ರನು, ವಸಿಷ್ಠಶ್ಚ-ವಸಿಷ್ಠನೂನು, ಅಸಿ-ಆಗಿದ್ದಿ ಪ್ರಾಣಿನಾಂ-ಪ್ರಾಣಿಗಳೊಳಗೆ, ಪರಾಪರಜ್ಞಃ-ಇದು ಪೂರ್ವವು ಇದುಪರವು ಎಂದು ತಿಳಿದವನು॥ ಕಾಂತ್ಯಾ-ಕಾಂತಿಯಿಂದ, ಅಪರಃ-ಮತ್ತೊಬ್ಬನಾದ, ಚಂದ್ರಇವ-ಚಂದ್ರನಂತಿರುವನು, ಸೂರ್ಯೋಯಥಾ-ಸೂರ್ಯನಂತೆ, ದುರ್ನಿರೀಕ್ಷ್ಯಃ-ನೋಡಲಸಾಧ್ಯನು, ಗೌರವೇ-ಗೌರವದಲ್ಲಿ, ಹಿಮವಾಂಶ್ಚೈವ-ಹಿಮವತ್ಪರ್ವತವೆ, ಗಾಂಭೀರ್ಯೇ-ಗಂಭೀರದಲ್ಲಿ, ಸಾಗರಶ್ಚಾಪಿ-ಸಮುದ್ರನೆ, ಲೋಕಪಾಲಸಮಃ-ದಿಕ್ಪಾಲಕರಿಗೆ ಸಮಾನನಾದವನು, ಅಸಿ-ಆಗಿದ್ದೀ, ಕ್ಷಾಂತ್ಯಾ-ಕ್ಷಮೆಯಿಂದ, ಧರಿತ್ರೀತುಲ್ಯಃ-ಭೂಮಿಗೆಸಮಾನನು, ಅಸಿ-ಆಗಿದ್ದಿ, ಶೀಘ್ರತ್ವೇ-ವೇಗದಲ್ಲಿ, ಅನಿಲೋಪಮಃ-ವಾಯುವಿಗೆ ಸಮಾನನಷ್ಟೆ॥೧೦॥ಹೇರಾಘವ-ಎಲೈಶ್ರೀರಾಮನೇ-ತ್ವಂ-ನೀನು, ಗುರುಃ-ಉಪದೇಶಕರ್ತನು, ಸತ್ವಸಂಪನ್ನಃ-ಬಲದಿಂದ ಕೂಡಿಕೊಂಡಿರುವವನು, ಕೀರ್ತಿಯುಕ್ತಃ-ಕೀರ್ತಿಯಿಂದ ಕೂಡಿದವನು, ಅಸಿ-ಆಗಿದ್ದೀ, ಅಮರ್ಷೀ-ಕೋಪವುಳ್ಳವನು, ದುರ್ಜಯಃ-ಜಯಿಸಲಸಾಧ್ಯನು, ಜೇತಾ-ಜಯಶೀಲನು, ಸರ್ವಾಸ್ತ್ರವಿಧಿಪಾರಗಃ-ಸಮಸ್ತಾಸ್ತ್ರಗಳಪ್ರಯೋಗಗಳನ್ನು, ತಿಳಿದವನು, ಹೇರಾಮ-ಎಲೈ ಶ್ರೀರಾಮನೆ, ಹೇರಘುನಂದನ-ಎಲೈರಘುಕುಲಾನಂದಕರನೆ, ಮಮ-ನನ್ನ, ವಿಜ್ಞಾಪ್ಯಂ-ವಿಜ್ಞಾಪನವಾದತಕ್ಕಮಾತನ್ನು, ಶೃಣುಷ್ವ-ಕೇಳು, ಹೇರಾಜನ್-ಎಲೈ ರಾಜಾಧಿರಾಜನೆ, ಪೂರ್ವಕೃತಂ-ಪೂರ್ವಕಾಲದಲ್ಲಿ ಮಾಡಲ್ಪಟ್ಟ, ಮಮ-ನನ್ನ, ಆಲಯಂ-ಮನೆಯನ್ನು, ಅಜಿತಾತ್ಮವಾನ್-ಜಯಿಸಲ್ಪಡದಿರುವಮನವುಳ್ಳ, ಉಲೂಕಃ-ಗೂಬೆಯು, ಹರತೆ-ಅಪಹರಿಸಿಕೊಂಡಿಧೆ, ತತ್ರ-ಆವಿಷಯದಲ್ಲಿ ತ್ವಂ-ನೀನು, ತ್ರಾತುಂ-ರಕ್ಷಣೆಮಾಡುವದಕ್ಕೋಸ್ಕರ, ಅರ್ಹಸಿ-ಯೋಗ್ಯನಾಗು, ಗೃಧ್ರೇಣ-ಹದ್ದಿನಿಂದ, ಏವಂ-ಈ ಪರಿಯಾಗಿ, ಉಕ್ತಃ- ಹೇಳಲ್ಪಟ್ಟ, ಉಲೂಕಸ್ತು-ಉಲೂಕವಾದರೆ, ವಾಕ್ಯಂ-ವಾಕ್ಯವನ್ನು, ಅಬ್ರವೀತ್-ನುಡಿಯಿತು ॥೧೩॥ ಹೇರಾಮ-ಎಲೈ ಶ್ರೀರಾಮನೆ, ನೃಪ- ಅರಸು, ಸೋಮಾತ್-ಚಂದ್ರನದೆಸೆಯಿಂದಲೂ, ಶತಕ್ರತೋಃ-ಇಂದ್ರನಿಂದಲೂ, ಸೂರ್ಯಾತ್-ಸೂರ್ಯನದೆಸೆಯಿಂದಲೂ, ಧನದಾಚ್ಚ-ಕುಬೇರನದೆಸೆಯಿಂದಲೂ, ಯಮಾತ್-ಯಮನದೆಸೆಯಿಂದಲೂ, ಜಾಯತೆ-ಹುಟ್ಟುತ್ತಾನೆ ॥ ೧೪ ॥ ಮಾನುಷಃ-ಮನುಷ್ಯನು, ಕಿಂಚಿತ್-ಸ್ವಲ್ಪವಾಗಿ ಆಗುತ್ತಾನೇ, ತ್ವಂ-ನೀನು, ಸರ್ವದೇವಮಯಃ-ಸಮಸ್ತದೇವತಾತ್ಮಕನು, ಅಪರಃ-ಮತ್ತೊಬ್ಬನಾದ, ನಾರಾಯಣಇವ-ವಿಷ್ಣುವಂತೆ ಇರುವನು, ಹೆ ರಾಜನ್-ಎಲೈ ರಾಜನೇ, ತೆ- ನಿನ್ನ,

---

ಪ್ರಾಣಿಗಳೊಳಗೆ ಪೂರ್ವಾಪರಗಳನ್ನರಿತವನಾಗಿಯೂ, ಕಾಂತಿಯಿಂದ ಮತ್ತೊಬ್ಬ ಚಂದ್ರನಂತೆ ತೋರುವಂಥಾವನಾಗಿಯೂ, ಸೂರ್ಯನ ತೆರದಿ ನೋಡಲಸಾಧ್ಯನಾಗಿಯೂ, ಹಿಮವತ್ಪರ್ವತದಂತೆ ಮಹಾ ಗೌರವವುಳ್ಳವನಾಗಿಯೂ, ಗಾಂಭೀರ್ಯದಲ್ಲಿ ಸಮುದ್ರಪ್ರಾಯನಾಗಿಯೂ, ದಿಕ್ಪಾಲಕರಾದ ಇಂದ್ರಾದಿಗಳಿಗೆ ಸರಿಯಾದವನಾಗಿಯೂ, ಸೈರಣೆಯ ವಿಷಯದಲ್ಲಿ ಭೂಸದೃಶನಾಗಿಯೂ, ಶೀಘ್ರಗಮನದೊಳು ವಾಯುತುಲ್ಯನಾಗಿಯೂ, ಉಪದೇಶಕರ್ತನಾಗಿಯೂ, ಬಲಸಂಪನ್ನನಾಗಿಯೂ, ಯಶೋವಂತನಾಗಿಯೂ, ಪಾಪಿಗಳಲ್ಲಿ ಬಲುಕೋಪವುಳ್ಳವನಾಗಿಯೂ, ಕಾಳಗದೊಳು ಶತ್ರುಗಳಿಂದ ಜಯಿಸಲಶಾಧ್ಯನಾಗಿಯೂ, ಹಗೆಯರಂ ಗೆಲ್ಲುವನಾಗಿಯೂ, ಸಮಸ್ತವಾದ ಅಸ್ತ್ರಪ್ರಯೋಗಗಳನ್ನರಿತವನಾಗಿಯೂ ಇರುವಂಥಾವನಾಗಿದ್ದೀ ॥೧೧॥ ಎಲೈರಘುಕುಲಾನಂದಕರನಾದ ಶ್ರೀರಾಮನೆ ! ಎಲ್ಲಾ ವಿಜ್ಞಾಪನೀಯವಾದ ಈ ವಿಷಯವಂ ಕೇಳುವಂಥಾವನಾಗು, ಅದೇನೆಂದರೆ—ದುರ್ಬುದ್ಧಿಯುಳ್ಳ ಈ ಗೂಬೆಯು, ನನ್ನಿಂದ ಪೂರ್ವದಲ್ಲಿ ಮಾಡಲ್ಪಟ್ಟ ಎನ್ನ ಮಂದಿರವನ್ನು ಅಪಹರಿಸಿಗೊಂಡಿಧೆ, ಈ ಮನೆಯಂ ನಿನಗೆ ಬಿಡಿಸಿಕೊಟ್ಟು ಎನ್ನಂ ಪರಿಪಾಲಿಸುವಂಥಾವನಾಗೆಂದು ಗೃಧ್ರನು ನುಡಿದಂಥಾದ್ದಾಗಲೂ, ಆ ಗೂಬೆಯು ಈ ಪರಿ ಹೇಳಲೊಸಗಿತದೆಂತೆನೆ ॥೧೩॥ ಎಲೈಶ್ರೀರಾಮನೇ ! ರಾಜನಾದವನು ಚಂದ್ರ, ಇಂದ್ರ, ಸೂರ್ಯ, ಕುಬೇರ, ಯಮನಿಂದ ಹುಟ್ಟುವನು, ಸಾಧಾರಣವಾದ ಮನುಷ್ಯನು ಈಪರಿ ಪುಟ್ಟಲಾರನು ॥೧೪॥ ನೀನಾದರೆ ಮತ್ತೊರ್ವನಾದ ನಾರಾಯಣನಂತೆ ಸರ್ವದೇವತಾ ಸ್ವರೂಪವಾಗಿದ್ದೀ, ಎಲೈ ರಾಜನೇ ! ನಿನ್ನ ಸೌಮ್ಯತೆಯೆಂಬದ್ಯಾವದೋ ಅದು ಬಹು ಚನ್ನಾಗಿಧೆ, ಆಸೌಮ್ಯತೆಯಿಂದ ನೀನು ಪ್ರಜೆಗಳಿಗೆಲ್ಲ ಸಂತೋಷಕರನಾಗಿದ್ದೀ ಯಾದಕಾರಣ ಚಂದ್ರನಿಗೆ ಸದೃಶನಾದವನು, ಮತ್ತೂ ಭಂಡಾರದ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಾಸಾತುತೇಸೌಮ್ಯತಾರಾಜನ್ಸಮ್ಯಕ್ಪ್ರಣಿಹಿತಾವಿಭೋ ॥೧೫॥ ಪ್ರಜಾಹ್ಲಾದಕರಸ್ತ್ವಂತು ತೇನಸೋಮಸಮೋಭವಾನ್ ।
ಕೋಶೇದಂಡೇಪ್ರಜಾನಾಥದಾನೇಚನಿರತೋಭವಾನ್ ॥೧೬॥ ದಾತಾಪಹರ್ತಾಗೋಪ್ತಾಸಿತೇನೇಂದ್ರಸದೃಶೋಭವಾನ್ ॥ ಸ್ಸಮ
ಸ್ಸರ್ವೇಷುಭೂತೇಷುಸ್ಥಾವರೇಷುಚರೇಷುಚ । ಶತ್ರೌಮಿತ್ರೇಚತೇದೃಷ್ಟಿಸ್ಸಮತಾಂಯಾತಿರಾಘವ ॥ ಧರ್ಮೇಣಶಾಸನಂತೇಸ್ತಿವ್ಯ
ವಹಾರವಿಧಿಕ್ರಮಾತ್ ॥೧೭॥ ಯಸ್ಯರುಷ್ಯತಿವೈರಾಮಮೃತ್ಯುಸ್ತಸ್ಯಾಭಿಧಾವತಿ । ಗೀಯಸೇತೇನವೈರಾಜನ್ಯಮಇತ್ಯು
ರುವಿಕ್ರಮ ॥೧೮॥ ಯಸ್ತ್ವೇಷಮಾನುಷೋಭಾವೋಭವತೋನೃಪಸತ್ತಮ । ಆನೃಶಂಸ್ಯಪರೋನಿತ್ಯಂಸತ್ವೇಷುಕೃಪಯಾನ್ವಿ
ತಃ ॥೨೦॥ ದುರ್ಬಲಸ್ಯತ್ವನಾಥಸ್ಯರಾಜಾಭವತಿವೈಬಲಂ । ಅಚಕ್ಷುಷೋಭವಾಂಶ್ಚಕ್ಷುರಗತೇಸ್ತ್ವಂಗತಿರ್ಭವಾನ್ ॥೨೧॥
ಅಸ್ಮಾಕಮಪಿನಾಥಸ್ತ್ವಂಶ್ರೂಯತಾಂಮಮಧಾರ್ಮಿಕ । ಮಮಾಲಯಂಪ್ರವಿಷ್ಟಸ್ತುಗೃಧ್ರೋಯಂಬಾಧತೇನೃಪ ॥೨೨॥
ತ್ವಂಹಿದೇವಮನುಷ್ಯೇಷುಶಾಸ್ತಾವೈರಘುನಂದನ । ಏತಚ್ಛ್ರುತ್ವಾತುವೈರಾಮಸ್ಸಚಿವಾನಾಹ್ವಯತ್ಸ್ವಯಂ ॥೨೩॥ಧೃ

ಸೌಮ್ಯತಾ-ಸೌಮ್ಯತೆಯು, ಯಾ-ಯಾವದುಂಟೋ, ಸಾ-ಅದು, ಹೆ ವಿಭೋ-ಎಲೈ ಸ್ವಾಮಿಯೆ, ಸಮ್ಯಕ್-ಚನ್ನಾಗಿ, ಪ್ರಣಿಹಿತಾ-ಇರಿಸಲ್ಪಟ್ಟಿಧೆ॥೧೫॥ ತ್ವಂ-ನೀನು, ಪ್ರಜಾಹ್ಲಾದಕರಃ-ಪ್ರಜೆಗಳಿಗೆ ಸಂತೋಷಕರನಾದಂಥಾವನು, ತೇನ-ಅದ್ದರಿಂದ, ಭವಾನ್-ನೀನು, ಸೋಮಸಮಃ - ಚಂದ್ರನಿಗೆಸಮಾನನು, ಕೋಶೇ-ಬಕ್ಕಸದಲ್ಲಿಯೂ, ದಂಡೇ-ಶಿಕ್ಷೆಯಲ್ಲಿಯೂ, ದಾನೇಚ-ದಾನದಲ್ಲಿಯೂ, ಭವಾನ್-ನೀನು, ನಿರತಃ-ಆಸಕ್ತನಾಗಿದ್ಧೀ, ಹೆ ಪ್ರಜಾನಾಥ ಎಲೈ ರಾಜನೇ, ದಾತಾ-ದಾತನನ್ನೂ, ಅಪಹರ್ತಾ-ಅರ್ಥವನ್ನು ಸಂಪಾದಿಸುವವನನ್ನೂ, ಗೋಪ್ತಾ-ಸಂರಕ್ಷಣಕರ್ತೆಯು, ಅಸಿ-ಆಗಿದ್ಧೀಯೋ, ತೇನ-ಅದರಿಂದ, ಭವಾನ್-ನೀನು, ಇಂದ್ರಸಮಃ-ದೇವೇಂದ್ರನಿಗೆ ಸಮಾನನು ॥೧೬॥ ಸರ್ವೇಷು-ಸಮಸ್ತಗಳಾದ, ಭೂತೇಷು-ಪ್ರಾಣಿಗಳಲ್ಲಿ, ಸ್ಥಾವರೇಷು-ಸ್ಥಿರಗಳಲ್ಲಿಯೂ, ಚರೇಷುಚ-ಜಂಗಮಗಳಲ್ಲಿಯೂ, ಸಮಃ-ಸಮಾನನು, ಹೆ ರಾಘವ-ಎಲೈ ಶ್ರೀರಾಮನೇ, ತೇ-ನಿನ್ನ, ದೃಷ್ಟಿಃ-ದೃಷ್ಟಿಯೂ, ಶತ್ರೌ- ಶತ್ರುವಿನಲ್ಲಿಯೂ, ಮಿತ್ರೇಚ-ಮಿತ್ರನಲ್ಲಿಯೂ, ಸಮತಾಂ-ಸಾಮ್ಯವನ್ನು, ಯಾತಿ-ಹೊಂದುತ್ತದೇ ॥೧೭॥ ಧರ್ಮೇಣ-ಧರ್ಮದಿಂದಲೇ, ವ್ಯವಹಾರ ವಿಧಿಕ್ರಮಾತ್-ವ್ಯವಹಾರ- ವ್ಯವಹಾರಗಳ, ವಿಧಿ-ಅನುಷ್ಠಾನದ, ಕ್ರಮಾತ್-ಕ್ರಮದದೆಸೆಯಿಂದ, ತೇ-ನಿನ್ನ, ಶಾಸನಂ-ಶಿಕ್ಷೆಯು, ಅಸ್ತಿ-ಇಧೇ, ಹೆ ಉರುವಿಕ್ರಮ-ಎಲೈ ಮಹಾಪರಾಕ್ರಮಶಾಲಿಯೇ, ಹೆ ರಾಜನ್-ಎಲೈ ರಾಜನೇ, ಹೆ ರಾಮ-ಎಲೈ ಶ್ರೀರಾಮನೇ, ಭವಾನ್-ನೀನು, ಯಸ್ಯ-ಯಾವಾತನ ವಿಷಯದಲ್ಲಿ, ರುಷ್ಯತಿ-ಕೋಪಮಾಡಿಕೊಳ್ಳುತ್ತೀಯೋ, ತಸ್ಯ-ಅವನಿಗೆ,ಮೃತ್ಯುಃ-ಮೃತ್ಯುವು, ಅಭಿಧಾವತಿ-ಸಮೀಪವರ್ತಿಯಾಗುತ್ತದೇ, ತೇನ-ಅದರಿಂದ, ಯಮ ಇತಿ-ಯಮನೆಂದು, ಗೀಯಸೇ - ಹೇಳಲ್ಪಡುತ್ತೀ ॥ ೧೮ ॥ ಹೆ ನೃಪಸತ್ತಮ-ಎಲೈ ರಾಜಶ್ರೇಷ್ಠನೇ, ಭವತಃ-ನಿನಿಗೆ, ಯಸ್ತುಮಾನುಷೋಭಾವಃ-ಮನುಷ್ಯಭಾವವು ಯಾವದುಂಟೋ, ಸಃ-ಆ ಮನುಷ್ಯಭಾವವು, ಆನೃಶಂಸ್ಯಪರಃ- ಘಾತುಕತ್ವದಲ್ಲಿ ಇರುವದಲ್ಲಾ, ನಿತ್ಯಂ-ನಿರಂತರವೂನು, ಸತ್ವೇಷು-ಜಂತುಗಳಲ್ಲಿ,ಕೃಪಯಾ-ದಯೆಯಿಂದ, ಅನ್ವಿತಃ-ಕೂಡಿಕೊಂಡಿಧೆ, ಅನಾಥಸ್ಯ - ನಾಥನಿಲ್ಲದ, ದುರ್ಬಲಸ್ಯ-ದುರ್ಬಲನಿಗೆ, ರಾಜಾವೈ-ಅರಸುಇದರೆ, ಬಲಂ-ಬಲವು, ಭವತಿ - ಆಗುತ್ತಾನೇ ॥ ೨೦ ॥ ಅಚಕ್ಷುಷಃ - ಚಕ್ಷುಸ್ಸು ಇಲ್ಲದವನಿಗೆ, ಭವಾನ್-ನೀನು, ಚಕ್ಷುಃ - ನೇತ್ರವು, ಅಗತೇಃ- ಗತಿಇಲ್ಲದವನಿಗೆ, ಭವಾನ್ - ಪೂಜ್ಯನಾದ, ತ್ವಂ-ನೀನು, ಗತಿಃ-ಗತಿಯು ॥ ೨೧ ॥ ಹೆ ಧಾರ್ಮಿಕ-ಎಲೈ ಧರ್ಮಿಷ್ಠನೇ, ಅಸ್ಮಾಕಮಪಿ - ನಮ್ಮಿಗೂಕೂಡ, ತ್ವಂ - ನೀನು, ನಾಥಃ - ನಾಥನು, ಮಮ-ನನ್ನ, ವಚಃ- ಮಾತು, ಶ್ರೂಯತಾಂ - ಕೇಳಲ್ಪಡಲೀ, ಮಮ-ನನ್ನ, ಆಲಯಂ - ಮನೆಯನ್ನು, ಪ್ರವಿಷ್ಟಃ-ಪ್ರವೇಶಿಸಿರುವ, ಅಯಂಗೃಧ್ರಃ-ಈ ಹದ್ದು, ಬಾಧತೆ - ಬಾಧಿಸುತ್ತದೇ ॥೨೨॥ ಹೆ ನೃಪ-ಎಲೈ ಅರಸೇ, ಹೆ ರಘುನಂದನ-ಎಲೈ ಶ್ರೀರಾಮನೇ, ತ್ವಂವೈ-ನೀನು ಆದರೆ, ದೇವಮನುಷ್ಯೇಷು-ದೇವತೆಗಳಲ್ಲಿಯೂ ಮನುಷ್ಯರಲ್ಲಿಯೂ, ಶಾಸ್ತಾವೈ - ಶಿಕ್ಷಾಕರ್ತನಾಗಿದ್ಧೀ, ರಾಮಃ - ಶ್ರೀರಾಮನು, ಏತತ್-ಈ ಉಲೂಕದವಾಕ್ಯವನ್ನು, ಶ್ರುತ್ವಾ-ಕೇಳಿ, ಸ್ವಯಂ-ತಾನು, ಸಚಿವಾನ್-ಮಂತ್ರಿಗಳನ್ನು, ಆಹ್ವಯತ್-ಕರೆಯಿಸಿದನು॥೨೩॥ ಧೃ

ವಿಷಯದಲ್ಲಿಯೂ ಶಿಕ್ಷೆಯಂ ಗೈಯುವದರಲ್ಲಿಯೂ, ದಾನದಲ್ಲಿಯೂ, ಆಸಕ್ತಿ ಯುಳ್ಳವನಾದ ನೀನು ದಾತನಾಗಿಯೂ, ದ್ರವ್ಯಸಂಪಾದಕನಾಗಿಯೂ, ಸಂರಕ್ಷಕನಾಗಿಯೂ ಇರುವಂಥಾವನಾಗಿದ್ದೀ ಯಾದಕಾರಣ, ದೇವೇಂದ್ರನಿಗೆ ಸಮಾನನಾದವನು ॥ ೧೬ ॥ ಇದಲ್ಲದೆ ನಿನ್ನದೃಷ್ಟಿಯು ಹಗೆಯರಲ್ಲಿಯೂ, ಮಿತ್ರರಲ್ಲಿಯೂ ಮತ್ತು ಸ್ಥಾವರಜಂಗಮಾತ್ಮಕವಾದ ಸರ್ವಪ್ರಾಣಿಗಳಲ್ಲಿಯೂ, ಏಕರೀತಿಯಾಗಿಧೆ. ಮತ್ತು ವ್ಯವಹಾರಗಳನ್ನು ಧರ್ಮವಾಗಿ ವಿಚಾರಿಸೋಣದರಿಂದ ನಿನ್ನ ದಂಡನೆಯು ಸರ್ವೋತ್ತಮವಾಗಿಧೆ. ಯಾವ ಪುರುಷನ ವಿಷಯದೊಳು ಕುಪಿತನಾಗುತ್ತೀಯೊ ಆ ಪುರುಷನನ್ನು ಮೃತ್ಯುವು ಅಟ್ಟಿಕೊಂಡು ಬರುವದು. ಎಲೈಮಹಾ ಪರಾಕ್ರಮಿಯೆ ! ಆಕಾರಣದಿಂದ ನೀನು ಯಮಸ್ವರೂಪನೆಂದು ಹೇಳಲ್ಪಡುತ್ತೀ॥೧೮॥ ಎಲೈರಾಜಶ್ರೇಷ್ಠನೆ ! ನಿನ್ನಮನುಷ್ಯತ್ವವೆಂಬದ್ಯಾವದೋ ಅದು ಘಾತಕತ್ವವಿಲ್ಲದೆ ಸರ್ವಪ್ರಾಣಿಗಳಲ್ಲಿಯೂ, ಬಹುದಯೆಯಿಂದ ಯುಕ್ತವಾದಂಥಾದ್ದು ನಾಥನಿಲ್ಲದಿರುವ ಬಲಹೀನನಿಗೆ ರಾಜನೇಬಲವು. ಕಂಣಿಲ್ಲದವನಿಗೆ ನೀನೇ ನೇತ್ರವು. ದಿಕ್ಕಿಲ್ಲದವನಿಗೆ ನೀನೆ ಗತಿಯು ಆದಕಾರಣ ನಮಗೆಲ್ಲ ನಾಥನಾದ ನೀನು ಕೇಳುವಂಥಾವನಾಗು. ಈಗೃಧ್ರವು ನನ್ನ ಮನೆಯಂ ಹೊಕ್ಕು ನನ್ನನ್ನು ಪೀಡಿಸುತ್ತಿಧೆ. ಎಲೈ ರಘುನಂದನನೆ! ನೀನಾದರೆ ದೇವತೆಗ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಧೃಷ್ಟಿರ್ಜಯಂತೋ ವಿಜಯಸ್ಸಿದ್ಧಾರ್ಥೋ ಹ್ಯರ್ಥಸಾಧಕಃ । ಅಶೋಕೋ ಮಂತ್ರಪಾಲಶ್ಚ ಸುಮಂತ್ರಶ್ಚಾಷ್ಟಮಸ್ತಥಾ ॥೨೪॥ ಏತೇ ರಾಮಸ್ಯ ಸಚಿವಾ ರಾಜ್ಞೋ ದಶರಥಸ್ಯ ಯೇ । ನೀತಿಯುಕ್ತಾ ಮಹಾತ್ಮಾನಃ ಸರ್ವೇ ಶಾಸ್ತ್ರವಿಶಾರದಾಃ ॥೨೫॥ ಹ್ರೀಮಂತಶ್ಚ ಕುಲೀನಾಶ್ಚ ನಯೇ ಮಂತ್ರೇ ಚ ಕೋವಿದಾಃ । ತಾನಾಹೂಯ ಸ ಧರ್ಮಾತ್ಮಾ ಪುಷ್ಪಕಾದವರುಹ್ಯ ಚ ॥೨೬॥ ಗೃಧ್ರೋಲೂಕವಿವಾದಂ ತಂ ಪೃಚ್ಛತಿ ಸ್ಮ ರಘೂತ್ತಮಃ । ಕತಿ ವರ್ಷಾಣಿ ವೈ ಗೃಧ್ರ ತ್ವಯೇದಂ ನಿಲಯಂ ಕೃತಂ ॥೨೭॥ ಏತನ್ಮೇ ಕಾರಣಂ ಬ್ರೂಹಿ ಯದಿ ಜಾನಾಸಿ ಗೃಧ್ರ ನೈ । ಏತಚ್ಛ್ರುತ್ವಾ ತು ವೈ ಗೃಧ್ರೋ ಬಭಾಷೇ ರಾಘವಂ ವಚಃ ॥೨೮॥ ಇಯಂ ವಸುಮತೀ ರಾಮ ಮನುಷ್ಯೈಸ್ಸು ಪುರಾವೃತಾ । ಉದಿತೈಶ್ಶೋಭಿತಾ ಸರ್ವಾ ತದಾ ಪ್ರಭೃತಿ ಮೇ ಗೃಹಂ ॥೨೯॥ ಉಲೂಕಸ್ತ್ವಬ್ರವೀದ್ರಾಮಂ ಪಾದಪೈರುಪಶೋಭಿತಾ । ಯದೇಯಂ ಪೃಥಿವೀ ರಾಜನ್ ತದಾ ಪ್ರಭೃತಿ ಮೇ ಗೃಹಂ ॥೩೦॥ ಏತಚ್ಛ್ರುತ್ವಾ ತು ರಾಮೋ ವೈ ತಾನುವಾಚ ಸಭಾಸದಃ । ನ ಸಾ ಸಭಾ ಯತ್ರ ನ ಸಂತಿ ವೃದ್ಧಾ ವೃದ್ಧಾ ನ ತೇ ಯೇ ನ ವದಂತಿ ಧರ್ಮಂ । ಧರ್ಮೋ ನಾಸೌ ಯತ್ರ ನ ಸತ್ಯಮಸ್ತಿ ನ ತ

---

ಧೃಷ್ಟಿಃ-ಧೃಷ್ಟಿ ಎಂಬವನು, ಜಯಂತಃ-ಜಯಂತನೆಂಬವನು, ವಿಜಯಃ-ವಿಜಯನೆಂಬವನು, ಸಿದ್ಧಾರ್ಥಃ-ಸಿದ್ಧಾರ್ಥನು, ಅರ್ಥಸಾಧಕಃ- ಅರ್ಥಸಾಧಕನು, ಅಶೋಕಃ-ಅಶೋಕನು, ಮಂತ್ರಪಾಲಶ್ಚ -ಮಂತ್ರಪಾಲ ನೆಂಬವನು, ತಥಾ-ಹಾಗೆಯೇ, ಸುಮಂತ್ರಶ್ಚ -ಸುಮಂತ್ರನೂ, ಅಷ್ಟಮಃ- ಎಂಟನೆಯವನು ॥೨೪॥ ದಶರಥಸ್ಯರಾಜ್ಞಃ- ದಶರಥರಾಯನಿಗೆ, ಯೇ-ಯಾರು, ಸಚಿವಾಃ-ಮಂತ್ರಿಗಳೋ, ಏತೇ-ಇವರೇ, ರಾಮಸ್ಯ-ಶ್ರೀರಾಮನಿಗೂನು, ಸಚಿವಾಃ-ಮಂತ್ರಿಗಳು, ನೀತಿಯುಕ್ತಾಃ-ರಾಜನೀತಿಯಿಂದ ಕೂಡಿದವರು, ಮಹಾತ್ಮಾನಃ-ಮಹಾಮನಸ್ವಿಗಳು, ಸರ್ವೇ-ಯೆಲ್ಲರೂನು, ಶಾಸ್ತ್ರವಿಶಾರದಾಃ-ಶಾಸ್ತ್ರಗಳಲ್ಲಿ ಪಾರಂಗತರು, ಹ್ರೀಮಂತಶ್ಚ -ಲಜ್ಜಾವಂತರೂ, ಕುಲೀನಾಶ್ಚ-ಸತ್ಕುಲಪ್ರಸೂತರು, ನಯೇ-ನೀತಿಯಲ್ಲಿಯೂ, ಮಂತ್ರೇಚ-ಆಲೋಚನೆಯಲ್ಲಿಯೂ, ಕೋವಿದಾಃ-ಸಮರ್ಥರು, ಧರ್ಮಾತ್ಮಾ-ಧರ್ಮಿಷ್ಠನಾದ, ಸಃರಘೂತ್ತಮಃ-ಆ ಶ್ರೀರಾಮನು, ತಾನ್-ಅವರುಗಳನ್ನು, ಆಹೂಯ-ಕರಿಸಿ, ಪುಷ್ಪಕಾತ್-ಪುಷ್ಪಕವಿಮಾನದ ದೆಸೆಯಿಂದ, ಅವರುಹ್ಯಚ-ಇಳಿದು ॥೨೬॥ ತಂ-ಆ, ಗೃಧ್ರೋಲೂಕವಿವಾದಂ- ಹದ್ದು ಗೂಬೆಗಳ ವಿವಾದವನ್ನು, ಪೃಚ್ಛತಿಸ್ಮ-ಕೇಳಿದನಷ್ಟೇ, ಹೇ ಗೃಧ್ರ-ಎಲೈ ಗೃಧ್ರವೇ, ಕತಿವರ್ಷಾಣಿ-ಯೆಷ್ಟುವರ್ಷಗಳಿಂದ, ತ್ವಯಾ-ನಿನ್ನಿಂದ, ಇದಂನಿಲಯಂ-ಈ ಮನೆಯು, ಕೃತಂ-ಮಾಡಲ್ಪಟ್ಟಿತು ॥೨೭॥ ಹೇ ಗೃಧ್ರ-ಎಲೈ ಗೃಧ್ರವೇ, ಏತತ್ಕಾರಣಂ-ಈ ಕಾರಣವನ್ನು, ಜಾನಾಸಿಯದಿ- ತಿಳಿದಿರುವಾದರೇ, ಮೇ-ನನಗೆ, ಬ್ರೂಹಿ-ಹೇಳು, ಏತತ್-ಈ ಶ್ರೀರಾಮನ ಮಾತನ್ನು, ಶ್ರುತ್ವಾ-ಕೇಳಿ, ಗೃಧ್ರೋಪಿ-ಗೃಧ್ರವಾದರೇ, ರಾಘವಂ-ಶ್ರೀರಾಮನಂ ಕುರಿತು, ಹೇ ರಾಮ-ಎಲೈ ಶ್ರೀರಾಮನೆ, ಇಯಂವಸುಮತೀ-ಈ ನೆಲವು, ಪುರಾ-ಪೂರ್ವದಲ್ಲಿ, ಉದಿತೈಃ-ಹುಟ್ಟಿದ, ಮನುಷ್ಯೈಃ-ಮನುಷ್ಯರಿಂದ, ಯದಾ-ಯಾವಕಾಲದಲ್ಲಿ, ವೃತಾ-ಪರಿಸಲ್ಪಟ್ಟದ್ದಾಗಿ, ಸರ್ವಾ-ಸಮಸ್ತವಾದ ಭೂಮಿಯು, ಶೋಭಿತಾ-ಹೊಳೆಯುತಿತ್ತೋ, ತದಾಪ್ರಭೃತಿ-ಅದುಮೊದಲುಗೊಂಡು, ಮೇ-ನನ್ನ, ಗೃಹಂ-ಮನೆಯು, ಇತಿ-ಇಂತೆಂದು, ವಚಃ-ಮಾತನ್ನು, ಅಬ್ರವೀತ್-ನುಡಿದಿತು ॥೨೯॥ ಉಲೂಕಸ್ತು-ಉಲೂಕವಾದರೆ, ರಾಮಂ - ಶ್ರೀರಾಮನಂಕುರಿತು, ಹೇ ರಾಜನ್-ಎಲೈ ರಾಜನೇ, ಇಯಂಪೃಥಿವೀ-ಈ ಭೂಮಿಯು, ಯದಾ-ಯಾವಕಾಲದಲ್ಲಿ, ಪಾದಪೈಃ-ವೃಕ್ಷಗಳಿಂದ, ಉಪಶೋಭಿತಾ- ಹೊಳೆಯುತ್ತಿತ್ತೋ, ತದಾಪ್ರಭೃತಿ-ಅದು ಮೊದಲುಗೊಂಡು, ಮೇ-ನನ್ನ, ಗೃಹಂ-ಗೃಹವೂ ಎಂದು, ಅಬ್ರವೀತ್-ನುಡಿದಿತು ॥೩೦॥ ಏತತ್-ಈ ಮಾತನ್ನು, ಶ್ರುತ್ವಾ-ಕೇಳಿ, ರಾಮೋವೈ-ಶ್ರೀರಾಮನಾದರೇ, ತಾನ್‌ಸಭಾಸದಃ-ಆ ಸಭಾಜನರಂಕುರಿತು, ಉವಾಚ-ಹೇಳಿದನು ॥೩೧॥ ಯತ್ರ-ಯಾವ ಸಭೆಯಲ್ಲಿ, ವೃ

---

ಳಿಗೂ ಮನುಷ್ಯರಿಗೂ ಸಹ ಶಿಕ್ಷಾಕರ್ತನಾಗಿದ್ದೀ ಎಂಬದಾಗಿ ಗೂಬೆಯು ಹೇಳಿದಂಥಾದ್ದಾಗಲೂ, ಆ ಮಾತಂ ಕೇಳಿ ಶ್ರೀರಾಮನು ನೀತಿವಂತರಾಗಿಯೂ ಮಹಾನುಭಾವರಾಗಿಯೂ, ಶಾಸ್ತ್ರದಕ್ಷರಾಗಿಯೂ ಮತಿವಂತರಾಗಿಯೂ ಸತ್ಕುಲ ಪ್ರಸೂತರಾಗಿಯೂ ನೀತಿಮಾತುಗಳಲ್ಲಿಯೂ, ಆಲೋಚನೆಯಲ್ಲಿಯೂ, ಸಹಾ ಪಂಡಿತರಾಗಿಯೂ ಇರುವ ಮಂತ್ರಿಗಳು ದಶರಥರಾಜನ ಕಾಲದೊಳು ಯಾರು ಇದ್ದಂಥಾವರಾದರೋ ಅಂಥಾ ಧೃಷ್ಟಿ, ಜಯಂತ, ವಿಜಯ, ಸಿದ್ಧಾರ್ಥ ಅರ್ಥಸಾಧಕ, ಅಶೋಕ, ಮಂತ್ರಪಾಲ ಸುಮಂತ್ರರೆಂಬ ಈ ಎಂಟುಮಂದಿಯಾದ ತನ್ನ ಮಂತ್ರಿಗಳಂ ಕರೆಯಿಸಿ ಆ ಪುಷ್ಪಕವಿಮಾನದಿಂ ದಿಳಿದು ಆ ಗೃಧ್ರಕ್ಕೂ ಗೂಬೆಗೂ ಸಂಭವಿಸಿದ ವಿವಾದವಂ ಕುರಿತು ಕೇಳುವನದೇನೆಂತೆನೆ,—ಎಲೈ ಗೃಧ್ರವೆ! ನೀನು ಈ ಮನೆಯಂ ಮಾಡಿಕೊಂಡು ಎಷ್ಟುವರ್ಷಗಳಾದವು. ಇದು ನಿನಿಗೆ ಬರುವದಕ್ಕೆ ಕಾರಣವೇನು ಇದನ್ನ ನೀನು ಅರಿತಿದ್ದರೆ ಹೇಳೆಂದು ನಿರೂಪಿಸಿದವನಾಗಲೂ ಆ ಗೃಧ್ರವು ಈ ಮಾತಂಕೇಳಿ, ಎಲೈ ಒಡೆಯನೆ! ಈ ಭೂಮಂಡಲದಲ್ಲಿ ಮನುಷ್ಯರು ಯಾವಾಗ ಹುಟ್ಟಿದರೋ ಅದು ಮೊದಲ್ಗೊಂಡು, ಇದು ಎನ್ನ ಮನೆಯಾಗಿರುವದೆಂದು ಹೇಳಿತು. ಆಗ ಗೂಬೆಯಾದರೆ ಕೇಳೆಲೈ ರಘುನಂದನನೆ! ಈ ಧರಾತಳದಲ್ಲಿ ವೃಕ್ಷಗಳು ಯಾವಾಗ ಉಂಟಾದವೊ ಆ ಕಾಲದಿಂದ ಈ ಮನೆಯನ್ನು ನಾನು ಮಾಡಿಕೊಂಡಿಧ್ಹೇನೆಂದು ನುಡಿದಂಥಾದ್ದಾಯಿತು, ಈ ಪರಿಯಾಗಿ ಆಗೃಧ್ರವು ಗೂಬೆಯೂ ಸಹ ಎರಡುವಿಧವಾಗಿ ಹೇಳಲೂ, ಶ್ರೀರಾಮನು ಈ ಮಾತುಗಳಂ ಕೇಳಿ ಆಆಸ್ಥಾನಪಂಡಿತರಂ ಕುರಿತು ಹೇಳುವನದೆಂತೆನೆ ॥೩೧॥ ಎಲೈಸಭ್ಯೀಕರೆ! ಯಾವಸಭೆಯೊಳು ಜ್ಞಾನವಯೋವೃದ್ಧರಾದವರಿರುವ ದಿಲ್ಲವೋ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ಸತ್ಯಂಯಚ್ಛಲೇನಾನುಬದ್ಧಂ ॥೩೧॥ ಯೇತುಸಭ್ಯಾಸ್ಸಭಾಂಗತ್ವಾತೂಷ್ಣೀಂಧ್ಯಾಯಂತಆಸತೇ॥ ಯಥಾಪ್ರಾಪ್ತಂನಬ್ರುವತೇತೇಸರ್ವೇನೃತವಾದಿನಃ । ಜಾನನ್ನಪ್ಯಬ್ರುವನ್ಪ್ರಶ್ನಾನ್ಕಾಮಾತ್ಕ್ರೋಧಾದ್ಭಯಾದಪಿ ॥ ಸಹಸ್ರಂವಾರುಣಾನ್ಪಾಶಾನ್ ಪ್ರತಿಮುಂಚತ್ಯಸಆತ್ಮನೇ ॥೩೩॥ ತೇಷಾಂಸಂವತ್ಸರೇಪೂರ್ಣೇಪಾಶಏಕಃಪ್ರಮುಚ್ಯತೇ ॥೩೪॥ ತಸ್ಮಾತ್ಸತ್ಯಂಪ್ರವಕ್ತವ್ಯಂ ಜಾನತಾಸತ್ಯಮಂಜಸಾ । ಏತಚ್ಛ್ರುತ್ವಾತುಸಚಿವಾಃರಾಮಮೇವಾಬ್ರುವಂಸ್ತದಾ ॥೩೫॥ಉಲೂಕಶ್ಶುಧ್ಯತೇರಾಜನ್ನತು ಗೃಧ್ರೋಮಹಾಮತೇ । ತ್ವಂಪ್ರಮಾಣಂಮಹಾರಾಜರಾಜಾಹಿಪರಮಾಗತಿಃ॥೩೬॥ ರಾಜಮೂಲಾಃಪ್ರಜಾಸ್ಸರ್ವಾ ರಾಜಾ ಧರ್ಮಸ್ಸನಾತನಃ । ಶಾಸ್ತಾರಾಜಾನರಾಣಾಂಹಿನತೇಗಚ್ಛಂತಿದುರ್ಗತಿಂ ॥೩೭॥ ವೈವಸ್ವತೇನಮುಕ್ತಾಸ್ತುಭವಂತಿಪುರುಷೋತ್ತಮಾಃ । ಸಚಿವಾನಾಂವಚಃಶ್ರುತ್ವಾರಾಮೋವಚನಮಬ್ರವೀತ್ ॥೩೮॥ ಶ್ರೂಯತಾಮಭಿಧಾಸ್ಯಾಮಿಪುರಾಣೇಯದು

ವೃದ್ಧಾಃ-ವೃದ್ಧರು, ನಸಂತಿ-ಇರುವದಿಲ್ಲವೋ, ಸಾ-ಅದು, ಸಭಾ-ಸಭೆಯು, ನ-ಅಲ್ಲಾ, ಯೇ-ಯಾರು, ಧರ್ಮಂ-ಧರ್ಮವನ್ನು, ನವದಂತಿ- ಹೇಳುವದಿಲ್ಲವೋ, ತೇ-ಅವರು, ವೃದ್ಧಾಃ-ವೃದ್ಧರು, ನಭವಂತಿ-ಆಗಲಾರರು, ಯತ್ರ-ಯಾವಧರ್ಮದಲ್ಲಿ, ಸತ್ಯಂ-ಸತ್ಯವು, ನ- ಇಲ್ಲವೋ, ಅಸೌ-ಅದು, ಧರ್ಮಃ-ಧರ್ಮವು, ನ-ಅಲ್ಲಾ, ಯತ್-ಯಾವಸತ್ಯವು, ಛಲೇನ-ಕಪಟದಿಂದ, ಅನುಬದ್ಧಂ-ಕೂಡಿಕೊಳ್ಳುತ್ತದೋ, ತತ್-ಅದು, ಸತ್ಯಂ-ಸತ್ಯವು, ನ-ಅಲ್ಲಾ॥ ಯೇಸಭ್ಯಾಃ-ಯಾವ ಸಭಾಜನರು, ಸಭಾಂ-ಸಭೆಯನ್ನು, ಗತ್ವಾ-ಹೊಂದಿ, ತೂಷ್ಣೀಂ-ಸುಮ್ಮನೇ, ಧ್ಯಾಯಂತಃ-ಧ್ಯಾನಮಾಡುವರಾಗಿ, ಆಸತೇ - ಇರುತ್ತಾರೋ, ಯಥಾಪ್ರಾಪ್ತಂ-ಯಥಾವಸ್ಥಿತವಾಗಿಯಿರುವ ಅರ್ಥವನ್ನು, ನಬ್ರುವತೇ-ಹೇಳುವದಿಲ್ಲವೋ, ತೇಸರ್ವೇ-ಅವರೆಲ್ಲರೂನು, ಅನೃತವಾದಿನಃ-ಸುಳ್ಳುಹೇಳತಕ್ಕವರು ॥೩೨॥ ಜಾನನ್ನಪಿ-ತಿಳಿದವನಾದರೂ ಕೂಡ, ಕಾಮಾತ್-ಕಾಮದ ದೆಸೆಯಿಂದಲೂ, ಕ್ರೋಧಾತ್-ಕ್ರೋಧದದೆಸೆಯಿಂದಲೂ, ಭಯಾದಪಿ-ಭಯದ ದೆಸೆಯಿಂದಲೂ, ಪ್ರಶ್ನಾನ್-ಕೇಳಿದ ಪ್ರಶ್ನೆಗಳನ್ನು ಕುರಿತು, ಅಬ್ರುವನ್-ಹೇಳದಿರುವನಾಗಿ, ಆತ್ಮನಿ-ತನಗೋಸುಗ, ಸಃ-ಆ ಪುರುಷನು, ಸಹಸ್ರಂ-ಸಹಸ್ರಸಂಖ್ಯಾಕಮಾದ, ವಾರುಣಾನ್-ವರುಣ ಸಂಬಂಧಗಳಾದ, ಪಾಶಾನ್-ಪಾಶಗಳನ್ನು, ಪ್ರತಿಮುಂಚತಿ- ಕೂಡಿಸಿಕೊಳ್ಳುತ್ತಾನೆ ॥೩೩॥ ತೇಷಾಂ-ಆ ಪಾಶಗಳೊಳಗೆ, ಸಂವತ್ಸರೇ-ಸಂವತ್ಸರವು, ಪೂರ್ಣೇ-ಸಂಪೂರ್ಣವಾಗುತ್ತಿರಲಿಕಾಗಿ, ಏಕಃಪಾಶಃ-ಒಂದು ಪಾಶವು, ಪ್ರಮುಚ್ಯತೇ- ಬಿಡಲ್ಪಡುತ್ತೇ ॥೩೪॥ ತಸ್ಮಾತ್-ಆ ಕಾರಣದದೆಸೆಯಿಂದ, ಸತ್ಯಂ-ಸತ್ಯವನ್ನು, ಜಾನತಾ-ತಿಳಿದಿರುವ ಪುರುಷನಿಂದ, ಅಂಜಸಾ-ಶೀಘ್ರವಾಗಿ, ಸತ್ಯಂ-ಸತ್ಯವೇ, ಪ್ರವಕ್ತವ್ಯಂ-ಹೇಳತಕ್ಕದ್ದು, ಏತತ್-ಈ ಮಾತನ್ನು, ಶ್ರುತ್ವಾತು-ಕೇಳಿಯಾದರೇ, ಸಚಿವಾಃ-ಮಂತ್ರಿಗಳು, ತದಾ-ಆ ಕಾಲದಲ್ಲಿ, ರಾಮಮೇವ-ಶ್ರೀರಾಮನಂ ಕುರಿತೇ, ಅಬ್ರುವನ್-ನುಡಿದರು ॥೩೫॥ ಹೆ ರಾಜನ್-ಎಲೈ ಅರಸೇ, ಹೆ ಮಹಾಮತೇ-ಎಲೈ ಮಹಾಬುದ್ಧಿಶಾಲಿಯೇ, ಉಲೂಕಃ- ಉಲೂಕವು, ಶುಧ್ಯತೇ-ನಿರ್ಮಲಚಿತ್ತನಾಗಿಹೇ, ಗೃಧ್ರಃ-ಗೃಧ್ರವಾದರೇ, ನ-ಅಲ್ಲಾ, ಹೆ ಮಹಾರಾಜ-ಎಲೈ ಮಹಾರಾಜನೇ, ತ್ವಂ-ನೀನು, ಪ್ರಮಾಣಂ-ಪ್ರಮಾಣವು, ರಾಜಾ-ಅರಸು, ಪರಮಃ-ಉತ್ಕೃಷ್ಟಮಾದ, ಗತಿಃ- ಶರಣವು, ॥೩೬॥ ಸರ್ವಾಃ-ಸಮಸ್ತರಾದ, ಪ್ರಜಾಃ-ಪ್ರಜೆಗಳು, ರಾಜಮೂಲಾಃ-ರಾಜನೇ ಮೂಲವಾಗುಳ್ಳವರು, ರಾಜಾ-ಅರಸೇ, ಸನಾತನಃ- ಅನಾದಿಸಿದ್ಧಮಾದ, ಧರ್ಮಃ-ಧರ್ಮಸ್ವರೂಪನು, ಹಿ-ಯಾವಕಾರಣದ ದೆಸೆಯಿಂದ, ರಾಜಾ- ಅರಸು, ನರಾಣಾಂ-ಮನುಜರಿಗೆ, ಶಾಸ್ತಾ-ಶಿಕ್ಷಾಕರ್ತನಾಗುವನೋ, ತೇ-ಆ ಶಿಕ್ಷಕರಾದಂಥಾಜನರು, ದುರ್ಗತಿಂ-ನರಕವನ್ನು, ನಗಚ್ಛಂತಿ-ಹೋದುವದಿಲ್ಲ॥ ವೈವಸ್ವತೇನ-ಯಮನಿಂದ, ಮುಕ್ತಾಃ-ಬಿಡಲ್ಪಟ್ಟವರಾಗಿ, ಪುರುಷೋತ್ತಮಾಃ-ಪುರುಷಶ್ರೇಷ್ಠರು, ಭವಂತಿ-ಆಗುವರು, ಸಚಿವಾನಾಂ- ಮಂತ್ರಿಗಳ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ರಾಮಃ-ಶ್ರೀರಾಮನು, ವಚನಂ-ಮಾತನ್ನು, ಅಬ್ರವೀತ್-ನುಡಿದನು ॥೩೮॥ಪುರಾಣೇ-ಪುರಾಣದಲ್ಲಿ, ಯತ್-ಯಾ

ಅದು ಸಭೆಯೇಅಲ್ಲ ಮುದುಕರಾದವರೂ ಧರ್ಮವನ್ನು ಯಾರು ಹೇಳುವದಿಲ್ಲವೊ ಅವರು ವೃದ್ಧರಲ್ಲ, ಯಾವಧರ್ಮದಲ್ಲಿ ಸತ್ಯವೆಂಬದು ಇರುವದಿಲ್ಲವೋ ಅದು ಧರ್ಮವೇ ಅಲ್ಲ. ಕಪಟಯುಕ್ತಮಾದ ಸತ್ಯವು ದಿಟಮಾದದ್ದಲ್ಲ. ಮತ್ತು ಸಭಿಕರು ಆಸಭೆ ನಕ್ಕೆ ಗಮಿಸಿ ಸುಮ್ಮನೆ ಧ್ಯಾನಿಸುತ್ತ ಸಂದರ್ಭಾನುಸರಮಾಗಿ ಮಾತಾಡದೆಕುಳಿತಿರುವರೋ ಅವರೆಲ್ಲರು ಅನೃತವಾದಿಗಳು ಇದಲ್ಲದೆ ಯಾವಪುರುಷನು ತಾನುತಿಳಿದವನಾದರೂಕೂಡ ಧನಾಶೆಯಿಂದಲಾಗಲೀ ಕ್ರೋಧದದೆಸೆಯಿಂದಲಾಗಲಿ ಭೀತಿಯದೆಶೆ ಇಂದಲಾಗಲಿ ಯಾತರಿಂದಾದರೂ ಸರಿಯೆ ಪ್ರಶ್ನೆಗಳಂಕುರಿತು ಉತ್ತರವಂಕೊಡುವದಿಲ್ಲವೊ ಆ ಪುರುಷನುಸಾವಿರವಾದ ವಾರುಣಪಾಶಂಗಳನ್ನು ತನಗೆ ಸಂಪಾದಿಸಿಕೊಳ್ಳುವಂಥಾವನಾಗುವನು, ಆ ಸಂಪಾದಿಸಿದ ಪಾಶಗಳಲ್ಲಿ, ಸಂವತ್ಸರಕ್ಕೆ ಒಂದೊಂದುಪಾಶವು ತಪ್ಪುವದು. ಆದಕಾರಣ ಸತ್ಯವಂ ಬಲ್ಲವನು, ತ್ವರೆಯಾಗಿ ದಿಟವಂನುಡಿಯಬೇಕೆಂದು ನಿರೂಪಿಸಿದವನಾಗಲು ಮಂತ್ರಿಗಳೆಲ್ಲ ಈಮಾತಂ ಕೇಳಿ, ಆಗ ಶ್ರೀರಾಮನಂ ಕುರಿತು ಎಲೈ ಮಹಾತಿಳುವಳಿಕೆಯುಳ್ಳರಾಜನೆ ! ಗೂಬೆಯು ನಿರ್ಮಲಚಿತ್ತಮುಳ್ಳಂತೆ ತೋರುತದೆ ಗೃಧ್ರವು ನ್ಯಾಯಮುಳ್ಳದ್ದೆಂದು ತೋರುವದಿಲ್ಲ. ಎಲೈ ಮಹಾರಾಜನೆ! ನೀನೆ ಪ್ರಮಾಣವು ಯಾಕೆಂದರೆ ರಾಜನೆ ಸರ್ವರಿಗೂ ಶರಣವಾಗಿರುವನು ಪ್ರಜಗಳೆಲ್ಲರು ಅರಸೆ ಮೂಲವಾಗಿ ಉಳ್ಳವರು, ರಾಜನು ಅನಾದಿಸಿದ್ಧಮಾದ ಧರ್ಮಸ್ವರೂಪನು ಅರಸಾದವನು ಶಿಕ್ಷಾಕರ್ತನಾಗಿರುವಾಗ ಅವರು ದುರ್ಗತಿಯಂ ಹೊಂದುವದಿಲ್ಲ, ಮತ್ತು ಯಮನಿಂದ ಬಿಡಲ್ಪಟ್ಟವರಾಗಿ ಉತ್ತಮರಾಗಿರುವರು, ಎಂಬದಾಗಿ ನುಡಿಯುತ್ತಿರುವ ಮಂತ್ರಿಗಳ ವಾಕ್ಯವಂ ಕೇಳಿ ಶ್ರೀರಾಮನು ಮತ್ತಿಂತೆಂದನು. ॥೩೮॥ ಎಲೈ ಮಂತ್ರಿವರ್ಯರೆ! ಪು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದಾಹೃತಂ । ದ್ಯೌಸ್ಸಚಂದ್ರಾರ್ಕನಕ್ಷತ್ರಾ ಸಪರ್ವತವನಾ ಮಹೀ ॥೩೯॥ ಸಲೀಲಂ ಕ್ರೋಡಸಂಭೂತಂ ತ್ರೈಲೋಕ್ಯಂ ಸಚ
ರಾಚರಂ । ಏಕ ಏವ ತದಾ ಹ್ಯಾಸೀದ್ಯುಕ್ತೋ ಮೇರುರ್ಮಹಾಚಲಃ ॥೪೦॥ ಪುನರ್ಭೂಸ್ಸಹ ಲಕ್ಷ್ಮ್ಯಾ ಚ ತ್ರೈಲೋಕ್ಯಂ ಸಚ
ರಾಚರಂ। ತನ್ನಿಗೃಹ್ಯ ಮಹಾತೇಜಾಃ ಪ್ರವಿಶ್ಯ ಸಲಿಲಾರ್ಣವಂ । ಸುಷ್ವಾಪ ಸುಮಹಾಭಾಗೋ ಬಹೂನ್ವರ್ಷಗಣಾನಪಿ॥ ವಿ
ಷ್ಣೌ ಸುಪ್ತೇ ತದಾ ಬ್ರಹ್ಮಾ ವಿವೇಶ ಜಲಜಂ ತತಃ ॥೪೨॥ ಬದ್ಧಸ್ರೋತಂ ತು ತಂ ಜ್ಞಾತ್ವಾ ಮಹಾಯೋಗಸ್ಸಮಾವಿಶತ್ ॥ ನಾಭ್ಯಾಂ
ವಿಷ್ಣೋಸ್ಸಮುದ್ಭೂತಂ ಪದ್ಮಂ ಹೇಮವಿಭೂಷಿತಂ ॥೪೩॥ ತಸ್ಮಾನ್ನಿರ್ಗತ್ಯ ವೈ ಬ್ರಹ್ಮಾ ಯೋಗೀ ಭೂತ್ವಾ ಮಹಾಪ್ರಭುಃ। ಸಿ
ಸೃಕ್ಷುಃ ಪೃಥಿವೀಂ ಸರ್ವಾಂ ಪರ್ವತಾನ್ ಸಮಹೀರುಹಾನ್ ॥೪೪॥ ಅನಂತರಂ ಪ್ರಜಾನಾಥಃ ಮನುಷ್ಯಾಂಶ್ಚ ಸರೀಸೃಪಾನ್।
ಜರಾಯುಜಾಂಡಜಾನ್ ಸರ್ವಾನ್ ಸಸರ್ಜ ಚ ಮಹಾತಪಾಃ ॥೪೫॥ ತಸ್ಯ ಗಾತ್ರಮಲೋತ್ಪನ್ನಃ ಕೈಟಭೋ ಮಧುನಾ ಸಹ। ದಾ

ವದು, ಉದಾಹೃತಂ-ಪೇಳಲ್ಪಟ್ಟದ್ಧಿಯೋ, ತತ್-ಅದನ್ನು, ಅಭಿಧಾಸ್ಯಾಮಿ-ಪೇಳುವೆನು, ಶ್ರೂಯತಾಂ-ಕೇಳಲ್ಪಡಲೀ, ಸಚಂದ್ರಾರ್ಕನಕ್ಷತ್ರಾ-ಚಂ
ದ್ರಸೂರ್ಯ ನಕ್ಷತ್ರಗಳಿಂದೊಡಗೂಡಿದ, ದ್ಯೌಃ-ನಕ್ಷತ್ರಮಂಡಲವೂನು, ಸಪರ್ವತವನಾ-ಪರ್ವತಗಳಿಂದಲೂ ವನಗಳಿಂದಲೂ ಒಡಗೂಡಿದ, ಮಹೀ-ನೆಲವು,
ಸಚರಾಚರಂ-ಸ್ಥಾವರ ಜಂಗಮಗಳಿಂದೊಡಗೂಡಿದ, ತ್ರೈಲೋಕ್ಯಂ-ಲೋಕತ್ರಯವು, ಸಲೀಲಂ-ವಿಲಾಸದಿಂದ ಕೂಡಿದಂತೆ, ಕ್ರೋಡಸಂಭೂತಂ-ಆದಿವ
ರಾಹದಿಂದ ಹುಟ್ಟಿದಂಥಾದ್ದಾಯಿತು, ತದಾ-ಆ ಕಾಲದಲ್ಲಿ, ಯುಕ್ತಃ-ಕೂಡಿಕೊಂಡಿರುವ, ಮೇರುಃ-ಮೇರುವೆಂಬ, ಮಹಾಚಲಃ-ದೊಡ್ಡ ಪರ್ವತವು, ಏಕ
ಏವ-ಒಂದೇ, ಆಸೀತ್-ಆಯಿತು ॥೪೦॥ ಲಕ್ಷ್ಮ್ಯಾ ಸಹ- ಲಕ್ಷ್ಮೀದೇವಿಯಿಂದೊಡಗೂಡಿ, ಪುನಃ-ಮತ್ತು, ಭೂಃ-ಭೂಮಿಯು, ಸಚರಾಚರಂ- ಜಂಗಮ
ಸ್ಥಾವರಗಳಿಂದೊಡಗೂಡಿದ, ತ್ರೈಲೋಕ್ಯಂ-ಲೋಕತ್ರಯವು, ಯತ್-ಯಾವದು, ಆಸೀತ್-ಆಯಿತೋ, ತತ್-ಅದನ್ನು, ನಿಗೃಹ್ಯ-ಉಪಸಂಹರಿಸಿ,
ಮಹಾತೇಜಾಃ-ಮಹಾತೇಜೋವಂತನಾದ, ಮಹಾಭಾಗಃ-ಮಹಾಪುಣ್ಯವಂತನಾದ, ಸಃ-ಆ ನಾರಾಯಣನು, ಸಲಿಲಾರ್ಣವಂ-ಜಲಸಮುದ್ರವನ್ನು, ಪ್ರ
ವಿಶ್ಯ-ಪ್ರವೇಶಿಸಿ, ಬಹೂನ್ ವರ್ಷಗಣಾನಪಿ-ಅನೇಕಸಂವತ್ಸರ ತಂಡಗಳು, ಸುಷ್ವಾಪ-ನಿದ್ರಿಸಿದನು ॥೪೧॥ ವಿಷ್ಣೌ-ಶ್ರೀಮಹಾ ವಿಷ್ಣುವು, ಸುಪ್ತೇಸತಿ-
ಮಲಗಿದವನಾಗುತಿರಲಿಕಾಗಿ, ತದಾ-ಆ ಕಾಲದಲ್ಲಿ, ಬ್ರಹ್ಮಾ-ಚತುರ್ಮುಖನು, ತತಃ-ಬಳಿಕ, ಜಲಜಂ-ಕಮಲವನ್ನು, ವಿವೇಶ-ಹೊಕ್ಕನು ॥೪೨॥
ತಂ-ಆತನನ್ನು, ಬದ್ಧಸ್ರೋತಂ-ಕಟ್ಟಲ್ಪಟ್ಟ ಪ್ರವಾಹವುಳ್ಳವನನ್ನಾಗಿ, ಜ್ಞಾತ್ವಾ-ತಿಳಿದು, ಮಹಾಯೋಗಃ-ಮಹಾಯೋಗವು, ಸಮಾವಿಶತ್-ಹೊ
ಕ್ಕಿತು, ವಿಷ್ಣೋಃ-ಶ್ರೀಮಹಾವಿಷ್ಣುವಿನ, ನಾಭ್ಯಾಂ-ನಾಭಿಪ್ರದೇಶದಲ್ಲಿ, ಹೇಮವಿಭೂಷಿತಂ-ಸುವರ್ಣದಿಂದಲಂಕರಿಸಲ್ಪಟ್ಟ, ಪದ್ಮಂ-ಕಮಲವು, ಸಮು
ದ್ಭೂತಂ-ಹುಟ್ಟಿತು ॥೪೩॥ ತಸ್ಮಾತ್-ಆ ಕಮಲದದೆಸೆಯಿಂದ, ನಿರ್ಗತ್ಯ-ಹೊರಟು, ಮಹಾಪ್ರಭುಃ-ಮಹಾಸಮರ್ಥನಾದ, ಬ್ರಹ್ಮಾ-ಬ್ರಹ್ಮನು, ಯೋ
ಗೀ-ಯೋಗಭ್ಯಾಸತತ್ಪರನು, ಭೂತ್ವಾ-ಆಗಿ, ಸರ್ವಾಂ-ಸಮಸ್ತವಾದ, ಪೃಥಿವೀಂ-ಭೂಮಿಯನ್ನು, ಸಮಹೀರುಹಾನ್-ವೃಕ್ಷಗಳಿಂದೊಡಗೂಡಿದ, ಪ
ರ್ವತಾನ್-ಬೆಟ್ಟಗಳನ್ನೂ, ಸಿಸೃಕ್ಷುಃ-ಸೃಷ್ಟಿ ಮಾಡಲಿಚ್ಛೆಯುಳ್ಳವನು, (ಅಭೂತ್-ಆದನು) ॥೪೪॥ ಅನಂತರಂ-ಬಳಿಕ, ಪ್ರಜಾನಾಥಃ - ಪ್ರಜೆಗಳಿಗೆ
ಲ್ಲ ಸ್ವಾಮಿಯಾದಬ್ರಹ್ಮನು, ಮಹಾತಪಾಃ-ಮಹಾ ತಪಸ್ವಿಯಾಗಿ, ಮನುಷ್ಯಾಂಶ್ಚ-ಮನುಷ್ಯರನ್ನೂ, ಸರೀಸೃಪಾನ್-ಸರ್ಪಗಳನ್ನೂ, ಸರ್ವಾನ್- ಸ
ಮಸ್ತವಾದ, ಜರಾಯುಜಾಂಡಜಾನ್-ಜರಾಯುಜ-ಗರ್ಭಗತವಾದ ಚರ್ಮಚೀಲದಲ್ಲಿ ಹುಟ್ಟಿದಜಂತುಗಳನ್ನು, ಅಂಡಜಾನ್-ಮೊಟ್ಟೆಯಿಂದ ಹುಟ್ಟು
ವ ಪಕ್ಷಿಮುಂತಾದವುಗಳನ್ನು, ಸಸರ್ಜ-ಸೃಷ್ಟಿ ಮಾಡಿದನು ॥೪೫॥ ಕೈಟಭಃ-ಕೈಟಭಾಸುರನು, ಮಧುನಾಸಹ-ಮಧ್ವಸುರನಿಂದೊಡಗೂಡಿದ, ತಸ್ಯ-

ರಾಣದಲ್ಲಿರ್ಪ ಪೂರ್ವಕಥೆಯಂ ಪೇಳ್ವೆನು ಕೇಳಿರಿ ಚಂದ್ರಸೂರ್ಯರಿಂದಲೂ ನಕ್ಷತ್ರಗಳಿಂದಲೂ ಒಡಗೂಡಿದ ಅಂತರಿಕ್ಷ
ವು ಪರ್ವತಗಳಿಂದಲೂ ವನಗಳಿಂದಲೂ ಯುಕ್ತವಾದ ಈಧರಾತಲವು ಚರಾಚರಾತ್ಮಕವಾದ ಈತ್ರೈಲೋಕ್ಯವು ಇದೆ
ಲ್ಲ ವಿಲಾಸದಿಂ ದೊಡಗೂಡಿದಂತೆ ಆದಿವರಾಹಮೂರ್ತಿಯಿಂದ ಉದ್ಧರಿಸಲ್ಪಟ್ಟಂಥಾದ್ದಾಯಿತು. ಆಗ ಮೇರು ಗಿರಿಯು
ಒಂದು ಮಾತ್ರವೆ ಇತ್ತು, ಪುನಶ್ಚ ಭೂಮಿಯು ಚರಾಚರಾತ್ಮಕ ಮಾದಮೂಜಗಗಳೂ ಇವೆಲ್ಲ ಅಭಿವ್ಯಕ್ತ ಮಾದವು,
ಅದನ್ನು ಮಹಾತೇಜೋವಂತನಾಗಿಯೂ ಬಹುಪುಣ್ಯಶಾಲಿಯಾಗಿಯೂ ಇರುವ ಶ್ರೀಮನ್ನಾರಾಯಣಮೂರ್ತಿಯು, ಉ
ಪಸಂಹಾರಮಾಡಿಕೊಂಡು ಅನೇಕ ಸಂವತ್ಸರಗಳು ಉದಕಸಮುದ್ರದಲ್ಲಿ ಶಯನಿಸಿದವನಾದನು ॥೪೧॥ ಶ್ರೀಮಹಾವಿಷ್ಣು
ವು ಈಪರಿ ಜಲಶಾಯಿಯಾಗಲು ಬಳಿಕ ಚತುರ್ಮುಖನು ಶ್ರೀಮನ್ನಾರಾಯಣ ನಾಭಿಯಲ್ಲಿ ಪುಟ್ಟಿದ ಸುವರ್ಣವಿಕಾರ
ಮಾದ ಕಮಲವಂ ಹೊಕ್ಕು ಅದರೊಳು ಕುಳಿತುಕೊಂಡಿರಲು, ಆಗಮಹಾಯೋಗವು ಬ್ರಹ್ಮನಿಗೆ ಆವರಿಸಿತು ॥೪೩॥ ಯೋ
ಗಾಭ್ಯಾಸತತ್ಪರನಾಗಿ ಆ ಕಮಲದಿಂದ ಹೊರಗೆಬಂದು ಸಮಸ್ತವಾದ ಭೂಮಿಯನ್ನೂ ವೃಕ್ಷಸಹಿತವಾದ ಪರ್ವತಗಳ
ನ್ನೂ ಸಹ ಸೃಜಿಸಿ, ಬಳಕ ಮನುಷ್ಯರನ್ನೂ ಸರ್ಪಗಳನ್ನೂ ಮತ್ತು ಬಸುರೊಳಗೆಶೋಣಿತ ಶುಕ್ಲಗಳಿಂದುಂಟಾಗುವಪಿಂ
ಡದಿಂದ ಸಂಭವಿಸುವ ಪ್ರಾಣಿಗಳನ್ನೂ, ಮೊಟ್ಟೆಯಿಂದ ಹುಟ್ಟುವ ಜಂತುಗಳನ್ನು ಸಹ ಸೃಷ್ಟಿ ಮಾಡುವಂಥಾವನಾದನು॥
ಆ ಬ್ರಹ್ಮನ ಶರೀರದ ಕೊಳೆಯಿಂದ ಕೈಟಭನೆಂಬರಾಕ್ಷಸನು ಮಧ್ವಸುರನಿಂದೊಡಗೂಡಿ ಸಂಜನಿಸಿದನು. ಆ ದಾನವ
ರೀರ್ವರು ಭಯಂಕರವಾದ ಆಕಾರವುಳ್ಳವರಾಗಿಯೂ ಹೊಂದಲಸಾಧ್ಯರಾಗಿಯೂ ಇರುವಂಥಾವರಾದರು ॥೪೬॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನೇವೌ ತೌ ಮಹಾವೀರ್ಯೌ ಘೋರರೂಪೌ ದುರಾಸದೌ ॥೪೬॥ ದೃಷ್ಟ್ವಾ ತು ಪ್ರಜಾಪತಿಂ ತೌ ತು ಕ್ರೋಧಾವಿಷ್ಟೌ ಬಭೂವತುಃ । ವೇಗೇನ ಮಹತಾ ತಂ ತು ಸ್ವಯಂಭುವಮಧಾವತಾಂ ॥೪೭॥ ದೃಷ್ಟ್ವಾ ಸ್ವಯಂಭುವಾ ಮುಕ್ತೋ ರಾವೋ ವೈ ವಿಕೃತಸ್ತದಾ । ತೇನ ಶಬ್ದೇನ ಸಂಪ್ರಾಪ್ತೋ ಹರೋ ವೈ ಹರಿಣಾ ಸಹ ॥೪೮॥ ಹರಿಚಕ್ರಪ್ರಹಾರೇಣ ಸೂದಿತೌ ಮಧುಕೈಟಭೌ । ಮೇದಸಾ ಪ್ಲಾವಿತಾ ಸರ್ವಾ ಪೃಥಿವೀ ಸಾ ಸಮಂತತಃ ॥೪೯॥ ಭೂಯೋ ವಿಶೋಧಿತಾ ತೇನ ಹರಿಣಾ ಲೋಕಕಾರಿಣಾ । ವಿಶುದ್ಧಾಂ ಮೇದಿನೀಂ ತಾಂ ತು ವೃಕ್ಷೈಸ್ಸರ್ವಾಮಪೂರಯತ್ ॥೫೦॥ ಓಷಧ್ಯಸ್ಸರ್ವಸಸ್ಯಾನಿ ನಿಷ್ಪಾದ್ಯಂತೇ ಪೃಥಗ್ವಿಧಾಃ । ಮೇದೋಗಂಧಾ ತು ಧರಣೀ ಮೇದಿನೀತ್ಯಭಿಸಂಜ್ಞಿತಾ ॥೫೧॥ ಯಸ್ಮಾನ್ನ ಗೃಧ್ರಸ್ಯ ಗೃಹಮುಲೂಕಸ್ಯೇತಿ ಮೇ ಮತಿಃ । ತಸ್ಮಾದ್ಗೃಧ್ರಸ್ಸ ದಂಡ್ಯೋಽಯಂ ಪಾಪಕರ್ತಾ ಪರಾಲಯೇ ॥೫೨॥ ಪೀಡಾಂ ಕರೋತಿ ಪಾಪಾತ್ಮಾ ದುರ್ವಿನೀತೋ ಮಹಾನಯಂ । ಏವಂ ಚಿಂತಯಮಾನಸ್ಯ ರಾಮಸ್ಯ ಸುಮಹಾತ್ಮನಃ ॥೫೩॥ ಅಥಾಶರೀರಿಣೀ ವಾಣ್ಯಂತರಿಕ್ಷಾದ್ಬಭೂವ ಹ । ಮಾ ವಧೀ ರಾಮ ಗೃಧ್ರಂ ತ್ವಂ ಪೂರ್ವದಗ್ಧಂ

---

ಆ ಬ್ರಹ್ಮನ, ಗಾತ್ರಮಲೋತ್ಪನ್ನೌ-ಗಾತ್ರ-ಶರೀರದ, ಮಲ-ಬೆವರುಮುಂತಾದ ಮಾಲಿನ್ಯದಿಂದ, ಉತ್ಪನ್ನೌ-ಪುಟ್ಟಿದರು, ಮಹಾವೀರ್ಯೌ-ಮಹಾಪರಾಕ್ರಮ ಶಾಲಿಗಳಾದ, ಘೋರರೂಪೌ-ಭಯಂಕರವಾದ ಆಕಾರಗಳುಳ್ಳ, ತೌ-ಪ್ರಸಿದ್ಧರಾದ, ದುರಾಸದೌ-ಹೊಂದಲಸಾಧ್ಯರಾದ, ತೌದಾನವೌ-ಆ ರಾಕ್ಷಸರು, ಪ್ರಜಾಪತಿಂ-ಸೃಷ್ಟಿಕರ್ತನಾದ ಬ್ರಹ್ಮನನ್ನು, ದೃಷ್ಟ್ವಾ-ಕಂಡು, ಕ್ರೋಧಾವಿಷ್ಟೌ-ಕೋಪಮುಳ್ಳವರು, ಬಭೂವತುಃ-ಆದರು, ಮಹತಾ-ಮಹತ್ತರವಾದ, ವೇಗೇನ-ಜವದಿಂದ, ತಂಸ್ವಯಂಭುವಂ-ಆ ಬ್ರಹ್ಮನಂಕುರಿತು, ಅಧಾವತಾಂ-ಅಟ್ಟಿಬಂದರು, ದೃಷ್ಟ್ವಾ-ಕಂಡು, ಸ್ವಯಂಭುವಾ-ಬ್ರಹ್ಮನಿಂದ, ತದಾ-ಆ ಕಾಲದಲ್ಲಿ, ವಿಕೃತಃ-ವಿಕಾರವಾದ, ರವಃ-ಶಬ್ದವು, ಮುಕ್ತಃ-ಬಿಡಲ್ಪಟ್ಟಿತು, ತೇನಶಬ್ದೇನ-ಆ ಧ್ವನಿಯಿಂದ, ಹರಃ-ಶಿವನು, ಹರಿಣಾಸಹ-ವಿಷ್ಣುವಿನಿಂ ದೊಡಗೂಡಿ, ಸಂಪ್ರಾಪ್ತಃ-ಬಂದನು ॥೪೮॥ ತೌಮಧುಕೈಟಭೌ-ಆ ಮಧುಕೈಟಭರು, ಹರಿಚಕ್ರಪ್ರಹಾರೇಣ-ಶ್ರೀಮಹಾವಿಷ್ಣುವಿನ ಚಕ್ರಪ್ರಹಾರದಿಂದ, ಸೂದಿತೌ-ಹೊಡೆಯಲ್ಪಟ್ಟರೂ, ಸರ್ವಾ-ಸಮಸ್ತವಾದ, ಸಾಪೃಥಿವೀ-ಆ ಭೂಮಿಯೂ, ಮೇದಸಾ-ಆ ಮಧುಕೈಟಭರ ಶರೀರದಕೊಳೆಯಿಂದ, ಸಮಂತತಃ-ಎಲ್ಲಾ ಕಡೆಯಲ್ಲಿಯೂ, ಪ್ಲಾವಿತಾ-ತೇಲಿತು ॥೪೯॥ ಲೋಕಧಾರಿಣಾ-ಲೋಕಗಳನ್ನು ಧರಿಸಿರುವ, ತೇನಹರಿಣಾ-ಆ ಶ್ರೀಮಹಾವಿಷ್ಣುವಿನಿಂದ, ಭೂಯಃ-ಮತ್ತೂ, ವಿಶೋಧಿತಾ-ಶೋಧಿಸಲ್ಪಟ್ಟಿತು, ವಿಶುದ್ಧಾಂ-ಪರಿಶುದ್ಧವಾದ, ಸರ್ವಾಂ-ಸಮಸ್ತವಾದ, ತಾಂಮೇದಿನೀಂ-ಆ ಭೂಮಿಯನ್ನು, ವೃಕ್ಷೈಃ-ಮರಗಳಿಂದ, ಅಪೂರಯತ್-ತುಂಬಿದನು ॥೫೦॥ ಪೃಥಗ್ವಿಧಾಃ-ನಾನಾಬಗೆಗಳಾದ, ಓಷಧ್ಯಃ-ಲತೆಗು, ಸರ್ವಸಸ್ಯಾನಿ-ಸಮಸ್ತವಾದ ಪೈರುಗಳು, ನಿಷ್ಪಾದ್ಯಂತೇ-ಹುಟ್ಟಿಸಲ್ಪಟ್ಟವು, ಮೇದೋಗಂಧಾ-ಮಧುಕೈಟಭರ ಮೇದಸ್ಸಿನಗಂಧವುಳ್ಳದ್ದಾದ ಕಾರಣವೆ, ಧರಣೀ-ಭೂಮಿಯು, ಮೇದಿನೀತಿ-ಮೇದಿನಿಎಂದು, ಅಭಿಸಂಜ್ಞಿತಾ-ಹೆಸರುಳ್ಳದ್ದಾಯಿತು ॥೫೧॥ ಯಸ್ಮಾತ್-ಯಾವಕಾರಣದ ದೆಸೆಯಿಂದ, ಗೃಹಂ-ಮನೆಯು, ಗೃಧ್ರಸ್ಯ-ಗೃಧ್ರಸಂಬಂಧವಾದದ್ದು, ನ-ಅಲ್ಲವೋ, ಉಲೂಕಸ್ಯ-ಗೂಬೆಯ ಸಂಬಂಧವಾದದ್ದೋ, ತಸ್ಮಾತ್-ಆ ಕಾರಣದ ದೆಸೆಯಿಂದ, ಪರಾಲಯೇ-ಪರಗೃಹದಲ್ಲಿ, ಪಾಪಕರ್ತಾ-ಪಾಪವನ್ನು ಮಾಡಿದ, ಸೋಯಂಗೃಧ್ರಃ-ಈ ಹದ್ದು, ದಂಡ್ಯಃ-ದಂಡಿಸತಕ್ಕದ್ದು, ಇತಿ-ಇಂತೆಂದು, ಮೇ-ನನ್ನ, ಮತಿಃ-ಬುದ್ಧಿಯು ॥೫೨॥ ಪಾಪಾತ್ಮಾ-ಪಾಪ ಬುದ್ಧಿಯುಳ್ಳ, ದುರ್ವಿನೀತಃ-ಧೂರ್ತನಾದ, ಮಹಾನ್-ಮಹತ್ತರವಾದ, ಅಯಂಗೃಧ್ರಃ-ಈ ಹದ್ದು, ಪೀಡಾಂ-ಬಾಧೆಯನ್ನು, ಕರೋತಿ-ಮಾಡುತ್ತದೆ, ಏವಂ-ಈ ಪರಿಯಾಗಿ, ಸುಮಹಾತ್ಮನಃ-ಮಹಾ ಮನಸ್ವಿಯಾದ, ರಾಮಸ್ಯ-ಶ್ರೀರಾಮನು, ಚಿಂತಯಮಾನಸ್ಯಸತಃ-ಆಲೋಚಿಸುತ್ತಿರುವಂಥಾವ ನಾಗುತ್ತಿರಲಿಕಾಗಿ, ಅಥ-ಬಳಿಕ, ಅಶರೀರಿಣೀ-ಶರೀರ ರಹಿತವಾದ, ವಾಣೀ-ವಾಕ್ಯ, ಅಂತರಿಕ್ಷಾತ್-ಅಂತರಿಕ್ಷದ ದೆಸೆಯಿಂದ, ಬಭೂವಹ-ಹುಟ್ಟಿತು, ಹೆ ರಾಮ-ಎಲೈ ಶ್ರೀರಾಮನೆ, ತ್ವಂ-ನೀನು, ತಪೋಬಲಾತ್-ತಪಶಕ್ತಿಯಿಂದ, ಪೂರ್ವದಗ್ಧಂ-ಮೊ

---

ಅವರಿಬ್ಬರು ಬ್ರಹ್ಮನಂ ಕಂಡು ಕಡು ರೋಷಮುಳ್ಳವರಾಗಿ, ಆತನನ್ನಟ್ಟಿ ಬಲುವೇಗವಾಗಿ ಓಡಿ ಬಂದವರಾಗಲೂ, ಆ ಚತುರ್ಮುಖನು ಘಟ್ಟಿಯಾಗಿ ಕೂಗಿಕೊಂಡನು. ಆ ಧ್ವನಿಯಿಂದ ಹರಿಹರರೀರ್ವರು ಬಂದವರಾದರು ॥೪೮॥ ಆಗಶ್ರೀಮಹಾವಿಷ್ಣುವು ಚಕ್ರಪ್ರಹಾರದಿಂದ ಆ ಮಧುಕೈಟಭರೀರ್ವರಂ ಧ್ವಂಸಿಸಿದಂಥಾವನಾದನು. ಆ ರಕ್ಕಸರ ಮೇದಸ್ಸಿನಿಂದ ಆ ಭೂಮಿಯೆಲ್ಲಾ ತೇಲಿಕೊಂಡು ಹೋಯಿತು, ಲೋಕಗಳನ್ನೆಲ್ಲ ಧರಿಸುತ್ತಿರುವ ಶ್ರೀಮನ್ನಾರಾಯಣನಿಂದ ಪುನಹ ಭೂಮಿಯು ಶೋಧಿಸಲ್ಪಟ್ಟು ಶುದ್ಧವಾಗಲು ಆಗ ವೃಕ್ಷಗಳಿಂದ ಆ ನೆಲವನ್ನು ತುಂಬಿ ಲತೆಗಳನ್ನೂ ಸಮಸ್ತವಾದ ಪೈರುಗಳನ್ನು ಹುಟ್ಟುಹಾಕಿದನು, ಭೂಮಿಯು ಮೇದಸ್ಸಿನ ಗಂಧಮುಳ್ಳದ್ದಾದಕಾರಣ ಮೇದಿನಿಯೆಂದು ಹೇಳಲ್ಪಟ್ಟಿತು ॥೫೧॥ ಈ ಹೇತುವಿನಿಂದ ಈಗ ವಿವಾದಾಸ್ಪದವಾಗಿರುವ ಮನೆಯು ಗೃಧ್ರದ್ದಲ್ಲ ಗೂಬೆಯದೆಂದು ನನಗೆತೋರುತ್ತದೆ ಆದಕಾರಣ ಪರಮಂದಿರದಲ್ಲಿ ಸೇರಿ ಅದನ್ನಾಕ್ರಮಿಸಿರುವ ಮತ್ತು ಪಾಪಿಯಾದ ಈ ಹದ್ದು ದಂಡನೀಯವಾಗಿರುವದು. ಈ ದುಷ್ಟಪ್ರಾಣಿಯು ಪರರಿಗೆ ಹಿಂಸೆಯಂಗೈಯ್ಯುತ್ತದೆ ಎಂಬದಾಗಿ ರಘುನಂದನನು ಚಿಂತಿಸುತ್ತಿರಲೂ, ಗಗನವಾಣಿಯು ನುಡಿದಂಥಾದ್ದಾಯಿತದೆಂತೆನೆ—ಎಲೈ ಶ್ರೀರಾಮನೆ! ತಪೋಬಲದಿಂದ ಪೂರ್ವದಲ್ಲಿಯೇ ದಗ್ಧವಾಗಿರ್ಪ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಪೋಬಲಾತ್ ॥೫೪॥ ಪುರಾಗೌತಮದಗ್ಧೋಯಂಪ್ರಜಾನಾಥೋನರೇಶ್ವರಃ। ಬ್ರಹ್ಮದತ್ತೇನನಾಮ್ನೈಷಶೂರಸ್ಸತ್ಯವ್ರತಶ್ಶುಚಿಃ ॥೫೫॥ ಗೃಹಮಾಗತ್ಯವಿಪ್ರೋಸ್ಯಭೋಜನಂಪ್ರತ್ಯಯಾಚತ । ಯೋವೈವರ್ಷಶತಂನೈವಭುಕ್ತವಾಂಸ್ತಪಸಿಸ್ಥಿತಃ ॥೫೬॥ ಬ್ರಹ್ಮದತ್ತಸ್ತದೈತಸ್ಯಪಾದ್ಯಮರ್ಘ್ಯಂಸ್ವಯಂನೃಪ । ಹಾರ್ದನ್ನೈವಾಕರೋತತ್ರಭೋಜನಾರ್ಥಂ ಮಹಾದ್ಯುತೇ ॥೫೭॥ ಮಾಂಸಂತಸ್ಯಾದದತ್ತತ್ರಹ್ಯಾಹಾರೇಚಮಹಾತ್ಮನಃ । ಅಥಕ್ರುದ್ಧೇನಮುನಿನಾಶಾಪೋದತ್ತೋಸ್ಯ ದಾರುಣಃ॥೫೮॥ ಗೃಧ್ರತ್ವಂಗಚ್ಛವೈರಾಜನ್ ಮಾಂಸಾದಇತಿಸೋಬ್ರವೀತ್ । ಪ್ರಸಾದಂಕುರುಧರ್ಮಜ್ಞ ಅಜ್ಞಾನಾನ್ಮೆ ಮಹಾಯಶಃ॥೫೯ ॥ ಇತಿವೈಪ್ರಾರ್ಥಿತಸ್ತೇನರಾಜ್ಞಾ ಸಋಷಿಸತ್ತಮಃ। ಉವಾಚಧರ್ಮನಿರತಶ್ಶಾಪಸ್ಯಾಂತಂಮಹಾತಪಾಃ । ಇಕ್ಷ್ವಾಕೂಣಾಂಮಹಾಭಾಗೋರಾಮೋರಾಜೀವಲೋಚನಃ।ತೇನದೃಷ್ಟೋವಿಶಾಪಸ್ತ್ವಂಭವಿತಾನರಸತ್ತಮ ॥೬೧॥ ಇತ್ಯಾ

---

ದಲೇ ದುಹಸಲ್ಪಟ್ಟ, ಗೃಧ್ರಂ-ಗೃಧ್ರವನ್ನು, ಮಾವಧೀಃ-ಹೊಡೆಯಬೇಡ ॥ ೫೪ ॥ ಪುರಾ-ಪೂರ್ವದಲ್ಲಿ, ಏಷಃ-ಈ ಹದ್ದು, ಬ್ರಹ್ಮದತ್ತೇನ-ಬ್ರಹ್ಮದತ್ತನೆಂಬ, ನಾಮ್ನಾ-ಹೆಸರಿನಿಂದ, (ಉಪಲಕ್ಷಿತಃ-ಕೂಡಿಕೊಂಡಿರುವ,) ಶೂರಃ-ವೀರನಾದ, ಸತ್ಯವ್ರತಃ-ಸತ್ಯಸಂಧನಾದ, ಶುಚಿಃ-ಪರಿಶುದ್ಧನಾದ, ಪ್ರಜಾನಾಥಃ-ಪ್ರಜೆಗಳಿಗೆಲ್ಲಾ ಅಧಿಪತಿಯಾದ, ನರೇಶ್ವರಃ-ಅರಸಾಗಿ, ಅಭೂತ್-ಇದ್ದನು, ಅಯಂ-ಇವನು, ಗೌತಮದಗ್ಧಃ-ಗೌತಮ-ಗೌತಮಮುನಿಯಿಂದ, ದಗ್ಧಃ-ದುಹಸಲ್ಪಟ್ಟನು ॥೫೫॥ ಯಃವಿಪ್ರಃ-ಯಾವ ಬ್ರಾಹ್ಮಣನು, ತಪಸಿ-ತಪದಲ್ಲಿ, ಸ್ಥಿತಃ-ಇದ್ದವನಾಗಿ, ವರ್ಷಶತಂ-ನೂರುವರುಷಗಳು, ನೈವಭುಕ್ತವಾನ್-ಭೋಜನವನ್ನು ಮಾಡಲಿಲ್ಲವೋ, ಸಃ-ಅಂಥಾಬ್ರಾಹ್ಮಣನು, ಅಸ್ಯ-ಈ ರಾಜನ, ಗೃಹಂ-ಮನೆಯನ್ನು ಕುರಿತು, ಆಗತ್ಯ- ಬಂದು, ಭೋಜನಂ-ಆ ಹಾರವನ್ನು, ಪ್ರತ್ಯಯಾಚತ-ಬೇಡಿದನು॥೫೬॥ ಹೆ ನೃಪ-ಎಲೈ ಅರಸೆ, ಹೆಮಹಾದ್ಯುತೆ-ಎಲೈ ಮಹಾಕಾಂತಿಯುಳ್ಳವನೆ, ಬ್ರಹ್ಮದತ್ತಃ-ಬ್ರಹ್ಮದತ್ತನು, ತದಾ-ಆ ಕಾಲದಲ್ಲಿ, ಏತಸ್ಯ-ಈ ಬ್ರಾಹ್ಮಣನಿಗೆ, ಭೋಜನಾರ್ಥಂ-ಅಶನಾರ್ಥವಾಗಿ, ಹಾರ್ದನ್ನೈವ-ಸೌಹಾರ್ದದಿಂದಲೆ, ಪಾದ್ಯಂ-ಪಾದ್ಯವನ್ನು, ಅರ್ಘ್ಯಂ-ಅರ್ಘ್ಯವನ್ನು, ಸ್ವಯಂ-ತಾನೆ, ತತ್ರ-ಆ ಮನೆಯಲ್ಲಿ, ಅಕರೋತ್-ಮಾಡಿದನು ॥೫೭॥ ತತ್ರ-ಆ ಮನೆಯಲ್ಲಿ, ಆಹಾರೇಚ-ಭೋಜನದಲ್ಲಿ, ಮಹಾತ್ಮನಃ-ಮಹಾನುಭಾವನಾದ, ತಸ್ಯ-ಆ ಬ್ರಾಹ್ಮಣನಿಗೆ, ಮಾಂಸಂ-ಮಾಂಸವನ್ನು, ಅದದತ್-ಕೊಟ್ಟನು, ಅಥ-ಬಳಿಕ, ಕ್ರುದ್ಧೇನ-ಕುಪಿತನಾದ, ಮುನಿನಾ-ಋಷಿಯಿಂದ, ಅಸ್ಯ-ಈ ರಾಜನಿಗೆ, ದಾರುಣಃ-ಕ್ರೂರವಾದ, ಶಾಪಃ-ಶಾಪವು, ದತ್ತಃ-ಕೊಡಲ್ಪಟ್ಟಿತು ॥೫೮॥ ಹೆ ರಾಜನ್-ಎಲೈ ಅರಸೆ, ಮಾಂಸಾದಃ-ಮಾಂಸವನ್ನು ಭುಜಿಸುವನಾಗಿ, ಗೃಧ್ರತ್ವಂ-ಗೃಧ್ರಭಾವವನ್ನು, ಗಚ್ಛ-ಹೊಂದು, ಇತಿ-ಇಂತೆಂದು, ಸಃ-ಆ ಬ್ರಾಹ್ಮಣನು, ಅಬ್ರವೀತ್-ನುಡಿದನು ॥೫೮॥ ಹೆ ಧರ್ಮಜ್ಞ-ಎಲೈ ಧರ್ಮವನ್ನರಿತವನೆ,ಹೆ ಮಹಾಯಶಃ-ಎಲೈ ಮಹಾಕೀರ್ತಿವಂತನೆ,ಅಜ್ಞಾನಾತ್-ಅಜ್ಞಾನದ ದೆಸೆಯಿಂದ, ಮೇ-ನನಗೆ, ಪ್ರಸಾದಂ-ಅನುಗ್ರಹವನ್ನು, ಕುರು-ಮಾಡು, ಇತಿ-ಇಂತೆಂದು, ತೇನರಾಜ್ಞಾ-ಆ ಬ್ರಹ್ಮದತ್ತನಿಂದ, ಪ್ರಾರ್ಥಿತಃ-ಪ್ರಾರ್ಥಿಸಲ್ಪಟ್ಟ, ಋಷಿಸತ್ತಮಃ-ಋಷಿಶ್ರೇಷ್ಠನಾದ, ಮಹಾತಪಾಃ-ಬಹುತಪಸ್ವಿಯಾದ, ಸಃ-ಆ ಮುನಿಯು, ಧರ್ಮನಿರತಃ-ಧರ್ಮದಲ್ಲಿ ಆಸಕ್ತಿಯುಳ್ಳವನಾಗಿ, ಶಾಪಸ್ಯ-ಶಾಪದ, ಅಂತಂ-ತುದಿಯನ್ನು, ಉವಾಚ-ಹೇಳಿದನು ॥೬೦॥ ಹೆ ನರಸತ್ತಮ-ಎಲೈ ನರಶ್ರೇಷ್ಠನೆ, ಇಕ್ಷ್ವಾಕೂಣಾಂ-ಇಕ್ಷ್ವಾಕುವಂಶಸ್ಥ ರಾಜರೊಳಗೆ, ಮಹಾಭಾಗಃ-ಪುಣ್ಯಶಾಲಿಯಾದ, ರಾಜೀವಲೋಚನಃ-ಕಮಲಗಳಿಗೆ ಸಮಾನವಾದ ನೇತ್ರಗಳುಳ್ಳ, ರಾಮಃ-ಶ್ರೀರಾಮನೆಂಬ ರಾಜನು, ಭವಿತಾ-ಆಗುವನು, ತೇನ-ಆತನಿಂದ, ತ್ವಂ-ನೀನು, ದೃಷ್ಟಃ-ನೋಡಲ್ಪಟ್ಟವನಾದರೆ, ವಿಶಾಪಃ- ಶಾಪರಹಿತನಾಗುವಿ, ಇತಿ-ಇಂತೆಂದು, ಉವಾಚ-ಹೇಳಿದನು ॥೬೧॥ಇತಿ-ಇಂತೆಂದು, ಆಕಾಶಗತಾಂ-ಗಗನವನ್ನು ಹೊಂದಿದ, ವಾಣೀಂ-ವಾಕ್ಯವನ್ನು, ನಿಶಮ್ಯ-ಕೇಳಿ, ಕೃಪಾನಿಧಿಃ- ದಯಾಸಮುದ್ರ

---

ಗೃಧ್ರವಂ ಹೊಡೆಯಬೇಡ ॥೫೪॥ ಈ ಗೃಧ್ರವು ಪೂರ್ವಕಾಲದಲ್ಲಿ ಬ್ರಹ್ಮದತ್ತನೆಂಬ ನರನಾಥನಾಗಿದ್ದು ಗೌತಮಮುನಿಯಿಂದ ಶಪಿಸಲ್ಪಟ್ಟು ದಗ್ಧನಾದನು॥೫೫॥ಯಾಕೆಂದರೆ ಯಾವ ಗೌತಮ ಮಹಾಮುನಿಯು ನೂರುವರ್ಷಗಳು ಭೋಜನವಂಗೈಯದೆ ತಪಸ್ಸು ಮಾಡುತ್ತಿರುವನಾಗಿದ್ದನೊ, ಆ ಮಹಾಮುನಿಯು ಈ ಬ್ರಹ್ಮದತ್ತನೆಂಬ ರಾಜನ ಮನೆಗೆ ಗಮಿಸಿ ಭೋಜನವಂ ಯಾಚಿಸಿದನು॥೫೬॥ಎಲೈ ಮಹಾ ತೇಜಸ್ವಿಯೇ ! ಆ ರಾಜನು ಆಗ ಸ್ವಯಮೇವ ಅರ್ಘ್ಯ ಪಾದ್ಯಾದಿಗಳಂ ಕೊಟ್ಟು, ಸೌಹಾರ್ದದಿಂದ ಭೋಜನಾರ್ಥವಾಗಿ ಮಾಂಸವಂ ಪಕ್ವಮಾಡಿಸಿ ಊಟಮಾಡುವ ಸಮಯದಲ್ಲಿ ಆ ಬ್ರಾಹ್ಮಣನಿಗೆ ಕೊಟ್ಟವನಾಗಲು, ಆ ಮಹಾಮುನಿಯು ಕುಪಿತನಾಗಿ ಈ ರಾಜನಿಗೆ ದಾರುಣವಾದ ಶಾಪವಂಕೊಟ್ಟನು ॥೫೮॥ (ಅದೇನೆಂದರೆ) ಎಲೈರಾಜನೇ ! ನೀನು ಮಾಂಸವಂ ಭುಜಿಸುವನಾದ ಕಾರಣ ಗೃಧ್ರವಾಗಿ ಹುಟ್ಟುವಂಥಾವನಾಗೆಂದು ಶಾಪವಂ ಕೊಡಲು, ಆ ರಾಜನು ಎಲೈಬ್ರಾಹ್ಮಣೋತ್ತಮನೇ ! ಅಜ್ಞಾನದಿಂದ ಈ ಪರಿಮಾಡಿದಂಥಾವನಾದೆ, ಇದನ್ನು ಕ್ಷಮಿಸೆಂದು ಪ್ರಾರ್ಥಿಸಲು, ಆ ಗೌತಮಋಷಿಯು ಶಾಪಕ್ಕೆ ಅಂತವಂ ಪೇಳಿದನದೆಂತೆನೆ॥೬೦॥ ಇಕ್ಷ್ವಾಕುವಂಶದಲ್ಲಿ ಮಹಾಪುಣ್ಯವಂತನಾಗಿಯೂ ಪುಂಡರೀಕಾಕ್ಷನಾಗಿಯೂ, ಇರುವ ಶ್ರೀರಾಮನೆಂಬವನು ಹುಟ್ಟುವನು. ಆತನ ಸಂದರ್ಶನವಾದರೆ ನಿನಗೆ ಈ ಶಾಪವು ತೊಲಗುವದೆಂದು ಆ ಮಹಾಮುನಿಯು ಪೇಳಿದನೆಂದು ನುಡಿಯುತ್ತಿರುವ ಗಗನವಾಣಿಯಂಕೇಳಿ ಶ್ರೀರಾಮನು ಆ ಗೃಧ್ರಕ್ಕೆ ದಂಡನೆಯಂಗೈಯಲಿಲ್ಲ ॥೬೧॥ ಮಹಾತ್ಮನಾದ ಶ್ರೀರಾಮನಿಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಾಶಗತಾಂವಾಣೀಂನಿಶಮ್ಯಸಕೃಪಾನಿಧಿಃ । ರಾಮೋರಾಜೀವಪತ್ರಾಕ್ಷಃದಂಡಂತಂನಚಕಾರಹ॥೬೦॥ದೃಷ್ಟೋರಾಮೇಣ ಸ್ಪೃಷ್ಟಶ್ಚ ತತ್‌ಕ್ಷಣಾದ್ವೈಮಹಾತ್ಮನಾ । ಗೃಧ್ರಂತ್ವಂತ್ಯಕ್ತ್ವಾ ರಾಜಾದಿವ್ಯಗಂಧಾನುಲೇಪನಃ ॥೬೩॥ಪುರುಷೋದಿವ್ಯ ರೂಪೋಭೂದ್ಬಭಾಷೇತಂರಘೂತ್ತಮಂ । ಸಾಧುರಾಘವಧರ್ಮಜ್ಞತ್ವತ್ಪ್ರಸಾದಾದಹಂವಿಭೋ । ವಿಮುಕ್ತೋನರಕಾದಾ ಮಶಾಪಸ್ಯಾಂತಃಕೃತಸ್ತ್ವಯಾ ... ... ... ... ॥೬೪॥

—...ಅಧಿಕಪಾಠಾಗತಶ್ಲೋಕಾಃ ಸಮಾಪ್ತಾಃ...—

ತತೋದೇವಾಃಪ್ರಯಾತಾಸ್ತೇವಿಮಾನೈರ್ಬಹುವಿಸ್ತರೈಃ।ರಾಮೋಪ್ಯನುಜಗಾಮಾಶುಕುಂಭಯೋನೇಸ್ತಪೋವನಂ॥೧೦ ದೃಷ್ಟ್ವಾತುದೇವಾನ್ ಸಂಪ್ರಾಪ್ತಾನಗಸ್ತ್ಯಸ್ತಪಸಾಂನಿಧಿಃ।ಅರ್ಚಯಾಮಾಸಧರ್ಮಾತ್ಮಾ ಸರ್ವಾಂಸ್ತಾನವಿಶೇಷತಃ॥೧೧॥ ಪ್ರತಿಗೃಹ್ಯತತಃಪೂಜಾಂಸಂಪೂಜ್ಯಚಮಹಾಮುನಿಂ । ಜಗ್ಮುಸ್ತೇತ್ರಿದಶಾಹೃಷ್ಟಾನಾಕಪೃಷ್ಠಂಸಹಾನುಗೈಃ ॥೧೨॥ ಗ ತೇಷುತೇಷುಕಾಕುತ್ಸ್ಥಃಪುಷ್ಪಕಾದವರುಹ್ಯಚ । ತತೋಭಿವಾದಯಾಮಾಸಅಗಸ್ತ್ಯಮೃಷಿಸತ್ತಮಂ ॥ ೧೩ ॥ ಸೋಭಿ

---

ನಾದ, ರಾಜೀವಪತ್ರಾಕ್ಷಃ-ತಾವರೆ ಎಸಳೆಯಂತಿರುವ ಕಣ್ಣುಗಳುಳ್ಳ, ರಾಮಃ-ಶ್ರೀರಾಮನು, ತಂ-ಆ ಗೃಧ್ರವನ್ನು ಕುರಿತು, ದಂಡಂ-ಶಿಕ್ಷೆಯ ನ್ನು, ನಚಕಾರಹ-ಮಾಡಲಿಲ್ಲ ॥೬೦॥ ಮಹಾತ್ಮನಾ-ಮಹಾನುಭಾವನಾದ, ರಾಮೇಣ-ಶ್ರೀರಾಮನಿಂದ, ದೃಷ್ಟಃ-ನೋಡಲ್ಪಟ್ಟ, ಸ್ಪೃಷ್ಟಶ್ಚ - ಸ್ಪ ರ್ಶಿಯೂಮಾಡಲ್ಪಟ್ಟ ಆಗೃಧ್ರವು, ತತ್‌ಕ್ಷಣಾತ್-ಆ ಕ್ಷಣದಲ್ಲಿ, ಗೃಧ್ರತ್ವಂ-ಗೃಧ್ರಭಾವವನ್ನು, ತ್ಯಕ್ತ್ವಾ-ಬಿಟ್ಟಿತು, ದಿವ್ಯಗಂಧಾನುಲೇಪನಃ- ಉ ತ್ತಮವಾದ ಗಂಧಲೇಪನವುಳ್ಳ, ರಾಜಾ-ಅರಸಾಗಿ, ದಿವ್ಯರೂಪಃ-ದೇವತಾರೂಪವುಳ್ಳ, ಪುರುಷಃ-ಪುರುಷನು, ಅಭೂತ್- ಆದನು, ತಂರಘೂತ್ತ ಮಂ-ಆ ಶ್ರೀರಾಮನಂ ಕುರಿತು, ಬಭಾಷೇ-ಮಾತಾಡಿದನು ॥೬೩॥ಹೇರಾಘವ-ಎಲೈ ರಘುವಂಶೋತ್ಪನ್ನನೆ, ಹೇ ಧರ್ಮಜ್ಞ-ಎಲೈಧರ್ಮವನ್ನರಿತವನೆ, ಹೇವಿ ಭೋ-ಎಲೈ ಸ್ವಾಮಿಯೆ, ಹೇರಾಮ-ಎಲೈ ಶ್ರೀರಾಮನೆ, ತ್ವತ್ಪ್ರಸಾದಾತ್-ನಿನ್ನ ಅನುಗ್ರಹದ ದೆಸೆಯಿಂದ, ಅಹಂ-ನಾನು, ನರಕಾತ್-ನರಕದದೆಸೆಯಿಂ ದ, ವಿಮುಕ್ತಃ-ಬಿಡಲ್ಪಟ್ಟೆನು, ತ್ವಯಾ-ನಿನ್ನಿಂದ, ಶಾಪಸ್ಯ-ಶಾಪದ, ಅಂತಃ-ಕೊನೆಯು, ಕೃತಃ-ಮಾಡಲ್ಪಟ್ಟಿತು ॥೬೪॥

ಅಧಿಕಪಾಠಸ್ಸಮಾಪ್ತಃ.

ತತಃ-ಬಳಿಕ, ತೇದೇವಾಃ-ಆದೇವತೆಗಳು, ಬಹುವಿಸ್ತರೈಃ-ಬಹಳವಿಸ್ತಾರವಾದ, ವಿಮಾನೈಃ-ವಿಮಾನಗಳಿಂದ, ಪ್ರಯಾತಾಃ-ಹೊರಟರು,ರಾಮೋ ಪಿ-ಶ್ರೀರಾಮನೂಕೂಡ, ಆಶು-ಜಾಗ್ರತೆಯಾಗಿ, ಕುಂಭಯೋನೇಃ-ಅಗಸ್ತ್ಯಮಹಾಮುನಿಯ, ತಪೋವನಂ-ತಪೋವನವನ್ನು, ಅನುಜಗಾಮ-ಅನುಸರಿ ಸಿಬಂದನು ॥ ೧೦ ॥ ತಪಸಾಂ-ತಪಸ್ಸುಗಳಿಗೆ, ನಿಧಿಃ-ನಿಕ್ಷೇಪನಾದ, ಧರ್ಮಾತ್ಮಾ-ಧರ್ಮಸ್ವಭಾವವುಳ್ಳ, ಅಗಸ್ತ್ಯಸ್ತು-ಅಗಸ್ತ್ಯಮುನಿಯಾದರೆ,ಸಂಪ್ರಾ ಪ್ತಾನ್-ಬಂದಂಥಾವರಾದ, ದೇವಾನ್-ದೇವತೆಗಳನ್ನು, ದೃಷ್ಟ್ವಾ-ಕಂಡು, ತಾನ್‌ಸರ್ವಾನ್-ಅವರೆಲ್ಲರನ್ನು, ಅವಿಶೇಷತಃ-ಹೆಚ್ಚು ಕಡಮೆಯಿಲ್ಲದಂತೆ-ಅರ್ಚ ಯಾಮಾಸ-ಪೂಜಿಸಿದನು, ॥೧೧॥ ತತಃ-ಬಳಿಕ, ತೇತ್ರಿದಶಾಃ-ಆ ದೇವತೆಗಳು, ಪೂಜಾಂ-ಪೂಜೆಯನ್ನು, ಪ್ರತಿಗೃಹ್ಯ-ಪರಿಗ್ರಹಿಸಿ, ಮಹಾಮುನಿಂಚ-ಅ ಗಸ್ತ್ಯಋಷಿಯನ್ನೂ ಕೂಡೆ, ಸಂಪೂಜ್ಯ-ಪೂಜಿಸಿ, ಹೃಷ್ಟಾಃ-ಸಂತೋಷಚಿತ್ತರಾಗಿ, ಅನುಗೈಸ್ಸಹ-ಸೇವಕರಿಂದೊಡಗೂಡಿ, ನಾಕಪೃಷ್ಠಂ-ಸ್ವರ್ಗವ ನ್ನು ಕುರಿತು, ಜಗ್ಮುಃ-ತೆರಳಿದರು ॥ ೧೨ ॥ ತೇಷು-ಆದೇವತೆಗಳು, ಗತೇಷುಸತ್ಸು-ಹೊರಟವರಾಗುತಿರಲಾಗಿ, ಕಾಕುತ್‌ಸ್ಥಶ್ಚ-ಶ್ರೀರಾಮನೂಕೂಡ, ಪುಷ್ಪಕಾತ್-ಪುಷ್ಪಕವಿಮಾನದದೆಸೆಯಿಂದ, ಅವರುಹ್ಯ-ಇಳಿದು, ತತಃ-ಬಳಿಕ, ಋಷಿಸತ್ತಮಂ-ಮುನಿಶ್ರೇಷ್ಠನಾದ, ಅಗಸ್ತ್ಯಂ-ಅಗಸ್ತ್ಯನಂಕುರಿತು ಅಭಿವಾದಯಾಮಾಸ-ನಮಸ್ಕರಿಸಿದನು॥೧೩॥ ನರಾಧಿಪಃ-ಅರಸಾದ, ಸಃ-ಆಶ್ರೀರಾಮನು, ತೇಜಸಾ-ಬ್ರಹ್ಮತೇಜಸ್ಸಿನಿಂದ, ಜ್ವಲಂತಂ-ಪ್ರಜ್ವಲಿಸುತ್ತಿರುವ ಮಹಾತ್ಮಾನಂ-ಮಹಾಮನಸ್ವಿಯಾದ, ಅಗಸ್ತ್ಯಮುನಿಯನ್ನು ಕುರಿತು, ಅಭಿವಾದ್ಯ-ನಮಸ್ಕರಿಸಿ, ಪರಮಂ-ಉತ್ತಮವಾದ, ಆತಿಥ್ಯಂ-ಅತಿಥಿಸತ್ಕಾರ

---

ದ ನೋಡಲ್ಪಟ್ಟವನಾಗಿ ಆ ರಾಜನು ಗೃಧ್ರಭಾವವಂಬಿಟ್ಟು ದಿವ್ಯವಾದ ಗಂಧವಂ ಹಚ್ಚಿಕೊಂಡವನಾಗಿ, ದಿವ್ಯಪುರುಷ ನಾದನು. ಆಗ ಶ್ರೀರಾಮನಂ ಕುರಿತು ಎಲೈ ರಘುವಂಶೋತ್ಪನ್ನನೇ ! ಧರ್ಮಜ್ಞನೇ ! ಎಲೈಸ್ವಾಮಿಯೇ ! ನಿನ್ನನು ಗ್ರಹದಿಂದ ನಾನು ನರಕವಂ ದಾಂಟಿ ಶಾಪದದೆಶೆಯಿಂದ ಬಿಡುಗಡೆಯಾದೆನೆಂದು ನುಡಿದವನಾದನು ॥೬೪॥

—...ಅಧಿಕಪಾಠ ಶ್ಲೋಕಂಗಳು ಮುಗಿದವು...—

ಬಳಿಕ ದೇವತೆಗಳೆಲ್ಲ ವಿಮಾನಗಳಲ್ಲಿ ಕುಳಿತುಕೊಂಡು ತೆರಳಿದವರಾಗಲೂ, ಶ್ರೀರಾಮನು ಅಗಸ್ತ್ಯ ಮಹಾಮು ನಿಯ ಆಶ್ರಮವಂಕುರಿತು ಬಂದವನಾದನು ॥೧೧॥ ತಪಸ್ವಿಗಳೊಳಗೆ ಉತ್ತಮನಾದ ಮತ್ತೂ ಧರ್ಮಸ್ವಭಾವಮು ಳ್ಳ ಆ ಅಗಸ್ತ್ಯಮಹಾಮುನಿಯು ಸಂಪ್ರಾಪ್ತರಾದ ಆ ದೇವತೆಗಳಂಕಾಣುತ್ತಲೇ ತಾರತಮ್ಯವಿಲ್ಲದಂತೆ ಅವರೆಲ್ಲರಂ ಪೂಜಿಸಿದಂಥಾವನಾದನು ॥೧೨॥ ಬಳಿಕ ಆ ದೇವತೆಗಳೆಲ್ಲರು ಆ ಮುನಿಯಿಂದ ಅರ್ಚಿಸಲ್ಪಟ್ಟವರಾಗಿ ಆತನನ್ನೂ ಪೂ ಜಿಸಿ, ಸಂತೋಷಚಿತ್ತರಾಗಿ ಸೇವಕರಿಂದೊಡಗೂಡಿ ಸ್ವರ್ಗವಂಕುರಿತು ತೆರಳಿದರು ॥೧೩॥ ಅವರೆಲ್ಲರೂ ಪೊರಟಬ ಳಿಕ ರಘುನಂದನನು ಪುಷ್ಪಕ ವಿಮಾನದಿಂದಿಳಿದು, ಋಷಿಶ್ರೇಷ್ಠನಾದ ಮತ್ತೂ ಬ್ರಹ್ಮತೇಜಸ್ಸಿನಿಂದ ಹೊಳೆಯುತ್ತಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಾದ್ಯಮುಹಾತ್ಮಾನಂಜ್ವಲಂತಮಿವತೇಜಸಾ । ಆತಿಥ್ಯಂಪರಮಂಪ್ರಾಪ್ಯನಿಷಸಾದನರಾಧಿಪಃ ॥೧೪॥ ತಮುವಾಚಮಹಾತೇಜಾಃಕುಂಭಯೋನಿರ್ಮಹಾಯಶಾಃ । ಸ್ವಾಗತಂತೇನರವ್ಯಾಘ್ರದಿಷ್ಟ್ಯಾಪ್ರಾಪ್ತೋಸಿರಾಘವ ॥೧೫॥ ತ್ವಂಮೇಬಹುಮತೋರಾಮಗುಣೈರ್ಬಹುಭಿರುತ್ತಮೈಃ । ಅತಿಥಿಃಪೂಜನೀಯಶ್ಚಮಮನಿತ್ಯಂಹೃದಿಸ್ಥಿತಃ ॥೧೬॥ ಸುರಾಹಿಕಥಯಂತಿತ್ವಾಮಾಗತಂಶೂದ್ರಘಾತಿನಂ । ಬ್ರಾಹ್ಮಣಸ್ಯತುಧರ್ಮೇಣತ್ವಯಾಸಂಜೀವಿತಸ್ಸುತಃ ॥೧೭॥ ಉಷ್ಯತಾಂಚೈಕರಜನೀಸಕಾಶೇಮಮರಾಘವ । ಪ್ರಭಾತೇಪುಷ್ಪಕೇನತ್ವಂಗಂತಾಸಿಪುರಮವಹಿ ॥೧೮॥ ಇದಂಚಾಭರಣಂಸೌಮ್ಯನಿರ್ಮಿತಂವಿಶ್ವಕರ್ಮಣಾ । ದಿವ್ಯಂದಿವ್ಯೇನವಪುಷಾದೀಪ್ಯಮಾನಂಸ್ವತೇಜಸಾ ॥ ಪ್ರತಿಗೃಹ್ಣೀಷ್ವಕಾಕುತ್ಸ್ಥಮತ್ಪ್ರಿಯಂಕುರುರಾಘವ ॥೧೯॥ ದತ್ತಸ್ಯಹಿಪುನರ್ದಾನಂಸುಮಹತ್ಫಲಮುಚ್ಯತೇ ॥೨೦॥ ಭರಣೇಹಿಭವಾನ್ ಶಕ್ತಸ್ಸೇಂದ್ರಾಣಾಂಮರುತಾಮಪಿ । ತಸ್ಮಾದ್ದಾಸ್ಯಾಮಿವಿಧಿವತ್ಪ್ರತೀಚ್ಛತ್ವಂನರರ್ಷಭ ॥೨೧॥ ಅಥೋವಾಚಮಹಾಬಾಹುರಿಕ್ಷ್ವಾಕೂಣಾಂಮಹಾರಥಃ । ರಾಮಃಪರಮ

---

ವನ್ನು, ಪ್ರಾಪ್ಯ-ಹೊಂದಿ, ನಿಷಸಾದ-ಕುಳಿತುಕೊಂಡನು, ॥ ೧೪ ॥ ಮಹಾತೇಜಾಃ-ಅತಿತೇಜಸ್ವಿಯಾದ, ಮಹಾಯಶಾಃ-ಬಹುಯಶೋವಂತನಾದ, ಕುಂಭಯೋನಿಃ-ಅಗಸ್ತ್ಯಮಹಾಮುನಿಯು, ತಂ-ಆ ಶ್ರೀರಾಮನಂಕುರಿತು, ಹೇನರವ್ಯಾಘ್ರ-ಎಲೈಪುರುಷಶ್ರೇಷ್ಠನೇ, ಹೇರಾಘವ-ಎಲೈ ರಘುವಂಶೋತ್ಪನ್ನನೇ, ತೇ-ನಿನಗೆ-ಸ್ವಾಗತಂ-ಸುಖಾಗಮನವೇ, ದಿಷ್ಟ್ಯಾ-ದೈವಾಧೀನದಿಂದ, ಪ್ರಾಪ್ತಃ-ಬಂದವನು, ಅಸಿ-ಆದೆ, ॥ ೧೫ ॥ ಹೇರಾಮ-ಎಲೈಶ್ರೀರಾಮನೆ, ಉತ್ತಮೈಃ-ಉತ್ಕೃಷ್ಟವಾದ, ಬಹುಭಿಃ-ಅನೇಕವಾದ, ಗುಣೈಃ-ಗುಣಗಳಿಂದ, ಮೇ-ನನಗೆ, ಬಹುಮತಃ-ಬಹಳಇಷ್ಟನಾದ, ತ್ವಂ-ನೀನು, ನಿತ್ಯಂ-ನಿರಂತರವು, ಮಮ-ನನ್ನ, ಹೃದಿ-ಹೃದಯದಲ್ಲಿ, ಸ್ಥಿತಃ-ಇದ್ದಿ, ಅತಿಥಿಃ-ಅಭ್ಯಾಗತನಾದಕಾರಣ, ಪೂಜನೀಯಶ್ಚ-ಪೂಜಾಯೋಗ್ಯನು॥೧೬॥ ಸುರಾಃ-ದೇವತೆಗಳು, ಆಗತಂ-ಬಂದ, ತ್ವಾಂ-ನಿನ್ನನ್ನು, ಶೂದ್ರಘಾತಿನಂ – ಶೂದ್ರನಂನುಹೊಡೆದವನೆಂದು, ಕಥಯಂತಿ-ಹೇಳುತ್ತಾರಷ್ಟೆ, ತ್ವಯಾ-ನಿನ್ನಿಂದ, ಬ್ರಾಹ್ಮಣಸ್ಯ-ಬ್ರಾಹ್ಮಣನ, ಸುತಃ-ಕುಮಾರನು, ಸಂಜೀವಿತಃ-ಬದುಕಿಸಲ್ಪಟ್ಟನು ॥೧೭॥ ಹೇರಾಘವ-ಎಲೈ ಶ್ರೀರಾಮನೆ, ಮಮ-ನನ್ನ, ಸಕಾಶೇ-ಸಮೀಪದಲ್ಲಿ, ಏಕರಜನೀ-ಒಂದುರಾತ್ರಿಯು, ಉಷ್ಯತಾಂ-ಇರಲ್ಪಡಲಿ, ಪ್ರಭಾತೇ-ಪ್ರಾತಃಕಾಲದಲ್ಲಿ, ತ್ವಂ-ನೀನು, ಪುಷ್ಪಕೇನ-ಪುಷ್ಪಕ ವಿಮಾನದಿಂದ, ಪುರಂ-ಪಟ್ಟಣವಂಕುರಿತು, ಗಂತಾಸ್ಯವಹಿ-ಹೋಗಲೀಹೋಗುತ್ತೀ ॥ ೧೮ ॥ ಹೇಸೌಮ್ಯ-ಎಲೈಪ್ರಸನ್ನನೆ, ಹೇಕಾಕುತ್ಸ್ಥ-ಎಲೈಕುಕುತ್ಸ್ಥವಂಶೋತ್ಪನ್ನನೆ, ವಿಶ್ವಕರ್ಮಣಾ-ವಿಶ್ವಕರ್ಮಬ್ರಹ್ಮನಿಂದ, ನಿರ್ಮಿತಂ-ನಿರ್ಮಿಸಲ್ಪಟ್ಟ, ದಿವ್ಯೇನ-ದೇವತಾಸಂಬಂಧವಾದ, ವಪುಷಾ-ಶರೀರದಿಂದ, ದಿವ್ಯಂ-ಮನೋಹರವಾದ, ಸ್ವತೇಜಸಾ-ತನ್ನ ತೇಜಸ್ಸಿನಿಂದ, ದೀಪ್ಯಮಾನಂ-ಹೊಳೆಯುತ್ತಿರುವ, ಇದಂಚ-ಈ ಪುರೋವರ್ತಿಯಾದ, ಆಭರಣಂ-ಒಡವೆಯನ್ನು, ಪ್ರತಿಗೃಹ್ಣೀಷ್ವ-ಪರಿಗ್ರಹಿಸು, ಹೇರಾಘವ-ಎಲೈರಘುವಂಶೋತ್ಪನ್ನನೆ, ಮತ್ಪ್ರಿಯಂ-ನನ್ನ ಇಷ್ಟವನ್ನು, ಕುರು-ಮಾಡು॥೧೯॥ ದತ್ತಸ್ಯ-ನನಗೆಕೊಡಲ್ಪಟ್ಟ, ಈ ಆಭರಣದ, ಪುನರ್ದಾನಂ-ಮತ್ತೂ ಮತ್ತೊಬ್ಬನಿಗೆ ಕೊಡೋಣವು, ಸುಮಹತ್ಫಲಂ-ಬಹಳ ಫಲವುಳ್ಳದ್ದಾಗಿ, ಉಚ್ಯತೇ-ಹೇಳಲ್ಪಡುತ್ತೆ॥೨೦॥ ಹೇನರರ್ಷಭ- ಎಲೈ ಪುರುಷಶ್ರೇಷ್ಠನೆ, ಭವಾನ್-ನೀನು, ಸೇಂದ್ರಾಣಾಂ-ಇಂದ್ರನಿಂದೊಡಗೂಡಿದ, ಮರುತಾಮಪಿ-ದೇವತೆಗಳ, ಭರಣೇ-ಸಂರಕ್ಷಣದಲ್ಲಿ, ಶಕ್ತಃ-ಸಮರ್ಥನು, ತಸ್ಮಾತ್-ಆಕಾರಣದ ದೆಸೆಯಿಂದ, ದಾಸ್ಯಾಮಿ-ಕೊಡುತ್ತೇನೆ, ತ್ವಂ-ನೀನು, ವಿಧಿವತ್-ಯಥಾಶಾಸ್ತ್ರವಾಗಿ, ಪ್ರತೀಚ್ಛ-ತೆಗದುಕೊ, ॥೨೧॥ ಅಥ-ಬಳಿಕ, ಇಕ್ಷ್ವಾಕೂಣಾಂ-ಇಕ್ಷ್ವಾಕುವಂಶಸ್ಥರೊಳಗೆ, ಮಹಾಬಾಹುಃ-ಮಹಾಭುಜಪರಾಕ್ರಮಶಾಲಿಯಾದ, ಮಹಾರಥಃ-ಮಹಾರಥಿಕನಾದ, ಮತಿಮತಾಂ-ಬುದ್ಧಿಮಂತರೊಳಗೆ, ಶ್ರೇಷ್ಠಃ-ಉತ್ತಮನಾದ, ರಾಮಃ-ಶ್ರೀರಾಮನು, ಕ್ಷತ್ರಧರ್ಮಂ-ರಾಜಧರ್ಮವನ್ನು, ಅನುಸ್ಮರನ್-ಜ್ಞಾಪಿಸಿಕೊಂಡಂ

---

ರುವನೊ ಏನೊ ಎಂಬಂತಿರುವ ಅಗಸ್ತ್ಯ ಮಹಾಮುನಿಯ ಪಾದಗಳಿಗೆ ವಂದನೆಯಂಗೈದು, ಆತನಿಂದ ಆತಿಥ್ಯವಂ ಪಡೆದು ಕುಳಿತುಕೊಂಡವನಾಗಲೂ, ಕಡುಕೀರ್ತಿವಂತನಾದ ಆ ಅಗಸ್ತ್ಯ ಮಹಾಮುನಿಯು ಶ್ರೀರಾಮನಂ ಕುರಿತು. ಎಲೈ ರಘುನಂದನನೆ ! ಸುಖಾಗಮನವೇ, ದೈವಾಧೀನದಿಂದ ಬಂದವನಾದೆ, ನೀನು ಉತ್ತಮವಾದ ಅನೇಕಗುಣಗಳಿಂದ ಯುಕ್ತನಾದಕಾರಣ ಬಹಳ ಇಷ್ಟನಾಗಿಯೂ, ಅತಿಥಿಯಾಗಿಯೂ, ಪೂಜಾಯೋಗ್ಯನಾಗಿಯೂ, ನಿರಂತರನ ಎನ್ನ ಹೃದಯದಲ್ಲಿರುವನಾಗಿಯೂ ಇರುವಂಥಾವನು, ದೇವತೆಗಳಾದರೆ ನಿನ್ನನ್ನು ಶೂದ್ರಘಾತಿಯೆಂದು ಹೇಳುತ್ತಿಧಾರೆ, ಬ್ರಾಹ್ಮಣ ಪುತ್ರನಾದ ಆ ಬಾಲಕನು ನಿನ್ನಿಂದ ಜೀವಿಸಿದಂಥಾವನಾದನು. ಈ ರಾತ್ರಿಯು ಇಲ್ಲಿಯೇಇರು, ನಾಳೆಯದಿನ ಪ್ರಾತಃಕಾಲದಲ್ಲಿ ನಿನ್ನಪುರಿಗೆ ಪೋಗಲೇ, ಪೋಗುವಿ ॥೧೮॥ ಎಲೈ ಸೌಮ್ಯನೆ ! ವಿಶ್ವಕರ್ಮ ನಿರ್ಮಿತವಾಗಿಯೂ, ದೇವತಾ ಸಂಬಂಧವಾಗಿಯೂ, ದಿವ್ಯವಾದಕಾಂತಿಯಿಂದ ಕಂಗೊಳಿಸುತ್ತಿರುವದಾಗಿಯೂ,ಇರುವ ಈ ಒಡವೆಯಂ ತೆಗದುಕೊಂಡು ಎನಗೆ ಸಂತೋಷವನ್ನುಂಟುಮಾಡು, ಒಬ್ಬನು ದಾನಮಾಗಿತ್ತದ್ದಂ ಮತ್ತೋರ್ವನಿಗೀಯುವದರಿಂದ ಮಹಾಫಲ ಮುಂಟಾಗುವದೆಂದು ಪ್ರಾಜ್ಞರು ಪೇಳುವರು, ನೀನು ಇಂದ್ರಾದಿದೇವತೆಗಳಂ ಪರಿಪಾಲಿಸುವದಕ್ಕೂ ಕೂಡಾ ಶಕ್ತನಾಗಿದ್ದೀ, ಆದಕಾರಣ ಇದನ್ನು ವಿಧ್ಯುಕ್ತವಾಗಿ ನಿನಿಗೆ ಇಯ್ಯುವೆನು, ನೀನು ಪರಿಗ್ರಹಿಸುವಂಥಾವನಾಗೆಂದು ನಿರೂಪಿಸಿದವನಾದನು ॥೨೧॥ ಇಕ್ಷ್ವಾಕುವಂಶಸ್ಥರಲ್ಲಿ ಮಹಾ ರಥಿಕನಾಗಿಯೂ ಬುದ್ಧಿಶಾಲಿಗಳೊಳಗೆ ಉತ್ತಮ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯತಾಂಶ್ರೇಷ್ಠಃ ಕ್ಷತ್ರಧರ್ಮಮನುಸ್ಮರನ್ ॥೩೨॥ ಪ್ರತಿಗ್ರಹೋವೈಭಗವನ್ ಬ್ರಾಹ್ಮಣಸ್ಯಾವಿಗರ್ಹಿತಃ। ಕ್ಷತ್ರಿಯೇಣಕಥಂ ವಿಪ್ರಪ್ರತಿಗ್ರಾಹ್ಯಂವಿಜಾನತಾ ॥ ಬ್ರಾಹ್ಮಣೇನಯದಾದತ್ತಂತನ್ಮೇವಕ್ತುಮಿಹಾರ್ಹಸಿ॥೩೩॥ ಏವಮುಕ್ತಸ್ತುರಾಮೇಣಪ್ರತ್ಯುವಾಚಮಹಾನೃಷಿಃ ॥೩೪॥ಆಸನ್ ಕೃತಯುಗೇರಾಮಬ್ರಹ್ಮಭೂತೇಪುರಾಯುಗೇ। ಅಪಾರ್ಥಿವಾಃಪ್ರಜಾಸ್ಸರ್ವಾಸ್ಸುರಾಣಾಂತುಶತಕ್ರತುಃ॥೩೫॥ ತಾಃಪ್ರಜಾಃದೇವದೇವೇಶಂರಕ್ಷಾರ್ಥಂಸಮುಪಾದ್ರವನ್। ಸುರಾಣಾಂಸ್ಥಾಪಿತೋರಾಜಾದೇವದೇವಶ್ಶತಕ್ರತುಃ ॥೩೬॥ ಪ್ರಯಚ್ಛನೋದೇವದೇವಪಾರ್ಥಿವಂಸುರಪುಂಗವಂ। ಯೇನಪೂಜಾಂಪ್ರಯುಂಜಾನಾಧೂತಪಾಪಾಶ್ಚರೇಮಹಿ ॥೩೭॥ ತತೋಬ್ರಹ್ಮಾಸುರಶ್ರೇಷ್ಠೋ ಲೋಕಪಾಲಾನ್ ಸವಾಸವಾನ್ । ಸಮಾಹೂಯಾಬ್ರವೀತ್ಸರ್ವಾನ್ ತೇಜೋಭಾಗಂ ಪ್ರಯಚ್ಛಥ ॥೩೮॥ ತತೋದದುರ್ಲೋಕಪಾಲಾಶ್ಚತುರ್ಭಾಗಂಸ್ವತೇಜಸಃ । ಅಕ್ಷಯತ್ವಂದದೌಬ್ರಹ್ಮಾಯತೋಜಾತಃ ಕ್ಷಿತೌನೃಪಃ॥೩೯॥ ತಂಬ್ರಹ್ಮಾಲೋಕಪಾಲಾನಾಂಸಹಾಂಶೈಸ್ಸಮಯೋಜಯತ್। ತತೋದದೌನೃಪಂತಾಸಾಂಪ್ರಜಾನಾಂ

---

ಥಾವನಾಗಿ, ಉವಾಚ–ಹೇಳಿದನು ॥೩೨॥ ಹೇಭಗವನ್–ಎಲೈಪೂಜ್ಯನೆ, ಪ್ರತಿಗ್ರಹಃ–ಸ್ವೀಕಾರವು, ಬ್ರಾಹ್ಮಣಸ್ಯ–ಬ್ರಾಹ್ಮಣನಿಗೆ, ಅವಿಗರ್ಹಿತಃ–ನಿಂದಿತವಾದದ್ದಲ್ಲ, ಯದಾ–ಯಾವಕಾಲದಲ್ಲಿ, ಬ್ರಾಹ್ಮಣೇನ – ಬ್ರಾಹ್ಮಣನಿಂದ, ದತ್ತಂ–ಕೊಡಲ್ಪಡುತ್ತೊ, ವಿಜಾನತಾ–ಅರಿತವನಾದ, ಕ್ಷತ್ರಿಯೇಣ–ಕ್ಷತ್ರಿಯನಿಂದ, ತತ್–ಆ ಕೊಟ್ಟಂಥಾಪದಾರ್ಥವು, ಕಥಂಪ್ರತಿಗ್ರಾಹ್ಯಂ–ಹ್ಯಾಗೆ ತೆಗದುಕೊಳ್ಳಬೇಕು, ಹೆ ವಿಪ್ರ–ಎಲೈ ಬ್ರಾಹ್ಮಣನೆ, ಮೇ–ನನಗೆ, ಇಹ–ಈಗ, ವಕ್ತುಂ–ಹೇಳುವದಕ್ಕೋಸ್ಕರ, ಅರ್ಹಸಿ–ಯೋಗ್ಯನಾಗು ॥ ೩೩ ॥ಏವಂ–ಈ ಪರಿಯಾಗಿ, ರಾಮೇಣ– ಶ್ರೀರಾಮನಿಂದ, ಉಕ್ತಃ–ಹೇಳಲ್ಪಟ್ಟ,ಮಹಾನ್–ಪೂಜ್ಯನಾದ, ಋಷಿಸ್ತು–ಅಗಸ್ತ್ಯಮುನಿಯಾದರೆ, ಪ್ರತ್ಯುವಾಚ–ಉತ್ತರಕೊಟ್ಟನು ॥ ೩೪ ॥ ಹೆ ರಾಮ–ಎಲೈ ಶ್ರೀರಾಮನೆ, ಪುರಾಯುಗೆ, ಪೂರ್ವಯುಗದಲ್ಲಿ, ಬ್ರಹ್ಮಭೂತೇ–ಬ್ರಾಹ್ಮಣ ಪ್ರಚುರವಾದ, ಕೃತಯುಗೇ–ಕೃತಯುಗದಲ್ಲಿ, ಸರ್ವಾಃ–ಸಮಸ್ತರಾದ, ಪ್ರಜಾಃ–ಪ್ರಜಗಳು, ಅಪಾರ್ಥಿವಾಃ–ರಾಜನಿಲ್ಲದಿರುವರು, ಆಸನ್–ಆದರು, ಸುರಾಣಾಂತು–ದೇವತೆಗಳಗಾದರೆ, ಶತಕ್ರತುಃ–ಇಂದ್ರನು, ಆಸೀತ್–ಆದನು ॥೩೫॥ ತಾಃಪ್ರಜಾಃ–ಆ ಮನುಷ್ಯರು, ದೇವದೇವೇಶಂ–ದೇವದೇವೋತ್ತಮನಾದ ಬ್ರಹ್ಮನಂಕುರಿತು, ರಕ್ಷಾರ್ಥಂ–ಸಂರಕ್ಷಣಾರ್ಥವಾಗಿ, ಸಮುಪಾದ್ರವನ್–ಓಡಿಬಂದರು, ಹೆದೇವದೇವ–ಎಲೈ ದೇವತೆಗಳಿಗೆಲ್ಲ ಸ್ವಾಮಿಯೆ, ಸುರಾಣಾಂ–ದೇವತೆಗಳಿಗೆ, ರಾಜಾ–ಅರಸಾಗಿ, ದೇವದೇವಃ–ದೇವೋತ್ತಮನಾದ, ಶತಕ್ರತುಃ–ಇಂದ್ರನು, ಸ್ಥಾಪಿತಃ– ಇರಿಸಲ್ಪಟ್ಟನು, ಯಸ್ಮೈ–ಯಾವ ರಾಜನಿಗೆ, ಪೂಜಾಂ–ಪೂಜೆಯನ್ನು, ಪ್ರಯುಂಜಾನಾಃ–ಮಾಡುತ್ತಿರುವರಾಗಿ, ಧೂತಪಾಪಾಃ–ಕೊಡಲ್ಪಟ್ಟ ಪಾಪವುಳ್ಳವರಾಗಿ, ಚರೇಮಹಿ–ಸಂಚರಿಸುವೆವೋ, ನರಪುಂಗವಂ–ನರಶ್ರೇಷ್ಠನಾದ, ಪಾರ್ಥಿವಂ–ಅರಸನ್ನು, ನಃ–ನಮಿಗೆ, ಪ್ರಯಚ್ಛ–ಕೊಡು, ॥೩೬॥ ತತಃ–ಬಳಿಕ, ಸುರಶ್ರೇಷ್ಠಃ–ದೇವತಾಶ್ರೇಷ್ಠನಾದ, ಬ್ರಹ್ಮಾ–ಚತುರ್ಮುಖಬ್ರಹ್ಮನು,ಸವಾಸವಾನ್–ಇಂದ್ರನಿಂದೊಡಗೂಡಿದ, ಸರ್ವಾನ್–ಸಮಸ್ತರಾದ, ಲೋಕಪಾಲಾನ್–ಲೋಕಪಾಲಕರನ್ನು, ಸಮಾಹೂಯ–ಕರೆದು, ತೇಜೋಭಾಗಂ–ನಿಮ್ಮನಿಮ್ಮ ತೇಜಸ್ಸುಗಳ ಅಂಶವನ್ನು, ಪ್ರಯಚ್ಛಥ–ಕೊಡಿರೆಂದು, ಅಬ್ರವೀತ್–ನುಡಿದನು ॥೩೭॥ ತತಃ–ಬಳಿಕ, ಲೋಕಪಾಲಾಃ–ಲೋಕಪಾಲಕರು, ಸ್ವತೇಜಸಃ– ತಮ್ಮ ತೇಜಸ್ಸಿನ, ಚತುರ್ಭಾಗಂ –ನಾಲ್ಕರಲ್ಲಿ ಒಂದುಭಾಗವನ್ನು, ದದುಃ–ಕೊಟ್ಟರು, ಬ್ರಹ್ಮಾ–ಬ್ರಹ್ಮನು, ಅಕ್ಷಯತ್ವಂ–ಕ್ಷಯರಾಹಿತ್ಯವನ್ನು, ದದೌ–ಕೊಟ್ಟನು,ಯತಃ–ಯಾವ ತೇಜಸ್ಸಿನಿಂದ,ಕ್ಷಿತೌ–ನೇಲದಲ್ಲಿ, ನೃಪಃ–ಅರಸು, ಜಾತಃ–ಹುಟ್ಟಿದನೋ ॥ ೩೮ ॥ ತಂ–ಆ ರಾಜನನ್ನು, ಬ್ರಹ್ಮಾ–ಚತುರ್ಮುಖ ಬ್ರಹ್ಮನು, ಲೋಕಪಾಲಾನಾಂ–ದಿಕ್ಪಾಲಕರ, ಅಂಶೈಸ್ಸಹ–ತೇಜೋಭಾಗಗಳ ಸಂಗಡ, ಸಮಯೋಜಯತ್–ಸೇರಿಸಿದನು, ತತಃ–ಬಳಿಕ ತಾಸಾಂಪ್ರಜಾನಾಂ– ಆ ಪ್ರಜೆಗಳ, ಕ್ಷುದ್ವಿನಾಶನಂ–ಹಸಿವನ್ನು ಹೋಗಲಾಡಿಸು

---

ನಾಗಿಯೂ, ಇರುವ ಶ್ರೀರಾಮನು ಕ್ಷತ್ರಧರ್ಮವಂ ಜ್ಞಾಪಿಸಿಗೊಂಡವನಾಗಿ, ಈಪರಿ ಪೇಳುವನದೆಂತೆನೆ॥೩೨॥ಎಲೈ ಪೂಜ್ಯನೆ! ಪ್ರತಿಗ್ರಹವೆಂಬದು ಬ್ರಾಹ್ಮಣನಿಗೆ ಮಾತ್ರವೇ ನಿಂದಿತವಾದದ್ದಲ್ಲ, ಕ್ಷತ್ರಿಯನಾದವನು ದಾನವಾಗಿ ಹ್ಯಾಗೆ ತೆಗದುಕೊಳ್ಳುವನು, ಬ್ರಾಹ್ಮಣನಿಂದಕ್ಷತ್ರಿಯನು ಯಾವಾಗಲಾದರೂ ದಾನವಂಪಡದಿದ್ದರೆ ಅದಂ ಪೇಳುವಂಥಾವನಾಗೆಂದು ಕೇಳಲೂ, ಆ ಮಹರ್ಷಿಯು ಉತ್ತರವಂಕೊಟ್ಟನು, ಅದೇನೆಂದರೆ ॥೩೪॥ ಕೇಳೆಲೈ ಶ್ರೀರಾಮನೆ!ಪೂರ್ವಕಾಲದೊಳು ಬ್ರಾಹ್ಮಣ ಪ್ರಚುರವಾದ ಕೃತಯುಗದಲ್ಲಿ ಪ್ರಜೆಗಳೆಲ್ಲ ರಾಜನಿಲ್ಲದವರಾಗಿದ್ದರು, ದೇವತೆಗಳಿಗೆ ಮಾತ್ರ ಇಂದ್ರನು ದೊರೆಯಾಗಿದ್ದನು ॥೩೫॥ ಆಗ ಜನಗಳೆಲ್ಲರು ದೇವತಾಶ್ರೇಷ್ಠನಾದ ಚತುರ್ಮುಖನಂ ಕುರಿತು ಸಂರಕ್ಷಣಾರ್ಥವಾಗಿ ಓಡಿಬಂದು, ಎಲೈ ಪೂಜ್ಯನೆ! ಇಂದ್ರನು ದೇವತೆಗಳಿಗೆ, ಅರಸಾಗಿ ಸ್ಥಾಪಿಸಲ್ಪಟ್ಟಧಾನೆ, ಯಾವ ಪ್ರಭುವಿನ ಸೇವೆಯಂಗೈದು ನಾವೆಲ್ಲರು ನಮ್ಮಗಳ ಪಾಪ ಪರಿಹಾರವಂ ಮಾಡಿಕೊಂಡು ಸಂಚರಿಸುವೆವೋ, ಅಂಥಾ ನರೋತ್ತಮನಾದ ಒಡೆಯನಂ ಕೊಡುವಂಥಾವನಾಗೆಂದು ನುಡಿದವರಾಗಲೂ,ಬಳಿಕ ಬ್ರಹ್ಮನುಸುರಶ್ರೇಷ್ಠರಾದ, ಲೋಕಪಾಲಕರಂ ಕರೆಯಿಸಿ, ಅವರುಗಳಂ ಕುರಿತು ಎಲೈದೇವತಾ ಶ್ರೇಷ್ಠರುಗಳಿರಾ! ನಿಮ್ಮಗಳ ತೇಜಸ್ಸಿನೊಳು ವಿಭಾಗವಂ ಮಾಡಿರೆಂದು ನಿರೂಪಿಸಿದಂಥಾವನಾದನು ॥೩೮॥ಸಮನಂತರ ಕಾಲದೊಳು ಆ ಲೋಕಪಾಲಕರಾದ ಇಂದ್ರಾದಿಗಳು ತಮ್ಮ ತೇಜಸ್ಸಿನೊಳು ಚತುರ್ಥಾಂಶವಂ ಕೊಟ್ಟಂಥಾವರಾದರೂ, ಯಾವ ತೇಜಸ್ಸಿನಿಂದ ರಾಜನು ಕ್ಷಿತಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕ್ಷುದ್ವಿನಾಶಿನಂ ॥೪೦॥ ತತ್ರೈಂದ್ರೇಣತುಭಾಗೇನಮಹಿಮಾನಂಯಯೌನೃಪಃ। ದಾರುಣೇನತುಭಾಗೇನವಪುಃಪುಷ್ಯತಿಪಾರ್ಥಿವಃ॥೪೧॥ ಕೌಬೇರೇಣತಥಾಂಶೇನಸಹ್ಯಾದತ್ತೇರ್ಥಾನ್ಧದಾತಿಸಃ। ಯಸ್ತುಯಾಮ್ಯೋಭವೇದ್ಭಾಗಸ್ತೇನಶಾಸತಿಸಪ್ರಜಾಃ॥ಕೌಬೇರೇಣರಘುಶ್ರೇಷ್ಠ ಭಾಗೇನರಘುನಂದನ। ಪ್ರತಿಗೃಹ್ಣೀಷ್ವಾಭರಣಂಧಾರಣಾರ್ಥಮಥಪ್ರಭೋ॥೪೩॥ತದಾ ರಾಮಃಪ್ರತಿಜಗ್ರಾಹಮುನೇಸ್ತಸ್ಯಮಹಾತ್ಮನಃ। ದಿವ್ಯಮಾಭರಣಂಚಿತ್ರಂಪ್ರದೀಪ್ತಮಿವಭಾಸ್ಕರಂ॥೪೪॥ ಪ್ರತಿಗೃಹ್ಯತತೋರಾಮಸ್ತದಾಭರಣಮುತ್ತಮಂ। ಆಗಮಂತಸ್ಯದಿವ್ಯಸ್ಯಪ್ರಷ್ಟುಮೇವೋಪಚಕ್ರಮೇ॥೪೫॥ ಅತ್ಯದ್ಭುತಮಿದಂಬ್ರಹ್ಮನ್ವಪುಷಾಯುಕ್ತಮದ್ಭುತಂ। ಕಥಂಭಗವತಾಪ್ರಾಪ್ತಂಕುತೋವಾಕೇನವಾಹೃತಂ॥೪೬॥ ಕುತೂಹಲತಯಾಬ್ರಹ್ಮನ್ಪೃಚ್ಛಾಮಿತ್ವಾಂಮಹಾಯಶಃ। ಆಶ್ಚರ್ಯಾಣಾಂಬಹೂನಾಂಹಿನಿಧಿಃಪರಮಕೋಭವಾನ್ ॥೪೭॥ ಏವಂಬ್ರುವತಿಕಾಕುತ್ಸ್ಥೇಮುನಿರ್ವಾಕ್ಯಮಥಾಬ್ರವೀತ ॥೪೮॥ ಶ್ರೃ

---

ತ್ತಿರುವ, ನೃಪಂ-ಅರಸನ್ನು, ದದೌ-ಕೊಟ್ಟನು ॥೪೦॥ ತತ್ರ-ಆ ಲೋಕಪಾಲಾಂಶಗಳಲ್ಲಿ,ನೃಪಃ-ಅರಸು, ಐಂದ್ರೇಣ-ಇಂದ್ರಸಂಬಂಧವಾದ, ಭಾಗೇನ-ಅಂಶದಿಂದ, ಮಹಿಮಾನಂ-ಮಹತ್ವವನ್ನು, ಯಯೌ-ಪಡೆದನು, ಪಾರ್ಥಿವಃ-ಅರಸು, ವಾರುಣೇನಭಾಗೇನತು-ವರುಣಸಂಬಂಧವಾದಭಾಗದಿಂದಾದರೋ, ಪುಷ್ಯತಿ-ಪೋಷಣೆಮಾಡುತ್ತಾನೇ, ॥೪೧॥ ಸಃ-ಆರಾಜನು, ತಥಾ-ಹಾಗೆಯೇ, ಕೌಬೇರೇಣ-ಕುಬೇರಸಂಬಂಧವಾದ, ಅಂಶೇನ-ಅಂಶದಿಂದ, ಅರ್ಥಾನ್- ದ್ರವ್ಯಗಳನ್ನು, ಆದತ್ತೆ-ತೆಗೆದುಕೊಳ್ಳುತ್ತಾನೇ, ದದಾತಿಹಿ-ಕೊಡುತ್ತಾನೇ, ಯಾಮ್ಯಃ-ಯಮನ ಸಂಬಂಧವಾದ, ಯೋಭಾಗಸ್ತು-ಯಾವ ಭಾಗವಾದರೋ, ಭವೇತ್-ಆಧೀತೋ, ತೇನ-ಆ ಭಾಗದಿಂದ, ಸಃ-ಆ ರಾಜನು, ಪ್ರಜಾಃ-ಪ್ರಜೆಗಳನ್ನು, ಶಾಸತಿ-ಶಿಕ್ಷಿಸುತ್ತಾನೇ ॥೪೨॥ ಹೆ ರಘುಶ್ರೇಷ್ಠ-ಎಲೈ ರಘುಕುಲ ಶ್ರೇಷ್ಠನೇ, ಹೆ ರಘುನಂದನ-ಎಲೈ ಶ್ರೀರಾಮನೆ, ಕೌಬೇರೇಣ-ಕುಬೇರಸಂಬಂಧವಾದ, ಭಾಗೇನ-ಅಂಶದಿಂದ, ಹೆ ಪ್ರಭೋ-ಎಲೊಸ್ವಾಮಿಯೇ, ಧಾರಣಾರ್ಥಂ-ಧರಿಸುವದಕ್ಕೋಸುಗ, ಆಭರಣಂ-ವಡಿವೆಯನ್ನು, ಪ್ರತಿಗೃಹ್ಣೀಷ್ವ-ಪರಿಗ್ರಹಿಸು ॥೪೩॥ ಅಥ-ಬಳಿಕ, ರಾಮಃ-ಶ್ರೀರಾಮನು, ಚಿತ್ರಂ-ನಾನಾವರ್ಣವುಳ್ಳ, (ಅಥವಾ ಚಿತ್ರಂ-ಆಶ್ಚರ್ಯಕರವಾದ) ಭಾಸ್ಕರಮಿವ-ಸೂರ್ಯನಂತೆ, ಪ್ರದೀಪ್ತಂ-ಹೊಳೆಯುತಿರುವ, ದಿವ್ಯಂ-ಮನೋಹರವಾದ, ಮಹಾತ್ಮನಃ-ಮಹಾ ಮನಸ್ವಿಯಾದ, ತಸ್ಯಮುನೇಃ-ಆ ಅಗಸ್ತ್ಯಋಷಿಯ ಸಂಬಂಧವಾದ, ತದಾಭರಣಂ-ಆ ಆಭರಣವನ್ನು, ಪ್ರತಿಜಗ್ರಾಹ-ಪರಿಗ್ರಹಿಸಿದನು ॥ ತತಃ-ಬಳಿಕ, ರಾಮಃ-ಶ್ರೀರಾಮನು, ಉತ್ತಮಂ-ಸರ್ವೋತ್ತಮನಾದ, ತದಾಭರಣಂ-ಆ ಆಭರಣವನ್ನು, ಪ್ರತಿಗೃಹ್ಯ-ಪರಿಗ್ರಹಿಸಿ, ದಿವ್ಯಸ್ಯ-ಮನೋಹರವಾದ, ತಸ್ಯ-ಆ ವಡಿವೆಯ, ಆಗಮಂ-ಬರುವಿಕೆಯನ್ನು, ಪ್ರಷ್ಟುಮೇವ-ಕೇಳುವದಕ್ಕೋಸ್ಕರ, ಉಪಚಕ್ರಮೇ-ಉಪಕ್ರಮಿಸಿದನು ॥೪೫॥ ಹೆ ಬ್ರಹ್ಮನ್-ಎಲೈ ಬ್ರಾಹ್ಮಣನೇ, ಅತ್ಯದ್ಭುತಂ-ಅತ್ಯಾಶ್ಚರ್ಯ ಕರವಾದ, ವಪುಷಾ-ಆ ಕಾರದಿಂದ, ಯುಕ್ತಂ-ಕೂಡಿಕೊಂಡಿರುವ, ಇದಂ-ಈ ವಡಿವೆಯು, ಭಗವತಾ-ಪೂಜ್ಯನಾದ ನಿನ್ನಿಂದ, ಕಥಂ-ಹ್ಯಾಗೆ, ಪ್ರಾಪ್ತಂ-ಹೊಂದಲ್ಪಟ್ಟಿತು, ಕುತೋವಾ-ಯಲ್ಲಿಂದ,ಕೇನವಾ-ಯಾರಿಂದ, ಆಹೃತಂ-ತರಲ್ಪಟ್ಟಿತು॥೪೬॥ ಹೆ ಬ್ರಹ್ಮನ್-ಎಲೈ ಬ್ರಾಹ್ಮಣನೇ, ಹೆ ಮಹಾಯಶಾಃ-ಎಲೈ ಮಹಾಕೀರ್ತಿವಂತನೇ, ಭವಾನ್-ನೀನು, ಬಹೂನಾಂ-ಅನೇಕಗಳಾದ, ಆಶ್ಚರ್ಯಾಣಾಂ-ಆಶ್ಚರ್ಯಗಳಿಗೆ, ಪರಮತಃ-ಉತ್ಕೃಷ್ಟವಾದ, ನಿಧಿರ್ಹಿ-ನಿಧಿಯಷ್ಟೇ, ತ್ವಾಂ-ನಿನ್ನನ್ನು, ಕುತೂಹಲತಯಾ-ಉತ್ಕಂಠೆಯಿಂದ, ಪೃಚ್ಛಾಮಿ-ಕೇಳುತ್ತೇನೆ ॥ ಕಾಕುತ್ಸ್ಥೇ-ಶ್ರೀರಾಮನು, ಏವಂಬ್ರುವತಿಸತಿ-ಈಪರಿ ಹೇಳುವವನಾಗುತ್ತಿರಲಿಕಾಗಿ, ಅಥ-ಬಳಿಕ, ಮುನಿಃ-ಅಗಸ್ತ್ಯಮಹಾಮುನಿಯು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೪೮॥ ಹೆ ರಾಮ-ಎಲೈ ಶ್ರೀರಾಮನೇ, ಪುರಾ-ಪೂರ್ವದಲ್ಲಿ, ತ್ರೇತಾಯುಗೆ, ತ್ರೇತಾಯುಗದಲ್ಲಿ, ಯಥಾವೃತ್ತಂ-ಹ್ಯಾಗೆ ನಡದಿತ್ತೋ-ಅದನ್ನು, ಶೃಣು-ಕೇಳು, ಹೆ ಮಹಾಬಾಹೊ - ಎಲೈ ಮಹಾಭುಜನೇ, ರಮಣೀಯಃಪ್ರದೇಶೇ-ರಮಣೀಯ್ಯ-ಇಂಪಾಗಿರುವ, ಪ್ರದೇಶೇ- ಪ್ರ

---

ಯೋಳು ಪುಟ್ಟದಂಥಾವನಾದನೋ, ಅಂಥಾ ಅರಸು ಅಕ್ಷಯವಾಗಿರಲೆಂದು ವರವಂಕೊಟ್ಟು ಲೋಕಪಾಲಕರ ಅಂಶಗಳೊಡನೆ ಶೇರಿಸಿ, ಕ್ಷುನ್ನಿವಾರಣೆಯಂ ಗೈಯ್ಯುತ್ತಿರುವ ಆ ರಾಜನನ್ನು ಪ್ರಜೆಗಳಿಗೆ ಕೊಟ್ಟವನಾದನು, ಅರಸಾದವನು ಆ ಲೋಕಪಾಲಕರ ಅಂಶಗಳಲ್ಲಿ ಇಂದ್ರಭಾಗದಿಂದ ಮಹಾತ್ಮ್ಯವಂಪೊಂದಿದನು, ವರುಣ ತೇಜಸ್ಸಿನ ಅಂಶದಿಂದ ಎಲ್ಲರಂ ಪೋಷಿಸುತ್ತಿಧಾನೆ, ಕುಬೇರಾಂಶದಿಂ ದ್ರವ್ಯವಂ ತೆಗದುಕೊಳ್ಳುತ್ತಲೂ, ಕೊಡುತ್ತಲೂಇರುವನು, ಮತ್ತೂ ಯಮಾಂಶದಿಂದ ಪ್ರಜೆಗಳನ್ನೆಲ್ಲ ಶಿಕ್ಷಿಸುತ್ತಿಧಾನೆ ಎಲೈ ಪ್ರಭುವಾದವನೆ ನೀನು ಕೌಬೇರಾಂಶದಿಂದ ಈ ಆಭರಣವಂ ಸ್ವೀಕರಿಸಿ ಧರಿಸಿಕೋ ಎಂಬದಾಗಿ ಆ ಅಗಸ್ತ್ಯಮುನಿಯು ಹೇಳಿದವನಾದನು ॥ ೪೩ ॥ ಬಳಿಕ ಶ್ರೀರಾಮನು ಆಮಾತಂ ಕೇಳಿ, ಅಗಸ್ತ್ಯ ಮಹಾಮುನಿಯ ಸಂಬಂಧವಾದ ಸೂರ್ಯನಂತೆ ಮಹಾ ಪ್ರಕಾಶಮಾನವಾಗಿರ್ಪ ಆ ದಿವ್ಯವಾದ ಆಭರಣವಂ ತೆಗದುಕೊಂಡು ಆ ಮಹಾಮುನಿಯಂ ಕುರಿತು, ಎಲೈ ಪೂಜ್ಯನೆ ! ದಿವ್ಯವಾದ, ಈ ವಡಿವೆಯು ತಮಗೆ ಹ್ಯಾಗೆ ಪ್ರಾಪ್ತವಾಯಿತು, ಯಾರು ತಂದುಕೊಟ್ಟರು, ಮಹದಾಶ್ಚರ್ಯ ಗಳಿಗೆಲ್ಲ ತಾವು ನಿಧಿಯಾಗಿರೋಣದರಿಂದ ಈ ಆಭರಣದ ಆಗಮನವಂ ಕೇಳಬಿಚ್ಛಿಸುತ್ತೆನೆ, ಎನಗೆ ಬಹುಕುತೂಹಲವಿಧೇ ಎಂದು ಕೇಳಿದವನಾಗಲೂ, ಎಲೈ ಶ್ರೀರಾಮನೆ ! ಪೂರ್ವಕಾಲದೊಳು ತ್ರೇತಾಯುಗದಲ್ಲಿ ಮನೋಹರವಾದ ಈ ವನದಲ್ಲಿ ಹ್ಯಾಗೆ ನಡೆದಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣುರಾಮಯಥಾವೃತ್ತಂಪುರಾತ್ರೇತಾಯುಗೇಯುಗೇ । ರಮಣೀಯಪ್ರದೇಶೇಸ್ಮಿನ್ವನೇಯದ್ದೃಷ್ಟವಾನಹಂ । ಆಶ್ಚರ್ಯಂಮಮ ಹಾಬಾಹೋದಾನಮಾಶ್ರಿತ್ಯಕೇವಲಂ ... ... ॥೪೯॥

—...ಇತಿ ಶ್ರೀಮದುತ್ತರರಾಮಾಯಣೇ ಷಟ್ಸಪ್ತತಿತಮಸ್ಸರ್ಗಃ...—

ವನಂತ್ರೇತಾಯುಗೇರಾಮಬಭೂವಬಹುವಿಸ್ತರಂ । ಸಮಂತಾದ್ಯೋಜನಶತಂಮೃಗಪಕ್ಷಿವಿವರ್ಜಿತಂ ॥೧॥ ತಸ್ಮಿನ್ನಿ ರ್ಮಾನುಷೇರಣ್ಯೇಕುರ್ವಾಣಸ್ತಪಉತ್ತಮಂ । ಅಹಮಾಕ್ರಮಿತುಂಸೌಮ್ಯ ತಥಾರಣ್ಯಮುಪಾಗಮಂ ॥೨॥ ತಸ್ಯರೂಪ ಮರಣ್ಯಸ್ಯನಿರ್ದೇಷ್ಟುಂನೈವಶಕ್ನುಮಃ ॥೩॥ ಫಲಮೂಲೈಸ್ಸುಖಾಸ್ವಾದೈರ್ಬಹುಮೂಲೈಶ್ಚ ಪಾದಪೈಃ॥೪॥ ತಸ್ಯಾರಣ್ಯ ಸ್ಯಮಧ್ಯೇತುಸರೋಯೋಜನಮಾಯತಂ। ಹಂಸಕಾರಂಡವಾಕೀರ್ಣಂಚಕ್ರವಾಕೋಪಶೋಭಿತಂ॥೫॥ಪದ್ಮೋತ್ಪಲಸಮಾ ಕೀರ್ಣಂಸಮತಿಕ್ರಾಂತಶೈವಲಂ। ತದಾಶ್ಚರ್ಯಮಿವಾತ್ಯರ್ಥಂಸುಖಾಸ್ವಾದಮನುತ್ತಮಂ ॥೬॥ಅರಜಸ್ಕಂತಥಾಕ್ಷೋಭ್ಯಂ ಶ್ರೀಮತ್ಪಕ್ಷಿಗಣಾಯುತಂ । ಸಮೀಪೇತಸ್ಯಸರಸೋಮಹದದ್ಭುತಮಾಶ್ರಮಂ ॥ ಪುರಾಣಂಪುಣ್ಯಮತ್ಯರ್ಥಂತಪಸ್ವಿಜನ

---

ದೇಶಮುಳ್ಳ, ಅಸ್ಮಿನ್ವನೇ-ಈ ವನದಲ್ಲಿ, ಅಹಂ-ನಾನು, ಮೇ-ನನಗೆ, ಆಶ್ಚರ್ಯಂ-ಆಶ್ಚರ್ಯಕರವಾದ, ದಾನಂ-ದಾನವನ್ನು, ಕೇವಲಂ-ಮುಖ್ಯವಾಗಿ, ಆ ಶ್ರಿತ್ಯ-ಆಶ್ರಯಿಸಿ, ಯತ್-ಯಾವದನ್ನು, ದೃಷ್ಟವಾನ್-ಕಂಡೆನೋ, ತಚ್ಛೃಣು-ಅದನ್ನು ಕೇಳು ॥೪೯॥

—...ಇತಿಶ್ರೀಮದುತ್ತರರಾಮಾಯಣೇ ಷಟ್ಸಪ್ತತಿತಮಸ್ಸರ್ಗಃ...—

ಹೇರಾಮ-ಎಲೈ ಶ್ರೀರಾಮನೆ, ತ್ರೇತಾಯುಗೇ-ತ್ರೇತಾಯುಗದಲ್ಲಿ, ಬಹುವಿಸ್ತರಂ-ಅನೇಕವಿಸ್ತಾರವಾದ, ವನಂ-ವನವು, ಸಮಂತಾತ್-ಎಲ್ಲಾಕಡೆ ಯಲ್ಲಿಯೂ, ಯೋಜನಶತಂ-ನೂರುಗಾವುದವು, ಮೃಗಪಕ್ಷಿವಿವರ್ಜಿತಂ-ಮೃಗಗಳಿಂದಲೂ, ಪಕ್ಷಿಗಳಿಂದಲೂ ಬಿಡಲ್ಪಟ್ಟದ್ದು, ಬಭೂವ-ಆಯಿತು, ॥೧॥ ನಿರ್ಮಾನುಷೇ-ಮನುಷ್ಯರಹಿತವಾದ, ತಸ್ಮಿನ್ನರಣ್ಯೇ-ಆ ಅರಣ್ಯದಲ್ಲಿ, ಉತ್ತಮಂ-ಉತ್ಕೃಷ್ಟವಾದ, ತಪಃ-ತಪಸ್ಸನ್ನು, ಕುರ್ವಾಣಃ-ಮಾಡುತ್ತಿರು ವನಾಗಿ, ಹೇಸೌಮ್ಯ-ಎಲೈಸೌಮ್ಯನೆ, ಅಹಂ-ನಾನು, ತಥಾ-ಹಾಗೆಯೆ, ಅರಣ್ಯಂ-ಅರಣ್ಯವನ್ನು, ಆಕ್ರಮಿತುಂ-ಸ್ವಾಧೀನಗೊಳಿಸಿಕೊಳ್ಳುವಕ್ಕೋಸ್ಕರ, ಉಪಾಗಮಂ-ಬಂದೆನು॥೨॥ತಸ್ಯಅರಣ್ಯಸ್ಯ-ಆಅರಣ್ಯದ, ರೂಪಂ-ಆಕಾರವನ್ನು,ಸುಖಾಸ್ವಾದೈಃ-ಸುಖಕರವಾದರುಚಿಯುಳ್ಳ,ಬಹುಮೂಲೈಃ-ಬಹಳವಾದ ಬುಡಗಳುಳ್ಳ, ಪಾದಪೈಃ-ಗಿಡಗಳಿಂದಲೂ, ಫಲಮೂಲೈಃ-ಫಲಗಳಿಂದಲೂ, ಕಂದಮೂಲಗಳಿಂದಲೂ,ನಿರ್ದೇಷ್ಟುಂ-ಹೀಗೆಂತೆಂದುಹೇಳುವದಕ್ಕೋಸ್ಕರ, ನೈವ ಶಕ್ನುಮಃ-ಸಮರ್ಥರಾಗಲಾರೆವು॥೩॥ತಸ್ಯಅರಣ್ಯಸ್ಯ-ಆಅರಣ್ಯದ-ಮಧ್ಯೇತು-ಮಧ್ಯಪ್ರದೇಶದಲ್ಲಾದರೆ, ಯೋಜನಂ-ಒಂದುಗಾವುದವು, ಆಯತಂ-ವಿಸ್ತಾ ರವಾದ, ಹಂಸಕಾರಂಡವಾಕೀರ್ಣಂ-ಹಂಸಪಕ್ಷಿಗಳಿಂದಲೂ ಕಾರಂಡಪಕ್ಷಿಗಳಿಂದಲೂ ತುಂಬಿರುವ, ಚಕ್ರವಾಕೋಪಶೋಭಿತಂ-ಚಕ್ರವಾಕಪಕ್ಷಿಗಳಿಂದ ಹೊ ಳೆಯುತ್ತಿರುವ, ಪದ್ಮೋತ್ಪಲಸಮಾಕೀರ್ಣಂ-ಪದ್ಮಗಳಿಂದಲೂ ನೈದಲೆಪುಷ್ಪಗಳಿಂದಲೂತುಂಬಿರುವ, ಸಮತಿಕ್ರಾಂತ ಶೈವಲಂ-ದಡವನ್ನು ಅತಿಕ್ರಮಿಸಿ ಇ ರುವ ಒಳಗಡೆಯ ಪಾಚಿಗಳುಳ್ಳ, ಅತ್ಯರ್ಥಂ-ಬಹುವಾಗಿ, ಆಶ್ಚರ್ಯಮಿವ-ಆಶ್ಚರ್ಯದಂತಿರುವ, ಸುಖಾಸ್ವಾದಂ-ಇಂಪಾಗಿರುವರುಚಿಯುಳ್ಳ, ಅನುತ್ತಮಂ- ಸರ್ವೋತ್ತಮವಾದ, ಅರಜಸ್ಕಂ- ಧೂಳಿಯಿಲ್ಲದಿರುವ, ತಥಾ-ಹಾಗೆಯೆ, ಅಕ್ಷೋಭ್ಯಂ-ಕ್ಷೋಭೆಯಿಲ್ಲದಿರುವ, ಶ್ರೀಮತ್-ಸಂಪದ್ಯುಕ್ತವಾದ, ಪಕ್ಷಿಗಣಾ ಯುತಂ-ಪಕ್ಷಿಗಳತಂಡಗಳಿಂದೊಡಗೂಡಿದ, ತತ್ಸರಃ-ಆ ಸರೋವರವು, ಅಸ್ತಿ-ಇದೆ ॥ ೬ ॥ ತಸ್ಯಸರಸಃ-ಆಸರೋವರದ, ಸಮೀಪೇ-ಸಮೀಪದಲ್ಲಿ, ಮಹ ತ್-ದೊಡ್ಡದಾದ, ಅದ್ಭುತಂ-ಆಶ್ಚರ್ಯಕರವಾದ, ಪುರಾಣಂ-ಪುರಾತನವಾದ, ಅತ್ಯರ್ಥಂ-ಅತಿಶಯವಾಗಿ, ಪುಣ್ಯಂ-ಪುಣ್ಯಕರವಾದ, ಆಶ್ರಮಂ-ಆಶ್ರ ಮವು, ತಪಸ್ವಿಜನವರ್ಜಿತಂ-ತಪಸ್ವಿಜನ-ಋಷಿಜನರಿಂದ, ವರ್ಜಿತಂ-ಬಿಡಲ್ಪಟ್ಟದ್ದಾಗಿ, ಆಸೀತ್-ಆಯಿತು, ॥೭॥ ಹೇಪುರುಷರ್ಷಭ-ಎಲೈಪುರುಷಶ್ರೇ

---

ಥಾದ್ದಾಯಿತೋ, ನಾನು ಯಾವದಂ ಕಂಡೆನೋ, ಅಂಥಾ ಮಹದಾಶ್ಚರ್ಯಕರವಾದ ಈ ಆಭರಣ ದಾನವಂಪೇಳ್ವೆನು ಕೇಳೆಂದು ನುಡಿದವನಾದನು ॥೪೯॥

—...ಉತ್ತರರಾಮಾಯಣದಲ್ಲಿನ ೭೬ ನೆಯ ಸರ್ಗಂ ಮುಗಿದುದು...—

ಕೇಳೆಲೈ ರಘುನಂದನನೆ! ತ್ರೇತಾಯುಗದೊಳು ಈ ವನವು ಮೃಗಪಕ್ಷಿಗಳಿಲ್ಲದಿರುವಂಥಾದ್ದಾಗಿಯೂ ಎಲ್ಲಾ ಕಡೆ ಯಲ್ಲಿಯೂ ನೂರುಗಾವುದ ಪರಿಮಿತಿಯುಳ್ಳದ್ದಾಗಿಯೂ ಇತ್ತು ॥೧॥ ಮನುಷ್ಯರಹಿತವಾದ ಆ ಅರಣ್ಯದೊಳು ನಾ ನು ಉತ್ತಮವಾದ ತಪವಂ ಗೈಯ್ಯುತ್ತಿರುವನಾಗಿ ಹಾಗೆಯೆ ಅರಣ್ಯವನ್ನಾಕ್ರಮಿಸಬೇಕೆಂದು ಬಂದೆನು ॥೨॥ ಬಹುರು ಚಿಯಾಗಿರ್ಪ ಕಂದಮೂಲಗಳಿಂದಲೂ ಗಿಡಗಳಿಂದಲೂ ಫಲಗಳಿಂದಲೂ ಒಡಗೂಡಿದ ಆ ಕಾಡಿನರೂಪವಂನೋಡು ವದಕ್ಕೆ ಸಮರ್ಥರಾಗಲಿಲ್ಲ ॥೪॥ ಆ ಅರಣ್ಯಮಧ್ಯಪ್ರದೇಶದಲ್ಲಿ ಯೋಜನವಿಸ್ತಾರವುಳ್ಳದ್ದಾಗಿಯೂ ಹಂಸಪಕ್ಷಿಗಳಿಂ ದಲೂ ಕಾರಂಡವೆಂಬ ಪಕ್ಷಿಗಳಿಂದಲೂ ಸಹ ವ್ಯಾಪ್ತವಾದದ್ದಾಗಿಯೂ ಕೋಕೀ ಹಕ್ಕಿಗಳಿಂದ ಕಂಗೊಳಿಸುತ್ತಿರು ವದಾಗಿಯೂ, ಕಮಲಗಳಿಂದಲೂ ತಾವರೆಗಳಿಂದಲೂ ತುಂಬಿದಂಥಾದ್ದಾಗಿಯೂ ಹಾಮಚೀಬಳ್ಳಿಗಳಿರುವದಾಗಿಯೂ, ಮಹದಾಶ್ಚರ್ಯಕರವಾಗಿಯೂ ಇರ್ಪ ಸರೋವರವಿಧೆ. ಆ ಸರಸ್ಸಿನ ಧಡದಲ್ಲಿ ಅದ್ಭುತಕರವಾಗಿಯೂ ಪುರಾತನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವರ್ಜಿತಂ ॥೭॥ ತತ್ರಾಹಮವಸಂರಾತ್ರಿಂನೈದಾಘೀಂಪುರುಷರ್ಷಭ । ಪ್ರಭಾತೇಕಾಲ್ಯಮುತ್ಥಾಯಸರಸ್ತದುಪಚಕ್ರಮೇ॥ ಅಥಾಪಶ್ಯಂಶವಂತತ್ರಸುಪುಷ್ಟಮಜರಂಕ್ವಚಿತ । ತಿಷ್ಠಂತಂಪರಯಾಲಕ್ಷ್ಮ್ಯಾತಸ್ಮಿಂಸ್ತೋಯಾಶಯೇನೃಪ॥೯॥ ತಮ ರ್ಥಂಚಿಂತಯಾನೋಹಂಮುಹೂರ್ತಂತತ್ರರಾಘವ। ಉಷಿತೋಸ್ಮಿಸರಸ್ತೀರೇಕಿನ್ವಿದಂಸ್ಯಾದಿತಿಪ್ರಭೋ॥೧೦॥ ಅಥಾಪಶ್ಯಂ ಮುಹೂರ್ತೇನದಿವ್ಯಮದ್ಭುತದರ್ಶನಂ । ವಿಮಾನಂಪರಮೋದಾರಂಹಂಸಯುಕ್ತಂಮನೋಜವಂ ॥೧೧॥ ಅತ್ಯರ್ಥಂಸ್ವರ್ಗಿ ಣಂತತ್ರವಿಮಾನೇರಘುನಂದನ । ಉಪಾಸ್ತೇಪ್ಸರಸಾಂವೀರಸಹಸ್ರಂದಿವ್ಯಭೂಷಣಂ॥೧೨॥ ಗಾಯಂತಿದಿವ್ಯಗೇಯಾನಿವಾದ ಯಂತಿತಥಾಪರಾಃ । ಕ್ಷ್ವೇಳಯಂತಿತಥಾಚಾನ್ಯಾನೃತ್ಯಂತ್ಯಪಿತಥಾಪರಾಃ ॥೧೩॥ ಅಪರಾಶ್ಚಂದ್ರರಶ್ಮ್ಯಾಭೈರ್ಹೇಮ ದಂಡೈಶ್ಚ ಚಾಮರೈಃ । ದುಧುವುರ್ವದನಂತಸ್ಯಪುಂಡರೀಕನಿಭೇಕ್ಷಣಂ॥೧೪॥ ತತಃಸಿಂಹಾಸನಂತ್ಯಕ್ತ್ವಾಮೇರುಕೂಟಮಿ ವಾಂಶುಮಾನ್। ಪಶ್ಯತೋಮೇತದಾರಾಮವಿಮಾನಾದವರುಹ್ಯಚ। ತಂಶವಂಭಕ್ಷಯಾಮಾಸಸಸ್ವರ್ಗೀರಘುನಂದನ॥೧೫॥

---

ಷ್ಮನೆ, ತತ್ರ–ಆ ಆಶ್ರಮದಲ್ಲಿ, ನೈದಾಘೀಂ–ನಿದಾಘಸಂಬಂಧವಾದ, ರಾತ್ರಿಂ–ರಾತ್ರಿಯು, ಅವಸಂ–ಇದ್ದೆನು, ಪ್ರಭಾತೇ–ಬೆಳಗಾಗುತಿರಲೀಕಾಗಿ, ಕಾಲ್ಯೇ–ಪ್ರಾತಃಕಾಲದಲ್ಲಿ, ಉತ್ಥಾಯ–ಎದ್ದು, ತತ್ಸರಃ–ಆ ಸರೋವರವನ್ನು ಕುರಿತು, ಉಪಚಕ್ರಮೇ–ಹೋದೆನು ॥ ೮ ॥ ಹೇನೃಪ–ಎಲೈಅರಸೆ, ಅಥ–ಬಳಿಕ, ತತ್ರ–ಆ ಸರೋವರದಲ್ಲಿ, ತಸ್ಮಿನ್–ಆ, ತೋಯಾಶಯೇ–ಆನೀರಿನಮಧ್ಯಪ್ರದೇಶದಲ್ಲಿ, ಸುಪುಷ್ಟಂ — ಬಹಳ ದೇಹಪುಷ್ಟಿಯುಳ್ಳ, ತಿಷ್ಠಂತಂ– ಇರುತಿರುವ, ಪರಯಾಲಕ್ಷ್ಮ್ಯಾ–ಶ್ರೇಷ್ಠವಾದ ಕಾಂತಿಯಿಂದ, ಅಜರಂ–ವಾರ್ಧಿಕಾವಸ್ಥೆಯಿಲ್ಲದಿರುವ, ಶವಂ–ಹೆಣವನ್ನು, ಅಪಶ್ಯಂ–ಕಂಡೆನು. ॥೯॥ ಹೇರಾಘವ–ಎಲೈ ಶ್ರೀರಾಮನೆ, ತಮರ್ಥಂ–ಆ ಅರ್ಥವನ್ನು, ಅಹಂ–ನಾನು, ಮುಹೂರ್ತಂ–ಮುಹೂರ್ತಕಾಲವು,ತತ್ರ–ಅಲ್ಲಿ, ಸರಸ್ತೀರೇ–ಸರೋವರದದಡದಲ್ಲಿ, ಇದಂ–ಇದು, ಕಿನ್ನುಸ್ಯಾತ್‌ಇತಿ–ಏನಾಧೀತುಎಂದು, ಚಿಂತಯಾನಃ–ಆಲೋಚಿಸುತಿರುವನಾಗಿ, ಉಷಿತಃ–ಇದ್ದವನು, ಅಸ್ಮಿ–ಆದೆನು ॥೧೦॥ ಅಥ–ಬಳಿಕ, ಮು ಹೂರ್ತೇನ–ಒಂದುಮುಹೂರ್ತಕಾಲದಲ್ಲಿಯೆ, ದಿವ್ಯಂ–ದೇವತಾಸಂಬಂಧವಾದ, ಅದ್ಭುತದರ್ಶನಂ–ಆಶ್ಚರ್ಯಕರವಾದ ನೋಡುವಿಕೆಯುಳ್ಳ, ಪರಮೋದಾರಂ–ಮಹಾಉನ್ನತವಾದ, ಹಂಸಯುಕ್ತಂ–ಹಂಸಪಕ್ಷಿಗಳಿಂದ ಕೂಡಿಕೊಂಡಿರುವ, ಮನೋಜವಂ–ಮನೋವೇಗದಂತೆವೇಗಮುಳ್ಳ, ವಿಮಾನಂ–ವಿಮಾನವನ್ನು, ಅಪಶ್ಯಂ–ಕಂಡೆನು, ॥ ೧೧ ॥ ಹೇರಘುನಂದನ–ಎಲೈಶ್ರೀರಾಮನೆ, ಹೇವೀರ–ಎಲೈಶೂರನೆ, ತತ್ರವಿಮಾನೇ–ಆವಿಮಾನದಲ್ಲಿ, ಸ್ವರ್ಗಿಣಂ–ಸ್ವರ್ಗವಾಸಿಯಾದ ದೇವತಾಪುರುಷನನ್ನು, ದಿವ್ಯಭೂಷಣಂ–ಅಮೂಲ್ಯವಾದ ಆಭರಣಗಳುಳ್ಳ, ಅಪ್ಸರಸಾಂ–ಅಪ್ಸರಸ್ಸುಗಳ, ಸಹಸ್ರಂ–ಸಹಸ್ರವು, ಉಪಾಸ್ತೇ–ಸೇವಿಸುತಿದ್ದರು ॥೧೨॥ ಅಪರಾಃ–ಕೆಲಬರು, ದಿವ್ಯಗೇಯಾನಿ–ದಿವ್ಯವಾದಗಾನಗಳನ್ನು, ಗಾಯಂತಿ–ಗಾನಮಾಡುತ್ತಾರೆ, ತಥಾ–ಹಾಗೆಯೆ, ಅಪರಾಃ–ಮತ್ತುಕೆಲಬರು, ವಾದಯಂತಿ–ವಾದ್ಯಗಳನ್ನು ಮಾಡುತ್ತಾರೆ, ತಥಾ–ಹಾಗೆಯೆ, ಅನ್ಯಾಶ್ಚ –ಮತ್ತುಕೆಲಬರು, ಕ್ಷ್ವೇಳಯಂತಿ–ಸಿಂಹನಾದಗಳನ್ನು ಮಾಡುತ್ತಾರೆ, ತಥಾ–ಹಾಗೆಯೆ, ಅಪರಾಃ–ಮತ್ತುಕೆಲಬರು, ನೃತ್ಯಂತ್ಯಪಿ–ನರ್ತನೆಮಾಡುತ್ತಾರೆ ॥ ೧೩ ॥ ಅಪರಾಃ–ಮತ್ತುಕೆಲಬರು, ಚಂದ್ರರಶ್ಮ್ಯಾಭೈಃ–ಚಂದ್ರಕಿರಣಗಳಿಗೆ ಸಮಾನವಾದ, ಹೇಮದಂಡೈಃ–ಸುವರ್ಣವಿಕಾರವಾದ ದಂಡಗಳುಳ್ಳ, ಚಾಮರೈಶ್ಚ –ಚಾಮರಗಳಿಂದ, ಪುಂಡರೀಕನಿಭೇಕ್ಷಣಂ–ಕಮಲಗಳಿಗೆ ಸಮಾನವಾದ ನೇತ್ರಗಳುಳ್ಳ, ತಸ್ಯ–ಆ ದೇವತಾಪುರುಷನ, ವದನಂ–ಮುಖವನ್ನು, ದುಧುವುಃ–ಚಾಮರಗಳಿಂದ ಬೀಸುತ್ತಾರೇ ॥೧೪॥ ತತಃ–ಬಳಿಕ, ಅಂಶು ಮಾನ್–ಸೂರ್ಯನು, ಮೇರುಕೂಟಮಿವ–ಮೇರುಶಿಖರಾಗ್ರದಂತೇ, ಸಿಹ್ಮಾಸನಂ–ಸಿಹ್ಮಾಸನವನ್ನು, ತ್ಯಕ್ತ್ವಾ–ಬಿಟ್ಟು, ತದಾ–ಆ ಕಾಲದಲ್ಲಿ, ಹೇ ರಾಮ–ಎಲೈ ಶ್ರೀರಾಮನೆ, ಮೇ–ನಾನು, ಪಶ್ಯತಃ–ನೋಡುತ್ತಿರಲಾಗಿ, ವಿಮಾನಾತ್–ವಿಮಾನದ ದೆಸೆಯಿಂದ, ಅವರುಹ್ಯಚ–ಇಳಿದು, ಹೇ ರಘುನಂದನ–ಎಲೈಶ್ರೀರಾಮನೆ, ಸಸ್ವರ್ಗೀ–ಆ ಸ್ವರ್ಗವಾಸಿಯಾದ ಪುರುಷನು, ತಂಶವಂ–ಆ ಶವವನ್ನು, ಭಕ್ಷಯಾಮಾಸ–ಭಕ್ಷಣೆಮಾಡಿದನು॥೧೫॥ ತದಾ–ಆ ಕಾಲದಲ್ಲಿಯ

---

ವಾಗಿಯೂ, ಬಹುಪುಣ್ಯಕರವಾಗಿಯೂ ಇರುವ ಒಂದಾನೊಂದು ಆಶ್ರಮವು ತಪಸ್ವಿಗಳಿಲ್ಲದಿತ್ತು. ಆ ಆಶ್ರಮದಲ್ಲಿಗ್ರೀಷ್ಮ ಸಂಬಂಧವಾದ ಒಂದು ರಾತ್ರಿಯು ಇಳಿದುಕೊಂಡಿದ್ದು ಬೆಳಗಾಗಲೂ ಪ್ರಾತಃಕಾಲದಲ್ಲೆದ್ದು ಆ ಸರೋವರದ ಸಮೀಪದಲ್ಲಿ ಪೋದೆನು ॥ ಬಳಿಕ ಆ ಸರೋವರದ ನೀರಿನಲ್ಲಿ ದೇಹಪುಷ್ಟಿಯುಳ್ಳದ್ದಾಗಿಯೂ, ಬಹುಕಾಂತಿಯುಳ್ಳದ್ದಾಗಿಯೂ ಮುಪ್ಪಿಲ್ಲದ್ದಾಗಿಯೂ ಇರುವ ಒಂದಾನೊಂದು ಹೆಣವಂಕಂಡು ಇದೇನಿರಬಹುದೆಂದು ಚಿಂತಿಸುತ್ತಾ ಸ್ವಲ್ಪ ಕಾಲವು ನಿಂತಿದ್ದೆನು।೧೧॥ ಬಳಿಕಮುಹೂರ್ತಮಾತ್ರದಲ್ಲಿ ದೇವತಾಸಂಬಂಧವಾಗಿಯೂ, ಅದ್ಭುತವಾದ ನೋಟವುಳ್ಳದ್ದಾಗಿಯೂ, ಹಂಸಪಕ್ಷಿಗಳಿಂದ ಯುಕ್ತವಾದದ್ದಾಗಿಯೂ, ಮನೋವೇಗದಂತೆ ವೇಗವುಳ್ಳದ್ದಾಗಿಯೂ, ಇರುವ ಉತ್ತಮವಾದ ವಿಮಾನವಂಕಂಡೆನು ॥೧೧॥ ಆ ವಿಮಾನದಲ್ಲಿ ಓರ್ವಸ್ವರ್ಗವಾಸಿಯನ್ನು ಸಾವಿರಮಂದಿಅಪ್ಸರಸ್ತ್ರೀಯರು ಸೇವಿಸುತ್ತಿದ್ದರು, ಅವರಲ್ಲಿ ಕೆಲವರು ಗಾನವಂಗೈಯುತ್ತಲೂ ಮತ್ತು ಕೆಲಬರು ಕಥೆಗಳಂ ಪೇಳುತ್ತಲೂ ಇನ್ನು ಕೆಲರು ಅಟ್ಟಹಾಸವಂ ಗೈಯ್ಯುತಲೂ, ಮತ್ತು ಕೆಲಬರು ನರ್ತಿಸುತ್ತಲೂ, ಚಂದ್ರಕಿರಣಗಳಿಗೆ ಸಮಾನವಾಗಿರ್ಪ ಮತ್ತೂ ಸುವರ್ಣಪಿಡಿಗಳುಳ್ಳ ಚಾಮರಗಳಂ ಬೀಸುತ್ತಲೂ, ಬಿಳಿದಾವರೆಯೋ ಪಾದಿಯಾಗಿರ್ಪ ಆತನ ಮುಖವನ್ನು ಮರಿಸುತ್ತಲೂ ಇರುತಿದ್ದರು ॥೧೪॥ ಬಳಿಕ ಆ ದೇವತಾಪುರುಷನು ನಾನು ನೋಡುತ್ತಿರುವಾಗಲೇ ಸೂರ್ಯನು ಮೇರುಗಿರಿಯ ಶಿಖರವಂ ತೊರೆಯುವ ತೆರದಿ ಆ ಸಿಹ್ಮಾಸನವಂ ಬಿಟ್ಟು ಆ ವಿಮಾನದಿಂದಿಳಿದು ಆ ಹೆಣವಂ ತಿಂದನು॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ಶಾಕಾಭುಕ್ತ್ವಾಯಥಾಕಾಮಂಮಾಂಸಂಬಹುಳಂಸುಪ್ಷುಚ । ಅವತೀರ್ಯಸರಃಸ್ವರ್ಗೀಸಂಸ್ಪೃಷ್ಟ್ವಮುಪಚಕ್ರಮೆ॥೧೬॥ ಉಪಸ್ಪೃಶ್ಯಯಥಾನ್ಯಾಯಂಸಸ್ವರ್ಗೀಪುರುಷರ್ಷಭ । ಆರೋಢುಮುಪಚಕ್ರಾಮವಿಮಾನವರಮುತ್ತಮಂ ॥೧೭॥ ತಮಹಂದೇವಸಂಕಾಶಮಾರೋಹಂತಮುದೀಕ್ಷ್ಯವೈ । ಅಹಂತದಾಬ್ರುವಂವಾಕ್ಯಂಸ್ವರ್ಗಿಣಂಪುರುಷರ್ಷಭ ॥೧೮॥ ಕೋಭವಾಂದೇವಸಂಕಾಶಆಹಾರಶ್ಚ ವಿಗರ್ಹಿತಃ । ತ್ವಯಾಸಂಭುಜ್ಯತೆಸೌಮ್ಯ ಕಿಮರ್ಥಂವಕ್ತುಮರ್ಹಸಿ ॥೧೯॥ ಆಶ್ಚರ್ಯಮೀದೃಶೋಭಾವೋಭಾಸ್ವರೋದೇವಸಮ್ಮತಃ । ಆಹಾರೋಗರ್ಹಿತಸ್ಸೌಮ್ಯಶ್ರೋತುಮಿಚ್ಛಾಮಿತತ್ವತಃ । ನಾಹಮೌಪಯಿಕಂಮನ್ಯೇತವಭಕ್ಷ್ಯಮಿಮಂಶವಂ ॥೨೦॥ ···✻ಇತಿಶ್ರೀಮದುತ್ತರ ರಾಮಾಯಣೆ ಸಪ್ತಸಪ್ತತಿತಮಸ್ಸರ್ಗಃ✻···—

ಶ್ರುತ್ವಾತುಭಾಷಿತಂವಾಕ್ಯಂಮಮರಾಮಶುಭಾಕ್ಷರಂ । ಪ್ರಾಂಜಲಿಃಪ್ರತ್ಯುವಾಚೆದಂಸಸ್ವರ್ಗೀರಘುನಂದನ॥೧॥ ಶೃಣುಬ್ರಹ್ಮನ್‌ಯಥಾವೃತ್ತಂಮಮೈತತ್ಸುಖದುಃಖಯೋಃ । ದುರತಿಕ್ರಮಣೀಯಂಹಿಯಥಾಪೃಚ್ಛಸಿಮಾಂದ್ವಿಜ ॥೨॥

---

ಶಾಕಾಮಂ–ಸ್ವೇಚ್ಛೆಯಾಗಿ, ಬಹು–ಬಹಳವಾದ, ಮಾಂಸಂ–ಮಾಂಸವನ್ನು, ಸುಷ್ಠು–ಚನ್ನಾಗಿ, ಭುಕ್ತ್ವಾ–ಭೋಜನಮಾಡಿ, ಸರಃ– ಸರೋವರವನ್ನು ಕುರಿತು, ಅವತೀರ್ಯ–ಯಿಳಿದು, ಸಂಸ್ಪೃಷ್ಟುಂ–ಉದಕಸ್ಪರ್ಶೆಯನ್ನು ಮಾಡುವದಕ್ಕೋಸುಗ, ಉಪಚಕ್ರಮೆ–ಆರಂಭಿಸಿದನು ॥೧೬॥ ಹೆ ಪುರುಷರ್ಷಭ–ಎಲೈ ಪುರುಷ ಶ್ರೇಷ್ಠನೇ, ಸಸ್ವರ್ಗೀ–ಆ ಸ್ವರ್ಗವಾಸಿಯಾದ ಪುರುಷನು, ಯಥಾನ್ಯಾಯಂ–ಯಥಾಶಾಸ್ತ್ರವಾಗಿ, ಉಪಸ್ಪೃಶ್ಯ–ಸ್ನಾನಮಾಡಿ, ಉತ್ತಮಂ–ಉತ್ತಮವಾದ, ವಿಮಾನವರಂ–ಶ್ರೇಷ್ಠವಾದ ವಿಮಾನವನ್ನು, ಆರೋಢುಂ–ಯೇರುವದಕ್ಕೋಸ್ಕರ, ಉಪಚಕ್ರಾಮ–ಯತ್ನಿಸಿದನು ॥೧೭॥ ಅಹಂ–ನಾನು, ಆರೋಹಂತಂ–ಯೇರುತ್ತಿರುವ, ದೇವಸಂಕಾಶಂ–ದೇವತಾ ಸಮಾನನಾದ, ತಂಸ್ವರ್ಗಿಣಂ–ಆ ಸ್ವರ್ಗವಾಸಿಯಾದ ಪುರುಷನನ್ನು ಕುರಿತು, ತದಾ–ಆ ಕಾಲದಲ್ಲಿ, ವಾಕ್ಯಂ–ಮಾತನ್ನು, ಅಬ್ರುವಂ–ನುಡಿದೆನು ॥೧೮॥ ಹೆ ಸೌಮ್ಯ–ಎಲೈ ಸೌಮ್ಯನೇ, ಭವಾನ್–ನೀನು, ಕಃ–ಯಾರು, ದೇವಸಂಕಾಶಃ–ದೇವತೆಗೆ ಸಮಾನನಾಗಿದ್ದೀ, ವಿಗರ್ಹಿತಃ–ನಿಂದ್ಯವಾದ, ಆಹಾರಶ್ಚ–ಆಹಾರವು, ತ್ವಯಾ–ನಿನ್ನಿಂದ, ಕಿಮರ್ಥಂ–ಯಾತಕ್ಕೋಸ್ಕರ, ಸಂಭುಜ್ಯತೆ –ಭೋಜನಮಾಡಲ್ಪಡುತ್ತೇ, ವಕ್ತುಂ–ಹೇಳುವದಕ್ಕೋಸ್ಕರ, ಅರ್ಹಸಿ–ಯೋಗ್ಯನಾಗು ॥೧೯॥ ಆಶ್ಚರ್ಯಂ–ಆಶ್ಚರ್ಯವು, ಈದೃಶಃ– ಇಂಥಾದ್ದಾದ, ಭಾವಃ–ದೇಹಭಾವವು, ದೆವಸಮ್ಮತಃ–ದೇವತೆಗಳಿಗೂಕೂಡ ಸಮ್ಮತವಾಗಿದ್ದಾಗಿ, ಭಾಸ್ವತಃ–ಹೊಳೆಯುತ್ತಿಧೆ, ಹೆ ಸೌಮ್ಯ–ಎಲೋಸೌಮ್ಯನೇ, ಆಹಾರಃ–ಆಹಾರವು, ಗರ್ಹಿತಃ–ನಿಂದಿತವಾದ್ದು, ತತ್ವತಃ–ಯಥಾರ್ಥವಾಗಿ, ಶ್ರೋತುಂ–ಕೇಳುವದಕ್ಕೋಸ್ಕರ, ಇಚ್ಛಾಮಿ– ಇಚ್ಛೆಸುತ್ತೇನೇ, ಅಹಂ–ನಾನು, ತವ–ನಿನಿಗೆ, ಇಮಂಶವಂ–ಈ ಶವವನ್ನು, ಔಪಯಿಕಂ–ಉಪಯುಕ್ತವಾದ, ಭಕ್ಷ್ಯಂ–ಭಕ್ಷಣಯೋಗ್ಯವನ್ನಾಗಿ, ನಮನ್ಯೆ–ಎಣಿಸಲಾರೆನು ॥೨೦॥

—···ಇತಿ ಶ್ರೀಮದುತ್ತರ ರಾಮಾಯಣೆ ಸಪ್ತಸಪ್ತತಿತಮ ಸ್ಸರ್ಗಃ···—

ಹೆ ರಾಮ–ಎಲೈ ಶ್ರೀರಾಮನೆ, ಹೆ ರಘುನಂದನ–ಎಲೈ ರಘುವಂಶರಾಜರಿಗೆ ಆನಂದವನ್ನುಂಟು ಮಾಡುವನೇ, ಸಸ್ವರ್ಗೀ– ಆ ಸ್ವರ್ಗವಾಸಿಯಾದ ಪುರುಷನು, ಶುಭಾಕ್ಷರಂ ಒಳ್ಳೇ ಮಾತುಗಳುಳ್ಳ, ಮಮ–ನನ್ನಿಂದ, ಭಾಷಿತಂ–ಮಾತಾಡಲ್ಪಟ್ಟ, ವಾಕ್ಯಂ–ಮಾತನ್ನು, ಶ್ರುತ್ವಾ–ಕೇಳಿ, ಪ್ರಾಂಜಲಿಃ–ಅಂಜಲಿಬದ್ಧನಾಗಿ, ಇದಂ–ಈಮಾತನ್ನು, ಪ್ರತ್ಯುವಾಚ–ಪ್ರತ್ಯುತ್ತರಕೊಟ್ಟನು ॥೧॥ ಹೆ ಬ್ರಹ್ಮನ್–ಎಲೈ ಬ್ರಹ್ಮಸ್ವರೂಪನಾದ, ಹೆದ್ವಿಜ–ಎಲೈ ಬ್ರಾಹ್ಮಣನೇ, ಮಮ–ನನಿಗೆ, ಏತತ್ಸುಖದುಃಖಯೋಃ–ಈ ಸುಖದುಃಖಗಳಿಗೆ, ಯಥಾವೃತ್ತಂ–ಪೂರ್ವದಲ್ಲಿನಡೆದ ವೃತ್ತಾಂತವನ್ನು, ಯಥಾಪೃಚ್ಛಸಿ–ಹ್ಯಾಗೆ ನೀನುಕೇಳುತ್ತೀಯೋ, ತಧಾ–ಹಾಗೆಯೆ, ದುರತಿಕ್ರಮಣೀಯಂ–ಅತಿಕ್ರಮಿಸ ಲಸಾಧ್ಯವಾದ, ತದ್ವೃತ್ತಾಂತಂ–ಆ ವೃತ್ತಾಂತವನ್ನು, ಶೃಣು–ಕೇಳು॥ ಪುರಾ–ಪೂರ್ವದಲ್ಲಿ, ಮಹಾಯಶಾಃ–ಮಹಾ ಕೀರ್ತಿವಂತನಾದ, ಮಮ–ನನಿಗೆ, ಪಿತಾ–ತಂದೆಯಾದ, ವೈದರ್ಭಕಃ–ವಿದರ್ಭದೇಶದ ಅಧಿಪತಿಯು, ಸು

---

ಎಲೈ ಶ್ರೀರಾಮನೆ! ಆಸ್ವರ್ಗವಾಸಿಯಾದ ಪುರುಷನು ಸ್ವೇಚ್ಛೆಯಾಗಿ ಬಹುಮಾಂಸವನ್ನು ಚನ್ನಾಗಿ ಭುಜಿಸಿ, ಆಸರೋವರದಲ್ಲಿಳಿದು, ಕೈಗಳಂ ತೊಳೆದುಕೊಂಡು, ಉದಕಪಾನವಂಮಾಡಿ ವಿಮಾನವನ್ನೇರುವದಕ್ಕೋಸುಗ ಬಂದವನಾಗಲೂ, ಆಗನಾನು ದೇವತಾ ಸದೃಶನಾದ ಆತನಂಕಂಡು, ಎಲೈ ಪುರುಷಶ್ರೇಷ್ಠನೆ! ದೇವತೆಗಳಿಗೆ ಸಮಾನವಾದ ನೀನ್ಯಾರು? ನಿನ್ನ ಆಹಾರವು ಬಹುನಿಂದಿತವಾದದ್ದು, ಇದನ್ನು ಯಾಕೆ ಭುಜಿಸುತ್ತಿದ್ದೀ? ಇದಂ ಹೇಳುವಂಥಾವನಾಗು, ನಿನ್ನ ಈ ದೇಹ ಭಾವನು ಬಹಳ ಆಶ್ಚರ್ಯಕರವಾಗಿ, ದೇವತೆಗಳಿಗೆಲ್ಲ ಸಂಮತವಾಗಿಧೆ, ಆಹಾರ ವಾದರೆ ಬಲುನಿಂದಿತವಾದದ್ದು, ನಿನಿಗೆ ಈ ಶವಭಕ್ಷಣೆಯು ಯುಕ್ತವಲ್ಲ, ಯಥಾರ್ಥವಂ ಹೇಳುವಂಥಾವನಾಗೆಂದು ನುಡಿದನು ॥೨೦॥

—···ಇತಿಶ್ರೀಮದುತ್ತರ ರಾಮಾಯಣೆ ಸಪ್ತಸಪ್ತತಿತಮಸ್ಸರ್ಗಃ.···—

ಕೇಳೆಲೈ ರಘುನಂದನನೆ! ಆ ಸ್ವರ್ಗವಾಸಿಯಾದ ಪುರುಷನು ಎನ್ನ ವಾಕ್ಯವಂ ಕೇಳಿ ಅಂಜಲಿಬದ್ಧನಾಗಿ ಈಪರಿ ಉತ್ತರವಂ ಕೊಟ್ಟನದೆಂತನೆ ॥೧॥ ಎಲೈ ಬ್ರಾಹ್ಮಣನೆ! ಎನ್ನ ಈ ಸುಖದುಃಖಗಳವಿಷಯವಾಗಿ ಪೂರ್ವದಲ್ಲಿ ನಡೆದ ವೃತಾಂತವನ್ನು ನೀನು ಹ್ಯಾಗೆ ಕೇಳಿದೆಯೋ, ಹಾಗೆಯೇ ಅದು ಅತಿಕ್ರಮಿಸ ಲಸಾಧ್ಯವಾದದ್ದು ಅಂಥಾ ಎನ್ನ ವೃತಾಂತವಂ ಪೇಳ್ವೆನು ಕೇಳು ॥೨॥ ಪೂರ್ವದಲ್ಲಿ ಮಹಾಯಶೋವಂತನಾದ ನಮ್ಮ ತಂದೆಯು, ಸುದೇವನೆಂದು ಪ್ರ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪುರಾವೈದರ್ಭಕೋರಾಜಾಪಿತಾಮಮಮಹಾಯಶಾಃ । ಸುದೇವಇತಿವಿಖ್ಯಾತಸ್ತ್ರಿಷುಲೋಕೇಷುವೀರ್ಯವಾನ್ ॥೩॥ ತಸ್ಯ ಪುತ್ರದ್ವಯಂರಾಜ್ಞೋದ್ವಾಭ್ಯಾಂಸ್ತ್ರೀಭ್ಯಾಮಜಾಯತ । ಅಹಂಶ್ವೇತಇತಿಖ್ಯಾತೋಯವೀಯಾನ್ ಸುರಥೋಭವತ್ ॥೪॥ ತತಃಪಿತರಿಸ್ವರ್ಯಾತೇಪೌರಾಮಾಮಭ್ಯಷೇಚಯನ್ । ತತ್ರಾಹಂಕೃತವಾನ್ ರಾಜ್ಯಂಧರ್ಮೇಣಸುಸಮಾಹಿತಃ ॥೫॥ ಏವಂವರ್ಷಸಹಸ್ರಾಣಿಸಮತೀತಾನಿಸುವ್ರತ । ರಾಜ್ಯಂಕಾರಯತಾಬ್ರಹ್ಮನ್ ಪ್ರಜಾಧರ್ಮೇಣರಕ್ಷಿತಾಃ ॥೬॥ ಸೋಹಂನಿಮಿತ್ತೇಕಸ್ಮಿಂಶ್ಚಿದ್ವಿಜ್ಞಾತಾಯುರ್ದ್ವಿಜೋತ್ತಮ । ಕಾಲಧರ್ಮಂಹೃದಿನ್ಯಸ್ಯತಪೋವನಮುಪಾಗಮಂ ॥೭॥ ಸೋಹಂವನಮಿದಂದುರ್ಗಂಮೃಗಪಕ್ಷಿವಿವರ್ಜಿತಂ । ತಪಃಕರ್ತುಂಪ್ರವಿಷ್ಟೋಸ್ಮಿ ಸಮೀಪೇಸರಸಶ್ಶುಭೇ ॥೮॥ ಭ್ರಾತರಂಸುರಥಂರಾಜ್ಯೇಹ್ಯಭಿಷಿಚ್ಯನರಾಧಿಪಂ । ಇದಂಸರಸ್ಸಮಾಸಾದ್ಯತಪಸ್ತಪ್ತಂಮಯಾಚಿರಂ ॥೯॥ ಸೋಹಂವರ್ಷಸಹಸ್ರಾಣಿತಪಸ್ತೀವ್ರಂಮಹಾಮುನೇ । ಕೃತ್ವಾಸುದುಷ್ಕರಂಪ್ರಾಪ್ತೋಬ್ರಹ್ಮಲೋಕಮನುತ್ತಮಂ ॥೧೦॥ ತಸ್ಯಮೇಸ್ವರ್ಗಭೂತಸ್ಯಕ್ಷುತ್ಪಿಪಾಸೇದ್ವಿಜೋತ್ತಮ ।

---

ದೇವಇತಿ–ಸುದೇವನೆಂದು, ವೀರ್ಯವಾನ್–ಪರಾಕ್ರಮಶಾಲಿಯಾಗಿ, ತ್ರಿಷುಲೋಕೇಷು–ಮೂರುಲೋಕಗಳಲ್ಲಿ, ವಿಖ್ಯಾತಃ–ಪ್ರಸಿದ್ಧನಾಗಿದ್ದನು ॥೩॥ ತಸ್ಯ ರಾಜ್ಞಃ–ಆ ಅರಸಿಗೆ, ದ್ವಾಭ್ಯಾಂಸ್ತ್ರೀಭ್ಯಾಂ–ಯಿಬ್ಬರುಸ್ತ್ರೀಯರುಗಳಿಂದ, ಪುತ್ರದ್ವಯಂ–ಯಿಬ್ಬರು ಮಕ್ಕಳು, ಅಜಾಯತ–ಹುಟ್ಟಿದರು, ಅಹಂ–ನಾನು, ಶ್ವೇತಇತಿ–ಶ್ವೇತನೆಂದು, ಖ್ಯಾತಃ–ಪ್ರಖ್ಯಾತನಾಗಿಧೆನೇ ॥೪॥ ಯವೀಯಾನ್–ತಮ್ಮನು, ಸುರಥಃ–ಸುರಥನೆಂಬವನು, ಅಭವತ್– ಆದನು, ತತಃ–ಬಳಿಕ, ಪಿತರಿ–ತಂದೆಯು, ಸ್ವರ್ಯಾತೇಸತಿ–ಸ್ವರ್ಗಸ್ಥನಾಗುತ್ತಿರಲಿಕಾಗಿ, ಪೌರಾಃ–ಪಟ್ಟಣಸ್ಥರು,ಮಾಂ–ನನ್ನನ್ನು, ಅಭ್ಯಷೇಚಯನ್– ಪಟ್ಟಾಭಿಷೇಕ ಮಾಡಿದರು, ತತ್ರ–ಅಲ್ಲಿ, ಅಹಂ–ನಾನು, ಧರ್ಮೇಣ–ಧರ್ಮದಿಂದ, ಸುಸಮಾಹಿತಃ–ಸಮಾಧಾನ ಚಿತ್ತನಾಗಿ, ರಾಜ್ಯಂ–ರಾಜ್ಯಭಾರವನ್ನು, ಅಕರೋತ್–ಮಾಡಿದೆನು ॥೫॥ ಹೆ ಸುವ್ರತ–ಎಲೈ ನಿಯಮದಲ್ಲಿರುವನೇ, ಹೆ ಬ್ರಹ್ಮನ್–ಎಲೈ ಬ್ರಾಹ್ಮಣನೆ, ಏವಂ–ಈ ಪರಿಯಾಗಿ, ವರ್ಷಸಹಸ್ರಾಣಿ–ಸಹಸ್ರವರುಷಗಳು, ಸಮತೀತಾನಿ–ಕಳದುಹೋದವು, ರಾಜ್ಯಂ–ರಾಜ್ಯವನ್ನು, ಕಾರಯತಾ–ಮಾಡುತಿರುವ, ಮಯಾ–ನನ್ನಿಂದ,ಪ್ರಜಾಃ–ಪ್ರಜೆಗಳು, ಧರ್ಮೇಣ–ಧರ್ಮದಿಂದ, ರಕ್ಷಿತಾಃ–ಸಂರಕ್ಷಿಸಲ್ಪಟ್ಟರು ॥೬॥ ಸೋಹಂ–ಆ ಈನಾನು, ಹೆ ದ್ವಿಜೋತ್ತಮ–ಎಲೈ ಬ್ರಾಹ್ಮಣಶ್ರೇಷ್ಠನೆ, ಕಸ್ಮಿಂಶ್ಚಿನ್ನಿಮಿತ್ತೇ–ಯಾವದೊ ಒಂದು ನಿಮಿತ್ತವಿಷಯವಾಗಿ, ವಿಜ್ಞಾತಾಯುಃ–ವಿಜ್ಞಾತ– ತಿಳಿಯಲ್ಪಟ್ಟ, ಆಯುಃ–ಆಯುಸ್ಸುಳ್ಳವನಾಗಿ, ಕಾಲಧರ್ಮಂ– ಮರಣವನ್ನು, ಹೃದಿ–ಹೃದಯದಲ್ಲಿ, ನ್ಯಸ್ಯ–ಯಿರಿಸಿಕೊಂಡು, ತಪೋವನಂ–ತಪೋವನವನ್ನು ಕುರಿತು, ಉಪಾಗಮತ್–ಬಂದೆನು, ॥೭॥ ಸೋಹಂ–ಆ ಈನಾನು, ದುರ್ಗಂ– ಹೋಗುವದಕ್ಕೆ ಅಸಾಧ್ಯವಾದ, ಮೃಗಪಕ್ಷಿವಿವರ್ಜಿತಂ–ಮೃಗಗಳಿಂದಲೂ, ಪಕ್ಷಿಗಳಿಂದಲೂ, ವಿರಹಿತವಾದ, ಇದಂವನಂ–ಈ ವನವನ್ನು ಕುರಿತು, ತಪಃ–ತಪಸ್ಸನ್ನು, ಕರ್ತುಂ–ಮಾಡುವದಕ್ಕೋಸ್ಕರ, ಸರಸಃ–ಸರೋವರದ, ಶುಭೇ–ಶುಭಕರವಾದ, ಸಮೀಪೇ–ಹತ್ತಿರದಲ್ಲಿ, ಪ್ರವಿಷ್ಟಃ–ಪ್ರವೇಶಿಸಿದವನು, ಅಸ್ಮಿ–ಆದೆನು ॥೮॥ ರಾಜ್ಯೇ–ರಾಜ್ಯದಲ್ಲಿ, ಭ್ರಾತರಂ–ತಮ್ಮನಾದ, ಸುರಥಂ–ಸುರಥನನ್ನು, ನರಾಧಿಪಂ–ಅರಸನನ್ನಾಗಿ, ಅಭಿಷಿಚ್ಯ–ಪಟ್ಟಾಭಿಷೇಕಮಾಡಿ, ಇದಂಸರಃ–ಈ ಸರೋವರವನ್ನು, ಸಮಾಸಾದ್ಯ–ಹೊಂದಿ, ಮಯಾ–ನನ್ನಿಂದ, ಚಿರಂ–ಬಹುಕಾಲವು, ತಪಃ–ತಪಸ್ಸು, ತಪ್ತಂ–ತಪಿಸಲ್ಪಟ್ಟಿತು ॥೯॥ ಹೆ ಮಹಾಮುನೇ–ಎಲೈಮಹಾಋಷಿಯೇ, ಸೋಹಂ–ಆ ಯೀನಾನು, ವರ್ಷಸಹಸ್ರಾಣಿ–ಅನೇಕ ಸಹಸ್ರ ವರುಷಗಳು, ತೀವ್ರಂ–ತೀಕ್ಷ್ಣವಾದ, ಸುದುಷ್ಕರಂ– ಮಾಡಲಸಾಧ್ಯವಾದ, ತಪಃ–ತಪಸ್ಸನ್ನು, ಕೃತ್ವಾ–ಮಾಡಿ, ಅನುತ್ತಮಂ–ಸರ್ವೋತ್ತಮವಾದ, ಬ್ರಹ್ಮಲೋಕಂ–ಬ್ರಹ್ಮಲೋಕವನ್ನು, ಪ್ರಾಪ್ತಃ– ಹೊಂದಿದೆನು ॥೧೦॥ ಹೆ ದ್ವಿಜೋತ್ತಮ–ಎಲೈ ಬ್ರಾಹ್ಮಣಶ್ರೇಷ್ಠನೇ, ಹೆ ಪರಮೋದಾರ–ಎಲೈಮಹಾ ಉನ್ನತಪುರುಷನೇ, ತಸ್ಯ–ಅಂಥಾ, ಸ್ವರ್ಗಭೂತಸ್ಯ–ಸ್ವರ್ಗವಾಸ ಪುರುಷನಾದ, ಮೇ–ನನ್ನನ್ನು, ಕ್ಷುತ್ಪಿಪಾಸೇ–ಹಸಿವು ನೀರಡಿಕೆಗಳು, ಬಾಧೇತೆ – ಬಾಧಿಸುತ್ತವೇ, ತತಃ – ಆದ್ದರಿಂದ, ಅಹಂ–ನಾ

---

ಸಿದ್ಧನಾಗಿಯೂ ಮಹಾಪರಾಕ್ರಮ ಶಾಲಿಯಾಗಿಯೂ ವಿದರ್ಭ ದೇಶಾಧೀಶ್ವರನಾಗಿಯೂ ಇದ್ದನು ॥೩॥ ಆತನ ಧರ್ಮ ಪತ್ನಿಗಳಾದ ಇಬ್ಬರು ರಾಜಕನ್ನಿಕೆಯರಿಂದ ಈರ್ವರು ಮಕ್ಕಳುಂಟಾದರು, ಆ ಕುಮಾರರಲ್ಲಿ ಹಿರಿಯ ಮಗನಾದವನು ನಾನು, ಎನ್ನ ಹೆಸರು ಶ್ವೇತನೆಂದು ಪ್ರಸಿದ್ಧವಾಗಿರುವದು, ಎನ್ನನುಜನು ಸುರಥನೆಂಬುವನು॥೪॥ ನಮ್ಮ ತಂದೆಯಾದ ಸುದೇವನೆಂಬರಾಜನು ಸ್ವರ್ಗಸ್ಥನಾಗಲೂ, ಪುರವಾಸಿಗಳೆಲ್ಲರು ಎನಗೆಪಟ್ಟಾಭಿಷೇಕವಂಗೈದರು, ಬಳಿಕ ನಾನು ಆ ವೈದರ್ಭದೇಶದೊಳು ಅನೇಕಸಹಸ್ರ ವರುಷಗಳು ರಾಜ್ಯ ವನ್ನಾಳುತ್ತಿದ್ದನು॥೬॥ ಅಂಥಾ ಪದವಿಯನ್ನನುಭವಿಸುತಿದ್ದ ನಾನು ಒಂದಾನೊಂದು ನಿಮಿತ್ತವಾಗಿ, ಆಯುಃ ಪರಿಮಿತಿಯಂ ತಿಳಿದು ಕೊಂಡು, ಎನ್ನನುಜನನ್ನು ದೇಶದಲ್ಲಿ ರಾಜನನ್ನಾಗಿ ಪಟ್ಟಾಭಿಷೇಕವಂ ಗೈದು, ನಿಯಮವಾಗಿ ತಪವಂ ಗೈಯುವದಕ್ಕೋಸುಗ ಮಹಾ ಭಯಂಕರವಾಗಿಯೂ ಮೃಗಗಳಿಂದಲೂ ಪಕ್ಷಿಗಳಿಂದಲೂ ಸಹ ರಹಿತವಾದಂಥಾದ್ದಾಗಿಯೂ ಇರುವ ಮತ್ತು ಗಮಿಸಲಸಾಧ್ಯವಾದ ಈ ಅರಣ್ಯಕ್ಕೆಬಂದು ಶುಭಕರವಾದ ಈ ಸರೋವರದ ಸಮೀಪದಲ್ಲಿ ಸಾವಿರ ವರುಷಗಳು ತೀವ್ರವಾದ ತಪಸ್ಸನ್ನು ಮಾಡಿದಂಥಾವನಾಗಿ, ಬ್ರಹ್ಮಲೋಕವನ್ನೈದಿದೆನು॥೧೦॥ ಕೇಳೆಲೈ ಬ್ರಹ್ಮರ್ಷಿಯೆ! ಅಂಥಾ ಸ್ವರ್ಗವಾಸಿಯಾದ ನನಿಗೆ ಕ್ಷುತ್ಪಿಪಾಸಂಗಳು ಬಲುಬಾಧೆಯನ್ನಿಡಲೂ, ಆಗ ನಾನು ಸಂತಪಿಸುತ್ತಿರುವನಾಗಿ ಪಿತಾಮಹನ ಸಮೀಪಕ್ಕೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಬಾಧತೇಪರಮೋದಾರತತೋಹಂವ್ಯಥಿತೇಂದ್ರಿಯಃ । ಗತ್ವಾತ್ರಿಭುವನಶ್ರೇಷ್ಠಂ ಪಿತಾಮಹಮಥಾಬ್ರುವಂ ॥೧೧॥ ಭಗವನ್ ಬ್ರಹ್ಮಲೋಕೋಯಂಕ್ಷುತ್ಪಿಪಾಸಾವಿವರ್ಜಿತಃ। ಕಸ್ಯೇಯಂಕರ್ಮಣಃಪ್ರಾಪ್ತಿಃಕ್ಷುತ್ಪಿಪಾಸಾವಶೋಸ್ಮ್ಯಹಂ॥೧೨॥ ಆಹಾರಃಕಶ್ಚ ಮೇದೇವತನ್ಮೇಬ್ರೂಹಿಪಿತಾಮಹ ॥೧೩॥ ಪಿತಾಮಹಸ್ತುಮಾಮಾಹತವಾಹಾರಸ್ಸುದೇವಜ। ಸ್ವಾದೂನಿಸ್ವಾನಿಮಾಂಸಾನಿತಾನಿಭಕ್ಷಯನಿತ್ಯಶಃ ॥೧೪॥ ಸ್ವಶರೀರಂತ್ವಯಾಪುಷ್ಟಂಕುರ್ವತಾತಪಉತ್ತಮಂ । ಅನುಪ್ತಂರೋಹತೇಶ್ವೇತನಕದಾಚಿನ್ಮಹಾಮತೇ ॥೧೫॥ ಉಪ್ತಿರ್ನತೇಸ್ತಿಸೂಕ್ಷ್ಮಾಪಿವನೇಸತ್ವನಿಷೇವಿತೇ ॥೧೬॥ ಪುರಾತ್ವಂಭಿಕ್ಷಮಾಣಾಯಭಿಕ್ಷಾಂವೈಯತಯೇನೃಪ। ನಹಿದತ್ತಾತ್ವಯಾಭಿಕ್ಷಾಯಸ್ಮಾದತಿಥಯೇಪಿವೈ । ತೇನಸ್ಸ್ವರ್ಗಗತೋವತ್ಸಬಾಧ್ಯಸೇಕ್ಷುತ್ಪಿಪಾಸಯಾ॥ ಸತ್ವಂಸುಪುಷ್ಟಮಾಹಾರೈಃಸ್ವಶರೀರಮನುತ್ತಮಂ। ಭಕ್ಷಯಸ್ವಾಮೃತರಸಂತೇನತೃಪ್ತಿರ್ಭವಿಷ್ಯತಿ ॥೧೮॥ ಯದಾತುತ

---

ನು, ವ್ಯಥಿತೇಂದ್ರಿಯಃ-ವ್ಯಥಿತ-ವ್ಯಸನಗೊಂಡ, ಇಂದ್ರಿಯಃ-ಮನಸ್ಸುಳ್ಳವನಾಗಿ, ತ್ರಿಭುವನಶ್ರೇಷ್ಠಂ – ಲೋಕತ್ರಯದಲ್ಲಿಯೂ ಕೂಡ ಶ್ರೇಷ್ಠನಾದ, ಪಿತಾಮಹಂ-ಬ್ರಹ್ಮದೇವರಂಕುರಿತು, ಗತ್ವಾ – ಪೋಗಿ, ಅಥ-ಬಳಿಕ, ಅಬ್ರುವಂ-ಪೇಳಿದೆನು, ಹೆ ಬ್ರಹ್ಮನ್-ಎಲೈ ಬ್ರಹ್ಮನೇ, ಅಯಂಬ್ರಹ್ಮಲೋಕಃ-ಈ ಬ್ರಹ್ಮಲೋಕವು, ಕ್ಷುತ್ಪಿಪಾಸಾವಿವರ್ಜಿತಃ-ನೀರಡಿಕೆಯಿಂದಲೂ ಆಶಿವೃಸಿಂದಲೂ ವಿವರ್ಜಿತವಾದದ್ದು, ಅಹಂ-ನಾನು, ಯತ್-ಯಾವಕಾರಣದ ದೆಸೆಯಿಂದ, ಕ್ಷುತ್ಪಿಪಾಸಾವಶಃ – ಕ್ಷುತ್ಪಿಪಾಸಗಳಿಗೆ ಸ್ವಾಧೀನನಾದವನು, ಅಸ್ಮಿ-ಆಗಿಧೇನೆ, ಇಯಂ-ಇದು, ಕಸ್ಯಕರ್ಮಣಃ – ಯಾವ ಕರ್ಮದ, ಪ್ರಾಪ್ತಿಃ-ಫಲಪ್ರಾಪ್ತಿಯು ॥ ೧೨ ॥ ಹೆದೇವ-ಎಲೈ ದೇವನೆ, ಹೆ ಪಿತಾಮಹ-ಎಲೈ ತಾತನೇ, ಮೇ-ನನಗೆ, ಆಹಾರಃ-ಆ ಹಾರವು, ಕಃ-ಯಾವದೋ, ತತ್-ಅದನ್ನು, ಬ್ರೂಹಿ- ಪೇಳು ೧೩॥ ಪಿತಾಮಹಸ್ತು -ಬ್ರಹ್ಮದೇವನಾದರೆ, ಮಾಂ – ನನ್ನನ್ನು ಕುರಿತು, ಆಹ – ಪೇಳಿದನು, ಹೆಸುದೇವಜ – ಎಲೈ ಸುದೇವನಪುತ್ರನೇ, ತವ – ನಿನಗೆ, ಆಹಾರಃ – ಆಹಾರವು, ಸ್ವಾದೂನಿ – ಖುಚಿಕರವಾದ, ಸ್ವಾನಿ – ಸ್ವದೇಹದಲ್ಲಿರುವ, ಮಾಂಸಾನಿ – ಮಾಂಸಗಳು, ತಾನಿ-ಆ ಮಾಂಸಗಳನ್ನು, ನಿತ್ಯಶಃ-ನಿರಂತರವು, ಭಕ್ಷಯ-ಭಕ್ಷಿಸು ॥ ೧೪ ॥ ಹೆ ಶ್ವೇತ-ಎಲೈ ಶ್ವೇತನೇ, ಹೆ ಮಹಾಮತೆ-ಎಲೈ ಬುದ್ಧಿವಂತನೆ, ಉತ್ತಮಂ-ಉತ್ಕೃಷ್ಟವಾದ, ತಪಃ-ತಪಸ್ಸನನ್ನು, ಕುರ್ವತಾ-ಮಾಡುತಿರುವ, ತ್ವಯಾ – ನಿನ್ನಿಂದ, ಸ್ವಶರೀರಂ – ತನ್ನ ಶರೀರವನ್ನು, ಪುಷ್ಟಂ-ಪೋಷಿಸಲ್ಪಟ್ಟಿತು, ಅನುಪ್ತಂ-ಸತ್ಪಾತ್ರರೂಪವಾದ ಕ್ಷೇತ್ರದಲ್ಲಿ ಹಾಕದಿರುವ ಬೀಜವು, ಕದಾಚಿತ್-ಎಂದಿಗೂನು, ನರೋಹತೆ- ಹುಟ್ಟೋದಿಲ್ಲಾ, ಸತ್ವನಿಷೇವಿತೆ-ಸತ್ವ-ಜಂತುಗಳಿಂದ, ನಿಷೇವಿತೆ- ಸೇವಿಸಲ್ಪಟ್ಟ, ವನೆ-ವನದಲ್ಲಿ, ತೆ-ನಿನಗೆ, ಸೂಕ್ಷ್ಮಾಪಿ- ಕೊಂಚವಾದರೂ, ಉಪ್ತಿಃ-ಬೀಜಾರೋಪವು, ನಾಸ್ತಿ-ಇಲ್ಲಾ ॥೧೬॥ ಹೆ ನೃಪ-ಎಲೈ ರಾಜನೇ, ಪುರಾ-ಪೂರ್ವದಲ್ಲಿ, ತ್ವಾಂ-ನಿನ್ನನ್ನು ಕುರಿತು, ಭಿಕ್ಷಾಂ-ಭಿಕ್ಷೆಯನ್ನು, ಭಿಕ್ಷಮಾಣಾಯ- ಬೇಡುತಿರುವ, ಯತಯೆ-ಯತಿಯಾದ, ಅತಿಥಯೇ-ಸನ್ಯಾಸಿಗೋಸ್ಕರ, ತ್ವಯಾ-ನಿನ್ನಿಂದ, ಯಸ್ಮಾತ್-ಯಾವಕಾರಣದ ದೆಸೆಯಿಂದ, ಭಿಕ್ಷಾ-ಭಿಕ್ಷೆಯು, ನದತ್ತಾ-ಕೊಡಲ್ಪಡಲಿಲ್ಲವೋ, ತೆನ-ಅದರಿಂದ, ಹೆವತ್ಸ-ಎಲೋ ಬಾಲನೇ, ಸ್ವರ್ಗಗತಃ-ಬ್ರಹ್ಮಲೋಕವನ್ನು ಹೊಂದಿದವನಾದರೂನು, ಕ್ಷುತ್ಪಿಪಾಸಯಾ-ಕ್ಷುತ್ಪಿಪಾಸೆಯಿಂದ, ಬಾಧ್ಯಸೇ-ಬಾಧಿಸಲ್ಪಡುತ್ತೀ ॥೧೭॥ ಸತ್ವಂ-ಆ ನೀನು, ಆಹಾರೈಃ-ಆಹಾರಗಳಿಂದ, ಸುಪುಷ್ಟಂ-ಚನ್ನಾಗಿ ಪೋಷಿಸಲ್ಪಟ್ಟ,ಅನುತ್ತಮಂ-ಸರ್ವೋತ್ತಮವಾದ, ಸ್ವಶರೀರಂ-ಸ್ವ-ತನ್ನ, ಶರೀರಂ-ಶರೀರವನ್ನು, ಅಮೃತರಸಂ-ಅಮೃತದಂತೇ, ಭಕ್ಷಯಸ್ವ-ಭಕ್ಷಣೆಮಾಡು, ತೆನ-ಆ ಭಕ್ಷಣೆಯಿಂದ, ತೃಪ್ತಿಃ-ತೃಪ್ತಿಯು, ಭವಿಷ್ಯತಿ-ಆಗುವದು ॥೧೮॥ ಹಶ್ವೇತ-ಎಲೈ ಶ್ವೇತನೇ, ಯದಾತು-ಯಾವಕಾಲದಲ್ಲಿ, ತದ್ವನಂ-ಆ ವನವನ್ನು, ದುರ್ಧರ್ಷಃ-ಜಯಿಸಲಸಾಧ್ಯನಾದ, ಮಹಾನ್-ದೊಡ್ಡವನಾದ, ಸಃಅಗಸ್ತ್ಯಃ-ಆ ಅಗಸ್ತ್ಯಋಷಿಯು, ಆಕ್ರಮಿಷ್ಯತಿ-ಆಕ್ರಮಿಸುವನೋ, ತ

---

ಗಮಿಸಿ, ಆತನಂ ಕುರಿತು, ಎಲೈ ಭಗವಂತನೆ! ಈ ತಮ್ಮ ಲೋಕವು ಕ್ಷುತ್ಪಿಪಾಸಗಳಿಲ್ಲದಿರುವದು ಇಂಥಾದಾದರೂ ನಾನು ಯಾವಕಾರಣದಿಂದ ಇವುಗಳಿಗೆ ಶಿಲುಕಿಧೇನೆ ಯಾವಕರ್ಮದಿಂದ ಈ ಪರಿಸಂಭವಿಸಿತು. ಎನಗೆ ಆಹಾರವೇನು. ಅದಂ ಪೇಳುವಂಥಾವನಾಗೆಂದು ಬೇಡಿದವನಾದೆನು ॥೧೩॥ ಆವೇಳೆಯಲ್ಲಿ ಬ್ರಹ್ಮನು ಎನ್ನಂ ಕುರಿತು ಎಲೈ ಸುದೇವಪುತ್ರನಾದ ಶ್ವೇತನೆ! ನಿನಗೆ ಆಹಾರವು ಖುಚಿಕರವಾಗಿರ್ಪ ನಿನ್ನ ಮಾಂಸಗಳೇ ಆದಕಾರಣ ಅವುಗಳನ್ನೇ ದಿನದಿನವೂ ಭುಜಿಸುವಂಥಾವನಾಗು. ಯಾಕಂದರೆ ನೀನು ಯಾವ ವಿಧದಲ್ಲಿಯು ದಾನವಂ ಗೈಯದೆ ನಿನ್ನ ಶರೀರವಂ ಚನ್ನಾಗಿ ಪೋಷಿಸಿಗೊಂಡು ತಪವಂ ಮಾಡಿದಂಥಾವನಾದೆ ಸತ್ಪಾತ್ರ, ರೂಪವಾದ ಕ್ಷೇತ್ರದಲ್ಲಿ ಬಿತ್ತದಿರುವ ಬೀಜವುಎಂದಿಗೂ ಮೊಳಕೆ ಯಾಗುವದಿಲ್ಲ ಜಂತುಗಳಿಂದ ತುಂಬಿದ ಕಾಡಿನಲ್ಲಿ ನೀನು ಸ್ವಲ್ಪವಾದರೂ ಬೀಜಾವಾಪವಂಗೈಯಲಿಲ್ಲಾ ॥೧೬॥ ಇದಲ್ಲದೆ ಪೂರ್ವದಲ್ಲಿ ನೀನು ಭಿಕ್ಷವಂ ಬೇಡುತ್ತಿರುವ ಯತಿಗೂ ಅತಿಥಿಗೂ ಸಹ ಭಿಕ್ಷೆಯಂ ಗೈಯಲಿಲ್ಲಾ ಆದರಿಂದೀಗ ಸ್ವರ್ಗ ಲೋಕದಲ್ಲಿದ್ದವನಾದರೂ ನಿನಿಗೆ ಕ್ಷುತ್ಪಿಪಾಸಂಗಳುಂಟಾಗಿವೆ. ಆದಕಾರಣ ನೀನು ಆಹಾರಗಳಿಂದ ಚನ್ನಾಗಿ ಪೋಷಿಸಲ್ಪಟ್ಟ ಉತ್ತಮವಾದ ನಿನ್ನ ದೇಹವನ್ನು ಭುಜಿಸುವಂಥಾವನಾಗು ಅಮೃತ ರಸದಂತೆ ಅದರಿಂದ ನಿನಿಗೆ ತೃಪ್ತಿಯುಂಟಾಗುವದು. ಆದರೆ ಮಹರ್ಷಿಯಾಗಿಯೂ ತಿರಸ್ಕರಿಸಲಸಾಧ್ಯನಾಗಿಯೂ ಇರುವ ಅಗಸ್ತ್ಯಮುನಿಯು ಎಂದಿಗೆ ಆ ವನಕ್ಕೆ ಬರುವಂಥಾವನಾಗುವನೋ ಆಗ ನಿನಿಗೇ ಕಷ್ಟ ನಿವಾರಣೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅತಿಕ್ರಾಮ್ಯತಿ ದುರ್ಧರ್ಷ ತಸ್ಮಾತ್ಕೃಚ್ಛ್ರಾದ್ವಿಮೋಕ್ಷ್ಯಸೇ ॥೧೯॥ ಸಹಿತಾರಯಿತುಂ ದ್ವನಂಶ್ಚೈತ ಅಗಸ್ತ್ಯಸ್ಸಮಹಾನೃಷಿಃ । ಅತಿಕ್ರಾಮ್ಯತಿದುರ್ಧರ್ಷತಸ್ಮಾತ್ಕೃಚ್ಛ್ರಾದ್ವಿಮೋಕ್ಷ್ಯಸೇ ॥೧೯॥ ಸಹಿತಾರಯಿತುಂ ಸೌಮ್ಯಶಕ್ತಸ್ಸುರಗಣಾನಪಿ॥ ಕಿಂಪುನಸ್ತ್ವಾಂಮಹಾಬಾಹೋಕ್ಷುತ್ಪಿಪಾಸಾವಶಂಗತಂ ॥೨೦॥ ಸೋಹಂಭಗವತಶ್ಶ್ರುತ್ವಾ ದೇವದೇವಸ್ಯನಿಶ್ಚಯಂ । ಆಹಾರಂಗರ್ಹಿತಂಕುರ್ಮಿಸ್ವಶರೀರಂದ್ವಿಜೋತ್ತಮ ॥೨೧॥ ಬಹುವರ್ಷಗಣಾನ್ಬ್ರಹ್ಮನ್ಭಕ್ಷ್ಯಮಾಣಮಿದಂಮಯಾ । ಕ್ಷಯಂನಾಭ್ಯೇತಿಬ್ರಹ್ಮರ್ಷೇಪ್ರಸಾದಂಕರ್ತುಮರ್ಹಸಿ ॥೨೨॥ ತಸ್ಯಕೃಚ್ಛ್ರಾಭಿಭೂತಸ್ಯಕೃಚ್ಛ್ರಾದಸ್ಮಾದ್ವಿಮೋಕ್ಷಯ ॥ ಅದ್ಯಮೇನಗತಿಸ್ತ್ವತ್ರಕುಂಭಯೋನಿಮೃತೇದ್ವಿಜಂ ॥ ೨೩ ॥ ಇದಮಾಭರಣಂಸೌಮ್ಯತಾರಣಾರ್ಥಂದ್ವಿಜೋತ್ತಮ । ಪ್ರತಿಗೃಹ್ಣೀಷ್ವಬ್ರಹ್ಮರ್ಷೇಪ್ರಸಾದಂಕರ್ತುಮರ್ಹಸಿ ॥ ೨೪ ॥ ಇಹಗಾಶ್ಚ ಸುವರ್ಣಂಚಧನಂವಸ್ತ್ರಾಣಿಚದ್ವಿಜ। ಭಕ್ಷ್ಯಂಭೋಜ್ಯಂಚಬ್ರಹ್ಮರ್ಷೇದದಾಮ್ಯಾಭರಣಾನಿಚ ॥೨೫॥ ಸರ್ವಕಾಮಾನ್ಪ್ರಯಚ್ಛಾಮಿಭೋಗಾಂಶ್ಚ ಮುನಿಪುಂಗವ । ತಾರಣೇಭಗವನ್ಮಹ್ಯಂಪ್ರಸಾದಂಕರ್ತುಮರ್ಹಸಿ ॥೨೬॥ ತಸ್ಯಾಹಂಸ್ವರ್ಗಿಣೋವಾಕ್ಯಂಶ್ರುತ್ವಾ

---

ದಾ-ಆ ಕಾಲದಲ್ಲಿ, ಕೃಚ್ಛ್ರಾತ್-ಕಷ್ಟದ ದೆಸೆಯಿಂದ, ವಿಮೋಕ್ಷ್ಯಸೇ-ಬಿಡಲ್ಪಡುತ್ತೀ ॥೧೯॥ ಹೆ ಸೌಮ್ಯ-ಎಲೈ ಪ್ರಸನ್ನನೇ, ಹೆಮಹಾಬಾಹೋ-ಎಲೈ ಮಹಾಭುಜ ಶಾಲಿಯೇ, ಹಿ-ಯಾವ ಕಾರಣದಿಂದ, ಸಃ-ಆ ಅಗಸ್ತ್ಯಋಷಿಯು, ಸುರಗಣಾನಪಿ-ದೇವತಾಸಮೂಹಗಳನ್ನು ಕೂಡ, ತಾರಯಿತುಂ-ತರಿಸುವದಕ್ಕೋಸ್ಕರ, ಶಕ್ತಃ-ಸಮರ್ಥನು, ಕ್ಷುತ್ಪಿಪಾಸಾವಶಂಗತಂ-ಹಸಿವು ನೀರಡಿಕೆಯಿಂದ ಪರತಂತ್ರನಾದ, ತ್ವಾಂ- ನಿನ್ನನ್ನು ಕುರಿತು, ಕಿಂಪುನಃ-ಯೇನು ಹೇಳತಕ್ಕದ್ದು ॥೨೦॥ ಹೆ ದ್ವಿಜೋತ್ತಮ-ಎಲೈ ಬ್ರಾಹ್ಮಣ ಶ್ರೇಷ್ಠನೇ, ಸೋಹಂ-ಆನಾನು, ಭಗವತಃ-ಪೂಜ್ಯನಾದ, ದೇವದೇವಸ್ಯ-ದೇವೋತ್ತಮನಾದ ಬ್ರಹ್ಮನ, ನಿಶ್ಚಯಂ-ನಿಶ್ಚಯವನ್ನು, ಶ್ರುತ್ವಾ-ಕೇಳಿ, ಗರ್ಹಿತಂ-ನಿಂದಿತವಾದ, ಸ್ವಶರೀರಂ-ತನ್ನ ಶರೀರವನ್ನೇ, ಆಹಾರಂ-ಆಹಾರವನ್ನಾಗಿ, ಕುರ್ಮಿ-ಮಾಡುತ್ತೇನೆ ॥೨೧॥ ಹೆ ಬ್ರಹ್ಮರ್ಷೆ-ಎಲೈ ಬ್ರಹ್ಮಋಷಿಯೆ, ಹೆ ಬ್ರಹ್ಮನ್-ಎಲೈ ಬ್ರಹ್ಮಸ್ವರೂಪನೇ, ಬಹುವರ್ಷಗಣಾನ್-ಬಹು ಸಂವತ್ಸರಗಳದ, ಮಯಾ-ನನ್ನಿಂದೆ, ಭಕ್ಷ್ಯಮಾಣಂ-ಭಕ್ಷಣೆಮಾಡಲ್ಪಟ್ಟದ್ದಾದರೂ, ಇದಂ-ಈ ಶರೀರವು, ಕ್ಷಯಂ-ಕ್ಷೀಣಗತಿಯನ್ನು, ನಾಭ್ಯೇತಿ- ಹೊಂದಲಿಲ್ಲಾ, ಪ್ರಸಾದಂ-ಅನುಗ್ರಹವನ್ನು, ಕರ್ತುಂ-ಮಾಡುವದಕ್ಕೋಸ್ಕರ, ಅರ್ಹಸಿ-ಯೋಗ್ಯನಾಗು ॥೨೨॥ ಕೃಚ್ಛ್ರಾಭಿಭೂತಸ್ಯ- ಕಷ್ಟದಿಂದ ಬಹುದುಃಖಾ ಕ್ರಾಂತನಾದ, ತಸ್ಯ-ಅಂಥಾನನ್ನನ್ನು, ಅಸ್ಮಾತ್ಕೃಚ್ಛ್ರಾತ್-ಈ ದುಃಖದ ದೆಸೆಯಿಂದ, ವಿಮೋಕ್ಷಯ-ಬಿಡಿಸು, ಅತ್ರ-ಇಲ್ಲಿ, ದ್ವಿಜಂ-ಬ್ರಹ್ಮರ್ಷಿಯಾದ, ಕುಂಭಯೋನಿಮೃತೆ-ಅಗಸ್ತ್ಯಋಷಿಯಂಬಿಟ್ಟು, ಮೇ-ನನಿಗೆ, ಅದ್ಯ-ಈಗ, ಗತಿಃ-ಶರಣವು, ನ-ಇಲ್ಲಾ ॥೨೩॥ ಹೆ ಸೌಮ್ಯ-ಎಲೋಪ್ರಸನ್ನನೇ, ಹೆದ್ವಿಜೋತ್ತಮ-ಎಲೋಬ್ರಾಹ್ಮಣಶ್ರೇಷ್ಠನೇ, ಹೆ ಬ್ರಹ್ಮರ್ಷೆ-ಎಲೊ ಬ್ರಹ್ಮರ್ಷಿಯೇ, ತಾರಣಾರ್ಥಂ- ಉದ್ಧರಣಾರ್ಥವಾಗಿ, ಇದಮಾಭರಣಂ-ಈ ಆಭರಣವನ್ನು, ಪ್ರತಿಗೃಹ್ಣೀಷ್ವ-ಪ್ರತಿಗ್ರಹಿಸು, ಪ್ರಸಾದಂ-ಅನುಗ್ರಹವನ್ನು, ಕರ್ತುಂ-ಮಾಡುವದಕ್ಕೋಸ್ಕರ, ಅರ್ಹಸಿ-ಯೋಗ್ಯನಾಗು ॥೨೪॥ ಹೆ ದ್ವಿಜ-ಎಲೈ ಬ್ರಾಹ್ಮಣನೇ, ಇಹ-ಈಗ, ಗಾಶ್ಚ-ಗೋವುಗಳನ್ನು, ಸುವರ್ಣಂಚ-ವರಹಗಳನ್ನು, ಧನಂಚ-ದ್ರವ್ಯಗಳನ್ನು, ವಸ್ತ್ರಾಣಿಚ- ವಸ್ತ್ರಗಳನ್ನು, ಭಕ್ಷ್ಯಂ-ಭಕ್ಷಣಯೋಗ್ಯ ಪದಾರ್ಥಗಳನ್ನು, ಭೋಜ್ಯಂಚ-ಭೋಜನಮಾಡತಕ್ಕ ವಸ್ತುಗಳನ್ನು, ಹೆ ಬ್ರಹ್ಮರ್ಷೆ-ಎಲೈ ಬ್ರಹ್ಮರ್ಷಿಯೇ, ಆಭರಣಾನಿಚ-ಆಭರಣಗಳನ್ನು, ದದಾಮಿ-ಕೊಡುವೆನು ॥೨೫॥ ಮುನಿಪುಂಗವ- ಎಲೈ ಋಷಿಶ್ರೇಷ್ಠನೆ, ಸರ್ವಕಾಮಾನ್-ಸಮಸ್ತ ಕೋರಿಕೆಗಳನ್ನು, ಭೋಗಾಂಶ್ಚ-ಸುಖಜನಕವಾದ ಪದಾರ್ಥಗಳನ್ನು, ಪ್ರಯಚ್ಛಾಮಿ-ಕೊಡುತ್ತೇನೆ, ಹೆ ಭಗವನ್-ಎಲೈ ಪೂಜ್ಯನೇ, ತಾರಣೇ-ಈ ದುಃಖದಿಂದ ತರಿಸುವ ವಿಷಯದಲ್ಲಿ, ಮಹ್ಯಂ-ನಿನಿಗೋಸುಗ, ಪ್ರಸಾದಂ-ಅನುಗ್ರಹವನ್ನು, ಕರ್ತುಂ-ಮಾಡುವದಕ್ಕೋಸ್ಕರ, ಅರ್ಹಸಿ-ಯೋಗ್ಯನಾಗು ॥೨೬॥ ಅಹಂ-ತಾನು, ತಸ್ಯ ಸ್ವರ್ಗಿಣಃ-ಆ ಸ್ವರ್ಗವಾಸಿಯಾದ, ಪುರುಷನ, ದುಃಖಸಮನ್ವಿತಂ-ದುಃಖದಿಂದ ಕೂಡಿಕೊಂಡಿರುವ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ತಾರಣಾ

---

ಯುಂಟಾಗುವದು. ಆ ಮಹರ್ಷಿಯಾದರೆ ದೇವ ಸಮೂಹಗಳೆಲ್ಲಾ ಕಡೆತೇರಿಸುವದಕ್ಕೆ ಸಮರ್ಥನಾದವನುಹೀಗಿರುವಲ್ಲಿ ಹಸಿವಿನಿಂದಲೂ ಬಾಯಾರಿಕೆಯಿಂದಲೂ ಬಾಧಿತನಾದ ನಿನ್ನನ್ನು ಉದ್ಧಾರ ಮಾಡುವದರಲ್ಲಿ ಏನು ಹೇಳತಕ್ಕದ್ದೆಂದು ನುಡಿದವನಾದನು ॥೨೦॥ ಎಲೈ ಬ್ರಾಹ್ಮಣೋತ್ತಮನೇ ! ಅಂಥಾ ನಾನು ದೇವೋತ್ತಮನಾದ ಬ್ರಹ್ಮನ ನಿಶ್ಚಯವಾದ ಆ ವಾಕ್ಯವಂ ಕೇಳಿ, ನಿಂದಿತವಾದ ಆ ಹಾರರೂಪವಾಗಿರ್ಪ ಎನ್ನ ಶರೀರವಂ ಭುಜಿಸುತ್ತಿಧೇನೆ, ಬಹು ವರುಷಗಳಿಂದ ನಾನು ಭಕ್ಷಿಸುತ್ತಿರುವ ಈ ಆಹಾರವು ಎನಗಿದುವರಿವಿಗೂ ತೊಲಗಲಿಲ್ಲಾ, ನೀನು ಅನುಗ್ರಹಿಸುವಂಥಾವನಾಗು ॥೨೨॥ ಕಷ್ಟದಿಂದ ಬಲುಸಂಕಟಪಡುತ್ತಿರುದ ಎನ್ನನ್ನು ಈ ದುಃಖದಿಂ ಕಡೆದೇರಿಸುವಂಥಾವನಾಗು, ಈ ವಿಷಯದಲ್ಲಿ ಅಗಸ್ತ್ಯಮಹಾಮುನಿಯಾದ ನಿನ್ನಹೊರತು ಎನಗೆ ಯಾರು ರಕ್ಷಕರಿಲ್ಲ. ಎಲೈ ಸೌಮ್ಯನೆ ಈ ಉತ್ತರಣಾರ್ಥವಾಗಿ ಈವಡಿವೆಯುಂಕೊಡುವೆನು,ಇದಂ ನೀನು ತೆಗದುಕೊಂಡು ಎನ್ನನುಉದ್ಧಾರಮಾಡು ಈಗ ನಿನಿಗೆ ಗೋವುಗಳನ್ನೂ ಸುವರ್ಣವನ್ನೂ ಧನವನ್ನು ವಸ್ತ್ರಗಳನ್ನೂ ಭಕ್ಷ್ಯ ಭೋಜ್ಯಗಳನ್ನು ಉತ್ತಮವಾದ ಆಭರಣಗಳನ್ನೂ, ಮತ್ತು ನೀನಪೇಕ್ಷಿಸಿದ ಪದಾರ್ಥಗಳನ್ನೆಲ್ಲಾ ಈಯುವೆನು, ಎನ್ನನ್ನುದ್ಧರಿಸುವಂಥಾವನಾಗೆಂದು ಪೇಳಿದವನಾಗಲೂ, ದುಃಖಯುಕ್ತವಾದ ಆ ವಾಕ್ಯವಂ ಕೇಳಿ ಆಗ ನಾನು ಆ ಸ್ವರ್ಗವಾಸಿಯ ಉತ್ತಾರಣಾರ್ಥವಾಗಿ ಆ ವಡಿವೆಯುಂ,

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದುಃಖಸಮನ್ವಿತಂ । ತಾರಣಾಯೋಪಜಗ್ರಾಹತದಾಭರಣಮುತ್ತಮಂ ॥೨೭॥ ಮಯಾಪ್ರತಿಗೃಹೀತೇತುತಸ್ಮಿನ್ನಾಭರಣೇಶುಭೇ । ಮಾನುಷಃಪೂರ್ವಕೋದೇಹೋರಾಜರ್ಷೇಸ್ಸನನಾಶಹ॥೨೮॥ ಪ್ರಣಷ್ಟೇಥಶರೀರೇತುರಾಜರ್ಷಿಃಪರಯಾಮುದಾ। ತೃಪ್ತಃಪ್ರಮುದಿತೋರಾಮಜಗಾಮತ್ರಿದಿವಂಸುಖಂ ॥೨೯॥ ತೇನೇದಂಶಕ್ರತುಲ್ಯೇನದಿವ್ಯಮಾಭರಣಂಮಮ । ತಸ್ಮಿನ್ನಿಮಿತ್ತೇಕಾಕುತ್ಸ್ಥದತ್ತಮದ್ಭುತದರ್ಶನಂ ॥೩೦॥ —...ಇತಿಶ್ರೀಮದುತ್ತರರಾಮಾಯಣೇ ಅಷ್ಟಸಪ್ತತಿತಮಸ್ಸರ್ಗಃ...—

ತದದ್ಭುತತಮಂವಾಕ್ಯಂಶ್ರುತ್ವಾಗಸ್ತ್ಯಸ್ಯರಾಘವಃ। ಗೌರವಾದ್ವಿಸ್ಮಯಾಚ್ಚೈವಭೂಯಃಪ್ರಷ್ಟುಂಪ್ರಚಕ್ರಮೇ। ಭಗವಂಸ್ತದ್ವನಂಘೋರಂತಪಸ್ತಪ್ಯತಿಯತ್ರಸಃ। ಶ್ವೇತೋವೈದರ್ಭಕೋರಾಜಾಕಥಂಸ್ಯಾದಮೃಗದ್ವಿಜಂ॥೨॥ನಿಸ್ಸತ್ವಂಚಕಥಂಜಾತಂಶೂನ್ಯಂಮನುಜವರ್ಜಿತಂ। ತಪಃಕರ್ತುಂಪ್ರವಿಷ್ಟಸ್ಸಶ್ರೋತುಮಿಚ್ಛಾಮಿತತ್ವತಃ ॥೩॥ ರಾಮಸ್ಯಭಾಷಿತಂಶ್ರುತ್ವಾಕೌತೂಹಲಸಮನ್ವಿತಂ । ವಾಕ್ಯಂಪರಮತೇಜಸ್ವೀವಕ್ತುಮೇವೋಪಚಕ್ರಮೇ ॥೪॥ ಪ್ರರಾಕೃತಯುಗೇರಾ

---

ಯ–ಉದ್ಧಾರಮಾಡುವದಕ್ಕೋಸ್ಕರ, ಉತ್ತಮಂ – ಉತ್ಕೃಷ್ಟವಾದ, ತದಾಭರಣಂ–ಆ ಆಭರಣವನ್ನು, ಉಪಜಗ್ರಾಹ – ಗ್ರಹಿಸಿದನು॥ ೨೭ ॥ ಮಯಾ–ನನ್ನಿಂದ, ಶುಭೇ–ಶುಭಕರವಾದ, ತಸ್ಮಿನ್ನಾಭರಣೇ–ಆ ಆಭರಣವು, ಪ್ರತಿಗೃಹೀತೇಸತಿ– ಪರಿಗ್ರಹಿಸಲ್ಪಟ್ಟಂಥಾದ್ದಾಗುತಿರಲೀಕಾಗಿ, ಪೂರ್ವಕಃ–ಮೊದಲಿದ್ದ, ಮಾನುಷಃ–ಮನುಷ್ಯಸಂಬಂಧವಾದ, ರಾಜರ್ಷೇಃ–ರಾಜರ್ಷಿಯ, ಸಃದೇಹಃ–ಆ ಶರೀರವು, ನನಾಶಹ–ನಷ್ಟವಾಯಿತಷ್ಟೇ ॥೨೮॥ ಶರೀರೇ–ಮನುಷ್ಯಶರೀರವು, ಪ್ರಣಷ್ಟೇಸತಿ–ನಷ್ಟವಾಗುತಿರಲೀಕಾಗಿ, ಹೆ ರಾಮ–ಎಲೈ ಶ್ರೀರಾಮನೆ, ರಾಜರ್ಷಿಃ–ರಾಜರ್ಷಿಯಾದ ಆ ಸ್ವರ್ಗಪುರುಷನು, ಪರಯಾ–ಉತ್ಕೃಷ್ಟವಾದ, ಮುದಾ–ಸಂತೋಷದಿಂದ, ಪ್ರಮುದಿತಃ–ಸಂತೋಷಯುಕ್ತನಾಗಿ, ತೃಪ್ತಃ–ನಿತ್ಯತೃಪ್ತನಾಗಿ, ತ್ರಿದಿವಂ– ಸ್ವರ್ಗಲೋಕವಂಕುರಿತು, ಸುಖಂ–ಸುಖವಾಗಿ, ಜಗಾಮ–ತೆರಳಿದನು ॥೨೯॥ ಹೇಕಾಕುತ್ಸ್ಥ–ಎಲೈಶ್ರೀರಾಮನೆ, ಶಕ್ರತುಲ್ಯೇನ–ದೇವೇಂದ್ರನಿಗೆ ಸಮಾನನಾದ, ತೇನ–ಆ ಸ್ವರ್ಗಪುರುಷನಿಂದ, ದಿವ್ಯಂ–ಮನೋಹರವಾದ, ಅದ್ಭುತದರ್ಶನಂ – ಆಶ್ಚರ್ಯಕರವಾದ ನೋಡುವಿಕೆಯುಳ್ಳ, ಇದಮಾಭರಣಂ–ಈ ಆಭರಣವು, ತಸ್ಮಿನ್ನಿಮಿತ್ತೇ–ಆ ಕ್ಷುತ್ಪಿಪಾಸಾನಿವೃತ್ತಿರೂಪವಾದ ಕಾರ್ಯ ವಿಷಯದಲ್ಲಿ, ಮಮ–ನನಿಗೆ, ದತ್ತಂ–ಕೊಡಲ್ಪಟ್ಟಿತು ॥ ೩೦ ॥—*ಅಷ್ಟಸಪ್ತತಿತಮಸ್ಸರ್ಗಃ.*—

ರಾಘವಃ–ಶ್ರೀರಾಮನು, ಅಗಸ್ತ್ಯಾತ್–ಅಗಸ್ತ್ಯಋಷಿಯದೆಸೆಯಿಂದ, ಅದ್ಭುತತಮಂ–ಆಶ್ಚರ್ಯಕರವಾದ,ತದ್ವಾಕ್ಯಂ–ಆಮಾತನ್ನು, ಶ್ರುತ್ವಾ–ಕೇಳಿ, ಗೌರವಾತ್-ಗುರುಭಾವದದೆಸೆಯಿಂದಲೂ, ವಿಸ್ಮಯಾಚ್ಚೈವ–ಆಶ್ಚರ್ಯದದೆಸೆಯಿಂದಲೂ, ಭೂಯಃ–ಮತ್ತು, ಪ್ರಷ್ಟುಂ–ಕೇಳುವದಕ್ಕೋಸ್ಕರ,ಪ್ರಚಕ್ರಮೇ–ಉಪಕ್ರಮಿಸಿದನು ॥೧॥ ಭಗವನ್–ಪೂಜ್ಯನಾದ ಅಗಸ್ತ್ಯಋಷಿಯೆ, ವೈದರ್ಭಕಃ–ವಿದರ್ಭದೇಶಾಧೀಶ್ವರನಮಗನಾದ, ಶ್ವೇತಃ–ಶ್ವೇತನಾಮಕನಾದ, ಸರಾಜಾ–ಆ ಅರಸು, ಯತ್ರ–ಯಾವವನದಲ್ಲಿ, ತಪಃ–ತಪಸ್ಸನ್ನು, ತಪ್ಯತಿ–ಮಾಡುತಿದ್ದನೊ, ಘೋರಂ–ಭಯಂಕರವಾದ, ತದ್ವನಂ–ಆವನವು, ಅಮೃಗದ್ವಿಜಂ–ಪಕ್ಷಿಗಳೂ ಮೃಗಗಳೂ ಇಲ್ಲದ್ದು, ಕಥಂಸ್ಯಾತ್–ಹ್ಯಾಗೆ ಆಯಿತು, ॥ ೨ ॥ ನಿಸ್ಸತ್ವಂ–ಜಂತುಗಳಿಂದ ರಹಿತವಾದ್ದು,ಕಥಂಜಾತಂ–ಹ್ಯಾಗಾಯಿತು, ಮನುಜವರ್ಜಿತಂ–ಮನುಷ್ಯರಿಂದ ರಹಿತವಾದ, ಶೂನ್ಯಂ–ಬರೀದಾದ ವನವನ್ನು, ತಪಃ–ತಪಸ್ಸನ್ನು, ಕರ್ತುಂ–ಮಾಡುವದಕ್ಕೋಸ್ಕರ, ಸಃ–ಆ ರಾಜರ್ಷಿಯು, ಕಥಂಪ್ರವಿಷ್ಟಃ–ಹ್ಯಾಗೆ ಪ್ರವೇಶಮಾಡಿದನು, ತತ್ವತಃ–ಯಥಾರ್ಥದಿಂದ, ಶ್ರೋತುಂ–ಕೇಳುವದಕ್ಕೋಸ್ಕರ, ಇಚ್ಛಾಮಿ–ಅಪೇಕ್ಷಿಸುತ್ತೇನೆ ॥೩॥ ರಾಮಸ್ಯ–ಶ್ರೀರಾಮನ, ಕೌತೂಹಲಸಮನ್ವಿತಂ–ಕುತೂಹಲದಿಂದಕೂಡಿಕೊಂಡಿರುವ, ಭಾಷಿತಂ–ಮಾತನ್ನು, ಶ್ರುತ್ವಾ–ಕೇಳಿ, ಪರಮತೇಜಸ್ವೀ–ಬಹುತೇಜಸ್ವಿಯಾದ ಆ ಅಗಸ್ತ್ಯಋಷಿಯು, ವಾಕ್ಯಂ–ಮಾತನ್ನು, ವಕ್ತುಂ–ಹೇಳುವದಕ್ಕೆ–ಉಪಚಕ್ರಮೆ -ಉಪಕ್ರಮಿಸಿದನು॥೪॥ ಹೆರಾಮ–

---

ಪರಿಗ್ರಹಿಸಿದೆನು ॥೨೭॥ ಎಲೈ ರಘುಕುಲತಿಲಕನೆ ! ಶುಭಕರವಾದ ಆ ಆಭರಣವು ಎನ್ನಿಂದ ಪರಿಗ್ರಹಿಸಲ್ಪಟ್ಟದ್ದಾಗಲೂ, ರಾಜರ್ಷಿಯ ಪೂರ್ವದಲ್ಲಿದ್ದ ಮನುಷ್ಯಶರೀರವು ನಾಶವಾದಂಥಾದ್ದಾಯಿತು ॥೨೮॥ ಬಳಿಕ ಆ ಮಾನುಷದೇಹವು ನಷ್ಟವಾದಂಥಾದ್ದಾಗಲೂ, ಆ ಶ್ವೇತನೆಂಬ ರಾಜರ್ಷಿಯು ತೃಪ್ತನಾಗಿಯೂ, ಸಂತೋಷಚಿತ್ತನಾಗಿಯೂ, ಇರುವನಾಗಿ ಸುಖವಾಗಿ ಮಹಾಹರುಷದಿಂದ ಸ್ವರ್ಗವಂಕುರಿತು ತೆರಳಿದನು ॥೨೯॥ ಎಲೈ ಶ್ರೀರಾಮನೆ ! ಇಂದ್ರಸದೃಶನಾದ ಆಶ್ವೇತನೆಂಬ ಧೊರೆಯಿಂದ ಈ ಉತ್ತಮವಾದ ಮತ್ತು ಅದ್ಭುತಕರವಾಗಿರುವ ಆಭರಣವು ಆ ಹಸಿವುಬಾಯಾರಿಕೆಗಳ ಪರಿಹಾರಾರ್ಥವಾಗಿ ಎನಗೆ ಕೊಡಲ್ಪಟ್ಟಿತು.॥೩೦॥ ಉತ್ತರ ರಾಮಾಯಣದಲ್ಲಿನ ೭೮ನೆಯ ಸರ್ಗಂ ಮುಗಿದುದು.

ರಘುಕುಲಾನಂದಕರನಾದ ಶ್ರೀರಾಮನು, ಮಹದಾಶ್ಚರ್ಯಕರವಾದ ಈವಾಕ್ಯವನ್ನು ಅಗಸ್ತ್ಯಮಹಾಮುನಿಯ ದೆಶೆಯಿಂದ ಕೇಳಿ, ಗೌರವದಿಂದಲೂ ವಿಸ್ಮಯದಿಂದಲೂ ಮತ್ತು ಕೇಳಲುಪಕ್ರಮಿಸಿದನದಂತೆನೆ ॥೧॥ ಎಲೈಪೂಜ್ಯನೆ ! ವಿದರ್ಭದೇಶಾಧೀಶ್ವರನಾದ, ಆಶ್ವೇತನೆಂಬ ರಾಜನು ಯಾವ ಎಡೆಯಲ್ಲಿ ತಪವಂಗೈಯುತಿದ್ದನೋ ಆ ಪ್ರದೇಶವು ಮೃಗಪಕ್ಷಿಗಳಿಲ್ಲದಿರುವದು ಹ್ಯಾಗೆ ಆದಂಥಾದ್ದಾಯಿತು ? ॥೨॥ ಮತ್ತು ಪ್ರಾಣಿಗಳಿಲ್ಲದ್ದಾಗಿಯೂ, ಮನುಷ್ಯರಹಿತವಾಗಿಯೂ, ಶೂನ್ಯವಾಗಿಯೂ ಇರುವಂಥಾದ್ದು ಹ್ಯಾಗೆಆಯಿತು, ಎಂಬದಾಗಿ ಕೇಳಿದವನಾಗಲೂ, ಕುತೂಹಲಯುಕ್ತವಾದ ಆ ವಾಕ್ಯವಂ ಕೇಳಿ, ಅಗಸ್ತ್ಯ ಮಹಾಮುನಿಯು ಹೇಳಲೊಸಗಿದನದೆಂತೆನೆ ॥೪॥ ಕೇಳಲೈ ಶ್ರೀರಾ-

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮನುರ್ದಂಡಧರಃಪ್ರಭುಃ । ತಸ್ಯಪುತ್ರೋಮಹಾನಾಸೀದಿಕ್ಷ್ವಾಕುಕುಲನಂದನಃ॥೫॥ತಂಪುತ್ರಂಪೂರ್ವಕೇರಾಜ್ಯೇನಿಕ್ಷಿಪ್ಯಭುವಿದುರ್ಜಯಂ । ಪೃಥಿವ್ಯಾಂರಾಜವಂಶಾನಾಂಭವಕರ್ತೇತ್ಯುವಾಚಹ ॥೬॥ ತಥೇತಿಚಪ್ರತಿಜ್ಞಾತಂಪಿತುಃಪುತ್ರೇಣರಾಘವ । ತತಃಪರಮಸಂತುಷ್ಟೋಮನುಃಪುತ್ರಮುವಾಚಹ ॥೭॥ ಪ್ರೀತೋಸ್ಮಿಪರಮೋದಾರತ್ವಂಕರ್ತಾನಸಂಶಯಃ । ದಂಡೇನಚಪ್ರಜಾರಕ್ಷಮಾಚದಂಡಮಕಾರಣೇ ॥೮॥ ಅಪರಾಧಿಷುಯೋದಂಡಃಪಾತ್ಯತೇಮಾನವಾಗ್ರಜ । ಸದಂಡೋವಿಧಿವನ್ಮುಕ್ತಃಸ್ವರ್ಗಂನಯತಿಪಾರ್ಥಿವಂ॥೯॥ ತಸ್ಮಾದ್ದಂಡೇಮಹಾಬಾಹೋಯತ್ನವಾನ್ಭವಪುತ್ರಕ। ಧರ್ಮೋಹಿಪರಮೋಲೋಕೇಕುರ್ವತಸ್ತೇಭವಿಷ್ಯತಿ॥೧೦॥ ಇತಿತಂಬಹುಸಂದಿಶ್ಯಮನುಃಪುತ್ರಂಸಮಾಧಿನಾ । ಜಗಾಮತ್ರಿದಿವಂಹೃಷ್ಟೋಬ್ರಹ್ಮಲೋಕಂಸನಾತನಂ॥೧೧॥ ಪ್ರಯಾತೇತ್ರಿದಿವಂತಸ್ಮಿನ್ನಿಕ್ಷ್ವಾಕುರಮಿತಪ್ರಭಃ । ಜನಯಿಷ್ಯೇಕಥಂಪುತ್ರಾನಿತಿಚಿಂತಾಪರೋಭವತ್ ॥೧೨॥ಕರ್ಮಭಿರ್ಬಹುರೂಪೈಶ್ಚತೈಸ್ತೈರ್ಮನುಸುತಸ್ಸುತಾನ್ । ಜನಯಾಮಾಸತೇಜಸ್ವೀಶತಂದೇವಸು

---

ಎಲೈಶ್ರೀರಾಮನೆ, ಪುರಾ–ಪೂರ್ವದಲ್ಲಿ, ಕೃತೆಯುಗೇ–ಕೃತಯುಗದಲ್ಲಿ, ದಂಡಧರಃ–ಶಿಕ್ಷಾಕರ್ತನಾದ, ಪ್ರಭುಃ–ವರ್ಣಾಶ್ರಮಧರ್ಮಸ್ಥಾಪನೆಯಲ್ಲಿ ಸಮರ್ಥನಾದ, ಮನುಃ–ಮನುವು, ಆಸೀತ್–ಆದನು, ತಸ್ಯ–ಆಮನುವಿಗೆ, ಪುತ್ರಃ–ಮಗನಾದ, ಮಹಾನ್–ಮಹಾತ್ಮನಾದ, ಕುಲನಂದನಃ–ಕುಲಾನಂದಕರನಾದ, ಇಕ್ಷ್ವಾಕುಃ–ಇಕ್ಷ್ವಾಕುಮಹಾರಾಯನು, ಆಸೀತ್–ಆದನು ॥ ೫ ॥ ಭುವಿ–ಭೂಮಿಯಲ್ಲಿ, ದುರ್ಜಯಂ–ಜಯಿಸಲಸಾಧ್ಯನಾದ, ಪುತ್ರಂ–ಮಗನಾದ, ತಂ–ಆ ಇಕ್ಷ್ವಾಕುಮಹಾರಾಯನನ್ನು, ಪೂರ್ವಕೇ–ಪೂರ್ವದಿಂದ ಬಂದಿರುವ, ರಾಜ್ಯೇ–ರಾಜ್ಯದಲ್ಲಿ, ನಿಕ್ಷಿಪ್ಯ–ಪಟ್ಟಾಭಿಷೇಕವಮಾಡಿ, ಪೃಥಿವ್ಯಾಂ –ಭೂಮಿಯಲ್ಲಿ, ರಾಜವಂಶಾನಾಂ–ರಾಜವಂಶಗಳಿಗೆ, ಕರ್ತಾ–ಸ್ಥಾಪಕನು, ಭವ–ಆಗು, ಇತಿ–ಇಂತೆಂದು, ಉವಾಚಹ–ಪೇಳಿದನು ॥ ೬ ॥ ತಥೇತಿ–ಹಾಗೆ ಆಗಲೀಯೆಂದು, ಪಿತುಃ–ತಂದೆಗೆ, ಪುತ್ರೇಣ–ಮಗನಿಂದ, ಪ್ರತಿಜ್ಞಾತಂ–ಪ್ರತಿಜ್ಞೆಮಾಡಲ್ಪಟ್ಟಿತು, ಹೇರಾಘವ–ಎಲೈಶ್ರೀರಾಮನೆ, ತತಃ–ಆ ಮಾತಿನವೇಳೆಯಿಂದ, ಪರಮಸಂತುಷ್ಟಃ–ಬಹಳಸಂತುಷ್ಟನಾದ, ಮನುಃ–ಮನುಚಕ್ರವರ್ತಿಯು, ಪುತ್ರಂ–ಮಗನನ್ನು ಕುರಿತು, ಉವಾಚ–ಪೇಳಿದನಷ್ಟೆ ॥ ೭ ॥ ಹೇಪರಮೋದಾರ–ಎಲೈ ಬಹಳಶ್ರೇಷ್ಠನಾದಮಗನೆ, ತ್ವಂ–ನೀನು, ಕರ್ತಾ–ಸಾಮರ್ಥ್ಯವುಳ್ಳವನು, ಅಸಿ–ಆಗಿದ್ದೀ, ಸಂಶಯಃ–ಸಂಶಯವು, ನ–ಇಲ್ಲ, ಪ್ರೀತಃ–ಸಂತುಷ್ಟನು, ಅಸ್ಮಿ–ಆದೆನು, ದಂಡೇನಚ–ಶಿಕ್ಷೆಯಿಂದ, ಪ್ರಜಾಃ–ಪ್ರಜೆಗಳನ್ನು, ರಕ್ಷ–ಸಂರಕ್ಷಿಸು, ಅಕಾರಣೇ–ಕಾರಣವಿಲ್ಲದಪಕ್ಷದಲ್ಲಿ, ದಂಡಂ–ಶಿಕ್ಷೆಯನ್ನು, ಮಾಕುರು–ಮಾಡಬೇಡ, ॥ ೮ ॥ ಹೇಮಾನವಾಗ್ರಜ–ಎಲೈಮನುವಂಶಸ್ಥರಲ್ಲಿ ಅಗ್ರಜನೆ, ಅಪರಾಧಿಷು–ಅಪರಾಧವನ್ನು ಮಾಡುವರಲ್ಲಿ, ಯಃ–ಯಾವದಂಡವು, ವಿಧಿವತ್–ಯಥಾಶಾಸ್ತ್ರವಾಗಿ, ಪಾತ್ಯತೇ–ಬೀಳಿಸಲ್ಪಡುತ್ತೊ, ಮುಕ್ತಃ–ಬಿಡಲ್ಪಟ್ಟ, ಸಃದಂಡಃ–ಆಶಿಕ್ಷೆಯು, ಪಾರ್ಥಿವಂ–ಅರಸನು, ಸ್ವರ್ಗಂ–ಸ್ವರ್ಗವನ್ನು, ನಯತಿ–ಹೊಂದಿಸುತ್ತದೆ, ತಸ್ಮಾತ್–ಅಕಾರಣದವೆಶೆಯಿಂದ, ಹೇಮಹಾಬಾಹೋ–ಎಲೊಭುಜಪರಾಕ್ರಮಿಯೆ, ದಂಡೇ – ಯಥಾಶಾಸ್ತ್ರವಾಗಿದಂಡನೆಮಾಡುವವಿಷಯದಲ್ಲಿ, ಯತ್ನವಾನ್–ಪ್ರಯತ್ನವಂತನು, ಭವ–ಆಗು, ಹೇಪುತ್ರಕ–ಎಲೈಮಗನೆ, ಕುರ್ವತಃ–ಈಪ್ರಕಾರದಂಡನೆಮಾಡುತ್ತಿರುವ, ತೇ–ನಿನಿಗೆ, ಲೋಕೇ–ಲೋಕದಲ್ಲಿ, ಪರಮಃ–ಉತ್ಕೃಷ್ಟವಾದ, ಧರ್ಮಃ–ಧರ್ಮವು, ಭವಿಷ್ಯತಿ–ಆಗುವದು ॥೧೦॥ ಇತಿ–ಇಂತೆಂದು, ಮನುಃ–ವೈವಸ್ವತಮನುವು, ತಂ–ಆ ಇಕ್ಷ್ವಾಕುಮಹಾರಾಯನಂಕುರಿತು, ಬಹು–ಬಹಳವಾಗಿ, ಸಂದಿಶ್ಯ–ಆಜ್ಞಾಪಿಸಿ, ಹೃಷ್ಟಃ–ಸಂತೋಷಚಿತ್ತನಾಗಿ, ತ್ರಿದಿವಂ–ಮೂರನೇಲೋಕವಾದ, ಸನಾತನಂ–ಅನಾದಿಸಿದ್ಧವಾದ, ಬ್ರಹ್ಮಲೋಕಂ–ಸತ್ಯಲೋಕವನ್ನು ಕುರಿತು, ಜಗಾಮ–ತೆರಳಿದನು, ॥ ೧೧ ॥ ತಸ್ಮಿನ್–ಆ ವೈವಸ್ವತಮನುವು, ತ್ರಿದಿವಂ–ಬ್ರಹ್ಮಲೋಕವಂಕುರಿತು, ಪ್ರಯಾತೇಸತಿ–ಹೋಗುತಿರುವನಾಗಲಾಗಿ, ಅಮಿತಪ್ರಭಃ–ಅಪಾರತೇಜಸ್ವಿಯಾದ, ಇಕ್ಷ್ವಾಕುಃ–ಇಕ್ಷ್ವಾಕುಮಹಾರಾಯನು, ಪುತ್ರಾನ್–ಮಕ್ಕಳನ್ನು, ಕಥಂಜನಯಿಷ್ಯೇ–ಹ್ಯಾಗೆಹುಟ್ಟಿಸುವೆನು, ಇತಿ–ಇಂತೆಂದು, ಚಿಂತಾಪರಃ–ಆಲೋಚನೆಯುಳ್ಳವನು, ಅಭವತ್–ಆದನು ॥ ೧೨ ॥ ಮನುಸುತಃ–ಮನುಪುತ್ರನಾದ, ತೇಜಸ್ವೀ–ತೇಜೋವಂತನಾದ, ಇಕ್ಷ್ವಾಕುಮಹಾರಾಯನು, ಬ್ರಹ್ಮರೂಪೈಃ – ವೇದೋಕ್ತರೂಪ

---

ಮನೆ! ಪೂರ್ವಕಾಲದೊಳು ಕೃತಯುಗದಲ್ಲಿ ಮನುಚಕ್ರವರ್ತಿ ಯೆಂಬಾತನು ಶಿಕ್ಷಾಕರ್ತನಾಗಿಯೂ, ವರ್ಣಾಶ್ರಮಧರ್ಮಂಗಳಂ ಸ್ಥಾಪಿಸಿದವನಾಗಿಯೂ ಇರುತಿದ್ದನು, ಆ ಮಹಾರಾಜನಿಗೆ ಇಕ್ಷ್ವಾಕುವೆಂಬ ಕುಮಾರನುಂಟಾದನು. ಭೂಮಂಡಲದಲ್ಲಿ ಜಯಿಸಲಸಾಧ್ಯನಾದ ಆ ಕುಮಾರನಂ ರಾಜ್ಯದೊಳು ಪಟ್ಟಾಭಿಷೇಕವಂಮಾಡಿ,ಈ ಧರಾತಲದಲ್ಲಿರ್ಪ ರಾಜರಿಗೆಲ್ಲ ಪ್ರಭುವಾಗಿರುವಂಥಾವನಾಗೆಂದು ಪೇಳಿದವನಾದನು ॥೬॥ ಬಳಿಕ ಆ ಇಕ್ಷ್ವಾಕು ಮಹಾರಾಜನು ಹಾಗೆಯೆ ಆಗಲೆಂದು ಪ್ರತಿಜ್ಞೆಯಂ ಗೈದವನಾಗಲೂ, ಮನುವು ಪುತ್ರನಂಕುರಿತು, ಎಲೈ ಉದಾರನೆ ! ನಾಂ ಸಂತುಷ್ಟನಾದೆನು, ನೀನು ಸಂರಕ್ಷಣ ಕರ್ತನಾಗಿದ್ದೀ, ಈ ಭಾಗದಲ್ಲಿ ಸಂದೇಹವಿಲ್ಲ, ದಂಡನೆಯಿಂದಲೇ ಪ್ರಜೆಗಳಂ ಸಂರಕ್ಷಿಸುವಂಥಾವನಾಗು, ನಿಷ್ಕಾರಣವಾಗಿ ದಂಡಿಸಬೇಡ, ಯಾಕಂದರೆ ಅಪರಾಧಿಗಳ ವಿಷಯದಲ್ಲಿ ಆಯಾ ಅಪರಾಧಗಳಿಗೆ ತಕ್ಕ ದಂಡನೆಯಂಗೈದರೆ, ರಾಜನೀತಿಗೆ ಅನುಸಾರವಾಗಿ ಮಾಡಿದ ಆ ದಂಡನೆಯೇ ಅರಸಾದವನನ್ನು ಸ್ವರ್ಗವಂಪೊಂದಿಸುವದು, ಆದಕಾರಣ ನೀನು ಕ್ರಮವಾಗಿ ಶಿಕ್ಷಿಸುವಂಥಾವನಾಗು, ಲೋಕದಲ್ಲಿ ಪ್ರಜಾ ಪರಿಪಾಲನೆಯಂ ಗೈಯುತ್ತಿರುವ ನಿನಿಗೆ ಧರ್ಮವೇ ಮುಖ್ಯವಾಗಿರುವಂಥಾದ್ದಾಗುವದು, ಎಂಬದಾಗಿ ಪರಿಪರಿಯಾಗಿಪೇಳಿ, ಸಂತೋಷಚಿತ್ತನಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೋಪಮಾನ್ ॥೧೩॥ ತೇಷಾಮವರಜಸ್ತಾತ ಸರ್ವೇಷಾಂ ರಘುನಂದನ । ಮೂರ್ಖಶ್ಚಾಕೃತವಿದ್ಯಶ್ಚ ನಶುಶ್ರೂಷತಿ ಪೂರ್ವಜಾನ್ ॥೧೪॥ ನಾಮ ತಸ್ಯ ತು ದಂಡೇತಿ ಪಿತಾ ಚಕ್ರೇಽಲ್ಪಮೇಧಸಃ । ಅವಶ್ಯಂ ದಂಡಪತನಂ ಶರೀರೇಽಸ್ಯ ಭವಿಷ್ಯತಿ ॥೧೫॥ ಅಪಶ್ಯಮಾನಸ್ತಂ ದೋಷಂ ಘೋರಂ ಪುತ್ರಸ್ಯ ರಾಘವ । ವಿಂಧ್ಯಶೈವಲಯೋರ್ಮಧ್ಯೇ ರಾಜ್ಯಂ ಪ್ರಾದಾದರಿಂದಮ ॥೧೬॥ ಸ ದಂಡಸ್ತತ್ರ ರಾಜಾಭೂದ್ರಮ್ಯೇ ಪರ್ವತರೋಧಸಿ । ಪುರಂ ಚಾಪ್ರತಿಮಂ ರಾಮ ನ್ಯವೇಶಯದನುತ್ತಮಮ್ ॥೧೭॥ ಪುರಸ್ಯ ಚಾಕರೋನ್ನಾಮ ಮಧುಮಂತಮಿತಿ ಪ್ರಭೋ । ಪುರೋಧಸಂ ತೂಶನಸಂ ವರಯಾಮಾಸ ಸುವ್ರತ ॥೧೮॥ ಏವಂ ಸ ರಾಜಾ ತದ್ರಾಜ್ಯಂ ಚಕಾರ ಸಪುರೋಹಿತಃ । ಪ್ರಹೃಷ್ಟಮನುಜಾಕೀರ್ಣಂ ದೇವರಾಜ್ಯಂ ಯಥಾ ವೃಷಾ ॥೧೯॥ —ಏಕೋನಾಶೀತಿತಮಸ್ಸರ್ಗಃ.—

ಏತದಾಖ್ಯಾಯ ರಾಮಾಯ ಮಹರ್ಷಿಃ ಕುಂಭಸಂಭವಃ । ಅಸ್ಯಾಮೇವಾಪರಂ ವಾಕ್ಯಂ ಕಥಾಯಾಮುಪಚಕ್ರಮೇ ॥೧॥

---

ಮಾದ, ತೈಸ್ತೈಃ ಕರ್ಮಭಿಃ-ಆಯಾಯಾ ಪುತ್ರಕಾಮೇಷ್ಟ್ಯಾದಿ ಕರ್ಮಗಳಿಂದ, ದೇವಸುತೋಪಮಾನ್-ದೇವತಾಪುತ್ರರಿಗೆ ಸಮಾನರಾದ, ಶತಂಸುತಾನ್-ನೂರುಜನ ಮಕ್ಕಳನ್ನು, ಜನಯಾಮಾಸ-ಹುಟ್ಟಿಸಿದನು ॥ ೧೩ ॥ ಹೇತಾತ-ಎಲೈ ಅಯ್ಯನೆ, ಹೇರಘುನಂದನ-ಎಲೈ ರಘುಕುಲಾನಂದಕರನೆ, ಸರ್ವೇಷಾಂ-ಸಮಸ್ತರಾದ ತೇಷಾಂ-ಆ ಮಕ್ಕಳೊಳಗೆ, ಅವರಜಃ-ಕಿರೀಗಮನು, ಮೂರ್ಖಶ್ಚ-ಮೂಢನಾಗಿ, ಅಕೃತವಿದ್ಯಶ್ಚ-ವಿದ್ಯೆಯೂ ಇಲ್ಲದವನಾಗಿ, ಪೂರ್ವಜಾನ್-ಅಣ್ಣಂದಿರೆ ಮೊದಲಾದ ದೊಡ್ಡವರನ್ನು, ನಶುಶ್ರೂಷತಿ-ಸೇವೆಮಾಡುವನಲ್ಲ, ಅಲ್ಪಮೇಧಸಃ-ಸ್ವಲ್ಪಬುದ್ಧಿಯುಳ್ಳ, ತಸ್ಯ-ಆ ಕಿರೀಮಗನಿಗೆ, ದಂಡೇತಿ-ದಂಡನೂ ಎಂದು, ನಾಮ-ಹೆಸರನ್ನು, ಚಕ್ರೇ-ಮಾಡಿದನು, ಅಸ್ಯ-ಈ ಮಗನ, ಶರೀರೇ-ಶರೀರದಲ್ಲಿ, ಅವಶ್ಯಂ-ಅವಶ್ಯವಾಗಿ, ದಂಡಪತನಂ-ಶಿಕ್ಷಾಪತನವು, ಭವಿಷ್ಯತೀತಿ-ಆಗುವದೆಂದು, ಅಬ್ರವೀತ್-ನುಡಿದನು ॥೧೫॥ ಹೇ ಅರಿಂದಮ-ಎಲೈ ಶತ್ರುಸಂಹಾರಕನೇ, ಘೋರಂ-ಭಯಂಕರವಾದ, ತಂದೋಷಂ-ಆ ದೋಷವನ್ನು, ಅಪಶ್ಯಮಾನಃ-ನೋಡದಿರುವನಾಗಿ, ಹೇ ರಾಘವ-ಎಲೈ ಶ್ರೀರಾಮನೆ, ಪುತ್ರಸ್ಯ-ಮಗನಿಗೆ, ವಿಂಧ್ಯಶೈವಲಯೋರ್ಮಧ್ಯೇ-ವಿಂಧ್ಯಶೈವಲ ಪರ್ವತಗಳ ಮಧ್ಯದಲ್ಲಿ, ರಾಜ್ಯಂ-ರಾಜ್ಯವನ್ನು, ಪ್ರಾದಾತ್ - ಕೊಟ್ಟನು ॥೧೬॥ ಸದಂಡಃ-ಆ ದಂಡನೆಂಬವನು, ತತ್ರ-ಆ ದೇಶದಲ್ಲಿ, ರಾಜಾ-ಅರಸು, ಅಭೂತ್-ಆದನು, ಹೇರಾಮ-ಎಲೈ ಶ್ರೀರಾಮನೇ, ರಮ್ಯೇ-ಮನೋಹರವಾದ, ಪರ್ವತರೋಧಸಿ-ಬೆಟ್ಟದ ಘಟ್ಟದಲ್ಲಿ, ಅನುತ್ತಮಂ-ಸರ್ವೋತ್ತಮವಾದ, ಅಪ್ರತಿಮಂ-ಸಮಾನರಹಿತವಾದ, ಪುರಂಚ-ಪಟ್ಟಣವನ್ನು, ನ್ಯವೇಶಯತ್-ಕಟ್ಟಿಸಿದನು ॥೧೭॥ ಹೇ ಪ್ರಭೋ-ಎಲೊ ಸ್ವಾಮಿಯೇ, ಹೇಸುವ್ರತ-ಎಲೊ ಸತ್ಯವ್ರತನೆ, ಪುರಸ್ಯಚ-ಪಟ್ಟಣಕ್ಕೂನು, ಮಧುಮಂತಮಿತಿ-ಮಧುಮಂತವೆಂದು, ನಾಮಚ-ನಾಮಧೇಯವನ್ನು, ಅಕರೋತ್-ಮಾಡಿದನು, ಉಶನಸಂ-ಶುಕ್ರಾಚಾರ್ಯನನ್ನು, ಪುರೋಧಸಂ-ಪುರೋಹಿತನನ್ನಾಗಿ, ವರಯಾಮಾಸ-ವರಿಸಿದನು ॥೧೮॥ ಸರಾಜಾ-ಆ ದಂಡನೆಂಬ ಅರಸು, ಸಪುರೋಹಿತಃ- ಪುರೋಹಿತನಿಂದೊಡಗೂಡಿದವನಾಗಿ, ಪ್ರಹೃಷ್ಟಮನುಜಾಕೀರ್ಣಂ-ಪ್ರಹೃಷ್ಟ-ಸಂತೋಷಯುಕ್ತವಾದ, ಮನುಜ-ಮನುಷ್ಯರಿಂದ, ಆಕೀರ್ಣಂ-ವ್ಯಾಪ್ತವಾದದ್ದನ್ನಾಗಿ, ವೃಷಾ-ದೇವೇಂದ್ರನು, ದೇವರಾಜ್ಯಂ ಯಥಾ-ಸ್ವರ್ಗರಾಜ್ಯದಂತೇ, ತದ್ರಾಜ್ಯಂ-ಆ ರಾಜ್ಯವನ್ನು, ಏವಂ-ಈ ಪರಿಯಾಗಿ, ಚಕಾರ-ಮಾಡಿದನು. *ಏಕೋನಾಶೀತಿತಮಸ್ಸರ್ಗಃ.*

ಮಹರ್ಷಿಃ-ಮಹರ್ಷಿಯಾದ, ಕುಂಭಸಂಭವಃ-ಅಗಸ್ತ್ಯಋಷಿಯು, ರಾಮಾಯ-ಶ್ರೀರಾಮನಿಗೋಸ್ಕರ, ಏತತ್-ಈ ಮಾತನ್ನು, ಆಖ್ಯಾಯ-ಹೇಳಿ, ಅಸ್ಯಾಂಕಥಾಯಾಂ-ಈ ಕಥೆಯಲ್ಲೀ, ಅಪರಂ-ಮತ್ತೊಂದಾದ, ವಾಕ್ಯಂ-ಮಾತನ್ನು, ಉಪಚಕ್ರಮೇ-ಉಪಕ್ರಮಿಸಿದನು ॥೧॥ ಹೇ ಕಾಕುತ್ಸ್ಥ-ಎಲೈ ಕಕುತ್ಸ್ಥವಂಶೋತ್ಪನ್ನನಾದ ಶ್ರೀರಾಮನೇ, ತತಃ-ಬಳಿಕ, ಮಂದಾತ್ಮಾ-ಮಂದಬುದ್ಧಿಯುಳ್ಳ, ಸಃದಂಡಃ-ಆ ದಂಡನೆಂಬವನು, ತತ್ರ-ಆ ಪಟ್ಟಣದಲ್ಲಿ, ಬಹುವರ್ಷಗಣಾಯುತಂ-ಹತ್ತು ಐದು ಸಾವಿರವರ್ಷಗಳು, ರಾಜ್ಯಂ-ರಾಜ್ಯವನ್ನು, ನಿಹತಕಂಟಕಂ-ಹೋಗಲಾಡಿಸಲ್ಪಟ್ಟ ಶತ್ರುಗಳುಳ್ಳವ

---

ನಾವಧಾನದಿಂದ ಅನಾದಿಸಿದ್ಧವಾದ ಬ್ರಹ್ಮಲೋಕವಂ ಪಡೆದನು, ಆವೈವಸ್ವತಮನುವು ಸ್ವರ್ಗಸ್ಥನಾಗಲೂ, ಮಹಾತೇಜೋವಂತನಾದ ಇಕ್ಷ್ವಾಕುಮಹಾರಾಜನು ಎನಗೆ ಸುತರು ಹ್ಯಾಗುಂಟಾಗುವರೆಂದು ಚಿಂತಿಸುತಿದ್ದವನಾಗಿ, ಬ್ರಾಹ್ಮಣ ಪ್ರಚುರವಾದ ಕರ್ಮಗಳಿಂದ ನೂರುಮಂದಿ ಮಕ್ಕಳಂ ಪಡದಂಥಾವನಾದನು ॥೧೩॥ ಎಲೈ ರಘುನಂದನನೆ, ಆ ಕುಮಾರರೊಳಗೆ ಕಿರಿಯುವನಾದವನು ಮೂರ್ಖನಾಗಿಯೂ ವಿದ್ಯಾಭ್ಯಾಸವಿಲ್ಲದವನಾಗಿಯೂ, ಹಿರಿಯುವರನ್ನು ಅನುಸರಿಸದಿರುವನಾಗಿಯೂ ಇದ್ದನು. ॥೧೪॥ ಆ ಬಾಲಕನಿಗೆ ಇಕ್ಷ್ವಾಕುಮಹಾರಾಜನು ದಂಡನೆಂಬದಾಗಿ ನಾಮಕರಣವಂಗೈದು । ಅವಶ್ಯವಾಗಿ ಈ ಹುಡಗನಿಗೆ ದಂಡನೆಯುಂಟಾಗುವದೆಂದು ಹೇಳಿ ಆಪುತ್ರನ ದೋಷಂಗಳಂ ನೋಡಲಾರದೇ ಅವನಿಗೆ ವಿಂಧ್ಯಶೈವಲ ಪರ್ವತಂಗಳ ಮಧ್ಯಪ್ರದೇಶದಲ್ಲಿ ರಾಜ್ಯವಂಕೊಟ್ಟಂಥವನಾದನು ॥೧೬॥ ಆ ದಂಡನೆಂಬವನು ಆ ಪರ್ವತ ಪ್ರಾಂತ್ಯದಲ್ಲಿ ರಾಜನಾಗಿ ಉತ್ತಮನಾದ ಪುರವಂನಿರ್ಮಿಸಿ, ಮಧುಮಂತವೆಂದು ಆ ಪಟ್ಟಣಕ್ಕೆ ನಾಮಧೇಯವಂಗೈದು, ಶುಕ್ರಾಚಾರ್ಯನಂ ಪುರೋಹಿತನನ್ನಾಗಿ ವರಿಸಿ, ಇಂದ್ರನು ದೇವರಾಜ್ಯವನ್ನಾಳಿದಂತೆ, ಪುರೋಹಿತನಿಂದೊಡಗೂಡಿ ಆ ದೇಶವನ್ನಾಳುತ್ತಿದ್ದನು ॥೧೯॥—⋯ಉತ್ತರರಾಮಾಯಣದಲ್ಲಿನ ೭೯ನೆಯ ಸರ್ಗಂ ಮುಗಿದುದು⋯—

ಮಹರ್ಷಿಯಾದ ಅಗಸ್ತ್ಯಮುನಿಯು ಈ ಪರಿ ಶ್ರೀರಾಮನಿಗೆ ಹೇಳಿ, ಇದೇಕಥೆಯಲ್ಲಿಯೆ ಮತ್ತೊಂದು ಮಾತಂ ಹೇಳಲುಪಕ್ರಮಿಸಿದನದೆಂತೆನೆ,—ಎಲೈ ಶ್ರೀರಾಮನೆ ! ದುರ್ಬುದ್ಧಿಯುಳ್ಳ ಆ ದಂಡರಾಜನು ಮಧುಮಂತವೆಂಬ ಆಪ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತತಸ್ಸದಂಡಃಕಾಕುತ್ಸಸ್ಥ ಬಹುವರ್ಷಗಣಾಯುತಂ । ಅಕರೋತ್ತತ್ರಮಂದಾತ್ಮಾ ರಾಜ್ಯಂನಿಹತಕಂಟಕಂ॥೨॥ ಅಥಕಾಲೇತುಕಸ್ಮಿಂಶ್ಚಿದ್ರಾಜಾಭಾರ್ಗವಮಾಶ್ರಮಂ । ರಮಣೀಯಮುಪಾಕ್ರಾಮಚ್ಚೈತ್ರೇಮಾಸಿಮನೋರಮೇ ॥೩॥ ತತ್ರಭಾರ್ಗವಕನ್ಯಾಂಸರೂಪೇಣಾಪ್ರತಿಮಾಂಭುವಿ । ವಿಚರಂತೀಂವನೋದ್ದೇಶೇದಂಡೋಪಶ್ಯದನುತ್ತಮಾಂ ॥೪॥ ಸದೃಷ್ಟ್ವಾತಾಂಸುದುರ್ಮೇಧಾಅನಂಗಶರಪೀಡಿತಃ । ಅಭಿಗಮ್ಯಸುಸಂವಿಗ್ನಾಂಕನ್ಯಾಂವಚನಮಬ್ರವೀತ್॥೫॥ ಕುತಸ್ತ್ವಮಸಿಸುಶ್ರೋಣಿಕಸ್ಯವಾಸಿಸುತಾಶುಭೇ । ಪೀಡಿತೋಹಮನಂಗೇನಪೃಚ್ಛಾಮಿತ್ವಾಂಸುಮಧ್ಯಮೇ॥೬॥ ತಸ್ಯತ್ವೇವಂಬ್ರುವಾಣಸ್ಯಮೋಹೋನ್ಮತ್ತಸ್ಯಕಾಮಿನಃ। ಭಾರ್ಗವೀಪ್ರತ್ಯುವಾಚೇದಂವಚಃಸಾನುನಯಂನೃಪಂ ॥೭॥ ಭಾರ್ಗವಸ್ಯಸುತಾಂವಿದ್ಧಿದೇವಸ್ಯಾಕ್ಲಿಷ್ಟಕರ್ಮಣಃ। ಅರಜಾಂನಾಮರಾಜೇಂದ್ರಜ್ಯೇಷ್ಠಾಮಾಶ್ರಮವಾಸಿನೀಂ॥೮॥ ಮಾಮಾಸ್ಪೃಶಬಲಾದ್ರಾಜನ್ಕನ್ಯಾಪಿತೃವಶಾಹ್ಯಹಂ। ಗುರುಃಪಿತಾಮೇರಾಜೇಂದ್ರತ್ವಂಚಶಿಷ್ಯೋಮಹಾತ್ಮನಃ ॥೯॥ ವ್ಯಸನಂಸುಮಹತ್ಕ್ರುದ್ಧಸ್ಸತೇದದ್ಯಾನ್ಮಹಾತಪಾಃ।

---

ನಾಗಿ, ರಾಜ್ಯಂ-ರಾಜ್ಯಭಾರವನ್ನು, ಅಕರೋತ್-ಮಾಡಿದನು ॥೨॥ ಅಥ-ಬಳಿಕ, ಕಸ್ಮಿಂಶ್ಚಿತ್ಕಾಲೇ-ಒಂದಾನೊಂದು ಕಾಲದಲ್ಲಿ, ರಾಜಾ-ಅರಸು, ಭಾರ್ಗವಂ-ಶುಕ್ರಾಚಾರ್ಯನ ಸಂಬಂಧಿಯಾದ,ರಮಣೀಯಂ-ಮನೋಹರವಾದ, ಆಶ್ರಮಂ-ಆಶ್ರಮವನ್ನು ಕುರಿತು, ಮನೋರಮೇ-ಮನೋಹರವಾದ, ಚೈತ್ರೇಮಾಸಿ-ಚೈತ್ರಮಾಸದಲ್ಲಿ, ಉಪಾಕ್ರಾಮತ್-ಬಂದಂಥಾವನಾದನು ॥ ೩ ॥ ತತ್ರ-ಆ ಭಾರ್ಗವಾಶ್ರಮದಲ್ಲಿ, ವನೋದ್ದೇಶೇ-ವನಪ್ರದೇಶದಲ್ಲಿ, ವಿಚರಂತೀಂ-ಸಂಚರಿಸುತಿರುವ, ರೂಪೇಣ-ಸೌಂದರ್ಯದಿಂದ, ಭುವಿ-ನೆಲದಲ್ಲಿ, ಅಪ್ರತಿಮಾಂ-ಸಮಾನರಹಿತಳಾದ,ಅನುತ್ತಮಾಂ-ಸರ್ವೋತ್ತಮಳಾದ, ಭಾರ್ಗವಕನ್ಯಾಂ-ಶುಕ್ರಾಚಾರ್ಯನಮಗಳನ್ನು, ಸಃದಂಡಃ-ಆ ದಂಡನೆಂಬವನು, ಅಪಶ್ಯತ್-ಕಂಡನು ॥೪॥ ಸುದುರ್ಮೇಧಾಃ-ದುರ್ಬುದ್ಧಿಯುಳ್ಳ, ಸಃ-ಆ ದಂಡನು, ತಾಂಕನ್ಯಾಂ-ಆ ಕನ್ಯಕೆಯನ್ನು, ದೃಷ್ಟ್ವಾ-ಕಂಡು, ಸುಸಂವಿಗ್ನಾಂ-ಭಯಬೀಳುತಿರುವ ಆ ಕನ್ಯಕೆಯಂಕುರಿತು, ಅನಂಗಶರಪೀಡಿತಃ – ಮನ್ಮಥಬಾಣಗಳಿಂದ ಬಾಧಿತನಾಗಿ, ಅಭಿಗಮ್ಯ-ಬಂದು, ವಚನಂ-ಮಾತನ್ನು, ಅಬ್ರವೀತ್-ನುಡಿದನು ॥೫॥ ಹೆ ಸುಶ್ರೋಣಿ-ಎಲೇಒಳ್ಳೇ ಕಟಿಕಪ್ರದೇಶಮುಳ್ಳವಳೇ, ಹೆ ಶುಭೇ-ಎಲೇ ಶುಭಕರಳೇ, ತ್ವಂ-ನೀನು, ಕುತಃ-ಎಲ್ಲಿಂದಬಂದೇ, ಕಸ್ಯವಾ-ಯಾರ, ಸುತಾ-ಕುವರಿಯು, ಅಸಿ-ಆಗಿದ್ದೀ, ಹೆ ಸುಮಧ್ಯಮೇ- ಎಲೇ ಒಳ್ಳೇ ಮಧ್ಯಪ್ರದೇಶ ಮುಳ್ಳವಳೇ, ಅಹಂ-ನಾನು, ಅನಂಗೇನ-ಮನ್ಮಥನಿಂದ, ಪೀಡಿತಃ-ಬಾಧಿತನಾಗಿ, ತ್ವಾಂ-ನಿನ್ನನ್ನು, ಪೃಚ್ಛಾಮಿ-ಕೇಳುತ್ತೇನೆ॥ ಏವಂ-ಈಪರಿ, ಬ್ರುವಾಣಸ್ಯ-ಹೇಳುತಿರುವ, ಮೋಹೋನ್ಮತ್ತಸ್ಯ-ಮೋಹ- ಅಜ್ಞಾನದಿಂದ, ಉನ್ಮತ್ತಸ್ಯ -ಉನ್ಮಾದಾವಸ್ಥೆಯನ್ನು ಹೊಂದಿರುವ, ಕಾಮಿನಃ-ಕಾಮುಕನಾದ, ತಸ್ಯ-ಆ ದಂಡನೆಂಬರಾಜನ, ವಚಃ-ಮಾತನ್ನು, ಶ್ರುತ್ವಾ-ಕೇಳಿ,ಭಾರ್ಗವೀ-ಶುಕ್ರಾಚಾರ್ಯನಮಗಳಾದ ಅರಜೆಯೆಂಬುವಳು, ನೃಪಂ-ದಂಡನಂಕುರಿತು, ಸಾನುನಯಂ-ಸಮಾಧಾನಮಾತಿನಿಂದ ಕೂಡಿಕೊಂಡಂತೆ, ಇದಂ-ಈ ಮಾತನ್ನು, ಪ್ರತ್ಯುವಾಚ-ಪ್ರತ್ಯುತ್ತರ ಕೊಟ್ಟಳು॥೭॥ ಹೆ ರಾಜೇಂದ್ರ-ಎಲೈರಾಜಶ್ರೇಷ್ಠನೆ, ಅಕ್ಲಿಷ್ಟಕರ್ಮಣಃ-ಕ್ಲೇಶವಿಲ್ಲದೆ ಕಾರ್ಯವನ್ನು ನಡಿಸುತಿರುವ, ಭಾರ್ಗವಸ್ಯದೇವಸ್ಯ- ಶುಕ್ರಾಚಾರ್ಯನಿಗೆ, ಜ್ಯೇಷ್ಠಾಂಸುತಾಂ-ಜ್ಯೇಷ್ಠಪುತ್ರಿಯಾದ, ಆಶ್ರಮವಾಸಿನೀಂ-ಆಶ್ರಮದಲ್ಲಿರುತಿರುವ ನನ್ನನ್ನು, ಅರಜಾಂನಾಮ-ಅರಜೆಯೆಂದು ಪ್ರಸಿದ್ಧಳನ್ನಾಗಿ, ವಿದ್ಧಿ-ತಿಳಿ॥ ಹೆ ರಾಜನ್-ಎಲೈ ಅರಸೆ, ಹಿ-ಯಾವಕಾರಣದದೆಸೆಯಿಂದ, ಅಹಂ-ನಾನು, ಪಿತೃವಶಾ-ತಂದೆಯಸ್ವಾಧೀನಳಾದ,ಕನ್ಯಾ-ಅವಿವಾಹಿತಳಾಗಿಧ್ದೇನೊ,ತಸ್ಮಾತ್-ಆ ಕಾರಣದ ದೆಸೆಯಿಂದ, ಬಲಾತ್-ಬಲಾತ್ಕಾರದಿಂದ, ಮಾಂ-ನನ್ನನ್ನು, ಮಾಸ್ಪೃಶಃ-ಸ್ಪರ್ಶಮಾಡಬ್ಯಾಡ, ಮೇ-ನನ್ನ, ಪಿತಾ-ತಂದೆಯು, ಗುರುಃ-ಗುರುವಾಗಿಧ್ದಾನೆ, ಹೆ ರಾಜೇಂದ್ರ-ಎಲೊರಾಜಶ್ರೇಷ್ಠನೆ, ತ್ವಂ-ನೀನು, ಮಹಾತ್ಮನಃ-ಮಹಾತ್ಮನಾದ ಶುಕ್ರಾಚಾರ್ಯನಿಗೆ, ಶಿಷ್ಯಃ-ಶಿಷ್ಯನು, ಅಸಿ-ಆಗಿದ್ದಿ ॥೯॥ ಮಹಾತಪಾಃ-ಮಹಾ ತಪಸ್ವಿಯಾದ, ಸಃ-ಆ ಶುಕ್ರಾಚಾರ್ಯನು, ಕ್ರುದ್ಧೋಯದಿ-ಕೋಪಿಷ್ಠನಾದರೆ, ತೇ-ನಿನಗೆ, ಸುಮಹತ್-ಬಹಳವಾದ, ವ್ಯಸನಂ-ವ್ಯಸನವನ್ನು, ದದ್ಯಾತ್-ಕೊಡುವನು, ಅದ್ಯ-ಈಗ, ಮಹಾನ್ವಾ-ನನ್ನಿಂದಲಾದರೂ, ಧರ್ಮದೃಷ್ಟೇನ-ಧರ್ಮಶಾಸ್ತ್ರದಿಂದ ತೋರಿಸಲ್ಪಟ್ಟ, ವರ್ತ್ಮ

---

ಟ್ಟಣದಲ್ಲಿ ಅನೇಕವರುಷಗಳು ನಿಷ್ಕಂಟಕವಾಗಿ ರಾಜ್ಯಭಾರವಂ ಗೈಯ್ಯುತ್ತಿದ್ದನು ॥೨॥ ಬಳಿಕ ಒಂದಾನೊಂದು ಕಾಲದೊಳು ಚೈತ್ರಮಾಸದಲ್ಲಿ, ಅಘೋರೆಯು ಮಹಾಮನೋಹಾರಿಯಾದ, ಶುಕ್ರಾಚಾರ್ಯರ ಆಶ್ರಮಕ್ಕೆ ಬಂದು ಅಲ್ಲಿ ಬಲುಸೌಂದರ್ಯವತಿಯಾಗಿಯೂ, ಅಸದೃಶಳಾಗಿಯೂ ಆವನ ಪ್ರಾಂತ್ಯದಲ್ಲಿ ಸಂಚರಿಸುತ್ತಿರುವಳಾಗಿಯೂ, ಇರುವ ಭಾರ್ಗವನ ಕನ್ನಿಕೆಯಂ ಕಂಡು, ಕಾಮಬಾಧೆಯಿಂದ ನೊಂದವನಾಗಿ, ಆ ಬಾಲಕಿಯ ಸಮೀಪಕ್ಕೆ ಪೋಗಿ ಎಲೈಶುಭಕರಳೆ! ನೀನು ಯಾರಮಗಳು? ಎಲ್ಲಿಂದಬಂದೆ ? ನಾನು ಮನ್ಮಥೋದ್ರೇಕವುಳ್ಳವನಾಗಿಧ್ದೇನೆ, ಆದ ಕಾರಣ ನಿನ್ನಂ ಕೇಳುತ್ತಿಧ್ದೇನೆ ಪೇಳುವಂಥಾವಳಾಗೆಂದು ನುಡಿದವನಾದನು. ॥೬॥ ಈ ಪರಿಪೇಳುತ್ತಿರುವ ಮತ್ತು ಮಹಾ ಮೋಹದಿಂದ ಉನ್ಮತ್ತನಾಗಿಯೂ, ಕಾಮುಕನಾಗಿಯೂ ಇರುವ ಆ ದುರ್ಮಾರ್ಗನವಾಕ್ಯವಂ ಕೇಳಿ, ಆ ಭೃಗುಪುತ್ರಿಯು ವಿನಯಪೂರ್ವಕವಾಗಿಂತೆಂದುತ್ತರವಂ ಕೊಟ್ಟಳದೆಂತೆನೆ॥೭॥ಎಲೈ ಪ್ರಭುವೆ! ಕ್ಲೇಶಿಸದೇಕೃತ್ಯಂಗಳಂಗೈಯುತ್ತಿರುವ ಶುಕ್ರಾಚಾರ್ಯನಿಗೆಜ್ಯೇಷ್ಠ ಪುತ್ರಿಯಾದವಳು, ಎನ್ನನ್ನು ಅರಜಳೆಂದು ಕರೆಯುವರು, ನಾನು ತಂದೆಯವಶದಲ್ಲಿ ಇರುವಳು, ಎಂನನ್ನು ಬಲಾತ್ಕರಿಸಿ ಸ್ಪರ್ಶಿಸಬೇಡ, ಯಾಕಂದರೆ ನಮ್ಮ ಜನಕನು ನಿನಿಗೆ ಗುರುವು ನೀನು ಆತನಿಗೆ ಶಿಷ್ಯನು ಮಹಾತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯದಿನಾರ್ಯ್ಯಮಯಾಕಾರ್ಯ್ಯಂಧರ್ಮದೃಷ್ಟೇನವರ್ತ್ಮನಾ । ವರಯಸ್ವನೃಪಶ್ರೇಷ್ಠ ಪಿತರಂಮೇಮಹಾದ್ಯುತಿಂ ॥೧೦॥ ಅನ್ಯ
ಥಾತುಫಲಂತುಭ್ಯಂಭವೇದ್ಘೋರಾಭಿಸಂಹಿತಂ । ಕ್ರೋಧೇನಹಿಪಿತಾಮೇಸೌಮ್ಯ ತ್ರೈಲೋಕ್ಯಮಪಿನಿರ್ದಹೇತ್ ॥೧೧॥ ದಾಸ್ಯತೇ
ಚಾನವದ್ಯಾಂಗತವಮಾಂಯಾಚಿತಃಪಿತಾ ॥೧೨॥ ಏವಂಬ್ರುವಾಣಾಮರಜಾಂದಂಡಃಕಾಮಶರಾರ್ದಿತಃ । ಪ್ರತ್ಯುವಾಚ
ಮದೋನ್ಮತ್ತಃಶಿರಸ್ಯಾಧಾಯಸೋಂಜಲಿಂ ॥೧೩॥ ಪ್ರಸಾದಂಕುರುಸುಶ್ರೋಣಿನಕಾಲಂಕ್ಷೇಪ್ತುಮರ್ಹಸಿ। ತ್ವತ್ಕೃತೇಹಿಮ
ಮಪ್ರಾಣಾಃವಿಶೀರ್ಯಂತೇಶುಭಾನನೇ ॥೧೪॥ ತ್ವಾಂಪ್ರಾಪ್ಯತುವಧೋವಾಸ್ತುಶಾಪೋವಾಪಿಸುದಾರುಣಃ । ಭಕ್ತಂಭಜಸ್ವ
ಮಾಂಭೀರುಭಜಮಾನಂಸುವಿಹ್ವಲಂ॥೧೫॥ ಏವಮುಕ್ತ್ವಾತುತಾಂಕನ್ಯಾಂದೋರ್ಭ್ಯಾಂಗೃಹ್ಯಬಲಾದ್ಬಲೀ ।ಸಂಸ್ಫುರಂ
ತೀಂಯಥಾಕಾಮಂಮೈಥುನಾಯೋಪಚಕ್ರಮೇ ॥೧೬॥ ತಮನರ್ಥಂಮಹಾಘೋರಂದಂಡಃಕೃತ್ವಾಸುದಾರುಣಂ। ನಗರಂ
ಪ್ರಯಯೌಚಾಶುಮಧುಮಂತಮನುತ್ತಮಂ ॥೧೭॥ ಅರಜಾಪಿರುದಂತೀಸಾಆಶ್ರಮಸ್ಯಾವಿದೂರತಃ। ಪ್ರತೀಕ್ಷಂತೀಸು
ಸಂತ್ರಸ್ತಾಪಿತರಂದೇವಸನ್ನಿಭಂ॥೧೮॥ —...ಇತಿಶ್ರೀಮದುತ್ತರರಾಮಾಯಣೇ ಅಶೀತಿತಮಸ್ಸರ್ಗಃ...—

---

ನಾ-ಮಾರ್ಗದಿಂದ, ಕಾರ್ಯಂ-ಮಾಡತಕ್ಕದ್ದು, ಹೆ ನೃಪಶ್ರೇಷ್ಠ-ಎಲೊ ಶ್ರೇಷ್ಠನಾದ ಅರಸೇ, ಮಹಾದ್ಯುತಿಂ-ಮಹಾ ತೇಜಸ್ವಿಯಾದ, ಮೇಪಿತರಂ- ನ
ನ್ನ ತಂದೆಯನ್ನು ಕುರಿತು, ವರಯಸ್ವ-ಸ್ವಯಂವರಮಾಡಿಸು ॥೧೦॥ ಅನ್ಯಥಾ- ಹಾಗಿಲ್ಲದಪಕ್ಷದಲ್ಲಿ, ತುಭ್ಯಂ-ನಿನಿಗೆ, ಘೋರಾಭಿಸಂಹಿತಂ- ಭಯಂಕರ
ವ್ಯಾಪಾರದಿಂದ ಕೂಡಿಕೊಂಡಿರುವ, ಫಲಂ-ಫಲವು, ಭವೇತ್-ಆಗುವದು, ಹೆ ಸೌಮ್ಯ-ಎಲೋಪ್ರಸನ್ನನೇ, ಪಿತಾ-ತಂದೆಯು, ಕ್ರೋಧೇನ-ಕೋಪದಿಂದ
ತ್ರೈಲೋಕ್ಯಮಪಿ-ಲೋಕತ್ರಯವನ್ನೂ ಕೂಡ, ನಿರ್ದಹೇತ್-ದಹಿಸುವನು॥೧೧॥ ಹೆ ಅನವದ್ಯಾಂಗ-ಎಲೊ ನಿರ್ದೋಷವಾದ ಶರೀರಮುಳ್ಳವನೇ, ಯಾಚಿ
ತಃ-ಯಾಚಿಸಲ್ಪಟ್ಟ, ಪಿತಾ-ತಂದೆಯು, ಮಾಂ-ನನ್ನನ್ನು, ತವ-ನಿನಗೆ, ದಾಸ್ಯತೇ-ಕೊಡುವನು ॥ ೧೨ ॥ ಏವಂ-ಈ ಪರಿಯಾಗಿ, ಬ್ರುವಾಣಾಂ-ಹೇಳು
ತಿರುವ, ಅರಜಾಂ-ಅರಜಾದೇವಿಯಂಕುರಿತು, ಕಾಮಶರಾರ್ದಿತಃ-ಕಾಮಬಾಣಗಳಿಂದ ಬಾಧಿತನಾಗಿ, ಮದೋನ್ಮತ್ತಃ- ಯವ್ವನ ಮದೋನ್ಮತ್ತನಾದ,
ದಂಡಃ-ದಂಡನು, ಶಿರಸಿ-ಶಿರಸ್ಸಿನಲ್ಲಿ,ಅಂಜಲಿಂ-ಅಂಜಲಿಯನ್ನು, ಆಧಾಯ-ಯಿಟ್ಟುಕೊಂಡು,ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು॥೧೩॥ಹೆಸುಶ್ರೋಣಿ-
ಎಲೆ ಸುಶ್ರೋಣಿಯೇ, ಪ್ರಸಾದಂ-ಅನುಗ್ರಹವನ್ನು,ಕುರು-ಮಾಡು, ಕಾಲಂ-ಕಾಲವನ್ನು,ಕ್ಷೇಪ್ತುಂ-ಕಳೆಯುವದಕ್ಕೋಸ್ಕರ, ನಾರ್ಹಸಿ-ಯೋಗ್ಯಳಾ
ಗಬ್ಯಾಡ, ಹೆ ಶುಭಾನನೇ-ಎಲೆ ಸುಮುಖಿಯೇ,ಮಮ-ನನ್ನ, ಪ್ರಾಣಾಃ-ಪ್ರಾಣಗಳು, ತ್ವತ್ಕೃತೇ-ನಿನ್ನನಿಮಿತ್ತವಾಗಿ, ವಿಶೀರ್ಯಂತೇಹಿ-ಶೀಳಿ ಹೋಗುತ್ತ
ವೆ ॥೧೪॥ ತ್ವಾಂ-ನಿನ್ನನ್ನು, ಪ್ರಾಪ್ಯ-ಹೊಂದಿ, ವಧೋವಾ-ಮರಣವಾದರೂ ಸರಿಯೇ, ಅಸ್ತು-ಆಗಲೀ, ಸುದಾರುಣಃ-ಭಯಂಕರವಾದ, ಶಾಪೋವಾ-
ಶಾಪವೇ ಆಗಲೀ, ಅಸ್ತು-ಆಗಲೀ, ಹೆ ಭೀರು-ಎಲೇ ಭಯಶೀಲಳೆ, ಭಜಮಾನಂ-ಸೇವಿಸುತಿರುವ, ಸುವಿಹ್ವಲಂ-ವಿಹ್ವಲಚಿತ್ತನಾದ, ಭಕ್ತಂ-ಭಕ್ತಿಯುಳ್ಳ,
ಮಾಂ-ನನ್ನನ್ನು, ಭಜಸ್ವ-ಭಜಿಸು (ಅಂದರೆ ಹೊಂದು)॥೧೫॥ ಏವಂ-ಈ ಪರಿಯಾಗಿ, ಉಕ್ತ್ವಾ-ಹೇಳಿ, ಬಲೀ-ಬಲಿಷ್ಠನಾದ ದಂಡನು, ಬಲಾತ್-ದೇಹ
ಸಾಮರ್ಥ್ಯದ ದೆಶೆಯಿಂದ, ಸಂಸ್ಫುರಂತೀಂ-ಹೊಳೆಯುತಿರುವ, ತಾಂಕನ್ಯಾಂ- ಆ ಕನ್ಯಕೆಯನ್ನು, ದೋರ್ಭ್ಯಾಂ-ಭುಜಗಳಿಂದ,ಗೃಹ್ಯ-ಹಿಡಿದು, ಯಥಾಕಾ
ಮಂ-ಸ್ವೇಚ್ಛೆಯಾಗಿ, ಮೈಥುನಾಯ-ಮಿಥುನೀ ಭಾವಕ್ಕೋಸ್ಕರ, ಉಪಚಕ್ರಮೇ-ಉಪಕ್ರಮಿಸಿದನು॥೧೬॥ ದಂಡಃ-ದಂಡನು, ಮಹಾಘೋರಂ-ಮಹಾಭ
ಯಂಕರವಾದ, ಸುದಾರುಣಂ-ಅತಿಕ್ರೂರವಾದ, ತಂಅನರ್ಥಂ-ಆ ಅನರ್ಥಕಾರ್ಯವನ್ನು,ಕೃತ್ವಾ-ಮಾಡಿ, ಆಶು-ಜಾಗ್ರತೆಯಾಗಿ, ಅನುತ್ತಮಂ-ಸರ್ವೋ
ತ್ತಮವಾದ, ಮಧುಮಂತಂ-ಮಧುಮಂತವೆಂಬ, ನಗರಂ-ಪಟ್ಟಣವನ್ನು ಕುರಿತು, ಪ್ರಯಯೌ-ತೆರಳಿದನು॥೧೭॥ಸಾಅರಜಾಪಿ-ಆ ಅರಜಾದೇವಿಯೂನು,
ರುದಂತೀ-ರೋದನೆ ಮಾಡುತಿರುವಳಾಗಿ, ಆಶ್ರಮಸ್ಯ-ಆಶ್ರಮಕ್ಕೆ, ಅವಿದೂರತಃ-ಸಮೀಪದಲ್ಲಿ,ಸುಸಂತ್ರಸ್ತಾ-ಭಯಶೀಲಳಾದವಳಾಗಿ, ದೇವಸನ್ನಿಭಂ-
ದೇವತಾ ಸಮಾನನಾದ, ಪಿತರಂ-ತಂದೆಯಾದ ಶುಕ್ರಾಚಾರ್ಯನನ್ನು, ಪ್ರತೀಕ್ಷಂತೀ-ನಿರೀಕ್ಷಣೆ ಮಾಡಿಕೊಂಡಿದ್ದಳು ॥೧೮॥—*ಅಶೀತಿತಮಸ್ಸರ್ಗಃ*—

---

ಘೋವಂತನಾದ ಆತನು ಕುಪಿತನಾಗಿ ನಿನಿಗೆ ಮಹಾವ್ಯಸನವನ್ನೀಯುವನು, ನಾನು ಧರ್ಮಮಾರ್ಗದಿಂದಲೆ ಇರಬೇ
ಕು. ಆದಕಾರಣ ನೀನು ಮಹಾ ತೇಜೋವಂತನಾದ ನಮ್ಮ ತಂದೆಯಂ ಕೇಳು, ಇಲ್ಲದಿದ್ದರೆ ನಿನಗೆ ಘೋರವಾದ
ಫಲವುಸಂಭವಿಸುವದು. ನಮ್ಮ ಜನಕನಿಗೆ ಕೋಪವುಂಟಾದೊಡೆ ಮೂಜಗಂಗಳನ್ನೂ ಸುಡುವನು. ಆ ತೇಜೋವಿ
ನಿಂದ ದುರ್ಮಾರ್ಗವಂ ಬಿಟ್ಟು ಸನ್ಮಾರ್ಗವಾಗಿ ನಮ್ಮ ತಂದೆಯಂಕೇಳು. ಆತನು ಎನನ್ನು ನಿನಿಗೀಯುವನೆಂಬದಾ
ಗಿ ಪೇಳುತ್ತಿರುವ ಆ ಬಾಲಕಿಯಂಕುರಿತು ದುಷ್ಟನಾದ ಆ ದಂಡನೆಂಬ ರಾಜನು ಕಾಮಪೀಡಿತನಾಗಿ ಮಂಡೆಯೊಳು
ಕೈಗಳಂ ಜೋಡಿಶಿಕೊಂಡು ಮದೋನ್ಮತ್ತನಾಗಿ ಇಂತೆಂದುತ್ತರವಂ ಕೊಟ್ಟನು॥೧೩॥ಎಲೈ ಶುಭಕರವಾದ ಮುಖವು
ಳ್ಳವಳೇ! ಕಾಲಹರಣವಂಗೈಯ್ಯದೆ ತ್ವರಿತವಾಗಿ ಕರುಣಿಸು, ನಿನಿಗೋಸುಗ ಎನ್ನಪ್ರಾಣಂಗಳು ಬಿರಿದುಹೋಗುವವು.
ನಿನ್ನಂಪಡನರೆ ಸಂಹಾರವಾದರೂ ಆಗಲೀ, ದಾರುಣರೂಪವಾದ ಶಾಪವಾದರೂ ಸಂಭವಿಸಲೀ, ಕೇಳೆಲೈ ಭಯಶೀಲ
ಳೆ ! ಹ್ಯಾಗಾದರೂನಿನ್ನನ್ನೇ ಭಜಿಸುತ್ತಿರುವ ಭಕ್ತನಾದ ಎನ್ನನ್ನು ಪೊಂದುವಂಥಾವಳಾಗೆಂದು ನುಡಿದು ಬಾಹುಗಳಿಂ
ದಪ್ಪಿಕೊಂಡು ಮೈಥುನಕ್ಕೆ ಪ್ರಾರಂಭಿಸಿದನು.॥೧೬॥ ಕಡು ಪಾಪಿಯಾದ ಆ ದಂಡನು ಮಹಾದಾರುಣವಾದ ಈ ಅ
ನರ್ಥವಂ ಗೈದು ತನ್ನಪುರವಂ ಕುರಿತು ತೆರಳಿದನು.॥೧೭॥ಆ ಅರಜೆಯೆಂಬ ಭೃಗುಕನ್ನಿಕೆಯಾದರೆ ಹೆದರಿದವಳಾಗಿ ಆ
ಶ್ರಮಸಮೀಪದಲ್ಲಿ ಬಹುರೋದಿಸುತ್ತಾ ದೇವಸದೃಶನಾದ ಜನಕನಂ ಕಾಣಲಿಚ್ಛೆಯುಳ್ಳವಳಾಗಿದ್ದಳು ॥೧೮॥

—ಉತ್ತರ ರಾಮಾಯಣದಲ್ಲಿನ ೮೦ ನೆಯಸರ್ಗಂ ಮುಗಿದುದು.—



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಮುಹೂರ್ತಾದುಪಾವೃತ್ಯದೇವರ್ಷಿರಮಿತಪ್ರಭಃ । ಸ್ವಮಾಶ್ರಮಂಶಿಷ್ಯವೃತಃಕ್ಷುಧಾರ್ತಸ್ಸನ್ನ್ಯವರ್ತತ॥ ಸೋಪಶ್ಯದರಜಾಂದೀನಾಂರಜಸಾಸಮಭಿಪ್ಲುತಾಂ । ಜ್ಯೋತ್ಸ್ನಾಮಿವಾರುಣಗ್ರಸ್ತಾಂಪ್ರತ್ಯೂಷೇನ್ನವಿರಾಜತೀಂ॥೨॥ತಸ್ಯರೋಷಸ್ಸಮಭವತ್ಕ್ಷುಧಾರ್ತಸ್ಯ ವಿಶೇಷತಃ। ನಿರ್ದಹನ್ನಿವಲೋಕಾಂಸ್ತ್ರೀನ್ ಶಿಷ್ಯಾಂಶ್ಚೇದಮುವಾಚಹ॥೩॥ ಪಶ್ಯಧ್ವಂವಿಪರೀತಸ್ಯದಂಡಸ್ಯಾವಿಜಿತಾತ್ಮನಃ। ವಿಪತ್ತಿಂಘೋರಸಂಕಾಶಾಂಕ್ರುದ್ಧಾಮಗ್ನಿಶಿಖಾಮಿವ ॥೪॥ ಕ್ಷಯೋಸ್ಯದುರ್ಮತೇಃಪ್ರಾಪ್ತಸ್ಸಾನುಗಸ್ಯದುರಾತ್ಮನಃ। ಯಃಪ್ರದೀಪ್ತಾಂಹುತಾಶಸ್ಯ ಶಿಖಾಂವೈಸ್ಪ್ರಷ್ಟುಮಿಚ್ಛತಿ ॥೫॥ ಯಸ್ಮಾತ್ಸಕೃತವಾನ್ ಪಾಪಮೀದೃಶಂಘೋರದರ್ಶನಂ । ತಸ್ಮಾತ್ಪ್ರಾಪ್ಸ್ಯತಿದುರ್ಮೇಧಾಃಫಲಂಪಾಪಸ್ಯಕರ್ಮಣಃ॥೬॥ ಸಪ್ತರಾತ್ರೇಣರಾಜಾಸೌ ಸಭೃತ್ಯಬಲವಾಹನಃ। ಪಾಪಕರ್ಮಸಮಾಚಾರೋವಧಂಪ್ರಾಪ್ಸ್ಯತಿದುರ್ಮತಿಃ ॥೭॥ ಸಮಂತಾದ್ಯೋಜನಶತಂವಿಷಯಂಚಾಸ್ಯದುರ್ಮತೇಃ । ಧಕ್ಷ್ಯತೇಪಾಂಸುವರ್ಷೇಣಮಹತಾಪಾಕಶಾಸನಃ॥೮॥ ಸರ್ವಸತ್ವಾನಿಯಾನೀಹಸ್ಥಾವರಾಣಿಚರಾ

---

ಅಮಿತಪ್ರಭಃ-ಅಪಾರವಾದ ಪ್ರಭಾವವುಳ್ಳ, ದೇವರ್ಷಿಃ-ದೇವಋಷಿಯಾದ, ಸಃ-ಆ ಶುಕ್ರಾಚಾರ್ಯನು, ಮುಹೂರ್ತಾತ್-ಮುಹೂರ್ತಕಾಲದ ದೆಸೆಯಿಂದ, ಉಪಾವೃತ್ಯ-ಶೀಘ್ರ, ಶಿಷ್ಯವೃತಃ-ಶಿಷ್ಯರಿಂದ ಪರಿವೃತನಾಗಿ, ಕ್ಷುಧಾರ್ತಸ್ಸನ್-ಕ್ಷುತ್ತಿನಿಂದ ಬಾಧಿತನಾದವನಾಗಿ, ಸ್ವಂ-ಸ್ವಕೀಯವಾದ, ಆಶ್ರಮಂ-ಆಶ್ರಮವನ್ನು ಕುರಿತು, ನ್ಯವರ್ತತ-ಹಿಂದಕ್ಕೆ ತಿರುಗಿದನು ॥೧॥ ಸಃ-ಆ ಶುಕ್ರಾಚಾರ್ಯನು, ರಜಸಾ-ಧೂಳಿಯಿಂದ, ಸಮಭಿಪ್ಲುತಾಂ- ವ್ಯಾಪ್ತಳಾದ, ದೀನಾಂ-ಪರಿತಪಿಸುತ್ತಿರುವ, ಪ್ರತ್ಯೂಷೇ-ಪ್ರಾತಃಕಾಲದಲ್ಲಿ, ಅರುಣಗ್ರಸ್ತಾಂ-ಸೂರ್ಯನಿಂದ ಹಿಡುಕೊಳ್ಳಲ್ಪಟ್ಟ, ಜ್ಯೋತ್ಸ್ನಾಮಿವ-ಬೆಳತಿಂಗಳಂತೇ, 'ಅವಿರಾಜತೀಂ-ಮಲಿನವಾಗಿರುವ, ಅರಜಾಂ-ಅರಜಾದೇವಿಯನ್ನು, ಅಪಶ್ಯತ್-ಕಂಡನು ॥ ೨ ॥ ವಿಶೇಷತಃ-ವಿಶೇಷವಾಗಿ, ಕ್ಷುಧಾ-ಹಸುವಿನಿಂದ, ಆರ್ತಸ್ಯ-ಬಾಧಿತನಾದ, ತಸ್ಯ-ಆ ಶುಕ್ರಾಚಾರ್ಯರಿಗೆ, ರೋಷಃ-ರೋಷವು, ಸಮಭವತ್-ಆಯಿತು, ತ್ರೀನ್‌ಲೋಕಾನ್- ಮೂರು ಲೋಕಗಳನ್ನು, ನಿರ್ದಹನ್ನಿವ-ಸುಡುವವನಂತಿರುವವನಾಗಿ, ಶಿಷ್ಯಾಂಶ್ಚ-ಶಿಷ್ಯರಂ ಕುರಿತು, ಇದಂ-ಈ ವಕ್ಷ್ಯಮಾಣ ವಚನವನ್ನು, ಉವಾಚಹ-ಹೇಳಿದನು, ॥೩॥ ವಿಪರೀತಸ್ಯ-ವ್ಯತ್ಯಸ್ತವಾದ ಬುದ್ಧಿಯುಳ್ಳ, ಅವಿಜಿತಾತ್ಮನಃ-ಜಿತೇಂದ್ರಿಯನಲ್ಲದಿರುವ, ದಂಡಸ್ಯ-ದಂಡನಿಗೆ, ಕ್ರುದ್ಧಾಂ-ಕೋಪಿಷ್ಠನಾದ, ಅಗ್ನಿಶಿಖಾಮಿವ- ಅಗ್ನಿಜ್ವಾಲೆಯಂತೇ, ಘೋರಸಂಕಾಶಾಂ-ಭಯಂಕರವಾದ, ವಿಪತ್ತಿಂ-ವಿಪತ್ತನ್ನು, ಪಶ್ಯಧ್ವಂ-ನೋಡಿರಿ ॥೪॥ ಯಃ-ಯಾವ ದಂಡನು, ಪ್ರದೀಪ್ತಾಂ- ಹೊಳೆಯುತಿರುವ, ಹುತಾಶಸ್ಯ-ಅಗ್ನಿಯ, ಶಿಖಾಂ-ಜ್ವಾಲೆಯನ್ನು, ಸ್ಪ್ರಷ್ಟುಂ-ಸ್ಪರ್ಶಿಸುವದಕ್ಕೋಸ್ಕರ, ಇಚ್ಛತಿ-ಇಚ್ಛೆಸುತ್ತಾನೆಯೊ, ಅಸ್ಯ-ಈ, ದುರ್ಮತೇಃ-ದುಷ್ಟಬುದ್ಧಿಯುಳ್ಳ, ದುರಾತ್ಮನಃ-ದುಷ್ಟನಾದ, ಸಾನುಗಸ್ಯ-ಅನುಚರಂ ದೊಡಗೂಡಿದ, ಅಸ್ಯ-ಈ ದಂಡನಿಗೆ, ಕ್ಷಯಃ-ನಾಶಕಾಲವು, ಪ್ರಾಪ್ತಃ- ಪ್ರಾಪ್ತನಾಯಿತು ॥೫॥ ಯಸ್ಮಾತ್-ಯಾವಕಾರಣದ ದೆಸೆಯಿಂದ, ದುರ್ಮೇಧಾಃ-ದುಷ್ಟಬುದ್ಧಿಯುಳ್ಳ, ಸಃ-ಆ ದಂಡನು, ಈದೃಶಂ- ಇಂಥಾದಾದ್ದದ, ಘೋರದರ್ಶನಂ-ಕ್ರೂರವಾದ ನೋಡುವಿಕೆಯುಳ್ಳ, ಪಾಪಂ-ಪಾಪವನ್ನು, ಕೃತವಾನ್-ಮಾಡಿದನೋ, ತಸ್ಮಾತ್- ಆ ಕಾರಣದ ದೆಸೆಯಿಂದ, ಪಾಪಸ್ಯಕರ್ಮಣಃ-ಪಾಪಕಾರ್ಯಕ್ಕೆ, ಫಲಂ-ಫಲವನ್ನು, ಪ್ರಾಪ್ಸ್ಯತಿ-ಹೊಂದುತ್ತಾನೇ ॥೬॥ ದುರ್ಮತಿಃ- ದುರ್ಬುದ್ಧಿಯುಳ್ಳ, ಅಸೌರಾಜಾ-ಈ ಅರಸು, ಸಭೃತ್ಯಬಲವಾಹನಃ-ಸೇವಕರೂ ಸೈನ್ಯವೂ ವಾಹನಗಳಂ ದೊಡಗೂಡಿದವನಾಗಿ, ಪಾಪಕರ್ಮಸಮಾಚಾರಃ- ಪಾಪಕರ್ಮ-ದುರ್ವ್ಯಾಪಾರವನ್ನು, ಸಮಾಚಾರಃ- ನಡಿಸಿದ-ಭಾವನಾದ ಕಾರಣ, ಸಪ್ತರಾತ್ರೇಣ- ಏಳುರಾತ್ರಿಗಳಲ್ಲಿ, ವಧಂ- ಸಂಹಾರವನ್ನು, ಪ್ರಾಪ್ಸ್ಯತಿ- ಹೊಂದುವನು ॥೭॥ ಅಸ್ಯದುರ್ಮತೇಃ-ಈ ದುರ್ಬುದ್ಧಿಯುಳ್ಳ ದಂಡನ, ವಿಷಯಂ-ದೇಶವನ್ನು, ಸಮಂತಾತ್-ಎಲ್ಲಾ ಕಡೆಯಲ್ಲಿ, ಯೋಜನಶತಂ-ನೂರು ಗಾವುದವನ್ನು, ಪಾಕಶಾಸನಃ-ದೇವೇಂದ್ರನು, ಮಹತಾ-ಬಹಳವಾದ, ಪಾಂಸುವರ್ಷೇಣ-ಧೂಳಿವೃಷ್ಟಿಯಿಂದ, ಧಕ್ಷ್ಯತೇ- ದಹಿಸುವನು ॥ ೮ ॥ ಇಹ - ಈ ರಾಜ್ಯದಲ್ಲಿ, ಸ್ಥಾವರಾಣಿ-

---

ಮಹಾಪ್ರಭಾವವುಳ್ಳ ಮತ್ತೂ ದೇವರ್ಷಿಯಾದ ಆ ಶುಕ್ರಾಚಾರ್ಯನು ಸ್ವಲ್ಪಕಾಲವು ಆರೋದನಧ್ವನಿಯಂ ಕೇಳಿ ಶಿಷ್ಯರಿಂದೊಡಗೂಡಿ, ಹಸಿವಿನಿಂದ ಪೀಡಿತನಾಗಿ ಆಶ್ರಮವಂ ಕುರಿತು ಹಿಂತಿರುಗಿ ಬಂದವನಾಗಿ ದೀನಳಾಗಿಯೂ ಧೂಳಿಯಿಂದ ವ್ಯಾಪ್ತವಾದ ದೇಹವುಳ್ಳವಳಾಗಿಯೂ, ಪ್ರಾತಃಕಾಲದೊಳು ಸೂರ್ಯನಿಂದ ಹಿಡಿದುಕೊಳ್ಳಲ್ಪಟ್ಟ ಬೆಳದಿಂಗಳಂತೆ ಕಾಂತಿಹೀನವಾಗಿಯೂ ಇರುವ ಆ ಮಗಳಂ ಕಂಡು ಕ್ಷುಧಾರ್ತನಾದ ಆತನಿಗೆ ಬಹುರೋಷವುಂಟಾಗಿ, ಲೋಕತ್ರಯವಂ ಸುಡುವನಂತೆ ಶಿಷ್ಯರಂ ಕುರಿತು ಎಲೈ ಶಿಷ್ಯರೆ! ವಿಪರೀತಬುದ್ಧಿಯುಳ್ಳ ಮತ್ತೂ ಜಿತೇಂದ್ರಿಯನಾಗದಿರುವ ಈ ದಂಡನ ವಿಪತ್ತನ್ನು ನೋಡಿರಿ. ಅಗ್ನಿಶಿಖೆಯಂತೆ ಮಹಾಭಯಂಕರವಾಗಿರುವದು. ದುರ್ಮಾರ್ಗನಾದ ಯಾವ ದಂಡನೆಂಬವನು, ಪ್ರಜ್ವಲಿಸುತ್ತಿರುವ, ಅಗ್ನಿಜ್ವಾಲೆಯಂ ಸ್ಪರ್ಶಿಸಲಿಚ್ಛಿಸುತ್ತಾನೆಯೊ ಅಂಥಾ ದುರಾತ್ಮನಾದ ಇವನಿಗೆ ವಿನಾಶ ಕಾಲವು ಒದಗಿತು. ಈ ದುಷ್ಟನು ಯಾವ ಕಾರಣದಿಂದ ಘೋರವಾದ ಇಂಥಾ ಪಾತಕವಂ ಗೈದನೋ ಆ ಹೇತುವಿನಿಂದ ಅದರ ಫಲವನನ್ನನುಭವಿಸುವನು. ॥೬॥ ಅದೇನೆಂದರೆ,—ಪಾಪ ಕಾರ್ಯಗಳಂಗೈಯ್ಯುತ್ತಿರುವ ಈ ದುರ್ಬುದ್ಧಿಯುಳ್ಳ ರಾಜನು ಭೃತ್ಯರಿಂದಲೂ, ಸೇನೆಯಿಂದಲೂ, ವಾಹನಗಳಿಂದಲೂ, ಒಡಗೂಡಿದವನಾಗಿ ಏಳುರಾತ್ರಿಗಳೊಳಗಾಗಿ, ವಧೆಯಂ ಪಡೆಯುವನು. ಮತ್ತು ಕೆಟ್ಟಮತಿಯುಳ್ಳ ಇವನ ದೇಶದ ಸುತ್ತಮುತ್ತಲೂ ನೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣಿಚ । ಮಹತಾಪಾಂಸುವರ್ಷೇಣನಾಶಂಯಾಸ್ಯಂತಿಸರ್ವಶಃ॥೯॥ ದಂಡಸ್ಯವಿಷಯೋಯಾವತ್ತಾವತ್ಸರ್ವಸಮುಚ್ಛ್ರಯಂ। ಪಾಂಸುಭೂತಮಿವಾಲಕ್ಷ್ಯಂಸಪ್ತರಾತ್ರಾದ್ಭವಿಷ್ಯತಿ॥೧೦॥ ಇತ್ಯುಕ್ತ್ವಾ ಕ್ರೋಧಸಂತಪ್ತಸ್ತದಾಶ್ರಮನಿವಾಸಿನಂ।ಜನಂ ಜನಪದಾಂತೇಷುಸ್ಥೀಯತಾಮಿತಿಚಾಬ್ರವೀತ್॥೧೧॥ ಶ್ರುತ್ವಾತೂಶನಸೋವಾಕ್ಯಮಾಶ್ರಮಾವಸಥೋಜನಃ।ನಿಷ್ಕ್ರಾಂತೋ ವಿಷಯಾತ್ತಸ್ಯಸ್ಥಾನಂಚಕ್ರೇಚಬಾಹ್ಯತಃ ॥೧೨॥ ಸತಥೋಕ್ತ್ವಾಮುನಿಜನಮರಜಾಮಿದಮಬ್ರವೀತ್।ಇಹೈವವಸದು ರ್ಬುದ್ಧೆಆಶ್ರಮೆಸುಸಮಾಹಿತಾ । ಇದಂಯೋಜನಪರ್ಯಂತಂಸರಸ್ಸುರುಚಿರಪ್ರಭಂ। ಅರಜೆವಿಜ್ವರಾಭುಂಕ್ಷ್ವಕಾಲಶ್ಚಾತ್ರ ಪ್ರತೀಕ್ಷ್ಯತಾಂ ॥೧೪॥ ತ್ವತ್ಸಮೀಪಂಚಯೆಸತ್ವಾ ವಾಸಮೆಷ್ಯಂತಿತಾಂನಿಶಾಂ! ಅವಧ್ಯಾಪಾಂಸುವರ್ಷೇಣತೆಭವಿಷ್ಯಂತಿ ನಿತ್ಯದಾ॥೧೫॥ ಇತ್ಯುಕ್ತ್ವಾಭಾರ್ಗವೋವಾಸಮನ್ಯತ್ರಸಮುಪಾಕ್ರಮತ್ ॥೧೬॥ ತಚ್ಚರಾಜ್ಯಂನರೇಂದ್ರಸ್ಯಸಭೃತ್ಯಬಲ ಲವಾಹನಂ । ಸಪ್ತಾಹಾದ್ಭಸ್ಮಸಾದ್ಭೂತಂಯಥೋಕ್ತಂಬ್ರಹ್ಮವಾದಿನಾ॥೧೭॥ ತಸ್ಯದಂಡಸ್ಯವಿಷಯೋವಿಂಧ್ಯಶೈವಲಸಾ

---

ವೃಕ್ಷಾದಿ ಸ್ಥಾವರಗಳೂನು, ಚರಾಣಿಚ-ಜಂಗಮಗಳೂನು, ಯಾನಿ-ಯಾವುಗಳೋ, ತಾನಿ-ಆ ಸರ್ವಸತ್ವಾನಿ- ಸಮಸ್ತಜಂತುಗಳು, ಮಹತಾ - ದೊಡ್ಡದಾದ, ಪಾಂಸುವರ್ಷೇಣ- ಮರಳುವರ್ಷದಿಂದ, ಸರ್ವಶಃ-ಸರ್ವಪ್ರಕಾರದಲ್ಲಿ, ನಾಶಂ-ನಾಶವನ್ನು, ಯಾಸ್ಯಂತಿ- ಹೊಂದುತ್ತವೆ ॥ ೯ ॥ ದಂಡಸ್ಯ-ದಂಡನ, ವಿಷಯಃ-ದೇಶವು, ಯಾವತ್-ಯಷ್ಟುಪರ್ಯಂತವೂ ಯಿದ್ದಿಯೊ, ತಾವತ್-ಅಷ್ಟುಪರ್ಯಂತಕ್ಕೂನು, ಸರ್ವಸಮುಚ್ಛ್ರಯಂ- ಸ್ಥಾವರ ಜಂಗಮಾತ್ಮಕ ಸಮಸ್ತಪ್ರಾಣಿಜಾತವೂ, ಪಾಂಸುಭೂತಮಿವ-ಧೂಳಯಂತೆ ಆಗಿರುವಂಥಾದ್ದಾಗಿ, ಸಪ್ತರಾತ್ರಾತ್- ಏಳುರಾತ್ರಿಗಳಲ್ಲಿ, ಅಲಕ್ಷ್ಯಂ-ಕಾಣಿಸದೇಇರುವಂಥಾದ್ದಾಗಿ, ಭವಿಷ್ಯತಿ-ಆಗುವದು ॥೧೦॥ಇತಿ-ಈ ಪರಿಯಾಗಿ, ಉಕ್ತ್ವಾ-ಹೇಳಿ, ಕ್ರೋಧಸಂತಪ್ತಃ-ಕ್ರೋಧದಿಂದ ಪರಿತಪಿಸುತಿರುವನಾಗಿ, ತದಾಶ್ರಮನಿವಾಸಿನಂ-ಆ ಆಶ್ರಮದಲ್ಲಿರುತಿರುವ, ಜನಂ-ಜನವನ್ನು ಕುರಿತು, ಜನಪದಾಂತೇಷು-ತುದಿಯಲ್ಲಿ, ಸ್ಥೀಯತಾಂ-ಯಿರಲ್ಪಡಲೆಂದು, ಅಬ್ರವೀತ್-ನುಡಿದನು ॥೧೧॥ ಉಶನಸಃ-ಶುಕ್ರಾಚಾರ್ಯನ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ಆಶ್ರಮಾವಸಥಃ-ಆಶ್ರಮವೇ ವಸತಿಯಾಗುಳ್ಳ, ಜನಃ-ಜನವು, ತಸ್ಯ-ಆ ದಂಡನ, ವಿಷಯಾತ್-ದೇಶದದೆಶೆಯಿಂದ, ಬಾಹ್ಯತಃ-ಹೊರಗೆ, ಸ್ಥಾನಂ-ವಸತಿಯನ್ನು, ಚಕ್ರೇ-ಮಾಡಿತು ॥೧೨॥ ಸಃ-ಆಶುಕ್ರಾಚಾರ್ಯನು, ಮುನಿಜನಂ-ಋಷಿಜನವನ್ನು ಕುರಿತು, ಉಕ್ತ್ವಾ-ಹೇಳಿ, ಅರಜಾಂ-ಅರಜಾದೇವಿಯಂಕುರಿತು, ಇದಂ-ಈ ಮಾತನ್ನು, ಅಬ್ರವೀತ್-ನುಡಿದನು, ಹೆ ದುರ್ಬುದ್ಧೇ-ಎಲೇ ದುರ್ಬುದ್ಧಿಯುಳ್ಳವಳೇ, ಇಹೈವ-ಇಲ್ಲಿಯೆ, ಆಶ್ರಮೇ-ಆಶ್ರಮದಲ್ಲಿ, ಸುಸಮಾಹಿತಾ-ಸಮಾಧಾನ ಚಿತ್ತಳಾಗಿ, ವಸ-ಇರು ॥೧೩॥ ಹೆ ಅರಜೇ-ಎಲೈ ಅರಜಾದೇವಿಯೇ, ಯೋಜನಪರ್ಯಂತಂ-ಯೋಜನವಾಗಿರುವ, ಸುರುಚಿರಪ್ರಭಂ-ಮಹಾಮನೋಹರವಾದ ಕಾಂತಿಯುಳ್ಳ, ಇದಂಸರಃ- ಈ ಸರೋವರವನ್ನು, ವಿಜ್ವರಾಸತೀ-ಸಂತಾಪ ರಹಿತಳಾಗಿ, ಭುಂಕ್ಷ್ವ-ಅನುಭವಿಸುತ್ತಿರು, ಅತ್ರ-ಈ ಸ್ಥಳದಲ್ಲಿ, ಕಾಲಶ್ಚ-ಕಾಲವೂನು, ಪ್ರತೀಕ್ಷ್ಯತಾಂ-ನಿರೀಕ್ಷಣೆಮಾಡಲ್ಪಡಲಿ, ಯೆಸತ್ವಾಃ-ಯಾವ ಜಂತುಗಳು, ತ್ವತ್ಸಮೀಪಂ-ನಿನ್ನ ಸಮೀಪವನ್ನು ಕುರಿತು, ತಾಂನಿಶಾಂ-ಆ ರಾತ್ರಿಯಲ್ಲಿ, ವಾಸಂ-ವಾಸವನ್ನು, ಎಷ್ಯಂತಿ-ಹೊಂದುವವೋ, ತೆ-ಆ ಜಂತುಗಳು, ಪಾಂಸುವರ್ಷೇಣ-ಧೂಳಿಗಳವೃಷ್ಟಿಯಿಂದ, ನಿತ್ಯಃ-ನಿರಂತರವೂನು, ಅವಧ್ಯಾಃ-ವಧೆಗೆ ಯೊಗ್ಯವಾಗದೆ ಯಿರುವವು, ಭವಿಷ್ಯಂತಿ-ಆಗುವವು, ॥ ೧೫ ॥ ಇತಿ-ಈ ಪರಿಯಾಗಿ, ಉಕ್ತ್ವಾ-ಹೇಳಿ, ಭಾರ್ಗವಃ-ಶುಕ್ರಾಚಾರ್ಯನು, ಅನ್ಯತ್ರ-ಮತ್ತೊಂದು ಸ್ಥಳದಲ್ಲಿ, ವಾಸಂ-ವಾಸವನ್ನು, ಸಮುಪಾಕ್ರಮತ್-ಮಾಡಿದನು ॥೧೬॥ ನರೇಂದ್ರಸ್ಯ-ದಂಡರಾಜನ, ತದ್ರಾಜ್ಯಂಚ-ಆ ರಾಜ್ಯವು, ಬ್ರಹ್ಮವಾದಿನಾ-ಬ್ರಹ್ಮಜ್ಞಾನಿಯಾದ ಶುಕ್ರಾಚಾರ್ಯನಿಂದ, ಯಥೋಕ್ತಂ-ಹ್ಯಾಗೆ ಹೇಳಲ್ಪಟ್ಟಿತೋ, ತಥಾ-ಹಾಗೆಯೇ, ಸಭೃತ್ಯಬಲವಾಹನಂ-ಸೇವಕರೂ ಸೈನ್ಯವೂ ವಾಹನಗಳಿಂದೊಡಗೂಡಿ, ಸಪ್ತಾಹಾತ್-ಏಳು ದಿವಸಗಳಲ್ಲಿ, ಭಸ್ಮಸಾದ್ಭೂತಂ-ಭಸ್ಮೀಭೂತವಾಯಿತು ॥೧೭॥ ತಸ್ಯದಂಡಸ್ಯ-ಆ ದಂಡರಾಜನ, ವಿಷಯಃ-ರಾ

---

ರುಗಳಾವುದಗಳವರಿವಿಗೂ ಇಂದ್ರನು ರಜೋವರ್ಷದಿಂದ ಸುಡುವಂಥಾವನಾಗುವನು, ಇಲ್ಲಿರುವ ಸ್ಥಾವರ ಜಂಗಮಾತ್ಮಕವಾದ ಎಲ್ಲಾ ಜಂತುಗಳು ಆ ಕೆಂಧೂಳಿಯವರ್ಷದಿಂದ ನಾಶವಂಹೊಂದುವವು, ಈ ರೀತಿಯಾಗಿ ಏಳುದಿನಗಳೊಳಗಾಗಿ ಇವನ ದೇಶವೆಲ್ಲ ಧೂಳಿಯಿಂದ ವ್ಯಾಪ್ತವಾಗಿ ಕಾಣದೇ ಹೋಗುವದೆಂದು ಶಪಿಸಿ, ಕಡುಕೋಪವುಳ್ಳವನಾಗಿ ತನ್ನಾಶ್ರಮವಾಸಿಗಳನ್ನು ಈ ದೇಶದ ತುದಿಭಾಗದಲ್ಲಿರೆಂದು ಹೇಳುವಂಥಾವನಾದನು. ॥೧೧॥ ಬಳಿಕ ಅವರುಗಳೆಲ್ಲರು ಶುಕ್ರಾಚಾರ್ಯನ ಆ ಮಾತಂಕೇಳಿ ಈ ದೇಶವಂ ತೊರೆದು ಹೊರಗಡೆ ನಿಂತವರಾದರು ॥೧೨॥ ಮಹಾತೇಜೋವಂತನಾದ ಆ ಭೃಗುವು ಈಪರಿ ಅವರುಗಳಿಗೆ ನಿರೂಪಿಸಿ ತನ್ನ ಮಗಳಂ ಕುರಿತು ಎಲೈದುರ್ಬುದ್ಧಿಯುಳ್ಳವಳೆ ! ನೀನಿಲ್ಲಿಯೆ ಇದ್ದುಗೊಂಡು ಯೋಜನ ವಿಸ್ತಾರವುಳ್ಳ ಈ ಸರೋವರದ ಉದಕಪಾನವಂ ಗೈಯುತ್ತಾ ಕಾಲವಂ ಕಳೆಯುತ್ತಿರು. ಆ ನಾಶಕಾಲದಲ್ಲಿ ನಿನ್ನಸಮೀಪದೊಳು ಯಾವ ಪ್ರಾಣಿಗಳೂ ವಾಸಿಸುತ್ತಿರುವವೊ ಅವುಗಳು ಆ ಧೂಳಿಯಿಂದ ಸಾಯುವದಿಲ್ಲ ಎಂಬದಾಗಿದಾನು ಹೇಳಿ ಈ ಸ್ಥಳವಂ ಬಿಟ್ಟುಮತ್ತೊಂದು ಪ್ರದೇಶಕ್ಕೆ ತೆರಳಿದನು.॥೧೬॥ ಆ ದಂಡನೆಂಬವನರಾಜ್ಯವಾದ ಈಸ್ಥಳವು ಬ್ರಹ್ಮಜ್ಞಾನಿಯಾದ ಆ ಶುಕ್ರಾಚಾರ್ಯನಿಂದಶಪಿಸಲ್ಪಟ್ಟಂತೆ ಏಳುರಾತ್ರಿಗಳಲ್ಲಿ ಭಸ್ಮೀಭೂತವಾಯಿತು॥೧೭॥ ಎಲೈ ಶ್ರೀರಾಮನೇ! ಪೂರ್ವಕಾಲದೊಳು ಕೃತಯುಗದಲ್ಲಿ ಧರ್ಮಪ್ರಧಾನವಾಗಿ ಉಳ್ಳ ಈ ದಂಡನೆಂಬ, ರಾಜನದೇಶವು ವಿಂಧ್ಯಶೈವಲ ಪರ್ವತಗಳ ಇರತೆಗಳಲ್ಲಿ ಬ್ರಹ್ಮರ್ಷಿಯಾದ ಆತನಿಂದ ಈಪರಿಶಪಿಸಲ್ಪಟ್ಟಿತು, ತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನುಷು । ಶಪ್ತೋ ಬ್ರಹ್ಮರ್ಷಿಣಾ ತೇನ ಪುರಾ ವೈ ಧರ್ಮಕೇ ಕೃತೇ ॥೧೮॥ ತತಃಪ್ರಭೃತಿ ಕಾಕುತ್ಸ್ಥ ದಂಡಕಾರಣ್ಯಮುಚ್ಯತೇ। ತಪಸ್ವಿನಃ ಸ್ಥಿತಾ ಯತ್ರ ಜನಸ್ಥಾನಮಥೋಽಭವತ್ ॥೧೯॥ ಏತತ್ತೇ ಸರ್ವಮಾಖ್ಯಾತಂ ಯತ್ತ್ವಂ ಪೃಚ್ಛಸಿ ರಾಘವ। ಸಂಧ್ಯಾಮುಪಾಸಿತುಂ ವೀರ ಸಮಯೋ ಹ್ಯತಿವರ್ತತೇ ॥೨೦॥ ಏತೇ ಮಹರ್ಷಯಸ್ಸರ್ವೇ ಪೂರ್ಣಕುಂಭಾಸ್ಸಮಂತತಃ । ಕೃತೋದಕಾ ನರವ್ಯಾಘ್ರ ಆದಿತ್ಯಂ ಪರ್ಯುಪಾಸತೇ ॥೨೧॥ ಸ ತೈರೃಷಿಭಿರಭ್ಯಸ್ತಸ್ಸಹಿತೈರ್ಬ್ರಹ್ಮವಿತ್ತಮೈಃ । ರವಿರಸ್ತಂ ಗತೋ ರಾಮ ಗಚ್ಛೋದಕಮುಪಸ್ಪೃಶ ॥೨೨॥

—…ಇತಿ ಶ್ರೀಮದುತ್ತರರಾಮಾಯಣೇ ಏಕಾಶೀತಿತಮಸ್ಸರ್ಗಃ…—

ಋಷೇರ್ವಚನಮಾಜ್ಞಾಯ ರಾಮಸ್ಸಂಧ್ಯಾಮುಪಾಸಿತುಂ । ಉಪಕ್ರಾಮತ್ಸರಃಪುಣ್ಯಮಪ್ಸರೋಭಿರ್ನಿಷೇವಿತಂ ॥೧॥ ಅಥೋದಕಮುಪಸ್ಪೃಶ್ಯ ಸಂಧ್ಯಾಮನ್ವಾಸ್ಯ ಪಶ್ಚಿಮಾಂ । ಆಶ್ರಮಂ ಪ್ರಾವಿಶದ್ರಾಮಃ ಕುಂಭಯೋನೇರ್ಮಹಾತ್ಮನಃ । ತಸ್ಯಾಗಸ್ತ್ಯೋ ಬಹುಗುಣಂ ಫಲಮೂಲಂ ತಥೌಷಧಿಂ । ಶಾಕಾನಿ ಚ ಪವಿತ್ರಾಣಿ ಭೋಜನಾರ್ಥಮಕಲ್ಪಯತ್ ॥೩॥ ಸ ಭುಕ್ತ

---

ಜ್ಯವು, ಪುರಾ–ಪೂರ್ವದಲ್ಲಿ, ಧರ್ಮಕೇ–ಧರ್ಮಪ್ರಧಾನವಾದ, ಕೃತೇ–ಕೃತಯುಗದಲ್ಲಿ, ವಿಂಧ್ಯಶೈವಲಸಾನುಷು–ವಿಂಧ್ಯಶೈವಲಪರ್ವತಗಳ ಜರಿಗಳಲ್ಲಿ, ತೇನ–ಬ್ರಹ್ಮರ್ಷಿಣಾ–ಬ್ರಹ್ಮರ್ಷಿಯಾದ ಆ ಶುಕ್ರಾಚಾರ್ಯನಿಂದ, ಶಪ್ತಃ–ಶಪಿಸಲ್ಪಟ್ಟಿತು ॥೧೮॥ ಹೇ ಕಾಕುತ್ಸ್ಥ–ಎಲೈ ಶ್ರೀರಾಮನೇ, ತತಃಪ್ರಭೃತಿ–ಅದು ಮೊದಲುಗೊಂಡು, ಯತ್ರ–ಯಾವವನದಲ್ಲಿ, ತಪಸ್ವಿನಃ–ಋಷಿಗಳು, ಸ್ಥಿತಾಃ–ಇರುವರೋ, ಅಥೋ–ಅನಂತರದಲ್ಲಿ, ಜನಸ್ಥಾನಂ– ರಾವಣಾಸುರನ ಪಟ್ಟಣಕ್ಕೆ ಉಕ್ಕಡವು, ಅಭವತ್–ಆಯಿತೋ, ತತ್–ಆವನವು, ದಂಡಕಾರಣ್ಯಂ–ದಂಡಕಾರಣ್ಯವೆಂಬದಾಗಿ, ಉಚ್ಯತೇ–ಹೇಳಲ್ಪಡುತ್ತೇ ॥೧೯॥ ಹೇ ರಾಘವ–ಎಲೈ ಶ್ರೀರಾಮನೆ, ತ್ವಂ–ನೀನು, ಯತ್–ಯಾವದರನ್ನು, ಪೃಚ್ಛಸಿ–ಕೇಳಿದೋ, ಏತತ್ಸರ್ವಂ–ಈ ಸಮಸ್ತವು, ತೇ–ನಿನಗೆ, ಆಖ್ಯಾತಂ–ಹೇಳಲ್ಪಟ್ಟಿತು, ಹೇವೀರ–ಎಲೈ ಶೂರ್ಯನೇ, ಸಂಧ್ಯಾಂ–ಸಂಧ್ಯೆಯನ್ನು, ಉಪಾಸಿತುಂ–ಉಪಾಸನೆ ಮಾಡುವದಕ್ಕೋಸ್ಕರ, ಸಮಯಃ–ಸಮಯವು, ಅತಿವರ್ತತೇ– ಅತಿಕ್ರಮಿಸುತ್ತದೇ ॥೨೦॥ ಏತೇಮಹರ್ಷಯಃ–ಈ ಋಷಿಗಳು, ಸರ್ವೇ–ಸಮಸ್ತರೂನು, ಸಮಂತತಃ–ಯಲ್ಲಾ ಕಡೆಯಲ್ಲಿ, ಪೂರ್ಣಕುಂಭಾಃ– ಸಂಪೂರ್ಣವಾದ ಉದಕ ಕುಂಭಮುಳ್ಳವರಾಗಿ, ಕೃತೋದಕಾಃ–ಕೃತ–ಮಾಡಲ್ಪಟ್ಟ, ಉದಕಾಃ–ಆಚಮನಗಳುಳ್ಳವರಾಗಿ, ಹೇ ನರವ್ಯಾಘ್ರ–ಎಲೈ ಮನುಜಶ್ರೇಷ್ಠನೇ, ಆದಿತ್ಯಂ–ಸೂರ್ಯನನ್ನು ಕುರಿತು, ಪರ್ಯುಪಾಸತೇ–ಉಪಾಸನೆಮಾಡುತ್ತಾರೆ ॥೨೧॥ ಹೇ ರಾಮ–ಎಲೈ ಶ್ರೀರಾಮನೇ, ಬ್ರಹ್ಮವಿತ್ತಮೈಃ–ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದವರಿಂದ, ಸಹಿತೈಃ–ಕೂಡಿಕೊಂಡಿರುವ, ತೈಃ–ಋಷಿಭಿಃ–ಆ ಋಷಿಗಳಿಂದ, ಅಭ್ಯಸ್ತಃ–ಧ್ಯಾನಮಾಡಲ್ಪಟ್ಟ, ಸಃರವಿಃ–ಆಸೂರ್ಯನು, ಅಸ್ತಂ– ಅಸ್ತಮಯಪರ್ವತವನ್ನು, ಗತಃ–ಹೊಂದಿದನು, ಗಚ್ಛ–ಹೋಗು, ಉದಕಂ–ಉದಕವನ್ನು, ಉಪಸ್ಪೃಶ–ಸ್ಪರ್ಶಮಾಡು ॥೨೨॥ *ಏಕಾಶೀತಿತಮಸರ್ಗಃ*

ಋಷೇಃ–ಅಗಸ್ತ್ಯಋಷಿಯ, ವಚನಂ–ಮಾತನ್ನು, ಆಜ್ಞಾಯ–ತಿಳಿದು, ರಾಮಃ–ಶ್ರೀರಾಮನು, ಸಂಧ್ಯಾಂ–ಸಂಧ್ಯೆಯನ್ನು, ಉಪಾಸಿತುಂ–ಉಪಾಸನೆ ಮಾಡುವದಕ್ಕೋಸ್ಕರ, ಅಪ್ಸರೋಭಿಃ–ಅಪ್ಸರಸ್ತ್ರೀರುಗಳಿಂದ, ನಿಷೇವಿತಂ–ಸೇವಿಸಲ್ಪಟ್ಟ, ಪುಣ್ಯಂ–ಪುಣ್ಯಕರವಾದ, ಸರಃ–ಸರೋವರವನ್ನು ಕುರಿತು, ಉಪಾಕ್ರಾಮತ್–ಬಂದನು ॥೧॥ ಅಥ–ಬಳಿಕ, ರಾಮಃ– ಶ್ರೀರಾಮನು, ಉದಕಂ–ನೀರಿನಲ್ಲಿ, ಉಪಸ್ಪೃಶ್ಯ–ಸ್ನಾನವಾದ, ಪಶ್ಚಿಮಾಂಸಂಧ್ಯಾಂ–ಸಾಯಂಸಂಧ್ಯಾ ವಂದನೆಯನ್ನು, ಅನ್ವಾಸ್ಯ–ಉಪಾಸನೆಮಾಡಿ, ಮಹಾತ್ಮನಃ–ಮಹಾತ್ಮನಾದ, ಕುಂಭಯೋನೇಃ – ಅಗಸ್ತ್ಯಋಷಿಯ, ಆಶ್ರಮಂ–ಆಶ್ರಮವನ್ನು, ಪ್ರಾವಿಶತ್–ಹೊಕ್ಕನು ॥೨॥ ಅಗಸ್ತ್ಯಃ–ಅಗಸ್ತ್ಯಋಷಿಯು, ತಸ್ಯ–ಆ ಶ್ರೀರಾಮನಿಗೆ, ಭೋಜನಾರ್ಥಂ– ಭೋಜನನಿಮಿತ್ತವಾಗಿ, ಬಹುಗುಣಂ–ಬಹು–ಅನೇಕಗಳಾದ, ಗುಣಂ–ಮಾಧುರ್ಯಾದಿಗುಣಗಳುಳ್ಳ, ಫಲಮೂಲಂ–ಫಲಗಳನ್ನೂ, ಕಂದಮೂಲಗಳನ್ನೂ, ತಥಾ– ಹಾಗೆಯೇ, ಔಷಧಿಂ–ಮೂಲಿಕೆಗಳನ್ನು, ಪವಿತ್ರಾಣಿ–ಪರಿಶುದ್ಧವಾದ, ಶಾಕಾನಿ–ಕಾಯಿ ಸೊಪ್ಪುಗಳನ್ನು, ಅಕಲ್ಪಯತ್–ಕಲ್ಪನೆಮಾಡಿದನು ॥೩॥ ಹೇ ನರಶ್ರೇಷ್ಠಃ–ಮನುಜಶ್ರೇಷ್ಠನಾದ, ಸಃ–ಆ ಶ್ರೀರಾಮನು, ಅಮೃತೋಪಮಂ–ಅಮೃತಾತುಲ್ಯವಾದ, ತದನ್ನಂ ತತ್–ಆ ಅಗಸ್ತ್ಯಋಷಿಯಿಂದ ಕೊಡಲ್ಪ

---

ಪಸ್ವಿಗಳು ಯಾವ ಜನಸ್ಥಾನವು ಎಲ್ಲಿ ಇತ್ತೊ ಅಂಥಾ ದೇಶಕ್ಕೆ ಅದು ಮೊದಲ್ಗೊಂಡು ದಂಡಕಾರಣ್ಯವೆಂದು ಪ್ರಸಿದ್ಧಿಯುಂಟಾಯಿತು ನೀನು ಪೃಚ್ಛಿಸಿದ ಕಥೆಯಂ ಹೇಳಿದೆನು, ಸಂಧ್ಯಾ ಕಾಲವು ಮೀರುವದು ಎತ್ತೆತ್ತಲೂ ಮಹರ್ಷಿಗಳು ಪೂರ್ಣಕುಂಭಗಳಂ ತೆಗದುಕೊಂಡು ಆಚಮನಂಗಳಂ ಗೈದು ಸೂರ್ಯೋಪಸ್ಥಾನಂ ಮಾಡುತ್ತಿಧಾರೆ ॥೨೧॥ ಆ ಮಹರ್ಷಿಗಳಿಂದ ಧ್ಯಾನಿಸಲ್ಪಡುತ್ತಿರುವ ಸೂರ್ಯನು ಅಸ್ತಾಚಲವನ್ನೈದಿದನು. ಉದಕಂ ಸ್ಪರ್ಶಿಸುವಂಥಾವನಾಗು॥

—…ಉತ್ತರರಾಮಾಯಣದಲ್ಲಿನ ೮೧ನೆಯ ಸರ್ಗಂ ಮುಗಿದದು…—

ಬಳಿಕ ಶ್ರೀರಾಮನು ಅಗಸ್ತ್ಯಮಹಾಮುನಿಯ ವಾಕ್ಯವಂ ಕೇಳಿ, ಸಂಧ್ಯಾವಂದನೆಯಂ ಗೈಯುವದಕ್ಕೋಸುಗ ಪುಣ್ಯಕರವಾದ ಮತ್ತು ಅಪ್ಸರಸ್ತ್ರೀಯರಿಂ ಸಂಕುಳವಾದ ಆ ಸರೋವರಕ್ಕೆ ಬಂದು ಜಲಸ್ಪರ್ಶೆಯಂಗೈದು ಸಾಯಂಸಂಧ್ಯೆಯಂ ಮಾಡಿ ಮಹಾತ್ಮನಾದ ಅಗಸ್ತ್ಯಮುನಿಯ ಆಶ್ರಮಕ್ಕೆ ಪುನಃ ಬಂದವನಾದನು ॥೨॥ ಆಗ ಆ ಮಹರ್ಷಿಯು ಆ ರಘುನಂದನಗೆ ಬಹುಗುಣಗಳುಳ್ಳ ಫಲಮೂಲಗಳನ್ನು ಪರಿಶುದ್ಧವಾದ ಕಾಯಿಪಲ್ಲೆಗಳನ್ನು ಇವುಗಳನ್ನೆಲ್ಲ ಕೊಟ್ಟವನಾಗಲೂ ಆ ಶ್ರೀರಾಮನು ಅಮೃತೋಪಮವಾದ ಅನ್ನಗಳಂ ಭುಜಿಸಿ ಸಂತುಷ್ಟನಾಗಿ ಆ ರಾತ್ರಿಯು ಅಲ್ಲಿಯೇ ಇದ್ದು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಾನರಶ್ರೇಷ್ಠಸ್ತದನ್ನಮಮೃತೋಪಮಂ । ಪ್ರೀತಶ್ಚ ಪರಿತುಷ್ಟಶ್ಚ ತಾಂರಾತ್ರಿಂಸಮುಪಾವಿಶತ್॥೪॥ ಪ್ರಭಾತೇಕಾಲ್ಯಮು ತ್ಥಾಯಕೃತ್ವಾಹ್ನಿಕಮರಿಂದಮಃ । ಋಷೀನ್‌ಸಮಭಿಚಕ್ರಾಮಗಮನಾಯರಘೂತ್ತಮಃ ॥ ೫ ॥ ಅಭಿವಾದ್ಯಾಬ್ರವೀ ದ್ರಾಮೋಮಹರ್ಷಿಂಕುಂಭಸಂಭವಂ । ಆಪೃಚ್ಛೇತ್ವಾಂಗಮಿಷ್ಯಾಮಿಮಾಮನುಜ್ಞಾತುಮರ್ಹಸಿ॥೬॥ಧನ್ಯೋಸ್ಮ್ಯನುಗೃ ಹೀತೋಸ್ಮಿದರ್ಶನೇನಮಹಾತ್ಮನಃ । ದ್ರಷ್ಟುಂಚೈವಾಗಮಿಷ್ಯಾಮಿಪಾವನಾರ್ಥಂಮಹಾತ್ಮನಃ ॥೭॥ ತಥಾಬ್ರುವತಿಕಾ ಕುತ್ಸ್ಥೇವಾಕ್ಯಮದ್ಭುತದರ್ಶನಂ । ಉವಾಚಪರಮಪ್ರೀತೋಧರ್ಮನೇತ್ರಸ್ತಪೋಧನಃ ॥೮॥ ಅತ್ಯದ್ಭುತಮಿದಂವಾಕ್ಯಂ ತವರಾಮಶುಭಾಕ್ಷರಂ । ಪಾವನಸ್ಸರ್ವಲೋಕಾನಾಂತ್ವಮೇವರಘುನಂದನ ॥೯॥ ಮುಹೂರ್ತಮಪಿರಾಮತ್ವಾಂಯೇಹಿಪ ಶ್ಯಂತಿಕೇಚನ । ಪೂತಾವ್ವೈಸ್ವರ್ಗಿಭೂತಾಸ್ತೇಪೂಜ್ಯಂತೇದಿವಿದೈವತೈಃ ॥೧೦॥ ಯೇನತ್ವಾಂಘೋರಚಕ್ಷುರ್ಭಿರೀಕ್ಷಂತೇಪ್ರಾ ಣಿನೋಭುವಿ। ಹತಾಸ್ತೇಯಮದಂಡೇನಸದ್ಯೋನಿರಯಗಾಮಿನಃ॥೧೧॥ಈದೃಶಸ್ತ್ವಂರಘುಶ್ರೇಷ್ಠಪಾವನಸ್ಸರ್ವದೇಹಿನಾಂ। ಭುವಿತ್ವಾಂಕೀರ್ತಯಂತೋವೈಸಿದ್ಧಿಮೇಷ್ಯಂತಿರಾಘವ ॥೧೨॥ ಗಚ್ಛಚಾರಿಷ್ಟಮವ್ಯಗ್ರಃಪಂಥಾನಮಕುತೋಭಯಂ । ಪ್ರ

---

ಟ್ಟ, ಅನ್ನಂ-ಅನ್ನವನ್ನು, ಭುಕ್ತವಾನ್-ಭೋಜನಮಾಡಿದವನಾಗಿ, ಪ್ರೀತಶ್ಚ-ಸಂತೋಷಗೊಂಡವನಾಗಿ, ಪರಿತುಷ್ಟಶ್ಚ-ತುಷ್ಟನಾಗಿ,ತಾಂರಾತ್ರಿಂ- ಆ ರಾತ್ರಿಯಲ್ಲಿ, ಸಮುಪಾವಿಶತ್-ಪ್ರವೇಶಿಸಿದನು॥೪॥ ಪ್ರಭಾತೇ-ಪ್ರಾತಃಕಾಲದಲ್ಲಿ, ಉತ್ಥಾಯ-ಎದ್ದು, ಕಾಲ್ಯಂ-ಪ್ರಾತಃಕಾಲೀನದಲ್ಲಿ ಮಾಡತಕ್ಕ, ಆ ಹ್ನಿಕಂ-ಸಂಧ್ಯಾವಂದನಾದಿ ನಿತ್ಯಕರ್ಮವನ್ನು, ಕೃತ್ವಾ-ಮಾಡಿ, ಅರಿಂದಮಃ-ಶತ್ರುಸಂಹಾರಕನಾದ ರಘೂತ್ತಮಃ-ಶ್ರೀರಾಮನು, ಗಮನಾಯ-ಪ್ರಯಾ ಣಕ್ಕೋಸ್ಕರ, ಋಷೀನ್-ಋಷಿಗಳಂಕುರಿತು, ಸಮಭಿಚಕ್ರಾಮ-ಬಂದನು ॥೫॥ ರಾಮಃ-ಶ್ರೀರಾಮನು, ಮಹರ್ಷಿಂ-ಮಹರ್ಷಿಯಾದ, ಕುಂಭಸಂಭವಂ- ಅಗಸ್ತ್ಯನನ್ನು, ಅಭಿವಾದ್ಯ-ನಮಸ್ಕರಿಸಿ, ಅಬ್ರವೀತ್-ನುಡಿದನು, ತ್ವಾಂ-ನಿನ್ನನ್ನು ಕುರಿತು,ಆಪೃಚ್ಛೇ-ಕೇಳುತ್ತೇನೆ, ಗಮಿಷ್ಯಾಮಿ-ಹೋಗುವೆನು, ಮಾಂ-ನನ್ನನ್ನು ಕುರಿತು, ಅನುಜ್ಞಾತುಂ-ಅನುಜ್ಞೆ ಕೊಡುವದಕ್ಕೋಸ್ಕರ, ಅರ್ಹಸಿ-ಯೋಗ್ಯನಾಗು ॥೬॥ ಮಹಾತ್ಮನಃ-ಮಹಾತ್ಮನಾದ ನಿನ್ನ, ದ ರ್ಶನೇನ-ದರುಶನದಿಂದ, ಧನ್ಯಃ-ಕೃತಾರ್ಥನು, ಅಸ್ಮಿ-ಆದೆನು, ಅನುಗೃಹೀತಃ-ಅನುಗ್ರಹಿಸಲ್ಪಟ್ಟವನು, ಅಸ್ಮಿ-ಆದೆನು, ಆತ್ಮನಃ-ನನ್ನ ಶರೀರದ, ಪಾ ವನಾರ್ಥಂ-ಪರಿಶುದ್ಧನಿಮಿತ್ತವಾಗಿ,ದ್ರಷ್ಟುಂ-ನೋಡುವದಕ್ಕೋಸ್ಕರ, ಆಗಮಿಷ್ಯಾಮಿಚೈವ-ಬರಲೇಬರುತ್ತಾಯಿರುತ್ತೇನೆ ॥೭॥ ಕಾಕುತ್ಸ್ಥೇ-ಶ್ರೀರಾ ಮನು, ತಥಾ-ಹಾಗೆಯೇ, ಅದ್ಭುತದರ್ಶನಂ- ಆಶ್ಚರ್ಯವಾಗಿ ನೋಡುವಿಕೆಯುಳ್ಳ, ವಾಕ್ಯಂ-ಮಾತನ್ನು, ವದತಿಸತಿ-ಹೇಳುತಿರಲಾಗಿ, ಪರಮಪ್ರೀತಃ- ಬಹಳ ಸಂತೋಷಗೊಂಡವನಾದ, ಧರ್ಮನೇತ್ರಃ-ಧರ್ಮದಲ್ಲಿ ದೃಷ್ಟಿಯುಳ್ಳ, ತಪೋಧನಃ-ಅಗಸ್ತ್ಯಋಷಿಯು, ಉವಾಚ-ಹೇಳಿದನು ॥೮॥ ಹೆ ರಘುನಂದ ನ-ಎಲೈ ಶ್ರೀರಾಮನೇ, ಹೆರಾಮ-ಎಲೈ ಆನಂದಕರನೇ, ಶುಭಾಕ್ಷರಂ-ಶುಭ-ಶುಭಕರವಾದ, ಅಕ್ಷರಂ-ಅಕ್ಷರಗಳುಳ್ಳ, ತವ-ನಿನ್ನ, ಇದಂವಾಕ್ಯಂ-ಈ ಮಾತು, ಅತ್ಯದ್ಭುತಂ-ಬಹಳ ಆಶ್ಚರ್ಯಕರವಾಗಿಧೇ, ತ್ವಮೇವ-ನೀನೇ, ಸರ್ವಲೋಕಾನಾಂ-ಸಮಸ್ತ ಲೋಕಗಳಗೂ, ಪಾವನಃ-ಪರಿಶುದ್ಧಿಕರನು ॥೯॥ ಹೆ ರಾಮ-ಎಲೈ ಶ್ರೀರಾಮನೇ, ಯೇಚ-ಯಾರೇಆಗಲೀ, ತ್ವಾಂ-ನಿನ್ನನ್ನು, ಮುಹೂರ್ತಮಪಿ-ಮುಹೂರ್ತಕಾಲವಾದರೂ, ಪಶ್ಯಂತಿ-ನೋಡುವರೋ ತೆಪ್ಯೆ-ಆ ಪುರುಷರಾದರೆ, ಪೂತಾಃ-ಪರಿಶುದ್ಧರಾಗಿ, ಸ್ವರ್ಗಿಭೂತಾಃ-ಸ್ವರ್ಗವಾಸಿಗಳಾಗಿ, ದೈವತೈರಪಿ-ದೇವತೆಗಳಿಂದಕೂಡ, ಪೂಜ್ಯಂತೆ- ಪೂಜಿಸಲ್ಪ ಡುತ್ತಾರೇ ॥೧೦॥ ಯೇ ಪ್ರಾಣಿನಶ್ಚ-ಯಾವ ಪ್ರಾಣಿಗಳೂನು, ತ್ವಾಂ-ನಿನ್ನನ್ನು, ಭುವಿ-ನೆಲದಲ್ಲಿ, ಘೋರಚಕ್ಷುರ್ಭಿಃ-ಕ್ರೂರವಾದ ನೇತ್ರಗಳಿಂದ, ಈ ಕ್ಷಂತೆ- ನೋಡುವರೋ, ತೆ-ಅವರು, ಯಮದಂಡೇನ-ಯಮನದಂಡದಿಂದ, ಹತಾಃ-ಹೊಡೆಯಲ್ಪಟ್ಟವರಾಗಿ,ಸದ್ಯಃ-ಆಗಲೇ, ನಿರಯಗಾಮಿನಃ- ನರಕ ವನ್ನು ಹೊಂದುವರು॥೧೧॥ಹೆ ರಘುಶ್ರೇಷ್ಠ-ಎಲೈ ರಘುವಂಶೋತ್ಪನ್ನನಾದ ಶ್ರೀರಾಮನೇ, ಈದೃಶಾಂ-ಇಂಥಾವನಾದ, ತ್ವಂ-ನೀನು, ಸರ್ವದೇಹಿನಾಂ- ಸಮಸ್ತದೇಹ ಧಾರಿಗಳಿಗೂ, ಪಾವನಃ-ಪರಿಶುದ್ಧಕರನು, ಭುವಿ-ಭೂಮಿಯಲ್ಲಿ, ತ್ವಾಂ- ನಿನ್ನನ್ನು, ಕೀರ್ತಯಂತಃ-ಹೊಗಳುತಿರುವರಾಗಿ, ಸಿದ್ಧಿಂ- ಕಾರ್ಯಸಿದ್ಧಿಯನ್ನು, ಏಷ್ಯಂತಿ-ಹೊಂದುವರು ॥೧೨॥ ಅವ್ಯಗ್ರಃ-ತ್ವರೆಯಿಲ್ಲದವನಂತೆ, ಅಕುತೋಭಯಂ-ನಿರ್ಭಯವಾದ, ಅರಿಷ್ಟಂ- ಇಷ್ಟವಾದ, ಪಂಥಾನಂ-ಮಾರ್ಗದಲ್ಲಿ, ಗಚ್ಛ-ಹೋಗು,ರಾಜ್ಯಂ-ರಾಜ್ಯವನ್ನು, ಧರ್ಮೇಣ-ಧರ್ಮದಿಂದ, ಪ್ರಶಾಧಿ-ರಕ್ಷಿಸು,ಭವಾನ್-ನೀನು,ಜಗತಃ-ಲೋಕಕ್ಕೆ, ಗತಿರ್ಹಿ-

---

ಪ್ರಾತಃಕಾಲವಾಗಲೂ ಎಚ್ಚೆತ್ತು ಆಹ್ನಿಕವಂಮಾಡಿ, ಹೊರಡಲುದ್ಯುಕ್ತನಾಗಿ,ಆಮಹರ್ಷಿಗಳ ಸನ್ನಿಧಿಗೆ ಗಮಿಸಿ ಕೈಮು ಗಿದು, ಕುಂಭಸಂಭವನಾದ ಅಗಸ್ತ್ಯಮಹಾಮುನಿಯಂ ಕುರಿತು, ಎಲೈ ಮಹರ್ಷಿಯೆ! ಅಪ್ಪಣೆಯಾದರೆ ಹೊರಡುವೆನು, ತಮ್ಮ ಸಂದರ್ಶನದಿಂದ ನಾನುಧನ್ಯನಾದೆ, ಅನುಗ್ರಹಿಸಲ್ಪಟ್ಟೆನು, ಎನ್ನ ದೇಹವಂ ಪರಿಶುದ್ಧಿ ಮಾಡಿಕೊಳ್ಳುವದಕ್ಕೋ ಸುಗ ಪುನಃ ಬರುವೆನು ಎಂಬುದಾಗಿ ಪೇಳಿದವನಾಗಲೂ, ಆ ಮಹರ್ಷಿಯು ಕಡು ಸಂತೋಷಮುಳ್ಳವನಾಗಿ, ಎಲೈ ಶ್ರೀರಾಮನೆ ! ನೀನು ಪೇಳುವದು ಅತ್ಯಾಶ್ಚರ್ಯಕರವಾಗಿಧೆ, ಸರ್ವಲೋಕಗಳನ್ನೂ ನೀನೆ ಪರಿಶುದ್ಧವಾಗಿರುವಂತೆ ಮಾಡುವನು, ಕ್ಷಣಮಾತ್ರವಾದರೂ ನಿನ್ನನ್ನು ಯಾರುನೋಡುವರೋ, ಅವರೆಲ್ಲರೂ ಸ್ವರ್ಗವಾಸಿಗಳಾಗಿ ಪೂಜ್ಯ ರಾಗಿರುವರು, ॥೧೦॥ ಇದಲ್ಲದೆ ಈ ಭೂಮಂಡಲದಲ್ಲಿ ಯಾರು ಘೋರವಾದ ನೇತ್ರಗಳಿಂದ ನಿನ್ನನ್ನು ನೋಡುವ ರೋ, ಅವರು ಯಮದಂಡದಿಂದ ಹತರಾಗಿ ತತ್ಕ್ಷಣದಲ್ಲಿಯೇ ನರಕವಂ ಪೊಂದುವರು॥೧೧॥ ಎಲೈ ರಘುಶ್ರೇಷ್ಠನೆ! ನೀ ನಿಂಥಾ ಮಾಹಾತ್ಮ್ಯಮುಳ್ಳವನು, ಸರ್ವಪ್ರಾಣಿಗಳನ್ನೂ ಪರಿಶುದ್ಧವಾಗಿ ಮಾಡುವನು, ನಿನ್ನಂ ಭಜಿಸುವರೆಲ್ಲರೂ ಸಿದ್ಧಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶಾಧಿರಾಜ್ಯಂಧರ್ಮೇಣಗತಿರ್ಹಿಜಗತೋಭವಾನ್ ॥೧೩॥ ಏವಮುಕ್ತಸ್ತುಮುನಿನಾಪ್ರಾಂಜಲಿಪ್ರಗ್ರಹೋನೃಪಃ । ಅಭ್ಯವಾದಯತಪ್ರಾಜ್ಞಸ್ತಮೃಷಿಂಪುಣ್ಯಶಾಲಿನಂ ॥೧೪॥ ಅಭಿವಾದ್ಯಮುನಿಶ್ರೇಷ್ಠಂತಾಂಸ್ತುಸರ್ವಾಂಸ್ತಪೋಧನಾನ್ । ಅಧ್ಯಾರೋಹತ್ತದವ್ಯಗ್ರಃಪುಷ್ಪಕಂಹೇಮಭೂಷಿತಂ ॥೧೫॥ ತಂಪ್ರಯಾಂತಂಮುನಿಗಣಾಆಶೀರ್ವಾದೈಸ್ಸಮಂತತಃ । ಅಪೂಜಯನ್ಮಹೇಂದ್ರಾಭಂಸಹಸ್ರಾಕ್ಷಮಿವಾಮರಾಃ ॥೧೬॥ ಖಸ್ಥಸ್ಸದದೃಶೇರಾಮಃಪುಷ್ಪಕೇಹೇಮಭೂಷಿತೇ । ಶಶೀಮೇಘಸಮೀಪಸ್ಥೋಯಥಾಜಲಧರಾಗಮೇ ॥೧೭॥ ತತೋಽರ್ಧದಿವಸೇಪ್ರಾಪ್ತೇಪೂಜ್ಯಮಾನಸ್ತತಸ್ತತಃ । ಅಯೋಧ್ಯಾಂಪ್ರಾಪ್ಯಕಾಕುತ್ಸ್ಥೋಮಧ್ಯಕಕ್ಷ್ಯಾಮವಾರುಹತ್ ॥೧೮॥ ತತೋವಿಸೃಜ್ಯರುಚಿರಂಪುಷ್ಪಕಂಕಾಮಗಾಮಿತತ್ । ಕಕ್ಷಾಂತರವಿನಿಕ್ಷಿಪ್ತಂದ್ವಾಸ್ಸ್ಥಂರಾಮೋಽಬ್ರವೀದ್ವಚಃ ॥೧೯॥ ಲಕ್ಷ್ಮಣಂಭರತಂಚೈವಗತ್ವಾತೌಲಘುವಿಕ್ರಮೌ । ಮಮಾಗಮನಮಾಖ್ಯಾಯಶಬ್ದಾಪಯಮಾಚಿರಂ । —ಇತಿಶ್ರೀಮದುತ್ತರರಾಮಾಯಣೇ ದ್ವ್ಯಶೀತಿತಮಸ್ಸರ್ಗಃ.—

ತಚ್ಛ್ರುತ್ವಾಭಾಷಿತಂತಸ್ಯರಾಮಸ್ಯಾಕ್ಲಿಷ್ಟಕರ್ಮಣಃ । ದ್ವಾಸ್ಸ್ಥಃಕುಮಾರಾವಾಹೂಯರಾಘವಾಯನ್ಯವೇದಯತ್॥

---

ಶರಣವಷ್ಟೆ ॥೧೩॥ ಮುನಿನಾ-ಅಗಸ್ತ್ಯಋಷಿಯಿಂದ, ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಪ್ರಾಂಜಲಿಪ್ರಗ್ರಹಃ-ಅಂಜಲಿ ಬದ್ಧಮುಖನಾಗಿ, ನೃಪಃ-ಅರಸಾದ,ಪ್ರಾಜ್ಞಃ-ಪಂಡಿತನಾದ ಶ್ರೀರಾಮನು, ಪುಣ್ಯಶಾಲಿನಂ-ಪುಣ್ಯಶಾಲಿಯಾದ, ತಂಋಷಿಂ-ಆ ಋಷಿಯಂಕುರಿತು, ಅಭ್ಯವಾದಯತ್-ನಮಸ್ಕಾರ ಮಾಡಿದನು ॥೧೪॥ ಮುನಿಶ್ರೇಷ್ಠಂ-ಋಷಿಶ್ರೇಷ್ಠನಾದ ಅಗಸ್ತ್ಯಋಷಿಯನ್ನು, ಸರ್ವಾನ್-ಸಮಸ್ತರಾದ, ತಾಂಸ್ತಪೋಧನಾಂಶ್ಚ-ಆ ಋಷಿಗಳನ್ನೂ ಕುರಿತು, ಅಭಿವಾದ್ಯ-ವಂದಿಸಿ, ಅವ್ಯಗ್ರಃ-ಏಕಾಗ್ರಚಿತ್ತನಾಗಿ, ಹೇಮಭೂಷಿತಂ-ಸುವರ್ಣದಿಂ ಅಲಂಕೃತವಾದ, ತತ್ಪುಷ್ಪಕಂ-ಆ ಪುಷ್ಪಕವನ್ನು, ಅಧ್ಯಾರೋಹತ್-ಏರಿದನು ॥ ೧೫ ॥ ಮುನಿಗಣಾಃ- ಋಷಿಗಳ ತಂಡಗಳು, ಪ್ರಯಾಂತಂ-ಪ್ರಯಾಣ ಮಾಡುತಿರುವ, ಮಹೇಂದ್ರಾಭಂ-ದೇವೇಂದ್ರನಂತೆ ಹೊಳೆಯುತ್ತಿರುವ, ತಂ-ಆ ಶ್ರೀರಾಮನಂ ಕುರಿತು, ಅಮರಾಃ-ದೇವತೆಗಳು, ಸಹಸ್ರಾಕ್ಷಮಿವ-ದೇವೇಂದ್ರನಂತೆ, ಸಮಂತತಃ-ಯೆಲ್ಲಾ ಕಡೆಯಲ್ಲಿ, ಆಶೀರ್ವಾದೈಃ-ಆಶೀರ್ವಾದಗಳಿಂದ, ಅಪೂಜಯನ್-ಪೂಜೆಮಾಡಿದರು॥೧೬॥ ಸರಾಮಃ-ಆ ಶ್ರೀರಾಮನು, ಹೇಮಭೂಷಿತೇ-ಚಿನ್ನದಿಂದ ಹೊಳೆಯುತಿರುವ,ಪುಷ್ಪಕೇ-ಪುಷ್ಪಕ ವಿಮಾನದಲ್ಲಿ, ಖಸ್ಥಸ್ಸನ್-ಅಂತರಿಕ್ಷ ಮಾರ್ಗದಲ್ಲಿರುವನಾಗಿ, ಜಲಧರಾಗಮೇ-ವರ್ಷಾಕಾಲದಲ್ಲಿ, ಮೇಘಸಮೀಪಸ್ಥಂ-ಮೇಘಗಳ ಸಮೀಪದಲ್ಲಿರುವ, ಶಶೀಯಥಾ-ಚಂದ್ರನಂತೆ, ದದೃಶೇ-ಕಾಣಲ್ಪಟ್ಟನು ॥೧೭॥ ತತಃ-ಬಳಿಕ, ಅರ್ಧದಿವಸೇ-ಮಧ್ಯಾಹ್ನವು, ಪ್ರಾಪ್ತೇ-ಹೊಂದಿದಂಥಾದ್ದಾಗಲಾಗಿ,ಕಾಕುತ್ಸ್ಥಃ-ಶ್ರೀರಾಮನು, ತತಸ್ತತಃ-ಆಯಾಯ ಸ್ಥಳಗಳಲ್ಲಿ, ಪೂಜ್ಯಮಾನಃ-ಪೂಜಿಸಲ್ಪಟ್ಟವನಾಗಿ, ಅಯೋಧ್ಯಾಂ-ಅಯೋಧ್ಯಾಪಟ್ಟಣವನ್ನು, ಪ್ರಾಪ್ಯ-ಹೊಂದಿ, ಮಧ್ಯಕಕ್ಷ್ಯಾಂ-ನಡು ತೊಟ್ಟಿಯಲ್ಲಿ, ಅವಾರುಹತ್-ಇಳಿದನು ॥೧೮॥ ತತಃ-ಬಳಿಕ, ರಾಮಃ-ಶ್ರೀರಾಮನು, ಕಾಮಗಾಮಿ-ಕಾಮಯಾನವಾದ, ರುಚಿರಂ-ಮನೋಹರವಾದ, ತತ್ಪುಷ್ಪಕಂ-ಆ ಪುಷ್ಪಕವನ್ನು, ವಿಸೃಜ್ಯ-ಬಿಟ್ಟು, ಕಕ್ಷ್ಯಾಂತರವಿನಿಕ್ಷಿಪ್ತಂ-ಮತ್ತೊಂದು ತೊಟ್ಟೀ ಬಾಗಲಲ್ಲಿ ನಿಲ್ಲಿಸಲ್ಪಟ್ಟ, ದ್ವಾರಸ್ಥಂ-ದ್ವಾರಪಾಲಕನಂ ಕುರಿತು, ವಚಃ-ಮಾತನ್ನು, ಅಬ್ರವೀತ್-ನುಡಿದನು ॥೧೯॥ ಲಘುವಿಕ್ರಮೌ-ತ್ವರೆಯಿಂದ ಕೂಡಿಕೊಂಡಿರುವಸಾಮರ್ಥ್ಯವುಳ್ಳ, ಲಕ್ಷ್ಮಣಂ-ಲಕ್ಷ್ಮಣನನ್ನು, ಭರತಂಚೈವ-ಭರತನನೂಎಂಬ, ತೌ-ಆ ಯಿಬ್ಬರಂಕುರಿತು, ಗತ್ವಾ-ಪೋಗಿ, ಮಮ-ನನ್ನ, ಆಗಮನಂ-ಬರುವಿಕೆಯನ್ನು, ಆಖ್ಯಾಯ-ಪೇಳಿ, ಮಾಚಿರಂ-ಸಾವಕಾಶವಿಲ್ಲದೆ, ಶಬ್ದಾಪಯ-ಕೂಗಿಹೇಳು ॥೨೦॥ —ಇತಿ ದ್ವ್ಯಶೀತಿ ತಮಸ್ಸರ್ಗಃ—

ದ್ವಾರಸ್ಥಃ-ದ್ವಾರಪಾಲಕನು, ಅಕ್ಲಿಷ್ಟಕರ್ಮಣಃ-ಅನಾಯಾಸವಾಗಿ ಕಾರ್ಯಕರ್ತನಾದ, ತಸ್ಯರಾಮಸ್ಯ-ಆಶ್ರೀರಾಮನ, ತದ್ಭಾಷಿತಂ-ಆಮಾತ

---

ಯಂ ಪಡೆವರು, ಸಾವಧಾನಚಿತ್ತನಾಗಿ ದಾರಿಯೊಳು ನಿರ್ಭಯವಾಗಿ ಹೊರಡು, ಧರ್ಮದಿಂದ ರಾಜ್ಯವಂ ಪರಿಪಾಲಿಸು, ಜಗಕ್ಕೆ ನೀನೇಗತಿಯು, ಎಂದು ಅಗಸ್ತ್ಯಮುನಿಯಿಂದ ಪೇಳಲ್ಪಟ್ಟವನಾಗಿ, ರಘುನಂದನನು ಅಂಜಲಿಬದ್ಧನಾಗಿ, ಪುಣ್ಯಶಾಲಿಯಾದ ಆ ಮಹಾಮುನಿಗೂ ಇತರ ಋಷಿಗಳಿಗೂ ಸಹ ವಂದನೆಯಂಗೈದು, ಭಂಗಾರದ ಕಟ್ಟುಗಳುಳ್ಳ ಆ ಪುಷ್ಪಕ ವಿಮಾನವನ್ನೇರಿದನು ॥೧೫॥ ಹೊರಟಂಥಾವನಾದ ಆ ಶ್ರೀರಾಮನಿಗೆ ಎಲ್ಲಾ ಮಹರ್ಷಿಗಳೂ ದೇವತೆಗಳೂ ಇಂದ್ರನಿಗೆ ಆಶೀರ್ವಾದವಂ ಮಾಡುವಂತೆ, ಸುತ್ತುಮುತ್ತಲೂ ಆಶೀರ್ವಾದಂಗಳಂಗೈದಂಥಾವರಾದರು ॥೧೬॥ ಸುವರ್ಣಾಲಂಕೃತವಾದ ಆ ಪುಷ್ಪಕ ವಿಮಾನದಲ್ಲಿ ರಘುನಂದನನು ವರ್ಷಾಸಮಯದೊಳು ಮೇಘಸಮೀಪದಲ್ಲಿರ್ಪ ಚಂದ್ರನತೆರದಿ ಪೊಳೆಯುತ್ತಿದ್ದನು ॥೧೭॥ ಬಳಿಕ ಆ ಶ್ರೀರಾಮನು ಅಲ್ಲಲ್ಲಿ ಪೂಜಿಸಲ್ಪಡುತ್ತಿರುವನಾಗಿ, ಮಧ್ಯಾಹ್ನಕಾಲವಾಗಲೂ ಅಯೋಧ್ಯಾಪುರವಂಪೊಂದಿ ಮಧ್ಯಮತೊಟ್ಟಿಯೊಳು ಇಳಿದಂಥಾವನಾದನು ॥೧೮॥ ಅನಂತರದಲ್ಲಿ ಕಾಮಗಾಮಿಯಾದ ಆ ಪುಷ್ಪಕ ವಿಮಾನವಂ ಕಳುಹಿಸಿಕೊಟ್ಟು, ಶ್ರೀರಾಮನು ಆ ತೊಟ್ಟೀಮನೆಯಲ್ಲಿರುವ ದ್ವಾರಪಾಲಕನಂ ಕುರಿತು, ಎಲೈ ದ್ವಾರರಕ್ಷಕನೆ ! ಎನ್ನ ಆಗಮನವಂ ಪೇಳಿ, ಲಕ್ಷ್ಮಣ ಭರತರೀರ್ವರಂ ತ್ವರೆಯಾಗಿ ಕರೆದುಕೊಂಡು ಬರುವಂಥಾವನಾಗೆಂದು ನಿರೂಪಿಸಿದನು —...ಉತ್ತರ ರಾಮಾಯಣದಲ್ಲಿನ ೮೨ನೆಯ ಸರ್ಗಂಮುಗಿದುದು...—

ಕ್ಲೇಶವಿಲ್ಲದೆ ಕಾರ್ಯವಂಗೈಯುತ್ತಿರುವ ಆ ಶ್ರೀರಾಮನ ವಾಕ್ಯವಂಕೇಳಿ ಆ ಬಾಗಿಲವನು ಭರತ ಲಕ್ಷ್ಮಣರಂ ಕರೆದುಬಂದು ಶ್ರೀರಾಮನಿಗೆ ಬಿನ್ನವಿಸಿದನು ॥೧॥ ಆ ರಘುನಂದನನಸಾದರ ಸಂಪ್ರಾಪ್ತರಾದ ಅವರಂ ಕಂಡು, ಕಡುಸಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದೃಷ್ಟ್ವಾತುರಾಘವಃಪ್ರಾಪ್ತೌಪ್ರಿಯೌಭರತಲಕ್ಷ್ಮಣೌ । ಪರಿಷ್ವಜ್ಯತದಾರಾಮೋವಾಕ್ಯಮೇತದುವಾಚಹ॥೨॥ ಕೃತಂ ಮಯಾತುಸರ್ವಂವೈದ್ವಿಜಕಾರ್ಯಮನುತ್ತಮಂ । ಧರ್ಮಸೇತುಮತೋಭೂಯಃಕರ್ತುಮಿಚ್ಛಾಮಿರಾಘವೌ ॥೩॥ ಅಕ್ಷಯಶ್ಚಾವ್ಯಯಶ್ಚೈವಧರ್ಮಸೇತುರ್ಮತೋಮಮ ॥೪॥ ಧರ್ಮಪ್ರಸವನಂತ್ವೇತತ್ಸರ್ವಪಾಪಪ್ರಣಾಶನಂ। ಯುವಾಭ್ಯಾಮಾತ್ಮಭೂತಾಭ್ಯಾಂರಾಜಸೂಯಮನುತ್ತಮಂ ॥ ಸಹಿತೋಯಷ್ಟುಮಿಚ್ಛಾಮಿತತ್ರಧರ್ಮೋಹಿಶಾಶ್ವತಃ ॥೫॥ಇಷ್ಟ್ವಾತುರಾಜಸೂಯೇನಮಿತ್ರಃಶತ್ರುನಿಬರ್ಹಣಃ । ಸುಕೃತೇನಸಮ್ಮೃದ್ಧೇನವರುಣತ್ವಮುಪಾಗಮತ್ ॥೬॥ ಸೋಮಶ್ಚರಾಜಸೂಯೇನಇಷ್ಟ್ವಾಧರ್ಮೇಣಧರ್ಮವಿತ್ । ಪ್ರಾಪ್ತಶ್ಚಸರ್ವಲೋಕಾನಾಂಕೀರ್ತಿಸ್ಥಾನಂಚಶಾಶ್ವತಂ ॥೭॥ ಅಸ್ಮಿನ್ನಹನಿಯಚ್ಛ್ರೇಯಶ್ಚಿಂತ್ಯತಾಂತನ್ಮಯಾಸಹ । ಹಿತಂಚಾಯತಿಯುಕ್ತಂಚಪ್ರಯತೌವಕ್ತುಮರ್ಹಥಃ ॥೮॥ ಶ್ರುತ್ವಾತುರಾಘವಸ್ಯೈತದ್ವಾಕ್ಯಂವಾಕ್ಯವಿಶಾರದಃ। ಭರತಃಪ್ರಾಂಜಲಿಃಭೂತ್ವಾವಾಕ್ಯಮೇತದುವಾಚಹ॥೯॥ ತ್ವಯಿಧರ್ಮಃಪರಸ್ಸಾಧೋತ್ವ

---

ನ್ನು, ಶ್ರುತ್ವಾ-ಕೇಳಿ, ಕುಮಾರೌ-ಭರತಲಕ್ಷ್ಮಣರನ್ನು, ಆಹೂಯ-ಕರೆದುಕೊಂಡುಬಂದು, ರಾಘವಾಯ-ಶ್ರೀರಾಮನಿಗೆ, ನ್ಯವೇದಯತ್-ತಿಳಿಸಿದನು, ತದಾ-ಆಕಾಲದಲ್ಲಿ, ರಾಘವಃ-ರಘುವಂಶೋತ್ಪನ್ನನಾದ, ರಾಮಃ-ಶ್ರೀರಾಮನು, ಪ್ರಾಪ್ತೌ-ಬಂದ, ಪ್ರಿಯೌ-ಇಷ್ಟರಾದ, ಭರತಲಕ್ಷ್ಮಣೌ-ಭರತಲಕ್ಷ್ಮಣರಿಬ್ಬರನ್ನು,ದೃಷ್ಟ್ವಾ-ಕಂಡು, ಪರಿಷ್ವಜ್ಯ-ಅಪ್ಪಿಕೊಂಡು, ಏತದ್ವಾಕ್ಯಂ-ಈಮಾತನ್ನು ಉವಾಚಹ-ಪೇಳಿದನಷ್ಟೇ॥೨॥ಹೇರಾಘವೌ-ಎಲೈಭರತಲಕ್ಷ್ಮಣಗಳಿರಾ, ಮಯಾ-ನನ್ನಿಂದ,ಅನುತ್ತಮಂ-ಸರ್ವೋತ್ತಮವಾದ,ಸರ್ವಂ-ಸಮಸ್ತವಾದ,ದ್ವಿಜಕಾರ್ಯಂ-ಬ್ರಾಹ್ಮಣಕಾರ್ಯವು, ಕೃತಂ-ಮಾಡಲ್ಪಟ್ಟಿತು,ಅತಃ-ಇದಕ್ಕಿಂತಲೂ,ಭೂಯಃ-ಬಹಳವಾದ,ಧರ್ಮಸೇತುಂ-ಧರ್ಮಸಂಪಾದಕವಾದ ರಾಜಸೂಯಯಾಗವನ್ನು, ಕರ್ತುಂ-ಮಾಡುವದಕೋಸ್ಕರ, ಇಚ್ಛಾಮಿ-ಇಚ್ಛೆಸುತ್ತೇನೇ॥೩॥ಮಮ-ನನಿಗೆ, ಧರ್ಮಸೇತುಃ-ಧರ್ಮಗಳೊಳಗೆ ಅವಧಿಭೂತವಾದ ರಾಜಸೂಯವೇ, ಅಕ್ಷಯಃ- ನಾಶರಹಿತವಾದ ಫಲವನ್ನು ಕೊಡುವದು, ಅವ್ಯಯಶ್ಚೈವ, ಶಾಶ್ವಿತವಾದದ್ದೆಂದು, ಮತಃ-ಇಷ್ಟವು, ॥೪॥ ಏತತ್-ಇದು, ಸರ್ವಪಾಪಪ್ರಣಾಶನಂ-ಸರ್ವಪಾಪಗಳನ್ನು ಹೋಗಲಾಡಿಸುವದು, ಧರ್ಮಪ್ರಸವನಂ- ಧರ್ಮಜನಕವಾದದ್ದು, ಆತ್ಮಭೂತಾಭ್ಯಾಂ-ನನಿಗೆಪ್ರಾಣಭೂತರಾದ, ಯುವಾಭ್ಯಾಂ-ನಿಮೊಡನೆ, ಸಹಿತಃ-ಕೂಡಿದವನಾಗಿ, ಅನುತ್ತಮಂ-ಸರ್ವೋತ್ತಮವಾದ, ರಾಜಸೂಯಂ-ರಾಜಸೂಯಯಾಗವನ್ನು,ಯಷ್ಟುಂ-ಮಾಡುವದಕ್ಕೋಸ್ಕರ,ಇಚ್ಛಾಮಿ-ಇಚ್ಛೆಸುತ್ತೇನೆ,ತತ್ರ-ಆಯಜ್ಞದಲ್ಲಿ, ಧರ್ಮಃ-ಧರ್ಮವು, ಶಾಶ್ವಿತೋಹಿ-ಶಾಶ್ವಿತವಾದ್ದಷ್ಟೆ ॥೫॥ ಮಿತ್ರಃ-ಮಿತ್ರನು, ಶತ್ರುನಿಬರ್ಹಣಃ-ಶತ್ರುಸಂಹಾರಕನಾಗಿ, ಸುಕೃತೇನ-ಚನ್ನಾಗಿಸಂಪಾದಿಸಲ್ಪಟ್ಟ, ಸಮೃದ್ಧೇನ-ದ್ರವ್ಯದಿಂದ ಪೂರ್ಣವಾದ, ರಾಜಸೂಯೇನ-ರಾಜಸೂಯಯಾಗದಿಂದ, ಇಷ್ಟ್ವಾತು-ಯಜ್ಞಮಾಡಿ, ವರುಣತ್ವಂ-ವರುಣತ್ವವನ್ನು, ಉಪಾಗಮತ್-ಹೊಂದಿದನು, ॥ ೬ ॥ ಧರ್ಮವಿತ್-ಧರ್ಮಜ್ಞನಾದ, ಸೋಮಶ್ಚ -ಚಂದ್ರನೂಕೂಡ, ಧರ್ಮೇಣ-ಧರ್ಮ ಸಂಪಾದಕವಾದ, ರಾಜಸೂಯೇನ-ರಾಜಸೂಯಯಾಗದಿಂದ, ಇಷ್ಟ್ವಾ-ಯಜ್ಞಮಾಡಿ, ಸರ್ವಲೋಕಾನಾಂ-ಸಮಸ್ತಲೋಕಗಳೊಳಗೆ, ಶಾಶ್ವಿತಂ-ಶಾಶ್ವಿತವಾದ, ಕೀರ್ತಿಸ್ಥಾನಂ-ಕೀರ್ತಿಸಂಪಾದಕವಾದ ಸ್ಥಾನವನ್ನು, ಪ್ರಾಪ್ತಶ್ಚ -ಹೊಂದಿದನು ॥ ೭ ॥ ಅಸ್ಮಿನ್ನಹನಿ-ಈ ಕಾಲದಲ್ಲಿ, ಯತ್-ಯಾವದು, ಶ್ರೇಯಃ-ಪುಣ್ಯಸಂಪಾದಕವೋ, ತತ್-ಅದನ್ನು, ಮಯಾಸಹ-ನನ್ನೊಡಗೂಡ, ಚಿಂತ್ಯತಾಂ-ಆಲೋಚಿಸಲ್ಪಡಲಿ, ಪ್ರಯತೌ-ಆಲೋಚನಪರರಾದ ನೀವು, ಹಿತಂಚ-ಹಿತಕರವಾದ, ಆಯತಿಯುಕ್ತಂಚ- ಅರ್ಥಾಗಮದಿಂದ ಕೂಡಿಕೊಂಡಿರುವ ಮಾತನ್ನು, ವಕ್ತುಂ-ಪೇಳುವದಕ್ಕೋಸ್ಕರ, ಅರ್ಹಥ-ಯೋಗ್ಯರಾಗಿ, ॥ ೮ ॥ ರಾಘವಸ್ಯ-ಶ್ರೀರಾಮನ, ಏತದ್ವಾಕ್ಯಂ-ಈಮಾತನ್ನು, ಶ್ರುತ್ವಾತು-ಕೇಳಿಯಾದರೆ, ವಾಕ್ಯವಿಶಾರದಃ-ಮಾತುಗಳಲ್ಲಿ ಸಮರ್ಥನಾದ, ಭರತಃ-ಭರತನು, ಪ್ರಾಂಜಲಿಃ-ಅಂಜಲಿಬದ್ಧನು, ಭೂತ್ವಾ-ಆಗಿ, ಏತತ್ವಾಕ್ಯಂ-ಈ ಮಾತನ್ನು, ಉವಾಚಹ- ಪೇಳಿದನಷ್ಟೇ ॥ ೯ ॥ ಹೆ ರಾಘವ-ಎಲೈ ಸತ್ಪುರುಷನೇ, ತ್ವಯಿ-ನಿನ್ನಲ್ಲಿ, ಪರಃ-ಸರ್ವೋತ್ಕೃಷ್ಟವಾದ, ಧರ್ಮಃ-ಧರ್ಮವು, ಅಸ್ತಿ-ಇಧೇ, ತ್ವಯಿ-ನಿನ್ನಲ್ಲಿ, ಸರ್ವಾ-ಸಮಸ್ತವಾದ, ವಸುಂಧರಾ-ಭೂಮಿಯು, ಪ್ರ

---

ತೋಷದಿಂದಪ್ಪಿಕೊಂಡು ಈ ಮಾತಂ ಪೇಳಿದನದೆಂತೆನೆ ॥೨॥ ಎಲೈ ರಘುವಂಶೋತ್ಪನ್ನರೇ ! ಆಬ್ರಾಹ್ಮಣನ ಕಾರ್ಯವೆಲ್ಲ ಮಾಡಲ್ಪಟ್ಟಿತು, ಆದರೆ ಇದಕ್ಕಿಂತಲೂ ಅತಿಶಯವಾದ ಮತ್ತು ಧರ್ಮಸಂಪಾದಕವಾದ ರಾಜಸೂಯ ಯಾಗವಂ ಮಾಡಲಿಚ್ಛೆಸುತ್ತೇನೆ, ನನಿಗೆ ಅದು ನಾಶರಹಿತವಾದ ಫಲವನ್ನೀಯುವದೆಂದು ತೋರುತ್ತೆ, ಇದು ಸರ್ವ ಪಾಪಪರಿಹಾರಕವಾಗಿಯೂ ಧರ್ಮಪಾದಕವಾಗಿಯೂ ಇರುವದು, ಪ್ರಾಣಪ್ರಾಯರಾದ ನಿಮ್ಮಗಳಿಂದೊಡಗೂಡಿ ಸರ್ವೋತ್ತಮವಾದ ಆ ಯಾಗವಂಗೈಯ್ಯಲಪೇಕ್ಷಿಸುತ್ತೇನೆ, ಆದರಲ್ಲಿ ಧರ್ಮವೇ ಶಾಶ್ವತನು ॥೫॥ ಶತ್ರುಸಹ್ಮಾರಕನಾದ ಸೂರ್ಯನು ರಾಜಸೂಯ ಯಜ್ಞವಂಗೈದು ವರುಣತ್ವವಂ ಪಡೆದನು. ಇದಲ್ಲದೆ ಚಂದಿರನು ಈ ಯಾಗವಂ ಮಾಡಿ, ಲೋಕಂಗಳೊಳಗೆ ಶಾಶ್ವತವಾದ ಮತ್ತು ಕೀರ್ತಿಸಂಪಾದಕವಾದ ಸ್ಥಾನವಂ ಪೊಂದಿದನು ॥೭॥ ನಮಿಗೆ ಯಾವಪುಣ್ಯಸಂಪಾದಕವಾಗಿರುವದೋ ಅದನ್ನು ಈ ಸಮಯದಲ್ಲಿ ನನ್ನ ಸಂಗಡ ಯೋಚಿಸಿ, ಹಿತಕರವಾಗಿಯೂ, ಅರ್ಥಸಂಪಾದಕವಾಗಿಯೂ ಇರುತ ವಾಕ್ಯವಂ ಪೇಳುವಂಥಾವರಾಗಿರೆಂದು ಕೇಳಿದವನಾಗಲೂ, ಭರತನು ಆ ಮಾತಂ ಕೇಳಿ ಅಂಜಲಿಬದ್ಧನಾಗಿ ಈ ಮಾತಂ ಹೇಳಲೊಸಗಿದನದೆಂತೆನೆ ॥೯॥ ಎಲೈ ಸಾಧುವೇ ! ನಿನ್ನಲ್ಲಿ ಧರ್ಮವೇ ಮುಖ್ಯವಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಿಸರ್ವಾವಸುಂಧರಾ । ಪ್ರತಿಷ್ಠಿತಾಮಹಾಬಾಹೋಸ್ತ್ವಯಂಚಾಮಿತವಿಕ್ರಮಃ ॥೧೦॥ ಮಹೀಪಾಲಾಶ್ಚಸರ್ವೇತ್ವಾಂಪ್ರಜಾಪತಿಮಿವಾಮರಾಃ । ನಿರೀಕ್ಷಂತೇಮಹಾತ್ಮಾನೋಲೋಕನಾಥಯಥಾವಯಂ॥ಪ್ರಜಾಶ್ಚಪಿತೃವದ್ರಾಜನ್ಪಶ್ಯಂತಿತ್ವಾಂಮಹಾಬಲ ॥೧೧॥ ಪೃಥಿವ್ಯಾಂಗತಿಭೂತೋಸಿಪ್ರಾಣಿನಾಮಪಿರಾಘವ । ಸತ್ವಮೇವಂವಿಧಂಯಜ್ಞಮಾಹರ್ತಾಸಿಕಥಂನೃಪ । ಪೃಥಿವ್ಯಾಂರಾಜವಂಶಾನಾಂವಿನಾಶೋಯತ್ರದೃಶ್ಯತೇ ॥೧೨॥ ಪೃಥಿವ್ಯಾಂಯೇಚಪುರುಷಾರಾಜನ್ಪೌರುಷಮಾಗತಾಃ । ಸರ್ವೇಷಾಂಭವಿತಾತತ್ರಕ್ಷಯಸ್ಸರ್ವಾಂತಕೋಮಹಾನ್॥೧೩॥ಸತ್ವಂಪುರುಷಶಾರ್ದೂಲಗುಣೈರಮಿತವಿಕ್ರಮಃ। ಪೃಥಿವೀಂನಾರ್ಹಸೇಹಂತುಂವಶೇಹಿತವವರ್ತತೇ ॥೧೪॥ ಭರತಸ್ಯತುತದ್ವಾಕ್ಯಂಶ್ರುತ್ವಾಮೃತಮಯಂತದಾ । ಪ್ರಹರ್ಷಮತುಲಂಲೇಭೇರಾಮಸ್ಸತ್ಯಪರಾಕ್ರಮಃ ॥೧೫॥ ಉವಾಚಚಶುಭಾಂವಾಣೀಂಕೈಕೇಯ್ಯಾನಂದವರ್ಧನಮ್ ।ಪ್ರೀತೋಸ್ಮಿಪರಿತುಷ್ಟೋಸ್ಮಿತವಾದ್ಯವಚನೇನಹಿ ॥೧೬॥ ಇದಂವಚನಮಕ್ಲೀಬಂತ್ವಯಾಧರ್ಮಸಮಾಹಿತಮ್। ವ್ಯಾಹೃತಂಪುರುಷವ್ಯಾಘ್ರ

---

ಷ್ಠಿತಾ-ಅಧಿಷ್ಠಾಪಿತವಾಗಿಧೆ, ಹೆ ಮಹಾಬಾಹೋ-ಎಲೈ ಮಹಾಭುಜಶಾಲಿಯೇ, ತ್ವಯಂಚ-ನೀನೂನು, ಅಮಿತವಿಕ್ರಮಃ-ಅಪಾರಪರಾಕ್ರಮವುಳ್ಳವನು, ॥೧೦॥ ಹೆ ಲೋಕನಾಥ-ಎಲೈ ಲೋಕಸ್ವಾಮಿಯೇ, ಸರ್ವೇ-ಸಮಸ್ತರಾದ, ಮಹೀಪಾಲಾಶ್ಚ-ರಾಜರೂನು, ಅಮರಾಃ-ದೇವತೆಗಳು, ಪ್ರಜಾಪತಿಮಿವ-ಬ್ರಹ್ಮನಂತೇ, ತ್ವಾಂ-ನಿನ್ನನ್ನು, ವಯಂಯಥಾ-ನಮ್ಮಗಳಂತೇ, ಮಹಾತ್ಮಾನಃ-ಮಹಾ ದೊಡ್ಡ ಮನವುಳ್ಳವರಾಗಿ, ನಿರೀಕ್ಷಂತೇ-ಎದುರುನೋಡುತ್ತಲಿಧಾರೆ, ಹೆ ರಾಜನ್-ಎಲೆ ಅರಸೇ, ಹೆ ಮಹಾಬಲ-ಎಲೈ ಮಹಾಬಲಶಾಲಿಯೇ, ತ್ವಾಂ-ನಿನ್ನನ್ನು, ಪ್ರಜಾಶ್ಚ - ಪ್ರಜೆಗಳೂನು, ಪಿತೃವತ್-ತಂದೆಯಂತೇ, ಪಶ್ಯಂತಿ-ನೋಡುತ್ತಾರೆ, ॥೧೧॥ ಹೆ ರಾಘವ-ಎಲೈ ಶ್ರೀರಾಮನೇ, ಪೃಥಿವ್ಯಾಂ-ನೆಲದಲ್ಲಿ, ಪ್ರಾಣಿನಾಮಪಿ-ಪ್ರಾಣಿಗಳಿಗೂನು, ಗತಿಭೂತಃ-ಶರಣ್ಯನು, ಅಸಿ-ಆಗಿದ್ಧೀ, ಹೆನೃಪ-ಎಲೊ ಅರಸೆ, ಯತ್ರ-ಯಾವರಾಜಸೂಯಯಾಗ ವಿಷಯವಾಗಿ, ಪೃಥಿವ್ಯಾಂ-ನೆಲದಲ್ಲಿ, ರಾಜವಂಶಗಳು, ವಿನಾಶಃ-ನಾಶವು, ದೃಶ್ಯತೆ-ಕಾಣಲ್ಪಡುತ್ತೊ, ಸತ್ವಂ-ಆ ನೀನು, ಏವಂ-ಯಿಂಥಾಪ್ರಾಣಾಪಹಾರಕವಾದ, ಯಜ್ಞಂ-ಯಜ್ಞವನ್ನು, ಕಥಂ-ಹ್ಯಾಗೆ, ಆಹರ್ತಾಸಿ-ಮಾಡುವೀ ॥ ೧೨ ॥ ಹೆ ರಾಜನ್-ಎಲೈ ರಾಜನೇ, ಪೃಥಿವ್ಯಾಂ-ಭೂಮಿಯೊಳಗೆ, ಯೆ ಪುರುಷಾಃ-ಯಾವಪುರುಷರು, ಪೌರುಷಂ-ಪರಾಕ್ರಮವನ್ನು, ಆಗತಾಃ-ಹೊಂದಿದವರೋ, ಸರ್ವೇಷಾಂ-ಸಮಸ್ತರಾದ, ತೇಷಾಂ-ಅರಸಗಳಿಗೆ, ಕ್ಷಯಃ-ನಾಶವು, ತತ್ರ-ಆ ಯಜ್ಞದಲ್ಲಿ, ಭವಿತಾ-ಆಗುವದು, ಮಹಾನ್-ದೊಡ್ಡದಾದ-ಆ ರಾಜಸೂಯಯಾಗವು, ಸರ್ವಾಂತಕಃ-ಸರ್ವರಿಗೂ ನಾಶಕರವಾದ್ದು ॥೧೩॥ ಹೆ ಪುರುಷಶಾರ್ದೂಲ-ಎಲೈ ಪುರುಷಶ್ರೇಷ್ಠನೇ, ಸತ್ವಂ-ಆ ನೀನು, ಗುಣೈಃ-ಧೈರ್ಯಶೌರ್ಯಾದಿಗುಣಗಳಿಂದ, ಅಮಿತವಿಕ್ರಮಃ-ಅಪಾರಪರಾಕ್ರಮಮುಳ್ಳವನಾಗಿ, ಪೃಥಿವೀಂ-ಭೂಮಿಯನ್ನೆಲ್ಲಾ, ಹಂತುಂ-ಹೊಡಿಯುವದಕ್ಕೋಸ್ಕರ, ನಾರ್ಹಸೆ-ಯೋಗ್ಯನಾಗಬ್ಯಾಡೆ, ತವ-ನಿನ್ನ, ವಶೆ-ಸ್ವಾಧೀನದಲ್ಲಿ, ಪೃಥಿವೀ-ನೆಲವು, ವರ್ತತೇಹಿ-ಇಥೆಯಸ್ಟೇ ॥ ೧೪ ॥ ಸತ್ಯಪರಾಕ್ರಮಃ-ಸಫಲವಾದ ಪರಾಕ್ರಮವುಳ್ಳ, ರಾಮಃ-ಶ್ರೀರಾಮನು, ತದಾ-ಆಕಾಲದಲ್ಲಿ, ಅಮೃತಮಯ ಅಮೃತದಂತೆ ಶ್ರೋತ್ರಗಳಿಗಿಂಪಾಗಿರುವ, ಭರತಸ್ಯ-ಭರತನ, ತದ್ವಾಕ್ಯಂತು- ಆಮಾತನ್ನಾದರೇ, ಶ್ರುತ್ವಾ-ಕೇಳಿ, ಅತುಲಂ-ಸಮಾನವಿಲ್ಲದ, ಪ್ರಹರ್ಷಂ-ಸಂತೋಷವನ್ನು, ಲೇಭೆ-ಹೊಂದಿದನು ॥ ೧೫ ॥ ಕೈಕೇಯ್ಯಾನಂದವರ್ಧನಮ್- ಕೈಕೇಯಿಗೆ ಆನಂದವನ್ನುಂಟುಮಾಡುವ ಭರತನನ್ನು ಕುರಿತು, ತವ-ನಿನ್ನ, ವಚನೇನ-ಮಾತಿನಿಂದ, ಅದ್ಯ-ಈಗ, ಪ್ರೀತಃ-ಸಂತೋಷಗೊಂಡವನು, ಅಸ್ಮಿ-ಆದೆನು, ಪರಿತುಷ್ಟಃ-ತುಷ್ಟನು, ಅಸ್ಮಿ-ಆದೆನು, ಇತಿ-ಇಂತೆಂದು, ಶುಭಾಂ-ಶುಭಕರವಾದ, ವಾಣೀಂ-ಮಾತನ್ನು, ಉವಾಚ-ಹೇಳಿದನು ॥ ೧೬ ॥ ಹೆ ಪುರುಷವ್ಯಾಘ್ರ-ಎಲೈ ಪುರುಷಶ್ರೇಷ್ಠನೇ, ಪೃಥಿವ್ಯಾಃ-ಭೂಮಿಯ-ಪರಿಪಾಲನಂ-ಸಂರಕ್ಷಣವನ್ನು ಕುರಿತು, ತ್ವಯಾ-ನಿನ್ನಿಂದ, ಧರ್ಮಸಮಾಹಿತಂ-ಧರ್ಮದಿಂದ ಕೂಡಿಕೊಂಡಿರುವ, ಅಕ್ಲೀಬಂ-ಪೌರುಷದಿಂದ ಕೂ

---

ರುವದು. ಎಲೈ ಮಹಾ ಭುಜಪರಾಕ್ರಮಿಯೆ ! ಭೂಮಂಡಲವೆಲ್ಲ ನಿನ್ನಲ್ಲಿಯೇ ಪ್ರತಿಷ್ಠಿತವಾಗಿರುವದು. ನೀನಾದರೆ ಮಹಾಪರಾಕ್ರಮಶಾಲಿಯು, ರಾಜರೆಲ್ಲರೂ ಮಹಾತ್ಮರಾದ ದೇವತೆಗಳು ಬ್ರಹ್ಮನಂ ಕಾಣುವಂತೆ ನಿನ್ನನ್ನು ನೋಡುತ್ತಿರುವರು. ಇದಲ್ಲದೇ ಪ್ರಜೆಗಳೆಲ್ಲರೂ ತಂದೆಯಂ ನೋಡುವ ತೆರದಿ ನಿನ್ನಂವೀಕ್ಷಿಸುತ್ತಿರುವರು. ಈ ಮಂಡಲದಲ್ಲಿರುವ ಪ್ರಾಣಿಗಳಿಗೆಲ್ಲ ನೀನೆ ಗತಿಸ್ವರೂಪನಾಗಿದ್ದೀ, ಇಂಥಾ ನೀನು ಯಾವ ರಾಜಸೂಯ ಯಾಗವಿಷಯವಾಗಿ ಅರಸರ ವಿನಾಶನವು ಕಾಣಲ್ಪಡುತಿಧೆಯೊ ಅಂಥಾ ಯಜ್ಞವಂ ನೀನು ಹ್ಯಾಗೆಮಾಡುತ್ತಿ ॥೧೨॥ ಎಲೈರಾಜನೇ! ಈ ಧರಾತಲದಲ್ಲಿ ಪೌರುಷವಂ ಪಡೆದ ಪುರುಷರ್ಯಾರೂ ಅವರ ವಿನಾಶವು ಆ ಯಾಗದ ವಿಷಯವಾಗಿ ಆಗತಕ್ಕದ್ದಾಗಿರುವದು. ಆದಕಾರಣ ಆ ಮಹಾಯಜ್ಞವು ಸರ್ವರಿಗೂ ನಾಶಕರವಾಗಿರುವದಿಲ್ಲ ॥೧೩॥ ಎಲೈ ಪುರುಷಶ್ರೇಷ್ಠನೇ! ಧೈರ್ಯಾಶೌರ್ಯಾದಿ ಗುಣಗಳಿಂದ ಅಪಾರವಾದ ಪರಾಕ್ರಮವುಳ್ಳ ಅಂಥಾ ನೀನು ನಿನ್ನಧೀನದಲ್ಲಿರುವ ಭೂಮಿಯಂ ವಿನಾಶಿಸುವದಕ್ಕೆ ಅರ್ಹನಾಗಬೇಡೆಂದು ಬೇಡಿದಂಥಾವನಾದನು ॥೧೪॥ ಸತ್ಯಪರಾಕ್ರಮಿಯಾದ ಶ್ರೀರಾಮನು ಭರತನುಪೇಳಿದ ಮತ್ತು ಅಮೃತೋಪಮವಾದ ಆ ವಾಕ್ಯವಂ ಕೇಳಿ ಆಗ ಮಹಾ ಸಂತೋಷವುಳ್ಳವನಾಗಿ ಆತನಂಕುರಿತು ಎಲೈ ಭರತನೆ ! ನಿನ್ನ ಮಾತಿಗೆ ಮೆಚ್ಚಿದೆನು, ಎನಗೆ ಬಹಳ ಸಂತೋಷವಾದುದು ಧರ್ಮಯುಕ್ತವಾದ ವಳ್ಳೇಮಾತಂ ಪೇಳಿದೆ, ಧೊರೆಗಳಿಗೆ ಭೂಮಿಯಂ ಪರಿಪಾಲಿಸುವದೇ ಮುಖ್ಯವಾದದ್ದು, ನಿನ್ನ ವಾಕ್ಯದಿಂಥ ಈ ರಾಜಸೂಯ ಯಾಗವಂಗೈಯ್ಯಬೇಕೆಂಬ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪೃಥಿವ್ಯಾಃಪರಿಪಾಲನಮ್ ॥೧೭॥ ಏಷಹ್ಯಸ್ಮದಭಿಪ್ರಾಯಾದ್ರಾಜಸೂಯಾತ್ಕ್ರತೂತ್ತಮಾತ್ । ನಿವೃತ್ತೋಽಸ್ಮಿಮಹಾಬಾಹೋತವೇಸುವ್ಯಾಹೃತೇನವೈ ॥೧೮॥ ಬಾಲಾನಾಂಹಿಶುಭಂವಾಕ್ಯಂಗ್ರಾಹ್ಯಂಲಕ್ಷ್ಮಣಪೂರ್ವಜ । ತಸ್ಮಾಚ್ಛೃಣೋಮಿತೇವಾಕ್ಯಂಸಾಧುಯುಕ್ತಂಮಹಾಮತೇ ॥೧೯॥ —॥ಇತಿ ಶ್ರೀಮದುತ್ತರರಾಮಾಯಣೆ ತ್ರ್ಯಶೀತಿತಮಸ್ಸರ್ಗಃ॥—

ತಥೋಕ್ತವತಿರಾಮೇತುಭರತೇಚಮಹಾತ್ಮನಿ । ಲಕ್ಷ್ಮಣೋಥಶುಭಂವಾಕ್ಯಮುವಾಚರಘುನಂದನಂ ॥೧॥ ಅಶ್ವಮೇಧೋಮಹಾಯಜ್ಞಃಪಾವನಸ್ಸರ್ವಪಾಪ್ಮನಾಂ। ಪಾವನಸ್ತವದುರ್ಧರ್ಷೋರೋಚತಾಂಕ್ರತುಪುಂಗವಃ॥೨॥ಶ್ರೂಯತೇಹಿಪುರಾವೃತ್ತಂವಾಸವೇಸುಮಹಾತ್ಮನಿ । ಬ್ರಹ್ಮಹತ್ಯಾವೃತಶ್ಶಕ್ರೋಹಯಮೇಧೇನಪಾವಿತಃ॥೩॥ ತದಾಕಿಲಮಹಾಬಾಹೋದೇವಾಸುರಸಮಾಗಮೇ । ವೃತ್ರೋನಾಮಮಹಾನಾಸೀದ್ದೈತೇಯೋಲೋಕಸಂಮತಃ ॥೪॥ ವಿಸ್ತೀರ್ಣೋಯೋಜನಶತಂಉಚ್ಛ್ರಿತಃತ್ರಿಗುಣಂತತಃ । ಅನುರಾಗೇಣಲೋಕಾಂಸ್ತ್ರೀನ್ಸ್ನೇಹಾತ್ಪಶ್ಯತಿಸರ್ವಶಃ॥೫॥ ಧರ್ಮಜ್ಞಶ್ಚಕೃತಜ್ಞಶ್ಚಬುಧ್ಯಾ

---

ಡಿಕೊಂಡಿರುವ, ಇದಂವಚನಂ–ಈ ಮಾತು, ವ್ಯಾಹೃತಂ–ಪೇಳಲ್ಪಟ್ಟಿತು ॥೧೭॥ ಹೆ ಮಹಾಬಾಹೋ–ಎಲೈ ಮಹಾಭುಜಪರಾಕ್ರಮಶಾಲಿಯೆ, ತವ–ನಿನ್ನ, ಸುವ್ಯಾಹೃತೇನವೈ–ಮಾತಿನಿಂದಲೇ, ಏಷಃ–ಈ ನಾನು, ಅಸ್ಮದಭಿಪ್ರಾಯಾತ್–ನಮಗೆ ಯಿಷ್ಟವಾದ, ಕ್ರತೂತ್ತಮಾತ್–ಕ್ರತುಗಳೊಳಗೆ ಉತ್ತಮವಾದ, ರಾಜಸೂಯಾತ್–ರಾಜಸೂಯ ಯಾಗದಪೇಕ್ಷೆಯಿಂದ, ನಿವೃತ್ತಃ–ವಿಮುಖನು, ಅಸ್ಮಿಹಿ–ಆದೆನಷ್ಟೇ ॥೧೮॥ ಹೆ ಲಕ್ಷ್ಮಣಪೂರ್ವಜ–ಎಲೈ ಲಕ್ಷ್ಮಣಾಗ್ರಜನೇ, ಹಿಯಸ್ಮಾತ್–ಯಾವಕಾರಣದ ದೆಸೆಯಿಂದ, ಬಾಲಾನಾಂ–ಬಾಲಕರ, ವಾಕ್ಯಂ–ವಚನವು, ಶುಭಂ–ಶುಭಕರವಾದುಥಾದ್ದು, ಗ್ರಾಹ್ಯಂ–ಗ್ರಹಿಸತಕ್ಕದ್ದೋ, ತಸ್ಮಾತ್–ಆಕಾರಣದದೆಸೆಯಿಂದ, ಹೆ ಮಹಾಮತೇ–ಎಲೈ ಮಹಾಬುದ್ಧಿಶಾಲಿಯೇ, ಸಾಧುಯುಕ್ತಂ–ಚನ್ನಾಗಿರುವ,ತೇ–ನಿನ್ನ,ವಾಕ್ಯಂ–ಮಾತನ್ನು, ಶೃಣೋಮಿ–ಕೇಳುತ್ತೇನೇ ॥೧೯॥ —ಇತಿ ಶ್ರೀಮದುತ್ತರರಾಮಾಯಣೆ ತ್ರ್ಯಶೀತಿತಮಸ್ಸರ್ಗಃ—

ರಾಮೇ–ಶ್ರೀರಾಮನು, ತಥಾ–ಹಾಗೆಯೇ, ಉಕ್ತವತಿಸತಿ–ಪೇಳಿದವನಾಗಲಾಗಿ,ಭರತೇಚ–ಭರತನೂನು, ಮಹಾತ್ಮನಿಸತಿ–ಮಹಾಮನಸ್ಸುಳ್ಳಂಥಾವನಾಗಲಾಗಿ, ಅಥ–ಬಳಿಕ, ಲಕ್ಷ್ಮಣಃ–ಲಕ್ಷ್ಮಣನು, ಶುಭಂ–ಶುಭಕರವಾದ, ವಾಕ್ಯಂ–ಮಾತನ್ನು,ರಘುನಂದನಂ–ಶ್ರೀರಾಮನಂಕುರಿತು,ಉವಾಚ–ಪೇಳಿದನು॥೧॥ ಅಶ್ವಮೇಧಃ–ಅಶ್ವಮೇಧವೆಂಬ, ಮಹಾಯಜ್ಞಃ–ದೊಡ್ಡಯಜ್ಞವು, ಸರ್ವಪಾಪ್ಮನಾಂ–ಸಮಸ್ತಪಾಪಿಗಳಿಗೆ, ಪಾವನಃ–ಪರಿಶುದ್ಧಿಕರವಾದಂಥಾದ್ದು, ತವ–ನಿನಿಗೂನು, ಪಾವನಃ–ಪರಿಶುದ್ಧಿಕರವಾದ, ದುರ್ಧರ್ಷಃ–ತಿರಸ್ಕರಿಸಲಸಾಧ್ಯವಾದ,ಕ್ರತುಪುಂಗವಃ–ಯಾಗಶ್ರೇಷ್ಠವಾದಅಶ್ವಮೇಧವು,ರೋಚತಾಂ–ರುಚಿಸಲೀ ॥೨॥ ಪುರಾ–ಪೂರ್ವದಲ್ಲಿ, ಸುಮಹಾತ್ಮನಿ–ಮಹಾತ್ಮನಾದ, ವಾಸವೇ– ಇಂದ್ರನವಿಷಯವಾಗಿ, ವೃತ್ತಂ–ಕಥೆಯು, ಶ್ರೂಯತೇಹಿ–ಕೇಳಲ್ಪಟ್ಟಿದ್ದಿಯಷ್ಟೇ, ಬ್ರಹ್ಮಹತ್ಯಾವೃತಃ–ಬ್ರಹ್ಮಹತ್ಯೆಯಿಂದ ಸುತ್ತಿಕೊಳ್ಳಲ್ಪಟ್ಟ, ಶಕ್ರಃ–ದೇವೇಂದ್ರನು, ಹಯಮೇಧೇನ–ಅಶ್ವಮೇಧಕ್ರತುವಿನಿಂದ, ಪಾವಿತಃ–ಪರಿಶುದ್ಧವಾಗಿ ಮಾಡಲ್ಪಟ್ಟನು ॥೩॥ ಹೆ ಮಹಾಬಾಹೋ–ಎಲೈ ಮಹಾಭುಜಪರಾಕ್ರಮಶಾಲಿಯೆ, ತದಾಕಿಲ–ಆ ಕಾಲದಲ್ಲಿ, ದೇವಾಸುರಸಮಾಗಮೇ–ದೇವತೆಗಳಿಗೂ ರಾಕ್ಷಸರಿಗೂ ಕಲಹಕಾಲದಲ್ಲಿ, ಲೋಕಸಮ್ಮತಃ–ಲೋಕಕ್ಕೆಲ್ಲಾ ಸಮ್ಮತನಾದ, ಮಹಾನ್–ದೊಡ್ಡವನಾದ, ವೃತ್ರೋನಾಮ– ವೃತ್ರಾಸುರನೆಂದು ಪ್ರಸಿದ್ಧನಾದ, ದೈತೇಯಃ–ರಾಕ್ಷಸನು, ಆಸೀತ್–ಆದನು, ಯೋಜನಾಶತಂ–ನೂರುಗಾವುದವು, ವಿಸ್ತೀರ್ಣಃ–ವಿಸ್ತಾರವುಳ್ಳ, ತತಃ–ಅದಕ್ಕಿಂತಲೂ, ತ್ರಿಗುಣಂ–ಮೂರರಷ್ಟು, ಉಚ್ಛ್ರಿತಃ–ಉನ್ನತನಾದ–ಆ ವೃತ್ರಾಸುರನು, ಅನುರಾಗೇಣ–ವಿಶ್ವಾಸದಿಂದ, ತ್ರೀನ್‌ಲೋಕಾನ್ – ಮೂರುಲೋಕಗಳನ್ನು, ಸರ್ವಶಃ–ಯಲ್ಲಾವಿಷಯದಲ್ಲಿಯೂ, ಸ್ನೇಹಾತ್–ಸ್ನೇಹದದೆಸೆಯಿಂದ, ಪಶ್ಯತಿ–ನೋಡುತ್ತಾನೆ ॥೫॥ ಧರ್ಮಜ್ಞಶ್ಚ–ಧರ್ಮಜ್ಞನು, ಕೃತಜ್ಞಶ್ಚ–ಉಪಕಾರವನ್ನು ಸ್ಮರಿಸುವನು, ಬುಧ್ಯಾಚ–ಬುದ್ಧಿಯಿಂದ, ಪರಿನಿಷ್ಠಿತಃ–ಕೂಡಿಕೊಂಡಿರುವನಾಗಿ, ಸುಸಮಾಹಿತಃ–ಸಮಾಧಾನಚಿತ್ತನಾಗಿ,ಧರ್ಮೇಣ–ಧ

---

ಮತಿಯುಂಬಿಟ್ಟೆ, ಎಲೈ ಮಹಾತಿಳುವಳಿಕೆಯುಳ್ಳ ಲಕ್ಷ್ಮಣಾಗ್ರಜನೆ ! ಬಾಲಕರು ನುಡಿದರೂವಳ್ಳೆಯ ಮಾತನ್ನು ಪರಿಗ್ರಹಿಸಬೇಕು, ನೀನು ನನಿಗಿಂತಲೂ ಕಿರಿಯುವನಾದರೂ ಚನ್ನಾಗಿರುವ ಮಾತಂ ಪೇಳಿದೆಯಾದಕಾರಣ ಅದಂಲಾಲಿಸುವೆನೆಂದು ನುಡಿದವನಾದನು ॥೧೯॥ —॥ಉತ್ತರರಾಮಾಯಣದಲ್ಲಿನ ೮೩ನೇಯ ಸರ್ಗಂ ಮುಗಿದುದು॥—

ಆಪರಿಯಾಗಿ ಶ್ರೀರಾಮನು ಭರತನುಸಹ ಪೇಳಿದವರಾಗಲೂ,ಬಳಿಕ ಲಕ್ಷ್ಮಣನು ಶ್ರೀರಾಮನಂಕುರಿತು ಶುಭಕರವಾದ ಈವಾಕ್ಯಂ ಹೇಳತೊಡಗಿನದೆಂತನೆ ॥೧॥ ಎಲೈ ಶ್ರೀರಾಮನೆ ! ಅಶ್ವಮೇಧವೆಂಬಮಹಾಯಾಗವು ಸರ್ವಪಾಪಪರಿಹಾರಕವಾದಂಥಾದ್ದು, ತಮಿಗಿಷ್ಟವಿದ್ದರೆ ಅದನ್ನು ಮಾಡಬಹುದು ॥೨॥ ಪೂರ್ವಕಾಲದಲ್ಲಿ ಇಂದ್ರವಿಷಯವಾಗಿ ಒಂದು ಕಥೆಯುಕೇಳಪಟ್ಟಿ ಇಧೆಯಷ್ಟೆ, ಅದೇನಂದರೆ ಬ್ರಹ್ಮಹತ್ಯೆಯಿಂದ ದೇವೇಂದ್ರನು ಪರಿವೃತನಾಗಿ ಅಶ್ವಮೇಧಯಾಗದಿಂದ ಪರಿಶುದ್ಧನಾದನು ॥೩॥ (ಆ ಬ್ರಹ್ಮಹತ್ಯಾಕಾರಣವೇನಂದರೆ) ಎಲೈ ಮಹಾಭುಜಪರಾಕ್ರಮಿಯೆ ! ದೇವರಾಕ್ಷಸರು ಸೇರಿದ ಆ ವೇಳೆಯೊಳಾದರೆ, ಲೋಕಸಂಮತನಾದ ವೃತ್ರನೆಂಬ ಮಹಾದೈತ್ಯನುಂಟಾದನು ॥೪॥ ಆತನು ನೂರು ಗಾವುದಗಳ ವಿಸ್ತಾರವುಳ್ಳವನಾಗಿಯೂ ಮುನ್ನೂರು ಯೋಜನಗಳೌನ್ನತ್ಯವುಳ್ಳವನಾಗಿಯೂ ಇರುವನಾಗಿ ಮೂಜಗಗಳನ್ನೂ ಅನುರಾಗದಿಂದ ನೋಡುತ್ತಿದ್ದನು ॥೫॥ಇದಲ್ಲದೆ ಧರ್ಮಜ್ಞನಾಗಿಯೂ ಕೃತಜ್ಞನಾಗಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಚಪರಿನಿಷ್ಠಿತಃ । ಶಶಾಸಪೃಥಿವೀಂಸ್ಫೀತಾಂಧರ್ಮೇಣಸುಸಮಾಹಿತಃ । ತಸ್ಮಿನ್ಪ್ರಶಾಸತಿತದಾಸರ್ವಕಾಮದುಘಾ ಮ
ಹೀ । ರಸವಂತಿಪ್ರಸೂತಾನಿಮೂಲಾನಿಚಫಲಾನಿಚ । ಅಕೃಷ್ಟಪಚ್ಯಾಪೃಥಿವೀಸುಸಂಪನ್ನಾಮಹಾತ್ಮನಃ ॥೭॥ ಸರಾ
ಜ್ಯಂತಾದೃಶಂಭುಂಕ್ತೇಸ್ಫೀತಮದ್ಭುತದರ್ಶನಂ ॥೮॥ ತಸ್ಯಬುದ್ಧಿಸ್ಸಮುತ್ಪನ್ನಾತಪಃಕುರ್ಯಾಮನುತ್ತಮಂ । ತಪೋಹಿಪ
ರಮಂಶ್ರೇಯಸ್ತಪೋಹಿಪರಮಂಸುಖಂ ॥೯॥ ಸನಿಕ್ಷಿಪ್ಯಸುತಂಜ್ಯೇಷ್ಠಂಪೌರೇಷುಮಧುರೇಶ್ವರಂ । ತಪಉಗ್ರಮುಪಾತಿಷ್ಠ
ತ್ತಾಪಯನ್ಸರ್ವದೇವತಾಃ ॥೧೦॥ ತಪಸ್ತಪ್ಯತಿವೃತ್ರೇತುವಾಸವಃಪರಮಾರ್ತವತ್ । ವಿಷ್ಣುಂಸಮುಪಸಂಕ್ರಮ್ಯವಾಕ್ಯ
ಮೇತದುವಾಚಹ ॥ ೧೧ ॥ ತಪಸ್ಯತಾಮಹಾಬಾಹೋಲೋಕಾವೃತ್ರೇಣನಿರ್ಜಿತಾಃ । ಬಲವಾನ್ಸಹಿಧರ್ಮಾತ್ಮಾನೈನಂಶ
ಕ್ಷ್ಯಾಮಿಬಾಧಿತುಂ ॥೧೨॥ ಯದ್ಯಸೌತಪಆತಿಷ್ಠೇದ್ಭೂಯಏವಸುರೇಶ್ವರಃ । ಯಾವಲ್ಲೋಕಾಧರಿಷ್ಯಂತಿತಾವದಸ್ಯವ
ಶಾನುಗಾಃ ॥೧೩॥ ತ್ವಂಚೈನಂಪರಮೋದಾರಮುಪೇಕ್ಷಸಿಮಹಾಬಲ । ಕ್ಷಣಂಹಿನಭವೇದ್ವೃತ್ರಃಕ್ರುದ್ಧೇತ್ವಯಿಸುರೇಶ್ವರ॥

---

ರ್ತ್ತಿಂದ, ಸ್ಫೀತಾಂ-ಪ್ರವೃದ್ಧಮಾನವಾದ, ಪೃಥಿವೀಂ-ನೆಲವನ್ನು, ಶಶಾಸ-ಸಂರಕ್ಷಿಸಿದನು ॥೬॥ ತಸ್ಮಿನ್-ಆ ವೃತ್ರಾಸುರನು, ಪ್ರಶಾಸತಿಸತಿ-ಪರಿಪಾಲನ
ಮಾಡುತ್ತಿರಲಾಗಿ, ಮಹೀ-ನೆಲವು, ಸರ್ವಕಾಮದುಘಾ - ಸರ್ವಫಲಗಳನ್ನು ಕೊಡುತಿತ್ತು, ಮೂಲಾನಿ-ಕಂದಮೂಲಗಳೂನು,ಫಲಾನಿಚ-ಫಲಗಳೂ
ನು, ರಸವಂತಿ-ಮಾಧುರ್ಯರಸವುಳ್ಳವುಗಳಾಗಿ, ಪ್ರಸೂತಾನಿ-ಹುಟ್ಟುವವು, ಮಹಾತ್ಮನಃ-ಮಹಾತ್ಮನಾದ ವೃತ್ರಾಸುರನ, ಪೃಥಿವೀ-ನೆಲವು, ಅಕೃಷ್ಟಪ
ಚ್ಯಾ-ಉಳದೇಪಾಕವುಳ್ಳದ್ದಾಗಿ, ಸಂಪನ್ನಾ-ಆಗಿತ್ತು॥೭॥ಸಃ-ಆವೃತ್ರಾಸುರನು, ಅದ್ಭುತದರ್ಶನಂ-ಆಶ್ಚರ್ಯಕರವಾದನೋಡುವಿಕೆಯುಳ್ಳ,ಸ್ಫೀತಾಂ-ಪ್ರ
ವೃದ್ಧಮಾನವಾದ, ತಾದೃಶಂ-ಅಂಥಾದ್ದಾದ, ರಾಜ್ಯಂ-ರಾಜ್ಯವನ್ನು, ಭುಂಕ್ತೇ-ಭುಜಿಸುತಿದ್ದನು, ತಸ್ಯ-ಆ ವೃತ್ರಾಸುರನಿಗೆ, ಹಿ-ಯಾವಕಾರಣದ ದೆಶೆ
ಯಿಂದ, ತಪಃ-ತಪವು, ಶ್ರೇಯಃ-ಶ್ರೇಯಸ್ಕರವೋ, ತಪಃ-ತಪವು, ಪರಮಂಸುಖಂಹಿ-ಬಹಳಸುಖಕರವಾದ್ದೊ, ತಸ್ಮಾತ್-ಆಕಾರಣದದೆಸೆಯಿಂದ, ಅ
ನುತ್ತಮಂ-ಸರ್ವೋತ್ತಮವಾದ, ತಪಃ-ತಪವನ್ನು, ಕುರ್ಯಾಂ-ಮಾಡುವೆನು ಇತಿ-ಇಂತೆಂದು, ಬುದ್ಧಿಃ-ಬುದ್ಧಿಯು, ಸಮುತ್ಪನ್ನಾ-ಹುಟ್ಟಿತು ॥೯॥
ಸಃ-ಆ ವೃತ್ರಾಸುರನು, ಪೌರೇಷು-ಪಟ್ಟಣಸ್ಥರಲ್ಲಿ, ಮಧುರೇಶ್ವರಂ-ಸೌಮ್ಯನಾದಪ್ರಭುವಾದ, ಜ್ಯೇಷ್ಠಂಸುತಂ-ದೊಡ್ಡಕುವರನನ್ನು, ನಿಕ್ಷಿಪ್ಯ-ಪಟ್ಟಾಭಿ
ಷೇಕಮಾಡಿ, ಸರ್ವದೇವತಾಃ-ಸಮಸ್ತದೇವತೆಗಳನ್ನು, ತಾಪಯನ್-ಸಂತಾಪಗೊಳಿಸುತಿರುವನಾಗಿ, ಉಗ್ರಂ-ಕ್ರೂರವಾದ, ತಪಃ-ತಪವನ್ನು, ಉಪಾ
ತಿಷ್ಠತ್-ಮಾಡಿದನು,॥೧೦॥ವೃತ್ರೇ-ವೃತ್ರಾಸುರನು,ತಪಃ-ತಪವನ್ನು,ತಪ್ಯತಿಸತಿ-ತಪಿಸುತಿರಲಾಗಿ, ವಾಸವಸ್ತು-ದೇವೇಂದ್ರನಾದರೋ,ಪರಮಾರ್ತವತ್-ಬ
ಹಳದೀನನಾಗಿ,ವಿಷ್ಣುಂ-ಶ್ರೀಮಹಾವಿಷ್ಣುವಿನಂ ಕುರಿತು, ಉಪಸಂಕ್ರಮ್ಯ-ಹೋಗಿ,ಏತದ್ವಾಕ್ಯಂ-ಈಮಾತನ್ನು, ಉವಾಚಹ-ಹೇಳಿದನಷ್ಟೆ॥೧೧॥ ಹೆ ಮ
ಹಾಬಾಹೋ-ಎಲೊ ಭುಜಪರಾಕ್ರಮಶಾಲಿಯೇ,ತಪಸ್ಯತಾ-ತಪವನ್ನು ಮಾಡುತಿರುವ, ವೃತ್ರೇಣ-ವೃತ್ರಾಸುರನಿಂದ, ಲೋಕಾಃ-ಲೋಕಗಳು, ನಿರ್ಜಿತಾಃ-
ಜಯಿಸಲ್ಪಟ್ಟವು, ಹಿ-ಯಾವಕಾರಣದ ದೆಸೆಯಿಂದ,ಬಲವಾನ್-ಬಲಿಷ್ಠನಾದ, ಸಃ-ಆ ವೃತ್ರಾಸುರನು, ಧರ್ಮಾತ್ಮಾ-ಧರ್ಮಿಷ್ಠನೋ-ತಸ್ಮಾತ್-ಆಕಾರಣದದೆ
ಯಿಂದ, ಏನಂ-ಈ ವೃತ್ರಾಸುರನನ್ನು, ಬಾಧಿತುಂ-ಬಾಧೆಗೊಳಿಸುವದಕ್ಕೋಸ್ಕರ, ನಶಕ್ಷ್ಯಾಮಿ-ಶಕ್ತನಾಗಲಾರೆನು॥೧೨॥ಅಸುರೇಶ್ವರಃ- ರಾಕ್ಷಸಾಧಿಪತಿ
ಯಾದ, ಅಸೌ-ಈ ವೃತ್ರಾಸುರನು, ಭೂಯಏವ-ಮತ್ತೂನೇ, ತಪಃ-ತಪವನ್ನು,ಆತಿಷ್ಠೇದ್ಯದಿ-ಅನುಷ್ಠಾನ ಮಾಡಿದವನಾದರೋ,ಲೋಕಾಃ-ಲೋಕಗಳು,
ಯಾವತ್-ಎಷ್ಟುಪರ್ಯಂತವೂ, ಧರಿಷ್ಯಂತಿ-ಇರುವವೋ, ತಾವತ್-ಅಷ್ಟುಪರ್ಯಂತವು, ಅಸ್ಯ-ಈ ವೃತ್ರಾಸುರನಿಗೆ,ವಶಾನುಗಾಃ-ಸ್ವಾಧೀನಗಳಾಗುತವೇ॥
ಹೆ ಮಹಾಬಲ-ಎಲೈ ಮಹಾಬಲಶಾಲಿಯೇ, ತ್ವಂತು-ನೀನಾದರೋ, ಪರಮೋದಾರಂ-ಅತ್ಯುನ್ನತನಾದ, ಏನಂ-ಇವನನ್ನು, ಉಪೇಕ್ಷಸಿ-ಉಪೇಕ್ಷೆಮಾಡಿ
ದ್ದೀ, ಹೆ ಸುರೇಶ್ವರ-ಎಲೈ ದೇವತಾಸ್ವಾಮಿಯೇ, ತ್ವಯಿ-ನೀನು, ಕ್ರುದ್ಧೇಸತಿ-ಕೋಪಗೊಂಡವನಾಗಲಾಗಿ, ವೃತ್ರಃ-ವೃತ್ರನು, ಕ್ಷಣಂ-ಕ್ಷಣಕಾಲವೂ
ನು, ನಭವೇದ್ಧಿ-ಇರಲಾರನಷ್ಟೇ ॥೧೪॥ ಹೆ ವಿಷ್ಣೋ-ಎಲೈ ವಿಷ್ಣುವೇ, ಯದಾ-ಯಾವಾಗ, ತ್ವಯಾ-ನಿನ್ನೊಡಗೂಡ, ಪ್ರೀತಿಸಂಯೋಗಂ- ವಿಶ್ವಾಸವ

---

ಯೂ ಬುದ್ಧಿವಂತನಾಗಿಯೂ ಸಾವಧಾನಚಿತ್ತನಾಗಿಯೂ ಇರುವನಾಗಿ ಧರ್ಮದಿಂದ ಈಧರಾತಲವನ್ನೆಲ್ಲಾ ಆಳುತಿ
ದ್ದನು ॥೬॥ ಆತನು ಪರಿಪಾಲಿಸುವಾಗ, ಭೂಮಿಯು ಸರ್ವಫಲಗಳಂ ಕೊಡುತ್ತಿತ್ತು, ಇದಲ್ಲದೆ ಕಂದಮೂಲಗಳೂ
ಫಲಗಳೂ ಇವುಗಳೆಲ್ಲ ರಸವತ್ತಾಗಿದ್ದವು, ಮತ್ತೂ ಆತನನೆಲವು ಉಳದೇಲೆ ಫಲಿಸುತ್ತಿತ್ತು,ಆವೃತ್ರಾಸುರನು ಈಪರಿಆ
ಶ್ಚರ್ಯಕರವಾಗಿ ರಾಜ್ಯಪದವಿಯನ್ನನುಭವಿಸುತಿದ್ದನು ॥೮॥ಆತನಿಗೆ ತಪವೇಶ್ರೇಯಸ್ಸು ತಪವೇಸುಖವು ಆದಕಾರಣ
ಹ್ಯಾಗಾದರೂ ತಪವಂಗೈಯ್ಯಬೇಕೆಂದು ಮತಿಯುಂಟಾಗಿ, ಮಗನಿಗೆ ರಾಜ್ಯಪದವಿಯನ್ನೊಪ್ಪಿಸಿ, ದೇವತೆಗಳನ್ನೆ
ಲ್ಲಾ ತಪಿಸುತ್ತಿರುವನಾಗಿ ಘೋರವಾದ ತಪದಲ್ಲಿ ನಿಂತಂಥಾವನಾದನು ॥೧೦॥ ಈಪರಿ ವೃತ್ರಾಸುರನು ತಪವಂಗೈಯು
ತ್ತಿರಲೂ, ಇಂದ್ರನು ಬಹಳ ಆರ್ತನಾಗಿ, ಶ್ರೀಮಹಾವಿಷ್ಣುವಿನ ಸನ್ನಿಧಿಗೆಪೋಗಿ, ಈಮಾತಂಪೇಳಿದನು ॥೧೧॥ ಎಲೈ
ಮಹಾಭುಜಪರಾಕ್ರಮಿಯಾದ ಶ್ರೀಮನ್ನಾರಾಯಣನೆ ! ತಪವಂಗೈಯ್ಯುತ್ತಿರುವ ವೃತ್ರಾಸುರನಿಂದ ಲೋಕಂಗಳೆಲ್ಲಾ
ಜಯಿಸಲ್ಪಟ್ಟವು, ಅವನು ಮಹಾಬಲವಂತನಾದ ಕಾರಣ ಆತನನ್ನು ನಾನುಬಾಧಿಸಲಾರೆನು,ಅಸುರೇಶ್ವರನಾದ ಈತನು
ಮತ್ತೂ ತಪವಂಮಾಡಿದರೆ, ಈಲೋಕಂಗಳಿರುವವರಿವಿಗೂ ಎಲ್ಲಾ ಈತನ ಸ್ವಾಧೀನವಾಗಿರುವವು, ನೀನಾದರೆ ಉ
ಪೇಕ್ಷಿಸಿದಂಥಾವನಾಗಿದ್ದೀ, ಎಲೈ ದೇವೋತ್ತಮನೆ ! ನೀನು ಕುಪಿತನಾದರೆ ಒಂದು ಕ್ಷಣ ಮಾತ್ರದರೂ ಈವೃತ್ರನಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯದಾಹಿಪ್ರೀತಿಸಂಯೋಗಂತ್ವಯಾವಿಷ್ಣೋ ಸಮಾಗತಃ । ತದಾಪ್ರಭೃತಿಲೋಕಾನಾಂನಾಥತ್ವ ಮುಪಲಬ್ಧವಾನ್ ॥೧೫॥ ಸತ್ವಂಪ್ರಸಾದಂದೇವಾನಾಂಕುರುಷ್ವಸುಮಹಾಯಶಃ । ತ್ವತ್ಕೃತೇನಹಿಸರ್ವಂಸ್ಯಾತ್ಪ್ರಶಾಂತಮಜರಂಜಗತ್ ॥೧೬॥ ಇಮೇಹಿಸರ್ವೇ ವಿಷ್ಣೋ ತ್ವಾಂನಿರೀಕ್ಷಂತೇದಿವೌಕಸಃ। ವೃತ್ರಘಾತೇನಮಹತಾಏಷಾಂಸಾಹ್ಯಂಕುರುಷ್ವಹ ॥೧೭॥ ತ್ವಯಾಹಿನಿತ್ಯಶಸ್ಸಾಹ್ಯಂಕೃತಮೇಷಾಂಮಹಾತ್ಮನಾಂ। ಅಸಹ್ಯಮಿದಮನ್ಯೇಷಾಮಗತೀನಾಂಗತಿರ್ಭವ ॥೧೮॥ *ಚತುರಶೀತತಮಸ್ಸರ್ಗಃ*

ಲಕ್ಷ್ಮಣಸ್ಯತುತದ್ವಾಕ್ಯಂಶ್ರುತ್ವಾ ಶತ್ರುನಿಬರ್ಹಣಃ । ವೃತ್ರಘಾತಮಶೇಷೇಣಕಥಯೇತ್ಯಾಹಸುವ್ರತ ॥೧॥ ರಾಘವೇಣೈವಮುಕ್ತಸ್ತು ಸುಮಿತ್ರಾನಂದವರ್ಧನಃ । ಭೂಯಏವಕಥಾಂದಿವ್ಯಾಂಕಥಯಾಮಾಸಲಕ್ಷ್ಮಣಃ ॥೨॥ ಸಹಸ್ರಾಕ್ಷವಚಶ್ಶ್ರುತ್ವಾ ಸರ್ವೇಷಾಂಚದಿವೌಕಸಾಮ್। ವಿಷ್ಣುರ್ದೇವಾನುವಾಚೇದಂಸರ್ವಾನಿಂದ್ರಪುರೋಗಮಾನ್ ॥೩॥ ಪೂರ್ವಂಸೌಹೃದಬದ್ಧೋಸ್ಮಿವೃತ್ರಸ್ಯಾಹಂಮಹಾತ್ಮನಃ। ತೇನಯುಷ್ಮತ್ಪ್ರಿಯಾರ್ಥಂವೈನಾಹಂಹನ್ಮಿ ಮಹಾಸುರಮ್ ॥೪॥ ಅವಶ್ಯ ಕರಣೀ

---

ನ್ನು, ಸಮಾಗತಃ-ಹೊಂದಿದನೋ, ತದಾಪ್ರಭೃತಿ-ಆ ಕಾಲವೊದಲು, ಲೋಕಾನಾಂ-ಲೋಕಗಳಿಗೆ, ನಾಥತ್ವಂ- ಸ್ವಾಮಿತ್ವವನ್ನು, ಉಪಲಬ್ಧವಾನ್-ಹೊಂದಿದನು ॥೧೫॥ ಹೆಸುಮಹಾಯಶಃ-ಎಲೈ ಮಹಾಯಶೋವಂತನೇ, ಸತ್ವಂ-ಅಈ ನೀನು, ದೇವಾನಾಂ-ದೇವತೆಗಳಿಗೆ, ಪ್ರಸಾದಂ-ಅನುಗ್ರಹವನ್ನು, ಕುರುಷ್ವ-ಮಾಡು, ತ್ವತ್ಕೃತೇ-ನಿನ್ನನಿಮಿತ್ತವಾಗಿ, ಸುರಕ್ಷಣೇನ-ರಕ್ಷಣೆಯಿಂದ, ಸರ್ವಂ-ಸಮಸ್ತವಾದ, ಅಜರಂ-ಜೀರ್ಣವಾಗದಿರುವ, ಜಗತ್- ಜಗತ್ತು, ಪ್ರಶಾಂತಂ-ಬಾಧವಿಲ್ಲದಂಥಾದ್ದು, ಸ್ಯಾತ್-ಆಗುವದು ॥೧೬॥ ಹೆ ವಿಷ್ಣೋ-ಎಲೈ ಶ್ರೀವಿಷ್ಣುವೇ, ಇಮೇ-ಈದಿವೌಕಸಃ-ದೇವತೆಗಳು, ಸರ್ವೇ-ಸಮಸ್ತರೂನು, ತ್ವಾಂ-ನಿನ್ನನ್ನು, ನಿರೀಕ್ಷಂತೆ-ನಿರೀಕ್ಷಿಸುತ್ತಾರೆ, ಮಹತಾ-ದೊಡ್ಡದಾದ, ವೃತ್ರಘಾತೇನ-ವೃತ್ರಾಸುರನ ಸಂಹಾರದಿಂದ, ಏಷಾಂ-ಈ ದೇವತೆಗಳಿಗೆ, ಸಾಹ್ಯಂ-ಸಹಾಯವನ್ನು, ಕುರುಷ್ವಹ-ಮಾಡು, ತ್ವಯಾಹಿ-ನಿನ್ನಿಂದ, ಮಹಾತ್ಮನಾಂ-ಮಹಾಮನಸ್ಕರಾದ, ಏಷಾಂ- ಈ ದೇವತೆಗಳಿಗೆ, ನಿತ್ಯಶಃ-ನಿರಂತರವೂನು, ಸಾಹ್ಯಂ-ಸಹಾಯ ಕರ್ಮವು, ಕೃತಂಹಿ-ಮಾಡಲ್ಪಟ್ಟಿತಷ್ಟೆ ॥೧೭॥ ಇದಂ-ಈ ಕಾರ್ಯವು, ಅನ್ಯೇಷಾಂ-ಇತರರಿಗೆ, ಅಸಹ್ಯಂ-ಅಸಾಧ್ಯವು, ಅಗತೀನಾಂ-ಗತಿಯಿಲ್ಲದನಮಿಗೆ, ಗತಿಃ-ಶರಣವು, ಭವ-ಆಗು ॥೧೮॥ —*ಇತಿ ಚತುರಶೀತಿ ತಮಸ್ಸರ್ಗಃ*—

ಶತ್ರುನಿಬರ್ಹಣಃ-ಶತ್ರುಸಂಹಾರಕನಾದ ಶ್ರೀರಾಮನು, ಲಕ್ಷ್ಮಣಸ್ಯ-ಲಕ್ಷ್ಮಣನ, ತದ್ವಾಕ್ಯಂತು-ಆ ಮಾತನ್ನಾದರೆ, ಶ್ರುತ್ವಾ-ಕೇಳಿ, ಹೆಸುವ್ರತ-ಎಲೈ ವ್ರತಶೀಲನೇ, ವೃತ್ರಘಾತಂ-ವೃತ್ರಾಸುರ ಸಂಹಾರವನ್ನು, ಅಶೇಷೇಣ-ಸಮಗ್ರವಾಗಿ, ಕಥಯ-ಹೇಳು, ಇತಿ-ಇಂತೆಂದು, ಆಹ- ನುಡಿದನು ॥೧॥ ರಾಘವೇಣ-ಶ್ರೀರಾಮನಿಂದ, ಏವಂ-ಈ ಪರಿಯಾಗಿ, ಉಕ್ತಃ-ಹೇಳಲ್ಪಟ್ಟ, ಸುಮಿತ್ರಾನಂದವರ್ಧನಃ-ಸುಮಿತ್ರೆಗೇ ಆನಂದವನ್ನು ವೃದ್ಧಿಗೊಳಿಸುತಿರುವ, ಲಕ್ಷ್ಮಣಸ್ತು -ಲಕ್ಷ್ಮಣನಾದರೆ, ದಿವ್ಯಾಂ-ಮನೋಹರವಾದ, ಕಥಾಂ-ಕಥೆಯನ್ನು, ಭೂಯಏವ-ಮತ್ತೂ, ಕಥಯಾಮಾಸ-ಹೇಳಿದನು ॥ ವಿಷ್ಣುಃ-ಶ್ರೀಮಹಾ ವಿಷ್ಣುವು, ಸರ್ವೇಷಾಂ-ಸಮಸ್ತರಾದ, ದಿವೌಕಸಾಂ-ದೇವತೆಗಳೊಳಗೆ, ಸಹಸ್ರಾಕ್ಷವಚಃ-ಇಂದ್ರನಮಾತನ್ನು, ಶ್ರುತ್ವಾ-ಕೇಳಿ, ಇಂದ್ರಪುರೋಗಮಾನ್-ಇಂದ್ರನೇ ಮೊದಲಾಗುಳ್ಳ, ಸರ್ವಾನ್-ಸಮಸ್ತರಾದ, ದೇವಾನ್-ದೇವತೆಗಳನ್ನು, ಇದಂ-ಈ ಮಾತನ್ನು, ಉವಾಚ-ಹೇಳಿದನು ॥೩॥ ಮಹಾತ್ಮನಃ-ಮಹಾಪ್ರಭಾವಂತನಾದ, ವೃತ್ರಸ್ಯ-ವೃತ್ರಾಸುರನಿಗೆ, ಅಹಂ-ನಾನು, ಪೂರ್ವಂ-ಮೊದಲು, ಸೌಹೃದಭಕ್ತಃ-ಭಕ್ತಿಯಿಂದ ಬದ್ಧನಾದವನು, ಅಸ್ಮಿ-ಆದೆನು, ತೇನ-ಆ ಕಾರಣದಿಂದ, ಯುಷ್ಮತ್ಪ್ರಿಯಾರ್ಥಂ-ನಿಮ್ಮಗಳ ಪ್ರೀತಿಗೋಸುಗ, ಅಹಂ-ನಾನು, ಮಹಾಸುರಂವೈ-ವೃತ್ರಾಸುರನನ್ನಾದರೆ, ನಹನ್ಮಿ-ಕೊಡಿಯುವದಿಲ್ಲಾ ॥೪॥ ಭವತಾಂ-ನಿಮ್ಮಗಳ, ಉತ್ತಮಂ-ಉತ್ಕೃಷ್ಟವಾದ, ಸುಖಂ-ಸುಖವು, ಅವಶ್ಯಕರಣೀಯಂಚ-ಆಗತ್ಯವಾಗಿ

---

ಲಾರನು, ನಿನ್ನ ಸಂಗಡ ಆ ಮಹಾಸುರನು ವಿಶ್ವಾಸವಂ ಪೊಂದಿದ ಕಾಲವು ಮೊದಲ್ಗೊಂಡು, ಲೋಕಂಗಳೆಲ್ಲ ಪ್ರಭುತ್ವವಂಪಡದನು, ಎಲೈ ಮಹಾ ಯಶೋವಂತನೆ ! ಅಂಥ ಮಹಿಮಾವಂತನಾದ ನೀನು ದೇವತೆಗಳಲ್ಲಿ ಅನುಗ್ರಹಿಸುವಂಥಾವನಾಗು, ನಿನ್ನಿಂಡ ಸಂರಕ್ಷಿಸಲ್ಪಟ್ಟ ಈ ಜಗವೆಲ್ಲ ನಿರುಪಾಧಿಕವಾಗಿರುವದು, ಈದೇವತೆಗಳೆಲ್ಲರು ನಿನ್ನನ್ನು ನಿರೀಕ್ಷಿಸುತ್ತಿರುವರು, ಮಹತ್ತರವಾದ ವೃತ್ರಾಸುರನ ಸಂಹಾರದಿಂದ ಇವರಿಗೆಲ್ಲ ಸಹಾಯವಂಮಾಡುವಂಥಾವನಾಗು, ಮಹಾತ್ಮರಾದ ಈ ದೇವತೆಗಳಿಗೆಲ್ಲ ಅನೇಕಸಲಸಹಾಯಕಾರ್ಯವಂ ಮಾಡಿದಂಥಾವನಾಗಿದ್ದೀ, ಈಕೃತ್ಯವು ಇತರರಿಗೆ ಅಸಾಧ್ಯವಾದುದ್ದು, ಗತಿಯಿಲ್ಲದೆ ಇರುವ ನಮಿಗೆ ನೀನು ರಕ್ಷಕನಾಗು ॥೧೮॥—...೮೪ನೆಯ ಸರ್ಗಂಮುಗಿದುದು...—

ಶತ್ರು ಸಂಹಾರಕನಾದ ಶ್ರೀರಾಮನು ಲಕ್ಷ್ಮಣನು ಪೇಳಿದ ಆ ವಾಕ್ಯವಂ ಕೇಳಿ, ಎಲೈ ನಿಯಮವಂತನಾದ ಲಕ್ಷ್ಮಣನೆ ! ವೃತ್ರಾಸುರನ ಸಂಹಾರವು ಹ್ಯಾಗೆ ನಡೆದಂಥಾದ್ದಾಯಿತೋ ಅದಂ ಪೇಳುವಂಥಾವನಾದನು ॥೧॥ ಶ್ರೀರಾಮನಿಂದ ಈಪರಿ ಕೇಳಲ್ಪಟ್ಟ ಆಸುಮಿತ್ರಾಪುತ್ರನಾದ ಲಕ್ಷ್ಮಣನು ಮತ್ತೂ ಆ ಕಥೆಯಂ ಪೇಳುವನದೆಂತೆನೆ॥೨॥ ಕೇಳೆಲೈ ಆರ್ಯನೆ ! ದೇವತೆಗಳೆಲ್ಲರು ಕೇಳುತ್ತಿರುವಾಗ ಇಂದ್ರನು ನುಡಿದ ಆ ಮಾತಂ ಕೇಳಿ, ಶ್ರೀಮಹಾವಿಷ್ಣುವು ದೇವತೆಗಳಂ ಕುರಿತಿಂತೆಂದನು, ಎಲೈ ದೇವತೆಗಳಿರಾ ! ಪೂರ್ವದಲ್ಲಿ ಮಹಾತ್ಮನಾದ ಆ ವೃತ್ರಾಸುರನ. ಸಂಗಡ ಸ್ನೇಹವಂ ಬೆಳಿಸಿಧೇನೆ, ಆಹೇತುವಿನಿಂದ ಈಗ ನಿಮಗೋಸುಗ ಆತನಂ ನಾನು ಸಂಹರಿಸಲಾರೆನು, ಆದರೆ ನಿಮಿಗೆಲ್ಲ ಕ್ಷೇಮವುಳ್ಳು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಂಚಭವತಾಂಸುಖಮುತ್ತಮಮ್ । ತಸ್ಮಾದುಪಾಯಮಾಖ್ಯಾಸ್ಯೇಯೇನವೃತ್ರಂವಧಿಷ್ಯತಿ ॥೫॥ ತ್ರಿಧಾಭೂತಂಕರಿಷ್ಯೇಽಹ ಮಾತ್ಮಾನಂಸುರಸತ್ತಮಾಃ । ತೇನವೃತ್ರಂಸಹಸ್ರಾಕ್ಷೋವಧಿಷ್ಯತಿನಸಂಶಯಃ ॥೬॥ ಏಕಾಂಶೋವಾಸವಂಯಾತುದ್ವಿತೀ ಯೋವಜ್ರಮೇವತು । ತೃತೀಯೋಭೂತಲಂಶಕ್ರಸ್ತತೋವೃತ್ರಂವಧಿಷ್ಯತಿ ॥೭॥ ತಥಾಬ್ರುವತಿದೇವೇಶೇದೇವಾವಾಕ್ಯಮಥಾಬ್ರು ವನ್ । ಏವಮೇತನ್ನಸಂದೇಹೋಯಥಾವದಸಿದೈತ್ಯಹನ್ ॥೮॥ ಭದ್ರಂತೇಸ್ತುಗಮಿಷ್ಯಾಮೋವೃತ್ರಾಸುರವಧೈಷಿಣಃ । ಭಜಸ್ವ ಪರಮೋದಾರವಾಸವಂಸ್ವೇನತೇಜಸಾ ॥೯॥ ತತಸ್ಸರ್ವೇಮಹಾತ್ಮಾನಸ್ಸಹಸ್ರಾಕ್ಷಪುರೋಗಮಾಃ । ತದರಣ್ಯಮುಪಾ ಕ್ರಾಮನ್ಯತ್ರವೃತ್ರೋಮಹಾಸುರಃ ॥೧೦॥ ತೇಪಶ್ಯನ್ತೇಜಸಾಭೂತಂತಪ್ಯಂತಮಸುರೇಶ್ವರಮ್ । ಪಿಬಂತಮಿವಲೋ ಕಾಂಸ್ತ್ರೀನ್ನಿರ್ದಹಂತಮಿವಾಂಬರಮ್ ॥೧೧॥ ದೃಷ್ಟ್ವೈವಚಾಸುರಶ್ರೇಷ್ಠಂದೇವಾಸ್ತ್ರಾಸಮುಪಾಗಮನ್ । ಕಥಮೇನಂಹನಿ ಷ್ಯಾಮಃಕಥಂನಸ್ಯಾತ್ಪರಾಜಯಃ ॥೧೨॥ ತೇಷಾಂಚಿಂತಯತಾಂತತ್ರಸಹಸ್ರಾಕ್ಷಃಪುರಂದರಃ । ವಜ್ರಂಪ್ರಗೃಹ್ಯಬಾಹು

---

ಮಾಡತಕ್ಕದ್ದು, ತಸ್ಮಾತ್-ಆ ಕಾರಣದದೆಸೆಯಿಂದ, ಯೇನ-ಯಾವಪ್ರಪಾಯದಿಂದ, ವೃತ್ರಂ-ವೃತ್ರಾಸುರನನ್ನು, ವಧಿಷ್ಯಥ- ಸಂಹಾರಮಾಡುವಿರೋ, ತಮುಪಾಯಃ-ಅಂಥಾ ಉಪಾಯವನ್ನು, ಆಖ್ಯಾಸ್ಯೇ-ಹೇಳುವೆನು ॥೫॥ ಹೆ ಸುರಸತ್ತಮಾಃ-ಎಲೈದೇವತಾ ಶ್ರೇಷ್ಠಗಳಿರಾ, ಅಹಂ- ನಾನು, ಆತ್ಮಾ ನಂ-ನನ್ನನ್ನು, ತ್ರಿಧಾಭೂತಂ-ಮೂರುಅಂಶಗ ಳುಳ್ಳದ್ದನ್ನಾಗಿ, ಕರಿಷ್ಯೇ-ಮಾಡುವೆನು, ತೇನ-ಆ ಅಂಶದಿಂದ, ಸಹಸ್ರಾಕ್ಷಃ-ದೇವೇಂದ್ರನು, ವೃತ್ರಂ- ವೃತ್ರಾಸುರನನ್ನು, ವಧಿಷ್ಯತಿ-ಹೊಡಿಯುವನು, ಸಂಶಯಃ-ಸಂಶಯವು, ನ-ಇಲ್ಲಾ ॥೬॥ ಏಕಾಂಶಃ-ಒಂದನೇಅಂಶವು, ವಾಸವಂ-ದೇವೇಂದ್ರನನ್ನು, ಯಾತು-ಹೊಂದಲೀ, ದ್ವಿತೀಯಃ-ಎರಡನೇ ಅಂಶವು, ವಜ್ರಮೇವತು-ವಜ್ರಾಯುಧವನ್ನಾದರೇ, ಯಾತು-ಹೊಂದಲೀ,ತೃತೀಯಃ-ಮೂರನೇ ಅಂಶವು, ಭೂತಲಂ-ಭೂಪ್ರದೇಶವನ್ನೂ, ಯಾತು-ಹೊಂದಲೀ, ತತಃ-ಅದರದೆಸೆಯಿಂದ, ಶಕ್ರಃ-ದೇವೇಂದ್ರನು, ವೃತ್ರಂ-ವೃತ್ರಾಸುರನನ್ನು, ವಧಿಷ್ಯತಿ- ವಧಿ ಸುವನು ॥೭॥ ದೇವೇಶೇ-ದೇವೋತ್ತಮನಾದ ಶ್ರೀಮಹಾವಿಷ್ಣುವು, ತಥಾ-ಆ ಪರಿಯಾಗಿ, ಬ್ರುವತಿಸತಿ - ಹೇಳುವನಾಗತಿರಲೀಕಾಗಿ, ದೇವಾಃ- ದೇವತೆಗ ಳು, ಅಥ-ಬಳಿಕ, ಅಬ್ರುವನ್-ನುಡಿದರು, ಹೆ ದೈತ್ಯಹನ್-ಎಲೊದೈತ್ಯಸಂಹಾರಕನೇ, ತ್ವಂ-ನೀನು, ಯಥಾ-ಹ್ಯಾಗೆ, ವದಸಿ-ಹೇಳುತ್ತಿಯ್ಯೋ, ಏತತ್- ಇದು, ಏವಂ-ಹೀಗೆ, ನಸಂದೇಹಃ-ಸಂಶಯಮಿಲ್ಲಾ ॥೮॥ ಹೆ ಪರಮೋದಾರ-ಎಲೊಸರ್ವೋತ್ಕೃಷ್ಟನಾದವನೇ, ತೇ-ನಿನಿಗೆ, ಭದ್ರಂ-ಶುಭವು, ಅಸ್ತು- ಆಗ ಲೀ, ಗಮಿಷ್ಯಾಮಃ-ಹೋಗುತ್ತೇವೇ, ವೃತ್ರಾಸುರವಧೈಷಿಣಃ-ವೃತ್ರಾಸುರ-ವೃತ್ರಾಸುರನ, ವಧ-ಸಂಹಾರವನ್ನು, ಏಷಿಣಃ-ಕೋರುತಿರುವರಾಗಿ ಇ ರುತ್ತೇವೇ, ವಾಸವಂ-ದೇವೇಂದ್ರನನ್ನು, ಸ್ವೇನತೇಜಸಾ-ಸ್ವಕೀಯ್ಯವಾದ ತೇಜಸ್ಸಿನಿಂದ, ಭಜಸ್ವ-ಹೊಂದು, ॥೯॥ ತತಃ-ಬಳಿಕ, ಸಹಸ್ರಾಕ್ಷಪುರೋಗ ಮಾಃ-ದೇವೇಂದ್ರನೇ ಮೊದಲಾಗುಳ್ಳ, ಮಹಾತ್ಮಾನಃ-ಮಹಾ ಮನಸ್ವಿಗಳಾದ, ಸರ್ವೇ-ಸಮಸ್ತ ದೇವತೆಗಳೂನು, ವೃತ್ರಃ-ವೃತ್ರನೆಂಬ, ಮಹಾಸುರಃ-ಮ ಹಾದೈತ್ಯನು, ಯತ್ರ-ಯಾವ ಅರಣ್ಯದಲ್ಲಿ, ಅಸ್ತಿ-ಇದ್ದಾನೋ, ತದರಣ್ಯಂ-ಅಂಥಾಅರಣ್ಯವಂ ಕುರಿತು, ಉಪಾಕ್ರಾಮನ್-ಬಂದರು ॥೧೦॥ ತೇ-ಆ ದೇ ವತೆಗಳು, ತೇಜಸಾ-ತೇಜಸ್ಸಿನಿಂದ, ತಪ್ಯಂತಂ-ತಪಿಸುತಿರುವ, ಭೂತಂ-ಮಹಾಭೂತ ಸ್ವರೂಪನಾದ, ತ್ರೀನ್ಲೋಕಾನ್ -ಮೂರುಲೋಕಗಳನ್ನು, ಪಿ ಬಂತಮಿವ-ಪಾನಮಾಡುತ್ತಾನೋ ಎಂಬಂತಿರುವ, ಅಂಬರಂ-ಅಂತರಿಕ್ಷವನ್ನು, ದಹಂತಮಿವ-ದಹಿಸುತ್ತಾನೋ ಎಂಬಂತಿರುವ, ಅಸುರೇಶ್ವರಂ-ದೈತ್ಯಾ ಧಿಪತಿಯಾದ ವೃತ್ರನನ್ನು, ಅಪಶ್ಯನ್-ಕಂಡರು ॥೧೧॥ ದೇವಾಃ-ದೇವತೆಗಳೂ, ಅಸುರಶ್ರೇಷ್ಠಂ -ದೈತ್ಯರಾಜನಾದ, ವೃತ್ರಾಸುರನನ್ನು, ದೃಷ್ಟ್ವೈ ವ-ಕಾಣುತ್ತಾಲೇ, ಏನಂ-ಇವನನ್ನು, ಕಥಂಹನಿಷ್ಯಾಮಃ-ಹ್ಯಾಗೆ ಹೊಡೆಯುವೆವು, ಕಥಂ-ಹ್ಯಾಗೆ, ಪರಾಜಯಃ-ಪರಾಜಯವು, ನಸ್ಯಾತ್- ಆಗದೇ ಇರುವದು, ಇತಿ-ಇಂತೆಂದು, ತ್ರಾಸಂ-ಭಯವನ್ನು, ಉಪಾಗಮನ್-ಹೊಂದಿದರು ॥೧೨॥ ತೇಷಾಂ-ಆ ದೇವತೆಗಳು, ತತ್ರ-ಆಯುದ್ಧರಂಗದಲ್ಲಿ, ಚಿಂತೆ

---

ಯಾಗುವಂತೆ ಅವಶ್ಯಕವಾಗಿ ಮಾಡತಕ್ಕದ್ದು, ಆದಕಾರಣ ಆ ವೃತ್ರಾಸುರನು ಹ್ಯಾಗೆ ಸಂಹರಿಸಲ್ಪಟ್ಟವನಾಗುವನೋ ಅವಕ್ಕೆ ತಕ್ಕ ಉಪಾಯವಂ ಹೇಳುವೆನು ಕೇಳಿರಿ ಅದೇನಂದರೆ, ಎಲೈ ದೇವತೆಗಳಿರಾ ! ನಾನು ಎನ್ನ ದೇಹವನ್ನು ಮೂ ರುಭಾಗಗಳಾಗಿಮಾಡುವೆನು, ಅವರಲ್ಲಿ ಒಂದು ಅಂಶವು, ಇಂದ್ರನನ್ನು ಮತ್ತೊಂದು ಭಾಗವು ವಜ್ರಾಯುಧವನ್ನೂ ಇನ್ನೊಂದು ಪಾಲು ಭೂಮಿಯನ್ನೂ ಹೊಂದಿದವು.ಆದರಿಂದ ಇಂದ್ರನು ಆರಾಕ್ಷಸನಂ ಸಂಹರಿಸುವಂಥಾವನಾಗಲೆಂದು ನಿರೂಪಿಸಿದವನಾಗಲೂ ಆಗ ದೇವತೆಗಳು,ಎಲೈರಾಕ್ಷಸನಾಶಕನೆ! ನೀ ಹೇಳಿದಂತೇ ಆಗಲೀ ನಾವು ಪೋಗಿಬರುವೆವು, ನಿ ನಿಗೆ ಶುಭವಾಗಲಿ, ಸ್ವಕೀಯವಾದ ತೇಜಸ್ಸಿನಿಂದ ಇಂದ್ರನಂ ಪೊಂದಿ ಆ ರಾಕ್ಷಸ ಬಾಧೆಯಂ ಪರಿ ಹರಿಸುವಂ ಥಾವನಾಗೆಂದು ಹೇಳಿದವರಾದರು ॥ ೯ ॥ ಆಬಳಿಕ ಇಂದ್ರನೇ ಮೊದಲಾದ ಆ ದೇವತೆಗಳೆಲ್ಲರು ವೃತ್ರಾಸುರನಿ ರುವಆ ಮಹದಾದರಣ್ಯಕ್ಕೆ ಗಮಿಸಿ ಮೂಜಗಗಳನ್ನೂ ನುಂಗುವನಂತೆಯೂ ಗಗನವನ್ನು ಸುಡುವನಂತೆಯೂ ಮ ಹತ್ತರವಾದ ತಪವಂಗೈಯುತ್ತಿರುವ ಮತ್ತೂ ರಾಕ್ಷಸೋತ್ತಮನಾದ ಆ ವೃತ್ರಾಸುರನಂ ಕಾಣುತ್ತಲೆ ಆಗಲೆಹೆದ ರಿದವರಾಗಿ, ಇವನನ್ನು ಹ್ಯಾಗೆ ಕೊಲ್ಲಲಾಗುವದು, ನಮಿಗೆ ಪರಾಜಯ ವಿಲ್ಲದೆ ಹ್ಯಾಗೆ ಇರುವದು ಎಂದು ಎಲ್ಲರು ಚಿಂತಿಸುತ್ತಿರಲೂ, ಆಗ ನಾಕಾಧಿಪತಿಯಾದ ದೇವೇಂದ್ರನು ತನ್ನ ಬಾಹುಗಳಿಂದ ವಜ್ರಾಯುಧವಂ ಪಿಡಿದುಕೊಂಡು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕ್ಷಿಪ್ತ್ವಂಪ್ರಾಹಿಣೋದ್ವೃತ್ರಮೂರ್ಧನಿ ॥೧೩॥ ಕಾಲಾಗ್ನಿನೇವಘೋರೇಣದೀಪ್ತೇನೈವಮಹಾರ್ಚಿಷಾ । ಪತಿತೇವೃತ್ರಶಿರಸಿಜ
ಗತ್ತ್ರಾಸಮುಪಾಗಮತ್ ॥೧೪॥ ಅಸಂಭಾವ್ಯಂವಧಂತಸ್ಯವೃತ್ರಸ್ಯವಿಬುಧಾಧಿಪಃ । ಚಿಂತಯಾನೋಜಗಾಮಾಶುಲೋಕ
ಸ್ಯಾಂತಂಮಹಾಯಶಾಃ ॥೧೫॥ ತಮಿಂದ್ರಂಬ್ರಹ್ಮಹತ್ಯಾಶುಗಚ್ಛಂತಮನುಗಚ್ಛತೀ। ಅಪತಚ್ಚಾಸ್ಯಗಾತ್ರೇಷುತಮಿಂದ್ರಂ
ದುಃಖಮಾವಿಶತ್ ॥೧೬॥ ಹತಾರಯಃಪ್ರಣಷ್ಟೇಂದ್ರಾದೇವಾಸ್ಸಾಗ್ನಿಪುರೋಗಮಾಃ । ವಿಷ್ಣುಂತ್ರಿಭುವನೇಶಾನಂಮುಹು
ರ್ಮುಹುರಪೂಜಯನ್ ॥ ೧೭ ॥ ತ್ವಂಗತಿಃಪರಮಾದೇವಪೂರ್ವಜೋಜಗತಃಪ್ರಭುಃ। ರಕ್ಷಾರ್ಥಂಸರ್ವಭೂತಾನಾಂವಿಷ್ಣು
ತ್ವಮುಪಜಗ್ಮಿವಾನ್ ॥ ೧೮ ॥ ಹತಶ್ಚಾಯಂತ್ವಯಾವೃತ್ರೋಬ್ರಹ್ಮಹತ್ಯಾಚವಾಸವಮ್ । ಬಾಧತೇಸುರಶಾರ್ದೂಲ
ಮೋಕ್ಷಂತಸ್ಯವಿನಿರ್ದಿಶ ॥೧೯॥ ತೇಷಾಂತದ್ವಚನಶ್ರುತ್ವಾದೇವಾನಾಂವಿಷ್ಣುರಬ್ರವೀತ್। ಮಾಮೇವಯಜತಾಂಶಕ್ರಃಪಾವಯಿ
ಷ್ಯಾಮಿವಜ್ರಿಣಮ್ ॥೨೦॥ ಪುಣ್ಯೇನಹಯಮೇಧೇನಮಾಮಿಷ್ಟ್ವಾಪಾಕಶಾಸನಃ । ಪುನರೇಷ್ಯತಿದೇವಾನಾಮಿಂದ್ರತ್ವಮಕು

---

ಯತಾಂನತಾಂ-ಆಲೋಚಿಸುವಂಥಾವರಾಗಲಾಗಿ, ಪುರಂದರಃ-ಶತೃಗಳ ಪಟ್ಟಣಗಳನ್ನು ದಹಿಸುವಂಥಾ, ಸಹಸ್ರಾಕ್ಷಃ-ದೇವೇಂದ್ರನು, ಬಾಹುಭ್ಯಾಂ-
ಬಾಹುಗಳಿಂದ, ವಜ್ರಂ-ವಜ್ರಾಯುಧವನ್ನು, ಪ್ರಗೃಹ್ಯ-ತೆಗೆದುಕೊಂಡು, ವೃತ್ರಮೂರ್ಧನಿ-ವೃತ್ರಾಸುರನಮಂಡೆಯಲ್ಲಿ, ಪ್ರಾಹಿಣೋತ್- ಎಸೆದನು ॥
ಕಾಲಾಗ್ನಿನೇವ-ಕಾಲಾಗ್ನಿಯಂತೆ, ಘೋರೇಣ-ಭಯಂಕರವಾದ, ದೀಪ್ತೇನ-ಉರಿಯುತ್ತಿರುವ, ಮಹಾರ್ಚಿಷಾ- ಮಹಾಜ್ವಾಲೆಗಳುಳ್ಳ ವಜ್ರಾಯುಧದಿಂ
ದ, ವೃತ್ರಶಿರಸಿ-ವೃತ್ರಾಸುರನ ಶಿರವು, ಪತಿತೇಸತಿ-ಕೆಳಗೆ ಬೀಳುವಂಥಾದ್ದಾಗಲಾಗಿ, ಜಗತ್-ಲೋಕವು, ತ್ರಾಸಂ-ಭಯವನ್ನು, ಸಮುಪಾಗಮತ್-
ಹೊಂದಿತು ॥೧೪॥ ವಿಬುಧಾಧಿಪಃ-ದೇವರಾಜನಾದ ದೇವೇಂದ್ರನು, ತಸ್ಯವೃತ್ರಸ್ಯ-ಆ ವೃತ್ರಾಸುರನ, ವಧಂ-ಸಂಹಾರವನ್ನು, ಅಸಂಭಾವ್ಯಂ-ಅನುಚಿತ
ವನ್ನಾಗಿ, ಚಿಂತಯಾನಃ-ಆಲೋಚಿಸು ತಿರುವನಾಗಿ, ಮಹಾಯಶಾಃ-ಮಹಾ ಕೀರ್ತಿವಂತನಾಗಿ, ಲೋಕಸ್ಯ-ಲೋಕಗಳಿಗೆ ಅಂತಂ-ಕೊನೆಯಾದ, ಲೋ
ಕಾಲೋಕಪರ್ವತದ ಅಗ್ರಭಾಗವನ್ನು ಕುರಿತು,ಜಗಾಮ-ತೆರಳಿದನು॥೧೫॥ಗಚ್ಛಂತಂ-ಹೋಗುತ್ತಿರುವ, ತಮಿಂದ್ರಂ-ಆ ಇಂದ್ರನನ್ನು, ಬ್ರಹ್ಮಹತ್ಯಾ-ಬ್ರಹ್ಮ
ಹತ್ಯೆಯು, ಆಶು-ಜಾಗ್ರತೆಯಾಗಿ, ಅನುಗಚ್ಛತೀ-ಅನುಸರಿಸಿಹೋಯಿತು, ಅಸ್ಯ-ಈ ದೇವೇಂದ್ರನ, ಗಾತ್ರೇಷು-ಅವಯವಗಳಲ್ಲಿ, ಅಪತತ್-ಬಿದ್ದಿತು, ತ
ಮಿಂದ್ರಂ-ಆ ದೇವೇಂದ್ರನನ್ನು, ದುಃಖಂ-ದುಃಖವು, ಆವಿಶತ್-ಹೊಕ್ಕಿತು ॥ ೧೬ ॥ ಸಾಗ್ನಿಪುರೋಗಮಾಃ- ಅಗ್ನಿಯೇ ಮೊದಲಾದವರಿಂದೊಡಗೂ
ಡಿದವರಾಗಿ,ಹತಾರಯಃ-ಹತ-ಹೊಡೆಯಲ್ಪಟ್ಟ, ಅರಯಃ - ಶತೃವುಳ್ಳ, ದೇವಾಃ-ದೇವತೆಗಳು, ಪ್ರಣಷ್ಟೇಂದ್ರಾಸ್ಸಂತಃ - ಅದರ್ಶನವನ್ನು ಹೊಂದಿದ
ದೇವೇಂದ್ರನುಳ್ಳವರಾಗಿ, ತ್ರಿಭುವನೇಶಾನಂ- ಮೂರುಲೋಕಗಳಿಗೂ ಅಧೀಶ್ವರನಾದ, ವಿಷ್ಣುಂ - ಶ್ರೀಮಹಾವಿಷ್ಣುವಿನನ್ನು, ಮುಹುರ್ಮುಹುಃ-ಬಾ
ರಿಬಾರಿಗೂ, ಅಪೂಜಯನ್-ಪೂಜಿಸಿದರು ॥೧೭॥ ಹೆ ದೇವ-ಎಲೈ ಸ್ವಾಮಿಯೆ, ತ್ವಂ-ನೀನು, ಪರಮಾಗತಿಃ-ಉತ್ಕೃಷ್ಟವಾದ ಶರಣವು, ಜಗತಃ-
ಜಗತ್ತಿಗೆ, ಪೂರ್ವಜಃ-ಮೊದಲುಹುಟ್ಟಿದ,ಪ್ರಭುಃ-ಸ್ವಾಮಿಯು, ಸರ್ವಭೂತಾನಾಂ-ಸಮಸ್ತಭೂತಗಳ, ರಕ್ಷಾರ್ಥಂ-ಸಂರಕ್ಷಣಾರ್ಥವಾಗಿ, ವಿಷ್ಣುತ್ವಂ-
ನಾರಾಯಣತ್ವವನ್ನು, ಉಪಜಗ್ಮಿವಾನ್-ಹೊಂದಿದವನಾಗಿದ್ದೀ ॥೧೮॥ ಹೆ ಸುರಶಾರ್ದೂಲ-ಎಲೈ ದೇವತಾಶ್ರೇಷ್ಠನೇ, ತ್ವಯಾ-ನಿನ್ನಿಂದ, ಅಯಂವೃ
ತ್ರಃ-ಈ ವೃತ್ರಾಸುರನು, ಹತಃ-ಹೊಡೆಯಲ್ಪಟ್ಟನು, ಬ್ರಹ್ಮಹತ್ಯಾಚ - ಬ್ರಹ್ಮಹತ್ಯೆಯು, ವಾಸವಂ-ದೇವೇಂದ್ರನನ್ನು, ಬಾಧತೇ- ಬಾಧಿಸುತ್ತದೆ-
ತಸ್ಯ-ಆ ದೇವೇಂದ್ರನಿಗೆ, ಮೋಕ್ಷಂ-ಬ್ರಹ್ಮಹತ್ಯದ ಬಿಡುಗಡೆಯನ್ನು, ವಿನಿರ್ದಿಶ, ಅಜ್ಞಾಪಿಸು ॥ ೧೯ ॥ ತೇಷಾಂದೇವಾನಾಂ-ಆ ದೇವತೆಗಳ, ತದ್ವಚನಂ-ಆ
ಮಾತನ್ನು, ಶ್ರುತ್ವಾ-ಕೇಳಿ,ವಿಷ್ಣುಃ-ನಾರಾಯಣನು, ಅಬ್ರವೀತ್-ನುಡಿದನು, ಶಕ್ರಃ-ದೇವೇಂದ್ರನು, ಮಾಮೇವ-ನನ್ನನ್ನೇಕುರಿತು, ಯಜತಾಂ-ಯ
ಜ್ಞಮಾಡಲೀ, ವಜ್ರಿಣಂ-ದೇವೇಂದ್ರನನ್ನು, ಪಾವಯಿಷ್ಯಾಮಿ - ಪರಿಶುದ್ಧನನ್ನಾಗಿ ಮಾಡುವೆನು ॥ ೨೦ ॥ ಪಾಕಶಾಸನಃ - ದೇವೇಂದ್ರನು, ಪುಣ್ಯೇ
ನ-ಪುಣ್ಯಕರವಾದ,ಹಯಮೇಧೇನ-ಅಶ್ವಮೇಧದಿಂದ, ಮಾಂ-ನನ್ನನ್ನು ಕುರಿತು, ಇಷ್ಟ್ವಾ-ಯಜ್ಞಮಾಡಿ,ದೇವಾನಾಂ-ದೇವತೆಗಳೊಳಗೆ, ಅಕುತೋಭ

---

ಮೇಲಕ್ಕೆತ್ತಿ ವೃತ್ರಾಸುರನ ಮಂಡೆಯೊಳು ಹೊಡೆದಂಥಾವನಾದನು ॥೧೩॥ ಪ್ರಳಯಾಗ್ನಿಯ ತೆರದಿ ಕಡು ದಾರುಣ
ಮಾಗಿಯೂ, ಮಹತ್ತರವಾದ ಜ್ವಾಲೆಗಳುಳ್ಳದ್ದಾಗಿಯೂ ಇರುವ ಆ ವಜ್ರಾಯುಧದಿಂದ ವೃತ್ರಾಸುರನತಲೆಯು ಕತ್ತ
ರಿಸಲ್ಪಟ್ಟದ್ದಾಗಲೂ ಜಗವೆಲ್ಲವುಮಹತ್ತರವಾದ ಭೀತಿಯಂ ಪೊಂದಿತು ॥೧೪॥ ಮಹಾಯಶೋವಂತನಾದ ದೇವೇಂದ್ರನು
ಆ ವೃತ್ರಾಸುರನ ಸಂಹಾರವನ್ನು ಗೈದದ್ದು ಅನುಚಿತವೆಂಬದಾಗಿ ಚಿಂತಿಸಿ, ಲೋಕಾಲೋಕಪರ್ವತದ ಅಗ್ರಭಾಗ
ವಂ ಕುರಿತು ತೆರಳಿದವನಾಗಲೂ, ಆ ಬ್ರಹ್ಮಹತ್ಯೆಯು ಆತನನ್ನಟ್ಟಿಕೊಂಡು ಪೋಗಿ ಆತನ ಶರೀರದಲ್ಲಿ ತಗಲಲೂ,
ಇಂದ್ರನು ದುಃಖಿತನಾದನು ॥೧೬॥ ಅಗ್ನಿ ಮುಂತಾದ ದೇವತೆಗಳು ಸಂಹರಿಸಲ್ಪಟ್ಟ ಶತ್ರುಗಳುಳ್ಳವರಾದರೂ ಇಂದ್ರ
ನಂ ಕಾಣದೆ ಇರುವರಾಗಿ, ಮೂಜಗಗಳಿಗೂ ಈಶ್ವರನಾದ ಶ್ರೀಮನ್ನಾರಾಯಣನಂ ಬಾರಿಬಾರಿಗೂ ಪೂಜಿಸುತ್ತಾ ಸ್ತು
ತಿಸುವರದೆಂತನೆ ॥೧೭॥ ಎಲೈ ಭಗವಂತನೆ ! ನೀನು ಈಜಗಕ್ಕೆಲ್ಲ ಗತಿಸ್ವರೂಪನಾಗಿಯೂ ಪ್ರಥಮತಃಪುಟ್ಟಿದವನಾ
ಗಿಯೂ, ಸ್ವಾಮಿಯಾಗಿಯೂ, ಸಮಸ್ತವಾದ ಭೂತಂಗಳಸಂರಕ್ಷಣಾರ್ಥವಾಗಿ ವಿಷ್ಣು ಭಾವವಂ ಪೊಂದವನಾಗಿಯೂ
ಇರುವ, ನಿನ್ನಿಂದ ವೃತ್ರಾಸುರನು ಸಂಹರಿಸಲ್ಪಟ್ಟನು. ಆದರೆ ಬ್ರಹ್ಮಹತ್ಯೆಯು ಇಂದ್ರನಂ ಬಲುಬಾಧಿಸುತ್ತೆ, ಅದು
ಹ್ಯಾಗೆ ತೊಲಗುವದೋ ಪೇಳುವಂಥಾವನಾಗೆಂದು ಬೇಡಿದವರಾಗಲೂ, ಆವಾಕ್ಯವಂಕೇಳಿ ಶ್ರೀಮನ್ನಾರಾಯಣನು,



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೋಭಯಮ್ ॥೧೯॥ ಏವಂಸಂದಿಶ್ಯತಾಂವಾಣೀಂದೇವಾನಾಮಮೃತೋಪಮಾಮ್ । ಜಗಾಮವಿಷ್ಣುರ್ದೇವೇಶಸ್ಸ್ತೂಯ ಮಾನಸ್ತ್ರಿವಿಷ್ಟಪಮ್ ॥೨೦॥ —…ಇತಿ ಶ್ರೀಮದುತ್ತರರಾಮಾಯಣೇ ಪಂಚಾಶೀತಿತಮಸ್ಸರ್ಗಃ…—

ತಥಾವೃತ್ರವಧಂಸರ್ವಮಖಿಲೇನಸಲಕ್ಷ್ಮಣಃ । ಕಥಯಿತ್ವಾನರಶ್ರೇಷ್ಠಃಕಥಾಶೇಷಂಪ್ರಚಕ್ರಮೇ॥೧॥ ತತೋಹತೇಮ ಹಾವೀರ್ಯೇವೃತ್ರೇದೇವಭಯಂಕರೇ । ಬ್ರಹ್ಮಹತ್ಯಾವೃತಶ್ಶಕ್ರಸ್ಸಂಜ್ಞಾಂಲೇಭೇನವೃತ್ರಹಾ ॥೨॥ ಸೋಂತಮಾಶ್ರಿತ್ಯಲೋಕಾ ನಾಂಂನಷ್ಟಸಂಜ್ಞೋವಿಚೇತನಃ । ಕಾಲಂತತ್ರಾವಸತ್ಕಿಂಚಿದ್ವೇಷ್ಟಮಾನೋಯಥೋರಗಃ ॥೩॥ ಅಥನಷ್ಟೇಸಹಸ್ರಾಕ್ಷೇಉದ್ವಿಗ್ನ ಮಭವಜ್ಜಗತ್। ಭೂಮಿಶ್ಚಧ್ವಸ್ತಸಂಕಾಶಾನಿಸ್ಸ್ನೇಹಾಶುಷ್ಕಕಾನನಾ॥೪॥ನಿಸ್ಸ್ರೋತಸಶ್ಚಾಂಬುವಾಹಾಹ್ರದಾಶ್ಚವಿಗತೋ ದಕಾಃ । ಸಂಕ್ಷೋಭಶ್ಚೈವಸತ್ತ್ವಾನಾಮನಾವೃಷ್ಟಿಕೃತೋಭವತ್ ॥೫॥ಕ್ಷೀಯಮಾಣೇತುಲೋಕೇಸ್ಮಿನ್ಸಂಭ್ರಾಂತಮನಸ ಸ್ಸುರಾಃ । ಯದುಕ್ತಂವಿಷ್ಣುನಾಪೂರ್ವಂತಂಯಜ್ಞಂಸಮುಪಾನಯನ್ ॥೬॥ತತಸ್ಸರ್ವೇಸುರಗಣಾಸ್ಸೋಪಾಧ್ಯಾಯಾಸ್ಸಹ

ಯಂ-ಯಾರಿಂದಲೂಭಯವಿಲ್ಲದ, ಇಂದ್ರತ್ವಂ-ದೇವೇಂದ್ರತ್ವವನ್ನು, ಪುನಃ-ಮತ್ತು, ಎಷ್ಯತಿ-ಹೊಂದುವನು,ದೇವೇಶಃ-ದೇವಸ್ವಾಮಿಯಾದ, ವಿಷ್ಣುಃ-ಶ್ರೀ ಮನ್ನಾರಾಯಣನು, ದೇವಾನಾಂ-ದೇವತೆಗಳಿಗೆ, ಅಮೃತೋಪಮಾಂ-ಅಮೃತವಂತೆ ಇಂಪಾಗಿರುವ, ತಾಂವಾಣೀಂ-ಆ ಮಾತನ್ನು, ಏವಂ-ಈಪರಿಯಾಗಿ, ಸಂದಿಶ್ಯ-ಆಜ್ಞಾಪಿಸಿ, ಸ್ತೂಯಮಾನಃ-ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನಾಗಿ, ತ್ರಿವಿಷ್ಟಪಂ-ವೈಕುಂಠವನ್ನು ಕುರಿತು, ಜಗಾಮ-ತೆರಳಿದನು ॥೨೦॥

—*ಇತಿ ಶ್ರೀಮದುತ್ತರರಾಮಾಯಣೇ ಪಂಚಾಶೀತಿತಮಸ್ಸರ್ಗಃ*—

ನರಶ್ರೇಷ್ಠಃ-ಮನುಜಶ್ರೇಷ್ಠನಾದ, ಸಲಕ್ಷ್ಮಣಃ-ಆ ಲಕ್ಷ್ಮಣನು, ತಥಾ-ಆಪರಿಯಾಗಿ, ಸರ್ವಂ-ಸಮಸ್ತವಾದ, ವೃತ್ರವಧಂ- ವೃತ್ರಾಸುರನ ಸಂ ಹಾರವನ್ನು, ಅಖಿಲೇನ-ಸಮಗ್ರವಾಗಿ, ಕಥಯಿತ್ವಾ-ಹೇಳಿ, ಕಥಾಶೇಷಂ-ಮಿಕ್ಕ ಕಥೆಯನ್ನು,ಪ್ರಚಕ್ರಮೇ-ಉಪಕ್ರಮಿಸಿದನು ॥೧॥ ತತಃ-ಬಳಿಕ, ಮಹಾ ವೀರ್ಯೇ-ಮಹಾಸಾಮರ್ಥ್ಯವುಳ್ಳ, ದೇವಭಯಂಕರೇ-ದೇವತೆಗಳಿಗೆಲ್ಲಾ ಭಯಂಕರನಾದ, ವೃತ್ರೇ-ವೃತ್ರಾಸುರನು,ಹತೇಸತಿ-ಹತನಾಗುತ್ತಿರಲೀಕಾಗಿ, ವೃತ್ರಹಾ- ವೃತ್ರಾಸುರಸಂಹಾರಕನಾದ, ಶಕ್ರಃ-ದೇವೇಂದ್ರನು, ಬ್ರಹ್ಮಹತ್ಯಾವೃತಃ-ಬ್ರಹ್ಮಹತ್ಯಾ-ಬ್ರಹ್ಮಹತ್ಯೆಯಿಂದ, ಆವೃತಃ-ಸುತ್ತಿಕೊಳ್ಳಲ್ಪಟ್ಟವನಾಗಿ, ಸಂ ಜ್ಞಾಂ-ಸಂಜ್ಞೆಯನ್ನು, ನಲೇಭೇ-ಹೊಂದಲಿಲ್ಲಾ ॥೨॥ ಸಃ-ಆ ದೇವೇಂದ್ರನು, ನಷ್ಟಸಂಜ್ಞಃ-ನಷ್ಟವಾದ ಪ್ರಜ್ಞೆಯುಳ್ಳವನಾಗಿ, ವಿಚೇತನಃ-ಸಾ ಮರ್ಥ್ಯವಿಲ್ಲದವನಾಗಿ, ಲೋಕಾನಾಂ-ಲೋಕಗಳಿಗೆ, ಅಂತಂ-ಕೊನೆಯಾದ ಲೋಕಾಲೋಕಪರ್ವತವನ್ನು, ಆಶ್ರಿತ್ಯ-ಆಶ್ರಯಿಸಿ, ತತ್ರ-ಆ ಗಾಢಾಂಧ ಕಾರದಲ್ಲಿ, ವೇಷ್ಟಮಾನಃ-ಸುತ್ತಿಕೊಂಡಿರುವ, ಉರಗೋಯಥಾ-ಹಾವಿನಂತೇ, ಕಿಂಚಿತ್ಕಾಲಂ-ಸ್ವಲ್ಪಕಾಲವು, ಅವಸತ್-ಇದ್ದನು ॥೩॥ ಅಥ- ಬಳಿಕ, ಸಹಸ್ರಾಕ್ಷೇ-ದೇವೇಂದ್ರನು, ನಷ್ಟೇಸತಿ-ಕಾಣದಿದ್ದವನಾಗಲಾಗಿ, ಜಗತ್-ಲೋಕವು, ಉದ್ವಿಗ್ನಂ-ಹೆದರಿಕೆಯುಳ್ಳದ್ದು, ಅಭವತ್-ಆಯಿತು, ಭೂಮಿ ಶ್ಚ-ಭೂಮಿಯೂನು, ಧ್ವಸ್ತಸಂಕಾಶಾ-ಧ್ವಸ್ತಂ-ನಾಶವನ್ನು ಹೊಂದಿದ್ದ, ಸಂಕಾಶಾ-ನಷ್ಟಪ್ರಾಯವಾಗಿ, ನಿಸ್ಸ್ನೇಹಾ-ವಿಶ್ವಾಸವಿಲ್ಲದ್ದಾಗಿ, ಶುಷ್ಕಕಾನನಾ- ನಿಸ್ಸಾರವಾದ ಅರಣ್ಯಗಳುಳ್ಳದ್ದಾಗಿ, ಅಭವತ್-ಆಯಿತು ॥೪॥ ಅಂಬುವಾಹಾಃ-ನದಿಗಳು, ನಿಸ್ಸ್ರೋತಸಶ್ಚ ಪ್ರವಾಹವಿಲ್ಲದವುಗಳು, ಅಭವನ್-ಆದವು, ಹ್ರ ದಾಶ್ಚ-ಸರೋವರಗಳೂನು, ವಿಗತೋದಕಾಃ-ವಿಗತ-ಹೋದಂಥಾ, ಉದಕಾಃ-ಉದಕಗಳುಳ್ಳವುಗಳು, ಅಭವನ್-ಆದವು, ಸತ್ತ್ವಾನಿ-ಜಂತುಗಳಿಗೆ, ಅನಾವೃ ಷ್ಟಿಕೃತಃ-ಅನಾವೃಷ್ಟಿಯಿಂದ ಮಾಡಲ್ಪಟ್ಟ, ಸಂಕ್ಷೋಭಶ್ಚ-ಕ್ಷೋಭವೂನು, ಅಭವತ್-ಆಯಿತು ॥೫॥ ಅಸ್ಮಿನ್‌ಲೋಕೇತು-ಈ ಲೋಕವಾದರೆ, ಕ್ಷೀ ಯಮಾಣೇಸತಿ-ಕ್ಷೀಣಗತಿಯನ್ನು ಹೊಂದಿದಂಥಾದ್ದಾಗಲಾಗಿ, ಸುರಾಃ-ದೇವತೆಗಳು, ಸಂಭ್ರಾಂತಮನಸಃ-ಭ್ರಾಂತಿಗೊಂಡ ಮನಸ್ಸುಳ್ಳವರಾಗಿ, ಪೂ ರ್ವಂ-ಪೂರ್ವದಲ್ಲಿ, ವಿಷ್ಣುನಾ-ಶ್ರೀ ಮಹಾವಿಷ್ಣುವಿನಿಂದ, ಯತ್-ಯಾವದು, ಉಕ್ತಂ-ಹೇಳಲ್ಪಟ್ಟಿತ್ತೋ, ತಂಯಜ್ಞಂ-ಅಂಥಾ ಯಜ್ಞವನ್ನು, ಸ ಮುಪಾನಯನ್-ಆರಂಭ ಮಾಡಿಸಿದರು ॥೬॥ ತತಃ-ಬಳಿಕ, ಸರ್ವೇ-ಸಮಸ್ತಗಳಾದ,ಸುರಗಣಾಃ-ದೇವತಾತಂಡಗಳು, ಸೋಪಾಧ್ಯಾಯಾಃ-ಉಪಾಧ್ಯಾಯ

ಎಲೈ ದೇವತೆಗಳಿರಾ ! ಇಂದ್ರನು ನನ್ನನ್ನೇ ಜಪಿಸಿದವನಾಗಿ ಅಶ್ವಮೇಧಯಾಗವಂ ಗೈದವನಾದರೆ ಆತನು ಬಿಡಗಡೆಯಾ ದವನಾಗಿ, ಪುನಹಾ ದೇವತೆಗಳಿಗೆಲ್ಲ ಒಡೆಯಭಾವವಂ ಪಡೆಯುವನೆಂದು ನುಡಿದವನಾದನು ॥೨೦॥

—ಉತ್ತರ ರಾಮಾಯಣದಲ್ಲಿನ ೮೫ ನೆಯ ಸರ್ಗಂ ಮುಗಿದುದು.—

ಪುರುಷಶ್ರೇಷ್ಠನಾದ ಲಕ್ಷ್ಮಣನು ಆ ಪರಿಯಾಗಿ ವೃತ್ರಾಸುರನ ಸಂಹಾರರೂಪವಾದ ಕಥೆಯನ್ನೆಲ್ಲ ಹೇಳಿದಂ ಥಾವನಾಗಿ ಉಳಿದ ಕಥೆಯುಂ ನುಡಿಯುವನ ದೆಂತನೆ॥೧॥ ದೇವತೆಗಳಿಗೆಲ್ಲ ಭಯಂಕರನಾದ ಆ ವೃತ್ರಾಸುರನು ಸಂಹರಿ ಸಲ್ಪಟ್ಟವನಾಗಲೂ, ಇಂದ್ರನು ಬ್ರಹ್ಮಹತ್ಯೆಗೆ ಗುರಿಯಾದವನಾಗಿ, ಪ್ರಜ್ಞೆಯಿಲ್ಲದೆ, ಲೋಕಾಲೋಕವೆಂಬ ಪರ್ವತದ ಶೃಂಗಕ್ಕೆ ಗಮಿಸಿ, ಮೂರ್ಛಿತನಾಗಿ ಕೆಲವುಕಾಲವು ಬಿದ್ದಿದ್ದು, ಹಾವಿನಂತೆ ಹೊರಳಾಡುತ್ತಿದ್ದನು, ಈಪರಿ ಇಂದ್ರ ನು ಅದರ್ಶನವಂ ಹೊಂದಿದವನಾಗಲೂ, ಬಳಿಕ ಜಗವೆಲ್ಲ ಹೆದರಿದಂಥಾದ್ದಾಯಿತು, ಆಗ ಭೂಮಿಯು ನಷ್ಟಪ್ರಾಯ ವಾಗಿಯೂ ರಸರಹಿತವಾಗಿಯೂ ಒಣಗಿದ ಕಾಡುಗಳುಳ್ಳದ್ದಾಯೂ ಇದ್ದಂಥಾಯಿತು ॥೪॥ ಆ ವೇಳೆಯೊಳ್ ನದಿ ಗಳೆಲ್ಲ ಬತ್ತಿಹೋದವು, ಮಡುವುಗಳಾದರೆ ನೀರಿಲ್ಲದೆ ಇರುವಂಥಾವುಗಳಾದವು, ಜೀವ ರಾಶಿಗಳಿಗೆಲ್ಲ ಅನಾವೃಷ್ಟಿ ದೋಷದಿಂದ ಮಹಾಕ್ಷೋಭೆಯುಂಟಾಯಿತು, ಈಪರಿಯಾಗಿ ಲೋಕವೆಲ್ಲ ಕ್ಷೀಣವಾಗಲೂ, ಆಗ ಸುರರೆಲ್ಲರೂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರ್ಷಿಭಿಃ । ತಂದೇಶಂಸಮುಪಾಜಗ್ಮುರ್ಯತ್ರೇಂದ್ರೋಭಯಮೋಹಿತಃ ॥೭॥ ತೇತುದೃಷ್ಟ್ವಾ ಸಹಸ್ರಾಕ್ಷಂಮೋಹಿತಂಬ್ರಹ್ಮಹ
ತ್ಯಯಾ । ತಂಪುರಸ್ಕೃತ್ಯದೇವೇಶಮಶ್ವಮೇಧಮುಪಾಕ್ರಮನ್ ॥೮॥ ತತೋಽಶ್ವಮೇಧಸ್ಸುಮಹಾನ್ಮಹೇಂದ್ರಸ್ಯಮಹಾತ್ಮ
ನಃ । ವವೃಧೇಬ್ರಹ್ಮಹತ್ಯಾಯಾಃಪಾವನಾರ್ಥಂನರೇಶ್ವರ ॥೯॥ ತತೋಯಜ್ಞೇಸಮಾಪ್ತೇತುಬ್ರಹ್ಮಹತ್ಯಾಮಹಾತ್ಮನಃ । ಅ
ಭಿಗಮ್ಯಾಬ್ರವೀದ್ವಾಕ್ಯಂಕ್ವಮೇಸ್ಥಾನಂವಿಧಾಸ್ಯಥ ॥೧೦॥ ತೇತಾಮೂಚುಸ್ತತೋದೇವಾಸ್ತುಷ್ಟಾಃಪ್ರೀತಿಸಮನ್ವಿತಾಃ । ಚ
ತುರ್ಧಾವಿಭಜಾತ್ಮಾನಂಆತ್ಮನೈವದುರಾಸದೇ ॥೧೧॥ ದೇವಾನಾಂಭಾಷಿತಂಶ್ರುತ್ವಾಬ್ರಹ್ಮಹತ್ಯಾಮಹಾತ್ಮನಾಮ್ । ಸನ್ನಿಧೌ
ಸ್ಥಾನಮನ್ಯತ್ರವರಯಾಮಾಸದುರ್ವಹಾ ॥೧೨॥ ಏಕೇನಾಂಶೇನವತ್ಸ್ಯಾಮಿಪೂರ್ಣೋದಾಸುನದೀಷುವೈ । ಚತುರೋವಾರ್ಷಿ
ಕಾನ್ಮಾಸಾನ್ದರ್ಪಘ್ನೀಕಾಮಚಾರಿಣೀ ॥೧೩॥ ಭೂಮ್ಯಾಮಹಂಸರ್ವಕಾಲಮಂಶೇನೈಕೇನದುರ್ವಸಾ । ವಸಿಷ್ಯಾಮಿನಸಂ
ದೇಹಸ್ಸತ್ಯೇನೈತದ್ಬ್ರವೀಮಿವಃ ॥೧೪॥ ಯೋಯಮಂಶಸ್ತೃತೀಯೋಮೇಸ್ತ್ರೀಷುಯೌವನಶಾಲಿಷು । ತ್ರಿರಾತ್ರಂದರ್ಪಪೂರ್ಣಾ

---

ರಿಂದೊಡಗೂಡಿದವರಾಗಿ, ಋಷಿಭಿಸ್ಸಹ-ಋಷಿಗಳಿಂದೊಡಗೂಡಿ, ಇಂದ್ರಃ-ದೇವೇಂದ್ರನು, ಭಯಮೋಹಿತಃ-ಭಯಾಕ್ರಾಂತನಾಗಿ, ಯತ್ರ-ಯಾವಸ್ಥ
ಳದಲ್ಲಿ, ಅಸ್ತಿ-ಇದ್ದಾನೋ, ತಂದೇಶಂ-ಅಂಥಾಪ್ರದೇಶವನ್ನು ಕುರಿತು, ಸಮುಪಾಜಗ್ಮುಃ-ಬಂದರು ॥೭॥ ತೇತು-ಆ ದೇವತೆಗಳಾದರೋ, ಬ್ರಹ್ಮಹತ್ಯಯಾ-
ಬ್ರಹ್ಮಹತ್ಯೆಯಿಂದ, ಮೋಹಿತಂ-ಮೋಹಿಸಲ್ಪಟ್ಟ, ಸಹಸ್ರಾಕ್ಷಂ-ದೇವೇಂದ್ರನನ್ನು, ದೃಷ್ಟ್ವಾ-ಕಂಡು, ದೇವೇಶಂ-ದೇವತಾಧಿಪತಿಯಾದ, ತಂ-ಆ ದೇವೇಂದ್ರನ
ನ್ನು, ಪುರಸ್ಕೃತ್ಯ-ಮುಂದೆಮಾಡಿಕೊಂಡು ಅಶ್ವಮೇಧಂ-ಅಶ್ವಮೇಧಯಜ್ಞವನ್ನು, ಉಪಾಕ್ರಮನ್-ಆರಂಭಿಸಿದರು ॥೮॥ ಹೇನರೇಶ್ವರ-ಎಲೈ ನರಶ್ರೇಷ್ಠನೇ, ತ
ತಃ-ಬಳಿಕ, ಮಹಾತ್ಮನಃ-ಮಹಾತ್ಮನಾದ, ಮಹೇಂದ್ರಸ್ಯ-ದೇವೇಂದ್ರನಿಗೆ, ಬ್ರಹ್ಮಹತ್ಯಾಯಾಃ-ಬ್ರಹ್ಮಹತ್ಯಾರೂಪದೋಷದದೆಸೆಯಿಂದ, ಪಾವನಾರ್ಥಂ-
ಪರಿಶುದ್ಧ್ಯರ್ಥವಾಗಿ, ಸುಮಹಾನ್-ದೊಡ್ಡದಾದ, ಅಶ್ವಮೇಧಃ-ಅಶ್ವಮೇಧಕ್ರಮವು, ವವೃಧೇ-ವೃದ್ಧಿಹೊಂದಿತು, ॥೯॥ ತತಃ-ಬಳಿಕ, ಯಜ್ಞೇಸಮಾ
ಪ್ತೇತು, ಅಶ್ವಮೇಧಯಜ್ಞಪೂರ್ತಿಯಾಗುತ್ತಿರಲಾಗಿ, ಮಹಾತ್ಮನಃ-ಮಹಾಮನಸ್ವಿಯಾದ ದೇವೇಂದ್ರನ, ಬ್ರಹ್ಮಹತ್ಯಾ-ಬ್ರಹ್ಮಹತ್ಯೆಯು, ಅಭಿಗ
ಮ್ಯ-ಬಂದು, ಮೇ-ನನಗೆ, ಕ್ವ-ಯಲ್ಲಿ, ಸ್ಥಾನಂ-ನಿವಾಸಸ್ಥಾನವನ್ನು, ವಿಧಾಸ್ಯಥ-ಮಾಡಿಯಿದ್ದೀರಿ, ಇತಿ-ಇಂತೆಂದು, ವಾಕ್ಯಂ-ಮಾತನ್ನು, ಅಬ್ರ
ವೀತ್-ನುಡೀತು ॥೧೦॥ ತತಃ-ಬಳಿಕ, ದೇವಾಃ-ಆ ದೇವತೆಗಳು, ತುಷ್ಟಾಃ-ಬಾಹ್ಯಸಂತೋಷಯುಕ್ತರಾಗಿ, ಪ್ರೀತಿಸಮನ್ವಿತಾಃ-ಸಂತೋಷವಿಂದ
ಕೂಡಿಕೊಂಡವರಾಗಿ, ತಾಂ-ಆ ಬ್ರಹ್ಮಹತ್ಯೆಯಂ ಕುರಿತು, ಹೇದುರಾಸದೇ-ಎಲೈ ಹೊಂದಲಸಾಧ್ಯಳಾದವಳೇ, ಆತ್ಮನೈವ-ನಿನ್ನಿಂದಲೆ, ಆತ್ಮಾನಂ-ನಿನ್ನ
ನ್ನು, ಚತುರ್ಧಾ-ನಾಲ್ಕು ಭಾಗವಾಗಿ, ವಿಭಜ-ವಿಭಾಗಮಾಡು, ಇತಿ-ಇಂತೆಂದು, ಊಚುಃ-ಹೇಳಿದರು ॥೧೧॥ ಮಹಾತ್ಮನಾಂ-ಮಹಾಮನಸ್ವಿಗಳಾದ,
ದೇವಾನಾಂ-ದೇವತೆಗಳ, ಭಾಷಿತಂ-ಮಾತನ್ನು, ಶ್ರುತ್ವಾ-ಕೇಳಿ, ದುರ್ವಹಾ-ವಹಿಸಲಸಾಧ್ಯವಾದ, ಬ್ರಹ್ಮಹತ್ಯಾ-ಬ್ರಹ್ಮಹತ್ಯೆಯು-ಸನ್ನಿಧೌ- ದೇವತಾಸ
ಮೀಪದಲ್ಲಿ, ಅನ್ಯತ್ರ-ಮತ್ತೊಂದುಕಡೆಯಲ್ಲಿ, ಸ್ಥಾನಂ-ಸ್ಥಾನವನ್ನು, ವರಯಾಮಾಸ-ಬೇಡಿತು ॥ ೧೨ ॥ ಏಕೇನಾಂಶೇನ-ಒಂದು ಅಂಶದಿಂದಲೇ, ಪೂ
ರ್ಣೋದಾಸು, ಸಂಪೂರ್ಣವಾದ ಉದಕಗಳುಳ್ಳ, ನದೀಷು-ನದಿಗಳಲ್ಲಿ, ದರ್ಪಘ್ನೀ-ದರ್ಪವನ್ನು ಕೊಡಿಯುತಿರುವಳಾಗಿ, ಕಾಮಚಾರಿಣೀ, ಸ್ವೇಚ್ಛಾ
ವಿಹಾರಶೀಲಳಾಗಿ, ಚತುರಃ-ನಾಲ್ಕಾದ, ವಾರ್ಷಿಕಾನ್ಮಾಸಾನ್-ವರ್ಷಕಾಲಿಕಗಳಾದ ಮಾಸಗಳು, ವತ್ಸ್ಯಾಮಿ-ಇರುವೆನು ॥೧೩॥ ದುರ್ವಸಾ-ದೇವೇಂ
ದ್ರನಲ್ಲಿ ವಾಸವಿಲ್ಲದಿರುವ, ಅಹಂ-ನಾನು, ಭೂಮ್ಯಾಂ-ನೆಲದಲ್ಲಿ, ಸರ್ವಕಾಲಂ-ಸಮಸ್ತಕಾಲದಲ್ಲಿಯೂ, ಏಕೇನಾಂಶೇನ-ಒಂದೇ ಅಂಶದಿಂದ, ವಸಿಷ್ಯಾಮಿ-
ಇರುವೆನು, ಸಂದೇಹಃ-ಸಂದೇಹವು, ನ ಇಲ್ಲ, ವಃ-ನಿಮ್ಮಗಳಿಗೆ, ಸತ್ಯೇನ-ಸತ್ಯದಿಂದ, ಏತತ್-ಇದನ್ನು, ಬ್ರವೀಮಿ-ಹೇಳುತ್ತೇನೆ ॥೧೪॥ ಮೇ-ನನ್ನ, ತೃ
ತೀಯಃಅಂಶಃ-ಮೂರನೇಅಂಶವು, ಯೋಯಂ-ಯಾವದೋ ತೇನ-ಆ ಅಂಶದಿಂದ, ಯೌವನಶಾಲಿಷು-ಯೌವನಾವಸ್ಥೆಯಿಂದ ಒಪ್ಪುತ್ತಿರುವ, ದರ್ಪ

---

ಭ್ರಾಂತಮನಸ್ಕರಾಗಿ, ಪೂರ್ವದಲ್ಲಿ ಶ್ರೀಮಹಾವಿಷ್ಣುವು ಯಾವ ಅಶ್ವಮೇಧ ಯಾಗವಂಮಾಡಿರೆಂದು ಹೇಳಿದ್ದನೋ
ಆ ಯಜ್ಞವಂಗೈಯ್ಯಲಿಚ್ಛೆಯುಳ್ಳವರಾಗಿ, ಎಲ್ಲರು ಗುಂಪುಸೇರಿ ಮಹಾ ಮುನಿಗಳಿಂದೊಡಗೂಡಿ, ಇಂದ್ರನಿರುವ ಎರಡ
ಕ್ಕೆಗವಿಸಿ, ಬ್ರಹ್ಮಹತ್ಯೆಯಿಂದ ಮೋಹಿತನಾದ ಆತನಂ ಕಂಡು, ಆದೇವೇಂದ್ರನಂ ಮುಂದುಮಾಡಿಕೊಂಡು ಅಶ್ವ
ಮೇಧಯಾಗಕ್ಕೆ ಪ್ರಾರಂಭಿಸಿದರು ॥೮॥ ಎಲೈ ನರಪತಿಯಾದ ಶ್ರೀರಾಮನೇ! ಇಂದ್ರನಿಗೆ ಪ್ರಾಪ್ತವಾದ ಬ್ರಹ್ಮಹತ್ಯಾ
ಪರಿಹಾರಾರ್ಥವಾಗಿ, ಮಹತ್ತರವಾದ ಅಶ್ವಮೇಧ ಯಾಗವು ಕ್ರಮವಾಗಿ ನಡೆದು ಪರಿಸಮಾಪ್ತಿಯಾದಂಥಾದಾಗ
ಲೂ, ಆ ಬ್ರಹ್ಮಹತ್ಯೆಯು ಎದುರಾಗಿಬಂದು, ಎಲೈ ದೇವತೆಗಳಿರಾ! ನಾನು ಇಂದ್ರನಂ ಬಿಟ್ಟೆನು, ಎನಗೆ ಇರುವದಕ್ಕೆ
ಎಡಮಲ್ಲಿ ಕೊಡುವಿರಿ, ಎಂಬದಾಗಿ ಕೇಳಿದಂಥಾದ್ದಾಯಿತು ॥೧೦॥ ಆಗ ದೇವತೆಗಳೆಲ್ಲರು ಕಡು ಸಂತೋಷವುಳ್ಳ
ವರಾಗಿ, ಎಲೈ ಹೊಂದಲಶಕ್ಯವಾದ ಬ್ರಹ್ಮಹತ್ಯೆಯೆ! ನೀನು ನಿನ್ನಿಚ್ಛೆಯೋ ನಾಲ್ಕು ಭಾಗಂಗಳಂ ಮಾಡಿಕೋ
ಎಂಬದಾಗಿ ನಿರೂಪಿಸಿದವನಾಗಲೂ, ಆ ಹತ್ಯೆಯು ಹಾಗೆಯೇ ಆಗಲೆಂದು ಒಪ್ಪಿ ತನಲ್ಲಿ ನಾಲ್ಕು ಭಾಗಂಗಳಂ ಮಾ
ಡಿಕೊಂಡು ಆಗ ದೇವತೆಗಳ ಸನ್ನಿಧಿಯಲ್ಲಿಯೆ, ಬ್ಯಾರೆ ನಾಲ್ಕು ಎಡಗಳಲ್ಲಿರುವಂತೆ ನಿಶ್ಚಯಿಸಿದಂಥಾದ್ದಾಯಿತ
ಹೆಂತವೆ ॥೧೨॥ ಎಲೈ ದೇವತೆಗಳಿರಾ! ಪೂರ್ಣಪ್ರವಾಹವುಳ್ಳ ನದಿಗಳಲ್ಲಿ ಒಂದು ಅಂಶದಿಂದವರ್ಷಾಕಾಲದ ನಾಲ್ಕು
ತಿಂಗಳಲ್ಲಿಯೂ ಸ್ವೇಚ್ಛೆಯಾಗಿರುವೆನು, ಮತ್ತೊಂದು ಅಂಶದಿಂದ ಸರ್ವಕಾಲದಲ್ಲಿಯೂ ಭೂಮಿಯಲ್ಲಿ ವಾಸಿಸುತ್ತಿರು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸುವೇಸಿಷ್ಯೈದರ್ಪಘಾತಿನೀ॥೧೫॥ಹಂತಾರೋಬ್ರಾಹ್ಮಣಾನ್ಯೇತುಮೃಷಾಪೂರ್ವಮುದಾಪಕಾಃ।ತಾಂಶ್ಚತುರ್ಥೇನಭಾಗೇನ ಸಂಶ್ರಯಿಷ್ಯೇಸುರರ್ಷಭಾಃ॥೧೬॥ಪ್ರತ್ಯೂಚುಸ್ತಾಂತತೋದೇವಾಯಥಾವದಸಿದುರ್ವಸೆ।ತಥಾಭವತುತತ್ಸರ್ವಂಸಾಧಯ ಸ್ವಯಥೇಪ್ಸಿತಮ್ ॥೧೭॥ ತತಃಪ್ರೀತ್ಯಾನ್ವಿತಾದೇವಾಸ್ಸಹಸ್ರಾಕ್ಷಂವವಂದಿರೇ।ವಿಜ್ವರಃಪೂತಪಾಪ್ಮಾ ಚವಾಸವಸ್ಸಮಪದ್ಯತ॥೧೮॥ಪ್ರಶಾಂತಂಚಜಗತ್ಸರ್ವಂಸಹಸ್ರಾಕ್ಷೇಪ್ರತಿಷ್ಠಿತೇ।ಯಜ್ಞಂಚಾದ್ಭುತಸಂಕಾಶಂತದಾಶಕ್ರೋಭ್ಯಪೂಜಯತ್॥೧೯॥ ಈದೃಶೋಹ್ಯಶ್ವಮೇಧಸ್ಯಪ್ರಭಾವೋರಘುನಂದನ।ಯಜಸ್ವಸುಮಹಾಭಾಗಹಯಮೇಧೇನಪಾರ್ಥಿವ॥*ಷಡಶೀತಿತಮಸ್ಸರ್ಗಃ*

ತಚ್ಛ್ರುತ್ವಾಲಕ್ಷ್ಮಣೇನೋಕ್ತಂವಾಕ್ಯಂವಾಕ್ಯವಿಶಾರದಃ।ಪ್ರತ್ಯುವಾಚಮಹಾತೇಜಾಃಪ್ರಹರ್ಸನ್ರಾಘವೋವಚಃ॥೧॥ ಏವಮೇತನ್ನರಶ್ರೇಷ್ಠ ಯಥಾವದಸಿಲಕ್ಷ್ಮಣ। ವೃತ್ರಘಾತಮಶೇಷೇಣವಾಜಿಮೇಧಫಲಂಚಯತ್ ॥೨॥ ಶ್ರೂಯತೇಹಿಪುರಾ

---

ಣಾಸು–ಗರ್ವದಿಂದ ತುಂಬಿರುವ, ಸ್ತ್ರೀಷು–ಸ್ತ್ರೀಯರುಗಳಲ್ಲಿ, ದರ್ಪಘಾತಿನೀ–ದರ್ಪಘಾತಿನೀಎಂಬ ಹೆಸರುಳ್ಳವಳಾಗಿ, ತ್ರಿರಾತ್ರಂ–ಮೂರುರಾತ್ರಿಗಳು, ವೇಸಿಷ್ಯೇ–ಇರುವೆನು ॥೧೫॥ ಹೇಸುರರ್ಷಭಾಃ–ಎಲೈ ದೇವತಾಶ್ರೇಷ್ಠರೇ, ಚತುರ್ಥೇನಭಾಗೇನ–ನಾಲ್ಕನೇಭಾಗದಿಂದ, ಅದೂಷಕಾನ್–ದೂಷಣೆಮಾಡದಿರುವ, ಬ್ರಾಹ್ಮಣಾನ್–ಬ್ರಾಹ್ಮಣರನ್ನು, ಯೇ–ಯಾರು, ಮೃಷಾಪೂರ್ವಂ–ಅಸತ್ಯವಾದ ಮಾತುಗಳೇಮೊದಲಾಗಿವುಳ್ಳವುಗಳಂತೆ, ಹಂತಾರಃ– ಹೊಡೆಯುವರೋ, ತಾನ್–ಅಂಥಾಬ್ರಾಹ್ಮಣ ಘಾತಕರನ್ನು, ಸಂಶ್ರಯಿಷ್ಯೇ–ಆಶ್ರಯಿಸುವೆನು ॥೧೬॥ ತತಃ–ಬಳಿಕ, ದೇವಾಃ–ದೇವತೆಗಳು, ತಾಂ–ಆ ಬ್ರಹ್ಮಹತ್ಯೆಯಂಕುರಿತು, ಹೇ ದುರ್ವಸೇ–ಎಲೈ ಬ್ರಹ್ಮಹತ್ಯೆಯೇ, ತ್ವಂ–ನೀನು, ಯಥಾವದಸಿ–ಹ್ಯಾಗೆ ಹೇಳುತ್ತೀಯೊ, ತತ್ಸರ್ವಂ– ಆ ಸಮಸ್ತವನ್ನು, ತಥಾ–ಹಾಗೆಯೇನೆ, ಭವತು–ಆಗಲೀ, ಯಥೇಪ್ಸಿತಂ–ಇಷ್ಟಾನುಸಾರವಾಗಿ, ಸಾಧಯಸ್ವ–ಮಾಡು, ಇತಿ–ಇಂತೆಂದು, ಪ್ರತ್ಯೂಚುಃ–ಪ್ರತ್ಯುತ್ತರಕೊಟ್ಟರು ॥೧೭॥ ತತಃ– ಬಳಿಕ,ಪ್ರೀತ್ಯಾ–ಸಂತೋಷದಿಂದ, ಅನ್ವಿತಾಃ–ಕೂಡಿಕೊಂಡಿರುವ, ದೇವಾಃ–ದೇವತೆಗಳು,ಸಹಸ್ರಾಕ್ಷಂ–ದೇವೇಂದ್ರನನ್ನುಕುರಿತು, ವವಂದಿರೇ–ನಮಸ್ಕರಿಸಿದರು, ವಾಸವಶ್ಚ–ದೇವೇಂದ್ರನೂಕೂಡ, ಪೂತಪಾಪ್ಮಾ–ಪರಿಶುದ್ಧವಾದ ಆತ್ಮಮುಳ್ಳವನಾಗಿ, ವಿಜ್ವರಃ–ತಾಪರಹಿತನು, ಸಮಪದ್ಯತ–ಆದನು ॥೧೮॥ ಸಹಸ್ರಾಕ್ಷೇ–ದೇವೇಂದ್ರನು, ಪ್ರತಿಷ್ಠಿತೇಸತಿ–ಪಟ್ಟಾಭಿಷಿಕ್ತನಾಗುತಿರಲಿಕಾಗಿ, ಸರ್ವಂ–ಸಮಸ್ತವಾದ, ಜಗತ್–ಲೋಕವು, ಪ್ರಶಾಂತಂ–ಬಾಧವಿಲ್ಲದ್ದು, ಅಭವತ್–ಆಯಿತು, ತದಾ–ಆ ಕಾಲದಲ್ಲಿ, ಶಕ್ರಃ–ದೇವೇಂದ್ರನು, ಅದ್ಭುತಸಂಕಾಶಂ–ಆಶ್ಚರ್ಯಕರವಾದ, ಯಜ್ಞಂಚ–ಯಜ್ಞವನ್ನು, ಅಭ್ಯಪೂಜಯತ್–ಶ್ಲಾಘಿಸಿದನು ॥೧೯॥ ಹೇ ರಘುನಂದನ–ಎಲೈ ರಘುನಂದನನೇ, ಅಶ್ವಮೇಧಸ್ಯ–ಅಶ್ವಮೇಧದ, ಪ್ರಭಾವಃ–ಮಾಹಾತ್ಮ್ಯವು, ಈದೃಶಃ–ಇಂಥಾದ್ದು, ಹೇ ಮಹಾಭಾಗ, ಎಲೈ ಪುಣ್ಯಶಾಲಿಯೇ, ಹೇ ಪಾರ್ಥಿವ–ಎಲೈರಾಜನೇ, ಹಯಮೇಧೇನ–ಅಶ್ವಮೇಧದಿಂದ, ಯಜಸ್ವ–ಯಜ್ಞಮಾಡು ॥೨೦॥—ಇತಿ ಷಡಶೀತಿತಮಸ್ಸರ್ಗಃ.—

ವಾಕ್ಯವಿಶಾರದಃ–ವಾಕ್ಯಾರ್ಥಜ್ಞಾನದಲ್ಲಿ ನಿಪುಣನಾದ, ಮಹಾತೇಜಾಃ–ಮಹಾಪರಾಕ್ರಮಶಾಲಿಯಾದ, ರಾಘವಃ–ಶ್ರೀರಾಮನು, ಲಕ್ಷ್ಮಣೇನ–ಲಕ್ಷ್ಮಣಸ್ವಾಮಿಯಿಂದ, ಏವಂ–ಈ ಪರಿಯಾಗಿ, ಉಕ್ತಂ–ಹೇಳಲ್ಪಟ್ಟ, ತದ್ವಾಕ್ಯಂ–ಆ ವಾಕ್ಯವನ್ನು, ಶ್ರುತ್ವಾ–ಕೇಳಿ, ಪ್ರಹರ್ಸನ್–ನಗುತಿರುವನಾಗಿ, ವಚಃ–ಮಾತನ್ನು, ಪ್ರತ್ಯುವಾಚ–ಪ್ರತ್ಯುತ್ತರವನ್ನು ಕೊಟ್ಟನು ॥೧॥ ಹೇನರಶ್ರೇಷ್ಠ–ಎಲೈ ನರಶ್ರೇಷ್ಠನಾದ, ಹೇ ಲಕ್ಷ್ಮಣ–ಎಲೈ ಲಕ್ಷ್ಮಣನೇ, ವೃತ್ರಘಾತಂ–ವೃತ್ರಾಸುರ ಸಂಹಾರವು ಅಶೇಷೇಣ–ಸಮಗ್ರವಾಗಿ, ವಾಜಿಮೇಧಫಲಂಚ – ಅಶ್ವಮೇಧ ಫಲವೂನು, ಯತ್–ಯಾವದೋ, ತತ್– ಅದನ್ನು, ಯಥಾ–ಹ್ಯಾಗೆ, ವದಸಿ–ಹೇಳುತ್ತೀಯೊ, ಏತತ್–ಇದು, ಏವಮೇವ–ಹೀಗೇಸರಿ ॥೨॥ ಹೇ ಸೌಮ್ಯ–ಎಲೈ ಸೌಮ್ಯನಾದವನೇ, ಪುರಾ–ಪೂರ್ವದಲ್ಲಿ, ಕ್ರೂ

---

ವೆನು, ಯೌವನ ಶಾಲಿಗಳಾಗಿಯೂ, ದರ್ಪ ಮುಳ್ಳವರಾಗಿಯೂ ಇರುವ ಹೆಂಗಳಲ್ಲಿ ಮೂರುನೆಯ ಅಂಶದಿಂನೆಲಗೊಂಡು, ಅವರ ಅಹಂಕಾರವಂ ಮುರಿಯುತ್ತಿರುವೆನು, ಬ್ರಾಹ್ಮಣರಂ ಹೊಡೆಯುತ್ತಿರುವರಾಗಿಯೂ, ಸತ್ಪುರುಷರಂ ಅನ್ಯಾಯವಾಗಿ ದೂಷಿಸುತ್ತಿರುವರಾಗಿಯೂ ಇರುವಕ್ರೂರರನ್ನು ನಾಲ್ಕನೆಯ ಅಂಶದಿಂದಾಶ್ರಯಿಸಿರಬೇಕೆಂದು ನನಗೆ ಇಷ್ಟವಿಧೆ ಇದನ್ನು ನೀವು ಮಾಡಿಸಬೇಕೆಂದು ಬೇಡಲೂ, ಆಗದೇವತೆಗಳುಹಾಗೆಯೇ ಆಗಲಿ, ನಿನ್ನ ಇಷ್ಟವಿದ್ದಂತೆ ಆಗುವದೆಂದು, ತೆರಳೆಂದು ನೀರೂಪಿಸಿದಂಥಾವರಾದರು ॥೧೭॥ ಬಳಿಕ ದೇವತೆಗಳೆಲ್ಲರು ಮಹಾ ಸಂತೋಷಮುಳ್ಳವರಾಗಿ ವಂದಿಸಿದವರಾಗಲೂ, ಆಗ ಇಂದ್ರನು ಪರಿಶುದ್ಧವಾದ ದೇಹಮುಳ್ಳವನಾಗಿಯೂ ಸಂತಾಪವಿಲ್ಲದವನಾಗಿಯೂ ಇರುವಂಥಾವನಾದನು ॥೧೮॥ ಸಾವಿರನೇತ್ರಗಳುಳ್ಳ ಇಂದ್ರನು ಪುನಃತನ್ನ ಅಧಿಕಾರವಂ ಪಡದವನಾಗಲೂ, ಜಗವೆಲ್ಲ ಶಾಂತವಾಗಿ ಇದ್ದಂಥಾಯಿತು, ಆ ವೇಳೆಯಲ್ಲಿ ಶಕ್ರನು ಮಹದಾಶ್ಚರ್ಯಕರವಾದ ಆ ಯಾಗವಂ ಪೂಜಿಸಿದಂಥಾವನಾದನು ॥೧೯॥ಎಲೈರಘುಕುಲಾನಂದಕರನಾದ ಶ್ರೀರಾಮನೆ! ಅಶ್ವಮೇಧಯಾಗದ ಪ್ರಭಾವವು ಈ ಪರಿ ಅದ್ಭುತಕರವಾಗಿರುವದು,ಆದಕಾರಣ ನೀನು ಮಾಡುವಂಥಾವನಾಗು ॥—೮೬ ನೆಯ ಸರ್ಗಂ ಮುಗಿದುದು.—

ಅತಿ ತೇಜೋವಂತನಾಗಿಯೂ ಪಂಡಿತನಾಗಿಯೂ ಇರುವ ಶ್ರೀರಾಮನು, ಲಕ್ಷ್ಮನಿಂದ ಪೇಳಲ್ಪಟ್ಟ ಆ ವಾಕ್ಯವಂ ಕೇಳಿ ಲಕ್ಷ್ಮಣನಂಕುರಿತು, ಎಲೈ ಅನುಜನೆ ! ವೃತ್ರಾಸುರನ ಸಂಹಾರವು ಅಶ್ವಮೇಧ ಯಾಗದ ಫಲವು ನೀ ಪೇಳಿದಂತೆಯೆ ನಿಶ್ಚಯವಾಗಿರುವದು, ಎಲೈ ಸೌಮ್ಯನೆ ! ಆದರೆ ನಾನೊಂದು ಕಥೆಯಂ ಪೇಳ್ವೆನು ಕೇಳು ಅದೇನೆಂದರೆ,—ಪೂರ್ವಕಾಲದೊಳು ಕರ್ದಮ ಬ್ರಹ್ಮನ ಪುತ್ರನು ಬಾಹ್ಲೀಕ ದೇಶಾಧೀಶ್ವರನಾಗಿಯೂ, ಸಂಪದ್ಯುಕ್ತನಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸ ... ಭ್ಯಷೇಚಯತ ॥೧೮॥ ನಕ್ಷತ್ರೇಣಚಸೌಮ್ಯೇನಪುರಸ್ಕೃತ್ಯಾಂಗಿರಸ್ಸುತಮ್ । ಭರತಸ್ಸಹಸೈನ್ಯೇನಕುಮಾರಾ
ಸ್ತ್ಯಾಂ ... ॥೧೯॥ ಸಾಸೇನಾಶಕ್ರಯುಕ್ತೇವನಗರಾತ್ಪ್ರಯಯಾವಥ। ರಾಘವಾನುಗತಾದೂರಂದುರಾಧರ್ಷಾಸು
ಸ್ತೈಭವೈ ... ಂಸಾದಾನಿಚಸತ್ವಾನಿರಕ್ಷಾಂಸಿಸುಮಹಾಂತಿಚ। ಅನುಜಗ್ಮುಶ್ಚ ಭರತಂರುಧಿರಸ್ಯಪಿಪಾಸಯಾ॥೨೧॥
... ತ್ರಾಂಕಥಾವಿಳ್ಳಸಹವೊಮಾಂಸಭಕ್ಷಾಶ್ಚದಾರುಣಾಃ । ಗಂಧರ್ವಪುತ್ರಮಾಂಸಾನಿಭೋಕ್ತುಕಾಮಾಸ್ಸಹಸ್ರಶಃ॥೨೨॥
... ವ್ಯಾಘ್ರಶೃಗಾಲಾನಾಂಖೇಚರಾಣಾಂಚಪಕ್ಷಿಣಾಮ್ । ಬಹೂನಿವೈಸಹಸ್ರಾಣಿಸೇನಾಯಾಯಯುರಗ್ರತಃ ॥೨೩॥
ವಂಸರಾಜಾಸ್ತ್ರೀಭೂತೊವತಥಸೇನಾನಿರಾಮಯಾ। ಹೃಷ್ಟಪುಷ್ಟಜನಾಕೀರ್ಣಾಕೇಕಯಂಸಮುಪಾಗತಮ್ ॥೨೪॥
... ಸ್ತ್ರದ್ವಾಷಿತಂಶ್ರುತಾ. ಇತಿ ಶ್ರೀಮದುತ್ತರರಾಮಾಯಣೇ ಶತತಮಸ್ಸರ್ಗಃ
... ಪ್ರಾಪ್ತಮ್ವಸೇನಾಪತಿಂಪ್ರಾಪ್ತಂಭರತಂಕೇಕಯಾಧಿಪಃ । ಯುಧಾಜಿದ್ಗಾರ್ಗ್ಯಸಹಿತಂಪರಾಂಪ್ರೀತಿಮುಪಾಗಮತ್॥೧॥
ಸನಿರ್ಯಯೌಜನೌಘೇನಮಹತಾಕೇಕಯಾಧಿಪಃ । ತ್ವರಮಾಣೋಽಭಿಚಕ್ರಾಮಗಂಧರ್ವಾನ್ಕಾಮರೂಪಿಣಃ ॥೨॥ ಭರತ

---

ರಾಭ್ಯಾಂಚ-ಮಕ್ಕಳನ್ನೂಕೂಡ, ಅಭ್ಯಷೇಚಯತ್-ಪಟ್ಟಾಭಿಷೇಕಮಾಡಿದನು, ॥ ೧೮ ॥ ಸೌಮ್ಯೇನ-ಸೋಮದೇವತಾಕವಾದ,ನಕ್ಷತ್ರೇಣ-ನಕ್ಷತ್ರದಲ್ಲಿ(ಅಂದರೆ), ಮೃಗಶೀರ್ಷನಕ್ಷತ್ರದಲ್ಲಿ, ಅಂಗಿರಸ್ಸುತಂ-ಗಾರ್ಗ್ಯಋಷಿಯನ್ನು, ಪುರಸ್ಕೃತ್ಯ-ಮುಂದುಮಾಡಿಕೊಂಡು,ಭರತಃ-ಭರತನು, ಸೈನ್ಯೇನಸಹ-ಸೇನೆಯೊಡನೆಯು, ಕುಮಾರಾಭ್ಯಾಂಚ-ಮಕ್ಕಳೊಡನೆಯು, ನಿರ್ಯಯೌ-ಹೊರಟನು, ॥ ೧೯ ॥ ಅಥ-ಬಳಿಕ, ದೂರಂ-ಬಹುದೂರವು, ರಾಘವಾನುಗತಾ-ಶ್ರೀರಾಮನಿಂದನುಸರಿಸಲ್ಪಟ್ಟದ್ದಾದಕಾರಣ, ಶಕ್ರಯುಕ್ತೇವ-ದೇವೇಂದ್ರನಿಂದೊಡಗೂಡಿದಂತೆ, ಸುರೈರಪಿ - ದೇವತೆಗಳಿಂದಲೂಕೂಡ, ದುರ್ಧರ್ಷಾ-ತಿರಸ್ಕರಿಸಲಸಾಧ್ಯವಾದ, ಸಾಸೇನಾ-ಆ ಸೇನೆಯು, ನಗರಾತ್-ಪಟ್ಟಣದ ದೆಸೆಯಿಂದ, ಪ್ರಯಯೌ-ತೆರಳಿತು, ॥ ೨೦ ॥ ಮಾಂಸಾದಾನಿ-ಮಾಂಸಭಕ್ಷಕಗಳಾದ, ಸತ್ವಾನಿ-ಜಂತುಗಳು, ಸುಮಹಾಂತಿ-ಮಹತ್ತರವಾದ, ರಕ್ಷಾಂಸಿ-ರಕ್ಕಸರು, ರುಧಿರಸ್ಯ-ರಕ್ತದ,ಪಿಪಾಸಯಾ-ಪಾನೇಚ್ಛೆಯಿಂದ,ಭರತಂ-ಭರತನನ್ನು, ಅನುಜಗ್ಮುಃ-ಅಟ್ಟಿಕೊಂಡು ಬಂದರು, ॥ ೨೧ ॥ ಬಹವಃ- ಅನೇಕವಾದ, ಭೂತಗ್ರಾಮಾಃ-ಭೂತರಾಶಿಗಳೂ, ಮಾಂಸಭಕ್ಷಾಃ-ಮಾಂಸವನ್ನು ಭುಜಿಸುತ್ತಿರುವ, ದಾರುಣಾಃ-ಕ್ರೂರವಾದಭೂತಗಳು, ಸಹಸ್ರಶಃ-ಅನೇಕಗಳು, ಗಂಧರ್ವಪುತ್ರಮಾಂಸಾನಿ-ಗಂಧರ್ವರಾಜನ ಮಕ್ಕಳಮಾಂಸಗಳನ್ನು, ಭೋಕ್ತುಕಾಮಾಃ-ಭುಜಿಸಲಿಚ್ಛೆಯುಳ್ಳವುಗಳಾಗಿ, ಯಯುಃ-ತೆರಳಿದವು ॥೨೨॥ ಸಿಂಹವ್ಯಾಘ್ರಸೃಗಾಲಾನಾಂ-ಸಿಂಹ-ಸಿಂಹಗಳ, ವ್ಯಾಘ್ರ-ಹುಲಿಗಳ, ಸೃಗಾಲಾನಾಂ-ನರಿಗಳ, ಖೇಚರಾಣಾಂ-ಅಂತರಿಕ್ಷಸಂಚಾರಶೀಲರಾದ, ಪಕ್ಷಿಣಾಂಚ-ಹಕ್ಕಿಗಳ, ಬಹೂನಿ-ಅನೇಕವಾದ, ಸಹಸ್ರಾಣಿ-ಸಾವಿರಗಳು, ಸೇನಾಯಾಃ-ಸೈನ್ಯದ, ಅಗ್ರತಃ-ಮುಂದುಗಡೆ, ಯಯುಃ-ಹೊರಟವು ॥೨೩॥ ಪಥಿ-ಮಾರ್ಗದಲ್ಲಿ, ಅಧ್ಯರ್ಧಮಾಸಂ-ಹದಿನೈದುದಿನಗಳು, ಪಥಿ-ಮಾರ್ಗದಲ್ಲಿ, ನಿರಾಮಯಾ-ರೋಗವಿಲ್ಲದ್ದಾಗಿ-ಸೇನಾ-ಸೈನ್ಯವು, ಹೃಷ್ಟಪುಷ್ಟಜನಾಕೀರ್ಣಾ-ಹೃಷ್ಟರಾದ ಪುಷ್ಟರಾದ ಜನಗಳಿಂದವ್ಯಾಪ್ತವಾದುಧಾದ್ದಾಗಿ, ಕೇಕಯಂ-ಕೇಕಯರಾಜನನ್ನು ಕುರಿತು ಸಮುಪಾಗಮತ್ - ಬಂದಂಥಾದ್ದಾಯಿತು ॥ ೨೪ ॥ —ಇತಿಶ್ರೀಮದುತ್ತರ ರಾಮಾಯಣೇ ಶತತಮಸ್ಸರ್ಗಃ—

ಕೇಕಯಾಧಿಪಃ-ಕೇಕಯರಾಜನಾದ, ಯುಧಾಜಿತ್-ಯುಧಾಜಿತುವು, ಸೇನಾಧಿಪತಿಯಾದ, ಭರತಂ-ಭರತನನ್ನು,ಗಾರ್ಗ್ಯಸಹಿತಂ-ಗಾರ್ಗ್ಯಮುನಿಯೊಡನೆ, ಪ್ರಾಪ್ತಂ-ಬಂದವನನ್ನಾಗಿ, ಶ್ರುತ್ವಾ-ಕೇಳಿ, ಪರಾಂ-ಬಹಳವಾದ, ಪ್ರೀತಿಂ-ವಿಶ್ವಾಸವನ್ನು, ಉಪಾಗಮತ್-ಹೊಂದಿದನು ॥೧॥ ಸಕೇಕಯಾಧಿಪಃ-ಆ ಕೇಕಯರಾಜನು, ಮಹತಾ-ಬಹಳವಾದ, ಜನೌಘೇನ-ಜನಸಮೂಹದೊಡನೆ, ತ್ವರಮಾಣಃ-ಜಾಗ್ರತೆಪಟ್ಟವನಾಗಿ, ಕಾಮರೂಪಿಣಃ-ಸ್ವೇಚ್ಛಾರೂಪಿಗಳಾದ, ಗಂಧರ್ವಾನ್-ಗಂಧರ್ವರನ್ನುಕುರಿತು, ನಿರ್ಯಯೌ-ಹೊರಟನು, ಅಭಿಚಕ್ರಾಮ-ಅಭಿಮುಖವಾಗಿ ಹೊರಟನು, ಲಘುವಿಕ್ರಮೌ-ಚುರುಕಾದ

---

ನು ಸೈನ್ಯದಿಂದಲೂ ಕುಮಾರರಿಂದಲೂ ಒಡಗೂಡಿ ಸೌಮ್ಯದೇವತಾಕವಾದ ನಕ್ಷತ್ರದಲ್ಲಿ, ಆಗಾರ್ಗ್ಯ ಮುನಿಯಂ ಮುಂದುಕೊಳಿಸಿಕೊಂಡು, ತೆರಳಿದವನಾದನು ॥೧೯॥ ಶ್ರೀರಾಮನಿಂದ ಹಿಂಬಾಲಿಸಲ್ಪಟ್ಟ ಆಸೇನೆಯು, ಇಂದ್ರನಿಂದನುಸರಿಸಲ್ಪಟ್ಟ ದೇವಸೇನೆಯ ತೆರದಿ ಅಯೋಧ್ಯಾ ಪುರದಿಂ ಪೊರಟಂಥಾದ್ದಾಯಿತು॥೨೦॥ ಆ ವೇಳೆಯಲ್ಲಿ ಮಾಂಸವಂ ಭುಜಿಸುತ್ತಿರುವ ಜಂತುಗಳೂ, ಮಹಾರಾಕ್ಷಸರೂ, ಮತ್ತು ಕ್ರೂರವಾದ ಭೂತಗಳೂ ಇವರೆಲ್ಲರು ಆಗಂಧರ್ವರರಕ್ತವಂ ಪಾನಮಾಡಬೇಕೆಂಬಿಚ್ಛೆಯಿಂ ಆ ಭರತನಂ ಹಿಡಟ್ಟಿ ಬಂದಂಥಾವುಗಳಾದಳು. ಇದಲ್ಲದೆ ಸಿಂಹಗಳು ಹುಲಿಗಳು ನರಿಗಳು ಮತ್ತು ಅನೇಕವಾದ ಗಗನಗಾಮಿಗಳಾದ ಪಕ್ಷಿಗಳು ಇವುಗಳೆಲ್ಲ ಆಸೇನೆಯು ಮುಂದುಗಡೆ ತೆರಳಿದಂಥಾದ್ದಾದವು. ಈ ಪರಿಯಾಗಿ ಹೊರಟ ಆ ಸೇನೆಯು ಹದಿನೈದು ದಿನಗಳು ಪ್ರಯಾಣವಂಮಾಡಿ ಕೇಕಯ ದೇಶದಲಿರವಾದ ಯುಧಾಜಿತು ನಗರಂ ಪೊಂದಿದಂಥಾದ್ದಾಯಿತು॥೨೪॥—ರಾಮಾಯಣದಲ್ಲಿನ ೧೦೦ನೆಯಸರ್ಗಂ ಮುಗಿದುದು.—

ಕೇಕಯ ದೇಶಾಧೀರನಾದ ಯುಧಾಜಿತವು, ಸೇನಾನಾಯಕನಾದ ಭರತನು ಗಾರ್ಗ್ಯ ಮುನಿಯಿಂದೊಡಗೂಡಿ, ಬಂದಿಹನೆಂಬ ಮಾತಂಕೇಳಿ, ಕಡುಸಂತೋಷಚಿತ್ತನಾಗಿ, ಬಹುಜನಗಳಂ ಕರೆದುಕೊಂಡು ಬಹುತ್ವರೆಯುಳ್ಳವನಾಗಿ, ಕಾಮರೂಪಿಗಳಾದ ಆಗಂಧರ್ವರಂ, ಕುರಿತು ತ್ವರೆಯಾಗಿ ತೆರಳಿದವನಾದನು ॥೨॥ ಕಡು ಪರಾಕ್ರಮಶಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ ಯುಧಾಜಿಚ್ಚ ಸಮೇತೌಲಘುವಿಕ್ರಮೌ । ಗಂಧರ್ವನಗರಂಪ್ರಾಪ್ತೌ ಸಬಲೌಸಬಲಾನುಗೌ ॥೩॥ ಶ್ರುತ್ವಾತು ಭರತಂ ಪ್ರಾಪ್ತಂಗಂಧರ್ವಾಸ್ತೇ ಸಮಾಹಿತಾಃ । ಯೋದ್ಧುಕಾಮಾಮಹಾವೀರ್ಯಾ ವ್ಯನದನ್ವೈಸಹಸ್ರಶಃ ॥೪॥ ತತಸ್ಸಮಭವದ್ಯು ದ್ಧಂತುಮುಲಂರೋಮಹರ್ಷಣಂ । ಸಪ್ತರಾತ್ರಂಮಹಾಭೀಮಂನಚಾನ್ಯತರಯೋರ್ಜಯಃ ॥೫॥ ಖಡ್ಗಶಕ್ತಿಧನುರ್ಗ್ರಾ ಹಾನದ್ಯಶ್ಶೋಣಿತಸಂಸ್ರವಾಃ । ನೃಕಳೇಬರವಾಹಿನ್ಯಃಪ್ರವೃತ್ತಾಸ್ಸರ್ವತೋದಿಶಂ ॥೬॥ ತತೋರಾಮಾನುಜಃಕ್ರುದ್ಧಃಕಾ ಲಸ್ಯಾಸ್ತ್ರಂಸುದಾರುಣಂ। ಸಂವರ್ತಂನಾಮಭರತೋಗಂಧರ್ವೇಷ್ವಭ್ಯಚೋದಯತ್ ॥೭॥ ತೇಬದ್ಧಾಃಕಾಲಪಾಶೇನಸಂವ ರ್ತೇನವಿದಾರಿತಾಃ । ಕ್ಷಣೇನಾಭಿಹತಾಸ್ತತ್ರತಿಸ್ರಃಕೋಟ್ಯೋಮಹಾತ್ಮನಾ ॥೮॥ತಂಘಾತಂಘೋರಸಂಕಾಶಂನಸ್ಮರಂತಿದಿ ವೌಕಸಃ । ನಿಮೇಷಾಂತರಮಾತ್ರೇಣತಾದೃಶಾನಾಂಮಹಾತ್ಮನಾಮ್ ॥೯॥ ಹತೇಷುತೇಷುವೀರೇಷುಭರತಃಕೈಕಯೀಸು ತಃ । ನಿವೇಶಯಾಮಾಸತದಾಸಮೃದ್ಧೇದ್ವೇಪುರೋತ್ತಮೇ ॥೧೦॥ತಂಕ್ಷಂತಕ್ಷಶಿಲಾಯಾಂತುಪುಷ್ಕಲಂಪುಷ್ಕಲಾವತೌ ॥೧೧॥

---

ಪರಾಕ್ರಮವುಳ್ಳ, ಭರತಶ್ಚ–ಭರತನೂ, ಯುಧಾಜಿಚ್ಚ–ಯುಧಾಜಿತುವು ಎಂಬ, ಉಭೌ–ಇಬ್ಬರು, ಸಮೇತೌ–ಕೂಡಿದವರಾಗಿ, ಸಬಲೌ– ಸೈನ್ಯಸಮೇತರಾಗಿ, ಸಬಲಾನುಗೌ–ಬಲದಿಂದೊಡಗೂಡಿದ ಅನುಚರರುಳ್ಳವರಾಗಿ, ಗಂಧರ್ವನಗರಂ–ಗಂಧರ್ವಪಟ್ಟಣವಂಕುರಿತು, ಪ್ರಾಪ್ತೌ–ಬಂದರು ॥೩॥ ಮಹಾವೀರ್ಯಾಃ–ಮಹಾಸಾಮರ್ಥ್ಯವಂತರಾದ, ತೇಗಂಧರ್ವಾಃ–ಆ ಗಂಧರ್ವರು, ಭರತಂ–ಭರತನನ್ನು, ಪ್ರಾಪ್ತಂ–ಬಂದವನನ್ನಾ, ಶ್ರುತ್ವಾ–ಕೇಳಿ, ಸಮಾಹಿತಾಃ–ಸಮಾಧಾನಚಿತ್ತರಾಗಿ, ಯೋದ್ಧುಕಾಮಾಃ–ಯುದ್ಧಮಾಡಲಿಚ್ಛಯುಳ್ಳವರಾಗಿ, ಸಹಸ್ರಶಃ–ಅನೇಕಪ್ರಕಾರವಾಗಿ, ವ್ಯನದನ್ವೈ– ಕೋಲಾಹಲವಂಗೈದರಷ್ಟೆ ॥೪॥ ತತಃ–ಬಳಿಕ, ತುಮುಲಂ–ಸಂಕುಲವಾದ, ರೋಮಹರ್ಷಣಂ–ರೋಮಾಂಚಜನಕವಾದ, ಮಹಾಭೀಮಂ–ಮಹಾಭಯಂಕರವಾದ ಯುದ್ಧಂ–ಕಾಳಗವು, ಸಪ್ತರಾತ್ರಂ–ಏಳುರಾತ್ರಿಗಳು, ಸಮಭವತ್–ಆಯಿತು, ಅನ್ಯತರಯೋಃ–ಇಬ್ಬರಲ್ಲಿ ಯಾರಿಗು, ಜಯಃ–ಜಯವು, ನಚ–ಇಲ್ಲದೆಹೋಯಿತು, ಖಡ್ಗಶಕ್ತಿ ಧನುರ್ಗ್ರಾಹಾಃ–ಖಡ್ಗ–ಕತ್ತಿಗಳು, ಶಕ್ತಿ–ಶಕ್ತ್ಯಾಯುಧಗಳನ್ನೂ,ಧನುಃ–ಧನುಸ್ಸುಗಳೇ,ಗ್ರಾಹಾಃ–ನೆಗಳುಗಳುಳ್ಳ,ಶೋಣಿತಸಂಸ್ರವಾಃ–ರಕ್ತಪ್ರವಾಹಗಳುಳ್ಳ, ನೃಕಳೇಬರವಾಹಿನ್ಯಃ–ಮನುಷ್ಯರ ಶರೀರದವೆಳೆಯಿಂದ ಪ್ರವಹಿಸುತ್ತಿರುವ, ನದ್ಯಃ–ನದಿಗಳು, ಸರ್ವತೋದಿಶಂ–ಎಲ್ಲಾದಿಕ್ಕುಗಳಲ್ಲಿಯು, ಪ್ರವೃತ್ತಾಃ ಪ್ರವರ್ತಿಸಿದವು ॥೬॥ ತತಃ–ಬಳಿಕ, ರಾಮಾನುಜಃ–ರಾಮನತಂಮನಾದ, ಭರತಃ–ಭರತನು, ಕ್ರುದ್ಧಃ–ಕುಪಿಕನಾಗಿ, ಕಾಲಸ್ಯ–ಯಮನ, ಸುದಾರುಣಂ–ಭಯಂಕರವಾದ, ಸಂವರ್ತಂನಾಮ–ಸಂವರ್ತವೆಂದು ಪ್ರಸಿದ್ಧವಾದ, ಅಸ್ತ್ರಂ–ಅಸ್ತ್ರವನ್ನು,ಗಂಧರ್ವೇಷು–ಗಂಧರ್ವರಲ್ಲಿ, ಅಭ್ಯಚೋದಯತ್–ಬಿಟ್ಟನು ॥೭॥ ಕ್ಷಣೇನ–ಕ್ಷಣಮಾತ್ರದಲ್ಲಿ, ತೇ–ಆ ಗಂಧರ್ವರು, ತಿಸ್ರಃಕೋಟ್ಯಃ–ಮೂರುಕೋಟಿಗಳು, ಕಾಲಪಾಶೇನ–ಯಮಪಾಶದಿಂದ, ಬದ್ಧಾಃ–ಕಟ್ಟಲ್ಪಟ್ಟವರಾಗಿ, ಸಂವರ್ತೇನ–ಸಂವರ್ತಾಸ್ತ್ರದಿಂದ, ವಿದಾರಿತಾಃ–ಸೀಳಲ್ಪಟ್ಟವರಾಗಿ, ಕ್ಷಣೇನ–ಕ್ಷಣಮಾತ್ರದಲ್ಲಿ, ತತ್ರ–ಆ ಯುದ್ಧರಂಗದಲ್ಲಿ, ಮಹಾತ್ಮನಾ–ಮಹಾನುಭಾವನಾದ ಭರತನಿಂದ, ಅಭಿಹತಾಃ–ಹೊಡೆಯಲ್ಪಟ್ಟರು ॥೮॥ ದಿವೌಕಸಃ–ದೇವತೆಗಳು, ತಾದೃಶಾನಾಂ–ಅಂಥಾಪರಾಕ್ರಮಶಾಲಿಗಳಾದ, ಮಹಾತ್ಮನಾಂ–ಮಹಾದೇಹಧಾರಿಗಳಾದ ಗಂಧರ್ವರ, ಘೋರಸಂಕಾಶಂ–ಭಯಂಕರವಾದ, ತಂಘಾತಂ–ಆ ಸಂಹಾರವನ್ನು, ನಸ್ಮರಂತಿ–ತಿಳಿಯಲಿಲ್ಲ, ನಿಮೇಷಾಂತರಮಾತ್ರೇಣ–ಕ್ಷಣಮಾತ್ರದಿಂದಲೇ, ತೇಷುವೀರೇಷು–ಆ ಶೂರರು, ಹತೇಷುಸತ್ಸು– ಹತರಾದವರಾಗುತ್ತಿರಲಾಗಿ, ಕೈಕೆಯೀಸುತಃ–ಕೈಕೇಯಿಯಮಗನಾದ, ಭರತಃ–ಭರತನು, ತದಾ – ಆ ಕಾಲದಲ್ಲಿ, ಸಮೃದ್ಧೇ–ಸಕಲೈಶ್ವರ್ಯಸಂಪೂರ್ಣವಾದ, ದ್ವೇಪುರೋತ್ತಮೇ – ಉತ್ತಮವಾದ ಎರಡುಪಟ್ಟಣಗಳನ್ನು, ನಿವೇಶಯಾಮಾಸ–ಕಟ್ಟಿಸಿದನು, ॥ ೧೦ ॥ ತಕ್ಷಂ–ತಕ್ಷನೆಂಬ ಮಗನನ್ನು, ತಕ್ಷಶಿಲಾಯಾಂ–ತಕ್ಷಶಿಲೆಯೆಂಬ ಪಟ್ಟಣದಲ್ಲಿ, ಪುಷ್ಕಲಂ–ಪುಷ್ಕಲನನ್ನು, ಪುಷ್ಕಲಾವತೌ–ಪುಷ್ಕಲಾವತಿಯೆಂಬ ಪುರದಲ್ಲಿ, ನಿವೇಶಯಾಮಾಸ–ಪಟ್ಟಾಭಿಷೇಕವಮಾಡಿಸಿದನು॥ ೧೧ ॥ ರುಚಿರಃ–ಮನೋ

---

ಲಿಗಳಾದ ಭರತನು ಯುಧಾಜಿತುವು ಇವರೀರ್ವರು ಸೈನ್ಯಸಮೇತರಾಗಿ ಆ ಗಂಧರ್ವ ಪುರಕ್ಕೆ ಬಂದವರಾಗಲು ಕಡುವೀರರಾದ ಆಗಂಧರ್ವರು ಭರತನುಬಂದಿಹನೆಂಬ ವಾರ್ತೆಯಂಕೇಳಿ ಯುದ್ಧೇಚ್ಛೆಯುಳ್ಳವರಾಗಿ,ಕೂಗಿದಂಥಾವರಾದರು. ಬಳಿಕ ಸಂಕುಲವಾಗಿಯು ರೋಮಾಂಚನವನ್ನುಂಟು ಮಾಡುತ್ತಿರುವದಾಗಿಯೂ,ಇರುವ ಕಾಳಗವು ಸಂಭವಿಸಿ ಏಳುದಿವಸಗಳು ನಡೆದಂಥಾದ್ದಾದರೂ ಅವರಿಗೆ ಯಾರಿಗೂ ಜಯವುಂಟಾಗಲಿಲ್ಲ, ಕತ್ತಿಗಳು ಶಕ್ತ್ಯಾಯುಧಗಳು ಧನುಸ್ಸುಗಳು ಎಂಬ ದೊಡ್ಡದೊಡ್ಡ ಮೀನುಗಳುಳ್ಳ ರಕುತದಿಂದ ಸ್ರವಿಸುತ್ತಿರುವ ಮಹಾನದಿಗಳು ದಿಕ್ಕುದಿಕ್ಕುಗಳಲ್ಲಿಯೂ, ಹರಿಯುತಿದ್ದವು॥೬॥ ಬಳಿಕ ಶ್ರೀರಾಮನತಂಮನಾದ ಭರತನು ಕಡುಕೋಪವುಳ್ಳವನಾಗಿ, ಮಹಾಭಯಂಕರವಾದ ಸಂವರ್ತವೆಂದು ಪ್ರಸಿದ್ಧವಾದ ಕಾಲಾಸ್ತ್ರವನ್ನು ಆ ಗಂಧರ್ವರಲ್ಲಿ ಪ್ರಯೋಗಿಸಿದವನಾಗಲು ಮೂರುಕೋಟಿ ಸಂಖ್ಯೆಯುಳ್ಳ ಆ ಗಂಧರ್ವರೆಲ್ಲರು ಆ ಸಂವರ್ತಾಸ್ತ್ರದಿಂದ ಸೀಳಲ್ಪಟ್ಟವರಾಗಿಯೂ ಕಾಲಪಾಶ ಬದ್ಧರಾಗಿಯೂ ಇರುವರಾಗಿ ಕ್ಷಣಮಾತ್ರದಲ್ಲಿ ಹೊಡೆಯಲ್ಪಟ್ಟಂಥಾವರಾದರು. ಈಪರಿ ಅವರೆಲ್ಲರು ಸಾಯುವರೆಂದು ದೇವತೆಗಳೂ ಕೂಡಾ ತಿಳಿದಿರಲಿಲ್ಲ. ಕ್ಷಣಮಾತ್ರದಲ್ಲಿ ಅವರೆಲ್ಲರು ಮೃತರಾದರು. ಮಹಾಶೂರರಾದ ಆಗಂಧರ್ವರು ಹತರಾಗಲು ಕೈಕೇಯಿಪುತ್ರನಾದ ಭರತನು ಆಗ ಸಂತೋಷಚಿತ್ತನಾಗಿ ಸಮೃದ್ಧವಾಗಿರುವಂತೆ ಎರಡು ಪುರಗಳಂ ನಿರ್ಮಿಸಿ, ತಕ್ಷಶಿಲೆಯೆಂಬ ಪಟ್ಟಣದಲ್ಲಿ, ತಕ್ಷನೆಂಬ ಕುಮಾರನನ್ನು, ಪುಷ್ಕಲಾವತಿಯೆಂಬ ಪುರವರದೊಳು ಪುಷ್ಕಲನೆಂಬ ಮಗನನ್ನು ಇರಿಸಿದಂ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗಂಧರ್ವದೇಶೋರುಚಿರೋಗಾಂಧಾರವಿಷಯಶ್ಚ ಸಃ । ವರ್ಷೈಃಪಂಚಭಿರಾಕೀರ್ಣೋವಿಷಯೈರ್ನಗರೈಸ್ತಥಾ ॥೧೦॥ ಧನರತ್ನೌಘಸಂಪೂರ್ಣೋಕಾನನೈರುಪಶೋಭಿತೇ। ಅನ್ಯೋನ್ಯಸಂಘರ್ಷಯುತೇಸ್ಪರ್ಧಯಾಗುಣವಿಸ್ತರೈಃ ॥೧೧॥ ಉಭೇಸುರುಚಿರಪ್ರಖ್ಯೇವ್ಯವಹಾರೈರಕಿಲ್ಬಿಷೈಃ । ಉದ್ಯಾನಯಾನೌಘವೃತೆಸುವಿಭಕ್ತಾಂತರಾಪಣೆ ॥ ೧೨ ॥ ಉಭೆಪುರವರೇರಮ್ಯೇವಿಸ್ತರೈರುಪಶೋಭಿತೇ । ಗೃಹಮುಖ್ಯೈಸ್ಸುರುಚಿರೈರ್ವಿಮಾನಸಮವರ್ಣಿಭಿಃ॥೧೫॥ಶೋಭಿತೆಶೋಭನೀಯೈಶ್ಚ ದೇವಾಯತನವಿಸ್ತರೈಃ । ಸಾಲೈಸ್ತಾಲೈಸ್ಸಮಾಕೀರ್ಣೇಚಂಪಕೈರುಪಶೋಭಿತೆ ॥೧೬॥ ನಿವೇಶ್ಯಪಂಚಭಿರ್ವರ್ಷೈರ್ಭರತೋರಾಘವಾನುಜಃ । ಪುನರಾಯನ್ಮಹಾಬಾಹುರಯೋಧ್ಯಾಂಲಕ್ಷ್ಮಣಾಗ್ರಜಃ ॥೧೭॥ ಸೋಭ್ಯಗಚ್ಛನ್ಮಹಾತ್ಮಾನಂಸಾಕ್ಷಾದ್ಧರ್ಮಮಿವಾಪರಮ್ । ರಾಘವಂಭರತಶ್ಶ್ರೀಮಾನ್ಬ್ರಹ್ಮಾಣಮಿವವಾಸವಃ॥೧೮॥ ಶಶಂಸಚಯಥಾವೃತ್ತಂಗಂಧರ್ವವಧಮುತ್ತಮಮ್ ।ನಿವೇಶನಂಚದೇಶಸ್ಯಶ್ರುತ್ವಾಪ್ರೀತೋಭಿಸೋಭವತ॥೧೯॥ :::ಉತ್ತರ ರಾಮಾಯಣೇಏಕೋತ್ತರಶತತಮಸ್ಸರ್ಗಃ:::

---

ಹರವಾದ, ಗಂಧರ್ವದೇಶಃ-ಗಂಧರ್ವದೇಶವು, ಸಃ-ಗಾಂಧಾರವಿಷಯಶ್ಚ-ಆಗಾಂಧಾರದೇಶವೂನು, ಪಂಚಭಿರ್ವರ್ಷೈಃ-ಐದುವರ್ಷಗಳಲ್ಲಿ, ವಿಷಯೈಃ-ದೆಶಗಳಿಂದಲೂ, ತಥಾ-ಹಾಗೆಯೆ, ನಗರೈಶ್ಚ-ಪಟ್ಟಣಗಳಿಂದಲೂ, ಆಕೀರ್ಣಃ-ತುಂಬಿದಂಥಾದ್ದಾಯಿತು, ॥ ೧೦ ॥ ಧನರತ್ನೌಘಸಂಪೂರ್ಣೇ-ದ್ರವ್ಯರಾಶಿಯಿಂದಲೂ, ರತ್ನರಾಶಿಗಳಿಂದಲೂ ತುಂಬಿರುವ, ಕಾನನೈಃ-ಅರಣ್ಯಗಳಿಂದ, ಉಪಶೋಭಿತೆ-ಹೊಳೆಯುತ್ತಿರುವ, ಉಭೆ-ಎರಡುಪಟ್ಟಣಗಳೂನು, ಗುಣವಿಸ್ತರೈಃ-ಗುಣಾತಿಶಯಗಳಿಂದ, ಅನ್ಯೋನ್ಯಂ-ಒಂದಕ್ಕೊಂದು, ಸ್ಪರ್ಧಯಾ-ಅಸೂಯೆಯಿಂದ, ಸಂಘರ್ಷಂ-ಚರ್ಚೆಮಾಡುತವೋಯೇನೊ ಎಂಬಂತಿದ್ದವು, ॥೧೧॥ ಸುರುಚಿರಪ್ರಖ್ಯೇ-ಬಹಳಮನೋಹರವಾದ,ಹೆಸರುಗಳುಳ್ಳ, ಅಕಿಲ್ಬಿಷೈಃ-ಪಾಪರಹಿತರಾದ, ವ್ಯವಹಾರೈಃ-ವ್ಯಾಪ್ಯಗಳಿಂದಲೂ, ಉಪಲಕ್ಷಿತೌ-ಕೂಡಿಕೊಂಡಿರುವ, ಉದ್ಯಾನಯಾನೌಘವೃತೆ-ತೋಪುಗಳಿಂದಲೂ ವಾಹನಗಳ ಸಮೂಹಗಳಿಂದಲೂ, ಸುತ್ತುಕೊಳ್ಳಲ್ಪಟ್ಟ, ಸುವಿಭಕ್ತಾಂತರಾಪಣೆ-ಚನ್ನಾಗಿಭಾಗಿಸಲ್ಪಟ್ಟ ಮಧ್ಯಪ್ರದೇಶಗಳುಳ್ಳ ಅಂಗಡೀ ಬೀದಿಗಳುಳ್ಳ, ವಿಸ್ತರೈಃ-ವಿಸ್ತಾರಗಳಿಂದ, ಉಪಶೋಭಿತೆ-ಹೊಳೆಯುತ್ತಿರುವ, ಸುರುಚಿರೈಃ-ಬಹುಮನೋಹರವಾದ, ವಿಮಾನಸಮವರ್ಣಿಭಿಃ-ದೇವತಾಗೃಹಗಳಿಗೆ ಸಮಾನವಾದ ಬಣ್ಣವುಳ್ಳ, ಗೃಹಮುಖ್ಯೈಃ-ಉತ್ತಮವಾದಮನೆಗಳಿಂದ, ಶೋಭಿತೆ-ಹೊಳೆಯುತ್ತಿರುವ, ಶೋಭನೀಯೈಃ-ಶುಭಕರವಾದ,ದೆವಾಯತನವಿಸ್ತರೈಃ-ದೇವಸ್ಥಾನಗಳ ಅತಿಶಯದಿಂದಲೂ, ಸಾಲೈಃ-ಸಾಲವೃಕ್ಷಗಳಿಂದಲೂ ತಾಲೈಃ-ತಾಲವೃಕ್ಷಗಳಿಂದಲೂ ಸಮಾಕೀರ್ಣೆ-ತುಂಬಿರುವ, ಚಂಪಕೈಃ-ಸಂಪಿಗೆಗಿಡಗಳಿಂದಲೂ, ಉಪಶೋಭಿತೆ-ಹೊಳೆಯುತ್ತಿರುವ, ರಮ್ಯೇ-ಮನೋಹರವಾದ, ಉಭೆ-ಎರಡಾದ, ಪುರವರೆ-ಉತ್ತಮವಾದ ಪಟ್ಟಣಗಳನ್ನು, ಪಂಚಭಿರ್ವರ್ಷೈಃ-ಐದುವರ್ಷಗಳಲ್ಲಿ, ನಿವೇಶ್ಯ-ಪ್ರತಿಷ್ಠೆಮಾಡಿ,ರಾಘವಾನುಜಃ-ಶ್ರೀರಾಮನತಮ್ಮನಾದ; ಲಕ್ಷ್ಮಣಾಗ್ರಜಃ-ಲಕ್ಷ್ಮಣನಿಗೆಅಣ್ಣನಾದ, ಮಹಾಬಾಹುಃ-ಮಹಾಭುಜಪರಾಕ್ರಮಶಾಲಿಯಾದ, ಭರತಃ--ಭರತನು, ಪುನಃ-ಮತ್ತು-ಅಯೋಧ್ಯಾಂ-ಅಯೋಧ್ಯಾಪಟ್ಟಣವಂಕುರಿತು ಆಯಾತ್-ಬಂದನು ॥ ೧೭ ॥ ಶ್ರೀಮಾನ್-ಸಂಪದ್ಯುಕ್ತನಾದ, ಭರತಃ-ಭರತನು, ವಾಸವಃ-ಇಂದ್ರನು, ಬ್ರಹ್ಮಾಣಮಿವ-ಬ್ರಹ್ಮದೇವರನ್ನಂತೆ, ಮಹಾತ್ಮಾನಂ-ಮಹಾನುಭಾವನಾದ, ಸಾಕ್ಷಾತ್-ಪ್ರತ್ಯಕ್ಷವಾದ,ಅಪರಂ-ಮತ್ತೊಂದಾದ, ಧರ್ಮಮಿವಸ್ಥಿತಂ-ಧರ್ಮವೆಂಬಂತಿರುವ, ರಾಘವಂ-ಶ್ರೀರಾಮನಂಕುರಿತು, ಅಭ್ಯಗಚ್ಛತ್-ಬಂದನು ॥೧೮॥ಯಥಾವೃತ್ತಂ-ನಡೆದಂತೆ-ಉತ್ತಮಂ-ಶ್ರೇಷ್ಠವಾದ ಗಂಧರ್ವವಧಂ-ಗಂಧರ್ವರ ಸಂಹಾರವನ್ನು, ದೇಶಸ್ಯ-ದೇಶದ, ನಿವೇಶನಂಚ-ವ್ಯವಸ್ಥೆಯಂನು, ಶಶಂಸ-ಹೇಳಿದನು, ಸಃ-ಆಶ್ರೀರಾಮನು,ಶ್ರುತ್ವಾ-ಕೇಳಿ,ಪ್ರೀತಃ-ಸಂತೋಷಗೊಂಡವನು, ಅಭವದ್ಧಿ-ಆದನಷ್ಟೆ ॥೧೯॥ —ಇತಿಶ್ರೀಮದುತ್ತರರಾಮಾಯಣೆ ಏಕೋತ್ತರಶತತಮಸ್ಸರ್ಗಃ—

---

ಥಾವನಾದನು. ಮನೋಹರವಾದ ಗಂಧರ್ವದೇಶವು ಗಾಂಧಾರದೇಶವು ಐದು ವರುಷಗಳೊಳಗಾಗಿ ದೇಶಗಳಿಂದಲೂ, ಪುರಗಳಿಂದಲೂ ತುಂಬಿದಂಥಾದ್ದಾಯಿತು ॥ ೧೦ ॥ ಧನಗಳಿಂದಲೂ ರತ್ನಗಳಿಂದಲೂ ತುಂಬಿರುವಂಥಾದ್ದಾಗಿಯೂ, ತೋಪುಗಳಿಂದ, ಹೊಳೆಯುತ್ತಿರುವದಾಗಿಯೂ ಇರುವ ಆ ಎರಡು ಪಟ್ಟಣಗಳು ಗುಣಗಳಿಂದ ಒಂದಕ್ಕೊಂದು ಸ್ಪರ್ಧೆಯಂ ಗೈಯುವಂತಿದ್ದವು, ॥೧೧॥ ಪಾಪವಿಲ್ಲದಿರುವ ಮಹಾವೀರರಿಂದಲೂಕೂಡಿದಂಥಾವುಗಳಾಗಿಯೂ,ಶುಭಕರವಾಗಿಯೂ, ಮನೋಹರವಾದ ಕಾಂತಿಯುಳ್ಳದ್ದಾಗಿಯೂ, ಉದ್ಯಾನವನಗಳಿಂದಲೂ, ವಾಹನಗಳಿಂದಲೂ ತುಂಬಿದಂಥಾದ್ದಾಗಿಯೂ ಚನ್ನಾಗಿ ಭಾಗಿಸಲ್ಪಟ್ಟ ಅಂಗಡಿ ಬೀದಿಗಳುಳ್ಳದ್ದಾಗಿಯೂ ವಿಸ್ತಾರವಾಗಿ ಇರುವಂಥಾದ್ದಾಗಿಯೂ, ಮನೋಹರವಾದ ಮನೆಗಳಿಂದ ಕಂಗೊಳಿಸುತ್ತಿರುವವಾಗಿಯೂ ಪ್ರಕಾಶಮಾನವಾಗಿಯೂ ವಿಸ್ತಾರವಾಗಿಯೂ ಇರುವ ದೇವಸ್ಥಾನಗಳಿಂದ ಹೊಳೆಯುತ್ತಿರುವದಾಗಿಯೂ ಸಾಲವೃಕ್ಷಗಳಿಂದ ತಾಳವೃಕ್ಷಗಳಿಂದಲೂ ವ್ಯಾಪ್ತವಾದದ್ದಾಗಿಯೂ,ಸಂಪಿಗೆಗಿಡಗಳಿಂದ ಎಸೆಯುತ್ತಿರುವದಾಗಿಯೂ ಇರುವ ಆ ಎರಡು ಪುರಗಳಂ ಐದುವರುಷಗಳೊಳಗಾಗಿಕಟ್ಟಿಸಿ, ಮಹಾಭುಜಪರಾಕ್ರಮಶಾಲಿಯಾದಭರತನು ಅಯೋಧ್ಯಾಪುರವಂ ಕುರಿತು ಪುನಃತೆರಳಿಬ್ರಹ್ಮನಂ ಕುರಿತು ಇಂದ್ರನು ಬರುವತೆರದಿ ಮಹಾತ್ಮನಾದ ಶ್ರೀರಾಮನಂ ಕುರಿತು ಬಂದು ಆ ಗಂಧರ್ವರಸಂಹಾರವಂನೂ ಆದೇಶವಂ ಸ್ವಾಧೀನವಮಾಡಿಕೊಂಡದ್ದನ್ನೂ ಇದನ್ನೆಲ್ಲ ಶ್ರೀರಾಮನಿಗೆ ತಿಳುಹಿಸಿದನಾಗಲೂ, ಆ ರಘುನಂದನನದಂ ಕೇಳಿ ಕಡು ಸಂತೋಷವುಳ್ಳವನಾದನು

—:::ಉತ್ತರರಾಮಾಯಣದಲ್ಲಿನ ೧೦೧ನೇ ಸರ್ಗಂಮುಗಿದುದು:::—

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಚ್ಛ್ರುತ್ವಾ ಹರ್ಷಮಾಪೇದೇ ರಾಘವೋ ಭ್ರಾತೃಭಿಸ್ಸಹ । ವಾಕ್ಯಂ ಚಾದ್ಭುತಸಂಕಾಶಂ ತದಾ ಪ್ರೋವಾಚ ಲಕ್ಷ್ಮಣಮ್ ॥ ೧ ॥ ಇಮೌ ಕುಮಾರೌ ಸೌಮಿತ್ರೇ ತವ ಧರ್ಮವಿಶಾರದೌ । ಅಂಗದಶ್ಚಂದ್ರಕೇತುಶ್ಚ ರಾಜ್ಯಾರ್ಹೌ ದೃಢವಿಕ್ರಮೌ ॥ ೨ ॥ ಇಮೌ ರಾಜ್ಯೇಽಭಿಷೇಕ್ಷ್ಯಾಮಿ ದೇಶಸ್ಸಾಧು ವಿಧೀಯತಾಮ್ । ರಮಣೀಯೋ ಹ್ಯಸಂಬಾಧೋ ರಮೇತೇ ಯತ್ರ ಧನ್ವಿನೌ ॥ ೩ ॥ ನ ರಾಜ್ಞಾಂ ಯತ್ರ ಪೀಡಾ ಸ್ಯಾನ್ನಾಶ್ರಮಾಣಾಂ ವಿನಾಶನಮ್ । ಸ ದೇಶೋ ದೃಶ್ಯತಾಂ ಸೌಮ್ಯ ನಾಪರಾಧ್ಯಾಮಹೇ ಯಥಾ ॥ ೪ ॥ ತಥೋಕ್ತವತಿ ರಾಮೇ ತು ಭರತಃ ಪ್ರತ್ಯುವಾಚ ಹ । ಅಯಂ ತಾರಾಪಥೋ ದೇಶಃ ರಮಣೀಯೋ ನಿರಾಮಯಃ ॥ ನಿವೇಶ್ಯತಾಂ ತತ್ರ ಪುರಮಂಗದಸ್ಯ ಮಹಾತ್ಮನಃ ॥ ೫ ॥ ಚಂದ್ರಕೇತೋಸ್ಸುರುಚಿರಂ ಚಂದ್ರಕಾಂತಂ ನಿರಾಮಯಮ್ ॥ ೬ ॥ ತದ್ವಾಕ್ಯಂ ಭರತೇನೋಕ್ತಂ ಪ್ರತಿಜಗ್ರಾಹ ರಾಘವಃ । ತಂ ಚ ಕೃತ್ವಾ ವಶೇ ದೇಶಮಂಗದಸ್ಯ ನ್ಯವೇಶಯತ್ ॥ ೭ ॥ ಅಂಗದೀಯಾ ಪುರೀ ರಮ್ಯಾ ಅಂಗದಸ್ಯ ನಿವೇಶಿತಾ ।

---

ರಾಘವಃ-ಶ್ರೀರಾಮನು, ಭ್ರಾತೃಭಿಸ್ಸಹ-ತಮ್ಮಂದಿರಿಂದೊಡಗೂಡಿ, ತತ್-ಆ ವೃತ್ತಾಂತವನ್ನು, ಶ್ರುತ್ವಾ-ಕೇಳಿ, ಹರ್ಷಂ-ಸಂತೋಷವನ್ನು, ಆಪೇದೇ-ಹೊಂದಿದನು, ತದಾ-ಆಕಾಲದಲ್ಲಿ, ಲಕ್ಷ್ಮಣಂ-ಲಕ್ಷ್ಮಣನನ್ನು ಕುರಿತು, ಅದ್ಭುತಸಂಕಾಶಂ-ಆಶ್ಚರ್ಯಕರವಾದಂತಿರುವ, ವಾಕ್ಯಂಚ-ಮಾತನ್ನೂ ಕೂಡಾ, ಪ್ರೋವಾಚ-ನುಡಿದನು ॥ ೧ ॥ ಹೇ ಸೌಮಿತ್ರೇ-ಎಲೈ ಲಕ್ಷ್ಮಣನೆ, ತವ-ನಿನ್ನ, ಕುಮಾರೌ-ಮಕ್ಕಳಾದ, ಅಂಗದಃ-ಅಂಗದನು, ಚಂದ್ರಕೇತುಶ್ಚ-ಚಂದ್ರಕೇತನೂ ಎಂಬ, ಇಮೌ-ಇವರಿಬ್ಬರು, ಧರ್ಮವಿಶಾರದೌ-ಧರ್ಮಾಸಕ್ತರಾಗಿರುವಕಾರಣ, ದೃಢವಿಕ್ರಮೌ-ದೃಢವಾದ ಪರಾಕ್ರಮವುಳ್ಳವರು, ರಾಜ್ಯಾರ್ಹೌ-ರಾಜ್ಯಕ್ಕೆ ಯೋಗ್ಯರಾಗಿದ್ದಾರೆ ॥ ೨ ॥ ಇಮೌ-ಇವರಿಬ್ಬರನ್ನು, ರಾಜ್ಯೇ-ರಾಜ್ಯದಲ್ಲಿ, ಅಭಿಷೇಕ್ಷ್ಯಾಮಿ-ಪಟ್ಟಾಭಿಷೇಕವಮಾಡುವೆನು, ಯತ್ರ-ಯಾವದೇಶದಲ್ಲಿ, ಧನ್ವಿನೌ-ಧನುರ್ಧಾರಿಗಳಾದ ಇವರಿಬ್ಬರು, ರಮೇತಾಂ-ಸುಖಿಸುವರೋ, ರಮಣೀಯಃ-ಮನೋಹರವಾದ, ಅಸಂಬಾಧಃ-ಸಮ್ಮರ್ದವಿಲ್ಲದಿರುವ, ಸದೇಶಃ-ಅಂಥಾದೇಶವು, ಸಾಧು-ಚೆನ್ನಾಗಿ, ವಿಧೀಯತಾಂ-ಮಾಡಲ್ಪಡಲಿ ॥ ೩ ॥ ಯತ್ರ-ಯಾವದೇಶದಲ್ಲಿ, ರಾಜ್ಞಾಂ-ಅರಸುಗಳಿಗೆ, ಪೀಡಾ-ಬಾಧೆಯು, ನಸ್ಯಾತ್-ಇರದೇಹೋಗುವದೊ, ಆಶ್ರಮಾಣಾಂ-ಬ್ರಹ್ಮಚರ್ಯಾದ್ಯಾಶ್ರಮಗಳಿಗೆ, ವಿನಾಶನಂ-ಬಾಧಕವು, ನಸ್ಯಾತ್-ಇರದಿರುವದೋ, ಸಃ-ಅಂಥಾ, ಪ್ರದೇಶಃ-ಪ್ರದೇಶವು, ಯಥಾ-ಹ್ಯಾಗೆ, ನಾಪರಾಧ್ಯಾಮಹೇ-ಪ್ರಜೆಗಳಿಗೆ ಅಪರಾಧವಮಾಡದಿರುವೆವೋ, ತಥಾ-ಆಪರಿಯಾಗಿ, ದೃಶ್ಯತಾಂ-ನೋಡಲ್ಪಡಲಿ ॥ ೪ ॥ ತಥಾ-ಆ ಪರಿಯಾಗಿ, ರಾಮೇತು-ಶ್ರೀರಾಮನಾದರೆ, ಉಕ್ತವತಿಸತಿ-ಹೇಳಿದವನಾಗುತಿರಲಾಗಿ, ಅಯಂತಾರಾಪಥಃ-ಈ ತಾರಾಪಥವೆಂಬ ದೇಶಃ-ದೇಶವು, (ಪಾ॥ ಅಯಂಕಾರುಪಥಃ-ಕಾರುಪಥವೆಂಬ) ದೇಶಃ-ಪ್ರದೇಶವು, ರಮಣೀಯಃ-ಮನೋಹರವು, ನಿರಾಮಯಃ- ರೋಗರಹಿತವಾದ್ದು, ತತ್ರ-ಆ ಪ್ರದೇಶದಲ್ಲಿ, ಮಹಾತ್ಮನಃ-ಪುಣ್ಯವಂತನಾದ, ಅಂಗದಸ್ಯ-ಅಂಗದನಿಗೆ, ಪುರಂ-ಪಟ್ಟಣವು ನಿವೇಶ್ಯತಾಂ-ಏರ್ಪಡಿಸಲ್ಪಡಲಿ ॥ ೫ ॥ ಚಂದ್ರಕೇತೋಃ-ಚಂದ್ರಕೇತುವೆಂಬುವನಿಗೆ, ಚಂದ್ರಕಾಂತಂ-ಚಂದ್ರಕಾಂತವೆಂಬ ಪಟ್ಟಣವು, ಸುರುಚಿರಂ-ಮನೋಹರವಾದದ್ದು, ನಿರಾಮಯಂ-ಬಾಧವಿಲ್ಲದ್ದು (ಎಂದು) ಭರತಃ-ಭರತನು, ಪ್ರತ್ಯುವಾಚ-ಪ್ರತ್ಯುತ್ತರಕೊಟ್ಟನು ॥ ೬ ॥ ಭರತೇನ-ಭರತನಿಂದ, ಉಕ್ತಂ-ಹೇಳಲ್ಪಟ್ಟ, ತದ್ವಾಕ್ಯಂ-ಆಮಾತನ್ನು, ರಾಘವಃ-ಶ್ರೀರಾಮನು ಪ್ರತ್ಯಜಗ್ರಾಹ-ಗ್ರಹಿಸಿದನು, ತಂದೇಶಂಚ-ಆ ಪ್ರದೇಶವನ್ನೂ ಕೂಡ, ವಶೇ-ಸ್ವಾಧೀನದಲ್ಲಿ, ಕೃತ್ವಾ-ಮಾಡಿ, ಅಂಗದಸ್ಯ-ಅಂಗದನಿಗೆ, ನ್ಯವೇಶಯತ್-ವಾಸಯೋಗ್ಯವಾಗಿಮಾಡಿದನು ॥ ೭ ॥ ಯಾಪುರೀ-ಯಾವ ಪಟ್ಟಣವು, ಅಂಗದೀ- ಅಂಗದೀನಾಮಕವೋ, ರಮ್ಯಾ-ಮನೋಹರವಾದ, ಸಾಪುರೀ-ಆ ಪಟ್ಟಣವು, ಅಂಗದಸ್ಯ-ಅಂಗದನಿಗೆ, ನಿವೇಶಿತಾ-ಇಡಲ್ಪಟ್ಟಿತು, ಅಕ್ಲಿಷ್ಟಕರ್ಮಣಾ-ಕ್ಲೇಶವಿಲ್ಲದವ್ಯಾಪಾರವುಳ್ಳ, ರಾಮೇಣ-ಶ್ರೀರಾಮನಿಂದ,

---

ರಘುವಂಶೋತ್ಪನ್ನನಾದ ಶ್ರೀರಾಮನು ತಮ್ಮಂದಿರಿಂ ದೊಡಗೂಡಿ, ಅತ್ಯಾಶ್ಚರ್ಯಕರವಾದ ಆವೃತ್ತಾಂತವಂ ಕೇಳಿ, ಆ ವೇಳೆಯೊಳು ಲಕ್ಷ್ಮಣನಂ ಕುರಿತು ಎಲೈಲಕ್ಷ್ಮಣನೆ! ನಿನ್ನ ಕುಮಾರರಾದ ಮಹಾ ಧರ್ಮಿಷ್ಠರಾಗಿರ್ಪ ಈ ಅಂಗದ ಚಂದ್ರಕೇತು ರೆಂಬೀರ್ವರು ಸತ್ವ ಪರಾಕ್ರಮಿಗಳಾಗಿಯೂ, ರಾಜಾರ್ಹ ರಾಗಿಯೂ ಇರುವರು. ಆದಕಾರಣ ಇವರಿಬ್ಬರನ್ನು ರಾಜ್ಯದೊಳು ಪಟ್ಟಾಭಿಷೇಕವಂ ಮಾಡುವೆನು, ಯಾವ ಪ್ರದೇಶದಲ್ಲಿ ಇವರೀರ್ವರೂ ಸುಖವಾಗಿರುವರೋ ಮನೋಹರವಾಗಿಯೂ ಸಂಮರ್ದ ವಿಲ್ಲದೇ ಇರುವದಾಗಿಯೂ ಇರುವ ಅಂಥಾ ದೇಶವು, ನಿಯಮಿಸಲ್ಪಡಲಿ. ಮತ್ತು ರಾಜರಿಗೆಲ್ಲ ಬಾಧೆ ಇಲ್ಲದಂತೆಯೂ, ಋಷ್ಯಾಶ್ರಮಗಳಿಗೆ ನ್ಯೂನತೆ ಇಲ್ಲದಂತೆಯೂ ಇರುವದೇಶವಂ ಹುಡುಕುವಂಥಾವನಾಗು. ನಾವು ಯಾರಿಗು ಎಂದಿಗೂ ಅಪರಾಧವಂ ಗೈಯಬಾರದೆಂದು ನಿರೂಪಿಸಿದವನಾಗಲು, ಭರತನು ಎಲೈ ಒಡೆಯನೆ ತಾರಾಪಥವೆಂಬ ಈ ದೇಶವು ಸೌಖ್ಯವಾಗಿರುವದು. ಅಲ್ಲಿ ಮಹಾತ್ಮನಾದ, ಅಂಗದನಿಗೆ ಪುರವಂ ಕಟ್ಟಿಸೋಣ, ಚಂದ್ರಕೇತುವಿಗಾದರೆ ಮನೋಹರವಾದ ಚಂದ್ರಕಾಂತವೆಂಬ ಪಟ್ಟಣವು ಬಹಳ ರಮ್ಯವಾದದ್ದಾಗಿಯೂ, ನಿರುಪಾಧಿಕ ವಾದದ್ದಾಗಿಯೂ ಇರುವದು ಎಂಬದಾಗಿ ತಿಳಿಸಿದವನಾಗಲೂ ಶ್ರೀರಾಮನು ಆ ವಾಕ್ಯವಂ ಪರಿಗ್ರಹಿಸಿ, ಆ ತಾರಾಪಥವೆಂಬ ದೇಶವಂ ಸ್ವಾಧೀನ ಮಾಡಿಕೊಂಡು ಅಂಗದನಿಗೆ ಕೊಡಲ್ಪಟ್ಟಿತು ॥ ೭ ॥ ಯಾರಿಗೂ ಕ್ಲೇಶವಿಲ್ಲದಂತೆ ಕಾರ್ಯವಂ ಮಾಡುತ್ತಿರುವ ಆ ಶ್ರೀರಾಮನಿಂದ ಅಂಗದನಿಗೋಸುಗ ಮಾಡಲ್ಪಟ್ಟ ಮಹಾ ಮನೋಹರವಾದ ಆ ಪಟ್ಟಣವು ಅಂಗದನ ಅಧೀನದಲ್ಲಿ ಕೊಡಲ್ಪಟ್ಟು ಚೆನ್ನಾಗಿ ರಕ್ಷಿಸಲ್ಪಟ್ಟಿತು ॥ ಮಹಾ ಶೂರನಾ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಮಣೀಯಾಸುಗುಪ್ತಾ ಚ ರಾಮೇಣಾಕ್ಲಿಷ್ಟಕರ್ಮಣಾ ॥೮॥ ಚಂದ್ರಕೇತೋಸ್ತು ಮಲ್ಲಸ್ಯ ಮಲ್ಲಭೂಮ್ಯಾಂ ನಿವೇಶಿತಾ । ಚಂದ್ರಕಾಂತೇತಿ ವಿಖ್ಯಾತಾ ದಿವ್ಯಾ ಸ್ವರ್ಗಪುರೀ ಯಥಾ ॥೯॥ ತತೋ ರಾಮಃ ಪರಾಂ ಪ್ರೀತಿಂ ಭರತೋ ಲಕ್ಷ್ಮಣಸ್ತಥಾ । ಯಯುರ್ಯುಧಿ ದುರಾಧರ್ಷಾ ಅಭಿಷೇಕಂ ಚ ಚಕ್ರಿರೇ ॥೧೦॥ ಅಭಿಷಿಚ್ಯ ಕುಮಾರೌ ದ್ವೌ ಪ್ರಸ್ಥಾಪ್ಯ ಸಬಲಾನುಗೌ । ಅಂಗದಂ ಪಶ್ಚಿಮಾಂ ಭೂಮಿಂ ಚಂದ್ರಕೇತುಮುದಙ್ಮುಖಮ್ ॥೧೧॥ ಅಂಗದಂ ಚಾಪಿ ಸೌಮಿತ್ರಿರ್ಲಕ್ಷ್ಮಣೋನುಜಗಾಮ ಹ । ಚಂದ್ರಕೇತೋಸ್ತು ಭರತಃ ಪಾರ್ಷ್ಣಿಗ್ರಾಹೋ ಬಭೂವ ಹ ॥೧೨॥ ಲಕ್ಷ್ಮಣಸ್ತ್ವಂಗದೀಯಾಯಾಂ ಸಂವತ್ಸರಮಥೋಷಿತಃ । ಪುತ್ರೇ ಸ್ಥಿತೇ ದುರಾಧರ್ಷೇ ಅಯೋಧ್ಯಾಂ ಪುನರಾಗಮತ್ ॥೧೩॥ ಭರತೋಪಿ ತಥೈವೋಷ್ಯ ಸಂವತ್ಸರಮತೋಧಿಕಮ್ । ಅಯೋಧ್ಯಾಂ ಪುನರಾಗಮ್ಯ ರಾಮಪಾದಾವುಪಾಗಮತ್ ॥೧೪॥ ಉಭೌ ಸೌಮಿತ್ರಿಭರತೌ ರಾಮಪಾದಾವನುವ್ರತೌ । ಕಾಲಂ ಗತಮಪಿ ಸ್ನೇಹಾನ್ನ ಜಜ್ಞಾತೇ ಸುಧಾರ್ಮಿಕೌ ॥೧೫॥ ಏವಂ ವರ್ಷಸಹಸ್ರಾಣಿ ದಶ ತೇಷಾಂ ಯಯುಸ್ತಥಾ ॥ ಧರ್ಮೇ ಪ್ರಯತಮಾನಾನಾಂ ಪೌರಕಾರ್ಯೇಷು ನಿತ್ಯದಾ ॥೧೬॥ ವಿಹೃತ್ಯ ಕಾಲಂ ಪರಿಪೂರ್ಣಮಾನಸಾಃ ಶ್ರಿಯಾವೃತಾ ಧರ್ಮಪರೇ ಪಥಿ ಸ್ಥಿತಾಃ । ತ್ರಯಸ್ಸಮಿದ್ಧಾ ಇವ ದೀ

---

ರಮಣೀಯಾ–ಮನೋಹರವಾದದ್ದಾಗಿ, ಸುಗುಪ್ತಾ ಚ–ಸಂರಕ್ಷಣೆಯೂ ಮಾಡಲ್ಪಟ್ಟಿತು, ॥೮॥ ಮಲ್ಲಸ್ಯ–ಶೂರನಾದ, ಚಂದ್ರಕೇತೋಸ್ತು–ಚಂದ್ರಕೇತುವಿಗಾದರೆ, ಮಲ್ಲಭೂಮ್ಯಾಂ–ಶ್ರೇಷ್ಠವಾದಪ್ರದೇಶದಲ್ಲಿ, ಸ್ವರ್ಗಪುರೀ ಯಥಾ–ಅಮರಾವತೀಪಟ್ಟಣದಂತೆ, ದಿವ್ಯಾ–ಮನೋಹರವಾದ, ಚಂದ್ರಕಾಂತೇತಿ–ಚಂದ್ರಕಾಂತವೆಂದು, ವಿಖ್ಯಾತಾ–ಪ್ರಸಿದ್ಧವಾದ, ಪುರೀ–ಪಟ್ಟಣವು, ನಿವೇಶಿತಾ–ಕಟ್ಟಲ್ಪಟ್ಟಿತು, ॥೯॥ ತತಃ–ಬಳಿಕ, ರಾಮಃ–ಶ್ರೀರಾಮನು, ಭರತಃ–ಭರತನು, ತಥಾ–ಹಾಗೆ, ಲಕ್ಷ್ಮಣಃ–ಲಕ್ಷ್ಮಣನೂ ಎಂಬ ಈ ಮುವ್ವರು, ಯುಧಿ–ಯುದ್ಧದಲ್ಲಿ, ದುರ್ಧರ್ಷಾಃ–ತಿರಸ್ಕರಿಸಲಸಾಧ್ಯರಾಗಿ, ಪರಾಂ ಪ್ರೀತಿಂ–ಅತ್ಯಂತಸಂತೋಷವನ್ನು, ಪ್ರಯಯುಃ–ಐದಿದರು ॥ ೧೦ ॥ ದ್ವೌ–ಇಬ್ಬರಾದ, ಕುಮಾರೌ–ಬಾಲಕರನ್ನು, ಅಭಿಷಿಚ್ಯ–ಪಟ್ಟಾಭಿಷೇಕಮಾಡಿ, ಸಬಲಾನುಗೌ–ಸೈನ್ಯಸೇವಕರಿಂದೊಡಗೂಡಿದವರನ್ನಾಗಿ, ಅಂಗದಂ–ಅಂಗದನನ್ನು, ಪಶ್ಚಿಮಾಂ ಭೂಮಿಂ–ಪಶ್ಚಿಮದೇಶವನ್ನು ಕುರಿತು, ಚಂದ್ರಕೇತುಂ–ಚಂದ್ರಕೇತುವಿನನ್ನು, ಉದಙ್ಮುಖಂ–ಉತ್ತರದೇಶವನ್ನು ಕುರಿತು, ಪ್ರಸ್ಥಾಪ್ಯ–ಕಳುಹಿಸಿ,॥ ೧೧ ॥ ಅಂಗದಂ ಚಾಪಿ–ಅಂಗದನನ್ನು, ಸೌಮಿತ್ರಿಃ – ಸುಮಿತ್ರಾಪುತ್ರನಾದ, ಲಕ್ಷ್ಮಣಃ–ಲಕ್ಷ್ಮಣಸ್ವಾಮಿಯು, ಅನುಜಗಾಮ ಹ–ಅನುಸರಿಸಿ ಹೋದನು,ಭರತಸ್ತು–ಭರತನಾದರೆ, ಚಂದ್ರಕೇತೋಃ–ಚಂದ್ರಕೇತುವಿನ ಪಾರ್ಷ್ಣಿಗ್ರಾಹಃ–ಹಿಂಭಾಗವನ್ನನು ಸರಿಸಿದವನು,ಬಭೂವ ಹ–ಆದನು॥ಲಕ್ಷ್ಮಣಸ್ತು–ಲಕ್ಷ್ಮಣನಾದರೆ,ಅಂಗದೀಯಾಯಾಂ–ಅಂಗದೀಯವೆಂಬ ಪಟ್ಟಣದಲ್ಲಿ, ಸಂವತ್ಸರಂ–ಸಂವತ್ಸರವು, ಉಷಿತಃ–ಇದ್ದನು, ಅಥ–ಬಳಿಕ, ದುರಾಧರ್ಷೇ–ತಿರಸ್ಕರಿಸಲಸಾಧ್ಯನಾದ, ಪುತ್ರೇ–ಮಗನು,ಸ್ಥಿತೇ ಸತಿ–ಇರಲಾಗಿ, ಪುನಃ–ಮತ್ತು, ಅಯೋಧ್ಯಾಂ–ಅಯೋಧ್ಯಾಪಟ್ಟಣವನ್ನು ಕುರಿತು, ಆಗಮತ್–ಬಂದನು ॥೧೩॥ ಭರತೋಪಿ–ಭರತನೂಕೂಡ, ಸಂವತ್ಸರಂ–ಸಂವತ್ಸರವು, ಉಷ್ಯ–ಇದ್ದು, ತಥೈವ–ಹಾಗೆಯೆ, ಅತಃ–ಈ ಲಕ್ಷ್ಮಣನಿಗಿಂತಲೂ, ಅಧಿಕಂ–ಹೆಚ್ಚಾಗಿ, ಪುನಃ–ಮತ್ತು, ಅಯೋಧ್ಯಾಂ–ಅಯೋಧ್ಯಾಪಟ್ಟಣವನ್ನು ಕುರಿತು, ಆಗಮ್ಯ–ಬಂದು, ರಾಮಪಾದೌ–ಶ್ರೀ ರಾಮನಪಾದಗಳನ್ನು, ಉಪಾಗಮತ್–ಹೊಂದಿದನು ॥೧೪॥ ಉಭೌ–ಇಬ್ಬರಾದ, ಸೌಮಿತ್ರಿಭರತೌ–ಲಕ್ಷ್ಮಣಭರತರು, ರಾಮಪಾದೌ– ಶ್ರೀರಾಮನಪಾದಗಳನ್ನು, ಅನುವ್ರತೌ–ಅನುಸರಿಸಿದವರಾಗಿ, ಸುಧಾರ್ಮಿಕೌ–ಧರ್ಮಿಷ್ಠರಾದಕಾರಣ, ಸ್ನೇಹಾತ್–ಪ್ರೇಮದವಶೆಯಿಂದ, ಗತಮಪಿ – ಕಳೆದಾಗ್ಯೂ, ಕಾಲಂ – ಕಾಲವನ್ನು, ನಜಜ್ಞಾತೇ – ಅರಿಯದೇಹೋದರು ॥೧೫॥ ಏವಂ–ಈಪರಿಯಾಗಿ, ವರ್ಷಸಹಸ್ರಾಣಿ–ಅನೇಕ ಸಹಸ್ರಸಂವತ್ಸರು, ಪೌರಕಾರ್ಯೇಷು, ಪ್ರಜಗಳ ಕಾರ್ಯಗಳಲ್ಲಿ, ನಿತ್ಯದಾ–ನಿರಂತರವಾಗಿ, ಧರ್ಮೇ–ಧರ್ಮದಲ್ಲಿ, ಪ್ರಯತಮಾನಾನಾಂ–ಪ್ರಯತ್ನಮಾಡುತಿರುವ, ತೇಷಾಂ–ಆ ರಾಮಲಕ್ಷ್ಮಣಭರತರಿಗೆ, ತಥಾ–ಹಾಗೆಯೆ, ಯಯುಃ–ಕಳೆದುಹೋದವು ॥೧೬॥ ಪರಿಪೂರ್ಣಮಾನಸಾಃ–ತುಂಬಿದಮನವುಳ್ಳ,

---

ದ ಚಂದ್ರಕೇತುವಿಗಾದರೆ, ಅಮರಾವತೀ ಪುರದಂತೆ ಬಹುರಮ್ಯವಾದ ಚಂದ್ರಕಾಂತವೆಂಬ ಪಟ್ಟಣವು ಉತ್ತಮವಾದ ಪ್ರದೇಶದೊಳು ಕಟ್ಟಲ್ಪಟ್ಟಂಥಾದ್ದಾಯಿತು ॥೯॥ ಬಳಿಕ ರಣರಂಗದಲ್ಲಿ ಗೆಲ್ಲಲಸಾಧ್ಯರಾದ ಆ ಶ್ರೀರಾಮ ಭರತ ಲಕ್ಷ್ಮಣರು ಮಹಾಸಂತೋಷವನ್ನೈದಿ ಆ ಬಾಲಕರೀರ್ವರಿಗೆ, ಪಟ್ಟಾಭಿಷೇಕವಂ ಗೈದು ಸೈನ್ಯಸಮೇತವಾಗಿ ಅಂಗದನನ್ನು ಪಶ್ಚಿಮದಿಕ್ಕಿನಲ್ಲಿಯೂ ಚಂದ್ರಕೇತುವನ್ನು ಉತ್ತರಕಡೆಯಲ್ಲಿಯೂ, ಕಳುಹಿಸುವಂತೆ ನಿಶ್ಚಯಿಸಿ ಸುಮಿತ್ರಾಪುತ್ರನಾದ ಲಕ್ಷ್ಮಣನು ಅಂಗದನನ್ನು ಕರೆದುಕೊಂಡು ತೆರಳಿದನು, ಭರತನು ಚಂದ್ರಕೇತುವಿನ ಹಿಂದೆ ಪೋದಂಥಾವನಾದನು ॥೧೨॥ ಬಳಿಕ ಲಕ್ಷ್ಮಣನಾದರೆ ಅಂಗದನ ಸಂಬಂಧವಾದ ಆ ತಾರಾಪಥವೆಂಬ ಪುರದಲ್ಲಿ ಸಂವತ್ಸರವಿದ್ದು ತಿರಸ್ಕರಿಸಲಶಾಧ್ಯನಾದ ಆ ಮಗನನ್ನು ಅಲ್ಲಿ ನಿಲ್ಲಿಸಿ ಮತ್ತು ಅಯೋಧ್ಯಾಪುರಿಗೆ ಬಂದವನಾದನು ॥೧೩॥ ಹಾಗೆಯೆ ಭರತನುಕೂಡಾ ಸ್ವಲ್ಪ ಅಧಿಕವಾಗಿ ಒಂದು ವರುಷವು ಆ ಚಂದ್ರಕೇತುವಿನ ಪಟ್ಟಣದಲ್ಲಿದ್ದು ಪುನಃ ಅಯೋಧ್ಯಾ ನಗರಿಗೆ ಗಮಿಸಿ ಶ್ರೀರಾಮನ ಪಾದಗಳಂ ಪೊಂದಿದನು ॥೧೪॥ ರಾಮನ ಪಾದಗಳನ್ನಾಶ್ರಯಿಸಿರುವ ಮಹಾಧರ್ಮಿಷ್ಠರಾದ, ಆ ಭರತ ಲಕ್ಷ್ಮಣರೀರ್ವರು ಸ್ನೇಹದಿಂದ ಕಳೆದಕಾಲವನ್ನೂ ಕೂಡ ಅರಿಯದಿದ್ದರು ॥೧೫॥ ನಿರಂತರವು ಈಪರಿ ಧರ್ಮವಾಗಿ ಪೌರಕಾರ್ಯಗಳಲ್ಲಿ ವ್ಯಗ್ರರಾದ ಶ್ರೀರಾಮಾದಿಗಳಿಗೆ ಹತ್ತುಸಾವಿರ ವರ್ಷಗಳ ಹಾಗೆಯೇ ಕಳೆದುಹೋದವು॥೧೬॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪ್ತತೇಜಸೋಮಹಾಧ್ವರೇಸಾಧುಹುತಾಸ್ತ್ರಯೋಗ್ನಯಃ ॥೧೭॥ —…ಇತಿ ದ್ವ್ಯುತ್ತರಶತತಮಸ್ಸರ್ಗಃ…—

ಕಸ್ಯಚಿತ್ತ್ವಥಕಾಲಸ್ಯರಾಮೇಧರ್ಮಪಥೇಸ್ಥಿತೇ । ಕಾಲಸ್ತಾಪಸರೂಪೇಣರಾಜದ್ವಾರಮುಪಾಗಮತ್ ॥ ಸೋಬ್ರವೀಲ್ಲಕ್ಷ್ಮಣಂವಾಕ್ಯಂಧೃತಿಮಂತಂಯಶಸ್ವಿನಮ್ । ಮಾಂನಿವೇದಯರಾಮಾಯಸಂಪ್ರಾಪ್ತಂಕಾರ್ಯಗೌರವಾತ್ ॥೨॥ ದೂತೋಹ್ಯತಿಬಲಸ್ಯಾಹಂಮಹರ್ಷೇರಮಿತೌಜಸಃ । ರಾಮಂದಿದೃಕ್ಷುರಾಯಾತಃಕಾರ್ಯೇಣಹಿಮಹಾಬಲ ॥೩॥ ತಸ್ಯತದ್ವಚನಂಶ್ರುತ್ವಾಸೌಮಿತ್ರಿಸ್ತ್ವರಯಾನ್ವಿತಃ । ನ್ಯವೇದಯತರಾಮಾಯತಾಪಸಸ್ಯವಿವಕ್ಷಿತಮ್ ॥೪॥ ಜಯಸ್ವರಾಮಧರ್ಮೇಣಉಭೌಲೋಕೌಮಹಾಮತೇ । ದೂತಸ್ತ್ವಾಂದ್ರಷ್ಟುಮಾಯಾತಸ್ತಪಸ್ವೀಭಾಸ್ಕರಪ್ರಭಃ ॥೫॥ ತದ್ವಾಕ್ಯಂಲಕ್ಷ್ಮಣೇನೋಕ್ತಂ ಶ್ರುತ್ವಾರಾಮಉವಾಚಹ । ಪ್ರವೇಶ್ಯತಾಂಮುನಿಸ್ತಾತಮಹೌಜಾಸ್ತಸ್ಯವಾಕ್ಯಧೃಕ್ ॥೬॥ ಸೌಮಿತ್ರಿಸ್ತುತಥೇ

---

ಶ್ರಿಯಾ–ಐಶ್ವರ್ಯದಿಂದ, ವೃತಾಃ–ವರಿಸಲ್ಪಟ್ಟ, ಧರ್ಮಪರೇ–ಧರ್ಮಾನುಸಾರಿಯಾದ, ಪಥೇ–ಮಾರ್ಗದಲ್ಲಿ, ಸ್ಥಿತಾಃ–ಇರುತಿರುವ, ತ್ರಯಃ–ಮೂವರು, ಕಾಲಂ–ಬಹುಕಾಲದಲ್ಲಿ, ವಿಸೃತ್ಯ–ಆಡಳಿತವನ್ನು ನಡಿಸಿ, ತೇಜಸಃ–ಪ್ರಕಾಶವುಳ್ಳವರಾಗಿ, ಸಮಿದ್ಧಾಃ–ಪ್ರಜ್ವಲಿಸಲ್ಪಟ್ಟ, ಮಹಾಧ್ವರೇ–ಮಹಾಕ್ರತುವಿನಲ್ಲಿ, ಸಾಧು–ಚನ್ನಾಗಿ, ಹುತಾಃ–ಹೋಮಮಾಡಲ್ಪಟ್ಟ, ತ್ರಯಃ–ಮೂರಾದ, ಅಗ್ನಯಃಇವ–ಆ ಹವನೀಯ್ಯ ಗಾರ್ಹಪತ್ಯ ದಕ್ಷಿಣಾಗ್ನಿಗಳಂತೆ, ದೀಪ್ತತೇಜಸಃ–ಹೊಳೆಯುತಿರುವಂಥಾವರು, ಬಭೂವುಃ–ಆದರು ॥೧೭॥ —ಇತಿ ಶ್ರೀಮದುತ್ತರರಾಮಾಯಣೇದ್ವ್ಯುತ್ತರಶತತಮಸ್ಸರ್ಗಃ—

ಕಸ್ಯಚಿತ್ಕಾಲಸ್ಯ–ಒಂದಾನೊಂದುಕಾಲದ, ಅಥ–ಕಳದಬಳಿಕ, ರಾಮೇ–ಶ್ರೀರಾಮನು, ಧರ್ಮಪಥೇ–ಧರ್ಮಮಾರ್ಗದಲ್ಲಿ, ಸ್ಥಿತೇಸತಿ – ಇರುತಿರುವನಾಗುತಿರಲೀಕಾಗಿ, ಕಾಲಃ–ಯಮನು, ತಾಪಸರೂಪೇಣ–ಋಷಿರೂಪದಿಂದ, ರಾಜದ್ವಾರಂ–ಅರಮನೆಯಬಾಗಲನ್ನು ಕುರಿತು, ಉಪಾಗಮತ್–ಬಂದನು, ॥ ೧ ॥ ಸಃ–ಆ ಯಮನು, ಧೃತಿಮಂತಂ–ಧೈರ್ಯಶಾಲಿಯಾದ, ಯಶಸ್ವಿನಂ–ಕೀರ್ತಿವಂತನಾದ, ಲಕ್ಷ್ಮಣಂ–ಲಕ್ಷ್ಮಣಸ್ವಾಮಿಯನ್ನು ಕುರಿತು, ರಾಮಾಯ–ಶ್ರೀರಾಮನಿಗೋಸ್ಕರ, ಕಾರ್ಯಗೌರವಾತ್–ಕಾರ್ಯ–ಅತಿಶಯದಳಿಯಿಂದ,ಮಾಂ–ನನ್ನನು, ಸಂಪ್ರಾಪ್ತಂ–ಬಂದವನನ್ನಾಗಿ, ನಿವೇದಯ–ತಿಳಿಸು ಯೆಂದು, ವಾಕ್ಯಂ–ಮಾತನ್ನು, ಅಬ್ರವೀತ್–ನುಡಿದನು, ॥ ೨ ॥ ಹೇಮಹಾಬಲ–ಎಲೈ ಲಕ್ಷ್ಮಣನೆ, ಅಮಿತೌಜಸಃ–ಅಪಾರತೇಜಸ್ವಿಯಾದ, ಅತಿಬಲಸ್ಯ–ಅತಿಪರಾಕ್ರಮಿಯಾದ, ಮಹರ್ಷೇಃ–ಬ್ರಂಹನಿಗೆ, ಅಹಂ–ನಾನು, ದೂತಃ–ದೂತನು, ಅಸ್ಮಿ–ಆಗಿಧೇನೆ, ಕಾರ್ಯೇಣ–ಕಾರ್ಯದಿಂದ, ರಾಮಂ–ಶ್ರೀರಾಮನನ್ನು, ದಿದೃಕ್ಷುಃ–ನೋಡಲಿಚ್ಛೆಯುಳ್ಳವನಾಗಿ, ಆಯಾತೋಹಿ–ಬಂದಿಧೆನಷ್ಟೆ ॥ ೩ ॥ ತಸ್ಯ–ಆ ಯಮನ, ತದ್ವಚನಂ–ಆ ಮಾತನ್ನು, ಶ್ರುತ್ವಾ–ಕೇಳಿ, ಸೌಮಿತ್ರಿಃ–ಲಕ್ಷ್ಮಣನು, ತ್ವರಯಾ–ಜಾಗ್ರತೆಯಿಂದ, ಅನ್ವಿತಃ–ಕೂಡಿದವನಾಗಿ, ರಾಮಾಯ–ಶ್ರೀರಾಮನಿಗೋಸ್ಕರ, ತಾಪಸಸ್ಯ–ಋಷಿಯ, ವಿವಕ್ಷಿತಂ–ಅಭಿಪ್ರಾಯವನ್ನು, ನ್ಯವೇದಯತ–ತಿಳಿಸಿದನು ॥ ೪ ॥ ಹೇರಾಮ–ಎಲೈಶ್ರೀರಾಮನೆ, ಹೇಮಹಾಮತೇ–ಎಲೈಮಹಾಬುದ್ಧಿಶಾಲಿಯೆ, ಧರ್ಮೇಣ–ಧರ್ಮದಿಂದ, ಉಭೌಲೋಕೌ–ಎರಡುಲೋಕಗಳನ್ನು, ಜಯಸ್ವ–ಜಯಿಸು, ತ್ವಾಂ–ನಿನ್ನನ್ನು, ದ್ರಷ್ಟುಂ–ನೋಡುವದಕ್ಕೋಸ್ಕರ, ಭಾಸ್ಕರಪ್ರಭಃ–ಸೂರ್ಯಪ್ರಕಾಶದಂತೆ ಪ್ರಕಾಶಉಳ್ಳ, ದೂತಃ–ದೂತನು, ತಪಸ್ವೀ–ಋಷಿಯಾಗಿ, ಆಯಾತಃ–ಬಂದಿಧಾನೆ, ಇತಿ–ಇಂತೆಂದು, ಅಬ್ರವೀತ್–ನುಡಿದನು, ॥೫॥ ರಾಮಃ–ಶ್ರೀರಾಮನು, ಲಕ್ಷ್ಮಣೇನ–ಲಕ್ಷ್ಮಣಸ್ವಾಮಿಯಿಂದ, ಉಕ್ತಂ–ಹೇಳಲ್ಪಟ್ಟ, ತದ್ವಾಕ್ಯಂ–ಆ ಮಾತನ್ನು, ಶ್ರುತ್ವಾ–ಕೇಳಿ, ತಸ್ಯ–ಆ ಬ್ರಹ್ಮನ, ವಾಕ್ಯಧೃತ್–ಮಾತನ್ನು ಧರಿಸಿರುವ, ಮಹೌಜಾಃ–ಮಹಾತೇಜಸ್ವಿಯಾದ, ಮುನಿಸ್ತಾವತ್–ಋಷಿಯಾದರೆ, ಪ್ರವೇಶ್ಯತಾಂ–ಪ್ರವೇಶಿಸಲ್ಪಡಲಿ, ಇತಿ–ಇಂತೆಂದು, ಉವಾಚಹ–ಹೇಳಿದನು ॥ ೬ ॥ ಸೌಮಿತ್ರಿಸ್ತು–ಲಕ್ಷ್ಮಣಸ್ವಾಮಿಯಾದರೆ, ತಥೇತ್ಯುಕ್ತ್ವಾ–ಹಾಗೆ ಆಗಲೀಯೆಂದು ಹೇಳಿ, ತೇಜೋಭಿಃ – ತೇಜಸ್ಸುಗಳಿಂದ, ಜ್ವಲಂತಮಿವಸ್ಥಿತಂ – ಪ್ರಜ್ವಲಿಸಿದವನಂತಿರುವ, ಅಂಶುಭಿಃ–ಕಾಂತಿಗಳಿಂದ, ಪ್ರದಹಂತಮಿವಸ್ಥಿತಂ – ದಹಿಸುತ್ತಾನೋಎಂಬಂತಿರುವ,ತಂ

---

ಪರಿಪೂರ್ಣ ಮನೋರಥಮುಳ್ಳವರಾಗಿಯೂ, ಐಶ್ವರ್ಯ ಸಮೃದ್ಧರಾಗಿಯೂ, ಧರ್ಮಮಾರ್ಗದಲ್ಲಿಯೇ ಇರುತ್ತಿರುವರಾಗಿಯೂ ಇರುವ ಆ ಮೂರು ಮಂದಿಯೂ ಬಹುಕಾಲವು ಆಡಳಿತೆಯಂ ನಡೆಯಿಸಿ ಯಾಗದೊಳ್ ಹೋಮಮಾಡಲ್ಪಟ್ಟ ಪ್ರಜ್ವಲಿಸುತ್ತಿರುವ ತ್ರೇತಾಗ್ನಿಗಳಂತೆ ಹೊಳೆಯುತಿದ್ದರು.*ರಾಮಾಯಣದಲ್ಲಿ ೧೦೨ನೇ ಸರ್ಗಂ ಮುಗಿದುದು*

ಈಪರಿ ಶ್ರೀರಾಮನು ಧರ್ಮಮಾರ್ಗದೊಳಿರುವಂಥಾವನಾಗಲೂ, ಬಳಿಕ ಒಂದಾನೊಂದು ಕಾಲದೊಳ್ ಯಮನು ತಾಪಸರೂಪವಂತಾಳಿ ಅರಮನೆಯ ಬಾಗಲಿಗೆ ಬಂದು, ಧೈರ್ಯವಂತನಾಗಿಯೂ ಯಶೋವಂತನಾಗಿಯೂ ಇರುವ ಲಕ್ಷ್ಮಣನಂಕಂಡು, ಎಲೈ ಲಕ್ಷ್ಮಣನೇ! ಕಾರ್ಯಾತಿಶಯದಿಂದ ನಾನು ಬಂದಿಧೇನೆಂದು ಶ್ರೀರಾಮನಿಗೆ ತಿಳುಹಿಸುವಂಥಾವನಾಗು, ನಾನು ಮಹಾ ತೇಜೋವಂತನಾದ ಮಹರ್ಷಿಯ ದೂತನು, ಸ್ವಲ್ಪ ಕೆಲಸವಿಧೆ, ರಾಮನಂ ಕಾಣಬೇಕೆಂದು ಬಂದಿಧೇನೆಂದು ನುಡಿದವನಾದನು ॥೩॥ ಆತನು ಹೇಳಿದ ಆ ಮಾತಂ ಕೇಳಿ ಲಕ್ಷ್ಮಣನು ಅತಿ ತ್ವರೆಯುಳ್ಳವನಾಗಿ ತಾಪಸ ಅಭಿಪ್ರಾಯವಂ ಶ್ರೀರಾಮನಿಗೆ ತಿಳುಸುವಂಥಾವನಾದನದೆಂತೆನೆ,—ಎಲೈ ಶ್ರೀರಾಮನೆ! ಇಹಲೋಕಪರಲೋಕಗಳಲ್ಲಿ ಜಯಶೀಲನಾಗು, ಸೂರ್ಯನಂತೆ ಕಂಗೊಳಿಸುತ್ತಿರುವ ದೂತನು ನಿನ್ನಂ ಕಾಣುವದಕ್ಕೋಸ್ಕರ ಬಂದಿಹನೆಂದು ನುಡಿದವನಾಗಲೂ, ಆ ವಾಕ್ಯವಂ ಕೇಳಿ ಶ್ರೀರಾಮನು ಎಲೈ ಲಕ್ಷ್ಮಣನೆ! ಆತನಂ ಪ್ರವೇಶ ಮಾಡಿಸುವಂಥಾ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ಯುಕ್ತ್ವಾಪ್ರಾವೇಶಯತತಂಮುನಿಮ್ ॥ ಜ್ವಲಂತಮಿವತೇಜೋಭಿಃ ಪ್ರದಹಂತಮಿವಾಂಶುಭಿಃ ॥೭॥ ಸೋಽಭಿಗಮ್ಯರಘುಶ್ರೇಷ್ಠಂದೀಪ್ಯಮಾನಂಸ್ವತೇಜಸಾ । ಋಷಿರ್ಮಧುರಯಾವಾಚಾವರ್ಧಯೇತ್ಯಾಹರಾಘವಂ ॥೮॥ ತಸ್ಮೈರಾಮೋಮಹಾತೇಜಾಃಪೂಜಾಮರ್ಘ್ಯಪುರೋಗಮಾಂ । ದದೌಕುಶಲಮವ್ಯಗ್ರಂಪ್ರಷ್ಟುಮೇವೋಪಚಕ್ರಮೇ ॥ ೯ ॥ ಪೃಷ್ಟಶ್ಚ ಕುಶಲಂತೇನ ರಾಮೇಣವದತಾಂವರಃ । ಆಸನೇಕಾಂಚನೇದಿವ್ಯೇನಿಷಸಾದಮಹಾಯಶಾಃ ॥೧೦॥ ತಮುವಾಚತತೋರಾಮಃಸ್ವಾಗತಂತೇಮಹಾಮುನೇ । ಪ್ರಾಪಯಸ್ವಚವಾಕ್ಯಾನಿಯತೋದೂತಸ್ತ್ವಮಾಗತಃ ॥ ೧೧ ॥ ಚೋದಿತೋರಾಜಸಿಂಹೇನಸಮುನಿರ್ವಾಕ್ಯಮುದೀರಯತ್ । ದ್ವಂದ್ವಮೇತತ್ಪ್ರವಕ್ತವ್ಯಂಹಿತಂವೈಯದ್ಯಪೇಕ್ಷಸೇ।(ನಚಚಕ್ಷುರ್ಗತಂವಚಃ)॥೧೨॥ ಯಶ್ಶೃಣೋತಿನಿರೀಕ್ಷೇದ್ವಾಸವಧ್ಯಸ್ತವರಾಘವ । ಭವೇದ್ವೈಮುನಿಮುಖ್ಯಸ್ಯವಚನಂಯದ್ಯಪೇಕ್ಷಸೇ ॥೧೩॥ ಸತಥೇತಿಪ್ರತಿಜ್ಞಾಯರಾಮೋಲಕ್ಷ್ಮಣಮಬ್ರವೀತ್। ದ್ವಾರಿತಿಷ್ಠ ಮಹಾಬಾಹೋಪ್ರತಿಹಾರಂವಿಸರ್ಜಯ॥೧೪॥ ಸಮೇವಧ್ಯಃಖಲುಭವೇತ್ಕಥಾಂದ್ವಂದ್ವಸ

---

ಮುನಿಂ– ಆ ಋಷಿಯನ್ನು, ಪ್ರವೇಶಯತ – ಪ್ರವೇಶಮಾಡಿಸಿದನು ॥ ೭ ॥ ಸಃಋಷಿಃ– ಆ ಋಷಿಯು, ಸ್ವತೇಜಸಾ–ತನ್ನ ತೇಜಸ್ಸಿನಿಂದ, ದೀಪ್ಯಮಾನಂ–ಹೊಳೆಯುತಿರುವ, ರಘುಶ್ರೇಷ್ಠಂ – ರಘುವಂಶೋತ್ಪನ್ನರಾಜರಲ್ಲಿ ಶ್ರೇಷ್ಠನಾದ, ರಾಘವಂ – ಶ್ರೀರಾಮನನ್ನು, ಕುರಿತು, ಅಭಿಗಮ್ಯ–ಬಂದು, ವರ್ಧಯೇತಿ – ವೃದ್ಧಿಹೊಂದೂ ಎಂದು, ಮಧುರಯಾ – ಮನೋಹರವಾದ, ವಾಚಾ–ವಾಕ್ಕಿನಿಂದ, ಆಹ–ಪೇಳಿದನು ॥ ೮ ॥ ಮಹಾತೇಜಾಃ–ಮಹಾತೇಜಸ್ವಿಯಾದ, ರಾಮಃ–ಶ್ರೀರಾಮನು, ತಸ್ಮೈ–ಆಋಷಿಗೋಸ್ಕರ, ಅರ್ಘ್ಯಪುರೋಗಮಾಂ – ಅರ್ಘ್ಯವೇ ಮೊದಲಾಗುಳ್ಳ, ಪೂಜಾಂ–ಪೂಜೆಯನ್ನು, ದದೌ–ಕೊಟ್ಟನು, ಅವ್ಯಗ್ರಂ–ತ್ವರೆಯಿಲ್ಲದಂತೆ, ಕುಶಲಂ–ಕ್ಷೇಮವನ್ನು, ಪ್ರಷ್ಟುಮೇವ – ಕೇಳುವದಕ್ಕೋಸ್ಕರವೆ, ಉಪಚಕ್ರಮೇ–ಉಪಕ್ರಮಮಾಡಿದನು ॥ ೯ ॥ ವದತಾಂವರಃ–ಮಾತುಗಾರರೊಳಗೆಶ್ರೇಷ್ಠನಾದ, ಮಹಾಯಶಾಃ – ಮಹಾಕೀರ್ತಿವಂತನಾದ ಆ ಋಷಿಯು, ತೇನರಾಮೇಣ–ಆಶ್ರೀರಾಮನಿಂದ, ಕುಶಲಂ–ಕ್ಷೇಮವನ್ನು, ಪೃಷ್ಟಶ್ಚ – ಕೇಳಲ್ಪಟ್ಟವನಾಗಿ, ದಿವ್ಯಂ– ಮನೋಹರವಾದ, ಕಾಂಚನೇ – ಭಂಗಾರವಿಕಾರವಾದ, ಆಸನೇ–ಪೀಠದಲ್ಲಿ, ನಿಷಸಾದ–ಕುಳಿತುಕೊಂಡನು ॥೧೦॥ ತತಃ–ಬಳಿಕ, ರಾಮಃ–ಶ್ರೀರಾಮನು, ಹೇಮಹಾಮುನೇ – ಎಲೈಮಹರ್ಷಿಯೆ, ತೇ–ನಿನಗೆ, ಸ್ವಾಗತಂ–ಸುಖಾಗಮನವೇ, ಯತಃ–ಯಾವಪುರುಷನ ದೆಸೆಯಿಂದ, ತ್ವಂ–ನೀನು, ದೂತಃ–ದೂತನಾಗಿ, ಆಗತಃ–ಬಂದೆಯೊ, ತಸ್ಯ–ಆತನ, ವಾಕ್ಯಂ–ಮಾತುಗಳನ್ನು, ಪ್ರಾಪಯಸ್ವ–ತಿಳಿಸು, ಇತಿ–ಇಂತೆಂದು, ತಂ–ಆಋಷಿಯನ್ನು ಕುರಿತು, ಉವಾಚ–ಪೇಳಿದನು ॥೧೧॥ ರಾಜಸಿಂಹೇನ, ರಾಜಶ್ರೇಷ್ಠನಾದ ಶ್ರೀರಾಮನಿಂದ, ಚೋದಿತಃ–ಪ್ರೇರಿತನಾದ, ಮುನಿಃ–ಋಷಿಯು, ವಾಕ್ಯಂ–ಮಾತನ್ನು, ಉದೀರಯತ್–ಪೇಳಿದನು, ಏತತ್–ಇದು, ದ್ವಂದ್ವಂ–ರಹಸ್ಯವಾಗಿ, ಪ್ರವಕ್ತವ್ಯಂ–ಹೇಳತಕ್ಕದ್ದು, ಹಿತಂ–ಹಿತವನ್ನು, ಅಪೇಕ್ಷಸೇಯದಿ–ಕೋರುವನಾದರೆ, ಹೇರಾಘವ–ಎಲೈಶ್ರೀರಾಮನೆ, ಮುನಿಮುಖ್ಯಸ್ಯ–ಋಷಿಶ್ರೇಷ್ಠನಾದಬ್ರಹ್ಮನ, ವಚನಂ–ಮಾತನ್ನು, ಶ್ರೋತುಂ–ಕೇಳುವದಕ್ಕೋಸ್ಕರ, ಅಪೇಕ್ಷಸೇಯದಿ–ಅಪೇಕ್ಷೆಯುಳ್ಳವನಾದರೆ, ಏತತ್–ಈಮಾತನ್ನು, ಯಃಶೃಣೋತಿ–ಯಾವನು ಕೇಳುತ್ತಾನೊ, ಅಥವಾ–ಹಾಗಲ್ಲದೆ, ಹೋದರೆ, ನಿರೀಕ್ಷೇತ್–ನೋಡುವನೋ, ಸಃ–ಅವನು, ತವ–ನಿನಗೆ, ವಧ್ಯೋಭವೇತ್–ವಧಾರ್ಹನಾಗಲಿ, ಇತಿ–ಇಂತೆಂದು, ಆಹ–ಪೇಳಿದನು ॥೧೩॥ ಸಃರಾಮಃ–ಆ ಶ್ರೀರಾಮನು, ತಥೇತಿ–ಹಾಗೆಸರಿ ಎಂದು, ಪ್ರತಿಜ್ಞಾಯ–ಪ್ರತಿಜ್ಞೆಮಾಡಿ, ಲಕ್ಷ್ಮಣಂ–ಲಕ್ಷ್ಮಣಸ್ವಾಮಿಯನ್ನು ಕುರಿತು, ಅಬ್ರವೀತ್–ನುಡಿದನು, ಹೆ ಮಹಾಬಾಹೋ–ಎಲೈ ಮಹಾಭುಜಪರಾಕ್ರಮಶಾಲಿಯೇ, ದ್ವಾರಿ–ದ್ವಾರದಲ್ಲಿ, ತಿಷ್ಠ–ಇರು, ಪ್ರತಿಹಾರಂ–ದ್ವಾರಪಾಲಕನನ್ನು, ವಿಸರ್ಜಯ–ಹೋಗೂ ಎಂದು ಕಳುಹಿಸು ॥೧೪॥ ಹೆ ಸೌಮಿತ್ರೇ–ಎಲೈ ಲಕ್ಷ್ಮಣನೆ, ಋಷೇಃ–ಋಷಿಯ, ಮಮಚ–ನನ್ನ, ದ್ವಂದ್ವಸಮೀರಿತಾಂ–ಇಬ್ಬರಿಂದ ಪೇಳಲ್ಪಡುತ್ತಿರುವ, ಕಥಾಂ–ವೃತ್ತಾಂತವನ್ನು, ಯಃ–ಯಾವನು,ಪಶ್ಯೇತ್–ನೋಡುವನೊ,

---

ವನಾಗೆಂದು ನಿರೂಪಿಸಿದನು. ಬಳಿಕ ಲಕ್ಷ್ಮಣನು ಹಾಗೆಯೇ ಆಗಲೆಂದು ಪೇಳಿ, ಆ ಮುನಿಯಂ ಪ್ರವೇಶಮಾಡಿಸಿದಂಥಾವನಾದನು ॥೭॥ ಆ ಮಹರ್ಷಿಯು, ಸ್ವಕೀಯವಾದ ತೇಜಸ್ಸಿನಿಂದ ಕಂಗೊಳಿಸುತ್ತಿರುವ ಮತ್ತು ರಘುಶ್ರೇಷ್ಠನಾದ ಆ ಶ್ರೀರಾಮನಂ ವೃದ್ಧಿಹೊಂದುವಂಥಾವನಾಗೆಂದು ಆಶೀರ್ವಾದವಂ ಮಾಡಿದವನಾಗಲೂ, ಮಹಾ ತೇಜೋವಂತನಾದ ಶ್ರೀರಾಮನು ಅರ್ಘ್ಯಪಾದ್ಯಾದಿಗಳನ್ನಿತ್ತು, ಕುಶಲಪ್ರಶ್ನೆಯಂಗೈದಂಥಾವನಾದನು॥೯॥ ಶ್ರೀರಾಮನಿಂದ ಈಪರಿಯಾಗಿ ಯೋಗಕ್ಷೇಮವಂ ಕೇಳಲ್ಪಟ್ಟವನಾಗಿ, ಆ ಮುನಿಶ್ರೇಷ್ಠನು ಸುವರ್ಣ ನಿರ್ಮಿತವಾದ ಸಿಂಹಾಸನದಲ್ಲಿ ಕುಳಿತುಕೊಂಡವನಾಗಲೂ ; ಬಳಿಕ ಶ್ರೀರಾಮನು ಆ ಮಹಾಮುನಿಯಂಕುರಿತು, ಎಲೈ ಮಹರ್ಷಿಯೆ ! ಸುಖಾಗಮನವೇಯೇನು? ನೀನು ದೂತನಾಗಿ ಬಂದಿದ್ದಿಯಾದಕಾರಣ, ನಿಮ್ಮ ಪತಿಯು ಪೇಳಿದ ವಾಕ್ಯಗಳಂ ಪೇಳುವಂಥಾವನಾಗೆಂದು ನಿರೂಪಿಸಿದವನಾದನು. ಈಪರಿಯಾಗಿ ರಾಜೋತ್ತಮನಾದ ಶ್ರೀರಾಮನಿಂದ ಪ್ರೇರಿಸಲ್ಪಟ್ಟವನಾಗಿ, ಆ ಮಹರ್ಷಿಯು, ಎಲೈ ಶ್ರೀರಾಮನೆ ! ನಿನಿಗೆ ಕೇಳಲಿಷ್ಟವಿದ್ದರೆ ಪೇಳ್ವೆನು, ಆ ಮಾತು ನಾವೀರ್ವರು ಇರುವಾಗಲೇ ಪೇಳ ಬೇಕಾಗಿರುವದು, ಆದಕಾರಣ ಆ ಮಾತಂ ಪೇಳುವ ವೇಳೆಯಲ್ಲಿ ಕೇಳಿದವನೂ ನೋಡಿದವನೂ ಸಹಾ ವಧ್ಯನಾಗುವಂತೆ ನೀನಾಜ್ಞಾಪಿಸಿದವನಾದರೆ ಪೇಳ್ವೆನು ಕೇಳೆಂದು ನುಡಿದವನಾಗಲೂ, ಆ ಶ್ರೀರಾಮನು ಹಾಗೆಯೇ ಆಗಲೆಂದು ಪ್ರತಿಜ್ಞೆಯಂ ಮಾಡಿ, ಲಕ್ಷ್ಮಣನಂ ಕುರಿತು, ಎಲೈ ಅನುಜನೆ ! ದ್ವಾರಪಾಲಕನಂ ಕಳುಹಿಸಿ ನೀನೆ ಬಾಗಿಲಲ್ಲಿ ನಿಂತುಕೋ,ನಾನು ಈ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಿಧಾರಿತಾಂ। ಋಷೇರ್ಮಮಚಸೌಮಿತ್ರೇಪಶ್ಯೇದ್ವಾಶ್ರುಣುಯಾಚ್ಚ ಯಃ॥೧೫॥ತತೋನಿಕ್ಷಿಪ್ಯಕಾಕುಸ್ಥೋ ಲಕ್ಷ್ಮಣಂದ್ವಾರಿಸಂಗ್ರಹಂ । ತಮುವಾಚಮುನಿಂವಾಕ್ಯಂಕಥಯಸ್ವೇತಿರಾಘವಃ ॥೧೬॥ ಯತ್ತೇ ಮನೀಷಿತಂವಾಕ್ಯಂಯೇನವಾಸಿಸಮಾಹಿತಃ। ಕಥಯಸ್ವಾವಿಶಂಕಸ್ತ್ವಂಮಮಾಪಿಹೃದಿವರ್ತತೇ॥೧೭॥ —ಉತ್ತರರಾಮಾಯಣೆ ತ್ರ್ಯುತ್ತರ ಶತತಮಸ್ಸರ್ಗಃ—

ಶ್ರುಣುರಾಮಮಹಾಬಾಹೋಯದರ್ಥಮಿಹಮಾಗತಃ । ಪಿತಾಮಹೇನದೇವೇನಪ್ರೇಷಿತೋಸ್ಮಿ ಮಹಾಬಲ ॥೧॥ ತವಾಹಂಪೂರ್ವಕೇಭಾವೇಪುತ್ರಃಪರಪುರಂಜಯ । ಮಯಾಸಂಭಾವಿತೋವೀರಕಾಲಸ್ಸರ್ವಸಮಾಹರ ॥೨॥ ಪಿತಾಮಹಶ್ಚ ಭಗವಾನಾಹಲೋಕಃಪತಿಃಪ್ರಭುಃ । ಸಮಯಸ್ತೇಮಹಾಬಾಹೋಸ್ವಾರ್ಲೋಕಾನ್ಪರಿರಕ್ಷಿತುಂ ॥೩॥ ಸಂಕಲ್ಪ್ಯಚಪುರಾಲೋಕಾನ್ಮಾಯಯಾಸ್ವಯಮೇವಹಿ । ಮಹಾರ್ಣವೇಶಯಾನೋಪ್ಸುಮಾಂತ್ವಂಪೂರ್ವಮಜೀಜನಃ ॥೪॥ ಭೋಗವಂತಂಮಹಾನಾಗಮನಂತಮುದಕೇಶಯಂ । ಮಾಯಯಾಜನಯಿತ್ವಾತ್ವಂದ್ವೌಚಸತ್ವೌಮಹಾಬಲೌ ॥೫॥ ಮಧುಂಚಕೈಟಭಂಚೈವಯಯೋರಸ್ಥಿಚಯೈರ್ವೃತಾ । ಇಯಂಪರ್ವತಸಂಬಂಧಾಮೇದಿನೀಚಾಭವನ್ಮಹೀ ॥೬॥ ಪದ್ಮೇದಿವ್ಯೇರ್ಕಸಂಕಾಶೇನಾ

---

ಯಶ್ಚ-ಯಾವನು, ಶ್ರುಣುಯಾದ್ವಾ-ಕೇಳುವನಾದರೂ ಆಗುವನೋ, ಸಃ-ಆ ಪುರುಷನು, ಮೇ-ನನಗೆ, ವಧ್ಯಃ-ವಧಾರ್ಹನು, ಭವೇತ್ಖಲು-ಆಗುವನಷ್ಟೆ ॥೧೫॥ ತತಃ-ಬಳಿಕ, ಕಾಕುಸ್ಥಃ-ಕಕುತ್ಸ್ಥವಂಶೋತ್ಪನ್ನನಾದ; ರಾಘವಃ-ಶ್ರೀರಾಮನು, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನು, ದ್ವಾರಿ-ಬಾಗಲಲ್ಲಿ, ಸಂಗ್ರಹಂ-ಪಾಲಕನನ್ನಾಗಿ, ನಿಕ್ಷಿಪ್ಯ-ಇರಿಸಿ, ತಂಮುನಿಂ-ಆ ಮುನಿಯನ್ನು ಕುರಿತು, ತೇ-ನಿನ್ನ, ಮನೀಷಿತಂ-ಇಷ್ಟವು, ಯತ್-ಯಾವದೋ, ಅಥವಾ-ಹಾಗಲ್ಲದೆಹೋದರೆ, ಯೇನ-ಯಾವನಿಂದ, ವಾಕ್ಯಂ-ಮಾತನ್ನು ಕುರಿತು, ಸಮಾಹಿತಃ-ಪ್ರೇರಿತನು, ಅಸಿ-ಆಗಿದ್ದೀಯೋ, ತತ್-ಅದನು, ಅವಿಶಂಕಃ-ನಿರ್ಭಯನಾಗಿ, ಕಥಯಸ್ವ-ಹೇಳುಹೇಳು, ಮಮ-ನನ್ನ, ಹೃದ್ಯಪಿ-ಮನಸ್ಸಿನಲ್ಲಿಯೂಕೂಡ, ವರ್ತತೇ-ಇಧೆ, ಇತಿ-ಇಂತೆಂದು, ಉವಾಚ-ಹೇಳಿದನು॥೧೭॥

—ಇತಿ ಶ್ರೀಮದುತ್ತರರಾಮಾಯಣೆ ತ್ರ್ಯುತ್ತರಶತತಮಸ್ಸರ್ಗಃ—

ಹೆ ರಾಮ-ಎಲೈ ಶ್ರೀರಾಮನೆ, ಹೆ ಮಹಾಬಾಹೋ ಎಲೈ ಮಹಾಬಲಪರಾಕ್ರಮಶಾಲಿಯೇ, ಅಹಂ-ನಾನು, ಯದರ್ಥಂ-ಯಾವ ನಿಮಿತ್ತವಾಗಿ, ಆಗತಃ-ಬಂದೆನೋ, ತತ್-ಅದನ್ನು, ಶ್ರುಣು-ಕೇಳು, ಹೆ ಮಹಾಬಲ-ಎಲೈ ಮಹಾಬಲಿಷ್ಠನೆ, ಪಿತಾಮಹೇನದೇವೇನ-ಬ್ರಹ್ಮದೇವರಿಂದ, ಪ್ರೇಷಿತಃ-ಕಳುಹಿಸಿಕೊಡಲ್ಪಟ್ಟವನು, ಅಸ್ಮಿ-ಆಗಿಧೇನೇ ॥೧॥ ಹೇಪರಪುರಂಜಯ-ಎಲೈ ಶತ್ರುಸಂಹಾರಕನೆ, ತವ-ನಿನಗೆ, ಅಹಂ-ನಾನು, ಪೂರ್ವಕೇಭಾವೆ, ಪೂರ್ವಜನ್ಮದಲ್ಲಿ, ಪುತ್ರಃ-ಮಗನು, ಹೆ ವೀರ-ಎಲೈಶೂರನೇ, ಮಯಾ-ನನ್ನಿಂದ, ಸರ್ವಸಮಾಹರ-ಸರ್ವಸಂಹಾರಕನಾದ, ಕಾಲಃ-ಕಾಲಪುರುಷನು, ಸಂಭಾವಿತಃ-ಬಹುಮಾನಿಸಲ್ಪಟ್ಟಿಧಾನೆ ॥೨॥ ಭಗವಾನ್-ಪೂಜ್ಯನಾದ, ಲೋಕಪತಿಃ-ಲೋಕಾಧಿಪತಿಯಾದ, ಪ್ರಭುಃ-ತತ್ವಾವಧಾರಣಸಮರ್ಥನಾದ, ಪಿತಾಮಹಶ್ಚ-ಬ್ರಹ್ಮನೂಕೂಡ, ಆಹ-ಹೇಳಿಧಾನೆ, ಹೆ ಮಹಾಬಾಹೋ-ಎಲೈ ಭುಜಪರಾಕ್ರಮಶಾಲಿಯೆ, ತೇ-ನಿನಗೆ, ಸ್ವಾರ್ಲೋಕಾನ್-ಸ್ವಕೀಯ್ಯವಾದ ಲೋಕಗಳನ್ನು, ಪರಿರಕ್ಷಿತುಂ-ಸಂರಕ್ಷಣೆಮಾಡುವದಕ್ಕೋಸ್ಕರ, ಸಮಯಃ-ಸಮಯವು ॥೩॥ ಪುರಾ-ಪೂರ್ವದಲ್ಲಿ, ಸ್ವಯಮೇವ-ನೀನೆ, ಲೋಕಾನ್-ಲೋಕಗಳನ್ನು, ಮಾಯಯಾ-ಮಾಯೆಯಿಂದ, ಸಂಕಲ್ಪ್ಯ-ಸೃಷ್ಟಿಮಾಡಿ, ಮಹಾರ್ಣವೇ-ಮಹಾಕಡಲಿನಲ್ಲಿ, ಅಪ್ಸು-ನೀರುಗಳಲ್ಲಿ, ಶಯನಃ-ಮಲಗಿರುವನಾಗಿ, ತ್ವಂ-ನೀನು, ಪೂರ್ವಂ-ಪೂರ್ವದಲ್ಲಿ, ಮಾಂ-ನನ್ನನ್ನು, ಅಜೀಜನಃ-ಹುಟ್ಟಿಸಿದೆ ॥೪॥ ಭೋಗವಂತಂ-ಸುಖವಂತನಾದ, ಉದಕೇಶಯಂ-ನೀರಿನಲ್ಲಿ ಮಲಗುತ್ತಿರುವ, ಅನಂತಂ-ಶೇಷರೂಪವಾದ, ಮಹಾನಾಗಂ-ಸರ್ಪವನ್ನು, ಮಹಾಬಲೌ-ಮಹಾಬಲಿಷ್ಠರಾದ, ಮಧುಂಕೈಟಭಂಚೈವ-ಮಧ್ವಾಸುರನು, ಕೈಟಭಾಸುರನೆಂಬ, ದ್ವೌಸತ್ವೌ-ಎರಡುಜಂತುಗಳನ್ನು, ಮಾಯಯಾ-ಮಾಯೆಯಿಂದ, ಜನಯಿತ್ವಾತು, ಸೃಷ್ಟಿಮಾಡಿಯಾದರೆ, ಯಯೋಃ-ಯಾವಮಧುಕೈಟಭರ, ಅಸ್ಥಿಚಯೈಃ-ಎಲುಗಳತಂಡಂಗಳಿಂದ, ವೃತಾ-ಸುತ್ತಲ್ಪಟ್ಟ, ಪರ್ವತಸಂಬಾಧಾ-ಬೆಟ್ಟಗಳಿಂದ ಸಂಮರ್ದವಾದ, ಇಯಂಮಹೀ-ಈ ಭೂಮಿಯು, ಮೇದಿನೀ-ಮೇದಿನೀಎಂಬ ಹೆಸರುಳ್ಳದ್ದು, ಅಭವತ್-ಆಯಿತೊ ॥೬॥ ದಿವ್ಯೇ-ಮನೋಹರವಾದ, ಅರ್ಕಸಂಕಾಶೇ-ಸೂರ್ಯನಿಗೆ ಸಮಾನವಾದ, ಪದ್ಮೇ-ಕಮ

---

ತಾಪಸನು ಈರ್ವರು ಮಾತಾಡುವಾಗ,ಯಾವ ಪುರುಷನಾದರೂ ಬಂದು ಕೇಳಿದರೂಸರಿಯೆ, ಅಥವಾ ನೋಡಿದರೂ ಸರಿಯೆ, ಅವನು ವಧಾರ್ಹನಾಗುವನು ಎಂಬದಾಗಿ ಹೇಳಿ ಲಕ್ಷ್ಮಣನಂ ಬಾಗಿಲಲ್ಲಿ ಕಾವಲಿಟ್ಟು,ಆ ಮುನಿಯಂ ಕುರಿತು, ಎಲೈ ತಾಪಸನೆ ! ನಿನ್ನ ಮನದಲ್ಲಿರುವ ವಾಕ್ಯವಂ ಸಾವಧಾನಚಿತ್ತನಾಗಿ ಹೇಳುವಂಥಾವನಾಗು, ಅದು ನನ್ನ ಮನದಲ್ಲಿಯೂ ಇರುವಂಥಾದ್ದಾಗಿಧೆ ಎಂಬದಾಗಿ ಹೇಳಿದವನಾದನು. —...೧೦೩ ನೆಯ ಸರ್ಗಂ ಮುಗಿದುದು....—

ಬಳಿಕ ಆ ಮಹಾಮುನಿಯು ಶ್ರೀರಾಮನಂ ಕುರಿತು ಎಲೈ ಮಹಾ ಭುಜಪರಾಕ್ರಮಿಯಾದ ಶ್ರೀರಾಮನೇ! ನಾನು ಚತುರ್ಮುಖನಿಂದ ಕಳುಹಿಸಲ್ಪಟ್ಟಧೇನೆ, ಎಲೈ ಶತ್ರುಸಂಹಾರಕನೇ ! ನಾನು ಪೂರ್ವಭಾವದಲ್ಲಿ ನಿನ್ನ ಮಗನು, ಸರ್ವರನ್ನೂ ಸಂಹಾರಮಾಡುತ್ತಿರುವ ಕಾಲಪುರುಷನು ನಾನೆ॥೨॥ಲೋಕಗಳಿಗೆಲ್ಲ ಅಧಿಪತಿಯಾಗಿಯೂ ಸಮರ್ಥನಾಗಿಯೂ ಪೂಜ್ಯನಾಗಿಯೂ ಇರುವ ಬ್ರಹ್ಮನು, ನೀನು ಲೋಕಂಗಳನ್ನೆಲ್ಲ ಸಂರಕ್ಷಿಸುವದಕ್ಕೆ ಇದೇ ಸಮಯವಾಗಿರುವದು, ಪೂರ್ವಕಾಲದಲ್ಲಿ ಸ್ವಕೀಯವಾದ ಮಾಯೆಯಿಂದ ನೀನೆ ಲೋಕಂಗಳನ್ನು ಸೃಜಿಸಿ, ಸಮುದ್ರಶಾಯಿಯಾಗಿ ಎನ್ನನ್ನು ಮೊದಲು ಪುಟ್ಟಿಸಿದಂಥಾವನಾದೆ, ಸುಖವಂತನಾಗಿಯೂ ಉದಕದಲ್ಲಿ ಮಲಗಿರುವನಾಗಿಯೂ ಇರುವ ಅನಂತ

CC-0. Bhagavad Ramanuja National Research Institute, Melukote Collection.

ಸೊಹಂಸನ್ಯಸ್ತ ಭಾರೊಹಿತ್ವಾಮುಪಾಸೆಜಗತ್ಪತಿಂ॥೭॥ ಭ್ಯಾಮುತ್ಪಾದ್ಯಮಾಮಪಿ । ಪ್ರಾಜಾಪತ್ಯಂತ್ವಯಾಕರ್ಮಸರ್ವಂಮಯಿನಿವೇಶಿತಂ॥೭॥ ಸೊಹಂಸನ್ಯಸ್ತ ಭಾರೊಹಿತ್ವಾ ಮುಪಾಸೆಜಗತ್ಪತಿಂ । ರಕ್ಷಾಂವಿಧತ್ಸ್ವ ಭೂತೆಷುಮಮತೆಜಸ್ಕರೊಭವಾರ್ ॥೮॥ ತತಸ್ತ್ವಮಸಿದುರ್ಧರ್ಷಸ್ತಸ್ಮಾ ದ್ಭಾವಾತ್ಸನಾತನಾತ್। ರಕ್ಷಾರ್ಥಂಸರ್ವಭೂತಾನಾಂವಿಷ್ಣುತ್ವಮುಪಜಗ್ಮಿವಾರ್ ॥೯॥ ಅದಿತ್ಯಾಂವೀರ್ಯವಾರ್ಪುತ್ರೊ ಭ್ರಾತೄಣಾಂಹರ್ಷವರ್ಧನಃ। ಸಮುತ್ಪನ್ನೆಷುಕೃತ್ಯೆಷುಲೊಕಸಾಹ್ಯಾಯಕಲ್ಪಸೆ॥೧೦॥ ಸತ್ವಂವಿತ್ರಾಸ್ಯಮಾನಾಸು ಪ್ರಜಾಸುಜಯತಾಂವರ । ರಾವಣಸ್ಯವಧಾಕಾಂಕ್ಷೀಮಾನುಷೆಷುಮನೊರಥಃ ॥೧೧॥ ದಶವರ್ಷಸಹಸ್ರಾಣಿದಶವರ್ಷ ಶತಾನಿಚ । ಕೃತ್ವಾವಾಸಸ್ಯನಿಯತಿಂಸ್ವಯಮೆವಾತ್ಮನಾಪುರಾ । ಸತ್ವಂಮನೊಮಯಃಪುತ್ರಃಪೂರ್ಣಾಯುರ್ಮಾನು ಷೆಷ್ವಿಹ। ಕಾಲೊಯಂತೆನರಶ್ರೆಷ್ಠ ಸಮೀಪಮುಪವರ್ತಿತುಂ ॥೧೨॥ ಯದಿಭೂಯೊಮಹಾರಾಜಪ್ರಜಾಇಚ್ಛಸ್ಯುಪಾ ಸಿತುಂ । ವಸವಾವೀರಭದ್ರಂತೆಪಿತಾಮಹಃ ॥೧೩॥ ಅಥವಾಪಿಜಿಗೀಷಾತೆಸುರಲೊಕಾಯರಾಘವ । ಸನಾಥಾ

---

ಲದಲ್ಲಿ, ನಾಭ್ಯಾಂ-ನಾಭಿಪ್ರದೇಶದಲ್ಲಿ, ಮಾಮಪಿ-ನನ್ನನ್ನು, ಉತ್ಪಾದ್ಯ-ಸೃಷ್ಟಿ ಮಾಡಿ, ತ್ವಯಾ-ನಿನ್ನಿಂದ, ಪ್ರಾಜಾಪತ್ಯಂ-ಬ್ರಹ್ಮಸೃಷ್ಟಿರೂಪವಾದ, ಸರ್ವಂ-ಸಮಸ್ತವಾದ, ಕರ್ಮ-ಕರ್ಮವು, ಮಯಿ-ನನ್ನಲ್ಲಿ, ನಿವೇಶಿತಂ ಇರಿಸಲ್ಪಟ್ಟಿತೊ ॥೭॥ ಸೊಹಂ-ಆ ಈ ನಾನು, ಸನ್ಯಸ್ತಭಾರಃ-ಸನ್ಯಸ್ತ-ಇರಿಸಲ್ಪಟ್ಟ, ಭಾರಃ-ಭಾರವುಳ್ಳವನಾಗಿ, ಜಗತ್ಪತಿಂ-ಜಗತ್ಪತಿಯಾದ, ತ್ವಾಂ-ನಿನ್ನನ್ನು, ಉಪಾಸೆ-ಉಪಾಸನೆಮಾಡುತಲಿಧೆನೆ, ಭೂತೆಷು-ಭೂತಗಳಲ್ಲಿ, ಮಮ-ನನಗೆ, ಭವಾರ್-ನೀನು, ತೇಜಸ್ಕರಃ-ಪ್ರಕಾಶಕರನಾದಕಾರಣ, ರಕ್ಷಾಂ-ಸಂರಕ್ಷಣೆಯನ್ನು, ವಿಧತ್ಸ್ವ-ಮಾಡು ॥೮॥ ತತಃ-ಬಳಿಕ, ತ್ವಂ-ನೀನು, ದುರ್ಧರ್ಷಃ-ತಿರಸ್ಕರಿಸಲಸಾಧ್ಯನಾಗಿ, ಸನಾತನಾತ್-ಅನಾದಿಸಿದ್ಧವಾದ, ತಸ್ಮಾದ್ಭಾವಾತ್-ಆ ಪದ್ಮನಾಭನಭಾವದದೆಶೆಯಿಂದ, ಸರ್ವಭೂತಾನಾಂ-ಸಮಸ್ತ ಪ್ರಾಣಿಗಳ, ರಕ್ಷಾರ್ಥಂ-ಸಂರಕ್ಷಣಾರ್ಥವಾಗಿ, ವಿಷ್ಣುತ್ವಂ-ವ್ಯಾಪಕಚೈತನ್ಯಭಾವವನ್ನು, (ಅಥವಾ-ಶ್ರೀಮಹಾವಿಷ್ಣುರೂಪವನ್ನು) ಉಪಜಗ್ಮಿವಾರ್-ಹೊಂದಿದವನು, ಅಸಿ-ಆದೆ ॥೯॥ ವೀರ್ಯವಾರ್-ಪರಾಕ್ರಮಶಾಲಿಯಾದ, ತ್ವಂ-ನೀನು, ಅದಿತ್ಯಾಂ-ಅದಿತಿದೇವಿಯಲ್ಲಿ, ಪುತ್ರಃ-ಪುತ್ರನಾಗಿ, ಭ್ರಾತೄಣಾಂ-ಅಣ್ಣತಮ್ಮಂದರಿಗೆ, ಹರ್ಷವರ್ಧನಃ-ಸಂತೋಷವನ್ನುಂಟುಮಾಡುವನಾಗಿ, ಸಮುತ್ಪನ್ನೆಷು-ಸಂಭವಿಸಿದ, ಕೃತ್ಯೆಷು-ಕಾರ್ಯಗಳಲ್ಲಿ, ಲೊಕಸಾಹ್ಯಾಯ-ಲೋಕಗಳಿಗೆ ಸಹಾಯ ಕರ್ಮಕ್ಕೋಸ್ಕರ, ಕಲ್ಪಸೆ-ಸಮರ್ಥನಾಗಿದ್ಧೀ ॥೧೦॥ಹೆ ಜಯತಾಂವರ, ಜಯಿಸುವರೊಳಗೆ ಎಲೈಶ್ರೇಷ್ಠನೆ, ಸತ್ವಂ-ಆ ಈ ನೀನು, ಪ್ರಜಾಸು-ಪ್ರಜೆಗಳು, ವಿತ್ರಾಸ್ಯಮಾನಾಸುಸತೆಷು-ಭಯಬೀಳಿಸಲಟ್ಟವರಾಗುತಿರಲೀಕಾಗಿ, ರಾವಣಸ್ಯ-ರಾವಣನ, ವಧಾಕಾಂಕ್ಷೀ-ಸಂಹಾರಾಪೇಕ್ಷೆಯುಳ್ಳವನಾಗಿ, ಪುರಾ-ಪೂರ್ವದಲ್ಲಿ, ಸ್ವಯಮೆವ-ನೀನೆ, ಆತ್ಮನಾ-ಮನಸ್ಸಿನಿಂದ, ದಶವರ್ಷಸಹಸ್ರಾಣಿ-ಹತ್ತುಸಾವಿರವರ್ಷಗಳು, ದಶವರ್ಷ ಶತಾನಿಚ-ಸಾವಿರವರ್ಷಗಳು, ವಾಸಸ್ಯ-ಮನುಷ್ಯಲೋಕವಾಸಕ್ಕೆ, ನಿಯಂತಿ-ನಿಯಮವನ್ನು, ಕೃತ್ವಾ-ಮಾಡಿ, ಮಾನುಷೆಷು-ಮನುಷ್ಯರಲ್ಲಿ, ಮನಃ-ಮನವನ್ನು, ಅದಧಃ-ಧರಿಸಿದೆ ॥೧೧॥ ಸತ್ವಂ-ಆ ಈ ನೀನು, ಮನೊಮಯಃ-ಮನೋವಿಕಾರವಾದ, ಪುತ್ರಃ-ಪುತ್ರಭಾವವನ್ನು ಹೊಂದಿದವನಾಗಿ, ಮಾನುಷೆಷು-ಮನುಷ್ಯರಲ್ಲಿ, ಇಹ-ಈಗ, ಪೂರ್ಣಾಯುಃ-ಸಂಪೂರ್ಣವಾದ ಆಯುಸ್ಸುಳ್ಳವನಾದೆ, ಹೆ ನರಶ್ರೆಷ್ಠ-ಎಲೈ ಮಾನುಷಶ್ರೇಷ್ಠನೆ, ಸಮೀಪಂ-ಸಮೀಪವನ್ನುಕುರಿತು, ಉಪವರ್ತಿತುಂ-ಬರುವದಕ್ಕೋಸ್ಕರ, ಅಯಂಕಾಲಃ-ಈ ಕಾಲವು ॥೧೨॥ ಹೆ ಮಹಾರಾಜ-ಎಲೈ ಮಹಾರಾಜನೆ, ಭೂಯೊಪಿ-ಮತ್ತೂಕೂಡ, ಪ್ರಜಾಃ-ಮನುಷ್ಯಪ್ರಜರನ್ನು, ಉಪಾಸಿತುಂ-ಅನುಸರಿಸುವದಕ್ಕೋಸ್ಕರ, ಇಚ್ಛಸಿಯದಿ-ಕೋರಿದನಾದರೆ, ಹೆವೀರ-ಎಲೈಶೂರನೆ, ವಸ-ಇರು, ತೆ-ನಿನಗೆ, ಭದ್ರಂ-ಶುಭವು, ಅಸ್ತು-ಆಗಲಿ, ಅಥವಾ-ಹಾಗಲ್ಲದೇಹೋದರೆ, ಹೆ ರಾಘವ-ಎಲೈ ಶ್ರೀರಾಮನೆ,ಸುರಲೋಕಾಯಃ-ದೇವಲೋಕ

---

ನೆಂಬ ಮಹಾಸರ್ಪವನ್ನೂ, ಬಹುಬಲವುಳ್ಳ ಮಧುಕೈಟಭರೆಂಬ ಎರಡು ಜಂತುಗಳನ್ನೂ ಮಾಯೆಯಿಂದ ಸೃಜಿಸಿದಂಥಾವನಾದೆ, ಆ ಮಧುಕೈಟಭರ ಎಲುವುಗಳ ತಂಡಗಳಿಂದ ಈ ಭೂಮಿಯು ಯುಕ್ತವಾದಂಥಾದ್ದಾಗಿ, ಮೇದಿನಿಯೆಂದು ಪೆಸರುಳ್ಳಂಥಾದ್ದಾಯಿತು. ಸೂರ್ಯಸದೃಶವಾದ ನಾಭೀಕಮಲದಲ್ಲಿ ಎನ್ನನ್ನು ಸೃಜಿಸಿ, ಬ್ರಹ್ಮನು ಮಾಡತಕ್ಕ ಕೆಲಸಗಳಂ ಎನ್ನಿಂದ ಮಾಡಿಸಿದಂಥಾವನಾದೆ, ನಿನ್ನಿಂದ ಕೊಡಲ್ಪಟ್ಟ ಈ ಅಧಿಕಾರವಂ ಪೊಂದಿದವನಾಗಿ ನಾನು ಜಗತ್ಪತಿಯಾದ ನಿನ್ನಂ ಧ್ಯಾನಿಸುತ್ತಿಧೇನೆ, ನನಿಗೆ ಪ್ರಭಾವವನ್ನುಂಟುಮಾಡಿದ ನೀನು ಭೂತಂಗಳಂ ರಕ್ಷಿಸುವಂಥಾವನಾಗು. ಅನಾದಿ ಸಿದ್ಧವಾದ ಆ ಶ್ರೀಮನ್ನಾರಾಯಣನಾದ ನೀನು ಸರ್ವಭೂತಗಳನ್ನು ಪಾಲಿಸುವದಕ್ಕೋಸುಗ ವಿಷ್ಣುತ್ವವಂ ಪೊಂದಿದೆ, ಮತ್ತೂ ಜನಗಳಿಗೆಲ್ಲ ಸಹಾಯ ಮಾಡುವದಕ್ಕೋಸ್ಕರ ಆ ದಿತಿದೇವಿಯಲ್ಲಿ ಸಂಜನಿಸಿ, ಅಣ್ಣ ತಮ್ಮಂದರಾದ ದೇವತೆಗಳಿಗೆಲ್ಲ ಸಂತೋಷವಂ ವೃದ್ಧಿಗೊಳಿಸುತ್ತಾ ಕಾರ್ಯಗಳಿಗೋಸುಗವೇ ರಾಮಾವತಾರವಂ ತಾಳಿದವನಾದೆ, ಅಂಥಾ ಜಗದ್ದೋದ್ಧಾರಕನಾದ ನೀನು ಜನಗಳೆಲ್ಲರು ಹೆದರಿಸಲ್ಪಟ್ಟವರಾಗಲೂ, ರಾವಣಾಸುರನ ಸಂಹಾರವನ್ನಿಚ್ಛಿಸುತ್ತಿರುವನಾಗಿ, ಮನುಷ್ಯನಾಗಿ ಹುಟ್ಟಬೇಕೆಂದು ಮನವಂಗೈದಪನಾಗೆ, ಪೂರ್ವದಲ್ಲಿ ನೀನು ಹತ್ತುಸಾವಿರ ವರುಷಗಳು ಭೂಮಿಯೊಳಿರುವಂತೆ ಸ್ವಯಮೇವ ಗೊತ್ತುಮಾಡಿದ್ದ, ಅಂಥಾ ನೀನು ಮನೋವಿಕಾರನಾಗಿಯೂ ಮನುಷ್ಯರಲ್ಲಿ ಪರಿಪೂರ್ಣವಾದ ಆಯುಸ್ಸುಳ್ಳವನಾಗಿಯೂ ಇರುವನಾಗಿದ್ಧೀ, ಎಲೈ ರಘುಶ್ರೇಷ್ಠನೇ ! ಸಮೀಪವಂ ಪೊಂದುವದಕ್ಕೆ ಇದು ಸಮಯವಾಗಿರುವದು, ಎಲೈ ಮಹಾರಾಜನೇ ! ಸೇವಿಸುವದಕ್ಕೆ ಪ್ರಜೆಗಳನ್ನೆ ಇಚ್ಛಿಸುವಂಥಾವನಾದರೆ ಭೂಮಂಡಲ

Funding: Tattva Heritage Foundation,Kolkata. Digitization: eGangotri.
CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಿಷ್ಣುನಾದೇವಾಭವಂತುವಿಗತಜ್ವರಾಃ ॥೧೫॥ ಶ್ರುತ್ವಾಪಿತಾಮಹೇನೋಕ್ತಂವಾಕ್ಯಂಕಾಲಸಮೀರಿತಂ। ರಾಘವಃಪ್ರಹಸನ್ವಾಕ್ಯಂಸರ್ವಸಂಹಾರಮಬ್ರವೀತ್ ॥೧೬॥ ಶ್ರುತ್ವಾತುದೇವದೇವಸ್ಯವಾಕ್ಯಂಪರಮಮದ್ಭುತಂ। ಪ್ರೀತಿರ್ಹಿಮಹತೀಜಾತಾತವಾಗಮನಸಂಭವಾ ॥೧೭॥ ತ್ರಯಾಣಾಂಚೈಹಲೋಕಾನಾಂಕಾರ್ಯಾರ್ಥಂಮಮಸಂಭವಃ ॥ ಭದ್ರಂತೇಸ್ತುಗಮಿಷ್ಯಾಮಿಯತಏವಾಹಮಾಗತಃ ॥೧೮॥ ಹೃದ್ಗತೋಹ್ಯಸಿಸಂಪ್ರಾಪ್ತೋನಮೇಸ್ತ್ಯತ್ರವಿಚಾರಣಾ ॥೧೯॥ ಮಯಾಹಿಸರ್ವಕೃತ್ಯೇಷುದೇವಾನಾಂವಶವರ್ತಿನಾ। ಸ್ಥಾತವ್ಯಂಸರ್ವಸಂಹಾರಯಥಾಹ್ಯಾಹಪಿತಾಮಹಃ॥ —ಇತಿಚತುರುತ್ತರಶತತಮಸ್ಸರ್ಗಃ.—

ತಥಾತಯೋಃಕಥಯತೋರ್ದುರ್ವಾಸಾಭಗವಾನೃಷಿಃ। ರಾಮಸ್ಯದರ್ಶನಾಕಾಂಕ್ಷೀರಾಜದ್ವಾರಮುಪಾಗಮತ್॥೧॥ ಸೋಭಿಗಮ್ಯತುಸೌಮಿತ್ರಿಮುವಾಚಋಷಿಸತ್ತಮಃ। ರಾಮಂದರ್ಶಯಮೇಶೀಘ್ರಂಪುರಾಮೇರ್ಥೋತಿವರ್ತತೇ॥೨॥ಮು

---

ಕ್ಕೋಸ್ಕರ, ಜಿಗೀಷಾ–ಗಮನೇಚ್ಛೆಯುಂಟಾದರೆ, ವಿಷ್ಣುನಾ–ವಿಷ್ಣುಸ್ವರೂಪನಾದನಿನ್ನಿಂದ, ದೇವಾಃ–ದೇವತೆಗಳು, ಸನಾಥಾಃ–ಕೂಡಿದವರಾಗಿ, ವಿಗತಜ್ವರಾಃ–ಹೋದಂಥಾ ತಾಪವುಳ್ಳವರು, ಭವಂತು–ಆಗಲಿ, ಇತಿ–ಇಂತೆಂದು, ಏವಂ–ಈಪರಿಯಾಗಿ,ಪಿತಾಮಹಃ–ಬ್ರಹ್ಮನು,ಆಹ–ಪೇಳಿದನು॥೧೫॥ರಾಘವಃ–ಶ್ರೀರಾಮನು, ಪಿತಾಮಹೇನ–ಬ್ರಹ್ಮದೇವನಿಂದ, ಉಕ್ತಂ–ಪೇಳಲ್ಪಟ್ಟದ್ದಾಗಿ, ಕಾಲಸಮೀರಿತಂ–ಕಾಲ–ಯಮನಿಂದ, ಸಮೀರಿತಂ–ಪೇಳಲ್ಪಟ್ಟ, ವಾಕ್ಯಂ–ಮಾತನ್ನು, ಶ್ರುತ್ವಾ–ಕೇಳಿ, ಪ್ರಹಸನ್–ನಗುತಿರುವನಾಗಿ, ಸರ್ವಸಂಹಾರಂ – ಸರ್ವಸಹ್ಮಾರಕನಾದ ಯಮನನ್ನು ಕುರಿತು, ದೇವದೇವಸ್ಯ– ದೇವದೇವೋತ್ತಮನಾದ ಬ್ರಹ್ಮದೇವನ, ಪರಮಂ–ಬಹಳವಾದ, ಅದ್ಭುತಂ–ಆಶ್ಚರ್ಯಕರವಾದ, ವಾಕ್ಯಂ–ಮಾತನ್ನು, ಶ್ರುತ್ವಾ–ಕೇಳಿ, ತವ–ನಿನ್ನ, ಆಗಮನಸಂಭವಾ, ಆಗಮನ–ಬರುವಿಕೆಯಿಂದ, ಸಂಭವಾ–ಹುಟ್ಟಿದ, ಪ್ರೀತಿಃ– ವಿಶ್ವಾಸವು, ಮಮ – ನನಗೆ, ಮಹತಿ – ಬಹಳವಾದದ್ದು, ಜಾತಾಹಿ – ಹುಟ್ಟಿತಷ್ಟೆ ॥೧೬॥೧೭॥ ತ್ರಯಾಣಾಂಲೋಕಾನಾಂ–ಮೂರು ಲೋಕಗಳ, ಕಾರ್ಯಾರ್ಥಂ – ಕಾರ್ಯನಿಮಿತ್ತವಾಗಿ, ಇಹ–ಈ ಭೂಲೋಕದಲ್ಲಿ, ಮಮ–ನನ್ನ, ಸಂಭವಃ–ಉತ್ಪತ್ತಿಯೂ, ತೆ–ನಿನಗೆ, ಭದ್ರಂ–ಶುಭವು, ಅಸ್ತು–ಇಗಲೀ, ಅಹಂ–ನಾನು, ಯತಏವ–ಎಲ್ಲಿಂದಲೆ, ಆಗತಃ–ಬಂದೆನೋ, ತತ್ರ–ಅಲ್ಲಿ, ಗಮಿಷ್ಯಾಮಿ, ಹೋಗುವೆನು ॥೧೮॥ಮೆ–ನನ್ನ, ಹೃದ್ಗತಃ–ಮನಸ್ಸಿನಲ್ಲಿ ಹೊಂದಿದವನಾಗಿಯೆ, ಸಂಪ್ರಾಪ್ತಃ–ಬಂದವನು, ಅಸಿ–ಆದೆ, ಅತ್ರ– ಈ ಅರ್ಥದಲ್ಲಿ, ವಿಚಾರಣಾ–ಸಂಶಯವು,ನ–ಇಲ್ಲ, ಸರ್ವಕೃತ್ಯೇಷು–ಸರ್ವಕಾರ್ಯಗಳಲ್ಲಿಯೂ, ದೇವಾನಾಂ–ದೇವತೆಗಳಿಗೆ, ವಶವರ್ತಿನಾ–ಸ್ವಾಧೀನನಾದ, ಮಯಾ–ನಿನ್ನಿಂದ, ಪಿತಾಮಹಃ–ಬ್ರಹ್ಮನು, ಯಥಾ–ಹ್ಯಾಗೆ, ಆಹ–ಹೇಳಿದನೊ, ತಥಾ–ಹಾಗೆಯೇ, ಸ್ಥಾತವ್ಯಂಹಿ–ಇರತಕ್ಕದ್ದಷ್ಟೆ, ಇತಿ–ಇಂತೆಂದು,ವಾಕ್ಯಂ–ಮಾತನ್ನು, ಅಬ್ರವೀತ್–ನುಡಿದನು॥೨೦॥ — ಇತಿ ಶ್ರೀಮದುತ್ತರರಾಮಾಯಣೇ ಚತುರುತ್ತರ ಶತತಮಸ್ಸರ್ಗಃ.—

ತಯೋಃ–ಆ ಯಮರಾಮರಿಬ್ಬರು, ತಥಾ–ಆಪರಿಯಾಗಿ, ಕಥಯತೋಸ್ಸತೋಃ–ಮಾತಾಡುತಿರಲಿಕಾಗಿ, ಭಗವಾನ್–ಪೂಜ್ಯನಾದ,ದುರ್ವಾಸಾಃ–ದೂರ್ವಾಸನೆಂಬ, ಋಷಿಃ–ಮುನಿಯು, ರಾಮಸ್ಯ–ಶ್ರೀರಾಮನ, ದರ್ಶನಾಕಾಂಕ್ಷೀ–ದರ್ಶನವನ್ನಪೇಕ್ಷಿಸುತಿರುವನಾಗಿ, ರಾಜದ್ವಾರಂ–ಅರಮನೇ ಬಾಗಿಲನ್ನು ಕುರಿತು, ಉಪಾಗಮತ್–ಬಂದನು ॥೧॥ ಋಷಿಸತ್ತಮಃ–ಋಷಿಶ್ರೇಷ್ಠನಾದ, ಸಃ–ದೂರ್ವಾಸಮುನಿಯು, ಅಭಿಗಮ್ಯ–ಬಂದು, ಸೌಮಿತ್ರಿಂ–ಲಕ್ಷ್ಮಣನನ್ನು ಕುರಿತು, ಮೆ–ನನಗೆ–ರಾಮಂ–ಶ್ರೀರಾಮನನ್ನು, ಶೀಘ್ರಂ–ಜಾಗ್ರತೆಯಾಗಿ, ಪುರಾ–ಮೊದಲು, ದರ್ಶಯ–ತೋರಿಸು, ಮೆ–ನನಗೆ, ಅರ್ಥಃ–ಪ್ರಯೋಜನವು, ಅತಿವರ್ತತೆ–ಅತಿಕ್ರಮಿಸಿ ಹೋಗುತ್ತದೆ, (ಇತಿ–ಇಂತೆಂದು,) ಉವಾಚ–ಪೇಳಿದನು ॥೨॥ ಪರವೀರಹಾ–ಶತ್ರುಸಂಹಾರಕನಾದ,ಲಕ್ಷ್ಮಣಃ–ಲಕ್ಷ್ಮಣನು, ಮುನೇಃ–ಋಷಿಯ, ವಚನಂತು–ಮಾತನ್ನಾದರೆ, ಶ್ರುತ್ವಾ–ಕೇಳಿ, ಅಭಿವಾದ್ಯ–ಸಮಸ್ಕರಿಸಿ, ಮಹಾತ್ಮಾನಂ–ಮಹಾ ಮನಸ್ವಿ

---

ದಲ್ಲಿಯೇ ಇರುವಂಥಾವನಾಗು, ನಿನಿಗೆ ಶುಭವಾಗಲಿ ಅಥವಾ ದೇವಲೋಕವಂ ಜಯಿಸಲಿಚ್ಛೆಯಿದ್ದರೆ ವಿಷ್ಣುವಿನಿಂದ ದೇವತೆಗಳೆಲ್ಲರು ನಾಥನುಳ್ಳವರಾಗುವರು ಎಂಬದಾಗಿ ಬ್ರಹ್ಮನು ನುಡಿದಿಹನೆಂದು ತಾಪಸರೂಪವಂ ತಾಳಿದ ಕಾಲಪುರುಷನು ಪೇಳಿದವನಾಗಲೂ, ಬ್ರಹ್ಮನಿಂದ ಪೇಳಲ್ಪಟ್ಟ ವಾಕ್ಯವಂ ಪೇಳಿದ ಆ ಕಾಲಪುರುಷನಂ ಕುರಿತು, ಶ್ರೀರಾಮನು ನಸುನಗೆಯುಳ್ಳವನಾಗಿ ಆಗ ಪೇಳುವನದೆಂತೆನೆ,—ಎಲೈ ತಾಪಸನೇ ! ಬ್ರಹ್ಮದೇವನು ಪೇಳಿರುವ ವಾಕ್ಯವು ಮಹದಾಶ್ಚರ್ಯಕರವಾಗಿಧೆ, ನೀನು ಗಮಿಸಿಬಂದದ್ದರಿಂದ ನನಿಗೆ ಬಹಳ ಸಂತೋಷವಾಯಿತು. ಮೂಜಗಗಳ ಕಾರ್ಯಕ್ಕೋಸ್ಕರವೇ ತಾನು ಪುಟ್ಟದವನಾದೆ. ನಾನು ಯಾವ ಕೆಲಸಕ್ಕೋಸುಗ ಅವತಾರವಂ ತಾಳದೆನೋ, ಆ ಕೃತ್ಯವು ಈಡೇರಿತು, ನಿನಿಗೆ ಶುಭವಾಗಲಿ, ನೀನು ಯನ್ನ ಮನದಲ್ಲಿಯೇ ಇದ್ದೀ, ಈ ವಿಷಯದಲ್ಲಿ ವಿಚಾರಣೆಯೆಂಬದು ಇಲ್ಲ ವೇಯಿಲ್ಲ. ಎಲೈ ಸರ್ವರಂ ಸಂಹಾರಮಾಡುವನೇ ! ಎಲ್ಲಾ ಕೆಲಸಗಳಲ್ಲಿಯೂ ದೇವತೆಗಳಿಗೆ ಸ್ವಾಧೀನನಾದ ನಾನು ಬ್ರಹ್ಮನು ಪೇಳಿರುವಂತೆಯೇ ಇರತಕ್ಕದ್ದು. ॥೨೦॥ —ರಾಮಾಯಣದಲ್ಲಿನ ೧೦೪ನೆಯ ಸರ್ಗಂ ಮುಗಿದುದು.—

ಆಪರಿಯಾಗಿ ಅವರೀರ್ವರು ಮಾತಾಡುತ್ತಿರಲೂ, ಶ್ರೀರಾಮನಂ ಕಾಣಲಿಚ್ಛಿಸಿದವನಾಗಿ, ದೂರ್ವಾಸ ಮಹರ್ಷಿಯು ಅರಮನೆಯ ಬಾಗಲಿಗೆ ಬಂದವನಾದನು ॥೧॥ ಆ ತಾಪಸೋತ್ತಮನಾದ ದೂರ್ವಾಸಮುನಿಯು ಮಹಾತ್ಮನಾದ ಲಕ್ಷ್ಮಣನಂ ಪೊಂದಿ, ಎಲೈ ಸುಮಿತ್ರಾಪುತ್ರನಾದ ಲಕ್ಷ್ಮಣನೇ ! ನಾನು ಬಂದಿಹೆನೆಂದು ಶ್ರೀರಾಮನಿಗೆ ತಿಳಿಹಿಸುವಂಥಾವನಾಗೆಂದು ನುಡಿದವನಾದನು ॥೨॥ ಶತ್ರುಸಂಹಾರಕನಾದ ಲಕ್ಷ್ಮಣನು ಆ ವಾಕ್ಯವಂಕೇಳಿ, ಆತನಿಗೆ ವಂದನೆ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನೇಸ್ತುವಚನಂಶ್ರುತ್ವಾ ಲಕ್ಷ್ಮಣಃಪರವೀರಹಾ ॥ ಅಭಿವಾದ್ಯಮಹಾತ್ಮಾನಂವಾಕ್ಯಮೇತದುವಾಚಹ॥೩॥ಕಿಂಕಾರ್ಯಂಬ್ರೂಹಿಭಗವನ್ಕೋವಾರ್ಥಃಕಿಂಕರೋಮ್ಯಹಮ್। ವ್ಯಗ್ರೋಹಿರಾಘವೋಬ್ರಹ್ಮನ್ಮುಹೂರ್ತಂವಾಪ್ರತೀಕ್ಷ್ಯತಾಮ್ ॥೪॥ ತಚ್ಛ್ರುತ್ವಾ ಮುನಿಶಾರ್ದೂಲಃಕ್ರೋಧೇನಕಲುಷೀಕೃತಃ । ಉವಾಚಲಕ್ಷ್ಮಣಂವಾಕ್ಯಂನಿರ್ದಹನ್ನಿವಚಕ್ಷುಷಾ ॥೫॥ ಅಸ್ಮಿನ್ಕ್ಷಣೇಮಾಂಸೌಮಿತ್ರೇರಾಘವಾಯನಿವೇದಯ । ಅಸ್ಮಿನ್ಕ್ಷಣೇಮಾಂಸೌಮಿತ್ರೇನನಿವೇದಯಸೇಯದಿ । ವಿಷಯಂಚಪುರಂಚೈವಶಪಿಷ್ಯೇರಾಘವಂತಥಾ ॥೬॥ ಭರತಂಚೈವಸೌಮಿತ್ರೇಯುಷ್ಮಾಕಂಯಾಚಸಂತತಿಃ । ನಹಿಶಕ್ಷ್ಯಾಮ್ಯಹಂಭೂಯೋಮನ್ಯುಂಧಾರಯಿತುಂಯತಃ॥೭॥ ತಚ್ಛ್ರುತ್ವಾಘೋರಸಂಕಾಶಂವಾಕ್ಯಂತಸ್ಯಮಹಾತ್ಮನಃ । ಚಿಂತಯಾಮಾಸಮನಸಾತಸ್ಯವಾಕ್ಯಸ್ಯನಿಶ್ಚಯಮ್ ॥೮॥ ಏಕಸ್ಯಮರಣಂಮೇಸ್ತುಮಾಭೂತ್ಸರ್ವವಿನಾಶನಮ್ । ಇತಿಬುದ್ಧ್ಯಾವಿನಿಶ್ಚಿತ್ಯರಾಘವಾಯನ್ಯವೇದಯತ್ ॥೯॥ ಲಕ್ಷ್ಮಣಸ್ಯವಚಃಶ್ರುತ್ವಾರಾಮಃಕಾಲಂವಿಸೃಜ್ಯಚ । ನಿಷ್ಪತ್ಯತ್ವರಿತಂರಾಜಾಅತ್ರೇಃಪುತ್ರಂದದ

---

ಯಾದ ದೂರ್ವಾಸನನ್ನು ಕುರಿತು, ಏತದ್ವಾಕ್ಯಂ-ಈ ಮಾತನ್ನು, ಉವಾಚಹ-ಹೇಳಿದನಷ್ಟೆ ॥೩॥ ಹೇ ಭಗವನ್-ಎಲೈ ಪೂಜ್ಯನೆ, ಕಿಂಕಾರ್ಯಂ- ಯೇನು ಕೆಲಸವು, ಅರ್ಥೋವಾ - ಪ್ರಯೋಜನವಾದರೂ, ಕಃ-ಯೇನು, ಅಹಂ-ನಾನು, ಕಿಂಕರೋಮಿ - ಏನುಮಾಡಲಿ, ಹೇ ಬ್ರಹ್ಮನ್ - ಎಲೈ ಬ್ರಾಹ್ಮಣನೆ, ರಾಘವಃ-ಶ್ರೀರಾಮನು, ವ್ಯಗ್ರಃ-ಕಾರ್ಯಾಂತರಾಸಕ್ತನಾಗಿಧ್ದಾನೆ, ಮುಹೂರ್ತಂವಾ-ಸ್ವಲ್ಪಹೊತ್ತಾದರು, ಪ್ರತೀಕ್ಷ್ಯತಾಂ-ನಿರೀಕ್ಷಿಸಲ್ಪಡಲಿ ॥ ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಮುನಿಶಾರ್ದೂಲಃ-ಋಷಿಶ್ರೇಷ್ಠನಾದ ದೂರ್ವಾಸಮುನಿಯು, ಕ್ರೋಧೇನ-ಕೋಪದಿಂದ, ಕಲುಷೀಕೃತಃ-ವ್ಯಾಕುಲಚಿತ್ತನಾಗಿ, ಲಕ್ಷ್ಮಣಂ-ಲಕ್ಷ್ಮಣನನ್ನು, ಚಕ್ಷುಷಾ-ಕಣ್ಣಿನಿಂದ, ನಿರ್ದಹನ್ನಿವ-ಸುಡುವನಂತೆ, ವಾಕ್ಯಂ-ಮಾತನ್ನು,ಉವಾಚ-ಹೇಳಿದನು ॥೫॥ ಹೆ ಸೌಮಿತ್ರೇ-ಎಲೈ ಲಕ್ಷ್ಮಣನೆ, ಅಸ್ಮಿನ್‌ಕ್ಷಣೇ-ಈ ಕ್ಷಣದಲ್ಲಿ, ಮಾಂ-ನನ್ನನ್ನು, ರಾಘವಾಯ, ಶ್ರೀರಾಮನಿಗೆ, ನಿವೇದಯ-ತಿಳಿಸು, ಹೇ ಸೌಮಿತ್ರೇ-ಎಲೈ ಸುಮಿತ್ರಾಪುತ್ರನೆ, ಅಸ್ಮಿನ್‌ಕ್ಷಣೇ-ಈ ಕ್ಷಣದಲ್ಲಿ, ಮಾಂ-ನನ್ನನ್ನು, ನನಿವೇದಯಸೆಯದಿ-ತಿಳಿಸದಿದ್ದರೆ, ವಿಷಯಂಚ-ದೇಶವನ್ನೂ, ಪುರಂಚೈವ-ಪಟ್ಟಣವನ್ನೂ ಕೂಡಾ, ತಥಾ-ಹಾಗೆಯೆ, ರಾಘವಂ - ಶ್ರೀರಾಮನನ್ನೂ, ಭರತಂಚೈವ-ಭರತನನ್ನೂ ಸಹಾ, ಹೇ ಸೌಮಿತ್ರೇ-ಎಲೈ ಲಕ್ಷ್ಮಣನೇ, ಯುಷ್ಮಾಕಂ-ನಿಮ್ಮ, ಸಂತತಿಃ - ಕುಲವು, ಯಾಚ-ಯಾವದೋ (ತತ್ಸರ್ವಂ-ಅದನ್ನೆಲ್ಲಾ,) ಶಪಿಷ್ಯೇ - ಶಪಿಸುವೆನು, ಯತಃ - ಯಾವಕಾರಣದ ದೆಸೆಯಿಂದ, ಅಹಂ-ನಾನು, ಭೂಯಃ-ಬಹಳವಾದ, ಮನ್ಯುಂ - ಕೋಪವನ್ನು, ಧಾರಯಿತುಂ - ಸಹಿಸುವದಕ್ಕೋಸ್ಕರ, ನಶಕ್ಷ್ಯಾಮಿಹಿ - ಸಮರ್ಥನಾಗುವದಿಲ್ಲವಷ್ಟೆ ॥೭॥ ಘೋರಸಂಕಾಶಂ-ಭಯಂಕರವಾದ, ತಸ್ಯಮಹಾತ್ಮನಃ-ಆ ಮಹಾನುಭಾವನ, ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ತಸ್ಯ-ಆ ದೂರ್ವಾಸನ, ವಾಕ್ಯಸ್ಯ- ಮಾತಿನ, ನಿಶ್ಚಯಂ-ನಿಶ್ಚಯವನ್ನು ಕುರಿತು, ಮನಸಾ-ಮನಸ್ಸಿನಿಂದ, ಚಿಂತಯಾಮಾಸ-ಯೋಚಿಸಿದನು ॥೮॥ ಏಕಸ್ಯ - ಒಬ್ಬನಾದ, ಮೇ-ನನಗೆ, ಮರಣಃ-ಮರಣವು, ಅಸ್ತು-ಆಗಲಿ, ಸರ್ವವಿನಾಶನಂ-ಸಮಸ್ತರಕ್ಷೆಯವು, ಮಾಭೂತ್-ಆಗಬೇಡ, ಇತಿ-ಇಂತೆಂದು, ಬುದ್ಧ್ಯಾ-ಬುದ್ಧಿಯಿಂದ, ವಿನಿಶ್ಚಿತ್ಯ-ನಿಶ್ಚಯಿಸಿ, ರಾಘವಾಯ-ಶ್ರೀರಾಮನಿಗೆ, ನ್ಯವೇದಯತ್-ತಿಳಿಸಿದನು ॥೯॥ ಲಕ್ಷ್ಮಣಸ್ಯ-ಲಕ್ಷ್ಮಣನ, ವಚಃ-ಮಾತನ್ನು, ಶ್ರುತ್ವಾ-ಕೇಳಿ, ರಾಜಾ-ಅರಸಾದ, ರಾಮಃ-ಶ್ರೀರಾಮನು, ಕಾಲಂಚ-ಯಮನನ್ನು, ವಿಸೃಜ್ಯ-ತೊರೆದು, ತ್ವರಿತಂ-ಜಾಗ್ರತೆಯಾಗಿ-ನಿಷ್ಪತ್ಯ-ಬಂದು, ಅತ್ರೇಃ-ಅತ್ರಿಮುನಿಯ, ಪುತ್ರಃ-ಕುಮಾರನಾದದೂರ್ವಾಸನನ್ನು, ದದರ್ಶಹ-ಕಂಡೆನಷ್ಟೆ, ಸಕಾಕುತ್ಸ್ಥಃ-ಆ ಶ್ರೀರಾಮನು, ತೇಜಸಾ-

---

ಯಿಂಗೈದು, ನುಡಿದನದೆಂತೆನೆ—ಎಲೈ ಪೂಜ್ಯನೇ ! ಶ್ರೀರಾಮನು ಕಾರ್ಯಾಂತರದಲ್ಲಿರುವನು, ನಿಮಿಗೆ ಏನುಕಾರ್ಯವಿರುವದು, ಯಾತಕ್ಕೋಸುಗ ನೀನು ದಯಮಾಡಿದಂಥಾವನಾದೆ, ನಾನು ಯಾವ ಕಾರ್ಯವಂಗೈಯಲಿ, ಪೇಳುವಂಥಾವನಾಗು, ಅಥವಾ ಸ್ವಲ್ಪಹೊತ್ತಾದರು ನಿರೀಕ್ಷಿಸುವಂಥಾವನಾಗು, ಎಂಬದಾಗಿ ನುಡಿದವನಾಗಲೂ, ಆ ಮುನಿಶ್ರೇಷ್ಠನು ಕೋಪಾಕ್ರಾಂತನಾಗಿ, ಲಕ್ಷ್ಮಣನಂ ಸುಡುವನಂತೆ ಮಹಾ ರೌದ್ರಮುಳ್ಳವನಾಗಿ, ಎಲೈ ಲಕ್ಷ್ಮಣನೇ ! ಈ ಕ್ಷಣದಲ್ಲಿಯೇ ಎನ್ನಂ ರಾಮನಿಗೆ ತಿಳುಹಿಸು, ಈಗ ನೀನು ಅರಿಕೆಮಾಡದಿದ್ದರೆ, ಈ ದೇಶವನ್ನೂ ಪುರವನ್ನೂ ಶ್ರೀರಾಮನನ್ನೂ, ಭರತನನ್ನೂ, ಮತ್ತೂ ನಿಮ್ಮ ಕುಲವನ್ನೂ ಸಹ ಶಪಿಸಿ ನಾಶಮಾಡುವೆನು, ಈ ಕೋಪವಂ ನಾನು ತಾಳಲಾರೆನೆಂದು ಪೇಳಿದವನಾದನು. ಮಹಾ ಭಯಂಕರವಾದ ಆ ದುರ್ವಾಸಮುನಿಯ ವಾಕ್ಯವಂ ಕೇಳಿ, ಲಕ್ಷ್ಮಣನು, ಆತನ ನಿಶ್ಚಯವನ್ನರಿತು ಆಗ ಯೋಚಿಸುವನದೆಂತೆನೆ.—ಎಲ್ಲರು ನಾಶವಾಗುವದಕ್ಕಿಂತಲೂ ಎನಗೊರ್ವನಿಗೆ ಮರಣಮುಂಟಾಗುವದು ಉತ್ತಮವೆಂದು ಬುದ್ಧಿಯಿಂದ ಯೋಚಿಸಿ, ಮಹಾತ್ಮನಾದ ಶ್ರೀರಾಮನಿಗೆ ದುರ್ವಾಸಮಹರ್ಷಿಯ ಆಗಮನವಂ ತಿಳುಹಿಸಿದಂಥಾವನಾದನು. ಬಳಿಕ ಶ್ರೀರಾಮನು ಲಕ್ಷ್ಮಣನು ಪೇಳಿದ ಆ ವಾಕ್ಯವಂ ಕೇಳಿ, ಕಾಲಪುರುಷನಂ ಕಳುಹಿಸಿಕೊಟ್ಟು, ತ್ವರೆಯಾಗಿ ಬಂದು ಅತ್ರಿಮಹರ್ಷಿಯ ಪುತ್ರನಾದ ದುರ್ವಾಸಮುನಿಯ ಸಮೀಪಕ್ಕೆ ಬಂದು ಆತನಂ ಕಂಡವನಾಗಿ, ಮಹಾತ್ಮನಾಗಿಯೂ,ಬ್ರಹ್ಮತೇಜಸ್ಸಿನಿಂದ ಅಗ್ನಿಯಂತೆ ಕಂಗೊಳಿಸುತ್ತಿರುವನಾಗಿಯೂ ಇರುವ ಆ ಮಹರ್ಷಿಗೆ ವಂದನೆಯಂಗೈದು ಕೈಮುಗಿದುಕೊಂಡವನಾಗಿ, ಯಾಕೆ ತಾವು ದಯಮಾಡಿಸೋಣವಾಯಿತೆಂದು ಕೇಳಿದವನಾಗಲೂ, ಆ ಮಾತಂ ಕೇಳಿ, ದುರ್ವಾಸಮುನಿಯು ರಾಮನಂ ಕುರಿತು, ಎಲೈ ಧರ್ಮಿಷ್ಠನಾದ ಶ್ರೀರಾಮನೇ !

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶ್ಚಹ ॥೧೦॥ ಸೋಭಿವಾದ್ಯ ಮಹಾತ್ಮಾನಂ ಜ್ವಲಂತಮಿವ ತೇಜಸಾ । ಕಿಂಕಾರ್ಯಮಿತಿ ಕಾಕುತ್ಸ್ಥಃ ಕೃತಾಂಜಲಿರಭಾಷತ ॥೧೧॥
ತದ್ವಾಕ್ಯಂ ರಾಘವೇಣೋಕ್ತಂ ಶ್ರುತ್ವಾ ಮುನಿವರಃ ಪ್ರಭುಮ್ । ಪ್ರತ್ಯಾಹ ರಾಮಂ ದುರ್ವಾಸಾಃ ಶ್ರೂಯತಾಂ ಧರ್ಮವತ್ಸಲ ॥೧೨॥
ಅದ್ಯ ವರ್ಷಸಹಸ್ರಸ್ಯ ಸಮಾಪ್ತಿಸ್ತಪಸೋ ಮಮ । ಸೋಹಂ ಭೋಜನಮಿಚ್ಛಾಮಿ ಯಥಾಸಿದ್ಧಂ ತವಾನಘ ॥೧೩॥ ತಚ್ಛ್ರುತ್ವಾ
ವಚನಂ ರಾಮೋ ಹರ್ಷೇಣ ಮಹತಾವೃತಃ । ಭೋಜನಂ ಮುನಿಮುಖ್ಯಾಯ ಯಥಾಸಿದ್ಧಮುಪಾಹರತ್ ॥೧೪॥ ಸ ಭುಕ್ತ್ವಾ ಚ
ಮುನಿಶ್ರೇಷ್ಠಸ್ತದನ್ನಮಮೃತೋಪಮಮ್ । ಸಾಧು ರಾಮೇತಿ ಸಂಭಾಷ್ಯ ಸ್ವಮಾಶ್ರಮಮುಪಾಗಮತ್ ॥೧೫॥ ತಸ್ಮಿನ್ಗತೇ
ಮಹಾತೇಜಾ ರಾಘವಃ ಪ್ರೀತಮಾನಸಃ । ಸಂಸ್ಮೃತ್ಯ ಕಾಲವಾಕ್ಯಾನಿ ತತೋ ಮೌನಮುಪೇಯಿವಾನ್ ॥೧೬॥ ದುಃಖೇನ ಚ ಸುಸಂ
ತಪ್ತಃ ಸ್ಮೃತ್ವಾ ತದ್ಘೋರದರ್ಶನಮ್ । ಅವಾಙ್ಮುಖೋ ದೀನಮನಾ ವ್ಯಾಹರ್ತುಂ ನ ಶಶಾಕ ಹ ॥೧೭॥ ತತೋ ಬುದ್ಧ್ಯಾ ವಿನಿ
ಶ್ಚಿತ್ಯ ಕಾಲವಾಕ್ಯಾನಿ ರಾಘವಃ । ನೈತದಸ್ತೀತಿ ಚೋಕ್ತ್ವಾ ಸ ತೂಷ್ಣೀಮಾಸೀನ್ಮಹಾಯಶಾಃ ... ... ॥೧೮॥

——ಇತಿ ಶ್ರೀಮದುತ್ತರರಾಮಾಯಣೇ ಪಂಚೋತ್ತರ ಶತತಮಸ್ಸರ್ಗಃ...——

---

ತೇಜಸ್ಸಿನಿಂದ, ಜ್ವಲಂತಮಿವಸ್ಥಿತಂ-ಪ್ರಜ್ವಲಿಸುತ್ತಾನೆಂಬಂತಿರುವ, ಮಹಾತ್ಮಾನಂ-ಮಹಾತ್ಮನಾದ ದೂರ್ವಾಸನನ್ನು, ಅಭಿವಾದ್ಯ-ನಮಸ್ಕರಿಸಿ, ಕೃತಾಂಜಲಿಃ-ಅಂಜಲಿಬದ್ಧನಾಗಿ, ಕಿಂಕಾರ್ಯಮಿತಿ-ಏನುಕಾರ್ಯವೆಂದು, ಅಭಾಷತ-ನುಡಿದನು ॥೧೧॥ ಮುನಿವರಃ-ಋಷಿಶ್ರೇಷ್ಠನಾದ, ದುರ್ವಾಸಾಃ-ದೂರ್ವಾಸಮುನಿಯು, ರಾಘವೇಣ-ಶ್ರೀರಾಮನಿಂದ, ಉಕ್ತಂ-ಹೇಳಲ್ಪಟ್ಟ, ತದ್ವಾಕ್ಯಂ-ಆ ಮಾತನ್ನು, ಶ್ರುತ್ವಾ-ಕೇಳಿ, ಹೇ ಧರ್ಮವತ್ಸಲ-ಎಲೈ ಧರ್ಮವಾತ್ಸಲ್ಯವುಳ್ಳವನೇ, ಶ್ರೂಯತಾಂ-ಕೇಳಲ್ಪಡಲಿ, ಇತಿ-ಇಂತೆಂದು, ಪ್ರಭುಂ-ಸ್ವಾಮಿಯಾದ, ರಾಮಂ-ಶ್ರೀರಾಮನನ್ನು ಕುರಿತು, ಪ್ರತ್ಯಾಹ-ಪ್ರತ್ಯುತ್ತರಕೊಟ್ಟನು ॥೧೨॥ ಹೆ ಅನಘ-ಎಲೈ ನಿರ್ದೋಷಿಯೆ, ಅದ್ಯ-ಈಗ, ಮಮ-ನನ್ನ, ತಪಸಃ-ತಪಸ್ಸಿಗೆ, ವರ್ಷಸಹಸ್ರಸ್ಯ-ಸಾವಿರವರ್ಷಗಳ, ಸಮಾಪ್ತಿಃ-ಪೂರ್ತಿಯು, ಸೋಹಂ-ಅಂಥಾ ನಾನು, ತವ-ನಿನ್ನ ಸಂಬಂಧವಾದ, ಭೋಜನಂ-ಭೋಜನವನ್ನು, ಯಥಾಸಿದ್ಧಂ-ಅಡಿಗೆಯಾಗಿದ್ದಂತೆ, ಇಚ್ಛಾಮಿ-ಅಪೇಕ್ಷಿಸುತ್ತೇನೆ ॥೧೩॥ ತದ್ವಚನಂ-ಆ ಮಾತನ್ನು, ಶ್ರುತ್ವಾ-ಕೇಳಿ, ರಾಮಃ-ಶ್ರೀರಾಮನು, ಮಹತಾ-ಮಹತ್ತರವಾದ, ಹರ್ಷೇಣ-ಸಂತೋಷದಿಂದ, ವೃತಃ-ಕೂಡಿದವನಾಗಿ, ಮುನಿಮುಖ್ಯಾಯ-ಋಷಿಶ್ರೇಷ್ಠನಾದ ದೂರ್ವಾಸಮುನಿಗೋಸ್ಕರ, ಯಥಾಸಿದ್ಧಂ-ಪಕ್ವವಾದಂತೆ, ಭೋಜನಂ-ಅನ್ನವನ್ನು, ಉಪಾಹರತ್-ಸಮರ್ಪಿಸಿದನು ॥೧೪॥ ಮುನಿಶ್ರೇಷ್ಠಃ-ಋಷಿಶ್ರೇಷ್ಠನಾದ, ಸಚ-ಆದೂರ್ವಾಸನೂ, ಅಮೃತೋಪಮಂ-ಅಮೃತಕ್ಕೆ ಸಮಾನವಾದ, ತದನ್ನಂ-ಆ ಅನ್ನವನ್ನು, ಭುಕ್ತ್ವಾ-ಭೋಜನಮಾಡಿ, ಹೇರಾಮ-ಎಲೈ ಶ್ರೀರಾಮನೆ, ಸಾಧ್ವಿತಿ-ಚೆನ್ನಾಗಾಯಿತೂ ಎಂದು, ಸಂಭಾಷ್ಯ-ಮಾತನಾಡಿ, ಸ್ವಂ-ಸ್ವಕೀಯ್ಯಮಾದ, ಆಶ್ರಮಂ-ಆಶ್ರಮವನ್ನು ಕುರಿತು, ಉಪಾಗಮತ್-ಹೊರಟುಬಂದನು ॥೧೫॥ ತಸ್ಮಿನ್-ಆ ದೂರ್ವಾಸನು, ಗತೇಸತಿ-ಹೊರಟುಹೋಗುತಿರಲೀಕಾಗಿ, ಮಹಾತೇಜಾಃ-ಮಹಾತೇಜೋವಂತನಾದ, ರಾಘವಃ-ಶ್ರೀರಾಮನು, ಪ್ರೀತಮಾನಸಃ-ಸಂತೋಷಯುಕ್ತಮನಸ್ಸುಳ್ಳವನಾಗಿ, ಕಾಲವಾಕ್ಯಾನಿ-ಕಾಲ-ಯಮನ, ವಾಕ್ಯಾನಿ-ಮಾತುಗಳನ್ನು, ಸಂಸ್ಮೃತ್ಯ-ಜ್ಞಾಪಿಸಿಕೊಂಡು, ತತಃ-ಬಳಿಕ, ಮೌನಂ - ವಾಙ್ನಿಯಮವನ್ನು, ಉಪೇಯಿವಾನ್-ಹೊಂದಿದನು ॥ ೧೬ ॥ ಘೋರದರ್ಶನಂ-ಭಯಂಕರವಾದನೋಟವುಳ್ಳ, ತತ್-ಆ ಯಮನ ಮಾತನ್ನು, ಸ್ಮೃತ್ವಾ-ಸ್ಮರಿಸಿಕೊಂಡು, ದುಃಖೇನಚ-ದುಃಖದಿಂದಲೂ, ಸುಸಂತಪ್ತಃ-ಬಹಳಪರಿತಪ್ತನಾಗಿ, ಅವಾಙ್ಮುಖಃ-ತಲೆಬೊಗ್ಗಿಸಿಕೊಂಡವನಾಗಿ, ದೀನಮನಾಃ-ದೈನ್ಯವಾದ ಮನಸ್ಸುಳ್ಳವನಾಗಿ, ವ್ಯಾಹರ್ತುಂ-ಯಾವಮಾತುಹೇಳುವದಕ್ಕೂ ಕೂಡ, ನಶಶಾಕಹ-ಸಮರ್ಥನಾಗಲಿಲ್ಲವಷ್ಟೆ ॥೧೭॥ ತತಃ-ಬಳಿಕ, ಮಹಾಯಶಾಃ-ಮಹಾಕೀರ್ತಿವಂತನಾದ, ಸರಾಘವಃ-ಆ ಶ್ರೀರಾಮನು, ಬುಧ್ಯಾ-ಬುದ್ಧಿಯಿಂದ, ಕಾಲವಾಕ್ಯಾನಿ-ಯಮನಮಾತುಗಳನ್ನು, ವಿನಿಶ್ಚಿತ್ಯ-ನಿಶ್ಚಯಿಸಿ, ಏತತ್-ಈಸರ್ವವೂ, ನಾಸ್ತಿ-ಇರೋದಿಲ್ಲಾ, ಇತಿ-ಇಂತೆಂದು, ಉಕ್ತ್ವಾ-ಹೇಳಿ, ತೂಷ್ಣೀಂ-ಸುಮ್ಮನೆ, ಆಸೀತ್-ಇದನು. —ಉತ್ತರರಾಮಾಯಣೆ ಪಂಚೋತ್ತರ ಶತತಮಸ್ಸರ್ಗಃ—

---

ನಾನು ಸಾವಿರ ವರುಷಗಳಿಂದ ತಪವಂ ಮಾಡುತ್ತಿದ್ದೆನು. ಇಂದಿಗೆ ಪರಿಸಮಾಪ್ತಿಯಾದದು, ನಿನ್ನ ಮನೆಯಲ್ಲಿ ಸಿದ್ಧವಾಗಿರುವ ಭೋಜನವನ್ನಿಚ್ಛಿಸುತ್ತೇನೆಂದು ನುಡಿದವನಾದನು. ಬಳಿಕ ಶ್ರೀರಾಮನು ಆ ಮಾತಂ ಕೇಳಿ ಮಹಾ ಹರುಷವುಳ್ಳವನಾಗಿ, ಅಟ್ಟಡಿಗೆಯಾದ ಪದಾರ್ಥಗಳಂ ತ್ವರೆಯಾಗಿ ಒಪ್ಪಿಸಿದವನಾಗಲೂ, ಆ ಋಷಿಶ್ರೇಷ್ಠನಾದ ದುರ್ವಾಸಮುನಿಯು ಅಮೃತದೋಪಾಧಿಯಲ್ಲಿರ್ಪ ಆ ಅನ್ನವಂ ಭುಜಿಸಿ, ಬಹುರುಚಿಯಾಗಿಹೆಂದು ಶ್ರೀರಾಮನಿಗೆ ಹೇಳಿ, ತನ್ನ ಆಶ್ರಮಕ್ಕೆ ತೆರಳಿದನು ॥೧೫॥ ಆ ಬ್ರಾಹ್ಮಣೋತ್ತಮನು ಹೊರಟು ಹೋದವನಾಗಲೂ, ಶ್ರೀರಾಮನು ಸಂತುಷ್ಟವಾದ ಮನವುಳ್ಳವನಾಗಿ, ಆ ಕಾಲಪುರುಷನ ಮಾತುಗಳಂ ಜ್ಞಾಪಿಸಿಗೊಂಡು ಮಾತಾಡದೆ ದುಃಖದಿಂ ಸಂತಪಿಸುತ್ತಿರುವನಾಗಿಯೂ ತಲೆಬೊಗ್ಗಿಸಿಕೊಂಡವನಾಗಿಯೂ ದೈನ್ಯವಾದ ಮನಸ್ಸುಳ್ಳವನಾಗಿಯೂ ಇರುವನಾಗಿ, ಹೇಳುವದಕ್ಕೆ ಅಸಕ್ತನಾಗಿದ್ದು ಬಳಿಕ ನಿಶ್ಚಯವಂ ಮಾಡಿಕೊಂಡು ಇದಾಗ ಬಾರದೆಂದು ಹೇಳಿದಂಥಾವನಾದನು ॥೧೮॥

ರಾಮಾಯಣದಲ್ಲಿನ ೧೦೫ನೇಯ ಸರ್ಗಂ ಮುಗಿದುದು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಅವಾಙ್ಮುಖಮಥೋದೀನಂದೃಷ್ಟ್ವಾಸೋಮಮಿವಾಪ್ಲುತಮ್। ರಾಘವಂಲಕ್ಷ್ಮಣೋವಾಕ್ಯಂಹೃಷ್ಟೋಮಧುರಮಬ್ರವೀತ್ ॥೧॥ ನಸಂತಾಪಂಮಹಾಬಾಹೋಮದರ್ಥಂಕರ್ತುಮರ್ಹಸಿ। ಪೂರ್ವನಿರ್ಮಾಣಬದ್ಧಾಹಿಕಾಲಸ್ಯಗತಿರೀದೃಶೀ॥೨॥ ಜಹಿಮಾಂಸೌಮ್ಯವಿಸ್ರಬ್ಧಃಪ್ರತಿಜ್ಞಾಂಪರಿಪಾಲಯ ।ಹೀನಪ್ರತಿಜ್ಞಾಃಕಾಕುತ್ಸ್ಥಪ್ರಯಾಂತಿನರಕಂನರಾಃ ॥೩॥ ಯದಿಪ್ರೀತಿರ್ಮಹಾರಾಜಯದ್ಯನುಗ್ರಾಹ್ಯತಾಮಯಿ । ಜಹಿಮಾಂನಿರ್ವಿಶಂಕಸ್ತ್ವಂಧರ್ಮಂವರ್ಧಯರಾಘವ॥೪॥ ಲಕ್ಷ್ಮಣೇನತಥೋಕ್ತಸ್ತುರಾಮಃಪ್ರಚಲಿತೇಂದ್ರಿಯಃ । ಮಂತ್ರಿಣಸ್ಸಮುಪಾನೀಯತಥೈವಚಪುರೋಧಸಮ್ ॥೫॥ ಅಬ್ರವೀಚ್ಚಯಥಾವೃತ್ತಂತೇಷಾಂಮಧ್ಯೇಸರಾಘವಃ ।ದುರ್ವಾಸೋಽಭಿಗಮಂಚೈವಪ್ರತಿಜ್ಞಾಂತಾಪಸಸ್ಯಚ ॥೬॥ ತಚ್ಛ್ರುತ್ವಾಮಂತ್ರಿಣಸ್ಸರ್ವೇಸೋಪಾಧ್ಯಾಯಾಸ್ಸಹಾನುಗಾಃ ।ವಸಿಷ್ಠಶ್ಚಮಹಾತೇಜಾವಾಕ್ಯಮೇತದುವಾಚಹ॥೭॥ ದೃಷ್ಟಮೇತನ್ಮಹಾಬಾಹೋಕ್ಷಯಂತೇರೋಮಹರ್ಷಣಮ್ । ಲಕ್ಷ್ಮಣೇನವಿಯೋಗಶ್ಚತವರಾಮಮಹಾಯಶಃ॥೮॥ ತ್ಯಜೈನಂಬಲವಾನ್ಕಾಲೋಮಾಪ್ರತಿ

---

ಅಥ-ಅನಂತರದಲ್ಲಿ, ಅವಾಙ್ಮುಖಂ-ಅಧೋಮುಖನಾದ, ದೀನಂ-ಅಂತಸ್ತಾಪವುಳ್ಳವನಾದಕಾರಣವೆ,ಪ್ಲುತಂ-ಮಗ್ಗಿಹೋದ,ಸೋಮಮಿವಸ್ಥಿತಂ-ಚಂದ್ರನಂತಿರುವ, ರಾಘವಂ-ಶ್ರೀರಾಮನನ್ನು ಕುರಿತು, ಲಕ್ಷ್ಮಣಃ-ಲಕ್ಷ್ಮಣಸ್ವಾಮಿಯು, ಹೃಷ್ಟಃ-ಸಂತೋಷಚಿತ್ತನಾಗಿ, ಮಧುರಂ-ಮನೋಹರವಾದ, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೧॥ ಹೆಮಹಾಬಾಹೋ-ಎಲೈಮಹಾಭುಜಪರಾಕ್ರಮಶಾಲಿಯೆ, ಮದರ್ಥಂ-ನನ್ನನಿಮಿತ್ತ್ಯವಾಗಿ, ಸಂತಾಪಂ-ಸಂಕಟವನ್ನು, ಕರ್ತುಂ-ಮಾಡುವದಕ್ಕೋಸ್ಕರ, ನಾರ್ಹಸಿ-ಅರ್ಹನಾಗಬೇಡ, ಪೂರ್ವನಿರ್ಮಾಣಬದ್ಧಾ, ಪೂರ್ವ-ಪೂರ್ವಜನ್ಮದ, ನಿರ್ಮಾಣ-ಸೃಷ್ಟಿಯಿಂದ, ಬದ್ಧಾ-ಕಟ್ಟಲ್ಪಟ್ಟ, ಕಾಲಸ್ಯ-ಕಾಲದ, ಗತಿಃ-ಚೆಷ್ಟೆಯೇ, ಈದೃಶೀಹಿ-ಇಂಥಾದಷ್ಟೆ ॥೨॥ ಹೆಸೌಮ್ಯ-ಎಲೈಸೌಮ್ಯನೆ,ಮಾಂ-ನನ್ನನ್ನು, ಜಹಿ-ಕೊಡೆದುಹಾಕು, ವಿಸ್ರಬ್ಧಾ - ವಿಶ್ವಾಸಯುಕ್ತನಾಗಿ, ಪ್ರತಿಜ್ಞಾಂ-ನಿನ್ನಶಪಥವನ್ನು, ಪರಿಪಾಲಯ, ರಕ್ಷಿಸು, ಹೆಕಾಕುತುಸ್ಥ-ಎಲೈಕಕುತ್ಸ್ಥವಂಶೋತ್ಪನ್ನನೆ, ಹೀನಪ್ರತಿಜ್ಞಾಃ-ಸಫಲವಾಗದೆಯಿರುವಪ್ರತಿಜ್ಞೆವುಳ್ಳ, ನರಾಃ-ಮನುಷ್ಯರು,ನರಕಂ-ನರಕವನ್ನು, ಪ್ರಯಾಂತಿ-ಹೊಂದುತ್ತಾರೆ ॥೩॥ ಹೆಮಹಾರಾಜ-ಎಲೈಮಹಾರಾಜನೆ, ಮಯಿ-ನನಲ್ಲಿ, ಪ್ರೀತಿರ್ಯದಿ, ವಿಶ್ವಾಸವಿದ್ದಪ್ಪೇಆದರೆ, ಅನುಗ್ರಾಹ್ಯತಾಯದಿ, ಅನುಗ್ರಹಿಸಲರ್ಹತೆಯುಂಟಾಗಿದ್ದರೆ, ತ್ವಂ-ನೀನು, ನಿರ್ವಿಶಂಕಃ-ನಿಸ್ಸಂಶಯನಾಗಿ, ಮಾಂ-ನನ್ನನ್ನು, ಜಹಿ-ಜಯಿಸು, ಹೆ ರಾಘವ-ಎಲೈಶ್ರೀರಾಮನೆ,ಧರ್ಮಂ-ಸ್ವಧರ್ಮವನ್ನು, ವರ್ಧಯ-ವೃದ್ಧಿಗೊಳಿಸು ॥೪॥ಲಕ್ಷ್ಮಣೇನ-ಲಕ್ಷ್ಮಣನಿಂದ ತಥಾ-ಆಪರಿಯಾಗಿ,ಉಕ್ತಃ-ಪೇಳಲ್ಪಟ್ಟ,ರಾಮಸ್ತು-ಶ್ರೀರಾಮನಾದರೆ,ಪ್ರಚಲಿತೇಂದ್ರಿಯಃ-ಪ್ರಚಲಿತ-ಅದಿರಿಹೋದ, ಇಂದ್ರಿಯಃ-ಇಂದ್ರಿಯಗಳುಳ್ಳವನಾಗಿ, ಮಂತ್ರಿಣಃ-ಮಂತ್ರಿಗಳನ್ನು, ತಥೈವ-ಹಾಗೆಯೆ, ಪುರೋಧಸಂಚ-ಪುರೋಹಿತರಾದ ವಸಿಷ್ಠರನ್ನೂ ಕೂಡ, ಸಮುಪಾನೀಯ-ಕರೆಸಿ ॥೫॥ ಸರಾಘವಃ-ಆ ಶ್ರೀರಾಮನು, ದುರ್ವಾಸೋಭಿಗಮಂಚೈವ-ದೂರ್ವಾಸರ ಆ ಗಮನವನ್ನೂ ಕೂಡ, ತಾಪಸಸ್ಯ-ತಪೋರೂಪಧಾರಿಯಾದ ಯಮನ, ಪ್ರತಿಜ್ಞಾಂಚ-ಪ್ರತಿಜ್ಞಾವಚನವನ್ನೂ ಕೂಡ, ತೇಷಾಂ-ಆ ಮಂತ್ರಿಗಳ, ಮಧ್ಯೇ-ಮಧ್ಯದಲ್ಲಿ, ಯಥಾವೃತ್ತಂ-ನಡೆದಹಾಗೆ, ಅಬ್ರವೀಚ್ಚ-ನುಡಿದಲೂ ನುಡಿದನು ॥೬॥ ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಸರ್ವೇ-ಸಮಸ್ತರಾದ, ಸೋಪಾಧ್ಯಾಯಾಃ-ಉಪಾಧ್ಯಾಯರಿಂದೊಡೆಗೂಡಿದ, ಸಹಾನುಗಾಃ-ಅನುಚರರಿಂದೊಡೆಗೂಡಿದ, ಮಂತ್ರಿಣಶ್ಚ-ಮಂತ್ರಿಗಳೂನು, ಮಹಾತೇಜಾಃ-ಮಹಾತೇಜೋವಂತರಾದ, ಮಂತ್ರಿಣಶ್ಚ-ಮಂತ್ರಿಗಳೂನು, ಮಹಾತೇಜಾಃ-ಮಹಾತೇಜೋವಂತನಾದ, ವಸಿಷ್ಠಶ್ಚ-ವಸಿಷ್ಠನೂ, ಏತತ್-ಈ ವಕ್ಷ್ಯಮಾಣವಾದ, ವಾಕ್ಯಂ-ವಚನವನ್ನು, ಉವಾಚಹ-ಪೇಳಿದನು, ಊಚುಃ-ಪೇಳಿದರು ॥೭॥ಹೆ ಮಹಾಬಾಹೋ-ಎಲೈ ಮಹಾಭುಜಶಾಲಿಯೆ, ತೇ-ನಿನಗೆ, ದೃಷ್ಟಂ-ಕಾಣಲ್ಪಟ್ಟ, ಕ್ಷಯಂ-ಹ್ರಾಸವು, ರೋಮಹರ್ಷಣಂ-ರೋಮಾಂಚೋತ್ಪಾದಕವಾಗಿರುವದೊ, ಹೆ ಮಹಾಯಶಃ-ಎಲೈಮಹಾಯಶೋವಂತನೆ,ಲಕ್ಷ್ಮಣೇನ-ಲಕ್ಷ್ಮಣನಿಂದ,ವಿಯೋಗಶ್ಚ-ವಿಯೋಗವೂನು, ತಥೈವ-ಹಾಗೆಯೆಸರಿ ॥೮॥ಹೆರಾಮ-ಎಲೈ ಶ್ರೀರಾಮನೆ, ಏನಂ-ಈ ಲಕ್ಷ್ಮಣನನ್ನು, ತ್ಯಜ-ಬಿಡು,ಕಾಲಃ-ಕಾಲವು, ಬಲವಾನ್-ಬಲಿಷ್ಠವಾದ್ದು, ಪ್ರತಿಜ್ಞಾಂ-ಪ್ರತಿಜ್ಞೆಯನ್ನು, ವೃಥಾ-ವ್ಯರ್ಥವಾಗಿ, ಮಾಕೃಥಾಃ-ಮಾಡಬ್ಯಾಡ, ಪ್ರತಿಜ್ಞಾಯಾಂ-ಶಪಥವು, ವಿನಷ್ಟಾಯಾಂಸತ್ಯಾಂ-

---

ಬಳಿಕ ಲಕ್ಷ್ಮಣನು ತಲೆಯಂಬೊಗ್ಗಿಸಿಕೊಂಡವನಾಗಿಯೂ ದೀನವಾದ ಮನಸ್ಸುಳ್ಳವನಾಗಿಯೂ ಕಳೆಗುಂದಿದ ಚಂದಿರನತೆರದಿ ಕಾಂತಿಹೀನನಾಗಿಯೂ ಇರುವ ಶ್ರೀರಾಮನಂ ಕುರಿತು, ಸಂತೋಷಚಿತ್ತನಾಗಿ ಮಧುರವಾದ ವಾಕ್ಯವಂ ಪೇಳುವನದೆಂತೆನೆ—ಎಲೈ ಮಹಾ ಭುಜಪರಾಕ್ರಮುಳ್ಳವನೇ! ಎನಿಗೋಸುಗ ಚಿಂತಿಸಬೇಡ, ಇಂಥಾಕಾಲಗತಿಯು ಪೂರ್ವದಲ್ಲಿಯೇ ಮಾಡಲ್ಪಟ್ಟಂಥಾದ್ದು, ನನ್ನನು ನಿಗ್ರಹಿಸಿ ನಿನ್ನ ಪ್ರತಿಜ್ಞೆಯಂ ಪರಿಪಾಲಿಸುವಂಥಾವನಾಗು, ಪ್ರತಿಜ್ಞೆಯಂಗೈದು ಆದಂ ಮಾಡದೆ ಮಾನವರು ನರಕವಂ ಪೊಂದುವರು. ಎನ್ನಲ್ಲಿ ನಿನಿಗೆ ವಿಶ್ವಾಸವಿದ್ದರೂ ಸರಿಯೆ, ಅಥವಾ ಅನುಗ್ರಹವಿದ್ದರೂಸರಿಯೆ ಹ್ಯಾಗಾದರೂ ನನ್ನನ್ನು ನಿಗ್ರಹಿಸಿ ಧರ್ಮವಂ ವೃದ್ಧಿಗೊಳಿಸುವಂಥಾವನಾಗು. ಎಂಬದಾಗಿ ಶ್ರೀರಾಮನು ಲಕ್ಷ್ಮಣನಿಂದ ಪೇಳಲ್ಪಟ್ಟು. ಶ್ರೀರಾಮನು ವ್ಯಾಕುಲವಾದ ಇಂದ್ರಿಯಗಳುಳ್ಳವನಾಗಿ, ಮಂತ್ರಿಗಳಂ ಮತ್ತು ಪುರೋಹಿತನಾದ ವಸಿಷ್ಠ ಮುನಿಯನ್ನು ಕರೆಯಿಸಿ ನಡೆದ ವೃತಾಂತವನ್ನೂ ತಾಪಸನಿಗೆ ತಾನುಮಾಡಿಕೊಟ್ಟ ಆ ಪ್ರತಿಜ್ಞೆಯನ್ನು, ದುರ್ವಾಸಮುನಿಯ ಆಗಮನವನ್ನೂ ಇದನೆಲ್ಲ ಪೇಳಿದವನಾಗಲೂ,ಅವರೆಲ್ಲರು ಆ ಮಾತಂ ಕೇಳಿ ಆಗ ಶ್ರೀರಾಮನಂ ಕುರಿತು, ಎಲೈ ಶ್ರೀರಾಮನೆ! ರೋಮಾಂಚಕರವಾಗಿರ್ಪ ನಿನ್ನ ನಾಶನವು ಮತ್ತೂ ಲಕ್ಷ್ಮಣನ ಅಗಲುವಿಕೆಯು ಸಹ ಗೊತ್ತಾಗಿಯೇ ಇಧೆ, ಆದಕ್ಕೆ ಸಮಯವು ವದಗಿದಂಥಾದ್ದಾಯಿತು, ಈ ಲಕ್ಷ್ಮಣನಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜ್ಞಾಂಪ್ರಧಾಕ್ಷ್ಮಥಾಃ। ವಿನಷ್ಟಾಯಾಂಪ್ರತಿಜ್ಞಾಯಾಂಧರ್ಮೋಪಿವಿಲಯಂವ್ರಜೇತ ॥೯॥ ತತೋಧರ್ಮೇವಿನಷ್ಟೇತುತ್ರೈಲೋಕ್ಯಂಸಚರಾಚರಮ್ ।ಸದೇವರ್ಷಿಗಣಂಸರ್ವಂವಿನಶ್ಯೇತ್ತುನಸಂಶಯಃ ॥೧೦॥ ಸತ್ವಂಪುರುಷಶಾರ್ದೂಲತ್ರೈಲೋಕ್ಯಸ್ಯಾಪಿಪಾಲನಾತ । ಲಕ್ಷ್ಮಣಸ್ಯವಧೇನಾದ್ಯಜಗತ್ಸ್ವಸ್ಥಂಕುರುಷ್ವಹ॥೧೧॥ತೇಷಾಂತತ್ಸಮವೇತಾನಾಂವಾಕ್ಯಂಧರ್ಮಾಭಿಸಂಹಿತಂ । ಶ್ರುತ್ವಾಪರಿಷದೋಮಧ್ಯೇರಾಮೋಲಕ್ಷ್ಮಣಮಬ್ರವೀತ ॥೧೨॥ ವಿಸರ್ಜಯೇತ್ವಾಂಸೌಮಿತ್ರೇಮಾಭೂದ್ಧರ್ಮವಿಪರ್ಯಯಃ । ತ್ಯಾಗೋವಧೋವಾವಿಹಿತಃಸಾಧೂನಾಮುಭಯಂಸಮಂ ॥೧೩॥ ರಾಮೇಣಭಾಷಿತೇವಾಕ್ಯೇಬಾಷ್ಪವ್ಯಾಕುಲಲೋಚನಃ । ಲಕ್ಷ್ಮಣಸ್ತ್ವರಿತಂಪ್ರಾಯಾತ್ಸ್ವಗೃಹಂನವಿವೇಶಹ ॥೧೪॥ಸಗತ್ವಾಸರಯೂತೀರಮುಪಸ್ಪೃಶ್ಯಕೃತಾಂಜಲಿಃ। ನಿಗೃಹ್ಯಸರ್ವಸ್ರೋತಾಂಸಿನಿಶ್ವಾಸಂನಮುಮೋಚಹ ॥೧೫॥ಅನಿಶ್ವಸಂತಂಯುಕ್ತಂತಂಸಶಕ್ರಾಸ್ಸಾಪ್ಸರೋಗಣಾಃ।ದೇವಾಸ್ಸರ್ಷಿಗಣಾಸ್ಸರ್ವೇಪುಷ್ಪೈರಭ್ಯಕಿರಂಸ್ತದಾ ॥೧೬॥ಅದೃಶ್ಯಂಸರ್ವಮನುಜೈಸ್ಸಶರೀರಂಮಹಾಬಲಂ। ಪ್ರಗೃಹ್ಯಲಕ್ಷ್ಮ

---

ನಷ್ಟವಾಗುತಿರಲೀಕಾಗಿ, ಧರ್ಮೋಪಿ-ಧರ್ಮವೂಕೂಡ, ವಿಲಯಂ-ನಾಶವನ್ನು, ವ್ರಜೇತ್-ಹೊಂದುವದು ॥೯॥ ಧರ್ಮೇತು-ಧರ್ಮವಾದರೆ, ವಿನಷ್ಟೇಸತಿ-ನಷ್ಟವಾಗುತಿರಲೀಕಾಗಿ, ತತಃ-ಬಳಿಕ, ಸಚರಾಚರಂ - ಸ್ಥಾವರಜಂಗಮಗಳಿಂದೊಡಗೂಡಿದ, ಸದೇವರ್ಷಿಗಣಂ - ದೇವರ್ಷಿಗಳ ಗುಂಪುಗಳಿಂದೊಡಗೂಡಿದ, ಸರ್ವಂ-ಸಮಸ್ತವಾದ, ತ್ರೈಲೋಕ್ಯಂ-ಲೋಕತ್ರಯವು, ವಿನಶ್ಯೇತ್-ನಶಿಸಿಹೋಗುವದು, ಸಂಶಯಸ್ತು-ಸಂಶಯವಾದರೆ, ನ-ಇಲ್ಲಾ ॥೧೦॥ ಹೆ ಪುರುಷಶಾರ್ದೂಲ-ಎಲೈ ಪುರುಷವ್ಯಾಘ್ರನೆ, ಸತ್ವಂ-ಆ ಈ ನೀನು, ತ್ರೈಲೋಕ್ಯಸ್ಯ-ಮೂರುಲೋಕದ, ಪಾಲನಾತ್-ಪರಿಪಾಲನನಿಮಿತ್ತವಾಗಿ, ಅದ್ಯ-ಈಗ, ಲಕ್ಷ್ಮಣಸ್ಯ-ಲಕ್ಷ್ಮಣನ, ವಧೇನ-ವಧೆಯಿಂದ, ಜಗತ್-ಜಗತ್ತನ್ನು, ಸ್ವಸ್ಥಂ-ಸ್ವಾಸ್ಥ್ಯವುಳ್ಳದ್ದರನ್ನಾಗಿ, ಕುರುಷ್ವಹ-ಮಾಡು ॥೧೧॥ ತೇಷಾಂ-ಆ ಮಂತ್ರಿಗಳ, ತತ್ಸಮವೇತಾನಾಂಚ-ಆ ಮಂತ್ರಿಗಳಿಂದ ಕೂಡಿಕೊಂಡಿರುವರ, ಧರ್ಮಾಭಿಸಂಹಿತಂ-ಧರ್ಮಯುಕ್ತವಾದ, ವಾಕ್ಯಂ-ಮಾತನ್ನು, ಶ್ರುತ್ವಾ-ಕೇಳಿ, ಪರಿಷದಃ-ಸಭೆಯ, ಮಧ್ಯೇ-ಮಧ್ಯಭಾಗದಲ್ಲಿ, ರಾಮಃ-ಶ್ರೀರಾಮನು, ಲಕ್ಷ್ಮಣಂ-ಲಕ್ಷ್ಮಣಸ್ವಾಮಿಯನ್ನು ಕುರಿತು, ಅಬ್ರವೀತ್-ನುಡಿದನು ॥೧೨॥ ಹೆ ಸೌಮಿತ್ರೇ-ಎಲೈ ಲಕ್ಷ್ಮಣನೆ, ಧರ್ಮವಿಪರ್ಯಯಃ-ಧರ್ಮವ್ಯತ್ಯಾಸವು, ಮಾಭೂತ್-ಆಗಬೇಡ, ತ್ವಾಂ-ನಿನ್ನನ್ನು, ವಿಸರ್ಜಯೇ-ಬಿಟ್ಟಿಧೆನೆ, ಸಾಧೂನಾಂ-ಸತ್ಪುರುಷರಿಗೆ, ತ್ಯಾಗೋವಾ-ದೇಶತ್ಯಾಗವೆ ಆಗಲಿ, ವಧೋವಾ-ವಧೆಯೆ ಆಗಲಿ, ವಿಹಿತಃ-ಶಾಸ್ತ್ರದಿಂದ ಹೇಳಲ್ಪಟ್ಟಿಧೆ, ಉಭಯಂ-ಎರಡೂನು, ಸಮಂ-ಸಮವಾದ್ದು, ರಾಮೇಣ-ಶ್ರೀರಾಮನಿಂದ, ವಾಕ್ಯೇ-ಮಾತು, ಭಾಷಿತೇಸತಿ-ಹೇಳಲ್ಪಟ್ಟದ್ದಾಗುತಿರಲೀಕಾಗಿ, ಬಾಷ್ಪವ್ಯಾಕುಲಲೋಚನಃ-ಬಾಷ್ಪ-ಕಣ್ಣೀರಿಂದ, ವ್ಯಾಕುಲ-ತುಂಬಿದ, ಲೋಚನಃ-ನೇತ್ರಗಳುಳ್ಳವನಾಗಿ, ಲಕ್ಷ್ಮಣಃ-ಲಕ್ಷ್ಮಣನು, ತ್ವರಿತಂ-ಜಾಗ್ರತೆಯಾಗಿ, ಪ್ರಾಯಾತ್-ಹೊರಟನು, ಸ್ವಗೃಹಂ-ತನ್ನ ಮನೆಯನ್ನು ಕುರಿತು ನವಿವೇಶಹ-ಹೊಕ್ಕವನಲ್ಲಾ ॥೧೪॥ ಸಃ-ಆ ಲಕ್ಷ್ಮಣನು, ಸರಯೂತೀರಂ- ಸರಯೂನದೀತೀರವನ್ನು ಕುರಿತು, ಗತ್ವಾ- ಹೋಗಿ, ಉಪಸ್ಪೃಶ್ಯ - ಸ್ನಾನಮಾಡಿ, ಕೃತಾಂಜಲಿಃ- ಅಂಜಲಿಬದ್ಧನಾಗಿ, ಸರ್ವಸ್ರೋತಾಂಸಿ - ಸಮಸ್ತೇಂದ್ರಿಯಗಳನ್ನು, ನಿಗೃಹ್ಯ-ನಿಗ್ರಹಿಸಿ, ನಿಶ್ವಾಸಂ-ನಿಟ್ಟುಸುರರನ್ನು, ನಮುಮೋಚಹ-ಬಿಡಲಿಲ್ಲಾ ॥೧೫॥ ಅನಿಶ್ವಸಂತಂ-ನಿಶ್ವಾಸವನ್ನು ಬಿಡದಿರುವ, ಯುಕ್ತಂ-ಯೋಗನಿಷ್ಠನಾದ, ತಂ-ಆ ಲಕ್ಷ್ಮಣನನ್ನು, ಸಶಕ್ರಾಃ-ದೇವೇಂದ್ರನು ಸಹಿತರಾದ, ಸಾಪ್ಸರೋಗಣಾಃ-ಅಪ್ಸರಸ್ತ್ರೀಯರಗುಂಪಿನಿಂದೊಡಗೂಡಿದ, ಸರ್ವೇದೇವಾಃ-ಸಮಸ್ತದೇವತೆಗಳೂ, ಸರ್ಷಿಗಣಾಃ-ಋಷಿಗಳ ಗುಂಪುಗಳಿಂದೊಡಗೂಡಿದವರಾಗಿ, ತದಾ-ಆ ಕಾಲದಲ್ಲಿ, ಪುಷ್ಪೈಃ-ಹುವ್ವುಗಳಿಂದ, ಅಭ್ಯಕಿರನ್-ಸುರಿಸಿದರು ॥೧೬॥ ಸರ್ವಮನುಜೈಃ-ಸಮಸ್ತಮನುಷ್ಯರಿಂದಲೂ, ಅದೃಶ್ಯಂ-ಕಾಣಲ್ಪಡದೇ ಇರುವ, ಸಶರೀರಂ-ಶರೀರಸಹಿತನಾದ, ಲಕ್ಷ್ಮ

---

ಬಿಡುವಂಥಾವನಾಗು, ಪ್ರತಿಜ್ಞೆಯಂ ವ್ಯರ್ಥಮಾಡಬೇಡ, ನೀನು ನುಡಿದ ಪ್ರತಿಜ್ಞೆಯನ್ನು ಪಾಲಿಸದಿದ್ದರೆ ರಾಜ ಧರ್ಮವು ನಾಶವಾಗುವದು. ಧರ್ಮ ನಾಶವಾಗಲೂ ಚರಾಚರಾತ್ಮಕವಾಗಿಯೂ ದೇವ ತಂಡಗಳೂ ಋಷಿ ಸಮೂಹಗಳೂ ಉಳ್ಳದ್ದಾಗಿಯೂ ಇರುವ ಈ ಮೂಜಗಗಳು ನಾಶವಾಗುವವು. ಈ ವಿಷಯದಲ್ಲಿ ಸಂದೇಹವಿಲ್ಲ. ಎಲೈ ಪುರುಷಶ್ರೇಷ್ಠನಾದ ಶ್ರೀರಾಮನೇ ! ನೀನು ಲೋಕತ್ರಯುವಂ ಪಾಲಿಸುವದಕ್ಕೋಸುಗ ಲಕ್ಷ್ಮಣನಂ ಸಂಹರಿಸಿ, ಜಗವಂ ಸ್ವಸ್ಥಚಿತ್ತಮುಳ್ಳದ್ದನ್ನಾಗಿ ಮಾಡುವಂಥಾವನಾಗೆಂದು ಅವರೆಲ್ಲರು ಪೇಳಲೂ, ಧರ್ಮಯುಕ್ತವಾದ ಆ ವಾಕ್ಯಂ ಕೇಳಿ, ಶ್ರೀರಾಮನು ಲಕ್ಷ್ಮಣನಂ ಕುರಿತು, ಎಲೈ ತಮ್ಮನೆ ! ನಾನು ನಿನ್ನಂ ಪರಿತ್ಯಜಿಸುವೆನು, ಧರ್ಮನಾಶನವು ಉಂಟಾಗಬೇಡ, ಪರಿತ್ಯಾಗವು ಸಂಹಾರವು ಇವೆರಡು ಸಮಾನವಾಗಿರುವದೆಂದು ಸತ್ಪುರುಷರು ಪೇಳುತ್ತಿರುವರು ಎಂಬದಾಗಿ ನುಡಿದವನಾದನು. ಈಪರಿಯಾಗಿ ಶ್ರೀರಾಮನು ನಿರೂಪಿಸಿದವನಾಗಲು, ಲಕ್ಷ್ಮಣನು ಕಂಬನಿಗಳಿಂದ ತುಂಬಿದ ಕಣ್ಣುಗಳುಳ್ಳವನಾಗಿ, ತನ್ನ ಮನೆಯಂ ಪೊಕ್ಕ ತ್ವರೆಯಾಗಿ ಸರಯೂನದಿಯ ತೀರಕ್ಕೆ ಬಂದು ಆಚಮನಂಗೈದು, ಜಿತೇಂದ್ರಿಯನಾಗಿ, ನಿಟ್ಟುಸುರುಗಳಂ ಬಿಡುತ್ತಿದ್ದನು ॥೧೫॥ಬಹಳವಾಗಿ ನಿಟ್ಟುಸುರುಗಳಂ ಬಿಡುತ್ತಿರುವನಾಗಿಯೂ ಯೋಗನಿಷ್ಠನಾಗಿಯೂ ಇರುವ ಲಕ್ಷ್ಮಣನಂಕುರಿತು, ದೇವತೆಗಳು ಋಷಿಗಳು ಇವರೆಲ್ಲರು ಪುಷ್ಪವೃಷ್ಟಿಯಂ ಸುರಿಸಿದಂಥಾವರಾದರು, ಮನುಷ್ಯರಿಂದ ಕಾಣಲ್ಪಡದಿರುವನಾಗಿಯೂ, ಶರೀರಸಹಿತನಾಗಿಯೂ, ಮಹಾ ಬಲವಂತನಾಗಿಯೂ ಇರುವ ಲಕ್ಷ್ಮಣನನ್ನು ಇಂದ್ರನು ಅಪ್ಪಿಕೊಂಡು ಸ್ವರ್ಗವಂಪೊಕ್ಕನು॥೧೭॥ ಬಳಿಕ ದೇವತಾಶ್ರೇಷ್ಠರೆ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣಾಂಶಕ್ರೋದಿವಂಸಂಪ್ರವಿವೇಶಹ ॥೧೭॥ ತತೋವಿಷ್ಣೋಶ್ಚತುರ್ಭಾಗಮಾಗತಂಸುರಸತ್ತಮಾಃ । ದೃಷ್ಟ್ವಾಪ್ರಮುದಿತಾಸ್ಸರ್ವೇಪೂಜಯನ್ಸಮಹರ್ಷಯಃ॥೧೮॥ —॥ಇತಿಶ್ರೀಮದುತ್ತರರಾಮಾಯಣೇ ಷಡುತ್ತರಶತತಮಸ್ಸರ್ಗಃ॥—

ವಿಸೃಜ್ಯಲಕ್ಷ್ಮಣಂರಾಮೋದುಃಖಶೋಕಸಮನ್ವಿತಃ। ಪುರೋಧಸಂಮಂತ್ರಿಗಣಾನ್ನೈಗಮಾಂಶ್ಚೇದಮಬ್ರವೀತ್॥೧॥ ಅದ್ಯರಾಜ್ಯೇಭಿಷೇಕ್ಷ್ಯಾಮಿಭರತಂಧರ್ಮವತ್ಸಲಂ। ಅಯೋಧ್ಯಾಯಾಃಪತಿಂವೀರಂತತೋಯಾಸ್ಯಾಮ್ಯಹಂವನಂ ॥೨॥ ಪ್ರವೇಶಯತಸಂಭಾರಾನ್ಮಾಭೂತ್ಕಾಲಸ್ಯಪರ್ಯಯಃ। ಅದ್ಯೈವಾಹಂಗಮಿಷ್ಯಾಮಿಲಕ್ಷ್ಮಣೇನಗತಾಂಗತಿಂ॥೩॥ ತಚ್ಛ್ರುತ್ವಾರಾಘವೇಣೋಕ್ತಂಸರ್ವಾಃಪ್ರಕೃತಯೋಭೃಶಂ । ಮೂರ್ಧಭಿಃಪ್ರಣತಾಭೂಮೌಗತಸತ್ವಾ ಇವಾಭವನ್ ॥೪॥ ಭರತಶ್ಚವಿಸಂಜ್ಞೋಭೂಚ್ಛ್ರುತ್ವಾರಾಮಸ್ಯಭಾಷಿತಂ । ರಾಜ್ಯಂವಿಗರ್ಹಯಾಮಾಸರಾಘವಂಚೇದಮಬ್ರವೀತ್॥೫॥ ಸತ್ಯೇನಹಿಶಪೇರಾಜನ್ಸ್ವರ್ಗಲೋಕೇನಚೈವಹಿ । ನಕಾಮಯೇಹ್ಯಹಂರಾಜ್ಯಂತ್ವಾಂವಿನಾರಘುನಂದನ॥೬॥ ಇಮೌಕುಶಲವೌರಾಜನ್ನ

---

ಣಂ-ಲಕ್ಷ್ಮಣನನ್ನು, ಶಕ್ರಃ-ದೇವೇಂದ್ರನು, ಪ್ರಗೃಹ್ಯ-ಕೈಹಿಡಿದುಕೊಂಡು, ದಿವಂ-ಸ್ವರ್ಗವನ್ನು ಕುರಿತು, ಸಂಪ್ರವಿವೇಶಹ-ಹೊಕ್ಕನು॥೧೭॥ ತತಃ-ಬಳಿಕ, ಸುರಸತ್ತಮಾಃ-ದೇವತಾಶ್ರೇಷ್ಠರಾದ, ಸಮಹರ್ಷಯಃ-ಮಹರ್ಷಿಗಳಿಂದೊಡಗೂಡಿದ, ಸರ್ವೇ-ಸಮಸ್ತರೂನು, ವಿಷ್ಣೋಃ-ಶ್ರೀಮಹಾವಿಷ್ಣುವಿನ, ಚತುರ್ಭಾಗಂ-ಚತುರ್ಥಾಂಶರೂಪನಾದ ಲಕ್ಷ್ಮಣನನ್ನು, ಆಗತಂ-ಬಂದಂಥಾವನನ್ನಾಗಿ, ದೃಷ್ಟ್ವಾ-ಕಂಡು, ಪ್ರಮುದಿತಾಃ-ಸಂತೋಷಚಿತ್ತರಾಗಿ, ಪೂಜಯನ್-ಪೂಜೆಮಾಡಿದರು —॥ಇತಿ ಶ್ರೀಮದುತ್ತರರಾಮಾಯಣೇ ಷಡುತ್ತರಶತತಮಸ್ಸರ್ಗಃ॥—

ರಾಮಃ-ಶ್ರೀರಾಮನು, ಲಕ್ಷ್ಮಣಂ-ಲಕ್ಷ್ಮಣನನ್ನು, ವಿಸೃಜ್ಯ-ಬಿಟ್ಟು, ದುಃಖಶೋಕಸಮನ್ವಿತಃ-ಅಂತರ್ದುಃಖಬಾಹ್ಯದುಃಖಗಳೆರಡರಿಂದಲೂ, ಸಮನ್ವಿತಃ-ಕೂಡಿದವನಾಗಿ, ಪುರೋಧಸಂ-ಪುರೋಹಿತರಾದ ವಸಿಷ್ಠರನ್ನು, ನೈಗಮಾನ್-ವೇದಜ್ಞರಾದ, ಮಂತ್ರಿಗಣಾಂಶ್ಚ-ವಾಮದೇವಾದಿ ಮಂತ್ರಿಗಳ ಗುಂಪುಗಳನ್ನು ಕುರಿತು, ಇದಂ-ಈ ವಕ್ಷ್ಯಮಾಣವಚನವನ್ನು, ಅಬ್ರವೀತ್-ನುಡಿದನು ॥೧॥ ಅದ್ಯ-ಈಗ, ಧರ್ಮವತ್ಸಲಂ-ಧರ್ಮದಲ್ಲಿ ಶ್ರದ್ಧೆಯುಳ್ಳ, ವೀರಂ-ಶೂರನಾದ, ಭರತಂ-ಭರತನನ್ನು, ರಾಜ್ಯೇ-ರಾಜ್ಯದಲ್ಲಿ, ಅಯೋಧ್ಯಾಯಾಃ-ಅಯೋಧ್ಯಾಪಟ್ಟಣಕ್ಕೆ, ಪತಿಂ-ಪತಿಯನ್ನಾಗಿ, ಅಭಿಷೇಕ್ಷ್ಯಾಮಿ- ಅಭಿಷೇಕಮಾಡುವೆನು, ತತಃ-ಬಳಿಕ, ಅಹಂ-ನಾನು, ವನಂ-ವನವನ್ನು ಕುರಿತು, ಯಾಸ್ಯಾಮಿ-ಹೋಗುತ್ತೇನೆ॥೨॥ ಕಾಲಸ್ಯ-ಕಾಲದ, ವಿಪರ್ಯಯಃ-ವಿಳಂಬವು, ಮಾಭೂತ್-ಆಗಬೇಡ, ಅದ್ಯೈವ-ಈಗಲೆ, ಸಂಭಾರಾನ್-ಪಟ್ಟಾಭಿಷೇಕಸಾಮಗ್ರಿಗಳನ್ನು, ಪ್ರವೇಶಯತ-ಸಿದ್ಧಪಡಿಸಿರಿ, ಅಹಂ-ನಾನು, ಲಕ್ಷ್ಮಣೇನ-ಲಕ್ಷ್ಮಣನಿಂದ, ಗತಾಂ-ಹೊಂದಲ್ಪಟ್ಟ, ಗತಿಂ-ಗಮನವನ್ನು ಕುರಿತು, ಗಮಿಷ್ಯಾಮಿ-ಹೋಗುವೆನು ॥೩॥ ರಾಘವೇಣ-ಶ್ರೀರಾಮನಿಂದ, ಉಕ್ತಂ-ಹೇಳಲ್ಪಟ್ಟ, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಸರ್ವಾಃ-ಸಮಸ್ತರಾದ, ಪ್ರಕೃತಯಃ-ಮಂತ್ರಿಗಳು, ಮೂರ್ಧಭಿಃ-ಶಿರಸ್ಸುಗಳಿಂದ, ಭೂಮೌ-ನೆಲದಲ್ಲಿ, ಪ್ರಣತಾಃ-ನಮಸ್ಕರಿಸಲ್ಪಟ್ಟವರಾಗಿ, ಗತಸತ್ವಾಇವ-ಗತವಾದ ಪ್ರಾಣಗಳುಳ್ಳವರಂತೆ-ಅಭವನ್-ಆದರು ॥೪॥ ಭರತಶ್ಚ-ಭರತನೂ, ರಾಮಸ್ಯ-ಶ್ರೀರಾಮನ, ಭಾಷಿತಂ-ಮಾತನ್ನು, ಶ್ರುತ್ವಾ-ಕೇಳಿ, ವಿಸಂಜ್ಞಃ-ಪ್ರಜ್ಞೆತಪ್ಪಿದವನು, ಅಭವತ್-ಆದನು, ರಾಜ್ಯಂ-ರಾಜ್ಯವನ್ನು, ವಿಗರ್ಹಯಾಮಾಸ-ನಿಂದಿಸಿದನು, ರಾಘವಂಚ-ಶ್ರೀರಾಮನನ್ನು ಕುರಿತು, ಇದಂ-ಈ ಮಾತನ್ನು, ಅಬ್ರವೀಚ್ಚ-ನುಡಿದಲೂ ನುಡಿದನು ॥೫॥ ಹೆ ರಘುನಂದನ-ಎಲೈ ರಘುನಂದನನೆ, ಹೇರಾಜನ್-ಎಲೈ ರಾಜನೇ, ತ್ವಾಂವಿನಾ-ನಿನ್ನನ್ನು ಬಿಟ್ಟು, ಅಹಂ-ನಾನು, ರಾಜ್ಯಂ-ರಾಜ್ಯವನ್ನು, ನಕಾಮಯೆ, ಕೋರುವನಲ್ಲ, ಸ್ವರ್ಗಲೋಕೇನಚೈವಹಿ-ಸ್ವರ್ಗಲೋಕದಿಂದಲೂ ಕೂಡ, ಸುಖಂ-ಸುಖವನ್ನು, ನಕಾಮಯೆ-ಕೋರುವನಲ್ಲ, ಸತ್ಯೇನ-ಯಥಾರ್ಥದಿಂದ, ಶಪೇಹಿ- ಆಣೆಇಟ್ಟಿದ್ದೇನಷ್ಟೆ ॥೬॥ ಹೇರಾಜನ್-ಎಲೈ ರಾಜನೆ, ಹೆ ನರಾಧಿಪ-ಎಲೈ ಮನುಷ್ಯಾಧಿಪತಿಯೆ, ಇಮೌಕುಶಲವೌ-ಈ ಕುಶಲವರೆಂಬ ಇಬ್ಬರನ್ನು, ಅಭಿಷಿಂಚ-ಅಭಿಷೇಕಮಾಡು, ವೀರಂ-ಶೂರನಾದ, ಕುಶಂ-ಕುಶನನ್ನು, ಕೋಸಲೇಷು-ಕೋಸಲದೇಶಗಳಲ್ಲಿ, ಅಭಿಷಿಂಚ-ಪಟ್ಟಾಭಿಷೇಕಮಾಡು, ತದಾ-ಹಾ

---

ಲ್ಲರು ಮಹರ್ಷಿಗಳು ಇವರೆಲ್ಲರು ಸಂಪ್ರಾಪ್ತವಾದ ಶ್ರೀಮನ್ನಾರಾಯಣನ ಚತುರ್ಥಾಂಶವಂ ಕಂಡು ಕಡುಸಂತೋಷವುಳ್ಳವರಾಗಿ ಎಲ್ಲರು ಪೂಜಿಸಿದಂಥಾವರಾದರು॥೧೮॥—*ರಾಮಾಯಣದಲ್ಲಿನ ೧೦೬ ನೆಯ ಸರ್ಗಂಮುಗಿದುದು*—

ಶ್ರೀರಾಮನು ಲಕ್ಷ್ಮಣನಂ ಪರಿತ್ಯಜಿಸಿ, ಅಂತಸ್ತಾಪದಿಂದ ಬಹಿಃವ್ಯಸನದಿಂದಲೂ ಒಡಗೂಡಿದವನಾಗಿ, ಪುರೋಹಿತನಾದ ವಸಿಷ್ಠಮುನಿಯನ್ನೂ ಮಂತ್ರಿಗಳನ್ನೂ ಪಟ್ಟಣಸ್ಥರನ್ನೂ ಸಹ ಕುರಿತು ಆಗ ಪೇಳುವನದೆಂತೆನೆ,— ಎಲೈ ಜನಗಳಿರಾ! ಧರ್ಮದಲ್ಲಿ ಬಲುವಾತ್ಸಲ್ಯವುಳ್ಳ ಭರತನಂ ಅಯೋಧ್ಯಾಪುರಿಗೆ ಅಧಿಪತಿಯನ್ನಾಗಿ ರಾಜ್ಯದೊಳು ಪಟ್ಟಾಭಿಷೇಕವಂ ಮಾಡಿಸಿ, ಬಳಿಕ ನಾನು ಅರಣ್ಯವಂ ಪೊಕ್ಕುವೆನು, ತ್ವರೆಯಾಗಿ ಪದಾರ್ಥಗಳಂ ತೆಗದುಕೊಂಡು ಬನ್ನಿರಿ ನಾವಕಾಶಂ ಮಾಡಬ್ಯಾಡಿರಿ. ಲಕ್ಷ್ಮಣನು ಪಡದ ಗತಿಯನ್ನೀಗಲೇ ಹೊಂದುವೆನು ಎಂಬದಾಗಿ ಶ್ರೀರಾಮನಿಂದ ಪೇಳಲ್ಪಟ್ಟ ವಾಕ್ಯವಂ ಕೇಳಿ, ಜನರೆಲ್ಲರು ಬಹಳವಾಗಿ ನಮಸ್ಕಾರವಂ ಮಾಡಿ, ಗತವಾದ ಪ್ರಾಣವುಳ್ಳವರಂತೆ ನೆಲದಲ್ಲಿ ಬಿದ್ದಂಥಾವರಾದರು ॥೪॥ ಆಗ ಭರತನೂಕೂಡ ಶ್ರೀರಾಮನಮಾತಂಕೇಳಿ ರಾಜ್ಯವನ್ನಿರಿಸಿ ಶ್ರೀರಾಮನಂಕುರಿತು ಎಲೈ ಮಹಾ ಭುಜಪರಾಕ್ರಮಿಯಾದ ಒಡೆಯನೆ! ನಾನು ನಿನ್ನ ವಿನಹಾ ರಾಜ್ಯವಂ ಸತ್ಯವಾಗಿಯೂ, ಸ್ವರ್ಗಲೋಕದ ಸಾಕ್ಷಿಯಾಗಿಯೂ, ಬಯಿಸುವದಿಲ್ಲ. ಎಲೈ ರಾಜೋತ್ತಮನೆ! ಈ ಬಾಲಕರಾದ ಕುಶಲವರೀರ್ವರಂ ರಾಜ್ಯ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಭಿಷಿಂಚ ನರಾಧಿಪ । ಕೋಸಲೇಷು ಕುಶಂ ವೀರಮುತ್ತರೇಷು ತಥಾ ಲವಮ್ ॥೭॥ ಶತ್ರುಘ್ನಸ್ಯ ತು ಗಚ್ಛಂತು ದೂತಾಸ್ತ್ವರಿತವಿಕ್ರಮಾಃ। ಇದಂ ಗಮನಮಸ್ಮಾಕಂ ಸ್ವರ್ಗಾಯಾಖ್ಯಾಂತು ಮಾಚಿರಮ್ ॥೮॥ ತಚ್ಛ್ರುತ್ವಾ ಭರತೇನೋಕ್ತಂ ದೃಷ್ಟ್ವಾ ಚಾಪಿ ಹ್ಯಧೋಮುಖಾನ್ । ಪೌರಾನ್ ಶೋಕೇನ ಸಂತಪ್ತಾನ್ ವಸಿಷ್ಠೋ ವಾಕ್ಯಮಬ್ರವೀತ್ ॥ ೯ ॥ ವತ್ಸ ರಾಮ ಇಮಾಃ ಪಶ್ಯ ಧರಣೀಂ ಪ್ರಕೃತೀರ್ಗತಾಃ । ಜ್ಞಾತ್ವೈಷಾಮೀಪ್ಸಿತಂ ಕಾರ್ಯಂ ಮಾ ಚೈಷಾಂ ವಿಪ್ರಿಯಂ ಕೃಥಾಃ ॥೧೦॥ ವಸಿಷ್ಠಸ್ಯ ತು ವಾಕ್ಯೇನ ಉತ್ಥಾಪ್ಯ ಪ್ರಕೃತೀಜನಮ್ । ಕಿಂ ಕರೋಮೀತಿ ಕಾಕುತ್ಸ್ಥಃ ಸರ್ವಾನ್ ವಚನಮಬ್ರವೀತ್॥೧೧॥ ತತಸ್ಸರ್ವಾಃ ಪ್ರಕೃತಯೋ ರಾಮಂ ವಚನಮಬ್ರುವನ್ । ಗಚ್ಛಂತಮನುಗಚ್ಛಾಮೋ ಯತೋ ರಾಮ ಗಮಿಷ್ಯಸಿ ॥೧೨॥ ಏಷ ನಃ ಪರಮಾ ಪ್ರೀತಿರೇಷ ಧರ್ಮಃ ಪರೋ ಮತಃ । ಹೃದ್ಗತಾ ನಸ್ಸದಾ ತುಷ್ಟಿಸ್ತವಾನುಗಮನೇ ದೃಢಾ ॥೧೩॥ ಪೌರೇಷು ಯದಿ ತೇ ಪ್ರೀತಿರ್ಯದಿ ಸ್ನೇಹೋ ಹ್ಯನುತ್ತಮಃ। ಸಪುತ್ರದಾರಾಃ ಕಾಕುತ್ಸ್ಥ ಸಮಂ ಗಚ್ಛಾಮ ಸತ್ವರಾಃ॥೧೪॥ ತಪೋವನಂ ವಾ ದುರ್ಗಂ ವಾ ನದೀಮಂಭೋನಿಧಿಂ ತಥಾ। ವಯಂ

---

ಗೆಯೂ, ಉತ್ತರೇಷು-ಉತ್ತರಕೋಸಲ ದೇಶಗಳಲ್ಲಿ, ಲವಂ-ಲವನೆಂಬ ಮಗನನ್ನು, ಅಭಿಷಿಂಚ-ಪಟ್ಟಾಭಿಷೇಕಮಾಡು ॥೭॥ ಶತ್ರುಘ್ನಸ್ಯ ತು- ಶತ್ರುಘ್ನ ನಿಗೂ ಕೂಡ, ತ್ವರಿತವಿಕ್ರಮಾಃ-ಶೀಘ್ರಗಾಮಿಗಳಾದ, ದೂತಾಃ-ದೂತರು, ಗಚ್ಛಂತು-ಹೋಗಲಿ, ಅಸ್ಮಾಕಂ-ನಮ್ಮ, ಸ್ವರ್ಗಾಯ-ಸ್ವರ್ಗಕ್ಕೋಸ್ಕರ, ಇದಂ ಗಮನಂ-ಈ ಗಮನವನ್ನು, ಆಖ್ಯಾಂತು-ಹೇಳಲಿ, ಚಿರಂ-ಸಾವಕಾಶವು, ಮಾಸ್ತು-ಆಗಬ್ಯಾಡ ॥೮॥ ಭರತೇನ-ಭರತನಿಂದ, ಉಕ್ತಂ-ಹೇಳಲ್ಪಟ್ಟ, ತತ್-ಆ ಮಾತನ್ನು, ಶ್ರುತ್ವಾ-ಕೇಳಿ, ಅಧೋಮುಖಾನ್-ತಲೆಬೊಗ್ಗಿಸಿಕೊಂಡಿರುವ, ಶೋಕೇನ-ಶೋಕದಿಂದ, ಸಂತಪ್ತಾನ್-ಪರಿತಪಿಸುತಿರುವ, ಪೌರಾನ್ ಅಪಿ-ಪಟ್ಟಣಸ್ಥರನ್ನೂ ಕೂಡ, ದೃಷ್ಟ್ವಾ-ಕಂಡು, ವಸಿಷ್ಠಃ-ವಸಿಷ್ಠರು, ವಾಕ್ಯಂ-ಮಾತನ್ನು, ಅಬ್ರವೀತ್-ನುಡಿದನು ॥೯॥ ಹೇವತ್ಸ - ಎಲೈವತ್ಸನೆ, ಹೇರಾಮ-ಎಲೈ ಶ್ರೀರಾಮನೆ, ಧರಣೀಂ-ನೆಲವನ್ನು, ಗತಾಃ-ಹೊಂದಿರುವ, ಇಮಾಃ ಪ್ರಕೃತೀಃ-ಈ ಮಂತ್ರಿಗಳನ್ನು, ಪಶ್ಯ- ನೋಡು, ಏಷಾಂ-ಇವರಿಗೆ, ಈಪ್ಸಿತಂ-ಇಷ್ಟವಾದ, ಕಾರ್ಯಂ-ಕಾರ್ಯವನ್ನು, ಜ್ಞಾತ್ವಾ-ತಿಳಿದು, ಏಷಾಂ-ಈ ಮಂತ್ರಿಗಳಿಗೆ, ವಿಪ್ರಿಯಂ-ಅಪ್ರಿಯವನ್ನು, ಮಾಕೃಥಾಃ-ಮಾಡಬ್ಯಾಡ (ಅಥವಾ-ಜ್ಞಾತ್ವಾ-ತಿಳಿದು, ಏಷಾಂ-ಈ ಮಂತ್ರಿಗಳ, ಈಪ್ಸಿತಂ-ಇಷ್ಟವು, ಕಾರ್ಯಂ-ಮಾಡತಕ್ಕದ್ದು, ಏಷಾಂ-ಇವರಿಗೆ, ವಿಪ್ರಿಯಂ-ಅಪ್ರಿಯವನ್ನು, ಮಾಕೃಥಾಃ-ಮಾಡಬ್ಯಾಡ) ॥೧೦॥ ವಸಿಷ್ಠಸ್ಯ-ವಸಿಷ್ಠ ಋಷಿಯ, ವಾಕ್ಯೇನ ತು-ವಾಕ್ಯದಿಂದಲಾದರೆ, ಪ್ರಕೃತೀಜನಂ- ಮಂತ್ರಿಜನವನ್ನು, ಉತ್ಥಾಪ್ಯ-ಮೇಲಕ್ಕೆ ಯಬ್ಬಿಸಿ, ಸರ್ವಾನ್-ಸಮಸ್ತರನ್ನು ಕುರಿತು, ಕಿಂಕರೋಮೀತಿ - ಏನು ಮಾಡಲೀ ಎಂದು, ವಚನಂ-ಮಾತನ್ನು, ಅಬ್ರವೀತ್-ನುಡಿದನು ॥೧೧॥ ತತಃ-ಬಳಿಕ, ಸರ್ವಾಃ-ಸಮಸ್ತರಾದ, ಪ್ರಕೃತಯಃ-ಮಂತ್ರಿಗಳು, ರಾಮಂ-ಶ್ರೀರಾಮನನ್ನು ಕುರಿತು, ವಚನಂ - ಮಾತನ್ನು, ಅಬ್ರುವನ್-ನುಡಿದರು, ಹೇರಾಮ-ಎಲೈ ಶ್ರೀರಾಮನೆ, ತ್ವಂ-ನೀನು, ಯತಃ-ಯಾವ ಸ್ಥಳದಲ್ಲಿ, ಗಮಿಷ್ಯಸಿ-ಹೋಗುವಿಯೊ, ತತ್ರ-ಆ ಸ್ಥಳದಲ್ಲಿ, ಗಚ್ಛಂತಂ-ಹೋಗುತಿರುವ ನಿನ್ನನ್ನು, ಅನುಗಚ್ಛಾಮಃ-ಅನುಸರಿಸಿ ಬರುತ್ತೇವೆ, ॥೧೨॥ ಏಷಃ-ಇದು, ನಃ-ನಮಗೆ, ಪರಮಾ-ಬಹಳವಾದ, ಪ್ರೀತಿಃ-ವಿಶ್ವಾಸವು, ಏಷಃ-ಇದು, ಪರೋಧರ್ಮಃ-ಉತ್ಕೃಷ್ಟವಾದ ಧರ್ಮವಾಗಿ, ಮತಃ-ಸಮ್ಮತವಾಗಿದೆ, ಸದಾ-ನಿರಂತರವು, ಹೃದ್ಗತಾ- ಮನಸ್ಸಿನಲ್ಲಿರುವ, ತುಷ್ಟಿಃ-ಸಂತೋಷವು, ತವ-ನಿನ್ನ, ಅನುಗಮನೆ, ಹಿಂದೆಬರುವಿಕೆಯಲ್ಲಿ, ದೃಢಾ-ನಿಶ್ಚಲವಾಗಿದೆ ॥೧೩॥ ಹೇ ಕಾಕುತ್ಸ್ಥ-ಎಲೈ ಕಾಕುತ್ಸ್ಥನೆ, ತೇ-ನಿನಗೆ, ಪೌರೇಷು-ಪಟ್ಟಣಸ್ಥರಲ್ಲಿ, ಪ್ರೀತಿಃ-ವಿಶ್ವಾಸವು, ಅಸ್ತಿಯದಿ- ಇದ್ದದ್ದೇ ಹುಂಟಾದರೆ, ಸ್ನೇಹಃ-ಸ್ನೇಹವು, ಅನುತ್ತಮೋಯದಿ -ಸರ್ವೋತ್ತಮವಾಗಿದ್ದದ್ದೇ ಹುಂಟಾದರೆ, ಸಪುತ್ರದಾರಾಃ-ಮಕ್ಕಳು ಹೆಂಡತಿಯರಿಂದೊಡಗೂಡಿದವರಾಗಿ, ಸತ್ವರಾಃ-ತ್ವರೆಯುಳ್ಳವರಾಗಿ, ಸಮಾಗಚ್ಛಾಮಃ-ಬರುತ್ತೇವೆ ॥೧೪॥ ತಪೋವನಂವಾ - ತಪೋವನವನ್ನು ಕುರಿತಾಗಲಿ, ದುರ್ಗಂವಾ-ದುರ್ಗಸ್ಥಾನವನ್ನೇ ಆಗಲಿ, ನದೀಂವಾ-ನದಿಯನ್ನೇ ಆಗಲೀ, ತಥಾ-ಹಾಗೆಯೆ,

---

ದೊಳು ಪಟ್ಟಾಭಿಷೇಕವಂ ಮಾಡಿಸಿ, ಕೋಸಲದೇಶದಲ್ಲಿ ವೀರನಾದ ಕುಶನನ್ನೂ, ಉತ್ತರದೇಶಗಳಲ್ಲಿ ಲವನನ್ನೂ ಇರಿಸುವಂಥಾವನಾಗು ॥೭॥ ತ್ವರೆಯಾಗಿ ಪೋಗುತ್ತಿರುವ ದೂತರುಗಳು ಶತ್ರುಘ್ನನ ಸಮೀಪಕ್ಕೆ ತೆರಳಿ, ಈ ನಮ್ಮಗಳ ಸ್ವರ್ಗಪ್ರಯಾಣವನ್ನು ತ್ವರೆಯಾಗಿ ಪೇಳಲಿ ಎಂಬದಾಗಿ ನುಡಿದವನಾಗಲೂ, ಆ ವಾಕ್ಯವಂ ಕೇಳಿ ವಸಿಷ್ಠಮುನಿಯು ಮಂಡೆಯಂ ಬೊಗ್ಗಿಸಿಕೊಂಡಿರುವ ಮತ್ತೂ ಮಹಾ ದುಃಖಿತರಾಗಿರುವ ಎಲ್ಲರಂ ಕಂಡು, ಶ್ರೀರಾಮನಂ ಕುರಿತು, ಎಲೈ ಶ್ರೀರಾಮನೆ! ನೆಲದಲ್ಲಿ ಬಿದ್ದಿರುವ ಈ ಜನಗಳಂ ನೋಡುವಂಥಾವನಾಗು, ಇವರುಗಳಿಗೆ ಇಷ್ಟವಿಲ್ಲದಿರುವ ಕಾರ್ಯವಂಗೈಯಬೇಡ ಎಂಬದಾಗಿ ನುಡಿದವನಾದನು ॥೧೦॥ ಆಗ ಶ್ರೀರಾಮನಾದರೆ ವಸಿಷ್ಠಮುನಿಯ ವಾಕ್ಯದಿಂ ಜನಗಳನ್ನೆಲ್ಲ ಎಬ್ಬಿಸಿದಂಥಾವನಾಗಿ, ಎಲೈ ಪ್ರಜೆಗಳಿರಾ ! ಈಗ ಯಾವ ಕಾರ್ಯವಂ ಮಾಡಲಿ ಎಂಬದಾಗಿ ನುಡಿದವನಾಗಲೂ, ಬಳಿಕ ಎಲ್ಲಾ ಜನಗಳು ಶ್ರೀರಾಮನಂ ಕುರಿತು, ಎಲೈ ಶ್ರೀರಾಮನೆ! ನೀನೆಲ್ಲಿ ಪೋಗುವಿಯೋ ಅಲ್ಲಿ ನಾವೆಲ್ಲರು ಬರುವೆವು, ಇದು ನಮಿಗೆ ಬಹಳ ಇಷ್ಟವಾಗಿಯೂ ಧರ್ಮವಾಗಿಯೂ ಇರುವದು, ನಿನ್ನ ಸಂಗಡಲೇ ಬರಬೇಕೆಂದು ನಮ್ಮ ಮನದಲ್ಲಿದೆ ಪುರವಾಸಿಗಳಾದ ನಮ್ಮಲ್ಲಿ ನಿನಿಗೆ ವಿಶ್ವಾಸವು, ಸ್ನೇಹವು, ಇದ್ದದ್ದಾದರೆ ಪತ್ನಿಗಳಿಂದಲೂ ಸುತರಿಂದಲೂ ಕೂಡಗೂಡಿ ತ್ವರೆಯಾಗಿ ಬರುವೆವು. ತಪೋವನವನ್ನಾಗಲೀ, ದುರ್ಗವನ್ನಾಗಲೀ, ನದಿಯನ್ನಾಗಲೀ, ಕಡಲನ್ನಾಗಲೀ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಟಯದಿನತ್ಯಾಜ್ಯಾಸ್ಸರ್ವಾನ್ನೋನಯಈಶ್ವರ ॥೧೫॥ ಏವಂವಿನಿಶ್ಚಯಂಕೃತ್ವಾಕೃತಾಂತಂಚಾನ್ವವೇಕ್ಷ್ಯಚ । ಪೌರಾಣಾಂದೃಢಭಕ್ತಿಂಚಬಾಢಮಿತ್ಯೇವಮಬ್ರವೀತ್॥೧೬॥ ಏವಂವಿನಿಶ್ಚಯಂಕೃತ್ವಾ ತಸ್ಮಿನ್ನಹನಿರಾಘವಃ । ಸುತೌಪ್ರಸ್ಥಾಪಯಾಮಾಸಧರ್ಮಿಷ್ಠೌ ಧರ್ಮವತ್ಸಲಃ ॥೧೭॥ ಕೋಸಲೇಷುಕುಶಂವೀರಮುತ್ತರೇಷುತಥಾಲವಂ । ಅಭ್ಯಷಿಂಚನ್ಮಹಾಬಾಹುರುಭಾವೇಚಕುಶೀಲವೌ ॥೧೮॥ ಅಭಿಷಿಚ್ಯಸುತೌವೀರೌಸುಪ್ರತಿಷ್ಠಾಪ್ಯವೈಪುರೇ । ಪುನಸ್ಸಮೀಕ್ಷ್ಯಸೀತಾಯಾರಾಘವಃಸ್ಮರಣಂಗತಃ ॥೧೯॥ ಪರಿಷ್ವಜ್ಯಮಹಾಬಾಹುರ್ಮೂರ್ಧ್ನ್ಯುಪಾಘ್ರಾಯಚಾಸಕೃತ್ । ರಥಾಯುತಸಹಸ್ರಾಣಿತ್ರೀಣಿನಾಗಾಯುತಾನಿಚ ॥೨೦॥ ದಶಾಯುತಸಹಸ್ರಾಣಿಚಾಶ್ವಾನಾಂಸಾಶ್ವರೋಹಿಣಾಂ । ಸುವರ್ಣಭಾರಾಂಶ್ಚಬಹೂನ್ರೂಪ್ಯಭಾರಶತಾನಿಚ ॥೨೧॥ ರತ್ನೌಘಾನ್ವಿವಿಧಾಂಶ್ಚಾಪ್ಯೇಕೈಕಸ್ಯಧನಂದದೌ ॥೨೨॥ ಬಹುರತ್ನೌಬಹುಧನೌಹೃಷ್ಟಪುಷ್ಟಜ

---

ಅಂಭೋನಿಧಿಂವಾ – ಕಡಲಿನನ್ನು ಕುರಿತೇಗಲೀ,ಹೆ ಈಶ್ವರ–ಎಲೈ ಸ್ವಾಮಿಯೆ, ವಯಂಚ–ನಾವೂನು, ನತ್ಯಾಜ್ಯಾಯದಿ, ಪರಿತ್ಯಾಗಕ್ಕೆ ಅರ್ಹರಾಗದೆಹೋದರೆ, ಸರ್ವಾನ್–ಸಮಸ್ತರಾದ, ನಃ–ನಮ್ಮಗಳನ್ನು, ನಯ -ಕರೆದುಕೊಂಡುಹೋಗು ॥೧೫॥ ಸಃ–ಆ ಶ್ರೀರಾಮನು, ತೇಷಾಂ–ಆ, ಪೌರಾಣಾಂ–ಪಟ್ಟಣಸ್ಥರ, ನಿಶ್ಚಯಂ–ನಿಶ್ಚಯವನ್ನು, ಜ್ಞಾತ್ವಾ–ತಿಳಿದು, ಕೃತಾಂತಂಚ–ಯಮನನ್ನೂ ಕೂಡ, ಅನ್ವವೇಕ್ಷ್ಯ–ನೋಡಿ, ದೃಢಭಕ್ತಿಂಚ – ದೃಢವಾಗಿರುವಭಕ್ತಿಯನ್ನು, ಅವೇಕ್ಷ್ಯ–ಕಂಡು, ಬಾಢಮಿತಿ–ಹಾಗೆ ಆಗಲೀಯೆಂದು, ಏವಂ–ಈಪರಿಯಾಗಿ, ಅಬ್ರವೀತ್–ನುಡಿದನು ॥೧೬॥ ಧರ್ಮವತ್ಸಲಃ–ಸ್ವಧರ್ಮದಲ್ಲಿ ಅಭಿಮಾನಶಾಲಿಯಾದ, ರಾಘವಃ –ಶ್ರೀರಾಮನು, ಏವಂ–ಈ ಪರಿಯಾಗಿ,ವಿನಿಶ್ಚಯಂ–ನಿಶ್ಚಯವನ್ನು,ಕೃತ್ವಾ–ಮಾಡಿ, ತಸ್ಮಿಂನಹನಿ–ಆ ದೇದಿವಸದಲ್ಲಿ, ಧರ್ಮಿಷ್ಠೌ – ಧರ್ಮಿಷ್ಠರಾದ, ಸುತೌ–ಕೊಮಾರರನ್ನು, ಪ್ರಸ್ಥಾಪಯಾಮಾಸ–ಕಳುಹಿಸಿಕೊಟ್ಟನು॥೧೭॥ ಮಹಾಬಾಹುಃ–ಮಹಾಭುಜಪರಾಕ್ರಮ ಶಾಲಿಯಾದ ಶ್ರೀರಾಮನು, ವೀರಂ–ಶೂರನಾದ, ಕುಶಂ–ಕುಶನನ್ನು, ಕೋಸಲೇಷು – ಕೋಸಲದೇಶದಲ್ಲಿಯೂನು, ತಥಾ – ಹಾಗೆಯೇ, ಲವಂ–ಲವನನನ್ನು, ಉತ್ತರೇಷು–ಉತ್ತರದೇಶಗಳಲ್ಲಿಯೂ,ಕುಶೀಲವೌ–ಗಾಯಕರಾದ, ಉಭಾವೇಚ–ಇಬ್ಬರನ್ನೂ ಕೂಡಲೇ,ಅಭ್ಯಷಿಂಚತ್–ಪಟ್ಟಾಭಿಷೇಕ ಮಾಡಿದನು ॥ ೧೮ ॥ ಸರಾಘವಃ–ಆ ಶ್ರೀರಾಮನು, ವೀರೌ–ಶೂರರಾದ, ತೌ–ಆ ಕುಶಲವರನ್ನು; ಪುರೇ–ಪಟ್ಟಣದಲ್ಲಿ, ಅಭಿಷಿಚ್ಯ–ಅಭಿಷೇಕಮಾಡಿ, ಪುರೇ–ಅಯೋಧ್ಯಾಪಟ್ಟಣದಲ್ಲಿ, ಸುಪ್ರತಿಷ್ಠಾಪ್ಯ– ಸುಖವಾಗಿಯಿರಿಸಿ, ಪುನಃ–ಮತ್ತೂ, ಸಮೀಕ್ಷ್ಯ–ನೋಡಿ, ಸೀತಾಯಾಃ–ಸೀತಾದೇವಿಯ, ಸ್ಮರಣಂ–ಸ್ಮರಣವನ್ನು, ಗತಃ–ಹೊಂದಿದನು॥೧೯॥ಮಹಾಬಾಹುಃ–ಮಹಾ ಭುಜಪರಾಕ್ರಮಶಾಲಿಯಾದ ಶ್ರೀರಾಮನು, ಪರಿಷ್ವಜ್ಯ– ಅಪ್ಪಿಕೊಂಡುಮೂರ್ಧ್ನಿ–ಶಿರಸ್ಸಿನಲ್ಲಿ, ಅಸಕೃತ್–ಬಾರಿಬಾರಿಗೂ, ಉಪಾಘ್ರಾಯ–ಆಘ್ರಾಣವನ್ನೂ ಮಾಡಿ,ತಥಾ–ಹಾಗೆಯೆ, ರಥಾಯುತಸಹಸ್ರಾಣಿ, ಅನೇಕಲಕ್ಷ ರಥಗಳನ್ನು, ತ್ರೀಣಿ–ಮೂರಾದ,ನಾಗಾಯುತಾನಿಚ–ಮುವ್ವತ್ತುಸಾವಿರಾನೆಗಳನ್ನು, ಸಾಶ್ವರೋಹಿಣಾಂ–ಕುದುರೆಸವಾರಿರಗಳಿಂದೊಡಗೂಡಿದ,ಅಶ್ವಾನಾಂ–ಕುದುರೆಗಳ, ದಶಾಯುತಸಹಸ್ರಾಣಿ–ಲಕ್ಷೋಪಲಕ್ಷಗಳನ್ನು, ಬಹೂನ್–ಅನೇಕಗಳಾದ, ಸುವರ್ಣಭಾರಾನ್–ಅನೇಕಹಿರಣ್ಯದ ಭಾರಗಳನ್ನು, ರೂಪ್ಯಭಾರಶತಾನಿಚ–ರೂಪಾಯಿಗಳ ನೂರಾರುಭಾರಗಳನ್ನು, ವಿವಿಧಾಂಶ್ಚ–ನಾನಾವಿಧಗಳಾದ, ರತ್ನೌಘಾನಪಿ–ರತ್ನರಾಶಿಗಳನ್ನೂ, ಏಕೈಕಸ್ಯ–ಒಬ್ಬೊಬ್ಬನಿಗೆ,ಧನಂ–ಧನವನ್ನು,ದದೌ–ಕೊಟ್ಟನು ॥೨೦ ॥ ಬಹುರತ್ನೌ–ಅನೇಕರತ್ನಗಳುಳ್ಳ, ಬಹುಧನೌ–ಬಹಳಧನವಂತನಾದ,ಹೃಷ್ಟಪುಷ್ಟಜನಾವೃತೌ–ಹೃಷ್ಟ–ಹರ್ಷಯುಕ್ತರಾದ, ಪುಷ್ಟ –ಪೋಷಣಯುಕ್ತರಾದ, ಜನ–ಜನರಿಂದ, ಆವೃತೌ–ಪರಿವೃತರಾದ,ಕುಶಲವರನ್ನು–ಅಭಿಷಿಚ್ಯ–ಪಟ್ಟಾಭಿಷೇಕಮಾಡಿ, ತತಃ–ಬಳಿಕ, ತದಾ–ಹಾಗೆಯೆ,ಸ್ವೇ–ಸ್ವಕೀಯ್ಯವಾದ, ಪುರೇ–ಪಟ್ಟಣದಲ್ಲಿ, ಪ್ರಸ್ಥಾಪ್ಯ–ಕಳುಹಿಸಿಕೊಟ್ಟು ( ಅಥವಾ- ಪ್ರಸ್ಥಾಪ್ಯ–ಸ್ಥಾಪನೆಮಾಡಿ,

---

ಯಾವದನ್ನು ನೀವು ಇಚ್ಛಿಸುವಿಯೋ, ಅದಂ ಕುರಿತು ನಮ್ಮನ್ನು ಕರೆದುಕೊಂಡು ಪೋಗುವಂಥಾವನಾಗು ಎಂಬದಾಗಿ ನುಡಿದವರಾಗಲೂ, ಶ್ರೀರಾಮನು ಅವರುಗಳ ನಿಶ್ಚಯವನ್ನರಿತು ಯಮನಂ ಪಟ್ಟಣಸ್ಥರ ಭಕ್ತಿಯನ್ನೂ ಸಹ ನೋಡಿ ಹಾಗೆಯೇ ಆಗಲೆಂದು ಪೇಳಿದಂಥಾವನಾದನು ॥ ೧೬ ॥ ಈಪರಿಯಾಗಿ ಶ್ರೀರಾಮನು ಆ ದಿನದಲ್ಲಿ ನಿಶ್ಚಯಿಸಿ,ಮಕ್ಕಳಾದ ಕುಶಲವರೀರ್ವರಂ ಕಳುಹಿಸಿಕೊಟ್ಟು, ಕೋಸಲದೇಶದಲ್ಲಿ ಕುಶನನ್ನೂ, ಹಾಗೆಯೆ ಉತ್ತರ ಕೋಸಲವೆಂಬ ದೇಶದಲ್ಲಿ ಲವನನ್ನೂ ಪಟ್ಟಾಭಿಷೇಕವಂ ಮಾಡಿಸಿ, ಅವರೀರ್ವರಿಗು ಎರಡು ಪುರಗಳಂ ಕಟ್ಟಿಸಿ, ಪುನಃ ಸೀತಾದೇವಿಯಂ ಜ್ಞಾಪಿಸಿಗೊಂಡು, ತನ್ನ ಮಕ್ಕಳಾದ ಕುಶಲವರೀರ್ವರಂ ಅಪ್ಪಿಕೊಂಡು, ಮಂಡೆಯೊಳ್ ಮೂಶಿನೋಡಿ,ಒಬ್ಬೊಬ್ಬನಿಗೆ ಮೂರು ಕೋಟಿ ಆನೆಗಳನ್ನೂ, ಹತ್ತು ಕೋಟಿ ಕುದುರೆಗಳನ್ನೂ, ಬಹಳವಾದ ಸುವರ್ಣದ ನಾಣ್ಯವನ್ನೂ ಅನೇಕವಾದ ಬೆಳ್ಳಿಯ ನಾಣ್ಯಗಳನ್ನೂ ಉತ್ತಮವಾದ ಮುತ್ತೂ ವಿಧವಿಧವಾದ ರತ್ನ ತಂಡಗಳನ್ನು ಕೊಟ್ಟು, ಅನೇಕ ರತ್ನಗಳುಳ್ಳವರಾಗಿಯೂ ಬಹುಧನವಂತರಾಗಿಯೂ, ಹೃಷ್ಟರಾಗಿಯೂ ಇರುವ ಜನರಿಂದೊಡಗೂಡಿದವರಾಗಿಯೂ. ಶೂರರಾಗಿಯೂ, ಇರುವ ಅವರೀರ್ವರಿಗೆ ಪಟ್ಟಾಭಿಷೇಕವಂ ಮಾಡಿಸಿ, ಅವರವರ ಪಟ್ಟಣಗಳಂ ಕೆ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಾವೃತೌ । ಅಭಿಷಿಚ್ಯ ತತೋ ವೀರೌ ಪ್ರಸ್ಥಾಪ್ಯ ಸ್ವಪುರೇ ತಥಾ । ದೂತಾನ್ ಸಂಪ್ರೇಷಯಾಮಾಸ ಶತ್ರುಘ್ನಾಯ ಮಹಾತ್ಮನೇ ॥

—…ಇತಿ ಶ್ರೀಮದುತ್ತರ ರಾಮಾಯಣೆ ಸಪ್ತೋತ್ತರ ಶತತಮಸ್ಸರ್ಗಃ…—

ತೇ ದೂತಾ ರಾಮವಾಕ್ಯೇನ ಚೋದಿತಾ ಲಘುವಿಕ್ರಮಾಃ । ಪ್ರಜಗ್ಮುರ್ಮಧುರಾಂ ಶೀಘ್ರಂ ಚಕ್ರುರ್ವಾಸಂ ನ ಚಾಧ್ವನಿ ॥೧॥ ತತಸ್ತ್ರಿಭಿರಹೋರಾತ್ರೈಃ ಸಂಪ್ರಾಪ್ಯ ಮಧುರಾಮಥ । ಶತ್ರುಘ್ನಾಯ ಯಥಾವೃತ್ತಮಾಚಖ್ಯುಸ್ಸರ್ವಮೇವ ತತ್ ॥೨॥ ಲಕ್ಷ್ಮಣಸ್ಯ ಪರಿತ್ಯಾಗಂ ಪ್ರತಿಜ್ಞಾಂ ರಾಘವಸ್ಯ ಚ । ಪುತ್ರಯೋರಭಿಷೇಕಂ ಚ ಪೌರಾನುಗಮನಂ ತಥಾ ॥೩॥ ಕುಶಸ್ಯ ನಗರೀ ರಮ್ಯಾ ವಿಂಧ್ಯಪರ್ವತರೋಧಸಿ । ಕುಶಾವತೀತಿ ನಾಮ್ನಾ ಸಾ ಕೃತಾ ರಾಮೇಣ ಧೀಮತಾ ॥೪॥ ಶ್ರಾವತೀತಿ ಪುರೀ ರಮ್ಯಾ ಶ್ರಾವಿತಾ ಚ ಲವಸ್ಯ ಚ ॥ ಅಯೋಧ್ಯಾಂ ವಿಜನಾಂ ಚೈವ ಭರತಂ ರಾಘವಾನುಗಮ್ ॥೫॥ ಏವಂ ಸರ್ವಂ ನಿವೇದ್ಯಾಶು ಶತ್ರುಘ್ನಾಯ ಮಹಾತ್ಮನೇ । ವಿರೇಮುಸ್ತೇ ತತೋ ದೂತಾಸ್ತ್ವರ ರಾಜೇತಿ ಚಾಬ್ರುವನ್ ॥೬॥ ಶ್ರುತ್ವಾ ತು ಘೋರಸಂಕಾಶಂ ಕುಲಕ್ಷಯಮುಪಸ್ಥಿತಮ್ । ಪ್ರಕೃತೀಸ್ತು ಸಮಾನೀಯ ಕಾಂಚನಂ ಚ ಪುರೋಹಿತಮ್ ॥೭॥ ತೇಷಾಂ ಸರ್ವಂ ಯಥಾವೃತ್ತಮಾಚಖ್ಯೌ ರಘುನಂದನಃ । ಆತ್ಮನಶ್ಚ ವಿಪರ್ಯಾಸಂ ಭವಿಷ್ಯಂ ಭ್ರಾತೃಭಿಸ್ಸಹ ॥೮॥ ತತಃ ಪುತ್ರದ್ವಯಂ ಶೂರಸ್ಸೋಽಭ್ಯಷಿಂಚನ್ನರಾಧಿ

---

ಮಹಾತ್ಮನೇ-ಮಹಾಮನಸ್ವಿಯಾದ, ಶತ್ರುಘ್ನಾಯ-ಶತ್ರುಘ್ನನಿಗೋಸ್ಕರ, ದೂತಾನ್-ದೂತರನ್ನು, ಸಂಪ್ರೇಷಯಾಮಾಸ-ಕಳುಹಿಸಿಕೊಟ್ಟನು ॥೨೩॥

—*ಇತಿ ಶ್ರೀಮದುತ್ತರರಾಮಾಯಣೆ ಸಪ್ತೋತ್ತರ ಶತತಮಸ್ಸರ್ಗಃ*—

ತೇದೂತಾಃ-ಆ ದೂತರು, ರಾಮವಾಕ್ಯೇನ-ಶ್ರೀರಾಮನ ವಾಕ್ಯದಿಂದ, ಚೋದಿತಾಃ-ಪ್ರೇರಿತರಾಗಿ, ಲಘುವಿಕ್ರಮಾಃ-ಶೀಘ್ರಗಾಮಿಗಳಾದಂಥಾವರಾಗಿ, ಮಧುರಾಂ-ಮಧುರಾಪಟ್ಟಣವನ್ನು ಕುರಿತು, ಶೀಘ್ರಂ-ಜಾಗ್ರತೆಯಾಗಿ, ಪ್ರಜಗ್ಮುಃ-ಹೊರಟರು, ಅಧ್ವನಿ-ಮಾರ್ಗದಲ್ಲಿ, ವಾಸಂ-ಸ್ಥಿತಿಯನ್ನು, ನ ಚಕ್ರುಃ-ಮಾಡಲಿಲ್ಲಾ ॥೧॥ ತೇತು-ಆ ದೂತರಾದರೆ, ತ್ರಿಭಿಃ-ಮೂರಾದ, ಅಹೋರಾತ್ರೈಃ-ಅಹೋರಾತ್ರಿಗಳಿಂದ, ಮಧುರಾಂ-ಮಧುರಾಪಟ್ಟಣವನ್ನು, ಸಂಪ್ರಾಪ್ಯ-ಹೊಂದಿ, ಅಥ-ಬಳಿಕ, ಶತ್ರುಘ್ನಾಯ-ಶತ್ರುಘ್ನನಿಗೋಸ್ಕರ, ಯಥಾವೃತ್ತಂ-ನಡೆದಂಥಾದ್ದು ನಡೆದಹಾಗೆಯೇ, ತತ್ಸರ್ವಮೇವ-ಆ ಸಮಸ್ತ ವೃತ್ತಾಂತವನ್ನೆ, ಆಚಖ್ಯುಃ-ಹೇಳಿದರು ॥೨॥ ಲಕ್ಷ್ಮಣಸ್ಯ-ಲಕ್ಷ್ಮಣನ, ಪರಿತ್ಯಾಗಂ-ಪರಿತ್ಯಾಗವನ್ನು, ರಾಘವಸ್ಯ-ಶ್ರೀರಾಮನ, ಪ್ರತಿಜ್ಞಾಂಚ-ಪ್ರತಿಜ್ಞೆಯನ್ನು, ಪುತ್ರಯೋಃ-ಮಕ್ಕಳಾದಕುಶಲವರಿಗೆ, ಅಭಿಷೇಕಂಚ-ಪಟ್ಟಾಭಿಷೇಕವನ್ನು, ತಥಾ-ಹಾಗೆಯೇ, ಪೌರಾನುಗಮನಂ-ಪೌರ- ಪಟ್ಟಣಸ್ಥರ,ಅನುಗಮನಂ-ಅನುಸರಿಸಿ ಹಿಂದೆ ಬರೋಣವನ್ನು ಆಚಖ್ಯುಃ-ಹೇಳಿದರು ॥೩॥ ವಿಂಧ್ಯಪರ್ವತರೋಧಸಿ-ವಿಂಧ್ಯಪರ್ವತ-ವಿಂಧ್ಯಪರ್ವತದ, ರೋಧಸಿ-ಧಡದಲ್ಲಿ, ರಮ್ಯಾನು-ಸೊಗಸಾದ, ಕುಶಸ್ಯ-ಕುಶನ, ಸಾನಗರೀ-ಆ ಪಟ್ಟಣವು, ಧೀಮತಾ-ಬುದ್ಧಿಮಂತನಾದ, ರಾಮೇಣ-ಶ್ರೀರಾಮನಿಂದ, ಕುಶಾವತೀ-ಕುಶಾವತೀಯೆಂದು, ನಾಮ್ನಾ-ಹೆಸರಿನಿಂದ, ಕೃತಾ-ಮಾಡಲ್ಪಟ್ಟಿಧೆ ॥೪॥ ಲವಸ್ಯ-ಲವಣನ, ರಮ್ಯಾ-ಸುಂದರವಾದ,ಪುರೀಚ- ಪಟ್ಟಣವೂಕೂಡಾ, ಶ್ರಾವತೀತಿ-ಶ್ರಾವತೀಎಂದು, ಶ್ರಾವಿತಾ-ಕೇಳಿಸಲ್ಪಟ್ಟಿತು, ಅಯೋಧ್ಯಾಂ-ಅಯೋಧ್ಯಾಪಟ್ಟಣವನ್ನು, ವಿಜನಾಂ- ಜನರಹಿತವಾದದ್ದನ್ನಾಗಿಯೂ, ಭರತಂಚ-ಭರತನನ್ನೂ ಕೂಡಾ, ರಾಘವಾನುಗಂ-ಶ್ರೀರಾಮನನ್ನನುಸರಿಸಿ ದವರನ್ನಾಗಿಯೂ, ಮಹಾತ್ಮನೇ-ಮಹಾತ್ಮನಾದ, ಶತ್ರುಘ್ನಾಯ-ಶತ್ರುಘ್ನನಿಗೆ, ಏವಂ-ಈ ಪ್ರಕಾರವಾಗಿ, ಸರ್ವಂ-ಸಮಸ್ತವನ್ನು, ಆಶು- ಜಾಗ್ರತೆಯಾಗಿ, ನಿವೇದ್ಯ-ತಿಳಿಸಿ, ತತಃ-ಬಳಿಕ, ತೇದೂತಾಃ-ಆ ದೂತರು, ಹೇರಾಜ-ಎಲೈ ಅರಸನೆ, ತ್ವರ-ತ್ವರೆಪಡು, ಇತಿಚ-ಇಂತೆಂದುನ್ನು, ಅಬ್ರುವನ್-ನುಡಿದು, ವಿರೇಮುಃ-ಸುಮ್ಮನೇ ಇದರು ॥೬॥ ಕಿಂತು-ಮತ್ತೇನೆಂದರೆ, ಘೋರಸಂಕಾಶಂ-ಭಯಂಕರವಾದ, ಉಪಸ್ಥಿತಂ-ಪ್ರಾಪ್ತವಾದ, ಕುಲಕ್ಷಯಂ-ವಂಶನಾಶವನ್ನು, ಶ್ರುತ್ವಾ-ಕೇಳಿ, ಪ್ರಕೃತೀಸ್ತು-ಜನಗಳನ್ನೂ, ಕಾಂಚನಂ-ಕಾಂಚನನೆಂಬ, ಪುರೋಹಿತಂಚ-ಪುರೋಹಿತನನ್ನೂ ಕೂಡಾ, ಸಮಾನೀಯ-ಕರೆಕಳಿಸಿ, ರಘುನಂದನಃ-ಶತ್ರುಘ್ನನು, ತೇಷಾಂ-ಅವರಿಗೆ, ಸರ್ವಂ- ಸಮಸ್ತವನ್ನು, ಯಥಾವೃತ್ತಂ-ನಡೆದಂತೆಯೂ, ಭ್ರಾತೃಭಿಸ್ಸಹ-ಅಣ್ಣಂದರೊಡನೆ,ಭವಿಷ್ಯಂ-ಆಗತಕ್ಕ, ಆತ್ಮನಃ-ತನ್ನ,ವಿಪರ್ಯಾಸಂಚ-ದೇಹ ಪರಿತ್ಯಾಗವನ್ನೂ ಕೂಡಾ, ಆಚಖ್ಯೌ-ಹೇಳಿದನು ॥೮॥ ನರಾಧಿಪಃ-ರಾಜನಾದ, ಶೂರಃ-ಶೂರನಾದ, ಸಃ-ಆಶತ್ರುಘ್ನನು, ಪುತ್ರದ್ವಯಂ - ಇಬ್ಬರುಕುಮಾರರನ್ನು, ಅ

---

ಳುಹಿಸಿಕೊಟ್ಟು, ಮಹಾತ್ಮನಾದ ಶತ್ರುಘ್ನನಂ ಕರೆಯುವದಕ್ಕೋಸುಗ ತ್ವರೆಯಾಗಿ ದೂತರಂ ಕಳುಹಿಸಿದಂತಾವನಾದನು ॥೨೩॥ —…*ಉತ್ತರರಾಮಾಯಣದಲ್ಲಿನ ೧೦೭ನೆಯ ಸರ್ಗಂ ಮುಗಿದುದು.*…—

ಬಹು ತ್ವರೆಯಾಗಿ ಪೋಗುತ್ತಿರುವ ಆ ದೂತರುಗಳು,ಶ್ರೀರಾಮನ ವಾಕ್ಯದಿಂ ತೆರಳಿದವರಾಗಿ ದಾರಿಯೊಳು ಎಲ್ಲಿಯೂ ನಿಲ್ಲದೆ ಮೂರುದಿನಗಳು ಪ್ರಯಾಣಿಸಿ ಆ ಮಧುರಾಪಟ್ಟಣವನ್ನೇ ಪೊಂದಿ, ಲಕ್ಷ್ಮಣನ ಪರಿತ್ಯಾಗವನ್ನೂ, ಶ್ರೀರಾಮನ ಪ್ರತಿಜ್ಞೆಯನ್ನೂ, ಲವಕುಶರೀರ್ವರಿಗೆ ಮಾಡಿದ ರಾಜ್ಯಪಟ್ಟಾಭಿಷೇಕವನ್ನೂ, ಪಟ್ಟಣಸ್ಥರ ಆಗಮನವನ್ನೂ ಪೇಳಿ ಮತ್ತಿಂತೆಂದರು ॥೩॥ ಎಲೈ ಶತ್ರುಘ್ನನೆ! ವಿಂಧ್ಯಪರ್ವತದ ಸಮೀಪದಲ್ಲಿ ಕುಶನಿಗೋಸುಗ ಕುಶಾವತಿಯೆಂಬ ಪಟ್ಟಣವು ನಿರ್ಮಿಸಲ್ಪಟ್ಟಿತು. ಲವನಪಟ್ಟಣವು ಶ್ರಾವತಿಯೆಂದು ಕೇಳಲ್ಪಟ್ಟಿಧೆ, ಅಯೋಧ್ಯಾಪುರಿಯು ವಿಜನವಾಯಿತು, ಭರತನು ರಾಮನಂ ಹಿಂಬಾಲಿಸುವನು ಎಂಬದಾಗಿ ಎಲ್ಲವಂ ಬಿನ್ನವಿಸಿ ನೀನು ತ್ವರೆ ಮಾಡೆಂದು ನುಡಿದು ತೂಷ್ಣೀಂಭೂತರಾದರು. ॥೭॥ ಮಹಾಭಯಂಕರವಾಗಿ ಸಂಭವಿಸಿದ ಆ ಕುಲ ಕ್ಷಯವಂ ಕೇಳಲು, ಮಂತ್ರಿಗಳನ್ನು ಪುರೋಹಿತನಂ

CC-0. Bhagavad Ramanuja National Research Institute, Melukote Collection.

ಯಾಽಹಂವಿನಾಕೃತಃ । ಗಚ್ಛೇಯಂದೇವಲೋಕಂವಾಪರಮಂವಾಪದಂಮಹತ್ ॥೨೫॥ ವಿಭೀಷಣಮಥೋವಾಚರಾಕ್ಷಸೇಂದ್ರಂ
ಮಹಾಯಶಾಃ । ಯಾವತ್ಪ್ರಜಾಧರಿಷ್ಯಂತಿತಾವತ್ತ್ವಂವೈವಿಭೀಷಣ ॥ರಾಕ್ಷಸೇಂದ್ರಮಹಾವೀರ್ಯಲಂಕಾಸ್ಥಸ್ತ್ವಂಧರಿಷ್ಯ
ಸಿ ॥೨೭॥ ಯಾವಚ್ಚಂದ್ರಶ್ಚಸೂರ್ಯಶ್ಚಯಾವತ್ತಿಷ್ಠತಿಮೇದಿನೀ । ಯಾವಚ್ಚಮತ್ಕಥಾಲೋಕೇತಾವದ್ರಾಜ್ಯಂತವಾಸ್ತ್ವಿ
ಹ ॥೨೮॥ ಶಾಸಿತಸ್ತ್ವಂಸಖಿತ್ವೇನಕಾರ್ಯಂತೇಮಮಶಾಸನಮ್ । ಪ್ರಜಾಸ್ಸಂರಕ್ಷಧರ್ಮೇಣನೋತ್ತರಂವಕ್ತುಮರ್ಹಸಿ ॥೨೯॥
ಕಿಂಚಾನ್ಯದ್ವಕ್ತುಮಿಚ್ಛಾಮಿರಾಕ್ಷಸೇಂದ್ರಮಹಾಮತೇ ॥೩೦॥ ಆರಾಧಯಜಗನ್ನಾಥಮಿಕ್ಷ್ವಾಕುಕುಲದೈವತಮ್ । ಆರಾಧ
ನೀಯಮನಿಶಂಸರ್ವೈರ್ದೇವೈಸ್ಸವಾಸವೈಃ ॥೩೧॥ ತಥೇತಿಪ್ರತಿಜಗ್ರಾಹರಾಮವಾಕ್ಯಂವಿಭೀಷಣಃ । ರಾಜಾರಾಕ್ಷಸಮು
ಖ್ಯಾನಾಂರಾಘವಾಜ್ಞಾಮನುಸ್ಮರನ್ ॥೩೨॥ ತಮೇವಮುಕ್ತ್ವಾಕಾಕುತ್ಸ್ಥೋಹನೂಮಂತಮಥಾಬ್ರವೀತ್ । ಜೀವಿತೇ
ಕೃತಬುದ್ಧಿಸ್ತ್ವಂಮಾಪ್ರತಿಜ್ಞಾಂವಿಲೋಪಯ ॥೩೩॥ ಮತ್ಕಥಾಃಪ್ರಚರಿಷ್ಯಂತಿಯಾವಲ್ಲೋಕೇಹರೀಶ್ವರ । ತಾವದ್ರಮಸ್ವ

---

ದೇವಲೋಕಂವಾ-ದೇವಲೋಕವನ್ನಾಗಲೀ, ಮಹತ್-ದೊಡ್ಡದಾದ, ಪರಮಂಪದಂವಾ-ಸರ್ವೋತ್ತಮಸ್ಥಾನವಾದ ವೈಕುಂಠವನ್ನಾಗಲೀ, ನಗಚ್ಛೇಯಂ-ಹೊಂದಲಾರೆನು ॥೨೫॥ ಅಥ-ಬಳಿಕ, ಮಹಾಯಶಾಃ-ಮಹಾಯಶಸ್ವಿಯಾದ ಶ್ರೀರಾಮನು, ರಾಕ್ಷಸೇಂದ್ರಂ- ರಾಕ್ಷಸಾಧಿಪತಿಯಾದ, ವಿಭೀಷಣಂ-ವಿಭೀಷಣನನ್ನು ಕುರಿತು, ಉವಾಚ-ನುಡಿದನು, ॥ ೨೬ ॥ ಹೇರಾಕ್ಷಸೇಂದ್ರ-ಎಲೈರಾಕ್ಷಸಾಧಿಪತಿಯೆ, ಹೇಮಹಾವೀರ್ಯ-ಎಲೈಮಹಾಪರಾಕ್ರಮವಂತನೆ, ಹೆ ವಿಭೀಷಣ-ಎಲೈ ವಿಭೀಷಣನೆ, ಯಾವತ್-ಯದುವರಿವಿಗೂ, ಪ್ರಜಾಃ-ಪ್ರಜೆಗಳು, ಧರಿಷ್ಯಂತಿ-ಪ್ರಾಣಗಳಂಧರಿಸುತ್ತಾರೊ, ತಾವತ್ - ಅದುವರಿವಿಗೂ, ತ್ವಂ-ನೀನು, ವಸ-ಇರು, ತ್ವಂ-ನೀನು, ಲಂಕಾಸ್ಥಃ-ಲಂಕಾಪಟ್ಟಣದಲ್ಲಿರುವನಾಗಿ, ಧರಿಷ್ಯಸಿ-ದೇಹವನ್ನು ಧರಿಸುವಿ ॥ ೨೭ ॥ ಇಹಲೋಕೇ-ಈ ಲೋಕದಲ್ಲಿ, ಯಾವತ್-ಯದುವರಿಗೂ, ಚಂದ್ರಶ್ಚ-ಚಂದ್ರನು, ತಿಷ್ಠತಿ-ಇರುವನೋ, ಯಾವತ್-ಯದುವರಿವಿಗೂ, ಸೂರ್ಯಶ್ಚ-ಸೂರ್ಯನುಕೂಡೆ, ತಿಷ್ಠಂತಿ-ಇರುವನೊ, ಮೇದಿನೀ, ಭೂಮಿಯು, ಯಾವತ್-ಎಷ್ಟುಪರ್ಯಂತವು, ತಿಷ್ಠತಿ-ಇರುವದೊ, ಮತ್ಕಥಾಚ-ನನ್ನಕಥೆಯುಸಹ, ಯಾವತ್-ಯದುವರಿವಿಗೂ ತಿಷ್ಠತಿ-ಇರುವದೊ, ತಾವತ್-ಅದುವರಿವಿಗೂ, ರಾಜ್ಯಂ-ರಾಜ್ಯವು, ತವ-ನಿನಗೆ, ಅಸ್ತು-ಆಗಲಿ ॥೨೮॥ ಸಖಿತ್ವೇನ-ಸ್ನೇಹಭಾವದಿಂದ, ತ್ವಂ-ನೀನು, ಶಾಸಿತಃ-ಆಜ್ಞಾಪಿಸಲ್ಪಟ್ಟಿಧೀ, ಮಮ-ನನ್ನ, ಶಾಸನಂ-ಆಜ್ಞೆಯು, ತೇ-ನಿನ್ನಿಂದ, ಕಾರ್ಯಂ-ಮಾಡತಕ್ಕದ್ದು, ಪ್ರಜಾಃ-ಪ್ರಜೆಗಳನ್ನು, ಧರ್ಮೇಣ-ಧರ್ಮದಿಂದ, ಸಂರಕ್ಷ-ಪರಿಪಾಲಿಸು, - ಉತ್ತರಂ-ಉತ್ತರವನ್ನು, ವಕ್ತುಂ- ಹೇಳುವದಕ್ಕೋಸ್ಕರ, ನಾರ್ಹಸಿ - ಯೋಗ್ಯನಾಗಬೇಡ ॥ ೨೯ ॥ ಕಿಂಚ-ಇಷ್ಟುಮಾತ್ರವಲ್ಲ, ಹೇರಾಕ್ಷಸೇಂದ್ರ-ಎಲೈ ರಾಕ್ಷಸಾಧಿಪತಿಯೆ, ಹೆ ಮಹಾಮತೇ-ಎಲೈ ಬುದ್ಧಿಶಾಲಿಯೆ, ಅನ್ಯತ್-ಮತ್ತೊಂದನ್ನು, ವಕ್ತುಂ-ಹೇಳುವದಕ್ಕೋಸ್ಕರ, ಇಚ್ಛಾಮಿ-ಅಪೇಕ್ಷಿಸುತ್ತೇನೆ ॥೩೦॥ (ಅದೇನೆಂದರೆ) ಸರ್ವೈಃ-ಸಮಸ್ತರಾದ, ಸವಾಸವೈಃ-ಇಂದ್ರಸಹಿತರಾದ, ದೇವೈಃ-ದೇವತೆಗಳಿಂದ, ಆರಾಧನೀಯಂ-ಪೂಜೆಮಾಡಲರ್ಹವಾದ, ಇಕ್ಷ್ವಾಕು ಕುಲದೈವತಂ-ಇಕ್ಷ್ವಾಕು ವಂಶಕ್ಕೆ ಇಷ್ಟದೈವವಾದ, ಜಗನ್ನಾಥಂ-ಜಗನ್ನಾಥಸ್ವಾಮಿಯನ್ನು, ಅನಿಶಂ-ನಿರಂತರವು, ಆರಾಧಯ-ಪೂಜಿಸು ॥೩೧॥ ರಾಕ್ಷಸಮುಖ್ಯಾನಾಂ-ರಾಕ್ಷಸೋತ್ತಮರಿಗೆ, ರಾಜಾ-ಅರಸಾದ, ವಿಭೀಷಣಃ-ವಿಭೀಷಣನು, ರಾಘವಾಜ್ಞಾಂ-ಶ್ರೀರಾಮನ ಅಪ್ಪಣೆಯನ್ನು, ಅನುಸ್ಮರನ್-ಬಾರಿಬಾರಿಗೂ ಸ್ಮರಿಸುತ್ತಿರುವನಾಗಿ, ರಾಮವಾಕ್ಯಂ-ಶ್ರೀರಾಮನಮಾತನ್ನು, ತಥೇತಿ-ಹಾಗೇ ಆಗಲಿಯೆಂದು, ಪ್ರತಿಜಗ್ರಾಹ-ಸ್ವೀಕರಿಸಿದನು ॥೩೨॥ ತಂ-ಆ ವಿಭೀಷಣನನ್ನು ಕುರಿತು, ಕಾಕುತ್ಸ್ಥಃ-ಶ್ರೀರಾಮನು, ಏವಂ-ಈಪರಿಯಾಗಿ, ಉಕ್ತ್ವಾ-ಹೇಳಿ, ಅಥ-ಬಳಿಕ, ಹನೂಮಂತಂ-ಆಂಜನೇಯನನ್ನು ಕುರಿತು, ಅಬ್ರವೀತ್-ನುಡಿದನು, ತ್ವಂ-ನೀನು, ಜೀವಿತೇ-ಜೀವಿತಾವಸ್ಥಾನದಲ್ಲಿ, ಕೃತಬುದ್ಧಿಃ-ಕೃತ-ನಿಶ್ಚಯಿಸಲ್ಪಟ್ಟ, ಬುದ್ಧಿಃ-ಮತಿಯುಳ್ಳವನಾಗಿ, ಪ್ರತಿಜ್ಞಾಂ-ನೀನುಮಾಡಿದ ಪ್ರತಿಜ್ಞೆಯನ್ನು, ಮಾವಿಲೋಪಯ, ನೋಡಬೇಡ ॥೩೩॥ ಹೇ ಹರೀಶ್ವರ-ಎಲೈ ಕಪೀಶ್ವರನೆ, ಲೋಕೇ-ಲೋಕದಲ್ಲಿ, ಯಾವತ್-ಯದುವರಿವಿಗೂ, ಮತ್ಕಥಾಃ-ನನ್ನ ಚರಿತ್ರೆಗಳು, ಪ್ರಚರಿಷ್ಯಂತಿ- ಪ್ರಸಿದ್ಧಿಯಾಗಿ

---

ಗಲೀ ಯಾವದನ್ನೂ ಇಚ್ಛೈಸುವದಿಲ್ಲ ಎಂಬದಾಗಿ ಹೇಳಿ, ರಾಕ್ಷಸಾಧಿಪತಿಯಾದ ವಿಭೀಷಣನಂ ಕುರಿತು, ಎಲೈ ಅಸುರೇಂದ್ರನಾದ ವಿಭೀಷಣನೆ! ಯದುವರಿಗು ಪ್ರಜೆಗಳೆಲ್ಲರು ಪ್ರಾಣಗಳಂ ಧರಿಸಿಗೊಂಡು ಇರುವರೋ, ಅದುವರಿಗು ಲಂಕಾಪುರಿಯೊಳು ಇರುವಂಥಾವನಾಗು ॥೨೭॥ ಈ ಲೋಕದಲ್ಲಿ ಚಂದ್ರಸೂರ್ಯರೂ ಭೂಮಿಯು ಎನ್ನ ಕಥೆಯೂ ಇರುವವರಿಗೂ ನೀನು ಸುಖವಾಗಿರುವಂಥಾವನಾಗು, ಸ್ನೇಹಭಾವದಿಂ ನಿನಿಗಾಜ್ಞಾಪಿಸಿಧೇನೆ, ಎನ್ನ ಆಜ್ಞೆಯಂ ರಾಕ್ಷಸರಂ ಪರಿಪಾಲಿಸುತ್ತಿರು, ಇದಕ್ಕೆ ಬದುಲುಮಾತಂ ಪೇಳಲಾಗದು, ಇದಲ್ಲದೆ ಮತ್ತೊಂದು ಮಾತಂ ಪೇಳ್ವೆನು ಕೇಳು (ಅದೇನೆಂದರೇ) ಈ ಇಕ್ಷ್ವಾಕುಕುಲಕ್ಕೆ ಇಷ್ಟದೈವವಾಗಿಯೂ, ಸಮಸ್ತರಾದ ದೇವತೆಗಳಿಂದಲೂ ಕೂಡಿ ಪೂಜಿಸಲ್ಪಡುತ್ತಿರುವದಾಗಿಯೂ, ಇರುವ ಜಗನ್ನಾಥಸ್ವಾಮಿಯಂ ಪೂಜಿಸುತ್ತಿರೆಂದು ನಿರೂಪಿಸಿದವನಾಗಲೂ, ರಾಕ್ಷಸಾಧಿಪತಿಯಾದ ಆ ವಿಭೀಷಣನು, ಶ್ರೀರಾಮನ ಅಪ್ಪಣೆಯಂ ಬಾರಿಬಾರಿಗೂ ಚಿಂತಿಸಿ, ಹಾಗೆಯೇ ಆಗಲೆಂದು ಒಪ್ಪಿಕೊಂಡವನಾದನು ॥೩೨॥ ಶ್ರೀರಾಮನು ಈಪರಿಯಾಗಿ ವಿಭೀಷಣನಂ ಕುರಿತು ನುಡಿದು, ಬಳಿಕ ಹನುಮಂತನಂ ಕುರಿತು, ಎಲೈ ಆಂಜನೇಯನೆ! ನೀನು ಬದುಕುವ ವಿಷಯದಲ್ಲಿ ನಿಶ್ಚಯವುಳ್ಳವನಾಗಿ, ನಮ್ಮ ಪ್ರತಿಜ್ಞೆಯಂ ನೋಡಬೇಡ, ಲೋಕದೊಳು ಎನ್ನ ಚರಿತ್ರೆಯು ಪ್ರಸಿದ್ಧವಾಗಿರುವವರಿಗೂ ಸಂತೋಷಚಿತ್ತನಾಗಿ ಎನ್ನ ಮಾತಂ ಕೇಳಿ ಸುಖ

Funding: Tattva Heritage Foundation,Kolkata. Digitization: eGangotri.
CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸುಪ್ರೀತೋ ಮದ್ವಾಕ್ಯಮನುಪಾಲಯನ್ ॥೩೪॥ ಏವಮುಕ್ತಸ್ತು ಹನುಮಾನ್ ರಾಘವೇಣ ಮಹಾತ್ಮನಾ । ವಾಕ್ಯಂ ವಿಜ್ಞಾಪಯಾಮಾಸ ಪರಂ ಹರ್ಷಮವಾಪ್ಯ ಚ ॥೩೫॥ ಯಾವತ್ತವ ಕಥಾ ಲೋಕೇ ವಿಚರಿಷ್ಯತಿ ಪಾವನೀ । ತಾವತ್ಸ್ಥಾಸ್ಯಾಮಿ ಮೇದಿನ್ಯಾಂ ತವಾಜ್ಞಾಮನುಪಾಲಯನ್ ॥೩೬॥ ಜಾಂಬವಂತಂ ತಥೋಕ್ತ್ವಾ ತು ವೃದ್ಧಂ ಬ್ರಹ್ಮಸುತಂ ತಥಾ । ಮೈಂದಂ ಚ ದ್ವಿವಿದಂ ಚೈವ ಪಂಚ ಜಾಂಬವತಾ ಸಹ ॥೩೭॥ ಯಾವತ್ಕಲಿಶ್ಚ ಸಂಪ್ರಾಪ್ತಸ್ತಾವಜ್ಜೀವತ ಸರ್ವದಾ । ತಾನೇವಮುಕ್ತ್ವಾ ಕಾಕುತ್ಸ್ಥಸ್ಸರ್ವಾಂಸ್ತಾನೃಕ್ಷವಾನರಾನ್ ॥ ಉವಾಚ ಬಾಢಂ ಗಚ್ಛಧ್ವಂ ಮಯಾ ಸಾರ್ಧಂ ಯಥೇಪ್ಸಿತಂ ... ॥೩೮॥

—...ಇತಿ ಶ್ರೀಮದುತ್ತರರಾಮಾಯಣೇ ಅಷ್ಟೋತ್ತರ ಶತತಮಸ್ಸರ್ಗಃ...—

ಪ್ರಭಾತಾಯಾಂ ತು ಶರ್ವರ್ಯಾಂ ಪೃಥುವಕ್ಷಾ ಮಹಾಯಶಾಃ । ರಾಮಃ ಕಮಲಪತ್ರಾಕ್ಷಃ ಪುರೋಧಸಮಥಾಬ್ರವೀತ್ ॥ ಅಗ್ನಿಹೋತ್ರಂ ವ್ರಜತ್ವಗ್ರೇ ದೀಪ್ಯಮಾನಂ ಸಹ ದ್ವಿಜೈಃ । ವಾಜಪೇಯಾತಪತ್ರಂ ಚ ಶೋಭಮಾನಂ ಮಹಾಪಥೇ ॥೧॥ ತತೋ ವ

---

ರುವವೋ, ತಾವತ್–ಅದುವರಿವಿಗೂ, ಸುಪ್ರೀತಃ–ಸಂತೋಷಚಿತ್ತರಾಗಿ, ಮದ್ವಾಕ್ಯಂ–ನನ್ನ ಮಾತನ್ನು, ಅನುಪಾಲಯನ್–ಪರಿಪಾಲಿಸುತ್ತಿರುವನಾಗಿ, ರಮಸ್ವ–ಸುಖಿಸು ॥ ೩೪ ॥ ಏವಂ–ಈ ಪ್ರಕಾರವಾಗಿ, ಮಹಾತ್ಮನಾ–ಮಹಾನುಭಾವನಾದ, ರಾಘವೇಣ–ಶ್ರೀರಾಮನಿಂದ, ಉಕ್ತಃ–ಹೇಳಲ್ಪಟ್ಟ, ಹನುಮಾನ್–ಹನುಮಂತನಾದರೆ, ಪರಂ ಹರ್ಷಂ ಚ–ಮಹಾಸಂತೋಷವನ್ನು ಕೂಡಾ, ಅವಾಪ್ಯ–ಹೊಂದಿ, ವಾಕ್ಯಂ–ಮಾತನ್ನು, ವಿಜ್ಞಾಪಯಾಮಾಸ–ಅರಿಕೆಮಾಡಿಕೊಂಡನು ॥ ೩೫ ॥ (ಅದೆಂತೆನೆ) ಪಾವನೀ–ಪರಿಶುದ್ಧವಾದ, ತವ ಕಥಾ–ನಿನ್ನ ಚರಿತ್ರೆಯು, ಯಾವತ್–ಯದುವರಿವಿಗೂ, ಲೋಕೇ–ಲೋಕದಲ್ಲಿ, ವಿಚರಿಷ್ಯತಿ–ಪ್ರಸಿದ್ಧಿಯಾಗಿರುವದೋ, ತಾವತ್–ಅದುವರಿವಿಗೂ, ಮೇದಿನ್ಯಾಂ–ಭೂಮಿಯಲ್ಲಿ, ತವ–ನಿನ್ನ, ಆಜ್ಞಾಂ–ಅಪ್ಪಣೆಯನ್ನು, ಅನುಪಾಲಯನ್–ಪರಿಪಾಲಿಸುತ್ತಿರುವನಾಗಿ, ಸ್ಥಾಸ್ಯಾಮಿ–ನಿಲ್ಲುವೆನು ॥೩೬॥ ತಥಾ–ಹಾಗೆ, ಬ್ರಹ್ಮಸುತಂ–ಬ್ರಹ್ಮಕುಮಾರನಾದ, ವೃದ್ಧಂ– ವೃದ್ಧನಾದ, ಜಾಂಬವಂತಂ– ಜಾಂಬವಂತನನ್ನು ಕುರಿತು, ಉಕ್ತ್ವಾ–ಹೇಳಿ, ತಥಾ–ಹಾಗೆಯೇ, ಮೈಂದಂ ಚ–ಮೈಂದನನ್ನು, ದ್ವಿವಿದಂ ಚ–ದ್ವಿವಿದನನ್ನು ಕೂಡ, ಜಾಂಬವತಾ ಸಹ–ಜಾಂಬವಂತನೊಡನೆ, ಪಂಚ–ಐದುಮಂದಿಯಾದ, ವಿಭೀಷಣ ಹನುಮ ಜಾಂಬುವ ಮೈಂದ ದ್ವಿವಿದರಂ ಕುರಿತು, (ಇತಿ–ಇಂತೆಂದು) ಅಬ್ರವೀತ್–ನುಡಿದನು, ಯಾವತ್–ಯದುವರಿಗೂ, ಕಲಿಶ್ಚ–ಪ್ರಳಯವೂ, ಸಂಪ್ರಾಪ್ತಃ–ಬರುವದೋ, ತಾವತ್–ಅದುವರಿವಿಗು, ಸರ್ವದಾ – ಸದಾಕಾಲದಲ್ಲಿಯೂ, ಜೀವಿತ–ಬದುಕಿರಿ ॥೩೭॥ ಕಾಕುತ್ಸ್ಥಃ–ಶ್ರೀರಾಮನು, ತಾನ್–ಆ ಐದುಮಂದಿಯಂ ಕುರಿತು, ಏವಂ–ಈ ಪ್ರಕಾರವಾಗಿ, ಉಕ್ತ್ವಾ–ಹೇಳಿ, ಯಥೇಪ್ಸಿತಂ–ನಿಮ್ಮ ಯಿಷ್ಟದಂತೆ, ಮಯಾ ಸಾರ್ಧಂ–ಎನ್ನೊಡನೆ, ಬಾಢಂ ಗಚ್ಛಧ್ವಂ–ಹಾಗೇ ಬನ್ನಿರೆಂದು, ಸರ್ವಾನ್–ಸಮಸ್ತರಾದ, ತಾನ್ ಋಕ್ಷವಾನರಾನ್–ಆ ಕರಡಿ ಕಪಿಗಳಂ ಕುರಿತು, ಉವಾಚ–ನುಡಿದನು ॥೩೮॥ —*ಇತಿ ಶ್ರೀಮದುತ್ತರರಾಮಾಯಣೇ ಅಷ್ಟೋತ್ತರ ಶತತಮಸ್ಸರ್ಗಃ*—

ಅಥ–ಬಳಿಕ, ಶರ್ವರ್ಯಾಂ–ರಾತ್ರಿಯು, ಪ್ರಭಾತಾಯಾಂ ಸತ್ಯಾಂ–ಪ್ರಾತಃಕಾಲವಾಗಲೂ, ಪೃಥುವಕ್ಷಾಃ–ವಿಸ್ತಾರವಾದ ವಕ್ಷಸ್ಸುಳ್ಳ, ಮಹಾಯಶಾಃ–ಮಹಾಕೀರ್ತಿಯುಳ್ಳ, ಕಮಲಪತ್ರಾಕ್ಷಃ–ತಾವರೆಯೆಸಳೆಯಂತೆ ನೇತ್ರಗಳುಳ್ಳ, ರಾಮಃ–ಶ್ರೀರಾಮನು, ಪುರೋಧಸಂ–ಪುರೋಹಿತನಂ ಕುರಿತು, ಅಬ್ರವೀತ್–ನುಡಿದನು ॥೧॥ ದೀಪ್ಯಮಾನಂ–ಹೊಳೆಯುತಿರುವ, ಅಗ್ನಿಹೋತ್ರಂ–ಅಗ್ನಿಕುಂಡವು, ಶೋಭಮಾನಂ–ಪ್ರಕಾಶಿಸುತಿರುವ, ವಾಜಪೇಯಾತಪತ್ರಂ ಚ–ವಾಜಪೇಯಯಜ್ಞದಿಂ ಪ್ರಾಪ್ತವಾದ ಶ್ವೇತಚ್ಛತ್ರವೂ ಸಹಾ, ದ್ವಿಜೈಸ್ಸಹ–ಬ್ರಾಹ್ಮಣರೊಡನೆ, ಮಹಾಪಥೇ–ಸಜೀವವಾಗಿ ಪರಲೋಕವನ್ನೈಯುವದಕ್ಕೋಸ್ಕರ ಮಹಾಸ್ಥಳವಂ ಕುರಿತು ಪ್ರಯಾಣದಲ್ಲಿ, ಅಗ್ರೇ–ಮುಂದುಕಡೆ, ವ್ರಜತು–ಹೊರಡಲಿ ॥೨॥ ತತಃ–ಬಳಿಕ, ತೇಜಸ್ವೀ–ತೇಜಸ್ವಿಯಾದ, ವಸಿಷ್ಠಃ–ವಸಿಷ್ಠಋಷಿಯು, ವಿಧಿವತ್–ಮಂತ್ರವತ್ತಾದ, ಧರ್ಮ್ಯಂ–ಧರ್ಮಪ್ರಧಾನವಾದ, ಮಹಾಪ್ರಸ್ಥಾನಕಂ–ಮಹಾಪ್ರಸ್ಥಾನಯೋಗ್ಯವಾದ, ಸರ್ವಂ–ಸಮ

---

ವಾಗಿರುವಂಥಾವನಾಗಿರು ಎಂಬದಾಗಿ ನುಡಿದವನಾಗಲು, ಹನುಮಂತನು ಬಹಳ ಹರುಷವುಳ್ಳವನಾಗಿ ಆಗ ಅರಿಕೆಯಂ ಮಾಡಿ ಕೊಳ್ಳುವನದೆಂತೆನೆ,—ಎಲೈ ಮಹಾರಾಜನೆ ! ಪರಿಶುದ್ಧವಾದ ನಿನ್ನ ಕಥೆಯು ಈ ಧರಾತಲದಲ್ಲಿ ಎದುವರಿವಿಗೆ ಪ್ರಸಿದ್ಧವಾಗಿರುವದೋ, ಅದುವರಿಗು ನಿನ್ನ ಆಜ್ಞೆಯನ್ನನುಸರಿಸುತ್ತಾ ಇಲ್ಲಿಯೇ ಇರುವೆನು ಎಂಬದಾಗಿ ನುಡಿದವನಾದನು ॥೩೬॥ ಆಪರಿಯಾಗಿ ಶ್ರೀರಾಮನು ಹನುಮಂತನಿಗೆ ನಿರೂಪಿಸಿ, ಬ್ರಹ್ಮಪುತ್ರನಾಗಿಯೂ ವೃದ್ಧನಾಗಿಯು ಇರುವ ಜಾಂಬವಂತನನ್ನೂ ಮೈಂದದ್ವಿವಿದರನ್ನೂ ಸಹ ಕುರಿತು ಪೇಳಿ ಇತರರೆಲ್ಲರಂ ನಿಮ್ಮ ಮನದೊಳಿದ್ದಂತೆ ಎನ್ನ ಸಂಗಡ ಬರುವಂಥಾವರಾಗಿರೆಂದು ನುಡಿದವನಾದನು. ॥೩೮॥—*ರಾಮಾಯಣದಲ್ಲಿನ ೧೦೮ ನೆಯ ಸರ್ಗಂ ಮುಗಿದುದು.*—

ಬಳಿಕ ಪ್ರಾತಃಕಾಲವಾಗಲೂ, ವಿಸ್ತಾರವಾದ ವಕ್ಷಸ್ಥಲವುಳ್ಳವನಾಗಿಯೂ, ಮಹಾಯಶೋವಂತನಾಗಿಯೂ, ತಾವರೇಯೆಸಳನಂತೆ ವಿಶಾಲವಾದ ಕಂಣುಗಳುಳ್ಳವನಾಗಿಯೂ ಇರುವ ಶ್ರೀರಾಮನು ಪುರೋಹಿತನಾದ ವಸಿಷ್ಠಮುನಿಯಂ ಕುರಿತು ನುಡಿಯುವನದೆಂತೆನೆ, ಎಲೈ ಪೂಜ್ಯನೆ ! ಸಜೀವವಾಗಿ ಪರಲೋಕವನ್ನೈಯುದಕ್ಕೋಸುಗ ಮಹಾಸ್ಥಳವಂ ಕುರಿತು ಪ್ರಯಾಣಮಾಡುವ ಕಾಲದಲ್ಲಿ, ಹೊಳೆಯುತ್ತಿರುವ ಅಗ್ನಿಕುಂಡವು, ಮತ್ತು ವಾಜಪೇಯ ಯಾಗದಿಂದ ಪ್ರಾಪ್ತವಾದ ಶ್ವೇತಚ್ಛತ್ರವು ಸಹ ಬ್ರಾಹ್ಮಣರ ಸಂಗಡ ಮುಂದೆ ತೆರಳಲೆಂದು ನುಡಿದವನಾದನು ॥೨॥ ಬಳಿಕ ಅತಿತೇಜಸ್ವಿಯಾದ ವಸಿಷ್ಠಮುನಿಯು, ಮಂತ್ರವತ್ತಾಗಿಯೂ ಧರ್ಮಪ್ರಧಾನವಾಗಿಯೂ ಮಹಾ ಪ್ರಸ್ಥಾನಕ್ಕೆ

CC-0. Bhagavad Ramanuja National Research Institute, Melukote Collection.

ಸಿಷ್ಟಸ್ತೈಜಸ್ವೀಸರ್ವಂನಿರವಶೇಷತಃ । ಚಕಾರವಿಧಿವದ್ಧರ್ಮಂಮಹಾಪ್ರಸ್ಥಾನಿಕಂವಿಧಿಂ॥೩॥ ತತಸ್ಸೂಕ್ಷ್ಮಾಂಬರಧರೋ ಬ್ರಹ್ಮಮಾವರ್ತಯನ್ಸ್ವಯಂ । ಕುಶಾನ್ಗೃಹೀತ್ವಾಪಾಣಿಭ್ಯಾಂಪ್ರಸಜ್ಯಪ್ರಯಯಾವಥ ॥೪॥ ಅವ್ಯಾಹರನ್ಕ್ವಚಿತ್ಕಿಂಚಿನ್ನಿಶ್ಚೇಷ್ಟೋನಿಸ್ಸುಖಃಪಥಿ । ನಿರ್ಜಗಾಮಗೃಹಾತ್ತಸ್ಮಾದ್ದೀಪ್ಯಮಾನಇವಾಂಶುಮಾನ್ ॥೫॥ ರಾಮಸ್ಯದಕ್ಷಿಣೇಪಾರ್ಶ್ವೇಸಪದ್ಮಾಶ್ರೀರುಪಾಶ್ರಿತಾ । ಸವ್ಯೇತುಹ್ರೀರ್ಮಹಾದೇವೀವ್ಯವಸಾಯಸ್ತಥಾಗ್ರತಃ ॥೬॥ ಶರಾನಾನಾವಿಧಾಶ್ಚಾಪಿಧನುರಾಯತಮುತ್ತಮಂ । ತಥಾಯುಧಾನಿತೇಸರ್ವೇಯಯುಃಪುರುಷವಿಗ್ರಹಾಃ ॥೭॥ ವೇದಾಬ್ರಾಹ್ಮಣರೂಪೇಣಗಾಯತ್ರೀಸರ್ವರಕ್ಷಿಣೀ । ಓಂಕಾರೋಥವಷಟ್ಕಾರಸ್ಸರ್ವೇರಾಮಮನುವ್ರತಾಃ ॥೮॥ ಋಷಯಶ್ಚಮಹಾತ್ಮಾನಸ್ಸರ್ವಏವಮಹೀಸುರಾಃ । ಅನ್ವಗಚ್ಛನ್ಮಹಾತ್ಮಾನಂಸ್ವರ್ಗದ್ವಾರಮುಪಾವೃತಂ ॥೯॥ ತಂಯಾಂತಮನುಗಚ್ಛಂತಿಹ್ಯಂತಃಪುರಚರಾಸ್ತ್ರಿಯಃ । ಸವೃದ್ಧಬಾಲದಾಸೀಕಾಸ್ಸವರ್ಷಧರಕಿಂಕರಾಃ॥೧೦॥ ಸಾಂತಃಪುರಶ್ಚಭರತಶ್ಶತ್ರುಘ್ನಸಹಿತೋಯಯೌ ।

---

ಸ್ತವಾದ, ವಿಧಿಂ-ವಿಧಿಯನ್ನು, ನಿರವಶೇಷತಃ-ನಿಶ್ಶೇಷವಾಗಿ, ಚಕಾರ-ಮಾಡಿದನು ॥೩॥ ತತಃ-ಬಳಿಕ, ಸೂಕ್ಷ್ಮಾಂಬರಧರಃ-ಸೂಕ್ಷ್ಮ-ಮೃದುವಾದ, ಅಂಬರ-ವಸ್ತ್ರವನ್ನು, ಧರಃ-ಧರಿಸಿರುವ ಶ್ರೀರಾಮನು, ಬ್ರಹ್ಮಂ-ಆತ್ಮಸ್ವರೂಪವನ್ನು, ಸ್ವಯಂ-ತಾನು, ಆವರ್ತಯನ್-ಧ್ಯಾನಮಾಡುತ್ತಿರುವವನಾಗಿ, (ಯದ್ವಾ ಬ್ರಹ್ಮಂ-ಬ್ರಹ್ಮಬೋಧಕಮಹಾಮಂತ್ರವನ್ನು, ಆವರ್ತಯನ್-ಆವರ್ತಿ ಮಾಡುತ್ತಿರುವವನಾಗಿ,) ಪಾಣಿಭ್ಯಾಂ-ಹಸ್ತಗಳಿಂದ, ಕುಶಾನ್-ದರ್ಭೆಗಳನ್ನು, ಗೃಹೀತ್ವಾ-ಗ್ರಹಿಸಿ, ಪ್ರಸಜ್ಯ-ಪವಿತ್ರರೂಪವಾಗಿ ಧರಿಸಿ, ಅಥ-ಬಳಿಕ, ಪ್ರಯಯೌ-ಹೊರಟನು॥೪॥ ಕ್ವಚಿತ್-ಒಂದಾನೊಂದು ಸ್ಥಳದಲ್ಲಿಯೂ, ಕಿಂಚಿತ್-ಸ್ವಲ್ಪವಾದರೂ, ಅವ್ಯಾಹರನ್-ಮಾತನಾಡದೆಯಿರುವವನಾಗಿ, ಪಥಿ-ಮಾರ್ಗದಲ್ಲಿ, ನಿಶ್ಚೇಷ್ಟಃ-ಅಂಗಚಾಲನಾತ್ಮಕಚೇಷ್ಟೆಯಿಲ್ಲದವನಾಗಿ, ನಿಸ್ಸುಖಃ-ಸುಖಾಪೇಕ್ಷೆಯಿಲ್ಲದವನಾಗಿ, ತಸ್ಮಾದ್ಗೃಹಾತ್-ಆ ಮನೆಯುದೆಸೆಯಿಂದ, ಅಂಶುಮಾನಿವ-ಸೂರ್ಯನಂತೆ, ದೀಪ್ಯಮಾನಃ-ಹೊಳೆಯುತ್ತಿರುವವನಾಗಿ, ನಿರ್ಜಗಾಮ-ಹೊರಟನು ॥೫॥ ರಾಮಸ್ಯ-ಶ್ರೀರಾಮನ, ದಕ್ಷಿಣೇಪಾರ್ಶ್ವೇ-ಬಲಭಾಗದಲ್ಲಿ, ಸಪದ್ಮಾ-ಕಮಲಗಳಿಂದೊಡಗೂಡಿದ, ಶ್ರೀಃ-ಲಕ್ಷ್ಮೀದೇವಿಯೂ, ಉಪಾಶ್ರಿತಾ-ಆಶ್ರಯಿಸಿ ಹೊರಟಳು, ಸವ್ಯೇತು-ಯಡಭಾಗದಲ್ಲಾದರೆ, ಹ್ರೀಃ-ಲಜ್ಜಾಭಿಮಾನಿಯಾದ, ಮಹಾದೇವೀ-ಮಹಾದೇವಿಯೂ, ವ್ಯವಸಾಯಃ-ಉದ್ಯೋಗವು, ತಥಾ-ಹಾಗೆಯೇನೇ, ಅಗ್ರತಃ-ಕೋಪವು, ನಿರ್ಜಗಾಮ-ಹೊರಟಿತು, ನಾನಾವಿಧಾಃ-ನಾನಾಬಗೆಗಳಾದ, ಶರಶ್ಚಾಪಿ-ಬಾಣಗಳೂನೂ, ಆಯತಂ-ಉದ್ದವಾದ, ಉತ್ತಮಂ-ಉತ್ಕೃಷ್ಟವಾದ, ಧನುಃ-ಕೋದಂಡವೂನೂ, ತಥಾ- ಹಾಗೆಯೇ, ಆಯುಧಾನಿ – ಆಯುಧಗಳೂನು, ತೇಸರ್ವೇ-ಆ ಯಲ್ಲಾ ಕೂಡಾ, ಪುರುಷವಿಗ್ರಹಾಃ – ಪುರುಷಶರೀರಗಳುಳ್ಳವುಗಳಾಗಿ, ಯಯುಃ-ಹೊರಟವು ॥ ೭ ॥ ವೇದಾಃ-ವೇದಗಳೂನೂ, ಸರ್ವರಕ್ಷಿಣೀ – ಸಮಸ್ತವನ್ನೂ ಪಾಲನೆಮಾಡುತ್ತಿರುವ, ಗಾಯತ್ರೀ – ಗಾಯತ್ರೀ ದೇವತೆಯೂ, ಓಂಕಾರಃ – ಓಂಕಾರವೂ, ಅಥ-ಬಳಿಕ, ವಷಟ್ಕಾರಃ-ವಷಟ್ಕಾರವೂ, ಸರ್ವೇ – ಸಮಸ್ತರೂನೂ, ಬ್ರಾಹ್ಮಣರೂಪೇಣ – ಬ್ರಾಹ್ಮಣ ವೇಷದಿಂದ, ರಾಮಂ- ಶ್ರೀರಾಮನನ್ನು, ಅನುವ್ರತಾಃ –ಅನುಸರಿಸಿ ಹೊರಟರು॥ ೮ ॥ ಮಹಾತ್ಮಾನಃ-ದೊಡ್ಡ ಸ್ವಭಾವವುಳ್ಳ, ಋಷಯಶ್ಚ – ಋಷಿಗಳೂನುನ್ನು, ಸರ್ವಏವ –ಸಮಸ್ತರಾದ, ಮಹೀಸುರಾಃ-ಬ್ರಾಹ್ಮಣರು, ಮಹಾತ್ಮಾನಂ- ಪರಮಾತ್ಮಸ್ವರೂಪಿಯಾದ ಶ್ರೀರಾಮನನ್ನು, ಅನ್ವಗಚ್ಛನ್ – ಅನುಸರಿಸಿ ಹೋದರು, ಸ್ವರ್ಗದ್ವಾರಂ- ಸ್ವರ್ಗದಬಾಗಲು, ಅಪಾವೃತಂ – ತೆಗಿಯಲ್ಪಟ್ಟಿತು, ॥ ೯ ॥ ಅಂತಃಪುರಚರಾಃ-ರಾಣೀವಾಸಸ್ಥಳದಲ್ಲಿರುವ, ಸ್ತ್ರಿಯಃ-ಸ್ತ್ರೀಯರು, ಸವೃದ್ಧಬಾಲದಾಸೀಕಾಃ – ವೃದ್ಧರಿಂದಲೂ, ಬಾಲರಿಂದಲೂ, ದಾಸೀಜನರಿಂದಲೂ, ಒಡಗೂಡಿದವರಾಗಿ, ಸವರ್ಷಧರಕಿಂಕರಾಃ-ಪಹರೆಜನರಿಂದಲೂ, ಚಾಕರರಿಂದಲೂ ಕೂಡಿದವರಾಗಿ, ಯಾಂತಂ-ಹೋಗುತ್ತಿರುವ, ತಂ-ಆ ಶ್ರೀರಾಮನನ್ನು, ಅನುಗಚ್ಛಂತಿಹಿ-ಅನುಸರಿಸಿ ಹೊರಟರಷ್ಟೆ, ಭರತಃ-ಭರತನು, ಸಾಂತಃಪುರಶ್ಚ – ಅಂತಃಪುರಸ್ತ್ರೀ ಜನರೊಡಗೂಡಿದವನಾಗಿ, ಶತ್ರುಘ್ನಸಹಿತಃ-ಶತ್ರುಘ್ನನಿಂದೊಡಗೂಡಿದವನಾಗಿ, ಗತಂ-ಹೋಗುತ್ತಿರುವ, ಸಾಗ್ನಿಹೋತ್ರಂ-ಅಗ್ನಿಹೋತ್ರ

---

ಯೋಗ್ಯವಾಗಿಯೂ ಇರುನಿಯಮವನ್ನು, ಯಥಾವಿಧಿಯಾಗಿ ಮಾಡಿಸಿದಂಥಾವನಾದನು ॥೩॥ ಅನಂತರದಲ್ಲಿ ಶ್ರೀರಾಮನು ನವುರಾಗಿರುವ ವಸ್ತ್ರವನ್ನುಟ್ಟವನಾಗಿಯೂ, ಬ್ರಹ್ಮಬೋಧಕವಾದ ಮಂತ್ರವಂಜಪಿಸುತ್ತಿರುವನಾಗಿಯೂ ಇರುವನಾಗಿ, ಕೈಗಳಿಂದ ದರ್ಭೆಗಳಂ ತೆಗದುಕೊಂಡು ಪವಿತ್ರವಂಧರಿಸಿ, ದಾರಿಯೊಳು ಎಲ್ಲಿ ಮಾತಾಡದೆ, ಅಂಗಚಲನಾತ್ಮಕವಾದ ಚೇಷ್ಟೆಗಳಿಲ್ಲದವನಾಗಿ, ಸೂರ್ಯನಂತೆ ಕಂಗೊಳಿಸುತ್ತಾ, ಮನೆಯಿಂಪೊರಮಟ್ಟನು ॥೫॥ ಆಗ ಶ್ರೀರಾಮನ ಬಲಭಾಗದಲ್ಲಿ ಪದ್ಮಹಸ್ತಳಾದ ಲಕ್ಷ್ಮೀದೇವಿಯು, ಎಡಭಾಗದಲ್ಲಿ ಲಜ್ಜಾಭಿಮಾನಿಯಾದ ಮಹಾದೇವತೆಯು ರಾಜ್ಯಲಕ್ಷ್ಮಿಯು, ಆಗ್ರಹವು, ಬಗೆಬಗೆಗಳಾದ ಬಾಣಗಳು, ಸರ್ವೋತ್ತಮವಾದ ಧನುರ್ದಂಡವು, ಹಾಗೆಯೆ ಆಯುಧಜಾಲಗಳು, ಇವೆಲ್ಲ ಪುರುಷವಿಗ್ರಹಂಗಳಂ ಧರಿಸಿ, ಹೊರಟವು, ಬಳಿಕ ವೇದಗಳೂ ಸರ್ವರನ್ನೂ ಪಾಲಿಸುತ್ತಿರುವ ಗಾಯತ್ರಿಯೂ, ಓಂಕಾರವು, ವಷಟ್ಕಾರವೂ, ಇವೆರಡು ಬ್ರಾಹ್ಮಣರೂಪವಾಗಿ ಶ್ರೀರಾಮನನ್ನನುಸರಿಸಿ ತೆರಳಿದವು, ಮತ್ತು ಮಹಾನುಭಾವರಾದ ಮಹರ್ಷಿಗಳೂ ಸಮಸ್ತರಾದ ಬ್ರಾಹ್ಮಣರು ಇವರೆಲ್ಲರು ಶ್ರೀರಾಮನನ್ನೇ ಅನುವರ್ತಿಸಿ ತೆರಳಲ್ಲೂ, ಸ್ವರ್ಗಲೋಕದ ಬಾಗಿಲುಗಳು ಕೂಡಲೆ ತೆರೆಯಲ್ಪಟ್ಟವು ॥ ೯॥ ಆಗ ಅಯೋಧ್ಯಾಪುರದ ರಾಣೀವಾಸಸ್ತ್ರೀಯರು ಮುದುಕರಿಂದಲೂ ಬಾಲಕರಿಂದಲೂ ದಾಸಿಗಳಿಂದಲೂ ಒಡಗೂಡಿದವರಾಗಿ, ಮಹಾ ಪ್ರಸ್ಥಾನವಂ ಗೈಯ್ಯು

Funding: Tattva Heritage Foundation,Kolkata. Digitization: eGangotri.



ರಾಮಂಗತಿಮುಪಾಗಮ್ಯಸಾಗ್ನಿಹೋತ್ರಮನುವ್ರತಃ ॥೧೧॥ ತೇಚಸರ್ವೇಮಹಾತ್ಮಾನಸ್ಸಾಗ್ನಿಹೋತ್ರಾಸ್ಸಮಾಗತಾಃ । ಸಪುತ್ರದಾರಾಃಕಾಕುತ್ಸ್ಥಮನುಜಗ್ಮುರ್ಮಹಾಮತಿಂ ॥೧೨॥ ಮಂತ್ರಿಣೋಭೃತ್ಯವರ್ಗಾಶ್ಚ ಸಪುತ್ರಪಶುಬಾಂಧವಾಃ । ಸರ್ವೇಸಹಾನುಗಾರಾಮಮನ್ವಗಚ್ಛನ್ಪ್ರಹೃಷ್ಟವತ್ ॥೧೩॥ ತತಸ್ಸರ್ವಾಃಪ್ರಕೃತಯೋಹೃಷ್ಟಪುಷ್ಟಜನಾವೃತಾಃ। ಅನುಜಗ್ಮುಃಪ್ರಯಾಂತಂತಂರಾಘವಂಗುಣರಂಜಿತಾಃ ॥೧೪॥ ತತಸ್ಸಸ್ತ್ರೀಪುಮಾಂಸಸ್ತೇ ಸಪಕ್ಷಿಪಶುವಾಹನಾಃ । ರಾಘವಸ್ಯಾನುಗಾಸ್ಸರ್ವೇಹೃಷ್ಟಾವಿಗತಕಲ್ಮಷಾಃ ॥೧೫॥ ಸರ್ವೇಪ್ರಮುದಿತಾಹೃಷ್ಟಾಸ್ಸ್ನಾತಾಃಪ್ರಹೃಷ್ಟಾಶ್ಚ ವಾನರಾಃ। ದೃಢಂಕಿಲಕಿಲಾಶಬ್ದೈಸ್ಸರ್ವಂರಾಮಮನುವ್ರತಂ ॥೧೬॥ ನತತ್ರಕಶ್ಚಿದ್ದೀನೋಭೂದ್ವ್ರೀಳಿತೋವಾಪಿದುಃಖಿತಃ। ಪ್ರಹೃಷ್ಟಮುದಿತಂಸರ್ವಂ ಬಭೂವಪರಮಾದ್ಭುತಂ ॥೧೭॥ ದ್ರಷ್ಟುಕಾಮೋಥನಿರ್ಯಾಂತಂರಾಮಂಜಾನಪದೋಜನಃ । ಸಂಪ್ರಾಪ್ತಸ್ಸೋಪಿದೃಷ್ಟ್ವೈವ

---

ಡಿಂ ದೊಡಗೂಡಿದ, ರಾಮಂ-ಶ್ರೀರಾಮನನ್ನು, ಅನುವ್ರತಃ-ಅನುಸರಿಸಿದಂಥವನಾಗಿ, ಯಯೌ-ತೆರಳಿದನು, (ರಾಮಂಗತಿಮಿತಿಪಾಠೇ-ರಾಮಂ - ಶ್ರೀರಾಮನನ್ನು, ಗತಿಂ-ಶರಣಾವನ್ನಾಗಿ, ಉಪಾಗಮ್ಯ-ಹೊಂದಿ, ಯಯೌ-ಹೊರಟನು) ॥೧೧॥ ಮಹಾತ್ಮಾನಃ-ಮಹಾಮನಸ್ವಿಗಳಾದ, ಸರ್ವೇ- ಸಮಸ್ತರಾದ, ಸಾಗ್ನಿಹೋತ್ರಾಃ-ಅಗ್ನಿಹೋತ್ರದಿಂದ ಕೂಡಿದ, ಸಪುತ್ರದಾರಾಃ-ಪುತ್ರದಾರಾದಿಗಳಿಂ ದೊಡಗೂಡಿದ, ತೇಚ-ಅವರೆಲ್ಲರೂ, ಸಮಾಗತಾಃ-ಬಂದವರಾಗಿ, ಮಹಾಮತಿಂ- ಮಹಾಬುದ್ಧಿಶಾಲಿಯಾದ, ಕಾಕುತ್ಸ್ಥಂ- ಶ್ರೀರಾಮನನ್ನು, ಅನುಜಗ್ಮುಃ- ಅನುಸರಿಸಿಹೊರಟರು ॥೧೨॥ ಮಂತ್ರಿಣಃ-ಮಂತ್ರಿಗಳೂ, ಭೃತ್ಯವರ್ಗಾಶ್ಚ -ಭೃತ್ಯ-ಚಾರರ, ವರ್ಗಾಶ್ಚ-ಸಮುದಾಯಗಳೂನೂ, ಸಪುತ್ರಪಶುಬಾಂಧವಾಃ-ಮಕ್ಕಳಿಂದಲೂ ಪಶುಗಳಿಂದಲೂ-ಬಂಧುಗಳಿಂದೊಡಗೂಡಿದವರಾಗಿ, ಸರ್ವೇ-ಸಮಸ್ತರೂನು, ಸಹಾನುಗಾಃ-ಅನುಚರರಿಂದೊಡಗೂಡಿದವರಾಗಿ, ರಾಮಂ-ಶ್ರೀರಾಮನನ್ನು, ಪ್ರಹೃಷ್ಟವತ್-ಸಂತೋಷಯುಕ್ತರಾಗಿ, ಅನ್ವಗಚ್ಛನ್-ಅನುಸರಿಸಿ ಹೋದರು ॥೧೩॥ ತತಃ-ಬಳಿಕ, ಸರ್ವಾಃ-ಸಮಸ್ತರಾದ, ಪ್ರಕೃತಯಃ-ಪ್ರಜೆಗಳು, ಹೃಷ್ಟಪುಷ್ಟಜನಾವೃತಾಃ-ಹೃಷ್ಟ-ಸಂತೋಷದಿಂದ ಯುಕ್ತರಾದ, ಪುಷ್ಟ - ಪೋಷಿತರಾದ,ಜನ-ಜನರಿಂದ, ಆವೃತಾಃ-ಸುತ್ತಿಕೊಳ್ಳಲ್ಪಟ್ಟವರಾಗಿ, ಗುಣರಂಜಿತಾಃ-ಗುಣ-ಶ್ರೀರಾಮನ ಗುಣಗಳಿಂದ, ರಂಜಿತಾಃ-ಅನುರಾಗವುಳ್ಳವರಾಗಿ, ಗಚ್ಛಂತಂ-ಪ್ರಯಾಣಮಾಡುತ್ತಿರುವ, ತಂ-ರಾಘವಂ, ಆ ಶ್ರೀರಾಮನನ್ನು, ಅನ್ವಗಚ್ಛನ್-ಅನುಸರಿಸಿಹೋದರು ॥ ೧೪ ॥ ತತಃ-ಬಳಿಕ, ಸಪಕ್ಷಿಪಶುವಾಹನಾಃ-ಪಕ್ಷಿಗಳಿಂದಲೂ, ಪಶುಗಳಿಂದಲೂ ವಾಹನಗಳಿಂದೊಡಗೂಡಿದ, ಸಸ್ತ್ರೀಪುಮಾಂಸಃ-ಸ್ತ್ರೀಯರಿಂದಲು ಪುರುಷರಿಂದಲೂಕೂಡಿದ, ತೇಸರ್ವೇ-ಆ ಪ್ರಜೆಗಳೆಲ್ಲರು,ಹೃಷ್ಟಾಃ-ಸಂತೋಷಗೊಂಡವರಾಗಿ,ವಿಗತಕಲ್ಮಷಾಃ-ಗಳಿತವಾದ ಪಾಪಗಳುಳ್ಳವರಾಗಿ, ರಾಘವಸ್ಯ-ಶ್ರೀರಾಮನಿಗೆ, ಅನುಗಾಃ-ಅನುಚರರಾದರು ॥೧೫॥ ಸರ್ವೇ- ಸಮಸ್ತರಾದ, ವಾನರಾಃ-ವಾನರಗಳು, ಸ್ನಾತಾಃ-ಸ್ನಾನಮಾಡಿದವರಾಗಿ, ಪ್ರಮುದಿತಾಃ-ಸಂತೋಷಯುಕ್ತರಾಗಿ, ಹೃಷ್ಟಾಃ-ಹರ್ಷಯುಕ್ತರಾಗಿ, ಪುಷ್ಟಾಶ್ಚ - ಪುಷ್ಟಾಂಗರಾಗಿಯೇ, ಅನ್ವಗಚ್ಛನ್-ಹೊರಟರು, ಕಿಲಕಿಲಾಶಬ್ದೈಃ-ಕಿಲಕಿಲಧ್ವನಿಗಳಿಂದ, ಉಪಲಕ್ಷಿತಂ-ಕೂಡಿಕೊಂಡಿರುವ, ಸರ್ವಂ-ಸಮಸ್ತವಾನರಬಲವೂ, ರಾಮಂ-ಶ್ರೀರಾಮನನ್ನು, ದೃಢಂ-ಚಿತ್ತಚಾಪಲ್ಯವಿಲ್ಲದೆ,ಅನುವ್ರತಂ-ಅನುಸರಿಸಿಹೋಯಿತು ॥೧೬॥ ತತ್ರ-ಆ ಪ್ರಜೆಗಳಸಮುದಾಯದಲ್ಲಿ,ಕಶ್ಚಿತ್-ಒಬ್ಬನಾದರು,ದೀನೋವಾ-ದೈನ್ಯವುಳ್ಳವನೇಆಗಲೀ, ವ್ರೀಳಿತೋವ-ನಾಚಿಕೆಗೊಂಡವನೇಆಗಲೀ, ದುಃಖಿತೋವಾಪಿ-ದುಃಖಪಟ್ಟವನೇಆಗಲೀ, ನ-ಇಲ್ಲ, ಹೃಷ್ಟಂ-ಹರ್ಷಯುಕ್ತವಾದ, ಮುದಿತಂ-ಸಂತೋಷಯುಕ್ತವಾದ, ಸರ್ವಂ-ಸಮಸ್ತಜನರೂ, ಪರಮಾದ್ಭುತಂ-ಆಶ್ಚರ್ಯಕರವಾಗಿ, ಬಭೂವ-ಆಯಿತು ॥೧೭॥ ಅಥ-ಬಳಿಕ, ನಿರ್ಯಾಂತಂ-ಹೋಗುತಿರುವ, ರಾಮಂ-ಶ್ರೀರಾಮನನ್ನು, ದ್ರಷ್ಟುಕಾಮಃ-ನೋಡಬೇಕೆಂಬ ಇಚ್ಛೆಯುಳ್ಳ, ಜಾನಪದಾಃ-ದೇಶಾಂತರದಿಂದ ಬಂದ, ಯಃಜನಾಃ-ಯಾವಜನವು,

---

ತ್ತಿರುವ ಶ್ರೀರಾಮನಂ ಅಟ್ಟಿಕೊಂಡು ಪೊರಡಲೂ ಭರತನು ಶತ್ರುಘ್ನನಿಂದಲೂ ಅಂತಃಪುರ ಸ್ತ್ರೀಯರಿಂದಲೂ ಕೂಡಿಗೂಡಿದವನಾಗಿ, ಶ್ರೀರಾಮನೇ ಗತಿಯೆಂದು ಹೊಂದಿದವನಾದನು ॥ ೧೧ ॥ ಮಹಾ ಮನಸ್ವಿಗಳಾಗಿಯೂ, ಅಗ್ನಿಹೋತ್ರಗಳಿಂದೊಡಗೂಡಿದವರಾಗಿಯೂ ಮಕ್ಕಳಿಂದಲೂ ಹೆಂಡತಿಗಳಿಂದಲೂ ಕೂಡಿಕೊಂಡಿರುವರಾಗಿಯೂ, ಇರುವ ಅವರೆಲ್ಲರು ಬಂದವರಾಗಿ ಮಹಾ ಮತಿವಂತನಾದ ಶ್ರೀರಾಮನಂ ಅನುಸರಿಸಿ ಹೊರಟರು॥೧೨॥ ಅನಂತರದಲ್ಲಿ ಮಂತ್ರಿಗಳು ಭೃತ್ಯರಸಮೂಹದಿಂದಲೂ ಬಂಧುಗಳಿಂದಲೂ, ಹಿಂಬಲದಿಂದಲೂ ಒಡಗೂಡಿದವರಾಗಿ ಕಡುಸಂತೋಷದಿಂ ಶ್ರೀರಾಮನಂ ಅನುಸರಿಸಿ ಹೊರಟರು ॥೧೩॥ ಬಳಿಕ ಜನಗಳೆಲ್ಲರು ಹೃಷ್ಟರಾಗಿಯೂ ಪುಷ್ಟರಾಗಿಯೂ ಇರುವರಾಗಿ, ಪೈಣಿಸುತ್ತಿರುವ ಶ್ರೀರಾಮನ ಹಿಂದುಗಡೆ ಹೊರಟಂಥಾವರಾದರು, ಸಮನಂತರ ಕಾಲದೊಳು, ಎಲ್ಲರು ಸ್ತ್ರೀಯರಿಂದಲೂ ಪುರುಷರಿಂದಲೂ, ಪಶುಪಕ್ಷಿವಾಹನಗಳಿಂದಲೂ ಒಡಗೂಡಿದವರಾಗಿಯೂ ಸಂತೋಷಚಿತ್ತರಾಗಿಯೂ ಪಾಪರಹಿತರಾಗಿಯೂ ಇರುವರಾಗಿ ಆತನಂ ಹಿಂದಟ್ಟಿ ಪೋದರು ॥೧೫॥ ಆಗ ಸಮಸ್ತರಾದ ವಾನರರು ಸ್ನಾನವಂಗೈದು ಹರುಷವುಳ್ಳವರಾಗಿಯೂ ತುಂಬಾದ ಶರೀರಗಳುಳ್ಳವರಾಗಿಯೂ ಇರುವರಾಗಿ, ಕಿಲಕಿಲವೆಂಬ ಧ್ವನಿಗಳಂಗೈಯುತ್ತಾ, ಮನಶ್ಚಾಂಚಲ್ಯವಿಲ್ಲದ ಶ್ರೀರಾಮನಂ ಅನುಸರಿಸಿ ತೆರಳಿದರು॥೧೬॥ ಅವರಲ್ಲಿ ಯಾರು ದೀನನಾಗಿಯೂ ನಾಚಿಕೆಯುಳ್ಳವನಾಗಿಯೂ,ದುಃಖವುಳ್ಳವನಾಗಿಯೂ ಇರಲಿಲ್ಲ, ಎಲ್ಲರು ಸಂತೋಷಚಿತ್ತರಾಗಿಯೂ ಆಶ್ಚರ್ಯವುಳ್ಳವರಾಗಿಯೂ ಇದ್ದರು, ಆ ದೇಶದಲ್ಲಿರುವ ಜನಗಳೆಲ್ಲರು, ರಾಜರುಗಳು ಆ ಆಶ್ಚರ್ಯಾತಿಶಯವಂ ಕಾಣಲಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಸರ್ವೋ ರಾಮಮನುವ್ರತಃ ॥೧೮॥ ಋಕ್ಷವಾನರರಕ್ಷಾಂಸಿಜನಾಶ್ಚ ಪುರವಾಸಿನಃ । ಆಗಚ್ಛನ್ ಪರಯಾಭಕ್ತ್ಯಾ ಪೃಷ್ಠತಸ್ಸುಸಮಾಹಿತಾಃ ॥೧೯॥ ಯಾನಿಭೂತಾನಿನಗರೇಽಪ್ಯಂತರ್ಧಾನಗತಾನ್ಯಪಿ । ರಾಘವಂತಾನ್ಯನುಯಯುಃಸ್ವರ್ಗಾಯಸಮುಪಸ್ಥಿತಂ ॥೨೦॥ ಯಾನ್ಯಪಶ್ಯಂಶ್ಚ ಕಾಕುಸ್ಥಂಸ್ಥಾವರಾಣಿಚರಾಣಿಚ। ಸರ್ವಾಣಿಸ್ವರ್ಗಗಮನೇಅನುಜಗ್ಮುರ್ಹಿತಾನ್ಯಪಿ॥೨೧॥ ನೋಚ್ಛ್ವಸತ್ತದಯೋಧ್ಯಾಯಾಂಸುಸೂಕ್ಷ್ಮಮಪಿದೃಶ್ಯತೇ। ತಿರ್ಯಗ್ಯೋನಿಗತಾಶ್ಚಾಪಿಸರ್ವೇರಾಮಮನುವ್ರತಾಃ॥

—…ಇತಿಶ್ರೀಮದುತ್ತರ ರಾಮಾಯಣೇನವೋತ್ತರಶತತಮಸ್ಸರ್ಗಃ…—

ಅಧ್ಯರ್ಧಯೋಜನಂಗತ್ವಾನದೀಂಪಶ್ಚಾನ್ಮುಖಾಶ್ರಿತಾಂ। ಸರಯೂಂಪುಣ್ಯಸಲಿಲಾಂದದರ್ಶರಘುನಂದನಃ॥೧॥ ಅಥತಸ್ಮಿನ್ಮುಹೂರ್ತೇತುಬ್ರಹ್ಮಾಲೋಕಪಿತಾಮಹಃ। ಸರ್ವೈಃಪರಿವೃತೋದೇವೈಃಋಷಿಭಿಶ್ಚ ಮಹಾತ್ಮಭಿಃ । ಆಯಯೌಯತ್ರಕಾಕುಸ್ಥಃಸ್ವರ್ಗಾಯಸಮುಪಸ್ಥಿತಃ॥೨॥ ವಿಮಾನಶತಕೋಟೀಭಿರ್ದಿವ್ಯಾಭಿರಭಿಸಂವೃತಃ।ದೀಪ್ಯತೇಸ್ಮತದಾಕಾ

ಪ್ರಾಪ್ತಃ-ಬಂದಿರುವದೋ, ಸೋಪಿ-ಆ ಜನವೂಕೂಡ, ದೃಷ್ಟ್ವೈವ-ನೋಡುತಲೆ, ಮುದಾ-ಸಂತೋಷದಿಂದ, ಸ್ವರ್ಗಾಯ-ಸ್ವರ್ಗಕ್ಕೋಸ್ಕರ, ಅನುಗಚ್ಛತಃ-ಹಿಂದೆ ಹೊರಟಿತು ॥೧೮॥ ಋಕ್ಷವಾನರರಕ್ಷಾಂಸಿ-ಕರಡಿಗಳೂ, ವಾನರರೂ, ರಾಕ್ಷಸರೂ,ಪುರವಾಸಿನಃ-ಪಟ್ಟಣಸ್ಥರಾದ, ಜನಾಶ್ಚ -ಜನರೂ, ಪರಯಾ-ಬಹಳವಾದ, ಭಕ್ತ್ಯಾ-ಭಕ್ತಿಯಿಂದ, ಸುಸಮಾಹಿತಾಃ-ಸಮಾಧಾನಚಿತ್ತರಾಗಿ, ಪೃಷ್ಠತಃ-ಹಿಂದುಗಡೆ, ಆಗಚ್ಛನ್- ಹೊರಟರು ॥೧೯॥ ನಗರೇ-ಅಯೋಧ್ಯಾಪಟ್ಟಣದಲ್ಲಿ, ಅಂತರ್ಧಾನಗತಾನಿ-ತಿರೋಧಾನವನ್ನು ಹೊಂದಿರುವ, ಭೂತಾನಿ-ಭೂತಗಳು, ಯಾನಿ-ಯಾವದುಂಟೋ, ತಾನ್ಯಪಿ-ಆ ಭೂತಗಳೂ, ಸ್ವರ್ಗಾಯ-ಸ್ವರ್ಗಕ್ಕೋಸ್ಕರ, ಸಮುಪಸ್ಥಿತಂ-ಸಿದ್ಧವಾದ, ರಾಘವಂ-ಶ್ರೀರಾಮನನ್ನು, ಅನುಯಯುಃ-ಅನುಸರಿಸಿ ಹೋದವು, ಕಾಕುತ್ಸ್ಥಂ-ಶ್ರೀರಾಮನನ್ನು, ಸ್ಥಾವರಾಣಿ-ಸ್ಥಿರಗಳೂ, ಚರಾಣಿಚ-ಜಂಗಮಗಳೂ ಆದ, ಸತ್ವಾನಿ-ಜಂತುಗಳು, ಸ್ವರ್ಗಗಮನೇ-ಸ್ವರ್ಗಕ್ಕೆಹೋಗುವ ಕಾಲದಲ್ಲಿ, ಯಾನಿ-ಯಾವಜಂತುಗಳು, ಅಪಶ್ಯನ್-ಕಂಡವೋ, ತಾನ್ಯಪಿ-ಆ ಜಂತುಗಳೂಕೂಡೆ, ಅನುಜಗ್ಮುರ್ಹಿ-ಅನುಸರಿಸಿ ಹೋದವಷ್ಟೆ ॥೨೧॥ ಉಚ್ಛ್ವಸತ್-ಉಸುರುಬಿಡುತಿರುವ, ಯತ್-ಯಾವಜಂತುವು, ಸೂಕ್ಷ್ಮಮಪಿ-ಸೂಕ್ಷ್ಮವಾದುದಾದ್ದೂ ಕೂಡೆ, ದೃಶ್ಯತೇ-ಕಾಣಲ್ಪಡುತ್ತೋ, ತತ್- ಆ ಜಂತುವು, ಅಯೋಧ್ಯಾಯಾಂ-ಅಯೋಧ್ಯಾಪಟ್ಟಣದಲ್ಲಿ, ನಾಸ್ತಿ-ಇಲ್ಲಾ ॥೨೨॥ ತಿರ್ಯಗ್ಯೋನಿಗತಾಶ್ಚಾಪಿ-ತಿರ್ಯಗ್ಯೋನಿ - ಮಾನುಷವ್ಯತಿರಿಕ್ತಯೋನಿಗಳನ್ನು, ಗತಾಃ-ಹೊಂದಿರುವ, ಸರ್ವೇಪಿ-ಸಮಸ್ತಜಂತುಗಳೂ, ರಾಮಂ-ಶ್ರೀರಾಮನನ್ನು, ಅನುವ್ರತಾಃ-ಅನುಸರಿಸಿಹೋದವು, ॥೨೩॥

ಇತಿ ಶ್ರೀಮದುತ್ತರರಾಮಾಯಣೇ ನವೋತ್ತರ ಶತತಮಸ್ಸರ್ಗಃ.

ರಘುನಂದನಃ-ಶ್ರೀರಾಮನು, ಅಧ್ಯರ್ಧಯೋಜನಂ-ಅರ್ಧಯೋಜನವನ್ನತಿಕ್ರಮಿಸಿ, ಗತ್ವಾ-ಹೋಗಿ, ಪಶ್ಚಾನ್ಮುಖಾಶ್ರಿತಾಂ- ಪಶ್ಚಿಮಾಭಿಮುಖವಾಗಿಹೋಗುತಿರುವ, ಪುಣ್ಯಸಲಿಲಾಂ-ಪುಣ್ಯಕರವಾದ ಉದಕವುಳ್ಳ, ಸರಯೂಂನದೀಂ-ಸರಯೂನದಿಯನ್ನು, ದದರ್ಶ-ಕಂಡನು॥೧॥ ಅಥ- ಬಳಿಕ, ತಸ್ಮಿನ್ಮುಹೂರ್ತೇತು-ಆ ಮುಹೂರ್ತದಲ್ಲಾದರೆ, ಲೋಕಪಿತಾಮಹಃ-ಲೋಕಕ್ಕೆಲ್ಲಾ ಪಿತಾಮಹನಾದ, ಬ್ರಹ್ಮಾ-ಚತುರ್ಮುಖನು, ಸರ್ವೈಃ- ಸಮಸ್ತರಾದ, ದೇವೈಃ-ದೇವತೆಗಳಿಂದಲೂ, ಮಹಾತ್ಮಭಿಃ-ಮಹಾತ್ಮರಾದ, ಋಷಿಭಿಶ್ಚ-ಋಷಿಗಳಿಂದಲೂ, ಪರಿವೃತಃ-ಸುತ್ತಿಕೊಳ್ಳಲ್ಪಟ್ಟವನಾಗಿ,ಯತ್ರ- ಯಾವಸ್ಥಳದಲ್ಲಿ, ಕಾಕುತ್ಸ್ಥಃ-ಶ್ರೀರಾಮನು, ಸ್ವರ್ಗಾಯ-ಸ್ವರ್ಗಕ್ಕೋಸ್ಕರ, ಸಮುಪಸ್ಥಿತಃ-ನಿಂತಿದ್ದಾನೋ, ತತ್ರ-ಆ ಸ್ಥಳದಲ್ಲಿ, ಆಯಯೌ- ಬಂದನು ॥೨॥ ದಿವ್ಯಾಭಿಃ-ದೇವತೆಸಂಬಂಧಗಳಾದ, ವಿಮಾನಶತಕೋಟೀಭಿಃ-ವಿಮಾನ-ವಿಮಾನಗಳ, ಶತಕೋಟೀಭಿಃ-ನೂರುಕೋಟಿಗಳಿಂದ, ಅಭಿಸಂವೃತಂ-ವ್ಯಾಪ್ತವಾದ, ಆಕಾಶಂ - ಅಂತರಿಕ್ಷಮಾರ್ಗವು, ತದಾ-ಆಕಾಲದಲ್ಲಿ, ಸ್ವಯಂಪ್ರಭೈಃ - ಸ್ವಪ್ರಕಾಶಸ್ವರೂಪರಾದ, ಸ್ವತೇಜೋಭಿಃ - ತೇಜಸ್ಸುಗಳಿಂದಪ್ರಕಾಶಮಾದ, ಪುಣ್ಯಕರ್ಮಭಿಃ-ಪುಣ್ಯವಂತರಾದ, ಸ್ವರ್ಗಭಿಃ-ಸ್ವರ್ಗವಾಸಿಗಳಿಂದ, ಅನುತ್ತಮಂ- ಸರ್ವೋತ್ತಮವಾದ, ಜ್ಯೋತಿರ್ಭೂತಂ-ತೇಜೋಮಯ

ಸುತ್ತಿರುವರಾಗಿಬಂದು, ಎಲ್ಲರು ರಾಮನನ್ನು ಅನುಸರಿಸಿದರು ॥೧೮॥ ಕರಡಿಗಳು ಕಪಿಗಳು ರಕ್ಕಸರು, ಪುರದಲ್ಲಿ ಜನಗಳು ಇವರೆಲ್ಲ ಮಹಾಭಕ್ತಿಯಿಂದ ಆ ಶ್ರೀರಾಮನ ಹಿಂದುಗಡೆ ಹೊರಟಂಥಾವರಾದರು. ಅಯೋಧ್ಯಾಪಟ್ಟಣದಲ್ಲಿ ಯಾವಯಾವ ಭೂತಗಳು ಕಣ್ಣುಗಳಿಗೆ ಕಾಣುತಿದ್ದವೋ, ಅವುಗಳೆಲ್ಲ ಮಹಾಪ್ರಸ್ಥಾನವಂ ಮಾಡುತ್ತಿರುವ ಶ್ರೀರಾಮನನ್ನನುಸರಿಸಿ ಹೊರಟವು, ಚರಾಚರಾತ್ಮಕವಾದ ಯಾವ ಜಂತುಗಳು ಶ್ರೀರಾಮನಂಕಂಡವೋ, ಅವುಗಳು ಆತನ ಹಿಂದುಗಡೆಯೇ ಹೊರಟವು, ಆ ಪಟ್ಟಣದಲ್ಲಿ ಉಸುರುಬಿಡುತ್ತಿರುವ ಪದಾರ್ಥವೆಂಬವದುಸ್ವಲ್ಪವಾದರೂ ಕಾಣಬರಲಿಲ್ಲ. ಪಶುಪಕ್ಷಿ ಮುಂತಾದವುಗಳೂಕೂಡ ಶ್ರೀರಾಮನನ್ನೆ ಅನುಸರಿಸಿ ಹೊರಟಂಥಾವವುಗಳಾದವು ॥೨೩॥

—…೧೦೯ನೇಯ ಸರ್ಗಂ ಮುಗಿದುದು…—

ಬಳಿಕ ಶ್ರೀರಾಮನು ಒಂದೂವರೇ ಹರದಾರಿ ಗಮಿಸಿದವನಾಗಿ, ಪುಣ್ಯೋದಕವುಳ್ಳ ಸರಯೂನದಿಯಂ ಕಂಡನು. ಅನಂತರದಲ್ಲಿ ಲೋಕಕ್ಕೆಲ್ಲಾ ಪಿತಾಮಹನಾದ ಬ್ರಹ್ಮನು ಸಮಸ್ತರಾದ ದೇವತೆಗಳಿಂದಲೂ ಮಹರ್ಷಿಗಳಿಂದಲೂ ಒಡಗೂಡಿ ಶ್ರೀರಾಮನು ಸ್ವರ್ಗಪ್ರಯಾಣಕ್ಕೋಸುಗ ಯಾವ ಪ್ರದೇಶದಲ್ಲಿ ಇದ್ದವನಾದನೋ ಆ ಸ್ಥಳದಲ್ಲಿ ಬಂದವನಾದನು ॥೨॥ ದೇವತಾಸಂಬಂಧವಾದ ಅನೇಕ ವಿಮಾನಗಳಿಂದಲೂ ವ್ಯಾಪ್ತವಾದದ್ದಾಗಿಯೂ ಸರ್ವೋತ್ತಮವಾಗಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಶಂಜ್ಯೋತಿರ್ಭೂತಮನುತ್ತಮಂ। ಸ್ವಯಂಪ್ರಭೈಃ ಸ್ವತೇಜೋಭಿಃ ಸ್ವರ್ಗಿಭಿಃ ಪುಣ್ಯಕರ್ಮಭಿಃ ॥೩॥ ಪುಣ್ಯಾ ವಾತಾಃ ಪ್ರವವುಶ್ಚೈವ ಗಂಧವಂತಸ್ಸುಖಪ್ರದಾಃ । ಪಪಾತ ಪುಷ್ಪವೃಷ್ಟಿಶ್ಚ ದೇವೈರ್ಮುಕ್ತಾ ಮಹೌಘವತ್ ॥೪॥ ತಸ್ಮಿಂಸ್ತೂರ್ಯಶತೈಃ ಕೀರ್ಣೇ ವ್ಯೋಮ್ನಿ ಚಾಪ್ಸರಸಾಂ ಕುಲೇ । ಸರಯೂಸಲಿಲಂ ರಾಮಃ ಪದ್ಭ್ಯಾಂ ಸಮುಪಚಕ್ರಮೇ ॥೫॥ ತತಃ ಪಿತಾಮಹೋ ವಾಣೀಮಂತರಿಕ್ಷಾದಭಾಷತ । ಆಗಚ್ಛ ವಿಷ್ಣೋ ಭದ್ರಂ ತೇ ದಿಷ್ಟ್ಯಾ ಪ್ರಾಪ್ತೋಸಿ ರಾಘವ ॥೬॥ ಭ್ರಾತೃಭಿಸ್ಸಹ ದೇವಾಭೈಃ ಪ್ರವಿಶಸ್ವ ಸ್ವಕಾಂ ತನುಮ್ । ವೈಷ್ಣವೀಂ ತಾಂ ಮಹಾತೇಜೋ ಯದ್ವಾಕಾಶಂ ಸನಾತನಮ್ ॥೭॥ ತ್ವಂ ಹಿ ಲೋಕಗತಿರ್ದೇವ ನ ತ್ವಾಂ ಕೇಚಿತ್ಪ್ರಜಾನತೇ । ಋತೇ ಮಾಯಾಂ ವಿಶಾಲಾಕ್ಷೀಂ ತವ ಪೂರ್ವಪರಿಗ್ರಹಮ್ ॥೮॥ ತ್ವಮಚಿಂತ್ಯಂ ಮಹದ್ಭೂತಮಕ್ಷಯಂ ಸರ್ವಸಂಗ್ರಹಮ್ । ಯಾಮಿಚ್ಛಸಿ ಮಹಾತೇಜಸ್ತಾಂ ತನುಂ ಪ್ರವಿಶ ಸ್ವಯಮ್ ॥೯॥ ಪಿತಾಮಹವಚಃ ಶ್ರುತ್ವಾ ವಿನಿಶ್ಚಿತ್ಯ ಮಹಾಮತಿಃ । ವಿವೇಶ ವೈಷ್ಣವಂ ತೇಜಃ ಸಶರೀರಸ್ಸಹಾನುಜಃ ॥೧೦॥ ತತೋ ವಿಷ್ಣುಮಯಂ ದೇವಂ ಪೂಜಯಂತಿ ಸ್ಮ ದೇವತಾಃ । ಸಾಧ್ಯಾ ಮರುದ್ಗ

---

ವಾದ್ದಾಗಿ, ದೀಪ್ಯತೇಸ್ಮ–ಹೊಳೆಯುತ್ತಿತ್ತು ॥೩॥ ಗಂಧವಂತಃ–ಸೌರಭ್ಯವುಳ್ಳ, ಸುಖಪ್ರದಾಃ–ಸುಖಕರಗಳಾದ, ಪುಣ್ಯಾವಾತಾಶ್ಚೈವ– ಪುಣ್ಯಕರವಾದ ವಾಯುಗಳುನ್ನು, ಪ್ರವವುಃ–ಬೀಸಿದವು, ದೇವೈಃ–ದೇವತೆಗಳಿಂದ, ಮುಕ್ತಾ–ಬಿಡಲ್ಪಟ್ಟ, ಪುಷ್ಪವೃಷ್ಟಿಶ್ಚ–ಪುಷ್ಪವೃಷ್ಟಿಯು, ಮಹೌಘವತ್– ಗುಂಪು ಗುಂಪಾಗಿ, ಪಪಾತ–ಬಿತ್ತು ॥೪॥ ತಸ್ಮಿನ್ವ್ಯೋಮ್ನಿ–ಆ ಅಂತರಿಕ್ಷದಲ್ಲಿ, ಅಪ್ಸರಸಾಂ–ಅಪ್ಸರಸ್ತ್ರೀಯರುಗಳ, ಕುಲೇ–ಸಮುದಾಯವು, ತೂರ್ಯಶತೈಃ–ನೂರಾರುವಾದ್ಯಗಳಿಂದ, ಕೀರ್ಣೇಸತಿ–ವ್ಯಾಪ್ತವಾಗುತ್ತಿರಲಿಕ್ಕಾಗಿ, ರಾಮಃ–ಶ್ರೀರಾಮನು, ಪದ್ಭ್ಯಾಂ–ಕಾಲುಗಳಿಂದ, ಸರಯೂಸಲಿಲಂ–ಸರಯೂನದಿಯ ಉದಕವನ್ನು ಕುರಿತು, ಸಮುಪಚಕ್ರಮೇ–ನಡೆದುಹೋದನು ॥೫॥ ತತಃ–ಬಳಿಕ, ಪಿತಾಮಹಃ–ಬ್ರಹ್ಮನು, ಅಂತರಿಕ್ಷಾತ್–ಅಂತರಿಕ್ಷದ ದೆಸೆಯಿಂದ, ವಾಣೀಂ–ಮಾತನ್ನು, ಅಭಾಷತ–ಹೇಳಿದನು, ಹೇರಾಘವ–ರಘುವಂಶೋತ್ಪನ್ನನಾದ, ಹೇವಿಷ್ಣೋ–ಶ್ರೀಮಹಾವಿಷ್ಣುವೆ, ಆಗಚ್ಛ–ಬಾರಯ್ಯಾ, ತೇ–ನಿನಗೆ, ಭದ್ರಂ–ಶುಭವು–ಅಸ್ತು–ಆಗಲಿ, ದಿಷ್ಟ್ಯಾ–ದೈವಾಧೀನದಿಂದ, ಪ್ರಾಪ್ತಃ–ಬಂದವನು, ಅಸಿ–ಆದೆ ॥೬॥ ದೇವಾಭೈಃ–ದೇವತಾಪ್ರಕಾಶವುಳ್ಳ, ಭ್ರಾತೃಭಿಸ್ಸಹ–ತಮ್ಮಂದಿರಿಂದೊಡಗೂಡಿದ–ವೈಷ್ಣವೀಂ–ವಿಷ್ಣುಸಂಬಂಧವಾದ, ತಾಂ–ಪ್ರಸಿದ್ಧವಾದ, ಸ್ವಕಾಂ–ಸ್ವಕೀಯವಾದ, ತನುಂ–ಶರೀರವನ್ನು, ಪ್ರವಿಶಸ್ವ –ಪ್ರವೇಶಿಸು ಹೇದೇವ–ಎಲೈ ದೇವನೆ, ತ್ವಂ–ನೀನು, ಲೋಕಗತಿರ್ಹಿ–ಲೋಕಕ್ಕೆಲ್ಲಾ ಗಮ್ಯಸ್ಥಾನವಷ್ಟೆ, ಕಶ್ಚಿತ್–ಯಾರೂನು, ವಿಶಾಲಾಕ್ಷೀಂ–ವಿಶಾಲಾಕ್ಷಿಯಾದ, ತವನಿನಗೆ, ಪೂರ್ವಪರಿಗ್ರಹಾಂ–ಪೂರ್ವಹೆಂಡತೀ ಸ್ವರೂಪವಾದ, ಮಾಯಾಮೃತೇ–ಮಾಯೆಯನ್ನು ಬಿಟ್ಟು, ತ್ವಾಂ–ನಿನ್ನನ್ನು, ನಪ್ರಜಾನತೇ– ಅರಿಯರು ॥೮॥ ಹೇ ಮಹಾತೇಜಃ–ಎಲೈ ಮಹಾತೇಜೋವಂತನೆ, ಅಚಿಂತ್ಯಂ–ಚಿಂತಿಸಲಸಾಧ್ಯವಾದ, ಮಹದ್ಭೂತಂ–ಮಹದ್ಭೂತ ಸ್ವರೂಪನಾದ, ಅಕ್ಷಯಂ–ನಾಶರಹಿತನಾದ, ಸರ್ವಸಂಗ್ರಹಂ–ಸಮಸ್ತವನ್ನು ಉಪಸಂಹಾರಮಾಡುತ್ತಿರುವ, ತ್ವಂ–ನೀನು, ಯಾಂ–ಯಾವಶರೀರವನ್ನು, ಇಚ್ಛತಿ–ಅಪೇಕ್ಷಿಸುತ್ತೀಯೊ, ತಾಂತನುಂ–ಆಶರೀರವನ್ನು, ಸ್ವಯಂ–ನೀನು, ಪ್ರವಿಶ–ಪ್ರವೇಶಿಸು ॥೯॥ ಮಹಾಮತಿಃ–ಮಹಾಬುದ್ಧಿಶಾಲಿಯಾದ, ಶ್ರೀರಾಮನು, ಪಿತಾಮಹಃಚತುರ್ಮುಖಬ್ರಹ್ಮನ, ವಚಃ–ಮಾತನ್ನು, ಶ್ರುತ್ವಾ–ಕೇಳಿ, ವಿನಿಶ್ಚಿತ್ಯ–ನಿಶ್ಚೈಸಿ, ಸಶರೀರಃ–ಶರೀರ ಸಹಿತನಾಗಿ, ಸಹಾನುಜಃ–ತಮ್ಮಂದಿರಿಂದೊಡಗೂಡಿದವನಾಗಿ, ವೈಷ್ಣವಂ–ವಿಷ್ಣುಸಂಬಂಧವಾದ, ತೇಜಃ–ತೇಜಸ್ಸನ್ನು, ವಿವೇಶ–ಪ್ರವೇಶಿಸಿದನು ॥೧೦॥ ತತಃ–ಬಳಿಕ, ವಿಷ್ಣುಮಯಂ–ವಿಷ್ಣುಸ್ವರೂ

---

ಪಿಯೂ ಇರುವ ಆ ಕಾಶವು, ಆ ವೇಳೆಯಲ್ಲಿ, ಸ್ವಪ್ರಕಾಶರಾದ ಪುಣ್ಯಕರ್ಮಗಳುಳ್ಳ ಸ್ವರ್ಗವಾಸಗಳಿಂ ಕೂಡಿದಂಥದ್ದಾಗಿ ಹೊಳೆಯುತ್ತಿತ್ತು ॥೩॥ ಸುಗಂಧವುಳ್ಳದ್ದಾಗಿಯೂ ಸುಖವನ್ನುಂಟುಮಾಡುವದಾಗಿಯೂ ಇರುವ ಪುಣ್ಯಕರವಾದಗಾಳಿಯು ಬೀಸಿದಂಥಾದ್ದಾಯಿತು. ಮತ್ತು ದೇವತೆಗಳಿಂದ ಮಹತ್ತರವಾದ ಪುಷ್ಪ ವರುಷವು ಸುರಿಸಲ್ಪಟ್ಟಿತ್ತು. ಇದಲ್ಲದೆ ಗಗನವು ದೇವದುಂದುಭಿಗಳಿಂದ ವ್ಯಾಪ್ತವಾಗಿ ಅಪ್ಸರಸ್ತ್ರೀಯರು ನಾಟ್ಯವಂಗೈಯುತ್ತಿರುವರಾಗಲೂ, ಶ್ರೀರಾಮನು ಕಾಲುನಡೆಯಿಂದಲೆ ಸರಯೂನದಿಯ ಉದುಕವನ್ನು ಹೊಂದಿದವನಾದನು. ॥೫॥ ಬಳಿಕ ಬ್ರಹ್ಮದೇವನು ಆಕಾಶದಲ್ಲಿ ನುಡಿದನದೆಂತೆನೆ:—ಎಲೈ ಶ್ರೀರಾಮನ ರೂಪವಾಗವತರಿಸಿದ ಶ್ರೀಮಹಾವಿಷ್ಣುವೆ ! ಬಾರಯ್ಯ, ನಿನಗೆ ಶುಭವಾಗಲಿ, ದೇವತಾಸದೃಶವಾದ ತಮ್ಮಂದರಿಂದೊಡಗೂಡಿ ವಿಷ್ಣುಸಂಬಂಧವಾದ ನಿನ್ನ ಆ ಕಾರವನ್ನು ಹೊಂದು, ಜಗಕೆಲ್ಲ ನೀನೆಗತಿಯು ನಿನ್ನಮಾಯೆಯಹೊರ್ತು ನಿನ್ನನ್ನುಯಾರು ಅರಿಯಲಾರರು. ನೀನು ಚಿಂತಿಸಲತಿರುವಾಗಿ ಉತ್ಪತ್ತಿಯಾಗಿಯೂ, ಭೂತಗಳಿಗೆಲ್ಲ ಭಯಂಕರವಾದ ಭೂತವಾಗಿರುವನಾಗಿಯೂ, ನಾಶರಹಿತನಾಗಿಯೂ, ಎಲ್ಲಾ ಪ್ರಾಣಿಗಳನ್ನು ತನ್ನ ಕುಕ್ಷಿಯೊಳು ಸಂಗ್ರಹಿಸಿರುವನಾಗಿಯೂ ಇರುವನು, ಎಲೈ ಮಹಾತೇಜೋವಂತನೆ ! ನಿನಿಗೆ ಯಾವ ಶರೀರದಲ್ಲಿ ಇಷ್ಟವಿರುವದೋ, ಆ ದೇಹವನ್ನು ಹೊಂದುವನಾಗು. (ಎಂಬದಾಗಿ ಬ್ರಹ್ಮನು ನುಡಿದವನಾಗಲೂ) ರವನ್ನು ಕಂಡು, ಮಹಾಬುದ್ಧಿಯುಳ್ಳವನಾದ ಶ್ರೀರಾಮನು ಶರೀರಸಹಿತನಾಗಿ ವಿಷ್ಣುಸಂಬಂಧವಾದ ತೇಜಸ್ಸನ್ನು ಹೊಂದಬೇಕೆಂದು ನಿಶ್ಚಯಿಸಿ ಕೇಳಿ ಶ್ರೀಮನ್ನಾರಾಯಣನನ್ನು ಹೊಕ್ಕನು. ॥೧೦॥ ಬಳಿಕ ವಿಷ್ಣುರೂಪವಾಗಿರುವ ದೇವನನ್ನು, ಇಂದ್ರಾದಿದೇವತೆಗಳೂ, ಸಾಧ್ಯರೂ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಣಾಶ್ಚೈವಸೇಂದ್ರಾಸ್ಸಾಗ್ನಿಪುರೋಗಮಾಃ ॥೧೧॥ ಯೇಚದಿವ್ಯಾಋಷಿಗಣಾಗಂಧರ್ವಾಪ್ಸರಸಶ್ಚಯಾಃ । ಸುಪರ್ಣನಾಗ. ಯಕ್ಷಾಶ್ಚ ದೈತ್ಯದಾನವರಾಕ್ಷಸಾಃ ॥೧೨॥ ಸರ್ವಂಪ್ರಮುದಿತಂಹೃಷ್ಟಂಸರ್ವಂಪೂರ್ಣಮನೋರಥಮ್ । ಸಾಧುಸಾಧ್ವಿತಿ ತತ್ಸರ್ವಂತ್ರಿದಿವಂಗತಕಲ್ಮಷಮ್ ॥೧೩॥ ಅಥವಿಷ್ಣುರ್ಮಹಾತೇಜಾಃಪಿತಾಮಹಮುವಾಚಹ । ಏಷಾಂಲೋಕಾನ್ ಜನೌಘಾನಾಂದಾತುಮರ್ಹಸಿಸುವ್ರತ ॥೧೪॥ ಇಮೇಹಿಸರ್ವೇಸ್ನೇಹಾನ್ಮಾಮನುಯಾತಾಮನಸ್ವಿನಃ । ಭಕ್ತ್ಯಾಹಿಭಜನೀಯಾಶ್ಚ ತ್ಯಕ್ತಾತ್ಮಾನಶ್ಚ ಮತ್ಕೃತೇ ॥೧೫॥ ತಚ್ಛ್ರುತ್ವಾವಚನಂತಸ್ಯಬ್ರಹ್ಮಾಲೋಕಗುರುಃಪ್ರಭುಃ । ಲೋಕಾನ್ ಸಾಂತಾನಿಕಾನ್ನಾಮಯಾಸ್ಯಂತೀಮೇಸಮಾಗತಾಃ ॥೧೬॥ ಯಚ್ಚತಿರ್ಯಗ್ಗತಂಕಿಂಚಿದ್ರಾಮಮೇವಾನುಚಿಂತಯತ್ । ಪ್ರಾಣಾಂಸ್ತ್ಯಕ್ಷ್ಯತಿಭಕ್ತ್ಯಾವೈತತ್ಸಾಂತಾನೇನಿವತ್ಸ್ಯತಿ ॥ ಸರ್ವೈರೇವಗುಣೈರ್ಯುಕ್ತೇಬ್ರಹ್ಮಲೋಕಾದನಂತರೇ ॥೧೭॥ ತಥೋಕ್ತವ

---

ಪನಾದ, ತಂದೇವಂ-ಆ ದೇವರನ್ನು, ದೇವತಾಃ-ದೇವತೆಗಳು, ಸಾಧ್ಯಾಃ-ಸಾಧ್ಯರು, ಸೇಂದ್ರಾಃ-ಇಂದ್ರಸಹಿತರಾದ, ಸಾಗ್ನಿಪುರೋಗಮಾಃ- ಅಗ್ನಿಯೇ ಮೊದಲಾಗುಳ್ಳವರಿಂ ದೊಡಗೂಡಿದ, ಮರುದ್ಗಣಾಶ್ಚೈವ-ಸಪ್ತ ಮರುತ್ತುಗಳಗುಂಪುಗಳೂ, ಪೂಜಯಂತಿಸ್ಮ-ಪೂಜೆಮಾಡಿದರಷ್ಟೆ ॥೧೧॥ ದಿವ್ಯಾಃ- ದೇವತಾಸಂಬಂಧಗಳಾದ, ಋಷಿಗಣಾಃ-ಋಷಿಗಳಗುಂಪುಗಳೂ,ಯೇ-ಯಾರೊ, ಗಂಧರ್ವಾಪ್ಸರಸಶ್ಚ-ಗಂಧರ್ವರನ್ನು,ಅಪ್ಸರಸ್ತ್ರೀಯರುಗಳೂ,ಯಾಃ-ಯಾ ರೊ, ತಾಃ-ಅವರುಗಳೂ, ಸುಪರ್ಣನಾಗಯಕ್ಷಾಶ್ಚ-ಗರುಡ ಸರ್ಪ ಯಕ್ಷರೂನು, ದೈತ್ಯದಾನವರಾಕ್ಷಸಾಃ-ದೈತ್ಯದಾನವ ರಾಕ್ಷಸರೆಂಬಜಾತಿ ಭೇದಗ ಳೂನು, ಪೂಜಯಂತಿಸ್ಮ-ಪೂಜೆಮಾಡಿದರಷ್ಟೆ ॥೧೨॥ಸರ್ವಂ-ಸಮಸ್ತರೂನು, ಪ್ರಮುದಿತಂ-ಸಂತೋಷವಾಗಿದ್ದರು, ಸರ್ವಂ-ಸಮಸ್ತರೂ, ಹೃಷ್ಟಃ- ಹರ್ಷಯುಕ್ತರಾಗಿದ್ದರು, ಸರ್ವಂ-ಸಮಸ್ತರೂನು, ಪೂರ್ಣಮನೋರಥಂ-ಸಂಪೂರ್ಣವಾದ ಮನೋರಥರಾದರು, ತತ್ಸರ್ವಂ-ಆ ಸಮಸ್ತರೂ, ಗತ ಕಲ್ಮಷಂ-ಗತ-ಹೋದಂಥಾ, ಕಲ್ಮಷಂ-ಪಾಪವುಳ್ಳದ್ದಾಗಿ, ಸಾಧುಸಾಧ್ವಿತಿ-ಒಳ್ಳೇದುಒಳ್ಳೇದುಎಂದು, ತ್ರಿದಿವಂ-ಸ್ವರ್ಗಲೋಕವನ್ನು, ಗತಾ-ಹೊಂದಿದ ರು, ॥೧೩॥ ಅಥ-ಬಳಿಕ, ಮಹಾತೇಜಾಃ-ಮಹಾತೇಜಸ್ವಿಯಾದ, ವಿಷ್ಣುಃ-ಶ್ರೀಮಹಾವಿಷ್ಣುವು, ಪಿತಾಮಹಂ-ಬ್ರಹ್ಮದೇವರನ್ನು ಕುರಿತು, ಹೆಸುವ್ರತ- ಎಲೈ ನಿಯತವ್ರತನೆ, ಏಷಾಂ-ಈ ಪುರೋವರ್ತಿಗಳಾದ, ಜನೌಘಾನಾಂ-ಜನಸಮುದಾಯಂಗಳಿಗೆ, ಲೋಕಾನ್- ಲೋಕಗಳನ್ನು, ದಾತುಂ- ಕೊಡುವ ದಕ್ಕೋಸ್ಕರ, ಅರ್ಹಸಿ-ಯೋಗ್ಯನಾಗು, ಇತಿ-ಇಂತೆಂದು, ಉವಾಚಹ-ಹೇಳಿದನಷ್ಟೆ ॥೧೪॥ ಸರ್ವೇ-ಸಮಸ್ತರಾದ, ಇಮೇ-ಈ ಜನರು, ಸ್ನೇಹಾತ್-ಪ್ರೇ ಮದ ದೆಸೆಯಿಂದ, ಮನಸ್ವಿನಃ-ಮನಸ್ಸುಳ್ಳವರಾಗಿ, ಮಾಂ-ನನ್ನನ್ನು, ಅನುಯಾತಾಹಿ-ಅನುಸರಿಸಿ ಬಂದರಷ್ಟೆ, ಮತ್ಕೃತೇ- ನನ್ನನಿಮಿತ್ತವಾಗಿ, ತ್ಯಕ್ತಾತ್ಮಾನಃ-ಬಿಡಲ್ಪಟ್ಟ ಶರೀರಗಳುಳ್ಳವರಾಗಿ, ಭಕ್ತ್ಯಾ-ಭಕ್ತಿಯಿಂದ, ಭಜನೀಯಾಹಿ-ಸೇವಿಸತಕ್ಕವರಷ್ಟೇ ॥೧೫॥ ತಸ್ಯ-ಆ ಶ್ರೀರಾಮನ, ತದ್ವಚ ನಂ-ಆ ವಚನವನ್ನು, ಶ್ರುತ್ವಾ-ಕೇಳಿ, ಲೋಕಗುರುಃ-ಲೋಕಸ್ವಾಮಿಯಾದ, ಪ್ರಭುಃ-ಸಮರ್ಥನಾದ, ಬ್ರಹ್ಮಾ-ಚತುರ್ಮುಖನು,ಸಮಾಗತಾಃ- ಬಂದಿರು ವ, ಇಮೇ-ಇವರು, ಸಾಂತಾನಿಕಾನ್ನಾಮ- ಸಾಂತಾನಿಕಗಳೆಂದು ಪ್ರಸಿದ್ಧಂಗಳಾದ, ಲೋಕಾನ್-ಲೋಕಗಳನ್ನು, ಯಾಸ್ಯಂತಿ-ಹೊಂದುತ್ತಾರೆ॥೧೬॥ ತಿ ರ್ಯಗ್ಗತಂ-ತಿರ್ಯಕ್‌ಜಂತುತ್ವವನ್ನು ಹೊಂದಿರುವದು, ಯಚ್ಚ-ಯಾವದುಂಟೋ, ತತ್-ಅದು, ಭಕ್ತ್ಯಾ-ಭಕ್ತಿಯಿಂದ, ರಾಮಮೇವ-ಶ್ರೀರಾಮನನ್ನೇ, ಅನುಚಿಂತಯತ್-ಆಲೋಚಿಸು ತಿರುವದಾಗಿ, ಪ್ರಾಣಾನ್-ಪ್ರಾಣಗಳನ್ನು, ತ್ಯಕ್ಷ್ಯತಿ-ಬಿಡುತದೋ, ತತ್-ಆ ಜಂತುವು, ಕಿಂಚಿತ್-ಯಾವದಾದರು, ಸ ರ್ವೈರೇವ-ಸಮಸ್ತವಾದ, ಗುಣೈಃ-ಗುಣಗಳಿಂದ, ಯುಕ್ತೇ-ಕೂಡಿಕೊಂಡಿರುವ, ಬ್ರಹ್ಮಲೋಕಾತ್-ಬ್ರಹ್ಮಲೋಕಕ್ಕಿಂತಲೂ, ಅನಂತರೇ-ಆ ಮ್ಯಾಲಿರು ವ, ಸಾಂತಾನೇ-ಸಾಂತಾನಕವೆಂಬ ಲೋಕದಲ್ಲಿ, ನಿವತ್ಸ್ಯತಿ-ವಾಸಮಾಡಲೀ, ಇತಿ-ಇಂತೆಂದು, ಅಬ್ರವೀತ್-ನುಡಿದನು ॥ ೧೭ ॥ ದೇವೇಶಃ-[illegible]ತಾಶ್ರೇಷ್ಠ ನಾದ ಬ್ರಹ್ಮನು, ತಥಾ-ಆ ಪ್ರಕಾರವಾಗಿ, ಉಕ್ತವತಿಸತಿ-ಹೇಳಿದಂಥಾವ ನಾಗತಿರಲೀಕಾಗಿ, ಗೋಪ್ರತಾರಂ-ಆಕಳು ನದಿಯನ್ನು ದಾಟಿದಹಾಗೆ, ಉ ಪಾಗತಾಃ-ಬಂದಂಥಾ, ಸರ್ವೇ-ಸಮಸ್ತರೂ, ಹರ್ಷಪೂರ್ಣಾಶ್ರುವಿಕ್ಲಬಾಃ-ಹರ್ಷ-ಸಂತೋಷದಿಂದ ಹುಟ್ಟಿದ, ಅಶ್ರು-ಕಂಣೀರಿನಿಂದ,ಪೂರ್ಣ-ಪೂರ್ಣರಾ

---

ಮುಂತಾದ ದೇವತಾಗಣಂಗಳೂ, ಋಷಿತಂಡಗಳೂ, ಗಂಧರ್ವರೂ, ಅಪ್ಸರಸ್ತ್ರೀಯರು, ನಾಗದೇವತೆಗಳೂ, ಯಕ್ಷ ರೂ, ರಾಕ್ಷಸರೂ, ದೈತ್ಯರೂ, ದಾನವರೂ, ಎಲ್ಲರು ಪೂಜಿಸಿದವರಾದರು. ॥೧೨॥ (ಆಗ) ಸ್ವರ್ಗವೆಲ್ಲ, ಸಂತೋಷ ವುಳ್ಳದ್ದಾಗಿಯೂ ಸಂಪೂರ್ಣವಾದ ಮನೋರಥವುಳ್ಳದ್ದಾಗಿಯೂ, ಪಾಪರಹಿತವಾಗಿಯೂ ಇರುವದಾಗಿ ಬಹುಚ ಯಿತು ಬಹುಚನ್ನಾಯಿತೆಂದು ಹೊಗಳಿತು. ॥೧೩॥ ಬಳಿಕ ಶ್ರೀಮಹಾವಿಷ್ಣುವು ಬ್ರಹ್ಮನಂಕುರಿತು, ಆಗ ಹೇಳುವ ದೆಂತೆಂದ್ರೆ:—ಎಲೈ ನಿಯಮವಂತನಾದ ಬ್ರಹ್ಮನೆ! ಈ ನನ್ನ ಸಂಗಡ ಬಂದಿರುವ ಇವರುಗಳಿಗೆ ಲೋಕಗಳನ್ನು ಕುವಂಥಾವನಾಗು, ಇವರೆಲ್ಲರು ಸ್ನೇಹದಿಂದ ನನ್ನನ್ನನುಸರಿಸಿಬಂದಿರುವರು, ಮಹಾಭಕ್ತಿಯಿಂದ ನನಿಗೋಸ್ಕರ ಪ್ರಾಣಗಳನ್ನು ಬಿಟ್ಟರಾರೆ ॥೧೪॥ ಶ್ರೀಮಹಾವಿಷ್ಣುವು ಹೇಳಿದ ಆ ವಾಕ್ಯವನ್ನು ಕೇಳಿ ಚತುರ್ಮುಖನು ಶ್ರೀಮನ್ನಾ ರಾಯಣನಂಕುರಿತು, ಎಲೈ ಭಗವಂತನೆ! ಇವರೆಲ್ಲರು ಸಾಂತಾನಿಕವೆಂದು ಪ್ರಸಿದ್ಧವಾದ ಲೋಕಗಳನ್ನು ಹೊಂದುವರು, ಶ್ರೀರಾಮರೂಪವಾಗಿ ಅವತರಿಸಿದ್ದ ನಿನ್ನ ನಾಮೋಚ್ಚಾರಣೆಯಂ ಮಾಡುತ್ತಾ ಪ್ರಾಣಗಳನ್ನು ಬಿಡು ವರೆಲ್ಲರು ಬಹುಗುಣಗಳುಳ್ಳ ಈ ಲೋಕಗಳನ್ನೇ ಹೊಂದುವರು ॥೧೫॥ ಈ ರೀತಿಯಾಗಿ ಬ್ರಹ್ಮನು ನುಡಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತಿದಿವೇಶೇಗೋಪ್ರತಾರಮುಪಾಗತಾಃ । ಭೇಜಿರೇ ಸರಯೂಂ ಸರ್ವೇ ಹರ್ಷಪೂರ್ಣಾಶ್ರುವಿಕ್ಲಬಾಃ ॥೧೮॥ ಅವಗಾಹ್ಯ ಜಲಂ ಯೋ ಯಃ ಪ್ರಾಣೀ ಹ್ಯಾಸೀತ್ಪ್ರಹೃಷ್ಟವತ್ । ಮಾನುಷಂ ದೇಹಮುತ್ಸೃಜ್ಯ ವಿಮಾನಂ ಸೋಧ್ಯರೋಹತ ॥೧೯॥ ತಿರ್ಯಗ್ಯೋನಿಗತಾಶ್ಚಾಪಿ ಸಂಪ್ರಾಪ್ತಾಸ್ಸರಯೂಜಲಮ್ । ದೀಪ್ತಾ ದಿವ್ಯೇನ ವಪುಷಾ ದಿವ್ಯಾ ದೇವಾ ಇವಾಭವನ್ ॥೨೦॥ ಗತ್ವಾ ತು ಸರಯೂತೀರಂ ಸ್ಥಾವರಾಣಿ ಚರಾಣಿ ಚ । ಪ್ರಾಪ್ಯ ತತ್ತೋಯವಿಕ್ಲೇದಂ ದೇವಲೋಕಮುಪಾಗಮನ್ ॥೨೧॥ ವಾನರಾಶ್ಚ ಸ್ವಕಾಂ ಯೋನಿಮೃಕ್ಷಾಶ್ಚೈವ ತಥಾ ಯಯುಃ । ಯೇಭ್ಯೋ ವಿನಿಸ್ಸೃತಾಸ್ಸರ್ವೇ ಸುರಾದಿಭ್ಯಸ್ಸುಸಂಭವಾಃ ॥ ಋಷಿಭ್ಯೋ ನಾಗಯಕ್ಷೇಭ್ಯಸ್ತಾಂಸ್ತಾನೇವ ಪ್ರಪೇದಿರೇ ॥೨೨॥ ದೇವಾನಾಂ ಯಸ್ಯ ಯಾ ಯೋನಿರ್ವಾನರಾ ಋಕ್ಷರಾಕ್ಷಸಾಃ । ತಾಮೇವ ವಿವಿಶುಸ್ಸರ್ವೇ ದೇಹಾನ್ನಿಕ್ಷಿಪ್ಯ ಚಾಂಭಸಿ ॥೨೪॥ ತಥಾ ಸ್ವರ್ಗಂ ಗತಂ ಸರ್ವಂ ಕೃತ್ವಾ ಲೋಕಗುರುಸ್ಸ್ವಕಮ್ । ಜಗಾಮ ತ್ರಿದಶೈಸ್ಸಾರ್ಧಂ ಹೃಷ್ಟೈರ್ಹೃಷ್ಟಃ ಪರಂ ಪದಮ್ ॥೨೫॥ ತತಃ ಪ್ರತಿಷ್ಠಿತೋ ವಿಷ್ಣುಃ ಸ್ವರ್ಗಲೋಕೇ ಯಥಾ ಪುರಾ । ಯೇನ ವ್ಯಾಪ್ತಮಿದಂ ಸರ್ವಂ ತ್ರೈಲೋಕ್ಯಂ ಸ

---

ಶ್ರುವಿಕ್ಲಬಾಃ-ಪರಾಧೀನರಾಗಿ, ಸರಯೂಂ-ಸರಯೂನದಿಯನ್ನು, ಭೇಜಿರೇ-ಹೊಂದಿದರು ॥೧೮॥ ಯೋಯಃ-ಯಾವಯಾವ ಪ್ರಾಣೀ-ಮನುಷ್ಯನು, ಜಲಂ-ಉದಕವನ್ನು, ಅವಗಾಹ್ಯ-ಪ್ರವೇಶಿಸಿ-ಪ್ರಹೃಷ್ಟವತ್-ಸಂತೋಷವುಳ್ಳವನು, ಆಸೀತ್-ಆದನೋ, ಸಃ-ಆ ಮನುಷ್ಯನು, ಮಾನುಷಂದೇಹಂ- ಮನುಷ್ಯ ದೇಹವನ್ನು, ಉತ್ಸೃಜ್ಯ-ಬಿಟ್ಟು, ವಿಮಾನಂ-ವಿಮಾನವನ್ನು, ಅಧ್ಯರೋಹತ-ಏರಿದನು ॥೧೯॥ ತಿರ್ಯಗ್ಯೋನಿಗತಾಶ್ಚಾಪಿ-ಮನುಷ್ಯವ್ಯತಿರಿಕ್ತ ಜಂತುಗಳೂಕೂಡ, ಸರಯೂಜಲಂ-ಸರಯೂ ಉದಕವನ್ನು, ಸಂಪ್ರಾಪ್ತಾಃ-ಹೊಂದಿದವುಗಳಾಗಿ, ದಿವ್ಯೇನ-ದೇವತಾಸಂಬಂಧವಾದ, ವಪುಷಾ-ಶರೀರದಿಂದ, ದಿವ್ಯಾಃ-ಸ್ವರ್ಗವರ್ತಿಗಳಾದ, ದೇವಾ ಇವ-ದೇವತೆಗಳಂತೆ, ದೀಪ್ತಾಃ-ಹೊಳೆಯುತ್ತಿರುವವುಗಳು, ಅಭವನ್-ಆದವು ॥೨೦॥ ಸ್ಥಾವರಾಣಿ-ಸ್ಥಾವರಗಳೂ, ಚರಾಣಿಚ-ಜಂಗಮಗಳೂ, ಸರಯೂತೀರಂ-ಸರಯೂನದಿಯ ದಡವನ್ನು, ಗತ್ವಾ-ಸೇರಿ, ತತ್ತೋಯವಿಕ್ಲೇದಂ-ತತ್-ಆ ಸರಯೂನದಿಯ, ತೋಯ-ಉದಕದಲ್ಲಿ, ವಿಕ್ಲೇದಂ-ಸ್ನಾನವನ್ನು, ಪ್ರಾಪ್ಯ-ಮಾಡಿ, ದೇವಲೋಕಂ-ದೇವಲೋಕವನ್ನು, ಉಪಾಗಮನ್-ಹೊಂದಿದವು, ॥೨೧॥ ವಾನರಾಶ್ಚ-ವಾನರಗಳೂ, ಸ್ವಕಾಂ-ಸ್ವಕೀಯವಾದ, ಯೋನಿಂ-ಸ್ವೋತ್ಪತ್ತಿಸ್ಥಾನವನ್ನು, ಯಯುಃ-ಹೊಂದಿದರು, ಋಕ್ಷಾಶ್ಚೈವ-ಕರಡಿಗಳೂಕೂಡ, ತಥಾ-ಹಾಗೆಯೆ, ಯಯುಃ-ಹೊಂದಿದವು, ಸುರಾದಿಭ್ಯಃ-ದೇವತೆಗಳೇ ಮೊದಲಾಗುಳ್ಳ, ಋಷಿಭ್ಯಃ-ಋಷಿಗಳ ದೆಸೆಯಿಂದಲೂ, ನಾಗಯಕ್ಷೇಭ್ಯಃ-ಸರ್ಪಯಕ್ಷರ ದೆಸೆಯಿಂದಲೂ, ಸುಸಂಭವಾಃ-ಉತ್ಪತ್ತಿಯುಳ್ಳವರಾಗಿ, ವಿನಿಸ್ಸೃತಾಃ-ಹೊರಟುಬಂದ, ಸರ್ವೇ-ಸಮಸ್ತರೂನು, ತಾಂಸ್ತಾನೇವ-ಆಯಾಯ ದೇವಾದಿಗಳನ್ನೇ, ಪ್ರಪೇದಿರೇ-ಐದಿದರು ॥೨೨॥ ತೇಷು-ಆ ವಾನರಾದಿಗಳು, ಸ್ವಾಂಶಂ-ಸ್ವಕೀಯಾಂಶವನ್ನು, ವಿಶತ್ಸುಸತ್ಸು-ಪ್ರವೇಶ ಮಾಡಿದವರಾಗುತ್ತಿರಲೀಕಾಗಿ, ವಾನರಾಧಿಪಃ-ವಾನರಾಧಿಪತಿಯಾದ, ಸುಗ್ರೀವಃ-ಸುಗ್ರೀವನು, ಸರ್ವದೇವಾನಾಂ-ಸಮಸ್ತದೇವತೆಗಳೂ, ಪಶ್ಯತಾಂಸತಾಂ-ನೋಡುತ್ತಿರಲೀಕಾಗಿ, ತ್ರಯೀತನುಂ-ವೇದತ್ರಯಸ್ವರೂಪವಾದ, ರವಿಂ-ರಶ್ಮಿಯುಳ್ಳ, ಸೂರ್ಯಂ-ಸೂರ್ಯನನ್ನು, ಪ್ರಾಪ-ಹೊಂದಿದನು ॥೨೩॥ ವಾನರಾಃ-ವಾನರಗಳೂ, ಋಕ್ಷರಾಕ್ಷಸಾಃ-ಕರಡಿಗಳೂ ರಾಕ್ಷಸರೂ, ದೇವಾನಾಂ-ದೇವತೆಗಳೊಳಗೆ, ಯಸ್ಯ-ಯಾವ್ವೊನಿಗೆ, ಯಾಯೋನಿಃ-ಯಾವದು ಉತ್ಪತ್ತಿಸ್ಥಾನವೋ, ಸರ್ವೇ-ಸಮಸ್ತರೂ, ಅಂಭಸಿ-ಉದಕದಲ್ಲಿ, ದೇಹಾನ್-ಶರೀರಗಳನ್ನು, ನಿಕ್ಷಿಪ್ಯ-ಸಮರ್ಪಿಸಿ, ತಾಮೇವ-ಆ ಉತ್ಪತ್ತಿಸ್ಥಾನವನ್ನೇ, ವಿವಿಶುಃ-ಹೊಕ್ಕರು ॥೨೪॥ ಲೋಕಗುರುಃ- ಲೋಕಸ್ವಾಮಿಯಾದ ಬ್ರಹ್ಮನು, ತಥಾ-ಆ ಪರಿಯಾಗಿ, ಸರ್ವಂ-ಸಮಸ್ತರನ್ನು, ಸ್ವರ್ಗಗತಂ-ಸ್ವರ್ಗವನ್ನು ಹೊಂದಿದವರನ್ನಾಗಿ, ಕೃತ್ವಾ-ಮಾಡಿ, ಹೃಷ್ಟೈಃ- ಸಂತೋಷಯುಕ್ತರಾದ, ತ್ರಿದಶೈಸ್ಸಾರ್ಧಂ-ದೇವತೆಗಳೊಡಗೂಡಿ, ಹೃಷ್ಟಃ-ಸಂತೋಷಗೊಂಡವನಾಗಿ, ಸ್ವಕಂ-ಸ್ವಕೀಯವಾದ, ಪರಂಪದಂ-ಸತ್ಯಲೋಕವನ್ನು ಕುರಿತು, ಜಗಾಮ-ತೆರಳಿದನು. ॥೨೫॥ ತತಃ-ಬಳಿಕ, ಸ್ವರ್ಗಲೋಕೇ-ಸ್ವರ್ಗಲೋಕದಲ್ಲಿ, ಯಥಾಪುರಾ-ಪೂರ್ವದಂತೇ, ವಿಷ್ಣುಃ-ಶ್ರೀಮಹಾವಿಷ್ಣುವು, ಪ್ರತಿಷ್ಠಿ

---

ರಲೂ, ಅವರುಗಳೆಲ್ಲರು ಆನಂದಬಾಷ್ಪಗಳನ್ನು ಸುರಿಸುತ್ತಾ ಸರಯೂನದಿಯನ್ನು ಹೊಂದಿ ಸಂತೋಷ ಚಿತ್ತರಾಗಿ ಸರಯೂನದಿಯ ಉದಕದಲ್ಲಿಳಿದನೋ, ಆತನು ಮನುಷ್ಯದೇಹವನ್ನು ಬಿಟ್ಟು ವಿಮಾನಾರೂಢನಾದನು. ॥೧೯॥ (ಆ ಸಮಯದಲ್ಲಿ) ತಿರ್ಯಗ್ಜಂತುಗಳೂ ಕೂಡಾ, ಸರಯೂನದಿಯನ್ನುಹೊಂದಿ, ದಿವ್ಯದೇಹವುಳ್ಳವರಾದ ದೇವತೆಗಳಂತೆ ಇದ್ದಂಥವುಗಳಾದವು (ಇದಲ್ಲದೆ) ಜಂಗಮಾಜಂಗಮಗಳೂ ಸಹಾ ಸರಯೂತೀರವನ್ನೈದಿ, ದೇವಲೋಕವಂ ಹೊಂದಿದವು. (೨೧) ವಾನರರು ಕರಡಿಗಳು ಸಹ ಯಾವ ದೇವತೆಗಳು ಮುಖಾಂತರವಾಗಿಯೂ ಋಷಿನಾಗ ಯಕ್ಷರ ದೆಸೆಯಿಂದಲೂ, ಜನಿಸಿದ್ದರೋ, ಅದೇ ಯೋನಿಗಳನ್ನೇ ಹೊಂದಿದರು ॥೨೨॥ ಈ ಪರಿಯಾಗಿ ವಾನರರೆಲ್ಲರು ತಮ್ಮ ತಮ್ಮ ಉತ್ಪತ್ತಿಸ್ಥಾನಗಳನ್ನು ಹೊಂದಿದವರಾಗಲೂ, ಕಪಿ ಸಾರ್ವಭೌಮನಾದ, ಸುಗ್ರೀವನು ಎಲ್ಲಾ ದೇವತೆಗಳು ನೋಡುತ್ತಿರುವಾಗಲೆ ವೇದತ್ರಯಾತ್ಮಕನಾದ ಸೂರ್ಯನನ್ನು ಹೊಂದಿದನು. (ಈ ರೀತಿಯಾಗಿ) ಕಪಿಗಳೂ ಕರಡಿಗಳೂ ರಾಕ್ಷಸರೂ ಇವರೆಲ್ಲರು ಯಾವ ಯಾವ ದೇವತೆಗಳಿಂದ ಉತ್ಪನ್ನರಾಗಿದ್ದರೋ, ಅವರೆಲ್ಲರು ತಮ್ಮ ತಮ್ಮ ದೇಹಗಳನ್ನೂ ಸರಯೂನದಿ ಉದಕದಲ್ಲಿರಿಸಿ ಆಯಾ ದೇವತೆಗಳನ್ನು ಹೊಂದಿದರು. ಈ ಪರಿಯಾಗಿ ಸ್ವರ್ಗಸ್ಥರಾದ ಎಲ್ಲರನ್ನು ಕಂಡು, ಲೋಕಗುರುವಾದ ಚತುರ್ಮುಖನು, ದೇವತೆಗಳಿಂದೊಡಗೂಡಿ, ತನ್ನ ಲೋಕವನ್ನೈದಿದನು ॥೨೫॥ ಬಳಿಕ ಶ್ರೀಮನ್ನಾ

CC-0. Bhagavad Ramanuja National Research Institute, Melukote Collection.

